ಶ್ರೀಮತ್ಕವಿಕುಲತಿಲಕ-ಶ್ರೀತ್ರಿವಿಕ್ರಮಪಂಡಿತಾಚಾರ್ಯಸುತ-
ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತ

# ಶ್ರೀಸುಮಧ್ವವಿಜಯ



ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು, ಪಾಜಕಕ್ಷೇತ್ರ

**ಪ್ರಥಮ ಸಂಪುಟ - 1 ರಿಂದ 7 ಸರ್ಗಗಳು**

॥ ಶ್ರೀಃ ॥

# ಶ್ರೀಸುಮಧ್ವವಿಜಯ

## ಸಂಪುಟ - 1

## ಸರ್ಗ 1 ರಿಂದ 7

*ಅನುವಾದಕರು:*

ದಿ॥ ವಿದ್ವಾನ್ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯ

ದಿ॥ ಮಾಗಡಿ ರಂಗನಾಥಾಚಾರ್ಯ

ದಿ॥ ವಿದ್ವಾನ್ ಎಸ್. ವಿ. ಭೀಮಭಟ್ಟರು



*ಪ್ರಕಾಶಕರು:*

ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

# Śrī Sumadhva Vijaya

## Part - 1

Sargas : 1 to 7

*First Edition :* 2012 - 2000 Copies.

Price : Rs.

*Hon. Editors :*
**Śrī Rājā S. Rājagopālāchārya**
*Āpta Kāryadarśī, and*
**Śrī S. N. Suyamīndrāchārya**
*Additional Āpta Kāryadarśī*
Śrī Rāghavendra Swāmy Mutt
Mantrālayam, Dist. Kurnool, A.P.

*Edited By :*

**Vidwān Rājā S. Pavamānāchārya**

**Vidwān Kaḍapa Rāghavendrāchārya**

**Vidwān Dr. N. Vādirājāchārya**

**Vidwān Purāṇik Subrahmaṇyāchārya**

*Published By :*
**Śrī Gurusārvabhouma Sanskrit Vidyāpīṭha**
Jagadguru Śrīman Madhvācharya Mūla Mahāsamsthānam
Śrī Rāghavendra Swāmi Mutt, Mantralayam (A.P)

*Printed By :*
**Dhananjay Warkhedkar**
at : **Sudhā Mudraṇa**
Śankarpuram, Bangalore - 560 004.
☎ 6560 2836, 2672 5340, Mobile : 92430 74414

॥ ಶ್ರೀಮನ್ಮೂಲರಾಮೋ ವಿಜಯತೇ ॥

॥ ಶ್ರೀಗುರುರಾಜೋ ವಿಜಯತೇ ॥



ಸ್ವಸ್ತಿಶ್ರೀ ವಿಜಯಾಭ್ಯುದಯ ಗತ ಶಾಲಿವಾಹನ ಶಕ 1934 ನೇ
ಶ್ರೀನಂದನನಾಮ ಸಂವತ್ಸರ, ಶ್ರಾವಣ ಶುದ್ಧ ನವಮಿ, ದಿನಾಂಕ : 27-7-2012, ಶುಕ್ರವಾರ.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿವೇದವ್ಯಾಸದೇವರ
ದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ
ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ

**ಶ್ರೀ 108 ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ**

## ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ

## ಅನುಗ್ರಹ ಸಂದೇಶ

*''ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ॥''*

ಎಂಬ ವಚನದಂತೆ ಲೋಕದಲ್ಲಿ ಸರ್ವೋತ್ತಮನಾದ ಭಗವಂತನಿಗೆ ಸಮಾನನಾದ ದೇವರೇ ಇಲ್ಲ. ಹಾಗೂ ಜೀವೋತ್ತಮರಾದ ವಾಯ್ವವತಾರಿಗಳಾದ ಮಧ್ವರ ಸಮಾನರಾದ ಗುರುಗಳೇ ಇಲ್ಲ. ಇಂಥಹ ಲೋಕಪಾವನರಾದ ಆಚಾರ್ಯ ಮಧ್ವರ ಚರಿತ್ರ, ಮಹಿಮೆಯ ತಿಳಿವು ಅತ್ಯಂತ ಅವಶ್ಯವಾಗಿದೆ - ಎಂದು ''ಮುಕುಂದಭಕ್ತ್ಯೈ ಗುರುಭಕ್ತಿಜಾಯ್ಕೈ'' ಎಂಬ ಸುಮಧ್ವವಿಜಯದ ಮಾತು ಸಮರ್ಥಿಸುತ್ತದೆ. ಇಂಥಹ ಶ್ರೀಮದಾಚಾರ್ಯರ ಚರಿತ್ರೆಯನ್ನು ಮಹಿಮೆಯನ್ನು, ವರ್ಣಿಸುವ ಸುಮಧ್ವವಿಜಯವೆಂಬ ಮಹಾಕಾವ್ಯವು ಸುಂದರವಾದ ಅನೇಕ ಸುವೃತ್ತಗಳಿಂದ ಶಾಸ್ತ್ರವಿಷಯಗಳಿಂದ ಶೋಭಿತವಾಗಿದೆ. ಇದನ್ನು ಅರ್ಥಪುರಃಸರವಾಗಿ ಎಲ್ಲರಿಗೂ ಮುಟ್ಟಿಸುವ ಯೋಚನೆಯಿಂದ ನಮ್ಮ ಪರಮಗುರುಗಳಾದ ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರು ಶ್ರೀಮಠದ ಅಧಿಕೃತ ಮಾಸಪತ್ರಿಕೆಯಲ್ಲಿ ಧಾರಾವಾಹಿರೂಪದಲ್ಲಿ ಬರುವಂತೆ ಮಾಡಿದ್ದರು. ಇದನ್ನು ಯೋಗ್ಯ ರೀತಿಯಲ್ಲಿ ಅನುವಾದವನ್ನು ಶ್ರೇಷ್ಠ ವಿದ್ವಾಂಸರುಗಳಾದ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು, ಮಾಗಡಿ ರಂಗನಾಥಾಚಾರ್ಯರು ಹಾಗೂ ಎಸ್. ಪಿ. ಭೀಮಭಟ್ಟರು ಮಾಡಿದ್ದರು. ಪ್ರಕೃತ ಇದನ್ನು ಒಂದು ಪುಸ್ತಕರೂಪದಲ್ಲಿ ಹೊರತರುವ ಆದೇಶವನ್ನು ಮಾಡಿದ್ದೆವು. ನಮ್ಮ ಆದೇಶದಂತೆ ವಿದ್ವಾಂಸರಾದ ರಾಜಾ ಎಸ್. ಪವಮಾನಾಚಾರ್ಯರು, ಕಡಪ ರಾಘವೇಂದ್ರಾಚಾರ್ಯರು, ಎನ್. ವಾದಿರಾಜಾಚಾರ್ಯರು, ಪುರಾಣಿಕ ಸುಬ್ರಹ್ಮಣ್ಯಾಚಾರ್ಯರು ಮತ್ತು ನಮ್ಮ ವಿದ್ಯಾಪೀಠದ ಅನೇಕ ವಿದ್ವಾಂಸರ ಸಹಯೋಗದೊಂದಿಗೆ ಸಂಪಾದಿಸಿದ್ದಾರೆ. ಇವರೆಲ್ಲರಿಗೂ ಹಾಗೂ ಅಂದವಾಗಿ ಮುದ್ರಿಸಿದ 'ಸುಧಾ ಮುದ್ರಣ'ದ ಮಾಲೀಕರಾದ ಧನಂಜಯ ವರಖೇಡಕರ್ ಇವರಿಗೂ, ಇದನ್ನು ಕೊಂಡು ಅಧ್ಯಯನವನ್ನು ಮಾಡುವ ಪ್ರತಿಯೊಬ್ಬರಿಗೂ ಸಕಲಸನ್ಮಂಗಳವನ್ನುಂಟು ಮಾಡಲೆಂದು ಅಸ್ಮದ್ಗುರ್ವಂತರ್ಗತ ಶ್ರೀರಾಘವೇಂದ್ರತೀರ್ಥ-ಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಪ್ರಾಸ್ತಾವಿಕ

ವಿಜಯ ಪರಂಪರೆ ಆರಂಭವಾದದ್ದೇ ಶ್ರೀಮಧ್ವಾಚಾರ್ಯರಿಂದ.

ಹಾಗಾಗಿ ಅದು ಮಧ್ವವಿಜಯ.

ಅದು ಸಜ್ಜನರಿಗೆ – ಸಾಧುಸಂತರಿಗೆ ಸಂತಸ ಕೊಡುವ ವಿಜಯವಾದ್ದರಿಂದ ಸುಮಧ್ವವಿಜಯವೂ ಹೌದು.

ಹದಿನಾರು ಸರ್ಗಗಳೂ ಸ್ವರ್ಗದ ಒಂದೊಂದೇ ಮೆಟ್ಟಲು.

ನೀವು ಗಮನಿಸಿರುತ್ತೀರಿ.

ಯತಿಗಳು – ಪೀಠಾಧೀಶ್ವರರು 108 – 1008 ಇಂತಹ ಸಂಖ್ಯೆಗಳನ್ನು ತಮ್ಮ ಹೆಸರಿನ ಮೊದಲು ಹಾಕಿಕೊಳ್ಳುತ್ತಾರೆ. ಸುಮಧ್ವವಿಜಯದ ಒಟ್ಟು ಶ್ಲೋಕಗಳು 1008. ಹೀಗಾಗಿ ಅದನ್ನು ತಮ್ಮ ಹೆಸರಿನ ಮೊದಲು ಜೋಡಿಸಿಕೊಂಡರೆ ತಾವು ಅಂದುಕೊಳ್ಳುವ ಕಾರ್ಯಗಳು ಜಯಪ್ರದವಾಗುತ್ತವೆ ಎಂಬ ನಂಬಿಕೆಯಿಂದ ಹಾಕಿಕೊಳ್ಳುತ್ತಾರೆ ಎಂದೆನಿಸುತ್ತದೆ.

ಸುಮಧ್ವವಿಜಯಕ್ಕೆ ಉಪಲಬ್ಧವಿರುವ ವ್ಯಾಖ್ಯಾನಗಳು ನಾಲಕ್ಕು. ಶ್ರೀಮಧ್ವಾಚಾರ್ಯರ ಪ್ರಮುಖ ಶಿಷ್ಯರು ನಾಲ್ವರು. (ಪದ್ಮನಾಭ-ನರಹರಿ-ಮಾಧವ-ಅಕ್ಷೋಭ್ಯತೀರ್ಥರು).

ಶ್ರೀ ರಾಯರ ಸೋದರಳಿಯಂದಿರಾದ ಆನಂದತೀರ್ಥಾಚಾರ್ಯರ ಸುಮಧ್ವವಿಜಯ ಮೇಲಿನ ವ್ಯಾಖ್ಯಾನ 'ಪದಾರ್ಥದೀಪಿಕಾ' ಮಾತ್ರ ಇನ್ನೂವರೆಗೂ ಮುದ್ರಣಪ್ರಪಂಚ ಕಂಡಿಲ್ಲ. ಚೆನ್ನೈನ O.R.I ನಲ್ಲಿ ಸಂರಕ್ಷಿಸಲ್ಪಟ್ಟಿದೆ.

ಸುಮಧ್ವವಿಜಯ 50ಕ್ಕೂ ಹೆಚ್ಚು ವ್ಯಕ್ತಿಗಳನ್ನು ಉಲ್ಲೇಖಿಸುತ್ತದೆ. 56ಕ್ಕೂ ಮಿಗಿಲಾದ ಸ್ಥಳಗಳನ್ನು ಪರಿಚಯಿಸುತ್ತದೆ.

ಆಚಾರ್ಯರ ಅವತಾರ ಮೂರು.

ಸುಮಧ್ವವಿಜಯವು ಒಂದರ್ಥದಲ್ಲಿ 'ತ್ರಿವೇಣೀ ಸಂಗಮ'. ಇಲ್ಲಿ ಸಂಸ್ಕೃತವಿದೆ. ಭಾಷಾತಜ್ಞರಿಗೆ ಆಸಕ್ತಿ ತರುವ ಮೂರು ಭಾಷೆಗಳ ಕೂಡುವಿಕೆ ಇಲ್ಲಿದೆ. ಕವಿ ನಾರಾಯಣಪಂಡಿತಾಚಾರ್ಯರು ಈ ಕಾವ್ಯದಲ್ಲಿ ಹೇಳಿದ್ದು, ಕೇಳಿದ – ಅಂದಿನ ಕಥನವಲ್ಲ, ತಾವು ನೇರವಾಗಿ ಕಂಡ ಸಮಕಾಲೀನ ಗಣ್ಯ ವ್ಯಕ್ತಿಗಳಲ್ಲಿ ರಾರಾಜಿಸಿದ ಒಬ್ಬ ನಾಯಕ(Hero)ನ ಚಿತ್ರಣ. ಹೀಗಾಗಿ ಐತಿಹಾಸಿಕ ಮಹತ್ವವಿದೆ. ಇದು ಮುಂದೆ 'ರಾಘವೇಂದ್ರವಿಜಯ'ಕ್ಕೆ ಪ್ರೇರಣೆಯಾಯಿತು.

ಸುಮಧ್ವವಿಜಯವನ್ನು ಮುಖೋದ್ಗತವಾಗಿ ಸ್ಪಷ್ಟವಾಗಿ – ಸುಂದರವಾಗಿ ಅನ್ನುವ ಸಾತ್ವಿಕರು ನಮಗೆ ಅಲ್ಲಲ್ಲಿ ಇಂದಿಗೂ ಕಾಣಸಿಗುತ್ತಾರೆ. ಪರಮಪೂಜ್ಯ 1008 ಶ್ರೀ ಸುವಿದ್ಯೇಂದ್ರತೀರ್ಥರು ಅಂತಹವರಲ್ಲಿ ಒಬ್ಬರು. ಅವರ ಅಸ್ಖಲಿತ ಸುಮಧ್ವವಿಜಯ ಪಾರಾಯಣ – ನಮಗೆ ಇವತ್ತಿಗೂ ರೋಮಾಂಚನ.

ಶ್ರೀಹರಿಯ ಬಗೆಗಿನ ಚಿಂತನೆಯನ್ನು – ಸಿದ್ಧಾಂತವನ್ನು ಪ್ರತಿಷ್ಠಾಪಿಸುವ ಸಂದರ್ಭದಲ್ಲಿ, ಆಚಾರ್ಯ ಮಧ್ವರು ಎದುರಿಸಿದ ವಿರೋಧಗಳು – ದೈಹಿಕ ಹೋರಾಟಗಳು ಅಸಂಖ್ಯಾತ. ಆದರೆ ಅದನ್ನು ಸುಲಲಿತವಾಗಿ ಮಂಡಿಸಿದ ರೀತಿ – ''ನ ಚ ಮಧ್ವಸಮೋ ಗುರುಃ'' ।

'ಸರ್ವಮೂಲ' ಅದೊಂದು ಮಹಾನ್ ಆಧ್ಯಾತ್ಮ ಆಗಸದ ಪ್ರಮುಖ ವೆಬ್‌ಸೈಟ್. ಆದರೆ ಅದನ್ನು ನೋಡಬೇಕಾದರೆ 'ಸುಮಧ್ವವಿಜಯ'ವೆಂಬ ಪಾಸ್‌ವರ್ಡ್ ಬೇಕೇಬೇಕು.

ಕವಿ ಡಾ. ಪ್ರದೀಪ್ ಕುಮಾರ್ ಹೆಬ್ರಿ ಬಹಳ ಸೊಗಸಾಗಿ ಕನ್ನಡದ 'ಮಧ್ವಾಚಾರ್ಯ'ರನ್ನು ಚಿತ್ರಿಸಿದ್ದಾರೆ.

ಕನ್ನಡದ ಧೀಮಂತ ಕರುನಾಡ ಹೇಮಂತ
ಕಡಲ ತೀರದ ಪರುಷ ಆಚಾರ್ಯ ಮಧ್ವ ।
ಕನ್ನಡಕೆ ಕೃಷ್ಣನನು ಕಾಯಕಕೆ ತತ್ತ್ವವನು
ತಂದು ಇರಿಸಿದೆ ನೀನು ಬದುಕು ಪೂರ್ಣತೆಗೆ ॥

## ಸುಮಧ್ವ ವಿಜಯ ಮತ್ತು ಕನ್ನಡ

ಮೂಲ ಸಂಸ್ಕೃತದಲ್ಲಿದ್ದ ಅದನ್ನು ಕನ್ನಡ ಭಾಷೆಯಲ್ಲಿ ತಂದವರು ಅನೇಕರು.

ಕೆ. ತಿಮ್ಮಣ್ಣಾಚಾರ್ 'ಶ್ರೀಸುಮಧ್ವವಿಜಯ ಮಹಾಕಾವ್ಯ - ಸಂದರ್ಶನ' (1961) ದಲ್ಲಿ ಇಡೀ ಕಾವ್ಯವನ್ನು ಸಿಂಹಾವಲೋಕನ ಮಾಡಿದ್ದಾರೆ. ವಿಮರ್ಶಕರ ಅಚ್ಚುಮೆಚ್ಚಿನ ಕೃತಿ - ಮಂಡ್ಯ ನಗರದ ಡಾ. ಪ್ರದೀಪ್‌ಕುಮಾರ್ ಹೆಬ್ಬಿಯವರು ಸುಮಾರು ನಾಲ್ಕು ಸಾವಿರ ಪದ್ಯಗಳನ್ನು ಮೀರಿದ ಕನ್ನಡದ ಸರಳ ಛಂದಸ್ಸಿನ ಬೃಹತ್ ಕಾವ್ಯ ರಚಿಸಿದ್ದಾರೆ. ಒಂದು ರೀತಿಯಲ್ಲಿ ಕನ್ನಡದ ಮಧ್ವವಿಜಯ.

ಬೆಂಗಳೂರು ಸಂಸ್ಕೃತ ಕಾಲೇಜಿನ ಕೆ. ನರಸಿಂಹಾಚಾರ್ಯರು ಇಡೀ 16 ಸರ್ಗವನ್ನು ಅನ್ವಯ-ಅರ್ಥ-ತಾತ್ಪರ್ಯಸಹಿತ 1967ರಲ್ಲಿ ಅನುವಾದಿಸಿದ್ದು ಓದುಗರಿಗೆ ಉಪಯುಕ್ತ ಕೃತಿಯಾಯಿತು. ಪಂಡಿತ ಶ್ರೀನಿವಾಸ. ಸು. ಮಠದ ಇವರು ಚಿಕ್ಕದಾದರೂ ಚೊಕ್ಕದಾದ 'ಶ್ರೀಸುಮಧ್ವವಿಜಯ ಮಹಾಕಾವ್ಯ ಚಿಂತನ-ಮಂಥನ' ವೆಂಬ ಕೃತಿಯ ಮೂಲಕ ಜನಸಾಮಾನ್ಯರಿಗೆ ಸರಳವಾಗಿ ಅರ್ಥವಾಗುವಂತೆ ಸಹಾಯ ಮಾಡಿದ್ದಾರೆ. (2007)

ಉಡುಪಿಯಿಂದ 1932ರಲ್ಲೇ ಬಂದ 'ಸುಖಬೋಧಿನೀ' ಎಂಬ ಕನ್ನಡ ಟೀಕಾ ಸಹಿತ ಸುಮಧ್ವ ವಿಜಯದ ರಚನೆಕಾರರು ಬಿ. ಶ್ರೀನಿವಾಸಭಟ್ಟರು. ಪಾವಂಜೆ ಗುರುರಾವ್ ಇವರಿಂದ ಪ್ರಕಾಶಿತ.

1977 ರಲ್ಲಿ ಜೆ. ಹೆಚ್. ಬಿ. ಆಚಾರ್ಯರವರು ಸುಮಧ್ವವಿಜಯ(ವಚನಕಾವ್ಯ)ವನ್ನು ಅನುವಾದಿಸಿ ಕನ್ನಡದ ಸೇವೆ ಸಲ್ಲಿಸಿದರು.

ಧಾರವಾಡ ನಗರದ ಶ್ರೀಮಾಧ್ವ ವಿದ್ಯಾಪೀಠದ ಪಂಡಿತ ತೆರಗುಂಡಿ ಶ್ರೀ ಗೋಪಾಲಕೃಷ್ಣಾಚಾರ್ಯರು 1967ರಲ್ಲಿ ಸಂಪೂರ್ಣ ಸುಮಧ್ವವಿಜಯವನ್ನು ಭಾವಾರ್ಥ, ಅನ್ವಯಾರ್ಥ ಮಾಡಿದ್ದರ ಜೊತೆಜೊತೆಯಾಗಿ ಅದ್ಭುತವಾಗಿ ಭಾಮಿನೀ ಷಟ್ಪದಿಯಲ್ಲಿ ಕನ್ನಡೀಕರಿಸಿ ಕನ್ನಡಿಗರು ಸವಿಯುವಂತೆ ಮಾಡಿದ್ದಾರೆ.

ಸೀತಾಪತಿ .'ಗ,ತಾರ ಬೆಂಗಳೂರಿನ ಶ್ರೀಹರಿಸರ್ವೋತ್ತಮ - ಶ್ರೀವಾಯುಜೀವೋತ್ತಮ ಪ್ರಕಾಶನದಿಂದ ಆದ್ಯಂತ ಶ್ಲೋಕ - ಪ್ರತಿ ಸರ್ಗದ ತಾತ್ಪರ್ಯದೊಡನೆ (16 ಸರ್ಗದ್ದು) ಮುದ್ರಿತವಾಗಿದೆ. ಇದೊಂದು ರೀತಿಯಲ್ಲಿ ಕಾವ್ಯದ ಕಥಾಸಾರ.

ಜನಪ್ರಿಯ ಮತ್ತೊಂದು ಕನ್ನಡ ಅನುವಾದವೆಂದರೆ ಅದು ಮಹಾಮಹೋಪಾಧ್ಯಾಯ, ಮಧ್ವರತ್ನಾಕರರೆಂಬ ಬಿರುದು ಗಳಿಸಿದವರೂ ಸಾಕ್ಷಿ ಕರು, ಶಾಂತರೂ ಆದ ಡಿ॥ ಆಚಾರ್ಯ ಸಾಣೂರು ಭೀಮಭಟ್ಟರದ್ದು. ಈಗಾಗಲೆ ಜನಪ್ರಿಯ ನಾಲ್ಕು ಮುದ್ರಣಗಳಾಗಿವೆ. ಅದರಲ್ಲಿ ಕ್ರಮವಾಗಿ ಮೂಲ-ಅನ್ವಯ-ಅರ್ಥ-ವ್ಯಾಕರಣವಿಶೇಷ - ಅಮಾಂಶಗಳುಳ್ಳ ಅಧ್ಯಯನಶೀಲರಿಗೆ - ಆಸಕ್ತರಿಗೆ ಅತ್ಯಂತ ಉಪಯೋಗವಾಗುವಂತೆ 'ಸಿದ್ಧ ಅಡಿಗೆ'ಯನ್ನು ಮಾಡಿಕೊಟ್ಟಿದ್ದಾರೆ. (ಮೊದಲನೆ ಮುದ್ರಣ 1985).

ದಾಸಸಾಹಿತ್ಯರಂಗದ ಭೀಷ್ಮಾಚಾರ್ಯರಾದ ಲಿಂಗಸ್ಗೂರಿನ ಹನುಮಂತರಾವ್ ವೆಂಕಟರಾವ್ ಕುಲಕರ್ಣಿಯವರು 1936ರಲ್ಲಿಯೇ ಅದ್ಭುತವಾಗಿ ಕನ್ನಡಕ್ಕೆ 'ಸುಮಧ್ವವಿಜಯ'ವನ್ನು ತಂದರು. ಪ್ರತಿಯೊಂದು ಶ್ಲೋಕಕ್ಕೂ ವಾರ್ಧಿಕ ಶೈಲಿಯಲ್ಲಿ ಕನ್ನಡಕ್ಕೆ ತರುವುದು ಸುಲಭದ ಕೆಲಸವಲ್ಲ.

ಇದನ್ನು ಗಮನಿಸಿ ಸುಮಧ್ವವಿಜಯದಲ್ಲಿನ ಹೀಗೊಂದು ಪ್ರಸಂಗ.

ಶ್ರೀ ಸರ್ವಜ್ಞರು ಶಂಖಪೂರಿತ ವಾರಿಯಿಂದ, ಶಾಲಿಗ್ರಾಮಶಿಲೆಗಳಿಗೆ ಅಭಿಷೇಕ ಮಾಡಿ ನಿರ್ಮಾಲ್ಯತೀರ್ಥ ಪ್ರಾಶನ ಮಾಡಿದ ಕ್ರಮವನ್ನು ನಾರಾಯಣಪಂಡಿತಾಚಾರ್ಯರು ಹೇಳಿದ್ದು ಹೀಗಷ್ಟೆ.

ಅಭಿದಧತಿ ಮುನೀಂದ್ರಾ ದ್ವಾದಶಾಬ್ದೋಪವಾಸ-
ಪ್ರತಿಮಫಲಮಲಂ ಯತ್ಸೇವನಂ ಭಕ್ತಿಯುಕ್ತಮ್ ।
ಅಧಿಕಮಮರನದ್ಯಾದ್ಯಾಪ್ಲವಾದನ್ಯಮಾನ್ಯಾ-
ದಪಿಬದಲವಬೋಧೋ ವಿಷ್ಣುಪಾದೋದಕಂ ತತ್ ॥ *(16ನೇ ಸರ್ಗ - 29 ಶ್ಲೋಕ)*

ಇದನ್ನು ಸುಂದರ ವಿಠಲಾಂಕಿತರಾದ ಶ್ರೀ ಗೋರೆಬಾಳ-ಹನುಮಂತರಾಯರು ಕನ್ನಡದ ಕನ್ನಡಿಯಲ್ಲಿ ತೋರಿಸಿದ್ದು ಹೀಗೆ—

ವಾರ್ಧಿಕ ॥ ಮುನಿವರರು ಅತಿ ಭಕುತಿಯಿಂ ಯಾವ ಶ್ರೀವಿಷ್ಣು-
ವಿನ ಸುಪಾದೋದಕಂ ಶಾಲಗ್ರಾಮದ ತೀರ್ಥ-
ವನು ಪ್ರಾಶನಂ ಮಾಡೆ ವಿಧಿವತ್ತು ಹನ್ನೆರಡು ವರ್ಷ ಉಪವಾಸ ಗೈದ ॥

ಅನಶನಂ ವ್ರತಫಲಕೆ ಸರಿ ಧನ್ಯಮಾನ್ಯರಿಂ-
ದನಿತೆ ಗಂಗಾದ್ಯೆಲ್ಲ ತೀರ್ಥ ಮಜ್ಜನದಧಿಕ ।
ಘನಫಲವಿದೆಂದು ಪೇಳುವರಿಂಥ ಮಹಾ ಮಹಿಮೆಯಾ ತೀರ್ಥಪಾನ ಮಾಡ್ದರ್ ॥

ಇಂತಹ ಕನ್ನಡ ಅನುವಾದ ಈಗೆಲ್ಲಿ ಸಾಧ್ಯ. ಇದ್ದರೂ ಓದುವವರು ಯಾರು ?

ಗದಗಿನ ಪ್ರಖ್ಯಾತ ಪ್ರಕಾಶನ ಶ್ರೀನಿವಾಸಾಚಾರ್ಯ ಹೊಂಬಾಳಿಯವರು 1982ರಲ್ಲಿ ಮತ್ತೊಮ್ಮೆ ಕೋಟೇಶ್ವರ ನರಸಿಂಹಾಚಾರ್ಯರ ಕನ್ನಡ ಅನುವಾದವನ್ನು ಪ್ರಕಟಿಸಿದರು.

ಮೂಲ ಸಂಸ್ಕೃತದಲ್ಲಿನ ಹಸ್ತಪ್ರತಿಯಲ್ಲೇ ಉಳಿದು ಹೋಗಿದ್ದ ಶ್ರೀಸುಮಧ್ವವಿಜಯದ ವ್ಯಾಖ್ಯಾನ 'ಶುಭಾಭರಣಂ' ಶ್ರೀವಾರಿ ಅನಂತಾಚಾರ್ಯಸುತ ವಿದ್ವನ್ಮಣಿ ಬಾಲಶರ್ಮ ಅವರು ರಚಿಸಿದ್ದು ಅದನ್ನು ಬೆಳಕಿಗೆ ತಂದಿದ್ದೇ ಅಲ್ಲದೇ ಅನುವಾದ ಮಾಡಿದವರು ವಿದ್ವಾನ್ ಅಯಾಚಿತ ಧೀರೇಂದ್ರಾಚಾರ್ಯರು. 2007ರಲ್ಲಿ ಇದು ಪ್ರಕಟಗೊಂಡಿದೆ. ಇದರ ವಿಶೇಷವೇನೆಂದರೆ ಬಾಲಶರ್ಮರು, ಶ್ರೀಸುಮಧ್ವವಿಜಯದ 1008 ಶ್ಲೋಕಗಳಿಂದ 108 ಶ್ಲೋಕಗಳನ್ನೇ ಆರಿಸಿ ಸಂಸ್ಕೃತದಲ್ಲಿ ವ್ಯಾಖ್ಯಾನ ಮಾಡಿರುವುದು. ಕನ್ನಡ ಅನುವಾದ ಕೂಡ ಅಷ್ಟೇ ವಿದ್ವತ್‌ಪೂರ್ಣವಾಗಿ ಬಂದಿದೆ.

'ಶ್ರೀರಾಘವೇಂದ್ರಾನುಗ್ರಹ' ಪ್ರಶಸ್ತಿ ವಿಜೇತ - ಬನ್ನಂಜೆ ಗೋವಿಂದಾಚಾರ್ಯರು ಶ್ರೀ ವೇದಾಂಗತೀರ್ಥರ ಟೀಕಾನುಸಾರಿಯಾದ ಶ್ರೀಮಧ್ವವಿಜಯವನ್ನು ಕನ್ನಡಕ್ಕೆ ತಂದು ಹೊಸ ಅನುಭವ ತಂದು ಕೊಟ್ಟಿದ್ದಾರೆ (2005).

## ಕೆಲವು ಆಂಗ್ಲ ಪ್ರಕಟಣೆಗಳು

1. **Sumadhva Vijaya** — Edited with Translation and Notes by D. R. Vasudeva Rao., 1983. Srimadananda Tīrtha Publications, Vishakhapatnam.

2. **Sumadhva Vijaya** of Narayana Panditacharya — Rendered into English with text by Prof. G. V. Nadagauda. 1991.

3. **Sri Madhva Vijaya** — (A Gist in English) By 16 Eminent scholars. 1969. Devaranama Bhajana Sangam. Tamilnadu. (Introduction by Dr. B.N.K. Sharma)

4. **Sri Sumadhva Vijaya — Sarasangraha** Tamil and English. Dr. C.B.H. Rao. 1974. Srirangam.

## ಸಂಸ್ಕೃತದಲ್ಲಿರುವ 'ಸುಮಧ್ವವಿಜಯ' ಪ್ರಕಾಶನಗಳು

1. श्रीसुमध्वविजयः — श्रीविश्वपतितीर्थविरचित पदार्थदीपिकासमेता यम्. नारायणाचार्यः, 1951. Udupi (With B.N.K. introduction)

२. श्रीसुमध्वविजयः — छलारी शेषाचार्य व्याख्यानसमेता 1952. श्रीरामकृष्ण द्वैतवेदान्त पाठशाला

३. सुमध्वविजयः — श्रीनारायणपंडिताचार्य-श्रीविश्वपतितीर्थ-श्रीछलारी शेषाचार्य (इति व्याख्यानत्रयोपेता) Edited by A. B. Shyamachar and S. R. Pandurangi. 2000.

४. श्रीसुमध्वविजयः (छलारी व्याख्यानसमेता) — निर्णयसागर मुद्रणालय, मुंबई. 1943.

५. श्रीसुमध्वविजयः — वेदांगतीर्थकृतपदार्थदीपिकया, आचार्यगोविंदकृतया तत्त्वचन्द्रिकया च संवलितः. 2003. Udupi

६. "श्रीसुमध्वविजयसारसङ्ग्रहभूत श्रीशुभाभरणम्" — श्री पुरी अनंताचार्यतनुजेन श्री बालाशर्मणा रचितं व्याख्यानम् - अनु० विद्वान् अयाचित धीरेंद्राचार्य चिंतामणि - 2007

## ಸುಮಧ್ವ ವಿಜಯದ 'ಕನ್ನಡ ಪ್ರಕಟನೆ'ಗಳು

1. ಶ್ರೀಮಧ್ವವಿಜಯ ಸಾರಸಂಗ್ರಹಃ - ಲಿಪಿ ಸಂಸ್ಕೃತ, ಭಾಷೆ ಕನ್ನಡ. ನಾಯಕಲ್ ತಿರುಮಲರಾವ್ ವಕೀಲ್ ಹೈಕೋರ್ಟ್, ಹೈದ್ರಾಬಾದ್ 1933.
2. ಶ್ರೀಮನ್ಮಧ್ವವಿಜಯ ಕಥಾಮೃತಂ - ಸಿ. ಎಮ್. ಪದ್ಮನಾಭಾಚಾರ್ಯ ವಿರಚಿತ - 1991, ಸಂ॥ ತಾಮ್ರಪರ್ಣಿ ಶ್ರೀನಿವಾಸಾಚಾರ್ಯ, ಬೆಂಗಳೂರು.
3. ಶ್ರೀಮನ್ಮಧ್ವಚರಿತಮಾನಸ - (ಶ್ರೀಸುಮಧ್ವವಿಜಯದ ಗದ್ಯಾನುವಾದ) ಮೈ. ಶೇ. - ಅನಂತಪದ್ಮನಾಭರಾವ್, ಬೆಂಗಳೂರು.
4. ಶ್ರೀಸುಮಧ್ವವಿಜಯ ಸಾರಸಂಗ್ರಹ - ಶ್ರೀವಿದ್ಯಾರತ್ನಾಕರತೀರ್ಥ ಶ್ರೀಪಾದಂಗಳವರಿಂದ ರಚಿತ - ಕನ್ನಡ ಅನುವಾದ ಶ್ರೀಗುರುವೇಂಕಟಾಚಾರ್ಯರು. ಬೆಂಗಳೂರು. 1992.
5. ಶ್ರೀಮತ್ಸುಮಧ್ವವಿಜಯವು - ಪ್ರತಿಸರ್ಗದ ಕನ್ನಡ ತಾತ್ಪರ್ಯ ಸಹಿತ. 1927. Udupi ಪಾವಂಜೆ ಗುರುರಾವ್ (ಪ್ರ).

## 'ಸುಮಧ್ವ ವಿಜಯ'ದ ವ್ಯಾಖ್ಯಾನಗಳು *(ಸಂಸ್ಕೃತದಲ್ಲಿದೆ)*

1. ನಾರಾಯಣಪಂಡಿತಾಚಾರ್ಯರು - ಭಾವಪ್ರಕಾಶಿಕಾ (ಭಾವದೀಪ)
2. ವೇದಾಂಗತೀರ್ಥರು - ಪದಾರ್ಥದೀಪಿಕಾ
3. ವಿಶ್ವಪತಿತೀರ್ಥರು - ಪದಾರ್ಥದೀಪಿಕಾ ಉದ್ಬೋಧಿಕಾ
4. ಛಲಾರಿ ನರಸಿಂಹಾಚಾರ್ಯರು - ಮಂದೋಪಕಾರಿಣೀ
5. ಛಲಾರಿ ಶೇಷಾಚಾರ್ಯರು - ಪ್ರಕಾಶಿಕಾ
6. ಆನಂದತೀರ್ಥಾಚಾರ್ಯರು - ಮಂದೋಪಕಾರಿಣೀ
7. ಮುದ್ಗಲ ಆನಂದತೀರ್ಥಾಚಾರ್ಯ
8. ಲಿಂಗೇರಿ ವ್ಯಾಸಾಚಾರ್ಯರು
9. ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು

(7–9) ಇವರೆಲ್ಲರೂ ವ್ಯಾಖ್ಯಾನ ರಚಿಸಿರುತ್ತಾರೆ.

## 'ಸುಮಧ್ವ ವಿಜಯ'ಕ್ಕೆ ಸಂಬಂಧಿಸಿದ ಕೃತಿಗಳು *(ಸಂಸ್ಕೃತದಲ್ಲಿವೆ)*

1. ಅಣುಮಧ್ವವಿಜಯ: (ಪ್ರಮೇಯನವಮಾಲಿಕಾ) - ಶ್ರೀನಾರಾಯಣಪಂಡಿತಾಚಾರ್ಯರು.
2. ಗೂಢಭಾವಪ್ರಕಾಶಿಕಾ - ಶ್ರೀರಾಘವೇಂದ್ರತೀರ್ಥರು
3. ವೇದಾಂಗತೀರ್ಥರು
4. ಸತ್ಯವ್ರತ ತೀರ್ಥರು
5. ರಘುವರ್ಯರು
6. ಛಲಾರೀ ಶ್ರೀನಿವಾಸಾಚಾರ್ಯರು

(3–6) ಇವರು ಕೂಡ ಅಣುಮಧ್ವವಿಜಯಕ್ಕೆ ವ್ಯಾಖ್ಯಾನ ರಚಿಸಿರುತ್ತಾರೆ.

7. ಭಗವಂತರಾಯರು - ಸುಮಧ್ವವಿಜಯ ವ್ಯಾಖ್ಯಾನ ಸಂಗ್ರಹ

8. ವಿದ್ಯಾರತ್ನಾಕರತೀರ್ಥರು - ಸುಮಧ್ವವಿಜಯಸಾರಸಂಗ್ರಹ
9. ಭಾಗವತ ಶ್ಯಾಮಾಚಾರ್ಯರು - ಶ್ರೀಮನ್ಮಧ್ವಕಥಾಸುದರ್ವಣಂ
10. ಎರಿ ದಾಸಾಚಾರ್ಯರು - ಶ್ರೀಮನ್ಮಧ್ವವಿಜಯ - ಶುಭಾಭರಣ
11. ಮಾದನೂರು ವಿಷ್ಣುತೀರ್ಥರು - ಸುಮಧ್ವವಿಜಯ - ಪ್ರಮೇಯಫಲಮಾಲಿಕಾ
12. ಬಿದರಳ್ಳಿ ಶ್ರೀನಿವಾಸಾಚಾರ್ಯರು - ಶ್ರೀಮಧ್ವನಾಮಾವಲಿಃ

ಪ್ರಸ್ತುತ ಮಂತ್ರಾಲಯದ ಶ್ರೀಮಠದಿಂದ 'ಸುಮಧ್ವವಿಜಯ'ದ ಕನ್ನಡ ಅನುವಾದ ಹೊರಗೆ ಬರುತ್ತಿದೆ. ಇದು ಈ ಹಿಂದೆ ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯಲ್ಲಿ ಧಾರಾವಾಹಿಯಾಗಿ ಹರಿದು ವಿದ್ವಾಂಸರ - ವಿದ್ಯಾರ್ಥಿಗಳ ಮನಸೂರೆಗೊಂಡಿತ್ತು. ಇಷ್ಟೊಂದು ವಿಸ್ತೃತವಾಗಿ ಕನ್ನಡದಲ್ಲಿ ಇಂತಹ ಪುಸ್ತಕ ಹೊರಬಂದಿಲ್ಲವೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಏಕೆಂದರೆ ಇದು ಜನಸಾಮಾನ್ಯರಿಗೂ ಅಚ್ಚು-ಮೆಚ್ಚು. ವಿದ್ವಾಂಸನಿಗೂ ಬೆಲ್ಲದ ಅಚ್ಚು. ಓತ-ಪ್ರೋತವಾಗಿ ಸಾಗಿದ ಶಬ್ದಸಾಗರವದು. ಕನ್ನಡ ಭಾಷೆಯಲ್ಲಿ ಕನ್ನಡದ ನಾಯಕ ಮಧ್ವಾಚಾರ್ಯರ ಚಿತ್ರಣ ಕೊಟ್ಟ ಕಾವ್ಯವದು. ದಿವಂಗತ ಪಣಿಯಾಡಿ, ಪಂಚಾಂಗಂ ಶ್ರೀ ಲಕ್ಷ್ಮೀನಾರಾಯಣ ಉಪಾಧ್ಯಾಯರು (ಪಿ. ಪಿ. ಲಕ್ಷ್ಮೀ-ನಾರಾಯಣ ಉಪಾಧ್ಯಾಯ), ಶ್ರೀ ಮಾಗಡಿ ರಂಗನಾಥಾಚಾರ್ಯರು, ಮತ್ತು ಶ್ರೀ ಎಸ್. ವಿ. ಭೀಮಭಟ್ಟರು ಶ್ರದ್ಧಾ-ಭಕ್ತಿಯಿಂದ ಹೆಣೆದ ವೈಭವದ ಕೃತಿಯಿದು. 'ಶ್ರೀಗುರುಸಾರ್ವಭೌಮ' ಮಾಸಪತ್ರಿಕೆಯಲ್ಲಿ ಆಗಸ್ಟ್ 1978ರಲ್ಲಿ ಧಾರಾವಾಹಿಯಾಗಿ ಆರಂಭವಾಯಿತು. ಡಿಸೆಂಬರ್ 1986 ರಲ್ಲಿ ಪೂರ್ಣವಾಯಿತು.

ಆಶ್ಚರ್ಯವೆಂದರೆ ಅದೇ ತಿಂಗಳಲ್ಲಿ ಅಂದರೆ ದಿನಾಂಕ 11.8.1978ರಲ್ಲಿ ಭಾರತದ ಅಂದಿನ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿಯವರು ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರಿಗೆ 'ರಾಷ್ಟ್ರಪ್ರಶಸ್ತಿ'ಯನ್ನು ಕೊಟ್ಟು ಗೌರವಿಸಿದರು. ಅದಕ್ಕೆ ನಾನು ಮೊದಲು ಹೇಳಿದ್ದು 'ಸುಮಧ್ವವಿಜಯ'ದ ಆರಂಭ 'ವಿಜಯದ ಆರಂಭ'. ಸರಳ ಶೈಲಿ, ಗಂಭೀರ ಭಾಷೆ ವಿಶೇಷಾಂಶಗಳ ಖಜಾನೆ ಇಲ್ಲಿದೆ.

ಕರ್ನಾಟಕದ ಎಲ್ಲ ವಿದ್ಯಾಪೀಠಗಳಲ್ಲಿ ವಿಶೇಷವಾಗಿ ಸಂಸ್ಕೃತ ವೈಷ್ಣವ ವಿದ್ಯಾಪೀಠಗಳಲ್ಲಿ ಪಠ್ಯವಾಗಿ ಅಂಗೀ-ಕರಿಸಬೇಕಾದ - ಅಂಗೀಕರಿಸಬಹುದಾದ ಅನುವಾದ ಇದಾಗಿದೆ.

'ಪತ್ರಿಕೆ'ಯಿಂದ 'ಪುಸ್ತಕ'ಕ್ಕೆ ವಿದ್ವಾನ್ ಧನಂಜಯಾಚಾರ್ಯ ವರಖೇಡಕರ್ ಅಂದವಾಗಿ ರೂಪಾಂತರ ಮಾಡಿ ಕೊಟ್ಟಿದ್ದಾರೆ. ಮಸ್ತಕದಲ್ಲಿಟ್ಟುಕೊಳ್ಳಬಹುದಾದ 'ಅಂಬರಚುಂಬಿತ'ವಿದು. ಈ ಕೃಷಿ ನಿರಂತರವಾಗಿರಲಿ.

ಭಾಟ್ಟಸಂಗ್ರಹದ ಮರುಮುದ್ರಣ, ಗೀತೆಯ 15 ವ್ಯಾಖ್ಯಾನಗಳ ಪ್ರಕಾಶನ, ಶ್ರೀಮನ್‌ನ್ಯಾಯಸುಧೆಯ 16 ರಿಂದ 22ರ ಬೃಹತ್ ಸಂಪುಟಗಳು, ಶ್ರೀರಾಘವೇಂದ್ರವಿಜಯದ ವಿಸ್ತೃತ ವ್ಯಾಖ್ಯಾನಗಳು ಮುಂತಾದ ಗ್ರಂಥಗಳನ್ನು ಹೊರತಂದ ಕೀರ್ತಿ ಶ್ರೀ ಶ್ರೀಸುಶಮೀಂದ್ರತೀರ್ಥರ ವರಕುಮಾರರಾದ ಪರಮಪೂಜ್ಯ ಶ್ರೀ ಶ್ರೀ ಸುಯತೀಂದ್ರ-ತೀರ್ಥರಿಗೆ ಸಲ್ಲುತ್ತದೆ. ಭಕ್ತವೃಂದ ಈ 'ಯತಿಶಿರೋಮಣಿ'ಗಳಿಗೆ ಆಜನ್ಮ ಪರ್ಯಂತ ಋಣಿಯಾಗಿರುತ್ತದೆ. ವಿಷ್ಣುವಿನ ಹೃದಯವಾದ ವೈಷ್ಣವರು ಇದನ್ನು ಯಾವಾಗಲೂ ಧರಿಸಲಿ. ಇದರಿಂದ ಇಲ್ಲಿ ಮತ್ತು ಅಲ್ಲಿ ಎರಡರಲ್ಲೂ ಸುಖವುಂಟು.

*''ಮಧ್ವಸ್ಯ ಕೀರ್ತಿರ್ದಿನನಾಥದೀಪ್ತಿಮ್ ॥''*

ಸಜ್ಜನರ ಕಿಂಕರ

**ರಾಜಾ ಎಸ್. ರಾಜಗೋಪಾಲಾಚಾರ್ಯ**

ಶ್ರೀ.ಶ್ರೀ.ಗಳವರ ಆಪ್ತಕಾರ್ಯದರ್ಶಿ

**ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ**

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಮುನ್ನುಡಿ

ಕರಾಳ ಕಲಿಯುಗದ ಪ್ರಭಾವದಿಂದ ಸಜ್ಜನರು ಕಂಗೆಟ್ಟು ಧರ್ಮಮಾರ್ಗದಿಂದ ಚ್ಯುತರಾಗಲು ಸಜ್ಜನರ ಮೇಲಿನ ಕೃಪೆಯಿಂದ ಬ್ರಹ್ಮಾದಿದೇವತೆಗಳು ಭಗವಂತನನ್ನು ಜಗತ್ಕಲ್ಯಾಣಕ್ಕಾಗಿ ಪ್ರಾರ್ಥಿಸಿದರು. ಮೂರು ಯುಗಗಳಲ್ಲಿ ಮಾತ್ರ ಅವತಾರವುಳ್ಳ ಭಗವಂತನು ಬ್ರಹ್ಮನಿಗೆ ಭೂಲೋಕದಲ್ಲಿ ಅವತಾರವಿಲ್ಲದ್ದನ್ನು ಮನಗಂಡು ಜೀವೋತ್ತಮರಾದ ವಾಯುದೇವರಿಗೆ ಅವತರಿಸಲು ಸೂಚನೆಯನ್ನಿತ್ತರು.

ಭಗವದಾಜ್ಞೆಯನ್ನು ಶಿರಸಾವಹಿಸಿ ವಾಯುದೇವರು ಮಧ್ಯಗೇಹಭಟ್ಟದಂಪತಿಗಳಲ್ಲಿ ವಿಜಯದಶಮಿಯ ಶುಭದಿನದಂದು ಅವತರಿಸಿ ತಂದೆತಾಯಿಗಳಿಂದ ಇಡಲ್ಪಟ್ಟ ವಾಸುದೇವನೆಂಬನಾಮಕರಣದಿಂದ ಪ್ರಸಿದ್ಧರಾದರು. ಬಾಲ್ಯದಲ್ಲೇ ಅನನ್ಯಾದೃಶಮಹಿಮೆಗಳನ್ನು ತೋರಿಸುತ್ತಾ ನಾನು ಜ್ಞಾನಕ್ಕಾಗಿ ಅವತರಿಸಿದ ಅಸುದೇವ = ಪ್ರಾಣದೇವರು ಎಂಬುದನ್ನು ಅಭಿವ್ಯಕ್ತಗೊಳಿಸಿದರು.

ಕಾಲಕ್ಕೆ ಅನುಗುಣವಾಗಿ ವೇದೋಕ್ತ ಸಂಸ್ಕಾರಗಳಿಂದ ಸುಸಂಸ್ಕೃತರಾದ ಇವರು ಉಪನಯನವಾದ ಅನಂತರದಲ್ಲಿ ಅಚ್ಯುತಪ್ರೇಕ್ಷಾಚಾರ್ಯರಿಂದ ಪೂರ್ಣಬೋಧ ಎಂಬ ನಾಮದೊಂದಿಗೆ ತುರ್ಯಾಶ್ರಮವನ್ನು ಸ್ವೀಕರಿಸಿದರು. ಹಂಸ-ನಾಮಕ ಪರಮಾತ್ಮನ ದಿವ್ಯಪೀಠದಲ್ಲಿ ಇವರನ್ನು ಕೂಡಿಸಿ ಅಚ್ಯುತಪ್ರೇಕ್ಷರು ಆನಂದತೀರ್ಥರೆಂಬ ಅನ್ವರ್ಥನಾಮ-ವನ್ನಿತ್ತರು. ಭಗವಂತನ ಆದೇಶದಂತೆ ಸೂತ್ರಭಾಷ್ಯವನ್ನು ರಚಿಸಿ ಅವರನ್ನು ಸಂತೋಷಪಡಿಸಿದರು. ಸಮಸ್ತ ಭಾರತ-ದೇಶವನ್ನು ಸಂಚರಿಸಿ ಆ ಕಾಲದಲ್ಲಿದ್ದ ಇಪ್ಪತ್ತೊಂದು ದುರ್ಮತಗಳನ್ನು ಖಂಡಿಸಿ ಸಿದ್ಧಾಂತಸ್ಥಾಪನೆಯನ್ನು ಮಾಡಿದರು. ಉಪನಿಷತ್ಪ್ರಸ್ಥಾನ, ಸೂತ್ರಪ್ರಸ್ಥಾನ, ಗೀತಾಪ್ರಸ್ಥಾನ, ಪುರಾಣಪ್ರಸ್ಥಾನ ಹೀಗೆ ಹಲವು ವಿಷಯಗಳನ್ನಾಧರಿಸಿ ಮೂವತ್ತೇಳು ಗ್ರಂಥಗಳನ್ನು ರಚನೆ ಮಾಡಿದರು.

ತ್ರಿವಿಕ್ರಮಪಂಡಿತರನ್ನು, ಶೋಭನಭಟ್ಟರನ್ನು ವಾದದಲ್ಲಿ ಗೆದ್ದು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಹೀಗೆ ತಾವು ಸಂಚರಿಸಿದ ಕಾಲದಲ್ಲಿ ಅನೇಕ ಪವಾಡಗಳನ್ನು ತೋರಿಸುವುದರ ಮೂಲಕ ಸಜ್ಜನರನ್ನು ಉದ್ಧಾರಮಾಡಿದರು.

ತಮ್ಮ ಈ ತತ್ತ್ವಜ್ಞಾನದ ಸಂಪ್ರದಾಯದ ಪದ್ಧತಿಯು ಮುಂದುವರಿಯಲು ಪದ್ಮನಾಭತೀರ್ಥರನ್ನು ತಮ್ಮ ಪ್ರಥಮ ಸಂನ್ಯಾಸಿಶಿಷ್ಯರನ್ನಾಗಿ ಸ್ವೀಕರಿಸಿ ಒಂದು ಪೀಠವನ್ನು ಸ್ಥಾಪನೆ ಮಾಡಿದರು. ಉಡುಪಿಯ ಪ್ರಾಂತ್ಯಕ್ಕೆ ಎಂಟು ಜನರನ್ನು ಸಂನ್ಯಾಸಿಶಿಷ್ಯರನ್ನಾಗಿ ಸ್ವೀಕರಿಸಿ ತಾವೇ ಪ್ರತಿಷ್ಠಾಪಿಸಿದ ಶ್ರೀಕೃಷ್ಣನ ಆರಾಧನೆಗೆ, ತತ್ತ್ವಪ್ರಚಾರಕ್ಕಾಗಿ ಮೀಸಲಿಟ್ಟರು. ತಮ್ಮ ಅವತಾರಕಾರ್ಯಸಮಾಪ್ತಿಯಾಗುವ ಪ್ರಸಂಗವು ಒದಗಿಬಂದಾಗ ಉಡುಪಿಯ ಅನಂತೇಶ್ವರದೇವಸ್ಥಾನದಲ್ಲಿ ಶಿಷ್ಯರಿಗೆ ಐತರೇಯೋಪನಿಷತ್ತಿನ ಪಾಠವನ್ನು ಹೇಳುತ್ತಿರುವಾಗ ದೇವತೆಗಳು ಪುಷ್ಪವೃಷ್ಟಿಯನ್ನು ಗೈದರು. ಆ ಪುಷ್ಪದ ರಾಶಿಯಿಂದ ಆಚಾರ್ಯರು ಕಾಣದಿರುವಾಗ ಆ ಪುಷ್ಪಗಳನ್ನು ಸರಿಸಿ ನೋಡಲಾಗಿ ಅಲ್ಲಿ ಶ್ರೀಮದಾಚಾರ್ಯರು ಅದೃಶ್ಯರಾಗಿದ್ದರು.

ಅಂದು ಅದೃಶ್ಯರಾದ ಶ್ರೀಮದಾಚಾರ್ಯರು ಇಂದಿಗೂ ಕೂಡ ಉತ್ತರಬದರಿಕಾಶ್ರಮದಲ್ಲಿ ವೇದವ್ಯಾಸರ ಸನ್ನಿಧಾನದಲ್ಲಿ ಇರುವರು. ಅದಕ್ಕಾಗಿ ''ಅದೃಶ್ಯೋ ರೂಪ್ಯಪೀಠೇಽಸ್ಮಿ ದೃಶ್ಯೋಽಸ್ಮಿ ಬದರೀತಟೇ'' ಎನ್ನುವ ಮಾತು ಪ್ರಚಲಿತವಾಗಿದೆ.

## ಶ್ರೀಮದಾಚಾರ್ಯರು ರಚಿಸಿದ ಗ್ರಂಥಗಳು
## (ಸರ್ವಮೂಲಗ್ರಂಥಗಳು)

*ಗೀತಾಪ್ರಸ್ಥಾನಗ್ರಂಥಗಳು:*

ಶ್ರೀಮದ್ಭಗವದ್ಗೀತಾಭಾಷ್ಯಮ್

ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯಃ

***ಸೂತ್ರಪ್ರಸ್ಥಾನಗ್ರಂಥಗಳು :***

ಶ್ರೀಮದ್ಬ್ರಹ್ಮಸೂತ್ರಭಾಷ್ಯಮ್

ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನಮ್

ಶ್ರೀಮದ್ಬ್ರಹ್ಮಸೂತ್ರಾಣುಭಾಷ್ಯಮ್

ನ್ಯಾಯವಿವರಣಮ್

***ಉಪನಿಷತ್ಪ್ರಸ್ಥಾನಗ್ರಂಥಗಳು :***

ಐತರೇಯೋಪನಿಷದ್ಭಾಷ್ಯಮ್

ಛಾಂದೋಗ್ಯೋಪನಿಷದ್ಭಾಷ್ಯಮ್

ಬೃಹದಾರಣ್ಯಕೋಪನಿಷದ್ಭಾಷಮ್

ಈಶಾವಾಸ್ಯೋಪನಿಷದ್ಭಾಷ್ಯಮ್

ತಲವಕಾರೋಪನಿಷದ್ಭಾಷ್ಯಮ್

ಷಟ್ಪ್ರಶ್ನೋಪನಿಷದ್ಭಾಷ್ಯಮ್

ಕಾಠಕೋಪನಿಷದ್ಭಾಷ್ಯಮ್

ಆಥರ್ವಣೋಪನಿಷದ್ಭಾಷ್ಯಮ್

ಮಾಂಡೂಕ್ಯೋಪನಿಷದ್ಭಾಷ್ಯಮ್

ತೈತ್ತಿರೀಯೋಪನಿಷದ್ಭಾಷ್ಯಮ್

***ಶ್ರುತಿಪ್ರಸ್ಥಾನಗ್ರಂಥ :***

ಋಗ್ಭಾಷ್ಯಮ್

***ಇತಿಹಾಸಪ್ರಸ್ಥಾನಗ್ರಂಥಗಳು :***

ಮಹಾಭಾರತತಾತ್ಪರ್ಯನಿರ್ಣಯಃ

ಯಮಕಭಾರತಮ್

***ಪುರಾಣಪ್ರಸ್ಥಾನಗ್ರಂಥ :***

ಭಾಗವತತಾತ್ಪರ್ಯನಿರ್ಣಯಃ

*ಪ್ರಕರಣಗ್ರಂಥಗಳು :*

ತತ್ತ್ವಸಂಖ್ಯಾನಮ್

ತತ್ತ್ವವಿವೇಕಃ

ತತ್ತ್ವೋದ್ಯೋತಃ

ವಿಷ್ಣುತತ್ತ್ವನಿರ್ಣಯಃ

ಪ್ರಮಾಣಲಕ್ಷಣಮ್

ಕಥಾಲಕ್ಷಣಮ್

ಉಪಾಧಿಖಂಡನಮ್

ಮಾಯಾವಾದಖಂಡನಮ್

ಪ್ರಪಂಚಮಿಥ್ಯಾತ್ವಾನುಮಾನಖಂಡನಮ್

ಕರ್ಮನಿರ್ಣಯಃ

*ಆಚಾರಗ್ರಂಥಗಳು :*

ತಂತ್ರಸಾರಸಂಗ್ರಹಃ

ಸದಾಚಾರಸ್ಮೃತಿಃ

ಜಯಂತೀನಿರ್ಣಯಃ

ಕೃಷ್ಣಾಮೃತಮಹಾರ್ಣವಃ

ಯತಿಪ್ರಣವಕಲ್ಪಃ

*ಸ್ತೋತ್ರಗ್ರಂಥಗಳು :*

ನಖಸ್ತುತಿಃ

ದ್ವಾದಶಸ್ತೋತ್ರಮ್

ಕಂದುಕಸ್ತುತಿಃ (ಪೂರ್ವಾಶ್ರಮದಲ್ಲಿ ರಚಿತವಾದದ್ದು)

## ಸುಮಧ್ವವಿಜಯದ ಬಗ್ಗೆ ಒಂದು ಮಾತು

ಹದಿನಾರು ಸರ್ಗಾತ್ಮಕವಾದ ಈ ಕೃತಿಯು ಮಹಾಕಾವ್ಯವೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಅಪೂರ್ವ ಛಂದಸ್ಸುಗಳಿಂದ ಅಲಂಕೃತವಾದ ಈ ಕಾವ್ಯವು ಶಾಸ್ತ್ರಗ್ರಂಥವೆಂದರೂ ತಪ್ಪಾಗಲಾರದು. ಶ್ರೀಮದಾಚಾರ್ಯರ ನೈಜ ಚರಿತ್ರೆಯನ್ನು ತಿಳಿಸಲು ಹೊರಟ ಈ ಕಾವ್ಯದಲ್ಲಿ ಎಲ್ಲಿಯೂ ಇಲ್ಲದ ಉತ್ಪ್ರೇಕ್ಷೆಗಳನ್ನು ವರ್ಣಿಸಿ ಕಾವ್ಯದ ಸೊಬಗನ್ನು ಹೆಚ್ಚಿಸಿಲ್ಲ ಎಂಬ ಮಾತನ್ನು ಸ್ವಯಂ ನಾರಾಯಣಪಂಡಿತಾಚಾರ್ಯರೇ ತಮ್ಮ ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಈ ಗ್ರಂಥವು ಇವತ್ತು ಸಂಸ್ಕೃತವಾಙ್ಮಯದಲ್ಲಿ ಕಂಡುಬರುವ ಎಲ್ಲ ವಿಜಯಕಾವ್ಯಗಳಿಗೆ ಮೂಲವೆಂದರೆ ತಪ್ಪಾಗಲಾರದು. ಜೀವೋತ್ತಮರಾದ ಇವರ ವಿಶಿಷ್ಟಲೀಲೆಗಳನ್ನು ಇದರಲ್ಲಿ ವರ್ಣಿಸಿರುವುದರಿಂದ ನಿತ್ಯ ಪಾರಾಯಣಕ್ಕೆ ಅತ್ಯಂತ ಸೂಕ್ತವಾದ ಗ್ರಂಥವಾಗಿದೆ.

ಸುಮಧ್ವವಿಜಯದ ಮೇಲೆ ಅನೇಕ ವ್ಯಾಖ್ಯಾನಗಳು ಹೊರಟಿವೆ. ಅವು ಈ ಕೆಳಗಿನಂತೆ ತಿಳಿಯಬಹುದು.

1) ಶ್ರೀ ನಾರಾಯಣ ಪಂಡಿತಾಚಾರ್ಯರ — ಭಾವಪ್ರಕಾಶಿಕಾ
2) ಶ್ರೀ ವೇದಾಂಗತೀರ್ಥರ — ಪದಾರ್ಥದೀಪಿಕಾ
3) ಶ್ರೀ ಸುಮತೀಂದ್ರತೀರ್ಥರ — ವ್ಯಾಖ್ಯಾನ
4) ಶ್ರೀ ವಿಶ್ವಪತಿತೀರ್ಥರ — ಪದಾರ್ಥದೀಪಿಕೋದ್ಬೋಧಿಕಾ
5) ಶ್ರೀ ಲಿಂಗೇರಿ ಶ್ರೀನಿವಾಸಾಚಾರ್ಯರ — ವ್ಯಾಖ್ಯಾನ
6) ಆನಂದತೀರ್ಥಾಚಾರ್ಯರ — ಪದಾರ್ಥಪ್ರಕಾಶಿಕಾ
7) ಛಲಾರಿ ಶೇಷಾಚಾರ್ಯರ — ಮಂದೋಪಕಾರಿಣೀ
8) ಗರುಡವಾಹನ ಲಕ್ಷ್ಮೀನಾರಾಯಣಾಚಾರ್ಯರು
   (ಇವರು ರಾಯರ ಪೂರ್ವಾಶ್ರಮದ ಸಂತತಿ)

ಇದಲ್ಲದೇ ನಮ್ಮ ಶ್ರೀಮಠದ ಪೂರ್ವಿಕ ಗುರುಗಳಾದ ಶ್ರೀಸುಜನೇಂದ್ರತೀರ್ಥರು ಒಂದು ವ್ಯಾಖ್ಯಾನವನ್ನು ಬರೆದಿದ್ದಾರೆಂದು ತಿಳಿದು ಬರುತ್ತದೆ.

ಇತ್ತೀಚಿನ ದಿನಗಳಲ್ಲಿ ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರು ತತ್ವಚಂದ್ರಿಕಾ ಎಂಬ ವ್ಯಾಖ್ಯಾನವನ್ನು ರಚಿಸಿ ಪ್ರಕಾಶನಗೊಳಿಸಿದ್ದಾರೆ.

## ಗ್ರಂಥಕರ್ತೃಗಳ ಪರಿಚಯ

ಶ್ರೀಸುಮಧ್ವವಿಜಯವನ್ನು ಬರೆದ ನಾರಾಯಣಪಂಡಿತಾಚಾರ್ಯರು ಶ್ರೀಸುಬ್ರಹ್ಮಣ್ಯಪಂಡಿತರ ಮೊಮ್ಮಕ್ಕಳು, ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು ಎಂದು ತಿಳಿದು ಬರುತ್ತದೆ. ಆಶುಕವಿಗಳಾದ ಇವರು ಲಿಕುಚವಂಶದವ-ರೆಂದು ಆಂಗೀರಸ ಗೋತ್ರದಲ್ಲಿ ಜನಿಸಿದವರೆಂದು ತಿಳಿದುಬರುತ್ತದೆ. ಎಂಥ ಜಟಿಲವಾದ ಶಾಸ್ತ್ರಪ್ರಮೇಯಗಳನ್ನು ಸುಲಭವಾದ ಕಾವ್ಯಶೈಲಿಯಲ್ಲಿ ಬರೆಯುವುದರಲ್ಲಿ ಅಪ್ರತಿಮರು ಇವರು. ಶ್ರೀಮದಾಚಾರ್ಯರ ವೈಭವವನ್ನು ಕಣ್ಣಾರೆ ಕಂಡು ಪುಟಕ್ಕಿಳಿಸಿದ ಪೂತಾತ್ಮರು.

## ಇವರು ರಚಿಸಿದ ಗ್ರಂಥಗಳು

1) ಸುಮಧ್ವವಿಜಯಃ
2) ಭಾವದೀಪಃ (ಸುಮಧ್ವವಿಜಯಭಾವಪ್ರಕಾಶಿಕಾ)
3) ಅಣುಮಧ್ವವಿಜಯಃ (ಪ್ರಮೇಯನವಮಾಲಿಕಾ)
4) ಮಣಿಮಂಜರೀ
5) ನಯಚಂದ್ರಿಕಾ (ಅನುವ್ಯಾಖ್ಯಾನಟೀಕಾ)
6) ತತ್ತ್ವಮಂಜರೀ (ವಿಷ್ಣುತತ್ತ್ವನಿರ್ಣಯಟೀಕಾ)
7) ಯಮಕಭಾರತಟೀಕಾ
8) ಅಣುಭಾಷ್ಯಟೀಕಾ
9) ಕೃಷ್ಣಾಮೃತಮಹಾರ್ಣವಟೀಕಾ
10) ಮಿಥ್ಯಾತ್ವಾನುಮಾನಖಂಡನಟೀಕಾ (ಶ್ಲೋಕರೂಪ)

11) ಸಂಗ್ರಹರಾಮಾಯಣಮ್ (ನಿರ್ಣಯಾನುಸಾರಿಯಾಗಿ ರಾಮಾಯಣಕಥಾಸಂಗ್ರಹ)

12) ಶುಭೋದಯಮ್ (ಒಂದು ಆಧ್ಯಾತ್ಮಿಕ ಕಾವ್ಯ)

13) ಪಾರಿಜಾತಹರಣಮ್ (ಯಮಕಕಾವ್ಯ)

14) ಯೋಗದೀಪಿಕಾ (ಸದಾಚಾರವಿವರಣರೂಪ ಗ್ರಂಥ)

15) ಮಧ್ವಾಮೃತಮಹಾರ್ಣವಃ (ಶ್ರೀಮಧ್ವಮಾಹಾತ್ಮ್ಯಪ್ರತಿಪಾದಕ ಕೃತಿ)

16) ಅಂಶಾವತಾರ (ಅಕಾರಾದಿಯಾಗಿ ದೇವದೈತ್ಯರ ಅಂಶಾವೇಶಾವತಾರಗಳನ್ನು ನಿರೂಪಿಸುವ ಶ್ಲೋಕರೂಪ ಕೃತಿ)

17) ನರಸಿಂಹಸ್ತುತಿಃ

18) ರಾಮಗೀತ್ಯಷ್ಟಕಮ್

19) ದಾಶರಥ್ಯಷ್ಟಕಮ್

20) ಕೃಷ್ಣಮಾಲಾಸ್ತೋತ್ರಮ್ (ಮಹಾಭಾರತತಾತ್ಪರ್ಯನಿರ್ಣಯೋಕ್ತ-ಕೃಷ್ಣಕಥಾಸಂಗ್ರಹ)

21) ಮಹಾಲಕ್ಷ್ಮೀಸ್ತುತಿಃ

22) ಮಧ್ವಕವಚಮ್

23) ಅಣುವಾಯುಸ್ತುತಿಃ

24) ಶಿವಸ್ತುತಿಃ

25) ತಾರತಮ್ಯಸ್ತೋತ್ರಮ್

- ಇವುಗಳಲ್ಲಿನ ಕೆಲವು ಯಮಕಶ್ಲೋಕಗಳೂ, ಇನ್ನೂ ಕೆಲವು ಸ್ತೋತ್ರಗಳೂ ಸಹ ನಾರಾಯಣಪಂಡಿತರ ಹೆಸರಿನಲ್ಲಿ ಪ್ರಸಿದ್ಧವಾಗಿವೆ.

ಇಂತಹ ಮೇರುಕೃತಿಯನಿಸಿದ ಸುಮಧ್ವವಿಜಯದ ಅಧ್ಯಯನಶೀಲರಾದ ವಿದ್ಯಾರ್ಥಿಗಳಿಗೂ, ಜಿಜ್ಞಾಸುಗಳಿಗೂ ಅತ್ಯಂತ ಉಪಕಾರಕವಾದ ರೀತಿಯಲ್ಲಿ ಪದಚ್ಛೇದ ಅನ್ವಯಾನುಸಾರೇಣ ಅರ್ಥ, ತಾತ್ಪರ್ಯ, ವಿಗ್ರಹ, ವ್ಯಾಕರಣ, ಅಲಂಕಾರ, ಛಂದೋವಿಶೇಷಗಳನ್ನೊಳಗೊಂಡ ರೀತಿಯಲ್ಲಿ ಅನುವಾದಿಸಿ ಈ ಹಿಂದೆ ನಮ್ಮ ಶ್ರೀಮಠದ ಅಧಿಕೃತ ಮಾಸಪತ್ರಿಕೆಯಾದ ಗುರುಸಾರ್ವಭೌಮದಲ್ಲಿ ಧಾರಾವಾಹಿರೂಪದಿಂದ ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ ಶ್ರೀ 1008 ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು ಪ್ರಕಾಶನಗೊಳಿಸಿದ್ದರು. ಇದರ ಅನುವಾದವನ್ನು ಪ್ರಸಿದ್ಧ ವಿದ್ವಾಂಸರಾದ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು, ಮಾಗಡಿ ರಂಗನಾಥಾಚಾರ್ಯರು, ಹಾಗೂ ಎಸ್. ವಿ. ಭೀಮಭಟ್ಟರು, ಮಾಡಿದ್ದರು. ಪ್ರಕೃತ ಈ ಪ್ರಕಾಶನಕಾರ್ಯದಲ್ಲಿ ಮಾರ್ಗದರ್ಶನವನ್ನು ನೀಡಿದ, ಆಗಿನ ಶ್ರೀಗುರು-ಸಾರ್ವಭೌಮ ಪತ್ರಿಕೆಯ ಪ್ರಧಾನ ಸಂಪಾದಕರಾದ ಹಾಗು ನಮ್ಮ ವಿದ್ಯಾಗುರುಗಳಾದ ರಾಜಾ. ಎಸ್. ಗಿರಿಯಾ-ಚಾರ್ಯರ ನೇತೃತ್ವದಲ್ಲಿ ಈ ಅನುವಾದವು ಪ್ರಕಾಶನಗೊಂಡು ಎಲ್ಲರ ಕೈಸೇರಿತು. ಪ್ರಕೃತ ಪ್ರಸ್ತುತ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀ ಶ್ರೀ 1008 ಸುಯತೀಂದ್ರತೀರ್ಥ ಶ್ರೀಪಾದಂಗಳವರು ಮಾಸಪತ್ರಿಕೆಯಲ್ಲಿ ಪ್ರಕಟಗೊಂಡ ಶ್ರೀ ಸುಮಧ್ವವಿಜಯದ ಹದಿನಾರು ಸರ್ಗಾತ್ಮಕವಾದ ಈ ಕೃತಿಯನ್ನು ಸಂಪಾದಿಸಿ, ಪ್ರಕಾಶಿಸಲು ನಮಗೆ ಆದೇಶವನ್ನಿತ್ತಿದ್ದರು. ನಾವು ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದ ಅನೇಕ ವಿದ್ವಾಂಸರ ಸಹಕಾರದೊಂದಿಗೆ ಸಂಪಾದಿಸಿ, ಜಿಜ್ಞಾಸುಗಳ ಕೈಸೇರುವ ಪ್ರಯತ್ನವನ್ನು ಮಾಡಿದ್ದೇವೆ. ಈ ನಿಟ್ಟಿನಲ್ಲಿ ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳಾದ

ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರ ಹಾಗೂ ಹೆಚ್ಚುವರಿ ಆಪ್ತಕಾರ್ಯದರ್ಶಿಗಳಾದ ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರ ಸಹಕಾರವು ಅಭಿನಂದನೀಯವಾಗಿದೆ. ಇಂತಹ ಉತ್ತಮ ಕಾರ್ಯದಲ್ಲಿ ನಮ್ಮನ್ನು ತೊಡಗುವಂತೆ ಮಾಡಿದ ಪರಮಪೂಜ್ಯ ಶ್ರೀಪಾದಂಗಳವರಿಗೆ ನಮ್ಮ ಅನಂತ ಶಿ॥ಸಾ॥ ನಮನಗಳು.

ಹಾಗೆಯೇ ನಮಗೆ ಉತ್ತಮ ಮಾರ್ಗದರ್ಶನವನ್ನು ನೀಡಿದ ನಮ್ಮ ಗುರುಗಳಾದ ಪಂಡಿತಕೇಸರೀ ರಾಜಾ ಎಸ್. ಗಿರಿಯಾಚಾರ್ಯರಿಗೆ ಅನಂತ ನಮನಗಳು. ಹಾಗೆಯೇ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರನ್ನು ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಅಭಿನಂದಿಸುತ್ತೇವೆ ಕರಡು ತಿದ್ದುವ ಕಾರ್ಯದಲ್ಲಿ ಸಹಕರಿಸಿದ ನಮ್ಮ ಶ್ರೀ ಗುರುಸಾರ್ವಭೌಮಸಂಸ್ಕೃತವಿದ್ಯಾಪೀಠದ ವಿದ್ವಾಂಸರಿಗೆ ಹೃತ್ಪೂರ್ವಕ ಧನ್ಯ-ವಾದಗಳು. ಸರಿಯಾದ ಸಮಯಕ್ಕೆ ಅಂದವಾಗಿ ಮುದ್ರಿಸಿದ ಶ್ರೀ ಸುಧಾ ಮುದ್ರಣದ ಮಾಲೀಕರಾದ ಶ್ರೀ ಧನಂಜಯ ವರಖೇಡಕರ್ ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

*ವಿದ್ವಾನ್ ರಾಜಾ ಎಸ್. ಪವಮಾನಾಚಾರ್ಯ*
*ವಿದ್ವಾನ್ ಕಡಪ ರಾಘವೇಂದ್ರಾಚಾರ್ಯ*
*ವಿದ್ವಾನ್ ಡಾ॥ ಎನ್. ವಾದಿರಾಜಾಚಾರ್ಯ*
*ವಿದ್ವಾನ್ ಪುರಾಣಿಕ ಸುಬ್ರಹ್ಮಣ್ಯಾಚಾರ್ಯ*
ಸಂಪಾದಕರು.

## ॥ श्री वेदव्यास भगवान् ॥



## ॥ ಶ್ರೀ ವೇದವ್ಯಾಸ ಭಗವಾನ್ ॥

येन प्रादुरभावि भूमिवलये व्यस्तारि गोसन्ततिः
प्राबोधि श्रुतिपङ्कजं करुणया प्राकाशि तत्त्वं परम् ।
ध्वान्तं ध्वंसमनायि साधुनिकरश्चाकारि सन्मार्गग-
स्तेन व्यासदिवाकरेण सततं मा त्याजि मे मानसम् ॥

॥ अवतारत्रयोपेत-श्रीमध्वाचार्याः ॥

प्रथमो हनुमन्नाम द्वितीयो भीम एव च ।
पूर्णप्रज्ञस्तृतीयस्तु भगवत्कार्यसाधकः ॥



॥ ಅವತಾರತ್ರಯೋಪೇತ-ಶ್ರೀಮಧ್ವಾಚಾರ್ಯಾಃ ॥

ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥

|| श्रीमदानन्दतीर्थभगवत्पादाचार्याः ||

अभ्रमं भङ्गरहितं अजडं विमलं सदा ।
आनन्दतीर्थमतुलं भजे तापत्रयापहम् ॥



|| ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಾಃ ||

ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥

## ॥ श्रीमज्जयतीर्थाः ॥



॥ ಶ್ರೀ ಶ್ರೀ 1008 ಶ್ರೀ ಜಯತೀರ್ಥಾಃ ॥

सत्पद्मबन्धवो यस्य गावो विश्वतमोनुदः ।
स स्यात् तत्त्वप्रकाशाय जयतीर्थरविर्मम ॥

# ॥ श्रीविजयीन्द्रतीर्थाः ॥



॥ ಶ್ರೀ ಶ್ರೀ 1008 ಶ್ರೀ ವಿಜಯೀಂದ್ರತೀರ್ಥಾಃ ॥

धर्मः सत्ये च धीमानहिरिव वचसा भूसुराणां सभायां
जेता भीमैव वादे पवन इव गतौ सम्पदि श्रीरिवाढ्यः ।
धाता ज्ञाता च सर्वानहिपतिशयनं पूजयंस्तोषयंश्च
लोकैः सर्वैश्च पूज्यो भुवि मनुजवरैर्मानितोऽभून्मुनीन्द्रः ॥

## ॥ श्रीराघवेन्द्रतीर्थाः ॥



## ॥ ಶ್ರೀ ಶ್ರೀ 1008 ಶ್ರೀ ರಾಘವೇಂದ್ರತೀರ್ಥಾಃ ॥

चित्ते चेन्मृदुता शिरीषसदृशो ह्यङ्गवीनं शिला
गाम्भीर्यं यदि यस्य सोऽन्धुरुदधिः शास्त्रेषु चेत्पाण्डिती ।
आचार्यो विबुधेशितुः कलयते विद्यार्थितामादरात्
औदार्यं यदि कल्पपादपमुखाः सम्भावयन्तेऽर्थिताम् ॥

## ॥ श्री श्री १००८ श्री सुशमीन्द्रतीर्थाः ॥



## ॥ ಶ್ರೀ ಶ್ರೀ 1008 ಶ್ರೀ ಸುಶಮೀಂದ್ರತೀರ್ಥಾಃ ॥

॥ श्री श्री १००८ श्री सुयतीन्द्रतीर्थाः ॥



॥ ಶ್ರೀ ಶ್ರೀ 1008 ಶ್ರೀ ಸುಯತೀಂದ್ರತೀರ್ಥಾಃ ॥

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಪ್ರಥಮಃ ಸರ್ಗಃ

ಶ್ರೀಮನ್ನಾರಾಯಣನಿಗೆ ನಮಸ್ಕಾರ

**ಕಾಂತಾಯ ಕಲ್ಯಾಣಗುಣೈಕಧಾಮ್ನೇ**
**ನವದ್ಯುನಾಥಪ್ರತಿಮಪ್ರಭಾಯ ।**
**ನಾರಾಯಣಾಯಾಖಿಲಕಾರಣಾಯ**
**ಶ್ರೀಪ್ರಾಣನಾಥಾಯ ನಮಸ್ಕರೋಮಿ ॥ 1 ॥**

**ಪದಚ್ಛೇದ—** ಕಾಂತಾಯ, ಕಲ್ಯಾಣಗುಣೈಕಧಾಮ್ನೇ, ನವದ್ಯುನಾಥಪ್ರತಿಮಪ್ರಭಾಯ, ನಾರಾಯಣಾಯ, ಅಖಿಲಕಾರಣಾಯ, ಶ್ರೀಪ್ರಾಣನಾಥಾಯ, ನಮಃ, ಕರೋಮಿ ।

**ಅನ್ವಯ—** ಕಲ್ಯಾಣಗುಣೈಕಧಾಮ್ನೇ, ನವದ್ಯುನಾಥಪ್ರತಿಮಪ್ರಭಾಯ, ಅಖಿಲಕಾರಣಾಯ, ಶ್ರೀಪ್ರಾಣನಾಥಾಯ, ಕಾಂತಾಯ, ನಾರಾಯಣಾಯ, ನಮಃ, ಕರೋಮಿ ।

**ಅನ್ವಯಾರ್ಥ—**

**ಕಲ್ಯಾಣಗುಣೈಕಧಾಮ್ನೇ** = ಮಂಗಲರೂಪವಾಗಿರುವ ಜ್ಞಾನ, ಆನಂದ ಮುಂತಾದ ಗುಣಗಳಿಗೆ ಮುಖ್ಯವಾದ ಆಶ್ರಯನೂ ಆ ಗುಣಗಳಿಂದ ಅಭಿನ್ನನೂ ಆಗಿರುವ

**ನವದ್ಯುನಾಥಪ್ರತಿಮಪ್ರಭಾಯ** = ಉದಯಿಸುತ್ತಿರುವ ಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಯುಕ್ತನಾಗಿರುವ

**ಅಖಿಲಕಾರಣಾಯ** = ಸಕಲ ಜಗತ್ತಿಗೂ ನಿಮಿತ್ತಕಾರಣನಾಗಿರುವ

**ಶ್ರೀಪ್ರಾಣನಾಥಾಯ** = ಶ್ರೀಲಕ್ಷ್ಮೀದೇವಿಗೆ, ಮುಖ್ಯಪ್ರಾಣನಿಗೂ ಸ್ವಾಮಿಯಾಗಿರುವ, ಅಥವಾ ಲಕ್ಷ್ಮೀದೇವಿಗೆ ಪ್ರಾಣಕಾಂತನಾಗಿರುವ

**ಕಾಂತಾಯ** = ಪರಮ ಸುಂದರನಾಗಿರುವ

**ನಾರಾಯಣಾಯ** = ನಾರಾಯಣನಿಗೆ (ಗೋಸ್ಕರ)

**ನಮಃ ಕರೋಮಿ** = ನಮಸ್ಕಾರವನ್ನು ಮಾಡುತ್ತೇನೆ.

**ತಾತ್ಪರ್ಯ**— ಶ್ರೀಹರಿಯು ಜ್ಞಾನ, ಆನಂದ ಮುಂತಾದ ಅನಂತ ಗುಣಗಳಿಂದ ಯುಕ್ತನಾಗಿರುವನು. ಆ ಗುಣಗಳೂ ಅವನಲ್ಲಿ ಪೂರ್ಣವಾಗಿವೆ. ಅದು ಮಾತ್ರವಲ್ಲ (1) ಆ ಗುಣಗಳಿಂದ ಅಭಿನ್ನವಾದ ಶರೀರವುಳ್ಳವನು, (2) ಎಳೆಯ ಸೂರ್ಯನಿಗೆ ಸದೃಶವಾದ ದೇಹದ ಕಾಂತಿಯುಳ್ಳವನು, (3) ಸಕಲ ಜಗತ್ತಿಗೂ ನಿಮಿತ್ತಕಾರಣನು, (4) ಲಕ್ಷ್ಮೀದೇವಿಗೂ, ಮುಖ್ಯಪ್ರಾಣನಿಗೂ ಸ್ವಾಮಿಯು, (5) ಲಕ್ಷ್ಮೀದೇವಿಗೆ ಪ್ರಾಣನಾಥನು, (6) ಪರಮಸುಂದರನಾದವನು. ಅಂತಹ ನಾರಾಯಣನನ್ನು ನಮಸ್ಕರಿಸುವೆನು.

**ವಿಗ್ರಹ**—

**ಕಲ್ಯಾಣಗುಣೈಕಧಾಮ್ನೇ**— ಕಲ್ಯಾಣಾಶ್ಚ ತೇ ಗುಣಾಶ್ಚ ಕಲ್ಯಾಣಗುಣಾಃ, ಕಲ್ಯಾಣಗುಣಾನಾಂ ಏಕಧಾಮ ಕಲ್ಯಾಣಗುಣೈಕಧಾಮಾ, ತಸ್ಮೈ ಕಲ್ಯಾಣಗುಣೈಕಧಾಮ್ನೇ.

**ನವದ್ಯುನಾಥಪ್ರತಿಮಪ್ರಭಾಯ**— ದಿವಃ ನಾಥಃ ದ್ಯುನಾಥಃ, ನವಶ್ಚಾಸೌ ದ್ಯುನಾಥಶ್ಚ ನವದ್ಯುನಾಥಃ, ನವದ್ಯುನಾಥಸ್ಯ ಪ್ರತಿಮಾ - ಪ್ರಭಾ ಯಸ್ಯ ಸಃ ನವದ್ಯುನಾಥಪ್ರತಿಮಪ್ರಭಾ, ತಸ್ಮೈ ನವದ್ಯುನಾಥ-ಪ್ರತಿಮಪ್ರಭಾಯ.

**ಅಖಿಲಕಾರಣಾಯ**— ಅಖಿಲಸ್ಯ ಕಾರಣಂ ಅಖಿಲಕಾರಣಂ, ತಸ್ಮೈ ಅಖಿಲಕಾರಣಾಯ.

**ಶ್ರೀಪ್ರಾಣನಾಥಾಯ**— ಶ್ರಿಯಃ ಪ್ರಾಣನಾಥಃ ಶ್ರೀಪ್ರಾಣನಾಥಃ, ತಸ್ಮೈ ಶ್ರೀಪ್ರಾಣನಾಥಾಯ. (ಶ್ರೀಶ್ಚ ಪ್ರಾಣೇ ಶ್ರೀಪ್ರಾಣೇ, ಶ್ರೀಪ್ರಾಣಯೋಃ ನಾಥಃ ಶ್ರೀಪ್ರಾಣನಾಥಃ, ತಸ್ಮೈ)

**ಕ್ರಿಯಾಪದ**— ಕರೋಮಿ-ಡುಕೃಞ್ ಕರಣೇ ಕರಣಾರ್ಥಕಾತ್ ಕೃಧಾತೋಃ ಲಟಿ ಉತ್ತಮಪುರುಷೇ ಏಕವಚನೇ 'ಕರೋಮಿ' ಇತಿ ರೂಪಮ್ । ಕರೋತಿ ಕುರುತಃ ಕುರ್ವಂತಿ, ಕರೋಷಿ ಕುರುಥಃ ಕುರುಥ, ಕರೋಮಿ ಕುರ್ವಃ ಕುರ್ಮಃ ॥

**ಅಲಂಕಾರ**— ಈ ಶ್ಲೋಕವು ವೃತ್ತ್ಯನುಪ್ರಾಸಾಲಂಕಾರ (ಶಬ್ದಾಲಂಕಾರ)ದಿಂದ ಕೂಡಿದೆ.

## ವೃತ್ತದ ವಿಚಾರ

1) ಒಂದನೇ ಶ್ಲೋಕದಿಂದ 53ನೇ ಶ್ಲೋಕದವರೆಗೆ ಉಪಜಾತಿವೃತ್ತ. ಇಂದ್ರವಜ್ರಾವೃತ್ತ ಮತ್ತು ಉಪೇಂದ್ರ-ವಜ್ರಾವೃತ್ತಮಿಶ್ರವಾಗಿ ಒಂದೇ ಶ್ಲೋಕದಲ್ಲಿ ಬಂದರೆ ಅದಕ್ಕೆ ಉಪೇಂದ್ರಮಾಲಾವೃತ್ತ ಎಂದು ಹೇಳುತ್ತಾರೆ. ಇದು ಉಪಜಾತಿಯಲ್ಲಿ ಸೇರಿದೆ. ಒಂದು ಪಾದದಲ್ಲಿ 11 ಅಕ್ಷರಗಳಿರುತ್ತವೆ.

ಅ) ಇಂದ್ರವಜ್ರಾವೃತ್ತದ ಲಕ್ಷಣ

ತಗಣ ತಗಣ ಜಗಣ ಗು ಗು

ಸ್ಯಾದಿಂದ್ರ ವಜ್ರಾಯ ದಿ ತೌ ಜ ಗೌ ಗಃ

ಆ) ಉಪೇಂದ್ರವಜ್ರಾವೃತ್ತದ ಲಕ್ಷಣ

ಜಗಣ ತಗಣ ಜಗಣ ಗು ಗು

ಉಪೇಂದ್ರ ವಜ್ರಾಜ ತಜಾಸ್ತ ತೋ ಗೌ

6, 10, 18, 19, 22, 26 ಈ ಸಂಖ್ಯೆಯ ಶ್ಲೋಕಗಳು ಇಂದ್ರವಜ್ರಾವೃತ್ತಗಳು. 25,50 ಇವೆರಡು ಶ್ಲೋಕಗಳು ಉಪೇಂದ್ರವಜ್ರಾವೃತ್ತದಲ್ಲಿದೆ. 53ರಲ್ಲಿ ಇನ್ನುಳಿದ ಶ್ಲೋಕಗಳು ಉಪೇಂದ್ರಮಾಲಾ ಎಂಬ ಉಪಜಾತಿಯಲ್ಲಿ ಸೇರಿವೆ.

2) 54ನೇ ಶ್ಲೋಕವು "ದ್ರುತವಿಲಂಬಿತ" ವೃತ್ತದಲ್ಲಿದೆ. ಅದರ ಲಕ್ಷಣವನ್ನು ಆ ಶ್ಲೋಕದ ವ್ಯಾಖ್ಯಾನದಲ್ಲಿ ಕೊಟ್ಟಿದೆ.

3) 55ನೇ ಶ್ಲೋಕವು "ಮಂದಾಕ್ರಾಂತಾ" ವೃತ್ತದಲ್ಲಿದೆ.

★ ★ ★

ಶ್ರೀಕೃಷ್ಣ-ವೇದವ್ಯಾಸಾವತಾರಗಳ ಸ್ತುತಿ

**ಅನಾಕುಲಂ ಗೋಕುಲಮುಲ್ಲಲಾಸ**
**ಯತ್ಪಾಲಿತಂ ನಿತ್ಯಮನಾವಿಲಾತ್ಮ ।**
**ತಸ್ಮೈ ನಮೋ ನೀರದನೀಲಭಾಸೇ**
**ಕೃಷ್ಣಾಯ ಕೃಷ್ಣಾರಮಣಪ್ರಿಯಾಯ ॥ 2 ॥**

**ಪದಚ್ಛೇದ—** ಅನಾಕುಲಂ, ಗೋಕುಲಂ, ಉಲ್ಲಲಾಸ, ಯತ್ಪಾಲಿತಂ, ನಿತ್ಯಂ, ಅನಾವಿಲಾತ್ಮ, ತಸ್ಮೈ ನಮಃ, ನೀರದನೀಲಭಾಸೇ, ಕೃಷ್ಣಾಯ, ಕೃಷ್ಣಾರಮಣಪ್ರಿಯಾಯ ।

**ಅನ್ವಯ—** ಯತ್ಪಾಲಿತಂ, ಗೋಕುಲಂ, ಅನಾವಿಲಾತ್ಮ, ನಿತ್ಯಂ, ಅನಾಕುಲಂ, ಉಲ್ಲಲಾಸ ನೀರದನೀಲಭಾಸೇ, ಕೃಷ್ಣಾರಮಣಪ್ರಿಯಾಯ, ತಸ್ಮೈ, ಕೃಷ್ಣಾಯ, ನಮಃ ।

**ಶ್ರೀವೇದವ್ಯಾಸದೇವರ ಪರವಾಗಿ ಅರ್ಥವನ್ನು ಹೇಳುವಾಗ**

**ಯತ್ಪಾಲಿತಂ** = ಯಾವ ವೇದವ್ಯಾಸರಿಂದ ಪಾಲಿಸಲ್ಪಟ್ಟ

**ಗೋಕುಲಂ** = ವೇದಸಮೂಹವು

ನಿತ್ಯಂ = ನಾಶರಹಿತವೆಂದು ಸಾಧಿಸಿದ್ದರಿಂದ ನಿತ್ಯವಾಗಿಯೂ

**ಅನಾಕುಲಂ** = ವ್ಯತ್ಯಾಸವಿಲ್ಲದೆಲೆ

**ಅನಾವಿಲಾತ್ಮ** = ಅತಿಸ್ವಚ್ಛವಾಗಿ ಅರ್ಥಗಳನ್ನು ತಿಳಿಸುತ್ತಿರುವುದರಿಂದ ಅತಿಸ್ವಚ್ಛವಾದ ಸ್ವರೂಪದಿಂದ ಯುಕ್ತವಾಗಿಯೂ, **ಉಲ್ಲಲಾಸ** = ಶೋಭಿಸಿತೋ

**ಕೃಷ್ಣಾರಮಣಪ್ರಿಯಾಯ** = ಕೃಷ್ಣಾ ಎಂದು ಪ್ರಸಿದ್ಧಳಾದ ದ್ರೌಪದೀದೇವಿಯ ಪತಿಗಳಾದ ಪಂಚಪಾಂಡವರಿಗೆ ಪ್ರಿಯರಾದ

**ತಸ್ಮೈ ಕೃಷ್ಣಾಯ** = ಆ ಶ್ರೀವೇದವ್ಯಾಸದೇವರಿಗೆ

**ನಮಃ** = ನಮಸ್ಕಾರವಿರಲಿ.

**ಶ್ರೀಕೃಷ್ಣನ ಪರವಾಗಿ ಅರ್ಥವನ್ನು ಹೇಳುವಾಗ**

**ಅನ್ವಯಾರ್ಥ—**

**ಯತ್ಪಾಲಿತಂ** = ಯಾವ ಶ್ರೀಕೃಷ್ಣನಿಂದ ಪಾಲಿಸಲ್ಪಟ್ಟ

**ಗೋಕುಲಂ** = ಗೋವುಗಳ ಸಮೂಹವು, ಅಥವಾ ನಂದಗೋಕುಲ ಮುಂತಾದ ಸ್ಥಾನಗಳು

**ಅನಾವಿಲಾತ್ಮ** = ಭಯ ಮುಂತಾದ ದೋಷಗಳಿಂದ ಕಲುಷಿತವಾಗಿರಲಿಲ್ಲವೋ

**ನಿತ್ಯಂ ಅನಾಕುಲಂ** = ಯಾವಾಗಲೂ ಚಂಚಲವಾಗದೇ, **ಉಲ್ಲಲಾಸ** = ಶೋಭಿಸಿತೋ

**ನೀರದನೀಲಭಾಸೇ** = ಮಳೆಗಾಲದಲ್ಲಿ ಮಳೆಯನ್ನು ಸುರಿಸುತ್ತಿರುವ ಮೇಘದಂತೆ ನೀಲವಾದ ದೇಹದ ಕಾಂತಿಯಿಂದ ಯುಕ್ತನಾಗಿರುವ

**ಕೃಷ್ಣಾರಮಣಪ್ರಿಯಾಯ** = ಕೃಷ್ಣಾ ಎಂದು ಪ್ರಸಿದ್ಧಳಾದ ದ್ರೌಪದೀದೇವಿಯ ಪತಿಗಳಾದ ಪಂಚಪಾಂಡವರಿಗೆ ತುಂಬಾ ಪ್ರಿಯನಾಗಿರುವ

**ತಸ್ಮೈ ಕೃಷ್ಣಾಯ** = ಆ ಶ್ರೀಕೃಷ್ಣನಿಗೆ

**ನಮಃ** = ನಮಸ್ಕಾರವಿರಲಿ.

**ತಾತ್ಪರ್ಯ—** ವಸುದೇವನ ಮಗನಾಗಿ ಅವತರಿಸಿದ ಶ್ರೀಹರಿಯು ಶ್ರೀಕೃಷ್ಣ ಎಂದು ಪ್ರಸಿದ್ಧನಾಗಿರುವನು. ಮಳೆಗಾಲದ ಮೇಘವು ಯಾವ ನೀಲಿಬಣ್ಣವೋ ಆ ನೀಲಿಬಣ್ಣದಿಂದ ಶ್ರೀಕೃಷ್ಣನು ಯುಕ್ತನಾಗಿರುವನು. ಶ್ರೀವೇದವ್ಯಾಸ ದೇವರು ಹಾಗೆಯೇ ಇರುವರು. ದ್ರೌಪದೀದೇವಿಯು ಕೃಷ್ಣಾ ಎಂದು ಪ್ರಸಿದ್ಧಳಾಗಿರುವಳು. ಆ ದ್ರೌಪದೀದೇವಿಗೆ ಐವರು ಪತಿಗಳು. ಆ ಪಾಂಡವರಿಗೆ ಶ್ರೀಕೃಷ್ಣನಲ್ಲಿಯೂ ಶ್ರೀವೇದವ್ಯಾಸದೇವರಲ್ಲಿಯೂ ಅಪಾರವಾದ ಭಕ್ತಿಯಿತ್ತು. ಆದ್ದರಿಂದ ಅವರೆಲ್ಲರಿಗೂ ಶ್ರೀಕೃಷ್ಣನೂ ಶ್ರೀವೇದವ್ಯಾಸದೇವರೂ ಪ್ರಿಯರಾಗಿದ್ದರು.

ಯಾವಾಗಲೂ ಶ್ರೀಕೃಷ್ಣನು ವೃಂದಾವನ ಮುಂತಾದ ಸ್ಥಳಗಳಲ್ಲಿರುವವರನ್ನು ರಕ್ಷಿಸುತ್ತಾ ಅಲ್ಲಿರುವ ಗೋವುಗಳ ಸಮೂಹವನ್ನು ರಕ್ಷಿಸುತ್ತಾ ಗೋವುಗಳಿಗೂ ವೃಂದಾವನ ಮುಂತಾದ ಸ್ಥಳಗಳಿಗೂ ವಿಶೇಷ ಶೋಭೆಯನ್ನು ಕೊಡುತ್ತಿದ್ದನು. ಶ್ರೀವೇದವ್ಯಾಸದೇವರು ವೇದಗಳ ಸಮೂಹವನ್ನು ರಕ್ಷಿಸಿದರು. ಆ ವೇದಗಳು ನಿತ್ಯ ಎಂದು ಸಾಧಿಸುತ್ತಾ ಅವುಗಳನ್ನು ನಾಶ ಮುಂತಾದ ದೋಷಗಳ ಭಯದಿಂದ ರಕ್ಷಿಸಿದರು. ವೇದರಕ್ಷಣೆ ಎಂಬ ಮಹಾಕಾರ್ಯವನ್ನು ಸ್ಥಾಪಿಸಿರುವ ಶ್ರೀವೇದ ವ್ಯಾಸರಿಗೂ ಶ್ರೀಕೃಷ್ಣನಿಗೂ ನಮಸ್ಕರಿಸುತ್ತೇನೆ.

**ವಿಗ್ರಹ—**

**ಅನಾಕುಲಂ—** ನ ಆಕುಲಂ ಅನಾಕುಲಂ ।

**ಗೋಕುಲಂ—** ಗವಾಂ ಕುಲಂ ಗೋಕುಲಂ ।

**ಯತ್ಪಾಲಿತಂ—** ಯೇನ ಪಾಲಿತಂ ಯತ್ಪಾಲಿತಂ ।

**ಅನಾವಿಲಾತ್ಮ—** ನ ಆವಿಲಃ ಅನಾವಿಲಃ, ಅನಾವಿಲಃ ಆತ್ಮಾ ಯಸ್ಯ ತತ್ ಅನಾವಿಲಾತ್ಮ ।

**ನೀರದನೀಲಭಾಸೇ—** ನೀರಂ ದದಾತಿ ಇತಿ ನೀರದಃ, ನೀರದ ಇವ ನೀಲಾಃ ಭಾಃ ಯಸ್ಯ ಸಃ ನೀರದನೀಲಭಾಃ, ತಸ್ಮೈ ನೀರದನೀಲಭಾಸೇ ।

**ಕೃಷ್ಣಾರಮಣಪ್ರಿಯಾಯ—** ಕೃಷ್ಣಾಯಾಃ ರಮಣಾಃ ಕೃಷ್ಣಾರಮಣಾಃ, ಕೃಷ್ಣಾರಮಣಾನಾಂ ಪ್ರಿಯಃ ಕೃಷ್ಣಾರಮಣಪ್ರಿಯಃ, ತಸ್ಮೈ ಕೃಷ್ಣಾರಮಣಪ್ರಿಯಾಯ ।

**ಕ್ರಿಯಾಪದ—** ಉಲ್ಲಲಾಸ ಉತ್ ಇತ್ಯುಪಸರ್ಗಪೂರ್ವಕಾತ್ ಲಸ ವಿಕಾಸೇ ಇತ್ಯಸ್ಮಾತ್ ವಿಕಾಸಾರ್ಥಕ ಲಸ-ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೈಕವಚನೇ ಉಲ್ಲಲಾಸ ಇತಿ ರೂಪಮ್ ।

| | | |
|---|---|---|
| ಉಲ್ಲಲಾಸ | ಲೇಸತುಃ | ಲೇಸುಃ, |
| ಲೇಸಿಥ, | ಉಲೇಸಥುಃ, | ಲೇಸ, |
| ಲಲಾಸ-ಲಲಸ | ಉಲೇಸಿವ | ಲೇಸಿಮ ॥ |

**ಅಲಂಕಾರ—** ಶ್ಲೇಷಾಲಂಕಾರ.

★ ★ ★

ಶ್ರೀಮಧ್ವಕೀರ್ತಿವರ್ಣನೆ

**ಅಪಿ ತ್ರಿಲೋಕ್ಯಾ ಬಹಿರುಲ್ಲಸಂತೀ**
**ತಮೋ ಹರಂತೀ ಮುಹುರಾಂತರಂ ಚ ।**
**ದಿಶ್ಯಾದ್ದೃಶಂ ನೋ ವಿಶದಾಂ ಜಯಂತೀ**
**ಮಧ್ವಸ್ಯ ಕೀರ್ತಿರ್ದಿನನಾಥದೀಪ್ತಿಮ್ ॥ 3 ॥**

**ಪದಚ್ಛೇದ—** ಅಪಿ, ತ್ರಿಲೋಕ್ಯಾಃ, ಬಹಿಃ, ಉಲ್ಲಸಂತೀ, ತಮಃ, ಹರಂತೀ, ಮುಹುಃ, ಆಂತರಂ, ಚ, ದಿಶ್ಯಾತ್, ದೃಶಂ, ನಃ, ವಿಶದಾಂ, ಜಯಂತೀ, ಮಧ್ವಸ್ಯ, ಕೀರ್ತಿಃ, ದಿನನಾಥದೀಪ್ತಿಂ ।

**ಅನ್ವಯ—** ತ್ರಿಲೋಕ್ಯಾಃ ಬಹಿಃ ಅಪಿ ಉಲ್ಲಸಂತೀ, ಆಂತರಂ ಚ ತಮಃ ಮುಹುಃ ಹರಂತೀ, ದಿನನಾಥದೀಪ್ತಿಂ ಜಯಂತೀ, ಮಧ್ವಸ್ಯ ಕೀರ್ತಿಃ, ನಃ ವಿಶದಾಂ ದೃಶಂ ದಿಶ್ಯಾತ್ ।

**ಅನ್ವಯಾರ್ಥ—**

**ತ್ರಿಲೋಕ್ಯಾಃ ಬಹಿಃ ಅಪಿ** = ಮೂರು ಲೋಕಗಳ ಹೊರಗೂ ಸಹ

**ಉಲ್ಲಸಂತೀ** = ಪ್ರಕಾಶಿಸುತ್ತಿರುವ

**ಮುಹುಃ** = ಪುನಃ

**ಆಂತರಂ ಚ** = ಒಳಗೂ ಇರುವ

**ತಮಃ ಹರಂತೀ** = ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುತ್ತಿರುವ

**ದಿನನಾಥದೀಪ್ತಿಂ ಜಯಂತೀ** = ದಿನಗಳಿಗೆ ಅಧಿಪತಿಯಾಗಿರುವ ಸೂರ್ಯನ ಪ್ರಕಾಶವನ್ನು ಜಯಿಸುತ್ತಿರುವ

**ಮಧ್ವಸ್ಯ ಕೀರ್ತಿಃ** = ಶ್ರೀಮಧ್ವಾಚಾರ್ಯರ ಕೀರ್ತಿಯು

**ವಿಶದಾಂ ದೃಶಂ** = ನಿರ್ಮಲವಾದ ಜ್ಞಾನವನ್ನು

**ನಃ ದಿಶ್ಯಾತ್** = ನಮಗೆ ಕೊಡಲಿ

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಕೀರ್ತಿಯನ್ನು ಈ ಶ್ಲೋಕದಲ್ಲಿ ಹೊಗಳುತ್ತಿದ್ದಾರೆ. ಶ್ರೀಮಧ್ವಾಚಾರ್ಯರ ಕೀರ್ತಿಯು ದಿನಗಳಿಗೆ ನಾಥನಾಗಿರುವ ಸೂರ್ಯನ ಪ್ರಕಾಶವನ್ನು ಜಯಿಸುತ್ತಿದೆ. ಸೂರ್ಯನ ಪ್ರಕಾಶವು ಮೂರು ಲೋಕಗಳಲ್ಲಿ ಒಳಗೆ ಮಾತ್ರ ವ್ಯಾಪಿಸಿದೆ. ಶ್ರೀಮಧ್ವಾಚಾರ್ಯರ ಕೀರ್ತಿಯು ಮೂರು ಲೋಕಗಳಿಂದ ಹೊರಗೂ ವ್ಯಾಪಿಸಿದೆ. ಸೂರ್ಯನ ಪ್ರಕಾಶವು ಮನೆಯ ಒಳಗೆ ಇರುವ ಕತ್ತಲೆಯನ್ನು ಮಾತ್ರ ಪರಿಹರಿಸುತ್ತಿದೆ. ಶ್ರೀಮಧ್ವಾಚಾರ್ಯರ ಕೀರ್ತಿಯು ಮನಸ್ಸುಗಳ ಒಳಗೂ ಅಡಗಿರುವ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುತ್ತಿದೆ. ಆದ್ದರಿಂದ ಅತಿ ನಿರ್ಮಲವಾದ ಜ್ಞಾನ ಎಂಬ ದೃಷ್ಟಿಯನ್ನು ನಮಗೆ ಕೊಡಲಿ.

**ಸಮಾಸವಿಗ್ರಹ—**

**ತ್ರಿಲೋಕ್ಯಾಃ—** ತ್ರಯಾಣಾಂ ಲೋಕಾನಾಂ ಸಮಾಹಾರಃ ತ್ರಿಲೋಕೀ, ತಸ್ಯಾಃ ತ್ರಿಲೋಕ್ಯಾಃ ।

**ಉಲ್ಲಸಂತೀ—** ಉಲ್ಲಸತಿ ಇತಿ ಉಲ್ಲಸಂತೀ ।

**ಹರಂತೀ—** ಹರತಿ ಇತಿ ಹರಂತೀ ।

**ಆಂತರಂ—** ಅಂತಃ ವಿದ್ಯಮಾನಂ ಆಂತರಂ ।

**ಜಯಂತೀ—** ಜಯತಿ ಇತಿ ಜಯಂತೀ ।

**ದಿನನಾಥದೀಪ್ತಿಂ—** ದಿನಾನಾಂ ನಾಥಃ ದಿನನಾಥಃ, ದಿನನಾಥಸ್ಯ ದೀಪ್ತಿಃ ದಿನನಾಥದೀಪ್ತಿಃ, ತಾಂ ದಿನನಾಥದೀಪ್ತಿಂ ।

**ಕ್ರಿಯಾಪದ—** ದಿಶ್ಯಾತ್ ದಿಶ ಅತಿಸರ್ಜನೇ ಅತಿಸರ್ಜನಾರ್ಥಕಾತ್ ದಿಶ ಧಾತೋಃ ಪರಸ್ಮೈಪದಿನಃ ಆಶೀರ್ಲಿಙ್ ಪ್ರಥಮಪುರುಷೇ ಏಕವಚನೇ ''ದಿಶ್ಯಾತ್'' ಇತಿ ರೂಪು.

ದಿಶ್ಯಾತ್ ದಿಶ್ಯಾಸ್ತಾಂ ದಿಶ್ಯಾಸುಃ, ದಿಶ್ಯಾಃ ದಿಶ್ಯಾಸ್ತಂ ದಿಶ್ಯಾಸ್ತ, ದಿಶ್ಯಾಸಂ ದಿಶ್ಯಾಸ್ವ ದಿಶ್ಯಾಸ್ಮ

**ಅಲಂಕಾರ—** ವ್ಯತಿರೇಕಾಲಂಕಾರ.

★ ★ ★

ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಸ್ತುತಿ

**ತಮೋನುದಾಽಽನಂದಮವಾಪ ಲೋಕ-**
**ಸ್ತತ್ವಪ್ರದೀಪಾಕೃತಿಗೋಗಣೇನ ।**
**ಯದಾಸ್ಯಶೀತಾಂಶುಭುವಾ ಗುರೂಂಸ್ತಾಂ-**
**ಸ್ತ್ರಿವಿಕ್ರಮಾರ್ಯಾನ್ ಪ್ರಣಮಾಮಿ ವರ್ಯಾನ್ ॥ 4 ॥**

**ಪದಭೇದ—** ತಮೋನುದಾ, ಆನಂದಂ, ಅವಾಪ, ಲೋಕಃ, ತತ್ವಪ್ರದೀಪಾಕೃತಿಗೋಗಣೇನ, ಯದಾಸ್ಯ ಶೀತಾಂಶುಭುವಾ, ಗುರೂನ್, ತಾನ್, ತ್ರಿವಿಕ್ರಮಾರ್ಯಾನ್, ಪ್ರಣಮಾಮಿ, ವರ್ಯಾನ್ ।

**ಅನ್ವಯ—** ಲೋಕಃ, ತಮೋನುದಾ, ಯದಾಸ್ಯಶೀತಾಂಶುಭುವಾ, ತತ್ವಪ್ರದೀಪಾಕೃತಿಗೋಗಣೇನ, ಆನಂದಂ, ಅವಾಪ, ತಾನ್, ಗುರೂನ್, ವರ್ಯಾನ್, ತ್ರಿವಿಕ್ರಮಾರ್ಯಾನ್, ಪ್ರಣಮಾಮಿ ।

**ಅನ್ವಯಾರ್ಥ—**

**ಲೋಕಃ** = ಜನಸಮೂಹ

**ತಮೋನುದಾ** = ಅಜ್ಞಾನವನ್ನು ಪರಿಹರಿಸುತ್ತಿರುವ

**ಯದಾಸ್ಯಶೀತಾಂಶುಭುವಾ** = ಯಾವ ತ್ರಿವಿಕ್ರಮಪಂಡಿತಾಚಾರ್ಯರ ಮುಖವೆಂಬ ಚಂದ್ರನಿಂದ ಹುಟ್ಟಿರುವ

**ತತ್ವಪ್ರದೀಪಾಕೃತಿಗೋಗಣೇನ** = ತತ್ವಪ್ರದೀಪವೆಂಬ (ಗ್ರಂಥದ) ಆಕಾರವುಳ್ಳ ವಾಕ್ಯಗಳ ಸಮೂಹದಿಂದ

**ಆನಂದಂ ಅವಾಪ** = ಸಂತೋಷವನ್ನು ಹೊಂದಿತೋ

**ಗುರೂನ್** = ತಂದೆಗಳಾದ

**ವರ್ಯಾನ್ ತಾನ್ ತ್ರಿವಿಕ್ರಮಾರ್ಯಾನ್** = ಪೂಜ್ಯರಾಗಿರುವ ಅಂತಹ ತ್ರಿವಿಕ್ರಮ ಎಂಬ ಪಂಡಿತಾ-ಚಾರ್ಯರನ್ನು

**ಪ್ರಣಮಾಮಿ** = ನಮಸ್ಕರಿಸುವೆನು.

**ತಾತ್ಪರ್ಯ—** ಶ್ರೀತ್ರಿವಿಕ್ರಮಪಂಡಿತಾಚಾರ್ಯರು ನನ್ನ ತಂದೆಗಳು. ಅವರು ತತ್ವಪ್ರದೀಪ ಎಂಬ ಗ್ರಂಥವನ್ನು ಬರೆದಿರುವರು. ಆ ಗ್ರಂಥವು ತ್ರಿವಿಕ್ರಮಪಂಡಿತಾಚಾರ್ಯರ ಮುಖವೆಂಬ ಚಂದ್ರನಿಂದ ಹೊರಟಿರುತ್ತದೆ. ಅಜ್ಞಾನವನ್ನು ಪರಿಹರಿಸುತ್ತದೆ. ಅಂತಹ ನನ್ನ ತಂದೆಗಳೂ ಗುರುವೂ ಆಗಿರುವ ತ್ರಿವಿಕ್ರಮಪಂಡಿತಾಚಾರ್ಯರೆಂಬ ಮಾನ್ಯರನ್ನು ಭಕ್ತಿಯಿಂದ ನಮಸ್ಕರಿಸುವೆನು.

ವಿಗ್ರಹ—

**ತಮೋನುದಾ—** ತಮಃ (ಅಜ್ಞಾನಂ) ನುದತಿ ಇತಿ ತಮೋನುತ್, ತೇನ ತಮೋನುದಾ ।

**ತತ್ವಪ್ರದೀಪಾಕೃತಿಗೋಗಣೇನ—** ತತ್ವಾನಿ ಪ್ರದೀಪಯತಿ (ಪ್ರಕಾಶಯತಿ) ಇತಿ ತತ್ವಪ್ರದೀಪಃ, ತತ್ವಪ್ರದೀಪಃ ಇತಿ ಆಕೃತಿಃ ಯಸ್ಯ ಸಃ ತತ್ವಪ್ರದೀಪಾಕೃತಿಃ; ಗವಾಂ ಗಣಃ ಗೋಗಣಃ; ತತ್ವಪ್ರದೀಪಾಕೃತಿಶ್ಚಾಸೌ ಗೋಗಣಶ್ಚ ತತ್ವಪ್ರದೀಪಾಕೃತಿಗೋಗಣಃ, ತೇನ ತತ್ವಪ್ರದೀಪಾಕೃತಿಗೋಗಣೇನ ।

**ಯದಾಸ್ಯಶೀತಾಂಶುಭುವಾ—** ಯಸ್ಯ ಆಸ್ಯಂ ಯದಾಸ್ಯಂ, ಶೀತಾಃ ಅಂಶವಃ ಯಸ್ಯ ಸಃ ಶೀತಾಂಶುಃ, ಯದಾಸ್ಯಮೇವ ಶೀತಾಂಶುಃ, ಯದಾಸ್ಯಶೀತಾಂಶುಃ, ಯದಾಸ್ಯಶೀತಾಂಶೋಃ ಭವತಿ ಇತಿ ಯದಾಸ್ಯಶೀತಾಂಶುಭೂಃ, ತೇನ ಯದಾಸ್ಯಶೀತಾಂಶುಭುವಾ ।

**ತ್ರಿವಿಕ್ರಮಾರ್ಯಾನ್—** ತ್ರಿವಿಕ್ರಮ ಇತಿ ಆರ್ಯಾಃ ತ್ರಿವಿಕ್ರಮಾರ್ಯಾಃ, ತಾನ್ ತ್ರಿವಿಕ್ರಮಾರ್ಯಾನ್ ।

ಕ್ರಿಯಾಪದ—

**ಅವಾಪ** - ಅವ ಇತ್ಯುಪಸರ್ಗಪೂರ್ವಕಾತ್ ಆಪ್ಲ್ಯ-ವ್ಯಾಪ್ತೌ ಇತ್ಯಸ್ಮಾತ್ ವ್ಯಾಪ್ತ್ಯರ್ಥಕಾತ್ ಆಪ್ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ ''ಅವಾಪ'' ಇತಿ ರೂಪಮ್ ।

ಅವಾಪ ಅವಾಪತುಃ ಅವಾಪುಃ, ಅವಾಪಿಥ ಅವಾಪಥುಃ ಅವಾಪ, ಅವಾಪ ಅವಾಪಿವ ಅವಾಪಿಮ

**ಪ್ರಣಮಾಮಿ** - ಪ್ರ ಇತ್ಯುಪಸರ್ಗಪೂರ್ವಕಾತ್ ಣಮು-ಪ್ರಹ್ವತ್ವೇ ಶಬ್ದೇ ಚ ಇತ್ಯಸ್ಮಾತ್ ಪ್ರಹ್ವತ್ವಶಬ್ದಾರ್ಥಕಾತ್ ಣಮು-ಧಾತೋಃ ಲಟಿ ಉತ್ತಮಪುರುಷೇ ಏಕವಚನೇ ''ಪ್ರಣಮಾಮಿ'' ಇತಿ ರೂಪಮ್.

ಪ್ರಣಮತಿ ಪ್ರಣಮತಃ ಪ್ರಣಮಂತಿ, ಪ್ರಣಮಸಿ ಪ್ರಣಮಥಃ ಪ್ರಣಮಥ,
ಪ್ರಣಮಾಮಿ ಪ್ರಣಮಾವಃ ಪ್ರಣಮಾಮಃ ।

ಅಲಂಕಾರ— ರೂಪಕಾಲಂಕಾರ.

★ ★ ★

ಶ್ರೀಮಧ್ವಭಕ್ತಿಯಿಂದ ಮಾಧವಾನುಗ್ರಹ

**ಮುಕುಂದಭಕ್ತ್ಯೈ ಗುರುಭಕ್ತಿಜಾಯ್ಯೈ**
**ಸತಾಂ ಪ್ರಸತ್ತ್ಯೈ ಚ ನಿರಂತರಾಯ್ಯೈ ।**
**ಗರೀಯಸೀಂ ವಿಶ್ವಗುರೋರ್ವಿಶುದ್ಧಾಂ**
**ವಕ್ಷ್ಯಾಮಿ ವಾಯೋರವತಾರಲೀಲಾಮ್ ॥ 5 ॥**

ಪದಚ್ಛೇದ— ಮುಕುಂದಭಕ್ತ್ಯೈ, ಗುರುಭಕ್ತಿಜಾಯ್ಯೈ, ಸತಾಂ, ಪ್ರಸತ್ತ್ಯೈ, ಚ, ನಿರಂತರಾಯ್ಯೈ, ಗರೀಯಸೀಂ, ವಿಶ್ವಗುರೋಃ, ವಿಶುದ್ಧಾಂ, ವಕ್ಷ್ಯಾಮಿ, ವಾಯೋಃ, ಅವತಾರಲೀಲಾಮ್ ।

ಅನ್ವಯ— ಗುರುಭಕ್ತಿಜಾಯ್ಯೈ ಮುಕುಂದಭಕ್ತ್ಯೈ, ನಿರಂತರಾಯ್ಯೈ ಸತಾಂ ಪ್ರಸತ್ತ್ಯೈ ಚ, ವಿಶುದ್ಧಾಂ ಗರೀಯಸೀಂ ವಿಶ್ವಗುರೋಃ ವಾಯೋಃ ಅವತಾರಲೀಲಾಂ, ವಕ್ಷ್ಯಾಮಿ ।

ಅನ್ವಯಾರ್ಥ—

**ಗುರುಭಕ್ತಿಜಾಯ್ಯೈ ಮುಕುಂದಭಕ್ತ್ಯೈ** = ಗುರುಭಕ್ತಿಯಿಂದ ಹುಟ್ಟುತ್ತಿರುವ ಮೋಕ್ಷದಾಯಕನಾಗಿರುವ ಶ್ರೀಹರಿಯ ಭಕ್ತಿಯು ಹುಟ್ಟುತ್ತಿರುವುದಕ್ಕೂ

**ನಿರಂತರಾಯ್ಯೆ ಸತಾಂ ಪ್ರಸತ್ತ್ಯೈ ಚ** = ಎಡೆಬಿಡದಿರುವ ಸಜ್ಜನರ ಅನುಗ್ರಹಕ್ಕೋಸ್ಕರವೂ

**ವಿಶ್ವಗುರೋಃ ವಾಯೋಃ** = ರುದ್ರ ಮುಂತಾದ ಸಕಲ ದೇವತೆಗಳಿಗೂ ಗುರುವಾಗಿರುವ ವಾಯುದೇವರ

**ವಿಶುದ್ಧಾಂ ಗರೀಯಸೀಂ** = ಅತ್ಯಂತ ಪರಿಶುದ್ಧವಾಗಿರುವ, ಅತ್ಯಂತ ಉತ್ತಮವಾಗಿರುವ

**ಅವತಾರಲೀಲಾಂ** = ಹನುಮದವತಾರ ಭೀಮಾವತಾರ ಮಧ್ವಾವತಾರಗಳಲ್ಲಿ ಮಾಡಿರುವ ಲೀಲೆಗಳನ್ನು

**ವಕ್ಷ್ಯಾಮಿ** = ಮುಂದೆ ಹೇಳುವೆನು.

**ತಾತ್ಪರ್ಯ—** ವಾಯುದೇವರು ಮೋಕ್ಷಯೋಗ್ಯ ಜೀವರಿಗೆ ಗುರುವಾಗಿರುವುದರಿಂದ ವಿಶ್ವಗುರು ಎಂದೆನಿಸುವರು. ಅವರು ಹನುಮದವತಾರ, ಭೀಮಸೇನಾವತಾರ, ಮಧ್ವಾವತಾರಗಳೆಂಬ ಮೂರು ಅವತಾರಗಳನ್ನು ಸ್ವೀಕರಿಸಿರುವರು. ಆ ಮೂರು ಅವತಾರಗಳಲ್ಲಿಯೂ ನಾನಾವಿಧಗಳಾದ ಲೀಲೆಗಳನ್ನು ಮಾಡಿರುವರು. ಆ ಲೀಲೆಗಳೆಲ್ಲವೂ ಅತ್ಯಂತ ಪರಿಶುದ್ಧವಾದವುಗಳು, ಅತಿ ಶ್ರೇಷ್ಠವಾದವುಗಳು ಮತ್ತು ಮೋಕ್ಷಕ್ಕೆ ಸಾಧನವಾದವುಗಳು. ಮೋಕ್ಷದಾಯಕವಾದದ್ದು ಮುಕುಂದನ ಭಕ್ತಿ. ಆ ಮುಕುಂದಭಕ್ತಿಯು ಗುರುಗಳ ಭಕ್ತಿಯಿಂದ ಹುಟ್ಟುತ್ತದೆ. ಅದು ಮಾತ್ರವಲ್ಲ, ಸಜ್ಜನರ ಅನುಗ್ರಹವೂ ಮುಕುಂದನ ಭಕ್ತಿಗೆ ಸಾಧನವಾಗುತ್ತದೆ. ಆ ಸಜ್ಜನರ ಅನುಗ್ರಹವನ್ನು ಎಡೆಬಿಡದಂತೆ ಸಾಧಿಸಬೇಕು. ಅದಕ್ಕಾಗಿ ವಾಯುದೇವರ ಅವತಾರಲೀಲೆಗಳನ್ನು ಹೇಳುವೆನು.

**ವಿಗ್ರಹ—**

**ಮುಕುಂದಭಕ್ತ್ಯೈ—** ಮುಂ (ಮೋಕ್ಷಂ) ಚ ದದಾತಿ ಇತಿ ಮುಕುಂದಃ, ಮುಕುಂದಸ್ಯ ಭಕ್ತಿಃ ಮುಕುಂದಭಕ್ತಿಃ, ತಸ್ಯೈ ಮುಕುಂದಭಕ್ತ್ಯೈ ।

**ಗುರುಭಕ್ತಿಜಾಯ್ಯೆ—** ಗುರುಷು ಭಕ್ತಿಃ ಗುರುಭಕ್ತಿಃ, ಗುರುಭಕ್ತೇಃ ಜಾಯತ ಇತಿ ಗುರುಭಕ್ತಿಜಾ, ತಸ್ಯೈ ಗುರುಭಕ್ತಿಜಾಯ್ಯೆ ।

**ನಿರಂತರಾಯ್ಯೆ** = ನಿರ್ಗತಂ ಅಂತರಂ ಯಸ್ಯಾಃ ಸಾ ನಿರಂತರಾ, ತಸ್ಯೈ ನಿರಂತರಾಯ್ಯೆ ।

**ಗರೀಯಸೀಂ** = ಅತ್ಯಂತಂ ಗುರ್ವೀ ಗರೀಯಸೀ, ತಾಂ ಗರೀಯಸೀಂ ।

**ವಿಶ್ವಗುರೋಃ** = ವಿಶ್ವೇಷಾಂ ಗುರುಃ ವಿಶ್ವಗುರುಃ, ತಸ್ಯ ವಿಶ್ವಗುರೋಃ ।

**ವಿಶುದ್ಧಾಂ** = ವಿಶೇಷೇಣ ಶುದ್ಧಾ ವಿಶುದ್ಧಾ, ತಾಂ ವಿಶುದ್ಧಾಂ ।

**ಅವತಾರಲೀಲಾಂ** = ಅವತಾರಾಣಾಂ ಲೀಲಾ ಅವತಾರಲೀಲಾ, ತಾಂ ಅವತಾರಲೀಲಾಮ್ ।

**ಕ್ರಿಯಾಪದ—** **ವಕ್ಷ್ಯಾಮಿ** - ವಚ ಪರಿಭಾಷಣೇ ಇತ್ಯಸ್ಮಾತ್ ಪರಿಭಾಷಣಾರ್ಥಕಾತ್ ವಚ ಧಾತೋಃ ಲೃಟ್ ಪರಸ್ಮೈಪದಿನಃ ಉತ್ತಮಪುರುಷೇ ಏಕವಚನೇ ''ವಕ್ಷ್ಯಾಮಿ'' ಇತಿ ರೂಪಮ್ ।

ವಕ್ಷ್ಯತಿ ವಕ್ಷ್ಯತಃ ವಕ್ಷ್ಯಂತಿ, ವಕ್ಷ್ಯಸಿ ವಕ್ಷ್ಯಥಃ ವಕ್ಷ್ಯಥ, ವಕ್ಷ್ಯಾಮಿ ವಕ್ಷ್ಯಾವಃ ವಕ್ಷ್ಯಾಮಃ ।

**ಅಲಂಕಾರ—** ಅರ್ಥಾಂತರನ್ಯಾಸಾಲಂಕಾರ.

★ ★ ★

ಸ್ವಾಹಂಕಾರಖಂಡನ

**ತಾಂ ಮಂತ್ರವರ್ಣೈರನುವರ್ಣನೀಯಾಂ**
**ಶರ್ವೇಂದ್ರಪೂರ್ವೈರಪಿ ವಕ್ತುಕಾಮೇ ।**

**ಸಂಕ್ಷಿಪ್ತವಾಕ್ಯೇ ಮಯಿ ಮಂದಬುದ್ಧೌ**
**ಸಂತೋ ಗುಣಾಢ್ಯಾಃ ಕರುಣಾಂ ಕ್ರಿಯಾಸುಃ ॥6॥**

**ಪದಚ್ಛೇದ—** ತಾಂ, ಮಂತ್ರವರ್ಣೈಃ, ಅನುವರ್ಣನೀಯಾಂ, ಶರ್ವೇಂದ್ರಪೂರ್ವೈಃ, ಅಪಿ, ವಕ್ತುಕಾಮೇ, ಸಂಕ್ಷಿಪ್ತವಾಕ್ಯೇ, ಮಯಿ, ಮಂದಬುದ್ಧೌ ಸಂತಃ, ಗುಣಾಢ್ಯಾಃ, ಕರುಣಾಂ, ಕ್ರಿಯಾಸುಃ ।

**ಅನ್ವಯ—** ಶರ್ವೇಂದ್ರಪೂರ್ವೈಃ ಅಪಿ ಮಂತ್ರವರ್ಣೈಃ ಅನುವರ್ಣನೀಯಾಂ ತಾಂ, ವಕ್ತುಕಾಮೇ, ಮಂದಬುದ್ಧೌ ಸಂಕ್ಷಿಪ್ತವಾಕ್ಯೇ, ಮಯಿ, ಗುಣಾಢ್ಯಾಃ ಸಂತಃ, ಕರುಣಾಂ ಕ್ರಿಯಾಸುಃ ।

**ಅನ್ವಯಾರ್ಥ—**

**ಶರ್ವೇಂದ್ರಪೂರ್ವೈಃ ಅಪಿ** = ರುದ್ರ, ದೇವೇಂದ್ರ ಮೊದಲಾದ ದೇವತೆಗಳಿಂದಲೂ

**ಮಂತ್ರವರ್ಣೈಃ** = 'ಬಳಿತ್ಥಾ ತದ್ವಪುಷೇಽಧಾಯಿ ದರ್ಶತಂ', ಭೂಷನ್ನಯೋಧಿ ಬಭ್ರೂಷು ನಮ್ನತೇ', 'ತಾಂ ಸುತೇ ಕೀರ್ತಿಂ ಮಘವನ್ಮಹಿತ್ವಾ', 'ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ', 'ವಿದ್ವಾನ್ಮಧ್ವ ಉಜ್ಜಭಾರಾ ದೃಶೇ ಕಂ॥ ಇತ್ಯಾದಯೋ ಮಂತ್ರವರ್ಣಾಃ'(ಭಾ.ಪ್ರ.) ಮುಂತಾದ ಮಂತ್ರಗಳಲ್ಲಿರುವ ಅಕ್ಷರಗಳಿಂದ (**ವಿವರಣೆ-** ಕೆಲವು ಕಡೆ ನಮ್ರತೇ ಎಂದು ಪಾಠವಿದೆ. ಆದರೆ ನಮ್ನತೇ ಎನ್ನುವ ಪಾಠವೇ ಸರಿಯಾದುದು. ಅದರ ಪೂರ್ಣಪಾಠ ಈ ರೀತಿ ಇದೆ - ಭೂಷನ್ ನ ಯೋಧಿ ಬಭ್ರೂಷು ನಮ್ನತೇ ವೃಷೇವ ಪತ್ನೀರಭ್ಯೇತಿರೋರುವತ್ ।)

**ಅನುವರ್ಣನೀಯಾಂ ತಾಂ** = ವರ್ಣಿಸಲು ಯೋಗ್ಯವಾಗಿರುವ ಆ ವಾಯುದೇವರ ಅವತಾರಲೀಲೆಯನ್ನು

**ವಕ್ತುಕಾಮೇ** = ಹೇಳಲು ಇಚ್ಛಿಸುತ್ತಿರುವ

**ಮಂದಬುದ್ಧೌ** = ಅತ್ಯಲ್ಪವಿಷಯಕವಾದ ಬುದ್ಧಿಯುಳ್ಳ

**ಸಂಕ್ಷಿಪ್ತವಾಕ್ಯೇ** = ಸಂಕ್ಷೇಪಪದಗಳಸಮೂಹಗಳಿಂದ ಯುಕ್ತನಾಗಿರುವ

**ಮಯಿ** = ನನ್ನಲ್ಲಿ

**ಗುಣಾಢ್ಯಾಃ** = ದೋಷವನ್ನು ಗ್ರಹಿಸದಿರುವಿಕೆ, ಸಾರವನ್ನು ಗ್ರಹಿಸುವಿಕೆ, ದಯಾಲುತ್ವ ಮುಂತಾದ ಅಸಂಖ್ಯಾಕಗಳಾದ ಗುಣಗಳಿಂದ ಸಂಪನ್ನರಾದ

**ಸಂತಃ** = ಉತ್ತಮ ಜನರು

**ಕರುಣಾಂ** = ಕೃಪೆಯನ್ನು

**ಕ್ರಿಯಾಸುಃ** = ಮಾಡಲಿ.

ತಾತ್ಪರ್ಯ— ''ವಾಯುದೇವರ ಅವತಾರಲೀಲೆಯನ್ನು ಹೇಳುವೆನು'' ಎಂದು ಪ್ರತಿಜ್ಞೆಯನ್ನು ಮಾಡಿರುವೆನು. ಆದರೆ ನನ್ನ ಆ ಪ್ರತಿಜ್ಞೆಯು ನಡೆಯಲಾರದೆಂದು ನನಗೆ ತೋರುತ್ತದೆ. ರುದ್ರದೇವರು ನನಗಿಂತ ಉತ್ತಮರೆಂಬ ವಿಷಯದಲ್ಲಿ ಸಂಶಯವಿಲ್ಲ. ದೇವೇಂದ್ರನೂ ನನಗಿಂತ ಉತ್ತಮನೇ ಆಗಿರುವನು. ರುದ್ರ ಮುಂತಾದ ದೇವತೆಗಳು ಶ್ರೀವಾಯುದೇವರ ಅವತಾರಲೀಲೆಗಳನ್ನು ಹೇಳಲು ಪ್ರವರ್ತಿಸಿರುವರು. ಅದೂ ವೇದಗಳಲ್ಲಿರುವ ವಾಕ್ಯಗಳಿಂದ ಸ್ತುತಿಸಲು ಆರಂಭಿಸಿದರು. ವೇದಗಳಲ್ಲಿರುವ ಮಂತ್ರಗಳ ವರ್ಣಗಳಿಂದಲೂ ಅಸಾಧ್ಯವಾದ ಶ್ರೀವಾಯುದೇವರ ಅವತಾರಲೀಲಾವರ್ಣನರೂಪವಾದ ವ್ಯಾಪಾರದಲ್ಲಿ ನಾನು ಹೊರಟಿರುವೆನು.

ನನ್ನ ಮಾತುಗಳಾದರೂ ಸಂಕ್ಷೇಪವಾಗಿ ಶ್ರೀವಾಯುದೇವರ ಅವತಾರಲೀಲೆಯನ್ನು ವರ್ಣಿಸುವುದಕ್ಕೆ ಮಾತ್ರ ಶಕ್ತವಾದದ್ದು. ಅಷ್ಟು ವಿಷಯಗಳನ್ನು ಗ್ರಹಿಸುವ ಶಕ್ತಿಯು ನನ್ನ ಅಲ್ಪಮತಿಗೆ ಎಲ್ಲಿದೆ ? ಆದರೆ ಪ್ರಪಂಚದಲ್ಲಿ ಸಜ್ಜನರು

ಅಸಂಖ್ಯಾಕರಿರುವರು. ದೋಷಗಳನ್ನು ಎಣಿಸದಿರುವಿಕೆ, ಗುಣಗಳು ಸ್ವಲ್ಪವಾಗಿದ್ದರೂ ಆ ಗುಣಗಳನ್ನು ಹೆಚ್ಚಾಗಿ ಮಾಡುವಿಕೆ, ದಯಾಳುತ್ವ ಮುಂತಾದ ಗುಣಗಳು ಸಜ್ಜನರಲ್ಲಿವೆ. ಆ ಗುಣಗಳಿಂದ ನನ್ನಲ್ಲಿ ದಯೆಯನ್ನು ತೋರಿಸುವರು.

**ವಿಗ್ರಹ—**

**ಮಂತ್ರವರ್ಣೈಃ—** ಮಂತ್ರೇಷು ವರ್ಣಾಃ ಮಂತ್ರವರ್ಣಾಃ, ತೈಃ ಮಂತ್ರವರ್ಣೈಃ ।

**ಅನುವರ್ಣನೀಯಾಂ—** ಅನುವರ್ಣಯಿತುಂ ಯೋಗ್ಯಾಃ ಅನುವರ್ಣನೀಯಾಃ, ತಾಂ ಅನು- ವರ್ಣನೀಯಾಂ ।

**ಶರ್ವೇಂದ್ರಪೂರ್ವೈಃ—** ಶರ್ವಶ್ಚ ಇಂದ್ರಶ್ಚ ಶರ್ವೇಂದ್ರೌ, ಶರ್ವೇಂದ್ರೌ ಪೂರ್ವೌ ಯೇಷಾಂ ತೇ ಶರ್ವೇಂದ್ರಪೂರ್ವಾಃ, ತೈಃ ಶರ್ವೇಂದ್ರಪೂರ್ವೈಃ ।

**ವಕ್ತುಕಾಮೇ—** ವಕ್ತುಂ ಕಾಮಃ ಯಸ್ಯ ಸಃ ವಕ್ತುಕಾಮಃ, ತಸ್ಮಿನ್ ವಕ್ತುಕಾಮೇ ।

**ಸಂಕ್ಷಿಪ್ತವಾಕ್ಯೇ—** ಸಂಕ್ಷೇಪಣಶೀಲಾನಿ ಸಂಕ್ಷಿಪ್ತಾನಿ, ಸಂಕ್ಷಿಪ್ತಾನಿ ವಾಕ್ಯಾನಿ ಯಸ್ಯ ಸಃ ಸಂಕ್ಷಿಪ್ತವಾಕ್ಯಃ, ತಸ್ಮಿನ್ ಸಂಕ್ಷಿಪ್ತವಾಕ್ಯೇ ।

**ಮಂದಬುದ್ಧೌ—** ಮಂದಾ ಬುದ್ಧಿಃ ಯಸ್ಯ ಸಃ ಮಂದಬುದ್ಧಿಃ, ತಸ್ಮಿನ್ ಮಂದಬುದ್ಧೌ ।

**ಗುಣಾಢ್ಯಾಃ—** ಗುಣೈಃ ಆಢ್ಯಾಃ ಗುಣಾಢ್ಯಾಃ ।

**ಕ್ರಿಯಾಪದ— ಕ್ರಿಯಾಸುಃ** - ಡು ಕೃಞ್ ಕರಣೇ ಇತ್ಯಸ್ಮಾತ್ ಕರಣಾರ್ಥಕಾತ್ ಕೃಧಾತೋಃ ಕರ್ಮಣಿ ಆಶೀರ್ಲಿಙ್ ಪ್ರಥಮಪುರುಷೇ ಬಹುವಚನೇ 'ಕ್ರಿಯಾಸುಃ' ಇತಿ ರೂಪಮ್ ।

ಕ್ರಿಯಾತ್ ಕ್ರಿಯಾಸ್ತಾಂ ಕ್ರಿಯಾಸುಃ, ಕ್ರಿಯಾಃ ಕ್ರಿಯಾಸ್ತಂ ಕ್ರಿಯಾಸ್ತ, ಕ್ರಿಯಾಸಂ ಕ್ರಿಯಾಸ್ವ ಕ್ರಿಯಾಸ್ಮ ॥

**ಅಲಂಕಾರ—** ಅರ್ಥಾಂತರನ್ಯಾಸಾಲಂಕಾರ.

★ ★ ★

ಮನಃಶುದ್ಧಿಗಾಗಿ ಮಹಾತ್ಮರ ಮಹಿಮಾವರ್ಣನೆ

**ಉಚ್ಚಾವಚಾ ಯೇನ ಸಮಸ್ತಚೇಷ್ಟಾಃ**
**ಕಿಂ ತತ್ರ ಚಿತ್ರಂ ಚರಿತಂ ನಿವೇದ್ಯಮ್ ।**
**ಕಿಂ ತೂತ್ತಮಶ್ಲೋಕಶಿಖಾಮಣೀನಾಂ**
**ಮನೋವಿಶುದ್ಧ್ಯೈ ಚರಿತಾನುವಾದಃ ॥ 7 ॥**

**ಪದಚ್ಛೇದ—** ಉಚ್ಚಾವಚಾಃ, ಯೇನ, ಸಮಸ್ತಚೇಷ್ಟಾಃ, ಕಿಂ, ತತ್ರ, ಚಿತ್ರಂ, ಚರಿತಂ, ನಿವೇದ್ಯಂ, ಕಿಂ ತು ಉತ್ತಮಶ್ಲೋಕಶಿಖಾಮಣೀನಾಂ, ಮನೋವಿಶುದ್ಧ್ಯೈ, ಚರಿತಾನುವಾದಃ ।

**ಅನ್ವಯ—** ಉಚ್ಚಾವಚಾಃ, ಸಮಸ್ತಚೇಷ್ಟಾಃ ಯೇನ (ಭವಂತಿ) ತತ್ರ ಕಿಂ ಚರಿತಂ ಚಿತ್ರಂ ನಿವೇದ್ಯಂ, ಕಿಂ ತು ಉತ್ತಮ ಶ್ಲೋಕಶಿಖಾಮಣೀನಾಂ ಚರಿತಾನುವಾದಃ ಮನೋವಿಶುದ್ಧ್ಯೈ (ಭವತಿ) । (ಅತಃ ನಿವೇದನೀಯಮೇವ ।)

**ಅನ್ವಯಾರ್ಥ—**

**ಉಚ್ಚಾವಚಾಃ ಸಮಸ್ತಚೇಷ್ಟಾಃ** = ಪರ್ವತವನ್ನು ಎತ್ತುವುದು ಮುಂತಾದ ಅಸಾಧ್ಯಗಳಾದ ವ್ಯಾಪಾರಗಳೂ ಹುಲ್ಲುಗಳನ್ನು ಎತ್ತುವುದು ಮುಂತಾದ ಸುಲಭಗಳಾದ ಎಲ್ಲಾ ವ್ಯಾಪಾರಗಳೂ

**ಯೇನ (ಭವಂತಿ)** = ಯಾವ ಮುಖ್ಯಪ್ರಾಣದೇವರಿಂದ ಸರ್ವರಿಗೂ ಏರ್ಪಡುತ್ತವೆಯೋ

**ತತ್ರ ಕಿಂ ಚರಿತಂ ಚಿತ್ರಂ ನಿವೇದ್ಯಂ** = ಆ ವ್ಯಾಪಾರಗಳಲ್ಲಿ ಯಾವ ವ್ಯಾಪಾರವು ಆಶ್ಚರ್ಯಕರವೆಂದು ಹೇಳುವುದಕ್ಕೆ ಯೋಗ್ಯವಾಗಿದೆ?

**ಕಿಂ ತು ಉತ್ತಮಶ್ಲೋಕಶಿಖಾಮಣೀನಾಂ ಚರಿತಾನುವಾದಃ** = ಆದರೂ ಪುಣ್ಯಕರವಾದ ಯಶಸ್ಸಿನಿಂದ ಯುಕ್ತರಾದ ಮಹನೀಯರಿಗೆ ತಲೆಯಲ್ಲಿ ಶೋಭಿಸುತ್ತಿರುವ ರತ್ನದಂತಿರುವವರ ಚರಿತ್ರೆಯನ್ನು ಅನುವಾದ ಮಾಡುವುದು,

**ಮನೋವಿಶುದ್ಧ್ಯೈ (ಭವತಿ)** = ಮನಸ್ಸಿನ ವಿಶೇಷವಾದ ಶುದ್ಧಿಗೆ ಅಂದರೆ ರಾಗ, ದ್ವೇಷ ಮುಂತಾದ ದೋಷಗಳ ಪರಿಹಾರಕ್ಕೆ ಉಪಯುಕ್ತವಾಗುತ್ತದೆ.

**ತಾತ್ಪರ್ಯ**— ಪರ್ವತಗಳನ್ನು ಎತ್ತುವುದು ಮುಂತಾದ ಮನುಷ್ಯರಿಂದ ಅಸಾಧ್ಯವಾದ ಕೆಲವು ವ್ಯಾಪಾರಗಳಿವೆ. ಹುಲ್ಲುಗಳನ್ನು ಎತ್ತುವುದು ಮುಂತಾದ ಸರ್ವರಿಂದಲೂ ಸಾಧ್ಯಗಳಾದ ಕೆಲವು ವ್ಯಾಪಾರಗಳಿವೆ. ಈ ಎಲ್ಲಾ ವ್ಯಾಪಾರಗಳೂ ಮುಖ್ಯಪ್ರಾಣದೇವರಿಂದಲೇ ನಡೆಯುತ್ತಿರುತ್ತವೆ. ಹೀಗಿರುವಾಗ ಯಾವ ಚರಿತ್ರೆಯನ್ನು ಆಶ್ಚರ್ಯಕರ ಎಂದು ಹೇಳಲಿ ? ಹಾಗಾದರೆ ಯಾವ ವ್ಯಾಪಾರವನ್ನೂ ಹೇಳದಿರಲೇ ? ಅದು ಸರಿಯಲ್ಲ. ಕೆಲವು ಮಹನೀಯರುಗಳ ಎಲ್ಲಾ ಚರಿತ್ರೆಗಳೂ ಪುಣ್ಯಕರವಾಗಿವೆ. ಅಂತಹ ಮಹನೀಯರ ಚರಿತ್ರೆಗಳ ಅನುವಾದವು ಮನಸ್ಸಿನಲ್ಲಿರುವ ರಾಗ, ದ್ವೇಷ ಮುಂತಾದ ದೋಷಗಳನ್ನು ಪರಿಹರಿಸುತ್ತವೆ. ಆ ರಾಗ, ದ್ವೇಷ ಮುಂತಾದ ದೋಷಗಳ ಪರಿಹಾರಕ್ಕಾಗಿ ಉತ್ತಮಶ್ಲೋಕಶಿಖಾಮಣಿಗಳ ಚರಿತ್ರೆಯನ್ನು ಹೇಳಲೂ ಕೇಳಲೂ ಬೇಕು.

ವಿಗ್ರಹ—

**ಉಚ್ಚಾವಚಾಃ**— ಉಚ್ಚಾಶ್ಚ ಅವಚಾಶ್ಚ ಉಚ್ಚಾವಚಾಃ ।

**ಸಮಸ್ತಚೇಷ್ಟಾಃ**— ಸಮಸ್ತಾನಾಂ ಚೇಷ್ಟಾಃ ಸಮಸ್ತಚೇಷ್ಟಾಃ ।

**ನಿವೇದ್ಯಂ**— ನಿವೇದಯಿತುಂ ಯೋಗ್ಯಂ ನಿವೇದ್ಯಂ ।

**ಉತ್ತಮಶ್ಲೋಕಶಿಖಾಮಣೀನಾಂ**— ಉತ್ತಮಃ ಶ್ಲೋಕಃ ಯೇಷಾಂ ತೇ ಉತ್ತಮಶ್ಲೋಕಾಃ, ಶಿಖಾಯಾಃ ಮಣಯಃ ಇವ ಶಿಖಾಮಣಯಃ, ಉತ್ತಮಶ್ಲೋಕಾನಾಂ ಶಿಖಾಮಣಯಃ ಉತ್ತಮಶ್ಲೋಕಶಿಖಾ-ಮಣಯಃ, ತೇಷಾಂ ಉತ್ತಮಶ್ಲೋಕಶಿಖಾಮಣೀನಾಂ ।

**ಮನೋವಿಶುದ್ಧ್ಯೈ**— ವಿಶೇಷೇಣ ಶುದ್ಧಿಃ ವಿಶುದ್ಧಿಃ, ಮನಸಃ ವಿಶುದ್ಧಿಃ ಮನೋವಿಶುದ್ಧಿಃ, ತಸ್ಯೈ ಮನೋ-ವಿಶುದ್ಧ್ಯೈ ।

**ಚರಿತಾನುವಾದಃ**— ಚರಿತಾನಾಂ ಅನುವಾದಃ ಚರಿತಾನುವಾದಃ ।

**ಅಲಂಕಾರ**— ಅರ್ಥಾಂತರನ್ಯಾಸಾಲಂಕಾರ.

★ ★ ★

ಸುಮಧ್ವವಿಜಯವು ಮಧ್ವಚರಿತ ರತ್ನಮಾಲೆ

**ಮಾಲಾಕೃತಸ್ತಚ್ಚರಿತಾಖ್ಯರತ್ನೈ-**
**ರಸೂಕ್ಷ್ಮದೃಷ್ಟೇಃ ಸಕುತೂಹಲಸ್ಯ ।**
**ಪೂರ್ವಾಪರೀಕಾರಮಥಾಪರಂ ವಾ**
**ಕ್ಷಾಮ್ಯಂತು ಮೇ ಹಂತ ಮುಹುರ್ಮಹಾಂತಃ ॥8॥**

**ಪದಚ್ಛೇದ—** ಮಾಲಾಕೃತಃ, ತಚ್ಚರಿತಾಖ್ಯರತ್ನೈಃ, ಅಸೂಕ್ಷ್ಮದೃಷ್ಟೇಃ, ಸಕುತೂಹಲಸ್ಯ, ಪೂರ್ವಾಪರೀಕಾರಂ, ಅಥ, ಅಪರಂ, ವಾ, ಕ್ಷಾಮ್ಯಂತು, ಮೇ, ಹಂತ, ಮುಹುಃ, ಮಹಾಂತಃ ।

**ಅನ್ವಯ—** ಮಹಾಂತಃ ತಚ್ಚರಿತಾಖ್ಯರತ್ನೈಃ ಮಾಲಾಕೃತಃ ಅಸೂಕ್ಷ್ಮದೃಷ್ಟೇಃ ಸಕುತೂಹಲಸ್ಯ ಪೂರ್ವಾಪರೀಕಾರಂ ಅಥ ಅಪರಂ ವಾ ಮುಹುಃ ಮೇ ಕ್ಷಾಮ್ಯಂತು ಹಂತ ।

**ಅನ್ವಯಾರ್ಥ—**

**ಮಹಾಂತಃ** = ಸಜ್ಜನರು

**ತಚ್ಚರಿತಾಖ್ಯರತ್ನೈಃ** = ಆ ಮುಖ್ಯಪ್ರಾಣದೇವರ ಚರಿತ್ರೆಗಳೆಂಬ ಪದ್ಮರಾಗಮಣಿಗಳು ಮುತ್ತುಗಳು ಮುಂತಾದ ಮಣಿಗಳಿಂದ

**ಮಾಲಾಕೃತಃ** = ಮಾಲೆಗಳನ್ನು ಕಟ್ಟುತ್ತಿರುವ

**ಅಸೂಕ್ಷ್ಮದೃಷ್ಟೇಃ** = ಸೂಕ್ಷ್ಮವಾದ ದೃಷ್ಟಿಯಿಲ್ಲದಿರುವ

**ಸಕುತೂಹಲಸ್ಯ** = ಅತ್ಯಂತ ಕುತೂಹಲದಿಂದ ಯುಕ್ತನಾಗಿರುವ

**ಮೇ** = ನನ್ನ

**ಪೂರ್ವಾಪರೀಕಾರಂ** = ಮೊದಲು ಹೇಳಬೇಕಾದ ವಿಷಯಗಳನ್ನು ಅನಂತರ ಹೇಳುವುದು

**ಅಥ** = ಅಥವಾ

**ಅಪರಂ ವಾ** = ಆಮೇಲೆ ಹೇಳಬೇಕಾದ ವಿಷಯಗಳನ್ನು ಮೊದಲೇ ಹೇಳುವುದು ಮುಂತಾದ ಅಪರಾಧಗಳನ್ನು

**ಮುಹುಃ** = ಮೇಲೆ ಮೇಲೆ

**ಹಂತ** = ದಯೆಯಿಂದ

**ಕ್ಷಾಮ್ಯಂತು** = ಕ್ಷಮಿಸಲಿ.

**ತಾತ್ಪರ್ಯ—** ಶ್ರೀವಾಯುದೇವರ ಚರಿತ್ರೆಗಳೆಂಬ ಪದ್ಮರಾಗಮಣಿಗಳು ಮುತ್ತುಗಳು ಮುಂತಾದ ರತ್ನಗಳಿಂದ ಶ್ರೀಹರಿಗೆ ಮಾಲೆಯನ್ನು ಕಟ್ಟುವುದಾಗಿ ತೀರ್ಮಾನಿಸಿರುವೆನು. ಕಣ್ಣುಗಳು ಮಧ್ಯಸ್ಥವಾಗಿವೆ. ಆದರೂ ಕಟ್ಟಬೇಕೆಂಬ ಆಸೆ ಇದೆ. ಆದರೆ ಮೊದಲು ಹೇಳಬೇಕಾದ ವಿಷಯವನ್ನು ಅನಂತರದಲ್ಲಿಯೂ ಅನಂತರದಲ್ಲಿ ಹೇಳಬೇಕಾದ ವಿಷಯವನ್ನು ಮೊದಲೂ ಹೇಳುತ್ತಿರುವೆನು. ಆದರೂ ಮಾಲೆಯನ್ನು ಕಟ್ಟುವುದು ಎಂಬ ಒಳ್ಳೆಯ ಕೆಲಸಕ್ಕೆ ಹೊರಟಿರುವೆನು. ಇದು ಭಾಗ್ಯವಲ್ಲವೇ? ಈ ಭಾಗ್ಯಶಾಲಿಯಾದ ನನ್ನ ತಪ್ಪುಗಳನ್ನೆಲ್ಲಾ ಮಹಾತ್ಮರಾದ ಸಜ್ಜನರುಗಳು ಕ್ಷಮಿಸಲಿ.

**ವಿಗ್ರಹ—**

**ಮಾಲಾಕೃತಃ—** ಮಾಲಾಂ ಕರೋತೀತಿ ಮಾಲಾಕೃತ್ ತಸ್ಯ - ಮಾಲಾಕೃತಃ ।

**ತಚ್ಚರಿತಾಖ್ಯರತ್ನೈಃ—** ತಸ್ಯಚರಿತಾನಿ ತಚ್ಚರಿತಾನಿ, ತಚ್ಚರಿತಾನಿ ಇತಿ ಆಖ್ಯಾ ಯೇಷಾಂ ತಾನಿ ತಚ್ಚರಿತಾಖ್ಯಾನಿ, ತಚ್ಚರಿತಾಖ್ಯಾನಿ ಚ ತಾನಿ ರತ್ನಾನಿ ಚ ತಚ್ಚರಿತಾಖ್ಯರತ್ನಾನಿ ತೈಃ ತಚ್ಚರಿತಾಖ್ಯರತ್ನೈಃ ।

**ಅಸೂಕ್ಷ್ಮದೃಷ್ಟೇಃ—** ಸೂಕ್ಷ್ಮಾ ನ ಭವತೀತಿ ಅಸೂಕ್ಷ್ಮಾ, ಅಸೂಕ್ಷ್ಮಾ ದೃಷ್ಟಿಃ ಯಸ್ಯ ಸಃ ಅಸೂಕ್ಷ್ಮದೃಷ್ಟಿಃ ತಸ್ಯ ಅಸೂಕ್ಷ್ಮದೃಷ್ಟೇಃ ।

**ಸಕುತೂಹಲಸ್ಯ—** ಕುತೂಹಲೇನ ಸಹಿತಃ ಸಕುತೂಹಲಃ ತಸ್ಯ ಸಕುತೂಹಲಸ್ಯ ।

**ಪೂರ್ವಾಪರೀಕಾರಂ—** ಅಪರತ್ವೇನ ಕಾರಃ ಅಪರೀಕಾರಃ, ಪೂರ್ವಸ್ಯ ಅಪರೀಕಾರಃ ಪೂರ್ವಾಪರೀಕಾರಃ ತಂ ।

**ಕ್ರಿಯಾಪದ—** ಕ್ಷಾಮ್ಯಂತು - ಕ್ಷಮೂಷ್ ಸಹನೇ ಇತ್ಯಸ್ಮಾತ್ ಕ್ಷಮ್ ಧಾತೋಃ ಲೋಟಿ ಪ್ರಥಮಪುರುಷೇ ಬಹುವಚನೇ ಕ್ಷಾಮ್ಯಂತು ಇತಿ ರೂಪಮ್ ।

ಕ್ಷಾಮ್ಯತು ಕ್ಷಾಮ್ಯತಾತ್, ಕ್ಷಾಮ್ಯತಾಂ ಕ್ಷಾಮ್ಯಂತು, ಕ್ಷಾಮ್ಯ ಕ್ಷಾಮ್ಯತಾತ್, ಕ್ಷಾಮ್ಯತಂ ಕ್ಷಾಮ್ಯತ, ಕ್ಷಾಮ್ಯಾನಿ ಕ್ಷಾಮ್ಯಾವ ಕ್ಷಾಮ್ಯಾಮ ॥

**ಅಲಂಕಾರ—** ರೂಪಕಾಲಂಕಾರ.

★ ★ ★

ಶ್ರೀಹನುಮದವತಾರಲೀಲಾ

**ಶ್ರೀವಲ್ಲಭಾಜ್ಞಾಂ ಸಸುರೇಂದ್ರಯಾಂಚಾಂ**
**ಸಂಭಾವ್ಯ ಸಂಭಾವ್ಯತಮಾಂ ತ್ರಿಲೋಕ್ಯಾಮ್ ।**
**ಪ್ರಾಣೇಶ್ವರಃ ಪ್ರಾಣಿಗಣಪ್ರಣೇತಾ**
**ಗುರುಃ ಸತಾಂ ಕೇಸರಿಣೋ ಗೃಹೇಽಭೂತ್ ॥ 9 ॥**

**ಪದಚ್ಛೇದ—** ಶ್ರೀವಲ್ಲಭಾಜ್ಞಾಂ, ಸಸುರೇಂದ್ರಯಾಂಚಾಂ, ಸಂಭಾವ್ಯ, ಸಂಭಾವ್ಯತಮಾಂ, ತ್ರಿಲೋಕ್ಯಾಂ, ಪ್ರಾಣೇಶ್ವರಃ, ಪ್ರಾಣಿಗಣಪ್ರಣೇತಾ, ಗುರುಃ, ಸತಾಂ, ಕೇಸರಿಣಃ, ಗೃಹೇ, ಅಭೂತ್ ।

**ಅನ್ವಯ—** ಪ್ರಾಣಿಗಣಪ್ರಣೇತಾ ಸತಾಂ ಗುರುಃ ಪ್ರಾಣೇಶ್ವರಃ ಸಸುರೇಂದ್ರಯಾಂಚಾಂ ತ್ರಿಲೋಕ್ಯಾಂ ಸಂಭಾವ್ಯತಮಾಂ ಶ್ರೀವಲ್ಲಭಾಜ್ಞಾಂ ಸಂಭಾವ್ಯ ಕೇಸರಿಣಃ ಗೃಹೇ ಅಭೂತ್ ।

**ಅನ್ವಯಾರ್ಥ—**

**ಪ್ರಾಣಿಗಣಪ್ರಣೇತಾ** = ಪ್ರಾಣಿಗಳ ಬಹುವಿಧವಾದ ಸಮುದಾಯಗಳಿಗೆ ನಾಯಕರಾಗಿರುವ

**ಸತಾಂ ಗುರುಃ** = ಸಜ್ಜನರುಗಳಿಗೆ ಅಂದರೆ ಮುಕ್ತಿಯೋಗ್ಯರುಗಳಿಗೆ ಜ್ಞಾನೋಪದೇಶಕರಾಗಿರುವ

**ಪ್ರಾಣೇಶ್ವರಃ** = ಇಂದ್ರಿಯಾಭಿಮಾನಿಗಳಾದ ಸೂರ್ಯ ಮುಂತಾದ ದೇವತೆಗಳ ಮಧ್ಯದಲ್ಲಿ ಶ್ರೇಷ್ಠರಾದ ಮುಖ್ಯಪ್ರಾಣದೇವರು

**ಸಸುರೇಂದ್ರಯಾಂಚಾಂ** = ಇಂದ್ರ ಮುಂತಾದವರ ಪ್ರಾರ್ಥನೆಯಿಂದ ಸಹಿತವಾದ

**ತ್ರಿಲೋಕ್ಯಾಂ ಸಂಭಾವ್ಯತಮಾಂ ಶ್ರೀವಲ್ಲಭಾಜ್ಞಾಂ ಸಂಭಾವ್ಯ** = ಮೂರು ಲೋಕಗಳಲ್ಲಿ ಅತ್ಯಂತವಾಗಿ ಗೌರವಿಸಲಿಕ್ಕೆ ಯೋಗ್ಯವಾಗಿರುವ, ಲಕ್ಷ್ಮೀದೇವಿಯ ಪತಿಯಾದ ಶ್ರೀಹರಿಯ ಆಜ್ಞೆಯನ್ನು ವಿಶೇಷವಾಗಿ ಗೌರವಿಸಿ

**ಕೇಸರಿಣಃ ಗೃಹೇ ಅಭೂತ್** = ಕೇಸರಿ ಎಂಬ ಕಪಿರಾಜನ ಪತ್ನಿಯಾಗಿರುವ ಅಂಜನಾದೇವಿಯಲ್ಲಿ ಅವತರಿಸಿದರು.

**ತಾತ್ಪರ್ಯ—** ಮುಖ್ಯಪ್ರಾಣದೇವರು ನಾನಾ ವಿಧಗಳಾದ ಸರ್ವ ಪ್ರಾಣಿಗಳಿಗೂ ನಾಯಕರು. ಅವರು ಇಂದ್ರಿಯಾಭಿಮಾನಿದೇವತೆಗಳಾದ ಸೂರ್ಯ ಮುಂತಾದವರಿಗೆ ನಾಯಕರು. ಎಲ್ಲಾ ಉತ್ತಮರಾದ ದೇವತೆಗಳೂ ಭೂಮಿಯಲ್ಲಿ ಅವತರಿಸುವಂತೆ ಅವರನ್ನು ಪ್ರಾರ್ಥಿಸಿದರು. ಲಕ್ಷ್ಮೀದೇವಿಯ ಪತಿಯಾಗಿರುವ ಆ ಶ್ರೀಹರಿಯ ಆಜ್ಞೆಯನ್ನು ಮೂರು ಲೋಕಗಳ ಸಮುದಾಯದಲ್ಲಿರುವ ಸರ್ವರೂ ಗೌರವಿಸಲೇಬೇಕು. ಆದ್ದರಿಂದ ಸರ್ವರೂ ಅಂಗೀಕರಿಸಿದರು. ಆ ಸಮಯದಲ್ಲಿ ಕೇಸರಿ ಎಂಬ ಹೆಸರಿನಿಂದ ಪ್ರಸಿದ್ಧನಾದ ಕಪಿರಾಜನಿದ್ದನು. ಅವನಿಗೆ ಅಂಜನಾದೇವಿ ಎಂದು ಪ್ರಸಿದ್ಧಳಾದ

ಪತ್ನಿಯಿದ್ದಳು. ಅವಳ ಗರ್ಭದಲ್ಲಿ ಮುಕ್ತಿಯೋಗ್ಯರುಗಳಿಗೆಲ್ಲಾ ಜ್ಞಾನೋಪದೇಶಕರಾಗಿರುವ ಮುಖ್ಯಪ್ರಾಣದೇವರು ಅವತರಿಸಿದರು.

**ವಿಗ್ರಹ—**

**ಶ್ರೀವಲ್ಲಭಾಜ್ಞಾಂ—** ಶ್ರಿಯಃ ವಲ್ಲಭಃ ಶ್ರೀವಲ್ಲಭಃ, ಶ್ರೀವಲ್ಲಭಸ್ಯ ಆಜ್ಞಾ ಶ್ರೀವಲ್ಲಭಾಜ್ಞಾ, ತಾಂ ಶ್ರೀವಲ್ಲಭಾಜ್ಞಾಂ ।

**ಸಸುರೇಂದ್ರಯಾಂಚಾಂ—** ಸುರಾಣಾಂ ಇಂದ್ರಾಃ ಸುರೇಂದ್ರಾಃ, ಸುರೇಂದ್ರಾಣಾಂ ಯಾಂಚಾ ಸುರೇಂದ್ರ-ಯಾಂಚಾ, ಸುರೇಂದ್ರಯಾಂಚಯಾ ಸಹ ವರ್ತತೇ ಇತಿ ಸಸುರೇಂದ್ರಯಾಂಚಾ, ತಾಂ ಸಸುರೇಂದ್ರ-ಯಾಂಚಾಂ ।

**ಸಂಭಾವ್ಯತಮಾಂ—** ಅತ್ಯಂತಂ ಸಂಭಾವ್ಯಾ ಸಂಭಾವ್ಯತಮಾ, ತಾಂ ಸಂಭಾವ್ಯತಮಾಂ ।

**ಪ್ರಾಣೇಶ್ವರಃ—** ಪ್ರಾಣಾನಾಂ ಈಶ್ವರಃ ಪ್ರಾಣೇಶ್ವರಃ ।

**ಪ್ರಾಣಿಗಣಪ್ರಣೇತಾ—** ಪ್ರಾಣಾಃ ಏಷು ಸಂತಿ ಇತಿ ಪ್ರಾಣಿನಃ, ಪ್ರಾಣಿನಾಂ ಗಣಃ ಪ್ರಾಣಿಗಣಃ, ಪ್ರಾಣಿಗಣಸ್ಯ ಪ್ರಣೇತಾ ಪ್ರಾಣಿಗಣಪ್ರಣೇತಾ ।

**ಕ್ರಿಯಾಪದ— ಅಭೂತ್** - ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂ ಧಾತೋಃ ಪರಸ್ಮೈಪದಿನಃ ಲುಙ್ ಪ್ರಥಮಪುರುಷೇ ಏಕವಚನೇ 'ಅಭೂತ್' ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಭೂತ, ಅಭೂವಂ ಅಭೂವ ಅಭೂಮ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ಹನುಮ ಶಬ್ದಾರ್ಥ ವೈಭವ

**ಯೇ ಯೇ ಗುಣಾ ನಾಮ ಜಗತ್ಪ್ರಸಿದ್ಧಾ**
**ಯಂ ತೇಷು ತೇಷು ಸ್ಮ ನಿದರ್ಶಯಂತಿ ।**
**ಸಾಕ್ಷಾನ್ಮಹಾಭಾಗವತಪ್ರಬರ್ಹಂ**
**ಶ್ರೀಮಂತಮೇನಂ ಹನುಮಂತಮಾಹುಃ ॥ 10 ॥**

**ಪದಚ್ಛೇದ—** ಯೇ, ಯೇ, ಗುಣಾಃ, ನಾಮ, ಜಗತ್ಪ್ರಸಿದ್ಧಾಃ, ಯಂ, ತೇಷು, ತೇಷು, ಸ್ಮ, ನಿದರ್ಶಯಂತಿ, ಸಾಕ್ಷಾತ್ ಮಹಾಭಾಗವತಪ್ರಬರ್ಹಂ, ಶ್ರೀಮಂತಂ, ಏನಂ, ಹನುಮಂತಂ, ಆಹುಃ ।

**ಅನ್ವಯ—** ಯೇ ಯೇ ಗುಣಾಃ, ನಾಮ, ಜಗತ್ಪ್ರಸಿದ್ಧಾಃ, ಯಂ ತೇಷು ತೇಷು ನಿದರ್ಶಯಂತಿ ಸ್ಮ, ಸಾಕ್ಷಾತ್ ಮಹಾಭಾಗವತಪ್ರಬರ್ಹಂ ಶ್ರೀಮಂತಂ, ಏನಂ ಹನುಮಂತಂ ಆಹುಃ ।

**ಅನ್ವಯಾರ್ಥ—**

**ಯೇ ಯೇ ಗುಣಾಃ ನಾಮ ಜಗತ್ಪ್ರಸಿದ್ಧಾಃ** = ಯಾವುದು ಯಾವುದು ಗುಣಗಳೆಂದು ಪ್ರಪಂಚದಲ್ಲಿ ಪ್ರಸಿದ್ಧವಾಗಿವೆಯೋ

**ಯಂ** = ಯಾವ ಕೇಸರಿ ಎಂಬ ಕಪಿರಾಜನ ಮಗನನ್ನು

**ತೇಷು ತೇಷು ನಿದರ್ಶಯಂತಿ ಸ್ಮ** = ಆಯಾ ಕಾರ್ಯಗಳಲ್ಲಿ ದೃಷ್ಟಾಂತವಾಗಿ ಸರ್ವರೂ ಹೇಳುತ್ತಾರೆಯೋ

**ಸಾಕ್ಷಾತ್ ಮಹಾಭಾಗವತಪ್ರಬರ್ಹಂ** = ಮುಖ್ಯವಾಗಿ ಮಹಾಭಗವದ್ಭಕ್ತರಲ್ಲಿ ಶ್ರೇಷ್ಠರಾದ
**ಶ್ರೀಮಂತಂ ಏನಂ** = ಕಾಂತಿಯಿಂದ ಸಂಪನ್ನರೂ ಆಗಿರುವ ಇವರನ್ನು
**ಹನುಮಂತಂ** = ಹನು ಎಂಬ ಶಬ್ದದಿಂದ ಹೇಳಲ್ಪಡುವ ಜ್ಞಾನಸಂಪನ್ನರಾದ ಹನುಮಂತದೇವರೆಂದು
**ಆಹುಃ** = ಹೇಳುತ್ತಾರೆ.

**ತಾತ್ಪರ್ಯ—** ಗುಣಗಳೆಂದು ಜಗತ್ಪ್ರಸಿದ್ಧಗಳಾದ ಎಲ್ಲಾ ಗುಣಗಳೂ ಶ್ರೀಹನುಮಂತದೇವರಲ್ಲಿ ಇವೆ. ಕೇಸರಿ ಎಂಬ ಕಪಿರಾಜನ ಮಗನನ್ನು ಯಾವ ಯಾವ ಗುಣಗಳಿಗೆ ಉದಾಹರಣವಾಗಿ ಕೊಡುವರೋ ಮುಖ್ಯವಾಗಿ ಮಹಾಭಗವದ್ಭಕ್ತರಲ್ಲಿ ಉತ್ತಮರಾಗಿರುವ ಕಾಂತಿಸಂಪನ್ನರಾದ ಇವರನ್ನು ಹನುಮಂತನು ಎಂದು ಕರೆಯುವರು.

**ವಿಗ್ರಹ—**

**ಜಗತ್ಪ್ರಸಿದ್ಧಾಃ—** ಜಗತ್ಸು ಪ್ರಸಿದ್ಧಾಃ ಜಗತ್ಪ್ರಸಿದ್ಧಾಃ ।
**ನಿದರ್ಶಯಂತಿ—** ನಿತರಾಂ ದರ್ಶಯಂತಿ ನಿದರ್ಶಯಂತಿ ।
**ಮಹಾಭಾಗವತಪ್ರಬರ್ಹಂ—** ಭಗವತಃ ಇಮೇ ಭಾಗವತಾಃ, ಮಹಾಂತಶ್ಚ ತೇ ಭಾಗವತಾಶ್ಚ ಮಹಾಭಾಗವತಾಃ, ಮಹಾಭಾಗವತಾನಾಂ ಪ್ರಬರ್ಹಃ, ಮಹಾಭಾಗವತಪ್ರಬರ್ಹಃ, ತಂ ಮಹಾಭಾಗವತಪ್ರಬರ್ಹಂ ।
**ಶ್ರೀಮಂತಂ—** ಶ್ರೀಃ ಅಸ್ಯ ಅಸ್ತಿ ಇತಿ ಶ್ರೀಮಾನ್, ತಂ ಶ್ರೀಮಂತಂ ।
**ಹನುಮಂತಂ—** ಹನುಃ ಅಸ್ಯ ಅಸ್ತಿ ಇತಿ ಹನುಮಾನ್, ತಂ ಹನುಮಂತಂ ।

**ಕ್ರಿಯಾಪದ— ನಿದರ್ಶಯಂತಿ** - ನಿ ಇತ್ಯುಪಸರ್ಗಪೂರ್ವಕಾತ್ ದೃಶಿರ್ ಪ್ರೇಕ್ಷಣೇ ಇತ್ಯಸ್ಮಾತ್ ಪ್ರೇಕ್ಷಣಾರ್ಥಕಾತ್ ದೃಶಿರ್ ಧಾತೋಃ ಣಿಜಂತಾತ್ ಲಟಿ ಪ್ರಥಮಪುರುಷೇ ಬಹುವಚನೇ 'ನಿದರ್ಶಯಂತಿ' ಇತಿ ರೂಪಮ್ ।

ನಿದರ್ಶಯತಿ ನಿದರ್ಶಯತಃ ನಿದರ್ಶಯಂತಿ, ನಿದರ್ಶಯಸಿ ನಿದರ್ಶಯಥಃ ನಿದರ್ಶಯಥ ।
ನಿದರ್ಶಯಾಮಿ ನಿದರ್ಶಯಾವಃ ನಿದರ್ಶಯಾಮಃ ॥

**ಆಹುಃ** - ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಞ್ ಧಾತೋಃ ಪರಸ್ಮೈಪದಿನಃ ಲಟಿ ಪ್ರಥಮಪುರುಷೇ ಬಹುವಚನೇ 'ಆಹುಃ' ಇತಿ ರೂಪಮ್ ।

ಆಹ ಆಹತುಃ ಆಹುಃ, ಆತ್ಥ ಆಹಥುಃ ಬ್ರೂಥ, ಬ್ರವೀಮಿ ಬ್ರೂವಃ ಬ್ರೂಮಃ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ಹನುಮಂತನಿಂದ ಶ್ರೀರಾಮ ಸಂದರ್ಶನ

**ಕರ್ಮಾಣಿ ಕುರ್ವನ್ ಪರಮಾದ್ಭುತಾನಿ**
**ಸಭಾಸು ದೈವೀಷು ಸಭಾಜಿತಾನಿ ।**
**ಸುಗ್ರೀವಮಿತ್ರಂ ಸ ಜಗತ್ಪವಿತ್ರಂ**
**ರಮಾಪತಿಂ ರಾಮತನುಂ ದದರ್ಶ ॥ 11 ॥**

**ಪದಚ್ಛೇದ—** ಕರ್ಮಾಣಿ, ಕುರ್ವನ್, ಪರಮಾದ್ಭುತಾನಿ, ಸಭಾಸು, ದೈವೀಷು, ಸಭಾಜಿತಾನಿ, ಸುಗ್ರೀವಮಿತ್ರಂ, ಸಃ, ಜಗತ್ಪವಿತ್ರಂ, ರಮಾಪತಿಂ, ರಾಮತನುಂ, ದದರ್ಶ ।

**ಅನ್ವಯ—** ಪರಮಾದ್ಭುತಾನಿ ದೈವೀಷು ಸಭಾಸು ಸಭಾಜಿತಾನಿ ಕರ್ಮಾಣಿ ಕುರ್ವನ್, ಜಗತ್ಪವಿತ್ರಂ ಸುಗ್ರೀವ-ಮಿತ್ರಂ, ಸಃ ರಾಮತನುಂ ರಮಾಪತಿಂ ದದರ್ಶ ।

ಅನ್ವಯಾರ್ಥ—

ಪರಮಾದ್ಭುತಾನಿ = ಅತ್ಯಂತ ಆಶ್ಚರ್ಯಕರವಾದ

ದೈವೀಷು ಸಭಾಸು = ದೇವತೆಗಳ ಸಂಬಂಧವಾದ ಸಭೆಗಳಲ್ಲಿ

ಸಭಾಜಿತಾನಿ = ಹೊಗಳಲ್ಪಟ್ಟ

ಕರ್ಮಾಣಿ ಕುರ್ವನ್ = ಕೆಲಸಗಳನ್ನು ಮಾಡುತ್ತಿರುವ

ಜಗತ್ಪವಿತ್ರಂ = ಪ್ರಪಂಚವನ್ನೆಲ್ಲಾ ಪಾವನವಾಗುವಂತೆ ಮಾಡುತ್ತಿರುವ

ಸುಗ್ರೀವಮಿತ್ರಂ = ಸುಗ್ರೀವನಿಗೆ ಮಿತ್ರನಾಗಿರುವ

ಸಃ = ಆ ಹನುಮಂತದೇವರು

ರಾಮತನುಂ = ರಾಮ ಎಂಬ ಹೆಸರಿನಿಂದ ಯುಕ್ತನಾಗಿರುವ

ರಮಾಪತಿಂ = ರಮಾದೇವಿಯರ ಪತಿಯಾದ ಶ್ರೀರಾಮದೇವರನ್ನು

ದದರ್ಶ = ನೋಡಿದರು.

ತಾತ್ಪರ್ಯ— ಶ್ರೀಹನುಮಂತದೇವರು ಮಾಡುತ್ತಿರುವ ಎಲ್ಲಾ ಕೆಲಸಗಳೂ ಅತ್ಯಂತವಾಗಿ ಆಶ್ಚರ್ಯಕರವಾಗಿವೆ. ದೇವತೆಗಳಿಗೆ ಸಂಬಂಧಿಸಿದ ಎಲ್ಲಾ ಸಭೆಗಳಲ್ಲಿಯೂ ಪೂಜಿಸಲ್ಪಡುತ್ತವೆ. ಇಂತಹ ಕರ್ಮಗಳನ್ನು ಮಾಡುತ್ತಾ ರಾಮ ಎಂಬ ಹೆಸರಿನಿಂದ ಯುಕ್ತನಾಗಿರುವ ರಮಾದೇವಿಯವರ ಪತಿಯಾದ ಶ್ರೀಹರಿಯನ್ನು ನೋಡಿದರು.

ವಿಗ್ರಹ—

ಕುರ್ವನ್— ಕರೋತಿ ಇತಿ ಕುರ್ವನ್ ।

ಪರಮಾದ್ಭುತಾನಿ— ಪರಮಾಣಿ ಚ ತಾನಿ ಅದ್ಭುತಾನಿ ಚ ಪರಮಾದ್ಭುತಾನಿ, ತಾನಿ ಪರಮಾದ್ಭುತಾನಿ ।

ದೈವೀಷು— ದೇವಾನಾಂ ಇಮಾಃ ದೈವ್ಯಃ, ತಾಸು ದೈವೀಷು ।

ಸುಗ್ರೀವಮಿತ್ರಂ— ಸುಗ್ರೀವಸ್ಯ ಮಿತ್ರಂ ಸುಗ್ರೀವಮಿತ್ರಂ ತತ್ ।

ಜಗತ್ಪವಿತ್ರಂ— ಜಗತ್ಪಾವಯತಿ ಇತಿ ಜಗತ್ಪವಿತ್ರಃ, ತಂ ಜಗತ್ಪವಿತ್ರಂ ।

ರಮಾಪತಿಂ— ರಮಾಯಾಃ ಪತಿಃ ರಮಾಪತಿಃ, ತಂ ರಮಾಪತಿಂ ।

ರಾಮತನುಂ— ರಾಮಾಖ್ಯಾ ತನುಃ ಯಸ್ಯ ಸಃ ರಾಮತನುಃ, ತಂ ರಾಮತನುಂ ।

ಕ್ರಿಯಾಪದ— ದದರ್ಶ - ದೃಶಿರ್ ಪ್ರೇಕ್ಷಣೇ ಇತ್ಯಸ್ಮಾತ್ ದೃಶಿರ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ದದರ್ಶ' ಇತಿ ರೂಪಮ್ ।

ದದರ್ಶ ದದೃಶತುಃ ದದೃಶುಃ, ದದರ್ಶಿಥ ದದ್ರಷ್ಠಥುಃ ದದರ್ಶ, ದದರ್ಶ ದದೃಶಿವ ದದೃಶಿಮ ॥

ಅಲಂಕಾರ— ಸ್ವಭಾವೋಕ್ತ್ಯಲಂಕಾರ.

★ ★ ★

ಹನುಮಂತನಿಗೆ ಶ್ರೀರಾಮನ ಅನುಗ್ರಹ

**ಪಾದಾರವಿಂದಪ್ರಣತೋ ಹರೀಂದ್ರ-**
**ಸ್ತದಾ ಮಹಾಭಕ್ತಿಭರಾಭಿನುನ್ನಃ ।**
**ಅಗ್ರಾಹಿ ಪದ್ಮೋದರಸುಂದರಾಭ್ಯಾಂ**
**ದೋರ್ಭ್ಯಾಂ ಪುರಾಣೇನ ಸ ಪೂರುಷೇಣ ॥ 12 ॥**

**ಪದಚ್ಛೇದ—** ಪಾದಾರವಿಂದಪ್ರಣತಃ, ಹರೀಂದ್ರಃ, ತದಾ, ಮಹಾಭಕ್ತಿಭರಾಭಿನುನ್ನಃ, ಅಗ್ರಾಹಿ, ಪದ್ಮೋದರ-ಸುಂದರಾಭ್ಯಾಂ, ದೋರ್ಭ್ಯಾಂ, ಪುರಾಣೇನ, ಸಃ, ಪೂರುಷೇಣ ।

**ಅನ್ವಯ—** ತದಾ ಮಹಾಭಕ್ತಿಭರಾಭಿನುನ್ನಃ ಪಾದಾರವಿಂದಪ್ರಣತಃ ಹರೀಂದ್ರಃ ಸಃ ಪದ್ಮೋದರಸುಂದರಾಭ್ಯಾಂ ದೋರ್ಭ್ಯಾಂ ಪುರಾಣೇನ ಪೂರುಷೇಣ ಅಗ್ರಾಹಿ ।

**ಅನ್ವಯಾರ್ಥ—**

**ತದಾ** = ಆ ಶ್ರೀರಾಮದೇವರ ದರ್ಶನಕಾಲದಲ್ಲಿ

**ಮಹಾಭಕ್ತಿಭರಾಭಿನುನ್ನಃ** = ಅತ್ಯಂತಭಕ್ತಿ ಎಂಬ ಭಾರದಿಂದ ಪ್ರೇರಿತರಾಗಿರುವ, ಆದ್ದರಿಂದಲೇ

**ಪಾದಾರವಿಂದಪ್ರಣತಃ** = ಪಾದಗಳೆಂಬ ಕಮಲಗಳಲ್ಲಿ ಅತ್ಯಂತವಾಗಿ ಬಗ್ಗಿ ನಮಸ್ಕರಿಸಿರುವ

**ಹರೀಂದ್ರಃ ಸಃ** = ಕಪಿರಾಜನಾದ ಆ ಹನುಮಂತದೇವರು

**ಪದ್ಮೋದರಸುಂದರಾಭ್ಯಾಂ** = ಪದ್ಮಗಳ ಮಧ್ಯದಂತೆ ಸುಂದರವಾಗಿರುವ

**ದೋರ್ಭ್ಯಾಂ** = ಎರಡು ಕೈಗಳಿಂದ

**ಪುರಾಣೇನ ಪೂರುಷೇಣ** = ಪುರಾತನ ಪುರುಷನಾದ ಶ್ರೀರಾಮದೇವರಿಂದ

**ಅಗ್ರಾಹಿ** = ಅನುಗ್ರಹಿಸಲ್ಪಟ್ಟರು.

**ತಾತ್ಪರ್ಯ—** ಶ್ರೀರಾಮದೇವರ ದರ್ಶನಕಾಲದಲ್ಲಿ ಶ್ರೀಹನುಮಂತದೇವರಿಗೆ ಅತ್ಯಂತ ಭಕ್ತಿಯುಂಟಾಗಿ ಆ ಭಕ್ತಿಯ ಭಾರದಿಂದ ಅವರ ದೇಹವು ಸಂಪೂರ್ಣವಾಗಿ ಬಗ್ಗಿ ಹೋಗುತ್ತದೆ. ಕಪಿರಾಜನಾದ ಶ್ರೀಹನುಮಂತದೇವರು ಭಕ್ತಿಯಿಂದ ನಮಸ್ಕರಿಸುವರು. ಆಗ ಪುರಾಣಪುರುಷನಾಗಿರುವ ಶ್ರೀರಾಮದೇವರೂ ಸಹ ಪದ್ಮದ ಮಧ್ಯದಂತೆ ಸುಂದರವಾಗಿರುವ ಎರಡು ಕೈಗಳಿಂದ ಎಬ್ಬಿಸಿ ತಬ್ಬಿಕೊಳ್ಳುತ್ತಾರೆ.

**ವಿಗ್ರಹ—**

**ಪಾದಾರವಿಂದಪ್ರಣತಃ—** ಪಾದೌ ಅರವಿಂದೇ ಇವ ಪಾದಾರವಿಂದೇ, ಪಾದಾರವಿಂದಯೋಃ (ಪ್ರಕರ್ಷೇಣ ನತಃ) ಪ್ರಣತಃ ಪಾದಾರವಿಂದಪ್ರಣತಃ ।

**ಹರೀಂದ್ರಃ—** ಹರೀಣಾಂ ಇಂದ್ರಃ ಹರೀಂದ್ರಃ ।

**ಮಹಾಭಕ್ತಿಭರಾಭಿನುನ್ನಃ—** ಮಹತೀ ಚ ಸಾ ಭಕ್ತಿಶ್ಚ ಮಹಾಭಕ್ತಿಃ, ಮಹಾಭಕ್ತೇಃ ಭರಃ ಮಹಾಭಕ್ತಿಭರಃ, ಮಹಾಭಕ್ತಿಭರೇಣ ಅಭಿನುನ್ನಃ (ಅಭಿತಃ ನುನ್ನಃ) ಮಹಾಭಕ್ತಿಭರಾಭಿನುನ್ನಃ ।

**ಪದ್ಮೋದರಸುಂದರಾಭ್ಯಾಂ—** ಪದ್ಮಯೋಃ ಉದರಂ ಪದ್ಮೋದರಂ, ಪದ್ಮೋದರವತ್ ಸುಂದರೇ ಪದ್ಮೋದರಸುಂದರೇ, ತಾಭ್ಯಾಂ ಪದ್ಮೋದರಸುಂದರಾಭ್ಯಾಂ ।

**ಕ್ರಿಯಾಪದ— ಅಗ್ರಾಹಿ** - ಗ್ರಹ ಉಪಾದಾನೇ ಇತ್ಯಸ್ಮಾತ್ ಉಪಾದಾನಾರ್ಥಕಾತ್ ಗ್ರಹ ಧಾತೋಃ ಕರ್ಮಣಿ ಲುಙ್ ಪ್ರಥಮಪುರುಷೇ ಏಕವಚನೇ 'ಅಗ್ರಾಹಿ' ಇತಿ ರೂಪಮ್ ।

ಅಗ್ರಾಹಿ ಅಗ್ರಾಹೀಷ್ಟ, ಅಗ್ರಾಹೀಷಾತಾಂ ಅಗ್ರಾಹೀಷತ, ಅಗ್ರಾಹೀಷ್ಠಾಃ ಅಗ್ರಾಹೀಷಾಥಾಂ ಅಗ್ರಾಹೀಢ್ವಂ, ಅಗ್ರಾಹೀಧ್ವಂ, ಅಗ್ರಾಹೀಷಿ ಅಗ್ರಾಹೀಷ್ವಹಿ ಅಗ್ರಾಹೀಷ್ಮಹಿ ॥

**ಅಲಂಕಾರ—** ಶ್ಲೇಷಗರ್ಭೋಪಮಾಲಂಕಾರ.

★ ★ ★

ಶ್ರೀರಾಮ-ಹನುಮರ ಹಿರಿಮೆ

**ಅದಾರ್ಯಸಾಲಾವಲಿದಾರಣೇನ**
**ವ್ಯಾಪಾದಿತೇಂದ್ರಪ್ರಭವೇನ ತೇನ ।**
**ಪ್ರಾದ್ಯೋತನಿಪ್ರೀತಿಕೃತಾ ನಿಕಾಮಂ**
**ಮಧುದ್ವಿಷಾ ಸಂದಿದಿಶೇ ಸ ವೀರಃ ॥ 13 ॥**

**ಪದಚ್ಛೇದ—** ಅದಾರ್ಯಸಾಲಾವಲಿದಾರಣೇನ, ವ್ಯಾಪಾದಿತೇಂದ್ರಪ್ರಭವೇನ, ತೇನ, ಪ್ರಾದ್ಯೋತನಿಪ್ರೀತಿಕೃತಾ, ನಿಕಾಮಂ, ಮಧುದ್ವಿಷಾ, ಸಂದಿದಿಶೇ, ಸಃ, ವೀರಃ ।

**ಅನ್ವಯ—** ವೀರಃ ಸಃ ಅದಾರ್ಯಸಾಲಾವಲಿದಾರಣೇನ ವ್ಯಾಪಾದಿತೇಂದ್ರಪ್ರಭವೇನ ನಿಕಾಮಂ ಪ್ರಾದ್ಯೋತನಿಪ್ರೀತಿಕೃತಾ ಮಧುದ್ವಿಷಾ ತೇನ ಸಂದಿದಿಶೇ ।

**ಅನ್ವಯಾರ್ಥ—**

**ವೀರಃ ಸಃ** = ಆರಂಭಿಸಿದ ಕೆಲಸವನ್ನು ಮುಗಿಸುವ ಸಾಮರ್ಥ್ಯವುಳ್ಳ ಆ ಹನುಮಂತದೇವರು

**ಅದಾರ್ಯಸಾಲಾವಲಿದಾರಣೇನ** = ರಾಮದೇವರನ್ನು ಬಿಟ್ಟು ಬೇರೆ ಯಾರಿಂದಲೂ ಸೀಳಲಿಕ್ಕೆ ಸಾಧ್ಯವಾಗದಿರುವ ತಾಳದ ಮರಗಳ ಪಂಕ್ತಿಯನ್ನು ಸೀಳುವುದರಿಂದಲೂ

**ವ್ಯಾಪಾದಿತೇಂದ್ರಪ್ರಭವೇನ** = ಕೊಲ್ಲಲ್ಪಟ್ಟ ಇಂದ್ರನ ಮಗನಾದ ವಾಲಿಯುಳ್ಳವನಾಗಿರುವ

**ನಿಕಾಮಂ** = ಅಧಿಕವಾಗಿ

**ಪ್ರಾದ್ಯೋತನಿಪ್ರೀತಿಕೃತಾ** =ಪ್ರದ್ಯೋತನ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಸೂರ್ಯನ ಮಗನಾಗಿರುವ ಸುಗ್ರೀವನಿಗೆ ಪ್ರಿಯವಾಗುವಂತೆ ಮಾಡಿದ

**ಮಧುದ್ವಿಷಾ ತೇನ** = ಮಧು ಎಂಬ ದೈತ್ಯನ ಶತ್ರುವಾದ ಆ ಶ್ರೀರಾಮನಿಂದ

**ಸಂದಿದಿಶೇ** = ಸೀತಾನ್ವೇಷಣಕ್ಕಾಗಿ ಕಳುಹಿಸಲ್ಪಟ್ಟರು.

**ತಾತ್ಪರ್ಯ—** ಶ್ರೀಹನುಮಂತದೇವರು ಆರಂಭಿಸಿದ ಕಾರ್ಯವನ್ನು ಕೊನೆಯವರೆಗೆ ಸಾಧಿಸುವವರು. ಶ್ರೀರಾಮದೇವರು ಇತರರಿಂದ ಸೀಳಲಿಕ್ಕೆ ಸಾಧ್ಯವಾಗದಿರುವ ತಾಳಮರಗಳನ್ನು ಸೀಳಿದನು. ಇದು ಮೊದಲನೆಯ ಪರೀಕ್ಷೆ. ಇಂದ್ರನ ಮಗನಾದ ವಾಲಿಯನ್ನು ಸಂಹರಿಸಿದನು. ಇದು ಎರಡನೆಯ ಪರೀಕ್ಷೆ. ಈ ಎರಡು ಪರೀಕ್ಷೆಗಳಿಂದ ಸೂರ್ಯನ ಮಗನಾದ ಸುಗ್ರೀವನನ್ನು ವಿಶೇಷವಾಗಿ ತೃಪ್ತಿಪಡಿಸಿದನು. ಮಧು ಎಂಬ ದೈತ್ಯನನ್ನು ಸಂಹರಿಸಿದ ಭಗವಂತನಾದ ಶ್ರೀರಾಮದೇವರು ಹನುಮಂತದೇವರನ್ನು ಸೀತಾನ್ವೇಷಣಕಾರ್ಯಕ್ಕಾಗಿ ಕಳುಹಿಸಿದನು.

**ವಿಗ್ರಹ—**

**ಅದಾರ್ಯಸಾಲಾವಲಿದಾರಣೇನ—** ದಾರಯಿತುಂ ಯೋಗ್ಯಾಃ ದಾರ್ಯಾಃ, ನ ದಾರ್ಯಾಃ ಅದಾರ್ಯಾಃ, ಅದಾರ್ಯಾಶ್ಚ ತೇ ಸಾಲಾಶ್ಚ ಅದಾರ್ಯಸಾಲಾಃ, ಅದಾರ್ಯಸಾಲಾನಾಂ ಆವಲಿಃ ಅದಾರ್ಯಸಾಲಾವಲಿಃ, ಅದಾರ್ಯಸಾಲಾವಲೇಃ ದಾರಣಂ, ಅದಾರ್ಯಸಾಲಾವಲಿದಾರಣಂ, ತೇನ ಅದಾರ್ಯಸಾಲಾವಲಿದಾರಣೇನ ।

**ವ್ಯಾಪಾದಿತೇಂದ್ರಪ್ರಭವೇನ—** ಇಂದ್ರಾತ್ ಪ್ರಭವಃ ಯಸ್ಯ ಸಃ ಇಂದ್ರಪ್ರಭವಃ, ವ್ಯಾಪಾದಿತಃ ಇಂದ್ರಪ್ರಭವಃ ಯೇನ ಸಃ ವ್ಯಾಪಾದಿತೇಂದ್ರಪ್ರಭವಃ, ತೇನ ವ್ಯಾಪಾದಿತೇಂದ್ರಪ್ರಭವೇನ ।

**ಪ್ರಾದ್ಯೋತನಿಪ್ರೀತಿಕೃತಾ—** ಪ್ರದ್ಯೋತನಸ್ಯ ಅಪತ್ಯಂ ಪುಮಾನ್ ಪ್ರಾದ್ಯೋತನಿಃ, ಪ್ರಾದ್ಯೋತನೇಃ ಪ್ರೀತಿಂ ಕರೋತಿ ಇತಿ ಪ್ರಾದ್ಯೋತನಿಪ್ರೀತಿಕೃತ್, ತೇನ ಪ್ರಾದ್ಯೋತನಿಪ್ರೀತಿಕೃತಾ ।

**ಮಧುದ್ವಿಷಾ—** ಮಧು ದ್ವೇಷ್ಟಿ ಇತಿ ಮಧುದ್ವಿಟ್, ತೇನ ಮಧುದ್ವಿಷಾ ।

**ಕ್ರಿಯಾಪದ—** **ಸಂದಿದಿಶೇ** - ಸಂ ಇತ್ಯುಪಸರ್ಗಪೂರ್ವಕಾತ್ ದಿಶ ಅಜ್ಞಾಪನೇ ಇತ್ಯಸ್ಮಾತ್ ಆಜ್ಞಾಪನಾರ್ಥಕಾತ್ ದಿಶ ಧಾತೋಃ ಕರ್ಮಣಿ ಲಿಟಿ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ 'ಸಂದಿದಿಶೇ' ಇತಿ ರೂಪಮ್ ।

ಸಂದಿದಿಶೇ ಸಂದಿದಿಶಾತೇ ಸಂದಿದಿಶಿರೇ, ಸಂದಿದಿಶಿಷೇ ಸಂದಿದಿಶಾಥೇ ಸಂದಿದಿಶಿಧ್ವೇ, ಸಂದಿದಿಶೇ
ಸಂದಿದಿಶಿವಹೇ ಸಂದಿದಿಶಿಮಹೇ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

**ಸೀತಾಕೃತಿಯ ಅನ್ವೇಷಣೆಯ ಆದೇಶ**

**ಕರ್ಣಾಂತಮಾನೀಯ ಗುಣಗ್ರಹೀತ್ರಾ**
**ರಾಮೇಣ ಮುಕ್ತೋ ರಣಕೋವಿದೇನ ।**
**ಸ್ಫುರನ್ನಸೌ ವೈರಿಭಯಂಕರೋಽಭೂತ್**
**ಸತ್ಪಕ್ಷಪಾತೀ ಪ್ರದರೋ ಯಥಾಽಗ್ರ್ಯಃ ॥ 14 ॥**

**ಪದಚ್ಛೇದ—** ಕರ್ಣಾಂತಂ, ಆನೀಯ, ಗುಣಗ್ರಹೀತ್ರಾ, ರಾಮೇಣ, ಮುಕ್ತಃ, ರಣಕೋವಿದೇನ, ಸ್ಫುರನ್, ಅಸೌ, ವೈರಿಭಯಂಕರಃ, ಅಭೂತ್, ಸತ್ಪಕ್ಷಪಾತೀ, ಪ್ರದರಃ ಯಥಾ ಅಗ್ರ್ಯಃ ।

**ಅನ್ವಯ—** ಗುಣಗ್ರಹೀತ್ರಾ ರಣಕೋವಿದೇನ ರಾಮೇಣ, ಕರ್ಣಾಂತಂ ಆನೀಯ, ಮುಕ್ತಃ ಸ್ಫುರನ್, ಸತ್ಪಕ್ಷಪಾತೀ ಅಗ್ರ್ಯಃ ಅಸೌ ಪ್ರದರಃ ಯಥಾ ತಥಾ ವೈರಿಭಯಂಕರಃ ಅಭೂತ್ ।

**ಅನ್ವಯಾರ್ಥ—**

**ಗುಣಗ್ರಹೀತ್ರಾ** = ಪರಾಕ್ರಮ, ಔದಾರ್ಯ, ಯಶಸ್ಸು, ಪ್ರತಾಪ, ಸೌಜನ್ಯ, ಮಾಧುರ್ಯ, ನೀತಿ, ಅನುನಯ, ಗಾಂಭೀರ್ಯ, ಚಾತುರ್ಯ, ಸುವೀರ್ಯ, ಧೈರ್ಯ ಮುಂತಾದ ಗುಣಗಳಲ್ಲಿ ಹನೂಮಂತನಿಗಿಂತ ಅಧಿಕನಾದವನು ಮೂರು ಲೋಕಗಳ ಸಮುದಾಯಗಳಲ್ಲಿ ಯಾರು ಇರುವನು ಎಂದು ಈ ಹನುಮಂತದೇವರ ಗುಣಗಳನ್ನು ತಿಳಿದಿರುವ

ರಣಕೋವಿದೇನ = ಯುದ್ಧವನ್ನು ಮಾಡುವ ವಿಷಯದಲ್ಲಿ ಮಹಾಜ್ಞಾನಿಯಾಗಿರುವ

ರಾಮೇಣ **ಕರ್ಣಾಂತಂ ಆನೀಯ ಮುಕ್ತಃ** = ಶ್ರೀರಾಮದೇವನಿಂದ ಕಿವಿಯ ಸಮೀಪದಲ್ಲಿ ತಂದು ನಿಲ್ಲಿಸಿ ಕಳುಹಿಸಲ್ಪಟ್ಟ

ಸ್ಫುರನ್ ಸತ್ಪಕ್ಷಪಾತೀ ಅಸೌ = ಶೋಭಿಸುತ್ತಿರುವ, ಸಜ್ಜನರಲ್ಲಿ ಸ್ನೇಹವಿಶೇಷವುಳ್ಳವರಾದ ಈ ಹನುಮಂತ ದೇವರು;

**ಗುಣಗ್ರಹೀತ್ರಾ** ರಣಕೋವಿದೇನ **ರಾಮೇಣ** = ಶಿಂಜಿನೀ, ಮೌರ್ವೀ ಮುಂತಾದ ಹೆಸರುಗಳಿಂದ ಪ್ರಸಿದ್ಧವಾದ ಹಗ್ಗವನ್ನು ಧರಿಸಿರುವ, ಯುದ್ಧದಲ್ಲಿ ಅತ್ಯಂತ ನಿಪುಣನಾದ, ಶ್ರೀರಾಮದೇವನಿಂದ

**ಕರ್ಣಾಂತಂ ಆನೀಯ ಮುಕ್ತಃ** = ಕಿವಿಯ ಕೊನೆಯಲ್ಲಿ, ತಂದು, ಬಿಡಲ್ಪಟ್ಟ

ಸತ್ಪಕ್ಷಪಾತೀ = ಶ್ರೇಷ್ಠವಾದ ರೆಕ್ಕೆಗಳಿಂದ ಗಮನವುಳ್ಳ

**ಅಗ್ರ್ಯಃ** = ಶ್ರೇಷ್ಠವಾದ ಋಜುವಾಗಿಯೂ ಹರಿತವಾಗಿಯೂ ಇವೇ ಮೊದಲಾದ ಗುಣಗಳಿಂದ ಯುಕ್ತವಾದ ಆದ್ದರಿಂದಲೇ ಶ್ರೇಷ್ಠವಾದ

**ಪ್ರದರಃ ಯಥಾ, ತಥಾ ವೈರಿಭಯಂಕರಃ ಅಭೂತ್** = ಬಾಣವು ಹೇಗೋ, ಹಾಗೇ ವೈರಿಗಳಿಗೆ ಭಯವನ್ನು ಹುಟ್ಟಿಸಿದರು.

**ತಾತ್ಪರ್ಯ—** ಶ್ರೀರಾಮದೇವನಲ್ಲಿ ಪರಾಕ್ರಮ ಮುಂತಾದ ಗುಣಗಳು ತುಂಬಿವೆ. ಯುದ್ಧದಲ್ಲಿ ಅತ್ಯಂತ ನಿಪುಣನಾದ ಶ್ರೀರಾಮದೇವನು ಶ್ರೀಹನುಮಂತದೇವನ ಕಿವಿಯನ್ನು ಸಮೀಪಿಸಿ ಕಿವಿಯಲ್ಲಿ ರಹಸ್ಯವಾಗಿ ಕೆಲವು ಮಾತುಗಳನ್ನು ಹೇಳಿದನು. ಆ ಮಾತುಗಳು ಋಜುವಾಗಿಯೂ ಹರಿತವಾಗಿಯೂ ಇರುವ ಬಾಣದಂತೆ ಶೋಭಿಸುತ್ತಾ ಇತ್ತು. ಸಜ್ಜನರ ಪಕ್ಷದಲ್ಲಿ ಅಭಿಮಾನದಿಂದ ಯುಕ್ತವಾಗಿತ್ತು. ಶ್ರೀರಾಮದೇವನ ಬಾಣವು ಹೇಗೆ ಶತ್ರುಗಳಿಗೆ ಭಯಂಕರವಾಗಿತ್ತೋ ಆದರಂತೆ ಇತ್ತು.

**ವಿಗ್ರಹ—**

**ಕರ್ಣಾಂತಂ—** ಕರ್ಣಸ್ಯ ಅಂತಃ ಕರ್ಣಾಂತಃ, ತಂ ಕರ್ಣಾಂತಂ ।

**ಆನೀಯ—** ಆ ಸಮಂತಾತ್ ನೀತ್ವಾ ಆನೀಯ ।

**ಗುಣಗ್ರಹೀತ್ರಾ—** ಗುಣಾನ್ ಗೃಹ್ಣಾತಿ ಇತಿ ಗುಣಗ್ರಹೀತಾ, ತೇನ ಗುಣಗ್ರಹೀತ್ರಾ ।

**ರಣಕೋವಿದೇನ—** ರಣೇ ಕೋವಿದಃ, ರಣಕೋವಿದಃ, ತೇನ ರಣಕೋವಿದೇನ ।

**ಸ್ಫುರನ್ —** ಸ್ಫುರತಿ ಇತಿ ಸ್ಫುರನ್ ।

**ವೈರಿಭಯಂಕರಃ—** ಭಯಂ ಕರೋತಿ ಇತಿ ಭಯಂಕರಃ, ವೈರಿಣಾಂ ಭಯಂಕರಃ ।

**ಸತ್ಪಕ್ಷಪಾತೀ—** ಸತ್ಸು ಪಕ್ಷಪಾತಃ ಅಸ್ಯ ಅಸ್ತಿ ಇತಿ ಸತ್ಪಕ್ಷಪಾತೀ ।

**ಕ್ರಿಯಾಪದ— ಅಭೂತ್** - ಭೂ ಸತ್ತಾಯಾಂ ಇತ್ಯಸ್ಮಾತ್ ಸತ್ತಾರ್ಥಕಾತ್ ಭೂ ಧಾತೋಃ ಲುಙ್ ಪ್ರಥಮಪುರುಷೇ ಏಕವಚನೇ 'ಅಭೂತ್' ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಭೂತ, ಅಭೂವಂ ಅಭೂವ ಅಭೂಮ ॥

**ಅಲಂಕಾರ—** ಅಭಂಗಶ್ಲಿಷ್ಟವಿಶೇಷಣೋಪಮಾಲಂಕಾರ.

★ ★ ★

ಸುಮಧ್ವವಿಜಯದ ಸುಂದರಕಾಂಡ

**ಗೋಭಿಃ ಸಮಾನಂದಿತರೂಪಸೀತಃ**
**ಸ್ವವಹ್ನಿನಿರ್ದಗ್ಧಪಲಾಶಿರಾಶಿಃ ।**
**ಅಹೋ ಹನೂಮನ್ನವವಾರಿದೋಽಸೌ**
**ತೀರ್ಣಾಂಬುಧಿರ್ವಿಷ್ಣುಪದೇ ನನಾಮ ॥ 15 ॥**

**ಪದಚ್ಛೇದ—** ಗೋಭಿಃ ಸಮಾನಂದಿತರೂಪಸೀತಃ, ಸ್ವವಹ್ನಿನಿರ್ದಗ್ಧಪಲಾಶಿರಾಶಿಃ, ಅಹೋ ಹನೂಮನ್ನವವಾರಿದಃ, ಅಸೌ, ತೀರ್ಣಾಂಬುಧಿಃ, ವಿಷ್ಣುಪದೇ, ನನಾಮ ।

**ಅನ್ವಯ—** ಗೋಭಿಃ ಸಮಾನಂದಿತರೂಪಸೀತಃ, ಸ್ವವಹ್ನಿನಿರ್ದಗ್ಧಪಲಾಶಿರಾಶಿಃ ಅಸೌ ಹನೂಮನ್ನವವಾರಿದಃ ತೀರ್ಣಾಂಬುಧಿಃ ವಿಷ್ಣುಪದೇ ನನಾಮ ಅಹೋ ।

**ಅನ್ವಯಾರ್ಥ—**

**ಗೋಭಿಃ ಸಮಾನಂದಿತರೂಪಸೀತಃ** = ಮಾತುಗಳಿಂದ ಅಥವಾ ನೀರುಗಳಿಂದ ಸಂತೋಷಪಡಿಸಲ್ಪಟ್ಟ ರೂಪವುಳ್ಳ ಸೀತಾದೇವಿಯುಳ್ಳ ಅಥವಾ ನವಚೈತನ್ಯವುಳ್ಳದ್ದಾಗಿ ಮಾಡಲ್ಪಟ್ಟ ಸಸ್ಯಗಳುಳ್ಳ

**ಸ್ವವಹ್ನಿನಿರ್ದಗ್ಧಪಲಾಶಿರಾಶಿಃ** = ತನ್ನ ಬಾಲದಲ್ಲಿರುವ ಬೆಂಕಿಯಿಂದ ಸುಡಲ್ಪಟ್ಟ ಮಾಂಸಾಹಾರಿಗಳಾದ ರಾಕ್ಷಸರುಗಳ ರಾಶಿಯಿಂದ ಸಹಿತರಾದ ಅಥವಾ ಮಿಂಚೆಂಬ ಬೆಂಕಿಯಿಂದ ಸುಡಲ್ಪಟ್ಟ ಪಲಾಶ-ಮರಗಳ ರಾಶಿಗಳುಳ್ಳ

**ಅಸೌ ಹನೂಮನ್ನವವಾರಿದಃ ತೀರ್ಣಾಂಬುಧಿಃ** = ಈ ಹನೂಮಂತದೇವರೆಂಬ ಹೊಸ ಮೇಘವು, ದಾಟಲ್ಪಟ್ಟ ಸಮುದ್ರವುಳ್ಳದ್ದಾಗಿ

**ವಿಷ್ಣುಪದೇ ನನಾಮ** = ನಾರಾಯಣ ರೂಪಿಯಾದ ರಾಮನ ಪಾದದಲ್ಲಿ ನಮಸ್ಕರಿಸಿತು. ಆಕಾಶದಲ್ಲಿ ಅಲ್ಲಿಯೇ ಅಡಗಿ ಹೋಯಿತು.

**ಅಹೋ** = ಹನೂಮಂತದೇವರ ಚರಿತ್ರೆಯು ಆಶ್ಚರ್ಯಕರವಾದುದು.

**ತಾತ್ಪರ್ಯ—** ಸೀತಾದೇವಿಯನ್ನು ಶ್ರೀಹನುಮಂತದೇವರು ನೋಡಿ, ಮಾತುಗಳನ್ನು ಆಡಿ ಸಂತೋಷಪಡಿಸಿದರು. ಅಥವಾ ನೇಗಿಲುಗಳಿಂದ ಹುಟ್ಟಿರುವ ಸಸ್ಯಗಳ ಸಮೂಹಕ್ಕೆ ನವಚೈತನ್ಯವನ್ನು ಕೊಟ್ಟರು. ತನ್ನ ಬಾಲದಿಂದ ಹುಟ್ಟಿರುವ ಬೆಂಕಿಯಿಂದ ಮಾಂಸಾಹಾರಿಗಳಾದ ರಾಕ್ಷಸರ ರಾಶಿಗಳನ್ನು ಸುಟ್ಟರು. ಅಥವಾ ಮಿಂಚಿನ ಬೆಂಕಿಯಿಂದ ಮರಗಳ ರಾಶಿಗಳನ್ನು ಸುಟ್ಟರು. ಈ ಹನುಮಂತದೇವರು ಎಂಬ ಹೊಸ ಮೇಘವು ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಹೋಯಿತು. ಪುನಃ ಹಿಂದಿರುಗಿ ಬಂದು ಶ್ರೀರಾಮನ ಪಾದಕ್ಕೆ ನಮಸ್ಕರಿಸಿತು. ಅಲ್ಲಿಯೇ ಲೀನವಾಗಿ ಅಡಗಿತು. ಶ್ರೀಹನುಮಂತದೇವರ ಮಹಿಮೆಯು ಅತ್ಯಾಶ್ಚರ್ಯಕರವಾಗಿದೆ.

**ವಿಗ್ರಹ—**

**ಸಮಾನಂದಿತರೂಪಸೀತಃ—** ಸಮಾನಂದಿತಂ ರೂಪಂ ಯಸ್ಯಾಃ ಸಾ ಸಮಾನಂದಿತರೂಪಾ, ಸಮಾನಂದಿತ-ರೂಪಾ ಸೀತಾ ಯೇನ ಸಃ ಸಮಾನಂದಿತರೂಪಸೀತಃ ।

**ಸ್ವವಹ್ನಿನಿರ್ದಗ್ಧಪಲಾಶಿರಾಶಿಃ—** ಸ್ವಸ್ಯ ವಹ್ನಿಃ ಸ್ವವಹ್ನಿಃ, ನಿತರಾಂ ದಗ್ಧಃ ನಿರ್ದಗ್ಧಃ, ಸ್ವವಹ್ನಿನಾ ನಿರ್ದಗ್ಧಃ ಸ್ವವಹ್ನಿನಿರ್ದಗ್ಧಃ, ಪಲಾನಿ ಅಶ್ನಂತಿ ಇತಿ ಪಲಾಶಿನಃ, ಪಲಾಶಿನಾಂ ರಾಶಿಃ ಪಲಾಶಿರಾಶಿಃ, ಸ್ವವಹ್ನಿನಿರ್ದಗ್ಧಾ ಪಲಾಶಿರಾಶಿಃ ಯೇನ ಸಃ ಸ್ವವಹ್ನಿನಿರ್ದಗ್ಧಪಲಾಶಿರಾಶಿಃ ।

**ಹನೂಮನ್ನವವಾರಿದಃ—** ವಾರೀಣಿ ದದಾತಿ ಇತಿ ವಾರಿದಃ, ನವಶ್ಚಾಸೌ ವಾರಿದಶ್ಚ ನವವಾರಿದಃ ಹನುಮಾನೇವ ನವವಾರಿದಃ ।

**ತೀರ್ಣಾಂಬುಧಿಃ—** ಅಂಬೂನಿ ಧೀಯಂತೇ ಅಸ್ಮಿನ್ ಇತಿ ಅಂಬುಧಿಃ, ತೀರ್ಣಃ ಅಂಬುಧಿಃ ಯೇನ ಸಃ ತೀರ್ಣಾಂಬುಧಿಃ ।

**ವಿಷ್ಣುಪದೇ—** ವಿಷ್ಣೋಃ ಪದಂ ವಿಷ್ಣುಪದಂ, ತಸ್ಮಿನ್ ವಿಷ್ಣುಪದೇ ।

**ಕ್ರಿಯಾಪದ—** ನನಾಮ- ಣಮು ಪ್ರಹ್ವತ್ವೇ ಶಬ್ದೇ ಚ ಇತ್ಯಸ್ಮಾತ್ ಪ್ರಹ್ವತ್ವಶಬ್ದಾರ್ಥಕಾತ್ ಣಮು ಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ನನಾಮ' ಇತಿ ರೂಪಮ್ ।

ನನಾಮ ನೇಮತುಃ ನೇಮುಃ, ನೇಮಿಥ ನೇಮಥುಃ ನೇಮ, ನನಾಮ ನನಮ, ನೇಮಿವ ನೇಮಿಮ ॥

**ಅಲಂಕಾರ—** ಶ್ಲೇಷಗರ್ಭರೂಪಕ ಉಪಮಾ ಸಂಕೀರ್ಣಃ.

★ ★ ★

## ಗರುಡನನ್ನು ಜಯಿಸುವ ಹನುಮಂತ

**ಅಪಕ್ಷಪಾತೀ ಪುರುಷಸ್ತ್ರಿಲೋಕ್ಯಾ-**
**ಮಭೋಗಭೋಕ್ತಾ ಪತಗಾಧಿರಾಜಮ್ ।**
**ವಿಶ್ವಂಭರಂ ಬಿಭ್ರದಸೌ ಜಿಗಾಯ**
**ತ್ವರಾಪರಾಕ್ರಾಂತಿಷು ಚಿತ್ರಮೇತತ್ ॥ 16 ॥**

ಪದಚ್ಛೇದ— ಅಪಕ್ಷಪಾತೀ, ಪುರುಷಃ, ತ್ರಿಲೋಕ್ಯಾಂ, ಅಭೋಗಭೋಕ್ತಾ, ಪತಗಾಧಿರಾಜಂ, ವಿಶ್ವಂಭರಂ, ಬಿಭ್ರತ್, ಅಸೌ, ಜಿಗಾಯ, ತ್ವರಾಪರಾಕ್ರಾಂತಿಷು ಚಿತ್ರಂ ಏತತ್ ।

ಅನ್ವಯ— ತ್ರಿಲೋಕ್ಯಾಂ ಪುರುಷಃ ಅಪಕ್ಷಪಾತೀ, ಅಭೋಗಭೋಕ್ತಾ, ವಿಶ್ವಂಭರಂ ಬಿಭ್ರತ್ ಅಸೌ, ತ್ವರಾಪರಾಕ್ರಾಂತಿಷು ಪತಗಾಧಿರಾಜಂ ಜಿಗಾಯ, ಏತತ್ ಚಿತ್ರಮ್ ।

ಅನ್ವಯಾರ್ಥ—

**ಪುರುಷಃ** = ಪುರುಷಾಕಾರವುಳ್ಳವರಾಗಿಯೂ

**ಅಪಕ್ಷಪಾತೀ** = ರೆಕ್ಕೆಗಳಿಂದ ಹಾರದೆ ಇರುವವರಾಗಿಯೂ

**ಅಭೋಗಭೋಕ್ತಾ** = ಬ್ರಹ್ಮಚರ್ಯವ್ರತನಿಷ್ಠರಾಗಿರುವುದರಿಂದ ಸ್ತ್ರೀಯರೇ ಮೊದಲಾದ ಸುಖಸಾಧನಗಳನ್ನು ಬಿಟ್ಟವರಾಗಿಯೂ ಅಥವಾ ಸರ್ಪಗಳ ದೇಹಗಳನ್ನು ತಿನ್ನದೆಯೂ ಇರುವ

**ವಿಶ್ವಂಭರಂ ಬಿಭ್ರತ್ ಅಸೌ** = ಸಕಲಲೋಕಧಾರಕನಾಗಿರುವ ಶ್ರೀಹರಿಯನ್ನು ಧರಿಸಿದವರಾಗಿಯೂ ಇರುವ ಈ ಹನುಮಂತದೇವರು

**ತ್ವರಾಪರಾಕ್ರಾಂತಿಷು ಪತಗಾಧಿರಾಜಂ ಜಿಗಾಯ** = ವೇಗಗಳಲ್ಲಿಯೂ ಪರಾಕ್ರಮಗಳಲ್ಲಿಯೂ ಪಕ್ಷಿಗಳಿಗೆ ಅಧಿರಾಜನಾಗಿರುವ ಗರುಡನನ್ನು ಜಯಿಸಿದರು.

**ತ್ರಿಲೋಕ್ಯಾಂ** = ಮೂರು ಲೋಕಗಳ ಸಮುದಾಯಗಳಲ್ಲಿ

**ಏತತ್ ಚಿತ್ರಂ** = ಇದು ಆಶ್ಚರ್ಯಕರವಾಗಿದೆ.

ತಾತ್ಪರ್ಯ— ಶ್ರೀಹನುಮಂತದೇವರಿಗೆ ರೆಕ್ಕೆಗಳಿಲ್ಲ, ಆದ್ದರಿಂದ ರೆಕ್ಕೆಗಳಿಂದ ಹಾರುವುದಿಲ್ಲ, ಸ್ತ್ರೀ ಮುಂತಾದ ಸುಖಸಾಧನಗಳನ್ನು ಅನುಭವಿಸುವುದಿಲ್ಲ, ಸರ್ಪಗಳ ದೇಹಗಳನ್ನು ಗರುಡನು ತಿಂದಂತೆ ತಿನ್ನುವುದಿಲ್ಲ, ಆದರೂ ವಿಶ್ವಂಭರರೂಪಿಯಾದ ಶ್ರೀಹರಿಯನ್ನು ಧರಿಸಿರುವ ಶ್ರೀಹನುಮಂತದೇವರು ವೇಗಗಳಲ್ಲಿಯೂ ಪರಾಕ್ರಮಗಳಲ್ಲಿಯೂ ಗರುಡನನ್ನು ಜಯಿಸಿದರು. ಮೂರು ಲೋಕಗಳ ಸಮುದಾಯದಲ್ಲಿ ಇದು ಆಶ್ಚರ್ಯವಲ್ಲವೇ ?

ವಿಗ್ರಹ—

**ಅಪಕ್ಷಪಾತೀ**— ಪಕ್ಷಾಭ್ಯಾಂ ಪಾತಃ ಅಸ್ಯ ಅಸ್ತಿ ಇತಿ ಪಕ್ಷಪಾತೀ, ಪಕ್ಷಪಾತೀ ನ ಭವತಿ ಇತಿ ಅಪಕ್ಷಪಾತೀ ।

**ತ್ರಿಲೋಕ್ಯಾಂ**— ತ್ರಯಾಣಾಂ ಲೋಕಾನಾಂ ಸಮಾಹಾರಃ ತ್ರಿಲೋಕೀಃ ತಸ್ಯಾಂ ।

**ಅಭೋಗಭೋಕ್ತಾ**— ಭೋಗಾನಾಂ ಭೋಕ್ತಾ ಭೋಗಭೋಕ್ತಾ, ನ ಭೋಗಭೋಕ್ತಾ ಅಭೋಗಭೋಕ್ತಾ ।

**ಪತಗಾಧಿರಾಜಂ**— ಪತಗಾನಾಂ ಅಧಿರಾಜಃ ಪತಗಾಧಿರಾಜಃ, ತಂ ಪತಗಾಧಿರಾಜಂ ।

**ವಿಶ್ವಂಭರಂ**— ವಿಶ್ವಂ ಬಿಭರ್ತಿ ಇತಿ ವಿಶ್ವಂಭರಃ, ತಂ ವಿಶ್ವಂಭರಂ ।

**ಬಿಭ್ರತ್**— ಬಿಭರ್ತಿ ಇತಿ ಬಿಭ್ರತ್ ।

**ತ್ವರಾಪರಾಕ್ರಾಂತಿಷು—** ತ್ವಾರಾಶ್ಚ ಪರಾಕ್ರಾಂತಯಶ್ಚ ತ್ವರಾಪರಾಕ್ರಾಂತಯಃ, ತಾಸು ತ್ವರಾಪರಾಕ್ರಾಂತಿಷು ।

**ಕ್ರಿಯಾಪದ—** ಜಗಾ- ಜಿ ಜಯೇ ಇತ್ಯಸ್ಮಾತ್ ಜಯಾರ್ಥಕಾತ್ ಜಿ ಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮ-ಪುರುಷೇ ಏಕವಚನೇ 'ಜಿಗಾಯ' ಇತಿ ರೂಪಮ್ ।

ಜಿಗಾಯ ಜಿಗ್ಯತುಃ ಜಿಗ್ಯುಃ, ಜಿಗ್ಯಿಥ ಜಿಗ್ಯಥುಃ ಜಿಗ್ಯ, ಜಿಗಾಯ ಜಿಗಯ ಜಿಗ್ಯಿವ ಜಿಗ್ಯಿಮ ॥

**ಅಲಂಕಾರ—** ವಿಭಾವನಾ ವ್ಯತಿರೇಕಾಲಂಕಾರ ಸಂಕೀರ್ಣಃ.

★ ★ ★

ಸೇತುಬಂಧನ - ರಾವಣನಿಗೆ ಮುಷ್ಟಿಪ್ರಹಾರ

**ನಿಬದ್ಧ್ಯ ಸೇತುಂ ರಘುವಂಶಕೇತು-**
**ಭ್ರೂಭಂಗಸಂಭ್ರಾಂತಪಯೋಧಿಮಧ್ಯೇ ।**
**ಮುಷ್ಟಿಪ್ರಹಾರಂ ದಶಕಾಯ ಸೀತಾ-**
**ಸಂತರ್ಜನಾಗ್ರ್ಯೋತ್ತರಮೇಷಕೋಽದಾತ್ ॥ 17 ॥**

**ಪದಚ್ಛೇದ—** ನಿಬದ್ಧ್ಯ, ಸೇತುಂ, ರಘುವಂಶಕೇತುಭ್ರೂಭಂಗಸಂಭ್ರಾಂತಪಯೋಧಿಮಧ್ಯೇ, ಮುಷ್ಟಿಪ್ರಹಾರಂ, ದಶಕಾಯ, ಸೀತಾಸಂತರ್ಜನಾಗ್ರ್ಯೋತ್ತರಂ ಏಷಕಃ ಅದಾತ್ ।

**ಅನ್ವಯ—** ಏಷಕಃ ರಘುವಂಶಕೇತುಭ್ರೂಭಂಗಸಂಭ್ರಾಂತಪಯೋಧಿಮಧ್ಯೇ ಸೇತುಂ ನಿಬದ್ಧ್ಯ, ದಶಕಾಯ, ಸೀತಾಸಂತರ್ಜನಾಗ್ರ್ಯೋತ್ತರಂ ಮುಷ್ಟಿಪ್ರಹಾರಂ ಅದಾತ್ ।

**ಅನ್ವಯಾರ್ಥ—**

ಏಷಕಃ = ಈ ಹನುಮಂತದೇವರು

ರಘುವಂಶಕೇತುಭ್ರೂಭಂಗಸಂಭ್ರಾಂತಪಯೋಧಿಮಧ್ಯೇ = ರಘುರಾಜನ ವಂಶದಲ್ಲಿ ಧ್ವಜಸ್ಥಾನೀಯನಾಗಿರುವ ಶ್ರೀರಾಮದೇವನ ಹುಬ್ಬುಗಳನ್ನು ಹಾರಿಸುವುದರಿಂದ ಹೆದರಿರುವ ದಕ್ಷಿಣಸಮುದ್ರದ ಮಧ್ಯದಲ್ಲಿ

ಸೇತುಂ = ಸೇತುವೆಯನ್ನು

ನಿಬದ್ಧ್ಯ = ಲಂಕಾಪಟ್ಟಣಕ್ಕೆ ಕಪಿಸೈನ್ಯವು ಹೋಗುವುದಕ್ಕೋಸ್ಕರ ಪರ್ವತ ಮುಂತಾದವುಗಳಿಂದ ಮಾರ್ಗವನ್ನು ಮಾಡಿಸಿ

ದಶಕಾಯ = ಹತ್ತು ತಲೆಗಳಿಂದ ಯುಕ್ತನಾದ ರಾವಣನಿಗೋಸ್ಕರ

ಸೀತಾಸಂತರ್ಜನಾಗ್ರ್ಯೋತ್ತರಂ = ಸೀತೆಯನ್ನು ಹೆದರಿಸಿ ಧಿಕ್ಕರಿಸಿದ್ದಕ್ಕೆ ಶ್ರೇಷ್ಠವಾದ ಉತ್ತರರೂಪವಾದ

ಮುಷ್ಟಿಪ್ರಹಾರಂ ಅದಾತ್ = ಎದೆಯಲ್ಲಿ ಒಂದು ಮುಷ್ಟಿಯಿಂದ ಪ್ರಹಾರವನ್ನು ಕೊಟ್ಟರು.

ತಾತ್ಪರ್ಯ— ರಘುವಂಶದಲ್ಲಿ ಧ್ವಜದಂತಿರುವ ಶ್ರೀರಾಮದೇವನು ಲಂಕಾಪಟ್ಟಣಕ್ಕೆ ಹೋಗಬೇಕೆಂದು ತೀರ್ಮಾನಿಸಿದನು. ಮಾರ್ಗದಲ್ಲಿ ಅಡ್ಡವಾಗಿರುವ ಸಮುದ್ರವನ್ನು ನೋಡಿದನು. ಒಂದು ಸಲ ಸಮುದ್ರವನ್ನು ನೋಡಿ ಹುಬ್ಬನ್ನು ಹಾರಿಸಿದನು. ಆ ಕ್ಷಣದಲ್ಲಿ ಸಮುದ್ರವು ಹೆದರಿತು. ಆ ಸಮುದ್ರದಲ್ಲಿ ಪರ್ವತ ಮುಂತಾದವುಗಳಿಂದ ಸೇತುವೆಯನ್ನು ಕಟ್ಟಿಸಿದನು. ರಾವಣನು ಸೀತೆಯನ್ನು ನೋಡಿದಾಗ ಹೆದರಿಸುತ್ತಾ ಇದ್ದನು. ಶ್ರೀಹನುಮಂತ ದೇವರು ಶ್ರೀಸೀತಾದೇವಿಯು ಧಿಕ್ಕರಿಸುತ್ತಿರುವುದನ್ನು ನೋಡಿದರು. ಅದಕ್ಕೆ ಯೋಗ್ಯವಾದ ಪ್ರತ್ಯುತ್ತರವನ್ನು ಕೊಡಬೇಕು ಎಂದು ತೀರ್ಮಾನಿಸಿ ಹತ್ತು ತಲೆಯಿಂದ ಯುಕ್ತನಾದ ರಾವಣನ ಎದೆಯನ್ನು ಒಂದು ಮುಷ್ಟಿಯಿಂದ ಗುದ್ದಿದರು. ಇದೇ ರಾವಣನಿಗೆ ಉತ್ತರ.

ವಿಗ್ರಹ—

**ನಿಬಧ್ಯ**— ನಿತರಾಂ ಬದ್ಧ್ವಾ ನಿಬಧ್ಯ ।

**ರಘುವಂಶಕೇತುಃ** — ರಘೋಃ ವಂಶಃ ರಘುವಂಶಃ । ರಘುವಂಶಸ್ಯ ಕೇತುಃ ರಘುವಂಶಕೇತುಃ ।

**ರಘುವಂಶಕೇತುಭ್ರೂಭಂಗಸಂಭ್ರಾಂತಪಯೋಧಿಮಧ್ಯೇ**— ರಘುವಂಶಕೇತೋಃ ಭ್ರುವೌ ರಘುವಂಶಕೇತು-ಭ್ರುವೌ, ರಘುವಂಶಕೇತುಭ್ರುವೋಃ ಭಂಗಃ, ರಘು...ಭ್ರೂಭಂಗಃ, ರಘು...ಭ್ರೂಭಂಗೇನಸಂಭ್ರಾಂತಃ (ಸಮ್ಯಕ್‌ಭ್ರಾಂತಃ), ರಘು...ಭ್ರೂಭಂಗಸಂಭ್ರಾಂತಃ, ರಘು...ಭ್ರೂಭಂಗಸಂಭ್ರಾಂತಶ್ಚಾಸೌ ಪಯೋ-ಧಿಶ್ಚ ರಘು...ಭ್ರೂಭಂಗಸಂಭ್ರಾಂತಪಯೋಧಿಃ, ರಘು...ಭ್ರೂಭಂಗಸಂಭ್ರಾಂತಪಯೋಧೇಃ ಮಧ್ಯಂ ರಘು...ಭ್ರೂಭಂಗಸಂಭ್ರಾಂತಪಯೋಧಿಮಧ್ಯಂ, ತಸ್ಮಿನ್ ರಘು...ಭ್ರೂಭಂಗಸಂಭ್ರಾಂತಪಯೋಧಿ ಮಧ್ಯೇ ।

**ಮುಷ್ಟಿಪ್ರಹಾರಂ**— ಮುಷ್ಟಿನಾ ಪ್ರಹಾರಃ ಮುಷ್ಟಿಪ್ರಹಾರಃ, ತಂ ಮುಷ್ಟಿಪ್ರಹಾರಂ ।

**ದಶಕಾಯ**— ದಶ ಕಾನಿ ಯಸ್ಯ ಸಃ ದಶಕಃ, ತಸ್ಮೈ ದಶಕಾಯ ।

**ಸೀತಾಸಂತರ್ಜನಾಗ್ರ್ಯೋತ್ತರಂ**— ಸೀತಾಯಾಃ ಸಂತರ್ಜನಂ (ಸಮ್ಯಕ್ ತರ್ಜನಂ) ಸೀತಾಸಂತರ್ಜನಂ, ಸೀತಾಸಂತರ್ಜನಸ್ಯ ಅಗ್ರ್ಯಂ ಉತ್ತರಂ ಯಸ್ಮಿನ್ ತತ್ ಸೀತಾಸಂತರ್ಜನಾಗ್ರ್ಯೋತ್ತರಂ, ತತ್ ।

**ಏಷಕಃ**— ಏಷಃ ಏವ ಏಷಕಃ ।

**ಕ್ರಿಯಾಪದ**— **ಅದಾತ್** - ಡುದಾಞ್ ದಾನೇ ಇತ್ಯಸ್ಮಾತ್ ಲುಙ್ ಲಕಾರಸ್ಯ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಅದಾತ್' ಇತಿ ರೂಪಮ್ ।

ಅದಾತ್ ಅದಾತಾಂ ಅದುಃ, ಅದಾಃ ಅದಾತಂ ಅದಾತ, ಅದಾಂ ಅದಾವ ಅದಾಮ ॥

**ಅಲಂಕಾರ**— ಸ್ವಭಾವೋಕ್ತ್ಯಲಂಕಾರ.

★ ★ ★

ರಣಯಜ್ಞದಲ್ಲಿ ಹನುಮಂತನೇ ಅಧ್ವರ್ಯು

**ಜಾಜ್ವಲ್ಯಮಾನೋಜ್ಜ್ವಲರಾಘವಾಗ್ನೌ**
**ಚಕ್ರೇ ಸ ಸುಗ್ರೀವಸುಯಾಯಜೂಕೇ ।**
**ಆಧ್ವರ್ಯವಂ ಯುದ್ಧಮಖೇ ಪ್ರತಿಪ್ರ-**
**ಸ್ಥಾತ್ರಾ ಸುಮಿತ್ರಾತನಯೇನ ಸಾಕಮ್ ॥ 18 ॥**

**ಪದಚ್ಛೇದ**— ಜಾಜ್ವಲ್ಯಮಾನೋಜ್ಜ್ವಲರಾಘವಾಗ್ನೌ, ಚಕ್ರೇ, ಸಃ, ಸುಗ್ರೀವಸುಯಾಯಜೂಕೇ, ಆಧ್ವರ್ಯವಂ, ಯುದ್ಧಮಖೇ, ಪ್ರತಿಪ್ರಸ್ಥಾತ್ರಾ, ಸುಮಿತ್ರಾತನಯೇನ ಸಾಕಮ್ ।

**ಅನ್ವಯ**— ಸಃ ಜಾಜ್ವಲ್ಯಮಾನೋಜ್ಜ್ವಲರಾಘವಾಗ್ನೌ ಸುಗ್ರೀವಸುಯಾಯಜೂಕೇ ಯುದ್ಧಮಖೇ ಪ್ರತಿಪ್ರಸ್ಥಾತ್ರಾ ಸುಮಿತ್ರಾತನಯೇನ ಸಾಕಂ ಆಧ್ವರ್ಯವಂ ಚಕ್ರೇ ।

**ಅನ್ವಯಾರ್ಥ**—

**ಸಃ** = ಆ ಹನುಮಂತದೇವರು

**ಜಾಜ್ವಲ್ಯಮಾನೋಜ್ಜ್ವಲರಾಘವಾಗ್ನೌ** = ಅತ್ಯಂತವಾಗಿ ಜ್ವಲಿಸುತ್ತಿರುವ ಅಂದರೆ ರಾವಣನ ವಿಷಯದಲ್ಲಿ ಅತ್ಯಂತವಾಗಿ ಪ್ರಕಾಶಮಾನವಾಗಿರುವ ಶ್ರೀರಾಮಚಂದ್ರನೆಂಬ ಅಗ್ನಿಯಲ್ಲಿ

**ಸುಗ್ರೀವಸುಯಾಯಜೂಕೇ** = ಸುಗ್ರೀವ ಎಂಬ ಯಾಗ ಮಾಡುವ ಉತ್ತಮ ಯಜಮಾನನುಳ್ಳ
**ಯುದ್ಧಮಖೇ** = ಯುದ್ಧ ಎಂಬ ಯಜ್ಞದಲ್ಲಿ
**ಪ್ರತಿಪ್ರಸ್ಥಾತ್ರಾ ಸುಮಿತ್ರಾತನಯೇನ ಸಾಕಂ** = ಪ್ರತಿಪ್ರಸ್ಥಾತಾ ಎಂಬ ಋತ್ವಿಕ್ ಆಗಿರುವ ಸುಮಿತ್ರೆಯ ಮಗನಾದ ಲಕ್ಷ್ಮಣನೊಡನೆ
**ಆಧ್ವರ್ಯವಂ** = ಅಧ್ವರ್ಯುವಿನ (ಋತ್ವಿಜನ) ಕೆಲಸವನ್ನು
**ಚಕ್ರೇ** = ಮಾಡಿದರು.

**ತಾತ್ಪರ್ಯ**— ಯುದ್ಧವೇ ಯಜ್ಞ. ಸುಗ್ರೀವನೇ ಯಜಮಾನನು. ಶ್ರೀರಾಮಚಂದ್ರದೇವನೇ ಜ್ವಲಿಸುತ್ತಿರುವ ಅಗ್ನಿ. ಲಕ್ಷ್ಮಣನೇ ಪ್ರತಿಪ್ರಸ್ಥಾತಾ ಎಂಬ ಋತ್ವಿಕ್. ಅಂಗದ ಮುಂತಾದವರು ಇತರ ಋತ್ವಿಕ್ಕುಗಳು. ಹೀಗೆ ಶ್ರೀಹರಿಯ ಪ್ರೀತಿಗಾಗಿ ಯುದ್ಧವೆಂಬ ಯಜ್ಞದಲ್ಲಿ ಶ್ರೀಹನುಮಂತದೇವರು ಆಧ್ವರ್ಯು ಎಂಬ ಪುರೋಹಿತನ ಕೆಲಸವನ್ನು ಮಾಡಿದರು.

**ವಿಗ್ರಹ**—

**ಜಾಜ್ವಲ್ಯಮಾನೋಜ್ಜ್ವಲರಾಘವಾಗ್ನೌ**— ಅತ್ಯಂತಂ ಜ್ವಲನ್ ಜಾಜ್ವಲ್ಯಮಾನಃ, ರಘೋಃ ಗೋತ್ರಾಪತ್ಯಂ ಪುಮಾನ್ ರಾಘವಃ, ರಾಘವ ಏವ ಅಗ್ನಿಃ ರಾಘವಾಗ್ನಿಃ, ಉಜ್ಜ್ವಲಶ್ಚಾಸೌ ರಾಘವಾಗ್ನಿಶ್ಚ ಉಜ್ಜ್ವಲ-ರಾಘವಾಗ್ನಿಃ, ಜಾಜ್ವಲ್ಯಮಾನಶ್ಚಾಸೌ ಉಜ್ಜ್ವಲರಾಘವಾಗ್ನಿಶ್ಚ ಜಾಜ್ವಲ್ಯಮಾನೋಜ್ಜ್ವಲರಾಘವಾಗ್ನಿಃ, ತಸ್ಮಿನ್ ಜಾಜ್ವಲ್ಯಮಾನೋಜ್ಜ್ವಲರಾಘವಾಗ್ನೌ ।

**ಸುಗ್ರೀವಸುಯಾಯಜೂಕೇ**— ಶೋಭನಶ್ಚಾಸೌ ಯಾಯಜೂಕಶ್ಚ ಸುಯಾಯಜೂಕಃ, ಸುಗ್ರೀವ ಏವ ಸುಯಾಯಜೂಕಃ ಸುಗ್ರೀವಸುಯಾಯಜೂಕಃ, ತಸ್ಮಿನ್ ಸುಗ್ರೀವಸುಯಾಯಜೂಕೇ ।

**ಆಧ್ವರ್ಯವಂ**— ಅಧ್ವರ್ಯೋಃ ಇದಂ ಆಧ್ವರ್ಯವಂ ।

**ಯುದ್ಧಮಖೇ**— ಯುದ್ಧಂ ಏವ ಮಖಃ ಯುದ್ಧಮಖಃ, ತಸ್ಮಿನ್ ಯುದ್ಧಮಖೇ ।

**ಸುಮಿತ್ರಾತನಯೇನ** — ಸುಮಿತ್ರಾಯಾಃ ತನಯಃ ಸುಮಿತ್ರಾತನಯಃ, ತೇನ ಸುಮಿತ್ರಾತನಯೇನ ।

**ಕ್ರಿಯಾಪದ**— ಚಕ್ರೇ - ಡುಕೃಞ್ ಕರಣೇ ಇತ್ಯಸ್ಮಾತ್ ಕರಣಾರ್ಥಕಾತ್ ಕೃಞ್ ಧಾತೋಃ ಆತ್ಮನೇಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಚಕ್ರೇ' ಇತಿ ರೂಪಮ್ ।

ಚಕ್ರೇ ಚಕ್ರಾತೇ ಚಕ್ರಿರೇ, ಚಕೃಷೇ ಚಕ್ರಾಥೇ ಚಕೃಢ್ವೇ, ಚಕ್ರೇ ಚಕೃವಹೇ ಚಕೃಮಹೇ ॥

**ಅಲಂಕಾರ**— ರೂಪಕಾಲಂಕಾರ.

★ ★ ★

ಶ್ರೀರಾಮಾರ್ಚನೆಯ ಜಾಗರೂಕತೆ

**ರಾಮಾರ್ಚನೇ ಯೋ ನಯತಃ ಪ್ರಸೂನಂ**
**ದ್ವಾಭ್ಯಾಂ ಕರಾಭ್ಯಾಮಭವತ್ಪ್ರಯತ್ನಃ ।**
**ಏಕೇನ ದೋಷ್ಣಾ ನಯತೋ ಗಿರೀಂದ್ರಂ**
**ಸಂಜೀವನಾದ್ಯಾಶ್ರಯಮಸ್ಯ ನಾಭೂತ್ ॥ 19 ॥**

**ಪದಚ್ಛೇದ**— ರಾಮಾರ್ಚನೇ, ಯಃ, ನಯತಃ, ಪ್ರಸೂನಂ, ದ್ವಾಭ್ಯಾಂ, ಕರಾಭ್ಯಾಂ, ಅಭವತ್, ಪ್ರಯತ್ನಃ, ಏಕೇನ, ದೋಷ್ಣಾ, ನಯತಃ, ಗಿರೀಂದ್ರಂ, ಸಂಜೀವನಾದ್ಯಾಶ್ರಯಂ, ಅಸ್ಯ, ನ, ಅಭೂತ್ ।

**ಅನ್ವಯ**— ರಾಮಾರ್ಚನೇ ದ್ವಾಭ್ಯಾಂ ಕರಾಭ್ಯಾಂ ಪ್ರಸೂನಂ ನಯತಃ ಯಃ ಪ್ರಯತ್ನಃ ಅಭವತ್, ಸಃ ಪ್ರಯತ್ನಃ ಏಕೇನ ದೋಷ್ಣಾ ಸಂಜೀವನಾದ್ಯಾಶ್ರಯಂ ಗಿರೀಂದ್ರಂ ನಯತಃ ಅಸ್ಯ ನ ಅಭೂತ್ ।

**ಅನ್ವಯಾರ್ಥ—**

**ರಾಮಾರ್ಚನೇ** = ಶ್ರೀರಾಮದೇವನ ಪೂಜೆಗಾಗಿ

**ದ್ವಾಭ್ಯಾಂ ಕರಾಭ್ಯಾಂ ಪ್ರಸೂನಂ ನಯತಃ** = ಎರಡು ಕೈಗಳಿಂದ ಪುಷ್ಪವನ್ನು ತೆಗೆದುಕೊಂಡು ಹೋಗುತ್ತಿರುವ ಶ್ರೀಹನುಮಂತದೇವರಿಗೆ

**ಯಃ ಪ್ರಯತ್ನಃ ಅಭವತ್** = ಯಾವ ಪ್ರಯಾಸವು ಏರ್ಪಟ್ಟಿತ್ತೋ

**ಸಃ ಪ್ರಯತ್ನಃ** = ಆ ಪ್ರಯಾಸವು

**ಏಕೇನ ದೋಷ್ಣಾ** = ಒಂದೇ ಕೈಯಿಂದ

**ಸಂಜೀವನಾದ್ಯಾಶ್ರಯಂ** = ಮೃತಸಂಜೀವನ ಮುಂತಾದ ಮೂಲಿಕೆಗಳ ವೃಕ್ಷಗಳಿಗೆ ಆಶ್ರಯವಾಗಿರುವ

**ಗಿರೀಂದ್ರಂ ನಯತಃ** = ಗಂಧಮಾದನ ಪರ್ವತವನ್ನು ಕಿತ್ತು ತರುತ್ತಿರುವ

**ಅಸ್ಯ** = ಈ ಹನುಮಂತದೇವರಿಗೆ

**ನ ಅಭೂತ್** = ಆಗಲಿಲ್ಲ

**ತಾತ್ಪರ್ಯ—** ಶ್ರೀರಾಮದೇವನ ಪೂಜೆಗಾಗಿ ಶ್ರೀಹನುಮಂತದೇವರು ಪುಷ್ಪವನ್ನು ತರುವುದುಂಟು. ಆಗ ಎರಡು ಕೈಗಳಿಂದಲೂ ಅತ್ಯಂತ ಭಕ್ತಿಯಿಂದ ತರುವುದು ಅವರ ಸ್ವಭಾವ. ಮೂಗಿನ ಗಾಳಿ ಮುಂತಾದವುಗಳ ಸ್ಪರ್ಶವಾಗದಂತೆ ತರುವರು. ಮೃತಸಂಜೀವನ ಮೂಲಿಕೆ ಮುಂತಾದವುಗಳಿಗೆ ಆಶ್ರಯವಾಗಿದ್ದುದು ಗಂಧಮಾದನ ಪರ್ವತ. ಮೂಲಿಕೆ-ಗಳನ್ನು ಒಂದೇ ಕೈಗಳಿಂದ ಅಲಕ್ಷ್ಯವಾಗಿ ತರುತ್ತಿರುವರು. ಆದರೆ ಪುಷ್ಪವನ್ನು ಎರಡು ಕೈಗಳಿಂದ ತರುವಾಗ ಏರ್ಪಟ್ಟಿರುವ ಪ್ರಯಾಸಕ್ಕಿಂತ ಅಧಿಕವಾದ ಪ್ರಯಾಸವು ಅಲಕ್ಷ್ಯವಾಗಿ ಒಂದೇ ಕೈಯಿಂದ ಮೃತಸಂಜೀವನ ಮುಂತಾದ ಮೂಲಿಕೆಗಳಿಗೆ ಆಶ್ರಯವಾದ ಗಂಧಮಾದನ ಪರ್ವತವನ್ನು ತರುವಾಗ ಶ್ರೀಹನುಮಂತದೇವರಿಗ ಆಗಿರಲಿಲ್ಲ.

**ವಿಗ್ರಹ—**

**ರಾಮಾರ್ಚನೇ—** ರಾಮಸ್ಯ ಅರ್ಚನಂ ರಾಮಾರ್ಚನಂ, ತಸ್ಮಿನ್ ರಾಮಾರ್ಚನೇ ।

**ನಯತಃ—** ನಯತಿ ಇತಿ ನಯನ್, ತಸ್ಯ ನಯತಃ ।

**ಸಂಜೀವನಾದ್ಯಾಶ್ರಯಂ—** ಸಂಜೀವಯತಿ ಇತಿ ಸಂಜೀವನಃ, ಸಂಜೀವನಃ ಆದಿಃ ಯಸ್ಯ ಸಃ ಸಂಜೀವನಾದಿಃ, ಸಂಜೀವನಾದೇಃ ಆಶ್ರಯಃ ಸಂಜೀವನಾದ್ಯಾಶ್ರಯಃ, ತಂ ಸಂಜೀವನಾದ್ಯಾಶ್ರಯಂ ।

**ಗಿರೀಂದ್ರಃ—** ಗಿರೀಣಾಂ ಇಂದ್ರಃ ಗಿರೀಂದ್ರಃ, ತಂ ಗಿರೀಂದ್ರಂ ।

**ಕ್ರಿಯಾಪದ—** **ಅಭವತ್** - ಭೂ ಸತ್ತಾಯಾಂ ಇತ್ಯಸ್ಮಾತ್ ಸತ್ತಾರ್ಥಕಾತ್ ಭೂಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಅಭವತ್' ಇತಿ ರೂಪಮ್ ।

ಅಭವತ್ ಅಭವತಾಂ ಅಭವನ್, ಅಭವಃ ಅಭವತಂ ಅಭವತ, ಅಭವಂ ಅಭವಾವ ಅಭವಾಮ ॥

**ಅಲಂಕಾರ—** ಸಂಬಂಧಾತಿಶಯೋಕ್ತ್ಯಲಂಕಾರ.

★ ★ ★

ಸೀತಾಪರೀಕ್ಷೆ

**ಸ ದಾರಿತಾರಿಂ ಪರಮಂ ಪುಮಾಂಸಂ**
**ಸಮನ್ವಯಾಸೀನ್ನರದೇವಪುತ್ರ್ಯಾ ।**
**ವಹ್ನಿಪ್ರವೇಶಾಧಿಗತಾತ್ಮಶುದ್ಧ್ಯಾ**
**ವಿರಾಜಿತಂ ಕಾಂಚನಮಾಲಯೇವ ॥ 20 ॥**

**ಪದಚ್ಛೇದ—** ಸಃ, ದಾರಿತಾರಿಂ, ಪರಮಂ, ಪುಮಾಂಸಂ, ಸಮನ್ವಯಾಸೀತ್, ನರದೇವಪುತ್ರ್ಯಾ, ವಹ್ನಿಪ್ರವೇಶಾಧಿಗತಾತ್ಮಶುದ್ಧ್ಯಾ, ವಿರಾಜಿತಂ, ಕಾಂಚನಮಾಲಯಾ, ಇವ ।

**ಅನ್ವಯ—** ಸಃ ದಾರಿತಾರಿಂ ವಹ್ನಿಪ್ರವೇಶಾಧಿಗತಾತ್ಮಶುದ್ಧ್ಯಾ ನರದೇವಪುತ್ರ್ಯಾ ಕಾಂಚನಮಾಲಯಾ ಇವ ವಿರಾಜಿತಂ ಪರಮಂ, ಪುಮಾಂಸಂ (ರಾಮಂ) ಸಮನ್ವಯಾಸೀತ್ ।

**ಅನ್ವಯಾರ್ಥ—**

**ಸಃ** = ಆ ಹನುಮಂತದೇವರು

**ದಾರಿತಾರಿಂ** = ಕೊಲ್ಲಲ್ಪಟ್ಟ ರಾವಣ ಕುಂಭಕರ್ಣ ಮುಂತಾದ ಶತ್ರುಗಳುಳ್ಳ

**ವಹ್ನಿಪ್ರವೇಶಾಧಿಗತಾತ್ಮಶುದ್ಧ್ಯಾ** = ವಹ್ನಿಪ್ರವೇಶದಿಂದ ತಿಳಿಯಲ್ಪಟ್ಟ ನಿರ್ದೋಷತ್ವ ಎಂಬ ಶ್ರೀಸೀತಾದೇವಿಯರ ಶುದ್ಧಿಯುಳ್ಳ

**ನರದೇವಪುತ್ರ್ಯಾ** = ಜನಕಮಹಾರಾಜನ ಪುತ್ರಿಯಾದ ಸೀತಾದೇವಿಯಿಂದ

**ಕಾಂಚನಮಾಲಯಾ ಇವ ವಿರಾಜಿತಂ** = ಸುವರ್ಣಮಾಲೆಯಿಂದ ಹೇಗೋ ಹಾಗೆ ಶೋಭಿತನಾಗಿರುವ

**ಪರಮಂ ಪುಮಾಂಸಂ (ರಾಮಂ)** = ಸರ್ವೋತ್ತಮನಾದ ಪುರುಷರೂಪಿಯಾದ ಶ್ರೀರಾಮದೇವರನ್ನು

**ಸಮನ್ವಯಾಸೀತ್** = ರಾವಣ ಮುಂತಾದವರನ್ನು ಸಂಹರಿಸಿ ಅಯೋಧ್ಯಾಪಟ್ಟಣಕ್ಕೆ ಹಿಂದಿರುಗುವಾಗ ಶ್ರೀರಾಮದೇವನನ್ನು ಅನುಸರಿಸಿ ಹೋದರು.

**ತಾತ್ಪರ್ಯ—** ಶ್ರೀರಾಮದೇವನು ರಾವಣ, ಕುಂಭಕರ್ಣ ಮುಂತಾದ ರಾಕ್ಷಸರನ್ನು ಸಂಹರಿಸಿ ತಾನು ಸರ್ವೋತ್ತಮನೆಂದು ತಿಳಿಸಿದನು. ಪುರುಷರೂಪಿಯಾಗಿ ಹೊರಟನು. ಸೀತಾದೇವಿಯು ರಾವಣನ ಮನೆಯಲ್ಲಿ ಒಂದು ವರ್ಷಕಾಲದವರೆಗೆ ವಾಸಿಸಿದ್ದರಿಂದ ಸೀತಾದೇವಿಯ ಪಾವಿತ್ರ್ಯವಿಷಯದಲ್ಲಿ ಸಂಶಯವು ಬರುವಂತೆ ಇತ್ತು. ಆಗ ಸೀತಾದೇವಿಯನ್ನು ಅಗ್ನಿಯಲ್ಲಿ ಪ್ರವೇಶಿಸುವಂತೆ ಶ್ರೀರಾಮದೇವನು ಆಜ್ಞಾಪಿಸಿದನು. ಅದರಂತೆ ಸೀತಾದೇವಿಯು ಪ್ರವೇಶಿಸಿದಳು. ಬಂಗಾರದ ಮಾಲೆಯು ಅಗ್ನಿಯಲ್ಲಿ ಪ್ರವೇಶಿಸಿದರೆ ಶುದ್ಧವಾಗುವುದಿಲ್ಲವೇ ? ಸೀತಾದೇವಿಯ ಶುದ್ಧಿಯನ್ನು ಅಗ್ನಿಪ್ರವೇಶದಿಂದ ತಿಳಿಯಬೇಕಾಗಿಲ್ಲ. ಆದರೂ ಅಜ್ಞಜನರ ಮನಸ್ಸಿಗೆ ಬಂದಿರುವ ಸಂಶಯವನ್ನು ಪರಿಹರಿಸಿ ಸರ್ವರೂ ಆ ಸೀತಾದೇವಿಯ ಆತ್ಮಶುದ್ಧಿಯನ್ನು ತಿಳಿಯುವಂತೆ ಮಾಡುವುದಕ್ಕೆ ಈ ನಾಟಕವನ್ನು ಆಡಿದನು. ಅಂತಹ ಶ್ರೀರಾಮನ ಹಿಂದೆ ಶ್ರೀ ಹನುಮಂತದೇವರೂ ಹೊರಟರು.

ವಿಗ್ರಹ—

**ದಾರಿತಾರಿಂ—** ದಾರಿತಾಃ ಅರಯಃ ಯೇನ ಸಃ ದಾರಿತಾರಿಃ, ತಂ ದಾರಿತಾರಿಂ ।

**ನರದೇವಪುತ್ರ್ಯಾ—** ನರಾಣಾಂ ದೇವಃ ನರದೇವಃ, ನರದೇವಸ್ಯ ಪುತ್ರೀ ನರದೇವಪುತ್ರೀ, ತಯಾ ನರದೇವಪುತ್ರ್ಯಾ ।

**ವಹ್ನಿಪ್ರವೇಶಾಧಿಗತಾತ್ಮಶುದ್ಧ್ಯಾ—** ವಹ್ನೌ ಪ್ರವೇಶಃ ವಹ್ನಿಪ್ರವೇಶಃ, ಆತ್ಮನಃ ಶುದ್ಧಿಃ ಆತ್ಮಶುದ್ಧಿಃ, ವಹ್ನಿಪ್ರವೇಶೇನ ಅಧಿಗತಾ ಆತ್ಮಶುದ್ಧಿಃ ಯಸ್ಯಾಃ ಸಾ ವಹ್ನಿಪ್ರವೇಶಾಧಿಗತಾತ್ಮಶುದ್ಧಿಃ, ತಯಾ ವಹ್ನಿಪ್ರವೇಶಾಧಿಗತಾತ್ಮಶುದ್ಧ್ಯಾ ।

**ಕಾಂಚನಮಾಲಯಾ—** ಕಾಂಚನಸ್ಯ ಮಾಲಾ ಕಾಂಚನಮಾಲಾ, ತಯಾ ಕಾಂಚನಮಾಲಯಾ ।

**ಕ್ರಿಯಾಪದ— ಸಮನ್ವಯಾಸೀತ್** - ಸಂ ಅನು ಇತ್ಯುಪಸರ್ಗದ್ವಯಪೂರ್ವಕಾತ್ ಯಾ ಪ್ರಾಪಣೇ ಇತ್ಯಸ್ಮಾತ್ ಪ್ರಾಪಣಾರ್ಥಕಾತ್ ಲುಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಸಮನ್ವಯಾಸೀತ್' ಇತಿ ರೂಪಮ್ ।

| ಸಮನ್ವಯಾಸೀತ್ | ಸಮನ್ವಯಾಸಿಷ್ಟಾಂ | ಸಮನ್ವಯಾಸಿಷುಃ । |
|---|---|---|
| ಸಮನ್ವಯಾಸೀಃ | ಸಮನ್ವಯಾಸಿಷ್ಟಂ | ಸಮನ್ವಯಾಸಿಷ್ಟ । |
| ಸಮನ್ವಯಾಸಿಷಂ | ಸಮನ್ವಯಾಸಿಷ್ವ | ಸಮನ್ವಯಾಸಿಷ್ಮ ॥ |

ಅಲಂಕಾರ— ಉಪಮಾಲಂಕಾರ.

★ ★ ★

ಶ್ರೀರಾಮರ ವಿಗ್ರ - ಹನೂಮಂತನ ಸೇವೆ

**ಶ್ಯಾಮಂ ಸ್ಮಿತಾಸ್ಯಂ ಪೃಥುದೀರ್ಘಹಸ್ತಂ**
**ಸರೋಜನೇತ್ರಂ ಗಜರಾಜಯಾತ್ರಮ್ ।**
**ವಪುರ್ಜಗನ್ಮಂಗಲಮೇಷ ದೃಗ್ಭ್ಯಾಂ**
**ಚಿರಾದಯೋಧ್ಯಾಧಿಪತೇಃ ಸಿಷೇವೇ ॥ 21 ॥**

**ಪದಚ್ಛೇದ—** ಶ್ಯಾಮಂ, ಸ್ಮಿತಾಸ್ಯಂ, ಪೃಥುದೀರ್ಘಹಸ್ತಂ, ಸರೋಜನೇತ್ರಂ, ಗಜರಾಜಯಾತ್ರಂ, ವಪುಃ, ಜಗನ್ಮಂಗಲಂ, ಏಷಃ, ದೃಗ್ಭ್ಯಾಂ, ಚಿರಾತ್, ಅಯೋಧ್ಯಾಧಿಪತೇಃ ಸಿಷೇವೇ ।

**ಅನ್ವಯ—** ಏಷಃ ಶ್ಯಾಮಂ ಸ್ಮಿತಾಸ್ಯಂ ಪೃಥುದೀರ್ಘಹಸ್ತಂ ಸರೋಜನೇತ್ರಂ ಗಜರಾಜಯಾತ್ರಂ ಜಗನ್ಮಂಗಲಂ ಅಯೋಧ್ಯಾಧಿಪತೇಃ ವಪುಃ ದೃಗ್ಭ್ಯಾಂ ಚಿರಾತ್ ಸಿಷೇವೇ ।

**ಅನ್ವಯಾರ್ಥ—**

**ಏಷಃ** = ಈ ಹನುಮಂತದೇವರು

**ಶ್ಯಾಮಂ** = ಕಪ್ಪು ಬಣ್ಣದಿಂದ ಯುಕ್ತನಾಗಿರುವ

**ಸ್ಮಿತಾಸ್ಯಂ** = ಮುಗುಳು ನಗೆಯಿಂದ ಯುಕ್ತವಾದ ಮುಖವುಳ್ಳ

**ಪೃಥುದೀರ್ಘಹಸ್ತಂ** = ಉದ್ದವಾಗಿಯೂ ಮೊಣಕಾಲುಗಳವರೆಗೆ ಉದ್ದವಾಗಿಯೂ ಇರುವ ಕೈಗಳಿಂದ ಯುಕ್ತನಾಗಿರುವ

**ಸರೋಜನೇತ್ರಂ** = ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ

**ಗಜರಾಜಯಾತ್ರಂ** = ಗಜರಾಜನ ಗಮನದಂತೆ ಗಮನವುಳ್ಳ

**ಜಗನ್ಮಂಗಲಂ** = ಶ್ರವಣ, ದರ್ಶನ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಮುಂತಾದವುಗಳಿಂದ ಎಲ್ಲಾ ಲೋಕಗಳಿಗೂ ಮಂಗಲಕರವಾದ

**ಅಯೋಧ್ಯಾಧಿಪತೇಃ ವಪುಃ** = ಅಯೋಧ್ಯಾನಗರದ ಅಧಿಪತಿಯಾಗಿರುವ ಶ್ರೀರಾಮದೇವನ ಶರೀರವನ್ನು

**ದೃಗ್ಭ್ಯಾಂ ಚಿರಾತ್ ಸಿಷೇವೇ** = ಎರಡು ಕಣ್ಣುಗಳಿಂದಲೂ ಇತರ ಸರ್ವೇಂದ್ರಿಯಗಳಿಂದಲೂ ಬಹುಕಾಲದ-ವರೆಗೆ ಸೇವಿಸಿದರು.

**ತಾತ್ಪರ್ಯ—** ಶ್ರೀಹನುಮಂತದೇವರು ಕಪ್ಪು ಬಣ್ಣದಿಂದ ಯುಕ್ತರಾಗಿಯೂ ಮುಗುಳನಗೆಯಿಂದ ಯುಕ್ತವಾದ ಮುಖವುಳ್ಳವರಾಗಿಯೂ ಉಚ್ಚವಾಗಿಯೂ ನೀಳವಾಗಿಯೂ ಇರುವ ಎರಡು ಕೈಗಳಿಂದ ಯುಕ್ತರಾಗಿಯೂ ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಗಳಿಂದ ಯುಕ್ತರಾಗಿಯೂ ಗಜರಾಜನಂತೆ ನಡೆಯುಳ್ಳವರಾಗಿಯೂ ಇರುವ ಅಯೋಧ್ಯಾ ಪಟ್ಟಣದ ಅಧಿಪತಿಯಾಗಿರುವ ಶ್ರೀರಾಮದೇವನನ್ನು ಬಹುಕಾಲದವರೆಗೆ ಶ್ರವಣ ಮುಂತಾದವುಗಳಿಂದ ಸೇವಿಸಿದರು.

**ವಿಗ್ರಹ—**

**ಶ್ಯಾಮಂ—** ಶ್ಯಾಮಃ ವರ್ಣಃ ಅಸ್ಯ ಅಸ್ತಿ ಇತಿ ಶ್ಯಾಮಃ, ತಂ ಶ್ಯಾಮಂ ।

**ಸ್ಮಿತಾಸ್ಯಂ—** ಸ್ಮಿತಂ ಆಸ್ಯಂ ಯಸ್ಯ ತತ್ ಸ್ಮಿತಾಸ್ಯಂ, ತತ್ ಸ್ಮಿತಾಸ್ಯಂ ।

**ಪೃಥುದೀರ್ಘಹಸ್ತಂ—** ಪೃಥೂ ದೀರ್ಘೌ ಹಸ್ತೌ ಯಸ್ಯ ತತ್ ಪೃಥುದೀರ್ಘಹಸ್ತಂ, ತತ್ ಪೃಥುದೀರ್ಘ-ಹಸ್ತಂ ।

**ಸರೋಜನೇತ್ರಂ—** ಸರೋಜ ಇವ ನೇತ್ರೇ ಯಸ್ಯ ತತ್, ಸರೋಜನೇತ್ರಂ, ತತ್ ಸರೋಜನೇತ್ರಂ ।

**ಗಜರಾಜಯಾತ್ರಂ—** ಗಜಾನಾಂ ರಾಜಾ ಗಜರಾಜಃ, ಗಜರಾಜಸ್ಯ ಯಾತ್ರಾ ಇವ ಯಾತ್ರಾ ಯಸ್ಯ ತತ್ ಗಜರಾಜಯಾತ್ರಂ ತತ್ ಗಜರಾಜಯಾತ್ರಂ ।

**ಜಗನ್ಮಂಗಲಂ—** ಜಗತಃ ಮಂಗಲಂ ಯಸ್ಮಾತ್ತತ್ ಜಗನ್ಮಂಗಲಂ ತತ್ ಜಗನ್ಮಂಗಲಂ ।

**ಅಯೋಧ್ಯಾಧಿಪತೇಃ—** ಅಯೋಧ್ಯಾಯಾಃ ಅಧಿಪತಿಃ ಅಯೋಧ್ಯಾಧಿಪತಿಃ, ತಸ್ಯ ಅಯೋಧ್ಯಾಧಿಪತೇಃ ।

**ಕ್ರಿಯಾಪದ—** ಸಿಷೇವೇ- ಸೇವೃಸೇವಾಯಾಂ ಇತಿ ಸೇವಾರ್ಥಾತ್ ಸೇವ್ ಧಾತೋಃ ಲಿಟಿ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ 'ಸಿಷೇವೇ' ಇತಿ ರೂಪಮ್ ।

ಸಿಷೇವೇ ಸಿಷೇವಾತೇ ಸಿಷೇವಿರೇ, ಸಿಷೇವಿಷೇ ಸಿಷೇವಾಥೇ ಸಿಷೇವಿಧ್ವೇ, ಸಿಷೇವಿಧ್ವೇ,
ಸಿಷೇವೇ, ಸಿಷೇವಿವಹೇ ಸಿಷೇವಿಮಹೇ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ಹನುಮಂತನಿಗೆ ಸೀತಾರಾಮರ ಅನುಗ್ರಹ

**ರಾಜ್ಯಾಭಿಷೇಕೇಽವಸಿತೇಽತ್ರ ಸೀತಾ**
**ಪ್ರೇಷ್ಠಾಯ ನಸ್ತಾಂ ಭಜತಾಂ ದಿಶೇತಿ ।**
**ರಾಮಸ್ಯ ವಾಣ್ಯಾ ಮಣಿಮಂಜುಮಾಲಾ-**
**ವ್ಯಾಜೇನ ದೀರ್ಘಾಂ ಕರುಣಾಂ ಬಬಂಧ ॥22॥**

ಪದಚ್ಛೇದ— ರಾಜ್ಯಾಭಿಷೇಕೇ, ಅವಸಿತೇ, ಅತ್ರ, ಸೀತಾ, ಪ್ರೇಷ್ಠಾಯ, ನಃ, ತಾಂ, ಭಜತಾಂ, ದಿಶ, ಇತಿ, ರಾಮಸ್ಯ, ವಾಣ್ಯಾ, ಮಣಿಮಂಜುಮಾಲಾವ್ಯಾಜೇನ, ದೀರ್ಘಾಂ, ಕರುಣಾಂ, ಬಬಂಧ ।

ಅನ್ವಯ— ಸೀತಾ ರಾಮಸ್ಯ ರಾಜ್ಯಾಭಿಷೇಕೇ ಅವಸಿತೇ (ಸತಿ ಹೇ ಸೀತೇ ತ್ವಂ) ನಃ ಭಜತಾಂ (ಮಧ್ಯೇ) ಪ್ರೇಷ್ಠಾಯ ತಾಂ ದಿಶ ಇತಿ ರಾಮಸ್ಯ ವಾಣ್ಯಾ ಮಣಿಮಂಜುಮಾಲಾವ್ಯಾಜೇನ ಅತ್ರ ದೀರ್ಘಾಂ ಕರುಣಾಂ ಬಬಂಧ ।

ಅನ್ವಯಾರ್ಥ—

ಸೀತಾ = ಸೀತಾದೇವಿಯು

**ರಾಮಸ್ಯ ರಾಜ್ಯಾಭಿಷೇಕೇ ಅವಸಿತೇ (ಸತಿ)** = ಶ್ರೀರಾಮದೇವನಿಗೆ ಸಾಮ್ರಾಜ್ಯಾಭಿಷೇಕವು ಮುಗಿಯಲು

**(ಹೇ ಸೀತೇ ! ತ್ವಂ) ನಃ ಭಜತಾಂ (ಮಧ್ಯೇ)** = ಎಲೈ ಸೀತೆಯೇ ! ನೀನು ನಮ್ಮಿಬ್ಬರನ್ನು ಸೇವಿಸುವವರ ಮಧ್ಯದಲ್ಲಿ

**ಪ್ರೇಷ್ಠಾಯತಾಂ ದಿಶ** = ತುಂಬಾ ಪ್ರಿಯನಾದವನಿಗೆ ಆ ಮಾಲೆಯನ್ನು ಕೊಡು

ಇತಿ ರಾಮಸ್ಯ ವಾಣ್ಯಾ = ಹೀಗೆಂಬ ಶ್ರೀರಾಮದೇವನ ಮಾತಿನಿಂದ

ಮಣಿಮಂಜುಮಾಲಾವ್ಯಾಜೇನ = ಪದ್ಮರಾಗ ಮುಂತಾದ ಮಣಿಗಳ ಮನೋಹರವಾದ ಮಾಲೆಯ ನೆಪದಿಂದ

ದೀರ್ಘಾಂ ಕರುಣಾಂ ಬಬಂಧ = ದೀರ್ಘವಾದ ಕರುಣೆಯನ್ನು ಮಾಡಿದಳು.

ತಾತ್ಪರ್ಯ— ಶ್ರೀರಾಮದೇವನಿಗೆ ಪಟ್ಟಾಭಿಷೇಕವು ಮುಗಿಯಿತು. ಆಗ ಶ್ರೀರಾಮದೇವನು ಸೀತಾದೇವಿಯನ್ನು ಕುರಿತು ಹೇಳಿದನು. ''ಎಲೈ ಸೀತೆಯೇ, ನಮ್ಮಲ್ಲಿ ಇಬ್ಬರನ್ನೂ ಅತ್ಯಂತ ಭಕ್ತಿಯಿಂದ ಸೇವಿಸಿದವರು ಎಷ್ಟೋ ಕಪಿಗಳಿರುವರು. ಆ ಕಪಿಗಳಲ್ಲಿ ನಮ್ಮ ಪರಮಾನುಗ್ರಹಕ್ಕೆ ಪಾತ್ರರಾದ ಅತ್ಯಂತಪ್ರಿಯರು ಯಾರೋ ಅವರಿಗೆ ಈ ಮಾಲೆಯನ್ನು ಕೊಡು ಎಂದು ಹೇಳುತ್ತಾ ಪದ್ಮರಾಗ ಮುಂತಾದ ಮಣಿಗಳಿಂದ ರಚಿಸಲ್ಪಟ್ಟ ಒಂದು ಮಾಲೆಯನ್ನು ಕೊಟ್ಟನು. ಆ ಸುಂದರವಾದ ಮಾಲೆಯನ್ನು ನಿಮಿತ್ತವಾಗಿಟ್ಟುಕೊಂಡು ಶ್ರೀಸೀತಾದೇವಿಯು ಶ್ರೀಹನುಮಂತದೇವರ ಕಂಠದಲ್ಲಿ ಆ ಮಾಲೆಯನ್ನು ಹಾಕಿದರು. ಇದರಿಂದ ಶ್ರೀಹನುಮಂತದೇವರಲ್ಲಿ ದೀರ್ಘವಾದ ಕರುಣೆಯನ್ನು ಬಂಧನ ಮಾಡಿದಂತಾಯಿತು.

ವಿಗ್ರಹ—

ರಾಜ್ಯಾಭಿಷೇಕೇ— ರಾಜ್ಯೇ ಅಭಿಷೇಕಃ ರಾಜ್ಯಾಭಿಷೇಕಃ, ತಸ್ಮಿನ್ ರಾಜ್ಯಾಭಿಷೇಕೇ ।

ಪ್ರೇಷ್ಠಾಯ— ಅತಿಶಯೇನ ಪ್ರಿಯಃ ಪ್ರೇಷ್ಠಃ, ತಸ್ಮೈ ಪ್ರೇಷ್ಠಾಯ ।

ಭಜತಾಂ— ಭಜಂತಿ ಇತಿ ಭಜಂತಃ, ತೇಷಾಂ ಭಜತಾಂ ।

ಮಣಿಮಂಜುಮಾಲಾವ್ಯಾಜೇನ— ಮಣೀನಾಂ ಮಂಜುಮಾಲಾ ಮಣಿಮಂಜುಮಾಲಾ, ಮಣಿಮಂಜುಮಾಲಾ ಇತಿ ವ್ಯಾಜಃ ಮಣಿಮಂಜುಮಾಲಾವ್ಯಾಜಃ, ತೇನ ಮಣಿಮಂಜುಮಾಲಾವ್ಯಾಜೇನ ।

ಕ್ರಿಯಾಪದ— ದಿಶ- ದಿಶ ಅತಿಸರ್ಜನೇ ಇತಿ ಅತಿಸರ್ಜನಾರ್ಥಕಾತ್ ದಿಶ ಧಾತೋಃ ಲೋಟಿ ಮಧ್ಯಮಪುರುಷೇ ಏಕವಚನೇ 'ದಿಶ' ಇತಿ ರೂಪಮ್ ।

ದಿಶತು ದಿಶತಾತ್, ದಿಶತಾಂ ದಿಶಂತು, ದಿಶ ದಿಶತಾತ್, ದಿಶತಂ ದಿಶತ, ದಿಶಾನಿ ದಿಶಾವ ದಿಶಾಮ ॥

ಬಬಂಧ - ಬಧಿರ್ ಬಂಧನೇ ಇತ್ಯಸ್ಮಾತ್ ಬಂಧನಾರ್ಥಕಾತ್ ಬಧಿರ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಬಬಂಧ' ಇತಿ ರೂಪಮ್।

ಬಬಂಧ ಬಬಂಧತುಃ ಬಬಂಧುಃ, ಬಬಂಧಿಥ ಬಬಂಧಥುಃ ಬಬಂಧ, ಬಬಂಧ ಬಬಂಧಿವ ಬಬಂಧಿಮ ॥

ಅಲಂಕಾರ— ಕೈತವಾಪಹ್ನುತಿ ಪರಿಣಾಮಾಲಂಕಾರ ಸಂಕೀರ್ಣಃ.

★ ★ ★

ಹನುಮಂತನಿಗೆ ಸಹಭೋಗ ಪ್ರದಾನ

**ಹೃದೋರುಸೌಹಾರ್ದಭೃತಾಽಧಿಮೌಲಿ-**
**ನ್ಯಸ್ತೇನ ಹಸ್ತೇನ ದಯಾರ್ದ್ರದೃಷ್ಟ್ಯಾ ।**
**ಸೇವಾಪ್ರಸನ್ನೋಽಮೃತಕಲ್ಪವಾಚಾ**
**ದಿದೇಶ ದೇವಃ ಸಹಭೋಗಮಸ್ಮೈ ॥ 23 ॥**

ಪದಚ್ಛೇದ— ಹೃದಾ, ಉರುಸೌಹಾರ್ದಭೃತಾ, ಅಧಿಮೌಲಿ, ನ್ಯಸ್ತೇನ, ಹಸ್ತೇನ, ದಯಾಽಽರ್ದ್ರದೃಷ್ಟ್ಯಾ, ಸೇವಾಪ್ರಸನ್ನಃ, ಅಮೃತಕಲ್ಪವಾಚಾ, ದಿದೇಶ, ದೇವಃ, ಸಹಭೋಗಂ, ಅಸ್ಮೈ ।

ಅನ್ವಯ— ಸೇವಾಪ್ರಸನ್ನಃ ದೇವಃ ಅಸ್ಮೈ ಉರುಸೌಹಾರ್ದ್ರಭೃತಾ ಹೃದಾ ಅಧಿಮೌಲಿ ನ್ಯಸ್ತೇನ ಹಸ್ತೇನ ದಯಾರ್ದ್ರದೃಷ್ಟ್ಯಾ ಅಮೃತಕಲ್ಪವಾಚಾ ಉಪಲಕ್ಷಿತಃ ಸಹಭೋಗಂ ದಿದೇಶ ।

**ಅನ್ವಯಾರ್ಥ—**

**ಸೇವಾಪ್ರಸನ್ನಃ ದೇವಃ** = ಸೇವೆಯಿಂದ ಪ್ರಸನ್ನನಾಗಿರುವ ಶ್ರೀರಾಮದೇವನು

**ಅಸ್ಮೈ** = ಈ ಹನುಮಂತದೇವರಿಗೆ

**ಉರುಸೌಹಾರ್ದಭೃತಾ ಹೃದಾ** = ಉತ್ಕೃಷ್ಟವಾದ ಮಿತ್ರಭಾವವನ್ನು ಧರಿಸಿರುವ (ಹೊಂದಿದ) ಮನಸ್ಸಿನಿಂದಲೂ

**ಅಧಿಮೌಲಿನ್ಯಸ್ತೇನ ಹಸ್ತೇನ** = ತಲೆಯಲ್ಲಿ ಇಡಲ್ಪಟ್ಟ ಕೈಯಿಂದಲೂ

**ದಯಾಽಽರ್ದ್ರದೃಷ್ಟ್ಯಾ** = ದಯಾರಸದಿಂದ ಒದ್ದೆಯಾಗಿರುವ ಕಣ್ಣುಗಳಿಂದಲೂ

**ಅಮೃತಕಲ್ಪವಾಚಾ (ಉಪಲಕ್ಷಿತಃ)** = ಹನುಮಂತನಿಗೆ ಸಮಾನವಾದ ಭಕ್ತನು ಎಲ್ಲಿಯೂ ಇಲ್ಲ ಮುಂತಾದ ಅಮೃತವನ್ನು ಸುರಿಸುವ ಮಾತುಗಳಿಂದಲೂ ಸಹಿತವಾಗಿ ಇರುವ ಶ್ರೀರಾಮದೇವನು

**ಸಹಭೋಗಂ ದಿದೇಶ** = ಸತ್ಯಲೋಕಾಧಿಪತ್ಯವನ್ನು ಕೊಟ್ಟನು.

**ತಾತ್ಪರ್ಯ—** ಶ್ರೀಹನುಮಂತದೇವರ ಸೇವೆಯಿಂದ ಶ್ರೀರಾಮದೇವನು ತೃಪ್ತನಾದನು. ಶ್ರೀರಾಮದೇವನ ಹೃದಯವು ಅಧಿಕವಾದ ಅತ್ಯುತ್ತಮವಾದ ಮಿತ್ರಭಾವದಿಂದ ತುಂಬಿತು. ಶ್ರೀಹನುಮಂತದೇವರ ತಲೆಯ ಮೇಲೆ ಕೈಯನ್ನು ಇಟ್ಟನು. ದಯಾರಸದಿಂದ ಒದ್ದೆಯಾದ ಕಣ್ಣುಗಳಿಂದ ನೋಡಿದನು. ಸ್ವಭಾವತಃ ಭಕ್ತನಾದ ಶ್ರೀಹನುಮಂತನ ವಿಷಯದಲ್ಲಿ ಅವನ ಉಪಕಾರಕ್ಕೆ ಪ್ರತಿಯಾದ ಉಪಕಾರವನ್ನು ಮಾಡಲು ನಾನು ಶಕ್ತನಲ್ಲ, ಭಕ್ತಿ ಮುಂತಾದ ಗುಣಗಳಲ್ಲಿ ಅವನಿಗೆ ಸಮಾನನು ಯಾವನೂ ಇಲ್ಲ, ಮುಂತಾದ ಅಮೃತಕ್ಕೆ ಸಮಾನವಾಗಿರುವ ಮಾತುಗಳನ್ನು ಹೇಳುತ್ತಾ ಶ್ರೀಹನುಮಂತ-ದೇವರಿಗೆ ಸತ್ಯಲೋಕಾಧಿಪತ್ಯ ಎಂಬ ಸಹಭೋಗವನ್ನು ಕೊಟ್ಟನು.

**ವಿಗ್ರಹ—**

**ಉರುಸೌಹಾರ್ದಭೃತಾ—** ಸುಹೃದಃ ಭಾವಃ ಸೌಹಾರ್ದಂ, ಉರು ಚ ತತ್ ಸೌಹಾರ್ದಂ ಚ ಉರು-ಸೌಹಾರ್ದಂ, ಉರುಸೌಹಾರ್ದಂ ಬಿಭರ್ತಿ ಇತಿ ಉರುಸೌಹಾರ್ದಭೃತ್, ತೇನ ಉರುಸೌಹಾರ್ದ-ಭೃತಾ ।

**ಅಧಿಮೌಲಿ—** ಮೌಲೌ ಅಧಿಮೌಲಿ ಅಧಿಮೌಲಿ ನ್ಯಸ್ತಃ ಅಧಿಮೌಲಿನ್ಯಸ್ತಃ ತೇನ ।

**ದಯಾಽಽರ್ದ್ರದೃಷ್ಟ್ಯಾ—** ದಯಯಾ ಆರ್ದ್ರಾ ದಯಾರ್ದ್ರಾ, ದಯಾರ್ದ್ರಾ ಚ ಸಾ ದೃಷ್ಟಿಶ್ಚ ಚ ದಯಾರ್ದ್ರದೃಷ್ಟಿಃ, ತಯಾ ದಯಾರ್ದ್ರದೃಷ್ಟ್ಯಾ ।

**ಸೇವಾಪ್ರಸನ್ನಃ—** ಸೇವಯಾ ಪ್ರಸನ್ನಃ ಸೇವಾಪ್ರಸನ್ನಃ ।

**ಅಮೃತಕಲ್ಪವಾಚಾ—** ಅಮೃತೇನ ಸದೃಶೀ ಅಮೃತಕಲ್ಪಾ, ಅಮೃತಕಲ್ಪಾ ಚ ಸಾ ವಾಕ್ ಚ ಅಮೃತಕಲ್ಪವಾಕ್, ತಯಾ ಅಮೃತಕಲ್ಪವಾಚಾ ।

**ಸಹಭೋಗಂ—** ಸಹ ಭುಜ್ಯತೇ ಇತಿ ಸಹಭೋಗಃ, ತಂ ಸಹಭೋಗಂ ।

**ಕ್ರಿಯಾಪದ—** ದಿದೇಶ- ದಿಶ ಅತಿಸರ್ಜನೇ ಇತ್ಯಸ್ಮಾತ್ ಅತಿಸರ್ಜನಾರ್ಥಕಾತ್ ದಿಶ ಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ದಿದೇಶ' ಇತಿ ರೂಪಮ್ ।

ದಿದೇಶ ದಿದಿಶತುಃ ದಿದಿಶುಃ, ದಿದೇಶಿಥ ದಿದಿಶಥುಃ ದಿದಿಶ, ದಿದೇಶ ದಿದಿಶಿವ ದಿದಿಶಿಮ ॥

**ಅಲಂಕಾರ—** ಕೈತವಾಪಹ್ನುತಿ ಪರಿಣಾಮಾಲಂಕಾರ ಸಂಕೀರ್ಣಃ.

★ ★ ★

### ವೈರಾಗ್ಯಕ್ಕೆ ಮಾದರಿ ಶ್ರೀ ಹನುಮಂತ

**ಪ್ರೇಷ್ಠೋ ನ ರಾಮಸ್ಯ ಬಭೂವ ತಸ್ಮಾ-**
**ನ್ನ ರಾಮರಾಜ್ಯೇಽಸುಲಭಂ ಚ ಕಿಂಚಿತ್ ।**
**ತತ್ಪಾದಸೇವಾರತಿರೇಷ ನೈಚ್ಛತ್**
**ತಥಾಪಿ ಭೋಗಾನ್ ನನು ಸಾ ವಿರಕ್ತಿಃ ॥ 24 ॥**

**ಪದಚ್ಛೇದ—** ಪ್ರೇಷ್ಠಃ, ನಃ, ರಾಮಸ್ಯ, ಬಭೂವ, ತಸ್ಮಾತ್, ನ, ರಾಮರಾಜ್ಯೇ, ಅಸುಲಭಂ, ಚ, ಕಿಂಚಿತ್, ತತ್ಪಾದಸೇವಾರತಿಃ, ಏಷಃ, ನ, ಐಚ್ಛತ್, ತಥಾ, ಅಪಿ, ಭೋಗಾನ್, ನನು, ಸಾ, ವಿರಕ್ತಿಃ ।

**ಅನ್ವಯ—** ರಾಮಸ್ಯ ತಸ್ಮಾತ್ (ಹನೂಮತಃ ಅನ್ಯಃ ಪುರುಷಃ) ಪ್ರೇಷ್ಠಃ ನ ಬಭೂವ. ರಾಮರಾಜ್ಯೇ ಕಿಂಚಿತ್ ಅಸುಲಭಂ ಚ ನ ಬಭೂವ, ತಥಾ ಅಪಿ ಏಷಃ ತತ್ಪಾದಸೇವಾರತಿಃ ಭೋಗಾನ್ ನ ಐಚ್ಛತ್, ಸಾ ವಿರಕ್ತಿಃ ನನು ।

**ಅನ್ವಯಾರ್ಥ—**

**ರಾಮಸ್ಯ** = ಶ್ರೀರಾಮದೇವನಿಗೆ

**ತಸ್ಮಾತ್ (ಹನೂಮತಃ ಅನ್ಯಃ ಪುರುಷಃ)** = ಹನುಮಂತದೇವರಿಗಿಂತ ಬೇರೊಬ್ಬ ಪುರುಷನು

**ಪ್ರೇಷ್ಠಃ ನ ಬಭೂವ** = ಅತಿಶಯವಾಗಿ ಪ್ರಿಯನಾದವನು ಇರಲಿಲ್ಲ. ಅಂದರೆ ರಾಮರಾಜ್ಯದಲ್ಲಿ ಶ್ರೀರಾಮದೇವನಿಗೆ ಹನುಮಂತದೇವರೇ ಅತಿಶಯವಾದ ಪ್ರೀತಿಗೆ ಪಾತ್ರರಾದವರು.

**ರಾಮರಾಜ್ಯೇ ಕಿಂಚಿತ್ ಅಸುಲಭಂ ಚ ನ** = ರಾಮದೇವನ ರಾಜ್ಯದಲ್ಲಿ ಯಾವ ವಸ್ತುವೂ ಸಹ ದುರ್ಲಭವಾದ ವಸ್ತುವು ಇಲ್ಲ.

**ತಥಾ ಅಪಿ** = ಸ್ವಯಂ ಶ್ರೀರಾಮದೇವನಿಗೆ ಶ್ರೀಹನುಮಂತದೇವರು ಅತಿಪ್ರಿಯರಾಗಿದ್ದರೂ ಸರ್ವ ವಸ್ತುಗಳ ಸೌಲಭ್ಯವಿದ್ದರೂ

**ತತ್ಪಾದಸೇವಾರತಿಃ ಏಷ** = ಶ್ರೀರಾಮದೇವನ ಪಾದಗಳ ಸೇವೆಯಲ್ಲಿ ಆಸಕ್ತಿಯುಳ್ಳ ಶ್ರೀಹನುಮಂತದೇವರು (ಶ್ರೀರಾಮದೇವನ ಪಾದಗಳ ಸೇವೆಯಲ್ಲಿ ಆಸಕ್ತಿಯುಳ್ಳವರಾದುದರಿಂದಲೇ)

**ಭೋಗಾನ್ ನ ಐಚ್ಛತ್** = ವಿಷಯಸುಖಗಳನ್ನು ಇಚ್ಛಿಸಲಿಲ್ಲ.

**ಸಾ ವಿರಕ್ತಿಃ ನನು** = ಭೋಗಸೌಲಭ್ಯವಿದ್ದರೂ ಅನುಭವಿಸಲು ಇಚ್ಛಿಸದೇ ಇರುವುದೇ ವಿರಕ್ತಿಯಲ್ಲವೇ ?

**ತಾತ್ಪರ್ಯ—** ಶ್ರೀರಾಮದೇವನಿಗೆ ಅತ್ಯಂತ ಪ್ರಿಯನಾದವನು ಯಾರೂ ಇಲ್ಲ. ರಾಮದೇವನ ರಾಜ್ಯದಲ್ಲಿ ದುರ್ಲಭವಾದದ್ದು ಯಾವುದೂ ಇಲ್ಲ. ಆದರೂ ವಿಷಯಸುಖಗಳನ್ನು ಶ್ರೀಹನುಮಂತದೇವರು ಅಪೇಕ್ಷಿಸಲೇ ಇಲ್ಲ. ರಾಮರಾಜ್ಯದಲ್ಲಿ ದುರ್ಲಭವಾದದ್ದು ಇಲ್ಲ. ಶ್ರೀರಾಮನಿಗೆ ಶ್ರೀಹನುಮಂತದೇವರಿಗಿಂತ ಅತ್ಯಂತ ಪ್ರಿಯರಿಲ್ಲ. ಆದರೂ ಹನುಮಂತದೇವರು ರಾಮದೇವರಲ್ಲಿ ಭಕ್ತಿಯನ್ನು ಬಿಟ್ಟು ಬೇರೆ ಏನನ್ನೂ ಅಪೇಕ್ಷಿಸಲಿಲ್ಲ. ಇದಲ್ಲವೇ ಸ್ವಾಭಾವಿಕವಾದ ವೈರಾಗ್ಯವು ?

**ವಿಗ್ರಹ—**

**ರಾಮರಾಜ್ಯೇ—** ರಾಮಸ್ಯ ರಾಜ್ಯಂ ರಾಮರಾಜ್ಯಂ, ತಸ್ಮಿನ್ ರಾಮರಾಜ್ಯೇ ।

**ಅಸುಲಭಂ—** ನ ಸುಲಭಂ ಅಸುಲಭಂ ।

**ತತ್ಪಾದಸೇವಾರತಿಃ—** ತಸ್ಯ ಪಾದೌ ತತ್ಪಾದೌ, ತತ್ಪಾದಯೋಃ ಸೇವಾ ತತ್ಪಾದಸೇವಾ, ತತ್ಪಾದಸೇವಾಯಾಂ ರತಿಃ ಯಸ್ಯ ಸಃ ತತ್ಪಾದಸೇವಾರತಿಃ ।

**ಕ್ರಿಯಾಪದ—** ಬಭೂವ- ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಬಭೂವ' ಇತಿ ರೂಪಮ್ ।

ಬಭೂವ ಬಭೂವತುಃ ಬಭೂವುಃ, ಬಭೂವಿಥ ಬಭೂವಥುಃ ಬಭೂವ, ಬಭೂವ ಬಭೂವಿವ ಬಭೂವಿಮ ॥

**ಐಚ್ಛತ್** - ಇಷು ಇಚ್ಛಾಯಾಂ ಇತಿ ಇಚ್ಛಾರ್ಥಕಾತ್ ಇಷು ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಐಚ್ಛತ್' ಇತಿ ರೂಪಮ್ ।

ಐಚ್ಛತ್ ಐಚ್ಛತಾಂ ಐಚ್ಛನ್, ಐಚ್ಛಃ ಐಚ್ಛತಂ ಐಚ್ಛತ, ಐಚ್ಛಂ ಐಚ್ಛಾವ ಐಚ್ಛಾಮ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ಹನುಮಂತನು ಶ್ರೀರಾಮನನ್ನು ವಂದಿಸುವ ರೀತಿ

**ನಮೋ ನಮೋ ನಾಥ ನಮೋ ನಮಸ್ತೇ**
**ನಮೋ ನಮೋ ರಾಮ ನಮೋ ನಮಸ್ತೇ ।**
**ಪುನಃ ಪುನಸ್ತೇ ಚರಣಾರವಿಂದಂ**
**ನಮಾಮಿ ನಾಥೇತಿ ನಮನ್ ಸ ರೇಮೇ ॥ 25 ॥**

**ಪದಚ್ಛೇದ—** ನಮಃ, ನಮಃ, ನಾಥ, ನಮಃ, ನಮಃ, ತೇ, ನಮಃ, ನಮಃ, ರಾಮ, ನಮಃ, ನಮಃ, ತೇ, ಪುನಃ, ಪುನಃ, ತೇ, ಚರಣಾರವಿಂದಂ, ನಮಾಮಿ, ನಾಥ, ಇತಿ, ನಮನ್, ಸಃ, ರೇಮೇ ।

**ಅನ್ವಯ—** ಹೇ ನಾಥ ತೇ ನಮಃ ನಮಃ ನಮಃ ನಮಃ, ಹೇ ರಾಮ ತೇ ನಮಃ ನಮಃ, ನಮಃ ನಮಃ ಹೇ ನಾಥ ತೇ ಚರಣಾರವಿಂದಂ ಪುನಃ ಪುನಃ ನಮಾಮಿ, ಇತಿ ನಮನ್ ಸಃ ರೇಮೇ ।

**ಅನ್ವಯಾರ್ಥ—**

**ಹೇ ನಾಥ** = ಎಲೈ ಸ್ವಾಮಿಯೇ
**ತೇ** = ನಿನಗೆ
**ನಮಃ ನಮಃ ನಮಃ ನಮಃ** = ನಮಸ್ಕಾರಗಳನ್ನು ಮಾಡುವೆನು.
**ಹೇ ರಾಮ** = ಎಲೈ ರಾಮನೇ
**ತೇ** = ನಿನಗೆ
**ನಮಃ ನಮಃ ನಮಃ ನಮಃ** = ನಮಸ್ಕಾರಗಳನ್ನು ಮಾಡುವೆನು.
**ಹೇ ನಾಥ** = ಎಲೈ ಸ್ವಾಮಿಯೇ
**ತೇ** = ನಿನ್ನ
**ಚರಣಾರವಿಂದಂ** = ಪಾದಕಮಲಗಳನ್ನು
**ಪುನಃ ಪುನಃ** = ಮತ್ತೆ ಮತ್ತೆ
**ನಮಾಮಿ** = ನಮಸ್ಕರಿಸುವೆನು
**ಇತಿ** = ಹೀಗೆಂದು
**ನಮನ್** = ನಮಸ್ಕರಿಸುತ್ತಿರುವವರಾಗಿ
**ಸಃ** = ಆ ಹನುಮಂತದೇವರು
**ರೇಮೇ** = ಕ್ರೀಡಿಸಿದರು.

**ತಾತ್ಪರ್ಯ—** ಎಲೈ ನಾಥನೇ, ನಿನ್ನನ್ನು ಪುನಃ ಪುನಃ ನಮಸ್ಕರಿಸುವೆನು. ಎಲೈ ರಾಮನೇ, ನಿನ್ನನ್ನು ಪುನಃ ಪುನಃ ನಮಸ್ಕರಿಸುವೆನು. ಹೇ ನಾಥನೇ, ಪುನಃ ಪುನಃ ನಿನ್ನ ಪಾದಕಮಲಗಳನ್ನು ನಮಸ್ಕರಿಸುವೆನು. ಹೀಗೆಂದು ಹೇಳುತ್ತಾ ಶ್ರೀಹನುಮಂತದೇವರು ಕ್ರೀಡಿಸಿದರು.

**ವಿಗ್ರಹ—**

**ಚರಣಾರವಿಂದಂ—** ಚರಣಃ ಅರವಿಂದಂ ಇವ ಚರಣಾರವಿಂದಂ, ತತ್ ಚರಣಾರವಿಂದಂ ।

**ನಮನ್—** ನಮತಿ ಇತಿ ನಮನ್ ।

**ಕ್ರಿಯಾಪದ—** ರೇಮೇ - ರಮು ಕ್ರೀಡಾಯಾಂ ಇತಿ ಕ್ರೀಡಾರ್ಥಕಾತ್ ರಮುಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ರೇಮೇ' ಇತಿ ರೂಪಮ್।

| | | |
|---|---|---|
| ರೇಮೇ | ರೇಮಾತೇ | ರೇಮಿರೇ, |
| ರೇಮಿಷೇ | ರೇಮಾಥೇ | ರೇಮಿಧ್ವೇ , |
| ರೇಮೇ | ರೇಮಿವಹೇ | ರೇಮಿಮಹೇ ॥ |

**ಅಲಂಕಾರ—** ವೃತ್ತ್ಯನುಪ್ರಾಸಾಲಂಕಾರ (ಶಬ್ದಾಲಂಕಾರ).

★ ★ ★

ಹನುಮನಿಗೆ ಶ್ರೀರಾಮನ ವಿಶೇಷಾನುಗ್ರಹ

**ಕಿಂ ವರ್ಣಯಾಮಃ ಪರಮಂ ಪ್ರಸಾದಂ**
**ಸೀತಾಪತೇಸ್ತತ್ರ ಹರಿಪ್ರಬರ್ಹೇ ।**
**ಮುಂಚನ್ ಮಹೀಂ ನಿತ್ಯನಿಷೇವಣಾರ್ಥಂ**
**ಸ್ವಾತ್ಮಾನಮೇವೈಷ ದದೌ ಯದಸ್ಮೈ ॥ 26 ॥**

**ಪದಚ್ಛೇದ—** ಕಿಂ, ವರ್ಣಯಾಮಃ, ಪರಮಂ, ಪ್ರಸಾದಂ, ಸೀತಾಪತೇಃ, ತತ್ರ, ಹರಿಪ್ರಬರ್ಹೇ, ಮುಂಚನ್, ಮಹೀಂ, ನಿತ್ಯನಿಷೇವಣಾರ್ಥಂ, ಸ್ವಾತ್ಮಾನಂ, ಏವ, ಏಷಃ, ದದೌ ಯತ್ ಅಸ್ಮೈ ।

**ಅನ್ವಯ—** ಹರಿಪ್ರಬರ್ಹೇ (ತತ್ರ) ಸೀತಾಪತೇಃ ಪರಮಂ ಪ್ರಸಾದಂ ಕಿಂ ವರ್ಣಯಾಮಃ, ಮಹೀಂ ಮುಂಚನ್ ನಿತ್ಯನಿಷೇವಣಾರ್ಥಂ ಸ್ವಾತ್ಮಾನಂ ಏವ ಏಷಃ ಅಸ್ಮೈ ದದೌ ಇತಿ ಯತ್ ।

**ಅನ್ವಯಾರ್ಥ—**

**ಹರಿಪ್ರಬರ್ಹೇ (ತತ್ರ)** = ಕಪಿಗಳಲ್ಲಿ ಶ್ರೇಷ್ಠರಾಗಿರುವ ಆ ಹನುಮಂತದೇವರಲ್ಲಿರುವ

**ಸೀತಾಪತೇಃ** = ಸೀತಾದೇವಿಯರ ಪತಿಯಾಗಿರುವ ಶ್ರೀರಾಮದೇವನ

**ಪರಮಂ ಪ್ರಸಾದಂ** = ಅತ್ಯುತ್ತಮವಾದ ಅನುಗ್ರಹವನ್ನು

**ಕಿಂ ವರ್ಣಯಾಮಃ** = ಏನೆಂದು ಹೊಗಳಲಿ ?

**ಮಹೀಂ ಮುಂಚನ್** = ಭೂಮಿಯನ್ನು ಬಿಟ್ಟು ಹೋಗುತ್ತಿರುವ ಶ್ರೀರಾಮದೇವನು

**ನಿತ್ಯನಿಷೇವಣಾರ್ಥಂ** = ಯಾವಾಗಲೂ ದರ್ಶನ ಮುಂತಾದ ಸೇವೆಗಳನ್ನು ಮಾಡುವುದಕ್ಕೋಸ್ಕರ

**ಸ್ವಾತ್ಮಾನಂ ಏವ ಏಷಃ ಅಸ್ಮೈ ದದೌ** = ತನ್ನನ್ನೇ ಈ ಶ್ರೀರಾಮಚಂದ್ರನು ಶ್ರೀ ಹನುಮಂತದೇವರಿಗೋಸ್ಕರ ಕೊಟ್ಟನು.

**ಇತಿ ಯತ್** = ಈ ಕಾರಣದಿಂದಲೇ ಶ್ರೀಹನುಮಂತದೇವರಲ್ಲಿರುವ ಪರಮಾನುಗ್ರಹವು ಬೇರೆ ಯಾರಲ್ಲಿಯೂ ಇಲ್ಲವೆಂದು ಸಿದ್ಧವಾಗಲಿಲ್ಲವೇ.

**ತಾತ್ಪರ್ಯ—** ಕಪಿಶ್ರೇಷ್ಠರಾಗಿರುವ ಶ್ರೀಶ್ರೀಹನುಮಂತದೇವರಲ್ಲಿರುವ ಅತ್ಯುತ್ತಮವಾಗಿರುವ ಅನುಗ್ರಹವನ್ನು ಏನೆಂದು ಹೇಳಲಿ ? ಶ್ರೀರಾಮದೇವನು ಲೋಕದೃಷ್ಟಿಯಿಂದ ಭೂಲೋಕದಿಂದ ಅದೃಶ್ಯನಾಗಬೇಕೆಂದು ತೀರ್ಮಾನಿಸಿ-ದನು. ಆಗಲೂ ಶ್ರೀರಾಮದೇವನ ದರ್ಶನ ಮುಂತಾದ ನಿರಂತರ ಸೇವೆಯನ್ನು ಶ್ರೀಹನುಮಂತದೇವರು ಮಾಡಲೆಂದು ತೀರ್ಮಾನಿಸಿದನು. ಆದಕ್ಕಾಗಿ ತನ್ನನ್ನೇ ಕೊಟ್ಟನು. ಇದಲ್ಲವೇ ಪರಮಾನುಗ್ರಹಕ್ಕೆ ಸಾಕ್ಷಿ.

**ವಿಗ್ರಹ—**

**ಸೀತಾಪತೇಃ—** ಸೀತಾಯಾಃ ಪತಿಃ ಸೀತಾಪತಿಃ, ತಸ್ಮಿನ್ ಸೀತಾಪತೇಃ ।

**ಹರಿಪ್ರಬರ್ಹೇ—** ಹರೀಣಾಂ ಪ್ರಬರ್ಹಃ ಹರಿಪ್ರಬರ್ಹಃ, ತಸ್ಮಿನ್ ಹರಿಪ್ರಬರ್ಹೇ ।

**ಮುಂಚನ್—** ಮುಂಚತಿ ಇತಿ ಮುಂಚನ್ ।

**ನಿತ್ಯನಿಷೇವಣಾರ್ಥಂ—** ನಿತರಾಂ ಸೇವನಂ ನಿಷೇವಣಂ, ನಿತ್ಯಂ ನಿಷೇವಣಂ ನಿತ್ಯನಿಷೇವಣಂ, ತಸ್ಮೈ ನಿತ್ಯನಿಷೇವಣಾರ್ಥಂ ।

**ಸ್ವಾತ್ಮಾನಂ—** ಸ್ವಸ್ಯ ಆತ್ಮಾ ಸ್ವಾತ್ಮಾ, ತಂ ಸ್ವಾತ್ಮಾನಂ ।

**ಕ್ರಿಯಾಪದ— ವರ್ಣಯಾಮಃ** - ವರ್ಣಸ್ತುತೌ ಇತ್ಯಸ್ಮಾತ್ ಸ್ತುತ್ಯರ್ಥಕಾತ್ ವರ್ಣಧಾತೋಃ ಲಟಿ ಉತ್ತಮ ಪುರುಷೇ ಬಹುವಚನೇ 'ವರ್ಣಯಾಮಃ' ಇತಿ ರೂಪಮ್ ।

| | | |
|---|---|---|
| ವರ್ಣಯತಿ | ವರ್ಣಯತಃ | ವರ್ಣಯಂತಿ, |
| ವರ್ಣಯಸಿ | ವರ್ಣಯಥಃ | ವರ್ಣಯಥ, |
| ವರ್ಣಯಾಮಿ | ವರ್ಣಯಾವಃ | ವರ್ಣಯಾಮಃ ॥ |

**ದದೌ** - ಡುದಾಞ್ ದಾನೇ ಇತ್ಯಸ್ಮಾತ್ ದಾನಾರ್ಥಕಾತ್ ದಾಧಾತೋಃ ಪರಸ್ಮೈ ಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ ದದೌ ಇತಿ ರೂಪಮ್.

| | | |
|---|---|---|
| ದದೌ | ದದತುಃ | ದದುಃ |
| ದದಿಥ ದದಾಥ | ದದಥುಃ | ದದ |
| ದದೌ | ದದಿವ | ದದಿಮ ॥ |

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ಕಿಂಪುರುಷವಾಸಿ ಶ್ರೀಹನುಮಂತ

**ಸ್ವಾನಂದಹೇತೌ ಭಜತಾಂ ಜನಾನಾಂ**
**ಮಗ್ನಃ ಸದಾ ರಾಮಕಥಾಸುಧಾಯಾಮ್ ।**
**ಅಸಾವಿದಾನೀಂ ಚ ನಿಷೇವಮಾಣೋ**
**ರಾಮಂ ಪತಿಂ ಕಿಂಪುರುಷೇ ಕಿಲಾಸ್ತೇ ॥ 27 ॥**

**ಪದಚ್ಛೇದ—** ಸ್ವಾನಂದಹೇತೌ, ಭಜತಾಂ, ಜನಾನಾಂ, ಮಗ್ನಃ, ಸದಾ, ರಾಮಕಥಾಸುಧಾಯಾಂ, ಅಸೌ, ಇದಾನೀಂ, ಚ, ನಿಷೇವಮಾಣಃ, ರಾಮಂ, ಪತಿಂ, ಕಿಂಪುರುಷೇ, ಕಿಲ, ಆಸ್ತೇ ।

**ಅನ್ವಯ—** ಅಸೌ ಭಜತಾಂ ಜನಾನಾಂ ಸ್ವಾನಂದಹೇತೌ ರಾಮಕಥಾಸುಧಾಯಾಂ ಸದಾ ಮಗ್ನಃ ಇದಾನೀಂ ಚ ಪತಿಂ ರಾಮಂ ನಿಷೇವಮಾಣಃ ಕಿಂಪುರುಷೇ ಆಸ್ತೇ ಕಿಲ ।

**ಅನ್ವಯಾರ್ಥ—**

**ಅಸೌ** = ಈ ಶ್ರೀ ಹನುಮಂತದೇವರು

**ಭಜತಾಂ ಜನಾನಾಂ** = ಶ್ರವಣ, ಮನನ, ಮುಂತಾದವುಗಳಿಂದ ಸೇವಿಸುತ್ತಿರುವ ಜನರಿಗೆ

**ಸ್ವಾನಂದಹೇತೌ** = ಸ್ವರೂಪಲಕ್ಷಣವಾಗಿರುವ ಮುಕ್ತಿಯ ಆನಂದದ ಆವಿರ್ಭಾವಕ್ಕೆ ಕಾರಣವಾಗಿರುವ

**ರಾಮಕಥಾಸುಧಾಯಾಂ ಸದಾ ಮಗ್ನಃ** = ಶ್ರೀರಾಮದೇವನ ಕಥೆ ಎಂಬ ಅಮೃತದಲ್ಲಿ ಯಾವಾಗಲೂ ಮುಳುಗಿರುವವರಾಗಿ

**ಇದಾನೀಂ ಚ** = ಈಗಲೂ ಸಹ

**ಪತಿಂ ರಾಮಂ** = ತನ್ನ ಸ್ವಾಮಿಯಾಗಿರುವ ಶ್ರೀರಾಮದೇವನನ್ನು

**ನಿಷೇವಮಾಣಃ** = ಅತ್ಯಧಿಕವಾಗಿ ಸೇವಿಸುತ್ತಾ

**ಕಿಂಪುರುಷೇ** = ಕಿಂಪುರುಷ ಎಂಬ ಖಂಡದಲ್ಲಿ

**ಆಸ್ತೇ** = ಇರುತ್ತಾರೆ

**ಕಿಲ** = ಇದು ಪೌರಾಣಿಕರಿಂದ ಪ್ರಸಿದ್ಧವಾದ ವಾರ್ತೆಯಾಗಿದೆ.

**ತಾತ್ಪರ್ಯ—** ಶ್ರೀಹರಿಯನ್ನು ಶ್ರವಣ, ಮನನ ಮುಂತಾದ ಸೇವೆಗಳಿಂದ ಸೇವಿಸುವವರಿಗೆ ಸ್ವರೂಪ ಆನಂದವು ಅಭಿವ್ಯಕ್ತವಾಗುತ್ತದೆ. ಈ ಸ್ವರೂಪಾನಂದದ ಅಭಿವ್ಯಕ್ತಿಗೆ ರಾಮಕಥಾಸುಧೆಯೆಂಬ ಅಮೃತವೇ ಕಾರಣವಾಗಿದೆ. ಈ ರಾಮಕಥಾಸುಧೆಯಲ್ಲಿ ಯಾವಾಗಲೂ ಶ್ರೀಹನುಮಂತದೇವರು ಆಸಕ್ತರಾಗಿರುವರು. ಅದು ಮಾತ್ರವಲ್ಲ , ಈವಾಗಲೂ ಅದೇ ಕಾರ್ಯವನ್ನೇ ಎಡಬಿಡದೇ ಮಾಡುತ್ತಾ ಶ್ರೀರಾಮಕಥಾಮೃತವನ್ನೇ ಸೇವಿಸುತ್ತಿರುವರು. ಈಗಲೂ ಕಿಂಪುರುಷ-ಖಂಡದಲ್ಲಿ ವಾಸಿಸುತ್ತಿರುವರು. ಇದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ.

**ವಿಗ್ರಹ—**

**ಸ್ವಾನಂದಹೇತೌ—** ಸ್ವಶ್ಚಾಸೌ ಆನಂದಶ್ಚ ಸ್ವಾನಂದಃ, ಸ್ವಾನಂದಸ್ಯ ಹೇತುಃ ಸ್ವಾನಂದಹೇತುಃ, ತಸ್ಮಿನ್ ಸ್ವಾನಂದಹೇತೌ ।

**ಭಜತಾಂ—** ಭಜಂತಿ ಇತಿ ಭಜಂತಃ, ತೇಷಾಂ ಭಜತಾಂ ।

**ರಾಮಕಥಾಸುಧಾಯಾಂ—** ರಾಮಸ್ಯ ಕಥಾ ರಾಮಕಥಾ, ರಾಮಕಥಾ ಏವ ಸುಧಾ ರಾಮಕಥಾಸುಧಾ, ತಸ್ಯಾಂ ರಾಮಕಥಾಸುಧಾಯಾಂ ।

**ನಿಷೇವಮಾಣಃ—** ನಿತರಾಂ ಸೇವಮಾನಃ ನಿಷೇವಮಾಣಃ ।

**ಕಿಂಪುರುಷೇ—** ಕಿಂಪುರುಷಂ ಇತಿ ಖಂಡಃ ಕಿಂಪುರುಷಂ, ತಸ್ಮಿನ್ ಕಿಂಪುರುಷೇ ।

**ಕ್ರಿಯಾಪದ— ಆಸ್ತೇ-** ಆಸ ಉಪವೇಶನೇ ಇತ್ಯಸ್ಮಾತ್ ಉಪವೇಶನಾರ್ಥಕಾತ್ ಆಸ ಧಾತೋಃ ಆತ್ಮನೇಪದಿನಃ ಲಟಿ ಪ್ರಥಮಪುರುಷೇ ಏಕವಚನೇ 'ಆಸ್ತೇ' ಇತಿ ರೂಪಮ್ ।

ಆಸ್ತೇ ಆಸಾತೇ ಆಸತೇ, ಆಸ್ಸೇ ಆಸಾಥೇ ಆಧ್ವೇ, ಆಸೇ ಆಸ್ವಹೇ ಆಸ್ಮಹೇ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ಭೀಮಸೇನಾವತಾರಲೀಲಾ

**ತಸ್ಯೈವ ವಾಯೋರವತಾರಮೇನಂ**
**ಸಂತೋ ದ್ವಿತೀಯಂ ಪ್ರವದಂತಿ ಭೀಮಮ್ ।**
**ಸ್ಪೃಷ್ಟೈವ ಯಂ ಪ್ರೀತಿಮತಾಽನಿಲೇನ**
**ನರೇಂದ್ರಕಾಂತಾ ಸುಷುವೇಽತ್ರ ಕುಂತೀ ॥ 28 ॥**

**ಪದಚ್ಛೇದ—** ತಸ್ಯ, ಏವ, ವಾಯೋಃ, ಅವತಾರಂ, ಏನಂ, ಸಂತಃ, ದ್ವಿತೀಯಂ, ಪ್ರವದಂತಿ, ಭೀಮಂ, ಸ್ಪೃಷ್ಟಾ, ಏವ, ಯಂ, ಪ್ರೀತಿಮತಾ, ಅನಿಲೇನ, ನರೇಂದ್ರಕಾಂತಾ, ಸುಷುವೇ, ಅತ್ರ, ಕುಂತೀ ।

**ಅನ್ವಯ—** ಸಂತಃ ತಸ್ಯ ಏವ ವಾಯೋಃ ದ್ವಿತೀಯಂ ಏನಂ ಅವತಾರಂ ಭೀಮಂ ಪ್ರವದಂತಿ ನರೇಂದ್ರಕಾಂತಾ ಕುಂತೀ ಪ್ರೀತಿಮತಾ ಅನಿಲೇನ ಸ್ಪೃಷ್ಟಾ ಏವ ಯಂ ಅತ್ರ ಸುಷುವೇ ।

**ಅನ್ವಯಾರ್ಥ—**

**ನರೇಂದ್ರಕಾಂತಾ ಕುಂತೀ** = ಪಾಂಡು ಚಕ್ರವರ್ತಿಯ ಪತ್ನಿಯಾಗಿರುವ ಕುಂತೀದೇವಿಯು
**ಪ್ರೀತಿಮತಾ** = ಪ್ರೀತಿಯಿಂದ ಯುಕ್ತನಾಗಿರುವ
**ಅನಿಲೇನ** = ವಾಯುದೇವರಿಂದ
**ಸ್ಪೃಷ್ಟಾ ಏವ** = ಮುಟ್ಟಲ್ಪಟ್ಟ ಮಾತ್ರದಿಂದಲೇ (ಕ್ರೀಡಿಸಲ್ಪಡದೆ)
**ಯಂ** = ಯಾವ ಮಗನನ್ನು
**ಅತ್ರ** = ಈ ಭೂಮಿಯಲ್ಲಿ
**ಸುಷುವೇ** = ಪ್ರಸವಿಸಿದಳೋ ಅವನು ಎರಡನೆಯ ವಾಯುದೇವನ ಅವತಾರ.
**ಸಂತಃ** = ಬಳಿತ್ಥಾ ಮುಂತಾದ ಸೂಕ್ತಗಳ ಅಭಿಪ್ರಾಯವನ್ನು ತಿಳಿದಿರುವ ಸಜ್ಜನರು
**ತಸ್ಯ ಏವ ವಾಯೋಃ** = ಅದೇ ಹನುಮಂತದೇವರ
**ದ್ವಿತೀಯಂ ಅವತಾರಂ** = ಎರಡನೆಯ ಈ ಅವತಾರವನ್ನು
**ಏನಂ ಭೀಮಂ ಪ್ರವದಂತಿ** = ಭೀಮಸೇನನ್ನಾಗಿ ಸ್ಪಷ್ಟವಾಗಿ ಹೇಳುವರು.

**ತಾತ್ಪರ್ಯ—** ವಾಯುದೇವರಿಗೆ ಹನುಮಾನ್ ಎಂಬ ಮೊದಲನೆಯ ಅವತಾರವನ್ನು ಹೇಳಿದ್ದಾಯಿತು. ಇನ್ನು ಎರಡನೆಯ ಅವತಾರವನ್ನು ಹೇಳುತ್ತೇವೆ. 'ಬಳಿತ್ಥಾ' ಮುಂತಾದ ಸೂಕ್ತಗಳ ಅಭಿಪ್ರಾಯವನ್ನು ತಿಳಿದವರು ಈ ಅವತಾರದ ರಹಸ್ಯವನ್ನು ಹೇಳಲು ಶಕ್ತರು. ವಾಯುದೇವರು ಪಾಂಡುರಾಜನ ಪತ್ನಿಯಾಗಿರುವ ಕುಂತೀದೇವಿಯೊಡನೆ ಕ್ರೀಡಿಸಲಿಲ್ಲ. ಮುಟ್ಟಿದರು ಮಾತ್ರವೇ. ಆಗಲೇ ಕುಂತಿಯು ಪ್ರಸವಿಸಿದಳು. ಆ ಮಗನು ಭೀಮ ಎಂದು ಪ್ರಸಿದ್ಧನಾದನು.

ವಿಗ್ರಹ—

**ಸ್ಪೃಷ್ಟಾ—** ಕೇವಲಂ ಸ್ಪರ್ಶಃ ಅಸ್ಯಾಃ ಅಸ್ತಿ ಇತಿ ಸ್ಪೃಷ್ಟಾ ।
**ಪ್ರೀತಿಮತಾ—** ಪ್ರೀತಿಃ ಅಸ್ಯ ಅಸ್ತಿ ಇತಿ ಪ್ರೀತಿಮಾನ್, ತೇನ ಪ್ರೀತಿಮತಾ ।
**ನರೇಂದ್ರಕಾಂತಾ—** ನರಾಣಾಂ ಇಂದ್ರಃ ನರೇಂದ್ರಃ, ನರೇಂದ್ರಸ್ಯ ಕಾಂತಾ ನರೇಂದ್ರಕಾಂತಾ ।

**ಕ್ರಿಯಾಪದ— ಸುಷುವೇ** - ಸೂಙ್ ಪ್ರಾಣಿಗರ್ಭಪ್ರಸವೇ ಇತಿ ಪ್ರಾಣಿಪ್ರಸವಾರ್ಥಕಾತ್ ಸೂಙ್‌ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಸುಷುವೇ' ಇತಿ ರೂಪಮ್ ।

ಸುಷುವೇ ಸುಷುವಾತೇ ಸುಷುವಿರೇ,
ಸುಷುವಿಷೇ ಸುಷುವಾಥೇ ಸುಷುವಿಧ್ವೇ (ಢ್ವೇ),
ಸುಷುವೇ ಸುಷುವಿವಹೇ ಸುಷುವಿಮಹೇ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ಶತಶೃಂಗಪರ್ವತಭೇದನಲೀಲಾ

**ಇಂದ್ರಾಯುಧಂ ಹೀಂದ್ರಕರಾಭಿನುನ್ನಂ**
**ಚಿಚ್ಛೇದ ಪಕ್ಷಾನ್ ಕ್ಷಿತಿಧಾರಿಣಾಂ ಪ್ರಾಕ್ ।**
**ಬಿಭೇದ ಭೂಭೃದ್ವಪುರಂಗಸಂಗಾ-**
**ಚ್ಚಿತ್ರಂ ಸ ಪನ್ನೋ ಜನನೀಕರಾಗ್ರಾತ್ ॥ 29 ॥**

**ಪದಚ್ಛೇದ—** ಇಂದ್ರಾಯುಧಂ, ಹಿ, ಇಂದ್ರಕರಾಭಿನುನ್ನಂ, ಚಿಚ್ಛೇದ, ಪಕ್ಷಾನ್, ಕ್ಷಿತಿಧಾರಿಣಾಂ, ಪ್ರಾಕ್, ಬಿಭೇದ, ಭೂಭೃದ್ವಪುಃ, ಅಂಗಸಂಗಾತ್, ಚಿತ್ರಂ, ಸಃ, ಪನ್ನಃ ಜನನೀಕರಾಗ್ರಾತ್ ।

**ಅನ್ವಯ—** ಪ್ರಾಕ್ ಇಂದ್ರಾಯುಧಂ ಇಂದ್ರಕರಾಭಿನುನ್ನಂ ಹಿ ಕ್ಷಿತಿಧಾರಿಣಾಂ ಪಕ್ಷಾನ್ ಚಿಚ್ಛೇದ, ಸಃ (ಶಾರ್ದೂಲಭಯೇನ ಕಂಪಿತಾತ್) ಜನನೀಕರಾಗ್ರಾತ್ ಪನ್ನಃ ಅಂಗಸಂಗಾತ್ ಭೂಭೃದ್ವಪುಃ ಬಿಭೇದ, (ಏತತ್) ಚಿತ್ರಮ್ ।

**ಅನ್ವಯಾರ್ಥ—**

**ಪ್ರಾಕ್** = ಹಿಂದಿನ ಕಾಲದಲ್ಲಿ
**ಇಂದ್ರಾಯುಧಂ** = ದೇವೇಂದ್ರನ ವಜ್ರಾಯುಧವು
**ಇಂದ್ರಕರಾಭಿನುನ್ನಂ** = ದೇವೇಂದ್ರನ ಎರಡು ಕೈಗಳಿಂದ ಚೆನ್ನಾಗಿ ಪ್ರೇರಿಸಲ್ಪಟ್ಟದ್ದಾಗಿ
**ಕ್ಷಿತಿಧಾರಿಣಾಂ ಪಕ್ಷಾನ್** = ಪರ್ವತಗಳ ರೆಕ್ಕೆಗಳನ್ನು
**ಚಿಚ್ಛೇದ ಹಿ** = ಕತ್ತರಿಸಿತಷ್ಟೇ.
**ಸಃ** = ಆ ಶ್ರೀಭೀಮಸೇನದೇವರು
**(ಶಾರ್ದೂಲಭಯೇನ ಕಂಪಿತಾತ್)** = ಹುಲಿಯ ಹೆದರಿಕೆಯಿಂದ ನಡುಗುತ್ತಿರುವ
**ಜನನೀಕರಾಗ್ರಾತ್** = ತಾಯಿಯಾದ ಕುಂತೀದೇವಿಯ ಕೈಗಳ ಕೊನೆಯಿಂದ
**ಪನ್ನಃ** = ಪರ್ವತದಲ್ಲಿ ಬಿದ್ದವರಾಗಿ
**ಅಂಗಸಂಗಾತ್** = ತನ್ನ ಶರೀರದ ಸಂಬಂಧದಿಂದ
**ಭೂಭೃದ್ವಪುಃ** = ಶತಶೃಂಗ ಪರ್ವತದ ಶರೀರವನ್ನು
**ಬಿಭೇದ** = ಪುಡಿಪುಡಿಯಾಗುವಂತೆ ಮಾಡಿದರು.
**(ಏತತ್)** = ಭೀಮಸೇನದೇವರ ಈ ವ್ಯಾಪಾರವು
**ಚಿತ್ರಂ** = ಆಶ್ಚರ್ಯಕರವಾಗಿದೆ. ಬುದ್ಧಿಪೂರ್ವಕವಾಗಿ ದೇವೇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧವು ಪರ್ವತಗಳ ರೆಕ್ಕೆಗಳನ್ನು ಮಾತ್ರ ಕತ್ತರಿಸಿತು. ಶ್ರೀಭೀಮಸೇನದೇವರು ಅಜಾಗ್ರತೆಯಿಂದ ಶತಶೃಂಗ ಪರ್ವತದಲ್ಲಿ ತಾಯಿಯ ಕೈಗಳಿಂದ ಜಾರಿ ಬಿದ್ದಾಗ ಪರ್ವತವು ಪುಡಿಪುಡಿಯಾಯಿತಲ್ಲವೇ ?

**ತಾತ್ಪರ್ಯ—** ಹಿಂದೆ ಪರ್ವತಗಳಿಗೆ ರೆಕ್ಕೆಗಳಿದ್ದವು. ಪರ್ವತಗಳು ತಮಗೆ ಇಷ್ಟ ಬಂದಂತೆ ಹಾರುತ್ತಾ ಯಾವುದೋ ಒಂದು ಊರಿನ ಮೇಲೆ ಕುಳಿತು ಊರುಗಳನ್ನೆಲ್ಲಾ ನಾಶ ಮಾಡುತ್ತಿದ್ದವು. ಈ ವಿಷಯವನ್ನು ತಿಳಿದ ಬ್ರಹ್ಮದೇವರು ಎಲ್ಲಾ ಪರ್ವತಗಳ ರೆಕ್ಕೆಗಳನ್ನೂ ಕತ್ತರಿಸುವಂತೆ ದೇವೇಂದ್ರನಿಗೆ ಆಜ್ಞಾಪಿಸಿದನು. ದೇವೇಂದ್ರನು ತನ್ನ ವಜ್ರಾಯುಧವನ್ನು ಎರಡು ಕೈಗಳಿಂದ ಎತ್ತಿದನು. ಪ್ರಯತ್ನಪೂರ್ವಕವಾಗಿ ಗುರಿಯಿಟ್ಟು ಪರ್ವತಗಳ ರೆಕ್ಕೆಗಳಿಗೆ ಪ್ರಯೋಗಿಸಿದನು. ಆದರೆ ಒಂದೊಂದು ಪೆಟ್ಟಿನಿಂದ ಒಂದೊಂದು ರೆಕ್ಕೆಗಳೇ ಕೆಳಗೆ ಬಿದ್ದವು. ಎಲ್ಲಾ ರೆಕ್ಕೆಗಳು ಕೆಳಗೆ ಬೀಳಲಿಲ್ಲ.

ಕುಂತೀದೇವಿಯು ಕುಳಿತಿರುವ ಸ್ಥಳಕ್ಕೆ ಸಮೀಪದಲ್ಲಿ ಒಂದು ಹುಲಿಯು ಕೂಗಿತು. ಅಬಲೆಯಾದ ಕುಂತೀದೇವಿಯು ಹೆದರಿದಳು. ಅವಳ ಕೈಗಳ ಕೊನೆಯಿಂದ ಶ್ರೀಭೀಮಸೇನದೇವರು ಜಾರಿ ಕೆಳಗೆ ಬಿದ್ದರು. ಪರ್ವತದಂತೆ ಭಾರವಾಗಿರುವ ಅವರ ದೇಹವು ಶತಶೃಂಗ ಪರ್ವತ ಎಂಬ ಪರ್ವತಕ್ಕೆ ತಗಲಿತು. ಕೂಡಲೇ ಆ ಪರ್ವತವು ಪುಡಿಪುಡಿಯಾಯಿತು. ತಮ್ಮ ಅಂಗಸಂಬಂಧದಿಂದ ಅಜಾಗ್ರತೆಯಲ್ಲಿದ್ದು ಪರ್ವತವನ್ನು ಪುಡಿಪುಡಿಯಾಗುವಂತೆ ಮಾಡಿರುವ ಶ್ರೀಭೀಮಸೇನದೇವರ ಶರೀರವು ವಜ್ರಾಯುಧಕ್ಕಿಂತಲೂ ಗಟ್ಟಿಯಾಗಿರುವುದು ಆಶ್ಚರ್ಯಕರವಲ್ಲವೆ ?

**ವಿಗ್ರಹ—**

**ಇಂದ್ರಾಯುಧಂ—** ಇಂದ್ರಸ್ಯ ಆಯುಧಂ ಇಂದ್ರಾಯುಧಂ ।

**ಇಂದ್ರಕರಾಭಿನುನ್ನಂ—** ಇಂದ್ರಸ್ಯ ಕರೌ ಇಂದ್ರಕರೌ, ಅಭಿತಃ ನುನ್ನಂ ಅಭಿನುನ್ನಂ, ಇಂದ್ರಕರಾಭ್ಯಾಂ ಅಭಿನುನ್ನಂ ಇಂದ್ರಕರಾಭಿನುನ್ನಂ ।

**ಕ್ಷಿತಿಧಾರಿಣಾಂ—** ಕ್ಷಿತಿಂ ಧರಂತಿ ಇತಿ ಕ್ಷಿತಿಧಾರಿಣಃ, ತೇಷಾಂ ಕ್ಷಿತಿಧಾರಿಣಾಂ ।

**ಭೂಭೃದ್ವಪುಃ—** ಭುವಂ ಬಿಭರ್ತಿ ಇತಿ ಭೂಭೃತ್, ಭೂಭೃತಃ ವಪುಃ ಭೂಭೃದ್ವಪುಃ, ತತ್ ಭೂಭೃದ್ವಪುಃ ।

**ಅಂಗಸಂಗಾತ್—** ಅಂಗಸ್ಯ ಸಂಗಃ ಅಂಗಸಂಗಃ, ತಸ್ಮಾತ್ ಅಂಗಸಂಗಾತ್ ।

**ಜನನೀಕರಾಗ್ರಾತ್—** ಜನನ್ಯಾಃ ಕರೌ ಜನನೀಕರೌ, ಜನನೀಕರಯೋಃ ಅಗ್ರಂ ಜನನೀಕರಾಗ್ರಂ, ತಸ್ಮಾತ್ ಜನನೀಕರಾಗ್ರಾತ್ ।

**ಕ್ರಿಯಾಪದ—** ಚಿಚ್ಛೇದ- ಛಿದಿರ್ ದ್ವೈಧೀಕರಣೇ ಇತ್ಯಸ್ಮಾತ್ ಛಿದಿರ್ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಚಿಚ್ಛೇದ' ಇತಿ ರೂಪಮ್ ।

ಚಿಚ್ಛೇದ ಚಿಚ್ಛಿದತುಃ ಚಿಚ್ಛಿದುಃ, ಚಿಚ್ಛೇದಿಥ ಚಿಚ್ಛಿದಥುಃ ಚಿಚ್ಛಿದ, ಚಿಚ್ಛೇದ ಚಿಚ್ಛಿದಿವ ಚಿಚ್ಛಿದಿಮ ॥

ಬಿಭೇದ- ಭಿದಿರ್ ವಿದಾರಣೇ ಇತ್ಯಸ್ಮಾತ್ ಭಿದಿರ್ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಬಿಭೇದ' ಇತಿ ರೂಪಮ್ ।

ಬಿಭೇದ ಬಿಭಿದತುಃ ಬಿಭಿದುಃ, ಬಿಭೇದಿಥ ಬಿಭಿದಥುಃ ಬಿಭಿದ, ಬಿಭೇದ ಬಿಭಿದಿವ ಬಿಭಿದಿಮ ॥

ಅಲಂಕಾರ— ಆಧಿಕ್ಯಾಲಂಕಾರ.

★ ★ ★

ಭೀಮಸೇನದೇವರ ಬಾಲಲೀಲಾ

**ಪುರೇ ಕುಮಾರಾನಲಸಾನ್ ವಿಹಾರಾ-**
**ನ್ನಿರೀಕ್ಷ್ಯ ಸರ್ವಾನಪಿ ಮಂದಲೀಲಃ ।**
**ಕೈಶೋರಲೀಲಾಂ ಹತಸಿಂಹಸಂಘಾಂ**
**ವನೇ ಪ್ರವೃತ್ತಾಂ ಸ್ಮರತಿ ಸ್ಮ ಸೂತ್ಕಃ ॥ 30 ॥**

**ಪದಚ್ಛೇದ—** ಪುರೇ, ಕುಮಾರಾನ್, ಅಲಸಾನ್, ವಿಹಾರಾತ್, ನಿರೀಕ್ಷ್ಯ, ಸರ್ವಾನ್, ಅಪಿ, ಮಂದಲೀಲಃ, ಕೈಶೋರಲೀಲಾಂ, ಹತಸಿಂಹಸಂಘಾಂ, ವನೇ, ಪ್ರವೃತ್ತಾಂ, ಸ್ಮರತಿ, ಸ್ಮ, ಸೂತ್ಕಃ ।

**ಅನ್ವಯ—** ಸಃ ಪುರೇ ಮಂದಲೀಲಃ ಅಪಿ ವಿಹಾರಾತ್ ಅಲಸಾನ್ ಸರ್ವಾನ್ ಕುಮಾರಾನ್ ನಿರೀಕ್ಷ್ಯ ವನೇ ಪ್ರವೃತ್ತಾಂ ಹತಸಿಂಹಸಂಘಾಂ ಕೈಶೋರಲೀಲಾಂ ಸೂತ್ಕಃ ಸ್ಮರತಿ ಸ್ಮ ।

**ಅನ್ವಯಾರ್ಥ—**

**ಸಃ** = ಆ ಶ್ರೀಭೀಮಸೇನದೇವರು

**ಪುರೇ** = ಹಸ್ತಿನಾವತೀ ನಗರದಲ್ಲಿ

**ಮಂದಲೀಲಃ** = ಮೆಲ್ಲಗೆ ಮೆಲ್ಲಗೆ ಲೀಲೆಗಳನ್ನು ಮಾಡುತ್ತಿರುವಾಗಲೂ

**ವಿಹಾರಾತ್ ಅಲಸಾನ್** = ಆಟದಿಂದ ಶ್ರಮಯುಕ್ತರಾಗಿರುವ

**ಸರ್ವಾನ್ ಕುಮಾರಾನ್ ನಿರೀಕ್ಷ್ಯ** = ಎಲ್ಲಾ ರಾಜಕುಮಾರರನ್ನೂ ನೋಡಿ

**ವನೇ** = ಕಾಡಿನಲ್ಲಿ

**ಪ್ರವೃತ್ತಾಂ** = ನಡೆದ

**ಹತಸಿಂಹಸಂಘಾಂ** = ತನ್ನಿಂದ ಕೊಲ್ಲಲ್ಪಟ್ಟ ಸಿಂಹಗಳ ಸಮೂಹಗಳುಳ್ಳ

**ಕೈಶೋರಲೀಲಾಂ** = ಬಾಲಕರಿಗೆ ಯೋಗ್ಯವಾದ ಲೀಲೆಯನ್ನು

**ಸೂತ್ಕಃ** = ತುಂಬಾ ಆಸೆಯಿಂದ ಯುಕ್ತರಾಗಿ

**ಸ್ಮರತಿ ಸ್ಮ** = ಸ್ಮರಿಸುತ್ತಿದ್ದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ಹಸ್ತಿನಾವತೀ ನಗರದಲ್ಲಿ ಮೆಲ್ಲಮೆಲ್ಲನೆ ಆಟವಾಡುತ್ತಿದ್ದರು. ಆ ಸಮಯದಲ್ಲಿ ಆಟದಿಂದ ಶ್ರಮಯುಕ್ತರಾಗಿರುವ ಎಲ್ಲಾ ರಾಜಕುಮಾರರನ್ನು ನೋಡಿದರು. ಆಗ ಅವರಿಗೆ ಬಾಲ್ಯದಲ್ಲಿ ಕಾಡಿನಲ್ಲಿ ನಡೆದ ವೃತ್ತಾಂತವು ಜ್ಞಾಪಕಕ್ಕೆ ಬಂತು. ಶ್ರೀಭೀಮಸೇನದೇವರಿಗೆ ಕಾಡಿನಲ್ಲಿಯೇ ಬಾಲಲೀಲೆ ಆರಂಭವಾಯಿತು. ಮೊದಲು ಮೊದಲು ಸಿಂಹಗಳ ಸಮೂಹಗಳನ್ನು ಕೊಂದರು. ಆ ಸಿಂಹಗಳ ಸಮೂಹಗಳನ್ನು ತುಂಬಾ ಆಸೆಯಿಂದ ಸ್ಮರಿಸಿದರು. ಈ ಬಾಲಲೀಲೆಗಳನ್ನು ಸ್ಮರಿಸುತ್ತಾ ನಿರಂತರವಾಗಿ ಹಾಗೆಯೇ ಇದ್ದರು. ಈ ಬಾಲಲೀಲೆಗಳು ಹಸ್ತಿನಾವತಿಯಲ್ಲಿ ಅಲ್ಲ, ಕಾಡಿನಲ್ಲಿ ನಡೆದವು.

**ವಿಗ್ರಹ—**

ನಿರೀಕ್ಷ್ಯ— ನಿತರಾಂ ಈಕ್ಷಿತ್ವಾ ನಿರೀಕ್ಷ್ಯ ।

ಮಂದಲೀಲಃ— ಮಂದಾ ಲೀಲಾ ಯಸ್ಯ ಸಃ ಮಂದಲೀಲಃ ।

**ಕೈಶೋರಲೀಲಾಂ—** ಕಿಶೋರಸ್ಯ ಇಯಂ ಕೈಶೋರಾ, ಕೈಶೋರಾ ಚ ಸಾ ಲೀಲಾ ಚ ಕೈಶೋರಲೀಲಾ, ತಾಂ ಕೈಶೋರಲೀಲಾಂ ।

**ಹತಸಿಂಹಸಂಘಾಂ—** ಸಿಂಹಾನಾಂ ಸಂಘಃ ಸಿಂಹಸಂಘಃ, ಹತಃ ಸಿಂಹಸಂಘಃ ಯಯಾ ಸಾ ಹತ-ಸಿಂಹಸಂಘಾ, ತಾಂ ಹತಸಿಂಹಸಂಘಾಂ ।

**ಸೂತ್ಕಃ—** ಸುಷ್ಠು ಭೃತಂ ಉತ್ಕಃ ಸೂತ್ಕಃ ।

**ಕ್ರಿಯಾಪದ—** ಸ್ಮರತಿ- ಸ್ಮೃ ಇಷ್ ಸ್ಮರಣೇ ಇತ್ಯಸ್ಮಾತ್ ಸ್ಮರಣಾರ್ಥಕಾತ್ ಸ್ಮೃ ಇಷ್ ಧಾತೋಃ ಲಟಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಸ್ಮರತಿ' ಇತಿ ರೂಪಮ್ ।

ಸ್ಮರತಿ ಸ್ಮರತಃ ಸ್ಮರಂತಿ, ಸ್ಮರಸಿ ಸ್ಮರಥಃ ಸ್ಮರಥ, ಸ್ಮರಾಮಿ ಸ್ಮರಾವಃ ಸ್ಮರಾಮಃ ॥

**ಅಲಂಕಾರ—** ಸ್ಮರಣಾಲಂಕಾರ.

★ ★ ★

**ಭೀಮಸೇನದೇವರಿಗೆ ವಿಷಪ್ರಯೋಗ, ಹಾವುಗಳಿಂದ ಕಡಿತ, ಆಳವಾದ ನೀರಿನಲ್ಲಿ ಮುಳುಗಿಸುವಿಕೆ**

**ಭುಕ್ತಂ ಚ ಜೀರ್ಣಂ ಪರಿಪಂಥಿದತ್ತಂ**
**ವಿಷಂ ವಿಷಣ್ಣೋ ವಿಷಭೃದ್ಗಣೋಽತಃ ।**
**ಪ್ರಮಾಣಕೋಟೇಃ ಸ ಹಿ ಹೇಲಯಾಽಗಾ-**
**ನ್ನೇದಂ ಜಗಜ್ಜೀವನದೇಽತ್ರ ಚಿತ್ರಮ್ ॥ 31 ॥**

**ಪದಚ್ಛೇದ—** ಭುಕ್ತಂ, ಚ, ಜೀರ್ಣಂ, ಪರಿಪಂಥಿದತ್ತಂ, ವಿಷಂ, ವಿಷಣ್ಣಃ, ವಿಷಭೃದ್ಗಣಃ, ಅತಃ, ಪ್ರಮಾಣ-ಕೋಟೇಃ, ಸಃ, ಹೇಲಯಾ, ಅಗಾತ್, ನ, ಇದಂ, ಜಗಜ್ಜೀವನದೇ, ಅತ್ರ, ಚಿತ್ರಮ್ ।

**ಅನ್ವಯ—** ಪರಿಪಂಥಿದತ್ತಂ ವಿಷಂ ಭುಕ್ತಂ ಚ ಜೀರ್ಣಮ್ ಅತಃ ವಿಷಭೃದ್ಗಣಃ ವಿಷಣ್ಣಃ ಪ್ರಮಾಣಕೋಟೇಃ ಸಃ ಹಿ ಹೇಲಯಾ ಅಗಾತ್ ಇದಂ ಜಗಜ್ಜೀವನದೇ ಅತ್ರ ಚಿತ್ರಂ ನ ।

**ಅನ್ವಯಾರ್ಥ—**

**ಪರಿಪಂಥಿದತ್ತಂ** = ಶತ್ರುಗಳಾದ ದುರ್ಯೋಧನಾದಿಗಳಿಂದ ಕೊಡಲ್ಪಟ್ಟ

**ವಿಷಂ** = ವಿಷಮಿಶ್ರಿತಾನ್ನವು

**ಭುಕ್ತಂ ಚ** = ತಿನ್ನಲ್ಪಟ್ಟಿತು ಮತ್ತು

**ಜೀರ್ಣಂ** = ಜೀರ್ಣವಾಯಿತು.

**ಅತಃ** = ಈ ಭೀಮಸೇನದೇವರ ದಯೆಯಿಂದ

**ವಿಷಭೃದ್ಗಣಃ** = ಅತಿ ಕ್ರೂರವಾದ ವಿಷವನ್ನು ಧರಿಸಿರುವ ಸರ್ಪಗಳ ಸಮೂಹವು

**ವಿಷಣ್ಣಃ** = ಸತ್ತು ಹೋದವು (ವ್ಯಥೆಗೊಳಿಸಲ್ಪಟ್ಟವು).

**ಪ್ರಮಾಣಕೋಟೇಃ** = ಪ್ರಮಾಣಕೋಟಿ ಎಂಬ ಅತ್ಯಂತ ಆಳವಾದ ಮಡುವಿನ ದೆಸೆಯಿಂದ

**ಸಃ** = ಆ ಶ್ರೀಭೀಮಸೇನದೇವರು

**ಹೇಲಯಾ** = ಆಯಾಸವಿಲ್ಲದೇ

**ಅಗಾತ್ ಹಿ** = ಹೊರಗೆ ಬಂದರಷ್ಟೇ.

**ಇದಂ** = ಈ ವ್ಯಾಪಾರವು

**ಜಗಜ್ಜೀವನದೇ** = ಸಕಲ ಜೀವರಿಗೂ ಜೀವನವನ್ನು ಕೊಡುತ್ತಿರುವ

**ಅತ್ರ** = ಈ ಶ್ರೀಭೀಮಸೇನದೇವರ ವಿಷಯದಲ್ಲಿ

**ಚಿತ್ರಂ ನ** = ಆಶ್ಚರ್ಯವಲ್ಲ.

ತಾತ್ಪರ್ಯ—

(1) ದುರ್ಯೋಧನನೇ ಮೊದಲಾದ ಶತ್ರುಗಳು ಶ್ರೀಭೀಮಸೇನದೇವರಿಗೆ ತಮ್ಮ ಸೇವಕರ ಮೂಲಕವಾಗಿ ಆಹಾರದಲ್ಲಿ ಅತ್ಯುಗ್ರವಾದ ವಿಷವನ್ನು ಸೇರಿಸಿ ಕೊಟ್ಟರು. ಈ ವಿಷಯವನ್ನು ತಿಳಿದಿರುವ ಶ್ರೀಭೀಮ-ಸೇನದೇವರು ವಿಷಮಿಶ್ರಿತವಾದ ಆಹಾರವನ್ನು ತಿಂದರು ಮತ್ತು ಜೀರ್ಣಿಸಿಕೊಂಡರು.

(2) ಅತಿ ಕ್ರೂರವಾದ ವಿಷಗಳನ್ನು ಧರಿಸಿರುವ ಸರ್ಪಗಳಿಂದ ಕಡಿಸಿದರು. ಆ ಸರ್ಪಗಳೇ ಸತ್ತವು.

(3) ಗಂಗೆಯಲ್ಲಿ 'ಪ್ರಮಾಣಕೋಟಿ' ಎಂಬ ಕೆಲವು ಪ್ರದೇಶಗಳು. ಸಗರ ರಾಜನ 60,000 ಮಕ್ಕಳು ಸಮುದ್ರವನ್ನು ಅಗೆದಾಗ ಏರ್ಪಟ್ಟ ಮಡುವುಗಳು ಅವುಗಳು. ಅವುಗಳು ಎಷ್ಟು ಆಳವಾಗಿವೆ ಎಂದು ಕೇಳಿದಾಗ ಅವುಗಳ ಆಳವು ಕೋಟಿಗಟ್ಟಲೆ ಯೋಜನಗಳೇ ಆಳಗಳು ಎಂದು ಜ್ಞಾನಿಗಳು ಉತ್ತರವನ್ನು ಕೊಟ್ಟಿರುವರು. ಆದ್ದರಿಂದ ಕೋಟಿಗಟ್ಟಲೆ ಆಳ ಅಂದರೆ ಪ್ರಮಾಣವುಳ್ಳವುಗಳು ಎಂದು ಜ್ಞಾನಿಗಳು ಉತ್ತರವನ್ನು ಕೊಟ್ಟಿರುವುದರಿಂದ ಪ್ರಮಾಣಕೋಟಿ ಎಂದು ಆ ಮಡವುಗಳು ಪ್ರಸಿದ್ಧವಾದವು.

(1) ಶ್ರೀಭೀಮಸೇನದೇವರಿಗೆ ವಿಷಮಿಶ್ರಿತವಾದ ಅನ್ನವನ್ನು ತಿನ್ನಿಸಬೇಕು,

(2) ಅತಿ ಭಯಂಕರವಾದ ಸರ್ಪಗಳಿಂದ ಕಡಿಸಬೇಕು,

(3) ಬಹು ಎತ್ತರದಿಂದ ಪ್ರಮಾಣಕೋಟಿ ಎಂಬ ಮಡುವಿನಲ್ಲಿ ತಳ್ಳಬೇಕು; ಹೀಗೆ ಮಾಡಿದರೆ ಪ್ರಮಾಣಕೋಟಿ ಎಂಬ ಮಡುವಿನಲ್ಲಿ ಕೆಳಗೆ ಹೋಗುತ್ತಿರುವ ಭೀಮಸೇನನು ಸಾಯುವುದರಲ್ಲಿ ಸಂಶಯವಿಲ್ಲ ಎಂದು ದುರ್ಯೋಧನ ಮುಂತಾದವರು ಯೋಚಿಸಿದರು. ಹಾಗೆಯೇ ಮಾಡಿದರು. ಆದರೆ ಅವರ ಆಸೆಯು ವ್ಯರ್ಥವಾಯಿತು.

ಪ್ರಮಾಣಕೋಟೇಃ = ಆ ಪ್ರಮಾಣಕೋಟಿ ಎಂಬ ಮಡುವಿನ ದೆಸೆಯಿಂದಲೂ, ಸಃ = ಆ ಭೀಮಸೇನದೇವರು, ಹೇಲಯಾ ಹಿ = ಲೀಲೆಯಿಂದಲೇ, ಅಗಾತ್ = ಹೊರಗೆ ಬಂದರು. ಇದು ಮಹಾಭಾರತ ಮುಂತಾದ ಗ್ರಂಥಗಳಲ್ಲಿ ಪ್ರಸಿದ್ಧವಾಗಿದೆ.

ದುರ್ಯೋಧನ ಮುಂತಾದವರು ಶ್ರೀಭೀಮಸೇನದೇವರನ್ನು ಕಟ್ಟಿದರು. ಪ್ರಮಾಣಕೋಟಿ ಎಂಬ ಮಡುವಿನಲ್ಲಿ ತಳ್ಳಿದರು. ಅವರು ಕಟ್ಟಿರುವ ಕಟ್ಟುಗಳನ್ನೂ ಮಡುವಿನಲ್ಲಿ ತಳ್ಳಿರುವುದನ್ನೂ ಅಲಕ್ಷ್ಯ ಮಾಡಿಕೊಂಡು ಶ್ರೀಭೀಮಸೇನ-ದೇವರು ಹೊರಗೆ ಬಂದರು.

ಈ ಕೆಲಸವನ್ನು ಇನ್ನೊಬ್ಬರು ಮಾಡಿದ್ದರೆ ಆಶ್ಚರ್ಯವೆಂದು ಹೇಳಬಹುದು. ಆದರೆ ಸಕಲ ಜೀವರಿಗೂ ಜೀವನವನ್ನು ಶ್ರೀಭೀಮಸೇನದೇವರು ಕೊಡುತ್ತಿರುವರು. ಅವರಿಗೆ ದುರ್ಯೋಧನ ಮುಂತಾದವರ ಕಟ್ಟುಗಳನ್ನು ಮುರಿಯುವುದೂ ಪ್ರಮಾಣಕೋಟ ಎಂಬ ಮಡುವಿನಿಂದ ಹೊರಗೆ ಬರುವುದೂ ಆಶ್ಚರ್ಯವಲ್ಲ.

ವಿಗ್ರಹ—

**ಪರಿಪಂಥಿದತ್ತಂ—** ಪರಿಪಂಥಿಭಿಃ ದತ್ತಂ ಪರಿಪಂಥಿದತ್ತಮ್।

**ವಿಷಣ್ಣಃ—** ವಿಶೇಷೇಣ ಸನ್ನಃ ವಿಷಣ್ಣಃ ।

**ವಿಷಭೃದ್ಗಣಃ—** ವಿಷಂ ಬಿಭ್ರತಿ ಇತಿ ವಿಷಭೃತಃ। ವಿಷಭೃತಾಂ ಗಣಃ ವಿಷಭೃದ್ಗಣಃ ।

**ಪ್ರಮಾಣಕೋಟೇಃ—** ಪ್ರಮಾಣಾನಾಂ ಕೋಟಿಃ ಪ್ರಮಾಣಕೋಟಿಃ ತಸ್ಮಾತ್ ಪ್ರಮಾಣಕೋಟೇಃ ।

**ಜಗಜ್ಜೀವನದೇ—** ಜಗತಾಂ ಜೀವನಂ ಜಗಜ್ಜೀವನಂ, ಜಗಜ್ಜೀವನಂ ದದಾತೀತಿ ಜಗಜ್ಜೀವನದಃ ತಸ್ಮಿನ್ ಜಗಜ್ಜೀವನದೇ ।

**ಕ್ರಿಯಾಪದ—** **ಅಗಾತ್-** ಇಣ್ ಗತೌ ಇತ್ಯಸ್ಮಾತ್ ಗತ್ಯರ್ಥಕಾತ್ ಇಣ್ ಧಾತೋಃ ಪರಸ್ಮೈಪದಿನಃ ಲುಙ್ ಪ್ರಥಮಪುರುಷೇ ಏಕವಚನೇ 'ಅಗಾತ್' ಇತಿ ರೂಪಮ್ ।

ಅಗಾತ್ ಅಗಾತಾಂ ಅಗುಃ, ಅಗಾಃ ಅಗಾತಂ ಅಗಾತ, ಅಗಾಂ ಅಗಾವ ಅಗಾಮ ॥

**ಅಲಂಕಾರ—** ಕಾವ್ಯಲಿಂಗಾಲಂಕಾರ.

★ ★ ★

ಅರಗಿನ ಮನೆಯ ದಹನ, ಧರ್ಮಾದಿಗಳ ರಕ್ಷಣೆ - ಶ್ರೀ ವೇದವ್ಯಾಸದರ್ಶನ

**ದಗ್ಧ್ವಾ ಪುರಂ ಯೋಗಬಲಾತ್ ಸ ನಿರ್ಯನ್**
**ಧರ್ಮಾನಿವ ಸ್ವಾನ್ ಸಹಜಾನ್ ದಧಾನಃ ।**
**ಅದಾರಿಭಾವೇನ ಜಗತ್ಸು ಪೂಜ್ಯೋ**
**ಯೋಗೀವ ನಾರಾಯಣಮಾಸಸಾದ ॥ 32 ॥**

**ಪದಚ್ಛೇದ—** ದಗ್ಧ್ವಾ, ಪುರಂ, ಯೋಗಬಲಾತ್, ಸಃ, ನಿರ್ಯನ್, ಧರ್ಮಾನ್, ಇವ, ಸ್ವಾನ್, ಸಹಜಾನ್, ದಧಾನಃ, ಅದಾರಿಭಾವೇನ, ಜಗತ್ಸು, ಪೂಜ್ಯಃ, ಯೋಗೀ, ಇವ, ನಾರಾಯಣಂ, ಆಸಸಾದ ।

**ಅನ್ವಯ—** ಯೋಗಬಲಾತ್ ಸಃ ಪುರಂ ದಗ್ಧ್ವಾ ನಿರ್ಯನ್, ಸ್ವಾನ್ ಸಹಜಾನ್ ಧರ್ಮಾನ್ ಇವ ದಧಾನಃ, ಅದಾರಿಭಾವೇನ ಜಗತ್ಸು ಪೂಜ್ಯಃ ಯೋಗೀ ಇವ ನಾರಾಯಣಂ ಆಸಸಾದ ।

**ಅನ್ವಯಾರ್ಥ—**

**ಯೋಗಬಲಾತ್** = ಉಪಾಯಗಳ ಸಾಮರ್ಥ್ಯದಿಂದ

**ಸಃ** = ಆ ಶ್ರೀಭೀಮಸೇನದೇವರು

**ಪುರಂ ದಗ್ಧ್ವಾ** = ಅರಗಿನ ಮನೆಯನ್ನು ಸುಟ್ಟವರಾಗಿ

**ನಿರ್ಯನ್** = ಬಿಲದಿಂದ ಹೊರಗೆ ಬರುತ್ತಿರುವವರಾಗಿ

**ಸ್ವಾನ್ ಸಹಜಾನ್ ಧರ್ಮಾನ್ ಇವ** = ಸ್ವಕೀಯರಾಗಿರುವ ಅಣ್ಣನಾಗಿರುವ ಧರ್ಮರಾಜನನ್ನೂ ತಮ್ಮಂದಿರಾಗಿರುವ ಅರ್ಜುನ ನಕುಲ ಸಹದೇವರನ್ನೂ

**ದಧಾನಃ** = ಹೆಗಲಿನ ಮೇಲೆ ಹೊತ್ತುಕೊಂಡವರಾಗಿ ಬಂದರು. ಅವರು ಪುಣ್ಯವಿಶೇಷಗಳಂತೆ ಇದ್ದರು.

**ಯೋಗಬಲಾತ್** = ಸಮಾಧಿಪರಿಪಾಕದ ಸಾಮರ್ಥ್ಯದಿಂದ

**ಪುರಂ** = ತನ್ನ ಶರೀರವನ್ನು

**ದಗ್ಧ್ವಾ** = ತನ್ನ ಶರೀರದಲ್ಲಿರುವ ಅಗ್ನಿಯ ಸಾಮರ್ಥ್ಯದಿಂದ ಸುಟ್ಟು ಬ್ರಹ್ಮನಾಡಿಯ ಮಾರ್ಗದಿಂದ (ದೇಹದಿಂದ) ಹೊರಗೆ ಬಂದು

**ಅದಾರಿಭಾವೇನ** = ವಾಯುಪಿನ ಅಭ್ಯಾಸವನ್ನು ಮಾಡುವ ಯೋಗಿಗಳಿಗೆ ದೇಹದಲ್ಲಿ ವಾಯುವು ಹಾದಿಯನ್ನು ತೋರಿಸುತ್ತಾ ಸಂಚರಿಸುತ್ತಿರುವುದರಿಂದ ಶೀರ್ಣತೆಯು ಏರ್ಪಡುವುದು ಸಹಜ-ವಾಗಿರುತ್ತದೆ. ಆ ಶೀರ್ಣತೆಯು ಏರ್ಪಡದಿರುವುದರಿಂದ

**ಜಗತ್ಸು** = ಸ್ವರ್ಗ ಮುಂತಾದ ಲೋಕಗಳಲ್ಲಿ

**ಪೂಜ್ಯಃ ಸನ್** = ಪೂಜ್ಯರೆನಿಸುತ್ತಾ

**ಧರ್ಮಾನ್** = ಮೋಕ್ಷದಲ್ಲಿ ಅಧಿಕವಾದ ಸುಖಾನುಭವಕ್ಕೆ ಕಾರಣವಾಗಿರುವ ಪುಣ್ಯವಿಶೇಷಗಳನ್ನು

**ದಧಾನಃ** = ಕಳೆದುಕೊಳ್ಳದೆ ಧರಿಸಿದವರಾಗಿ

**ನಾರಾಯಣಂ** = ತನ್ನ ಬಿಂಬರೂಪಿಯಾದ ಶ್ರೀಹರಿಯನ್ನು

**ಯೋಗೀ ಇವ** = ಯೋಗಿಯು ಹೇಗೆ ಹೊಂದುವನೋ ಹಾಗೆ

**ಅದಾರಿಭಾವೇನ** = ಮನುಷ್ಯರನ್ನು ತಿನ್ನುವುದರಿಂದ – 'ಅದ' ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಹಿಡಿಂಬ ಎಂಬ ರಾಕ್ಷಸನ ಶತ್ರುವಾದುದರಿಂದ

**ಜಗತ್ಸುಪೂಜ್ಯಃ** = ಲೋಕಗಳಲ್ಲಿ ಪೂಜ್ಯರಾದ ಶ್ರೀಭೀಮಸೇನದೇವರು

**ನಾರಾಯಣಂ** = ಹಿಡಿಂಬಿಯನ್ನು ಮದುವೆ ಮಾಡಿಸುವುದಕ್ಕಾಗಿ ಪ್ರತ್ಯಕ್ಷರಾದ ಶ್ರೀವೇದವ್ಯಾಸರನ್ನು

**ಆಸಸಾದ** = ಹೊಂದಿದರು.

**ತಾತ್ಪರ್ಯ—** ಪಾಂಡವರನ್ನು ಅರಗಿನ ಮನೆಯಲ್ಲಿ ಇರುವಂತೆ ದುರ್ಯೋಧನ ಮುಂತಾದ ಅಯೋಗ್ಯರು ಮಾಡಿದರು. ಈ ವಿಷಯವನ್ನು ತಿಳಿದ ಶ್ರೀಭೀಮಸೇನದೇವರು ಉಪಾಯದ ಬಲದಿಂದ ಅರಗಿನ ಮನೆಯನ್ನು ಸುಟ್ಟರು. ಧರ್ಮರಾಜ, ಅರ್ಜುನ, ನಕುಲ ಸಹದೇವರನ್ನು ಹೆಗಲಿನ ಮೇಲೆ ಎತ್ತಿಕೊಂಡು ಹೊರಟರು. ಹಿಡಿಂಬ ಎಂಬ ದುಷ್ಟನು ಪ್ರಪಂಚದಲ್ಲಿರುವ ಮನುಷ್ಯರುಗಳನ್ನೆಲ್ಲಾ ತಿನ್ನುತ್ತಿದ್ದನು. ಅವನಿಗೆ ತಂಗಿಯಾಗಿ ಹುಟ್ಟಿರುವ ಹಿಡಿಂಬಿ ಎಂಬ ಉತ್ತಮಿಯನ್ನು ಶ್ರೀಭೀಮಸೇನದೇವರಿಗೆ ವಿವಾಹವನ್ನು ಮಾಡಿಸುವುದಕ್ಕಾಗಿ ಬಂದ ಶ್ರೀವೇದವ್ಯಾಸದೇವರನ್ನು ನೋಡಿದರು.

ಶ್ರೀಭೀಮಸೇನದೇವರನ್ನು ಆಗ ನೋಡಿದಾಗ ಒಬ್ಬ ಯೋಗಿಯಂತೆ ಕಾಣಿಸುತ್ತಿದ್ದರು. ಯೋಗಿಯು ತನ್ನ ದೇಹದಲ್ಲಿರುವ ಅಗ್ನಿಯ ಬಲದಿಂದ ತನ್ನ ದೇಹವನ್ನು ಸುಟ್ಟುಕೊಳ್ಳುವನು. ಆದ್ದರಿಂದ ಆ ದೇಹದ ನಾಶವು ಯಾರಿಗೂ ಕಾಣಿಸುವುದಿಲ್ಲ. ದೇಹದಿಂದ ಹೊರಗೆ ಬರುವುದೂ ಯಾರಿಗೂ ಕಾಣಿಸುವುದಿಲ್ಲ. ಹೀಗೆ ಯೋಗಾಭ್ಯಾಸವನ್ನು ಮಾಡುವವರಿಗೆ ಮೋಕ್ಷದಲ್ಲಿ ಆನಂದೋದ್ರೇಕವು ಏರ್ಪಡುತ್ತದೆ, ಆ ಯೋಗಿಯ ದೇಹವು ಸೀಳುವುದಿಲ್ಲ. ಆದ್ದರಿಂದ ಸ್ವರ್ಗ ಮುಂತಾದ ಲೋಕಗಳಲ್ಲಿರುವವರು ಆ ಯೋಗಿಗಳನ್ನು ಪೂಜಿಸುವರು.

ಯಾವನೋ ಒಬ್ಬ ಪುರುಷನ ಮನೆಯನ್ನು ಯಾವುದೋ ಒಂದು ಉಪಾಯದ ಬಲದಿಂದ ಸುಟ್ಟುಬಿಟ್ಟು ಗುಟ್ಟಾಗಿ ಬಚ್ಚಿಟ್ಟಿರುವ ಆ ಸ್ಥಳದಿಂದ ಹೊರಗೆ ಬರುತ್ತಿರುವವರಂತೆ ಶ್ರೀಭೀಮಸೇನದೇವರು ಹೊರಗೆ ಬಂದರು. ಹೊರಗೆ ಬರುವಾಗಲೂ ತಮ್ಮ ಅಣ್ಣತಮ್ಮಂದಿರನ್ನು ಎತ್ತಿಕೊಂಡು ಬಂದರು. ಆಗ ಶತ್ರುಗಳಿಂದ ಯಾವ ವಿಧವಾದ ಬಾಧೆಯೂ ಏರ್ಪಡಲಿಲ್ಲ. ಇದಲ್ಲವೇ ಶ್ರೀಭೀಮಸೇನದೇವರ ಸಾಮರ್ಥ್ಯ!

ವಿಗ್ರಹ—

**ಯೋಗಬಲಾತ್—** ಯೋಗಸ್ಯ ಬಲಂ ಯೋಗಬಲಂ, ತಸ್ಮಾತ್ ಯೋಗಬಲಾತ್ ।

**ನಿರ್ಯನ್—** ನಿರ್ಯಾತಿ ಇತಿ ನಿರ್ಯನ್ ।

**ಸಹಜಾನ್—** ಸಹ ಜಾಯಂತೇ ಇತಿ ಸಹಜಾಃ, ತಾನ್ ಸಹಜಾನ್ ।

**ಅದಾರಿಭಾವೇನ—** (1) ದಾರಃ (ದಲನಂ) ಅಸ್ಯ ಅಸ್ತಿ ಇತಿ ದಾರೀ, ದಾರೀ ನ ಭವತಿ ಇತಿ ಅದಾರೀ, ಅದಾರಿಣಃ ಭಾವಃ ಅದಾರಿಭಾವಃ, ತೇನ ಅದಾರಿಭಾವೇನ । (2) ಅತ್ತಿ (ಭಕ್ಷಯತಿ ನರಾನ್) ಇತಿ ಅದಃ, ಅದಸ್ಯ ಅರಿಃ ಅದಾರಿಃ, ಅದಾರೇಃ ಭಾವಃ ಅದಾರಿಭಾವಃ, ತೇನ ಅದಾರಿಭಾವೇನ । (3) ದಾರಃ (ದೇಹಸ್ಯ ಘಾತನಂ) ಅಸ್ಯ ಅಸ್ತಿ ಇತಿ ದಾರೀ, ನ ದಾರೀ ಅದಾರೀ, ಅದಾರಿಣಃ ಭಾವಃ ಅದಾರಿಭಾವಃ, ತೇನ ಅದಾರಿಭಾವೇನ ।

**ಕ್ರಿಯಾಪದ—** ಆಸಸಾದ- ಆಜ್ ಇತ್ಯುಪಸರ್ಗಪೂರ್ವಕಾತ್ ಷದ್ಲ್ರ ವಿಶರಣಗತ್ಯವಸಾದನೇಷು ಇತ್ಯಸ್ಮಾತ್ ವಿಶರಣಗತ್ಯವಸಾದನಾರ್ಥಕಾತ್ ಷದ್ಲ್ರ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಆಸಸಾದ' ಇತಿ ರೂಪಮ್ ।

ಆಸಸಾದ ಆಸೇದತುಃ ಆಸೇದುಃ, ಆಸೇದಿಥ ಆಸೇದಥುಃ ಆಸೇದ, ಆಸಸಾದ ಆಸಸದ ಆಸೇದಿವ ಆಸೇದಿಮ ॥

**ಅಲಂಕಾರ—** ಉಪಮಾಲಂಕಾರ ಸಭಂಗಶ್ಲೇಷಾಲಂಕಾರ ಸಂಕೀರ್ಣಃ ।

★ ★ ★

### ಶ್ರೀ ಭೀಮಸೇನದೇವರ ಸಂಕಲ್ಪ - ಸಮರ್ಪಣೆಯ ವೈಭವ

**ಸಮರ್ಪ್ಯ ಕೃತ್ಯಾನಿ ಕೃತೀ ಕೃತಾನಿ**
**ವ್ಯಾಸಾಯ ಭೂಮ್ನೇ ಸುಕೃತಾನಿ ತಾವತ್ ।**
**ಕರಿಷ್ಯಮಾಣಾನಿ ಚ ತಸ್ಯ ಪೂಜಾಂ**
**ಸಂಕಲ್ಪಯಾಮಾಸ ಸ ಶುದ್ಧಬುದ್ಧಿಃ ॥ 33 ॥**

**ಪದಚ್ಛೇದ—** ಸಮರ್ಪ್ಯ , ಕೃತ್ಯಾನಿ, ಕೃತೀ, ಕೃತಾನಿ, ವ್ಯಾಸಾಯ, ಭೂಮ್ನೇ , ಸುಕೃತಾನಿ, ತಾವತ್, ಕರಿಷ್ಯಮಾಣಾನಿ. ಚ, ತಸ್ಯ, ಪೂಜಾಂ, ಸಂಕಲ್ಪಯಾಮಾಸ, ಸಃ, ಶುದ್ಧಬುದ್ಧಿಃ ।

**ಅನ್ವಯ—** ಕೃತೀ ಶುದ್ಧಬುದ್ಧಿಃ ಸಃ ಸುಕೃತಾನಿ ಕೃತ್ಯಾನಿ ತಾವತ್ ಕೃತಾನಿ, ಭೂಮ್ನೇ ವ್ಯಾಸಾಯ ಸಮರ್ಪ್ಯ, ಕರಿಷ್ಯಮಾಣಾನಿ ಚ ಕೃತ್ಯಾನಿ, ತಾವತ್ ತಸ್ಯ ಪೂಜಾಂ ಇತಿ ಸಂಕಲ್ಪಯಾಮಾಸ ।

**ಅನ್ವಯಾರ್ಥ—**

ಕೃತೀ = ಮಹಾಜ್ಞಾನಿಯಾಗಿರುವ

ಶುದ್ಧಬುದ್ಧಿಃ = ಭಗವಂತನಲ್ಲಿ ಪ್ರತಿಕೂಲವಲ್ಲದಿರುವ ಅಂತಃಕರಣವುಳ್ಳವರಾದ

ಸಃ = ಆ ಶ್ರೀಭೀಮಸೇನದೇವರು

ಸುಕೃತಾನಿ = ಶ್ರೀಭಗವಂತನಿಗೆ ಪೂಜೆಯೆಂದು ಮಾಡಲ್ಪಟ್ಟ

ಕೃತ್ಯಾನಿ ತಾವತ್ ಕೃತಾನಿ = ತನಗೆ ಮಾಡಲು ಯೋಗ್ಯವಾಗಿರುವ ಎಲ್ಲಾ ಕೆಲಸಗಳನ್ನೂ

ಭೂಮ್ನೇ = ಪರಿಪೂರ್ಣರಾಗಿರುವ

ವ್ಯಾಸಾಯ = ಶ್ರೀವೇದವ್ಯಾಸದೇವರಿಗೆ

ಸಮರ್ಪ್ಯ = ಸಮರ್ಪಣೆ ಮಾಡಿ

ಕರಿಷ್ಯಮಾಣಾನಿ ಚ ಕೃತ್ಯಾನಿ ತಾವತ್ = ಮುಂದೆ ಮಾಡಬೇಕಾದ ಎಲ್ಲಾ ಕರ್ಮಗಳನ್ನೂ

ತಸ್ಯ ಪೂಜಾಂ ಇತಿ = ಆ ಶ್ರೀವೇದವ್ಯಾಸದೇವರ ಪೂಜೆಯನ್ನಾಗಿ

ಸಂಕಲ್ಪಯಾಮಾಸ = ಪ್ರತಿಜ್ಞೆಯನ್ನು ಮಾಡಿದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ಮಹಾಜ್ಞಾನಿಗಳು. ಅವರ ಬುದ್ಧಿಯು ಯಾವಾಗಲೂ ಭಗವಂತನಿಗೆ ಪ್ರತಿಕೂಲವಾಗಿ ಹೋಗುವುದಿಲ್ಲ. ಆ ಶ್ರೀಭೀಮಸೇನದೇವರು ಹಿಂದೆ ಮಾಡಿರುವ ಎಲ್ಲಾ ಕಾರ್ಯಗಳೂ ಶ್ರೀಹರಿಗೆ ಸಮ್ಮತವಾಗಿರತಕ್ಕವುಗಳು. ಆ ಕೃತ್ಯಗಳನ್ನೆಲ್ಲವನ್ನೂ ಶ್ರೀಹರಿಗೆ ಸಮರ್ಪಿಸಿದರು. ಮುಂದೆ ಮಾಡಲಿರುವ ಬಕಾಸುರನಿಗ್ರಹ ಮುಂತಾದ ಎಲ್ಲಾ ಕಾರ್ಯಗಳನ್ನೂ ವಿಷ್ಣುವಿನ ಪೂಜೆಯನ್ನಾಗಿ ಸಂಕಲ್ಪಿಸಿದರು.

ವಿಗ್ರಹ—

**ಕೃತ್ಯಾನಿ—** ಕರ್ತುಂ ಯೋಗ್ಯಾನಿ ಕೃತ್ಯಾನಿ, ತಾನಿ ಕೃತ್ಯಾನಿ ।

**ಕರಿಷ್ಯಮಾಣಾನಿ—** ಕರಿಷ್ಯಂತೇ ಇತಿ ಕರಿಣ್ಯಮಾಣಾನಿ, ತಾನಿ ಕರಿಷ್ಯಮಾಣಾನಿ ।

**ಶುದ್ಧಬುದ್ಧಿಃ—** ಶುದ್ಧಾ ಬುದ್ಧಿಃ ಯಸ್ಯ ಸಃ ಶುದ್ಧಬುದ್ಧಿಃ ।

**ಕ್ರಿಯಾಪದ—** ಸಂಕಲ್ಪಯಾಂ ಇತ್ಯುಪಪದಪೂರ್ವಕಾತ್ ಅಸ ಭುವಿ ಇತ್ಯಸ್ಮಾದ್ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಸಂಕಲ್ಪಯಾಮಾಸ' ಇತಿ ರೂಪಮ್ ।

| | | |
|---|---|---|
| ಸಂಕಲ್ಪಯಾಮಾಸ | ಸಂಕಲ್ಪಯಾಮಾಸತುಃ | ಸಂಕಲ್ಪಯಾಮಾಸುಃ, |
| ಸಂಕಲ್ಪಯಾಮಾಸಿಥ | ಸಂಕಲ್ಪಯಾಮಾಸಥುಃ | ಸಂಕಲ್ಪಯಾಮಾಸ, |
| ಸಂಕಲ್ಪಯಾಮಾಸ | ಸಂಕಲ್ಪಯಾಮಾಸಿವ | ಸಂಕಲ್ಪಯಾಮಾಸಿಮ ॥ |

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

### ಅಸುರ ಸಂಹಾರ - ದ್ರೌಪದೀಸ್ವೀಕಾರ

**ವಿಷ್ಣೋಃ ಪದಶ್ರಿದ್ಬಕಸನ್ನಿರಾಸೀ**
**ಕ್ಷಿಪ್ತಾನ್ಯಪಕ್ಷಿಪ್ರಕರಃ ಸುಪಕ್ಷಃ ।**
**ಸಸೋದರೋಽಥಾದಿತ ರಾಜಹಂಸಃ**
**ಸ ರಾಜಹಂಸೀಮಿವ ರಾಜಕನ್ಯಾಮ್ ॥ 34 ॥**

**ಪದಚ್ಛೇದ—** ವಿಷ್ಣೋಃ, ಪದಶ್ರಿತ್, ಬಕಸನ್ನಿರಾಸೀ, ಕ್ಷಿಪ್ತಾನ್ಯಪಕ್ಷಿಪ್ರಕರಃ, ಸುಪಕ್ಷಃ, ಸಸೋದರಃ, ಅಥ, ಆದಿತ, ರಾಜಹಂಸಃ, ಸಃ, ರಾಜಹಂಸೀಂ, ಇವ, ರಾಜಕನ್ಯಾಮ್ ।

**ಅನ್ವಯ—** ಅಥ ಸಸೋದರಃ ಸಃ ವಿಷ್ಣೋಃ ಪದಶ್ರಿತ್, ಬಕಸನ್ನಿರಾಸೀ ಕ್ಷಿಪ್ತಾನ್ಯಪಕ್ಷಿಪ್ರಕರಃ ಸುಪಕ್ಷಃ ರಾಜಹಂಸಃ ರಾಜಹಂಸೀಂ ಇವ ರಾಜಕನ್ಯಾಂ ಆದಿತ ।

**ಅನ್ವಯಾರ್ಥ—**

**ಅಥ** = ಶ್ರೀವೇದವ್ಯಾಸರ ದರ್ಶನಾನಂತರದಲ್ಲಿ

**ಸಸೋದರಃ** = ತನ್ನ ಅಣ್ಣನಾದ ಧರ್ಮರಾಜನಿಂದಲೂ ತಮ್ಮಂದಿರಾದ ಅರ್ಜುನ, ನಕುಲ, ಸಹದೇವ-ರಿಂದಲೂ ಸಹಿತರಾದ

**ಸಃ** = ಆ ಭೀಮಸೇನದೇವರು

**ರಾಜಕನ್ಯಾಂ** = ದ್ರುಪದರಾಜನ ಮಗಳಾದ ದ್ರೌಪದೀದೇವಿಯನ್ನು

**ಆದಿತ** = ಹೆಂಡತಿಯಾಗುವಂತೆ ಸ್ವೀಕರಿಸಿದರು.

ಇನ್ನು ಮುಂದೆ ರಾಜಹಂಸಪರವಾಗಿಯೂ ಶ್ರೀಭೀಮಸೇನದೇವರ ಪರವಾಗಿಯೂ ಎರಡೆರಡು ಅರ್ಥಗಳಿವೆ.

ಅವು ಹೀಗೆ—

**ವಿಷ್ಣೋಃ** = ಶ್ರೀಹರಿಯ

**ಪದಶ್ರಿತ್** = ಪಾದಗಳನ್ನು ಆಶ್ರಯಿಸಿರುವವರು ಶ್ರೀಭೀಮಸೇನದೇವರು.

**ಬಕಸನ್ನಿರಾಸೀ** = ಬಕ ಎಂಬ ರಾಕ್ಷಸನನ್ನು ಕೊಂದವರೂ ಅವರೇ.

**ಕ್ಷಿಪ್ತಾನ್ಯಪಕ್ಷಿಪ್ರಕರಃ** = ತನ್ನ ವಿಷ್ಣುಸರ್ವೋತ್ತಮತ್ವ ಸಿದ್ಧಾಂತಕ್ಕೆ ವಿರುದ್ಧವಾದ ಸಿದ್ಧಾಂತವುಳ್ಳ ಜರಾಸಂಧ ಮುಂತಾದವರನ್ನು ಎದುರುಸಿದವರು ಶ್ರೀಭೀಮಸೇನದೇವರು.

ಮಂಗಲಕರವಾದ ಶ್ರೀವಿಷ್ಣುಸರ್ವೋತ್ತಮತ್ವ ಸಿದ್ಧಾಂತವುಳ್ಳವರು ಶ್ರೀಭೀಮಸೇನದೇವರು. ಇಂತಹ ಶ್ರೀಭೀಮ-ಸೇನದೇವರು ಅಣ್ಣತಮ್ಮಂದಿರಿಂದ ಸಹಿತರಾಗಿ ದ್ರುಪದರಾಜನ ಕುಮಾರಿಯಾದ ದ್ರೌಪದೀದೇವಿಯನ್ನು ವಿವಾಹ ಮಾಡಿಕೊಂಡರು. ರಾಜಹಂಸವು ರಾಜಹಂಸಿಯನ್ನು ವಿವಾಹ ಮಾಡಿಕೊಂಡಂತೆ ಇದು ಇತ್ತು. ಅದು ಹೀಗೆ—

**ವಿಷ್ಣೋಃ ಪದಶ್ರಿತ್** = ರಾಜಹಂಸವು ಆಕಾಶದಲ್ಲಿ ಹಾರುತ್ತಿರುತ್ತದೆ. ಬಕ ಎಂಬ ಪಕ್ಷಿಯನ್ನು ನಿರಾಕರಿಸುತ್ತದೆ. ತನಗಿಂತ ಭಿನ್ನವಾದ ಕಾಗೆ, ಗೂಬೆ ಮುಂತಾದ ಪಕ್ಷಿಗಳ ಗುಂಪನ್ನು ಧಿಕ್ಕರಿಸುತ್ತದೆ. ಸುಂದರವಾದ ಎರಡು ರೆಕ್ಕೆಗಳಿಂದ ಶೋಭಿಸುತ್ತದೆ.

**ತಾತ್ಪರ್ಯ—** ಶ್ರೀಭೀಮಸೇನದೇವರು ಶ್ರೀವೇದವ್ಯಾಸದೇವರನ್ನು ನೋಡಿದರು. ಅನಂತರದಲ್ಲಿ ವಿಷ್ಣುವಿನ ಪಾದಗಳನ್ನು ಯಾವಾಗಲೂ ಬಿಡಲಿಲ್ಲ. ಬಕ ಎಂಬ ರಾಕ್ಷಸನ ತೊಂದರೆಗಳಿಂದ ಸಜ್ಜನರನ್ನು ರಕ್ಷಿಸಿದರು. ಶ್ರೀವಿಷ್ಣು ಸರ್ವೋತ್ತಮತ್ವ ಸಿದ್ಧಾತಂತವನ್ನು ಸ್ಥಾಪಿಸುತ್ತಾ ಆ ಸಿದ್ಧಾಂತಕ್ಕೆ ವಿರುದ್ಧವಾದ ಸಿದ್ಧಾಂತವನ್ನು ಸ್ಥಾಪಿಸುತ್ತಿರುವ ಜರಾಸಂಧ ಮುಂತಾದವರನ್ನು ಸಂಹರಿಸಿದರು. ವಿಷ್ಣುಸರ್ವೋತ್ತಮತ್ವ ಸಿದ್ಧಾಂತ ಎಂಬ ಪರಮಮಂಗಲವಾದ ಸಿದ್ಧಾಂತವನ್ನು ತನ್ನ ಮನಸ್ಸಿನಲ್ಲಿ ಇಟ್ಟುಕೊಂಡಿದ್ದರು. ಅಂತಹ ರಾಜಹಂಸವು ಆಕಾಶದಲ್ಲಿ ಸಂಚರಿಸುತ್ತಾ ಬಕಪಕ್ಷಿಯನ್ನು ವರಿಸುವುದೇ ? ಕಾಗೆ ಗೂಬೆ ಮುಂತಾದ ಇತರ ಪಕ್ಷಿಗಳನ್ನು ವರಿಸುವುದೇ ? ರಾಜಹಂಸವು ರಾಜಹಂಸಿಯನ್ನಲ್ಲವೇ ವರಿಸುವುದು. ಅದರಂತೆ ಶ್ರೀಭೀಮಸೇನದೇವರು ದ್ರೌಪದೀದೇವಿಯರನ್ನು ಅಣ್ಣತಮ್ಮಂದಿರೊಡನೆ ವರಿಸಿದರು.

**ವಿಗ್ರಹ—**

**ಪದಶ್ರಿತ್—** ಪದಂ ಶ್ರಯತೇ ಇತಿ ಪದಶ್ರಿತ್ ।

**ಬಕಸನ್ನಿರಾಸೀ—** ಸಮ್ಯಕ್ ನಿರಸನಂ ಶೀಲಂ ಅಸ್ಯೇತಿ ಸನ್ನಿರಾಸೀ, ಬಕಸ್ಯ ಸನ್ನಿರಾಸೀ ಬಕಸನ್ನಿರಾಸೀ । ಅಥವಾ— ಬಕಸ್ಯ ಸನ್ನಿರಾಸಃ ನಿರಾಕರಣಂ ಅಸ್ಯ ಅಸ್ತಿ ಇತಿ ಬಕಸನ್ನಿರಾಸೀ ।

**ಕ್ಷಿಪ್ತಾನ್ಯಪಕ್ಷಿಪ್ರಕರಃ—** ಅನ್ಯಃ ಪಕ್ಷಃ (ಸ್ವಸಿದ್ಧಾಂತವಿರುದ್ಧಃ) ಏಷಾಂ ಅಸ್ತಿ ಇತಿ ಅನ್ಯಪಕ್ಷಿಣಃ, ಅನ್ಯಪಕ್ಷಿಣಾಂ ಪ್ರಕರಃ ಅನ್ಯಪಕ್ಷಿಪ್ರಕರಃ, ಕ್ಷಿಪ್ತಃ ಅನ್ಯಪಕ್ಷಿಪ್ರಕರಃ ಯೇನ ಸಃ ಕ್ಷಿಪ್ತಾನ್ಯಪಕ್ಷಿಪ್ರಕರಃ । ಅಥವಾ— ಅನ್ಯೇ ಚ ತೇ ಪಕ್ಷಿಣಶ್ಚ ಅನ್ಯಪಕ್ಷಿಣಃ, ಅನ್ಯಪಕ್ಷಿಣಾಂ ಪ್ರಕರಃ ಅನ್ಯಪಕ್ಷಿಪ್ರಕರಃ, ಕ್ಷಿಪ್ತಃ ಅನ್ಯಪಕ್ಷಿಪ್ರಕರಃ ಯೇನ ಸಃ ಕ್ಷಿಪ್ತಾನ್ಯಪಕ್ಷಿಪ್ರಕರಃ ।

**ಸುಪಕ್ಷಃ—** ಶೋಭನಃ ಪಕ್ಷಃ ಯಸ್ಯ ಸಃ ಸುಪಕ್ಷಃ । ಅಥವಾ— ಶೋಭನೌ ಪಕ್ಷೌ ಯಸ್ಯ ಸಃ ಸುಪಕ್ಷಃ ।

**ಸಸೋದರಃ—** ಸಮಾನಂ ಉದರಂ ಯೇಷಾಂ ತೇ ಸೋದರಾಃ, ಸೋದರ್ಯೈಃ ಸಹ ವರ್ತತೇ ಇತಿ ಸಸೋದರಃ ।

**ರಾಜಕನ್ಯಾಂ—** ರಾಜ್ಞಃ ಕನ್ಯಾ ರಾಜಕನ್ಯಾ, ತಾಂ ರಾಜಕನ್ಯಾಂ ।

**ರಾಜಹಂಸಃ—** ಹಂಸಾನಾಂ ರಾಜಾ ರಾಜಹಂಸಃ ।

**ಕ್ರಿಯಾಪದ—** ಆದಿತ- ಆಙ್ ಇತ್ಯುಪಸರ್ಗಪೂರ್ವಕ ಡು ದಾಞ್ ದಾನೇ ಇತ್ಯಸ್ಮಾತ್ ದಾನಾರ್ಥಕಾತ್ ದಾಞ್ ಧಾತೋಃ ಲುಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಆದಿತ' ಇತಿ ರೂಪಮ್ ।

ಆದಿತ ಆದಿಷಾತಾಂ ಆದಿಷತ, ಆದಿಥಾಃ ಆದಿಷಾಥಾಂ ಆದಿಢ್ವಂ, ಆದಿಷಿ ಆದಿಷ್ವಹಿ ಆದಿಷ್ಮಹಿ ॥

**ಅಲಂಕಾರ—** ಉಪಮಾ ಸಮಾಲಂಕಾರ ಸಂಕೀರ್ಣಃ.

★ ★ ★

ಭೀಮಸೇನದೇವರ ಶ್ರೀಕೃಷ್ಣಸಂದರ್ಶನ

**ಇಂದೀವರಶ್ರೀಜಯಿಸುಂದರಾಭಂ**
**ಸ್ಮೇರಾನನೇಂದುಂ ದಯಿತಂ ಮುಕುಂದಮ್ ।**
**ಸ್ವಮಾತುಲೇಯಂ ಕಮಲಾಯತಾಕ್ಷಂ**
**ಸಮಭ್ಯನಂದತ್ಸುಚಿರಾಯ ಭೀಮಃ ॥ 35 ॥**

**ಪದಚ್ಛೇದ—** ಇಂದೀವರಶ್ರೀಜಯಿಸುಂದರಾಭಂ, ಸ್ಮೇರಾನನೇಂದುಂ, ದಯಿತಂ, ಮುಕುಂದಂ, ಸ್ವ-ಮಾತುಲೇಯಂ, ಕಮಲಾಯತಾಕ್ಷಂ, ಸಮಭ್ಯನಂದತ್, ಸುಚಿರಾಯ, ಭೀಮಃ ।

**ಅನ್ವಯ—** ಭೀಮಃ ಇಂದೀವರಶ್ರೀಜಯಿಸುಂದರಾಭಂ ಸ್ಮೇರಾನನೇಂದುಂ ದಯಿತಂ ಸ್ವಮಾತುಲೇಯಂ ಕಮಲಾಯತಾಕ್ಷಂ ಮುಕುಂದಂ ಸುಚಿರಾಯ (ದೃಷ್ಟ್ವಾ) ಸಮಭ್ಯನಂದತ್ ।

**ಅನ್ವಯಾರ್ಥ—**

**ಭೀಮಃ** = ಶ್ರೀಭೀಮಸೇನದೇವರು

**ಇಂದೀವರಶ್ರೀಜಯಿಸುಂದರಾಭಂ**= ಕನ್ನೈದಿಲೆಯ ಕಾಂತಿಯನ್ನು ಜಯಿಸುವ ಸುಂದರವಾದ ಕಾಂತಿಯನ್ನು ಧರಿಸಿರುವವನಾದ

**ಸ್ಮೇರಾನನೇಂದುಂ** = ಮಂದಹಾಸದಿಂದ ಯುಕ್ತವಾದ ಮುಖವೆಂಬ ಚಂದ್ರನಿಂದ ಯುಕ್ತನಾಗಿರುವ

**ದಯಿತಂ, ಸ್ವಮಾತುಲೇಯಂ** = ತನಗೆ ಪರಮ ಪ್ರಿಯನಾಗಿರುವ, ತನ್ನ ಸೋದರಮಾವನ ಮಗನಾಗಿರುವ

**ಕಮಲಾಯತಾಕ್ಷಂ, ಮುಕುಂದಂ** = ಕಮಲದ ದಳದಂತೆ ವಿಶಾಲವಾದ ಕಣ್ಣುಗಳಿಂದ ಯುಕ್ತನಾದ, ಶ್ರೀಕೃಷ್ಣದೇವನನ್ನು

**ಸುಚಿರಾಯ ( ದೃಷ್ಟ್ವಾ )** = ಬಹುಕಾಲದ ಮೇಲೆ ಅಂದರೆ ದ್ರೌಪದೀಸ್ವಯಂವರಕಾಲದಲ್ಲಿ ಶ್ರೀಕೃಷ್ಣದೇವನನ್ನು ನೋಡಿ

**ಸಮಭ್ಯನಂದತ್** = ಸಂತೋಷಿಸಿದನು.

**ತಾತ್ಪರ್ಯ—** ಶ್ರೀಭೀಮಸೇನದೇವರು ಬಹುಕಾಲದ ಮೇಲೆ ಶ್ರೀಕೃಷ್ಣದೇವರನ್ನು ನೋಡಿದರು. ಆ ಶ್ರೀಕೃಷ್ಣದೇವನ ಕಣ್ಣುಗಳು ಕನ್ನೈದಿಲೆಯ ದಳಗಳನ್ನು ಸೌಂದರ್ಯದಲ್ಲಿ ಜಯಿಸುವ ಸುಂದರವಾದ ಕಾಂತಿಯಿಂದ ಯುಕ್ತವಾಗಿದ್ದವು. ಮುಗುಳುನಗೆಯಿಂದ ಕೂಡಿದ್ದನು. ಆ ಮುಖವು ಚಂದ್ರನಂತೆ ಹೊಳೆಯುತ್ತಿತ್ತು. ಇಂತಹ ಶ್ರೀಕೃಷ್ಣದೇವನು ತನಗೆ ಅತ್ಯಂತ ಪ್ರಿಯನಾಗಿದ್ದನು. ಮೋಕ್ಷಪ್ರದನಾಗಿದ್ದನು. ತನ್ನ ತಾಯಿಯಾದ ಕುಂತೀದೇವಿಗೆ ಅಣ್ಣನಾಗಿರುವ ವಸುದೇವನ ಮಗ-ನಾಗಿದ್ದನು. ಕಮಲದಳದಂತೆ ವಿಶಾಲವಾದ ನೇತ್ರವುಳ್ಳವನಾಗಿದ್ದನು. ಅವನನ್ನು ಬಹುಕಾಲದ ಮೇಲೆ ನೋಡಿದವರಾಗಿ ಸಂತುಷ್ಟರಾದರು.

**ವಿಗ್ರಹ—**

**ಇಂದೀವರಶ್ರೀಜಯಿಸುಂದರಾಭಂ—** ಇಂದೀವರಸ್ಯ ಶ್ರೀಃ ಇಂದೀವರಶ್ರೀಃ, ಇಂದೀವರಶ್ರಿಯಃ ಜಯತಿ ತಾಚ್ಛೀಲ್ಯೇನೇತಿ ಇಂದೀವರಶ್ರೀಜಯಿನೀ, ಇಂದೀವರಶ್ರೀಜಯಿನೀ ಸುಂದರಾ ಆಭಾ ಯಸ್ಯ ಸಃ ಇಂದೀವರಶ್ರೀಜಯಿಸಂದರಾಭಃ, ತಂ ಇಂದೀವರಶ್ರೀಜಯಿಸುಂದರಾಭಂ ।

**ಸ್ಮೇರಾನನೇಂದುಂ—** ಆನನಂ ಇಂದುಃ ಇವ ಆನನೇಂದುಃ, ಸ್ಮೇರಶ್ಚಾಸೌ ಆನನೇಂದುಶ್ಚ ಸ್ಮೇರಾನನೇಂದುಃ, ತಂ ಸ್ಮೇರಾನನೇಂದುಂ ।

**ಮುಕುಂದಂ—** ಮುಕುಂ (ಮೋಕ್ಷಂ) ದದಾತಿ ಇತಿ ಮುಕುಂದಃ, ತಂ ಮುಕುಂದಂ ।

**ಸ್ವಮಾತುಲೇಯಂ—** ಸ್ವಸ್ಯ ಮಾತುಲಃ ಸ್ವಮಾತುಲಃ, ಸ್ವಮಾತುಲಸ್ಯ ಅಪತ್ಯಂ ಪುಮಾನ್ ಸ್ವಮಾತುಲೇಯಃ, ತಂ ಸ್ವಮಾತುಲೇಯಂ ।

**ಕಮಲಾಯತಾಕ್ಷಂ—** ಕಮಲೇ ಇವ ಆಯತೇ ಅಕ್ಷಿಣೀ ಯಸ್ಯ ಸಃ ಕಮಲಾಯತಾಕ್ಷಃ ತಂ ಕಮಲಾಯತಾಕ್ಷಂ

**ಕ್ರಿಯಾಪದ—** **ಸಮಭ್ಯನಂದತ್**- ಸಮ್ ಅಭಿ ಇತ್ಯುಪಸರ್ಗದ್ವಯಪೂರ್ವಕಾತ್ ಟು ನದಿ ಸಮೃದ್ಧೌ ಇತ್ಯರ್ಥಕಾತ್ ನದಿ ಧಾತೋಃ ಪರಸ್ಮೈಪದಿನಃ ಲಙ್ ಪ್ರಥಮಪುರುಷೇ ಏಕವಚನೇ 'ಸಮಭ್ಯನಂದತ್' ಇತಿ ರೂಪಮ್ ।

ಸಮಭ್ಯನಂದತ್ ಸಮಭ್ಯನಂದತಾಂ ಸಮಭ್ಯನಂದನ್, ಸಮಭ್ಯನಂದಃ ಸಮಭ್ಯನಂದತಂ ಸಮಭ್ಯನಂದತ, ಸಮಭ್ಯನಂದಂ ಸಮಭ್ಯನಂದಾವ ಸಮಭ್ಯನಂದಾಮ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

**ಜರಾಸಂಧವಧೆ - ರಾಜಸೂಯಯಾಗ**

**ಮಹಾಗದಂ ಚಂಡರಣಂ ಪೃಥಿವ್ಯಾಂ**
**ಬಾರ್ಹದ್ರಥಂ ಮಂಕ್ಷು ನಿರಸ್ಯ ವೀರಃ ।**
**ರಾಜಾನಮತ್ಯುಜ್ಜ್ವಲರಾಜಸೂಯಂ**
**ಚಕಾರ ಗೋವಿಂದಸುರೇಂದ್ರಜಾಭ್ಯಾಮ್ ॥ 36 ॥**

**ಪದಚ್ಛೇದ—** ಮಹಾಗದಂ, ಚಂಡರಣಂ, ಪೃಥಿವ್ಯಾಂ, ಬಾರ್ಹದ್ರಥಂ, ಮಂಕ್ಷು, ನಿರಸ್ಯ, ವೀರಃ, ರಾಜಾನಂ, ಅತ್ಯುಜ್ಜ್ವಲರಾಜಸೂಯಂ ಚಕಾರ, ಗೋವಿಂದಸುರೇಂದ್ರಜಾಭ್ಯಾಮ್ ।

**ಅನ್ವಯ—** ಮಹಾಗದಂ ಪೃಥಿವ್ಯಾಂ ಚಂಡರಣಂ ಬಾರ್ಹದ್ರಥಂ ಮಂಕ್ಷು ನಿರಸ್ಯ, ರಾಜಾನಂ ಅತ್ಯುಜ್ಜ್ವಲರಾಜಸೂಯಂ ವೀರಃ ಗೋವಿಂದಸುರೇಂದ್ರಜಾಭ್ಯಾಂ ಚಕಾರ ।

**ಅನ್ವಯಾರ್ಥ—**

**ವೀರಃ** = ಪರಾಕ್ರಮಶಾಲಿಗಳಾದ ಭೀಮಸೇನದೇವರು

**ಮಹಾಗದಂ** = ಅತ್ಯಂತ ದೊಡ್ಡದಾಗಿರುವ ಗದೆಯುಳ್ಳವನೂ

**ಪೃಥಿವ್ಯಾಂ** = ಭೂಮಿಯಲ್ಲಿ

**ಚಂಡರಣಂ** = ತೀಕ್ಷ್ಣವಾದ ಯುದ್ಧವನ್ನು ಮಾಡುತ್ತಿರುವವನೂ ಆಗಿರುವ

**ಬಾರ್ಹದ್ರಥಂ** = ಬೃಹದ್ರಥ ಎಂಬ ರಾಜನ ಮಗನಾಗಿರುವ ಜರಾಸಂಧನನ್ನು

**ಮಂಕ್ಷು** = ಬಹುಬೇಗನೆ

**ನಿರಸ್ಯ** = ಕೊಂದವರಾಗಿ

**ಮಹಾಗದಂ** = ಭೇದನ ಮಾಡುವುದಕ್ಕೆ ಅಶಕ್ಯವಾದ ಪರ್ವತಗಳನ್ನೂ ಮರಗಳನ್ನೂ ಭೇದವನ್ನು ಮಾಡುವ ಶಕ್ತಿಯುಳ್ಳವನಾದ

**ಬಾರ್ಹದ್ರಥಂ ನಿರಸ್ಯ** = ಮಹಾರಥಿಕರಿಗೆ ಯಜಮಾನನಾಗಿರುವ ಜರಾಸಂಧನನ್ನು ಕೊಂದು,

**ಚಂಡರಣಂ** = ಉಗ್ರವಾಗಿ ಯುದ್ಧವನ್ನು ಮಾಡುವ ಕೀಚಕ ಮುಂತಾದ ನೀಚರನ್ನು

ನಿರಸ್ಯ = ನೀಚರ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿರುವಾಗ ಉಗ್ರಸ್ವಭಾವವುಳ್ಳ ಕೀಚಕ ಮುಂತಾದವರನ್ನು ಜಯಿಸಿ

**ಗೋವಿಂದಸುರೇಂದ್ರಜಾಭ್ಯಾಂ** = ಗೋವಿಂದನಿಂದಲೂ ದೇವೇಂದ್ರನ ಮಗನಾಗಿರುವ ಅರ್ಜುನನಿಂದಲೂ ಸಹಿತನಾಗಿ

**ರಾಜಾನಂ** = ಧರ್ಮರಾಜನನ್ನು

**ಅತ್ಯುಜ್ಜ್ವಲರಾಜಸೂಯಂ** = ಅತ್ಯಂತವಾಗಿ ಶೋಭಿಸುತ್ತಿರುವ ರಾಜಸೂಯಯಾಗವನ್ನುಳ್ಳವನನ್ನಾಗಿ

**ಚಕಾರ** = ಮಾಡಿದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ಧರ್ಮರಾಜನಿಂದ ಯಾಗಗಳಲ್ಲಿ ಅತ್ಯಂತವಾಗಿ ಶೋಭಿಸುತ್ತಿರುವ ರಾಜಸೂಯಯಾಗವನ್ನು ಮಾಡಿಸಿರುವರು. ಆ ಯಾಗವನ್ನು ಮಾಡುವುದಕ್ಕಿಂತ ಪೂರ್ವದಲ್ಲಿ ಪ್ರಪಂಚದಲ್ಲಿರುವ ಯುದ್ಧಗಳಲ್ಲಿ ಅತ್ಯಂತ ನಿಪುಣನಾಗಿರುವ ಸರ್ವ ರಾಜರುಗಳನ್ನೂ ಧರ್ಮರಾಜನು ಜಯಿಸಬೇಕು. ಅಥವಾ ಕೊಲ್ಲಬೇಕು. ಜರಾಸಂಧನು ಆ ಕಾಲದಲ್ಲಿ ಘೋರವಾದ ಯುದ್ಧಗಳನ್ನು ಮಾಡುತ್ತಿದ್ದನು. ಅತ್ಯಂತವಾಗಿ ದೊಡ್ಡದಾಗಿರುವ ಗದಾಯುಧವು ಅವನಲ್ಲಿತ್ತು. ಆ ಗದಾಯುಧದಲ್ಲಿಯೂ ಅವನು ನಿಪುಣನಾಗಿದ್ದನು. ದೊಡ್ಡ ಪರ್ವತಗಳನ್ನೂ ಮರಗಳನ್ನೂ ಆ ಜರಾಸಂಧನು ಪುಡಿಪುಡಿಯಾಗುವಂತೆ ಮಾಡುತ್ತಿದ್ದನು. ಭೂಮಂಡಲದಲ್ಲಿ ಅವನಿಗೆ ಸಮಾನನಾದವನು ಯಾರೂ ಇರಲಿಲ್ಲ. ಅಂತಹ ಜರಾಸಂಧನನ್ನು ಬಹುಬೇಗನೆ ಕೊಂದರು. ಅವನ ಮಿತ್ರರಾದ ಕೀಚಕ ಮುಂತಾದ ದುಷ್ಟರುಗಳು ಆಗ ಇದ್ದರು. ಆ ಕೀಚಕ ಮುಂತಾದವರನ್ನು ಶ್ರೀಭೀಮಸೇನದೇವರು ಜಯಿಸಿದರು. ಶ್ರೀಕೃಷ್ಣದೇವನ ಪೂರ್ಣಾನುಗ್ರಹದಿಂದಲೂ ತಮ್ಮನೂ ದೇವೇಂದ್ರನ ಮಗನೂ ಆಗಿರುವ ಅರ್ಜುನನ ಸಹಾಯದಿಂದಲೂ ಜರಾಸಂಧನನ್ನು ಕೊಂದು ಧರ್ಮರಾಜನಿಂದ ರಾಜಸೂಯಯಾಗವನ್ನು ಮಾಡಿಸಿದರು.

**ವಿಗ್ರಹ—**

**ಮಹಾಗದಂ—** ಮಹತೀ ಗದಾ ಯಸ್ಯ ಸಃ ಮಹಾಗದಃ, ತಂ ಮಹಾಗದಂ । ಅಥವಾ— ಮಹಾಂತಶ್ಚ ತಾಃ ಅಗಾಃ ಚ ಮಹಾಗಾಃ, ಮಹಾಗಾನ್ ದ್ಯತಿ ಇತಿ ಮಹಾಗದಃ, ತಂ ಮಹಾಗದಂ ।

**ಚಂಡರಣಂ—** ಚಂಡಃ ರಣಃ ಯಸ್ಯ ಸಃ ಚಂಡರಣಃ, ತಂ ಚಂಡರಣಂ ।

**ಬಾರ್ಹದ್ರಥಂ—** ಬೃಹದ್ರಥಸ್ಯ ಅಪತ್ಯಂ ಪುಮಾನ್ ಬಾರ್ಹದ್ರಥಃ, ತಂ ಬಾರ್ಹದ್ರಥಂ ।

**ಅತ್ಯುಜ್ಜ್ವಲರಾಜಸೂಯಂ—** ಅತ್ಯಂತಂ ಉಜ್ಜ್ವಲಃ ಅತ್ಯುಜ್ಜ್ವಲಃ, ಅತ್ಯುಜ್ಜ್ವಲಃ ರಾಜಸೂಯಃ ಯಸ್ಯ ಸಃ ಅತ್ಯುಜ್ಜ್ವಲರಾಜಸೂಯಃ, ತಂ ಅತ್ಯುಜ್ಜ್ವಲರಾಜಸೂಯಂ ।

**ಗೋವಿಂದಸುರೇಂದ್ರಜಾಭ್ಯಾಂ—** ಸುರಾಣಾಂ ಇಂದ್ರಃ ಸುರೇಂದ್ರಃ, ಸುರೇಂದ್ರಾತ್ ಜಾಯತೇ ಇತಿ ಸುರೇಂದ್ರಜಃ, ಗೋವಿಂದಶ್ಚ ಸುರೇಂದ್ರಜಶ್ಚ ಗೋವಿಂದಸುರೇಂದ್ರಜೌ, ತಾಭ್ಯಾಂ ಗೋವಿಂದ-ಸುರೇಂದ್ರಜಾಭ್ಯಾಂ ।

**ಕ್ರಿಯಾಪದ—** **ಚಕಾರ-** ಡು ಕೃಞ್ ಕರಣೇ ಇತ್ಯಸ್ಮಾತ್ ಕರಣಾರ್ಥಕಾತ್ ಕೃಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಚಕಾರ' ಇತಿ ರೂಪಮ್ ।

ಚಕಾರ ಚಕ್ರತುಃ ಚಕ್ರುಃ, ಚಕರ್ಥ ಚಕ್ರಥುಃ ಚಕ್ರ, ಚಕಾರ ಚಕರ, ಚಕೃವ ಚಕೃಮ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

**ಕೆದಕಿದ ದುಃಶಾಸನ - ಕೆರಳಿದ ಭೀಮಸೇನ**

**ದುಃಶಾಸನೇನಾಽಽಕುಲಿತಾನ್ ಪ್ರಿಯಾಯಾಃ**
**ಸೂಕ್ಷ್ಮಾನರಾಲಾನಸಿತಾಂಶ್ಚ ಕೇಶಾನ್ ।**
**ಜಿಘಾಂಸಯಾ ವೈರಿಜನಸ್ಯ ತೀಕ್ಷ್ಣಃ**
**ಸ ಕೃಷ್ಣಸರ್ಪಾನಿವ ಸಂಚಿಕಾಯ ॥ 37 ॥**

**ಪದಚ್ಛೇದ—** ದುಃಶಾಸನೇನ, ಆಕುಲಿತಾನ್ ಪ್ರಿಯಾಯಾಃ, ಸೂಕ್ಷ್ಮಾನ್, ಅರಾಲಾನ್, ಅಸಿತಾನ್, ಚ, ಕೇಶಾನ್, ಜಿಘಾಂಸಯಾ, ವೈರಿಜನಸ್ಯ, ತೀಕ್ಷ್ಣಃ, ಸಃ, ಕೃಷ್ಣಸರ್ಪಾನ್, ಇವ, ಸಂಚಿಕಾಯ ।

**ಅನ್ವಯ—** ಸಃ ದುಃಶಾಸನೇನ ಆಕುಲಿತಾನ್ ಸೂಕ್ಷ್ಮಾನ್ ಅರಾಲಾನ್ ಅಸಿತಾನ್ ಚ ಪ್ರಿಯಾಯಾಃ ಕೇಶಾನ್ ವೈರಿಜನಸ್ಯ ಜಿಘಾಂಸಯಾ ಸಂಚಿಕಾಯ, ತೀಕ್ಷ್ಣಃ ಕೃಷ್ಣಸರ್ಪಾನ್ ಇವ ದುಃಶಾಸನೇನ ಆಕುಲಿತಾನ್ ಕೃಷ್ಣಸರ್ಪಾನ್ ವೈರಿಜನಸ್ಯ ಜಿಘಾಂಸಯಾ ಸಂಚಿಕಾಯ ।

**ಅನ್ವಯಾರ್ಥ—**

**ಸಃ** = ಆ ಶ್ರೀಭೀಮಸೇನದೇವರು
**ದುಃಶಾಸನೇನ** = ದುರ್ಯೋಧನನ ತಮ್ಮನಾಗಿರುವ ದುಃಶಾಸನನಿಂದ
**ಆಕುಲಿತಾನ್** = ಕೆದರಲ್ಪಟ್ಟ,
**ಸೂಕ್ಷ್ಮಾನ್ ಅರಾಲಾನ್** = ಮೆತ್ತಗಿರುವ, ವಕ್ರವಾಗಿರುವ,
**ಅಸಿತಾನ್ ಚ** = ಕಪ್ಪಾಗಿರುವ,
**ಪ್ರಿಯಾಯಾಃ, ಕೇಶಾನ್** = ತನ್ನ ಪತ್ನಿಯಾಗಿರುವ ದ್ರೌಪದೀದೇವಿಯ ತಲೆಯ ಕೂದಲುಗಳನ್ನೂ
**ವೈರಿಜನಸ್ಯ, ಜಿಘಾಂಸಯಾ** = ಶತ್ರುಜನರಾಗಿರುವ ದುರ್ಯೋಧನ ಮುಂತಾದವರನ್ನು, ಕೊಲ್ಲಬೇಕು ಎಂಬ ಇಚ್ಛೆಯಿಂದ
**ಸಂಚಿಕಾಯ** = ಒಟ್ಟುಗೂಡಿಸಿದರು. (ಇದು ಹೇಗಿತ್ತು ಎಂದರೆ)
**ತೀಕ್ಷ್ಣಃ** = ಕ್ರೂರಸ್ವಭಾವವುಳ್ಳ ಗರುಡಮಂತ್ರವನ್ನು ತಿಳಿದಿರುವ ಒಬ್ಬ ಪುರುಷನು ಮೆತ್ತಗೆಯೂ ವಕ್ರವಕ್ರ-ವಾಗಿಯೂ ಕಪ್ಪಾಗಿಯೂ ಇರುವ
**ಕೃಷ್ಣಸರ್ಪಾನ್ ಇವ ದುಃಶಾಸನೇನ** = ದುಷ್ಟವಾದ ಮಂತ್ರಗಳ ಮತ್ತು ಮೂಲಿಕೆಗಳ ತೀಕ್ಷ್ಣರೂಪವಾದ ಶಕ್ತಿಯಿಂದ ಯುಕ್ತನಾದ ಇನ್ನೊಬ್ಬ ಪುರುಷನಿಂದ,
**ಆಕುಲಿತಾನ್ ಕೃಷ್ಣಸರ್ಪಾನ್** = ಪಂಜರ ಮುಂತಾದ ಸ್ಥಾನಗಳಿಂದ ಓಡಿಸಲ್ಪಟ್ಟ, ಕೃಷ್ಣಸರ್ಪಗಳನ್ನು ಹೇಗೋ ಹಾಗೆ
**ವೈರಿಜನಸ್ಯ** = ತನ್ನ ವೈರಿಗಳಾದ ಜನರನ್ನು
**ಜಿಘಾಂಸಯಾ** = ಕೊಲ್ಲಬೇಕೆಂಬ ಆಸೆಯಿಂದ
**ಸಂಚಿಕಾಯ** = ತಮ್ಮ ಪಂಜರ ಮುಂತಾದ ಸ್ಥಳಗಳಲ್ಲಿ ಒಟ್ಟುಗೂಡಿಸಿದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ದುರ್ಯೋಧನನ ತಮ್ಮನಾಗಿರುವ ದುಃಶಾಸನ ಎಂಬ ಮಹಾಪಾಪಿಯಿಂದ ಕೆದರಲ್ಪಟ್ಟ ಮೆತ್ತಗೆಯೂ ಗುಂಗುರು ಆಕಾರವಾಗಿಯೂ ಕಪ್ಪಾಗಿಯೂ ಇರುವ ತನ್ನ ಪತ್ನಿಯಾದ ದ್ರೌಪದೀದೇವಿಯ ತಲೆಯಲ್ಲಿರುವ ಕೂದಲುಗಳನ್ನು, ಈ ಅಪರಾಧವನ್ನು ಮಾಡಿರುವ ದುರ್ಯೋಧನ ಮುಂತಾದವರನ್ನು ಕೊಲ್ಲಬೇಕೆಂದು ತೀರ್ಮಾನಿಸಿ, ಅದಕ್ಕಾಗಿ ದ್ರೌಪದೀದೇವಿಯರ ಆ ಕೂದಲುಗಳನ್ನು ಒಟ್ಟುಗೂಡಿಸಿದರು. ಇದು ಹೇಗೆ ಇತ್ತು ಎಂದು

ಕೇಳಬಹುದು. ಅದಕ್ಕೆ ಯೋಗ್ಯವಾದ ಉತ್ತರ— ತೀಕ್ಷ್ಣ ಸ್ವಭಾವವುಳ್ಳ ಗರುಡಮಂತ್ರದಲ್ಲಿ ನಿಪುಣನಾಗಿರುವ ಒಬ್ಬ ಪುರುಷನು ಸೂಕ್ಷ್ಮವಾಗಿಯೂ ಗುಂಗುರುಗುಂಗುರಾಗಿಯೂ ಕಪ್ಪಾಗಿಯೂ ಇರುವ ಕೃಷ್ಣಸರ್ಪಗಳನ್ನು ಗರುಡಮಂತ್ರ ಜಪದ ಸಿದ್ಧಿಯನ್ನು ಪಡೆದಿರುವ ಮತ್ತೊಬ್ಬ ಮಂತ್ರವಾದಿಯು ಕೃಷ್ಣಸರ್ಪಗಳನ್ನು ಓಡಿಸಿದಾಗ ಆ ಕೃಷ್ಣಸರ್ಪಗಳನ್ನು ಹೇಗೆ ಒಟ್ಟುಗೂಡಿಸುವನೋ ಹಾಗೆ ಇತ್ತು.

ಕೃಷ್ಣಸರ್ಪಗಳು ವೈರಿಗಳನ್ನು ಕೊಲ್ಲುವುದಕ್ಕೆ ನಿಮಿತ್ತವೆಂದೂ, ದುಃಶಾಸನನಿಂದ ಕೆದರಲ್ಪಟ್ಟ ತಲೆಗೂದಲುಗಳಿಗೆ ಅವರಿಂದ ಕೆದರಲ್ಪಟ್ಟ ಕೂದಲುಗಳು ನಿಮಿತ್ತವಾದವೆಂದೂ ಹೇಳಿದಂತಾಯಿತು.

**ವಿಗ್ರಹ—**

**ದುಃಶಾಸನೇನ—** ದುಷ್ಟಂ ಶಾಸನಂ ಯಸ್ಯ ಸಃ ದುಃಶಾಸನಃ, ತೇನ ದುಃಶಾಸನೇನ ।

**ಅಸಿತಾನ್—** ನ ಸಿತಾಃ ಅಸಿತಾಃ, ತಾನ್ ಅಸಿತಾನ್ ।

**ಜಿಘಾಂಸಯಾ—** ಹಂತುಂ ಇಚ್ಛಾ ಜಿಘಾಂಸಾ, ತಯಾ ಜಿಘಾಂಸಯಾ ।

**ವೈರಿಜನಸ್ಯ—** ವೈರೀ ಚಾಸೌ ಜನಶ್ಚ ವೈರಿಜನಃ ತಸ್ಯ ವೈರಿಜನಸ್ಯ ।

**ಕೃಷ್ಣಸರ್ಪಾನ್—** ಕೃಷ್ಣಾಶ್ಚ ತೇ ಸರ್ಪಾಶ್ಚ ಕೃಷ್ಣಸರ್ಪಾಃ, ತಾನ್ ಕೃಷ್ಣಸರ್ಪಾನ್ ।

**ಕ್ರಿಯಾಪದ— ಸಂಚಿಕಾಯ-** ಸಮ್ ಇತ್ಯುಪಸರ್ಗಪೂರ್ವಕಾತ್ ಚಿಞ್ ಚಯನೇ ಇತ್ಯಸ್ಮಾತ್ ಚಯನಾರ್ಥಕಾತ್ ಚಿಞ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಸಂಚಿಕಾಯ' ಇತಿ ರೂಪಮ್ ।

| | | |
|---|---|---|
| ಸಂಚಿಕಾಯ | ಸಂಚಿಕ್ಯತುಃ | ಸಂಚಿಕ್ಯುಃ |
| ಚಿಕಯಿಥ ಚಿಕೇಥ | ಚಿಕ್ಯಥುಃ | ಚಿಕ್ಯ |
| ಚಿಕಾಯ ಚಿಕಯ | ಚಿಕ್ಯಿವ | ಚಿಕ್ಯಿಮ ॥ |

**ಅಲಂಕಾರ—** ಉಪಮಾಲಂಕಾರ.

★ ★ ★

### ವೃಕೋದರಾಗ್ನಿಯಿಂದ ವೃಷ್ಣರ ನಾಶ

**ಜಾಜ್ವಲ್ಯಮಾನಸ್ಯ ವನೇ ವನೇಽಲಂ**
**ದಿಧಕ್ಷತಃ ಪಾರ್ಥಿವಸಾರ್ಥಮುಗ್ರಮ್ ।**
**ಸತ್ವಾನಿ ಪುಂಸಾಂ ಭಯದಾನಿ ನಾಶಂ**
**ವೃಕೋದರಾಗ್ನೇರ್ಗುರುತೇಜಸಾಽಽಪುಃ ॥ 38 ॥**

**ಪದಚ್ಛೇದ—** ಜಾಜ್ವಲ್ಯಮಾನಸ್ಯ, ವನೇ, ವನೇ, ಅಲಂ, ದಿಧಕ್ಷತಃ, ಪಾರ್ಥಿವಸಾರ್ಥಂ, ಉಗ್ರಂ, ಸತ್ವಾನಿ, ಪುಂಸಾಂ, ಭಯದಾನಿ, ನಾಶಂ, ವೃಕೋದರಾಗ್ನೇಃ, ಗುರುತೇಜಸಾ, ಆಪುಃ ।

**ಅನ್ವಯ—** ಪುಂಸಾಂ ಭಯದಾನಿ ಸತ್ವಾನಿ ವೃಕೋದರಾಗ್ನೇಃ ಗುರುತೇಜಸಾ ನಾಶಂ ಆಪುಃ । ವನೇ ವನೇ ಜಾಜ್ವಲ್ಯಮಾನಸ್ಯ ಉಗ್ರಂ ಪಾರ್ಥಿವಸಾರ್ಥಂ ಅಲಂ ದಿಧಕ್ಷತಃ, ಉಗ್ರಂ ಪಾರ್ಥಿವಸಾರ್ಥಂ ದಿಧಕ್ಷತಃ ವನೇ ಜಾಜ್ವಲ್ಯಮಾನಸ್ಯ (ದಾವಾಗ್ನೇಃ) ಗುರುತೇಜಸಾ ವಾ ಪುಂಸಾಂ ಭಯದಾನಿ ಸತ್ವಾನಿ (ಯಥಾ) ನಾಶಂ ಆಪುಃ (ತಥಾ) ।

**ಅನ್ವಯಾರ್ಥ—**

**ಪುಂಸಾಂ ಭಯದಾನಿ** = ಜನರುಗಳಿಗೆ ಹೆದರಿಕೆಯನ್ನುಂಟುಮಾಡುತ್ತಿರುವ

**ಸತ್ವಾನಿ** = ಕಿರ್ಮೀರ ಮುಂತಾದ ರಾಕ್ಷಸರುಗಳೂ, ಹುಲಿ ಮುಂತಾದ ಮೃಗಗಳೂ ಸಹ

**ವೃಕೋದರಾಗ್ನೇಃ** = ಶ್ರೀಭೀಮಸೇನದೇವರೆಂಬ ಬೆಂಕಿಯ

**ಗುರುತೇಜಸಾ** = ಅಧಿಕವಾದ ಸಾಮರ್ಥ್ಯದಿಂದ

**ನಾಶಂ ಆಪುಃ** = ಮರಣವನ್ನು ಹೊಂದಿದರು.

ವೃಕೋದರಾಗ್ನಿಗೆ ಉದಾಹರಣವನ್ನು ಕೊಡುತ್ತಿರುವುದು— ಅರಣ್ಯವಾಸದಲ್ಲಿ

**ವನೇ ವನೇ** = ಎಲ್ಲಾ ಕಾಡುಗಳಲ್ಲಿಯೂ

**ಜಾಜ್ವಲ್ಯಮಾನಸ್ಯ** = ಅಧಿಕವಾಗಿ ಜ್ವಲಿಸುತ್ತಿರುವ

**ಉಗ್ರಂ** = ಅತ್ಯಂತ ಭಯಂಕರವಾಗಿರುವ ಅಂದರೆ ಭೂಭಾರಭೂತವಾಗಿರುವ

**ಪಾರ್ಥಿವಸಾರ್ಥಂ** = ಎಲ್ಲಾ ರಾಜರುಗಳ ಸಮೂಹವನ್ನು

**ಅಲಂ** = ನಿಃಶೇಷವಾಗಿ

**ದಿಧಕ್ಷತಃ** = ಮುಂದೆ ಬರುವ ಯುದ್ಧದಲ್ಲಿ ನಾಶ ಮಾಡುವ ಆಸೆಯಿಂದ ಯುಕ್ತರಾಗಿರುವ ಮತ್ತು ಅದಕ್ಕಾಗಿ ಯುದ್ಧವನ್ನು ನಿರೀಕ್ಷಿಸುತ್ತಿರುವ ಹಾಗೆಯೇ

**ಉಗ್ರಂ** = ಮುಳ್ಳು ಮುಂತಾದವುಗಳಿಂದ ಯುಕ್ತವಾಗಿರುವುದರಿಂದ ಮುಟ್ಟುವುದಕ್ಕೆ ಕೂಡ ಅಶಕ್ಯವಾದ

**ಪಾರ್ಥಿವಸಾರ್ಥಂ** = ಪೃಥಿವಿಯಲ್ಲಿ ಹುಟ್ಟಿರುವ ಮರಗಳ ಸಮೂಹವನ್ನು

**ದಿಧಕ್ಷತಃ** = ಯಥೇಚ್ಛವಾಗಿ ಸುಡಬೇಕೆಂಬ ಆಸೆಯಿಂದ ಯುಕ್ತರಾದ

**ವನೇ ವನೇ** = ಎಲ್ಲಾ ಕಾಡುಗಳಲ್ಲಿಯೂ

**ಜಾಜ್ವಲ್ಯಮಾನಸ್ಯ** = ಅಧಿಕವಾಗಿ ಜ್ವಲಿಸುತ್ತಿರುವ

**(ದಾವಾಗ್ನೇಃ)** = ಕಾಡ್ಗಿಚ್ಚಿನ

**ಗುರುತೇಜಸಾ** = ಅಧಿಕವಾದ ಜ್ವಾಲೆಯಿಂದ

**ಪುಂಸಾಂ** = ಪುರುಷರುಗಳಿಗೆ

**ಭಯದಾನಿ** = ಹೆದರಿಕೆಯನ್ನುಂಟುಮಾಡುತ್ತಿರುವ

**ಸತ್ವಾನಿ** = ಕಿರ್ಮೀರ ಮುಂತಾದ ರಾಕ್ಷಸರುಗಳೂ ಸಿಂಹ, ಹುಲಿ ಮುಂತಾದ ಪ್ರಾಣಿಗಳೂ

**(ಯಥಾ) ನಾಶಂ ಆಪುಃ (ತಥಾ)** = ಹೇಗೆ ನಾಶವಾದವೋ ಹಾಗೆ ನಶಿಸುವರು ಎಂದು ತಿಳಿಯಬೇಕು.

**ತಾತ್ಪರ್ಯ**— ಶ್ರೀಭೀಮಸೇನದೇವರು ಕಾಡ್ಗಿಚ್ಚಿನಂತಿರುವರು. ಮುಂದೆ ಬರಲಿರುವ ಯುದ್ಧಗಳಲ್ಲಿ ಕಿರ್ಮೀರ ಮುಂತಾದ ರಾಕ್ಷಸರುಗಳನ್ನೂ ಸಿಂಹ ಹುಲಿ ಮುಂತಾದ ಕ್ರೂರಪ್ರಾಣಿಗಳನ್ನೂ ಸಂಹರಿಸಲಿರುವ, ಮುಳ್ಳುಗಳಿಂದ ಯುಕ್ತವಾಗಿರುವ ಮರಗಳಂತೆ, ಕಿರ್ಮೀರ ಮುಂತಾದ ರಾಕ್ಷಸರುಗಳೂ ಸಿಂಹ ಹುಲಿ ಮುಂತಾದ ಪ್ರಾಣಿಗಳೂ ಎಲ್ಲಾ ಜನರುಗಳಿಗೆ ಕ್ಲೇಶವನ್ನು ಕೊಡತಕ್ಕವುಗಳು. ಅವುಗಳನ್ನು ಸಂಹರಿಸುವುದರಿಂದ ಶ್ರೀಭೀಮಸೇನದೇವರು ಮಾನ್ಯರು.

ವಿಗ್ರಹ—

**ಜಾಜ್ವಲ್ಯಮಾನಸ್ಯ**— ಅತ್ಯಂತಂ ಜ್ವಲನ್ ಜಾಜ್ವಲ್ಯಮಾನಃ, ತಸ್ಯ ಜಾಜ್ವಲ್ಯಮಾನಸ್ಯ ।

**ದಿಧಕ್ಷತಃ**— ದಗ್ಧುಂ ಇಚ್ಛನ್ ದಿಧಕ್ಷನ್, ತಸ್ಯ ದಿಧಕ್ಷತಃ ।

**ಪಾರ್ಥಿವಸಾರ್ಥಂ**— ಪಾರ್ಥಿವಾನಾಂ ಸಾರ್ಥಂ ಪಾರ್ಥಿವಸಾರ್ಥಂ, ತತ್ ಪಾರ್ಥಿವಸಾರ್ಥಂ ।

**ಭಯದಾನಿ**— ಭಯಂ ದದತಿ ಇತಿ ಭಯದಾನಿ, ತಾನಿ ಭಯದಾನಿ ।

**ವೃಕೋದರಾಗ್ನೇಃ—** ವೃಕೋದರ ಏವ ಅಗ್ನಿಃ ವೃಕೋದರಾಗ್ನಿಃ, ತಸ್ಯ ವೃಕೋದರಾಗ್ನೇಃ ।

**ಗುರುತೇಜಸಾ—** ಗುರು ಚ ತತ್ ತೇಜಶ್ಚ ಗುರತೇಜಃ, ತೇನ ಗುರುತೇಜಸಾ ।

**ಕ್ರಿಯಾಪದ— ಆಪುಃ** - ಆಪ್ಲೃ ವ್ಯಾಪ್ತೌ ಇತ್ಯಸ್ಮಾತ್ ವ್ಯಾಪ್ತ್ಯರ್ಥಕಾತ್ ಆಪ್ಲೃ ಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೇ ಬಹುವಚನೇ 'ಆಪುಃ' ಇತಿ ರೂಪಮ್ ।

ಆಪ ಆಪತುಃ ಆಪುಃ, ಆಪಿಥ ಆಪಥುಃ ಆಪ, ಆಪ ಆಪಿವ ಆಪಿಮ ॥

**ಅಲಂಕಾರ—** ಪ್ರಕೃತಾಪ್ರಕೃತಶ್ಲೇಷಗರ್ಭರೂಪಕ ಸಮಾಸೋಕ್ತ್ಯಲಂಕಾರ ಸಂಕೀರ್ಣ.

★ ★ ★

ಮಣಿಮಂತ, ಕ್ರೋಧವಶರ ಸಂಹಾರ

**ಭೋಗಾಧಿಕಾಭೋಗವತೋಽರುಣಾಕ್ಷಾ-**
**ನಿತಸ್ತತಃ ಸಂಚಲತೋ ಧರೇಂದ್ರೇ ।**
**ಬಹೂನ್ ದ್ವಿಜಿಹ್ವಾನ್ ಮಣಿಮತ್ಪುರೋಗಾ-**
**ನಸೌ ಕಟೂನ್ ಕ್ರೋಧವಶಾನ್ ಜಘಾನ ॥ 39 ॥**

**ಪದಚ್ಛೇದ—** ಭೋಗಾಧಿಕಾಭೋಗವತಃ, ಅರುಣಾಕ್ಷಾನ್, ಇತಃ, ತತಃ, ಸಂಚಲತಃ, ಧರೇಂದ್ರೇ, ಬಹೂನ್, ದ್ವಿಜಿಹ್ವಾನ್, ಮಣಿಮತ್ಪುರೋಗಾನ್, ಅಸೌ, ಕಟೂನ್, ಕ್ರೋಧವಶಾನ್, ಜಘಾನ ।

**ಅನ್ವಯ—** ಅಸೌ ಭೋಗಾಧಿಕಾಭೋಗವತಃ ಅರುಣಾಕ್ಷಾನ್ ಧರೇಂದ್ರೇ ಇತಃ ತತಃ ಸಂಚಲತಃ ದ್ವಿಜಿಹ್ವಾನ್ ಮಣಿಮತ್ಪುರೋಗಾನ್ ಕ್ರೋಧವಶಾನ್ ಕಟೂನ್ ಬಹೂನ್ ಜಘಾನ ।

**ಅನ್ವಯಾರ್ಥ—**

**ಅಸೌ** = ಈ ಶ್ರೀಭೀಮಸೇನದೇವರು

**ಭೋಗಾಧಿಕಾಭೋಗವತಃ** = ಅತಿಶಯದಿಂದ ವಿಷಯಗಳಲ್ಲಿ ಆಸಕ್ತರಾಗಿಯೂ ಬಲ ಮುಂತಾದ ಗುಣಗಳಿಂದ ಪರಿಪೂರ್ಣರಾಗಿಯೂ ಇರುವ

**ಅರುಣಾಕ್ಷಾನ್** = ಕೆಂಡದಂತೆ ಕೆಂಪಾಗಿರುವ ಕಣ್ಣುಗಳಿಂದ ಯುಕ್ತರಾಗಿಯೂ

**ಧರೇಂದ್ರೇ** = ಪರ್ವತಗಳಿಗೆಲ್ಲಾ ಶ್ರೇಷ್ಠವಾಗಿರುವ ಗಂಧಮಾದನ ಪರ್ವತದಲ್ಲಿ

**ಇತಃ ತತಃ** = ಇಲ್ಲಿಯೂ ಅಲ್ಲಿಯೂ ಎಲ್ಲಾ ಸ್ಥಳಗಳಲ್ಲಿಯೂ

**ಸಂಚಲತಃ** = ಸಂಚರಿಸುತ್ತಿರುವ

**ದ್ವಿಜಿಹ್ವಾನ್** = ಒಮ್ಮೆ ಒಂದು ವಿಧವಾಗಿ ಮಾತಾಡಿ ಮರುಕ್ಷಣದಲ್ಲಿಯೇ ಹಿಂದೆ ಹೇಳಿದ ಮಾತುಗಳಿಗೆ ಅತ್ಯಂತ ವಿರುದ್ಧವಾಗಿರುವ ಮಾತುಗಳನ್ನು ಆಡುತ್ತಿರುವುದರಿಂದ ಎರಡು ನಾಲಿಗೆಗಳಿಂದ ಯುಕ್ತರಾಗಿರುವ

**ಮಣಿಮತ್ಪುರೋಗಾನ್** = ಮಣಿಮಾನ್ ಎಂಬ ದೈತ್ಯನೇ ಮೊದಲಾಗಿರುವ

**ಕಟೂನ್** = ಮನಸ್ಸಿನಿಂದಲೂ ಮಾತುಗಳಿಂದಲೂ ಕೆಲಸಗಳಿಂದಲೂ ತೀಕ್ಷ್ಣರಾದ

**ಬಹೂನ್** = ಅಸಂಖ್ಯಾಕರಾದ

**ಕ್ರೋಧವಶಾನ್** = ಕ್ರೋಧವಶರೆಂಬ ದಾನವರನ್ನು

**ಜಘಾನ** = ಸಂಹರಿಸಿದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ಮಣಿಮಂತನೇ ಮೊದಲಾದ ಅಸಂಖ್ಯಾಕರನ್ನು ಸಂಹರಿಸಿದರು. ಆ ಮಣಿಮಾನ್ ಮುಂತಾದವರು ಎರಡು ನಾಲಿಗೆಗಳಿಂದ ಯುಕ್ತರಾದವರು. ಅಂದರೆ ಸುಳ್ಳು ಹೇಳುವವರು. ಮೊದಲು ಒಂದು ಮಾತನ್ನು ಹೇಳಿ ಮರುಕ್ಷಣದಲ್ಲಿಯೇ ಹಿಂದೆ ಹೇಳಿದ ಆ ಮಾತುಗಳಿಗೆ ವಿರುದ್ಧವಾಗಿ ಹೇಳುತ್ತಾ ಆ ಮಾತುಗಳನ್ನು ಖಂಡಿಸುತ್ತಿರುವರು. ಆ ದೈತ್ಯರಲ್ಲಿ ಮಣಿಮಾನ್ ಎಂಬ ದೈತ್ಯನು ಮುಂದಿನವನು. ಎಲ್ಲರಿಗೂ, ಮನಸ್ಸಿನಲ್ಲಿ ಯೋಚಿಸಿ-ದ್ದನ್ನು ಬಾಯಿಯಲ್ಲಿ ಹೇಳುವುದು, ಬಾಯಿಯಲ್ಲಿ ಹೇಳಿದ್ದನ್ನು ಅನುಷ್ಠಿಸುವುದು ಎಂಬ ಸಂಪ್ರದಾಯವಿಲ್ಲ. ಅವರೆಲ್ಲರಿಗೂ ಕೋಪವು ಬಂದರೆ ತಡೆದುಕೊಳ್ಳುವ ಸಹನಶಕ್ತಿಯಿಲ್ಲ. ಆದ್ದರಿಂದ ಕ್ರೋಧವಶ ಎಂದು ಹೆಸರು. ಅವರನ್ನೆಲ್ಲರನ್ನೂ ಶ್ರೀಭೀಮಸೇನದೇವರು ಕೊಂದರು.

**ವಿಗ್ರಹ—**

**ಭೋಗಾಧಿಕಾಭೋಗವತಃ—** ಭೋಗೇನ (ಅಪೇಕ್ಷಿತಸುಖಾನುಭವಜನ್ಯವಾದ ಸುಖಾನುಭವಗಳಿಂದ) ಅಧಿಕಾಃ ಭೋಗಾಧಿಕಾಃ, ಭೋಗಾಧಿಕಾಃ ಅಭೋಗಶ್ಚ ಯೇಷಾಂ ಅಸ್ತಿ ಇತಿ ಭೋಗಾಧಿಕಾಭೋಗ-ವಂತಃ, ತಾನ್ ಭೋಗಾಧಿಕಾಭೋಗವತಃ ।

**ಅರುಣಾಕ್ಷಾನ್—** ಅರುಣೇ ಅಕ್ಷಿಣೀ ಯೇಷಾಂ ತೇ ಅರುಣಾಕ್ಷಾಃ, ತಾನ್ ಅರುಣಾಕ್ಷಾನ್ ।

**ಸಂಚಲತಃ—** ಸಂಚಲಂತಿ ಇತಿ ಸಂಚಲಂತಃ, ತಾನ್ ಸಂಚಲತಃ ।

**ಧರೇಂದ್ರೇ—** ಧರಂತಿ ಇತಿ ಧರಾಃ, ಧರಾಣಾಂ ಇಂದ್ರಃ ಧರೇಂದ್ರಃ, ತಸ್ಮಿನ್ ಧರೇಂದ್ರೇ ।

**ದ್ವಿಜಿಹ್ವಾನ್—** ದ್ವೇ ಜಿಹ್ವೇ ಯೇಷಾಂ ತೇ ದ್ವಿಜಿಹ್ವಾಃ, ತಾನ್ ದ್ವಿಜಿಹ್ವಾನ್ ।

**ಮಣಿಮತ್ಪುರೋಗಾನ್—** ಮಣಿಃ ಅಸ್ಯ ಅಸ್ತಿ ಇತಿ ಮಣಿಮಾನ್, ಪುರಃ ಗಚ್ಛತಿ ಇತಿ ಪುರೋಗಃ, ಮಣಿಮಾನ್ ಪುರೋಗಃ ಯೇಷಾಂ ತೇ ಮಣಿಮತ್ಪುರೋಗಾಃ, ತಾನ್ ಮಣಿಮತ್ಪುರೋಗಾನ್ ।

**ಕ್ರೋಧವಶಾನ್—** ಕ್ರೋಧಸ್ಯ ವಶಾಃ ಕ್ರೋಧವಶಾಃ, ತಾನ್ ಕ್ರೋಧವಶಾನ್ ।

**ಕ್ರಿಯಾಪದ—** ಜಘಾನ- ಹನ ಹಿಂಸಾಗತ್ಯೋಃ ಇತ್ಯಸ್ಮಾತ್ ಹಿಂಸಾಗತ್ಯರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ 'ಜಘಾನ' ಇತಿ ರೂಪಮ್ ।

ಜಘಾನ ಜಘ್ನತುಃ ಜಘ್ನುಃ, ಜಘನಿಥ ಜಘಂಥ ಜಘ್ನಥುಃ ಜಘ್ನ, ಜಘಾನ ಜಘನ ಜಘ್ನಿವ ಜಘ್ನಿಮ ॥

**ಅಲಂಕಾರ—** ಪ್ರಕೃತಾಪ್ರಕೃತಶ್ಲೇಷಗರ್ಭರೂಪಕಸಮಾಸೋಕ್ತ್ಯಲಂಕಾರಸಂಕೀರ್ಣ.

★ ★ ★

**ಕೀಚಕ ಸಂಹಾರ**

**ಅಥೈಷ ವೇಷಾಂತರಭಸ್ಮಲೀನಃ**
**ಕ್ರಮೇಣ ವಾಯುಪ್ರಭವಃ ಸುತೇಜಾಃ ।**
**ರುದ್ಧಾಖಿಲಾಶಂ ಮುಖರಂ ಪ್ರಚಂಡಂ**
**ಭಸ್ಮೀಚಕಾರಾಖಿಲಕೀಚಕೌಘಮ್ ॥ 40 ॥**

**ಪದಚ್ಛೇದ—** ಅಥ, ಏಷಃ, ವೇಷಾಂತರಭಸ್ಮಲೀನಃ, ಕ್ರಮೇಣ, ವಾಯುಪ್ರಭವಃ, ಸುತೇಜಾಃ, ರುದ್ಧಾಖಿಲಾಶಂ ಮುಖರಂ, ಪ್ರಚಂಡಂ, ಭಸ್ಮೀಚಕಾರ, ಅಖಿಲಕೀಚಕೌಘಮ್ ।

**ಅನ್ವಯ—** ಅಥ ವಾಯುಪ್ರಭವಃ ಏಷಃ ವೇಷಾಂತರಭಸ್ಮಲೀನಃ ಕ್ರಮೇಣ ಸುತೇಜಾಃ ರುದ್ಧಾಖಿಲಾಶಂ ಪ್ರಚಂಡಂ ಮುಖರಂ ಅಖಿಲಕೀಚಕೌಘಂ ಭಸ್ಮೀಚಕಾರ ।

**ಅನ್ವಯಾರ್ಥ—**

**ಅಥ** = ವನವಾಸ ಸಮಾಪ್ತಿಯ ಅನಂತರದಲ್ಲಿ

**ವಾಯುಪ್ರಭವಃ ಏಷಃ** = ಮುಖ್ಯಪ್ರಾಣದೇವರ ಎರಡನೆಯ ಅವತಾರವಾಗಿರುವ ಈ ಶ್ರೀಭೀಮಸೇನ-ದೇವರು

**ವೇಷಾಂತರಭಸ್ಮಲೀನಃ** = ಅಡಿಗೆಯವನ ವೇಷ ಎಂಬ ಬೇರೆವೇಷ ಎಂಬ ಭಸ್ಮದಿಂದ ತಿಳಿಯದಂತೆ ಇದ್ದವರು

**ಕ್ರಮೇಣ ಸುತೇಜಾಃ** = ಕ್ರಮದಿಂದ ಚೆನ್ನಾಗಿ ಅಭಿವ್ಯಕ್ತವಾದ ತೇಜಸ್ಸಿನಿಂದ ಯುಕ್ತರಾಗಿ

**ರುದ್ಧಾಖಿಲಾಶಂ** = ತಡೆಯಲ್ಪಟ್ಟ ಸಕಲ ರಾಜರುಗಳ ವಿಜಯದ ಅಭಿಲಾಷೆಯುಳ್ಳವರಾಗಿರುವ

**ಪ್ರಚಂಡಂ ಮುಖರಂ** = ಅತಿಕ್ರೂರರಾಗಿರುವ ವಿಚಾರವಿಲ್ಲದೆ ವಿಷಯಗಳನ್ನು ಹೇಳುತ್ತಿರುವ

**ಅಖಿಲಕೀಚಕೌಘಂ ಭಸ್ಮೀಚಕಾರ** = 106 ಸಂಖ್ಯಾಕರಾದ ಕೀಚಕರೆಂಬ ಅಸುರಸಮೂಹವನ್ನು ಬೂದಿಯಾಗಿ ಮಾಡಿದರು.

**ತಾತ್ಪರ್ಯ—** ಅಜ್ಞಾತವಾಸವು ಪಾಂಡವರಿಗೆ ಮುಗಿಯಿತು. ಆಗ 106 ಸಂಖ್ಯಾಕರಾದ ಸಕಲ ಕೀಚಕರ ಸಮೂಹ-ವನ್ನು ಶ್ರೀಭೀಮಸೇನದೇವರು ಭಸ್ಮವಾಗುವಂತೆ ಮಾಡಿದರು. ಕೀಚಕರೆಲ್ಲರೂ ಅತ್ಯುಗ್ರ ಸ್ವಭಾವವುಳ್ಳವರು. ಬಾಯಿಗೆ ಬಂದಂತೆ ಬೊಗಳುತ್ತಿರುವವರು. ಅವರ ಸಂಖ್ಯೆಯೂ ಅತ್ಯಧಿಕವಾಗಿತ್ತು. ಅವರು ಹೇಳುತ್ತಿರುವ ಪೌರುಷಗಳೂ ಅಧಿಕ-ವಾಗಿದ್ದವು.

ಅಜ್ಞಾತವಾಸ ಕಾಲವು ಮುಗಿಯುವವರೆಗೆ ವೇಷಾಂತರವೆಂಬ ಭಸ್ಮದಿಂದ ಬೆಂಕಿಯ ಕಿಡಿಯಂತೆ ಶ್ರೀಭೀಮಸೇನ-ದೇವರು ಹೊರಗೆ ಕಾಣಿಸಲಿಲ್ಲ. ಅಜ್ಞಾತವಾಸವು ಮುಗಿದ ಕೂಡಲೆ ಕ್ರಮದಿಂದ ಅಧಿಕವಾದ ತೇಜಸ್ಸಿನಿಂದ ಯುಕ್ತರಾದರು. ಪ್ರಪಂಚದಲ್ಲಿರುವ ಎಲ್ಲಾ ರಾಜರುಗಳಿಗೂ ಕೀಚಕರನ್ನು ಜಯಿಸುವ ಆಸೆಯು ಹೋಯಿತು. ಈ ಕೀಚಕರುಗಳು ಹೆಚ್ಚು ಹೆಚ್ಚಾಗಿ ಬಡಾಯಿಕೊಚ್ಚಿಕೊಳ್ಳುತ್ತಿದ್ದರು. ಶ್ರೀಭೀಮಸೇನದೇವರು ಆ ಕೀಚಕರುಗಳ ಸಮೂಹವನ್ನು ಸಂಹರಿಸಿ ಸಕಲರಿಗೆ ಬಂದಿರುವ ಆಪತ್ತುಗಳನ್ನು ಪರಿಹರಿಸಿದರು.

ವಿಗ್ರಹ—

**ವೇಷಾಂತರಭಸ್ಮಲೀನಃ—** ಅನ್ಯಃ ವೇಷಃ ವೇಷಾಂತರಂ, ವೇಷಾಂತರಂ ಏವ ಭಸ್ಮ ವೇಷಾಂತರಭಸ್ಮ, ವೇಷಾಂತರಭಸ್ಮನಾ ಲೀನಃ ವೇಷಾಂತರಭಸ್ಮಲೀನಃ ।

**ವಾಯುಪ್ರಭವಃ—** ವಾಯೋಃ ಪ್ರಭವಃ ಯಸ್ಯ ಸಃ ವಾಯುಪ್ರಭವಃ ।

**ರುದ್ಧಾಖಿಲಾಶಂ—** ಅಖಿಲಾನಾಂ ಆಶಾಃ ಅಖಿಲಾಶಾಃ, ರುದ್ಧಾಃ ಅಖಿಲಾಶಾಃ ಯೇನ ಸಃ ರುದ್ಧಾಖಿಲಾಶಃ, ತಂ ರುದ್ಧಾಖಿಲಾಶಂ ।

**ಪ್ರಚಂಡಂ—** ಪ್ರಕರ್ಷೇಣ ಚಂಡಃ ಪ್ರಚಂಡಃ, ತಂ ಪ್ರಚಂಡಂ ।

**ಅಖಿಲಕೀಚಕೌಘಂ—** ಅಖಿಲಾಶ್ಚ ತೇ ಕೀಚಕಾಶ್ಚ ಅಖಿಲಕೀಚಕಾಃ, ಅಖಿಲಕೀಚಕಾನಾಂ ಓಘಃ ಅಖಿಲ-ಕೀಚಕೌಘಃ, ತಂ ಅಖಿಲಕೀಚಕೌಘಂ ।

**ಕ್ರಿಯಾಪದ— ಭಸ್ಮೀಚಕಾರ-** ಭಸ್ಮೀ ಇತ್ಯುಪಪದಪೂರ್ವಕಾತ್ ಡು ಕೃಞ್ ಕರಣೇ ಇತ್ಯಸ್ಮಾತ್ ಕರಣಾರ್ಥಕಾತ್ ಕೃಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಭಸ್ಮೀಚಕಾರ' ಇತಿ ರೂಪಮ್ ।

ಭಸ್ಮೀಚಕಾರ ಭಸ್ಮೀಚಕ್ರತುಃ ಭಸ್ಮೀಚಕ್ರುಃ, ಭಸ್ಮೀಚಕರ್ಥ ಭಸ್ಮೀಚಕ್ರಥುಃ ಭಸ್ಮೀಚಕ್ರ, ಭಸ್ಮೀಚಕಾರ ಭಸ್ಮೀಚಕರ, ಭಸ್ಮೀಚಕೃವ ಭಸ್ಮೀಚಕೃಮ ॥

**ಅಲಂಕಾರ—** ಪ್ರಕೃತಾಪ್ರಕೃತಶ್ಲೇಷಗರ್ಭರೂಪಕಸಮಾಸೋಕ್ತ್ಯಲಂಕಾರಸಂಕೀರ್ಣ.

**ಕುರುಕ್ಷೇತ್ರದಲ್ಲಿ ಅರ್ಜುನನೊಂದಿಗೆ ಭೀಮನ ಹಿರಿಮೆ**

**ಸ ಕೃಷ್ಣವರ್ತ್ಮಾ ವಿಜಯೇನ ಯುಕ್ತೋ**
**ಮುಹುರ್ಮಹಾಹೇತಿಧರೋऽಪ್ರಧೃಷ್ಯಃ ।**
**ಭೀಷ್ಮದ್ವಿಜಾದ್ಯೈರತಿಭೀಷಣಾಭಂ**
**ವಿಪಕ್ಷಕಕ್ಷಂ ಕ್ಷಪಯನ್ ವಿರೇಜೇ ॥ 41 ॥**

**ಪದಚ್ಛೇದ—** ಸಃ, ಕೃಷ್ಣವರ್ತ್ಮಾ, ವಿಜಯೇನ, ಯುಕ್ತಃ, ಮುಹುಃ, ಮಹಾಹೇತಿಧರಃ, ಅಪ್ರಧೃಷ್ಯಃ, ಭೀಷ್ಮ-ದ್ವಿಜಾದ್ಯೈಃ, ಅತಿಭೀಷಣಾಭಂ, ವಿಪಕ್ಷಕಕ್ಷಂ, ಕ್ಷಪಯನ್, ವಿರೇಜೇ ।

**ಅನ್ವಯ—** ಕೃಷ್ಣವರ್ತ್ಮಾ ವಿಜಯೇನ ಯುಕ್ತಃ ಮಹಾಹೇತಿಧರಃ ಅಪ್ರಧೃಷ್ಯಃ ಸಃ ಭೀಷ್ಮದ್ವಿಜಾದ್ಯೈಃ ಅತಿ-ಭೀಷಣಾಭಂ ವಿಪಕ್ಷಕಕ್ಷಂ ಕ್ಷಪಯನ್ ಮುಹುಃ ವಿರೇಜೇ ।

**ಅನ್ವಯಾರ್ಥ—**

**ಕೃಷ್ಣವರ್ತ್ಮಾ** = ವಸುದೇವನ ಮಗನಾಗಿರುವ ಶ್ರೀಕೃಷ್ಣನು ಹೋದ ದಾರಿಯಲ್ಲಿ ಹೋಗುತ್ತಿರುವ

**ವಿಜಯೇನ ಯುಕ್ತಃ** = ಅರ್ಜುನನಿಂದ ಸಹಿತರಾಗಿ

**ಮಹಾಹೇತಿಧರಃ** = ಉತ್ತಮಗಳಾದ ಆಯುಧಗಳನ್ನು ಧರಿಸಿದವರಾದ,

**ಅಪ್ರಧೃಷ್ಯಃ** = ನಾಶಮಾಡಲಶಕ್ಯರಾದ

**ಸಃ** = ಆ ಭೀಮಸೇನದೇವರು

**ಭೀಷ್ಮದ್ವಿಜಾದ್ಯೈಃ** = ಭೀಷ್ಮರಿಂದಲೂ ದ್ರೋಣಾಚಾರ್ಯರು ಅಶ್ವತ್ಥಾಮಾಚಾರ್ಯರು ಮುಂತಾದ ಮಹಾವೀರರಿಂದಲೂ

**ಅತಿಭೀಷಣಾಭಂ** = ಅತ್ಯಂತ ಭಯಂಕರವಾಗಿರುವ ಕಾಂತಿಯಿಂದ ಯುಕ್ತವಾಗಿರುವ

**ವಿಪಕ್ಷಕಕ್ಷಂ** = ಶತ್ರುಗಳಾದ ದುರ್ಯೋಧನ ಮುಂತಾದವರೆಂಬ ಒಣಗಿದ ಮರಗಳನ್ನು

**ಮುಹುಃ ಕ್ಷಪಯನ್ ವಿರೇಜೇ** = ಬಹಳವಾಗಿ ನಾಶಮಾಡುತ್ತಾ ಶೋಭಿಸಿದರು.

**ತಾತ್ಪರ್ಯ—** ಶ್ರೀಕೃಷ್ಣನು ಹೋದ ಹಾದಿಯಲ್ಲಿ ಶ್ರೀಭೀಮಸೇನದೇವರು ಯಾವಾಗಲೂ ಹೋಗುತ್ತಿದ್ದರು. ಆದ್ದರಿಂದ ಆ ಭೀಮಸೇನದೇವರಿಗೆ 'ಕೃಷ್ಣವರ್ತ್ಮಾ' ಎಂಬ ಹೆಸರು ಪ್ರಸಿದ್ಧವಾಯಿತು. ಶ್ರೀಭೀಮಸೇನದೇವರು ವಿಜಯಕ್ಕೆ ಪ್ರಧಾನದೇವತೆಯಾಗಿರುವ ಅರ್ಜುನನಿಂದ ಸಹಿತರಾದರು. ಶ್ರೀಭೀಮಸೇನದೇವರೂ ಅರ್ಜುನನೂ ಒಟ್ಟುಗೂಡಿದ್ದರಿಂದ ಶ್ರೀಭೀಮಸೇನದೇವರ ವಿಜಯಶೀಲವಾದ ಗದೆಯೂ ಅರ್ಜುನನ ಗಾಂಡೀವ ಧನುಸ್ಸೂ ಒಂದೇ ಕಡೆಯಲ್ಲಿ ಸೇರಿದಂತಾಯಿತು. ಆದ್ದರಿಂದ ಶ್ರೀಭೀಮಸೇನದೇವರನ್ನು ಯಾರಿಂದಲೂ ಎದುರಿಸಲು ಸಾಧ್ಯವಾಗಲಿಲ್ಲ. ಎದುರು ಪಕ್ಷದಲ್ಲಿ ಭೀಷ್ಮರು, ದ್ರೋಣಾಚಾರ್ಯರು, ಅಶ್ವತ್ಥಾಮಾಚಾರ್ಯರು ಮುಂತಾದ ಮಹಾವೀರರೂ ಇರುವುದರಿಂದ ಮತ್ತು ದುರ್ಯೋಧನಾದಿಗಳಿಂದಲೂ ಅತಿ ಭಯಂಕರವಾಗಿರುವ ಶತ್ರುಗಳ ಪಕ್ಷವನ್ನು ಶ್ರೀಭೀಮಸೇನದೇವರು ನಾಶ ಮಾಡುತ್ತಾ ಶೋಭಿಸಿದರು.

**ವಿಗ್ರಹ—**

**ಕೃಷ್ಣವರ್ತ್ಮಾ—** ಕೃಷ್ಣಸ್ಯ ವರ್ತ್ಮ ಯಸ್ಯ ಸಃ ಕೃಷ್ಣವರ್ತ್ಮಾ ।

**ಮಹಾಹೇತಿಧರಃ—** ಮಹತೀ ಚ ಸಾ ಹೇತಿಶ್ಚ ಮಹಾಹೇತಿಃ, ಮಹಾಹೇತಿಂ ಧರತಿ ಇತಿ ಮಹಾಹೇತಿಧರಃ ।

**ಅಪ್ರಧೃಷ್ಯಃ—** ಪ್ರಕರ್ಷೇಣ ಧರ್ಷಯಿತುಂ ಯೋಗ್ಯಃ ಪ್ರಧೃಷ್ಯಃ, ನ ಪ್ರಧೃಷ್ಯಃ ಅಪ್ರಧೃಷ್ಯಃ ।

ಭೀಷ್ಮದ್ವಿಜಾದ್ಯೈಃ— ದ್ವಿಜಃ ಆದ್ಯಃ ಯೇಷಾಂ ತೇ ದ್ವಿಜಾದ್ಯಾಃ, ಭೀಷ್ಮಶ್ಚ ದ್ವಿಜಾದ್ಯಾಶ್ಚ ಭೀಷ್ಮದ್ವಿಜಾದ್ಯಾಃ, ತೈಃ ಭೀಷ್ಮದ್ವಿಜಾದ್ಯೈಃ ।

ಅತಿಭೀಷಣಾಭಂ— ಅತ್ಯಂತಂ ಭೀಷಣಾ ಅತಿಭೀಷಣಾ, ಅತಿಭೀಷಣಾ ಆಭಾ ಯಸ್ಯ ಸಃ ಅತಿಭೀಷಣಾಭಃ, ತಂ ಅತಿಭೀಷಣಾಭಂ ।

ವಿಪಕ್ಷಕಕ್ಷಂ— ವಿಪಕ್ಷ ಏವ ಕಕ್ಷಃ ವಿಪಕ್ಷಕಕ್ಷಃ, ತಂ ವಿಪಕ್ಷಕಕ್ಷಂ ।

ಕ್ಷಪಯನ್— ಕ್ಷಪಯತಿ ಇತಿ ಕ್ಷಪಯನ್ ।

ಕ್ರಿಯಾಪದ— ವಿರೇಜೇ- ವಿ ಇತ್ಯುಪಸರ್ಗಪೂರ್ವಕಾತ್ ರಾಜೃ ದೀಪ್ತೌ ಇತ್ಯಸ್ಮಾತ್ ದೀಪ್ತ್ಯರ್ಥಕಾತ್ ರಾಜೃ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ವಿರೇಜೇ' ಇತಿ ರೂಪಮ್ ।

ವಿರೇಜೇ ವಿರೇಜಾತೇ ವಿರೇಜಿರೇ, ವಿರೇಜಿಷೇ ವಿರೇಜಾಥೇ ವಿರೇಜಿಧ್ವೇ, ವಿರೇಜೇ ವಿರೇಜಿವಹೇ ವಿರೇಜಿಮಹೇ ॥

ಅಲಂಕಾರ— ಪ್ರಕೃತಾಪ್ರಕೃತಶ್ಲೇಷಗರ್ಭರೂಪಕಸಮಾಸೋಕ್ತ್ಯಲಂಕಾರಸಂಕೀರ್ಣ.

★ ★ ★

ಭೀಮನಿಂದಲೇ ಕೌರವರ ಸಂಹಾರ

**ತರಸ್ವಿನಃ ಪ್ರೋಚ್ಚಲಿತಾನಧೀರಾ-**
**ನ್ನಿರ್ದಗ್ಧಪಕ್ಷಾನತಿತೀಕ್ಷ್ಣಕೋಪಾನ್ ।**
**ಸ ಧಾರ್ತರಾಷ್ಟ್ರಾನ್ ಬಹುಹೇತಿಲೀಲೋ**
**ವಿನಾಶ್ಯ ವಿಶ್ವಾನ್ ಪರಯಾ ಶ್ರಿಯಾಽಽಭಾತ್ ॥ 42 ॥**

ಪದಚ್ಛೇದ— ತರಸ್ವಿನಃ, ಪ್ರೋಚ್ಚಲಿತಾನ್, ಅಧೀರಾನ್, ನಿರ್ದಗ್ಧಪಕ್ಷಾನ್, ಅತಿತೀಕ್ಷ್ಣಕೋಪಾನ್, ಸಃ, ಧಾರ್ತ-ರಾಷ್ಟ್ರಾನ್, ಬಹುಹೇತಿಲೀಲಃ, ವಿನಾಶ್ಯ, ವಿಶ್ವಾನ್, ಪರಯಾ, ಶ್ರಿಯಾ, ಆಭಾತ್ ।

ಅನ್ವಯ— ಬಹುಹೇತಿಲೀಲಃ ಸಃ ತರಸ್ವಿನಃ ಪ್ರೋಚ್ಚಲಿತಾನ್ ಅಧೀರಾನ್ ನಿರ್ದಗ್ಧಪಕ್ಷಾನ್ ಅತಿತೀಕ್ಷ್ಣಕೋಪಾನ್ ವಿಶ್ವಾನ್ ಧಾರ್ತರಾಷ್ಟ್ರಾನ್ ವಿನಾಶ್ಯ ಪರಯಾ ಶ್ರಿಯಾ ಆಭಾತ್ ।

ಅನ್ವಯಾರ್ಥ—

**ಬಹುಹೇತಿಲೀಲಃ** = ನಾನಾವಿಧಗಳಾದ ಆಯುಧಗಳಿಂದ ಲೀಲೆಯನ್ನು ಮಾಡುತ್ತಿರುವ
**ಸಃ** = ಶ್ರೀಭೀಮಸೇನದೇವರು
**ತರಸ್ವಿನಃ** = ಶೂರರಾಗಿರುವ
**ಪ್ರೋಚ್ಚಲಿತಾನ್** = ಧರ್ಮಮಾರ್ಗವನ್ನು ಬಿಟ್ಟಿರುವ
**ಅಧೀರಾನ್** = (ಆದ್ದರಿಂದಲೇ) ಧೈರ್ಯವಿಲ್ಲದಿರುವ
**ನಿರ್ದಗ್ಧಪಕ್ಷಾನ್** = ಕೊಲ್ಲಲ್ಪಟ್ಟ ಸ್ವಪಕ್ಷದವರುಳ್ಳ
**ಅತಿತೀಕ್ಷ್ಣಕೋಪಾನ್** = ಅತ್ಯಂತವಾಗಿ ತೀಕ್ಷ್ಣವಾದ ಕೋಪದಿಂದ ಯುಕ್ತರಾಗಿರುವ
**ವಿಶ್ವಾನ್ ಧಾರ್ತರಾಷ್ಟ್ರಾನ್** = ಎಲ್ಲಾ ಧೃತರಾಷ್ಟ್ರನ ಮಕ್ಕಳನ್ನೂ (ಕೌರವರನ್ನೂ)
**ವಿನಾಶ್ಯ** = ಕೊಂದು
**ಪರಯಾ** = ಅಧಿಕವಾದ

**ಶ್ರಿಯಾ** = ಕಾಂತಿಯಿಂದ

**ಆಭಾತ್** = ಶೋಭಿಸಿದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ನಾನಾವಿಧಗಳಾದ ಆಯುಧಗಳಿಂದ ಲೀಲೆಯಂತೆ ಯುದ್ಧವನ್ನು ಮಾಡುತ್ತಿರುವರು. ದುರ್ಯೋಧನನೇ ಮೊದಲಾಗಿರುವ ಧೃತರಾಷ್ಟ್ರನ ಮಕ್ಕಳನ್ನು ಸಂಹರಿಸುತ್ತಾ ಅತಿವೇಗವಾಗಿ ಯುದ್ಧವನ್ನು ಮಾಡುತ್ತಿರುವರು.

**ವಿಗ್ರಹ—**

**ತರಸ್ವಿನಃ—** ತರಃ ಏಷಾಂ ಅಸ್ತೀತಿ ತರಸ್ವಿನಃ, ತಾನ್ ತರಸ್ವಿನಃ ।

**ಅಧೀರಾನ್—** ನ ಧೀರಾಃ ಅಧೀರಾಃ, ತಾನ್ ಅಧೀರಾನ್ ।

**ನಿರ್ದಗ್ಧಪಕ್ಷಾನ್—** ನಿರ್ದಗ್ಧಃ ಪಕ್ಷಃ ಯೇಷಾಂ ತೇ ನಿರ್ದಗ್ಧಪಕ್ಷಾಃ, ತಾನ್ ನಿರ್ದಗ್ಧಪಕ್ಷಾನ್ ।

**ಅತಿತೀಕ್ಷ್ಣಕೋಪಾನ್—** ಅತ್ಯಂತಂ ತೀಕ್ಷ್ಣಃ ಅತಿತೀಕ್ಷ್ಣಃ, ಅತಿತೀಕ್ಷ್ಣಃ ಕೋಪಃ ಯೇಷಾಂ ತೇ ಅತಿತೀಕ್ಷ್ಣಕೋಪಾಃ, ತಾನ್ ಅತಿತೀಕ್ಷ್ಣಕೋಪಾನ್ ।

**ಧಾರ್ತರಾಷ್ಟ್ರಾನ್—** ಧೃತರಾಷ್ಟ್ರಸ್ಯ ಅಪತ್ಯಾನಿ ಪುಮಾಂಸಃ ಧಾರ್ತರಾಷ್ಟ್ರಾಃ, ತಾನ್ ಧಾರ್ತರಾಷ್ಟ್ರಾನ್ ।

**ಬಹುಹೇತಿಲೀಲಃ—** ಬಹ್ವ್ಯಶ್ಚ ತಾಃ ಹೇತವಶ್ಚ ಬಹುಹೇತವಃ, ಬಹುಹೇತೀನಾಂ ಲೀಲಾ ಯಸ್ಯ ಸಃ, ಬಹುಹೇತಿಲೀಲಃ ।

**ಕ್ರಿಯಾಪದ—** **ಆಭಾತ್**- ಆಙ್ ಇತ್ಯುಪಸರ್ಗಪೂರ್ವಕಾತ್ ಭಾ ದೀಪ್ತೌ ಇತ್ಯಸ್ಮಾತ್ ಭಾ ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಆಭಾತ್' ಇತಿ ರೂಪಮ್।

ಆಭಾತ್ ಆಭಾತಾಂ ಅಭುಃ, ಅಭಾನ್ ಅಭಾಃ ಅಭಾತಂ ಅಭಾತ, ಅಭಾಂ ಅಭಾವ ಅಭಾಮ ॥

**ಅಲಂಕಾರ—** ಪ್ರಕೃತಾಪ್ರಕೃತಶ್ಲೇಷಗರ್ಭರೂಪಕಸಮಾಸೋಕ್ತ್ಯಲಂಕಾರಸಂಕೀರ್ಣ.

★ ★ ★

ಭೀಮನ ವಿವಿಧ ವೈಭವ

**ಕೃಷ್ಣಾಂಘ್ರಿಪಂಕೇರುಹಭೃಂಗರಾಜಃ**
**ಕೃಷ್ಣಾಮುಖಾಂಭೋರುಹಹಂಸರಾಜಃ ।**
**ಪ್ರಜಾಸರೋಜಾವಲಿರಶ್ಮಿರಾಜಃ**
**ಸಸೋದರೋಽರಾಜತ ವೀರರಾಜಃ ॥ 43 ॥**

**ಪದಚ್ಛೇದ—** ಕೃಷ್ಣಾಂಘ್ರಿಪಂಕೇರುಹಭೃಂಗರಾಜಃ, ಕೃಷ್ಣಾಮುಖಾಂಭೋರುಹಹಂಸರಾಜಃ, ಪ್ರಜಾಸರೋಜಾವಲಿ-ರಶ್ಮಿರಾಜಃ ಸಸೋದರಃ ಅರಾಜತ ವೀರರಾಜಃ ।

**ಅನ್ವಯ—** ಕೃಷ್ಣಾಂಘ್ರಿಪಂಕೇರುಹಭೃಂಗರಾಜಃ, ಕೃಷ್ಣಾಮುಖಾಂಭೋರುಹಹಂಸರಾಜಃ, ಪ್ರಜಾಸರೋಜಾವಲಿ-ರಶ್ಮಿರಾಜಃ ಸಸೋದರಃ ವೀರರಾಜಃ ಅರಾಜತ ।

**ಅನ್ವಯಾರ್ಥ—**

**ಕೃಷ್ಣಾಂಘ್ರಿಪಂಕೇರುಹಭೃಂಗರಾಜಃ** = ವಸುದೇವನ ಮಗನಾಗಿ ಅವತರಿಸಿರುವ ಶ್ರೀಕೃಷ್ಣನ ಪಾದಗಳೆಂಬ ಕಮಲಗಳಿಗೆ ಶ್ರೇಷ್ಠ ದುಂಬಿಗಳಾದ

**ಕೃಷ್ಣಾಮುಖಾಂಭೋರುಹಹಂಸರಾಜಃ** = ಕೃಷ್ಣಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವ ದ್ರೌಪದೀದೇವಿಯ ಮುಖವೆಂಬ ಕಮಲವನ್ನು ಅರಳಿಸುವ ವಿಷಯದಲ್ಲಿ ಸೂರ್ಯನಂತಿರುವ

**ಪ್ರಜಾಸರೋಜಾವಲಿರಶ್ಮಿರಾಜಃ** = ಪ್ರಜೆಗಳೆಂಬ ಕಮಲಪುಷ್ಪಗಳ ಪಂಕ್ತಿಗಳ ವಿಕಾಸಕ್ಕೆ ಕಾರಣವಾಗಿರುವ ವಿಷಯದಲ್ಲಿ ಸೂರ್ಯರಾದ

**ಸಸೋದರಃ** = ಅಣ್ಣನಾದ ಧರ್ಮರಾಜನಿಂದಲೂ ತಮ್ಮಂದಿರಾದ ಅರ್ಜುನ, ನಕುಲ ಮತ್ತು ಸಹದೇವ-ನಿಂದಲೂ ಸಹಿತರಾದ

**ವೀರರಾಜಃ ಅರಾಜತ** = ವೀರರ ಮಧ್ಯದಲ್ಲಿ ರಾಜನಂತಿರುವ ಶ್ರೀಭೀಮಸೇನದೇವರು ಶೋಭಿಸಿದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ವೀರರಾದ ಧರ್ಮರಾಜನಿಗೂ ಅರ್ಜುನನಿಗೂ ನಕುಲನಿಗೂ ಸಹದೇವ-ನಿಗೂ ಮಧ್ಯದಲ್ಲಿ ರಾಜನಂತಿದ್ದರು. ವಸುದೇವನ ಮಗನಾಗಿ ಅವತರಿಸಿರುವ ಶ್ರೀಕೃಷ್ಣದೇವನ ಪಾದಗಳು ಕಮಲಗಳಂತಿವೆ. ಆ ಕಮಲಗಳಲ್ಲಿ ಭ್ರಮರಗಳ ರಾಜನು ಮೇಲೆ ಮೇಲೆ ಸುತ್ತುತ್ತಿರುವಂತೆ ಶ್ರೀಕೃಷ್ಣದೇವನ ಪಾದಕಮಲಗಳನ್ನು ಯಾವಾಗಲೂ ಬಿಡದೆ ಸೇವಿಸುತ್ತಿರುವರು. ಕೃಷ್ಣಾ ಎಂದು ಪ್ರಸಿದ್ಧಳಾಗಿರುವ ದ್ರೌಪದೀದೇವಿಯ ಮುಖ ಎಂಬ ಕಮಲವನ್ನು ಅರಳಿಸುವ ವಿಷಯದಲ್ಲಿ ಸೂರ್ಯನಂತಿದ್ದಾರೆ. ಪ್ರಜೆಗಳೇ ಕಮಲಗಳ ಪಂಕ್ತಿಗಳು. ಅವುಗಳನ್ನು ಸೂರ್ಯ-ರಂತೆ ಅರಳಿಸುತ್ತವೆ. ಹೀಗೆ ಅಣ್ಣನಾದ ಧರ್ಮರಾಜನಿಂದಲೂ ತಮ್ಮಂದಿರಾದ ಅರ್ಜುನ, ನಕುಲ, ಸಹದೇವನಿಂದಲೂ ಸಹಿತರಾದ ವೀರರಾದ ಶ್ರೀಭೀಮಸೇನದೇವರು ಶೋಭಿಸಿದರು.

**ವಿಗ್ರಹ—**

**ಕೃಷ್ಣಾಂಘ್ರಿಪಂಕೇರುಹಭೃಂಗರಾಜಃ—** ಕೃಷ್ಣಸ್ಯ ಅಂಘ್ರೀ ಕೃಷ್ಣಾಂಘ್ರೀ, ಕೃಷ್ಣಾಂಘ್ರೀ ಏವ ಪಂಕೇರುಹೇ ಕೃಷ್ಣಾಂಘ್ರಿಪಂಕೇರುಹೇ, ಕೃಷ್ಣಾಂಘ್ರಿಪಂಕೇರುಹಯೋಃ ಭೃಂಗರಾಜಃ ಕೃಷ್ಣಾಂಘ್ರಿಪಂಕೇರುಹ-ಭೃಂಗರಾಜಃ ।

**ಕೃಷ್ಣಾಮುಖಾಂಭೋರುಹಹಂಸರಾಜಃ—** ಕೃಷ್ಣಾಯಾಃ ಮುಖಂ ಕೃಷ್ಣಾಮುಖಂ, ಕೃಷ್ಣಾಮುಖಂ ಏವ ಅಂಭೋರುಹಂ ಕೃಷ್ಣಾಮುಖಾಂಭೋರುಹಂ, ಹಂಸಾನಾಂ ರಾಜಾ ಹಂಸರಾಜಃ, ಕೃಷ್ಣಾಮುಖಾಂ-ಭೋರುಹೇ ಹಂಸರಾಜಃ ಕೃಷ್ಣಾಮುಖಾಂಭೋರುಹಹಂಸರಾಜಃ ।

**ಪ್ರಜಾಸರೋಜಾವಲಿರಶ್ಮಿರಾಜಃ—** ರಶ್ಮೀನಾಂ ರಾಜಾ ರಶ್ಮಿರಾಜಃ, ಪ್ರಜಾಃ ಏವ ಸರೋಜಾನಿ ಪ್ರಜಾ-ಸರೋಜಾನಿ, ಪ್ರಜಾಸರೋಜಾನಾಂ ಆವಲಿಃ ಪ್ರಜಾಸರೋಜಾವಲಿಃ, ಪ್ರಜಾಸರೋಜಾವಲೇಃ ರಶ್ಮಿರಾಜಃ ಪ್ರಜಾಸರೋಜಾವಲಿರಶ್ಮಿರಾಜಃ ।

**ಸಸೋದರಃ—** ಸೋದರೇಣ ಸಹಿತಃ ಸಸೋದರಃ ।

**ವೀರರಾಜಃ—** ವೀರಾಣಾಂ ರಾಜಾ ವೀರರಾಜಃ । ''ರಾಜಾಹಸ್ಸಖಿಭ್ಯಃ ಟಚ್'' ಎಂಬ ಸೂತ್ರದಿಂದ ರಾಜನ್ ಶಬ್ದಕ್ಕೆ ಟಚ್ ಪ್ರತ್ಯಯ ಬಂದು ಅಕಾರಾಂತವಾಗಿದೆ.

**ಕ್ರಿಯಾಪದ— ಅರಾಜತ-** ರಾಜೃ ದೀಪ್ತೌ ಇತ್ಯರ್ಥಕಾತ್ 'ರಾಜೃ' ಧಾತೋಃ ಲಙ್ ಆತ್ಮನೇಪದಿ ಪ್ರಥಮಪುರುಷೇ ಏಕವಚನೇ ಅರಾಜತ ಇತಿ ರೂಪಮ್ ।

ಅರಾಜತ, ಅರಾಜೇತಾಂ ಅರಾಜಂತ, ಅರಾಜಥಾಃ ಅರಾಜೇಥಾಂ ಅರಾಜಧ್ವಂ, ಅರಾಜೇ ಅರಾಜಾವಹಿ ಅರಾಜಾಮಹಿ ॥

**ಅಲಂಕಾರ—** ಉಲ್ಲೇಖಾಲಂಕಾರ.

★ ★ ★

### ಪಾಂಡವರ ಅವತಾರ ಪರಿಸಮಾಪ್ತಿ - ಸ್ವರ್ಗಾರೋಹಣ

**ಪೌತ್ರೇ ಪವಿತ್ರಾಹ್ವಯಜಾಮಿಪೌತ್ರೇ**
**ಧರಾಂ ನಿಧಾಯಾಸುರಧೀಷು ತಾಪಮ್ ।**
**ಕೀರ್ತಿಂ ತ್ರಿಲೋಕ್ಯಾಂ ಹೃದಯೇ ಮುಕುಂದಂ**
**ಭೇಜೇ ಪದಂ ಸ್ವಂ ಸಹಜೈಃ ಸ ಭೀಮಃ ॥ 44 ॥**

**ಪದಚ್ಛೇದ—** ಪೌತ್ರೇ, ಪವಿತ್ರಾಹ್ವಯಜಾಮಿಪೌತ್ರೇ, ಧರಾಂ, ನಿಧಾಯ, ಅಸುರಧೀಷು, ತಾಪಂ, ಕೀರ್ತಿಂ, ತ್ರಿಲೋಕ್ಯಾಂ, ಹೃದಯೇ, ಮುಕುಂದಂ, ಭೇಜೇ, ಪದಂ, ಸ್ವಂ, ಸಹಜೈಃ, ಸಃ ಭೀಮಃ ।

**ಅನ್ವಯ—** ಸಃ ಭೀಮಃ ಪವಿತ್ರಾಹ್ವಯಜಾಮಿಪೌತ್ರೇ ಪೌತ್ರೇ ಧರಾಂ ನಿಧಾಯ ಅಸುರಧೀಷು ತಾಪಂ ತ್ರಿಲೋಕ್ಯಾಂ ಕೀರ್ತಿಂ ಹೃದಯೇ ಮುಕುಂದಂ ನಿಧಾಯ ಸಹಜೈಃ ಸ್ವಂ ಪದಂ ಭೇಜೇ ।

**ಅನ್ವಯಾರ್ಥ—**

**ಸಃ ಭೀಮಃ** = ಆ ಶ್ರೀಭೀಮಸೇನದೇವರು

**ಪವಿತ್ರಾಹ್ವಯಜಾಮಿಪೌತ್ರೇ** = ಪವಿತ್ರವಾದ ಹೆಸರಿನಿಂದ ಯುಕ್ತನಾದ ಶ್ರೀಕೃಷ್ಣದೇವನ ತಂಗಿಯಾದ ಶ್ರೀಸುಭದ್ರಾದೇವಿಯ ಮಗನ ಮಗನಾಗಿರುವ ಮತ್ತು

**ಪೌತ್ರೇ ಧರಾಂ** = ತನ್ನ ಮೊಮ್ಮಗನಾಗಿರುವ ಪರೀಕ್ಷಿತ್ ಮಹಾರಾಜನಲ್ಲಿ ಭೂಮಿಯನ್ನು

**ಅಸುರಧೀಷು ತಾಪಂ** = ದೈತ್ಯರುಗಳ ಮನಸ್ಸಿನಲ್ಲಿ ಸಂತಾಪವನ್ನೂ

**ತ್ರಿಲೋಕ್ಯಾಂ ಕೀರ್ತಿಂ** = ಮೂರುಲೋಕಗಳ ಸಮುದಾಯಗಳಲ್ಲಿ ಕೀರ್ತಿಯನ್ನೂ

**ಹೃದಯೇ ಮುಕುಂದಂ ನಿಧಾಯ** = ಹೃದಯಕಮಲದಲ್ಲಿ ಮೋಕ್ಷದಾಯಕನಾದ ಶ್ರೀಹರಿಯನ್ನೂ ಇಟ್ಟವರಾಗಿ

**ಸಹಜೈಃ** = ಸಹೋದರಸಹಿತರಾಗಿ

**ಸ್ವಂ ಪದಂ ಭೇಜೇ** = ತಮ್ಮ ಲೋಕವನ್ನು ಹೊಂದಿದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ತನ್ನ ಸಹೋದರರೊಡನೆ ತಮ್ಮ ತಮ್ಮ ಸ್ಥಾನಗಳಿಗೆ ಹೋದರು. ಹೋಗುವಾಗ ಭೂಮಿಯನ್ನು ಶ್ರೀಕೃಷ್ಣನ ತಂಗಿಯಾದ ಸುಭದ್ರೆಯ ಮಗನಾದ ಅಭಿಮನ್ಯುವಿನ ಮಗನಾದ ಪರೀಕ್ಷಿತ್ ಮಹಾರಾಜನಿಗೆ ಕೊಟ್ಟು ಹೋದರು. ದೇವತೆಗಳಿಗೆ ವಿರೋಧಿಗಳಾದವರು ಅಸುರರ ಮನಸ್ಸುಗಳಲ್ಲಿ ಸಂತಾಪವನ್ನೂ ಕೊಟ್ಟರು. ಮೂರು ಲೋಕಗಳ ಮಧ್ಯದಲ್ಲಿ ಕೀರ್ತಿಯನ್ನು ಸಂಪಾದಿಸಿದರು. ತಮ್ಮ ತಮ್ಮ ಹೃದಯಗಳಲ್ಲಿ ಮೋಕ್ಷ-ದಾಯಕನಾದ ಮುಕುಂದನನ್ನು ಸ್ಮರಿಸುತ್ತಾ ಸ್ವಸ್ಥಾನವನ್ನು ಪಡೆದರು.

**ವಿಗ್ರಹ—**

**ಪೌತ್ರೇ** = ಪುತ್ರಸ್ಯ ಅಪತ್ಯಂ ಪುಮಾನ್ ಪೌತ್ರಃ, ತಸ್ಮಿನ್ ಪೌತ್ರೇ ।

**ಪವಿತ್ರಾಹ್ವಯಜಾಮಿಪೌತ್ರೇ—** ಪವಿತ್ರಃ ಆಹ್ವಯಃ ಯಸ್ಯ ಸಃ ಪವಿತ್ರಾಹ್ವಯಃ, ಪವಿತ್ರಾಹ್ವಯಸ್ಯ ಜಾಮಿಃ ಪವಿತ್ರಾಹ್ವಯಜಾಮಿಃ, ಪವಿತ್ರಾಹ್ವಯಜಾಮೇಃ ಪೌತ್ರಃ ಪವಿತ್ರಾಹ್ವಯಜಾಮಿಪೌತ್ರಃ, ತಸ್ಮಿನ್ ಪವಿತ್ರಾಹ್ವಯಜಾಮಿಪೌತ್ರೇ ।

**ಅಸುರಧೀಷು—** ಸುರವಿರುದ್ಧಾಃ ಅಸುರಾಃ, ಅಸುರಾಣಾಂ ಧಿಯಃ ಅಸುರಧಿಯಃ, ತಾಸು ಅಸುರಧೀಷು ।

**ತ್ರಿಲೋಕ್ಯಾಂ—** ತ್ರಯಾಣಾಂ ಲೋಕಾನಾಂ ಸಮಾಹಾರಃ ತ್ರಿಲೋಕೀ, ತಸ್ಯಾಂ ತ್ರಿಲೋಕ್ಯಾಂ ।

**ಮುಕುಂದಂ**— ಮುಂ (ಮೋಕ್ಷಂ) ಚ ದದಾತಿ ಇತಿ ಮುಕುಂದಃ, ತಂ ಮುಕುಂದಂ ।

**ಸಹಜೈಃ**— ಸಹ ಜಾಯಂತೇ ಇತಿ ಸಹಜಾಃ, ತೈಃ ಸಹಜೈಃ ।

**ಕ್ರಿಯಾಪದ**— ಭೇಜೇ- ಭಜ ಸೇವಾಯಾಂ ಇತ್ಯಸ್ಮಾತ್ ಸೇವಾರ್ಥಕಾತ್ ಭಜ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಭೇಜೇ' ಇತಿ ರೂಪಮ್ ।

ಭೇಜೇ ಭೇಜಾತೇ ಭೇಜಿರೇ, ಭೇಜಿಷೇ ಭೇಜಾಥೇ ಭೇಜಿಧ್ವೇ, ಭೇಜೇ ಭೇಜಿವಹೇ ಭೇಜಿಮಹೇ ॥

**ಅಲಂಕಾರ**— ದೀಪಕಾಲಂಕಾರ.

★ ★ ★

ಶ್ರೀಮಧ್ವಾವತಾರಲೀಲಾ

**ವಿಷ್ಣೋಃ ಪದಾಂತಂ ಭಜತಾಽನಿಲೇನ**
**ಘೋರಪ್ರಘಾತೈರಿತಿ ನಾಶಿತಾಸ್ತೇ ।**
**ರಸೋಜ್ಝಿತಾಶ್ಚಂಚಲವೃತ್ತಯೋಽಲಂ**
**ಶೋಭಾಂ ನ ಭೇಜುಃ ಸುರವೈರಿಮೇಘಾಃ ॥ 45 ॥**

**ಪದಚ್ಛೇದ**— ವಿಷ್ಣೋಃ, ಪದಾಂತಂ, ಭಜತಾ, ಅನಿಲೇನ, ಘೋರಪ್ರಘಾತೈಃ, ಇತಿ, ನಾಶಿತಾಃ, ತೇ, ರಸೋಜ್ಝಿತಾಃ, ಚಂಚಲವೃತ್ತಯಃ, ಅಲಂ, ಶೋಭಾಂ, ನ, ಭೇಜುಃ, ಸುರವೈರಿಮೇಘಾಃ ।

**ಅನ್ವಯ**— ವಿಷ್ಣೋಃ ಪದಾಂತಂ ಭಜತಾ ಅನಿಲೇನ ಘೋರಪ್ರಘಾತೈಃ ಇತಿ ನಾಶಿತಾಃ ಅಲಂ ರಸೋಜ್ಝಿತಾಃ ಚಂಚಲವೃತ್ತಯಃ ತೇ ಸುರವೈರಿಮೇಘಾಃ ಶೋಭಾಂ ನ ಭೇಜುಃ ।

**ಅನ್ವಯಾರ್ಥ**—

**ವಿಷ್ಣೋಃ ಪದಾಂತಂ ಭಜತಾ** = ಶ್ರೀಕೃಷ್ಣದೇವನ ಪಾದಗಳ ಸನ್ನಿಧಾನವನ್ನು ಸೇವಿಸುತ್ತಿರುವ

**ಅನಿಲೇನ** = ಶ್ರೀಭೀಮಸೇನರೂಪಿಯಾದ ವಾಯುದೇವರಿಂದ

**ಘೋರಪ್ರಘಾತೈಃ** = ಭಯಂಕರಗಳಾದ ಯುದ್ಧಗಳಿಂದ (ಹೊಡೆತಗಳಿಂದ)

**ಇತಿ ನಾಶಿತಾಃ** = ಹಿಂದೆ ಹೇಳಿದಂತೆ ಕೊಲ್ಲಲ್ಪಟ್ಟ

**ರಸೋಜ್ಝಿತಾಃ** = ವೀರ್ಯದಿಂದ ರಹಿತರಾಗಿ

**ಅಲಂ ಚಂಚಲವೃತ್ತಯಃ** = ಅತ್ಯಂತವಾಗಿ ಚಂಚಲವಾದ ಅಂದರೆ ಅಸ್ಥಿರವಾದ ಮನೋವ್ಯಾಪಾರವುಳ್ಳ

**ತೇ ಸುರವೈರಿಮೇಘಾಃ** = ಆ ಪ್ರಸಿದ್ಧರಾಗಿರುವ ದೇವತೆಗಳ ದ್ವೇಷಿಗಳೆಂಬ ಮೇಘಗಳು

**ಶೋಭಾಂ ನ ಭೇಜುಃ** = ಕಾಂತಿಯನ್ನು ಹೊಂದಲಿಲ್ಲ.

**ತಾತ್ಪರ್ಯ**— ಶ್ರೀಹರಿಯ ಪಾದಗಳ ಸಮೀಪವನ್ನು ಭೀಮಸೇನರೂಪಿಯಾಗಿರುವ ಶ್ರೀವಾಯುದೇವರು ಸೇವಿಸುತ್ತಿರುವರು. ಆಗ ದೈತ್ಯರಿಗೂ ಶ್ರೀವಾಯುದೇವರಿಗೂ ಆಗಾಗ್ಗೆ ಘೋರವಾದ ಯುದ್ಧಗಳು ಏರ್ಪಡುತ್ತಿರುತ್ತವೆ. ಆ ಯುದ್ಧಗಳಲ್ಲಿ ದೈತ್ಯರುಗಳೆಲ್ಲರೂ ಪರಾಜಿತರಾಗುತ್ತಾರೆ. ಆಗ ಎಲ್ಲಾ ದೈತ್ಯರುಗಳಿಗೂ ಮನಸ್ಸಿನ ಸ್ಥೈರ್ಯವು ಹೋಗುತ್ತದೆ. ಆಗ ದೈತ್ಯರೆಲ್ಲರೂ ಮೇಘಗಳಂತೆ ಶೋಭೆಯನ್ನು ಕಳೆದುಕೊಂಡರು.

**ವಿಗ್ರಹ—**

**ಪದಾಂತಂ—** ಪದಯೋಃ ಅಂತಃ ಪದಾಂತಃ, ತಂ ಪದಾಂತಂ ।

**ಭಜತಾ—** ಭಜತಿ ಇತಿ ಭಜನ್, ತೇನ ಭಜತಾ ।

**ಘೋರಪ್ರಘಾತೈಃ—** ಘೋರಾಶ್ಚ ತೇ ಪ್ರಘಾತಾಶ್ಚ ಘೋರಪ್ರಘಾತಾಃ, ತೈಃ ಘೋರಪ್ರಘಾತೈಃ ।

**ರಸೋಜ್ಝಿತಾಃ—** ರಸೇನ ಉಜ್ಝಿತಾಃ ರಸೋಜ್ಝಿತಾಃ ।

**ಚಂಚಲವೃತ್ತಯಃ—** ಚಂಚಲಾ ವೃತ್ತಿಃ ಯೇಷಾಂ ತೇ ಚಂಚಲವೃತ್ತಯಃ ।

**ಸುರವೈರಿಮೇಘಾಃ—** ವೈರಂ ಯೇಷಾಂ ಅಸ್ತಿ ಇತಿ ವೈರಿಣಃ, ಸುರಾಣಾಂ ವೈರಿಣಃ ಸುರವೈರಿಣಃ, ಸುರವೈರಿಣಃ ಮೇಘಾಃ ಇವ ಸುರವೈರಿಮೇಘಾಃ ।

**ಕ್ರಿಯಾಪದ— ಭೇಜುಃ-** ಭಜ ಸೇವಾಯಾಂ ಇತ್ಯಸ್ಮಾತ್ ಸೇವಾರ್ಥಕಾತ್ ಭಜಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೇ ಬಹುವಚನೇ 'ಭೇಜುಃ' ಇತಿ ರೂಪಮ್ ।

ಬಭಾಜ ಭೇಜತುಃ ಭೇಜುಃ, ಭೇಜಿಥ ಭೇಜಥುಃ ಬಭಕ್ತ ಭೇಜ, ಬಭಾಜ ಬಭಜ ಭೇಜಿವ ಭೇಜಿಮ ॥

**ಅಲಂಕಾರ—** ಶ್ಲೇಷಗರ್ಭರೂಪಕಾಲಂಕಾರ.

★ ★ ★

**ಅಸುರರಿಂದ ಹಗೆಸಾಧನೆ**

**ಏತತ್ಪ್ರತೀಪಂ ಕಿಲ ಕರ್ತುಕಾಮಾ**
**ನಷ್ಟೌಜಸಃ ಸಂಕಟಮೇವಮಾಪ್ಯ ।**
**ಮಂಕುಂದವೈಗುಣ್ಯಕಥಾಂ ಸ್ವಯೋಗ್ಯಾಂ**
**ಕಾಲೇ ಕಲಾವಾಕಲಯಂತ ತೇऽಲಮ್ ॥ 46 ॥**

**ಪದಚ್ಛೇದ—** ಏತತ್ಪ್ರತೀಪಂ, ಕಿಲ, ಕರ್ತುಕಾಮಾಃ, ನಷ್ಟೌಜಸಃ, ಸಂಕಟಂ, ಏವಂ, ಆಪ್ಯ, ಮುಕುಂದ ವೈಗುಣ್ಯಕಥಾಂ, ಸ್ವಯೋಗ್ಯಾಂ, ಕಾಲೇ, ಕಲೌ, ಆಕಲಯಂತ, ತೇ, ಅಲಮ್ ।

**ಅನ್ವಯ—** ನಷ್ಟೌಜಸಃ ತೇ ಏವಂ ಸಂಕಟಂ ಆಪ್ಯ ಏತತ್ಪ್ರತೀಪಂ ಕರ್ತುಕಾಮಾಃ ಕಿಲ ಕಲೌ (ಉತ್ಪನ್ನಾಃ ಸಂತಃ) ಕರ್ತುಕಾಮಾಃ ಕಲೌ ಕಾಲೇ (ಸಮಾಗತೇ) (ಉತ್ಪನ್ನಾಃ ಸಂತಃ) ಸ್ವಯೋಗ್ಯಾಂ ಮುಕುಂದವೈಗುಣ್ಯಕಥಾಂ ಅಲಂ ಆಕಲಯಂತ ।

**ಅನ್ವಯಾರ್ಥ—**

**ನಷ್ಟೌಜಸಃ ತೇ** = ನಷ್ಟವಾದ ಸಾಮರ್ಥ್ಯವುಳ್ಳವರಾದ ಆ ದೈತ್ಯರುಗಳು

**ಏವಂ ಸಂಕಟಂ ಆಪ್ಯ** = ಹೀಗೆ ಕಷ್ಟವನ್ನು ಹೊಂದಿ

**ಏತತ್ಪ್ರತೀಪಂ ಕರ್ತುಕಾಮಾಃ ಕಿಲ** = ಶ್ರೀಭೀಮಸೇನದೇವರು ಮಾಡಿದ ಅಪಕಾರಕ್ಕೆ ಪ್ರತೀಕಾರವನ್ನು ಇಚ್ಛೆಯುಳ್ಳವರಾಗಿ

**ಕಲೌ (ಉತ್ಪನ್ನಾಃ ಸಂತಃ) ಕರ್ತುಕಾಮಾಃ** = ಕಲಿಕಾಲದಲ್ಲಿ ಹುಟ್ಟಿದವರಾಗಿ, ಪ್ರತೀಕಾರವನ್ನು ಮಾಡಬೇಕೆಂಬ ಇಚ್ಛೆಯುಳ್ಳವರಾಗಿ

**ಕಲೌ ಕಾಲೇ (ಸಮಾಗತೇ ಉತ್ಪನ್ನಾಃ ಸಂತಃ)** = ಕಲಿಯುಗದಲ್ಲಿ ಹುಟ್ಟಿದವರಾಗಿ

**ಸ್ವಯೋಗ್ಯಾಂ** = ದೈತ್ಯರಾದ ತಮಗೆ ಯೋಗ್ಯವಾಗಿರುವ

**ಮುಕುಂದವೈಗುಣ್ಯಕಥಾಂ** = ಮೋಕ್ಷವನ್ನು ಕೊಡುವವನಾದ ಶ್ರೀಹರಿಯು 'ವಿಗುಣನು' ಅಂದರೆ 'ಶ್ರೀಹರಿ-ಯಲ್ಲಿ ಯಾವ ಗುಣವೂ ಇಲ್ಲ' ಮುಂತಾದ ಮುಕುಂದವೈಗುಣ್ಯಕಥೆಯನ್ನು

**ಅಲಂ ಆಕಲಯಂತ** = ಧಾರಾಳವಾಗಿ ಹೇಳಿದರು.

**ತಾತ್ಪರ್ಯ—** ಶ್ರೀಭೀಮಸೇನದೇವರು ಮಾಡಿರುವ ಅಪಕಾರಕ್ಕೆ ಪ್ರತೀಕಾರವನ್ನು ಮಾಡಬೇಕೆಂಬ ಆಸೆಯು ಆ ದೈತ್ಯರಿಗೆಲ್ಲಾ ಇತ್ತು. ಅದಕ್ಕಾಗಿ ಕಲಿಕಾಲದಲ್ಲಿ ಹುಟ್ಟಿದರು. ಆದರೆ ಅವರ ಶಕ್ತಿಯೆಲ್ಲಾ ಕುಗ್ಗಿತು. ತಮಗೆ ಯೋಗ್ಯವಾಗಿರುವ 'ಮುಕುಂದನು ನಿರ್ಗುಣನು' ಮುಂತಾದ ಕಥೆಗಳನ್ನು ಹೇಳಲು ಆರಂಭಿಸಿದರು.

**ವಿಗ್ರಹ—**

**ಏತತ್ಪ್ರತೀಪಂ—** ಏತಸ್ಯ ಪ್ರತೀಪಂ ಏತತ್ಪ್ರತೀಪಂ ।

**ಕರ್ತುಕಾಮಾಃ—** ಕರ್ತುಂ ಕಾಮಃ ಯೇಷಾಂ ತೇ ಕರ್ತುಕಾಮಾಃ ।

**ನಷ್ಟೌಜಸಃ—** ನಷ್ಟಂ ಓಜಃ ಯೇಷಾಂ ತೇ ನಷ್ಟೌಜಸಃ ।

**ಮುಕುಂದವೈಗುಣ್ಯಕಥಾಂ—** ವಿಗುಣಸ್ಯ ಭಾವಃ ವೈಗುಣ್ಯಂ ಮುಕುಂದಸ್ಯ ವೈಗುಣ್ಯಂ ಮುಕುಂದವೈಗುಣ್ಯಂ, ಮುಕುಂದವೈಗುಣ್ಯಸ್ಯ ಕಥಾ ಮುಕುಂದವೈಗುಣ್ಯಕಥಾ, ತಾಂ ಮುಕುಂದವೈಗುಣ್ಯಕಥಾಂ ।

**ಸ್ವಯೋಗ್ಯಾಂ—** ಸ್ವಸ್ಯ ಯೋಗ್ಯಾ ಸ್ವಯೋಗ್ಯಾ, ತಾಂ ಸ್ವಯೋಗ್ಯಾಂ ।

**ಕ್ರಿಯಾಪದ— ಆಕಲಯತ-** ಆಙ್ ಇತ್ಯುಪಸರ್ಗಪೂರ್ವಕಾತ್ ಕಲ ಕಾಮಧೇನೌ ಇತ್ಯಸ್ಮಾತ್ ಕಲ ಧಾತೋಃ ಲಙ್ ಆತ್ಮನೇಪದಿನಃ ಪ್ರಥಮಪುರುಷೇ ಬಹುವಚನೇ 'ಆಕಲಯಂತ' ಇತಿ ರೂಪಮ್ ।

| | | |
|---|---|---|
| ಆಕಲಯತ | ಆಕಲಯೇತಾಂ | ಆಕಲಯಂತ, |
| ಆಕಲಯಥಾಃ | ಆಕಲಯೇಥಾಂ | ಆಕಲಯಧ್ವಂ, |
| ಆಕಲಯೇ | ಆಕಲಯಾವಹಿ | ಆಕಲಯಾಮಹಿ ॥ |

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ದ್ವೇಷಸಾಧಿಸಲು ಮಣಿಮಂತ ಮೊದಲಾದವರ ಜನನ

**ಯೋ ಭೂರಿವೈರೋ ಮಣಿಮಾನ್ ಮೃತಃ ಪ್ರಾ-**
**ಗ್ವಾಗ್ಮೀಬುಭೂಷುಃ ಪರಿತೋಷಿತೇಶಃ ।**
**ಸ ಸಂಕರಾಖ್ಯೋಽಂಘ್ರಿತಲೇಷು ಜಜ್ಞೇ**
**ಸ್ಪೃಧಾಽಪರೇಽಪ್ಯಾಸುರಿಹಾಸುರೇಂದ್ರಾಃ ॥ 47 ॥**

**ಪದಚ್ಛೇದ—** ಯಃ, ಭೂರಿವೈರಃ, ಮಣಿಮಾನ್, ಮೃತಃ, ಪ್ರಾಕ್, ವಾಗ್ಮೀಬುಭೂಷುಃ, ಪರಿತೋಷಿತೇಶಃ, ಸಃ, ಸಂಕರಾಖ್ಯಃ, ಅಂಘ್ರಿತಲೇಷು, ಜಜ್ಞೇ, ಸ್ಪೃಧಾ, ಅಪರೇ, ಅಪಿ, ಆಸುಃ, ಇಹ, ಅಸುರೇಂದ್ರಾಃ ।

**ಅನ್ವಯ—** ಪ್ರಾಕ್ (ಭೀಮೇನ) ಮೃತಃ (ಹತಃ) ಯಃ (ಭೀಮೇ) ಭೂರಿವೈರಃ ಮಣಿಮಾನ್ ವಾಗ್ಮೀಬುಭೂಷುಃ ಪರಿತೋಷಿತೇಶಃ ಸಃ ಸಂಕರಾಖ್ಯಃ ಅಂಘ್ರಿತಲೇಷು ಜಜ್ಞೇ, ಸ್ಪೃಧಾ ಇಹ ಅಪರೇ ಅಪಿ ಅಸುರೇಂದ್ರಾಃ ಆಸುಃ ।

**ಅನ್ವಯಾರ್ಥ—**

**ಪ್ರಾಕ್ (ಭೀಮೇನ) ಮೃತಃ (ಹತಃ)** = ಹಿಂದಿನ ಜನ್ಮದಲ್ಲಿ ಸೌಗಂಧಿಕವನದಲ್ಲಿ , ಶ್ರೀಭೀಮಸೇನದೇವರಿಂದ ಕೊಲ್ಲಲ್ಪಟ್ಟಿರುವ

**ಯಃ (ಭೀಮೇ) ಭೂರಿವೈರಃ ಮಣಿಮಾನ್** = ಶ್ರೀಭೀಮಸೇನದೇವರಲ್ಲಿ ಹೆಚ್ಚಾಗಿ ದ್ವೇಷವುಳ್ಳವನಾದ ಯಾವ ಮಣಿಮಾನ್ ಎಂಬ ದೈತ್ಯನೋ (ಅವನು)

**ವಾಗ್ಮೀಬುಭೂಷುಃ** = ತಾನು ವಾಗ್ಮಿಯಾಗಬೇಕೆಂಬ ಆಸೆಯಿಂದ ಯುಕ್ತನಾಗಿ

**ಪರಿತೋಷಿತೇಶಃ ಸಃ** = ಸಂತೋಷಪಡಿಸಲ್ಪಟ್ಟ ರುದ್ರದೇವನಿಂದ ವರವನ್ನು ಪಡೆದ ಅವನು

**ಸಂಕರಾಖ್ಯಃ ಅಂಘ್ರಿತಲೇಷು ಜಜ್ಞೇ** = ಸಂಕರ ಎಂಬ ಹೆಸರುಳ್ಳವನಾಗಿ ಕಾಲಡೀ ಎಂಬ ಗ್ರಾಮದಲ್ಲಿ ಹುಟ್ಟಿದನು.

**ಸ್ಪೃಧಾ ಇಹ** = ಸ್ಪರ್ಧೆಯಿಂದ ಈ ಭೂಲೋಕದಲ್ಲಿ

**ಅಪರೇ ಅಪಿ ಅಸುರೇಂದ್ರಾಃ** = ಬೇರೆ ದೈತ್ಯರಲ್ಲಿ ಪ್ರಧಾನರೂ

**ಆಸುಃ** = ಹುಟ್ಟಿದರು.

**ತಾತ್ಪರ್ಯ—** ಹಿಂದೆ ಸೌಗಂಧಿಕವನದಲ್ಲಿ ಶ್ರೀಭೀಮಸೇನದೇವರು ಮಣಿಮಾನ್ ಎಂಬ ದೈತ್ಯನನ್ನು ಕೊಂದರಲ್ಲವೇ? ಆ ಮಣಿಮಾನ್ ಎಂಬ ದೈತ್ಯನು ಪುನಃ ಹುಟ್ಟಿದನು. ಆಗ ರುದ್ರದೇವರನ್ನು ಸಂತೋಷಪಡಿಸಿ ಅವರಿಂದ ತಾನು ವಾಗ್ಮಿಯಾಗಬೇಕೆಂದೂ ತನ್ನನ್ನು ಜಯಿಸುವ ವಾಚಾಲನು ಯಾರೂ ಇರಕೂಡದೆಂದೂ ವರವನ್ನು ಬೇಡಿದನು. ರುದ್ರನ ವರದಿಂದ ಭೂಲೋಕದಲ್ಲಿ ವಾಗ್ಮಿಯಾಗಿ ಹುಟ್ಟಿದನು. ಅವನು ಹುಟ್ಟಿದ ಊರು ಕಾಲಡೀ ಎಂಬ ಗ್ರಾಮ. ಅದೇ ಸಮಯದಲ್ಲಿ ಎಲ್ಲಾ ದೈತ್ಯೇಂದ್ರರೂ ಸ್ಪರ್ಧೆಯಿಂದ ಹುಟ್ಟಿದರು.

**ವಿಗ್ರಹ—**

**ಮಣಿಮಾನ್—** ಮಣಿಃ ಅಸ್ಯ ಅಸ್ತಿ ಇತಿ ಮಣಿಮಾನ್ ।

**ವಾಗ್ಮೀ ಬುಭೂಷುಃ—** ಭವಿತುಂ ಇಚ್ಛುಃ ಬುಭೂಷುಃ, ಅವಾಗ್ಮೀ ವಾಗ್ಮೀ ಬುಭೂಷುಃ ವಾಗ್ಮೀಬುಭೂಷುಃ ।

**ಪರಿತೋಷಿತೇಶಃ—** ಪರಿತೋಷಿತಃ ಈಶಃ ಯೇನ ಸಃ ಪರಿತೋಷಿತೇಶಃ ।

**ಸಂಕರಾಖ್ಯಃ—** ಸಂಕರಃ ಇತಿ ಆಖ್ಯಾ ಯಸ್ಯ ಸಃ ಸಂಕರಾಖ್ಯಃ ।

**ಅಂಘ್ರಿತಲೇಷು—** ಅಂಘ್ರೇಃ ತಲಾನಿ ಅಂಘ್ರಿತಲಾನಿ, ತೇಷು ಅಂಘ್ರಿತಲೇಷು ।

**ಅಸುರೇಂದ್ರಾಃ—** ಅಸುರಾಣಾಂ ಇಂದ್ರಾಃ ಅಸುರೇಂದ್ರಾಃ ।

**ಕ್ರಿಯಾಪದ—** ಜಜ್ಞೇ- ಜನೀ ಪ್ರಾದುರ್ಭಾವೇ ಇತ್ಯಸ್ಮಾತ್ ಪ್ರಾದುರ್ಭಾವಾರ್ಥಕಾತ್ ಲಿಟಿ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ 'ಜಜ್ಞೇ' ಇತಿ ರೂಪಮ್ ।

ಜಜ್ಞೇ ಜಜ್ಞಾತೇ ಜಜ್ಞಿರೇ, ಜಜ್ಞಿಷೇ ಜಜ್ಞಾಥೇ, ಜಜ್ಞಿಧ್ವೇ, ಜಜ್ಞೇ ಜಜ್ಞಿವಹೇ ಜಜ್ಞಿಮಹೇ ॥

**ಆಸುಃ** - ಅಸ ಭುವಿ ಇತ್ಯಸ್ಮಾತ್ ಬಹ್ವರ್ಥಕಾತ್ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೇ ಬಹುವಚನೇ 'ಆಸುಃ' ಇತಿ ರೂಪಮ್।

ಆಸ ಆಸತುಃ ಆಸುಃ, ಆಸಿಥ ಆಸಥುಃ ಆಸ, ಆಸ ಆಸಿವ ಆಸಿಮ ॥

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

## ಮಣಿಮಂತ ನಡೆಸಿದ ತತ್ವವಿಪ್ಲವ

**ಸಾನ್ನಾಯ್ಯಮವ್ಯಕ್ತಹೃದಾಖುಭುಗ್ವಾ**
**ಶ್ವಾ ವಾ ಪುರೋಡಾಶಮಸಾರಕಾಮಃ ।**
**ಮಣಿಸ್ರಜಂ ವಾ ಪ್ಲವಗೋಽವ್ಯವಸ್ಥೋ**
**ಜಗ್ರಾಹ ವೇದಾದಿಕಮೇಷ ಪಾಪಃ** **॥ 48 ॥**

**ಪದಚ್ಛೇದ—** ಸಾನ್ನಾಯ್ಯಂ, ಅವ್ಯಕ್ತಹೃತ್, ಆಖುಭುಕ್, ವಾ, ಶ್ವಾ, ವಾ, ಪುರೋಡಾಶಂ, ಅಸಾರಕಾಮಃ, ಮಣಿಸ್ರಜಂ, ವಾ, ಪ್ಲವಗಃ, ಅವ್ಯವಸ್ಥಃ, ಜಗ್ರಾಹ, ವೇದಾದಿಕಂ, ಏಷಃ, ಪಾಪಃ ।

**ಅನ್ವಯ—** ಅವ್ಯಕ್ತಹೃತ್ ಆಖುಭುಕ್ ವಾ ಸಾನ್ನಾಯ್ಯಂ ವಾ ಅಸಾರಕಾಮಃ ಶ್ವಾ ವಾ ಪುರೋಡಾಶಂ ವಾ ಅವ್ಯವಸ್ಥಃ ಪ್ಲವಗಃ ಮಣಿಸ್ರಜಂ ವಾ ಪಾಪಃ ಏಷಃ ವೇದಾದಿಕಂ ಜಗ್ರಾಹ ।

**ಅನ್ವಯಾರ್ಥ—**

**ಅವ್ಯಕ್ತಹೃತ್ ಆಖುಭುಕ್ ವಾ** = ಹೃದಯದಲ್ಲಿರುವ ಅಭಿಪ್ರಾಯವು ತಿಳಿಯದಂತಿರುವ ಇಲಿಗಳನ್ನು ತಿನ್ನುತ್ತಿರುವ ಬೆಕ್ಕಿನ ಹಾಗೆ

**ಸಾನ್ನಾಯ್ಯಂ ವಾ** = ಸಾನ್ನಾಯ್ಯಂ ಎಂಬ ದುಗ್ಧದಧಿವಿಕಾರವಾದ ಹವಿಸ್ಸಿನಂತೆಯೂ

**ಅಸಾರಕಾಮಃ ಶ್ವಾ ವಾ** = ಅಪವಿತ್ರವಾದ ವಸ್ತುವನ್ನು ಅಪೇಕ್ಷಿಸುತ್ತಿರುವ ನಾಯಿಯು

**ಪುರೋಡಾಶಂ ವಾ** = ಪುರೋಡಾಶ ಎಂಬ ಹಿಟ್ಟಿನ ಮುದ್ದೆಯಂತೆಯೂ

**ಅವ್ಯವಸ್ಥಃ ಪ್ಲವಗಃ** = ವಿವೇಕವಿಲ್ಲದಿರುವ ಕೋತಿಯು

**ಮಣಿಸ್ರಜಂ ವಾ** = ಅಮೂಲ್ಯವಾದ ರತ್ನಗಳಿಂದ ರಚಿಸಲ್ಪಟ್ಟ ಮಾಲೆಯಂತೆಯೂ

**ಪಾಪಃ ಏಷಃ** = ಪಾಪಕಾರ್ಯಗಳನ್ನು ಮಾಡುತ್ತಿರುವ ಈ ಸಂಕರನು

**ವೇದಾದಿಕಂ ಜಗ್ರಾಹ** = ವೇದ ಮತ್ತು ಶಾಸ್ತ್ರಗಳನ್ನು ಸ್ವೀಕರಿಸಿದನು.

**ತಾತ್ಪರ್ಯ—** ಮಹಾಪಾಪಿಯಾದ ಸಂಕರನು ವೇದವನ್ನೂ ಶಾಸ್ತ್ರ ಮುಂತಾದವುಗಳನ್ನೂ ಓದಿದನು. ಅದಕ್ಕೆ ದೃಷ್ಟಾಂತಗಳನ್ನು ಕೊಡುವೆವು. ಬೆಕ್ಕಿನ ಮನಸ್ಸಿನಲ್ಲಿರುವ ಆಸೆಯು ಯಾರಿಂದಲೂ ತಿಳಿಯಲು ಸಾಧ್ಯವಿಲ್ಲ. ಆ ಬೆಕ್ಕು ಇಲಿಯನ್ನು ತಿನ್ನುತ್ತದೆ. ಆ ಬೆಕ್ಕು ಸಾನ್ನಾಯ್ಯ ಎಂಬ ಹಾಲಿನಲ್ಲಿ ಮೊಸರನ್ನು ಹಾಕಿದಾಗ ಏರ್ಪಡುವ ಹವಿರ್ವಿಶೇಷವನ್ನು ಇಲಿ ಎಂದು ತಿಳಿದಿದ್ದರೂ ತಿಳಿದಿರಬಹುದು ಅಥವಾ ಯಜ್ಞದಲ್ಲಿ ಕೊಡುವ ಪುರೋಡಾಶ ಎಂಬ ಹವಿಸ್ಸನ್ನು ಇಲಿ ಎಂದು ಭ್ರಮಿಸಿರಬಹುದು. ವಿವೇಕವಿಲ್ಲದ ಕೋತಿಯು ಮಣಿಗಳ ಮಾಲೆಯನ್ನು ಮೂಸಬಹುದು, ಅದನ್ನು ಮುದ್ದಿಡಬಹುದು, ನೆಕ್ಕಬಹುದು, ಹಲ್ಲುಗಳಿಂದ ಕಚ್ಚಬಹುದು. ಆದರೆ ಆ ಮಾಲೆಯ ಬೆಲೆಯನ್ನು ಬಲ್ಲುದೇ ? ಅದರಂತೆ ಸಂಕರನು ವೇದವನ್ನೂ ವೇದಾನುಸಾರಿಯಾದ ಶಾಸ್ತ್ರಗಳನ್ನೂ ಸ್ವೀಕರಿಸಿದನು. ಅವನು ಮಹಾಪಾಪಿಯಲ್ಲವೇ ?

**ವಿಗ್ರಹ—**

**ಅವ್ಯಕ್ತಹೃತ್—** ಅವ್ಯಕ್ತಂ ಹೃತ್ ಯಸ್ಯ ಸಃ ಅವ್ಯಕ್ತಹೃತ್ ।

**ಆಖುಭುಕ್—** ಆಖೂನ್ ಭುನಕ್ತಿ ಇತಿ ಆಖುಭುಕ್ ।

**ಅಸಾರಕಾಮಃ—** ಅಸಾರಸ್ಯ – (ಅಪವಿತ್ರಸ್ಯ) ಕಾಮಃ ಯಸ್ಯ ಸಃ ಅಸಾರಕಾಮಃ ।

**ಮಣಿಸ್ರಜಂ—** ಮಣೀನಾಂ ಸ್ರಕ್ ಮಣಿಸ್ರಕ್, ತಾಂ ಮಣಿಸ್ರಜಂ ।

**ಅವ್ಯವಸ್ಥಃ—** ನ ವಿದ್ಯತೇ ವ್ಯವಸ್ಥಾ ಯಸ್ಯ ಸಃ ಅವ್ಯವಸ್ಥಃ ।

**ವೇದಾದಿಕಂ**— ವೇದಃ ಆದಿಃ ಯಸ್ಯ ಸಃ ವೇದಾದಿಃ, ತಂ ವೇದಾದಿಕಂ ।

**ಪಾಪಃ**— ಪಾಪಂ ಅಸ್ಯ ಅಸ್ತಿ ಇತಿ ಪಾಪಃ ।

**ಕ್ರಿಯಾಪದ**— ಜಗ್ರಾಹ- ಗ್ರಹ ಉಪಾದಾನೇ ಇತ್ಯಸ್ಮಾತ್ ಉಪಾದಾನಾರ್ಥಕಾತ್ ಗ್ರಹ ಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಜಗ್ರಾಹ' ಇತಿ ರೂಪಮ್ ।

ಜಗ್ರಾಹ ಜಗೃಹತುಃ ಜಗೃಹುಃ, ಜಗ್ರಹಿಥ ಜಗೃಹಥುಃ ಜಗೃಹ, ಜಗ್ರಾಹ ಜಗ್ರಹ ಜಗೃಹಿವ ಜಗೃಹಿಮ ॥

**ಅಲಂಕಾರ**— ಉಪಮಾಲಂಕಾರ.

★ ★ ★

ಮಣಮಂತನ ಸನ್ಯಾಸದ ಹಿನ್ನೆಲೆ

**ಜನೋ ನಮೇನ್ನಾಪರಥೇತಿ ಮತ್ವಾ**
**ಶಠಶ್ಚತುರ್ಥಾಶ್ರಮಮೇಷ ಭೇಜೇ ।**
**ಪದ್ಮಾಕರಂ ವಾ ಕಲುಷಂ ಚಿಕೀರ್ಷುಃ**
**ಸುದುರ್ದಮೋ ದುಷ್ಟಗಜೋ ವಿಶುದ್ಧಮ್ ॥ 49 ॥**

**ಪದಚ್ಛೇದ**— ಜನಃ, ನಮೇತ್, ನ, ಅಪರಥಾ, ಇತಿ, ಮತ್ವಾ, ಶಠಃ, ಚತುರ್ಥಾಶ್ರಮಂ, ಏಷಃ, ಭೇಜೇ, ಪದ್ಮಾಕರಂ, ವಾ, ಕಲುಷಂ, ಚಿಕೀರ್ಷುಃ, ಸುದುರ್ದಮಃ, ದುಷ್ಟಗಜಃ, ವಿಶುದ್ಧಮ್ ।

**ಅನ್ವಯ**— ಅಪರಥಾ ಜನಃ ನ ನಮೇತ್ ಇತಿ ಮತ್ವಾ ಏಷಃ ಶಠಃ ಚತುರ್ಥಾಶ್ರಮಂ ಭೇಜೇ, ಕಲುಷಂ ಚಿಕೀರ್ಷುಃ ಸುದುರ್ದಮಃ ದುಷ್ಟಗಜಃ ವಿಶುದ್ಧಂ ಪದ್ಮಾಕರಂ ವಾ ।

**ಅನ್ವಯಾರ್ಥ**—

**ಅಪರಥಾ ಜನಃ ನ ನಮೇತ್** = ಸಂನ್ಯಾಸಾಶ್ರಮವನ್ನು ಸ್ವೀಕರಿಸದಿದ್ದರೆ ಯಾವ ಜನರೂ ನಮಸ್ಕರಿಸಲಾರರು.

**ಇತಿ ಮತ್ವಾ** = ಹೀಗೆಂದು ತಿಳಿದವನಾಗಿ

**ಶಠಃ ಏಷಃ** = ವೇದ ಮುಂತಾದ ಶಾಸ್ತ್ರಗ್ರಂಥಗಳಲ್ಲಿಯೂ ವೇದಪ್ರತಿಪಾದ್ಯನಾದ ಪರಬ್ರಹ್ಮನಲ್ಲಿಯೂ ಬ್ರಾಹ್ಮಣರಲ್ಲಿಯೂ ಗಾಢದ್ವೇಷವುಳ್ಳ ಈ ಸ್ವಕಾರ್ಯತತ್ಪರನಾಗಿರುವ ಸಂಕರನು

**ಚತುರ್ಥಾಶ್ರಮಂ ಭೇಜೇ** = ನಾಲ್ಕು ಆಶ್ರಮಗಳಲ್ಲಿ ಕೊನೆಯದಾದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದನು.

**ಕಲುಷಂ ಚಿಕೀರ್ಷುಃ** = ಕದಡಿದದ್ದನ್ನಾಗಿ ಮಾಡಬೇಕೆಂಬ ಆಸೆಯುಳ್ಳ

**ಸುದುರ್ದಮಃ ದುಷ್ಟಗಜಃ** = ಅತ್ಯಂತವಾಗಿ ಅಡಗಿಸಲು ಸಾಧ್ಯವಿಲ್ಲದ ಅತಿದುಷ್ಟವಾದ ಆಸೆಯುಳ್ಳ ಮದ-ಭರಿತವಾದ ಆನೆಯಂತೆ

**ವಿಶುದ್ಧಂ ಪದ್ಮಾಕರಂ ವಾ** = ಅತ್ಯಂತ ಪರಿಶುದ್ಧವಾಗಿರುವ ಪದ್ಮಗಳ ಸರೋವರವನ್ನು ಹೇಗೋ ಹಾಗೆ ಸಂಕರನು ಮಾಡಿದನು.

**ತಾತ್ಪರ್ಯ**— ಸಂನ್ಯಾಸಾಶ್ರಮವನ್ನು ಸ್ವೀಕರಿಸದಿದ್ದರೆ ನನ್ನನ್ನು ಯಾವ ಜನರೂ ನಮಸ್ಕರಿಸಲಾರರು ಎಂದು ಸಂಕರನು ತೀರ್ಮಾನಿಸಿದನು. ಮುಂದೆ ಜನರಿಂದ ಮರ್ಯಾದೆಗಳನ್ನು ಸ್ವೀಕರಿಸುತ್ತಾ ಜನಸಾಮಾನ್ಯರನ್ನು ವಂಚಿಸಬೇಕು. ಇದಕ್ಕಾಗಿ ಸಂಕರನು ನಾಲ್ಕನೆಯ ಆಶ್ರಮವಾಗಿರುವ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದನು. ಪದ್ಮಗಳ ಉತ್ಪತ್ತಿಸ್ಥಾನವಾಗಿರುವ ಪದ್ಮಾಕರಗಳನ್ನು ಕದಡಿಸಬೇಕಾದರೆ ಯಾವ ಉಪಾಯಕ್ಕೂ ಬಗ್ಗದಿರುವ ದುಷ್ಟಗಜವು ನೀರಿನಲ್ಲಿ ಮುಳುಗಿ ಕದಡಿಸು-ವುದಿಲ್ಲವೆ ? ಅದರಂತೆ ತಾನೇ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಅದನ್ನು ಕೆಡಿಸಬೇಕಲ್ಲವೇ ?

ವಿಗ್ರಹ—

**ಅಪರಥಾ—** ನ ಪರಥಾ ಅಪರಥಾ ।

**ಚತುರ್ಥಾಶ್ರಮಂ—** ಚತುರ್ಥಶ್ಚಾಸೌ ಆಶ್ರಮಶ್ಚ ಚತುರ್ಥಾಶ್ರಮಃ, ತಂ ಚತುರ್ಥಾಶ್ರಮಂ ।

**ಪದ್ಮಾಕರಂ—** ಪದ್ಮಾನಾಂ ಆಕರಃ ಪದ್ಮಾಕರಃ, ತಂ ಪದ್ಮಾಕರಂ ।

**ಚಿಕೀರ್ಷುಃ—** ಕರ್ತುಂ ಇಚ್ಛುಃ ಚಿಕೀರ್ಷುಃ.।

**ಸುದುರ್ದಮಃ—** ದುಃಖೇನ ದಮಯಿತುಂ ಯೋಗ್ಯಃ ದುರ್ದಮಃ, ಅತ್ಯಂತಂ ದುರ್ದಮಃ ಸುದುರ್ದಮಃ ।

**ದುಷ್ಟಗಜಃ—** ದುಷ್ಟಶ್ಚಾಸೌ ಗಜಶ್ಚ ದುಷ್ಟಗಜಃ ।

**ವಿಶುದ್ಧಂ—** ವಿಶೇಷೇಣ ಶುದ್ಧಂ ವಿಶುದ್ಧಂ ।

**ಕ್ರಿಯಾಪದ—** ನಮೇತ್- ಣಮು ಪ್ರಹ್ವತ್ವೇ ಶಬ್ದೇ ಚ ಇತಿ ಪ್ರಹ್ವತ್ವ ಶಬ್ದಾರ್ಥಕಾತ್ ಣಮು ಧಾತೋಃ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ 'ನಮೇತ್' ಇತಿ ರೂಪಮ್ ।

ನಮೇತ್ ನಮೇತಾಂ ನಮೇಯುಃ, ನಮೇಃ ನಮೇತಂ ನಮೇತ, ನಮೇಯಂ ನಮೇವ ನಮೇಮ ॥

ಭೇಜೇ - ಭಜ ಸೇವಾಯಾಂ ಇತಿ ಸೇವಾರ್ಥಕಾತ್ ಭಜ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಭೇಜೇ' ಇತಿ ರೂಪಮ್ ।

ಭೇಜೇ ಭೇಜಾತೇ ಭೇಜಿರೇ, ಭೇಜಿಷೇ ಭೇಜಾಥೇ ಭೇಜಿಧ್ವೇ, ಭೇಜೇ ಭೇಜಿವಹೇ ಭೇಜಿಮಹೇ ॥

**ಅಲಂಕಾರ—** ಉಪಮಾಲಂಕಾರ.

★ ★ ★

ಮಣಿಮಂತನಿಂದ ಅವೈದಿಕಬೌದ್ಧಮತ ಸ್ವೀಕಾರ

**ಅವೈದಿಕಂ ಮಾಧ್ಯಮಿಕಂ ನಿರಸ್ತಂ**
**ನಿರೀಕ್ಷ್ಯ ತತ್ಪಕ್ಷಸುಪಕ್ಷಪಾತೀ ।**
**ತಮೇವ ಪಕ್ಷಂ ಪ್ರತಿಪಾದುಕೋಽಸೌ**
**ನ್ಯರೂರುಪನ್ಮಾರ್ಗಮಿಹಾನುರೂಪಮ್ ॥ 50 ॥**

**ಪದಚ್ಛೇದ—** ಅವೈದಿಕಂ, ಮಾಧ್ಯಮಿಕಂ, ನಿರಸ್ತಂ, ನಿರೀಕ್ಷ್ಯ, ತತ್ಪಕ್ಷಸುಪಕ್ಷಪಾತೀ, ತಂ, ಏವ, ಪಕ್ಷಂ, ಪ್ರತಿಪಾದುಕಃ, ಅಸೌ, ನ್ಯರೂರುಪತ್, ಮಾರ್ಗಂ, ಇಹ, ಅನುರೂಪಮ್ ।

**ಅನ್ವಯ—** ಅಸೌ ಮಾಧ್ಯಮಿಕಂ ಅವೈದಿಕಂ ನಿರಸ್ತಂ ನಿರೀಕ್ಷ್ಯ ತತ್ಪಕ್ಷಸುಪಕ್ಷಪಾತೀ ತಮೇವ ಪಕ್ಷಂ ಪ್ರತಿಪಾದುಕಃ ಅಸೌ ಇಹ ಅನುರೂಪಂ ಮಾರ್ಗಂ ನ್ಯರೂರುಪತ್ ।

ಅನ್ವಯಾರ್ಥ—

**ಅಸೌ** = ಈ ಸಂಕರನು

**ಮಾಧ್ಯಮಿಕಂ** = ಬೌದ್ಧಮತವನ್ನು,

**ಅವೈದಿಕಂ** = ಬೌದ್ಧಮತವನ್ನು, ವೇದವಿರುದ್ಧವಾದುದರಿಂದಲೂ ವೇದಪ್ರಾಮಾಣ್ಯವನ್ನು ನಂಬದಿರುವವ-ರಿಂದ ರಚಿಸಿರುವುದರಿಂದಲೂ,

**ನಿರಸ್ತಂ** = ನಿರಾಸಮಾಡಲ್ಪಟ್ಟದ್ದನ್ನು

**ನಿರೀಕ್ಷ್ಯ** = ನೋಡಿ

**ತತ್ಪಕ್ಷಸುಪಕ್ಷಪಾತೀ** = ಆ ಬೌದ್ಧಸಿದ್ಧಾಂತದಲ್ಲಿಯೇ ಪಕ್ಷಪಾತವುಳ್ಳವನಾಗಿ

**ತಮೇವ ಪಕ್ಷಂ** = ಅದೇ ಬೌದ್ಧಸಿದ್ಧಾಂತವನ್ನೇ

**ಪ್ರತಿಪಾದುಕಃ ಅಸೌ** = ಪ್ರತಿಪಾದನೆ ಮಾಡುತ್ತಿರುವವನಾಗಿ

**ಇಹ** = ಬೌದ್ಧಸಿದ್ಧಾಂತದ ವಿವರಣವಿಷಯದಲ್ಲಿ

**ಅನುರೂಪಂ ಮಾರ್ಗಂ** = ಅನುಗುಣವಾದ ಹಾದಿಯನ್ನು

**ನ್ಯರೂರುಪತ್** = ನಿರೂಪಣೆ ಮಾಡಿದನು.

**ತಾತ್ಪರ್ಯ**— ಸಂಕರನು ಬೌದ್ಧ ಸಿದ್ಧಾಂತವನ್ನು ನೋಡಿದನು. ಆ ಸಿದ್ಧಾಂತವು ತನಗೆ ಅನುಕೂಲವಾಗಿಯೇ ಇತ್ತು. ಮಾಧ್ಯಮಿಕಮತವು ವೈದಿಕ ಮತವಲ್ಲ. ವೇದವಿರುದ್ಧವಾಗಿದೆ. ಅದನ್ನು ಪ್ರಾಮಾಣಿಕರು ಸರ್ವರೂ ನಿರಾಸ ಮಾಡಿರುವರು. ಸಂಕರನು ಮಾಧ್ಯಮಿಕ ಎಂಬ ಪಕ್ಷದಲ್ಲಿಯೇ ವಿಶೇಷ ಪಕ್ಷಪಾತವನ್ನು ಇಟ್ಟುಕೊಂಡಿರುವವನು. ಆದಕ್ಕಾಗಿ ತನ್ನ ಸಿದ್ಧಾಂತವನ್ನೇ ದೃಢಪಡಿಸಬೇಡವೇ ? ಅದಕ್ಕೆ ಅನುಗುಣವಾದ ಮಾರ್ಗವನ್ನು ಹಿಡಿದನು.

**ವಿಗ್ರಹ**—

**ಅವೈದಿಕಂ**— ವೇದಸ್ಯ ಅಯಂ ವೈದಿಕಃ, ವೈದಿಕಃ ನ ಭವತೀತಿ ಅವೈದಿಕಃ ತಂ ಅವೈದಿಕಂ ।

**ಮಾಧ್ಯಮಿಕಂ**— ಮಧ್ಯಮಾನಾಂ ಸಮ್ಮತಂ ಮಾಧ್ಯಮಿಕಂ ।

**ತತ್ಪಕ್ಷಸುಪಕ್ಷಪಾತೀ**— ಸ ಚಾಸೌ ಪಕ್ಷಶ್ಚ ತತ್ಪಕ್ಷಃ, ತತ್ಪಕ್ಷೇ (ಶೋಭನಃ ಪಕ್ಷಪಾತಃ ಅಸ್ಯ ಅಸ್ತಿ ಇತಿ ಸುಪಕ್ಷಪಾತೀ) ಸುಪಕ್ಷಪಾತೀ ತತ್ಪಕ್ಷಸುಪಕ್ಷಪಾತೀ ।

**ಕ್ರಿಯಾಪದ**— **ನ್ಯರೂರುಪತ್**- ನಿ ಇತ್ಯುಪಸರ್ಗಪೂರ್ವಕಾತ್ ರುಹಬೀಜಜನ್ಮನಿ ಪ್ರಾದುರ್ಭಾವೇ ಚ ಇತಿ ಬೀಜ-ಜನ್ಮಪ್ರಾದುರ್ಭಾವಾರ್ಥಕಾತ್ ರುಹ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ನ್ಯರೂರುಪತ್' ಇತಿ ರೂಪಮ್ ।

| | | |
|---|---|---|
| ನ್ಯರೂರುಪತ್ | ನ್ಯರೂರುಪತಾಂ | ನ್ಯರೂರುಪನ್, |
| ನ್ಯರೂರುಪಃ | ನ್ಯರೂರುಪತಂ | ನ್ಯರೂರುಪತ, |
| ನ್ಯರೂರುಪಂ | ನ್ಯರೂರುಪಾವ | ನ್ಯರೂರುಪಾಮ ॥ |

**ಅಲಂಕಾರ**— ಸ್ವಭಾವೋಕ್ತ್ಯಲಂಕಾರ.

★ ★ ★

ಬೌದ್ಧಮತದ ರೂಪಾಂತರ ಪ್ರದರ್ಶನ

**ಅಸತ್ವದೇಽಸನ್ ಸದಸದ್ವಿವಿಕ್ತಂ**
**ಮಾಯಾಖ್ಯಯಾ ಸಂವೃತಿಮಭ್ಯಧತ್ತ ।**
**ಬ್ರಹ್ಮಾಪ್ಯಖಂಡಂ ಬತ ಶೂನ್ಯಸಿದ್ಧ್ಯೈ**
**ಪ್ರಚ್ಛನ್ನಬೌದ್ಧೋಽಯಮತಃ ಪ್ರಸಿದ್ಧಃ ॥ 51 ॥**

**ಪದಚ್ಛೇದ**— ಅಸತ್ವದೇ, ಅಸನ್, ಸದಸದ್ವಿವಿಕ್ತಂ, ಮಾಯಾಖ್ಯಯಾ, ಸಂವೃತಿಂ, ಅಭ್ಯಧತ್ತ, ಬ್ರಹ್ಮ, ಅಪಿ, ಅಖಂಡಂ, ಬತ, ಶೂನ್ಯಸಿದ್ಧ್ಯೈ, ಪ್ರಚ್ಛನ್ನಬೌದ್ಧಃ, ಅಯಂ, ಅತಃ, ಪ್ರಸಿದ್ಧಃ ।

**ಅನ್ವಯ—** ಅಯಂ ಅಸನ್ ಅಸತ್ಪದೇ ಸದಸದ್ವಿವಿಕ್ತಂ ಅಭ್ಯಧತ್ತ । ಮಾಯಾಖ್ಯಯಾ ಸಂವೃತಿಂ ಅಭ್ಯಧತ್ತ । ಅಖಂಡಂ ಬ್ರಹ್ಮ ಅಪಿ ಶೂನ್ಯಸಿದ್ಧ್ಯೈ (ನಿರ್ವಿಶೇಷಂ) ಅಭ್ಯಧತ್ತ । ಅತಃ ಅಯಂ ಪ್ರಚ್ಛನ್ನಬೌದ್ಧಃ (ಇತಿ) ಪ್ರಸಿದ್ಧಃ ।

**ಅನ್ವಯಾರ್ಥ—**

**ಅಯಂ ಅಸನ್** = ಈ ದುಷ್ಟನಾದ ಸಂಕರನು

**ಅಸತ್ಪದೇ ಸದಸದ್ವಿವಿಕ್ತಂ ಅಭ್ಯಧತ್ತ** = ಅಸತ್ ಎಂದು ಹೇಳಬೇಕಾದ ಸಂದರ್ಭದಲ್ಲಿ ಸದಸದ್ವಿಲಕ್ಷಣ ಎಂದು ಹೇಳಿದನು.

**ಮಾಯಾಖ್ಯಯಾ ಸಂವೃತಿಂ ಅಭ್ಯಧತ್ತ** = ಮಾಯಾ ಎಂಬ ಹೆಸರಿನಿಂದ ಸಂವೃತಿಯನ್ನು ಹೇಳಿದನು.

**ಅಖಂಡಂ ಬ್ರಹ್ಮ ಅಪಿ ಶೂನ್ಯಸಿದ್ಧ್ಯೈ (ನಿರ್ವಿಶೇಷಂ) ಅಭ್ಯಧತ್ತ** = ಅಖಂಡವಾದ ಬ್ರಹ್ಮ ಎಂಬ ವಸ್ತುವನ್ನೂ ಶೂನ್ಯಸಿದ್ಧಿಗಾಗಿ ನಿರ್ವಿಶೇಷವೆಂದು ಹೇಳುವನು, ಬತ = ಖೇದವು

**ಅತಃ ಅಯಂ** = ಆದುದರಿಂದ ಈ ಸಂಕರನು

**ಪ್ರಚ್ಛನ್ನಬೌದ್ಧಃ (ಇತಿ) ಪ್ರಸಿದ್ಧಃ** = ಪ್ರಚ್ಛನ್ನಬೌದ್ಧನು ಎಂದು ಪ್ರಸಿದ್ಧನಾದನು.

**ತಾತ್ಪರ್ಯ—** ಈ ಸಂಕರನು ಪ್ರಚ್ಛನ್ನಬೌದ್ಧನು ಎಂದು ಪ್ರಸಿದ್ಧನಾದನು. ಬೌದ್ಧರು ಪ್ರಪಂಚವನ್ನು ಅಸತ್ ಎಂದು ಹೇಳುತ್ತಾರೆ. ಸಂಕರನು ಪ್ರಪಂಚವು ಅಸತ್ ಎಂದು ಹೇಳುವುದಕ್ಕೆ ಬದಲಾಗಿ ಸದಸದ್ವಿಲಕ್ಷಣ ಎಂದು ಹೇಳಿದನು. ಪ್ರಪಂಚವು ಮಾಯಿಕ ಎಂದು ಹೇಳುವುದಕ್ಕೆ ಬದಲಾಗಿ 'ಸಂವೃತಿ' ಎಂಬ ಪದಾರ್ಥವನ್ನು ಮಾಯಾ ಎಂಬ ಹೆಸರಿನಿಂದ ಹೇಳಿದನು. ಅನಂತಗುಣಗಳಿಂದ ಪೂರ್ಣನಾದ ಪರಬ್ರಹ್ಮನನ್ನು ಶೂನ್ಯಸಿದ್ಧಿಗಾಗಿ ಶೂನ್ಯ ಎಂದು ಹೇಳಿದನು. ಆದ್ದರಿಂದ ಈ ಮತವು ಪ್ರಚ್ಛನ್ನಬೌದ್ಧಮತವೆಂದು ಪ್ರಸಿದ್ಧವಾಯಿತು. ಇಂತಹ ಪ್ರಚ್ಛನ್ನ ಬೌದ್ಧಮತವನ್ನು ವೈದಿಕಮತವೆಂದು ಹೇಳುವುದು ತುಂಬಾ ಖೇದಜನಕವಾಗಿದೆ, ಅಯ್ಯೋ !

**ವಿಗ್ರಹ—**

**ಅಸತ್ಪದೇ—** ಅಸತ್ ಇತಿ ಪದಂ ಅಸತ್ಪದಂ, ತಸ್ಮಿನ್ ಅಸತ್ಪದೇ ।

**ಅಸನ್—** ನ ಸನ್ ಅಸನ್ ।

**ಸದಸದ್ವಿವಿಕ್ತಂ—** ಸಚ್ಚ ಅಸಚ್ಚ ಸದಸತೀ, ಸದಸದ್ಭ್ಯಾಂ ವಿವಿಕ್ತಂ ಸದಸದ್ವಿವಿಕ್ತಂ ।

**ಮಾಯಾಖ್ಯಯಾ—** ಮಾಯಾ ಇತಿ ಆಖ್ಯಾ ಮಾಯಾಖ್ಯಾ, ತಯಾ ಮಾಯಾಖ್ಯಯಾ ।

**ಶೂನ್ಯಸಿದ್ಧ್ಯೈ—** ಶೂನ್ಯಸ್ಯ ಸಿದ್ಧಿಃ ಶೂನ್ಯಸಿದ್ಧಿಃ, ತಸ್ಯೈ ಶೂನ್ಯಸಿದ್ಧ್ಯೈ ।

**ಪ್ರಚ್ಛನ್ನಬೌದ್ಧಃ—** ಪ್ರಚ್ಛನ್ನಶ್ಚಾಸೌ ಬೌದ್ಧಶ್ಚ ಪ್ರಚ್ಛನ್ನಬೌದ್ಧಃ ।

**ಕ್ರಿಯಾಪದ—** ಅಭ್ಯದತ್ತ- ಅಭಿ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತ್ಯಸ್ಮಾತ್ ಧಾರಣಪೋಷಣಾರ್ಥಕಾತ್ ಧಾಞ್ ಧಾತೋಃ ಆತ್ಮನೇಪದಿನಃ ಲಙ್ ಪ್ರಥಮಪುರುಷೇ ಏಕವಚನೇ 'ಅಭ್ಯಧತ್ತ' ಇತಿ ರೂಪಮ್ ।

| | | |
|---|---|---|
| ಅಭ್ಯಧತ್ತ | ಅಭ್ಯದಧಾತಾಂ | ಅಭ್ಯದಧತ, |
| ಅಭ್ಯಧತ್ಥಾಃ | ಅಭ್ಯಧಾಥಾಂ | ಅಭ್ಯದಧ್ವಂ, |
| ಅಭ್ಯದಧಿ | ಅಭ್ಯದಧ್ವಹಿ | ಅಭ್ಯದಧ್ಮಹಿ ॥ |

**ಅಲಂಕಾರ—** ಸ್ವಭಾವೋಕ್ತ್ಯಲಂಕಾರ.

★ ★ ★

ಬ್ರಹ್ಮಸೂತ್ರವನ್ನು ಕದ್ದ ಮಣಿಮಂತ ಮಹಾತಸ್ಕರನೆನಿಸಿದ

**ಯದ್ಬ್ರಹ್ಮಸೂತ್ರೋತ್ಕರಭಾಸ್ಕರಂ ಚ**
**ಪ್ರಕಾಶಯಂತಂ ಸಕಲಂ ಸ್ವಗೋಭಿಃ ।**
**ಅಚೂಚುರದ್ವೇದಸಮೂಹವಾಹಂ**
**ತತೋ ಮಹಾತಸ್ಕರಮೇನಮಾಹುಃ ॥ 52 ॥**

**ಪದಚ್ಛೇದ—** ಯತ್, ಬ್ರಹ್ಮಸೂತ್ರೋತ್ಕರಭಾಸ್ಕರಂ, ಚ, ಪ್ರಕಾಶಯಂತಂ, ಸಕಲಂ, ಸ್ವಗೋಭಿಃ, ಅಚೂಚುರತ್, ವೇದಸಮೂಹವಾಹಂ, ತತಃ, ಮಹಾತಸ್ಕರಂ, ಏನಂ, ಆಹುಃ ।

**ಅನ್ವಯ—** ಯತ್ (ಅಯಂ) ಸಕಲಂ ಸ್ವಗೋಭಿಃ ಪ್ರಕಾಶಯಂತಂ ವೇದಸಮೂಹವಾಹಂ ಬ್ರಹ್ಮಸೂತ್ರೋತ್ಕರ-ಭಾಸ್ಕರಂ ಚ ಅಚೂಚುರತ್, ತತಃ ಏನಂ ಮಹಾತಸ್ಕರಂ ಆಹುಃ ।

**ಅನ್ವಯಾರ್ಥ—**

**ಯತ್ (ಅಯಂ) ಸಕಲಂ** = ಯಾವ ಕಾರಣದಿಂದ (ಈ ಸಂಕರನು) ಎಲ್ಲಾ ವಿಷಯಗಳನ್ನೂ

**ಸ್ವಗೋಭಿಃ ಪ್ರಕಾಶಯಂತಂ** = ತಮ್ಮಲ್ಲಿರುವ ವಾಕ್ಯಗಳಿಂದ ಪ್ರಕಟಿಸುವ

**ವೇದಸಮೂಹವಾಹಂ** = ಸಮಸ್ತ ವೇದಗಳೇ ವಾಹನವಾಗುಳ್ಳ

**ಬ್ರಹ್ಮಸೂತ್ರೋತ್ಕರಭಾಸ್ಕರಂ ಚ ಅಚೂಚುರತ್** = ಬ್ರಹ್ಮಸೂತ್ರಗಳ ರಾಶಿಯೆಂಬ ಸೂರ್ಯನನ್ನು ಕದ್ದನೋ

**ತತಃ** = ಆ ಕಾರಣದಿಂದ

**ಏನಂ ಮಹಾತಸ್ಕರಂ ಆಹುಃ** = ಈ ಸಂಕರನನ್ನು ದೊಡ್ಡ ಕಳ್ಳನನ್ನಾಗಿ ಜ್ಞಾನಿಗಳು ಹೇಳುತ್ತಾರೆ.

**ತಾತ್ಪರ್ಯ—** ಸಂಕರನನ್ನು ದೊಡ್ಡ ಕಳ್ಳನೆಂದು ಹೇಳಬಹುದು. ಸೂರ್ಯನು ಎಲ್ಲಾ ವಸ್ತುಗಳನ್ನೂ ಚೆನ್ನಾಗಿ ತಿಳಿಸುತ್ತಿರುವನು. ಬ್ರಹ್ಮಸೂತ್ರಗಳು ತನ್ನಲ್ಲಿರುವ ವಾಕ್ಯಗಳಿಂದ ಸಕಲ ವಿಷಯಗಳನ್ನೂ ತಿಳಿಸುತ್ತಿರುತ್ತವೆ. ಎಲ್ಲಾ ವೇದಗಳಿಗೂ ಅರ್ಥಗಳನ್ನು ಚೆನ್ನಾಗಿ ತಿಳಿಸುತ್ತಿರುತ್ತವೆ. ಆದ್ದರಿಂದಲೇ ಬ್ರಹ್ಮಸೂತ್ರಗಳನ್ನು 'ವೇದಸಮೂಹವಾಹಂ' ಎಂದು ಜ್ಞಾನಿಗಳು ಕರೆಯುತ್ತಿರುವರು. ಹೀಗೆ ಎಲ್ಲಾ ವಿಷಯಗಳನ್ನೂ ಸ್ಪಷ್ಟವಾಗಿ ತಿಳಿಸುತ್ತಿರುವ ಬ್ರಹ್ಮಸೂತ್ರಗಳನ್ನೇ ಕದ್ದಿರುವ ಸಂಕರನು ದೊಡ್ಡ ಕಳ್ಳನಲ್ಲವೇ ? ಆದ್ದರಿಂದ ಬ್ರಹ್ಮಸೂತ್ರಗಳನ್ನು ಕದ್ದಿರುವ ಸಂಕರನು ದೊಡ್ಡ ಕಳ್ಳನೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ವಿಗ್ರಹ—

**ಬ್ರಹ್ಮಸೂತ್ರೋತ್ಕರಭಾಸ್ಕರಂ—** ಬ್ರಹ್ಮಣಃ ಸೂತ್ರಾಣಿ ಬ್ರಹ್ಮಸೂತ್ರಾಣಿ ಬ್ರಹ್ಮಸೂತ್ರಾಣಾಂ ಉತ್ಕರಃ ಬ್ರಹ್ಮ-ಸೂತ್ರೋತ್ಕರಃ, ಬ್ರಹ್ಮಸೂತ್ರೋತ್ಕರ ಏವ ಭಾಸ್ಕರಃ ಬ್ರಹ್ಮಸೂತ್ರೋತ್ಕರಭಾಸ್ಕರಃ, ತಂ ಬ್ರಹ್ಮಸೂತ್ರೋ-ತ್ಕರಭಾಸ್ಕರಂ ।

**ಪ್ರಕಾಶಯಂತಂ—** ಪ್ರಕಾಶಯತಿ ಇತಿ ಪ್ರಕಾಶಯನ್, ತಂ ಪ್ರಕಾಶಯಂತಂ ।

**ಸ್ವಗೋಭಿಃ—** ಸ್ವಸ್ಯ ಗಾವಃ ಸ್ವಗಾವಃ, ತೈಃ ಸ್ವಗೋಭಿಃ ।

**ವೇದಸಮೂಹವಾಹಂ—** ವೇದಾನಾಂ ಸಮೂಹಃ ವೇದಸಮೂಹಃ, ವೇದಸಮೂಹಂ ವಹತಿ ಇತಿ ವೇದಸಮೂಹವಾಟ್, ತಂ ವೇದಸಮೂಹವಾಹಂ । (ವೇದಸಮೂಹ ಏವ ವಾಹಃ ಯಸ್ಯ ಸಃ)

**ಮಹಾತಸ್ಕರಂ—** ಮಹಾಂಶ್ಚಾಸೌ ತಸ್ಕರಶ್ಚ ಮಹಾತಸ್ಕರಃ, ತಂ ಮಹಾತಸ್ಕರಂ ।

**ಕ್ರಿಯಾಪದ— ಅಚೂಚುರತ್** - ಚುರ ಸ್ತೇಯೇ ಇತಿ ಸ್ತೇಯಾರ್ಥಕಾತ್ ಚುರಧಾತೋಃ ಲುಙ್ ಪ್ರಥಮಪುರುಷೇ ಏಕವಚನೇ 'ಅಚೂಚುರತ್' ಇತಿ ರೂಪಮ್ ।

ಅಚೂಚುರತ್ ಅಚೂಚುರತಾಂ ಅಚೂಚುರನ್,
ಅಚೂಚುರಃ ಅಚೂಚುರತಂ ಅಚೂಚುರತ,
ಅಚೂಚುರಂ ಅಚೂಚುರಾವ ಅಚೂಚುರಾಮ ॥

**ಅಲಂಕಾರ—** ಉಪಮಾಲಂಕಾರ.

★ ★ ★

ಅಕಾರ್ಯ ಮಾಡಿದ ಮಣಿಮಂತನನ್ನು ವ್ಯಾಸರು ಸುಡಲಿಲ್ಲ

**ಸ್ವಸೂತ್ರಜಾತಸ್ಯ ವಿರುದ್ಧಭಾಷೀ**
**ತದ್ಭಾಷ್ಯಕಾರೋಽಹಮಿತಿ ಬ್ರುವನ್ ಯಃ ।**
**ತಂ ತತ್ಕ್ಷಣಾದ್ಯೋ ನ ದಿಧಕ್ಷತಿ ಸ್ಮ**
**ಸ ವ್ಯಾಸರೂಪೋ ಭಗವಾನ್ ಕ್ಷಮಾಬ್ಧಿಃ ॥ 53 ॥**

**ಪದಚ್ಛೇದ—** ಸ್ವಸೂತ್ರಜಾತಸ್ಯ, ವಿರುದ್ಧಭಾಷೀ, ತದ್ಭಾಷ್ಯಕಾರಃ, ಅಹಂ, ಇತಿ, ಬ್ರುವನ್, ಯಃ, ತಂ, ತತ್ಕ್ಷಣಾತ್, ಯಃ, ನ, ದಿಧಕ್ಷತಿ, ಸ್ಮ, ಸಃ, ವ್ಯಾಸರೂಪಃ, ಭಗವಾನ್, ಕ್ಷಮಾಬ್ಧಿಃ ।

**ಅನ್ವಯ—** ಸ್ವಸೂತ್ರಜಾತಸ್ಯ ವಿರುದ್ಧಭಾಷೀ ಅಹಂ ತದ್ಭಾಷ್ಯಕಾರಃ ಇತಿ ಬ್ರುವನ್ ಯಃ ತಂ ತತ್ಕ್ಷಣಾತ್ ಯಃ ನ ದಿಧಕ್ಷತಿ ಸ್ಮ ಸಃ ವ್ಯಾಸರೂಪಃ ಭಗವಾನ್ ಕ್ಷಮಾಬ್ಧಿಃ ।

**ಅನ್ವಯಾರ್ಥ—**

**ಸ್ವಸೂತ್ರಜಾತಸ್ಯ ವಿರುದ್ಧಭಾಷೀ** = ತಮ್ಮಿಂದ ಬರೆಯಲ್ಪಟ್ಟ ಸೂತ್ರಗಳ ಸಮೂಹಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಹೇಳುತ್ತಾ

**ಅಹಂ ತದ್ಭಾಷ್ಯಕಾರಃ ಇತಿ ಬ್ರುವನ್** = ನಾನು ಆ ಸೂತ್ರಗಳಿಗೆ ಭಾಷ್ಯವನ್ನು ಬರೆಯುತ್ತಿರುವೆನು ಹೀಗೆಂದು ಹೇಳುತ್ತಿರುವವನು

**ಯಃ** = ಯಾವ ಸಂಕರನೋ

**ತಂ** = ಅವನನ್ನು

**ಯಃ ವ್ಯಾಸರೂಪಃ** = ಯಾವ ವ್ಯಾಸರೂಪಿಯಾದ

**ಭಗವಾನ್** = ಭಗವಂತನು

**ತತ್ಕ್ಷಣಾತ್ ನ ದಿಧಕ್ಷತಿ ಸ್ಮ** = ಅದೇ ಕ್ಷಣದಲ್ಲಿಯೇ ಸುಡುವುದಕ್ಕೆ ಇಚ್ಛಿಸಲಿಲ್ಲ.

**ಸಃ ಕ್ಷಮಾಬ್ಧಿಃ** = ಆ ವ್ಯಾಸರು ಕ್ಷಮಾಸಮುದ್ರರಲ್ಲವೇ ?

**ತಾತ್ಪರ್ಯ—** ಒಬ್ಬರು ಸೂತ್ರಗಳನ್ನು ಬರೆದಿರುವ ಆ ವ್ಯಾಸರು. ಆ ಸೂತ್ರಗಳ ಸಮೂಹಕ್ಕೆ ವಿರುದ್ಧವಾದ ಮಾತುಗಳನ್ನು ಹೇಳುತ್ತಾ ಆ ಸೂತ್ರಗಳಿಗೆ ಭಾಷ್ಯವನ್ನು ಬರೆಯುವುದಾಗಿ ಇನ್ನೊಬ್ಬನು ಹೇಳುವನು. ಆಗ ಸೂತ್ರಕಾರನಿಗೆ ಶಕ್ತಿಯಿದ್ದರೆ ಭಾಷ್ಯವೆಂದು ಹೇಳುತ್ತಿರುವವನನ್ನು ಸುಟ್ಟುಬಿಡಬೇಕು. ಹಾಗೆ ಸುಡುವುದಕ್ಕೆ ಶಕ್ತಿಯಿದ್ದರೂ ಸುಡದಿರುವವನು ಕ್ಷಮಾಸಮುದ್ರನೆಂದೇ ಹೇಳಬೇಕು.

**ವಿಗ್ರಹ—**

**ಸ್ವಸೂತ್ರಜಾತಸ್ಯ—** ಸ್ವಸ್ಯ ಸೂತ್ರಾಣಿ ಸ್ವಸೂತ್ರಾಣಿ, ಸ್ವಸೂತ್ರಾಣಾಂ ಜಾತಂ ಸ್ವಸೂತ್ರಜಾತಂ, ತಸ್ಯ ಸ್ವಸೂತ್ರಜಾತಸ್ಯ ।

**ವಿರುದ್ಧಭಾಷೀ—** ವಿರುದ್ಧಂ ಭಾಷತೇ ಇತಿ ವಿರುದ್ಧಭಾಷೀ ।

**ತದ್ಭಾಷ್ಯಕಾರಃ—** ತೇಷಾಂ ಭಾಷ್ಯಂ ತದ್ಭಾಷ್ಯಂ, ತದ್ಭಾಷ್ಯಂ ಕರೋತಿ ಇತಿ ತದ್ಭಾಷ್ಯಕಾರಃ ।

**ಬ್ರುವನ್—** ಬ್ರೂತೇ ಇತಿ ಬ್ರುವನ್ ।

**ತತ್ಕ್ಷಣಾತ್—** ಸ ಏವ ಕ್ಷಣಃ ತತ್ಕ್ಷಣಃ, ತಸ್ಮಾತ್ ತತ್ಕ್ಷಣಾತ್ ।

**ದಿಧಕ್ಷತಿ—** ದಗ್ಧುಂ ಇಚ್ಛತಿ ದಿಧಕ್ಷತಿ ।

**ವ್ಯಾಸರೂಪಃ—** ವ್ಯಾಸರೂಪಂ ಅಸ್ಯ ಇಸ್ತಿ ಇತಿ ವ್ಯಾಸರೂಪಃ । (ವ್ಯಾಸ ಇತಿ ರೂಪಂ ಯಸ್ಯ ಸಃ)

**ಭಗವಾನ್—** ಭಗಃ ಅಸ್ಯ ಅಸ್ತಿ ಇತಿ ಭಗವಾನ್ ।

**ಕ್ಷಮಾಬ್ಧಿಃ—** ಕ್ಷಮಾಯಾಂ ಅಬ್ಧಿಃ ಇವ ಕ್ಷಮಾಬ್ಧಿಃ ।

**ಕ್ರಿಯಾಪದ—** ದಿಧಕ್ಷತಿ- ದಹ ಭಸ್ಮೀಕರಣೇ ಇತಿ ಭಸ್ಮೀಕರಣಾರ್ಥಕಾತ್ ದಹ ಧಾತೋಃ ಲೃಟಿ ಪ್ರಥಮಪುರುಷೇ ಏಕವಚನೇ 'ದಿಧಕ್ಷತಿ' ಇತಿ ರೂಪಂ ।

ದಿಧಕ್ಷತಿ ದಿಧಕ್ಷತಃ ದಿಧಕ್ಷಂತಿ, ದಿಧಕ್ಷಸಿ ದಿಧಕ್ಷಥಃ ದಿಧಕ್ಷಥ, ದಿಧಕ್ಷಾಮಿ ದಿಧಕ್ಷಾವಃ ದಿಧಕ್ಷಾಮಃ ॥

**ಅಲಂಕಾರ—** ಕಾವ್ಯಲಿಂಗಾಲಂಕಾರ.

★ ★ ★

ವೇದಸಮೂಹವು ಸಂಕರನಿಂದ ಕಲುಷಿತವಾಯಿತು

**ನಿಗಮಸನ್ಮಣಿದೀಪಗಣೋಽಭವ-**
**ತ್ತದುರುವಾಗ್ಗಣಪಂಕನಿಗೂಢಭಾಃ ।**
**ಅವಿದುಷಾಮಿತಿ ಸಂಕರತಾಕರಃ**
**ಸ ಕಿಲ ಸಂಕರ ಇತ್ಯಭಿಶುಶ್ರುವೇ ॥ 54 ॥**

**ಪದಚ್ಛೇದ—** ನಿಗಮಸನ್ಮಣಿದೀಪಗಣಃ, ಅಭವತ್, ತತ್, ಉರುವಾಗ್ಗಣಪಂಕನಿಗೂಢಭಾಃ, ಅವಿದುಷಾಂ, ಇತಿ ಸಂಕರತಾಕರಃ ಸಃ ಕಿಲ ಸಂಕರಃ ಇತಿ ಅಭಿಶುಶ್ರುವೇ ।

**ಅನ್ವಯ—** ನಿಗಮಸನ್ಮಣಿದೀಪಗಣಃ ತದ್ ಉರುವಾಗ್ಗಣಪಂಕನಿಗೂಢಭಾಃ ಅಭವತ್ ಇತಿ ಅವಿದುಷಾಂ ಸಂಕರತಾಕರಃ ಸಃ ಸಂಕರಃ ಇತಿ ಅಭಿಶುಶ್ರುವೇ ಕಿಲ ।

**ಅನ್ವಯಾರ್ಥ—**

**ನಿಗಮಸನ್ಮಣಿದೀಪಗಣಃ** = ವೇದವಾಕ್ಯಗಳೆಂಬ ಶ್ರೇಷ್ಠಗಳಾದ ಮಣಿಗಳ ದೀಪಗಳ ಸಮೂಹವು

**ತತ್** = ಆ ಸಂಕರನ

**ಉರುವಾಗ್ಗಣಪಂಕನಿಗೂಢಭಾಃ ಅಭವತ್** = ಅಧಿಕವಾದ ಮಾತುಗಳ ಸಮೂಹವೆಂಬ ಕೆಸರಿನಿಂದ ಅಡಗಿದ ಕಾಂತಿಯುಳ್ಳದ್ದಾಗಿ ಮುಚ್ಚಲ್ಪಟ್ಟಿತು.

**ಇತಿ ಅವಿದುಷಾಂ ಸಂಕರತಾಕರಃ** = ಹೀಗೆ ಅಜ್ಞಾನಿಗಳಿಗೆ ಬುದ್ಧಿಸಾಂಕರ್ಯವನ್ನು ಹುಟ್ಟಿಸುತ್ತಿರುವ

**ಸಃ** = ಆ ಸಂಕರನು

**ಸಂಕರಃ ಇತಿ** = ಸಂಕರ ಎಂಬ ಅನ್ವರ್ಥಕವಾದ ಹೆಸರಿನಿಂದ

**ಅಭಿಶುಶ್ರುವೇ ಕಿಲ** = ಕರೆಯಲ್ಪಟ್ಟನು.

**ತಾತ್ಪರ್ಯ—** ವೇದವಾಕ್ಯಗಳು ನಿರ್ದೋಷಗಳಾದ ಉತ್ತಮ ಮಣಿಗಳು. ಸಂಕರನ ಮಾತುಗಳು ರುದ್ರದೇವರ ವರದಿಂದ ಲಬ್ಧವಾಗಿರುವ ಮಾತುಗಳೆಂಬ ಕೆಸರಿಗೆ ಸಮಾನವಾದವುಗಳು. ವೇದಗಳ ಸನ್ಮಣಿಗಳು ತಿರುವು ಮಾತುಗಳ ಕೆಸರಿನಿಂದ ಮುಚ್ಚಲ್ಪಟ್ಟವು. ಆದ್ದರಿಂದಲೇ ಕೆಸರು ಮುಚ್ಚಿದ ಮಣಿಗಳ ಪ್ರಕಾಶದಂತೆ ಇದ್ದವು. ಹೀಗೆ ಅಜ್ಞಾನಿಗಳಿಗೆ ಬುದ್ಧಿಸಾಂಕರ್ಯವನ್ನು ಕೊಡುತ್ತಿರುವ ಸಂಕರನಿಗೆ 'ಸಂಕರ' ಎಂಬ ಹೆಸರು ಅನ್ವರ್ಥಕವಾಯಿತು.

**ವಿಗ್ರಹ—**

**ನಿಗಮಸನ್ಮಣಿದೀಪಗಣಃ—** ನಿಗಮಾಃ ಸನ್ಮಣಯಃ ಇವ ನಿಗಮಸನ್ಮಣಯಃ, ನಿಗಮಸನ್ಮಣಯ ಏವ ದೀಪಾಃ, ನಿಗಮಸನ್ಮಣಿದೀಪಾಃ ನಿಗಮಸನ್ಮಣಿದೀಪಾನಾಂ ಗಣಃ ನಿಗಮಸನ್ಮಣಿದೀಪಗಣಃ

**ಉರುವಾಗ್ಗಣಪಂಕನಿಗೂಢಭಾಃ—** ಉರ್ವ್ಯಶ್ಚ ತಾಃ ವಾಚಶ್ಚ ಉರುವಾಚಃ, ಉರುವಾಚಾಂ ಗಣಃ ಉರುವಾಗ್ಗಣಃ, ಉರುವಾಗ್ಗಣಸ್ಯ ಪಂಕಃ ಉರುವಾಗ್ಗಣಪಂಕಃ, ಉರುವಾಗ್ಗಣಪಂಕೇನ ನಿಗೂಢಾಃ ಭಾಃ ಯಸ್ಯ ಸಃ ಉರುವಾಗ್ಗಣಪಂಕನಿಗೂಢಭಾಃ ।

**ಅವಿದುಷಾಂ—** ನ ವಿದ್ವಾಂಸಃ ಅವಿದ್ವಾಂಸಃ, ತೇಷಾಂ ಅವಿದುಷಾಂ ।

**ಸಂಕರತಾಕರಃ—** ಸಂಕರಸ್ಯ ಭಾವಃ ಸಂಕರತಾ, ಸಂಕರತಾಂ ಕರೋತಿ ಇತಿ ಸಂಕರತಾಕರಃ ।

**ಕ್ರಿಯಾಪದ— ಅಭಿಶುಶ್ರುವೇ-** ಅಭಿ ಇತ್ಯುಪಸರ್ಗ ಪೂರ್ವಕಾತ್ ಶ್ರುಶ್ರವಣೇ ಇತ್ಯಸ್ಮಾತ್ ಶ್ರವಣಾರ್ಥಕಾತ್ ಶ್ರು ಧಾತೋಃ ಲಿಟ್ ಪ್ರಥಮಪುರುಷೇ ಏಕವಚನೇ 'ಅಭಿಶುಶ್ರುವೇ' ಇತಿ ರೂಪಮ್ ।

ಅಭಿಶುಶ್ರುವೇ ಅಭಿಶುಶ್ರುವಾತೇ ಅಭಿಶುಶ್ರುವಿರೇ,
ಅಭಿಶುಶ್ರುವಿಷೇ ಅಭಿಶುಶ್ರುವಾಥೇ ಅಭಿಶುಶ್ರುವಿಧ್ವೇ,
ಅಭಿಶುಶ್ರುವೇ ಅಭಿಶುಶ್ರುವಿವಹೇ ಅಭಿಶುಶ್ರುವಿಮಹೇ ॥

**ಅಭವತ್-** ಭೂ-ಸತ್ತಾಯಾಮಿತ್ಯಸ್ಮಾತ್ ಸತ್ತಾರ್ಥಕಾತ್ ಭೂಧಾತೋಃ ಲಙ್ ಪ್ರ.ಪು. ಏಕವಚನೇ ಅಭವತ್ ಇತಿ ರೂಪಮ್।

ಅಭವತ್ ಅಭವತಾಂ ಅಭವನ್
ಅಭವಃ ಅಭವತಂ ಅಭವತ
ಅಭವಂ ಅಭವಾವ ಅಭವಾಮ ॥

ಈ ಶ್ಲೋಕವು "ದ್ರುತವಿಲಂಬಿತ" ಎಂಬ ವೃತ್ತದಿಂದ ಕೂಡಿದೆ. ಈ ವೃತ್ತದಲ್ಲಿ ಒಂದೊಂದು ಪಾದವು 12 ಅಕ್ಷರಗಳಿಂದ ಹಾಗೂ ನಾಲ್ಕು ಗಣಗಳಿಂದ ಕೂಡಿದೆ.

ನಗಣ ಭಗಣ ಭಗಣ ರಗಣ
ವೃತ್ತದ ಲಕ್ಷಣ - ದ್ರುತವಿ ಲಂಬಿತ ಮಾಹ ನ ಭೌ ಭರೌ

**ಅಲಂಕಾರ—** ರೂಪಕಾಲಂಕಾರ.

★ ★ ★

ದೈತ್ಯರಿಂದ ಅಭೇದಪ್ರಚಾರ - ಸಜ್ಜನರಿಗೆ ಉಂಟಾದ ಗ್ರಹಚಾರ

**ವಿಶ್ವಂ ಮಿಥ್ಯಾ ವಿಭುರಗುಣವಾನಾತ್ಮನಾಂ ನಾಸ್ತಿ ಭೇದೋ**
**ದೈತ್ಯಾ ಇತ್ಥಂ ವ್ಯದಧತ ಗಿರಾಂ ದಿಕ್ಷು ಭೂಯಃ ಪ್ರಸಿದ್ಧಿಮ್ ।**
**ಆನಂದಾದ್ಯೈರ್ಗುರುಗುಣಗಣೈಃ ಪೂರಿತೋ ವಾಸುದೇವೋ**
**ಮಂದಂ ಮಂದಂ ಮನಸಿ ಚ ಸತಾಂ ಹಂತ ನೂನಂ ತಿರೋಽಭೂತ್ ॥55॥**

**ಪದಚ್ಛೇದ—** ವಿಶ್ವಂ, ಮಿಥ್ಯಾ, ವಿಭುಃ, ಅಗುಣವಾನ್, ಆತ್ಮನಾಂ, ನ, ಅಸ್ತಿ, ಭೇದಃ, ದೈತ್ಯಾಃ, ಇತ್ಥಂ, ವ್ಯದಧತ, ಗಿರಾಂ, ದಿಕ್ಷು, ಭೂಯಃ, ಪ್ರಸಿದ್ಧಿಂ, ಆನಂದಾದ್ಯೈಃ, ಗುರುಗುಣಗಣೈಃ, ಪೂರಿತಃ, ವಾಸುದೇವಃ, ಮಂದಂ, ಮಂದಂ, ಮನಸಿ, ಚ, ಸತಾಂ, ಹಂತ, ನೂನಂ, ತಿರಃ, ಅಭೂತ್ ।

**ಅನ್ವಯ—** ವಿಶ್ವಂ ಮಿಥ್ಯಾ, ವಿಭುಃ ಅಗುಣವಾನ್, ಆತ್ಮನಾಂ ನ ಅಸ್ತಿ ಭೇದಃ, ಇತ್ಥಂ ದೈತ್ಯಾಃ ಗಿರಾಂ ದಿಕ್ಷು ಭೂಯಃ ಪ್ರಸಿದ್ಧಿಂ ವ್ಯದಧತ, ಆನಂದಾದ್ಯೈಃ ಗುರುಗುಣಗಣೈಃ ಪೂರಿತಃ ವಾಸುದೇವಃ ಮಂದಂ ಮಂದಂ ಸತಾಂ ಮನಸಿ ಚ ತಿರಃ ಅಭೂತ್, ನೂನಂ ಹಂತ ।

**ಅನ್ವಯಾರ್ಥ—**

**ವಿಶ್ವಂ ಮಿಥ್ಯಾ** = ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಂದ ತಿಳಿಯಲ್ಪಟ್ಟ ಎಲ್ಲಾ ಪ್ರಪಂಚವೂ ಸುಳ್ಳಾಗಿರುತ್ತವೆ,

**ವಿಭುಃ ಅಗುಣವಾನ್** = ವಿಭುತ್ವ ಮುಂತಾದ ಅನಂತ ಗುಣಗಳಿಂದ ಯುಕ್ತನಾಗಿರುವ ಶ್ರೀಹರಿಯು ಯಾವ ಗುಣಗಳೂ ಇಲ್ಲದವನು,

**ಆತ್ಮನಾಂ ಭೇದಃ ನ ಅಸ್ತಿ** = ಜೀವರುಗಳಲ್ಲಿ ಭೇದವು ಇರುವುದಿಲ್ಲ ,

**ಇತ್ಥಂ** = ಈ ಪ್ರಕಾರವಾಗಿ

**ದೈತ್ಯಾಃ** = ಎಲ್ಲಾ ದೈತ್ಯರುಗಳೂ

**ಗಿರಾಂ** = ಮಾತುಗಳಿಂದ

**ದಿಕ್ಷು** = ಎಲ್ಲಾ ದಿಕ್ಕುಗಳಲ್ಲಿಯೂ

**ಭೂಯಃ ಪ್ರಸಿದ್ಧಿಂ ವ್ಯದಧತ** = ಹೆಚ್ಚಾಗಿ ಪ್ರಸಿದ್ಧಿಯನ್ನು ಮಾಡಿದರು.

**ಆನಂದಾದ್ಯೈಃ ಗುರುಗುಣಗಣೈಃ ಪೂರಿತಃ ವಾಸುದೇವಃ** = ಆನಂದ, ಜ್ಞಾನ ಮುಂತಾದ ಶ್ರೇಷ್ಠಗಳಾದ ಗುಣಗಳ ಸಮೂಹಗಳಿಂದ ಪೂರ್ಣನಾಗಿರುವ ಶ್ರೀವಾಸುದೇವನು

**ಮಂದಂ ಮಂದಂ** = ಮೆಲ್ಲಮೆಲ್ಲನೆ

**ಸತಾಂ ಮನಸಿ ಚ** = ಸಜ್ಜನರ ಮನಸ್ಸಿನಲ್ಲಿಯೂ

**ತಿರಃ ಅಭೂತ್** = ಅಡಗಿ ಹೋದನು (ಇಲ್ಲದಾದನು).

**ನೂನಂ** = ನಿಶ್ಚಯ.

**ಹಂತ** = ಅಯ್ಯೋ.

**ತಾತ್ಪರ್ಯ—** ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಂದ ತಿಳಿಯಲ್ಪಟ್ಟ ಎಲ್ಲಾ ಪ್ರಪಂಚವೂ ಸುಳ್ಳು. ವಿಭುತ್ವ ಮುಂತಾದ ಗುಣಗಳಿಂದ ಯುಕ್ತನಾದ ಶ್ರೀಹರಿಯಲ್ಲಿ ಯಾವ ಗುಣವೂ ಇಲ್ಲ. ಆತ್ಮರಿಗೆ ಭೇದವಿಲ್ಲ. ಹೀಗೆ ಎಲ್ಲಾ ದಿಕ್ಕುಗಳಲ್ಲಿಯೂ ಪ್ರಸಿದ್ಧಿಯನ್ನು ದೈತ್ಯರುಗಳೆಲ್ಲರೂ ಮಾಡಿದರು. ಆಗ ಜ್ಞಾನ, ಆನಂದ ಮುಂತಾದ ಗುಣಗಳಿಂದ ಪೂರ್ಣನಾದ ವಾಸುದೇವನು ಮೆಲ್ಲ ಮೆಲ್ಲನೆ ಸಜ್ಜನರುಗಳ ಮನಸ್ಸಿನಲ್ಲಿ ಅಡಗಿ ಹೋದನು.

**ವಿಗ್ರಹ—**

**ವಿಭುಃ—** ವಿಭುತ್ವವಾನ್ ವಿಭುಃ ।

**ಅಗುಣವಾನ್—** ಗುಣಾಃ ಅಸ್ಯ ಸಂತಿ ಇತಿ ಗುಣವಾನ್, ನ ಗುಣವಾನ್ ಅಗುಣವಾನ್ ।

**ಆನಂದಾದ್ಯೈಃ—** ಆನಂದಃ ಆದ್ಯಃ ಯೇಷಾಂ ತೇ ಆನಂದಾದ್ಯಾಃ, ತೈಃ ಆನಂದಾದ್ಯೈಃ ।

**ಗುರುಗುಣಗಣೈಃ—** ಗುರವಶ್ಚ ತೇ ಗುಣಾಶ್ಚ ಗುರುಗುಣಾಃ, ಗುರುಗುಣಾನಾಂ ಗಣಾಃ ಗುರುಗುಣಗಣಾಃ, ತೈಃ ಗುರುಗುಣಗಣೈಃ ।

**ಕ್ರಿಯಾಪದ— ವ್ಯದಧತ**- 'ವಿ' ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತಿ ಧಾರಣ-ಪೋಷಣಾರ್ಥಕಾತ್ ಧಾಞ್ ಧಾತೋಃ ಲಙ್ ಪ್ರಥಮಪುರುಷೇ ಬಹುವಚನೇ 'ವ್ಯದಧತ' ಇತಿ ರೂಪಮ್ ।

ವ್ಯಧತ್ತ ವ್ಯದಧಾತಾಂ ವ್ಯದಧತ, ವ್ಯಧತ್ಥಾಃ ವ್ಯದಧಾಥಾಂ ವ್ಯದಧ್ವಂ, ವ್ಯದಧೇ ವ್ಯದಧ್ವಹೇ ವ್ಯದಧ್ಮಹೇ॥

**ಆಭೂತ್**- ಭೂ ಸತ್ತಾಯಾಂ ಇತ್ಯಸ್ಮಾತ್ ಸತ್ತಾರ್ಥಕಾತ್ ಭೂಧಾತೋಃ ಲುಙ್ ಪ್ರಥಮಪುರುಷೇ ಏಕವಚನೇ 'ಅಭೂತ್' ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಭೂತ, ಅಭೂವಂ ಅಭೂವ ಅಭೂಮ ॥

**ಅಸ್ತಿ** - ಅಸ ಭುವಿ ಇತ್ಯಸ್ಮಾತ್ ಧಾತೋಃ ಲಟ್ ಪ್ರ.ಪು. ಏಕವಚನೇ 'ಅಸ್ತಿ' ಇತಿ ರೂಪಮ್ ।

ಅಸ್ತಿ ಸ್ತಃ ಸಂತಿ, ಅಸಿ ಸ್ಥಃ ಸ್ಥ, ಅಸ್ಮಿ ಸ್ವಃ ಸ್ಮಃ ॥

**ಮಂದಾಕ್ರಾಂತ ವೃತ್ತ**

| ಮಗಣ | ಭಗಣ | ನಗಣ | ತಗಣ | ತಗಣ | ಗು | ಗು |
|---|---|---|---|---|---|---|
| ಮಂದ್ರಾಕ್ರಾಂ | ತಾಜಲ | ಧಿಷಡ | ಗ್ಯೆರ್ಮ್ಯಾನ | ತೌತಾದ್ಗು | ರೂ | ಚೇತ್ |

ಈ ವೃತ್ತವು ಒಂದೊಂದು ಪಾದದಲ್ಲಿ 17 ಅಕ್ಷರಗಳಿಂದ ಕೂಡಿರುತ್ತದೆ. 5 ಗಣಗಳು, 2 ಗುರ್ವಕ್ಷರಗಳಿಂದ ಕೂಡಿರುತ್ತದೆ.

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ಪ್ರಥಮಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ದ್ವಿತೀಯಃ ಸರ್ಗಃ

ಕುಲಪತಿ ನಾರಾಯಣನಲ್ಲಿ ಬ್ರಹ್ಮಾದಿದೇವತೆಗಳ ಪ್ರಾರ್ಥನೆ

**ವಿಜ್ಞಾನಭಾನುಮತಿ ಕಾಲಬಲೇನ ಲೀನೇ**
**ದುರ್ಭಾಷ್ಯಸಂತಮಸಸಂತತಿತೋ ಜನೇಽಂಧೇ ।**
**ಮಾರ್ಗಾತ್ಸತಾಂ ಸ್ಖಲತಿ ಖಿನ್ನಹೃದೋ ಮುಕುಂದಂ**
**ದೇವಾಶ್ಚತುರ್ಮುಖಮುಖಾಃ ಶರಣಂ ಪ್ರಜಗ್ಮುಃ ॥ 1 ॥**

**ಪದಚ್ಛೇದ—** ವಿಜ್ಞಾನಭಾನುಮತಿ, ಕಾಲಬಲೇನ, ಲೀನೇ, ದುರ್ಭಾಷ್ಯಸಂತಮಸಸಂತತಿತಃ, ಜನೇ, ಅಂಧೇ, ಮಾರ್ಗಾತ್, ಸತಾಂ, ಸ್ಖಲತಿ, ಖಿನ್ನಹೃದಃ, ಮುಕುಂದಂ, ದೇವಾಃ, ಚತುರ್ಮುಖಮುಖಾಃ, ಶರಣಂ, ಪ್ರಜಗ್ಮುಃ ।

**ಅನ್ವಯ—** ವಿಜ್ಞಾನಭಾನುಮತಿ ಕಾಲಬಲೇನ ಲೀನೇ ದುರ್ಭಾಷ್ಯಸಂತಮಸಸಂತತಿತಃ ಅಂಧೇ ಜನೇ ಸತಾಂ ಮಾರ್ಗಾತ್ ಸ್ಖಲತಿ (ಸತಿ) ಖಿನ್ನಹೃದಃ ಚತುರ್ಮುಖಮುಖಾಃ ದೇವಾಃ ಮುಕುಂದಂ ಶರಣಂ ಪ್ರಜಗ್ಮುಃ ।

**ಅನ್ವಯಾರ್ಥ—**

**ವಿಜ್ಞಾನಭಾನುಮತಿ** = ವಿಜ್ಞಾನ ಅಂದರೆ ತತ್ತ್ವಜ್ಞಾನವೆಂಬ ಕಿರಣಗಳಿಂದ ಯುಕ್ತನಾಗಿರುವ ಸೂರ್ಯನು

**ಕಾಲಬಲೇನ** = ಕಲಿಕಾಲದ ಸಾಮರ್ಥ್ಯದಿಂದ

**ಲೀನೇ ಸತಿ** = ಅಡಗಿಹೋಗಲು

**ದುರ್ಭಾಷ್ಯಸಂತಮಸಸಂತತಿತಃ** = ಸಂಕರನೇ ಮೊದಲಾದ ದುರ್ವಾದಿಗಳಿಂದ ರಚಿತಗಳಾಗಿರುವ ಕೆಟ್ಟ ಭಾಷ್ಯಗಳೆಂಬ ಗಾಢಾಂಧಕಾರಗಳಂತಿರುವ ಭಾಷ್ಯಗಳ ಸಮೂಹದಿಂದ

**ಅಂಧೇ ಜನೇ** = ಮೂಢರಾದ, ತತ್ವಜ್ಞಾನಕ್ಕೆ ಯೋಗ್ಯರಾದ ಜನರು

**ಸತಾಂ ಮಾರ್ಗಾತ್** = ಸಜ್ಜನರುಗಳ ಮಾರ್ಗದ ದೆಸೆಯಿಂದ

**ಸ್ಖಲತಿ (ಸತಿ)** = ತಪ್ಪಿ ಹೋಗುತ್ತಿರಲು

**ಖಿನ್ನಹೃದಃ** = ಖೇದಯುಕ್ತ ಮನಸ್ಸುಗಳಿಂದ ಯುಕ್ತರಾಗಿರುವ

**ಚತುರ್ಮುಖಮುಖಾಃ ದೇವಾಃ** = ನಾಲ್ಕು ಮುಖಗಳಿಂದ ಯುಕ್ತರಾದ ಚತುರ್ಮುಖ ಬ್ರಹ್ಮದೇವನೇ ಮೊದಲಾಗಿರುವ ದೇವತೆಗಳು

**ಮುಕುಂದಂ ಶರಣಂ ಪ್ರಜಗ್ಮುಃ** = ಮುಕುಂದನನ್ನು ರಕ್ಷಕನನ್ನಾಗಿ ಹೊಂದಿದರು.

**ತಾತ್ಪರ್ಯ—** ಕಾಲಬಲದಿಂದ ವಿಜ್ಞಾನ ಎಂಬ ತತ್ತ್ವಜ್ಞಾನವು ಎಲ್ಲಾ ಕಡೆಗಳಲ್ಲಿಯೂ ಇಲ್ಲದಂತಾಯಿತು. ಇನ್ನೊಂದು ಕಡೆ ಸಂಕರ ಮುಂತಾದ ದುರ್ವಾದಿಗಳಿಂದ ರಚಿಸಲ್ಪಟ್ಟ ದುರ್ಭಾಷ್ಯಗಳು ಸಾಲುಸಾಲಾಗಿ ಅಪಪ್ರಚಾರವನ್ನು ಮಾಡ ಹತ್ತಿದವು. ಇದರಿಂದ ಸರಿಯಾದ ಜ್ಞಾನವಿಲ್ಲ. ವಿಪರೀತ ಜ್ಞಾನಗಳು ಹುಟ್ಟುತ್ತಾ ಇವೆ. ಇದರಿಂದ ಯೋಗ್ಯ ಜನರಿಗೂ ವಿಪರೀತಜ್ಞಾನವು ಹುಟ್ಟುತ್ತಾ ಇರುವುದನ್ನು ನಾಲ್ಕುಮುಖಗಳಿಂದ ಯುಕ್ತರಾದ ಚತುರ್ಮುಖ ಬ್ರಹ್ಮದೇವನೇ ಮೊದಲಾದವರು, ಕಷ್ಟಕಾಲ ಬಂದಾಗ ಮುಕುಂದನಲ್ಲಿ ತಮ್ಮ ಕಷ್ಟಗಳನ್ನು ವಿಜ್ಞಾಪಿಸಿಕೊಳ್ಳುವುದೂ, ಆ ಕಷ್ಟಕ್ಕೆ ಯೋಗ್ಯವಾದ ಪರಿಹಾರವನ್ನು ಶ್ರೀಮುಕುಂದನಿಂದ ತಿಳಿಯುವುದೂ ದೇವತೆಗಳ ಸಂಪ್ರದಾಯ. ಈ ಸಂಪ್ರದಾಯದಂತೆ ಚತುರ್ಮುಖ ಬ್ರಹ್ಮದೇವನೇ ಮೊದಲಾದವರು ಮುಕುಂದನನ್ನು ಶರಣು ಹೋದರು.

**ವಿಗ್ರಹ—**

**ವಿಜ್ಞಾನಭಾನುಮತಿ—** ಭಾನುರಸ್ಯಾಸ್ತೀತಿ ಭಾನುಮಾನ್, ವಿಜ್ಞಾನಂ ಏವ ಭಾನುಮಾನ್ ವಿಜ್ಞಾನಭಾನುಮಾನ್, ತಸ್ಮಿನ್ ವಿಜ್ಞಾನಭಾನುಮತಿ ।

**ಕಾಲಬಲೇನ—** ಕಾಲಸ್ಯ ಬಲಂ ಕಾಲಬಲಂ, ತೇನ ಕಾಲಬಲೇನ ।

**ದುರ್ಭಾಷ್ಯಸಂತಮಸಸಂತತಿತಃ—** ದುಷ್ಟಾನಿ ಚ ತಾನಿ ಭಾಷ್ಯಾಣಿ ಚ ದುರ್ಭಾಷ್ಯಾಣಿ, ದುರ್ಭಾಷ್ಯಾಣಿ ಏವ ಸಂತಮಸಾನಿ ದುರ್ಭಾಷ್ಯಸಂತಮಸಾನಿ, ದುರ್ಭಾಷ್ಯಸಂತಮಸಾನಾಂ ಸಂತತಿಃ ದುರ್ಭಾಷ್ಯಸಂತಮಸಸಂತತಿಃ, ತಸ್ಯಾಃ ದುರ್ಭಾಷ್ಯಸಂತಮಸಸಂತತಿತಃ ।

**ಖಿನ್ನಹೃದಃ—** ಖಿನ್ನಂ ಹೃತ್ ಯೇಷಾಂ ತೇ ಖಿನ್ನಹೃದಃ ।

**ಚತುರ್ಮುಖಮುಖಾಃ—** ಚತ್ವಾರಿ ಮುಖಾನಿ ಯಸ್ಯ ಸಃ ಚತುರ್ಮುಖಃ, ಚತುರ್ಮುಖಃ ಮುಖಂ ಯೇಷಾಂ ತೇ ಚತುರ್ಮುಖಮುಖಾಃ ।

**ಕ್ರಿಯಾಪದ— ಪ್ರಜಗ್ಮುಃ** - ಪ್ರ ಇತ್ಯುಪಸರ್ಗಪೂರ್ವಕಾತ್ ಗಮ್ಲ್ಱ ಗತೌ ಇತಿ ಗತ್ಯರ್ಥಕಾತ್ ಲಿಟಿ ಪ್ರಥಮಪುರುಷೇ ಬಹುವಚನೇ 'ಪ್ರಜಗ್ಮುಃ' ಇತಿ ರೂಪಮ್ ।

ಪ್ರಜಗಾಮ ಪ್ರಜಗ್ಮತುಃ ಪ್ರಜಗ್ಮುಃ, ಪ್ರಜಗಮಿಥ ಪ್ರಜಗಂಥ, ಪ್ರಜಗ್ಮಥುಃ ಪ್ರಜಗ್ಮ, ಪ್ರಜಗಾಮ ಪ್ರಜಗಮ, ಪ್ರಜಗ್ಮಿವ ಪ್ರಜಗ್ಮಿಮ ॥

★ ★ ★

### ಜೀವೋತ್ತಮರಿಗೆ ಸರ್ವೋತ್ತಮವಾದ ಸಂದೇಶ

**ನಾಥಃ ಕಲೌ ತ್ರಿಯುಗಹೂತಿರನುದ್ಬುಭೂಷು-**
**ರ್ಬ್ರಹ್ಮಾಣಮಪ್ಯನವತಾರಮನಾದಿದಿಕ್ಷುಃ ।**
**ಸರ್ವಜ್ಞಮನ್ಯಮನವೇಕ್ಷ್ಯ ಸಕಾರ್ಯವೀರ್ಯಂ**
**ಸ್ಮೇರಾನನೋ ಭುವನಜೀವನಮಾಬಭಾಷೇ ॥ 2 ॥**

**ಪದಚ್ಛೇದ—** ನಾಥಃ, ಕಲೌ, ತ್ರಿಯುಗಹೂತಿಃ, ಅನುದ್ಬುಭೂಷುಃ, ಬ್ರಹ್ಮಾಣಂ, ಅಪಿ, ಅನವತಾರಂ, ಅನಾದಿದಿಕ್ಷುಃ, ಸರ್ವಜ್ಞಂ, ಅನ್ಯಂ ಅನವೇಕ್ಷ್ಯ, ಸಕಾರ್ಯವೀರ್ಯಂ, ಸ್ಮೇರಾನನಃ, ಭುವನಜೀವನಂ, ಆಬಭಾಷೇ ।

**ಅನ್ವಯ—** ತ್ರಿಯುಗಹೂತಿಃ ಕಲೌ ಅನುದ್ಬುಭೂಷುಃ ಅನವತಾರಂ ಬ್ರಹ್ಮಾಣಂ ಅಪಿ ಅನಾದಿದಿಕ್ಷುಃ ನಾಥಃ ಸಕಾರ್ಯವೀರ್ಯಂ ಸರ್ವಜ್ಞಂ ಅನ್ಯಂ ಅನವೇಕ್ಷ್ಯ ಭುವನಜೀವನಂ ಸ್ಮೇರಾನನಃ ಆಬಭಾಷೇ ।

**ಅನ್ವಯಾರ್ಥ—**

**ತ್ರಿಯುಗಹೂತಿಃ** = ಮೂರು ಯುಗಗಳಲ್ಲಿ ಮಾತ್ರ ಅವತಾರವುಳ್ಳವನಾದ್ದರಿಂದ 'ತ್ರಿಯುಗ' ಎಂದು ಹೆಸರುಳ್ಳ

**ಕಲೌ ಅನುದ್ಬುಭೂಷುಃ** = ಕಲಿಯುಗದಲ್ಲಿ ಅವತಾರ ಮಾಡಲು ಇಚ್ಛೆಯಿಲ್ಲದ

**ಅನವತಾರಂ ಬ್ರಹ್ಮಾಣಂ ಅಪಿ** = ಭೂಮಿಯಲ್ಲಿ ಅವತಾರವಿಲ್ಲದ ಚತುರ್ಮುಖನನ್ನೂ

**ಅನಾದಿದಿಕ್ಷುಃ** = ಅಪ್ಪಣೆ ಮಾಡಲಿಚ್ಛೆಯಿಲ್ಲದ

**ನಾಥಃ** = ಸ್ವಾಮಿಯಾದ ಆ ನಾರಾಯಣನು

**ಸಕಾರ್ಯವೀರ್ಯಂ ಸರ್ವಜ್ಞಂ ಅನ್ಯಂ ಅನವೇಕ್ಷ್ಯ** = ಕೆಲಸವನ್ನು ಸಾಧಿಸುವ ಶಕ್ತಿಯಿಂದ ಕೂಡಿದ, ಎಲ್ಲವನ್ನೂ ತಿಳಿದ, ಬೇರೆಯವನನ್ನು ನೋಡದೆ

**ಭುವನಜೀವನಂ** = ಲೋಕದ ಪ್ರಾಣಿಗಳಿಗೆ ಜೀವನಸ್ವರೂಪವಾದ ವಾಯುದೇವರನ್ನು ಕುರಿತು

**ಸ್ಮೇರಾನನಃ** = ಮುಗುಳ್ನಗೆಯುಳ್ಳವನಾಗಿ

**ಆಬಭಾಷೇ** = ಅಪ್ಪಣೆ ಮಾಡಿದನು.

**ತಾತ್ಪರ್ಯ—** ''ಯುಗತ್ರಯಾವತಾರತ್ವಾತ್ ತ್ರಿಯುಗೋ ವಿಷ್ಣುರುಚ್ಯತೇ'' = ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಎಂಬ ನಾಲ್ಕು ಯುಗಗಳ ಮಧ್ಯದಲ್ಲಿ ಮೊದಲನೆಯ ಮೂರು ಯುಗಗಳಲ್ಲಿ ಶ್ರೀಹರಿಯು ಅವತಾರಗಳನ್ನು ಸ್ವೀಕರಿಸುವನು. ನಾಲ್ಕನೆಯ ಕಲಿಯುಗದಲ್ಲಿ ಮಾತ್ರ ಶ್ರೀಹರಿಗೆ ಅವತಾರಗಳಿಲ್ಲ. ಇದು ಮೇಲ್ಕಂಡ ಪ್ರಮಾಣದ ಅರ್ಥ. ಶ್ರೀಹರಿಗೆ ಮೇಲ್ಕಂಡ ಪ್ರಮಾಣದಲ್ಲಿ ತ್ರಿಯುಗ ಎಂಬ ಹೆಸರು ಹೇಳಲ್ಪಟ್ಟಿದೆ. ಆದ್ದರಿಂದ ತ್ರಿಯುಗ ಎಂಬ ಹೆಸರಿನಿಂದ ಯುಕ್ತನಾದ ಶ್ರೀಹರಿಗೆ ಕಲಿಯುಗದಲ್ಲಿ ಅವತಾರವಿಲ್ಲವೆಂದು ಹೇಳಿದ್ದರಿಂದ ಆ ಪ್ರಮಾಣವಚನಕ್ಕೆ ಮರ್ಯಾದೆಯನ್ನು ಕೊಡುವುದಕ್ಕೋಸ್ಕರ ಶ್ರೀಹರಿಯು ಕಲಿಯುಗದಲ್ಲಿ ಅವತರಿಸಬೇಕೆಂದು ಇಷ್ಟಪಡಲಿಲ್ಲ. ಬ್ರಹ್ಮದೇವನಿಗೆ ಭೂಮಿಯಲ್ಲಿ ಅವತಾರವೇ ಇಲ್ಲ ಎಂದು ಪ್ರಮಾಣಗಳು ಸಾರುತ್ತವೆ. ಆ ಪ್ರಮಾಣವಚನಗಳಿಗೆ ಮರ್ಯಾದೆಯನ್ನು ಕೊಡುವುದಕ್ಕೋಸ್ಕರ ''ಬ್ರಹ್ಮನೇ ! ನೀನು ಭೂಮಿಯಲ್ಲಿ ಅವತರಿಸು'' ಎಂದು ಆಜ್ಞಾಪಿಸಲಿಲ್ಲ. ಉಳಿದ ದೇವತೆಗಳಲ್ಲಿ ಸರ್ವಜ್ಞರು ಯಾರೂ ಇಲ್ಲ. ಕಾರ್ಯವನ್ನು ನಿರ್ವಾಹ ಮಾಡುವ ಸಾಮರ್ಥ್ಯವೂ ಯಾರಲ್ಲಿಯೂ ಇಲ್ಲ. ಇದನ್ನೆಲ್ಲಾ ಯೋಚಿಸಿದ ಶ್ರೀಹರಿಗೆ ಮುಗುಳುನಗೆ ಬಂತು. ಎಲ್ಲಾ ಲೋಕಗಳನ್ನೂ ಬದುಕಿಸುವ ಶಕ್ತಿಯುಳ್ಳ ಮುಖ್ಯಪ್ರಾಣದೇವನನ್ನು ನೋಡಿ ಮಾತನಾಡಿದನು.

**ವಿಗ್ರಹ—**

**ತ್ರಿಯುಗಹೂತಿಃ—** ತ್ರಿಯುಗಃ ಇತಿ ಹೂತಿಃ ಯಸ್ಯ ಸಃ ತ್ರಿಯುಗಹೂತಿಃ ।

**ಅನುದ್ಬುಭೂಷುಃ—** ಉದ್ಭವಿತುಂ ಇಚ್ಛುಃ ಉದ್ಬುಭೂಷುಃ, ನ ಉದ್ಬುಭೂಷುಃ ಅನುದ್ಬುಭೂಷುಃ ।

**ಅನವತಾರಂ—** ನ ವಿದ್ಯತೇ ಅವತಾರಃ ಯಸ್ಯ ಸಃ ಅನವತಾರಃ, ತಂ ಅನವತಾರಂ ।

**ಅನಾದಿದಿಕ್ಷುಃ—** ಆದೇಷ್ಟುಂ ಇಚ್ಛುಃ ಆದಿದಿಕ್ಷುಃ, ನ ಆದಿದಿಕ್ಷುಃ ಅನಾದಿದಿಕ್ಷುಃ ।

**ಸರ್ವಜ್ಞಂ—** ಸರ್ವಂ ಜಾನಾತಿ ಇತಿ ಸರ್ವಜ್ಞಃ, ತಂ ಸರ್ವಜ್ಞಂ ।

**ಅನವೇಕ್ಷ್ಯ—** ನ ಅಪೇಕ್ಷ್ಯ ಅನಪೇಕ್ಷ್ಯ ।

**ಸಕಾರ್ಯವೀರ್ಯಂ—** ಕಾರ್ಯೇ ವೀರ್ಯಂ ಕಾರ್ಯವೀರ್ಯಂ, ಕಾರ್ಯವೀರ್ಯೇಣ ಸಹ ವರ್ತತೇ ಇತಿ ಸಕಾರ್ಯವೀರ್ಯಃ, ತಂ ಸಕಾರ್ಯವೀರ್ಯಂ ।

**ಸ್ಮೇರಾನನಃ—** ಸ್ಮೇರಂ ಆನನಂ ಯಸ್ಯ ಸಃ ಸ್ಮೇರಾನನಃ ।

**ಭುವನಜೀವನಂ—** ಜೀವಯತಿ ಇತಿ ಜೀವನಃ, ಭುವನಾನಾಂ ಜೀವನಃ ಭುವನಜೀವನಃ, ತಂ ಭುವನಜೀವನಂ ।

**ಕ್ರಿಯಾಪದ—** **ಆಬಭಾಷೇ-** ಆಙ್ ಇತ್ಯುಪಸರ್ಗಪೂರ್ವಕಾತ್ ಭಾಷ್ಯ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತ ವಾಗರ್ಥಕಾತ್ ಭಾಷ್ಯ ಧಾತೋಃ ಆತ್ಮನೇಪದಿನಿ ಲಿಟಿ ಪ್ರಥಮಪುರುಷೇ ಏಕವಚನೇ 'ಆಬಭಾಷೇ' ಇತಿ ರೂಪಮ್ ।

| | | |
|---|---|---|
| ಆಬಭಾಷೇ | ಆಬಭಾಷಾತೇ | ಆಬಭಾಷಿರೇ, |
| ಆಬಭಾಷಿಷೇ | ಆಬಭಾಷಾಥೇ | ಆಬಭಾಷಿಧ್ವೇ, ಆಬಭಾಷಿಢ್ವೇ |
| ಆಬಭಾಷೇ | ಆಬಭಾಷಿವಹೇ | ಆಬಭಾಷಿಮಹೇ ॥ |

★ ★ ★

ಭಗವದಾದೇಶದ ರೀತಿ

**ವೇದಾಂತಮಾರ್ಗಪರಿಮಾರ್ಗಣದೀನದೂನಾಃ**
**ದೈವೀಃ ಪ್ರಜಾ ವಿಶರಣಾಃ ಕರುಣಾಪದಂ ನಃ ।**
**ಆನಂದಯೇಃ ಸುಮುಖ ಭೂಷಿತಭೂಮಿಭಾಗೋ**
**ರೂಪಾಂತರೇಣ ಮಮ ಸದ್ಗುಣನಿರ್ಣಯೇನ ॥ 3 ॥**

**ಪದಚ್ಛೇದ—** ವೇದಾಂತಮಾರ್ಗಪರಿಮಾರ್ಗಣದೀನದೂನಾಃ, ದೈವೀಃ, ಪ್ರಜಾಃ, ವಿಶರಣಾಃ, ಕರುಣಾಪದಂ, ನಃ, ಆನಂದಯೇಃ ಸುಮುಖ ಭೂಷಿತಭೂಮಿಭಾಗಃ, ರೂಪಾಂತರೇಣ, ಮಮ, ಸದ್ಗುಣನಿರ್ಣಯೇನ ।

**ಅನ್ವಯ—** ವೇದಾಂತಮಾರ್ಗಪರಿಮಾರ್ಗಣದೀನದೂನಾಃ ದೈವೀಃ ಪ್ರಜಾಃ ವಿಶರಣಾಃ ನಃ ಕರುಣಾಪದಂ, ಹೇ ಸುಮುಖ ! ಭೂಷಿತಭೂಮಿಭಾಗಃ ರೂಪಾಂತರೇಣ ಮಮ ಸದ್ಗುಣನಿರ್ಣಯೇನ ಆನಂದಯೇಃ ।

**ಅನ್ವಯಾರ್ಥ—**

**ವೇದಾಂತಮಾರ್ಗಪರಿಮಾರ್ಗಣದೀನದೂನಾಃ** = ವೇದಾಂತಗಳ ಮಾರ್ಗವನ್ನು ಹುಡುಕುವುದರಲ್ಲಿ ದೈನ್ಯವನ್ನೂ ಆ ದೈನ್ಯದಿಂದ ಆಯಾಸವನ್ನೂ ಹೊಂದುತ್ತಿರುವ ಗತಿಯಿಲ್ಲದಿರುವ ದೇವರೇ ನನಗೆ ಗತಿ ಎಂದು ನಂಬಿರುವ

**ದೈವೀಃ ಪ್ರಜಾಃ ವಿಶರಣಾಃ ನಃ ಕರುಣಾಪದಂ** = ಇತರ ಗತಿಯಿಲ್ಲದಿರುವ ಪ್ರಜೆಗಳಲ್ಲಿ ನಾವು ಕರುಣೆಯನ್ನು ತೋರಿಸಬೇಕು. ಅವರಲ್ಲವೇ ನಮ್ಮ ಕರುಣೆಗೆ ಪಾತ್ರರು.

**ಹೇ ಸುಮುಖ !** = ಹೇ ಮಂಗಲಕರ ಮುಖವುಳ್ಳ ವಾಯುವೇ !

**ಭೂಷಿತಭೂಮಿಭಾಗಃ** = ಯಾವ ಭೂಪ್ರದೇಶದಲ್ಲಿ ಅವತರಿಸಿದರೆ ಸಜ್ಜನರಿಗೆ ಉಪಕಾರವಾಗುತ್ತದೆಯೋ ಆ ಸ್ಥಳವನ್ನು ಚುನಾಯಿಸಿ

**ರೂಪಾಂತರೇಣ** = ಬೇರೆಯಾದ ಮಧ್ವರೂಪದಿಂದ

**ಮಮ ಸದ್ಗುಣನಿರ್ಣಯೇನ** = ನನ್ನ ದೋಷವಿಲ್ಲದ ಗುಣಗಳನ್ನು ನಿಶ್ಚಯಿಸಿ

**ಆನಂದಯೇಃ** = ನನ್ನನ್ನು ಸಂತೋಷಪಡಿಸು.

**ತಾತ್ಪರ್ಯ—** ವೇದಾಂತದ ಮಾರ್ಗವನ್ನು ಹುಡುಕುತ್ತಾ ದೈನ್ಯವನ್ನು ಪಡೆಯುತ್ತಾ ಆಯಾಸದಿಂದ ಯುಕ್ತರಾದವರು ನಮ್ಮ ಕರುಣೆಗೆ ಪಾತ್ರರಾದವರು. ಅವರನ್ನು ನೀನು ಸಂತೋಷಪಡಿಸಬೇಕು. ನೀನು ಯಾವ ಭೂಪ್ರದೇಶದಲ್ಲಿ ಅವತರಿಸಬೇಕೋ ಆ ಪ್ರದೇಶವನ್ನು ನೀನೇ ಚುನಾಯಿಸು. ಬೇರೆ ರೂಪದಿಂದ ನನ್ನ ಸದ್ಗುಣಗಳನ್ನು ನಿರ್ಣಯಿಸಿ ನನ್ನನ್ನು ಸಂತೋಷಪಡಿಸು.

ವಿಗ್ರಹ—

**ವೇದಾಂತಮಾರ್ಗಪರಿಮಾರ್ಗಣದೀನದೂನಾಃ—** ವೇದಾಂತಾನಾಂ ಮಾರ್ಗಃ ವೇದಾಂತಮಾರ್ಗಃ, ವೇದಾಂತಮಾರ್ಗಸ್ಯ ಪರಿಮಾರ್ಗಣಂ ವೇದಾಂತಮಾರ್ಗಪರಿಮಾರ್ಗಣಂ, ವೇದಾಂತಮಾರ್ಗ-ಪರಿಮಾರ್ಗಣೇನ ದೀನಾಃ ವೇದಾಂತಮಾರ್ಗಪರಿಮಾರ್ಗಣದೀನಾಃ, ವೇದಾಂತಮಾರ್ಗಪರಿ-ಮಾರ್ಗಣದೀನಾಶ್ಚ ತಾಃ ದೂನಾಶ್ಚ, ವೇದಾಂತಮಾರ್ಗಪರಿಮಾರ್ಗಣದೀನದೂನಾಃ ।

**ದೈವೀಃ—** ದೇವಾನಾಂ ಇಮಾಃ ದೈವ್ಯಃ, ತಾಃ ದೈವೀಃ ।

**ವಿಶರಣಾಃ—** ವಿಗತಂ ಶರಣಂ ಯಾಸಾಂ ತಾಃ ವಿಶರಣಾಃ ।

**ಕರುಣಾಪದಂ—** ಕರುಣಾಯಾಃ ಪದಂ ಕರುಣಾಪದಂ ।

**ಸುಮುಖ—** ಶೋಭನಂ ಮುಖಂ ಯಸ್ಯ ಸಃ ಸುಮುಖಃ, ತಸ್ಯ ಸಂಬುದ್ಧಿಃ ಹೇ ಸುಮುಖ ।

**ಭೂಷಿತಭೂಮಿಭಾಗಃ—** ಭೂಮೇಃ ಭಾಗಃ ಭೂಮಿಭಾಗಃ, ಭೂಷಿತಃ ಭೂಮಿಭಾಗಃ ಯೇನ ಸಃ ಭೂಷಿತ-ಭೂಮಿಭಾಗಃ ।

**ರೂಪಾಂತರೇಣ—** ಅನ್ಯತ್ ರೂಪಂ ರೂಪಾಂತರಂ, ತೇನ ರೂಪಾಂತರೇಣ ।

**ಸದ್ಗುಣನಿರ್ಣಯೇನ—** ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಸದ್ಗುಣಾನಾಂ ನಿರ್ಣಯಃ ಯಸ್ಮಾತ್ ಸಃ ಸದ್ಗುಣನಿರ್ಣಯಃ, ತೇನ ಸದ್ಗುಣನಿರ್ಣಯೇನ ।

**ಕ್ರಿಯಾಪದ— ಆನಂದಯೇಃ-** ಆಙ್ ಇತ್ಯುಪಸರ್ಗಪೂರ್ವಕಾತ್ ಟು ನದಿ ಸಮೃದ್ಧೌ ಇತಿ ಸಮೃದ್ಧ್ಯರ್ಥಕಾತ್ ನದಿಧಾತೋಃ ಣಿಜಂತಾತ್ 'ಆನಂದಯೇಃ' ಇತಿ ರೂಪಮ್ ।

| | | |
|---|---|---|
| ಆನಂದಯೇತ್ | ಆನಂದಯೇತಾಂ | ಆನಂದಯೇಯುಃ, |
| ಆನಂದಯೇಃ | ಆನಂದಯೇಯಾತಾಂ | ಆನಂದಯೇಯ, |
| ಆನಂದಯೇಯಂ | ಆನಂದಯೇವ | ಆನಂದಯೇಮ ॥ |

★ ★ ★

ಸುಜನೋದ್ಧಾರಕ್ಕೆ ವಾಯುದೇವರ ಅವತಾರದ ಸಂಕಲ್ಪ

**ಆದೇಶಮೌಲಿಮಣಿಮುಜ್ಜ್ವಲವರ್ಣಮೇನಂ**
**ಬದ್ಧಾಂಜಲಿರ್ಮರುದನರ್ಘ್ಯಮಧತ್ತ ಮೂರ್ಧ್ನಾ ।**
**ಹಾರಾವಲೀಮಿವ ಹೃದಾ ವಿಬುಧೇಂದ್ರಯಾಂಚಾಂ**
**ಬಿಭ್ರನ್ನಿಜಾನನುಜಿಘೃಕ್ಷುರವಾತಿತೀರ್ಷತ್ ॥ 4 ॥**

**ಪದಚ್ಛೇದ—** ಆದೇಶಮೌಲಿಮಣಿಂ, ಉಜ್ಜ್ವಲವರ್ಣಂ, ಏನಂ, ಬದ್ಧಾಂಜಲಿಃ, ಮರುತ್, ಅನರ್ಘ್ಯಂ, ಅಧತ್ತ, ಮೂರ್ಧ್ನಾ, ಹಾರಾವಲೀಂ, ಇವ, ಹೃದಾ, ವಿಬುಧೇಂದ್ರಯಾಂಚಾಂ, ಬಿಭ್ರತ್, ನಿಜಾನ್, ಅನುಜಿಘೃಕ್ಷುಃ, ಅವಾತಿತೀರ್ಷತ್ ।

**ಅನ್ವಯ—** ಆದೇಶಮೌಲಿಮಣಿಂ ಅನರ್ಘ್ಯಂ ಉಜ್ಜ್ವಲವರ್ಣಂ ಏನಂ ಬದ್ಧಾಂಜಲಿಃ ಮರುತ್ ಮೂರ್ಧ್ನಾ ಅಧತ್ತ ಹೃದಾ ಹಾರಾವಲೀಂ ಇವ ವಿಬುಧೇಂದ್ರಯಾಂಚಾಂ ಬಿಭ್ರತ್ ನಿಜಾನ್ ಅನುಜಿಘೃಕ್ಷುಃ ಅವಾತಿತೀರ್ಷತ್ ।

**ಅನ್ವಯಾರ್ಥ—**

**ಆದೇಶಮೌಲಿಮಣಿಂ** = ಶ್ರೀಹರಿಯ ಆಜ್ಞೆ ಎಂಬ ತಲೆಯಲ್ಲಿ ಧರಿಸಬೇಕಾದ ಮಣಿಯನ್ನು

ಅನರ್ಘ್ಯಂ = ಅಮೂಲ್ಯವಾದುದನ್ನು

ಉಜ್ಜ್ವಲವರ್ಣಂ = ಅತ್ಯಂತವಾಗಿ ಜ್ವಲಿಸುತ್ತಿರುವ ಅಕ್ಷರಗಳಿಂದ ಯುಕ್ತವಾಗಿರುವುದನ್ನು

ಏನಂ = ಹೀಗಿರುವ

ಬದ್ಧಾಂಜಲಿಃ = ಎರಡು ಕೈಗಳನ್ನು ಜೋಡಿಸಿದವರಾಗಿ

ಮರುತ್ = ವಾಯುದೇವರು

ಮೂರ್ಧ್ನಾ = ತಲೆಯಿಂದ

ಅಧತ್ತ = ಧರಿಸಿದರು.

ಹೃದಾ = ಹೃದಯದಿಂದ

ಹಾರಾವಲೀಂ ಇವ = ಮುತ್ತುಗಳ ಮಾಲೆಯನ್ನು ಹೇಗೋ ಹಾಗೆ

ವಿಬುಧೇಂದ್ರಯಾಂಚಾಂ = ದೇವಶ್ರೇಷ್ಠರುಗಳ ಪ್ರಾರ್ಥನೆಯನ್ನು

ಬಿಭ್ರತ್ = ಧರಿಸಿದವರಾಗಿ

ನಿಜಾನ್ = ಸ್ವಕೀಯರಾದ ಭಕ್ತರನ್ನು

ಅನುಜಿಘೃಕ್ಷುಃ = ಅನುಗ್ರಹಿಸಬೇಕೆಂಬ ಇಚ್ಛೆಯುಳ್ಳವರಾಗಿ

ಅವಾತಿತೀರ್ಷತ್ = ಅವತಾರವನ್ನು ಸ್ವೀಕರಿಸಬೇಕೆಂದು ಅಪೇಕ್ಷಿಸಿದರು.

ತಾತ್ಪರ್ಯ— ಶ್ರೀಹರಿಯು ಮೇಲ್ಕಂಡಂತೆ ಆಜ್ಞಾಪಿಸಿದನು. ಅದನ್ನು ಕೇಳಿದ ಎಲ್ಲಾ ದೇವತೆಗಳೂ ಉತ್ತಮವಾದ ರತ್ನಗಳನ್ನು ತಲೆಯಲ್ಲಿ ಧರಿಸಿದಂತೆ ಸಂತೋಷಿಸಿದರು. ಆ ಮಾತುಗಳಲ್ಲಿರುವ ಒಂದೊಂದು ವರ್ಣಗಳನ್ನೂ ಲಾಲಿಸಿದರು. ಸಂತೋಷಾತಿರೇಕವಾಯಿತು. ಕೈಗಳನ್ನು ಜೋಡಿಸಿದರು. ತಲೆಗೆ ತಾಗಿಸಿದರು. ದೇವಶ್ರೇಷ್ಠರುಗಳ ಪ್ರಾರ್ಥನೆಯನ್ನೂ ಮುತ್ತುಗಳ ಮಾಲೆಯಂತೆ ತಲೆಯಲ್ಲಿ ಧರಿಸಿದರು. ತನ್ನ ಭಕ್ತರುಗಳಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಅವತರಿಸಬೇಕೆಂದು ಸಂಕಲ್ಪಿಸಿದರು.

ವಿಗ್ರಹ—

ಆದೇಶಮೌಲಿಮಣಿಂ— ಮೌಲೌ ಮಣಿಃ (ಇವ) ಮೌಲಿಮಣಿಃ, ಆದೇಶ ಏವ ಮೌಲಿಮಣಿಃ ಆದೇಶಮೌಲಿಮಣಿಃ, ತಂ ಆದೇಶಮೌಲಿಮಣಿಂ ।

ಉಜ್ಜ್ವಲವರ್ಣಂ— ಉಜ್ಜ್ವಲಃ ವರ್ಣಃ ಯಸ್ಯ ಸಃ ಉಜ್ಜ್ವಲವರ್ಣಃ, ತಂ ಉಜ್ಜ್ವಲವರ್ಣಂ ।

ಬದ್ಧಾಂಜಲಿಃ— ಬದ್ಧಾ ಅಂಜಲಿಃ ಯಸ್ಯ ಸಃ ಬದ್ಧಾಂಜಲಿಃ ।

ಅನರ್ಘ್ಯಂ— ನ ವಿದ್ಯತೇ ಅರ್ಘ್ಯಃ ಯಸ್ಯ ಸಃ ಅನರ್ಘ್ಯಃ, ತಂ ಅನರ್ಘ್ಯಂ ।

ಹಾರಾವಲೀಂ— ಹಾರಾಣಾಂ ಆವಲೀ ಹಾರಾವಲೀ, ತಾಂ ಹಾರಾವಲೀಂ ।

ವಿಬುಧೇಂದ್ರಯಾಂಚಾಂ— ವಿಬುಧಾನಾಂ ಇಂದ್ರಾಃ ವಿಬುಧೇಂದ್ರಾಃ, ವಿಬುಧೇಂದ್ರಾಣಾಂ ಯಾಂಚಾ ವಿಬುಧೇಂದ್ರಯಾಂಚಾ, ತಾಂ ವಿಬುಧೇಂದ್ರಯಾಂಚಾಂ ।

ಬಿಭ್ರತ್— ಬಿಭರ್ತಿ ಇತಿ ಬಿಭ್ರತ್ ।

ಅನುಜಿಘೃಕ್ಷುಃ— ಅನುಗ್ರಹೀತುಂ ಇಚ್ಛುಃ ಅನುಜಿಘೃಕ್ಷುಃ ।

ಕ್ರಿಯಾಪದ— ಅವಾತಿತೀರ್ಷತ್- ಅವ ಇತ್ಯುಪಸರ್ಗಪೂರ್ವಕಾತ್ ತೄ ಪ್ಲವನತರಣಯೋಃ ಇತ್ಯಸ್ಮಾತ್ ತೄ ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಅವಾತಿತೀರ್ಷತ್' ಇತಿ ರೂಪಮ್ ॥

| | | |
|---|---|---|
| ಅವಾತಿತೀರ್ಷತ್ | ಅವಾತಿತೀರ್ಷತಾಂ | ಅವಾತಿತೀರ್ಷನ್, |
| ಅವಾತಿತೀರ್ಷಃ | ಅವಾತಿತೀರ್ಷತಂ | ಅವಾತಿತೀರ್ಷತ, |
| ಅವಾತಿತೀರ್ಷಂ | ಅವಾತಿತೀರ್ಷಾವ | ಅವಾತಿತೀರ್ಷಾಮ ॥ |

★ ★ ★

### ಜ್ಞಾನಸಾಧನೆಗಾಗಿ ಭೂಲೋಕದಲ್ಲಿ ಸಜ್ಜನರ ಅಳಲು

**ಕಾಲಃ ಸ ಏವ ಸಮವರ್ತತ ನಾಮ ಯಾವತ್**
**ಚಿಂತಾಕುಲಂ ವಿವಿಧಸಾಧುಕುಲಂ ಬಭೂವ ।**
**ವೇದಾಂತಸಂತತಕೃತಾಂತರಸಂ ನ ವಿದ್ಮಃ**
**ಶ್ರೇಯೋ ಲಭೇಮಹಿ ಕಥಂ ನು ವಯಂ ಬತೇತಿ ॥ 5 ॥**

**ಪದಚ್ಛೇದ—** ಕಾಲಃ, ಸಃ, ಏವ, ಸಮವರ್ತತ, ನಾಮ, ಯಾವತ್, ಚಿಂತಾಕುಲಂ, ವಿವಿಧಸಾಧುಕುಲಂ, ಬಭೂವ, ವೇದಾಂತಸಂತತಕೃತಾಂತರಸಂ, ನ, ವಿದ್ಮಃ, ಶ್ರೇಯಃ, ಲಭೇಮಹಿ, ಕಥಂ, ನು, ವಯಂ, ಬತ, ಇತಿ ।

**ಅನ್ವಯ—** ವೇದಾಂತಸಂತತಕೃತಾಂತರಸಂ ನ ವಿದ್ಮಃ, ಕಥಂ ನು ವಯಂ ಶ್ರೇಯಃ ಲಭೇಮಹಿ, ಬತ ಇತಿ ವಿವಿಧಸಾಧುಕುಲಂ ಯಾವತ್ ಚಿಂತಾಕುಲಂ ಬಭೂವ, ಸಃ ಏವ ಕಾಲಃ ಸಮವರ್ತತ ನಾಮ ।

**ಅನ್ವಯಾರ್ಥ—**

**ವೇದಾಂತಸಂತತಕೃತಾಂತರಸಂ ನ ವಿದ್ಮಃ** = ವೇದಾಂತಗಳ ಅವಿಚ್ಛಿನ್ನವಾದ ಸಿದ್ಧಾಂತದ ರಹಸ್ಯವನ್ನು ನಾವು ತಿಳಿದಿಲ್ಲ.

**ಕಥಂ ನು ವಯಂ ಶ್ರೇಯಃ ಲಭೇಮಹಿ ಬತ ಇತಿ** = ಆದ್ದರಿಂದ ನಾವು ಶ್ರೇಯಸ್ಸನ್ನು ಹೇಗೆ ಪಡೆಯುವೆವು ಹೇಳಿ, ಎಂದು

**ವಿವಿಧಸಾಧುಕುಲಂ ಯಾವತ್ ಚಿಂತಾಕುಲಂ ಬಭೂವ** = ನಾನಾವಿಧರಾಗಿರುವ ಸಜ್ಜನರ ಸಮೂಹವು, ಚಿಂತೆಯಿಂದ ವ್ಯಾಕುಲವಾಗಿ ಇತ್ತೋ

**ಸ ಏವ ಕಾಲಃ ಸಮವರ್ತತ ನಾಮ** = ಅದೇ ಕಾಲವು ಇತ್ತು.

**ತಾತ್ಪರ್ಯ—** ಆ ಸಮಯದಲ್ಲಿ ಎಲ್ಲಾ ಸಜ್ಜನರ ಮನಸ್ಸುಗಳಲ್ಲಿಯೂ ಒಂದೇ ಚಿಂತೆಯಾಗಿತ್ತು. ಎಲ್ಲಾ ವೇದಾಂತಗಳ ಸಿದ್ಧಾಂತಗಳ ಅವಿಚ್ಛಿನ್ನವಾದ ರಹಸ್ಯವನ್ನು ನಾವು ತಿಳಿದಿಲ್ಲ. ನಾವು ಹೇಗೆ ಮೋಕ್ಷವನ್ನು ಪಡೆದೇವು ಎಂದು ವ್ಯಥೆಗೊಳ್ಳುತ್ತಿದ್ದರು.

**ವಿಗ್ರಹ—**

**ಚಿಂತಾಕುಲಂ—** ಚಿಂತಯಾ ಆಕುಲಂ ಚಿಂತಾಕುಲಂ ।

**ವಿವಿಧಸಾಧುಕುಲಂ—** ವಿವಿಧಾಶ್ಚ ತೇ ಸಾಧುವಶ್ಚ ವಿವಿಧಸಾಧವಃ, ವಿವಿಧಸಾಧೂನಾಂ ಕುಲಂ ವಿವಿಧ-ಸಾಧುಕುಲಂ ।

**ವೇದಾಂತಸಂತತಕೃತಾಂತರಸಂ—** ಕೃತಾಂತಸ್ಯ ರಸಃ ಕೃತಾಂತರಸಃ, ಸಂತತಶ್ಚಾಸೌ ಕೃತಾಂತರಸಶ್ಚ ಸಂತತ-ಕೃತಾಂತರಸಃ, ವೇದಾನಾಂ ಅಂತಃ ಯಸ್ಮಾತ್ ತತ್ ವೇದಾಂತಃ, ವೇದಾಂತಸ್ಯ ಸಂತತಕೃತಾಂತರಸಃ ವೇದಾಂತಸಂತತಕೃತಾಂತರಸಃ, ತಂ ವೇದಾಂತಸಂತತಕೃತಾಂತರಸಂ ।

**ಕ್ರಿಯಾಪದ— ಸಮವರ್ತತ-** ಸಂ ಇತ್ಯುಪಸರ್ಗಪೂರ್ವಕಾತ್ ವೃತು ವರ್ತನೇ ಇತ್ಯಸ್ಮಾತ್ ವರ್ತನಾರ್ಥಕಾತ್ ವೃತು ಧಾತೋಃ ಆತ್ಮನೇಪದಿನಃ ಲಙ್ ಪ್ರಥಮಪುರುಷೇ ಏಕವಚನೇ 'ಸಮವರ್ತತ' ಇತಿ ರೂಪಮ್ ।

ಸಮವರ್ತತ ಸಮವರ್ತೇತಾಂ ಸಮವರ್ತಂತ,
ಸಮವರ್ತಥಾಃ ಸಮವರ್ತೇಥಾಂ ಸಮವರ್ತಧ್ವಂ,
ಸಮವರ್ತೇ ಸಮವರ್ತಾವಹಿ ಸಮವರ್ತಾಮಹಿ ॥

**ಬಭೂವ-** ಭೂ ಸತ್ತಾಯಾಂ ಇತ್ಯಸ್ಮಾತ್ ಸತ್ತಾರ್ಥಕಾತ್ ಪರಸ್ಮೈಪದಿನಃ ಭೂಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಬಭೂವ' ಇತಿ ರೂಪಮ್ ।

ಬಭೂವ ಬಭೂವತುಃ ಬಭೂವುಃ, ಬಭೂವಿಥ ಬಭೂವಥುಃ ಬಭೂವ, ಬಭೂವ ಬಭೂವಿವ ಬಭೂವಿಮ ।

**ವಿದ್ಮಃ-** ವಿದ ಜ್ಞಾನೇ ಇತ್ಯಸ್ಮಾತ್ ಜ್ಞಾನಾರ್ಥಕಾತ್ ವಿದ ಧಾತೋಃ ಲಟಿ ಪ್ರಥಮಪುರುಷೇ ಬಹುವಚನೇ 'ವಿದ್ಮಃ' ಇತಿ ರೂಪಮ್ ।

ವೇತ್ತಿ ವಿತ್ತಃ ವಿದಂತಿ, ವೇತ್ಸಿ ವಿತ್ಥಃ ವಿತ್ಥ, ವೇದ್ಮಿ ವಿದ್ವಃ ವಿದ್ಮಃ ।

**ಲಭೇಮಹಿ -** ಡು - ಲಭಷ್ ಪ್ರಾಪ್ತೌ ಇತಿ ಧಾತೋಃ ಆತ್ಮನೇಪದಿನಃ ವಿಧಿಲಿಙ್ ಉತ್ತಮಪುರುಷೇ ಬಹುವಚನೇ ಲಭೇಮಹಿ ಇತಿ ರೂಪಮ್ ।

ಲಭೇತ ಲಭೇಯಾತಾಂ ಲಭೇರನ್
ಲಭೇಥಾಃ ಲಭೇಯಾಥಾಂ ಲಭೇಧ್ವಂ
ಲಭೇಯ ಲಭೇವಹಿ ಲಭೇಮಹಿ॥

★ ★ ★

ಶ್ರೀ ಅನಂತಾಸನ ದೇವರಿಂದ ಜನತೆಗೆ ಮಧ್ವಾವತಾರದ ಸೂಚನೆ

**ತತ್ಪ್ರೀತಯೇ ರಜತಪೀಠಪುರಾಧಿವಾಸೀ**
**ದೇವೋ ವಿವೇಶ ಪುರುಷಂ ಶುಭಸೂಚನಾಯ ।**
**ಪ್ರಾಪ್ತೇ ಮಹಾಯ ಮಹಿತಾಯ ಮಹಾಜನೌಘೇ**
**ಕೋಲಾಹಲೇನ ಸಕುತೂಹಲಿನಿ ಪ್ರವೃತ್ತೇ ॥ 6 ॥**

**ಪದಚ್ಛೇದ—** ತತ್ಪ್ರೀತಯೇ, ರಜತಪೀಠಪುರಾಧಿವಾಸೀ, ದೇವಃ, ವಿವೇಶ, ಪುರುಷಂ, ಶುಭಸೂಚನಾಯ, ಪ್ರಾಪ್ತೇ, ಮಹಾಯ, ಮಹಿತಾಯ, ಮಹಾಜನೌಘೇ, ಕೋಲಾಹಲೇನ, ಸಕುತೂಹಲಿನಿ, ಪ್ರವೃತ್ತೇ ।

**ಅನ್ವಯ—** ತತ್ಪ್ರೀತಯೇ ರಜತಪೀಠಪುರಾಧಿವಾಸೀ ದೇವಃ, ಮಹಾಜನೌಘೇ ಮಹಿತಾಯ ಮಹಾಯ ಕೋಲಾಹಲೇನ ಪ್ರಾಪ್ತೇ ಸಕುತೂಹಲಿನಿ ಪ್ರವೃತ್ತೇ, ಶುಭಸೂಚನಾಯ ಪುರುಷಂ ವಿವೇಶ ।

**ಅನ್ವಯಾರ್ಥ—**

**ತತ್ಪ್ರೀತಯೇ** = ರಜತಪೀಠಪುರವಾಸಿಗಳಾದ ಜನರುಗಳ ಪ್ರೀತಿಗಾಗಿ

**ರಜತಪೀಠಪುರಾಧಿವಾಸೀ ದೇವಃ** = ರಜತಪೀಠಪುರದಲ್ಲಿ ವಾಸಿಸುತ್ತಿರುವ ಶ್ರೀಹರಿಯು

**ಮಹಾಜನೌಘೇ ಮಹಿತಾಯ ಮಹಾಯ** = ದೊಡ್ಡ ಜನರ ಗುಂಪು ಸರ್ವರಿಂದಲೂ ಗೌರವಿಸಲ್ಪಡುತ್ತಿರುವ ಉತ್ಸವಕ್ಕೋಸ್ಕರ

**ಕೋಲಾಹಲೇನ ಪ್ರಾಪ್ತೇ** = ಕಲಕಲಧ್ವನಿ ಮಾಡುತ್ತ ಬಂದಿರುವಾಗ

**ಸಕುತೂಹಲಿನಿ ಪ್ರವೃತ್ತೇ (ಸತಿ)** = ಕುತೂಹಲದಿಂದ ಸಹಿತವಾಗಿ ಆರಬ್ಧವಾಗಲಿಕ್ಕಾಗಿ

**ಶುಭಸೂಚನಾಯ** = ಮುಂದೆ ಏರ್ಪಡಲಿರುವ ಶುಭವನ್ನು ಸೂಚನೆ ಮಾಡುವುದಕ್ಕಾಗಿ

**ಪುರುಷಂ ವಿವೇಶ** = ಒಬ್ಬ ಪುರುಷನನ್ನು ಪ್ರವೇಶಿಸಿದನು.

**ತಾತ್ಪರ್ಯ**— ಉಡುಪಿಯಲ್ಲಿರುವ ಜನರುಗಳ ಪ್ರೀತಿಗಾಗಿ ಉಡುಪಿಯಲ್ಲಿರುವ ಆ ಕ್ಷೇತ್ರದ ಅಧಿಪತಿಯಾಗಿರುವ ಶ್ರೀಹರಿಯು ಅದೇ ಸಮಯದಲ್ಲಿ ಅಲ್ಲಿ ದೊಡ್ಡ ಉತ್ಸವಕ್ಕಾಗಿ ಸೇರಿರುವ ಜನರಿಗೆ ಶುಭಫಲವನ್ನು ಸೂಚಿಸುವುದಕ್ಕಾಗಿ ಒಬ್ಬ ಪುರುಷನನ್ನು ಪ್ರವೇಶಿಸಿದನು. ಎಲ್ಲರೂ ಸಂತೋಷಾತಿರೇಕದಿಂದ ಕಲಕಲಧ್ವನಿಯನ್ನು ಮಾಡುತ್ತಿದ್ದರು. ಉತ್ಸವವು ಆರಂಭವಾಯಿತು. ಆಗ ಆ ಪುರುಷನು ಕುಣಿಯಲು ಆರಂಭಿಸಿದನು. ಎಲ್ಲರ ದೃಷ್ಟಿಯೂ ಕುಣಿಯುತ್ತಿರುವ ಆ ಪುರುಷನ ಮೇಲೆ ಬಿತ್ತು.

**ವಿಗ್ರಹ**—

**ತತ್ಪ್ರೀತಯೇ**— ತಸ್ಯ ಪ್ರೀತಿಃ ತತ್ಪ್ರೀತಿಃ, ತಸ್ಮೈ ತತ್ಪ್ರೀತಯೇ ।

**ರಜತಪೀಠಪುರಾಧಿವಾಸೀ**— ರಜತಪೀಠ ಇತಿ ಪುರಂ ರಜತಪೀಠಪುರಂ, ರಜತಪೀಠಪುರಸ್ಯ ಅಧಿವಾಸೀ ರಜತಪೀಠಪುರಾಧಿವಾಸೀ ।

**ಶುಭಸೂಚನಾಯ**— ಶುಭಸ್ಯ ಸೂಚನಂ ಶುಭಸೂಚನಂ, ತಸ್ಮೈ ಶುಭಸೂಚನಾಯ ।

**ಮಹಾಜನೌಘೇ**— ಮಹಾಂತಶ್ಚ ತೇ ಜನಾಶ್ಚ ಮಹಾಜನಾಃ, ಮಹಾಜನಾನಾಂ ಓಘಃ ಮಹಾಜನೌಘಃ, ತಸ್ಮಿನ್ ಮಹಾಜನೌಘೇ ।

**ಸಕುತೂಹಲಿನಿ**— ಕುತೂಹಲೇನ ಸಹಿತಃ ಸಕುತೂಹಲೀ, ತಸ್ಮಿನ್ ಸಕುತೂಹಲಿನಿ ।

**ಕ್ರಿಯಾಪದ**— ವಿವೇಶ- ವಿಶ ಪ್ರವೇಶನೇ ಪ್ರವೇಶನಾರ್ಥಕಾತ್ ವಿಶ ಧಾತೋಃ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಲಿಟಿ 'ವಿವೇಶ' ಇತಿ ರೂಪಮ್ ।

ವಿವೇಶ ವಿವಿಶತುಃ ವಿವಿಶುಃ, ವಿವೇಶಿಥ ವಿವಿಶಥುಃ ವಿವಿಶ, ವಿವೇಶ ವಿವೇಶಿವ ವಿವೇಶಿಮ ॥

★ ★ ★

ಶ್ರೀ ಅನಂತೇಶ್ವರನಿಂದ ಆಜ್ಞನಲ್ಲಿ ಆವೇಶದ ಮೂಲಕ ವಿಶ್ವಾಸಪ್ರದರ್ಶನ

**ಆವಿಷ್ಟವಾನಕುಶಲಂ ಪುರುಷಂ ಪ್ರಕೃತ್ಯಾ**
**ಪ್ರತ್ಯಾಯಯನ್ನಿಜಜನಾನ್ನಿತರಾಮನೃತ್ಯತ್ ।**
**ಉತ್ತುಂಗಕೇತುಶಿಖರೇ ಸ ಕೃತಾಂಗಹಾರೋ**
**ರಂಗಾಂತರೇ ನಟ ಇವಾಖಿಲವಿಸ್ಮಯಾತ್ಮಾ ॥ 7 ॥**

**ಪದಚ್ಛೇದ**— ಆವಿಷ್ಟವಾನ್, ಅಕುಶಲಂ, ಪುರುಷಂ, ಪ್ರಕೃತ್ಯಾ, ಪ್ರತ್ಯಾಯಯನ್, ನಿಜಜನಾನ್ ನಿತರಾಂ, ಅನೃತ್ಯತ್, ಉತ್ತುಂಗಕೇತುಶಿಖರೇ, ಸಃ, ಕೃತಾಂಗಹಾರಃ, ರಂಗಾಂತರೇ, ನಟಃ, ಇವ, ಅಖಿಲವಿಸ್ಮಯಾತ್ಮಾ ।

**ಅನ್ವಯ**— ನಿಜಜನಾನ್ ಪ್ರತ್ಯಾಯಯನ್ ಪ್ರಕೃತ್ಯಾ ಅಕುಶಲಂ ಪುರುಷಂ ಆವಿಷ್ಟವಾನ್ ಸಃ ಕೃತಾಂಗಹಾರಃ ರಂಗಾಂತರೇ ನಟಃ ಇವ ಅಖಿಲವಿಸ್ಮಯಾತ್ಮಾ ಉತ್ತುಂಗಕೇತುಶಿಖರೇ ನಿತರಾಂ ಅನೃತ್ಯತ್ ।

**ಅನ್ವಯಾರ್ಥ**—

**ನಿಜಜನಾನ್ ಪ್ರತ್ಯಾಯಯನ್** = ಸ್ವಂತ ಜನರಿಗೆ ನಂಬಿಕೆಯನ್ನು ಹುಟ್ಟಿಸುವುದಕ್ಕೋಸ್ಕರ

**ಪ್ರಕೃತ್ಯಾ ಅಕುಶಲಂ ಪುರುಷಂ ಆವಿಷ್ಟವಾನ್** = ಸ್ವಭಾವದಿಂದ ಚಾತುರ್ಯವಿಲ್ಲದ ಪುರುಷನನ್ನು ಪ್ರವೇಶಿಸಿದನು.

**ಸಃ ಕೃತಾಂಗಹಾರಃ** = ಅವನು ಅಂಗವಿಕ್ಷೇಪ ಮಾಡಿದವನಾಗಿ

**ರಂಗಾಂತರೇ ನಟಃ ಇವ** = ರಂಗಸ್ಥಳದ ಮಧ್ಯದಲ್ಲಿ ನಟನಂತೆ

**ಅಖಿಲವಿಸ್ಮಯಾತ್ಮಾ** = ಸರ್ವರಿಗೂ ಆಶ್ಚರ್ಯಕರವಾದ ಶರೀರವುಳ್ಳವನಾಗಿ

**ಉತ್ತುಂಗಕೇತುಶಿಖರೇ** = ಎತ್ತರದಲ್ಲಿರುವ ಧ್ವಜಸ್ತಂಭದ ಮೇಲೆ

**ನಿತರಾಂ ಅನೃತ್ಯತ್** = ಸರ್ವರಿಗೂ ಆಶ್ಚರ್ಯವಾಗುವಂತೆ ಕುಣಿದನು.

**ತಾತ್ಪರ್ಯ—** ಸ್ವಭಾವದಿಂದ ಚತುರನಲ್ಲದ (ದಡ್ಡನಾದ) ಮನುಷ್ಯನಲ್ಲಿ ಆ ಅನಂತಾಸನದೇವನು ಆವೇಶ-ಗೊಂಡನು. ಆದ್ದರಿಂದ ಅವನ ಸಾಮರ್ಥ್ಯದಿಂದ ಮಾಡಿದನು ಎಂದು ಹೇಳುವಂತಿಲ್ಲ. ಸ್ವಂತ ಜನರಿಗೆ ನಂಬಿಕೆಯು ಹುಟ್ಟಬೇಕು. ಅದಕ್ಕಾಗಿ ಜೋರಾಗಿ ಕುಣಿದನು. ಅದೂ ತುಂಬಾ ಎತ್ತರದಲ್ಲಿದ್ದ ಧ್ವಜಸ್ತಂಭದ ಮೇಲೆ ಏರಿದನು. ಅಂಗಚೇಷ್ಟೆಗಳನ್ನೆಲ್ಲಾ ಮಾಡುತ್ತಾ ರಂಗಸ್ಥಳದ ಮಧ್ಯದಲ್ಲಿ ನಟನಂತೆ ಕುಣಿದನು. ಈ ಕುಣಿತವನ್ನು ನೋಡುತ್ತಾ ಸರ್ವರೂ ಆಶ್ಚರ್ಯವನ್ನು ಅನುಭವಿಸಿದರು.

**ವಿಗ್ರಹ—**

**ಅಕುಶಲಂ—** ನ ಕುಶಲಃ ಅಕುಶಲಃ, ತಂ ಅಕುಶಲಂ ।

**ಪ್ರತ್ಯಾಯಯನ್—** ಪ್ರತ್ಯಾಯಯತಿ ಇತಿ ಪ್ರತ್ಯಾಯಯನ್ ।

**ನಿಜಜನಾನ್—** ನಿಜಾಶ್ಚ ತೇ ಜನಾಶ್ಚ ನಿಜಜನಾಃ, ತಾನ್ ನಿಜಜನಾನ್ ।

**ಉತ್ತುಂಗಕೇತುಶಿಖರೇ—** ಉತ್ತುಂಗಶ್ಚಾಸೌ ಕೇತುಶ್ಚ ಉತ್ತುಂಗಕೇತುಃ, ಉತ್ತುಂಗಕೇತೋಃ ಶಿಖರಂ ಉತ್ತುಂಗಕೇತುಶಿಖರಂ, ತಸ್ಮಿನ್ ಉತ್ತುಂಗಕೇತುಶಿಖರೇ ।

**ಕೃತಾಂಗಹಾರಃ—** ಅಂಗಾನಾಂ ಹಾರಃ ಅಂಗಹಾರಃ, ಕೃತಃ ಅಂಗಹಾರಃ ಯೇನ ಸಃ ಕೃತಾಂಗಹಾರಃ ।

**ರಂಗಾಂತರೇ—** ರಂಗಸ್ಯ ಅಂತರಂ ರಂಗಾಂತರಂ, ತಸ್ಮಿನ್ ರಂಗಾಂತರೇ ।

**ಅಖಿಲವಿಸ್ಮಯಾತ್ಮಾ—** ಅಖಿಲಾನಾಂ ವಿಸ್ಮಯಃ ಯಸ್ಮಾತ್ ಸಃ ಅಖಿಲವಿಸ್ಮಯಃ, ಅಖಿಲವಿಸ್ಮಯಃ ಆತ್ಮಾ ಯಸ್ಯ ಸಃ ಅಖಿಲವಿಸ್ಮಯಾತ್ಮಾ ।

**ಕ್ರಿಯಾಪದ—** ಅನೃತ್ಯತ್- ನೃತೀ ಗಾತ್ರವಿಕ್ಷೇಪೇ ಇತಿ ಗಾತ್ರವಿಕ್ಷೇಪಾರ್ಥಕಾತ್ ನೃತೀ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಅನೃತ್ಯತ್' ಇತಿ ರೂಪಮ್ ।

ಅನೃತ್ಯತ್ ಅನೃತ್ಯತಾಂ ಅನೃತ್ಯನ್, ಅನೃತ್ಯಃ ಅನೃತ್ಯತಂ ಅನೃತ್ಯತ, ಅನೃತ್ಯಂ ಅನೃತ್ಯಾವ ಅನೃತ್ಯಾಮ ॥

★ ★ ★

ಅನಂತೇಶ್ವರನ ಅಮೃತಸಂದೇಶ

**ಆಭಾಷ್ಯ ಸೋಽತ್ರ ಜನತಾಂ ಶಪಥಾನುವಿದ್ಧ-**
**ಮುಚ್ಚೈರಿದಂ ವಚನಮುದ್ಧೃತದೋರ್ಬಭಾಷೇ ।**
**ಉತ್ಪತ್ಸ್ಯತೇ ಜಗತಿ ವಿಶ್ವಜನೀನವೃತ್ತಿ-**
**ರ್ವಿಶ್ವಜ್ಞ ಏವ ಭಗವಾನಚಿರಾದಿಹೇತಿ ॥ 8 ॥**

**ಪದಚ್ಛೇದ—** ಆಭಾಷ್ಯ, ಸಃ, ಅತ್ರ, ಜನತಾಂ, ಶಪಥಾನುವಿದ್ಧಂ, ಉಚ್ಚೈಃ, ಇದಂ, ವಚನಂ, ಉದ್ಧೃತದೋಃ, ಬಭಾಷೇ, ಉತ್ಪತ್ಸ್ಯತೇ, ಜಗತಿ, ವಿಶ್ವಜನೀನವೃತ್ತಿಃ, ವಿಶ್ವಜ್ಞಃ, ಏವ, ಭಗವಾನ್, ಅಚಿರಾತ್, ಇಹ, ಇತಿ ।

**ಅನ್ವಯ—** ಸಃ ಅತ್ರ ಜನತಾಂ ಆಭಾಷ್ಯ ಉದ್ಧೃತದೋಃ ಶಪಥಾನುವಿದ್ಧಂ ಇತಿ ಉಚ್ಚೈಃ ಇದಂ ವಚನಂ ಬಭಾಷೇ, ಇಹ ವಿಶ್ವಜನೀನವೃತ್ತಿಃ ವಿಶ್ವಜ್ಞಃ ಏವ ಭಗವಾನ್ ಅಚಿರಾತ್ ಉತ್ಪತ್ಸ್ಯತೇ ಇತಿ ।

**ಅನ್ವಯಾರ್ಥ—**

**ಸಃ** = ಪುರುಷನಲ್ಲಿ ಆವಿಷ್ಟನಾದ ದೇವನು

**ಅತ್ರ** = ಈ ರಜತಪೀಠಪುರದಲ್ಲಿ ಮಿಲಿತವಾಗಿರುವ

**ಜನತಾಂ** = ಜನಸಮೂಹವನ್ನು

**ಆಭಾಷ್ಯ** = ''ಎಲೈ ಜನರೇ, ನನ್ನ ಮಾತುಗಳನ್ನು ಕೇಳಿರಿ'' ಎಂದು ಸಂಬೋಧಿಸಿ

**ಉದ್ಧೃತದೋಃ** = ಎತ್ತಲ್ಪಟ್ಟ ಎರಡು ಕೈಗಳುಳ್ಳವನಾಗಿ

**ಶಪಥಾನುವಿದ್ಧಂ ಇತಿ** = ''ನಾನು ಹೇಳುವ ಮಾತುಗಳು ಸುಳ್ಳಾದರೆ ಹರಿಗುರುಗಳ ದ್ರೋಹಿಯಾಗುವೆನು'' ಮುಂತಾದ ಶಪಥಗಳಿಂದ ಸಹಿತವಾಗಿ

**ಉಚ್ಚೈಃ ಇದಂ ವಚನಂ ಬಭಾಷೇ** = ಗಟ್ಟಿಯಾಗಿ ಮುಂದೆ ಹೇಳುವ ಮಾತನ್ನು ಹೇಳಿದನು.

**ಇಹ ಜಗತಿ** = ಈ ಪ್ರಪಂಚದಲ್ಲಿ

**ವಿಶ್ವಜನೀನವೃತ್ತಿಃ** = ಎಲ್ಲ ಜನರಿಗೂ ಹಿತವಾದ ವ್ಯಾಪಾರವುಳ್ಳವನಾದ

**ವಿಶ್ವಜ್ಞಃ** = ಸರ್ವಜ್ಞನಾಗಿರುವ

**ಭಗವಾನ್** = ಷಡ್ಗುಣೈಶ್ವರ್ಯಸಂಪನ್ನನಾದ ಒಬ್ಬ ಪುರುಷನು

**ಅಚಿರಾತ್** = ಬಹು ಬೇಗನೆ

**ಉತ್ಪತ್ಸ್ಯತೇ** = ಅವತರಿಸುವನು

**ಇತಿ** = ಹೀಗೆಂದು ಹೇಳಿದನು.

**ತಾತ್ಪರ್ಯ—** ಸ್ವಭಾವದಿಂದ ಅಕುಶಲನಾದ ಪುರುಷನನ್ನು ರಜತಪೀಠಪುರವಾಸಿಯಾದ ದೇವನು ಪ್ರವೇಶಿಸಿದನೆಂದೂ ಜನರಿಗೆಲ್ಲಾ ನಂಬಿಕೆಯನ್ನು ಹುಟ್ಟಿಸುವುದಕ್ಕಾಗಿ ಅತ್ಯಧಿಕ ಎತ್ತರವಾದ ಧ್ವಜಸ್ತಂಭದ ಶಿಖರದಲ್ಲಿ ನರ್ತನವನ್ನು ಮಾಡಿದನೆಂದೂ ಹೇಳಿದೆವು. ಮುಂದೆ ಆ ವಿಷಯವನ್ನೇ ವಿವರಿಸುವೆವು. ಆ ಪುರುಷನಲ್ಲಿ ಆವಿಷ್ಟನಾದ ದೇವನು ನಾನು ಹೇಳುವ ಮಾತುಗಳು ಸುಳ್ಳಾದರೆ ಹರಿಗುರುಗಳಿಗೆ ದ್ರೋಹಿಯಾಗುವೆನು. ನಾನು ಹೇಳುವ ಮಾತುಗಳೆಲ್ಲಾ ಸತ್ಯ, ಸತ್ಯ. ಕೈಗಳನ್ನು ಎತ್ತಿ ಹೇಳುತ್ತಿರುವೆನು ಮುಂತಾದ ಶಪಥಗಳನ್ನು ಮಾಡಿ ಹೇಳಿದನು. ಅಲ್ಲಿ ಸೇರಿರುವ ಜನರುಗಳ ಸಮೂಹವನ್ನು ಉದ್ದೇಶಿಸಿ ಗಟ್ಟಿಯಾಗಿ ಹೇಳಿದನು. ಇನ್ನು ಕೆಲವು ದಿನಗಳಲ್ಲಿ ಒಬ್ಬ ಪುರುಷನು ಹುಟ್ಟುವನು. ಅವನು ಮಾಡುವ ಎಲ್ಲಾ ವ್ಯಾಪಾರಗಳೂ ಸರ್ವರಿಗೂ ಹಿತವಾಗಿರುತ್ತವೆ. ಇವನು ಸರ್ವಜ್ಞನೇ ಆಗಿರುವನು. ಅಲ್ಲದೆ ಷಡ್ಗುಣೈಶ್ವರ್ಯಸಂಪನ್ನನಾಗಿರುವನು. ಹೀಗೆ ಪ್ರತಿಜ್ಞೆಯನ್ನು ಮಾಡಿದನು.

ವಿಗ್ರಹ—

**ಆಭಾಷ್ಯ—** ಆ ಸಮಂತಾತ್ ಭಾಷಿತ್ವಾ ಆಭಾಷ್ಯ ।

**ಶಪಥಾನುವಿದ್ಧಂ—** ಶಪಥೇನ ಅನುವಿದ್ಧಂ ತತ್ ಶಪಥಾನುವಿದ್ಧಂ ।

**ಉದ್ಧೃತದೋಃ—** ಉದ್ಧೃತಃ ದೋಃ ಯೇನ ಸಃ ಉದ್ಧೃತದೋಃ ।

ವಿಶ್ವಜನೀನವೃತ್ತಿಃ— ವಿಶ್ವೇ ಚ ತೇ ಜನಾಶ್ಚ ವಿಶ್ವಜನಾಃ, ವಿಶ್ವಜನಾನಾಂ ಹಿತಾ ವಿಶ್ವಜನೀನಾ, ವಿಶ್ವಜನೀನಾ ವೃತ್ತಿಃ ಯಸ್ಯ ಸಃ ವಿಶ್ವಜನೀನವೃತ್ತಿಃ ।

ವಿಶ್ವಜ್ಞಃ— ವಿಶ್ವಂ ಜಾನಾತಿ ಇತಿ ವಿಶ್ವಜ್ಞಃ ।

ಭಗವಾನ್— ಭಗಃ ಅಸ್ಯ ಅಸ್ತಿ ಇತಿ ಭಗವಾನ್ ।

ಅಚಿರಾತ್— ನ ಚಿರಾತ್ ಅಚಿರಾತ್ ।

ಕ್ರಿಯಾಪದ— ಉತ್ಪತ್ಸ್ಯತೇ- ಉತ್ ಇತ್ಯುಪಸರ್ಗಪೂರ್ವಕಾತ್ ಪದಗತೌ ಪತನೇ ಇತ್ಯಸ್ಮಾದ್ಧಾತೋಃ ಲೃಟ್ ಪ್ರಥಮಪುರುಷೇ ಏಕವಚನೇ 'ಉತ್ಪತ್ಸ್ಯತೇ' ಇತಿ ರೂಪಮ್ ।

ಉತ್ಪತ್ಸ್ಯತೇ ಉತ್ಪತ್ಸ್ಯೇತೇ ಉತ್ಪತ್ಸ್ಯಂತೇ, ಉತ್ಪತ್ಸ್ಯಸೇ ಉತ್ಪತ್ಸ್ಯೇಥೇ ಉತ್ಪತ್ಸ್ಯಧ್ವೇ,
ಉತ್ಪತ್ಸ್ಯೇ ಉತ್ಪತ್ಸ್ಯಾವಹೇ ಉತ್ಪತ್ಸ್ಯಾಮಹೇ ॥

★ ★ ★

ಮಧ್ಯಗೇಹಭಟ್ಟರ ಪೂರ್ವವಿಚಾರ

**ಸದ್ವೀಪವಾರಿನಿಧಿಸಪ್ತಕಭೂತಧಾತ್ರ್ಯಾ**
**ಮಧ್ಯೇಽಪಿ ಕರ್ಮಭುವಿ ಭಾರತನಾಮಖಂಡೇ ।**
**ಕಾಲೇ ಕಲೌ ಸುವಿಮಲಾನ್ವಯಲಬ್ಧಜನ್ಮಾ**
**ಸನ್ಮಧ್ಯಗೇಹಕುಲಮೌಲಿಮಣಿರ್ದ್ವಿಜೋಽಭೂತ್ ॥ 9 ॥**

ಪದಚ್ಛೇದ— ಸದ್ವೀಪವಾರಿನಿಧಿಸಪ್ತಕಭೂತಧಾತ್ರ್ಯಾ, ಮಧ್ಯೇ, ಅಪಿ, ಕರ್ಮಭುವಿ, ಭಾರತನಾಮಖಂಡೇ, ಕಾಲೇ, ಕಲೌ, ಸುವಿಮಲಾನ್ವಯಲಬ್ಧಜನ್ಮಾ, ಸನ್ಮಧ್ಯಗೇಹಕುಲಮೌಲಿಮಣಿಃ, ದ್ವಿಜಃ, ಅಭೂತ್ ।

ಅನ್ವಯ— ಸದ್ವೀಪವಾರಿನಿಧಿಸಪ್ತಕಭೂತಧಾತ್ರ್ಯಾ ಮಧ್ಯೇ ಅಪಿ ಕರ್ಮಭುವಿ ಭಾರತನಾಮಖಂಡೇ ಕಾಲೇ ಕಲೌ ಸನ್ಮಧ್ಯಗೇಹಕುಲಮೌಲಿಮಣಿಃ ಸುವಿಮಲಾನ್ವಯಲಬ್ಧಜನ್ಮಾ ದ್ವಿಜಃ, ಅಭೂತ್ ।

ಅನ್ವಯಾರ್ಥ—

ಸದ್ವೀಪವಾರಿನಿಧಿಸಪ್ತಕಭೂತಧಾತ್ರ್ಯಾ ಮಧ್ಯೇ ಅಪಿ= ಏಳು ದ್ವೀಪಗಳಿಂದಲೂ ಏಳು ಸಮುದ್ರಗಳಿಂದಲೂ ಸಹಿತವಾದ ಭೂತಧಾತ್ರಿ; ಅಂದರೆ ಭೂಮಿಯ ಮಧ್ಯದಲ್ಲಿ

ಕರ್ಮಭುವಿ = ಕರ್ಮಗಳನ್ನು ಮಾಡುವುದಕ್ಕೆ ಯೋಗ್ಯವಾಗಿರುವ

ಭಾರತನಾಮಖಂಡೇ = ಭಾರತ ಎಂಬ ಹೆಸರಿನಿಂದ ಯುಕ್ತನಾಗಿರುವ ಖಂಡದಲ್ಲಿ

ಕಲೌ ಕಾಲೇ = ಕಲಿಯುಗದಲ್ಲಿ

ಸನ್ಮಧ್ಯಗೇಹಕುಲಮೌಲಿಮಣಿಃ = ನಿರ್ದೋಷವಾದ ಮಧ್ಯಗೇಹ ಎಂಬ ಕುಲಕ್ಕೆ ತಲೆಯ ಮಣಿಯಂತಿರುವ

ಸುವಿಮಲಾನ್ವಯಲಬ್ಧಜನ್ಮಾ = ಅತ್ಯಂತ ಪರಿಶುದ್ಧವಾದ ವಂಶದಲ್ಲಿ ಹುಟ್ಟಿರುವ

ದ್ವಿಜಃ ಅಭೂತ್ = ಬ್ರಾಹ್ಮಣನು ಇದ್ದನು.

ತಾತ್ಪರ್ಯ— ಈ ಭೂಮಿಯು ಏಳು ದ್ವೀಪಗಳಿಂದಲೂ ಏಳು ಸಮುದ್ರಗಳಿಂದಲೂ ಯುಕ್ತವಾಗಿದೆ. ಈ ಭೂಮಿಯಲ್ಲಿಯೇ ಸರ್ವ ಪ್ರಾಣಿಗಳೂ ವಾಸಿಸುವುವು. ಆದ್ದರಿಂದಲೇ ಈ ಭೂಮಿಗೆ ಭೂತಧಾತ್ರೀ ಎಂದು ಹೆಸರು ಬಂದಿದೆ. ಈ ಭೂಮಿಯಲ್ಲಿ ಮಾಡಿರುವ ಕರ್ಮಗಳಿಗೆ ಯೋಗ್ಯವಾದ ಫಲವು ಸಿಗುತ್ತದೆ. ಆದ್ದರಿಂದಲೇ ಈ ಭೂಮಿಯನ್ನು ಕರ್ಮಭೂಮಿ ಎಂದು ಕರೆಯುವ ವಾಡಿಕೆಯು ಬಂದಿರುತ್ತದೆ. ಭಾರತ ಎಂಬ ಭೂಭಾಗವೂ ಈ

ಭೂಮಿಯಲ್ಲಿಯೇ ಇರುತ್ತದೆ. ಈ ಭೂಮಿಯಲ್ಲಿ ಕಲಿಯುಗದಲ್ಲಿ ಒಬ್ಬ ಬ್ರಾಹ್ಮಣರು ಒಳ್ಳೆಯ ನಿರ್ದುಷ್ಟವಾದ ಮಧ್ಯಗೇಹ ಎಂಬ ಕುಲದಲ್ಲಿ ಶಿರೋಮಣಿಯಂತೆ ಹುಟ್ಟಿದರು.

**ವಿಗ್ರಹ—**

**ಸದ್ವೀಪವಾರಿನಿಧಿಸಪ್ತಕಭೂತಧಾತ್ರ್ಯಾ—** ವಾರೀಣಿ ನಿಧೀಯಂತೇ ಏಷ್ವಿತಿ ವಾರಿನಿಧಯಃ, ದ್ವೀಪಾನಿ ಚ ವಾರಿನಿಧಯಶ್ಚ ದ್ವೀಪವಾರಿನಿಧಯಃ, ದ್ವೀಪವಾರಿನಿಧೀನಾಂ ಸಪ್ತಕಂ ದ್ವೀಪವಾರಿನಿಧಿಸಪ್ತಕಂ, ದ್ವೀಪವಾರಿನಿಧಿಸಪ್ತಕೇನ ಸಹ ವರ್ತತೇ ಇತಿ ಸದ್ವೀಪವಾರಿನಿಧಿಸಪ್ತಕಾ, ಭೂತಾನಾಂ ಧಾತ್ರೀ ಭೂತಧಾತ್ರೀ, ಸದ್ವೀಪವಾರಿನಿಧಿಸಪ್ತಕಾ ಚ ಸಾ ಭೂತಧಾತ್ರೀ ಚ ಸದ್ವೀಪವಾರಿನಿಧಿಸಪ್ತಕಭೂತಧಾತ್ರೀ, ತಸ್ಯಾಃ ಸದ್ವೀಪವಾರಿನಿಧಿಸಪ್ತಕಭೂತಧಾತ್ರ್ಯಾಃ ।

**ಕರ್ಮಭುವಿ—** ಕರ್ಮಣಃ ಭೂಃ ಕರ್ಮಭೂಃ, ತಸ್ಯಾಂ ಕರ್ಮಭುವಿ ।

**ಭಾರತನಾಮಖಂಡೇ—** ಭಾರತಂ ಇತಿ ನಾಮ ಯಸ್ಯ ಸಃ ಭಾರತನಾಮಾ, ಭಾರತನಾಮಾ ಚಾಸೌ ಖಂಡಶ್ಚ ಭಾರತನಾಮಖಂಡಃ, ತಸ್ಮಿನ್ ಭಾರತನಾಮಖಂಡೇ ।

**ಸುವಿಮಲಾನ್ವಯಲಬ್ಧಜನ್ಮಾ—** ಅತ್ಯಂತಂ ವಿಮಲಃ ಸುವಿಮಲಃ, ಸುವಿಮಲಶ್ಚಾಸೌ ಅನ್ವಯಶ್ಚ ಸುವಿಮಲಾನ್ವಯಃ, ಸುವಿಮಲಾನ್ವಯೇ ಲಬ್ಧಂ ಜನ್ಮ ಯಸ್ಯ ಸಃ ಸುವಿಮಲಾನ್ವಯಲಬ್ಧಜನ್ಮಾ।

**ಸನ್ಮಧ್ಯಗೇಹಕುಲಮೌಲಿಮಣಿಃ—** ಮಧ್ಯಗೇಹ ಇತಿ ಕುಲಂ ಮಧ್ಯಗೇಹಕುಲಂ, ಸಚ್ಚ ತತ್ ಮಧ್ಯಗೇಹಕುಲಂ ಚ ಸನ್ಮಧ್ಯಗೇಹಕುಲಂ, ಸನ್ಮಧ್ಯಗೇಹಕುಲೇ ಮೌಲೌ ಮಣಿಃ ಇವ ಸನ್ಮಧ್ಯಗೇಹಕುಲಮೌಲಿಮಣಿಃ ।

**ದ್ವಿಜಃ—** ದ್ವಾಭ್ಯಾಂ ಜಾಯತೇ ಇತಿ ದ್ವಿಜಃ ।

**ಕ್ರಿಯಾಪದ— ಅಭೂತ್-** ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂ ಧಾತೋಃ ಲುಙ್ ಪ್ರಥಮಪುರುಷೇ ಏಕವಚನೇ 'ಅಭೂತ್' ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಭೂತ, ಅಭೂವಂ ಅಭೂವ ಅಭೂಮ॥

★ ★ ★

ಮಧ್ಯಗೇಹರ ಮೂಲಸ್ಥಾನ

**ವೇದಾದ್ರಿಸದ್ರಜತಪೀಠಪುರೇಶ್ವರಾಭ್ಯಾಂ**
**ಗ್ರಾಮೋ ವಿಭೂಷಿತತರಃ ಶಿವರೂಪ್ಯನಾಮಾ ।**
**ಹೇಮಾದ್ರಿರಾಜವಿಭುರಾಜದಿಲಾವೃತಾಭ-**
**ಸ್ತಸ್ಯಾಭವದ್ಗುರುಗುಣಃ ಖಲು ಮೂಲಭೂಮಿಃ ॥ 10 ॥**

**ಪದಚ್ಛೇದ—** ವೇದಾದ್ರಿಸದ್ರಜತಪೀಠಪುರೇಶ್ವರಾಭ್ಯಾಂ, ಗ್ರಾಮಃ, ವಿಭೂಷಿತತರಃ, ಶಿವರೂಪ್ಯನಾಮಾ, ಹೇಮಾದ್ರಿರಾಜವಿಭುರಾಜದಿಲಾವೃತಾಭಃ, ತಸ್ಯ, ಅಭವತ್, ಗುರುಗುಣಃ, ಖಲು, ಮೂಲಭೂಮಿಃ ।

**ಅನ್ವಯ—** ವೇದಾದ್ರಿಸದ್ರಜತಪೀಠಪುರೇಶ್ವರಾಭ್ಯಾಂ ವಿಭೂಷಿತತರಃ ಶಿವರೂಪ್ಯನಾಮಾ ಗ್ರಾಮಃ ಹೇಮಾದ್ರಿರಾಜ-ವಿಭುರಾಜದಿಲಾವೃತಾಭಃ ತಸ್ಯ ಮೂಲಭೂಮಿಃ ಗುರುಗುಣಃ ಅಭವತ್ ಖಲು ।

**ಅನ್ವಯಾರ್ಥ—**

**ವೇದಾದ್ರಿಸದ್ರಜತಪೀಠಪುರೇಶ್ವರಾಭ್ಯಾಂ** = ವೇದಾಚಲ ಮತ್ತು ಶ್ರೇಷ್ಠವಾದ ರಜತಪೀಠಪುರಗಳಿಗೆ ಅಧಿಪತಿ-ಗಳಾಗಿರುವ ಇಬ್ಬರಿಂದ

**ವಿಭೂಷಿತತರಃ** = ಅತ್ಯಂತವಾಗಿ ಅಲಂಕೃತವಾಗಿರುವ

**ಶಿವರೂಪ್ಯನಾಮಾ ಗ್ರಾಮಃ** = ಶಿವಳ್ಳಿ ಎಂಬ ಗ್ರಾಮವು

**ಹೇಮಾದ್ರಿರಾಜವಿಭುರಾಜದಿಲಾವೃತಾಭಃ** = ಬಂಗಾರದ ಬೆಟ್ಟ ಮತ್ತು ಇಲಾವೃತಖಂಡವಾಸಿಯಾಗಿರುವ ರುದ್ರದೇವನು ಇವರಿಬ್ಬರಿಂದ ಶೋಭಿತವಾದ ಇಲಾವೃತಖಂಡದಂತೆ

**ತಸ್ಯ** = ಆ ಬ್ರಾಹ್ಮಣನ

**ಮೂಲಭೂಮಿಃ** = ಜನ್ಮಸ್ಥಳವು

**ಗುರುಗುಣಃ ಅಭವತ್ ಖಲು** = ಶ್ರೇಷ್ಠವಾದ ಗುಣಗಳಿಂದ ಯುಕ್ತವಾಗಿತ್ತು.

**ತಾತ್ಪರ್ಯ**— ವೇದಾಚಲ ಮತ್ತು ರಜತಪೀಠಪುರ ಈ ಪಟ್ಟಣಗಳ ಮಧ್ಯದಲ್ಲಿ ಈ ಎರಡು ಪಟ್ಟಣಗಳಿಂದ ಅಲಂಕೃತವಾಗಿರುವ ಒಂದು ಗ್ರಾಮವು 'ಶಿವಳ್ಳಿ' ಎಂದು ಪ್ರಸಿದ್ಧವಾಗಿತ್ತು. ಮತ್ತು ಈ ಎರಡು ಪಟ್ಟಣಗಳು ಮೇರು-ಪರ್ವತವಾಸಿಯಾದ ರುದ್ರದೇವನಂತೆ ಕಾಣಿಸುತ್ತಿದ್ದವು. ಅವರಿಂದ ಅಲಂಕೃತವಾದ ಮೇರುಪರ್ವತದಂತೆ ವೇದಾಚಲವೂ, ರುದ್ರದೇವರಂತೆ ಶಿವರೂಪ್ಯಕ್ಕೆ ಅಧಿಪತಿಯೂ ಕಾಣಿಸಿದರು. ಮಧ್ಯಗೇಹಭಟ್ಟರಿಗೆ ಆಶ್ರಯವಾಗಿರುವ ಶಿವಳ್ಳಿ ಎಂಬ ಗ್ರಾಮವು ಮೇರುಪರ್ವತ ಮತ್ತು ಆ ಪರ್ವತದಲ್ಲಿರುವ ಶಿವ ಇವರಿಬ್ಬರಂತೆ ಕಾಣಿಸಿತು.

(ವೇದಾದ್ರಿ ಮತ್ತು ಅನಂತೇಶ್ವರದೇವರಿಂದ ಅಲಂಕಾರಗೊಂಡ ಶಿವಳ್ಳಿ ಎಂಬ ಒಂದು ಗ್ರಾಮವಿದ್ದಿತು. ಅದು ಮೇರುಪರ್ವತ ಮತ್ತು ಶಂಕರರಿಂದ ಅಲಂಕಾರಗೊಂಡ ಇಲಾವೃತಖಂಡದಂತೆ ಇದ್ದಿತು. ವೇದಶಾಸ್ತ್ರಗಳನ್ನು ಬಲ್ಲವರಾದ ಸಜ್ಜನರು ವಾಸಮಾಡಿಕೊಂಡಿರುವುದರಿಂದ ಅತಿಶಯ ಗುಣವುಳ್ಳ ಆ ಗ್ರಾಮದಲ್ಲಿ ಆ ಬ್ರಾಹ್ಮಣರು ಹುಟ್ಟಿದರು.)

**ವಿಗ್ರಹ**—

**ವೇದಾದ್ರಿಸದ್ರಜತಪೀಠಪುರೇಶ್ವರಾಭ್ಯಾಂ**— ಸಂಶ್ಚಾಸೌ ರಜತಪೀಠಪುರೇಶ್ವರಶ್ಚ ಸದ್ರಜತಪೀಠಪುರೇಶ್ವರಃ, ವೇದಾದ್ರಿಶ್ಚ ಸದ್ರಜತಪೀಠಪುರೇಶ್ವರಶ್ಚ ವೇದಾದ್ರಿಸದ್ರಜತಪೀಠಪುರೇಶ್ವರೌ, ತಾಭ್ಯಾಂ ವೇದಾದ್ರಿಸದ್ರಜತ ಪೀಠಪುರೇಶ್ವರಾಭ್ಯಾಂ ।

**ವಿಭೂಷಿತತರಃ**— ಅತ್ಯಂತಂ ವಿಭೂಷಿತಃ ವಿಭೂಷಿತತರಃ ।

**ಹೇಮಾದ್ರಿರಾಜವಿಭುರಾಜದಿಲಾವೃತಾಭಃ**— ಹೇಮ್ನಃ ಅದ್ರಿರಾಜಃ ಹೇಮಾದ್ರಿರಾಜಃ, ಹೇಮಾದ್ರಿರಾಜಶ್ಚ ವಿಭುಶ್ಚ ಹೇಮಾದ್ರಿರಾಜವಿಭೂ, ಹೇಮಾದ್ರಿರಾಜವಿಭುಭ್ಯಾಂ ರಾಜತ್ ಹೇಮಾದ್ರಿರಾಜವಿಭುರಾಜತ್, ಹೇಮಾದ್ರಿರಾಜವಿಭುರಾಜತ್ ಚಾಸೌ ಇಲಾವೃತಂ ಚ ಹೇಮಾದ್ರಿರಾಜವಿಭುರಾಜದಿಲಾವೃತಂ, ಹೇಮಾದ್ರಿರಾಜವಿಭುರಾಜದಿಲಾವೃತಸ್ಯ ಆಭಾ ಇವ ಆಭಾ ಯಸ್ಯ ಸಃ ಹೇಮಾದ್ರಿರಾಜವಿಭು-ರಾಜದಿಲಾವೃತಾಭಃ ।

**ಗುರುಗುಣಃ**— ಗುರವಃ ಗುಣಾಃ ಯಸ್ಯ ಸಃ ಗುರುಗುಣಃ ।

**ಮೂಲಭೂಮಿಃ**— ಮೂಲಾ ಚ ಸಾ ಭೂಮಿಶ್ಚ ಮೂಲಭೂಮಿಃ ।

**ಕ್ರಿಯಾಪದ— ಅಭವತ್**- ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಅಭವತ್' ಇತಿ ರೂಪಮ್ ।

ಅಭವತ್ ಅಭವತಾಂ ಅಭವನ್, ಅಭವಃ, ಅಭವತಂ ಅಭವತ, ಅಭವಂ ಅಭವಾವ ಅಭವಾಮ ॥

★ ★ ★

ಪಾಜಕಕ್ಕೆ ಮಧ್ಯಗೇಹರ ಆಗಮನ

**ರಾಮಾಧಿವೇಶಿತಹರಿಸ್ವಸೃಮೌಲಿಮಾಲಾ-**
**ರಾಜದ್ವಿಮಾನಗಿರಿಶೋಭಿತಮಧ್ಯುವಾಸ ।**
**ಕ್ಷೇತ್ರಂ ಸ ಪಾಜಕಪದಂ ತ್ರಿಕುಲೈಕಕೇತುಃ**
**ಕಂ ಯದ್ದಧಾತಿ ಸತತಂ ಖಲು ವಿಶ್ವಪಾಜಾತ್ ॥ 11 ॥**

**ಪದಚ್ಛೇದ—** ರಾಮಾಧಿವೇಶಿತಹರಿಸ್ವಸೃಮೌಲಿಮಾಲಾರಾಜದ್ವಿಮಾನಗಿರಿಶೋಭಿತಂ, ಅಧ್ಯುವಾಸ, ಕ್ಷೇತ್ರಂ, ಸಃ, ಪಾಜಕಪದಂ ತ್ರಿಕುಲೈಕಕೇತುಃ, ಕಂ, ಯತ್, ದಧಾತಿ, ಸತತಂ, ಖಲು, ವಿಶ್ವಪಾಜಾತ್ ।

**ಅನ್ವಯ—** ತ್ರಿಕುಲೈಕಕೇತುಃ ಸಃ ರಾಮಾಧಿವೇಶಿತಹರಿಸ್ವಸೃಮೌಲಿಮಾಲಾರಾಜದ್ವಿಮಾನಗಿರಿಶೋಭಿತಂ ಯತ್ ಕ್ಷೇತ್ರಂ ವಿಶ್ವಪಾಜಾತ್ ಸತತಂ ಕಂ ದಧಾತಿ ಖಲು (ತತ್) ಪಾಜಕಪದಂ ಅಧ್ಯುವಾಸ ।

**ಅನ್ವಯಾರ್ಥ—**

**ತ್ರಿಕುಲೈಕಕೇತುಃ ಸಃ** = ವಡಿಪ್ಪ, ಪಾರ್ಪದಾನೆ, ಕಬೆಕೊಡೆ ಎಂಬ ಮೂರು ವಂಶಗಳಿಗೆ ಮುಖ್ಯ ಧ್ವಜದಂತಿರುವ ಆ ಬ್ರಾಹ್ಮಣರು

**ರಾಮಾಧಿವೇಶಿತಹರಿಸ್ವಸೃಮೌಲಿಮಾಲಾರಾಜದ್ವಿಮಾನಗಿರಿಶೋಭಿತಂ** = ಪರಶುರಾಮನಿಂದ ಪ್ರತಿಷ್ಠೆ ಮಾಡಲ್ಪಟ್ಟ ಕೃಷ್ಣನ ತಂಗಿ ದುರ್ಗಾದೇವಿಯೆಂಬ ತಲೆಯ ಮಾಲೆಯಿಂದ ಪ್ರಕಾಶಿಸುವ ವಿಮಾನಾಕಾರದ (ವಿಮಾನವೆಂಬ) ಬೆಟ್ಟದಿಂದ ಅಲಂಕಾರಗೊಂಡ

**ಯತ್ ಕ್ಷೇತ್ರಂ** = ಯಾವ ಕ್ಷೇತ್ರವು

**ವಿಶ್ವಪಾಜಾತ್** = ಸಕಲವನ್ನು ಕಾಪಾಡುವ ಹುಟ್ಟಿಲ್ಲದ ಪರಶುರಾಮನಿಂದ (ವಿಷ್ಣುವಿನಿಂದ)

**ಸತತಂ ಕಂ ದಧಾತಿ ಖಲು** = ಯಾವಾಗಲೂ ನೀರನ್ನು ಧರಿಸಿದೆಯೋ

**(ತತ್) ಪಾಜಕಪದಂ** = ಆ ಪಾಜಕವೆಂಬ ಕ್ಷೇತ್ರದಲ್ಲಿ

**ಅಧ್ಯುವಾಸ** = ವಾಸಮಾಡಿದರು.

**ತಾತ್ಪರ್ಯ—** ಪರಶುರಾಮದೇವನು ವಿಮಾನಗಿರಿಯಲ್ಲಿ ನಾಲ್ಕು ಸ್ಥಳಗಳಲ್ಲಿ ತನ್ನ ಆಯುಧಗಳಿಂದ ಭೂಮಿಯನ್ನು ಭೇದನ ಮಾಡಿ ನೀರನ್ನು ತರಿಸಿದನು. ಆದ್ದರಿಂದಲೇ ಆ ಪರ್ವತವು ಲೋಕಸಂರಕ್ಷಕನಾದ್ದರಿಂದ 'ಪ' ಎಂದು ಪ್ರಸಿದ್ಧನಾಗಿರುವ ಸಕಲಲೋಕಪಾಲಕನಾದ್ದರಿಂದ 'ಪ' ಎಂದೂ ಉತ್ಪತ್ತಿರಹಿತನಾದ್ದರಿಂದ 'ಅಜ' ಎಂದೂ ಪ್ರಸಿದ್ಧನಾಗಿರುವುದರಿಂದ 'ಅಜ' ಎಂದೂ ಪರಶುರಾಮದೇವನ ದಯೆಯಿಂದ ಯಾವಾಗಲೂ 'ಕ' ಅಂದರೆ ನೀರಿನ ಸಮೃದ್ಧಿಯುಳ್ಳದ್ದರಿಂದ 'ಪಾಜಕ' ಎಂದು ಪ್ರಸಿದ್ಧವಾಗಿರುವ ಕ್ಷೇತ್ರವು ವಿಮಾನಗಿರಿಯಲ್ಲಿದೆ. ಈ ಪರ್ವತದಲ್ಲಿ ಶ್ರೀಪರಶುರಾಮದೇವನು ಬೆಟ್ಟದ ಮೇಲೆ ಶ್ರೀಹರಿಯ ತಂಗಿಯಾಗಿರುವ ದುರ್ಗಾದೇವಿಯ ಪ್ರತಿಷ್ಠೆಯನ್ನು ಮಾಡಿರುವನು. ಆ ದುರ್ಗಾದೇವಿಯು ಆ ಪರ್ವತಕ್ಕೆ ಶಿರೋಮಣಿಯಂತೆ ಶೋಭಿಸುತ್ತಿರುವಳು.

**ವಿಗ್ರಹ—**

**ರಾಮಾಧಿವೇಶಿತಹರಿಸ್ವಸೃಮೌಲಿಮಾಲಾರಾಜದ್ವಿಮಾನಗಿರಿಶೋಭಿತಂ—** ರಾಮೇಣ ಅಧಿವೇಶಿತಾ ರಾಮಾಧಿವೇಶಿತಾ ರಾಮಾಧಿವೇಶತಾ ಚ ಸಾ ಹರಿಸ್ವಸಾ ಚ ರಾಮಾಧಿವೇಶಿತಹರಿಸ್ವಸಾ, ರಾಮಾಧಿವೇಶಿತಹರಿಸ್ವಸಾ ಚ ಸಾ ಮೌಲಿಮಾಲಾ ಚ ರಾಮಾಧಿವೇಶಿತಹರಿಸ್ವಸೃಮೌಲಿಮಾಲಾ, ರಾಮಾಧಿವೇಶಿತಹರಿಸ್ವಸೃಮೌಲಿಮಾಲಯಾ ರಾಜತ್ ರಾಮಾಧಿವೇಶಿತಹರಿಸ್ವಸೃಮೌಲಿಮಾಲಾರಾಜನ್, ರಾಮಾಧಿವೇಶಿತಹರಿಸ್ವಸೃಮೌಲಿಮಾಲಾರಾಜಂಶ್ಚಾಸೌ ವಿಮಾನಗಿರಿಶ್ಚ ರಾಮಾಧಿವೇಶಿತಹರಿಸ್ವಸೃಮೌಲಿಮಾಲಾ-

ರಾಜದ್ವಿಮಾನಗಿರಿಃ, ರಾಮಾಧಿವೇಶಿತಹರಿಸ್ವಸ್ವಮೌಲಿಮಾಲಾರಾಜದ್ವಿಮಾನಗಿರಿಣಾ ಶೋಭಿತಃ ರಾಮಾಧಿವೇಶಿತಹರಿಸ್ವಸ್ವಮೌಲಿಮಾಲಾರಾಜದ್ವಿಮಾನಗಿರಿಶೋಭಿತಃ, ತಂ ರಾಮಾಧಿವೇಶಿತಹರಿ-ಸ್ವಸ್ವಮೌಲಿಮಾಲಾರಾಜದ್ವಿಮಾನಗಿರಿಶೋಭಿತಂ ।

**ಪಾಜಕಪದಂ—** ಪಶ್ಚಾತ್ ಅಜಶ್ಚ ಪಾಜಃ, ಪಾಜಾತ್ ಕಂ ಯಸ್ಯ ತತ್ ಪಾಜಕಂ, ಪಾಜಕಂ ಇತಿ ಪದಂ ಯಸ್ಯ ತತ್ ಪಾಜಕಪದಂ ತತ್ ಪಾಜಕಪದಂ ।

**ತ್ರಿಕುಲೈಕಕೇತುಃ—** ತ್ರೀಣಿ ಚ ತಾನಿ ಕುಲಾನಿ ಚ ತ್ರಿಕುಲಾನಿ, ತ್ರಿಕುಲಾನಾಂ ಏಕಃ ಮುಖ್ಯಃ ಕೇತುಃ ತ್ರಿಕುಲೈಕಕೇತುಃ ।

**ವಿಶ್ವಪಾಜಾತ್—** ವಿಶ್ವಂ ಪಾತೀತಿ ವಿಶ್ವಪಾ, ವಿಶ್ವಪಾಶ್ಚಾಸೌ ಅಜಶ್ಚ ವಿಶ್ವಪಾಜಃ, ತಸ್ಮಾತ್ ವಿಶ್ವಪಾಜಾತ್ ।

**ಕ್ರಿಯಾಪದ— ದಧಾತಿ-** ಡು ಧಾಞ್ ಧಾರಣಪೋಷಣಯೋಃ ಇತಿ ಧಾರಣಪೋಷಣಾರ್ಥಕಾತ್ ಧಾಞ್ ಧಾತೋಃ ಪರಸ್ಮೈಪದಿನಃ ಲಟಿ ಪ್ರಥಮಪುರುಷೇ ಏಕವಚನೇ 'ದಧಾತಿ' ಇತಿ ರೂಪಮ್ ।

ದಧಾತಿ ಧತ್ತಃ ದಧತಿ, ದಧಾಸಿ ಧತ್ಥಃ ಧತ್ಥ, ದಧಾಮಿ ದಧ್ವಃ ದಧ್ಮಃ ॥

**ಅಧ್ಯುವಾಸ-** ಅಧಿ ಇತ್ಯುಪಸರ್ಗಪೂರ್ವಕ ವಸ ನಿವಾಸೇ ಇತಿ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮ-ಪುರುಷೈಕವಚನೇ 'ಅಧ್ಯುವಾಸ' ಇತಿ ರೂಪಮ್ ।

| | | |
|---|---|---|
| ಅಧಿ + ಉವಾಸ | ಊಷತುಃ | ಊಷುಃ |
| ಉವಸಿಥ - ಉವಸ್ಥ , | ಊಷಥುಃ | ಊಷ |
| ಉವಾಸ - ಉವಸ, | ಊಷಿವ | ಊಷಿಮ ॥ |

★ ★ ★

ವೇದವಿದ್ಯೆಯಂತಿರುವ ಕನ್ಯೆಯೊಂದಿಗೆ ಮಧ್ಯಗೇಹರ ವಿವಾಹ

**ಅರ್ಥಂ ಕಮಪ್ಯನವಮಂ ಪುರುಷಾರ್ಥಹೇತುಂ**
**ಪುಂಸಾಂ ಪ್ರದಾತುಮುಚಿತಾಮುಚಿತಸ್ವರೂಪಾಮ್ ।**
**ಕನ್ಯಾಂ ಸುವರ್ಣಲಸಿತಾಮಿವ ವೇದವಿದ್ಯಾಂ**
**ಜಗ್ರಾಹ ವಿಪ್ರವೃಷಭಪ್ರತಿಪಾದಿತಾಂ ಸಃ ॥ 12 ॥**

**ಪದಚ್ಛೇದ—** ಅರ್ಥಂ, ಕಂ, ಅಪಿ, ಅನವಮಂ, ಪುರುಷಾರ್ಥಹೇತುಂ, ಪುಂಸಾಂ, ಪ್ರದಾತುಂ, ಉಚಿತಾಂ, ಉಚಿತಸ್ವರೂಪಾಂ, ಕನ್ಯಾಂ, ಸುವರ್ಣಲಸಿತಾಂ, ಇವ, ವೇದವಿದ್ಯಾಂ, ಜಗ್ರಾಹ, ವಿಪ್ರವೃಷಭಪ್ರತಿಪಾದಿತಾಂ, ಸಃ ।

**ಅನ್ವಯ—** ಸಃ ಪುರುಷಾರ್ಥಹೇತುಂ ಅನವಮಂ ಕಂ ಅಪಿ ಅರ್ಥಂ ಪುಂಸಾಂ ಪ್ರದಾತುಂ ಉಚಿತಾಂ ಉಚಿತಸ್ವರೂಪಾಂ ಸುವರ್ಣಲಸಿತಾಂ ವಿಪ್ರವೃಷಭಪ್ರತಿಪಾದಿತಾಂ ಕನ್ಯಾಂ ವೇದವಿದ್ಯಾಂ ಇವ ಜಗ್ರಾಹ ।

**ಅನ್ವಯಾರ್ಥ—**

**ಸಃ** = ಆ ಮಧ್ಯಗೇಹಭಟ್ಟರು

**ಪುರುಷಾರ್ಥಹೇತುಂ** = ಪುರುಷರಿಂದ ಅಪೇಕ್ಷಿಸಲ್ಪಡುವ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧವಾದ ಪುರುಷಾರ್ಥಗಳಿಗೆ ಕಾರಣವಾಗಿರುವ

**ಅನವಮಂ** = ಉತ್ತಮವಾಗಿರುವ

**ಕಂ ಅಪಿ ಅರ್ಥಂ** = ಯಾವುದೋ ಒಂದು ಮಧ್ವಾಚಾರ್ಯ ಎಂಬ ವಸ್ತುವನ್ನು, ಪರಬ್ರಹ್ಮವೆಂಬ ವಸ್ತುವನ್ನು

**ಪುಂಸಾಂ ಪ್ರದಾತುಂ** = ಸಜ್ಜನರಿಗೆ ಕೊಡುವುದಕ್ಕೆ
**ಉಚಿತಾಂ** = ಯೋಗ್ಯಳಾದ, ಬ್ರಾಹ್ಮಣರಿಗೆ ಓದಲು ಯೋಗ್ಯವಾದ
**ಉಚಿತಸ್ವರೂಪಾಂ** = ಯೋಗ್ಯವಾದ ಆಕೃತಿಯುಳ್ಳ
**ಸುವರ್ಣಲಸಿತಾಂ** = ಭಂಗಾರದಿಂದ ಶೋಭಿತಳಾಗಿರುವ, ಶೋಭನಗಳಾದ ಅಕ್ಷರಗಳಿಂದ ಶೋಭಿತಳಾದ
**ವಿಪ್ರವೃಷಭಪ್ರತಿಪಾದಿತಾಂ ಕನ್ಯಾಂ** = ಬ್ರಾಹ್ಮಣಶ್ರೇಷ್ಠರಿಂದ ಕೊಡಲ್ಪಟ್ಟ ಹುಡುಗಿಯನ್ನು
**ವೇದವಿದ್ಯಾಂ ಇವ** = ವೇದವಿದ್ಯೆಯನ್ನು ಹೇಗೋ ಹಾಗೆ
**ಜಗ್ರಾಹ** = ಸ್ವೀಕರಿಸಿದರು.

**ತಾತ್ಪರ್ಯ—** ಈ ಕನ್ಯೆಯು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಕೊಡಲು ಶಕ್ತಳಾಗಿರುವಳು. ಧರ್ಮವನ್ನೂ ಎಲ್ಲಾ ಪುರುಷಾರ್ಥಗಳ ಮಧ್ಯದಲ್ಲಿಯೂ ಉತ್ತಮವಾದ ಮೋಕ್ಷವನ್ನು ಈ ಧರ್ಮಪತ್ನಿಯ ಸಹಾಯದಿಂದಲೇ ಪಡೆಯಬಹುದು. ಇವಳು ಕುಲ ಮತ್ತು ರೂಪಗಳಿಂದ ವಿವಾಹವನ್ನು ಮಾಡಿಕೊಳ್ಳಲಿಕ್ಕೆ ಯೋಗ್ಯಳಾದವಳು. ಇವಳು ಬಂಗಾರದಿಂದ ಶೋಭಿತಳಾಗಿದ್ದು ಬ್ರಾಹ್ಮಣಶ್ರೇಷ್ಠರಿಂದ ಕೊಡಲ್ಪಟ್ಟಿದ್ದರೆ ಇನ್ನೂ ಉತ್ತಮ. ಇವಳನ್ನು ವಿವಾಹ ಮಾಡಿಕೊಳ್ಳುವುದೂ ವೇದವಿದ್ಯೆಯನ್ನು ಅಧ್ಯಯನ ಮಾಡುವುದೂ ಸಮಾನವಾಗಿರುತ್ತದೆ. ಈ ವೇದವಿದ್ಯೆಯನ್ನು ಸ್ವೀಕರಿಸಿದಂತೆ ಈ ಕನ್ಯೆಯನ್ನು ಮಧ್ಯಗೇಹಭಟ್ಟರು ಸ್ವೀಕರಿಸಿದರು.

**ವಿಗ್ರಹ—**

**ಅನವಮಂ—** ನ ಅವಮಃ ಅನವಮಃ, ತಂ ಅನವಮಂ ।

**ಪುರುಷಾರ್ಥಹೇತುಂ—** ಪುರುಷೈಃ ಅರ್ಥ್ಯಂತೇ ಇತಿ ಪುರುಷಾರ್ಥಾಃ, ಪುರುಷಾರ್ಥಾನಾಂ ಹೇತುಃ ಪುರುಷಾರ್ಥಹೇತುಃ, ತಂ ಪುರುಷಾರ್ಥಹೇತುಂ ।

**ಉಚಿತಸ್ವರೂಪಾಂ—** ಉಚಿತಂ ಸ್ವರೂಪಂ ಯಸ್ಯಾಃ ಸಾ ಉಚಿತಸ್ವರೂಪಾ, ತಾಂ ಉಚಿತಸ್ವರೂಪಾಂ ।

**ಸುವರ್ಣಲಸಿತಾಂ—** ಶೋಭನಾಶ್ಚ ತೇ ವರ್ಣಾಶ್ಚ ಸುವರ್ಣಾಃ, ಸುವರ್ಣೈಃ ಲಸಿತಾ ಸುವರ್ಣಲಸಿತಾ, ತಾಂ ಸುವರ್ಣಲಸಿತಾಂ ।

**ವೇದವಿದ್ಯಾಂ—** ವೇದರೂಪಾ ಚ ಸಾ ವಿದ್ಯಾ ಚ ವೇದವಿದ್ಯಾ, ತಾಂ ವೇದವಿದ್ಯಾಂ ।

**ವಿಪ್ರವೃಷಭಪ್ರತಿಪಾದಿತಾಂ—** ವಿಪ್ರೇಷು ವೃಷಭಃ ವಿಪ್ರವೃಷಭಃ, ವಿಪ್ರವೃಷಭೇಣ ಪ್ರತಿಪಾದಿತಾ ವಿಪ್ರವೃಷಭಪ್ರತಿಪಾದಿತಾ, ತಾಂ ವಿಪ್ರವೃಷಭಪ್ರತಿದಾದಿತಾಂ ।

**ಕ್ರಿಯಾಪದ—** ಜಗ್ರಾಹ- ಗ್ರಹ ಉಪಾದಾನೇ ಉಪಾದಾನಾರ್ಥಕಾತ್ ಗ್ರಹ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಜಗ್ರಾಹ' ಇತಿ ರೂಪಮ್ ।

ಜಗ್ರಾಹ ಜಗೃಹತುಃ ಜಗೃಹುಃ, ಜಗೃಹಿಥ ಜಗೃಹಥುಃ ಜಗೃಹ, ಜಗ್ರಾಹ ಜಗ್ರಹ, ಜಗೃಹಿವ ಜಗೃಹಿಮ ॥

★ ★ ★

ಮಧ್ಯಗೇಹರ ಪವಿತ್ರ ದಾಂಪತ್ಯ

**ರೇಮೇಽಚ್ಛಯೋಪನಿಷದೇವ ಮಹಾವಿವೇಕೋ**
**ಭಕ್ತ್ಯೇವ ಶುದ್ಧಕರಣಃ ಪರಮಶ್ರಿತಾಽಲಮ್ ।**
**ಮಿಥ್ಯಾಭಿಮಾನರಹಿತಃ ಪರಯೇವ ಮುಕ್ತ್ಯಾ**
**ಸ್ವಾನಂದಸಂತತಿಕೃತಾ ಸ ತಯಾ ದ್ವಿಜೇಂದ್ರಃ ॥ 13 ॥**

ಪದಚ್ಛೇದ— ರೇಮೇ, ಅಚ್ಛಯಾ, ಉಪನಿಷದಾ, ಇವ, ಮಹಾವಿವೇಕಃ, ಭಕ್ತ್ಯಾ, ಇವ, ಶುದ್ಧಕರಣಃ, ಪರಮ-ಶ್ರಿತಾ, ಅಲಂ, ಮಿಥ್ಯಾಭಿಮಾನರಹಿತಃ, ಪರಯಾ, ಇವ, ಮುಕ್ತ್ಯಾ, ಸ್ವಾನಂದಸಂತತಿಕೃತಾ, ಸಃ, ತಯಾ, ದ್ವಿಜೇಂದ್ರಃ ।

ಅನ್ವಯ— ಸಃ ದ್ವಿಜೇಂದ್ರಃ ಅಚ್ಛಯಾ ಮಹಾವಿವೇಕಃ ಉಪನಿಷದಾ ಇವ ಅಲಂ ಪರಮಶ್ರಿತಾ ಶುದ್ಧಕರಣಃ ಭಕ್ತ್ಯಾ ಇವ ಮಿಥ್ಯಾಭಿಮಾನರಹಿತಃ ಪರಯಾ ಮುಕ್ತ್ಯಾ ಇವ ಸ್ವಾನಂದಸಂತತಿಕೃತಾ ತಯಾ ರೇಮೇ ।

ಅನ್ವಯಾರ್ಥ—

ಸಃ ದ್ವಿಜೇಂದ್ರಃ = ಆ ಮಧ್ಯಗೇಹ ಎಂಬ ಬ್ರಾಹ್ಮಣಶ್ರೇಷ್ಠರು

ಅಚ್ಛಯಾ ಮಹಾವಿವೇಕಃ = ಸ್ವಚ್ಛವಾಗಿರುವ ಮಹಾವಿವೇಕವುಳ್ಳವರು

ಉಪನಿಷದಾ ಇವ = ಉಪನಿಷತ್ತಿನಿಂದ ಹೇಗೆಯೋ ಹಾಗೆ

ಅಲಂ ಪರಮಶ್ರಿತಾ = ಅತಿಶಯವಾಗಿ ಪರಮಾತ್ಮನನ್ನು ಆಶ್ರಯಿಸಿರುವ

ಶುದ್ಧಕರಣಃ = ಶುದ್ಧಗಳಾದ ಇಂದ್ರಿಯಗಳುಳ್ಳವರು

ಭಕ್ತ್ಯಾ ಇವ = ಭಕ್ತಿಯಿಂದ ಹೇಗೆಯೋ ಹಾಗೆ

ಮಿಥ್ಯಾಭಿಮಾನರಹಿತಃ = ವ್ಯರ್ಥವಾದ ದುರಭಿಮಾನವಿಲ್ಲದವನು

ಪರಯಾ ಮುಕ್ತ್ಯಾ ಇವ = ಉತ್ತಮವಾದ ಮುಕ್ತಿಯಿಂದ ಹೇಗೋ ಹಾಗೆ

ಸ್ವಾನಂದಸಂತತಿಕೃತಾ = ಶೋಭಮಾನವಾದ 'ಆನಂದತೀರ್ಥ' ಎಂಬ ಸಂತತಿಯನ್ನು ಕೊಡುವ

ತಯಾ ರೇಮೇ = ಆ ಕನ್ಯೆಯಿಂದ ಸಂತುಷ್ಟರಾಗಿ ಕಾಲವನ್ನು ಕಳೆದರು.

ತಾತ್ಪರ್ಯ— ಆ ಮಧ್ಯಗೇಹಭಟ್ಟರು ಮಹಾವಿವೇಕವುಳ್ಳವರು. ಅವರು ಸ್ವಚ್ಛವಾದ ಉಪನಿಷತ್ತಿನಿಂದ ಸಂತೋಷಿಸಿದಂತೆ ಆ ಕನ್ಯೆಯಿಂದ ಸಂತೋಷಿಸಿದರು. ಪರಮಾತ್ಮನಲ್ಲಿ ಭಕ್ತಿಯಿಂದ ಯುಕ್ತನಾದವನು ಇಂದ್ರಿಯಗಳೆಲ್ಲವೂ ಸ್ವಾಧೀನವಾಗಿರುವುದರಿಂದ ಆ ಭಕ್ತಿಯಿಂದಲೇ ತೃಪ್ತನಾಗಿರುವನು. ಅದರಂತೆ ಶೋಭನವಾಗಿರುವ 'ಮಧ್ವ' ಎಂಬ ಸಂತತಿಯು ಹುಟ್ಟುವುದರಿಂದ ತೃಪ್ತರಾಗಿ ಆ ಕನ್ಯೆಯಿಂದ ಯುಕ್ತರಾಗಿ ಸಂತೋಷಿಸಿದರು. ಒಣ ಅಭಿಮಾನವಿಲ್ಲದವನು ಉತ್ತಮವಾದ ಮುಕ್ತಿಯನ್ನು ಪಡೆಯುವುದಿಲ್ಲವೇ ? ಅವನು 'ಆನಂದತೀರ್ಥ' ಎಂಬ ಸಂತತಿಯನ್ನು ಕೊಡುವ ಈ ಕನ್ಯೆಯಲ್ಲಿ ಉದಾಸೀನನಾಗುವನೇ ? ಅದರಂತೆ ಈ ಕನ್ಯೆಯಲ್ಲಿ ವಿಶೇಷ ಪ್ರೀತಿಯಿಂದ ಕಾಲವನ್ನು ಕಳೆದರು.

ವಿಗ್ರಹ—

ಮಹಾವಿವೇಕಃ— ಮಹಾನ್ ವಿವೇಕಃ ಯಸ್ಯ ಸಃ ಮಹಾವಿವೇಕಃ ।

ಶುದ್ಧಕರಣಃ— ಶುದ್ಧಾನಿ ಕರಣಾನಿ ಯಸ್ಯ ಸಃ ಶುದ್ಧಕರಣಃ ।

ಪರಮಶ್ರಿತಾ— ಪರಮಂ ಶ್ರಯತೇ ಇತಿ ಪರಮಶ್ರಿತ್, ತಯಾ ಪರಮಶ್ರಿತಾ ।

ಮಿಥ್ಯಾಭಿಮಾನರಹಿತಃ— ಮಿಥ್ಯಾಭೂತಶ್ಚಾಸೌ ಅಭಿಮಾನಶ್ಚ ಮಿಥ್ಯಾಭಿಮಾನಃ, ಮಿಥ್ಯಾಭಿಮಾನೇನ ರಹಿತಃ ಮಿಥ್ಯಾಭಿಮಾನರಹಿತಃ ।

ಸ್ವಾನಂದಸಂತತಿಕೃತಾ— ಶೋಭನಶ್ಚಾಸೌ ಆನಂದಶ್ಚ ಸ್ವಾನಂದಃ, ಸ್ವಾನಂದಾಖ್ಯಾ ಚ ಸಾ ಸಂತತಿಶ್ಚ ಸ್ವಾನಂದ-ಸಂತತಿಃ, ಸ್ವಾನಂದಸಂತತಿಂ ಕರೋತಿ ಇತಿ ಸ್ವಾನಂದಸಂತತಿಕೃತ್, ತಯಾ ಸ್ವಾನಂದಸಂತತಿಕೃತಾ ।

ದ್ವಿಜೇಂದ್ರಃ— ದ್ವಿಜಾನಾಂ ಇಂದ್ರಃ ದ್ವಿಜೇಂದ್ರಃ ।

**ಕ್ರಿಯಾಪದ—** ರೇಮೇ- ರಮು ಕ್ರೀಡಾಯಾಂ ಇತಿ ಕ್ರೀಡಾರ್ಥಕಾತ್ ರಮು ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ರೇಮೇ' ಇತಿ ರೂಪಂ ।

ರೇಮೇ ರೇಮಾತೇ ರೇಮಿರೇ, ರೇಮಿಷೇ ರೇಮಾಥೇ ರೇಮಿಧ್ವೇ, ರೇಮೇ ರೇಮಿವಹೇ ರೇಮಿಮಹೇ ॥

★ ★ ★

ಮಧ್ಯಗೇಹರ 'ಭಟ್ಟ' ಎನ್ನುವ ಸಾರ್ಥಕನಾಮ

**ತಸ್ಯ ಪ್ರಭೋಶ್ಚರಣಯೋಃ ಕುಲದೇವತಾಯಾ**
**ಭಕ್ತಿಂ ಬಬಂಧ ನಿಜಧರ್ಮರತಃ ಸ ಧೀರಃ ।**
**ವಿಜ್ಞಾತಭಾರತಪುರಾಣಮಹಾರಹಸ್ಯಂ**
**ಯಂ ಭಟ್ಟ ಇತ್ಯಭಿವದಂತಿ ಜನಾ ವಿನೀತಮ್ ॥ 14 ॥**

**ಪದಚ್ಛೇದ—** ತಸ್ಯ, ಪ್ರಭೋಃ, ಚರಣಯೋಃ, ಕುಲದೇವತಾಯಾಃ, ಭಕ್ತಿಂ, ಬಬಂಧ, ನಿಜಧರ್ಮರತಃ, ಸಃ, ಧೀರಃ, ವಿಜ್ಞಾತಭಾರತಪುರಾಣಮಹಾರಹಸ್ಯಂ, ಯಂ, ಭಟ್ಟಃ, ಇತಿ, ಅಭಿವದಂತಿ, ಜನಾಃ, ವಿನೀತಮ್ ।

**ಅನ್ವಯ—** ನಿಜಧರ್ಮರತಃ ಸಃ ಧೀರಃ ಕುಲದೇವತಾಯಾಃ ಪ್ರಭೋಃ ತಸ್ಯ ಚರಣಯೋಃ ಭಕ್ತಿಂ ಬಬಂಧ, ಜನಾಃ ವಿಜ್ಞಾತಭಾರತಪುರಾಣಮಹಾರಹಸ್ಯಂ ಯಂ ವಿನೀತಂ ಭಟ್ಟಃ ಇತಿ ಅಭಿವದಂತಿ ।

**ಅನ್ವಯಾರ್ಥ—**

**ನಿಜಧರ್ಮರತಃ ಸಃ ಧೀರಃ** = ತಮ್ಮ ತಮ್ಮ ಆಶ್ರಮಗಳಿಗೆ ವಿಹಿತವಾಗಿರುವ ಧರ್ಮಗಳಲ್ಲಿ ಆಸಕ್ತರಾಗಿರುವ ಪ್ರಾಜ್ಞರಾದ ಮಧ್ಯಗೇಹಭಟ್ಟರು

**ಕುಲದೇವತಾಯಾಃ ಪ್ರಭೋಃ** = ವಂಶಪರಂಪರೆಯ ದೇವತೆಯಾಗಿರುವ ಪರಮಸಮರ್ಥನಾಗಿರುವ

**ತಸ್ಯ ಚರಣಯೋಃ** = ಆ ಅನಂತೇಶ್ವರನ ಪಾದಗಳಲ್ಲಿ

**ಭಕ್ತಿಂ ಬಬಂಧ** = ಭಕ್ತಿಯನ್ನು ಮಾಡಿದರು.

**ಜನಾಃ** = ಎಲ್ಲಾ ಜನರು

**ವಿಜ್ಞಾತಭಾರತಪುರಾಣಮಹಾರಹಸ್ಯಂ** = ಭಾರತ ಮತ್ತು ಪುರಾಣಗಳ ಮಹಾರಹಸ್ಯವನ್ನು ತಿಳಿದಿರುವ

**ಯಂ ವಿನೀತಂ** = ಯಾವ ಮಧ್ಯಗೇಹಭಟ್ಟರನ್ನು ಅತ್ಯಂತ ವಿನಯದಿಂದ ಯುಕ್ತರಾಗಿರುವವರನ್ನು

**ಭಟ್ಟಃ ಇತಿ ಅಭಿವದಂತಿ** = 'ಭಟ್ಟ' ಎಂದು ಹೇಳುತ್ತಿರುವರೋ

**(ಸಃ ಭಕ್ತಿಂ ಬಬಂಧ)** = ಆ ಮಧ್ಯಗೇಹಭಟ್ಟರು ಭಕ್ತಿಯನ್ನು ಮಾಡಿದರು.

**ತಾತ್ಪರ್ಯ—** ವರ್ಣಾಶ್ರಮಗಳಿಗೆ ವಿಹಿತವಾಗಿರುವ ಕರ್ಮಗಳನ್ನು ಮಾಡುತ್ತಿರುವ ಶ್ರೀಮಧ್ಯಗೇಹಭಟ್ಟರು ಕುಲದೇವತೆಯಾಗಿರುವ ಅನಂತೇಶ್ವರನನ್ನು ತನ್ನ ಕುಲದೇವತೆಯೆಂದು ಭಾವಿಸಿರುವರು. ಭಾರತ ಮತ್ತು ಮಹಾ ಪುರಾಣಗಳು ಇವುಗಳ ಮಹಾರಹಸ್ಯವನ್ನು ತಿಳಿದಿರುವರು. ಅವರನ್ನು 'ಭಟ್ಟ' ಎಂದು ಸರ್ವರೂ ಸ್ತುತಿಸುವರು. ಅವರಲ್ಲಿ ವಿನಯ ಮುಂತಾದ ಗುಣಗಳು ತುಂಬಿವೆ. ಸರ್ವರಿಂದಲೂ ಮಾನ್ಯರಾದ ಮಧ್ಯಗೇಹಭಟ್ಟರನ್ನು ಸ್ತುತಿಸದೆ ಇರುವವರು ಯಾರು ?

**ವಿಗ್ರಹ—**

**ಕುಲದೇವತಾಯಾಃ—** ಕುಲಸ್ಯ ದೇವತಾ ಕುಲದೇವತಾ, ತಸ್ಯಾಃ ಕುಲದೇವತಾಯಾಃ ।

**ನಿಜಧರ್ಮರತಃ**— ನಿಜಶ್ಚಾಸೌ ಧರ್ಮಶ್ಚ ನಿಜಧರ್ಮಃ, ನಿಜಧರ್ಮೇ ರತಃ ನಿಜಧರ್ಮರತಃ ।

**ವಿಜ್ಞಾತಭಾರತಪುರಾಣಮಹಾರಹಸ್ಯಂ**— ಭಾರತಂ ಚ ಪುರಾಣಾನಿ ಚ ಭಾರತಪುರಾಣಾನಿ, ಮಹಚ್ಚ ತತ್ ರಹಸ್ಯಂ ಚ ಮಹಾರಹಸ್ಯಂ, ಭಾರತಪುರಾಣಾನಾಂ ಮಹಾರಹಸ್ಯಂ ಭಾರತಪುರಾಣಮಹಾರಹಸ್ಯಂ, ವಿಜ್ಞಾತಂ ಭಾರತಪುರಾಣಮಹಾರಹಸ್ಯಂ ಯೇನ ಸಃ ವಿಜ್ಞಾತಭಾರತಪುರಾಣಮಹಾರಹಸ್ಯಃ, ತಂ ವಿಜ್ಞಾತಭಾರತಪುರಾಣಮಹಾರಹಸ್ಯಂ ।

**ಕ್ರಿಯಾಪದ**— **ಬಬಂಧ**- ಬಧಿರ್ ಬಂಧನೇ ಬಂಧನಾರ್ಥಕಾತ್ ಬಧಿರ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಬಬಂಧ' ಇತಿ ರೂಪಮ್ ।

ಬಬಂಧ ಬಬಂಧತುಃ ಬಬಂಧುಃ, ಬಬಂಧಿಥ ಬಬಂಧಥುಃ ಬಬಂಧ,
ಬಬಂಧ ಬಬಂಧಿವ ಬಬಂಧಿಮ ॥

**ಅಭಿವಂದತಿ**- ಅಭಿ ಇತ್ಯುಪಸರ್ಗಪೂರ್ವಕಾತ್ ವದ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ವದಧಾತೋಃ ಲಟಿ ಪ್ರಥಮಪುರುಷೇ ಬಹುವಚನೇ 'ಅಭಿವದಂತಿ' ಇತಿ ರೂಪಮ್ ।

ಅಭಿವದತಿ ಅಭಿವದತಃ ಅಭಿವದಂತಿ, ಅಭಿವದಸಿ ಅಭಿವದಥಃ ಅಭಿವದಥ, ಅಭಿವದಾಮಿ ಅಭಿವದಾವಃ ಅಭಿವದಾಮಃ ॥

★ ★ ★

### ರಜತಪೀಠದಲ್ಲಿ ಮಧ್ಯಗೇಹರ ಗೋವಿಂದಕಥಾಸುಧಾ ನಿರೂಪಣೆ

**ಗೋವಿಂದಸುಂದರಕಥಾಸುಧಯಾ ಸ ನೄಣಾ-**
**ಮಾನಂದಯನ್ನ ಕಿಲ ಕೇವಲಮಿಂದ್ರಿಯಾಣಿ ।**
**ಕಿಂ ತು ಪ್ರಭೋೋ ರಜತಪೀಠಪುರೇ ಪದಾಬ್ಜಂ**
**ಶ್ರೀವಲ್ಲಭಸ್ಯ ಭಜತಾಮಪಿ ದೇವತಾನಾಮ್ ॥ 15 ॥**

**ಪದಚ್ಛೇದ**— ಗೋವಿಂದಸುಂದರಕಥಾಸುಧಯಾ, ಸಃ, ನೄಣಾಂ, ಆನಂದಯತ್, ನ, ಕಿಲ, ಕೇವಲಂ, ಇಂದ್ರಿಯಾಣಿ, ಕಿಂ, ತು, ಪ್ರಭೋಃ, ರಜತಪೀಠಪುರೇ, ಪದಾಬ್ಜಂ, ಶ್ರೀವಲ್ಲಭಸ್ಯ, ಭಜತಾಂ, ಅಪಿ, ದೇವತಾನಾಮ್ ।

**ಅನ್ವಯ**— ಸಃ ಗೋವಿಂದಸುಂದರಕಥಾಸುಧಯಾ ಕೇವಲಂ ನೄಣಾಂ ಇಂದ್ರಿಯಾಣಿ ನ ಆನಂದಯತ್ ಕಿಂ ತು ರಜತಪೀಠಪುರೇ ಪ್ರಭೋಃ ಶ್ರೀವಲ್ಲಭಸ್ಯ ಪದಾಬ್ಜಂ ಭಜತಾಂ ದೇವತಾನಾಂ ಅಪಿ ಆನಂದಯತ್ ಕಿಲ ।

**ಅನ್ವಯಾರ್ಥ**—

**ಸಃ** = ಆ ಮಧ್ಯಗೇಹಭಟ್ಟರು

**ಗೋವಿಂದಸುಂದರಕಥಾಸುಧಯಾ** = ಗೋವಿಂದನ ಸುಂದರವಾದ ಕಥೆ ಎಂಬ ಅಮೃತದಿಂದ

**ಕೇವಲಂ ನೄಣಾಂ ಇಂದ್ರಿಯಾಣಿ** = ಕೇವಲ ಮನುಷ್ಯರ ಇಂದ್ರಿಯಗಳನ್ನು ಮಾತ್ರ

**ನ ಆನಂದಯತ್** = ಸಂತೋಷಪಡಿಸಲಿಲ್ಲ,

**ಕಿಂ ತು** = ಆದರೆ

**ರಜತಪೀಠಪುರೇ** = ರಜತಪೀಠಪುರದಲ್ಲಿ

**ಪ್ರಭೋಃ ಶ್ರೀವಲ್ಲಭಸ್ಯ** = ಸ್ವಾಮಿಯಾದ ಲಕ್ಷ್ಮೀಪತಿಯಾದ ಅನಂತಾಸನನ

**ಪದಾಬ್ಜಂ ಭಜತಾಂ ದೇವತಾನಾಂ ಇಂದ್ರಿಯಾಣಿ ಅಪಿ** = ಪಾದಕಮಲವನ್ನು ಸೇವಿಸುತ್ತಿರುವ ದೇವತೆಗಳ ಇಂದ್ರಿಯಗಳನ್ನೂ

**ಆನಂದಯತ್ ಕಿಲ** = ಸಂತೋಷಪಡಿಸಿದರಷ್ಟೇ!

**ತಾತ್ಪರ್ಯ—** ಮಧ್ಯಗೇಹಭಟ್ಟರು ರಜತಪೀಠಪುರದಲ್ಲಿ ಮಹಾಭಾರತಪುರಾಣಗಳು ಇವುಗಳನ್ನೆಲ್ಲಾ ಹೇಳುತ್ತಾ ಕಾಲವನ್ನು ಕಳೆಯುತ್ತಿರುವರು ಎಂದು ಹೇಳಿದೆವು. ಆ ಪುರಾಣದಿಂದ ಸಂತುಷ್ಟರಾದವರು ಯಾರು? ಎಂದು ಕೇಳಬಹುದು. ಈ ಪ್ರಶ್ನೆಗೆ ಉತ್ತರವನ್ನು ಕೊಡುವೆವು. ಈ ಪುರಾಣಪ್ರವಚನದಿಂದ ಸಂತುಷ್ಟರಾದವರು ಶ್ರೋತೃಗಳು ಮಾತ್ರವಲ್ಲ. ರಜತಪೀಠಪುರದಲ್ಲಿ ಅನಂತೇಶ್ವರನನ್ನು ಸೇವಿಸುವುದಕ್ಕೋಸ್ಕರ ಎಲ್ಲಾ ದೇವತೆಗಳೂ ಪ್ರತಿದಿನದಲ್ಲಿಯೂ ಬರುತ್ತಿದ್ದರು. ಆ ದೇವತೆಗಳೆಲ್ಲರೂ ಈ ಪುರಾಣಪ್ರವಚನದಿಂದ ತೃಪ್ತರಾದರು.

**ವಿಗ್ರಹ—**

**ಗೋವಿಂದಸುಂದರಕಥಾಸುಧಯಾ—** ಸುಂದರಾ ಚ ಸಾ ಕಥಾ ಚ ಸುಂದರಕಥಾ, ಸುಂದರಕಥಾ ಏವ ಸುಧಾ ಸುಂದರಕಥಾಸುಧಾ, ಗೋವಿಂದಸ್ಯ ಸುಂದರಕಥಾಸುಧಾ ಗೋವಿಂದಸುಂದರಕಥಾಸುಧಾ, ತಯಾ ಗೋವಿಂದಸುಂದರಕಥಾಸುಧಯಾ ।

**ರಜತಪೀಠಪುರೇ—** ರಜತಪೀಠಂ ಇತಿ ಪುರಂ ರಜತಪೀಠಪುರಂ, ತಸ್ಮಿನ್ ರಜತಪೀಠಪುರೇ ।

**ಪದಾಬ್ಜಂ—** ಪದಂ ಅಬ್ಜಂ ಇವ ಪದಾಬ್ಜಂ, ತತ್ ಪದಾಬ್ಜಂ ।

**ಶ್ರೀವಲ್ಲಭಸ್ಯ—** ಶ್ರಿಯಃ ವಲ್ಲಭಃ ಶ್ರೀವಲ್ಲಭಃ, ತಸ್ಯ ಶ್ರೀವಲ್ಲಭಸ್ಯ ।

**ಭಜತಾಂ—** ಭಜತಿ ಇತಿ ಭಜಂತಃ, ತೇಷಾಂ ಭಜತಾಂ ।

**ಕ್ರಿಯಾಪದ—** ಆನಂದಯತ್- ಆಙ್ ಇತ್ಯುಪಸರ್ಗಪೂರ್ವಕ ಟು ನದಿ ಸಮೃದ್ಧೌ ಇತಿ ಸಮೃದ್ಧ್ಯರ್ಥಕಾತ್ ನದಿಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ಣಿಜಂತಾತ್ 'ಆನಂದಯತ್' ಇತಿ ರೂಪಮ್ ।

| | | |
|---|---|---|
| ಆನಂದಯತ್ | ಆನಂದಯತಾಂ | ಆನಂದಯನ್, |
| ಆನಂದಯಃ | ಆನಂದಯತಂ | ಆನಂದಯತ, |
| ಆನಂದಯಂ | ಆನಂದಯಾವ | ಆನಂದಯಾಮ ॥ |

★ ★ ★

ಯಥಾರ್ಥಜ್ಞಾನ ಪಡೆಯುವಲ್ಲಿ ಮಧ್ಯಗೇಹರ ಕಳಕಳಿ

**ಇತ್ಥಂ ಹರೇರ್ಗುಣಕಥಾಸುಧಯಾ ಸುತೃಪ್ತೋ**
**ನೈರ್ಗುಣ್ಯವಾದಿಷು ಜನೇಷ್ವಪಿ ಸಾಗ್ರಹೇಷು ।**
**ತತ್ತ್ವೇ ಸ ಕಾಲಚಲಧೀರತಿಸಂಶಯಾಲು-**
**ರ್ಧೀಮಾನ್ ಧಿಯಾ ಶ್ರವಣಶೋಧಿತಯಾ ಪ್ರದಧ್ಯೌ ॥ 16 ॥**

**ಪದಚ್ಛೇದ—** ಇತ್ಥಂ, ಹರೇಃ, ಗುಣಕಥಾಸುಧಯಾ, ಸುತೃಪ್ತಃ, ನೈರ್ಗುಣ್ಯವಾದಿಷು, ಜನೇಷು, ಅಪಿ, ಸಾಗ್ರಹೇಷು, ತತ್ತ್ವೇ, ಸಃ, ಕಾಲಚಲಧೀಃ, ಅತಿಸಂಶಯಾಲುಃ, ಧೀಮಾನ್, ಧಿಯಾ, ಶ್ರವಣಶೋಧಿತಯಾ, ಪ್ರದಧ್ಯೌ ।

**ಅನ್ವಯ—** ಇತ್ಥಂ ಹರೇಃ ಗುಣಕಥಾಸುಧಯಾ ಸುತೃಪ್ತಃ ಸಃ ನೈರ್ಗುಣ್ಯವಾದಿಷು ಜನೇಷು ಸಾಗ್ರಹೇಷು ಅಪಿ ತತ್ತ್ವೇ ಕಾಲಚಲಧೀಃ ಅತಿಸಂಶಯಾಲುಃ ಧೀಮಾನ್ ಶ್ರವಣಶೋಧಿತಯಾ ಧಿಯಾ ಪ್ರದಧ್ಯೌ ।

ಅನ್ವಯಾರ್ಥ—

**ಇತ್ಥಂ ಹರೇಃ ಗುಣಕಥಾಸುಧಯಾ ಸುತೃಪ್ತಃ ಸಃ** = ಹಿಂದೆ ಹೇಳಿದಂತೆ ಶ್ರೀಹರಿಯ ಗುಣಗಳನ್ನು ಹೇಳುವುದು ಎಂಬ ಅಮೃತದಿಂದ ತುಂಬಾ ತೃಪ್ತಿಯನ್ನು ಹೊಂದಿರುವ ಆ ಮಧ್ಯಗೇಹಭಟ್ಟರು

**ನೈರ್ಗುಣ್ಯವಾದಿಷು ಜನೇಷು ಸಾಗ್ರಹೇಷು ಅಪಿ** = 'ಶ್ರೀಹರಿಯು ನಿರ್ಗುಣನು' ಎಂಬ ವಾದಿಗಳು ತುಂಬಾ ಆಗ್ರಹದಿಂದ ಯುಕ್ತರಾಗಿರಲು

**ತತ್ತ್ವೇ ಕಾಲಚಲಧೀಃ** = ತತ್ತ್ವವಿಷಯದಲ್ಲಿ ಕಲಿಕಾಲಬಲದಿಂದ ಚಂಚಲವಾದ ಬುದ್ಧಿಯುಳ್ಳವರಾಗಿ

**ಅತಿಸಂಶಯಾಲುಃ ಧೀಮಾನ್** = ಅತ್ಯಂತ ಸಂಶಯದಿಂದ ಯುಕ್ತರಾಗಿ, ವಿವೇಕವುಳ್ಳವರಾಗಿ

**ಶ್ರವಣಶೋಧಿತಯಾ ಧಿಯಾ** = ಶ್ರವಣದಿಂದ ಅತ್ಯಂತ ಪರಿಶುದ್ಧವಾಗಿರುವ ಬುದ್ಧಿಯಿಂದ

**ಪ್ರದಧ್ಯೌ** = ಚೆನ್ನಾಗಿ ಆಲೋಚಿಸಿದರು.

**ತಾತ್ಪರ್ಯ—** ಹಿಂದೆ ಹೇಳಿದಂತೆ ಶ್ರೀಹರಿಯ ಗುಣಗಳನ್ನು ಹೇಳುತ್ತಿರುವುದರಿಂದ ಶ್ರೀಹರಿಯ ಕಥೆ ಎಂಬ ಅಮೃತಪಾನದಿಂದ ಮಧ್ಯಗೇಹಭಟ್ಟರು ತುಂಬಾ ತೃಪ್ತರಾದರು. ಆದರೆ ಶ್ರೀಹರಿಯು ನಿರ್ಗುಣನು ಎಂಬ ವಾದಿಗಳ ಆಗ್ರಹವು ತಪ್ಪಲಿಲ್ಲ. ಕಾಲದೋಷದಿಂದ ತತ್ತ್ವದಲ್ಲಿ ಚಂಚಲಬುದ್ಧಿಯು ಹುಟ್ಟಿತು. ಮಧ್ಯಗೇಹಭಟ್ಟರು ಅತ್ಯಂತ ಸಂಶಯವುಳ್ಳವರು. ಶ್ರವಣದಿಂದ ಅತ್ಯಂತ ಪರಿಶುದ್ಧವಾದ ಬುದ್ಧಿಯಿಂದ ದೀರ್ಘಾಲೋಚನೆಯನ್ನು ಮಾಡಿದರು.

ವಿಗ್ರಹ—

**ಗುಣಕಥಾಸುಧಯಾ—** ಗುಣಾನಾಂ ಕಥಾ ಗುಣಕಥಾ, ಗುಣಕಥೈವ ಸುಧಾ ಗುಣಕಥಾಸುಧಾ, ತಯಾ ಗುಣಕಥಾಸುಧಯಾ ।

**ಸುತೃಪ್ತಃ—** ಅತ್ಯಂತಂ ತೃಪ್ತಃ ಸುತೃಪ್ತಃ ।

**ನೈರ್ಗುಣ್ಯವಾದಿಷು—** ಗುಣಾನಾಂ ಅಭಾವಃ ನೈರ್ಗುಣ್ಯಂ, ನೈರ್ಗುಣ್ಯಸ್ಯ ವಾದಃ ಯೇಷಾಂ ಅಸ್ತಿ ಇತಿ ನೈರ್ಗುಣ್ಯವಾದಿನಃ, ತೇಷು ನೈರ್ಗುಣ್ಯವಾದಿಷು ।

**ಸಾಗ್ರಹೇಷು—** ಆಗ್ರಹೇಣ ಸಹ ವರ್ತಂತೇ ಇತಿ ಸಾಗ್ರಹಾಃ, ತೇಷು ಸಾಗ್ರಹೇಷು ।

**ಕಾಲಚಲಧೀಃ—** ಕಾಲೇನ ಚಲಾ ಧೀಃ ಯಸ್ಯ ಸಃ ಕಾಲಚಲಧೀಃ ।

**ಅತಿಸಂಶಯಾಲುಃ—** ಅತ್ಯಂತಂ ಸಂಶಯಾಲುಃ ಅತಿಸಂಶಯಾಲುಃ ।

**ಧೀಮಾನ್—** ಧೀಃ ಅಸ್ಯ ಅಸ್ತಿ ಇತಿ ಧೀಮಾನ್ ।

**ಶ್ರವಣಶೋಧಿತಯಾ—** ಶ್ರವಣೇನ ಶೋಧಿತಾ ಶ್ರವಣಶೋಧಿತಾ, ತಯಾ ಶ್ರವಣಶೋಧಿತಯಾ ।

**ಕ್ರಿಯಾಪದ— ಪ್ರದಧ್ಯೌ-** ಪ್ರ ಇತ್ಯುಪಸರ್ಗಪೂರ್ವಕಾತ್ ಧ್ಯೈ ಚಿಂತಾಯಾಂ ಇತ್ಯಸ್ಮಾತ್ ಚಿಂತಾರ್ಥಕಾತ್ ಧ್ಯೈ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಪ್ರದಧ್ಯೌ' ಇತಿ ರೂಪಮ್ ।

ಪ್ರದಧ್ಯೌ ಪ್ರದಧ್ಯತುಃ ಪ್ರದಧ್ಯುಃ, ಪ್ರದಧ್ಯಿಥ ಪ್ರದಧ್ಯಾಥ, ಪ್ರದಧ್ಯಥುಃ ಪ್ರದಧ್ಯ, ಪ್ರದಧ್ಯೌ ಪ್ರದಧ್ಯಿವ ಪ್ರದಧ್ಯಿಮ ॥

★ ★ ★

### ಸತ್ಪುತ್ರನನ್ನು ಪಡೆಯುವ ಆಲೋಚನೆ

**ತ್ರಾತಾ ಯ ಏವ ನರಕಾತ್ ಸ ಹಿ ಪುತ್ರನಾಮಾ**
**ಮುಖ್ಯಾವನಂ ನ ಸುಲಭಂ ಪುರುಷಾದಪೂರ್ಣಾತ್ ।**
**ತಸ್ಮಾತ್ಸಮಸ್ತವಿದಪತ್ಯಮವದ್ಯಹೀನಂ**
**ವಿದ್ಯಾಕರಾಕೃತಿ ಲಭೇಮಹಿ ಕೈರುಪಾಯೈಃ ॥ 17 ॥**

**ಪದಚ್ಛೇದ—** ತ್ರಾತಾ, ಯಃ, ಏವ, ನರಕಾತ್, ಸಃ, ಹಿ, ಪುತ್ರನಾಮಾ, ಮುಖ್ಯಾವನಂ, ನ, ಸುಲಭಂ, ಪುರುಷಾತ್ ಅಪೂರ್ಣಾತ್, ತಸ್ಮಾತ್, ಸಮಸ್ತವಿತ್, ಅಪತ್ಯಂ, ಅವದ್ಯಹೀನಂ, ವಿದ್ಯಾಕರಾಕೃತಿ, ಲಭೇಮಹಿ, ಕೈಃ, ಉಪಾಯೈಃ ।

**ಅನ್ವಯ—** ಯಃ ಏವ ನರಕಾತ್ ತ್ರಾತಾ ಸಃ ಪುತ್ರನಾಮಾ ಹಿ, ಅಪೂರ್ಣಾತ್ ಪುರುಷಾತ್ ಮುಖ್ಯಾವನಂ ನ ಸುಲಭಂ, ತಸ್ಮಾತ್ ಸಮಸ್ತವಿತ್ ಅವದ್ಯಹೀನಂ ವಿದ್ಯಾಕರಾಕೃತಿ ಅಪತ್ಯಂ ಕೈಃ ಉಪಾಯೈಃ ಲಭೇಮಹಿ ।

**ಅನ್ವಯಾರ್ಥ—**

**ಯಃ ಏವ ನರಕಾತ್ ತ್ರಾತಾ ಸಃ ಪುತ್ರನಾಮಾ ಹಿ** = ಯಾವನು ಪುತ್ ಎಂಬ ನರಕದಿಂದ ರಕ್ಷಿಸುವನೋ ಅವನೇ ಪುತ್ರ ಎಂಬ ಹೆಸರುಳ್ಳವನು.

**ಅಪೂರ್ಣಾತ್ ಪುರುಷಾತ್ ಮುಖ್ಯಾವನಂ ನ ಸುಲಭಂ** = ಆನಂದ ಮುಂತಾದ ಗುಣಗಳಿಂದ ಪೂರ್ಣನಲ್ಲದಿರುವ ಪುರುಷನ ದೆಸೆಯಿಂದ ಮುಖ್ಯವಾದ ರಕ್ಷಣವು ಸುಲಭವಲ್ಲ.

**ತಸ್ಮಾತ್ ಸಮಸ್ತವಿತ್ ಅವದ್ಯಹೀನಂ ವಿದ್ಯಾಕರಾಕೃತಿ ಅಪತ್ಯಂ** = ಆದ್ದರಿಂದ ಎಲ್ಲವನ್ನೂ ತಿಳಿದವನೂ ಯಾವ ದೋಷಗಳೂ ಇಲ್ಲದವನೂ ಎಲ್ಲಾ ವಿದ್ಯೆಗಳಿಗೂ ಖನಿಯಂತೆ ಇರುವ ಆಕಾರವುಳ್ಳವನೂ ಆಗಿರುವ ಮಗನನ್ನು

**ಕೈಃ ಉಪಾಯೈಃ ಲಭೇಮಹಿ** = ಯಾವ ಉಪಾಯಗಳಿಂದ ಹೊಂದುವೆವು ? ಹೀಗೆ ಎಲ್ಲರೂ ಆಲೋಚಿಸುತ್ತಿದ್ದರು.

**ತಾತ್ಪರ್ಯ—** ಪುತ್ರನ ಲಕ್ಷಣಗಳನ್ನು ಈಗ ವಿವರಿಸುವೆವು. ಯಾವನು 'ಪುತ್' ಎಂಬ ನರಕದಿಂದ ರಕ್ಷಿಸುವನೋ ಅವನೇ ಪುತ್ರ ಎಂದು ಹೇಳಲ್ಪಡುವನು. ಪುತ್ರ ಎಂದು ಹೇಳಲ್ಪಡುವವನು ಸರ್ವವನ್ನೂ ತಿಳಿದಿರಬೇಕು. ಅವನಲ್ಲಿ ಯಾವ ದೋಷಗಳೂ ಇರಬಾರದು. ಎಲ್ಲಾ ವಿದ್ಯೆಗಳನ್ನು ತಿಳಿದಿರಬೇಕು. ಅಂತಹ ಮಗನನ್ನು ಯಾವ ಉಪಾಯಗಳಿಂದ ನಾವು ಪಡೆಯಬಹುದು ಎಂದೂ ಸರ್ವರೂ ಆಲೋಚಿಸಿದರು.

**ವಿಗ್ರಹ—**

**ಪುತ್ರಃ—** ಪುತಃ (ನರಕಾತ್) ತ್ರಾಯತೇ ಇತಿ ಪುತ್ರಃ ।

**ಮುಖ್ಯಾವನಂ—** ಮುಖ್ಯಂ ಚ ತತ್ ಅವನಂ ಚ ಮುಖ್ಯಾವನಂ ।

**ಸುಲಭಂ—** ಸುಖೇನ ಲಬ್ಧುಂ ಯೋಗ್ಯಂ ಸುಲಭಂ ।

**ಅಪೂರ್ಣಾತ್—** ನ ಪೂರ್ಣಃ ಅಪೂರ್ಣಃ, ತಸ್ಮಾತ್ ಅಪೂರ್ಣಾತ್ ।

**ಸಮಸ್ತವಿತ್—** ಸಮಸ್ತಂ ವೇತ್ತಿ ಇತಿ ಸಮಸ್ತವಿತ್, ತತ್ ಸಮಸ್ತವಿತ್ ।

**ಅವದ್ಯಹೀನಂ—** ವದಿತುಂ ಯೋಗ್ಯಾನಿ ವದ್ಯಾನಿ, ನ ವದ್ಯಾನಿ ಅವದ್ಯಾನಿ, ಅವದ್ಯೈಃ ಹೀನಂ ಅವದ್ಯಹೀನಂ, ತತ್ ಅವದ್ಯಹೀನಂ ।

**ವಿದ್ಯಾಕರಾಕೃತಿ—** ವಿದ್ಯಾನಾಂ ಆಕರಾಃ ವಿದ್ಯಾಕರಾಃ, ವಿದ್ಯಾಕರಾಃ ಆಕೃತಿಃ ಯಸ್ಯ ತತ್ ವಿದ್ಯಾಕರಾಕೃತಿ, ತತ್ ವಿದ್ಯಾಕರಾಕೃತಿ ।

**ಕ್ರಿಯಾಪದ—** ಲಭೇಮಹಿ- ಡು ಲಭಷ್ ಪ್ರಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ ಲಭಷ್ ಧಾತೋಃ ವಿಧಿಲಿಙ್ ಪ್ರಥಮ-ಪುರುಷೇ ಬಹುವಚನೇ 'ಲಭೇಮಹಿ' ಇತಿ ರೂಪಮ್ ।

ಲಭೇತ ಲಭೇಯಾತಾಂ ಲಭೇರನ್, ಲಭೇಥಾಃ ಲಭೇಯಾಥಾಂ ಲಭೇಧ್ವಂ, ಲಭೇಯ ಲಭೇವಹಿ ಲಭೇಮಹಿ ॥

★ ★ ★

ಸಂತತಿಗಾಗಿ ಪರಾಶರಾದಿಗಳ ಸೇವೆಯ ಚಿಂತನೆ

**ಪೂರ್ವೇಽಪಿ ಕರ್ದಮಪರಾಶರಪಾಂಡುಮುಖ್ಯಾ**
**ಯತ್ಸೇವಯಾ ಗುಣಗಣಾಢ್ಯಮಪತ್ಯಮಾಪುಃ ।**
**ತಂ ಪೂರ್ಣಸದ್ಗುಣತನುಂ ಕರುಣಾಮೃತಾಬ್ಧಿಂ**
**ನಾರಾಯಣಂ ಕುಲಪತಿಂ ಶರಣಂ ವ್ರಜೇಮ ॥ 18 ॥**

**ಪದಚ್ಛೇದ—** ಪೂರ್ವೇ, ಅಪಿ, ಕರ್ದಮಪರಾಶರಪಾಂಡುಮುಖ್ಯಾಃ, ಯತ್ಸೇವಯಾ, ಗುಣಗಣಾಢ್ಯಂ, ಅಪತ್ಯಂ, ಆಪುಃ, ತಂ, ಪೂರ್ಣಸದ್ಗುಣತನುಂ, ಕರುಣಾಮೃತಾಬ್ಧಿಂ, ನಾರಾಯಣಂ, ಕುಲಪತಿಂ, ಶರಣಂ, ವ್ರಜೇಮ ।

**ಅನ್ವಯ—** ಪೂರ್ವೇ ಕರ್ದಮಪರಾಶರಪಾಂಡುಮುಖ್ಯಾಃ ಅಪಿ ಯತ್ಸೇವಯಾ ಗುಣಗಣಾಢ್ಯಂ ಅಪತ್ಯಂ ಆಪುಃ, ತಂ ಪೂರ್ಣಸದ್ಗುಣತನುಂ ಕರುಣಾಮೃತಾಬ್ಧಿಂ ಕುಲಪತಿಂ ನಾರಾಯಣಂ ಶರಣಂ ವ್ರಜೇಮ ।

**ಅನ್ವಯಾರ್ಥ—**

**ಪೂರ್ವೇ ಕರ್ದಮಪರಾಶರಪಾಂಡುಮುಖ್ಯಾಃ ಅಪಿ** = ಹಿಂದಿನ ಕಾಲದವರಾದ ಕರ್ದಮರು, ಪರಾಶರರು, ಪಾಂಡು ಮಹಾರಾಜ ಮುಂತಾದವರು ಕೂಡ

**ಯತ್ಸೇವಯಾ ಗುಣಗಣಾಢ್ಯಂ ಅಪತ್ಯಂ ಆಪುಃ** = ಯಾರ ಸೇವೆಯಿಂದ ಗುಣಸಮೂಹಗಳಿಂದ ಯುಕ್ತನಾಗಿರುವ ಮಗನನ್ನು ಪಡೆದಿರುವರೋ

**ತಂ ಪೂರ್ಣಸದ್ಗುಣತನುಂ ಕರುಣಾಮೃತಾಬ್ಧಿಂ** = ಅಂತಹ ಪೂರ್ಣವಾದ ನಿರ್ದೋಷವಾದ ಗುಣಗಳಿಂದ ಯುಕ್ತವಾದ ಶರೀರಗಳಿಂದ ಸಹಿತನಾದ, ಕರುಣೆಯೆಂಬ ಅಮೃತದಿಂದ ಸಮುದ್ರದಂತೆ ತುಂಬಿರುವ

**ಕುಲಪತಿಂ ನಾರಾಯಣಂ** = ನಮ್ಮ ಕುಲಕ್ಕೆ ಅಧಿಪತಿಯಾಗಿರುವ ನಾರಾಯಣನನ್ನು

**ಶರಣಂ ವ್ರಜೇಮ** = ರಕ್ಷಕನನ್ನಾಗಿ ಹೊಂದೋಣ.

**ತಾತ್ಪರ್ಯ—** ಹಿಂದಿನವರಾಗಿರುವ ಕರ್ದಮರು, ಪರಾಶರರು, ಪಾಂಡುಮಹಾರಾಜ ಮುಂತಾದ ಪ್ರಮುಖರು ಯಾರ ಸೇವೆಯಿಂದ ಗುಣಗಳ ಸಮೂಹದಿಂದ ಪೂರ್ಣನಾಗಿರುವ ಮಕ್ಕಳನ್ನು ಹೊಂದಿರುವರೋ ಅಂತಹ ಪೂರ್ಣ-ಗಳಾಗಿಯೂ ನಿರ್ದೋಷಗಳಾಗಿಯೂ ಇರುವ ಸದ್ಗುಣಗಳೇ ಯಾರ ಶರೀರವಾಗಿರುವುದೋ ಕರುಣಾಮೃತ-ಸಮುದ್ರನಾಗಿರುವ ನಮ್ಮ ಕುಲದ ಅಧಿಪತಿಯಾಗಿರುವ ನಾರಾಯಣನನ್ನು ಶರಣು ಹೊಂದೋಣ.

**ವಿಗ್ರಹ—**

**ಕರ್ದಮಪರಾಶರಪಾಂಡುಮುಖ್ಯಾಃ—** ಕರ್ದಮಶ್ಚ ಪರಾಶರಶ್ಚ ಪಾಂಡುಶ್ಚ ಕರ್ದಮಪರಾಶರಪಾಂಡವಃ, ಕರ್ದಮಪರಾಶರಪಾಂಡವಃ ಏವ ಮುಖ್ಯಾಃ ಯೇಷಾಂ ತೇ ಕರ್ದಮಪರಾಶರಪಾಂಡುಮುಖ್ಯಾಃ ।

**ಯತ್ಸೇವಯಾ—** ಯಸ್ಯ ಸೇವಾ ಯತ್ಸೇವಾ, ತಯಾ ಯತ್ಸೇವಯಾ ।

**ಗುಣಗಣಾಢ್ಯಂ—** ಗುಣಾನಾಂ ಗಣಾಃ ಗುಣಗಣಾಃ, ಗುಣಗಣೈಃ ಆಢ್ಯಂ ಗುಣಗಣಾಢ್ಯಂ, ತತ್ ಗುಣಗಣಾಢ್ಯಂ ।

**ಪೂರ್ಣಸದ್ಗುಣತನುಂ—** ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಪೂರ್ಣಾಶ್ಚ ತೇ ಸದ್ಗುಣಾಶ್ಚ ಪೂರ್ಣಸದ್ಗುಣಾಃ, ಪೂರ್ಣಸದ್ಗುಣಾಃ ತನುಃ ಯಸ್ಯ ಸಃ ಪೂರ್ಣಸದ್ಗುಣತನುಃ, ತಂ ಪೂರ್ಣಸದ್ಗುಣತನುಂ ।

**ಕರುಣಾಮೃತಾಬ್ಧಿಂ—** ಕರುಣೈವ ಅಮೃತಂ ಕರುಣಾಮೃತಂ, ಕರುಣಾಮೃತಸ್ಯ ಅಬ್ಧಿಃ ಕರುಣಾಮೃತಾಬ್ಧಿಃ, ತಂ ಕರುಣಾಮೃತಾಬ್ಧಿಂ ।

**ಕುಲಪತಿಂ—** ಕುಲಸ್ಯ ಪತಿಃ ಕುಲಪತಿಃ, ತಂ ಕುಲಪತಿಂ ।

**ಕ್ರಿಯಾಪದ— ಆಪುಃ-** ಆಪ್ಲ್ರ ವ್ಯಾಪ್ತೌ ಇತ್ಯಸ್ಮಾತ್ ವ್ಯಾಪ್ತ್ಯರ್ಥಕಾತ್ ಆಪ್ಲ್ರ ಧಾತೋಃ ಲಿಟಿ ಪ್ರಥಮಪುರುಷೇ ಬಹುವಚನೇ 'ಆಪುಃ' ಇತಿ ರೂಪಮ್ ।

ಆಪ ಆಪತುಃ ಆಪುಃ, ಆಪಿಥ ಆಪಥುಃ ಆಪ, ಆಪ ಆಪಿವ ಆಪಿಮ ॥

**ವ್ರಜೇಮ-** ವ್ರಜ ಗತೌ ಇತ್ಯಸ್ಮಾತ್ ಗತ್ಯರ್ಥಕಾತ್ ವ್ರಜ ಧಾತೋಃ ವಿಧಿಲಿಙ್ ಪರಸ್ಮೈಪದಿನಃ ಉತ್ತಮಪುರುಷೇ ಬಹುವಚನೇ 'ವ್ರಜೇಮ' ಇತಿ ರೂಪಮ್ ।

ವ್ರಜೇತ್ ವ್ರಜೇತಾಂ ವ್ರಜೇಯುಃ, ವ್ರಜೇಃ ವ್ರಜೇತಂ ವ್ರಜೇತ, ವ್ರಜೇಯಂ ವ್ರಜೇವ ವ್ರಜೇಮ ॥

★ ★ ★

**ಮಧ್ಯಗೇಹಯತಿಗಳಿಂದ 12 ವರ್ಷ ಸತತ ಸೇವೆ**

**ಇತ್ಥಂ ವಿಚಿಂತ್ಯ ಸ ವಿಚಿಂತ್ಯಮನನ್ಯಬಂಧುಃ**
**ಪ್ರೇಷ್ಠಪ್ರದಂ ರಜತಪೀಠಪುರಾಧಿವಾಸಮ್ ।**
**ಭಕ್ತ್ಯಾ ಭವಾಬ್ಧಿಭಯಭಂಗದಯಾ ಶುಭಾತ್ಮಾ**
**ಭೇಜೇ ಭುಜಂಗಶಯನಂ ದ್ವಿಷಡಬ್ದಕಾಲಮ್ ॥ 19 ॥**

**ಪದಚ್ಛೇದ—** ಇತ್ಥಂ, ವಿಚಿಂತ್ಯ, ಸಃ, ವಿಚಿಂತ್ಯಂ, ಅನನ್ಯಬಂಧುಃ, ಪ್ರೇಷ್ಠಪ್ರದಂ, ರಜತಪೀಠಪುರಾಧಿವಾಸಂ, ಭಕ್ತ್ಯಾ, ಭವಾಬ್ಧಿಭಯಭಂಗದಯಾ, ಶುಭಾತ್ಮಾ , ಭೇಜೇ, ಭುಜಂಗಶಯನಂ, ದ್ವಿಷಡಬ್ದಕಾಲಮ್ ।

**ಅನ್ವಯ—** ಇತ್ಥಂ ವಿಚಿಂತ್ಯ, ವಿಚಿಂತ್ಯಂ ಪ್ರೇಷ್ಠಪ್ರದಂ ರಜತಪೀಠಪುರಾಧಿವಾಸಂ ಶುಭಾತ್ಮಾ ಅನನ್ಯಬಂಧುಃ ಸಃ ಭವಾಬ್ಧಿಭಯಭಂಗದಯಾ ಭಕ್ತ್ಯಾ ಭುಜಂಗಶಯನಂ ದ್ವಿಷಡಬ್ದಕಾಲಂ ಭೇಜೇ ।

**ಅನ್ವಯಾರ್ಥ—**

**ಇತ್ಥಂ ವಿಚಿಂತ್ಯ** = ಹೀಗೆ ಆಲೋಚಿಸಿ

**ವಿಚಿಂತ್ಯಂ ಪ್ರೇಷ್ಠಪ್ರದಂ** = ಆಲೋಚಿಸಿ ತಿಳಿಯಲು ಯೋಗ್ಯನಾಗಿರುವ ಅತಿಶಯಿತವಾದ ಪ್ರಿಯವನ್ನು ಕೊಡುತ್ತಿರುವ

**ರಜತಪೀಠಪುರಾಧಿವಾಸಂ** = ರಜತಪೀಠಪುರಕ್ಕೆ ಅಧಿಪತಿಯಾಗಿರುವ ಅನಂತೇಶ್ವರನನ್ನು

**ಶುಭಾತ್ಮಾ ಅನನ್ಯಬಂಧುಃ ಸಃ** = ಶುಭವಾದ ಜೀವರಾಗಿರುವ, ಬೇರೆ ಬಂಧುಗಳಿಲ್ಲದಿರುವವರಾದ ಆ ಶ್ರೀಮಧ್ಯಗೇಹಭಟ್ಟರು

**ಭವಾಬ್ಧಿಭಯಭಂಗದಯಾ ಭಕ್ತ್ಯಾ** = ಸಂಸಾರವೆಂಬ ಸಮುದ್ರದ ಭಯವನ್ನು ಪರಿಹರಿಸುತ್ತಿರುವ ಭಕ್ತಿಯಿಂದ

ಭುಜಂಗಶಯನಂ = ಅನಂತಶಯನನನ್ನು

ದ್ವಿಷಡಬ್ದಕಾಲಂ ಭೇಜೇ = ಹನ್ನೆರಡು ವರ್ಷಕಾಲಗಳ ವರೆಗೆ ಸೇವಿಸಿದರು.

**ತಾತ್ಪರ್ಯ—** ಆ ಮಧ್ಯಗೇಹಭಟ್ಟರಿಗೆ ಶ್ರೀಮನ್ನಾರಾಯಣನನ್ನು ಬಿಟ್ಟು ಬೇರೆ ಉತ್ತಮ ಬಂಧುಗಳಿರಲಿಲ್ಲ. ಹೀಗೆ ಶುದ್ಧಚಿತ್ತರಾದ ಆ ಮಧ್ಯಗೇಹಭಟ್ಟರು ಹಿಂದೆ ಹೇಳಿದಂತೆ ಆಲೋಚಿಸಿದರು. ಅನಂತರ ಧ್ಯಾನಿಸಲು ಯೋಗ್ಯನೂ ಭಕ್ತರಿಗೆ ಅತ್ಯಂತ ಇಷ್ಟವಾದುದನ್ನು ಕೊಡುವವನೂ, ಉಡುಪಿಯಲ್ಲಿ ವಾಸಿಸುವನೂ, ಶೇಷನ ಮೇಲೆ ಮಲಗಿರುವವನೂ ಆದ ಶ್ರೀ ಅನಂತಾಸನದೇವರನ್ನು ಸಂಸಾರಬಂಧವನ್ನು ನಾಶಗೊಳಿಸುವ ಭಕ್ತಿಯಿಂದ ಹನ್ನೆರಡು ವರ್ಷಕಾಲ ಸೇವಿಸಿದರು.

**ವಿಗ್ರಹ—**

**ವಿಚಿಂತ್ಯ—** ವಿಶೇಷೇಣ ಚಿಂತಯಿತ್ವಾ ವಿಚಿಂತ್ಯ ।

**ವಿಚಿಂತ್ಯಂ—** ವಿಚಿಂತಯಿಂತುಂ ಯೋಗ್ಯಃ ವಿಚಿಂತ್ಯಃ, ತಂ ವಿಚಿಂತ್ಯಂ ।

**ಅನನ್ಯಬಂಧುಃ—** ನ ವಿದ್ಯತೇ ಅನ್ಯ ಬಂಧುಃ ಯಸ್ಯ ಸಃ ಅನನ್ಯಬಂಧುಃ ।

**ಪ್ರೇಷ್ಠಪ್ರದಂ—** ಅತಿಶಯಿತಂ ಪ್ರಿಯಂ ಪ್ರೇಷ್ಠಂ, ಪ್ರೇಷ್ಠಂ ಪ್ರದದಾತಿ ಇತಿ ಪ್ರೇಷ್ಠಪ್ರದಃ, ತಂ ಪ್ರೇಷ್ಠಪ್ರದಂ ।

**ರಜತಪೀಠಪುರಾಧಿವಾಸಂ—** ರಜತಪೀಠಂ ಇತಿ ಪುರಂ ರಜತಪೀಠಪುರಂ, ರಜತಪೀಠಪುರೇ ಅಧಿವಸತಿ ಇತಿ ರಜತಪೀಠಪುರಾಧಿವಾಸಃ, ತಂ ರಜತಪೀಠಪುರಾಧಿವಾಸಂ ।

**ಭವಾಬ್ಧಿಭಯಭಂಗದಯಾ—** ಭವಃ ಅಬ್ಧಿಃ ಇವ ಭವಾಬ್ಧಿಃ, ಭವಾಬ್ಧೇಃ ಭಯಂ ಭವಾಬ್ಧಿಭಯಂ, ಭವಾಬ್ಧಿಭಯಸ್ಯ ಭಂಗಃ ಭವಾಬ್ಧಿಭಯಭಂಗಃ, ಭವಾಬ್ಧಿಭಯಭಂಗಂ ದದಾತಿ ಇತಿ ಭವಾಬ್ಧಿಭಯಭಂಗದಾ, ತಯಾ ಭವಾಬ್ಧಿಭಯಭಂಗದಯಾ ।

**ಶುಭಾತ್ಮಾ—** ಶುಭಃ ಆತ್ಮಾ ಯಸ್ಯ ಸಃ ಶುಭಾತ್ಮಾ ।

**ಭುಜಂಗಶಯನಂ—** ಭುಜಂಗಃ ಶಯನಂ ಯಸ್ಯ ಸಃ ಭುಜಂಗಶಯನಃ, ತಂ ಭುಜಂಗಶಯನಂ ।

**ದ್ವಿಷಡಬ್ದಕಾಲಂ—** ದ್ವಾಭ್ಯಾಂ ಆವೃತ್ತಾಃ ಷಟ್ ದ್ವಿಷಟ್, ದ್ವಿಷಟ್ ಚ ತೇ ಅಬ್ದಾಶ್ಚ ದ್ವಿಷಡಬ್ದಾಃ, ದ್ವಿಷಡಬ್ದಾಃ ಕಾಲಃ ಯಸ್ಯ ತತ್ ದ್ವಿಷಡಬ್ದಕಾಲಂ ।

**ಕ್ರಿಯಾಪದ—** ಭೇಜೇ- ಭಜ ಸೇವಾಯಾಂ ಸೇವಾರ್ಥಕಾತ್ ಭಜ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಭೇಜೇ' ಇತಿ ರೂಪಮ್ ।

ಭೇಜೇ ಭೇಜಾತೇ ಭೇಜಿರೇ, ಭೇಜಿಷೇ ಭೇಜಾಥೇ ಭೇಜಿಧ್ವೇ, ಭೇಜೇ ಭೇಜಿವಹೇ ಭೇಜಿಮಹೇ ॥

★ ★ ★

ಮಧ್ಯಗೇಹ ದಂಪತಿಗಳ ಅಧಿಕವಾದ ಇಂದ್ರಿಯ ನಿಗ್ರಹ

**ಪತ್ನ್ಯಾ ಸಮಂ ಭಗವತಃ ಸ ಭಜನ್ ಪದಾಬ್ಜಂ**
**ಭೋಗಾನ್ ಲಘೂನಪಿ ಪುನರ್ಲಘಯಾಂಚಕಾರ ।**
**ದಾಂತಂ ಸ್ವಯಂ ಚ ಹೃದಯಂ ದಮಯಾಂಚಕಾರ**
**ಸ್ವಚ್ಛಂ ಚ ದೇಹಮಧಿಕಂ ವಿಮಲೀಚಕಾರ ॥ 20 ॥**

**ಪದಚ್ಛೇದ—** ಪತ್ನ್ಯಾ, ಸಮಂ, ಭಗವತಃ, ಸಃ, ಭಜನ್, ಪದಾಬ್ಜಂ, ಭೋಗಾನ್, ಲಘೂನ್, ಅಪಿ, ಪುನಃ, ಲಘಯಾಂಚಕಾರ, ದಾಂತಂ, ಸ್ವಯಂ, ಚ, ಹೃದಯಂ, ದಮಯಾಂಚಕಾರ, ಸ್ವಚ್ಛಂ, ಚ, ದೇಹಂ, ಅಧಿಕಂ, ವಿಮಲೀಚಕಾರ।

**ಅನ್ವಯ—** ಪತ್ನ್ಯಾ ಸಮಂ ಸಃ ಭಗವತಃ ಪದಾಬ್ಜಂ ಭಜನ್ ಲಘೂನ್ ಅಪಿ ಭೋಗಾನ್ ಪುನಃ ಲಘಯಾಂಚಕಾರ, ಸ್ವಯಂ ದಾಂತಂ ಚ ಹೃದಯಂ ದಮಯಾಂಚಕಾರ, ಸ್ವಚ್ಛಂ ದೇಹಂ ಚ ಅಧಿಕಂ ವಿಮಲೀಚಕಾರ ।

**ಅನ್ವಯಾರ್ಥ—**

**ಪತ್ನ್ಯಾ ಸಮಂ ಸಃ** = ತನ್ನ ಧರ್ಮಪತ್ನಿಯೊಡನೆ ಆ ಮಧ್ಯಗೇಹಭಟ್ಟರು

**ಭಗವತಃ ಪದಾಬ್ಜಂ ಭಜನ್** = ಶ್ರೀಹರಿಯ ಪಾದಗಳೆಂಬ ಕಮಲವನ್ನು ಸೇವಿಸುತ್ತಿರುವವರಾಗಿ

**ಲಘೂನ್ ಅಪಿ ಭೋಗಾನ್ ಪುನಃ ಲಘಯಾಂಚಕಾರ** = ಮೊದಲೇ ಕಡಿಮೆಯಾಗಿರುವ ಸುಖಸಾಧನಗಳನ್ನು ಇನ್ನೂ ಅಧಿಕವಾಗಿ ಕಡಿಮೆ ಮಾಡಿಕೊಂಡರು.

**ಸ್ವಯಂ ದಾಂತಂ ಚ ಹೃದಯಂ ದಮಯಾಂಚಕಾರ** = ಸ್ವಭಾವದಿಂದಲೇ ಮೊದಲೇ ನಿಗ್ರಹಿಸಲ್ಪಟ್ಟ ಹೃದಯವನ್ನು ಇನ್ನೂ ಅಧಿಕವಾಗಿ ನಿಗ್ರಹ ಮಾಡಿದರು.

**ಸ್ವಚ್ಛಂ ದೇಹಂ ಚ ಅಧಿಕಂ ವಿಮಲೀಚಕಾರ** = ಮೊದಲೇ ಸ್ವಚ್ಛವಾದ ದೇಹವನ್ನು ಇನ್ನೂ ಅಧಿಕವಾಗಿ ನಿರ್ಮಲವನ್ನು ಮಾಡಿಕೊಂಡರು.

**ತಾತ್ಪರ್ಯ—** ಪತ್ನಿಯೊಡನೆ ಭಗವಂತನ ಪಾದಕಮಲವನ್ನು ಸೇವಿಸುತ್ತಿರುವ ಮಧ್ಯಗೇಹಭಟ್ಟರು ಮೊದಲೇ ಅಲ್ಪವಾಗಿರುವ ಸುಖಸಾಮಗ್ರಿಗಳನ್ನು ಇನ್ನೂ ಕಡಿಮೆ ಮಾಡಿಕೊಂಡರು. ಮೊದಲೇ ನಿಗ್ರಹಿಸಲ್ಪಟ್ಟ ಹೃದಯವನ್ನು ಇನ್ನೂ ಅಧಿಕವಾಗಿ ನಿಗ್ರಹಿಸಿದರು. ಮೊದಲೇ ಸ್ವಚ್ಛವಾದ ದೇಹವನ್ನು ಇನ್ನೂ ಅಧಿಕವಾಗಿ ನಿರ್ಮಲವಾಗುವಂತೆ ಮಾಡಿಕೊಂಡರು.

**ವಿಗ್ರಹ—**

**ಭಗವತಃ—** ಭಗಃ ಅಸ್ಯ ಅಸ್ತಿ ಇತಿ ಭಗವಾನ್, ತಸ್ಯ ಭಗವತಃ ।

**ಪದಾಬ್ಜಂ—** ಪದಂ ಅಬ್ಜಂ ಇವ ಪದಾಬ್ಜಂ ।

**ಭೋಗಾನ್—** ಭೋಗಾಃ ಸುಖಸಾಧನಾನಿ, ತಾನಿ ಭೋಗಾನ್ ।

**ಲಘೂನ್—** ಅತ್ಯಲ್ಪಾಃ ಲಘವಃ, ತಾನ್ ಲಘೂನ್ ।

**ಲಘಯಾಂಚಕಾರ—** ಲಘೂನ್ ಚಕಾರ ಲಘಯಾಂಚಕಾರ ।

**ವಿಮಲೀಚಕಾರ—** ಅವಿಮಲಂ ವಿಮಲಂ, ವಿಮಲಂ ಚಕಾರ ವಿಮಲೀಚಕಾರ ।

**ಕ್ರಿಯಾಪದ— ಲಂಘಯಾಂಚಕಾರ-** ಲಘಯಾಂ ಇತ್ಯುಪಪದಪೂರ್ವಕಾತ್ ಡುಕೃಞ್ ಕರಣೇ ಕರಣಾರ್ಥಕಾತ್ ಕೃಞ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಲಘಯಾಂಚಕಾರ' ಇತಿ ರೂಪಮ್ ।

| | | |
|---|---|---|
| ಲಘಯಾಂಚಕಾರ | ಲಘಯಾಂಚಕ್ರತುಃ | ಲಘಯಾಂಚಕ್ರುಃ, |
| ಲಘಯಾಂಚಕರ್ಥ | ಲಘಯಾಂಚಕ್ರಥುಃ | ಲಘಯಾಂಚಕ್ರ, |
| ಲಘಯಾಂಚಕಾರ,ಚಕರ | ಲಘಯಾಂಚಕೃವ | ಲಘಯಾಂಚಕೃಮ ॥ |

**ದಮಯಾಂಚಕಾರ-** ದಮಯಾಂ ಇತ್ಯುಪಪದಪೂರ್ವಕಾತ್ ಡುಕೃಞ್ ಕರಣೇ ಇತ್ಯಸ್ಮಾತ್ ಕೃಞ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ದಮಯಾಂಚಕಾರ' ಇತಿ ರೂಪಮ್ ।

| | | |
|---|---|---|
| ದಮಯಾಂಚಕಾರ | ದಮಯಾಂಚಕ್ರತುಃ | ದಮಯಾಂಚಕ್ರುಃ, |
| ದಮಯಾಂಚಕರ್ಥ | ದಮಯಾಂಚಕ್ರಥುಃ | ದಮಯಾಂಚಕ್ರ, |
| ದಮಯಾಂಚಕಾರ, ಚಕರ | ದಮಯಾಂಚಕೃವ | ದಮಯಾಂಚಕೃಮ ॥ |

ವಿಮಲೀಚಕಾರ- ವಿಮಲೀ ಇತ್ಯುಪಪದಪೂರ್ವಕಾತ್ ಡುಕೃಞ್ ಕರಣೇ ಇತ್ಯಸ್ಮಾತ್ ಕೃಞ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ವಿಮಲೀಚಕಾರ' ಇತಿ ರೂಪಮ್ ।

| | | |
|---|---|---|
| ವಿಮಲೀಚಕಾರ | ವಿಮಲೀಚಕ್ರತುಃ | ವಿಮಲೀಚಕ್ರುಃ, |
| ವಿಮಲೀಚಕರ್ಥ | ವಿಮಲೀಚಕ್ರಥುಃ | ವಿಮಲೀಚಕ್ರ, |
| ವಿಮಲೀಚಕಾರ,ಚಕರ | ವಿಮಲೀಚಕೃವ | ವಿಮಲೀಚಕೃಮ ॥ |

★ ★ ★

**ಅದಿತಿ ಕಶ್ಯಪರಂತೆ ಕಂಗೊಳಿಸಿದ ಮಧ್ಯಗೇಹದಂಪತಿಗಳು**

**ತೀವ್ರೈಃ ಪಯೋವ್ರತಮುಖ್ಯೈರ್ವಿವಿಧೈರ್ವ್ರತಾಗ್ರ್ಯೈ-**
**ರ್ಜಾಯಾಪತೀ ಗುಣಗಣಾರ್ಣವಪುತ್ರಕಾಮೌ ।**
**ಸಂಪೂರ್ಣಪೂರುಷಮತೋಷಯತಾಂ ನಿತಾಂತಂ**
**ದೇವೇರಿತಾವಿವ ಪುರಾಽದಿತಿಕಶ್ಯಪೌ ತೌ ॥ 21 ॥**

**ಪದಚ್ಛೇದ—** ತೀವ್ರೈಃ, ಪಯೋವ್ರತಮುಖ್ಯೈಃ, ವಿವಿಧೈಃ, ವ್ರತಾಗ್ರ್ಯೈಃ, ಜಾಯಾಪತೀ, ಗುಣಗಣಾರ್ಣವಪುತ್ರಕಾಮೌ, ಸಂಪೂರ್ಣಪೂರುಷಂ, ಅತೋಷಯತಾಂ, ನಿತಾಂತಂ, ದೇವೇರಿತೌ, ಇವ, ಪುರಾ, ಅದಿತಿಕಶ್ಯಪೌ, ತೌ ।

**ಅನ್ವಯ—** ತೀವ್ರೈಃ ಪಯೋವ್ರತಮುಖ್ಯೈಃ ವಿವಿಧೈಃ ವ್ರತಾಗ್ರ್ಯೈಃ ತೌ ಜಾಯಾಪತೀ ಗುಣಗಣಾರ್ಣವಪುತ್ರಕಾಮೌ ಪುರಾ ದೇವೇರಿತೌ ಅದಿತಿಕಶ್ಯಪೌ ಇವ ಸಂಪೂರ್ಣಪೂರುಷಂ ನಿತಾಂತಂ ಅತೋಷಯತಾಂ ।

**ಅನ್ವಯಾರ್ಥ—**

**ತೀವ್ರೈಃ ಪಯೋವ್ರತಮುಖ್ಯೈಃ** = ಅತ್ಯಂತ ಕಠಿಣವಾಗಿರುವ ಪಯೋವ್ರತ ಮುಂತಾದ

**ವಿವಿಧೈಃ ವ್ರತಾಗ್ರ್ಯೈಃ** = ನಾನಾವಿಧಗಳಾದ ಶ್ರೇಷ್ಠಗಳಾಗಿರುವ ವ್ರತಗಳಿಂದ

**ತೌ ಜಾಯಾಪತೀ** = ಆ ದಂಪತಿಗಳು

**ಗುಣಗಣಾರ್ಣವಪುತ್ರಕಾಮೌ** = ಗುಣಗಳ ಸಮೂಹಗಳಿಗೆ ಸಮುದ್ರದಂತಿರುವ ಮಗನನ್ನು ಅಪೇಕ್ಷಿಸುತ್ತಾ

**ಪುರಾ ದೇವೇರಿತೌ ಅದಿತಿಕಶ್ಯಪೌ ಇವ** = ಹಿಂದೆ ದೇವತೆಗಳಿಂದ ಪ್ರೇರಿಸಲ್ಪಟ್ಟ ಅದಿತಿ ಮತ್ತು ಕಶ್ಯಪರು ಹೇಗೋ ಹಾಗೆ

**ಸಂಪೂರ್ಣಪೂರುಷಂ** = ಗುಣಗಳಿಂದ ಪೂರ್ಣನಾಗಿರುವ ಪುರುಷನಾದ ಶ್ರೀಹರಿಯನ್ನು

**ನಿತಾಂತಂ ಅತೋಷಯತಾಂ** = ಬಹಳವಾಗಿ ಸಂತೋಷಪಡಿಸಿದರು.

**ತಾತ್ಪರ್ಯ—** ಆ ಮಧ್ಯಗೇಹಭಟ್ಟರು ಮತ್ತು ಅವರ ಪತ್ನಿ ಇವರಿಬ್ಬರು ವ್ರತಗಳಲ್ಲಿ ಉತ್ತಮವಾಗಿರುವ ವ್ರತಗಳನ್ನು ಅನುಷ್ಠಿಸಿದರು. ಆ ವ್ರತಗಳು ಅತ್ಯಂತ ಕಠಿಣವಾದವುಗಳು. ನಾನಾವಿಧವಾದವುಗಳು. ಪಯೋವ್ರತ ಮುಂತಾದವುಗಳು. ಈ ವಿಧಗಳಾದ ವ್ರತಗಳನ್ನು ಈ ದಂಪತಿಗಳು ಮಾಡಿದರು. ಈ ವಿಧಗಳಾದ ವ್ರತಗಳನ್ನು ಗುಣಗಳಿಗೆ ಸಮುದ್ರದಂತಿರುವ ಮಗನನ್ನು ಅಪೇಕ್ಷಿಸಿಕೊಂಡು ಮಾಡಿದರು. ಇದು ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಅದಿತಿ ಮತ್ತು ಕಶ್ಯಪರು ಮಾಡಿದಂತಿತ್ತು.

**ವಿಗ್ರಹ—**

**ಪಯೋವ್ರತಮುಖ್ಯೈಃ—** ಪಯಸಃ ವ್ರತಂ ಪಯೋವ್ರತಂ, ಪಯೋವ್ರತಂ ಮುಖಂ ಯೇಷಾಂ ತೇ ಪಯೋವ್ರತಮುಖಾಃ, ತೈಃ ಪಯೋವ್ರತಮುಖ್ಯೈಃ ।

**ವ್ರತಾಗ್ರ್ಯೈಃ**— ವ್ರತಾನಾಂ ಅಗ್ರ್ಯಾಣಿ ವ್ರತಾಗ್ರ್ಯಾಣಿ, ತೈಃ ವ್ರತಾಗ್ರ್ಯೈಃ ।

**ಜಾಯಾಪತೀ**— ಜಾಯಾ ಚ ಪತಿಶ್ಚ ಜಾಯಾಪತೀ ।

**ಗುಣಗಣಾರ್ಣವಪುತ್ರಕಾಮೌ**— ಗುಣಾನಾಂ ಗಣಾಃ ಗುಣಗಣಾಃ, ಗುಣಗಣಾನಾಂ ಅರ್ಣವಃ ಗುಣಗಣಾರ್ಣವಃ, ಗುಣಗಣಾರ್ಣವಶ್ಚಾಸೌ ಪುತ್ರಶ್ಚ ಗುಣಗಣಾರ್ಣವಪುತ್ರಃ, ಗುಣಗಣಾರ್ಣವಪುತ್ರಂ ಕಾಮಯತೇ ಇತಿ ಗುಣಗಣಾರ್ಣವಪುತ್ರಕಾಮೌ ।

**ಸಂಪೂರ್ಣಪೂರುಷಂ**— ಸಂಪೂರ್ಣಶ್ಚಾಸೌ ಪೂರುಷಶ್ಚ ಸಂಪೂರ್ಣಪೂರುಷಃ, ತಂ ಸಂಪೂರ್ಣಪೂರುಷಂ।

**ದೇವೇರಿತೌ**— ದೇವೈಃ ಈರಿತೌ ದೇವೇರಿತೌ ।

**ಅದಿತಿಕಶ್ಯಪೌ**— ಅದಿತಿಶ್ಚ ಕಶ್ಯಪಶ್ಚ ಅದಿತಿಕಶ್ಯಪೌ ।

**ಕ್ರಿಯಾಪದ— ಅತೋಷಯತಾಂ**- ತುಷ ತುಷ್ಟೌ ಇತಿ ತುಷ್ಟ್ಯರ್ಥಕಾತ್ ತುಷಧಾತೋಃ ಲಙ್ ಪ್ರಥಮಪುರುಷೇ ದ್ವಿವಚನೇ 'ಅತೋಷಯತಾಂ' ಇತಿ ರೂಪಮ್ ।

| | | |
|---|---|---|
| ಅತೋಷಯತ್ | ಅತೋಷಯತಾಂ | ಅತೋಷಯನ್, |
| ಅತೋಷಯಃ | ಅತೋಷಯತಂ | ಅತೋಷಯತ, |
| ಅತೋಷಯಂ | ಅತೋಷಯಾವ | ಅತೋಷಯಾಮ ॥ |

★ ★ ★

ನಾಥನ ಭೂರಿಕರುಣೆಯಿಂದ ದೇಹಶುದ್ಧಿ ಪಡೆದರು

**ನಾಥಸ್ಯ ಭೂರಿಕರುಣಾಸುಧಯಾಽಭಿಷಿಕ್ತೌ**
**ಶ್ರೀಶ್ರೀಧರಪ್ರತತಿಶಾರಶರೀರಯಷ್ಟೀ ।**
**ಭೂರಿವ್ರತಪ್ರಭವದಿವ್ಯಸುಕಾಂತಿಮಂತೌ**
**ತೌ ದೇಹಶುದ್ಧಿಮತಿಮಾತ್ರಮಥಾಲಭೇತಾಮ್ ॥ 22 ॥**

**ಪದಚ್ಛೇದ**— ನಾಥಸ್ಯ, ಭೂರಿಕರುಣಾಸುಧಯಾ, ಅಭಿಷಿಕ್ತೌ, ಶ್ರೀಶ್ರೀಧರಪ್ರತತಿಶಾರಶರೀರಯಷ್ಟೀ, ಭೂರಿವ್ರತಪ್ರಭವದಿವ್ಯಸುಕಾಂತಿಮಂತೌ, ತೌ, ದೇಹಶುದ್ಧಿಂ, ಅತಿಮಾತ್ರಂ, ಅಥ, ಅಲಭೇತಾಮ್ ।

**ಅನ್ವಯ**— ನಾಥಸ್ಯ ಭೂರಿಕರುಣಾಸುಧಯಾ ಅಭಿಷಿಕ್ತೌ ಶ್ರೀಶ್ರೀಧರಪ್ರತತಿಶಾರಶರೀರಯಷ್ಟೀ ಭೂರಿವ್ರತಪ್ರಭವದಿವ್ಯಸುಕಾಂತಿಮಂತೌ ತೌ ಅಥ ದೇಹಶುದ್ಧಿಂ ಅತಿಮಾತ್ರಂ ಅಲಭೇತಾಮ್ ।

**ಅನ್ವಯಾರ್ಥ**—

**ನಾಥಸ್ಯ** = ತನ್ನಿಂದ ಸೇವಿಸಲ್ಪಟ್ಟ ಅನಂತೇಶ್ವರನ

**ಭೂರಿಕರುಣಾಸುಧಯಾ** = ಅತ್ಯಧಿಕವಾದ ಕರುಣೆಯೆಂಬ ಅಮೃತದಿಂದ

**ಅಭಿಷಿಕ್ತೌ** = ಅಭಿಷೇಕ ಮಾಡಲ್ಪಟ್ಟವರುಗಳಾದ

ಶ್ರೀಶ್ರೀಧರಪ್ರತತಿಶಾರಶರೀರಯಷ್ಟೀ = ಲಕ್ಷ್ಮೀದೇವಿ ಮತ್ತು ಶ್ರೀನಾರಾಯಣ ಇವರಿಬ್ಬರ ಪ್ರತತಿ ಅಂದರೆ ಅಧಿಕವ್ಯಾಪ್ತಿ ಅಂದರೆ ವಿಶೇಷ ಸನ್ನಿಧಾನದಿಂದ ಮಿಶ್ರವಾದ ಶರೀರಗಳೆಂಬ ಯಷ್ಟಿಗಳುಳ್ಳ

**ಭೂರಿವ್ರತಪ್ರಭವದಿವ್ಯಸುಕಾಂತಿಮಂತೌ** = ಹೆಚ್ಚಾದ ವ್ರತನಿಯಮದಿಂದ ಉಂಟಾದ ದೇವತಾನುಗ್ರಹ ಸಂಬಂಧವಾದ ಒಳ್ಳೆ ಕಾಂತಿಯುಳ್ಳ

**ತೌ** = ಆ ಮಧ್ಯಗೇಹಭಟ್ಟರು ಮತ್ತು ಅವರ ಪತ್ನಿಯರು

**ಅಥ** = ಅನಂತರ

**ದೇಹಶುದ್ಧಿಂ** = ದೇಹದ ಶುದ್ಧಿಯನ್ನು

**ಅತಿಮಾತ್ರಂ** = ಅತ್ಯಧಿಕವಾಗಿ

**ಆಲಭೇತಾಮ್** = ಪಡೆದರು.

**ತಾತ್ಪರ್ಯ**— ನಾಥನ ಅಪಾರ ಕರುಣಾಮೃತದಿಂದ ಶ್ರೀಮಧ್ಯಗೇಹಭಟ್ಟರು ಮತ್ತು ಅವರ ಪತ್ನಿಯರು ಅಭಿಷಿಕ್ತರಾದರು. ಲಕ್ಷ್ಮೀದೇವಿಯರ ಮತ್ತು ಲಕ್ಷ್ಮೀನಾರಾಯಣನ ವಿಶೇಷ ಸನ್ನಿಧಾನವು ಅವರಿಬ್ಬರ ದೇಹಗಳಲ್ಲಿ ಏರ್ಪಟ್ಟಿತು. ಅವರಿಬ್ಬರ ದೇಹಗಳೂ ಶ್ರೇಷ್ಠವೆನಿಸಿದವು. ಅವರಿಬ್ಬರ ದೇಹಗಳೂ ಕಡ್ಡಿಯಂತಾದವು. ಅವರಿಬ್ಬರೂ ನಾನಾ-ವಿಧಗಳಾದ ವ್ರತಗಳನ್ನು ಮಾಡಿದರು. ಆ ವ್ರತಗಳಿಂದ ಅವರಿಬ್ಬರ ದೇಹಗಳಲ್ಲಿಯೂ ಶುದ್ಧಿಯು ಏರ್ಪಟ್ಟಿತು. ಇನ್ನೂ ಅಧಿಕವಾದ ದೇಹಶುದ್ಧಿಯು ಏರ್ಪಡಲೆಂದು ಪ್ರಾರ್ಥಿಸಿದರು.

**ವಿಗ್ರಹ**—

**ಭೂರಿಕರುಣಾಸುಧಯಾ**— ಭೂರಿಶ್ಚಾಸೌ ಕರುಣಾ ಚ ಭೂರಿಕರುಣಾ, ಭೂರಿಕರುಣೈವ ಸುಧಾ ಭೂರಿ-ಕರುಣಾಸುಧಾ, ತಯಾ ಭೂರಿಕರುಣಾಸುಧಯಾ ।

**ಶ್ರೀಶ್ರೀಧರಪ್ರತತಿಶಾರಶರೀರಯಷ್ಟೀ**— ಶ್ರೀಶ್ಚ ಶ್ರೀಧರಶ್ಚ ಶ್ರೀಶ್ರೀಧರೌ, ಶ್ರೀಶ್ರೀಧರಯೋಃ ಪ್ರತತಿಃ ಶ್ರೀಶ್ರೀಧರಪ್ರತತಿಃ, ಶ್ರೀಶ್ರೀಧರಪ್ರತತೇಃ ಶಾರಃ ಶ್ರೀಶ್ರೀಧರಪ್ರತತಿಶಾರಃ, ಶ್ರೀಶ್ರೀಧರಪ್ರತತಿಶಾರೇ ಚ ತೇ ಶರೀರೇ ಚ ಶ್ರೀಶ್ರೀಧರಪ್ರತತಿಶಾರಶರೀರೇ ಶ್ರೀಶ್ರೀಧರಪ್ರತತಿಶಾರಶರೀರೇ ಯಷ್ಟೀ ಇವ ಯಯೋಸ್ತೌ ಶ್ರೀಶ್ರೀಧರಪ್ರತತಿಶಾರಶರೀರಯಷ್ಟೀ ।

**ಭೂರಿವ್ರತಪ್ರಭವದಿವ್ಯಸುಕಾಂತಿಮಂತೌ**— ಭೂರೀಣಿ ವ್ರತಾನಿ ಭೂರಿವ್ರತಾನಿ, ಭೂರಿವ್ರತೇಭ್ಯಃ ಪ್ರಭವಾ ಭೂರಿವ್ರತಪ್ರಭವಾ, ಭೂರಿವ್ರತಪ್ರಭವಾ ದಿವ್ಯಾ ಸುಕಾಂತಿಃ ಯಯೋಸ್ತೇ ಭೂರಿವ್ರತಪ್ರಭವದಿವ್ಯ-ಸುಕಾಂತಿಃ, ತಯೋಃ ಭೂರಿವ್ರತಪ್ರಭವದಿವ್ಯಸುಕಾಂತಿಮಂತೌ ।

**ದೇಹಶುದ್ಧಿಂ**— ದೇಹಸ್ಯ ಶುದ್ಧಿಃ ದೇಹಶುದ್ಧಿಃ, ತಾಂ ದೇಹಶುದ್ಧಿಂ ।

**ಅತಿಮಾತ್ರಂ**— ಅತ್ಯಂತಂ ಮಾತ್ರಾ ಯಸ್ಯ ತತ್ ಅತಿಮಾತ್ರಂ ।

**ಕ್ರಿಯಾಪದ**— **ಆಲಭೇತಾಂ**- ಡು ಲಭಷ್ ಪ್ರಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ ಲಭಷ್‌ಧಾತೋಃ ಆತ್ಮನೇಪದಿನಃ ಲಙ್ ಪ್ರಥಮಪುರುಷೇ ದ್ವಿವಚನೇ 'ಆಲಭೇತಾಂ' ಇತಿ ರೂಪಮ್ ।

ಆಲಭತ ಆಲಭೇತಾಂ ಆಲಭಂತ, ಆಲಭಥಾಃ ಆಲಭೇಥಾಂ ಆಲಭಧ್ವಂ, ಆಲಭೇ ಆಲಭಾವಹಿ ಆಲಭಾಮಹಿ॥

★ ★ ★

ಮಧ್ಯಗೇಹರ ಪತ್ನಿಯ ಗರ್ಭಧಾರಣೆ

**ಕಾಂತಾದೃತೌ ಸಮುಚಿತೇಽಥ ಬಭಾರ ಗರ್ಭಂ**

**ಸಾ ಭೂಸುರೇಂದ್ರದಯಿತಾ ಜಗತಾಂ ಸುಖಾಯ ।**

**ಅಚ್ಛಾಂಬರೇವ ರಜನೀ ಪರಿಪೂರಿತಾಶಾ**

**ಭಾವಿನ್ಯಪಾಸ್ತತಮಸಂ ವಿಧುಮಾದ್ಯಪಕ್ಷಾತ್ ॥ 23 ॥**

**ಪದಚ್ಛೇದ—** ಕಾಂತಾತ್, ಋತೌ, ಸಮುಚಿತೇ, ಅಥ, ಬಭಾರ, ಗರ್ಭಂ, ಸಾ, ಭೂಸುರೇಂದ್ರದಯಿತಾ, ಜಗತಾಂ, ಸುಖಾಯ, ಅಚ್ಛಾಂಬರಾ, ಇವ, ರಜನೀ, ಪರಿಪೂರಿತಾಶಾ, ಭಾವಿನೀ, ಅಪಾಸ್ತತಮಸಂ, ವಿಧುಂ, ಆದ್ಯಪಕ್ಷಾತ್ ।

**ಅನ್ವಯ—** ಭೂಸುರೇಂದ್ರದಯಿತಾ ಸಾ ಕಾಂತಾತ್ ಸಮುಚಿತೇ ಋತೌ ಜಗತಾಂ ಸುಖಾಯ ಗರ್ಭಂ ಬಭಾರ, ಅಥ ಅಚ್ಛಾಂಬರಾ ರಜನೀ ಇವ, ಪರಿಪೂರಿತಾಶಾ ಭಾವಿನೀ ಅಪಾಸ್ತತಮಸಂ ವಿಧುಂ ಆದ್ಯಪಕ್ಷಾತ್ ಇವ ।

**ಅನ್ವಯಾರ್ಥ—**

**ಭೂಸುರೇಂದ್ರದಯಿತಾ ಸಾ** = ಬ್ರಾಹ್ಮಣಶ್ರೇಷ್ಠರಾದ ಮಧ್ಯಗೇಹಭಟ್ಟರ ಪತ್ನಿಯಾಗಿರುವ ಆ ವೇದವತೀ ದೇವಿಯು

**ಕಾಂತಾತ್** = ಪತಿಯಾದ ಮಧ್ಯಗೇಹಭಟ್ಟರ ದೆಸೆಯಿಂದ

**ಸಮುಚಿತೇ ಋತೌ** = ಪ್ರಸವಕ್ಕೆ ಯೋಗ್ಯವಾದ ಋತುವಿನಲ್ಲಿ

**ಜಗತಾಂ ಸುಖಾಯ** = ಸಕಲಲೋಕಗಳ ಕ್ಷೇಮಕ್ಕೋಸ್ಕರ

**ಗರ್ಭಂ ಬಭಾರ** = ಗರ್ಭವನ್ನು ಧರಿಸಿದಳು. (ಆ ಗರ್ಭಧಾರಣವು ಹೇಗೆ ಇತ್ತು ಆ ವಿಷಯವನ್ನು ವಿವರಿಸುವೆವು.)

**ಅಥ** = ದೇಹವು ಶುದ್ಧವಾದ ಮೇಲೆ

**ಅಚ್ಛಾಂಬರಾ ಪರಿಪೂರಿತಾಶಾ ಭಾವಿನೀ ಅಪಾಸ್ತತಮಸಂ ವಿಧುಂ ಆದ್ಯಪಕ್ಷಾತ್ ಇವ** = ಸ್ವಚ್ಛವಾದ ಆಕಾಶವುಳ್ಳ, ಪರಿಪೂರ್ಣವಾದ ದಿಕ್ಕುಗಳುಳ್ಳ, ಪ್ರಕಾಶಮಾನವಾದ ರಾತ್ರಿಯಲ್ಲಿ, ಶುಕ್ಲಪಕ್ಷದಲ್ಲಿ, ಚಂದ್ರನು ಉದಯಿಸಿದಂತೆ ಇತ್ತು.

**ತಾತ್ಪರ್ಯ—** ಮಧ್ಯಗೇಹಭಟ್ಟರ ಪತ್ನಿಯಾಗಿರುವ ವೇದವತೀದೇವಿ ತಮ್ಮ ಪತಿಯಿಂದ ಗರ್ಭಧಾರಣಕ್ಕೆ ಯೋಗ್ಯವಾಗಿರುವ ಋತುವಿನಲ್ಲಿ ಗರ್ಭವನ್ನು ಧರಿಸಿದಳು. ಈ ಗರ್ಭಧಾರಣವು ಹೇಗಿತ್ತು ಅಂದರೆ ಅದನ್ನು ವಿವರಿಸುವೆವು. ರಾತ್ರಿಕಾಲ, ಆ ಕಾಲದಲ್ಲಿ ಆಕಾಶವು ಅತ್ಯಂತ ಸ್ವಚ್ಛವಾಗಿದೆ. ಎಲ್ಲಾ ದಿಕ್ಕುಗಳೂ ಚಂದ್ರನ ಬೆಳಕಿನಿಂದ ತುಂಬಿವೆ. ಮುಂಜಾನೆಯಾಗುತ್ತಿದೆ. ಚಂದ್ರನ ಬೆಳಕಿನಿಂದ ಕತ್ತಲೆಯೆಲ್ಲವೂ ದೂರವಾಗಿದೆ. ಈ ಶುಕ್ಲಪಕ್ಷದಲ್ಲಿ ಎಲ್ಲಾ ದಿಕ್ಕುಗಳೂ ಪ್ರಕಾಶಮಯವಾಗಿವೆ. ಇಂತಹ ಶುಭ ಸನ್ನಿವೇಶದಲ್ಲಿ ಚಂದ್ರನು ಉದಯಿಸಿದಂತಿತ್ತು.

**ವಿಗ್ರಹ—**

**ಭೂಸುರೇಂದ್ರದಯಿತಾ—** ಭುವಃ ಸುರೇಂದ್ರಃ ಭೂಸುರೇಂದ್ರಃ, ಭೂಸುರೇಂದ್ರಸ್ಯ ದಯಿತಾ ಭೂಸುರೇಂದ್ರದಯಿತಾ ।

**ಅಚ್ಛಾಂಬರಾ—** ಅಚ್ಛಂ ಅಂಬರಂ ಯಸ್ಯಾಃ ಸಾ ಅಚ್ಛಾಂಬರಾ ।

**ಪರಿಪೂರಿತಾಶಾ—** ಪರಿಪೂರಿತಾ ಆಶಾ ಯಸ್ಯಾಃ ಸಾ ಪರಿಪೂರಿತಾಶಾ ।

**ಭಾವಿನೀ—** ಭವಿಷ್ಯತಿ ಇತಿ ಭಾವಿನೀ ।

**ಅಪಾಸ್ತತಮಸಂ—** ಅಪಾಸ್ತಂ ತಮಃ ಯಸ್ಯಾಃ ಸಾ ಅಪಾಸ್ತತಮಾಃ, ತಂ ಅಪಾಸ್ತತಮಸಂ ।

**ಆದ್ಯಪಕ್ಷಾತ್—** ಆದ್ಯಃ ಪಕ್ಷಃ ಯಸ್ಯ ಸಃ ಆದ್ಯಪಕ್ಷಃ, ತಸ್ಮಾತ್ ಆದ್ಯಪಕ್ಷಾತ್ ।

**ಕ್ರಿಯಾಪದ—** **ಬಭಾರ-** ಭೃಞ್ ಭರಣೇ ಇತಿ ಭರಣಾರ್ಥಕಾತ್ ಭೃಞ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಬಭಾರ' ಇತಿ ರೂಪಮ್ ।

ಬಭಾರ ಬಭ್ರತುಃ ಬಭ್ರುಃ, ಬಭರ್ಥ ಬಭ್ರಥುಃ ಬಭ್ರ, ಬಭಾರ ಬಭರ, ಬಭೃವ ಬಭೃಮ ॥

**ಅಲಂಕಾರ—** ಉಪಮಾಲಂಕಾರ.

★ ★ ★

### ವೇದವತಿಯಲ್ಲಿ ಶ್ರೀ ವಾಯುದೇವರ ಸಾಂಶಪ್ರವೇಶ

**ತಂ ಪೂರ್ವಪಕ್ಷಸಿತಬಿಂಬಮಿವ ಪ್ರವೃದ್ಧಂ**
**ಯಾವದ್ ದ್ವಿಜೇಂದ್ರವನಿತಾ ಸುಷುವೇಽತ್ರ ತಾವತ್ ।**
**ಅಂಶೇನ ವಾಯುರವತೀರ್ಯ ಸ ರೂಪ್ಯಪೀಠೇ**
**ವಿಷ್ಣುಂ ಪ್ರಣಮ್ಯ ಭವನಂ ಪ್ರಯಯೌ ತದೀಯಮ್ ॥ 24 ॥**

**ಪದಚ್ಛೇದ—** ತಂ, ಪೂರ್ವಪಕ್ಷಸಿತಬಿಂಬಂ, ಇವ, ಪ್ರವೃದ್ಧಂ, ಯಾವತ್, ದ್ವಿಜೇಂದ್ರವನಿತಾ, ಸುಷುವೇ, ಅತ್ರ, ತಾವತ್, ಅಂಶೇನ, ವಾಯುಃ, ಅವತೀರ್ಯ, ಸಃ, ರೂಪ್ಯಪೀಠೇ, ವಿಷ್ಣುಂ, ಪ್ರಣಮ್ಯ, ಭವನಂ, ಪ್ರಯಯೌ, ತದೀಯಂ ।

**ಅನ್ವಯ—** ಪೂರ್ವಪಕ್ಷಸಿತಬಿಂಬಂ ಇವ ಪ್ರವೃದ್ಧಂ ದ್ವಿಜೇಂದ್ರವನಿತಾ ಅತ್ರ ಯಾವತ್ ಸುಷುವೇ ತಾವತ್ ಸಃ ವಾಯುಃ ಅಂಶೇನ ಅವತೀರ್ಯ ರೂಪ್ಯಪೀಠೇ ವಿಷ್ಣುಂ ಪ್ರಣಮ್ಯ ತದೀಯಂ ಭವನಂ ಪ್ರಯಯೌ ।

**ಅನ್ವಯಾರ್ಥ—**

**ಪೂರ್ವಪಕ್ಷಸಿತಬಿಂಬಂ ಇವ ಪ್ರವೃದ್ಧಂ** = ಪೂರ್ವಪಕ್ಷದ ಶುಭ್ರಬಿಂಬದಂತೆ ಬೆಳೆಯುತ್ತಿರುವ
**ದ್ವಿಜೇಂದ್ರವನಿತಾ** = ಬ್ರಾಹ್ಮಣಶ್ರೇಷ್ಠರ ಪತ್ನಿಯರಾದ ವೇದವತೀದೇವಿಯರು
**ಅತ್ರ ಯಾವತ್ ಸುಷುವೇ ತಾವತ್** = ಇಲ್ಲಿ ಪ್ರಸವಿಸಿದ ಸಮಯದಲ್ಲಿ
**ಸಃ ವಾಯುಃ** = ಆ ವಾಯುದೇವರು
**ಅಂಶೇನ ಅವತೀರ್ಯ** = ಒಂದು ಅಂಶದಿಂದ ದೇವಲೋಕದಿಂದ ಇಳಿದವರಾಗಿ
**ರೂಪ್ಯಪೀಠೇ ವಿಷ್ಣುಂ ಪ್ರಣಮ್ಯ** = ರಜತಪೀಠಪುರದಲ್ಲಿ ಅನಂತೇಶ್ವರನನ್ನು ಚೆನ್ನಾಗಿ ನಮಸ್ಕರಿಸಿ
**ತದೀಯಂ ಭವನಂ ಪ್ರಯಯೌ** = ಮಧ್ಯಗೇಹಭಟ್ಟರ ಮನೆಯನ್ನು ಕುರಿತು ಹೋದರು.

**ತಾತ್ಪರ್ಯ—** ಪೂರ್ವಪಕ್ಷದ ಶುಭ್ರವಾದ ಚಂದ್ರಬಿಂಬದಂತೆ ಪ್ರತಿದಿನದಲ್ಲಿಯೂ ಬೆಳೆಯುತ್ತಿರುವ ವೇದವತೀದೇವಿಯರ ಗರ್ಭವು ಕ್ರಮವಾಗಿ ಬೆಳೆದು ವೇದವತೀದೇವಿಯು ಪ್ರಸವಿಸುವ ಕಾಲದಲ್ಲಿ ಒಂದು ರೂಪದಿಂದ ಶ್ರೀವಾಯುದೇವರು ಉಡುಪಿಯಲ್ಲಿ ಅನಂತೇಶ್ವರನನ್ನು ನಮಸ್ಕರಿಸಿ ಮಧ್ಯಗೇಹಭಟ್ಟರ ಮನೆಗೆ ಹೋದರು.

**ವಿಗ್ರಹ—**

**ಪೂರ್ವಪಕ್ಷಸಿತಬಿಂಬಂ—** ಪೂರ್ವಶ್ಚಾಸೌ ಪಕ್ಷಶ್ಚ ಪೂರ್ವಪಕ್ಷಃ, ಪೂರ್ವಪಕ್ಷೇ ಸಿತಂ ಪೂರ್ವಪಕ್ಷಸಿತಂ, ಪೂರ್ವಪಕ್ಷಸಿತಂ ಚ ತತ್ ಬಿಂಬಂ ಚ ಪೂರ್ವಪಕ್ಷಸಿತಬಿಂಬಂ ।
**ಪ್ರವೃದ್ಧಂ—** ಪ್ರಕರ್ಷೇಣ ವೃದ್ಧಂ ಪ್ರವೃದ್ಧಂ ।
**ದ್ವಿಜೇಂದ್ರವನಿತಾ—** ದ್ವಿಜಾನಾಂ ಇಂದ್ರಃ ದ್ವಿಜೇಂದ್ರಃ, ದ್ವಿಜೇಂದ್ರಸ್ಯ ವನಿತಾ ದ್ವಿಜೇಂದ್ರವನಿತಾ ।
**ಅವತೀರ್ಯ—** ಅವತೀರ್ತ್ವಾ ಅವತೀರ್ಯ ।
**ರೂಪ್ಯಪೀಠೇ—** ರೂಪ್ಯಸ್ಯ ಪೀಠಂ ರೂಪ್ಯಪೀಠಂ, ತಸ್ಮಿನ್ ರೂಪ್ಯಪೀಠೇ ।
**ಪ್ರಣಮ್ಯ—** ಪ್ರಕರ್ಷೇಣ ನತ್ವಾ ಪ್ರಣಮ್ಯ ।
**ತದೀಯಂ—** ತಸ್ಯ ಇದಂ ತದೀಯಂ ।

**ಕ್ರಿಯಾಪದ—** ಸುಷುವೇ- ಷೂಙ್ ಪ್ರಾಣಿಪ್ರಸವೇ ಪ್ರಾಣಿಪ್ರಸವಾರ್ಥಕಾತ್ ಷೂಙ್ ಧಾತೋಃ ಲಿಟಿ ಪ್ರಥಮ-ಪುರುಷೇ ಏಕವಚನೇ 'ಸುಷುವೇ' ಇತಿ ರೂಪಮ್ ।

ಸುಷುವೇ ಸುಷುವಾತೇ ಸುಷುವಿರೇ, ಸುಷುವಿಷೇ, ಸುಷುವಾಥೇ, ಸುಷುವಿಧ್ವೇ(ಢ್ವೇ), ಸುಷುವೇ ಸುಷುವಿವಹೇ ಸುಷುವಿಮಹೇ ॥

**ಪ್ರಯಯೌ-** ಪ್ರ ಇತ್ಯುಪಸರ್ಗಪೂರ್ವಕಾತ್ ಯಾ ಪ್ರಾಪಣೇ ಇತ್ಯಸ್ಮಾತ್ ಯಾ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಪ್ರಯಯೌ' ಇತಿ ರೂಪಮ್ ।

| | | |
|---|---|---|
| ಪ್ರಯಯೌ | ಪ್ರಯಯತುಃ | ಪ್ರಯಯುಃ |
| ಪ್ರಯಯಿಥ, ಪ್ರಯಯಾಥ | ಪ್ರಯಯಥುಃ | ಪ್ರಯಯ |
| ಪ್ರಯಯೌ | ಪ್ರಯಯಿವ | ಪ್ರಯಯಿಮ ॥ |

★ ★ ★

ಶ್ರೀಮಧ್ವರ ಅಪೂರ್ವದೇಹಲಕ್ಷಣ

**ಸಂಪೂರ್ಣಲಕ್ಷಣಚಣಂ ನವರಾಜಮಾನ-**
**ದ್ವಾರಾಂತರಂ ಪರಮಸುಂದರಮಂದಿರಂ ತತ್ ।**
**ರಾಜೇವ ಸತ್ಪುರವರಂ ಭುವನಾಧಿರಾಜೋ**
**ನಿಷ್ಕಾಸಯನ್ ಪರಮಸೌ ಭಗವಾನ್ ವಿವೇಶ ॥ 25 ॥**

**ಪದಚ್ಛೇದ—** ಸಂಪೂರ್ಣಲಕ್ಷಣಚಣಂ, ನವರಾಜಮಾನದ್ವಾರಾಂತರಂ, ಪರಮಸುಂದರಮಂದಿರಂ, ತತ್, ರಾಜಾ, ಇವ, ಸತ್ಪುರವರಂ, ಭುವನಾಧಿರಾಜಃ, ನಿಷ್ಕಾಸಯನ್, ಪರಂ, ಅಸೌ, ಭಗವಾನ್, ವಿವೇಶ ।

**ಅನ್ವಯ—** ಭುವನಾಧಿರಾಜಃ ಅಸೌ ಸಂಪೂರ್ಣಲಕ್ಷಣಚಣಂ ನವರಾಜಮಾನದ್ವಾರಾಂತರಂ ತತ್ ಪರಮ-ಸುಂದರಮಂದಿರಂ ರಾಜಾ ಇವ ಸತ್ಪುರವರಂ ಪರಂ ನಿಷ್ಕಾಸಯನ್ ಭಗವಾನ್ ವಿವೇಶ ।

**ಅನ್ವಯಾರ್ಥ—**

**ಭುವನಾಧಿರಾಜಃ ಅಸೌ** = ಲೋಕಗಳಿಗೆಲ್ಲಾ ಅಧಿರಾಜನಾಗಿರುವ ಈ ವಾಯುದೇವರು

**ಸಂಪೂರ್ಣಲಕ್ಷಣಚಣಂ** = ಮೂವತ್ತೆರಡು ಸಂಖ್ಯಾಕಗಳಾದ ಉತ್ತಮಪುರುಷರ ಲಕ್ಷಣಗಳಿಂದ ಪ್ರಸಿದ್ಧರಾಗಿರುವ

**ನವರಾಜಮಾನದ್ವಾರಾಂತರಂ** = ತೊಂಭತ್ತಾರು ಲಕ್ಷಣಗಳಿಂದ ಶೋಭಿಸುವ ದ್ವಾರಗಳ ಮಧ್ಯಪ್ರವೇಶಗಳಿಂದ ಶೋಭಿಸುತ್ತಿರುವ

**ತತ್ ಪರಮಸುಂದರಮಂದಿರಂ** = ಆ ಪರಮಸುಂದರವಾದ ಮನೆಯನ್ನು

**ರಾಜಾ ಇವ ಸತ್ಪುರವರಂ** = ಉತ್ತಮವಾದ ಪಟ್ಟಣವನ್ನು ರಾಜನಂತೆ

**ಪರಂ** = ಶತ್ರುವನ್ನು

**ನಿಷ್ಕಾಸಯನ್** = ಹೊರಗೆ ಹೊರಡಿಸುತ್ತಾ

**ಭಗವಾನ್** = ಭಾಗ್ಯಶಾಲಿಗಳಾದ ವಾಯುದೇವರು

**ವಿವೇಶ** = ಪ್ರವೇಶಿಸಿದರು.

**ತಾತ್ಪರ್ಯ—** ಶ್ರೀವಾಯುದೇವರು ಲೋಕಗಳಿಗೆಲ್ಲಾ ಅಧಿರಾಜರುಗಳು. ಅವರ ದೇಹವು ಮೂವತ್ತೆರಡು ಲಕ್ಷಣಗಳಿಂದ ಯುಕ್ತವಾದುದು. ಆ ದೇಹವು ಅತಿಸುಂದರವಾದುದು. ಆ ದೇಹದಲ್ಲಿ ತೊಂಭತ್ತಾರು ದ್ವಾರಗಳ ಛಿದ್ರಗಳು ಶೋಭಿಸುತ್ತವೆ. ಆ ದೇಹವು ಪರಮ ಸುಂದರವಾದುದು. ಒಬ್ಬ ರಾಜನು ದೇಶದಿಂದ ತನ್ನ ಶತ್ರುವನ್ನು ಹೊರಡಿಸಿದಂತೆ ಆ ಜೀವವನ್ನು ಹೊರದೂಡಿಸಿ ತಾನು ಪ್ರವೇಶಿಸಿದನು.

**ವಿಗ್ರಹ—**

**ನವರಾಜಮಾನದ್ವಾರಾಂತರಂ—** ನವರಾಜಮಾನಾನಿ ದ್ವಾರಾಂತರಾಣಿ ಯಸ್ಯ ತತ್ ನವರಾಜಮಾನ-ದ್ವಾರಾಂತರಾಣಿ ತತ್ ನವರಾಜಮಾನದ್ವಾರಾಂತರಂ ।

**ಪರಮಸುಂದರಮಂದಿರಂ—** ಪರಮಂ ಚ ತತ್ ಸುಂದರಂ ಚ ಪರಮಸುಂದರಂ, ಪರಮಸುಂದರಂ ಚ ತತ್ ಮಂದಿರಂ ಚ ಪರಮಸುಂದರಮಂದಿರಂ ತತ್ ।

**ಸತ್ಪುರವರಂ—** ಸಚ್ಚ ತತ್ ಪುರಂ ಚ ಸತ್ಪುರಂ, ಸತ್ಪುರೇ ವರಂ ಸತ್ಪುರವರಂ ।

**ಭುವನಾಧಿರಾಜಃ—** ಭುವನಾನಾಂ ಅಧಿರಾಜಃ ಭುವನಾಧಿರಾಜಃ ।

**ನಿಷ್ಕಾಸಯನ್—** ನಿಷ್ಕಾಸಯತಿ ಇತಿ ನಿಷ್ಕಾಸಯನ್ ।

**ಭಗವಾನ್—** ಭಗಃ ಅಸ್ಯ ಅಸ್ತಿ ಇತಿ ಭಗವಾನ್ ।

**ಕ್ರಿಯಾಪದ—** ವಿವೇಶ - ವಿಶ ಪ್ರವೇಶನೇ ಇತಿ ಪ್ರವೇಶನಾರ್ಥಕಾತ್ ವಿಶ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ವಿವೇಶ' ಇತಿ ರೂಪಮ್ ।

ವಿವೇಶ ವಿವಿಶತುಃ ವಿವಿಶುಃ, ವಿವೇಶಿಥ ವಿವಿಶಥುಃ ವಿವಿಶ, ವಿವೇಶ ವಿವಿಶಿವ ವಿವಿಶಿಮ ॥

**ಅಲಂಕಾರ—** ಉಪಮಾಲಂಕಾರ.

★ ★ ★

**ದೇವದುಂದುಭಿಗಳಿಂದ ಸಂದೇಶ**

**ಸಂತುಷ್ಯತಾಂ ಸಕಲಸನ್ನಿಕರೈರಸದ್ಭಿಃ**
**ಖಿದ್ಯೇತ ವಾಯುರಯಮಾವಿರಭೂತ್ ಪೃಥಿವ್ಯಾಮ್ ।**
**ಆಖ್ಯಾನ್ನಿತೀವ ಸುರದುಂದುಭಿಮಂದ್ರನಾದಃ**
**ಪ್ರಾಶ್ರಾವಿ ಕೌತುಕವಶೈರಿಹ ಮಾನವೈಶ್ಚ ॥ 26 ॥**

**ಪದಚ್ಛೇದ—** ಸಂತುಷ್ಯತಾಂ, ಸಕಲಸನ್ನಿಕರೈಃ, ಅಸದ್ಭಿಃ, ಖಿದ್ಯೇತ, ವಾಯುಃ, ಅಯಂ, ಆವಿರಭೂತ್, ಪೃಥಿವ್ಯಾಂ, ಆಖ್ಯಾನ್, ಇತಿ, ಇವ, ಸುರದುಂದುಭಿಮಂದ್ರನಾದಃ, ಪ್ರಾಶ್ರಾವಿ, ಕೌತುಕವಶೈಃ, ಇಹ ಮಾನವೈಃ, ಚ ।

**ಅನ್ವಯ—** ಸಕಲಸನ್ನಿಕರೈಃ ಸಂತುಷ್ಯತಾಂ ಅಸದ್ಭಿಃ ಖಿದ್ಯೇತ ಅಯಂ ವಾಯುಃ ಪೃಥಿವ್ಯಾಂ ಆವಿರಭೂತ್, ಇತಿ ಇವ ಆಖ್ಯಾನ್ ಸುರದುಂದುಭಿಮಂದ್ರನಾದಃ ಇಹ ಕೌತುಕವಶೈಃ ಮಾನವೈಃ ಚ ಪ್ರಾಶ್ರಾವಿ ।

**ಅನ್ವಯಾರ್ಥ—**

**ಸಕಲಸನ್ನಿಕರೈಃ** = ಸಕಲ ಸಜ್ಜನರ ಸಮೂಹಗಳಿಂದ

**ಸಂತುಷ್ಯತಾಂ** = ಸಂತೋಷಿಸಲ್ಪಡಲಿ.

**ಅಸದ್ಭಿಃ** = ಅಯೋಗ್ಯರಿಂದ

**ಖಿದ್ಯೇತ** = ದುಃಖಿಸಲ್ಪಡಲಿ.

**ಅಯಂ ವಾಯುಃ** = ಈ ವಾಯುದೇವರು

**ಪೃಥಿವ್ಯಾಂ** = ಭೂಮಿಯಲ್ಲಿ

**ಆವಿರಭೂತ್** = ಆವಿರ್ಭವಿಸಿರುವರು.

**ಇತಿ ಇವ** = ಹೀಗೆಂಬುದಾಗಿ

**ಆಖ್ಯಾನ್** = ತಿಳಿಸುತ್ತಾ

**ಸುರದುಂದುಭಿಮಂದ್ರನಾದಃ** = ದೇವತೆಗಳ ದುಂದುಭಿಯ ಮೆಲ್ಲಗಿನ ಧ್ವನಿಯು

**ಇಹ ಕೌತುಕವಶ್ಯೈಃ ಮಾನವೈಃ ಚ** = ಈ ಭೂಮಿಯಲ್ಲಿ ಕುತೂಹಲಪರಾಧೀನರಾದ ಮನುಷ್ಯರುಗಳಿಂದಲೂ

**ಪ್ರಾಶ್ರಾವಿ** = ಕೇಳಲ್ಪಟ್ಟಿತು.

**ತಾತ್ಪರ್ಯ—** ಸಕಲ ಸಜ್ಜನರು ಸಂತೋಷಿಸಲ್ಪಡಲಿ. ದುರ್ಜನರು ದುಃಖಿಸಲ್ಪಡಲಿ. ಈ ವಾಯುದೇವರು ಪೃಥಿವಿಯಲ್ಲಿ ಆವಿರ್ಭವಿಸಿದರು. ಹೀಗೆ ಹೇಳುತ್ತಿರುವಂತೆ ಸುರದುಂದುಭಿಯ ಮೆಲ್ಲಗಿನ ಧ್ವನಿಯು ಕುತೂಹಲ ಪರವಶರಾಗಿರುವ ಮನುಷ್ಯರುಗಳಿಂದಲೂ ಕೇಳಲ್ಪಟ್ಟಿತು.

**ವಿಗ್ರಹ—**

**ಸಕಲಸನ್ನಿಕರೈಃ—** ಸತಾಂ ನಿಕರಾಃ ಸನ್ನಿಕರಾಃ, ಸಕಲಾಶ್ಚ ತೇ ಸನ್ನಿಕರಾಶ್ಚ ಸಕಲಸನ್ನಿಕರಾಃ, ತೈಃ ಸಕಲಸನ್ನಿಕರೈಃ ।

**ಸುರದುಂದುಭಿಮಂದ್ರನಾದಃ—** ಸುರಾಣಾಂ ದುಂದುಭಯಃ ಸುರದುಂದುಭಯಃ, ಮಂದ್ರಶ್ಚಾಸೌ ನಾದಶ್ಚ ಮಂದ್ರನಾದಃ, ಸುರದುಂದುಭೀನಾಂ ಮಂದ್ರನಾದಃ ಸುರದುಂದುಭಿಮಂದ್ರನಾದಃ ।

**ಕೌತುಕವಶ್ಯೈಃ—** ಕೌತುಕಸ್ಯ ವಶಾಃ ಕೌತುಕವಶಾಃ, ತೈಃ ಕೌತುಕವಶ್ಯೈಃ ।

**ಕ್ರಿಯಾಪದ— ಸಂತುಷ್ಯತಾಂ-** ಸಂ ಇತ್ಯುಪಸರ್ಗಪೂರ್ವಕಾತ್ ತುಷ ತುಷ್ಟೌ ಇತ್ಯಸ್ಮಾತ್ ತುಷ್ಟ್ಯರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ 'ಸಂತುಷ್ಯತಾಂ' ಇತಿ ರೂಪಮ್ ।

| | | |
|---|---|---|
| ಸಂತುಷ್ಯತಾಂ | ಸಂತುಷ್ಯೇತಾಂ | ಸಂತುಷ್ಯಂತಾಂ, |
| ಸಂತುಷ್ಯಥಾಃ | ಸಂತುಷ್ಯೇಥಾಂ | ಸಂತುಷ್ಯಧ್ವಂ, |
| ಸಂತುಷ್ಯೇ | ಸಂತುಷ್ಯಾವಹೇ | ಸಂತುಷ್ಯಾಮಹೇ ॥ |

**ಖಿದ್ಯೇತ-** ಖಿದ ದೈನ್ಯೇ ಇತ್ಯಸ್ಮಾತ್ ದೈನ್ಯಾರ್ಥಕಾತ್ ಖಿದ ಧಾತೋಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ 'ಖಿದ್ಯೇತ' ಇತಿ ರೂಪಮ್ ।

ಖಿದ್ಯೇತ, ಖಿದ್ಯೇಯಾತಾಂ ಖಿದ್ಯೇರನ್, ಖಿದ್ಯೇಥಾಃ ಖಿದ್ಯೇಯಾಥಾಂ ಖಿದ್ಯೇಧ್ವಂ, ಖಿದ್ಯೇಯ ಖಿದ್ಯೇವಹಿ ಖಿದ್ಯೇಮಹಿ ।

**ಆವಿರಭೂತ್-** ಆವಿಃ ಇತ್ಯುಪಪದಪೂರ್ವಕಾತ್ ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಲುಙಿ ಪ್ರಥಮಪುರುಷೇ ಏಕವಚನೇ 'ಆವಿರಭೂತ್' ಇತಿ ರೂಪಮ್ ।

| | | |
|---|---|---|
| ಆವಿರಭೂತ್ | ಆವಿರಭೂತಾಂ | ಆವಿರಭೂವನ್, |
| ಆವಿರಭೂಃ | ಆವಿರಭೂತಂ | ಆವಿರಭೂತ, |
| ಆವಿರಭೂವಂ | ಆವಿರಭೂವ | ಆವಿರಭೂಮ ॥ |

**ಪ್ರಾಶ್ರಾವಿ -** ಪ್ರ ಇತ್ಯುಪಸರ್ಗಪೂರ್ವಕಾತ್ ಶ್ರು ಶ್ರವಣೇ ಇತ್ಯಸ್ಮಾತ್ ಶ್ರವಣಾರ್ಥಕಾತ್ ಕರಣಾರ್ಥಕಾತ್ ಶ್ರುಧಾತೋಃ ಪ್ರಥಮಪುರುಷೇ ಏಕವಚನೇ 'ಪ್ರಾಶ್ರಾವಿ' ಇತಿ ರೂಪಮ್ ।

| | | |
|---|---|---|
| ಪ್ರಾಶ್ರಾವಿ | ಪ್ರಾಶ್ರಾವಿಷಾತಾಂ | ಪ್ರಾಶ್ರಾವಿಷತ, |
| ಪ್ರಾಶ್ರಾವಿಷ್ಠಾಃ | ಪ್ರಾಶ್ರಾವಿಷಾಥಾಂ | ಪ್ರಾಶ್ರಾವಿಧ್ವಂ, |
| ಪ್ರಾಶ್ರಾವಿಷಿ | ಪ್ರಾಶ್ರಾವಿಷ್ವಹಿ | ಪ್ರಾಶ್ರಾವಿಷ್ಮಹಿ ॥ |

**ಅಲಂಕಾರ—** ಉತ್ಪ್ರೇಕ್ಷಾಲಂಕಾರ.

★ ★ ★

**ನಾಥಂ ನಿಷೇವ್ಯ ಭವನಾನತಿದೂರಮಾಪ್ತಃ**
**ಪ್ರಾಜ್ಞೋ ಮಹಪ್ರಕೃತದುಂದುಭಿನಾದಪೂರ್ವಾತ್ ।**
**ಪುತ್ರೋದ್ಭವಶ್ರವಣತೋ ಮಹದಾಪ್ಯ ಸೌಖ್ಯಂ**
**ಜ್ಞಾನಂ ಪರೋಕ್ಷಪದಮಪ್ಯಮತೇಷ್ಟಹೇತುಮ್ ।। 27 ।।**

**ಪದಚ್ಛೇದ—** ನಾಥಂ, ನಿಷೇವ್ಯ, ಭವನಾನತಿದೂರಂ, ಆಪ್ತಃ, ಪ್ರಾಜ್ಞಃ, ಮಹಪ್ರಕೃತದುಂದುಭಿನಾದಪೂರ್ವಾತ್, ಪುತ್ರೋದ್ಭವಶ್ರವಣತಃ, ಮಹತ್, ಆಪ್ಯ, ಸೌಖ್ಯಂ, ಜ್ಞಾನಂ, ಪರೋಕ್ಷಪದಂ, ಅಪಿ, ಅಮತ, ಇಷ್ಟಹೇತುಂ ।

**ಅನ್ವಯ—** ನಾಥಂ, ನಿಷೇವ್ಯ, ಭವನಾನತಿದೂರಂ ಆಪ್ತಃ ಪ್ರಾಜ್ಞಃ ಮಹಪ್ರಕೃತದುಂದುಭಿನಾದಪೂರ್ವಾತ್ ಪುತ್ರೋದ್ಭವಶ್ರವಣತಃ, ಮಹತ್ ಸೌಖ್ಯಂ ಆಪ್ಯ ಪರೋಕ್ಷಪದಂ ಜ್ಞಾನಂ ಅಪಿ ಇಷ್ಟಹೇತುಂ ಅಮತ ।

**ಅನ್ವಯಾರ್ಥ—**

**ನಾಥಂ ನಿಷೇವ್ಯ** = ತನ್ನ ಸ್ವಾಮಿಯಾಗಿರುವ ಅನಂತೇಶ್ವರನನ್ನು ಸೇವಿಸಿ

**ಭವನಾನತಿದೂರಂ ಆಪ್ತಃ** = ಮನೆಯ ಸಮೀಪವನ್ನು ಹೊಂದಿದವರಾಗಿರುವ

**ಪ್ರಾಜ್ಞಃ** = ಮಹಾಜ್ಞಾನಿಯಾಗಿರುವ ಮಧ್ಯಗೇಹಭಟ್ಟರು

**ಮಹಪ್ರಕೃತದುಂದುಭಿನಾದಪೂರ್ವಾತ್** = ಮಂಗಲಕಾರ್ಯಕ್ಕೆ ಸಂಬಂಧಿಸಿದ ನಗಾರಿಧ್ವನಿಯೇ ಮೊದಲಾಗಿರುವ

**ಪುತ್ರೋದ್ಭವಶ್ರವಣತಃ** = ತನಗೆ ಪುತ್ರೋತ್ಸವದ ಶ್ರವಣದಿಂದ

**ಮಹತ್ ಸೌಖ್ಯಂ ಆಪ್ಯ** = ಅಧಿಕವಾದ ಸಂತೋಷವನ್ನು ಹೊಂದಿದವರಾಗಿ

**ಪರೋಕ್ಷಪದಂ ಜ್ಞಾನಂ ಅಪಿ** = ಪರೋಕ್ಷ ಎಂಬ ಪದದಿಂದ ಹೇಳಲ್ಪಡುವ ಜ್ಞಾನವೂ ಕೂಡ

**ಇಷ್ಟಹೇತುಂ ಅಮತ** = ಇಷ್ಟಕ್ಕೆ ಕಾರಣವನ್ನಾಗಿ ತಿಳಿದರು.

**ತಾತ್ಪರ್ಯ—** ಅನಂತೇಶ್ವರ ದೇವನನ್ನು ಚೆನ್ನಾಗಿ ಮಧ್ಯಗೇಹಭಟ್ಟರು ಸೇವಿಸಿದರು. ಮನೆಯ ಸಮೀಪಕ್ಕೆ ಬಂದರು. ಮಹಾಜ್ಞಾನಿಗಳಾದ ಮಧ್ಯಗೇಹಭಟ್ಟರು ವಿವಾಹ ಮುಂತಾದ ಮಂಗಳಕಾರ್ಯಕ್ಕೆ ಸಂಬಂಧಿಸಿದ ನಗಾರಿಯನ್ನು ಕೇಳಿದರು. ಆ ನಗಾರಿಧ್ವನಿಯು ಮಂಗಳಕಾರ್ಯಕ್ಕೆ ಸಂಬಂಧಿಸಿದುದು ಎಂದು ತಿಳಿದರು. ಅಪಾರವಾದ ಸುಖವನ್ನು ಹೊಂದಿದರು. ಅದನ್ನು ತಿಳಿದವರು ಪರೋಕ್ಷಜ್ಞಾನವೂ ಸಹ ಸೌಖ್ಯಕ್ಕೆ ಕಾರಣವೆಂದು ತಿಳಿದರು.

**ವಿಗ್ರಹ—**

**ನಿಷೇವ್ಯ—** ನಿತರಾಂ ಸೇವಿತ್ವಾ ನಿಷೇವ್ಯ ।

**ಭವನಾನತಿದೂರಂ—** ನ ಅತಿದೂರಂ ಅನತಿದೂರಂ, ಭವನಸ್ಯ ಅನತಿದೂರಂ ಭವನಾನತಿದೂರಂ ।

**ಮಹಪ್ರಕೃತದುಂದುಭಿನಾದಪೂರ್ವಾತ್—** ಮಹೇಃ ಪ್ರಕೃತಃ ಮಹಪ್ರಕೃತಃ, ದುಂದುಭೇಃ ನಾದಃ ದುಂದುಭಿನಾದಃ, ಮಹಪ್ರಕೃತಶ್ಚಾಸೌ ದುಂದುಭಿನಾದಶ್ಚ ಮಹಪ್ರಕೃತದುಂದುಭಿನಾದಃ, ಮಹಪ್ರಕೃತ-ದುಂದುಭಿನಾದಃ ಪೂರ್ವಃ ಯಸ್ಯ ಸಃ ಮಹಪ್ರಕೃತದುಂದುಭಿನಾದಪೂರ್ವಃ, ತಸ್ಮಾತ್ ಮಹ-ಪ್ರಕೃತದುಂದುಭಿನಾದಪೂರ್ವಾತ್ ।

**ಪುತ್ರೋದ್ಭವಶ್ರವಣತಃ—** ಪುತ್ರಸ್ಯ ಉದ್ಭವಃ ಪುತ್ರೋದ್ಭವಃ, ಪುತ್ರೋದ್ಭವಸ್ಯ ಶ್ರವಣಂ ಪುತ್ರೋದ್ಭವಶ್ರವಣಂ, ತಸ್ಮಾತ್ ಪುತ್ರೋದ್ಭವಶ್ರವಣತಃ ।

**ಪರೋಕ್ಷಪದಂ**— ಪರೋಕ್ಷಃ ಪದಂ ಯಸ್ಯ ತತ್ ಪರೋಕ್ಷಪದಂ ।

**ಇಷ್ಟಹೇತುಂ**— ಇಷ್ಟಸ್ಯ ಹೇತುಃ ಇಷ್ಟಹೇತುಃ, ತಂ ಇಷ್ಟಹೇತುಂ ।

**ಕ್ರಿಯಾಪದ**— ಅಮತ- ಮನು ಅವಬೋಧನೇ ಇತ್ಯಸ್ಮಾತ್ ಮನು ಧಾತೋಃ ಆತ್ಮನೇಪದಿನಃ ಲುಙ್ ಪ್ರಥಮ-ಪುರುಷೇ ಏಕವಚನೇ 'ಅಮತ' ಇತಿ ರೂಪಮ್ ।

ಅಮನಿಷ್ಟ ಅಮತ ಅಮನಿಷಾತಾಂ ಅಮನಿಷತ, ಅಮನಿಷ್ಠಾಃ ಅಮಥಾಃ ಅಮನಿಷಾಥಾಂ ಅಮನಿಷಢ್ವಂ, ಅಮನಿಷಿ ಅಮನಿಷ್ವಹಿ ಅಮನಿಷ್ಮಹಿ ॥

★ ★ ★

ಜಗದ್ಗುರುವಿಗೆ ಜಾತಕರ್ಮಾದಿಗಳು

**ಆವಿಶ್ಯ ವೇಶ್ಮ ನಿಜನಂದನಮಿಂದುವಕ್ತ್ರಂ**
**ಭೂಯೋಽಭಿನಂದ್ಯ ಸ ಮುಕುಂದದಯಾಂ ಪ್ರವಂದ್ಯ ।**
**ಜಾತಸ್ಯ ತಸ್ಯ ಗುಣಜಾತವಹಸ್ಯ ಜಾತ-**
**ಕರ್ಮಾದಿಕರ್ಮನಿವಹಂ ವಿದಧೇ ಸುಕರ್ಮಾ ॥ 28 ॥**

**ಪದಚ್ಛೇದ**— ಆವಿಶ್ಯ, ವೇಶ್ಮ, ನಿಜನಂದನಂ, ಇಂದುವಕ್ತ್ರಂ, ಭೂಯಃ, ಅಭಿನಂದ್ಯ, ಸಃ, ಮುಕುಂದದಯಾಂ, ಪ್ರವಂದ್ಯ, ಜಾತಸ್ಯ, ತಸ್ಯ, ಗುಣಜಾತವಹಸ್ಯ, ಜಾತಕರ್ಮಾದಿಕರ್ಮನಿವಹಂ, ವಿದಧೇ, ಸುಕರ್ಮಾ ।

**ಅನ್ವಯ**— ವೇಶ್ಮ ಆವಿಶ್ಯ ಸಃ ಸುಕರ್ಮಾ ಇಂದುವಕ್ತ್ರಂ ನಿಜನಂದನಂ ಭೂಯಃ ಅಭಿನಂದ್ಯ ಮುಕುಂದದಯಾಂ ಪ್ರವಂದ್ಯ ಜಾತಸ್ಯ ತಸ್ಯ ಗುಣಜಾತವಹಸ್ಯ ಜಾತಕರ್ಮಾದಿಕರ್ಮನಿವಹಂ ವಿದಧೇ ।

**ಅನ್ವಯಾರ್ಥ**—

**ವೇಶ್ಮ ಆವಿಶ್ಯ** = ಮನೆಯನ್ನು ಪ್ರವೇಶಿಸಿ

**ಸಃ ಸುಕರ್ಮಾ** = ಒಳ್ಳೆಯ ಕಾರ್ಯಗಳನ್ನು ಮಾಡುತ್ತಿರುವ ಆ ಮಧ್ಯಗೇಹಭಟ್ಟರು

**ಇಂದುವಕ್ತ್ರಂ ನಿಜನಂದನಂ** = ಚಂದ್ರನಂತೆ ಮುಖವುಳ್ಳ ತನ್ನ ಮಗನನ್ನು

**ಭೂಯಃ ಅಭಿನಂದ್ಯ** = ಪುನಃ ಪುನಃ ಹೊಗಳಿ

**ಮುಕುಂದದಯಾಂ ಪ್ರವಂದ್ಯ** = ಮುಕುಂದನ ದಯೆಯನ್ನು ಸ್ತುತಿಸಿ

**ಜಾತಸ್ಯ ತಸ್ಯ ಗುಣಜಾತವಹಸ್ಯ** = ಹುಟ್ಟಿರುವ ಗುಣಗಳ ಸಮೂಹವನ್ನು ಹೊಂದಿರುವ ಆ ಮಗುವಿಗೆ

**ಜಾತಕರ್ಮಾದಿಕರ್ಮನಿವಹಂ** = ಜಾತಕರ್ಮ ಮುಂತಾದ ಕರ್ಮಗಳ ಸಮೂಹವನ್ನು

**ವಿದಧೇ** = ಮಾಡಿಸಿದರು.

**ತಾತ್ಪರ್ಯ**— ಮಧ್ಯಗೇಹಭಟ್ಟರು ಮನೆಯನ್ನು ಪ್ರವೇಶಿಸಿದರು. ಚಂದ್ರನಂತೆ ಸುಂದರವಾದ ತನ್ನ ಮಗನನ್ನು ನೋಡಿದರು. ಬಹಳ ಸಂತೋಷಿಸಿದರು. ಮುಕುಂದನ ದಯೆಯನ್ನು ಸ್ತುತಿಸಿದರು. ಹುಟ್ಟಿದ ಈ ಮಗನು ಗುಣಗಳ ಸಮೂಹವನ್ನು ಧರಿಸಿರುವನು. ಅವನಿಗೆ ಜಾತಕರ್ಮ ಮುಂತಾದ ಕರ್ಮಗಳನ್ನು ಮಾಡಿಸಿದರು.

**ವಿಗ್ರಹ**—

**ಆವಿಶ್ಯ**— ಆ ಸಮಂತಾತ್ ವೇಶಿತ್ವಾ ಆವಿಶ್ಯ ।

**ನಿಜನಂದನಂ**— ನಿಜಶ್ಚಾಸೌ ನಂದನಶ್ಚ ನಿಜನಂದನಃ, ತಂ ನಿಜನಂದನಂ ।

**ಇಂದುವಕ್ತ್ರಂ—** ಇಂದುಃ ಇವ ವಕ್ತ್ರಂ ಯಸ್ಯ ಸಃ ಇಂದುವಕ್ತ್ರಃ, ತಂ ಇಂದುವಕ್ತ್ರಂ ।

**ಗುಣಜಾತವಹಸ್ಯ—** ಗುಣಾನಾಂ ಜಾತಂ ವಹತಿ ಇತಿ ಗುಣಜಾತವಹಃ, ತಸ್ಯ ಗುಣಜಾತವಹಸ್ಯ ।

**ಮುಕುಂದದಯಾಂ—** ಮುಕುಂದಸ್ಯ ದಯಾ ಮುಕುಂದದಯಾ, ತಾಂ ಮುಕುಂದದಯಾಂ ।

**ಪ್ರವಂದ್ಯ—** ಪ್ರಕರ್ಷೇಣ ವಂದಿತ್ವಾ ಪ್ರವಂದ್ಯ ।

**ಜಾತಕರ್ಮಾದಿಕರ್ಮನಿವಹಂ—** ಜಾತಕರ್ಮ ಆದಿಃ ಯೇಷಾಂ ತಾನಿ ಜಾತಕರ್ಮಾದೀನಿ, ಜಾತ-ಕರ್ಮಾದೀನಿ ಚ ತಾನಿ ಕರ್ಮಾಣಿ ಚ ಜಾತಕರ್ಮಾದಿಕರ್ಮಾಣಿ, ಜಾತಕರ್ಮಾದಿಕರ್ಮಣಾಂ ನಿವಹಃ ಜಾತಕರ್ಮಾದಿಕರ್ಮನಿವಹಃ ತಂ ಜಾತಕರ್ಮಾದಿಕರ್ಮನಿವಹಂ ।

**ಸುಕರ್ಮಾ—** ಶೋಭನಂ ಕರ್ಮ ಯಸ್ಯ ಸಃ ಸುಕರ್ಮಾ ।

**ಕ್ರಿಯಾಪದ—** ವಿದಧೇ- ವಿ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತ್ಯಸ್ಮಾತ್ ಧಾರಣಪೋಷಣಾರ್ಥಕಾತ್ ಡು ಧಾಞ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ವಿದಧೇ' ಇತಿ ರೂಪಮ್ ।

ವಿದಧೇ ವಿದಧಾತೇ ವಿದಧಿರೇ, ವಿದಧಿಷೇ ವಿದಧಾಥೇ ವಿದಧಿಧ್ವೇ, ವಿದಧೇ ವಿದಧಿವಹೇ ವಿದಧಿಮಹೇ ॥

★ ★ ★

ಪ್ರಾಣನಾಮನಿಗೆ ನಾಮಕರಣ

**ಜ್ಞಾನಾರ್ಥಮೇವ ಯದಭೂದಸುದೇವ ಏಷ**
**ಯದ್ವಾಸುದೇವಪದಭಕ್ತಿರತಃ ಸದಾಽಸೌ ।**
**ತದ್ವಾಸುದೇವಪದಮನ್ವವದನ್ ಸುರೇಂದ್ರಾ-**
**ಸ್ತಾತೇನ ಯನ್ನಿಗದಿತಂ ಸುತನಾಮಕರ್ತ್ರಾ ॥ 29 ॥**

**ಪದಚ್ಛೇದ—** ಜ್ಞಾನಾರ್ಥಂ, ಏವ, ಯತ್, ಅಭೂತ್, ಅಸುದೇವಃ, ಏಷಃ, ಯತ್, ವಾಸುದೇವಪದಭಕ್ತಿರತಃ, ಸದಾ, ಅಸೌ, ತತ್, ವಾಸುದೇವಪದಂ, ಅನ್ವವದನ್, ಸುರೇಂದ್ರಾಃ, ತಾತೇನ, ಯತ್, ನಿಗದಿತಂ, ಸುತನಾಮಕರ್ತ್ರಾ ।

**ಅನ್ವಯ—** ಏಷಃ ಅಸುದೇವಃ ಜ್ಞಾನಾರ್ಥಂ ಏವ ಯತ್ ಅಭೂತ್ ಯತ್ ಅಸೌ ವಾಸುದೇವಪದಭಕ್ತಿರತಃ ತತ್ ಸುರೇಂದ್ರಾಃ ಸುತನಾಮಕರ್ತ್ರಾ ತಾತೇನ ಯತ್ ವಾಸುದೇವಪದಂ ನಿಗದಿತಂ (ತತ್) ಅನ್ವವದನ್ ।

**ಅನ್ವಯಾರ್ಥ—**

**ಏಷಃ ಅಸುದೇವಃ** = ಈ ಪ್ರಾಣಪತಿಯಾಗಿರುವ ಮುಖ್ಯಪ್ರಾಣದೇವನು

**ಜ್ಞಾನಾರ್ಥಂ ಏವ** = ಸರ್ವರಿಗೂ ಜ್ಞಾನವನ್ನು ಕೊಡುವುದಕ್ಕಾಗಿಯೇ

**ಯತ್ ಅಭೂತ್** = ಯಾವ ಕಾರಣದಿಂದ ಅವತರಿಸಿರುವನೋ

**ಯತ್ ಅಸೌ ಸದಾ ವಾಸುದೇವಪದಭಕ್ತಿರತಃ ತತ್**= ಯಾವ ಕಾರಣದಿಂದ, ಈ ಮುಖ್ಯಪ್ರಾಣದೇವರು, ಯಾವಾಗಲೂ, ವಾಸುದೇವನ ಪಾದಗಳಲ್ಲಿ ಭಕ್ತಿಯನ್ನು ಇಟ್ಟಿರುವನೋ, ಆ ಕಾರಣದಿಂದ

**ಸುರೇಂದ್ರಾಃ** = ದೇವಶ್ರೇಷ್ಠರು

**ಸುತನಾಮಕರ್ತ್ರಾ** = ತನ್ನ ಮಗನಿಗೆ ನಾಮಕರಣವನ್ನು ಮಾಡುತ್ತಿರುವ

**ತಾತೇನ** = ತಂದೆಯಾದ ಮಧ್ಯಗೇಹಭಟ್ಟರಿಂದ

**ಯತ್ ನಿಗದಿತಂ** = ಯಾವ ಮಾತುಗಳು ಹೇಳಲ್ಪಟ್ಟವೋ

**ವಾಸುದೇವಪದಂ** = ವಾಸುದೇವ ಎಂಬ ಶಬ್ದವನ್ನು

**ತತ್ ಅನ್ವವದನ್** = ಆ ಮಾತುಗಳನ್ನು ಅನುವಾದ ಮಾಡಿದರು.

**ತಾತ್ಪರ್ಯ—** ಈತನು ಮುಖ್ಯಪ್ರಾಣದೇವನೇ ಆಗಿರುವನು. ಎಲ್ಲರಿಗೂ ಜ್ಞಾನವನ್ನು ಕೊಡುವುದಕ್ಕಾಗಿಯೇ ಅವತರಿಸಿರುವನು. ಈತನು ವಾಸುದೇವನ ಪಾದಗಳಲ್ಲಿ ಸದಾ ಭಕ್ತಿಯಿಂದ ಆಸಕ್ತನಾಗಿರುವನು ಎಂದು ತಂದೆಯೂ ಆಗಿರುವ ಮಧ್ಯಗೇಹಭಟ್ಟರು 'ವಾಸುದೇವ' ಎಂಬುದಾಗಿ ನಾಮಕರಣವನ್ನು ಮಾಡುತ್ತಿರುವಾಗಲೇ ದೇವಶ್ರೇಷ್ಠರೆಲ್ಲರೂ ಅನುವಾದವನ್ನು ಮಾಡಿದರು.

**ವಿಗ್ರಹ—**

**ಜ್ಞಾನಾರ್ಥಂ—** ಜ್ಞಾನಾಯ ಜ್ಞಾನಾರ್ಥಂ ।

**ಅಸುದೇವಃ—** ಅಸೂನಾಂ ದೇವಃ ಅಸುದೇವಃ ।

**ವಾಸುದೇವಪದಭಕ್ತಿರತಃ—** ವಾಸುದೇವಸ್ಯ ಪದೇ ವಾಸುದೇವಪದೇ, ವಾಸುದೇವಪದಯೋಃ ಭಕ್ತಿಃ, ವಾಸುದೇವಪದಭಕ್ತಿಃ, ವಾಸುದೇವಪದಭಕ್ತ್ಯಾಂ ರತಃ ವಾಸುದೇವಪದಭಕ್ತಿರತಃ । ಅಥವಾ ವಾಸುದೇವ ಇತಿ ಪದಂ ವಾಸುದೇವಪದಂ ।

**ಸುರೇಂದ್ರಾಃ—** ಸುರಾಣಾಂ ಇಂದ್ರಾಃ ಸುರೇಂದ್ರಾಃ

**ನಿಗದಿತಂ—** ನಿತರಾಂ ಗದಿತಂ ನಿಗದಿತಂ ।

**ಸುತನಾಮಕರ್ತ್ರಾ—** ಸುತಸ್ಯ ನಾಮ ಸುತನಾಮ, ಸುತನಾಮ್ನಃ ಕರ್ತಾ ಸುತನಾಮಕರ್ತಾ, ತೇನ ಸುತ-ನಾಮಕರ್ತ್ರಾ ।

**ಕ್ರಿಯಾಪದ—** **ಅಭೂತ್**- ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂ ಧಾತೋಃ ಲುಙ್ ಪ್ರಥಮಪುರುಷೇ ಏಕವಚನೇ 'ಅಭೂತ್' ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಭೂತ, ಅಭೂವಂ ಅಭೂವ ಅಭೂಮ ॥

**ಅನ್ವವದನ್**- ಅನು ಇತ್ಯುಪಸರ್ಗಪೂರ್ವಕಾತ್ ವದಿ ಅಭಿವಾದನಸ್ತುತ್ಯೋಃ ಇತ್ಯಸ್ಮಾತ್ ವದಿಧಾತೋಃ ಲಙ್ ಪ್ರಥಮಪುರುಷೇ ಬಹುವಚನೇ 'ಅನ್ವವದನ್' ಇತಿ ರೂಪಮ್ ।

ಅನ್ವವದತ್ ಅನ್ವವದತಾಂ ಅನ್ವವದನ್, ಅನ್ವವದಃ ಅನ್ವವದತಂ ಅನ್ವವದತ, ಅನ್ವವದಂ ಅನ್ವವದಾವ ಅನ್ವವದಾಮ ॥

★ ★ ★

ಪೂರ್ವಾಲಯರು ಮಾಡಿದ ಸಾರ್ಥಕ ಗೋದಾನ

**ಪಾತುಂ ಪಯಾಂಸಿ ಶಿಶವೇ ಕಿಲ ಗೋಪ್ರದೋಽಸ್ಮೈ**
**ಪೂರ್ವಾಲಯಃ ಸ್ವಸುತಸೂನುತಯಾ ಪ್ರಜಾತಃ ।**
**ನಿರ್ವಾಣಹೇತುಮಲಭಿಷ್ಟ ಪರಾತ್ಮವಿದ್ಯಾಂ**
**ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್ ॥ 30 ॥**

**ಪದಚ್ಛೇದ—** ಪಾತುಂ, ಪಯಾಂಸಿ, ಶಿಶವೇ, ಕಿಲ, ಗೋಪ್ರದಃ, ಅಸ್ಮೈ, ಪೂರ್ವಾಲಯಃ, ಸ್ವಸುತಸೂನುತಯಾ, ಪ್ರಜಾತಃ, ನಿರ್ವಾಣಹೇತುಂ, ಅಲಭಿಷ್ಟ, ಪರಾತ್ಮವಿದ್ಯಾಂ, ದಾನಂ, ಧ್ರುವಂ, ಫಲತಿ, ಪಾತ್ರಗುಣಾನುಕೂಲ್ಯಾತ್ ।

**ಅನ್ವಯ—** ಅಸ್ಮೈ ಶಿಶವೇ ಪಯಾಂಸಿ ಪಾತುಂ ಗೋಪ್ರದಃ ಪೂರ್ವಾಲಯಃ ಸ್ವಸುತಸೂನುತಯಾ ಪ್ರಜಾತಃ ನಿರ್ವಾಣಹೇತುಂ ಪರಾತ್ಮವಿದ್ಯಾಂ ಅಲಭಿಷ್ಟ ಕಿಲ । ದಾನಂ ಪಾತ್ರಗುಣಾನುಕೂಲ್ಯಾತ್ ಧ್ರುವಂ ಫಲತಿ ।

**ಅನ್ವಯಾರ್ಥ—**

**ಅಸ್ಮೈ ಶಿಶವೇ** = ಚಿಕ್ಕ ಮಗುವಾಗಿರುವ ಕಾಲದಲ್ಲಿ ಶ್ರೀವಾಸುದೇವ ಎಂಬ ಮಗುವಿಗೆ

**ಪಯಾಂಸಿ ಪಾತುಂ** = ಹಾಲನ್ನು ಕುಡಿಯುವುದಕ್ಕೋಸ್ಕರ

**ಗೋಪ್ರದಃ** = ಗೋದಾನವನ್ನು ಮಾಡಿರುವ

**ಪೂರ್ವಾಲಯಃ** = ಮೂಡಂತಿಲ್ಲಾಯ ಎಂಬ ಶ್ರೀಮಂತರು

**ಸ್ವಸುತಸೂನುತಯಾ ಪ್ರಜಾತಃ** = ತನ್ನ ಮಗನ ಮಗನಾಗಿ ಹುಟ್ಟಿದವರಾಗಿ

**ನಿರ್ವಾಣಹೇತುಂ** = ಮುಕ್ತಿಗೆ ಸಾಧನವಾಗಿರುವ

**ಪರಾತ್ಮವಿದ್ಯಾಂ** = ಆತ್ಮವಿದ್ಯೆಯನ್ನು

**ಅಲಭಿಷ್ಟ ಕಿಲ** = ಹೊಂದಿದರಷ್ಟೆ.

**ದಾನಂ** = ದಾನವು

**ಪಾತ್ರಗುಣಾನುಕೂಲ್ಯಾತ್** = ಸತ್ಪಾತ್ರರ ಗುಣಗಳಾನುಸಾರವಾಗಿ

**ಫಲತಿ** = ಫಲಿಸುತ್ತದೆ

**ಧ್ರುವಂ** = ನಿಶ್ಚಯ.

**ತಾತ್ಪರ್ಯ—** ಶ್ರೀವಾಸುದೇವಾಚಾರ್ಯರು ಚಿಕ್ಕ ವಯಸ್ಸಿನಲ್ಲಿ ಹಾಲನ್ನು ಕುಡಿಯಬೇಕಾಗಿತ್ತು. ಚಿಕ್ಕ ವಯಸ್ಸಿನಲ್ಲಿರುವ ಶ್ರೀ ವಾಸುದೇವಾಚಾರ್ಯರಿಗಾಗಿ ಮೂಡಂತಿಲ್ಲಾಯ ಎಂಬ ಗೃಹಸ್ಥರು ಮಾಡಿದ ಗೋದಾನದಿಂದ ಅವರು ಮಗನ ಮಗನಾಗಿ (ಮೊಮ್ಮಗನಾಗಿ) ಹುಟ್ಟಿದರು. ಉತ್ತಮವಾದ ಆತ್ಮವಿದ್ಯೆಯನ್ನು ವಾಸುದೇವಾಚಾರ್ಯರಿಂದ ಪಡೆದು ಮಹಾಜ್ಞಾನಿಯೆನಿಸಿದರು. ಸತ್ಪಾತ್ರರಲ್ಲಿ ಸೇರಿದ ದಾನವು ಮಹಾಫಲವನ್ನು ಕೊಡುವುದರಲ್ಲಿ ಸಂಶಯವೇನಿದೆ?

**ವಿಗ್ರಹ—**

**ಗೋಪ್ರದಃ—** ಗೋಃ ಪ್ರದಃ ಗೋಪ್ರದಃ ।

**ಸ್ವಸುತಸೂನುತಯಾ—** ಸ್ವಸ್ಯ ಸುತಃ ಸ್ವಸುತಃ, ಸ್ವಸುತಸ್ಯ ಸೂನುಃ ಸ್ವಸುತಸೂನುಃ, ಸ್ವಸುತಸೂನೋಃ ಭಾವಃ ಸ್ವಸುತಸೂನುತಾ, ತಯಾ ಸ್ವಸುತಸೂನುತಯಾ ।

**ಪ್ರಜಾತಃ—** ಪ್ರಕರ್ಷೇಣ ಜಾತಃ ಪ್ರಜಾತಃ ।

**ನಿರ್ವಾಣಹೇತುಂ—** ನಿರ್ವಾಣಸ್ಯ ಹೇತುಃ ನಿರ್ವಾಣಹೇತುಃ, ತಂ ನಿರ್ವಾಣಹೇತುಂ ।

**ಪರಾತ್ಮವಿದ್ಯಾಂ—** ಪರಾ ಚ ಸಾ ಆತ್ಮವಿದ್ಯಾ ಚ ಪರಾತ್ಮವಿದ್ಯಾ, ತಾಂ ಪರಾತ್ಮವಿದ್ಯಾಂ ।

**ಪಾತ್ರಗುಣಾನುಕೂಲ್ಯಾತ್—** ಪಾತ್ರಸ್ಯ ಗುಣಾಃ ಪಾತ್ರಗುಣಾಃ, ಪಾತ್ರಗುಣಾನಾಂ ಆನುಕೂಲ್ಯಂ ಪಾತ್ರ-ಗುಣಾನುಕೂಲ್ಯಂ, ತಸ್ಮಾತ್ ಪಾತ್ರಗುಣಾನುಕೂಲ್ಯಾತ್ ।

**ಕ್ರಿಯಾಪದ— ಅಲಭಿಷ್ಟ-** ಡು ಲಭಷ್ ಪ್ರಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ ಡು ಲಭಷ್ ಧಾತೋಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ 'ಅಲಭಿಷ್ಟ' ಇತಿ ರೂಪಮ್ ।

ಅಲಭಿಷ್ಟ ಅಲಭಿಷಾತಾಂ ಅಲಭಿಷತ, ಅಲಭಿಷ್ಠಾಃ ಅಲಭಿಷಾಥಾಂ ಅಲಭಿಧ್ವಂ, ಅಲಭಿಷಿ ಅಲಭಿಷ್ವಹಿ ಅಲಭಿಷ್ಮಹಿ॥

ಫಲತಿ-ಫಲ ನಿಷ್ಪತ್ತೌ ನಿಷ್ಪತ್ಯರ್ಥಕಾತ್ ಫಲಧಾತೋಃ ಲಟಿ ಪ್ರಥಮಪುರುಷೇ ಏಕವಚನೇ 'ಫಲತಿ' ಇತಿ ರೂಪಮ್ ।
ಫಲತಿ ಫಲತಃ ಫಲಂತಿ, ಫಲಸಿ ಫಲಥಃ ಫಲಥ, ಫಲಾಮಿ ಫಲಾವಃ ಫಲಾಮಃ ।।

★ ★ ★

ದೇವದೇವೋತ್ತಮನ ಪತದಲದಲ್ಲಿ ಜೀವೋತ್ತಮರ ಸಮರ್ಪಣೆ

**ಅತ್ರಸ್ತಮೇವ ಸತತಂ ಪರಿಫುಲ್ಲಚಕ್ಷುಃ**
**ಕಾಂತ್ಯಾ ವಿಡಂಬಿತನವೇಂದು ಜಗತ್ಯನರ್ಘ್ಯಮ್ ।**
**ತತ್ಪುತ್ರರತ್ನಮುಪಗೃಹ್ಯ ಕದಾಚಿದಾಪ್ತಃ**
**ಸ್ವಸ್ವಾಮಿನೇ ಬುಧ ಉಪಾಯನಮಾರ್ಪಯತ್ ಸಃ।। 31 ।।**

**ಪದಚ್ಛೇದ—** ಅತ್ರಸ್ತಂ, ಏವ, ಸತತಂ, ಪರಿಫುಲ್ಲಚಕ್ಷುಃ, ಕಾಂತ್ಯಾ, ವಿಡಂಬಿತನವೇಂದು, ಜಗತಿ, ಅನರ್ಘ್ಯಂ, ತತ್, ಪುತ್ರರತ್ನಂ, ಉಪಗೃಹ್ಯ, ಕದಾಚಿತ್, ಆಪ್ತಃ, ಸ್ವಸ್ವಾಮಿನೇ, ಬುಧಃ, ಉಪಾಯನಂ, ಆರ್ಪಯತ್, ಸಃ ।

**ಅನ್ವಯ—** ಸತತಂ ಅತ್ರಸ್ತಂ ಏವ ಪರಿಫುಲ್ಲಚಕ್ಷುಃ ಕಾಂತ್ಯಾ ವಿಡಂಬಿತನವೇಂದು ಜಗತಿ ಅನರ್ಘ್ಯಂ ತತ್ ಪುತ್ರರತ್ನಂ ಕದಾಚಿತ್ ಆಪ್ತಃ ಉಪಗೃಹ್ಯ ಸ್ವಸ್ವಾಮಿನೇ ಬುಧಃ ಸಃ ಉಪಾಯನಂ ಆರ್ಪಯತ್ ।

**ಅನ್ವಯಾರ್ಥ—**

**ಸತತಂ** = ಯಾವಾಗಲೂ ಜ್ಞಾನಿಗಳಾಗಿರುವ ಆ ಮಧ್ಯಗೇಹಭಟ್ಟರು ಅಥವಾ ತ್ರಾಸ ಎಂಬ ಮಣಿಗಳಲ್ಲಿರುವ
**ಅತ್ರಸ್ತಂ ಏವ** = ದೋಷಗಳಿಲ್ಲದಿರುವ
**ಪರಿಫುಲ್ಲಚಕ್ಷುಃ** = ಯಾವಾಗಲೂ ಅರಳಿದ ಕಣ್ಣುಗಳುಳ್ಳ
**ಕಾಂತ್ಯಾ** = ಕಾಂತಿಯಿಂದ
**ವಿಡಂಬಿತನವೇಂದು** = ಉದಯಿಸುತ್ತಿರುವ ಹೊಸ ಚಂದ್ರನಂತಿರುವ
**ಜಗತಿ ಅನರ್ಘ್ಯಂ** = ಪ್ರಪಂಚದಲ್ಲಿ ಅಮೂಲ್ಯವಾದ
**ತತ್ ಪುತ್ರರತ್ನಂ** = ಆ ಪುತ್ರನೆಂಬ ರತ್ನವನ್ನು
**ಕದಾಚಿತ್** = ಯಾವುದೋ ಒಂದು ದಿನದಲ್ಲಿ
**ಆಪ್ತಃ** = ಅನಂತಾಸನದೇವರನ್ನು ಹೊಂದಿದವರಾಗಿ
**ಉಪಗೃಹ್ಯ** = ಎತ್ತಿಕೊಂಡವರಾಗಿ
**ಸ್ವಸ್ವಾಮಿನೇ** = ತನ್ನ ಸ್ವಾಮಿಯಾಗಿರುವ ಅನಂತೇಶ್ವರ ದೇವನಿಗೆ
**ಬುಧಃ ಸಃ** = ಜ್ಞಾನಿವರ್ಯರಾಗಿರುವ, ಮಧ್ಯಗೇಹಭಟ್ಟರು
**ಉಪಾಯನಂ** = ಕಾಣಿಕೆಯಾಗಿ
**ಆರ್ಪಯತ್** = ಸಮರ್ಪಿಸಿದರು.

**ತಾತ್ಪರ್ಯ—** ಶ್ರೀಮಧ್ಯಗೇಹಭಟ್ಟರು ತನ್ನ ಸ್ವಾಮಿಯಾಗಿರುವ ಅನಂತೇಶ್ವರದೇವನಿಗೆ ತನ್ನ ಮಗನೆಂಬ ಮಣಿ-ಯನ್ನು ಕಾಣಿಕೆಯಾಗಿ ಸಮರ್ಪಿಸಿದರು. ಆ ಪುತ್ರರತ್ನವು ಯಾವಾಗಲೂ ಯಾವ ವಿಧವಾದ ದೋಷಗಳೂ ಇಲ್ಲದಿರು-ವುದು. ಅಥವಾ ಮಣಿಗಳಲ್ಲಿ ಇರಬಹುದಾದ ತ್ರಾಸ ಎಂಬ ದೋಷಗಳಿಲ್ಲದಿರುವುದು. ಎರಡು ಕಣ್ಣುಗಳನ್ನೂ ತೆರೆದು ನೋಡುತ್ತಿರುವಂತೆ ಯಾವಾಗಲೂ ಅಳಿದ ಕಣ್ಣುಗಳಿಂದ ಯುಕ್ತವಾದುದು. ಶ್ರೀವಾಸುದೇವನು ಅಪಾರ ಕಾಂತಿಯಿಂದ

ಯುಕ್ತನಾಗಿರುವನು. ಅವನನ್ನು ನೋಡಿದರೆ ಹೊಸದಾಗಿ ಉದಯಿಸಿದ ಚಂದ್ರನನ್ನು ಧಿಕ್ಕರಿಸುವಂತಿದೆ. ಪ್ರಪಂಚದಲ್ಲಿ ಈ ಪುತ್ರರತ್ನವು ಅಮೂಲ್ಯವಾದುದು. ಈ ವಾಸುದೇವನಾಮಕನಾದ ಪುತ್ರರತ್ನನನ್ನು ಕರೆದುಕೊಂಡು ಅನಂತೇಶ್ವರನ ಸನ್ನಿಧಾನಕ್ಕೆ ಹೋದರು. ಆ ಪುತ್ರರತ್ನನನ್ನು ಮಹಾಜ್ಞಾನಿಯಾಗಿರುವ ಅನಂತೇಶ್ವರದೇವರಿಗೆ ಕಾಣಿಕೆಯಾಗಿ ಸಮರ್ಪಿಸಿದರು.

ವಿಗ್ರಹ—

**ಅತ್ರಸ್ತಂ—** ನ ತ್ರಸ್ತಂ ಅತ್ರಸ್ತಂ ।

**ಪರಿಫುಲ್ಲಚಕ್ಷುಃ—** ಪರಿಫುಲ್ಲೇ ಚಕ್ಷುಷೀ ಯಸ್ಯ ಸಃ ಪರಿಫುಲ್ಲಚಕ್ಷುಃ, ತತ್ ಪರಿಫುಲ್ಲಚಕ್ಷುಃ ।

**ವಿಡಂಬಿತನವೇಂದು—** ನವಶ್ಚಾಸೌ ಇಂದುಶ್ಚ ನವೇಂದುಃ, ವಿಡಂಬಿತಃ ನವೇಂದುಃ ಯಸ್ಯ ತತ್ ವಿಡಂಬಿ-ತನವೇಂದು ।

**ಅನರ್ಘ್ಯಂ—** ಅರ್ಘಾರ್ಹಂ ಅರ್ಘ್ಯಂ, ನ ಅರ್ಘ್ಯಂ ಅನರ್ಘ್ಯಂ ।

**ಪುತ್ರರತ್ನಂ—** ಪುತ್ರಃ ರತ್ನಂ ಇವ ಪುತ್ರರತ್ನಂ ।

**ಉಪಗೃಹ—** ಗೃಹೀತ್ವಾ ಉಪಗೃಹ್ಯ ।

**ಸ್ವಸ್ವಾಮಿನೇ—** ಸ್ವಸ್ಯ ಸ್ವಾಮೀ ಸ್ವಸ್ವಾಮೀ, ತಸ್ಮೈ ಸ್ವಸ್ವಾಮಿನೇ ।

**ಕ್ರಿಯಾಪದ—** ಆರ್ಪಯತ್- ಆಜ್ ಇತ್ಯುಪಸರ್ಗಪೂರ್ವಕಾತ್ ಣಿಜಂತಾತ್ ಋ-ಗತಿಪ್ರಾಪಣಯೋಃ ಆರ್ಪಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಆರ್ಪಯತ್' ಇತಿ ರೂಪಮ್ ।

ಆರ್ಪಯತ್ ಆರ್ಪಯತಾಂ ಆರ್ಪಯನ್, ಆರ್ಪಯಃ ಆರ್ಪಯತಂ ಆರ್ಪಯತ, ಆರ್ಪಯಂ ಆರ್ಪಯಾವ ಆರ್ಪಯಾಮ ॥

★ ★ ★

ಮಧ್ಯಗೇಹರಿಂದ ಬಾಲಕನಿಗೆ ಶ್ರೇಯಃ ಪ್ರಾರ್ಥನೆ

**ನತ್ವಾ ಹರಿಂ ರಜತಪೀಠಪುರಾಧಿವಾಸಂ**
**ಬಾಲಸ್ಯ ಸಂಪದಮನಾಪದಮರ್ಥಯಿತ್ವಾ ।**
**ಸಾಕಂ ಸುತೇನ ಪರಿವಾರಜನಾನ್ವಿತೋಽಸೌ**
**ಪ್ರಾಯಾನ್ನಿಶೀಥಸಮಯೇ ನಿಜಮೇವ ಧಾಮ ॥ 32 ॥**

**ಪದಚ್ಛೇದ—** ನತ್ವಾ, ಹರಿಂ, ರಜತಪೀಠಪುರಾಧಿವಾಸಂ, ಬಾಲಸ್ಯ, ಸಂಪದಂ, ಅನಾಪದಂ, ಅರ್ಥಯಿತ್ವಾ, ಸಾಕಂ, ಸುತೇನ, ಪರಿವಾರಜನಾನ್ವಿತಃ, ಅಸೌ, ಪ್ರಾಯಾತ್, ನಿಶೀಥಸಮಯೇ, ನಿಜಂ, ಏವ, ಧಾಮ ।

**ಅನ್ವಯ—** ರಜತಪೀಠಪುರಾಧಿವಾಸಂ ಹರಿಂ ನತ್ವಾ ಬಾಲಸ್ಯ ಅನಾಪದಂ ಸಂಪದಂ ಅರ್ಥಯಿತ್ವಾ ಪರಿವಾರ-ಜನಾನ್ವಿತಃ ಅಸೌ ಸುತೇನ ಸಾಕಂ ನಿಶೀಥಸಮಯೇ ಏವ ನಿಜಂ ಧಾಮ ಪ್ರಾಯಾತ್ ।

**ಅನ್ವಯಾರ್ಥ—**

**ರಜತಪೀಠಪುರಾಧಿವಾಸಂ ಹರಿಂ ನತ್ವಾ** = ಉಡುಪಿಯಲ್ಲಿ ವಾಸಿಸುತ್ತಿರುವವನಾದ ಅನಂತೇಶ್ವರನನ್ನು ನಮಸ್ಕರಿಸಿ

**ಬಾಲಸ್ಯ ಅನಾಪದಂ ಸಂಪದಂ ಅರ್ಥಯಿತ್ವಾ** = ತನ್ನ ಮಗನಾಗಿರುವ ವಾಸುದೇವನಿಗೆ, ಆಪತ್ತು ಇಲ್ಲದಿರುವ, ಸಂಪತ್ತನ್ನು ಪ್ರಾರ್ಥಿಸಿ

**ಪರಿವಾರಜನಾನ್ವಿತಃ ಅಸೌ** = ತಮ್ಮ ಪರಿವಾರಜನರಿಂದ ಸಹಿತರಾಗಿ ಮಧ್ವಗೇಹಭಟ್ಟರು

**ಸುತೇನ ಸಾಕಂ** = ತನ್ನ ಮಗನೊಡನೆ

**ನಿಶೀಥಸಮಯೇ ಏವ** = ಅರ್ಧರಾತ್ರಿಕಾಲದಲ್ಲಿಯೇ

**ನಿಜಂ ಧಾಮ ಪ್ರಾಯಾತ್** = ತನ್ನ ಮನೆಯನ್ನು ಕುರಿತು ಹೋದರು.

**ತಾತ್ಪರ್ಯ—** ಉಡುಪಿ ಕ್ಷೇತ್ರಕ್ಕೆ ಬಂದಿರುವ ಮಧ್ವಗೇಹಭಟ್ಟರು ಉಡುಪಿ ಕ್ಷೇತ್ರದಲ್ಲಿ ವಾಸಿಸುತ್ತಿರುವ ಅನಂತೇಶ್ವರನನ್ನು ನಮಸ್ಕರಿಸಿದರು. ತನ್ನ ಬಾಲಕನಿಗೆ ಸಂಪತ್ತನ್ನೂ ಆ ಸಂಪತ್ತಿನಲ್ಲಿ ಸಂಭವಿಸಬಹುದಾದ ಆಪತ್ತಿನ ಅಭಾವವನ್ನೂ ಬೇಡಿದರು. ಪರಿವಾರಜನರಿಂದ ಸಹಿತರಾಗಿಯೂ ತಮ್ಮ ಮಗನಿಂದ ಸಹಿತರಾಗಿಯೂ ಅರ್ಧರಾತ್ರಿ-ಕಾಲದಲ್ಲಿಯೇ ತಮ್ಮ ಸ್ವಂತ ಮನೆಗೆ ಹೋದರು.

**ವಿಗ್ರಹ—**

**ರಜತಪೀಠಪುರಾಧಿವಾಸಂ—** ರಜತಪೀಠಂ ಇತಿ ಪುರಂ ರಜತಪೀಠಪುರಂ, ರಜತಪೀಠಪುರೇ ಅಧಿವಸತಿ ಇತಿ ರಜತಪೀಠಪುರಾಧಿವಾಸಃ, ತಂ ರಜತಪೀಠಪುರಾಧಿವಾಸಂ ।

**ಅನಾಪದಂ—** ನ ವಿದ್ಯತೇ ಆಪತ್ ಯಸ್ಯಾಂ ಸಾ ಅನಾಪತ್, ತಾಂ ಅನಾಪದಂ ।

**ಪರಿವಾರಜನಾನ್ವಿತಃ—** ಪರಿವಾರಜನೈಃ ಅನ್ವಿತಃ ಪರಿವಾರಜನಾನ್ವಿತಃ ।

**ನಿಶೀಥಸಮಯೇ—** ನಿಶೀಥಂ ಇತಿ ಸಮಯಃ ನಿಶೀಥಸಮಯಃ, ತಸ್ಮಿನ್ ನಿಶೀಥಸಮಯೇ ।

**ಕ್ರಿಯಾಪದ— ಪ್ರಾಯಾತ್**- ಪ್ರ ಇತ್ಯುಪಸರ್ಗಪೂರ್ವಕಾತ್ ಯಾ ಪ್ರಾಪಣೇ ಇತ್ಯಸ್ಮಾದ್ಧಾತೋಃ ಲಙ್ ಪ್ರಥಮ-ಪುರುಷೇ ಏಕವಚನೇ 'ಪ್ರಾಯಾತ್' ಇತಿ ರೂಪಮ್ ।

ಪ್ರಾಯಾತ್ ಪ್ರಾಯಾತಾಂ ಪ್ರಾಯುಃ ಪ್ರಾಯಾನ್, ಪ್ರಾಯಾಃ ಪ್ರಾಯಾತಂ ಪ್ರಾಯಾತ, ಪ್ರಾಯಾಂ ಪ್ರಾಯಾವ ಪ್ರಾಯಾಮ ॥

★ ★ ★

ಭೂತಪೀಡೆ ಮಟ್ಟದ ಪುಟ್ಟಬಾಲಕ

**ದೋಷೇಯುಷಾಂ ಸಮಮನೇನ ವನೇಽತಿಭೀಮೇ**
**ತತ್ಕ್ರೀಡಿತಗ್ರಹ ಇಹೈಕತಮಂ ತುತೋದ ।**
**ಉದ್ಭ್ರಾಂತರಕ್ತಮವಲೋಕ್ಯ ತಮಭ್ಯಧಾಯಿ**
**ಕೇನಾಪ್ಯಹೋ ನ ಶಿಶುತುತ್ ಕಥಮೇಷ ಇತ್ಥಮ್ ॥ 33 ॥**

**ಪದಚ್ಛೇದ—** ದೋಷಾ, ಈಯುಷಾಂ, ಸಮಂ, ಅನೇನ, ವನೇ, ಅತಿಭೀಮೇ, ತತ್ಕ್ರೀಡಿತಗ್ರಹಃ, ಇಹ, ಏಕತಮಂ, ತುತೋದ, ಉದ್ಭ್ರಾಂತರಕ್ತಂ ಅವಲೋಕ್ಯ, ತಂ, ಅಭ್ಯಧಾಯಿ, ಕೇನ, ಅಪಿ, ಅಹೋ, ನ, ಶಿಶುತುತ್, ಕಥಂ, ಏಷಃ, ಇತ್ಥಮ್ ।

**ಅನ್ವಯ—** ಅನೇನ ಸಮಂ ದೋಷಾ ಅತಿಭೀಮೇ ವನೇ ಈಯುಷಾಂ ತತ್ಕ್ರೀಡಿತಗ್ರಹಃ ಇಹ ಏಕತಮಂ ತುತೋದ, ಉದ್ಭ್ರಾಂತರಕ್ತಂ ಅವಲೋಕ್ಯ ತಂ ಅಭ್ಯಧಾಯಿ, ಕೇನ ಅಪಿ ನ ಶಿಶುತುತ್, ಏಷಃ ಕಥಂ ಇತ್ಥಂ, ಅಹೋ ।

**ಅನ್ವಯಾರ್ಥ—**

**ಅನೇನ ಸಮಂ** = ಈ ಶಿಶುವಿನೊಡನೆ

**ದೋಷಾ** = ರಾತ್ರಿಯಲ್ಲಿ

**ಅತಿಭೀಮೇ ವನೇ** = ಅತ್ಯಂತ ಭಯಂಕರವಾದ ಕಾಡಿನಲ್ಲಿ

**ಈಯುಷಾಂ** = ಹೋಗುತ್ತಿರುವ ಜನರುಗಳ ಮಧ್ಯದಲ್ಲಿ

**ತತ್ಕ್ರೀಡಿತಗ್ರಹಃ** = ಆ ಸಮಯದಲ್ಲಿ ಕ್ರೀಡೆಯನ್ನು ಮಾಡುತ್ತಿರುವ ಒಂದು ಪಿಶಾಚವು

**ಇಹ ಏಕತಮಂ ತುತೋದ** = ಅವರುಗಳಲ್ಲಿ ಒಬ್ಬನೇ ಒಬ್ಬನನ್ನು ಪೀಡಿಸಿತು.

**ಉದ್ವಾಂತರಕ್ತಂ ತಂ ಅವಲೋಕ್ಯ** = ರಕ್ತವನ್ನು ವಾಂತಿ ಮಾಡುತ್ತಿರುವ ಅವನನ್ನು ನೋಡಿ

**ಅಭ್ಯಧಾಯಿ** = ಹೇಳಿದರು.

**ಕೇನ ಅಪಿ ನ ಶಿಶುತುತ್** = ಯಾರೋ ಒಬ್ಬರಿಂದ ಈ ವಾಸುದೇವ ಎಂಬ ಬಾಲಕನಿಗೆ ಯಾವ ಪೀಡೆಯೂ ಉಂಟಾಗಲಿಲ್ಲ.

**ಏಷಃ ಕಥಂ ಇತ್ಥಂ** = ಈತನು ಹೇಗೆ ಈ ರೀತಿಯಿಂದ ಪೀಡಿಸಲ್ಪಡದೇ ಇದ್ದಾನೆ ?

**ಅಹೋ** = ಆಶ್ಚರ್ಯ ಎಂದನು.

**ತಾತ್ಪರ್ಯ**— ರಾತ್ರಿಯಲ್ಲಿ ಸರ್ವರೂ ಬರುತ್ತಿದ್ದಾರೆ. ಆಗ ಅಲ್ಲಿ ಕ್ರೀಡೆಯನ್ನು ಮಾಡುತ್ತಿದ್ದ ಒಂದು ಪಿಶಾಚವು ಅವರಲ್ಲಿ ಒಬ್ಬನನ್ನು ಪೀಡಿಸಿತು. ಆಗ ಅದನ್ನು ನೋಡಿದ ಯಾವನೋ ಒಬ್ಬನು ಹೇಳಿದನು. ಇದೇನು ಆಶ್ಚರ್ಯ, ಪಿಶಾಚಗಳು ಸ್ವಸ್ಥನಾಗಿರುವವರನ್ನು ಪೀಡಿಸಲಾರವು. ಅದರಲ್ಲಿಯೂ ಶಿಶುಗಳನ್ನು ಬಾಧಿಸಲಾರವು. ಈ ಶಿಶುವು ರಕ್ತವಾಂತಿಯನ್ನು ಮಾಡಿರಬೇಕು. ಹೀಗೆ ಯಾಕೆ ನಡೆಯಿತು ? ಎಂದನು.

**ವಿಗ್ರಹ**—

**ಅತಿಭೀಮೇ**— ಅತ್ಯಂತಂ ಭೀಮಂ ಅತಿಭೀಮಂ, ತಸ್ಮಿನ್ ಅತಿ ಭೀಮೇ ।

**ತತ್ಕ್ರೀಡಿತಗ್ರಹಃ**— ತೇಷಾಂ ಮಧ್ಯೇ ಕ್ರೀಡಿತಃ ತತ್ಕ್ರೀಡಿತಃ, ತತ್ಕ್ರೀಡಿತಶ್ಚಾಸೌ ಗ್ರಹಶ್ಚ ತತ್ಕ್ರೀಡಿತಗ್ರಹಃ ।

**ಏಕತಮಂ**— ಏಕ ಏವ ಏಕತಮಃ, ತಂ ಏಕತಮಂ ।

**ಕ್ರಿಯಾಪದ**— **ತುತೋದ**- ತುದ ವ್ಯಥನೇ ಇತಿ ವ್ಯಥನಾರ್ಥಕಾತ್ ತುದ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ತುತೋದ' ಇತಿ ರೂಪಮ್ ।

ತುತೋದ ತುತುವತುಃ ತುತುದುಃ. ತುತೋದಿಥ ತುತುದಥುಃ ತುತುದ, ತುತೋದ ತುತುದಿವ ತುತುದಿಮ॥

**ಅಭ್ಯಧಾಯಿ** - ಡು ಧಾಞ್ ಧಾರಣಪೋಷಣಯೋಃ ಧಾರಣಪೋಷಣಾರ್ಥಕಾತ್ ಅಭಿ ಇತ್ಯುಪಸರ್ಗ-ಪೂರ್ವಕಾತ್ ಲಿಟಿ ಪ್ರಥಮಪುರುಷೇ ಏಕವಚನೇ 'ಅಭ್ಯಧಾಯಿ' ಇತಿ ರೂಪಮ್ ।

| | | |
|---|---|---|
| ಅಭ್ಯಧಾಯಿ | ಅಭ್ಯಧಾಯಿಷಾತಾಂ | ಅಭ್ಯಧಾಯಿಷತ, |
| ಅಭ್ಯಧಾಯಿಷ್ಠಾಃ | ಅಭ್ಯಧಾಯಿಷಾಥಾಂ | ಅಭ್ಯಧ್ಯಾಯಿಧ್ವಂ, |
| ಅಭ್ಯಧಾಯಿಷಿ | ಅಭ್ಯಧಾಯಿಷ್ವಹಿ | ಅಭ್ಯಧಾಯಿಷ್ಮಹಿ ॥ |

★ ★ ★

ಮಹಾಭೂತದ ಅದ್ಭುತ ಸಂದೇಶ

**ಆವಿಶ್ಯ ಪೂರುಷಮುವಾಚ ಮಹಾಗ್ರಹೋಽಸಾ-**
**ವಸ್ಮದ್ವಿಹಾರಸಮಯೋಪಗತಾನ್ ಸಮಸ್ತಾನ್ ।**
**ಯಚ್ಛಕ್ತಿಗುಪ್ತಿರಹಿತಾನಲಮಸ್ಮಿ ಹಂತುಂ**
**ಲೋಕೇಶ್ವರಃ ಸ ಬತ ಬಾಲತಮಃ ಕಿಲೇತಿ ॥ 34 ॥**

**ಪದಚ್ಛೇದ—** ಆವಿಶ್ಯ, ಪೂರುಷಂ, ಉವಾಚ, ಮಹಾಗ್ರಹಃ, ಅಸೌ, ಅಸ್ಮದ್ವಿಹಾರಸಮಯೋಪಗತಾನ್, ಸಮಸ್ತಾನ್, ಯಚ್ಛಕ್ತಿಗುಪ್ತಿರಹಿತಾನ್, ಅಲಂ, ಅಸ್ಮಿ, ಹಂತುಂ, ಲೋಕೇಶ್ವರಃ, ಸಃ, ಬತ, ಬಾಲತಮಃ, ಕಿಲ, ಇತಿ ।

**ಅನ್ವಯ—** ಅಸೌ ಮಹಾಗ್ರಹಃ ಪೂರುಷಂ ಆವಿಶ್ಯ ಉವಾಚ । ಅಸ್ಮದ್ವಿಹಾರಸಮಯೋಪಗತಾನ್ ಸಮಸ್ತಾನ್ ಯಚ್ಛಕ್ತಿಗುಪ್ತಿರಹಿತಾನ್ ಹಂತುಂ ಅಲಂ ಅಸ್ಮಿ । ಸಃ ಬಾಲತಮಃ ಲೋಕೇಶ್ವರಃ ಕಿಲ ಇತಿ ।

**ಅನ್ವಯಾರ್ಥ—**

**ಅಸೌ ಮಹಾಗ್ರಹಃ** = ಈ ದೊಡ್ಡ ಪಿಶಾಚವು

**ಪೂರುಷಂ ಆವಿಶ್ಯ ಉವಾಚ** = ಒಬ್ಬ ಪುರುಷನನ್ನು ಆವೇಶಗೊಂಡು ಹೇಳಿತು.

**ಅಸ್ಮದ್ವಿಹಾರಸಮಯೋಪಗತಾನ್ ಸಮಸ್ತಾನ್** = ನಾವು ವಿಹಾರವನ್ನು ಮಾಡುತ್ತಿರುವ ಸಮಯದಲ್ಲಿ ಬಂದಿರುವ ಸರ್ವರನ್ನೂ

**ಯಚ್ಛಕ್ತಿಗುಪ್ತಿರಹಿತಾನ್ ಹಂತುಂ** = ಯಾವನ ಶಕ್ತಿಯ ರಕ್ಷಣೆಯಿಲ್ಲದಿರುವ ಸರ್ವರನ್ನೂ ಕೊಲ್ಲುವುದಕ್ಕೆ

**ಅಲಂ ಅಸ್ಮಿ** = ನಾನು ಸಮರ್ಥನಾಗಿರುವೆನು.

**ಸಃ ಬಾಲತಮಃ** = ಆ ಚಿಕ್ಕ ಬಾಲಕನು

**ಲೋಕೇಶ್ವರಃ ಕಿಲ** = ಎಲ್ಲಾ ಲೋಕಗಳಿಗೂ ಈಶ್ವರನಲ್ಲವೇ !

**ಇತಿ** = ಈ ರೀತಿಯಾಗಿ

**ಉವಾಚ** = ಹೇಳಿತು.

**ತಾತ್ಪರ್ಯ—** ದೊಡ್ಡ ಪಿಶಾಚವು ಪುರುಷನಲ್ಲಿ ಪ್ರವೇಶ ಮಾಡಿಕೊಂಡೇ ಹೇಳಿತು. ನಾವು ವಿಹಾರವನ್ನು ಮಾಡುತ್ತಿರುವ ಸಮಯದಲ್ಲಿ ಬಂದಿರುವ ನಿಮ್ಮನ್ನೆಲ್ಲರನ್ನೂ ಸಂಹರಿಸಿಬಿಡುತ್ತಿದ್ದೆವು. ಆದರೆ ನಿಮ್ಮ ಜೊತೆಯಲ್ಲಿ ಬಂದಿರುವ ಬಾಲಕನ ಶಕ್ತಿಯಿಂದ ನಿಮ್ಮನ್ನು ಸಂಹರಿಸಲು ನಮ್ಮಿಂದ ಸಾಧ್ಯವಾಗಲಿಲ್ಲ. ಆ ಬಾಲಕನು ಸಕಲಲೋಕಗಳಿಗೂ ಅಧಿಪತಿಯಾಗಿರುವನು ತಾನೇ?

**ವಿಗ್ರಹ—**

**ಮಹಾಗ್ರಹಃ—** ಮಹಾಂಶ್ಚಾಸೌ ಗ್ರಹಶ್ಚ ಮಹಾಗ್ರಹಃ ।

**ಅಸ್ಮದ್ವಿಹಾರಸಮಯೋಪಗಾನ್—** ಅಸ್ಮಾಕಂ ವಿಹಾರಃ ಅಸ್ಮದ್ವಿಹಾರಃ, ಅಸ್ಮದ್ವಿಹಾರಸ್ಯ ಸಮಯಃ ಅಸ್ಮ-ದ್ವಿಹಾರಸಮಯಃ, ಅಸ್ಮದ್ವಿಹಾರಸಮಯೇ ಉಪಗತಾಃ ಅಸ್ಮದ್ವಿಹಾರಸಮಯೋಪಗತಾಃ, ತಾನ್ ಅಸ್ಮ-ದ್ವಿಹಾರಸಮಯೋಪಗತಾನ್ ।

**ಯಚ್ಛಕ್ತಿಗುಪ್ತಿರಹಿತಾನ್—** ಯಸ್ಯ ಶಕ್ತಿಃ ಯಚ್ಛಕ್ತಿಃ, ಯಚ್ಛಕ್ತ್ಯಾ ಗುಪ್ತಿಃ ಯಚ್ಛಕ್ತಿಗುಪ್ತಿಃ, ಯಚ್ಛಕ್ತಿಗುಪ್ತ್ಯಾ ರಹಿತಃ ಯಚ್ಛಕ್ತಿಗುಪ್ತಿರಹಿತಃ, ತಾನ್ ಯಚ್ಛಕ್ತಿಗುಪ್ತಿರಹಿತಾನ್ ।

**ಲೋಕೇಶ್ವರಃ—** ಲೋಕಾನಾಂ ಈಶ್ವರಃ ಲೋಕೇಶ್ವರಃ ।

**ಬಾಲತಮಃ—** ಅತ್ಯಂತಂ ಬಾಲಃ ಬಾಲತಮಃ ।

**ಕ್ರಿಯಾಪದ—** ಉವಾಚ- ವಚ ಪರಿಭಾಷಣೇ ಇತ್ಯಸ್ಮಾತ್ ಪರಿಭಾಷಣಾರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ 'ಉವಾಚ' ಇತಿ ರೂಪಮ್ ।

ಉವಾಚ ಊಚತುಃ ಊಚುಃ, ಉವಚಿಥ-ಉವಕ್ಥ ಊಚಥುಃ ಊಚ, ಉವಾಚ-ಉವಚ ಊಚಿವ ಊಚಿಮ ॥

★ ★ ★

ವಾಸುದೇವನ ಬಾಲಲೀಲಾ ಉಪಕ್ರಮ

**ಸ್ತನ್ಯೇನ ಬಾಲಮನುತೋಷ್ಯ ಮುಹುಃ ಸ್ವಧಾಮ್ನೋ**
**ಮಾತಾ ಕದಾಚನ ಯಯೌ ವಿರಹಾಸಹಾऽಪಿ ।**
**ವಿಶ್ವಸ್ಯ ವಿಶ್ವಪರಿಪಾಲಕಪಾಲನಾಯ**
**ಕನ್ಯಾಂ ನಿಜಾಮನುಗುಣಾಂ ಕಿಲ ಭೀರುರೇಷಾ ।। 35 ।।**

**ಪದಚ್ಛೇದ—** ಸ್ತನ್ಯೇನ, ಬಾಲಂ, ಅನುತೋಷ್ಯ, ಮುಹುಃ, ಸ್ವಧಾಮ್ನಃ, ಮಾತಾ, ಕದಾಚನ, ಯಯೌ, ವಿರಹಾಸಹಾ, ಅಪಿ, ವಿಶ್ವಸ್ಯ, ವಿಶ್ವಪರಿಪಾಲಕಪಾಲನಾಯ, ಕನ್ಯಾಂ, ನಿಜಾಂ, ಅನುಗುಣಾಂ, ಕಿಲ, ಭೀರುಃ, ಏಷಾ ।

**ಅನ್ವಯ—** ಬಾಲಂ ಸ್ತನ್ಯೇನ ಮುಹುಃ ಅನುತೋಷ್ಯ ಮಾತಾ ಕದಾಚನ ವಿರಹಾಸಹಾ ಅಪಿ ವಿಶ್ವಪರಿಪಾಲಕಪಾಲನಾಯ ನಿಜಾಂ ಅನುಗುಣಾಂ ಕನ್ಯಾಂ ವಿಶ್ವಸ್ಯ ಭೀರುಃ ಏಷಾ ಸ್ವಧಾಮ್ನಃ ಯಯೌ ।

**ಅನ್ವಯಾರ್ಥ—**

**ಬಾಲಂ ಸ್ತನ್ಯೇನ ಮುಹುಃ ಅನುತೋಷ್ಯ** = ತನ್ನ ಬಾಲಕನಾದ ವಾಸುದೇವನನ್ನು ತನ್ನ ಸ್ತನಗಳಿಂದ ಬರುತ್ತಿರುವ ಹಾಲಿನಿಂದ ಮೇಲೆ ಮೇಲೆ ತೃಪ್ತಿಪಡಿಸಿದವಳಾಗಿ

**ಮಾತಾ ವಿರಹಾಸಹಾ ಅಪಿ** = ತಾಯಿಯಾದ ವೇದವತೀದೇವಿಯು ತನ್ನ ಮಗನ ವಿರಹವನ್ನು ಸಹಿಸದಿದ್ದರೂ

**ಸ್ವಧಾಮ್ನಃ** = ತನ್ನ ಮನೆಯಿಂದ

**ಕದಾಚನ** = ಒಂದು ದಿನ

**ವಿಶ್ವಪರಿಪಾಲಕಪಾಲನಾಯ** = ಸಕಲ ಲೋಕಗಳನ್ನೂ ಕಾಪಾಡುತ್ತಿರುವ ಶ್ರೀವಾಸುದೇವನನ್ನು ರಕ್ಷಿಸುವುದಕ್ಕೋಸ್ಕರ

**ನಿಜಾಂ ಅನುಗುಣಾಂ ಕನ್ಯಾಂ** = ಸ್ವಕೀಯಳಾಗಿರುವ ತನ್ನ ಗುಣಗಳಿಗೆ ಅನುಗುಣವಾಗಿರುವ ಹೆಣ್ಣುಮಗಳನ್ನು

**ವಿಶ್ವಸ್ಯ** = ಕಾಪಾಡುವುದರಲ್ಲಿ ನಂಬಿಕೆ ಇಟ್ಟು ,

**ಭೀರುಃ ಏಷಾ** = ತುಂಬಾ ಭಯಸ್ವಭಾವದ ಈ ವೇದವತೀದೇವಿಯು

**ಯಯೌ** = ಹೊರಗೆ ಹೋದಳು.

**ತಾತ್ಪರ್ಯ—** ಒಂದು ದಿನ ತನ್ನ ಸ್ತನಗಳಿಂದ ಸುರಿಯುತ್ತಿರುವ ಹಾಲನ್ನು ಪುನಃ ಪುನಃ ತಾಯಿಯಾದ ವೇದವತೀದೇವಿಯು ತನ್ನ ಮಗನಿಗೆ ಕುಡಿಸಿದಳು. ಅವನ ವಿರಹವನ್ನು ಸಹಿಸದಿರುವ ತಾಯಿಯು ಅವನನ್ನು ತೃಪ್ತಿಪಡಿಸಿದಂತೆ ಭಾವಿಸಿ, ತನ್ನ ಮಗಳೂ ಅನುಗುಣವಾದ ಸ್ವಭಾವವುಳ್ಳವಳೂ ಆಗಿರುವ ತನ್ನ ಮಗಳ ಹಾಸಿಗೆಯಲ್ಲಿ ಮಲಗಿಸಿ, ತನ್ನ ಮನೆಯಿಂದ ಹೊರಟಳು. ನಿಜವಾಗಿಯೂ ಭಯಸ್ವಭಾವವುಳ್ಳ ತಾಯಿಯು ಹೊರಗೆ ಬಂದಳು.

**ವಿಗ್ರಹ—**

**ಸ್ತನ್ಯೇನ—** ಸ್ತನಾಭ್ಯಾಂ ನಿಃಸೃತಂ ಸ್ತನ್ಯಂ, ತೇನ ಸ್ತನ್ಯೇನ ।

**ಸ್ವಧಾಮ್ನಃ—** ಸ್ವಸ್ಯ ಧಾಮ ಸ್ವಧಾಮ, ತಸ್ಮಾತ್ ಸ್ವಧಾಮ್ನಃ ।

**ವಿರಹಾಸಹಾ—** ವಿರಹಂ ನ ಸಹತಿ ಇತಿ ವಿರಹಾಸಹಾ ।

**ವಿಶ್ವಪರಿಪಾಲಕಪಾಲನಾಯ—** ವಿಶ್ವಸ್ಯ ಪರಿತಃ ಪಾಲಕಃ ವಿಶ್ವಪರಿಪಾಲಕಃ, ವಿಶ್ವಪರಿಪಾಲಕಸ್ಯ ಪಾಲನಂ ವಿಶ್ವಪರಿಪಾಲಕಪಾಲನಂ, ತಸ್ಮೈ ವಿಶ್ವಪರಿಪಾಲಕಪಾಲನಾಯ ।

**ಅನುಗುಣಾಂ—** ಅನುಗತಃ ಗುಣಃ ಯಸ್ಯಾಃ ಸಾ ಅನುಗುಣಾ, ತಾಂ ಅನುಗುಣಾಂ ।

**ಕ್ರಿಯಾಪದ—** **ಯಯೌ-** ಯಾ ಪ್ರಾಪಣೇ ಇತ್ಯಸ್ಮಾತ್ ಪ್ರಾಪಣಾರ್ಥಕಾತ್ ಯಾ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಯಯೌ' ಇತಿ ರೂಪಮ್ ।

ಯಯೌ ಯಯತುಃ ಯಯುಃ, ಯಯಿಥ ಯಯಾಥ, ಯಯಥುಃ ಯಯ,
ಯಯೌ ಯಯಿವ ಯಯಿಮ ॥

★ ★ ★

ವಾಸುದೇವನಿಂದ ಕುಳಿತ್ಥಕುಲಭಕ್ಷಣ, ಕನ್ಯೆಯಿಂದ ಸಾಂತ್ವನ

**ಸಾ ಬಾಲಕಂ ಪ್ರರುದಿತಂ ಪರಿಸಾಂತ್ವಯಂತೀ**
**ಮುಗ್ಧಾಕ್ಷರೇಣ ವಚಸಾऽನುನಿನಾಯ ಮುಗ್ಧಾ।**
**ಮಾ ತಾತ ತಾತ ಸುಮುಖೇತಿ ಪುನಃ ಪ್ರರೋದೀ-**
**ರ್ಮಾತಾ ತನೋತಿ ರುಚಿತಂ ತ್ವರಿತಂ ತವೇತಿ ॥ 36 ॥**

**ಪದಚ್ಛೇದ—** ಸಾ, ಬಾಲಕಂ, ಪ್ರರುದಿತಂ, ಪರಿಸಾಂತ್ವಯಂತೀ, ಮುಗ್ಧಾಕ್ಷರೇಣ, ವಚಸಾ, ಅನುನಿನಾಯ, ಮುಗ್ಧಾ ಮಾ, ತಾತ, ತಾತ, ಸುಮುಖ, ಇತಿ, ಪುನಃ, ಪ್ರರೋದೀಃ, ಮಾತಾ, ತನೋತಿ, ರುಚಿತಂ, ತ್ವರಿತಂ, ತವ, ಇತಿ ।

**ಅನ್ವಯ—** ಸಾ ಮುಗ್ಧಾ ಮುಗ್ಧಾಕ್ಷರೇಣ ವಚಸಾ ಪ್ರರುದಿತಂ ಬಾಲಕಂ ಪರಿಸಾಂತ್ವಯಂತೀ ಅನುನಿನಾಯ ಹೇ ತಾತ, ಹೇ ತಾತ, ಸುಮುಖ, ಇತಿ ಪುನಃ, ಮಾ ಪ್ರರೋದೀಃ, ಮಾತಾ ತವ ರುಚಿತಂ ತ್ವರಿತಂ ತನೋತಿ ಇತಿ ।

**ಅನ್ವಯಾರ್ಥ—**

**ಸಾ ಮುಗ್ಧಾ** = ಆ ಮುಗ್ಧಾವಸ್ಥೆಯಲ್ಲಿರುವ ಕನ್ಯೆಯು
**ಮುಗ್ಧಾಕ್ಷರೇಣ ವಚಸಾ** = ತನ್ನ ವಯಸ್ಸಿಗೆ ಯೋಗ್ಯವಾಗಿರುವ ಮಾತುಗಳಿಂದ
**ಪ್ರರುದಿತಂ ಬಾಲಕಂ** = ಅಳುತ್ತಿರುವ ಮಗುವನ್ನು
**ಪರಿಸಾಂತ್ವಯಂತೀ** = ಸಮಾಧಾನಮಾಡುತ್ತಿರುವವಳಾಗಿ
**ಹೇ ತಾತ, ಹೇ ತಾತ** = ಎಲೈ ಮಗುವೇ, ಎಲೈ ಮಗುವೇ,
**ಸುಮುಖ, ಇತಿ ಪುನಃ** = ಸುಂದರವಾದ ಮುಖವುಳ್ಳವನೇ,
**ಮಾ ಪ್ರರೋದೀಃ** = ಅಳಬೇಡ.
**ಮಾತಾ ತವ ರುಚಿತಂ** = ತಾಯಿಯು ನಿನಗೆ ರುಚಿಕರವಾದದ್ದನ್ನು
**ತ್ವರಿತಂ ತನೋತಿ ಇತಿ ಅನುನಿನಾಯ** = ಬೇಗನೆ ಮಾಡುವಳು, ಹೀಗೆಂದು ಸಮಾಧಾನಪಡಿಸಿದಳು.

**ತಾತ್ಪರ್ಯ—** ಆ ಕನ್ಯೆಯು ಮುಗ್ಧಾವಸ್ಥೆಗೆ ಯೋಗ್ಯವಾಗಿರುವ ಮಾತಿನಿಂದ ಸಮಾಧಾನಪಡಿಸಿದಳು. 'ಮಗುವೇ, ಅಳಬೇಡ. ಸುಂದರವಾದ ಮುಖವುಳ್ಳವನೇ, ಅಳಬೇಡ. ತಾಯಿಯು ಮಗನಿಗೆ ಬೇಕಾದ ವಸ್ತುವನ್ನು ಬೇಗನೆ ಕಂಡು ಹಿಡಿದು ಅವನನ್ನು ತೃಪ್ತಿಪಡಿಸುವಳು. ಪುನಃ ಪುನಃ ಅಳಬೇಡ' ಎಂದು ಹೇಳುತ್ತಾ ಸಮಾಧಾನಪಡಿಸಿದಳು.

**ವಿಗ್ರಹ—**

**ಪ್ರರುದಿತಂ—** ಪ್ರಕರ್ಷೇಣ ರುದಿತಃ ಪ್ರರೋದಿತಃ, ತಂ ಪ್ರರುದಿತಂ ।
**ಪರಿಸಾಂತ್ವಯಂತೀ—** ಪರಿಸಾಂತ್ವಯತಿ ಇತಿ ಪರಿಸಾಂತ್ವಯತೀ ।
**ಮುಗ್ಧಾಕ್ಷರೇಣ —** ಮುಗ್ಧಂ ಚ ತತ್ ಅಕ್ಷರಂ ಚ ಮುಗ್ಧಾಕ್ಷರಂ, ತೇನ ಮುಗ್ಧಾಕ್ಷರೇಣ ।
**ಸುಮುಖ—** ಶೋಭನಂ ಮುಖಂ ಯಸ್ಯ ಸಃ ಸುಮುಖಃ, ತಸ್ಯ ಸಂಬುದ್ಧಿಃ ಹೇ ಸುಮುಖ ।

**ಕ್ರಿಯಾಪದ—** **ಪ್ರರೋದೀಃ-** ಪ್ರ ಇತ್ಯುಪಸರ್ಗಪೂರ್ವಕಾತ್ ರುದಿರ್ ಅಶ್ರುವಿಮೋಚನೇ ಇತಿ ಅಶ್ರು-ವಿಮೋಚನಾರ್ಥಕಾತ್ ರುದಿರ್ ಧಾತೋಃ ಲುಙ್ ಮಧ್ಯಮಪುರುಷೇ ಏಕವಚನೇ 'ಪ್ರರೋದೀಃ' ಇತಿ ರೂಪಮ್ ।

ಅರೋದಿತ್ ಅರೋದಿಷ್ಟಾಂ ಅರೋದಿಷುಃ
ಅರೋದೀಃ ಅರೋದಿಷ್ಟಂ ಅರೋದಿಷ್ಟ
ಅರೋದಿಷಂ ಅರೋದಿಷ್ವ ಅರೋದಿಷ್ಮ ॥

**ತನೋತಿ-** ತನು ವಿಸ್ತಾರೇ ವಿಸ್ತಾರಾರ್ಥಕಾತ್ ತನು ಧಾತೋಃ ಲಟಿ ಪ್ರಥಮಪುರುಷೇ ಏಕವಚನೇ 'ತನೋತಿ' ಇತಿ ರೂಪಮ್ ।

ತನೋತಿ ತನುತಃ ತನ್ವಂತಿ, ತನೋಷಿ ತನುಥಃ ತನುಥ, ತನೋಮಿ, ತನುವಃ ತನ್ವಃ, ತನುಮಃ ತನ್ಮಃ ॥

**ಅನುನಿನಾಯ-** ಅನು ಇತ್ಯುಪಸರ್ಗಪೂರ್ವಕಾತ್ ಣೀಞ್ ಪ್ರಾಪಣೇ ಇತ್ಯಸ್ಮಾತ್ ಣೀಞ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಅನನುನಿನಾಯ' ಇತಿ ರೂಪಮ್ ।

ಅನುನಿನಾಯ ಅನುನಿನ್ಯತುಃ ಅನುನಿನ್ಯುಃ, ಅನುನಿನಯಿಥ ಅನುನಿನೇಥ, ಅನುನಿನ್ಯಥುಃ ಅನುನಿನ್ಯ, ಅನುನಿನಾಯ ಅನುನಿನಯ, ಅನುನಿನ್ಯಿವ ಅನುನಿನ್ಯಿಮ॥

★ ★ ★

### ಗಾಬರಿಯಾದ ಬಾಲೆ

**ರೋದೇ ಕ್ರಿಯಾಸಮಭಿಹಾರತ ಏವ ವೃತ್ತೇ**
**ಪೋತಸ್ಯ ಮಾತರಿ ಚಿರಾದಪಿ ನಾಗತಾಯಾಮ್ ।**
**ಜಗ್ರಾಹ ಬಾಲಮಥ ಚೈಕ್ಷತ ಮಾತೃಮಾರ್ಗಂ**
**ಸಾಽಪಿ ಕ್ರಿಯಾಸಮಭಿಹಾರತ ಏವ ಬಾಲಾ ॥ 37 ॥**

**ಪದಚ್ಛೇದ—** ರೋದೇ, ಕ್ರಿಯಾಸಮಭಿಹಾರತಃ, ಏವ, ವೃತ್ತೇ, ಪೋತಸ್ಯ, ಮಾತರಿ, ಚಿರಾತ್, ಅಪಿ, ನಾಗ-ತಾಯಾಂ, ಜಗ್ರಾಹ, ಬಾಲಂ, ಅಥ, ಚ, ಐಕ್ಷತ, ಮಾತೃಮಾರ್ಗಂ, ಸಾ, ಅಪಿ; ಕ್ರಿಯಾಸಮಭಿಹಾರತಃ, ಏವ, ಬಾಲಾ ।

**ಅನ್ವಯ—** ರೋದೇ ಕ್ರಿಯಾಸಮಭಿಹಾರತಃ ಏವ ವೃತ್ತೇ ಪೋತಸ್ಯ ಮಾತರಿ ಚಿರಾತ್ ಅಪಿ ನಾಗತಾಯಾಂ ಬಾಲಂ ಸಾ ಬಾಲಾ ಜಗ್ರಾಹ ಅಥ ಚ ಸಾ ಅಪಿ ಮಾತೃಮಾರ್ಗಂ ಕ್ರಿಯಾಸಮಭಿಹಾರತಃ ಏವ ಐಕ್ಷತ ।

**ಅನ್ವಯಾರ್ಥ—**

**ರೋದೇ** = ಅಳುವಿಕೆಯು
**ಕ್ರಿಯಾಸಮಭಿಹಾರತ ಏವ ವೃತ್ತೇ** = ಪುನಃ ಪುನಃ ನಡೆಯುತ್ತಿರಲಿಕ್ಕಾಗಿ
**ಪೋತಸ್ಯ ಮಾತರಿ** = ಮಗನ ತಾಯಿಯಾಗಿರುವ ವೇದವತೀದೇವಿಯು
**ಚಿರಾತ್ ಅಪಿ ನಾಗತಾಯಾಂ** = ಬಹುಕಾಲದ ವರೆಗೂ ಬಾರದಿರಲಿಕ್ಕಾಗಿ
**ಬಾಲಂ ಸಾ ಬಾಲಾ ಜಗ್ರಾಹ** = ಬಾಲ ವಾಸುದೇವನನ್ನು ಆ ಅಕ್ಕನು ಎತ್ತಿಕೊಂಡಳು.
**ಅಥ ಚ ಸಾ ಅಪಿ** = ಆ ಅಕ್ಕನೂ ಕೂಡ
**ಮಾತೃಮಾರ್ಗಂ** = ತಾಯಿಯ ಹಾದಿಯನ್ನೇ
**ಕ್ರಿಯಾಸಮಭಿಹಾರತ ಏವ ಐಕ್ಷತ** = ಪುನಃ ಪುನಃ ನಿರೀಕ್ಷಿಸಿದಳು.

**ತಾತ್ಪರ್ಯ—** ಅಳುವುದನ್ನು ಶ್ರೀವಾಸುದೇವನು ಬಿಡಲೇ ಇಲ್ಲ. ವಾಸುದೇವನ ಅಕ್ಕಳು ಪುನಃ ಪುನಃ ನಿರೀಕ್ಷಿಸಿದಳು. ತಾಯಿಯು ಎಷ್ಟು ಹೊತ್ತಾದರೂ ಬರಲೇ ಇಲ್ಲ. ಅಕ್ಕಳು ಮಗುವನ್ನು ಎತ್ತಿಕೊಂಡಳು. ತಾಯಿಯು ಹೋದ ದಾರಿಯನ್ನೇ ನೋಡುತ್ತಿದ್ದಳು.

**ವಿಗ್ರಹ—**

**ಕ್ರಿಯಾಸಮಭಿಹಾರತಃ—** ಕ್ರಿಯಾಸಮಭಿಹಾರಾತ್ ಕ್ರಿಯಾಸಮಭಿಹಾರತಃ ।

**ನಾಗತಾಯಾಂ—** ನ ಆಗತಾ ನಾಗತಾ, ತಸ್ಯಾಂ ನಾಗತಾಯಾಂ ।

**ಮಾತೃಮಾರ್ಗಂ—** ಮಾತುಃ ಮಾರ್ಗಃ, ಮಾತೃಮಾರ್ಗಃ, ತಂ ಮಾತೃಮಾರ್ಗಂ ।

**ಕ್ರಿಯಾಪದ—** ಜಗ್ರಾಹ- ಗ್ರಹ ಉಪಾದಾನೇ ಇತಿ ಉಪಾದಾನಾರ್ಥಕಾತ್ ಗ್ರಹಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಜಗ್ರಾಹ' ಇತಿ ರೂಪಮ್ ।

ಜಗ್ರಾಹ ಜಗೃಹತುಃ ಜಗೃಹುಃ, ಜಗೃಹಿಥ ಜಗೃಹಥುಃ ಜಗೃಹ, ಜಗ್ರಾಹ ಜಗ್ರಹ, ಜಗೃಹಿವ ಜಗೃಹಿಮ ॥

ಐಕ್ಷತ- ಈಕ್ಷ ದರ್ಶನೇ ಇತಿ ದರ್ಶನಾರ್ಥಕಾತ್ ಈಕ್ಷಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಐಕ್ಷತ' ಇತಿ ರೂಪಮ್ ।

ಐಕ್ಷತ ಐಕ್ಷೇತಾಂ ಐಕ್ಷಂತ, ಐಕ್ಷಥಾಃ ಐಕ್ಷೇಥಾಂ ಐಕ್ಷಧ್ವಂ, ಐಕ್ಷೇ ಐಕ್ಷಾವಹಿ ಐಕ್ಷಾಮಹಿ ॥

**ಅಲಂಕಾರ—** ಉಪಮಾಲಂಕಾರ.

★ ★ ★

ಎತ್ತಿಗಾಗಿ ಇಟ್ಟ ಹುರುಳಿ ತಿಂದ ಮಗು

**ಕರ್ತವ್ಯಮೌಢ್ಯಮಭಿಪದ್ಯ ನಿರೂಪ್ಯ ಸಾ ತಂ**
**ಪ್ರಾಭೋಜಯತ್ ಖಲು ಕುಲಿತ್ಥಕುಲಂ ಪ್ರಪಕ್ವಮ್ ।**
**ಶೀತಂ ಪಯೋಽಪಿ ಸತತಂ ಪರಿಪಾಯಯಂತೀ**
**ಯಸ್ಯೋಷ್ಣರೋಗಮತಿವೇಲಮಶಂಕತಾಂಬಾ ॥ 38 ॥**

**ಪದಚ್ಛೇದ—** ಕರ್ತವ್ಯಮೌಢ್ಯಂ, ಅಭಿಪದ್ಯ, ನಿರೂಪ್ಯ, ಸಾ, ತಂ, ಪ್ರಾಭೋಜಯತ್, ಖಲು, ಕುಲಿತ್ಥಕುಲಂ, ಪ್ರಪಕ್ವಂ, ಶೀತಂ, ಪಯಃ, ಅಪಿ, ಸತತಂ, ಪರಿಪಾಯಯಂತೀ, ಯಸ್ಯ, ಉಷ್ಣರೋಗಂ, ಅತಿವೇಲಂ, ಆಶಂಕತ, ಅಂಬಾ ।

**ಅನ್ವಯ—** ಸಾ ಕರ್ತವ್ಯಮೌಢ್ಯಂ ಅಭಿಪದ್ಯ ನಿರೂಪ್ಯ ತಂ ಪ್ರಪಕ್ವಂ ಕುಲಿತ್ಥಕುಲಂ ಪ್ರಾಭೋಜಯತ್ ಖಲು, ಅಂಬಾ ಶೀತಂ ಪಯಃ ಅಪಿ ಸತತಂ ಪರಿಪಾಯಯಂತೀ ಅತಿವೇಲಂ ಉಷ್ಣರೋಗಂ ಅಶಂಕತ ।

**ಅನ್ವಯಾರ್ಥ—**

**ಸಾ ಕರ್ತವ್ಯಮೌಢ್ಯಂ ಅಭಿಪದ್ಯ** = ಅವಳು ಮಾಡುವ ಕೆಲಸದಲ್ಲಿ ಮೂರ್ಖತನವನ್ನು ಹೊಂದಿದವಳಾಗಿ

**ನಿರೂಪ್ಯ** = ವಿಚಾರ ಮಾಡಿ

**ತಂ** = ಆ ಬಾಲಕನಿಗೆ

**ಪ್ರಪಕ್ವಂ ಕುಲಿತ್ಥಕುಲಂ** = ಚೆನ್ನಾಗಿ ಬೆಂದಿರುವ ಹುರುಳೀಕಾಳಿನ ಸಮೂಹವನ್ನು

**ಪ್ರಾಭೋಜಯತ್ ಖಲು** = ತಿನ್ನಿಸಿದಳಷ್ಟೇ.

**ಅಂಬಾ ಪಯಃ ಅಪಿ ಶೀತಂ** = ತಾಯಿಯು ಹಾಲನ್ನೂ ಸಹ ತಣ್ಣಗಾಗಿರುವುದನ್ನು

**ಸತತಂ ಪರಿಪಾಯಯಂತೀ** = ಯಾವಾಗಲೂ ಕುಡಿಸುತ್ತಿರುವವಳಾಗಿ

**ಅತಿವೇಲಂ** = ಮಿತಿ ಮೀರಿದ

**ಉಷ್ಣರೋಗಂ** = ಉಷ್ಣರೋಗವನ್ನು

**ಅಶಂಕತ** = ಶಂಕಿಸಿದಳು.

ತಾತ್ಪರ್ಯ— ಶ್ರೀವಾಸುದೇವನ ಅಕ್ಕನಿಗೆ ತನ್ನ ಕರ್ತವ್ಯದಲ್ಲಿ ದಡ್ಡತನವು ಬಂತು. ತಾಯಿಯು ಯಾವ ಮಗುವಿಗೆ ಉಷ್ಣವಾಗುವುದೆಂದು ತಿಳಿದು ಹಾಲನ್ನು ಕುಡಿಸುವಾಗಲೂ ಅದನ್ನು ತಣ್ಣಗೆ ಮಾಡಿ ಕುಡಿಸುತ್ತಿದ್ದಳೋ, ಅಂತಹ ಮಗುವಿಗೆ ಎತ್ತಿಗಾಗಿ ಬೇಯಿಸಿದ ಹುರುಳಿ ಕಾಳುಗಳನ್ನು ಚೆನ್ನಾಗಿ ತಿನಿಸಿದಳು.

ವಿಗ್ರಹ—

**ಕರ್ತವ್ಯಮೌಢ್ಯಂ**— ಕರ್ತುಂ ಯೋಗ್ಯಂ ಕರ್ತವ್ಯಂ, ಮೂಢಸ್ಯ ಭಾವಃ ಮೌಢ್ಯಂ, ಕರ್ತವ್ಯೇ ಮೌಢ್ಯಂ ಕರ್ತವ್ಯಮೌಢ್ಯಂ, ತತ್ ಕರ್ತವ್ಯಮೌಢ್ಯಂ ।

**ಕುಲಿತ್ಥಕುಲಂ**— ಕುಲಿತ್ಥಾನಾಂ ಕುಲಂ ಕುಲಿತ್ಥಕುಲಂ, ತತ್ ಕುಲಿತ್ಥಕುಲಂ ।

**ಪ್ರಪಕ್ವಂ**— ಪ್ರಕರ್ಷೇಣ ಪಕ್ವಂ ಪ್ರಪಕ್ವಂ ತತ್ ಪ್ರಪಕ್ವಂ ।

**ಪರಿಪಾಯಯಂತೀ**— ಪರಿಪಾಯಯತಿ ಇತಿ ಪರಿಪಾಯಯಂತೀ ।

**ಉಷ್ಣರೋಗಂ**— ಉಷ್ಣಮಯೋ ರೋಗಃ ಉಷ್ಣರೋಗಃ, ತಂ ಉಷ್ಣರೋಗಂ ।

**ಅತಿವೇಲಂ**— ವೇಲಾಂ ಅತಿಕ್ರಮ್ಯ ವರ್ತಮಾನಂ ಅತಿವೇಲಂ ।

ಕ್ರಿಯಾಪದ— ಪ್ರಾಭೋಜಯತ್- ಪ್ರ ಇತ್ಯುಪಸರ್ಗಪೂರ್ವಕಾತ್ ಭುಜಪಾಲನಾಭ್ಯವಹಾರಯೋಃ ಇತಿ ಪಾಲನಾಭ್ಯವಹಾರಾರ್ಥಕಾತ್ ಭುಜಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಪ್ರಾಭೋಜಯತ್' ಇತಿ ರೂಪಮ್ ।

| | | |
|---|---|---|
| ಪ್ರಾಭೋಜಯತ್ | ಪ್ರಾಭೋಜಯತಾಂ | ಪ್ರಾಭೋಜಯನ್, |
| ಪ್ರಾಭೋಜಯಃ | ಪ್ರಾಭೋಜಯತಂ | ಪ್ರಾಭೋಜಯತ, |
| ಪ್ರಾಭೋಜಯಂ | ಪ್ರಾಭೋಜಯಾವ | ಪ್ರಾಭೋಜಯಾಮ ॥ |

ಅಶಂಕತ- ಶಕಿ ಶಂಕಾಯಾಂ, ಇತಿ ಶಂಕಾರ್ಥಕಾತ್ ಶಕಧಾತೋಃ ಲಙ್ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ 'ಅಶಂಕತ' ಇತಿ ರೂಪಮ್ ।

ಅಶಂಕತ ಅಶಂಕೇತಾಂ ಅಶಂಕಂತ, ಅಶಂಕಥಾಃ ಅಶಂಕೇಥಾಂ ಅಶಂಕಧ್ವಂ, ಅಶಂಕೇ ಅಶಂಕಾವಹಿ ಅಶಂಕಾಮಹಿ ॥

★ ★ ★

ವಿಪ್ರಪತ್ನಿ ಕಂಡ ಆಶ್ಚರ್ಯ

**ನೂನಂ ಪಿಪಾಸುರತಿರೋದಿತಿ ಹಂತ ಬಾಲೋ**
**ಧಿಙ್ ಮಾಂ ದಯಾವಿರಹಿತಾಂ ಪರಕೃತ್ಯಸಕ್ತಾಮ್ ।**
**ಇತ್ಯಾಕುಲಾ ಗೃಹಮುಪೇತ್ಯ ತದಾ ಪ್ರಸನ್ನಂ**
**ಪೂರ್ಣೋದರಂ ಸುತಮವೈಕ್ಷತ ವಿಪ್ರಪತ್ನೀ ॥ 39 ॥**

ಪದಚ್ಛೇದ— ನೂನಂ, ಪಿಪಾಸುಃ, ಅತಿರೋದಿತಿ, ಹಂತ, ಬಾಲಃ, ಧಿಕ್, ಮಾಂ, ದಯಾವಿರಹಿತಾಂ, ಪರ-ಕೃತ್ಯಸಕ್ತಾಂ, ಇತಿ, ಆಕುಲಾ, ಗೃಹಂ, ಉಪೇತ್ಯ, ತದಾ, ಪ್ರಸನ್ನಂ, ಪೂರ್ಣೋದರಂ, ಸುತಂ, ಅವೈಕ್ಷತ, ವಿಪ್ರಪತ್ನೀ ।

**ಅನ್ವಯ—** ತದಾ ಬಾಲಃ ನೂನಂ ಪಿಪಾಸುಃ ಅತಿರೋದಿತಿ, ದಯಾವಿರಹಿತಾಂ ಪರಕೃತ್ಯಸಕ್ತಾಂ ಮಾಂ ಧಿಕ್, ಇತಿ ಆಕುಲಾ ವಿಪ್ರಪತ್ನೀ ಗೃಹಂ ಉಪೇತ್ಯ ಪ್ರಸನ್ನಂ ಪೂರ್ಣೋದರಂ ಸುತಂ ಅವೈಕ್ಷತ ।

**ಅನ್ವಯಾರ್ಥ—**

**ತದಾ** = ಆ ಸಮಯದಲ್ಲಿ

**ಬಾಲಃ ನೂನಂ ಪಿಪಾಸುಃ** = ನನ್ನ ಬಾಲಕನು ನಿಶ್ಚಯವಾಗಿಯೂ ನೀರಡಿಕೆಯಿಂದ ಯುಕ್ತನಾಗಿರುವನು,

**ಅತಿರೋದಿತಿ** = ತುಂಬಾ ಅಳುತ್ತಿರುವನು,

**ದಯಾವಿರಹಿತಾಂ ಪರಕೃತ್ಯಸಕ್ತಾಂ ಮಾಂ ಧಿಕ್** = ಮಗುವಿನಲ್ಲಿ ಕೃಪೆಯಿಲ್ಲದ, ಬೇರೆ ಜನರುಗಳ ಕೆಲಸಗಳಲ್ಲಿಯೇ ಆಸಕ್ತಳಾಗಿರುವ ನನ್ನನ್ನು ಧಿಕ್ಕರಿಸುವೆನು,

**ಇತಿ ಆಕುಲಾ ವಿಪ್ರಪತ್ನೀ** = ಹೀಗೆಂದು ಚಿಂತಾಯುಕ್ತಳಾದ ಮಧ್ಯಗೇಹಭಟ್ಟರ ಹೆಂಡತಿಯು

**ಗೃಹಂ ಉಪೇತ್ಯ** = ಮನೆಯನ್ನು ಕುರಿತು ಬಂದವಳಾಗಿ

**ಪ್ರಸನ್ನಂ ಪೂರ್ಣೋದರಂ ಸುತಂ** = ನಗುಮುಖವುಳ್ಳ ತುಂಬಿದ ಹೊಟ್ಟೆಯುಳ್ಳ ಮಗನನ್ನು

**ಅವೈಕ್ಷತ** = ನೋಡಿದನು.

**ತಾತ್ಪರ್ಯ—** ಶ್ರೀವಾಸುದೇವನ ಅಕ್ಕಳಲ್ಲಿ ಬಿಡಲ್ಪಟ್ಟ ವಾಸುದೇವನು ಬಹಳ ಸಮಯವಾದರೂ ಶ್ರೀವಾಸುದೇವಾ-ಚಾರ್ಯರನ್ನು ಮರೆತಳು. ಈ ಬಾಲಕನು ಖಂಡಿತವಾಗಿಯೂ ನೀರಡಿಕೆಯಿಂದ ಯುಕ್ತನಾಗಿರುವನು. ಆದ್ದರಿಂದಲೇ ಬಹಳವಾಗಿ ಅಳುತ್ತಿರುವನು. ಮಗುವಿನಲ್ಲಿ ಕೃಪೆಯಿಲ್ಲದ ನಾನು ಇನ್ನೊಬ್ಬರ ಕೆಲಸದಲ್ಲಿಯೇ ಆಸಕ್ತಳಾಗಿರುವೆನು. ನನಗೆ ಧಿಕ್ಕಾರವಿರಲಿ ಎಂದು ಹೇಳುತ್ತಾ ಮನೆಗೆ ಬಂದಳು. ಮಗನನ್ನು ನೋಡಿದಳು. ಆಗ ಹೊಟ್ಟೆ ತುಂಬಿ ಸಂತೋಷದಿಂದ ಮಗನ ಈ ಸ್ಥಿತಿಯನ್ನು ತಿಳಿದ ತಾಯಿಯು ಆಶ್ಚರ್ಯಚಕಿತಳಾದಳು.

**ವಿಗ್ರಹ—**

**ಅತಿರೋದಿತಿ—** ಅತ್ಯಂತಂ ರೋದಿತಿ ಅತಿರೋದಿತಿ ।

**ದಯಾವಿರಹಿತಾಂ—** ದಯಯಾ ವಿರಹಿತಾ ದಯಾವಿರಹಿತಾ, ತಾಂ ದಯಾವಿರಹಿತಾಂ ।

**ಪರಕೃತ್ಯಸಕ್ತಾಂ—** ಪರೇಷಾಂ ಕಾರ್ಯೇ ಸಕ್ತಾ ಪರಕೃತ್ಯಸಕ್ತಾ, ತಾಂ ಪರಕೃತ್ಯಸಕ್ತಾಂ ।

**ಪೂರ್ಣೋದರಂ—** ಪೂರ್ಣಂ ಉದರಂ ಯಸ್ಯ ಸಃ ಪೂರ್ಣೋದರಃ, ತಂ ಪೂರ್ಣೋದರಂ ।

**ವಿಪ್ರಪತ್ನೀ—** ವಿಪ್ರಸ್ಯ ಪತ್ನೀ ವಿಪ್ರಪತ್ನೀ ।

**ಕ್ರಿಯಾಪದ— ಅವೈಕ್ಷತ-** ಅವ ಇತ್ಯುಪಸರ್ಗಪೂರ್ವಕಾತ್ ಈಕ್ಷ ದರ್ಶನೇ ಇತಿ ದರ್ಶನಾರ್ಥಕಾತ್ ಲಙ್ ಪ್ರಥಮಪುರುಷೇ ಏಕವಚನೇ 'ಅವೈಕ್ಷತ' ಇತಿ ರೂಪಮ್ ।

ಅವೈಕ್ಷತ ಅವೈಕ್ಷೇತಾಂ ಅವೈಕ್ಷಂತ, ಅವೈಕ್ಷಥಾಃ ಅವೈಕ್ಷೇಥಾಂ ಅವೈಕ್ಷಧ್ವಂ, ಅವೈಕ್ಷೇ ಅವೈಕ್ಷಾವಹಿ ಅವೈಕ್ಷಾಮಹಿ ॥

**ಅತಿರೋದಿತಿ-** ರುದಿರ್ ಅಶ್ರು ವಿಮೋಚನೇ ಇತಿ ಅಶ್ರುವಿಮೋಚನಾರ್ಥಕಾತ್ ರುದಿರ್ ಧಾತೋಃ ಲಟ್ ಪ್ರಥಮಪುರುಷೇ ಏಕವಚನೇ ಅತಿರೋದಿತಿ ಇತಿ ರೂಪಂ ।

| | | |
|---|---|---|
| ರೋದಿತಿ | ರುದಿತಃ | ರುದಂತಿ |
| ರೋದಿಷಿ | ರುದಿಥಃ | ರುದಿಥ |
| ರೋದಿಮಿ | ರುದಿವಃ | ರುದಿಮಃ |

★ ★ ★

ವಿಪ್ರಪತ್ನಿಯ ಪರಿತಾಪ

**ಪೃಷ್ಟ್ವಾಽವಗಮ್ಯ ಸಕಲಂ ಚ ತತಃ ಪ್ರವೃತ್ತಂ**
**ಯೂನಾಂ ಚ ದುಃಸಹಮಿದಂ ಶಿಶುನೋಪಭುಕ್ತಮ್ ।**
**ಇತ್ಥಂ ವಿಚಿಂತ್ಯ ತನಯಾಂ ಬಹು ಭರ್ತ್ಸಯಂತ್ಯಾ**
**ಭೀತಂ ತಯಾಽನುಕುಪಿತಂ ಮನಸಾಽನುತಪ್ತಮ್ ॥ 40 ॥**

ಪದಚ್ಛೇದ— ಪೃಷ್ಟ್ವಾ, ಅವಗಮ್ಯ, ಸಕಲಂ, ಚ, ತತಃ, ಪ್ರವೃತ್ತಂ, ಯೂನಾಂ, ಚ, ದುಃಸಹಂ, ಇದಂ, ಶಿಶುನಾ, ಉಪಭುಕ್ತಂ, ಇತ್ಥಂ, ವಿಚಿಂತ್ಯ, ತನಯಾಂ, ಬಹು, ಭರ್ತ್ಸಯಂತ್ಯಾ, ಭೀತಂ, ತಯಾ, ಅನುಕುಪಿತಂ, ಮನಸಾ, ಅನುತಪ್ತಂ ।

ಅನ್ವಯ— ತತಃ ಸಕಲಂ ಪೃಷ್ಟ್ವಾ ಯೂನಾಂ ಚ ದುಃಸಹಂ ಇದಂ ಶಿಶುನಾ ಉಪಭುಕ್ತಂ ಅವಗಮ್ಯ ವಿಚಿಂತ್ಯ ತನಯಾಂ ಬಹು ಭರ್ತ್ಸಯಂತ್ಯಾ ತಯಾ ಅನುಕುಪಿತಂ ಮನಸಾ ಅನುತಪ್ತಂ ಚ ।

ಅನ್ವಯಾರ್ಥ—

**ತತಃ ಸಕಲಂ ಪೃಷ್ಟ್ವಾ** = ಅನಂತರದಲ್ಲಿ, ಎಲ್ಲಾ ವಿಷಯವನ್ನು ಕೇಳಿ

**ಯೂನಾಂ ಚ ದುಃಸಹಂ ಇದಂ** = ತರುಣರಿಗೂ ಸಹ ಸಹಿಸಲಾಗದಿರುವ ಈ ಪಕ್ವವಾದ ಹುರುಳೀಕಾಳುಗಳು

**ಶಿಶುನಾ ಉಪಭುಕ್ತಂ ಅವಗಮ್ಯ** = ವಾಸುದೇವ ಎಂಬ ಬಾಲಕನಿಂದ ತಿನ್ನಲ್ಪಟ್ಟಿದ್ದನ್ನು ತಿಳಿದು

**ವಿಚಿಂತ್ಯ** = ನಾನಾವಿಧಗಳಾದ ಯೋಚನೆಗಳಿಂದ ಯುಕ್ತಳಾಗಿ

**ತನಯಾಂ ಬಹು ಭರ್ತ್ಸಯಂತ್ಯಾ** = ಮಗಳನ್ನು ಅಧಿಕವಾಗಿ ನಿಂದಿಸುತ್ತಿರುವ ತಾಯಿಯಿಂದ ಹೆದರಲ್ಪಟ್ಟಿತು.

**ತಯಾ ಅನುಕುಪಿತಂ** = ಅದೇ ತಾಯಿಯಿಂದ ಹೆಚ್ಚಾಗಿ ಕೋಪವು ಮಾಡಲ್ಪಟ್ಟಿತು.

**ಮನಸಾ ಅನುತಪ್ತಂ ಚ** = ಮನಸ್ಸಿನಿಂದ ಪರಿತಾಪವು ಮಾಡಲ್ಪಟ್ಟಿತು.

ತಾತ್ಪರ್ಯ— ಅನಂತರದಲ್ಲಿ ಮನೆಗೆ ಬಂದ ಕೂಡಲೆ ನಡೆದ ವಿಷಯಗಳನ್ನೆಲ್ಲವನ್ನೂ ತಾಯಿಯು ಕೇಳಿ ತಿಳಿದುಕೊಂಡಳು. ತರುಣರಿಗೂ ಹುರುಳೀಕಾಳುಗಳನ್ನು ತಿಂದರೆ ಜೀರ್ಣವಾಗಲಾರದು. ಅಂಥಹ ಹುರುಳೀಕಾಳುಗಳನ್ನು ಮಗು ತಿಂದಿದೆ. ಎಲ್ಲಾ ವಿಷಯಗಳನ್ನೂ ತಿಳಿದುಕೊಂಡಳು. ಹೆದರಿದಳು. ಕೋಪಿಸಿಕೊಂಡವಳಾಗಿ ಮನಸ್ಸಿನಿಂದ ಪರಿತಾಪವನ್ನು ತೋರಿಸಿಕೊಂಡಳು.

ವಿಗ್ರಹ—

**ಅವಗಮ್ಯ**— ಅವಗತ್ಯ ಅವಗಮ್ಯ ।

**ಪ್ರವೃತ್ತಂ**— ಪ್ರಕರ್ಷೇಣ ವೃತ್ತಂ ಪ್ರವೃತ್ತಂ ।

**ದುಃಸಹಂ**— ದುಃಖೇನ ಸೋಢುಂ ಶಕ್ಯಂ ದುಃಸಹಂ ।

**ಭರ್ತ್ಸಯಂತ್ಯಾ**— ಭರ್ತ್ಸಯತಿ ಇತಿ ಭರ್ತ್ಸಯಂತೀ, ತಯಾ ಭರ್ತ್ಸಯಂತ್ಯಾ ।

**ಅನುಕುಪಿತಂ**— ಅನುಸೃತ್ಯ ಕುಪಿತಂ ಅನುಕುಪಿತಂ ।

★ ★ ★

ವಿಷ ಜೀರ್ಣಿಸಿಕೊಂಡ ಪ್ರಾಣನಿಗೆ ಹುರುಳಿ ಯಾವ ಲೆಕ್ಕ?

**ಆರೋಗ್ಯಶಾಲಿನಿ ತದಾಽಪಿ ಪುರೇವ ಪುತ್ರೇ**
**ವಿಸ್ಮೇರತಾಮುಪಜಗಾಮ ಜನನ್ಯಮುಷ್ಯ ।**

**ಯಸ್ಯ ತ್ರಿಲೋಕಜನನೀ ಜನನೀ ವಿಷೇऽಪಿ**
**ಪೀತೇ ನ ವಿಸ್ಮಯಮವಾಪ ಸಮಸ್ತಶಕ್ತೇಃ ॥ 41 ॥**

**ಪದಚ್ಛೇದ—** ಆರೋಗ್ಯಶಾಲಿನಿ, ತದಾ, ಅಪಿ, ಪುರಾ, ಇವ, ಪುತ್ರೇ, ವಿಸ್ಮೇರತಾಂ ಉಪಜಗಾಮ, ಜನನೀ, ಅಮುಷ್ಯ, ಯಸ್ಯ ತ್ರಿಲೋಕಜನನೀ, ಜನನೀ, ವಿಷೇ, ಅಪಿ, ಪೀತೇ, ನ, ವಿಸ್ಮಯಂ, ಅವಾಪ, ಸಮಸ್ತಶಕ್ತೇಃ ।

**ಅನ್ವಯ—** ತದಾ ಅಪಿ ಪುತ್ರೇ ಪುರಾ ಇವ ಆರೋಗ್ಯಶಾಲಿನಿ ಸತಿ ಅಮುಷ್ಯ ಜನನೀ ವಿಸ್ಮೇರತಾಂ ಉಪಜಗಾಮ । ಸಮಸ್ತಶಕ್ತೇಃ ಯಸ್ಯ ತ್ರಿಲೋಕಜನನೀ ಜನನೀ ವಿಷೇ ಪೀತೇ ಅಪಿ ವಿಸ್ಮಯಂ ನ ಅವಾಪ ।

**ಅನ್ವಯಾರ್ಥ—**

**ತದಾ ಅಪಿ** = ಆಗಲೂ ಕೂಡ
**ಪುತ್ರೇ** = ಮಗನು
**ಆರೋಗ್ಯಶಾಲಿನಿ ಸತಿ** = ಆರೋಗ್ಯದಿಂದ ಯುಕ್ತನಾಗಿರಲು
**ಅಮುಷ್ಯ** = ಈ ವಾಸುದೇವನ
**ಜನನೀ** = ತಾಯಿಯಾಗಿರುವ ವೇದವತಿಯು
**ವಿಸ್ಮೇರತಾಂ** = ಆಶ್ಚರ್ಯವನ್ನು
**ಉಪಜಗಾಮ** = ಹೊಂದಿದಳು.
**ಸಮಸ್ತಶಕ್ತೇಃ** = ಸಮಸ್ತ ಕಾರ್ಯಗಳಲ್ಲಿಯೂ ಶಕ್ತಿಯುಳ್ಳ ಮುಖ್ಯಪ್ರಾಣದೇವನ
**ತ್ರಿಲೋಕಜನನೀ** = ಮೂರು ಲೋಕಗಳ ತಾಯಿಯಾಗಿರುವ
**ಜನನೀ** = ತಾಯಿಯಾದ ಲಕ್ಷ್ಮೀದೇವಿಯು
**ವಿಷೇ** = ವಿಷವು
**ಪೀತೇ ಅಪಿ** = ಕುಡಿಯಲ್ಪಟ್ಟರೂ
**ವಿಸ್ಮೇರತಾಂ** = ಆಶ್ಚರ್ಯವನ್ನು
**ನ ಅವಾಪ** = ಪಡೆಯಲಿಲ್ಲ.

**ತಾತ್ಪರ್ಯ—** ಹಿಂದೆ ದೇವದಾನವರು ಒಟ್ಟಿಗೆ ಸೇರಿ ಮಂದರ ಪರ್ವತದಿಂದ ಕ್ಷೀರಮುದ್ರವನ್ನು ಕಡೆದಾಗ ವಿಷವು ಹುಟ್ಟಿತು. ಆಗ ಮುಖ್ಯಪ್ರಾಣದೇವರು ಅದನ್ನು ಕುಡಿದು ಜೀರ್ಣಸಿಕೊಂಡರು. ಹೀಗೆ ಮಗನಾದ ವಾಯುದೇವರು ವಿಷವನ್ನು ಕುಡಿದರೂ ಅವರು ಎಲ್ಲ ವಿಷಯಗಳಲ್ಲಿಯೂ ಸಮರ್ಥರಾದ್ದರಿಂದ ತಾಯಿ ಮಹಾಲಕ್ಷ್ಮೀದೇವಿಯು ಆಗ ಆಶ್ಚರ್ಯಗೊಳ್ಳಲಿಲ್ಲ. ಈಗ ಅಂತಹ ಮುಖ್ಯಪ್ರಾಣದೇವರ ಅವತಾರವಾದ ಈ ಮಗುವು ಹುರುಳಿಕಾಳುಗಳನ್ನು ತಿಂದರೂ ಆರೋಗ್ಯವಾಗಿರುವುದನ್ನು ಕಂಡು ತಾಯಿಯು ಆಶ್ಚರ್ಯಗೊಂಡಳು.

**ವಿಗ್ರಹ—**

**ಆರೋಗ್ಯಶಾಲಿನಿ—** ಆರೋಗ್ಯೇಣ ಶಾಲತಿ ಇತಿ ಆರೋಗ್ಯಶಾಲೀ, ತಸ್ಮಿನ್ ಆರೋಗ್ಯಶಾಲಿನಿ ।
**ವಿಸ್ಮೇರತಾಂ—** ವಿಸ್ಮೇರಸ್ಯ ಭಾವಃ ವಿಸ್ಮೇರತಾ, ತಾಂ ವಿಸ್ಮೇರತಾಂ ।
ಜನನೀ— ಜನಯಿತ್ರೀ ಜನನೀ ।
**ತ್ರಿಲೋಕಜನನೀ—** ತ್ರಯಾಣಾಂ ಲೋಕಾನಾಂ ಸಮಾಹಾರಃ ತ್ರಿಲೋಕಃ, ತ್ರಿಲೋಕಸ್ಯ ಜನನೀ ತ್ರಿಲೋಕ-ಜನನೀ ।

**ಪೀತೇ**— ಪೀತಂ ಪಾನಂ ಕೃತಂ ಪೀತಂ, ತಸ್ಮಿನ್ ಪೀತೇ ।

**ಸಮಸ್ತಶಕ್ತೇಃ**— ಸಮಸ್ತಾ ಶಕ್ತಿಃ ಯಸ್ಯ ಸಃ ಸಮಸ್ತಶಕ್ತೀ, ತಸ್ಯ ಸಮಸ್ತಶಕ್ತೇಃ ।

**ಕ್ರಿಯಾಪದ**— ಉಪಜಗಾಮ- ಉಪ ಇತ್ಯುಪಸರ್ಗಪೂರ್ವಕಾತ್ ಗಮ್ಲೃಗತೌ ಇತ್ಯಸ್ಯ ಗತ್ಯರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ 'ಉಪಜಗಾಮ' ಇತಿ ರೂಪಮ್ ।

| | | |
|---|---|---|
| ಉಪಜಗಾಮ | ಉಪಜಗ್ಮತುಃ | ಉಪಜಗ್ಮುಃ |
| ಉಪಜಗಮಿಥ, ಜಗಂಥ | ಉಪಜಗ್ಮಥುಃ | ಉಪಜಗ್ಮ, |
| ಉಪಜಗಾಮ, ಉಪಜಗಮ | ಉಪಜಗ್ಮಿವ | ಉಪಜಗ್ಮಿಮ ॥ |

**ಅವಾಪ**- ಅಪ ಇತ್ಯುಪಸರ್ಗಪೂರ್ವಕಾತ್ ಆಪ್ಲೃ ವ್ಯಾಪ್ತೌ ವ್ಯಾಪ್ತ್ಯರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ 'ಅವಾಪ' ಇತಿ ರೂಪಮ್ ।

ಅವಾಪ ಅವಾಪತುಃ ಅವಾಪುಃ, ಅವಾಪಿಥ ಅವಾಪಥುಃ ಅವಾಪ, ಅವಾಪ ಅವಾಪಿವ ಅವಾಪಿಮ ॥

★ ★ ★

ಜನನಿ, ಜನತೆಯಿಂದ ಲಾಲನೆ

**ಸ್ತನ್ಯಂ ಮುಹುಃ ಕಿಲ ದದೌ ಜನನೀ ಗೃಹೀತ್ವಾ**
**ಕ್ಷೇಮಾಯ ತಂ ಕಿಲ ದಧಜ್ಜನಕೋ ಜಜಾಪ ।**
**ಅನ್ಯೋ ಜನೋಽಪಿ ಕಿಲ ಲಾಲಯತಿ ಸ್ಮ ಕಿಂತು**
**ಸರ್ವೋಽಪಿ ತನ್ಮುಖಸುಹಾಸರಸಾಯನೋತ್ಕಃ ॥ 42 ॥**

**ಪದಚ್ಛೇದ**— ಸ್ತನ್ಯಂ, ಮುಹುಃ, ಕಿಲ, ದದೌ, ಜನನೀ, ಗೃಹೀತ್ವಾ, ಕ್ಷೇಮಾಯ, ತಂ, ಕಿಲ, ದಧತ್, ಜನಕಃ, ಜಜಾಪ, ಅನ್ಯಃ, ಜನಃ, ಅಪಿ, ಕಿಲ, ಲಾಲಯತಿ, ಸ್ಮ, ಕಿಂತು, ಸರ್ವಃ, ಅಪಿ, ತನ್ಮುಖಸುಹಾಸರಸಾಯನೋತ್ಕಃ ।

**ಅನ್ವಯ**— ಜನನೀ ತಂ ಗೃಹೀತ್ವಾ ಮುಹುಃ ಸ್ತನ್ಯಂ ದದೌ ಕಿಲ, ಜನಕಃ ತಂ ದಧತ್ ಕ್ಷೇಮಾಯ ಜಜಾಪ ಕಿಲ, ಅನ್ಯಃ ಜನಃ ಅಪಿ ಲಾಲಯತಿ ಸ್ಮ ಕಿಲ, ಕಿಂತು ಸರ್ವಃ ಅಪಿ ತನ್ಮುಖಸುಹಾಸರಸಾಯನೋತ್ಕಃ ।

**ಅನ್ವಯಾರ್ಥ**—

**ಜನನೀ** = ತಾಯಿಯಾದ ವೇದವತೀದೇವಿಯು
**ತಂ ಗೃಹೀತ್ವಾ** = ಆ ಮಗುವನ್ನು ಎತ್ತಿಕೊಂಡು
**ಮುಹುಃ** = ಪುನಃ ಪುನಃ
**ಸ್ತನ್ಯಂ ದದೌ ಕಿಲ** = ಸ್ತನ್ಯಪಾನ ಮಾಡಿಸಿದಳು. ಇದು ಅತ್ಯಂತ ಪ್ರಸಿದ್ಧ.
**ಜನಕಃ** = ತಂದೆಯಾದ ಮಧ್ಯಗೇಹಭಟ್ಟರು
**ತಂ ದಧತ್** = ಆ ಮಗುವನ್ನು ಎತ್ತಿಕೊಂಡವರಾಗಿ
**ಕ್ಷೇಮಾಯ ಜಜಾಪ ಕಿಲ** = ಮಂಗಳಕ್ಕಾಗಿ ಜಪಿಸಿದರಲ್ಲವೇ,
**ಅನ್ಯಃ ಜನಃ ಅಪಿ** = ಬೇರೆ ಜನರೂ ಕೂಡ
**ಲಾಲಯತಿ ಸ್ಮ ಕಿಲ** = ಆ ವಾಸುದೇವನನ್ನು ಲಾಲಿಸುತ್ತಿದ್ದರಲ್ಲವೇ,
**ಕಿಂತು ಸರ್ವಃ ಅಪಿ** = ಆದರೆ ಎಲ್ಲರೂ

**ತನ್ಮುಖಸುಹಾಸರಸಾಯನೋತ್ಕಃ** = ಆ ವಾಸುದೇವನ ಮುಗುಳುನಗೆ ಎಂಬ ರಸಾಯನವನ್ನು ತಲೆ ಎತ್ತಿ ನೋಡುತ್ತಿರುವರು.

**ತಾತ್ಪರ್ಯ—** ತಾಯಿಯಾದ ವೇದವತಿಯು ಸ್ತನಗಳಿಂದ ಸುರಿಯುತ್ತಿರುವ ಹಾಲನ್ನು ಮೇಲಿಂದ ಮೇಲೆ ಕುಡಿಸಿ-ದಳು. ಕ್ಷೇಮಕ್ಕಾಗಿ ವಾಸುದೇವನನ್ನು ಎತ್ತಿಕೊಂಡವರಾಗಿ ಮಧ್ಯಗೇಹಭಟ್ಟರು ಜಪಿಸಿದರು. ಬೇರೆ ಜನರು ಕೂಡ ವಾಸು-ದೇವನನ್ನು ಲಾಲಿಸಿದರಲ್ಲವೇ ? ಸರ್ವರೂ ಸಹ ವಾಸುದೇವನ ಮಂದಹಾಸ ಎಂಬ ರಸಾಯನದಲ್ಲಿ ಉತ್ಕಂಠಿತರಾದರು.

**ವಿಗ್ರಹ—**

**ತನ್ಮುಖಸುಹಾಸರಸಾಯನೋತ್ಕಃ—** ತಸ್ಯ ಮುಖಂ ತನ್ಮುಖಂ, ತನ್ಮುಖಸ್ಯ ಸುಹಾಸಃ ತನ್ಮುಖಸುಹಾಸಃ, ತನ್ಮುಖಸುಹಾಸ ಏವ ರಸಾಯನಂ ತನ್ಮುಖಸುಹಾಸರಸಾಯನಂ, ತನ್ಮುಖಸುಹಾಸರಸಾಯನೇ ಉತ್ಕಃ ತನ್ಮುಖಸುಹಾಸರಸಾಯನೋತ್ಕಃ ।

**ಕ್ರಿಯಾಪದ— ದದೌ-** ಡುದಾಞ್ ದಾನೇ ದಾನಾರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ 'ದದೌ' ಇತಿ ರೂಪಮ್ ।

ದದೌ ದದತುಃ ದದುಃ, ದದಿಥ ದದಾಥ, ದದಥುಃ ದದ, ದದೌ ದದಿವ ದದಿಮ ॥

**ಜಜಾಪ** - ಜಲ್ಪ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತಾಯಾಂ ವಾಗರ್ಥಕಾತ್ ಜಲ್ಪ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಜಜಾಪ' ಇತಿ ರೂಪಮ್ ।

ಜಜಾಪ ಜೇಪತುಃ ಜೇಪುಃ, ಜೇಪಿಥ, ಜೇಪಥುಃ ಜೇಪ, ಜಜಾಪ ಜಜಪ, ಜೇಪಿವ ಜೇಪಿಮ ॥

**ಲಾಲಯತಃ-** ಲಲ ಈಪ್ಸಾಯಾಂ ಲಟಿ ಪ್ರಥಮಪುರುಷೇ ಏಕವಚನೇ 'ಲಾಲಯತಿ' ಇತಿ ರೂಪಮ್ ।

ಲಾಲಯತಿ ಲಾಲಯತಃ ಲಾಲಯಂತಿ, ಲಾಲಯಸಿ ಲಾಲಯಥಃ ಲಾಲಯಥ, ಲಾಲಯಾಮಿ ಲಾಲಯಾವಃ ಲಾಲಯಾಮಃ।

★ ★ ★

ಮಾತಿನ ಪತಿಯ ಮೊದಲಮಾತು

**ದೇವಾದಿಸದ್ಭಿರನುಪಾಲಿತಯಾಽಽದರೇಣ**
**ದೇವ್ಯಾಽಽತ್ಮನೇವ ವಿಲಸತ್ಪದಯಾ ನಿತಾಂತಮ್ ।**
**ಅವ್ಯಕ್ತಯಾ ಪ್ರಥಮತೋ ವದನೇಽಸ್ಯ ವಾಣ್ಯಾ**
**ಶಾಲೀನಯೇವ ಭುವನಾರ್ಚಿತಯಾ ವಿಜಹ್ರೇ ॥ 43 ॥**

**ಪದಚ್ಛೇದ—** ದೇವಾದಿಸದ್ಭಿಃ, ಅನುಪಾಲಿತಯಾ, ಆದರೇಣ, ದೇವ್ಯಾ, ಆತ್ಮನಾ, ಇವ, ವಿಲಸತ್ಪದಯಾ, ನಿತಾಂತಂ, ಅವ್ಯಕ್ತಯಾ, ಪ್ರಥಮತಃ, ವದನೇ, ಅಸ್ಯ, ವಾಣ್ಯಾ, ಶಾಲೀನಯಾ, ಇವ, ಭುವನಾರ್ಚಿತಯಾ, ವಿಜಹ್ರೇ ।

**ಅನ್ವಯ—** ಅಸ್ಯ ವದನೇ ದೇವ್ಯಾ ವಾಣ್ಯಾ ನಿತಾಂತಂ ವಿಜಹ್ರೇ, ದೇವಾದಿಸದ್ಭಿಃ ಆದರೇಣ ಅನುಪಾಲಿತಯಾ ಆತ್ಮನಾ ಇವ ವಿಲಸತ್ಪದಯಾ ಪ್ರಥಮತಃ ಅವ್ಯಕ್ತಯಾ ಭುವನಾರ್ಚಿತಯಾ ಶಾಲೀನಯಾ ಇವ ವಿಜಹ್ರೇ ।

**ಅನ್ವಯಾರ್ಥ—**

**ಅಸ್ಯ ವದನೇ** = ಈ ವಾಸುದೇವಾಚಾರ್ಯರ ಮುಖದಲ್ಲಿ

**ದೇವ್ಯಾ ವಾಣ್ಯಾ** = ಸರಸ್ವತೀ ದೇವಿಯಿಂದ

**ನಿತಾಂತಂ ವಿಜಹ್ರೇ** = ಬಹಳವಾಗಿ ವಿಹರಿಸೋಣವಾಯಿತು

**ದೇವಾದಿಸದ್ಭಿಃ** = ದೇವತೆಗಳು ಮುಂತಾದ ಸಜ್ಜನರುಗಳಿಂದ

**ಆದರೇಣ ಅನುಪಾಲಿತಯಾ ಆತ್ಮನಾ ಇವ** = ಭಕ್ತಿಯಿಂದ ಅಂದರೆ ಈ ಬಾಲನು ಯಾವಾಗ ಮಾತುಗಳುಳ್ಳವನಾಗುವನು ಎಂದು ನಿರೀಕ್ಷಿಸಲ್ಪಟ್ಟ

**ವಿಲಸತ್ಪದಯಾ** = ಪ್ರಕಾಶಿಸುವ ಶಬ್ದಗಳುಳ್ಳ

**ಪ್ರಥಮತಃ ಅವ್ಯಕ್ತಯಾ** = ಮೊದಲು ಸ್ಪಷ್ಟವಾದ ಅಕ್ಷರಗಳಿಲ್ಲದಿರುವ

**ಭುವನಾರ್ಚಿತಯಾ** = ಲೋಕಗಳಲ್ಲಿ ಎಲ್ಲೆಡೆಗಳಲ್ಲಿಯೂ ಸರ್ವರಿಂದಲೂ ಪೂಜ್ಯಳಾದ ವಾಗ್ದೇವಿಯು

**ಶಾಲೀನಯಾ ಇವ** = ದಿಟ್ಟತನವಿಲ್ಲದಂತಿರುವ

**ವಿಜಹ್ರೇ** = ಶೋಭಿಸಿದಳು.

ಇದು ಹೇಗೆ ಇತ್ತು ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವೆವು. ಬ್ರಹ್ಮಸಭೆಯಲ್ಲಿ ಬ್ರಹ್ಮದೇವನ ಪತ್ನಿಯಾದ ಸರಸ್ವತೀದೇವಿಯು ವಾದಕ್ಕೆ ಬರುವಳು ಎಂಬ ನಿರೀಕ್ಷೆ ಇದೆ. ಈ ನಿರೀಕ್ಷಣೆಯಿಂದ ಶೋಭನವಾದ ವ್ಯಾಸಂಗವನ್ನು ಮಾಡುತ್ತಾ ಸರಸ್ವತೀದೇವಿಯು ಬರುವಳು. ಮೊದಲು ಪರದೆಯ ಹಿಂದೆ ನಿಂತವಳಾಗಿ ಬ್ರಹ್ಮಸಭೆಯಲ್ಲಿಯೇ ಲಜ್ಜೆಯಿಂದ ಹಿಂದಿರುಗುವಳು. ಅಥವಾ ದೇವತೆಗಳಾದ ಬ್ರಹ್ಮ ಮುಂತಾದವರು ತಮಗೆ ಅಭಿಮತವಾದ ವಾಗಿಂದ್ರಿಯಗಳಿಂದ ''ನಮ್ಮಲ್ಲಿ ದೇವಿಯು ಯಾವಾಗ ಕಟಾಕ್ಷವನ್ನು ತೋರಿಸುವಳು'' ಎಂದು ನಿರೀಕ್ಷಿಸುತ್ತಾ ''ನಾವೆಲ್ಲರೂ ಭಾಗ್ಯಶಾಲಿಗಳಾಗುವ ಬಗೆ ಹೇಗೇ ?'' ಎಂದು ನಿರೀಕ್ಷಿಸುತ್ತಿರುವರು. ನಿತಾಂತಂ = ಅತ್ಯಧಿಕವಾಗಿ ಸುವರ್ಣಗಳಿಂದ ಶೋಭಿಸುವ ಲಕ್ಷಣ-ಗಳುಳ್ಳವಳಾಗಿರುವ ಆದ್ದರಿಂದಲೇ ಅವ್ಯಕ್ತಾವಸ್ಥೆಯಿಂದ ಯುಕ್ತಳಾಗಿರುವ ಸರಸ್ವತೀದೇವಿಯರು ಹೇಗೆ ಕ್ರೀಡಿಸಿದರೋ ಹಾಗೆ ಇತ್ತು.

**ತಾತ್ಪರ್ಯ—** ವಾಸುದೇವಾಚಾರ್ಯರ ಮುಖದಲ್ಲಿ ಭಕ್ತಿಯಿಂದ ಸಕಲ ಸಜ್ಜನರೂ ವಾಸಿಸಿದರು. ಮೊದಲು ಆ ಮಾತುಗಳು ಸ್ಪಷ್ಟವಾಗಿರಲಿಲ್ಲ. ಎಲ್ಲಾ ದೇವತೆಗಳೂ ಸುಂದರವಾದ ಅಕ್ಷರಗಳಿಂದ ಯುಕ್ತವಾಗಿದ್ದರು. ಮೊದಲು ಅಸ್ಪಷ್ಟಗಳಾದ ಅಕ್ಷರಗಳಿಂದ ಆರಂಭಿಸಿ ಕ್ರಮವಾಗಿ ಲೋಕಮಾನ್ಯವಾದವು. ಮೊದಲು ವರ್ಣಾತ್ಮಕಗಳಾದ ಅಕ್ಷರಗಳು ತೆರೆಗಳಲ್ಲಿ ಕಾಣಸದಂತಾದವು.

**ವಿಗ್ರಹ—**

**ದೇವಾದಿಸದ್ಭಿಃ—** ದೇವಾಃ ಆದಯಃ ಯೇಷಾಂ ತೇ ದೇವಾದಯಃ, ದೇವಾದಯಶ್ಚ ತೇ ಸಂತಶ್ಚ ದೇವಾದಿಸಂತಃ, ತೈಃ ದೇವಾದಿಸದ್ಭಿಃ ।

**ಅನುಪಾಲಿತಯಾ—** ಅನುಪಾಲ್ಯತೇ ಇತಿ ಅನುಪಾಲಿತಾ, ತಯಾ ಅನುಪಾಲಿತಯಾ ।

**ವಿಲಸತ್ಪದಯಾ—** ವಿಲಸತಿ ಪದಾನಿ ಯಸ್ಯಾಃ ಸಾ ವಿಲಸತ್ಪದಾ, ತಯಾ ವಿಲಸತ್ಪದಯಾ ।

**ಅವ್ಯಕ್ತಯಾ—** ನ ವ್ಯಕ್ತಾ ಅವ್ಯಕ್ತಾ, ತಯಾ ಅವ್ಯಕ್ತಯಾ ।

**ಶಾಲೀನಯಾ—** ಶಾಲೀನವತ್ ಚರತಿ ಇತಿ ಶಾಲೀನಾ, ತಯಾ ಶಾಲೀನಯಾ ।

**ಭುವನಾರ್ಚಿತಯಾ—** ಭುವನೇಷು ಅರ್ಚಿತಾ ಭುವನಾರ್ಚಿತಾ, ತಯಾ ಭುವನಾರ್ಚಿತಯಾ ।

**ಕ್ರಿಯಾಪದ—** ವಿಜಹ್ರೇ- ಹೃಞ್ ಹರಣೇ ಇತ್ಯಸ್ಮಾತ್ ಹರಣಾರ್ಥಕಾತ್ ವಿ ಇತ್ಯುಪಸರ್ಗಪೂರ್ವಕಾತ್ ಆತ್ಮನೇಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ವಿಜಹ್ರೇ' ಇತಿ ರೂಪಮ್ ।

ವಿಜಹ್ರೇ ವಿಜಹ್ರಾತೇ ವಿಜಹ್ರಿರೇ, ವಿಜಹ್ರಿಷೇ ವಿಜಹ್ರಾತೇ ವಿಜಹ್ರಿಧ್ವೇ, ವಿಜಹ್ರೇ ವಿಜಹ್ರಿವಹೇ ವಿಜಹ್ರಿಮಹೇ ॥

★ ★ ★

ಜಗಚ್ಚೇಷ್ಟಕ ಅಂಬೆಗಾಲ ಇಟ್ಟದ್ದು

**ಪ್ರಾಗ್ರಿಂಖಣಂ ಸ್ವಯಮಥ ಸ್ಥಿತಿಮೇಷ ಚಕ್ರೇ**
**ಪಶ್ಚಾದ್ಗತಿಂ ಪರಿಚಯೇನ ಕಿಲ ಕ್ರಮೇಣ ।**
**ವಿಶ್ವಸ್ಯ ಚೇಷ್ಟಿತಮಹೋ ಯದನುಗ್ರಹೇಣ**
**ಸರ್ವಂ ತದಸ್ಯ ಪವನಸ್ಯ ವಿಡಂಬನಂ ಹಿ ॥44॥**

**ಪದಚ್ಛೇದ—** ಪ್ರಾಕ್, ರಿಂಖಣಂ, ಸ್ವಯಂ, ಅಥ, ಸ್ಥಿತಿಂ, ಏಷಃ, ಚಕ್ರೇ, ಪಶ್ಚಾತ್, ಗತಿಂ, ಪರಿಚಯೇನ, ಕಿಲ, ಕ್ರಮೇಣ, ವಿಶ್ವಸ್ಯ, ಚೇಷ್ಟಿತಂ, ಅಹೋ, ಯದನುಗ್ರಹೇಣ, ಸರ್ವಂ, ತತ್, ಅಸ್ಯ, ಪವನಸ್ಯ, ವಿಡಂಬನಂ, ಹಿ ।

**ಅನ್ವಯ—** ಪ್ರಾಕ್ ರಿಂಖಣಂ ಅಥ ಸ್ವಯಂ ಸ್ಥಿತಿಂ ಏಷಃ ಚಕ್ರೇ ಪಶ್ಚಾತ್ ಗತಿಂ ಪರಿಚಯೇನ ಕಿಲ ಕ್ರಮೇಣ ವಿಶ್ವಸ್ಯ ಚೇಷ್ಟಿತಂ ಅಹೋ ಯದನುಗ್ರಹೇಣ ಸರ್ವಂ ತತ್ ಅಸ್ಯ ಪವನಸ್ಯ ವಿಡಂಬನಂ ಹಿ ।

**ಅನ್ವಯಾರ್ಥ—**

**ಪ್ರಾಕ್ ರಿಂಖಣಂ** = ಮೊದಲು ಅಂಬೆಗಾಲನ್ನು ಇಡುವುದನ್ನು
**ಅಥ ಸ್ವಯಂ ಸ್ಥಿತಿಂ** = ಅನಂತರದಲ್ಲಿ ತಾನಾಗಿಯೇ ನಿಲ್ಲುವಿಕೆಯನ್ನು
**ಏಷಃ ಚಕ್ರೇ** = ಈ ವಾಸುದೇವಾಚಾರ್ಯರು ಮಾಡಿದರು.
**ಪಶ್ಚಾತ್ ಗತಿಂ** = ಅನಂತರದಲ್ಲಿ
**ಪರಿಚಯೇನ ಕಿಲ** = ಪರಿಚಯದಿಂದಲೂ
**ಕ್ರಮೇಣ ವಿಶ್ವಸ್ಯ ಚೇಷ್ಟಿತಂ** = ಕ್ರಮದಿಂದಲೂ ಎಲ್ಲಾ ಪ್ರಪಂಚದ ವ್ಯಾಪಾರವು
**ಅಹೋ** = ಆಶ್ಚರ್ಯ
**ಯದನುಗ್ರಹೇಣ** = ಯಾರ ಅನುಗ್ರಹದಿಂದ ಏರ್ಪಡುತ್ತದೆಯೋ
**ಸರ್ವಂ ತತ್** = ಆ ಎಲ್ಲಾ ವ್ಯಾಪಾರಗಳು
**ಅಸ್ಯ ಪವನಸ್ಯ** = ಈ ವಾಯುದೇವರ
**ವಿಡಂಬನಂ ಹಿ** = ವಿಡಂಬನವಲ್ಲವೇ ?

**ತಾತ್ಪರ್ಯ—** ಶ್ರೀವಾಸುದೇವಾಚಾರ್ಯರು ಅಂಬೆಗಾಲನ್ನು ಹಾಕಿದರು. ಅನಂತರದಲ್ಲಿ ತಾವೇ ಎದ್ದು ನಿಂತರು. ಕ್ರಮವಾಗಿ ಪರಿಚಯದಿಂದ ನಡೆದರು. ಸಕಲ ಲೋಕಗಳಿಗು ಎಲ್ಲಾ ವ್ಯಾಪಾರಗಳು ಯಾರ ಅನುಗ್ರಹದಿಂದ ಏರ್ಪಡುತ್ತವೆಯೋ ಇದೆಲ್ಲವೂ ಆ ಮುಖ್ಯಪ್ರಾಣದೇವರ ಆಟವಲ್ಲವೇ ?

**ವಿಗ್ರಹ—**

**ರಿಂಖಣಂ—** ರಿಂಖತಿ ಇತಿ ರಿಂಖಣಂ ।
**ಯದನುಗ್ರಹೇಣ—** ಯಸ್ಯ ಅನುಗ್ರಹಃ ಯದನುಗ್ರಹಃ, ತೇನ ಯದನುಗ್ರಹೇಣ ।

**ಕ್ರಿಯಾಪದ—** ಚಕ್ರೇ- ಡು ಕೃಞ್ ಕರಣೇ ಇತಿ ಕರಣಾರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ ಆತ್ಮನೇಪದಿನ 'ಚಕ್ರೇ' ಇತಿ ರೂಪಮ್ ।

ಚಕ್ರೇ ಚಕ್ರಾತೇ ಚಕ್ರಿರೇ, ಚಕೃಷೇ ಚಕ್ರಾಥೇ ಚಕೃಢ್ವೇ, ಚಕ್ರೇ ಚಕೃವಹೇ ಚಕೃಮಹೇ ॥

★ ★ ★

ಎತ್ತಿನ ಗಾಡಿ ಹಿಡಿದು ಸಂಚರಿಸಿದ ವಾಸುದೇವ

**ಪುಚ್ಛಾಂತಮಚ್ಛಮವಲಂಬ್ಯ ಕದಾಚಿದೇಷಃ**
**ಪ್ರಾತರ್ವ್ರಜಾದ್ವ್ರಜತ ಏಷ ನಿಜರ್ಷಭಸ್ಯ ।**
**ಪ್ರಾಯಾತ್ ಪ್ರಿಯಸ್ಯ ಸಹಸಾ ಸ್ವಜನೈರದೃಷ್ಟೋ**
**ನಾನಾವನೇಷು ಚರತಶ್ಚರತಸ್ತೃಣಾನಿ ॥ 45 ॥**

**ಪದಚ್ಛೇದ—** ಪುಚ್ಛಾಂತಂ, ಅಚ್ಛಂ, ಅವಲಂಬ್ಯ, ಕದಾಚಿತ್, ಏಷಃ, ಪ್ರಾತಃ, ವ್ರಜಾತ್, ವ್ರಜತಃ, ಏಷಃ, ನಿಜರ್ಷಭಸ್ಯ, ಪ್ರಾಯಾತ್, ಪ್ರಿಯಸ್ಯ, ಸಹಸಾ, ಸ್ವಜನೈಃ, ಅದೃಷ್ಟಃ, ನಾನಾವನೇಷು ಚರತಃ, ಚರತಃ ತೃಣಾನಿ ।

**ಅನ್ವಯ—** ಕದಾಚಿತ್ ಏಷಃ ಪ್ರಾತಃ ವ್ರಜಾತ್ ವ್ರಜತಃ ನಿಜರ್ಷಭಸ್ಯ ಪ್ರಿಯಸ್ಯ ಅಚ್ಛಂ ಪುಚ್ಛಾಂತಂ ಅವಲಂಬ್ಯ ಪ್ರಾಯಾತ್ ಸಹಸಾ ಸ್ವಜನೈಃ ಅದೃಷ್ಟಃ ನಾನಾವನೇಷು ಚರತಃ ತೃಣಾನಿ ಚರತಃ ಪ್ರಾಯಾತ್ ।

**ಅನ್ವಯಾರ್ಥ—**

**ಕದಾಚಿತ್** = ಒಂದು ದಿನ (ಒಮ್ಮೆ)
**ಏಷಃ ಪ್ರಾತಃ** = ಈ ವಾಸುದೇವಾಚಾರ್ಯರು, ಪ್ರಾತಃಕಾಲದಲ್ಲಿ
**ವ್ರಜಾತ್ ವ್ರಜತಃ** = ದನದ ಕೊಟ್ಟಗೆಯಿಂದ ಹೊರಗೆ ಹೋಗುತ್ತಿರುವ
ನಿಜರ್ಷಭಸ್ಯ ಪ್ರಿಯಸ್ಯ = ತನ್ನ ಎತ್ತಿನ ಸಂಬಂಧಿಯಾದ ಪ್ರಿಯವಾದ ಆ ಎತ್ತಿನ
**ಅಚ್ಛಂ ಪುಚ್ಛಾಂತಂ ಅವಲಂಬ್ಯ** = ಸ್ವಚ್ಛವಾಗಿರುವ, ಬಾಲದ ಕೊನೆಯನ್ನು, ಅವಲಂಬಿಸಿದವರಾಗಿ
**ಪ್ರಾಯಾತ್** = ಹೊರಟುಹೋದರು.
**ಸಹಸಾ ಸ್ವಜನೈಃ ಅದೃಷ್ಟಃ** = ಆಕಸ್ಮಿಕವಾಗಿ ಸ್ವಕೀಯರಾದ ಜನರುಗಳಿಂದ ಕಾಣಸಲ್ಪಡದೇ ಹೋದನು.
**ನಾನಾವನೇಷು ಚರತಃ** = ನಾನಾವಿಧಗಳಾದ ವನಗಳಲ್ಲಿ ಸಂಚರಿಸುತ್ತಿರುವ
**ತೃಣಾನಿ ಚರತಃ** = ನಾನಾವಿಧಗಳಾದ ಹುಲ್ಲುಗಳನ್ನು ತಿನ್ನುತ್ತಿರುವ ಎತ್ತಿನ ಹಿಂದೆ ಈ ಬಾಲಕನನ್ನು ನೋಡಿದರು.

**ತಾತ್ಪರ್ಯ—** ಒಂದು ದಿನ ಬೆಳಿಗ್ಗೆ ವಾಸುದೇವಾಚಾರ್ಯರು ಸ್ವಚ್ಛವಾಗಿರುವ ಎತ್ತಿನ ಬಾಲದ ಕೊನೆಯನ್ನು ಹಿಡಿದುಕೊಂಡರು. ಬೆಳಗಿನಿಂದ ತಮ್ಮ ಎತ್ತನ್ನು ಬಿಡಲೇ ಇಲ್ಲ. ಸಾಯಂಕಾಲದವರೆಗೂ ಜೊತೆಯಲ್ಲಿಯೇ ಇದ್ದರು. ಬೇರೆ ಬೇರೆ ವಿಧವಾಗಿರುವ ವನಗಳಲ್ಲಿ ಎತ್ತು ತಿರುಗಿತು. ಎಲ್ಲಾ ಕಡೆಗಳಲ್ಲಿಯೂ ನಾನಾವಿಧಗಳಾದ ಹುಲ್ಲುಗಳನ್ನು ಮೇಯಿತು. ವಾಸುದೇವಾಚಾರ್ಯರು ಹಿಂದಿರುಗಿ ಬಂದರು.

ವಿಗ್ರಹ—

**ಪುಚ್ಛಾಂತಂ—** ಪುಚ್ಛಸ್ಯ ಅಂತಃ ಪುಚ್ಛಾಂತಃ, ತಂ ಪುಚ್ಛಾಂತಂ ।
ವ್ರಜತಃ— ವ್ರಜತಿ ಇತಿ ವ್ರಜನ್, ತಸ್ಯ ವ್ರಜತಃ ।
ನಿಜರ್ಷಭಸ್ಯ— ನಿಜಶ್ಚಾಸೌ ಋಷಭಶ್ಚ ನಿಜರ್ಷಭಃ, ತಸ್ಯ ನಿಜರ್ಷಭಸ್ಯ ।
ಸ್ವಜನೈಃ— ಸ್ವೇ ಚ ತೇ ಜನಾಶ್ಚ ಸ್ವಜನಾಃ, ತೈಃ ಸ್ವಜನೈಃ ।
**ಅದೃಷ್ಟಃ—** ನ ದೃಷ್ಟಃ ಅದೃಷ್ಟಃ ।
**ನಾನಾವನೇಷು—** ನಾನಾ ಚ ತಾನಿ ವನಾನಿ ಚ, ನಾನಾವನಾನಿ, ತೇಷು ನಾನಾವನೇಷು ।
**ಚರತಃ—** ಚರತ ಇತಿ ಚರನ್, ತಸ್ಯ ಚರತಃ ।

**ಕ್ರಿಯಾಪದ—** **ಪ್ರಾಯಾತ್**- ಪ್ರ ಇತ್ಯುಪಸರ್ಗಪೂರ್ವಕಾತ್ ಯಾ ಪ್ರಾಪಣೇ ಇತ್ಯಸ್ಮಾತ್ ಪ್ರಾಪಣಾರ್ಥಕಾತ್ ಯಾ ಧಾತೋಃ ಪರಸ್ಮೈಪದಿನಃ ಲಙ್ 'ಪ್ರಾಯಾತ್' ಇತಿ ರೂಪಮ್ ।

ಪ್ರಾಯಾತ್ ಪ್ರಾಯಾತಾಂ, ಪ್ರಾಯುಃ ಪ್ರಾಯಾಸ್, ಪ್ರಾಯಾಃ ಪ್ರಾಯಾತಂ ಪ್ರಾಯಾತ, ಪ್ರಾಯಾಂ ಪ್ರಾಯಾವ ಪ್ರಾಯಾಮ ॥

★ ★ ★

ವೃಷಭದ ಹಿಂದೆ ನಡೆದ ಜ್ಞಾನಋಷಭ

**ಉತ್ತುಂಗಶೃಂಗಲಸಿತಸ್ಯ ಮಹಿಷ್ಠಮೂರ್ತೇಃ**
**ಪಾದಾವೃತಾವನಿತಲಸ್ಯ ಸುರಂಧ್ರಕಸ್ಯ ।**
**ಆಶ್ರಿತ್ಯ ತಸ್ಯ ಶುಶುಭೇಽವಯವೈಕದೇಶಂ**
**ಬಾಲೋ ದಿವಾಕರ ಇವೋದಯಪರ್ವತಸ್ಥಃ ॥ 46 ॥**

**ಪದಚ್ಛೇದ—** ಉತ್ತುಂಗಶೃಂಗಲಸಿತಸ್ಯ, ಮಹಿಷ್ಠಮೂರ್ತೇಃ, ಪಾದಾವೃತಾವನಿತಲಸ್ಯ, ಸುರಂಧ್ರಕಸ್ಯ, ಆಶ್ರಿತ್ಯ, ತಸ್ಯ, ಶುಶುಭೇ, ಅವಯವೈಕದೇಶಂ, ಬಾಲಃ, ದಿವಾಕರಃ, ಇವ, ಉದಯಪರ್ವತಸ್ಥಃ ।

**ಅನ್ವಯ—** ಉತ್ತುಂಗಶೃಂಗಲಸಿತಸ್ಯ ಮಹಿಷ್ಠಮೂರ್ತೇಃ ಪಾದಾವೃತಾವನಿತಲಸ್ಯ ಸುರಂಧ್ರಕಸ್ಯ ತಸ್ಯ ಅವಯವೈಕದೇಶಂ ಆಶ್ರಿತ್ಯ ಉದಯಪರ್ವತಸ್ಥಃ ಬಾಲಃ ದಿವಾಕರಃ ಇವ ಶುಶುಭೇ ।

**ಅನ್ವಯಾರ್ಥ—**

**ಉತ್ತುಂಗಶೃಂಗಲಸಿತಸ್ಯ** = ಎತ್ತರವಾಗಿರುವ ಕೊಂಬುಗಳಿಂದ ಶೋಭಿಸುತ್ತಿರುವ

**ಮಹಿಷ್ಠಮೂರ್ತೇಃ** = ಅತಿ ದೊಡ್ಡ ಆಕಾರವುಳ್ಳ

**ಪಾದಾವೃತಾವನಿತಲಸ್ಯ** = ಕಾಲುಗಳ ಗೊರಸುಗಳಿಂದ ಮುಚ್ಚಲ್ಪಟ್ಟ ಭೂಪ್ರದೇಶವುಳ್ಳ

**ಸುರಂಧ್ರಕಸ್ಯ** = ಒಳ್ಳೆಯ ಕಿವಿ ಮೂಗಿನ ರಂಧ್ರಗಳು ಮುಂತಾದವುಗಳಿಂದ ಯುಕ್ತವಾಗಿರುವ

**ತಸ್ಯ ಅವಯವೈಕದೇಶಂ ಆಶ್ರಿತ್ಯ** = ಆ ಎತ್ತಿನ ಅವಯವಗಳ ಏಕದೇಶವನ್ನು ಆಶ್ರಯಿಸಿ

**ಉದಯಪರ್ವತಸ್ಥಃ** = ಉದಯಪರ್ವತದಲ್ಲಿ ಇರುವ

**ಬಾಲಃ ದಿವಾಕರಃ ಇವ** = ಎಳೆಯ ಸೂರ್ಯನಂತೆ

**ಶುಶುಭೇ** = ಪ್ರಕಾಶಿಸಿದರು.

**ತಾತ್ಪರ್ಯ—** ಎತ್ತಿನ ಕೊಂಬುಗಳು ಉದ್ದವಾಗಿದ್ದವು. ಎತ್ತಿನ ಆಕಾರವೂ ದೊಡ್ಡದಾಗಿತ್ತು. ಕಾಲಿನ ಗೊರಸುಗಳು ಭೂಮಿಯನ್ನು ಮುಚ್ಚುತ್ತಿದ್ದವು. ಕಿವಿ ಮುಂತಾದವುಗಳ ರಂಧ್ರಗಳು ದೊಡ್ಡದಾಗಿದ್ದವು. ಎಳೆಯ ಸೂರ್ಯನಂತೆ ಉದಯಪರ್ವತದಲ್ಲಿ ಶೋಭಿಸುತ್ತಿದ್ದನು.

**ವಿಗ್ರಹ—**

**ಉತ್ತುಂಗಶೃಂಗಲಸಿತಸ್ಯ** — ಉತ್ತುಂಗೇ ಚ ತೇ ಶೃಂಗೇ ಚ ಉತ್ತುಂಗಶೃಗೇ, ಉತ್ತುಂಗಶೃಂಗಾಭ್ಯಾಂ ಲಸಿತಃ ಉತ್ತುಂಗಶೃಂಗಲಸಿತಃ ತಸ್ಯ ಉತ್ತುಂಗಶೃಂಗಲಸಿತಸ್ಯ ।

**ಮಹಿಷ್ಠಮೂರ್ತೇಃ** — ಅತಿಶಯೇನ ಮಹತೀ ಮಹಿಷ್ಠಾ, ಮಹಿಷ್ಠಾ ಮೂರ್ತಿಃ ಯಸ್ಯ ಸಃ ಮಹಿಷ್ಠ-ಮೂರ್ತಿಃ ತಸ್ಯ ಮಹಿಷ್ಠಮೂರ್ತೇಃ ।

**ಪಾದಾವೃತಾವನಿತಲಸ್ಯ**— ಪಾದ್ಯೈಃ ಆವೃತಂ ಪಾದಾವೃತಂ, ಅವನೇಃ ತಲಂ ಅವನಿತಲಂ, ಪಾದಾವೃತಂ ಅವನಿತಲಂ ಯಸ್ಯ ಸಃ ಪಾದಾವೃತಾವನಿತಲಃ ತಸ್ಯ ಪಾದಾವೃತಾವನಿತಲಸ್ಯ ।

**ಸುರಂಧ್ರಕಸ್ಯ**— ಶೋಭನಾನಿ ರಂಧ್ರಾಣಿ ಯಸ್ಯ ಸಃ ಸುರಂಧ್ರಃ ತಸ್ಯ ಸುರಂಧ್ರಕಸ್ಯ ।

**ಅವಯವೈಕದೇಶಂ**— ಅವಯ ಯಸ್ಯ ಏಕದೇಶಃ ಅವಯವೈಕದೇಶಃ ತಸ್ಯ ಅವಯವೈಕದೇಶಸ್ಯ ।

**ಉದಯಪರ್ವತಸ್ಯ**— ಉದಯಸ್ಯ ಪರ್ವತಃ ಉದಯಪರ್ವತಃ ತಸ್ಯ ಉದಯಪರ್ವತಸ್ಯ ।

**ಕ್ರಿಯಾಪದ**— ಶುಶುಭೇ - ಶುಭ ದೀಪ್ತೌ ದೀಪ್ತ್ಯರ್ಥಕಾತ್ ಶುಭ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಶುಶುಭೇ' ಇತಿ ರೂಪಮ್ ।

ಶುಶುಭೇ ಶುಶುಭಾತೇ ಶುಶುಭಿರೇ, ಶುಶುಭಿಷೇ ಶುಶುಭಾಥೇ ಶುಶುಭಿಧ್ವೇ (ಢ್ವೇ), ಶುಶುಭೇ ಶುಶುಭಿವಹೇ ಶುಶುಭಿಮಹೇ ॥

**ಅಲಂಕಾರ**— ಉಪಮಾಲಂಕಾರ.

★ ★ ★

ಬಾಲಕನನ್ನು ಕಾಣದೇ ಚಿಂತೆಗೀಡಾದ ಬಂಧುಜನ

**ಲೀಲಾಂ ಕರೋತಿ ನು ಗೃಹಾಂತರಗೋ ನು ಬಾಲಃ**
**ಕೂಪಾಂತರೇ ನು ಪತಿತಃ ಪ್ರಕೃತಿಸ್ವತಂತ್ರಃ ।**
**ಇತ್ಥಂ ವಿಚಿಂತ್ಯ ಸ ಮುಹುಃ ಸ್ವಜನೋ ವಿಮೃಗ್ಯ**
**ಹಂತಾನವೇಕ್ಷ್ಯ ತನಯಂ ಹೃದಿ ತಾಪಮಾಪ ॥ 47 ॥**

**ಪದಚ್ಛೇದ**— ಲೀಲಾಂ, ಕರೋತಿ, ನು, ಗೃಹಾಂತರಗಃ, ನು, ಬಾಲಃ, ಕೂಪಾಂತರೇ, ನು, ಪತಿತಃ, ಪ್ರಕೃತಿಸ್ವತಂತ್ರಃ, ಇತ್ಥಂ, ವಿಚಿಂತ್ಯ, ಸಃ, ಮುಹುಃ, ಸ್ವಜನಃ, ವಿಮೃಗ್ಯ, ಹಂತ, ಅನವೇಕ್ಷ್ಯ, ತನಯಂ, ಹೃದಿ, ತಾಪಂ, ಆಪ ।

**ಅನ್ವಯ**— ಗೃಹಾಂತರಗಃ ಬಾಲಃ ಲೀಲಾಂ ಕರೋತಿ ನು, ಪ್ರಕೃತಿಸ್ವತಂತ್ರಃ ಕೂಪಾಂತರೇ ಪತಿತಃ ನು, ಇತ್ಥಂ ವಿಚಿಂತ್ಯ ಸಃ ಸ್ವಜನಃ ಮುಹುಃ ವಿಮೃಗ್ಯ ತನಯಂ ಅನವೇಕ್ಷ್ಯ ಹೃದಿ ತಾಪಂ ಆಪ । ಹಂತ ।

**ಅನ್ವಯಾರ್ಥ**—

**ಗೃಹಾಂತರಗಃ ಬಾಲಃ** = ಬೇರೆ ಮನೆಯಲ್ಲಿರುವ ಶ್ರೀವಾಸುದೇವಾಚಾರ್ಯ ಎಂಬ ಬಾಲಕನು

**ಲೀಲಾಂ ಕರೋತಿ ನು** = ಆಟವನ್ನು ಆಡುತ್ತಿರುವನೇ,

**ಪ್ರಕೃತಿಸ್ವತಂತ್ರಃ** = ಸ್ವಭಾವದಿಂದ ಸ್ವತಂತ್ರನಾಗಿರುವ ಶ್ರೀವಾಸುದೇವಾಚಾರ್ಯನು

**ಕೂಪಾಂತರೇ ಪತಿತಃ ನು** = ಭಾವಿಯ ಮಧ್ಯದಲ್ಲಿ ಬಿದ್ದಿರುವನೇ,

**ಇತ್ಥಂ ವಿಚಿಂತ್ಯ** = ಹೀಗೆ ಯೋಚಿಸಿ

**ಸಃ ಸ್ವಜನಃ** = ಆ ಮಧ್ಯಗೇಹಭಟ್ಟರ ಸ್ವಜನರು

**ಮುಹುಃ ವಿಮೃಗ್ಯ** = ಪುನಃ ಪುನಃ ಹುಡುಕಿದವರಾಗಿ

**ತನಯಂ ಅನವೇಕ್ಷ್ಯ** = ಮಗನನ್ನು ಕಾಣದೆ

**ಹೃದಿ ತಾಪಂ ಆಪ** = ಮನಸ್ಸಿನಲ್ಲಿ ತಾಪವನ್ನು ಹೊಂದಿದರು.

**ಹಂತ** = ದುಃಖವು

**ತಾತ್ಪರ್ಯ—** ಪಕ್ಕದ ಮನೆಯಲ್ಲಿ ಅಡಗಿಕೊಂಡಿದ್ದು ಆಟವನ್ನು ಆಡುತ್ತಿರುವನೇ ? ಬಾವಿಯ ಮಧ್ಯದಲ್ಲಿ ಬಿದ್ದಿರುವನೇ ? ಸ್ವಭಾವದಿಂದ ಸ್ವತಂತ್ರನಾಗಿರುವ ಬಾಲಕನ ಗತಿ ಏನು ? ಹೀಗೆ ಶ್ರೀವಾಸುದೇವಾಚಾರ್ಯರ ಸ್ವಜನರೆಲ್ಲರೂ ವಾಸುದೇವಾಚಾರ್ಯರನ್ನು ಹುಡುಕಿ ನೋಡಿದರು. ಆದರೆ ಎಲ್ಲಾ ಕಡೆಗಳಲ್ಲಿಯೂ ಮಾಡಿದ ಪ್ರಯತ್ನಗಳು ವಿಫಲವಾದವು. ಕೊನೆಗೆ ಹೃದಯದಲ್ಲಿ ತಾಪವನ್ನು ಹೊಂದಿದರು.

**ವಿಗ್ರಹ—**

**ಗೃಹಾಂತರಗಃ—** ಗೃಹಸ್ಯ ಅಂತರಂ ಗೃಹಾಂತರಂ, ಗೃಹಾಂತರಂ ಗಚ್ಛತಿ ಇತಿ ಗೃಹಾಂತರಗಃ ।

**ಕೂಪಾಂತರೇ—** ಕೂಪಸ್ಯ ಅಂತರಂ ಕೂಪಾಂತರಂ, ತಸ್ಮಿನ್ ಕೂಪಾಂತರೇ ।

**ಪ್ರಕೃತಿಸ್ವತಂತ್ರಃ—** ಪ್ರಕೃತ್ಯಾ ಸ್ವತಂತ್ರಃ ಪ್ರಕೃತಿಸ್ವತಂತ್ರಃ ।

**ವಿಚಿಂತ್ಯ—** ವಿಶೇಷೇಣ ಚಿಂತಯಿತ್ವಾ ವಿಚಿಂತ್ಯ ।

**ಸ್ವಜನಃ—** ಸ್ವಸ್ಯ ಜನಃ ಸ್ವಜನಃ ।

**ವಿಮೃಗ್ಯ—** ವಿಶೇಷೇಣ ಮೃಗಯಿತ್ವಾ ವಿಮೃಗ್ಯ ।

**ಅನಪೇಕ್ಷ್ಯ—** ನ ಅವೇಕ್ಷ್ಯ ಅನವೇಕ್ಷ್ಯ ।

**ಕ್ರಿಯಾಪದ—** ಆಪ- ಆಪ್ಲೃ ವ್ಯಾಪ್ತೌ ಇತಿ ವ್ಯಾಪ್ತ್ಯರ್ಥಕಾತ್ ಆಪ್ಲೃಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಆಪ' ಇತಿ ರೂಪಮ್ ।

ಆಪ ಆಪತುಃ ಆಪುಃ, ಆಪಿಥ ಆಪಥುಃ ಆಪ, ಆಪ ಆಪಿವ ಆಪಿಮ ॥

**ಕರೋತಿ-** ಡುಕೃಞ್ ಕರಣೇ ಲಟ್ ಪ್ರ.ಪು. ಏಕವಚನೇ ಕರೋತಿ ಇತಿ ರೂಪಮ್ ।

| | | |
|---|---|---|
| ಕರೋತಿ | ಕುರುತಃ | ಕುರ್ವಂತಿ |
| ಕರೋಷಿ | ಕುರುಥಃ | ಕುರುಥ |
| ಕರೋಮಿ | ಕುರ್ವಃ | ಕುರ್ಮಃ ॥ |

★ ★ ★

ಮರಳಿ ಬಂದ ಧರ್ಮಪಾಲಕ

**ಬಾಲಸ್ಯ ಬಾಲಪರಿಲಂಬನಗೋಚರಂ ತತ್**
**ವೃಶ್ಚಸ್ಯತಾಪಿ ವಚನಂ ವನಗೋಚರೋಕ್ತಮ್ ।**
**ಯತ್ಸಾಯಮೈಕ್ಷತ ಜನಃ ಶಿಶುಮಾವ್ರಜಂತ-**
**ಮೇಕಾಬ್ದಕಂ ವೃಷಭವಾಲಕೃತಾವಲಂಬಮ್ ॥ 48 ॥**

**ಪದಚ್ಛೇದ—** ಬಾಲಸ್ಯ, ಬಾಲಪರಿಲಂಬನಗೋಚರಂ, ತತ್, ವೃಶ್ಚಸ್ಯತ, ಅಪಿ, ವಚನಂ, ವನಗೋಚರೋಕ್ತಂ, ಯತ್, ಸಾಯಂ, ಐಕ್ಷತ, ಜನಃ, ಶಿಶುಂ, ಆವ್ರಜಂತಂ, ಏಕಾಬ್ದಕಂ, ವೃಷಭವಾಲಕೃತಾವಲಂಬಂ ।

**ಅನ್ವಯ—** ಬಾಲಪರಿಲಂಬನಗೋಚರಂ ತತ್ ವನಗೋಚರೋಕ್ತಂ ಬಾಲಸ್ಯ ವಚನಂ ವೃಶ್ಚಸ್ಯತ ಅಪಿ, ಯತ್ ಸಾಯಂ ಆವ್ರಜಂತಂ, ಏಕಾಬ್ದಕಂ, ವೃಷಭವಾಲಕೃತಾವಲಂಬಂ ಶಿಶುಂ ಜನಃ ಐಕ್ಷತ ।

**ಅನ್ವಯಾರ್ಥ—**

**ಬಾಲಪರಿಲಂಬನಗೋಚರಂ** = ಬಾಲವನ್ನು ಹಿಡಿದು ಜೋಲಾಡುತ್ತಿರುವ

**ತತ್ ವನಗೋಚರೋಕ್ತಂ ಬಾಲಸ್ಯ ವಚನಂ** = ಕಾಡುಮನುಷ್ಯನಿಂದ ಹೇಳಲ್ಪಟ್ಟ, ಬಾಲಕನ ಸಂಬಂಧಿಯಾದ ವಚನವನ್ನು

**ವ್ಯಶ್ವಸ್ಯತ ಅಪಿ** = ನಂಬಲ್ಪಟ್ಟರೂ

**ಯತ್ ಸಾಯಂ** = ಯಾವ ಕಾರಣದಿಂದ ಸಾಯಂಕಾಲದಲ್ಲಿ

**ಆವ್ರಜಂತಂ ಏಕಾಬ್ದಕಂ** = ಬರುತ್ತಿರುವ ಒಂದು ವರ್ಷ ವಯಸ್ಸಿನ

**ವೃಷಭವಾಲಕೃತಾವಲಂಬಂ ಶಿಶುಂ** = ವೃಷಭದ ಕರುವಿನ ಬಾಲವನ್ನು ಹಿಡಿದಿರುವ ಬಾಲಕ ಶ್ರೀವಾಸು-ದೇವನನ್ನು

**ಜನಃ ಐಕ್ಷತ** = ಎಲ್ಲ ಜನರು ನೋಡಿದರು.

**ತಾತ್ಪರ್ಯ—** ಶ್ರೀವಾಸುದೇವಾಚಾರ್ಯರು ಕಾಡಿಗೆ ಹೋದ ದಿನದಲ್ಲಿ ಕಾಡುಮನುಷ್ಯನೊಬ್ಬನು ಒಬ್ಬ ಬಾಲಕನು ಬಾಲದಿಂದ ಯುಕ್ತವಾದ ವೃಷಭವೊಂದನ್ನು ತೆಗೆದುಕೊಂಡು ಹೋಗಿರುವ ವಿಷಯವನ್ನು ತಿಳಿಸಿದನು. ಅದನ್ನು ನಂಬಲು ಸಾಧ್ಯವಾಗಲಿಲ್ಲ. ಆದರೆ ಸಾಯಂಕಾಲದಲ್ಲಿ ಆ ಮಾತಿನಲ್ಲಿ ನಂಬಿಕೆಯು ಹುಟ್ಟುವಂತಿತ್ತು. ಒಂದು ವರ್ಷದ ಕೂಸು. ಎತ್ತಿನ ಬಾಲವನ್ನು ಹಿಡಿದುಕೊಂಡು ಬರುತ್ತಿದೆ. ಈ ಆಶ್ಚರ್ಯವನ್ನು ನೋಡಿಬಿಟ್ಟು ಎಲ್ಲರೂ ಬೆರಗಾದರು.

**ವಿಗ್ರಹ—**

**ಬಾಲಪರಿಲಂಬನಗೋಚರಂ—** ಬಾಲಸ್ಯ ಪರಿಲಂಬನಂ ಬಾಲಪರಿಲಂಬನಂ, ಬಾಲಪರಿಲಂಬನಂ ಗೋಚರಃ ಯಸ್ಯ ತತ್ ಬಾಲಪರಿಲಂಬನಗೋಚರಂ ।

**ವನಗೋಚರೋಕ್ತಂ—** ವನೇ ಗೋಚರಃ ವನಗೋಚರಃ, ವನಗೋಚರೇಣ ಉಕ್ತಂ ವನಗೋಚರೋಕ್ತಂ ।

**ಆವ್ರಜಂತಂ—** ಆವ್ರಜತಿ ಇತಿ ಆವ್ರಜನ್, ತಂ ಆವ್ರಜಂತಂ ।

**ಏಕಾಬ್ದಕಂ—** ಏಕಃ ಅಬ್ದಃ ಯಸ್ಯ ಸಃ ಏಕಾಬ್ದಕಃ, ತಂ ಏಕಾಬ್ದಕಂ ।

**ವೃಷಭವಾಲಕೃತಾವಲಂಬಂ—** ವೃಷಭಸ್ಯ ವಾಲಃ ವೃಷಭವಾಲಃ, ವೃಷಭವಾಲಃ ಕೃತಃ ಅವಲಂಬಃ ಯೇನ ಸಃ ವೃಷಭವಾಲಕೃತಾವಲಂಬಃ, ತಂ ವೃಷಭವಾಲಕೃತಾವಲಂಬಂ ।

**ಕ್ರಿಯಾಪದ—** **ಐಕ್ಷತ**- ಈಕ್ಷ ದರ್ಶನೇ ಇತಿ ಧಾತೋಃ ದರ್ಶನಾರ್ಥಕಾತ್ ಲಙ್ ಪ್ರಥಮಪುರುಷೇ ಏಕವಚನೇ 'ಐಕ್ಷತ' ಇತಿ ರೂಪಮ್ ।

ಐಕ್ಷತ ಐಕ್ಷೇತಾಂ ಐಕ್ಷಂತ, ಐಕ್ಷಥಾಃ ಐಕ್ಷೇಥಾಂ ಐಕ್ಷಧ್ವಂ, ಐಕ್ಷೇ ಐಕ್ಷಾವಹಿ ಐಕ್ಷಾಮಹಿ ॥

**ವ್ಯಶ್ವಸತಃ—** ವಿ ಇತ್ಯುಪಸರ್ಗಪೂರ್ವಕಾತ್ ಶ್ವಸ ಪ್ರಾಣನೇ ಇತಿ ಧಾತೋಃ ಲಙ್ ಪ್ರ.ಪು.ಏ. 'ವ್ಯಶ್ವಸ್ಯತ' ಇತಿ ರೂಪಮ್ ।

| | | |
|---|---|---|
| ಅಶ್ವಸ್ಯತ | ಅಶ್ವಸ್ಯೇತಾಂ | ಅಶ್ವಸ್ಯಂತ |
| ಅಶ್ವಸ್ಯಥಾಃ | ಅಶ್ವಸ್ಯೇಥಾಂ | ಅಶ್ವಸ್ಯಧ್ವಮ್ |
| ಅಶ್ವಸ್ಯೇ | ಅಶ್ವಸ್ಯಾವಹಿ | ಅಶ್ವಸ್ಯಾಮಹಿ ॥ |

★ ★ ★

### ಮಧ್ವರ ದರ್ಶನದಿಂದ ಮಹದಾನಂದ

**ಚಿಂತಾಮಣೇಂದ್ರಮಿವ ಚಿಂತಿತದಂ ದರಿದ್ರೋ**
**ವಿಜ್ಞಾನಮಾರ್ಗಮಿವ ವಿಷ್ಣುಪರಂ ಮುಮುಕ್ಷುಃ ।**
**ನಷ್ಟಂ ಚ ನಂದನಮಿತಿ ಸ್ವಜನೋಽಸ್ಯ ಲಬ್ಧ್ವಾ**
**ನಾಥಸ್ಯ ತಸ್ಯ ತಮನುಗ್ರಹಮೇವ ಮೇನೇ ॥ 49 ॥**

**ಪದಚ್ಛೇದ—** ಚಿಂತಾಮಣೇಂದ್ರಂ, ಇವ, ಚಿಂತಿತದಂ, ದರಿದ್ರಃ, ವಿಜ್ಞಾನಮಾರ್ಗಂ, ಇವ, ವಿಷ್ಣುಪರಂ, ಮುಮುಕ್ಷುಃ, ನಷ್ಟಂ, ಚ, ನಂದನಂ, ಇತಿ, ಸ್ವಜನಃ, ಅಸ್ಯ, ಲಬ್ಧ್ವಾ, ನಾಥಸ್ಯ, ತಸ್ಯ, ತಂ, ಅನುಗ್ರಹಂ, ಏವ ಮೇನೇ ।

**ಅನ್ವಯ—** ದರಿದ್ರಃ ಚಿಂತಿತದಂ ಚಿಂತಾಮಣೇಂದ್ರಂ ಇವ, ಮುಮುಕ್ಷುಃ ವಿಷ್ಣುಪರಂ ವಿಜ್ಞಾನಮಾರ್ಗಂ ಇವ, ಇತಿ ನಷ್ಟಂ ಚ ನಂದನಂ ಅಸ್ಯ ಸ್ವಜನಃ ಲಬ್ಧ್ವಾ, ತಂ ನಾಥಸ್ಯ ತಸ್ಯ ಅನುಗ್ರಹಂ ಏವ ಮೇನೇ ।

**ಅನ್ವಯಾರ್ಥ—**

**ದರಿದ್ರಃ ಚಿಂತಿತದಂ ಚಿಂತಾಮಣೇಂದ್ರಂ ಇವ** = ಬಡವನು ಚಿಂತಿಸಿದ ವಸ್ತುಗಳನ್ನು ಕೊಡುತ್ತಿರುವ ಶ್ರೇಷ್ಠವಾದ ಚಿಂತಾಮಣಿಯನ್ನು ಪಡೆದಂತೆ

**ಮುಮುಕ್ಷುಃ ವಿಷ್ಣುಪರಂ ವಿಜ್ಞಾನಮಾರ್ಗಂ ಇವ ಇತಿ** = ಮೋಕ್ಷವನ್ನು ಅಪೇಕ್ಷಿಸುವವನು ವಿಷ್ಣುವೇ ಸರ್ವೋತ್ತಮನೆಂದು ತಿಳಿಸುವ ವಿಜ್ಞಾನ ಎಂಬ ಮಾರ್ಗವನ್ನು ಹೇಗೋ ಹಾಗೆ

**ನಷ್ಟಂ ಚ ನಂದನಂ** = ತಪ್ಪಿಸಿಕೊಂಡು ಹೋದ ವಾಸುದೇವಾಚಾರ್ಯ ಎಂಬ ಬಾಲಕನನ್ನು

**ಅಸ್ಯ ಸ್ವಜನಃ ಲಬ್ಧ್ವಾ** = ಈ ವಾಸುದೇವಾಚಾರ್ಯನ ಸ್ವಜನರಾಗಿರುವ ಮಧ್ಯಗೇಹಭಟ್ಟ ಮುಂತಾದವರು ಪಡೆದುಕೊಂಡು

**ತಂ ನಾಥಸ್ಯ ತಸ್ಯ ಅನುಗ್ರಹಂ ಏವ ಮೇನೇ** = ಅವನನ್ನು ಪಡೆದದ್ದು ಆ ಅನಂತೇಶ್ವರದೇವನ ಅನುಗ್ರಹ-ವನ್ನಾಗಿಯೇ ತಿಳಿದರು.

**ತಾತ್ಪರ್ಯ—** ಬಾಲಕನ ತಂದೆತಾಯಿಗಳು ಬೆಳಗಿನಿಂದ ಕಾಣದೇ ಇದ್ದ ಸಕಲ ಇಷ್ಟಾರ್ಥವನ್ನೀಯುವವನಾದ ವಿಷ್ಣುನಿಷ್ಠನಾದ ಮಗನನ್ನು ಸಾಯಂಕಾಲ ನೋಡಿದರು. ಅದು ಕಡುಬಡವನಿಗೆ ಬೇಡಿದ್ದನ್ನು ನೀಡುವ ಚಿಂತಾಮಣಿ-ಯೆಂಬ ರತ್ನವು ಸಿಕ್ಕಿದಂತೆ, ಮುಕ್ತಿಯನ್ನು ಬಯಸುವವನಿಗೆ ಸರ್ವೋತ್ತಮನಾದ ವಿಷ್ಣುವಿನ ತತ್ತ್ವಜ್ಞಾನ ಸಿಕ್ಕಿದಂತಾಯಿತು. ಆ ಸಿಕ್ಕಿದ್ದೂ ಅನಂತೇಶ್ವರನ ಅನುಗ್ರಹವೆಂದೇ ಎಲ್ಲಾ ಸ್ವಜನರೂ ತಿಳಿದರು.

**ವಿಗ್ರಹ—**

**ಚಿಂತಾಮಣೇಂದ್ರಂ—** ಚಿಂತಾಯಾಃ ಮಣಿಃ ಚಿಂತಾಮಣಿಃ, ಚಿಂತಾಮಣೀನಾಂ ಇಂದ್ರಃ ಚಿಂತಾ-ಮಣೇಂದ್ರಃ, ತಂ ಚಿಂತಾಮಣೇಂದ್ರಂ ।

**ಚಿಂತಿತದಂ—** ಚಿಂತಿತಂ ದದಾತಿ ಇತಿ ಚಿಂತಿತದಃ, ತಂ ಚಿಂತಿತದಂ ।

**ವಿಜ್ಞಾನಮಾರ್ಗಂ—** ವಿಶಿಷ್ಟಂ ಚ ತತ್ ಜ್ಞಾನಂ ಚ ವಿಜ್ಞಾನಂ, ವಿಜ್ಞಾನಂ ಏವ ಮಾರ್ಗಃ ವಿಜ್ಞಾನಮಾರ್ಗಃ, ತಂ ವಿಜ್ಞಾನಮಾರ್ಗಂ ।

**ವಿಷ್ಣುಪರಂ—** ವಿಷ್ಣುಃ ಪರಃ ಯಸ್ಮಿನ್ ತತ್ ವಿಷ್ಣುಪರಂ ।

**ಮುಮುಕ್ಷುಃ—** ಮೋಕ್ತುಂ ಇಚ್ಛುಃ ಮುಮುಕ್ಷುಃ ।

ಸ್ವಜನಃ— ಸ್ವಸ್ಯ ಜನಃ ಸ್ವಜನಃ ।

**ಕ್ರಿಯಾಪದ—** ಮೇನೇ- ಮನು ಅವಬೋಧನೇ ಇತಿ ಅವಬೋಧನಾರ್ಥಕಾತ್ ಮನು ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಮೇನೇ' ಇತಿ ರೂಪಮ್ ।

ಮೇನೇ ಮೇನಾತೇ ಮೇನಿರೇ, ಮೇನಿಷೇ ಮೇನಾಥೇ ಮೇನಿಧ್ವೇ, ಮೇನೇ ಮೇನಿವಹೇ ಮೇನಿಮಹೇ ॥

★ ★ ★

**ದುಡ್ಡಿಗಾಗಿ ಧರಣ ಕುಳಿತ ಧನಿಕ**

**ಲೀಲಾವಸಾನಸಮಯೇ ಸಹಸಾ ಕದಾಚಿ-**
**ದಾರ್ಯೋಽಮುನಾಽಭ್ಯವಹೃತಿಂ ಪ್ರತಿ ಚೋದ್ಯಮಾನಃ ।**
**ರೋದ್ಧೈಷ ನೋಽಸ್ತಿ ಧನಿಕೋ ವೃಷವಿಕ್ರಯೀತಿ**
**ಪ್ರೋವಾಚ ನಂದನಮುಖೇಂದುಮವೇಕ್ಷ್ಯ ಮಂದಮ್॥ 50 ॥**

**ಪದಚ್ಛೇದ—** ಲೀಲಾವಸಾನಸಮಯೇ, ಸಹಸಾ, ಕದಾಚಿತ್, ಆರ್ಯಃ, ಅಮುನಾ, ಅಭ್ಯವಹೃತಿಂ, ಪ್ರತಿ, ಚೋದ್ಯಮಾನಃ, ರೋದ್ಧಾ, ಏಷಃ, ನಃ, ಅಸ್ತಿ, ಧನಿಕಃ, ವೃಷವಿಕ್ರಯೀ, ಇತಿ, ಪ್ರೋವಾಚ, ನಂದನಮುಖೇಂದುಂ, ಅವೇಕ್ಷ್ಯ, ಮಂದಂ ।

**ಅನ್ವಯ—** ಲೀಲಾವಸಾನಸಮಯೇ ಸಹಸಾ ಕದಾಚಿತ್ ಆರ್ಯಃ ಅಮುನಾ ಅಭ್ಯವಹೃತಿಂ ಪ್ರತಿ ಚೋದ್ಯಮಾನಃ ಏಷಃ ಧನಿಕಃ ನಃ ವೃಷವಿಕ್ರಯೀ ರೋದ್ಧಾ ಅಸ್ತಿ ಇತಿ ನಂದನಮುಖೇಂದುಂ ಮಂದಂ ಅವೇಕ್ಷ್ಯ ಪ್ರೋವಾಚ ।

**ಅನ್ವಯಾರ್ಥ—**

**ಲೀಲಾವಸಾನಸಮಯೇ** = ಆಟಗಳು ಮುಗಿದ ಕಾಲದಲ್ಲಿ

**ಸಹಸಾ ಕದಾಚಿತ್ ಆರ್ಯಃ** = ಆಕಸ್ಮಿಕವಾಗಿ ಯಾವುದೋ ಒಂದು ದಿನದಲ್ಲಿ

**ಅಮುನಾ** = ಈ ವಾಸುದೇವಾಚಾರ್ಯರಿಂದ

**ಅಭ್ಯವಹೃತಿಂ ಪ್ರತಿ ಚೋದ್ಯಮಾನಃ** = ಊಟವನ್ನು ಕುರಿತು ಪ್ರೇರಿಸಲ್ಪಡುತ್ತಿರುವವರಾಗಿ

**ಏಷಃ ಧನಿಕಃ ನಃ ವೃಷವಿಕ್ರಯೀ** = ಈ ಧನಿಕನು ನಮಗೆ ಎತ್ತನ್ನು ಮಾರಿದವನು

**ರೋದ್ಧಾ ಅಸ್ತಿ ಇತಿ** = ಅವನು ನಮ್ಮನ್ನು ಅಡ್ಡಗಟ್ಟುತ್ತಿರುವನು. ಆದ್ದರಿಂದ ತೊಂದರೆಯು ನಿವೃತ್ತವಾಗಲಿ, ಆಮೇಲೆ ನಾನು ಬರುವೆನು ಎಂದು

**ನಂದನಮುಖೇಂದುಂ ಅವೇಕ್ಷ್ಯ** = ತನ್ನ ಮಗನ ಮುಖವನ್ನು ನೋಡುತ್ತಾ

**ಮಂದಂ ಪ್ರೋವಾಚ** = ಮಧ್ಯಗೇಹಭಟ್ಟರು ಮೆಲ್ಲನೆ ಹೇಳಿದರು.

**ತಾತ್ಪರ್ಯ—** ಆಟವು ಮುಗಿಯುವ ಸಮಯ. ಆಗ ಅವಸರ-ಅವಸರವಾಗಿ ಈ ಶ್ರೀವಾಸುದೇವಾಚಾರ್ಯರು ಒಮ್ಮೆ ತನ್ನ ತಂದೆಯಾಗಿರುವ ಮಧ್ಯಗೇಹಭಟ್ಟರನ್ನು ಊಟಕ್ಕಾಗಿ ಪ್ರೇರಿಸಿದರು. ಆಗ ಮಧ್ಯಗೇಹಭಟ್ಟರು ಈ ಧನಿಕನು ನನಗಾಗಿ ಎತ್ತುಗಳನ್ನು ಮಾರಿ ಇರುವನು. ಇವನು ನನ್ನ ಹಣವನ್ನು ಕೊಡದಿದ್ದರೆ ಎಲ್ಲಿಗೂ ಹೋಗಕೂಡದು ಎಂದು ಹೇಳುತ್ತಿರುವನು. ಆದ್ದರಿಂದ ಸಾಲಗಾರನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎಂದು ವಾಸುದೇವಾಚಾರ್ಯರ ತಂದೆಯು ಮೆಲ್ಲನೆ ಹೇಳಿದರು.

**ವಿಗ್ರಹ—**

**ಲೀಲಾವಸಾನಸಮಯೇ—** ಲೀಲಾಯಾಃ ಅವಸಾನಂ ಲೀಲಾವಸಾನಂ, ಲೀಲಾವಸಾನಸ್ಯ ಸಮಯಃ ಲೀಲಾವಸಾನಸಮಯಃ, ತಸ್ಮಿನ್ ಲೀಲಾವಸಾನಸಮಯೇ ।

**ಅಭ್ಯವಹೃತಿಂ—** ಅಭಿತಃ ಅವಹೃತಿಃ ಅಭ್ಯವಹೃತಿಃ, ತಾಂ ಅಭ್ಯವಹೃತಿಂ ।

**ಚೋದ್ಯಮಾನಃ—** ಚೋದ್ಯತೇ ಇತಿ ಚೋದ್ಯಮಾನಃ ।

**ಧನಿಕಃ—** ಧನಸ್ಯ ಸ್ವಾಮೀ ಧನಿಕಃ ।

**ವೃಷವಿಕ್ರಯೀ—** ವೃಷಸ್ಯ ವಿಕ್ರಯಃ ಅಸ್ಯ ಅಸ್ತಿ ಇತಿ ವೃಷವಿಕ್ರಯೀ ।

**ನಂದನಮುಖೇಂದುಂ—** ಮುಖಂ ಇಂದುಃ ಇವ ಮುಖೇಂದುಃ, ನಂದನಸ್ಯ ಮುಖೇಂದುಃ ನಂದನ-ಮುಖೇಂದುಃ, ತಂ ನಂದನಮುಖೇಂದುಂ ।

**ಕ್ರಿಯಾಪದ—** **ಪ್ರೋವಾಚ-** ಪ್ರ ಇತ್ಯುಪಸರ್ಗಪೂರ್ವಕಾತ್ ವಚ ಪರಿಭಾಷಣೇ ಇತ್ಯಸ್ಮಾತ್ ಪರಿಭಾಷಣಾರ್ಥ-ಕಾತ್ ವಚ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಪ್ರೋವಾಚ' ಇತಿ ರೂಪಮ್ ।

ಪ್ರೋವಾಚ ಪ್ರೋಚತುಃ ಪ್ರೋಚುಃ, ಪ್ರೋವಚಿಥ ಪ್ರೋವಕ್ಥ, ಪ್ರೋಚಥುಃ ಪ್ರೋಚ, ಪ್ರೋವಾಚ ಪ್ರೋವಚ, ಪ್ರೋಚಿವ ಪ್ರೋಚಿಮ ॥

★ ★ ★

ಹುಣಸೆಬೀಜದಿಂದ ಋಣಪರಿಹಾರ

**ಲೀಲಾಕರೇಣ ಸ ಕರೇಣ ಸುಕೋಮಲೇನ**
**ಬೀಜಾಂತರಾಣಿ ಕಿಲ ಕಾನಿಚಿದಾಶು ತಸ್ಮೈ ।**
**ಸ್ಮಿತ್ವಾಽರ್ಭಕೋಽಭಿಮತನಿಷ್ಕಪದೇ ಯದಾಽದಾ-**
**ದಾದತ್ತ ತಾನಿ ಧನಿಕೋ ಬಹುಮಾನಪೂರ್ವಮ್॥ 51 ॥**

**ಪದಚ್ಛೇದ—** ಲೀಲಾಕರೇಣ, ಸಃ, ಕರೇಣ, ಸುಕೋಮಲೇನ, ಬೀಜಾಂತರಾಣಿ, ಕಿಲ, ಕಾನಿಚಿತ್, ಆಶು, ತಸ್ಮೈ, ಸ್ಮಿತ್ವಾ, ಅರ್ಭಕಃ, ಅಭಿಮತನಿಷ್ಕಪದೇ, ಯದಾ, ಅದಾತ್, ಆದತ್ತ, ತಾನಿ, ಧನಿಕಃ, ಬಹುಮಾನಪೂರ್ವಂ ।

**ಅನ್ವಯ—** ಅರ್ಭಕಃ ಸಃ ಲೀಲಾಕರೇಣ ಸುಕೋಮಲೇನ ಕರೇಣ ಆಶು ಸ್ಮಿತ್ವಾ ತಸ್ಮೈ ಅಭಿಮತನಿಷ್ಕಪದೇ ಕಾನಿಚಿತ್ ಬೀಜಾಂತರಾಣಿ ಯದಾ ಅದಾತ್ ತಾನಿ ಧನಿಕಃ ಬಹುಮಾನಪೂರ್ವಂ ಆದತ್ತ ಕಿಲ ।

**ಅನ್ವಯಾರ್ಥ—**

**ಅರ್ಭಕಃ ಸಃ** = ಮಗುವಿನ ರೂಪದಿಂದ ಯುಕ್ತರಾಗಿರುವ ಆ ವಾಸುದೇವಾಚಾರ್ಯರು

**ಲೀಲಾಕರೇಣ ಸುಕೋಮಲೇನ ಕರೇಣ** = ಬಾಲಕ್ರೀಡೆಯನ್ನು ಮಾಡುತ್ತಿರುವ ತುಂಬಾ ಮೃದುವಾಗಿರುವ ಕೈಯಿಂದ

**ಆಶು ಸ್ಮಿತ್ವಾ ತಸ್ಮೈ ಅಭಿಮತನಿಷ್ಕಪದೇ** = ಶೀಘ್ರವಾಗಿ ಮಂದಹಾಸ ಮಾಡಿ, ಅವನಿಗೆ, ಸಮ್ಮತವಾಗಿರುವ ರೂಪಾಯಿಗಳ ಸ್ಥಾನದಲ್ಲಿ

**ಕಾನಿಚಿತ್ ಬೀಜಾಂತರಾಣಿ ಯದಾ ಅದಾತ್** = ಕೆಲವು (ಹುಣಸೆ) ಬೀಜಗಳನ್ನು ಯಾವಾಗ ಕೊಟ್ಟನೋ

**ತಾನಿ ಧನಿಕಃ** = ಆಗ ಆ ನಾಣ್ಯಗಳನ್ನು ಶ್ರೀಮಂತನು

**ಬಹುಮಾನಪೂರ್ವಂ ಆದತ್ತ ಕಿಲ** = ತುಂಬಾ ಮರ್ಯಾದೆಯನ್ನು ಮಾಡುತ್ತಾ ಸ್ವೀಕರಿಸಿದನು.

**ತಾತ್ಪರ್ಯ—** ಶ್ರೀವಾಸದೇವಾಚಾರ್ಯರು ಈ ಮಾತುಗಳನ್ನು ಕೇಳಿದರು. ಆಟದಲ್ಲೇ ಆಸಕ್ತರಾಗಿರುವ ಶ್ರೀವಾಸುದೇವಾಚಾರ್ಯರು ಅತಿ ಕೋಮಲವಾದ ಬೆರಳುಗಳಿಂದ ಧನಿಕನು ಹೇಳಿರುವ ಸಂಖ್ಯೆಗಳನ್ನು ಗಣನೆ ಮಾಡಿದರು. ಕೆಲವು ಹುಣಿಸೆ ಬೀಜಗಳನ್ನು ಲೆಕ್ಕ ಮಾಡಿಕೊಟ್ಟರು. ಎಲೋ ಶ್ರೀಮಂತನೇ, ನಿನ್ನ ಹಣವು ಬಂದಿತೇ ಎಂದು ಕೇಳಿದರು. ಆ ಧನಿಕನು ಬಹುಮಾನಪೂರ್ವಕವಾಗಿ ಬಂತು ಎಂದು ಹೇಳಿದನು. ಹೀಗೆ ಶ್ರೀವಾಸುದೇವಾಚಾರ್ಯರು ನಗುತ್ತಾ ಸಾಲವನ್ನು ತೀರಿಸಿದರು.

**ವಿಗ್ರಹ—**

**ಲೀಲಾಕರೇಣ—** ಲೀಲಾಯಾಃ ಆಕರಃ ಲೀಲಾಕರಃ, ತೇನ ಲೀಲಾಕರೇಣ ।

**ಸುಕೋಮಲೇನ—** ಅತ್ಯಂತಂ ಕೋಮಲಃ ಸುಕೋಮಲಃ, ತೇನ ಸುಕೋಮಲೇನ ।

**ಬೀಜಾಂತರಾಣಿ—** ಅನ್ಯಾನಿ ಬೀಜಾನಿ ಬೀಜಾಂತರಾಣಿ ತಾನಿ ಬೀಜಾಂತರಾಣಿ ।

**ಅಭಿಮತನಿಷ್ಕಪದೇ—** ಅಭಿಮತಾನಿ ಚ ತಾನಿ ನಿಷ್ಕಾಣಿ ಚ ಅಭಿಮತನಿಷ್ಕಾಣಿ, ಅಭಿಮತನಿಷ್ಕಾಣಾಂ ಪದಂ ಅಭಿಮತನಿಷ್ಕಪದಂ, ತಸ್ಮಿನ್ ಅಭಿಮತನಿಷ್ಕಪದೇ ।

**ಧನಿಕಃ—** ಧನಂ ಅಸ್ಯ ಅಸ್ತಿ ಇತಿ ಧನಿಕಃ ।

**ಬಹುಮಾನಪೂರ್ವಂ—** ಬಹುಮಾನಃ ಪೂರ್ವಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಬಹುಮಾನಪೂರ್ವಂ ।

**ಕ್ರಿಯಾಪದ—** **ಅದಾತ್**- ಡು ದಾಞ್ ದಾನೇ ಇತಿ ದಾನಾರ್ಥಕಾತ್ ದಾಞ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ಪರಸ್ಮೈಪದಿನಃ 'ಅದಾತ್' ಇತಿ ರೂಪಮ್ ।

ಅದಾತ್ ಅದಾತಾಂ ಅದುಃ, ಅದಾಃ ಅದಾತಂ ಅದಾತ, ಅದಾಂ ಅದಾವ ಅದಾಮ ॥

★ ★ ★

**ಪುರುಷಾರ್ಥ ಕಾರಣವಾದ ಹುಣಸೇಬೀಜ**

**ಲಬ್ಧಂ ಸುತಾದಿತಿ ವದನ್ ದ್ವಿಜಪುಂಗವೇನ**
**ಕಾಲಾಂತರೇ ನಿಜಧನೇ ಪ್ರತಿದಿತ್ಸಿತೇಽಪಿ ।**
**ಸಾಕ್ಷಾದಮಾನವನವಾಕೃತಿತಃ ಸ ಲೇಭೇ**
**ಬೀಜಚ್ಛಲೇನ ಪುರುಷಾರ್ಥಮಹೋ ವಿಶಿಷ್ಟಮ್ ॥ 52 ॥**

**ಪದಚ್ಛೇದ—** ಲಬ್ಧಂ, ಸುತಾತ್, ಇತಿ, ವದನ್, ದ್ವಿಜಪುಂಗವೇನ, ಕಾಲಾಂತರೇ, ನಿಜಧನೇ, ಪ್ರತಿದಿತ್ಸಿತೇ, ಅಪಿ, ಸಾಕ್ಷಾದಮಾನವನವಾಕೃತಿತಃ, ಸಃ, ಲೇಭೇ, ಬೀಜಚ್ಛಲೇನ, ಪುರುಷಾರ್ಥಂ, ಅಹೋ ವಿಶಿಷ್ಟಂ ।

**ಅನ್ವಯ—** ದ್ವಿಜಪುಂಗವೇನ ಸುತಾತ್ ಲಬ್ಧಂ ನಿಜಧನೇ ಪ್ರತಿದಿತ್ಸಿತೇ ಅಪಿ ಇತಿ ವದನ್ ಸಃ ಕಾಲಾಂತರೇ ಸಾಕ್ಷಾದಮಾನವನವಾಕೃತಿತಃ ವಿಶಿಷ್ಟಂ ಪುರುಷಾರ್ಥಂ ಬೀಜಚ್ಛಲೇನ ಲೇಭೇ, ಅಹೋ ।

**ಅನ್ವಯಾರ್ಥ—**

**ದ್ವಿಜಪುಂಗವೇನ** = ಬ್ರಾಹ್ಮಣರಲ್ಲಿ ಶ್ರೇಷ್ಠರಾಗಿರುವ ಮಧ್ಯಗೇಹಭಟ್ಟರಿಂದ

**ಸುತಾತ್ ಲಬ್ಧಂ** = ನಿಮ್ಮ ಮಗನಿಂದ ಲಬ್ಧವಾಯಿತು ಎಂದು

**ನಿಜಧನೇ ಪ್ರತಿದಿತ್ಸಿತೇ ಅಪಿ** = ತನ್ನ ಹಣವು ತಿರುಗಿಸಿಕೊಡಬೇಕು ಎಂದು ಮನಸ್ಸಿಗೆ ಇಷ್ಟವಾಗಿದ್ದರೂ

**ಇತಿ ವದನ್ ಸಃ** = ಎಂದು ಹೇಳುತ್ತಿರುವವರಾದ ಆ ಶ್ರೀವಾಸುದೇವಾಚಾರ್ಯರು

**ಕಾಲಾಂತರೇ ಸಾಕ್ಷಾದಮಾನವನವಾಕೃತಿತಃ** = ಕೆಲವು ಕಾಲದ ನಂತರ ಸಾಕ್ಷಾತ್ತಾಗಿ ದೇವತೆಗಳಲ್ಲಿ ಮುಖ್ಯ- ವಾಗಿರುವ ಮುಖ್ಯಪ್ರಾಣದೇವರ ಸುಂದರವಾದ ಆಕಾರದಿಂದ

**ವಿಶಿಷ್ಟಂ ಪುರುಷಾರ್ಥಂ** = ವಿಶಿಷ್ಟವಾದ ಪುರುಷಾರ್ಥ (ಮೋಕ್ಷ)ವನ್ನು

**ಬೀಜಚ್ಛಲೇನ ಲೇಭೇ** = ಹುಣಸೇಬೀಜದ ನೆಪದಿಂದ ಹೊಂದಿದನು.

**ಅಹೋ** = ಆಶ್ಚರ್ಯ !

**ತಾತ್ಪರ್ಯ—** ಮಧ್ಯಗೇಹಭಟ್ಟರು ಧನಿಕನಿಂದ ಸಾಲವನ್ನು ತೆಗೆದುಕೊಂಡು ಎತ್ತನ್ನು ಸ್ವೀಕರಿಸಿರುವುದು ನಿಜ. ಆ ಧನಿಕನನ್ನು ನೋಡಿದ ಕೂಡಲೆ ಆ ಸಾಲವನ್ನು ಮಧ್ಯಗೇಹಭಟ್ಟರು ನೆನೆಸಿರುವುದೂ ನಿಜ. ಆ ಸಾಲವನ್ನು ತೀರಿಸಿದ ಮೇಲೆಯೇ ಬೆಳಗಿನ ಊಟಕ್ಕಾಗಿ ಮಧ್ಯಗೇಹಭಟ್ಟರು ಹೊರಡಬೇಕಾದದ್ದೂ ನ್ಯಾಯವಾಗಿದೆ. ಆದರೆ ಈ ಮುಖ್ಯಪ್ರಾಣದೇವರು ಸಾಮಾನ್ಯರಲ್ಲ. ದೇವತಾಸಾರ್ವಭೌಮರು. ಅವರ ಶರೀರವೂ ಹೊಸದಾಗಿದೆ. ಈ ಹುಣಸೇ-ಬೀಜದ ನೆಪದಿಂದ ವಿಶಿಷ್ಟವಾದ ಪುರುಷಾರ್ಥವನ್ನು ಧನಿಕನಿಗೆ ಕೊಟ್ಟರು. ಆಹಾ ! ಇದಲ್ಲವೇ ಆಶ್ಚರ್ಯ !

**ವಿಗ್ರಹ—**

**ವದನ್—** ವದತಿ ಇತಿ ವದನ್ ।

**ದ್ವಿಜಪುಂಗವೇನ—** ದ್ವಿಜಾನಾಂ ಪುಂಗವಃ ದ್ವಿಜಪುಂಗವಃ, ತೇನ ದ್ವಿಜಪುಂಗವೇನ ।

**ಕಾಲಾಂತರೇ—** ಅನ್ಯಃ ಕಾಲಃ ಕಾಲಾಂತರಂ, ತಸ್ಮಿನ್ ಕಾಲಾಂತರೇ ।

**ನಿಜಧನೇ—** ನಿಜಂ ಚ ತತ್ ಧನಂ ಚ ನಿಜಧನಂ, ತಸ್ಮಿನ್ ನಿಜಧನೇ ।

**ಪ್ರತಿದಿತ್ಸಿತೇ—** ಪ್ರತಿಪಾದಿತುಂ ಇಷ್ಟಂ ಪ್ರತಿದಿತ್ಸಿತಂ, ತಸ್ಮಿನ್ ಪ್ರತಿದಿತ್ಸಿತೇ ।

**ಅಮಾನವನವಾಕೃತಿತಃ—** ಮಾನವಃ ನ ಭವತೀತಿ ಅಮಾನವಃ, ನವಾ ಚ ಸಾ ಆಕೃತಿಶ್ಚ ನವಾಕೃತಿಃ, ಅಮಾನವಸ್ಯ ನವಾಕೃತಿಃ, ಅಮಾನವನವಾಕೃತಿಃ ತಸ್ಮಾತ್ ಅಮಾನವನವಾಕೃತಿತಃ ।

**ಬೀಜಚ್ಛಲೇನ—** ಬೀಜಂ ಇತಿ ಛಲಂ ಬೀಜಚ್ಛಲಂ, ತೇನ ಬೀಜಚ್ಛಲೇನ ।

**ಪುರುಷಾರ್ಥಂ—** ಪುರುಷೈಃ ಅರ್ಥ್ಯಮಾನಂ ಪುರುಷಾರ್ಥಂ ।

**ಕ್ರಿಯಾಪದ— ಲೇಭೇ-** ಡು ಲಭಷ್ ಪ್ರಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ ಲಭಷ್ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಲೇಭೇ' ಇತಿ ರೂಪಮ್।

ಲೇಭೇ ಲೇಭಾತೇ ಲೇಭಿರೇ, ಲೇಭಿಷೇ ಲೇಭಾತೇ ಲೇಭಿಧ್ವೇ, ಲೇಭೇ ಲೇಭಿವಹೇ ಲೇಭಿಮಹೇ ॥

★ ★ ★

ವಾಸುದೇವನಿಂದ ಸಜ್ಜನಸಮೂಹ ಸಂತಸಪಟ್ಟಿತು

**ವಾಸುದೇವಮಿಹ ವಾಽಸುದೇವತಾಸತ್ಕಲಾಮಭಿನನಂದ ತಂ ಜನಃ ।**
**ವಾಸುದೇವಮಿತಿ ವಾಸುದೇವಸನ್ನಾಮಕಂ ವಿವಿಧಲೀಲಮರ್ಭಕಮ್ ॥ 53 ॥**

**ಪದಚ್ಛೇದ—** ವಾಸುದೇವಂ, ಇಹ, ವಾ, ಅಸುದೇವತಾಸತ್ಕಲಾಂ, ಅಭಿನನಂದ, ತಂ, ಜನಃ, ವಾಸುದೇವಂ, ಇತಿ, ವಾಸುದೇವಸನ್ನಾಮಕಂ ವಿವಿಧಲೀಲಂ, ಅರ್ಭಕಂ ।

**ಅನ್ವಯ—** ಜನಃ ಇಹ (ವರ್ತಮಾನಂ) ವಾಸುದೇವಂ ಅಸುದೇವತಾಸತ್ಕಲಾಂ ಇತಿ ವಿವಿಧಲೀಲಂ ವಾಸುದೇವಸನ್ನಾಮಕಂ ತಂ ಅರ್ಭಕಂ ವಾಸುದೇವಂ, ವಾಸುದೇವಂ ವಾ ಅಭಿನನಂದ ।

**ಅನ್ವಯಾರ್ಥ—**

**ಜನಃ** = ಸಜ್ಜನರು

**ಇಹ (ವರ್ತಮಾನಂ)** = ಭುವಿಯಲ್ಲಿ ಇರುವ

**ವಾಸುದೇವಂ** = ವಾಸುದೇವನನ್ನು

**ಅಸುದೇವತಾಸತ್ಕಲಾಂ ಇತಿ** = ಮುಖ್ಯಪ್ರಾಣದೇವರ ಸತ್ಕಲೆಯನ್ನು ಅಂದರೆ ನಿರ್ದುಷ್ಟವಾಗಿರುವ ಅಂಶವೆಂದು

**ವಿವಿಧಲೀಲಂ** = ನಾನಾವಿಧವಾದ ಲೀಲೆಗಳನ್ನು ಮಾಡುತ್ತಿರುವ

**ವಾಸುದೇವಸನ್ನಾಮಕಂ** = ವಾಸುದೇವ ಎಂಬ ನಿರ್ದುಷ್ಟವಾದ ಹೆಸರಿನಿಂದ ಯುಕ್ತವಾಗಿರುವ

**ಅರ್ಭಕಂ** = ಆ ಬಾಲಕನನ್ನು

**ವಾಸುದೇವಂ** = ವಸುದೇವನ ಮಗನಾದ,

**ವಾಸುದೇವಂ ವಾ** = ಶ್ರೀಕೃಷ್ಣನನ್ನು ಎಂಬಂತೆ,

**ಅಭಿನನಂದ** = ಕೇಳಿ, ನೋಡಿ ಸಂತೋಷಪಟ್ಟರು.

**ತಾತ್ಪರ್ಯ—** ಸಜ್ಜನರು ಈ ಭೂಮಿಯಲ್ಲಿ ವಾಸಿಸುತ್ತಿರುವ ವಾಸುದೇವನನ್ನು ಅಸುದೇವತೆಯ ಸತ್ಕಲೆ ಅಂದರೆ ನಿರ್ದುಷ್ಟವಾದ ಕಲೆ ಎಂದು ತಿಳಿದರು. ನಿರ್ದುಷ್ಟನಾದ ಬಾಲಕನೆಂದು ತಿಳಿದರು. ವಾಸುದೇವ ಎಂಬ ಅವನ ಹೆಸರು ನಿರ್ದುಷ್ಟವಾದ ಹೆಸರು ಎಂದು ತಿಳಿದರು. ಹಾಗೆಯೇ ಕಿವಿಯಿಂದ ಕೇಳಿದರು. ಕಣ್ಣುಗಳಿಂದ ನೋಡಿದರು. ಮನಸ್ಸಿನಿಂದ ಹೊಗಳಿದರು.

**ವಿಗ್ರಹ—**

**ವಾಸುದೇವಃ—** ವಸುದೇವಸ್ಯ ಅಪತ್ಯಂ ಪುಮಾನ್ ವಾಸುದೇವಃ ।

**ಅಸುದೇವತಾಸತ್ಕಲಾಂ—** ಅಸೂನಾಂ ದೇವತಾ ಅಸುದೇವತಾ, ಅಸುದೇವತಾನಾಂ ಸತೀ ಕಲಾ ಅಸು-ದೇವತಾಸತ್ಕಲಾ, ತಾಂ ಅಸುದೇವತಾಸತ್ಕಲಾಂ ।

**ವಿವಿಧಲೀಲಂ—** ವಿವಿಧಾ ಲೀಲಾ ಯಸ್ಯ ಸಃ ವಿವಿಧಲೀಲಃ ತಂ ವಿವಿಧಲೀಲಮ್ ।

**ವಾಸುದೇವಸನ್ನಾಮಕಂ—** ಸಚ್ಚ ತತ್ ನಾಮ ಚ ಸನ್ನಾಮ, ವಾಸುದೇವ ಇತಿ ಸನ್ನಾಮ ಯಸ್ಯ ಸಃ ವಾಸುದೇವಸನ್ನಾಮಕಃ, ತಂ ವಾಸುದೇವಸನ್ನಾಮಕಂ ।

**ಕ್ರಿಯಾಪದ—** **ಅಭಿನನಂದ-** ಅಭಿ ಇತ್ಯುಪಸರ್ಗಪೂರ್ವಕಾತ್ ಟು ನದಿ ಸಮೃದ್ಧೌ ಇತಿ ಸಮೃದ್ಧ್ಯರ್ಥಕಾತ್ ನದಿಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ 'ಅಭಿನನಂದ' ಇತಿ ರೂಪಮ್ ।

ಅಭಿನನಂದ ಅಭಿನನಂದತುಃ ಅಭಿನನಂದುಃ,
ಅಭಿನನಂದಿಥ ಅಭಿನನಂದಥುಃ ಅಭಿನನಂದ,
ಅಭಿನನಂದ ಅಭಿನನಂದಿವ ಅಭಿನನಂದಿಮ ॥

★ ★ ★

**ಬಾಲವಾಸುದೇವನಿಂದ ನಲಿದ ಜಗತ್ತು**

**ಇತಿ ವಿಹರತಿ ಮಹ್ಯಾಂ ವಿಷ್ಣುದಾಸೇಽಪಿ ಗೂಢೇ**
**ಸಮಜನಿ ಸುಜನಾನಾಂ ಚಿತ್ತಮಾನಂದಪೂರ್ಣಮ್ ।**
**ಉದಯತಿ ಘನಮಾಲಾಲೀನಭಾನೌ ಚ ಭಾನೌ**
**ನನು ಜನನಯನಾಬ್ಜೈರ್ಲಭ್ಯತೇಽಲಂ ವಿಕಾಸಃ ॥ 54 ॥**

**ಪದಚ್ಛೇದ—** ಇತಿ, ವಿಹರತಿ, ಮಹ್ಯಾಂ, ವಿಷ್ಣುದಾಸೇ, ಅಪಿ, ಗೂಢೇ, ಸಮಜನಿ, ಸುಜನಾನಾಂ,ಚಿತ್ತಂ, ಆನಂದ-ಪೂರ್ಣಂ, ಉದಯತಿ, ಘನಮಾಲಾಲೀನಭಾನೌ, ಚ, ಭಾನೌ, ನನು, ಜನನಯನಾಬ್ಜೈಃ, ಲಭ್ಯತೇ, ಅಲಂ, ವಿಕಾಸಃ ।

**ಅನ್ವಯ—** ವಿಷ್ಣುದಾಸೇ ಗೂಢೇ ಅಪಿ ಮಹ್ಯಾಂ ಇತಿ ವಿಹರತಿ ಸತಿ ಸುಜನಾನಾಂ ಚಿತ್ತಂ ಆನಂದಪೂರ್ಣಂ ಸಮಜನಿ. ಭಾನೌ ಘನಮಾಲಾಲೀನಭಾನೌ ಉದಯತಿ ಸತಿ ಜನನಯನಾಬ್ಜೈಃ ಅಲಂ ವಿಕಾಸಃ ಲಭ್ಯತೇ ನನು ।

**ಅನ್ವಯಾರ್ಥ—**

**ವಿಷ್ಣುದಾಸೇ** = ಶ್ರೀಹರಿಯ ಸೇವಕನಾಗಿರುವ ಶ್ರೀವಾಸುದೇವಾಚಾರ್ಯರು ಎಂಬ ಬಾಲಕನು

**ಗೂಢೇ ಅಪಿ** = ಅವರ ಸಾಮರ್ಥ್ಯವನ್ನು ಪ್ರಕಟಿಸದಿದ್ದರೂ

**ಮಹ್ಯಾಂ ಇತಿ** = ಭೂಮಿಯಲ್ಲಿ ಹಿಂದೆ ಹೇಳಿದ ರೀತಿಯಿಂದ

**ವಿಹರತಿ ಸತಿ** = ಆಟವನ್ನು ಆಡುತ್ತಿರಲು

**ಸುಜನಾನಾಂ ಚಿತ್ತಂ** = ಸಜ್ಜನರುಗಳ ಮನಸ್ಸು

**ಆನಂದಪೂರ್ಣಂ ಸಮಜನಿ** = ಆನಂದದಿಂದ ಪೂರ್ಣವಾಯಿತು.

**ಭಾನೌ** = ಸೂರ್ಯನು

**ಘನಮಾಲಾಲೀನಭಾನೌ** = ಮೇಘಗಳ ಪಂಕ್ತಿಯಿಂದ ಮುಚ್ಚಲ್ಪಟ್ಟ ಕಿರಣಗಳಿಂದ ಯುಕ್ತನಾಗಿ

**ಉದಯತಿ ಸತಿ** = ಉದಯಿಸುತ್ತಿದ್ದಾಗ

**ಜನನಯನಾಬ್ಜೈಃ** = ಜನರುಗಳ ಕಣ್ಣುಗಳಿಂದಲೂ ಕಮಲಪುಷ್ಪಗಳಿಂದಲೂ

**ಅಲಂ ವಿಕಾಸಃ ಲಭ್ಯತೇ ನನು** = ಸರಿಯಾಗಿ ಅರಳುವಿಕೆಯು ಹೊಂದುವುದಿಲ್ಲವೇ !

**ತಾತ್ಪರ್ಯ—** ಶ್ರೀ ವಾಸುದೇವಾಚಾರ್ಯರು ತಮ್ಮ ಮಹಿಮೆಗಳನ್ನು ಪ್ರಕಟಿಸದಿದ್ದರೂ ಹೇಗೆ ಸೂರ್ಯನು ಮೇಘಾಚ್ಛಾದಿತನಾದರೂ ಕಮಲಗಳು ಬಹುವಾಗಿ ಅರಳುವವೋ ಹಾಗೆಯೇ ಶ್ರೀ ವಾಸುದೇವಾಚಾರ್ಯರ ಕ್ರೀಡಾದಿಗಳಿಂದ ಜನರ ಕಮಲವೆಂಬ ಕಣ್ಣುಗಳೂ ಚೆನ್ನಾಗಿ ಅರಳಿದವು.

**ವಿಗ್ರಹ—**

**ವಿಹರತಿ—** ವಿಹರತಿ ಇತಿ ವಿಹರನ್ ।

**ವಿಷ್ಣುದಾಸೇ—** ವಿಷ್ಣೋಃ ದಾಸಃ ವಿಷ್ಣುದಾಸಃ, ತಸ್ಮಿನ್ ವಿಷ್ಣುದಾಸೇ ।

**ಗೂಢೇ—** ಗೂಢತ್ವಂ ಪ್ರಾಪ್ತಃ ಗೂಢಃ, ತಸ್ಮಿನ್ ಗೂಢೇ ।

**ಸುಜನಾನಾಂ—** ಶೋಭನಾಶ್ಚ ತೇ ಜನಾಶ್ಚ ಸುಜನಾಃ, ತೇಷಾಂ ಸುಜನಾನಾಂ ।

**ಆನಂದಪೂರ್ಣಂ—** ಆನಂದೇನ ಪೂರ್ಣಂ ಆನಂದಪೂರ್ಣಂ ।

**ಘನಮಾಲಾಲೀನಭಾನೌ—** ಘನಾನಾಂ ಮಾಲಾ ಘನಮಾಲಾ, ಘನಮಾಲಯಾ ಲೀನಃ ಘನಮಾಲಾಲೀನಃ, ಘನಮಾಲಾಲೀನಾಃ ಭಾನವಃ ಯಸ್ಯ ಸಃ ಘನಮಾಲಾಲೀನಭಾನುಃ, ತಸ್ಮಿನ್ ಘನಮಾಲಾಲೀನ-ಭಾನೌ ।

**ಜನನಯನಾಬ್ಜೈಃ—** ಜನಾನಾಂ ನಯನಾನಿ ಜನನಯನಾನಿ, ಜನನಯನಾನಿ ಅಬ್ಜಾನಿ ಇವ ಜನ-ನಯನಾಬ್ಜಾನಿ, ತೈಃ ಜನನಯನಾಬ್ಜೈಃ ।

**ಕ್ರಿಯಾಪದ—** 1) **ಲಭ್ಯತೇ-** ಡು ಲಭಷ್ ಪ್ರಾಪ್ತೌ ಪ್ರಾಪ್ತ್ಯರ್ಥಕಾತ್ ಲಭಷ್ ಧಾತೋಃ ಲಟಿ ಪ್ರಥಮಪುರುಷೇ ಏಕವಚನೇ 'ಲಭ್ಯತೇ' ಇತಿ ರೂಪಮ್ ।

ಲಭ್ಯತೇ ಲಭ್ಯೇತೇ ಲಭ್ಯಂತೇ, ಲಭ್ಯಸೇ ಲಭ್ಯೇಥೇ ಲಭ್ಯಧ್ವೇ, ಲಭ್ಯೇ ಲಭ್ಯಾವಹೇ ಲಭ್ಯಾಮಹೇ ॥

**ಸಮಜನಿ-** ಜನೀ ಪ್ರಾದುರ್ಭಾವೇ ಪ್ರಾದುರ್ಭಾವಾರ್ಥಕಾತ್ ಜನಿಧಾತೋಃ ಆತ್ಮನೇಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ಸಮಜನಿ' ಇತಿ ರೂಪಮ್ ।

ಸಮಜನಿ ಅಜನಿಷ್ಟ, ಸಮಜನಿಷಾತಾಂ ಸಮಜನಿಷತ, ಸಮಜನಿಷ್ಠಾಃ ಸಮಜನಿಷಾಥಾಂ
ಸಮಜನಿಧ್ವಂ (ಢ್ವಂ), ಸಮಜನಿಷಿ ಸಮಜನಿಷ್ವಹಿ ಸಮಜನಿಷ್ಮಹಿ ॥

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ*
*ದ್ವಿತೀಯಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ತೃತೀಯಃ ಸರ್ಗಃ

### ಬಂಧುಗಳ ವಿವಾಹಕ್ಕೆ ಪಯಣ

**ಅಥ ಕದಾಚನ ಸುಂದರನಂದನ-**
**ಸ್ಮಿತಮುಖೇಂದುದೃಶಾಂ ದಯಿತೌ ನೃಣಾಮ್ ।**
**ಮಹಮಿತೋ ನಿಜಬಂಧುಮುದೇ ಮುದಾ**
**ಪ್ರಯಯತುಃ ಸ್ವಜನೈಃ ಸಹ ದಂಪತೀ ॥ 1 ॥**

**ಪದಚ್ಛೇದ—** ಅಥ, ಕದಾಚನ, ಸುಂದರನಂದನಸ್ಮಿತಮುಖೇಂದುದೃಶಾಂ, ದಯಿತೌ, ನೃಣಾಂ, ಮಹಂ, ಇತಃ ನಿಜಬಂಧುಮುದೇ, ಮುದಾ, ಪ್ರಯಯತುಃ ಸ್ವಜನೈಃ, ಸಹ ದಂಪತೀ ।

**ಅನ್ವಯ—** ಅಥ ಕದಾಚನ ಸುಂದರನಂದನಸ್ಮಿತಮುಖೇಂದುದೃಶಾಂ ನೃಣಾಂ ದಯಿತೌ ದಂಪತೀ ಸ್ವಜನೈಃ ಸಹ ನಿಜಬಂಧುಮುದೇ ಇತಃ ಮಹಂ (ಉದ್ದಿಶ್ಯ) ಮುದಾ ಪ್ರಯಯತುಃ ।

**ಅನ್ವಯಾರ್ಥ—**

**ಅಥ** = ಕೆಲವು ವರ್ಷಗಳು ಕಳೆದ ಅನಂತರದಲ್ಲಿ

**ಕದಾಚನ** = ಯಾವತ್ತೋ ಒಂದು ದಿನದಲ್ಲಿ

**ಸುಂದರನಂದನಸ್ಮಿತಮುಖೇಂದುದೃಶಾಂ** = ಸುಂದರವಾದ ತಮ್ಮ ಕುಮಾರನಾಗಿರುವ ಶ್ರೀವಾಸುದೇವ ಎಂಬ ಬಾಲಕನ ಮುಗುಳುನಗೆಯಿಂದ ಯುಕ್ತವಾಗಿರುವ ಮುಖವೆಂಬ ಚಂದ್ರನನ್ನು ನೋಡುತ್ತಿರುವ

**ನೃಣಾಂ** = ಸಜ್ಜನರಿಗೆ

**ದಯಿತೌ** = ಅತ್ಯಂತ ಇಷ್ಟರಾದ

**ದಂಪತೀ** = ಈ ದಂಪತಿಗಳು

**ಸ್ವಜನೈಃ ಸಹ** = ಸ್ವಜನರಿಂದ ಸಹಿತರಾಗಿ

**ನಿಜ ಬಂಧುಮುದೇ** = ಸ್ವಕೀಯರಾದ ಬಂಧುಗಳ ಸಂತೋಷಕ್ಕಾಗಿ

**ಮಹಂ ಮುದಾ** = ಉತ್ಸವವನ್ನು ಕುರಿತು ಸಂತೋಷದಿಂದ

**ಇತಃ** = ತಮ್ಮ ಸ್ವಂತ ಮನೆಯಿಂದ

**ಪ್ರಯಯತುಃ** = ಹೋದರು.

**ತಾತ್ಪರ್ಯ**— ಅನಂತರದಲ್ಲಿ ಯಾವುದೋ ಒಂದು ದಿನದಲ್ಲಿ ಸುಂದರನಾದ ತಮ್ಮ ಮಗನಾದ ಶ್ರೀವಾಸುದೇವಾಚಾರ್ಯನ ಮಂದಹಾಸದಿಂದ ಯುಕ್ತವಾಗಿರುವ ಮುಖಚಂದ್ರನನ್ನು ನೋಡುತ್ತಿರುವ ಸಕಲಜನರಿಗೆ ಪ್ರಿಯರಾಗಿರುವ ಮಧ್ಯಗೇಹಭಟ್ಟರೂ ಅವರ ಪತ್ನಿಯಾಗಿರುವ ವೇದವತೀದೇವಿಯೂ ವಿವಾಹ ಮುಂತಾದ ಮಂಗಳ ಕಾರ್ಯಕ್ಕಾಗಿ ಉಡುಪಿಯಿಂದ ಬಂಧುಗಳ ಸಹಿತರಾಗಿ ಹೊರಟರು.

**ವಿಗ್ರಹ**—

**ಸುಂದರನಂದನಸ್ಮಿತಮುಖೇಂದುದೃಶಾಂ**— ಸುಂದರಶ್ಚಾಸೌ ನಂದನಶ್ಚ ಸುಂದರನಂದನಃ ಸುಂದರನಂದನಸ್ಯ ಸ್ಮಿತಯುಕ್ತಃ ಮುಖೇಂದುಃ ಸುಂದರನಂದನಸ್ಮಿತಮುಖೇಂದುಃ, ಸುಂದರನಂದನಸ್ಮಿತಮುಖೇಂದುಂ ಪಶ್ಯಂತಿ ಇತಿ ಸುಂದರನಂದನಸ್ಮಿತಮುಖೇಂದುದೃಶಃ, ತೇಷಾಂ ಸುಂದನಂದನಸ್ಮಿತಮುಖೇಂದು-ದೃಶಾಂ ।

**ನಿಜಬಂಧುಮುದೇ**— ನಿಜಾಶ್ಚತೇ ಬಂಧವಶ್ಚ ನಿಜಬಂಧವಃ, ನಿಜಬಂಧೂನಾಂ ಮುತ್ ನಿಜಬಂಧುಮುತ್ ತಸ್ಯೈ, ನಿಜಬಂಧುಮುದೇ ।

**ಕ್ರಿಯಾಪದ— ಪ್ರಯಯತುಃ**- ಪ್ರ ಇತ್ಯುಪಸರ್ಗಪೂರ್ವಕಾತ್ ಯಾ ಪ್ರಾಪಣೇ ಇತ್ಯಸ್ಮಾತ್ ಯಾ ಧಾತೋಃ ಲಿಟಿ ಪ್ರಥಮಪುರುಷೈಕವಚನೇ ''ಪ್ರಯಯೌ'' ಇತಿ ರೂಪಂ ।

ಪ್ರಯಯೌ ಪ್ರಯಯತುಃ, ಪ್ರಯಯುಃ, ಪ್ರಯಯಿಥ ಪ್ರಯಯಾಥ, ಪ್ರಯಯಥುಃ ಪ್ರಯಯ, ಪ್ರಯಯೌ ಪ್ರಯಯಿವ ಪ್ರಯಯಿಮ ॥

**ಛಂದಸ್ಸು**— ದ್ರುತವಿಲಂಬಿತ ವೃತ್ತ.

'ದ್ರುತವಿಲಂಬಿತಮಾಹ ನ ಭೌ ಭಕಾ' ಈ ವೃತ್ತದ ಲಕ್ಷಣವು.

**ಪ್ರಸ್ತಾರ**—

| ನಗಣ | ಭಗಣ | ಭಗಣ | ರಗಣ |
|---|---|---|---|
| ಅಥಕ | ದಾಚನ | ಸುಂದರ | ನಂದನ |

**ಈ ತೃತೀಯ ಸರ್ಗದಲ್ಲಿ ಎಲ್ಲಾ ಶ್ಲೋಕಗಳು, ಅಂದರೆ 1 ರಿಂದ 54 ಶ್ಲೋಕಗಳು ಮೇಲೆ ಹೇಳಿದ ದ್ರುತವಿಲಂಬಿ ವೃತ್ತದಲ್ಲಿ ರಚಿತವಾಗಿವೆ. ಇನ್ನುಳಿದ ಎರಡು ಶ್ಲೋಕಗಳಲ್ಲಿ, 55ನೇ ಶ್ಲೋಕವು ವಸಂತತಿಲಕಾ ವೃತ್ತದಲ್ಲಿಯೂ ಮತ್ತು 56 ನೇ ಶ್ಲೋಕವು ಶಿಖರಿಣೀ ವೃತ್ತದಲ್ಲಿಯೂ ರಚಿತವಾಗಿದೆ.**

★★★

ವಿವಾಹದ ಮನೆಯಿಂದ ಹೊರಟ ವಾಸುದೇವ

**ಸ್ವಜನತಾಪಗಮಾಗಮಸಂಗಮ-**
**ಪ್ರತಿಸಭಾಜಿತಪೂರ್ವಕಸಂಭ್ರಮೇ ।**
**ಅವಿದುಷೀ ಜನನೀತಿ ಸ ಬಾಲಕಃ**
**ಶರಣತೋ ರಣತೋ ನಿರಗಾನ್ನೃಭಿಃ ॥ 2 ॥**

**ಪದಚ್ಛೇದ**— ಸ್ವಜನತಾಪಗಮಾಗಮಸಂಗಮಪ್ರತಿಸಭಾಜಿತಪೂರ್ವಕಸಂಭ್ರಮೇ, ಅವಿದುಷೀ, ಜನನೀ, ಇತಿ ಬಾಲಕಃ, ಶರಣತಃ, ರಣತಃ, ನಿರಗಾತ್, ನೃಭಿಃ ।

**ಅನ್ವಯ**— ಸ್ವಜನತಾಪಗಮಾಗಮಸಂಗಮಪ್ರತಿಭಾಜಿತಪೂರ್ವಕಸಂಭ್ರಮೇ, ಜನನೀ, ಅವಿದುಷೀ ಇತಿ ಸಃ, ಬಾಲಕಃ ನೃಭಿಃ, ರಣತಃ ಶರಣತಃ ನಿರಗಾತ್ ।

**ಅನ್ವಯಾರ್ಥ—**

**ಸ್ವಜನತಾಪಗಮಾಗಮಸಂಗಮಪ್ರತಿಸಭಾಜಿತಪೂರ್ವಕಸಂಭ್ರಮೇ** = ಸ್ವಕೀಯಜನರ ಹೋಗುವಿಕೆ, ಬರುವಿಕೆ, ಅನ್ಯೋನ್ಯವಾಗಿ ಸೇರುವಿಕೆ, ಪ್ರತಿಮರ್ಯಾದೆ ಮಾಡುವಿಕೆ ಮುಂತಾದ ಸಂಭ್ರಮದ ಕೆಲಸಗಳಲ್ಲಿ

**ಜನನೀ** = ತನ್ನ ತಾಯಿಯಾಗಿರುವ ವೇದವತೀದೇವಿಯು

**ಅವಿದುಷೀ ಇತಿ** = ತನ್ನನ್ನು ಮರೆತಳು ಎಂದು

**ಸಃ** = ಆ ಬಾಲಕನು

**ನೃಭಿಃ** = ಜನರಿಂದ

**ರಣತಃ** = ಧ್ವನಿಸುತ್ತಿರುವ

**ಶರಣತಃ** = ಮನೆಯ ದೆಸೆಯಿಂದ

**ನಿರಗಾತ್** = ಹೊರಗೆ ಹೊರಟನು.

**ತಾತ್ಪರ್ಯ—** ಸ್ವಜನರ ಸಮೂಹವು ಹೋಗುವಿಕೆ, ಬರುವಿಕೆ, ಒಟ್ಟುಗೂಡುವಿಕೆ, ಪ್ರತಿಮರ್ಯಾದೆಯನ್ನು ಮಾಡುವಿಕೆ ಮುಂತಾದ ಕೆಲಸಗಳು ಸಂಭ್ರಮದ ಕೆಲಸಗಳು, ಈ ಸಂಭ್ರಮದ ಕೆಲಸಗಳಲ್ಲಿ ತನ್ನ ತಾಯಿಯಾದ ವೇದವತೀದೇವಿಯು ತನ್ನನ್ನು ಮರೆತಳೆಂದು ಆ ಬಾಲಕನು ತಿಳಿದನು. ಮನೆಯೆಲ್ಲವೂ ಕೋಲಾಹಲದಿಂದ ಯುಕ್ತವಾಗಿದೆ. ಆಗ ಕೋಲಾಹಲದಿಂದ ಯುಕ್ತವಾದ ಮನೆಯನ್ನು ಬಿಟ್ಟು ವಾಸುದೇವಾಚಾರ್ಯನು ಹೊರಟನು.

**ವಿಗ್ರಹ—**

**ಸ್ವಜನತಾಪಗಮಾಗಮಸಂಗಮಪ್ರತಿಸಭಾಜಿತಪೂರ್ವಕಸಂಭ್ರಮೇ—** ಅಪಗಮಶ್ಚ ಆಗಮಶ್ಚ ಸಂಗಮಶ್ಚ ಪ್ರತಿಸೌಭಾಜಿತಂ ಚ ಅಪಗಮಾಗಮಸಂಗಮಪ್ರತಿಸಭಾಜಿತಾನಿ, ಸ್ವಜನತಯಾಃ ಅಪಗಮಾಗಮ-ಸಂಗಮಪ್ರತಿಸಭಾಜಿತಾನಿ ಸ್ವಜನತಾಪಗಮಾಗಮಸಂಗಮಪ್ರತಿಸಭಾಜಿತಾನಿ, ಸ್ವಜನತಾಪಗಮಾಗಮ-ಸಂಗಮಪ್ರತಿಸಭಾಜಿತಾನಿ ಪೂರ್ವಾಣಿ ಯಸ್ಮಿನ್ ಸಃ ಸ್ವಜನತಾಪಗಮಾಗಮಸಂಗಮತ್ರಪ್ರತಿಸಭಾ-ಜಿತಪೂರ್ವಕಃ, ಸ್ವಜನತಾಪಗಮಾಗಮಸಂಗಮಪ್ರತಿಸಭಾಜಿತಪೂರ್ವಕಶ್ಚಾಸೌ ಸಂಭ್ರಮಶ್ಚ ಸ್ವಜನತಾ-ಪಗಮಾಗಮಸಂಗಮಪ್ರತಿಸಭಾಜಿತಪೂರ್ವಕಸಂಭ್ರಮಃ ತಸ್ಮಿನ್ ಸ್ವಜನತಾಪಗಮಾಗಮಸಂಗಮ-ಪ್ರತಿಸಭಾಜಿತಪೂರ್ವಕಸಂಭ್ರಮೇ ।

**ಅವಿದುಷೀ—** ನ ವಿದುಷೀ ಅವಿದುಷೀ ।

**ಶರಣತಃ—** ಶರಣಾತ್ ಇತಿ ಶರಣತಃ ।

**ರಣನ್—** ರಣತಿ ಇತಿ ರಣನ್, ತಸ್ಮಾತ್ ರಣತಃ ।

**ಕ್ರಿಯಾಪದ—** ನಿರಗಾತ್- ನಿರ್ ಇತ್ಯುಪಸರ್ಗಪೂರ್ವಕಾತ್ ಇಣ್ ಗತೌ ಇತ್ಯಸ್ಮಾತ್ ಇಣ್ ಧಾತೋಃ ಪರಸ್ಮೈಪದಿನಃ ಲುಙ್ ಪ್ರಥಮಪುರುಷೈಕವಚನೇ ''ನಿರಗಾತ್'' ಇತಿ ರೂಪಂ ।

ನಿರಗಾತ್ ನಿರಗಾತಾಂ ನಿರಗುಃ, ನಿರಗಾಃ ನಿರಗಾತಂ ನಿರಗಾತ, ನಿರಗಾಂ ನಿರಗಾವ ನಿರಗಾಮ ॥

★ ★ ★

**ಪಥಿಕಜನರಿಂದ ಬಗೆಬಗೆಯ ಪ್ರಶ್ನೆ**

**ಕ್ವನು ಯಿಯಾಸಸಿ ತಾತ ನ ಸಾಂಪ್ರತಂ**
**ಸ್ವಜನಸಂತ್ಯಜನಂ ತವ ಸಾಂಪ್ರತಮ್ ।**

**ಇತಿ ವಿಭುಃ ಪಥಿಕೈರುದಿತೋ ವ್ರಜನ್**

**ಸ್ಮಿತಮನಾಕುಲಮುತ್ತರಮಾತನೋತ್ ॥ 3 ॥**

**ಪದಚ್ಛೇದ—** ಕ್ವ, ನು, ಯಿಯಾಸಸಿ, ತಾತ, ನ, ಸಾಂಪ್ರತಂ, ಸ್ವಜನಸಂತ್ಯಜನಂ, ತವ, ಸಾಂಪ್ರತಂ, ಇತಿ, ವಿಭುಃ, ಪಥಿಕೈಃ ಉದಿತಃ ವ್ರಜನ್, ಸ್ಮಿತಂ, ಅನಾಕುಲಂ, ಉತ್ತರಂ, ಆತನೋತ್ ।

**ಅನ್ವಯ—** ಹೇ ತಾತ, ಕ್ವ ನು ಯಿಯಾಸಸಿ ತವ ಸಾಂಪ್ರತಂ ಸ್ವಜನಸಂತ್ಯಜನಂ ನ ಸಾಂಪ್ರತಂ ಇತಿ ಪಥಿಕೈಃ ಉದಿತಃ ವಿಭುಃ ವ್ರಜನ್ ಅನಾಕುಲಂ ಸ್ಮಿತಂ, ಉತ್ತರಂ ಆತನೋತ್ ।

**ಅನ್ವಯಾರ್ಥ—**

**ಹೇ ತಾತ** = ಎಲೈ ಮಗುವೇ

**ಕ್ವನು** = ಎಲ್ಲಿಗೆ ತಾನೇ

**ಯಿಯಾಸಸಿ** = ಹೋಗುವ ಆಸೆಯುಳ್ಳವನಾಗಿರುವಿ,

**ತವ** = ನಿನಗೆ

**ಸಾಂಪ್ರತಂ** = ಈಗ

**ಸ್ವಜನಸಂತ್ಯಜನಂ** = ಸ್ವಜನರ ಪರಿತ್ಯಾಗವು

**ನ ಸಾಂಪ್ರತಂ** = ಯುಕ್ತವಲ್ಲ

**ಇತಿ** = ಹೀಗೆಂದು

**ಪಥಿಕೈಃ** = ಹಾದಿಯಲ್ಲಿ ಹೋಗುತ್ತಿರುವವರಿಂದ

**ಉದಿತಃ** = ಹೇಳಲ್ಪಟ್ಟ

**ವ್ರಜನ್** = ಹೋಗುತ್ತಿರುವ

**ವಿಭುಃ** = ಸಮರ್ಥನಾದ ವಾಸುದೇವನು

**ಅನಾಕುಲಂ ಸ್ಮಿತಂ** = ವ್ಯಾಕುಲತೆಯಿಲ್ಲದವನಾಗಿ ಮುಗುಳುನಗೆಯನ್ನು

**ಉತ್ತರಂ** = ಉತ್ತರವನ್ನಾಗಿ

**ಆತನೋತ್** = ಮಾಡಿದನು.

**ತಾತ್ಪರ್ಯ—** ನೀನು ಎಲ್ಲಿಗೆ ಹೋಗಬೇಕೆಂದು ಆಲೋಚನೆ ಮಾಡುತ್ತಿರುವಿ. ಈಗ ಸ್ವಜನರ ಪರಿತ್ಯಾಗವು ನಿನಗೆ ಯೋಗ್ಯವಲ್ಲ ಎಂದು ಹಾದಿಯಲ್ಲಿ ಹೋಗುತ್ತಿರುವವರು ಕೇಳಿದರು. ಹಾಗೆ ಕೇಳಿದವರಿಗೆ ಮೆಲ್ಲನೆ ಯಾವ ಭಯವೂ ಇಲ್ಲದಂತೆ ಮುಗುಳ್ನಗೆಯನ್ನೇ ಉತ್ತರವನ್ನಾಗಿ ಕೊಟ್ಟನು.

**ವಿಗ್ರಹ—**

**ಯಿಯಾಸಸಿ—** ಯಾತುಂ ಇಚ್ಛಸಿ ಯಿಯಾಸಸಿ ।

**ಸ್ವಜನಸಂತ್ಯಜನಂ—** ಸ್ವಸ್ಯ ಜನಃ ಸ್ವಜನಃ, ಸ್ವಜನಸ್ಯ ಸಂತ್ಯಜನಂ ಸ್ವಜನಸಂತ್ಯಜನಂ ।

**ಪಥಿಕೈಃ—** ಪಥಿ ಸಾಧವಃ ಪಥಿಕಾಃ, ತೈಃ ಪಥಿಕೈಃ ।

**ಅನಾಕುಲಂ—** ನ ವಿದ್ಯತೇ ಆಕುಲಂ ಭವತಿ ಯಥಾ ತಥಾ ಅನಾಕುಲಂ ।

**ಕ್ರಿಯಾಪದ—** ಆಙ್ ಇತ್ಯುಪಸರ್ಗಪೂರ್ವಕಾತ್ ತನು ವಿಸ್ತಾರೇ ಇತಿ ವಿಸ್ತಾರಾರ್ಥಕಾತ್ ತನುಧಾತೋ ಲಙ್ ಪ್ರಥಮಪುರುಷೈಕವಚನೇ ಆತನೋತ್ ಇತಿ ರೂಪಂ ।

| | | | |
|---|---|---|---|
| ಆ+ಅತನೋತ್ | ಆತನೋತ್ | ಆತನುತಾಂ | ಆತನ್ವನ್ |
| | ಆತನೋಃ | ಆತನುತಂ | ಆತನುತ |
| | ಆತನವಂ | ಆತನುವ-ಆತನ್ವ | ಆತನುಮ ಆತನ್ಮ |

★ ★ ★

**ಕುಡುಪೂರು ತಾಳಿಕುಡೆ ದೇವಸ್ಥಾನಗಳಿಗೆ ವಾಸುದೇವನ ಪಯಣ**

**ತ್ವರಿತಮೇತ್ಯ ಸ ಕಾನನದೇವತಾ-**
**ಸದನಮತ್ರ ನನಾಮ ರಮಾಪತಿಮ್ ।**
**ಅಪಿ ತತಃ ಪ್ರಗತೋ ಲಘುನಾರಿಕೇ-**
**ಳ್ಯುಪಪದಾಂತರಸದ್ಮಗತಂ ಚ ತಂ ॥ 4 ॥**

**ಪದಚ್ಛೇದ—** ತ್ವರಿತಂ, ಏತ್ಯ, ಸಃ, ಕಾನನದೇವತಾಸದನಂ, ಅತ್ರ, ನನಾಮ, ರಮಾಪತಿಂ, ಅಪಿ, ತತಃ, ಪ್ರಗತಃ, ಲಘುನಾರಿಕೇಳ್ಯುಪಪದಾಂತರಸದ್ಮಗತಂ, ಚ, ತಂ ।

**ಅನ್ವಯ—** ತ್ವರಿತಂ, ಸಃ, ಕಾನನದೇವತಾಸದನಂ, ಏತ್ಯ , ಅತ್ರ, ರಮಾಪತಿಂ, ನನಾಮ, ತತಃ ಅಪಿ ಪ್ರಗತಃ (ಸನ್) ಲಘುನಾರಿಕೇಳ್ಯುಪಪದಾಂತರಸದ್ಮಗತಂ ಚ ತಂ ನನಾಮ ।

**ಅನ್ವಯಾರ್ಥ—**

**ತ್ವರಿತಂ** = ಬೇಗನೇ
**ಸಃ** = ಆ ವಾಸುದೇವನು
**ಕಾನನದವತಾಸದನಂ** = ಕಾಡಿನಲ್ಲಿರುವ ವಿಷ್ಣುಮಂದಿರವನ್ನು
**ಏತ್ಯ** = ಹೊಂದಿ
**ಅತ್ರ** = ಈ ಮಂದಿರದಲ್ಲಿರುವ
**ರಮಾಪತಿಂ** = ರಮಾಪತಿಯಾಗಿರುವ ನಾರಾಯಣನನ್ನು
**ನನಾಮ** = ನಮಸ್ಕರಿಸಿದನು.
**ತತಃ ಅಪಿ** = ಆ ದೇವಾಲಯದಿಂದಲೂ
**ಲಘುನಾರಿಕೇಳ್ಯುಪಪದಾಂತರಸದ್ಮಗತಂ ಚ ತಂ** = ಲಘುನಾರಿಕೇಳಿ ಎಂಬ ಉಪಪದದಿಂದ ಯುಕ್ತವಾಗಿರುವ ಮಂದಿರದಲ್ಲಿರುವ ಆ ಶ್ರೀಹರಿಯನ್ನು
**ಪ್ರಗತಃ** = ಹೊಂದಿದವನಾಗಿ
**ನನಾಮ** = ನಮಸ್ಕರಿಸಿದನು.

**ತಾತ್ಪರ್ಯ—** ಬೇಗನೆ ಶ್ರೀವಾಸುದೇವನು ಕಾಡಿನಲ್ಲಿರುವ ಕಾನನದೇವಮಂದಿರವನ್ನು ಹೊಂದಿದನು. ಅಲ್ಲಿರುವ ಶ್ರೀರಮಾಪತಿಯನ್ನು ನಮಸ್ಕರಿಸಿದನು. ಅಲ್ಲಿಂದ 'ಲಘುನಾರಿಕೇಳಿ' ಎಂಬ ಉಪಪದದಿಂದ ಯುಕ್ತವಾಗಿರುವ ಮಂದಿರದಲ್ಲಿರುವ ಶ್ರೀಹರಿಯನ್ನೂ ನಮಸ್ಕರಿಸಿದನು.

ವಿಗ್ರಹ—

**ಕಾನನದೇವತಾ—** ಕಾನನೇ ದೇವತಾ ಕಾನನದೇವತಾ ।

**ಕಾನನದೇವತಾಸದನಂ—** ಕಾನನದೇವತಾಯಾಃ ಸದನಂ ಕಾನನದೇವತಾಸದನಂ ।

**ರಮಾಪತಿಃ—** ರಮಾಯಾಃ ಪತಿಃ ರಮಾಪತಿಃ, ತಂ ರಮಾಪತಿಂ ।

**ಲಘುನಾರಿಕೇಳ್ಯುಪಪದಾಂತರಸದ್ಮಗತಂ—** ಲಘುಶ್ಚಾಸೌ ನಾರಿಕೇಳೀ ಚ ಲಘುನಾರಿಕೇಳೀ, ಲಘುನಾರಿಕೇಳೀ ಇತ್ಯುಪಪದಂ ಅಂತರಂ ಯಸ್ಯ ತತ್ ಲಘುನಾರಿಕೇಳೀತ್ಯುಪಪದಾಂತರಂ, ಲಘುನಾರಿಕೇಳ್ಯುಪಪದಾಂತರಂ ಚ ತತ್ ಸದ್ಮ ಚ ಲಘುನಾರಿಕೇಳ್ಯುಪಪದಾಂತರಂಸದ್ಮ , ಲಘುನಾರಿಕೇಳ್ಯುಪಪದಾಂತರಸದ್ಮನಿ ಗತಃ ಲಘುನಾರಿಕೇಳ್ಯುಪಪದಾಂತರಸದ್ಮಗತಃ, ತಂ ಲಘುನಾರಿಕೇಳ್ಯುಪಪದಾಂತರಸದ್ಮಗತಂ ।

**ಕ್ರಿಯಾಪದ—** ಣಮು ಪ್ರಹ್ವತ್ವೇ ಶಬ್ದೇ ಚ ಇತಿ ಪ್ರಹ್ವತ್ವ ಶಬ್ದಾರ್ಥಕಾತ್ ಣಮ್ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೈಕವಚನೇ 'ನನಾಮ' ಇತಿ ರೂಪಂ ।

ನನಾಮ ನೇಮತುಃ ನೇಮುಃ, ನೇಮಿಥ ನನಂಥ, ನೇಮಥುಃ ನೇಮ, ನನಾಮ ನನಮ,
ನೇಮಿವ ನೇಮಿಮ ॥

★ ★ ★

### ದೇವೋತ್ತಮನ ದರ್ಶನ ಪಡೆದ ಜೀವೋತ್ತಮ

**ನಳಿನನಾಭನಿಭಾಲನಸಂಮದಾ-**
**ಗಮವಿಕಸ್ವರಭಾಸ್ವರಲೋಚನಃ ।**
**ಜನಮನೋನಯನಾಂಬುಜಭಾಸ್ಕರೋ**
**ರಜತಪೀಠಪುರಂ ಪ್ರಯಯಾವಸೌ ॥ 5 ॥**

**ಪದಚ್ಛೇದ—** ನಳಿನನಾಭನಿಭಾಲನಸಂಮದಾಗಮವಿಕಸ್ವರಭಾಸ್ವರಲೋಚನಃ, ಜನಮನೋನಯನಾಂಬುಜಭಾಸ್ಕರಃ, ರಜತಪೀಠಪುರಂ, ಪ್ರಯಯೌ, ಅಸೌ ।

**ಅನ್ವಯ—** ನಳಿನನಾಭನಿಭಾಲನಸಂಮದಾಗಮವಿಕಸ್ವರಭಾಸ್ವರಲೋಚನಃ ಜನಮನೋನಯನಾಂಬುಜಭಾಸ್ಕರಃ, ರಜತಪೀಠಪುರಂ ಪ್ರಯಯೌ ।

**ಅನ್ವಯಾರ್ಥ—**

ನಳಿನನಾಭನಿಭಾಲನಸಂಮದಾಗಮವಿಕಸ್ವರಭಾಸ್ವರಲೋಚನಃ —

ನಳಿನನಾಭ = ಪದ್ಮನಾಭನ

ನಿಭಾಲನ = ದರ್ಶನದಿಂದ ಉಂಟಾದ

ಸಮ್ಮದ = ಸಂತೋಷದ ಪ್ರಾಪ್ತಿಯಿಂದ

ವಿತಸ್ವರ = ಅರಳಿದ

ಭಾಸ್ವರ = ಪ್ರಕಾಶಮಾನವಾದ

ಲೋಚನಃ = ಕಣ್ಣುಗಳುಳ್ಳ

**ಜನಮನೋ —**

ಜನ = ಜನರ

ಮನಃ = ಮನಸ್ಸುಗಳೆಂಬ

**ನಯನಾಂಬುಜ ಭಾಸ್ಕರಃ —**

ನಯನ = ಕಣ್ಣುಗಳೆಂಬ

ಅಂಬುಜ = ಕಮಲಗಳಿಗೆ

ಭಾಸ್ಕರ = ಸೂರ್ಯನಾದ

**ಅಸೌ** = ಆ ವಾಸುದೇವನು

**ರಜತಪೀಠಪುರಂ** = ಉಡುಪಿಯನ್ನು ಕುರಿತು

**ಪ್ರಯಯೌ** = ಹೋದನು.

**ತಾತ್ಪರ್ಯ—** ಈ ವಾಸುದೇವನು ಅರಣ್ಯದಲ್ಲಿರುವ ಶ್ರೀಮನ್ನಾರಾಯಣನನ್ನು ನೋಡುವುದರಿಂದ ಆನಂದ-ಗೊಂಡನು. ಮುಂದೆ ತನ್ನನ್ನು ನೋಡುತ್ತಿರುವ ಜನರ ಮನಸ್ಸು ಮತ್ತು ಕಮಲದಂತಿರುವ ಕಣ್ಣುಗಳನ್ನು ಸೂರ್ಯನಂತೆ ಸಂತೋಷಗೊಳಿಸುತ್ತ ಉಡುಪಿಗೆ ಹೋದನು.

**ವಿಗ್ರಹ—**

**ನಳಿನನಾಭಃ—** ನಳಿನಂ ನಾಭೌ ಯಸ್ಯ ಸಃ, ನಳಿನನಾಭಃ ।

**ನಳಿನನಾಭನಿಭಾಲನಂ—** ನಳಿನನಾಭಸ್ಯ ನಿಭಾಲನಂ ನಳಿನನಾಭನಿಭಾಲನಂ ।

**ನಳಿನನಾಭನಿಭಾಲನಸಂಮದಾಗಮಃ—** ನಳಿನನಾಭನಿಭಾಲನೇನ ಸಮ್ಮದಃ ನಳಿನನಾಭನಿಭಾಲನಸಮ್ಮದಃ, ನಳಿನನಾಭನಿಭಾಲನಸಂಮದಸ್ಯ ಆಗಮಃ ನಳಿನನಾಭನಿಭಾಲನಸಂಮದಾಗಮಃ, ನಳಿನನಾಭನಿಭಾ-ಲನಸಂಮದಾಗಮೇನ ವಿಕಸ್ವರೇ ಭಾಸ್ವರೇ ಲೋಚನೇ ಯಸ್ಯ ಸಃ ನಳಿನನಾಭನಿಭಾಲನ-ಸಂಮದಾಗಮವಿಕಸ್ವರಭಾಸ್ವರಲೋಚನಃ ।

**ಜನಮನೋನಯನಾಂಬುಜಭಾಸ್ಕರಃ—** ಜನಾನಾಂ ಮನಾಂಸಿ ಏವ ನಯನಾಂಬುಜೇ ಜನಮನೋನಯ-ನಾಂಬುಜೇ, ಜನಮನೋನಯನಾಂಬುಜಯೋಃ ಭಾಸ್ಕರಃ ಜನಮನೋನಯನಾಂಬುಜಭಾಸ್ಕರಃ ।

**ರಜತಪೀಠಪುರಂ—** ರಜತಪೀಠಂ ಇತಿ ಪುರಂ ರಜತಪೀಠಪುರಂ ।

**ಕ್ರಿಯಾಪದ— ಪ್ರಯಯೌ-** ಪ್ರ ಇತ್ಯುಪಸರ್ಗಪೂರ್ವಕಾತ್ ಯಾ ಪ್ರಾಪಣೇ ಇತ್ಯಸ್ಮಾತ್ ಲಿಟಿ ಪ್ರಥಮ-ಪುರುಷೈಕವಚನೇ 'ಪ್ರಯಯೌ' ಇತಿ ರೂಪಂ ।

ಪ್ರಯಯೌ ಪ್ರಯಯತುಃ ಪ್ರಯಯುಃ, ಪ್ರಯಯಿಥ ಪ್ರಯಯಾಥ, ಪ್ರಯಯಥುಃ ಪ್ರಯಯ ಪ್ರಯಯೌ ಪ್ರಯಯಿವ ಪ್ರಯಯಿಮ ॥

★ ★ ★

ವಾಸುದೇವನ ನಮಸ್ಕಾರ ವೈಭವ

**ಸುಹಯಮೇಧಗಣಾತಿಶಯಾಲವೋ**
**ಹರಿನಮಸ್ಕೃತಯಃ ಸುಕೃತಾ ಇಮಾಃ ।**
**ಇತಿ ಸುರೈರಪಿ ಭೂಸುರಮಂಡಲೈಃ**
**ಸಮನಮತ್ಸ ಸವಿಸ್ಮಯಮೀಕ್ಷಿತಃ ॥ 6 ॥**

**ಪದಚ್ಛೇದ—** ಸುಹಯಮೇಧಗಣಾತಿಶಯಾಲವಃ, ಹರಿನಮಸ್ಕೃತಯಃ, ಸುಕೃತಾಃ, ಇಮಾ, ಇತಿ, ಸುರೈಃ, ಅಪಿ, ಭೂಸುರಮಂಡಲೈಃ, ಸಮನಮತ್ ಸಃ, ಸವಿಸ್ಮಯಂ, ಈಕ್ಷಿತಃ ।

**ಅನ್ವಯ—** ಇಮಾಃ ಸುಕೃತಾಃ ಹರಿನಮಸ್ಕೃತಯಃ ಸುಹಯಮೇಧಗಣಾತಿಶಯಾಲವಃ ಇತಿ ಸುರೈಃ ಭೂಸುರ-ಮಂಡಲೈಃ ಅಪಿ ಸವಿಸ್ಮಯಂ ಈಕ್ಷಿತಃ ಸಃ ಸಮನಮತ್ ।

**ಅನ್ವಯಾರ್ಥ—**

**ಇಮಾಃ** = ಈ ಯಾವ

**ಸುಕೃತಾಃ** = ಭಕ್ತಿಶ್ರದ್ಧೆಗಳಿಂದ ಮಾಡಲ್ಪಡುವ

**ಹರಿನಮಸ್ಕೃತಯಃ** = ಶ್ರೀಹರಿಯ ನಮಸ್ಕಾರಗಳು

**ಸುಹಯಮೇಧಿಗಣಾತಿಶಯಾಲವಃ ಇತಿ** = ಸಾಂಗವಾಗಿ, ಉತ್ತಮ ಕಲ್ಪದಿಂದ ಮಾಡಿದ ಅಶ್ವಮೇಧಯಾಗ ಸಮೂಹಗಳನ್ನು ಮೀರಿಸಿರುವುದು ಎಂದು

**ಸುರೈಃ** = ದೇವತೆಗಳಿಂದ

**ಭೂಸುರಮಂಡಲೈಃ ಅಪಿ** = ಬ್ರಾಹ್ಮಣರ ಸಮೂಹಗಳಿಂದಲೂ ಕೂಡ

**ಸವಿಸ್ಮಯಂ** = ಆಶ್ಚರ್ಯದಿಂದ ಕೂಡಿದ್ದಾಗಿ

**ಈಕ್ಷಿತಃ** = ನೋಡಲ್ಪಟ್ಟ

**ಸಃ** = ವಾಸುದೇವನು

**ಸಮನಮತ್** = ಪರಮಾತ್ಮನಿಗೆ ಭಕ್ತಿಶ್ರದ್ಧೆಗಳಿಂದ ನಮಸ್ಕರಿಸಿದನು.

**ತಾತ್ಪರ್ಯ—** ಈ ವಾಸುದೇವನು ಶ್ರೀಹರಿಗೆ ಅಷ್ಟಾಂಗಪೂರ್ವಕವಾಗಿ ನಮಸ್ಕಾರಗಳನ್ನು ಚೆನ್ನಾಗಿ ಮಾಡಿದನು. ಶ್ರೀಹರಿಯ ನಮಸ್ಕಾರಗಳಿಗೆ ಶ್ರೇಷ್ಠಗಳಾದ ಅಶ್ವಮೇಧಾದಿಯಾಗಗಳಿಗಿಂತಲೂ ಅತಿಶಯವಾದ ಫಲವು ಬರುತ್ತದೆ. ಹೀಗೆಂದು ದೇವತೆಗಳೂ, ಬ್ರಾಹ್ಮಣರುಗಳೂ ಆಶ್ಚರ್ಯಪರವಶರಾಗಿ ನೋಡುತ್ತಿರುವಾಗ, ವಾಸುದೇವನು ಶ್ರೀಹರಿಗೆ ನಮಸ್ಕರಿಸಿದನು.

'ಏಕೋಽಪಿ ಕೃಷ್ಣಸ್ಯ ಕೃತಪ್ರಣಾಮೋ ದಶಾಶ್ವಮೇಧಾವಭೃತೇನ ತುಲ್ಯಃ ।
ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ ॥''

ಶ್ರೀಹರಿಗೆ (ಕೃಷ್ಣನಿಗೆ) ಭಕ್ತಿಶ್ರದ್ಧೆಗಳಿಂದ ಮಾಡಿದ ಒಂದು ಸಾಷ್ಟಾಂಗ ನಮಸ್ಕಾರವು ಕೂಡಾ ಹತ್ತು ಅಶ್ವಮೇಧ ಯಾಗಗಳನ್ನು ಚೆನ್ನಾಗಿ ಮಾಡಿ ಕೊನೆಗೆ ಅವಭೃಥಸ್ನಾನವನ್ನು ಮಾಡಿದ್ದಕ್ಕೆ ಸಮನಾಗಿದೆ. ಹತ್ತು ಅಶ್ವಮೇಧಯಾಗಗಳನ್ನು ಮಾಡಿದ ವ್ಯಕ್ತಿಯು ಕೆಲಕಾಲ ಸ್ವರ್ಗಲೋಕದಲ್ಲಿ ಚೆನ್ನಾಗಿ ಸುಖವನ್ನು ಅನುಭವಿಸಿ, ಪುನಃ ದುಃಖಮಯವಾದ ಭೂಲೋಕದಲ್ಲಿ ಹುಟ್ಟುವನು. (ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ). ಆದರೆ ಭಗವಂತನಿಗೆ, ಹರಿಗೆ, ಶ್ರೀ ಕೃಷ್ಣನಿಗೆ ಭಕ್ತಿಶ್ರದ್ಧೆಗಳಿಂದ ನಮಸ್ಕಾರ ಮಾಡುವ ಸ್ವಭಾವವುಳ್ಳವನು ಶ್ರೀ ಹರಿಯ ಅನುಗ್ರಹದಿಂದ ಭಗವಂತನ ಶ್ರವಣ, ಮನನ, ಧ್ಯಾನಗಳಿಂದ ಪರೋಕ್ಷಜ್ಞಾನವನ್ನು ಪಡೆದು, ಜ್ಞಾನಾನಂತರದಲ್ಲಿಯೂ ವಿಶೇಷವಾಗಿ ಭಕ್ತಿಶ್ರದ್ಧೆಗಳಿಂದ ಮಾಡಿದ ಪ್ರಣಾಮಗಳು ಮತ್ತು ವಿಶೇಷವಾಗಿ ಮಾಡಿದ ಸದಾಚಾರಗಳಿಂದ ಹಾಗೂ ಶ್ರವಣಮನನಧ್ಯಾನಗಳಿಂದ ಉಂಟಾದ ಭಗವಂತನ ಅತ್ಯರ್ಥಪ್ರಸಾದದಿಂದ ಲಿಂಗದೇಹದ ಭಂಗವನ್ನು ಹೊಂದಿ ಸ್ವರೂಪಸುಖಾನುಭವರೂಪವಾದ ಮೋಕ್ಷವನ್ನು ಹೊಂದಿ ಪುನಃ ಹುಟ್ಟು-ಸಾವು ರೂಪವಾದ ಈ ಸಂಸಾರಕ್ಕೆ ಬರಲಾರನು.

**ವಿಗ್ರಹ—**

**ಸುಹಯಮೇಧಗಣಾತಿಶಯಾಲವಃ —** ಶೋಭನಾಶ್ಚ ತೇ ಹಯಮೇಧಾಶ್ಚ ಸುಹಯಮೇಧಾಃ, ಸುಹಯ-ಮೇಧಾನಾಂ ಗಣಾಃ ಸುಹಯಮೇಧಗಣಾಃ, ಸುಹಯಮೇಧಗಣಾನ್ ಅತಿಶಯಿತುಂ ಶೀಲಂ ಆಸಾಂ ಅಸ್ತೀತಿ ಸುಹಯಮೇಧಗಣಾತಿಶಯಾಲವಃ ।

**ಹರಿನಮಸ್ಕೃತಯಃ—** ಹರೇಃ ನಮಸ್ಕೃತಯಃ ಹರಿನಮಸ್ಕೃತಯಃ ।

**ಸುಕೃತಾಃ—** ಸಮ್ಯಕ್ ಕೃತಾಃ ಸುಕೃತಾಃ ।

**ಭುವಿ ಸುರಾಃ—** ಭೂಸುರಾಃ ।

**ಭೂಸುರಮಂಡಲೈಃ—** ಭೂಸುರಾಣಾಂ ಮಂಡಲಾನಿ ಭೂಸುರಮಂಡಲಾನಿ, ತೈಃ ಭೂಸುರಮಂಡಲೈಃ

**ಸವಿಸ್ಮಯಂ** = ವಿಸ್ಮಯೇನ ಸಹಿತಂ ಯಥಾ ಭವತಿ ತಥಾ ಸವಿಸ್ಮಯಂ ।

**ಕ್ರಿಯಾಪದ—** ಸಮ್ ಇತ್ಯುಪಸರ್ಗಪೂರ್ವಕಾತ್ ಣಮು ಪ್ರಹ್ವತ್ವೇ ಶಬ್ದೇ ಚ ಪ್ರಹ್ವತ್ವಶಬ್ದಾರ್ಥಕಾತ್ ಣಮ್ ಧಾತೋಃ ಲಙ್ ಪ್ರಥಮಪುರುಷೈಕವಚನೇ 'ಸಮನಮತ್' ಇತಿ ರೂಪಂ ।

ಸಮನಮತ್ ಸಮನಮತಾಂ ನಮನಮನ್, ಸಮನಮಃ ಸಮನಮತಂ ಸಮನಮತ, ಸಮನಮಂ ಸಮನಮಾವ ಸಮನಮಾಮ ॥

★ ★ ★

ಸದಾ ಹರಿಯನ್ನು ನಮಿಸುವ ವಾಸುದೇವ

**ನ ಹಿ ಹರಿಂ ಸತತಂ ನ ನಮತ್ಯಸೌ**
**ನ ಚ ನ ಪಶ್ಯತಿ ನಾಪಿ ನ ವಂದತೇ ।**
**ಅಪಿ ತಥೇತಿ ವಿಧಾಯ ವಿಶೇಷತಃ**
**ಸ ನನು ಸಾಧುಜನಾನ್ ಸಮಶಿಕ್ಷಯತ್ ॥ 7 ॥**

**ಪದಚ್ಛೇದ—** ನ, ಹಿ, ಹರಿಂ, ಸತತಂ, ನ, ನಮತಿ, ಅಸೌ, ನ, ಚ, ನ, ಪಶ್ಯತಿ, ನ, ಅಪಿ, ನ, ವಂದತೇ, ಅಪಿ, ತಥಾ, ಇತಿ, ವಿಧಾಯ, ವಿಶೇಷತಃ ಸಃ, ನನು, ಸಾಧುಜನಾನ್, ಸಮಶಿಕ್ಷಯತ್.

**ಅನ್ವಯ—** ಅಸೌ, ಹರಿಂ, ಸತತಂ, ನ ನಮತಿ ಇತಿ ನ ಹಿ, ಹರಿಂ, ನ ಪಶ್ಯತಿ ಇತಿ ನ ಚ, ಹರಿಂ ನ ವಂದತೇ ಇತಿ ಅಪಿ ನ, ತಥಾ ಅಪಿ, ಇತಿ, ವಿಶೇಷತಃ, ವಿಧಾಯ, ಸಾಧುಜನಾನ್, ಸಮಶಿಕ್ಷಯತ್ ನನು.

**ಅನ್ವಯಾರ್ಥ—**

**ಹರಿಂ** = ಶ್ರೀ ಹರಿಯನ್ನು

**ಅಸೌ** = ಈ ಶ್ರೀವಾಸುದೇವಾಚಾರ್ಯನು

**ಸತತಂ** = ಯಾವಾಗಲೂ

**ನ ನಮತಿ ಇತಿ ನ ಹಿ** = ನಮಸ್ಕರಿಸುವುದಿಲ್ಲ ಎಂಬುದಿಲ್ಲ

**ಹರಿಂ** = ಶ್ರೀ ಹರಿಯನ್ನು

**ನ ಪಶ್ಯತಿ ಇತಿ ನ ಚ** = ನೋಡುತ್ತಿಲ್ಲ ಎಂಬುದು ಇಲ್ಲ

**ಹರಿಂ ನ ವಂದತೇ ಇತಿ ಅಪಿ ನ** = ಶ್ರೀ ಹರಿಯನ್ನು ಸ್ತುತಿಸುವುದಿಲ್ಲ ಎಂಬುದಿಲ್ಲ

**ತಥಾ ಅಪಿ** = ಹಾಗಿದ್ದರೂ ಕೂಡ,

**ಇತಿ** = ಹೀಗೆ

**ವಿಶೇಷತಃ ವಿಧಾಯ** = ವಿಶೇಷವಾಗಿ ಮಾಡಿ

**ಸಾಧುಜನಾನ್** = ಸಾಧುಗಳಾದ ಜನರನ್ನು

**ಸಮಶಿಕ್ಷಯತ್ ನನು** = ಉಪದೇಶಿಸಿದನಷ್ಟೇ.

**ತಾತ್ಪರ್ಯ**— ಶ್ರೀ ಹರಿಯ ಪರಮಭಕ್ತನಾದ ಈ ವಾಸುದೇವಾಚಾರ್ಯನು ಯಾವಾಗಲೂ ಆ ಹರಿಯನ್ನು ನಮಸ್ಕರಿಸುವವನೂ ನೋಡುವವನೂ ಸ್ತೋತ್ರ ಮಾಡುವವನೂ ಆಗಿದ್ದಾನೆ. ಆದರೂ 'ಸಜ್ಜನರೇ! ನೀವೂ ಹೀಗೆ ನನ್ನಂತೆ ಶ್ರೀಹರಿಗೆ ನಮಸ್ಕಾರಾದಿಗಳನ್ನು ಮಾಡಿರಿ' ಎಂದು ಉಪದೇಶ ಮಾಡುವುದಕ್ಕಾಗಿಯೇ ಬ್ರಾಹ್ಮಣರ ಸಮೂಹದ ಮತ್ತು ದೇವತೆಗಳ ಮುಂದೆ ಹೀಗೆ ಸಾಷ್ಟಂಗ ನಮಸ್ಕಾರ ಮಾಡಿದನು.

**ವಿಗ್ರಹ**—

**ಸಾಧುಜನಾನ್**— ಸಾಧವಶ್ಚತೇ ಜನಾಶ್ಚ ಸಾಧುಜನಾಃ, ತಾನ್ ಸಾಧುಜನಾನ್ ।

**ಕ್ರಿಯಾಪದ**— **ನಮತಿ**- ಣಮು ಪ್ರಹ್ವತ್ವೇ ಶಬ್ದೇಚೇತಿ ಪ್ರಹ್ವತ್ವಶಬ್ದಾರ್ಥಕಾತ್ ಣಮ್ ಧಾತೋಃ ಲಟಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ನಮತಿ' ಇತಿ ರೂಪಂ ।

ನಮತಿ ನಮತಃ ನಮಂತಿ, ನಮಸಿ ನಮಥಃ ನಮಥ, ನಮಾಮಿ ನಮಾವಃ ನಮಾಮಃ ॥

**ಪಶ್ಯತಿ**- ದೃಶಿರ್ ಪ್ರೇಕ್ಷಣೇ ಇತಿ ಪ್ರೇಕ್ಷಣಾರ್ಥಕಾತ್ ದೃಶಿರ್ ಧಾತೋಃ ಪ್ರಥಮಪುರುಷೈಕವಚನೇ 'ಪಶ್ಯತಿ' ಇತಿ ರೂಪಂ ।

ಪಶ್ಯತಿ ಪಶ್ಯತಃ ಪಶ್ಯಂತಿ, ಪಶ್ಯಸಿ ಪಶ್ಯಥಃ ಪಶ್ಯಥ, ಪಶ್ಯಾಮಿ ಪಶ್ಯಾವಃ ಪಶ್ಯಾಮಃ

**ವಂದತೇ**- ವದಿ ಅಭಿವಾದನ ಸ್ತುತ್ಯೋಃ ಅಭಿವಂದನಸ್ತುತ್ಯರ್ಥಕಾತ್ ಆತ್ಮನೇಪದಿನಃ ಪ್ರಥಮಪುರುಷೈಕವಚನೇ 'ವಂದತೇ' ಇತಿ ರೂಪಂ ।

ವಂದತೇ ವಂದೇತೇ ವಂದಂತೇ, ವಂದಸೇ ವಂದೇಥೇ ವಂದಧ್ವೇ, ವಂದೇ ವಂದಾವಹೇ ವಂದಾಮಹೇ ॥

**ಸಮಶಿಕ್ಷಯತ್**- ಸಂ ಇತ್ಯುಪಸರ್ಗಪೂರ್ವಕಾತ್ ಶಿಕ್ಷ ವಿದ್ಯೋಪಾದಾನೇ ವಿದ್ಯೋಪಾದಾನಾರ್ಥಕಾತ್ ಶಿಕ್ಷ ಧಾತೋಃ ಲಙ್ ಪ್ರಥಮಪುರುಷೈಕವಚನೇ 'ಸಮಶಿಕ್ಷಯತ್' ಇತಿ ರೂಪಂ ।

ಸಮಶಿಕ್ಷಯತ್, ಸಮಶಿಕ್ಷಯತಾಂ ಸಮಶಿಕ್ಷಯನ್, ಸಮಶಿಕ್ಷಯಃ ಸಮಶಿಕ್ಷಯತಂ ಸಮಶಿಕ್ಷಯತ,
ಸಮಶಿಕ್ಷಯಂ ಸಮಶಿಕ್ಷಯಾವ ಸಮಶಿಕ್ಷಯಾಮ ॥

★ ★ ★

ಮಗನ ಹುಡುಕುವಿಕೆಯಲ್ಲಿ ಮಧ್ಯಗೇಹರು

**ಅನವಲೋಕ್ಯ ಸುತಂ ಸುತವತ್ಸಲೋ**
**ಮೃಗಯತಿ ಸ್ಮ ಮಹೀಸುರಪುಂಗವಃ ।**
**ಮುಹುರಪೃಚ್ಛದಮುಷ್ಯ ಗತಿಂ ನರಾನ್**
**ಪಥಿ ಪಥಿ ಪ್ರಗತೋಽನುಪದಂ ದ್ರುತಮ್ ॥ 8 ॥**

**ಪದಚ್ಛೇದ**— ಅನವಲೋಕ್ಯ, ಸುತಂ ಸುತವತ್ಸಲಃ, ಮೃಗಯತಿ, ಸ್ಮ, ಮಹೀಸುರಪುಂಗವಃ, ಮುಹುಃ ಅಪೃಚ್ಛತ್, ಅಮುಷ್ಯ, ಗತಿಂ, ನರಾನ್, ಪಥಿ, ಪಥಿ, ಪ್ರಗತಃ, ಅನುಪದಂ, ದ್ರುತಂ ।

**ಅನ್ವಯ—** ಸುತವತ್ಸಲಃ ಮಹೀಪುರಪುಂಗವಃ ಸುತಂ ಅನವಲೋಕ್ಯ ಮೃಗಯತಿ ಸ್ಮ । ಅಮುಷ್ಯ ಗತಿಂ ಪಥಿ ಪಥಿ ಪ್ರಗತಃ ಸನ್, ಅನುಪದಂ ದ್ರುತಂ ಮುಹುಃ ನರಾನ್ ಅಪೃಚ್ಛತ್ ।

**ಅನ್ವಯಾರ್ಥ—**

**ಅನುಪದಂ** = ಕೂಡಲೇ (ಅಥವಾ ಹೆಜ್ಜೆಯನ್ನನುಸರಿಸಿ)

**ಸುತವತ್ಸಲಃ ಮಹೀಸುರಪುಂಗವಃ** = ಮಗನಲ್ಲಿ ವಾತ್ಸಲ್ಯವುಳ್ಳವರಾದ ಬ್ರಾಹ್ಮಣಶ್ರೇಷ್ಠರಾಗಿರುವ ಮಧ್ಯ-ಗೇಹಭಟ್ಟರು

**ಸುತಂ ನ ಅವಲೋಕ್ಯ** = ಮಗನನ್ನು ಕಾಣದೆ

**ಮೃಗಯತಿ ಸ್ಮ** = ಹುಡುಕಿದರು.

**ಅಮುಷ್ಯ** = ಈ ವಾಸುದೇವನ

**ಗತಿಂ** = ಗಮನವನ್ನು ಕುರಿತು

**ಪಥಿ ಪಥಿ** = ಒಂದೊಂದು ಮಾರ್ಗದಲ್ಲಿಯೂ

**ಪ್ರಗತಃ** = ವೇಗವಾಗಿ ಹೋಗುತ್ತಿರುವವರಾಗಿ

**ದ್ರುತಂ** = ಬೇಗನೇ

**ನರಾನ್** = ಮನುಷ್ಯರನ್ನು (ದಾರಿಹೋಕರನ್ನು)

**ಮುಹುಃ** = ಬಾರಿ ಬಾರಿಗೂ

**ಅಪೃಚ್ಛತ್** = ಕೇಳಿದರು.

**ತಾತ್ಪರ್ಯ—** ಆ ಬ್ರಾಹ್ಮಣೋತ್ತಮರಾದ ಮಧ್ಯಗೇಹಭಟ್ಟರು ಉತ್ಸವದ ಮಧ್ಯದಲ್ಲಿ ಮಗನನ್ನು ಕಾಣದೆ ಅವನ ಹೆಜ್ಜೆಯ ಗುರುತನ್ನು ಅನುಸರಿಸಿ ಬೇಗನೆ ಹುಡುಕಿಕೊಂಡು ಹೋದರು. ಆದರೆ ಅವನು ಸಿಕ್ಕಲಿಲ್ಲ. ದಾರಿಯಲ್ಲಿ ಹೋಗುತ್ತಿರುವ ಜನರನ್ನೂ 'ನಮ್ಮ ಮಗುವು ಇಲ್ಲಿ ಹೋಗುತ್ತಿರುವುದನ್ನು ನೋಡಿದ್ದೀರಾ?' ಎಂದು ಪ್ರತಿಯೊಂದು ದಾರಿಯಲ್ಲಿಯೂ ಪ್ರಶ್ನಿಸಿದರು.

**ವಿಗ್ರಹ—**

**ನ ಅವಲೋಕ್ಯ—** ಅನವಲೋಕ್ಯ ।

**ಸುತವತ್ಸಲಃ—** ಸುತೇ ವತ್ಸಲಃ ಸುತವತ್ಸಲಃ ।

**ಮಹೀಸುರಪುಂಗವಃ—** ಮಹೀಸುರಾಣಾಂ ಪುಂಗವಃ ಮಹೀಸುರಪುಂಗವಃ ।

**ಕ್ರಿಯಾಪದ—** **ಮೃಗಯತಿ-** ಮೃಗ ಅನ್ವೇಷಣೇ ಇತಿ ಅನ್ವೇಷಣಾರ್ಥಕಾತ್ ಮೃಗಧಾತೋಃ ಲಟಿ ಪ್ರಥಮ-ಪುರುಷೈಕವಚನೇ 'ಮೃಗಯತಿ' ಇತಿ ರೂಪಂ ।

ಮೃಗಯತಿ ಮೃಗಯತಃ ಮೃಗಯಂತಿ, ಮೃಗಯಸಿ ಮೃಗಯಥಃ ಮೃಗಯಥ,
ಮೃಗಯಾಮಿ ಮೃಗಯಾವಃ ಮೃಗಯಾಮಃ ॥

**ಅಪೃಚ್ಛತ್-** ಪ್ರಚ್ಛಜ್ಞೀಪ್ಸಾಯಾಂ ಇತಿ ಜ್ಞೀಪ್ಸ್ಯಾರ್ಥಕಾತ್ ಪ್ರಚ್ಛ ಧಾತೋಃ ಲಙಿ ಪ್ರಥಮಪುರುಷೈಕವಚನೇ 'ಅಪೃಚ್ಛತ್' ಇತಿ ರೂಪಂ.

ಅಪೃಚ್ಛತ್ ಅಪೃಚ್ಛತಾಂ ಅಪೃಚ್ಛನ್, ಅಪೃಚ್ಛಃ ಅಪೃಚ್ಛತಂ ಅಪೃಚ್ಛತ, ಅಪೃಚ್ಛಂ ಅಪೃಚ್ಛಾವ ಅಪೃಚ್ಛಾಮ ॥

★ ★ ★

ಮಗನಿಗಾಗಿ ಮಧ್ಯಗೇಹರ ಮಧುಕರವೃತ್ತಿ

**ಜನಸದಾಗತಿಸೂಚಿತವರ್ತ್ಮನಾ**
**ಪ್ರತಿಪದಂ, ವ್ರಜತಾ ಪರಯಾ ತೃಷಾ ।**
**ದ್ವಿಜಮಹಾಮಧುಪೇನ, ಮನೋಹರಂ**
**ಸ್ಮಿತಮಲಾಭಿಸುತಾನನವಾರಿಜಂ ॥ 9 ॥**

**ಪದಚ್ಛೇದ—** ಜನಸದಾಗತಿಸೂಚಿತವರ್ತ್ಮನಾ, ಪ್ರತಿಪದಂ, ವ್ರಜತಾ, ಪರಯಾ, ತೃಷಾ, ದ್ವಿಜಮಹಾಮಧುಪೇನ, ಮನೋಹರಂ, ಸ್ಮಿತಂ, ಅಲಾಭಿ, ಸುತಾನನವಾರಿಜಂ ।

**ಅನ್ವಯ—** ಪ್ರತಿಪದಂ ಜನಸದಾಗತಿಸೂಚಿತವರ್ತ್ಮನಾ ಪರಯಾ, ತೃಷಾ ವ್ರಜತಾ ದ್ವಿಜಮಹಾಮಧುಪೇನ, ಮನೋಹರಂ, ಸ್ಮಿತಂ, ಸುತಾಸನವಾರಿಜಂ, ಅಲಾಭಿ ।

**ಅನ್ವಯಾರ್ಥ—**

**ಪ್ರತಿಪದಂ** = ಪ್ರತಿ ಹೆಜ್ಜೆಯಲ್ಲಿಯೂ

**ಜನಸದಾಗತಿಸೂಚಿತವರ್ತ್ಮನಾ** = ಜನರೆಂಬ ವಾಯುವಿನಿಂದ ಸೂಚಿಸಲ್ಪಟ್ಟ ಮಾರ್ಗದಿಂದ

**ಪರಯಾ** = ಅಧಿಕವಾದ

**ತೃಷಾ** = ನೀರಡಿಕೆಯಿಂದ

**ವ್ರಜತಾ** = ಹೋಗುತ್ತಿರುವ

**ದ್ವಿಜಮಹಾಮಧುಪೇನ** = ಮಧ್ಯಗೇಹಭಟ್ಟರೆಂಬ ದೊಡ್ಡ ಜೇನುನೊಣದಿಂದ

**ಮನೋಹರಂ** = ಸುಂದರವಾಗಿರುವ

**ಸ್ಮಿತಂ** = ಮುಗುಳ್ನಗೆಯ, ಅರಳಿದ

**ಸುತಾನನವಾರಿಜಂ** = ಮಗನ ಮುಖವೆಂಬ ಕಮಲದ ಪುಷ್ಪವು

**ಅಲಾಭಿ** = ಪಡೆಯಲ್ಪಟ್ಟಿತು.

**ತಾತ್ಪರ್ಯ—** ಆ ಮಧ್ಯಗೇಹಭಟ್ಟರು ದಾರಿಹೋಕರು ತಿಳಿಸಿದ ದಾರಿಯಿಂದ ಅತ್ಯಾತುರದಿಂದ ಹೋಗುತ್ತಾ, ಮಗನ ನಗುಮುಖವನ್ನು ಕಂಡರು. ಅದು ಕಮಲದ ಸುವಾಸನೆಯ ಗಾಳಿ ಸೂಚಿಸಿದ ದಾರಿಯಿಂದ ಅತ್ಯಾಶೆಯಿಂದ ಹೋಗುತ್ತಿರುವ ಜೇನುನೊಣವು ಅರಳಿದ ಸುಂದರವಾದ ಕಮಲದ ಪುಷ್ಪವನ್ನು ಕಂಡಂತಾಯಿತು.

**ವಿಗ್ರಹ—**

**ಜನಸದಾಗತಿಸೂಚಿತವರ್ತ್ಮನಾ—** ಜನಾಃ ಏವ ಸದಾಗತಿಃ ಜನಸದಾಗತಿಃ, ಜನಸದಾಗತಿನಾ ಸೂಚಿತಂ ಜನಸದಾಗತಿಸೂಚಿತಂ, ಜನಸದಾಗತಿಸೂಚಿತಂ ಚ ತತ್ ವರ್ತ್ಮ ಚ ಜನಸದಾಗತಿಸೂಚಿತವರ್ತ್ಮ ತೇನ ಜನಸದಾಗತಿವರ್ತ್ಮನಾ ।

**ಪ್ರತಿಪದಂ—** ಪದಂ ಪದಂ ಪ್ರತಿಪದಂ ।

**ವ್ರಜನ್—** ವ್ರಜತಿ ಇತಿ ವ್ರಜನ್, ತೇನ ವ್ರಜತಾ ।

**ದ್ವಿಜಮಹಾಮಧುಪಃ—** ದ್ವಿಜಃ ಏವ ಮಹಾ ಮಧುಪಃ ದ್ವಿಜಮಹಾಮಧುಪಃ ತೇನ ದ್ವಿಜಮಹಾ-ಮಧುಪೇನ ।

**ಮನೋಹರಂ—** ಮನಃ ಹರತಿ ಇತಿ ಮನೋಹರಂ ।

**ಸುತಾನನವಾರಿಜಂ—** ಸುತಸ್ಯ ಆನನಂ ಸುತಾನನಂ, ಸುತಾನನಂ ಏವ ವಾರಿಜಂ ಸುತಾನನವಾರಿಜಂ ।

**ಕ್ರಿಯಾಪದ— ಅಲಾಭಿ-** ಡುಲಭಷ್ ಪ್ರಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ ಲಭಷ್ ಧಾತೋಃ ಕರ್ಮಣಿ ಲುಙ್ ಪ್ರಥಮಪುರುಷೇ ಏಕವಚನೇ 'ಅಲಾಭಿ' ಇತಿ ರೂಪಂ ।

ಅಲಾಭಿ ಅಲಾಭಿಷಾತಾಂ ಅಲಾಭಿಷತ, ಅಲಾಭಿಷ್ಠಾಃ ಅಲಾಭಿಷಾಥಾಂ ಅಲಾಭಿಧ್ವಂ-ಅಲಾಭಿಢ್ವಂ,
ಅಲಾಭಿಷಿ ಅಲಾಭಿಷ್ವಹಿ ಅಲಾಭಿಷ್ಮಹಿ ॥

★ ★ ★

ಪುತ್ರಸಮಾಗಮ - ಆನಂದಾಶ್ರು

**ವಿರಹದೂನತಯೋದ್ಗಮನೋನ್ಮುಖಂ**
**ನ್ಯರುಣದಶ್ರು ಪುರಾ ಸ ಯಯೋರ್ದೃಶೋಃ ।**
**ಅಥ ತಯೋಃ ಪ್ರಮದೋತ್ಥಿತಮಪ್ಯದಃ**
**ಪ್ರತಿನಿರುದ್ಧ್ಯ ಗಿರಂ ಗುರುರಬ್ರವೀತ್ ॥ 10 ॥**

**ಪದಚ್ಛೇದ—** ವಿರಹದೂನತಯಾ, ಉದ್ಗಮನೋನ್ಮುಖಂ, ನ್ಯರುಣತ್, ಅಶ್ರು, ಪುರಾ, ಸಃ, ಯಯೋಃ ದೃಶೋಃ, ಅಥ, ತಯೋಃ ಪ್ರಮದೋತ್ಥಿತಂ, ಅಪಿ, ಅದಃ, ಪ್ರತಿನಿರುದ್ಧ್ಯ, ಗಿರಂ, ಗುರುಃ ಅಬ್ರವೀತ್ ।

**ಅನ್ವಯ—** ಸಃ, ವಿರಹದೂನತಯಾ ಉದ್ಗಮನೋನ್ಮುಖಂ ಅಶ್ರು ಯಯೋಃ ದೃಶೋಃ ಪುರಾನ್ನ್ಯರುಣತ್, ಅಥ ತಯೋಃ ಪ್ರಮದೋತ್ಥಿತಂ ಅಪಿ ಅದಃ, ಪ್ರತಿನಿರುದ್ಧ್ಯ ಗುರುಃ ಗಿರಂ ಅಬ್ರವೀತ್ ।

**ಅನ್ವಯಾರ್ಥ—**

**ಸಃ** = ಆ ಮಧ್ಯಗೇಹಭಟ್ಟರು
**ವಿರಹದೂನತಯಾ** = ವಾಸುದೇವನ ವಿರಹದಿಂದ ಏರ್ಪಟ್ಟ ವ್ಯಥೆಯಿಂದ
**ಉದ್ಗಮನೋನ್ಮುಖಂ** = ಕಣ್ಣುಗಳಿಂದ ಹೊರಗೆ ಬೀಳುವುದಕ್ಕೆ ಸಿದ್ಧವಾಗಿದ್ದ
**ಅಶ್ರು** = ಕಣ್ಣೀರುಗಳನ್ನು
**ಯಯೋಃ ದೃಶೋಃ** = ಯಾವ ಎರಡು ಕಣ್ಣುಗಳಲ್ಲಿ
**ನ್ಯರುಣತ್** = ತಡೆದು ನಿಲ್ಲಿಸಿದರೋ
**ಅಥ** = ಅನಂತರದಲ್ಲಿ
**ತಯೋಃ** = ಆ ಎರಡು ಕಣ್ಣುಗಳಲ್ಲಿಯೂ
**ಪ್ರಮದೋತ್ಥಿತಮಪಿ** = ಸಂತೋಷದಿಂದ ಏರ್ಪಟ್ಟಿದ್ದನ್ನೂ
**ಅದಃ** = ಈ ಕಣ್ಣೀರುಗಳನ್ನು
**ಪ್ರತಿನಿರುಧ್ಯ** = ತಡೆದು ನಿಲ್ಲಿಸಿ
**ಗುರುಃ** = ಗುರುಗಳಾದ ಮಧ್ಯಗೇಹಭಟ್ಟರು
**ಗಿರಂ** = ಮಾತುಗಳನ್ನು
**ಅಬ್ರವೀತ್** = ಹೇಳಿದರು.

**ತಾತ್ಪರ್ಯ—** ಹಿಂದೆ ವಾಸುದೇವಾಚಾರ್ಯರಿಗೂ ಶ್ರೀಮಧ್ಯಗೇಹಭಟ್ಟರಿಗೂ ವಿರಹವು ಏರ್ಪಟ್ಟಿತ್ತು. ಆಗ ವ್ಯಥೆಯು ಏರ್ಪಟ್ಟಿತು. ಆ ವ್ಯಥೆಯಿಂದ ಎರಡು ಕಣ್ಣುಗಳಲ್ಲಿ ಕಣ್ಣೀರುಗಳು ಸುರಿಯಲು ಸಿದ್ಧವಾಗಿತ್ತು. ಈಗ ಅದೇ ಕಣ್ಣುಗಳಲ್ಲಿ ಸಂತೋಷದಿಂದ ಕಣ್ಣೀರುಗಳು ಸುರಿಯಲು ಆರಂಭವಾಯಿತು. ಆ ಕಣ್ಣೀರುಗಳನ್ನು ಶ್ರೀಮಧ್ಯಗೇಹಭಟ್ಟರು ತಡೆದು ನಿಲ್ಲಿಸಿದರು. ಗುರುಗಳಾಗಿರುವ ಮಧ್ಯಗೇಹಭಟ್ಟರು ಮಾತುಗಳನ್ನು ಹೇಳಿದರು.

**ವಿಗ್ರಹ—**

**ವಿರಹದೂನತಯಾ—** ದೂನಸ್ಯ ಭಾವಃ ದೂನತಾ, ವಿರಹೇಣ ದೂನತಾ ವಿರಹದೂನತಾ, ತಯಾ ವಿರಹದೂನತಯಾ ।

**ಉದ್ಗಮನೋನ್ಮುಖಂ—** ಉದ್ಗಮನಾಯ ಉನ್ಮುಖಂ ।

**ಪ್ರಮದೋತ್ಥಿತಂ—** ಪ್ರಮದೇನ ಉತ್ಥಿತಂ ಪ್ರಮದೋತ್ಥಿತಂ ತತ್ ಪ್ರಮದೋತ್ಥಿತಂ ।

**ಕ್ರಿಯಾಪದ—** ಅಬ್ರವೀತ್- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಞ್ ಧಾತೋಃ ಪರಸ್ಮೈಪದಿನಃ ಲಙ್ ಪ್ರಥಮಪುರುಷೇ ಏಕವಚನೇ 'ಅಬ್ರವೀತ್' ಇತಿ ರೂಪಂ ।

ಅಬ್ರವೀತ್ ಅಬ್ರೂತಾಂ ಅಬ್ರುವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ ॥

ನ್ಯರುಣತ್- ನಿ ಇತ್ಯುಪಸರ್ಗಪೂರ್ವಕಾತ್ ರುಧಿರ್ ಆವರಣೇ ಇತಿ ಆವರಣಾರ್ಥಕಾತ್ ರುಧಿರ್ ಧಾತೋಃ ಲಙ್ ಪ್ರಥಮಪುರುಷೈಕವಚನೇ 'ನ್ಯರುಣತ್' ಇತಿ ರೂಪಂ ।

ನ್ಯರುಣತ್(ದ್) ನ್ಯರುಂಧಾಂ ನ್ಯರುಂಧನ್, ನ್ಯರುಣಃ ನ್ಯರುಂಧಂ ನ್ಯರುಂಧ, ನ್ಯರುಣಧಂ ನ್ಯರುಂಧ್ವ ನ್ಯರುಂಧ್ಮ ॥

★ ★ ★

ಮಧ್ಯಗೇಹರ ಕುತೂಹಲ - ಪ್ರಶ್ನೆ

**ಅಯಿ ಸುತೇದಮುದಾಹರ ತತ್ತ್ವತೋ**
**ನನು ಸಮಾಗತವಾನಸಿ ಸಾಂಪ್ರತಮ್ ।**
**ಸ್ವಜನತಾರಹಿತಸ್ಯ ತು ಕೋಽತ್ರ ತೇ**
**ಸಹಚರೋಽರ್ಭಕ ದೀರ್ಘತಮೇ ಪಥಿ ॥ 11 ॥**

**ಪದಚ್ಛೇದ—** ಅಯಿ, ಸುತ, ಇದಂ, ಉದಾಹರ, ತತ್ತ್ವತಃ, ನನು, ಸಮಾಗತವಾನ್, ಅಸಿ, ಸಾಂಪ್ರತಂ, ಸ್ವಜನತಾರಹಿತಸ್ಯ, ತು ಕಃ ಅತ್ರ ತೇ ಸಹಚರಃ ಅರ್ಭಕ, ದೀರ್ಘತಮೇ, ಪಥಿ ।

**ಅನ್ವಯ—** ಅಯಿ ಸುತ! ಸಾಂಪ್ರತಂ ಸಮಾಗತವಾನಸಿ ನನು ಅರ್ಭಕ! ಸ್ವಜನಾರಹಿತಸ್ಯ ತೇ ತು ಅತ್ರ ದೀರ್ಘತಮೇ ಪಥಿ ಕಃ ಸಹಚರಃ ಇದಂ ತತ್ತ್ವತಃ ಉದಾಹರ ।

**ಅನ್ವಯಾರ್ಥ—**

**ಅಯಿ, ಸುತ!** = ಎಲೈ ಮಗುವೇ!

**ಸಾಂಪ್ರತಂ** = ಈಗ

**ಸಮಾಗತವಾನ್ ಅಸಿ ನನು** = ಇಷ್ಟೊಂದು ದೂರ ಬಂದಿದ್ದೆಯಷ್ಟೇ.

**ಅರ್ಭಕ!** = ಮಗು

**ಸ್ವಜನತಾರಹಿತಸ್ಯ** = ಬಂಧುಜನರ ಸಮೂಹವಿಲ್ಲದ,

**ತೇ ತು** = ನಿನಗಾದರೋ

**ಅತ್ರ** = ಈ ಯಾವ

**ದೀರ್ಘತಮೇ** = ಅತ್ಯಂತ ದೂರವಾದ

**ಪಥಿ** = ದಾರಿಯಲ್ಲಿ

**ಸಹಚರಃ ಕಃ?** = ಸಂಗಡಿಗನು ಯಾರು?

**ಇದಂ** = ಇದನ್ನು

**ತತ್ತ್ವತಃ** = ನಿಜವಾಗಿ

**ಉದಾಹರ** = ಹೇಳು.

**ತಾತ್ಪರ್ಯ**— ಮಗು! ನೀನು ಇಷ್ಟು ದೂರ ಬಂದಿರುವೆ. ನಿನ್ನೊಡನೆ ಬಂಧುಗಳು ಯಾರೂ ಬರಲಿಲ್ಲ. ಇಷ್ಟು ದೂರ ಬರುವಾಗ ನಿನಗೆ ದಾರಿಯಲ್ಲಿ ಯಾರು ಸಹಾಯಕರಾಗಿದ್ದರು? ಈ ವಿಷಯವನ್ನು ನಿಜವಾಗಿ ಹೇಳು.

**ವಿಗ್ರಹ**—

**ಸ್ವಜನತಾರಹಿತಸ್ಯ**— ಸ್ವಸ್ಯ ಜನಾಃ ಸ್ವಜನಾಃ, ಸ್ವಜನಾನಾಂ ಸಮೂಹಃ ಸ್ವಜನತಾ, ಸ್ವಜನತಯಾ ರಹಿತಃ ಸ್ವಜನತಾರಹಿತಃ, ತಸ್ಯ ಸ್ವಜನತಾರಹಿತಸ್ಯ ।

**ಸಹಚರಃ**— ಸಹ ಚರತಿ ಇತಿ ಸಹಚರಃ ।

**ದೀರ್ಘತಮೇ**— ಅತಿಶಯೇನ ದೀರ್ಘಃ ದೀರ್ಘತಮಃ, ತಸ್ಮಿನ್ ದೀರ್ಘತಮೇ ।

**ಕ್ರಿಯಾಪದ**— ಉದಾಹರ- ಉತ್ ಇತಿ ಆಙ್ ಇತಿ ಉಪಸರ್ಗದ್ವಯಪೂರ್ವಕಾತ್ ಹೃಞ್ ಹರಣೇ ಇತ್ಯಸ್ಮಾತ್ ಧಾತೋಃ ಲೋಟಿ ಮಧ್ಯಮಪುರುಷೇ ಏಕವಚನೇ 'ಉದಾಹರ' ಇತಿ ರೂಪಂ ।

ಉದಾಹರತು ಉದಾಹರತಾತ್ ಉದಾಹರತಾಂ ಉದಾಹರಂತು, ಉದಾಹರ ಉದಾಹರತಾತ್,
ಉದಾಹರತಂ ಉದಾಹರತ, ಉದಾಹರಾಣಿ ಉದಾಹರಾವ ಉದಾಹರಾಮ ॥

★ ★ ★

ವಾಸುದೇವನ ಅಪೂರ್ವ ಉತ್ತರ

**ಜನಕವಾಚಮಿಮಾಮವಧಾರಯನ್**
**ಕಲಮುದಾಹರದಂಬುರುಹೇಕ್ಷಣಃ ।**
**ಸ್ವಪದಮಾವ್ರಜತೋ ವ್ರಜತೋಽಪ್ಯತೋ**
**ನನು ಸಖಾ ಮಮ ಕಾನನಗೋ ವಿಭುಃ ॥ 12 ॥**

**ಪದಚ್ಛೇದ**— ಜನಕವಾಚಂ, ಇಮಾಂ, ಅವಧಾರಯನ್, ಕಲಂ, ಉದಾಹರತ್, ಅಂಬುರುಹೇಕ್ಷಣಃ, ಸ್ವಪದಂ, ಆವ್ರಜತಃ, ವ್ರಜತಃ, ಅಪಿ, ಅತಃ, ನನು, ಸಖಾ, ಮಮ, ಕಾನನಗಃ, ವಿಭುಃ ।

**ಅನ್ವಯ**— ಇಮಾಂ ಜನಕವಾಚಂ ಅವಧಾರಯನ್ ಅಂಬುರುಹೇಕ್ಷಣಃ ಸ್ವಪದಂ ಆವ್ರಜತಃ ಅತಃ ವ್ರಜತಃ, ಮಮ, ಕಾನನಗೋ ವಿಭುಃ, ಸಖಾ ನನು (ಇತಿ) ಕಲಂ ಉದಾಹರತ್ ।

**ಅನ್ವಯಾರ್ಥ—**

**ಇಮಾಂ ಜನಕವಾಚಂ** = ಈ ತಂದೆಯ ಮಾತನ್ನು

**ಅವಧಾರಯನ್** = ಕೇಳಿದವನಾಗಿ

**ಅಂಬುರುಹೇಕ್ಷಣಃ** = ಕಮಲದಂತೆ ಕಣ್ಣುಗಳಿಂದ ಯುಕ್ತನಾದ ಶ್ರೀವಾಸುದೇವನು

**ಸ್ವಪದಂ ಆವ್ರಜತಃ** = ತನ್ನ ಸ್ಥಾನವನ್ನು ಕುರಿತು ಬರುತ್ತಿರುವ,

**ಅತಃ** = ಅನಂತರದಲ್ಲಿ

**ವ್ರಜತಃ** = ಹೋಗುತ್ತಿರುವ

**ಮಮ** = ನನಗೆ,

**ಕಾನನಗಃ** = ಕಾಡಿನ ದೇವಾಲಯದಲ್ಲಿರುವ

**ವಿಭುಃ** = ಸರ್ವತ್ರ ವ್ಯಾಪ್ತನಾದ ಶ್ರೀಹರಿಯು

**ಸಖಾ ನನು** = ಮಿತ್ರನಲ್ಲವೇ.

(ಇತಿ = ಹೀಗೆಂದು)

**ಕಲಂ** = ಅತ್ಯಂತ ಮಧುರವಾದ ಧ್ವನಿಯಿಂದ

**ಉದಾಹರತ್** = ಹೇಳಿದನು.

**ತಾತ್ಪರ್ಯ—** ಶ್ರೀವಾಸುದೇವನು ತನ್ನ ತಂದೆಯ ಮಾತುಗಳನ್ನು ಕೇಳಿದನು. ಗ್ರಹಿಸಿದನು. ಅತ್ಯಂತ ಮಧುರವಾದ ಮಾತುಗಳಿಂದ ಉತ್ತರವನ್ನು ಕೊಟ್ಟನು. ತನ್ನ ಮನೆಗೆ ಬರುವಾಗಲೂ, ಹಿಂದಿರುಗಿ ಹೋಗುವಾಗಲೂ ಕಾಡಿನ ದೇವಾಲಯದಲ್ಲಿದ್ದ ಸರ್ವತ್ರ ವ್ಯಾಪ್ತನಾದ ಶ್ರೀಹರಿಯು ನನಗೆ ಸಂಗಡಿಗನಲ್ಲವೇ? ಎಂದು ಉತ್ತರವನ್ನು ಕೊಟ್ಟನು.

**ವಿಗ್ರಹ—**

**ಜನಕವಾಚಂ—** ಜನಕಸ್ಯ ವಾಕ್ ಜನಕವಾಕ್, ತಾಂ ಜನಕವಾಚಂ ।

**ಅವಧಾರಯನ್—** ಅವಧಾರಯತಿ ಇತಿ ಅವಧಾರಯನ್ ।

**ಅಂಬುರುಹೇಕ್ಷಣಃ—** ಅಂಬುರುಹೇ ಇವ ಈಕ್ಷಣೇ ಯಸ್ಯ ಸಃ ಅಂಬುರುಹೇಕ್ಷಣಃ ।

**ಸ್ವಪದಂ—** ಸ್ವಸ್ಯ ಪದಂ ಸ್ವಪದಂ, ತತ್ ಸ್ವಪದಂ ।

**ಆವ್ರಜತಃ—** ಆವ್ರಜತಿ ಇತಿ ಆವ್ರಜನ್, ತಸ್ಯ ಆವ್ರಜತಃ ।

**ವ್ರಜತಃ—** ವ್ರಜತಿ ಇತಿ ವ್ರಜನ್, ತಸ್ಯ ವ್ರಜತಃ ।

**ಕಾನನಗಃ—** ಕಾನನಂ ಗಚ್ಛತಿ ಇತಿ ಕಾನನಗಃ ।

**ಕ್ರಿಯಾಪದ—** ಉತ್ ಆಙ್ ಇತ್ಯುಪಸರ್ಗದ್ವಯಪೂರ್ವಕಾತ್ ಹೃಞ್ ಹರಣೇ ಇತಿ ಧಾತೋಃ ಲಙ್ ಪ್ರಥಮ-ಪುರುಷೈಕವಚನೇ 'ಉದಾಹರತ್' ಇತಿ ರೂಪಂ ।

ಉದಾಹರತ್ ಉದಾಹರತಾಂ ಉದಾಹರನ್, ಉದಾಹರಃ ಉದಾಹರತಂ ಉದಾಹರತ,
ಉದಾಹರಂ ಉದಾಹರಾವ ಉದಾಹರಾಮ ॥

★ ★ ★

ಶ್ರೀಮನ್ನಾರಾಯಣನೇ ನಿಜಸಖ

**ತದಿತರಾಯತನಾತ್ತು ಯದಾಽಗಮಂ**
**ಕೃತರತಿಃ(ನತಿಃ) ಖಲು ತತ್ರ ಹರಿಃ ಸಖಾ ।**
**ಅಹಮಿಹಾಪಿ ಮಹೇಂದ್ರದಿಗಾಲಯಂ**
**ಪ್ರಣತವಾನುತ ಯಾವದಧೀಶ್ವರಮ್ ॥ 13 ॥**

**ಪದಚ್ಛೇದ—** ತದಿತರಾಯತನಾತ್, ತು, ಯದಾ, ಆಗಮಂ ಕೃತರತಿ(ನತಿ)ಃ ಖಲು ತತ್ರ, ಹರಿಃ, ಸಖಾ, ಅಹಂ, ಇಹ ಅಪಿ, ಮಹೇಂದ್ರದಿಗಾಲಯಂ, ಪ್ರಣತವಾನ್, ಉತ, ಯಾವತ್, ಅಧೀಶ್ವರಂ ।

**ಅನ್ವಯ—** ಅಹಂ ತದಿತರಾಯತನಾತ್ ಯದಾಗಮಂ, ತದಾನೀಮಾರಭ್ಯ ತತ್ರ ಕೃತರತಿಃ(ನತಿಃ) ಹರಿಃ ಇಹಾಪಿ ಯಾವತ್ ಮಹೇಂದ್ರದಿಗಾಲಯಂ ಅಧೀಶ್ವರಂ ಉತ ಪ್ರಣತವಾನ್, ತಾವತ್ ಸಖಾ ಖಲು ।

**ಅನ್ವಯಾರ್ಥ—**

**ಅಹಂ ತು** = ನಾನಾದರೋ
**ತದಿತರಾಯನಾತ್- ತದಿತರ** = ಆರಣ್ಯ ದೇವಾಲಯಕ್ಕಿಂತ ಬೇರೆಯಾದ, **ಆಯತನಾತ್** =ತಾಳೇಕುಡೆ ದೇವಾಲಯದಿಂದ,
**ಯದಾ** = ಯಾವ ಉಡುಪಿಯನ್ನು ಕುರಿತು
**ತತ್ರ** = ಆ ಕಾಡಿನ ದೇವಾಲಯದಲ್ಲಿ
**ಅಗಮಂ** = ಬಂದೆನೋ
**(ತತ್ರ** = ಆ ಕಾಡಿನ ದೇವಾಲಯದಲ್ಲಿ)
**ಕೃತರತಿಃ(ನತಿಃ)** = ಮಾಡಲ್ಪಟ್ಟ ವಿಹಾರವುಳ್ಳ (ಮಾಡಲ್ಪಟ್ಟ ನಮಸ್ಕಾರವುಳ್ಳ)
**ಹರಿಃ** = ಶ್ರೀಮನ್ನಾರಾಯಣನು
**ಇಹ ಅಪಿ** = ಈ ಉಡುಪಿಯಲ್ಲಿಯೂ,
**ಯಾವತ್** = ಯಾವಾಗ
**ಮಹೇಂದ್ರದಿಗಾಲಯಂ- ಮಹೇಂದ್ರದಿಕ್** = ಪೂರ್ವದಿಕ್ಕಿನಲ್ಲಿ, **ಆಲಯಂ** = ಮನೆಯುಳ್ಳ
**ಅಧೀಶ್ವರಂ ಉತ** = ಶ್ರೀಹರಿಯನ್ನು ಕೂಡಾ
**ಪ್ರಣತವಾನ್** = ನಮಸ್ಕಾರ ಮಾಡಿದೆನೋ
**ತಾವತ್** = ಅಷ್ಟರವರೆಗೆ
**ಸಖಾ ಖಲು** = ಸ್ನೇಹಿತನಾಗಿದ್ದನಷ್ಟೇ.

**ತಾತ್ಪರ್ಯ—** ನಾನು ಈಗ ಶ್ರೀಹರಿಯನ್ನು ನಮಸ್ಕರಿಸಿದೆನು. ಈಗ ಹರಿಯು ನನ್ನ ಮಿತ್ರನು. ನಾರಿಕೇಳ ದೇವಾಲಯವು ಕಾನನ ದೇವಾಲಯಕ್ಕಿಂತ ಬೇರೆ. ಆ ಕಾನನ ದೇವಾಲಯಕ್ಕಿಂತ ಬೇರೆಯಾಗಿರುವ ನಾರಿಕೇಳ ದೇವಾಲಯಕ್ಕೆ ನಾನು ಶ್ರೀಹರಿಯ ಸಹಾಯದಿಂದಲೇ ಬಂದೆ. ಈಗಲೂ ಅವನ ಸಹಾಯದಿಂದಲೇ ಉಡುಪಿಗೆ ಬಂದು ಅಲ್ಲಿ ಪೂರ್ವದಿಕ್ಕಿನಲ್ಲಿರುವ ಚಂದ್ರಮೌಳೀಶ್ವರನಂತರ್ಗತನಾದ ಶ್ರೀಹರಿಗೆ ನಮಸ್ಕರಿಸಿದೆನು.

**ವಿಗ್ರಹ—**

**ತದಿತರಂ—** ತಸ್ಮಾತ್ ಇತರಂ ತದಿತರಂ ।
**ತದಿತರಾಯತನಾತ್—** ತದಿತರಂ ಚ ತತ್ ಆಯತನಂ ಚ ತದಿತರಾಯತನಂ, ತಸ್ಮಾತ್ ತದಿತರಾಯತನಾತ್ ।

**ಕೃತನತಿಃ—** ಕೃತಾ ನತಿಃ ಯೇನ ಸಃ ಕೃತನತಿಃ ।

**ಮಹೇಂದ್ರದಿಕ್—** ಮಹೇಂದ್ರಸ್ಯ ದಿಕ್ ಮಹೇಂದ್ರದಿಕ್ ।

**ಮಹೇಂದ್ರದಿಗಾಲಯಂ—** ಮಹೇಂದ್ರದಿಶಿ ಆಲಯಃ ಯಸ್ಯ ಸಃ ಮಹೇಂದ್ರದಿಗಾಲಯಃ, ತಂ ಮಹೇಂದ್ರದಿಗಾಲಯಂ ।

**ಕ್ರಿಯಾಪದ—** **ಅಗಮಂ-** ಗಮ್ಲೃಗತೌ ಇತಿ ಗತ್ಯರ್ಥಕಾತ್ ಗಮ್ಲೃಧಾತೋಃ ಪರಸ್ಮೈಪದಿನಃ ಲುಙ್ ಉತ್ತಮ-ಪುರುಷೇ ಏಕವಚನೇ 'ಅಗಮಂ' ಇತಿ ರೂಪಂ ।

ಅಗಮತ್ ಅಗಮತಾಂ ಅಗಮನ್, ಅಗಮಃ ಅಗಮತಂ ಅಗಮತ, ಅಗಮಂ ಅಗಮಾವ ಅಗಮಾಮ॥

★ ★ ★

ಸರ್ವತ್ರ ಹರಿಯನ್ನೇ ಕಾಣುವ ವಾಸುದೇವ

**ಅಪಿ ತತೋಽಹಮುಪೇತ್ಯ ಸಹಾಮುನಾ**
**ಭಗವತೇಽತ್ರ ಸತೇ ಪ್ರಣತಿಂ ವ್ಯಧಾಮ್ ।**
**ಇತಿ ನಿಗದ್ಯ ವಿಭಾತಿ ಶಿಶುಃ ಸ್ಮ ವಿ-**
**ಸ್ಮಿತಸಭಾಜನಚೀರ್ಣಸಭಾಜನಃ ॥ 14 ॥**

**ಪದಚ್ಛೇದ—** ಅಪಿ, ತತಃ ಅಹಂ, ಉಪೇತ್ಯ, ಸಹ, ಅಮುನಾ ಭಗವತೇ, ಅತ್ರ, ಸತೇ, ಪ್ರಣತಿಂ, ವ್ಯಧಾಂ, ಇತಿ ನಿಗದ್ಯ ವಿಭಾತಿ, ಶಿಶುಃ, ಸ್ಮ, ವಿಸ್ಮಿತಸಭಾಜನಚೀರ್ಣಸಭಾಜನಃ ।

**ಅನ್ವಯ—** ಅಹಂ ತತಃ ಅಪಿ ಅಮುನಾ ಸಹ ಉಪೇತ್ಯ ಅತ್ರ ಸತೇ ಭಗವತೇ ಪ್ರಣತಿಂ ವ್ಯಧಾಂ, ಇತಿ ನಿಗದ್ಯ ಶಿಶುಃ, ವಿಸ್ಮಿತಭಾಜನಚೀರ್ಣಸಭಾಜನಃ (ಸನ್) ವಿಭಾತಿ ಸ್ಮ ।

**ಅನ್ವಯಾರ್ಥ—**

**ಅಹಂ** = ನಾನು

**ತತಃ ಅಪಿ** = ಆ ಪೂರ್ವದಿಕ್ಕಿನಲ್ಲಿರುವ ದೇವಾಲಯದಿಂದಲೂ

**ಅಮುನಾ ಸಹ** = ಪೂರ್ವದಿಕ್ಕಿನಲ್ಲಿರುವ ದೇವಾಲಯದ ಅಧಿಪತಿಯಾದ ಶ್ರೀಹರಿಯಿಂದ ಸಹಿತನಾಗಿ

**ಉಪೇತ್ಯ** = ಕೂಡಿಕೊಂಡು

**ಅತ್ರ ಸತೇ** = ಈ ಪಶ್ಚಿಮ ದೇವಾಲಯದಲ್ಲಿರುವ

**ಭಗವತೇ** = ಶ್ರೀ ಹರಿಗೋಸ್ಕರ (ಪೂಜ್ಯನಾದ ಅನಂತಾಸನನಿಗೋಸ್ಕರ)

**ಪ್ರಣತಿಂ** = ನಮಸ್ಕಾರವನ್ನು

**ವ್ಯಧಾಂ** = ಮಾಡಿದೆನು,

**ಇತಿ ನಿಗದ್ಯ** = ಹೀಗೆಂದು ಹೇಳಿ

**ವಿಸ್ಮಿತ ಸಭಾಜನಚೀರ್ಣಸಭಾಜನಃ—** **ವಿಸ್ಮಿತ** = ಆಶ್ಚರ್ಯಗೊಂಡ, **ಸಭಾಜನ** = ಸಭೆಯಲ್ಲಿರುವ ಜನರಿಂದ, **ಚೀರ್ಣ** = ಸಂಪಾದಿಸಲ್ಪಟ್ಟ (ಮಾಡಲ್ಪಟ್ಟ), **ಸಭಾಜನಃ ಸನ್** = ಸನ್ಮಾನವುಳ್ಳದ್ದಾಗಿ,

**ಶಿಶುಃ** = ಮಗುವು

**ವಿಭಾತಿ ಸ್ಮ** = ಶೋಭಿಸಿತು (ಪ್ರಕಾಶಿಸಿತು).

**ತಾತ್ಪರ್ಯ—** ಆ ಬಾಲಕನು "ನಾನು ಈ ಉಡುಪಿಯಲ್ಲಿಯೂ ಪೂರ್ವಾಲಯದ ಶ್ರೀಹರಿಯೊಡನೆ ಪಶ್ಚಿಮಾಲಯಕ್ಕೆ ಬಂದೆನು. ಇಲ್ಲಿರುವ ಅನಂತಾಸನ ದೇವರನ್ನು ನಮಸ್ಕರಿಸಿದೆನು" ಎಂದನು. ಅದರಿಂದ ಅಲ್ಲಿ ಸಭೆಯಲ್ಲಿರುವ ಜನರೆಲ್ಲರೂ ಆಶ್ಚರ್ಯಗೊಂಡು ಅವನಿಗೆ ಸನ್ಮಾನ ಮಾಡಿದರು. ಈ ರೀತಿ ಆ ಅದ್ಭುತ ಬಾಲಕನು ವಿರಾಜಿಸಿದನು.

**ವಿಗ್ರಹ—**

**ಭಗವತೇ—** ಭಗಃ ಅಸ್ಯ ಅಸ್ತಿ ಇತಿ ಭಗವಾನ್, ತಸ್ಮೈ ಭಗವತೇ ।

**ಪ್ರಣತಿಃ—** ಪ್ರಕೃಷ್ಟಾ ನತಿಃ ಪ್ರಣತಿಃ, ತಾಂ ಪ್ರಣತಿಂ ।

**ವಿಸ್ಮಿತಸಭಾಜನಚೀರ್ಣಸಭಾಜನಃ—** ಸಭಾಯಾಂ ಸ್ಥಿತಾಃ ಜನಾಃ ಸಭಾಜನಾಃ, ವಿಸ್ಮಿತಾಶ್ಚ ತೇ ಸಭಾಜನಾಶ್ಚ ವಿಸ್ಮಿತಸಭಾಜನಃ, ವಿಸ್ಮಿತಸಭಾಜನೈಃ ಚೀರ್ಣಂ ವಿಸ್ಮಿತಸಭಾಜನಚೀರ್ಣಂ, ವಿಸ್ಮಿತಸಭಾಜನಚೀರ್ಣಂ ಸಭಾಜನಂ ಯಸ್ಯ ಸಃ ವಿಸ್ಮಿತಸಭಾಜನಚೀರ್ಣಸಭಾಜನಃ ।

**ಕ್ರಿಯಾಪದ— ವಿಭಾತಿ-** ವಿ ಇತ್ಯುಪಸರ್ಗಪೂರ್ವಕಾತ್ ದೀಪ್ತ್ಯರ್ಥಕಾತ್ ಭಾದೀಪ್ತೌ ಇತಿ ಭಾಧಾತೋ ಲಟಿ ಪ್ರಥಮಪುರುಷೈಕವಚನೇ 'ವಿಭಾತಿ' ಇತಿ ರೂಪಂ ।

ವಿಭಾತಿ ವಿಭಾತಃ ವಿಭಾಂತಿ, ವಿಭಾಸಿ ವಿಭಾಥಃ ವಿಭಾಥ, ವಿಭಾಮಿ ವಿಭಾವಃ ವಿಭಾಮಃ ॥

**ವ್ಯಧಾಮ್-** ವಿ ಇತ್ಯುಪಸರ್ಗಪೂರ್ವಕಾತ್ ಡುಧಾಞ್ ಧಾರಣಪೋಷಣಯೋಃ ಇತಿ ಧಾರಣಪೋಷಣಾರ್ಥಕಾತ್ ಡುಧಾಞ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲುಙ್ ಉತ್ತಮಪುರುಷೈಕವಚನೇ 'ವ್ಯಧಾಮ್' ಇತಿ ರೂಪಮ್ ।

ವ್ಯಧಾತ್ ವ್ಯಧಾತಾಂ ವ್ಯಧುಃ, ವ್ಯಧಾಃ ವ್ಯಧಾತಂ ವ್ಯಧಾತ, ವ್ಯಧಾಂ ವ್ಯಧಾವ ವ್ಯಧಾಮ ॥

★ ★ ★

ಒಬ್ಬನೇ ಸಂಚರಿಸುವ ಮಗನನ್ನು ಕಾಪಾಡಲು ಮಧ್ಯಗೇಹರ ಪ್ರಾರ್ಥನೆ

**ವಿರಹಿತಸ್ವಜನಂ ಚರಣಪ್ರಿಯಂ**
**ವಿವಿಧಭೂತಭಯಂಕರವರ್ತ್ಮನಿ ।**
**ಅಯಿ ಕೃಪಾಲಯ ಪಾಲಯ ಬಾಲಕಂ**
**ಲಘುಶುಭಸ್ಯ ಮಮೇತ್ಯನಮದ್ ದ್ವಿಜಃ ॥ 15 ॥**

**ಪದಚ್ಛೇದ—** ವಿರಹಿತಸ್ವಜನಂ, ಚರಣಪ್ರಿಯಂ ವಿವಿಧಭೂತಭಯಂಕರವರ್ತ್ಮನಿ ಅಯಿ, ಕೃಪಾಲಯ ಪಾಲಯ ಬಾಲಕಂ, ಲಘುಶುಭಸ್ಯ ಮಮ ಇತಿ ಅನಮತ್ ದ್ವಿಜಃ ।

**ಅನ್ವಯ—** ಅಯಿ ಕೃಪಾಲಯ ವಿರಹಿತಸ್ವಜನಂ ವಿವಿಧಭೂತಭಯಂಕರವರ್ತ್ಮನಿ ಚರಣಪ್ರಿಯಂ ಲಘು ಶುಭಸ್ಯ ಮಮ ಬಾಲಕಂ ಪಾಲಯ ಇತಿ ದ್ವಿಜಃ ಅನಮತ್ ।

**ಅನ್ವಯಾರ್ಥ—**

**ಅಯಿ ಕೃಪಾಲಯ** = ಎಲೈ! ದಯೆಯ ಬೀಡಾದ ಸ್ವಾಮಿಯೇ!

**ವಿರಹಿತಸ್ವಜನಂ** = ಬಿಡಲ್ಪಟ್ಟ ಬಂಧುಜನರುಳ್ಳ

**ವಿವಿಧಭೂತಭಯಂಕರವರ್ತ್ಮನಿ** = ನಾನಾವಿಧಗಳಾದ ಪ್ರಾಣಿಗಳಿಂದ ಭಯವನ್ನು ಹುಟ್ಟಿಸುವ ಹಾದಿಯಲ್ಲಿ

**ಚರಣಪ್ರಿಯಂ** = ಸಂಚರಿಸುವುದರಲ್ಲಿ ಪ್ರೀತಿಯುಳ್ಳವನಾದ

**ಲಘು ಶುಭಸ್ಯ** = ಸ್ವಲ್ಪ ಪುಣ್ಯವುಳ್ಳ

**ಮಮ ಬಾಲಕಂ** = ನನ್ನ ಮಗನನ್ನು

**ಪಾಲಯ** = ರಕ್ಷಿಸು

**ಇತಿ** = ಹೀಗೆಂದು

**ದ್ವಿಜಃ** = ಮಧ್ಯಗೇಹಭಟ್ಟರು

**ಅನಮತ್** = ನಮಸ್ಕರಿಸಿದರು.

**ತಾತ್ಪರ್ಯ—** 'ಅನಂತಪದ್ಮನಾಭನೇ! ನೀನು ಅತ್ಯಂತ ಕೃಪಾಳು. ನನ್ನ ಮಗುವು ಬಂಧುಜನರನ್ನೆಲ್ಲಾ ಬಿಟ್ಟು ತಾನೊಬ್ಬನೇ ನಾನಾ ಬಗೆಯ ಪ್ರಾಣಿಗಳಿಂದ ಭಯಂಕರವಾದ ದಾರಿಯಲ್ಲಿ ತಾನೊಬ್ಬನೇ ಸಂಚರಿಸಲು ಇಚ್ಛೆಯುಳ್ಳವ-ನಾಗಿದ್ದಾನೆ. ಇಂತಹ ಮಗುವನ್ನು ಕಾಪಾಡು' ಎಂದು ಮಧ್ಯಗೇಹಭಟ್ಟರು ಅನಂತಾಸನನನ್ನು ನಮಸ್ಕರಿಸಿದರು.

**ವಿಗ್ರಹ—**

**ವಿವಿಧಭೂತಭಯಂಕರವರ್ತ್ಮನೀ—** ವಿವಿಧಾಶ್ಚ ತಾಃ ಭೂತಾಶ್ಚ ವಿವಿಧಭೂತಾಃ, ವಿವಿಧಭೂತೈಃ ಭಯಂಕರಂ ವಿವಿಧಭೂತಭಯಂಕರಂ, ವಿವಿಧಭೂತಭಯಂಕರಂ ಚ ತತ್ ವರ್ತ್ಮ ಚ ವಿವಿಧಭೂತಭಯಂಕರ-ವರ್ತ್ಮ, ತಸ್ಮಿನ್ ವಿವಿಧಭೂತಭಯಂಕರವರ್ತ್ಮನಿ ।

**ಕೃಪಾಲಯ—** ಕೃಪಾಯಾಃ ಆಲಯಃ ಕೃಪಾಲಯಃ ತಸ್ಯ ಸಂಬುದ್ಧಿಃ ಕೃಪಾಲಯ ।

**ವಿರಹಿತ ಸ್ವಜನಂ** = ಸ್ವಸ್ಯ ಜನಾಃ ಸ್ವಜನಾಃ, ವಿರಹಿತಾಃ ಸ್ವಜನಾಃ ಯಸ್ಯ ಸಃ ವಿರಹಿತ ಸ್ವಜನಃ ತಂ ವಿರಹಿತಸ್ವಜನಂ ।

**ಚರಣಪ್ರಿಯಂ** = ಚರಣೇ ಪ್ರಿಯಃ ಚರಣಪ್ರಿಯಃ, ತಂ ಚರಣಪ್ರಿಯಂ ।

**ಲಘುಶುಭಸ್ಯ** = ಲಘು ಶುಭಂ ಯಸ್ಯ ಸಃ ಲಘುಶುಭಃ, ತಸ್ಯ ಲಘುಶುಭಸ್ಯ ।

**ಕ್ರಿಯಾಪದ— ಪಾಲಯ-** ಪಾಲ ರಕ್ಷಣೇ ಇತಿ ರಕ್ಷಣಾರ್ಥಕಾತ್ ಪಾಲಧಾತೋಃ ಲೋಟಿ ಮಧ್ಯಮಪುರುಷೇ ಏಕವಚನೇ 'ಪಾಲಯ' ಇತಿ ರೂಪಮ್ ।

ಪಾಲಯತು ಪಾಲಯತಾತ್, ಪಾಲಯತಾಂ ಪಾಲಯಂತು, ಪಾಲಯ ಪಾಲಯತಾತ್, ಪಾಲಯತಂ ಪಾಲಯತ, ಪಾಲಯಾನಿ ಪಾಲಯಾವ ಪಾಲಯಾಮ ॥

**ಅನಮತ್-** ಣಮ ಪ್ರಹ್ವತ್ವೇ ಶಬ್ದೇ ಚ ಇತಿ ಣಮಧಾತ್ ಸಕರ್ಮಕಾತ್ ಪರಸ್ಮೈಪದಿನಃ ಲಙ್ ಪ್ರಥಮಪುರುಷೇ ಏಕವಚನೇ ಅನಮತ್ ಇತಿ ರೂಪಮ್ ।

ಅನಮತ್ ಅನಮತಾಂ ಅನಮನ್, ಅನಮಃ ಅನಮತಂ ಅನಮತ, ಅನಮಂ ಅನಮಾವ, ಅನಮಾಮ ॥

★ ★ ★

ಮಧ್ವಸೂರ್ಯರಿಂದ ಸಜ್ಜನರ ಮನೋವಿಕಾಸ

**ತಮುಪಗೃಹ್ಯ ಸುತಂ ಸುತಪೋನಿಧಿ-**
**ರ್ಗೃಹಮಸೌ ಗೃಹಿಣೀಸಹಿತೋ ಯಯೌ ।**

**ಉದಯತೀತಿ ಹಿ ಬಾಲದಿವಾಕರೇ**

**ಸ್ಮಿತಮಭೂತ್ಸುಜನಾನನವಾರಿಜಮ್ ॥ 16 ॥**

**ಪದಚ್ಛೇದ—** ತಂ, ಉಪಗೃಹ್ಯ, ಸುತಂ ಸುತಪೋನಿಧಿಃ, ಗೃಹಂ, ಅಸೌ, ಗೃಹಿಣೀಸಹಿತಃ, ಯಯೌ, ಉದಯತಿ, ಇತಿ, ಹಿ, ಬಾಲದಿವಾಕರೇ, ಸ್ಮಿತಂ, ಅಭೂತ್, ಸುಜನಾನನವಾರಿಜಂ ।

**ಅನ್ವಯ—** ತಂ ಸುತಂ ಉಪಗೃಹ್ಯ ಸುತಪೋನಿಧಿಃ ಅಸೌ, ಗೃಹಿಣೀಸಹಿತಃ ಗೃಹಂ ಯಯೌ, ಇತಿ ಬಾಲದಿವಾಕರೇ ಉದಯತಿ (ಸತಿ) ಸುಜನಾನವಾರಿಜಂ ಸ್ಮಿತಂ ಅಭೂತ್ ಹಿ ।

**ಅನ್ವಯಾರ್ಥ—**

**ತಂ ಸುತಂ** = ಆ ಮಗನಾದ ವಾಸುದೇವನನ್ನು
**ಉಪಗೃಹ್ಯ** = ಕರೆದುಕೊಂಡು
**ಸುತಪೋನಿಧಿಃ ಅಸೌ** = ಒಳ್ಳೆಯ ತಪಸ್ಸಿಗೆ ನಿಧಿಯಂತಿರುವ ಈ ಮಧ್ಯಗೇಹಭಟ್ಟರು
**ಗೃಹಿಣೀ ಸಹಿತಃ** = ತನ್ನ ಪತ್ನಿಯಿಂದ ಸಹಿತರಾಗಿ
**ಗೃಹಂ** = ಮನೆಯನ್ನು ಕುರಿತು
**ಯಯೌ** = ಹೋದರು.
**ಇತಿ** = ಹೀಗೆ
**ಬಾಲದಿವಾಕರೇ** = ಹುಡುಗನೆಂಬ ಸೂರ್ಯನು
**ಉದಯತಿ (ಸತಿ)** = ಅಭಿವೃದ್ಧಿಗೊಳ್ಳುತ್ತಿರಲು
**ಸುಜನಾನನವಾರಿಜಂ** = ಸಜ್ಜನರುಗಳ ಮುಖವೆಂಬ ಕಮಲವು
**ಸ್ಮಿತಂ** = ಅರಳಿದ್ದಾಗಿ
**ಅಭೂತ್** = ಆಯಿತು.
**ಹಿ** = ಇದು ಪ್ರಸಿದ್ಧವಾಗಿದೆ.

**ತಾತ್ಪರ್ಯ—** ತಪಸ್ವಿಗಳಾದ ಮಧ್ಯಗೇಹಭಟ್ಟರು ಆ ಹುಡುಗನನ್ನು ಕರೆದುಕೊಂಡು ಹೆಂಡತಿಯೊಡನೆ ತಮ್ಮ ಮನೆಗೆ ತೆರಳಿದರು. ಈ ವಾಸುದೇವನ ಸಾಮರ್ಥ್ಯವು ಹೀಗೆ ಪ್ರಕಟಗೊಳ್ಳುತ್ತಿರಲು, ಸೂರ್ಯನು ಉದಯಿಸಲು ತಾವರೆ ಹೂವು ಅರಳುವಂತೆ ಸಜ್ಜನರ ಮುಖವು ವಿಕಾಸಗೊಂಡಿತು.

ವಿಗ್ರಹ—

**ಸುತಪಾಂಸಿ—** ಶೋಭನಾನಿ ಚ ತಾನಿ ತಪಾಂಸಿ ಚ ಸುತಪಾಂಸಿ ।
**ಸುತಪೋನಿಧಿಃ—** ಸುತಪಸಾಂ ನಿಧಿಃ ಸುತಪೋನಿಧಿಃ ।
**ಗೃಹಿಣೀಸಹಿತಃ—** ಗೃಹಿಣ್ಯಾ ಸಹಿತಃ ಗೃಹಿಣೀಸಹಿತಃ ।
**ಉದಯತಿ—** ಉದಯತಿ ಇತಿ ಉದಯನ್, ತಸ್ಮಿನ್ ಉದಯತಿ ।
**ಬಾಲದಿವಾಕರೇ—** ಬಾಲಃ ಏವ ದಿವಾಕರಃ ಬಾಲದಿವಾಕರಃ, ತಸ್ಮಿನ್ ಬಾಲದಿವಾಕರೇ ।
**ಸುಜನಾನನವಾರಿಜಂ** = ಶೋಭನಾಶ್ಚ ತೇ ಜನಾಶ್ಚ ಸುಜನಾಃ, ಸುಜನಾನಾಂ ಆನನಂ, ಸುಜನಾನನಂ, ಸುಜನಾನನಂ ಏವ ವಾರಿಜಂ ಸುಜನಾನನ ವಾರಿಜಂ ।

**ಕ್ರಿಯಾಪದ—** **ಯಯೌ**- ಯಾ ಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ಯಾ ಧಾತೋಃ ಲಿಟಿ ಪ್ರಥಮಪುರುಷೈಕ-ವಚನೇ 'ಯಯೌ' ಇತಿ ರೂಪಮ್ ।

ಯಯೌ ಯಯತುಃ ಯಯುಃ, ಯಯಿಥ ಯಯಾಥ, ಯಯಥುಃ ಯಯ, ಯಯೌ
ಯಯಿವ ಯಯಿಮ ॥

* * *

ವಾಸುದೇವನನ್ನು ಲಾಲಿಸಿದ ಲೋಕಜನನಿ

**ವರವಿಮಾನಗಿರಾವಪಿ ಚಂಡಿಕಾ**
**ಶಿಶುಮಹೋ ಜನನೀ ತಮಲಾಲಯತ್ ।**
**ಅಪರಥಾ ಪರಿತುಷ್ಟಮನಾಃ ಕಥಂ**
**ಚಿರಮಿಹೈಷ ವಸೇದ್ವಿಸಹಾಯಕಃ** ॥ 17 ॥

**ಪದಚ್ಛೇದ—** ವರವಿಮಾನಗಿರೌ, ಅಪಿ, ಚಂಡಿಕಾ, ಶಿಶುಂ, ಅಹೋ ಜನನೀ ತಂ, ಅಲಾಲಯತ್, ಅಪರಥಾ, ಪರಿತುಷ್ಟಮನಾಃ ಕಥಂ, ಚಿರಂ, ಇಹ, ಏಷಃ ವಸೇತ್, ವಿಸಹಾಯಕಃ ।

**ಅನ್ವಯ—** ವರವಿಮಾನಗಿರೌ ಚಂಡಿಕಾ ಜನನೀ ಅಪಿ ತಂ ಶಿಶುಂ ಅಲಾಲಯತ್ ಅಹೋ ಅಪರಥಾ ಚಿರಂ ವಿಸಹಾಯಕಃ ಏಷಃ ಕಥಂ ಇಹ ಪರಿತುಷ್ಟಮನಾಃ ವಸೇತ್ ।

**ಅನ್ವಯಾರ್ಥ—**

**ವರವಿಮಾನಗಿರಾವಪಿ** = ಶ್ರೇಷ್ಠವಾಗಿರುವ ಪಾಜಕಕ್ಷೇತ್ರದ ವಿಮಾನಗಿರಿಯಲ್ಲಿಯೂ
**ಚಂಡಿಕಾ ಜನನೀ ಅಪಿ** = ಲಕ್ಷ್ಮೀರೂಪವಾದ ದುರ್ಗಾದೇವಿಯೂ
**ತಂ ಶಿಶುಂ** = ಆ ವಾಸುದೇವನೆಂಬ ಬಾಲಕನನ್ನು
**ಅಲಾಲಯತ್** = ಲಾಲಿಸಿದಳು.
**ಅಹೋ!** = ಆಶ್ಚರ್ಯ
**ಅಪರಥಾ** = ಇಲ್ಲದಿದ್ದರೆ
**ಚಿರಂ** = ಬಹುಕಾಲದವರೆಗೆ
**ವಿಸಹಾಯಕಃ** = ಯಾರ ಸಹಾಯವೂ ಇಲ್ಲದವನಾಗಿ
**ಏಷಃ** = ಈ ಬಾಲಕನು
**ಕಥಂ** = ಹೇಗೆ ತಾನೆ
**ಇಹ** = ಈ ಕಾಡಾದ, ಪಾಜಕಕ್ಷೇತ್ರದ ವಿಮಾನಗಿರಿಯಲ್ಲಿ
**ಪರಿತುಷ್ಟಮನಾಃ** = ಸಂತೋಷಗೊಂಡ ಮನಸ್ಸುಳ್ಳವನಾಗಿ
**ವಸೇತ್** = ವಾಸ ಮಾಡಿಯಾನು?

**ತಾತ್ಪರ್ಯ—** ಈ ವಾಸುದೇವನನ್ನು ವಿಮಾನಗಿರಿಯಲ್ಲಿ ವಾಸವಾಗಿದ್ದ ಲಕ್ಷ್ಮೀಸ್ವರೂಪಳಾದ ದುರ್ಗಾದೇವಿಯು ಲಾಲಿಸುತ್ತಿದ್ದಳು. ಹಾಗಿಲ್ಲದಿದ್ದರೇ ಈ ವಾಸುದೇವನು ಜನನಿಬಿಡವಾದ ಆ ವಿಮಾನಗಿರಿಯಲ್ಲಿ ಬಹಳ ಕಾಲ ಸಂತೋಷದಿಂದ ಹೇಗೆ ತಾನೇ ವಾಸ ಮಾಡಿಕೊಂಡಿರುತ್ತಿದ್ದನು?

**ವಿಗ್ರಹ—**

**ವರವಿಮಾನಗಿರೌ—** ವರಶ್ಚಾಸೌ ವಿಮಾನಗಿರಿಶ್ಚ ವರವಿಮಾನಗಿರಿಃ, ತಸ್ಮಿನ್ ವರವಿಮಾನಗಿರೌ ।

**ಅಪರಥಾ—** ನ ಪರಥಾ ಅಪರಥಾ ।

**ಪರಿತುಷ್ಟಮನಾಃ—** ಪರಿತಃ ತುಷ್ಟಂ ಪರಿತುಷ್ಟಂ, ಪರಿತುಷ್ಟಂ ಮನಃ ಯಸ್ಯ ಸಃ ಪರಿತುಷ್ಟಮನಾಃ ।

**ವಿಸಹಾಯಕಃ—** ವಿಗತಃ ಸಹಾಯಃ ಯಸ್ಯ ಸಃ ವಿಸಹಾಯಕಃ ।

**ಕ್ರಿಯಾಪದ— ಅಲಾಲಯತ್**- ಲಲ ಈಪ್ಸಾಯಾಂ ಇತಿ ಈಪ್ಸಾರ್ಥಕಾತ್ ಲಲ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲಙ್ ಪ್ರಥಮಪುರುಷೈಕವಚನೇ 'ಅಲಾಲಯತ್' ಇತಿ ರೂಪಂ ।

ಅಲಾಲಯತ್ ಅಲಾಲಯತಾಂ ಅಲಾಲಯನ್, ಅಲಾಲಯಃ ಅಲಾಲಯತಂ ಅಲಾಲಯತ,
ಅಲಾಲಯಂ ಅಲಾಲಯಾವ ಅಲಾಲಯಾಮ ॥

**ವಸೇತ್** - ವಸನಿವಾಸೇ ಇತಿ ನಿವಾಸಾರ್ಥಕಾತ್ ವಸಧಾತೋಃ ವಿಧಿಲಿಙ್ ಪ್ರಥಮಪುರುಷೈಕವಚನೇ 'ವಸೇತ್' ಇತಿ ರೂಪಂ ।

ವಸೇತ್ ವಸೇತಾಂ ವಸೇಯುಃ, ವಸೇಃ ವಸೇತಂ ವಸೇತ, ವಸೇಯಂ, ವಸೇವ, ವಸೇಮ ॥

★ ★ ★

ಭಾರತೀಪತಿಯ ಅಕ್ಷರಾಭ್ಯಾಸ

**ಸಕಲಶಬ್ದಮಯೀ ಚ ಸರಸ್ವತೀ**
**ಸತತಮಾನಮತಿ ಸ್ವಯಮೇವ ಯಮ್ ।**
**ದ್ವಿಜವರೋಽಥ ಕದಾಚನ ಮಾತೃಕಾಃ**
**ಕಿಲ ಸುತಂ ಪರಿಚಾಯಯತಿ ಸ್ಮ ತಮ್ ॥ 18 ॥**

**ಪದಚ್ಛೇದ—** ಸಕಲಶಬ್ದಮಯೀ, ಚ, ಸರಸ್ವತೀ, ಸತತಂ, ಆನಮತಿ, ಸ್ವಯಂ, ಏವ, ಯಂ, ದ್ವಿಜವರಃ ಅಥ, ಕದಾಚನ, ಮಾತೃಕಾಃ, ಕಿಲ, ಸುತಂ, ಪರಿಚಾಯಯತಿ, ಸ್ಮ, ತಂ ।

**ಅನ್ವಯ—** ಅಥ ದ್ವಿಜವರಃ, ಸಕಲಶಬ್ದಮಯೀ ಚ ಸರಸ್ವತೀ, ಯಂ ಸ್ವಯಮೇವ, ಸತತಮಾನಮತಿ, ತಂ ಸುತಂ ಕದಾಚನ ಮಾತೃಕಾಃ, ಪರಿಚಾಯಯತಿ ಸ್ಮ ಕಿಲ ।

**ಅನ್ವಯಾರ್ಥ—**

**ಅಥ** = ಅಕ್ಷರಾಭ್ಯಾಸಕ್ಕೆ ಯೋಗ್ಯ ಕಾಲವು ಬಂದ ನಂತರ

**ದ್ವಿಜವರಃ** = ಬ್ರಾಹ್ಮಣಶ್ರೇಷ್ಠರಾದ ಮಧ್ಯಗೇಹಭಟ್ಟರು

**ಸಕಲಶಬ್ದಮಯೀ ಚ** = ಲೌಕಿಕಶಬ್ದಗಳಿಂದಲೂ ವೈದಿಕಶಬ್ದಗಳಿಂದಲೂ ಅಭಿನ್ನವಾಗಿರುವ

**ಸರಸ್ವತೀ** = ಎಲ್ಲಾ ವಿದ್ಯೆಗಳ ಅಭಿಮಾನಿಯಾದ ಸರಸ್ವತೀ ದೇವಿಯು

**ಯಂ** = ಯಾವ ವಾಯುದೇವರ ಅವತಾರನಾದ ಶ್ರೀ ವಾಸುದೇವನನ್ನು

**ಸ್ವಯಮೇವ** = ತಾನಾಗಿಯೇ

**ಸತತಂ** = ಯಾವಾಗಲೂ ಎಡೆಬಿಡದೆ

**ಆನಮತಿ** = ನಮಸ್ಕಾರ ಮಾಡುತ್ತಾಳೋ

**ತಂ ಸುತಂ** = ಆ ಮಗನನ್ನು ಕುರಿತು

**ಕದಾಚಿನ** = ಒಂದು ಶುಭಮುಹೂರ್ತದಲ್ಲಿ

**ಮಾತೃಕಾಃ** = ಅಕ್ಷರಗಳನ್ನು

**ಪರಿಚಾಯಯತಿ ಸ್ಮ ಕಿಲ** = ಅಭ್ಯಾಸ ಮಾಡಿಸುತ್ತಿದ್ದರಷ್ಟೇ.

**ತಾತ್ಪರ್ಯ—** ಸರಸ್ವತೀ ದೇವಿಯು ಸಮಸ್ತ ಶಬ್ದಗಳಿಗೂ ಅಭಿಮಾನಿ ದೇವತೆಯಾಗಿರುವಳು. ಅವಳು ತಾನಾಗಿಯೇ ಮುಖ್ಯಪ್ರಾಣದೇವರ ಅವತಾರರಾದ ಶ್ರೀ ವಾಸುದೇವನನ್ನು ಯಾವಾಗಲೂ ನಮಿಸುವಳು. ಅಂತಹ ವಾಸುದೇವನಿಗೆ ಅಕ್ಷರಾಭ್ಯಾಸ ಮಾಡಿಸುವುದು ಅನಾವಶ್ಯಕವಾದರೂ ತಂದೆ ಮಧ್ಯಗೇಹಭಟ್ಟರು ಪ್ರಪಂಚದ ಎಲ್ಲಾ ಮಕ್ಕಳಂತೆ ಅವನಿಗೆ ಶುಭಮುಹೂರ್ತದಲ್ಲಿ ಅಕ್ಷರಾಭ್ಯಾಸ ಮಾಡಿಸಿದರು.

**ವಿಗ್ರಹ—**

**ಸಕಲಶಬ್ದಮಯೀ—** ಸಕಲಾಶ್ಚ ತೇ ಶಬ್ದಾಶ್ಚ ಸಕಲಶಬ್ದಾಃ ಸಕಲಶಬ್ದೈಃ ಅಭಿನ್ನಾ, ಸಕಲಶಬ್ದಮಯೀ ।

**ದ್ವಿಜವರಃ—** ದ್ವಿಜೇಷು ವರಃ, ದ್ವಿಜವರಃ ।

**ಕ್ರಿಯಾಪದ— ಪರಿಚಾಯಯತಿ-** ಪರಿ ಇತ್ಯುಪಸರ್ಗಪೂರ್ವಕಾತ್ ಚಿಞ್ ಚಯನೇ ಇತಿ ಚಯನಾರ್ಥಕಾತ್ ಣಿಜಂತಾತ್ ಚಿಞ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲಟಿ ಪ್ರಥಮಪುರುಷೈಕವಚನೇ ಪರಿಚಾಯಯತಿ ಇತಿ ರೂಪಮ್ ।

ಪರಿಚಾಯಯತಿ ಪರಿಚಾಯಯತಃ ಪರಿಚಾಯಯಂತಿ, ಪರಿಚಾಯಯಸಿ ಪರಿಚಾಯಯಥಃ
ಪರಿಚಾಯಯಥ, ಪರಿಚಾಯಯಾಮಿ ಪರಿಚಾಯಯಾವಃ ಪರಿಚಾಯಯಾಮಃ ॥

★ ★ ★

**ಹಿಂದಿನ ಪಾಠದ ಅವಶ್ಯಕತೆ ಇಲ್ಲದ ವಾಸುದೇವ**

**ಲಿಪಿಕುಲಂ ನನು ತಾತ ಗತೇ ದಿನೇ**
**ಲಿಖಿತಮೇವ ಪುನರ್ಲಿಖಿತಂ ಕುತಃ ।**
**ಇತಿ ನಿಜಪ್ರತಿಭಾಗುಣಭಾವಿತಂ**
**ಹರಿಪದಸ್ಯ ವಚಸ್ತಮನಂದಯತ್ ॥ 19 ॥**

**ಪದಚ್ಛೇದ—** ಲಿಪಿಕುಲಂ, ನನು, ತಾತ, ಗತೇ, ದಿನೇ, ಲಿಖಿತಂ, ಏವ, ಪುನಃ, ಲಿಖಿತಂ, ಕುತಃ, ಇತಿ, ನಿಜ-ಪ್ರತಿಭಾಗುಣಭಾವಿತಂ, ಹರಿಪದಸ್ಯ, ವಚಃ, ತಂ, ಅನಂದಯತ್ ।

**ಅನ್ವಯ—** ನನು, ಹೇ ತಾತ! ಗತೇ ದಿನೇ ಲಿಖಿತಮೇವ ಲಿಪಿಕುಲಂ ಪುನಃ ಕುತಃ ಲಿಖಿತಂ ? ಇತಿ ನಿಜಪ್ರತಿಭಾ-ಗುಣಭಾವಿತಂ ಹರಿಪದಸ್ಯ ವಚಃ, ತಂ ಅನಂದಯತ್ ।

**ಅನ್ವಯಾರ್ಥ—**

**ಹೇ ತಾತ** = ಹೇ ತಂದೆಯೇ

**ಗತೇ ದಿನೇ** = ಹಿಂದಿನ ದಿನದಲ್ಲಿ

**ಲಿಖಿತಮೇವ** = ಬರೆಯಲ್ಪಟ್ಟಿರುವುದನ್ನೇ

**ಲಿಪಿಕುಲಂ** = ಅಕ್ಷರಗಳ ಸಮೂಹವೇ

**ಪುನಃ** = ಇನ್ನೊಮ್ಮೆ

**ಕುತಃ ಲಿಖಿತಂ** = ಏತಕ್ಕೆ ಬರೆಯಲ್ಪಟ್ಟಿತು?

**ಇತಿ** = ಹೀಗೆಂದು

**ನಿಜಪ್ರತಿಭಾಗುಣಭಾವಿತಂ- ನಿಜಪ್ರತಿಭಾಃ** = ತನ್ನ ಸ್ವಾಭಾವಿಕ ಬುದ್ಧಿಯೆಂಬ, **ಗುಣಃ** = ಗುಣದಿಂದ, **ಭಾವಿತಂ** = ಉಂಟುಮಾಡಲ್ಪಟ್ಟ

**ಹರಿಪದಸ್ಯ** = ಶ್ರೀಹರಿಯ ಹೆಸರಿನಿಂದ ಯುಕ್ತವಾಗಿರುವ ವಾಸುದೇವನ

**ವಚಃ** = ಮಾತು

**ತಂ** = ಮಧ್ಯಗೇಹಭಟ್ಟರನ್ನು

**ಅನಂದಯತ್** = ಸಂತೋಷಪಡಿಸಿತು.

**ತಾತ್ಪರ್ಯ—** ತಂದೆ ಮಧ್ಯಗೇಹಭಟ್ಟರು ಸಾಮಾನ್ಯಮಕ್ಕಳಿಗೆ ಬರೆದು ಹೇಳಿಕೊಡುವಂತೆ ವಾಸುದೇವನಿಗೂ ಹಿಂದಿನ ದಿನ ಬರೆದ ಅಕ್ಷರವನ್ನೇ ಹೇಳಿಕೊಡಲು ಮರಳಿ ಬರೆದರು. ಅದನ್ನು ನೋಡಿ ವಾಸುದೇವನು ''ತಂದೆಯೇ! ನಿನ್ನೆ ಬರೆದ ಅಕ್ಷರವನ್ನೇ ಏಕೆ ಬರೆದಿರುತ್ತೀರಿ?'' ಎಂದು ಕೇಳಿದನು. ಹೀಗೆ ಸ್ವಾಭಾವಿಕಬುದ್ಧಿನಿಪುಣನಾದ ಮಗನ ಮಾತನ್ನು ಕೇಳಿ ತಂದೆಯಾದ ಮಧ್ಯಗೇಹಭಟ್ಟರು ಆನಂದಗೊಂಡರು.

ವಿಗ್ರಹ—

**ಲಿಪಿಕುಲಂ—** ಲಿಪೀನಾಂ ಕುಲಂ, ಲಿಪಿಕುಲಂ, ತತ್ ಲಿಪಿಕುಲಂ ।

**ನಿಜಪ್ರತಿಭಾಗುಣಭಾವಿತಂ—** ನಿಜಾ ಚ ಸಾ ಪ್ರತಿಭಾ ಚ ನಿಜಪ್ರತಿಭಾ, ನಿಜಪ್ರತಿಭಾ ಏವ ಗುಣಃ ನಿಜ-ಪ್ರತಿಭಾಗುಣಃ, ನಿಜಪ್ರತಿಭಾಗುಣೇನ ಭಾವಿತಂ, ನಿಜಪ್ರತಿಭಾಗುಣಭಾವಿತಂ ।

**ಹರಿಪದಸ್ಯ—** ಹರೇಃ ಪದಂ ಯಸ್ಯ ಸಃ ಹರಿಪದಃ ತಸ್ಯ ಹರಿಪದಸ್ಯ ।

**ಕ್ರಿಯಾಪದ— ಅನಂದಯತ್-** ಟು ನದಿ ಸಮೃದ್ಧೌ ಸಮೃದ್ಧ್ಯರ್ಥಕಾತ್ ನದಿ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಅನಂದಯತ್' ಇತಿ ರೂಪಮ್ ।

ಅನಂದಯತ್ ಅನಂದಯತಾಂ ಅನಂದಯನ್, ಅನಂದಯಃ ಅನಂದಯತಂ ಅನಂದಯತ,
ಅನಂದಯಂ ಅನಂದಯಾವ ಅನಂದಯಾಮ ॥

★ ★ ★

ವಾಸುದೇವ ಪ್ರತಿಭಾಸಮುದ್ರದಿಂದ ತಂದೆಯ ಆಚ್ಚರಿ

**ಶಿಶುರಸೌ ಪ್ರತಿಭಾಂಬುಧಿರಿತ್ಯಲಂ**
**ಜನಮನೋವಚನಗ್ರಹಪೀಡನಾ ।**
**ನ ಭವತಾದಿತಿ ತಂ ವಿಜನಸ್ಥಲೇ**
**ಸ್ವತನಯಂ ಸಮಶಿಕ್ಷಯದೇಷಕಃ ॥ 20 ॥**

**ಪದಚ್ಛೇದ—** ಶಿಶುಃ, ಅಸೌ, ಪ್ರತಿಭಾಂಬುಧಿಃ, ಇತಿ, ಅಲಂ, ಜನಮನೋವಚನಗ್ರಹಪೀಡನಾ, ನ, ಭವತಾತ್, ಇತಿ, ತಂ, ವಿಜನಸ್ಥಲೇ, ಸ್ವತನಯಂ, ಸಮಶಿಕ್ಷಯತ್, ಏಷಕಃ ।

**ಅನ್ವಯ—** ಏಷಕಃ, ಅಸೌ, ಶಿಶುಃ ಅಲಂ ಪ್ರತಿಭಾಂಬುಧಿಃ, ಇತಿ, ಜನಮನೋವಚನಗ್ರಹಪೀಡನಾ, ನ, ಭವತಾತ್, ಇತಿ, ತಂ ಸ್ವತನಯಂ, ವಿಜನಸ್ಥಲೇ, ಸಮಶಿಕ್ಷಯತ್ ।

**ಅನ್ವಯಾರ್ಥ—**

**ಏಷಕಃ** = ಈ ತಂದೆಯಾದ ಮಧ್ಯಗೇಹಭಟ್ಟರು

**ಅಸೌ ಶಿಶುಃ** = ಈ ಮಗುವು

**ಅಲಂ** = ಚೆನ್ನಾಗಿ

**ಪ್ರತಿಭಾಂಬುಧಿ** = ಪ್ರತಿಭೆಯಿಂದ ಸಮುದ್ರದಂತಿರುವವನು

**ಇತಿ** = ಹೀಗೆಂದು

**ಜನಮನೋವಚಗ್ರಹಪೀಡನಾ** = ಜನರುಗಳ ಮನಸ್ಸುಗಳು ಮಾತುಗಳೆಂಬ ಪಿಶಾಚದ ಪೀಡೆಯು

**ನ ಭವತಾತ್** = ಆಗದಿರಲಿ

**ಇತಿ** = ಹೀಗೆಂದು

**ಸ್ವತನಯಂ** = ತನ್ನ ಮಗನಾಗಿರುವ

**ತಂ** = ಆ ವಾಸುದೇವನನ್ನು

**ವಿಜನಸ್ಥಲೇ** = ಜನರುಗಳೇ ಇಲ್ಲದಿರುವ ಸ್ಥಳದಲ್ಲಿ (ಏಕಾಂತದಲ್ಲಿ)

**ಸಮಶಿಕ್ಷಯತ್** = ವಿದ್ಯಾಭ್ಯಾಸ ಮಾಡಿಸಿದರು.

**ತಾತ್ಪರ್ಯ—** ಮಧ್ಯಗೇಹಭಟ್ಟರು ತಮ್ಮ ಗಮನಿಗೆ ವಿದ್ಯೆಯನ್ನು ಕಲಿಸುವಾಗ, ಜನರು ಅವನ ಪ್ರತಿಭೆಯನ್ನು ಕಂಡು ''ಈ ಹುಡುಗನು ಎಷ್ಟು ಪ್ರತಿಭೆಯುಳ್ಳವನಾಗಿದ್ದಾನೆ'' ಎಂದು ಹೇಳಿಯಾರು. ಆದರಿಂದ ಏನಾದರೂ ದೃಷ್ಟಿದೋಷ ಬಂದು ಕೆಟ್ಟದ್ದಾದೀತು ಎಂದು ತಿಳಿದು ಏಕಾಂತದಲ್ಲಿ ಅವನಿಗೆ ವಿದ್ಯೆಯನ್ನು ಕಲಿಸಿದರು.

**ವಿಗ್ರಹ—**

**ಪ್ರತಿಭಾಂಬುಧಿಃ—** ಪ್ರತಿಭಯಾ ಅಂಬುಧಿಃ ಇವ ಪ್ರತಿಭಾಂಬುಧಿಃ ।

**ಜನಮನೋವಚನಗ್ರಹಪೀಡನಾ—** ಮನಃ ಚ ವಚನಂ ಚ ಮನೋವಚನೇ, ಜನಾನಾಂ ಮನೋವಚನೇ ಜನಮನೋವಚನೇ, ಜನಮನೋವಚನೇ ಏವ ಗ್ರಹಃ ಜನಮನೋವಚನಗ್ರಹಃ, ಜನಮನೋ-ವಚನಗ್ರಹಸ್ಯ ಪೀಡನಾ ಜನಮನೋವಚನಗ್ರಹಪೀಡನಾ ।

**ವಿಜನಸ್ಥಲಂ—** ವಿಗತಾಃ ಜನಾಃ ಯಸ್ಮಿನ್ ತತ್ ವಿಜನಂ, ವಿಜನಂ ಚ ತತ್ ಸ್ಥಲಂ ಚ ವಿಜನಸ್ಥಲಂ, ತಸ್ಮಿನ್ ವಿಜನಸ್ಥಲೇ ।

**ಸ್ವತನಯಂ—** ಸ್ವಸ್ಯ ತನಯಃ ಸ್ವತನಯಃ ತಂ ಸ್ವತನಯಂ ।

**ಕ್ರಿಯಾಪದ— ಭವತಾತ್**- ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಲೋಟಿ ಪ್ರಥಮಪುರುಷೇ ಏಕವಚನೇ 'ಭವತಾತ್' ಇತಿ ರೂಪಂ ।

ಭವತು ಭವತಾತ್ ಭವತಾಂ ಭವಂತು, ಭವ ಭವತಾತ್, ಭವತಂ ಭವತ, ಭವಾನಿ ಭವಾವ ಭವಾಮ ॥

**ಸಮಶಿಕ್ಷಯತ್**- ಸಂ ಇತ್ಯುಪಸರ್ಗಪೂರ್ವಕಾತ್ ಶಿಕ್ಷವಿದ್ಯೋಪಾದಾನೇ ಇತಿ ಧಾತೋಃ ಲಙ್ ಪ್ರಥಮ-ಪುರುಷೈಕವಚನೇ 'ಸಮಶಿಕ್ಷಯತ್' ಇತಿ ರೂಪಂ ।

ಸಮಶಿಕ್ಷಯತ್, ಸಮಶಿಕ್ಷಯತಾಂ ಸಮಶಿಕ್ಷಯನ್, ಸಮಶಿಕ್ಷಯಃ ಸಮಶಿಕ್ಷಯತಂ ಸಮಶಿಕ್ಷಯತ, ಸಮಶಿಕ್ಷಯಂ ಸಮಶಿಕ್ಷಯಾವ ಸಮಶಿಕ್ಷಯಾಮ ॥

★ ★ ★

ಘೃತವಲ್ಲಿಯಲ್ಲಿ ವಾಸುದೇವನ ಚತುರತೆ

**ಮಹವತಾ ಸ್ವಜನೇನ ಸಮೀರಿತ-**
**ಸ್ವಜನನೀಸಹಿತೇನ ಕದಾಚನ ।**
**ರುಚಿರವಾಚನಯಾಽರ್ಚಿತವಾಕ್ ಶ್ರಿಯಾ**
**ಪ್ರತಿಯಯೇ ಪ್ರಭುಣಾ ಘೃತವಲ್ಲ್ಯಪಿ ॥ 21 ॥**

**ಪದಚ್ಛೇದ—** ಮಹವತಾ, ಸ್ವಜನೇನ, ಸಮೀರಿತಸ್ವಜನನೀಸಹಿತೇನ, ಕದಾಚನ, ರುಚಿರವಾಚನಯಾ, ಅರ್ಚಿತ-ವಾಕ್‌ಶ್ರಿಯಾ ಪ್ರತಿಯಯೇ, ಪ್ರಭುಣಾ ಘೃತವಲ್ಲೀ, ಅಪಿ ।

**ಅನ್ವಯ—** ಕದಾಚನ ಮಹವತಾ ಸ್ವಜನೇನ ಸಮೀರಿತಸ್ವಜನನೀಸಹಿತೇನ ರುಚಿರವಾಚನಯಾ ಅರ್ಚಿತ-ವಾಕ್‌ಶ್ರಿಯಾ ಪ್ರಭುಣಾ ಘೃತವಲ್ಲೀ ಅಪಿ ಪ್ರತಿಯಯೇ ।

**ಅನ್ವಯಾರ್ಥ—**

**ಕದಾಚನ** = ಒಂದಾನೊಂದು ದಿನ
**ಮಹವತಾ** = ಉತ್ಸವವುಳ್ಳ
**ಸ್ವಜನೇನ** = ಬಂಧುಜನರಿಂದ
ಸಮೀರಿತಸ್ವಜನನೀಸಹಿತೇನ—
**ಸಮೀರಿತ** = ಪ್ರೇರಿಸಲ್ಪಟ್ಟ
**ಸ್ವಜನನೀ** = ತನ್ನ ತಾಯಿಯಿಂದ
**ಸಹಿತೇನ** = ಕೂಡಿರುವ
**ರುಚಿರವಾಚನಯಾ** = ಮನೋಹರವಾಗಿ ಇರುವುದರಿಂದ
**ಅರ್ಚಿತ ವಾಕ್‌ಶ್ರಿಯಾ** = ಸನ್ಮಾನಿಸಲ್ಪಟ್ಟ ಮಾತಿನ ಸಂಪತ್ತುಳ್ಳ
**ಪ್ರಭುಣಾ** = ಸಮರ್ಥನಾದ ವಾಸುದೇವನಿಂದ
**ಘೃತವಲ್ಲೀ ಅಪಿ** = ನೇಯಂಪಳ್ಳಿಯೂ ಕೂಡ
**ಪ್ರತಿಯಯೇ** = ಹೋಗಲ್ಪಟ್ಟಿತು.

**ತಾತ್ಪರ್ಯ—** ಒಂದಾನೊಂದು ದಿನ 'ನೇಯಂಪಳ್ಳಿ' ಎಂಬ ಹಳ್ಳಿಯಲ್ಲಿರುವ ಬಂಧುವಿನ ಮನೆಯಲ್ಲಿ ಒಂದು ಉತ್ಸವವು ನಡೆಯಿತು. ಅಲ್ಲಿರುವ ವಾಸುದೇವನ ತಾಯಿಯ ಬಂಧುವು ಬರಬೇಕೆಂದು ಅವರನ್ನು ಕರೆದನು. ಆಗ ವಾಸುದೇವನು ತಾಯಿಯೊಡನೆ ಅಲ್ಲಿಗೆ ಹೋದನು. ಅಷ್ಟರಲ್ಲಿ ವಾಸುದೇವನು ಎಲ್ಲಾ ಪುಸ್ತಕಗಳನ್ನು ಓದುವುದರಲ್ಲಿ ಮತ್ತು ಅರ್ಥ ಹೇಳುವುದರಲ್ಲಿ ಚತುರನಾಗಿದ್ದನು. ಅದರಿಂದ ಅವನನ್ನು ಎಲ್ಲರೂ ಸನ್ಮಾನಿಸುತ್ತಿದ್ದರು.

**ವಿಗ್ರಹ—**

**ಅರ್ಚಿತವಾಕ್‌ಶ್ರಿಯಾಃ** = ವಾಚಃ ಶ್ರೀಃ ವಾಕ್‌ಶ್ರೀಃ, ಅರ್ಚಿತಾ ವಾಕ್‌ಶ್ರೀಃ ಯಸ್ಯ ಸಃ ಅರ್ಚಿತವಾಕ್‌ಶ್ರೀಃ ತೇನ ಅರ್ಚಿತವಾಕ್‌ಶ್ರಿಯಾ ।

**ಮಹವತಾ—** ಮಹಃ ಅಸ್ಯ ಇತಿ ಮಹವಾನ್ ತೇನ ಮಹವತಾ ।

**ಸ್ವಜನೇನ—** ಸ್ವಸ್ಯ ಜನಃ ಸ್ವಜನಃ ತೇನ ಸ್ವಜನೇನ ।

**ಸಮೀರಿತಸ್ವಜನನೀಸಹಿತೇನ**— ಸಮೀರಿತಾ ಚ ಸಾ ಸ್ವಜನನೀ ಚ ಸಮೀರಿತಸ್ವಜನನೀ, ಸಮೀರಿತಸ್ವಜನನ್ಯಾ ಸಹಿತಃ ಸಮೀರಿತಸ್ವಜನನೀಸಹಿತಃ, ತೇನ ಸಮೀರಿತಸ್ವಜನನೀಸಹಿತೇನ ।

**ರುಚಿರವಾಚನಾ**— ರುಚಿರಾ ಚ ಸಾ ವಾಚನಾ ಚ ರುಚಿರವಾಚನಾ, ತಯಾ ರುಚಿರವಾಚನಯಾ ।

**ಕ್ರಿಯಾಪದ**— **ಪ್ರತಿಯಯೇ**- ಪ್ರತಿ ಇತ್ಯುಪಸರ್ಗಪೂರ್ವಕಾತ್ ಯಾ ಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ಯಾಧಾತೋಃ ಆತ್ಮನೇಪದಿನಃ ಕರ್ಮಣಿ ಲಿಟ್ ಪ್ರಥಮಪುರುಷೇ ಏಕವಚನೇ ಪ್ರತಿಯಯೇ ಇತಿ ರೂಪಮ್ ।

ಪ್ರತಿಯಯೇ ಪ್ರತಿಯಯಾತೇ ಪ್ರಯಯಿರೇ
ಪ್ರತಿಯಯಿಷೇ ಪ್ರತಿಯಯಾಥೇ ಪ್ರತಿಯಯಿಧ್ವೇ
ಪ್ರತಿಯಯೇ ಪ್ರತಿಯಯಿವಹೇ ಪ್ರತಿಯಯಿಮಹೇ ॥

★ ★ ★

ಶಿವಭಟ್ಟನಿಂದ ಪುರಾಣಕಥನ

**ಪರಿಷದಾ ನಿತರಾಂ ಪರಿವಾರಿತಃ**
**ಶಿವಪದಃ ಕಿಲ ಧೌತಪಟೋದ್ಭವಃ ।**
**ಇಹ ಕಥಾಂ ಕಥಯನ್ ದದೃಶೇ ತತಃ**
**ಪೃಥುಧಿಯಾ ಪೃಥುಕಾಽಕೃತಿನಾಽಮುನಾ ॥ 22 ॥**

**ಪದಚ್ಛೇದ**— ಪರಿಷದಾ, ನಿತರಾಂ, ಪರಿವಾರಿತಃ, ಶಿವಪದಃ, ಕಿಲ, ಧೌತಪಟೋದ್ಭವಃ, ಇಹ, ಕಥಾಂ, ಕಥಯನ್, ದದೃಶೇ ತತಃ, ಪೃಥುಧಿಯಾ, ಪೃಥುಕಾಽಕೃತಿನಾ, ಅಮುನಾ ।

**ಅನ್ವಯ**— ತತಃ ಇಹ ಪೃಥುಧಿಯಾ ಪೃಥುಕಾಕೃತಿನಾ ಅಮುನಾ ಕಥಾಂ ಕಥಯನ್ ಪರಿಷದಾ ನಿತರಾಂ ಪರಿವಾರಿತಃ ಶಿವಪದಃ ಧೌತಪಟೋದ್ಭವಃ (ದ್ವಿಜಃ) ದದೃಶೇ ಕಿಲ ।

**ಅನ್ವಯಾರ್ಥ**—

**ತತಃ** = ಅನಂತರದಲ್ಲಿ
**ಇಹ** = ಈ ನೇಯಂಪಳ್ಳಿಯಲ್ಲಿ
**ಪೃಥುಧಿಯಾ** = ವಿಶಾಲವಾದ ಬುದ್ಧಿಯುಳ್ಳವರಾದ
**ಪೃಥುಕಾಕೃತಿನಾ** = ಬಾಲಕನ ಆಕಾರವುಳ್ಳ
**ಅಮುನಾ** = ಈ ವಾಸುದೇವನೆಂದು ಹೆಸರುಳ್ಳ ಮುಖ್ಯಪ್ರಾಣನಿಂದ
**ಕಥಾಂ** = ಪುರಾಣ ಕಥೆಯನ್ನು
**ಕಥಯನ್** = ಹೇಳುತ್ತಿರುವ
**ಪರಿಷದಾ** = ಸಭೆಯಲ್ಲಿರುವ ಜನಸಮೂಹದಿಂದ
**ನಿತರಾಂ** = ಅಧಿಕವಾಗಿ
**ಪರಿವಾರಿತಃ** = ಸುತ್ತಲ್ಪಟ್ಟವರಾದ
**ಶಿವಪದಃ** = ಶಿವ ಎಂಬ ಹೆಸರಿನಿಂದ ಯುಕ್ತನಾದ
**ಧೌತಪಟೋದ್ಭವಃ** = ಧೌತಪಟವೆಂಬಕುಲದಲ್ಲಿ (ಮಡಿನ್ನಾಯಕುಲದಲ್ಲಿ) ಹುಟ್ಟಿರುವರಾದ ಒಬ್ಬ ಬ್ರಾಹ್ಮಣನು
**ದದೃಶೇ ಕಿಲ** = ನೋಡಲ್ಪಟ್ಟನಷ್ಟೇ.

**ತಾತ್ಪರ್ಯ—** ಆ ನೇಯಂಪಳ್ಳಿಯಲ್ಲಿ ಮಡಿನ್ನಾಯ ವಂಶದಲ್ಲಿ ಜನಿಸಿದ ಶಿವಭಟ್ಟನೆಂಬ ಬ್ರಾಹ್ಮಣನು ಪುರಾಣ-ಕಥೆಯನ್ನು ಹೇಳುತ್ತಿದ್ದನು. ಸಭೆಯ ಜನರೆಲ್ಲಾ ಕುತೂಹಲದಿಂದ ಗುಂಪುಗುಂಪಾಗಿ ಅವನನ್ನು ಸುತ್ತಿಕೊಂಡಿದ್ದರು. ಅತಿಬುದ್ಧಿಶಾಲಿಯಾದ ಈ ವಾಸುದೇವನು ಅವನನ್ನು ಕಂಡನು.

**ವಿಗ್ರಹ—**

**ಶಿವಪದಃ—** ಶಿವಃ ಇತಿ ಪದಂ ಯಸ್ಯ ಸಃ ಶಿವಪದಃ ।

**ಧೌತಪಟೋದ್ಭವಃ—** ಧೌತಪಟೇ (ತನ್ನಾಮಕೇ ಕುಲೇ) ಉದ್ಭವಃ ಯಸ್ಯ ಸಃ ಧೌತಪಟೋದ್ಭವಃ ।

**ಕಥಯನ್—** ಕಥಯತಿ ಇತಿ ಕಥಯನ್ ।

**ಪೃಥುಧೀಃ—** ಪೃಥ್ವೀ ಧೀ ಯಸ್ಯ ಸಃ ಪೃಥುಧೀಃ, ತೇನ ಪೃಥುಧಿಯಾ ।

**ಪೃಥುಕಾಕೃತಿಃ—** ಪೃಥುಕಸ್ಯ ಆಕೃತಿಃ ಯಸ್ಯ ಸಃ ಪೃಥುಕಾಕೃತಿಃ, ತೇನ ಪೃಥುಕಾಕೃತಿನಾ ।

**ಕ್ರಿಯಾಪದ—** ದದೃಶೇ- ದೃಶಿರ್ ಪ್ರೇಕ್ಷಣೇ ಪ್ರೇಕ್ಷಣಾರ್ಥಕಾತ್ ಕರ್ಮಣಿ ಲಿಟಿ ಪ್ರಥಮಪುರುಷೈಕವಚನೇ 'ದದೃಶೇ' ಇತಿ ರೂಪಂ ।

ದದೃಶೇ ದದೃಶಾತೇ ದದೃಶಿರೇ, ದದೃಶಿಷೇ ದದೃಶಾಥೇ ದದೃಶಿಧ್ವೇ, ದದೃಶೇ ದದೃಶಿವಹೇ ದದೃಶಿಮಹೇ ॥

★ ★ ★

ಶಿವಭಟ್ಟನ ಅಪಸಿದ್ಧಾಂತ

**ಇದಮುವಾಚ ವಿಚಾರವಿಚಕ್ಷಣಃ**
**ಶುಚಿವಚಃ ಶನಕೈಃ ಸ ಜನಾಂತರೇ ।**
**ಅಪರಥಾ ಕಥಿತಂ ಕಥಕ ತ್ವಯಾ**
**ನನು ಮತಾನ್ಮಹತಾಮಿತಿ ಸಸ್ಮಿತಮ್ ॥ 23 ॥**

**ಪದಚ್ಛೇದ—** ಇದಂ, ಉವಾಚ, ವಿಚಾರವಿಚಕ್ಷಣಃ, ಶುಚಿವಚಃ, ಶನಕೈಃ, ಸಃ, ಜನಾಂತರೇ, ಅಪರಥಾ, ಕಥಿತಂ, ಕಥಕ ತ್ವಯಾ, ನನು, ಮತಾತ್, ಮಹತಾಂ, ಇತಿ, ಸಸ್ಮಿತಂ ।

**ಅನ್ವಯ—** ವಿಚಾರವಿಚಕ್ಷಣಃ ಶುಚಿವಚಃ, ಸಃ, ಜನಾಂತರೇ, ಹೇ ಕಥಕ ! ತ್ವಯಾ ಮಹತಾಂ ಮತಾತ್ ಅಪರಥಾ ಕಥಿತಂ ನನು ಇತಿ ಇದಂ ಸಸ್ಮಿತಂ ಶನಕೈಃ ಉವಾಚ ।

**ಅನ್ವಯಾರ್ಥ—**

**ವಿಚಾರವಿಚಕ್ಷಣಃ** = ಪದಗಳಿಗೂ ಪದಾರ್ಥಗಳಿಗೂ ವಾಚ್ಯವಾಚಕಶಕ್ತಿಯನ್ನು ವಿಚಾರಿಸುವ ವಿಷಯದಲ್ಲಿ ಅತ್ಯಂತ ನಿಪುಣನಾದ

**ಶುಚಿವಚಃ** = ಶುದ್ಧವಾದ ಮಾತುಳ್ಳ

**ಸಃ** = ಆ ವಾಸುದೇವನು

**ಜನಾಂತರೇ** = ಶ್ರೋತೃಗಳಾದ ಜನರ ಮಧ್ಯದಲ್ಲಿ

**ಹೇ ಕಥಕ** = ಪುರಾಣಿಕರೇ

**ತ್ವಯಾ** = ನಿಮ್ಮಿಂದ

**ಮಹತಾಂ** = ಜ್ಞಾನಿಗಳಾದ ವ್ಯಾಸ-ಶುಕಾದಿಗಳ

**ಮತಾತ್** = ಸಿದ್ಧಾಂತಕ್ಕಿಂತ

**ಅಪರಥಾ** = ಬೇರೆ ವಿಧವಾಗಿ

**ಕಥಿತಂ ನನು** = ಹೇಳಲ್ಪಟ್ಟಿತಷ್ಟೇ

**ಇತಿ** = ಹೀಗೆಂಬ

**ಇದಂ** = ಈ ಮಾತನ್ನು

**ಸಸ್ಮಿತಂ** = ಮುಗುಳುನಗೆಯಿಂದ ಕೂಡಿದ್ದಾಗಿ

**ಶನಕೈಃ** = ಮೆಲ್ಲಗೆ

**ಉವಾಚ** = ಹೇಳಿದನು.

**ತಾತ್ಪರ್ಯ**— ಆ ವಾಸುದೇವನು ಪದ ಮತ್ತು ಅರ್ಥಗಳನ್ನು ವಿಮರ್ಶಿಸುವುದರಲ್ಲಿ ನಿಪುಣರಾಗಿದ್ದರು. ಅವನು ಜನರೆಲ್ಲಾ ಕೇಳುತ್ತಿರುವಾಗಲೇ 'ಪುರಾಣಿಕರೇ ತಾವು ಹೇಳುತ್ತಿರುವುದು ಸರಿಯಲ್ಲ, ಇದು ವ್ಯಾಸಶುಕಾದಿಗಳ ಸಿದ್ಧಾಂತಕ್ಕೆ ವಿರುದ್ಧವಾದದ್ದು' ಎಂದು ಸ್ಫುಟವಾಗಿ ನಗುತ್ತ ಮೆಲ್ಲಗೆ ಹೇಳಿದನು.

**ವಿಗ್ರಹ**—

**ವಿಚಾರವಿಚಕ್ಷಣಃ**— ವಿಚಾರೇ ವಿಚಕ್ಷಣಃ ವಿಚಾರವಿಚಕ್ಷಣಃ ।

**ಜನಾಂತರಂ**— ಜನಾನಾಂ ಅಂತರಂ ಜನಾಂತರಂ ತಸ್ಮಿನ್ ಜನಾಂತರೇ ।

**ಶುಚಿವಚಃ**— ಶುಚಿ ಚ ತತ್ ವಚಶ್ಚ ಶುಚಿವಚಃ, ತತ್ ಶುಚಿವಚಃ ।

**ಅಪರಥಾ**— ನ ಪರಥಾ, ಅಪರಥಾ ।

**ಕಥಕಃ**— ಕಥಾಂ ಕರೋತಿ ಇತಿ ಕಥಕಃ, ತಸ್ಯ ಸಂಬುದ್ಧಿಃ ಹೇ ಕಥಕ ।

**ಸಸ್ಮಿತಂ**— ಸ್ಮಿತೇನ ಸಹ ವರ್ತತೇ ಯಥಾ ತಥಾ ಸಸ್ಮಿತಂ ।

**ಕ್ರಿಯಾಪದ**— **ಉವಾಚ**- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಞ್ ಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೈಕವಚನೇ 'ಉವಾಚ' ಇತಿ ರೂಪಂ ।

ಉವಾಚ ಊಚತುಃ ಊಚುಃ, ಉವಚಿಥ-ಉವಕ್ಥ, ಊಚಥುಃ ಊಚ, ಉವಾಚ- ಉವಚ, ಊಚಿವ ಊಚಿಮ ॥

★ ★ ★

ವಾಸುದೇವನಿಂದ ಪರಾಭವ

**ಅಗಣಯನ್ನ ಶಿವಂ ಜನತಾ ತದಾ**
**ಸವಚನೇ ವಸುದೇವಸುತಾಹ್ವಯೇ ।**
**ಮುಖರಮಿಚ್ಛತಿ ಕೋ ಮೃಗಧೂರ್ತಕಂ**
**ಪ್ರಕೃತಹುಂಕೃತಸಿಂಹಶಿಶೌ ಸತಿ ॥ 24 ॥**

**ಪದಚ್ಛೇದ**— ಅಗಣಯಿತ್ ನ, ಶಿವಂ ಜನತಾ, ತದಾ, ಸವಚನೇ, ವಸುದೇವಸುತಾಹ್ವಯೇ, ಮುಖರಂ, ಇಚ್ಛತಿ, ಕಃ, ಮೃಗಧೂರ್ತಕಂ, ಪ್ರಕೃತಹುಂಕೃತಸಿಂಹಶಿಶೌ ಸತಿ ।

**ಅನ್ವಯ—** ತದಾ, ವಸುದೇವಸುತಾಹ್ವಯೇ ಸವಚನೇ ಸತಿ ಜಗತಾ ಶಿವಂ ನ ಅಗಣಯತ್, ಪ್ರಕೃತಹುಂಕೃತಸಿಂಹ-ಶಿಶೌ ಸತಿ ಮುಖರಂ, ಮೃಗಧೂರ್ತಕಂ ಕಃ ಇಚ್ಛತಿ ।

**ಅನ್ವಯಾರ್ಥ—**

**ತದಾ** = ಆ ಸಮಯದಲ್ಲಿ

**ವಸುದೇವಸುತಾಹ್ವಯೇ** = ವಸುದೇವನ ಮಗನಾದ ಶ್ರೀಕೃಷ್ಣನ ಹೆಸರಾದ ವಾಸುದೇವ ಎಂಬ ಹೆಸರುಳ್ಳ ವಾಸುದೇವನು,

**ಸವಚನೇ ಸತಿ** = ಮಾತನಾಡುತ್ತಿರಲು

**ಶಿವಂ** = ಶಿವ ಎಂಬ ಪೌರಾಣಿಕರನ್ನು

**ಜನತಾ** = ಜನಸಮೂಹವು

**ನ ಅಗಣಯತ್** = ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ

**ಪ್ರಕೃತಹುಂಕೃತಸಿಂಹಶಿಶೌ ಸತಿ- ಪ್ರಕೃತ** = ಚೆನ್ನಾಗಿ ಮಾಡಲ್ಪಟ್ಟ (ಆರಂಭಿಸಲ್ಪಟ್ಟ), **ಹುಂಕೃತ** = ಹುಂಕಾರವುಳ್ಳ, **ಸಿಂಹಶಿಶೌ** = ಸಿಂಹದಮರಿಯು, **ಸತಿ** = ಇರುತ್ತಿರಲು

**ಮುಖರಂ** = ಒದರುತ್ತಿರುವ

**ಮೃಗಧೂರ್ತಕಂ** = ನರಿಯನ್ನು

**ಕಃ** = ಯಾರು ತಾನೇ

**ಇಚ್ಛತಿ** = ಅಪೇಕ್ಷಿಸುತ್ತಾನೆ?

**ತಾತ್ಪರ್ಯ—** ಶ್ರೀವಾಸುದೇವಾಚಾರ್ಯನು ಆ ಪುರಾಣಿಕರಿಗೆ, ತಾವು ಹೇಳಿದ ಕಥೆಯಲ್ಲಿ ಮಹಾತ್ಮರಾದ ಸಜ್ಜನರಿಗೆ ವಿರೋಧ ಇದೆ ಎಂದು ಮೆಲ್ಲನೇ ಸ್ಪಷ್ಟವಾಗಿ ಮಾತನಾಡಲು ಆರಂಭಿಸಿದ ಕೂಡಲೇ ನೆರೆದಿದ್ದ ಜನರೆಲ್ಲಾ ಪುರಾಣಿಕರ ಪುರಾಣವನ್ನು ಕೇಳುವುದನ್ನು ಬಿಟ್ಟು ಇವನ ಮಾತನ್ನೇ ಆಲಿಸಿದರು. ಉದು ಉಚಿತವೇ ಆಗಿದೆ. ಸಿಂಹದ ಮರಿಯು ಗರ್ಜಿಸುತ್ತಿರುವಾಗ ಸುಮ್ಮನೇ ಒದರುತ್ತಿರುವ ನರಿಯ ಕೂಗನ್ನು ಯಾರು ಕೇಳುತ್ತಾರೆ?

**ವಿಗ್ರಹ—**

**ಜನತಾ—** ಜನಾನಾಂ ಸಮೂಹಃ ಜನತಾ ।

**ಸವಚನಃ—** ವಚನೇನ ಸಹಃ ಸವಚನಃ, ತಸ್ಮಿನ್ ಸವಚನೇ ।

**ವಸುದೇವಸುತಾಹ್ವಯೇ—** ವಸುದೇವಸ್ಯ ಸುತಃ ವಸುದೇವಸುತಃ ವಸುದೇವಸುತಃ ಇತಿ ಆಹ್ವಯಃ ಯಸ್ಯ ಸಃ ವಸುದೇವಸುತಾಹ್ವಯಃ, ತಸ್ಮಿನ್ ವಸುದೇವಸುತಾಹ್ವಯೇ ।

**ಮೃಗಧೂರ್ತಕಂ—** ಮೃಗೇಷು ಧೂರ್ತಃ ಮೃಗಧೂರ್ತಃ, ಮೃಗಧೂರ್ತಃ ಏವ ಮೃಗಧೂರ್ತಕಃ ತಂ ಮೃಗಧೂರ್ತಕಂ ।

**ಸಿಂಹಶಿಶುಃ—** ಸಿಂಹಸ್ಯ ಶಿಶುಃ ಸಿಂಹಶಿಶುಃ ।

**ಪ್ರಕೃತಹುಂಕೃತಸಿಂಹಶಿಶೌ—** ಪ್ರಕೃತಂ ಹುಂಕೃತಂ ಯೇನ ಸಃ ಪ್ರಕೃತಹುಂಕೃತಃ, ಪ್ರಕೃತಹುಂಕೃತಶ್ಚಾಸೌ ಸಿಂಹಶಿಶುಶ್ಚ ಪ್ರಕೃತಹುಂಕೃತಸಿಂಹಶಿಶುಃ, ತಸ್ಮಿನ್ ಪ್ರಕೃತಹುಂಕೃತಸಿಂಹಶಿಶೌ ।

**ಕ್ರಿಯಾಪದ—** ಅಗಣಯತ್- ಗಣಸಂಖ್ಯಾನೇ ಇತಿ ಸಂಖ್ಯಾರ್ಥಕಾತ್ ಗಣಧಾತೋಃ ಲಙ್ ಪ್ರಥಮಪುರುಷೈಕ-ವಚನೇ 'ಅಗಣಯತ್' ಇತಿ ರೂಪಂ ।

ಅಗಣಯತ್ ಅಗಣಯತಾಂ ಅಗಣಯನ್, ಅಗಣಯಃ ಅಗಣಯತಂ ಅಗಣಯತ,
ಅಗಣಯಂ ಅಗಣಯಾವ ಅಗಣಯಾಮ ॥

ಇಚ್ಛತಿ- ಇಷು ಇಚ್ಛಾಯಾಂ ಇತಿ ಇಚ್ಛಾರ್ಥಕಾತ್ ಇಷುಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೈಕವಚನೇ 'ಇಚ್ಛತಿ' ಇತಿ ರೂಪಂ ।

ಇಚ್ಛತಿ ಇಚ್ಛತಃ ಇಚ್ಛಂತಿ, ಇಚ್ಛಸಿ ಇಚ್ಛಥಃ ಇಚ್ಛಥ, ಇಚ್ಛಾಮಿ ಇಚ್ಛಾವಃ ಇಚ್ಛಾಮಃ ॥

★ ★ ★

ವ್ಯಾಸಸಮ್ಮತವಾದ ವಾಸುದೇವನ ಪ್ರಥಮ ಪ್ರವಚನ

**ಅಥ ಕಥಂ (ಕಥಾಂ) ಕಥಯೇತಿ ತದಾ ಜನೇ**
**ಗದಿತವತ್ಯುಚಿತಾರ್ಥಮುದಾಹರತ್ ।**
**ಸ ಸಮಲಾಲ್ಯತ ವಿಸ್ಮಯಿಭಿರ್ನರೈ-**
**ರಪಿ ಸುರೈರ್ವಿಜಯಾಂಕುರಪೂಜಕೈಃ ॥ 25 ॥**

**ಪದಚ್ಛೇದ**— ಅಥ, ಕಥಂ (ಕಥಾಂ), ಕಥಯ, ಇತಿ, ತದಾ ಜನೇ, ಗದಿತವತಿ, ಉಚಿತಾರ್ಥಂ, ಉದಾಹರತ್, ಸಃ, ಸಮಲಾಲ್ಯತ ವಿಸ್ಮಯಿಭಿಃ, ನರೈಃ, ಅಪಿ, ಸುರೈಃ ವಿಜಯಾಂಕುರಪೂಜಕೈಃ ।

**ಅನ್ವಯ**— ಅಥ (ಕಥಂ) ಕಥಾಂ, ಕಥಯ, ಇತಿ ಜನೇ, ಗದಿತವತಿ, ಉಚಿತಾರ್ಥಂ, ಉದಾಹರತ್, ತದಾ ಸಃ, ವಿಸ್ಮಯಿಭಿಃ, ನರೈಃ ವಿಜಯಾಂಕುರಪೂಜಕೈಃ ಸುರೈರಪಿ ಸಮಲಾಲ್ಯತ ।

**ಅನ್ವಯಾರ್ಥ**—

**ಅಥ** = ಹಾಗಿಲ್ಲದಿದ್ದರೇ
**ಕಥಾಂ** = ಜ್ಞಾನಿಗಳಿಗೆ ಸಮ್ಮತವಾದ ಕಥೆಯನ್ನು
**ಕಥಯ** = ಹೇಳಿರಿ
**ಇತಿ** = ಹೀಗೆಂದು
**ಜನೇ** = ಜನರು
**ಗದಿತವತಿ ಸತಿ** = ಹೇಳುತ್ತಿರಲು
**ಉಚಿತಾರ್ಥಂ** = ಪುರಾಣಿಕರು ಹೇಳಿದ್ದಕ್ಕಿಂತಲೂ ಬೇರೆಯಾದ, ಉಚಿತವಾದ ಅರ್ಥವನ್ನು
**ಉದಾಹರತ್** = ಆ ವಾಸುದೇವನು ಹೇಳಿದನು.
**ತದಾ** = ಆಗ
**ಸಃ** = ವಾಸುದೇವನು
**ವಿಸ್ಮಯಿಭಿಃ** = ಆಶ್ಚರ್ಯದಿಂದ ಯುಕ್ತರಾಗಿರುವ
**ನರೈಃ** = ಮನುಷ್ಯರುಗಳಿಂದಲೂ
**ವಿಜಯಾಂಕುರಪೂಜಕೈಃ**- **ವಿಜಯಃ** = ಜಯದ, **ಅಂಕುರೈಃ** = ಮೊಳಕೆಯನ್ನು, **ಪೂಜಕೈಃ** = ಪೂಜಿಸುವ, **ಸುರೈಃ ಅಪಿ** = ದೇವತೆಗಳಿಂದಲೂ ಕೂಡ
**ಸಮಲಾಲ್ಯತ** = ಲಾಲಿಸಲ್ಪಟ್ಟನು.

**ತಾತ್ಪರ್ಯ—** ಜನರು ''ಎಲೈ ಮಗುವೆ! ಪುರಾಣಿಕರು ಹೇಳಿದ ಅರ್ಥವು ಸರಿಯಿಲ್ಲದಿದ್ದರೆ ಹೇಗೆ ಅರ್ಥವನ್ನು ಹೇಳಬೇಕು? ಕತೆಯನ್ನು ನೀನೇ ಹೇಳು' ಎಂದರು. ಆಗ ವಾಸುದೇವನು ಜನರು ಮೆಚ್ಚುವ ಸರಿಯಾದ ಅರ್ಥವನ್ನು ಹೇಳಿದನು. ಅದರಿಂದ ಜನರು ಆಶ್ಚರ್ಯಗೊಂಡರು ಮತ್ತು ಮುಖ್ಯಪ್ರಾಣದೇವರ ಜಯದ ಆರಂಭದಿಂದ ಸಂತೋಷಗೊಂಡ ದೇವತೆಗಳು ಸಹ ಆ ವಾಸುದೇವನನ್ನು ಸನ್ಮಾನಿಸಿದರು.

**ವಿಗ್ರಹ—**

**ಉಚಿತಾರ್ಥಂ—** ಉಚಿತಶ್ಚಾಸೌ ಅರ್ಥಶ್ಚ ಉಚಿತಾರ್ಥಃ, ತಂ ಉಚಿತಾರ್ಥಂ ।

**ವಿಸ್ಮಯಿಭಿಃ—** ವಿಸ್ಮಯಃ ಯೇಷಾಂ ಅಸ್ತಿ ಇತಿ ವಿಸ್ಮಯಿನಃ, ತೈಃ ವಿಸ್ಮಯಿಭಿಃ ।

**ವಿಜಯಾಂಕುರಃ—** ವಿಜಯಸ್ಯ ಅಂಕುರಃ ವಿಜಯಾಂಕುರಃ ।

**ವಿಜಯಾಂಕುರಪೂಜಕೈಃ—** ವಿಜಯಾಂಕುರಸ್ಯ ಪೂಜಕಾಃ ವಿಜಯಾಂಕುರಪೂಜಕಾಃ ತೈಃ ವಿಜಯಾಂಕುರ-ಪೂಜಕೈಃ ।

**ಕ್ರಿಯಾಪದ—** **ಕಥಯ-** ಕಥವಾಕ್ಯಪ್ರಬಂಧೇ ಇತಿ ವಾಕ್ಯಪ್ರಬಂಧಾರ್ಥಕಾತ್ ಕಥಧಾತೋಃ ಲೋಟಿ ಪ್ರಥಮ-ಪುರುಷೈಕವಚನೇ 'ಕಥಯ' ಇತಿ ರೂಪಂ ।

ಕಥಯತು ಕಥಯತಾತ್, ಕಥಯತಾಂ ಕಥಯಂತು, ಕಥಯ ಕಥಯತಾತ್, ಕಥಯತಂ ಕಥಯತ, ಕಥಯಾನಿ ಕಥಯಾವ ಕಥಯಾಮ ॥

**ಉದಾಹರತ್-** ಉತ್ ಆಙ್ ಇತ್ಯುಪಸರ್ಗದ್ವಯಪೂರ್ವಕಾತ್ ಹೃಞ್ ಹರಣೇ ಇತ್ಯಸ್ಮಾತ್ ಹೃಞ್ ಧಾತೋಃ ಲಙ್ ಪ್ರಥಮಪುರುಷೈಕವಚನೇ 'ಉದಾಹರತ್' ಇತಿ ರೂಪಂ ।

ಉದಾಹರತ್ ಉದಾಹರತಾಂ ಉದಾಹರನ್, ಉದಾಹರಃ ಉದಾಹರತಂ ಉದಾಹರತ, ಉದಾಹರಂ ಉದಾಹರಾವ ಉದಾಹರಾಮ ॥

**ಸಮಲಾಲ್ಯತ-** ಸಮ್ ಇತ್ಯುಪಸರ್ಗಪೂರ್ವಕಾತ್ ಲಲಈಪ್ಸಾಯಾಂ ಇತಿ ಈಪ್ಸಾರ್ಥಕಾತ್ ಲಲಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಕರ್ಮಣಿ ಲಙ್ ಪ್ರಥಮಪುರುಷೈಕವಚನೇ ಸಮಲಾಲ್ಯತ ಇತಿ ರೂಪಮ್ ।

ಸಮಲಾಲ್ಯತ ಸಮಲಾಲ್ಯೇತಾಂ ಸಮಲಾಲ್ಯಂತ, ಸಮಲಾಲ್ಯಥಾಃ ಸಮಲಾಲ್ಯೇಥಾಂ ಸಮಲಾಲ್ಯಧ್ವಂ, ಸಮಲಾಲ್ಯೇ ಸಮಲಾಲ್ಯಾವಹಿ ಸಮಲಾಲ್ಯಾಮಹಿ ॥

★ ★ ★

ವಾಸುದೇವನ ಅನುವಾದ ಕೌಶಲ

**ಸ ಜನನೀಸಹಿತೋ ಜನಕಂ ಗೃಹೇ**
**ಪ್ರಗತವಾಂಸ್ತಮುದಂತಮವೇದಯತ್ ।**
**ನಿಗದ ತಾತ ಶಿವಃ ಕಥಕಃ ಸ ಕಿಂ**
**ವಿತಥಗೀರಥ ವಾऽಹಮಿತೀರಯನ್ ॥ 26 ॥**

**ಪದಚ್ಛೇದ—** ಸಃ, ಜನನೀಸಹಿತಃ, ಜನಕಂ, ಗೃಹೇ, ಪ್ರಗತವಾನ್, ತಂ, ಉದಂತಂ, ಅವೇದಯತ್, ನಿಗದ, ತಾತ, ಶಿವಃ, ಕಥಕಃ, ಸಃ, ಕಿಂ, ವಿತಥಗೀಃ, ಅಥ, ವಾ, ಅಹಂ, ಇತಿ, ಈರಯನ್ ।

**ಅನ್ವಯ—** ಜನನೀಸಹಿತಃ ಪ್ರಗತವಾನ್ ಸಃ ಗೃಹೇ ಜನಕಂ ''ತಾತ! ನಿಗದ ಕಥಕಃ ಸಃ ಶಿವಃ ವಿತಥಗೀಃ ಕಿಂ? ಅಥ ಅಹಂ ವಾ?'' ಇತಿ ಈರಯನ್ ತಮುದಂತಮವೇದಯತ್ ।

**ಅನ್ವಯಾರ್ಥ—**

**ಜನನೀಸಹಿತಃ** = ತಾಯಿಯಿಂದ, **ಸಹಿತಃ** = ಕೂಡಿದವನಾಗಿ

**ಪ್ರಗತವಾನ್** = ಮನೆಗೆ ಹೋದ

**ಸಃ** = ಆ ವಾಸುದೇವನು

**ಗೃಹೇ** =ಮನೆಯಲ್ಲಿ

**ಜನಕಂ** = ತಂದೆಯನ್ನು ಕುರಿತು

**ತಾತ** = ಎಲೈ ತಂದೆಯೇ

**ನಿಗದ** = ಹೇಳಿರಿ

**ಕಥಕಃ** = ಪುರಾಣವನ್ನು ಹೇಳುವ

**ಸಃ** = ಆ

**ಶಿವಃ** = ಶಿವ ಎಂಬ ಹೆಸರುಳ್ಳವರು

**ವಿತಥಗೀಃ ಕಿಂ** = ಪುರಾಣಕ್ಕೆ ತಪ್ಪಾಗಿ ಅರ್ಥವನ್ನು ಹೇಳುವವರೋ

**ಅಥ**= ಅಥವಾ

**ಅಹಂ ವಾ** = ನಾನೋ ?

**ಇತಿ** = ಹೀಗೆಂದು

**ಈರಯನ್** = ಹೇಳುತ್ತಾ

**ತಂ ಉದಂತಂ** = ಆ ವೃತ್ತಾಂತವನ್ನು

**ಅವೇದಯತ್** = ತಿಳಿಸಿದನು.

**ತಾತ್ಪರ್ಯ—** ತಾಯಿಯಿಂದ ಸಹಿತನಾದ ವಾಸುದೇವನು ಮನೆಗೆ ಹೋದನು. ತಂದೆಯವರಾದ ಮಧ್ಯಗೇಹ-ಭಟ್ಟರನ್ನು ಕುರಿತು ಏಕಾಂತದಲ್ಲಿ 'ತಂದೆಯೇ, ಕಥೆಯನ್ನು ಹೇಳುತ್ತಿರುವ ಶಿವ ಎಂಬ ಪುರಾಣಿಕನು ನಿಜವಾದ ಅರ್ಥವನ್ನು ಹೇಳಿದನೋ ಅಥವಾ ನಾನೇ? ನೀವೇ ಹೇಳಿರಿ' ಎಂದು ನಡೆದ ಸಮಾಚಾರವನ್ನೆಲ್ಲಾ ತಿಳಿಸಿದನು.

**ವಿಗ್ರಹ—**

**ಜನನೀಸಹಿತಃ—** ಜನನ್ಯಾಸಹಿತಃ ಜನನೀಸಹಿತಃ ।

**ಕಥಕಃ—** ಕಥಾಂ ಕರೋತಿ ಇತಿ ಕಥಕಃ ।

**ವಿತಥಗೀಃ—** ವಿತಥಾ ಗೀರ್ಯಸ್ಯ ಸಃ ವಿತಥಗೀಃ ।

**ಈರಯನ್—** ಈರಯತಿ ಇತಿ ಈರಯನ್ ।

**ಕ್ರಿಯಾಪದ— ಅವೇದಯತ್**- ವಿದಜ್ಞಾನೇ ಇತಿ ಜ್ಞಾನಾರ್ಥಕಾತ್ ವಿದಧಾತೋಃ ಲಙ್ ಪ್ರಥಮಪುರುಷೈಕವಚನೇ 'ಅವೇದಯತ್' ಇತಿ ರೂಪಂ ।

ಅವೇದಯತ್ ಅವೇದಯತಾಂ ಅವೇದಯನ್, ಅವೇದಯಃ ಅವೇದಯತಂ ಅವೇದಯತ,
ಅವೇದಯಂ ಅವೇದಯಾವ ಅವೇದಯಾಮ ॥

**ನಿಗದ-** ನಿ ಇತ್ಯುಪಸರ್ಗಪೂರ್ವಕಾತ್ ಗದವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಗದಧಾತೋಃ ಲೋಟಿ ಪ್ರಥಮಪುರುಷೈಕವಚನೇ 'ನಿಗದ' ಇತಿ ರೂಪಂ ।

ನಿಗದತು ನಿಗದತಾತ್, ನಿಗದತಾಂ ನಿಗದಂತು, ನಿಗದ ನಿಗದತಾತ್, ನಿಗದತಂ ನಿಗದತ, ನಿಗದಾನಿ ನಿಗದಾವ ನಿಗದಾಮ ॥

★ ★ ★

ಮಗನ ಬುದ್ಧಿಕೌಶಲ - ಅನಂತೇಶ್ವರನನ್ನು ಸ್ಮರಿಸಿದ ತಂದೆ

**ನನು ಸುತಾವಿತಥಂ ಕಥಿತಂ ತ್ವಯೇ-**
**ತ್ಯಮುಮುದೀರ್ಯ ಸವಿಸ್ಮಯಮಸ್ಮರತ್ ।**
**ಪ್ರಕೃತಿತಃ ಕೃತಿತಾ ಖಲು ಮೇ ಶಿಶೋ-**
**ರ್ಮದಧಿನಾಥದಯೋದಯಜೇತ್ಯಸೌ ॥ 27 ॥**

**ಪದಚ್ಛೇದ—** ನನು, ಸುತ, ಅವಿತಥ, ಕಥಿತಂ ತ್ವಯಾ ಇತಿ, ಅಮುಂ, ಉದೀರ್ಯ ಸವಿಸ್ಮಯಂ ಅಸ್ಮರತ್ ಪ್ರಕೃತಿತಃ ಕೃತಿತಾ, ಖಲು ಮೇ ಶಿಶೋಃ, ಮದಧಿನಾಥದಯೋದಯಜಾ, ಇತಿ, ಅಸೌ ।

**ಅನ್ವಯ—** 'ಹೇ ಸುತ', ತ್ವಯಾ, ಅವಿತಥಂ ಕಥಿತಂ ನನು ಇತಿ ಅಮುಂ ಉದೀರ್ಯ, ಸವಿಸ್ಮಯಂ, ಪ್ರಕೃತಿತಃ ಕೃತಿತಾ ಮೇ ಶಿಶೋಃ 'ಮದಧಿನಾಥದಯೋದಯಜಾ' ಖಲು ಇತಿ ಅಸೌ ಅಸ್ಮರತ್ ।

**ಅನ್ವಯಾರ್ಥ—**

**ಹೇ ಸುತ!** = ಎಲೈ ಮಗನೇ
**ತ್ವಯಾ** = ನಿನ್ನಿಂದ
**ಅವಿತಥಂ** = ಸರಿಯಾದ ಅರ್ಥವು
**ಕಥಿತಂ ನನು** = ಹೇಳಲ್ಪಟ್ಟಿತಷ್ಟೇ.
**ಇತಿ** = ಹೀಗೆಂದು
**ಅಮುಂ** = ಈ ಮಗುವನ್ನು ಕುರಿತು
**ಉದೀರ್ಯ** = ಹೇಳಿ
**ಸವಿಸ್ಮಯಂ** = ಆಶ್ಚರ್ಯದಿಂದ ಸಹಿತರಾಗಿ
**ಪ್ರಕೃತಿತಃ** = ಸ್ವಭಾವದಿಂದ
**ಕೃತಿತಾ** = ಪಾಂಡಿತ್ಯವು (ಬುದ್ಧಿವಂತಿಕೆಯು)
**ಮೇ ಶಿಶೋಃ** = ನನ್ನ ಮಗುವಿಗೆ
**ಮದಧಿನಾಥದಯೋದಯಜಾ ಖಲು** = ನನ್ನ ಯಜಮಾನನಾಗಿರುವ ಅನಂತೇಶ್ವರನ, ದಯೆಯಿಂದ ಹುಟ್ಟಿರುವುದು ನಿಜ
**ಇತಿ** = ಹೀಗೆಂದು
**ಅಸೌ** = ಮಧ್ಯಗೇಹಭಟ್ಟರು
**ಅಸ್ಮರತ್** = ಆ ದೇವರನ್ನು ಸ್ಮರಿಸಿದರು.

**ತಾತ್ಪರ್ಯ**— ಆ ಮಧ್ಯಗೇಹಭಟ್ಟರು 'ಮಗು, ನೀನು ಸರಿಯಾದ ಅರ್ಥವನ್ನೇ ಹೇಳಿರುವಿ' ಎಂದರು. ಮತ್ತು ಆಶ್ಚರ್ಯದಿಂದ ನನ್ನ ಮಗುವು ಯಾರ ಶಿಕ್ಷಣವಿಲ್ಲದೇ ಬುದ್ಧಿವಂತನಾಗಿರುವನು. ಇದು ನನ್ನ ಸ್ವಾಮಿಯಾದ ಶ್ರೀ ಅನಂತಾಸನನ ದಯೆಯಿಂದ ಉಂಟಾಗಿದೆ' ಎಂದು ಆ ಸ್ವಾಮಿಯನ್ನು ಸ್ಮರಿಸಿದರು.

**ವಿಗ್ರಹ**—

**ಅವಿತಥಂ**— ನ ವಿತಥಂ ಅವಿತಥಂ ।

**ಸವಿಸ್ಮಯಂ**— ವಿಸ್ಮಯೇನ ಸಹಿತಂ ಯಥಾ ಭವತಿ ತಥಾ (ಕ್ರಿಯಾ ವಿಶೇಷಣ, ಅವ್ಯಯ)

**ಕೃತಿತಾ**— ಕೃತಿನಃ ಭಾವಃ ಕೃತಿತಾ ।

**ಮದಧಿನಾಥಃ**— ಮಮ ಅಧಿನಾಥಃ ಮದಧಿನಾಥಃ ।

**ಮದಧಿನಾಥದಯಾ**— ಮದಧಿನಾಥಸ್ಯ ದಯಾ ಮದಧಿನಾಥದಯಾ ।

**ಮದಧಿನಾಥದಯೋದಯಃ**— ಮದಧಿನಾಥಸ್ಯದಯಾಃ ಉದಯಃ ಮದಧಿನಾಥದಯೋದಯಃ ।

**ಮದಧಿನಾಥದಯೋದಯಜಾ**— ಮದಧಿನಾಥವಯೋದಯೋ ದಯಾತ್ ಜಾಯತೇ ಇತಿ ಮದಧಿ-ನಾಥದಯೋದಯಜಾ ।

**ಕ್ರಿಯಾಪದ**— **ಅಸ್ಮರತ್**- ಸ್ಮೃಚಿಂತಾಯಾಂ ಇತಿ ಚಿಂತಾರ್ಥಕ ಸ್ಮೃಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲಙ್ ಪ್ರಥಮಪುರುಷೈಕವಚನೇ ಅಸ್ಮರತ್ ಇತಿ ರೂಪಮ್ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

★ ★ ★

ಮಧ್ಯಗೇಹರ ಪ್ರವಚನ ವೈಖರಿ

**ಕಥಯತಾಂ ಪ್ರಥಮೇ ಕಥಯತ್ಯಲಂ**
**ಸ್ವಜನಕೇ ಜನಸಂಘವೃತೇ ಕಥಾಮ್ ।**
**ಸಕಲಲೋಕಮನೋನಯನೋತ್ಸವ-**
**ಶ್ಚತುರಧೀಃ ಸ ಕದಾಚಿದವಾಚಯ್ ॥ 28 ॥**

**ಪದಚ್ಛೇದ**— ಕಥಯತಾಂ, ಪ್ರಥಮೇ, ಕಥಯತಿ, ಅಲಂ, ಸ್ವಜನಕೇ, ಜನಸಂಘವೃತೇ, ಕಥಾಮ್ । ಸಕಲಲೋಕ-ಮನೋನಯನೋತ್ಸವಃ, ಚತುರಧೀಃ, ಸಃ ಕದಾಚಿತ್, ಅವಾಚಯತ್ ।

**ಅನ್ವಯ**— ಕದಾಚಿತ್, ಕಥಯತಾಂ ಪ್ರಥಮೇ ಜನಸಂಘವೃತೇ ಸ್ವಜನಕೇ, ಕಥಾಂ ಕಥಯತಿ (ಸತಿ), ಸಕಲಲೋಕ ಮನೋನಯನೋತ್ಸವಃ ಚತುರಧೀಃ ಸಃ ಅಲಂ ಅವಾಚಯತ್ ।

**ಅನ್ವಯಾರ್ಥ**—

**ಕದಾಚಿತ್** = ಒಂದೊಮ್ಮೆ

**ಕಥಯತಾಂ** = ಪುರಾಣ ಹೇಳುವವರಲ್ಲಿ

**ಪ್ರಥಮೇ** = ಶ್ರೇಷ್ಠರಾದ

**ಜನಸಂಘವೃತೇ** = ಜನರ ಸಮೂಹದಿಂದ ಸುತ್ತುವರಿಯಲ್ಪಟ್ಟ

**ಸ್ವಜನಕೇ** = ತನ್ನ ತಂದೆಯು

**ಕಥಾಂ** = ಪುರಾಣದಲ್ಲಿ ಹೇಳಿರುವ ಭಗವಂತನ ಕಥೆಯನ್ನು

**ಕಥಯತಿ ಸತಿ** = ಹೇಳುತ್ತಿರಲು

**ಸಕಲಲೋಕಮನೋನಯನೋತ್ಸವಃ - ಸಕಲಲೋಕಃ** = ಎಲ್ಲಾ ಜನರ, **ಮನಃ** = ಮನಸ್ಸು ಮತ್ತು, **ನಯನ** = ಕಣ್ಣು ಇವುಗಳಿಗೆ, **ಉತ್ಸವಃ** = ಹಬ್ಬದಂತೆ ಮನೋಹರನಾದ,

**ಚತುರಧೀಃ** = ಕುಶಲಬುದ್ಧಿಯುಳ್ಳ

**ಸಃ** = ಆ ವಾಸುದೇವನು

**ಅಲಂ** = ಚೆನ್ನಾಗಿ ಸುಶ್ರಾವ್ಯವಾಗಿ

**ಅವಾಚಯತ್** = ಪುರಾಣವಾಚನ ಮಾಡಿದನು (ಪುರಾಣವನ್ನು ಪಠಿಸಿದನು)

**ತಾತ್ಪರ್ಯ—** ಒಂದೊಮ್ಮೆ ಪೌರಾಣಿಕರಲ್ಲಿ ಶ್ರೇಷ್ಠರಾದ ಮಧ್ಯಗೇಹಭಟ್ಟರು ಪುರಾಣಾರ್ಥವನ್ನು ಹೇಳುತ್ತಿದ್ದರು. ಅವರ ಸುತ್ತ ಜನರು ನೆರೆದಿದ್ದರು. ಆಗ ಸಮಸ್ತ ಜನರ ಕಣ್ಣು ಮತ್ತು ಮನಸ್ಸುಗಳಿಗೆ ಆನಂದವನ್ನುಂಟುಮಾಡುವ ಬುದ್ಧಿಶಾಲಿಯಾದ ವಾಸುದೇವನು ಚೆನ್ನಾಗಿ ಪುರಾಣವಾಚನ ಮಾಡಿದನು.

**ವಿಗ್ರಹ—**

**ಸಕಲಲೋಕಮನೋನಯನೋತ್ಸವಃ—** ಸಕಲಾಶ್ಚ ತೇ ಲೋಕಾಶ್ಚ ಸಕಲಲೋಕಾಃ, ಮನಾಂಸಿ ಚ ನಯನಾನಿ ಚಃ ಮನೋನಯನಾನಿ, ಸಕಕಲೋಕಾನಾಂ ಮನೋನಯನಾನಿ ಸಕಲಲೋಕಮನೋನಯನಾನಿ, ಸಕಲಲೋಕಮನೋನಯನಾನಾಂ ಉತ್ಸವಃ ಸಕಲಲೋಕಮನೋನಯನೋತ್ಸವಃ ।

**ಚತುರಧೀಃ—** ಚತುರಾ ಧೀಃ ಯಸ್ಯ ಸಃ ಚತುರಧೀಃ ।

**ಕ್ರಿಯಾಪದ— ಅವಾಚಯತ್**- ವಚ ಪರಿಭಾಷಣೇ ಇತಿ ಪರಿಭಾಷಣಾರ್ಥಕ ವಚ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲಙ್ ಪ್ರಥಮಪುರುಷೈಕವಚನೇ ಅವಾಚಯತ್ ಇತಿ ರೂಪಮ್ ।

ಅವಾಚಯತ್ ಅವಾಚಯತಾಂ ಅವಾಚಯನ್, ಅವಾಚಯಃ ಅವಾಚಯತಂ ಅವಾಚಯತ, ಅವಾಚಯಂ ಅವಾಚಯಾವ ಅವಾಚಯಾಮ ॥

★ ★ ★

**ಲಿಕುಚ ಪದದ ಅರ್ಥವನ್ನು ತಿಳಿಸಲು ಸೂಚನೆ**

**ವಿವಿಧಶಾಖಿಪದಾರ್ಥನಿವೇದನೇ**
**ಲಿಕುಚನಾಮ್ನಿ ತದಾಽನುದಿತಾರ್ಥಕೇ ।**
**ಕಿಮಿತಿ ತಾತ ತದರ್ಥಮವರ್ಣಯನ್**
**ಕಥಯಸೀತಿ ಶನೈರಯಮಬ್ರವೀತ್ ॥ 29 ॥**

**ಪದಚ್ಛೇದ—** ವಿವಿಧಶಾಖಿಪದಾರ್ಥನಿವೇದನೇ, ಲಿಕುಚನಾಮ್ನಿ, ತದಾ, ಅನುದಿತಾರ್ಥಕೇ, ಕಿಂ, ಇತಿ, ತಾತ ತದರ್ಥಂ, ಅವರ್ಣಯನ್, ಕಥಯಸಿ, ಇತಿ, ಶನೈಃ ಅಯಂ, ಅಬ್ರವೀತ್ ।

**ಅನ್ವಯ—** ತದಾ ವಿವಿಧಶಾಖಿಪದಾರ್ಥನಿವೇದನೇ (ಪ್ರಸ್ತುತೇಸತಿ) ಲಿಕುಚನಾಮ್ನಿ ಅನುದಿತಾರ್ಥಕೇ ಅಯಂ, ''ತಾತ! ತದರ್ಥಮವರ್ಣಯನ್ ಕಿಮಿತಿ ಕಥಯಸಿ?'' ಇತಿ ಶನೈರಬ್ರವೀತ್ ।

**ಅನ್ವಯಾರ್ಥ—**

**ತದಾ** = ಆ ಸಮಯದಲ್ಲಿ

**ವಿವಿಧಶಾಖಿಪದಾರ್ಥನಿವೇದನೇ (ಪ್ರಸ್ತುತೇ ಸತಿ)** = ನಾನಾ ವಿಧಗಳಾದ ಮರಗಳ ಹೆಸರುಗಳನ್ನು ಹೇಳುವ ಪ್ರಸಕ್ತಿಯು ಬಂದಾಗ

**ಲಿಕುಚನಾಮ್ನಿ** = ಲಿಕುಚ ಎಂಬ ಶಬ್ದವು

**ಅನುದಿತಾರ್ಥಕೇ** = ಹೇಳಲ್ಪಡದ ಅರ್ಥವುಳ್ಳದ್ದಾಗಲು

**ಅಯಂ** = ಈ ವಾಸುದೇವನು

**ಹೇ ತಾತ** = ಎಲೈ ತಂದೆಯೇ

**ತದರ್ಥಂ** = ಆ ಲಿಕುಚ ಎಂಬ ಪದದ ಅರ್ಥವನ್ನು

**ಕಿಮಿತಿ** = ಏನೆಂದು

**ಅವರ್ಣಯನ್** = ಹೇಳದೆ

**ಕಥಯಸಿ** = ಕಥೆಯನ್ನು ಹೇಳುತ್ತಿರುವಿರಿ

**ಇತಿ** = ಹೀಗೆಂದು

**ಶನೈಃ** = ಮೆಲ್ಲನೆ

**ಅಬ್ರವೀತ್** = ಹೇಳಿದರು.

**ತಾತ್ಪರ್ಯ—** ಆಗ ಮಧ್ಯಗೇಹಭಟ್ಟರು ಮರಗಿಡಗಳನ್ನು ತಿಳಿಸುವ ಅನೇಕ ಶಬ್ದಗಳಿಗೆ ಅರ್ಥವನ್ನು ಹೇಳುತ್ತಾ 'ಲಿಕುಚ' ಎಂಬ ಶಬ್ದಕ್ಕೆ ಅರ್ಥವನ್ನು ತಿಳಿಸದೇ ಪುರಾಣವನ್ನು ಹೇಳಲಾರಂಭಿಸಿದರು. ಆಗ ಬಳಿಯಲ್ಲಿದ್ದ ವಾಸುದೇವನು 'ತಂದೆಯೇ, ಲಿಕುಚ ಶಬ್ದದ ಅರ್ಥವನ್ನು ತಿಳಿಸದೇ ಏನೆಂದು ಪುರಾಣವನ್ನು ಹೇಳುತ್ತಿದ್ದೀರಿ' ಎಂದು ಮೆಲ್ಲಗೆ ತಂದೆಗೆ ಹೇಳಿದನು.

**ವಿಗ್ರಹ—**

**ವಿವಿಧಶಾಖಿಪದಾರ್ಥನಿವೇದನೇ—** ಶಾಖಾಃ ಏಷಾಂ ಸಂತೀ ಇತಿ ಶಾಖಿನಃ, ವಿವಿಧಾಶ್ಚ ತೇ ಶಾಖಿನಶ್ಚ ವಿವಿಧಶಾಖಿನಃ, ವಿವಿಧಶಾಖಿನಾಂ ಪದಾನಿ ವಿವಿಧಶಾಖಿಪದಾನಿ, ವಿವಿಧಶಾಖಿಪದಾನಾಂ ಅರ್ಥಾಃ ವಿವಿಧಶಾಖಿಪದಾರ್ಥಾಃ, ವಿವಿಧಶಾಖಿಪದಾರ್ಥಾನಾಂ ನಿವೇದನಂ ವಿವಿಧಶಾಖಿಪದಾರ್ಥ-ನಿವೇದನಂ, ತಸ್ಮಿನ್ ವಿವಿಧಶಾಖಿಪದಾರ್ಥನಿವೇದನೇ ।

**ಲಿಕುಚನಾಮ್ನಿ—** ಲಿಕುಚಂ ಇತಿ ನಾಮ ಯಸ್ಯ ಸಃ ಲಿಕುಚನಾಮ, ತಸ್ಮಿನ್ ಲಿಕುಚನಾಮ್ನಿ ।

**ಅನುದಿತಾರ್ಥಕೇ—** ನ ಉದಿತಃ ಅನುದಿತಃ, ಅನುದಿತಃ ಅರ್ಥಃ ಯಸ್ಯ ತತ್ ಅನುದಿತಾರ್ಥಃ, ತಸ್ಮಿನ್ ಅನುದಿತಾರ್ಥಕೇ ।

**ತದರ್ಥಂ—** ತಸ್ಯ ಅರ್ಥಃ ತದರ್ಥಃ, ತಂ ತದರ್ಥಂ ।

**ಅವರ್ಣಯನ್—** ನ ವರ್ಣಯತಿ ಇತಿ ಅವರ್ಣಯನ್ ।

**ಕ್ರಿಯಾಪದ—** ಕಥಯಸಿ- ಕಥ ವಾಕ್ಯಪ್ರಬಂಧೇ ಇತಿ ವಾಕ್ಯಪ್ರಬಂಧಾರ್ಥಕಾತ್ ಕಥಧಾತೋಃ ಲಟ್ ಮಧ್ಯಮ-ಪುರುಷೈಕವಚನೇ 'ಕಥಯಸಿ' ಇತಿ ರೂಪಂ ।

ಕಥಯತಿ ಕಥಯತಃ ಕಥಯಂತಿ, ಕಥಯಸಿ ಕಥಯಥಃ ಕಥಯಥ, ಕಥಯಾಮಿ ಕಥಯಾವಃ ಕಥಯಾಮಃ ॥

**ಅಬ್ರವೀತ್**- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಲಙ್ ಪ್ರಥಮಪುರುಷೈಕವಚನೇ ಅಬ್ರವೀತ್ ಇತಿ ರೂಪಂ ।

ಅಬ್ರವೀತ್ ಅಬ್ರೂತಾಂ ಅಬ್ರೂವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ ॥

★ ★ ★

ವಾಸುದೇವನಿಂದ ಲಿಕುಚ ಶಬ್ದಾರ್ಥಕಥನ

**ಅವದತೀತಿ ಪಿತರ್ಯಪಿ ಚೋದಿತೇ**
**ಪ್ರತಿಬುಭುತ್ಸುಷು ತತ್ರ ಜನೇಷ್ವಪಿ ।**
**ಅಯಮುದೀರ್ಯ ತದರ್ಥಮವಾಪ್ತವಾನ್**
**ಪರಿಷದೋ ಹ್ಯಸಮಾನಸುಮಾನನಾಮ್ ॥ 30 ॥**

**ಪದಚ್ಛೇದ—** ಅವದತಿ, ಇತಿ, ಪಿತರಿ, ಅಪಿ, ಚೋದಿತೇ, ಪ್ರತಿಬುಭುತ್ಸುಷು ತತ್ರ ಜನೇಷು, ಅಪಿ, ಅಯಂ, ಉದೀರ್ಯ ತದರ್ಥಂ 'ಅವಾಪ್ತವಾನ್' ಪರಿಷದಃ, ಹಿ, ಅಸಮಾನಸುಮಾನನಾಂ ।

**ಅನ್ವಯ—** ಇತಿ ಚೋದಿತೇಽಪಿ ಪಿತರಿ ಅವದತಿ (ಸತಿ), ತತ್ರ, ಜನೇಷ್ವಪಿ ಪ್ರತಿಬುಭುತ್ಸುಷು (ಸತ್ಸು), ಅಯಂ ತದರ್ಥಮುದೀರ್ಯ, ಪರಿಷದಃ, ಅಸಮಾನಸುಮಾನನಾಂ, ಅವಾಪ್ತವಾನ್ ಹಿ ।

**ಅನ್ವಯಾರ್ಥ—**

**ಇತಿ** = ಹೀಗೆ

**ಚೋದಿತೇ ಅಪಿ** = ಹೇಳಿ ಎಂದು ಪ್ರೇರಿಸಿದರೂ,

**ಪಿತರಿ** = ತಂದೆಯಾಗಿರುವ ಮಧ್ಯಗೇಹಭಟ್ಟರೂ

**ಅವದತಿ ಸತಿ** = ಹೇಳದಿರುವಾಗ

**ತತ್ರ** = ಆ ಸಭೆಯಲ್ಲಿರುವ

**ಜನೇಷ್ವಪಿ** = ಜನರೂ ಕೂಡಾ

**ಪ್ರತಿಬುಭುತ್ಸುಷು (ಸತ್ಸು)** = ಲಿಕುಚ ಎಂಬ ಪದದ ಅರ್ಥವನ್ನು ತಿಳಿಯಬೇಕು ಎಂಬ ಆಸೆಯಿಂದ ಯುಕ್ತರಾಗಲಿಕ್ಕಾಗಿ

**ಅಯಂ** = ಈ ವಾಸುದೇವನು

**ತದರ್ಥಂ** = ಆ ಪದದ ಅರ್ಥವನ್ನು

**ಉದೀರ್ಯ** = ಹೇಳಿ

**ಪರಿಷದಃ** = ಆ ಸಭೆಯ

**ಅಸಮಾನಸುಮಾನಾನಾಂ** = ಅಸದೃಶವಾದ ಮರ್ಯಾದೆಯನ್ನು

**ಅವಾಪ್ತವಾನ್** = ಹೊಂದಿದನು.

**ತಾತ್ಪರ್ಯ—** ವಾಸುದೇವನು ತಮ್ಮ ತಂದೆಗೆ ಹೇಳಿ ಎಂದು ತಿಳಿಸಿದರೂ, ಅವರು ಹೇಳದಿದ್ದುದ್ದರಿಂದ, ಅಲ್ಲಿದ್ದ ಜನರು ಆ ಲಿಕುಚ ಎಂಬ ಪದದ ಅರ್ಥವನ್ನು ತಿಳಿಯಲು ಕುತೂಹಲವುಳ್ಳವರಾದರು. ಆಗ ವಾಸುದೇವನು ಲಿಕುಚ

ಪದದ ಸರಿಯಾದ ಅರ್ಥವಾದ 'ಹೆಬ್ಬಲಸು' ಎಂಬ ಅರ್ಥವನ್ನು ತಾನೇ ವಿವರಿಸಿದನು. ಅದರಿಂದ ಸಭೆಯಲ್ಲಿದ್ದ ಜನರು ಸಂತೋಷದಿಂದ ಅವನನ್ನು ಪೂಜಿಸಿದರು.

**ವಿಗ್ರಹ—**

**ಅವದತಿ—** ನ ವದತಿ ಇತಿ ಅವದನ್, ತಸ್ಮಿನ್ ಅವದತಿ ।

**ಪ್ರತಿಬುಭುತ್ಸುಷು—** ಪ್ರತಿಬೋದ್ಧುಂ ಇಚ್ಛವಃ ಪ್ರತಿಬುಭುತ್ಸವಃ, ತೇಷು ಪ್ರತಿಬುಭುತ್ಸುಷು ।

**ತದರ್ಥಂ—** ತಸ್ಯ ಅರ್ಥಃ ತದರ್ಥಂ, ತಂ ತದರ್ಥಂ ।

**ಅಸಮಾನಾ—** ನ ಸಮಾನಾ ಅಸಮಾನಾ ।

**ಅಸಮಾನಸುಮಾನನಾಂ—** ಅಸಮಾನಾ ಚ ಸಾ ಸುಮಾನನಾ ಚ ಅಸಮಾನಸುಮಾನನಾ, ತಾಂ ಅಸಮಾನ-ಸುಮಾನನಾಂ ।

★ ★ ★

**ಸುಂದರಚರಿತನಿಗೆ ಉಪನಯನ ಕಾಲ**

**ಬಹುವಿಧೈಶ್ಚರಿತ್ರೈರಿತಿ ಚಾರುಭಿಃ**
**ಸಕಲಲೋಕಕುತೂಹಲಕಾರಿಣಮ್ ।**
**ದ್ವಿಜವರೇಣ ವಯಸ್ಯುಚಿತೇ ಸ್ಥಿತಂ**
**ತಮುಪನೇತುಮನೇನ ದಧೇ ಮನಃ ॥ 31 ॥**

**ಪದಚ್ಛೇದ—** ಬಹುವಿಧೈಃ, ಚರಿತ್ರೈಃ ಇತಿ, ಚಾರುಭಿಃ ಸಕಲಲೋಕಕುತೂಹಲಕಾರಿಣಂ. ದ್ವಿಜವರೇಣ ವಯಸಿ, ಉಚಿತೇ, ಸ್ಥಿತಂ, ತಂ, ಉಪನೇತುಂ ಅನೇನ, ದಧೇ ಮನಃ ।

**ಅನ್ವಯ—** ಇತಿ ಬಹುವಿಧೈಃ ಚಾರುಭಿಃ ಚರಿತ್ರೈಃ ಸಕಲಲೋಕಕುತೂಹಲಕಾರಿಣಂ ಉಚಿತೇ ವಯಸಿ ಸ್ಥಿತಂ ತಂ ಉಪನೇತುಂ ಅನೇನ ದ್ವಿಜವರೇಣ ಮನಃ ದಧೇ ।

**ಅನ್ವಯಾರ್ಥ—**

**ಇತಿ** = ಹೀಗೆ
**ಬಹುವಿಧೈಃ** = ನಾನಾ ವಿಧಗಳಾದ
**ಚಾರುಭಿಃ** = ಸುಂದರಗಳಾದ
**ಚರಿತ್ರೈಃ** = ಚರಿತ್ರೆಗಳಿಂದ
**ಸಕಲಲೋಕಕುತೂಹಲಕಾರಿಣಂ** = ಎಲ್ಲಾ ಲೋಕಗಳಿಗೂ ಆಶ್ಚರ್ಯವನ್ನುಂಟುಮಾಡುತ್ತಿರುವ
**ಉಚಿತೇ ವಯಸಿ** = ಉಪನಯನಕ್ಕೆ ಯೋಗ್ಯವಾದ ವಯಸ್ಸಿನಲ್ಲಿ
**ಸ್ಥಿತಂ ತಂ** = ಇರುವ ಆ ವಾಸುದೇವನಿಗೆ
**ಉಪನೇತುಂ** = ಉಪನಯನ ಆಡುವುದಕ್ಕೆ
**ದ್ವಿಜವರೇಣ ಅನೇನ** = ಬ್ರಾಹ್ಮಣಶ್ರೇಷ್ಠರಾದ ಮಧ್ಯಗೇಹಭಟ್ಟರಿಂದ
**ಮನಃ** = ಮನಸ್ಸು
**ದಧೇ** = ಮಾಡಲ್ಪಟ್ಟಿತು.

**ತಾತ್ಪರ್ಯ—** ವಾಸುದೇವನಿಗೆ ಉಪನಯನಕಾಲವು ಬಂತು. ನಾನಾವಿಧಗಳಾದ ಸುಂದರಗಳಾದ ಚರಿತ್ರೆಗಳಿಂದ ಸಕಲಲೋಕಗಳಿಗೂ ಕುತೂಹಲವನ್ನು ಮಾಡುತ್ತಿದ್ದನು. ಉಪನಯನಕ್ಕೆ ಉಚಿತವಾದ ವಯಸ್ಸೂ ಬಂತು. ಬ್ರಾಹ್ಮಣ-ಶ್ರೇಷ್ಠರಾದ ಮಧ್ಯಗೇಹಭಟ್ಟರು ಗರ್ಭದ ಎಂಟನೇ ವಯಸ್ಸಿನಲ್ಲಿ ವಾಸುದೇವನಿಗೆ ಉಪನಯನ ಮಾಡುವುದಾಗಿ ತೀರ್ಮಾನಿಸಿದರು (ಹುಟ್ಟಿದ ಎಂಟನೇ ವರ್ಷದಲ್ಲಿ ಉಪನಯನ ಎಂದು ಕೂಡಾ ಹೇಳುತ್ತಾರೆ).

**ವಿಗ್ರಹ—**

**ಬಹುವಿಧೈಃ** = ಬಹ್ವ್ಯಃ ವಿಧಾಃ ಯೇಷಾಂ ತಾನಿ ಬಹುವಿಧಾನಿ, ತೈಃ ಬಹುವಿಧೈಃ ।

**ಸಕಲಲೋಕಕುತೂಹಲಕಾರಿಣಂ** = ಸಕಲಾಶ್ಚ ತೇ ಲೋಕಾಶ್ಚ ಸಕಲಲೋಕಾಃ, ಸಕಲಲೋಕಾನಾಂ ಕುತೂಹಲಂ ಸಕಲಲೋಕಕುತೂಹಲಂ, ಸಕಕಲೋಕಕುತೂಹಲಂ ಕರೋತೀತಿ ಸಕಲಲೋಕಕುತೂಹಲಕಾರೀ ತಂ ಸಕಲಲೋಕಕುತೂಹಲಕಾರಿಣಂ ।

**ಕ್ರಿಯಾಪದ—** **ದಧೇ-** ಡು ಧಾಞ್ ಧಾರಣಪೋಷಣಯೋಃ ಇತಿ ಧಾರಣಪೋಷಣಾರ್ಥಕಾತ್ ಸಕರ್ಮಕಾತ್ ಉಭಯಪದಿನಃ ಧಾಞ್ ಧಾತೋಃ ಲಿಟಿ ಪ್ರಥಮಪುರುಷೈಕವಚನೇ 'ದಧೇ' ಇತಿ ರೂಪಂ ।

ದಧೇ ದಧಾತೇ ದಧಿರೇ, ದಧಿಷೇ ದಧಾಥೇ ದಧಿಧ್ವೇ, ದಧೇ ದಧಿವಹೇ ದಧಿಮಹೇ ॥

★ ★ ★

ಶುಭಮುಹೂರ್ತದಲ್ಲಿ ಉಪನಯನ ಮಹೋತ್ಸವ

**ಸಮುಚಿತಗ್ರಹಯೋಗಗುಣಾನ್ವಿತಂ**
**ಸಮವಧಾರ್ಯ ಮುಹೂರ್ತಮದೂಷಣಮ್ ।**
**ಪ್ರಣಯಬಂಧುರಬಾಂಧವವಾನಸೌ**
**ದ್ವಿಜಕುಲಾಕುಲಮುತ್ಸವಮಾತನೋತ್ ॥ 32 ॥**

**ಪದಚ್ಛೇದ—** ಸಮುಚಿತಗ್ರಹಯೋಗಗುಣಾನ್ವಿತಂ, ಸಮವಧಾರ್ಯ, ಮುಹೂರ್ತಂ, ಅದೂಷಣಂ, ಪ್ರಣಯ-ಬಂಧುರಬಾಂಧವವಾನ್, ಅಸೌ, ದ್ವಿಜಕುಲಾಕುಲಂ, ಉತ್ಸವಂ, ಆತನೋತ್ ।

**ಅನ್ವಯ—** ಪ್ರಣಯಬಂಧುರಬಾಂಧವವಾನ್ ಅಸೌ, ಸಮುಚಿತಗ್ರಹಯೋಗಗುಣಾನ್ವಿತಂ, ಅದೂಷಣಂ, ಮುಹೂರ್ತಂ ಸಮವಧಾರ್ಯ, ದ್ವಿಜಕುಲಾಕುಲಂ ಉತ್ಸವಂ ಆತನೋತ್ ।

**ಅನ್ವಯಾರ್ಥ—**

**ಪ್ರಣಯಬಂಧುರಬಾಂಧವವಾನ್-** **ಪ್ರಣಯ** = ಸ್ನೇಹದಿಂದ, **ಬಂಧುರ** = ಮನೋಹರವಾದ, **ಬಾಂಧವ-ವಾನ್** = ಬಂಧುಜನರುಳ್ಳ, **ಅಸೌ** = ಆ ಮಧ್ಯಗೇಹಭಟ್ಟರು,

**ಸಮುಚಿತಗ್ರಹಯೋಗಗುಣಾನ್ವಿತಂ-** **ಸಮುಚಿತ** = ಉಪನಯನಕ್ಕೆ ಯೋಗ್ಯವಾದ, **ಗ್ರಹ** = ಬೃಹಸ್ಪತಿ ಮುಂತಾದ ಗ್ರಹಗಳ, **ಯೋಗ** = ಎಂಟನೇ ಮನೆಯಲ್ಲಿ ಗ್ರಹಗಳಿಲ್ಲದಿರುವಿಕೆಯೇ ಮೊದಲಾದ ಗುಣಗಳಿಂದ, **ಅನ್ವಿತಂ** = ಕೂಡಿದ,

**ಅದೂಷಣಂ** = ದೋಷವಿಲ್ಲದಿರುವ,

**ಮುಹೂರ್ತಂ** = ವೃಷಭಾದಿ ಲಗ್ನಗಳನ್ನು

**ಸಮವಧಾರ್ಯ** = ನಿಶ್ಚಯಿಸಿ

**ದ್ವಿಜಕುಲಾಕುಲಂ-** ದ್ವಿಜ = ಬ್ರಾಹ್ಮಣರ, **ಕುಲ** = ಸಮೂಹದಿಂದ, **ಆಕುಲಂ** = ತುಂಬಿದ

**ಉತ್ಸವಂ** = ಉಪನಯನರೂಪವಾದ ಮಂಗಳೋತ್ಸವವನ್ನು

**ಆತನೋತ್** = ಮಾಡಿದರು.

**ತಾತ್ಪರ್ಯ—** ಅನಂತರ ಮಧ್ಯಗೇಹಭಟ್ಟರು ಉಪನಯನಕ್ಕೆ ಮುಹೂರ್ತ (ಲಗ್ನ)ವನ್ನು ಇಟ್ಟರು. ಅದು ಅಷ್ಟಮ-ಶುದ್ಧಿ ಮೊದಲಾದ ಗುಣಗಳಿಂದ ಕೂಡಿ ದೋಷವಿಲ್ಲದ್ದಾಗಿತ್ತು. ಆ ದಿನ ಅವರ ಪ್ರೀತಿಯ ಬಂಧುಗಳೂ, ಬ್ರಾಹ್ಮಣರೂ ನೆರೆದರು. ಅಂತಹ ಶುಭಮುಹೂರ್ತದಲ್ಲಿ ಪುತ್ರನಾದ ವಾಸುದೇವನಿಗೆ ಸಂಭ್ರಮದಿಂದ ಉಪನಯನೋತ್ಸವವನ್ನು ನೆರವೇರಿಸಿದರು.

**ವಿಗ್ರಹ—**

**ಸಮುಚಿತಗ್ರಹಯೋಗಗುಣಾನ್ವಿತಂ—** ಗ್ರಹಾಣಾಂ ಯೋಗಃ ಗ್ರಹಯೋಗಃ, ಸಮುಚಿತಶ್ಚಾಸೌ ಗ್ರಹ-ಯೋಗಶ್ಚ ಸಮುಚಿತಗ್ರಹಯೋಗಃ, ಸಮುಚಿತಗ್ರಹಯೋಗಃ ಏವ ಗುಣಃ ಸಮುಚಿತಗ್ರಹಯೋಗ-ಗುಣಃ, ಸಮುಚಿತಗ್ರಹಯೋಗಗುಣೇನ ಅನ್ವಿತಃ ಸಮುಚಿತಗ್ರಹಯೋಗಗುಣಾನ್ವಿತಃ, ತಂ ಸಮುಚಿತಗ್ರಹಯೋಗಗುಣಾನ್ವಿತಃ ।

**ಅದೂಷಣಂ—** ನ ವಿದ್ಯತೇ ದೂಷಣಂ ಯಸ್ಯ ಸಃ, ಅದೂಷಣಃ ।

**ಪ್ರಣಯಬಂಧುರಬಾಂಧವವಾನ್—** ಪ್ರಣಯೇನ ಬಂಧುರಾಃ ಪ್ರಣಯಬಂಧುರಾಃ, ಪ್ರಣಯಬಂಧುರಾಶ್ಚ ತೇ ಬಾಂಧವಾಶ್ಚ ಪ್ರಣಯಬಂಧುರಬಾಂಧವಾಃ, ಪ್ರಣಯಬಂಧುರಬಾಂಧವಾಃ ಅಸ್ಯ ಸಂತಿ ಇತಿ ಪ್ರಣಯಬಂಧುರಬಾಂಧವವಾನ್ ।

**ದ್ವಿಜಕುಲಾಕುಲಂ—** ದ್ವಿಜಾನಾಂ ಕುಲಂ ದ್ವಿಜಕುಲಂ, ದ್ವಿಜಕುಲೇನ ಆಕುಲಃ ದ್ವಿಜಕುಲಾಕುಲಃ ತಂ ದ್ವಿಜ-ಕುಲಾಕುಲಂ ।

**ಕ್ರಿಯಾಪದ— ಆತನೋತ್-** ಆಙ್ ಉಪಸರ್ಗಪೂರ್ವಕಾತ್ ತನು ವಿಸ್ತಾರೇ ಇತಿ ವಿಸ್ತಾರಾರ್ಥಕಾತ್ ತನು-ಧಾತೋಃ ಲಙ್ ಪ್ರಥಮಪುರುಷೈಕವಚನೇ 'ಆತನೋತ್' ಇತಿ ರೂಪಂ ।

ಆತನೋತ್ ಆತನುತಾಂ ಆತನ್ವನ್, ಆತನೋಃ ಆತನುತಂ ಆತನುತ, ಆತನವಂ ಆತನುವ-ಆತನ್ವ, ಆತನುಮ-ಆತನ್ಮ ॥

★ ★ ★

ದೇವತೆಗಳಿಗೆ ವಾಸುದೇವನ ಮುಖಕಮಲದಲ್ಲಿ ನಲಿಯುವ ಆಸೆ

**ವಿವಿಧವೇದತಯಾ ವಿಜಿಹೀರ್ಷವೋ**
**ವದನರಂಗಪದೇಽಸ್ಯ ಚಿರಾಯ ಯಾಃ ।**
**ಸುರವರಪ್ರಮದಾ ಅಪಿ ಸಪ್ರಿಯಾ**
**ಅಭಿನನಂದುರಹೋ ವಿಯತೋ ಮಹಮ್ ॥ 33 ॥**

**ಪದಚ್ಛೇದ—** ವಿವಿಧವೇದತಯಾ, ವಿಜಿಹೀರ್ಷವಃ, ವದನರಂಗಪದೇ, ಅಸ್ಯ, ಚಿರಾಯ, ಯಾಃ, ಸುರವರ-ಪ್ರಮದಾಃ, ಅಪಿ ಸಪ್ರಿಯಾಃ, ಅಭಿನನಂದುಃ, ಅಹೋ, ವಿಯತಃ, ಮಹಂ ।

**ಅನ್ವಯ—** ಯಾಃ ಸುರವರಪ್ರಮದಾ ಅಪಿ, ಚಿರಾಯ, ಅಸ್ಯ ವದನರಂಗಪದೇ ವಿವಿಧವೇದತಯಾ ವಿಜಿಹೀರ್ಷವಃ, (ತಾಃ) ಸಪ್ರಿಯಾಃ ವಿಯತಃ ಮಹಂ ಅಭಿನನಂದುಃ, ಅಹೋ!

**ಅನ್ವಯಾರ್ಥ—**

**ಯಾಃ** = ಯಾವ

**ಸುರವರಪ್ರಮದಾಃ ಅಪಿ** = ದೇವತೋತ್ತಮರ ಹೆಂಗಸರೂ

**ಚಿರಾಯ** = ಬಹಳ ಕಾಲದಿಂದ

**ಅಸ್ಯ** = ಈ ವಾಸುದೇವನ

**ವದನರಂಗಪದೇ** = ಮುಖ ಎಂಬ ರಂಗಸ್ಥಾನದಲ್ಲಿ

**ವಿವಿಧವೇದತಯಾ** = ನಾನಾವಿಧಗಳಾದ ವೇದಗಳ ಸ್ವರೂಪದಿಂದ

**ವಿಜಿಹೀರ್ಷವಃ** = ವಿಹಾರ ಮಾಡಲು ಇಚ್ಛೆಯುಳ್ಳವರೋ

**(ತಾಃ)** = ಅವರು

**ಸಪ್ರಿಯಾಃ** = ತಮ್ಮ ತಮ್ಮ ಪತಿಗಳಿಂದ ಸಹಿತರಾಗಿ

**ವಿಯತಃ** = ಆಕಾಶದಿಂದ

**ಮಹಂ** = ಉಪನಯನೋತ್ಸವವನ್ನು

**ಅಭಿನನಂದುಃ** = ನೋಡಿ ಸಂತೋಷಪಟ್ಟರು

**ಅಹೋ!** = ಆಶ್ಚರ್ಯವು.

**ತಾತ್ಪರ್ಯ—** ವೇದಾಭಿಮಾನಿಗಳಾದ ಲಕ್ಷ್ಮೀ, ಭಾರತೀ, ವಾರುಣೀ, ಪಾರ್ವತೀ ಮೊದಲಾದ ದೇವತಾಸ್ತ್ರೀಯರು ಆ ವಾಸುದೇವನ ಮುಖವೆಂಬ ರಂಗಸ್ಥಳದಲ್ಲಿ ಕುಣಿಯಬೇಕೆಂದು ಅಪೇಕ್ಷಿಸುತ್ತಿದ್ದರು. ಅವರು ಈಗ ತಮ್ಮ ಪತಿಯರೊಡನೆ ಆಕಾಶದಲ್ಲಿ ವಿಮಾನದಲ್ಲಿ ಕುಳಿತೇ ಆ ಉಪನಯನೋತ್ಸವವನ್ನು ನೋಡಿ ಆನಂದಿಸಿದರು. ಎಂದರೆ, ಇಂದಿನವರೆಗೆ ವಾಸುದೇವನಿಗೆ ಉಪನಯನವಾಗದಿದ್ದುದರಿಂದ ಅವನು ವೇದವನ್ನು ಉಚ್ಚಾರಣೆ ಮಾಡುವಂತಿರಲಿಲ್ಲ. ಈಗ ಉಪನಯನವಾಯಿತು. ಆದ್ದರಿಂದ ವೇದಾಭಿಮಾನಿಗಳಾದ ಲಕ್ಷ್ಮೀಮೊದಲಾದವರು ತಮಗೆ ಅವನ ಬಾಯಿಂದ ಉಚ್ಚಾರವಾಗುವ ವೇದಗಳಲ್ಲಿ ನೆಲೆಸಲು ಅವಕಾಶವಾಯಿತೆಂದು ಆನಂದದಿಂದ ಆಕಾಶದಲ್ಲಿ ಪ್ರಿಯರಾದ ಪತಿಯರೊಡನೆ ಉಪನಯನೋತ್ಸವವನ್ನು ವೀಕ್ಷಿಸಿದರು.

ವಿಗ್ರಹ—

**ವಿವಿಧವೇದತಯಾ—** ವಿವಿಧಾಶ್ಚ ತೇ ವೇದಾಶ್ಚ ವಿವಿಧವೇದಾಃ ವಿವಿಧವೇದಾನಾಂ ಭಾವಃ ವಿವಿಧವೇದತಾ, ತಯಾ ವಿವಿಧವೇದತಯಾ ।

**ವಿಜಿಹೀರ್ಷವಃ—** ವಿಹರ್ತುಂ ಇಚ್ಛವಃ ವಿಜಿಹೀರ್ಷವಃ ।

**ವದನರಂಗಪದೇ—** ವದನಂ ಏವ ರಂಗಪದಂ ವದನರಂಗಪದಂ, ತಸ್ಮಿನ್ ವದನರಂಗಪದೇ ।

**ಸುರವರಪ್ರಮದಾಃ—** ಸುರೇಶು ವರಾಃ ಸುರವರಾಃ, ಸುರವರಾಣಾಂ ಪ್ರಮದಾಃ ಸುರವರಪ್ರಮದಾಃ ।

**ಸಪ್ರಿಯಾಃ—** ಪ್ರಿಯಾ ಸಹಿತಾಃ ಸಪ್ರಿಯಾಃ ।

**ಕ್ರಿಯಾಪದ— ಅಭಿನನಂದುಃ-** ಅಭಿ ಇತ್ಯುಪಸರ್ಗಪೂರ್ವಕಾತ್ ಟು ನದಿ ಸಮೃದ್ಧೌ ಇತಿ ಸಮೃದ್ಧ್ಯರ್ಥಕಾತ್ ಲಿಟಿ ಪ್ರಥಮಪುರುಷೇ ಬಹುವಚನೇ 'ಅಭಿನನಂದುಃ' ಇತಿ ರೂಪಂ ।

ಅಭಿನನಂದ ಅಭಿನನಂದತುಃ ಅಭಿನನಂದುಃ, ಅಭಿನನಂದಿಥ ಅಭಿನನಂದಥುಃ ಅಭಿನನಂದ,
ಅಭಿನನಂದ ಅಭಿನನಂದಿವ ಅಭಿನನಂದಿಮ ॥

★ ★ ★

ವೇದೋಕ್ತರೀತಿಯ ಉಪನಯನ

**ವಿಹಿತಸಾಧನಸಾಧಿತಸತ್ಕ್ರಿಯೋ**
**ಜ್ವಲನಮುಜ್ಜ್ವಲಧೀರ್ಜ್ವಲಯನ್ನಯಮ್ ।**
**ಉಪನಿನಾಯ ಸುತಂ ಸಮಲಂಕೃತಂ**
**ಕುಶಲಿನಂ ಕುಶಲೀಕೃತಶೀರ್ಷಕಮ್ ॥ 34 ॥**

**ಪದಚ್ಛೇದ—** ವಿಹಿತಸಾಧನಸಾಧಿತಸತ್ಕ್ರಿಯಃ ಜ್ವಲನಂ, ಉಜ್ಜ್ವಲಧೀಃ, ಜ್ವಲಯನ್, ಅಯಂ, ಉಪನಿನಾಯ, ಸುತಂ, ಸಮಲಂಕೃತಂ, ಕುಶಲಿನಂ, ಕುಶಲೀಕೃತಶೀರ್ಷಕಂ ।

**ಅನ್ವಯ—** ವಿಹಿತಸಾಧನಸಾಧಿತಸತ್ಕ್ರಿಯಃ ಉಜ್ಜ್ವಲಧೀಃ, ಅಯಂ ಜ್ವಲನಂ ಜ್ವಲಯನ್, ಸಮಲಂಕೃತಂ, ಕುಶಲಿನಂ ಕುಶಲೀಕೃತಶೀರ್ಷಕಂ ಸುತಂ ಉಪನಿನಾಯ ।

**ಅನ್ವಯಾರ್ಥ—**

**ವಿಹಿತಸಾಧನಸಾಧಿತಸತ್ಕ್ರಿಯಃ** = ಶಾಸ್ತ್ರಗಳಲ್ಲಿ ವಿಹಿತವಾದ ಸಾಧನಗಳಿಂದ ಸಾಧಿಸಲ್ಪಟ್ಟ ಮಂಗಲಕ್ಕೆ ಸಂಬಂಧಿಸಿದ ನಿರ್ದುಷ್ಟಗಳಾದ ಕರ್ಮಗಳುಳ್ಳ
**ಉಜ್ಜ್ವಲಧೀಃ** = ನಿರ್ಮಲವಾದ ಬುದ್ಧಿಯುಳ್ಳ
**ಅಯಂ** = ಈ ಮಧ್ಯಗೇಹಭಟ್ಟರು
**ಜ್ವಲನಂ** = ಅಗ್ನಿಯನ್ನು
**ಜ್ವಲಯನ್** = ಆಹುತಿಗಳನ್ನು ಹಾಕಿ ಉರಿಸುತ್ತಾ
**ಸಮಲಂಕೃತಂ** = ಅಲಂಕಾರಮಾಡಲ್ಪಟ್ಟ
**ಕುಶಲಿನಂ** = ಕ್ಷೇಮವುಳ್ಳ
**ಕುಶಲೀಕೃತಶೀರ್ಷಕಂ** = ಭದ್ರಾಕರಣ ಮಾಡಲ್ಪಟ್ಟ (ಕ್ಷೌರ ಮಾಡಿದ) ತಲೆಯುಳ್ಳ
**ಸುತಂ** = ಮಗನನ್ನು
**ಉಪನಿನಾಯ** = ಉಪನೀತನನ್ನಾಗಿ ಮಾಡಿದರು.

**ತಾತ್ಪರ್ಯ—** ಶುದ್ಧಮನಸ್ಸುಳ್ಳ ಈ ಮಧ್ಯಗೇಹಭಟ್ಟರು ಆಹುತಿಗಳಿಂದ ಅಗ್ನಿಯನ್ನು ಜ್ವಲಿಸುವಂತೆ ಮಾಡಿದರು. ವೇದದಲ್ಲಿ ಹೇಳಿದ ಸಾಮಗ್ರಿಗಳಿಂದ ಉಪನಯನೋತ್ಸವವನ್ನು ಮುಗಿಸಿದರು. ರೋಗ ಮೊದಲಾದವುಗಳಿಲ್ಲದೇ ಕ್ಷೇಮವಾಗಿರುವ ಮಗನಿಗೆ ಕ್ಷೌರಮಾಡಿಸಿ ಒಡವೆಗಳಿಂದ ಅಲಂಕಾರ ಮಾಡಿ ಉಪನಯನ ಸಂಸ್ಕಾರವನ್ನು ಸಾಂಗವಾಗಿ ನೆರವೇರಿಸಿದರು.

**ವಿಗ್ರಹ—**

**ವಿಹಿತಸಾಧನಾನಿ—** ವಿಹಿತಾನಿ ಚ ತಾನಿ ಸಾಧನಾನಿ ಚ ವಿಹಿತಸಾಧನಾನಿ ।
**ವಿಹಿತಸಾಧನಸಾಧಿತಸತ್ಕ್ರಿಯಃ—** ವಿಹಿತಾನಿ ಚ ತಾನಿ ಸಾಧನಾನಿ ಚ ವಿಹಿತಸಾಧನಾನಿ, ವಿಹಿತಸಾಧನೈಃ ಸಾಧಿತಾ ವಿಹಿತಸಾಧನಸಾಧಿತಾ, ಸತೀ ಚ ಸಾ ಕ್ರಿಯಾ ಚ ಸತ್ಕ್ರಿಯಾ, ವಿಹಿತಸಾಧನಸಾಧಿತಾ ಸತ್ಕ್ರಿಯಾ ಯೇನ ಸಃ ವಿಹಿತಸಾಧನಸಾಧಿತಸತ್ಕ್ರಿಯಃ ।
**ಉಜ್ಜ್ವಲಧೀಃ—** ಉಜ್ಜ್ವಲಾ ಧೀಃ ಯಸ್ಯ ಸಃ ಉಜ್ಜ್ವಲಧೀಃ ।

**ಜ್ವಲಯನ್**— ಜ್ವಲಯತಿ ಇತಿ ಜ್ವಲಯನ್ ।
**ಸಮಲಂಕೃತಂ**— ಸಮ್ಯಕ್ ಅಲಂಕೃತಃ ಸಮಲಂಕೃತಃ ತಂ ।
**ಕುಶಲಿನಂ**— ಕುಶಲಂ ಅಸ್ಯ ಅಸ್ತಿ ಇತಿ ಕುಶಲೀ, ತಂ ಕುಶಲಿನಂ ।
**ಕುಶಲೀಕೃತಶೀರ್ಷಕಂ**— ಅಕುಶಲಂ ಕುಶಲಂ ಸಂಪದ್ಯಮಾನಂ ಕೃತಂ ಕುಶಲೀಕೃತಂ, ಕುಶಲೀಕೃತಂ ಶೀರ್ಷಕಂ ಯಸ್ಯ ಸಃ ಕುಶಲೀಕೃತಶೀರ್ಷಕಃ ತಂ ।

**ಕ್ರಿಯಾಪದ**— ಉಪನಿನಾಯ- ಉಪ ಇತ್ಯುಪಸರ್ಗಪೂರ್ವಕಾತ್ ಣೀಞ್ ಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ಣೀಞ್ ಧಾತೋಃ ಲಿಟಿ ಪ್ರಥಮಪುರುಷೈಕವಚನೇ 'ಉಪನಿನಾಯ' ಇತಿ ರೂಪಂ ।

ಉಪನಿನಾಯ ಉಪನಿನ್ಯತುಃ ಉಪನಿನ್ಯುಃ, ಉಪನಿನಯಿಥ-ಉಪನಿನೇಥ ಉಪನಿನ್ಯಥುಃ ಉಪನಿನ್ಯ, ಉಪನಿನಾಯ-ಉಪನಿನಯ ಉಪನಿನ್ಯಿವ ಉಪನಿನ್ಯಿಮ ॥

★ ★ ★

ಭಾವೀಬ್ರಹ್ಮನಿಗೆ ಬ್ರಹ್ಮೋಪದೇಶ

**ಪರಿಚರಾಗ್ನಿಗುರೂ ಚರಿತವ್ರತಃ**
**ಸುಚರಣಃ ಪಠ ಸಾಧು ಸದಾಗಮಾನ್ ।**
**ಇತಿ ಗುರೋಸ್ತ್ರಿಜಗದ್ಗುರುಶಿಕ್ಷಣೇ**
**ಸ್ಫುಟಮಹಾಸಿ ಸುರೈಃ ಕೃತಸಾಕ್ಷಿಭಿಃ ॥ 35 ॥**

**ಪದಚ್ಛೇದ**— ಪರಿಚರ, ಅಗ್ನಿಗುರೂ, ಚರಿತವ್ರತಃ, ಸುಚರಣಃ, ಪಠ, ಸಾಧುಸದಾಗಮಾನ್, ಇತಿ, ಗುರೋಃ, ತ್ರಿಜಗದ್ಗುರುಶಿಕ್ಷಣೇ ಸ್ಫುಟಂ, ಅಹಾಸಿ, ಸುರೈಃ, ಕೃತಸಾಕ್ಷಿಭಿಃ ।

**ಅನ್ವಯ**— ಸುಚರಣಃ (ಸನ್), ಚರಿತವ್ರತಃ (ಸನ್) ಅಗ್ನಿಗುರೂ ಪರಿಚರ, ಸದಾಗಮಾನ್ ಸಾಧು ಪಠ, ಇತಿ ಗುರೋಃ ತ್ರಿಜಗದ್ಗುರುಶಿಕ್ಷಣೇ ಕೃತಸಾಕ್ಷಿಭಿಃ ಸುರೈಃ ಸ್ಫುಟಂ ಅಹಾಸಿ ।

**ಅನ್ವಯಾರ್ಥ**—

**ಸುಚರಣಃ (ಸನ್)** = ಸದಾಚಾರಸಂಪನ್ನನಾಗಿ
**ಚರಿತವ್ರತಃ** = ಚೆನ್ನಾಗಿ ಬ್ರಹ್ಮಚರ್ಯವನ್ನು ಪಾಲಿಸುತ್ತಾ
**ಅಗ್ನಿಗುರೂ ಪರಿಚರ** = ಅಗ್ನಿಯನ್ನೂ ಗುರುಗಳನ್ನೂ ಸೇವಿಸು
**ಸದಾಗಮಾನ್** = ಸದಾಗಮಗಳನ್ನು
**ಸಾಧು** = ಚೆನ್ನಾಗಿ
**ಪಠ** = ಅಧ್ಯಯನವನ್ನು ಮಾಡು,
**ಇತಿ** = ಹೀಗೆಂದು
**ಗುರೋಃ** = ಮಧ್ಯಗೇಹಭಟ್ಟರು
**ತ್ರಿಜಗದ್ಗುರುಶಿಕ್ಷಣೇ** = ಮೂರು ಲೋಕಗಳಿಗೂ ಶಿಕ್ಷಕರಾದ ಮುಖ್ಯಪ್ರಾಣದೇವನ ಅವತಾರವಾದ ವಾಸುದೇವನನ್ನು ಶಿಕ್ಷಣ ನೀಡುವ ವಿಷಯದಲ್ಲಿ
**ಕೃತಸಾಕ್ಷಿಭಿಃ ಸುರೈಃ** = ಮನುಷ್ಯರುಗಳು ಮಾಡುವ ಕೆಲಸಗಳಲ್ಲಿ ಸಾಕ್ಷಿಗಳಾಗಿರುವ ದೇವತೆಗಳಿಂದ

**ಸ್ಫುಟಂ** = ಸ್ಪಷ್ಟವಾಗಿ

**ಅಹಾಸಿ** = ನಗಲ್ಪಟ್ಟಿತು.

**ತಾತ್ಪರ್ಯ—** ವಾಸುದೇವನನ್ನು ಕುರಿತು ಮಧ್ಯಗೇಹಭಟ್ಟರು ಅಗ್ನಿಯನ್ನೂ ಗುರುಗಳನ್ನೂ ಸೇವಿಸುತ್ತಾ, ಬ್ರಹ್ಮಚರ್ಯವನ್ನು ಪಾಲಿಸುತ್ತಾ ಸದಾಗಮಗಳನ್ನೂ ಯಾವಾಗಲೂ ಓದು ಎಂದು ಉಪದೇಶಿಸುತ್ತಿದ್ದರು. ಮನುಷ್ಯರುಗಳು ಮಾಡುತ್ತಿರುವ ಕರ್ಮಗಳಿಗೆ ಸಾಕ್ಷಿಗಳಾಗಿರುವ ದೇವತೆಗಳು, ಮಧ್ಯಗೇಹಭಟ್ಟರು ಮಾಡುತ್ತಿರುವ ಈ ಉಪದೇಶಗಳನ್ನು ಕೇಳಿ ತ್ರಿಜಗತ್ತುಗಳಿಗೂ ಗುರುಗಳಾಗಿರುವ ಈ ಮುಖ್ಯಪ್ರಾಣದೇವರಿಗೆ ಉಪದೇಶವನ್ನು ಮಾಡುತ್ತಿದ್ದಾರೆ ಎಂದು ಸ್ಪಷ್ಟವಾಗಿ ದೇವತೆಗಳೆಲ್ಲಾ ನಕ್ಕರು.

**ವಿಗ್ರಹ—**

**ಅಗ್ನಿಗುರೂ—** ಅಗ್ನಿಶ್ಚ ಗುರುಶ್ಚ ಅಗ್ನಿಗುರೂ, ತೌ ಅಗ್ನಿಗುರೂ ।

**ಚರಿತವ್ರತಃ—** ಚರಿತಂ ವ್ರತಂ ಯಸ್ಯ ಸಃ ಚರಿತವ್ರತಃ ।

**ಸುಚರಣಃ—** ಶೋಭನಂ ಚರಣಂ ಯಸ್ಯ ಸಃ ಸುಚರಣಃ ।

**ಸದಾಗಮಾನ್—** ಸಂತಶ್ಚ ತೇ ಆಗಮಾಶ್ಚ ಸದಾಗಮಾಃ, ತಾನ್ ಸದಾಗಮಾನ್ ।

**ತ್ರಿಜಗಂತಿ—** ತ್ರೀಣಿ ಚ ತಾನಿ ಜಗಂತಿ ಚ ತ್ರಿಜಗಂತಿ ।

**ತ್ರಿಜಗದ್ಗುರುಃ—** ತ್ರಿಜಗತಾಂ ಗುರುಃ ತ್ರಿಜಗದ್ಗುರುಃ ।

**ತ್ರಿಜಗದ್ಗುರು ಶಿಕ್ಷಣೇ—** ತ್ರಿಜಗದ್ಗುರೋಃ ಶಿಕ್ಷಣಂ ತ್ರಿಜಗದ್ಗುರುಶಿಕ್ಷಣಂ, ತಸ್ಮಿನ್ ತ್ರಿಜಗದ್ಗುರುಶಿಕ್ಷಣೇ ।

**ಕೃತಸಾಕ್ಷಿಭಿಃ—** ಕೃತೇಃ ಸಾಕ್ಷಿಣಃ ಕೃತಸಾಕ್ಷಿಣಃ ತೈಃ ಕೃತಸಾಕ್ಷಿಭಿಃ ।

**ಕ್ರಿಯಾಪದ—** ಪರಿಚರ- ಪರಿ ಇತ್ಯುಪಸರ್ಗಪೂರ್ವಕಾತ್ ಚರಗತಿಭಕ್ಷಣಯೋಃ ಇತಿ ಧಾತೋಃ ಲೋಟಿ ಮಧ್ಯಮಪುರುಷೈಕವಚನೇ 'ಪರಿಚರ' ಇತಿ ರೂಪಮ್ ।

ಪರಿಚರತು ಪರಿಚರತಾತ್, ಪರಿಚರತಾಂ ಪರಿಚರಂತು, ಪರಿಚರ ಪರಿಚರತಾತ್, ಪರಿಚರತಂ ಪರಿಚರತ, ಪರಿಚರಾಣಿ ಪರಿಚರಾವ ಪರಿಚರಾಮ ।।

ಪಠ- ಪಠ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಪಠಧಾತೋಃ ಲೋಟಿ ಮಧ್ಯಮಪುರುಷೈಕವಚನೇ 'ಪಠ' ಇತಿ ರೂಪಮ್ ।

ಪಠತು ಪಠತಾತ್, ಪಠತಾಂ ಪಠಂತು, ಪಠ ಪಠತಾತ್, ಪಠತಂ ಪಠತ, ಪಠಾನಿ ಪಠಾವ ಪಠಾಮ ।।)

ಅಹಾಸಿ- ಹಸ್ ಹಸನೇ ಇತಿ ಹಸನಾರ್ಥಕಾತ್ ಹಸಧಾತೋಃ ಭಾವೇ ಲುಙ್ ಪ್ರಥಮಪುರುಷೈಕವಚನೇ 'ಅಹಾಸಿ' ಇತಿ ರೂಪಂ ।

| | | |
|---|---|---|
| ಅಹಾಸಿ | ಅಹಾಸಿಷ್ಟಾಂ | ಅಷಾಶಿಷತ |
| ಅಹಾಸಿಷ್ಠಾಃ | ಅಹಾಸಿಷತಾಂ | ಅಹಾಸಿಷಥ |
| ಅಹಾಸಿಷಂ | ಅಹಾಷಿಷ್ವ | ಅಹಾಷಿಷ್ಮ |

★ ★ ★

ವಟು ವಾಸುದೇವನ ಆಚಾರ-ವಿಚಾರ

**ಜಿತಕುಮಾರಗುಣಂ ಸುಕುಮಾರಕಂ**

**ನಿಜಕುಮಾರಮವೇಕ್ಷ್ಯ ನಿರಂತರಮ್ ।**

**ಸಮುಚಿತಾಽಚರಣೇ ಚತುರಂ ಸ್ವತಃ**
**ಕ್ಷಿತಿಸುರೋ ಮುದಮಾಯತ ಶಿಕ್ಷಯನ್ ॥ 36 ॥**

**ಪದಚ್ಛೇದ—** ಜಿತಕುಮಾರಗುಣಂ, ಸುಕುಮಾರಕಂ, ನಿಜಕುಮಾರಂ, ಅವೇಕ್ಷ್ಯ, ನಿರಂತರಂ, ಸಮುಚಿತಾಚರಣೇ, ಚತುರಂ, ಸ್ವತಃ, ಕ್ಷಿತಿಸುರಃ, ಮುದಂ, ಆಯತ, ಶಿಕ್ಷಯನ್ ।

**ಅನ್ವಯ—** ಜಿತಕುಮಾರಗುಣಂ ಸುಕುಮಾರಕಂ ನಿಜಕುಮಾರಂ ಶಿಕ್ಷಯನ್ ಕ್ಷಿತಿಸುರಃ ಸ್ವತಃ ನಿರಂತರಂ ಸಮುಜಿತಾಚರಣೇ ಚತುರಮವೇಕ್ಷ್ಯ, ಮುದಮಾಯತ ।

**ಅನ್ವಯಾರ್ಥ—**

**ಜಿತಕುಮಾರಗುಣಂ** = ಜಯಿಸಲ್ಪಟ್ಟ ಸ್ಕಂದನ ಬ್ರಹ್ಮಚರ್ಯ ಮೊದಲಾದ ಗುಣವುಳ್ಳ

**ಸುಕುಮಾರಕಂ** = ಕೋಮಲವಾದ ಶರೀರವುಳ್ಳ

**ನಿಜಕುಮಾರಂ** = ತನ್ನ ಮಗನಾದ ವಾಸುದೇವನನ್ನು ಕುರಿತು

**ಶಿಕ್ಷಯನ್** = ಶೌಚ ಆಚಮನ ಮುಂತಾದ ಸದಾಚಾರಗಳನ್ನು ಹೇಳಿಕೊಡುತ್ತಾ

**ಕ್ಷಿತಿಸುರಃ** = ಬ್ರಾಹ್ಮಣರಾದ ಮಧ್ಯಗೇಹಭಟ್ಟರು

**ಸ್ವತಃ** = ಇನ್ನೊಬ್ಬರ ಉಪದೇಶವಿಲ್ಲದೆ, ತಾನಾಗಿಯೇ

**ನಿರಂತರಂ** = ಪ್ರತಿದಿನದಲ್ಲಿಯೂ

**ಸಮುಜಿತಾಚರಣೇ** = ಆಶ್ರಮಗಳಿಗೆ ಯೋಗ್ಯಗಳಾದ ಆಚಾರಗಳನ್ನು ಮಾಡುವ ವಿಷಯದಲ್ಲಿ

**ಚತುರಂ** = ಸಮರ್ಥನಾಗಿರುವುದನ್ನು

**ಅವೇಕ್ಷ್ಯ** = ನೋಡಿ

**ಮುದಂ** = ಸಂತೋಷವನ್ನು

**ಆಯತ** = ಹೊಂದಿದರು.

**ತಾತ್ಪರ್ಯ—** ತಂದೆಯಾದ ಮಧ್ಯಗೇಹಭಟ್ಟರು ಉಪನಯನವಾದ ಕೂಡಲೇ ದೇವಸೇನಾನಿಯಾದ ಸುಬ್ರಹ್ಮಣ್ಯನಿಗಿಂತಲೂ ಗುಣಶಾಲಿಯಾದ, ಬಾಲಕನಾದ ಮಗನಿಗೆ ಶುದ್ಧಿಕ್ರಮ, ಆಚಮನ, ಸಂಧ್ಯಾವಂದನೆ ಮೊದಲಾ-ದವುಗಳನ್ನು ಹೇಳಿಕೊಟ್ಟರು. ಆದರೆ ಆ ಬಾಲಕನು ತಾನಾಗಿಯೇ ಯಾವಾಗಲೂ ಅವುಗಳನ್ನು ಮಾಡುವುದರಲ್ಲಿ ಬುದ್ಧಿಶಾಲಿಯಾಗಿದ್ದನು. ಇದನ್ನು ನೋಡಿ ತಂದೆಗೆ ಬಹಳ ಸಂತೋಷವಾಯಿತು.

ವಿಗ್ರಹ—

**ಜಿತಕುಮಾರಗುಣಂ—** ಜಿತಃ ಕುಮಾರಸ್ಯ ಗುಣಃ ಯೇನ ಸಃ ಜಿತಕುಮಾರಗುಣಃ ತಂ ಜಿತಕುಮಾರಗುಣಂ ।

**ಸುಕುಮಾರಕಃ—** ಅತ್ಯಂತಂ ಕುಮಾರಃ ಸುಕುಮಾರಃ, ಸುಕುಮಾರಃ ಏವ ಸುಕುಮಾರಕಃ, ತಂ ಸುಕುಮಾರಕಂ ।

**ನಿಜಕುಮಾರಂ—** ನಿಜಶ್ಚಾಸೌ ಕುಮಾರಶ್ಚ ನಿಜಕುಮಾರಃ, ತಂ ನಿಜಕುಮಾರಂ ।

**ಸಮುಚಿತಾಚರಣೇ—** ಸಮುಚಿತಂ ಚ ತತ್ ಆಚರಣಂ ಚ ಸಮುಚಿತಾಚರಣಂ, ತಸ್ಮಿನ್ ಸಮುಚಿತ-ಚರಣೇ ।

**ಕ್ಷಿತಿಸುರಃ—** ಕ್ಷಿತ್ಯಾಂ ಸುರಃ ಕ್ಷಿತಿಸುರಃ ।

**ಕ್ರಿಯಾಪದ—** ಆಯತ- ಅಯಗತೌ ಇತಿ ಗತ್ಯರ್ಥಕಾತ್ ಅಯಧಾತೋಃ ಲಙ್ ಪ್ರಥಮಪುರುಷೈಕವಚನೇ 'ಆಯತ' ಇತಿ ರೂಪಮ್ ।

ಆಯತ ಆಯೇತಾಂ ಆಯಂತ, ಆಯಥಾಃ ಆಯೇಥಾಂ ಆಯಧ್ವಂ, ಆಯೇ ಆಯಾವಹಿ
ಆಯಾಮಹಿ ॥

★ ★ ★

ವಾಸುದೇವನ ಬ್ರಹ್ಮಚರ್ಯ - ಕೌಪೀನ ವೈಭವ

**ಸಪಟಖಂಡಮಕಿಂಚನವತ್ಕ್ವಚಿತ್-**
**ಸ್ವವಿಭವಾನುಚಿತಂ ಚರಣಾದಿಕಮ್ ।**
**ಭುವನಭರ್ತುರಹೋ ಸ್ವನಿಗೂಹನಂ**
**ಸುರಸಭಾಸು ಕುತೂಹಲಮಾತನೋತ್ ॥ 37 ॥**

**ಪದಚ್ಛೇದ—** ಸಪಟಖಂಡಂ, ಅಕಿಂಚನವತ್, ಕ್ವಚಿತ್ ಸ್ವವಿಭಾನುಚಿತಂ, ಚರಣಾದಿಕಂ, ಭುವನಭರ್ತುಃ, ಅಹೋ, ಸ್ವನಿಗೂಹನಂ, ಸುರಸಭಾಸು, ಕುತೂಹಲಂ ಆತನೋತ್ ।

**ಅನ್ವಯ—** ಕ್ವಚಿತ್ ಅಕಿಂಚನವತ್, ಸಪಟಖಂಡಂ ಸ್ವವಿಭವಾನುಚಿತಂ ಚರಣಾದಿಕಂ, ಭುವನಭರ್ತುಃ, ಸ್ವನಿಗೂಹನಂ, ಸುರಸಭಾಸು ಕುತೂಹಲಮಾತನೋತ್ ಅಹೋ ।

**ಅನ್ವಯಾರ್ಥ—**

**ಕ್ವಚಿತ್** = ಒಂದೊಮ್ಮೆ
**ಅಕಿಂಚನವತ್** = ಏನೂ ಇಲ್ಲದ ಬಡವನಂತೆ
**ಸಪಟಖಂಡಂ** = ವಸ್ತ್ರದ ತುಂಡಿನಿಂದ ಸಹಿತವಾಗಿ
**ಸ್ವವಿಭವಾನುಚಿತಂ - ಸ್ವ** = ತನ್ನ, **ವಿಭವ** = ಸಂಪತ್ತಿಗೆ, **ಅನುಚಿತಂ** = ಯೋಗ್ಯವಲ್ಲದ
**ಚರಣಾದಿಕಂ** = ಸಂಚಾರವೇ ಮೊದಲಾಗಿ ಉಳ್ಳ
**ಭುವನಭರ್ತುಃ** = ಸಕಲಲೋಕಗಳ ಅಧಿಪತಿಯ
**ಸ್ವನಿಗೂಹನಂ** = ತನ್ನ ಐಶ್ವರ್ಯಾದಿಗಳ ಮುಚ್ಚುವಿಕೆಯು
**ಸುರಸಭಾಸು** = ದೇವತೆಗಳ ಸಭೆಗಳಲ್ಲಿ
**ಕುತೂಹಲಂ** = ಕೌತುಕವನ್ನು
**ಆತನೋತ್** = ಉಂಟುಮಾಡಿತು
**ಅಹೋ** = ಆಶ್ಚರ್ಯ.

**ತಾತ್ಪರ್ಯ—** ಮುಖ್ಯಪ್ರಾಣನ ಅವತಾರನಾದ ಆ ವಾಸುದೇವನು ಬ್ರಹ್ಮಚರ್ಯ (ಧರ್ಮಕ್ಕನುಗುಣವಾಗಿ) ಕೇವಲ ಕೌಪೀನವನ್ನುಟ್ಟು ಸಂಚರಿಸುತ್ತಿದ್ದನು. ಅದು ಮೂರುಲೋಕದ ಒಡೆಯ ಮುಖ್ಯಪ್ರಾಣನ ವೈಭವಕ್ಕೆ ಯೋಗ್ಯವಲ್ಲ. ಇಂತಹ ತನ್ನ ಮೂರ್ಲೋಕದ ವೈಭವವನ್ನು ಮುಚ್ಚಿಕೊಂಡಿರುವುದನ್ನು ನೋಡಿ ದೇವತೆಗಳು ಕುತೂಹಲಗೊಂಡರು. ಇದು ಆಶ್ಚರ್ಯಕರವಾದುದು.

ವಿಗ್ರಹ—

**ಸಪಟಖಂಡಂ—** ಪಟಖಂಡೇನ ಸಹಿತಂ ಯಥಾಭವತಿ ತಥಾ ಸಪಟಖಂಡಂ ।

**ಅಕಿಂಚನವತ್—** ನ ವಿದ್ಯತೇ ಕಿಂಚನ ಯಸ್ಯ ಸಃ ಅಕಿಂಚನಃ ಅಕಿಂಚನಃ ಇವ ಅಕಿಂಚನವತ್ ।

**ಸ್ವವಿಭವಾನುಚಿತಂ—** ಸ್ವಸ್ಯ ವಿಭವಾಃ ಸ್ವವಿಭವಃ ಸ್ವವಿಭವಾನಾಂ ಅನುಚಿತಂ ಸ್ವವಿಭವಾನುಚಿತಂ ।

**ಚರಣಾದಿಕಂ—** ಚರಣಂ ಆದಿಃ ಯಸ್ಯ ತತ್ ಚರಣಾದಿಕಂ ।

**ಭುವನಭರ್ತುಃ—** ಭುವನಾನಾಂ ಭರ್ತಾ ಭುವನಭರ್ತಾ ತಸ್ಯ ಭುವನಭರ್ತುಃ ।

**ಸ್ವನಿಗೂಹನಂ—** ಸ್ವಸ್ಯ ನಿಗೂಹನಂ ಸ್ವನಿಗೂಹನಂ ।

**ಸುರಸಭಾಸು—** ಸುರಾಣಾಂ ಸಭಾಃ ಸುರಸಭಾಃ ತಾಸು ಸುರಸಭಾಸು ।

**ಕ್ರಿಯಾಪದ—** **ಆತನೋತ್**- ಆಙ್ ಉಪಸರ್ಗಪೂರ್ವಕಾತ್ ತನುವಿಸ್ತಾರೇ ಇತಿ ವಿಸ್ತಾರಾರ್ಥಕಾತ್ ತನು ಧಾತೋಃ ಲಙ್ ಪ್ರಥಮಪುರುಷೈಕವಚನೇ 'ಆತನೋತ್' ಇತಿ ರೂಪಮ್ ।

ಆತನೋತ್ ಆತನುತಾಂ ಆತನ್ವನ್, ಆತನೋಃ ಆತನುತಂ ಆತನುತ, ಆತನವಂ ಆತನುವ-ಆತನ್ವ, ಆತನುಮ-ಆತನ್ಮ ॥

★ ★ ★

**ಹಗೆ ಸಾಧಿಸಲು ಹಾವಾಗಿ ಬಂದ ಮಣಿಮಂತ**

**ಅವಿರಲೈರ್ಗರಲೋಷ್ಮಭಿರಾಕುಲೀ-**
**ಕೃತಸಮಸ್ತಜನೋ ವಿಚಚಾರ ಯಃ ।**
**ಕ್ವಚಿದಮುಂ ನಿಜಿಘಾಂಸುರಶಾಂತಿಮಾ-**
**ನುಪಸಸರ್ಪ ಸ ಸರ್ಪಮಯೋಽಸುರಃ ॥ 38 ॥**

**ಪದಚ್ಛೇದ—** ಅವಿರಲೈಃ, ಗರಲೋಷ್ಮಭಿಃ, ಆಕುಲೀಕೃತಸಮಸ್ತಜನಃ, ವಿಚಚಾರ, ಯಃ, ಕ್ವಚಿತ್, ಅಮುಂ, ನಿಜಿಘಾಂಸುಃ, ಅಶಾಂತಿಮಾನ್, ಉಪಸಸರ್ಪ, ಸಃ, ಸರ್ಪಮಯಃ, ಅಸುರಃ ।

**ಅನ್ವಯ—** ಅಶಾಂತಿಮಾನ್, ಯಃ, ಸರ್ಪಮಯೋಽಸುರಃ, ಅವಿರಲೈರ್ಗರಲೋಷ್ಮಭಿಃ, ಆಕುಲೀಕೃತಸಮಸ್ತ-ಜನಃ ವಿಚಚಾರ, ಸಃ, ಕ್ವಚಿತ್ ಅಮುಂ ನಿಜಿಘಾಂಸು (ಸನ್) ಉಪಸಸರ್ಪ ।

**ಅನ್ವಯಾರ್ಥ—**

**ಅಶಾಂತಿಮಾನ್** = ಮಂತ್ರ, ಔಷಧಾದಿಗಳಿಂದ ಶಾಂತಿ ಇಲ್ಲದ

**ಯಃ** = ಯಾವ

**ಸರ್ಪಮಯಃ** = ಸರ್ಪದ ಆಕೃತಿಯುಳ್ಳ

**ಅಸುರಃ** = ದೈತ್ಯನು

**ಅವಿರಲೈಃ** = ಬಹಳವಾದ

**ಗರಲೋಷ್ಮಭಿಃ** - ಗರಲ = ವಿಷದ, **ಊಷ್ಮಭಿಃ** = ಬೇಗೆಗಳಿಂದ

**ಆಕುಲೀಕೃತಸಮಸ್ತಜನಃ**- ಆಕುಲೀಕೃತ = ಹೆದರಿಸಲ್ಪಟ್ಟ, **ಸಮಸ್ತಜನಃ** = ಎಲ್ಲ ಜನರುಳ್ಳವನಾಗಿ

**ವಿಚಚಾರ** = ತಿರುಗಿದನೋ

**ಸಃ** = ಆ ಸರ್ಪರೂಪಿಯಾದ ದೈತ್ಯನು

**ಕ್ವಚಿತ್** = ಯಾವುದೋ ಒಂದು ದೇಶದಲ್ಲಿ, ಸ್ಥಳದಲ್ಲಿ

**ಅಮುಂ** = ಈ ವಾಸುದೇವನನ್ನು

**ನಿಜಿಘಾಂಸುಃ** = ಕೊಲ್ಲಬೇಕೆಂಬ ಇಚ್ಛೆಯಿಂದ ಕೂಡಿದವನಾಗಿ

**ಉಪಸಸರ್ಪ** = ಸಮೀಪಿಸಿದನು.

**ತಾತ್ಪರ್ಯ**— ಸರ್ಪದ ಆಕಾರವನ್ನು ಧರಿಸಿದ ಒಬ್ಬ ದೈತ್ಯನು ತನ್ನ ವಿಷದ ಜ್ವಾಲೆಯಿಂದ ಎಲ್ಲ ಜನರನ್ನೂ ಹೆದರಿಸುತ್ತಾ ಸಂಚರಿಸುತ್ತಿದ್ದನು. ಅವನ ವಿಷವು ಮಂತ್ರ-ಔಷಧ ಮೊದಲಾದವುಗಳಿಂದಲೂ ಶಾಂತವಾಗುತ್ತಿರಲಿಲ್ಲ. ಆ ದೈತ್ಯನು ಒಂದು ದಿನ ಒಂದಾನೊಂದು ಸ್ಥಳದಲ್ಲಿ ಈ ವಾಸುದೇವನನ್ನು ಕೊಲ್ಲಲು ಬಂದನು.

ವಿಗ್ರಹ—

**ಅವಿರಲೈಃ**— ನ ವಿರಲಾಃ ಅವಿರಲಾಃ ತೈ ಅವಿರಲೈಃ ।

**ಗರಲೋಷ್ಮಭಿಃ**— ಗರಲೇನ ಊಷ್ಮಾಣಿ ಗರಲೋಷ್ಮಾಣಿ, ತೈಃ ಗರಲೋಷ್ಮಭಿಃ ।

**ಆಕುಲೀಕೃತಸಮಸ್ತಜನಃ**— ಅನಾಕುಲಾಃ ಆಕುಲಾಃ ಸಂಪದ್ಯಮಾನಾಃ ಕೃತಾಃ ಆಕುಲೀಕೃತಾಃ, ಸಮಸ್ತಾಃ ಜನಾಃ ಸಮಸ್ತಜನಾಃ, ಆಕುಲೀಕೃತಾಃ ಸಮಸ್ತಜನಾಃ ಯೇನ ಸಃ ಆಕುಲೀಕೃತಸಮಸ್ತಜನಃ ।

**ನಿಜಿಘಾಂಸುಃ**— ನಿಹಂತುಂ ಇಚ್ಛುಃ ನಿಜಿಘಾಂಸುಃ ।

**ಅಶಾಂತಿಮಾನ್**— ಅಶಾಂತಿಃ ಅಸ್ಯ ಅಸ್ತೀತಿ ಅಶಾಂತಿಮಾನ್ ।

**ಕ್ರಿಯಾಪದ**— ಉಪಸಸರ್ಪ- ಉಪ ಇತ್ಯುಪಸರ್ಗಪೂರ್ವಕಾತ್ ಸೃಪ ಗತೌ ಇತ್ಯಸ್ಮಾತ್ ಲಿಟಿ ಪ್ರಥಮ-ಪುರುಷೈಕವಚನೇ 'ಉಪಸಸರ್ಪ' ಇತಿ ರೂಪಂ ।

ಉಪಸಸರ್ಪ ಉಪಸಸೃಪತುಃ ಉಪಸಸೃಪುಃ, ಉಪಸಸರ್ಪಿಥ ಉಪಸಸೃಪಥುಃ ಉಪಸಸೃಪ, ಉಪಸಸರ್ಪ ಉಪಸಸೃಪಿವ ಉಪಸಸೃಪಿಮ ॥

**ವಿಚಚಾರ**- ವಿ ಇತ್ಯುಪಸರ್ಗಪೂರ್ವಕಾತ್ ಚರ ಗತಿಭಕ್ಷಣಯೋಃ ಇತಿ ಗತಿಭಕ್ಷಣಾರ್ಥಕಾತ್ ಲಿಟಿ ಪ್ರಥಮ-ಪುರುಷೈಕವಚನೇ 'ವಿಚಚಾರ' ಇತಿ ರೂಪಮ್ ।

ವಿಚಚಾರ ವಿಚೇರತುಃ ವಿಚೇರುಃ, ವಿಚೇರಿಥ ವಿಚೇರಥುಃ ವಿಚೇರ, ವಿಚಚಾರ ವಿಚಚರ, ವಿಚೇರಿವ ವಿಚೇರಿಮ ॥

★ ★ ★

ಕಾಲುಕಚ್ಚಿ, ಕಾಲನವಶವಾದ ಮಣಿಮಂತ

**ತ್ವರಿತಮುದ್ಯತವಿಸ್ತೃತಮಸ್ತಕಃ**
**ಪ್ರತಿದದಂಶ ಯದೈನಮವಿಕ್ಷತಮ್ ।**
**ಪ್ರಭುಪದಾರುಣಚಾರುತರಾಂಗುಲೀ-**
**ವಿಹೃತಿಪಿಷ್ಟತನುಃ ಪ್ರತತಾಮ ಸಃ ॥ 39 ॥**

**ಪದಚ್ಛೇದ**— ತ್ವರಿತಂ, ಉದ್ಯತವಿಸ್ತೃತಮಸ್ತಕಃ, ಪ್ರತಿದದಂಶ, ಯದಾ, ಏನಂ, ಅವಿಕ್ಷತಂ, ಪ್ರಭುಪದಾರುಣ-ಚಾರುತರಾಂಗುಲೀವಿಹೃತಿಪಿಷ್ಟತನುಃ, ಪ್ರತತಾಮ ಸಃ ।

**ಅನ್ವಯ—** ಸಃ ತ್ವರಿತಂ ಉದ್ಯತವಿಸ್ತೃತಮಸ್ತಕಃ (ಸನ್), ಯದಾ, ಅವಿಕ್ಷತಂ ಏನಂ ಪ್ರತಿದದಂಶ, (ತದಾ), ಪ್ರಭುಪದಾರುಣಚಾರುತರಾಂಗುಲೀವಿಹೃತಿಪಿಷ್ಟತನುಃ (ಸನ್) ಪ್ರತತಾಮ ।

**ಅನ್ವಯಾರ್ಥ—**

**ಸಃ** = ಸರ್ಪಾಕಾರದ ಆ ದೈತ್ಯನು

**ತ್ವರಿತಂ** = ಶೀಘ್ರವಾಗಿ

**ಉದ್ಯತವಿಸ್ತೃತಮಸ್ತಕಃ- ಉದ್ಯತ** = ಎತ್ತಲ್ಪಟ್ಟ, **ವಿಸ್ತೃತ** = ಬಿಡಿಸಿದ, **ಮಸ್ತಕಃ (ಸನ್)** = ಹೆಡೆಯುಳ್ಳವನಾಗಿ

**ಯದಾ** = ಯಾವಾಗ

**ಅವಿಕ್ಷತಂ** = ಗಾಯವಿಲ್ಲದ

ಏನಂ = ಈ ವಾಸುದೇವನನ್ನು

**ಪ್ರತಿದದಂಶ** = ಕಚ್ಚಿದನೋ

**(ತದಾ** = ಆಗ)

**ಪ್ರಭುಪದಾರುಣಚಾರುತರಾಂಗುಲೀವಿಹೃತಿಪಿಷ್ಟತನುಃ - ಪ್ರಭು** = ಸಮರ್ಥನಾದ ವಾಸುದೇವನ, **ಪದ** = ಪಾದದ, **ಆರುಣ** = ಕೆಂಪಾದ, **ಚಾರುತರ** = ಅತ್ಯಂತ ಮನೋಹರವಾದ, **ಅಂಗುಲೀ** = ಬೆರಳಿನ, **ವಿಹೃತೀ** = ಲೀಲೆಯಿಂದ, **ಪಿಷ್ಟ** = ಪುಡಿಮಾಡಲ್ಪಟ್ಟ, **ತನುಃ (ಸನ್)** = ಶರೀರವುಳ್ಳವನಾಗಿ, **ಪ್ರತತಾಮ** = ಆಯಾಸಗೊಂಡನು.

**ತಾತ್ಪರ್ಯ—** ಸರ್ಪಾಕಾರದ ಆ ದೈತ್ಯನು ಕೋಪದಿಂದ ಹೆಡೆ ಬಿಡಿಸಿದನು. ಕೂಡಲೇ ಯಾವ ವಿಧವಾದ ಗಾಯವಿಲ್ಲದಿರುವ ಈ ವಾಸುದೇವನನ್ನು ಕಚ್ಚಿದನು. ಆಗ ಸಮರ್ಥನಾದ ವಾಸುದೇವನು ತನ್ನ ಕಾಲಿನ ಸುಂದರವಾದ ಬೆರಳಿನಿಂದ ಅನಾಯಾಸವಾಗಿ ಆ ದೈತ್ಯನನ್ನು ಅಮುಕಿದನು. ಆದರಿಂದ ಆ ದೈತ್ಯನು ಬಹಳ ಆಯಾಸಗೊಂಡನು.

**ವಿಗ್ರಹ—**

**ಉದ್ಯತವಿಸ್ತೃತಮಸ್ತಕಃ—** ವಿಸ್ತೃತಂ ಚ ತತ್ ಮಸ್ತಕಂ ಚ ವಿಸ್ತೃತಮಸ್ತಕಂ ಉದ್ಯತಂ ವಿಸ್ತೃತಮಸ್ತಕಂ ಯಸ್ಯ ಸಃ ಉದ್ಯತವಿಸ್ತೃತಮಸ್ತಕಃ ।

**ಪ್ರಭುಪದಾರುಣಚಾರುತರಾಂಗುಲೀವಿಹೃತಿಪಿಷ್ಟತನುಃ—** ಅತಿಶಯೇನ ಚಾರು ಚಾರುತರಾ, ಚಾರುತರಾ ಚ ಸಾ ಅಂಗುಲೀ ಚ ಚಾರುತರಾಂಗುಲೀ, ಅರುಣಾ ಚ ಸಾ ಚಾರುತರಾಂಗುಲೀ ಚ ಅರುಣಚಾರು-ತರಾಂಗುಲೀ, ಪ್ರಭೋಃ ಪದಂ ಪ್ರಭುಪದಂ, ಪ್ರಭುಪದಸ್ಯ ಅರುಣಚಾರುತರಾಂಗುಲೀ ಪ್ರಭು-ಪದಾರುಣಚಾರುತರಾಂಗುಲೀ, ಪ್ರಭುಪದಾರುಣಚಾರುತರಾಂಗುಲ್ಯಾಃ ವಿಹೃತಿಃ ಪ್ರಭುಪದಾ-ರುಣಚಾರುತರಾಂಗುಲೀವಿಹೃತಿಃ, ಪ್ರಭುಪದಾರುಣಚಾರುತರಾಂಗುಲೀವಿಹೃತ್ಯಾ ಪಿಷ್ಟಾ ಪ್ರಭುಪದಾ-ರುಣಚಾರುತರಾಂಗುಲೀವಿಹೃತಿಪಿಷ್ಟಾ, ಪ್ರಭುಪದಾರುಣಚಾರುತರಾಂಗುಲೀವಿಹೃತಿಪಿಷ್ಟಾ ತನುಃ ಯಸ್ಯ ಸಃ ಪ್ರಭುಪದಾರುಣಚಾರುತರಾಂಗುಲೀವಿಹೃತಿಪಿಷ್ಟತನುಃ ।

**ಕ್ರಿಯಾಪದ— ಪ್ರತತಾಮ-** ಪ್ರ ಇತ್ಯುಪಸರ್ಗಪೂರ್ವಕಾತ್ ತಮು ಗ್ಲಾನೌ (ಕಾಂಕ್ಷಾಯಾಂ) ಇತಿ ಗ್ಲಾನ್ಯರ್ಥಕಾತ್ ತಮುಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೈಕವಚನೇ ಪ್ರತತಾಮ ಇತಿ ರೂಪಮ್ ।

ಪ್ರತತಾಮ ಪ್ರತೇಮತುಃ ಪ್ರತೇಮುಃ, ಪ್ರತೇಮಿಥ ಪ್ರತೇಮಥುಃ ಪ್ರತೇಮ, ಪ್ರತತಾಮ ಪ್ರತತಮ, ಪ್ರತೇಮಿವ ಪ್ರತೇಮಿಮ ।

**ಪ್ರತಿದದಂಶ-** ಪ್ರತಿ ಇತ್ಯುಪಸರ್ಗಪೂರ್ವಕತ್ವಾತ್ ದಂಶದಶನೇ ಇತಿ ದಶನಾರ್ಥಕಾತ್ ಸಕರ್ಮಕಾತ್ ಪರಸ್ಮೈ-ಪದಿನಃ ದಂಶಧಾತೋಃ ಲಿಟಿ ಪ್ರಥಮಪುರುಷೈಕವಚನೇ ಪ್ರತಿದದಂಶ ಇತಿರೂಪಮ್ ।

ಪ್ರತಿದದಂಶ ಪ್ರತಿದದಂಶತುಃ ಪ್ರತಿದದಂಶುಃ, ಪ್ರತಿದದಂಶಿಥ (ಪ್ರತಿದದಂಷ್ಠ) ಪ್ರತಿದದಂಶಥುಃ ಪ್ರತಿದದಂಶ, ಪ್ರತಿದದಂಶ ಪ್ರತಿದದಂಶಿವ ಪ್ರತಿದದಂಶಿಮ ।

★ ★ ★

**ಮಣಿಮಂತನ ದುರಂತ - ದೇವತೆಗಳ ಸಂತಸ**

**ಗರುಡತುಂಡಮಿವ ಪ್ರತಿಪನ್ನವಾನ್**
**ದ್ವಿಜಕುಮಾರಪದಂ ಸ ಮಮಾರ ಚ ।**
**ಸಮುಚಿತಂ ಚರಿತಂ ಮಹತಾಮಿದಂ**
**ಸುಮನಸೋ ಮನಸೇಷ್ಟಮಪೂಜಯನ್ ॥ 40 ॥**

**ಪದಚ್ಛೇದ—** ಗರುಡತುಂಡಂ, ಇವ, ಪ್ರತಿಪನ್ನವಾನ್, ದ್ವಿಜಕುಮಾರಪದಂ, ಸಃ, ಮಮಾರ, ಚ, ಸಮುಚಿತಂ, ಚರಿತಂ, ಮಹತಾಂ, ಇದಂ, ಸುಮನಸಃ, ಮನಸಾ, ಇಷ್ಟಂ, ಅಪೂಜಯನ್ ।

**ಅನ್ವಯ—** ಸಃ ಗರುಡತುಂಡಮಿವ ದ್ವಿಜಕುಮಾರಪದಂ ಪ್ರತಿಪನ್ನವಾನ್ (ಸನ್) ಮಮಾರ ಚ, ಸುಮನಸಃ ಮಹತಾಂ ಸಮುಚಿತಂ ಇಷ್ಟಂ ಇದಂ ಚರಿತಂ ಮನಸಾ ಅಪೂಜಯನ್ ।

**ಅನ್ವಯಾರ್ಥ—**

**ಸಃ** = ಸರ್ಪಾಕಾರದ ಆ ದೈತ್ಯನು
**ಗರುಡತುಂಡಂ ಇವ** = ಗರುಡನ ಕೊಕ್ಕಿನಂತಿರುವ
**ದ್ವಿಜಕುಮಾರಪದಂ** = ಬ್ರಾಹ್ಮಣಬಾಲಕನಾದ ವಾಸುದೇವನ ಕಾಲನ್ನು
**ಪ್ರತಿಪನ್ನವಾನ್ (ಸನ್)** = ಹೊಂದಿದವನಾಗಿ
**ಮಮಾರ ಚ** = ಸತ್ತೂ ಹೋದನು
**ತದಾ** = ಆಗ
**ಸುಮನಸಃ** = ಮನಸ್ಸಿನಿಂದ
**ಮಹತಾಂ** = ಮಹಾತ್ಮರಿಗೆ
**ಸಮುಚಿತಂ** = ಯೋಗ್ಯವಾದ
**ಇಷ್ಟಂ** = ಸಜ್ಜನರಿಗೆ ಪ್ರಿಯವಾದ
**ಇದಂ ಚರಿತಂ** = ಈ ಕೆಲಸವನ್ನು
**ಮನಸಾ** = ಮನಸ್ಸಿನಿಂದ
**ಅಪೂಜಯನ್** = ಪೂಜಿಸಿದರು.

**ತಾತ್ಪರ್ಯ—** ಆ ಸರ್ಪಾಕಾರದ ದೈತ್ಯನು ಗರುಡನ ಬಾಯಿಗೆ ಸಿಕ್ಕಿ ಸಾಯುವಂತೆ ವಾಸುದೇವನ ಕಾಲಿನ ಒತ್ತುವಿಕೆಯಿಂದ ಸತ್ತನು. ಅದು ದೊಡ್ಡವರಿಗೆ ಸಾಧ್ಯವಾದುದೂ, ಸಜ್ಜನರಿಗೆ ಇಷ್ಟವಾದುದೂ ಆಗಿದ್ದಿತು. ಇದನ್ನು ದೇವತೆಗಳು ತಮ್ಮ ಮನಸ್ಸಿನಿಂದಲೇ ಸಂತೋಷದಿಂದ ಸನ್ಮಾನಿಸಿದರು.

**ವಿಗ್ರಹ—**

**ಗರುಡತುಂಡಂ—** ಗರುಡಸ್ಯ ತುಂಡಂ ಗರುಡತುಂಡಂ, ತತ್ ಗರುಡತುಂಡಂ ।

**ದ್ವಿಜಕುಮಾರಪದಂ—** ದ್ವಿಜಸ್ಯ ಕುಮಾರಃ ದ್ವಿಜಕುಮಾರಃ, ದ್ವಿಜಕುಮಾರಸ್ಯ ಪದಂ ದ್ವಿಜಕುಮಾರಪದಂ, ತತ್ ದ್ವಿಜಕುಮಾರಪದಂ ।

**ಕ್ರಿಯಾಪದ— ಅಪೂಜಯನ್-** ಪೂಜಪೂಜಾಯಾಂ ಇತಿ ಪೂಜನಾರ್ಥಕಾತ್ ಪೂಜಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲಙಿ ಪ್ರಥಮಪುರುಷೇ ಬಹುವಚನೇ 'ಅಪೂಜಯನ್' ಇತಿ ರೂಪಮ್ ।

ಅಪೂಜಯತ್ ಅಪೂಜಯತಾಂ ಅಪೂಜಯನ್, ಅಪೂಜಯಃ ಅಪೂಜಯತಂ ಅಪೂಜಯತ,

ಅಪೂಜಯಂ ಅಪೂಜಯಾವ ಅಪೂಜಯಾಮ ॥

**ಮಮಾರ-** ಮೃಹಿಂಸಾಯಾಂ ಇತಿ ಹಿಂಸಾರ್ಥಕಾತ್ ಮೃಜಧಾತೋಃ ಅಕರ್ಮಕಾತ್ ಕರ್ತರಿ ಆತ್ಮನೇಪದಿನಃ ಲಿಟಿ ಪ್ರಥಮಪುರುಷೈಕವಚನೇ 'ಮಮಾರ' ಇತಿ ರೂಪಮ್ ॥

ಮಮಾರ ಮಮ್ರತುಃ ಮಮ್ರುಃ, ಮಮರಿಥ – ಮಮರ್ಥ ಮಮ್ರಥುಃ ಮಮ್ರ,
ಮಮಾರ-ಮಮರ ಮಮ್ರಿವ ಮಮ್ರಿಮ ॥

★ ★ ★

ತ್ರಿಲೋಕಗುರುವಿನ ಗುರುಕುಲವಾಸ, ವಿದ್ಯಾಭ್ಯಾಸ

**ಗಿರಿಶಗುರ್ವಮರೇಂದ್ರಮುಖ್ಯೈಶ್ಚ ಯ-**
**ಚ್ಚರಣರೇಣುರಧಾರಿ ಸುರಾಧಿಪೈಃ ।**
**ಕ್ಷಿತಿಸುರಾಂಘ್ರ್ಯಭಿವಂದನಪೂರ್ವಕಂ**
**ಸ ವಿದಧೇಽಧ್ಯಯನಂ ಛಲಮಾನುಷಃ ॥ 41 ॥**

**ಪದಚ್ಛೇದ—** ಗಿರಿಶಗುರ್ವಮರೇಂದ್ರಮುಖ್ಯೈಃ, ಚ, ಯಚ್ಚರಣರೇಣುಃ, ಅಧಾರಿ, ಸುರಾಧಿಪೈಃ, ಕ್ಷಿತಿ-ಸುರಾಂಘ್ರ್ಯಭಿವಂದನಪೂರ್ವಕಂ, ಸಃ ವಿದಧೇ, ಅಧ್ಯಯನಂ, ಛಲಮಾನುಷಃ ।

**ಅನ್ವಯ—** ಗಿರಿಶಗುರ್ವಮರೇಂದ್ರಮುಖ್ಯೈಃ ಯಚ್ಚರಣರೇಣುಃ ಸುರಾಧಿಪೈಶ್ಚ ಅಧಾರಿ, ಸಃ ಛಲಮಾನುಷಃ ಕ್ಷಿತಿಸುರಾಂಘ್ರ್ಯಭಿವಂದನಪೂರ್ವಕಂ ಅಧ್ಯಯನಂ ವಿದಧೇ ।

**ಅನ್ವಯಾರ್ಥ—**

**ಗಿರಿಶಗುರ್ವಮರೇಂದ್ರಮುಖ್ಯೈಃ ಸುರಾಧಿಪೈಶ್ಚ** = ರುದ್ರದೇವರು, ಬೃಹಸ್ಪತಿ, ದೇವೇಂದ್ರ ಇವರೇ ಮೊದಲಾಗಿ ದೇವತೆಗಳ, ಒಡೆಯರಿಂದಲೂ,

**ಯಚ್ಚರಣರೇಣುಃ** = ಯಾವ ವಾಸುದೇವನ ಪಾದದ ಧೂಳಿಯು

**ಅಧಾರಿ** = ಧರಿಸಲ್ಪಟ್ಟಿತ್ತೋ

**ಸಃ ಛಲಮಾನುಷಃ** = ಆ, ಮನುಷ್ಯನಾದ ವಾಸುದೇವನು

**ಕ್ಷಿತಿಸುರಾಂಘ್ರ್ಯಭಿವಂದನಪೂರ್ವಕಂ** = ಬ್ರಾಹ್ಮಣರ ಕಾಲುಗಳಿಗೆ ನಮಸ್ಕಾರವೇ ಮೊದಲಾಗುಳ್ಳದ್ದಾದ ನೆಪದಿಂದ

**ಅಧ್ಯಯನಂ** = ವೇದ ಮುಂತಾದ ಶಾಸ್ತ್ರಗಳ ಅಧ್ಯಯನವನ್ನು
**ವಿದಧೇ** = ಮಾಡಿದನು.

**ತಾತ್ಪರ್ಯ—** ಶಂಕರ, ಬೃಹಸ್ಪತಿ, ಇಂದ್ರನೇ ಮೊದಲಾದ ದೇವತೋತ್ತಮರು ಯಾವ ಮುಖ್ಯಪ್ರಾಣನ ಪಾದ-ಧೂಳಿಯನ್ನು ಭಕ್ತಿಶ್ರದ್ಧೆಗಳಿಂದ ಶಿರಸ್ಸಿನಲ್ಲಿ ಧರಿಸುವರೋ ಅಂತಹ ಮುಖ್ಯಪ್ರಾಣನ ಸಾಕ್ಷಾತ್ ಅವತಾರರಾದ, ಈಗ ನೆಪಮಾತ್ರದಿಂದ ಮನುಷ್ಯನಾದ ಈ ವಾಸುದೇವನು ಬ್ರಾಹ್ಮಣಶ್ರೇಷ್ಠರಾದ ಗುರುಗಳಿಗೆ ನಮಸ್ಕಾರ ಮಾಡಿ ವೇದಶಾಸ್ತ್ರಗಳ ಅಧ್ಯಯನವನ್ನು ಪ್ರಾರಂಭಿಸಿದನು.

**ವಿಗ್ರಹ—**

**ಗಿರಿಶಗುರ್ವಮರೇಂದ್ರಮುಖ್ಯೈಃ—** ಗಿರಿಶಶ್ಚ ಗುರುಶ್ಚ ಅಮರೇಂದ್ರಶ್ಚ ಗಿರಿಶಗುರ್ವಮರೇಂದ್ರಾಃ, ಗಿರಿಶ-ಗುರ್ವಮರೇಂದ್ರಾಃ ಮುಖಾನಿ ಯೇಷಾಂ ತೇ ಗಿರಿಶಗುರ್ವಮರೇಂದ್ರಮುಖಾಃ, ತೈಃ ಗಿರಿಶ-ಗುರ್ವಮರೇಂದ್ರಮುಖ್ಯೈಃ ।

**ಯಚ್ಚರಣರೇಣುಃ—** ಯಸ್ಯ ಚರಣಯೋಃ ರೇಣುಃ ಯಚ್ಚರಣರೇಣುಃ ।

**ಸುರಾಧಿಪೈಃ—** ಸುರಾಣಾಂ ಅಧಿಪಾಃ ಸುರಾಧಿಪಾಃ, ತೈಃ ಸುರಾಧಿಪೈಃ ।

**ಕ್ಷಿತಿಸುರಾಂಘ್ರ್ಯಭಿವಂದನಪೂರ್ವಕಂ—** ಕ್ಷಿತ್ಯಾಂ ಸುರಃ ಕ್ಷಿತಿಸುರಃ, ಕ್ಷಿತಿಸುರಸ್ಯ ಅಂಘ್ರಿಃ ಕ್ಷಿಸುರಾಂಘ್ರೀ, ಕ್ಷಿತಿಸುರಾಂಘ್ರ್ಯೋಃ ಅಭಿವಂದನಂ ಕ್ಷಿತಿಸುರಾಂಘ್ರ್ಯಭಿನಂದನಂ, ಕ್ಷಿತಿಸುರಾಂಘ್ರ್ಯಭಿವಂದನಂ ಪೂರ್ವಂ ಯಥಾ ಭವತಿ ತಥಾ ಕ್ಷಿತಿಸುರಾಂಘ್ರ್ಯಭಿವಾದನಪೂರ್ವಕಂ, ತತ್ ಕ್ಷಿತಿಸುರಾಂಘ್ರ್ಯಭಿವಂದನ-ಪೂರ್ವಕಂ ।

**ಛಲಮಾನುಷಃ—** ಛಲೇನ ಮಾನುಷಃ ಛಲಮಾನುಷಃ ।

**ಕ್ರಿಯಾಪದ—** ಅಧಾರಿ- ಧೃಞ್ ಧಾರಣೇ ಇತಿ ಧಾರಣಾರ್ಥಕಾತ್ ಧೃಞ್ ಧಾತೋಃ ಕರ್ಮಣಿ ಲುಙ್ ಅಧಾರಿ ಇತಿ ರೂಪಂ ।

ಅಧಾರಿ ಅಧಾರಿಷಾತಾಂ ಅಧಾರಿಷತ, ಅಧಾರಿಷ್ಠಾಃ ಅಧಾರಿಷಾಥಾಂ ಅಧಾರಿಷಧ್ವಂ , ಅಧಾರಿಷಿ ಅಧಾರಿಷ್ವಹಿ ಅಧಾರಿಷ್ಮಹಿ ॥

ವಿದಧೇ- ವಿ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತಿ ಧಾರಣಪೋಷಣಾರ್ಥಕಾತ್ ಲಿಟಿ ಪ್ರಥಮಪುರುಷೈಕವಚನೇ 'ವಿದಧೇ' ಇತಿ ರೂಪಂ ।

ವಿದಧೇ ವಿದಧಾತೇ ವಿದಧಿರೇ, ವಿದಧಿಷೇ ವಿದಧಾಥೇ ವಿದಧಿಧ್ವೇ ವಿದಧೇ ವಿದಧಿವಹೇ ವಿದಧಿಮಹೇ ॥

★ ★ ★

ಸರ್ವಜ್ಞಾಚಾರ್ಯರ ಲೋಕವಿಡಂಬನೆ

**ಕರತಲೇ ಖಲು ಕಂದುಕವತ್ ಸದಾ**
**ಸಕಲಯಾ ಕಲಯಾ ಸಹವಿದ್ಯಯಾ ।**
**ಅರಿಧರೇಣ ಸಮಂ ಸ್ಫುರಿತಂ ಗುರೋ-**
**ರ್ಮನಸಿ ತಸ್ಯ ವಿಡಂಬಯತೋ ಜನಾನ್ ॥ 42 ॥**

**ಪದಚ್ಛೇದ—** ಕರತಲೇ, ಖಲು, ಕಂದುಕವತ್, ಸದಾ, ಸಕಲಯಾ, ಕಲಯಾ, ಸಹವಿದ್ಯಯಾ, ಅರಿಧರೇಣ, ಸಮಂ, ಸ್ಫುರಿತಂ ಗುರೋಃ, ಮನಸಿ ತಸ್ಯ ವಿಡಂಬಯತಃ, ಜನಾನ್ ।

**ಅನ್ವಯ—** ಜನಾನ್ ವಿಡಂಬಯತಃ, ಗುರೋಃ ತಸ್ಯ ಮನಸಿ, ಸಕಲಯಾ ಸಹವಿದ್ಯಯಾ ಕಲಯಾ ಕರತಲೇ, ಕಂದುಕವತ್ ಅರಿಧರೇಣ ಸಮಂ ಸದಾ ಸ್ಫುರಿತಂ ಖಲು ।

**ಅನ್ವಯಾರ್ಥ—**

**ಜನಾನ್** = ಪ್ರಾಕೃತಜನರುಗಳನ್ನು

**ವಿಡಂಬಯತಃ** = ಅನುಕರಣ ಮಾಡುತ್ತಿರುವ

**ಗುರೋಃ** = ಸಕಲಲೋಕಗಳ ಗುರುವಾದ

**ತಸ್ಯ** = ಆ ವಾಸುದೇವನ

**ಮನಸಿ** = ಹೃದಯದಲ್ಲಿ

**ಸಕಲಯಾ** = ಸಂಪೂರ್ಣವಾಗಿರುವ ಎಲ್ಲಾ

**ಸಹವಿದ್ಯಯಾ** = ವಿದ್ಯೆಗಳೊಡನೆ

**ಕಲಯಾ** = ಇತರ ಕಲೆಗಳಿಂದ

**ಕರತಲೇ** = ಅಂಗೈಯಲ್ಲಿ

**ಕಂದುಕವತ್** = ಚೆಂಡಿನಂತೆ

**ಅರಿಧರೇಣ ಸಮಂ** = ಚಕ್ರಧಾರಿಯಾದ ನಾರಾಯಣನೊಡನೆ

**ಸದಾ** = ಯಾವಾಗಲೂ

**ಸ್ಫುರಿತಂ ಖಲು** = ಪ್ರಕಾಶಿಸುವಿಕೆಯಾಗಿದೆಯಷ್ಟೇ !

**ತಾತ್ಪರ್ಯ—** ಮಾನವನು ಸಕಲ ವಿದ್ಯೆಗಳನ್ನು ಸಂಗೀತ ಮೊದಲಾದ ಕಲೆಗಳನ್ನು ಸ್ವಾಧೀನಪಡಿಸಿಕೊಳ್ಳು-ವುದಕ್ಕೂ, ಅವುಗಳಿಂದ ಪ್ರತಿಪಾದ್ಯನಾದ ಭಗವಂತನನ್ನು ಅರಿಯುವುದಕ್ಕೂ ಅಭ್ಯಾಸ ಮಾಡಬೇಕಾಗುವುದು. ಆದರೆ ಸಮಸ್ತ ಜಗತ್ತಿಗೆ ಗುರುವಾದ ಆ ವಾಸುದೇವನು ಮೊದಲೇ ಅವುಗಳನ್ನು ಅಂಗೈಯಲ್ಲಿರುವ ಚೆಂಡಿನಂತೆ ಪೂರ್ತಿಯಾಗಿ ತಿಳಿದುಕೊಂಡಿದ್ದನು. ಆದರೂ ಸಾಮಾನ್ಯ ಜನರಂತೆ ನಟಿಸುತ್ತಾ ಆ ವಿದ್ಯೆಗಳನ್ನು ಅಭ್ಯಾಸ ಮಾಡುತ್ತಿದ್ದನು.

ವಿಗ್ರಹ—

**ಕರತಲೇ—** ಕರಸ್ಯ ತಲಂ ಕರತಲಂ, ತಸ್ಮಿನ್ ಕರತಲೇ ।

**ಕಂದುಕವತ್—** ಕಂದುಕೇನ ತುಲ್ಯಂ ಕಂದುಕವತ್ ।

**ಸಹವಿದ್ಯಯಾ—** ವಿದ್ಯಯಾ ಸಹ ವರ್ತತೇ ಇತಿ ಸಹವಿದ್ಯಾ, ತಯಾ ಸಹವಿದ್ಯಯಾ ।

**ವಿಡಂಬಯತಃ—** ವಿಡಂಬಯತಿ ಇತಿ ವಿಡಂಬಯನ್, ತಸ್ಯ ವಿಡಂಬಯತಃ ।

★ ★ ★

### ಗೆಳೆಯರ ಸಂತೋಷಕ್ಕೆ ವಾಸುದೇವನ ವಿಹಾರ

**ಅನಧಿಕೈರಧಿಕೈಶ್ಚ ವಯಸ್ಯಥೋ**
**ಬಹುಭಿರಧ್ಯಯನೋಪರಮಾಂತರೇ ।**
**ಅನಿಕಟೇ ವಟುಭಿಃ ಪಟುಭಿರ್ಗುರೋಃ**
**ಸ ವಿಜಹಾರ ಸುಖೀ ಸಖಿಭಿಃ ಸಮಮ್ ॥ 43 ॥**

**ಪದಚ್ಛೇದ—** ಅನಧಿಕೈಃ, ಅಧಿಕೈಃ, ಚ, ವಯಸಿ, ಅಥೋ, ಬಹುಭಿಃ, ಅಧ್ಯಯನೋಪರಮಾಂತರೇ, ಅನಿಕಟೇ, ವಟುಭಿಃ, ಪಟುಭಿಃ, ಗುರೋಃ, ಸಃ, ವಿಜಹಾರ, ಸುಖೀ, ಸಖಿಭಿಃ, ಸಮಂ ।

**ಅನ್ವಯ—** ಅಥೋ, ಸುಖೀ, ಸಃ ಅಧ್ಯಯನೋಪರಮಾಂತರೇ, ವಯಸಿ ಅನಧಿಕೈಃ ಚ ಬಹುಭಿಃ ಪಟುಭಿಃ ಸಖಿಭಿಃ ವಟುಭಿಃ ಸಮಂ ಗುರೋಃ ಅನಿಕಟೇ ವಿಜಹಾರ ।

**ಅನ್ವಯಾರ್ಥ—**

**ಅಥೋ** = ವೇದಾಧ್ಯಯನವನ್ನು ಮಾಡುತ್ತಿರುವ ಕಾಲದಲ್ಲಿ
**ಸುಖೀ** = ಸುಖವುಳ್ಳ
**ಸಃ** = ಆ ವಾಸುದೇವನು
**ಅಧ್ಯಯನೋಪರಮಾಂತರೇ-** **ಅಧ್ಯಯನ** = ಓದುವುದರ **ಉಪರಮ** = ಮುಗಿಯುವಿಕೆಯ **ಅಂತರೇ** = ಮಧ್ಯದಲ್ಲಿ
**ವಯಸಿ** = ವಯಸ್ಸಿನಲ್ಲಿ
**ಅನಧಿಕೈಃ** = ಹೆಚ್ಚಾಗದಿರುವ (ಸಮಾನರಾದ)
**ಚ** = ಮತ್ತು
**ಅಧಿಕೈಃ** = ತನ್ನ ವಯಸ್ಸಿಗಿಂತ ಹೆಚ್ಚಿನವರಾದ
**ಬಹುಭಿಃ** = ಬಹಳ ಮಂದಿ (ಹೆಚ್ಚು ಸಂಖ್ಯೆಯುಳ್ಳವರಾದ)
**ಪಟುಭಿಃ** = ಸಮರ್ಥರಾದ
**ಸಖಿಭಿಃ** = ಸ್ನೇಹಿತರಾದ
**ವಟುಭಿಃ ಸಮಂ** = ಬ್ರಹ್ಮಚಾರಿಗಳೊಡನೆ
**ಗುರೋಃ** = ಉಪಾಧ್ಯಾಯರ
**ಅನಿಕಟೇ** = ದೂರದಲ್ಲಿ
**ವಿಜಹಾರ** = ವಿಹರಿಸಿದನು (ಆಟವಾಡಿದನು).

**ತಾತ್ಪರ್ಯ—** ತರುವಾಯ ಸುಖಿಯಾದ ವಾಸುದೇವನು ಓದುವಿಕೆಯು ಮುಗಿಯುವಷ್ಟರಲ್ಲೇ ತನಗೆ ಸಮಾನ ವಯಸ್ಸಿನವರು, ಹೆಚ್ಚಿನ ವಯಸ್ಸಿನವರೂ, ಸ್ನೇಹಿತರೂ ಆದ ಬಹಳಮಂದಿ ಬುದ್ಧಿಶಾಲಿ ಬಾಲಕರೊಡನೆ ಗುರುಗಳಿರುವ ಸ್ಥಳಕ್ಕಿಂತ ದೂರದಲ್ಲಿ ಆಟವಾಡಿದನು.

**ವಿಗ್ರಹ—**

**ಅನಧಿಕೈಃ—** ನ ಅಧಿಕಾಃ, ಅನಧಿಕಾಃ, ತೈಃ ಅನಧಿಕೈಃ ।

**ಅಧ್ಯಯನೋಪರಮಾಂತರೇ—** ಅಧ್ಯಯನಾನಾಂ ಉಪರಮಾಃ ಅಧ್ಯಯನೋಪರಮಾಃ ಅಧ್ಯಯನೋ-ಪರಮಾನಾಂ ಅಂತರಂ, ಅಧ್ಯಯನೋಪರಮಾಂತಂ, ತಸ್ಮಿನ್ ಅಧ್ಯಯನೋಪರಮಾಂತರೇ ।

**ಅನಿಕಟೇ—** ನ ನಿಕಟಂ ಅನಿಕಟಂ, ತಸ್ಮಿನ್ ಅನಿಕಟೇ ।

**ಸುಖೀ—** ಸುಖಂ ಅಸ್ಯ ಅಸ್ತಿ ಇತಿ ಸುಖೀ ।

**ಕ್ರಿಯಾಪದ—** ವಿಜಹಾರ- ವಿ ಇತ್ಯುಪಸರ್ಗಪೂರ್ವಕಾತ್ ಹೃಞ್ ಹರಣೇ ಇತ್ಯಸ್ಮಾತ್ ಹರಣಾರ್ಥಕಾತ್ ಪರಸ್ಮೈಪದಿನಃ ಲಿಟಿ ಪ್ರಥಮೈಕವಚನೇ 'ವಿಜಹಾರ' ಇತಿ ರೂಪಂ ।

ವಿಜಹಾರ ವಿಜಹ್ರತುಃ ವಿಜಹ್ರುಃ, ವಿಜಹರ್ಥ ವಿಜಹ್ರಥುಃ ವಿಜಹ್ರ, ವಿಜಹಾರ - ವಿಜಹರ ವಿಜಹ್ರಿವ ವಿಜಹ್ರಿಮ ॥

★ ★ ★

ವಾಯುವೇಗದ ವಾಸುದೇವ

**ಪದಮುದೀರ್ಯ ಜವೇನ ಯಿಯಾಸಿತಂ**
**ದ್ರುತಸಖೇಷ್ವಭವತ್ ಸ ಪುರಃಸರಃ ।**
**ಅಯಮಯತ್ನತಯೇತಿ ನ ವಿಸ್ಮಯೋ**
**ನನು ಮನೋಜವಜಿತ್ಪವನೋಽಸತೌ(ಹ್ಯಸೌ) ॥ 44 ॥**

**ಪದಚ್ಛೇದ—** ಪದಂ, ಉದೀರ್ಯ, ಜವೇನ ಯಿಯಾಸಿತಂ, ದ್ರುತಸಖೇಷು, ಅಭವತ್, ಸಃ ಪುರಃಸರಃ ಅಯಂ, ಅಯತ್ನತಯಾ, ಇತಿ, ನ, ವಿಸ್ಮಯಃ, ನನು, ಮನೋಜವಜಿತ್, ಪವನಃ, ಅಸತೌ (ಹಿ, ಅಸೌ) ।

**ಅನ್ವಯ—** ಸೋಽಯಂ ಪದಂ ಉದೀರ್ಯ, ಜವೇನ ಯಿಯಾಸಿತಂ ದ್ರುತಸಖೇಷು ಅಯತ್ನತಯಾ ಪರಸ್ಸರೋಽಭವತ್, ಇತಿ ವಿಸ್ಮಯೋ ನ, ಅಸತೌ (ಅಸೌ) ಮನೋಜವಜಿತ್ ಪವನೋ ನನು ।

**ಅನ್ವಯಾರ್ಥ—**

**ಸೋಽಯಂ** = ಆ ಯಾವ ಈ ವಾಸುದೇವನು

**ಪದಂ** = ಕಾಲನ್ನು, **ಉದೀರ್ಯ** = ಇಟ್ಟು

**ಜವೇನ** = ವೇಗದಿಂದ

**ಯಿಯಾಸಿತಂ** = ಹೋಗಲು ಅಪೇಕ್ಷಿಸಲ್ಪಟ್ಟ

**ದ್ರುತಸಖೇಷು** = ಓಡಿದ ಸ್ನೇಹಿತರಲ್ಲಿ

**ಅಯತ್ನತಯಾ** = ಪ್ರಯತ್ನವಿಲ್ಲದೆಯೇ

**ಪುರಸ್ಸರಃ** = ಮುಂದೆ ಹೋಗುವವನು

**ಅಭವತ್** = ಆದನು

**ಇತಿ** = ಹೀಗೆಂದು

**ವಿಸ್ಮಯಃ** = ಆಶ್ಚರ್ಯವು

**ನ** = ಇಲ್ಲ

**ಅಸತೌ (ಅಸೌ)** = ಇವನು,

**ಮನೋಜವಜಿತ್- ಮನೋ** = ಮನಸ್ಸಿನ, **ಜವ** = ವೇಗವನ್ನು, **ಜಿತ್** = ಗೆದ್ದ

**ಪವನಃ ನನು** = ವಾಯುವಷ್ಟೇ.

**ತಾತ್ಪರ್ಯ—** ಈ ವಾಸುದೇವನು ಓಡುವುದರಲ್ಲಿ ಸ್ಪರ್ಧೆಯನ್ನು ಏರ್ಪಡಿಸಿದನು. ಅದರಲ್ಲಿ ಓಡಿ ಮುಟ್ಟುವ ಒಂದು ಜಾಗವನ್ನು ನಿಶ್ಚಯಿಸಿದನು. ಸ್ಪರ್ಧಿಸಲು ಬಂದ ಸ್ನೇಹಿತರೊಡನೆ ಓಡಿದನು. ಅವರೆಲ್ಲರಿಗಿಂತಲೂ ಮೊದಲು ನಿರ್ದಿಷ್ಟ ಸ್ಥಳವನ್ನು ತಾನು ಮುಟ್ಟಿ ಗೆದ್ದು ಮುಂದಾಳಾದನು. ಮನಸ್ಸಿನ ವೇಗವನ್ನು ಮೀರಿಸಿದ ವೇಗವುಳ್ಳ ವಾಯುವಿನ ಅವತಾರನಾದ ಈ ವಾಸುದೇವನ ವಿಷಯದಲ್ಲಿ ಇದು ಆಶ್ಚರ್ಯವಲ್ಲ.

**ವಿಗ್ರಹ—**

**ಯಿಯಾಸಿತಂ—** ಯಾತುಂ ಇಷ್ಟಂ ಯಿಯಾಸಿತಂ ತತ್ ಯಿಯಾಸಿತಂ ।

**ದ್ರುತಸಖೇಷು—** ದ್ರುತಾಶ್ಚ ತೇ ಸಖಾಯಶ್ಚ ದ್ರುತಸಖಾಃ ತೇಷು ದ್ರುತಸಖೇಷು । ''ರಾಜಾಹಸ್ಸಖಿಭ್ಯಃ ಟಚ್'' ಈ ಸೂತ್ರದಿಂದ ಸಮಾಸಾಂತ್ಯದಲ್ಲಿ ಟಚ್ ಪ್ರತ್ಯಯವು ಬಂದು ಸಖಿ ಶಬ್ದವು ಅಕಾರಾಂತ-ವಾಗಿದೆ.

**ಪುರಸರಃ—** ಪುರಃ ಸರತಿ ಇತಿ ಪುರಸ್ಸರಃ ।

**ಅಯತ್ನಃ—** ನ ಯತ್ನಃ ಅಯತ್ನಃ ।

**ಅಯತ್ನತಯಾ—** ಅಯತ್ನಸ್ಯ ಭಾವಃ ಅಯತ್ನತಾ, ತಯಾ ಅಯತ್ನತಯಾ ।

**ಮನೋಜವಜಿತ್—** ಮನಸಃ ಜವಃ ಮನೋಜವಃ, ಮನೋಜವಂ ಜಯತಿ ಇತಿ ಮನೋಜವಜಿತ್ ।

★ ★ ★

ವಾಸುದೇವನ ಸಹಜ ಲೀಲೆಗಳು

**ಪ್ಲವನತೇಜಸಿ ಹಂತ ನ ಕೇವಲಂ**
**ವಿಜಿತವಾನ್ ಸ ತದಾ ಸಕಲಾನ್ ಜನಾನ್ ।**
**ಪ್ರಭುನಿದೇಶಕರೋ ಹನುಮತ್ತನೌ**
**ನನು ಜಿಗಾಯ ಸ ವಾಲಿಸುತಾದಿಕಾನ್ ॥ 45 ॥**

**ಪದಚ್ಛೇದ—** ಪ್ಲವನತೇಜಸಿ, ಹಂತ, ನ, ಕೇವಲಂ, ವಿಜಿತವಾನ್, ಸಃ ತದಾ ಸಕಲಾನ್, ಜನಾನ್ ಪ್ರಭುನಿದೇಶಕರಃ, ಹನುಮತ್ತನೌ, ನನು, ಜಿಗಾಯ, ಸಃ ವಾಲಿಸುತಾದಿಕಾನ್ ।

**ಅನ್ವಯ—** ಸಃ ಪ್ಲವನತೇಜಸಿ ಸಕಲಾನ್ ಜನಾನ್ ಕೇವಲಂ ತದಾ ಹಂತ ವಿಜಿತವಾನ್ ನ, ಹನುಮತ್ತನೌ ಪ್ರಭುನಿದೇಶಕರಃ ಸಃ ವಾಲಿಸುತಾದಿಕಾನ್ ಜಿಗಾಯ ನನು ।

**ಅನ್ವಯಾರ್ಥ—**

**ಸಃ** = ಆ ವಾಸುದೇವನು

**ಪ್ಲವನತೇಜಸಿ** = ಎತ್ತರಕ್ಕೆ ಹಾರುವ ಬಲದಲ್ಲಿ

**ಸಕಲಾನ್** = ಎಲ್ಲಾ

**ಜನಾನ್** = ಜನರನ್ನೂ

**ಕೇವಲಂ** = ಮುಖ್ಯವಾಗಿ

**ತದಾ** = ಆಗ

**ಹಂತ** = ಸಂತೋಷದಿಂದ

**ವಿಜಿತವಾನ್** = ಗೆದ್ದವನು

**ನ** = ಅಲ್ಲ

**ಹನುಮತ್ತನೌ** = ಆನಂಜನೇಯನ ಅವತಾರದಲ್ಲಿ

**ಪ್ರಭುನಿದೇಶಕರಃ- ಪ್ರಭು** = ಸ್ವಾಮಿಯಾದ ಶ್ರೀ ರಾಮನ, ನಿದೇಶ = ಅಪ್ಪಣೆಯನ್ನು, ಕರಃ = ಮಾಡಿದ

**ಸಃ** = ಆ ವಾಸುದೇವನು

**ವಾಲಿಸುತಾದಿಕಾನ್** = ವಾಲಿಯ ಮಗನಾದ ಅಂಗದನೇ ಮೊದಲಾದವರನ್ನು

**ಜಿಗಾಯ ನನು** = ಗೆದ್ದಿರುವನಷ್ಟೇ.

**ತಾತ್ಪರ್ಯ—** ಆ ವಾಸುದೇವನು ಹಾರುವ ಸ್ಪರ್ಧೆಯಲ್ಲಿ ಸಂತೋಷದಿಂದ ಎಲ್ಲರನ್ನು ಗೆದ್ದು ಬಲಶಾಲಿಯೆನಿಸಿ-ಕೊಂಡನು. ಹಿಂದೆ ರಾಮಾವತಾರದಲ್ಲಿ ಶ್ರೀ ರಾಮನ ಅಪ್ಪಣೆಯಂತೆ ಸೀತೆಯನ್ನು ಹುಡುಕಿ ಅವಳಿಗೆ ಮುದ್ರೆ-ಯುಂಗುರವನ್ನು ಕೊಡಲೋಸುಗ ನೂರುಗಾವುದ ವಿಸ್ತಾರವಾದ ದಕ್ಷಿಣಸಮುದ್ರವನ್ನು ದಾಟಿ ಲಂಕೆಯನ್ನು ಸೇರಿ ವಾಲಿಯ ಮಗನಾದ ಅಂಗದ ಮೊದಲಾದವರನ್ನು ಗೆದ್ದ ಇವನಿಗೆ ಇದು ಆಶ್ಚರ್ಯವಲ್ಲ.

ವಿಗ್ರಹ—

**ಪ್ಲವನತೇಜಸಿ—** ಪ್ಲವನಸ್ಯ ತೇಜಃ ಪ್ಲವನತೇಜಃ, ತಸ್ಮಿನ್ ಪ್ಲವನತೇಜಸಿ ।

**ವಿಜಿತವಾನ್—** ವಿಶೇಷೇಣ ಜಿತವಾನ್ ವಿಜಿತವಾನ್ ।

**ಪ್ರಭುನಿದೇಶಕರಃ—** ಪ್ರಭೋಃ ನಿದೇಶಃ ಪ್ರಭುನಿದೇಶಃ ಪ್ರಭುನಿದೇಶಂ ಕರೋತಿ ಇತಿ ಪ್ರಭುನಿದೇಶಕರಃ ।

**ಹನುಮತ್ತನೌ—** ಹನುಮತಃ ತನುಃ ಹನುಮತ್ತನುಃ, ತಸ್ಯಾಂ ಹನುಮತ್ತನೌ ।

**ವಾಲಿಸುತಾದಿಕಾನ್—** ವಾಲಿನಃ ಸುತಃ, ವಾಲಿಸುತಃ, ವಾಲಿಸುತಃ ಆದಿಃ ಯೇಷಾಂ ತೇ ವಾಲಿಸುತಾದಿಕಾಃ, ತಾನ್ ವಾಲಿಸುತಾದಿಕಾನ್ ।

**ಕ್ರಿಯಾಪದ—** ಜಗಾಮ- ಜೀ ಜಯೇ ಇತಿ ಜಯಾರ್ಥಕಾತ್ ಜಿ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೈಕವಚನೇ 'ಜಿಗಾಯ' ಇತಿ ರೂಪಮ್ ।

ಜಿಗಾಯ ಜಿಗ್ಯತುಃ ಜಿಗ್ಯುಃ, ಜಿಗಯಿಥ ಜಿಗ್ಯಥುಃ ಜಿಗ್ಯ, ಜಿಗಾಯ-ಜಿಗಯ , ಜಿಗ್ಯಿವ ಜಿಗ್ಯಿಮ ॥

★ ★ ★

ಜಲವಿಹಾರದಲ್ಲೂ ವಾಸುದೇವನಿಗೇ ಜಯ

**ಜಲವಿಹಾರಪರಾಜಯಿಭಿಃ ಸ್ವೃಧಾ**
**ಸಖಿಭಿರೀರಿತವಾರಿಪರಿಶ್ರಿತಮ್ ।**
**ವದನಮಾಕುಲಲೋಚನಮಾದಧೇ**
**ಸ್ಮಿತಮಮುಷ್ಯ ಹಿ ಕಂಚನ ವಿಭ್ರಮಮ್ ॥ 46 ॥**

**ಪದಚ್ಛೇದ—** ಜಲವಿಹಾರಪರಾಜಯಿಭಿಃ, ಸ್ಪೃಧಾ, ಸಖಿಭಿಃ, ಈರಿತವಾರಿಪರಿಶ್ರಿತಂ, ವದನಂ, ಆಕುಲಲೋಚನಂ, ಆದಧೇ ಸ್ಮಿತಂ, ಅಮುಷ್ಯ, ಹಿ, ಕಂಚನ, ವಿಭ್ರಮಂ ।

**ಅನ್ವಯ—** ಜಲವಿಹಾರಪರಾಜಯಿಭಿಃ ಸಖಿಭಿಃ ಸ್ಪೃಧಾ ಈರಿತವಾರಿಪರಿಶ್ರಿತಂ ಆತುಲಲೋಚನಂ ಸ್ಮಿತಂ ಅಮುಷ್ಯ ವದನಂ ಕಂಚನ ವಿಭ್ರಮಂ ಆದಧೇ ಹಿ ।

**ಅನ್ವಯಾರ್ಥ—**

**ಜಲವಿಹಾರಪರಾಜಯಿಭಿಃ** = ಜಲಕ್ರೀಡೆಯಲ್ಲಿ ಸೋತವರಾದ

**ಸಖಿಭಿಃ** = ಸ್ನೇಹಿತರುಗಳಿಂದ

**ಸ್ಪೃಧಾ** = ಸ್ಪರ್ಧೆಯಿಂದ

**ಈರಿತವಾರಿಪರಿಶ್ರಿತಂ** = ಚೆಲ್ಲಲ್ಪಟ್ಟ ನೀರಿನಿಂದ ಏರ್ಪಟ್ಟ ಪರಿಶ್ರಮವುಳ್ಳ

**ಆಕುಲಲೋಚನಂ** = ವ್ಯಾಕುಲವಾದ ಕಣ್ಣುಗಳುಳ್ಳ

**ಸ್ಮಿತಂ** = ಮುಗುಳ್ನಗೆಯಿಂದ ಕೂಡಿದ

**ಅಮುಷ್ಯ** = ಈ ವಾಸುದೇವನ

**ವದನಂ** = ಮುಖವು

**ಕಂಚನ** = ಯಾವುದೋ ಒಂದು

**ವಿಭ್ರಯಂ** = ವಿಲಾಸವನ್ನು

**ಆದಧೇ ಹಿ** = ಧರಿಸಿತಷ್ಟೇ.

**ತಾತ್ಪರ್ಯ—** ಈ ವಾಸುದೇವನು ಸ್ನೇಹಿತರೊಡನೆ ಜಲಕ್ರೀಡೆಯಾಡಿ ಅವರನ್ನು ಗೆದ್ದನು. ಆಗ ಅವರು ಸ್ಪರ್ಧೆಯಿಂದ ಇವನ ಮುಖಕ್ಕೆ ಬೊಗಸೆಯಿಂದ ನೀರನ್ನು ಎರಚಿದರು. ಅದು ಇವನ ಕಣ್ಣುಗಳಿಗೆ ಬಿದ್ದು ತೊಂದರೆಯಾದರೂ ಮುಖವು ಆಗಲೂ ವಿಲಕ್ಷಣವಾದ ಕಾಂತಿಯನ್ನು ಬೀರಿತು.

**ವಿಗ್ರಹ—**

**ಜಲವಿಹಾರಪರಾಜಯಿನಃ—** ಜಲೇ ವಿಹಾರಃ ಜಲವಿಹಾರಃ, ಜಲವಿಹಾರೇ ಪರಾಜಯಃ ಜಲವಿಹಾರಪರಾಜಯಃ, ಜಲವಿಹಾರಪರಾಜಯಃ ಏಷಾಂ ಅಸ್ತಿ ಇತಿ ಜಲವಿಹಾರಪರಾಜಯಿನಃ, ತೈಃ ಜಲವಿಹಾರಪರಾಜಯಿಭಿಃ ।

**ಈರಿತವಾರಿಪರಿಶ್ರಿತಂ—** ಈರಿತಂ ಚ ತತ್ ವಾರಿ ಚ ಈರಿತವಾರಿ, ಈರಿತವಾರಿಣಾ ಪರಿಶ್ರಿತಂ ಈರಿತವಾರಿಪರಿಶ್ರಿತಂ ।

**ಆಕುಲಲೋಚನಂ—** ಆಕುಲೇ ಲೋಚನೇ ಯಸ್ಯ ತತ್ ಆಕುಲಲೋಚನಂ ।

**ಕ್ರಿಯಾಪದ—** **ಆದಧೇ**- ಆಜ್ ಪೂರ್ವಕಾತ್ ಡು ಧಾಞ್ ಧಾರಣಪೋಷಣಯೋ ಇತಿ ಧಾರಣಪೋಷಣಾರ್ಥಕಾತ್ ಲಿಟಿ ಪ್ರಥಮಪುರುಷೈಕವಚನೇ 'ಆದಧೇ' ಇತಿ ರೂಪಂ ।

ಆದಧೇ ಆದಧಾತೇ ಆದಧಿರೇ, ದಧಿಷೇ ದಧಾತೇ ದಧಿಧ್ವೇ, ದಧೇ ದಧಿವಹೇ ದಧಿಮಹೇ ॥

★ ★ ★

ದ್ವಂದ್ವಯುದ್ಧದಲ್ಲೂ ಅಸಮ ಈ ವಾಸುದೇವ

**ಸ ಶನಕೈರ್ಬಲಿನೋಽಯುಗಪದ್ಗತಾನ್**
**ಪ್ರವಿಹೃತೇಷು ಸಖೀನ್ನಿರಪಾತಯತ್ ।**
**ಆಶನಕೈರ್ಯುಗಪತ್ಪ್ರಕೃತಾಹವಾನ್**
**ಸಹಸಿತೋ ದ್ವಿಜಸೂನುರಯತ್ನವಾನ್ ॥ 47 ॥**

**ಪದಚ್ಛೇದ—** ಸಃ, ಶನಕೈಃ ಬಲಿನಃ, ಅಯುಗಪತ್, ಗತಾನ್, ಪ್ರವಿಹೃತೇಷು, ಸಖೀನ್, ನಿರಪಾತಯತ್, ಆಶನಕೈಃ ಯುಗಪತ್, ಪ್ರಕೃತಾಹವಾನ್, ಸಹಸಿತಃ, ದ್ವಿಜಸೂನುಃ, ಅಯತ್ನವಾನ್ ।

**ಅನ್ವಯ—** ಸಹಸಿತಃ, ಸಃ ದ್ವಿಜಸೂನುಃ ಪ್ರವಿಹೃತೇಷು, ಅಯುಗಪತ್ ಗತಾನ್, ಪ್ರಕೃತಾಹವಾನ್ ಬಲಿನಃ ಸಖೀನ್, ಶನಕೈಃ ನಿರಪಾತಯತ್, ಯುಗಪತ್ (ಗತಾನ್) ಪ್ರಕೃತಾಹವಾನ್ ಸಖೀನ್ ಆಶನಕೈಃ ಅಯತ್ನವಾನ್ ನಿರಪಾತಯತ್ ।

**ಅನ್ವಯಾರ್ಥ—**

**ಸಹಸಿತಃ** = ಮುಗುಳ್ನಗೆಯಿಂದ ಕೂಡಿದ
**ಸಃ ದ್ವಿಜಸೂನುಃ** = ಬ್ರಾಹ್ಮಣರ ಮಗನಾದ ಆ ವಾಸುದೇವನು
**ಪ್ರವಿಹೃತೇಷು** = ಆಟಗಳಲ್ಲಿ
**ಅಯುಗಪತ್** = ಬೇರೆಯಾಗಿ
**ಗತಾನ್** = ತನ್ನನ್ನು ಬೀಳಿಸಲು ಸಮೀಪಿಸಿದ
**ಪ್ರಕೃತಾಹವಾನ್** = ಪ್ರಕೃತ - ಚೆನ್ನಾಗಿ ಮಾಡಲ್ಪಟ್ಟ (ಆರಂಭಿಸಿದ)
**ಆಹವಾನ್** = ಆಟದ ಜಗಳವುಳ್ಳ
**ಬಲಿನಃ** = ಬಲಿಷ್ಠರಾದ
**ಸಖೀನ್** = ಸ್ನೇಹಿತರನ್ನು
**ಶನಕೈಃ** = ಮೆಲ್ಲಗೆ
**ನಿರಪಾತಯತ್** = ಕೆಡವಿದನು
**ಯುಗಪತ್** = ಒಂದೇ ಸಲ
**ಗತಾನ್** = ಸಮೀಪಿಸಿದ
**ಪ್ರಕೃತಾಹವಾನ್** = ಆಟಕ್ಕಾಗಿ ಜಗಳವಾಡಿದ (ಆರಂಭಿಸಿದ ಜಗಳವುಳ್ಳ)
**ಸಖೀನ್** = ಸ್ನೇಹಿತರನ್ನು
**ಆಶನಕೈಃ** = ಬೇಗನೆ
**ಅಯತ್ನವಾನ್** = ಪ್ರಯತ್ನವಿಲ್ಲದವನಾಗಿ
**ನಿರಪಾತಯತ್** = ಕೆಡವಿದನು.

**ತಾತ್ಪರ್ಯ—** ಆ ವಾಸುದೇವನು ತಮಾಷೆಯಾಗಿ ಒಬ್ಬೊಬ್ಬರಾಗಿ ಜಗಳವಾಡಲು ಬಂದ ಬಲಶಾಲಿಗಳಾದ ಸ್ನೇಹಿತರನ್ನು ಮೆಲ್ಲನೆ ನೆಲದಲ್ಲಿ ಉರುಳಿಸಿದನು. ಅನಂತರ ಒಟ್ಟಿಗೆ ಜಗಳವಾಡಲು ಬಂದ ಆ ಸ್ನೇಹಿತರನ್ನು ಅನಾಯಾಸವಾಗಿ ನೆಲದ ಮೇಲೆ ಬೇಗನೆ ಕೆಡವಿದನು.

**ವಿಗ್ರಹ—**

**ಬಲಿನಃ—** ಬಲಂ ಏಷಾಂ ಅಸ್ತಿ ಇತಿ ಬಲಿನಃ, ತಾನ್ ಬಲಿನಃ ।

**ಪ್ರಕೃತಾಹವಾನ್—** ಪ್ರಕೃತಃ ಆಹವಃ ಯೈಃ ತೇ ಪ್ರಕೃತಾಹವಾಃ, ತಾನ್ ಪ್ರಕೃತಾಹವಾನ್ ।

**ಸಹಸಿತಃ—** ಹಸಿತೇನ ಸಹ ವರ್ತತೇ ಇತಿ ಸಹಸಿತಃ ।

**ದ್ವಿಜಸೂನುಃ—** ದ್ವಿಜಸ್ಯ ಸೂನುಃ ದ್ವಿಜಸೂನುಃ ।

**ಅಯತ್ನವಾನ್—** ಯತ್ನಃ ಅಸ್ಯ ಅಸ್ತೀತಿ, ಯತ್ನವಾನ್ ನ ಯತ್ನವಾನ್, ಅಯತ್ನವಾನ್ ।

**ಕ್ರಿಯಾಪದ—** ನಿರಪಾತಯತ್- ಪಿತಲೃಗತೌ ಇತಿ ಗಮನಾರ್ಥಕಾತ್ ಣಿಚಿ ಲಙ್ ಪ್ರಥಮಪುರುಷೈಕವಚನೇ 'ನಿರಪಾತಯತ್' ಇತಿ ರೂಪಂ ।

ನಿರಪಾತಯತ್ ನಿರಪಾತಯತಾಂ ನಿರಪಾತಯನ್, ನಿರಪಾತಯಃ ನಿರಪಾತಯತಂ ನಿರಪಾತಯತ,
ನಿರಪಾತಯಂ ನಿರಪಾತಯಾವ ನಿರಪಾತಯಾಮ ॥

★ ★ ★

ಎಲ್ಲರನ್ನೂ ಜಯಿಸಿದ ಭೀಮವೈಭವ

**ಗ್ರಹಣನಿಗ್ರಹಣೇ ಗ್ರಹಣೇ ದೃಢೇ**
**ಗುರುಭರೋದ್ಧರಣಾದಿವಿಧೌ ಪಟೌ ।**
**ಇಹ ವಿಭಾವುಪಚಾರಧಿಯಾ ನೃಣಾ-**
**ಮೃತಮಯಂ ನನು ಭೀಮ ಇತೀರಿತಮ್ ॥ 48 ॥**

**ಪದಚ್ಛೇದ—** ಗ್ರಹಣನಿಗ್ರಹಣೇ, ಗ್ರಹಣೇ, ದೃಢೇ, ಗುರುಭರೋದ್ಧರಣಾದಿವಿಧೌ, ಪಟೌ, ಇಹ, ವಿಭೌ, ಉಪಚಾರಧಿಯಾ, ನೃಣಾಂ, ಋತಂ, ಅಯಂ, ನನು, ಭೀಮಃ, ಇತಿ, ಈರಿತಂ ।

**ಅನ್ವಯ—** ಗ್ರಹಣನಿಗ್ರಹಣೇ ಗ್ರಹಣೇ ದೃಢೇ ಗುರುಭರೋದ್ಧರಣಾದಿವಿಧೌ ಪಟೌ ವಿಭೌ ಇಹ ಉಪಚಾರಧಿಯಾ ಅಯಂ ಭೀಮ ಇತಿ ನೃಣಾಮೀರಿತಂ ಋತಂ ನನು ।

**ಅನ್ವಯಾರ್ಥ—**

**ಗ್ರಹಣನಿಗ್ರಹಣೇ** - ಗ್ರಹಣ = ಇನ್ನೊಬ್ಬರ ಹಿಡಿತದ, ನಿಗ್ರಹಣೆ = ಬಿಡಿಸಿಕೊಳ್ಳುವಿಕೆಯಲ್ಲಿ

**ದೃಢೇ** = ಗಟ್ಟಿಯಾಗಿ

**ಗ್ರಹಣೇ** = ತಾನು (ಇನ್ನೊಬ್ಬರನ್ನೂ) ಹಿಡಿದುಕೊಳ್ಳುವುದರಲ್ಲಿ

**ಗುರುಭರೋದ್ಧಾರಣಾದಿವಿಧೌ**- ಗುರು = ಹೆಚ್ಚಾದ, ಭರ = ಭಾರದ, ಉದ್ಧರಣ = ಎತ್ತುವುದೇ, ಆದಿ = ಮೊದಲಾದ, ವಿಧೌ = ಕೆಲಸದಲ್ಲಿ

**ಪಟೌ** = ಸಮರ್ಥನಾದ

**ವಿಭೌ** = ಶಕ್ತನಾದ

**ಇಹ** = ಈ ವಾಸುದೇವನಲ್ಲಿ

**ಉಪಚಾರಧಿಯಾ** = ಉಪಚಾರಬುದ್ಧಿಯಿಂದ (ಲಾಕ್ಷಣಿಕ ರೀತಿಯಿಂದ)

**ಅಯಂ** = ಇವನು

**ಭೀಮ ಇತಿ** = ಭೀಮನೆಂಬ

**ನೃಣಾಂ** = ಮನುಷ್ಯರ

**ಈರಿತಂ** = ಮಾತು

**ಋತಂ ನನು** = ಸತ್ಯವಾದುದಷ್ಟೇ !

**ತಾತ್ಪರ್ಯ—** ಈ ವಾಸುದೇವನು ಇನ್ನೊಬ್ಬರು ಹಿಡಿದುಕೊಂಡಾಗ ಬಿಡಿಸಿಕೊಳ್ಳುವುದರಲ್ಲಿಯೂ, ತಾನು ಮತ್ತೊಬ್ಬರನ್ನು ಗಟ್ಟಿಯಾಗಿ ಹಿಡಿದುಕೊಳ್ಳುವುದರಲ್ಲಿಯೂ, ಹೆಚ್ಚು ಭಾರವಾದ ವಸ್ತುವನ್ನು ಎತ್ತುವುದರಲ್ಲಿಯೂ ಅತ್ಯಂತ ಸಮರ್ಥನಾಗಿದ್ದನು. ಆದ್ದರಿಂದ ಇವನು ಮುಖ್ಯಪ್ರಾಣದೇವರ ಅವತಾರನಾಗಿರುವನೆಂದರಿಯದ ಜನರು ಇವನನ್ನು ನೋಡಿ ಇವನು ಭೀಮನು ಎಂದು ಹೇಳಿದರು. ಈ ಮಾತು ''ಹುಡುಗನು ಸಿಂಹದಂತೆ ಇದ್ದಾನೆ'' ಎಂಬ ಸಾದೃಶ್ಯದ ಮಾತಿನಂತೆ ಲಾಕ್ಷಣಿಕವಾಗಿತ್ತು. ಆದರೂ ಹಿಂದೆ ಭೀಮನಾಗಿದ್ದ ಇವನಲ್ಲಿ ಅದು ಸತ್ಯವೇ ಆಯಿತು.

**ವಿಗ್ರಹ—**

**ಗ್ರಹಣ ನಿಗ್ರಹಣೇ—** ಗ್ರಹಣಸ್ಯ ನಿಗ್ರಹಣಂ ಗ್ರಹಣನಿಗ್ರಹಣಂ, ತಸ್ಮಿನ್ ಗ್ರಹಣನಿಗ್ರಹಣೇ ।

**ಗುರುಭರೋದ್ಧರಣಾದಿವಿಧೌ—** .ಗುರುಶ್ಚಾಸೌ ಭರಶ್ಚ ಗುರುಭರಃ, ಗುರುಭರಸ್ಯ ಉದ್ಧರಣಂ ಗುರುಭರೋದ್ಧರಣಂ, ಗುರುಭರೋದ್ಧರಣಂ ಆದಿ ಯಸ್ಯ ಸಃ ಗುರುಭರೋದ್ಧರಣಾದಿಃ ಗುರುಭರೋದ್ಧರಣಾದಿಶ್ಚಾಸೌ ವಿಧಿಶ್ಚ ಗುರುಭರೋದ್ಧರಣಾದಿವಿಧಿಃ ತಸ್ಮಿನ್ ಗುರುಭರೋದ್ಧರಣಾದಿವಿಧೌ ।

**ಉಪಚಾರಧಿಯಾ—** ಉಪಚಾರೇಣ ಧೀಃ ಉಪಚಾರಧೀಃ, ತಯಾ ಉಪಚಾರಧಿಯಾ ॥

★ ★ ★

ಜಗದ್ಗುರುವಿನಲ್ಲಿ ಗುರುವಿನ ಅತೃಪ್ತಿ

**ವಿಹರತೀತಿ ಪಠತ್ಯಪಿ ನ ಸ್ಫುಟಂ**
**ಸ್ವಗೃಹಗಾಮಿನಿ ಚಾದ್ರುತಮಾಯತಿ ।**
**ಪರಿತುತೋಷ ನ ತತ್ರ ಜಗದ್ಗುರೌ**
**ಸ ಕಿಲ ಪೂಗವನಾನ್ವಯಜೋ ದ್ವಿಜಃ ॥ 49 ॥**

**ಪದಚ್ಛೇದ—** ವಿಹರತಿ, ಇತಿ, ಪಠತಿ, ಅಪಿ, ನ, ಸ್ಫುಟಂ, ಸ್ವಗೃಹಗಾಮಿನಿ, ಚ, ಅದ್ರುತಂ ಆಯತಿ, ಪರಿತುತೋಷ, ನ, ತತ್ರ, ಜಗದ್ಗುರೌ, ಸಃ, ಕಿಲ, ಪೂಗವನಾನ್ವಯಜಃ, ದ್ವಿಜಃ ।

**ಅನ್ವಯ—** ಇತಿ ವಿಹರತಿ ಸ್ಫುಟಂ ನ ಪಠತಿ ಅಪಿ ಸ್ವಗೃಹಗಾಮಿನಿ, ಚ ಅದ್ರುತಂ ಆಯತಿ ಜಗದ್ಗುರೌ ತತ್ರ ಪೂಗವನಾನ್ವಯಜಃ ಸಃ ದ್ವಿಜಃ ನ ಪರಿತುತೋಷ ಕಿಲ ।

**ಅನ್ವಯಾರ್ಥ—**

**ಇತಿ ವಿಹರತಿ** = ಹೀಗೆ ಆಟವಾಡುತ್ತಿರುವಾಗ

**ಸ್ಫುಟಂ** = ಚೆನ್ನಾಗಿ

**ನ ಪಠತಿ ಅಪಿ** = ಓದದೇ ಇರುವವನಾದರೂ

**ಸ್ವಗೃಹಗಾಮಿನಿ** = ತನ್ನ ಮನೆಗೆ ಹೋಗುತ್ತಿರುವ

**ಚ** = ಮತ್ತು

**ಅದ್ರುತಂ** = ಮೆಲ್ಲಗೆ

**ಆಯತಿ** = ಬರುತ್ತಿರುವ

**ಜಗದ್ಗುರೌ** = ಪ್ರಪಂಚದ ಗುರುವಾದ

**ತತ್ರ** = ಆ ವಾಸುದೇವನಲ್ಲಿ

**ಪೂಗವನಾನ್ವಯಜಃ** = ತೋಟಂತಿಲ್ಲಾಯ ವಂಶದಲ್ಲಿ ಹುಟ್ಟಿರುವ

**ಸಃ ದ್ವಿಜಃ** = ಬ್ರಾಹ್ಮಣೋಪಾಧ್ಯಾಯರು

**ನ ಪರಿತುತೋಷ ಕಿಲ** = ಪರಿತುಷ್ಟರಾಗಲಿಲ್ಲವಷ್ಟೇ.

**ತಾತ್ಪರ್ಯ—** ಜಗದ್ಗುರುವಾದ ಆ ವಾಸುದೇವನು ತಾನು ಎಲ್ಲವನ್ನೂ ಬಲ್ಲವನಾದ್ದರಿಂದ ಈ ರೀತಿ ಆಡುತ್ತ ಚೆನ್ನಾಗಿ ವೇದಪಾಠಗಳನ್ನು ಓದುತ್ತಿರಲಿಲ್ಲ. ಯಾವಾಗಲೂ ಊಟ ಮೊದಲಾದವುಗಳಿಗಾಗಿ ಮನೆಗೆ ಹೋಗುತ್ತಿದ್ದನು. ಬೇಗನೆ ಪಾಠವನ್ನು ಓದಲು ಬರುತ್ತಿರಲಿಲ್ಲ. ಇದನ್ನು ಕಂಡು ಅವನ ಮಹಾತ್ಮೆಯನ್ನರಿಯದ ಉಪಾಧ್ಯಾಯರಾದ ತೋಟಂ-ತಿಲ್ಲಾಯ ವಂಶದ ಬ್ರಾಹ್ಮಣರು ಅಸಮಾಧಾನಗೊಂಡರು.

**ವಿಗ್ರಹ—**

**ವಿಹರತಿ—** ವಿಹರತಿ ಇತಿ ವಿಹರನ್, ತಸ್ಮಿನ್ ವಿಹರತಿ ।

**ಪಠತಿ—** ಪಠತಿ ಇತಿ ಪಠನ್, ತಸ್ಮಿನ್ ಪಠತಿ ।

**ಸ್ವಗೃಹಗಾಮಿನಿ—** ಸ್ವಸ್ಯ ಗೃಹಂ ಸ್ವಗೃಹಂ, ಸ್ವಗೃಹಂ ಗಚ್ಛತಿ ಇತಿ ಸ್ವಗೃಹಗಾಮೀ, ತಸ್ಮಿನ್ ಸ್ವಗೃಹಗಾಮಿನಿ ।

**ಆಯತಿ—** ಆಯಾತಿ ಇತಿ ಆಯನ್, ತಸ್ಮಿನ್ ಆಯತಿ ।

**ಜಗದ್ಗುರೌ—** ಜಗತಾಂ ಗುರುಃ ಜಗದ್ಗುರುಃ, ತಸ್ಮಿನ್ ಜಗದ್ಗುರೌ ।

**ಪೂಗವನಾನ್ವಯಜಃ—** ಪೂಗಸ್ಯ ವನಂ ಪೂಗವನಂ ಪೂಗವನಂ ಇತಿ ಅನ್ವಯಃ ಪೂಗವನಾನ್ವಯಃ ಪೂಗವನಾನ್ವಯೇ ಜಾತಃ ಪೂಗವನಾನ್ವಯಜಃ ।

**ದ್ವಿಜಃ—** ದ್ವಾಭ್ಯಾಂ ಜಾಯತೇ ಇತಿ ದ್ವಿಜಃ ।

**ಕ್ರಿಯಾಪದ— ಪರಿತುತೋಷ-** ಪರಿ ಇತ್ಯುಪಸರ್ಗಪೂರ್ವಕಾತ್ ತುಷ ತುಷ್ಟೌ ಇತಿ ಪ್ರೀತ್ಯರ್ಥಕಾತ್ ತುಷಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೈಕವಚನೇ ಪರಿತುತೋಷ ಇತಿ ರೂಪಂ ।

ಪರಿತುತೋಷ ಪರಿತುತುಷತುಃ ಪರಿತುತುಷುಃ, ಪರಿತುತೋಷಿಥ ಪರಿತುತುಷಥುಃ ಪರಿತುತುಷ,
ಪರಿತುತೋಷ ಪರಿತುತುಷಿವ ಪರಿತುತುಷಿಮ ॥

★ ★ ★

### ಶಿಷ್ಯನ ಬಗ್ಗೆ ಕೋಪಗೊಂಡ ತೋಟಂತಿಲ್ಲಾಯರು

**ಅಥ ಕದಾಚನ ಸೋಽಧ್ಯಯನಾಂತರೇ**
**ತಮವದತ್ಕುಪಿತೋಽನ್ಯಮನಸ್ವಿನಮ್ ।**
**ಪಠಸಿ ನೋ ಶಠ ತೇ ಸಖಿಭಿಃ ಸಮಂ**
**ಕಿಮಿತಿ ನಿತ್ಯಮುದಾಸಿತಧೀರಿತಿ ॥ 50 ॥**

**ಪದಚ್ಛೇದ—** ಅಥ ಕದಾಚನ ಸಃ ಅಧ್ಯಯನಾಂತರೇ, ತಂ, ಅವದತ್, ಕುಪಿತಃ ಅನ್ಯಮನಸ್ವಿನಂ, ಪಠಸಿ, ನೋ, ಶಠ ತೇ, ಸಖಿಭಿಃ, ಸಮಂ, ಕಿಂ, ಇತಿ, ನಿತ್ಯಂ, ಉದಾಸಿತಧೀಃ ಇತಿ ।

**ಅನ್ವಯ—** ಅಥ ಕದಾಚನ, ಕುಪಿತಃ ಸಃ ಅಧ್ಯಯನಾಂತರೇ, ಅನ್ಯಮನಸ್ವಿನಂ ತಂ, ''ಶಠ ನಿತ್ಯಂ ಉದಾಸಿತಧೀಃ ತೇ ಸಖಿಭಿಃ ಸಮಂ ಕಿಮಿತಿ ನೋ ಪಠಸಿ?'' ಇತ್ಯವದತ್ ।

**ಅನ್ವಯಾರ್ಥ—**

**ಅಥ** = ಅನಂತರ
**ಕದಾಚನ** = ಒಂದಾನೊಂದು ಸಮಯದಲ್ಲಿ
**ಕುಪಿತಃ** = ಕೋಪಗೊಂಡ
**ಸಃ** = ಆ ಉಪಾಧ್ಯಾಯರು
**ಅಧ್ಯಯನಾಂತರೇ** = ಓದುವುದರ ಮಧ್ಯದಲ್ಲಿ
**ಅನ್ಯಮನಸ್ವಿನಂ** = ಬೇರೆ ವಿಷಯದಲ್ಲಿ ಮನಸ್ಸುಳ್ಳ
**ತಂ** = ಆ ವಾಸುದೇವನನ್ನು ಕುರಿತು
**ಶಠ** = ಮೂರ್ಖ ಅಥವಾ ಉತ್ತಮ ಗುಣಶಾಲಿಯೇ!
**ನಿತ್ಯಂ** = ಯಾವಾಗಲೂ
**ಉದಾಸಿತಧೀಃ** = ಉದಾಸೀನವಾದ (ಬುದ್ಧಿಯುಳ್ಳವನಾಗಿ)
**ತೇ** = ನಿನ್ನ
**ಸಖಿಭಿಃ ಸಮಂ** = ಸ್ನೇಹಿತರೊಡನೆ ಕೂಡಿಕೊಂಡು
**ಕಿಮಿತಿ** = ಏತಕ್ಕೆ
**ನೋ ಪಠಸಿ** = ಓದುವುದಿಲ್ಲ?
**ಇತಿ** = ಹೀಗೆಂದು
**ಅವದತ್** = ಹೇಳಿದರು.

**ತಾತ್ಪರ್ಯ—** ಬಳಿಕ ಒಂದುದಿನ ವಾಸುದೇವನು ಪಾಠವನ್ನು ಓದುತ್ತಿರುವಾಗ ಅದರಲ್ಲಿ ಮನಸ್ಸನ್ನಿಡದೆ ಬೇರೆ ಏನನ್ನು ಆಲೋಚಿಸುತ್ತಿದ್ದನು. ಆಗ ಉಪಾಧ್ಯಾಯರಿಗೆ ಕೋಪಬಂತು. ಅವರು ''ಎಲೈ ಉತ್ತಮಗುಣಶಾಲಿಯೇ (ಮೂರ್ಖ)! ನೀನು ಯಾವಾಗಲೂ ಪಾಠದಲ್ಲಿ ಉದಾಸೀನನಾಗಿರುವೆ. ನಿನ್ನ ಸ್ನೇಹಿತರಂತೆ ನೀನು ಏಕೆ ಓದುತ್ತಿಲ್ಲ?' ಎಂದು ಗದರಿಸಿದರು.

**ವಿಗ್ರಹ—**

**ಅಧ್ಯಯನಾಂತರೇ—** ಅಧ್ಯಯನಸ್ಯ ಅಂತರಂ ಅಧ್ಯಯನಾಂತರಂ, ತಸ್ಮಿನ್ ಅಧ್ಯಯನಾಂತರೇ ।

**ಅನ್ಯಮನಸ್ವಿನಂ—** ಅನ್ಯಸ್ಮಿನ್ ಮನಃ ಅನ್ಯಮನಃ ಅನ್ಯಮನಃ ಅಸ್ಯ ಅಸ್ತೀತಿ ಅನ್ಯಮನಸ್ವೀ ತಂ ಅನ್ಯ-ಮನಸ್ವಿನಂ।

**ಉದಾಸಿತಧೀಃ—** ಉದಾಸಿತಾ ಧೀಃ ಯಸ್ಯ ಸಃ ಉದಾಸಿತಧೀಃ ।

**ಕ್ರಿಯಾಪದ—** **ಪಠಸಿ**- ಪಠ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಪಠಧಾತೋಃ ಲಟಿ ಮಧ್ಯಮ-ಪುರುಷೈಕವಚನೇ 'ಪಠಸಿ' ಇತಿ ರೂಪಂ ।

ಪಠತಿ ಪಠತಃ ಪಠಂತಿ, ಪಠಸಿ ಪಠಥಃ ಪಠಥ, ಪಠಾಮಿ ಪಠಾವಃ ಪಠಾಮಃ ॥

**ಅವದತ್**- ವದ ವ್ಯಕ್ತಾಯಾಂ ವಾಚಿ ಇತ್ಯಸ್ಮಾತ್ ವ್ಯಕ್ತವಾಗರ್ಥಕಾತ್ ವದಧಾತೋಃ ಲಙ್ ಪ್ರಥಮಪುರುಷೈಕ-ವಚನೇ 'ಅವದತ್' ಇತಿ ರೂಪಂ ।

ಅವದತ್ ಅವದತಾಂ ಅವದನ್, ಅವದಃ ಅವದತಂ ಅವದತ, ಅವದಂ ಅವದಾವ ಅವದಾಮ ॥

★ ★ ★

### ಕಂಗೆಡಿಸಿದ ಶಿಷ್ಯನ ಉತ್ತರ

**ಗುಣನಿಕಾ ಚರಣಾದಿಕಗೋಚರಾ**
**ನ ಮಮ ಹೃದ್ದಯಿತೇತ್ಯುದಿತೇಽಮುನಾ ।**
**ವದ ವಿಶಾರದವಾದ ಯಥೇಪ್ಸಿತಂ**
**ತ್ವಮುಪರೀತ್ಯವದದ್ಧರಣೀಸುರಃ ॥ 51 ॥**

**ಪದಚ್ಛೇದ—** ಗುಣನಿಕಾ, ಚರಣಾದಿಕಗೋಚರಾ, ನ, ಮಮ, ಹೃದ್ದಯಿತಾ, ಇತಿ, ಉದಿತೇ, ಅಮುನಾ, ವದ, ವಿಶಾರದವಾದ, ಯಥೇಪ್ಸಿತಂ, ತ್ವಂ ಉಪರಿ, ಇತಿ, ಅವದತ್, ಧರಣೀಸುರಃ ।

**ಅನ್ವಯ—** ''ಚರಣಾದಿಕಗೋಚರಾ ಗುಣನಿಕಾ ಮಮ ಹೃದ್ದಯಿತಾ ನ'' ಇತ್ಯುಮುನಾ ಉದಿತೇ ಧರಣೀಸುರಃ (ಹೇ) ''ವಿಶಾರದವಾದ ತ್ವಂ, ಉಪರಿ ಯಥೇಽಪ್ಸಿತಂ ವದ'' ಇತ್ಯವದತ್ ।

**ಅನ್ವಯಾರ್ಥ—**

**ಚರಣಾದಿಕಗೋಚರಾ** = ಪಾದ ಮುಂತಾದವುಗಳ ವಿಷಯಕವಾದ
**ಗುಣನಿಕಾ** = ಆವೃತ್ತಿಯು (ಪುನಃ ಪುನಃ ಹೇಳುವುದು)
**ಮಮ** = ನನಗೆ
**ನ ಹೃದ್ದಯಿತಾ** = ಹೃದಯಕ್ಕೆ ಪ್ರಿಯವಲ್ಲ
**ಇತಿ** = ಹೀಗೆಂದು
**ಅಮುನಾ** = ಈ ವಾಸುದೇವನಿಂದ
**ಉದಿತೇ** = ಹೇಳಲ್ಪಡಲು
**ಧರಣೀಸುರಃ** = ಬ್ರಾಹ್ಮಣರು (ಉಪಾಧ್ಯಾಯರು)
**ವಿಶಾರದವಾದ** = ವಿದ್ವಾಂಸರಂತೆ ಮಾತನಾಡುವ ವಾಸುದೇವನೇ
**ತ್ವಂ** = ನೀನು
**ಉಪರಿ** = ಈಗ ಹೇಳಿಕೊಡುತ್ತಿರುವುದಕ್ಕಿಂತ ಮೇಲೆ
**ಯಥೇಪ್ಸಿತಂ** = ಇಷ್ಟ ಬಂದುದನ್ನು
**ವದ** = ಹೇಳು
**ಇತಿ** = ಹೀಗೆಂದು
**ಅವದತ್** = ಹೇಳಿದರು.

**ತಾತ್ಪರ್ಯ—** ವಾಸುದೇವನು ''ಗುರುಗಳೇ! ವೇದಮಂತ್ರವನ್ನು ಹೇಳಿಕೊಡುವಾಗ ಸಂಪ್ರದಾಯದಂತೆ ಮೊದಲು ಋಕ್ಕಿನ ಪಾದಭಾಗ, ಅನಂತರ ಅರ್ಧಭಾಗ, ತರುವಾಯ ಪೂರ್ತಿಯನ್ನು ಹೇಳಿಕೊಟ್ಟು, ಅದನ್ನು ನಾನು ಆವೃತ್ತಿ ಮಾಡುತ್ತಿರುವುದು ನನಗೆ ಸರಿ ತೋರುವುದಿಲ್ಲ. ಆದ್ದರಿಂದ ನಾನು ಉದಾಸೀನನಾಗಿರುತ್ತೇನೆ'' ಎಂದನು. ಆಗ ಗುರುಗಳು ''ನೀನು ಎಲ್ಲವನ್ನೂ ತಿಳಿದ ವಿದ್ವಾಂಸನಂತೆ ಮಾತನಾಡುತ್ತಿರುವಿ. ಹಾಗಾದರೆ ಈಗ ನಾನು ಹೇಳಿಕೊಡುತ್ತಿರುವ ಮಂತ್ರಭಾಗಕ್ಕಿಂತ ನಿನಗೆ ಇಷ್ಟಬಂದ ಮುಂದಿನ ಯಾವುದಾದರೂ ಮಂತ್ರಭಾಗವನ್ನು ಹೇಳು, ನೋಡೋಣ'' ಎಂದರು.

ವಿಗ್ರಹ—

**ಚರಣಾದಿಕಗೋಚರಾ—** ಚರಣಃ ಆದಿಃ ಯಸ್ಯ ಸ! ಚರಣಾದಿಕಃ, ಚರಣಾದಿಕಃ ಗೋಚರಃ ಯಸ್ಯಾಃ ಸಾ ಚರಣಾದಿಕಗೋಚರಾಃ ।

**ಹೃದ್ದಯಿತಾ—** ಹೃದಃ ದಯಿತಾ ಹೃದ್ದಯಿತಾ ।

**ವಿಶಾರದವಾದ—** ವಿಶಾರದವತ್ ವದತಿ ಇತಿ ವಿಶಾರದವಾದಃ ತಸ್ಯ ಸಂಬುದ್ಧಿಃ ವಿಶಾರದವಾದ ।

**ಧರಣೀಸುರಃ—** ಧರಣ್ಯಾಂ ಸುರಃ, ಧರಣೀಸುರಃ ।

**ಯಥೇಪ್ಸಿತಂ—** ಈಪ್ಸಿತಂ ಅನತಿಕ್ರಮ್ಯ ಯಥೇಪ್ಸಿತಂ ।

**ಕ್ರಿಯಾಪದ— ವದ-** ವದಿ ಅಭಿವಾದನಸ್ತುತ್ಯೋಃ ಇತಿ ಅಭಿವಾದನಸ್ತುತ್ಯರ್ಥಕಾತ್ ವದಧಾತೋಃ ಲೋಟಿ ಪ್ರಥಮಪುರುಷೈಕವಚನೇ 'ವದ' ಇತಿ ರೂಪಂ ।

ವದತು ವದತಾತ್, ವದತಾಂ ವದಂತು, ವದ ವದತಾತ್, ವದತಂ ವದತ, ವದಾನಿ ವದಾವ ವದಾಮ ॥

**ಅವದತ್-** ವದಿ ಅಭಿವಾದನಸ್ತುತ್ಯೋಃ ಅಭಿವಾದನಸ್ತುತ್ಯರ್ಥಕಾತ್ ವದಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಅವದತ್' ಇತಿ ರೂಪಂ ।

ಅವದತ್ ಅವದತಾಂ ಅವದನ್, ಅವದಃ ಅವದತಂ ಅವದತ, ಅವದಂ ಅವದಾವ ಅವದಾಮ ॥

★ ★ ★

**ಸಕಲ ಲಕ್ಷಣಗಳಿಂದ ವೇದೋಚ್ಚಾರಣೆ**

**ಸಕಲಲಕ್ಷಣಶಿಕ್ಷಣಮೂಲಭೂಃ**
**ಶ್ರುತಿಸಮಾಮನನಂ ಸ್ಖಲನೋಜ್ಝಿತಮ್ ।**
**ನ ಖಲು ಕೇವಲಮಸ್ಯ ಗುರೋರ್ವ್ಯಥಾತ್**
**ಸುಮನಸಾಮಪಿ ತತ್ರ ಕುತೂಹಲಮ್ ॥ 52 ॥**

**ಪದಚ್ಛೇದ—** ಸಕಲಲಕ್ಷಣಶಿಕ್ಷಣಮೂಲಭೂಃ, ಶ್ರುತಿಸಮಾಮನನಂ, ಸ್ಖಲನೋಜ್ಝಿತಂ, ನ, ಖಲು, ಕೇವಲಂ, ಅಸ್ಯ, ಗುರೋಃ ವ್ಯಥಾತ್, ಸುಮನಸಾಂ, ಅಪಿ ತತ್ರ ಕುತೂಹಲಂ ।

**ಅನ್ವಯ—** ಸಕಲಲಕ್ಷಣಶಿಕ್ಷಣಮೂಲಭೂಃ, ಸ್ಖಲನೋಜ್ಝಿತಂ, ಅಸ್ಯ ಶ್ರುತಿಸಮಾಮನನಂ, ಗುರೋಃ ಕೇವಲಂ ಕುತೂಹಲಂ ನ ವ್ಯಥಾತ್, ಸುಮನಸಾಂ, ಅಪಿ ತತ್ರ, ಕುತೂಹಲಂ ವ್ಯಥಾತ್ ಖಲು ।

**ಅನ್ವಯಾರ್ಥ—**

**ಸಕಲಲಕ್ಷಣಶಿಕ್ಷಣಮೂಲಭೂಃ-** ಸಕಲ = ಎಲ್ಲಾ, ಲಕ್ಷಣ = ವೇದೋಚ್ಚಾರಣ ಲಕ್ಷಣಗಳ, ಶಿಕ್ಷಣ = ಕಲಿಯುವಿಕೆಗೆ, **ಮೂಲಭೂಃ** = ಉತ್ಪತ್ತಿಸ್ಥಾನವಾದ (ಮೂಲಸ್ಥಾನವಾದ)

**ಸ್ಖಲನೋಜ್ಝಿತಂ-ಸ್ಖಲಿನಃ** = ತಪ್ಪುವಿಕೆಯಿಂದ, **ಉಜ್ಝಿತಂ** = ಬಿಡಲ್ಪಟ್ಟ

**ಅಸ್ಯ** = ಈ ವಾಸುದೇವನ

**ಶ್ರುತಿಸಮಾಮನನಂ- ಶ್ರುತಿ** = ವೇದದ, **ಸಮಾಮನನಂ** = ಉಚ್ಚಾರಣೆಯು

**ಗುರೋಃ** ಕೇವಲಂ = ಉಪಾಧ್ಯಾಯರಿಗೆ ಮಾತ್ರ

**ಕುತೂಹಲಂ** = ಕೌತುಕವನ್ನು

**ನ ವ್ಯಧಾತ್** = ಉಂಟುಮಾಡಲಿಲ್ಲ

**ತತ್ರ** = ಆ ಸಭೆಯಲ್ಲಿ

**ಸುಮನಸಾಂ ಅಪಿ** = ದೇವತೆಗಳಿಗೂ ಕೂಡ

**ಕುತೂಹಲಂ** = ಕೌತುಕವನ್ನು

**ವ್ಯಧಾತ್** = ಉಂಟುಮಾಡಿತು.

**ತಾತ್ಪರ್ಯ**— ಆಗ ವಾಸುದೇವನು ಸಂಪ್ರದಾಯದಂತೆ ವೇದೋಚ್ಚಾರಣೆಯನ್ನು ಮಾಡುವ ಸಕಲ ಲಕ್ಷಣಗಳಿಂದ ಕೂಡಿ ಸ್ವಲ್ಪಮಾತ್ರವೂ ತಪ್ಪದೆ ವರ್ಗಗಳ ಕ್ರಮದಿಂದ ತನಗೆ ಗುರುಗಳು ಹೇಳಿಕೊಡದಿರುವ ಮುಂದಿನ ವೇದಮಂತ್ರಗಳನ್ನು ಹೇಳಿದನು. ಆಗ ಗುರುಗಳು ಆಶ್ಚರ್ಯಗೊಂಡರು, ಅಷ್ಟೇ ಅಲ್ಲದೆ ದೇವತೆಗಳೂ ಆಶ್ಚರ್ಯಗೊಂಡರು.

**ವಿಗ್ರಹ**—

**ಸಕಲಲಕ್ಷಣಶಿಕ್ಷಣಮೂಲಭೂಃ**— ಸಕಲಾನಿ ಚ ತಾನಿ ಲಕ್ಷಣಾನಿ ಚ ಸಕಲಲಕ್ಷಣಾನಿ, ಸಕಲಲಕ್ಷಣಾನಾನಾಂ ಶಿಕ್ಷಣಂ ಸಕಲಲಕ್ಷಣಶಿಕ್ಷಣಂ, ಸಕಲಲಕ್ಷಣಶಿಕ್ಷಣಸ್ಯ ಮೂಲಭೂಃ ಸಕಲಲಕ್ಷಣಶಿಕ್ಷಣಮೂಲಭೂಃ ।

**ಶ್ರುತಿಸಮಾಮನನಂ**— ಶ್ರುತೀನಾಂ ಸಮಾಮನನಂ ಶ್ರುತಿಸಮಾಮನನಂ ।

**ಸ್ಖಲನೋಜ್ಝಿತ**— ಸ್ಖಲನೇನ ಉಜ್ಝಿತಂ ಸ್ಖಳನೋಜ್ಝಿತಂ ।

**ಕ್ರಿಯಾಪದ**— **ವ್ಯಧಾತ್**- ವಿ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತಿ ಧಾರಣ-ಪೋಷಣಾರ್ಥಕಾತ್ ಡುಧಾಞ್ ಧಾತೋಃ ಲುಙ್ ಪ್ರಥಮಪುರುಷೈಕವಚನೇ 'ವ್ಯಧಾತ್' ಇತಿ ರೂಪಂ ।

ವ್ಯಧಾತ್ ವ್ಯಧಾತಾಂ ವ್ಯಧುಃ, ವ್ಯಧಾಃ ವ್ಯಧಾತಂ ವ್ಯಧಾತ, ವ್ಯಧಾಂ ವ್ಯಧಾವ ವ್ಯಧಾಮ ॥

★ ★ ★

**ಗುರುಪುತ್ರನ ರೋಗಪರಿಹಾರ**

**ಪ್ರಿಯವಯಸ್ಯಶಿರೋಗುರುವೇದನಾ-**
**ಮಶಮಯತ್ ಸಹಜಾಮಪಿ ದುಃಸಹಾಮ್ ।**
**ಸ ವಿಪಿನೇ ವಿಜನೇ ಮುಖವಾಯುನಾ**
**ಶ್ರವಣಗೋಚರಿತೇನ ಕದಾಚನ ॥ 53 ॥**

**ಪದಚ್ಛೇದ**— ಪ್ರಿಯವಯಸ್ಯಶಿರೋಗುರುವೇದನಾಂ, ಅಶಮಯತ್, ಸಹಜಾಂ, ಅಪಿ, ದುಃಸಹಾಂ, ಸಃ ವಿಪಿನೇ, ವಿಜನೇ, ಮುಖವಾಯುನಾ, ಶ್ರವಣಗೋಚರಿತೇನ, ಕದಾಚನ ।

**ಅನ್ವಯ**— ಸಃ ಕದಾಚನ ವಿಜನೇ ವಿಪಿನೇ ದುಃಸಹಾಂ ಸಹಜಾಂ ಅಪಿ ಪ್ರಿಯವಯಸ್ಯಶಿರೋಗುರುವೇದನಾಂ ಸಃ ಶ್ರವಣಗೋಚರಿತೇನ, ಮುಖವಾಯುನಾ ಅಶಮಯತ್ ।

**ಅನ್ವಯಾರ್ಥ**—

**ಸಃ** = ಆ ವಾಸುದೇವನು

**ಕದಾಚನ** = ಒಂದೊಮ್ಮೆ

**ವಿಜನೇ** = ಜನರಿಲ್ಲದ

**ವಿಪಿನೇ** = ಕಾಡಿನಲ್ಲಿ

**ದುಸ್ಸಹಾಂ** = ಸಹಿಸಲಸಾಧ್ಯವಾದ

**ಸಹಜಾಂ ಅಪಿ** = ಜನ್ಮದಿಂದ ಮೊದಲ್ಗೊಂಡು ಬರುತ್ತಿದ್ದು, ಸ್ವಾಭಾವಿಕವಾಗಿದ್ದರೂ ಕೂಡ

**ಪ್ರಿಯವಯಸ್ಯಶಿರೋಗುರುವೇದನಾಂ**- ಪ್ರಿಯವಯಸ್ಯ = ಪ್ರಿಯಸ್ನೇಹಿತನ, ಶಿರಃ = ತಲೆಯ, ಗುರು = ಹೆಚ್ಚಾದ, ವೇದನಾಂ = ನೋವನ್ನು,

**ಶ್ರವಣಗೋಚರಿತೇನ** = ಕಿವಿಗೆ ವಿಷಯವಾದ (ಕಿವಿಯಲ್ಲಿ ಊದಿದ)

**ಮುಖವಾಯುನಾ** = ಬಾಯಿಯ ಗಾಳಿಯಿಂದ

**ಅಶಮಯತ್** = ಹೋಗಲಾಡಿಸಿದನು.

**ತಾತ್ಪರ್ಯ—** ಒಂದು ದಿನ ಆ ವಾಸುದೇವನು ಅತ್ಯಂತ ಸ್ನೇಹಿತನಾದ ಗುರುಗಳ ಪುತ್ರನೊಡನೆ ಕಾಡಿಗೆ ಹೋಗಿದ್ದನು. ಅಲ್ಲಿ ಬೇರೆ ಯಾರೂ ಇರಲಿಲ್ಲ. ಆಗ ಆ ಸ್ನೇಹಿತನನ್ನು ಜನ್ಮದಾರಭ್ಯ ಇದ್ದ ತಲೆನೋವು ಬಹುವಾಗಿ ಕಾಡಿಸಿತು. ಆ ನೋವನ್ನು ಸಹಿಸಲಾರದೇ ಗೋಳಾಡುತ್ತಿದ್ದನು. ವಾಸುದೇವನು ಅವನ ಕಿವಿಯಲ್ಲಿ ತನ್ನ ಬಾಯಿಯಿಂದ ಗಾಳಿಯನ್ನು ಊದಿ ಆ ನೋವನ್ನು ಹೋಗಲಾಡಿಸಿದನು. (ಆ ಸ್ನೇಹಿತನ ಹಿಂದಿನ ಅನೇಕ ಜನ್ಮಗಳ ವೃತ್ತಾಂತವನ್ನು ತಿಳಿಸಿದನು - ಭಾವಪ್ರಕಾಶಿಕೆ)

**ವಿಗ್ರಹ—**

**ಪ್ರಿಯವಯಸ್ಯಶಿರೋಗುರುವೇದನಾಂ—** ವಯಸಿ ಭವಃ ವಯಸ್ಯಃ, ಪ್ರಿಯಶ್ಚಾಸೌ ವಯಸ್ಯಶ್ಚ ಪ್ರಿಯವಯಸ್ಯಃ, ಪ್ರಿಯವಯಸ್ಯಸ್ಯ ಶಿರಃ ಪ್ರಯವಯಸ್ಯಶಿರಃ, ಗುರ್ವೀ ವೇದನಾ ಗುರುವೇದನಾ, ಪ್ರಿಯವಯಸ್ಯಶಿರಸಃ ಗುರುವೇದನಾ ಪ್ರಿಯವಯಸ್ಯಶಿರೋಗುರುವೇದನಾ, ತಾಂ ಪ್ರಿಯವಯಸ್ಯ-ಶಿರೋಗುರುವೇದನಾಂ ।

**ಸಹಜಾಂ—** ಸಹಜಾಯತೇ ಇತಿ ಸಹಜಾ, ತಾಂ ।

**ದುಃಸಹಾಂ—** ದುಃಖೇನ ಸೋಢುಂ ಶಕ್ಯಾ ದುಃಸಹಾ ತಾಂ ದುಃಸಹಾಂ ।

**ವಿಜನೇ—** ವಿಗತಃ ಜನಃ ಯಸ್ಮಿನ್ ವಿಜನಃ ತಸ್ಮಿನ್ ವಿಜನೇ ।

**ಮುಖವಾಯುನಾ—** ಮುಖೇನ ನಿಸ್ಸೃತಃ ವಾಯುಃ ಮುಖವಾಯುಃ, ತೇನ ಮುಖವಾಯುನಾ ।

**ಶ್ರವಣಗೋಚರಿತೇನ—** ಶ್ರವಣೇ ಗೋಚರಿತಃ ಶ್ರವಣಗೋಚರಿತಃ ತೇನ ಶ್ರವಣಗೋಚರಿತೇನ ।

**ಕ್ರಿಯಾಪದ—ಅಶಮಯತ್**- ಶಮು ಉಪಶಮೇ ಇತಿ ಉಪಶಮಾರ್ಥಕಾತ್ ಶಮು ಧಾತೋಃ ಣಿಜನ್ತಾತ್ ಸಕರ್ಮಕಾತ್ ಪರಸ್ಮೈಪದಿನಃ ಲಙ್ ಪ್ರಥಮಪುರುಷೈಕವಚನೇ 'ಅಶಮಯತ್' ಇತಿ ರೂಪಂ ।

ಅಶಮಯತ್ ಅಶಮಯತಾಂ ಅಶಮಯನ್, ಅಶಮಯಃ ಅಶಮಯತಂ ಅಶಮಯತ, ಅಶಮಯಂ ಅಶಮಯಾವ ಅಶಮಯಾಮ ॥

★ ★ ★

ನಾರಾಯಣೋಪನಿಷತ್ತಿನ ಆವಿಷ್ಕಾರ

**ಅಧಿಗತೋಪನಿಷಚ್ಚ ಸಕೃಚ್ಛ್ರುತಾ**
**ಪ್ರಕಟಭಾಗವತೀತಿ ನ ವಿಸ್ಮಯಃ ।**
**ಅಧಿಗತಾ ನನು ಜಾತ್ವಪಿ ನ ಶ್ರುತಾಃ**
**ಪ್ರತಿಭಯಾ ಶ್ರುತಯಃ ಶತಶೋಽಮುನಾ ॥ 54 ॥**

ಪದಚ್ಛೇದ— ಅಧಿಗತಾ, ಉಪನಿಷತ್ ಚ, ಸಕೃತ್, ಶ್ರುತಾ, ಪ್ರಕಟಭಾಗವತೀ, ಇತಿ, ನ, ವಿಸ್ಮಯಃ, ಅಧಿಗತಾ, ನನು, ಜಾತು, ಅಪಿ, ನ, ಶ್ರುತಾಃ ಪ್ರತಿಭಯಾ, ಶ್ರುತಯಃ, ಶತಶಃ, ಅಮುನಾ ।

ಅನ್ವಯ— ಅಮುನಾ, ಸಕೃತ್ ಶ್ರುತಾ ಪ್ರಕಟಭಾಗವತೀ ಉಪನಿಷಚ್ಚ, ಅಧಿಗತಾ ಇತಿ ವಿಸ್ಮಯೋ ನ ಜಾತ್ವಪಿ ನ ಶ್ರುತಾಃ ಶತಶಃ ಶ್ರುತಯಃ ಪ್ರತಿಭಯಾ ಅಧಿಗತಾ ನನು ।

ಅನ್ವಯಾರ್ಥ—

ಅಮುನಾ = ಈ ವಾಸುದೇವನಿಂದ
ಸಕೃತ್ = ಒಂದು ಸಲ
ಶ್ರುತಾ = ಕೇಳಲ್ಪಟ್ಟ
ಪ್ರಕಟಭಾಗವತೀ = ಸ್ಪಷ್ಟವಾಗಿ ಪರಮಾತ್ಮನನ್ನು ಪ್ರತಿಪಾದಿಸುವ
ಉಪನಿಷಚ್ಚ = ನಾರಾಯಣೋಪನಿಷತ್ತು ಕೂಡಾ
ಅಧಿಗತಾ ಇತಿ = ತಿಳಿಯಲ್ಪಟ್ಟಿತು ಎಂಬುದಾಗಿ
ವಿಸ್ಮಯಃ = ಆಶ್ಚರ್ಯವು
ನ = ಅಲ್ಲ
ಜಾತು ಅಪಿ = ಒಂದು ಸಲವೂ ಕೂಡಾ
ನ ಶ್ರುತಾಃ = ಕೇಳಲ್ಪಡದಿರುವ
ಶತಶಃ = ನೂರಾರು
ಶ್ರುತಯಃ = ವೇದಗಳು
ಪ್ರತಿಭಯಾಃ = ಸ್ವಾಭಾವಿಕವಾದ ಪ್ರತಿಭೆಯಿಂದ (ಜ್ಞಾನದಿಂದ)
ಅಧಿಗತಾ ನನು = ತಿಳಿಯಲ್ಪಟ್ಟಿವೆಯಷ್ಟೇ.

ತಾತ್ಪರ್ಯ— ಈ ವಾಸುದೇವನು ತಾನು ಒಂದು ಸಲ ಕೇಳಿದ, ಪರಮಾತ್ಮನನ್ನು ಬೋಧಿಸುವ ನಾರಾಯಣೋಪನಿಷತ್ತನ್ನು ತಿಳಿದುಕೊಂಡನೆಂಬುದು ಆಶ್ಚರ್ಯವಲ್ಲ. ಇವನು ಒಂದು ಸಲವೂ ಕೇಳದ ನೂರಾರು ವೇದಮಂತ್ರಗಳನ್ನು ಪ್ರತಿಭಾಶಕ್ತಿಯಿಂದ ಅರಿತಿದ್ದನು. ಕೇಳದಿರುವುದನ್ನು ತಿಳಿದುಕೊಂಡಿರುವ ಇವನು ಕೇಳದ್ದನ್ನು ತಿಳಿಯದಿರುವುದು ಆಶ್ಚರ್ಯವಲ್ಲ.

ವಿಗ್ರಹ—

ಪ್ರಕಟಭಾಗವತಿ — ಭಗವತಃ ಸಂಬಂಧಿನೀ ಭಾಗವತೀ, ಪ್ರಕಟಂ ಯಥಾ ಭವತಿ ತಥಾ ಭಾಗವತೀ ಪ್ರಕಟ ಭಾಗವತೀ ।

ಕ್ರಿಯಾಪದ— ಅಧಿಗತಾ - ಅಧಿ ಇತ್ಯುಪಸರ್ಗಪೂರ್ವಕಸ್ಯ ಗಮ್ಲ್ಲೃ ಗತೌ ಇತಿ ಗತ್ಯರ್ಥಕಸ್ಯ ಗಮ್ಲ್ಲೃ ಧಾತೋಃ ಕ್ತ-ಪ್ರತ್ಯಯಾಂತಸ್ಯ ಆಕಾರಾಂತಃ ಸ್ತ್ರೀಲಿಂಗ ಶಬ್ದಃ ॥

★ ★ ★

ವಾಸುದೇವನಿಂದ ಗುರುವಿಗೆ ಐತರೇಯ ಪಾಠ

**ಸಾಕ್ಷಾದಥೋಪನಿಷದೋ ವಿಭುರೈತರೇಯ್ಯಾಃ**
**ಪಾಠಚ್ಛಲೇನ ವಿಜನೇಽರ್ಥರಸಾನ್ ಬ್ರುವಾಣಃ ।**

**ಅಧ್ಯಾಪಕಾಯ ವಿತತಾರ ವಿಮೋಕ್ಷಬೀಜಂ**
**ಗೋವಿಂದಭಕ್ತಿಮುಚಿತಾಂ ಗುರುದಕ್ಷಿಣಾಂ ಸಃ ॥ 55 ॥**

**ಪದಚ್ಛೇದ—** ಸಾಕ್ಷಾತ್, ಅಥ, ಉಪನಿಷದಃ ವಿಭುಃ, ಐತರೇಯ್ಯಾಃ, ಪಾಠಚ್ಛಲೇನ, ವಿಜನೇ, ಅರ್ಥರಸಾನ್, ಬ್ರುವಾಣಃ, ಅಧ್ಯಾಪಕಾಯ, ವಿತತಾರ, ವಿಮೋಕ್ಷಬೀಜಂ, ಗೋವಿಂದಭಕ್ತಿಂ, ಉಚಿತಾಂ, ಗುರುದಕ್ಷಿಣಾಂ, ಸಃ ।

**ಅನ್ವಯ—** ಅಥ, ವಿಭುಃ, ಸಾಕ್ಷಾತ್, ಸಃ, ವಿಜನೇ, ಐತರೇಯ್ಯಾಃ ಉಪನಿಷದಃ, ಪಾಠಚ್ಛಲೇನ, ಅಧ್ಯಾಪಕಾಯ, ಅರ್ಥರಸಾನ್ ಬ್ರುವಾಣಃ, ಉಚಿತಾಂ ವಿಮೋಕ್ಷಬೀಜಂ ಗೋವಿಂದಭಕ್ತಿಗುರುದಕ್ಷಿಣಾಂ ವಿತತಾರ ।

**ಅನ್ವಯಾರ್ಥ—**

**ಅಥ** = ಅನಂತರ

**ವಿಭುಃ** = ಸಮರ್ಥನಾದ

**ಸಾಕ್ಷಾತ್** = ಪ್ರತ್ಯಕ್ಷವಾಗಿ

**ಸಃ** = ಆ ವಾಸುದೇವನು

**ವಿಜನೇ** = ಯಾರೂ ಇಲ್ಲದ ಪ್ರದೇಶದಲ್ಲಿ

**ಐತರೇಯ್ಯಾಃ** = ಇತರಾದೇವಿಯ ಮಗನಾದ ಮಹಿದಾಸನೆಂಬ ಹೆಸರಿನ ವಿಷ್ಣುವಿನಿಂದ ಕಂಡುಹಿಡಿಯಲ್ಪಟ್ಟ

**ಉಪನಿಷದಃ** = ಉಪನಿಷತ್ತಿನ

**ಪಾಠಚ್ಛಲೇನ** = ಪಾಠ ಓದುವ ನೆಪದಿಂದ

**ಅಧ್ಯಾಪಕಾಯ** = ವೇದವನ್ನು ಹೇಳುತ್ತಿರುವ ತೋಟಂತಿಲ್ಲಾಯರಿಗೆ

**ಸಾಕ್ಷಾತ್** = ಪ್ರತ್ಯಕ್ಷವಾಗಿ

**ಅರ್ಥರಸಾನ್** = ಉತ್ತಮವಾದ ಅರ್ಥವನ್ನು

**ಬ್ರುವಾಣಃ** = ಹೇಳುವವನಾಗಿ

**ಉಚಿತಾಂ** = ಯೋಗ್ಯವಾದ

**ವಿಮೋಕ್ಷಬೀಜಂ** = ಮೋಕ್ಷಕ್ಕೆ ಕಾರಣವಾದ

**ಗೋವಿಂದಭಕ್ತಿಂ** = ಗೋವಿಂದನಲ್ಲಿ ಭಕ್ತಿಯ ರೂಪವಾದ

**ಗುರುದಕ್ಷಿಣಾಂ** = ಗುರುದಕ್ಷಿಣೆಯನ್ನು

**ವಿತತಾರ** = ಕೊಟ್ಟನು.

**ತಾತ್ಪರ್ಯ—** ಸಮರ್ಥನಾದ ವಾಸುದೇವನು ಗುರುಗಳ ಹತ್ತಿರ ಐತರೇಯೋಪನಿಷತ್ತನ್ನು ಪಠಿಸುತ್ತಿದ್ದನು. ಹೀಗೆ ಓದುತ್ತಾ ಆ ಉಪನಿಷತ್ತಿನ ಉತ್ತಮವಾದ ಅರ್ಥಗಳನ್ನು ಅವರಿಗೆ ಹೇಳಿಕೊಡುತ್ತಾ ಆ ಗುರುಗಳಿಗೆ ಅವರಲ್ಲಿಲ್ಲದ, ಮೋಕ್ಷಕ್ಕೆ ಕಾರಣವಾದ, ಉತ್ತಮವಾದ ವಿಷ್ಣುಭಕ್ತಿಯ ಸ್ವರೂಪವನ್ನು ತಿಳಿಸಿದನು. ಅದೇ ಅವರಿಗೆ ಕೊಡಬೇಕಾದ ಗುರು-ದಕ್ಷಿಣೆಯಾಯಿತು.

**ವಿಗ್ರಹ—**

**ಐತರೇಯ್ಯಾಃ—** ಇತರಾಯಾಃ ಅಪತ್ಯಂ ಪುಮಾನ್ ಐತರೇಯಃ, ಐತರೇಯೇಣ ಪ್ರೋಕ್ತಾ ಐತರೇಯೀ, ತಸ್ಯಾಃ ಐತರೇಯ್ಯಾಃ ।

**ಪಾಠಚ್ಛಲೇನ—** ಪಾಠಸ್ಯ ಛಲಂ ಪಾಠಚ್ಛಲಂ, ತೇನ ಪಾಠಚ್ಛಲೇನ ।

**ವಿಜನೇ**— ವಿಗತಾಃ ಜನಾಃ ಯಸ್ಮಾತ್ ಸಃ ವಿಜನಃ ತಸ್ಮಿನ್ ವಿಜನೇ ।

**ಅರ್ಥರಸಾನ್**— ಅರ್ಥಸ್ಯ ರಸಾಃ ಅರ್ಥರಸಾಃ, ತಾನ್ ಅರ್ಥರಸಾನ್ ।

**ವಿಮೋಕ್ಷಬೀಜಂ**— ವಿಮೋಕ್ಷಸ್ಯ ಬೀಜಂ ವಿಮೋಕ್ಷಬೀಜಂ ತತ್ ವಿಮೋಕ್ಷಬೀಜಂ ।

**ಗೋವಿಂದಭಕ್ತಿಂ**— ಗೋವಿಂದೇ ಭಕ್ತಿಃ ಗೋವಿಂದಭಕ್ತಿಃ, ತಾಂ ಗೋವಿಂದಭಕ್ತಿಂ ।

**ಗುರುದಕ್ಷಿಣಾಂ**— ಗುರವೇ ದಕ್ಷಿಣಾ ಗುರುದಕ್ಷಿಣಾ ತಾಂ ಗುರುದಕ್ಷಿಣಾಂ ।

**ಕ್ರಿಯಾಪದ**— ವಿತತಾರ- ವಿ ಇತ್ಯುಪಸರ್ಗಪೂರ್ವಕಾತ್ ತೃ ಪ್ಲವನತರಣಯೋಃ ಇತಿ ಪ್ಲವನತರಣಾರ್ಥಕಾತ್ ತೃ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೈಕವಚನೇ, ವಿತತಾರ ಇತಿ ರೂಪಮ್ ।

ವಿತತಾರ ವಿತೇರತುಃ ವಿತೇರುಃ, ವಿತೇರಿಥ ವಿತೇರಥುಃ ವಿತೇರ, ವಿತತಾರ ವಿತತರ, ವಿತೇರಿವ ವಿತೇರಿಮ ॥

**ಛಂದಸ್ಸು**— ವಸಂತತಿಲಕಾವೃತ್ತ.

ಉಕ್ತಾ ವಸಂತ ತಿಲಕಾ ತಭಜಾ ಜಗೌ ಗಃ - ಎಂದು ವಸಂತತಿಲಕಾವೃತ್ತದ ಲಕ್ಷಣವು.

| ಪ್ರಸ್ತಾರ | ತಗಣ | ಭಗಣ | ಜಗಣ | ಜಗಣ | ಗು | ಗು | |
|---|---|---|---|---|---|---|---|
| | ಸಾ ಕ್ಷಾ ದ | ಥೋ ಪ ನಿ | ಷ ದೋ ವಿ | ಭು ಕ್ತೈ ತ | ರೇ | ಯ್ಯಾಃ | ॥ |

★ ★ ★

ದುಷ್ಟರನ್ನು ದಮಿಸಲು ದೇವತೆಗಳ ಪ್ರಾರ್ಥನೆ

**ಅಯಿ ಸ್ವಾಮಿನ್ ದುಷ್ಟಾನ್ ದಮಯ ದಮಯ ವ್ಯಕ್ತಮಚಿರಾತ್**
**ಗುಣಾನ್ ಗೂಢಾನ್ ವಿಷ್ಣೋಃ ಕಥಯ ಕಥಯ ಸ್ವಾನ್ ಪ್ರಮದಯನ್ ।**
**ತದಾಽನಂದಂ ತನ್ವನ್ನಿತಿ ಸುಮನಸಾಂ ಸೋಽನುಸರತಾ-**
**ಮನುಜ್ಞಾಮಾದತ್ತ ತ್ರಿಭುವನಗುರುರ್ಬ್ರಾಹ್ಮಣಗುರೋಃ ॥ 56 ॥**

**ಪದಚ್ಛೇದ**— ಅಯಿ, ಸ್ವಾಮಿನ್, ದುಷ್ಟಾನ್, ದಮಯ, ದಮಯ, ವ್ಯಕ್ತಂ, ಅಚಿರಾತ್, ಗುಣಾನ್, ಗೂಢಾನ್, ವಿಷ್ಣೋಃ ಕಥಯ, ಕಥಯ, ಸ್ವಾನ್ ಪ್ರಮದಯನ್, ತದಾ ಆನಂದಂ, ತನ್ವನ್, ಇತಿ, ಸುಮನಸಾಂ, ಸಃ, ಅನುಸರತಾಂ, ಅನುಜ್ಞಾಂ, ಆದತ್ತ, ತ್ರಿಭುವನಗುರುಃ, ಬ್ರಾಹ್ಮಣಗುರೋಃ ।

**ಅನ್ವಯ**— ಅಯಿ ಸ್ವಾಮಿನ್! ದುಷ್ಟಾನ್ ದಮಯ ದಮಯ, ಸ್ವಾನ್ ಪ್ರಮದಯನ್ ವಿಷ್ಣೋಃ ಗೂಢಾನ್ ಗುಣಾನ್, ಅಚಿರಾತ್, ವ್ಯಕ್ತಂ ಕಥಯ ಕಥಯ, ಇತಿ, ಅನುಸರತಾಂ ಸುಮಸಾಂ ಆನಂದಂ ತನ್ವನ್, ತ್ರಿಭುವನಗುರುಃ, ಸಃ, ತದಾ, ಬ್ರಾಹ್ಮಣಗುರೋಃ ಆಜ್ಞಾಂ ಆದತ್ತ ।

**ಅನ್ವಯಾರ್ಥ**—

**ಅಯಿ ಸ್ವಾಮಿನ್** = ಎಲೈ ಸ್ವಾಮಿಯೇ!

**ದುಷ್ಟಾನ್** = ದುಷ್ಟರುಗಳನ್ನು

**ದಮಯ ದಮಯ** = ನಿಗ್ರಹಿಸು, ನಿಗ್ರಹಿಸು

**ಸ್ವಾನ್** = ನಿನ್ನವರಾದ ಸಜ್ಜನರನ್ನು

**ಪ್ರಮದಯನ್** = ಸಂತೋಷಪಡಿಸುತ್ತಾ

**ಗೂಢಾನ್** = ರಹಸ್ಯವಾಗಿರುವ

**ವಿಷ್ಣೋಃ** = ಶ್ರೀನಾರಾಯಣನ

**ಗುಣಾನ್** = ಗುಣಗಳನ್ನು

**ಅಚಿರಾತ್** = ಬೇಗನೆ

**ವ್ಯಕ್ತಂ** = ಸ್ಪಷ್ಟವಾಗಿ

**ಕಥಯ ಕಥಯ** = ಹೇಳು ಹೇಳು

**ಅನುಸರತಾಂ** = ಪ್ರಾರ್ಥಿಸುವ

**ಸುಮನಸಾಂ** = ದೇವತೆಗಳಿಗೆ

**ಆನಂದಂ** = ಆನಂದವನ್ನು (ಸಂತೋಷವನ್ನು)

**ತನ್ವನ್** = ಉಂಟುಮಾಡುತ್ತಾ

**ತ್ರಿಭುವನಗುರುಃ** = ಮೂರು ಲೋಕಗಳ ಗುರುವಾದ

**ಸಃ** = ಆ ವಾಸುದೇವನು

**ತದಾ** = ಆಗ

**ಬ್ರಾಹ್ಮಣಗುರೋಃ** = ಬ್ರಾಹ್ಮಣರಿಗೆ ಗುರುಗಳಾಗಿರುವ ತೋಟಂತಿಲ್ಲಾಯರಿಂದ

**ಅನುಜ್ಞಾಂ** = ಅನುಜ್ಞೆಯನ್ನು (ಅಪ್ಪಣೆಯನ್ನು)

**ಆದತ್ತ** = ಸ್ವೀಕರಿಸಿದನು.

**ತಾತ್ಪರ್ಯ—** ಹೀಗೆ ವಾಸುದೇವನ ಗುರುಕುಲದ ವಿದ್ಯಾಭ್ಯಾಸವು ಮುಗಿಯಿತು. ಆಗ ದೇವತೆಗಳು ಅವನನ್ನು ಸಮೀಪಿಸಿ, ''ಸ್ವಾಮಿ! ನೀನು ಜಗತ್ತಿನಲ್ಲಿರುವ ದುಷ್ಟ ಜನರನ್ನು ಶಿಕ್ಷಿಸು. ನಿನ್ನ ಭಕ್ತರಾದ ಸಜ್ಜನವನ್ನು ಸಂತೋಷಪಡಿಸುತ್ತಾ (ಅದ್ವೈತಿಗಳು) ಮಾಯಾವಾದಿಗಳು ವಿಷ್ಣುವು ನಿರ್ಗುಣನೆಂದು ವಾದಿಸಿ ಮುಚ್ಚಿಟ್ಟ ಅವನ ಆನಂದಾದಿ ಗುಣಗಳನ್ನು ಸಪ್ರಮಾಣವಾಗಿ ಶೀಘ್ರವಾಗಿ ಪ್ರಕಟಿಸು'' ಎಂದು ಪ್ರಾರ್ಥಿಸಿದರು. ಮೂರು ಲೋಕಗಳ ಗುರುವಾದ ಆ ವಾಸುದೇವನು ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ, ಅವರನ್ನು ಆನಂದಗೊಳಿಸಿದನು. ಆ ವಿಷ್ಣುವಿನ ಗುಣಗಳನ್ನು ಪ್ರಸಿದ್ಧಿಗೊಳಿಸುವ ಕಾರ್ಯವನ್ನು ನೆರವೇರಿಸಲು ಬ್ರಾಹ್ಮಣರಾದ ಉಪಾಧ್ಯಾಯರಿಂದ (ತೋಟಂತಿಲ್ಲಾಯರಿಂದ) ಅಪ್ಪಣೆಯನ್ನು ಪಡೆದು ಮನೆಗೆ ಹಿಂದಿರುಗಿದನು.

**ವಿಗ್ರಹ—**

**ಪ್ರಮದಯನ್—** ಪ್ರಮದಯತಿ ಇತಿ ಪ್ರಮದಯನ್ ।

**ತನ್ವನ್—** ತನೋತಿ ಇತಿ ತನ್ವನ್ ।

**ಅನುಸರತಾಂ—** ಅನುಸರಂತಿ ಇತಿ ಅನುಸರಂತಃ, ತೇಷಾಂ ಅನುಸರತಾಂ ।

**ತ್ರಿಭುವನಗುರುಃ—** ತ್ರಯಾಣಾಂ ಭುವನಾನಾಂ ಸಮಾಹಾರಃ ತ್ರಿಭುವನಂ, ತ್ರಿಭುವನಸ್ಯ ಗುರುಃ ತ್ರಿಭುವನಗುರುಃ ।

**ಬ್ರಾಹ್ಮಣಗುರೋಃ—** ಬ್ರಾಹ್ಮಣಶ್ಚಾಸೌ ಗುರುಶ್ಚ ಬ್ರಾಹ್ಮಣಗುರುಃ, ತಸ್ಮಾತ್ ಬ್ರಾಹ್ಮಣಗುರೋಃ ।

|| ಶ್ರೀಃ ||

|| ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ||

### ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಚತುರ್ಥಃ ಸರ್ಗಃ

ಅವತಾರಕಾರ್ಯ ನೆರವೇರಿಸಲು ಆಲೋಚನೆ

**ಅಥೈಷ ಸಲ್ಲೋಕದಯಾಸುಧಾರ್ದ್ರಯಾ**
**ಸದಾಗಮಸ್ತೇನನಿರಾಸಕಾಮಯಾ ।**
**ರಮಾವರಾವಾಸಭುವಾ ವಿಶಾರದೋ**
**ವಿಶಾಲಯಾಽಚಿಂತಯದಾತ್ಮನೋ ಧಿಯಾ || 1 ||**

**ಪದಚ್ಛೇದ**—ಅಥ ಏಷಃ, ಸಲ್ಲೋಕದಯಾಸುಧಾರ್ದ್ರಯಾ, ಸದಾಗಮಸ್ತೇನನಿರಾಸಕಾಮಯಾ, ರಮಾವರಾ-ವಾಸಭುವಾ, ವಿಶಾರದಃ, ವಿಶಾಲಯಾ, ಅಚಿಂತಯತ್, ಆತ್ಮನಃ, ಧಿಯಾ ।

**ಅನ್ವಯ**— ಅಥ ವಿಶಾರದಃ ಏಷಃ, ಸಲ್ಲೋಕದಯಾಸುಧಾರ್ದ್ರಯಾ, ಸದಾಗಮಸ್ತೇನನಿರಾಸಕಾಮಯಾ, ರಮಾ-ವರಾವಾಸಭುವಾ, ವಿಶಾಲಯಾ ಆತ್ಮನಃ ಧಿಯಾ, ಅಚಿಂತಯತ್ ।

**ಅನ್ವಯಾರ್ಥ**—

**ಅಥ** = ಗುರುಕುಲವಾಸವು ಮುಗಿದ ಅನಂತರದಲ್ಲಿ
**ವಿಶಾರದಃ ಏಷಃ** = ಬುದ್ಧಿವಂತನಾದ ಈ ವಾಸುದೇವನು
**ಸಲ್ಲೋಕದಯಾಸುಧಾರ್ದ್ರಯಾ** = ಸಜ್ಜನರಲ್ಲಿ ಕರುಣೆ ಎಂಬ ಅಮೃತರಸದಿಂದ ಒದ್ದೆಯಾಗಿರುವ
**ಸದಾಗಮಸ್ತೇನನಿರಾಸಕಾಮಯಾ** = ಸಚ್ಛಾಸ್ತ್ರಗಳ ಕಳ್ಳನನ್ನು ಖಂಡಿಸುವ ಅಪೇಕ್ಷೆಯುಳ್ಳ,
**ರಮಾವರಾವಾಸಭುವಾ** = ರಮಾದೇವಿಯ ಪತಿಯಾದ ನಾರಾಯಣನ ವಾಸಸ್ಥಾನವಾಗಿರುವ,
**ವಿಶಾಲಯಾ** = ವಿಶಾಲವಾಗಿರುವ
**ಆತ್ಮನಃ** = ತನ್ನ
**ಧಿಯಾ** = ಬುದ್ಧಿಯಿಂದ
**ಅಚಿಂತಯತ್** = ಚಿಂತಿಸಿದನು.

**ತಾತ್ಪರ್ಯ**— ಗುರುಕುಲವಾಸದ ಅನಂತರದಲ್ಲಿ ವಿಚಕ್ಷಣನಾದ ಈ ವಾಸುದೇವನು ಸಚ್ಛಾಸ್ತ್ರಗಳಾದ ವೇದ ಮೊದಲಾದವುಗಳಿಗೆ ವಿರುದ್ಧಾರ್ಥವನ್ನು ಕಲ್ಪಿಸುವ ಮೂಲಕ ಸಚ್ಛಾಸ್ತ್ರಗಳನ್ನು ಅಪಹರಣ ಮಾಡಿದಂಥ, ಇತರ ಮತವನ್ನು ನಿರಾಕರಿಸುವ ಇಚ್ಛೆಯುಳ್ಳ, ಸಜ್ಜನರಲ್ಲಿರುವ ಕರುಣಾಮೃತರಸದಿಂದ ತೊಯ್ದ ಶ್ರೀಹರಿಯ ನಿರಂತರ ವಾಸಸ್ಥಾನವಾದ ವಿಶಾಲವಾದ ತನ್ನ ಬುದ್ಧಿಯಿಂದ ಹೀಗೆಂದು ಆಲೋಚಿಸಿದನು.

ವಿಗ್ರಹ—

**ಸಲ್ಲೋಕದಯಾಸುಧಾರ್ದ್ರಯಾ—** ಸಂತಶ್ಚ ತೇ ಲೋಕಾಶ್ಚ ಸಲ್ಲೋಕಾಃ, ಸಲ್ಲೋಕೇಷು ದಯಾ ಸಲ್ಲೋಕದಯಾ, ಸಲ್ಲೋಕದಯಯಾ ಏವ ಸುಧಾ ಸಲ್ಲೋಕದಯಾಸುಧಾ, ಸಲ್ಲೋಕದಯಾ-ಸುಧಯಾ ಆರ್ದ್ರಾ ಸಲ್ಲೋಕದಯಾಸುಧಾರ್ದ್ರಾ, ತಯಾ ಸಲ್ಲೋಕದಯಾಸುಧಾರ್ದ್ರಯಾ ।

**ಸದಾಗಮಸ್ತೇನನಿರಾಸಕಾಮಯಾ—** ಸಂತಶ್ಚ ತೇ ಆಗಮಾಶ್ಚ ಸದಾಗಮಾಃ, ಸದಾಗಮಾನಾಂ ಸ್ತೇನಾಃ ಸದಾಗಮಸ್ತೇನಾಃ ಸದಾಗಮಸ್ತೇನಾನಾಂ ನಿರಾಸಃ ಸದಾಗಮಸ್ತೇನನಿರಾಸಃ, ಸದಾಗಮಸ್ತೇನ ನಿರಾಸೇ ಕಾಮಃ ಯಸ್ಯಾ ಸಾ ಸದಾಗಮಸ್ತೇನನಿರಾಸಕಾಮಾ, ತಯಾ ಸದಾಗಮಸ್ತೇನನಿರಾಸಕಾಮಯಾ ।

**ರಮಾವರಾವಾಸಭುವಾ—** ರಮಾಯಾಃ ವರಃ ರಮಾವರಃ, ರಮಾವರಸ್ಯ ಆವಾಸಃ ರಮಾವರಾವಾಸಃ, ರಮಾವರಾವಾಸಸ್ಯ ಭೂಃ ರಮಾವರಾವಾಸಭೂಃ, ತಯಾ ರಮಾವರಾವಾಸಭುವಾ ।

**ಕ್ರಿಯಾಪದ—** ಅಚಿಂತಯತ್- ಚಿತಿ ಸ್ಮೃತ್ಯಾಂ ಇತಿ ಸ್ಮೃತ್ಯರ್ಥಕಾತ್ ಚಿತಿಧಾತೋಃ ಲಙಿ ಪ್ರಥಮಪುರುಷೈಕವಚನೇ ''ಅಚಿಂತಯತ್'' ಇತಿ ರೂಪಮ್ ।

ಅಚಿಂತಯತ್ ಅಚಿಂತಯತಾಂ ಅಚಿಂತಯನ್,
ಅಚಿಂತಯಃ ಅಚಿಂತಯತಂ ಅಚಿಂತಯತ,
ಅಚಿಂತಯಂ ಅಚಂತಯಾವ ಅಚಿಂತಯಾಮ ।।

★ ★ ★

ಅನ್ಯಸಂಗ ತೊರೆಯುವುದೇ ಭಗವಂತನ ಸಂಗಕ್ಕೆ ಕಾರಣ

**ಅನನ್ಯಸಂಗಾದ್ಗುಣಸಂಗಿತಾ ಹರೇ-**
**ರ್ಜನಸ್ಯ ಮಾನಂ ತು ವಿಶಿಷ್ಟಚೇಷ್ಟಿತಮ್ ।**
**ಅಸಂಗಮಸ್ಮಾತ್ಪ್ರಕಟೀಕರೋಮ್ಯಹಂ**
**ನಿಜಂ ಭಜನ್ ಪಾರಮಹಂಸ್ಯಮಾಶ್ರಮಮ್ ।। 2 ।।**

**ಪದಚ್ಛೇದ—** ಅನನ್ಯಸಂಗಾತ್, ಗುಣಸಂಗಿತಾ, ಹರೇಃ, ಜನಸ್ಯ, ಮಾನಂ, ತು, ವಿಶಿಷ್ಟಚೇಷ್ಟಿತಂ, ಅಸಂಗಂ, ಅಸ್ಮಾತ್, ಪ್ರಕಟೀಕರೋಮಿ, ಅಹಂ, ನಿಜಂ, ಭಜನ್, ಪಾರಮಹಂಸ್ಯಂ, ಆಶ್ರಮಂ ।

**ಅನ್ವಯ—** ಅನನ್ಯಸಂಗಾತ್, ಹರೇಃ, ಗುಣಸಂಗಿತಾ, ಜನಸ್ಯ ವಿಶಿಷ್ಟಚೇಷ್ಟಿತಂ ಮಾನಂ ತು, ಅಸ್ಮಾತ್, ಅಹಂ ಪಾರಮಹಂಸ್ಯಂ ಆಶ್ರಮಂ ಭಜನ್, ನಿಜಂ ಅಸಂಗಂ ಪ್ರಕಟೀಕರೋಮಿ ।

**ಅನ್ವಯಾರ್ಥ—**

**ಅನನ್ಯಸಂಗಾತ್** = ಭಗವಂತನನ್ನು ಬಿಟ್ಟು ಬೇರೆಯಾದ ವಸ್ತುಗಳಲ್ಲಿ ಆಸಕ್ತಿಯಿಲ್ಲದಿರುವುದರಿಂದ
**ಹರೇಃ** = ಶ್ರೀಹರಿಯ
**ಗುಣಸಂಗಿತಾ** = ಗುಣಗಳಲ್ಲಿ ಆಸಕ್ತಿಯು (ಉಂಟಾಗುವುದು)
**ಜನಸ್ಯ** = ಜನರಿಗೆ
**ವಿಶಿಷ್ಟಚೇಷ್ಟಿತಂ** = ವಿಶಿಷ್ಟರ ನಡತೆಯು
**ಮಾನಂ ತು** = ಪ್ರಮಾಣವಲ್ಲವೇ ?
**ಅಸ್ಮಾತ್** = ಈ ಕಾರಣದಿಂದ

**ಅಹಂ** = ನಾನು

**ಪಾರಮಹಂಸ್ಯಂ** = ಪರಮಹಂಸರಿಗೆ ಸಂಬಂಧಿಸಿದ

**ಆಶ್ರಮಂ** = ಸಂನ್ಯಾಸಾಶ್ರಮವನ್ನು

**ಭಜನ್** = ಆಶ್ರಯಿಸಿದವನಾಗಿ

**ನಿಜಂ** = ಸ್ವಾಭಾವಿಕವಾಗಿರುವ (ನನ್ನ ಸ್ವಭಾವವಾದ)

**ಅಸಂಗಂ** = ಯಾವ ವಸ್ತುಗಳ ಆಸಕ್ತಿಯೂ ಇಲ್ಲದಿರುವಿಕೆಯನ್ನು

**ಪ್ರಕಟೀಕರೋಮಿ** = ಪ್ರಕಟಪಡಿಸುವೆನು.

**ತಾತ್ಪರ್ಯ—** ಯಾರ ಯಾವ ಸಂಗವೂ ಇಲ್ಲದಿದ್ದರೆ ಶ್ರೀಹರಿಯ ಗುಣಗಳ ಸಂಗವು ಉಂಟಾಗುವುದು. ಲೋಕದಲ್ಲಿ ಜನರು ದೊಡ್ಡವರ ಆಚರಣೆಗಳನ್ನು ಅನುಸರಿಸುವರು. ಆದಕ್ಕಾಗಿ ಸ್ವಾಭಾವಿಕವಾಗಿರುವ ಪರಮಹಂಸಾಶ್ರಮವನ್ನು ಸ್ವೀಕರಿಸಿ ಯಾವ ವಸ್ತುಗಳಲ್ಲಿಯೂ ನನಗೆ ಸಂಗವಿಲ್ಲವೆಂದು ಪ್ರಕಟೀಕರಿಸುವೆನು, ಹೀಗೆಂದು ಆಲೋಚಿಸಿದನು.

**ವಿಗ್ರಹ—**

**ಅನನ್ಯಸಂಗಾತ್—** ಅನ್ಯೇಷಾಂ ಸಂಗಃ ಅನ್ಯಸಂಗಃ, ಅನ್ಯಸಂಗಸ್ಯ ಅಭಾವಃ ಅನನ್ಯಸಂಗಃ ತಸ್ಮಾತ್ ಅನನ್ಯಸಂಗಾತ್ ।

**ಗುಣಸಂಗಿತಾ—** ಗುಣಾನಾಂ ಸಂಗಃ ಗುಣಸಂಗಃ, ಗುಣಸಂಗಃ ಅಸ್ಯ ಅಸ್ತಿ ಇತಿ ಗುಣಸಂಗೀ, ಗುಣಸಂಗಿನೋ ಭಾವಃ ಗುಣಸಂಗಿತಾ ।

**ವಿಶಿಷ್ಟಚೇಷ್ಟಿತಂ—** ವಿಶಿಷ್ಟಾನಾಂ ಚೇಷ್ಟಿತಂ ವಿಶಿಷ್ಟಚೇಷ್ಟಿತಂ ।

**ಅಸಂಗಂ—** ನ ವಿದ್ಯತೇ ಸಂಗಃ ಯಸ್ಯ ಸಃ ಅಸಂಗಃ, ತಂ ಅಸಂಗಂ ।

**ಭಜನ್—** ಭಜತಿ ಇತಿ ಭಜನ್ ।

**ಪಾರಮಹಂಸ್ಯಂ—** ಪರಮಹಂಸಾನಾಂ ಇದಂ ಪಾರಮಹಂಸ್ಯಂ, ತತ್ ಪಾರಮಹಂಸ್ಯಂ ।

**ಕ್ರಿಯಾಪದ— ಪ್ರಕಟೀಕರೋಮಿ-** ಪ್ರಕಟ ಇತ್ಯುಪಪದಪೂರ್ವಕಾತ್ ಡುಕೃಞ್ ಕರಣೇ ಇತ್ಯಸ್ಮಾತ್ ಕರಣಾರ್ಥಕಾತ್ ಕೃಧಾತೋಃ ಲಟಿ ಉತ್ತಮಪುರುಷೇ ಏಕವಚನೇ 'ಪ್ರಕಟೀಕರೋಮಿ' ಇತಿ ರೂಪಮ್ ।

ಪ್ರಕಟೀಕರೋತಿ ಕುರುತಃ ಕುರ್ವಂತಿ, ಕರೋಷಿ ಕುರುಥಃ ಕುರುಥ, ಕರೋಮಿ ಕುರ್ವಃ ಕುರ್ಮಃ ॥

★ ★ ★

ಸನ್ಯಾಸಸ್ವೀಕಾರದ ಹಿನ್ನೆಲೆ - ದುರ್ಗಾವತಾರದ ಮುನ್ಸೂಚನೆ

**ಮಮ ಪ್ರಭೋರ್ನಾಪರಥಾ ಹಿ ಶೋಭತೇ**
**ದ್ವಿಷತ್ಸು ವಿಷ್ಣಂ ಯದದಂಡಧಾರಣಮ್ ।**
**ಹರಿಸ್ವಸಾ ನನ್ವಚಿರಾದಸದ್ಭಿದೇ**
**ಭವೇದತೋ ನಾಸ್ಮಿ ಚ ದಂಡಧಾರಕಃ ॥ 3 ॥**

**ಪದಚ್ಛೇದ—** ಮಮ, ಪ್ರಭೋಃ, ನ, ಅಪರಥಾ, ಹಿ, ಶೋಭತೇ, ದ್ವಿಷತ್ಸು, ವಿಷ್ಣಂ ಯತ್, ಅದಂಡಧಾರಣಂ, ಹರಿಸ್ವಸಾ, ನನು, ಅಚಿರಾತ್, ಅಸದ್ಭಿದೇ, ಭವೇತ್, ಅತಃ ನ, ಅಸ್ಮಿ ಚ, ದಂಡಧಾರಕಃ ।

**ಅನ್ವಯ—** ಅಪರಥಾ ಪ್ರಭೋಃ ಮಮ, ವಿಷ್ಣಂ ದ್ವಿಷತ್ಸು ಯತ್ ಅದಂಡಧಾರಣಂ, ನ ಹಿ ಶೋಭತೇ । ಹರಿಸ್ವಸಾ ಅಚಿರಾತ್ ಅಸದ್ಭಿದೇ ಭವೇತ್ ನನು ಅತೋ ದಂಡಧಾರಕಃ ನಾಸ್ಮಿ ಚ ।

**ಅನ್ವಯಾರ್ಥ—**

**ಅಪರಥಾ** = ಯತ್ಯಾಶ್ರಮವನ್ನು ಸ್ವೀಕರಿಸದಿದ್ದರೆ

**ಪ್ರಭೋಃ** = ಸಮರ್ಥನಾಗಿರುವ

**ಮಮ** = ನನಗೆ,

**ವಿಷ್ಣುಂ** = ಶ್ರೀವಿಷ್ಣುವನ್ನು

**ದ್ವಿಷತ್ಸು** = ದ್ವೇಷಿಸುತ್ತಿರುವ ಮಾಯಾವಾದಿ ಮುಂತಾದವರಲ್ಲಿ

**ಯತ್ ಅದಂಡಧಾರಣಂ** = ಯಾವ ನಾಲಿಗೆಯನ್ನು ಸೀಳುವಿಕೆಯಂಥ ಶಿಕ್ಷೆಯನ್ನು ಮಾಡದಿರುವಿಕೆ-ಯಿದೆಯೋ (ಅದು)

**ನ ಹಿ ಶೋಭತೇ** = ಶೋಭಿಸುವುದಿಲ್ಲ.

**ಹರಿಸ್ವಸಾ** = ಶ್ರೀಕೃಷ್ಣದೇವರ ತಂಗಿಯು

**ಅಚಿರಾತ್** = ಬಹಳ ಬೇಗನೇ

**ಅಸದ್ಭಿದೇ ಭವೇತ್ ನನು** = ದುಷ್ಟರನ್ನು ಕೊಲ್ಲಲು ಅವತಾರ ಮಾಡಿಯೇ ಮಾಡುವಳು.

**ಅತಃ** = ಆದುದರಿಂದಲೇ

**ದಂಡಧಾರಕಃ ನಾಸ್ಮಿ ಚ** = ಶಿಕ್ಷೆಮಾಡುವವನು ಆಗುವುದಿಲ್ಲ.

**ತಾತ್ಪರ್ಯ—** ನಾನು ಶಿಕ್ಷೆಯನ್ನು ಮಾಡಲು ಶಕ್ತನಾಗಿರುವೆನು. ಸಮರ್ಥನಾಗಿರುವವನಿಗೆ ಶ್ರೀವಿಷ್ಣುದ್ವೇಷಿಗಳಿಗೆ ಮಾಡಬೇಕಾದ "ನಾಲಿಗೆಯನ್ನು ಕೊಯ್ಯುವುದು" ಎಂಬ ಆ ಧಾರಣವು ಸಂನ್ಯಾಸಿಯಾಗದಿದ್ದರೆ ನನಗೆ ಶೋಭಿಸು-ವುದಿಲ್ಲ. ಶ್ರೀಹರಿಯ ತಂಗಿಯಾದ ದುರ್ಗಾದೇವಿಯು ಬೇಗನೆ ಅಯೋಗ್ಯರನ್ನು ಕೊಲ್ಲುವುದಕ್ಕೆ ಅವತರಿಸುವಳು. ಆದ್ದರಿಂದ ನಾನು ದಂಡವನ್ನು ಮಾಡುವುದಿಲ್ಲ. ನಾನು ದಂಡಿಸಲನರ್ಹವಾದ ಸಂನ್ಯಾಸಾಶ್ರಮವನ್ನು ಸ್ವೀಕರಿಸುವೆನು.

**ವಿಗ್ರಹ—**

**ಅಪರಥಾ—** ನ ಪರಥಾ ಅಪರಥಾ ।

**ದ್ವಿಷತ್ಸು—** ದ್ವಿಷಂತಿ ಇತಿ ದ್ವಿಷಂತಃ, ತೇಷು ದ್ವಿಷತ್ಸು ।

**ಅದಂಡಧಾರಣಂ—** ದಂಡಸ್ಯ ಧಾರಣಂ ದಂಡಧಾರಣಂ, ದಂಡಧಾರಣಂ ನ ಭವತಿ ಇತಿ ಅದಂಡಧಾರಣಂ ।

**ಹರಿಸ್ವಸಾ—** ಹರೇಃ ಸ್ವಸಾ ಹರಿಸ್ವಸಾ ।

**ಅಚಿರಾತ್—** ನ ಚಿರಾತ್ ಅಚಿರಾತ್ ।

**ಅಸದ್ಭಿದೇ—** ಅಸತಾಂ ಭಿತ್ ಅಸದ್ಭಿತ್, ತಸ್ಮೈ ಅಸದ್ಭಿದೇ ।

**ದಂಡಧಾರಕಃ—** ದಂಡಸ್ಯ ಧಾರಕಃ ದಂಡಧಾರಕಃ ।

**ಕ್ರಿಯಾಪದ— ಶೋಭತೇ-** ಶುಭದೀಪ್ತೌ ಇತಿ ದೀಪ್ತ್ಯರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ ಶೋಭತೇ ಇತಿ ರೂಪಮ್ ।

**ಶೋಭತೇ ಶೋಭೇತೇ ಶೋಭಂತೇ, ಶೋಭಸೇ ಶೋಭೇಥೇ ಶೋಭಧ್ವೇ, ಶೋಭೇ ಶೋಭಾವಹೇ ಶೋಭಾಮಹೇ ॥**

★ ★ ★

ಸನ್ಯಾಸಸ್ವೀಕಾರಕ್ಕೆ ನಿಶ್ಚಯ - ಶ್ರೀಹರಿಗೆ ನಮನ

**ವಿಚಿಂತಯನ್ನಿತ್ಥಮನಂತಚಿಂತಕಃ**
**ಸಮಸ್ತಸಂನ್ಯಾಸನಿಬದ್ಧನಿಶ್ಚಯಃ ।**
**ಅಸಾವನುಜ್ಞಾರ್ಥಮಥಾನಮದ್ಧರಿಂ**
**ಸಮಸ್ತಸಂವ್ಯಾಪಿನಮಾತ್ಮದಾಯಗಮ್ ॥ 4 ॥**

**ಪದಚ್ಛೇದ—** ವಿಚಿಂತಯನ್, ಇತ್ಥಂ, ಅನಂತಚಿಂತಕಃ, ಸಮಸ್ತಸಂನ್ಯಾಸನಿಬದ್ಧನಿಶ್ಚಯಃ, ಅಸೌ, ಅನುಜ್ಞಾರ್ಥಂ, ಅಥ, ಅನಮತ್, ಹರಿಂ, ಸಮಸ್ತಸಂವ್ಯಾಪಿನಂ, ಆತ್ಮದಾಯಗಮ್ ।

**ಅನ್ವಯ—** ಅನಂತಚಿಂತಕಃ ಅಸೌ ಇತ್ಥಂ ವಿಚಿಂತಯನ್, ಅಥ ಸಮಸ್ತಸಂನ್ಯಾಸನಿಬದ್ಧನಿಶ್ಚಯಃ, ಅನುಜ್ಞಾರ್ಥಂ ಸಮಸ್ತಸಂವ್ಯಾಪಿನಂ, ಆತ್ಮದಾಯಗಂ ಹರಿಂ ಅನಮತ್ ।

**ಅನ್ವಯಾರ್ಥ—**

**ಅನಂತಚಿಂತಕಃ** = ಅಂತವಿಲ್ಲದಿರುವ ಅನಂತನ ಧ್ಯಾನದಲ್ಲಿ ಆಸಕ್ತನಾದ

**ಅಸೌ** = ಈ ವಾಸುದೇವನು

**ಇತ್ಥಂ** = ಹೀಗೆ

**ವಿಚಿಂತಯನ್** = ಆಲೋಚಿಸುತ್ತಾ,

**ಅಥ** = ತರುವಾಯ

**ಸಮಸ್ತಸಂನ್ಯಾಸನಿಬದ್ಧನಿಶ್ಚಯಃ** = ಸಮಸ್ತ ವಸ್ತುಗಳನ್ನೂ ಬಿಡುವ ವಿಷಯದಲ್ಲಿ ನಿಶ್ಚಯ ಮಾಡಿದವನಾಗಿ

**ಅನುಜ್ಞಾರ್ಥಂ** = ಅನುಜ್ಞಾ ಸ್ವೀಕಾರಾರ್ಥವಾಗಿ

**ಸಮಸ್ತಸಂವ್ಯಾಪಿನಂ** = ಎಲ್ಲಾ ವಸ್ತುಗಳಲ್ಲಿಯೂ ವ್ಯಾಪಿಸಿರುವ

**ಆತ್ಮದಾಯಗಂ** = ತನ್ನ ಮನೆಯಲ್ಲಿರುವ ವಸ್ತುಗಳಲ್ಲಿ ವ್ಯಾಪಿಸಿರುವ

**ಹರಿಂ** = ಶ್ರೀಹರಿಯನ್ನು

**ಅನಮತ್** = ನಮಸ್ಕರಿಸಿದನು.

**ತಾತ್ಪರ್ಯ—** ಈ ವಾಸುದೇವನು ಸಂನ್ಯಾಸವನ್ನು ಸ್ವೀಕರಿಸುವುದಾಗಿ ದೃಢವಾದ ನಿಶ್ಚಯವನ್ನು ಮಾಡಿದನು. ಸಂನ್ಯಾಸಸ್ವೀಕಾರಕ್ಕೆ ಅನುಜ್ಞೆಯನ್ನು ಸ್ವೀಕರಿಸುವುದಕ್ಕಾಗಿ ಜಗತ್ತಿನ ಎಲ್ಲ ವಸ್ತುಗಳಲ್ಲಿ ವ್ಯಾಪಿಸಿರುವ ಹಾಗೂ ತನ್ನ ಮನೆಯಲ್ಲಿರುವ ವಸ್ತುಗಳಲ್ಲಿ ವ್ಯಾಪಿಸಿರುವ ಶ್ರೀಹರಿಯನ್ನು ನಮಸ್ಕರಿಸಿದನು.

**ವಿಗ್ರಹ—**

**ವಿಚಿಂತಯನ್—** ವಿಚಿಂತಯತಿ ಇತಿ ವಿಚಿಂತಯನ್ ।

**ಅನಂತಚಿಂತಕಃ—** ಅನಂತಸ್ಯ ಚಿಂತಕಃ ಅನಂತಚಿಂತಕಃ ।

**ಸಮಸ್ತಸಂನ್ಯಾಸನಿಬದ್ಧನಿಶ್ಚಯಃ—** ಸಮಸ್ತಾನಾಂ ಸನ್ಯಾಸಃ ಸಮಸ್ತಸನ್ಯಾಸಃ, ಸಮಸ್ತಸನ್ಯಾಸೇ ನಿಬದ್ಧಃ ಸಮಸ್ತಸನ್ಯಾಸನಿಬದ್ಧಃ, ಸಮಸ್ತಸನ್ಯಾಸನಿಬದ್ಧಃ ನಿಶ್ಚಯಃ ಯಸ್ಯ ಸಃ ಸಮಸ್ತಸನ್ಯಾಸನಿಬದ್ಧನಿಶ್ಚಯಃ ।

**ಅನುಜ್ಞಾರ್ಥಂ—** ಅನುಜ್ಞಾಯೈ ಇತಿ ಅನುಜ್ಞಾರ್ಥಂ ।

**ಸಮಸ್ತಸಂವ್ಯಾಪಿನಂ—** ಸಮಸ್ತಂ ಸಂವ್ಯಾಪ್ತಂ ಶೀಲಂ ಅಸ್ಯ ಅಸ್ತೀತಿ ಸಮಸ್ತಸಂವ್ಯಾಪೀ, ತಂ ಸಮಸ್ತಸಂವ್ಯಾಪಿನಂ ।

ಆತ್ಮದಾಯಗಂ— ಆತ್ಮನಃ ದಾಯಃ ಆತ್ಮದಾಯಃ, ಆತ್ಮದಾಯಂ ಗಚ್ಛತಿ ಇತಿ ಆತ್ಮದಾಯಗಃ, ತಂ ಆತ್ಮದಾಯಗಂ ।

**ಕ್ರಿಯಾಪದ**— ಅನಮತ್- ಣಮು ಪ್ರಹ್ವತ್ವೇ ಶಬ್ದೇ ಚ ಇತಿ ಪಹ್ವತ್ವಶಬ್ದಾರ್ಥಕಾತ್ ಣಮ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅನಮತ್'' ಇತಿ ರೂಪಮ್ ।

ಅನಮತ್ ಅನಮತಾಂ ಅನಮನ್, ಅನಮಃ ಅನಮತಂ ಅನಮತ, ಅನಮಂ ಅನಮಾವ ಅನಮಾಮ ॥

★ ★ ★

ಗುರುವಿನ ಅನ್ವೇಷಣೆಯಲ್ಲಿ ಜಗದ್ಗುರು

**ನಿಜೇ ಜನೇ ಕಿಂ ನಮಸೀತಿ ಪೃಚ್ಛತಿ**
**ಬ್ರುವನ್ ಸ್ವವಸ್ತುಪ್ರಣತಿಂ ವ್ಯಧಾಮಿತಿ ।**
**ಗುರೋಃ ಕಿಲಾನ್ವೇಷಣವಾನ್ ಜಗದ್ಗುರು-**
**ಸ್ತದಾ ಜಗಾಮಾಖಿಲಲೋಕಶಿಕ್ಷಕಃ ॥ 5 ॥**

**ಪದಚ್ಛೇದ**— ನಿಜೇ, ಜನೇ, ಕಿಂ, ನಮಸಿ, ಇತಿ, ಪೃಚ್ಛತಿ, ಬ್ರುವನ್, ಸ್ವವಸ್ತುಪ್ರಣತಿಂ, ವ್ಯಧಾಂ, ಇತಿ, ಗುರೋಃ, ಕಿಲ, ಅನ್ವೇಷಣವಾನ್, ಜಗದ್ಗುರುಃ, ತದಾ, ಜಗಾಮ, ಅಖಿಲಲೋಕಶಿಕ್ಷಕಃ ।

**ಅನ್ವಯ**— ತದಾ ನಿಜೇ ಜನೇ, ಕಿಂ ನಮಸಿ ಇತಿ ಪೃಚ್ಛತಿ, ಸ್ವವಸ್ತುಪ್ರಣತಿಂ ವ್ಯಧಾಂ ಇತಿ ಬ್ರುವನ್, ಜಗದ್ಗುರುಃ ಅಖಿಲಲೋಕಶಿಕ್ಷಕಃ ಗುರೋಃ ಅನ್ವೇಷಣವಾನ್ ಜಗಾಮ ಕಿಲ।

**ಅನ್ವಯಾರ್ಥ**—

**ತದಾ** = ಆಗ
**ನಿಜೇ ಜನೇ** = ತಮ್ಮವರಾದ ತಂದೆ ಮುಂತಾದ ಜನರು
**ಕಿಂ ನಮಸಿ** = ಏತಕ್ಕೆ ನಮಸ್ಕರಿಸುತ್ತೀ ?
**ಇತಿ** = ಹೀಗೆಂದು
**ಪೃಚ್ಛತಿ** = ಪ್ರಶ್ನೆ ಮಾಡುತ್ತಿರಲು
**ಸ್ವವಸ್ತುಪ್ರಣತಿಂ ವ್ಯಧಾಂ** = ನನ್ನ ವಸ್ತುವಿಗೆ ನಮಸ್ಕಾರವನ್ನು ಮಾಡುತ್ತಿರುವೆನು,
**ಇತಿ** = ಹೀಗೆಂದು
**ಬ್ರುವನ್** = ಹೇಳುತ್ತಿದ್ದ
**ಜಗದ್ಗುರುಃ** = ಎಲ್ಲಾ ಜಗತ್ತುಗಳಿಗೂ ಗುರುವಾದ
**ಅಖಿಲಲೋಕಶಿಕ್ಷಕಃ** = ಎಲ್ಲ ಜನರ ಶಿಕ್ಷಕನಾದ ಆ ವಾಸುದೇವನು
**ಗುರೋಃ** = ಗುರುಗಳ
**ಅನ್ವೇಷಣವಾನ್** = ಹುಡುಕುವಿಕೆಯುಳ್ಳವನಾಗಿ
**ಜಗಾಮ ಕಿಲ** = ಹೊರಟನಷ್ಟೇ.

**ತಾತ್ಪರ್ಯ**— ತಂದೆ ಮೊದಲಾದ ಬಂಧುಗಳು ಏನನ್ನು ಏತಕ್ಕೆ ನಮಸ್ಕರಿಸುತ್ತಿದ್ದಿ ? ಎಂದು ಕೇಳಿದಾಗ, ನನ್ನ ವಸ್ತುವನ್ನು ನಮಸ್ಕರಿಸುತ್ತಿದ್ದೇನೆ ಎಂದು ವಾಸುದೇವನು ಉತ್ತರವನ್ನು ಕೊಟ್ಟನು. ಹೀಗೆ ಎಲ್ಲಾ ಜಗತ್ತುಗಳಿಗೂ

ಗುರುವಾಗಿರುವ, ಎಲ್ಲ ಜನರಿಗೆ ತನ್ನ ಆಚರಣೆಯಿಂದ ತಿಳುವಳಿಕೆಯನ್ನುಂಟು ಮಾಡುವ ಆ ವಾಸುದೇವನು ಸನ್ಯಾಸ ಸ್ವೀಕಾರಕ್ಕಾಗಿ ಗುರುಗಳನ್ನು ಹುಡುಕುವುದಕ್ಕೆ ಹೊರಟನು. ಸರ್ವರಿಗೂ ಗುರುಗಳನ್ನು ಹುಡುಕಿ ಸ್ವೀಕರಿಸಬೇಕು ಎಂದು ತಿಳಿಸಬೇಡವೇ ? ಅಖಿಲ ಲೋಕಶಿಕ್ಷಕರಾದ ಅವರು ಈ ಕೆಲಸವನ್ನು ಮಾಡಿದರು.

**ವಿಗ್ರಹ—**

**ಪೃಚ್ಛತಿ—** ಪೃಚ್ಛತಿ ಇತಿ ಪೃಚ್ಛನ್, ತಸ್ಮಿನ್ ಪೃಚ್ಛತಿ ।

**ಸ್ವವಸ್ತುಪ್ರಣತಿಂ—** ಸ್ವಸ್ಯ ವಸ್ತೂನಿ ಸ್ವವಸ್ತೂನಿ, ಸ್ವವಸ್ತೂನಾಂ ಪ್ರಣತಿಃ ಸ್ವವಸ್ತುಪ್ರಣತಿಃ, ತಾಂ ಸ್ವವಸ್ತುಪ್ರಣತಿಂ ।

**ಬ್ರುವನ್—** ಬ್ರೂತೇ ಇತಿ ಬ್ರುವನ್ ।

**ಜಗದ್ಗುರುಃ—** ಜಗತಾಂ ಗುರುಃ ಜಗದ್ಗುರುಃ ।

**ಅಖಿಲಲೋಕಶಿಕ್ಷಕಃ—** ಅಖಿಲಾಶ್ಚ ತೇ ಲೋಕಾಶ್ಚ ಅಖಿಲಲೋಕಾಃ, ಅಖಿಲಲೋಕಾನಾಂ ಶಿಕ್ಷಕಃ ಅಖಿಲ-ಲೋಕಶಿಕ್ಷಕಃ ।

**ಕ್ರಿಯಾಪದ— ವ್ಯಧಾಂ-** ವಿ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತಿ ಧಾರಣ-ಪೋಷಣಾರ್ಥಕಾತ್ ಧಾಞ್ ಧಾತೋಃ ಲಙ್ ಉತ್ತಮಪುರುಷೇ ಏಕವಚನೇ ''ವ್ಯಧಾಂ'' ಇತಿ ರೂಪಮ್ ।

ವ್ಯಧಾತ್, ವ್ಯಧಾತಾಂ ವ್ಯಧುಃ, ವ್ಯಧಾಃ ವ್ಯಧಾತಂ ವ್ಯಧಾತ, ವ್ಯಧಾಂ ವ್ಯಧಾವ ವ್ಯಧಾಮ ॥

**ಜಗಾಮ-** ಗಮ್ಲೃಗತೌ ಗತ್ಯರ್ಥಕಾತ್ ಗಮ್ಲೃ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಜಗಾಮ'' ಇತಿ ರೂಪಮ್ ।

ಜಗಾಮ ಜಗ್ಮತುಃ ಜಗ್ಮುಃ, ಜಗಮಿಥ-ಜಗಂಥ ಜಗ್ಮಥುಃ ಜಗ್ಮ, ಜಗಾಮ-ಜಗಮ ಜಗ್ಮಿವ ಜಗ್ಮಿಮ ॥

★ ★ ★

ಸಾರ್ಥಕನಾಮದ ಅಚ್ಯುತಪ್ರೇಕ್ಷರು

**ಯತಿರ್ಯತಾತ್ಮಾ ಭುವಿ ಕಶ್ಚನಾಭವತ್**
**ವಿಭೂಷಣೋ ಭೂರಿವಿರಕ್ತಿಭೂಷಣಃ ।**
**ನ ನಾಮಮಾತ್ರಾಚ್ಛುಚಿಮರ್ಥತೋಽಪಿ ಯಂ**
**ಜನೋಽಚ್ಯುತಪ್ರೇಕ್ಷಮುದಾಹರತ್ ಸ್ಫುಟಮ್ ॥ 6 ॥**

**ಪದಚ್ಛೇದ—** ಯತಿಃ, ಯತಾತ್ಮಾ, ಭುವಿ, ಕಶ್ಚನ, ಅಭವತ್, ವಿಭೂಷಣಃ, ಭೂರಿವಿರಕ್ತಿಭೂಷಣಃ ನ ನಾಮಮಾತ್ರಾತ್, ಶುಚಿಂ, ಅರ್ಥತಃ, ಅಪಿ, ಯಂ, ಜನಃ, ಅಚ್ಯುತಪ್ರೇಕ್ಷಂ, ಉದಾಹರತ್, ಸ್ಫುಟಂ ।

**ಅನ್ವಯ—** ಜನಃ ಶುಚಿಂ ಯಂ ನಾಮಮಾತ್ರಾತ್ ಅಚ್ಯುತಪ್ರೇಕ್ಷಂ ನ ಉದಾಹರತ್ । ಸ್ಫುಟಂ ಅರ್ಥತಃ ಅಪಿ ಉದಾಹರತ್, ಭುವಿ ಯತಾತ್ಮಾ ವಿಭೂಷಣಃ ಭೂರಿವಿರಕ್ತಿಭೂಷಣಃ ಕಶ್ಚನ ಯತಿಃ ಅಭವತ್ ।

**ಅನ್ವಯಾರ್ಥ—**

**ಜನಃ** = ಜನರು

**ಶುಚಿಂ** = ಶುದ್ಧರಾದ

**ಯಂ** = ಯಾವ ಯತಿಗಳನ್ನು

**ನಾಮಮಾತ್ರಾತ್** = ಹೆಸರಿನಿಂದ ಮಾತ್ರ

**ಅಚ್ಯುತಪ್ರೇಕ್ಷಂ** = ಅಚ್ಯುತಪ್ರೇಕ್ಷ ಎಂದು
**ನ ಉದಾಹರತ್** = ಹೇಳಲಿಲ್ಲವೋ,
**ಸ್ಫುಟಂ** = ಸ್ಪಷ್ಟವಾಗಿ
**ಅರ್ಥತಃ ಅಪಿ** = ಅರ್ಥದಿಂದಲೂ ಸಹ (ಅಚ್ಯುತಪ್ರೇಕ್ಷ ಎಂದು ಹೇಳಿದರೋ)
**ಭುವಿ** = ಭೂಮಿಯಲ್ಲಿ
**ಯತಾತ್ಮಾ** = ಇಂದ್ರಿಯಗಳನ್ನು ನಿಗ್ರಹಿಸಿದವರಾದ
**ವಿಭೂಷಣಃ** = ಆಭರಣಗಳನ್ನು ಧರಿಸದಿರುವ
**ಭೂರಿವಿರಕ್ತಿಭೂಷಣಃ** = ಅತ್ಯಧಿಕವಾದ ವೈರಾಗ್ಯವೆಂಬ ಆಭರಣದಿಂದ ಸಹಿತರಾದ
**ಕಶ್ಚನ ಯತಿಃ** = ಒಬ್ಬ ಯತಿಗಳು
**ಅಭವತ್** = ಇದ್ದರು.

**ತಾತ್ಪರ್ಯ—** ಆಗ ಭೂಮಿಯಲ್ಲಿ ಸರ್ವೇಂದ್ರಿಯಗಳನ್ನೂ ನಿಗ್ರಹಿಸಿರುವ ಒಬ್ಬ ಯತಿಗಳು ಇದ್ದರು. ಅವರು ಅಚ್ಯುತಪ್ರೇಕ್ಷ ಎಂಬ ಹೆಸರಿನಿಂದ ಯುಕ್ತರಾಗಿದ್ದರು. ಅವರು ಹೆಸರಿನಿಂದ ಮಾತ್ರವಲ್ಲ ಅರ್ಥದಿಂದಲೂ ಆ ಹೆಸರಿನಿಂದ ಯುಕ್ತರಾಗಿದ್ದರು. ಅವರಲ್ಲಿ ಯಾವ ಆಭರಣಗಳೂ ಇರಲಿಲ್ಲ. ಅತ್ಯಧಿಕವಾದ ವಿರಕ್ತಿಯೇ ಆಭರಣವಾಗಿತ್ತು.

**ವಿಗ್ರಹ—**

**ಯತಾತ್ಮಾ—** ಯತಃ ಆತ್ಮಾ ಯಸ್ಯ ಸಃ ಯತಾತ್ಮಾ ।
**ವಿಭೂಷಣಃ—** ವಿಗತಾನಿ ಭೂಷಣಾನಿ ಯಸ್ಯ ಸಃ ವಿಭೂಷಣಃ ।
**ಭೂರಿವಿರಕ್ತಭೂಷಣಃ—** ಭೂರಿಶ್ಚ ಸಾ ವಿರಕ್ತಿಶ್ಚ ಭೂರಿವಿರಕ್ತಿಃ, ಭೂರಿವಿರಕ್ತಿರೇವ ಭೂಷಣಂ ಯಸ್ಯ ಸಃ ಭೂರಿವಿರಕ್ತಿಭೂಷಣಃ ।
**ನಾಮಮಾತ್ರಾತ್—** ನಾಮ್ನೈವ ನಾಮಮಾತ್ರಂ, ತಸ್ಮಾತ್ ನಾಮಮಾತ್ರಾತ್ ।
**ಅಚ್ಯುತಪ್ರೇಕ್ಷಂ—** ಅಚ್ಯುತಸ್ಯ ಪ್ರೇಕ್ಷಾ ಯಸ್ಯ ಸಃ ಅಚ್ಯುತಪ್ರೇಕ್ಷಃ, ತಂ ಅಚ್ಯುತಪ್ರೇಕ್ಷಂ ।

**ಕ್ರಿಯಾಪದ— ಉದಾಹರತ್**- ಉತ್ ಆಙ್ ಇತ್ಯುಪಸರ್ಗದ್ವಯಪೂರ್ವಕಾತ್ ಹೃಞ್‌ಹರಣೇ ಇತ್ಯಸ್ಮಾದ್ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಉದಾಹರತ್'' ಇತಿ ರೂಪಮ್ ।

ಉದಾಹರತ್ ಉದಾಹರತಾಂ ಉದಾಹರನ್, ಉದಾಹರಃ ಉದಾಹರತಂ ಉದಾಹರತ,
ಉದಾಹರಂ ಉದಾಹರಾವ ಉದಾಹರಾಮ ॥

★ ★ ★

ಅಚ್ಯುತಪ್ರೇಕ್ಷರ ಮಧುಕರವೃತ್ತಿ

**ಪುರೈಷ ಕೃಷ್ಣಾಕರಸಿದ್ಧಶುದ್ಧಿಮ-**
**ದ್ವರಾನ್ನಭುಕ್ತ್ಯಾ ಕಿಲ ಪಾಂಡವಾಲಯೇ ।**
**ವಿಶೋಧಿತಾತ್ಮಾ ಮಧುಕೃತ್ವವೃತ್ತಿಮಾಂ-**
**ಶ್ಚಚಾರ ಕಾಂಶ್ಚಿತ್ಪರಿವತ್ಸರಾನ್ಮುದಾ** ॥ 7 ॥

**ಪದಚ್ಛೇದ—** ಪುರಾ, ಏಷಃ, ಕೃಷ್ಣಾಕರಸಿದ್ಧಶುದ್ಧಿಮದ್ವರಾನ್ನಭುಕ್ತ್ಯಾ, ಕಿಲ, ಪಾಂಡವಾಲಯೇ, ವಿಶೋಧಿತಾತ್ಮಾ, ಮಧುಕೃತ್ವವೃತ್ತಿಮಾನ್, ಚಚಾರ, ಕಾಂಶ್ಚಿತ್ ಪರಿವತ್ಸರಾನ್, ಮುದಾ ।

**ಅನ್ವಯ—** ಏಷಃ ಪುರಾ, ಮಧುಕೃತ್ತ್ವವೃತ್ತಿಮಾನ್ ಕೃಷ್ಣಾಕರಸಿದ್ಧಶುದ್ಧಿಮದ್ವರಾನ್ನಭುಕ್ತ್ಯಾ ವಿಶೋಧಿತಾತ್ಮಾ, ಪಾಂಡವಾಲಯೇ ಕಾಂಶ್ಚಿತ್ ಪರಿವತ್ಸರಾನ್ ಮುದಾ ಚಚಾರ ಕಿಲ ।

**ಅನ್ವಯಾರ್ಥ—**

**ಏಷಃ ಪುರಾ** = ಈ ಅಚ್ಯುತಪ್ರೇಕ್ಷರು ಹಿಂದಿನ ಜನ್ಮದಲ್ಲಿ

**ಮಧುಕೃತ್ತ್ವವೃತ್ತಿಮಾನ್** = ಜೇನುನೊಣದ ಕೆಲಸವುಳ್ಳವರಾಗಿ (ಭಿಕ್ಷಾಟನೆ ಮಾಡುವವರಾಗಿ)

**ಕೃಷ್ಣಾಕರಸಿದ್ಧಶುದ್ಧಿಮದ್ವರಾನ್ನಭುಕ್ತ್ಯಾ—**

**ಕೃಷ್ಣಾ** = ದ್ರೌಪದೀದೇವಿಯ

**ಕರ** = ಕೈಯಿಂದ

**ಸಿದ್ಧ** = ತಯಾರಿಸಲ್ಪಟ್ಟ ಆದ್ದರಿಂದಲೇ

**ಶುದ್ಧಿಮದ್** = ಶುದ್ಧವಾದ

**ವರಾನ್ನ** = ಶ್ರೇಷ್ಠವಾದ ಅನ್ನವನ್ನು

**ಭುಕ್ತ್ಯಾ** = ತಿಂದಿರುವುದರಿಂದ,

**ವಿಶೋಧಿತಾತ್ಮಾ** = ಶುದ್ಧಮಾಡಲ್ಪಟ್ಟ ದೇಹ ಮತ್ತು ಮನಸ್ಸುಳ್ಳವರಾಗಿ

**ಪಾಂಡವಾಲಯೇ** = ಪಾಂಡವರ ಆಶ್ರಯದಲ್ಲಿ (ಹಸ್ತಿನಾಪುರದಲ್ಲಿ)

**ಕಾಂಶ್ಚಿತ್ ಪರಿವತ್ಸರಾನ್** = ಕೆಲವು ವರ್ಷಗಳವರೆಗೆ

**ಮುದಾ ಚಚಾರ ಕಿಲ** =ಸಂತೋಷದಿಂದ ಸಂಚಾರ ಮಾಡಲಿಲ್ಲವೇ ? (ಈ ಅಚ್ಯುತಪ್ರೇಕ್ಷಾಚಾರ್ಯರಿಗೆ ವಾಸುದೇವಾಚಾರ್ಯರ ಗುರುವಾಗುವ ಭಾಗ್ಯವು ಲಭಿಸಿತು).

**ತಾತ್ಪರ್ಯ—** ಹಿಂದಿನಜನ್ಮದಲ್ಲಿಯೂ ಸಂನ್ಯಾಸಿಗಳಾಗಿದ್ದ ಈ ಅಚ್ಯುತಪ್ರೇಕ್ಷಾಚಾರ್ಯರು ಜೇನುನೊಣವು ಒಂದೊಂದು ಹೂವಿನಿಂದಲೂ ಜೇನನ್ನು ಸಂಗ್ರಹಿಸುವಂತೆ ಅನೇಕ ಗೃಹಸ್ಥರ ಮನೆಗಳಲ್ಲಿ ಭಿಕ್ಷಾಟನೆ ಮಾಡುತ್ತಿದ್ದರು. ಇವರು ದ್ರೌಪದಿ ದೇವಿಯ ಕೈಗಳಿಂದ ತಯಾರಿಸಲ್ಪಟ್ಟ ಶುದ್ಧವಾದ, ಶ್ರೇಷ್ಠವಾದ ಅನ್ನವನ್ನು ತಿಂದದ್ದರಿಂದ, ಪಾಂಡವರ ಸ್ಥಳವಾದ ಹಸ್ತಿನಾಪುರದಲ್ಲಿ ಕೆಲವು ವರ್ಷಕಾಲ ಸಂಚರಿಸುತ್ತಿದ್ದರು. ಈ ಕಾರಣಗಳಿಂದ ವಾಸುದೇವಾಚಾರ್ಯರ ಗುರುವಾಗುವ ಭಾಗ್ಯವು ಅಚ್ಯುತಪ್ರೇಕ್ಷಾಚಾರ್ಯರಿಗೆ ಲಭಿಸಿತು.

ವಿಗ್ರಹ—

**ಕೃಷ್ಣಾಕರಸಿದ್ಧಶುದ್ಧಿಮದ್ವರಾನ್ನಭುಕ್ತ್ಯಾ—** ಕೃಷ್ಣಾಯಾಃ ಕರಃ ಕೃಷ್ಣಾಕರಃ, ಕೃಷ್ಣಾಕರೇಣ ಸಿದ್ಧಂ ಕೃಷ್ಣಾಕರಸಿದ್ಧಂ, ಶುದ್ಧಿ ಅಸ್ಯ ಅಸ್ತೀತಿ ಶುದ್ಧಿಮತ್, ವರಂ ಚ ತತ್ ಅನ್ನಂ ಚ ವರಾನ್ನಂ, ಶುದ್ಧಿಮಚ್ಚ ತತ್ ವರಾನ್ನಂ ಚ ಶುದ್ಧಿಮದ್ವರಾನ್ನಂ, ಕೃಷ್ಣಾಕರಸಿದ್ಧಂ ಚ ತತ್ ಶುದ್ಧಿಮದ್ವರಾನ್ನಂ ಚ ಕೃಷ್ಣಾಕರಸಿದ್ಧಶುದ್ಧಿಮದ್ವರಾನ್ನಂ, ಕೃಷ್ಣಾಕರಸಿದ್ಧಶುದ್ಧಿಮದ್ವರಾನ್ನಸ್ಯ ಭುಕ್ತಿಃ ಕೃಷ್ಣಾಕರಸಿದ್ಧಶುದ್ಧಿಮದ್ವರಾನ್ನಸ್ಯ ಭುಕ್ತಿಃ ತಯಾ ಕೃಷ್ಣಾಕರಸಿದ್ಧ-ಶುದ್ಧಿಮದ್ವರಾನ್ನಭುಕ್ತ್ಯಾ ।

**ಪಾಂಡವಾಲಯೇ—** ಪಾಂಡವಾನಾಂ ಆಲಯಃ ಪಾಂಡವಾಲಯಃ, ತಸ್ಮಿನ್ ಪಾಂಡವಾಲಯೇ ।

**ವಿಶೋಧಿತಾತ್ಮಾ—** ವಿಶೋಧಿತಃ ಆತ್ಮಾ ಯಸ್ಯ ಸಃ ವಿಶೋಧಿತಾತ್ಮಾ ।

**ಮಧುಕೃತ್ತ್ವವೃತ್ತಿಮಾನ್—** ಮಧುಂ ಕರೋತಿ ಇತಿ ಮಧುಕೃತ್, ಮಧುಕೃತಃ ಪ್ರವೃತ್ತಿಃ ಮಧುಕೃತ್ತ್ವವೃತಿಃ ಮಧುಕೃತ್ತ್ವವೃತ್ತಿಃ ಅಸ್ಯ ಅಸ್ತಿ ಇತಿ ಮಧುಕೃತ್ತ್ವವೃತ್ತಿಮಾನ್ ।

**ಕ್ರಿಯಾಪದ—** ಚಚಾರ- ಚರಗತಿಭಕ್ಷಣಯೋಃ ಇತಿ ಗತಿಭಕ್ಷಣಾರ್ಥಕಾತ್ ಚರಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಚಚಾರ'' ಇತಿ ರೂಪಮ್ ।

ಚಚಾರ ಚೇರತುಃ ಚೇರುಃ, ಚೇರಿಥ ಚೇರಥುಃ ಚೇರ, ಚಚಾರ-ಚಚರ ಚೇರಿವ ಚೇರಿಮ ॥

★ ★ ★

ಪಶ್ಚಾತ್ತಾಪದಿಂದ ಕುಶಾಸ್ತ್ರಾಧ್ಯಯನದ ಪಾಪ ಪರಿಹಾರ

**ಅಭೂತ್ಕುಶಾಸ್ತ್ರಾಭ್ಯಸನಂ ನ ಪಾತಕಂ**
**ಕ್ರಮಾಗತಾದ್ವಿಪ್ರತಿಸಾರತೋ ಯತೇಃ ।**
**ಯಥಾ ಕುಶಸ್ತ್ರಾಧ್ಯಸನಂ ಮುರದ್ವಿಷಃ**
**ಪದಾಂಬುಜೇ ವ್ಯಾಧವರಸ್ಯ ಗರ್ಹಿತಮ್ ॥ 8 ॥**

**ಪದಚ್ಛೇದ—** ಅಭೂತ್, ಕುಶಾಸ್ತ್ರಾಭ್ಯಸನಂ, ನ, ಪಾತಕಂ, ಕ್ರಮಾಗತಾತ್, ವಿಪ್ರತಿಸಾರತೋ, ಯತೇಃ, ಯಥಾ, ಕುಶಸ್ತ್ರಾಧ್ಯಸನಂ, ಮುರದ್ವಿಷಃ, ಪದಾಂಬುಜೇ, ವ್ಯಾಧವರಸ್ಯ, ಗರ್ಹಿತಮ್ ।

**ಅನ್ವಯ—** ಯತೇಃ ಕ್ರಮಾಗತಾತ್ ವಿಪ್ರತಿಸಾರತಃ, ಕುಶಾಸ್ತ್ರಾಭ್ಯಸನಂ ಮುರದ್ವಿಷಃ ಪದಾಂಬುಜೇ ವ್ಯಾಧವರಸ್ಯ ಗರ್ಹಿತಂ ಕುಶಸ್ತ್ರಾಧ್ಯಸನಂ ಯಥಾ ಪಾತಕಂ ನ ಅಭೂತ್ ।

**ಅನ್ವಯಾರ್ಥ—**

**ಯತೇಃ** = ಸಂನ್ಯಾಸಿಯಾದ ಅಚ್ಯುತಪ್ರೇಕ್ಷರಿಗೆ
**ಕ್ರಮಾಗತಾತ್** = ಕಾಲಕ್ರಮದಿಂದ ಬಂದ
**ವಿಪ್ರತಿಸಾರತಃ** = ಪಶ್ಚಾತ್ತಾಪದಿಂದ
**ಕುಶಾಸ್ತ್ರಾಭ್ಯಸನಂ** = ದುಷ್ಟಶಾಸ್ತ್ರದ ಅಭ್ಯಾಸವು,
**ಮುರದ್ವಿಷಃ** = ಮುರಾಸುರನನ್ನು ಕೊಂದಿರುವ ಶ್ರೀಕೃಷ್ಣನ
**ಪದಾಂಬುಜೇ** = ಪಾದಕಮಲಗಳಲ್ಲಿ
**ವ್ಯಾಧವರಸ್ಯ** = ಬೇಟೆಗಾರರಲ್ಲಿ ಶ್ರೇಷ್ಠನಾದ ''ಜರ'' ಎಂಬ ವ್ಯಾಧನ
**ಗರ್ಹಿತಂ** = ನಿಂದಿತವಾದ
**ಕುಶಸ್ತ್ರಾಧ್ಯಸನಂ ಯಥಾ** = ಕುತ್ಸಿತವಾದ ಬಾಣಗಳ ಪ್ರಯೋಗದಂತೆ
**ಪಾತಕಂ** = ಪಾಪಕ್ಕೆ ಕಾರಣವು
**ನ ಅಭೂತ್** = ಆಗಲಿಲ್ಲ.

**ತಾತ್ಪರ್ಯ—** ಆ ಅಚ್ಯುತಪ್ರೇಕ್ಷರು ಮಧ್ವಶಾಸ್ತ್ರವನ್ನು ಓದಿದ ತರುವಾಯ ತಾವು ಹಿಂದೆ ದುಷ್ಟ ಅದ್ವೈತ-ಸಿದ್ಧಾಂತವನ್ನು ಓದಿದ್ದಕ್ಕೆ ಪಶ್ಚಾತ್ತಾಪಗೊಂಡರು. ಹಿಂದೆ 'ಜರಾ' ಎಂಬ ವ್ಯಾಧಶ್ರೇಷ್ಠನು ಎಲ್ಲಾ ಯಾದವರು ಸ್ವರ್ಗಕ್ಕೆ ತೆರಳುವ ಕಾಲದಲ್ಲಿ ಅಶ್ವತ್ಥಮರದ ಕೆಳಗೆ ಕುಳಿತಿರುವ ಶ್ರೀಕೃಷ್ಣನ ಪಾದಕಮಲಕ್ಕೆ ಅರಿಯದ ಮೃಗವೆಂಬ ಭ್ರಾಂತಿಯಿಂದ ಬಾಣಪ್ರಯೋಗಿಸಿ, ಅನಂತರ ಪಶ್ಚಾತ್ತಾಪಗೊಂಡನು. ಆದರಿಂದ ಅವನಿಗೆ ಪಾಪವುಂಟಾಗಲಿಲ್ಲ, ಹಾಗೆಯೇ ಈ ಅಚ್ಯುತ-ಪ್ರೇಕ್ಷರಿಗೂ ಪಾಪವುಂಟಾಗಲಿಲ್ಲ.

**ವಿಗ್ರಹ—**

**ಕುಶಾಸ್ತ್ರಾಭ್ಯಸನಂ—** ಕುತ್ಸಿತಂ ಚ ತತ್ ಶಾಸ್ತ್ರಂ ಚ ಕುಶಾಸ್ತ್ರಂ, ಕುಶಾಸ್ತ್ರಸ್ಯ ಅಭ್ಯಸನಂ ಕುಶಾಸ್ತ್ರಾಭ್ಯಸನಂ ।

**ಕ್ರಮಾಗತಾತ್**— ಕ್ರಮೇಣ ಆಗತಃ ಕ್ರಮಾಗತಃ, ತಸ್ಮಾತ್ ಕ್ರಮಾಗತಾತ್ ।

**ಕುಶಾಸ್ತ್ರಾಧ್ಯಸನಂ**— ಕುತ್ಸಿತಂ ಚ ಶಾಸ್ತ್ರಂ ಚ ಕುಶಾಸ್ತ್ರಂ, ಕುಶಾಸ್ತ್ರಸ್ಯ ಅಧ್ಯಸನಂ ಕುಶಾಸ್ತ್ರಾಧ್ಯಸನಂ ।

**ಮುರದ್ವಿಷಃ**— ಮುರಂ ದ್ವೇಷ್ಟಿ ಇತಿ ಮುರದ್ವಿಟ್, ತಸ್ಯ ಮುರದ್ವಿಷಃ ।

**ಪದಾಂಬುಜೇ**— ಪದಂ ಅಂಬುಜಂ ಇವ ಪದಾಂಬುಜಂ, ತಸ್ಮಿನ್ ಪದಾಂಬುಜೇ ।

**ವ್ಯಾಧವರಸ್ಯ**— ವ್ಯಾಧೇಷು ವರಃ ವ್ಯಾಧವರಃ, ತಸ್ಯ ವ್ಯಾಧವರಸ್ಯ ।

**ಕ್ರಿಯಾಪದ— ಅಭೂತ್**- ಭೂ ಸತ್ತಾಯಾಂ ಸತ್ತಾರ್ಥಕಾತ್ ಭೂಧಾತೋಃ ಲುಙ್ ಪ್ರಥಮಪುರುಷೇ ಏಕವಚನೇ 'ಅಭೂತ್' ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಭೂತ, ಅಭೂವಂ ಅಭೂವ ಅಭೂಮ ॥

★ ★ ★

ಅಚ್ಯುತಪ್ರೇಕ್ಷರಿಗೆ ಗುರುಗಳಿಂದ ಹಿತನುಡಿ

**ವಿನೀತಮಾಮ್ನಾಯಶಿರೋವಿಶಾರದಂ**
**ಸದೈವ ತತ್ತ್ವಂ ಪ್ರಬುಭುತ್ಸುಮಾದರಾತ್ ।**
**ಗುರುರ್ವಿದಿತ್ವೋಪಗತಾಂ ನಿಜಾಂ ಮೃತಿಂ**
**ಕದಾಚಿದೂಚೇ ತಮುಪಹ್ವರೇ ಗಿರಮ್ ॥ 9 ॥**

**ಪದಚ್ಛೇದ**— ವಿನೀತಂ, ಆಮ್ನಾಯಶಿರೋವಿಶಾರದಂ, ಸದಾ, ಏವ, ತತ್ತ್ವಂ, ಪ್ರಬುಭುತ್ಸುಂ, ಆದರಾತ್, ಗುರುಃ, ವಿದಿತ್ವಾ, ಉಪಗತಾಂ ನಿಜಾಂ, ಮೃತಿಂ, ಕದಾಚಿತ್, ಊಚೇ, ತಂ, ಉಪಹ್ವರೇ, ಗಿರಂ ।

**ಅನ್ವಯ**— ಗುರುಃ ಕದಾಚಿತ್ ನಿಜಾಂ ಮೃತಿಂ ಉಪಗತಾಂ ವಿದಿತ್ವಾ, ವಿನೀತಂ ಆಮ್ನಾಯಶಿರೋವಿಶಾರದಂ, ಸದಾ ತತ್ತ್ವಂ ಏವ ಆದರಾತ್ ಪ್ರಬುಭುತ್ಸುಂ, ತಂ ಉಪಹ್ವರೇ ಗಿರಂ ಊಚೇ ।

**ಅನ್ವಯಾರ್ಥ**—

**ಗುರುಃ** = ಅಚ್ಯುತಪ್ರೇಕ್ಷಾಚಾರ್ಯರ ಗುರುಗಳು

**ಕದಾಚಿತ್** = ಒಂದಾನೊಂದು ವೇಳೆ

**ನಿಜಾಂ ಮೃತಿಂ** = ತಮ್ಮ ಮರಣವನ್ನು

**ಉಪಗತಾಂ** = ಸಮೀಪಿಸಿದ್ದನ್ನಾಗಿ

**ವಿದಿತ್ವಾ** = ತಿಳಿದು

**ವಿನೀತಂ** = ವಿನಯ ಮುಂತಾದ ಗುಣಗಳಿಂದ ಸಂಪನ್ನರಾದ,

**ಆಮ್ನಾಯಶಿರೋವಿಶಾರದಂ** = ವೇದಗಳ ತಲೆಯಂತಿರುವ ಉಪನಿಷತ್ತುಗಳಲ್ಲಿ ನಿಪುಣರಾದ,

**ಸದಾ ತತ್ತ್ವಂ ಏವ** = ಯಾವಾಗಲೂ ಭಗವಂತನ ನಿಜಸ್ಥಿತಿಯನ್ನೇ

**ಆದರಾತ್** = ಆದರದಿಂದ

**ಪ್ರಬುಭುತ್ಸುಂ ತಂ** = ತಿಳಿಯಲಪೇಕ್ಷಿಸುವ ಆ ಶಿಷ್ಯರಾದ ಅಚ್ಯುತಪ್ರೇಕ್ಷರನ್ನು ಕುರಿತು

**ಉಪಹ್ವರೇ** = ರಹಸ್ಯದಲ್ಲಿ

**ಗಿರಂ** = ಮಾತನ್ನು

**ಊಚೇ** = ಹೇಳಿದರು.

**ತಾತ್ಪರ್ಯ**— ಆ ಅಚ್ಯುತಪ್ರೇಕ್ಷಾಚಾರ್ಯರ ಗುರುಗಳು ಒಂದಾನೊಂದು ದಿನ ತಮಗೆ ಮರಣವು ಸಮೀಪಿಸಿರುವುದನ್ನರಿತರು. ಅವರು ವಿಧೇಯರೂ, ಉಪನಿಷತ್ತುಗಳಲ್ಲಿ ಕುಶಲರೂ, ಯಾವಾಗಲೂ ಪ್ರೀತಿಯಿಂದ ಭಗವತ್ತತ್ವವನ್ನು ಅರಿಯಲು ಉತ್ಸುಕರೂ ಆಗಿರುವ ಶಿಷ್ಯರಾದ ಅಚ್ಯುತಪ್ರೇಕ್ಷರನ್ನು ಕುರಿತು ಗುಟ್ಟಿನಲ್ಲಿ ಇಂತೆಂದರು.

**ವಿಗ್ರಹ**—

**ಆಮ್ನಾಯಶಿರೋವಿಶಾರದಃ**— ಆಮ್ನಾಯಾನಾಂ ಶಿರಾಂಸ ಇವ ಆಮ್ನಾಯಶಿರಾಂಸಃ, ಆಮ್ನಾಯಶಿರಸ್ಸು ವಿಶಾರದಃ ಆಮ್ನಾಯಶಿರೋವಿಶಾರದಃ, ತಂ ಆಮ್ನಾಯಶಿರೋವಿಶಾರದಂ ।

**ಪ್ರಬುಭುತ್ಸುಂ**— ಪ್ರಕರ್ಷೇಣ ಬೋದ್ಧುಂ ಇಚ್ಛುಃ ಪ್ರಬುಭುತ್ಸುಃ, ತಂ ಪ್ರಬುಭುತ್ಸುಂ ।

**ಕ್ರಿಯಾಪದ**— ಊಚೇ- ಬ್ರೂಞ್ ವ್ಯಕ್ತಾಯಾಂ ವಾಚಿ ಇತ್ಯಸ್ಮಾತ್ ವ್ಯಕ್ತವಾಗರ್ಥಕಾತ್ ಸಕರ್ಮಕಾತ್ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ ''ಊಚೇ'' ಇತಿ ರೂಪಮ್ ।

ಊಚೇ ಊಚಾತೇ ಊಚಿರೇ, ಊಚಿಷೇ ಊಚಾಥೇ ಊಚಿಧ್ವೇ, ಊಚೇ ಊಚಿವಹೇ ಊಚಿಮಹೇ॥

★ ★ ★

### ಮಾಯಾವಾದವನ್ನು ನಂಬಲಾಗದು

**ಅಹಂ ಸ್ವಯಂ ಬ್ರಹ್ಮ ನ ಕಿಂಚಿದಸ್ತಿ ಮ-**
**ತ್ಪರಂ ವಿಜೃಂಭೇತ ಯದಾ ಸ್ಫುಟಂ ಚಿತಿಃ ।**
**ಇತೀಹ ಮಾಯಾಸಮಯೋಪಪಾದಿತಂ**
**ನಿರನ್ವಯಂ ಸುವ್ರತ ಮಾ ಸ್ಮ ವಿಶ್ವಸೀಃ** ॥ 10 ॥

**ಪದಚ್ಛೇದ**— ಅಹಂ, ಸ್ವಯಂ, ಬ್ರಹ್ಮ, ನ, ಕಿಂಚಿತ್, ಅಸ್ತಿ, ಮತ್ಪರಂ, ವಿಜೃಂಭೇತ, ಯದಾ, ಸ್ಫುಟಂ, ಚಿತಿಃ, ಇತಿ, ಇಹ, ಮಾಯಾಸಮಯೋಪಪಾದಿತಂ, ನಿರನ್ವಯಂ, ಸುವ್ರತ, ಮಾ, ಸ್ಮ, ವಿಶ್ವಸೀ ।

**ಅನ್ವಯ**— ಸುವ್ರತ! ''ಅಹಂ ಸ್ವಯಂ ಬ್ರಹ್ಮ (ಇತಿ) ಚಿತಿಃ ಯದಾ ಸ್ಫುಟಂ ವಿಜೃಂಭೇತ ಮತ್ಪರಂ ಕಿಂಚಿತ್ ನ ಅಸ್ತಿ'' ಇತಿ ಮಾಯಾಸಮಯೋಪಪಾದಿತಂ ನಿರನ್ವಯಂ ಇಹ ಮಾ ಸ್ಮ ವಿಶ್ವಸೀಃ ।

**ಅನ್ವಯಾರ್ಥ**—

**ಸುವ್ರತ** = ಶೋಭನಗಳಾದ ವಿಷ್ಣುಪಂಚಕ ಮುಂತಾದ ವ್ರತಗಳನ್ನು ಮಾಡಿರುವ ಶಿಷ್ಯನೇ,
**ಅಹಂ** = ನಾನು
**ಸ್ವಯಂ ಬ್ರಹ್ಮ** = ಸಾಕ್ಷಾತ್ ಬ್ರಹ್ಮನು.
**ಇತಿ ಚಿತಿಃ** = ಈ ರೀತಿ ಜ್ಞಾನವು
**ಯದಾ** = ಯಾವಾಗ
**ಸ್ಫುಟಂ** = ಸ್ಪಷ್ಟವಾಗಿ
**ವಿಜೃಂಭೇತ** = ಪರಿಪಕ್ವವಾಗುತ್ತದೆಯೋ
**ತದಾ** = ಆಗ
**ಮತ್ಪರಂ** = ನನಗಿಂತ ಬೇರೆಯಾದ
**ಕಿಂಚಿತ್** = ಯಾವ ವಸ್ತುವೂ
**ನಾಸ್ತಿ** = ಇಲ್ಲ

**ಇತಿ** = ಹೀಗೆಂದು ಈ ಬ್ರಹ್ಮತತ್ತ್ವ ವಿಷಯದಲ್ಲಿ

**ಮಾಯಾಸಮಯೋಪಪಾದಿತಂ** = ಮಾಯಾವಾದಿ ಶಾಸ್ತ್ರದಿಂದ ಸಮರ್ಥಿಸಲ್ಪಟ್ಟ ವಿಷಯವು

**ನಿರನ್ವಯಂ** = ನಿರಾಧಾರವಾದದ್ದು,

**ಇಹ** = ಈ ಪ್ರಮೇಯದಲ್ಲಿ

**ಮಾ ಸ್ಮ ವಿಶ್ವಸೀ** = ನಂಬಿಕೆ ಇಡಬೇಡ.

**ತಾತ್ಪರ್ಯ—** ಒಳ್ಳೆಯ ವ್ರತಗಳಲ್ಲಿ ಆಸಕ್ತನಾದ ಅಚ್ಯುತಪ್ರೇಕ್ಷನೆ ! ಮಾಯಾವಾದಿಗಳು ತಾನೇ ಬ್ರಹ್ಮ ಎಂಬ ಜ್ಞಾನವು ಪಕ್ವವಾದಾಗ ಪ್ರಪಂಚದಲ್ಲಿ ನನಗಿಂತ ಬೇರೆ ಯಾವ ವಸ್ತುವೂ ಇಲ್ಲ ಎಂದು ಅರಿವಾಗುವುದು. ಇದೇ ಅದ್ವೈತ ಸಿದ್ಧಾಂತ ಎಂದು ಪ್ರತಿಪಾದಿಸುವರು. ಹೀಗೆ ಆ ಮಾಯಾವಾದಿಗಳು ಸಮರ್ಥಿಸುವ ವಿಷಯವು ಯುಕ್ತಿಯಿಲ್ಲದ್ದು. ಆದ್ದರಿಂದ ಅದನ್ನು ನಂಬಬೇಡ.

**ವಿಗ್ರಹ—**

**ಮಾಯಾಸಮಯೋಪಪಾದಿತಂ—** ಮಾಯಯಾ ಕಲ್ಪಿತಃ ಮಾಯಾಕಲ್ಪಿತಃ, ಮಾಯಾಕಲ್ಪಿತಃ ಸಮಯಃ ಮಾಯಾಸಮಯಃ, ಮಾಯಾಸಮಯೇ ಉಪಪಾದಿತಂ ಮಾಯಾಸಮಯೋಪಪಾದಿತಂ, ತಂ ।

**ನಿರನ್ವಯಂ—** ನಿರ್ಗತಃ ಅನ್ವಯಃ ಯಸ್ಮಾತ್ ತತ್ ನಿರನ್ವಯಂ, ತತ್ ನಿರನ್ವಯಂ ।

**ಹೇಸುವ್ರತ—** ಶೋಭನಾನಿ ವ್ರತಾನಿ ಯಸ್ಯ ಸಃ ಸುವ್ರತಃ, ತಸ್ಯ ಸಂಬುದ್ಧಿಃ ಹೇ ಸುವ್ರತ ।

**ಕ್ರಿಯಾಪದ—** ವಿಜೃಂಭೇತ- ವಿ ಇತ್ಯುಪಸರ್ಗಪೂರ್ವಕಾತ್ ಜೃಭೀ ಗಾತ್ರವಿನಾಮೇ ಚ ಗಾತ್ರವಿನಾಮಾರ್ಥಕಾತ್ ಅಕರ್ಮಕಾತ್ ಆತ್ಮನೇಪದಿನಃ ಜೃಭೀಧಾತೋಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ''ವಿಜೃಂಭೇತ'' ಇತಿ ರೂಪಮ್ ।

ವಿಜೃಂಭೇತ ವಿಜೃಂಭೇಯಾತಾಂ ವಿಜೃಂಭೇರನ್, ವಿಜೃಂಭೇಥಾಃ ವಿಜೃಂಭೇಯಾಥಾಂ ವಿಜೃಂಭೇಧ್ವಂ, ವಿಜೃಂಭೇಯ ವಿಜೃಂಭೇವಹಿ ವಿಜೃಂಭೇಮಹಿ ॥

**ಕ್ರಿಯಾಪದ—** ವಿಶ್ವಸೀಃ- ವಿ ಇತ್ಯುಪಸರ್ಗಪೂರ್ವಕಾತ್ ಶ್ವಸಪ್ರಾಣನೇ ಇತಿ ಪ್ರಾಣನಾರ್ಥಕಾತ್ ಅಕರ್ಮಕಾತ್ ಪರಸ್ಮೈಪದಿನಃ, ಶ್ವಸಧಾತೋಃ ಲುಙ್ ಮಧ್ಯಮಪುರುಷೈಕವಚನೇ ವಿಶ್ವಸೀಃ ರೂಪಮ್ ।

ವ್ಯಶ್ವಸೀತ್ ವ್ಯಶ್ವಸಿಷ್ಟಾಂ ವ್ಯಶ್ವಸಿಷುಃ, ವ್ಯಶ್ವಸೀಃ ವ್ಯಶ್ವಸೀಷ್ಟಂ ವ್ಯಶ್ವಸಿಷ್ಟ, ವ್ಯಶ್ವಸಿಷಂ ವ್ಯಶ್ವಸಿಷ್ವ ವ್ಯಶ್ವಸಿಷ್ಮ ।

'ನ ಮಾಙ್ ಯೋಗೇ' ಈ ಸೂತ್ರದಿಂದ ಲುಙ್ ಲಕಾರಕ್ಕೆ ಮಾಙ್ (ಮಾ) ಯೋಗ ಬಂದಾಗ ಅಟ್ (ಅ) ಆಗಮ ಬರುವುದಿಲ್ಲ. ಆಗ ಮಾ ವಿ+ಶ್ವಸೀಃ ಎಂದೇ ರೂಪವಾಗುವುದು. ವಿ+ಅ+ಶ್ವಸೀತ್ (ಅಟ್ ಆಗಮವು)

★ ★ ★

ಆತ್ಮೈಕ್ಯೋಪಾಸನೆಯಿಂದ ಮೋಕ್ಷವಿಲ್ಲ - ಶ್ರೀಹರಿಯನ್ನೇ ಸೇವಿಸು

**ಯದೇತದಾತ್ಮೈಕ್ಯಮುಪಾಸ್ತಿಚೋದಿತಂ**
**ನ ಮೇ ಗುರೋರಪ್ಯಪರೋಕ್ಷತಾಂ ಗತಮ್ ।**
**ಪುರಾತನಾನಾಮಪಿ ಸೌಮ್ಯ ಕುತ್ರಚಿತ್**
**ತತೋ ಮುಕುಂದಂ ಭಜ ಸಂವಿದೇ ಮುದಾ ॥ 11 ॥**

**ಪದಚ್ಛೇದ—** ಯತ್, ಏತತ್, ಆತ್ಮೈಕ್ಯಂ, ಉಪಾಸ್ತಿಚೋದಿತಂ, ನ, ಮೇ, ಗುರೋಃ, ಅಪಿ, ಅಪರೋಕ್ಷತಾಂ ಗತಂ ಪುರಾತನಾನಾಂ ಅಪಿ, ಸೌಮ್ಯ ಕುತ್ರಚಿತ್, ತತಃ, ಮುಕುಂದಂ, ಭಜ, ಸಂವಿದೇ, ಮುದಾ ।

**ಅನ್ವಯ—** ಯತ್, ಆತ್ಮೈಕ್ಯಂ, ಉಪಾಸ್ತಿಚೋದಿತಂ, ಏತತ್, ಮೇ ಗುರೋಃ ಅಪಿ ಪುರಾತನಾನಾಂ ಅಪಿ ಕುತ್ರಚಿತ್ ಅಪರೋಕ್ಷತಾಂ ನ ಗತಂ, ಸೌಮ್ಯ ತತಃ ಮುಕುಂದಂ ಸಂವಿದೇ ಮುದಾ ಭಜ ।

**ಅನ್ವಯಾರ್ಥ—**

**ಯತ್ ಆತ್ಮೈಕ್ಯಂ** = ಯಾವ ಜೀವಬ್ರಹ್ಮಾಭೇದವು
**ಉಪಾಸ್ತಿಚೋದಿತಂ** = ಉಪಾಸನೆಗಾಗಿ ವಿಹಿತವಾಗಿದೆಯೋ,
**ಏತತ್** = ಇದು
**ಮೇ ಗುರೋಃ ಅಪಿ** = ನನ್ನ ಗುರುಗಳಿಗೂ,
**ಪುರಾತನಾನಾಂ ಅಪಿ** = ಹಿಂದಿನವರಿಗೂ
**ಕುತ್ರಚಿತ್** = ಯಾವಪ್ರಸಂಗದಲ್ಲಿಯೂ
**ಅಪರೋಕ್ಷತಾಂ** = ಪ್ರತ್ಯಕ್ಷವಿಷಯತ್ವವನ್ನು
**ನ ಗತಂ** = ಹೊಂದಲಿಲ್ಲ,
**ಸೌಮ್ಯ!** = ಎಲೈ ಮಂಗಳಕರನೇ!
**ತತಃ** = ಆದ್ದರಿಂದ
**ಮುಕುಂದಂ** = ಮೋಕ್ಷವನ್ನು ಕೊಡುವ ಶ್ರೀಮನ್ನಾರಾಯಣನನ್ನು
**ಸಂವಿದೇ** = ಜ್ಞಾನರೂಪವಾದ ಫಲಕ್ಕಾಗಿ
**ಮುದಾ** = ಸಂತೋಷದಿಂದ
**ಭಜ** = ಸೇವಿಸು.

**ತಾತ್ಪರ್ಯ—** ಅಚ್ಯುತಪ್ರೇಕ್ಷ! ಉಪಾಸನೆಗಾಗಿ ಆತ್ಮೈಕ್ಯವು (ಜೀವಬ್ರಹ್ಮಾಭೇದವು) ವಿಹಿತವೆಂದು ಅದ್ವೈತಿಗಳು ಹೇಳುತ್ತಾರೆ. ಆ ಆತ್ಮೈಕ್ಯವು ನನ್ನ ಗುರುಗಳಿಗೂ ಅನುಭವದಿಂದ ಪ್ರತ್ಯಕ್ಷವಾಗಿಲ್ಲ. ಅವರಿಗೆ ಮಾತ್ರವಲ್ಲ. ಹಿಂದಿನವರಿಗೂ ಎಲ್ಲಿಯೂ ಅನುಭವದಿಂದ ಪ್ರತ್ಯಕ್ಷವಾಗಿಲ್ಲ. ಆದ್ದರಿಂದ ನೀನು ಇದನ್ನು ತ್ಯಜಿಸಿ, ಮೋಕ್ಷದಾಯಕನಾದ ಮುಕುಂದನನ್ನು ತತ್ವಜ್ಞಾನಕ್ಕೋಸ್ಕರ ಸಂತೋಷದಿಂದ ಸೇವಿಸು.

**ವಿಗ್ರಹ—**

ಐಕ್ಯಂ = ಏಕಸ್ಯಭಾವಃ ಐಕ್ಯಂ ।
**ಆತ್ಮೈಕ್ಯಂ—** ಆತ್ಮನಃ ಐಕ್ಯಂ ಆತ್ಮೈಕ್ಯಂ ।
**ಉಪಾಸ್ತಿಚೋದಿತಂ—** ಉಪಾಸ್ತಯೇ ಚೋದಿತಂ ಉಪಾಸ್ತಿಚೋದಿತಂ।
**ಅಪರೋಕ್ಷತಾಂ—** ಅಪರೋಕ್ಷಸ್ಯ ಭಾವಃ ಅಪರೋಕ್ಷತಾ, ತಾಂ ಅಪರೋಕ್ಷತಾಂ ।
**ಮುಕುಂದಂ—** ಮುಕುಂ ದದಾತಿ ಇತಿ ಮುಕುಂದಃ, ತಂ ಮುಕುಂದಂ ।
**ಸಂವಿದೇ—** ಸಮೀಚೀನಾ ವಿತ್ ಸಂವಿತ್, ತಸ್ಯೈ ಸಂವಿದೇ ।

**ಕ್ರಿಯಾಪದ—** ಭಜ- ಭಜ ಸೇವಾಯಾಂ ಇತಿ ಸೇವಾರ್ಥಕಾತ್ ಭಜಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲೋಟ ಮಧ್ಯಮಪುರುಷೇ ಏಕವಚನೇ 'ಭಜ' ಇತಿ ರೂಪಮ್ ।

ಭಜತು-ಭಜತಾತ್ ಭಜತಾಂ ಭಜಂತು, ಭಜ-ಭಜತಾತ್ ಭಜತಂ ಭಜತ, ಭಜಾನಿ ಭಜಾವ ಭಜಾಮ ॥

★ ★ ★

### ಯಥಾರ್ಥಜ್ಞಾನಕ್ಕಾಗಿ ಅನಂತಾಸನನ ಸೇವೆ

**ಇತೀದಮಾದಿಶ್ಯ ವಚೋ ವಚಸ್ವಿನಿ**
**ಸ್ವಕೇ ಗುರೌ ಲೋಕಮಥಾನ್ಯಮೀಯುಷಿ ।**
**ಅಸೇವತಾಽಲೋಚ್ಯ ಮುಹುರ್ಗುರೋರ್ಗಿರಂ**
**ಸರೂಪ್ಯಪೀಠಾಲಯಮಿಂದಿರಾವರಮ್ ॥ 12 ॥**

**ಪದಚ್ಛೇದ—** ಇತಿ, ಇದಂ, ಆದಿಶ್ಯ, ವಚಃ, ವಚಸ್ವಿನಿ, ಸ್ವಕೇ, ಗುರೌ, ಲೋಕಂ, ಅಥ, ಅನ್ಯಂ, ಈಯುಷಿ, ಅಸೇವತ, ಆಲೋಚ್ಯ, ಮುಹುಃ ಗುರೋಃ, ಗಿರಂ, ಸಃ, ರೂಪ್ಯ ಪೀಠಾಲಯಂ, ಇಂದಿರಾವರಂ ।

**ಅನ್ವಯ—** ವಚಸ್ವಿನಿ ಸ್ವಕೇ ಗುರೌ ಇತಿ ಇದಂ ವಚಃ ಆದಿಶ್ಯ, ಅನ್ಯಂ ಲೋಕಂ ಈಯುಷಿ, ಅಥ ಸಃ ಗುರೋಃ ಗಿರಂ ಮುಹುಃ ಆಲೋಚ್ಯ, ರೂಪ್ಯಪೀಠಾಲಯಂ ಇಂದಿರಾವರಂ ಅಸೇವತ ।

**ಅನ್ವಯಾರ್ಥ—**

**ವಚಸ್ವಿನಿ** = ವಚನಚತುರರಾದ
**ಸ್ವಕೇ ಗುರೌ** = ತನ್ನ ಗುರುಗಳು
**ಇತಿ** = ಹೀಗೆ
**ಇದಂ ವಚಃ** = ಈ ಮಾತನ್ನು
**ಆದಿಶ್ಯ** = ಆದೇಶಿಸಿ
**ಅನ್ಯಂ ಲೋಕಂ** = ಬೇರೆ ಲೋಕವನ್ನು
**ಈಯುಷಿ** = ಹೊಂದಲು (ಮೃತರಾಗಲು)
**ಅಥ ಸಃ** = ಬಳಿಕ ಆ ಅಚ್ಯುತಪ್ರೇಕ್ಷರು
**ಗುರೋಃ ಗಿರಂ** = ಗುರುವಿನ ಮಾತನ್ನು
**ಮುಹುಃ ಆಲೋಚ್ಯ** = ಮತ್ತೆ ಮತ್ತೆ ಆಲೋಚಿಸಿ,
**ರೂಪ್ಯಪೀಠಾಲಯಂ** = ರೂಪ್ಯಪೀಠವೇ ವಾಸಸ್ಥಾನವಾಗುಳ್ಳ
**ಇಂದಿರಾವರಂ** = ಇಂದಿರಾದೇವಿಯ ಪತಿಯಾದ ಅನಂತೇಶ್ವರನನ್ನು
**ಅಸೇವತ** = ಸೇವಿಸಿದರು.

**ತಾತ್ಪರ್ಯ—** ವಾಗ್ಮಿಗಳಾದ ತನ್ನ ಗುರುಗಳು ಹೀಗೆ ಹೇಳಿ ಕೀರ್ತಿಶೇಷರಾದರು. ಅನಂತರ ಅಚ್ಯುತಪ್ರೇಕ್ಷರು ಗುರುಗಳ ಆ ಮಾತನ್ನು ಮತ್ತೆ ಮತ್ತೆ ಪರಿಶೀಲಿಸಿ ಉಡುಪಿಯಲ್ಲಿರುವ ಅನಂತಾಸನದೇವರನ್ನು ಭಜಿಸಿದರು.

**ವಿಗ್ರಹ—**

**ವಚಸ್ವಿನಿ—** ವಚಃ ಅಸ್ಯ ಅಸ್ತೀತಿ ವಚಸ್ವೀ, ತಸ್ಮಿನ್ ವಚಸ್ವಿನಿ ।

**ರೂಪ್ಯಪೀಠಾಲಯಂ—** ರೂಪ್ಯಪೀಠಂ ಆಲಯಃ ಯಸ್ಯ ಸಃ ರೂಪ್ಯಪೀಠಾಲಯಃ, ತಂ ರೂಪ್ಯ-ಪೀಠಾಲಯಂ ।

**ಇಂದಿರಾವರಂ—** ಇಂದಿರಾಯಾಃ ವರಃ ಇಂದಿರಾವರಃ, ತಂ ಇಂದಿರಾವರಂ ।

**ಕ್ರಿಯಾಪದ—** ಆಸೇವತ- ಸೇವೃ ಸೇವಾಯಾಂ ಸೇವಾರ್ಥಕಾತ್ ಸೇವೃಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಲಙ್ ಪ್ರಥಮಪುರುಷೈಕವಚನೇ ''ಅಸೇವತ'' ಇತಿ ರೂಪಂ ।

ಅಸೇವತ ಅಸೇವೇತಾಂ ಅಸೇವಂತ, ಅಸೇವಥಾಃ ಅಸೇವೇಥಾಂ ಅಸೇವಧ್ವಂ, ಅಸೇವೇ ಅಸೇವಾವಹಿ ಅಸೇವಾಮಹಿ ॥

★ ★ ★

ಹರಿಸೇವಾಫಲ ಜ್ಞಾನಪ್ರಾಪ್ತಿ

**ಸುಭಕ್ತಿನಾ ತೇನ ಸ ಭಕ್ತವತ್ಸಲೋ**
**ನಿಷೇವಿತಸ್ತತ್ರ ಪರಂ ಬುಭುತ್ಸುನಾ ।**
**ಭವಿಷ್ಯತಃ ಶಿಷ್ಯವರಾದ್ಧಿ ವಿದ್ಧಿ ಮಾ-**
**ಮಿತಿ ಪ್ರವಿಷ್ಟಃ ಪುರುಷಂ ತಮಭ್ಯಧಾತ್ ॥ 13 ॥**

**ಪದಚ್ಛೇದ—** ಸುಭಕ್ತಿನಾ, ತೇನ, ಸಃ, ಭಕ್ತವತ್ಸಲಃ, ನಿಷೇವಿತಃ, ತತ್ರ, ಪರಂ, ಬುಭುತ್ಸುನಾ, ಭವಿಷ್ಯತಃ, ಶಿಷ್ಯವರಾತ್, ಹಿ, ವಿದ್ಧಿ, ಮಾಂ, ಇತಿ, ಪ್ರವಿಷ್ಟಃ, ಪುರುಷಂ, ತಂ, ಅಭ್ಯಧಾತ್ ।

**ಅನ್ವಯ—** ಪರಂ ಬುಭುತ್ಸುನಾ, ಸುಭಕ್ತಿನಾ ತೇನ ತತ್ರ ನಿಷೇವಿತಃ ಭಕ್ತವತ್ಸಲಃ, ಸಃ ಪುರುಷಂ ಪ್ರವಿಷ್ಟಃ ತಂ ಭವಿಷ್ಯತಃ ಶಿಷ್ಯವರಾತ್ ಹಿ ಮಾಂ ವಿದ್ಧಿ, ಇತಿ ಅಭ್ಯಧಾತ್ ।

**ಅನ್ವಯಾರ್ಥ—**

**ಪರಂ** = ಸರ್ವೋತ್ತಮನಾದ ಶ್ರೀಹರಿಯನ್ನು
**ಬುಭುತ್ಸುನಾ** = ತಿಳಿಯಬೇಕೆಂಬ ಆಸೆಯಿಂದ ಯುಕ್ತರಾದ
**ಸುಭಕ್ತಿನಾ** = ಒಳ್ಳೆಯ ಭಕ್ತಿಯುಳ್ಳ
**ತೇನ** = ಆ ಅಚ್ಯುತಪ್ರೇಕ್ಷಾಚಾರ್ಯರಿಂದ
**ತತ್ರ** = ಆ ರಜತಪೀಠಪುರಕ್ಷೇತ್ರದಲ್ಲಿ (ಉಡುಪಿಯಲ್ಲಿ)
**ನಿಷೇವಿತಃ** = ಚೆನ್ನಾಗಿ ಸೇವಿಸಲ್ಪಟ್ಟ
**ಭಕ್ತವತ್ಸಲಃ** = ಭಕ್ತರಲ್ಲಿ ಪ್ರೀತಿಯುಳ್ಳ
**ಸಃ** = ಆ ಅನಂತೇಶ್ವರನು
**ಪುರುಷಂ ಪ್ರವಿಷ್ಟಃ** = ಒಬ್ಬ ಪುರುಷನಲ್ಲಿ ಪ್ರವೇಶಿಸಿ
**ಭವಿಷ್ಯತಃ** = ಮುಂದೆ ಬರಲಿರುವ
**ಶಿಷ್ಯವರಾತ್ ಹಿ** = ಶಿಷ್ಯಶ್ರೇಷ್ಠನಿಂದಲೇ
**ಮಾಂ** = ನನ್ನನ್ನು
**ವಿದ್ಧಿ ಇತಿ** = ತಿಳಿ ಎಂದು
**ತಂ** = ಆ ಅಚ್ಯುತಪ್ರೇಕ್ಷಾಚಾರ್ಯರನ್ನು ಕುರಿತು
**ಅಭ್ಯಧಾತ್** = ಹೇಳಿದನು.

**ತಾತ್ಪರ್ಯ—** ತುಂಬಾ ಭಕ್ತಿಯಿಂದ ಯುಕ್ತವಾಗಿರುವ, ಸರ್ವೋತ್ತಮನು ಯಾರು ಎಂದು ತಿಳಿಯಬೇಕೆಂಬ ಆಸೆಯಿಂದ ಯುಕ್ತರಾಗಿರುವ ಆ ಅಚ್ಯುತಪ್ರೇಕ್ಷಾಚಾರ್ಯರು ಅನಂತಾಸನನ್ನು ಭಕ್ತಿಯಿಂದ ಸೇವಿಸುತ್ತಿರಲು, ಆ

ಅನಂತೇಶ್ವರನು, ಒಬ್ಬ ಪುರುಷನನ್ನು ಪ್ರವೇಶಿಸಿದವನಾಗಿ ಮುಂದೆ ಶಿಷ್ಯನಾಗಲಿರುವ ಶಿಷ್ಯಶ್ರೇಷ್ಠನಿಂದ ನನ್ನನ್ನು ತಿಳಿ, ಎಂದು ಹೇಳಿದನು.

**ವಿಗ್ರಹ—**

**ಸುಭಕ್ತಿನಾ—** ಶೋಭನಾ ಭಕ್ತಿಃ ಯಸ್ಯ ಸಃ ಸುಭಕ್ತಿಃ, ತೇನ ಸುಭಕ್ತಿನಾ ।

**ಭಕ್ತವತ್ಸಲಃ—** ಭಕ್ತೇಷು ವತ್ಸಲಃ ಭಕ್ತವತ್ಸಲಃ ।

**ಬುಭುತ್ಸುನಾ—** ಬೋದ್ಧುಂ ಇಚ್ಛುಃ ಬುಭುತ್ಸುಃ, ತೇನ ಬುಭುತ್ಸುನಾ ।

**ಕ್ರಿಯಾಪದ—ಅಭ್ಯಧಾತ್**- ಅಭಿ ಇತ್ಯುಪಸರ್ಗಪೂರ್ವಕಾತ್ ಡುಧಾಞ್ ಧಾರಣಪೋಷಣಯೋಃ ಇತಿ ಧಾರಣ-ಪೋಷಣಾರ್ಥಕಾತ್ ಡುಧಾಞ್‌ಧಾತೋಃ ಲುಙ್ ಪ್ರಥಮಪುರುಷೈಕವಚನೇ 'ಅಭ್ಯಧಾತ್' ಇತಿ ರೂಪಮ್ ।

ಅಭ್ಯಧಾತ್ ಅಭ್ಯಧಾತಾಂ ಅಭ್ಯಧುಃ, ಅಭ್ಯಧಾಃ ಅಭ್ಯಧಾತಂ ಅಭ್ಯಧಾತ, ಅಭ್ಯಧಾಂ ಅಭ್ಯಧಾವ ಅಭ್ಯಧಾಮ ॥

**ವಿದ್ಧಿ—** ವಿದಜ್ಞಾನೇ ಇತಿ ಜ್ಞಾನಾರ್ಥಕಾತ್, ಸಕರ್ಮಕಾತ್, ಪರಸ್ಮೈಪದಿನಃ ವಿದಧಾತೋಃ ಲೋಟಿ ಮಧ್ಯಮ-ಪುರುಷೈಕವಚನೇ ವಿದ್ಧಿ ಇತಿ ರೂಪಮ್ ।

ವೇತ್ತು ವಿತ್ತಾತ್, ವಿತ್ತಾಂ ವಿದಂತು, ವಿದ್ಧಿ ವಿತ್ತಾತ್, ವಿತ್ತಂ ವಿತ್ತ, ವೇದಾನಿ ವೇದಾವ ವೇದಾಮ ॥

★ ★ ★

ಶಿಷ್ಯರೂಪದಿಂದ ಗುರುವಿನ ಅನುಗ್ರಹ

**ಪ್ರತೀಕ್ಷಮಾಣಂ ತಮನುಗ್ರಹಂ ಮುದಾ**
**ನಿಷೇವಮಾಣಂ ಪುನರಂಬುಜೇಕ್ಷಣಮ್ ।**
**ಸತಾಂ ಗುರುಃ ಕಾರಣಮಾನುಷಾಕೃತಿ-**
**ರ್ಯತಿಂ ಪ್ರಶಾಂತಂ ತಮುಪಾಸಸಾದ ಸಃ ॥ 14 ॥**

**ಪದಚ್ಛೇದ—** ಪ್ರತೀಕ್ಷಮಾಣಂ, ತಂ, ಅನುಗ್ರಹಂ, ಮುದಾ, ನಿಷೇವಮಾಣಂ, ಪುನಃ, ಅಂಬುಜೇಕ್ಷಣಂ, ಸತಾಂ, ಗುರುಃ, ಕಾರಣಮಾನುಷಾಕೃತಿಃ, ಯತಿಂ, ಪ್ರಶಾಂತಂ, ತಂ, ಉಪಾಸಸಾದ, ಸಃ ।

**ಅನ್ವಯ—** ಸತಾಂ ಗುರುಃ, ಕಾರಣಮಾನುಷಾಕೃತಿಃ ಸಃ, ತಂ ಅನುಗ್ರಹಂ ಪ್ರತೀಕ್ಷಮಾಣಂ, ಪುನಃ ಮುದಾ ಅಂಬುಜೇಕ್ಷಣಂ ನಿಷೇವಮಾಣಂ, ಪ್ರಶಾಂತಂ ತಂ ಯತಿಂ ಉಪಾಸಸಾದ ।

**ಅನ್ವಯಾರ್ಥ—**

**ಸತಾಂ** = ಸಜ್ಜನರುಗಳ

**ಗುರುಃ** = ಗುರುವಾಗಿರುವ

**ಕಾರಣಮಾನುಷಾಕೃತಿಃ** = ಸಿದ್ಧಾಂತತತ್ತ್ವವನ್ನು ಪ್ರಚಾರಮಾಡುವ ಕಾರಣದಿಂದ ಮನುಷ್ಯರೂಪವನ್ನು ಧರಿಸಿರುವ

**ಸಃ** = ಆ ವಾಸುದೇವನು,

**ತಂ** = ಆ ವಿಷ್ಣುವು ಮಾಡಿದ (ಮುಂದೆ ಬರಲಿರುವ ಶಿಷ್ಯನಿಂದ ಪರಮಾತ್ಮನನ್ನು ತಿಳಿಯುವ)

**ಅನುಗ್ರಹಂ** = ಅನುಗ್ರಹವನ್ನು

**ಪ್ರತೀಕ್ಷಮಾಣಂ** = ನಿರೀಕ್ಷಿಸುತ್ತಿರುವ
**ಪುನಃ** = ಮತ್ತೆ
**ಮುದಾ** = ಸಂತೋಷದಿಂದ
**ಅಂಬುಜೇಕ್ಷಣಂ** = ಕಮಲದಂತೆ ನೇತ್ರಗಳಿಂದ ಯುಕ್ತನಾಗಿರುವ ಅನಂತೇಶ್ವರನನ್ನು
**ನಿಷೇವಮಾಣಂ** = ಸೇವಿಸುತ್ತಿರುವ
**ಪ್ರಶಾಂತಂ** = ಪರಮಶಾಂತವಾಗಿರುವ
**ತಂ** = ಆ
**ಯತಿಂ** = ಸಂನ್ಯಾಸಿಗಳಾದ ಅಚ್ಯುತಪ್ರೇಕ್ಷಾಚಾರ್ಯರನ್ನು
**ಉಪಾಸಸಾದ** = ಸಮೀಪಿಸಿದನು.

**ತಾತ್ಪರ್ಯ—** 'ಮುಂದೆ ಬರಲಿರುವ ಶಿಷ್ಯನಿಂದ ನನ್ನನ್ನು ತಿಳಿಯುವಿ' ಎಂದು ಅನಂತೇಶ್ವರನು ಹೇಳಿದನು. ಆ ಅನುಗ್ರಹವು ಯಾವಾಗ ಏರ್ಪಡುತ್ತದೆ ಎಂದು ಅಚ್ಯುತಪ್ರೇಕ್ಷಾಚಾರ್ಯರು ಪ್ರತೀಕ್ಷಿಸುತ್ತಿದ್ದರು. ಕಮಲದಂತೆ ನೇತ್ರಗಳಿಂತ ಯುಕ್ತನಾಗಿರುವ ಆ ಸ್ವಾಮಿಯನ್ನು ಪುನಃ ಸೇವಿಸುತ್ತಿದ್ದರು. ಸಜ್ಜನರುಗಳಿಗೆ ಗುರುವಾಗಿಯೂ ದ್ವೈತಸಿದ್ಧಾಂತ ತತ್ವವನ್ನು ಪ್ರಚಾರಮಾಡುವ ಕಾರಣದಿಂದ ಮನುಷ್ಯಾಕಾರವನ್ನು ಧರಿಸಿರುವವರಾದ ವಾಯುದೇವರು, ಪರಮಶಾಂತರಾಗಿರುವ ಯತಿವರ್ಯರಿಗೆ ಶಿಷ್ಯರಾಗಲು ಅವರ ಸಮೀಪ ಹೋದರು.

**ವಿಗ್ರಹ—**

**ಪ್ರತೀಕ್ಷಮಾಣಂ—** ಪ್ರತೀಕ್ಷತೇ ಇತಿ ಪ್ರತೀಕ್ಷಮಾಣಃ, ತಂ ಪ್ರತೀಕ್ಷಮಾಣಂ ।
**ನಿಷೇವಮಾಣಂ—** ನಿಷೇವತೇ ಇತಿ ನಿಷೇವಮಾಣಃ, ತಂ ನಿಷೇವಮಾಣಂ ।
**ಅಂಬುಜೇಕ್ಷಣಂ—** ಅಂಬುಜೇ ಇವ ಈಕ್ಷಣೇ ಯಸ್ಯ ಸಃ ಅಂಬುಜೇಕ್ಷಣಃ, ತಂ ಅಂಬುಜೇಕ್ಷಣಂ ।
**ಕಾರಣಮಾನುಷಾಕೃತಿಃ—** ಕಾರಣೇನ ಮಾನುಷಾಕೃತಿಃ ಯಸ್ಯ ಸಃ ಕಾರಣಮಾನುಷಾಕೃತಿಃ ।

**ಕ್ರಿಯಾಪದ—** ಉಪಾಸಸಾದ- ಉಪ ಆಙ್ ಇತ್ಯುಪಸರ್ಗದ್ವಯಪೂರ್ವಕಾತ್ ಷದ್ ಲೃ-ವಿಶರಣಗತ್ಯ-ವಸಾದನೇಷು ಇತಿ ವಿಶರಣಗತ್ಯವಸಾಧನಾರ್ಥಕಾತ್ ಷದ್ ಲೃ ಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಉಪಾಸಸಾದ'' ಇತಿ ರೂಪಮ್ ।

| | | |
|---|---|---|
| ಉಪಾಸಸಾದ | ಉಪಾಸೇದತುಃ | ಉಪಾಸೇದುಃ, |
| ಉಪಾಸೇದಿಥ-ಉಪಾಸಸತ್ಥ | ಉಪಾಸೇದಥುಃ | ಉಪಾಸೇದ, |
| ಉಪಾಸಸಾದ-ಉಪಾಸಸದ | ಉಪಾಸೇದಿವ | ಉಪಾಸೇದಿಮ ॥ |

★ ★ ★

ವಾಸುದೇವನ ಸನ್ಯಾಸ ನಿಶ್ಚಯ - ಗಾಬರಿಯಾದ ದಂಪತಿಗಳು

**ಸುತಂ ಯತೀಂದ್ರಾನುಚರಂ ವಿರಾಗಿಣಂ**
**ನಿಶಮ್ಯ ಸಂನ್ಯಾಸನಿಬದ್ಧಮಾನಸಮ್ ।**
**ಸುವತ್ಸಲೌ ರೂಪ್ಯತಲಾಲಯಸ್ಥಿತಂ**
**ವಿಯೋಗತಾಂತೌ ಪಿತರೌ ಸಮೀಯತುಃ ॥ 15 ॥**

**ಪದಚ್ಛೇದ—** ಸುತಂ, ಯತೀಂದ್ರಾನುಚರಂ, ವಿರಾಗಿಣಂ, ನಿಶಮ್ಯ, ಸಂನ್ಯಾಸನಿಬದ್ಧಮಾನಸಂ, ಸುವತ್ಸಲೌ, ರೂಪ್ಯತಲಾಲಯಸ್ಥಿತಂ ವಿಯೋಗತಾಂತೌ, ಪಿತರೌ, ಸಮೀಯತುಃ ।

**ಅನ್ವಯ—** ಯತೀಂದ್ರಾನುಚರಂ ವಿರಾಗಿಣಂ ಸಂನ್ಯಾಸನಿಬದ್ಧಮಾನಸಂ ರೂಪ್ಯತಲಾಲಯಸ್ಥಿತಂ ಸುತಂ ನಿಶಮ್ಯ, ಸುವತ್ಸಲೌ ವಿಯೋಗತಾಂತೌ ಪಿತರೌ ಸಮೀಯತುಃ ।

**ಅನ್ವಯಾರ್ಥ—**

**ಯತೀಂದ್ರಾನುಚರಂ** = ಯತಿಗಳಲ್ಲಿ ಶ್ರೇಷ್ಠರಾಗಿರುವ ಅಚ್ಯುತಪ್ರೇಕ್ಷಾಚಾರ್ಯರನ್ನು ಅನುಸರಿಸಿ ಹೋಗು-ತ್ತಿರುವ ಶಿಷ್ಯನಾದ

**ವಿರಾಗಿಣಂ** = ವೈರಾಗ್ಯದಿಂದ ಯುಕ್ತನಾಗಿರುವ

**ಸಂನ್ಯಾಸನಿಬದ್ಧಮಾನಸಂ** = ಸನ್ಯಾಸದಲ್ಲಿ ಇಡಲ್ಪಟ್ಟ ಮನಸ್ಸುಳ್ಳ

**ರೂಪ್ಯತಲಾಲಯಸ್ಥಿತಂ** = ಬೆಳ್ಳಿಯು ಕೆಳಭಾಗವೇ ಯಾವ ಮಂದಿರಕ್ಕೆ ಇದೆಯೋ ಆ ರೂಪ್ಯತಲದಲ್ಲಿರುವ (ಉಡುಪಿಯಲ್ಲಿರುವ)

**ಸುತಂ** = ತಮ್ಮ ಮಗನಾಗಿರುವ ವಾಸುದೇವನನ್ನು

**ನಿಶಮ್ಯ** = ತಿಳಿದು

**ಸುವತ್ಸಲೌ** = ಅತ್ಯಂತ ವಾತ್ಸಲ್ಯದಿಂದ ಯುಕ್ತರಾಗಿರುವ

**ವಿಯೋಗತಾಂತೌ** = ವಿರಹದಿಂದ ತುಂಬಾ ಖಿನ್ನರಾಗಿರುವ

**ಪಿತರೌ** = ವಾಸುದೇವನ ತಂದೆಯೂ ತಾಯಿಯೂ

**ಸಮೀಯತುಃ** = ಸಮೀಪಕ್ಕೆ ಬಂದರು.

**ತಾತ್ಪರ್ಯ—** ಆಗ ಮಗನಲ್ಲಿ ಅತಿಶಯ ಮಮತೆಯುಳ್ಳ ವಾಸುದೇವನ ತಂದೆತಾಯಿಗಳು ಅವನ ಅಗಲಿಕೆ-ಯಿಂದ ವ್ಯಥೆಗೊಂಡವರಾಗಿ, ತಮ್ಮ ಮಗನು ಅಚ್ಯುತಪ್ರೇಕ್ಷರ ಶಿಷ್ಯನಾಗಿ ವೈರಾಗ್ಯಶಾಲಿಯಾಗಿದ್ದಾನೆ. ಸಂನ್ಯಾಸವನ್ನು ಸ್ವೀಕರಿಸುವುದರಲ್ಲಿ ನಿಶ್ಚಿತಮನಸ್ಸುಳ್ಳವನಾಗಿ ಉಡುಪಿಯಲ್ಲಿದ್ದಾನೆ ಎಂಬುದನ್ನು ಕೇಳಿ ಅವನಿದ್ದಲ್ಲಿಗೆ ಬಂದರು.

**ವಿಗ್ರಹ—**

**ಸಂನ್ಯಾಸನಿಬದ್ಧಮಾನಸಂ** = ಸನ್ಯಾಸೇ ನಿಬದ್ಧಂ ಸಂನ್ಯಾಸನಿಬದ್ಧಂ, ಸಂನ್ಯಾಸನಿಬದ್ಧಂ ಮಾನಸಂ ಯಸ್ಯ ಸಃ ಸಂನ್ಯಾಸನಿಬದ್ಧಮಾನಸಃ, ತಂ ಸಂನ್ಯಾಸನಿಬದ್ಧಮಾನಸಂ ।

**ವಿರಾಗಿಣಂ** = ವಿರಾಗಃ ಅಸ್ಯ ಅಸ್ತೀತಿ ವಿರಾಗೀ, ತಂ ವಿರಾಗಿಣಂ ।

**ವಿಯೋಗತಾಂತೌ—** ವಿಯೋಗೇನ ತಾಂತೌ ವಿಯೋಗತಾಂತೌ ।

**ಮಾತಾಪಿತರೌ—** ಮಾತಾ ಚ ಪಿತಾ ಚ ಪಿತರೌ । 'ಪಿತಾಮಾತ್ರಾ' ಎಂಬ ವ್ಯಾಕರಣ ಸೂತ್ರದ ಪ್ರಕಾರ ಏಕಶೇಷ ಬಂದು ಪಿತೃಶಬ್ದ ಮಾತ್ರ ಉಳಿದಿದೆ.

**ರೂಪ್ಯತಲಾಲಯಸ್ಥಿತಂ—** ರೂಪ್ಯತಲೇ ಆಲಯಃ ರೂಪ್ಯತಲಾಲಯಃ, ರೂಪ್ಯತಲಾಲಯೇ ಸ್ಥಿತಃ ರೂಪ್ಯ-ತಲಾಲಯಸ್ಥಿತಃ, ತಂ ರೂಪತಲಾಲಯಸ್ಥಿತಂ ।

**ಯತೀಂದ್ರಾನುಚರಂ—** ಯತೀನಾಂ ಇಂದ್ರಃ ಯತೀಂದ್ರಃ, ಯತೀಂದ್ರಸ್ಯ ಅನುಚರಃ ಯತೀಂದ್ರಾನುಚರಃ, ತಂ ಯತೀಂದ್ರಾನುಚರಂ ।

**ಕ್ರಿಯಾಪದ—** ಸಮೀಯತುಃ- ಸಂ ಇತ್ಯುಪಸರ್ಗಪೂರ್ವಕಾತ್ ಇಣ್‌ಗತೌ ಗತ್ಯರ್ಥಕಾತ್ ಸಕರ್ಮಕಾತ್ ಪರಸ್ಮೈಪದಿನಃ ಇಣ್ ಧಾತೋಃ ಲಿಟಿ ಪ್ರಥಮಪುರುಷೇ ದ್ವಿವಚನೇ ''ಸಮೀಯತುಃ'' ಇತಿ ರೂಪಮ್ ।

| | | |
|---|---|---|
| ಸಮೀಯಾಯ | ಸಮೀಯತುಃ | ಸಮೀಯುಃ, |
| ಸಮೀಯಮಿಥ-ಸಮೀಯೇಥ | ಸಮೀಯಥುಃ | ಸಮೀಯ, |
| ಸಮೀಯಾಯ-ಸಮೀಯಯ | ಸಮೀಯಿವ | ಸಮೀಯಿಮ ॥ |

★ ★ ★

ಮಗನಿಗೇ ಎರಗಿದ ಮಾತಾಪಿತೃಗಳು

**ವರಾಶ್ರಮಸ್ತೇ ಜರತೋರನಾಥಯೋ-**
**ರ್ನ ಜೀವತೋಃ ಸ್ಯಾದಯಿ ನಂದನಾವಯೋಃ ।**
**ಸಯಾಚನಂ ವಾಕ್ಯಮುದೀರ್ಯ ತಾವಿದಂ**
**ಪರೀತ್ಯ ಪುತ್ರಾಯ ನತಿಂ ವಿತೇನತುಃ ॥ 16 ॥**

**ಪದಚ್ಛೇದ—** ವರಾಶ್ರಮಃ, ತೇ, ಜರತೋಃ, ಅನಾಥಯೋಃ, ನ, ಜೀವತೋಃ, ಸ್ಯಾತ್, ಅಯಿ, ನಂದನ, ಆವಯೋಃ, ಸಯಾಚನಂ, ವಾಕ್ಯಂ, ಉದೀರ್ಯ, ತೌ, ಇದಂ, ಪರೀತ್ಯ, ಪುತ್ರಾಯ, ನತಿಂ, ವಿತೇನತುಃ ।

**ಅನ್ವಯ—** ಅಯಿ ನಂದನ, ಜರತೋಃ ಅನಾಥಯೋಃ ಆವಯೋಃ ಜೀವತೋಃ ತೇ ವರಾಶ್ರಮಃ ನ ಸ್ಯಾತ್, ತೌ ಸಯಾಚನಂ ಇದಂ ವಾಕ್ಯಂ ಉದೀರ್ಯ, ಪುತ್ರಾಯ ಪರೀತ್ಯ ನತಿಂ ವಿತೇನತುಃ ।

**ಅನ್ವಯಾರ್ಥ—**

**ಅಯಿ ನಂದನ** = ಎಲೇ ಮಗನೇ,
**ಜರತೋಃ** = ಮುದುಕರಾದ
**ಅನಾಥಯೋಃ** = ಕಾಪಾಡುವವರಿಲ್ಲದ
**ಆವಯೋಃ** = ನಾವಿಬ್ಬರೂ
**ಜೀವತೋಃ (ಸತೋಃ)** = ಬದುಕಿರಲು
**ತೇ ವರಾಶ್ರಮಃ** = ನಿನಗೆ ಶ್ರೇಷ್ಠವಾದ ಸಂನ್ಯಾಸಾಶ್ರಮದ ಸ್ವೀಕಾರವು
**ನ ಸ್ಯಾತ್** = ಆಗದಿರಲಿ (ಎಂದು)
**ತೌ** = ಅವರಿಬ್ಬರೂ
**ಸಯಾಚನಂ** = ಪ್ರಾರ್ಥನೆಯಿಂದ ಸಹಿತವಾಗಿರುವ
**ಇದಂ ವಾಕ್ಯಂ** = ಈ ಮಾತನ್ನು
**ಉದೀರ್ಯ** = ಹೇಳಿ
**ಪುತ್ರಾಯ** = ಮಗನಿಗೆ
**ಪರೀತ್ಯ** = ಪ್ರದಕ್ಷಿಣೆ ಮಾಡಿ
**ನತಿಂ** = ನಮಸ್ಕಾರವನ್ನು
**ವಿತೇನತುಃ** = ಮಾಡಿದರು.

**ತಾತ್ಪರ್ಯ—** ಆ ತಂದೆತಾಯಿಗಳು ''ಮಗು! ನಾವು ಮುದುಕರು, ನಮ್ಮ ಕಾಪಾಡುವವರು ಬೇರೆ ಯಾರೂ ಇಲ್ಲ. ಇಂತಹ ನಾವು ಬದುಕಿರುವಾಗ ನೀನು ಸಂನ್ಯಾಸವನ್ನು ಸ್ವೀಕರಿಸುವುದು ಉಚಿತವಲ್ಲ'' ಎಂದು ಬೇಡಿಕೊಂಡರು. ಹೀಗೆ ಹೇಳಿ ಅವರು ಮಗನ ಮನಸ್ಸನ್ನು ಬದಲಾಯಿಸಲು ಅವನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದರು.

**ವಿಗ್ರಹ—**

**ವರಾಶ್ರಮಃ—** ವರಶ್ಚಾಸೌ ಆಶ್ರಮಶ್ಚ ವರಾಶ್ರಮಃ ।

**ಜರತೋಃ—** ಜೀರ್ಯತೌ ಇತಿ ಜರಂತೌ, ತಯೋಃ ಜರತೋಃ।

**ಅನಾಥಯೋಃ—** ನ ವಿದ್ಯತೇ ನಾಥಃ ಯಯೋಃ ತೌ ಅನಾಥೌ, ತಯೋಃ ಅನಾಥಯೋಃ ।

**ಜೀವತೋಃ—** ಜೀವತಃ ಇತಿ ಜೀವಂತೌ, ತಯೋಃ ಜೀವತೋಃ ।

**ಆವಯೋಃ—** ಅಹಂ ಚ ಭಾರ್ಯಾ ಚ ಆವಾಂ, ತಯೋಃ ಆವಯೋಃ ।

**ಸಯಾಚನಂ—** ಯಾಚನಯಾ ಸಹಿತಂ ಸಯಾಚನಂ ।

**ಕ್ರಿಯಾಪದ—** **ವಿತೇನತುಃ-** ವಿ ಇತ್ಯುಪಸರ್ಗಪೂರ್ವಕಾತ್ ತನು ವಿಸ್ತಾರೇ ಇತಿ ವಿಸ್ತಾರಾರ್ಥಕಾತ್ ಸಕರ್ಮಕಾತ್ ಪರಸ್ಮೈಪದಿನಃ ಲಿಟ್ ಪ್ರಥಮಪುರುಷೇ ದ್ವಿವಚನೇ ವಿತೇನತುಃ ಇತಿ ರೂಪಮ್ ।

ವಿತತಾನ ವಿತೇನತುಃ ವಿತೇನುಃ, ವಿತೇನಿಥ ವಿತೇನಥುಃ ವಿತೇನ, ವಿತತಾನ -ವಿತತನ ವಿತೇನಿವ ವಿತೇನಿಮ ॥

★ ★ ★

### ದೈವೇಚ್ಛೆಯಂತೆ ದೊರಕಿದ ಅನುಜ್ಞೆ

**ನತಿರ್ನ ಶುಶ್ರೂಷುಜನಾಯ ಶಸ್ಯತೇ**
**ನತಂ ಭವದ್ಭ್ಯಾಂ ಸ್ಫುಟಮತ್ರ ಸಾಂಪ್ರತಮ್ ।**
**ಅಹೋ ವಿಧಾತ್ರಾ ಸ್ವಯಮೇವ ದಾಪಿತಾ**
**ತದಭ್ಯನುಜ್ಞೇತಿ ಜಗಾದ ಸ ಪ್ರಭುಃ ॥ 17 ॥**

**ಪದಚ್ಛೇದ—** ನತಿಃ, ನ, ಶುಶ್ರೂಷುಜನಾಯ, ಶಸ್ಯತೇ, ನತಂ, ಭವದ್ಭ್ಯಾಂ, ಸ್ಫುಟಂ, ಅತ್ರ, ಸಾಂಪ್ರತಂ, ಅಹೋ ವಿಧಾತ್ರಾ, ಸ್ವಯಮೇವ, ದಾಪಿತಾ, ತದಭ್ಯನುಜ್ಞಾ, ಇತಿ, ಜಗಾದ, ಸಃ, ಪ್ರಭುಃ ।

**ಅನ್ವಯ—** ಶುಶ್ರೂಷುಜನಾಯ ನತಿಃ ನ ಶಸ್ಯತೇ, ಅತ್ರ ಸಾಂಪ್ರತಂ ಸ್ಫುಟಂ ಭವದ್ಭ್ಯಾಂ ನತಂ, ಅಹೋ, ವಿಧಾತ್ರಾ ಸ್ವಯಂ ಏವ ತತ್ ಅಭ್ಯನುಜ್ಞಾ ದಾಪಿತಾ, ಇತಿ ಸಃ ಪ್ರಭುಃ ಜಗಾದ ।

**ಅನ್ವಯಾರ್ಥ—**

**ಶುಶ್ರೂಷುಜನಾಯ** = ಸೇವಕಜನರಿಗೆ

**ನತಿಃ** = ನಮಸ್ಕಾರವು

**ನ ಶಸ್ಯತೇ** = ಪ್ರಶಸ್ತವಲ್ಲ,

**ಅತ್ರ** = ಈ ಸೇವಕನಾದ ನನ್ನಲ್ಲಿ

**ಸಾಂಪ್ರತಂ** = ಈಗ

**ಭವದ್ಭ್ಯಾಂ** = ನಿಮ್ಮಿಬ್ಬರಿಂದ

**ಸ್ಫುಟಂ** = ಸ್ಪಷ್ಟವಾಗಿ

ನತಂ = ನಮಸ್ಕಾರ ಮಾಡಲ್ಪಟ್ಟಿತು.

ಅಹೋ = ಬಹಳ ಆಶ್ಚರ್ಯಕರವಾದದ್ದು

ವಿಧಾತ್ರಾ = ಸರ್ವರನ್ನು ಪ್ರೇರಿಸುವ ವಿಷ್ಣುವಿನಿಂದ

ಸ್ವಯಮೇವ = ತಾನಾಗಿಯೇ

ತದಭ್ಯನುಜ್ಞಾ = ಆ (ಸಂನ್ಯಾಸಾಶ್ರಮವನ್ನು ಸ್ವೀಕರಿಸುವ) ಅನುಮತಿಯು

ದಾಪಿತಾ = ಕೊಡಿಸಲ್ಪಟ್ಟಿತು

ಇತಿ = ಹೀಗೆಂದು

ಸಃ ಪ್ರಭುಃ = ಆ ಸಮರ್ಥನಾದ ವಾಸುದೇದೇವನು

ಜಗಾದ = ಹೇಳಿದನು.

ತಾತ್ಪರ್ಯ— ಉತ್ತಮಜನರಿಂದ ಸೇವಕಜನರಿಗೆ ನಮಸ್ಕಾರವು ಪ್ರಶಸ್ತವಲ್ಲ. ನೀವಿಬ್ಬರೂ ಸ್ಪಷ್ಟವಾಗಿ ಎಲ್ಲರ ಎದುರಿನಲ್ಲಿಯೇ ನನಗೆ ನಮಸ್ಕರಿಸಿದಿರಿ. ''ಇದಲ್ಲವೇ ಆಶ್ಚರ್ಯ?'' ಭಗವಂತನು ತಾನಾಗಿಯೇ ನಿಮ್ಮಿಂದ ಅನುಮತಿ-ಯನ್ನು ಕೊಡಿಸಿದನು ಎಂದು ಆ ಸಮರ್ಥನಾದ ವಾಸುದೇವನು ಹೇಳಿದನು.

ವಿಗ್ರಹ—

ತದಭ್ಯನುಜ್ಞಾ— ತಸ್ಯ ಅಭ್ಯನುಜ್ಞಾ ತದಭ್ಯನುಜ್ಞಾ ।

ಶುಶ್ರೂಷುಜನಾಯ— ಸೇವಿತಂ ಇಚ್ಛುಃ ಶುಶ್ರೂಷುಃ, ಶುಶ್ರೂಷುಶ್ಚಾಸೌ ಜನಶ್ಚ ಶುಶ್ರೂಷುಜನಃ, ತಸ್ಮೈ ಶುಶ್ರೂಷುಜನಾಯ ।

ಭವದ್ಭ್ಯಾಂ— ಭವಾಂಶ್ಚ ಭವತೀ ಚ ಭವಂತೌ, ತಾಭ್ಯಾಂ ಭವದ್ಭ್ಯಾಂ ।

ಕ್ರಿಯಾಪದ— ಶಸ್ಯತೇ- ಶಂಸು ಸ್ತುತೌ ಇತಿ ಸ್ತುತ್ಯರ್ಥಕಾತ್ ಶಂಸು ಧಾತೋಃ ಲಟಿ ಪ್ರಥಮಪುರುಷೇ ಏಕವಚನೇ ''ಶಸ್ಯತೇ'' ಇತಿ ರೂಪಮ್ ।

ಶಸ್ಯತೇ ಶಸ್ಯೇತೇ ಶಸ್ಯಂತೇ, ಶಸ್ಯೇಸೇ ಶಸ್ಯೇಥೇ ಶಸ್ಯಧ್ವೇ, ಶಸ್ಯೇ ಶಸ್ಯಾವಹೇ ಶಸ್ಯಾಮಹೇ ॥

ಜಗಾದ- ಗದ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಸಕರ್ಮಕಾತ್ ಪರಸ್ಮೈಪದಿನಃ ಗದಧಾತೋಃ ಲಿಟಿ ಪ್ರಥಮಪುರುಷೈಕವಚನೇ ಜಗಾದ ಇತಿ ರೂಪಮ್ ।

ಜಗಾದ ಜಗದತುಃ ಜಗದುಃ, ಜಗದಿಥ ಜಗದಥುಃ ಜಗದ, ಜಗಾದ-ಜಗದ ಜಗದಿವ ಜಗದಿಮ ॥

★ ★ ★

### ಚಿಂತಾಕ್ರಾಂತರಾದ ಮಧ್ಯಗೇಹರು

**ಅನುತ್ತರಜ್ಞಃ ಸ ತಮರ್ಥಯನ್ ಪುನರ್-**
**ಯತೀಂದ್ರಮಾನಮ್ಯ ಗತಃ ಪ್ರಿಯಾಯುತಃ ।**
**ಗೃಹೇ ವಸನ್ ಕಲ್ಪಸಮಾನ್ ಕ್ಷಣಾನ್ ನಯನ್**
**ಸುತಾನನೇಂದೋರನಿಶಂ ತತೋಽಸ್ಮರತ್ ॥ 18 ॥**

ಪದಚ್ಛೇದ— ಅನುತ್ತರಜ್ಞಃ, ಸಃ, ತಂ, ಅರ್ಥಯನ್, ಪುನಃ, ಯತೀಂದ್ರಂ, ಆನಮ್ಯ, ಗತಃ, ಪ್ರಿಯಾಯುತಃ, ಗೃಹೇ, ವಸನ್ ಕಲ್ಪಸಮಾನ್, ಕ್ಷಣಾನ್, ನಯನ್, ಸುತಾನನೇಂದೋಃ, ಅನಿಶಂ, ತತಃ, ಅಸ್ಮರತ್ ।

**ಅನ್ವಯ—** ತತಃ ಅನುತ್ತರಜ್ಞಃ ಸಃ ಪ್ರಿಯಾಯುತಃ ಪುನಃ ತಂ ಅರ್ಥಯನ್ ಯತೀಂದ್ರಂ ಆನಮ್ಯ ಗತಃ, ಗೃಹೇ ವಸನ್, ಕ್ಷಣಾನ್ ಕಲ್ಪಸಮಾನ್ ನಯನ್, ಅನಿಶಂ ಸುತಾನನೇಂದೋಃ ಅಸ್ಮರತ್ ।

**ಅನ್ವಯಾರ್ಥ—**

**ತತಃ** = ಆನಂತರದಲ್ಲಿ

**ಅನುತ್ತರಜ್ಞಃ ಸಃ** = ಉತ್ತರವನ್ನು ಹೇಳಲಾಗದ ಅವರು (ಮಧ್ಯಗೇಹ ಭಟ್ಟರು)

**ಪ್ರಿಯಾಯುತಃ** = ಮಡದಿಯನೊಡಗೂಡಿ

**ಪುನಃ** = ಇನ್ನೊಮ್ಮೆ

**ತಂ** = ಆ ವಾಸುದೇವನನ್ನು

**ಅರ್ಥಯನ್** = ಬೇಡುತ್ತಿರುವವರಾಗಿ

**ಯತೀಂದ್ರಂ** = ಯತಿಶ್ರೇಷ್ಠರನ್ನು (ಅಚ್ಯುತಪ್ರೇಕ್ಷರನ್ನು)

**ಆನಮ್ಯ** = ನಮಸ್ಕರಿಸಿ

**ಗತಃ ಸನ್** = ಮನೆಗೆ ಹೋದವರಾಗಿ

**ಗೃಹೇ** = ಮನೆಯಲ್ಲಿ

**ವಸನ್** = ವಾಸವನ್ನು ಮಾಡುತ್ತಾ

**ಕ್ಷಣಾನ್** = ಕ್ಷಣಕಾಲಗಳನ್ನು

**ಕಲ್ಪಸಮಾನ್** =ಕಲ್ಪಗಳಿಗೆ ಸಮಗಳನ್ನು

**ನಯನ್** = ಕಳೆಯುತ್ತಾ

**ಸುತಾನನೇಂದೋಃ** = ಮಗನ ಮುಖಚಂದ್ರವನ್ನು

**ಅನಿಶಂ** = ರಾತ್ರಿಹಗಲುಗಳಲ್ಲಿ

**ಅಸ್ಮರತ್** = ಸ್ಮರಿಸಿದರು.

**ತಾತ್ಪರ್ಯ—** ವಾಸುದೇವನ ತಂದೆತಾಯಿಗಳಿಗೆ ಉತ್ತರವನ್ನು ಕೊಡಲಿಕ್ಕೆ ತಿಳಿಯಲಿಲ್ಲ. ಪುನಃ ಅವನಲ್ಲಿಯೇ ಪ್ರಾರ್ಥಿಸುತ್ತಾ, ಯತಿಶ್ರೇಷ್ಠರಾದ ಅಚ್ಯುತಪ್ರೇಕ್ಷರನ್ನು ನಮಸ್ಕರಿಸಿ ಊರಿಗೆ ಬಂದರು. ಮನೆಯಲ್ಲಿ ಒಂದೊಂದು ಕ್ಷಣಗಳನ್ನು ಒಂದೊಂದು ಕಲ್ಪಗಳ ಹಾಗೆ ಕಳೆದರು. ಮಗನ ಮುಖಚಂದ್ರವನ್ನು ಹಗಲೂ ರಾತ್ರಿಯೂ ಸ್ಮರಿಸುತ್ತಿದ್ದರು.

**ವಿಗ್ರಹ—**

**ಅನುತ್ತರಜ್ಞಃ—** ಉತ್ತರಂ ಜಾನಾತೀತಿ ಉತ್ತರಜ್ಞಃ, ಉತ್ತರಜ್ಞಃ ನ ಭವತಿ ಇತಿ ಅನುತ್ತರಜ್ಞಃ ।

**ಯತೀಂದ್ರಂ—** ಯತೀನಾಮ್ ಇಂದ್ರಃ ಯತೀಂದ್ರಃ, ತಂ ।

**ಸುತಾನನೇಂದೋಃ—** ಸುತಸ್ಯ ಆನನಂ ಸುತಾನನಂ, ಸುತಾನನಂ ಇಂದುರಿವ ಸುತಾನನೇಂದುಃ ತಸ್ಯ ಸುತಾನನೇಂದೋಃ । ಅಸ್ಮರತ್ 'ಅಧೀಗರ್ಥದಯೇಶಾಂ ಕರ್ಮಣಿ' ಎಂಬ ಪಾಣಿನಿ ಸೂತ್ರದಿಂದ ಸ್ಮರಣಾರ್ಥಕ ಧಾತುಯೋಗವಿರುವಾಗ ಸುತಾನನೇಂದು ಶಬ್ದಕ್ಕೆ (ಅಸ್ಮರತ್ ಕ್ರಿಯಾಪದಕ್ಕೆ ಕರ್ಮ) ದ್ವಿತೀಯ ವಿಭಕ್ತಿಯನ್ನು ಬಾಧಿಸಿ ಷಷ್ಠೀ ವಿಭಕ್ತಿಯು ಬಂದಿರುತ್ತದೆ.)

**ಕ್ರಿಯಾಪದ—** ಅಸ್ಮರತ್- ಸ್ಮೃ ಚಿಂತಾಯಾಂ ಇತಿ ಸ್ಮರಣಾರ್ಥಕಾತ್ ಲಙ್ ಪ್ರಥಮಪುರುಷೇ ಏಕವಚನೇ ''ಅಸ್ಮರತ್'' ಇತಿ ರೂಪಮ್ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

★ ★ ★

### ಮಗನ ಸನ್ಯಾಸ ತಡೆಯಲು ಪ್ರಯತ್ನ

**ಸ ಚಿಂತಯನ್ ಪುತ್ರಮನೋರಥಂ ಶುಚಾ**
**ಪುನಶ್ಚ ತೀರ್ತ್ವೋಪಗತೋ ಮಹಾನದೀಮ್।**
**ವ್ರ(ಯ)ತೀಶ್ವರಾನುವ್ರತಮಾತ್ಮನಂದನಂ**
**ತಮೈಕ್ಷತ ಗ್ರಾಮವರೇ ಮಠಾಂತರೇ ॥ 19 ॥**

**ಪದಚ್ಛೇದ—** ಸಃ, ಚಿಂತಯನ್, ಪುತ್ರಮನೋರಥಂ, ಶುಚಾ, ಪುನಃ, ಚ, ತೀರ್ತ್ವಾ, ಉಪಗತಃ, ಮಹಾನದೀಂ, ವ್ರತೀಶ್ವರಾನುವ್ರತಂ, ಆತ್ಮನಂದನಂ, ತಂ, ಐಕ್ಷತ, ಗ್ರಾಮವರೇ, ಮಠಾಂತರೇ ।

**ಅನ್ವಯ—** ಶುಚಾ ಪುತ್ರಮನೋರಥಂ ಚಿಂತಯನ್ ಸಃ, ಪುನಶ್ಚ ಮಹಾನದೀಂ ತೀರ್ತ್ವಾ ಉಪಗತಃ, ಗ್ರಾಮವರೇ ಮಠಾಂತರೇ ವ್ರತೀಶ್ವರಾನುವ್ರತಂ ತಂ ಆತ್ಮನಂದನಂ ಐಕ್ಷತ ।

**ಅನ್ವಯಾರ್ಥ—**

**ಶುಚಾ** = ದುಃಖದಿಂದ
**ಪುತ್ರಮನೋರಥಂ** = ಮಗನಾದ ವಾಸುದೇವನು ಸಂನ್ಯಾಸವನ್ನು ಸ್ವೀಕರಿಸಬೇಕು ಎಂಬ ಆಸೆಯನ್ನು
**ಚಿಂತಯನ್** = ಚಿಂತಿಸುತ್ತಿರುವ
**ಸಃ** = ಆ ಮಧ್ಯಗೇಹ ಭಟ್ಟರು
**ಪುನಃ ಚ** = ಮತ್ತೊಮ್ಮೆ
**ಮಹಾನದೀಂ** = ನೇತ್ರಾವತೀ ಎಂಬ ಹೆಸರಿನಿಂದ ಯುಕ್ತವಾದ ಮಹಾನದಿಯನ್ನು
**ತೀರ್ತ್ವಾ** = ಮಹಾಪ್ರಯಾಸದಿಂದ ದಾಟಿ
**ಉಪಗತಃ** = ಬಂದವರಾಗಿ
**ಗ್ರಾಮವರೇ** = ಶ್ರೇಷ್ಠವಾದ (ಕಾರೇ ಊರು) ಗ್ರಾಮದಲ್ಲಿ
**ಮಠಾಂತರೇ** = ಕುತ್ಯಾಡಿ ಎಂಬ ಮಠದಲ್ಲಿ
**ವ್ರತೀಶ್ವರಾನುವ್ರತಂ** =ಯತಿಶ್ರೇಷ್ಠರಾದ ಅಚ್ಯುತಪ್ರೇಕ್ಷರು ಹೇಳಿದ ಕೆಲಸಗಳನ್ನು ಮಾಡುತ್ತಿರುವ
**ತಂ** - ಆ
**ಆತ್ಮನಂದನಂ** = ತನ್ನ ಮಗನಾದ ವಾಸುದೇವನನ್ನು
**ಐಕ್ಷತ** = ನೋಡಿದರು.

**ತಾತ್ಪರ್ಯ—** ಆ ಮಧ್ಯಗೇಹಭಟ್ಟರು ಮಗನು ಸಂನ್ಯಾಸವನ್ನು ಸ್ವೀಕರಿಸುವುದಾಗಿ ಮಾಡಿದ ತೀರ್ಮಾನವನ್ನು ಚಿಂತಿಸುತ್ತಾ ದುಃಖಪಡುತ್ತಿದ್ದರು. ಪುನಃ ನೇತ್ರಾವತೀ ಎಂಬ ಮಹಾನದಿಯನ್ನೂ ಕಷ್ಟದಿಂದ ದಾಟಿ ಅಲ್ಲಿ ಶ್ರೇಷ್ಠವಾದ ಕಾರೆಯೂರು ಗ್ರಾಮದಲ್ಲಿರುವ 'ಕುತ್ಯಾಡಿ' ಎಂಬ ಮಠದಲ್ಲಿ ವಾಸುದೇವನು ಸಂನ್ಯಾಸಿಶ್ರೇಷ್ಠರಾದ ಅಚ್ಯುತಪ್ರೇಕ್ಷರಂತೆಯೇ ನಿಯಮವನ್ನು ಆಚರಿಸುತ್ತಿರುವ, ಅವರ ಬಳಿಯಲ್ಲಿರುವ ಮಗನನ್ನು ಕಂಡರು.

ವಿಗ್ರಹ—

**ಚಿಂತಯನ್**— ಚಿಂತಯತಿ ಇತಿ ಚಿಂತಯನ್ ।

**ಪುತ್ರಮನೋರಥಂ**— ಪುತ್ರಸ್ಯ ಮನೋರಥಃ ಪುತ್ರಮನೋರಥಃ, ತಂ ಪುತ್ರಮನೋರಥಂ ।

**ಮಹಾನದೀಂ**— ಮಹತೀ ಚ ಸಾ ನದೀ ಚ ಮಹಾನದೀ, ತಾಂ ಮಹಾನದೀಂ ।

**ಉಪಗತಃ** — ಉಪಸಮೀಪೇ ಗತಃ ಉಪಗತಃ ।

**ವ್ರತೀಶ್ವರಾನುವ್ರತಂ**— ವ್ರ(ಯ)ತೀನಾಂ ಈಶ್ವರಃ ವ್ರ(ಯ)ತೀಶ್ವರಃ, ವ್ರ(ಯ)ತೀಶ್ವರಸ್ಯ ಅನುವ್ರತಃ ವ್ರ(ಯ)ತೀಶ್ವರಾನುವ್ರತಃ, ತಂ ವ್ರ(ಯ)ತೀಶ್ವರಾನುವ್ರತಂ ।

**ಆತ್ಮನಂದನಂ**— ಆತ್ಮನಃ ನಂದನಃ ಆತ್ಮನಂದನಃ, ತಂ ಆತ್ಮನಂದನಂ ।

**ಗ್ರಾಮವರಃ**— ಗ್ರಾಮೇಷು ವರಃ ಗ್ರಾಮವರಃ, ತಸ್ಮಿನ್ ಗ್ರಾಮವರೇ ।

**ಮಠಾಂತರೇ**— ಅನ್ಯೋ ಮಠಃ ಮಠಾಂತರಃ, ತಸ್ಮಿನ್ ಮಠಾಂತರೇ ।

**ಕ್ರಿಯಾಪದ**— **ಐಕ್ಷತ**- ಈಕ್ಷದರ್ಶನೇ ಇತಿ ದರ್ಶನಾರ್ಥಕಾತ್ ಈಕ್ಷಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಐಕ್ಷತ'' ಇತಿ ರೂಪಮ್ ।

ಐಕ್ಷತ ಐಕ್ಷೇತಾಂ ಐಕ್ಷಂತ, ಐಕ್ಷಥಾಃ ಐಕ್ಷೇಥಾಂ ಐಕ್ಷಧ್ವಂ, ಐಕ್ಷೇ ಐಕ್ಷಾವಹಿ ಐಕ್ಷಾಮಹಿ ।।

★ ★ ★

ಮಧ್ಯಗೇಹರ ಕೋಪ-ಪ್ರತಾಪ

**ಸ ಜಾತಕೋಪಾಕುಲಿತೋ ಧರಾಸುರೋ**
**ಮಹಾತ್ಮನಾಂ ಲಂಘನಭೀರುರಪ್ಯಲಮ್ ।**
**ಸುತಸ್ಯ ಕೌಪೀನಧೃತೌ ಹಿ ಸಾಹಸ-**
**ಪ್ರತಿಶ್ರವೋ ಮೇ ದೃಢ ಇತ್ಯಭಾಷತ ।। 20 ।।**

**ಪದಚ್ಛೇದ**— ಸಃ, ಜಾತಕೋಪಾಕುಲಿತಃ, ಧರಾಸುರಃ, ಮಹಾತ್ಮನಾಂ, ಲಂಘನಭೀರುಃ. ಅಪಿ, ಅಲಂ, ಸುತಸ್ಯ, ಕೌಪೀನಧೃತೌ, ಹಿ, ಸಾಹಸಪ್ರತಿಶ್ರವಃ, ಮೇ, ದೃಢಃ, ಇತಿ, ಅಭಾಷತ ।

**ಅನ್ವಯ**— ಸಃ ಧರಾಸುರಃ ಅಲಂ ಮಹಾತ್ಮನಾಂ ಲಂಘನಭೀರುಃ ಅಪಿ ಜಾತಕೋಪಾಕುಲಿತಃ, ಸುತಸ್ಯ ಕೌಪೀನಧೃತೌ ಹಿ, ಮೇ ಸಾಹಸಪ್ರತಿಶ್ರವಃ ದೃಢಃ ಇತಿ ಅಭಾಷತ ।

**ಅನ್ವಯಾರ್ಥ**—

**ಸಃ ಧರಾಸುರಃ** = ಬ್ರಾಹ್ಮಣರಾದ ಆ ಮಧ್ಯಗೇಹಭಟ್ಟರು

**ಅಲಂ** = ಬಹಳವಾಗಿ

**ಮಹಾತ್ಮನಾಂ** = ಮಹಾತ್ಮರುಗಳನ್ನು (ಶ್ರೀ ವಿಷ್ಣುಭಕ್ತರನ್ನು)

**ಲಂಘನಭೀರುಃ ಅಪಿ** = ಮೀರುವಿಕೆಯಿಂದ ಹೆದರಿದವರಾದರೂ ಸಹ

**ಜಾತಕೋಪಾಕುಲಿತಃ** = ಬಂದ ಸಿಟ್ಟಿನಿಂದ ವ್ಯಥೆಗೊಂಡವರಾಗಿ

**ಸುತಸ್ಯ ಕೌಪೀನಧೃತೌ** = ಮಗನಿಗೆ ಸಂನ್ಯಾಸವನ್ನು ಸ್ವೀಕರಿಸಿ ಕೌಪೀನ, ದಂಡ ಮುಂತಾದವುಗಳನ್ನು ಧರಿಸುವ ವಿಷಯದಲ್ಲಿ

**ಮೇ** = ನನ್ನ

**ಸಾಹಸಪ್ರತಿಶ್ರವಃ** = ಸಾಹಸಕಾರ್ಯವಿಷಯಕವಾದ ಪ್ರತಿಜ್ಞೆಯು

**ದೃಢಃ** = ನಿಶ್ಚಯವಾದದ್ದು,

**ಇತಿ** = ಹೀಗೆಂದು

**ಅಭಾಷತ** = ಹೇಳಿದರು.

ತಾತ್ಪರ್ಯ— ಮಧ್ಯಗೇಹಭಟ್ಟರು ದೊಡ್ಡವರನ್ನು ಮೀರುವುದರಿಂದ ಭಯಪಡುವ ಸ್ವಭಾವದವರು. ಆದರೂ ಅವರು ಕೋಪಗೊಂಡು 'ನನ್ನ ಮಗನು ಸಂನ್ಯಾಸಿಯಾಗಿ ಕೌಪೀನಧಾರಿಯಾದರೆ ನಾನು ನಿಶ್ಚಯವಾಗಿಯೂ ಉಪವಾಸ ಮೊದಲಾದ ಸಾಹಸಕಾರ್ಯಗಳನ್ನು ಮಾಡುವೆನು' ಎಂದು ಹೇಳಿದರು.

ವಿಗ್ರಹ—

**ಜಾತಕೋಪಾಕುಲಿತಃ**— ಜಾತಶ್ಚಾಸೌ ಕೋಪಶ್ಚ ಜಾತಕೋಪಃ, ಜಾತಕೋಪೇನ ಆಕುಲಿತಃ ಜಾತ-ಕೋಪಾಕುಲಿತಃ, ।

**ಧರಾಸುರಃ**— ಧರಾಯಾಂ ಸುರಃ ಧರಾಸುರಃ ।

**ಮಹಾತ್ಮನಾಂ**— ಮಹಾನ್ ಆತ್ಮಾ ಯೇಷಾಂ ತೇ ಮಹಾತ್ಮಾನಃ ತೇಷಾಂ ಮಹಾತ್ಮನಾಂ ।

**ಲಂಘನಭೀರುಃ**— ಲಂಘನಾತ್ ಭೀರುಃ ಲಂಘನಭೀರುಃ ।

**ಕೌಪೀನಧೃತೌ**— ಕೌಪೀನಸ್ಯ ಧೃತಿಃ ಕೌಪೀನಧೃತಿಃ, ತಸ್ಯಾಂ ಕೌಪೀನಧೃತೌ ।

**ಸಾಹಸಪ್ರತಿಶ್ರವಃ**— ಸಾಹಸಸ್ಯ ಪ್ರತಿಶ್ರವಃ ಸಾಹಸಪ್ರತಿಶ್ರವಃ ।

ಕ್ರಿಯಾಪದ— ಭಾಷ್ ವ್ಯಕ್ತಾಯಾಂ ವಾಚಿ ವ್ಯಕ್ತವಾಗರ್ಥಕಾತ್ ಭಾಷ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ಅಭಾಷತ ಇತಿ ರೂಪಮ್।

ಅಭಾಷತ ಅಭಾಷೇತಾಂ ಅಭಾಷಂತ, ಅಭಾಷಥಾಃ ಅಭಾಷೇಥಾಂ ಅಭಾಷಧ್ವಂ, ಅಭಾಷೇ ಅಭಾಷಾವಹಿ ಅಭಾಷಾಮಹಿ ॥

★ ★ ★

ತಂದೆಗೆ ವಾಸುದೇವನ ಹಿತನುಡಿ

**ಕ್ಷಣೇನ ಕೌಪೀನಧರೋ ನಿಜಂ ಪಟಂ**
**ವಿದಾರ್ಯ ಹೇ ತಾತ ಕುರುಷ್ವ ಸಾಹಸಮ್ ।**
**ಇತೀಮಮುಕ್ತ್ವಾ ವಿಭುರಬ್ರವೀತ್ಪುನಃ**
**ಶುಭಾಂತರಾಯಂ ನ ಭವಾಂಶ್ಚರೇದಿತಿ ॥ 21 ॥**

ಪದಚ್ಛೇದ— ಕ್ಷಣೇನ, ಕೌಪೀನಧರಃ, ನಿಜಂ, ಪಟಂ, ವಿದಾರ್ಯ, ಹೇ, ತಾತ, ಕುರುಷ್ವ, ಸಾಹಸಂ, ಇತಿ, ಇಮಂ, ಉಕ್ತ್ವಾ, ವಿಭುಃ, ಅಬ್ರವೀತ್, ಪುನಃ, ಶುಭಾಂತರಾಯಂ, ನ, ಭವಾನ್, ಚರೇತ್, ಇತಿ ।

ಅನ್ವಯ— ವಿಭುಃ ಕ್ಷಣೇನ ನಿಜಂ ಪಟಂ ವಿದಾರ್ಯ ಕೌಪೀನಧರಃ, ಹೇ ತಾತ ಸಾಹಸಂ ಕುರುಷ್ವ, ಇತಿ ಇಮಂ ಉಕ್ತ್ವಾ ಭವಾನ್ ಶುಭಾಂತರಾಯಂ ನ ಚರೇತ್, ಇತಿ ಪುನಃ ಅಬ್ರವೀತ್ ।

ಅನ್ವಯಾರ್ಥ—

**ವಿಭುಃ** = ಸಮರ್ಥನಾದ ವಾಸುದೇವನು

**ಕ್ಷಣೇನ** = ಒಂದು ಕ್ಷಣದಲ್ಲಿ

**ನಿಜಂ ಪಟಂ** = ತನ್ನ ಬಟ್ಟೆಯನ್ನು
**ವಿದಾರ್ಯ** = ಸೀಳಿ
**ಕೌಪೀನಧರಃ** = ಕೌಪೀನವನ್ನು ಧರಿಸಿದವನಾಗಿ
**ಹೇ ತಾತ** = ಎಲೈ ತಂದೆಯೇ!
**ಸಾಹಸಂ** = ಸಾಹಸಕಾರ್ಯವನ್ನು
**ಕುರುಷ್ವ** = ಮಾಡಿರಿ
**ಇತಿ** = ಹೀಗೆಂದು
**ಇಮಂ** = ಈ ತಂದೆಯನ್ನು ಕುರಿತು
**ಉಕ್ತ್ವಾ** = ಹೇಳಿ
**ಭವಾನ್** = ನೀವು
**ಶುಭಾಂತರಾಯಂ** = ಮಂಗಳಕಾರ್ಯಕ್ಕೆ ಅಡ್ಡಿಯನ್ನು
**ನ ಚರೇತ್** = ಮಾಡಬೇಡಿ
**ಇತಿ** = ಹೀಗೆಂದು
**ಪುನಃ** = ಇನ್ನೊಮ್ಮೆ
**ಅಬ್ರವೀತ್** = ಹೇಳಿದನು.

**ತಾತ್ಪರ್ಯ**— ಸಮರ್ಥನಾದ ವಾಸುದೇವನು ತಂದೆಯ ಪ್ರತಿಜ್ಞೆಯನ್ನು ಕೇಳಿದ ಕೂಡಲೆ ತನ್ನ ಬಟ್ಟೆಯನ್ನು ಸೀಳಿ ಕೌಪೀನವನ್ನುಟ್ಟನು. ''ಅಪ್ಪ! ಈಗ ಸಾಹಕಾರ್ಯವನ್ನು ಮಾಡಿರಿ'' ಎಂದನು. ''ಇನ್ನೊಮ್ಮೆ ನೀವು ನಾನು ಸಂನ್ಯಾಸ ಸ್ವೀಕರಿಸುವ ಶುಭಕಾರ್ಯಕ್ಕೆ ಅಡ್ಡಿ ಮಾಡಬೇಡಿರಿ'' ಎಂದು ಹೇಳಿದನು.

**ವಿಗ್ರಹ**—

**ಕೌಪೀನಧರಃ**— ಧರತಿ ಇತಿ ಧರಃ, ಕೌಪೀನಸ್ಯ ಧರಃ ಕೌಪೀನಧರಃ, ।

**ಶುಭಾಂತರಾಯಂ**— ಶುಭಸ್ಯ ಅಂತರಾಯಃ ಶುಭಾಂತರಾಯಃ, ತಂ ಶುಭಾಂತರಾಯಂ ।

**ಕ್ರಿಯಾಪದ**— ಚರೇತ್- ಚರಗತಿಭಕ್ಷಣಯೋಃ ಇತಿ ಗತಿಭಕ್ಷಣಾರ್ಥಕಾತ್ ಚರ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೈಕವಚನೇ ಚರೇತ್ ಇತಿ ರೂಪಮ್ ।

ಚರೇತ್ ಚರೇತಾಂ ಚರೇಯುಃ, ಚರೇಃ ಚರೇತಂ ಚರೇತ, ಚರೇಯಂ ಚರೇವ ಚರೇಮ ॥

★ ★ ★

### ಮಧ್ಯಗೇಹರ ಮತ್ತೊಂದು ಉಪಾಯ

**ನ ಪುತ್ರ ಪಿತ್ರೋರವನಂ ವಿನಾ ಶುಭಂ**
**ವದಂತಿ ಸಂತೋ ನನು ತೌ ಸುತೌ ಮೃತೌ ।**
**ನಿವರ್ತಮಾನೇ ನ ಹಿ ಪಾಲಕೋಸ್ತಿ ನೌ**
**ತ್ವಯೀತಿ ವಕ್ತಾರಮಮುಂ ಸುತೋಽಬ್ರವೀತ್ ॥ 22 ॥**

**ಪದಚ್ಛೇದ**— ನ, ಪುತ್ರ, ಪಿತ್ರೋಃ, ಅವನಂ, ವಿನಾ, ಶುಭಂ, ವದಂತಿ, ಸಂತಃ, ನನು, ತೌ, ಸುತೌ, ಮೃತೌ, ನಿವರ್ತಮಾನೇ, ನ, ಹಿ, ಪಾಲಕಃ, ಅಸ್ತಿ, ನೌ, ತ್ವಯಿ, ಇತಿ, ವಕ್ತಾರಂ, ಅಮುಂ, ಸುತಃ, ಅಬ್ರವೀತ್ ।

**ಅನ್ವಯ**— ಪುತ್ರ! ಸಂತಃ ಪಿತ್ರೋಃ ಅವನಂ ವಿನಾ ಶುಭಂ ನ ವದಂತಿ, ತೌ ಸುತೌ ಮೃತೌ ನನು, ತ್ವಯಿ ನಿವರ್ತಮಾನೇ ನೌ ಪಾಲಕಃ ನ ಅಸ್ತಿ ಹಿ. ಇತಿ ವಕ್ತಾರಂ ಅಮುಂ ಸುತಃ ಅಬ್ರವೀತ್ ।

**ಅನ್ವಯಾರ್ಥ**—

**ಹೇ ಪುತ್ರ!** = ಎಲೈ ಮಗನೇ!

**ಸಂತಃ** = ಜ್ಞಾನಿಗಳಾದ ಮನು ಮುಂತಾದವರುಗಳು

**ಪಿತ್ರೋಃ** = ತಂದೆತಾಯಿಗಳ

**ಅವನಂ** = ಕಾಪಾಡುವಿಕೆಯನ್ನು

**ವಿನಾ** = ಬಿಟ್ಟು

**ಶುಭಂ** = ಮಂಗಳಕಾರ್ಯವನ್ನು

**ನ ವದಂತಿ** = ಹೇಳುವುದಿಲ್ಲ.

**ತೌ** = ಆ

**ಸುತೌ** = ನಮ್ಮ ಮಕ್ಕಳಿಬ್ಬರು

**ಮೃತೌ ನನು** = ಸತ್ತುಹೋಗಿರುವರಷ್ಟೇ,

**ತ್ವಯಿ** = ನೀನು

**ನಿವರ್ತಮಾನೇ** = ಸಂನ್ಯಾಸವನ್ನು ಸ್ವೀಕರಿಸಲು

**ನೌ** = ನಮ್ಮಿಬ್ಬರಿಗೆ

**ಪಾಲಕಃ** = ರಕ್ಷಕನು

**ನಾಸ್ತಿ ಹಿ** = ಇಲ್ಲವಷ್ಟೆ.

**ಇತಿ** = ಹೀಗೆಂದು

**ವಕ್ತಾರಂ** = ಹೇಳುವ

**ಅಮುಂ** = ಈ ತಂದೆಯನ್ನು ಕುರಿತು

**ಸುತಃ** = ಮಗನು

**ಅಬ್ರವೀತ್** = ಹೇಳಿದನು.

**ತಾತ್ಪರ್ಯ**— ಆಗ ಮಧ್ಯಗೇಹಭಟ್ಟರು ''ಮಗು! ಮಗನಿಗೆ ತಂದೆ-ತಾಯಿಗಳನ್ನು ಕಾಪಾಡುವುದನ್ನು ಬಿಟ್ಟು ಬೇರೆ ಶುಭಕಾರ್ಯವಿಲ್ಲ'' ಎಂದು ಧರ್ಮಶಾಸ್ತ್ರವನ್ನು ರಚಿಸಿದ ಮನ್ವಾದಿಗಳು ಹೇಳಿರುತ್ತಾರೆ. ಆದ್ದರಿಂದ ನಿನ್ನ ಸಂನ್ಯಾಸ-ಸ್ವೀಕಾರವು ನಿನಗೆ ಶುಭಕಾರ್ಯವಲ್ಲ. ನಿನ್ನ ಸಹೋದರರಿಬ್ಬರು ಮೃತರಾಗಿರುವುದರಿಂದ ನೀನು ಸಂನ್ಯಾಸಿಯಾದರೆ ನಮಗೆ ಬೇರೆ ರಕ್ಷಕರಿಲ್ಲ'' ಎಂದರು. ಆಗ ಆ ವಾಸುದೇವನು ತಂದೆಯನ್ನು ಕುರಿತು ಹೀಗೆ ಹೇಳಿದನು-

**ವಿಗ್ರಹ**—

**ಪಿತರೌ**— ಮಾತಾ ಚ ಪಿತಾ ಚ ಪಿತರೌ, ತಯೋಃ ಪಿತ್ರೋಃ ।

**ಸುತೌ**— ಸುತಶ್ಚ ಸುತಾ ಚ ಸುತೌ ।

**ನಿವರ್ತಮಾನೇ**— ನಿವರ್ತಿಷ್ಯತೇ ಇತಿ ನಿವರ್ತಮಾನಃ, ತಸ್ಮಿನ್ ನಿವರ್ತಮಾನೇ ।

**ನೌ**— ಅಹಂ ಚ ಭಾರ್ಯಾ ಚ ನೌ ।

**ಕ್ರಿಯಾಪದ—** **ವದಂತಿ-** ವದ ವ್ಯಕ್ತಾಯಾಂ ವಾಚಿ ವ್ಯಕ್ತವಾಗರ್ಥಕಾತ್ ವದಧಾತೋಃ ಪ್ರಥಮಪುರುಷೇ ಬಹುವಚನೇ 'ವದಂತಿ' ಇತಿ ರೂಪಮ್ ।

ವದತಿ ವದತಃ ವದಂತಿ, ವದಸಿ ವದಥಃ ವದಥ, ವದಾಮಿ ವದಾವಃ ವದಾಮಃ ॥

**ಅಬ್ರವೀತ್-** ಬ್ರೂಞ್ ವ್ಯಕ್ತಾಯಾಂ ವಾಚಿ ವ್ಯಕ್ತವಾಗರ್ಥಕಾತ್ ಬ್ರೂಞ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಅಬ್ರವೀತ್' ಇತಿ ರೂಪಮ್ ।

ಅಬ್ರವೀತ್ ಅಬ್ರೂತಾಂ ಅಬ್ರೂವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರೂವಂ ಅಬ್ರವ ಅಬ್ರೂಮ ॥

★ ★ ★

ವಿರಕ್ತಿಯೇ ಸನ್ಯಾಸಕ್ಕೆ ಅರ್ಹತೆ

**ಯದಾ ವಿರಕ್ತಃ ಪುರುಷಃ ಪ್ರಜಾಯತೇ**
**ತದೈವ ಸಂನ್ಯಾಸವಿಧಿಃ ಶ್ರುತೌ ಶ್ರುತಃ ।**
**ನ ಸಂಗಹೀನೋಽಪಿ ಪರಿವ್ರಜಾಮಿ ವಾ-**
**ಮಹಂ ತು ಶುಶ್ರೂಷುಮಕಲ್ಪಯನ್ನಿತಿ ॥ 23 ॥**

**ಪದಚ್ಛೇದ—** ಯದಾ, ವಿರಕ್ತಃ, ಪುರುಷಃ, ಪ್ರಜಾಯತೇ, ತದಾ, ಏವ, ಸಂನ್ಯಾಸವಿಧಿಃ, ಶ್ರುತೌ, ಶ್ರುತಃ, ನ ಸಂಗಹೀನಃ, ಅಪಿ, ಪರಿವ್ರಜಾಮಿ, ವಾಂ, ಅಹಂ, ತು, ಶುಶ್ರೂಷುಂ, ಅಕಲ್ಪಯನ್, ಇತಿ ।

**ಅನ್ವಯ—** ಪುರುಷಃ ಯದಾ ವಿರಕ್ತಃ ಪ್ರಜಾಯತೇ, ತದಾ ಏವ ಸಂನ್ಯಾಸವಿಧಿಃ ಶ್ರುತೌ ಶ್ರುತಃ. ಅಹಂ ತು ಸಂಗಹೀನಃ ಅಪಿ ವಾಂ ಶುಶ್ರೂಷುಂ ಅಕಲ್ಪಯನ್ ನ ಪರಿವ್ರಜಾಮಿ ಇತಿ ।

**ಅನ್ವಯಾರ್ಥ—**

**ಪುರುಷಃ** = ಪುರುಷನು
**ಯದಾ** = ಯಾವಾಗ
**ವಿರಕ್ತಃ** = ವಿಷಯಗಳಲ್ಲಿ ಆಸಕ್ತಿಯಿಲ್ಲದವನು
**ಪ್ರಜಾಯತೇ** = ಆಗುವನೋ
**ತದಾ ಏವ** = ಅದೇ ಸಮಯದಲ್ಲಿಯೇ
**ಸಂನ್ಯಾಸವಿಧಿಃ** = ಸಂನ್ಯಾಸಸ್ವೀಕಾರವು
**ಶ್ರುತೌ** = ವೇದದಲ್ಲಿ
**ಶ್ರುತಃ** = ಪ್ರಸಿದ್ಧವಾಗಿದೆ.
**ಅಹಂ ತು** = ನಾನಾದರೋ
**ಸಂಗಹೀನಃ ಅಪಿ** = ವಿಷಯಾಸಕ್ತಿಯಿಲ್ಲದವನಾದರೂ
**ವಾಂ** = ನಿಮ್ಮಿಬ್ಬರಿಗೆ
**ಶುಶ್ರೂಷುಂ** = ಸೇವಕನನ್ನು
**ಅಕಲ್ಪಯನ್** = ನಿಯಮಿಸದವನಾಗಿ

**ನ ಪರಿವ್ರಜಾಮಿ ಇತಿ** = ಸಂನ್ಯಾಸವನ್ನು ಸ್ವೀಕರಿಸುವುದಿಲ್ಲವೆಂದು

**ಅಬ್ರವೀತ್** = ಹೇಳಿದನು.

**ತಾತ್ಪರ್ಯ—** ಮನುಷ್ಯನಿಗೆ ವೈರಾಗ್ಯವುಂಟಾದ ಕೂಡಲೆ ಅವನು ಸಂನ್ಯಾಸವನ್ನು ಸ್ವೀಕರಿಸಬೇಕೆಂದು ವೇದವು ಸಾರುತ್ತಿದೆ. ಆದರೆ ನಾನೀಗ ವಿರಕ್ತನಾಗಿದ್ದರೂ ಸಹ ನಿಮ್ಮ ಸೇವೆಗೊಬ್ಬ ಸೇವಕನನ್ನು ನೇಮಿಸದೆ ಸಂನ್ಯಾಸಿಯಾಗುವುದಿಲ್ಲ.

**ವಿಗ್ರಹ—**

**ಸನ್ಯಾಸವಿಧಿಃ—** ಸಂನ್ಯಾಸಸ್ಯ ವಿಧಿಃ ಸಂನ್ಯಾಸವಿಧಿಃ ।

**ಸಂಗಹೀನಃ—** ಸಂಗೇನ ಹೀನಃ ಸಂಗಹೀನಃ ।

**ಕ್ರಿಯಾಪದ— ಪ್ರಜಾಯತೇ-** ಪ್ರ ಇತ್ಯುಪಸರ್ಗಪೂರ್ವಕಾತ್ ಜನೀ ಪ್ರಾದುರ್ಭಾವೇ ಇತ್ಯಸ್ಮಾತ್ ಧಾತೋಃ ಲಟಿ ಆತ್ಮನೇಪದಿನಃ ಪ್ರಜಾಯತೇ ಇತಿ ರೂಪಮ್ ।

ಪ್ರಜಾಯತೇ ಪ್ರಜಾಯೇತೇ ಪ್ರಜಾಯಂತೇ,
ಪ್ರಜಾಯಸೇ ಪ್ರಜಾಯೇಥೇ ಪ್ರಜಾಯಧ್ವೇ,
ಪ್ರಜಾಯೇ ಪ್ರಜಾಯಾವಹೇ ಪ್ರಜಾಯಾಮಹೇ ॥

**ಪರಿವ್ರಜಾಮಿ-** ಪರಿ ಇತ್ಯುಪಸರ್ಗಪೂರ್ವಕಾತ್ ವ್ರಜಗತೌ ಇತಿ ಗತ್ಯರ್ಥಕಾತ್ ಸಕರ್ಮಕಾತ್ ಆತ್ಮನೇಪದಿನಃ ವ್ರಜಧಾತೋಃ ಲಟ್ ಉತ್ತಮಪುರುಷೈಕವಚನೇ ಪರಿವ್ರಜಾಮಿ ಇತಿ ರೂಪಮ್ ।

ಪರಿವ್ರಜತಿ ಪರಿವ್ರಜತಃ ಪರಿವ್ರಜಂತಿ, ಪರಿವ್ರಜಸಿ ಪರಿವ್ರಜಥಃ ಪರಿವ್ರಜಥ, ಪರಿವ್ರಜಾಮಿ ಪರಿವ್ರಜಾವಃ ಪರಿವ್ರಜಾಮಃ ।

★ ★ ★

ನಿರುತ್ತರರಾದ ಮಧ್ಯಗೇಹರು

**ಬಹುಶ್ರುತತ್ವಾದ್ಯದಿ ತತ್ಸಹೇ ಬಲಾನ್**
**ನ ಸಾ ಸವಿತ್ರೀ ವಿರಹಂ ಸಹೇತ ತೇ ।**
**ಇತಿ ದ್ವಿಜೇನಾಭಿಹಿತೇಽನಮತ್ ಸ ತಂ**
**ಭವಾನನುಜ್ಞಾಂ ಪ್ರದದಾತ್ವಿತಿ ಬ್ರುವನ್ ॥ 24 ॥**

**ಪದಚ್ಛೇದ—** ಬಹುಶ್ರುತತ್ವಾತ್, ಯದಿ, ತತ್, ಸಹೇ, ಬಲಾತ್, ನ, ಸಾ, ಸವಿತ್ರೀ, ವಿರಹಂ, ಸಹೇತ, ತೇ, ಇತಿ, ದ್ವಿಜೇನ, ಅಭಿಹಿತೇ, ಅನಮತ್, ಸಃ, ತಂ, ಭವಾನ್, ಅನುಜ್ಞಾಂ, ಪ್ರದದಾತು, ಇತಿ, ಬ್ರುವನ್ ।

**ಅನ್ವಯ—** ಯದಿ ಬಹುಶ್ರುತತ್ವಾತ್ ಬಲಾತ್ ತತ್ ಸಹೇ, ತೇ ಸಾ ಸವಿತ್ರೀ ವಿರಹಂ ನ ಸಹೇತ । ಇತಿ ದ್ವಿಜೇನ ಅಭಿಹಿತೇ, ಸಃ ಭವಾನ್ ಅನುಜ್ಞಾಂ ಪ್ರದದಾತು ಇತಿ ಬ್ರುವನ್ ತಂ ಅನಮತ್ ।

**ಅನ್ವಯಾರ್ಥ—**

**ಯದಿ** = ಆಲೋಚಿಸಿದರೆ

**ಬಹುಶ್ರುತತ್ವಾತ್** = (ನಾನು) ಅನೇಕ ಶಾಸ್ತ್ರಗಳನ್ನು ಕೇಳಿರುವುದರಿಂದ

**ಬಲಾತ್** = ಶಕ್ತಿಯಿಂದ

**ತತ್** = ಆ ನಿನ್ನ ಸಂನ್ಯಾಸ ಸ್ವೀಕಾರವನ್ನು

ಸಹೇ = ಸಹಿಸುತ್ತೇನೆ.

ತೇ = ನಿನ್ನ

ಸಾ ಸವಿತ್ರೀ = ಆ ತಾಯಿಯು

ವಿರಹಂ = ಅಗಲಿಕೆಯನ್ನು

ನ ಸಹೇತ = ಸಹಿಸಲಾರಳು.

ಇತಿ ದ್ವಿಜೇನ = ಹೀಗೆಂದು ಮಧ್ಯಗೇಹಭಟ್ಟರಿಂದ

ಅಭಿಹಿತೇ = ಹೇಳಲ್ಪಡಲು

ಸಃ = ಆ ವಾಸುದೇವನು

ಭವಾನ್ = ಪೂಜ್ಯರಾದ ತಾವುಗಳು

ಅನುಜ್ಞಾಂ = ಅನುಮತಿಯನ್ನು

ಪ್ರದದಾತು = ಕೊಡಿರಿ

ಇತಿ ಬ್ರುವನ್ = ಹೀಗೆಂದು ಹೇಳುತ್ತ

ತಂ ಅನಮತ್ = ಆ ತಂದೆಯನ್ನು ವಂದಿಸಿದನು.

**ತಾತ್ಪರ್ಯ—** ''ನಾನು ಅನೇಕ ಶಾಸ್ತ್ರಗಳನ್ನು ಕೇಳಿರುವುದರಿಂದ ಒಂದು ವೇಳೆ ನಿನ್ನ ಸಂನ್ಯಾಸ ಸ್ವೀಕಾರದಿಂದಾಗುವ ಅಗಲಿಕೆಯನ್ನು ಶಕ್ತಿಯಿಂದ ಸಹಿಸುತ್ತೇನೆ. ಆದರೆ ನಿನ್ನ ತಾಯಿಯು ನಿನ್ನ ವಿರಹವನ್ನು ಸಹಿಸಲಾರಳು'' ಎಂದು ಮಧ್ಯಗೇಹಭಟ್ಟರು ಹೇಳಿದರು. ಆಗ ವಾಸುದೇವನು ''ಹಾಗಾದರೆ ನೀವು ಅಪ್ಪಣೆ ಕೊಡಿರಿ'' ಎಂದು ಹೇಳುತ್ತ ತಂದೆಗೆ ವಂದಿಸಿದನು.

**ವಿಗ್ರಹ—**

**ಬಹುಶ್ರುತತ್ವಾತ್—** ಬಹೂನಾಂ ಶ್ರುತಂ ಯಸ್ಯ ಸಃ ಬಹುಶ್ರುತಃ, ಬಹುಶ್ರುತಸ್ಯ ಭಾವಃ ಬಹುಶ್ರುತತ್ವಂ, ತಸ್ಮಾತ್ ಬಹುಶ್ರುತತ್ವಾತ್ ।

**ಕ್ರಿಯಾಪದ—** **ಸಹೇ-** ಸಹ ಮರ್ಷಣೇ ಇತಿ ಮರ್ಷಣಾರ್ಥಕಾತ್ ಸಹಧಾತೋಃ ವಿಧಿಲಟ್ ಪ್ರಥಮಪುರುಷೇ ಏಕವಚನೇ 'ಸಹೇ' ಇತಿ ರೂಪಮ್ ।

| | | |
|---|---|---|
| ಸಹತೇ | ಸಹೇತೇ | ಸಹಂತೇ |
| ಸಹಸೇ | ಸಹೇಥೇ | ಸಹಧ್ವೇ |
| ಸಹೇ | ಸಹಾವಹೇ | ಸಹಾಮಹೇ ॥ |

**ಅನಮತ್-** ಣಮು ಪ್ರಹ್ವತ್ವೇ ಶಬ್ದೇ ಚ ಪ್ರಹ್ವತ್ವಶಬ್ದಾರ್ಥಕಾತ್ ಣಮ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಅನಮತ್' ಇತಿ ರೂಪಮ್ ।

ಅನಮತ್ ಅನಮತಾಂ ಅನಮನ್, ಅನಮಃ ಅನಮತಂ ಅನಮತ, ಅನಮಂ ಅನಮಾವ ಅನಮಾಮ ॥

**ಪ್ರದದಾತು-** ಪ್ರ ಇತ್ಯುಪಸರ್ಗಪೂರ್ವಕಾತ್ ಡುಧಾಞ್ ದಾನೇ ಇತಿ ಧಾತೋಃ ಲೋಟಿ ಪ್ರಥಮಪುರುಷೇ ಏಕವಚನೇ 'ಪ್ರದದಾತು' ಇತಿ ರೂಪಮ್ ।

ಪ್ರದದಾತು ಪ್ರದತ್ತಾತ್, ಪ್ರದತ್ತಾಂ ಪ್ರದದತು, ಪ್ರದೇಹಿ ಪ್ರದತ್ತಾತ್, ಪ್ರದತ್ತಂ ಪ್ರದತ್ತ, ಪ್ರದದಾನಿ ಪ್ರದದಾವ ಪ್ರದದಾಮ ॥

★ ★ ★

### ಮಾತಿನ ಭರದಲ್ಲಿ ಅನುಮತಿ

**ವಿಚಿಂತ್ಯ ವಿದ್ವಾನ್ ಸ ನಿರುತ್ತರೀಕೃತ-**
**ಸ್ತಥಾಽಸ್ತು ಮಾತಾಽನುವದೇದ್ಯದೀತಿ ತಮ್ ।**
**ಉದೀರ್ಯ ಕೃಚ್ಛ್ರಾದುಪಗಮ್ಯ ಮಂದಿರಂ**
**ಪ್ರಿಯಾಸಕಾಶೇ ತಮುದಂತಮಬ್ರವೀತ್ ॥ 25 ॥**

**ಪದಚ್ಛೇದ—** ವಿಚಿಂತ್ಯ, ವಿದ್ವಾನ್, ಸಃ, ನಿರುತ್ತರೀಕೃತಃ, ತಥಾ, ಅಸ್ತು, ಮಾತಾ, ಅನುವದೇತ್, ಯದಿ, ಇತಿ, ತಂ ಉದೀರ್ಯ ಕೃಚ್ಛ್ರಾತ್ ಉಪಗಮ್ಯ, ಮಂದಿರಂ, ಪ್ರಿಯಾಸಕಾಶೇ, ತಂ, ಉದಂತಂ, ಅಬ್ರವೀತ್ ।

**ಅನ್ವಯ—** ನಿರುತ್ತರೀಕೃತಃ ವಿದ್ವಾನ್ ಸಃ ವಿಚಿಂತ್ಯ ಮಾತಾ ಯದಿ ಅನುವದೇತ್ ತಥಾ ಅಸ್ತು । ಇತಿ ತಂ ಉದೀರ್ಯ ಕೃಚ್ಛ್ರಾತ್ ಮಂದಿರಂ ಉಪಗಮ್ಯ ಪ್ರಿಯಾಸಕಾಶೇ ತಂ ಉದಂತಂ ಅಬ್ರವೀತ್ ।

**ಅನ್ವಯಾರ್ಥ—**

**ನಿರುತ್ತರೀಕೃತಃ** = ಪ್ರತ್ಯುತ್ತರವಿಲ್ಲದಂತೆ ಮಾಡಲ್ಪಟ್ಟ
**ವಿದ್ವಾನ್** = ತಿಳುವಳಿಕೆಯುಳ್ಳ
**ಸಃ** = ತಂದೆಯಾದ ಆ ಮಧ್ಯಗೇಹಭಟ್ಟರು
**ವಿಚಿಂತ್ಯ** = ಆಲೋಚಿಸಿ
**ಮಾತಾ** = ತಾಯಿಯು
**ಯದಿ ಅನುವದೇತ್** = ಒಂದು ವೇಳೆ ಒಪ್ಪಿದ್ದೇ ಆದರೆ (ಆಗ)
**ತಥಾ** = ನೀನು ಹೇಳಿದಂತೆ
**ಅಸ್ತು** = ಆಗಲಿ
**ಇತಿ** = ಹೀಗೆಂದು
**ತಂ** = ಆ ಮಗನನ್ನು ಕುರಿತು
**ಉದೀರ್ಯ** = ಹೇಳಿ
**ಕೃಚ್ಛ್ರಾತ್** = ಕಷ್ಟದಿಂದ
**ಮಂದಿರಂ** = ಮನೆಯನ್ನು
**ಉಪಗಮ್ಯ** = ಸೇರಿ
**ಪ್ರಿಯಾಸಕಾಶೇ** = ಹೆಂಡತಿಯ ಹತ್ತಿರ
**ತಂ ಉದಂತಂ** = ಆ ಸಮಾಚಾರವನ್ನು
**ಅಬ್ರವೀತ್** = ಹೇಳಿದರು.

**ತಾತ್ಪರ್ಯ—** ಮಗನು ನಮಸ್ಕಾರ ಮಾಡಿದ ಕೂಡಲೇ ವಿದ್ವಾಂಸರಾದ ತಂದೆಗೆ ಪ್ರತ್ಯುತ್ತರ ಕೊಡಲಾಗಲಿಲ್ಲ. ಆಗ ಅವರು ಆಲೋಚಿಸಿ ನಿನ್ನ ತಾಯಿಯು ಒಪ್ಪಿದರೆ ನೀನು ನಿನ್ನ ಇಷ್ಟದಂತೆ ಸಂನ್ಯಾಸವನ್ನು ಸ್ವೀಕರಿಸು ಎಂದು ಹೇಳಿ ಮಗನ ಅಗಲಿಕೆಯನ್ನು ಕಷ್ಟದಿಂದ ಸಹಿಸಿಕೊಂಡು ಮನೆಗೆ ಹೋದರು. ಅಲ್ಲಿ ಪತ್ನಿಯ ಹತ್ತಿರ ತನಗೂ ಮಗನಿಗೂ ನಡೆದ ವಿವಾದವನ್ನು ಹೇಳಿದರು.

ವಿಗ್ರಹ—

**ವಿಚಿಂತ್ಯ—** ವಿಶೇಷೇಣ ಚಿಂತಯಿತ್ವಾ ವಿಚಿಂತ್ಯ ।

**ನಿರುತ್ತರೀಕೃತಃ—** ನಿರ್ಗತಂ ಉತ್ತರಂ ಯಸ್ಮಾತ್ಸಃ ನಿರುತ್ತರಃ, ಅನಿರುತ್ತರಃ ನಿರುತ್ತರಃ ಸಂಪದ್ಯಮಾನಃ ಕೃತಃ ನಿರುತ್ತರೀಕೃತಃ ।

**ಪ್ರಿಯಾಸಕಾಶೇ—** ಪ್ರಿಯಾಯಾಃ ಸಕಾಶಃ ಪ್ರಿಯಾಸಕಾಶಃ, ತಸ್ಮಿನ್ ಪ್ರಿಯಾಸಕಾಶೇ ।

**ಕ್ರಿಯಾಪದ— ಅಬ್ರವೀತ್-** ಬ್ರೂಞ್ ವ್ಯಕ್ತಾಯಾಂ ವಾಚಿ ವ್ಯಕ್ತವಾಗರ್ಥಕಾತ್ ಬ್ರೂಞ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅಬ್ರವೀತ್'' ಇತಿ ರೂಪಮ್ ।

ಅಬ್ರವೀತ್ ಅಬ್ರೂತಾಂ ಅಬ್ರುವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ ॥

★ ★ ★

ಭಾವಿ ವಿಷ್ಣುತೀರ್ಥರ ಅವತಾರ

**ನಿಶಾಚರಾರೇರಿವ ಲಕ್ಷ್ಮಣಃ ಪುರಾ**
**ವೃಕೋದರಸ್ಯೇವ ಸುರೇಂದ್ರನಂದನಃ ।**
**ಗದೋಽಥ ಶೌರೇರಿವ ಕರ್ಮಕೃತ್ ಪ್ರಿಯಃ**
**ಸುಭಕ್ತಿಮಾನ್ ವಿಶ್ವವಿದೋಽನುಜೋಽಭವತ್ ॥ 26 ॥**

**ಪದಚ್ಛೇದ—** ನಿಶಾಚರಾರೇಃ, ಇವ, ಲಕ್ಷ್ಮಣಃ, ಪುರಾ, ವೃಕೋದರಸ್ಯ, ಇವ, ಸುರೇಂದ್ರನಂದನಃ, ಗದಃ, ಅಥ, ಶೌರೇಃ, ಇವ, ಕರ್ಮಕೃತ್, ಪ್ರಿಯಃ, ಸುಭಕ್ತಿಮಾನ್, ವಿಶ್ವವಿದಃ, ಅನುಜಃ, ಅಭವತ್ ।

**ಅನ್ವಯ—** ಅಥ ಪುರಾ ನಿಶಾಚರಾರೇಃ ಲಕ್ಷ್ಮಣಃ ಇವ, ವೃಕೋದರಸ್ಯ ಸುರೇಂದ್ರನಂದನಃ ಇವ, ಶೌರೇಃ ಗದಃ ಇವ ವಿಶ್ವವಿದಃ ಸುಭಕ್ತಿಮಾನ್ ಪ್ರಿಯಃ ಕರ್ಮಕೃತ್ ಅನುಜಃ ಅಭವತ್ ।

**ಅನ್ವಯಾರ್ಥ—**

**ಅಥ** = ಬಳಿಕ

**ಪುರಾ** = ಹಿಂದೆ ತ್ರೇತಾಯುಗದಲ್ಲಿ

**ನಿಶಾಚರಾರೇಃ—**

**ನಿಶಾಚರ** = ರಾವಣಾದಿ ರಾಕ್ಷಸರಿಗೆ,

**ಅರೇಃ** = ಶತ್ರುವಾದ ರಾಮನಿಗೆ

**ಲಕ್ಷ್ಮಣಃ ಇವ** = ಲಕ್ಷ್ಮಣನಂತೆಯೂ,

**ವೃಕೋದರಸ್ಯ** = ಭೀಮನಿಗೆ

**ಸುರೇಂದ್ರನಂದನಃ ಇವ** = ಇಂದ್ರನ ಮಗನಾದ ಅರ್ಜುನನಂತೆಯೂ

**ಶೌರೇಃ** = ಶ್ರೀಕೃಷ್ಣನಿಗೆ

**ಗದಃ ಇವ** = ಗದನೆಂಬವನಂತೆಯೂ,

**ವಿಶ್ವವಿದಃ** = ಸರ್ವಜ್ಞನಾದ ವಾಸುದೇವನಿಗೆ

**ಸುಭಕ್ತಿಮಾನ್** = ಅತಿಶಯ ಭಕ್ತಿಯುಳ್ಳ

ಪ್ರಿಯಃ = ಇಷ್ಟನಾದ

ಕರ್ಮಕೃತ್ = ಸೇವಕನಾದ

ಅನುಜಃ = ತಮ್ಮನು

ಅಭವತ್ = ಆದನು (ಹುಟ್ಟಿದನು).

**ತಾತ್ಪರ್ಯ**— ಶ್ರೀರಾಮನಿಗೆ ಲಕ್ಷ್ಮಣನು ಭಕ್ತಿಯುಳ್ಳ ತಮ್ಮನಾಗಿದ್ದನು. ಭೀಮಸೇನನಿಗೆ ಅರ್ಜುನನು ಸ್ನೇಹವುಳ್ಳ ತಮ್ಮನಾಗಿದ್ದನು. ಶ್ರೀಕೃಷ್ಣನಿಗೆ ಗದನೆಂಬುವನು ಸೇವಾಕಾರ್ಯವನ್ನು ಮಾಡುವ ತಮ್ಮನಾಗಿದ್ದನು. ಹಾಗೆಯೇ ತರುವಾಯ ಸರ್ವಜ್ಞನಾದ ಆ ವಾಸುದೇವನಿಗೆ ಅತ್ಯಂತ ಭಕ್ತಿಯುಳ್ಳವನೂ, ಸ್ನೇಹವುಳ್ಳವನೂ, ಸೇವಕನೂ ಆದ ಅವರೆಲ್ಲರ ಗುಣವುಳ್ಳ ಒಬ್ಬ ತಮ್ಮನು ಹುಟ್ಟಿದನು.

**ವಿಗ್ರಹ**—

ನಿಶಾಚರಾರೇಃ— ನಿಶಾಯಾಂ ಚರಂತಿ ಇತಿ ನಿಶಾಚರಾಃ, ನಿಶಾಚರಾಣಾಂ ಅರಿಃ ನಿಶಾಚರಾರಿಃ, ತಸ್ಯ ನಿಶಾಚರಾರೇಃ।

ವೃಕೋದರಸ್ಯ— ವೃಕಃ ಉದರೇ ಯಸ್ಯ ಸಃ ವೃಕೋದರಃ, ತಸ್ಯ ವೃಕೋದರಸ್ಯ ।

ಸುರೇಂದ್ರನಂದನಃ— ಸುರಾಣಾಂ ಇಂದ್ರಃ ಸುರೇಂದ್ರಃ, ಸುರೇಂದ್ರಸ್ಯ ನಂದನಃ ಸುರೇಂದ್ರನಂದನಃ ।

ಶೌರೇಃ— ಶೂರಸ್ಯ ಅಪತ್ಯಂ ಪುಮಾನ್ ಶೌರಿಃ, ತಸ್ಯ ಶೌರೇಃ ।

ಕರ್ಮಕೃತ್ = ಕರ್ಮ ಕರೋತಿ ಇತಿ ಕರ್ಮಕೃತ್ ।

ಸುಭಕ್ತಿಮಾನ್ = ಶೋಭನಾ ಚ ಸಾ ಭಕ್ತಿಶ್ಚ ಸುಭಕ್ತಿಃ, ಸುಭಕ್ತಿಃ ಅಸ್ಯ ಅಸ್ತೀತಿ ಸುಭಕ್ತಿಮಾನ್ ।

ವಿಶ್ವವಿದಃ— ವಿಶ್ವಂ ವೇತ್ತಿ ಇತಿ ವಿಶ್ವವಿತ್, ತಸ್ಯ ವಿಶ್ವವಿದಃ ।

ಅನುಜಃ— ಅನುಜಾಯತೇ ಇತಿ ಅನುಜಃ ।

**ಕ್ರಿಯಾಪದ**— ಅಭವತ್- ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ಅಭವತ್ ಇತಿ ರೂಪಮ್ ।

ಅಭವತ್ ಅಭವತಾಂ ಅಭವನ್, ಅಭವಃ ಅಭವತಂ ಅಭವತ, ಅಭವಂ ಅಭವಾವ ಅಭವಾಮ ॥

★ ★ ★

ಸನ್ಯಾಸಕ್ಕೆ ಅಪ್ಪಣೆ ನೀಡಲು ವಾಸುದೇವನ ಕೋರಿಕೆ

**ಕದಾಚಿದಾಪ್ಯಾಲಯಬುದ್ಧಿರಾಲಯಂ**
**ನಿವೇದಯನ್ ಪಾಲಕಮೇನಮೇತಯೋಃ ।**
**ದೃಢಸ್ವಸನ್ಯಾಸನಿಷೇಧನಿಶ್ಚಯಾಂ**
**ಧವಾನುಮತ್ಯೇದಮುವಾಚ ಮಾತರಮ್ ॥ 27 ॥**

**ಪದಚ್ಛೇದ**— ಕದಾಚಿತ್, ಆಪ್ಯ, ಆಲಯಬುದ್ಧಿಃ, ಆಲಯಂ, ನಿವೇದಯನ್, ಪಾಲಕಂ, ಏನಂ, ಏತಯೋಃ, ದೃಢಸ್ವಸಂನ್ಯಾಸನಿಷೇಧನಿಶ್ಚಯಾಂ, ಧವಾನುಮತ್ಯಾ, ಇದಂ, ಉವಾಚ, ಮಾತರಮ್ ।

**ಅನ್ವಯ**— ಕದಾಚಿತ್ ಆಲಯಬುದ್ಧಿಃ ಆಲಯಂ ಆಪ್ಯ ಏನಂ ಏತಯೋಃ ಪಾಲಕಂ ನಿವೇದಯನ್ ಧವಾನುಮತ್ಯಾ ದೃಢಸ್ವಸಂನ್ಯಾಸನಿಶ್ಚಯಾಂ ಮಾತರಂ ಇದಂ ಉವಾಚ ।

**ಅನ್ವಯಾರ್ಥ—**

**ಕದಾಚಿತ್** = ಒಂದಾನೊಂದು ದಿನ
**ಅಲಯಬುದ್ಧಿಃ** = ನಾಶವಿಲ್ಲದ ಜ್ಞಾನವುಳ್ಳ ವಾಸುದೇವನು,
**ಆಲಯಂ** = ತಂದೆಯಿರುವ ಮನೆಗೆ
**ಆಪ್ಯ** = ಹೋಗಿ
**ಏನಂ** = ಈ ತನ್ನ ತಮ್ಮನನ್ನು
**ಏತಯೋಃ** = ಈ ತಂದೆ, ತಾಯಿಗಳಿಗೆ
**ಪಾಲಕಂ** = ಸೇವಕನನ್ನಾಗಿ
**ನಿವೇದಯನ್** = ತಿಳಿಸುತ್ತ
**ಧವಾನುಮತ್ಯಾ** = ಪತಿಯ ಒಪ್ಪಿಗೆಯಿಂದ
**ದೃಢ** = ಸ್ಥಿರವಾದ
**ಸ್ವಸಂನ್ಯಾಸನಿಷೇಧನಿಶ್ಚಯಾಂ—**
**ಸ್ವಸಂನ್ಯಾಸ** = ತನ್ನ ಸಂನ್ಯಾಸದ
**ನಿಷೇಧ** = ತಡೆಯುವಿಕೆಯ
**ನಿಶ್ಚಯಾಂ** = ನಿಶ್ಚಯವುಳ್ಳ
**ಮಾತರಂ** = ತಾಯಿಯನ್ನು ಕುರಿತು
**ಇದಂ** = ಈ ಮಾತನ್ನು
**ಉವಾಚ** = ಹೇಳಿದನು.

**ತಾತ್ಪರ್ಯ—** ಪ್ರಳಯಕಾಲದಲ್ಲಿಯೂ ನಾಶವಾಗದ ಜ್ಞಾನವುಳ್ಳ ಆ ವಾಸುದೇವನು ಒಂದಾನೊಂದು ದಿನ ತಂದೆಯಿರುವ ತನ್ನ ಮನೆಗೆ ಹೋದನು. ಅಲ್ಲಿರುವ ತಮ್ಮನನ್ನು ತೋರಿಸಿ ನಾನು ಸಂನ್ಯಾಸವನ್ನು ಸ್ವೀಕರಿಸಿದ ತರುವಾಯ ಇವನು ನಿಮ್ಮನ್ನು ಕಾಪಾಡುವನು ಎಂದು ತಂದೆ ತಾಯಿಗಳಿಗೆ ಹೇಳಿದನು. ಹೀಗೆಂದು ಪತಿಯ ಅಭಿಪ್ರಾಯದಂತೆ ತನ್ನ ಸಂನ್ಯಾಸಕ್ಕೆ ಅಡ್ಡಿ ಮಾಡಲು ನಿಶ್ಚಯಿಸಿಕೊಂಡಿರುವ ತಾಯಿಯನ್ನು ಕುರಿತು ಈ ಮಾತನ್ನು ಹೇಳಿದನು.

**ವಿಗ್ರಹ—**

**ಅಲಯಬುದ್ಧಿಃ—** ನ ವಿದ್ಯತೇ ಲಯಃ ಯಸ್ಯಾಃ ಸಾ ಅಲಯಾ, ಅಲಯಾ ಬುದ್ಧಿಃ ಯಸ್ಯ ಸಃ ಅಲಯಬುದ್ಧಿಃ ।

**ದೃಢಸ್ವಸಂನ್ಯಾಸನಿಷೇಧನಿಶ್ಚಯಾಂ—** ಸ್ವಸ್ಯ ಸಂನ್ಯಾಸಃ ಸ್ವಸಂನ್ಯಾಸಃ, ಸ್ವಸಂನ್ಯಾಸಸ್ಯ ನಿಷೇಧಃ ಸ್ವಸಂನ್ಯಾಸನಿಷೇಧಃ, ದೃಢಃ ಯಥಾ ತಥಾ ದೃಢಸ್ವಸಂನ್ಯಾಸನಿಷೇಧಃ, ದೃಢಸ್ವಸಂನ್ಯಾಸನಿಷೇಧೇ ನಿಶ್ಚಯಃ ಯಸ್ಯಾಃ ಸಾ ದೃಢಸ್ವಸಂನ್ಯಾಸನಿಷೇಧನಿಶ್ಚಯಾ, ತಾಂ ದೃಢಸ್ವಸಂನ್ಯಾಸನಿಷೇಧನಿಶ್ಚಯಾಂ ।

**ಧವಾನುಮತ್ಯಾ—** ಧವಸ್ಯ ಅನುಮತಿಃ ಧವಾನುಮತಿಃ, ತಯಾ ಧವಾನುಮತ್ಯಾ ।

**ಕ್ರಿಯಾಪದ—** ಉವಾಚ- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ಧಾತೋಃ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೈಕವಚನೇ 'ಉವಾಚ' ಇತಿ ರೂಪಮ್ ।

ಉವಾಚ ಊಚತುಃ ಊಚುಃ, ಉವಚಿಥ ಉವಕ್ಥ, ಊಚಥುಃ ಊಚ, ಉವಾಚ ಉವಚ, ಊಚಿವ ಊಚಿಮ ॥

★ ★ ★

ತಾಯಿಯನ್ನು ಒಪ್ಪಿಸಿದ ವಾಸುದೇವ

**ವರಾಶ್ರಮಾಪ್ತಿಂ ಮಮ ಸಂವದಸ್ವ ಮಾಂ**
**ಕದಾಚಿದಪ್ಯಂಬ ಯದೀಚ್ಛಸೀಕ್ಷಿತುಮ್ ।**
**ಯದನ್ಯಥಾ ದೇಶಮಿಮಂ ಪರಿತ್ಯಜನ್**
**ನ ಜಾತು ದೃಷ್ಟೇರ್ವಿಷಯೋ ಭವಾಮಿ ವಃ ॥ 28 ॥**

**ಪದಚ್ಛೇದ—** ವರಾಶ್ರಮಾಪ್ತಿಂ, ಮಮ, ಸಂವದಸ್ವ, ಮಾಂ, ಕದಾಚಿತ್, ಅಪಿ, ಅಂಬ, ಯದಿ, ಇಚ್ಛಸಿ, ಈಕ್ಷಿತುಂ, ಯತ್, ಅನ್ಯಥಾ, ದೇಶಂ ಇಮಂ, ಪರಿತ್ಯಜನ್, ನ ಜಾತು, ದೃಷ್ಟೇಃ, ವಿಷಯಃ, ಭವಾಮಿ, ವಃ ।

**ಅನ್ವಯ—** ಅಂಬ! ಕದಾಚಿತ್ ಅಪಿ ಮಾಂ ಈಕ್ಷಿತುಂ ಯದಿ ಇಚ್ಛಸಿ ಮಮ ವರಾಶ್ರಮಾಪ್ತಿಂ ಸಂವದಸ್ವ । ಯದನ್ಯಥಾ ಇಮಂ ದೇಶಂ ಪರಿತ್ಯಜನ್ ಜಾತು ವಃ ದೃಷ್ಟೇಃ ವಿಷಯಃ ನ ಭವಾಮಿ ।

**ಅನ್ವಯಾರ್ಥ—**

**ಅಂಬ** = ಅಮ್ಮ,
**ಕದಾಚಿತ್ ಅಪಿ** = ಯಾವಾಗಲಾದರೂ
**ಮಾಂ** = ನನ್ನನ್ನು
**ಈಕ್ಷಿತುಂ** = ನೋಡುವುದಕ್ಕೆ
**ಯದಿ ಇಚ್ಛಸಿ** = ಅಪೇಕ್ಷಿಸಿದ್ದೇ ಆದರೆ,
**ಮಮ** = ನನ್ನ
**ವರಾಶ್ರಮಾಪ್ತಿಂ** = ಸಂನ್ಯಾಸಾಶ್ರಮದ ಸ್ವೀಕಾರವನ್ನು
**ಸಂವದಸ್ವ** = ಅನುಮೋದಿಸು.
**ಯದನ್ಯಥಾ** = ಇದಕ್ಕೆ ವ್ಯತ್ಯಾಸವಾಗಿ ಒಪ್ಪದೇ ಇದ್ದರೆ
**ಇಮಂ** = ಈ
**ದೇಶಂ** = ದೇಶವನ್ನು
**ಪರಿತ್ಯಜನ್** = ಬಿಡುವವನಾಗಿ
**ಜಾತು** = ಒಂದು ಸಲವೂ
**ವಃ** = ನಿಮ್ಮ
**ದೃಷ್ಟೇಃ ವಿಷಯಃ** = ಕಣ್ಣಿಗೆ ಬೀಳುವವನು
**ನ ಭವಾಮಿ** = ಆಗುವುದಿಲ್ಲ.

**ತಾತ್ಪರ್ಯ—** "ಅಮ್ಮ ನೀನು ಯಾವಾಗಲಾದರೂ ನನ್ನನ್ನು ನೋಡಲು ಅಪೇಕ್ಷಿಸುವುದಾದರೆ ಈಗ ಸಂನ್ಯಾಸ ಸ್ವೀಕರಿಸಲು ನನಗೆ ಅಪ್ಪಣೆಯನ್ನು ನೀಡು. ಹಾಗೆ ಒಪ್ಪದಿದ್ದರೆ ನಾನು ಈ ದೇಶವನ್ನೇ ಬಿಟ್ಟು ಹೊರಟು ಹೋಗುವೆನು. ಅನಂತರ ನೀನು ಯಾವಾಗಲಾದರೂ ಒಂದು ಸಲವೂ ನನ್ನನ್ನು ನೋಡಲಾರೆ".

**ವಿಗ್ರಹ—**

**ವರಾಶ್ರಮಾಪ್ತಿಂ—** ವರಶ್ಚಾಸೌ ಆಶ್ರಮಶ್ಚ ವರಾಶ್ರಮಃ, ವರಾಶ್ರಮಸ್ಯ ಆಪ್ತಿಃ ವರಾಶ್ರಮಾಪ್ತಿಃ, ತಾಂ ವರಾಶ್ರಮಾಪ್ತಿಂ ।

**ಕ್ರಿಯಾಪದ—** **ಸಂವದಸ್ವ**- ಸಂ ಇತ್ಯುಪಸರ್ಗಪೂರ್ವಕಾತ್ ವದ ವ್ಯಕ್ತಾಯಾಂ ವಾಚಿ ಇತ್ಯಸ್ಮಾತ್ ವ್ಯಕ್ತವಾಗರ್ಥಕಾತ್ ವದಧಾತೋಃ ಲೋಟಿ ಮಧ್ಯಮಪುರುಷೈಕವಚನೇ ಸಂವದಸ್ವ ಇತಿ ರೂಪಮ್ ।

ಸಂವದತಾಂ ಸಂವದೇತಾಂ ಸಂವದಂತಾಂ, ಸಂವದಸ್ವ ಸಂವದೇಥಾಂ ಸಂವದಧ್ವಂ, ಸಂವದೈ ಸಂವದಾವಹೈ ಸಂವದಾಮಹೈ ॥

★ ★ ★

**ಮಾತೆಯ ಮೌನ - ಸಮ್ಮತಿ ತಿಳಿದ ವಾಸುದೇವ**

**ಇತಿ ಬ್ರುವಾಣೇ ತನಯೇ ಕದಾಚಿದ-**
**ಪ್ಯದರ್ಶನಂ ತಸ್ಯ ಮೃತೇರ್ನಿದರ್ಶನಮ್ ।**
**ವಿಚಿಂತ್ಯ ಪರ್ಯಾಕುಲಿತಾ ಚಿಕೀರ್ಷಿತಂ**
**ಸುತಸ್ಯ ಕೃಚ್ಛ್ರಾನ್ನ್ಯರುಣನ್ನ ಸಾ ಶುಭಾ ॥ 29 ॥**

**ಪದಚ್ಛೇದ—** ಇತಿ ಬ್ರುವಾಣೇ ತನಯೇ ಕದಾಚಿತ್ ಅಪಿ ಅದರ್ಶನಂ ತಸ್ಯ ಮೃತೇಃ, ನಿದರ್ಶನಂ, ವಿಚಿಂತ್ಯ, ಪರ್ಯಾಕುಲಿತಾ, ಚಿಕೀರ್ಷಿತಂ, ಸುತಸ್ಯ, ಕೃಚ್ಛ್ರಾತ್, ನ್ಯರುಣತ್, ನ, ಸಾ, ಶುಭಾ ।

**ಅನ್ವಯ—** ತನಯೇ ಇತಿ ಬ್ರುವಾಣೇ, ಪರ್ಯಾಕುಲಿತಾ ಶುಭಾ ಸಾ, ತಸ್ಯ ಕದಾಚಿದಪಿ ಅದರ್ಶನಂ ಮೃತೇಃ ನಿದರ್ಶನಂ, (ಇತಿ) ವಿಚಿಂತ್ಯ ಸುತಸ್ಯ ಚಿಕೀರ್ಷಿತಂ ಕೃಚ್ಛ್ರಾತ್ ನ ನ್ಯರುಣತ್ ।

**ಅನ್ವಯಾರ್ಥ—**

**ತನಯೇ** = ಮಗನು
**ಇತಿ** = ಈ ರೀತಿ
**ಬ್ರುವಾಣೇ** = ಹೇಳುತ್ತಿರಲು
**ಪರ್ಯಾಕುಲಿತಾ** = ವ್ಯಥೆಗೊಂಡ
**ಶುಭಾ** = ಮಂಗಳಕರಳಾದ
**ಸಾ** = ಆ ತಾಯಿಯು
**ತಸ್ಯ** = ಆ ಮಗನ
**ಕದಾಚಿದಪಿ** = ಯಾವಾಗಲಾದರೂ ಒಂದು ಬಾರಿಯೂ
**ಅದರ್ಶನಂ** = ನೋಡದಿರುವುದು
**ಮೃತೇಃ** = ಮರಣಕ್ಕೆ
**ನಿದರ್ಶನಂ (ಇತಿ)** = ಸಮಾನವಾದುದು (ಎಂದು)
**ವಿಚಿಂತ್ಯ** = ಆಲೋಚಿಸಿ
**ತಸ್ಯ ಸುತಸ್ಯ** = ಆ ಮಗನ
**ಚಿಕೀರ್ಷಿತಂ** = ಮಾಡಲಪೇಕ್ಷಿಸಲ್ಪಟ್ಟಿದ್ದನ್ನು
**ಕೃಚ್ಛ್ರಾತ್** = ಕಷ್ಟದಿಂದ
**ನ ನ್ಯರುಣತ್** = ತಡೆಯಲಿಲ್ಲ.

**ತಾತ್ಪರ್ಯ**— ಮಗನು ಈ ರೀತಿ ಹೇಳಲು ತಾಯಿಯು ಏನನ್ನೂ ಹೇಳಲು ತೋರದೆ ವ್ಯಥೆಗೊಂಡಳು. ಮಂಗಳ ಕಾರ್ಯಕ್ಕೆ ಅನುಕೂಲಳಾದ ಅವಳು ಮಗನು ಸಂನ್ಯಾಸ ಸ್ವೀಕರಿಸಿದಲ್ಲಿ ಅವನನ್ನು ಯಾವಾಗಲಾದರೂ ನೋಡಬಹುದು. ಸಂನ್ಯಾಸಕ್ಕೆ ಒಪ್ಪದಿದ್ದಲ್ಲಿ ಅವನ ದರ್ಶನವೇ ಇಲ್ಲದಂತಾಗುವುದು. ಅದು ಅವನ ಮರಣಕ್ಕೆ ಸಮಾನವಾದುದು ಎಂದು ಆಲೋಚಿಸಿ ಅತಿಕಷ್ಟದಿಂದ ಮಗನ ಸಂನ್ಯಾಸ ಸ್ವೀಕಾರವನ್ನು ಒಪ್ಪಿಕೊಂಡಳು.

**ವಿಗ್ರಹ**—

**ಅದರ್ಶನಂ**— ದರ್ಶನಸ್ಯ ಅಭಾವಃ ಅದರ್ಶನಂ ।

**ಕ್ರಿಯಾಪದ**— ನ್ಯರುಣತ್- ನಿ ಇತ್ಯುಪಸರ್ಗಪೂರ್ವಕಾತ್ ರುಧಿರಾವರಣೇ ಇತಿ ಧಾತೋಃ ಪರಸ್ಮೈಪದಿನಃ ಲಙ್ ಪ್ರಥಮಪುರುಷೈಕವಚನೇ ನ್ಯರುಣತ್ ಇತಿ ರೂಪಂ ।

ನ್ಯರುಣತ್ ನ್ಯರುಂಧಾಂ ನ್ಯರುಂಧನ್, ನ್ಯರುಣಃ ನ್ಯರುಣತ್, ನ್ಯರುಂಧಂ ನ್ಯರುಂಧ, ನ್ಯರುಂಧಂ ನ್ಯರುಂಧ್ವ ನ್ಯಯುಂಧ್ಮ ।

★ ★ ★

ಸನ್ಯಾಸ ಪಡೆದ ವಾಸುದೇವ

**ಅಥೋಪಗಮ್ಯೈಷ ಗುರುಂ ಜಗದ್ಗುರುಃ**
**ಪ್ರಸಾದ್ಯ ತಂ ದೇವವರಪ್ರಸಾದಿತಃ ।**
**ಸದಾ ಸಮಸ್ತಾಶ್ರಮಭಾಕ್ ಸುರೇಶ್ವರೋ**
**ವಿಶೇಷತಃ ಖಲ್ವಭಜದ್ವರಾಶ್ರಮಮ್ ॥ 30 ॥**

**ಪದಚ್ಛೇದ**— ಅಥ, ಉಪಗಮ್ಯ, ಏಷಃ, ಗುರುಂ, ಜಗದ್ಗುರುಃ, ಪ್ರಸಾದ್ಯ, ತಂ, ದೇವವರಪ್ರಸಾದಿತಃ, ಸದಾ, ಸಮಸ್ತಾಶ್ರಮಭಾಕ್, ಸುರೇಶ್ವರಃ, ವಿಶೇಷತಃ, ಖಲು, ಅಭಜತ್, ವರಾಶ್ರಮಮ್ ।

**ಅನ್ವಯ**— ಅಥ ದೇವವರಪ್ರಸಾದಿತಃ ಜಗದ್ಗುರುಃ ಸುರೇಶ್ವರಃ ಏಷಃ, ಗುರುಂ ಉಪಗಮ್ಯ, ತಂ ಪ್ರಸಾದ್ಯ, ಸದಾ ಸಮಸ್ತಾಶ್ರಮಭಾಕ್, ವಿಶೇಷತಃ ವರಾಶ್ರಮಂ ಅಭಜತ್ ಖಲು ।

**ಅನ್ವಯಾರ್ಥ**—

**ಅಥ** = ನಂತರ

**ದೇವವರಪ್ರಸಾದಿತಃ** = ದೇವಶ್ರೇಷ್ಠರಿಂದ ಪ್ರಸನ್ನಗೊಳಿಸಲ್ಪಟ್ಟ

**ಜಗದ್ಗುರುಃ** = ಪ್ರಪಂಚದ ಗುರುವಾದ

**ಸುರೇಶ್ವರಃ** = ದೇವೋತ್ತಮನಾದ

**ಏಷಃ** = ಈ ವಾಸುದೇವನು

**ಗುರುಂ** = ಅಚ್ಯುತಪ್ರೇಕ್ಷಾಚಾರ್ಯರನ್ನು

**ಉಪಗಮ್ಯ** = ಸಮೀಪಿಸಿ

**ತಂ ಪ್ರಸಾದ್ಯ** = ಅವರನ್ನು ಸಂತೋಷಗೊಳಿಸಿ

**ಸದಾ** = ಯಾವಾಗಲೂ

**ಸಮಸ್ತಾಶ್ರಮಭಾಕ್** = ಎಲ್ಲ ಆಶ್ರಮಗಳನ್ನು (ದೇವತೆಯಾದ್ದರಿಂದ) ಹೊಂದಿದವನಾದರೂ

**ವಿಶೇಷತಃ** = ವಿಶೇಷವಾಗಿ

**ವರಾಶ್ರಮಂ** = ಸಂನ್ಯಾಸಾಶ್ರಮವನ್ನು

**ಅಭಜತ್ ಖಲು** = ಹೊಂದಿದನು, ಇದು ನಿಶ್ಚಯ.

**ತಾತ್ಪರ್ಯ—** ಬಳಿಕ ದೇವತೆಗಳಿಂದ ದುರ್ಮತಗಳನ್ನು ಖಂಡಿಸಿ ಸನ್ಮತವನ್ನು ಸ್ಥಾಪಿಸೆಂದು ಪ್ರಾರ್ಥಿಸಲ್ಪಟ್ಟ, ಪ್ರಪಂಚಕ್ಕೆ ಗುರುವಾದ ವಾಯುದೇವರ ಅವತಾರನಾದ ಆ ವಾಸುದೇವನು ಅಚ್ಯುತಪ್ರೇಕ್ಷಾಚಾರ್ಯರ ಹತ್ತಿರಕ್ಕೆ ಹೋದನು. ಅವರನ್ನು ತನ್ನ ಗುಣಗಳಿಂದ ಸಂತೋಷಗೊಳಿಸಿದನು. ತಾನು ದೇವತೆಯಾದ್ದರಿಂದ ಎಲ್ಲಾ ಆಶ್ರಮಗಳನ್ನು ಹೊಂದಿದವನಾದರೂ ವಿಶೇಷವಾಗಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದನು.

**ವಿಗ್ರಹ—**

**ಜಗದ್ಗುರುಃ—** ಜಗತಾಂ ಗುರುಃ ಜಗದ್ಗುರುಃ ।

**ದೇವವರಪ್ರಸಾದಿತಃ—** ದೇವಾನಾಂ ವರಾಃ ದೇವವರಾಃ, ದೇವವರೈಃ ಪ್ರಸಾದಿತಃ ದೇವವರಪ್ರಸಾದಿತಃ ।

**ಸಮಸ್ತಾಶ್ರಮಭಾಕ್—** ಸಮಸ್ತಾಶ್ಚ ತೇ ಆಶ್ರಮಾಶ್ಚ ಸಮಸ್ತಾಶ್ರಮಾಃ, ಸಮಸ್ತಾಶ್ರಮಾನ್ ಭಜತಿ ಇತಿ ಸಮಸ್ತಾಶ್ರಮಭಾಕ್ ।

**ಸುರೇಶ್ವರಃ—** ಸುರಾಣಾಂ ಈಶ್ವರಃ ಸುರೇಶ್ವರಃ ।

**ವರಾಶ್ರಮಂ—** ವರಶ್ಚಾಸೌ ಆಶ್ರಮಶ್ಚ ವರಾಶ್ರಮಃ ತಂ ವರಾಶ್ರಮಂ ।

**ಕ್ರಿಯಾಪದ— ಅಭಜತ್**- ಭಜ ಸೇವಾಯಾಂ ಇತಿ ಸೇವಾರ್ಥಕಾತ್ ಭಜಧಾತೋಃ ಲಙ್ ಪ್ರಥಮಪುರುಷೇ ಏಕವಚನೇ 'ಅಭಜತ್' ಇತಿ ರೂಪಮ್।

ಅಭಜತ್ ಅಭಜತಾಂ ಅಭಜನ್, ಅಭಜಃ ಅಭಜತಂ ಅಭಜತ, ಅಭಜಂ, ಅಭಜಾವ ಅಭಜಾಮ ॥

★ ★ ★

ಸಂನ್ಯಾಸಸ್ವೀಕಾರದ ಪೂರ್ವವಿಧಿ

**ಕ್ರಿಯಾಕಲಾಪಂ ಸಕಲಂ ಸ ಕಾಲವಿ-**
**ದ್ವಿಧಾನಮಾರ್ಗೇಣ ವಿಧಾಯ ಕೇವಲಮ್ ।**
**ಸದಾ ಪ್ರಸನ್ನಸ್ಯ ಹರೇಃ ಪ್ರಸತ್ತಯೇ**
**ಮುಹುಃ ಸಮಸ್ತನ್ಯಸನಂ ಸಮಭ್ಯಧಾತ್ ॥ 31 ॥**

**ಪದಚ್ಛೇದ—** ಕ್ರಿಯಾಕಲಾಪಂ, ಸಕಲಂ, ಸಃ, ಕಾಲವಿತ್, ವಿಧಾನಮಾರ್ಗೇಣ, ವಿಧಾಯ, ಕೇವಲಂ, ಸದಾ, ಪ್ರಸನ್ನಸ್ಯ, ಹರೇಃ, ಪ್ರಸತ್ತಯೇ, ಮುಹುಃ ಸಮಸ್ತನ್ಯಸನಂ, ಸಮಭ್ಯಧಾತ್ ।

**ಅನ್ವಯ—** ಕಾಲವಿತ್ ಸಃ, ಸಕಲಂ ಕ್ರಿಯಾಕಲಾಪಂ ವಿಧಾನಮಾರ್ಗೇಣ ಕೇವಲಂ ವಿಧಾಯ, ಸದಾ ಪ್ರಸನ್ನಸ್ಯ ಹರೇಃ ಪ್ರಸತ್ತಯೇ, ಮುಹುಃ ಸಮಸ್ತನ್ಯಸನಂ ಸಮಭ್ಯಧಾತ್ ।

**ಅನ್ವಯಾರ್ಥ—**

**ಕಾಲವಿತ್** = ಸಮಯವನ್ನರಿತ

**ಸಃ** = ಆ ವಾಸುದೇವನು

**ಸಕಲಂ** = ಎಲ್ಲ

**ಕ್ರಿಯಾಕಲಾಪಂ** = ಜೀವಚ್ಛ್ರಾದ್ಧ ಮೊದಲಾದ ಕಾರ್ಯ ಸಮೂಹವನ್ನು

**ವಿಧಾನಮಾರ್ಗೇಣ** = ಶಾಸ್ತ್ರವಿಹಿತ ರೀತಿಯಿಂದ

**ಕೇವಲಂ ವಿಧಾಯ** = ಚೆನ್ನಾಗಿ ಮಾಡಿ

**ಸದಾ** = ಯಾವಾಗಲೂ

**ಪ್ರಸನ್ನಸ್ಯ** = ಸಂತುಷ್ಟನಾದ

**ಹರೇಃ** = ಶ್ರೀಮನ್ನಾರಾಯಣನ

**ಪ್ರಸತ್ತಯೇ** = ಅನುಗ್ರಹಕ್ಕಾಗಿ

**ಮುಹುಃ** = ಮತ್ತೂ,

**ಸಮಸ್ತನ್ಯಸನಂ** = ಎಲ್ಲವನ್ನೂ ಭಗವಂತನಲ್ಲಿ ಸಮರ್ಪಿಸುವಿಕೆಯನ್ನು

**ಸಮಭ್ಯಧಾತ್** = ಹೇಳಿದನು.

**ತಾತ್ಪರ್ಯ—** ಯಾವ ಕಾಲದಲ್ಲಿ ಏನನ್ನು ಮಾಡಬೇಕು ಎಂಬುದನ್ನರಿತ ಆ ವಾಸುದೇವನು ಜೀವಚ್ಛ್ರಾದ್ಧ ಮೊದಲಾದ ಸಂನ್ಯಾಸಸ್ವೀಕಾರಕ್ಕಿಂತ ಮೊದಲು ಮಾಡಬೇಕಾದ ಕಾರ್ಯಗಳನ್ನು ಶಾಸ್ತ್ರರೀತಿಯಿಂದ ಮಾಡಿದನು. ಯಾವಾಗಲೂ ಈ ವಾಸುದೇವಾಚಾರ್ಯರಲ್ಲಿ ಶ್ರೀಹರಿಯು ಪ್ರಸನ್ನನಾಗಿರುವನು. ಅವನ ವಿಶೇಷಾನುಗ್ರಹಕ್ಕಾಗಿ ಅವನಲ್ಲಿ ಎಲ್ಲವನ್ನೂ ಸಮರ್ಪಿಸಿದ್ದೇನೆಂದು ಮತ್ತೆ ಮತ್ತೆ ಹೇಳಿ ಹಾಗೆಯೇ ಮಾಡಿದನು.

**ವಿಗ್ರಹ—**

**ಕ್ರಿಯಾಕಲಾಪಂ—** ಕ್ರಿಯಾಣಾಂ ಕಲಾಪಃ ಕ್ರಿಯಾಕಲಾಪಃ, ತಂ ಕ್ರಿಯಾಕಲಾಪಂ ।

**ಕಾಲವಿತ್—** ಕಾಲಂ ವೇತ್ತೀತಿ ಕಾಲವಿತ್ ।

**ವಿಧಾನಮಾರ್ಗೇಣ—** ವಿಧಾನಸ್ಯ ಮಾರ್ಗಃ ವಿಧಾನಮಾರ್ಗಃ, ತೇನ ವಿಧಾನಮಾರ್ಗೇಣ ।

**ಸಮಸ್ತನ್ಯಸನಂ—** ಸಮಸ್ತಾನಾಂ ನ್ಯಸನಂ ಸಮಸ್ತನ್ಯಸನಂ ತತ್ ।

**ಕ್ರಿಯಾಪದ— ಸಮಭ್ಯಧಾತ್** - ಸಂ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತಿ ಧಾರಣಪೋಷಣಾರ್ಥಕಾತ್ ಧಾಞ್ ಧಾತೋಃ ಲಙ್ ಪರಸ್ಮೈಪದಿನಃ ಅಭ್ಯಧಾತ್ ಇತಿ ರೂಪಮ್ ।

ಅಭ್ಯಧಾತ್ ಅಭ್ಯಧತ್ತಾಂ ಅಭ್ಯಧುಃ, ಅಭ್ಯಧಾಃ ಅಭ್ಯಧತ್ತಂ ಅಭ್ಯಧತ್ತ, ಅಭ್ಯಧಾಂ ಅಭ್ಯದಧ್ವ ಅಭ್ಯದಧ್ಮ ॥

★ ★ ★

ಅನಂತಮಾತ್ರೆಗಳ ಪ್ರಣವಾಧಿಕಾರಿಯಾದ ವಾಸುದೇವ

**ಅನಂತಮಾತ್ರಾಂತಮುದಾಹರಂತಿ ಯಂ**
**ತ್ರಿಮಾತ್ರಪೂರ್ವಂ ಪ್ರಣವೋಚ್ಚಯಂ ಬುಧಾಃ ।**
**ತದಾಽಭವದ್ಭಾವಿಚತುರ್ಮುಖಾಕೃತಿ-**
**ರ್ಜಪಾಧಿಕಾರೀ ಯತಿರಸ್ಯ ಸೂಚಿತಃ ॥ 32 ॥**

**ಪದಚ್ಛೇದ—** ಅನಂತಮಾತ್ರಾಂತಂ, ಉದಾಹರಂತಿ, ಯಂ, ತ್ರಿಮಾತ್ರಪೂರ್ವಂ ಪ್ರಣವೋಚ್ಚಯಂ, ಬುಧಾಃ, ತದಾ ಅಭವತ್, ಭಾವಿಚತುರ್ಮುಖಾಕೃತಿಃ, ಜಪಾಧಿಕಾರೀ, ಯತಿಃ, ಅಸ್ಯ, ಸೂಚಿತಃ ।

**ಅನ್ವಯ—** ಬುಧಾಃ ತ್ರಿಮಾತ್ರಪೂರ್ವಂ ಯಂ ಪ್ರಣವೋಚ್ಚಯಂ ಅನಂತಮಾತ್ರಾಂತಂ ಉದಾಹರಂತಿ, ಅಸ್ಯ ತದಾ ಭಾವಿಚತುರ್ಮುಖಾಕೃತಿಃ ಸೂಚಿತಃ ಜಪಾಧಿಕಾರೀ ಯತಿಃ ಅಭವತ್ ।

**ಅನ್ವಯಾರ್ಥ—**

**ಬುಧಾಃ** = ಜ್ಞಾನಿಗಳು

**ತ್ರಿಮಾತ್ರಪೂರ್ವಂ** = ಅಕಾರ, ಉಕಾರ, ಮಕಾರವೆಂಬ ಮೂರು ವರ್ಣಗಳೇ ಮೊದಲುಳ್ಳ

**ಯಂ** = ಯಾವ

**ಪ್ರಣವೋಚ್ಚಯಂ** = ಓಂಕಾರ ರೂಪವಾದ ಅಕ್ಷರಗಳ ಸಮೂಹವನ್ನು

**ಅನಂತಮಾತ್ರಾಂತಂ** = ವೇದದಿಂದ ನಿಶ್ಚಯಿಸಲ್ಪಡುವ ಅರ್ಥವುಳ್ಳದ್ದನ್ನಾಗಿ

**ಉದಾಹರಂತಿ** = ಹೇಳುತ್ತಾರೋ

**ಅಸ್ಯ** = ಈ ಓಂಕಾರಕ್ಕೆ

**ತದಾ** = ಆಗ

**ಭಾವಿಚತುರ್ಮುಖಾಕೃತಿಃ** = ಮುಂದಿನ ಬ್ರಹ್ಮದೇವರ ಸ್ವರೂಪವುಳ್ಳ ವಾಸುದೇವನು

**ಸೂಚಿತಃ** = ಅತ್ಯಂತ ಯೋಗ್ಯನಾದ

**ಜಪಾಧಿಕಾರೀ** = ಜಪಿಸುವ ಅಧಿಕಾರವುಳ್ಳ

**ಯತಿಃ** = ಸಂನ್ಯಾಸಿಯು

**ಅಭವತ್** = ಆದನು.

**ತಾತ್ಪರ್ಯ—** ಜ್ಞಾನಿಗಳು ಅಕಾರ, ಉಕಾರ, ಮಕಾರರೂಪವಾದ ಓಂಕಾರರೂಪದಿಂದ ಕೂಡಿದ ಅಷ್ಟಾಕ್ಷರಮಂತ್ರದ ಅರ್ಥವನ್ನು ವೇದವು ನಿರ್ಣಯಿಸಿ ಹೇಳುವುದೆಂದೂ, ಈ ಪ್ರಣವಕ್ಕೆ ಅಸಂಖ್ಯಮಾತ್ರೆಗಳಿವೆಯೆಂದೂ ಹೇಳುತ್ತಾರೆ. ಇದನ್ನು ಜಪಿಸಲು ಮುಖ್ಯಾಧಿಕಾರಿಗಳು ಯತಿಗಳಾಗಿರುತ್ತಾರೆ. ಆದರಲ್ಲಿಯೂ ವಾಸುದೇವನು ಮುಂದೆ ಬ್ರಹ್ಮಪದವಿಗೆ ಬರುವ ವಾಯುದೇವರ ಅವತಾರನಾದ್ದರಿಂದ ಇಂತಹ ಪ್ರಣವಜಪಕ್ಕೆ ಅತ್ಯಂತ ಯೋಗ್ಯ ಮುಖ್ಯಾಧಿಕಾರಿಯಾಗಬಹುದು.

**ವಿಗ್ರಹ—**

**ಅನಂತಮಾತ್ರಾಂತಂ—** ಅನಂತಾಃ ಮಾತ್ರಾಃ ಯಸ್ಮಿನ್ ಸಃ ಅನಂತಮಾತ್ರಃ, ಅನಂತಮಾತ್ರಃ ಅಂತೇ ಯಸ್ಯ ಸಃ ಅನಂತಮಾತ್ರಾಂತಃ. ತಂ ಅನಂತಮಾತ್ರಾಂತಂ ।

**ತ್ರಿಮಾತ್ರಪೂರ್ವಂ—** ತಿಸ್ರಃ ಮಾತ್ರಾ ಯಸ್ಮಿನ್ ಸಃ ತ್ರಿಮಾತ್ರಃ, ತ್ರಿಮಾತ್ರಃ ಪೂರ್ವಃ ಯಸ್ಮಿನ್ ಸಃ ತ್ರಿಮಾತ್ರಪೂರ್ವಃ, ತಂ ತ್ರಿಮಾತ್ರಪೂರ್ವಂ ।

**ಪ್ರಣವೋಚ್ಚಯಂ—** ಪ್ರಣವಾನಾಂ ಉಚ್ಚಯಃ ಪ್ರಣವೋಚ್ಚಯಃ, ತಂ ಪ್ರಣವೋಚ್ಚಯಂ ।

**ಭಾವಿಚತುರ್ಮುಖಾಕೃತಿಃ—** ಚತ್ವಾರಿ ಮುಖಾನಿ ಯಸ್ಯ ಸಃ ಚತುರ್ಮುಖಃ, ಭಾವೀ ಚಾಸೌ ಚತುರ್ಮುಖಶ್ಚ ಭಾವಿಚತುರ್ಮುಖಃ, ಭಾವಿಚತುರ್ಮುಖಸ್ಯ ಆಕೃತಿಃ ಇವ ಆಕೃತಿಃ ಯಸ್ಯ ಸಃ ಭಾವಿಚತುರ್ಮುಖಾಕೃತಿಃ ।

**ಜಪಾಧಿಕಾರೀ—** ಜಪಸ್ಯ ಅಧಿಕಾರೀ ಜಪಾಧಿಕಾರೀ ।

**ಕ್ರಿಯಾಪದ—** **ಅಭವತ್**- ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಪರಸ್ಮೈಪದಿನಃ ಲಙ್ ಪ್ರಥಮ-ಪುರುಷೈಕವಚನೇ ''ಅಭವತ್''ಇತಿ ರೂಪಂ ।

ಅಭವತ್ ಅಭವತಾಂ ಅಭವನ್, ಅಭವಃ ಅಭವತಂ ಅಭವತ, ಅಭವಂ ಅಭವಾವ ಅಭವಾಮ ॥

★ ★ ★

ಪೂರ್ಣಪ್ರಜ್ಞನಾದ ವಾಸುದೇವ

**ಗುಣಾನುರೂಪೋನ್ನತಿ ಪೂರ್ಣಬೋಧ ಇ-**
**ತ್ಯಮುಷ್ಯ ನಾಮ ದ್ವಿಜವೃಂದವಂದಿತಃ ।**
**ಉದಾಹರದ್ಭೂರಿಯಶಾ ಹಿ ಕೇವಲಂ**
**ನ ಮಂತ್ರವರ್ಣಃ ಸ ಚ ಮಂತ್ರವರ್ಣಕಃ ॥ 33 ॥**

**ಪದಚ್ಛೇದ—** ಗುಣಾನುರೂಪೋನ್ನತಿ, ಪೂರ್ಣಬೋಧಃ, ಇತಿ, ಅಮುಷ್ಯ, ನಾಮ, ದ್ವಿಜವೃಂದವಂದಿತಃ, ಉದಾಹರತ್, ಭೂರಿಯಶಾಃ, ಹಿ, ಕೇವಲಂ, ನ, ಮಂತ್ರವರ್ಣಃ, ಸಃ, ಚ, ಮಂತ್ರವರ್ಣಕಃ ।

**ಅನ್ವಯ—** ಗುಣಾನುರೂಪೋನ್ನತಿ ಪೂರ್ಣಬೋಧಃ ಇತಿ ಅಮುಷ್ಯ ನಾಮ, ದ್ವಿಜವೃಂದವಂದಿತಃ ಭೂರಿಯಶಾಃ ಮಂತ್ರವರ್ಣಃ ಕೇವಲಂ ನ ಉದಾಹರತ್ ಸಃ ಮಂತ್ರವರ್ಣಕಃ ಚ ಉದಾಹರತ್ ಹಿ ।

**ಅನ್ವಯಾರ್ಥ—**

**ಗುಣಾನುರೂಪೋನ್ನತಿ** = ಗುಣಗಳಿಗೆ ಅನುಗುಣವಾದ ಅರ್ಥದ ಅತಿಶಯವುಳ್ಳ
**ಪೂರ್ಣಬೋಧಃ ಇತಿ** = ಪೂರ್ಣಬೋಧ ಎಂಬ
**ಅಮುಷ್ಯ** = ಈ ಯತಿಯ
**ನಾಮ** = ಹೆಸರನ್ನು
**ದ್ವಿಜವೃಂದವಂದಿತಃ** = ಬ್ರಾಹ್ಮಣರ ಸಮೂಹದಿಂದ ನಮಸ್ಕರಿಸಲ್ಪಟ್ಟ
**ಭೂರಿಯಶಾಃ** = ಹೆಚ್ಚಾದ ಕೀರ್ತಿಯುಳ್ಳ
**ಮಂತ್ರವರ್ಣಃ ಕೇವಲಂ** = ವೇದಮಂತ್ರವು ಮಾತ್ರ
**ನ ಉದಾಹರತ್** = ಹೇಳಲಿಲ್ಲ.
**ಸಃ ಮಂತ್ರವರ್ಣಕಃ ಚ** = ಆ ಪ್ರಣವಮಂತ್ರವನ್ನು ಉಪದೇಶಿಸಿದ ಅಚ್ಯುತಪ್ರೇಕ್ಷಾಚಾರ್ಯರೂ ಕೂಡ
**ಉದಾಹರತ್ ಹಿ** = ಹೇಳಿದರು ಎಂದು ಪ್ರಸಿದ್ಧವು.

**ತಾತ್ಪರ್ಯ—** ವಾಸುದೇವನು ಸರ್ವಜ್ಞನಾದ್ದರಿಂದಲೇ ಪೂರ್ಣಬೋಧ, ಪೂರ್ಣಪ್ರಜ್ಞ, ದಶಪ್ರಮತಿ ಎಂಬ ಅನ್ವರ್ಥವಾದ ಹೆಸರನ್ನು ಪಡೆದನು. ಈ ಹೆಸರನ್ನು ಬ್ರಾಹ್ಮಣರಿಂದ ಪೂಜಿಸಲ್ಪಟ್ಟ ಅತಿಯಶಸ್ವಿಯಾದ ವೇದವು ''ದಶಪ್ರಮತಿಂ ಜನಯಂತ'' ಇತ್ಯಾದಿ ಮಾತುಗಳಿಂದ ಹೊಗಳಿರುತ್ತದೆ. ಅದರಂತೆ ಬ್ರಾಹ್ಮಣ ಪೂಜ್ಯರೂ, ಕೀರ್ತಿವಂತರೂ ಆದ ಪ್ರಣವಮಂತ್ರವನ್ನು ಉಪದೇಶಿಸಿದ ಅಚ್ಯುತಪ್ರೇಕ್ಷರೂ ಈ ಹೊಸ ಯತಿಗೆ 'ಪೂರ್ಣಪ್ರಜ್ಞ' ಎಂದೇ ಹೆಸರಿಟ್ಟರು.

**ವಿಗ್ರಹ—**

**ಗುಣಾನುರೂಪೋನ್ನತಿ—** ಗುಣಾನಾಂ ಅನುರೂಪಾ ಗುಣಾನುರೂಪಾ, ಗುಣಾನುರೂಪಾ ಉನ್ನತಿಃ ಯಸ್ಯ ತತ್ ಗುಣಾನುರೂಪೋನ್ನತಿ ।
**ಪೂರ್ಣಬೋಧಃ—** ಪೂರ್ಣಃ ಬೋಧಃ ಯಸ್ಯ ಸಃ ಪೂರ್ಣಬೋಧಃ ।
**ದ್ವಿಜವೃಂದವಂದಿತಃ—** ದ್ವಿಜಾನಾಂ ವೃಂದಂ ದ್ವಿಜವೃಂದಂ, ದ್ವಿಜವೃಂದೇನ ವಂದಿತಃ ದ್ವಿಜವೃಂದವಂದಿತಃ ।
**ಭೂರಿಯಶಾಃ—** ಭೂರಿ ಯಶಃ ಯಸ್ಯ ಸಃ ಭೂರಿಯಶಾಃ ।
**ಮಂತ್ರವರ್ಣಕಃ—** ಮಂತ್ರಸ್ಯ ವರ್ಣಕಃ ಮಂತ್ರವರ್ಣಕಃ ।

**ಕ್ರಿಯಾಪದ—** **ಉದಾಹರತ್**- ಉತ್ ಆಜ್ ಇತ್ಯುಪಸರ್ಗದ್ವಯಪೂರ್ವಕಾತ್ ಹೃಞ್ ಹರಣೇ ಇತ್ಯಸ್ಮಾತ್ ಧಾತೋಃ ಲಜ್ ಪ್ರಥಮಪುರುಷೇ ಏಕವಚನೇ ''ಉದಾಹರತ್'' ಇತಿ ರೂಪಮ್ ।

| | | |
|---|---|---|
| ಉದಾಹರತ್ | ಉದಾಹರತಾಂ | ಉದಾಹರನ್, |
| ಉದಾಹರಃ | ಉದಾಹರತಂ | ಉದಾಹರತ, |
| ಉದಾಹರಂ | ಉದಾಹರಾವ | ಉದಾಹರಾಮ ॥ |

★ ★ ★

ಪೂರ್ಣಪ್ರಜ್ಞರ ದೇವತಾಶೋಭೆ

**ನಿರಂಗರಾಗಂ ಮುಖರಾಗವರ್ಜಿತಂ**
**ವಿಭೂಷಣಂ ವಿಷ್ಟಪಭೂಷಣಾಯಿತಮ್ ।**
**ಅಮುಂ ಧೃತಾಷಾಢಮವೇಕ್ಷ್ಯ ಮೇನಿರೇ**
**ಸ್ವಭಾವಶೋಭಾಽನುಪಮೇತಿ ಜಂತವಃ ॥ 34 ॥**

**ಪದಚ್ಛೇದ—** ನಿರಂಗರಾಗಂ, ಮುಖರಾಗವರ್ಜಿತಂ, ವಿಭೂಷಣಂ, ವಿಷ್ಟಪಭೂಷಣಾಯಿತಂ, ಅಮುಂ, ಧೃತಾಷಾಢಂ, ಅವೇಕ್ಷ್ಯ, ಮೇನಿರೇ, ಸ್ವಭಾವಶೋಭಾ, ಅನುಪಮಾ, ಇತಿ, ಜಂತವಃ ।

**ಅನ್ವಯ—** ನಿರಂಗರಾಗಂ, ಮುಖರಾಗವರ್ಜಿತಂ, ವಿಭೂಷಣಂ, ವಿಷ್ಟಪಭೂಷಣಾಯಿತಂ, ಧೃತಾಷಾಢಂ ಅಮುಂ ಅವೇಕ್ಷ್ಯ, ಜಂತವಃ ಸ್ವಭಾವಶೋಭಾ ಅನುಪಮಾ ಇತಿ ಮೇನಿರೇ ।

**ಅನ್ವಯಾರ್ಥ—**

**ನಿರಂಗರಾಗಂ** = ಗಂಧ ಮೊದಲಾದ ದೇಹಾಲಂಕಾರಗಳಿಲ್ಲದಿರುವ,
**ಮುಖರಾಗವರ್ಜಿತಂ** = ತಾಂಬೂಲ ಮುಂತಾದ ಮುಖಗಳ ಅಲಂಕಾರಗಳಿಲ್ಲದಿರುವ,
**ವಿಭೂಷಣಂ** = ಕರ್ಣಕುಂಡಲ ಮುಂತಾದ ಆಭರಣಗಳಿಲ್ಲದ,
**ವಿಷ್ಟಪ** = ಲೋಕಗಳಿಗೆ
**ಭೂಷಣಾಯಿತಂ** = ಅಲಂಕಾರದಂತೆ ಇರುವ,
**ಧೃತಾಷಾಢಂ** = ಆಷಾಢ ಮರದ ಕೊಂಬೆಯನ್ನು ದಂಡವನ್ನಾಗಿ ಹಿಡಿದಿರುವ
**ಅಮುಂ** = ಈ ಪೂರ್ಣಪ್ರಜ್ಞರನ್ನು
**ಅವೇಕ್ಷ್ಯ** = ನೋಡಿ
**ಜಂತವಃ** = ಜನರು,
**ಸ್ವಭಾವಶೋಭಾ** = ಸ್ವಾಭಾವಿಕ ಕಾಂತಿಯು
**ಅನುಪಮಾ** = ಅಸದೃಶವಾದದ್ದು
**ಇತಿ** = ಹೀಗೆಂದು
**ಮೇನಿರೇ** = ತಿಳಿದರು.

**ತಾತ್ಪರ್ಯ—** ಈ ಪೂರ್ಣಪ್ರಜ್ಞರು ಗಂಧ ಮೊದಲಾದ ಲೇಪನ ದ್ರವ್ಯಗಳನ್ನು ಹಚ್ಚಿಕೊಳ್ಳುತ್ತಿರಲಿಲ್ಲ. ತಾಂಬೂಲ ಮೊದಲಾದದ್ದನ್ನು ಸವಿದು ಬಾಯಿಯನ್ನು ಕೆಂಪು ಮಾಡಿಕೊಳ್ಳುತ್ತಿರಲಿಲ್ಲ. ಒಡವೆಗಳನ್ನು ಧರಿಸುತ್ತಿರಲಿಲ್ಲ. ಹೀಗಿದ್ದರೂ ಪ್ರಪಂಚಕ್ಕೆ ಅಲಂಕಾರಪ್ರಾಯರಾಗಿದ್ದರು. ದಂಡವನ್ನು ಹಿಡಿದಿರುವ ಇಂತಹ ಪೂರ್ಣಪ್ರಜ್ಞರನ್ನು ಕಂಡು ಜನರು ಇವರು ಸ್ವಾಭಾವಿಕವಾದ ಕಾಂತಿಯುಳ್ಳವರು. ಈ ಸ್ವಾಭಾವಿಕ ಕಾಂತಿಗೆ ಎಣೆಯಿಲ್ಲವೆಂದು ತಿಳಿದರು.

**ವಿಗ್ರಹ—**

**ನಿರಂಗರಾಗಂ—** ನಿರ್ಗತಃ ಅಂಗರಾಗಃ ಯಸ್ಮಾತ್ ಸಃ ನಿರಂಗರಾಗಃ, ತಂ ನಿರಂಗರಾಗಮ್ ।

**ಮುಖರಾಗವರ್ಜಿತಂ—** ಮುಖೇ ರಾಗಃ ಮುಖರಾಗಃ, ಮುಖರಾಗೇಣ ವರ್ಜಿತಃ ಮುಖರಾಗವರ್ಜಿತಃ, ತಂ ಮುಖರಾಗವರ್ಜಿತಂ ।

**ವಿಭೂಷಣಂ—** ವಿಗತಾನಿ ಭೂಷಣಾನಿ ಯಸ್ಮಾತ್ ಸಃ ವಿಭೂಷಣಃ, ತಂ ವಿಭೂಷಣಂ ।

**ವಿಷ್ಟಪಭೂಷಣಾಯಿತಂ—** ವಿಷ್ಟಪಸ್ಯ ಭೂಷಣಂ ವಿಷ್ಟಪಭೂಷಣಂ, ವಿಷ್ಟಪಭೂಷಣಂ ಇವ ಆಚರತಿ ಇತಿ ವಿಷ್ಟಪಭೂಷಣಾಯಿತಃ, ತಂ ವಿಷ್ಟಪಭೂಷಣಾಯಿತಂ ।

**ಧೃತಾಷಾಢಂ—** ಧೃತಂ ಆಷಾಢಂ ಯೇನ ಸಃ ಧೃತಾಷಾಢಃ, ತಂ ಧೃತಾಷಾಢಂ ।

**ಸ್ವಭಾವಶೋಭಾ—** ಸ್ವಭಾವಸ್ಯ ಶೋಭಾ ಸ್ವಭಾವಶೋಭಾ ।

**ಅನುಪಮಾ—** ನ ವಿದ್ಯತೇ ಉಪಮಾ ಯಸ್ಯಾಃ ಸಾ ಅನುಪಮಾ ।

**ಕ್ರಿಯಾಪದ— ಮೇನಿರೇ-** ಮನು ಅವಬೋಧನೇ ಇತಿ ಅವಬೋಧನಾರ್ಥಕಾತ್ ಮನುಧಾತೋ ಆತ್ಮನೇಪದಿನಃ ಲಿಟ್ ಪ್ರಥಮಪುರುಷೇ ಬಹುವಚನೇ ''ಮೇನಿರೇ'' ಇತಿ ರೂಪಮ್ ।

ಮೇನೇ ಮೇನಾತೇ ಮೇನಿರೇ, ಮೇನಿಷೇ ಮೇನಾಥೇ ಮೇನಿಧ್ವೇ, ಮೇನೇ ಮೇನಿವಹೇ ಮೇನಿಮಹೇ ॥

★ ★ ★

ಪೂರ್ಣಪ್ರಜ್ಞರ ವಿಡಂಬನೆ

**ಭುಜಂಗಭೂತೇಶವಿಹಂಗಪಾದಿಕೈಃ**
**ಪ್ರವಂದಿತಃ ಸಾವಸರಪ್ರತೀಕ್ಷಣೈಃ ।**
**ನನಾಮ ಸೋಽಯಂ ಗುರುಪೂರ್ವಕಾನ್ ಯತೀನ್**
**ಅಹೋ ಮಹೀಯೋ ಮಹತಾಂ ವಿಡಂಬನಮ್ ॥ 35 ॥**

**ಪದಚ್ಛೇದ—** ಭುಜಂಗಭೂತೇಶವಿಹಂಗಪಾದಿಕೈಃ, ಪ್ರವಂದಿತಃ, ಸಾವಸರಪ್ರತೀಕ್ಷಣೈಃ, ನನಾಮ, ಸಃ, ಅಯಂ, ಗುರುಪೂರ್ವಕಾನ್, ಯತೀನ್, ಅಹೋ, ಮಹೀಯಃ, ಮಹತಾಂ, ವಿಡಂಬನಂ ।

**ಅನ್ವಯ—** ಸಾವಸರಪ್ರತೀಕ್ಷಣೈಃ ಭುಜಂಗಭೂತೇಶವಿಹಂಗಪಾದಿಕೈಃ ಪ್ರವಂದಿತಃ ಸಃ ಅಯಂ ಗುರುಪೂರ್ವಕಾನ್ ಯತೀನ್ ನನಾಮ ಮಹತಾಂ ವಿಡಂಬನಂ ಮಹೀಯಃ ಅಹೋ ।

**ಅನ್ವಯಾರ್ಥ—**

**ಸಾವಸರಪ್ರತೀಕ್ಷಣೈಃ** = ಅವಸರದಿಂದ ದರ್ಶನ ಸಮಯದ ನಿರೀಕ್ಷಣೆಯಿಂದ ಕೂಡಿದ

**ಭುಜಂಗಭೂತೇಶವಿಹಂಗಪಾದಿಕೈಃ** = ಶೇಷದೇವರು, ರುದ್ರದೇವರು, ಪಕ್ಷಿರಾಜನಾದ ಗರುಡದೇವರು ಮುಂತಾದವರಿಂದ

**ಪ್ರವಂದಿತಃ** = ಅತ್ಯಂತ ಭಕ್ತಿಯಿಂದ ನಮಸ್ಕಾರ ಮಾಡಲ್ಪಟ್ಟ

**ಸಃ ಅಯಂ** = ಆ ಪೂರ್ಣಪ್ರಜ್ಞರು

**ಗುರುಪೂರ್ವಕಾನ್** = ಗುರುಗಳಾದ ಅಚ್ಯುತಪ್ರೇಕ್ಷರು ಮುಂತಾದ

**ಯತೀನ್** = ಯತಿಗಳನ್ನು

**ನನಾಮ** = ನಮಸ್ಕಾರ ಮಾಡಿದರು.

**ಮಹತಾಂ** = ದೊಡ್ಡವರ

**ವಿಡಂಬನಂ** = ಸಾಮಾನ್ಯ ಜನರಂತೆ ನಟಿಸುವಿಕೆಯು

**ಮಹೀಯಃ** = ಅತಿ ದೊಡ್ಡದಾದದ್ದು

**ಅಹೋ!** = ಆಶ್ಚರ್ಯ.

**ತಾತ್ಪರ್ಯ—** ಈ ಪೂರ್ಣಪ್ರಜ್ಞರನ್ನು ಮಹಾಶೇಷ, ರುದ್ರ ಗರುಡ ಮೊದಲಾದ ದೇವತೆಗಳು ತಮಗೆ ಅವಕಾಶವು ಸಿಗುತ್ತದೆಯೋ ಇಲ್ಲವೋ ಎಂದು ಅವಸರದಿಂದ ಸಮಯ ನಿರೀಕ್ಷಿಸಿ ವಂದಿಸುತ್ತಿದ್ದರು. ಅಂತಹ ಇವರು ತಮಗಿಂತ ಕಡಿಮೆಯವರಾದ ಅಚ್ಯುತಪ್ರೇಕ್ಷ ಮೊದಲಾದ ಯತಿಗಳನ್ನು ವಂದಿಸಿದರು. ದೊಡ್ಡವರು ಸಾಮಾನ್ಯ ಜನರ ತಿಳುವಳಿಕೆಗಾಗಿ ಸಾಮಾನ್ಯ ಜನರಂತೆ ನಟಿಸುವುದು ಆಶ್ಚರ್ಯಕರವಾದದ್ದು.

**ವಿಗ್ರಹ—**

**ಸಾವಸರಪ್ರತೀಕ್ಷಣೈಃ—** ಅವಸರಸ್ಯ ಪ್ರತೀಕ್ಷಣಂ ಅವಸರಪ್ರತೀಕ್ಷಣಂ, ಅವಸರಪ್ರತೀಕ್ಷಣೇನ ಸಹಿತಾಃ ಇತಿ ಸಾವಸರಪ್ರತೀಕ್ಷಣಾಃ, ತೈಃ ಸಾವಸರಪ್ರತೀಕ್ಷಣೈಃ ।

**ಭುಜಂಗಭೂತೇಶವಿಹಂಗಪಾದಿಕೈಃ—** ಭುಜಂಗಶ್ಚ ಭೂತೇಶಶ್ಚ ವಿಹಂಗಪಶ್ಚ ಭುಜಂಗಭೂತೇಶವಿಹಂಗಪಾಃ, ಭುಜಂಗಭೂತೇಶವಿಹಂಗಪಾಃ ಆದಯಃ ಯೇಷಾಂ ತೇ ಭುಜಂಗಭೂತೇಶವಿಹಂಗಪಾದಿಕಾಃ, ತೈಃ ಭುಜಂಗಭೂತೇಶವಿಹಂಗಪಾದಿಕೈಃ ।

**ಗುರುಪೂರ್ವಕಾನ್—** ಗುರುಃ ಪೂರ್ವಃ ಯೇಷಾಂ ತೇ ಗುರುಪೂರ್ವಕಾಃ, ತಾನ್ ಗುರುಪೂರ್ವಕಾನ್ ।

**ಕ್ರಿಯಾಪದ—** ನನಾಮ- ಣಮು ಪ್ರಹ್ವತ್ವೇ ಶಬ್ದೇ ಚ ಇತಿ ಪ್ರಹ್ವತ್ವ ಶಬ್ದಾರ್ಥಕಾತ್ ಪರಸ್ಮೈಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ 'ನನಾಮ' ಇತಿ ರೂಪಮ್ ।

ನನಾಮ ನೇಮತುಃ ನೇಮುಃ, ನೇಮಿಥ ನನಂಥ, ನೇಮಥುಃ ನೇಮ, ನನಾಮ ನನಮ, ನೇಮಿವ ನೇಮಿಮ ॥

★ ★ ★

ಕಲಿಸಲು ಹೋಗಿ ಕಲಿತ ಅಚ್ಯುತಪ್ರೇಕ್ಷರು

**ವರಾಶ್ರಮಾಚಾರವಿಶೇಷಶಿಕ್ಷಣಂ**
**ವಿಧಿತ್ಸುರಸ್ಯಾಚರಿತಂ ನಿಶಾಮಯನ್ ।**
**ವಿಶೇಷಶಿಕ್ಷಾಂ ಸ್ವಯಮಾಪ್ಯ ಧೀರಧೀ-**
**ರ್ಯತೀಶ್ವರೋ ವಿಸ್ಮಯಮಾಯತಾಂತರಮ್ ॥ 36 ॥**

**ಪದಚ್ಛೇದ—** ವರಾಶ್ರಮಾಚಾರವಿಶೇಷಶಿಕ್ಷಣಂ, ವಿಧಿತ್ಸುಃ, ಅಸ್ಯ, ಆಚರಿತಂ, ನಿಶಾಮಯನ್, ವಿಶೇಷಶಿಕ್ಷಾಂ, ಸ್ವಯಂ, ಆಪ್ಯ, ಧೀರಧೀಃ, ಯತೀಶ್ವರಃ, ವಿಸ್ಮಯಂ, ಆಯತ, ಆಂತರಂ ।

**ಅನ್ವಯ—** ಧೀರಧೀಃ ಯತೀಶ್ವರಃ ವರಾಶ್ರಮಾಚಾರವಿಶೇಷಶಿಕ್ಷಣಂ ವಿಧಿತ್ಸುಃ ಅಸ್ಯ ಆಚರಿತಂ ನಿಶಾಮಯನ್ ಸ್ವಯಂ ವಿಶೇಷಶಿಕ್ಷಾಂ ಆಪ್ಯ ಆಂತರಂ ವಿಸ್ಮಯಂ ಆಯತ ।

**ಅನ್ವಯಾರ್ಥ—**

**ಧೀರಧೀಃ** = ಧೈರ್ಯವುಳ್ಳವರಾದ,

**ಯತೀಶ್ವರಃ** = ಸಂನ್ಯಾಸಶ್ರೇಷ್ಠರಾದ ಅಚ್ಯುತಪ್ರೇಕ್ಷರು,

**ವರಾಶ್ರಮಾಚಾರವಿಶೇಷಶಿಕ್ಷಣಂ** = ಶ್ರೇಷ್ಠವಾದ ಸಂನ್ಯಾಸಾಶ್ರಮದ ಆಚಾರವಿಶೇಷಗಳ ಶಿಕ್ಷಣವನ್ನು

**ವಿಧಿತ್ಸುಃ** = ಹೇಳಿಕೊಡಬೇಕೆಂಬ ಅಪೇಕ್ಷೆಯುಳ್ಳವರಾಗಿ

**ಅಸ್ಯ** = ಈ ಪೂರ್ಣಪ್ರಜ್ಞರ

**ಆಚರಿತಂ** = ಆಚಾರವನ್ನು

**ನಿಶಾಮಯನ್** = ನೋಡುತ್ತ

**ಸ್ವಯಂ** = ತಾವೇ

**ವಿಶೇಷಶಿಕ್ಷಾಂ** = ವಿಶೇಷವಾದ ಶಿಕ್ಷಣವನ್ನು

**ಆಪ್ಯ** = ಹೊಂದಿ

**ಆಂತರಂ** = ಮನಸ್ಸಿನಲ್ಲಿಯೇ ಏರ್ಪಟ್ಟ

**ವಿಸ್ಮಯಂ** = ಆಶ್ಚರ್ಯವನ್ನು

**ಆಯತ** = ಹೊಂದಿದರು.

**ತಾತ್ಪರ್ಯ—** ಶ್ರೇಷ್ಠ ಶಿಷ್ಯನು ಸಿಕ್ಕಿದ್ದರಿಂದ ಸ್ವಸ್ಥ ಮನಸ್ಸುಳ್ಳ ಅಚ್ಯುತಪ್ರೇಕ್ಷರು ಈ ಪೂರ್ಣಪ್ರಜ್ಞರಿಗೆ ಸಂನ್ಯಾಸಾಶ್ರಮದ ಉತ್ತಮಾಚಾರವನ್ನು ಹೇಳಿಕೊಡಲು ಬಯಸಿದರು. ಆದರೆ ಪೂರ್ಣಪ್ರಜ್ಞರು ತಾವಾಗಿಯೇ ಮಾಡುತ್ತಿರುವ ತಮಗೆ ತಿಳಿಯದ ವಿಶೇಷಾಚಾರಗಳನ್ನು ನೋಡಿ ತಾವೇ ಉತ್ತಮಾಚಾರವನ್ನು ಅವರಿಂದ ಕಲಿತವರಾಗಿ ಮನಸ್ಸಿನಲ್ಲಿಯೇ ಆಶ್ಚರ್ಯಗೊಂಡರು.

**ವಿಗ್ರಹ—**

**ವರಾಶ್ರಮಾಚಾರವಿಶೇಷಶಿಕ್ಷಣಂ—** ವರಶ್ಚಾಸೌ ಆಶ್ರಮಶ್ಚ ವರಾಶ್ರಮಃ, ವರಾಶ್ರಮಸ್ಯ ಆಚಾರಃ ವರಾಶ್ರಮಾಚಾರಃ, ವಿಶೇಷೇಣ ಶಿಕ್ಷಣಂ ವಿಶೇಷಶಿಕ್ಷಣಂ, ವರಾಶ್ರಮಾಚಾರಸ್ಯ ವಿಶೇಷಶಿಕ್ಷಣಂ ವರಾಶ್ರಮಾಚಾರವಿಶೇಷಶಿಕ್ಷಣಂ, ತತ್ ವರಾಶ್ರಮಾಚಾರವಿಶೇಷಶಿಕ್ಷಣಂ ।

**ವಿಧಿತ್ಸುಃ—** ವಿಧಾತುಂ ಇಚ್ಛುಃ ವಿಧಿತ್ಸುಃ ।

**ನಿಶಾಮಯನ್—** ನಿಶಾಮಯತಿ ಇತಿ ನಿಶಾಮಯನ್ ।

**ವಿಶೇಷಶಿಕ್ಷಾಂ—** ವಿಶೇಷೇಣ ಶಿಕ್ಷಾ ವಿಶೇಷಶಿಕ್ಷಾ, ತಾಂ ವಿಶೇಷಶಿಕ್ಷಾಂ ।

**ಧೀರಧೀಃ—** ಧೀರಾ ಧೀಃ ಯಸ್ಯ ಸಃ ಧೀರಧೀಃ।

**ಯತೀಶ್ವರಃ—** ಯತೀನಾಂ ಈಶ್ವರಃ ಯತೀಶ್ವರಃ ।

**ಆಂತರಂ—** ಅಂತರೇ ಭವಃ ಆಂತರಃ, ತಂ ಆಂತರಂ ।

**ಕ್ರಿಯಾಪದ— ಆಯತ-** ಅಯ ಗತೌ ಗತ್ಯರ್ಥಕಾತ್ ಅಯ ಧಾತೋಃ ಆತ್ಮನೇಪದಿನಃ ಲಙ್ ಪ್ರಥಮ-ಪುರುಷೈಕವಚನೇ ''ಆಯತ'' ಇತಿ ರೂಪಮ್ ।

ಆಯತ ಆಯೇತಾಂ ಆಯಂತ, ಆಯಥಾಃ ಆಯೇಥಾಂ ಆಯಧ್ವಂ, ಆಯೇ ಆಯಾವಹಿ ಆಯಾಮಹಿ ॥

★ ★ ★

ಶಿಷ್ಯನೇ ನಿಮ್ಮ ಗುರುವೆಂದು ಅನಂತಾಸನನ ಸೂಚನೆ

**ಸ ರೂಪ್ಯಪೀಠಾಲಯವಾಸಿನೇ ಯದಾ**
**ನನಾಮ ನಾಥಾಯ ಮಹಾಮತಿರ್ಮುದಾ ।**
**ತದಾಽಮುನಾಽಗ್ರಾಹಿ ನರಪ್ರವೇಶಿನಾ**
**ಭುಜೇ ಭುಜೇನಾಶು ಭುಜಂಗಶಾಯಿನಾ ॥ 37 ॥**

**ಪದಚ್ಛೇದ—** ಸಃ, ರೂಪ್ಯಪೀಠಾಲಯವಾಸಿನೇ, ಯದಾ, ನನಾಮ, ನಾಥಾಯ, ಮಹಾಮತಿಃ, ಮುದಾ, ತದಾ, ಅಮುನಾ, ಅಗ್ರಾಹಿ, ನರಪ್ರವೇಶಿನಾ, ಭುಜೇ, ಭುಜೇನ, ಆಶು, ಭುಜಂಗಶಾಯಿನಾ ।

**ಅನ್ವಯ—** ಮಹಾಮತಿಃ ಸಃ ರೂಪ್ಯಪೀಠಾಲಯವಾಸಿನೇ ನಾಥಾಯ ಯದಾ ನನಾಮ, ತದಾ ಮುದಾ ನರಪ್ರವೇಶಿನಾ ಭುಜಂಗಶಾಯಿನಾ ಅಮುನಾ ಭುಜೇನ ಭುಜೇ ಆಶು ಅಗ್ರಾಹಿ ।

**ಅನ್ವಯಾರ್ಥ—**

**ಮಹಾಮತಿಃ** = ಪೂರ್ಣಜ್ಞಾನವುಳ್ಳ
**ಸಃ** = ಆ ಪೂರ್ಣಪ್ರಜ್ಞರು
**ರೂಪ್ಯಪೀಠಾಲಯವಾಸಿನೇ** = ಉಡುಪಿಯಲ್ಲಿ ವಾಸಿಸುವ
**ನಾಥಾಯ** = ಅನಂತಾಸನಸ್ವಾಮಿಗೆ
**ಯದಾ** = ಯಾವಾಗ
**ನನಾಮ** = ವಂದಿಸಿದರೋ,
**ತದಾ ಮುದಾ** = ಆಗ ಸಂತೋಷದಿಂದ
**ನರಪ್ರವೇಶಿನಾ** = ಮನುಷ್ಯನಲ್ಲಿ ಆವೇಶಗೊಂಡ
**ಭುಜಂಗಶಾಯಿನಾ** = ಶೇಷಶಾಯಿಯಾದ
**ಅಮುನಾ** = ಈ ಅನಂತಾಸನದೇವರಿಂದ
**ಭುಜೇನ** = ತನ್ನ ತೋಳಿನಿಂದ
**ಭುಜೇ** = ಪೂರ್ಣಪ್ರಜ್ಞರ ತೋಳಿನಲ್ಲಿ
**ಆಶು** = ಜಾಗ್ರತೆಯಾಗಿ
**ಅಗ್ರಾಹಿ** = ಹಿಡಿದುಕೊಳ್ಳಲ್ಪಟ್ಟರು.

**ತಾತ್ಪರ್ಯ—** ಈ ಪೂರ್ಣಪ್ರಜ್ಞರು ಆಶ್ರಮವನ್ನು ಸ್ವೀಕಾರಮಾಡಿದ ತರುವಾಯ ಉಡುಪಿಯಲ್ಲಿರುವ ಅನಂತಾಸನಸ್ವಾಮಿಗೆ ನಮಸ್ಕಾರ ಮಾಡಿದರು. ಆಗ ಅವನು ಸಂತೋಷದಿಂದ ಒಬ್ಬ ಮನುಷ್ಯನಲ್ಲಿ ಆವೇಶಗೊಂಡು ತನ್ನ ಕೈಯಿಂದ ಅವರ ತೋಳನ್ನು ಹಿಡಿದುಕೊಂಡನು.

**ವಿಗ್ರಹ—**

**ರೂಪ್ಯಪೀಠಾಲಯವಾಸಿನೇ—** ರೂಪ್ಯಪೀಠಸ್ಯ ಆಲಯಃ ರೂಪ್ಯಪೀಠಾಲಯಃ, ರೂಪ್ಯಪೀಠಾಲಯೇ ವಸತಿ ಇತಿ ರೂಪ್ಯಪೀಠಾಲಯವಾಸೀ, ತಸ್ಮೈ ರೂಪ್ಯಪೀಠಾಲಯವಾಸಿನೇ ।

**ಮಹಾಮತಿಃ—** ಮಹತೀ ಮತಿಃ ಯಸ್ಯ ಸಃ ಮಹಾಮತಿಃ ।

**ಭುಜಂಗಶಾಯಿನಾ—** ಭುಜಂಗೇ ಶೇತೇ ಇತಿ ಭುಜಂಗಶಾಯೀ, ತೇನ ಭುಜಂಗಶಾಯಿನಾ ।

**ನರಪ್ರವೇಶಿನಾ—** ನರಂ ಪ್ರವಿಶತಿ ಇತಿ ನರಪ್ರವೇಶೀ, ತೇನ ನರಪ್ರವೇಶಿನಾ ।

**ಕ್ರಿಯಾಪದ—** **ಅಗ್ರಾಹಿ-** ಗ್ರಹ ಉಪಾದಾನೇ ಇತಿ ಉಪಾದಾನಾರ್ಥಕಾತ್ ಗ್ರಹಧಾತೋಃ ಕರ್ಮಣಿ ಲುಙ್ ಪ್ರಥಮಪುರುಷೇ ಏಕವಚನೇ ಅಗ್ರಾಹಿ ಇತಿ ರೂಪಮ್।

ಅಗ್ರಾಹಿ ಅಗ್ರಾಹಿಷಾತಾಂ ಅಗ್ರಾಹಿಷತ, ಅಗ್ರಾಹಿಷ್ಠಾಃ ಅಗ್ರಾಹಿಷಾಥಾಂ ಅಗ್ರಾಹಿಢ್ವಂ,
ಅಗ್ರಾಹಿ ಅಗ್ರಾಹಿಷ್ವಹಿ ಅಗ್ರಾಹಿಷ್ಮಹಿ ॥

**ನನಾಮ-** ಣಮು ಪ್ರಹ್ವತ್ವೇಶಬ್ದೇ ಚ ಪ್ರಹ್ವತ್ವಶಬ್ದಾರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ "ನನಾಮ" ಇತಿ ರೂಪಂ।

ನನಾಮ ನೇಮತುಃ ನೇಮುಃ, ನೇಮಿಥ ನನಂಥ, ನೇಮಥುಃ ನೇಮ, ನನಾಮ ನನಮ
ನೇಮಿವ ನೇಮಿಮ

★ ★ ★

### ಅಚ್ಯುತಪ್ರೇಕ್ಷರಿಗೆ ದೊರೆತ ಅನಂತಾಸನನ ಸೇವಾಫಲ

**ಚಿರಾತ್ ಸುತತ್ತ್ವಂ ಪ್ರಬುಭುತ್ಸುನಾ ತ್ವಯಾ**
**ನಿಷೇವಣಂ ಮೇ ಯದಕಾರಿ ತತ್ಫಲಮ್ ।**
**ಅಮುಂ ದದಾಮೀತ್ಯಭಿಧಾಯ ಸೋಽಮುನಾ**
**ತದಾ ಪ್ರಣೀಯ ಪ್ರದದೇಽಚ್ಯುತಾತ್ಮನೇ ॥ 38 ॥**

**ಪದಚ್ಛೇದ—** ಚಿರಾತ್, ಸುತತ್ತ್ವಂ, ಪ್ರಬುಭುತ್ಸುನಾ, ತ್ವಯಾ, ನಿಷೇವಣಂ, ಮೇ, ಯದಕಾರಿ, ತತ್ಫಲಂ, ಅಮುಂ, ದದಾಮಿ, ಇತ್ಯಭಿಧಾಯ, ಸಃ, ಅಮುನಾ, ತದಾ, ಪ್ರಣೀಯ, ಪ್ರದದೇ, ಅಚ್ಯುತಾತ್ಮನೇ ।

**ಅನ್ವಯ—** ತದಾ ಅಮುನಾ ಪ್ರಣೀಯ ಸುತತ್ತ್ವಂ ಪ್ರಬುಭುತ್ಸುನಾ ತ್ವಯಾ ಚಿರಾತ್ ಯತ್ ಮೇ ನಿಷೇವಣಂ ಅಕಾರಿ ತತ್ಫಲಂ ಅಮುಂ ದದಾಮಿ. ಇತಿ ಅಭಿಧಾಯ ಅಚ್ಯುತಾತ್ಮನೇ ಸಃ ಪ್ರದದೇ ।

**ಅನ್ವಯಾರ್ಥ—**

**ತದಾ** = ಆಗ
**ಅಮುನಾ** = ಈ ಅನಂತಾಸನಸ್ವಾಮಿಯಿಂದ
**ಪ್ರಣೀಯ** = ಅಚ್ಯುತಪ್ರೇಕ್ಷರ ಹತ್ತಿರ ಕರೆತಂದು
**ಸುತತ್ತ್ವಂ** = ಒಳ್ಳೆ ಅಧ್ಯಾತ್ಮ ತತ್ತ್ವವನ್ನು
**ಪ್ರಬುಭುತ್ಸುನಾ** = ತಿಳಿಯಲಪೇಕ್ಷೆಯುಳ್ಳ
**ತ್ವಯಾ** = ನಿನ್ನಿಂದ
**ಚಿರಾತ್** = ಬಹಳ ಕಾಲದಿಂದ
**ಯತ್** = ಯಾವ
**ಮೇ ನಿಷೇವಣಂ** = ನನ್ನ ಸೇವೆಯು
**ಅಕಾರಿ** = ಮಾಡಲ್ಪಟ್ಟಿತೋ
**ತತ್ ಫಲಂ** = ಆ ಸೇವೆಯ ಫಲವಾಗಿ
**ಅಮುಂ** = ಈ ಪೂರ್ಣಪ್ರಜ್ಞರನ್ನು
**ದದಾಮಿ** = ಕೊಡುತ್ತೇನೆ

**ಇತಿ ಅಭಿಧಾಯ** = ಹೀಗೆಂದು ಹೇಳಿ

**ಅಚ್ಯುತಾತ್ಮನೇ** = ಹರಿಯಲ್ಲಿ ಮನಸ್ಸುಳ್ಳ ಅಚ್ಯುತಪ್ರೇಕ್ಷರಿಗೆ

**ಸಃ ಪ್ರದದೇ** = ಕೊಡಲ್ಪಟ್ಟರು.

**ತಾತ್ಪರ್ಯ—** ಆ ಮನುಷ್ಯನಲ್ಲಿ ಆವೇಶಗೊಂಡ ಅನಂತಾಸನಸ್ವಾಮಿಯು ಪೂರ್ಣಪ್ರಜ್ಞರನ್ನು ಕೈಯಿಂದ ಹಿಡಿದುಕೊಂಡು ಅಚ್ಯುತಪ್ರೇಕ್ಷರ ಹತ್ತಿರ ಬಂದನು, ಅಚ್ಯುತಪ್ರೇಕ್ಷರೇ, ನೀವು ಬಹಳಕಾಲದಿಂದ ನನ್ನ ತತ್ತ್ವವನ್ನು ತಿಳಿಯಲು ನನ್ನನ್ನು ಸೇವಿಸಿದ್ದೀರಿ. ಅದಕ್ಕೆ ಫಲವಾಗಿ ಈ ಪೂರ್ಣಪ್ರಜ್ಞರನ್ನು ನಿಮಗೆ ಕೊಡುತ್ತೇನೆ. ಇವರು ನಿಮಗೆ ಅಧ್ಯಾತ್ಮವನ್ನು ತಿಳಿಸುವವರು ಎಂದು ಅವರನ್ನು ಆ ಅಚ್ಯುತಪ್ರೇಕ್ಷರಿಗೆ ಒಪ್ಪಿಸಿದನು.

**ವಿಗ್ರಹ—**

**ಸುತತ್ತ್ವಂ—** ಶೋಭನಂ ಚ ತತ್ ತತ್ತ್ವಂ ಚ ಸುತತ್ತ್ವಂ, ತತ್ ಸುತತ್ತ್ವಂ ।

**ಪ್ರಬುಭುತ್ಸುನಾ—** ಪ್ರಬೋದ್ಧುಂ ಇಚ್ಛುಃ ಪ್ರಬುಭುತ್ಸುಃ, ತೇನ ಪ್ರಬುಭುತ್ಸುನಾ ।

**ನಿಷೇವಣಂ—** ನಿತರಾಂ ಸೇವನಂ ನಿಷೇವಣಂ, ತತ್ ನಿಷೇವಣಂ

**ತತ್ಫಲಂ—** ತಸ್ಯ ಫಲಂ, ತತ್ಫಲಂ, ತತ್ ತತ್ಫಲಂ ।

**ಪ್ರಣೀಯ—** ಪ್ರಕರ್ಷೇಣ ನೀತ್ವಾ ಪ್ರಣೀಯ ।

**ಅಚ್ಯುತಾತ್ಮನೇ—** ಅಚ್ಯುತೇ ಆತ್ಮಾ ಯಸ್ಯ ಸಃ ಅಚ್ಯುತಾತ್ಮಾ, ತಸ್ಮೈ ಅಚ್ಯುತಾತ್ಮನೇ ।

**ಕ್ರಿಯಾಪದ— ಅಕಾರಿ-** ಡುಕೃಞ್ ಕರಣೇ ಇತಿ ಕರಣಾರ್ಥಕಾತ್ ಕೃಧಾತೋಃ ಕರ್ಮಣಿ ಲುಙ್ ಪ್ರಥಮಪುರುಷೇ ಏಕವಚನೇ ಅಕಾರಿ ಇತಿ ರೂಪಮ್ ।

ಅಕಾರಿ ಅಕಾರಿಷಾತಾಂ ಅಕಾರಿಷತ, ಅಕಾರಿಷ್ಠಾಃ ಅಕಾರಿಷಾಥಾಂ ಅಕಾರಿಧ್ವಂ, ಅಕಾರಿಷಿ ಅಕಾರಿಷ್ವಹಿ ಅಕಾರಿಷ್ಮಹಿ ॥

ದದಾಮಿ- ಡು ದಾಞ್ ದಾನೇ ಇತಿ ದಾನಾರ್ಥಕಾತ್ ಲಟಿ ಉ.ಪು.ಏ. ''ದದಾಮಿ'' ಇತಿ ರೂಪಮ್।

ದದಾತಿ ದತ್ತಃ ದದತಿ, ದದಾಸಿ ದತ್ಥಃ ದತ್ಥ ದದಾಮಿ ದದ್ವಃ ದದ್ಮಃ

ಪದದೇ- ಪ್ರ ಇತ್ಯುಪಸರ್ಗಪೂರ್ವಕಾತ್ ದಾಞ್ ದಾನೇ ಇತಿ ದಾನಾರ್ಥಕಾತ್ ಆತ್ಮನೇಪದಿನಃ ಲಿಟಿ ಉ.ಪು.ಏ. ''ಪ್ರದದೇ'' ಇತಿ ರೂಪಮ್ ।

ಪ್ರದದೇ ಪ್ರದದಾತೇ ಪ್ರದದಿರೇ, ಪ್ರದದಿಷೇ ಪ್ರದದಾಥೇ ಪ್ರದದಿಧ್ವೇ, ಪ್ರದದೇ ಪ್ರದದಿವಹೇ ಪ್ರದದಿಮಹೇ ॥

★ ★ ★

ಸರ್ವಜ್ಞಾಚಾರ್ಯರ ಸಂಗದಿಂದ ಸಂತಸ ಪಡೆದ ಗುರುಗಳು

**ಅನುಗ್ರಹಂ ತಂ ಪ್ರತಿಗೃಹ್ಯ ಸಾದರಂ**
**ಮುದಾऽऽತ್ಮನಾऽऽಪ್ತಾಂ ಕೃತಕೃತ್ಯತಾಂ ಸ್ಮರನ್ ।**
**ಅಭೂದಸಂಗೋऽಪಿ ಸ ತತ್ಸುಸಂಗವಾನ್**
**ಅಸಂಗಭೂಷಾ ನನು ಸಾಧುಸಂಗಿತಾ ॥ 39 ॥**

**ಪದಚ್ಛೇದ—** ಅನುಗ್ರಹಂ, ತಂ, ಪ್ರತಿಗೃಹ್ಯ, ಸಾದರಂ, ಮುದಾ, ಆತ್ಮನಾ, ಆಪ್ತಾಂ, ಕೃತಕೃತ್ಯತಾಂ, ಸ್ಮರನ್, ಅಭೂತ್, ಅಸಂಗಃ, ಅಪಿ, ಸಃ, ತತ್ಸುಸಂಗವಾನ್, ಅಸಂಗಭೂಷಾ, ನನು, ಸಾಧುಸಂಗಿತಾ ।

**ಅನ್ವಯ—** ಸಃ ತಂ ಅನುಗ್ರಹಂ ಸಾದರಂ ಮುದಾ ಪ್ರತಿಗೃಹ್ಯ ಆತ್ಮನಾ ಕೃತಕೃತ್ಯತಾಂ ಆಪ್ತಾಂ ಸ್ಮರನ್ ಅಸಂಗಃ ಅಪಿ ತತ್ಸುಸಂಗವಾನ್ ಅಭೂತ್ ಸಾಧುಸಂಗಿತಾ ಅಸಂಗಭೂಷಾ ನನು ।

**ಅನ್ವಯಾರ್ಥ—**

**ಸಃ** = ಆ ಅಚ್ಯುತಪ್ರೇಕ್ಷಾಚಾರ್ಯರು
**ತಂ ಅನುಗ್ರಹಂ** = ಆ ಅನುಗ್ರಹವನ್ನು
**ಸಾದರಂ** = ಆದರ ಸಹಿತವಾಗಿ
**ಮುದಾ** = ಸಂತೋಷದಿಂದ
**ಪ್ರತಿಗೃಹ್ಯ** = ಸ್ವೀಕರಿಸಿ
**ಆತ್ಮನಾ** = ತಮ್ಮಿಂದ
**ಕೃತಕೃತ್ಯತಾಂ** = ಧನ್ಯತೆಯನ್ನು
**ಆಪ್ತಾಂ** = ಹೊಂದಲ್ಪಟ್ಟವರಾಗಿ
**ಸ್ಮರನ್** = ಸ್ಮರಿಸುವವರಾಗಿ
**ಅಸಂಗಃ ಅಪಿ** = ಸಾಮಾನ್ಯಜನರ ಸಹವಾಸವಿಲ್ಲದವರಾದರೂ
**ತತ್** = ಆ ಪೂರ್ಣಪ್ರಜ್ಞರಲ್ಲಿ
**ಸುಸಂಗವಾನ್** = ಒಳ್ಳೆ ಸಹವಾಸವುಳ್ಳವರು
**ಅಭೂತ್** = ಆದರು
**ಸಾಧುಸಂಗಿತಾ** = ಸಜ್ಜನರ ಸಂಬಂಧವು
**ಅಸಂಗಭೂಷಾ ನನು** = ವಿಷಯ ಸಂಬಂಧವಿಲ್ಲದವರಿಗೆ ಅಲಂಕಾರವಷ್ಟೆ.

**ತಾತ್ಪರ್ಯ—** ಆ ಅಚ್ಯುತಪ್ರೇಕ್ಷರು ಎಲ್ಲವನ್ನು ತ್ಯಜಿಸಿದ ಸಂನ್ಯಾಸಿಗಳು. ಆದರೂ ಆ ಅನಂತಾಸನಸ್ವಾಮಿಯು ಅನುಗ್ರಹರೂಪವಾಗಿ ಕೊಟ್ಟಿರುವ ಪೂರ್ಣಪ್ರಜ್ಞರನ್ನು ಸಂತೋಷದಿಂದ ಸ್ವೀಕರಿಸಿ ತಾವು ಧನ್ಯರೆಂದು ಭಾವಿಸಿದರು. ಆ ಪೂರ್ಣಪ್ರಜ್ಞರ ಸಹವಾಸವನ್ನು ಮಾಡಿದರು. ವಿಷಯಗಳನ್ನು ತ್ಯಜಿಸಿದವರಿಗೂ ಸಜ್ಜನರ ಸಹವಾಸವು ಅಲಂಕಾರ ರೂಪವಾದುದೆ.

**ವಿಗ್ರಹ—**

**ಸಾದರಂ—** ಆದರೇಣ ಸಹ ವರ್ತತೇ ಇತಿ ಸಾದರಂ ।
**ಕೃತಕೃತ್ಯತಾಂ—** ಕೃತಂ ಕೃತ್ಯಂ ಯೇನ ಸಃ ಕೃತಕೃತ್ಯಃ, ತಸ್ಯ ಭಾವಃ ಕೃತಕೃತ್ಯತಾ, ತಾಂ ಕೃತಕೃತ್ಯತಾಂ ।
**ಸ್ಮರನ್—** ಸ್ಮರತಿ ಇತಿ ಸ್ಮರನ್ ।
**ಅಸಂಗಃ—** ನ ವಿದ್ಯತೇ ಸಂಗಃ ಯಸ್ಯ ಸಃ ಅಸಂಗಃ ।
**ತತ್ಸುಸಂಗವಾನ್—** ಶೋಭನಶ್ಚಾಸೌ ಸಂಗಶ್ಚ ಸುಸಂಗಃ, ಸುಸಂಗಃ ಅಸ್ಯಾಸ್ತೀತಿ ತತ್ಸುಸಂಗವಾನ್ ।
**ಅಸಂಗಭೂಷಾ—** ನ ವಿದ್ಯತೇ ಸಂಗಃ ಯೇಷಾಂ ತೇ ಅಸಂಗಾಃ, ಅಸಂಗಾನಾಂ ಭೂಷಾ ಅಸಂಗಭೂಷಾ ।
**ಸಾಧುಸಂಗಿತಾ—** ಸಾಧುಷು ಸಂಗಃ ಸಾಧುಸಂಗಃ, ಸಾಧುಸಂಗಃ ಅಸ್ಯಾಸ್ತೀತಿ ಸಾಧುಸಂಗೀ, ಸಾಧುಸಂಗಿನಃ ಭಾವಃ ಸಾಧುಸಂಗಿತಾ ।

**ಕ್ರಿಯಾಪದ— ಅಭೂತ್**- ಭೂ ಸತ್ತಾಯಾಂ ಸತ್ತಾರ್ಥಕಾತ್ ಭೂಧಾತೋಃ ಲುಙ್ ಪ್ರಥಮಪುರುಷೇ ಏಕವಚನೇ ಅಭೂತ್ ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಭೂತ, ಅಭೂವಂ ಅಭೂವ ಅಭೂಮ ॥

★ ★ ★

### ಪೂರ್ಣಪ್ರಜ್ಞರಿಗೆ ಗಂಗಾಸ್ನಾನದ ಅಪೇಕ್ಷೆ

**ಯಿಯಾಸತಿ ಸ್ವಸ್ತಟಿನೀಂ ಮುಹುರ್ಮುಹು-**
**ರ್ನಮತ್ಯನುಜ್ಞಾರ್ಥಿನಿ ಭೂರಿಚೇತಸಿ ।**
**ತಮಸ್ಮರತ್ ಸ್ವಾಮಿನಮೇವ ದೂನಧೀ-**
**ರ್ಗುರುರ್ಭವಿಷ್ಯದ್ವಿರಹಾಗ್ನಿಶಂಕಯಾ ॥ 40 ॥**

**ಪದಚ್ಛೇದ—** ಯಿಯಾಸತಿ, ಸ್ವಸ್ತಟಿನೀಂ, ಮುಹುರ್ಮುಹುಃ, ನಮತಿ, ಅನುಜ್ಞಾರ್ಥಿನಿ, ಭೂರಿಚೇತಸಿ, ತಂ, ಅಸ್ಮರತ್, ಸ್ವಾಮಿನಂ, ಏವ, ದೂನಧೀಃ, ಗುರುಃ, ಭವಿಷ್ಯತ್, ವಿರಹಾಗ್ನಿಶಂಕಯಾ ।

**ಅನ್ವಯ—** ಸ್ವಸ್ತಟಿನೀಂ ಯಿಯಾಸತಿ ಅನುಜ್ಞಾರ್ಥಿನಿ ಭೂರಿಚೇತಸಿ ಮುಹುರ್ಮುಹುಃ ನಮತಿ, ಭವಿಷ್ಯ-ದ್ವಿರಹಾಗ್ನಿಶಂಕಯಾ ದೂನಧೀಃ ಗುರುಃ ತಂ ಸ್ವಾಮಿನಂ ಏವ ಅಸ್ಮರತ್ ।

**ಅನ್ವಯಾರ್ಥ—**

**ಸ್ವಸ್ತಟಿನೀಂ** = ಗಂಗಾನದಿಯನ್ನು ಕುರಿತು
**ಯಿಯಾಸತಿ** = ಹೋಗಲಪೇಕ್ಷೆಯುಳ್ಳ
**ಅನುಜ್ಞಾರ್ಥಿನಿ** = ಅನುಮತಿಯನ್ನು ಅಪೇಕ್ಷಿಸುವ
**ಭೂರಿಚೇತಸಿ** =ಹೆಚ್ಚು ಬುದ್ಧಿಯುಳ್ಳ ಪೂರ್ಣಪ್ರಜ್ಞರು
**ಮುಹುರ್ಮುಹುಃ** = ಮತ್ತೆಮತ್ತೆ
**ನಮತಿ** = ನಮಸ್ಕಾರ ಮಾಡುತ್ತಿರಲು
**ಭವಿಷ್ಯದ್ವಿರಹಾಗ್ನಿಶಂಕಯಾ** = ಮುಂದಿನ ಅಗಲಿಕೆಯೆಂಬ ಬೆಂಕಿಯ ಭಯದಿಂದ
**ದೂನಧೀಃ** = ದುಃಖಗೊಂಡ ಮನಸ್ಸುಳ್ಳ
**ಗುರುಃ** = ಅಚ್ಯುತಪ್ರೇಕ್ಷರು
**ತಂ ಸ್ವಾಮಿನಂ ಏವ** = ಆ ಅನಂತಾಸನದೇವರನ್ನೇ
**ಅಸ್ಮರತ್** = ಧ್ಯಾನಿಸಿದರು.

**ತಾತ್ಪರ್ಯ—** ಪೂರ್ಣಪ್ರಜ್ಞರು ಗಂಗೆಯಲ್ಲಿ ಸ್ನಾನಮಾಡಲು ಕಾಶಿಗೆ ಹೋಗಬೇಕೆಂದು ಅಪೇಕ್ಷಿಸಿದರು. ಅದಕ್ಕಾಗಿ ಗುರುಗಳಾದ ಅಚ್ಯುತಪ್ರೇಕ್ಷರನ್ನು ಅಪ್ಪಣೆಕೊಡಬೇಕೆಂದು ಅನೇಕ ಬಾರಿ ನಮಸ್ಕರಿಸಿ ಕೇಳಿಕೊಂಡರು. ಆದರೆ ಅಚ್ಯುತಪ್ರೇಕ್ಷರು ಭವಿಷ್ಯದಲ್ಲಿ ಉಂಟಾಗುವ ಅವರ ವಿರಹದುಃಖವನ್ನು ಸಹಿಸಲಾರದೆ ವ್ಯಥೆಗೊಂಡವರಾಗಿ ಆ ಅನಂತಾಸನಸ್ವಾಮಿಯನ್ನೇ ಧ್ಯಾನಿಸಿದರು.

ವಿಗ್ರಹ—

**ಯಿಯಾಸತಿ—** ಯಾತುಂ ಇಚ್ಛತಿ ಇತಿ ಯಿಯಾಸನ್, ತಸ್ಮಿನ್ ಯಿಯಾಸತಿ ।
**ನಮತಿ—** ನಮತಿ ಇತಿ ನಮನ್, ತಸ್ಮಿನ್ ನಮತಿ ।
**ಅನುಜ್ಞಾರ್ಥಿನಿ—** ಅನುಜ್ಞಾಂ ಅರ್ಥಯತೇ ಇತಿ ಅನುಜ್ಞಾರ್ಥೀ, ತಸ್ಮಿನ್ ಅನುಜ್ಞಾರ್ಥಿನಿ ।
**ಭೂರಿಚೇತಸಿ—** ಭೂರಿ ಚೇತಃ ಯಸ್ಯ ಸಃ ಭೂರಿಚೇತಾಃ, ತಸ್ಮಿನ್ ಭೂರಿಚೇತಸಿ ।
**ದೂನಧೀಃ—** ದೂನಾ ಧೀಃ ಯಸ್ಯ ಸಃ ದೂನಧೀಃ ।

**ಭವಿಷ್ಯದ್ವಿರಹಾಗ್ನಿಶಂಕಯಾ—** ವಿರಹೇಣ ಅಗ್ನಿಃ ವಿರಹಾಗ್ನಿಃ, ಭವಿಷ್ಯತಿ ಇತಿ ಭವಿಷ್ಯನ್, ಭವಿಷ್ಯಂಶ್ಚಾಸೌ ವಿರಹಾಗ್ನಿಶ್ಚ ಭವಿಷ್ಯದ್ವಿರಹಾಗ್ನಿಃ, ಭವಿಷ್ಯದ್ವಿರಹಾಗ್ನಿಃ ಇತಿ ಶಂಕಾ ಭವಿಷ್ಯದ್ವಿರಹಾಗ್ನಿಶಂಕಾ, ತಯಾ ಭವಿಷ್ಯದ್ವಿರಹಾಗ್ನಿಶಂಕಯಾ ।

**ಕ್ರಿಯಾಪದ—** ಅಸ್ಮರತ್- ಸ್ಮೃ ಸ್ಮೃತೌ ಇತಿ ಸ್ಮೃತ್ಯರ್ಥಕಾತ್ ಸ್ಮೃಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅಸ್ಮರತ್'' ಇತಿ ರೂಪಮ್ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

★ ★ ★

### ಅನಂತಾಸನನಿಂದ ಗಂಗಾವತರಣದ ವಾರ್ತೆ

**ಇತಸ್ತೃತೀಯೇ ದಿವಸೇ ದ್ಯುನಿಮ್ನಗಾ**
**ತ್ವದರ್ಥಮಾಸ್ಮಾಕತಟಾಕಮಾವ್ರಜೇತ್ ।**
**ಅತೋ ನ ಯಾಯಾ ಇತಿ ತಂ ತದಾಽವದತ್**
**ಪ್ರವಿಶ್ಯ ಕಂಚಿತ್ಕರುಣಾಕರೋ ಹರಿಃ ॥ 41 ॥**

**ಪದಚ್ಛೇದ—** ಇತಃ, ತೃತೀಯೇ, ದಿವಸೇ, ದ್ಯುನಿಮ್ನಗಾ, ತ್ವದರ್ಥಂ, ಆಸ್ಮಾಕತಟಾಕಂ, ಆವ್ರಜೇತ್, ಅತಃ, ನ, ಯಾಯಾಃ, ಇತಿ, ತಂ, ತದಾ, ಆವದತ್, ಪ್ರವಿಶ್ಯ, ಕಂಚಿತ್, ಕರುಣಾಕರಃ, ಹರಿಃ ।

**ಅನ್ವಯ—** ತದಾ ಕರುಣಾಕರಃ ಹರಿಃ ಕಂಚಿತ್ ಪ್ರವಿಶ್ಯ, ದ್ಯುನಿಮ್ನಗಾ ತ್ವದರ್ಥಂ ಇತಃ ತೃತೀಯೇ ದಿವಸೇ ಆಸ್ಮಾಕತಟಾಕಂ ಆವ್ರಜೇತ್ ಅತಃ ನ ಯಾಯಾಃ ಇತಿ ತಂ ಅವದತ್ ।

**ಅನ್ವಯಾರ್ಥ—**

**ತದಾ** = ಆಗ
**ಕರುಣಾಕರಃ** = ದಯಾಳುವಾದ
**ಹರಿಃ** = ಅನಂತಾಸನ ಸ್ವಾಮಿಯು
**ಕಂಚಿತ್** = ಒಬ್ಬ ಮನುಷ್ಯನನ್ನು
**ಪ್ರವಿಶ್ಯ** = ಪ್ರವೇಶಿಸಿ
**ದ್ಯುನಿಮ್ನಗಾ** = ಭಾಗೀರಥಿಯು
**ತ್ವದರ್ಥಂ** = ನಿನಗಾಗಿ
**ಇತಃ ತೃತೀಯೇ ದಿವಸೇ** = ಈ ದಿನದಿಂದ ಮೂರನೆ ದಿನದಲ್ಲಿ
**ಆಸ್ಮಾಕತಟಾಕಂ** = ನಮ್ಮ ಸರೋವರಕ್ಕೆ
**ಆವ್ರಜೇತ್** = ಬರುವಳು.
**ಅತಃ** = ಈ ಕಾರಣದಿಂದ
**ನ ಯಾಯಾಃ** = ಹೋಗಬೇಡ,
**ಇತಿ** = ಹೀಗೆಂದು
**ತಂ ಆವದತ್** = ಆ ಪೂರ್ಣಪ್ರಜ್ಞರನ್ನು ಕುರಿತು ಹೇಳಿದನು.

**ತಾತ್ಪರ್ಯ—** ಆಗ ದಯಾಳುವಾದ ಅನಂತಾಸನಸ್ವಾಮಿಯು ಒಬ್ಬ ಮನುಷ್ಯನಲ್ಲಿ ಆವೇಶಗೊಂಡನು. ಎಲೈ ಪೂರ್ಣಪ್ರಜ್ಞನೇ, ದೇವಗಂಗೆಯು ದೂರದಲ್ಲಿರುವಳು. ಅವಳಿಗಾಗಿ ನೀನು ಅಲ್ಲಿಗೆ ಹೋಗಬೇಡ. ಕರುಣಾಸಮುದ್ರ-ನಾದ ನಾನು ಅವಳನ್ನು ಇಲ್ಲಿಗೆ ಕಳುಹಿಸುವೆನು. 'ಮಧ್ವಸರೋವರ' ಎಂದು ಈ ಕೆರೆಯು ಇನ್ನು ಮುಂದೆ ಪ್ರಸಿದ್ಧ-ವಾಗುತ್ತದೆ. ಗಂಗೆಯು ನಿನಗಾಗಿ ಇಲ್ಲಿಗೆ ಬರುವಳು. ನೀನು ಅಲ್ಲಿಗೆ ಹೋಗಬೇಕಾದ್ದಿಲ್ಲ. ಇಲ್ಲಿಗೆ ಬಂದು ತನ್ನ ಜನ್ಮವು ಸಾರ್ಥಕವಾಗುವಂತೆ ಮಾಡಿಕೊಂಡು ಹೋಗುವಳು ಎಂದು ಹೇಳಿದನು.

**ವಿಗ್ರಹ—**

**ದ್ಯುನಿಮ್ನಗಾ—** ನಿಮ್ನಂ ಗಚ್ಛತಿ ಇತಿ ನಿಮ್ನಗಾ, ದಿವಃ ನಿಮ್ನಗಾ, ದ್ಯುನಿಮ್ನಗಾ ।

**ತ್ವದರ್ಥಂ—** ತವ ಅರ್ಥಾಯ ತ್ವದರ್ಥಂ ।

**ಆಸ್ಮಾಕತಟಾಕಂ—** ಅಸ್ಮಾಕಂ ಅಯಂ ಆಸ್ಮಾಕಃ, ಆಸ್ಮಾಕಶ್ಚಾಸೌ ತಟಾಕಶ್ಚ ಆಸ್ಮಾಕತಟಾಕಃ, ತಂ ಆಸ್ಮಾಕತಟಾಕಂ ।

**ಕರುಣಾಕರಃ—** ಕರುಣಾಯಾಃ ಆಕರಃ ಕರುಣಾಕರಃ ।

**ಕ್ರಿಯಾಪದ—** ವ್ರಜ ಗತೌ ಇತಿ ಗತ್ಯರ್ಥಕಾತ್ ವಿಧಿಲಿಜ್ ಪ್ರ.ಪು.ಏ. ಆವ್ರಜೇತ್ ಇತಿ ರೂಪಮ್ ।

ಆವ್ರಜೇತ್ ಆವ್ರಜೇತಾಂ ಆವ್ರಜೇಯುಃ, ಆವ್ರಜೇಃ ಆವ್ರಜೇತಂ ಆವ್ರಜೇತ, ಆವ್ರಜೇಯಂ ಆವ್ರಜೇವ ಆವ್ರಜೇಮ ॥

**ಯಾಯಾಃ-** ಯಾ ಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ವಿಧಿಲಿಜ್ ಮಧ್ಯಮಪುರುಷೈಕವಚನೇ ಯಾಯಾಃ ಇತಿ ರೂಪಮ್ ।

ಯಾಯಾತ್ ಯಾಯಾತಾಂ ಯಾಯುಃ, ಯಾಯಾಃ, ಯಾಯಾತಂ ಯಾಯಾತ,
ಯಾಯಾಂ ಯಾಯಾವ ಯಾಯಾಮ ॥

★ ★ ★

ವೈಷ್ಣವಾಗ್ರೇಸರನಿಗೆ ಒಲಿದುಬಂದ ವಿಷ್ಣುಪದಿ

**ತದಾಜ್ಞಯೋಪಾಗತಜಾಹ್ನವೀಜಲೇ**
**ಜನೋಽತ್ರ ಸಸ್ನೌ ಸಹ ಪೂರ್ಣಬುದ್ಧಿನಾ ।**
**ತತಃ ಪರಂ ದ್ವಾದಶವತ್ಸರಾಂತರೇ**
**ಸದಾಽಽವ್ರಜೇತ್ಸಾ ತದನುಗ್ರಹಾಂಕಿನೀ ॥ 42 ॥**

**ಪದಚ್ಛೇದ—** ತದಾಜ್ಞಯಾ, ಉಪಾಗತಜಾಹ್ನವೀಜಲೇ, ಜನಃ, ಅತ್ರ, ಸಸ್ನೌ ಸಹ, ಪೂರ್ಣಬುದ್ಧಿನಾ, ತತಃ, ಪರಂ, ದ್ವಾದಶವತ್ಸರಾಂತರೇ, ಸದಾ, ಆವ್ರಜೇತ್, ಸಾ ತದನುಗ್ರಹಾಂಕಿನೀ ।

**ಅನ್ವಯ—** ಜನಃ ತದಾಜ್ಞಯಾ ಅತ್ರ ಉಪಾಗತಜಾಹ್ನವೀಜಲೇ ಪೂರ್ಣಬುದ್ಧಿನಾ ಸಹ ಸಸ್ನೌ । ಸಾ ತತಃ ಪರಂ ದ್ವಾದಶವತ್ಸರಾಂತರೇ ತದನುಗ್ರಹಾಂಕಿನೀ ಸದಾ ಆವ್ರಜೇತ್ ।

**ಅನ್ವಯಾರ್ಥ—**

**ಜನಃ** = ಜನರು

**ತದಾಜ್ಞಯಾ** = ಆ ಅನಂತಾಸನಸ್ವಾಮಿಯ ಅಪ್ಪಣೆಯಿಂದ

**ಅತ್ರ** = ಈ ಸರೋವರದಲ್ಲಿ

**ಉಪಾಗತಜಾಹ್ನವೀಜಲೇ** = ಬಂದ ಗಂಗೆಯ ನೀರಿನಲ್ಲಿ

**ಪೂರ್ಣಬುದ್ಧಿನಾ ಸಹ** = ಪೂರ್ಣಪ್ರಜ್ಞರೊಡನೆ

**ಸಸ್ನೌ** = ಸ್ನಾನ ಮಾಡಿದರು.

**ಸಾ** = ಆ ಗಂಗೆಯು

**ತತಃ ಪರಂ** = ಅಲ್ಲಿಂದ ಮುಂದೆ

**ದ್ವಾದಶವತ್ಸರಾಂತರೇ** = ಹನ್ನೆರಡು ವರ್ಷಗಳಿಗೆ ಒಂದು ಬಾರಿ

**ತದನುಗ್ರಹಾಂಕಿನೀ** = ಆ ಪೂರ್ಣಪ್ರಜ್ಞರಲ್ಲಿ ಮಾಡಿದ ಅನುಗ್ರಹದ ಚಿಹ್ನೆಯುಳ್ಳವಳಾಗಿ

**ಸದಾ** = ಯಾವಾಗಲೂ

**ಆವ್ರಜೇತ್** = ಬರುವಳು.

**ತಾತ್ಪರ್ಯ—** ಅಲ್ಲಿಯ ಜನರೆಲ್ಲ ಆ ಅನಂತಾಸನಸ್ವಾಮಿಯ ಅಪ್ಪಣೆಯಿಂದ ಆ ಸರೋವರಕ್ಕೆ ಬಂದ ಗಂಗೆಯ ನೀರಿನಲ್ಲಿ ಪೂರ್ಣಪ್ರಜ್ಞರೊಡನೆ ಮಿಂದರು. ಅನಂತರ ಆ ಪೂರ್ಣಪ್ರಜ್ಞರಿಗೆ ಅನಂತಪದ್ಮನಾಭನು ಮಾಡಿದ ಅನು-ಗ್ರಹವನ್ನು ಜ್ಞಾಪಿಸಿಕೊಡುತ್ತಾ ಆ ಗಂಗೆಯು ಹನ್ನೆರಡು ವರ್ಷಗಳಿಗೊಮ್ಮೆ ಆ ಕೊಳಕ್ಕೆ ಯಾವಾಗಲೂ ಬರುವಳು.

**ವಿಗ್ರಹ—**

**ಉಪಾಗತಜಾಹ್ನವೀಜಲೇ—** ಉಪಾಗತಾ ಚ ಸಾ ಜಾಹ್ನವೀ ಚ ಉಪಾಗತಜಾಹ್ನವೀ, ಉಪಾಗತಜಾಹ್ನವ್ಯಾಃ ಜಲಂ ಉಪಾಗತಜಾಹ್ನವೀಜಲಂ, ತಸ್ಮಿನ್ ಉಪಾಗತಜಾಹ್ನವೀಜಲೇ ।

**ಪೂರ್ಣಬುದ್ಧಿನಾ—** ಪೂರ್ಣಾ ಬುದ್ಧಿಃ ಯಸ್ಯ ಸಃ ಪೂರ್ಣಬುದ್ಧಿಃ, ತೇನ ಪೂರ್ಣಬುದ್ಧಿನಾ ।

**ದ್ವಾದಶವತ್ಸರಾಂತರೇ—** ದ್ವಾದಶ ಚ ವತ್ಸರಾಶ್ಚ ದ್ವಾದಶವತ್ಸರಾಃ, ದ್ವಾದಶವತ್ಸರಾಣಾಂ ಅಂತರಂ ದ್ವಾದಶ-ವತ್ಸರಾಂತರಂ, ತಸ್ಮಿನ್ ದ್ವಾದಶವತ್ಸರಾಂತರೇ ।

**ತದನುಗ್ರಹಾಂಕಿನೀ—** ತಸ್ಯ ಅನುಗ್ರಹಃ ತದನುಗ್ರಹಃ, ತದನುಗ್ರಹಃ ಅಂಕಃ ಅಸ್ಯಾಃ ಅಸ್ತಿ ಇತಿ ತದನು-ಗ್ರಹಾಂಕಿನೀ ।

**ಕ್ರಿಯಾಪದ— ಆವ್ರಜೇತ್**- ವ್ರಜಗತೌ ಇತಿ ಗತ್ಯರ್ಥಕಾತ್ ವಿಧಿಲಿಙ್ ಪ್ರ.ಪು.ಏ. ಆವ್ರಜೇತ್ ಇತಿ ರೂಪಮ್ ।
ಆವ್ರಜೇತ್ ಆವ್ರಜೇತಾಂ ಆವ್ರಜೇಯುಃ, ಆವ್ರಜೇಃ ಆವ್ರಜೇತಂ ಆವ್ರಜೇತ, ಆವ್ರಜೇಯಂ ಆವ್ರಜೇವ ಆವ್ರಜೇಮ ॥

★ ★ ★

ಪೂರ್ಣಪ್ರಜ್ಞರ ವಿಜಯಾಂಕ

**ಗತೇ ದಿನಾನಾಂ ದಶಕೇ ಸಮಾಸಕೇ**
**ವರಾಶ್ರಮಂ ಪ್ರಾಪ್ಯ ಸಪತ್ರಲಂಬನಮ್ ।**
**ಜಿಗಾಯ ಜೈತ್ರಾನ್ ಬಹುತರ್ಕಕರ್ಕಶಾನ್**
**ಸ ವಾಸುದೇವಾಹ್ವಯಪಂಡಿತಾದಿಕಾನ್ ॥ 43 ॥**

**ಪದಚ್ಛೇದ—** ಗತೇ, ದಿನಾನಾಂ, ದಶಕೇ, ಸಮಾಸಕೇ, ವರಾಶ್ರಮಂ, ಪ್ರಾಪ್ಯ, ಸಪತ್ರಲಂಬನಂ, ಜಿಗಾಯ, ಜೈತ್ರಾನ್, ಬಹುತರ್ಕಕರ್ಕಶಾನ್, ಸಃ, ವಾಸುದೇವಾಹ್ವಯಪಂಡಿತಾದಿಕಾನ್ ।

**ಅನ್ವಯ—** ಸಃ ವರಾಶ್ರಮಂ ಪ್ರಾಪ್ಯ ಸಮಾಸಕೇ ದಶಕೇ ದಿನಾನಾಂ ಗತೇ, ಬಹುತರ್ಕಕರ್ಕಶಾನ್ ಜೈತ್ರಾನ್ ವಾಸುದೇವಾಹ್ವಯಪಂಡಿತಾದಿಕಾನ್ ಸಪತ್ರಲಂಬನಂ ಜಿಗಾಯ ।

**ಅನ್ವಯಾರ್ಥ—**

**ಸಃ** = ಪೂರ್ಣಪ್ರಜ್ಞಾಚಾರ್ಯರು

**ವರಾಶ್ರಮಂ** = ಸಂನ್ಯಾಸಾಶ್ರಮವನ್ನು

**ಪ್ರಾಪ್ಯ** = ಹೊಂದಿ

**ಸಮಾಸಕೇ** = ತಿಂಗಳಿನಿಂದ ಸಹಿತವಾದ

**ದಶಕೇ ದಿನಾನಾಂ** = ಹತ್ತು ದಿವಸಗಳನ್ನು

**ಗತೇ** = ಕಳೆಯಲು

**ಬಹುತರ್ಕಕರ್ಕಶಾನ್** = ಬಹಳವಾದ ಅನುಮಾನಗಳಿಂದ ಕಠಿಣರಾದ

**ಜೈತ್ರಾನ್** = ಜಯಶೀಲರಾದ

**ವಾಸುದೇವಾಹ್ವಯಪಂಡಿತಾದಿಕಾನ್** = ವಾಸುದೇವನೆಂಬ ಹೆಸರಿನ ಪಂಡಿತರೇ ಮೊದಲಾದವರನ್ನು

**ಸಪತ್ರಲಂಬನಂ** = ಜಯಪತ್ರವನ್ನು ಬರೆಯಿಸಿಕೊಳ್ಳುವುದರಿಂದ ಸಹಿತವಾಗಿ

**ಜಿಗಾಯ** = ಗೆದ್ದರು.

**ತಾತ್ಪರ್ಯ—** ಆ ಪೂರ್ಣಪ್ರಜ್ಞಾಚಾರ್ಯರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಒಂದು ತಿಂಗಳು ಹತ್ತು ದಿವಸ-ಗಳಾದವು. ಆಗ ಅವರನ್ನು ಜಯಿಸಲು ವಾಸುದೇವ ಪಂಡಿತನೇ ಮೊದಲಾದ ತರ್ಕಶಾಸ್ತ್ರದಲ್ಲಿ ಬುದ್ಧಿಶಾಲಿಗಳಾಗಿ, ಎಲ್ಲರನ್ನೂ ಜಯಿಸಿದ ಪಂಡಿತರು ವಾದಕ್ಕೆ ಬಂದರು. ಆಗ ಆಚಾರ್ಯರು ಅವರನ್ನೆಲ್ಲ ವಾದದಲ್ಲಿ ಗೆದ್ದು ಅವರಿಂದ ಜಯಪತ್ರವನ್ನು ಬರೆಸಿಕೊಂಡರು.

ವಿಗ್ರಹ—

**ಸಮಾಸಕೇ—** ಮಾಸೇನ ಸಹಿತಂ ಸಮಾಸಕಂ, ತಸ್ಮಿನ್ ಸಮಾಸಕೇ ।

**ವರಾಶ್ರಮಂ—** ವರಶ್ಚಾಸೌ ಆಶ್ರಮಶ್ಚ ವರಾಶ್ರಮಃ, ತಂ ವರಾಶ್ರಮಂ ।

**ಸಪತ್ರಲಂಬನಂ—** ಪತ್ರಸ್ಯ ಲಂಬನಂ ಪತ್ರಲಂಬನಂ, ಪತ್ರಲಂಬೇನ ಸಹ ವರ್ತತೇ ಇತಿ ಸಪತ್ರಲಂಬನಂ ।

**ಜೈತ್ರಾನ್—** ಜಯಶೀಲಾಃ ಜೈತ್ರಾಃ, ತಾನ್ ಜೈತ್ರಾನ್ ।

**ಬಹುತರ್ಕಕರ್ಕಶಾನ್—** ಬಹವಶ್ಚ ತೇ ತರ್ಕಾಶ್ಚ ಬಹುತರ್ಕಾಃ, ಬಹುತರ್ಕೈಃ ಕರ್ಕಶಾಃ ಬಹುತರ್ಕಕರ್ಕಶಾಃ, ತಾನ್ ಬಹುತರ್ಕಕರ್ಕಶಾನ್ ।

**ವಾಸುದೇವಾಹ್ವಯಪಂಡತಾದಿಕಾನ್—** ವಾಸುದೇವ ಇತಿ ಆಹ್ವಯಃ ಯಸ್ಯ ಸಃ ವಾಸುದೇವಾಹ್ವಯಃ, ವಾಸುದೇವಾಹ್ವಯಶ್ಚಾಸೌ ಪಂಡಿತಶ್ಚ, ವಾಸುದೇವಾಹ್ವಯಪಂಡಿತಃ, ವಾಸುದೇವಾಹ್ವಯ-ಪಂಡಿತಃ ಆದಿಃ ಏಷಾಂ ತೇ ವಾಸುದೇವಾಹ್ವಯಪಂಡಿತಾದಿಕಾಃ, ತಾನ್ ವಾಸುದೇವಾಹ್ವಯ-ಪಂಡಿತಾದಿಕಾನ್ ।

**ಕ್ರಿಯಾಪದ—** **ಜಿಗಾಯ**- ಜಿ ಜಯೇ ಇತಿ ಜಯಾರ್ಥಕಾತ್ ಜಿಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಜಿಗಾಯ'' ಇತಿ ರೂಪಮ್ ।

ಜಿಗಾಯ ಜಿಗ್ಯತುಃ ಜಿಗ್ಯುಃ, ಜಿಗಯಿಥ-ಜಿಗೇಥ ಜಿಗ್ಯಥುಃ ಜಿಗ್ಯ, ಜಗಾಯ-ಜಿಗಯ ಜಿಗ್ಯಿವ ಜಿಗ್ಯಿಮ ॥

★ ★ ★

ಇಷ್ಟವಿಲ್ಲದ ಇಷ್ಟಸಿದ್ಧಿಯ ಪಾಠ

**ಗುರೋಃ ಸ್ವಶಿಷ್ಯಂ ಚತುರಂ ಚಿಕೀರ್ಷತಃ**
**ಪ್ರಚೋದನಾಚ್ಛ್ರೋತುಮಿಹೋಪಚಕ್ರಮೇ ।**
**ಅಥೇಷ್ಟಸಿದ್ಧಿಶ್ಛಲಜಾತಿವಾರಿಧಿ-**
**ರ್ನಿರಾದರೇಣಾಪಿ ಮಹಾತ್ಮನಾಽಮುನಾ ॥ 44 ॥**

ಪದಚ್ಛೇದ— ಗುರೋಃ, ಸ್ವಶಿಷ್ಯಂ, ಚತುರಂ, ಚಿಕೀರ್ಷತಃ, ಪ್ರಚೋದನಾತ್, ಶ್ರೋತುಂ, ಇಹ, ಉಪಚಕ್ರಮೇ, ಅಥ, ಇಷ್ಟಸಿದ್ಧಿಃ, ಛಲಜಾತಿವಾರಿಧಿಃ, ನಿರಾದರೇಣ, ಅಪಿ, ಮಹಾತ್ಮನಾ, ಅಮುನಾ ।

ಅನ್ವಯ— ಅಥ ಮಹಾತ್ಮನಾ ಅಮುನಾ ಇಹ ನಿರಾದರೇಣ ಅಪಿ, ಛಲಜಾತಿವಾರಿಧಿಃ ಇಷ್ಟಸಿದ್ಧಿಃ ಸ್ವಶಿಷ್ಯಂ ಚತುರಂ ಚಿಕೀರ್ಷತಃ ಗುರೋಃ ಪ್ರಚೋದನಾತ್ ಶ್ರೋತುಂ ಉಪಚಕ್ರಮೇ ।

**ಅನ್ವಯಾರ್ಥ—**

**ಅಥ** = ತರುವಾಯ
**ಮಹಾತ್ಮನಾ** = ಮಹಾತ್ಮರಾದ
**ಅಮುನಾ** = ಈ ಪೂರ್ಣಪ್ರಜ್ಞಾಚಾರ್ಯರಿಂದ
**ಇಹ** = ಈ ಇಷ್ಟಸಿದ್ಧಿಯೆಂಬ ಗ್ರಂಥದಲ್ಲಿ,
**ನಿರಾದರೇಣ ಅಪಿ** = ಆಸಕ್ತಿಯಿಲ್ಲದವರಾದಾಗ್ಯೂ
**ಛಲಜಾತಿವಾರಿಧಿಃ—**
  **ಛಲ** = ಛಲೋತ್ತರ
  **ಜಾತಿ** = ಜಾತ್ಯುತ್ತರ ಇವುಗಳಿಂದ
  **ವಾರಿಧಿಃ** = ಸಮುದ್ರದಂತೆ ಪೂರ್ಣವಾದ
**ಇಷ್ಟಸಿದ್ಧಿಃ** = ಮಾಯಾವಾದಿಗಳು ಹೇಳುವ ಜೀವಾತ್ಮೈಕ್ಯವನ್ನು ಬೋಧಿಸುವ ಇಷ್ಟಸಿದ್ಧಿಯೆಂಬ ಗ್ರಂಥವು,
**ಸ್ವಶಿಷ್ಯಂ** = ತಮ್ಮ ಶಿಷ್ಯನನ್ನು
**ಚತುರಂ** = ಕುಶಲನನ್ನಾಗಿ
**ಚಿಕೀರ್ಷತಃ** = ಮಾಡಲಿಚ್ಛಿಸುವ
**ಗುರೋಃ** = ಅಚ್ಯುತಪ್ರೇಕ್ಷಾಚಾರ್ಯರ
**ಪ್ರಚೋದನಾತ್** = ಪ್ರೇರಣೆಯಿಂದ
**ಶ್ರೋತುಂ** = ಕೇಳುವುದಕ್ಕೆ
**ಉಪಚಕ್ರಮೇ** = ಆರಂಭಿಸಲ್ಪಟ್ಟಿತು.

ತಾತ್ಪರ್ಯ— ಅಚ್ಯುತಪ್ರೇಕ್ಷಾಚಾರ್ಯರು ತಮ್ಮ ಶಿಷ್ಯರಾದ ಪೂರ್ಣಪ್ರಜ್ಞರನ್ನು ಬುದ್ಧಿವಂತರನ್ನಾಗಿ ಮಾಡಬೇಕೆಂದು ಬಯಸಿದರು. ಅದರಿಂದವರು ಛಲೋತ್ತರ ಜಾತ್ಯುತ್ತರಗಳಿಂದ ತುಂಬಿ ದೋಷಪೂರ್ಣವಾದ, ಜೀವ ಮತ್ತು ಬ್ರಹ್ಮರಿಗೆ ಭೇದವಿಲ್ಲವೆಂದು ಬೋಧಿಸುವ ಅದ್ವೈತ ಗ್ರಂಥವಾದ ಇಷ್ಟಸಿದ್ಧಿಯನ್ನು ಕೇಳಬೇಕೆಂದು ಪ್ರೇರಿಸಿದರು. ಮಹಾತ್ಮರಾದ ಪೂರ್ಣಪ್ರಜ್ಞರು ತಮಗೆ ಅದರಲ್ಲಿ ಆಸಕ್ತಿಯಿಲ್ಲದಿದ್ದರೂ ಅದನ್ನು ಕೇಳಲು ಆರಂಭಿಸಿದರು.

**ವಿಗ್ರಹ—**

**ಸ್ವಶಿಷ್ಯಂ—** ಸ್ವಸ್ಯ ಶಿಷ್ಯಃ ಸ್ವಶಿಷ್ಯಃ, ತಂ ಸ್ವಶಿಷ್ಯಂ ।

**ಚಿಕೀರ್ಷತಃ—** ಕರ್ತುಮಿಚ್ಛನ್ ಚಿಕೀರ್ಷನ್, ತಸ್ಯ ಚಿಕೀರ್ಷತಃ ।

**ಪ್ರಚೋದನಾತ್—** ಪ್ರಕೃಷ್ಟಂ ಚ ತತ್ ಚೋದನಂ ಚ ಪ್ರಚೋದನಂ, ತಸ್ಮಾತ್ ಪ್ರಚೋದನಾತ್ ।

**ಛಲಜಾತಿವಾರಿಧಿಃ—** ಛಲಾನಿ ಚ ಜಾತಯಶ್ಚ ಛಲಜಾತಯಃ, ಛಲಜಾತೀನಾಂ ವಾರಿಧಿಃ ಇವ ಛಲಜಾತಿವಾರಿಧಿಃ ।

**ನಿರಾದರೇಣ—** ನಿರ್ಗತಂ ಆದರಂ ಯಸ್ಯ ಸಃ ನಿರಾದರಃ, ತೇನ ನಿರಾದರೇಣ ।

**ಮಹಾತ್ಮನಾ—** ಮಹಾಂಶ್ಚಾಸೌ ಆತ್ಮಾ ಚ ಮಹಾತ್ಮಾ, ತೇನ ಮಹಾತ್ಮನಾ ।

**ಕ್ರಿಯಾಪದ—** **ಉಪಚಕ್ರಮೇ**- ಉಪ ಇತ್ಯುಪಸರ್ಗಪೂರ್ವಕಾತ್ ಕ್ರಮು ಪಾದವಿಕ್ಷೇಪೇ ಇತಿ ಪಾದವಿಕ್ಷೇಪಾರ್ಥಕಾತ್ ಕ್ರಮು ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಉಪಚಕ್ರಮೇ'' ಇತಿ ರೂಪಮ್ ।

ಉಪಚಕ್ರಮೇ ಉಪಚಕ್ರಮಾತೇ ಉಪಚಕ್ರಮಿರೇ,
ಉಪಚಕ್ರಮಿಷೇ ಉಪಚಕ್ರಮಾಥೇ ಉಪಚಕ್ರಮಿಧ್ವೇ,
ಉಪಚಕ್ರಮೇ ಉಪಚಕ್ರಮಿವಹೇ ಉಪಚಕ್ರಮಿಹೇ ॥

★ ★ ★

ಇಷ್ಟಸಿದ್ಧಿಯಲ್ಲಿನ ದೋಷಕಥನ

**ತದಾದ್ಯಪದ್ಯಸ್ಥಮವದ್ಯಮಂಡಲಂ**
**ಯದಾಽವದತ್ ಷೋಡಶಕದ್ವಯಾತ್ಮಕಮ್ ।**
**ಉಪರ್ಯಪಾಸ್ತಂ ತದಿತಿ ಬ್ರುವತ್ಯಸೌ**
**ಗುರೌ ತಮೂಚೇ ಪ್ರಣಿಗದ್ಯತಾಮಿತಿ ॥ 45 ॥**

**ಪದಚ್ಛೇದ—** ತದಾದ್ಯಪದ್ಯಸ್ಥಂ, ಅವದ್ಯಮಂಡಲಂ, ಯದಾ, ಅವದತ್, ಷೋಡಶಕದ್ವಯಾತ್ಮಕಂ, ಉಪರಿ, ಅಪಾಸ್ತಂ, ತತ್, ಇತಿ, ಬ್ರುವತಿ, ಅಸೌ, ಗುರೌ, ತಂ, ಊಚೇ, ಪ್ರಣಿಗದ್ಯತಾಂ, ಇತಿ ।

**ಅನ್ವಯ—** ಅಸೌ ತದಾದ್ಯಪದ್ಯಸ್ಥಂ ಷೋಡಶಕದ್ವಯಾತ್ಮಕಂ ಅವದ್ಯಮಂಡಲಂ ಯದಾ ಅವದತ್ (ತದಾ) ತತ್ ಉಪರಿ ಅಪಾಸ್ತಂ ಇತಿ ಗುರೌ ಬ್ರುವತಿ ತತ್ ಪ್ರಣಿಗದ್ಯತಾಂ ಇತಿ ತಂ ಊಚೇ ।

**ಅನ್ವಯಾರ್ಥ—**

**ಅಸೌ** = ಈ ಪೂರ್ಣಪ್ರಜ್ಞರು
**ತತ್** = ಆ ಇಷ್ಟಸಿದ್ಧಿ ಗ್ರಂಥದ
**ಆದ್ಯಪದ್ಯಸ್ಥಂ** = ಮೊದಲಿನ ಶ್ಲೋಕದಲ್ಲಿರುವ
**ಷೋಡಶಕದ್ವಯಾತ್ಮಕಂ** = ಮೂವತ್ತೆರಡು
**ಅವದ್ಯಮಂಡಲಂ** = ದೋಷಸಮೂಹವನ್ನು
**ಯದಾ** = ಯಾವಾಗ
**ಅವದತ್** = ಹೇಳಿದರೋ (ಆಗ)
**ತತ್** = ಆ ದೋಷಸಮೂಹವು

**ಉಪರಿ** = ಮುಂದಿನ ಗ್ರಂಥದಲ್ಲಿ

**ಅಪಾಸ್ತಂ ಇತಿ** = ನಿವಾರಿಸಲ್ಪಟ್ಟಿದೆ ಎಂದು

**ಗುರೌ** = ಗುರುಗಳಾದ ಅಚ್ಯುತಪ್ರೇಕ್ಷರು

**ಬ್ರುವತಿ ಸತಿ** = ಹೇಳುತ್ತಿರಲು

**ತತ್** = ಅದು

**ಪ್ರಣಿಗದ್ಯತಾಂ ಇತಿ** = ಹೇಳಲ್ಪಡಲಿ ಎಂದು

**ತಂ** = ಆ ಅಚ್ಯುತಪ್ರೇಕ್ಷರನ್ನು ಕುರಿತು

**ಊಚೇ** = ಹೇಳಿದರು.

**ತಾತ್ಪರ್ಯ—** ಈ ಪೂರ್ಣಪ್ರಜ್ಞರು ಆ ಇಷ್ಟಸಿದ್ಧಿಯೆಂಬ ಗ್ರಂಥದ ಮೊದಲಿನ ಪದ್ಯದಲ್ಲಿಯೇ ಮೂವತ್ತೆರಡು ದೋಷಗಳಿವೆ ಎಂದರು. ಗುರುಗಳು ಆ ದೋಷಗಳನ್ನೆಲ್ಲ ಮುಂದಿನ ಗ್ರಂಥದಲ್ಲಿ ಪರಿಹರಿಸಿದ್ದಾರೆ ಎಂದು ಹೇಳಿದರು. ಆಗ ಪೂರ್ಣಪ್ರಜ್ಞರು ಹಾಗಾದರೆ ಅದನ್ನು ಹೇಳಿ ಎಂದು ಕೇಳಿದರು.

**ವಿಗ್ರಹ—**

**ತದಾದ್ಯಪದ್ಯಸ್ಥಂ—** ತಸ್ಯ ಆದ್ಯಪದ್ಯಂ ತದಾದ್ಯಪದ್ಯಂ, ತದಾದ್ಯಪದ್ಯೇ ತಿಷ್ಠತಿ ಇತಿ ತದಾದ್ಯಪದ್ಯಸ್ಥಃ, ತಂ ತದಾದ್ಯಪದ್ಯಸ್ಥಂ ।

**ಅವದ್ಯಮಂಡಲಂ—** ಅವದ್ಯಾನಾಂ ಮಂಡಲಂ, ತತ್ ಅವದ್ಯಮಂಡಲಂ ।

**ಷೋಡಶದ್ವಯಾತ್ಮಕಂ—** ಷೋಡಶಕಾನಾಂ ದ್ವಯಂ ಷೋಡಶಕದ್ವಯಂ, ಷೋಡಶಕದ್ವಯಂ ಆತ್ಮಾ ಯಸ್ಯ ತತ್ ಷೋಡಶಕದ್ವಯಾತ್ಮಕಂ ತತ್ ಷೋಡಶಕದ್ವಯಾತ್ಮಕಂ ।

**ಬ್ರುವತಿ—** ಬ್ರೂತೇ ಇತಿ ಬ್ರುವನ್, ತಸ್ಮಿನ್ ಬ್ರುವತಿ ।

**ಕ್ರಿಯಾಪದ— ಪ್ರಣಿಗದ್ಯತಾಂ-** ಪ್ರ ನಿ ಇತ್ಯುಪಸರ್ಗದ್ವಯಪೂರ್ವಕಾತ್ ಗದ ವ್ಯಕ್ತಾಯಾಂ ವಾಚಿ ಇತ್ಯರ್ಥಕಾತ್ ಗದಧಾತೋಃ ಲೋಟಿ ಪ್ರ.ಪು.ಏ. ''ಪ್ರಣಿಗದ್ಯತಾಂ'' ಇತಿ ರೂಪಮ್ ।

| | | |
|---|---|---|
| ಪ್ರಣಿಗದ್ಯತಾಂ | ಪ್ರಣಿಗದ್ಯೇತಾಂ | ಪ್ರಣಿಗದ್ಯಂತಾಂ, |
| ಪ್ರಣಿಗದ್ಯಸ್ವ | ಪ್ರಣಿಗದ್ಯೇಥಾಂ | ಪ್ರಣಿಗದ್ಯಧ್ವಂ, |
| ಪ್ರಣಿಗದ್ಯೈ | ಪ್ರಣಿಗದ್ಯಾವಹೈ | ಪ್ರಣಿಗದ್ಯಾಮಹೈ ॥ |

ಊಚೇ- ಬ್ರೂಞ್ ವ್ಯಕ್ತಾಯಾಂ ವಾಚಿ-ವಾಚೇ ಇತ್ಯಸ್ಮಾತ್ ಆತ್ಮನೇಪದಿನಃ ಲಿಟಿ ಪ್ರ.ಪು.ಏ. ''ಊಚೇ'' ಇತಿ ರೂಪಮ್ ।

ಊಚೇ ಊಚಾತೇ ಊಚಿರೇ, ಊಚಿಷೇ ಊಚಾಥೇ ಊಚಿಧ್ವೇ, ಊಚೇ ಊಚಿವಹೇ ಊಚಿಮಹೇ ॥

★ ★ ★

**ಮಾಯಾವಾದದ ಅಪಜಯ**

**ಭವತ್ಪ್ರವಕ್ತೃತ್ವಸಮರ್ಥತಾ ನ ಮೇ**
**ಸಕೋಪಮಿತ್ಥಂ ಬ್ರುವತಿ ವ್ರತೀಶ್ವರೇ ।**
**ಅಪೀಹಮಾಯಾಸಮಯೇ ಪಟೌ ನೃಣಾಂ**
**ಬಭೂವ ತದ್ದೂಷಣಸಂಶಯಾಂಕುರಃ ॥ 46 ॥**

**ಪದಚ್ಛೇದ—** ಭವತ್ಪ್ರವಕ್ತೃತ್ವಸಮರ್ಥತಾ, ನ, ಮೇ, ಸಕೋಪಂ, ಇತ್ಥಂ, ಬ್ರುವತಿ, ವ್ರತೀಶ್ವರೇ, ಅಪಿ, ಇಹ, ಮಾಯಾಸಮಯೇ, ಪಟೌ, ನೃಣಾಂ, ಬಭೂವ, ತದ್ದೂಷಣಸಂಶಯಾಂಕುರಃ ।

**ಅನ್ವಯ—** ಇಹ ಮಾಯಾಸಮಯೇ ಪಟೌ ಅಪಿ ವ್ರತೀಶ್ವರೇ ಮೇ ಭವತ್ಪ್ರವಕ್ತೃತ್ವಸಮರ್ಥತಾ ನ ಇತ್ಥಂ ಸಕೋಪಂ ಬ್ರುವತಿ ನೃಣಾಂ ತದ್ದೂಷಣಸಂಶಯಾಂಕುರಃ ಬಭೂವ ।

**ಅನ್ವಯಾರ್ಥ—**

**ಇಹ ಮಾಯಾಸಮಯೇ** = ಈ ಅದ್ವೈತಸಿದ್ಧಾಂತದಲ್ಲಿ

**ಪಟೌ ಅಪಿ** = ಸಮರ್ಥರಾದರೂ

**ವ್ರತೀಶ್ವರೇ** = ಯತಿಶ್ರೇಷ್ಠರಾದ ಅಚ್ಯುತಪ್ರೇಕ್ಷರು

**ಮೇ** = ನನಗೆ,

**ಭವತ್‌ಪ್ರವಕ್ತೃತ್ವಸಮರ್ಥತಾ** = ನಿನಗೆ ಪ್ರವಚನ ಮಾಡುವ ಶಕ್ತಿಯು

**ನ** = ಇಲ್ಲ.

**ಇತ್ಥಂ** = ಈ ರೀತಿಯಾಗಿ

**ಸಕೋಪಂ** = ಕೋಪದಿಂದ ಸಹಿತವಾಗಿ

**ಬ್ರುವತಿ** = ಹೇಳುತ್ತಿರಲು

**ನೃಣಾಂ** = ಅಲ್ಲಿ ಕೇಳುತ್ತಿರುವ ಜನರಿಗೆ

**ತದ್ದೂಷಣ** = ಪೂರ್ಣಪ್ರಜ್ಞರು ಹೇಳಿದ ಆ ಗ್ರಂಥದ ದೋಷದ ವಿಷಯದಲ್ಲಿ

**ಸಂಶಯಾಂಕುರಃ** = ಸಂದೇಹದ ಮೊಳಕೆಯು

**ಬಭೂವ** = ಉಂಟಾಯಿತು.

**ತಾತ್ಪರ್ಯ—** ಆಗ ಅಚ್ಯುತಪ್ರೇಕ್ಷರು, ಜೀವಬ್ರಹ್ಮರಿಗೆ ಭೇದವಿಲ್ಲ. ಜೀವ ಬ್ರಹ್ಮರು ಬೇರೆ ಬೇರೆ ಎಂಬುದು ಮಾಯೆಯಿಂದ ಕಲ್ಪಿಸಲ್ಪಟ್ಟದ್ದು, ಎಂಬ ಅದ್ವೈತ ಸಿದ್ಧಾಂತದಲ್ಲಿ ತಾವು ನಿಪುಣರಾದರೂ ಉತ್ತರ ಹೇಳಲು ಸಾಧ್ಯವಾಗದೆ ಇರುವುದರಿಂದ ಉಂಟಾದ ಕೋಪದಿಂದ ನಿನಗೆ ವಿವರಣೆ ಮಾಡಿ ಹೇಳಲು ನನಗೆ ಶಕ್ತಿಯಿಲ್ಲ ಎಂದರು. ಆಗ ಅಲ್ಲಿ ನೆರೆದಿದ್ದ, ಗುರುಶಿಷ್ಯರ ವಿವಾದವನ್ನು ಕೇಳುತ್ತಿದ್ದ ಜನರಿಗೆ ಅದ್ವೈತ ಸಿದ್ಧಾಂತವು ಸರಿಯಿಲ್ಲವೋ ಏನೋ ? ಎಂದು ಸಂದೇಹವುಂಟಾಯಿತು.

**ವಿಗ್ರಹ—**

**ಭವತ್ಪ್ರವಕ್ತೃತ್ವಸಮರ್ಥತಾ—** ಭವತಃ ಪ್ರವಕ್ತೃತ್ವಂ ಭವತ್ಪ್ರವಕ್ತೃತ್ವಂ, ಭವತ್ಪ್ರವಕ್ತೃತ್ವೇ ಸಮರ್ಥತಾ ಭವತ್ಪ್ರವಕ್ತೃತ್ವ-ಸಮರ್ಥತಾ ।

**ಸಕೋಪಂ—** ಕೋಪೇನ ಸಹ ವರ್ತತೇ ಇತಿ ಸಕೋಪಂ ।

**ಬ್ರುವತಿ—** ಬ್ರುವತಿ ಇತಿ ಬ್ರುವನ್, ತಸ್ಮಿನ್ ಬ್ರುವತಿ ।

**ವ್ರತೀಶ್ವರೇ—** ವ್ರತೀನಾಂ ಈಶ್ವರಃ ವ್ರತೀಶ್ವರಃ, ತಸ್ಮಿನ್ ವ್ರತೀಶ್ವರೇ ।

**ಮಾಯಾಸಮಯೇ—** ಮಾಯಾಯಾಃ ಸಮಯಃ ಮಾಯಾಸಮಯಃ, ತಸ್ಮಿನ್ ಮಾಯಾಸಮಯೇ ।

**ದೂಷಣಸಂಶಯಾಂಕುರಃ—** ತಸ್ಯ ದೂಷಣಂ ತದ್ದೂಷಣಂ, ತದ್ದೂಷಣೇ ಸಂಶಯಾಂಕುರಃ ತದ್ದೂಷಣ-ಸಂಶಯಾಂಕುರಃ ।

**ಕ್ರಿಯಾಪದ—** ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ ''ಬಭೂವ'' ಇತಿ ರೂಪಮ್ ।

ಬಭೂವ ಬಭೂವತುಃ ಬಭೂವುಃ, ಬಭೂವಿಥ ಬಭೂವಥುಃ ಬಭೂವ, ಬಭೂವ, ಬಭೂವಿವ ಬಭೂವಿಮ ॥

★ ★ ★

ತ್ರೈಲೋಕ್ಯಾಚಾರ್ಯಪಾದರ ಪಾಠಪ್ರವಚನ

**ಬುಧೋಽಭಿಧಾನಂ ಶ್ರವಣಂ ಬುಧೇತರೋ**
**ಧ್ರುವಂ ವಿದಧ್ಯಾದ್ವಿಮುಮುಕ್ಷುರಾತ್ಮನಃ ।**
**ಯತಿರ್ವಿಶೇಷಾದಿತಿ ಲೋಕಚೋದನಾತ್**
**ಪ್ರವಕ್ತಿ ಮಾಯಾಸಮಯಂ ಸ್ಮ ಪೂರ್ಣಧೀಃ ॥ 46 ॥**

**ಪದಚ್ಛೇದ—** ಬುಧಃ, ಅಭಿಧಾನಂ, ಶ್ರವಣಂ, ಬುಧೇತರಃ, ಧ್ರುವಂ, ವಿದಧ್ಯಾತ್ ವಿಮುಮುಕ್ಷುಃ, ಆತ್ಮನಃ, ಯತಿಃ, ವಿಶೇಷಾತ್ ಇತಿ, ಲೋಕಚೋದನಾತ್, ಪ್ರವಕ್ತಿ, ಮಾಯಾಸಮಯಂ, ಸ್ಮ, ಪೂರ್ಣಧೀಃ ।

**ಅನ್ವಯ—** ಆತ್ಮನಃ ವಿಮುಮುಕ್ಷುಃ ಬುಧಃ ಧ್ರುವಂ ಅಭಿಧಾನಂ ವಿದಧ್ಯಾತ್, ಬುಧೇತರಃ ಶ್ರವಣಂ ವಿದಧ್ಯಾತ್ । ಯತಿಃ ವಿಶೇಷಾತ್ ಇತಿ ಲೋಕಚೋದನಾತ್ ಪೂರ್ಣಧೀಃ ಮಾಯಾಸಮಯಂ ಪ್ರವಕ್ತಿ ಸ್ಮ ।

**ಅನ್ವಯಾರ್ಥ—**

**ಆತ್ಮನಃ** = ತನಗೆ
**ವಿಮುಮುಕ್ಷುಃ** = ಮೋಕ್ಷವನ್ನು ಅಪೇಕ್ಷಿಸುವ
**ಬುಧಃ** = ವಿದ್ವಾಂಸನು
**ಧ್ರುವಂ** = ನಿಶ್ಚಯವಾಗಿಯೂ
**ಅಭಿಧಾನಂ** = ಪ್ರವಚನವನ್ನು
**ವಿದಧ್ಯಾತ್** = ಮಾಡಬೇಕು.
**ಬುಧೇತರಃ** = ಪಂಡಿತನಲ್ಲದವನು
**ಶ್ರವಣಂ** = ಕೇಳುವಿಕೆಯನ್ನು
**ವಿದಧ್ಯಾತ್** = ಮಾಡಬೇಕು.
**ಯತಿಃ** = ಸನ್ಯಾಸಿಯು
**ವಿಶೇಷಾತ್** = ಅತಿಶಯದಿಂದ (ವ್ಯಾಖ್ಯಾನವನ್ನಾಗಲಿ, ಕೇಳುವಿಕೆಯನ್ನಾಗಲಿ ಮಾಡಬೇಕು)
**ಇತಿ** = ಹೀಗೆಂದು
**ಲೋಕಚೋದನಾತ್** = ಅಲ್ಲಿ ನೆರೆದ ಜನಗಳು ಪ್ರೇರಣೆಮಾಡಿದ್ದರಿಂದ
**ಪೂರ್ಣಧೀಃ** = ಪೂರ್ಣಪ್ರಜ್ಞರು
**ಮಾಯಾಸಮಯಂ** = ಅದ್ವೈತಶಾಸ್ತ್ರವನ್ನು
**ಪ್ರವಕ್ತಿ ಸ್ಮ** = ವ್ಯಾಖ್ಯಾನ ಮಾಡಿದರು.

**ತಾತ್ಪರ್ಯ—** ಪ್ರಪಂಚದಲ್ಲಿ ತನಗೆ ಮೋಕ್ಷವನ್ನು ಬಯಸುವ ವಿದ್ವಾಂಸನು ಜನರಿಗೆ ಶಾಸ್ತ್ರವನ್ನು ವಿವರಿಸಿ ಹೇಳಬೇಕಾದುದು ಅತ್ಯಾವಶ್ಯಕ. ವಿದ್ವಾಂಸನಲ್ಲದವನು ಮೋಕ್ಷವನ್ನು ಪಡೆಯಲೋಸುಗ ತಾನೇ ಶಾಸ್ತ್ರವನ್ನು ಕೇಳಬೇಕು. ಎಲ್ಲವನ್ನೂ ತ್ಯಜಿಸಿದ ಸಂನ್ಯಾಸಿಯು ಗೃಹಸ್ಥನಿಗಿಂತ ಶ್ರೇಷ್ಠನಾದ್ದರಿಂದ ಪ್ರವಚನ ಅಥವಾ ಶ್ರವಣವನ್ನು ಅವಶ್ಯಕವಾಗಿ ಮಾಡಬೇಕು. ಆದ್ದರಿಂದ ಯತಿಗಳಾದ ನೀವು ಮಾಯಾವಾದ ಸಿದ್ಧಾಂತವನ್ನು ವಿವರಿಸಿ ಎಂದು ಜನರು ಒತ್ತಾಯ ಮಾಡಿ ಹೇಳಲು ಪೂರ್ಣಪ್ರಜ್ಞರು ಹಾಗೆಯೇ ಆ ಸಿದ್ಧಾಂತವನ್ನು ವಿವರಿಸಿದರು.

**ವಿಗ್ರಹ—**

**ಬುಧೇತರಃ—** ಬುಧಾತ್ ಇತರಃ ಬುಧೇತರಃ ।

**ವಿಮುಮುಕ್ಷುಃ—** ವಿಮೋಕ್ತುಮಿಚ್ಛುಃ ವಿಮುಮುಕ್ಷುಃ ।

**ಲೋಕಚೋದನಾತ್—** ಲೋಕಸ್ಯ ಚೋದನಂ ಲೋಕಚೋದನಂ, ತಸ್ಮಾತ್ ಲೋಕಚೋದನಾತ್ ।

**ಪೂರ್ಣಧೀಃ—** ಪೂರ್ಣಾ ಧೀಃ ಯಸ್ಯ ಸಃ ಪೂರ್ಣಧೀಃ ।

**ಕ್ರಿಯಾಪದ— ಪ್ರವಕ್ತಿ-** ಪ್ರ ಇತ್ಯುಪಸರ್ಗಪೂರ್ವಕಾತ್ ವಚ ಪರಿಭಾಷಣೇ ಇತಿ ಪರಿಭಾಷಣಾರ್ಥಕಾತ್ ಲಟಿ ಪ್ರಥಮಪುರುಷೇ ಏಕವಚನೇ ''ಪ್ರವಕ್ತಿ '' ಇತಿ ರೂಪಮ್ ।

ಪ್ರವಕ್ತಿ ಪ್ರವಕ್ತಃ ಪ್ರವದಂತಿ, ಪ್ರವಕ್ಷಿ ಪ್ರವಕ್ಥಃ ಪ್ರವಕ್ಥ ಪ್ರವಚ್ಮಿ ಪ್ರವಚ್ವಃ ಪ್ರವಚ್ಮಃ ॥

★ ★ ★

ಸರ್ವಜ್ಞಾಚಾರ್ಯರ ವಾದವೈಖರಿ

**ಅಖಂಡಿತೋಪನ್ಯಸನಂ ವಿಸಂಶಯಂ**
**ಸಸಂಪ್ರದಾಯಂ ಪ್ರವಚೋ ದೃಢೋತ್ತರಮ್ ।**
**ಸಮಾಗಮಂಶ್ರೋತುಮಮುಷ್ಯ ಸಾಗ್ರಹಾ**
**ಜನಾಃ ಶ್ರುತಾಢ್ಯಾಶ್ಚತುರಾ ಬುಭೂಷವಃ ॥ 48 ॥**

**ಪದಚ್ಛೇದ—** ಅಖಂಡಿತೋಪನ್ಯಸನಂ, ವಿಸಂಶಯಂ, ಸಸಂಪ್ರದಾಯಂ, ಪ್ರವಚಃ, ದೃಢೋತ್ತರಂ, ಸಮಾಗಮನ್, ಶ್ರೋತುಂ, ಅಮುಷ್ಯ, ಸಾಗ್ರಹಾಃ, ಜನಾಃ, ಶ್ರುತಾಢ್ಯಾಃ, ಚತುರಾಃ, ಬುಭೂಷವಃ ।

**ಅನ್ವಯ—** ಶ್ರುತಾಢ್ಯಾಃ ಜನಾಃ ಚತುರಾಃ ಬುಭೂಷವಃ ಅಖಂಡಿತೋಪನ್ಯಸನಂ ವಿಸಂಶಯಂ ದೃಢೋತ್ತರಂ ಸಸಂಪ್ರದಾಯಂ ಅಮುಷ್ಯ ಪ್ರವಚಃ ಶ್ರೋತುಂ, ಸಾಗ್ರಹಾಃ ಸಮಾಗಮನ್ ।

**ಅನ್ವಯಾರ್ಥ—**

**ಶ್ರುತಾಢ್ಯಾಃ** = ಶಾಸ್ತ್ರಶ್ರವಣವನ್ನು ಮಾಡಿದ

**ಜನಾಃ** = ಜನರು

**ಚತುರಾಃ** = ಜ್ಞಾನಿಗಳು

**ಬುಭೂಷವಃ** = ಆಗಲು ಅಪೇಕ್ಷೆಯುಳ್ಳವರಾಗಿ

**ಅಖಂಡಿತೋಪನ್ಯಸನಂ** = ಎಡೆಬಿಡದ ಉಪನ್ಯಾಸವುಳ್ಳ

**ವಿಸಂಶಯಂ** = ಸಂದೇಹವಿಲ್ಲದ

**ದೃಢೋತ್ತರಂ** = ಸ್ಥಿರವಾದ ಉತ್ತರವುಳ್ಳ

**ಸಸಂಪ್ರದಾಯಂ** = ಶಾಸ್ತ್ರಮರ್ಯಾದೆಯಿಂದ ಸಹಿತವಾದ

**ಅಮುಷ್ಯ** = ಈ ಪೂರ್ಣಪ್ರಜ್ಞರ
**ಪ್ರವಚಃ** = ವ್ಯಾಖ್ಯಾನವನ್ನು
**ಶ್ರೋತುಂ** = ಕೇಳುವುದಕ್ಕಾಗಿ
**ಸಾಗ್ರಹಾಃ** = ಆಸಕ್ತಿಯಿಂದ ಸಹಿತರಾಗಿ
**ಸಮಾಗಮನ್** = ಬಂದರು.

**ತಾತ್ಪರ್ಯ—** ಶಾಸ್ತ್ರಗಳನ್ನು ಓದಿದ ಜನರು ತಾವು ಪೂರ್ಣಪ್ರಜ್ಞರ ವ್ಯಾಖ್ಯಾನವನ್ನು ಕೇಳಿ ಹೆಚ್ಚು ಬುದ್ಧಿಶಾಲಿ-ಗಳಾಗಬೇಕೆಂದು ಬಯಸಿದರು. ಅವರು ಆ ಆಚಾರ್ಯರ ತಡೆಯಿಲ್ಲದ ವಾಗ್ಧೋರಣೆಯುಳ್ಳ, ಸಂಶಯವಿಲ್ಲದ, ಸ್ಥಿರೋತ್ತರವುಳ್ಳ, ಶಾಸ್ತ್ರಸಂಪ್ರದಾಯವನ್ನು ಅನುಸರಿಸಿದ ಶಾಸ್ತ್ರವಿವರಣೆಯನ್ನು ಕೇಳಲು ಆಸಕ್ತಿಯಿಂದ ಅಲ್ಲಿಗೆ ಬಂದರು.

**ವಿಗ್ರಹ—**

**ಅಖಂಡಿತೋಪನ್ಯಸನಂ—** ನ ಖಂಡಿತಂ ಅಖಂಡಿತಂ, ಅಖಂಡಿತಂ ಚ ತತ್ ಉಪನ್ಯಸನಂ ಚ ಅಖಂಡಿ-ತೋಪನ್ಯಸನಂ ತತ್ ।
**ವಿಸಂಶಯಂ—** ವಿಗತಃ ಸಂಶಯಃ ಯಸ್ಮಾತ್ ತತ್ ವಿಸಂಶಯಂ ತತ್ ।
**ಸಸಂಪ್ರದಾಯಂ—** ಸಂಪ್ರದಾಯೇನ ವರ್ತತೇ ಇತಿ ಸಸಂಪ್ರದಾಯಂ ತತ್ ।
**ದೃಢೋತ್ತರಂ—** ದೃಢಂ ಉತ್ತರಂ ಯಸ್ಯ ತತ್ ದೃಢೋತ್ತರಂ ತತ್ ।
**ಸಾಗ್ರಹಾಃ—** ಆಗ್ರಹೇಣ ಸಹ ವರ್ತಂತೇ ಇತಿ ಸಾಗ್ರಹಾಃ ।
**ಶ್ರುತಾಢ್ಯಾಃ—** ಶ್ರುತೇನ ಆಢ್ಯಾಃ ಶ್ರುತಾಢ್ಯಾಃ ।
**ಬುಭೂಷವಃ—** ಭವಿತುಂ ಇಚ್ಛವಃ ಬುಭೂಷವಃ ।

**ಕ್ರಿಯಾಪದ—** ಸಂ ಆ ಇತ್ಯುಪಸರ್ಗದ್ವಯಪೂರ್ವಕಾತ್ ಗಮ್ಳೃಗತೌ ಇತಿ ಧಾತೋಃ ಗತ್ಯರ್ಥಕಾತ್ ಲಙ್ ''ಸಮಾಗಮನ್'' ಇತಿ ರೂಪಂ ।

ಸಮಾಗಮತ್ ಸಮಾಗಮತಾಂ ಸಮಾಗಮನ್,
ಸಮಾಗಮಃ ಸಮಾಗಮತಂ ಸಮಾಗಮತ,
ಸಮಾಗಮಂ ಸಮಾಗಮಾವ ಸಮಾಗಮಾಮ ॥

★ ★ ★

ಭಾಗವತೋತ್ತಮರ ಭಾಗವತ ಪಾಂಡಿತ್ಯ

**ಗುರೋರುಪಾಂತೇ ಶ್ರವಣೇ ರತ್ತೈರ್ದ್ವಿಜೈಃ**
**ಸ ಪಂಚಷೈರ್ಭಾಗವತೇ ಕದಾಚನ ।**
**ಬಹುಪ್ರಕಾರೇ ಲಿಖಿತೇ ತು ವಾಚಿತೇ**
**ಪ್ರಕಾರಮೇಕಂ ಪ್ರಭುರಭ್ಯಧಾದ್ದೃಢಮ್ ॥ 49 ॥**

**ಪದಚ್ಛೇದ—** ಗುರೋಃ, ಉಪಾಂತೇ, ಶ್ರವಣೇ, ರತ್ತೈಃ, ದ್ವಿಜೈಃ, ಸ ಪಂಚಷೈಃ, ಭಾಗವತೇ, ಕದಾಚನ, ಬಹುಪ್ರಕಾರೇ, ಲಿಖಿತೇ, ವಾಚಿತೇ, ತು, ಪ್ರಕಾರಂ, ಏಕಂ, ಪ್ರಭುಃ, ಅಭ್ಯಧಾತ್, ದೃಢಂ ।

**ಅನ್ವಯ—** ಕದಾಚನ ಗುರೋಃ ಉಪಾಂತೇ ಶ್ರವಣೇ ರತ್ತೈಃ ಪಂಚಷೈಃ ದ್ವಿಜೈಃ ಬಹುಪ್ರಕಾರೇ ಲಿಖಿತೇ ಭಾಗವತೇ ವಾಚಿತೇ ತು ಪ್ರಭುಃ ಸಃ ದೃಢಂ ಏಕಂ ಪ್ರಕಾರಂ ಅಭ್ಯಧಾತ್ ।

**ಅನ್ವಯಾರ್ಥ—**

**ಕದಾಚನ** = ಒಂದಾನೊಂದು ವೇಳೆ
**ಗುರೋಃ** = ಅಚ್ಯುತಪ್ರೇಕ್ಷಾಚಾರ್ಯರ
**ಉಪಾಂತೇ** = ಹತ್ತಿರ
**ಶ್ರವಣೇ** = ಕೇಳುವುದರಲ್ಲಿ
**ರತೈಃ** = ಆಸಕ್ತರಾದ
**ಪಂಚಷೈಃ** = ಐದಾರು ಮಂದಿ
**ದ್ವಿಜೈಃ** = ಬ್ರಾಹ್ಮಣರಿಂದ
**ಬಹುಪ್ರಕಾರೇ** = ಅನೇಕ ರೀತಿಯಿಂದ
**ಲಿಖಿತೇ** = ಬರೆಯಲ್ಪಟ್ಟ
**ಭಾಗವತೇ** = ಭಾಗವತ ಗ್ರಂಥವು
**ವಾಚಿತೇ ತು** = ಓದಲ್ಪಡಲು
**ಪ್ರಭುಃ** = ಸಮರ್ಥರಾದ
**ಸಃ** = ಆ ಪೂರ್ಣಪ್ರಜ್ಞಾಚಾರ್ಯರು
**ದೃಢಂ** = ನಿಶ್ಚಯವಾಗಿ
**ಏಕಂ** = ಒಂದು
**ಪ್ರಕಾರಂ** = ರೀತಿಯನ್ನು
**ಅಭ್ಯಧಾತ್** = ಹೇಳಿದರು.

**ತಾತ್ಪರ್ಯ—** ಒಂದಾನೊಂದು ದಿನ ಅಚ್ಯುತಪ್ರೇಕ್ಷಾಚಾರ್ಯರು ಭಾಗವತ ಪುರಾಣವನ್ನು ಹೇಳುತ್ತಿದ್ದರು. ಆಗ ಪುರಾಣವನ್ನು ಕೇಳುತ್ತಿದ್ದ ಐದಾರು ಮಂದಿ ಬ್ರಾಹ್ಮಣರು ಬೇರೆ ಬೇರೆ ರೀತಿ ಬರೆದ ಪಾಠದ ಭಾಗವತ ಗ್ರಂಥವನ್ನು ಓದಿದರು. ಆಗ ಸಮರ್ಥರಾದ ಪೂರ್ಣಪ್ರಜ್ಞರು ಅವುಗಳಲ್ಲಿ ಒಂದು ಪುಸ್ತಕದ ಪಾಠವು ವೇದವ್ಯಾಸರಿಗೆ ಸಮ್ಮತವಾಗಿದೆ. ಅದೇ ಸರಿಯಾದುದು ಎಂದು ದೃಢವಾಗಿ ಹೇಳಿದರು.

**ವಿಗ್ರಹ—**

**ಪಂಚಷೈಃ—** ಪಂಚ ವಾ ಷಟ್ ವಾ ಪಂಚಷಾಃ, ತೈಃ ಪಂಚಷೈಃ ।

**ಬಹುಪ್ರಕಾರೇ—** ಬಹವಃ ಪ್ರಕಾರಾಃ ಯಸ್ಮಿನ್ ತತ್ ಬಹುಪ್ರಕಾರಂ, ತಸ್ಮಿನ್ ಬಹುಪ್ರಕಾರೇ ।

**ಕ್ರಿಯಾಪದ— ಅಭ್ಯಧಾತ್-** ಅಭಿ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತಿ ಧಾರಣಪೋಷಣಾರ್ಥಕಾತ್ ಧಾಞ್ ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಅಭ್ಯಧಾತ್' ಇತಿ ರೂಪಮ್ ।

ಅಭ್ಯಧಾತ್ ಅಭ್ಯಧತ್ತಾಂ ಅಭ್ಯಧುಃ, ಅಭ್ಯಧಾಃ ಅಭ್ಯಧತ್ತಂ ಅಭ್ಯಧತ್ತ, ಅಭ್ಯಧಾಂ ಅಭ್ಯದಧ್ವ ಅಭ್ಯದಧ್ಮ ॥

★ ★ ★

ಅಚ್ಯುತಪ್ರೇಕ್ಷರ ಅಪೂರ್ವ ಜಿಜ್ಞಾಸೆ

**ಪರಪ್ರಕಾರೇಷ್ವಪಿ ಸಂಭವತ್ಸು ತೇ**
**ವಿನಿರ್ಣಯೋಽಸ್ಮಿನ್ ಕಥಮಿತ್ಯುದೀರಿತೇ ।**

**ಮುಕುಂದಬೋಧೇನ ಮಹಾಹೃದಬ್ರವೀತ್**
**ಪ್ರಕಾರಮೇಕಂ ಭಗವತ್ಕೃತಂ ಸ್ಫುಟಮ್ ॥ 50 ॥**

**ಪದಚ್ಛೇದ—** ಪರಪ್ರಕಾರೇಷು, ಅಪಿ, ಸಂಭವತ್ಸು, ತೇ, ವಿನಿರ್ಣಯಃ, ಅಸ್ಮಿನ್, ಕಥಂ, ಇತಿ, ಉದೀರಿತೇ, ಮುಕುಂದಬೋಧೇನ, ಮಹಾಹೃತ್, ಅಬ್ರವೀತ್, ಪ್ರಕಾರಂ, ಏಕಂ, ಭಗವತ್ಕೃತಂ, ಸ್ಫುಟಂ ।

**ಅನ್ವಯ—** ಪರಪ್ರಕಾರೇಷು ಸಂಭವತ್ಸು ಅಪಿ ತೇ ಅಸ್ಮಿನ್ ವಿನಿರ್ಣಯಃ ಕಥಂ ಇತಿ ಮುಕುಂದಬೋಧೇನ ಉದೀರಿತೇ ಮಹಾಹೃತ್ ಭಗವತ್ಕೃತಂ ಏಕಂ ಪ್ರಕಾರಂ ಸ್ಫುಟಂ ಅಬ್ರವೀತ್ ।

**ಅನ್ವಯಾರ್ಥ—**

**ಪರಪ್ರಕಾರೇಷು** = ಬೇರೆ ರೀತಿಯ ಪಾಠಗಳು
**ಸಂಭವತ್ಸು ಅಪಿ** = ಕೂಡುತ್ತಿದ್ದರೂ
**ತೇ ಅಸ್ಮಿನ್** = ನಿಮಗೆ ಈ ಪಾಠದಲ್ಲಿ
**ವಿನಿರ್ಣಯಃ** = ನಿಶ್ಚಯವು
**ಕಥಂ** = ಹೇಗೆ ?
**ಇತಿ** = ಹೀಗೆಂದು
**ಮುಕುಂದಬೋಧೇನ** = ಶ್ರೀಮನ್ನಾರಾಯಣನಲ್ಲಿ ಆಸಕ್ತವಾದ ಮನಸ್ಸುಳ್ಳ ಅಚ್ಯುತಪ್ರೇಕ್ಷಾಚಾರ್ಯರಿಂದ
**ಉದೀರಿತೇ** = ಹೇಳಲ್ಪಡಲು
**ಮಹಾಹೃತ್** = ಪೂರ್ಣಪ್ರಜ್ಞರು
**ಭಗವತ್ಕೃತಂ** = ಶ್ರೀವೇದವ್ಯಾಸರಿಂದ ಮಾಡಲ್ಪಟ್ಟ
**ಏಕಂ** = ಒಂದು
**ಪ್ರಕಾರಂ** = ಪಾಠದ ರೀತಿಯನ್ನು
**ಸ್ಫುಟಂ** = ಸಯುಕ್ತಿಕವಾಗಿ
**ಅಬ್ರವೀತ್** = ಹೇಳಿದರು.

**ತಾತ್ಪರ್ಯ—** ಆಗ ಅಚ್ಯುತಪ್ರೇಕ್ಷರು ಇತರ ಪಾಠಗಳೂ ಹೊಂದುವುದರಿಂದ ನಿಮಗೆ ಈ ಪಾಠವೇ ಸರಿ ಎಂಬ ನಿರ್ಣಯವು ಹೇಗೆಂದು ಪ್ರಶ್ನಿಸಿದರು. ವೇದವ್ಯಾಸರು ಮಾಡಿದ ಪಾಠಪ್ರಕಾರವನ್ನು ಪೂರ್ಣಪ್ರಜ್ಞರು ಯುಕ್ತಿಸಹಿತವಾಗಿ ಉಪಪಾದಿಸಿ ಅದೇ ಸರಿಯಾದ ಪಾಠವೆಂದರು.

**ವಿಗ್ರಹ—**

**ಪರಪ್ರಕಾರೇಷು—** ಪರೇ ಚ ತೇ ಪ್ರಕಾರಾಶ್ಚ ಪರಪ್ರಕಾರಾಃ, ತೇಷು ಪರಪ್ರಕಾರೇಷು ।
**ಸಂಭವತ್ಸು—** ಸಂಭವಂತಿ ಇತಿ ಸಂಭವಂತಃ ತೇಷು ಸಂಭವತ್ಸು ।
**ವಿನಿರ್ಣಯಃ—** ವಿಶಿಷ್ಟಃ ನಿರ್ಣಯಃ ವಿನಿರ್ಣಯಃ ।
**ಮುಕುಂದಬೋಧೇನ—** ಮುಕುಂದೇ ಬೋಧಃ ಯಸ್ಯ ಸಃ ಮುಕುಂದಬೋಧಃ, ತೇನ ಮುಕುಂದ-ಬೋಧೇನ ।
**ಮಹಾಹೃತ್—** ಮಹತಿ ಹೃದಯಂ ಯಸ್ಯ ಸಃ ಮಹಾಹೃತ್ ।
**ಭಗವತ್ಕೃತಂ —** ಭಗವತಾ ಕೃತಂ ಭಗವತ್ಕೃತಂ ।

**ಕ್ರಿಯಾಪದ—** ಅಬ್ರವೀತ್- ಬ್ರೂಞ್ ವ್ಯಾಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಞ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅಬ್ರವೀತ್'' ಇತಿ ರೂಪಮ್ ।

ಅಬ್ರವೀತ್ ಅಬ್ರೂತಾಂ ಅಬ್ರೂವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ ॥

★ ★ ★

ಪಂಚಮಸ್ಕಂದದಲ್ಲಿ ಆಚಾರ್ಯರು ತೋರಿದ ಅಪೂರ್ವಕೌಶಲ

**ನಿಗದ್ಯತಾಂ ಗದ್ಯಮಿಹೈವ ಪಂಚಮೇ**
**ಜಗದ್ಗುರೋರ್ವೇತ್ಥ ಕೃತಿಸ್ಥಿತಿಂ ಯದಿ ।**
**ಇತಿ ಬ್ರುವಾಣೇ ಯತಿಸತ್ತಮೇ ಸ್ವಯಂ**
**ತದುಕ್ತಮಾರ್ಗೇಣ ಜಗಾದ ಭೂರಿಹೃತ್ ॥ 51 ॥**

**ಪದಚ್ಛೇದ—** ನಿಗದ್ಯತಾಂ, ಗದ್ಯಂ, ಇಹ, ಏವ, ಪಂಚಮೇ, ಜಗದ್ಗುರೋಃ, ವೇತ್ಥ, ಕೃತಿಸ್ಥಿತಿಂ, ಯದಿ, ಇತಿ, ಬ್ರುವಾಣೇ, ಯತಿಸತ್ತಮೇ, ಸ್ವಯಂ, ತದುಕ್ತಮಾರ್ಗೇಣ, ಜಗಾದ, ಭೂರಿಹೃತ್ ।

**ಅನ್ವಯ—** ಜಗದ್ಗುರೋಃ ಕೃತಿಸ್ಥಿತಿಂ ಯದಿ ವೇತ್ಥ ಇಹ ಏವ ಪಂಚಮೇ ಗದ್ಯಂ ನಿಗದ್ಯತಾಂ ಇತಿ ಯತಿಸತ್ತಮೇ ಬ್ರುವಾಣೇ ಭೂರಿಹೃತ್ ಸ್ವಯಂ ತದುಕ್ತಮಾರ್ಗೇಣ ಜಗಾದ ।

**ಅನ್ವಯಾರ್ಥ—**

**ಜಗದ್ಗುರೋಃ** = ಪ್ರಪಂಚದ ಗುರುಗಳಾದ ವೇದವ್ಯಾಸರ
**ಕೃತಿಸ್ಥಿತಿಂ** = ರಚನೆಯ ಕ್ರಮವನ್ನು
**ಯದಿ ವೇತ್ಥ** = ತಿಳಿಯುತ್ತೀಯಾದರೆ
**ಇಹ ಏವ** = ಈ ಭಾಗವತ ಗ್ರಂಥದಲ್ಲಿಯೇ
**ಪಂಚಮೇ** = ಐದನೇ ಸ್ಕಂಧದಲ್ಲಿರುವ
**ಗದ್ಯಂ** = ಗದ್ಯವು (ಛಂದಸ್ಸಿಲ್ಲದ ವಾಕ್ಯವು)
**ನಿಗದ್ಯತಾಂ** = ಹೇಳಲ್ಪಡಲಿ
**ಇತಿ** = ಹೀಗೆಂದು
**ಯತಿಸತ್ತಮೇ** = ಸಂನ್ಯಾಸಿಗಳಲ್ಲಿ ಶ್ರೇಷ್ಠರಾದ ಅಚ್ಯುತಪ್ರೇಕ್ಷರು
**ಬ್ರುವಾಣೇ** = ಹೇಳಲು
**ಭೂರಿಹೃತ್** = ಸರ್ವಜ್ಞರಾಗಿರುವ ಪೂರ್ಣಪ್ರಜ್ಞರು
**ಸ್ವಯಂ** = ಸ್ವಂತವಾಗಿ
**ತದುಕ್ತಮಾರ್ಗೇಣ** = ವೇದವ್ಯಾಸರು ಹೇಳಿದ ರೀತಿಯಿಂದ
**ಜಗಾದ** = ಹೇಳಿದರು.

**ತಾತ್ಪರ್ಯ—** ಆಗ ಅಚ್ಯುತಪ್ರೇಕ್ಷಯತಿವರ್ಯರು ನೀನು ವೇದವ್ಯಾಸರು ಮಾಡಿರುವ ಭಾಗವತಗ್ರಂಥದ ಪಾಠಕ್ರಮವನ್ನು ಸರಿಯಾಗಿ ತಿಳಿದವನಾದರೆ ಇದೇ ಭಾಗವತ ಗ್ರಂಥದ ಐದನೆ ಸ್ಕಂಧದಲ್ಲಿರುವ ಒಂದು ಗದ್ಯವನ್ನು (ಛಂದಸ್ಸಿಲ್ಲದ ವಾಕ್ಯವನ್ನು) ಹೇಳಿ ಅದರ ಅರ್ಥವನ್ನು ವಿವರಿಸು ನೋಡೋಣ ಎಂದು ಹೇಳಿದರು. ಪೂರ್ಣಪ್ರಜ್ಞರು

ತಾವೇ ಪುಸ್ತಕಾಪೇಕ್ಷೆ ಇಲ್ಲದೆ ವೇದವ್ಯಾಸರು ಹೇಳಿದ ರೀತಿಯಿಂದ ಆ ಗದ್ಯವನ್ನು ಅರ್ಥಸಹಿತವಾಗಿ ಹೇಳಿದರು. ಹೀಗೆ ಆಚಾರ್ಯರು ತಾನು ಅನೇಕ ಜನ್ಮಸಂಸಿದ್ಧನೆಂದು ಪ್ರಕಾಶಪಡಿಸಿದರು.

**ವಿಗ್ರಹ—**

**ಜಗದ್ಗುರೋಃ—** ಜಗತಾಂ ಗುರುಃ ಜಗದ್ಗುರುಃ, ತಸ್ಯ ಜಗದ್ಗುರೋಃ ।

**ಕೃತಿಸ್ಥಿತಿಂ—** ಕೃತೀನಾಂ ಸ್ಥಿತಿಃ ಕೃತಿಸ್ಥಿತಿಃ ತಾಂ ಕೃತಿಸ್ಥಿತಿಂ ।

**ಬ್ರುವಾಣೇ—** ಬ್ರೂತೇ ಇತಿ ಬ್ರುವಾಣಃ, ತಸ್ಮಿನ್ ಬ್ರುವಾಣೇ ।

**ಯತಿಸತ್ತಮೇ—** ಯತಿಷು ಸತ್ತಮಃ ಯತಿಸತ್ತಮಃ, ತಸ್ಮಿನ್ ಯತಿಸತ್ತಮೇ ।

**ತದುಕ್ತಮಾರ್ಗೇಣ—** ತೇನ ಉಕ್ತಃ ತದುಕ್ತಃ, ತದುಕ್ತಶ್ಚಾಸೌ ಮಾರ್ಗಶ್ಚ ತದುಕ್ತಮಾರ್ಗಃ, ತೇನ ತದುಕ್ತಮಾರ್ಗೇಣ ।

**ಭೂರಿಹೃತ್—** ಭೂರಿ ವಿಷಯಂ ಹೃದಯಂ ಯಸ್ಯ ಸಃ ಭೂರಿಹೃತ್ ।

**ಕ್ರಿಯಾಪದ—** ನಿಗದ್ಯತಾಂ- ನಿ ಇತ್ಯುಪಸರ್ಗಪೂರ್ವಕಾತ್ ಗದವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಗದಧಾತೋಃ ಕರ್ಮಣಿ ಲೋಟಿ ಪ್ರಥಮಪುರುಷೇ ಏಕವಚನೇ ''ನಿಗದ್ಯತಾಂ'' ಇತಿ ರೂಪಮ್ ।

ನಿಗದ್ಯತಾಂ ನಿಗದ್ಯೇತಾಂ ನಿಗದ್ಯಂತಾಂ, ನಿಗದ್ಯಸ್ವ ನಿಗದ್ಯೆಥಾಂ ನಿಗದ್ಯಧ್ವಂ, ನಿಗದ್ಯೆ ನಿಗದ್ಯಾವಹೈ ನಿಗದ್ಯಾಮಹೈ ॥ (ಜಗಾದ - ಹಿಂದೆಯೇ ಬಂದಿದೆ)

★ ★ ★

ಸರ್ವಜ್ಞರ ಪರೀಕ್ಷೆ - ಸೋತ ಶಿಷ್ಯವರ್ಗ

**ಅಶೇಷಶಿಷ್ಯೈಶ್ಚ ತದಾಜ್ಞಯಾ ತದಾ**
**ಪರೀಕ್ಷಣಾಯೈಕ್ಷಿ ಸಮಸ್ತಪುಸ್ತಕಮ್ ।**
**ಸ ತತ್ರ ಹಂತೈಕತಮೇ ಸ್ಥಿತಂ ತ್ಯಜನ್**
**ನ ತಾವದಧ್ಯಾಯನಿಕಾಯಮಭ್ಯಧಾತ್ ॥ 52 ॥**

**ಪದಚ್ಛೇದ—** ಅಶೇಷಶಿಷ್ಯೈಃ, ಚ, ತದಾಜ್ಞಯಾ, ತದಾ, ಪರೀಕ್ಷಣಾಯ, ಐಕ್ಷಿ ಸಮಸ್ತಪುಸ್ತಕಂ, ಸಃ, ತತ್ರ, ಹಂತ, ಏಕತಮೇ, ಸ್ಥಿತಂ, ತ್ಯಜನ್, ನ, ತಾವತ್, ಅಧ್ಯಾಯನಿಕಾಯಂ, ಅಭ್ಯದಾತ್ ।

**ಅನ್ವಯ—** ತದಾ ತದಾಜ್ಞಯಾ ಅಶೇಷಶಿಷ್ಯೈಃ ಚ ಪರೀಕ್ಷಣಾಯ ಸಮಸ್ತಪುಸ್ತಕಂ ಐಕ್ಷಿ ಸಃ ತತ್ರ ಏಕತಮೇ ಸ್ಥಿತಂ ನ ತ್ಯಜನ್ ತಾವತ್ ಅಧ್ಯಾಯನಿಕಾಯಂ ಅಭ್ಯಧಾತ್ ಹಂತ ।

**ಅನ್ವಯಾರ್ಥ—**

**ತದಾ ತದಾಜ್ಞಯಾ** = ಆ ಸಮಯದಲ್ಲಿ ಆ ಗುರುಗಳ ಅಪ್ಪಣೆಯಿಂದ

**ಅಶೇಷಶಿಷ್ಯೈಃ ಚ** = ಎಲ್ಲ ಶಿಷ್ಯರಿಂದಲೂ

**ಪರೀಕ್ಷಣಾಯ** = ಪರೀಕ್ಷೆಗಾಗಿ

**ಸಮಸ್ತಪುಸ್ತಕಂ** = ಎಲ್ಲ ಪುಸ್ತಕಗಳೂ

**ಐಕ್ಷಿ** = ನೋಡಲ್ಪಟ್ಟವು.

**ಸಃ ತತ್ರ** = ಆ ಪೂರ್ಣಪ್ರಜ್ಞರು ಆ ಎಲ್ಲ ಪುಸ್ತಕಗಳ ನಡುವೆ,

**ಏಕತಮೇ ಸ್ಥಿತಂ** = ಒಂದು ಪುಸ್ತಕದಲ್ಲಿ ನೋಡಲ್ಪಟ್ಟ ಪಾಠವನ್ನು

ನ ತ್ಯಜನ್ = ಬಿಡದಂತೆ

ತಾವತ್ = ಆ ಶಿಷ್ಯರು ಪುಸ್ತಕವನ್ನು ನೋಡುತ್ತಿರುವಾಗಲೆ,

ಅಧ್ಯಾಯನಿಕಾಯಂ = ಅಧ್ಯಾಯಗಳ ಸಮೂಹವನ್ನು

ಅಭ್ಯಧಾತ್ = ಹೇಳಿದರು

ಹಂತ = ಆಶ್ಚರ್ಯ!

**ತಾತ್ಪರ್ಯ—** ಆ ಪೂರ್ಣಪ್ರಜ್ಞರು ಗದ್ಯವನ್ನು ಹೇಳುತ್ತಿರುವಾಗ ಅಚ್ಯುತಪ್ರೇಕ್ಷ ಗುರುಗಳು ಎಲ್ಲ ಶಿಷ್ಯರಿಗೂ ಎಲ್ಲ ಪುಸ್ತಕಗಳನ್ನೂ ಪರೀಕ್ಷೆಗಾಗಿ ನೋಡುವಂತೆ ಹೇಳಿದರು. ಅವರೆಲ್ಲ ಹಾಗೆಯೇ ಪುಸ್ತಕಗಳ ಪಾಠವನ್ನು ನೋಡುತ್ತಿದ್ದರು. ಆಗ ಪೂರ್ಣಪ್ರಜ್ಞರು ಯಾವುದೋ ಒಂದು ಪುಸ್ತಕದ ಪಾಠಕ್ರಮವನ್ನನುಸರಿಸಿ ಅಧ್ಯಾಯಗಳ ಸಮೂಹವನ್ನು ಬಾಯಿಪಾಠ ಹೇಳಿದರು.

**ವಿಗ್ರಹ—**

**ಅಶೇಷಶಿಷ್ಯೈಃ—** ಅಶೇಷಾಶ್ಚ ತೇ ಶಿಷ್ಯಾಶ್ಚ ಅಶೇಷಶಿಷ್ಯಾಃ, ತೈಃ ಅಶೇಷಶಿಷ್ಯೈಃ ।

**ತದಾಜ್ಞಯಾ—** ತಸ್ಯ ಆಜ್ಞಾ ತದಾಜ್ಞಾ, ತಯಾ ತದಾಜ್ಞಯಾ ।

**ಸಮಸ್ತಪುಸ್ತಕಂ—** ಸಮಸ್ತಂ ಚ ತತ್ ಪುಸ್ತಕಂ ಚ ಸಮಸ್ತಪುಸ್ತಕಂ ।

**ಏಕತಮೇ—** ಏಕ ಏವ ಏಕತಮಃ, ತಸ್ಮಿನ್ ಏಕತಮೇ ।

**ಅಧ್ಯಾಯನಿಕಾಯಂ—** ಅಧ್ಯಾಯಾನಾಂ ನಿಕಾಯಃ ಅಧ್ಯಾಯನಿಕಾಯಃ ತಂ ಅಧ್ಯಾಯನಿಕಾಯಂ ।

**ಕ್ರಿಯಾಪದ— ಅಭ್ಯಧಾತ್-** ಅಭಿ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಧಾರಣ-ಪೋಷಣಾರ್ಥಕಾತ್ ಧಾಞ್ ಧಾತೋಃ ಲುಙ್ ಪ್ರಥಮಪುರುಷೈಕವಚನೇ ಅಭ್ಯಧಾತ್ ಇತಿ ರೂಪಮ್ ।

ಅಭ್ಯಧಾತ್ ಅಭ್ಯಧಾತಾಂ ಅಭ್ಯಧುಃ, ಅಭ್ಯಧಾಃ ಅಭ್ಯಧಾತಂ ಅಭ್ಯಧಾತ, ಅಭ್ಯಧಾಂ ಅಭ್ಯಧಾವ ಅಭ್ಯಧಾಮ ॥

★ ★ ★

**ಹಿಂದೆಯೇ ತಿಳಿದ ಸರ್ವಜ್ಞರು**

**ಅತ್ರ ಜನ್ಮನಿ ನ ಯತ್ಪಠಿತಂ ತೇ**
**ಜೈತ್ರ ಭಾತಿ ಕಥಮಿತ್ಯಮುನೋಕ್ತೇ ।**
**ಪೂರ್ವಜನ್ಮಸು ಹಿ ವೇದ ಪುರೇದಂ**
**ಸರ್ವಮಿತ್ಯಮಿತಬುದ್ಧಿರುವಾಚ ॥ 53 ॥**

**ಪದಚ್ಛೇದ—** ಅತ್ರ, ಜನ್ಮನಿ, ನ, ಯತ್ಪಠಿತಂ, ತೇ, ಜೈತ್ರ, ಭಾತಿ, ಕಥಂ, ಇತಿ, ಅಮುನಾ, ಉಕ್ತೇ, ಪೂರ್ವ, ಜನ್ಮಸು, ಹಿ, ವೇದ, ಪುರಾ, ಇದಂ, ಸರ್ವಂ, ಇತಿ, ಅಮಿತಬುದ್ಧಿಃ, ಉವಾಚ ।

**ಅನ್ವಯ—** ಜೈತ್ರ! ತೇ ಅತ್ರ ಜನ್ಮನಿ ಯತ್ ನ ಪಠಿತಂ (ತತ್) ಕಥಂ ಭಾತಿ ಇತಿ ಅಮುನಾ ಉಕ್ತೇ ಅಮಿತಬುದ್ಧಿಃ ಇದಂ ಸರ್ವಂ ಪೂರ್ವಜನ್ಮಸು ಪುರಾ ವೇದ ಇತಿ ಉವಾಚ ಹಿ ।

**ಅನ್ವಯಾರ್ಥ—**

ಜೈತ್ರ! = ಜಯಶೀಲನೇ!

ತೇ ಅತ್ರ ಜನ್ಮನಿ = ನಿನ್ನಂದ ಈ ಜನ್ಮದಲ್ಲಿ

**ಯತ್ ನ ಪಠಿತಂ** = ಯಾವುದು ಓದಲ್ಪಡಲಿಲ್ಲವೋ (**ತತ್** = ಅದು)

**ಕಥಂ ಭಾತಿ ?** = ಹೇಗೆ ತಿಳಿಯುತ್ತದೆ ?

**ಇತಿ** = ಹೀಗೆಂದು

**ಅಮುನಾ ಉಕ್ತೇ** = ಈ ಗುರುಗಳಿಂದ ಹೇಳಲ್ಪಡಲು

**ಅಮಿತಬುದ್ಧಿಃ** = ಪೂರ್ಣಪ್ರಜ್ಞರು

**ಇದಂ ಸರ್ವಂ** = ಈ ಎಲ್ಲವನ್ನು

**ಪೂರ್ವಜನ್ಮಸು** = ಹಿಂದಿನ ಜನ್ಮಗಳಲ್ಲಿ

**ಪುರಾ ವೇದ** = ಮೊದಲೇ ತಿಳಿದಿರುವೆನು

**ಇತಿ ಉವಾಚ** = ಹೀಗೆಂದು ಹೇಳಿದರು (**ಹಿ** = ಪ್ರಸಿದ್ಧಿಯು).

**ತಾತ್ಪರ್ಯ—** "ವಿಜಯಶಾಲಿಯಾದ ಪೂರ್ಣಪ್ರಜ್ಞನೇ! ನೀನು ಈ ಪುರಾಣಾದಿಗಳನ್ನು ಈ ಜನ್ಮದಲ್ಲಿ ಓದಲಿಲ್ಲ. ಆದರೂ ಅದು ನಿನಗೆ ಹೇಗೆ ಬರುತ್ತದೆ?" ಎಂದು ಗುರುಗಳು ಕೇಳಿದರು. ಅದಕ್ಕೆ ಪೂರ್ಣಪ್ರಜ್ಞರು "ನಾನು ಇದನ್ನೆಲ್ಲ ಹಿಂದಿನ ಜನ್ಮಗಳಲ್ಲಿ ಕಲಿತುಕೊಂಡಿದ್ದೇನೆ" ಎಂದು ಉತ್ತರ ಕೊಟ್ಟರು.

**ವಿಗ್ರಹ—**

**ಜೈತ್ರ—** ಜಯಶೀಲಃ ಜೈತ್ರಃ ತಸ್ಯ ಸಂಬುದ್ಧಿಃ ಹೇ ಜೈತ್ರ ।

**ಪೂರ್ವಜನ್ಮಸು—** ಪೂರ್ವಾಣಿ ಚ ತಾನಿ ಜನ್ಮಾನಿ ಚ ಪೂರ್ವಜನ್ಮಾನಿ, ತೇಷು ಪೂರ್ವಜನ್ಮಸು ।

**ಅಮಿತಬುದ್ಧಿಃ—** ಅಮಿತಾ ಬುದ್ಧಿಃ ಯಸ್ಯ ಸಃ ಅಮಿತಬುದ್ಧಿಃ ।

**ಕ್ರಿಯಾಪದ—** **ಭಾತಿ-** ಭಾ ದೀಪ್ತೌ ಇತಿ ದೀಪ್ತ್ಯರ್ಥಕಾತ್ ಭಾಧಾತೋಃ ಲಟಿ ಪ್ರಥಮಪುರುಷೈಕವಚನೇ "ಭಾತಿ" ಇತಿ ರೂಪಮ್ ।

ಭಾತಿ ಭಾತಃ ಭಾಂತಿ, ಭಾಸಿ ಭಾಥಃ ಭಾಥ, ಭಾಮಿ ಭಾವಃ ಭಾಮಃ ॥

**ಉವಾಚ-** ವಚ ಪರಿಭಾಷಣೇ ಇತಿ ಪರಿಭಾಷಣಾರ್ಥಕಾತ್ ವಚಧಾತೋಃ ಲಿಟಿ ಪ್ರಥಮಪುರುಷೈಕವಚನೇ "ಉವಾಚ" ಇತಿ ರೂಪಮ್ ।

ಉವಾಚ ಊಚತುಃ ಊಚುಃ, ಉವಚಿಥ ಉವಕ್ಥ, ಊಚಥುಃ ಊಚ, ಉವಾಚ ಉವಚ, ಊಚಿವ ಊಚಿಮ ॥

★ ★ ★

ಶ್ರೀ ಮಧ್ವಕೀರ್ತಿಯ ವೈಭವ

**ಇತಿ ಬಹುವಿಧವಿಶ್ವಾಶ್ಚರ್ಯಚಿತ್ತಪ್ರವೃತ್ತೇ-**
**ರ್ಜಗತಿ ವಿತತಿಮಾಯ(ಪ)ನ್ನೂತನಾಽಪ್ಯಸ್ಯ ಕೀರ್ತಿಃ ।**
**ಕ್ಷಪಿತತತತಮಸ್ಕಾ ಭಾಸ್ಕರೀವ ಪ್ರಭಾಽಲಂ**
**ಸುಜನಕುಮುದವೃಂದಾನಂದದಾ ಚಂದ್ರಿಕೇವ ॥ 54 ॥**

**ಪದಚ್ಛೇದ—** ಇತಿ, ಬಹುವಿಧವಿಶ್ವಾಶ್ಚರ್ಯಚಿತ್ತಪ್ರವೃತ್ತೇಃ, ಜಗತಿ, ವಿತತಿಂ, ಅಯತ್, ನೂತನಾ, ಅಪಿ, ಅಸ್ಯ ಕೀರ್ತಿಃ, ಕ್ಷಪಿತತತತಮಸ್ಕಾ, ಭಾಸ್ಕರೀ, ಇವ, ಪ್ರಭಾ, ಅಲಂ, ಸುಜನಕುಮುದವೃಂದಾನಂದದಾ, ಚಂದ್ರಿಕಾ, ಇವ ।

**ಅನ್ವಯ—** ಇತಿ ಬಹುವಿಧವಿಶ್ವಾಶ್ಚರ್ಯಚಿತ್ತಪ್ರವೃತ್ತೇಃ ಅಸ್ಯ, ಕ್ಷಪಿತತತತಮಸ್ಕಾ ಸುಜನಕುಮುದವೃಂದಾನಂದದಾ ಕೀರ್ತಿಃ ನೂತನಾ ಅಪಿ ಭಾಸ್ಕರೀ ಪ್ರಭಾ ಇವ ಚಂದ್ರಿಕಾ ಇವ ಜಗತಿ ವಿತತಿಂ ಅಲಂ ಆಯತ್ ।

**ಅನ್ವಯಾರ್ಥ—**

**ಇತಿ** = ಈ ರೀತಿಯಾಗಿ

**ಬಹುವಿಧವಿಶ್ವಾಶ್ಚರ್ಯ ಚಿತ್ತಪ್ರವೃತ್ತೇಃ** = ಅನೇಕಪ್ರಕಾರವಾದ ಸಮಸ್ತಜನರಿಗೆ ಆಶ್ಚರ್ಯವನ್ನುಂಟುಮಾಡುವ ಮನಸ್ಸಿನ ವ್ಯಾಪಾರ ಉಳ್ಳ

**ಅಸ್ಯ** = ಈ ಪೂರ್ಣಪ್ರಜ್ಞರ

**ಕ್ಷಪಿತತತತಮಸ್ಕಾ—**

**ಕ್ಷಪಿತ** = ನಾಶಗೊಳಿಸಲ್ಪಟ್ಟ

**ತತ** = ವ್ಯಾಪ್ತವಾದ

**ತಮಸ್ಕಾ** = ಅಜ್ಞಾನವೆಂಬ ಕತ್ತಲೆಯುಳ್ಳ

**ಸುಜನಕುಮುದವೃಂದಾನಂದದಾ** = ಸಜ್ಜನರೆಂಬ ನೈದಿಲೆಹೂವುಗಳ ಸಮೂಹಕ್ಕೆ ಸಂತೋಷವನ್ನುಂಟು ಮಾಡುವ

**ಕೀರ್ತಿಃ** = ಯಶಸ್ಸು

**ನೂತನಾ ಅಪಿ** = ಹೊಸದಾಗಿದ್ದರೂ

**ಭಾಸ್ಕರೀ** = ಸೂರ್ಯನಿಗೆ ಸಂಬಂಧಪಟ್ಟ

**ಪ್ರಭಾ ಇವ** = ಕಾಂತಿಯಂತೆಯೂ

**ಚಂದ್ರಿಕಾ ಇವ** = ಬೆಳದಿಂಗಳಂತೆಯೂ

**ಜಗತಿ** = ಲೋಕದಲ್ಲಿ

**ವಿತತಿಂ** = ವ್ಯಾಪ್ತಿಯನ್ನು

**ಅಲಂ ಆಯತ್** = ಚೆನ್ನಾಗಿ ಹೊಂದಿತು.

**ತಾತ್ಪರ್ಯ—** ಸೂರ್ಯನ ಪ್ರಭೆಯು ದಟ್ಟವಾದ ಕತ್ತಲೆಯನ್ನು ನಿವಾರಿಸಿ ಪ್ರಪಂಚದಲ್ಲೆಲ್ಲಾ ಹರಡುತ್ತದೆ. ಚಂದ್ರನ ಬೆಳದಿಂಗಳೂ ನೈದಿಲೆಹೂವುಗಳನ್ನು ಅರಳಿಸಿ ಜಗತ್ತಿನ ಎಲ್ಲ ಕಡೆಯಲ್ಲಿಯೂ ವ್ಯಾಪಿಸುತ್ತದೆ. ಶ್ರೀ ಪೂರ್ಣಪ್ರಜ್ಞರು ಎಲ್ಲಾ ಜನರಿಗೂ ಆಶ್ಚರ್ಯಕರವಾದ ಕಾರ್ಯವನ್ನು ಮಾಡತಕ್ಕವರು. ಅವರ ಮನೋವ್ಯಾಪಾರವು ಹಾಗೆಯೇ ಅದ್ಭುತ-ವಾದುದು. ಅವರ ಕೀರ್ತಿಯು ನೂತನವಾದರೂ ಸಮಸ್ತ ಜನರ ಅಜ್ಞಾನವನ್ನು ನಿವಾರಿಸಿ ಸಜ್ಜನರಿಗೆ ಆನಂದ-ವನ್ನುಂಟುಮಾಡುತ್ತ ಪ್ರಪಂಚದಲ್ಲಿ ಹರಡಿತು. ಹೀಗೆ ಸೂರ್ಯಚಂದ್ರರಂತೆ ಶ್ರೀಪೂರ್ಣಪ್ರಜ್ಞರು ಅನಿಷ್ಟವನ್ನು ನಿವಾರಿಸಿ ಇಷ್ಟವನ್ನು ನೀಡುವ ಮಹಾಗುರುಗಳು ಎಂದು ಸಾತ್ವಿಕಜನರಿಗೆ ಮನವರಿಕೆಯಾಯಿತು ಎಂದು ಅಭಿಪ್ರಾಯ.

**ವಿಗ್ರಹ—**

**ಬಹುವಿಧವಿಶ್ವಾಶ್ಚರ್ಯಚಿತ್ತಪ್ರವೃತ್ತೇಃ—** ಬಹ್ವ್ಯಃ ವಿಧಾಃ ಯಸ್ಯಾಃ ಸಾ ಬಹುವಿಧಾಃ, ವಿಶ್ವಸ್ಯ ಆಶ್ಚರ್ಯಂ ಯಸ್ಯಾಃ ಸಾ ವಿಶ್ವಾಶ್ಚರ್ಯಾ, ಚಿತ್ತಸ್ಯ ಪ್ರವೃತ್ತಿಃ ಚಿತ್ತಪ್ರವೃತ್ತಿಃ, ಬಹುವಿಧಾ ವಿಶ್ವಾಶ್ಚರ್ಯಾ ಚಿತ್ತಪ್ರವೃತ್ತಿಃ ಯಸ್ಯ ಸಃ ಬಹುವಿಧವಿಶ್ವಾಶ್ಚರ್ಯಚಿತ್ತಪ್ರವೃತ್ತಿಃ, ತಸ್ಯ ಬಹುವಿಧವಿಶ್ವಾಶ್ಚರ್ಯಚಿತ್ತಪ್ರವೃತ್ತೇಃ ।

**ಕ್ಷಪಿತತತತಮಸ್ಕಾ—** ತತಂ ಚ ತಮಶ್ಚ ತತತಮಃ, ಕ್ಷಪಿತಂ ತತತಮಃ ಯಯಾ ಸಾ ಕ್ಷಪಿತತತತಮಸ್ಕಾ ।

**ಭಾಸ್ಕರೀ—** ಭಾಸ್ಕರಸ್ಯ ಇಯಂ ಭಾಸ್ಕರೀ ।

**ಸುಜನಕುಮುದವೃಂದಾನಂದದಾ—** ಸುಜನಾಃ ಕುಮುದಾನಿ ಇವ ಸುಜನಕುಮುದಾನಿ, ಸುಜನ-ಕುಮುದಾನಾಂ ವೃಂದಂ ಸುಜನಕುಮುದವೃಂದಂ, ಸುಜನಕುಮುದವೃಂದಸ್ಯ ಆನಂದಂ ದದಾತಿ ಇತಿ ಸುಜನಕುಮುದವೃಂದಾನಂದದಾ ।

**ಕ್ರಿಯಾಪದ— ಆಯತ್-** ಅಯ ಗತೌ ಇತಿ ಗತ್ಯರ್ಥಕಾತ್ ಅಯ ಧಾತೋಃ ಲಙ್ ಪರಸ್ಮೈಪದಿನಃ ಪ್ರ.ಪು.ಏ. ಆಪತ್ ಇತಿ ರೂಪಮ್ ।

ಆಯತ್ ಆಯತಾಂ ಆಯನ್, ಆಯಃ ಆಯತಂ ಆಯುತಂ, ಆಯಂ ಆಯಾವ ಆಯಾಮ ।

**ಆಪತ್-** ಆಪ್ಲೃ ವ್ಯಾಪ್ತೌ ಇತ್ಯಸ್ಮಾತ್ ಆಪ್ಲೃ ಧಾತೋಃ ಲುಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಆಪತ್ ಇತಿ ರೂಪಮ್ ।

| | | |
|---|---|---|
| ಆಪತ್ | ಆಪತಾಮ್ | ಆಪನ್ |
| ಆಪಃ | ಆಪತಮ್ | ಆಪತ |
| ಆಪಮ್ | ಆಪಾವ | ಆಪಾಮ |

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ*
*ಚತುರ್ಥಃ ಸರ್ಗಃ ಸಮಾಪ್ತಃ ।*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಪಂಚಮಃ ಸರ್ಗಃ

ವೇದಾಂತಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ

**ವೇದಾಂತವಿದ್ಯಾನಿಜರಾಜ್ಯಪಾಲನೇ ಸಂಕಲ್ಪ್ಯಮಾನೋ ಗುರುಣಾ ಗರೀಯಸಿ ।**
**ಅದಭ್ರಚೇತಾ ಅಭಿಷಿಚ್ಯತೇ ಪುರಾ ಸ ವಾರಿಭಿರ್ವಾರಿಜಪೂರಿತೈರಥ ॥ 1 ॥**

**ಪದಚ್ಛೇದ—** ವೇದಾಂತವಿದ್ಯಾನಿಜರಾಜ್ಯಪಾಲನೇ, ಸಂಕಲ್ಪ್ಯಮಾನಃ, ಗುರುಣಾ, ಗರೀಯಸಿ, ಅದಭ್ರಚೇತಾಃ, ಅಭಿಷಿಚ್ಯತೇ, ಪುರಾ, ಸಃ, ವಾರಿಭಿಃ, ವಾರಿಜಪೂರಿತೈಃ, ಅಥ,

**ಅನ್ವಯ—** ಅಥ ಗರೀಯಸಿ ವೇದಾಂತವಿದ್ಯಾನಿಜರಾಜ್ಯಪಾಲನೇ ಗುರುಣಾ ಸಂಕಲ್ಪ್ಯಮಾನಃ ಸಃ ಅದಭ್ರಚೇತಾಃ ವಾರಿಜಪೂರಿತೈಃ ವಾರಿಭಿಃ ಅಭಿಷಿಚ್ಯತೇ ಪುರಾ ।

**ಅನ್ವಯಾರ್ಥ—**

**ಅಥ** = ಕೆಲವು ಕಾಲ ಕಳೆದ ಮೇಲೆ

**ಗರೀಯಸಿ** = ಅತ್ಯುತ್ತಮವಾದ

**ವೇದಾಂತವಿದ್ಯಾನಿಜರಾಜ್ಯಪಾಲನೇ** = ವೇದಾಂತವಿದ್ಯೆಯೆಂಬ ಸ್ವಾಭಾವಿಕವಾದ ರಾಜ್ಯದ ಪಾಲನೆಯ ವಿಷಯದಲ್ಲಿ

**ಗುರುಣಾ** = ಗುರುಗಳಾದ ಅಚ್ಯುತಪ್ರೇಕ್ಷರಿಂದ

**ಸಂಕಲ್ಪ್ಯಮಾನಃ** = ಸಂಕಲ್ಪಮಾಡಲ್ಪಡುತ್ತಲಿರುವ

**ಸಃ ಅದಭ್ರಚೇತಾಃ** = ಆ ಶ್ರೀಪೂರ್ಣಪ್ರಜ್ಞಾಚಾರ್ಯರು

**ವಾರಿಜಪೂರಿತೈಃ** = ಶಂಖದಲ್ಲಿ ತುಂಬಿಸಲ್ಪಟ್ಟ

**ವಾರಿಭಿಃ ಅಭಿಷಿಚ್ಯತೇ ಪುರಾ** = ನೀರಿನಿಂದ ಅಭಿಷೇಕ ಮಾಡಲ್ಪಟ್ಟರು.

**ತಾತ್ಪರ್ಯ—** ಸಂನ್ಯಾಸವನ್ನು ಸ್ವೀಕರಿಸಿದ ಮೇಲೆ ಕೆಲವು ಕಾಲ ಮುಗಿಯಿತು. ವೇದಾಂತವಿದ್ಯೆಯೆಂಬ ಸಾಮ್ರಾಜ್ಯದ ಪಾಲನೆಯ ಕಾಲವು ಬಂತು. ವೇದಾಂತ ವಿದ್ಯೆಯೂ ಜ್ಞಾನವನ್ನು ನಿರ್ವಹಿಸುವ ಶಕ್ತಿಯು ಬಂದ ಮೇಲೆ ರಾಜ್ಯಪಾಲನೆಯಂತೆ ಬಹಳ ಕಷ್ಟವನ್ನು ಕೊಡುತ್ತದೆ. ಶಿಷ್ಯರೇ ಮೊದಲಾದವರಲ್ಲಿ ಸತ್ಸಂಪ್ರದಾಯವನ್ನು ಪ್ರವರ್ತನೆ ಮಾಡಿಕೊಡಿಸಿರಬೇಕು. ಪ್ರತಿಕೂಲರಾದ ವಾದಿಗಳನ್ನು ನಿರಾಕರಣೆ ಮಾಡಬೇಕು. ಇಷ್ಟು ಶಕ್ತಿಯು ಅವರಿಗೆ ಇರಬೇಕು. ಅದಕ್ಕೆ ಮೊದಲು ದೀಕ್ಷಾಸ್ವೀಕಾರವನ್ನು ಮಾಡಬೇಕು. ಅದಕ್ಕಾಗಿ ಶಂಖದಲ್ಲಿ ತುಂಬಿಸಿದ ನೀರುಗಳಿಂದ ಗುರುಸ್ಥಾನದಲ್ಲಿ ಕುಳ್ಳಿರಿಸಿ ಅವರಿಗೆ ಅಭಿಷೇಕ ಮಾಡಿದರು.

**ವಿಗ್ರಹ—**

**ವೇದಾಂತವಿದ್ಯಾನಿಜರಾಜ್ಯಪಾಲನೇ—** ವೇದಾನಾಂ ಅಂತಃ ಯಯಾ ಸಾ ವೇದಾಂತಾ, ವೇದಾಂತಾ ಚ ಸಾ ವಿದ್ಯಾ ಚ ವೇದಾಂತವಿದ್ಯಾ, ವೇದಾಂತವಿದ್ಯಾ ಏವ ನಿಜರಾಜ್ಯಂ ವೇದಾಂತವಿದ್ಯಾನಿಜರಾಜ್ಯಂ, ವೇದಾಂತವಿದ್ಯಾನಿಜರಾಜ್ಯಸ್ಯ ಪಾಲನಂ ವೇದಾಂತವಿದ್ಯಾನಿಜರಾಜ್ಯಪಾಲನಂ, ತಸ್ಮಿನ್ ವೇದಾಂತ ವಿದ್ಯಾನಿಜರಾಜ್ಯಪಾಲನೇ ।

**ಸಂಕಲ್ಪ್ಯಮಾನಃ—** ಸಂಕಲ್ಪ್ಯತೇ ಇತಿ ಸಂಕಲ್ಪ್ಯಮಾನಃ ।

**ಗರೀಯಸಿ—** ಅತ್ಯಂತಂ ಗುರುಃ ಗರೀಯಃ, ತಸ್ಮಿನ್ ಗರೀಯಸಿ ।

**ಅದಭ್ರಚೇತಾಃ—** ಅದಭ್ರಂ ಚೇತಃ ಯಸ್ಯ ಸಃ ಅದಭ್ರಚೇತಾಃ ।

**ವಾರಿಜಪೂರಿತೈಃ—** ವಾರಿಜೇ ಪೂರಿತಾನಿ ವಾರಿಜಪೂರಿತಾನಿ, ತೈಃ ವಾರಿಜಪೂರಿತೈಃ ।

**ಕ್ರಿಯಾಪದ—** ಅಭಿ ಇತ್ಯುಪಸರ್ಗಪೂರ್ವಕಾತ್ ಷಿಚಕ್ಷರಣೇ ಇತ್ಯಸ್ಮಾತ್ ಷಿಚ ಧಾತೋಃ ಪ್ರಥಮಪುರುಷೇ ಏಕವಚನೇ ''ಅಭಿಷಿಚ್ಯತೇ'' ಇತಿ ರೂಪಮ್ ।

| | | |
|---|---|---|
| ಅಭಿಷಿಚ್ಯತೇ | ಅಭಿಷಿಚ್ಯೇತೇ | ಅಭಿಷಿಚ್ಯಂತೇ, |
| ಅಭಿಷಿಚ್ಯಸೇ | ಅಭಿಷಿಚ್ಯೇಥೇ | ಅಭಿಷಿಚ್ಯಧ್ವೇ, |
| ಅಭಿಷಿಚ್ಯೇ | ಅಭಿಷಿಚ್ಯಾವಹೇ | ಅಭಿಷಿಚ್ಯಾಮಹೇ ॥ |

★ ★ ★

**ಆನಂದರೂಪಸ್ಯ ಪರಸ್ಯ ಪಾತ್ರಧೀರಾನಂದಸಂದಾಯಿಸುಶಾಸ್ತ್ರಕೃತ್ ಸ ಯತ್ ।**
**ಆನಂದತೀರ್ಥೇತಿಪದಂ ಗುರೂದಿತಂ ಬಭೂವ ತಸ್ಯಾತ್ಯನುರೂಪರೂಪಕಮ್ ॥ 2 ॥**

**ಪದಚ್ಛೇದ—** ಆನಂದರೂಪಸ್ಯ, ಪರಸ್ಯ, ಪಾತ್ರಧೀಃ, ಆನಂದಸಂದಾಯಿಸುಶಾಸ್ತ್ರಕೃತ್, ಸಃ, ಯತ್, ಆನಂದತೀರ್ಥೇತಿಪದಂ, ಗುರೂದಿತಂ, ಬಭೂವ, ತಸ್ಯ, ಅತ್ಯನುರೂಪರೂಪಕಂ ।

**ಅನ್ವಯ—** ಯತ್ ಸಃ ಆನಂದರೂಪಸ್ಯ ಪರಸ್ಯ ಪಾತ್ರಧೀಃ, ಆನಂದಸಂದಾಯಿಸುಶಾಸ್ತ್ರಕೃತ್, ಗುರೂದಿತಂ ಆನಂದತೀರ್ಥೇತಿಪದಂ ತಸ್ಯ ಅತ್ಯನುರೂಪರೂಪಕಂ ಬಭೂವ ।

**ಅನ್ವಯಾರ್ಥ—**

**ಯತ್** = ಯಾವ ಕಾರಣದಿಂದ

**ಸಃ** = ಆ ಪೂರ್ಣಪ್ರಜ್ಞರು

**ಆನಂದರೂಪಸ್ಯ** = ಆನಂದರೂಪಿಯಾಗಿರುವ

**ಪರಸ್ಯ** = ಪರಮಾತ್ಮನಿಗೆ

**ಪಾತ್ರಧೀಃ** = ಪಾತ್ರವಾದ ಬುದ್ಧಿಯುಳ್ಳವರೂ

**ಆನಂದಸಂದಾಯಿಸುಶಾಸ್ತ್ರಕೃತ್** = ಆನಂದವನ್ನು ಕೊಡುವ ಒಳ್ಳೆಯ ಶಾಸ್ತ್ರವನ್ನು ಬರೆದಿದ್ದರೋ (ಆ ಕಾರಣದಿಂದ)

**ಗುರೂದಿತಂ** = ಗುರುಗಳಿಂದ ಹೇಳಲ್ಪಟ್ಟ

**ಆನಂದತೀರ್ಥೇತಿಪದಂ** = ''ಆನಂದತೀರ್ಥ'' ಎಂಬ ಹೆಸರು

**ತಸ್ಯ** = ಆ ಪೂರ್ಣಪ್ರಜ್ಞರಿಗೆ

**ಅತ್ಯನುರೂಪರೂಪಕಂ** = ತುಂಬಾ ಅನುರೂಪವಾದ ಹೆಸರು

**ಬಭೂವ** = ಆಯಿತು.

**ತಾತ್ಪರ್ಯ—** ಆನಂದರೂಪಿಯಾಗಿರುವ ಪರಮಾತ್ಮನ ಸನ್ನಿಧಾನಕ್ಕೆ ಪಾತ್ರರಾದವರಿಗೂ, ಆನಂದವನ್ನು ಕೊಡುವ ಸಚ್ಛಾಸ್ತ್ರವನ್ನು ಬರೆದವರಿಗೆ ಗುರುಗಳಿಂದ ಹೇಳಲ್ಪಟ್ಟ ''ಆನಂದತೀರ್ಥ'' ಎಂಬ ಹೆಸರು ಅತ್ಯಂತ ಅನುರೂಪವಾಗಿತ್ತು.

**ವಿಗ್ರಹ—**

**ಆನಂದರೂಪಸ್ಯ—** ಆನಂದಃ ರೂಪಂ ಯಸ್ಯ ಸಃ ಆನಂದರೂಪಃ, ತಸ್ಯ ಆನಂದರೂಪಸ್ಯ ।

**ಆನಂದಸಂದಾಯಿಸುಶಾಸ್ತ್ರಕೃತ್—** ಆನಂದಂ ಸಂದಾತುಂ ಶೀಲಂ ಅಸ್ಯೇತಿ ಆನಂದಸಂದಾಯಿ, ಆನಂದಸಂದಾಯಿ ಚ ತತ್ ಸುಶಾಸ್ತ್ರಂ ಚ ಆನಂದಸಂದಾಯಿಸುಶಾಸ್ತ್ರಂ, ತತ್ ಕರೋತೀತಿ ಆನಂದಸಂದಾಯಿಸುಶಾಸ್ತ್ರಕೃತ್ ।

**ಅತ್ಯನುರೂಪರೂಪಕಂ—** ಅತ್ಯಂತಂ ಅನುರೂಪಂ ಅತ್ಯನುರೂಪಂ, ಅತ್ಯನುರೂಪಂ ರೂಪಕಂ ಯಸ್ಯ ತತ್ ಅತ್ಯನುರೂಪರೂಪಕಂ ।

**ಗರೂದಿತಂ—** ಗುರುಣಾ ಉದಿತಂ ಗುರೂದಿತಂ ।

**ಆನಂದತೀರ್ಥೇತಿಪದಂ—** ಆನಂದದಂ ತೀರ್ಥಂ ಯಸ್ಯ ಸಃ ಆನಂದತೀರ್ಥಃ, ಆನಂದತೀರ್ಥ ಇತಿ ಪದಂ ಆನಂದತೀರ್ಥೇತಿಪದಂ ।

**ಕ್ರಿಯಾಪದ—** ಬಭೂವ ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಲಿಟಿ ಪ್ರಥಮಪುರುಷೈಕವಚನೇ ''ಬಭೂವ'' ಇತಿ ರೂಪಮ್ ।

ಬಭೂವ ಬಭೂವತುಃ ಬಭೂವುಃ, ಬಭೂವಿಥ ಬಭೂವಥುಃ ಬಭೂವ, ಬಭೂವ ಬಭೂವಿವ ಬಭೂವಿಮ ॥

★ ★ ★

### ತಾರ್ಕಿಕರೊಂದಿಗೆ ವಾದಕೌಶಲ

## ಕದಾಚಿದತ್ರೋಪಯಯೌ ಯತಿಸ್ಸಖಾ ಗೋವಿಂದಬುದ್ಧೇರ್ಬಹುಶಿಷ್ಯಸಂವೃತಃ ।
## ಅಮುಷ್ಯ ಶಿಷ್ಯಾ ಅನುಮಾನಶಿಕ್ಷಿತಾಸ್ತದಾಽಜಿಗೀಷನ್ ಗುರುಬುದ್ಧಿಮುದ್ಧತಾಃ ॥ 3 ॥

**ಪದಚ್ಛೇದ—** ಕದಾಚಿತ್, ಅತ್ರ, ಉಪಯಯೌ, ಯತಿಃ, ಸಖಾ, ಗೋವಿಂದಬುದ್ಧೇಃ, ಬಹುಶಿಷ್ಯಸಂವೃತಃ, ಅಮುಷ್ಯ, ಶಿಷ್ಯಾಃ, ಅನುಮಾನಶಿಕ್ಷಿತಾಃ, ತದಾ, ಅಜಿಗೀಷನ್, ಗುರುಬುದ್ಧಿಂ, ಉದ್ಧತಾಃ ।

**ಅನ್ವಯ—** ಕದಾಚಿತ್ ಬಹುಶಿಷ್ಯಸಂವೃತಃ ಗೋವಿಂದಬುದ್ಧೇಃ ಸಖಾ ಯತಿಃ ಅತ್ರ ಉಪಯಯೌ । ತದಾ ಅನುಮಾನಶಿಕ್ಷಿತಾಃ ಉದ್ಧತಾಃ ಅಮುಷ್ಯ ಶಿಷ್ಯಾಃ ಗುರುಬುದ್ಧಿಂ ಅಜಿಗೀಷನ್ ।

**ಅನ್ವಯಾರ್ಥ—**

**ಕದಾಚಿತ್** = ಯಾವುದೋ ಒಂದು ದಿನದಲ್ಲಿ

**ಬಹುಶಿಷ್ಯಸಂವೃತಃ** = ಅನೇಕಮಂದಿ ಶಿಷ್ಯರಿಂದ ಸುತ್ತುವರಿಯಲ್ಪಟ್ಟ

**ಗೋವಿಂದಬುದ್ಧೇಃ** = ಅಚ್ಯುತಪ್ರೇಕ್ಷಾಚಾರ್ಯರ

**ಸಖಾ** = ಸ್ನೇಹಿತರಾದ

**ಯತಿಃ** = ಸನ್ಯಾಸಿಗಳು
**ಅತ್ರ** = ಉಡುಪಿಗೆ
**ಉಪಯಯೌ** = ಬಂದರು.
**ತದಾ ಅನುಮಾನಶಿಕ್ಷಿತಾಃ** = ಆಗ ತರ್ಕಶಾಸ್ತ್ರದಲ್ಲಿ ಶಿಕ್ಷಣವನ್ನು ಪಡೆದ
**ಉದ್ಧತಾಃ** = ಅಹಂಕಾರವುಳ್ಳ
**ಅಮುಷ್ಯ** = (ಅಚ್ಯುತಪ್ರೇಕ್ಷರ ಸ್ನೇಹಿತರಾದ) ಈ ಯತಿಗಳ
**ಶಿಷ್ಯಾಃ** = ಶಿಷ್ಯರು
**ಗುರುಬುದ್ಧಿಂ** = ಪೂರ್ಣಪ್ರಜ್ಞಾಚಾರ್ಯರನ್ನು
**ಅಜಿಗೀಷನ್** = ಜಯಿಸಬೇಕೆಂದು ಅಪೇಕ್ಷಿಸಿದರು.

**ತಾತ್ಪರ್ಯ—** ಒಂದಾನೊಂದು ದಿನ ಅಚ್ಯುತಪ್ರೇಕ್ಷಾಚಾರ್ಯರ ಸ್ನೇಹಿತರಾದ ಒಬ್ಬ ಯತಿಗಳು ಉಡುಪಿಗೆ ಬಂದರು. ಅವರು ಅನೇಕ ಶಿಷ್ಯರಿಂದ ಸುತ್ತುವರಿಯಲ್ಪಟ್ಟಿದ್ದರು. ಅವರ ಶಿಷ್ಯರುಗಳೆಲ್ಲರೂ ತರ್ಕಶಾಸ್ತ್ರದಲ್ಲಿ ವಿಶೇಷ ಪಾಂಡಿತ್ಯ ಪಡೆದವರು. ಪೂರ್ಣಪ್ರಜ್ಞಾಚಾರ್ಯರನ್ನು ಕೆಲವು ಉನ್ಮತ್ತರಾದ ಶಿಷ್ಯರು ಜಯಿಸಬೇಕೆಂದು ತೀರ್ಮಾನಿಸಿದರು.

ವಿಗ್ರಹ—

**ಗೋವಿಂದಬುದ್ಧೇಃ—** ಗೋವಿಂದೇ ಬುದ್ಧಿಃ ಯಸ್ಯ ಸಃ ಗೋವಿಂದಬುದ್ಧಿಃ, ತಸ್ಯ ಗೋವಿಂದಬುದ್ಧೇಃ ।
**ಬಹುಶಿಷ್ಯಸಂವೃತಃ—** ಬಹವಶ್ಚ ತೇ ಶಿಷ್ಯಾಶ್ಚ ಬಹುಶಿಷ್ಯಾಃ, ಬಹುಶಿಷ್ಯೈಃ ಸಂವೃತಃ ಬಹುಶಿಷ್ಯಸಂವೃತಃ ।
**ಅನುಮಾನಶಿಕ್ಷಿತಾಃ—** ಅನುಮಾನೇ ಶಿಕ್ಷಿತಾಃ ಅನುಮಾನಶಿಕ್ಷಿತಾಃ ।
**ಅಜಿಗೀಷನ್—** ಜೇತುಂ ಐಚ್ಛನ್ ಅಜಿಗೀಷನ್ ।
**ಗುರುಬುದ್ಧಿಂ—** ಗುರ್ವೀ ಬುದ್ಧಿಃ ಯಸ್ಯ ಸಃ ಗುರುಬದ್ಧಿಃ, ತಂ ಗುರುಬುದ್ಧಿಂ ।

**ಕ್ರಿಯಾಪದ— ಯಯೌ** ಯಾ ಪ್ರಾಪಣೇ ಇತ್ಯಸ್ಮಾತ್ ಪ್ರಾಪಣಾರ್ಥಕಾತ್ ಯಾ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಯಯೌ'' ಇತಿ ರೂಪಮ್ ।

ಯಯೌ ಯಯತುಃ ಯಯುಃ, ಯಯಿಥ ಯಯಾಥ ಯಯಥುಃ ಯಯ,
ಯಯೌ ಯಯಿವ ಯಯಿಮ ॥

**ಅಜಿಗೀಷನ್** - ಜಿ ಜಯೇ ಇತ್ಯಸ್ಮಾತ್ ಜಯಾರ್ಥಕಾತ್ ಲಙ್ ಪ್ರಥಮಪುರುಷೇ ಬಹುವಚನೇ ''ಅಜಿಗೀಷನ್'' ಇತಿ ರೂಪಮ್ ।

ಅಜಿಗೀಷತ್ ಅಜಿಗೀಷತಾಂ ಅಜಿಗೀಷನ್, ಅಜಿಗೀಷಃ ಅಜಿಗೀಷತಂ ಅಜಿಗೀಷತ,
ಅಜಿಗೀಷಂ ಅಜಿಗೀಷಾವ ಅಜಿಗೀಷಾಮ ॥

★ ★ ★

**ಕೇವಲಾನುಮಾನದ ಇತಿಮಿತಿ ತೋರಿಸಿದ ಆಚಾರ್ಯರು**

**ಭಿದಾ ಸುಸಾಧ್ಯೇತ್ಯನುಮಾನಮತ್ರ ತೈಃ ಪ್ರಾಯುಜ್ಯತಾಶು ಪ್ರತಿಪಕ್ಷಭೀಷಣಮ್ ।**
**ಅಖಂಡಯದ್ ವ್ಯಕ್ತಮಖಂಡಧೀರಿದಂ ಸ ಪಕ್ಷದಕ್ಷಃ ಫಣಿನಂ ವಿರಾಡಿವ ॥ 4 ॥**

**ಪದಚ್ಛೇದ—** ಭಿದಾ, ಸುಸಾಧ್ಯಾ, ಇತಿ, ಅನುಮಾನಂ, ಅತ್ರ, ತೈಃ, ಪ್ರಾಯುಜ್ಯತ, ಆಶು, ಪ್ರತಿಪಕ್ಷಭೀಷಣಂ, ಅಖಂಡಯತ್, ವ್ಯಕ್ತಂ, ಅಖಂಡಧೀಃ, ಇದಂ, ಸಃ, ಪಕ್ಷದಕ್ಷಃ, ಫಣಿನಂ, ವಿರಾಟ್, ಇವ ।

**ಅನ್ವಯ—** ಭಿದಾ ಸುಸಾಧ್ಯಾ ಇತಿ ಅತ್ರ ತೈಃ ಪ್ರತಿಪಕ್ಷಭೀಷಣಂ ಅನುಮಾನಂ ಆಶು ಪ್ರಾಯುಜ್ಯತ, ಪಕ್ಷದಕ್ಷಃ ಅಖಂಡಧೀಃ ಸಃ, ಫಣಿನಂ ವಿರಾಟ್ ಇವ ಇದಂ ವ್ಯಕ್ತಂ ಅಖಂಡಯತ್ ।

**ಅನ್ವಯಾರ್ಥ—**

**ಭಿದಾ** = ಭೇದವು

**ಸುಸಾಧ್ಯಾ** = ಸುಲಭವಾಗಿ ಸಾಧನೆ ಮಾಡಲಿಕ್ಕೆ ಸಾಧ್ಯವು.

**ಇತಿ** = ಎಂಬ ಅಭಿಪ್ರಾಯದಿಂದ

**ಅತ್ರ** = ಇಲ್ಲಿ

**ತೈಃ** = ಆ ಶಿಷ್ಯರಿಂದ

**ಪ್ರತಿಪಕ್ಷಭೀಷಣಂ** = ಪ್ರತಿಪಕ್ಷದವರಿಗೆ ಭಯಂಕರರಾದ ಆಚಾರ್ಯರನ್ನು ಕುರಿತು

**ಅನುಮಾನಂ** = ಅನುಮಾನವು

**ಆಶು ಪ್ರಾಯುಜ್ಯತ** = ಬೇಗನೆ ಪ್ರಯೋಗಿಸಲ್ಪಟ್ಟಿತು.

**ಪಕ್ಷದಕ್ಷಃ** = ತಮ್ಮ ಪಕ್ಷವನ್ನು ರಕ್ಷಿಸುವುದಕ್ಕೆ ಸಮರ್ಥವಾಗಿರುವ

**ಅಖಂಡಧೀಃ** = ಪೂರ್ಣಬುದ್ಧಿಯುಳ್ಳ

**ಸಃ** = ಆನಂದತೀರ್ಥರು

**ಫಣಿನಂ** = ಸರ್ಪವನ್ನು

**ವಿರಾಟ್ ಇವ** = ಪಕ್ಷಿಗಳಿಗೆ ರಾಜನಾದ ಗರುಡನು (ಹೇಗೆ ಸರ್ಪವನ್ನು ನಿಗ್ರಹಿಸುವನೋ ಹಾಗೆ)

**ಇದಂ** = ಈ ಅನುಮಾನವನ್ನು

**ವ್ಯಕ್ತಂ** = ಸ್ಪಷ್ಟವಾಗಿ

**ಅಖಂಡಯತ್** = ಖಂಡಿಸಿದರು.

**ತಾತ್ಪರ್ಯ—** ಆ ಶಿಷ್ಯರು ''ವಿಮತೌ ಜೀವಪರಮಾತ್ಮಾನೌ, ಭಿನ್ನೌ, ನಿಯಮ್ಯನಿಯಾಮಕತ್ವಾತ್, ರಾಜಭೃತ್ಯ ರಾಜವತ್'' ಎಂಬ ಅನುಮಾನವನ್ನು ಪ್ರಯೋಗಿಸಿದರು. ''ರಾಜನೂ ಸೇವಕನೂ ಭಿನ್ನರಲ್ಲವೇ ? ಒಂದೇ ಶಕ್ತಿಯುಳ್ಳವರು ಆಗಲು ಸಾಧ್ಯವೇ? ಭಿನ್ನರೇ ಆಗಿರುವರಲ್ಲವೇ? ಹೀಗೆ ಜೀವನು ಪರಮಾತ್ಮನಿಗಿಂತ ಭಿನ್ನನೆಂದು ಸಿದ್ಧವಾಗುವುದಿಲ್ಲವೇ?'' ಹೀಗೆ ಭಯಂಕರವಾದ ಅನುಮಾನಗಳನ್ನು ಪ್ರತಿಪಕ್ಷದವರಾದ ಆ ಶಿಷ್ಯರು ಹೇಳಿದರು. ಈ ಅನುಮಾನವನ್ನು ಪೂರ್ಣ-ಪ್ರಜ್ಞಾಚಾರ್ಯರು ಚೆನ್ನಾಗಿ ಎಲ್ಲರಿಗೂ ತಿಳಿಯುವಂತೆ ಖಂಡಿಸಿದರು. ಸರ್ಪವು ಎಷ್ಟು ಸಮರ್ಥವಾಗಿದ್ದರೂ ಅದನ್ನು ಪಕ್ಷಿಗಳಿಗೆ ರಾಜನಾದ ಗರುಡನು ಕೊಲ್ಲುವುದಿಲ್ಲವೇ? ಹಾಗೆ ಪೂರ್ಣಪ್ರಜ್ಞರು ಪ್ರಬಲವಾದ ಅನುಮಾನವನ್ನು ಖಂಡಿಸಿದರು.

**ವಿಗ್ರಹ—**

**ಪಕ್ಷದಕ್ಷಃ—** ಪಕ್ಷಾಭ್ಯಾಂ ದಕ್ಷಃ ಪಕ್ಷದಕ್ಷಃ ।

**ಫಣಿನಂ—** ಫಣಾಃ ಅಸ್ಯ ಅಸ್ತೀತಿ ಫಣೀ, ತಂ ಫಣಿನಂ ।

**ವಿರಾಟ್—** ವಿನಾಂ ರಾಟ್ ವಿರಾಟ್ ।

**ಕ್ರಿಯಾಪದ—** ಪ್ರ ಇತ್ಯುಪಸರ್ಗಪೂರ್ವಕಾತ್ ಯುಜಿರ್ ಯೋಗೇ ಇತ್ಯಸ್ಮಾತ್ ಲಟಿ ಪ್ರಥಮಪುರುಷೇ ಏಕವಚನೇ ''ಪ್ರಾಯುಜ್ಯತ'' ಇತಿ ರೂಪಮ್ ।

| | | |
|---|---|---|
| ಪ್ರಾಯುಜ್ಯತ | ಪ್ರಾಯುಜ್ಯೇತಾಂ | ಪ್ರಾಯುಜ್ಯಂತ, |
| ಪ್ರಾಯುಜ್ಯಥಾಃ | ಪ್ರಾಯುಜ್ಯೇಥಾಂ | ಪ್ರಾಯುಜ್ಯಧ್ವಂ , |
| ಪ್ರಾಯುಜ್ಯೇ | ಪ್ರಾಯುಜ್ಯಾವಹಿ | ಪ್ರಾಯುಜ್ಯಾಮಹಿ ॥ |

**ಅಖಂಡಯತ್**- ಖಡಿ ಭೇದನೇ ಇತಿ ಭೇದನಾರ್ಥಕಾತ್ ಖಡಿಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅಖಂಡಯತ್'' ಇತಿ ರೂಪಮ್ ।

| | | |
|---|---|---|
| ಅಖಂಡಯತ್ | ಅಖಂಡಯತಾಂ | ಅಖಂಡಯನ್, |
| ಅಖಂಡಯಃ | ಅಖಂಡಯತಂ | ಅಖಂಡಯತ, |
| ಅಖಂಡಯಂ | ಅಖಂಡಯಾವ | ಅಖಂಡಯಾಮ ॥ |

★ ★ ★

ಪ್ರಪಂಚಮಿಥ್ಯಾತ್ವಾನುಮಾನವನ್ನು ಖಂಡಿಸಿದ ಆಚಾರ್ಯರು

**ಅಥಾಪಿ ಮಿಥ್ಯಾ ವಿಮತಂ ಮತತ್ವತೋ ವಿವಾದನಿರ್ಮುಕ್ತವದಿತ್ಯವಾದಿ ತೈಃ ।**
**ಅನೇನ ಸತ್ಯಂ ವಿಮತಂ ಮತತ್ವತೋ ಯಥಾ ಘಟಾದೀತ್ಯನುಮಾ ನ್ಯಗದ್ಯತ ॥ 5 ॥**

**ಪದಚ್ಛೇದ—** ಅಥ, ಅಪಿ, ಮಿಥ್ಯಾ, ವಿಮತಂ, ಮತತ್ವತಃ, ವಿವಾದನಿರ್ಮುಕ್ತವತ್, ಇತಿ, ಅವಾದಿ, ತೈಃ, ಅನೇನ, ಸತ್ಯಂ, ವಿಮತಂ, ಮತತ್ವತಃ, ಯಥಾ, ಘಟಾದಿ, ಇತಿ, ಅನುಮಾ, ನ್ಯಗದ್ಯತ ।

**ಅನ್ವಯ—** ಅಥ, ಅಪಿ ವಿಮತಂ ಮಿಥ್ಯಾ ಮತತ್ವತಃ ವಿವಾದನಿರ್ಮುಕ್ತವತ್ ಇತಿ ತೈಃ ಅನುಮಾ ಅವಾದಿ ವಿಮತಂ ಸತ್ಯಂ ಮತತ್ವತಃ ಯಥಾ ಘಟಾದಿ ಇತಿ ಅನೇನ ಅನುಮಾ ನ್ಯಗದ್ಯತ ।

**ಅನ್ವಯಾರ್ಥ—**

**ಅಥಾಪಿ** = ಮೇಲ್ಕಂಡ ಅನುಮಾನದಿಂದ ಭೇದವು ಸಿದ್ಧವಾದರೂ
**ವಿಮತಂ** = ಸತ್ಯವೋ, ಸುಳ್ಳೋ ಎಂಬ ವಿವಾದಕ್ಕೆ ಸಂಬಂಧಿಸಿದ ಆಕಾಶ ಮುಂತಾದ ಪ್ರಪಂಚವು
**ಮಿಥ್ಯಾ** = ಸುಳ್ಳಾಗಿರುತ್ತದೆ,
**ಮತತ್ವತಃ** = ಕಣ್ಣಿಗೆ ಕಾಣುತ್ತಿರುವುದರಿಂದ
**ವಿವಾದನಿರ್ಮುಕ್ತವತ್** = ವಿವಾದರಹಿತವಾದ ಶುಕ್ತಿರಜತ ಮುಂತಾದವುಗಳು ಹೇಗೆ ಸುಳ್ಳಲ್ಲವೋ ಹಾಗೆ
**ಇತಿ** = ಎಂದು
**ತೈಃ** = ಆ ಶಿಷ್ಯರಿಂದ
**ಅನುಮಾ** = ಅನುಮಾನವು
**ಅವಾದಿ** = ಹೇಳಲ್ಪಟ್ಟಿತು.
**ವಿಮತಂ** = ವಿವಾದವಿಷಯವಾದ ಈ ಜಗತ್ತು
**ಸತ್ಯಂ** = ನಿಜವಾದುದು.
**ಮತತ್ವತಃ** = ಕಾಣುತ್ತಿರುವುದರಿಂದ
**ಯಥಾ ಘಟಾದಿ** = ಹೇಗೆ ಮಡಿಕೆ ಮೊದಲಾದುದೋ (ಹಾಗೆ)
**ಇತಿ** = ಎಂದು

**ಅನೇನ** = ಆನಂದತೀರ್ಥರಿಂದ

**ಅನುಮಾ** = ಅನುಮಾನವು

**ನ್ಯಗದ್ಯತ** = ಹೇಳಲ್ಪಟ್ಟಿತು.

**ತಾತ್ಪರ್ಯ—** ಮೇಲ್ಕಂಡ ಅನುಮಾನದಿಂದ ಭೇದವು ಸಿದ್ಧವಾದರೂ ಕೂಡ, ತಾರ್ಕಿಕರಾದ ಆ ಶಿಷ್ಯರು ಸತ್ಯವೋ ಸುಳ್ಳೋ ಎಂಬ ವಿವಾದಕ್ಕೆ ಸಂಬಂಧಿಸಿದ ಆಕಾಶ ಮುಂತಾದ ಪ್ರಪಂಚವು ಜ್ಞಾನಕ್ಕೆ ವಿಷಯವಾಗಿದೆ. ಯಾವುದು ಜ್ಞಾನಕ್ಕೆ ವಿಷಯವಾಗಿದೆಯೋ ಅದೆಲ್ಲವೂ ಸುಳ್ಳಾಗಿರುತ್ತದೆ. ಆದ್ದರಿಂದ ಆಕಾಶ ಮುಂತಾದ ಎಲ್ಲ ವಸ್ತುಗಳೂ ಸುಳ್ಳು ಎಂಬ ಅನುಮಾನವನ್ನು ಪ್ರಯೋಗಿಸಿದರು. ಸತ್ಯವೋ ಸುಳ್ಳೋ ಎಂದು ವಿವಾದವಿಷಯವಾದ ಈ ಪ್ರಪಂಚವು ಮುತ್ತಿನ ಚಿಪ್ಪಿನಲ್ಲಿ ಕಾಣಿಸುವ ಬೆಳ್ಳಿಯಂತೆ ಕಣ್ಣಿಗೆ ಕಾಣಿಸುವುದರಿಂದ ಸುಳ್ಳಾಗಿದೆ ಎಂದು ಸಾಧಿಸಿದರು. ಅದಕ್ಕೆ ಶ್ರೀಪೂರ್ಣಪ್ರಜ್ಞಾಚಾರ್ಯರು ಉತ್ತರವನ್ನು ಕೊಟ್ಟಿರುವರು. ವಿವಾದಕ್ಕೆ ಸಂಬಂಧಿಸಿದ ಆಕಾಶ ಮುಂತಾದವುಗಳು ಜ್ಞಾನಕ್ಕೆ ವಿಷಯವಾಗಿರುವುದರಿಂದ ಆಕಾಶ ಮುಂತಾದ ವಸ್ತುಗಳು ಸತ್ಯವಾಗಿವೆ. ಇದಕ್ಕೆ ದೃಷ್ಟಾಂತ ಘಟ ಮುಂತಾದ ವಸ್ತುಗಳು ಜ್ಞಾನಕ್ಕೆ ವಿಷಯವಾಗಿವೆ. ಆ ಘಟ ಮುಂತಾದ ವಸ್ತುಗಳು ಜ್ಞಾನಕ್ಕೆ ವಿಷಯವಾಗಿರುವವು. ಅವುಗಳು ಸತ್ಯವಾದಂತೆ ಆಕಾಶ ಮುಂತಾದ ವಸ್ತುಗಳೂ ಸತ್ಯವಾಗುವುದಕ್ಕೆ ಏನು ಅಡ್ಡಿ ? ಇದು ಪೂರ್ಣಪ್ರಜ್ಞಾಚಾರ್ಯರ ವಾದ.

**ಕ್ರಿಯಾಪದ— ಅವಾದಿ-** ವದವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ವದಧಾತೋಃ ಕರ್ಮಣಿ ಲುಙ್ ಪ್ರಥಮಪುರುಷೇ ಏಕವಚನೇ ಅವಾದಿ ಇತಿ ರೂಪಮ್ ।

ಅವಾದಿ ಅವಾದಿಷಾತಾಂ ಅವಾದಿಷತ, ಅವಾದಿಷ್ಠಾಃ ಅವಾದಿಷಾಥಾಂ ಅವಾದಿಧ್ವಂ, ಅವಾದಿ
ಅವಾದಿಷ್ವಹಿ ಅವಾದಿಷ್ಮಹಿ ॥

ನ್ಯಗದ್ಯತ - ನಿ ಇತ್ಯುಪಸರ್ಗಪೂರ್ವಕಾತ್ ಗದ ವ್ಯಕ್ತಾಯಾಂ ವಾಚಿ ಇತಿ ಧಾತೋಃ ಕರ್ಮಣಿ ಲಙ್ ಆತ್ಮನೇ ಪದಿನಃ, ಪ್ರಥಮಪುರುಷೇ ಏಕವಚನೇ ನ್ಯಗದ್ಯತ ಇತಿ ರೂಪಂ । ಅಗದ್ಯತ, ಅಗದ್ಯೇತಾಂ, ಅಗದ್ಯಂತ ಇತ್ಯಾದಿ.

★ ★ ★

### ಶರಣಾಗತರಾದ ತಾರ್ಕಿಕರು

**ಹೇತೋರತಿ ವ್ಯಾಪ್ತಿರವಾದಿ ತೈರ್ಯದಾ**
**ಸಕೌತುಕೈಸ್ತೂರ್ಣಮಸಾವವಿಸ್ಮಯಃ ।**
**ನ ಶುಕ್ತಿರೂಪ್ಯಾದಿ ಮತಂ ಯದನ್ಯಥಾ ಮತಂ**
**ತದಿತ್ಯಾದಿ ವದನ್ ಜಿಗಾಯ ತಾನ್ ॥ 6 ॥**

**ಪದಚ್ಛೇದ—** ಹೇತೋಃ, ಅತಿವ್ಯಾಪ್ತಿಃ, ಅವಾದಿ, ತೈಃ, ಯದಾ, ಸಕೌತುಕೈಃ, ತೂರ್ಣಂ, ಅಸೌ, ಅವಿಸ್ಮಯಃ, ನ, ಶುಕ್ತಿರೂಪ್ಯಾದಿ, ಮತಂ, ಯತ್, ಅನ್ಯಥಾ, ಮತಂ, ತತ್, ಇತ್ಯಾದಿ, ವದನ್, ಜಿಗಾಯ, ತಾನ್ ।

**ಅನ್ವಯ—** ಯದಾ ಸಕೌತುಕೈಃ ತೈಃ ತೂರ್ಣಂ ಹೇತೋಃ ಅತಿವ್ಯಾಪ್ತಿಃ ಅವಾದಿ, (ತದಾ) ಅಸೌ ಅವಿಸ್ಮಯಃ ಶುಕ್ತಿರೂಪ್ಯಾದಿ ನ ಮತಂ, ಯತ್ ತತ್ ಅನ್ಯಥಾ ಮತಂ ಇತ್ಯಾದಿ ವದನ್ ತಾನ್ ಜಿಗಾಯ ।

**ಅನ್ವಯಾರ್ಥ—**

**ಯದಾ** = ಯಾವಾಗ

**ಸಕೌತುಕೈಃ** = ತುಂಬಾ ಕುತೂಹಲದಿಂದ ಯುಕ್ತವಾಗಿರುವ

**ತೈಃ** = ಆ ಶಿಷ್ಯರಿಂದ

ತೂರ್ಣಂ = ಬಹು ಬೇಗನೆ
ಹೇತೋಃ = ಮತತ್ವ (ದೃಶ್ಯತ್ವ) ಎಂದು ಆಚಾರ್ಯರು ಹೇಳಿದ ಹೇತುವಿಗೆ
ಅತಿವ್ಯಾಪ್ತಿಃ = ಅತಿವ್ಯಾಪ್ತಿ ಎಂಬ ದೋಷವು
ಅವಾದಿ = ಹೇಳಲ್ಪಟ್ಟಿತ್ತೋ
ತದಾ = ಆಗ
ಅಸೌ = ಶ್ರೀಮಧ್ವಾಚಾರ್ಯರು
ಅವಿಸ್ಮಯಃ = ಯಾವ ಆಶ್ಚರ್ಯವೂ ಇಲ್ಲದವರಾಗಿ
ಶುಕ್ತಿರೂಪ್ಯಾದಿ = ಚಿಪ್ಪಿನಲ್ಲಿ ಬೆಳ್ಳಿಯೆಂದು ತೋರುತ್ತಿರುವ ಬೆಳ್ಳಿಯು
ನ ಮತಂ = ಯಥಾರ್ಥಜ್ಞಾನಕ್ಕೆ ವಿಷಯವಲ್ಲ.
ಯತ್ = ಏಕೆಂದರೆ
ತತ್ = ಅದು
ಅನ್ಯಥಾಮತಂ = ವಿಪರೀತವಾದ ಜ್ಞಾನಕ್ಕೆ ವಿಷಯವು
ಇತ್ಯಾದಿ = ಇದೇ ಮೊದಲಾದ ಯುಕ್ತಿಯನ್ನು
ವದನ್ = ಹೇಳುತ್ತಾ
ತಾನ್ = ಅವರನ್ನು
ಜಿಗಾಯ = ಗೆದ್ದರು.

ತಾತ್ಪರ್ಯ— ಪೂರ್ಣಪ್ರಜ್ಞರ ಮಾತುಗಳನ್ನು ಕೇಳಿದ ಆ ಶಿಷ್ಯರು ಕುತೂಹಲದಿಂದ ನಿಮ್ಮ ಅನುಮಾನಕ್ಕೆ ಶುಕ್ತಿರಜತದಲ್ಲಿ ವ್ಯಭಿಚಾರವು ಬಂತು ಎಂದರು. ಆಗ ಪೂರ್ಣಪ್ರಜ್ಞಾಚಾರ್ಯರು ಶುಕ್ತಿಯಲ್ಲಿ ತೋರುವ ರಜತವು ಯಥಾರ್ಥಜ್ಞಾನಕ್ಕೆ ವಿಷಯವಲ್ಲ. ಯಥಾರ್ಥಜ್ಞಾನವಿಷಯತ್ವವೇ ಇಲ್ಲಿ ಹೇತುವಾಗಿದೆ. ಅದಕ್ಕೆ ಅತಿವ್ಯಾಪ್ತಿಯಿಲ್ಲ. ಶುಕ್ತಿರಜತವು ಅನ್ಯಥಾಜ್ಞಾನಕ್ಕೆ ವಿಷಯವಾಗಿದೆ. ಆದ್ದರಿಂದ ಯಥಾರ್ಥಜ್ಞಾನವಿಷಯತ್ವ ಎಂಬ ಹೇತುವಿಗೆ ಅತಿ-ವ್ಯಾಪ್ತಿಯಿಲ್ಲ ಎಂದು ಹೇಳಿದರು.

ವಿಗ್ರಹ—

ಸಕೌತುಕೈಃ— ಕೌತುಕೇನ ಸಹ ವರ್ತಂತೇ ಇತಿ ಸಕೌತುಕಾಃ, ತೈಃ ಸಕೌತುಕೈಃ ।
ಅವಿಸ್ಮಯಃ— ನ ವಿದ್ಯತೇ ವಿಸ್ಮಯಃ ಯಸ್ಯ ಸಃ ಅವಿಸ್ಮಯಃ ।

ಕ್ರಿಯಾಪದ— ಅವಾದಿ- ವದ ವ್ಯಕ್ತಾಯಾಂ ವಾಚಿ ಇತ್ಯಸ್ಮಾತ್ ವ್ಯಕ್ತವಾಗರ್ಥಕಾತ್ ವದಧಾತೋಃ ಕರ್ಮಣಿ ಲುಙ್ ಪ್ರಥಮಪುರುಷೇ ಏಕವಚನೇ ಅವಾದಿ ಇತಿ ರೂಪಮ್ ।

ಅವಾದಿ ಅವಾದಿಷಾತಾಂ ಅವಾದಿಷತ, ಅವಾದಿಷ್ಠಾಃ ಅವಾದಿಷಾಥಾಂ ಅವಾದಿಢ್ವಂ,
ಅವಾದಿ ಅವಾದಿಷ್ವಹಿ ಅವಾದಿಷ್ಮಹಿ ॥

ಜಿಗಾಮ- ಜೀ, ಜಯೇ ಇತಿ ಜಯಾರ್ಥಕಾತ್ ಜಿ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ಜಿಗಾಯ ಇತಿ ರೂಪಮ್ ।

ಜಿಗಾಯ ಜಿಗ್ಯತುಃ ಜಿಗ್ಯುಃ, ಜಗಿಥ ಜಿಗ್ಯಥುಃ ಜಿಗ್ಯ, ಜಿಗಾಯ ಜಿಗಯ ಜಿಗ್ಯಿವ ಜಿಗ್ಯಿಮ ॥

★ ★ ★

ಆನಂದತೀರ್ಥರು ಅನುಮಾನತೀರ್ಥರೂ ಆದರು

**ತತ್ತ್ವೇಽಪ್ಯತತ್ತ್ವೇ ವಿಮತೇಽನುಮಾಂ ವದಂಸ್ತದಪ್ರತಿಷ್ಠಾಂ ಪ್ರತಿಪಾದುಕಃ ಸ್ವಯಮ್ ।**
**ವಿಜಿತ್ಯ ಸರ್ವಾನ್ ವಿದುಷಃ ಸಭಾಸ್ವಸೌ ಜಗಾಮ ನಾಮ್ನಾಽಪ್ಯನುಮಾನತೀರ್ಥತಾಮ್ ॥ 7 ॥**

**ಪದಚ್ಛೇದ—** ತತ್ತ್ವೇ, ಅಪಿ, ಅತತ್ತ್ವೇ, ವಿಮತೇ, ಅನುಮಾಂ, ವದನ್, ತದಪ್ರತಿಷ್ಠಾಂ, ಪ್ರತಿಪಾದುಕಃ, ಸ್ವಯಂ, ವಿಜಿತ್ಯ, ಸರ್ವಾನ್, ವಿದುಷಃ, ಸಭಾಸು, ಅಸೌ, ಜಗಾಮ, ನಾಮ್ನಾ, ಅಪಿ, ಅನುಮಾನತೀರ್ಥತಾಂ ।

**ಅನ್ವಯ—** ತದಪ್ರತಿಷ್ಠಾಂ ಪ್ರತಿಪಾದುಕಃ ಅಸೌ ಸಭಾಸು ವಿಮತೇ ತತ್ತ್ವೇ ಅತತ್ತ್ವೇ ಅಪಿ ಸ್ವಯಂ ಅನುಮಾಂ ವದನ್ ಸರ್ವಾನ್ ವಿದುಷಃ ವಿಜಿತ್ಯ ನಾಮ್ನಾ ಅಪಿ ಅನುಮಾನತೀರ್ಥತಾಂ ಜಗಾಮ ।

**ಅನ್ವಯಾರ್ಥ—**

**ತದಪ್ರತಿಷ್ಠಾಂ** = ಆ ಅನುಮಾನದ ಅಪ್ರಾಮಾಣ್ಯವನ್ನು
**ಪ್ರತಿಪಾದುಕಃ** = ಪ್ರತಿಪಾದಿಸುವ ಸ್ವಭಾವವುಳ್ಳ
**ಅಸೌ** = ಈ ಪೂರ್ಣಪ್ರಜ್ಞಾಚಾರ್ಯರು
**ಸಭಾಸು** = ಸಭೆಗಳಲ್ಲಿ
**ವಿಮತೇ** = ವಿವಾದಕ್ಕೆ ವಿಷಯವಾಗಿರುವ ವಸ್ತುವಿನಲ್ಲಿ
**ತತ್ತ್ವೇ** = ಯಥಾರ್ಥವಿಷಯದಲ್ಲಿಯೂ
**ಅತತ್ತ್ವೇ ಅಪಿ** = ಅಯಥಾರ್ಥವಿಷಯದಲ್ಲಿಯೂ
**ಸ್ವಯಂ** = ತಾನೇ
**ಅನುಮಾಂ** = ಅನುಮಾನಪ್ರಮಾಣವನ್ನು
**ವದನ್** = ಹೇಳುತ್ತಾ,
**ಸರ್ವಾನ್** = ಎಲ್ಲಾ
**ವಿದುಷಃ** = ವಿದ್ವಾಂಸರಾದ ವಾದಿಗಳನ್ನು
**ವಿಜಿತ್ಯ** = ಜಯಿಸಿ
**ನಾಮ್ನಾ ಅಪಿ** = ಹೆಸರಿನಿಂದಲೂ ಕೂಡ
**ಅನುಮಾನತೀರ್ಥತಾಂ** = ಅನುಮಾನತೀರ್ಥ ಎಂಬ ಹೆಸರನ್ನು
**ಜಗಾಮ** = ಹೊಂದಿದರು.

**ತಾತ್ಪರ್ಯ—** ವಿವಾದಕ್ಕೆ ವಿಷಯವಾಗಿರುವ ವಸ್ತುವಿನಲ್ಲಿ ಯಾವ ರೂಪವು ಇದೆಯೋ ಆ ರೂಪವು ಇಲ್ಲದಿರುವುದಕ್ಕೂ ಅನುಮಾನ ಪ್ರಮಾಣವನ್ನು ಹೇಳುತ್ತಾ ಪ್ರತ್ಯಕ್ಷ ಪ್ರಮಾಣಗಳ ಸಹಾಯವಿಲ್ಲದಿರುವ ಅನುಮಾನವು ಪ್ರಮಾಣವಲ್ಲವೆಂದೂ ಆ ಅನುಮಾನವು ಸ್ವತಂತ್ರವಾಗಿ ಪ್ರಮಾಣವಲ್ಲ ಎಂದೂ ಆ ಅನುಮಾನಕ್ಕೆ ಸ್ವತಃ ಪ್ರಾಮಾಣ್ಯವಿಲ್ಲದ್ದರಿಂದ ಅನುಮಾನಪ್ರಮಾಣದಿಂದ ಯಾವ ವಸ್ತುವನ್ನೂ ನಿರ್ಣಯಿಸಲು ಸಾಧ್ಯವಿಲ್ಲವೆಂದೂ ತಾನೇ ಪ್ರತಿಪಾದನೇ ಮಾಡುತ್ತ ಎಲ್ಲಾ ಸಭೆಗಳಲ್ಲಿಯೂ ಎಲ್ಲಾ ಪಂಡಿತರುಗಳನ್ನೂ ಜಯಿಸಿ ಅನುಮಾನತೀರ್ಥ ಎಂಬ ಹೆಸರಿನಿಂದಲೂ ಪ್ರಸಿದ್ಧರಾದರು.

ವಿಗ್ರಹ—

**ತಸ್ಯ ಅಪ್ರತಿಷ್ಠಾ—** ತದಪ್ರತಿಷ್ಠಾ ತಾಂ

**ಅನುಮಾನಪ್ರಯೋಗೇ ತೀರ್ಥ: (ಗುರು:)—** ಅನುಮಾನತೀರ್ಥಃ ತಸ್ಯಭಾವಃ ಅನುಮಾನತೀರ್ಥತಾ ತಾಂ.

**ಕ್ರಿಯಾಪದ—** ಜಗಾಮ ಜಗ್ಮತು ಜಗ್ಮುಃ, ಜಗಮಿಥ ಜಗಂಥ ಜಗ್ಮಥುಃ, ಜಗ್ಮ, ಜಗಾಮ ಜಗಮ ಜಗ್ಮಿವ ಜಗ್ಮಿಮ, ಗಮ್ಲ್ೃ ಗತೌ ಲಿಟ್ ।

★ ★ ★

**ಉಡುಪಿಗೆ ಆಗಮಿಸಿದ ವಾದಿಸಿಂಹ ಬುದ್ಧಿಸಾಗರರು**

**ಸಮಸ್ತವಾದೀಂದ್ರಗಜಪ್ರಭಂಗದಶ್ಚರನ್ನವನ್ಯಾಂ ಪ್ರತಿಪಕ್ಷಕಾಂಕ್ಷಯಾ ।**
**ವೇದದ್ವಿಷಾಂ ಯಃ ಪ್ರಥಮಃ ಸಮಾಯಯೌ ಸ**
**ವಾದಿಸಿಂಹೋಽತ್ರ ಸಬುದ್ಧಿಸಾಗರಃ ॥ 8 ॥**

**ಪದಚ್ಛೇದ—** ಸಮಸ್ತವಾದೀಂದ್ರಗಜಪ್ರಭಂಗದಃ, ಚರನ್, ಅವನ್ಯಾಂ, ಪ್ರತಿಪಕ್ಷಕಾಂಕ್ಷಯಾ, ವೇದದ್ವಿಷಾಂ, ಯಃ, ಪ್ರಥಮಃ, ಸಮಾಯಯೌ, ಸಃ, ವಾದಿಸಿಂಹಃ, ಅತ್ರ, ಸಬುದ್ಧಿಸಾಗರಃ ।

**ಅನ್ವಯ—** ಸಮಸ್ತವಾದೀಂದ್ರಗಜಪ್ರಭಂಗದಃ ಅವನ್ಯಾಂ ಪ್ರತಿಪಕ್ಷಕಾಂಕ್ಷಯಾ ಚರನ್, ವೇದದ್ವಿಷಾಂ ಯಃ ಪ್ರಥಮಃ ಸಃ ವಾದಿಸಿಂಹಃ, ಸಬುದ್ಧಿಸಾಗರಃ ಅತ್ರ ಸಮಾಯಯೌ ।

**ಅನ್ವಯಾರ್ಥ—**

**ಸಮಸ್ತವಾದೀಂದ್ರಗಜಪ್ರಭಂಗದಃ** = ಎಲ್ಲಾ ವಾದಿಶ್ರೇಷ್ಠರೆಂಬ ಆನೆಗಳಿಗೆ ಪರಾಜಯವನ್ನುಂಟುಮಾಡು-ತ್ತಿದ್ದವನೂ

**ಅವನ್ಯಾಂ** = ಭೂಮಿಯಲ್ಲಿ

**ಪ್ರತಿಪಕ್ಷಕಾಂಕ್ಷಯಾ** = ನನಗೆ ಪ್ರತಿವಾದಿಯು ಎಲ್ಲಿರುವನು ಎಂದು ಹೇಳುತ್ತಾ ಪ್ರತಿವಾದಿಯನ್ನು ಹುಡುಕುತ್ತಿರುವವನಾಗಿ

**ಚರನ್** = ಸಂಚರಿಸುತ್ತಿದ್ದ

**ವೇದದ್ವಿಷಾಂ** = ವೇದವು ಪ್ರಮಾಣವಲ್ಲವೆಂದು ಸಾಧಿಸುವ ಬೌದ್ಧರಲ್ಲಿ

**ಯಃ** = ಯಾವನು

**ಪ್ರಥಮಃ** = ಮೊದಲನೆಯವನೋ

**ಸಃ ವಾದಿಸಿಂಹಃ** = ಆ ವಾದಿಸಿಂಹನೆಂಬ ವಾದಿಯು

**ಸಬುದ್ಧಿಸಾಗರಃ** = ಬುದ್ಧಿಸಾಗರನೆಂಬ ತನ್ನ ಅನುಯಾಯಿಯಿಂದ ಸಹಿತನಾಗಿ

**ಅತ್ರ** = ಉಡುಪಿಗೆ

**ಸಮಾಯಯೌ** = ಬಂದನು.

**ತಾತ್ಪರ್ಯ—** ವೇದದ್ವೇಷಿಗಳಾದ ಬೌದ್ಧರಲ್ಲಿ ಅಗ್ರಗಣ್ಯನಾದ ವಾದಿಸಿಂಹನೆಂಬ ವಾದಿಯು ವಾದಿಶ್ರೇಷ್ಠರು-ಗಳೆಂಬ ಆನೆಗಳನ್ನು ಜಯಿಸಿ ಭೂಮಿಯಲ್ಲಿ ತನಗೆ ಪ್ರತಿವಾದಿಯೇ ಇಲ್ಲವೆಂದು ಹೇಳುತ್ತಾ ತಿರುಗುತ್ತಿದ್ದನು. ಆ ವಾದಿಸಿಂಹ ಎಂಬ ಬೌದ್ಧನು ಬುದ್ಧಿಸಾಗರನ ಸಹಿತವಾಗಿ ಉಡುಪಿಗೆ ಬಂದನು.

ವಿಗ್ರಹ—

**ಸಮಸ್ತವಾದೀಂದ್ರಗಜಪ್ರಭಂಗದಃ—** ವಾದೀನಾಂ ಇಂದ್ರಾಃ ವಾದೀಂದ್ರಾಃ, ಸಮಸ್ತಾಶ್ಚ ತೇ ವಾದೀಂದ್ರಾಶ್ಚ ಸಮಸ್ತವಾದೀಂದ್ರಾಃ, ಸಮಸ್ತವಾದೀಂದ್ರಾ ಏವ ಗಜಾಃ ಸಮಸ್ತವಾದೀಂದ್ರಗಜಾಃ, ಸಮಸ್ತ-ವಾದೀಂದ್ರಗಜಾನಾಂ ಪ್ರಭಂಗಃ, ಸಮಸ್ತವಾದೀಂದ್ರಗಜಪ್ರಭಂಗಃ, ಸಮಸ್ತವಾದೀಂದ್ರಗಜಪ್ರಭಂಗಂ ದದಾತಿ ಇತಿ ಸಮಸ್ತವಾದೀಂದ್ರಗಜಪ್ರಭಂಗದಃ ।

**ಚರನ್—** ಚರತಿ ಇತಿ ಚರನ್ ।

**ಪ್ರತಿಪಕ್ಷಕಾಂಕ್ಷಯಾ—** ಪ್ರತಿಪಕ್ಷಸ್ಯ ಕಾಂಕ್ಷಾ ಪ್ರತಿಪಕ್ಷಕಾಂಕ್ಷಾ, ತಯಾ ಪ್ರತಿಪಕ್ಷಕಾಂಕ್ಷಯಾ ।

**ವೇದದ್ವಿಷಾಂ—** ವೇದಾನ್ ದ್ವಿಷತಿ ಇತಿ ವೇದದ್ವಿಷಃ, ತೇಷಾಂ ವೇದದ್ವಿಷಾಂ ।

**ಸಬುದ್ಧಿಸಾಗರಃ—** ಬುದ್ಧ್ಯಾ ಸಾಗರಃ ಇವ ಬುದ್ಧಿಸಾಗರಃ, ಬುದ್ಧಿಸಾಗರೇಣ ಸಹ ವರ್ತತೇ ಇತಿ ಸಬುದ್ಧಿಸಾಗರಃ ।

**ಕ್ರಿಯಾಪದ—** **ಸಮಾಯಯೌ-** ಸಂ ಆಙ್ ಇತ್ಯುಪಸರ್ಗದ್ವಯಪೂರ್ವಕಾತ್ ಯಾ ಪ್ರಾಪಣೇ ಇತ್ಯಸ್ಮಾತ್ ಯಾಧಾತೋಃ ಲಿಟಿ ಪ್ರಥಮಪುರುಷೈಕವಚನೇ ''ಸಮಾಯಯೌ'' ಇತಿ ರೂಪಮ್ ।

| | | |
|---|---|---|
| ಸಮಾಯಯೌ | ಸಮಾಯಯತುಃ | ಸಮಾಯಯುಃ, |
| ಸಮಾಯಯಿಥ, ಸಮಾಯಯಾಥ | ಸಮಾಯಯಥುಃ, | ಸಮಾಯಯ |
| ಸಮಾಯಯೌ | ಸಮಾಯಯಿವ | ಸಮಾಯಯಿಮ ॥ |

★ ★ ★

### ಪೂರ್ಣಪ್ರಜ್ಞರನ್ನು ಕರೆಸಿದ ಅಚ್ಯುತಪ್ರೇಕ್ಷರು

**ತಸ್ಯೋರುದುರ್ಗರ್ವವತೋ ಜಿಗೀಷಯಾ**
**ನಿಶಾತಮಾದತ್ತ ಮುಕುಂದಧೀರ್ದ್ರುತಮ್ ।**
**ಸ್ವಶಿಷ್ಯಹಸ್ತೇನ ಮತಾಂತರೇಷುಧೇಃ**
**ಸುಪಕ್ಷದಕ್ಷಂ ಸುಖತೀರ್ಥಮಾರ್ಗಣಮ್ ॥ 9 ॥**

**ಪದಚ್ಛೇದ—** ತಸ್ಯ, ಉರುದುರ್ಗರ್ವವತಃ, ಜಿಗೀಷಯಾ, ನಿಶಾತಂ, ಆದತ್ತ, ಮುಕುಂದಧೀಃ, ದ್ರುತಂ, ಸ್ವಶಿಷ್ಯಹಸ್ತೇನ, ಮತಾಂತರೇಷುಧೇಃ, ಸುಪಕ್ಷದಕ್ಷಂ ಸುಖತೀರ್ಥಮಾರ್ಗಣಂ ।

**ಅನ್ವಯ—** ಮುಕುಂದಧೀಃ ಉರುದುರ್ಗರ್ವವತಃ ತಸ್ಯ ಜಿಗೀಷಯಾ ನಿಶಾತಂ ಸುಪಕ್ಷದಕ್ಷಂ ಸುಖ-ತೀರ್ಥಮಾರ್ಗಣಂ ಮತಾಂತರೇಷುಧೇಃ ಸ್ವಶಿಷ್ಯಹಸ್ತೇನ ದ್ರುತಂ ಆದತ್ತ ।

**ಅನ್ವಯಾರ್ಥ—**

**ಮುಕುಂದಧೀಃ** = ಅಚ್ಯುತಪ್ರೇಕ್ಷಚಾರ್ಯರು

**ಉರುದುರ್ಗರ್ವವತಃ** = ಅತ್ಯಧಿಕವಾದ ದುರ್ಗರ್ವದಿಂದ ಯುಕ್ತನಾಗಿರುವ

**ತಸ್ಯ** = ಆ ವಾದಿಸಿಂಹನನ್ನು

**ಜಿಗೀಷಯಾ** = ಜಯಿಸಬೇಕೆಂಬ ಆಸೆಯಿಂದ

**ನಿಶಾತಂ** = ಅತ್ಯಂತ ತೀಕ್ಷ್ಣವಾಗಿರುವ

**ಸುಪಕ್ಷದಕ್ಷಂ** = ಒಳ್ಳೆಯ ರೆಕ್ಕೆಗಳಿಂದ ಶತ್ರುವನ್ನು ನಿಗ್ರಹಿಸಲು ಸಮರ್ಥನಾಗಿರುವ

**ಸುಖತೀರ್ಥಮಾರ್ಗಣಂ** = ಆನಂದತೀರ್ಥರೆಂಬ ಬಾಣವನ್ನು
**ಮತಾಂತರೇಷುಧೇಃ** = ಬೇರೊಂದು ಮಠ ಎಂಬ ಬತ್ತಳಿಕೆಯಿಂದ
**ಸ್ವಶಿಷ್ಯಹಸ್ತೇನ** = ತನ್ನ ಶಿಷ್ಯನ ಕೈಯಿಂದ
**ದ್ರುತಂ** = ಜಾಗ್ರತೆಯಾಗಿ
**ಆದತ್ತ** = ಸ್ವೀಕರಿಸಿದರು.

**ತಾತ್ಪರ್ಯ—** ಅಚ್ಯುತಪ್ರೇಕ್ಷಾಚಾರ್ಯರು ವಾದಿಸಿಂಹನನ್ನು ನೋಡಿದರು. ಅವನು ಅಧಿಕವಾದ ದುರ್ಗರ್ವದಿಂದ ಯುಕ್ತನಾಗಿರುವನು. ಅವನನ್ನು ಜಯಿಸುವ ವಿಷಯದಲ್ಲಿ ಬಹಳ ಜಾಗ್ರತೆಯಿಂದ ಇರಬೇಕು ಎಂದು ತೀರ್ಮಾನಿಸಿದರು. ಆಗ ಪೂರ್ಣಪ್ರಜ್ಞಾಚಾರ್ಯರು ಉಡುಪಿಯಲ್ಲಿ ಇರಲಿಲ್ಲ. ಸಮೀಪದಲ್ಲಿದ್ದ ಬೇರೆ ಮಠದಲ್ಲಿದ್ದರು. ಅಲ್ಲಿ ತಮ್ಮ ಶಿಷ್ಯನೊಬ್ಬನನ್ನು ಕಳುಹಿಸಿ ಅವರನ್ನು ಕರೆಯಿಸಿದರು. ಶ್ರೀ ನಾರಾಯಣಾಚಾರ್ಯರು ಹೀಗೆ ವಿವರಿಸುತ್ತಾರೆ - 'ವಾದಿಗಳನ್ನು ಎದುರಿಸಲು ಶ್ರೀ ಅಚ್ಯುತಪ್ರೇಕ್ಷಾಚಾರ್ಯರು ಬೇರೊಂದು ಮಠವೆಂಬ ತಮ್ಮ ಬತ್ತಳಿಕೆಯಲ್ಲಿ ಅತಿತೀಕ್ಷ್ಣವಾದ ಶ್ರೀ ಆನಂದತೀರ್ಥರೆಂಬ ಬಾಣವನ್ನು ಸ್ವಶಿಷ್ಯನಿಂದ ಸ್ವೀಕರಿಸಿದರು.

**ವಿಗ್ರಹ—**

**ಉರುದುರ್ಗರ್ವವತಃ—** ಉರುಶ್ಚಾಸೌ ದುರ್ಗರ್ವಶ್ಚ ಉರುದುರ್ಗರ್ವಃ, ಉರುದುರ್ಗರ್ವಃ ಅಸ್ಯ ಅಸ್ತಿ ಇತಿ ಉರುದುರ್ಗರ್ವವಾನ್, ತಸ್ಯ ಉರುದುರ್ಗರ್ವವತಃ ।

**ಜಿಗೀಷಯಾ—** ಜೇತುಂ ಇಚ್ಛಾ ಜಿಗೀಷಾ, ತಯಾ ಜಿಗೀಷಯಾ ।

**ಮುಕುಂದಧೀಃ—** ಮುಕುಂದೇ ಧೀಃ ಯಸ್ಯ ಸಃ ಮುಕುಂದಧೀಃ ।

**ಸ್ವಶಿಷ್ಯಹಸ್ತೇನ—** ಸ್ವಸ್ಯ ಶಿಷ್ಯಃ ಸ್ವಶಿಷ್ಯಃ, ಸ್ವಶಿಷ್ಯ ಏವ ಹಸ್ತಃ ಸ್ವಶಿಷ್ಯಹಸ್ತಃ, ತೇನ ಸ್ವಶಿಷ್ಯಹಸ್ತೇನ ।

**ಮತಾಂತರೇಷುಧೇ—** ಅನ್ಯೋ ಮಠಃ ಮಠಾಂತರಃ, ಇಷವಃ ಧೀಯತೇ ಅಸ್ಮಿನ್ ಇತಿ ಇಷುಧೇ, ಮಠಾಂತರಂ ಏವ ಇಷುಧಿಃ ಮಠಾಂತರೇಷುಧಿಃ, ತಸ್ಮಾತ್ ಮಠಾಂತರೇಷುಧೇಃ ।

**ಸುಖತೀರ್ಥಮಾರ್ಗಣಂ—** ಸುಖತೀರ್ಥಃ ಏವ ಮಾರ್ಗಣಃ ಸುಖತೀರ್ಥಮಾರ್ಗಣಃ, ತಂ ಸುಖತೀರ್ಥಮಾರ್ಗಣಂ ।

**ಕ್ರಿಯಾಪದ—** ಆದತ್ತ- ದದ-ದಾನೇ ಇತಿ ಧಾತೋಃ ಆತ್ಮನೇ ಪದಿನಃ ಲಙ್ ಪ್ರಥಮಪುರುಷೇ ಏಕವಚನೇ ಆದತ್ತ ಇತಿ ರೂಪಂ ।

ಆದತ್ತ ಆದದಾತಾಂ ಆದದತ, ಆದತ್ಥಾಃ ಆದದಾಥಾಂ ಆದದ್‌ಧ್ವಂ, ಆದದಿ ಆದದ್ವಹಿ ಆದದ್ಮಹಿ

★ ★ ★

ಪೂರ್ಣಪ್ರಜ್ಞರ ಆಗಮನ ವೈಭವ

**ಜೈತ್ರಂ ಪ್ರಜಿಜ್ಞಾಸು ಕುತೂಹಲಾಕುಲಂ**
**ನೃಣಾಂ ಕುಲಂ ಪ್ರತ್ವರಿತಂ ನಿಶಾಮಯನ್ ।**
**ಅವಂದತೋಪೇತ್ಯ ಗುರುಂ ಗರಿಷ್ಠಧೀಃ**
**ಸ ರೂಪ್ಯಪೀಠಾಯತನೋತ್ತಮಸ್ಥಿತಮ್ ॥ 10 ॥**

**ಪದಚ್ಛೇದ—** ಜೈತ್ರಂ, ಪ್ರಜಿಜ್ಞಾಸು, ಕುತೂಹಲಾಕುಲಂ, ನೃಣಾಂ, ಕುಲಂ, ಪ್ರತ್ವರಿತಂ, ನಿಶಾಮಯನ್, ಅವಂದತ, ಉಪೇತ್ಯ, ಗುರುಂ, ಗರಿಷ್ಠಧೀಃ, ಸಃ, ರೂಪ್ಯಪೀಠಾಯತನೋತ್ತಮಸ್ಥಿತಂ ।

**ಅನ್ವಯ—** ಗರಿಷ್ಠಧೀಃ ಸಃ ಜೈತ್ರಂ ಪ್ರಜಿಜ್ಞಾಸು ಕುತೂಹಲಾಕುಲಂ ಪ್ರತ್ವರಿತಂ ನೃಣಾಂ ಕುಲಂ ನಿಶಾಮಯನ್ ರೂಪ್ಯಪೀಠಾಯ- ತನೋತ್ತಮಸ್ಥಿತಂ ಗುರುಂ ಉಪೇತ್ಯ ಅವಂದತ ।

**ಅನ್ವಯಾರ್ಥ—**

**ಜೈತ್ರಂ** = ಜಯಶಾಲಿಯನ್ನು
**ಪ್ರಜಿಜ್ಞಾಸು** = ತಿಳಿಯಬೇಕು ಎಂಬ ಆಸೆಯಿಂದ ಯುಕ್ತರಾಗಿರುವ
**ಕುತೂಹಲಾಕುಲಂ** = ಕುತೂಹಲದಿಂದ ವ್ಯಾಕುಲರಾಗಿರುವ
**ಪ್ರತ್ವರಿತಂ** = ಅತಿ ವೇಗದಿಂದ ಫಲಿತಾಂಶವನ್ನು ನಿರೀಕ್ಷಿಸುತ್ತಿರುವ
**ನೃಣಾಂ ಕುಲಂ** = ಮನುಷ್ಯರ ಸಮೂಹವನ್ನು
**ನಿಶಾಮಯನ್** = ನೋಡುತ್ತಿರುವವರಾಗಿ
**ಗರಿಷ್ಠಧೀಃ ಸಃ** = ಶ್ರೇಷ್ಠವಾದ ಬುದ್ಧಿಯುಳ್ಳ ಆ ಪೂರ್ಣಪ್ರಜ್ಞಾಚಾರ್ಯರು
**ರೂಪ್ಯಪೀಠಾಯತನೋತ್ತಮಸ್ಥಿತಂ** = ಉಡುಪಿಯ ಶ್ರೇಷ್ಠವಾದ ಮಠದಲ್ಲಿ ಇರುವ
**ಗುರುಂ** = ಗುರುಗಳಾದ ಅಚ್ಯುತಪ್ರೇಕ್ಷರನ್ನು
**ಉಪೇತ್ಯ ಅವಂದತ** = ಸಮೀಪಿಸಿ ನಮಸ್ಕರಿಸಿದರು.

**ತಾತ್ಪರ್ಯ—**ಪೂರ್ಣಪ್ರಜ್ಞಾಚಾರ್ಯರು ಅತಿ ವೇಗದಿಂದ ಬರುತ್ತಿದ್ದಾರೆ. ಹಾದಿಯುದ್ದಕ್ಕೂ ವಾದಿಸಿಂಹನ ಪಕ್ಷದವರು ವಾದಿಸಿಂಹನ ಪಾಂಡಿತ್ಯವನ್ನು ಹೊಗಳುತ್ತಾ ಪೂರ್ಣಪ್ರಜ್ಞಾಚಾರ್ಯರ ಪಕ್ಷದವರು ಪೂರ್ಣಪ್ರಜ್ಞಾಚಾರ್ಯರನ್ನು ಹೊಗಳುತ್ತಾ ಬಂದರು. ಜನರಿಗೆ ಏರ್ಪಟ್ಟ ಕೋಲಾಹಲವನ್ನು ನೋಡುತ್ತಾ ಕೊನೆಗೆ ಉಡುಪಿಯಲ್ಲಿರುವ ಶ್ರೇಷ್ಠವಾದ ಮಠಕ್ಕೆ ಬಂದರು. ಅಲ್ಲಿ ವಾಸಿಸುತ್ತಿರುವ ಅಚ್ಯುತಪ್ರೇಕ್ಷಚಾರ್ಯರ ಬಳಿಗೆ ಬಂದರು. ಅಲ್ಲಿಗೆ ಬಂದು ಅಚ್ಯುತ-ಪ್ರೇಕ್ಷಾಚಾರ್ಯರನ್ನು ನಮಸ್ಕರಿಸಿದರು.

**ವಿಗ್ರಹ—**

**ಜೈತ್ರಂ—** ಜಯಶೀಲಃ ಜೈತ್ರಃ, ತಂ ಜೈತ್ರಂ ।
**ಪ್ರಜಿಜ್ಞಾಸು—** ಪ್ರಕರ್ಷೇಣ ಜ್ಞಾತುಂ ಇಚ್ಛಃ ಅಸ್ಯ ಅಸ್ತಿ ಇತಿ ಪ್ರಜಿಜ್ಞಾಸು ।
**ಕುತೂಹಲಾಕುಲಂ—** ಕುತೂಹಲೇನ ಆಕುಲಂ, ತತ್ ಕೂತೂಹಲಾಕುಲಂ ।
**ಪ್ರತ್ವರಿತಂ—** ಪ್ರಕರ್ಷೇಣ ತ್ವರಿತಂ, ತತ್ ಪ್ರತ್ವರಿತಂ ।
**ಗರಿಷ್ಠಧೀಃ—** ಅತ್ಯಂತಂ ಗುರ್ವೀ ಗರಿಷ್ಠಾ, ಗರಿಷ್ಠಾ ಧೀಃ ಯಸ್ಯ ಸಃ ಗರಿಷ್ಠಧೀಃ ।
**ರೂಪ್ಯಪೀಠಾಯತನೋತ್ತಮಸ್ಥಿತಂ—** ರೂಪ್ಯಪೀಠೇ ಆಯತನೋತ್ತಮಂ, ರೂಪ್ಯಪೀಠಾಯತನೋತ್ತಮಂ, ರೂಪ್ಯಪೀಠಾಯತನೋತ್ತಮೇ ಸ್ಥಿತಃ ರೂಪ್ಯಪೀಠಾಯತನೋತ್ತಮಸ್ಥಿತಃ, ತಂ ರೂಪ್ಯಪೀಠಾ-ಯತನೋತ್ತಮಸ್ಥಿತಂ ।

**ಕ್ರಿಯಾಪದ— ಅವಂದತ-** ವದಿ ಅಭಿವಾದನಸ್ತುತ್ಯೋಃ ಇತಿ ಅಭಿವಾದನಸ್ತುತ್ಯರ್ಥಕಾತ್ ಲಙ್ ಪ್ರಥಮಪುರುಷೇ ಏಕವಚನೇ 'ಅವಂದತ' ಇತಿ ರೂಪಮ್।

ಅವಂದತ ಅವಂದೇತಾಂ ಅವಂದಂತ, ಅವಂದಥಾಃ ಅವಂದೇಥಾಂ ಅವಂದಧ್ವಂ, ಅವಂದೇ ಅವಂದಾವಹಿ ಅವಂದಾಮಹಿ ॥

★ ★ ★

**ಪರಾಭವಗೊಂಡ ವಾದಿಸಿಂಹ**

**ಸ ವಾದಿಸಿಂಹಸ್ಯ ಗಿರಂ ಗರೀಯಸೀಂ**
**ಅಖಂಡಯತ್ ಪಂಡಿತಮಂಡಲಾಂತರೇ ।**
**ತೀಕ್ಷ್ಣೇನ ವಾಕ್ಯೇನ ಮಿತೇನ ವೇಗಿನಾ**
**ಗದಾಂ ಶರೇಣೇವ ವಿಶಾರದೋ ಮುಹುಃ ॥ 11 ॥**

**ಪದಚ್ಛೇದ—** ಸಃ, ವಾದಿಸಿಂಹಸ್ಯ, ಗಿರಂ, ಗರೀಯಸೀಂ, ಅಖಂಡಯತ್, ಪಂಡಿತಮಂಡಲಾಂತರೇ, ತೀಕ್ಷ್ಣೇನ, ವಾಕ್ಯೇನ, ಮಿತೇನ, ವೇಗಿನಾ, ಗದಾಂ, ಶರೇಣ, ಇವ, ವಿಶಾರದಃ, ಮುಹುಃ ।

**ಅನ್ವಯ—** ವಿಶಾರದಃ ಸಃ, ವಾದಿಸಿಂಹಸ್ಯ ಗರೀಯಸೀಂ ಗಿರಂ, ತೀಕ್ಷ್ಣೇನ ಮಿತೇನ ವೇಗಿನಾ ವಾಕ್ಯೇನ, ಶರೇಣ ಗದಾಂ ಇವ ಪಂಡಿತಮಂಡಲಾಂತರೇ ಮುಹುಃ ಅಖಂಡಯತ್ ।

**ಅನ್ವಯಾರ್ಥ—**

**ವಿಶಾರದಃ ಸಃ** = ಪ್ರತಿವಾದಿಯ ನಿರಾಕರಣದಲ್ಲಿ ನಿಪುಣರಾದ ಆ ಪೂರ್ಣಪ್ರಜ್ಞಾಚಾರ್ಯರು
**ವಾದಿಸಿಂಹಸ್ಯ** = ವಾದಿಸಿಂಹನ
**ಗರೀಯಸೀಂ** = ಪ್ರಬಲವಾದ
**ಗಿರಂ** = ಮಾತನ್ನು
**ತೀಕ್ಷ್ಣೇನ** = ಪ್ರತಿವಾದಿಯಿಂದ ಸಹಿಸಲಿಕ್ಕೆ ಅಶಕ್ಯವಾಗಿರುವ, ಹರಿತವಾಗಿರುವ
**ಮಿತೇನ** = ಅಲ್ಪಪ್ರಮಾಣದ
**ವೇಗಿನಾ** = ವಾದಿಯ ಮಾತಿನ ಅನಂತರದಲ್ಲಿ ಅವಕಾಶವಿಲ್ಲದಂತೆ ಅತಿ ವೇಗದಿಂದ ಹೇಳಿರುವ
**ವಾಕ್ಯೇನ** = ವಾಕ್ಯದಿಂದ, ಪ್ರತ್ಯುತ್ತರದಿಂದ
**ಶರೇಣ ಗದಾಂ ಇವ** = ಬಾಣದಿಂದ ಗದೆಯನ್ನು ಎಂಬಂತೆ
**ಪಂಡಿತಮಂಡಲಾಂತರೇ** = ಪಂಡಿತ ಸಮೂಹದ ಮಧ್ಯದಲ್ಲಿ
**ಮುಹುಃ** = ಬಾರಿಬಾರಿಗೂ
**ಅಖಂಡಯತ್** = ಖಂಡಿಸಿದರು.

**ತಾತ್ಪರ್ಯ—** ವಾದಿಸಿಂಹನಿಗೂ ಪೂರ್ಣಪ್ರಜ್ಞಾಚಾರ್ಯರಿಗೂ ವಾಗ್ಯುದ್ಧವು ಆರಂಭವಾಯಿತು. ಅವನು ಶ್ರೇಷ್ಠವಾದ ಯುಕ್ತಿಗಳನ್ನು ಹೇಳಿದನು. ಪೂರ್ಣಪ್ರಜ್ಞಾಚಾರ್ಯರೋ ಇನ್ನೊಬ್ಬನಿಂದ ಸಹಿಸಲು ಅಶಕ್ಯವಾದ ಯುಕ್ತಿಗಳನ್ನು ಹೇಳಿದರು. ಅವರ ಮಾತುಗಳನ್ನು ಅಲ್ಲಿ ಪ್ರತಿವಾದಿಯು ಹೇಳಿದ ಕೂಡಲೇ ವಿಳಂಬವಿಲ್ಲದೆ ಹೇಳುತ್ತಿದ್ದರು. ಗದಾಯುದ್ಧವನ್ನು ಬಾಣದಿಂದ ತುಂಡುಮಾಡಿದಂತೆ ವಾದಿಸಂಹನ ಯತ್ನಗಳನ್ನು ಪಂಡಿತರಸಮೂಹದ ಮಧ್ಯದಲ್ಲಿ ಖಂಡಿಸಿದರು.

**ಕ್ರಿಯಾಪದ— ಅಖಂಡಯತ್**- ಖಡಿ ಭೇದನೇ ಇತ್ಯಸ್ಮಾತ್ ಭೇದನಾರ್ಥಕಾತ್ ಖಡಿಧಾತೋಃ ಲಙ್ ಪರಸ್ಮೈ-ಪದಿನಃ ''ಅಖಂಡಯತ್'' ಇತಿ ರೂಪಮ್ ।

| | | |
|---|---|---|
| ಅಖಂಡಯತ್ | ಅಖಂಡಯತಾಂ | ಅಖಂಡಯನ್, |
| ಅಖಂಡಯಃ | ಅಖಂಡಯತಂ | ಅಖಂಡಯತ, |
| ಅಖಂಡಯಂ | ಅಖಂಡಯಾವ | ಅಖಂಡಯಾಮ ॥ |

★ ★ ★

ಮುಂದುವರೆದ ವಾದವೈಖರಿ

**ಅಸಾವಸೂಯನ್ ದ್ವಿನವಪ್ರಕಾರತೋ ವ್ಯಚೀಕ್ಲೃಪತ್ ಕಂಚಿದಥಾರ್ಥಮುಚ್ಚಕ್ಕೈಃ ।**
**ಜಗದ್ವಿಜೇತುಶ್ಚ ಜಯೇ ಸಸಂಶಯಸ್ತಾವಜ್ಜನೋಽಜಾಯತ ಪೂರ್ಣಚೇತಸಃ ॥ 12 ॥**

**ಪದಚ್ಛೇದ—** ಅಸೌ, ಅಸೂಯನ್, ದ್ವಿನವಪ್ರಕಾರತಃ, ವ್ಯಚೀಕ್ಲೃಪತ್, ಕಂಚಿತ್, ಅಥ, ಅರ್ಥಂ, ಉಚ್ಚಕ್ಕೈಃ, ಜಗದ್ವಿಜೇತುಃ, ಚ, ಜಯೇ, ಸಸಂಶಯಃ, ತಾವಜ್ಜನಃ, ಅಜಾಯತ, ಪೂರ್ಣಚೇತಸಃ ।

**ಅನ್ವಯ—** ಅಥ ಅಸೂಯನ್ ಅಸೌ, ಕಂಚಿತ್ ಅರ್ಥಂ ಉಚ್ಚಕ್ಕೈಃ ದ್ವಿನವಪ್ರಕಾರತಃ ವ್ಯಚೀಕ್ಲೃಪತ್, ತಾವತ್ ಜನಃ ಜಗದ್ವಿಜೇತುಃ ಪೂರ್ಣಚೇತಸಃ ಜಯೇ ಚ ಸಸಂಶಯಃ ಅಜಾಯತ ।

**ಅನ್ವಯಾರ್ಥ—**

**ಅಥ** = ಅನಂತರದಲ್ಲಿ
**ಅಸೂಯನ್ ಅಸೌ** = ಹೊಟ್ಟೆಕಿಚ್ಚಿನಿಂದ ಯುಕ್ತನಾಗಿರುವ ಈ ವಾದಿಸಿಂಹನು
**ಕಂಚಿತ್** = ಯಾವುದೋ ಒಂದು
**ಅರ್ಥಂ** = ಅರ್ಥವನ್ನು
**ಉಚ್ಚಕ್ಕೈಃ** = ಗಟ್ಟಿಯಾದ ಧ್ವನಿಯಿಂದ
**ದ್ವಿನವಪ್ರಕಾರತಃ** = ಹದಿನೆಂಟು ಪ್ರಕಾರಗಳಿಂದ
**ವ್ಯಚೀಕ್ಲೃಪತ್** = ಹೀಗೋ ಹಾಗೋ ಎಂದು ವಿಕಲ್ಪ ಮಾಡಿದನು.
**ತಾವಜ್ಜನಃ** = ಆಗ ಅಷ್ಟು ಜನರೂ ಕೂಡ
**ಜಗದ್ವಿಜೇತುಃ** = ಪ್ರಪಂಚವನ್ನೆಲ್ಲಾ ಜಯಿಸಿರುವ
**ಪೂರ್ಣಚೇತಸಃ** = ಪೂರ್ಣಪ್ರಜ್ಞರ
**ಜಯೇ ಚ** = ಜಯದ ವಿಷಯದಲ್ಲಿಯೂ ಕೂಡ
**ಸಸಂಶಯಃ** = ಸಂಶಯದಿಂದ ಸಹಿತರಾಗಿ
**ಅಜಾಯತ** = ಆದರು.

**ತಾತ್ಪರ್ಯ—** ವಾದಿಸಿಂಹನು ಹೊಟ್ಟೆಕಿಚ್ಚಿನಿಂದ ಯುಕ್ತನಾದನು. ಒಂದು ಅರ್ಥವನ್ನು ಹದಿನೆಂಟು ವಿಧವಾಗಿ ವಿಕಲ್ಪ ಮಾಡಿದನು. ಆ ವಿಕಲ್ಪಗಳನ್ನೆಲ್ಲಾ ಸಭಿಕರು ಕೇಳಿದರು. ಅವರೆಲ್ಲರಿಗೂ ಜಗತ್ತನ್ನೇ ಜಯಿಸಿರುವ ಪೂರ್ಣಪ್ರಜ್ಞಾ-ಚಾರ್ಯರಿಗೂ ಜಯವು ಏರ್ಪಡುತ್ತದೆಯೋ ಇಲ್ಲವೋ ಎಂಬ ಸಂಶಯವು ಬಂತು.

ವಿಗ್ರಹ—

**ಅಸೂಯನ್—** ಅಸೂಯತಿ ಇತಿ ಅಸೂಯನ್ ।
**ದ್ವಿನವಪ್ರಕಾರತಃ—** ದ್ವಿಃ ಆವೃತ್ತಾಃ ನವ ದ್ವಿನವ, ದ್ವಿನವತೀ ಪ್ರಕಾರಾಶ್ಚ ದ್ವಿನವಪ್ರಕಾರಾಃ, ತೇಭ್ಯಃ ದ್ವಿನವಪ್ರಕಾರತಃ ।
**ವ್ಯಚೀಕ್ಲೃಪತ್—** ವಿಶೇಷೇಣ ಅಚೀಕ್ಲೃಪತ್, ವ್ಯಚೀಕ್ಲೃಪತ್ ।
**ಜಗದ್ವಿಜೇತುಃ—** ಜಗತಾಂ ವಿಜೇತಾ ಜಗದ್ವಿಜೇತಾ, ತಸ್ಯ ಜಗದ್ವಿಜೇತುಃ ।
**ಸಸಂಶಯಃ—** ಸಂಶಯೇ ಸಹ ವರ್ತತೇ ಇತಿ ಸಸಂಶಯಃ ।
**ಪೂರ್ಣಚೇತಸಃ—** ಪೂರ್ಣಂ ಚೇತಃ ಯಸ್ಯ ಸಃ ಪೂರ್ಣಚೇತಃ, ತಸ್ಯ ಪೂರ್ಣಚೇತಸಃ ।

**ಕ್ರಿಯಾಪದ—** ವ್ಯಚೀಕ್ಲೃಪತ್- ವಿ ಇತ್ಯುಪಸರ್ಗಪೂರ್ವಕಾತ್ ಕ್ಲೃಪೂ ಸಾಮರ್ಥ್ಯೇ ಇತ್ಯಸ್ಮಾತ್ ಸಾಮರ್ಥ್ಯಾರ್ಥಕಾತ್ ಕ್ಲೃಪೂ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ವ್ಯಚೀಕ್ಲೃಪತ್'' ಇತಿ ರೂಪಮ್ ।

| | | |
|---|---|---|
| ವ್ಯಚೀಕ್ಲೃಪತ್ | ವ್ಯಚೀಕ್ಲೃಪತಾಂ | ವ್ಯಚೀಕ್ಲೃಪನ್ |
| ವ್ಯಚೀಕ್ಲೃಪಃ | ವ್ಯಚೀಕ್ಲೃಪತಂ | ವ್ಯಚೀಕ್ಲೃಪತ |
| ವ್ಯಚೀಕ್ಲೃಪಂ | ವ್ಯಚೀಕ್ಲೃಪಾವ | ವ್ಯಚೀಕ್ಲೃಪಾಮ ॥ |

★ ★ ★

ಗ್ರಾಮಸಿಂಹದಂತಾದ ವಾದಿಸಿಂಹ

**ವಿಕಲ್ಪಕೋಟೀರಥ ಖಂಡಯನ್ ದ್ರುತಂ**
**ರೇಜೇಽಧಿಕಂ ಸ್ಮೇರಮುಖೋ ಬೃಹನ್ಮತಿಃ ।**
**ತಮಸ್ತತೀರ್ವಾ ದ್ಯುಮಣಿರ್ವಿಶುದ್ಧಯಾ**
**ಗವಾಶ್ರಿತೋ ವಿಷ್ಣುಪದಂ ಸದಾಸ್ಪದಮ್ ॥ 13 ॥**

**ಪದಚ್ಛೇದ—** ವಿಕಲ್ಪಕೋಟೀಃ, ಅಥ, ಖಂಡಯನ್, ದ್ರುತಂ, ರೇಜೇ, ಅಧಿಕಂ, ಸ್ಮೇರಮುಖಃ, ಬೃಹನ್ಮತಿಃ, ತಮಸ್ತತೀಃ, ವಾ, ದ್ಯುಮಣಿಃ, ವಿಶುದ್ಧಯಾ, ಗವಾಶ್ರಿತಃ, ವಿಷ್ಣುಪದಂ, ಸದಾಸ್ಪದಂ ।

**ಅನ್ವಯ—** ಅಥ ಸದಾಸ್ಪದಂ ವಿಷ್ಣುಪದಂ ಶ್ರಿತಃ ಸ್ಮೇರಮುಖಃ ಬೃಹನ್ಮತಿಃ, ವಿಕಲ್ಪಕೋಟೀಃ ದ್ರುತಂ ವಿಶುದ್ಧಯಾ ಗವಾ ದ್ಯುಮಣಿಃ ತಮಸ್ತತೀಃ ವಾ ಖಂಡಯನ್ ಅಧಿಕಂ ರೇಜೇ ।

**ಅನ್ವಯಾರ್ಥ—**

**ಅಥ** = ಅನಂತರದಲ್ಲಿ
**ಸದಾಸ್ಪದಂ** = ಸಜ್ಜನರಿಗೆ ಆಶ್ರಯವಾದ ನಕ್ಷತ್ರಗಳಿಗೆ ಮತ್ತು ಪ್ರಾಣಗಳಿಗೆ ಆಶ್ರಯವಾದ
**ವಿಷ್ಣುಪದಂ** = ಶ್ರೀಹರಿಯ ಪಾದವನ್ನು (ಆಕಾಶವನ್ನು)
**ಶ್ರಿತಃ** = ಆಶ್ರಯಿಸಿದ
**ಸ್ಮೇರಮುಖಃ** = ಮಂದಹಾಸದಿಂದ ಕೂಡಿದ ಮುಖವುಳ್ಳ
**ಬೃಹನ್ಮತಿಃ** = ಶ್ರೀಪೂರ್ಣಪ್ರಜ್ಞಾಚಾರ್ಯರು
**ವಿಕಲ್ಪಕೋಟೀಃ** = ವಿಕಲ್ಪಗಳ ಪ್ರಕಾರಗಳನ್ನು
**ದ್ರುತಂ** = ಬೇಗನೆ
**ವಿಶುದ್ಧಯಾ** = ಶಬ್ದ ಮತ್ತು ಅರ್ಥದೋಷಗಳಿಲ್ಲದ
**ಗವಾ** = ಕಿರಣಗಳಿಂದ (ಮಾತುಗಳಿಂದ)
**ದ್ಯುಮಣಿಃ** = ಸೂರ್ಯನು
**ತಮಸ್ತತೀಃ ವಾ** = ಅಂಧಕಾರಗಳ ಸಮೂಹಗಳನ್ನು ನಾಶಮಾಡುವಂತೆ
**ಖಂಡಯನ್** = ಖಂಡಿಸುತ್ತಾ
**ಅಧಿಕಂ** = ಹೆಚ್ಚಾಗಿ
**ರೇಜೇ** = ಪ್ರಕಾಶಿಸಿದರು.

ತಾತ್ಪರ್ಯ— ವಾದಿಸಿಂಹನು ಮಾಡಿರುವ ವಿಕಲ್ಪಗಳನ್ನು ಶ್ರೀಪೂರ್ಣಪ್ರಜ್ಞಾಚಾರ್ಯರು ಕೇಳಿದರು. ಹದಿನೆಂಟು ವಿಧವಾಗಿ ವಿಕಲ್ಪವನ್ನು ಮಾಡಿದ್ದನ್ನು ಕೇಳಿಬಿಟ್ಟು ಪೂರ್ಣಪ್ರಜ್ಞಾಚಾರ್ಯರು ಹೆದರಲಿಲ್ಲ. ಅವುಗಳನ್ನು ಖಂಡಿಸುತ್ತಾ ಹಿಂದಿನಗಿಂತಲೂ ಅಧಿಕವಾಗಿ ಶೋಭಿಸಿದರು. ಕತ್ತಲೆಯ ಸಮೂಹವನ್ನು ನೋಡಿ ಸೂರ್ಯನು ಅಂಜುವನೇ ? ಅತ್ಯಂತ ಪರಿಶುದ್ಧನಾದ ಸೂರ್ಯನು ಕಿರಣಗಳಿಂದ ಯುಕ್ತನಾಗಿರುವನು. ಶ್ರೀಪೂರ್ಣಪ್ರಜ್ಞಾಚಾರ್ಯರು ಅಲಕ್ಷ್ಯವಾಗಿ ಮೆಲ್ಲನೆ ನಕ್ಕರು. ಮಂದಹಾಸದಿಂದ ಯುಕ್ತವಾಗಿರುವವರಾಗಿ ಅವನ ವಿಕಲ್ಪಗಳ ಕೋಟಿಗಳನ್ನು ಕೇಳಿದ ಕೂಡಲೆ ಮುಗುಳು ನಗೆಯು ಬಂತು. ಶ್ರೀಪೂರ್ಣಪ್ರಜ್ಞಾಚಾರ್ಯರು ಅಧಿಕವಾಗಿ ಶೋಭಿಸಿದರು.

ವಿಗ್ರಹ—

ವಿಕಲ್ಪಕೋಟೀಃ— ವಿಕಲ್ಪಾನಾಂ ಕೋಟಯಃ ತಾಃ ವಿಕಲ್ಪಕೋಟೀಃ ।

ಖಂಡಯನ್— ಖಂಡಯತಿ ಇತಿ ಖಂಡಯನ್ ।

ಸ್ಮೇರಮುಖಃ— ಸ್ಮೇರಂ ಮುಖಂ ಯಸ್ಯ ಸಃ ಸ್ಮೇರಮುಖಃ ।

ಬೃಹನ್ಮತಿಃ— ಬೃಹತೀ ಮತಿಃ ಯಸ್ಯ ಸಃ ಬೃಹನ್ಮತಿಃ ।

ತಮಸ್ತತೀಃ— ತಮಸಾಂ ತತಯಃ ತಮಸ್ತತಯಃ, ತಾಃ ತಮಸ್ತತೀಃ ।

ದ್ಯುಮಣಿಃ— ದಿವಃ ಮಣಿಃ ದ್ಯುಮಣಿಃ ।

ವಿಶುದ್ಧಃ— ವಿಶುದ್ಧಿಃ ಅಸ್ಯ ಅಸ್ತಿ ಇತಿ ವಿಶುದ್ಧಃ ।

ಗವಾಶ್ರಿತಃ— ಗವಾ ಆಶ್ರಿತಃ ಗವಾಶ್ರಿತಃ

ಸದಾಸ್ಪದಂ— ಸತಾಂ ಆಸ್ಪದಂ ಸದಾಸ್ಪದಂ ।

ಕ್ರಿಯಾಪದ— ರಾಜೃದೀಪ್ತೌದೀಪ್ತ್ಯರ್ಥಕಾತ್ ಲಿಟಿ ಪ್ರಥಮಪುರುಷೇ ಏಕವಚನೇ ''ರೇಜೇ'' ಇತಿ ರೂಪಮ್ ।

ರೇಜೇ ರೇಜಾತೇ ರೇಜಿರೇ, ರೇಜಿಷೇ ರೇಜಾಥೇ ರೇಜಿಧ್ವೇ, ರೇಜೇ ರೇಜಿವಹೇ ರೇಜಿಮಹೇ ॥

★ ★ ★

ಏಕಾಪೋಷಣವಾದ ಬುದ್ಧಿಸಾಗರ

**ಅಗಾಧಮಾತ್ಮನ್ಯತಿವೇಲಮುದ್ಧತಂ**
**ತಿರಸ್ಕೃತಾಶೇಷಸರಸ್ವತೀತತಿಮ್ ।**
**ಕಾಮಂ ಮಹಾಮಾನಸಕುಂಭಸಂಭವೋ**
**ಲಘೂಚಕಾರೇತ್ಯಪಿ ಬುದ್ಧಿಸಾಗರಮ್ ॥ 14 ॥**

ಪದಚ್ಛೇದ— ಅಗಾಧಂ, ಆತ್ಮನಿ, ಅತಿವೇಲಂ, ಉದ್ಧತಂ, ತಿರಸ್ಕೃತಾಶೇಷಸರಸ್ವತೀತತಿಂ, ಕಾಮಂ, ಮಹಾಮಾನಸ-ಕುಂಭಸಂಭವಃ, ಲಘೂಚಕಾರ, ಇತಿ, ಅಪಿ, ಬುದ್ಧಿಸಾಗರಂ ।

ಅನ್ವಯ— ಮಹಾಮಾನಸಕುಂಭಸಂಭವಃ ಅಗಾಧಂ ಆತ್ಮನಿ ಅತಿವೇಲಂ ಉದ್ಧತಂ ತಿರಸ್ಕೃತಾಶೇಷಸರಸ್ವತೀತತಿಂ ಬುದ್ಧಿಸಾಗರಂ ಅಪಿ ಲಘೂಚಕಾರ ।

ಅನ್ವಯಾರ್ಥ—

ಮಹಾಮಾನಸಕುಂಭಸಂಭವಃ = ಶ್ರೀಪೂರ್ಣಪ್ರಜ್ಞಾಚಾರ್ಯರೆಂಬ ಅಗಸ್ತ್ಯಮುನಿಗಳು

ಅಗಾಧಂ = ಗಂಭೀರ ಸ್ವಭಾವದಿಂದ ಯುಕ್ತವಾದ

ಆತ್ಮನಿ = ತನ್ನ ವಿಷಯದಲ್ಲಿ

**ಅತಿವೇಲಂ** = ಅತ್ಯಂತವಾಗಿ

**ಉದ್ಧತಂ** = ನನಗೆ ಸಮಾನರು ಯಾರೂ 'ಇಲ್ಲವೆಂದು ದುರಹಂಕಾರದಿಂದ ಯುಕ್ತನಾಗಿರುವ

**ತಿರಸ್ಕೃತಾಶೇಷಸರಸ್ವತೀತತಿಂ** = ಧಿಕ್ಕರಿಸಲ್ಪಟ್ಟ ಸಕಲ ಪಂಡಿತರ ಮಾತುಗಳ ಸಮೂಹಗಳುಳ್ಳ

**ಬುದ್ಧಿಸಾಗರಂ ಅಪಿ** = ಬುದ್ಧಿಸಾಗರನನ್ನೂ ಕೂಡ

**ಇತಿ ಕಾಮಂ** = ಹೀಗೆಯೇ ಯಥೇಚ್ಛವಾಗಿ

**ಲಘೂಚಕಾರ** = ಸೋಲಿಸಿದರು.

**ತಾತ್ಪರ್ಯ—** ವಾದಿಸಂಹನು ವಾದದಲ್ಲಿ ಸೋತನು. ಅನಂತರ ಬುದ್ಧಿಸಾಗರನು ಸೋತನು. ಅವನು ಗಂಭೀರ ಸ್ವಭಾವವುಳ್ಳವನು. ತನ್ನನ್ನು ಜಯಿಸುವವನು ಯಾರೂ ಇಲ್ಲವೆಂಬ ದುರಹಂಕಾರದಿಂದ ಯುಕ್ತನಾಗಿರುವವನು. ಎಲ್ಲಾ ಪಂಡಿತರುಗಳನ್ನೂ ಸೋಲಿಸಿದವನು. ಅಗಸ್ತ್ಯರು ಎಂತಹ ನದಿಗಳನ್ನೂ ಕುಡಿದವರು. ಅವರ ಮುಂದೆ ಸಾಮಾನ್ಯನದಿಗಳ ಗತಿ ಏನು? ಅಗಸ್ತ್ಯರ ಮುಂದೆ ಎಲ್ಲಾ ಸಮುದ್ರಗಳೂ ಏಕಾಪೋಶನದಲ್ಲಿ ಅಡಗಿದಂತೆ ಬುದ್ಧಿಸಾಗರನು ಅಡಗಿದನು.

**ವಿಗ್ರಹ—**

**ಅಗಾಧಂ—** ನ ಗಾಧಃ ಅಗಾಧಃ, ತಂ ಅಗಾಧಂ ।

**ಉದ್ಧತಃ—** ಆತ್ಮನಿ ಅತಿವೇಲಂ ಉದ್ಧತಃ ।

**ತಿರಸ್ಕೃತಾಶೇಷನದೀತತಿಂ—** ಅಶೇಷಾಶ್ಚ ತಾಃ ನದ್ಯಶ್ಚ ಅಶೇಷನದ್ಯಃ, ಅಶೇಷನದೀನಾಂ ತತಿಃ ಅಶೇಷನದೀತತಿಃ, ತಿರಸ್ಕೃತಾ ಅಶೇಷನದೀತತಿಃ ಯೇನ ಸಃ ತಿರಸ್ಕೃತಾಶೇಷನದೀತತಿಃ, ತಂ ತಿರಸ್ಕೃತಾಶೇಷನದೀತತಿಂ ।

**ಮಹಾಮಾನಸಕುಂಭಸಂಭವಃ—** ಮಹತ್ ಮಾನಸಂ ಯಸ್ಯ ಸಃ ಮಹಾಮಾನಸಃ, ಮಹಾಮಾನಸ ಏವ ಕುಂಭಸಂಭವಃ ಮಹಾಮಾನಸಕುಂಭಸಂಭವಃ ।

**ಲಘೂಚಕಾರ—** ಅಲಘುಂ ಲಘುಂ ಸಂಪದ್ಯಮಾನಂ ಚಕಾರ ಲಘೂಚಕಾರ ।

**ಬುದ್ಧಿಸಾಗರಃ—** ಬುದ್ಧ್ಯಾ ಸಾಗರಃ ಇವ ಬುದ್ಧಿಸಾಗರಃ ।

**ಕ್ರಿಯಾಪದ—** ಲಘೂಚಕಾರ - ಡುಕೃಞ್ ಕರಣೇ ಲಿಟ್ ಪ್ರಥಮಪುರುಷೇ ಏಕವಚನೇ ।

ಚಕಾರ ಚಕ್ರತುಃ ಚಕ್ರುಃ, ಚಕರ್ಥ ಚಕ್ರಥು ಚಕ್ರ, ಚಕಾರ ಚಕರ ಚಕೃವ ಚಕೃಮ॥

★ ★ ★

ಪರವಾದಿಗಳ ಪಲಾಯನವಾದ

**ಶ್ವ ಏವ ವಾದೋಽಸ್ತ್ವಿತಿ ವಾದಿನೌ ಖಲಾ-**
**ವದ್ಯೋತ್ತರಂ ಭಾತಿ ಯದೀರ್ಯತಾಮಿತಿ ।**
**ಮಧ್ವೇ ಬ್ರುವಾಣೇಽಮತ ತೌ ಜಿತೌ ಜನಃ**
**ಸ ನಿಶ್ಚಿಕಾಯಾಥ ನಿಶಾಪಲಾಯನಾತ್ ॥ 15 ॥**

**ಪದಚ್ಛೇದ—** ಶ್ವಃ, ಏವ, ವಾದಃ, ಅಸ್ತು, ಇತಿ, ವಾದಿನೌ, ಖಲೌ, ಅದ್ಯ, ಉತ್ತರಂ, ಭಾತಿ, ಯದಿ, ಈರ್ಯತಾಂ, ಇತಿ, ಮಧ್ವೇ, ಬ್ರುವಾಣೇ, ಅಮತ, ತೌ, ಜಿತೌ, ಜನಃ, ಸಃ, ನಿಶ್ಚಿಕಾಯ, ಅಥ, ನಿಶಾಪಲಾಯನಾತ್ ।

**ಅನ್ವಯ—** ವಾದಃ ಶ್ವಃ ಏವ ಅಸ್ತು ಇತಿ ವಾದಿನೌ ಖಲೌ, ಮಧ್ವೇ ಉತ್ತರಂ ಭಾತಿ ಯದಿ ತರ್ಹಿ ಅದ್ಯ ಉದೀರ್ಯತಾಂ, ಇತಿ ಬ್ರುವಾಣೇ, ಜನಃ ತೌ ಜಿತೌ ಅಮತ, ಸಃ ಅಥ ನಿಶಾಪಲಾಯನಾತ್ ಜಿತೌ ನಿಶ್ಚಿಕಾಯ ।

ಅನ್ವಯಾರ್ಥ—

ವಾದಃ = ಚರ್ಚೆಯು

ಶ್ವಃ ಏವ = ನಾಳೆಯೇ

ಅಸ್ತು = ಆಗಲಿ

ಇತಿ = ಹೀಗೆಂದು

ವಾದಿನೌ ಖಲೌ = ಹೇಳುತ್ತಿರುವ ಅಯೋಗ್ಯರಿಗೆ,

ಮಧ್ವೇ = ಮಧ್ವಾಚಾರ್ಯರಿಂದ

ಉತ್ತರಂ ಭಾತಿ ಯದಿ = ಉತ್ತರವು ತೋರಿದರೆ

ಅದ್ಯ = ಈಗಲೇ

ಈರ್ಯತಾಂ = ಹೇಳಲ್ಪಡಲಿ

ಇತಿ = ಎಂದು

ಬ್ರುವಾಣೇ = ಹೇಳಲ್ಪಡಲು,

ಜನಃ = ಜನರು

ತೌ = ಆ ವಾದಿಸಿಂಹ ಮತ್ತು ಬುದ್ಧಿಸಾಗರ ಇಬ್ಬರನ್ನೂ

ಜಿತೌ = ಜಯಿಸಲ್ಪಟ್ಟವರನ್ನಾಗಿ

ಅಮತ = ತಿಳಿದರು.

ಸಃ = ಆ ಜನರು

ಅಥ = ಬಳಿಕ

ನಿಶಾಪಲಾಯನಾತ್ = ರಾತ್ರಿ ಓಡಿಹೋದುದರಿಂದ

ಜಿತೌ ನಿಶ್ಚಿಕಾಯ = ಸೋತರೆಂದು ನಿಶ್ಚಯಿಸಿದರು.

ತಾತ್ಪರ್ಯ— 'ನಾಳೆ ಬೆಳಿಗ್ಗೆ ವಾದವು ನಡೆಯಲಿ' ಎಂದು ವಾದಿಸಿಂಹನೂ ಬುದ್ಧಿಸಾಗರನೂ ಹೇಳಿದರು. ಆಗ ಪೂರ್ಣಪ್ರಜ್ಞಾಚಾರ್ಯರು 'ನಿಮಗೆ ಉತ್ತರವು ತೋರಿದರೆ ಈಗಲೇ ಹೇಳಿರಿ' ಎಂದರು. ಅಷ್ಟು ಹೇಳಿದ್ದಕ್ಕೆ ಆ ಅಯೋಗ್ಯರು ಯಾವ ವಿಧವಾದ ಉತ್ತರವನ್ನೂ ಕೊಡಲಿಲ್ಲ. ಹೊರಟು ಹೋದರು. ಅಲ್ಲಿದ್ದ ಜನರು ಇದರಿಂದ ಅವರಿಬ್ಬರೂ ಹೆದರಿದರು, ಸೋತರು ಎಂದು ತೀರ್ಮಾನ ಮಾಡಿದರು. ಆ ದಿನ ರಾತ್ರಿ ಅವರಿಬ್ಬರೂ ಊರನ್ನೇ ಬಿಟ್ಟು ಓಡಿಹೋಗಿದ್ದರು. ಅವರು ಪಲಾಯನವನ್ನು ಮಾಡಿದ್ದರಿಂದ ಪೂರ್ಣಪ್ರಜ್ಞಾಚಾರ್ಯರ ಜಯವು ನಿಶ್ಚಯವಾಯಿತು.

ವಿಗ್ರಹ—

ವಾದಿನೌ— ವಾದಃ ಅನಯೋಃ ಅಸ್ತು ಇತಿ ವಾದಿನೌ ।

ಬ್ರುವಾಣೇ— ಬ್ರೂತೇ ಇತಿ ಬ್ರುವಾಣಃ, ತಸ್ಮಿನ್ ಬ್ರುವಾಣೇ ।

ಜಿತೌ— ಜಿತಶ್ಚ ಜಿತಶ್ಚ ಜಿತೌ ।

ನಿಶಾಪಲಾಯನಾತ್— ನಿಶಾಯಾಂ ಪಲಾಯನಂ ನಿಶಾಪಲಾಯನಂ, ತಸ್ಮಾತ್ ನಿಶಾಪಲಾಯನಾತ್ ।

ಕ್ರಿಯಾಪದ— ಅಸ್ತು - ಅಸಭುವಿ ಇತ್ಯರ್ಥಕಾತ್ ಲೋಟಿ ''ಅಸು'' ಇತಿ ರೂಪಮ್ ।

ಅಸ್ತು ಸ್ತಾತ್ ಸ್ತಾಂ ಸಂತು, ಏಧಿಸ್ತಾತ್ ಸ್ತಂ ಸ್ತ, ಅಸಾನಿ ಅಸಾವ ಅಸಾಮ ॥

ಭಾತಿ - ಭಾದೀಪ್ತೌ ದೀಪ್ತ್ಯರ್ಥಕಾತ್ ಭಾಧಾತೋಃ ಲಟಿ ಪ್ರಥಮಪುರುಷೇ ಏಕವಚನೇ ''ಭಾತಿ'' ಇತಿ ರೂಪಮ್ ।

ಭಾತಿ ಭಾತಃ ಭಾಂತಿಃ, ಭಾಸಿ ಭಾಥಃ ಭಾಥ, ಭಾಮಿ ಭಾವಃ ಭಾಮಃ ॥

ಈರ್ಯತಾಂ- ಈರ ಪ್ರೇರಣೇ ಇತಿ ಪ್ರೇರಣಾರ್ಥಕಾತ್ ಈರಧಾತೋಃ ಲೋಟಿ ಪ್ರಥಮಪುರುಷೇ ಏಕವಚನೇ ''ಈರ್ಯತಾಂ'' ಇತಿ ರೂಪಮ್ ।

ಈರ್ಯತಾಂ ಈರ್ಯೇತಾಂ ಈರ್ಯಂತಾಂ, ಈರ್ಯಸ್ವ ಈರ್ಯೇಥಾಂ ಈರ್ಯಧ್ವಂ,
ಈರ್ಯೇ ಈರ್ಯಾವಹೇ ಈರ್ಯಾಮಹೇ ॥

ಅಮತ- ಮನು ಅವಬೋಧನೇ ಇತಿ ಅವಬೋಧನಾರ್ಥಕಾತ್ ಮನುಧಾತೋಃ ಆತ್ಮನೇಪದಿನಃ ಲಙ್ ಪ್ರಥಮಪುರುಷೇ ಏಕವಚನೇ ''ಅಮತ'' ಇತಿ ರೂಪಮ್ ।

ಅಮತ ಅಮನಿಷ್ವ ಅಮನಿಷಾತಾಂ ಅಮನಿಷತ, ಅಮನಿಷ್ಠಾಃ ಅಮನಿಷಾಥಾಂ ಅಮನಿಷಧ್ವಂ,
ಅಮನಿಷಿ ಅಮನಿಷ್ವಹಿ ಅಮನಿಷ್ಮಹಿ ॥

ನಿಶ್ಚಿಕಾಯ- ನಿಸ್ ಇತ್ಯುಪಸರ್ಗಪೂರ್ವಕಾತ್ ಚಿಞ್ ಚಯನೇ ಇತ್ಯಸ್ಮಾದ್ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ನಿಶ್ಚಿಕಾಯ'' ಇತಿ ರೂಪಮ್ ।

ನಿಶ್ಚಿಕಾಯ ನಿಶ್ಚಿಕ್ಯತುಃ ನಿಶ್ಚಿಕ್ಯುಃ, ನಿಶ್ಚಿಕ್ಯಿಥ ನಿಶ್ಚಿಕ್ಯಥುಃ ನಿಶ್ಚಿಕ್ಯ, ನಿಶ್ಚಿಕಾಯ ನಿಶ್ಚಿಕ್ಯಿವ ನಿಶ್ಚಿಕ್ಯಿಮ ॥

★ ★ ★

ಶ್ರೀಪೂರ್ಣಪ್ರಜ್ಞರ ಅದ್ಭುತವಿಜಯ

**ಬುದ್ಧ್ಯಬ್ಧಿನಾ ವಾದಿವರೇಣ ಚಾರ್ಜಿತಾಂ ಜಯಶ್ರಿಯಂ ಭೂಪರಿವರ್ತಿನಾ ಚಿರಾತ್ ।**
**ಅಹೋ ಮುಹೂರ್ತಾದಯಮಪ್ರಯತ್ನವಾನವಾಪ್ತವಾನಿತ್ಯತಿವಿಸ್ಮಿತಂ ಜನೈಃ ॥ 16 ॥**

**ಪದಚ್ಛೇದ—** ಬುದ್ಧ್ಯಬ್ಧಿನಾ, ವಾದಿವರೇಣ, ಚ, ಅರ್ಜಿತಾಂ, ಜಯಶ್ರಿಯಂ, ಭೂಪರಿವರ್ತಿನಾ, ಚಿರಾತ್, ಅಹೋ, ಮುಹೂರ್ತಾತ್, ಅಯಂ, ಅಪ್ರಯತ್ನವಾನ್, ಅವಾಪ್ತವಾನ್, ಇತಿ, ಅತಿವಿಸ್ಮಿತಂ, ಜನೈಃ ।

**ಅನ್ವಯ—** ಅಯಂ ಬುದ್ಧ್ಯಬ್ಧಿನಾ ಭೂಪರಿವರ್ತಿನಾ ವಾದಿವರೇಣ ಚ, ಚಿರಾತ್ ಅರ್ಜಿತಾಂ ಜಯಶ್ರಿಯಂ, ಮುಹೂರ್ತಾತ್ ಅಪ್ರಯತ್ನವಾನ್ ಅವಾಪ್ತವಾನ್, ಅಹೋ! ಇತಿ ಜನೈಃ ಅತಿವಿಸ್ಮಿತಂ ।

**ಅನ್ವಯಾರ್ಥ—**

**ಅಯಂ** = ಈ ಪೂರ್ಣಪ್ರಜ್ಞಾಚಾರ್ಯರು
**ಬುದ್ಧ್ಯಬ್ಧಿನಾ** = ಬುದ್ಧಿಸಾಗರನಿಂದಲೂ
**ಭೂಪರಿವರ್ತಿನಾ** = ಪ್ರತಿವಾದಿಗಳನ್ನು ಹುಡುಕಿಕೊಂಡು ಯಾವಾಗಲೂ ಭೂಪ್ರದಕ್ಷಿಣೆಯನ್ನು ಮಾಡುತ್ತಿದ್ದ
**ವಾದಿವರೇಣ ಚ** = ವಾದಿಸಿಂಹನಿಂದಲೂ
**ಚಿರಾತ್** = ಬಹಳ ಕಾಲದಿಂದ
**ಅರ್ಜಿತಾಂ** = ಸಂಪಾದಿಸಲ್ಪಟ್ಟ
**ಜಯಶ್ರಿಯಂ** = ಜಯಸಂಪತ್ತನ್ನು
**ಮುಹೂರ್ತಾತ್** = ಬಹು ಬೇಗನೇ, ಒಂದು ಮುಹೂರ್ತದಲ್ಲಿ
**ಅಪ್ರಯತ್ನವಾನ್** = ಯಾವ ಪ್ರಯತ್ನವೂ ಇಲ್ಲದೆ
**ಅವಾಪ್ತವಾನ್** = ಹೊಂದಿದರು

**ಅಹೋ** = ಆಶ್ಚರ್ಯ!

**ಇತಿ** = ಹೀಗೆಂದು

**ಜನೈಃ** = ಜನರುಗಳಿಂದ

**ಅತಿವಿಸ್ಮಿತಂ** = ಅತ್ಯಂತ ಆಶ್ಚರ್ಯವು ಹೊಂದಲ್ಪಟ್ಟಿತು.

**ತಾತ್ಪರ್ಯ—** ಆ ಬುದ್ಧಿಸಾಗರನೂ ವಾದಿಸಿಂಹನೂ ಯಾವಾಗಲೂ ಪ್ರತಿವಾದಿಗಳನ್ನು ಹುಡುಕುತ್ತಾ ಭೂ-ಪ್ರದಕ್ಷಿಣವನ್ನು ಮಾಡುತ್ತಿದ್ದರು. ''ಇಷ್ಟು ಕಷ್ಟದಿಂದ ಸಂಪಾದಿಸಿದ ಜಯಶ್ರೀಯನ್ನು ಪೂರ್ಣಪ್ರಜ್ಞಾಚಾರ್ಯರು ಒಂದೇ ಮುಹೂರ್ತದಲ್ಲಿ ಯಾವ ಪ್ರಯಾಸವೂ ಇಲ್ಲದಂತೆಯೇ ಹೊಂದಿದರಲ್ಲವೇ ? ಏನು ಆಶ್ಚರ್ಯ!'' ಎಂದು ಎಲ್ಲಾ ಜನರೂ ತುಂಬಾ ಆಶ್ಚರ್ಯಪಟ್ಟರು.

**ವಿಗ್ರಹ—**

**ಬುದ್ಧ್ಯಬ್ಧಿನಾ—** ಬುದ್ಧ್ಯಾಃ ಅಬ್ಧಿಃ ಬುದ್ಧ್ಯಬ್ಧಿಃ, ತೇನ ಬುದ್ಧ್ಯಬ್ಧಿನಾ ।

**ವಾದಿವರೇಣ—** ವಾದೀನಾಂ ವರಃ ವಾದಿವರಃ, ತೇನ ವಾದಿವರೇಣ ।

**ಜಯಶ್ರಿಯಂ—** ಜಯಸ್ಯ ಶ್ರೀಃ ಜಯಶ್ರೀಃ, ತಾಂ ಜಯಶ್ರಿಯಂ ।

**ಭೂಪರಿವರ್ತಿನಾ—** ಭುವಂ ಪರಿವರ್ತಯತೇ ಇತಿ ಭೂಪರಿವರ್ತೀ, ತೇನ ಭೂಪರಿವರ್ತಿನಾ ।

**ಅಪ್ರಯತ್ನವಾನ್—** ನ ಪ್ರಯತ್ನಃ ಅಪ್ರಯತ್ನಃ, ಅಪ್ರಯತ್ನಃ ಅಸ್ಯ ಅಸ್ತಿ ಇತಿ ಅಪ್ರಯತ್ನವಾನ್ ।

**ಅವಾಪ್ತವಾನ್—** ಅವಾಪ್ತಂ ಅಸ್ಯ ಅಸ್ತಿ ಇತಿ ಅವಾಪ್ತವಾನ್ ।

**ಅತಿವಿಸ್ಮಿತಂ—** ಅತ್ಯಂತಂ ವಿಸ್ಮಿತಂ ಅತಿವಿಸ್ಮಿತಂ ।

★ ★ ★

ಶಾಂಕರಭಾಷ್ಯದ ಖಂಡನೆಗೆ ಉಪಕ್ರಮ

**ವ್ಯಾಖ್ಯನ್ ಕದಾಚಿನ್ಮಣಿಮದ್ವಿನಿರ್ಮಿತಂ**
**ಭಾಷ್ಯಂ ಜನೈಸ್ತರ್ಕವಿಶಾರದೈರ್ವೃತಃ ।**
**ಉವಾಚ ವಾಚಂ ಪರಿಹಾಸಹಾಸವಾನ್**
**ಸಂಮೋದತೀರ್ಥಃ ಸುರಮೋದದಾಯಿನೀಮ್ ॥ 17 ॥**

**ಪದಚ್ಛೇದ—** ವ್ಯಾಖ್ಯನ್, ಕದಾಚಿತ್, ಮಣಿಮತ್, ವಿನಿರ್ಮಿತಂ, ಭಾಷ್ಯಂ, ಜನೈಃ, ತರ್ಕವಿಶಾರದೈಃ, ವೃತಃ, ಉವಾಚ, ವಾಚಂ, ಪರಿಹಾಸಹಾಸವಾನ್, ಸಂಮೋದತೀರ್ಥಃ, ಸುರಮೋದದಾಯಿನೀಂ ।

**ಅನ್ವಯ—** ಕದಾಚಿತ್ ಮಣಿಮದ್ವಿನಿರ್ಮಿತಂ ಭಾಷ್ಯಂ, ತರ್ಕವಿಶಾರದೈಃ ವೃತಃ ವ್ಯಾಖ್ಯನ್, ಸಂಮೋದತೀರ್ಥಃ ಪರಿಹಾಸಹಾಸವಾನ್ ಸುರಮೋದದಾಯಿನೀಂ ವಾಚಂ ಉವಾಚ ।

**ಅನ್ವಯಾರ್ಥ—**

**ಕದಾಚಿತ್** = ಯಾವುದೋ ಒಂದು ದಿನದಲ್ಲಿ

**ಮಣಿಮದ್ವಿನಿರ್ಮಿತಂ** = ಮಣಿಮಾನ್ ಎಂಬ ದೈತ್ಯನಿಂದ ನಿರ್ಮಿತವಾದ

**ಭಾಷ್ಯಂ** = ಬ್ರಹ್ಮಸೂತ್ರಭಾಷ್ಯವನ್ನು

**ತರ್ಕವಿಶಾರದೈಃ ಜನೈಃ** = ತರ್ಕಶಾಸ್ತ್ರದಲ್ಲಿ ಚತುರರಾಗಿರುವ ಜನರುಗಳಿಂದ

**ವೃತಃ** = ಸುತ್ತುವರಿಯಲ್ಪಟ್ಟು

ವ್ಯಾಖ್ಯನ್ = ವ್ಯಾಖ್ಯಾನವನ್ನು ಮಾಡುತ್ತಿದ್ದ
ಸಂಮೋದತೀರ್ಥಃ = ಪೂರ್ಣಪ್ರಜ್ಞಾಚಾರ್ಯರು
ಪರಿಹಾಸಹಾಸವಾನ್ = ಪರಿಹಾಸರೂಪವಾದ ನಗುವಿಕೆಯಿಂದ ಯುಕ್ತರಾಗಿ
ಸುರಮೋದದಾಯಿನೀಂ = ದೇವತೆಗಳಿಗೆ ಸಂತೋಷವನ್ನು ಕೊಡುವ
ವಾಚಂ = ಮಾತನ್ನು
ಉವಾಚ = ಹೇಳಿದರು.

ತಾತ್ಪರ್ಯ— ಒಂದು ದಿನ ಸಂಕರನ ರೂಪವನ್ನು ತಾಳಿದ್ದ ಮಣಿಮಾನ್ ಎಂಬ ದೈತ್ಯನಿಂದ ಬರೆಯಲ್ಪಟ್ಟ ಭಾಷ್ಯವನ್ನು ಪಾಠ ಹೇಳುತ್ತಿದ್ದರು. ಆಗ ಸರ್ವಜ್ಞಾಚಾರ್ಯರ ಸುತ್ತಲೂ ತರ್ಕಶಾಸ್ತ್ರದಲ್ಲಿ ನಿಪುಣರಾದ ಪಂಡಿತರುಗಳೆಲ್ಲರೂ ಸುತ್ತಿಕೊಂಡಿದ್ದರು. ಆಗ ಅವರ ಮಧ್ಯದಲ್ಲಿ ಸರ್ವಜ್ಞಾಚಾರ್ಯರು ಪರಿಹಾರರೂಪವಾಗಿ ಮಾಡುತ್ತಾ, ಮಂದಹಾಸ-ದೊಡನೆ ದೇವತೆಗಳಿಗೆ ಸಂತೋಷವನ್ನುಂಟುಮಾಡುವ ಈ ಮಾತನ್ನು ಹೇಳಿದರು.

ವಿಗ್ರಹ—

ಮಣಿಮದ್ವಿನಿರ್ಮಿತಂ— ಮಣಿಮತಾಂ ವಿನಿರ್ಮಿತಂ ಮಣಿಮದ್ವಿನಿರ್ಮಿತಂ, ತತ್ ಮಣಿಮದ್ವಿನಿರ್ಮಿತಂ ।
ತರ್ಕವಿಶಾರದೈಃ— ತರ್ಕೇ ವಿಶಾರದಾಃ ತರ್ಕವಿಶಾರದಾಃ, ತೈಃ ತರ್ಕವಿಶಾರದೈಃ ।
ವ್ಯಾಖ್ಯನ್— ವ್ಯಾಖ್ಯಾತಿ ಇತಿ ವ್ಯಾಖ್ಯನ್ ।
ಪರಿಹಾಸಹಾಸವಾನ್— ಪರಿಹಾಸಃ ಏವ ಹಾಸಃ ಪರಿಹಾಸಹಾಸಃ, ಪರಿಹಾಸಹಾಸಃ ಅಸ್ಯ ಅಸ್ತಿ ಇತಿ ಪರಿಹಾಸಹಾಸವಾನ್ ।
ಸಂಮೋದತೀರ್ಥಃ— ಸಂಮೋದಃ ತೀರ್ಥಂ ಯಸ್ಯ ಸಃ ಸಂಮೋದತೀರ್ಥಃ ।
ಸುರಮೋದದಾಯಿನೀಂ— ಸುರಾಣಾಂ ಮೋದಃ ಸುರಮೋದಃ, ಸುರಮೋದಂ ದದಾತೀತಿ ಸುರಮೋದದಾಯಿನೀ, ತಾಂ ಸುರಮೋದದಾಯಿನೀಂ ।

ಕ್ರಿಯಾಪದ— ಉವಾಚ- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವಚಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಉವಾಚ'' ಇತಿ ರೂಪಮ್ ।

ಉವಾಚ ಊಚತುಃ, ಊಚುಃ, ಉವಚಿಥ ಉವಕ್ಥ ಊಚಥುಃ ಊಚ, ಉವಾಚ ಉವಚ, ಊಚಿವ ಊಚಿಮ ॥

★ ★ ★

ಶಂಕರಭಾಷ್ಯವು ಯಥಾರ್ಥವಾದುದಲ್ಲ

**ಸತ್ಸೂತ್ರಭಾವೇ ಪ್ರವಿಚಾರಿತೇ ಪೃಥ-**
**ಗ್ಭಾಷ್ಯಾಭಿಸಂಧೌ ಚ ವಿಶುದ್ಧಬುದ್ಧಿಭಿಃ ।**
**ನಿಗೃಹ್ಯ ಗೂಢಾಗ್ರಹಮುಗ್ರಮೇತಯೋ-**
**ರ್ಮಾನ್ಯೋಽನ್ವಯೋಽನ್ಯೋನ್ಯಮಹೋ ನ ದೃಶ್ಯತೇ ॥ 18 ॥**

ಪದಚ್ಛೇದ— ಸತ್ಸೂತ್ರಭಾವೇ, ಪ್ರವಿಚಾರಿತೇ, ಪೃಥಕ್, ಭಾಷ್ಯಾಭಿಸಂಧೌ, ಚ, ವಿಶುದ್ಧಬುದ್ಧಿಭಿಃ, ನಿಗೃಹ್ಯ, ಗೂಢಾಗ್ರಹಂ, ಉಗ್ರಂ, ಏತಯೋಃ, ಮಾನ್ಯಃ, ಅನ್ವಯಃ, ಅನ್ಯೋನ್ಯಂ, ಅಹೋ, ನ, ದೃಶ್ಯತೇ ।

ಅನ್ವಯ— ವಿಶುದ್ಧಬುದ್ಧಿಭಿಃ ಉಗ್ರಂ ಗೂಢಾಗ್ರಹಂ ನಿಗೃಹ್ಯ ಸತ್ಸೂತ್ರಭಾವೇ ಭಾಷ್ಯಾಭಿಸಂಧೌ ಚ ಪೃಥಕ್ ಪ್ರವಿಚಾರಿತೇ ಏತಯೋಃ ಅನ್ಯೋನ್ಯಂ ಮಾನ್ಯಃ ಅನ್ವಯಃ ನ ದೃಶ್ಯತೇ ಅಹೋ!

**ಅನ್ವಯಾರ್ಥ—**

**ವಿಶುದ್ಧಬುದ್ಧಿಭಿಃ** = ಅತ್ಯಂತ ಪರಿಶುದ್ಧವಾದ ಬುದ್ಧಿಯುಳ್ಳವರುಗಳಿಂದ (ಮನಸ್ಸುಳ್ಳವರಿಂದ)

**ಉಗ್ರಂ** = ಕಠಿಣವಾದ, ನರಕ ಮುಂತಾದ ಅನರ್ಥಗಳನ್ನು ಕೊಡುವ

**ಗೂಢಾಗ್ರಹಂ** = ಮನಸ್ಸಿನಲ್ಲಿ ಅಡಗಿರುವ ಹಠವನ್ನು, ತತ್ತ್ವವು ಹೀಗೆಯೇ ಇರಬೇಕು ಎಂಬ ದುರಭಿ-ಮಾನವನ್ನು ಮಾಡದೆ

**ನಿಗೃಹ್ಯ** = ತಡೆದುಕೊಂಡು

**ಸತ್ಸೂತ್ರಭಾವೇ** = ನಿರ್ದೋಷವಾದ ಸೂತ್ರಗಳ ಅಭಿಪ್ರಾಯವೂ

**ಭಾಷ್ಯಾಭಿಸಂಧೌ ಚ** = ಈ ಭಾಷ್ಯದ ಅಭಿಪ್ರಾಯವೂ

**ಪೃಥಕ್** = ಪ್ರತ್ಯೇಕವಾಗಿ

**ಪ್ರವಿಚಾರಿತೇ ಸತಿ** = ವಿಚಾರಮಾಡಲ್ಪಟ್ಟಾಗ

**ಏತಯೋಃ** = ಈ ಬ್ರಹ್ಮಸೂತ್ರ ಮತ್ತು ಸಂಕರಭಾಷ್ಯಗಳಿಗೆ

**ಅನ್ಯೋನ್ಯಂ** = ಪರಸ್ಪರವಾಗಿ

**ಮಾನ್ಯಃ** = ಯೋಗ್ಯವಾದ

**ಅನ್ವಯಃ** = ಸಂಬಂಧವು

**ನ ದೃಶ್ಯತೇ** = ಕಾಣಲ್ಪಡುವುದಿಲ್ಲ

**ಅಹೋ** = ಆಶ್ಚರ್ಯ!

**ತಾತ್ಪರ್ಯ—** ವಿಶುದ್ಧವಾದ ಬುದ್ಧಿಯುಳ್ಳವರು ಈ ಸೂತ್ರಗಳನ್ನೂ ಅವುಗಳ ಭಾಷ್ಯಗಳನ್ನೂ ಪ್ರತ್ಯೇಕವಾಗಿ ಓದಬೇಕು. ಓದುವ ಸಮಯದಲ್ಲಿ ಮನಸ್ಸಿನಲ್ಲಿ ಅಡಗಿರುವ ಮತ್ತು ನರಕ ಮುಂತಾದ ಅನರ್ಥಗಳನ್ನು ಕೊಡದ ಇರಬೇಕು. ಆಗ್ರಹವನ್ನು ಬಿಟ್ಟು ಚೆನ್ನಾಗಿ ವಿಚಾರವನ್ನೂ ಮಾಡಬೇಕು. ಅಂತಹ ವಿಚಾರವನ್ನು ಮಾಡಿದರೆ ಬ್ರಹ್ಮಸೂತ್ರಗಳಿಗೂ ಅವುಗಳ ಭಾಷ್ಯಗಳಿಗೂ ಪರಸ್ಪರಯೋಗ್ಯವಾದ ಸಂಬಂಧವು ಕಾಣಲ್ಪಡುವುದಿಲ್ಲ. ಇದು ತುಂಬಾ ಆಶ್ಚರ್ಯಕರವಾಗಿದೆ.

ವಿಗ್ರಹ—

**ಸತ್ಸೂತ್ರಭಾವೇ—** ಸಂತಿ ಚ ತಾನಿ ಸೂತ್ರಾಣಿ ಚ ಸತ್ಸೂತ್ರಾಣಿ, ಸತ್ಸೂತ್ರಾಣಾಂ ಭಾವಃ ಸತ್ಸೂತ್ರಭಾವಃ, ತಸ್ಮಿನ್ ಸತ್ಸೂತ್ರಭಾವೇ ।

**ಪ್ರವಿಚಾರಿತೇ—** ಪ್ರಕರ್ಷೇಣ ವಿಚಾರಿತಂ ಪ್ರವಿಚಾರಿತಂ, ತಸ್ಮಿನ್ ಪ್ರವಿಚಾರಿತೇ ।

**ಭಾಷ್ಯಾಭಿಸಂಧೌ—** ಭಾಷ್ಯಸ್ಯ ಅಭಿಸಂಧಿಃ ಭಾಷ್ಯಾಭಿಸಂಧಿಃ, ತಸ್ಮಿನ್ ಭಾಷ್ಯಾಭಿಸಂಧೌ ।

**ವಿಶುದ್ಧಬುದ್ಧಿಭಿಃ—** ವಿಶೇಷೇಣ ಶುದ್ಧಾ ವಿಶುದ್ಧಾ, ವಿಶುದ್ಧಾ ಬುದ್ಧಿಃ ಯೇಷಾಂ ತೇ ವಿಶುದ್ಧಬುದ್ಧಯಃ, ತೈಃ ವಿಶುದ್ಧಬುದ್ಧಿಭಿಃ ।

**ಗೂಢಾಗ್ರಹಂ—** ಗೂಢಶ್ಚಾಸೌ ಆಗ್ರಹಶ್ಚ ಗೂಢಾಗ್ರಹಃ, ತಂ ಗೂಢಾಗ್ರಹಂ ।

**ಕ್ರಿಯಾಪದ—** ದೃಶ್ಯತೇ- ದೃಶಿರ್‌ಪ್ರೇಕ್ಷಣೇ ಇತ್ಯಸ್ಮಾತ್ ಪ್ರೇಕ್ಷಣಾರ್ಥಕಾತ್ ದೃಶಿರ್ ಧಾತೋಃ ಕರ್ಮಣಿ ಲಟಿ ಪ್ರಥಮಪುರುಷೇ ಏಕವಚನೇ ''ದೃಶ್ಯತೇ'' ಇತಿ ರೂಪಮ್ ।

ದೃಶ್ಯತೇ ದೃಶ್ಯೇತೇ ದೃಶ್ಯಂತೇ, ದೃಶ್ಯಸೇ ದೃಶ್ಯೇಥೇ ದೃಶ್ಯಧ್ವೇ, ದೃಶ್ಯೇ ದೃಶ್ಯಾವಹೇ ದೃಶ್ಯಾಮಹೇ ॥

★ ★ ★

ಆಚಾರ್ಯರು ನಿರೂಪಿಸಿದ ಪ್ರಬಲದೋಷಗಳು - ನಿರುತ್ತರರಾದ ಪಂಡಿತರು

**ಇತಿ ಬ್ರುವಾಣೇ ಪ್ರತಿಪಾದಯತ್ಯಲಂ**
**ಭಾಷ್ಯೇಽತ್ರ ದೋಷಾನ್ ಪ್ರಬಲಾನ್ ಮುಹುರ್ಮುಹುಃ ।**
**ತಸ್ಮಿಂಸ್ತು ವಿಸ್ಮೇರಧಿಯೋಽಪಿ ಯತ್ನತೋ**
**ನ ಸ್ಥೇಯಸಃ ಪರ್ಯಹರನ್ನಿಮಾನಮೀ ॥ 19 ॥**

**ಪದಚ್ಛೇದ—** ಇತಿ, ಬ್ರುವಾಣೇ, ಪ್ರತಿಪಾದಯತಿ, ಅಲಂ, ಭಾಷ್ಯೇ, ಅತ್ರ, ದೋಷಾನ್, ಪ್ರಬಲಾನ್, ಮುಹುಃ, ಮುಹುಃ, ತಸ್ಮಿನ್, ತು, ವಿಸ್ಮೇರಧಿಯಃ, ಅಪಿ, ಯತ್ನತಃ, ನ, ಸ್ಥೇಯಸಃ, ಪರ್ಯಹರನ್, ಇಮಾನ್, ಅಮೀ ।

**ಅನ್ವಯ—** ಇತಿ ಬ್ರುವಾಣೇ ತಸ್ಮಿನ್ ತು, ಅತ್ರ ಭಾಷ್ಯೇ ಪ್ರಬಲಾನ್ ದೋಷಾನ್ ಮುಹುಃ ಮುಹುಃ ಅಲಂ ಪ್ರತಿಪಾದಯತಿ, ವಿಸ್ಮೇರಧಿಯಃ ಅಮೀ, ಸ್ಥೇಯಸಃ ಇಮಾನ್ ಯತ್ನತಃ ಅಪಿ ನ ಪರ್ಯಹರನ್ ।

**ಅನ್ವಯಾರ್ಥ—**

**ಇತಿ ಬ್ರುವಾಣೇ** = ಈ ರೀತಿಯಾಗಿ ಹೇಳುತ್ತಿರುವ
**ತಸ್ಮಿನ್ ತು** = ಆ ಪೂರ್ಣಪ್ರಜ್ಞಾಚಾರ್ಯರಾದರೋ
**ಅತ್ರ ಭಾಷ್ಯೇ** = ಈ ಸಂಕರ ಭಾಷ್ಯದಲ್ಲಿ
**ಪ್ರಬಲಾನ್ ದೋಷಾನ್** = ಪ್ರಬಲವಾದ ದೋಷಗಳನ್ನು
**ಮುಹುಃ ಮುಹುಃ** = ಮತ್ತೆ ಮತ್ತೆ
**ಅಲಂ** = ಚೆನ್ನಾಗಿ
**ಪ್ರತಿಪಾದಯತಿ (ಸತಿ)** = ವಿವರಿಸುತ್ತಿರಲು
**ವಿಸ್ಮೇರಧಿಯಃ** = ಆಶ್ಚರ್ಯದಿಂದ ಯುಕ್ತವಾದ ಬುದ್ಧಿಯುಳ್ಳ
**ಅಮೀ** = ಈ ಜನರು
**ಸ್ಥೇಯಸಃ** = ಸ್ಥಿರವಾದ
**ಇಮಾನ್** = ಈ ದೋಷಗಳನ್ನು
**ಯತ್ನತಃ ಅಪಿ** = ಪ್ರಯತ್ನದಿಂದಲೂ
**ನ ಪರ್ಯಹರನ್** = ಪರಿಹರಿಸಲು ಶಕ್ಯರಾಗಲಿಲ್ಲ.

**ತಾತ್ಪರ್ಯ—** ಪೂರ್ಣಪ್ರಜ್ಞಾಚಾರ್ಯರು ಈ ರೀತಿ ಹೇಳಿ ಸಂಕರನಿಂದ ರಚಿತವಾದ ಭಾಷ್ಯದಲ್ಲಿ ಪ್ರಬಲವಾದ ದೋಷಗಳನ್ನು ಮತ್ತೆ ಮತ್ತೆ ಎಲ್ಲರಿಗೂ ತಿಳಿಯುವಂತೆ ಹೇಳುತ್ತಾ ಬಂದರು. ಆ ದೋಷಗಳನ್ನು ಕೇಳಿದ ಪಂಡಿತರ ಮನಸ್ಸಿನಲ್ಲಿ ಆಶ್ಚರ್ಯವು ಉಂಟಾಯಿತು. ಆ ಭಾಷ್ಯದಲ್ಲಿ ಪೂರ್ಣಪ್ರಜ್ಞಾಚಾರ್ಯರಿಂದ ಹೇಳಲ್ಪಟ್ಟ ಪ್ರಬಲ ದೋಷಗಳನ್ನು ಪರಿಹರಿಸುವುದಕ್ಕೆ ಬಹುವಾಗಿ ಪ್ರಯತ್ನಿಸಿದರು. ಆದರೂ ದೋಷಗಳನ್ನು ಪರಿಹರಿಸಲು ಸಾಧ್ಯವಾಗಲಿಲ್ಲ. ಇವರು ಪ್ರಯತ್ನವನ್ನು ಮಾಡಿದಂತೆ ಆ ದೋಷಗಳು ಸ್ಥಿರವಾದವು. ಕೊನೆಗೆ ಪರಿಹರಿಸಲು ಸಾಧ್ಯವಾಗಲಿಲ್ಲ..

**ವಿಗ್ರಹ—**

**ಬ್ರುವಾಣೇ—** ಬ್ರೂತೇ ಇತಿ ಬ್ರುವಾಣಃ, ತಸ್ಮಿನ್ ಬ್ರುವಾಣೇ ।
**ಪ್ರತಿಪಾದಯತಿ—** ಪ್ರತಿಪಾದಯತಿ ಇತಿ ಪ್ರತಿಪಾದಯನ್, ತಸ್ಮಿನ್ ಪ್ರತಿಪಾದಯತಿ ।
**ಪ್ರಬಲಾನ್—** ಪ್ರಕೃಷ್ಟಂ ಬಲಂ ಯೇಷಾಂ ತೇ ಪ್ರಬಲಾಃ, ತಾನ್ ಪ್ರಬಲಾನ್ ।

**ವಿಸ್ಮೇರಧಿಯಃ—** ವಿಸ್ಮೇರಾಃ ಧಿಯಃ ಯೇಷಾಂ ತೇ ವಿಸ್ಮೇರಧಿಯಃ ।

**ಸ್ಥೇಯಸಃ—** ಅತ್ಯಂತಂ ಸ್ಥಿರಾಃ ಸ್ಥೇಯಸಃ ।

**ಕ್ರಿಯಾಪದ—** **ಪರ್ಯಹರನ್-** ಹೃಞ್ ಹರಣೇ ಇತ್ಯಸ್ಮಾತ್ ಹರಣಾರ್ಥಕಾತ್ ಲಙ್ ಪ್ರಥಮಪುರುಷೇ ಬಹುವಚನೇ ''ಪರ್ಯಹರನ್'' ಇತಿ ರೂಪಮ್ ।

ಪರ್ಯಹರತ್ ಪರ್ಯಹರತಾಂ ಪರ್ಯಹರನ್,
ಪರ್ಯಹರಃ ಪರ್ಯಹರತಂ ಪರ್ಯಹರತ,
ಪರ್ಯಹರಂ ಪರ್ಯಹರಾವ ಪರ್ಯಹರಾಮ ॥

★ ★ ★

ಬ್ರಹ್ಮಸೂತ್ರಗಳ ವಿವರಣೆಗಾಗಿ ಶಿಷ್ಯರಿಂದ ಪ್ರಾರ್ಥನೆ

**ನನ್ವಸ್ಯ ಸೂತ್ರಸ್ಯ ಪರೋಽರ್ಥ ಉಚ್ಯತಾಂ ಯದ್ಭಾಷ್ಯಮಾತ್ರಂ ಭವತಾ ನಿರಸ್ಯತೇ ।**
**ಭವಾದೃಶೈರ್ಯಃ ಕವಿಭಿರ್ನ ದೂಷ್ಯತೇ ಕಥಂಚನೇತ್ಯೂಚುರಿಮೇ ವಚಸ್ವಿನಃ ॥ 20 ॥**

**ಪದಚ್ಛೇದ—** ನನು, ಅಸ್ಯ, ಸೂತ್ರಸ್ಯ, ಪರಃ, ಅರ್ಥಃ, ಉಚ್ಯತಾಂ, ಯತ್, ಭಾಷ್ಯಮಾತ್ರಂ, ಭವತಾ, ನಿರಸ್ಯತೇ, ಭವಾದೃಶೈಃ, ಯಃ ಕವಿಭಿಃ, ನ, ದೂಷ್ಯತೇ, ಕಥಂಚನ, ಇತಿ, ಊಚುಃ, ಇಮೇ, ವಚಸ್ವಿನಃ ।

**ಅನ್ವಯ—** ನನು ಯತ್ ಭವತಾ ಭಾಷ್ಯಮಾತ್ರಂ ನಿರಸ್ಯತೇ ಭವಾದೃಶೈಃ ಕವಿಭಿಃ ಯಃ ಕಥಂಚನ ನ ದೂಷ್ಯತೇ ಪರಃ ಅರ್ಥಃ ಅಸ್ಯ ಸೂತ್ರಸ್ಯ ಉಚ್ಯತಾಂ ಇತಿ ವಚಸ್ವಿನಃ ಇಮೇ ಊಚುಃ ।

**ಅನ್ವಯಾರ್ಥ—**

**ನನು** = ಎಲೈ ಮಧ್ವಾಚಾರ್ಯರೇ
**ಯತ್** = ಒಂದು ವೇಳೆ
**ಭವತಾ** = ನಿಮ್ಮಿಂದ
**ಭಾಷ್ಯಮಾತ್ರಂ** = ಕೇವಲ ಸಂಕರನಿಂದ ರಚಿತವಾದ ಭಾಷ್ಯವು
**ನಿರಸ್ಯತೇ** = ದೂಷಿಸಲ್ಪಡುತ್ತಿದ್ದರೆ
**ಭವಾದೃಶೈಃ** = ನಿಮ್ಮಂತಹ
**ಕವಿಭಿಃ** = ಪಂಡಿತರಿಂದ
**ಯಃ** = ಯಾವ ಅರ್ಥವು
**ಕಥಂಚನ** = ಯಾವ ರೀತಿಯಿಂದಲೂ
**ನ ದೂಷ್ಯತೇ** = ಖಂಡಿಸಲ್ಪಡುವುದಿಲ್ಲವೋ, ಅಂತಹ
**ಪರಃ ಅರ್ಥಃ** = ಅದ್ವಿತೀಯವಾದ ಬೇರೆ ಅರ್ಥವು
**ಅಸ್ಯ ಸೂತ್ರಸ್ಯ** = ಈ ಬ್ರಹ್ಮಸೂತ್ರಕ್ಕೆ
**ಉಚ್ಯತಾಂ** = ಹೇಳಲ್ಪಡಲಿ
**ಇತಿ** = ಎಂದು
**ವಚಸ್ವಿನಃ** = ವಾಗ್ಮಿಗಳಾದ
**ಇಮೇ** = ಈ ಪಂಡಿತರು
**ಊಚುಃ** = ಹೇಳಿದರು.

**ತಾತ್ಪರ್ಯ—** ಎಲೈ ಪೂರ್ಣಪ್ರಜ್ಞಾಚಾರ್ಯರೇ! ನೀವು ಶಾಂಕರಭಾಷ್ಯವನ್ನು ಮಾತ್ರ ನಿರಾಕರಿಸುತ್ತಿದ್ದೀರಿ. ಸೂತ್ರವು ನಿಮಗೆ ಪ್ರಮಾಣವೆಂದಾಯಿತು. ಆದ್ದರಿಂದ ಈ ಬ್ರಹ್ಮಸೂತ್ರಕ್ಕೆ ನಿಮ್ಮಂತಹ ಪಂಡಿತರು ಯಾವ ರೀತಿಯಿಂದಲೂ ಖಂಡಿಸಲು ಸಾಧ್ಯವಿಲ್ಲದ ಬೇರೆ ಅರ್ಥವನ್ನು ನೀವೇ ಹೇಳಿರಿ ಎಂದು ಅಲ್ಲಿಯ ವಿದ್ವಾಂಸರು ಹೇಳಿದರು.

**ವಿಗ್ರಹ—**

**ಭವಾದೃಶೈಃ—** ಭವತಾಂ ಸದೃಶಾಃ ಭವಾದೃಶಾಃ, ತೈಃ ಭವಾದೃಶೈಃ ।

**ಭಾಷ್ಯಮಾತ್ರಂ—** ಕೇವಲಂ ಭಾಷ್ಯಂ ಭಾಷ್ಯಮಾತ್ರಂ ।

**ವಚಸ್ವಿನಃ—** ಪ್ರಶಸ್ತಂ ವಚಃ ಏಷಾಂ ಅಸ್ತೀತಿ ವಚಸ್ವಿನಃ ।

**ಕ್ರಿಯಾಪದ— ಊಚುಃ-** ವಚ ಪರಿಭಾಷಣೇ ಇತಿಧಾತೋಃ ಪರಸ್ಮೈಪದಿನಃ ಲಿಟ್ ಲಕಾರಸ್ಯ ಪ್ರಥಮಪುರುಷೇ ಬಹುವಚನೇ ಊಚುಃ ಇತಿ ರೂಪಂ ।

ಉವಾಚ ಊಚತುಃ ಊಚುಃ, ಊಚಿಥ ಉವಕ್ಥ ಊಚತುಃ ಊಚ, ಉವಾಚ ಉವಚ, ಊಚಿವ ಊಚಿಮ ॥

★ ★ ★

ಭಾಷ್ಯರಚನೆಗೆ ನಾಂದಿಯಾದ ಭಾಷ್ಯಪ್ರವಚನ

**ಅಕ್ಲಿಷ್ಟಶಬ್ದಾನ್ವಯಮೇಷ ಸಂಭವ-**
**ತ್ಸೂತ್ರಾರ್ಥಮುಚ್ಚೈರ್ವಚನಂ ತದಾಽಽದದೇ ।**
**ಮಾನೀಕೃತಾಮ್ನಾಯಯುತಸ್ಮೃತಿ ಕ್ಷಣಾ-**
**ದೇಷ್ಯತ್ಕಥಾತಾಂಡವಸೂತ್ರಧಾರಕಮ್ ॥ 21 ॥**

**ಪದಚ್ಛೇದ—** ಅಕ್ಲಿಷ್ಟಶಬ್ದಾನ್ವಯಂ, ಏಷಃ, ಸಂಭವತ್, ಸೂತ್ರಾರ್ಥಂ, ಉಚ್ಚೈಃ, ವಚನಂ, ತದಾ, ಆದದೇ, ಮಾನೀಕೃತಾಮ್ನಾಯಯುತಸ್ಮೃತಿ, ಕ್ಷಣಾತ್ ಏಷ್ಯತ್ಕಥಾತಾಂಡವಸೂತ್ರಧಾರಕಮ್ ।

**ಅನ್ವಯ—** ಏಷಃ ತದಾ ಅಕ್ಲಿಷ್ಟಶಬ್ದಾನ್ವಯಂ ಸಂಭವತ್ ಸೂತ್ರಾರ್ಥಂ ಮಾನೀಕೃತಾಮ್ನಾಯಯುತಸ್ಮೃತಿ ಏಷ್ಯತ್ಕಥಾತಾಂಡವಸೂತ್ರಧಾರಕಂ ವಚನಂ ಉಚ್ಚೈಃ ಕ್ಷಣಾತ್ ಆದದೇ ।

**ಅನ್ವಯಾರ್ಥ—**

**ಏಷಃ** = ಶ್ರೀ ಪೂರ್ಣಪ್ರಜ್ಞಾಚಾರ್ಯರು
**ಅಕ್ಲಿಷ್ಟಶಬ್ದಾನ್ವಯಂ** = ಶಬ್ದಗಳೂ ಅನ್ವಯಗಳೂ ಕ್ಲಿಷ್ಟವಿಲ್ಲದಿರುವ
**ಸಂಭವತ್ಸೂತ್ರಾರ್ಥಂ** = ಹೊಂದಾಣಿಕೆಯಾಗುವ ಸೂತ್ರಾರ್ಥಗಳಿಂದ ಯುಕ್ತವಾಗಿರುವ
**ಮಾನೀಕೃತಾಮ್ನಾಯಯುತಸ್ಮೃತಿ** = ವೇದಗಳನ್ನೂ ಸ್ಮೃತಿಗಳನ್ನೂ ಪ್ರಮಾಣವಾಗಿ ಕೊಟ್ಟಿರುವ
**ಏಷ್ಯತ್ಕಥಾತಾಂಡವಸೂತ್ರಧಾರಕಂ** = ಮುಂದೆ ಬರಲಿರುವ ಕಥೆಗೆ ಸೂತ್ರಧಾರಕನಂತಿರುವ
**ವಚನಂ** = ಮಾತನ್ನು
**ಉಚ್ಚೈಃ** = ಗಟ್ಟಿಯಾಗಿ
**ಕ್ಷಣಾತ್** = ಸ್ವಲ್ಪ ಹೊತ್ತಿನಲ್ಲಿಯೇ
**ಆದದೇ** = ಸ್ವೀಕರಿಸಿದರು (ಹೇಳಿದರು)

**ತಾತ್ಪರ್ಯ—** ಆಗ ಪೂರ್ಣಪ್ರಜ್ಞಾಚಾರ್ಯರು ಬ್ರಹ್ಮಸೂತ್ರಗಳ ಅರ್ಥದ ಉಪನ್ಯಾಸವನ್ನು ಕೂಡಲೇ ಉಚ್ಚ-ಸ್ವರದಿಂದ ಮಾಡಲು ಪ್ರಾರಂಭಿಸಿದರು. ಅವರ ಭಾಷ್ಯದಲ್ಲಿ ಶಬ್ದಗಳಾಗಲೀ ಅನ್ವಯವಾಗಲೀ ಕ್ಲಿಷ್ಟವಾದದ್ದು ಯಾವುದೂ ಇರಲಿಲ್ಲ. ಅವರು ಸೂತ್ರಗಳಿಗೆ ಹೊಂದಾಣಿಕೆಯಾಗುವ ಅರ್ಥಗಳನ್ನೇ ಹೇಳುತ್ತಿದ್ದರು. ಒಂದೊಂದು ಸಂದರ್ಭ-ಗಳಲ್ಲಿಯೂ ವೇದ ಮತ್ತು ಸ್ಮೃತಿಗಳ ಪ್ರಮಾಣವನ್ನು ಕೊಡುತ್ತಿದ್ದರು.ಮುಂದೆ ಆಚಾರ್ಯರು ಬರೆಯಲಿರುವ ಸೂತ್ರ-ಭಾಷ್ಯವೆಂಬ ನಾಟಕಕ್ಕೆ ಅವರ ಉಪನ್ಯಾಸವು ಸೂತ್ರಧಾರನಂತೆ ಇತ್ತು.

**ವಿಗ್ರಹ—**

**ಅಕ್ಲಿಷ್ಟಶಬ್ದಾನ್ವಯಂ—** ನ ಕ್ಲಿಷ್ಟಾ ಅಕ್ಲಿಷ್ಟಾ, ಶಬ್ದಾನಾಂ ಅನ್ವಯಃ ಶಬ್ದಾನ್ವಯಃ, ಅಕ್ಲಿಷ್ಟಃ ಶಬ್ದಾನ್ವಯಃ ಯಸ್ಮಿನ್ ತತ್ ಅಕ್ಲಿಷ್ಟಶಬ್ದಾನ್ವಯಂ ।

**ಸಂಭವತ್ಸೂತ್ರಾರ್ಥಂ—** ಸೂತ್ರಸ್ಯ ಅರ್ಥಃ ಸೂತ್ರಾರ್ಥಃ, ಸಂಭವತ್ಸೂತ್ರಾರ್ಥಃ ಯಸ್ಮಿನ್ ತತ್ ಸಂಭವತ್ಸೂತ್ರಾರ್ಥಂ ।

**ಉಚ್ಚೈರ್ವಚನಂ—** ಉಚ್ಚೈಃ ವಚನಂ ಯಸ್ಮಿನ್ ತತ್ ಉಚ್ಚೈರ್ವಚನಂ ।

**ಮಾನೀಕೃತಾಮ್ನಾಯಯುತಸ್ಮೃತಿ—** ಆಮ್ನಾಯೇವ ಯುತಾ ಸ್ಮೃತಿಶ್ಚ ಆಮ್ನಾಯಯುತಸ್ಮೃತಿಃ, ಮಾನೀಕೃತಾ ಆಮ್ನಾಯಯುತಸ್ಮೃತಿಃ ಯಸ್ಮಿನ್ ತತ್ ಮಾನೀಕೃತಾಮ್ನಾಯಯುತಸ್ಮೃತಿಃ ।

**ಏಷ್ಯತ್ಕಥಾತಾಂಡವಸೂತ್ರಧಾರಕಂ—** ಏಷ್ಯಂತೀ ಚ ಸಾ ಕಥಾ ಚ ಏಷ್ಯತ್ಕಥಾ, ಏಷ್ಯತ್ಕಥಾ ಏವ ತಾಂಡವಂ ಏಷ್ಯತ್ಕಥಾತಾಂಡವಂ, ಏಷ್ಯತ್ಕಥಾತಾಂಡವೇ ಸೂತ್ರಧಾರತ್ ಇವ ಏಷ್ಯತ್ಕಥಾತಾಂಡವ ಸೂತ್ರಧಾರಕಃ, ತತ್ ಏಷ್ಯತ್ಕಥಾತಾಂಡವಸೂತ್ರಧಾರಕಂ ।

**ಕ್ರಿಯಾಪದ— ಡುದಾಞ್ ದಾನೇ-** ಇತ್ಯಸ್ಮಾತ್ ಧಾತೋಃ ಆಙ್ ಇತ್ಯುಪಸರ್ಗಪೂರ್ವಕಾತ್ ಲಿಟ್ ಲಕಾರೇ ಪ್ರಥಮಪುರುಷೇ ಏಕವಚನೇ 'ಆದದೇ' ಇತಿ ರೂಪಮ್ ।

ಆದದೇ ಆದದಾತೇ ಆದದಿರೇ, ಆದದಿಷೇ ಆದದಾಥೇ ಆದದಿಧ್ವೇ, ಆದದೇ ಆದದಿವಹೇ ಆದದಿಮಹೇ।

★ ★ ★

ವಿವಿಧ ಪರವಾದಿಗಳ ಪರಾಭವ

**ಬುಭುತ್ಸಯಾ ಮತ್ಸರವರ್ಜಿತಾನ್ ಜನಾನ್**
**ಸಮತ್ಸರಾನ್ ವಾ ವಿಜಿಗೀಷಯಾಽಽಗತಾನ್ ।**
**ಶ್ರುತಪ್ರವೀಣಾನತಿತಾರ್ಕಿಕಾನ್ ಮುಹು-**
**ರ್ಭಂಗ್ಯಾನಯಾ ಭಂಗಮುಪಾನಿನಾಯ ಸಃ ॥ 22 ॥**

**ಪದಚ್ಛೇದ—** ಬುಭುತ್ಸಯಾ, ಮತ್ಸರವರ್ಜಿತಾನ್, ಜನಾನ್, ಸಮತ್ಸರಾನ್, ವಾ, ವಿಜಿಗೀಷಯಾ, ಆಗತಾನ್, ಶ್ರುತಪ್ರವೀಣಾನ್, ಅತಿತಾರ್ಕಿಕಾನ್, ಮುಹುಃ, ಭಂಗ್ಯಾ, ಅನಯಾ, ಭಂಗಂ, ಉಪಾನಿನಾಯ, ಸಃ ।

**ಅನ್ವಯ—** ಸಃ ಶ್ರುತಪ್ರವೀಣಾನ್ ಅತಿತಾರ್ಕಿಕಾನ್ ಮತ್ಸರವರ್ಜಿತಾನ್ ಬುಭುತ್ಸಯಾ ವಾ, ಸಮತ್ಸರಾನ್ ವಿಜಿಗೀಷಯಾ ಆಗತಾನ್ ಜನಾನ್ ಅನಯಾ ಭಂಗ್ಯಾ ಮುಹುಃ ಭಂಗಂ ಉಪಾನಿನಾಯ ।

**ಅನ್ವಯಾರ್ಥ—**

**ಸಃ** = ಆ ಮಧ್ವಾಚಾರ್ಯರು

**ಶ್ರುತಪ್ರವೀಣಾನ್** = ಶಾಸ್ತ್ರಶ್ರವಣದಿಂದ ನಿಪುಣರಾದವರೂ

**ಅತಿತಾರ್ಕಿಕಾನ್** = ಅತ್ಯಂತವಾಗಿ ತರ್ಕಶಾಸ್ತ್ರದಲ್ಲಿ ಚತುರರಾದವರೂ

**ಮತ್ಸರವರ್ಜಿತಾನ್** = ಹೊಟ್ಟೆಕಿಚ್ಚು ಇಲ್ಲದವರೂ

**ಬುಭುತ್ಸಯಾ** = ತತ್ವಗಳನ್ನು ತಿಳಿಯಬೇಕು ಎಂಬ ಇಚ್ಛೆಯಿಂದ (ಬಂದ)

**ವಾ** = ಮತ್ತು

**ಸಮತ್ಸರಾನ್** = ಅಸೂಯೆಯಿಂದ ಕೂಡಿದ

**ವಿಜಿಗೀಷಯಾ** = ಜಯಿಸುವ ಇಚ್ಛೆಯಿಂದ

**ಆಗತಾನ್** = ಬಂದ

**ಜನಾನ್** = ಜನರನ್ನು

**ಅನಯಾ ಭಂಗ್ಯಾ** = ಎರಡೂ ಪ್ರಕಾರಗಳಿಂದ

**ಮುಹುಃ** = ಮತ್ತೆ

**ಭಂಗಂ** = ಪರಾಜಯವನ್ನು

**ಉಪಾನಿನಾಯ** = ಹೊಂದಿಸಿದರು.

**ತಾತ್ಪರ್ಯ**— ಪೂರ್ಣಪ್ರಜ್ಞಾಚಾರ್ಯರಲ್ಲಿಗೆ ಎರಡು ವಿಧವಾದ ಜನರು ಬರುತ್ತಿದ್ದರು. ಅವರಲ್ಲಿ ಕೆಲವರು ಚೆನ್ನಾಗಿ ಶಾಸ್ತ್ರಶ್ರವಣ ಮಾಡಿದವರು, ತರ್ಕಶಾಸ್ತ್ರದಲ್ಲಿ ಪಾರಂಗತರು, ತತ್ವವನ್ನು ತಿಳಿಯಬೇಕೆಂಬ ಆಸೆಯಿಂದ ಬರುತ್ತಿದ್ದರು. ಅಂತಹವರಿಗೆ ಪೂರ್ಣಪ್ರಜ್ಞಾಚಾರ್ಯರು ಸರಿಯಾದ ಉಪದೇಶ ಮಾಡಿ ಅವರ ಮನಸ್ಸಿಗೆ ಸಮಾಧಾನವನ್ನುಂಟು ಮಾಡಿ ಯಾವ ಆಕ್ಷೇಪವೂ ಇಲ್ಲದಂತೆ ಮಾಡಿದರು. ಇನ್ನು ಕೆಲವರು ಹೊಟ್ಟೆಕಿಚ್ಚಿನಿಂದ ಇವರನ್ನು ಜಯಿಸಬೇಕೆಂಬ ಮನೋ-ಭಾವದಿಂದ ಬರುತ್ತಿದ್ದರು. ಅಂಥವರ ಪ್ರಶ್ನೆಗಳನ್ನು ಪೂರ್ಣಪ್ರಜ್ಞಾಚಾರ್ಯರು ಖಂಡಿಸಿ ಪ್ರತಿಯಾಗಿ ಉತ್ತರ ಹೇಳಲು ಬರದಂತೆ ಮಾಡಿ ಪರಾಭವಗೊಳಿಸಿದರು.

**ವಿಗ್ರಹ**—

**ಬುಭುತ್ಸಯಾ**— ಬೋದ್ಧುಂ ಇಚ್ಛಾ ಬುಭುತ್ಸಾ, ತಯಾ ಬುಭುತ್ಸಯಾ ।

**ಮತ್ಸರವರ್ಜಿತಾನ್**— ಮತ್ಸರೇಣ ವರ್ಜಿತಾಃ ಮತ್ಸರವರ್ಜಿತಾಃ, ತಾನ್ ಮತ್ಸರವರ್ಜಿತಾನ್ ।

**ಸಮತ್ಸರಾನ್**— ಮತ್ಸರೇಣ ಸಹ ವರ್ತಂತೇ ಇತಿ ಸಮತ್ಸರಾಃ ತಾನ್ ಸಮತ್ಸರಾನ್ ।

**ವಿಜಿಗೀಷಯಾ**— ವಿಜೇತುಂ ಇಚ್ಛಾ ವಿಜಿಗೀಷಾ, ತಯಾ ವಿಜಿಗೀಷಯಾ ।

**ಶ್ರುತಪ್ರವೀಣಾನ್**— ಶ್ರುತೇ ಪ್ರವೀಣಾಃ ಶ್ರುತಪ್ರವೀಣಾಃ, ತಾನ್ ಶ್ರುತಪ್ರವೀಣಾನ್ ।

**ಅತಿತಾರ್ಕಿಕಾನ್**— ತರ್ಕಾನ್ ಅತೀತ್ಯ ವರ್ತಂತೇ ಇತಿ ಅತಿತಾರ್ಕಿಕಾಃ, ತಾನ್ ಅತಿತಾರ್ಕಿಕಾನ್ ।

**ಕ್ರಿಯಾಪದ— ಉಪಪಾನಾಯ**- ಣೀಞ್ ಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ಣೀಞ್ ಧಾತೋಃ ಉಪ ಆಙ್ ಇತ್ಯುಪಸರ್ಗದ್ವಯಪೂರ್ವಕಾತ್ ಲಿಟಿ ಪ್ರಥಮಪುರುಷೇ ಏಕವಚನೇ ''ಉಪಾನಿನಾಯ'' ಇತಿ ರೂಪಮ್ ।

| | | |
|---|---|---|
| ಉಪಾನಿನಾಯ | ಉಪಾನಿನ್ಯತುಃ | ಉಪಾನಿನ್ಯುಃ, |
| ಉಪನಿನಯಿಥ, ಉಪನಿನೇಥ | ಉಪಾನಿನ್ಯಥುಃ | ಉಪಾನಿನ್ಯ, |
| ಉಪಾನಿನಾಯ, ಉಪನಿನಯ | ಉಪಾನಿನ್ಯಿವ | ಉಪಾನಿನ್ಯಿಮ ॥ |

★ ★ ★

ಮಧ್ಯಗೇಹರಿಂದ ಮಧ್ವದರ್ಶನ

**ಕದಾಚಿದೇನಂ ಪ್ರತಿಗಮ್ಯ ಸೌಮ್ಯಧೀಃ**
**ಸ ಮಧ್ಯಗೇಹಾರ್ಯವರಃ ಪ್ರಸೇದಿವಾನ್ ।**
**ಹೇತೋಃ ಕುತಶ್ಚಿದ್ವಿಮನೀಕೃತೋಽಪ್ಯಹೋ**
**ಗುಣಾಬ್ಧಿಲುಬ್ಧಃ ಸುಜನಃ ಪ್ರಸೀದತಿ ॥ 23 ॥**

**ಪದಚ್ಛೇದ—** ಕದಾಚಿತ್, ಏನಂ, ಪ್ರತಿಗಮ್ಯ, ಸೌಮ್ಯಧೀಃ, ಸಃ, ಮಧ್ಯಗೇಹಾರ್ಯವರಃ, ಪ್ರಸೇದಿವಾನ್, ಹೇತೋಃ, ಕುತಶ್ಚಿತ್, ವಿಮನೀಕೃತಃ, ಅಪಿ, ಅಹೋ, ಗುಣಾಬ್ಧಿಲುಬ್ಧಃ, ಸುಜನಃ, ಪ್ರಸೀದತಿ ।

**ಅನ್ವಯ—** ಸೌಮ್ಯಧೀಃ ಸಃ ಮಧ್ಯಗೇಹಾರ್ಯವರಃ, ಕುತಶ್ಚಿತ್ ಹೇತೋಃ ವಿಮನೀಕೃತೋಽಪಿ, ಕದಾಚಿತ್ ಏನಂ ಪ್ರತಿಗಮ್ಯ ಪ್ರಸೇದಿವಾನ್, ಅಹೋ ಗುಣಾಬ್ಧಿಲುಬ್ಧಃ ಸುಜನಃ ಪ್ರಸೀದತಿ ।

**ಅನ್ವಯಾರ್ಥ—**

**ಸೌಮ್ಯಧೀಃ** = ಸೌಮ್ಯವಾದ ಮನಸ್ಸಿನಿಂದ ಯುಕ್ತರಾದ
**ಸಃ ಮಧ್ಯಗೇಹಾರ್ಯವರಃ** = ಆ ಮಧ್ಯಗೇಹಭಟ್ಟರು ಎಂಬ ಸಜ್ಜನಶ್ರೇಷ್ಠರು
**ಕುತಶ್ಚಿತ್** = ಯಾವುದೋ ಒಂದು
**ಹೇತುನಾ** = ಕಾರಣದಿಂದ
**ವಿಮನೀಕೃತಃ ಅಪಿ** = ಮನಸ್ತಾಪವನ್ನು ಹೊಂದಿದ್ದರೂ
**ಕದಾಚಿತ್** = ಒಂದು ದಿನ
**ಏನಂ** = ಈ ಪೂರ್ಣಪ್ರಾಜ್ಞಾಚಾರ್ಯರನ್ನು
**ಪ್ರತಿಗಮ್ಯ** = ಸಮೀಪಿಸಿ
**ಪ್ರಸೇದಿವಾನ್** = ಪ್ರಸನ್ನರಾದರು.
**ಅಹೋ** = ಆಶ್ಚರ್ಯ
**ಗುಣಾಬ್ಧಿಲುಬ್ಧಃ ಸುಜನಃ** = ಗುಣಗಳೆಂಬ ಸಮುದ್ರದಲ್ಲಿ ಲೋಭವುಳ್ಳ ಸಜ್ಜನರು
**ಪ್ರಸೀದತಿ** = ಪ್ರಸನ್ನರಾಗುವರು.

**ತಾತ್ಪರ್ಯ—** ಶ್ರೀ ಆನಂದತೀರ್ಥರ ಪೂರ್ವಾಶ್ರಮದ ತಂದೆಯಾದ ಮಧ್ಯಗೇಹಭಟ್ಟರು ಸೌಮ್ಯವಾದ ಮನಸ್ಸುಳ್ಳವರು. ಅವರು ಹಿಂದೆ ಯಾವುದೋ ಒಂದು ಕಾರಣದಿಂದ ಸಿಟ್ಟುಗೊಂಡಿದ್ದರು. ಅವರು ಒಂದು ದಿನ ಪೂರ್ಣಪ್ರಜ್ಞಾಚಾರ್ಯರ ಬಳಿಗೆ ಬಂದು ನೋಡಿ ಪ್ರಸನ್ನರಾದರು. ಆಶ್ಚರ್ಯ! ಸಜ್ಜನರು ಗುಣಸಮುದ್ರರಾದ ಯೋಗ್ಯಪುರುಷರ ಗುಣಗಳ ಮೇಲಿನ ಪ್ರೀತಿಯಿಂದ ಪ್ರಸನ್ನರಾಗುತ್ತಾರೆ.

ವಿಗ್ರಹ—

**ಸೌಮ್ಯಧೀಃ—** ಸೌಮ್ಯಾ ಧೀಃ ಯಸ್ಯ ಸಃ ಸೌಮ್ಯಧೀಃ ।
**ಮಧ್ಯಗೇಹಾರ್ಯವರಃ—** ಮಧ್ಯಗೇಹಶ್ಚಾಸೌ ಆರ್ಯವರಶ್ಚ ಮಧ್ಯಗೇಹಾರ್ಯವರಃ ।
**ವಿಮನೀಕೃತ್ಯ—** ಅವಿಮನಾಃ ವಿಮನಾಃ ಕೃತಃ ಇತಿ ವಿಮನೀಕೃತಃ ।
**ಗುಣಾಬ್ಧಿಲುಬ್ಧಃ—** ಗುಣಾನಾಂ ಅಬ್ಧಿಃ ಗುಣಾಬ್ಧಿಃ, ಗುಣಾಬ್ಧೌ ಲುಬ್ಧಃ ಗುಣಾಬ್ಧಿಲುಬ್ಧಃ ।
**ಸುಜನಃ—** ಶೋಭನಶ್ಚಾಸೌ ಜನಶ್ಚ ಸುಜನಃ ।

**ಕ್ರಿಯಾಪದ—** ಪ್ರಸೀದತಿ- ಷದ್ಲೃವಿಶರಣಗತ್ಯವಸಾದನೇಷು ಇತಿ ವಿಶರಣಗತ್ಯವಸಾದನಾರ್ಥಕಾತ್ ಷದ್ಲೃ ಧಾತೋಃ ಲಟಿ ''ಪ್ರಸೀದತಿ'' ಇತಿ ರೂಪಮ್ ।

ಪ್ರಸೀದತಿ ಪ್ರಸೀದತಃ ಪ್ರಸೀದಂತಿ, ಪ್ರಸೀದಸಿ ಪ್ರಸೀದಥಃ ಪ್ರಸೀದಥ, ಪ್ರಸೀದಾಮಿ ಪ್ರಸೀದಾವಃ ಪ್ರಸೀದಾಮಃ

★ ★ ★

**ಆಚಾರ್ಯರ ಅಮೃತವಾಣಿ - ಕರ್ಣಪುಟಗಳಿಂದ ಪಾನ ಮಾಡಿದರು**

**ತೇಜೋऽಮೃತಂ ನಂದನಗಾತ್ರಪಾತ್ರಗಂ**
**ನೇತ್ರಾಂಜಲಿಭ್ಯಾಮಪಿಬತ್ ಸದಾऽವ್ಯಯಮ್ ।**
**ವಿದ್ಯಾಸುಧಾಂ ಚಾಸ್ಯ ವಚೋಮಹಾಘಟೇ**
**ಪೂರ್ಣಾಮಸೌ ಕರ್ಣಪುಟೇನ ಪಂಡಿತಃ ॥ 24 ॥**

**ಪದಚ್ಛೇದ—** ತೇಜೋऽಮೃತಂ, ನಂದನಗಾತ್ರಪಾತ್ರಗಂ, ನೇತ್ರಾಂಜಲಿಭ್ಯಾಂ, ಅಪಿಬತ್, ಸದಾ, ಅವ್ಯಯಂ, ವಿದ್ಯಾಸುಧಾಂ, ಚ, ಅಸ್ಯ, ವಚೋಮಹಾಘಟೇ, ಪೂರ್ಣಾಂ, ಅಸೌ, ಕರ್ಣಪುಟೇನ, ಪಂಡಿತಃ ।

**ಅನ್ವಯ—** ಪಂಡಿತಃ ಅಸೌ ನಂದನಗಾತ್ರಪಾತ್ರಗಂ ಸದಾ ಅವ್ಯಯಂ ತೇಜೋऽಮೃತಂ ನೇತ್ರಾಂಜಲಿಭ್ಯಾಂ ಅಪಿಬತ್. ಅಸ್ಯ ವಚೋಮಹಾಘಟೇ ಪೂರ್ಣಾಂ ವಿದ್ಯಾಸುಧಾಂ ಚ ಕರ್ಣಪುಟೇನ ಅಪಿಬತ್ ।

**ಅನ್ವಯಾರ್ಥ—**

**ಪಂಡಿತಃ** = ವಿದ್ವಾಂಸರಾದ
**ಅಸೌ** = ಈ ಮಧ್ಯಗೇಹಭಟ್ಟರು
**ನಂದನಗಾತ್ರಪಾತ್ರಗಂ** = ಮಗನಾದ ಶ್ರೀವಾಸುದೇವಾಚಾರ್ಯರ ಶರೀರವೆಂಬ ಪಾತ್ರೆಯಲ್ಲಿರುವ
**ಸದಾ** = ಯಾವಾಗಲೂ
**ಅವ್ಯಯಂ** = ಖರ್ಚಾಗದಿರುವ
**ತೇಜೋऽಮೃತಂ** = ತೇಜಸ್ಸೆಂಬ ಅಮೃತವನ್ನು
**ನೇತ್ರಾಂಜಲಿಭ್ಯಾಂ** = ಕಣ್ಣುಗಳೆಂಬ ಎರಡು ಬೊಗಸೆಗಳಿಂದ,
**ಅಪಿಬತ್** = ಕುಡಿದರು.
**ಅಸ್ಯ** = ಈ ಪೂರ್ಣಪ್ರಜ್ಞಾಚಾರ್ಯರ
**ವಚೋಮಹಾಘಟೇ** = ಮಾತುಗಳು ಎಂಬ ದೊಡ್ಡ ಗಡಿಗೆಯಲ್ಲಿ ತುಂಬಿರುವ
**ವಿದ್ಯಾಸುಧಾಂ** = ವಿದ್ಯೆಯೆಂಬ ಅಮೃತವನ್ನು
**ಕರ್ಣಪುಟೇನ** = ಕಿವಿಗಳೆಂಬ ದೊನ್ನೆಯಿಂದ
**ಅಪಿಬತ್** = ಕುಡಿದರು.

**ತಾತ್ಪರ್ಯ—** ಮಧ್ಯಗೇಹಭಟ್ಟರು ಕಣ್ಣುಗಳೆಂಬ ಬೊಗಸೆಗಳಿಂದ ಮಗನ ದೇಹದಲ್ಲಿರುವ ತೇಜಸ್ಸೆಂಬ ಅಮೃತವನ್ನು ಕಣ್ಣುಗಳ ಎವೆಯನ್ನು ಮುಚ್ಚದಂತೆ ನೋಡುತ್ತಾ ಆ ತೇಜಸ್ಸೆಂಬ ಅಮೃತವನ್ನು ಕುಡಿದರು. ವಿದ್ಯೆಯೆಂಬ ಅಮೃತವು ಅವರ ಮಾತುಗಳೆಂಬ ದೊಡ್ಡ ಗಡಿಗೆಗಳಲ್ಲಿ ತುಂಬಿದ್ದವು. ಆ ಅಮೃತವನ್ನು ಎರಡು ಕಿವಿಗಳಿಂದ ಕುಡಿದರು.

ವಿಗ್ರಹ—

**ತೇಜೋಽಮೃತಂ**— ತೇಜಃ ಏವ ಅಮೃತಂ, ತೇಜೋಽಮೃತಂ, ತತ್ ತೇಜೋಽಮೃತಂ ।

**ನಂದನಗಾತ್ರಪಾತ್ರಗಂ**— ನಂದನಸ್ಯ ಗಾತ್ರಂ ನಂದನಗಾತ್ರಂ, ನಂದನಗಾತ್ರಂ ಏವ ಪಾತ್ರಂ ನಂದನಗಾತ್ರ-ಪಾತ್ರಂ, ನಂದನಗಾತ್ರಪಾತ್ರಂ ಗಚ್ಛತಿ ಇತಿ ನಂದನಗಾತ್ರಪಾತ್ರಗಂ ।

**ನೇತ್ರಾಂಜಲಿಭ್ಯಾಂ**— ನೇತ್ರೇ ಅಂಜಲೀ ಇವ ನೇತ್ರಾಂಜಲೀ, ತಾಭ್ಯಾಂ ನೇತ್ರಾಂಜಲಿಭ್ಯಾಂ ।

**ಅವ್ಯಯಂ**— ನ ವಿದ್ಯತೇ ವ್ಯಯಃ ಯಸ್ಯ ತತ್ ಅವ್ಯಯಂ ।

**ವಿದ್ಯಾಸುಧಾಂ**— ವಿದ್ಯಾ ಏವ ಸುಧಾ ವಿದ್ಯಾಸುಧಾ, ತಾಂ ವಿದ್ಯಾಸುಧಾಂ ।

**ವಚೋಮಹಾಘಟೇ**— ವಚ ಏವ ಮಹಾಘಟಃ ವಚೋಮಹಾಘಟಃ, ತಸ್ಮಿನ್ ವಚೋಮಹಾಘಟೇ ।

**ಕರ್ಣಪುಟೇನ**— ಕರ್ಣಯೋಃ ಪುಟಂ ಕರ್ಣಪುಟಂ, ತೇನ ಕರ್ಣಪುಟೇನ ।

**ಪಂಡಿತಃ**— ಪಂಡಾ ಸಂಜಾತಾ ಅಸ್ಯ ಇತಿ ಪಂಡಿತಃ ।

**ಕ್ರಿಯಾಪದ**— ಪಾಪಾನೇ ಇತ್ಯಸ್ಮಾತ್ ದಾನಾರ್ಥಕಾತ್ ಲಙ್ ಪ್ರಥಮಪುರುಷೇ ಏಕವಚನೇ ''ಅಪಿಬತ್'' ಇತಿ ರೂಪಮ್ ।

ಅಪಿಬತ್ ಅಪಿಬತಾಂ ಅಪಿಬನ್, ಅಪಿಬಃ ಅಪಿಬತಂ ಅಪಿಬತ, ಅಪಿಬಂ ಅಪಿಬಾವ ಅಪಿಬಾಮ ॥

★ ★ ★

ಅಚ್ಯುತಪ್ರೇಕ್ಷರೇ ಮೊದಲಾದವರಿಂದ ಭಾಷ್ಯರಚನೆಗೆ ಪ್ರಾರ್ಥನೆ

**ಲೀಲಾವಿವಾದೇ ಗುರುಣಾ ಜಗದ್ಗುರೋಃ**
**ಪ್ರಸಂಗತಸ್ತತ್ರ ಚ ತಾದೃಶೇ ಸತಿ ।**
**ಸೂತ್ರಾರ್ಥವಿಚ್ಚೇತ್ಕುರು ಭಾಷ್ಯಮಂಜಸೇಽ-**
**ತ್ಯಾಕ್ಷೇಪಪೂರ್ವಂ ಗುರುರಭ್ಯಧಾದಿಮಮ್ ॥ 25 ॥**

**ಪದಚ್ಛೇದ**— ಲೀಲಾವಿವಾದೇ, ಗುರುಣಾ, ಜಗದ್ಗುರೋಃ, ಪ್ರಸಂಗತಃ, ತತ್ರ, ಚ, ತಾದೃಶೇ, ಸತಿ, ಸೂತ್ರಾರ್ಥವಿತ್, ಚೇತ್, ಕುರು, ಭಾಷ್ಯಂ, ಅಂಜಸಾ, ಇತಿ, ಆಕ್ಷೇಪಪೂರ್ವಂ, ಗುರುಃ, ಅಭ್ಯಧಾತ್, ಇಮಂ ।

**ಅನ್ವಯ**— ಜಗದ್ಗುರೋಃ ಗುರುಣಾ ಪ್ರಸಂಗತಃ ತತ್ರ ಚ ತಾದೃಶೇ ಲೀಲಾವಿವಾದೇ ಸತಿ ಗುರುಃ ಇಮಂ ಸೂತ್ರಾರ್ಥವಿತ್ ಚೇತ್ ಭಾಷ್ಯಂ ಅಂಜಸಾ ಕುರು ಇತಿ ಆಕ್ಷೇಪಪೂರ್ವಂ ಅಭ್ಯಧಾತ್ ।

**ಅನ್ವಯಾರ್ಥ**—

**ಜಗದ್ಗುರೋಃ** = ಜಗತ್ತಿಗೆ ಗುರುವಾಗಿರುವ ಪೂರ್ಣಪ್ರಜ್ಞಾಚಾರ್ಯರಿಗೆ

**ಗುರುಣಾ** = ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರೊಡನೆ

**ಪ್ರಸಂಗತಃ** = ಪ್ರಸಕ್ತಿಯಿಂದ

**ತತ್ರ ಚ** = ಆ ಪ್ರಸಂಗದಲ್ಲಿ

**ತಾದೃಶೇ** = ಹಿಂದೆ ಹೇಳಿದಂತಹ

**ಲೀಲಾವಿವಾದೇ ಸತಿ** = ಲೀಲೆಗಾಗಿ ಮಾಡಿರುವ ಕಲಹವು ಏರ್ಪಟ್ಟಾಗ

**ಗುರುಃ** = ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರು

**ಇಮಂ** = ಈ ಸರ್ವಜ್ಞಾಚಾರ್ಯರನ್ನು ಕುರಿತು

**ಸೂತ್ರಾರ್ಥವಿತ್ ಚೇತ್** = ನೀನು ಬ್ರಹ್ಮಸೂತ್ರಗಳ ಅರ್ಥವನ್ನು ತಿಳಿದವನಾಗಿದ್ದರೆ

**ಭಾಷ್ಯಂ ಅಂಜಸಾ ಕುರು** = ಭಾಷ್ಯವನ್ನು ಸರಿಯಾಗಿ ಮಾಡು

**ಇತಿ** = ಹೀಗೆಂದು

**ಆಕ್ಷೇಪಪೂರ್ವಂ** = ಆಕ್ಷೇಪಪೂರ್ವಕವಾಗಿ

**ಅಭ್ಯಧಾತ್** = ಹೇಳಿದರು.

**ತಾತ್ಪರ್ಯ—** ಅಚ್ಯುತಪ್ರೇಕ್ಷಾಚಾರ್ಯರೂ ಹಾಗೂ ಪೂರ್ಣಪ್ರಜ್ಞಾಚಾರ್ಯರೂ ಒಂದು ದಿನ ತತ್ತ್ವವಿಚಾರ ಮಾಡುತ್ತಿದ್ದಾಗ ಬ್ರಹ್ಮಸೂತ್ರತಾತ್ಪರ್ಯ ವಿಷಯದಲ್ಲಿ ವಿನೋದದ ಕಲಹವು ಉಂಟಾಯಿತು. ಸೂತ್ರದ ಭಾವವನ್ನೂ, ಸಂಕರ ಭಾಷ್ಯದ ಭಾವವನ್ನೂ ಚೆನ್ನಾಗಿ ವಿಮರ್ಶಿಸಿದರೆ ಸೂತ್ರದ ಭಾವಕ್ಕೆ ಭಾಷ್ಯವು ವಿರುದ್ಧವಾಗಿದೆ ಎಂದು ಶ್ರೀಪೂರ್ಣ-ಪ್ರಜ್ಞಾಚಾರ್ಯರು ವಾದಿಸಿದರು. ಆಗ ಅಚ್ಯುತಪ್ರೇಕ್ಷಾಚಾರ್ಯರು ಕೋಪಿಸಿಕೊಂಡು, 'ನೀನು ಸೂತ್ರಾರ್ಥಗಳನ್ನು ತಿಳಿದವನಾಗಿದ್ದರೆ ನೀನೇ ನಿರ್ದುಷ್ಟವಾದ ಭಾಷ್ಯವನ್ನು ಮಾಡು' ಎಂದು ಆಕ್ಷೇಪಪೂರ್ವಕವಾಗಿ ಹೇಳಿದರು.

**ವಿಗ್ರಹ—**

**ಲೀಲಾವಿವಾದೇ—** ಲೀಲಯಾ ವಿವಾದಃ ಲೀಲಾವಿವಾದಃ, ತಸ್ಮಿನ್ ಲೀಲಾವಿವಾದೇ ।

**ಜಗದ್ಗುರೋಃ—** ಜಗತಾಂ ಗುರುಃ ಜಗದ್ಗುರುಃ, ತಸ್ಯ ಜಗದ್ಗುರೋಃ ।

**ಪ್ರಸಂಗತಃ—** ಪ್ರಸಂಗಾತ್ ಇತಿ ಪ್ರಸಂಗತಃ ।

**ತಾದೃಶೇ—** ತಸ್ಯ ಸದೃಶಃ ತಾದೃಶಃ, ತಸ್ಮಿನ್ ತಾದೃಶೇ ।

**ಸೂತ್ರಾರ್ಥವಿತ್—** ಸೂತ್ರಾರ್ಥಂ ವೇತ್ತಿ ಇತಿ ಸೂತ್ರಾರ್ಥವಿತ್ ।

**ಆಕ್ಷೇಪಪೂರ್ವಂ—** ಆಕ್ಷೇಪಃ ಪೂರ್ವಃ ಯಸ್ಮಿನ್ ಕರ್ಮಣಿ ತತ್ ಯಥಾ ಭವತಿ ತಥಾ ಆಕ್ಷೇಪಪೂರ್ವಂ ।

**ಕ್ರಿಯಾಪದ— ಅಭ್ಯಧಾತ್-** ಅಭಿ ಇತ್ಯುಪಸರ್ಗಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತ್ಯಸ್ಮಾತ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅಭ್ಯಧಾತ್'' ಇತಿ ರೂಪಮ್ ।

ಅಭ್ಯಧಾತ್ ಅಭ್ಯಧಾತಾಂ ಅಭ್ಯಧುಃ, ಅಭ್ಯಧಾಃ ಅಭ್ಯಧಾತಂ ಅಭ್ಯಧಾತ, ಅಭ್ಯಧಾಂ ಅಭ್ಯಧಾವ ಅಭ್ಯಧಾಮ ॥

★ ★ ★

ಶ್ರೀಮದಾಚಾರ್ಯರಿಂದ ಭಾಷ್ಯರಚನೆಗೆ ಸಂಕಲ್ಪ

**ವಿಧಾನಮಾತ್ರಂ ತದುಪಾದದೇ ತದಾ**

**ಪಯೋ ಯಥಾಽಚ್ಛಂ ಪರಮಃ ಸ ಹಂಸರಾಟ್ ।**

**ತಲ್ಲೀನಮಾಕ್ಷೇಪಮುಪೈಕ್ಷತಾಫಲಂ**

**ವಾರೀವ ಸಂತೋ ಹಿ ಗುಣಾಂಶತೋಷಿಣಃ ॥ 26 ॥**

**ಪದಚ್ಛೇದ—** ವಿಧಾನಮಾತ್ರಂ, ತತ್, ಉಪಾದದೇ, ತದಾ, ಪಯಃ, ಯಥಾ, ಅಚ್ಛಂ, ಪರಮಃ, ಸಃ, ಹಂಸರಾಟ್, ತಲ್ಲೀನಂ, ಆಕ್ಷೇಪಂ, ಉಪೈಕ್ಷತ, ಅಫಲಂ, ವಾರಿ, ಇವ, ಸಂತಃ, ಹಿ, ಗುಣಾಂಶತೋಷಿಣಃ ।

**ಅನ್ವಯ—** ಪರಮಃ ಹಂಸರಾಟ್ ಸಃ, ತದಾ ಅಚ್ಛಂ ಪಯಃ ಯಥಾ, ತತ್ ವಿಧಾನಮಾತ್ರಂ ಉಪಾದದೇ, ತಲ್ಲೀನಂ ಅಫಲಂ ಆಕ್ಷೇಪಂ ವಾರಿ ಇವ ಉಪೈಕ್ಷತ, ಹಿ ಸಂತಃ ಗುಣಾಂಶತೋಷಿಣಃ ।

**ಅನ್ವಯಾರ್ಥ—**

**ಪರಮಃ ಹಂಸರಾಟ್** = ಪರಮಹಂಸರಿಗೆ(ಯತಿಗಳಿಗೆ) ರಾಜರಂತಿರುವ

**ಸಃ** = ಆ ಪೂರ್ಣಪ್ರಜ್ಞಾಚಾರ್ಯರು

**ತದಾ** = ಆಗ

**ವಿಧಾನಮಾತ್ರಂ** = ''ಮಾಡು'' ಎಂಬ ವಿಧಾನಮಾತ್ರವನ್ನು

**ಅಚ್ಛಂ ಪಯಃ** = ನಿರ್ಮಲವಾದ ಹಾಲನ್ನು ಹೇಗೋ ಹಾಗೆ

**ಉಪಾದದೇ** = ಸ್ವೀಕರಿಸಿದರು.

**ತಲ್ಲೀನಂ ಅಫಲಂ** = ಆ ಮಾತುಗಳಲ್ಲಿ ಅಡಗಿರುವ ನಿಷ್ಫಲವಾಗಿರುವ

**ಆಕ್ಷೇಪಂ** = ಆಕ್ಷೇಪವನ್ನು

**ವಾರಿ ಇವ** = ನೀರು ಎಂಬಂತೆ ..

**ಉಪೈಕ್ಷತ ಹಿ** = ಉಪೇಕ್ಷಿಸಿದರು. ಏಕೆಂದರೆ

**ಸಂತಃ** = ಸಜ್ಜನರು

**ಗುಣಾಂಶತೋಷಿಣಃ** = ಗುಣಗಳಲ್ಲಿ ಒಂದು ಅಂಶದಿಂದ ಸಂತೋಷಿಸುವರು.

**ತಾತ್ಪರ್ಯ—** ''ನೀನು ಸೂತ್ರಾರ್ಥಗಳನ್ನು ತಿಳಿದಿದ್ದರೆ ಭಾಷ್ಯವನ್ನು ಬರೆ'' ಎಂದು ಅಚ್ಯುತಪ್ರೇಕ್ಷಾಚಾರ್ಯರು ಆಕ್ಷೇಪವನ್ನು ಮಾಡಿ ಹೇಳಿದರು. ಆ ಮಾತಿನಲ್ಲಿ ಎರಡು ಅಂಶಗಳಿವೆ. ಆಕ್ಷೇಪವು ಮೊದಲನೆ ಅಂಶ, ಎರಡನೆಯದು ಭಾಷ್ಯ ಮಾಡು ಎಂಬ ಆಜ್ಞೆ. ಇವುಗಳಲ್ಲಿ ಯಾವುದನ್ನು ಪೂರ್ಣಪ್ರಜ್ಞಾಚಾರ್ಯರು ಸ್ವೀಕರಿಸಿದರು ಎಂದು ಕೇಳಿದರೆ ಅದಕ್ಕೆ ಉತ್ತರವನ್ನು ಕೊಡುತ್ತಾರೆ. ಶ್ರೀಪೂರ್ಣಪ್ರಜ್ಞಾಚಾರ್ಯರು ಪರಮಹಂಸರಾಜರಲ್ಲವೇ ? ಹಂಸಪಕ್ಷಿಯ ಮುಂದೆ ನೀರಿನಿಂದ ಮಿಶ್ರಿತವಾದ ಹಾಲನ್ನು ಇಟ್ಟರೆ ನೀರನ್ನು ಬಿಟ್ಟು ಹಾಲನ್ನು ಮಾತ್ರ ಸ್ವೀಕರಿಸುತ್ತದೆ. ಅಂತೆಯೇ ಸಜ್ಜನರು ಗುಣಾಂಶಗಳಿಂದ ಸಂತೋಷಿಸುವರಲ್ಲವೇ ?

**ವಿಗ್ರಹ—**

**ವಿಧಾನಮಾತ್ರಂ—** ಕೇವಲಂ ವಿಧಾನಂ ವಿಧಾನಮಾತ್ರಂ, ತತ್ ವಿಧಾನಮಾತ್ರಂ ।

**ಹಂಸರಾಟ್—** ಹಂಸಾನಾಂ ರಾಟ್ ಹಂಸರಾಟ್ ।

**ಗುಣಾಂಶತೋಷಿಣಃ—** ಗುಣಾನಾಂ ಅಂಶಾಃ ಗುಣಾಂಶಾಃ, ಗುಣಾಂಶೈಃ ತೋಷಿಣಃ ಗುಣಾಂಶತೋಷಿಣಃ ।

**ಕ್ರಿಯಾಪದ— ಉಪಾದದೇ-** ಉಪ ಇತ್ಯುಪಸರ್ಗಪೂರ್ವಕಾತ್ ಡು ದಾಞ್ ದಾನೇ ಇತ್ಯಸ್ಮಾತ್ ಲಿಟಿ ಆತ್ಮನೇ-ಪದಿನಃ ಪ್ರಥಮಪುರುಷೇ ಏಕವಚನೇ ''ಉಪಾದದೇ'' ಇತಿ ರೂಪಮ್ ।

ಉಪಾದದೇ ಉಪಾದದಾತೇ ಉಪಾದದಿರೇ, ಉಪಾದದಿಷೇ ಉಪಾದದಾಥೇ ಉಪಾದದಿಧ್ವೇ,
ಉಪಾದದೇ ಉಪಾದದಿವಹೇ ಉಪಾದದಿಮಹೇ ॥

**ಉಪೈಕ್ಷತ-** ಉಪ ಇತ್ಯುಪಸರ್ಗಪೂರ್ವಕಾತ್ ಈಕ್ಷದರ್ಶನೇ ಇತ್ಯಸ್ಮಾತ್ ಈಕ್ಷಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ಉಪೈಕ್ಷತ ಇತಿ ರೂಪಮ್ ।

ಉಪೈಕ್ಷತ ಉಪೈಕ್ಷೇತಾಂ ಉಪೈಕ್ಷಂತ, ಉಪೈಕ್ಷಥಾಃ ಉಪೈಕ್ಷೇಥಾಂ ಉಪೈಕ್ಷಧ್ವಂ, ಉಪೈಕ್ಷೇ ಉಪೈಕ್ಷಾವಹಿ
ಉಪೈಕ್ಷಾಮಹಿ ॥

★ ★ ★

ಜ್ಯೇಷ್ಠಯತಿಗಳಾದ ಆಚಾರ್ಯರಲ್ಲಿ ಪ್ರಾರ್ಥನೆ

**ವೈರಾಗ್ಯವೈಯಾತ್ಯಸುವಾಕ್ತ್ವಪೂರ್ವಕೈ-**
**ರ್ಯುಕ್ತೋ ಗುಣೈಃ ಪಾರಮಹಂಸ್ಯಭೂಷಣೈಃ ।**
**ಜ್ಯೇಷ್ಠೋ ಯತಿರ್ಯೋ ಲಿಕುಚಾನ್ವಯೋ-**
**ದ್ಭವಸ್ತಂ ಭೂರಿಭಕ್ತಿಸ್ಸ ಕದಾಚಿದಬ್ರವೀತ್ ॥ 27 ॥**

**ಪದಚ್ಛೇದ—** ವೈರಾಗ್ಯವೈಯಾತ್ಯಸುವಾಕ್ತ್ವಪೂರ್ವಕೈಃ, ಯುಕ್ತಃ, ಗುಣೈಃ, ಪಾರಮಹಂಸ್ಯಭೂಷಣೈಃ, ಜ್ಯೇಷ್ಠಃ, ಯತಿಃ, ಯಃ, ಲಿಕುಚಾನ್ವಯೋದ್ಭವಃ, ತಂ, ಭೂರಿಭಕ್ತಿಃ, ಸಃ, ಕದಾಚಿತ್, ಅಬ್ರವೀತ್ ।

**ಅನ್ವಯ—** ಪಾರಮಹಂಸ್ಯಭೂಷಣೈಃ ವೈರಾಗ್ಯವೈಯಾತ್ಯಸುವಾಕ್ತ್ವಪೂರ್ವಕೈಃ ಗುಣೈಃ ಯುಕ್ತಃ, ಭೂರಿಭಕ್ತಿಃ ಲಿಕುಚಾನ್ವಯೋದ್ಭವಃ ಜ್ಯೇಷ್ಠಃ ಯಃ ಯತಿಃ, ಸಃ ಕದಾಚಿತ್ ತಂ ಅಬ್ರವೀತ್ ।

**ಅನ್ವಯಾರ್ಥ—**

**ಪಾರಮಹಂಸ್ಯಭೂಷಣೈಃ** = ಪರಮಹಂಸಾಶ್ರಮಕ್ಕೆ ಅಲಂಕಾರರಾಗಿರುವ

**ವೈರಾಗ್ಯವೈಯಾತ್ಯಸುವಾಕ್ತ್ವಪೂರ್ವಕೈಃ ಗುಣೈಃ** = ಐಹಿಕ ಆಮುಷ್ಮಿಕ ಫಲಭೋಗದಲ್ಲಿ ಆಸೆ ಇಲ್ಲದಿರುವಿಕೆ, ಹಿಡಿದ ಹಟವನ್ನು ಬಿಡದಿರುವಿಕೆ, ಒಳ್ಳೆಯ ಮಾತುಗಳು ಮುಂತಾದ ಗುಣಗಳಿಂದ

**ಯುಕ್ತಃ** = ಯುಕ್ತರಾಗಿರುವ

**ಭೂರಿಭಕ್ತಿಃ** = ಹರಿಯಲ್ಲಿ ಅಧಿಕವಾದ ಭಕ್ತಿಯುಳ್ಳ,

**ಲಿಕುಚಾನ್ವಯೋದ್ಭವಃ** = ಲಿಕುಚ ವಂಶದಲ್ಲಿ ಹುಟ್ಟಿದ

**ಜ್ಯೇಷ್ಠಃ ಯಃ ಯತಿಃ** = ಆಶ್ರಮದಲ್ಲಿ ಹಿರಿಯರಾದ ಯಾವ ಯತಿಗಳಿದ್ದರೋ

**ಸಃ** = ಅವರು

**ಕದಾಚಿತ್** = ಒಂದಾನೊಂದು ದಿನ,

**ತಂ** = ಮಧ್ವಾಚಾರ್ಯರನ್ನು ಕುರಿತು

**ಅಬ್ರವೀತ್** = ಹೇಳಿದರು.

**ತಾತ್ಪರ್ಯ—** ಪೆಜತ್ತಾಯ ವಂಶದಲ್ಲಿ (ಲಿಕುಚವಂಶದಲ್ಲಿ) ಹುಟ್ಟಿದ್ದ ಒಬ್ಬರು ಹಿರಿಯ ಯತಿಗಳು ಪರಮಹಂಸ-ಸಂನ್ಯಾಸಕ್ಕೆ ಅಲಂಕಾರವಾಗಿರುವ ವೈರಾಗ್ಯ, ಧೈರ್ಯ, ಒಳ್ಳೆಯ ಮಾತುಗಳು ಮೊದಲಾದ ಗುಣಗಳಿಂದ ಯುಕ್ತರಾಗಿದ್ದರು. ಶ್ರೀಹರಿಯಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿದ್ದರು. ಆ ಯತಿಗಳು ಒಂದುದಿನ ಶ್ರೀಮಧ್ವಾಚಾರ್ಯರನ್ನು ಕುರಿತು ಹೀಗೆ ಹೇಳಿದರು.

**ವಿಗ್ರಹ—**

**ವೈರಾಗ್ಯವೈಯಾತ್ಯಸುವಾಕ್ತ್ವಪೂರ್ವಕೈಃ—** ವಿಗತಃ ರಾಗಃ ಯಸ್ಯ ಸಃ ವಿರಾಗಃ, ವಿರಾಗಸ್ಯ ಭಾವಃ ವೈರಾಗ್ಯಂ, ವಿಯಾತಸ್ಯ ಭಾವಃ ವೈಯಾತ್ಯಂ, ಶೋಭನಾ ವಾಕ್ ಯಸ್ಯ ಸಃ ಸುವಾಕ್, ಸುವಾಚಃ ಭಾವಃ ಸುವಾಕ್ತ್ವಂ, ವೈರಾಗ್ಯಂ ಚ ವೈಯಾತ್ಯಂ ಚ ಸುವಾಕ್ತ್ವಂ ಚ ವೈರಾಗ್ಯವೈಯಾತ್ಯಸುವಾಕ್ತ್ವಾನಿ, ವೈರಾಗ್ಯ-ವೈಯಾತ್ಯಸುವಾಕ್ತ್ವಾನಿ ಪೂರ್ವಾನಿ ಯೇಷಾಂ ತಾನಿ ವೈರಾಗ್ಯವೈಯಾತ್ಯಸುವಾಕ್ತ್ವಪೂರ್ವಾನಿ, ತೈಃ ವೈರಾಗ್ಯವೈಯಾತ್ಯಸುವಾಕ್ತ್ವಪೂರ್ವಕೈಃ ।

**ಪಾರಮಹಂಸ್ಯಭೂಷಣೈಃ—** ಪರಮಾಶ್ಚ ತೇ ಹಂಸಾಶ್ಚ ಪರಮಹಂಸಾಃ, ಪರಮಹಂಸಾನಾಂ ಇದಂ ಪಾರಮ-ಹಂಸ್ಯಂ, ಪಾರಮಹಂಸ್ಯ ಭೂಷಣಾನಿ ಪಾರಮಹಂಸ್ಯಭೂಷಣಾನಿ, ತೈಃ ಪಾರಮಹಂಸ್ಯಭೂಷಣೈಃ ।

**ಲಿಕುಚಾನ್ವಯೋದ್ಭವಃ—** ಲಿಕುಚಃ ಅನ್ವಯಃ ಲಿಕುಚಾನ್ವಯಃ, ಲಿಕುಚಾನ್ವಯೇ ಉದ್ಭವಃ ಯಸ್ಯ ಸಃ ಲಿಕುಚಾನ್ವಯೋದ್ಭವಃ ।

**ಭೂರಿಭಕ್ತಿಃ—** ಭೂರಿಃ ಭಕ್ತಿಃ ಯಸ್ಯ ಸಃ ಭೂರಿಭಕ್ತಿಃ ।

**ಕ್ರಿಯಾಪದ— ಅಬ್ರವೀತ್-** ಬ್ರೂಞ್ ವ್ಯಕ್ತಾಯಾಂ ವಾಚಿ ವ್ಯಕ್ತವಾಗರ್ಥಕಾತ್ ಲಙ್ ಪ್ರಥಮಪುರುಷೇ ಏಕವಚನೇ ''ಅಬ್ರವೀತ್'' ಇತಿ ರೂಪಮ್।

ಅಬ್ರವೀತ್ ಅಬ್ರೂತಾಂ ಅಬ್ರೂವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ ॥

★ ★ ★

ಬ್ರಹ್ಮಸೂತ್ರಗಳಿಗೆ ಮತ್ತು ಉಪನಿಷತ್ತುಗಳಿಗೆ ಸಮ್ಮತವಾದ ಅರ್ಥ ಬರೆಯಲು ಪ್ರಾರ್ಥನೆ

**ವಿರೋಧಿ ವೇದಾಂತಕೃತಾಂತಸಂಪದಾಂ ಭಾಷ್ಯಾದಿಕಂ ಚೇದಿದಮಸ್ತು ಕಾ ಕ್ಷತಿಃ ।**
**ಅಸ್ಮಭ್ಯಮಾಚಕ್ಷ್ವ ವಿಚಕ್ಷಣೋಚಿತಂ ಭಾವಂ ತು ಸೂತ್ರೋಪನಿಷದ್ವಿವಕ್ಷಿತಮ್ ॥ 28 ॥**

**ಪದಚ್ಛೇದ—** ವಿರೋಧಿ, ವೇದಾಂತಕೃತಾಂತಸಂಪದಾಂ, ಭಾಷ್ಯಾದಿಕಂ, ಚೇತ್, ಇದಂ, ಅಸ್ತು, ಕಾ, ಕ್ಷತಿಃ, ಅಸ್ಮಭ್ಯಂ, ಆಚಕ್ಷ್ವ, ವಿಚಕ್ಷಣ, ಉಚಿತಂ, ಭಾವಂ, ತು, ಸೂತ್ರೋಪನಿಷದ್ ವಿವಕ್ಷಿತಂ ।

**ಅನ್ವಯ—** ಇದಂ ಭಾಷ್ಯಾದಿಕಂ ವೇದಾಂತಕೃತಾಂತಸಂಪದಾಂ ವಿರೋಧಿ ಚೇತ್ ಅಸ್ತು, ಕಾ ಕ್ಷತಿಃ ? ವಿಚಕ್ಷಣ! ಅಸ್ಮಭ್ಯಂ ತು ಸೂತ್ರೋಪನಿಷದ್ ವಿವಕ್ಷಿತಂ ಉಚಿತಂ ಭಾವಂ ಆಚಕ್ಷ್ವ ।

**ಅನ್ವಯಾರ್ಥ—**

**ಇದಂ ಭಾಷ್ಯಾದಿಕಂ** = ಈ(ಸಂಕರನಿಂದ ಬರೆಯಲ್ಪಟ್ಟ) ಭಾಷ್ಯ ಮೊದಲಾದವು
**ವೇದಾಂತಕೃತಾಂತಸಂಪದಾಂ** = ಬ್ರಹ್ಮಮೀಮಾಂಸಾಶಾಸ್ತ್ರ ಎಂಬ ಸಂಪತ್ತುಗಳಿಗೆ
**ವಿರೋಧಿ ಚೇತ್** = ವಿರುದ್ಧವಾಗಿರುವುದಾದರೆ
**ಅಸ್ತು** = ಇರಲಿ,
**ಕಾ ಕ್ಷತಿಃ** = ಏನು ಬಾಧಕ ?
**ವಿಚಕ್ಷಣ !** = ಸಮರ್ಥರಾದ ಮಧ್ವಾಚಾರ್ಯರೇ
**ಅಸ್ಮಭ್ಯಂ ತು** = ನಮಗಾದರೋ
**ಸೂತ್ರೋಪನಿಷದ್ವಿವಕ್ಷಿತಂ** = ಬ್ರಹ್ಮಸೂತ್ರಗಳಿಗೂ ಉಪನಿಷತ್ತುಗಳಿಗೂ ಒಪ್ಪಿಗೆಯಾಗುವ
**ಉಚಿತಂ ಭಾವಂ** = ಯೋಗ್ಯವಾದ ಅಭಿಪ್ರಾಯವನ್ನು
**ಆಚಕ್ಷ್ವ** = ಹೇಳಿರಿ.

**ತಾತ್ಪರ್ಯ—** ಸಂಕರನಿಂದ ಬರೆಯಲ್ಪಟ್ಟ ಬ್ರಹ್ಮಸೂತ್ರಭಾಷ್ಯ ಉಪನಿಷದ್ಭಾಷ್ಯ ಮುಂತಾದವುಗಳು ಬ್ರಹ್ಮಸೂತ್ರ-ಗಳಿಗೂ ಉಪನಿಷತ್ತುಗಳಿಗೂ ತಪ್ಪಾದ ಅರ್ಥಗಳನ್ನು ತಿಳಿಸುತ್ತವೆ. ಆದ್ದರಿಂದ ಬ್ರಹ್ಮಸೂತ್ರಗಳಿಂದಲೂ ಉಪನಿಷತ್ತು-ಗಳಿಂದಲೂ ತಿಳಿಯುವ ಅರ್ಥವು ವಿರುದ್ಧವಾಗಿದ್ದರೆ ಅದು ಹಾಗೆಯೇ ಇರಲಿ, ಹೇ ಸಮರ್ಥರಾದ ಪೂರ್ಣಪ್ರಜ್ಞಾ-ಚಾರ್ಯರೇ ಬ್ರಹ್ಮಸೂತ್ರಗಳಿಗೆ ಮತ್ತು ಉಪನಿಷತ್ತುಗಳಿಗೆ ಸಮ್ಮತವಾದ ಯೋಗ್ಯವಾದ ಅರ್ಥವನ್ನು ನೀವೇ ಹೇಳಿರಿ ಎಂದು ಹಿರಿಯ ಯತಿಗಳು ಹೇಳಿದರು.

**ವಿಗ್ರಹ—**

**ವಿರೋಧಿ—** ವಿರೋಧಃ ಅಸ್ಯ ಅಸ್ತಿ ಇತಿ ವಿರೋಧಿ ।

**ವೇದಾಂತಕೃತಾಂತಸಂಪದಾಂ—** ವೇದಾಂತಾನಾಂ ಕೃತಾಂತಃ ವೇದಾಂತಕೃತಾಂತಃ, ವೇದಾಂತಕೃತಾಂತಸ್ಯ ಸಂಪದಃ ವೇದಾಂತಕೃತಾಂತಸಂಪದಃ, ತೇಷಾಂ ವೇದಾಂತಕೃತಾಂತಸಂಪದಾಂ ।

**ಭಾಷ್ಯಾದಿಕಂ—** ಭಾಷ್ಯಂ ಆದಿ ಯಸ್ಯ ತತ್ ಭಾಷ್ಯಾದಿಕಂ ।

**ಸೂತ್ರೋಪನಿಷದ್ವಿವಕ್ಷಿತಂ—** ಸೂತ್ರಾಣಿ ಚ ಉಪನಿಷದಶ್ಚ ಸೂತ್ರೋಪನಿಷದಃ, ಸೂತ್ರೋಪನಿಷದಾಂ ವಿಶೇಷೇಣ ವಕ್ತುಂ ಇಷ್ಟಂ ಸೂತ್ರೋಪನಿಷದ್ವಿವಕ್ಷಿತಂ ।

**ಕ್ರಿಯಾಪದ—** ಅಸಭುವಿ- ಇತ್ಯಸ್ಮಾತ್ ಅಸ ಧಾತೋಃ ಲೋಟಿ ಪ್ರಥಮಪುರುಷೇ ಏಕವಚನೇ ''ಅಸ್ತು'' ಇತಿ ರೂಪಮ್ ।

ಅಸ್ತು ಸ್ತಾತ್, ಸ್ತಾಂ ಸಂತು, ಏಧಿ ಸ್ತಾತ್, ಸ್ತಂ ಸ್ತ, ಅಸಾನಿ ಅಸಾವ ಅಸಾಮ ॥

**ಆಚಕ್ಷ್ವ-** ಚಕ್ಷಿಙ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಲೋಟಿ ಮಧ್ಯಮಪುರುಷೇ ಏಕವಚನೇ ''ಆಚಕ್ಷ್ವ'' ಇತಿ ರೂಪಮ್ ।

ಆಚಕ್ಷತಾಂ ಆಚಕ್ಷೇತಾಂ ಆಚಕ್ಷಂತಾಂ, ಆಚಕ್ಷ್ವ ಆಚಕ್ಷೇಥಾಂ ಆಚಕ್ಷಧ್ವಂ, ಆಚಕ್ಷೇ ಆಚಕ್ಷ್ವಹಿ ಆಚಕ್ಷ್ಮಹಿ ॥

★ ★ ★

ಶ್ರೀಪೂರ್ಣಪ್ರಜ್ಞರ ವ್ಯಾಖ್ಯಾನಚಂದ್ರಿಕೆ

**ಇತ್ಯಸ್ಯ ವಾಚಾ ಶರದೇವ ಭಾಸಿತಾ ಯದಾಽಖಿಲಾಶಾ ಶುಭಪೂರ್ಣಯಾ ಬಭೌ ।**
**ಪ್ರಮೋದತೀರ್ಥಾನನಚಂದ್ರಚಂದ್ರಿಕಾ ವ್ಯಾಖ್ಯಾಭಿಧಾ ವಿಷ್ಣುಪದಪ್ರಕಾಶಿನೀ ॥ 29 ॥**

**ಪದಚ್ಛೇದ—** ಇತಿ, ಅಸ್ಯ, ವಾಚಾ, ಶರದಾ, ಇವ, ಭಾಸಿತಾ, ಯದಾ, ಅಖಿಲಾಶಾ, ಶುಭಪೂರ್ಣಯಾ, ಬಭೌ, ಪ್ರಮೋದತೀರ್ಥಾನನಚಂದ್ರಚಂದ್ರಿಕಾ, ವ್ಯಾಖ್ಯಾಭಿದಾ ವಿಷ್ಣುಪದಪ್ರಕಾಶಿನೀ ।

**ಅನ್ವಯ—** ಇತಿ ಶುಭಪೂರ್ಣಯಾ ಅಸ್ಯ ವಾಚಾ, ಅಖಿಲಾಶಾ ಶರದಾ ಇವ ಯದಾ ಭಾಸಿತಾ, ತದಾ ವ್ಯಾಖ್ಯಾಭಿಧಾ ವಿಷ್ಣುಪದಪ್ರಕಾಶಿನೀ ಪ್ರಮೋದತೀರ್ಥಾನನಚಂದ್ರಚಂದ್ರಿಕಾ ಬಭೌ ।

**ಅನ್ವಯಾರ್ಥ—**

**ಇತಿ** = ಈ ರೀತಿಯಾದ

**ಶುಭಪೂರ್ಣಯಾ** = ಮಂಗಳಕರವಿಷಯದಿಂದ ಪೂರ್ಣವಾಗಿರುವ, ಸಜ್ಜನರುಗಳ ಅಭೀಷ್ಟರೂಪವಾಗಿರುವ

**ಅಸ್ಯ** = ಈ ಜ್ಯೇಷ್ಠ ಯತಿಗಳ

**ವಾಚಾ** = ಮಾತಿನಿಂದ

**ಅಖಿಲಾಶಾ** = ಸರ್ವ ಸಜ್ಜನರ ಅಭಿಲಾಷೆಯು,

**ಶರದಾ ಇವ** = ಶರದ್ ಋತುವಿನಿಂದ ಹೇಗೋ ಹಾಗೆ

**ಯದಾ ಭಾಸಿತಾ** = ಯಾವಾಗ ಪ್ರಕಾಶಿಸಿತೋ,

**ತದಾ** = ಆಗ

**ವ್ಯಾಖ್ಯಾಭಿಧಾ** = ವ್ಯಾಖ್ಯಾನ ಎಂಬ ಹೆಸರುಳ್ಳ

**ವಿಷ್ಣುಪದಪ್ರಕಾಶಿನೀ** = ವಿಷ್ಣುವಿನ ಪಾದಗಳನ್ನು ಪ್ರಕಾಶಗೊಳಿಸುವ

**ಪ್ರಮೋದತೀರ್ಥಾನನಚಂದ್ರಚಂದ್ರಿಕಾ** = ಪ್ರಮೋದತೀರ್ಥ = ಶ್ರೀಮದಾನಂದತೀರ್ಥರ

**ಆನನಚಂದ್ರ** = ಮುಖವೆಂಬ ಚಂದ್ರನ

**ಚಂದ್ರಿಕಾ** = ಬೆಳದಿಂಗಳು

**ಬಭೌ** = ಪ್ರಕಾಶಿಸಿತು.

**ತಾತ್ಪರ್ಯ—** ಜ್ಯೇಷ್ಠಯತಿಗಳು ಹೇಳಿದ ಮಾತು ಮಂಗಳಕರವಾಗಿತ್ತು. ಮಂಗಳಕರವಾದ ಶರದೃತುವಿನ ಹುಣ್ಣಿಮೆಯಿಂದ ಎಲ್ಲಾ ದಿಕ್ಕುಗಳೂ ಪ್ರಕಾಶಗೊಳ್ಳುತ್ತವೆ. ಅದರಂತೆ ಎಲ್ಲಾ ಸಜ್ಜನರಿಗೂ ಬ್ರಹ್ಮಮೀಮಾಂಸಾಶಾಸ್ತ್ರದ ಸರಿಯಾದ ಅರ್ಥವನ್ನು ಅರಿಯಬೇಕೆಂಬ ಆಸೆಯು ಇದೆಯೆಂದು ಪ್ರಕಾಶವಾಯಿತು. ಪೂರ್ಣಪ್ರಜ್ಞಾಚಾರ್ಯರ ಮುಖವೆಂಬ ಚಂದ್ರನಿಂದ ಆಕಾಶವನ್ನೆಲ್ಲಾ ಪ್ರಕಾಶಪಡಿಸುವ ವ್ಯಾಖ್ಯಾನ ಎಂಬ ಬೆಳದಿಂಗಳು ಹೊರಟಿತು.

**ಕ್ರಿಯಾಪದ—** ಭಾದೀಪ್ತೌ ದೀಪ್ತ್ಯರ್ಥಕಾತ್ ಭಾ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಬಭೌ'' ಇತಿ ರೂಪಮ್ ।

ಬಭೌ ಬಭತುಃ ಬಭುಃ, ಬಭಿಥ ಬಭಾಥ ಬಭಥುಃ ಬಭ, ಬಭೌ ಬಭಿವ ಬಭಿಮ ॥

★ ★ ★

ವಿಷ್ಣುಮಂಗಲಕ್ಕೆ ಪ್ರಯಾಣ - ಭಗವದ್ದರ್ಶನ

**ಜೇಷ್ಯನ್ ಕದಾಚಿತ್ ಕಿಲ ಕಾಲಪಾಲಿತಾಂ ದಿಶಂ ಪ್ರಯಾತೋಽಚ್ಯುತಬುದ್ಧಿನಾ ಸಹ ।**
**ಸಮಗ್ರಧೀರ್ಮಂಡಿತವಿಷ್ಣುಮಂಗಲಂ ವಿಷ್ಣುಂ ಜಗನ್ಮಂಗಲಮಾನನಾಮ ಸಃ ॥ 30 ॥**

**ಪದಚ್ಛೇದ—** ಜೇಷ್ಯನ್, ಕದಾಚಿತ್, ಕಿಲ, ಕಾಲಪಾಲಿತಾಂ, ದಿಶಂ, ಪ್ರಯಾತಃ, ಅಚ್ಯುತಬುದ್ಧಿನಾ, ಸಹ, ಸಮಗ್ರಧೀಃ, ಮಂಡಿತವಿಷ್ಣುಮಂಗಲಂ, ವಿಷ್ಣುಂ, ಜಗನ್ಮಂಗಲಂ, ಆನನಾಮ, ಸಃ ।

**ಅನ್ವಯ—** ಸಮಗ್ರಧೀಃ ಸಃ ಕದಾಚಿತ್ ಜೇಷ್ಯನ್, ಅಚ್ಯುತಬುದ್ಧಿನಾ ಸಹ ಕಾಲಪಾಲಿತಾಂ ದಿಶಂ ಪ್ರಯಾತಃ, ಮಂಡಿತವಿಷ್ಣುಮಂಗಲಂ ಜಗನ್ಮಂಗಲಂ ವಿಷ್ಣುಂ ಆನನಾಮ ಕಿಲ ।

**ಅನ್ವಯಾರ್ಥ—**

**ಸಮಗ್ರಧೀಃ** = ಪೂರ್ಣವಾದ ಬುದ್ಧಿಯುಳ್ಳ

**ಸಃ** = ಆ ಪೂರ್ಣಪ್ರಜ್ಞಾಚಾರ್ಯರು

**ಕದಾಚಿತ್** = ಒಂದು ಸಂದರ್ಭದಲ್ಲಿ

**ಜೇಷ್ಯನ್** = ಜಯಿಸುವ ಅಭಿಪ್ರಾಯದಿಂದ ಯುಕ್ತರಾಗಿ

**ಅಚ್ಯುತಬುದ್ಧಿನಾ ಸಹ** = ಅಚ್ಯುತಪ್ರೇಕ್ಷಾಚಾರ್ಯರೊಡನೆ

**ಕಾಲಪಾಲಿತಾಂ** = ಯಮನಿಂದ ಕಾಪಾಡಲ್ಪಟ್ಟ

**ದಿಶಂ** = (ದಕ್ಷಿಣ) ದಿಕ್ಕನ್ನು ಕುರಿತು

**ಪ್ರಯಾತಃ** = ಹೊರಟವರಾಗಿ

**ಮಂಡಿತವಿಷ್ಣುಮಂಗಲಂ** = ಅಲಂಕರಿಸಲ್ಪಟ್ಟ ವಿಷ್ಣುಮಂಗಳವೆಂಬ ಕ್ಷೇತ್ರವನ್ನು

**ಜಗನ್ಮಂಗಲಂ** = ಜಗತ್ತಿಗೆ ಮಂಗಳವನ್ನು ಕೊಡುತ್ತಿರುವ

**ವಿಷ್ಣುಂ** = ವಿಷ್ಣುವನ್ನು

**ಆನನಾಮ ಕಿಲ** = ವಂದಿಸಿದರಷ್ಟೇ.

**ತಾತ್ಪರ್ಯ—** ಒಂದು ಸಂದರ್ಭದಲ್ಲಿ ಸರ್ವಜ್ಞಾಚಾರ್ಯರು ಉಡುಪಿಗೆ ದಕ್ಷಿಣ ದಿಕ್ಕಿನಲ್ಲಿರುವ ಪಂಡಿತರನ್ನು ಜಯಿಸಬೇಕೆಂಬ ಅಭಿಪ್ರಾಯವುಳ್ಳವರಾಗಿ ಅಚ್ಯುತಪ್ರೇಕ್ಷಾಚಾರ್ಯರೊಡನೆ ಹೊರಟು, ವಿಷ್ಣುಮಂಗಲ ಕ್ಷೇತ್ರವನ್ನು ಅಲಂಕರಿಸಿರುವ ಸಕಲ ಜಗತ್ತುಗಳಿಗೂ ಅಲಂಕಾರನಾಗಿರುವ ಶ್ರೀವಿಷ್ಣುವನ್ನು ಭಕ್ತಿಶ್ರದ್ಧಾಪೂರ್ವಕವಾಗಿ ನಮಸ್ಕರಿಸಿದರು.

ವಿಗ್ರಹ—

**ಜೇಷ್ಯನ್**— ಜೇಷ್ಯತಿ ಇತಿ ಜೇಷ್ಯನ್ ।

**ಕಾಲಪಾಲಿತಾ**— ಕಾಲೇನ ಪಾಲಿತಾ ಕಾಲಪಾಲಿತಾ, ತಾಂ ಕಾಲಪಾಲಿತಾಂ ।

**ಅಚ್ಯುತಬುದ್ಧಿಃ**— ಅಚ್ಯುತಃ ಬುದ್ಧಿಃ ಯಸ್ಯ ಸಃ ಅಚ್ಯುತಬುದ್ಧಿಃ, ತೇನ ಅಚ್ಯುತಬುದ್ಧಿನಾ ।

**ಸಮಗ್ರಧೀಃ**— ಸಮಗ್ರಾ ಧೀಃ ಯಸ್ಯ ಸಃ ಸಮಗ್ರಧೀಃ ।

**ಮಂಡಿತವಿಷ್ಣುಮಂಗಲಂ**— ಮಂಡಿತಂ ವಿಷ್ಣುಮಂಗಲಂ ಯೇನ ಸಃ ಮಂಡಿತವಿಷ್ಣುಮಂಗಲಃ, ತಂ ಮಂಡಿತವಿಷ್ಣುಮಂಗಲಂ ।

**ಜಗನ್ಮಂಗಲಂ**— ಜಗತಾಂ ಮಂಗಲಃ ಜಗನ್ಮಂಗಲಃ, ತಂ ಜಗನ್ಮಂಗಲಂ ।

**ಕ್ರಿಯಾಪದ**— ಆನನಾಮ- ಆಙ್ ಇತ್ಯುಪಸರ್ಗಪೂರ್ವಕಾತ್ ಣಮು ಪ್ರಹ್ವತ್ವೇ ಶಬ್ದೇ ಚ ಪ್ರಹ್ವತ್ವಶಬ್ದಾರ್ಥಕಾತ್ ಲಿಟ್ ಪ್ರಥಮಪುರುಷೇ ಏಕವಚನೇ ಆನನಾಮ ''ಇತಿ'' ರೂಪಮ್ ।

ಆನನಾಮ ಆನೇಮತುಃ ಆನೇಮುಃ, ಆನೇಮಿಥ ನನಂಥ, ಆನೇಮಥುಃ ಆನನೇಮ,
ಆನನಾಮ ಆನನಮ ಆನೇಮಿವ ಆನೇಮಿಮ ॥

★ ★ ★

ಭಿಕ್ಷಾನಂತರ ಕದಲೀಫಲಭಕ್ಷಣ ಪರೀಕ್ಷೆ

**ಭಿಕ್ಷಾಪ್ರದಾತ್ರಾಽತ್ರ ಪರೀಕ್ಷಿತುಂ ಮುಹುರ್ದತ್ತೇ**
**ಪ್ರಭುಕ್ತೇ ಕದಲೀಫಲೋಚ್ಚಯೇ ।**
**ಅನೇನ ನಿರ್ಯತ್ನಮವಾರ್ಯವಿಸ್ಮಯ-**
**ಸ್ತಮಾರ್ಯವರ್ಯಂ ವಿಜನೇಽವದದ್ಗುರುಃ ॥ 31 ॥**

**ಪದಚ್ಛೇದ**— ಭಿಕ್ಷಾಪ್ರದಾತ್ರಾ, ಅತ್ರ, ಪರೀಕ್ಷಿತುಂ, ಮುಹುಃ, ದತ್ತೇ, ಪ್ರಭುಕ್ತೇ, ಕದಲೀಫಲೋಚ್ಚಯೇ, ಅನೇನ, ನಿರ್ಯತ್ನಂ, ಅವಾರ್ಯವಿಸ್ಮಯಃ, ತಂ, ಆರ್ಯವರ್ಯಂ, ವಿಜನೇ, ಅವದತ್, ಗುರುಃ ।

**ಅನ್ವಯ**— ಅತ್ರ ಭಿಕ್ಷಾಪ್ರದಾತ್ರಾ ಪರೀಕ್ಷಿತುಂ ಮುಹುಃ ಕದಲೀಫಲೋಚ್ಚಯೇ ದತ್ತೇ, ಅನೇನ ನಿರ್ಯತ್ನಂ ಪ್ರಭುಕ್ತೇ, ಅವಾರ್ಯ- ವಿಸ್ಮಯಃ ಗುರುಃ ಆರ್ಯವರ್ಯಂ ತಂ, ವಿಜನೇ ಅವದತ್ ।

**ಅನ್ವಯಾರ್ಥ**—

**ಅತ್ರ** = ಈ ವಿಷ್ಣುಮಂಗಲಕ್ಷೇತ್ರದಲ್ಲಿ

**ಭಿಕ್ಷಾಪ್ರದಾತ್ರಾ** = ಭಿಕ್ಷೆಯನ್ನು ಮಾಡಿಸಿದ ಪುರುಷನಿಂದ

**ಪರೀಕ್ಷಿತುಂ** = ಶ್ರೀ ಪೂರ್ಣಪ್ರಜ್ಞಾಚಾರ್ಯರನ್ನು ಪರೀಕ್ಷಿಸುವುದಕ್ಕೋಸ್ಕರ

**ಮುಹುಃ** = ಮತ್ತೆ ಮತ್ತೆ

**ಕದಲೀಫಲೋಚ್ಚಯೇ** = ಬಾಳೆಹಣ್ಣಿನ ರಾಶಿಯು

**ದತ್ತೇ** = ಕೊಡಲ್ಪಡಲು,

**ಅನೇನ** = ಶ್ರೀ ಪೂರ್ಣಪ್ರಜ್ಞಾಚಾರ್ಯರಿಂದ

**ನಿರ್ಯತ್ನಂ** = ಆಯಾಸವಿಲ್ಲದೆ

**ಪ್ರಭುಕ್ತೇ** = ತಿನ್ನಲ್ಪಡಲು,

**ಅವಾರ್ಯವಿಸ್ಮಯಃ** = ಪರಿಹಾರವನ್ನು ಮಾಡಲು ಸಾಧ್ಯವಿಲ್ಲದ ಆಶ್ಚರ್ಯವುಳ್ಳವರಾದ
**ಗುರುಃ** = ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರು
**ಆರ್ಯವರ್ಯಂ** = ಜ್ಞಾನಿಶ್ರೇಷ್ಠರಾದ
**ತಂ** = ಪೂರ್ಣಪ್ರಜ್ಞಾಚಾರ್ಯರನ್ನು ಕುರಿತು
**ವಿಜನೇ** = ಏಕಾಂತದಲ್ಲಿ
**ಅವದತ್** = ಹೇಳಿದರು.

**ತಾತ್ಪರ್ಯ—** ಒಂದು ದಿನ ಆ ವಿಷ್ಣುಮಂಗಲದಲ್ಲಿ ಭಿಕ್ಷೆ ಮಾಡಿಸಿದ ಯಜಮಾನನು, ಶ್ರೀಪೂರ್ಣಪ್ರಜ್ಞಾಚಾರ್ಯರು ಅಧಿಕವಾಗಿ ತಿನ್ನುವವರು ಎಂದು ಪ್ರಸಿದ್ಧಿ ಇದೆ. ಅದನ್ನು ಪರೀಕ್ಷಿಸಬೇಕೆಂದು ತೀರ್ಮಾನಿಸಿದನು. ಭೋಜನವಾದ ಕೂಡಲೇ 200ರಕ್ಕಿಂತ ಅಧಿಕವಾದ ಬಾಳೆಹಣ್ಣುಗಳನ್ನು ಕೊಟ್ಟನು. ಆ ಬಾಳೆಹಣ್ಣುಗಳನ್ನು ಆಯಾಸವಿಲ್ಲದೆ ತಿಂದು ಮುಗಿಸಿದರು. ಅದನ್ನು ನೋಡಿದ ಅಚ್ಯುತಪ್ರೇಕ್ಷಾಚಾರ್ಯರಿಗೆ ಆಶ್ಚರ್ಯವನ್ನು ತಡೆಯಲಿಕ್ಕೆ ಸಾಧ್ಯವಾಗಲಿಲ್ಲ. ಅವರು ಜನರಿಲ್ಲದ ಸ್ಥಳದಲ್ಲಿ ಪೂರ್ಣಪ್ರಜ್ಞಾಚಾರ್ಯರನ್ನು ಕುರಿತು ಹೀಗೆ ಹೇಳಿದರು.

**ವಿಗ್ರಹ—**

**ಭಿಕ್ಷಾಪ್ರದಾತ್ರಾ—** ಭಿಕ್ಷಾಯಾಃ ಪ್ರದಾತಾ, ಭಿಕ್ಷಾಪ್ರದಾತಾ, ತೇನ ಭಿಕ್ಷಾಪ್ರದಾತ್ರಾ ।
**ಪ್ರದತ್ತೇ—** ಪ್ರಕರ್ಷೇಣ ದತ್ತಂ ಪ್ರದತ್ತಂ, ತಸ್ಮಿನ್ ಪ್ರದತ್ತೇ ।
**ಕದಲೀಫಲೋಚ್ಚಯೇ—** ಕದಲೀಫಲಾನಾಂ ಉಚ್ಚಯಃ ಕದಲೀಫಲೋಚ್ಚಯಃ, ತಸ್ಮಿನ್ ಕದಲೀಫಲೋಚ್ಚಯೇ ।
**ನಿರ್ಯತ್ನಂ—** ನಿರ್ಗತಃ ಯತ್ನಃ ಯಸ್ಯ ಸಃ ನಿರ್ಯತ್ನಃ, ತಂ ನಿರ್ಯತ್ನಂ ।
**ಅವಾರ್ಯವಿಸ್ಮಯಃ—** ನ ವಾರ್ಯಃ ಅವಾರ್ಯಃ, ಅವಾರ್ಯಃ ವಿಸ್ಮಯಃ ಯಸ್ಯ ಸಃ ಅವಾರ್ಯವಿಸ್ಮಯಃ ।
**ಆರ್ಯವರ್ಯಂ—** ಆರ್ಯೇಷು ವರ್ಯಃ ಆರ್ಯವರ್ಯಃ, ತಂ ಆರ್ಯವರ್ಯಂ ।
**ವಿಜನೇ—** ವಿಗತಾಃ ಜನಾಃ ಯಸ್ಮಿನ್ ಸಃ ವಿಜನಃ, ತಸ್ಮಿನ್ ವಿಜನೇ ।

**ಕ್ರಿಯಾಪದ— ಅವದತ್**- ವದ ವ್ಯಕ್ತಾಯಾಂ ವಾಚಿ ಇತಿ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅವದತ್'' ಇತಿ ರೂಪಮ್ ।

ಅವದತ್ ಅವದತಾಂ ಅವದನ್, ಅವದಃ ಅವದತಂ ಅವದತ, ಅವದಂ ಅವದಾವ ಅವದಾಮ ॥

★ ★ ★

ಅಚ್ಚರಿಪಟ್ಟ ಅಚ್ಯುತಪ್ರೇಕ್ಷರು

**ಭಿಕ್ಷಾವಸಾನೇ ದ್ವಿಶತಾಧಿಕೈಃ ಫಲೈಃ ವ್ಯೂಢೈಃ ಪ್ರಭುಕ್ತೈಃ ಪರಿಪೂರಿತೇಽಪಿ ತೇ ।**
**ತನೂದರೇ ನಾಸ್ತಿ ಗರಿಷ್ಠತಾ ಕಥಂ ಸುಚಿತ್ತ ಸತ್ಯಂ ವದತಾದ್ ಭವಾನಿತಿ ॥ 32 ॥**

**ಪದಚ್ಛೇದ—** ಭಿಕ್ಷಾವಸಾನೇ, ದ್ವಿಶತಾಧಿಕೈಃ, ಫಲೈಃ, ವ್ಯೂಢೈಃ, ಪ್ರಭುಕ್ತೈಃ, ಪರಿಪೂರಿತೇ, ಅಪಿ, ತೇ, ತನೂದರೇ, ನ, ಅಸ್ತಿ, ಗರಿಷ್ಠತಾ, ಕಥಂ, ಸುಚಿತ್ತ, ಸತ್ಯಂ, ವದತಾದ್, ಭವಾನ್, ಇತಿ ।

**ಅನ್ವಯ—** ''ಭಿಕ್ಷಾವಸಾನೇ ಪ್ರಭುಕ್ತೈಃ, ವ್ಯೂಢೈಃ ದ್ವಿಶತಾಧಿಕೈಃ ಫಲೈಃ ಪರಿಪೂರಿತೇ ಅಪಿ, ತೇ ತನೂದರೇ ಕಥಂ ಗರಿಷ್ಠತಾ ನಾಸ್ತಿ ? ಹೇ ಸುಚಿತ್ತ ಭವಾನ್ ಸತ್ಯಂ ವದತಾತ್'' ಇತಿ ।

**ಅನ್ವಯಾರ್ಥ—**

**ಭಿಕ್ಷಾವಸಾನೇ** = ಭೋಜನವು ಮುಗಿದ ಮೇಲೆ
**ಪ್ರಭುಕ್ತೈಃ** = ತಿನ್ನಲ್ಪಟ್ಟ
**ವ್ಯಾಢ್ಯೈಃ** = ದಪ್ಪದಪ್ಪವಾಗಿರುವ
**ದ್ವಿಶತಾಧಿಕೈಃ** = ಇನ್ನೂರಕ್ಕಿಂತಲೂ ಅಧಿಕವಾದ
**ಫಲೈಃ** = ಹಣ್ಣುಗಳಿಂದ
**ಪರಿಪೂರಿತೇ ಅಪಿ** = ತುಂಬಲ್ಪಟ್ಟಿದ್ದರೂ ಕೂಡ
**ತೇ** = ನಿನ್ನ
**ತನೂದರೇ** = ಕೃಶವಾದ ಹೊಟ್ಟೆಯಲ್ಲಿ
**ಕಥಂ** = ಹೇಗೆ
**ಗರಿಷ್ಠತಾ** = ಬಹಳ ದೊಡ್ಡದಾಗಿರುವಿಕೆಯು
**ನಾಸ್ತಿ** = ಇಲ್ಲ ?
**ಹೇ ಸುಚಿತ್ತ !** = ಎಲೈ ಒಳ್ಳೆಯ ಮನಸ್ಸುಳ್ಳ ಸರ್ವಜ್ಞಾಚಾರ್ಯರೇ !
**ಭವಾನ್** = ನೀವು
**ಸತ್ಯಂ** = ಸತ್ಯವನ್ನು
**ವದತಾತ್** = ಹೇಳಿರಿ
**ಇತಿ** = ಎಂದು (ಅವದತ್ = ಹೇಳಿದರು).

**ತಾತ್ಪರ್ಯ—** ''ಭೋಜನವು ಮುಗಿದ ಮೇಲೆ 200ಕ್ಕಿಂತ ಅಧಿಕ ದೊಡ್ಡ ದೊಡ್ಡ ಬಾಳೆಹಣ್ಣುಗಳನ್ನು ತಿಂದಿರುವಿರಿ. ಅದರಿಂದ ಹೊಟ್ಟೆಯು ಅಧಿಕವಾಗಿ ದೊಡ್ಡದಾಗಬೇಕಾಗಿತ್ತು. ಏಕೆ ಹಾಗೆ ದೊಡ್ಡದಾಗಲಿಲ್ಲ ? ಪೂರ್ಣಪ್ರಜ್ಞಾಚಾರ್ಯರೇ ! ನಿಜವಾಗಿ ಹೇಳಿರಿ'' ಎಂದು ಅಚ್ಯುತಪ್ರೇಕ್ಷಾಚಾರ್ಯರು ಕೇಳಿದರು.

**ವಿಗ್ರಹ—**

**ಭಿಕ್ಷಾವಸಾನೇ—** ಭಿಕ್ಷಾಯಾಃ ಅವಸಾನಂ ಭಿಕ್ಷಾವಸಾನಂ, ತಸ್ಮಿನ್ ಭಿಕ್ಷಾವಸಾನೇ ।
**ದ್ವಿಶತಾಧಿಕೈಃ—** ದ್ವೇ ಚ ತೇ ಶತೇ ಚ, ದ್ವಿಶತೇ, ದ್ವಿಶತೇಭ್ಯೋ ಅಧಿಕಾನಿ ದ್ವಿಶತಾಧಿಕಾನಿ, ತೈಃ ದ್ವಿಶತಾಧಿಕೈಃ ।
**ಪ್ರಭುಕ್ತೈಃ—** ಪ್ರಕರ್ಷೇಣ ಭುಕ್ತಾನಿ ಪ್ರಭುಕ್ತಾನಿ, ತೈಃ ಪ್ರಭುಕ್ತೈಃ ।
**ಪರಿಪೂರಿತೇ—** ಪರಿತಃ ಪೂರಿತಾನಿ ಪರಿಪೂರಿತಾನಿ, ತಸ್ಮಿನ್ ಪರಿಪೂರಿತೇ ।
**ತನೂದರೇ—** ತನು ಚ ತತ್ ಉದರಂ ಚ ತನೂದರಂ, ತಸ್ಮಿನ್ ತನೂದರೇ ।

**ಕ್ರಿಯಾಪದ— ಅಸ್ತಿ-** ಅಸಭುವಿ ಇತ್ಯರ್ಥಕಾತ್ ಅಸ ಧಾತೋಃ ಅಸ್ತಿ ಇತಿ ಪ್ರಥಮಪುರುಷೇ ಏಕವಚನೇ ''ಅಸ್ತಿ'' ಇತಿ ರೂಪಮ್ ।

ಅಸ್ತಿ ಸ್ತಃ ಸಂತಿ, ಅಸಿ ಸ್ಥಃ ಸ್ಥ, ಅಸ್ಮಿ ಸ್ವಃ ಸ್ಮಃ ॥

**ವದತಾತ್-** ವದವ್ಯಕ್ತಾಯಾಂ ವಾಚಿ ಇತಿ ಧಾತೋಃ ಲೋಟ್ ಪರಸ್ಮೈಪದಿನಃ ಮಧ್ಯಮಪುರುಷೇ ಏಕವಚನೇ ವದತಾತ್ ಇತಿ ರೂಪಮ್ ।

ವದತು ವದತಾತ್, ವದತಾಂ ವದಂತು, ವದವದತಾತ್, ವದಂತಂ ವದತ ವದಾನಿ ವದಾವ ವದಾಮ ॥

★ ★ ★

ಅಂಗುಷ್ಠಮಾತ್ರದ ವೃಕೋದರರೇ ಈ ಪೂರ್ಣಪ್ರಜ್ಞರು!

**ಅಂಗುಷ್ಠಮಾತ್ರಂ ಜಠರೇ ಪ್ರತಿಷ್ಠಿತಂ ಜಾಜ್ವಲ್ಯಮಾನಂ ಮಮ ಜಾತವೇದಸಮ್ ।**
**ನಿತ್ಯಂ ಹಿತಂ ವಿಶ್ವದಹಂ ಚ ವಿತ್ತ ತಂ ವಿಶ್ವೇಶಚೇತಾ ಇತಿ ಸೋಽಬ್ರವೀತ್ತದಾ ॥ 33 ॥**

**ಪದಚ್ಛೇದ—** ಅಂಗುಷ್ಠಮಾತ್ರಂ, ಜಠರೇ, ಪ್ರತಿಷ್ಠಿತಂ, ಜಾಜ್ವಲ್ಯಮಾನಂ, ಮಮ, ಜಾತವೇದಸಂ, ನಿತ್ಯಂ, ಹಿತಂ, ವಿಶ್ವದಹಂ, ಚ, ವಿತ್ತ, ತಂ, ವಿಶ್ವೇಶಚೇತಾಃ, ಇತಿ, ಸಃ, ಅಬ್ರವೀತ್, ತದಾ ।

**ಅನ್ವಯ—** ತದಾ ವಿಶ್ವೇಶಚೇತಾಃ ಸಃ, ಮಮ ಜಠರೇ ಪ್ರತಿಷ್ಠಿತಂ, ಜಾಜ್ವಲ್ಯಮಾನಂ ತಂ ಜಾತವೇದಸಂ, ಅಂಗುಷ್ಠಮಾತ್ರಂ ನಿತ್ಯಂ ಹಿತಂ, ವಿಶ್ವದಹಂ ಚ ವಿತ್ತ ಇತ್ಯಬ್ರವೀತ್ ।

**ಅನ್ವಯಾರ್ಥ—**

**ತದಾ** = ಆಗ
**ವಿಶ್ವೇಶಚೇತಾಃ** = ಆ ಸರ್ವೇಶ್ವರನಾದ ಶ್ರೀಹರಿಯಲ್ಲಿ ಮನಸ್ಸನ್ನು ಇಟ್ಟಿರುವ
**ಸಃ** = ಸರ್ವಜ್ಞಾಚಾರ್ಯರು
**ಮಮ** = ನನ್ನ
**ಜಠರೇ** = ಹೊಟ್ಟೆಯಲ್ಲಿ
**ಪ್ರತಿಷ್ಠಿತಂ** = ಇರುವ
**ಜಾಜ್ವಲ್ಯಮಾನಂ** = ಚೆನ್ನಾಗಿ ಪ್ರಜ್ವಲಿಸುತ್ತಿರುವ
**ತಂ ಜಾತವೇದಸಂ** = ಆ ಅಗ್ನಿಯನ್ನು
**ಅಂಗುಷ್ಠಮಾತ್ರಂ** = ಅಂಗುಷ್ಠದಷ್ಟು ಪರಿಮಾಣ ಇರುವುದಾಗಿ
**ನಿತ್ಯಂ** = ಯಾವಾಗಲೂ
**ಹಿತಂ** = ಅನುಕೂಲಕರವಾದದ್ದಾಗಿ
**ವಿಶ್ವದಹಂ** = ಪ್ರಳಯಕಾಲದಲ್ಲಿ ಪ್ರಪಂಚವನ್ನು ಸುಡುವುದನ್ನಾಗಿ
**ವಿತ್ತ** = ತಿಳಿಯಿರಿ
**ಇತಿ** = ಎಂದು
**ಅಬ್ರವೀತ್** = ಹೇಳಿದರು.

**ತಾತ್ಪರ್ಯ—** ಆಗ ಶ್ರೀಪೂರ್ಣಪ್ರಜ್ಞಾಚಾರ್ಯರು ''ನನ್ನ ಹೊಟ್ಟೆಯಲ್ಲಿ ಅಂಗುಷ್ಠಗಾತ್ರದಷ್ಟು ಅಗ್ನಿ ಪ್ರಜ್ವಲಿಸುತ್ತಾ ಇರುತ್ತದೆ. ಅದು ಯಾವಾಗಲೂ ನನಗೆ ಹಿತಕರವಾಗಿಯೇ ಇರುತ್ತದೆ. ಅದು ಪ್ರಳಯಕಾಲದಲ್ಲಿ ಪ್ರಪಂಚವನ್ನೇ ದಹಿಸುವ ಶಕ್ತಿಯುಳ್ಳದ್ದು ಎಂದು ತಿಳಿಯಿರಿ'' ಎಂದು ಗುರುಗಳಿಗೆ ಹೇಳಿದರು.

**ವಿಗ್ರಹ—**

**ಜಾಜ್ವಲ್ಯಮಾನಂ—** ಅತ್ಯಂತಂ ಜ್ವಲತಿ ಇತಿ ಜಾಜ್ವಲ್ಯಮಾನಃ, ತಂ ಜಾಜ್ವಲ್ಯಮಾನಂ ।
**ವಿಶ್ವದಹಂ—** ವಿಶ್ವಂ ದಹತಿ ಇತಿ ವಿಶ್ವದಹಃ, ತಂ ವಿಶ್ವದಹಂ ।
**ವಿಶ್ವೇಶಚೇತಾಃ—** ವಿಶ್ವೇಷಾಂ ಈಶಃ ವಿಶ್ವೇಶಃ, ವಿಶ್ವೇಶೇ ಚೇತಃ ಯಸ್ಯ ಸಃ ವಿಶ್ವೇಶಚೇತಾಃ ।

**ಕ್ರಿಯಾಪದ—** ವಿತ್ತ- ವಿದಜ್ಞಾನೇ ಇತಿ ಜ್ಞಾನಾರ್ಥಕಾತ್ ವಿದ ಧಾತೋಃ ಲೋಟಿ ಪ್ರಥಮಪುರುಷೇ ಏಕವಚನೇ ''ವಿತ್ತ'' ಇತಿ ರೂಪಮ್ ।

ವೇತ್ತು ವಿತ್ತಾತ್, ವಿತ್ತಾಂ ವಿದಂತು, ವಿದ್ಧಿ ವಿತ್ತಾತ್, ವಿತ್ತಂ ವಿತ್ತ, ವೇದಾನಿ ವೇದಾವ ವೇದಾಮ ॥

ಅಬ್ರವೀತ್- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಞ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅಬ್ರವೀತ್'' ಇತಿ ರೂಪಮ್ ।

ಅಬ್ರವೀತ್ ಅಬ್ರೂತಾಂ ಅಬ್ರುವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ ॥

★ ★ ★

ಮುಂದುವರೆದ ದಕ್ಷಿಣ ದಿಗ್ವಿಜಯ

**ಪರ್ಯಾಕುಲಾನೇಕಸರಸ್ವತೀತತೀನ್**
**ನ್ಯಾಯೋಪಪನ್ನಾನ್ ವಿವಿಧಾರ್ಥಸಂಯುತಾನ್ ।**
**ಅತೀತ್ಯ ದೇಶಾನ್ ಸಮಯಾಂಶ್ಚ ಚಾರುಧೀರಸೌ**
**ಜಗಾಮಾಭಿಮತೇನ ವರ್ತ್ಮನಾ ॥ 34 ॥**

**ಪದಚ್ಛೇದ—** ಪರ್ಯಾಕುಲಾನೇಕಸರಸ್ವತೀತತೀನ್, ನ್ಯಾಯೋಪಪನ್ನಾನ್, ವಿವಿಧಾರ್ಥಸಂಯುತಾನ್, ಅತೀತ್ಯ, ದೇಶಾನ್, ಸಮಯಾನ್, ಚ, ಚಾರುಧೀಃ, ಅಸೌ, ಜಗಾಮ, ಅಭಿಮತೇನ ವರ್ತ್ಮನಾ ।

**ಅನ್ವಯ—** ಚಾರುಧೀಃ ಅಸೌ, ಅಭಿಮತೇನ ವರ್ತ್ಮನಾ, ಪರ್ಯಾಕುಲಾನೇಕಸರಸ್ವತೀತತೀನ್, ನ್ಯಾಯೋಪಪನ್ನಾನ್ ವಿವಿಧಾರ್ಥಸಂಯುತಾನ್, ದೇಶಾನ್ ಸಮಯಾಂಶ್ಚ ಅತೀತ್ಯ ಜಗಾಮ ।

**ಅನ್ವಯಾರ್ಥ—**

**ಚಾರುಧೀಃ** = ಮನೋಹರವಾದ ಬುದ್ಧಿಯುಳ್ಳ
**ಅಸೌ** = ಶ್ರೀಪೂರ್ಣಪ್ರಜ್ಞಾಚಾರ್ಯರು
**ಅಭಿಮತೇನ** = ಇಷ್ಟವಾದ, ಶ್ರೇಷ್ಠವಾದ
**ವರ್ತ್ಮನಾ** = ಮಾರ್ಗದಿಂದ (ಸಿದ್ಧಾಂತದಿಂದ)
**ಪರ್ಯಾಕುಲಾನೇಕಸರಸರ್ವತೀತತೀನ್** = ಎಲ್ಲಾ ಕಡೆಗಳಲ್ಲೂ ವ್ಯಾಪಿಸಿರುವ ಅಂದರೆ ಪೂರ್ಣವಾಗಿರುವ ನದಿಗಳ ಸಮೂಹಗಳುಳ್ಳ
**ನ್ಯಾಯೋಪಪನ್ನಾನ್** = ಆಯಾ ದೇಶಗಳ ಧರ್ಮಗಳಿಂದ ಯುಕ್ತವಾಗಿರುವ
**ವಿವಿಧಾರ್ಥಸಂಯುತಾನ್** = ನಾನಾ ಬಗೆಯ ಪದಾರ್ಥಗಳಿಂದ ಯುಕ್ತವಾಗಿರುವ
**ದೇಶಾನ್** = ದೇಶಗಳನ್ನೂ
**ಸಮಯಾನ್ ಚ** = ಸಿದ್ಧಾಂತಗಳನ್ನೂ (ಕೂಡಾ)
**ಅತೀತ್ಯ** = ವಾದಪ್ರಸಂಗದಿಂದ ಬಂದಿರುವ ಎಲ್ಲಾ ವಾದಿಗಳನ್ನೂ ಜಯಿಸಿ ಮುಂದೆ
**ಜಗಾಮ** = ಹೋದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞಾಚಾರ್ಯರು ಆ ವಿಷ್ಣುಮಂಗಲ ಪ್ರದೇಶದಿಂದ ದಕ್ಷಿಣದಿಕ್ಕಿನಲ್ಲಿರುವ ದೇಶಗಳಿಗೆ ಹೊರಟರು. ಆ ದೇಶಗಳಲ್ಲಿ ತುಂಬಿ ಹರಿಯುವ ನದಿಗಳಿದ್ದವು. ಅಲ್ಲಲ್ಲಿರುವ ಧರ್ಮವಿಶೇಷಗಳನ್ನು ತಿಳಿದರು. ನಾನಾ ವಿಧವಾದ ಹಣ್ಣು ಹಂಪಲು, ದವಸ ಧಾನ್ಯ ಮುಂತಾದ ಪದಾರ್ಥಗಳನ್ನು ನೋಡಿದರು. ಈ ದೇಶಗಳಲ್ಲಿ ಅನೇಕ ಸಿದ್ಧಾಂತಗಳನ್ನು ಖಂಡಿಸಿ ತಮ್ಮ ಸಿದ್ಧಾಂತವನ್ನು ಪ್ರಕಟಿಸಿದರು. ತಮ್ಮ ಜೊತೆ ವಾದಕ್ಕೆ ಬಂದ ಎಲ್ಲ ವಾದಿಗಳನ್ನೂ ಜಯಿಸಿ ಮುಂದೆ ಸಾಗಿದರು.

ವಿಗ್ರಹ—

**ಪರ್ಯಾಕುಲಾನೇಕಸರಸ್ವತೀತತೀನ್**— ಪರಿತಃ ಆಕುಲಾಃ ಪರ್ಯಾಕುಲಾಃ, ಪರ್ಯಾಕುಲಾಶ್ಚ ತಾಃ ಅನೇಕ ಸರಸ್ವತ್ಯಶ್ಚ ಪರ್ಯಾಕುಲಾನೇಕಸರಸ್ವತ್ಯಃ, ಪರ್ಯಾಕುಲಾನೇಕಸರಸ್ವತೀನಾಂ ತತಯಃ ಯಾಸು ತಾಃ ಪರ್ಯಾಕುಲಾನೇಕಸರಸ್ವತೀತತಯಃ, ತಾನ್ ಪರ್ಯಾಕುಲಾನೇಕಸರಸ್ವತೀತತೀನ್।

**ನ್ಯಾಯೋಪಪನ್ನಾನ್**— ನ್ಯಾಯ್ಯೈಃ ಉಪಪನ್ನಾಃ ನ್ಯಾಯೋಪಪನ್ನಾಃ, ತಾನ್ ನ್ಯಾಯೋಪಪನ್ನಾನ್ ।

**ವಿವಿಧಾರ್ಥಸಂಯುತಾನ್**— ವಿವಿಧಾಶ್ಚ ತೇ ಅರ್ಥಾಶ್ಚ ವಿವಿಧಾರ್ಥಾಃ, ವಿವಿಧಾರ್ಥೈಃ ಸಂಯುತಾಃ ವಿವಿಧಾರ್ಥಸಂಯುತಾಃ, ತಾನ್ ವಿವಿಧಾರ್ಥಸಂಯುತಾನ್ ।

**ಚಾರುಧೀಃ**— ಚಾರು ಧೀಃ ಯಸ್ಯ ಸಃ ಚಾರುಧೀಃ ।

**ಕ್ರಿಯಾಪದ**— ಜಗಾಮ- ಗಮ್ಲೃಗತೌ ಇತಿ ಗತ್ಯರ್ಥಕಾತ್ ಗಮ್ಲೃ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಜಗಾಮ'' ಇತಿ ರೂಪಮ್ ।

ಜಗಾಮ ಜಗ್ಮತುಃ ಜಗ್ಮುಃ, ಜಗಮಿಥ ಜಗಂಥ ಜಗ್ಮಥುಃ ಜಗ್ಮ, ಜಗಾಮ ಜಗಮ ಜಗ್ಮಿವ ಜಗ್ಮಿಮ ॥

★ ★ ★

ಪಯಸ್ವಿನೀತೀರಕ್ಕೆ ಪ್ರಯಾಣ - ದುರ್ಗೆಯ ಸ್ಮರಣೆ

**ಸ್ವಹೇಲಯಾ ಪಾತಿತಪಾರ್ಥಿವವ್ರಜಾಂ**
**ಧೀಶುದ್ಧಿದಾಂ ಕೇರಲಭೂಷಣಾಯಿತಾಮ್ ।**
**ಪಯಸ್ವಿನೀಂ ಪ್ರೇಕ್ಷ್ಯ ಪಥಿ ದ್ವಿಜಾರ್ಚಿತಾಂ**
**ಸ ಭಾವಿನೀಮಸ್ಮರದತ್ರ ಚಂಡಿಕಾಮ್** ॥ 35 ॥

**ಪದಚ್ಛೇದ**— ಸ್ವಹೇಲಯಾ, ಪಾತಿತಪಾರ್ಥಿವವ್ರಜಾಂ, ಧೀಶುದ್ಧಿದಾಂ, ಕೇರಲಭೂಷಣಾಯಿತಾಂ, ಪಯಸ್ವಿನೀಂ, ಪ್ರೇಕ್ಷ್ಯ, ಪಥಿ, ದ್ವಿಜಾರ್ಚಿತಾಂ, ಸಃ, ಭಾವಿನೀಂ, ಅಸ್ಮರತ್, ಅತ್ರ, ಚಂಡಿಕಾಂ ।

**ಅನ್ವಯ**— ಸಃ ಪಥಿ, ಸ್ವಹೇಲಯಾ ಪಾತಿತಪಾರ್ಥಿವವ್ರಜಾಂ, ಧೀಶುದ್ಧಿದಾಂ, ಕೇರಲಭೂಷಣಾಯಿತಾಂ, ದ್ವಿಜಾರ್ಚಿತಾಂ ಪಯಸ್ವಿನೀಂ ಪ್ರೇಕ್ಷ್ಯ, ಅತ್ರ ಭಾವಿನೀಂ ಚಂಡಿಕಾಂ ಅಸ್ಮರತ್ ।

**ಅನ್ವಯಾರ್ಥ**—

**ಸಃ** = ಆ ಪೂರ್ಣಪ್ರಜ್ಞಾಚಾರ್ಯರು

**ಪಥಿ** = ಮಾರ್ಗದಲ್ಲಿ

**ಸ್ವಹೇಲಯಾ** = ತನ್ನ ಪ್ರವಾಹರೂಪವಾದ ಲೀಲೆಯಿಂದ

**ಪಾತಿತಪಾರ್ಥಿವವ್ರಜಾಂ** = ಎರಡು ಪಕ್ಕಗಳಲ್ಲಿ ಬೀಳಿಸಲ್ಪಟ್ಟ ಮರಗಳ ಸಮೂಹಗಳುಳ್ಳ,

**ಧೀಶುದ್ಧಿದಾಂ** = ಮನಸ್ಸಿಗೆ ಪವಿತ್ರತೆಯನ್ನು ಕೊಡುವವಳಾದ,

**ಕೇರಲಭೂಷಣಾಯಿತಾಂ** = ಕೇರಳ ದೇಶಕ್ಕೆ ಅಲಂಕಾರದಂತಿರುವ,

**ದ್ವಿಜಾರ್ಚಿತಾಂ** = ಬ್ರಾಹ್ಮಣರಿಂದ ಪೂಜಿಸಲ್ಪಟ್ಟ

**ಪಯಸ್ವಿನೀಂ** = ಪಯಸ್ವಿನೀ ಎಂಬ ನದಿಯನ್ನು

**ಪ್ರೇಕ್ಷ್ಯ** = ನೋಡಿದವರಾಗಿ

**ಅತ್ರ** = ಈ ಪಯಸ್ವಿನೀ ನದೀತೀರದಲ್ಲಿ

ಭಾವಿನೀಂ = ಮುಂದೆ ಅವತರಿಸಲಿರುವ
ಚಂಡಿಕಾಂ = ದುರ್ಗಾದೇವಿಯನ್ನು
ಅಸ್ಮರತ್ = ಸ್ಮರಿಸಿದರು.

**ತಾತ್ಪರ್ಯ—** ಶ್ರೀ ಪೂರ್ಣಪ್ರಜ್ಞಾಚಾರ್ಯರು ಪಯಸ್ವಿನೀ ನದೀತೀರಕ್ಕೆ ಬಂದರು. ಆ ನದಿಯು ತನ್ನ ಪ್ರವಾಹದ ಲೀಲೆಯಿಂದ ಮರಗಳ ಗುಂಪುಗಳನ್ನೇ ಕೆಡವಿ ಹಾಕಿತ್ತು. ಸ್ನಾನಪಾನಾದಿಗಳಿಂದ ಮನಸ್ಸನ್ನು ಪವಿತ್ರಗೊಳಿಸುತ್ತಿತ್ತು. ಕೇರಳ ದೇಶಕ್ಕೆ ಅಲಂಕಾರದಂತಿತ್ತು. ಬ್ರಾಹ್ಮಣರಿಂದ ಪೂಜಿತವಾಗಿತ್ತು. ಇಂತಹ ನದೀತೀರದಲ್ಲಿ ಮುಂದೆ ಅವತರಿಸಲಿರುವ ದುರ್ಗಾದೇವಿಯನ್ನು ಸ್ಮರಿಸಿದರು.

**ವಿಗ್ರಹ—**

**ಸ್ವಹೇಲಯಾ—** ಸ್ವಸ್ಯ ಹೇಲಾ ಸ್ವಹೇಲಾ, ತಯಾ ಸ್ವಹೇಲಯಾ ।

**ಪಾತಿತಪಾರ್ಥಿವವ್ರಜಾಂ—** ಪಾರ್ಥಿವಾನಾಂ ವ್ರಜಃ ಪಾರ್ಥಿವವ್ರಜಃ, ಪಾತಿತಃ ಪಾರ್ಥಿವವ್ರಜಃ ಯಯಾ ಸಾ ಪಾತಿತಪಾರ್ಥಿವವ್ರಜಾ, ತಾಂ ಪಾತಿತಪಾರ್ಥಿವವ್ರಜಾಂ ।

**ಧೀಶುದ್ಧಿದಾಂ—** ಧಿಯಃ ಶುದ್ಧಿಃ ಧೀಶುದ್ಧಿಃ, ಧೀಶುದ್ಧಿಂ ದದಾತಿ ಇತಿ ಧೀಶುದ್ಧಿದಾ, ತಾಂ ಧೀಶುದ್ಧಿದಾಂ ।

**ಕೇರಲಭೂಷಣಾಯಿತಾಂ—** ಕೇರಲಸ್ಯ ಭೂಷಣಂ ಕೇರಲಭೂಷಣಂ, ಕೇರಲಭೂಷಣವತ್ ಆಚರತಿ ಇತಿ ಕೇರಲಭೂಷಣಾಯಿತಾ, ತಾಂ ಕೇರಲಭೂಷಣಾಯಿತಾಂ ।

**ಕ್ರಿಯಾಪದ—** ಅಸ್ಮರತ್- ಸ್ಮೃಜ್ ಸ್ಮೃತೌ ಇತಿ ಸ್ಮೃತ್ಯರ್ಥಕಾತ್ ಸ್ಮೃಧಾತೋಃ ಲಜ್ ಪ್ರಥಮಪುರುಷೇ ಏಕವಚನೇ ''ಅಸ್ಮರತ್'' ಇತಿ ರೂಪಮ್ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

★ ★ ★

ತಿರುವನಂತಪುರಕ್ಕೆ ಪ್ರಯಾಣ - ಅನಂತಪದ್ಮನಾಭರ ದರ್ಶನ

**ತತಃ ಕ್ರಮೇಣ ಪ್ರಚಲನ್ನುಪೇಯಿವಾನವಂದತೇಂದೀವರಸುಂದರಚ್ಛವಿಮ್ ।**
**ಅಂಭೋಜನಾಭಂ ಸ ಭುಜಂಗಶಾಯಿನಂ ಶ್ರೀವಲ್ಲಭಂ ಶ್ರೀಮದನಂತಸತ್ಪುರೇ ॥ 36 ॥**

**ಪದಚ್ಛೇದ—** ತತಃ, ಕ್ರಮೇಣ, ಪ್ರಚಲನ್, ಉಪೇಯಿವಾನ್, ಅವಂದತ, ಇಂದೀವರಸುಂದರಚ್ಛವಿಂ, ಅಂಭೋಜನಾಭಂ, ಸಃ, ಭುಜಂಗಶಾಯಿನಂ, ಶ್ರೀವಲ್ಲಭಂ, ಶ್ರೀಮದನಂತಸತ್ಪುರೇ ।

**ಅನ್ವಯ—** ಸಃ ತತಃ ಕ್ರಮೇಣ ಪ್ರಚಲನ್, ಶ್ರೀಮದನಂತಸತ್ಪುರೇ ಇಂದೀವರಸುಂದರಚ್ಛವಿಂ, ಅಂಭೋಜನಾಭಂ, ಭುಜಂಗಶಾಯಿನಂ ಶ್ರೀವಲ್ಲಭಂ ಉಪೇಯಿವಾನ್, ಅವಂದತ ।

**ಅನ್ವಯಾರ್ಥ—**

**ಸಃ** = ಆ ಪೂರ್ಣಪ್ರಜ್ಞಾಚಾರ್ಯರು
**ತತಃ** = ಆ ಪಯಸ್ವಿನೀ ನದೀತೀರದಿಂದ
**ಕ್ರಮೇಣ** = ಕ್ರಮವಾಗಿ
**ಪ್ರಚಲನ್** = ಹೊರಟವರಾಗಿ,
**ಶ್ರೀಮದನಂತಸತ್ಪುರೇ** = ಸಮೃದ್ಧವಾದ ''ಅನಂತಶಯನ'' ವೆಂಬ ಉತ್ತಮವಾದ ಪಟ್ಟಣದಲ್ಲಿ
**ಇಂದೀವರಸುಂದರಚ್ಛವಿಂ** = ಕನ್ನೈದಿಲೆಯಂತೆ ಸುಂದರವಾದ ದೇಹದ ಕಾಂತಿಯುಳ್ಳವನಾದ,

**ಅಂಭೋಜನಾಭಂ** = ನಾಭಿಯಲ್ಲಿ ಕಮಲವುಳ್ಳ,

**ಭುಜಂಗಶಾಯಿನಂ** = ಶೇಷದೇವನ ಮೇಲೆ ಮಲಗಿರುವ

**ಶ್ರೀವಲ್ಲಭಂ** = ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನನ್ನು

**ಉಪೇಯಿವಾನ್** = ಸಮೀಪಿಸಿ

**ಅವಂದತ** = ವಂದಿಸಿದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞಾಚಾರ್ಯರು ಪಯಸ್ವಿನೀ ನದೀತೀರದಿಂದ ಹೊರಟು ದಿನಕ್ರಮದಿಂದ ನಡೆಯುತ್ತಾ ಅನಂತಶಯನ ಕ್ಷೇತ್ರಕ್ಕೆ ಬಂದರು. ಕಮಲವು ಹೊಕ್ಕಳಿನಲ್ಲಿ ಇರುವವನಾಗಿಯೂ, ಶೇಷದೇವನ ದೇಹದ ಮೇಲೆ ಮಲಗಿ-ದವನಾಗಿಯೂ, ಕನ್ನೈದಿಲೆಯಂತೆ ಸುಂದರವಾದ ದೇಹದ ಕಾಂತಿಯುಳ್ಳವನಾಗಿಯೂ ಇರುವ ಅನಂತಪದ್ಮನಾಭ-ದೇವನನ್ನು ನಮಸ್ಕರಿಸಿದರು.

ವಿಗ್ರಹ—

**ಪ್ರಚಲನ್—** ಪ್ರಚಲಂ ಇತಿ ಪ್ರಚಲನ್ ।

**ಉಪೇಯಿವಾನ್—** ಉಪೇಯಾಯ ಉಪೇಯಿವಾನ್ ।

**ಕ್ರಿಯಾಪದ— ಅವಂದತ-** ವದಿ ಅಭಿವಾದನಸ್ತುತ್ಯೋಃ ಅಭಿವಾದನಸ್ತುತ್ಯರ್ಥಕಾತ್ ವದಿಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ಆತ್ಮನೇಪದಿನಃ ''ಅವಂದತ'' ಇತಿ ರೂಪಮ್ ।

ಅವಂದತ ಅವಂದೇತಾಂ ಅವಂದಂತ, ಅವಂದಥಾಃ ಅವಂದೇಥಾಂ ಅವಂದಧ್ವಂ, ಅವಂದೇ ಅವಂದಾವಹಿ ಅವಂದಾಮಹಿ ॥

★ ★ ★

ತಿರುವನಂತಪುರದಲ್ಲಿ ಬ್ರಹ್ಮಸೂತ್ರ ಪ್ರವಚನ

**ವೇದಾಂತಸೂತ್ರಾಣಿ ಕೃತಾಂತವಿತ್ತಮೋ**
**ವ್ಯಾಖ್ಯಾದಸೌ ಶಿಷ್ಯಗಣಾಯ ಸಂಸದಿ ।**
**ವಿಲಕ್ಷಣಂ ಜೀವಗಣಾದ್ಗುಣಾರ್ಣವಂ**
**ಬ್ರಹ್ಮಾಚ್ಯುತಾಖ್ಯಂ ಪ್ರತಿಪಾದಯನ್ಮುಹುಃ ॥ 37 ॥**

**ಪದಚ್ಛೇದ—** ವೇದಾಂತಸೂತ್ರಾಣಿ, ಕೃತಾಂತವಿತ್ತಮಃ, ವ್ಯಾಖ್ಯಾತ್, ಅಸೌ, ಶಿಷ್ಯಗಣಾಯ, ಸಂಸದಿ, ವಿಲಕ್ಷಣಂ, ಜೀವಗಣಾದ್ಗುಣಾರ್ಣವಂ, ಬ್ರಹ್ಮ, ಅಚ್ಯುತಾಖ್ಯಂ, ಪ್ರತಿಪಾದಯನ್, ಮುಹುಃ ।

**ಅನ್ವಯ—** ಕೃತಾಂತವಿತ್ತಮಃ ಅಸೌ, ಸಂಸದಿ ಶಿಷ್ಯಗಣಾಯ, ವೇದಾಂತಸೂತ್ರಾಣಿ, ಅಚ್ಯುತಾಖ್ಯಂ ಬ್ರಹ್ಮ ಗುಣಾರ್ಣವಂ, ಜೀವಗಣಾತ್ ವಿಲಕ್ಷಣಂ, ಮುಹುಃ ಪ್ರತಿಪಾದಯನ್ ವ್ಯಾಖ್ಯಾತ್ ।

**ಅನ್ವಯಾರ್ಥ—**

**ಕೃತಾಂತವಿತ್ತಮಃ** = ಸಿದ್ಧಾಂತಜ್ಞಾನಿಗಳಲ್ಲಿ ಶ್ರೇಷ್ಠರಾಗಿರುವ

**ಅಸೌ** = ಶ್ರೀ ಪೂರ್ಣಪ್ರಜ್ಞಾಚಾರ್ಯರು

**ಸಂಸದಿ** = ವಿದ್ವಾಂಸರ ಸಭೆಯಲ್ಲಿ

**ಶಿಷ್ಯಗಣಾಯ** = ಶಿಷ್ಯರ ಸಮೂಹಕ್ಕೆ

**ವೇದಾಂತಸೂತ್ರಾಣಿ** = ಬ್ರಹ್ಮಸೂತ್ರಗಳನ್ನು

**ಅಚ್ಯುತಾಖ್ಯಂ** = ಅಚ್ಯುತನೆಂದು ಹೆಸರುಳ್ಳ

**ಬ್ರಹ್ಮ** = ಬ್ರಹ್ಮನನ್ನು

**ಗುಣಾರ್ಣವಂ** = ಗುಣಗಳ ಸಮುದ್ರದಂತಿರುವವನನ್ನಾಗಿಯೂ,

**ಜೀವಗಣಾತ್** = ಜೀವಸಮೂಹದ ದೆಸೆಯಿಂದ

**ವಿಲಕ್ಷಣಂ** = ಬೇರೆಯವನನ್ನಾಗಿಯೂ,

**ಮುಹುಃ** = ಮತ್ತೆ ಮತ್ತೆ

**ಪ್ರತಿಪಾದಯನ್** = ಸಮರ್ಥಿಸುತ್ತಾ

**ವ್ಯಾಖ್ಯಾತ್** = ಪ್ರವಚನ ಮಾಡಿದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞಾಚಾರ್ಯರು ವೇದಾಂತಸೂತ್ರಗಳನ್ನು ಅಂದರೆ ಬ್ರಹ್ಮಸೂತ್ರಗಳನ್ನು ಶಿಷ್ಯರುಗಳ ಸಮೂಹವನ್ನುದ್ದೇಶಿಸಿ ಸಭೆಯಲ್ಲಿ ಪ್ರವಚನವನ್ನು ಮಾಡಿದರು. ಆ ಪ್ರವಚನದಲ್ಲಿ ಅಚ್ಯುತನೇ ಬ್ರಹ್ಮನು, ಅವನು ಜೀವಸಮೂಹದಿಂದ ಭಿನ್ನನು. ಅವನು ಗುಣಸಮುದ್ರನು, ಮುಂತಾದ ವಿಷಯಗಳನ್ನು ಪುನಃ ಪುನಃ ಸಮರ್ಥಿಸಿದರು.

**ವಿಗ್ರಹ—**

**ವೇದಾಂತಸೂತ್ರಾಣಿ—** ವೇದಾಂತಾನಾಂ ಸೂತ್ರಾಣಿ, ತಾನಿ ವೇದಾಂತಸೂತ್ರಾಣಿ ।

**ಕೃತಾಂತವಿತ್ತಮಃ—** ಕೃತಾಂತಂ ವೇತ್ತಿ ಇತಿ ಕೃತಾಂತವಿತ್, ಅತಿಶಯೇನ ಕೃತಾಂತವಿತ್ ಕೃತಾಂತವಿತ್ತಮಃ ।

**ಶಿಷ್ಯಗಣಾಯ—** ಶಿಷ್ಯಾಣಾಂ ಗಣಃ ಶಿಷ್ಯಗಣಃ, ತಸ್ಮೈ ಶಿಷ್ಯಗಣಾಯ ।

★ ★ ★

ಕುದುಪುಸ್ತೂರನ ಅಪಚಾರ

**ಅಪ್ರಾಂಶುನೂತ್ನೋಪಪದಾಧಿವಾಸಜಃ**
**ಸ ಸಂಕರೋ ವೈರಪರಾಯಣಃ ಪುನಃ ।**
**ಅಸೂಯಯೋಚೇಽತ್ರ ಮಹಾನತಿಕ್ರಮಃ**
**ಸೂತ್ರಾರ್ಥವಾದೋಽಕೃತಭಾಷ್ಯಕೇಷ್ವಿತಿ ॥ 38 ॥**

**ಪದಚ್ಛೇದ—** ಅಪ್ರಾಂಶುನೂತ್ನೋಪಪದಾಧಿವಾಸಜಃ, ಸಃ, ಸಂಕರಃ, ವೈರಪರಾಯಣಃ, ಪುನಃ, ಅಸೂಯಯಾ, ಊಚೇ, ಅತ್ರ , ಮಹಾನ್, ಅತಿಕ್ರಮಃ, ಸೂತ್ರಾರ್ಥವಾದಃ, ಅಕೃತಭಾಷ್ಯಕೇಷು, ಇತಿ ।

**ಅನ್ವಯ—** ವೈರಪರಾಯಣಃ ಸಃ ಸಂಕರಃ, ಪುನಃ ಅಪ್ರಾಂಶುನೂತ್ನೋಪಪದಾಧಿವಾಸಜಃ, ಅತ್ರ ಅಸೂಯಯಾ, ಅಕೃತಭಾಷ್ಯಕೇಷು ಸೂತ್ರಾರ್ಥವಾದಃ ಮಹಾನ್ ಅತಿಕ್ರಮಃ, ಇತಿ ಊಚೇ ।

**ಅನ್ವಯಾರ್ಥ—**

**ವೈರಪರಾಯಣಃ** = ಮುಖ್ಯಪ್ರಾಣದೇವರ ವೈರಕ್ಕೆ ಮುಖ್ಯ ಆಶ್ರಯನಾದ

**ಸಃ ಸಂಕರಃ** = ಆ ಸಂಕರನು,

**ಪುನಃ** = ಮತ್ತೆ

**ಅಪ್ರಾಂಶುನೂತ್ನೋಪಪದಾಧಿವಾಸಜಃ** = ಅಪ್ರಾಂಶುನೂತ್ನ ಎಂಬ ಊರಿನಲ್ಲಿ ಹುಟ್ಟಿದವನಾಗಿ,

**ಅತ್ರ** = ಈ ಮಧ್ವಾಚಾರ್ಯರ ವಿಷಯದಲ್ಲಿ

**ಅಸೂಯಯಾ** = ಹೊಟ್ಟೆಕಿಚ್ಚಿನಿಂದ,

**ಅಕೃತಭಾಷ್ಯಕೇಷು** = ಭಾಷ್ಯವನ್ನು ಬರೆಯದಿದ್ದವರಲ್ಲಿ

**ಸೂತ್ರಾರ್ಥವಾದಃ** = ಸೂತ್ರಾರ್ಥ ಪ್ರವಚನವು

**ಮಹಾನ್** = ದೊಡ್ಡ

**ಅತಿಕ್ರಮಃ** = ಅತಿಕ್ರಮವು,

**ಇತಿ** = ಹೀಗೆಂದು

**ಊಚೇ** = ಹೇಳಿದನು.

**ತಾತ್ಪರ್ಯ**— ಮುಖ್ಯಪ್ರಾಣದೇವರ ದ್ವೇಷಿಗಳಿಗೆ ಮುಖ್ಯ ಆಶ್ರಯನಾದ ಆ ಸಂಕರನು ಮುಂದಿನ ಜನ್ಮದಲ್ಲಿ 'ಅಪ್ರಾಂಶುನೂತ್ನ' ಎಂಬ ವಂಶದಲ್ಲಿ ಹುಟ್ಟಿದನು. ಅವನು ಶ್ರೀಪೂರ್ಣಪ್ರಜ್ಞಾಚಾರ್ಯರ ಬ್ರಹ್ಮಸೂತ್ರಗಳ ವಿವರಣೆಯನ್ನು ಕೇಳಿದನು. ಪೂರ್ಣಪ್ರಜ್ಞಾಚಾರ್ಯರ ಮೇಲಿನ ಮಾತ್ಸರ್ಯದಿಂದ ಅವನು 'ಭಾಷ್ಯವನ್ನು ಬರೆಯದಿದ್ದವರು ಸೂತ್ರಾರ್ಥಗಳನ್ನು ಹೇಳಕೂಡದು, ಇಂತಹ ಅನ್ಯಾಯವು ನಡೆಯುತ್ತಿದೆ. ಇದು ದೊಡ್ಡ ಅನ್ಯಾಯ' ಎಂದು ಹೇಳಿದರು.

**ವಿಗ್ರಹ**—

**ಅಪ್ರಾಂಶುನೂತ್ನೋಪಪದಾಧಿವಾಸಜಃ**— ಅಪ್ರಾಂಶುನೂತ್ನ ಇತಿ ಉಪಪದಂ ಯಸ್ಯ ಸಃ ಅಪ್ರಾಂಶುನೂತ್ನೋಪಪದಃ, ಅಪ್ರಾಂಶುನೂತ್ನೋಪಪದಶ್ಚಾಸೌ ಅಧಿವಾಸಶ್ಚ ಅಪ್ರಾಂಶುನೂತ್ನೋಪಪದಾಧಿವಾಸಃ, ಅಪ್ರಾಂಶುನೂತ್ನೋಪಪದಾಧಿವಾಸಾತ್ ಜಾಯತೇ ಇತಿ ಅಪ್ರಾಂಶುನೂತ್ನೋಪಪದಾಧಿವಾಸಜಃ ।

**ವೈರಪರಾಯಣಃ**— ವೈರೇ ಪರಾಯಣಃ ವೈರಪರಾಯಣಃ ।

**ಸೂತ್ರಾರ್ಥವಾದಃ**— ಸೂತ್ರಾಣಾಂ ಅರ್ಥಃ ಸೂತ್ರಾರ್ಥಃ, ಸೂತ್ರಾರ್ಥಸ್ಯ ವಾದಃ ಸೂತ್ರಾರ್ಥವಾದಃ ।

**ಅಕೃತಭಾಷ್ಯಕೇಷು**— ನ ಕೃತಂ ಅಕೃತಂ, ಅಕೃತಂ ಭಾಷ್ಯಂ ಯೈಃ ತೇ ಅಕೃತಭಾಷ್ಯಕಾಃ, ತೇಷು ಅಕೃತಭಾಷ್ಯಕೇಷು ।

**ಕ್ರಿಯಾಪದ**— **ಊಚೇ**- ವಚಪರಿಭಾಷಣೇ ಇತಿ ಪರಿಭಾಷಣಾರ್ಥಕಾತ್ ವಚಧಾತೋಃ ಆತ್ಮನೇಪದಿನಃ ಲಿಟಿ ಪ್ರಥಮಪುರುಷೇ ಏಕವಚನೇ ''ಊಚೇ'' ಇತಿ ರೂಪಮ್ ।

ಊಚೇ ಊಚಾತೇ ಊಚಿರೇ, ಊಚಿಷೇ ಊಚಾಥೇ ಊಚಿಧ್ವೇ, ಊಚೇ ಊಚಿವಹೇ ಊಚಿಮಹೇ ॥

★ ★ ★

ಪೂರ್ಣಪ್ರಜ್ಞರ ಸ್ಪಷ್ಟವಾದ ಉತ್ತರ

**ವದೋತ್ತರಂ ಭಾತಿ ಯದೀಹ ಕುರ್ಮಹೇ**
**ಭಾಷ್ಯಂ ಕೃತಿರ್ನಾಸ್ಯ ಹಿ ದಂಡವಾರಿತಾ ।**
**ಜಗದ್ಗುರೂಣಾಮಿತಿ ತಾಂ ಗುರೋರ್ಗಿರಂ**
**ಜನಃ ಸಮಸ್ತೋಽಭಿನನಂದ ಸಸ್ಮಿತಾಮ್ ॥ 39 ॥**

**ಪದಚ್ಛೇದ**— ವದೋತ್ತರಂ, ಭಾತಿ, ಯದಿ, ಇಹ, ಕುರ್ಮಹೇ, ಭಾಷ್ಯಂ, ಕೃತಿಃ, ನ, ಅಸ್ಯ, ದಂಡವಾರಿತಾ, ಜಗದ್ಗುರೂಣಾಂ, ಇತಿ, ತಾಂ, ಗುರೋಃ, ಗಿರಂ, ಜನಃ, ಸಮಸ್ತಃ, ಅಭಿನನಂದ, ಸಸ್ಮಿತಾಂ ।

**ಅನ್ವಯ**— ಯದಿ ಇಹ ಉತ್ತರಂ ಭಾತಿ, ವದ ವಯಂ ಭಾಷ್ಯಂ ಕುರ್ಮಹೇ, ಅಸ್ಯ ಕೃತಿಃ ದಂಡವಾರಿತಾ ನ ಹಿ, ಜಗದ್ಗುರೂಣಾಂ ಗುರೋಃ ಇತಿ ಸಸ್ಮಿತಾಂ ತಾಂ ಗಿರಂ, ಸಮಸ್ತಃ ಜನಃ ಅಭಿನನಂದ ।

**ಅನ್ವಯಾರ್ಥ—**

**ಯದಿ** = ಒಂದು ವೇಳೆ

**ಇಹ** = ಈ ವಿಷಯದಲ್ಲಿ

**ಉತ್ತರಂ** = ಉತ್ತರವು

**ಭಾತಿ** = ತೋರಿದರೆ

**ವದ** = ಹೇಳು,

**ವಯಂ** = ನಾವು

**ಭಾಷ್ಯಂ** = ನಮ್ಮ ಭಾಷ್ಯವನ್ನು

**ಕುರ್ಮಹೇ** = ಮಾಡುವೆವು.

**ಅಸ್ಯ** = ಈ ಭಾಷ್ಯದ

**ಕೃತಿಃ** = ನಿರ್ಮಾಣವು

**ದಂಡವಾರಿತಾ ನ ಹಿ** = ರಾಜಶಾಸನದಿಂದ ತಡೆಯಲ್ಪಟ್ಟಿಲ್ಲವಷ್ಟೆ

**ಜಗದ್ಗುರೂಣಾಂ** = ಪ್ರಪಂಚಕ್ಕೇ ಗುರುಗಳಾಗಿರುವ ದೇವತೆಗಳಿಗೆ

**ಗುರೋಃ** = ಗುರುಗಳಾದ ಶ್ರೀ ಮಧ್ವಾಚಾರ್ಯರ

**ಇತಿ** = ಈ ರೀತಿಯ

**ಸಸ್ಮಿತಾಂ** = ಮಂದಹಾಸದಿಂದ ಕೂಡಿದ

**ತಾಂ ಗಿರಂ** = ಸಂಕರನನ್ನು ಕುರಿತು ಹೇಳಿರುವ ಆ ಮಾತನ್ನು,

**ಸಮಸ್ತಃ** = ಎಲ್ಲಾ ಜನರು

**ಅಭಿನನಂದ** = ಭಲೇ ಭಲೇ ಎಂದು ಅನುಮೋದಿಸಿದರು.

**ತಾತ್ಪರ್ಯ—** ಶ್ರೀ ಪೂರ್ಣಪ್ರಜ್ಞಾಚಾರ್ಯರು ಸಂಕರನ ಮಾತುಗಳನ್ನು ಕೇಳಿ, ''ಎಲೈ ಸಂಕರನೇ, ಈ ನಿಮ್ಮ ಸಂಕರಭಾಷ್ಯದಲ್ಲಿ ದೋಷಗಳನ್ನು ಹೇಳಿರುವೆವು. ಅದಕ್ಕೆ ಪ್ರತ್ಯುತ್ತರವು ತೋರಿದರೆ ಹೇಳು. ನಾವು ಭಾಷ್ಯವನ್ನು ಬರೆಯುವೆವು. ರಾಜಶಾಸನದಿಂದ ಭಾಷ್ಯದ ನಿರ್ಮಾಣವು ತಡೆಯಲ್ಪಟ್ಟಿಲ್ಲ'', ಹೀಗೆ ಮುಗುಳು ನಗೆಯಿಂದ ಸಹಿತವಾದ ಶ್ರೀಮಧ್ವಾಚಾರ್ಯರು ಹೇಳಿದರು. ಆ ಮಾತುಗಳನ್ನು ಕೇಳಿದ ಸಮಸ್ತ ಜನರೂ ಅಭಿನಂದನೆಯನ್ನು ಮಾಡಿದರು.

**ವಿಗ್ರಹ—**

**ದಂಡವಾರಿತಾ—** ದಂಡೇನ ವಾರಿತಾ ದಂಡವಾರಿತಾ ।

**ಜಗದ್ಗುರೂಣಾಂ—** ಜಗತಾಂ ಗುರವಃ ಜಗದ್ಗುರವಃ, ತೇಷಾಂ ಜಗದ್ಗುರೂಣಾಂ ।

**ಸಸ್ಮಿತಾಂ—** ಸ್ಮಿತೇನ ಸಹ ವರ್ತತೇ ಇತಿ ಸಸ್ಮಿತಾ, ತಾಂ ಸಸ್ಮಿತಾಂ ।

**ಕ್ರಿಯಾಪದ— ಅಭಿನನಂದ-** ಅಭಿ ಇತ್ಯುಪಸರ್ಗಪೂರ್ವಕಾತ್ ಟುನದಿಸಮೃದ್ಧೌ ಇತಿ ಧಾತೋಃ ಲಿಟಿ ಪ್ರಥಮ-ಪುರುಷೇ ಏಕವಚನೇ ''ಅಭಿನನಂದ'' ಇತಿ ರೂಪಮ್ ।

ಅಭಿನನಂದ ಅಭಿನನಂದತುಃ ಅಭಿನನಂದುಃ,
ಅಭಿನನಂದಿಥ ಅಭಿನನಂದಥುಃ ಅಭನನಂದ,
ಅಭಿನನಂದ ಅಭಿನನಂದಿವ ಅಭಿನನಂದಿಮ ॥

★ ★ ★

### ದ್ವಾತ್ರಿಂಶಲ್ಲಕ್ಷಣಗಳಿಂದ ಶೋಭಿಸಿದ ಆಚಾರ್ಯರು

**ಪ್ರಾಜ್ಞೈರ್ಮಹಾಪೂರುಷಸರ್ವಲಕ್ಷಣೈಃ ಸಂಪನ್ನದೇಹೋಽಯಮಿತೀರಿತೇ ಪ್ರಭೌ ।**
**ಪರೇ ಪರಸ್ಯಾಪ್ಯತಿಪೀನತಾದೃಶಃ ಸ್ಫಿಜ್ಮಾತ್ರಸಂಶಂಸನಮತ್ರ ಚಕ್ರಿರೇ ॥ 40 ॥**

**ಪದಚ್ಛೇದ—** ಪ್ರಾಜ್ಞೈಃ, ಮಹಾಪೂರುಷಸರ್ವಲಕ್ಷಣೈಃ, ಸಂಪನ್ನದೇಹಃ, ಅಯಂ, ಇತಿ, ಈರಿತೇ, ಪ್ರಭೌ, ಪರೇ, ಪರಸ್ಯ, ಅಪಿ, ಅತಿಪೀನತಾದೃಶಃ, ಸ್ಫಿಜ್ಮಾತ್ರಸಂಶಂಸನಂ, ಅತ್ರ, ಚಕ್ರಿರೇ ।

**ಅನ್ವಯ—** ಅತ್ರ ಪ್ರಭೌ, ಪ್ರಾಜ್ಞೈಃ ಅಯಂ ಮಹಾಪೂರುಷಸರ್ವಲಕ್ಷಣೈಃ ಸಂಪನ್ನದೇಹಃ ಇತಿ ಈರಿತೇ, ಪರೇ ಅಪಿ ಅತಿಪೀನತಾದೃಶಃ ಪರಸ್ಯ ಸ್ಫಿಜ್‌ಮಾತ್ರಸಂಶಂಸನಂ ಚಕ್ರಿರೇ ।

**ಅನ್ವಯಾರ್ಥ—**

**ಅತ್ರ** = ಈ ಸಭೆಯಲ್ಲಿ
**ಪ್ರಭೌ** = ಸಮರ್ಥರಾದ ಶ್ರೀಪೂರ್ಣಪ್ರಜ್ಞಾಚಾರ್ಯರು
**ಪ್ರಾಜ್ಞೈಃ** = ಪುರುಷರ ಲಕ್ಷಣಗಳನ್ನು ತಿಳಿದವರಿಂದ
**ಅಯಂ** = ಶ್ರೀಪೂರ್ಣಪ್ರಜ್ಞಾಚಾರ್ಯರು
**ಮಹಾಪೂರುಷಸರ್ವಲಕ್ಷಣೈಃ** = ಮಹಾಪುರುಷರಿಗೆ ಇರಬೇಕಾದ ಎಲ್ಲಾ ಲಕ್ಷಣಗಳಿಂದಲೂ
**ಸಂಪನ್ನದೇಹಃ** = ಪರಿಪೂರ್ಣವಾದ ದೇಹವುಳ್ಳವರು
**ಇತಿ** = ಹೀಗೆಂದು
**ಈರಿತೇ** = ಹೇಳಲ್ಪಟ್ಟಾಗ
**ಪರೇ ಅಪಿ** = ಸಂಕರನ ಕಡೆಯವರೂ ಕೂಡ
**ಅತಿಪೀನತಾದೃಶಃ** = ಸಂಕರದೇಹದಲ್ಲಿ ಅತ್ಯಂತ ಪುಷ್ಟಿಯನ್ನು ನೋಡಿದವರಾಗಿ
**ಸ್ಫಿಜ್ಮಾತ್ರಸಂಶಂಶನಂ** = ಒಂದೇ ಪಿರ್ರೆಯ ಹೊಗಳಿಕೆಯನ್ನು
**ಚಕ್ರಿರೇ** = ಮಾಡಿದರು.

**ತಾತ್ಪರ್ಯ—** ದೇಹಗಳಲ್ಲಿರುವ ಲಕ್ಷಣಗಳನ್ನು ಚೆನ್ನಾಗಿ ತಿಳಿದಿರುವ ಪ್ರಾಜ್ಞರು, ಮಹಾಪುರುಷರಲ್ಲಿ ಇರಬೇಕಾದ ಎಲ್ಲಾ ಲಕ್ಷಣಗಳಿಂದಲೂ ಸರ್ವಜ್ಞಾಚಾರ್ಯರು ಯುಕ್ತರಾಗಿರುವರು ಎಂದು ಹೊಗಳಿದರು. ಆಗ ಇತರ ವ್ಯಕ್ತಿಗಳು ಸಂಕರನ ದೇಹದಲ್ಲಿರುವ ಅತ್ಯಂತ ಪುಷ್ಟವಾಗಿ ಬೆಳೆದಿದ್ದ ಪಿರ್ರೆಯನ್ನು ಮಾತ್ರ ಹೊಗಳಿದರು.

ವಿಗ್ರಹ—

**ಮಹಾಪೂರುಷಸರ್ವಲಕ್ಷಣೈಃ—** ಮಹಾಂತಶ್ಚ ತೇ ಪೂರುಷಾಶ್ಚ ಮಹಾಪೂರುಷಾಃ, ಮಹಾಪುರುಷಾಣಾಂ ಸರ್ವಲಕ್ಷಣಾನಿ ಮಹಾಪುರುಷಸರ್ವಲಕ್ಷಣಾನಿ, ತೈಃ ಮಹಾಪುರುಷಲಕ್ಷಣೈಃ ।

**ಸಂಪನ್ನದೇಹಃ—** ಸಂಪನ್ನಃ ದೇಹಃ ಯಸ್ಯ ಸಃ ಸಂಪನ್ನದೇಹಃ ।

**ಅತಿಪೀನತಾದೃಶಃ—** ಅತ್ಯಂತಂ ಪೀನಃ ಅತಿಪೀನಃ, ಅತಿಪೀನಸ್ಯ ಭಾವಃ ಅತಿಪೀನತಾ, ಅತಿಪೀನತಾಂ ಪಶ್ಯಂತಿ ಇತಿ ಅತಿಪೀನತಾದೃಶಃ ।

**ಸ್ಫಿಜ್ಮಾತ್ರಸಂಶಂಸನಂ—** ಸ್ಫಿಗೇವ ಸ್ಫಿಜ್ಮಾತ್ರಂ, ಸ್ಫಿಜ್ಮಾತ್ರಸ್ಯ ಸಂಶಂಸನಂ, ಸ್ಫಿಜ್ಮಾಂತ್ರಸಂಶಸನಂ, ತತ್ ಸ್ಫಿಜ್ಮಾತ್ರ-ಸಂಶಂಸನಮ್ ।

**ಕ್ರಿಯಾಪದ—** ಚಕ್ರಿರೇ- ಡುಕೃಞ್ ಕರಣೇ ಇತಿ ಕರಣಾರ್ಥಕಾತ್ ಕೃಧಾತೋಃ ಆತ್ಮನೇಪದಿನಃ ಲಿಟಿ ಪ್ರಥಮ-ಪುರುಷೇ ಬಹುವಚನೇ "ಚಕ್ರಿರೇ" ಇತಿ ರೂಪಮ್ ।

ಚಕ್ರೇ ಚಕ್ರಾತೇ ಚಕ್ರಿರೇ, ಚಕೃಷೇ ಚಕ್ರಾಥೇ ಚಕೃಢ್ವೇ, ಚಕ್ರೇ ಚಕೃವಹೇ ಚಕೃಮಹೇ ॥

★ ★ ★

## ಕುದುಪುಸ್ತೂರನ ದುರ್ಲಕ್ಷಣ

**ಸ್ಫಿಗ್ದೂಷಣಾನಿ ಪ್ರತಿಪಾದಯತ್ಯಲಂ**
**ಸಂಪೂರ್ಣಸಂಖ್ಯೇಽಸ್ಯ ತು ಲಕ್ಷ್ಮಶಾಸ್ತ್ರತಃ ।**
**ತದ್ದಂಡಸಂಖಂಡನಸಂಶ್ರವಂ ವ್ಯಧಾತ್**
**ತದಕ್ಷಮೋಽಸೌ ಪ್ರಕೃತಿರ್ಹಿ ಸಾಽಸತಾಮ್ ॥ 41 ॥**

**ಪದಚ್ಛೇದ**— ಸ್ಫಿಗ್ದೂಷಣಾನಿ, ಪ್ರತಿಪಾದಯತಿ, ಅಲಂ, ಸಂಪೂರ್ಣಸಂಖ್ಯೇ, ಅಸ್ಯ, ತು, ಲಕ್ಷ್ಮಶಾಸ್ತ್ರತಃ, ತದ್ದಂಡ-ಸಂಖಂಡನಸಂಶ್ರವಂ, ವ್ಯಧಾತ್, ತದಕ್ಷಮಃ, ಅಸೌ, ಪ್ರಕೃತಿಃ, ಹಿ, ಸಾ, ಅಸತಾಂ ।

**ಅನ್ವಯ**— ಸಂಪೂರ್ಣಸಂಖ್ಯೇ ತು, ಲಕ್ಷ್ಮಶಾಸ್ತ್ರತಃ ಅಸ್ಯ ಸ್ಫಿಗ್ದೂಷಣಾನಿ ಅಲಂ ಪ್ರತಿಪಾದಯತಿ, ತದ್ದಂಡ-ಸಂಖಂಡನಸಂಶ್ರವಂ ತದಕ್ಷಮಃ ಅಸೌ ವ್ಯಧಾತ್, ಸಾ ಅಸತಾಂ ಪ್ರಕೃತಿಃ ಹಿ ।

**ಅನ್ವಯಾರ್ಥ**—

**ಸಂಪೂರ್ಣಸಂಖ್ಯೇ ತು** = ಪೂರ್ಣಪ್ರಜ್ಞಾಚಾರ್ಯರಾದರೋ
**ಲಕ್ಷ್ಮಶಾಸ್ತ್ರತಃ** = ಲಕ್ಷಣಶಾಸ್ತ್ರದಿಂದ
**ಅಸ್ಯ** = ಈ ಸಂಕರನ
**ಸ್ಫಿಗ್ದೂಷಣಾನಿ** = ಪಿರ್‍ರೆಗಳ ದೋಷಗಳನ್ನು
**ಅಲಂ ಪ್ರತಿಪಾದಯತಿ ಸತಿ** = ಚೆನ್ನಾಗಿ ಪ್ರತಿಪಾದನೆ ಮಾಡುತ್ತಿರಲಿಕ್ಕಾಗಿ,
**ತದ್ದಂಡಸಂಖಂಡನಸಂಶ್ರವಂ** = ಆ ಪೂರ್ಣಪ್ರಜ್ಞಾಚಾರ್ಯರ ದಂಡದ
**ಸಂಖಂಡನ** = ಚೆನ್ನಾಗಿ ಮುರಿಯುವಿಕೆಯ
**ಸಂಶ್ರವಂ** = ಪ್ರತಿಜ್ಞೆಯನ್ನು
**ತದಕ್ಷಮಃ** = ಆ ಕಾರ್ಯವನ್ನು ಮಾಡಲು ಅಸಮರ್ಥನಾದ
**ಅಸೌ** = ಈ ಸಂಕರನು
**ವ್ಯಧಾತ್** = ಮಾಡಿದನು.
**ಸಾ** = ಅದು (ತನ್ನಿಂದ ಮಾಡಲು ಅಶಕ್ಯವಾದ ಕಾರ್ಯವನ್ನು ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡುವುದು)
**ಅಸತಾಂ** = ಅಯೋಗ್ಯರ
**ಪ್ರಕೃತಿ ಹಿ** = ಸ್ವಭಾವವಷ್ಟೆ.

**ತಾತ್ಪರ್ಯ**— ಶ್ರೀಪೂರ್ಣಪ್ರಜ್ಞಾಚಾರ್ಯರು ಲಕ್ಷಣಶಾಸ್ತ್ರದ ಆಧಾರದಿಂದ ಪಿರ್‍ರೆಗಳಲ್ಲಿರುವ ದೋಷಗಳನ್ನು ಹೇಳಲಿಕ್ಕೆ ಆರಂಭಿಸಿದರು. ಸಂಕರನು ಆಗ ಶ್ರೀಪೂರ್ಣಪ್ರಜ್ಞಾಚಾರ್ಯರ ದಂಡವನ್ನು ಮುರಿಯುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿದನು. ಆದರೆ ಆ ಕಾರ್ಯವನ್ನು ಮಾಡಲು ಸಂಕರನು ಅಸಮರ್ಥನು. ಹೀಗೆಯೇ ತನ್ನಿಂದ ಮಾಡಲು ಸಾಧ್ಯವಾಗದ ಪ್ರತಿಜ್ಞೆಯನ್ನು ಮಾಡುವುದು, ಕೊನೆಗೆ ಮಾಡದಿರುವುದು ಅಸಜ್ಜನರ ಸ್ವಭಾವವಲ್ಲವೇ ?

**ವಿಗ್ರಹ**—

**ಸ್ಫಿಗ್ದೂಷಣಾನಿ**— ಸ್ಫಿಚೋಃ ದೂಷಣಾನಿ, ಸ್ಫಿಗ್ದೂಷಣಾನಿ, ತಾನಿ ಸ್ಫಿಗ್ದೂಷಣಾನಿ ।
**ಪ್ರತಿಪಾದಯತಿ**— ಪ್ರತಿಪಾದಯತಿ ಇತಿ ಪ್ರತಿಪಾದಯನ್, ತಸ್ಮಿನ್ ಪ್ರತಿಪಾದಯತಿ ।
**ಸಂಪೂರ್ಣಸಂಖ್ಯೇ**— ಸಂಪೂರ್ಣಾ ಸಂಖ್ಯಾ ಯಸ್ಯ ಸಃ ಸಂಪೂರ್ಣಸಂಖ್ಯಃ, ತಸ್ಮಿನ್ ಸಂಪೂರ್ಣಸಂಖ್ಯೇ ।

**ಲಕ್ಷ್ಮಶಾಸ್ತ್ರತಃ—** ಲಕ್ಷ್ಮಣಃ ಶಾಸ್ತ್ರಂ ಲಕ್ಷ್ಮಶಾಸ್ತ್ರಂ, ತಸ್ಮಾತ್ ಲಕ್ಷ್ಮಶಾಸ್ತ್ರತಃ ।

**ತದ್ದಂಡಸಂಖಂಡನಸಂಶ್ರವಂ—** ತಸ್ಯ ದಂಡಃ ತದ್ದಂಡಃ, ತದ್ದಂಡಸ್ಯ ಸಂಖಂಡನಂ ತದ್ದಂಡಸಂಖಂಡನಂ, ತದ್ದಂಡಸಂಖಂಡನೇ ಸಂಶ್ರವಃ ತದ್ದಂಡಸಂಖಂಡನಸಂಶ್ರವಃ, ತಂ ತದ್ದಂಡಸಂಖಂಡನಸಂಶ್ರವಂ ।

**ತದಕ್ಷಮಃ—** ತಸ್ಮಿನ್ ಅಕ್ಷಮಃ ತದಕ್ಷಮಃ ।

**ಅಸತಾಂ—** ನ ಸಂತಃ ಅಸಂತಃ, ತೇಷಾಂ ಅಸತಾಂ ।

★ ★ ★

### ಕನ್ಯಾಕುಮಾರಿ, ರಾಮೇಶ್ವರಕ್ಕೆ ಪ್ರಯಾಣ - ರಾಮನಾಥನ ದರ್ಶನ

**ಸ್ನಾತ್ವಾತ್ರ ತೀರ್ಥೇಷ್ವಚಿರೇಣ ಕನ್ಯಕಾತೀರ್ಥೇ ಸುತೀರ್ಥೇ ಸುಖತೀರ್ಥ ಆಪ್ಲುತಃ ।**
**ಸಮುದ್ರಸೇತೌ ಚ ನಿಮಜ್ಜ್ಯ ವಿಷ್ಣವೇ ಶ್ರೀರಾಮನಾಥಾಯ ನಮಶ್ಚಕಾರ ಸಃ ॥ 42 ॥**

**ಪದಚ್ಛೇದ—** ಸ್ನಾತ್ವಾ, ಅತ್ರ, ತೀರ್ಥೇಷು, ಅಚಿರೇಣ, ಕನ್ಯಕಾತೀರ್ಥೇ, ಸುತೀರ್ಥೇ, ಸುಖತೀರ್ಥಃ, ಆಪ್ಲುತಃ, ಸಮುದ್ರಸೇತೌ, ಚ ನಿಮಜ್ಜ್ಯ, ವಿಷ್ಣವೇ, ಶ್ರೀರಾಮನಾಥಾಯ, ನಮಶ್ಚಕಾರ, ಸಃ ।

**ಅನ್ವಯ—** ಸಃ ಸುಖತೀರ್ಥಃ, ಅತ್ರ ತೀರ್ಥೇಷು ಸ್ನಾತ್ವಾ ಅಚಿರೇಣ, ಸುತೀರ್ಥೇ ಕನ್ಯಕಾತೀರ್ಥೇ ಆಪ್ಲುತಃ, ಸಮುದ್ರಸೇತೌ ಚ ನಿಮಜ್ಜ್ಯ ಶ್ರೀರಾಮನಾಥಾಯ ವಿಷ್ಣವೇ ನಮಶ್ಚಕಾರ ।

**ಅನ್ವಯಾರ್ಥ—**

**ಸಃ ಸುಖತೀರ್ಥಃ** = ಆ ಆನಂದತೀರ್ಥರು,
**ಅತ್ರ** = ಆ ಅನಂತಶಯನದಲ್ಲಿ ಇರುವ
**ತೀರ್ಥೇಷು** = ತೀರ್ಥಗಳಲ್ಲಿ
**ಸ್ನಾತ್ವಾ** = ಸ್ನಾನ ಮಾಡಿದವರಾಗಿ
**ಅಚಿರೇಣ** = ಬೇಗನೆ
**ಸುತೀರ್ಥೇ** = ಒಳ್ಳೆಯ ತೀರ್ಥವಾದ
**ಕನ್ಯಕಾತೀರ್ಥೇ** = ಕನ್ಯಾಕುಮಾರಿ ತೀರ್ಥದಲ್ಲಿ
**ಆಪ್ಲುತಃ** = ಸ್ನಾನ ಮಾಡಿದವರಾಗಿ,
**ಸಮುದ್ರಸೇತೌ ಚ** = ದಕ್ಷಿಣಸಮುದ್ರದಲ್ಲಿ ಶ್ರೀರಾಮನು ಕಟ್ಟಿರುವ ಸೇತುವಿನಲ್ಲಿಯೂ
**ನಿಮಜ್ಜ್ಯ** = ಸ್ನಾನ ಮಾಡಿದವರಾಗಿ,
**ಶ್ರೀರಾಮನಾಥಾಯ** = ಶ್ರೀರಾಮನಾಥ ಎಂಬ
**ವಿಷ್ಣವೇ** = ವಿಷ್ಣುವಿಗೆ
**ನಮಶ್ಚಕಾರ** = ನಮಸ್ಕರಿಸಿದರು.

**ತಾತ್ಪರ್ಯ—** ಶ್ರೀ ಆನಂದತೀರ್ಥರು ಅನಂತಶಯನದಲ್ಲಿರುವ ಬೇರೆ ಬೇರೆ ತೀರ್ಥಗಳಲ್ಲಿ ಸ್ನಾನ ಮಾಡಿದರು. ಅನಂತರ ಕನ್ಯಾಕುಮಾರಿಗೆ ಹೋದರು. ಅಲ್ಲಿರುವ ಕನ್ಯಕಾತೀರ್ಥ ಎಂಬ ಪಾವನವಾದ ತೀರ್ಥದಲ್ಲಿ ಸ್ನಾನ ಮಾಡಿದರು. ಆಮೇಲೆ ಸಮುದ್ರಸೇತುವಿನಲ್ಲಿ ಸ್ನಾನವನ್ನು ಮಾಡಿದವರಾಗಿ ಶ್ರೀರಾಮನಾಥ ನಾಮಕನಾದ ಶ್ರೀವಿಷ್ಣುವನ್ನು ನಮ-ಸ್ಕರಿಸಿದರು.

ವಿಗ್ರಹ—

**ಅಚಿರೇಣ—** ನ ಚಿರಂ ಅಚಿರಂ, ತೇನ ಅಚಿರೇಣ ।

**ಕನ್ಯಕಾತೀರ್ಥೇ—** ಕನ್ಯಕಾಯಾಃ ತೀರ್ಥಂ ಕನ್ಯಕಾತೀರ್ಥಂ, ತಸ್ಮಿನ್ ಕನ್ಯಕಾತೀರ್ಥೇ ।

**ಸುತೀರ್ಥೇ—** ಶೋಭನಂ ಚ ತತ್ ತೀರ್ಥಂ ಚ ಸುತೀರ್ಥಂ, ತಸ್ಮಿನ್ ಸುತೀರ್ಥೇ ।

**ಸುಖತೀರ್ಥಃ—** ಸುಖದಂ ತೀರ್ಥಂ ಯಸ್ಯ ಸಃ ಸುಖತೀರ್ಥಃ ।

**ಸಮುದ್ರಸೇತೌ—** ಸಮುದ್ರೇ ಸೇತುಃ ಸಮುದ್ರಸೇತುಃ, ತಸ್ಮಿನ್ ಸಮುದ್ರಸೇತೌ ।

**ಶ್ರೀರಾಮನಾಥಾಯ—** ಶ್ರೀರಾಮಃ ನಾಥಃ ಯಸ್ಯ ಸಃ ಶ್ರೀರಾಮನಾಥಃ, ತಸ್ಮೈ ಶ್ರೀರಾಮನಾಥಾಯ ।

**ಕ್ರಿಯಾಪದ—** ಚಕಾರ- ಡುಕೃಞ್ ಕರಣೇ ಇತಿ ಕರಣಾರ್ಥಕಾತ್ ಕೃ ಧಾತೋಃ ಲಿಟಿ ಪರಸ್ಮೈಪದಿನಿ ''ಚಕಾರ''ಇತಿ ರೂಪಮ್ ।

ಚಕಾರ ಚಕ್ರತುಃ ಚಕ್ರುಃ, ಚಕ್ರಿಥ ಚಕರ್ಥ ಚಕ್ರಥುಃ ಚಕ್ರ, ಚಕಾರ ಚಕರ ಚಕ್ರಿವ ಚಕ್ರಿಮ ॥

★ ★ ★

ರಾಮೇಶ್ವರದಲ್ಲಿ ಕುದುಪುಸ್ತೂರನ ಪರಾಭವ

**ತಮಾವ್ರಜಂತಂ ಯತಿವೇಷಧಾರಿಣಂ ದಂಡಂ**
**ಪ್ರಕಾಶ್ಯೈಷ ಹಸನ್ನಭಾಷತ ।**
**ಖಂಡ್ಯೇತ ದಂಡೋ ಯದಿ ಚಂಡ ನ ತ್ವಯಾ**
**ತ್ವಂ ಷಂಡಕೋಽಪಂಡಿತ ವಂಧ್ಯವಾಗಿತಿ ॥ 43 ॥**

**ಪದಚ್ಛೇದ—** ತಂ, ಆವ್ರಜಂತಂ, ಯತಿವೇಷಧಾರಿಣಂ, ದಂಡಂ, ಪ್ರಕಾಶ್ಯ, ಏಷಃ, ಹಸನ್, ಅಭಾಷತ, ಖಂಡ್ಯೇತ, ದಂಡಃ, ಯದಿ, ಚಂಡ, ನ, ತ್ವಯಾ, ತ್ವಂ, ಷಂಡಕಃ, ಅಪಂಡಿತ, ವಂಧ್ಯವಾಕ್, ಇತಿ ।

**ಅನ್ವಯ—** ಏಷಃ ಆವ್ರಜಂತಂ ಯತಿವೇಷಧಾರಿಣಂ ತಂ ಅಸುರಂ, ದಂಡಂ ಪ್ರಕಾಶ್ಯ ಹಸನ್, ಚಂಡ ಅಪಂಡಿತ, ತ್ವಯಾ ದಂಡಃ ಯದಿ ನ ಖಂಡ್ಯೇತ, ವಂಧ್ಯವಾಕ್ ತ್ವಂ ಷಂಡಕಃ, ಇತಿ ಅಭಾಷತ ।

**ಅನ್ವಯಾರ್ಥ—**

**ಏಷಃ** = ಪೂರ್ಣಪ್ರಜ್ಞಾಚಾರ್ಯರು

**ಆವ್ರಜಂತಂ** = ಎದುರಿಗೆ ಬರುತ್ತಿರುವ

**ಯತಿವೇಷಧಾರಿಣಂ** = ಯತಿಯ ವೇಷವನ್ನು ಧರಿಸಿರುವ

**ತಂ (ಅಸುರಂ)** = ದೈತ್ಯನಾದ ಸಂಕರನನ್ನು ಕುರಿತು

**ದಂಡಂ** = ದಂಡವನ್ನು

**ಪ್ರಕಾಶ್ಯ** = ತೋರಿಸಿ

**ಹಸನ್** = ನಗುತ್ತಾ

**ಚಂಡ** = ಕೋಪಸ್ವಭಾವದವನೇ!

**ಅಪಂಡಿತ** = ಮೂಢನೇ !

**ತ್ವಯಾ** = ನಿನ್ನಿಂದ

**ದಂಡಃ** = ದಂಡವು

**ಯದಿ** = ಒಂದು ವೇಳೆ

**ನ ಖಂಡ್ಯೇತ** = ಮುರಿಯಲ್ಪಡದಿದ್ದರೆ,

**ವಂಧ್ಯವಾಕ್** = ವ್ಯರ್ಥ ಮಾತುಗಳುಳ್ಳ

**ತ್ವಂ** = ನೀನು

**ಷಂಡಕಃ** =ನಪುಂಸಕನು

**ಇತಿ** = ಎಂದು

**ಅಭಾಷತ** = ಹೇಳಿದರು.

**ತಾತ್ಪರ್ಯ—** ಶ್ರೀರಾಮದೇವರಿಂದ ನಿರ್ಮಿಸಲ್ಪಟ್ಟ ಸೇತುವಿನಲ್ಲಿ ಸ್ನಾನವನ್ನು ಮಾಡಿಕೊಂಡು ಶ್ರೀಪೂರ್ಣ-ಪ್ರಜ್ಞಾಚಾರ್ಯರು ಬರುತ್ತಿರುವಾಗ ಈ ಸಂಕರನು ಯತಿವೇಷವನ್ನು ಧರಿಸಿದವನಾಗಿ ಎದುರಿನಲ್ಲಿ ಬರುತ್ತಿದ್ದನು. ಅವನು ಶ್ರೀಪೂರ್ಣಪ್ರಜ್ಞಾಚಾರ್ಯರ ದಂಡವನ್ನು ಮುರಿಯುವುದಾಗಿ ಪ್ರತಿಜ್ಞೆ ಮಾಡಿದವನಲ್ಲವೇ ? ಅವನಿಗೆ ದಂಡವನ್ನು ತೋರಿಸಿ, ''ಎಲೋ ಸಂಕರನೇ ! ನನ್ನ ದಂಡವನ್ನು ಮುರಿಯುವುದಾಗಿ ಪ್ರತಿಜ್ಞೆಯನ್ನು ಮಾಡಿರುವಿಯಲ್ಲವೇ ? ಇಕೋ ದಂಡವನ್ನು ಕೊಡುವೆನು. ನಿನಗೆ ಶಕ್ತಿಯಿದ್ದರೆ ಮುರಿ, ಹಾಗೆ ನಿನಗೆ ಮುರಿಯಲು ಸಾಧ್ಯವಾಗದಿದ್ದರೆ ಸುಳ್ಳು ಪ್ರತಿಜ್ಞೆಯನ್ನು ಮಾಡಿರುವ ನೀನು ನಪುಂಸಕನು ಮತ್ತು ಮೂರ್ಖನು'' ಎಂದರು.

**ವಿಗ್ರಹ—**

**ಯತಿವೇಷಧಾರೀ—** ಯತೇಃ ವೇಷಃ ಯತಿವೇಷಃ, ತಂ ಧರ್ತುಂ ಶೀಲಂ ಅಸ್ಯೇತಿ ಯತಿವೇಷಧಾರೀ, ತಂ ।

**ಅಪಂಡಿತಃ—** ನ ಪಂಡಿತಃ, ತಸ್ಯ ಸಂಬುದ್ಧಿಃ ಹೇ ಅಪಂಡಿತ! ।

**ವಂಧ್ಯವಾಕ್—** ವಂಧ್ಯಾ ವಾಕ್ ಯಸ್ಯ ಸಃ ವಂಧ್ಯವಾಕ್ ।

**ಕ್ರಿಯಾಪದ—** **ಭಾಷ-** ವ್ಯಕ್ತಾಯಾಂ ವಾಚಿ ಆತ್ಮನೇ ಲಟ್ ।

ಅಭಾಷತ ಅಭಾಷೇತಾಂ ಅಭಾಷಂತ, ಅಭಾಷಥ ಅಭಾಷೇಥಾಂ ಅಭಾಷಧ್ವಂ, ಅಭಾಷೇ ಅಭಾಷಾವಹಿ ಅಭಾಷಾಮಹಿ ॥

ಖಡಿಭೇದನೇ- ವ್ಯಕ್ತಾಯಾಂ ಖಡಿ ಭೇದನೇ ಕರ್ಮಣಿ ವಿಧಿಲಿಙ್ ।

ಖಂಡ್ಯೇತ ಖಂಡ್ಯೇಯಾತಾಂ ಖಂಡ್ಯೇರನ್, ಖಂಡ್ಯೇಥಾಃ ಖಂಡ್ಯೇ ಯಾಥಾಂ ಖಂಡ್ಯೇಧ್ವಂ, ಖಂಡ್ಯೇಯ ಖಂಡ್ಯೇವಹಿ ಖಂಡ್ಯೇಮಹಿ.

★ ★ ★

## ಪೂರ್ಣಪ್ರಜ್ಞರನ್ನು ಕೊಂಡಾಡಿದ ಪಂಡಿತವರ್ಗ

**ಲಜ್ಜಾನತಃ ಸ್ವಾರ್ಥಮಥಾರ್ಥಯನ್ನಸನ್**
**ಉಪೈಕ್ಷ್ಯತಾಸೌ ದ್ವಿಜನಾಯಕೈಸ್ತದಾ ।**
**ಆನಂದಯಂತಂ ವದನೇಂದುನಾ ಜಗತ್**
**ತಂ ದ್ವೇಷ್ಟಿ ಕಃ ಪ್ರಾಜ್ಞಮಿಹೇತಿ ವಾದಿಭಿಃ ॥ 44 ॥**

**ಪದಚ್ಛೇದ—** ಲಜ್ಜಾನತಃ, ಸ್ವಾರ್ಥಂ, ಅಥ, ಅರ್ಥಯನ್, ಅಸನ್, ಉಪೈಕ್ಷ್ಯತ, ಅಸೌ, ದ್ವಿಜನಾಯಕೈಃ, ತದಾ, ಆನಂದಯಂತಂ, ವದನೇಂದುನಾ, ಜಗತ್, ತಂ, ದ್ವೇಷ್ಟಿ, ಕಃ, ಪ್ರಾಜ್ಞಂ, ಇಹ, ಇತಿ, ವಾದಿಭಿಃ ।

**ಅನ್ವಯ—** ಅಥ ಅಸನ್ ಅಸೌ ಲಜ್ಜಾನತಃ, ಸ್ವಾರ್ಥಂ ಅರ್ಥಯನ್, ತದಾ ''ವದನೇಂದುನಾ ಜಗತ್ ಆನಂದಯಂತಂ ಇಹ ಪ್ರಾಜ್ಞಂ ತಂ ಕಃ ದ್ವೇಷ್ಟಿ ?'' ಇತಿ ವಾದಿಭಿಃ ದ್ವಿಜನಾಯಕೈಃ ಉಪೈಕ್ಷತ ।

**ಅನ್ವಯಾರ್ಥ—**

**ಅಥ** = ಅನಂತರ

**ಅಸನ್** = ದುಷ್ಟನಾದ

**ಅಸೌ** = ಈ ಸಂಕರನು,

**ಲಜ್ಜಾನತಃ** = ಲಜ್ಜೆಯಿಂದ ತಲೆಯನ್ನು ಬಗ್ಗಿಸಿದವನಾಗಿ,

**ಸ್ವಾರ್ಥಂ** = ತನಗಾಗಿ

**ಅರ್ಥಯನ್** = ಬೇರೆ ಜನರನ್ನು ಪ್ರಾರ್ಥಿಸುತ್ತಿರಲು,

**ತದಾ** = ಆಗ

**ವದನೇಂದುನಾ** = ಮುಖವೆಂಬ ಚಂದ್ರನಿಂದ

**ಜಗತ್** = ಪ್ರಪಂಚವನ್ನು

**ಆನಂದಯಂತಂ** = ಸಂತೋಷಪಡಿಸುತ್ತಿರುವ

**ಪ್ರಾಜ್ಞಂ ತಂ** = ಜ್ಞಾನಿಗಳಾದ ಪೂರ್ಣಪ್ರಜ್ಞಾಚಾರ್ಯರನ್ನು

**ಕಃ** = ಯಾವನು

**ದ್ವೇಷ್ಟಿ** = ದ್ವೇಷಿಸುತ್ತಾನೆ ?

**ಇತಿ ವಾದಿಭಿಃ** = ಹೀಗೆಂದು ಹೇಳುತ್ತಿರುವ

**ದ್ವಿಜನಾಯಕೈಃ** = ಬ್ರಾಹ್ಮಣಪ್ರಮುಖರುಗಳಿಂದ

**ಉಪೈಕ್ಷ್ಯತ** = ಉಪೇಕ್ಷಿಸಲ್ಪಟ್ಟನು.

**ತಾತ್ಪರ್ಯ—** ಸಂಕರನು ಲಜ್ಜೆಯಿಂದ ತಲೆಯನ್ನು ಬಗ್ಗಿಸಿದನು. ತನಗಾಗಿ ಅಲ್ಲಿರುವ ಬ್ರಾಹ್ಮಣರನ್ನೆಲ್ಲಾ ಪ್ರಾರ್ಥಿಸಿದನು. ಆ ಬ್ರಾಹ್ಮಣಶ್ರೇಷ್ಠರು, ''ಪೂರ್ಣಪ್ರಜ್ಞಾಚಾರ್ಯರು ತಮ್ಮ ಮುಖಚಂದ್ರವನ್ನು ತೋರಿಸಿ ಪ್ರಪಂಚವನ್ನೇ ಆನಂದಗೊಳಿಸುವರು. ಅವರನ್ನು ಯಾರು ದ್ವೇಷಿಸುವರು ?'' ಎಂದು ಹೇಳಿ ಆ ಸಂಕರನನ್ನು ಉಪೇಕ್ಷಿಸಿದರು. ಅವರು ಯಾರೂ ಈ ಸಂಕರನ ಸಹಾಯಕ್ಕೆ ಬರಲಿಲ್ಲ.

**ವಿಗ್ರಹ—**

**ಲಜ್ಜಾನತಃ—** ಲಜ್ಜಯಾ ಆನತಃ ಲಜ್ಜಾನತಃ ।

**ಅರ್ಥಯನ್—** ಅರ್ಥಯತಿ ಇತಿ ಅರ್ಥಯನ್ ।

**ಅಸನ್—** ನ ಸನ್ ಅಸನ್ ।

**ಆನಂದಯಂತಂ—** ಆನಂದಯತಿ ಇತಿ ಆನಂದಯನ್, ತಂ ಆನಂದಯಂತಂ ।

**ವದನೇಂದುನಾ—** ವದನಮೇವ ಇಂದುಃ ವದನೇಂದುಃ, ತೇನ ವದನೇಂದುನಾ ।

**ವಾದಿಭಿಃ—** ವದಂತಿ ಇತಿ ವಾದಿನಃ, ತೈಃ ವಾದಿಭಿಃ ।

**ಕ್ರಿಯಾಪದ—** **ದ್ವೇಷ್ಟಿ**- ದ್ವಿಷ ಅಪ್ರೀತೌ ಇತಿ ಅಪ್ರೀತ್ಯರ್ಥಕಾತ್ ದ್ವಿಷಧಾತೋಃ ಲಟ್ ಪ್ರಥಮಪುರುಷೇ ಏಕವಚನೇ ''ದ್ವೇಷ್ಟಿ'' ಇತಿ ರೂಪಮ್ ।

ದ್ವೇಷ್ಟಿ ದ್ವಿಷ್ಟಃ ದ್ವಿಷಂತಿ, ದ್ವೇಷ್ಟಿ ದ್ವಿಷ್ಟಃ ದ್ವಿಷ್ಠ, ದ್ವೇಷ್ಮಿ ದ್ವಿಷ್ವಃ ದ್ವಿಷ್ಮಃ ॥

**ಉಪೈಕ್ಷತ-** ಉಪ ಇತ್ಯುಪಸರ್ಗಪೂರ್ವಕಾತ್ ಈಕ್ಷ ದರ್ಶನೇ ಇತಿ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಉಪೈಕ್ಷತ''ಇತಿ ರೂಪಮ್ ।

ಉಪೈಕ್ಷತ ಉಪೈಕ್ಷೇತಾಂ ಉಪೈಕ್ಷಂತ, ಉಪೈಕ್ಷಥಾಃ ಉಪೈಕ್ಷೇಥಾಂ ಉಪೈಕ್ಷಧ್ವಂ, ಉಪೈಕ್ಷೇ ಉಪೈಕ್ಷಾವಹಿ ಉಪೈಕ್ಷಾಮಹಿ ॥

★ ★ ★

ಪರವಾದಿಗಳ ಪರಾಭವ - ಸರ್ವವಿದ್ಯಾಪ್ರವೀಣರಾದ ಸರ್ವಜ್ಞರು

**ಯಾ ಯಾಃ ಪ್ರಸಕ್ತಾಃ ಪರಿಷತ್ಸು ಪೂರುಷೈ**
**ರ್ವಿದ್ಯಾವಿದಗ್ಧೈರ್ವಿವಿಧೈಃ ಸಮಾಗಮೇ ।**
**ಸ ತಾಸು ತಾಸು ಪ್ರತಿಭಾತಿ ಭಾಸುರೋ**
**ವಿದ್ಯಾಸು ವಿದ್ಯಾಧಿಪತಿರ್ಜಿಗಾಯ ತಾನ್ ॥ 45 ॥**

**ಪದಚ್ಛೇದ—** ಯಾಃ, ಯಾಃ, ಪ್ರಸಕ್ತಾಃ, ಪರಿಷತ್ಸು, ಪೂರುಷೈಃ, ವಿದ್ಯಾವಿದಗ್ಧೈಃ, ವಿವಿಧೈಃ, ಸಮಾಗಮೇ, ಸಃ, ತಾಸು, ತಾಸು, ಪ್ರತಿಭಾತಿ ಭಾಸುರಃ, ವಿದ್ಯಾಸು, ವಿದ್ಯಾಧಿಪತಿಃ, ಜಿಗಾಯ, ತಾನ್ ।

**ಅನ್ವಯ—** ಪರಿಷತ್ಸು ವಿವಿಧೈಃ ವಿದಗ್ಧೈಃ ಪೂರುಷೈಃ ಸಮಾಗಮೇ, ಯಾಃ ಯಾಃ ವಿದ್ಯಾಃ ಪ್ರಸಕ್ತಾಃ, ತಾಸು ತಾಸು ವಿದ್ಯಾಸು, ಪ್ರತಿಭಾತಿಭಾಸುರಃ ವಿದ್ಯಾಧಿಪತಿಃ ಸಃ, ತಾನ್ ಜಿಗಾಯ ।

**ಅನ್ವಯಾರ್ಥ—**

**ಪರಿಷತ್ಸು** = ಪಂಡಿತರ ಸಭೆಗಳಲ್ಲಿ
**ವಿವಿಧೈಃ** = ನಾನಾ ಪ್ರಕಾರದ
**ವಿದಗ್ಧೈಃ** = ಬುದ್ಧಿವಂತರಾದ
**ಪೂರುಷೈಃ** = ಮನುಷ್ಯರೊಡನೆ
**ಸಮಾಗಮೇ** = ಭೇಟಿಯಾಗಲು,
**ಯಾಃ ಯಾಃ ವಿದ್ಯಾಃ** = ಯಾವ ಯಾವ ವಿದ್ಯೆಗಳು
**ಪ್ರಸಕ್ತಾಃ** = ಪ್ರಸಕ್ತವಾಗಿರುವವೋ
**ತಾಸು ತಾಸು ವಿದ್ಯಾಸು** = ಆ ಆ ವಿದ್ಯೆಗಳಲ್ಲಿ
**ಪ್ರತಿಭಾ** = ಪ್ರತಿಭೆಯಿಂದ
**ಅತಿಭಾಸುರಃ** = ಅತ್ಯಂತ ಪ್ರಕಾಶಮಾನರಾದ
**ವಿದ್ಯಾಧಿಪತಿಃ** = ಸಮಸ್ತ ವಿದ್ಯೆಗಳಿಗೆ ಅಧಿಪತಿಯಾದ
**ಸಃ** = ಆ ಪೂರ್ಣಪ್ರಜ್ಞಾಚಾರ್ಯರು
**ತಾನ್** = ಅವರನ್ನು
**ಜಿಗಾಯ** = ಗೆದ್ದರು.

**ತಾತ್ಪರ್ಯ—** ಪಂಡಿತಗೋಷ್ಠಿಗಳಲ್ಲಿ ಪಂಡಿತರು ಒಟ್ಟಿಗೆ ಸೇರಿದಾಗ ಯಾವ ಯಾವ ವಿದ್ಯೆಗಳು ಪ್ರಸಕ್ತವಾಗಿದ್ದವೋ, ಆ ಆ ವಿದ್ಯೆಗಳಲ್ಲಿ ಅಂದರೆ ಎಲ್ಲಾ ವಿದ್ಯೆಗಳಲ್ಲಿಯೂ, ಸರ್ವರನ್ನೂ ಶ್ರೀಪೂರ್ಣಪ್ರಜ್ಞಾಚಾರ್ಯರು ಜಯಿಸಿದರು. ಸಮಸ್ತ ವಿದ್ಯಾಧಿಪತಿಗಳು ಎನಿಸಿಕೊಂಡರು.

ವಿಗ್ರಹ—

ವಿದ್ಯಾವಿದಗ್ಧೈಃ— ವಿದ್ಯಾಸು ವಿದಗ್ಧಾ ವಿದ್ಯಾವಿದಗ್ಧಾಃ, ತೈಃ ವಿದ್ಯಾವಿದಗ್ಧೈಃ ।

ವಿದ್ಯಾಧಿಪತಿಃ— ವಿದ್ಯಾನಾಂ ಅಧಿಪತಿಃ ವಿದ್ಯಾಧಿಪತಿಃ ।

ಕ್ರಿಯಾಪದ— ಪ್ರತಿಭಾತಿ- ಪ್ರತಿ ಇತ್ಯುಪಸರ್ಗಪೂರ್ವಕಾತ್ ಭಾದೀಪ್ತೌ ಇತಿ ದೀಪ್ತ್ಯರ್ಥಕಾತ್ ಭಾಧಾತೋಃ ಲಟಿ ಪ್ರಥಮಪುರುಷೇ ಏಕವಚನೇ ''ಪ್ರತಿಭಾತಿ'' ಇತಿ ರೂಪಮ್ ।

ಪ್ರತಿಭಾತಿ ಪ್ರತಿಭಾತಃ ಪ್ರತಿಭಾಂತಿ, ಪ್ರತಿಭಾಸಿ ಪ್ರತಿಭಾಥಃ ಪ್ರತಿಭಾಥ, ಪ್ರತಿಭಾಮಿ ಪ್ರತಿಭಾವಃ ಪ್ರತಿಭಾಮಃ ॥

★ ★ ★

### ಶ್ರೀರಾಮೇಶ್ವರದಲ್ಲಿ ಪೂರ್ಣಪ್ರಜ್ಞರ ಚಾತುರ್ಮಾಸ್ಯ

**ಅಚಾಲ್ಯಮಾನಃ ಸಗುರುಃ ಸಚಾಪಲ್ಯೈ-**
**ರಸಜ್ಜನಾನಾಮಬಲೀಯಸಾಮಿಹ ।**
**ಉವಾಸ ಮಾಸಾಂಶ್ಚತುರೋ ಮಹಾಮನಾಃ**
**ಸಿಂಹೋ ಗುಹಾಂತೋಪಗತಃ ಶುನಾಮಿವ ॥ 46 ॥**

ಪದಚ್ಛೇದ— ಅಚಾಲ್ಯಮಾನಃ, ಸಗುರುಃ, ಸಚಾಪಲ್ಯೈಃ, ಅಸಜ್ಜನಾನಾಂ, ಅಬಲೀಯಸಾಂ, ಇಹ, ಉವಾಸ, ಮಾಸಾನ್, ಚತುರಃ, ಮಹಾಮನಾಃ, ಸಿಂಹಃ, ಗುಹಾಂತೋಪಗತಃ, ಶುನಾಂ, ಇವ ।

ಅನ್ವಯ— ಸಗುರುಃ ಅಬಲೀಯಸಾಂ ಅಸಜ್ಜನಾನಾಂ ಚಾಪಲ್ಯೈಃ, ಅಚಾಲ್ಯಮಾನಃ ಮಹಾಮನಾಃ ಸಃ, ಇಹ ಚತುರಃ ಮಾಸಾನ್ ಶುನಾಂ ಚಾಪಲ್ಯೈಃ ಅಚಾಲ್ಯಮಾನಃ, ಗುಹಾಂತೋಪಗತಃ ಸಿಂಹಃ, ಇವ ಉವಾಸ ।

ಅನ್ವಯಾರ್ಥ—

**ಸಗುರುಃ** = ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಂದ ಸಹಿತರಾದ
**ಅಬಲೀಯಸಾಂ** = ಅತಿದುರ್ಬಲರಾದ
**ಅಸಜ್ಜನಾನಾಂ** = ಅಯೋಗ್ಯಜನರ
**ಚಾಪಲ್ಯೈಃ** = ಕೆಟ್ಟ ವ್ಯಾಪಾರಗಳಿಂದ
**ಅಚಾಲ್ಯಮಾನಃ** = ವಿಚಲಿತರಾಗದ
**ಮಹಾಮನಾಃ** = ಗಂಭೀರವಾದ ಮನಸ್ಸುಳ್ಳ
**ಸಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,
**ಇಹ** = ಈ ರಾಮೇಶ್ವರದಲ್ಲಿ
**ಚತುರಃ ಮಾಸಾನ್** = ನಾಲ್ಕು ತಿಂಗಳು
**ಶುನಾಂ** = ನಾಯಿಗಳ
**ಚಾಪಲ್ಯೈಃ** = ದುಶ್ಚೇಷ್ಟೆಗಳಿಂದ
**ಅಚಾಲ್ಯಮಾನಃ** = ಅಲ್ಲಾಡಿಸಲ್ಪಡದಿರುವ,
**ಗುಹಾಂತೋಪಗತಃ** = ಗುಹೆಯೊಳಗಿರುವ
**ಸಿಂಹಃ ಇವ** = ಸಿಂಹದಂತೆ
**ಉವಾಸ** = ವಾಸಿಸಿದರು.

**ತಾತ್ಪರ್ಯ—** ಅಚ್ಯುತಪ್ರೇಕ್ಷಾಚಾರ್ಯರಿಂದ ಸಹಿತರಾದ ಶ್ರೀಪೂರ್ಣಪ್ರಜ್ಞಾಚಾರ್ಯರಿಗೆ ಎಷ್ಟೋ ವಿಧಗಳಾದ ಕುಚೇಷ್ಟೆಗಳನ್ನು ಮಾಡಿ ರಾಮೇಶ್ವರದಿಂದ ಹೊರಡಿಸಬೇಕೆಂದು ಸಂಕರನ ಕಡೆಯವರು ಪ್ರಯತ್ನಿಸಿದರು. ಅವುಗಳೆಲ್ಲವೂ ಫಲಿಸಲಿಲ್ಲ. ಅದೆಲ್ಲವೂ ಯಾರಿಗೆ ಮನೋಬಲವಿಲ್ಲವೋ ಅವರಲ್ಲಿ ಫಲಿಸಬಹುದು. ಪೂರ್ಣಪ್ರಜ್ಞಾಚಾರ್ಯರು ಸ್ವಲ್ಪವೂ ವಿಚಲಿತರಾಗದೆ ಆ ರಾಮೇಶ್ವರ ಕ್ಷೇತ್ರದಲ್ಲಿಯೇ ಧೈರ್ಯದಿಂದ ಚಾತುರ್ಮಾಸ್ಯವನ್ನು ಆಚರಿಸಿದರು.

**ವಿಗ್ರಹ—**

**ಅಬಲೀಯಸಾಂ—** ಬಲಂ ಏಷಾಂ ಅಸ್ತಿ ಅತಿ ಬಲೀಯಾಂಸಃ, ನ ಬಲೀಯಾಂಸಃ ಅಬಲೀಯಾಂಸಃ, ತಾಂ ಅಬಲೀಯಸಾಂ ।

**ಅಚಾಲ್ಯಮಾನಃ—** ಚಾಲ್ಯತೇ ಇತಿ ಚಾಲ್ಯಮಾನಃ, ನ ಚಾಲ್ಯಮಾನಃ ಅಚಾಲ್ಯಮಾನಃ ।

**ಸಗುರುಃ—** ಗುರುಣಾ ಸಹ ವರ್ತತೇ ಇತಿ ಸಗುರುಃ ।

**ಅಸಜ್ಜನಾನಾಂ—** ನ ಸಜ್ಜನಾಃ ಅಸಜ್ಜನಾಃ, ತೇಷಾಂ ಅಸಜ್ಜನಾನಾನಾಂ ।

**ಮಹಾಮನಾಃ—** ಮಹತ್ ಮನಃ ಯಸ್ಯ ಸಃ ಮಹಾಮನಾಃ ।

**ಗುಹಾಂತೋಪಗತಃ—** ಗುಹಾಯಾಃ ಅಂತಃ ಗುಹಾಂತಃ, ಗುಹಾಂತಂ ಉಪಗತಃ ಗುಹಾಂತೋಪಗತಃ ।

**ಕ್ರಿಯಾಪದ— ಉವಾಸ-** ವಸ ನಿವಾಸೇ ಇತಿ ನಿವಾಸಾರ್ಥಕಾತ್ ವಸಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಉವಾಸ'' ಇತಿ ರೂಪಮ್ ।

ಉವಾಸ ಊಷತುಃ ಊಷುಃ, ಉವಸಿಥ ಉವಸ್ಥ, ಊಷಥುಃ ಊಷ, ಉವಾಸ ಉವಸ ಊಷಿವ ಊಷಿಮ ॥

★ ★ ★

ಶ್ರೀರಂಗ ಪಯಣ - ರಂಗನಾಥನ ದರ್ಶನ

**ಶೃಂಗಾರಸಿಂಧುಂ ಸ ಭುಜಂಗಶಾಯಿನಂ ಶ್ರೀರಂಗವಾಸಂ ಕೃತಮಂಗಲಂ ಸತಾಮ್ ।**
**ಅಮಂದಧೀರ್ದೇವಮವಂದತಾಗತಃ ಕವೇರಕನ್ಯಾಹಿಮವಾಯುಸೇವಿತಮ್ ॥ 47 ॥**

**ಪದಚ್ಛೇದ—** ಶೃಂಗಾರಸಿಂಧುಂ, ಸಃ, ಭುಜಂಗಶಾಯಿನಂ, ಶ್ರೀರಂಗವಾಸಂ, ಕೃತಮಂಗಲಂ, ಸತಾಂ, ಅಮಂದಧೀಃ, ದೇವಂ, ಅವಂದತ, ಆಗತಃ, ಕವೇರಕನ್ಯಾಹಿಮವಾಯುಸೇವಿತಮ್ ।

**ಅನ್ವಯ—** ಆಗತಃ ಅಮಂದಧೀಃ ಸಃ, ಶೃಂಗಾರಸಿಂಧುಂ, ಭುಜಂಗಶಾಯಿನಂ, ಶ್ರೀರಂಗವಾಸಂ, ಸತಾಂ ಕೃತಮಂಗಲಂ ಕವೇರಕನ್ಯಾಹಿಮವಾಯುಸೇವಿತಂ, ದೇವಂ ಅವಂದತ ।

**ಅನ್ವಯಾರ್ಥ—**

**ಆಗತಃ** = ರಾಮೇಶ್ವರದಿಂದ ಬಂದ

**ಅಮಂದಧೀಃ ಸಃ** = ಪೂರ್ಣವಾದ ಬುದ್ಧಿ ಉಳ್ಳ ಆ ಪೂರ್ಣಪ್ರಜ್ಞಾಚಾರ್ಯರು,

**ಶೃಂಗಾರಸಿಂಧುಂ** = ಸೌಂದರ್ಯಕ್ಕೆ ಸಮುದ್ರದಂತಿರುವ,

**ಭುಜಂಗಶಾಯಿನಂ** = ಶೇಷದೇವನ ದೇಹದ ಮೇಲೆ ಮಲಗಿರುವ,

**ಶ್ರೀರಂಗವಾಸಂ** = ಶ್ರೀರಂಗಕ್ಷೇತ್ರದಲ್ಲಿ ವಾಸಿಸುತ್ತಿರುವ,

**ಸತಾಂ** = ಸಜ್ಜನರಿಗೆ

**ಕೃತಮಂಗಲಂ** = ಶ್ರೇಯಸ್ಸನ್ನು ಕೊಟ್ಟಿರುವ,

**ಕವೇರಕನ್ಯಾಹಿಮವಾಯುಸೇವಿತಂ** = ಕಾವೇರಿಯ ಹಿಮವಾದ ವಾಯುವಿನಿಂದ (ತಂಗಾಳಿಯಿಂದ)
**ಸೇವಿತಂ** = ಸೇವಿಸಲ್ಪಟ್ಟ
**ದೇವಂ** = ರಂಗನಾಥದೇವರನ್ನು
**ಅವಂದತ** = ನಮಸ್ಕರಿಸಿದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞಾಚಾರ್ಯರು ಅಲ್ಲಿಂದ ಶ್ರೀರಂಗ ಕ್ಷೇತ್ರಕ್ಕೆ ಬಂದರು. ಶೃಂಗಾರವದನಕ್ಕೆ ಸಮುದ್ರ-ದಂತಿರುವವನೂ ಶೇಷದೇವನ ದೇಹದ ಮೇಲೆ ಮಲಗಿರುವವನೂ, ಸಜ್ಜನರಿಗೆ ಮಂಗಲವನ್ನು ಕೊಡುತ್ತಿರುವವನೂ ಆಗಿರುವ ರಂಗನಾಥದೇವರನ್ನು ಸಮಸ್ಕರಿಸಿದರು.

**ಸಮಾಸವಿಗ್ರಹ—**

**ಶೃಂಗಾರಸಿಂಧುಂ—** ಶೃಂಗಾರೇಣ ಸಿಂಧುಃ ಇವ ಶೃಂಗಾರಸಿಂಧುಃ ತಂ, ಶೃಂಗಾರಸಿಂಧುಂ ।
**ಭುಜಂಗಶಾಯಿನಂ—** ಭುಜಂಗೇ ಶೇತೇ ಇತಿ ಭುಜಂಗಶಾಯೀ, ತಂ ಭುಜಂಗಶಾಯಿನಂ ।
**ಶ್ರೀರಂಗವಾಸಂ—** ಶ್ರೀರಂಗೇ ವಾಸಃ ಯಸ್ಯ ಸಃ ಶ್ರೀರಂಗವಾಸಃ, ತಂ ಶ್ರೀರಂಗವಾಸಂ ।
**ಕೃತಮಂಗಲಂ—** ಕೃತಂ ಮಂಗಲಂ ಯೇನ ಸಃ ಕೃತಮಂಗಲಃ, ತಂ ಕೃತಮಂಗಲಂ ।
**ಅಮಂದಧೀಃ—** ಅಮಂದಾ ಧೀಃ ಯಸ್ಯ ಸಃ ಅಮಂದಧೀಃ ।
**ಕವೇರಕನ್ಯಾಯಾಃ—** ಕವೇರಸ್ಯ ಕನ್ಯಾ ಕವೇರಕನ್ಯಾ, ಹಿಮಶ್ಚಾಸೌ ವಾಯುಶ್ಚ ಹಿಮವಾಯುಃ, ಕವೇರ-ಕನ್ಯಾಯಾಃ ಹಿಮವಾಯುಃ ಕವೇರಕನ್ಯಾಹಿಮವಾಯುಃ, ಕವೇರಕನ್ಯಾಹಿಮವಾಯುನಾ ಸೇವಿತಃ, ಕವೇರಕನ್ಯಾಹಿಮವಾಯುಸೇವಿತಃ ತಂ ಕವೇರಕನ್ಯಾಹಿಮವಾಯುಸೇವಿತಂ ।

**ಕ್ರಿಯಾಪದ—** ಅವಂದತ- ವದಿ ಅಭಿವಾದನಸ್ತುತ್ಯೋಃ ಇತಿ ಅಭಿವಾದನಸ್ತುತ್ಯರ್ಥಕಾತ್ ಲಙ್ ಪ್ರಥಮಪುರುಷೇ ಏಕವಚನೇ ಧಾತೋಃ ''ಅವಂದತ'' ಇತಿ ರೂಪಮ್ ।

ಅವಂದತ ಅವಂದೇತಾಂ ಅವಂದಂತ, ಅವಂದಥಾಃ ಅವಂದೇಥಾಂ ಅವಂದದ್ವಂ, ಅವಂದೇ
ಅವಂದಾವಹಿ ಅವಂದಾಮಹಿ ॥

★ ★ ★

ಮರಳಿ ಉಡುಪಿಯತ್ತ ಪಯಣ

**ತತೋ ನಿವೃತ್ತಃ ಪರಮೇವ ಪೂರುಷಂ**
**ಪ್ರಣಮ್ಯ ನಾನಾಯತನೇಷು ಸಂಚರನ್ ।**
**ಪ್ರಕಾಶಯನ್ ಸ್ವಾತಿಶಯಾನಮಾನುಷಾನ್**
**ಆಶಾಮುದೀಚೀಂ ಪ್ರಯಯಾವಸೌ ಕ್ರಮಾತ್ ॥ 48 ॥**

**ಪದಚ್ಛೇದ—** ತತಃ, ನಿವೃತ್ತಃ, ಪರಂ, ಏವ, ಪೂರುಷಂ, ಪ್ರಣಮ್ಯ, ನಾನಾಯತನೇಷು, ಸಂಚರನ್, ಪ್ರಕಾಶಯನ್, ಸ್ವಾತಿಶಯಾನ್, ಅಮಾನುಷಾನ್, ಆಶಾಂ, ಉದೀಚೀಂ, ಪ್ರಯಯೌ, ಅಸೌ, ಕ್ರಮಾತ್ ।

**ಅನ್ವಯ—** ಅಸೌ, ತತಃ ನಿವೃತ್ತಃ, ನಾನಾಯತನೇಷು ಸಂಚರನ್ ಪರಂ ಪೂರುಷಂ ಏವ ಪ್ರಣಮ್ಯ, ಅಮಾನುಷಾನ್ ಸ್ವಾತಿಶಯಾನ್ ಪ್ರಕಾಶಯನ್, ಕ್ರಮಾತ್ ಉದೀಚೀಂ ಆಶಾಂ ಪ್ರಯಯೌ ।

**ಅನ್ವಯಾರ್ಥ—**

**ಅಸೌ** = ಈ ಪೂರ್ಣಪ್ರಜ್ಞಾಚಾರ್ಯರು

**ತತಃ** = ಶ್ರೀರಂಗಕ್ಷೇತ್ರದಿಂದ

**ನಿವೃತ್ತಃ** = ಹಿಂದಿರುಗಿದವರಾಗಿ,

**ನಾನಾಯತನೇಷು** = ನಾನಾವಿಧವಾದ ಮಂದಿರಗಳಲ್ಲಿ

**ಸಂಚರನ್** = ಸಂಚರಿಸುತ್ತಾ,

**ಪರಂ ಪೂರುಷಂ ಏವ** = ಪರಮಪುರುಷನಾದ ವಿಷ್ಣುವನ್ನೇ

**ಪ್ರಣಮ್ಯ** = ನಮಸ್ಕರಿಸಿ,

**ಅಮಾನುಷಾನ್** = ಮನುಷ್ಯರಲ್ಲಿ ಇಲ್ಲದಿರುವ

**ಸ್ವಾತಿಶಯಾನ್** = ತನ್ನ ಮಹಿಮೆಗಳನ್ನು

**ಪ್ರಕಾಶಯನ್** = ತೋರಿಸುತ್ತಾ

**ಕ್ರಮಾತ್** = ದೇಶಕ್ರಮದಿಂದ

**ಉದೀಚೀಂ ಆಶಾಂ** = ಉತ್ತರ ದಿಕ್ಕನ್ನು ಕುರಿತು

**ಪ್ರಯಯೌ** = ಹೋದರು.

**ತಾತ್ಪರ್ಯ—** ಶ್ರೀರಂಗಕ್ಷೇತ್ರದಿಂದ ಶ್ರೀಪೂರ್ಣಪ್ರಜ್ಞಾಚಾರ್ಯರು ಹಿಂದಿರುಗಿದರು. ನಾನಾವಿಧವಾದ ಮಂದಿರ-ಗಳಿಗೆ ಸಂಚರಿಸುತ್ತಾ, ಆ ದೇವತೆಗಳ ಅಂತರ್ಯಾಮಿಯಾದ ಶ್ರೀವಿಷ್ಣುವನ್ನೇ ನಮಸ್ಕರಿಸಿದರು.ಮತ್ತು ಎಲ್ಲಾ ದೇಶಗಳನ್ನು ಸಂಚರಿಸಿ ಉತ್ತರ ದಿಕ್ಕಿಗೆ ಹೋಗಿ ಅಲ್ಲಿರತಕ್ಕ ತನ್ನ ಭಕ್ತರುಗಳಿಗೆ ಅವರ ಮಹಾತ್ಮೆಗಳನ್ನು ತೋರಿಸಿದರು.

**ಸಮಾಸವಿಗ್ರಹ—**

**ಸ್ವಾತಿಶಯಾ—** ಸ್ವಸ್ಯ ಅತಿಶಯಾಃ, ತಾನ್ ।

**ಅಮಾನುಷಾಃ—** ಮಾನುಷಾಣಾಂ ಇಮೇ ಮಾನುಷಾಃ, ನ ಮಾನುಷಾಃ ಅಮಾನುಷಾಃ, ತಾನ್ ।

★ ★ ★

ಪಯಸ್ವಿನೀ ತೀರಕ್ಕೆ ಆಗಮನ

**ತತಸ್ತತೋ ವಿಸ್ಮಿತಲೋಚನೈರ್ನರೈ-**
**ರ್ನಿರೀಕ್ಷ್ಯಮಾಣೋಽತಿಸುಲಕ್ಷಣಾಕೃತಿಃ ।**
**ಗ್ರಾಮೋತ್ತಮಾನ್ ಪ್ರಾಪ್ಯ ಪಯಸ್ವಿನೀತಟೇ**
**ವಿವೇಶ ದೇವಾಯತನಂ ಸ ಕಿಂಚನ ॥ 49 ॥**

**ಪದಚ್ಛೇದ—** ತತಸ್ತತಃ, ವಿಸ್ಮಿತಲೋಚನೈಃ, ನರೈಃ, ನಿರೀಕ್ಷ್ಯಮಾಣಃ, ಅತಿಸುಲಕ್ಷಣಾಕೃತಿಃ, ಗ್ರಾಮೋತ್ತಮಾನ್, ಪ್ರಾಪ್ಯ, ಪಯಸ್ವಿನೀತಟೇ, ವಿವೇಶ, ದೇವಾಯತನಂ, ಸಃ, ಕಿಂಚನ ।

**ಅನ್ವಯ—** ತತಸ್ತತಃ ವಿಸ್ಮಿತಲೋಚನೈಃ ನರೈಃ ನಿರೀಕ್ಷ್ಯಮಾಣಃ, ಅತಿಸುಲಕ್ಷಣಾಕೃತಿಃ ಸಃ, ಗ್ರಾಮೋತ್ತಮಾನ್ ಪ್ರಾಪ್ಯ, ಪಯಸ್ವಿನೀತಟೇ ಕಿಂಚನ ದೇವಾಯತನಂ ವಿವೇಶ ।

**ಅನ್ವಯಾರ್ಥ—**

**ತತಸ್ತತಃ** = ಅಲ್ಲಲ್ಲಿ

**ವಿಸ್ಮಿತಲೋಚನೈಃ** = ಆಶ್ಚರ್ಯದಿಂದ ಯುಕ್ತರಾಗಿರುವ

**ನರೈಃ** = ಜನರಿಂದ
**ನಿರೀಕ್ಷ್ಯಮಾಣಃ** = ನೋಡಲ್ಪಡುತ್ತಿರುವ,
**ಅತಿಸುಲಕ್ಷಣಾಕೃತಿಃ** = ಅತ್ಯಂತ ಶ್ರೇಷ್ಠವಾದ ಲಕ್ಷಣಗಳಿಂದ ಯುಕ್ತರಾಗಿರುವ
**ಸಃ** = ಆ ಪೂರ್ಣಪ್ರಜ್ಞಾಚಾರ್ಯರು,
**ಗ್ರಾಮೋತ್ತಮಾನ್** = ಶ್ರೇಷ್ಠವಾದ ಗ್ರಾಮಗಳನ್ನು
**ಪ್ರಾಪ್ಯ** = ತಲುಪಿ
**ಪಯಸ್ವಿನೀತಟೇ** = ಪಯಸ್ವಿನೀನದಿಯ ತೀರದಲ್ಲಿ
**ಕಿಂಚನ** = ಯಾವುದೋ ಒಂದು
**ದೇವಾಯತನಂ** = ದೇವಾಲಯವನ್ನು
**ವಿವೇಶ** = ಪ್ರವೇಶಿಸಿದರು.

**ತಾತ್ಪರ್ಯ**— ಅಲ್ಲಲ್ಲಿ ಆಶ್ಚರ್ಯದಿಂದ ಯುಕ್ತವಾಗಿರುವ ಕಣ್ಣುಗಳಿಂದ ಮನುಷ್ಯರು ನೋಡುತ್ತಿದ್ದರು. ಅತ್ಯಂತವಾದ ಸುಲಕ್ಷಣಗಳಿಂದ ಯುಕ್ತವಾಗಿರುವ ಶ್ರೀಪೂರ್ಣಪ್ರಜ್ಞಾಚಾರ್ಯರು ಉತ್ತಮವಾದ ಗ್ರಾಮಗಳಿಗೆ ಹೋದರು. ಕೊನೆಗೆ ಪಯಸ್ವಿನೀನದೀತೀರದಲ್ಲಿರುವ ಒಂದು ದೇವಾಲಯವನ್ನು ಪ್ರವೇಶಿಸಿದರು.

**ವಿಗ್ರಹ**—

**ವಿಸ್ಮಿತಲೋಚನೈಃ**— ವಿಸ್ಮಿತಾನಿ ಲೋಚನಾನಿ ಯೇಷಾಂ ತೇ ವಿಸ್ಮಿತಲೋಚನಾಃ, ತೈಃ ವಿಸ್ಮಿತಲೋಚನೈಃ ।
**ನಿರೀಕ್ಷ್ಯಮಾಣಃ**— ನಿರೀಕ್ಷ್ಯತೇ ಇತಿ ನಿರೀಕ್ಷ್ಯಮಾಣಃ ।
**ಅತಿಸುಲಕ್ಷಣಾಕೃತಿಃ**— ಶೋಭನಾನಿ ಲಕ್ಷಣಾನಿ ಯಸ್ಯಾಃ ಸಾ ಸುಲಕ್ಷಣಾ, ಅತ್ಯಂತಂ ಸುಲಕ್ಷಣಾ ಅತಿ-ಸುಲಕ್ಷಣಾ, ಅತಿಸುಲಕ್ಷಣಾ ಆಕೃತಿಃ ಯಸ್ಯ ಸಃ ಅತಿಸುಲಕ್ಷಣಾಕೃತಿಃ ।
**ಗ್ರಾಮೋತ್ತಮಾನ್**— ಗ್ರಾಮೇಷು ಉತ್ತಮಾಃ ಗ್ರಾಮೋತ್ತಮಾಃ, ತಾನ್ ಗ್ರಾಮೋತ್ತಮಾನ್ ।
**ಪಯಸ್ವಿನೀತಟೇ**— ಪಯಸ್ವಿನ್ಯಾಃ ತಟಂ ಪಯಸ್ವಿನೀತಟಂ, ತಸ್ಮಿನ್ ಪಯಸ್ವಿನೀತಟೇ ।
**ದೇವಾಯತನಂ**— ದೇವಸ್ಯ ಆಯತನಂ ದೇವಾಯತನಂ, ತತ್ ದೇವಾಯತನಂ ।

**ಕ್ರಿಯಾಪದ**— ವಿವೇಶಃ- ವಿಶಪ್ರವೇಶನೇ ಇತಿ ಪ್ರವೇಶನಾರ್ಥಕಾತ್ ವಿಶಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ವಿವೇಶ'' ಇತಿ ರೂಪಮ್ ।

ವಿವೇಶ ವಿವಿಶತುಃ ವಿವಿಶುಃ, ವಿವಿಶಿಥ ವಿವಿಶಥುಃ ವಿವಿಶ, ವಿವೇಶ ವಿವಿಶಿವ ವಿವಿಶಿಮ ।।

★ ★ ★

ಪೂರ್ಣಪ್ರಜ್ಞರ ದರ್ಶನ ಪಡೆದ ಪ್ರಾಜ್ಞವೃಂದ

**ಅಧೀತ್ಯ ಧರ್ಮೇಣ ಷಡಂಗಮಾಗಮಂ**
**ತದರ್ಥಸಂವರ್ಣನನಿರ್ಣಯಾನ್ವಿತಾಃ ।**
**ಪ್ರಾಪುರ್ದ್ವಿಜೇಂದ್ರಾಸ್ತಮಪೂರ್ವಪೂರುಷಂ**
**ಜಿಜ್ಞಾಸವಃ ಸುಪ್ರಥಿತಂ ಜಗತ್ತ್ರಯೇ ।। 50 ।।**

**ಪದಚ್ಛೇದ—** ಅಧೀತ್ಯ, ಧರ್ಮೇಣ, ಷಡಂಗಂ, ಆಗಮಂ, ತದರ್ಥಸಂವರ್ಣನನಿರ್ಣಯಾನ್ವಿತಾಃ, ಪ್ರಾಪುಃ, ದ್ವಿಜೇಂದ್ರಾಃ, ತಂ, ಅಪೂರ್ವಪೂರುಷಂ, ಜಿಜ್ಞಾಸವಃ, ಸುಪ್ರಥಿತಂ, ಜಗತ್ತ್ರಯೇ ।

**ಅನ್ವಯ—** ಧರ್ಮೇಣ ಷಡಂಗಂ ಆಗಮಂ ಅಧೀತ್ಯ ತದರ್ಥಸಂವರ್ಣನನಿರ್ಣಯಾನ್ವಿತಾಃ ದ್ವಿಜೇಂದ್ರಾಃ, ಜಗತ್ತ್ರಯೇ ಸುಪ್ರಥಿತಂ ಅಪೂರ್ವಪೂರುಷಂ ತಂ ಜಿಜ್ಞಾಸವಃ ಅಲಂ ಪ್ರಾಪುಃ ।

**ಅನ್ವಯಾರ್ಥ—**

**ಧರ್ಮೇಣ** = ವೇದಾಧ್ಯಯನ ನಿಯಮದಿಂದ
**ಷಡಂಗಂ** = ಆರು ಅಂಗಗಳುಳ್ಳ
**ಆಗಮಂ** = ವೇದವನ್ನು
**ಅಧೀತ್ಯ** = ಅಧ್ಯಯನವನ್ನು ಮಾಡಿ
**ತದರ್ಥಸಂವರ್ಣನನಿರ್ಣಯಾನ್ವಿತಾಃ** = ಆ ವೇದಾರ್ಥಗಳನ್ನು ಸರಿಯಾಗಿ ಹೇಳುವುದಕ್ಕೆ ಬೇಕಾದ ನಿರ್ಣಯಗಳನ್ನು ತಿಳಿದಿರುವ
**ದ್ವಿಜೇಂದ್ರಾಃ** = ಬ್ರಾಹ್ಮಣ ಶ್ರೇಷ್ಠರು,
**ಜಗತ್ತ್ರಯೇ** = ಮೂರು ಲೋಕಗಳಲ್ಲಿ
**ಸುಪ್ರಥಿತಂ** = ಅತ್ಯಂತ ಪ್ರಸಿದ್ಧರಾದ
**ಅಪೂರ್ವಪೂರುಷಂ** = ಹಿಂದೆ ನೋಡದಿರುವ ಪುರುಷರಾದ
**ತಂ** = ಆ ಪೂರ್ಣಪ್ರಜ್ಞಾಚಾರ್ಯರನ್ನು
**ಜಿಜ್ಞಾಸವಃ** = ತಿಳಿಯುವ ಆಸೆ ಉಳ್ಳವರಾಗಿ
**ಅಲಂ ಪ್ರಾಪುಃ** = ಬಂದು ಸೇರಿದರು.

**ತಾತ್ಪರ್ಯ—** ವೇದಾಧ್ಯನವನ್ನು ನಿಯಮದಿಂದ ಮಾಡಿರುವ ಎಷ್ಟೋ ಮಹನೀಯರು ಅಲ್ಲಿ ಇದ್ದರು. ಆ ವೇದಗಳ ಅರ್ಥಗಳ ನಿರ್ಣಯವನ್ನು ತಿಳಿದವರೂ ಇದ್ದರು. ಮೂರು ಲೋಕಗಳಲ್ಲಿಯೂ ಅತ್ಯಂತ ಪ್ರಸಿದ್ಧರಾಗಿರುವ ಶ್ರೀಪೂರ್ಣ-ಪ್ರಜ್ಞಾಚಾರ್ಯರ ವಿಷಯವನ್ನು ತಿಳಿಯಬೇಕೆಂದು ಸರ್ವರಿಗೂ ಆಸೆ ಇತ್ತು. ಅವರೆಲ್ಲರೂ ಅಪೂರ್ವಪುರುಷರಾಗಿರುವ ಪೂರ್ಣಪ್ರಜ್ಞಾಚಾರ್ಯರ ವಿಷಯವನ್ನು ತಿಳಿಯಬೇಕೆಂದು ಬಂದು ಸೇರಿದರು.

**ವಿಗ್ರಹ—**

**ಅಧ್ಯಯನನಿರ್ಣಯಾನ್ವಿತಾಃ—** ಅಧ್ಯಯನೇ ನಿರ್ಣಯಃ ಅಧ್ಯಯನನಿರ್ಣಯಃ, ಅಧ್ಯಯನನಿರ್ಣಯೇನ ಅನ್ವಿತಾಃ ಅಧ್ಯಯನನಿರ್ಣಯಾನ್ವಿತಾಃ ।
**ದ್ವಿಜೇಂದ್ರಾಃ—** ದ್ವಿಜಾನಾಂ ಇಂದ್ರಾಃ ದ್ವಿಜೇಂದ್ರಾಃ ।
**ಅಪೂರ್ವಪೂರುಷಂ—** ಅಪೂರ್ವಶ್ಚಾಸೌ ಪೂರುಷಶ್ಚ ಅಪೂರ್ವಪೂರುಷಃ, ತಂ ಅಪೂರ್ವಪೂರುಷಂ ।
**ಸುಪ್ರಥಿತಂ—** ಅತ್ಯಂತಂ ಪ್ರಥಿತಃ ಸುಪ್ರಥಿತಃ, ತಂ ಸುಪ್ರಥಿತಂ ।
**ಜಗತ್ತ್ರಯೇ—** ಜಗತಾಂ ತ್ರಯಂ ಜಗತ್ತ್ರಯಂ, ತಸ್ಮಿನ್ ಜಗತ್ತ್ರಯೇ ।

**ಕ್ರಿಯಾಪದ— ಪ್ರಾಪುಃ-** ಪ್ರ ಇತ್ಯುಪಸರ್ಗಪೂರ್ವಕಾತ್ ಆಪ್ಲೃ ವ್ಯಾಪ್ತೌ ಇತ್ಯಸ್ಮಾದ್ಧಾತೋಃ ಲಿಟ್ ಪ್ರಥಮಪುರುಷೇ ಬಹುವಚನೇ ''ಪ್ರಾಪುಃ'' ಇತಿ ರೂಪಮ್ ।

ಪ್ರಾಪತ್ ಪ್ರಾಪತಾಂ ಪ್ರಾಪುಃ, ಪ್ರಾಪತಃ ಪ್ರಾಪತಂ ಪ್ರಾಪತ, ಪ್ರಾಪಂ ಪ್ರಾಪಾವ ಪ್ರಾಪಾಮ ॥

★ ★ ★

### ಶ್ರೀಮದಾಚಾರ್ಯರ ಅಪೂರ್ವ ದೇಹಕಾಂತಿ

**ಸುಸ್ಮಿತೇಂದುಮರವಿಂದಲೋಚನಂ ಸ್ವರ್ಣವರ್ಣಮತಿಭದ್ರಭಾಷಣಮ್ ।**
**ವೀತಭೂಷಮಪಿ ವಿಶ್ವಭೂಷಣಂ ತಂ ದಿದೃಕ್ಷುರಲಮಾಪತಜ್ಜನಃ ॥ 51 ॥**

ಪದಚ್ಛೇದ— ಸುಸ್ಮಿತೇಂದುಂ, ಅರವಿಂದಲೋಚನಂ, ಸ್ವರ್ಣವರ್ಣಂ, ಅತಿಭದ್ರಭಾಷಣಂ, ವೀತಭೂಷಂ, ಅಪಿ, ವಿಶ್ವಭೂಷಣಂ, ತಂ, ದಿದೃಕ್ಷುಃ, ಅಲಂ, ಆಪತತ್, ಜನಃ ।

ಅನ್ವಯ— ಸುಸ್ಮಿತೇಂದುಂ, ಅರವಿಂದಲೋಚನಂ, ಸ್ವರ್ಣವರ್ಣಂ, ಅತಿಭದ್ರಭಾಷಣಂ, ವೀತಭೂಷಂ ಅಪಿ ವಿಶ್ವಭೂಷಣಂ ತಂ ದಿದೃಕ್ಷುಃ ಅಲಂ ಜನಃ ಆಪತತ್ ।

ಅನ್ವಯಾರ್ಥ—

**ಸುಸ್ಮಿತೇಂದುಂ** = ಒಳ್ಳೆಯ ಮಂದಹಾಸವೆಂಬ ಚಂದಿರನಿಂದ ಯುಕ್ತವಾಗಿರುವ,

**ಅರವಿಂದಲೋಚನಂ** = ಕಮಲದಂತೆ ಸುಂದರವಾದ ಕಣ್ಣುಗಳಿಂದ ಯುಕ್ತರಾದ,

**ಸ್ವರ್ಣವರ್ಣಂ** = ಬಂಗಾರದಂತೆ ಬಣ್ಣವುಳ್ಳ,

**ಅತಿಭದ್ರಭಾಷಣಂ** = ಅತ್ಯಂತವಾಗಿ ಮಂಗಳಕರವಾದ ಮಾತುಗಳುಳ್ಳ,

**ವೀತಭೂಷಂ ಅಪಿ** = ಆಭರಣಗಳು ಇಲ್ಲದಿದ್ದರೂ

**ವಿಶ್ವಭೂಷಣಂ** = ಸಮಸ್ತ ಲೋಕಕ್ಕೂ ಅಲಂಕಾರದಂತಿರುವ,

**ತಂ** = ಆ ಪೂರ್ಣಪ್ರಜ್ಞಾಚಾರ್ಯರನ್ನು

**ದಿದೃಕ್ಷುಃ** = ನೋಡಬೇಕೆಂಬ ಆಸೆಯುಳ್ಳವರಾಗಿ

**ಅಲಂ** = ಅಧಿಕವಾಗಿ

**ಜನಃ** = ಜನರು

**ಆಪತತ್** = ಬಂದರು.

ತಾತ್ಪರ್ಯ— ಶ್ರೀಪೂರ್ಣಪ್ರಜ್ಞಾಚಾರ್ಯರು ನಕ್ಕರೆ ಚಂದ್ರೋದಯವಾಗುವಂತೆ ಆ ಮಂದಹಾಸವು ಕಾಣುತ್ತಿತ್ತು. ಕಣ್ಣುಗಳು ಕಮಲದಂತೆ ಕಾಣಸುತಿದ್ದವು. ಅವರ ದೇಹಕಾಂತಿಯು ಬಂಗಾರದ ಬಣ್ಣವುಳ್ಳದ್ದಾಗಿತ್ತು. ಅವರ ಮಾತುಗಳು ಎಲ್ಲರಿಗೂ ಮಂಗಳವನ್ನು ಕೊಡುತ್ತಿದ್ದವು. ಅವರು ಯಾವ ಆಭರಣಗಳನ್ನೂ ಧರಿಸಿರಲಿಲ್ಲ. ಆದರೂ ಸಮಸ್ತ ಜಗತ್ತಿಗೆ ಅವರು ಅಲಂಕಾರದಂತೆ ಇದ್ದರು. ಅವರನ್ನು ನೋಡಬೇಕೆಂಬ ಆಸೆಯಿಂದ ಯಥೇಚ್ಛವಾಗಿ ಜನರು ಬಂದು ಸೇರಿದರು.

ವಿಗ್ರಹ—

**ಸುಸ್ಮಿತೇಂದುಂ—** ಶೋಭನಂ ಸ್ಮಿತಂ ಯಸ್ಯ ತತ್ ಸುಸ್ಮಿತಂ, ಸುಸ್ಮಿತಂ ಏವ ಇಂದುಃ ಸುಸ್ಮಿತೇಂದುಃ, ತಂ ಸುಸ್ಮಿತೇಂದುಂ ।

**ಅರವಿಂದಲೋಚನಂ—** ಅರವಿಂದಂ ಇವ ಲೋಚನೇ ಯಸ್ಯ ಸಃ ಅರವಿಂದಲೋಚನಃ, ತಂ ಅರವಿಂದ-ಲೋಚನಂ ।

**ಸ್ವಣವರ್ಣಂ—** ಸ್ವರ್ಣಂ ಇವ ವರ್ಣಂ ಯಸ್ಯ ಸಃ ಸ್ವರ್ಣವರ್ಣಃ, ತಂ ಸ್ವರ್ಣವರ್ಣಂ ।

**ಅತಿಭದ್ರಭಾಷಣಃ—** ಅತ್ಯಂತಂ ಭದ್ರಂ ಅತಿಭದ್ರಂ, ಅತಿಭದ್ರಂ ಭಾಷಣಂ ಯಸ್ಯ ಸಃ ಅತಿಭದ್ರಭಾಷಣಃ, ತಂ ಅತಿಭದ್ರಭಾಷಣಂ ।

**ವೀತಭೂಷಂ—** ವೀತಾ ಭೂಷಾ ಯಸ್ಯ ಸಃ ವೀತಭೂಷಃ, ತಂ ವೀತಭೂಷಂ ।

**ವಿಶ್ವಭೂಷಣಂ—** ವಿಶ್ವಸ್ಯ ಭೂಷಣಂ ವಿಶ್ವಭೂಷಣಂ ।

**ದಿದೃಕ್ಷುಃ—** ದ್ರಷ್ಟುಂ ಇಚ್ಛುಃ ದಿದೃಕ್ಷುಃ ।

**ಕ್ರಿಯಾಪದ— ಆಪತತ್**- ಆಙ್ ಇತ್ಯುಪಸರ್ಗಪೂರ್ವಕಾತ್ ಪತ್ಲೃ ಪತನೇ ಇತ್ಯಸ್ಮಾತ್ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಆಪತತ್'' ಇತಿ ರೂಪಮ್ ।

ಆಪತತ್ ಆಪತತಾಂ ಆಪತನ್, ಆಪತಃ, ಆಪತತಂ ಆಪತತ, ಆಪತಂ ಆಪತಾವ ಆಪತಾಮ ॥

★ ★ ★

ಸಭಾಮಂಟಪದಲ್ಲಿ ಅಲಂಕಾರಪ್ರಾಯರಾದ ಶ್ರೀಮದಾಚಾರ್ಯರು

**ವಿದ್ಯೋರುದ್ಯುತಿಧೀರತಾರಕತಿರಸ್ಕಾರೇ ಪತಂಗಾಯಿತೋ**
**ದುರ್ವಾದೀಭಕುತರ್ಕಕುಂಭದಲನೇ ಸಿಂಹಪ್ರಬರ್ಹಾಯಿತಃ ।**
**ಲೋಲಾಲೋಕಕಲೋಕದೃಕ್ಕುಮುದಿನೀಸಂಹ್ಲಾದನೇಽಬ್ಜಾಯಿತಃ**
**ಸಂಸನ್ಮಂಡಲಮಂಡನಾಯಿತವಪುಃ ಸ್ವಾನಂದತೀರ್ಥೋ ಬಭೌ ॥ 52 ॥**

**ಪದಚ್ಛೇದ—** ವಿದ್ಯೋರುದ್ಯುತಿಧೀರತಾರಕತಿರಸ್ಕಾರೇ, ಪತಂಗಾಯಿತಃ, ದುರ್ವಾದೀಭಕುತರ್ಕಕುಂಭದಲನೇ, ಸಿಂಹಪ್ರಬರ್ಹಾಯಿತಃ, ಲೋಲಾಲೋಕಕಲೋಕದೃಕ್ಕುಮುದಿನೀಸಂಹ್ಲಾದನೇ, ಅಬ್ಜಾಯಿತಃ ಸಂಸನ್ಮಂಡಲಮಂಡನಾಯಿತವಪುಃ, ಸ್ವಾನಂದತೀರ್ಥಃ ಬಭೌ ।

**ಅನ್ವಯ—** ವಿದ್ಯೋರುದ್ಯುತಿಧೀರತಾರಕತಿರಸ್ಕಾರೇ ಪತಂಗಾಯಿತೋ, ದುರ್ವಾದೀಭಕುತರ್ಕಕುಂಭದಲನೇ ಸಿಂಹಪ್ರಬರ್ಹಾಯಿತಃ, ಲೋಲಾಲೋಕಕಲೋಕದೃಕ್ಕುಮುದಿನೀಸಂಹ್ಲಾದನೇ ಅಬ್ಜಾಯಿತಃ ಸಂಸನ್ಮಂಡಲಮಂಡನಾಯಿತವಪುಃ ಸ್ವಾನಂದತೀರ್ಥಃ ಬಭೌ ।

**ಅನ್ವಯಾರ್ಥ—**

**ವಿದ್ಯೋರುದ್ಯುತಿಧೀರತಾರಕತಿರಸ್ಕಾರೇ** = ವಿದ್ಯಾ ಎಂಬ ಅಪಾರಕಾಂತಿಯಿಂದ ಯುಕ್ತವಾಗಿರುವ ದೊಡ್ಡ ದೊಡ್ಡ ನಕ್ಷತ್ರಗಳನ್ನು (ಪಂಡಿತರನ್ನು) ತಿರಸ್ಕರಿಸುವ ವಿಷಯದಲ್ಲಿ

**ಪತಂಗಾಯಿತಃ** = ಸೂರ್ಯನಂತಿರುವ,

**ದುರ್ವಾದೀಭಕುತರ್ಕಕುಂಭದಲನೇ** = ದುರ್ವಾದಿಗಳೆಂಬ ಆನೆಗಳ ಕುತರ್ಕಗಳೆಂಬ ಕುಂಭಸ್ಥಳಗಳನ್ನು ನಾಶಮಾಡುವ ವಿಷಯದಲ್ಲಿ

**ಸಿಂಹಪ್ರಬರ್ಹಾಯಿತಃ** = ಶ್ರೇಷ್ಠವಾದ ಸಿಂಹದಂತಿರುವ,

**ಲೋಲಾಲೋಕಕಲೋಕದೃಕ್ಕುಮುದಿನೀಸಂಹ್ಲಾದನೇಽಬ್ಜಾಯಿತಃ** = ಚಂಚಲರಾದ ಪ್ರೇಕ್ಷಕರ ಕಣ್ಣುಗಳೆಂಬ ಕುಮುದಪುಷ್ಪಗಳನ್ನು ಅರಳಿಸುವ ವಿಷಯದಲ್ಲಿ ಚಂದ್ರನಂತಿರುವ ,

**ಸಂಸನ್ಮಂಡಲಮಂಡನಾಯಿತವಪುಃ**= ಸಭೆಗಳ ಸಮೂಹಕ್ಕೆ ಅಲಂಕಾರದಂತಿರುವ ದೇಹವುಳ್ಳ,

**ಸ್ವಾನಂದತೀರ್ಥಃ** = ಶೋಭನವಾದ ಆನಂದವನ್ನು ಕೊಡುತ್ತಿರುವ ಆನಂದಕರವಾದ ಶಾಸ್ತ್ರವನ್ನು ಬರೆದಿರುವ ಪೂರ್ಣಪ್ರಜ್ಞಾಚಾರ್ಯರು

ಬಭೌ = ಶೋಭಿಸಿದರು.

ತಾತ್ಪರ್ಯ—ವಿದ್ಯೆಯು ಅಧಿಕವಾದ ಪ್ರಕಾಶದಿಂದ ಯುಕ್ತವಾದದ್ದು. ಬಹಳ ಕಾಂತಿಪೂರ್ಣವಾದ ನಕ್ಷತ್ರಗಳ ಶೋಭೆಯನ್ನು ಸೂರ್ಯನು ತಿರಸ್ಕರಿಸುವಂತೆ, ವಿದ್ಯೆಗಳಿಂದ ಪ್ರಕಾಶಿಸುವ ಪಂಡಿತರನ್ನು ಆಚಾರ್ಯರು ಜಯಿಸಿದರು. ದುರ್ವಾದಿಗಳೆಂಬ ಆನೆಗಳ ಕುತರ್ಕಗಳೆಂಬ ಕುಂಭಸ್ಥಳಗಳ ನಾಶ ಮಾಡುವುದಕ್ಕೆ ಶ್ರೇಷ್ಠವಾದ ಸಿಂಹದಂತೆ ಶ್ರೀಪೂರ್ಣಪ್ರಜ್ಞರಿದ್ದಾರೆ. ಚಂಚಲವಾದ ನೇತ್ರಗಳಿಂದ ನೋಡುತ್ತಿರುವ ಪ್ರೇಕ್ಷಕರ ಕಣ್ಣುಗಳೆಂಬ ಕುಮುದಪುಷ್ಪಗಳಿಗೆ ವಿಕಾಸವನ್ನು ಕೊಡುತ್ತಿರುವ ಚಂದ್ರನಂತೆ ಶ್ರೀಪೂರ್ಣಪ್ರಜ್ಞಾಚಾರ್ಯರು ಶೋಭಿಸಿದರು. ಸಭೆಗಳ ಸಮೂಹಗಳಿಗೆ ಅಲಂಕಾರಪ್ರಾಯದಂತಿರುವ ದೇಹವುಳ್ಳವರು, ಆನಂದಕರವಾದ ಶಾಸ್ತ್ರಗಳನ್ನು ಬರೆದಿರುವ ಈ ಪೂರ್ಣಪ್ರಜ್ಞಾಚಾರ್ಯರು ಶೋಭಿಸಿದರು.

ವಿಗ್ರಹ—

**ವಿದ್ಯೋರುದ್ಯುತಿಧೀರತಾರಕತಿರಸ್ಕಾರೇ—** ವಿದ್ಯೈವ ಉರು ದ್ಯುತಿಃ ಯೇಷಾಂ ತೇ ವಿದ್ಯೋರುದ್ಯುತಯಃ, ವಿದ್ಯೋರುದ್ಯುತಯಶ್ಚ ತೇ ಧೀರಾಶ್ಚ ವಿದ್ಯೋರುದ್ಯುತಿಧೀರಾಃ, ವಿದ್ಯೋರುದ್ಯುತಿಧೀರಾಃ ಏವ ತಾರಕಾಣಿ ವಿದ್ಯೋರುದ್ಯುತಿಧೀರತಾರಕಾಣಿ, ತೇಷಾಂ ತಿರಸ್ಕಾರಃ ವಿದ್ಯೋರುದ್ಯುತಧೀರತಾರಕತಿರಸ್ಕಾರಃ, ತಸ್ಮಿನ್ ವಿದ್ಯೋರುದ್ಯುತಿಧೀರತಾರಕತಿರಸ್ಕಾರೇ ।

**ಪತಂಗಾಯಿತಃ—** ಪತಂಗವತ್ ಆಚರತಿ ಇತಿ ಪತಂಗಾಯಿತಃ ।

**ದುರ್ವಾದೀಭಕುತರ್ಕಕುಂಭದಲನೇ—** ದುಷ್ಟಾಶ್ಚತೇ ವಾದಿನಶ್ಚ ದುರ್ವಾದಿನಃ, ದುರ್ವಾದಿನಃ ಏವ ಇಭಾಃ ದುರ್ವಾದೀಭಾಃ, ದುರ್ವಾದೀಭಾಃ ಏವ ಕುತರ್ಕಾ ದುರ್ವಾದೀಭಕುತರ್ಕಾ, ದುರ್ವಾದೀಭಕುತರ್ಕಾನಾಂ ಕುಂಭಾಃ, ದುರ್ವಾದೀಭಕುತರ್ಕಕುಂಭಾಃ, ದುರ್ವಾದೀಭಕುತರ್ಕಕುಂಭಾನಾಂ ದಲನಂ ದುರ್ವಾದೀಭಕುತರ್ಕದಲನಂ, ತಸ್ಮಿನ್ ದುರ್ವಾದೀಭಕುತರ್ಕಕುಂಭದಲನೇ ।

**ಸಿಂಹಪ್ರಬರ್ಹಾಯಿತಃ—** ಸಿಂಹೇಷು ಪ್ರಬರ್ಹಾಃ ಸಿಂಹಪ್ರಬರ್ಹಾಃ, ಸಿಂಹಪ್ರಬರ್ಹಾ ಇವ ಆಚರತಿ ಇತಿ ಸಿಂಹ- ಪ್ರಬರ್ಹಾಯಿತಃ ।

**ಸಂಸನ್ಮಂಡಲಮಂಡನಾಯಿತವಪುಃ—** ಸಂಸದಾಂ ಮಂಡಲಂ ಸಂಸನ್ಮಂಡಲಂ, ಸಂಸನ್ಮಂಡಲಸ್ಯ ಮಂಡನಂ ಸಂಸನ್ಮಂಡಲಮಂಡನಂ, ಸಂಸನ್ಮಂಡಲಮಂಡವತ್ ಆಚರತಿ ಇತಿ ಸಂಸನ್ಮಂಡಲಮಂಡನಾಯಿತಂ, ಸಂಸನ್ಮಂಡಲಮಂಡನಾಯಿತಂ ವಪುಃ ಯಸ್ಯ ಸಃ, ಸಂಸನ್ಮಂಡಲಮಂಡನಾಯಿತವಪುಃ ।

**ಸ್ವಾನಂದತೀರ್ಥಃ—** ಶೋಭನಶ್ಶಾಸೌ ಆನಂದಶ್ಚ ಸ್ವಾನಂದಃ, ಸ್ವಾನಂದಂ ತೀರ್ಥಂ ಯಸ್ಯ ಸಃ ಸ್ವಾನಂದತೀರ್ಥಃ ।

**ಕ್ರಿಯಾಪದ— ಬಭೌ-** ಭಾದೀಪ್ತೌ ಇತಿ ದೀಪ್ತ್ಯರ್ಥಕಾತ್ ಭಾಧಾತೋಃ ಲಿಟಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಬಭೌ' ಇತಿ ರೂಪಮ್।

ಬಭೌ ಬಭತುಃ ಬಭುಃ, ಬಭಿಧ ಬಭಾಧ ಬಭಧುಃ ಭಭ, ಬಭೌ ಬಭಿವ ಬಭಿಮ ॥

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ ಪಂಚಮಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಷಷ್ಠಃ ಸರ್ಗಃ

ಜಿಜ್ಞಾಸುವೃಂದದ ಪ್ರಾರ್ಥನೆ - ಆಚಾರ್ಯರಿಂದ ಐತರೇಯ ಶ್ರುತ್ಯರ್ಥ ಕಥನ

**ಐತರೇಯಮಥ ಕಿಂಚನ ಸೂಕ್ತಂ ಸೂಚಯನ್ ಸದಸಿ ತತ್ರ ಗರಿಷ್ಠಃ ।**

**ಶ್ರೋತುಮಿಚ್ಛತಿ ಸಭಾ ಭಗವದ್ಭ್ಯಃ ಸೂಕ್ತಭಾವಮಿತಿ ತಾವದುವಾಚ ॥ 1 ॥**

**ಪದಚ್ಛೇದ—** ಐತರೇಯಂ, ಅಥ, ಕಿಂಚನ, ಸೂಕ್ತಂ, ಸೂಚಯನ್, ಸದಸಿ, ತತ್ರ, ಗರಿಷ್ಠಃ, ಶ್ರೋತುಂ, ಇಚ್ಛತಿ, ಸಭಾ, ಭಗವದ್ಭ್ಯಃ, ಸೂಕ್ತಭಾವಂ, ಇತಿ, ತಾವತ್, ಉವಾಚ ।

**ಅನ್ವಯ—** ಅಥ ತತ್ರ ಸದಸಿ ಗರಿಷ್ಠಃ, ಐತರೇಯಂ ಕಿಂಚನ ಸೂಕ್ತಂ ಸೂಚಯನ್, ಸಭಾ ಭಗವದ್ಭ್ಯಃ ಸೂಕ್ತಭಾವಂ ಶ್ರೋತುಂ ಇಚ್ಛತಿ ಇತಿ ತಾವತ್ ಉವಾಚ ।

**ಅನ್ವಯಾರ್ಥ—**

**ಅಥ** = ಶ್ರೀಪೂರ್ಣಪ್ರಜ್ಞಾಚಾರ್ಯರ ದರ್ಶನಾನಂತರದಲ್ಲಿ

**ತತ್ರ ಸದಸಿ** = ಆ ಸಭೆಯಲ್ಲಿ

**ಗರಿಷ್ಠಃ** = ಶ್ರೇಷ್ಠರಾದ ಒಬ್ಬ ಪಂಡಿತರು,

**ಐತರೇಯಂ** = ಐತರೇಯರಾಶಿಯಲ್ಲಿ ಇರುವ

**ಕಿಂಚನ** = ಯಾವುದೋ ಒಂದು

**ಸೂಕ್ತಂ ಸೂಚಯನ್** = ಸೂಕ್ತವನ್ನು ಸೂಚಿಸುತ್ತಾ,

**(ಇಯಂ) ಸಭಾ** = ಈ ಸಭೆಯು

**ಭಗವದ್ಭ್ಯಃ** = ತಮ್ಮಂತಹ ಜ್ಞಾನಿಶ್ರೇಷ್ಠರಿಂದ

**ಸೂಕ್ತಭಾವಂ** = ಈ ಸೂಕ್ತದ ಅಭಿಪ್ರಾಯವನ್ನು

**ಶ್ರೋತುಂ** = ಕೇಳಿ ತಿಳಿಯುವುದಕ್ಕೆ

**ಇಚ್ಛತಿ** = ಇಚ್ಛಿಸುತ್ತದೆ,

**ಇತಿ** = ಹೀಗೆಂದು

**ತಾವತ್** = ಮೊದಲು

**ಉವಾಚ** = ಹೇಳಿದರು.

**ತಾತ್ಪರ್ಯ**— ಶ್ರೀಪೂರ್ಣಪ್ರಜ್ಞಾಚಾರ್ಯರ ದರ್ಶನವಾಯಿತು. ಅನಂತರದಲ್ಲಿ ಅಲ್ಲಿ ಸೇರಿರುವ ಸಭ್ಯರಲ್ಲಿ ಶ್ರೇಷ್ಠರಾದ ಒಬ್ಬ ಪಂಡಿತರು ಋಗ್ವೇದದ ಐತರೇಯ ಶಾಖೆಯಲ್ಲಿರುವ ಒಂದು ಸೂಕ್ತವನ್ನು ಸೂಚಿಸುತ್ತಾ ಈ ಸೂಕ್ತದ ಭಾವವನ್ನು ಈ ಸಭ್ಯರು ನಿಮ್ಮಿಂದ ತಿಳಿಯಬೇಕೆಂದು ಆಶಿಸುತ್ತಾರೆ. ಅದನ್ನು ಹೇಳುವಿರಾ ? ಎಂದು ಕೇಳಿದರು.

**ವಿಗ್ರಹ**—

**ಐತರೇಯಂ**— ಇತರಾಯಾ ಉತ್ಪನ್ನಃ ಐತರೇಯಃ, ಐತರೇಯಸ್ಯ ಇದಂ ಐತರೇಯಂ ।

**ಸೂಚಯನ್**— ಸೂಚಯತಿ ಇತಿ ಸೂಚಯನ್ ।

**ಗರಿಷ್ಠಃ**— ಅತ್ಯಂತಂ ಗುರುಃ ಗರಿಷ್ಠಃ ।

**ಭಗವದ್ಭ್ಯಃ**— ಭಗಃ ಏಷಾಂ ಅಸ್ತಿ ಇತಿ ಭಗವಂತಃ, ತೇಭ್ಯಃ ಭಗವದ್ಭ್ಯಃ ।

**ಸೂಕ್ತಭಾವಂ**— ಸೂಕ್ತಸ್ಯ ಭಾವಃ ಸೂಕ್ತಭಾವಃ, ತಂ ಸೂಕ್ತಭಾವಂ ।

**ಕ್ರಿಯಾಪದ**— ಉವಾಚ- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ಚ ಧಾತೋಃ ಲಿಟಿ ಪ್ರಥಮಪುರುಷೇ ಏಕವಚನೇ ''ಉವಾಚ'' ಇತಿ ರೂಪಮ್ ।

ಉವಾಚ ಊಚತುಃ ಊಚುಃ, ಉವಚಿಥ ಉವಕ್ಥ ಊಚಥುಃ ಊಚ, ಉವಾಚ ಉವಚ,
ಊಚಿವ ಊಚಿಮ ॥

★ ★ ★

ಆಚಾರ್ಯರಿಂದ ಶ್ರುತ್ಯರ್ಥ ವಿವರಣೆ

**ವರ್ಣಸೌಷ್ಠವಗರಿಷ್ಠಮತೂರ್ಣಂ ತುಲ್ಯಮಾತ್ರಮತಿಮಾತ್ರಸುಲಕ್ಷ್ಮ ।**
**ವ್ಯೂಢಹೃಜ್ಜಲದಘೋಷಮಮುಷ್ಯೋಚ್ಚಾರಣಂ ವಿದಧದಭ್ಯಧಿತಾರ್ಥಮ್ ॥ 2 ॥**

**ಪದಚ್ಛೇದ**— ವರ್ಣಸೌಷ್ಠವಗರಿಷ್ಠಂ, ಅತೂರ್ಣಂ, ತುಲ್ಯಮಾತ್ರಂ, ಅತಿಮಾತ್ರಸುಲಕ್ಷ್ಮ, ವ್ಯೂಢಹೃತ್, ಜಲದ-ಘೋಷಂ, ಅಮುಷ್ಯ, ಉಚ್ಚಾರಣಂ, ವಿದಧತ್, ಅಭ್ಯಧಿತ, ಅರ್ಥಂ ।

**ಅನ್ವಯ**— ವ್ಯೂಢಹೃತ್ ವರ್ಣಸೌಷ್ಠವಗರಿಷ್ಠಂ, ಅತೂರ್ಣಂ, ತುಲ್ಯಮಾತ್ರಂ, ಅತಿಮಾತ್ರಸುಲಕ್ಷ್ಮ, ಜಲದ-ಘೋಷಂ ಉಚ್ಚಾರಣಂ ವಿದಧತ್ ಅಮುಷ್ಯ ಅರ್ಥಂ ಅಭ್ಯಧಿತ ।

**ಅನ್ವಯಾರ್ಥ**—

**ವ್ಯೂಢಹೃತ್** = ಶ್ರೀಪೂರ್ಣಪ್ರಜ್ಞಾಚಾರ್ಯರು
**ವರ್ಣಸೌಷ್ಠವಗರಿಷ್ಠಂ** = ಅಕ್ಷರಗಳ ಸ್ಪಷ್ಟತೆಯ ಭಾವದಿಂದ ಗರಿಷ್ಠವಾಗಿಯೂ,
**ಅತೂರ್ಣಂ** = ವೇಗವಿಲ್ಲದೆಯೂ,
**ತುಲ್ಯಮಾತ್ರಂ** = ಆಯಾ ಅಕ್ಷರದ ಉಚ್ಚಾರಣೆಗೆ ಯೋಗ್ಯವಾದ ಮಾತ್ರೆಗಳುಳ್ಳ ಹಾಗೆ,
**ಅತಿಮಾತ್ರಸುಲಕ್ಷ್ಮ** = ಅತಿಶಯವಾಗಿ ಒಳ್ಳೆಯ ಲಕ್ಷಣವುಳ್ಳದ್ದಾಗಿ,
**ಜಲದಘೋಷಂ** = ಮೇಘಧ್ವನಿಯಂತೆ ಧ್ವನಿಯುಳ್ಳ
**ಉಚ್ಚಾರಣಂ** = ಉಚ್ಚಾರಣೆಯನ್ನು
**ವಿದಧತ್** = ಮಾಡುತ್ತಾ
**ಅಮುಷ್ಯ** = ಈ ಸೂಕ್ತದ
**ಅರ್ಥಂ** = ಅರ್ಥವನ್ನು
**ಅಭ್ಯಧಿತ** = ಹೇಳಿದರು.

**ತಾತ್ಪರ್ಯ—** ಪೂರ್ಣಪ್ರಜ್ಞಾಚಾರ್ಯರು ಬಹಳ ಚೆನ್ನಾಗಿ, ಸ್ಪಷ್ಟವಾಗಿ ಐತರೇಯ ಸೂಕ್ತದ ಅಕ್ಷರಗಳನ್ನು ಉಚ್ಚರಿಸಿದರು. ಅವಸರವಿಲ್ಲದ ಹಾಗೆ ಹ್ರಸ್ವ, ದೀರ್ಘ, ಪ್ಲುತ, ಅಕ್ಷರಗಳ ಉಚ್ಚಾರಣೆಗೆ ಬೇಕಾದ ಮಾತ್ರೆಗಳನ್ನು ಶಾಸ್ತ್ರೋಕ್ತ ಕ್ರಮದಿಂದ ಅನುಸರಿಸಿ ಅರ್ಥವನ್ನು ಮೇಘದಂತೆ ಗಂಭೀರವಾದ ಧ್ವನಿಯಿಂದ ಹೇಳುತ್ತಾ ಬಂದರು.

**ವಿಗ್ರಹ—**

**ವರ್ಣಸೌಷ್ಠವಗರಿಷ್ಠಂ—** ವರ್ಣಾನಾಂ ಸೌಷ್ಠವಂ ವರ್ಣಸೌಷ್ಠವಂ, ವರ್ಣಸೌಷ್ಠವೇನ ಗರಿಷ್ಠಂ ಯಥಾ ಭವತಿ ತಥಾ ವರ್ಣಸೌಷ್ಠವಗರಿಷ್ಠಂ ।

**ಅತೂರ್ಣಂ** = ನ ತೂರ್ಣಂ ಅತೂರ್ಣಂ ।

**ತುಲ್ಯಮಾತ್ರಂ—** ತುಲ್ಯಾ ಮಾತ್ರಾಃ ಯಸ್ಮಿನ್ ತತ್ ತುಲ್ಯಮಾತ್ರಂ ।

**ಅತಿಮಾತ್ರಸುಲಕ್ಷ್ಮ—** ಅತಿಮಾತ್ರಯಾ ಶೋಭನಂ ಲಕ್ಷ್ಮ ಯಸ್ಯ ತತ್ ಅತಿಮಾತ್ರಸುಲಕ್ಷ್ಮ ।

**ವ್ಯೂಢಹೃತ್—** ವ್ಯೂಢಾ ಹೃತ್ ಯಸ್ಯ ಸಃ ವ್ಯೂಢಹೃತ್ ।

**ಜಲದಘೋಷಂ—** ಜಲದವತ್ ಘೋಷಃ ಯಸ್ಯ ತತ್ ಜಲದಘೋಷಂ ।

**ಕ್ರಿಯಾಪದ— ಅಭ್ಯಧಿತ** - ಅಭಿ+ಅಧಿತ, ಡುಧಾಞ್ (ಧಾ) ಧಾರಣ ಪೋಷಣಯೋಃ.

ಅಭಿ+ಅಧಿತ, ಅಧಿಷಾತಾಂ ಅಧಿಷತ, ಅಧಿಥಾಃ ಅಧಿಷಾಥಾಂ ಅಧಿಢ್ವಂ, ಅಧಿಷಿ ಅಧಿಷ್ವಹಿ ಅಧಿಷ್ಮಹಿ ॥

★ ★ ★

ಐತರೇಯ ಶ್ರುತಿಯ ಮತ್ತೊಂದು ಅರ್ಥ

**ಲಕ್ಷಣಾನ್ವಿತತಯಾ ವಚನೇಽಸ್ಮಿನ್ ದೇವತಾಗುರುಮಸಾವತಿಶೇತೇ ।**
**ಮಾನಮಿತ್ಯಪಿ ವಿಧಾಯ ಧಿಯಾ ತೇ ತತ್ತು ಸೂಕ್ತಮಪರಾರ್ಥಮವೋಚನ್ ॥ 3 ॥**

**ಪದಚ್ಛೇದ—** ಲಕ್ಷಣಾನ್ವಿತತಯಾ, ವಚನೇ, ಅಸ್ಮಿನ್, ದೇವತಾಗುರುಂ, ಅಸೌ, ಅತಿಶೇತೇ, ಮಾನಂ, ಇತ್ಯಪಿ, ವಿಧಾಯ, ಧಿಯಾ, ತೇ, ತತ್ತು, ಸೂಕ್ತಂ, ಅಪರಾರ್ಥಂ, ಅವೋಚನ್ ।

**ಅನ್ವಯ—** ತೇ ಅಸೌ ಲಕ್ಷಣಾನ್ವಿತತಯಾ ಅಸ್ಮಿನ್ ವಚನೇ ದೇವತಾಗುರುಂ ಅತಿಶೇತೇ ,ಇತಿ ಧಿಯಾ ಮಾನಂ ವಿಧಾಯ ಅಪಿ, ತತ್ ಸೂಕ್ತಂ ತು, ಅಪರಾರ್ಥಂ ಅವೋಚನ್ ।

**ಅನ್ವಯಾರ್ಥ—**

**ತೇ** = ಆ ಪಂಡಿತರು

**ಅಸೌ** = ಈ ಪೂರ್ಣಪ್ರಜ್ಞಾಚಾರ್ಯರು

**ಲಕ್ಷಣಾನ್ವಿತತಯಾ** = ವೇದೋಚ್ಚಾರಣಗಳ ಲಕ್ಷಣಗಳಿಂದ ಯುಕ್ತವಾಗಿರುವುದರಿಂದ

**ಅಸ್ಮಿನ್ ವಚನೇ** = ಈ ಮಾತಿನಲ್ಲಿ

**ದೇವತಾಗುರುಂ** = ದೇವತೆಗಳ ಗುರುಗಳಾಗಿರುವ ಬೃಹಸ್ಪತ್ಯಾಚಾರ್ಯರನ್ನು

**ಅತಿಶೇತೇ** = ಮೀರಿಸುತ್ತಾರೆ.

**ಇತಿ** = ಹೀಗೆಂದು

**ಧಿಯಾ** = ಮನಸ್ಸಿನಿಂದ

**ಮಾನಂ** = ಗೌರವವನ್ನು

**ವಿಧಾಯ ಅಪಿ** = ಮಾಡಿದರೂ ಕೂಡ

**ತತ್ ಸೂಕ್ತಂ ತು** = ಆ ಸೂಕ್ತವನ್ನಾದರೋ

**ಅಪರಾರ್ಥಂ** = ಪೂರ್ಣಪ್ರಜ್ಞಾಚಾರ್ಯರು ಹೇಳಿರತಕ್ಕ ಅರ್ಥಕ್ಕಿಂತ ಬೇರೆ ಅರ್ಥವುಳ್ಳದ್ದನ್ನಾಗಿ

**ಅವೋಚತ್** = ಹೇಳಿದರು.

**ತಾತ್ಪರ್ಯ—** ಆ ಪಂಡಿತರು ಶ್ರೀಪೂರ್ಣಪ್ರಜ್ಞಾಚಾರ್ಯರು ಹೇಳಿದ ಅರ್ಥವನ್ನು ಕೇಳಿದರು. ಅವರಿಗೆ ಆಶ್ಚರ್ಯವಾಯಿತು. ಈ ಸೂಕ್ತದ ಕಾಲದಲ್ಲಿ ಯಾವ ಲಕ್ಷಣಗಳು ಇರಬೇಕೋ ಆ ಎಲ್ಲಾ ಲಕ್ಷಣಗಳೂ ಇವೆ. ಆದ್ದರಿಂದ ಈ ಪೂರ್ಣಪ್ರಜ್ಞಾಚಾರ್ಯರು ದೇವತೆಗಳಿಗೆ ಗುರುವಾಗಿರುವ ಬೃಹಸ್ಪತ್ಯಾಚಾರ್ಯರನ್ನು ಮೀರಿಸುತ್ತಿದ್ದಾರೆ ಎಂದು ಮನಸ್ಸಿನಿಂದ ಮರ್ಯಾದೆಯನ್ನು ಮಾಡಿದರು. ಆದರೂ ಆ ಸೂಕ್ತಕ್ಕೆ ಶ್ರೀಪೂರ್ಣಪ್ರಜ್ಞಾಚಾರ್ಯರು ಹೇಳಿದ ಅರ್ಥಕ್ಕಿಂತ ಬೇರೆ ಅರ್ಥವನ್ನು ಹೇಳಿದರು.

**ವಿಗ್ರಹ—**

**ಲಕ್ಷಣಾನ್ವಿತತಯಾ—** ಲಕ್ಷಣೈಃ ಅನ್ವಿತಂ ಲಕ್ಷಣಾನ್ವಿತಂ, ಲಕ್ಷಣಾನ್ವಿತಸ್ಯ ಭಾವಃ ಲಕ್ಷಣಾನ್ವಿತತಾ, ತಯಾ ಲಕ್ಷಣಾನ್ವಿತತಯಾ ।

**ದೇವತಾಗುರುಂ—** ದೇವತಾನಾಂ ಗುರುಃ ದೇವತಾಗುರುಃ, ತಂ ದೇವತಾಗುರುಂ ।

**ಅಪರಾರ್ಥಂ—** ಅಪರಃ ಅರ್ಥಃ ಯಸ್ಯ ತತ್ ಅಪರಾರ್ಥಂ ।

**ಕ್ರಿಯಾಪದ— ಅವೋಚನ್**- ಬ್ರೂಙ್ ವ್ಯಕ್ತಾಯಾಂ ವಾಚಿ ಇತಿ ಚ ಧಾತೋಃ ಲಿಟಿ ಪರಸ್ಮೈಪದಿನಃ ಲುಙ್ ಪ್ರಥಮಪುರುಷೇ ಬಹುವಚನೇ ''ಅವೋಚನ್'' ಇತಿ ರೂಪಮ್ ।

ಅವೋಚತ್ ಅವೋಚತಾಂ ಅವೋಚನ್, ಅವೋಚಃ ಅವೋಚತಂ ಅವೋಚತ, ಅವೋಚಂ ಅವೋಚಾವ ಅವೋಚಾಮ ॥

**ಅತಿಶೇತೇ**- ಅತಿ ಇತ್ಯುಪಸರ್ಗಪೂರ್ವಕಾತ್ ಶೀಙ್ ಸ್ವಪ್ನೇ ಇತ್ಯಸ್ಮಾತ್ ಧಾತೋಃ ಆತ್ಮನೇ ಪದಿನಃ ಲಟ್ ಪ್ರಥಮಪುರುಷೇ ಏಕವಚನೇ ಅತಿಶೇತೇ ಇತಿ ರೂಪಂ ।

ಅತಿಶೇತೇ, ಶಯಾತೇ, ಶೇರತೇ, ಶೇಷೇ, ಶಯಾಥೇ, ಶೇಧ್ವೇ, ಶಯೇ, ಶೇವಹೇ, ಶೇಮಹೇ ॥

★ ★ ★

ವಿಷ್ಣುಸಹಸ್ರನಾಮದ ಅರ್ಥವೈಭವ

**ಸ್ಯಾತ್ತಥೇತ್ಥಮಪಿ ಸಂಭವಿತಾರ್ಥಸ್ತ್ರ್ಯರ್ಥತಾಂ ಶ್ರುತಿಷು ವಿತ್ತ ದಶಾರ್ಥಮ್ ।**
**ಭಾರತಂ ನನು ಶತಾರ್ಥಮಪಿ ಸ್ಯಾದ್ವೈಷ್ಣವಂ ಪದಸಹಸ್ರತಯಂ ಹಿ ॥ 4 ॥**

**ಪದಚ್ಛೇದ—** ಸ್ಯಾತ್, ತಥಾ, ಇತ್ಥಂ, ಅಪಿ, ಸಂಭವಿತಾ, ಅರ್ಥಃ, ತ್ರ್ಯರ್ಥತಾಂ, ಶ್ರುತಿಷು, ವಿತ್ತ, ದಶಾರ್ಥಂ, ಭಾರತಂ, ನನು ಶತಾರ್ಥಂ, ಅಪಿ, ಸ್ಯಾತ್, ವೈಷ್ಣವಂ, ಪದಸಹಸ್ರತಯಂ, ಹಿ ।

**ಅನ್ವಯ—** ತಥಾ ಅರ್ಥಃ ಸ್ಯಾತ್, ಇತ್ಥಂ ಅಪಿ ಅರ್ಥಃ ಸಂಭವಿತಾ, ಶ್ರುತಿಷು ತ್ರ್ಯರ್ಥತಾಂ ಭಾರತಂ ದಶಾರ್ಥಂ ವಿತ್ತ, ವೈಷ್ಣವಂ ಪದಸಹಸ್ರತಯಂ ಶತಾರ್ಥಂ ನನು ಹಿ ।

**ಅನ್ವಯಾರ್ಥ—**

**ಅರ್ಥಃ** = ಈ ಸೂಕ್ತದ ಅರ್ಥವು, **ತಥಾ** = ಹಾಗೆ, **ಸ್ಯಾತ್** = ಆಗುವುದು

**ಇತ್ಥಂ ಅಪಿ** = ಹೀಗೆಯೂ ಕೂಡ

(**ಅರ್ಥಃ** = ಅರ್ಥವು)

**ಸಂಭವಿತಾ** = ಸಂಭವಿಸುತ್ತದೆ.

**ಶ್ರುತಿಷು** = ವೇದಗಳಿಗೆ

**ತ್ರ್ಯರ್ಥತಾಂ** = ಮೂರು ಅರ್ಥಗಳನ್ನು

**ವಿತ್ತ** = ತಿಳಿಯಿರಿ

**ಭಾರತಂ** = ಮಹಾಭಾರತವನ್ನು

**ದಶಾರ್ಥಂ ವಿತ್ತ** = ಹತ್ತು ಅರ್ಥಗಳಿಂದ ಯುಕ್ತವಾದದ್ದೆಂದು ತಿಳಿಯಿರಿ

**ವೈಷ್ಣವಂ ಪದಸಹಸ್ರತಯಂ** = ವಿಷ್ಣುವಿನ ಒಂದು ಸಾವಿರ ನಾಮಗಳಿಗೆ

**ಶತಾರ್ಥಂ ಅಪಿ ಸ್ಯಾತ್ ನನು** = ನೂರು ಅರ್ಥಗಳಿಂದ ಯುಕ್ತವಾಗಿರುತ್ತವೆ ಎಂದು ತಿಳಿಯಿರಿ.

**ತಾತ್ಪರ್ಯ—** ಈ ಸೂಕ್ತಕ್ಕೆ ಹಾಗೂ ಅರ್ಥವು ಆಗುತ್ತದೆ, ಹೀಗೂ ಅರ್ಥವು ಸಂಭವಿಸುತ್ತದೆ. ವೇದಗಳಿಗೆ ಮೂರು ಅರ್ಥಗಳಿವೆ ಎಂದು ತಿಳಿಯಿರಿ. ಮಹಾಭಾರತಕ್ಕೆ ಹತ್ತು ಅರ್ಥಗಳಿವೆಯೆಂದು ತಿಳಿಯಿರಿ. ವಿಷ್ಣುಸಹಸ್ರನಾಮದಲ್ಲಿರುವ ಒಂದೊಂದು ಪದಕ್ಕೂ ನೂರು ಅರ್ಥಗಳಿವೆಯೆಂದು ತಿಳಿಯಿರಿ ಎಂದು ಶ್ರೀಪೂರ್ಣಪ್ರಜ್ಞಾಚಾರ್ಯರು ಹೇಳಿದರು.

**ಕ್ರಿಯಾಪದ—** **ಸ್ಯಾತ್-** ಅಸಭುವಿ ಇತ್ಯಸ್ಮಾತ್ ಧಾತೋಃ ವಿಧಿಲಿಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಸ್ಯಾತ್ ಇತಿರೂಪಮ್ ।

ಸ್ಯಾತ್ ಸ್ಯಾತಾಂ ಸ್ಯುಃ, ಸ್ಯಾಃ ಸ್ಯಾತಂ ಸ್ಯಾತ, ಸ್ಯಾಂ ಸ್ಯಾವ ಸ್ಯಾಮ ॥

**ಸಂಭವಿತಾ-** ಸಂ ಇತ್ಯುಪಸರ್ಗಪೂರ್ವಕಾತ್ ಭೂಸತ್ತಾಯಾಂ ಇತಿ ಧಾತೋಃ ಲುಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಸ್ಯಾತ್ ಇತಿ ರೂಪಮ್ ॥

ಭವಿತಾ, ಭವಿತಾರೌ ಭವಿತಾರಃ, ಭವಿತಾಸಿ ಭವಿತಾಸ್ಥಃ ಭವಿತಾಸ್ಥಃ ಭವಿತಾಸ್ಥ, ಭವಿತಾಸ್ಮಿ ಭವಿತಾಸ್ವಃ ಭವಿತಾಸ್ಮಃ॥

**ವಿತ್ತ-** ವಿದಜ್ಞಾನೇ ಇತ್ಯಸ್ಮಾತ್ ಪರಸ್ಮೈಪದಿನಃ ಲೋಟ್ ಮಧ್ಯಮಪುರುಷೇ ಏಕವಚನೇ ಸ್ಯಾತ್ ಇತಿ ರೂಪಮ್ ।

ವೇತ್ತು ವೇತ್ತಾತ್ ವಿತ್ತಾಂ ವಿದಂತು, ವಿದ್ಧಿ ವಿತ್ತಾತ್ ವಿತ್ತಂ ವಿತ್ತ, ವೇದಾನಿ ವೇದಾವ ವೇದಾಮ ॥

★ ★ ★

ವಿಷ್ಣುಸಹಸ್ರನಾಮಕ್ಕೆ ಶತಾರ್ಥಗಳನ್ನು ವಿವರಿಸಲು ವಿದ್ವಾಂಸರ ಪ್ರಾರ್ಥನೆ

**ಇತ್ಯುದೀರಯತಿ ವಿಸ್ತೃತಚಿತ್ತೇ ಭೂಸುರಾ ಇಹ ಜಗೀಷವ ಏನಮ್ ।**
**ಊಚುರರ್ಥಶತಕಂ ಹರಿನಾಮ್ನಾಂ ವರ್ಣ್ಯತಾಮಿತಿ ಸಹಾಸಮುಖಾಸ್ತೇ ॥ 5 ॥**

**ಪದಚ್ಛೇದ—** ಇತಿ, ಉದೀರಯತಿ, ವಿಸ್ತೃತಚಿತ್ತೇ, ಭೂಸುರಾ, ಇಹ, ಜಗೀಷವಃ, ಏನಂ, ಊಚುಃ, ಅರ್ಥಶತಕಂ, ಹರಿನಾಮ್ನಾಂ, ವರ್ಣ್ಯತಾಂ, ಇತಿ, ಸಹಾಸಮುಖಃ, ತೇ ।

**ಅನ್ವಯ—** ವಿಸ್ತೃತಚಿತ್ತೇ ಇತಿ ಉದೀರಯತಿ(ಸತಿ), ತೇ ಭೂಸುರಾಃ ಇಹ ಏನಂ ಜಗೀಷವಃ ಸಹಾಸಮುಖಾಃ, ಹರಿನಾಮ್ನಾಂ ಅರ್ಥಶತಕಂ, ವರ್ಣ್ಯತಾಂ ಇತಿ ಊಚುಃ ।

**ಅನ್ವಯಾರ್ಥ—**

**ವಿಸ್ತೃತಚಿತ್ತೇ** = ವಿಸ್ತಾರವಾದ ಬುದ್ಧಿಯುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು

**ಇತಿ ಉದೀರಯತಿ (ಸತಿ)** = ಹೀಗೆ ಹೇಳುತ್ತಿರಲಾಗಿ,

**ತೇ ಭೂಸುರಾಃ** = ಪಯಸ್ವಿನೀನದೀತೀರದಲ್ಲಿ ಸೇರಿರುವ ಆ ಬ್ರಾಹ್ಮಣರು,

**ಇಹ** = ಈ ವಿಷಯದಲ್ಲಿ
**ಏನಂ** = ಇವರನ್ನು
**ಜಿಗೀಷವಃ** = ಜಯಿಸಬೇಕೆಂಬ ಆಸೆ ಉಳ್ಳವರಾಗಿ
**ಸಹಾಸಮುಖಾಃ** = ನಗುವಿನಿಂದ ಕೂಡಿದ ಮುಖವುಳ್ಳವರಾಗಿ,
**ಹರಿನಾಮ್ನಾಂ** = ಹರಿಯ ಹೆಸರುಗಳಿಗೆ
**ಅರ್ಥಶತಕಂ** = ನೂರು ಅರ್ಥಗಳು
**ವರ್ಣ್ಯತಾಂ** = ವರ್ಣಿಸಲ್ಪಡಲಿ,
**ಇತಿ** = ಹೀಗೆಂದು
**ಊಚುಃ** = ಹೇಳಿದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞಾಚಾರ್ಯರು ವಿಷ್ಣುಸಹಸ್ರನಾಮದ ಒಂದೊಂದು ಪದಕ್ಕೆ ಒಂದು ನೂರು ಅರ್ಥಗಳಿವೆ ಎಂದು ಹೇಳಿದರು. ಹಾಗಾದರೆ ನೂರು ಅರ್ಥಗಳನ್ನು ಹೇಳಿರಿ ಎಂದು ಪಯಸ್ವಿನೀ ತೀರದಲ್ಲಿರುವ ಪಂಡಿತರು ಇವರನ್ನು ಜಯಿಸಬೇಕೆಂಬ ಆಸೆಯಿಂದ ಕೇಳಿದರು.

**ವಿಗ್ರಹ—**

**ವಿಸ್ಮೃತಚಿತ್ತಃ—** ವಿಸ್ಮೃತಂ ಚಿತ್ತಂ ಯಸ್ಯ ಸಃ ವಿಸ್ಮೃತಚಿತ್ತಃ ।

**ಭೂಸುರಾಃ—** ಭುವ ಸುರಾಃ, ಭೂಸುರಾಃ ಜೇತುಂ ಇಚ್ಛ್ಯ ಜಿಗೀಷಃ ತೇ ಜಗೀಷವಃ ಅರ್ಥಸ್ಯ ಶತಕಂ ಅರ್ಧಶತಕಂ ।

**ಹರಿನಾಮ್ನಾಂ—** ಹರೇಃ ನಾಮಾನಿ ಹರಿನಾಮಾನಿ ತೇಷಾಂ ಹರಿನಾಮ್ನಾಂ ।

**ಸಹಾಸಮುಖಾಃ—** ಹಾಸೇನ ಸಹಿತಂ ಸಹಾಸಂ, ಸಹಾಸೇನ ಮುಖಂ ಯೇಷಾಂ ತೇ ಸಹಾಸಮುಖಾಃ ।

**ಕ್ರಿಯಾಪದ—** ವರ್ಣ್ಯತಾಂ- ವರ್ಣ ವರ್ಣನೇ ಇತ್ಯಸ್ಮಾತ್ ಲೋಟಿ ಪ್ರಥಮಪುರುಷೇ ಏಕವಚನೇ ''ವರ್ಣ್ಯತಾಂ'' ಇತಿ ರೂಪಮ್ ।

ವರ್ಣ್ಯತಾಂ ವರ್ಣ್ಯೇತಾಂ ವರ್ಣ್ಯಂತಾಂ, ವರ್ಣ್ಯಸ್ವ ವರ್ಣ್ಯೇಥಾಂ ವರ್ಣ್ಯಧ್ವಂ, ವರ್ಣ್ಯೇ ವರ್ಣ್ಯಾವಹೇ ವರ್ಣ್ಯಾಮಹೇ ॥

★ ★ ★

ಆಚಾರ್ಯರು ನೀಡಿದ ಸವಾಲು

**ವರ್ಣಯಾಮಿ ತದಹಂ ಸಕಲಂ ವಃ ಸೌಷ್ಠವಾದನುವದಂತು ಭವಂತಃ ।**
**ತಂ ವದಂತಮಿತಿ ತೇಽಥ ವದಂತೋ ಬಾಢಮಿತ್ಯತಿದೃಢೋದ್ಯಮಮಾಪುಃ ॥ 6 ॥**

**ಪದಚ್ಛೇದ—** ವರ್ಣಯಾಮಿ, ತತ್, ಅಹಂ, ಸಕಲಂ, ವಃ, ಸೌಷ್ಠವಾತ್, ಅನುವದಂತು, ಭವಂತಃ, ತಂ, ವದಂತಂ, ಇತಿ, ತೇ, ಅಥ, ವದಂತಃ, ಅತಿದೃಢಃ, ಉದ್ಯಮಂ, ಆಪುಃ ।

**ಅನ್ವಯ—** ಅಹಂ ತತ್ ಸಕಲಂ ವಃ ವರ್ಣಯಾಮಿ, ಭವಂತಃ ಸೌಷ್ಠವಾತ್ ಅನುವದಂತು, ಇತಿ ವದಂತಂ ತಂ ಅಥ, ತೇ ಬಾಢಂ ಇತಿ ವದಂತಃ, ಅತಿದೃಢೋದ್ಯಮಂ ಆಪುಃ ।

**ಅನ್ವಯಾರ್ಥ—**

**ಅಹಂ** = ನಾನು
**ತತ್** = ಅರ್ಥವನ್ನು

**ಸಕಲಂ** = ಎಲ್ಲವನ್ನೂ

**ವಃ** = ನಿಮಗೆ

**ವರ್ಣಯಾಮಿ** = ವರ್ಣಿಸುತ್ತೇನೆ.

**ಭವಂತಃ** = ತಾವು

**ಸೌಷ್ಠವಾತ್** = ಸ್ಪಷ್ಟತೆಯಿಂದ

**ಅನುವದಂತು** = ಅನುವಾದ ಮಾಡಿರಿ

**ಇತಿ ವದಂತಂ ತಂ** = ಎಂದು ಹೇಳುತ್ತಿರುವ ಪೂರ್ಣಪ್ರಜ್ಞಾಚಾರ್ಯರನ್ನು ಕುರಿತು

**ಅಥ** = ಅನಂತರ

**ತೇ** = ಆ ಪಂಡಿತರು

**ಬಾಢಂ ಇತಿ** = ಹಾಗೆಯೇ ಆಗಲಿ ಎಂದು

**ವದಂತಃ** = ಹೇಳುತ್ತಾ

**ಅತಿದೃಢೋದ್ಯಮಂ** = ಅತ್ಯಂತ ದೃಢವಾದ ಪ್ರಯತ್ನವನ್ನು

**ಆಪುಃ** = ಮಾಡಿದರು.

**ತಾತ್ಪರ್ಯ**— ''ನಾನು ವಿಷ್ಣುಸಹಸ್ರನಾಮದ ಒಂದೊಂದು ಪದದ ನೂರು ಅರ್ಥಗಳನ್ನು ವರ್ಣಿಸುತ್ತೇನೆ, ಅನಂತರ ನೀವು ನಾನು ಹೇಳಿದ ಅರ್ಥಗಳನ್ನು ಸ್ಪಷ್ಟವಾಗಿ ಹೇಳಬೇಕು'' ಎಂದು ಪೂರ್ಣಪ್ರಜ್ಞಾಚಾರ್ಯರು ಹೇಳಿದಾಗ ಆ ಪಂಡಿತರು ''ಹಾಗೆಯೇ ಆಗಲಿ'' ಎಂದು ಅತ್ಯಂತ ದೃಢವಾದ ಪ್ರಯತ್ನವನ್ನು ಮಾಡಲು ಆರಂಭಿಸಿದರು.

**ವಿಗ್ರಹ**—

**ಸೌಷ್ಠವಾತ್**— ಸುಷ್ಠುಭಾವಃ ಸೌಷ್ಠವಂ, ತಸ್ಮಾತ್ ಸೌಷ್ಠವಾತ್ ।

**ವದಂತಂ**— ವದತಿ ಇತಿ ವದನ್, ತಂ ವದಂತಂ ।

**ಅತಿದೃಢೋದ್ಯಮಂ**— ಅತ್ಯಂತಂ ದೃಢಃ ಅತಿದೃಢಃ, ಅತಿದೃಢಶ್ಚಾಸೌ ಉದ್ಯಮಶ್ಚ ಅತಿದೃಢೋದ್ಯಮಃ, ತಂ ಅತಿದೃಢೋದ್ಯಮಂ ।

**ಕ್ರಿಯಾಪದ**— **ವರ್ಣಯಾಮಿ**- ವರ್ಣವರ್ಣನೇ ವರ್ಣನಾರ್ಥಕಾತ್ ವರ್ಣ ಧಾತೋಃ ಲಟಿ ಉತ್ತಮಪುರುಷೇ ಏಕವಚನೇ ''ವರ್ಣಯಾಮಿ'' ಇತಿ ರೂಪಮ್ ।

| | | |
|---|---|---|
| ವರ್ಣಯತಿ | ವರ್ಣಯತಃ | ವರ್ಣಯಂತಿ |
| ವರ್ಣಯಸಿ | ವರ್ಣಯಥಃ | ವರ್ಣಯಥ |
| ವರ್ಣಯಾಮಿ | ವರ್ಣಯಾವಃ | ವರ್ಣಯಾಮಃ ॥ |

★ ★ ★

ಅಪೂರ್ವರೀತಿಯಿಂದ ವಿಶ್ವಶಬ್ದಾರ್ಥ ಕಥನ

**ಪ್ರತ್ಯಯಪ್ರಕೃತಿಸಂಗಮಭಂಗೀಂ ಶಬ್ದಶಾಸ್ತ್ರವಿಹಿತಾಂ ಪ್ರತಿದರ್ಶ್ಯ ।**
**ಶುದ್ಧಧೀಃ ಶ್ರುತಿಶಿರಃಶತಸಿದ್ಧಾನಭ್ಯಧಾತ್ ಸಪದಿ ವಿಶ್ವಪದಾರ್ಥಾನ್ ॥ 7 ॥**

**ಪದಚ್ಛೇದ**— ಪ್ರತ್ಯಯಪ್ರಕೃತಿಸಂಗಮಭಂಗೀಂ, ಶಬ್ದಶಾಸ್ತ್ರವಿಹಿತಾಂ, ಪ್ರತಿದರ್ಶ್ಯ, ಶುದ್ಧಧೀಃ, ಶ್ರುತಿಶಿರಃಶತ-ಸಿದ್ಧಾನ್, ಅಭ್ಯಧಾತ್, ಸಪದಿ, ವಿಶ್ವಪದಾರ್ಥಾನ್ ।

**ಅನ್ವಯ—** ಶುದ್ಧಧೀಃ ಸಪದಿ, ಶ್ರುತಿಶಿರಃಶತಸಿದ್ಧಾನ್ ವಿಶ್ವಪದಾರ್ಥಾನ್, ಶಬ್ದಶಾಸ್ತ್ರವಿಹಿತಾಂ ಪ್ರತ್ಯಯಪ್ರಕೃತಿ-ಸಂಗಮಭಂಗೀಂ ಪ್ರತಿದರ್ಶ್ಯ ಅಭ್ಯಧಾತ್ ।

**ಅನ್ವಯಾರ್ಥ—**

**ಶುದ್ಧಧೀಃ** = ಶುದ್ಧವಾದ ಮನಸ್ಸುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು

**ಸಪದಿ** = ಕೂಡಲೇ,

**ಶ್ರುತಿಶಿರಃಶತಸಿದ್ಧಾನ್** = ನೂರಾರು ಉಪನಿಷತ್ತುಗಳಲ್ಲಿ ಸಿದ್ಧವಾಗಿರುವ

**ವಿಶ್ವಪದಾರ್ಥಾನ್** = ವಿಶ್ವ ಎಂಬ ಪದದ ಅರ್ಥಗಳನ್ನು ,

**ಶಬ್ದಶಾಸ್ತ್ರವಿಹಿತಾಂ** = ವ್ಯಾಕರಣ ಶಾಸ್ತ್ರದಲ್ಲಿ ವಿಹಿತವಾಗಿರುವ

**ಪ್ರತ್ಯಯಪ್ರಕೃತಿಸಂಗಮಭಂಗೀಂ** = ಪ್ರತ್ಯಯಗಳೂ ಪ್ರಕೃತಿಗಳಿಗೂ ಸಂಗಮದ ರೀತಿಯನ್ನು

**ಪ್ರತಿದರ್ಶ್ಯ** = ತೋರಿಸಿ

**ಅಭ್ಯಧಾತ್** = ಹೇಳಿದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞರು ಕೂಡಲೇ ವಿಷ್ಣುಸಹಸ್ರನಾಮದ ಮೊದಲನೆಯ ಶಬ್ದವಾದ ''ವಿಶ್ವ ''ಎಂಬ ಶಬ್ದದ ಅರ್ಥವನ್ನು ವರ್ಣಿಸಲು ಆರಂಭಿಸಿದರು. ವ್ಯಾಕರಣಶಾಸ್ತ್ರದಲ್ಲಿ ಪ್ರಕೃತಿಗಳು ಮತ್ತು ಪ್ರತ್ಯಯಗಳು ಇವುಗಳ ಸಂಬಂಧವನ್ನು ಕ್ರಮವಾಗಿ ಹೇಳಿರುವವು. ಆ ಕ್ರಮವನ್ನು ತಿಳಿಸಿ ಅದರಂತೆ ಉಪನಿಷತ್ತುಗಳ ಪ್ರಕಾರ ನೂರು ಅರ್ಥಗಳನ್ನು ಹೇಳಿದರು.

**ವಿಗ್ರಹ—**

**ಪ್ರತ್ಯಯಪ್ರಕೃತಿಸಂಗಮಭಂಗೀ—** ಪ್ರತ್ಯಯಶ್ಚ ಪ್ರಕೃತಿಶ್ಚ ಪ್ರತ್ಯಯಪ್ರಕೃತೀ, ಪ್ರತ್ಯಯಪ್ರಕೃತ್ಯೋಃ ಸಂಗಮಃ ಪ್ರತ್ಯಯಪ್ರಕೃತಿಸಂಗಮಃ, ತಸ್ಯ ಭಂಗೀ ಪ್ರತ್ಯಯಪ್ರಕೃತಿಸಂಗಮಭಂಗೀ ।

**ಶಬ್ದಶಾಸ್ತ್ರವಿಹಿತಾಂ** = ಶಬ್ದಸ್ಯ ಶಾಸ್ತ್ರಂ ಶಬ್ದಶಾಸ್ತ್ರಂ, ಶಬ್ದಶಾಸ್ತ್ರೇ ವಿಹಿತಾ ಶಬ್ದಶಾಸ್ತ್ರವಿಹಿತಾಂ, ತಾಃ

**ವಿಶ್ವಪದಾರ್ಥಾನ್—** ವಿಶ್ವಂ ಇತಿ ಪದಂ ವಿಶ್ವಪದಂ, ವಿಶ್ವಪದಸ್ಯ ಅರ್ಥಾಃ ವಿಶ್ವಪದಾರ್ಥಾಃ, ತಾನ್ ವಿಶ್ವಪದಾರ್ಥಾನ್ ।

**ಶೃತಿಶಿರಃಶತಸಿದ್ಧಾನ್—** ಶ್ರುತೀನಾಂ ಶಿರಾಂಸಿ ಶ್ರುತಿಶಿರಾಂಸಿ, ಶ್ರುತಿಶಿರಸಾಂ ಶತಾನಿ ಶ್ರುತಿಶಿರಃ ಶತಾನಿ, ಶ್ರುತಿಶಿರಃ ಶತೇಷು ಸಿದ್ಧಾನಿ ಶ್ರುತಿಶಿರಃ ಶತಸಿದ್ಧಾನಿ ತಾನ್ ।

**ಕ್ರಿಯಾಪದ— ಅಭ್ಯದಾತ್**- ಅಭಿ ಇತ್ಯುಪಸರ್ಗಪೂರ್ವಕಾತ್ ಡುಧಾಞ್ ಧಾರಣಪೋಷಣಯೋಃ ಇತ್ಯತೋ ಲುಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಇತಿ ರೂಪಮ್ ।

ಅಧಾತ್, ಅಧಾತಾಂ, ಅಧುಃ ಇತ್ಯಾದಿ.

★ ★ ★

**ವಿಶ್ವಶಬ್ದಕ್ಕೆ ಶತಾರ್ಥ ಕಥನ - ಗಾಬರಿಗೊಂಡ ಪಂಡಿತಮಂಡಲಿ**

**ಯಾವದರ್ಥಶತಕಂ ನ ವಿಶಂಕಃ ಸಂತತೋಕ್ತಿಕೃದಪೂರಯದೇಷಃ ।**

**ವರ್ಣಿತಾವಧೃತಿದುರ್ಬಲಚಿತ್ತಾಸ್ತಾವದಾಕುಲಹೃದೋ ಹ್ಯಭವಂಸ್ತೇ ॥ 8 ॥**

**ಪದಚ್ಛೇದ—** ಯಾವತ್, ಅರ್ಥಶತಕಂ, ನ, ವಿಶಂಕಃ, ಸಂತತೋಕ್ತಿಕೃತ್, ಅಪೂರಯತ್, ಏಷಃ, ವರ್ಣಿತಾವ-ಧೃತಿದುರ್ಬಲಚಿತ್ತಾಃ, ತಾವತ್, ಆಕುಲಹೃದಃ, ಹಿ, ಅಭವನ್, ತೇ ।

**ಅನ್ವಯ—** ವಿಶಂಕಃ ಸಂತತೋಕ್ತಿಕೃತ್ ಏಷಃ ಯಾವತ್, ಅರ್ಥಶತಕಂ ನ ಅಪೂರಯತ್, ತಾವತ್ ವರ್ಣಿತಾವಧೃತಿ ದುರ್ಬಲಚಿತ್ತಾಃ ತೇ ಆಕುಲಹೃದಃ ಅಭವನ್ ಹಿ ।

**ಅನ್ವಯಾರ್ಥ—**

**ವಿಶಂಕಃ** = ಸಂದೇಹವಿಲ್ಲದ

**ಸಂತತೋಕ್ತಿಕೃತ್** = ಅವಿಚ್ಛಿನ್ನ ಭಾಷಣವನ್ನು ಮಾಡುತ್ತಿರುವ

**ಏಷಃ** = ಈ ಪೂರ್ಣಪ್ರಜ್ಞಾಚಾರ್ಯರು

**ಯಾವತ್** = ಎಷ್ಟರವರೆಗೆ

**ಅರ್ಥಶತಕಂ** = ನೂರು ಅರ್ಥಗಳನ್ನು

**ನ ಅಪೂರಯತ್** = ಪೂರ್ತಿಮಾಡಲಿಲ್ಲವೋ,

**ತಾವತ್** = ಅಷ್ಟರಲ್ಲಿ

**ವರ್ಣಿತಾವಧೃತಿದುರ್ಬಲಚಿತ್ತಾಃ** = ವರ್ಣನೆ ಮಾಡಲ್ಪಟ್ಟಿರುವ ವಿಷಯಗಳ ಗ್ರಹಣ ಮಾಡುವ ವಿಷಯದಲ್ಲಿ ದುರ್ಬಲವಾದ ಚಿತ್ತದಿಂದ ಯುಕ್ತರಾಗಿ,

**ತೇ ಆಕುಲಹೃದಃ** = ಆ ಪಂಡಿತರು ವ್ಯಾಕುಲವಾದ ಹೃದಯವುಳ್ಳವರಾಗಿ

**ಅಭವನ್ ಹಿ** = ಆದರು ಅಷ್ಟೇ.

**ತಾತ್ಪರ್ಯ—** ಪೂರ್ಣಪ್ರಜ್ಞಾಚಾರ್ಯರು ನೂರು ಅರ್ಥಗಳನ್ನು ಹೇಳಿ ಮುಗಿಸುವುದರೊಳಗೆ ಆ ಪಂಡಿತರಿಗೆ ಹೇಳಿದ ಅರ್ಥಗಳನ್ನು ಮನಸ್ಸಿನಲ್ಲಿ ಗ್ರಹಣ ಮಾಡಲಿಕ್ಕೆ ಸಾಧ್ಯವಾಗಲಿಲ್ಲ. ಅಷ್ಟು ದುರ್ಬಲವಾದ ಮನಸ್ಸಿನಿಂದ ಯುಕ್ತರಾದ ಅವರಿಗೆ ಮನಸ್ಸು ವ್ಯಾಕುಲವಾಯಿತು.

**ವಿಗ್ರಹ—**

**ಅರ್ಥಶತಕಂ—** ಅರ್ಥಾನಾಂ ಶತಕಂ ಅರ್ಥಶತಕಂ, ತತ್ ಅರ್ಥಶತಕಮ್ ।

**ವಿಶಂಕಾ—** ವಿಗತಾ ಶಂಕಾ ಯಸ್ಯ ಸಃ ವಿಶಂಕಃ ।

**ಸಂತತೋಕ್ತಿಕೃತ್—** ಸಂತತಾ ಉಕ್ತಿಃ ಸಂತತೋಕ್ತಿಃ, ಸಂತತೋಕ್ತೇ ಕರೋತಿ ಇತಿ ಸಂತತೋಕ್ತಿಕೃತ್ ।

**ವರ್ಣಿತಾವಧೃತಿದುರ್ಬಲಚಿತ್ತಾಃ—** ವರ್ಣಿತಾನಾಂ ಅವಧೃತಿಃ ವರ್ಣಿತಾವಧೃತಿಃ, ವರ್ಣಿತಾವಧೃತೌ ದುರ್ಬಲಂ ಚಿತ್ತಂ ಯೇಷಾಂ ತೇ ವರ್ಣಿತಾವಧೃತಿದುರ್ಬಲಚಿತ್ತಾಃ ।

**ಆಕುಲಹೃದಃ—** ಆಕುಲಂ ಹೃದಂ ಯೇಷಾಂ ತೇ ಆಕುಲಹೃದಃ ।

**ಕ್ರಿಯಾಪದ—** **ಅಪೂರಯತ್**- ಪೄಪಾಲನಪೂರಣಯೋಃ ಪಾಲನಪೂರಣಾರ್ಥಕಾತ್ ಪೂಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅಪೂರಯತ್'' ಇತಿ ರೂಪಮ್ ।

ಅಪೂರಯತ್ ಅಪೂರಯತಾಂ ಅಪೂರಯನ್,
ಅಪೂರಯಃ ಅಪೂರಯತಂ ಅಪೂರಯತ,
ಅಪೂರಯಂ ಅಪೂರಯಾವ ಅಪೂರಯಾಮ ॥

**ಅಭವನ್**- ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂ ಧಾತೋಃ ಲಙ್ ಪ್ರಥಮಪುರುಷೇ ಏಕವಚನೇ ''ಅಭವತ್'' ಇತಿ ರೂಪಮ್ ।

ಅಭವತ್ ಅಭವತಾಂ ಅಭವನ್, ಅಭವಃ ಅಭವತಂ ಅಭವತ, ಅಭವಂ ಅಭವಾವ ಅಭವಾಮ ॥

★ ★ ★

**ಪಂಡಿತರಾದರೂ ಆಚಾರ್ಯವಾಣಿ ಗ್ರಹಿಸಲಾಗಲಿಲ್ಲ**

**ಸಾಂಗವೇದಚತುರಾ ಇತಿಹಾಸೇ ಶಿಕ್ಷಿತಾಃ ಸುಬಹವೋಽಪ್ಯತಿಧೃಷ್ಟಾಃ ।**
**ನೈತದೀರಿತಮಹೋ ಜಗೃಹುಸ್ತೇ ವಿಶ್ವಸಂಕ್ಷಯಪಯೋಽಂಧುಗಣಾ ವಾ ॥ 9 ॥**

**ಪದಚ್ಛೇದ—** ಸಾಂಗವೇದಚತುರಾ, ಇತಿಹಾಸೇ, ಶಿಕ್ಷಿತಾಃ, ಸುಬಹವಃ, ಅಪಿ, ಅತಿಧೃಷ್ಟಾಃ, ನ, ಏತದೀರಿತಂ, ಅಹೋ, ಜಗೃಹುಃ, ತೇ, ವಿಶ್ವಸಂಕ್ಷಯಪಯಃ, ಅಂಧುಗಣಾ, ವಾ ।

**ಅನ್ವಯ—** ಸಾಂಗವೇದಚತುರಾಃ, ಇತಿಹಾಸೇ ಶಿಕ್ಷಿತಾಃ, ಸುಬಹವಃ, ಅತಿಧೃಷ್ಟಾಃ ಅಪಿ ತೇ, ಅಂಧುಗಣಾಃ ವಿಶ್ವ-ಸಂಕ್ಷಯಪಯಃ ವಾ, ಏತದೀರಿತಂ ನ ಜಗೃಹುಃ ಅಹೋ !

**ಅನ್ವಯಾರ್ಥ—**

**ಸಾಂಗವೇದಚತುರಾಃ** = ಶಿಕ್ಷಾ ಮುಂತಾದ ಆರು ಅಂಗಗಳಿಂದ ಯುಕ್ತವಾಗಿರುವ ವೇದಗಳಲ್ಲಿ ಕುಶಲರಾದ,
**ಇತಿಹಾಸೇ** = ಮಹಾಭಾರತ ಮುಂತಾದ ಇತಿಹಾಸಗಳಲ್ಲಿ
**ಶಿಕ್ಷಿತಾಃ** = ಶಿಕ್ಷಿತರಾಗಿರುವ,
**ಸುಬಹವಃ** = ಬಹುಸಂಖ್ಯಾಕರಾಗಿರುವ
**ಅತಿಧೃಷ್ಟಾಃ ಅಪಿ** = ಅತ್ಯಂತವಾಗಿ ಭಯವಿಲ್ಲದವರಾದರೂ ಕೂಡ
**ತೇ** = ಆ ಪಯಸ್ವಿನೀ ತೀರದಲ್ಲಿರುವ ಪಂಡಿತರು,
**ಅಂಧುಗಣಾಃ** = ಭಾವಿಗಳ ಸಮೂಹವು
**ವಿಶ್ವಸಂಕ್ಷಯಪಯಃ ವಾ** = ಸಕಲಲೋಕಗಳ ನಾಶಕಾಲವಾಗಿರುವ ಪ್ರಳಯಕಾಲದ ಜಲದಂತೆ
**ಏತದೀರಿತಂ** = ಶ್ರೀಪೂರ್ಣಪ್ರಜ್ಞಾಚಾರ್ಯರಿಂದ ಹೇಳಲ್ಪಟ್ಟ ವಿಷಯಗಳನ್ನು
**ನ ಜಗೃಹುಃ** = ಗ್ರಹಿಸಲಿಲ್ಲ.
**ಅಹೋ !** = ಆಶ್ಚರ್ಯ !

**ತಾತ್ಪರ್ಯ—** ಶಿಕ್ಷಾ ಮುಂತಾದ ಆರು ಅಂಗಗಳಿಂದ ಕೂಡಿದ ವೇದಗಳು ಮತ್ತು ಮಹಾಭಾರತ ಮುಂತಾದ ಇತಿಹಾಸಗಳಲ್ಲಿಯೂ ಶಿಕ್ಷಣವನ್ನು ಹೊಂದಿದವರೂ, ಅತ್ಯಂತ ನಿರ್ಭಯವಾಗಿರುವವರೂ ಆದ ಪಂಡಿತರು ಅನೇಕ ಸಂಖ್ಯೆಯಲ್ಲಿ ಸೇರಿದ್ದರೂ ಕೂಡ ಪೂರ್ಣ- ಪ್ರಜ್ಞಾಚಾರ್ಯರಿಂದ ಹೇಳಲ್ಪಟ್ಟ ವಿಷಯಗಳನ್ನು ಗ್ರಹಿಸಲು ಅವರು ಶಕ್ತರಾಗಲಿಲ್ಲ. ಪ್ರಳಯಕಾಲದ ನೀರನ್ನು ಭಾವಿಗಳು ತುಂಬಿಸಬಲ್ಲವೇ ?

**ವಿಗ್ರಹ—**

**ಸಾಂಗವೇದಚತುರಾಃ—** ಅಂಗೈಃ ಸಹಿತಾಃ ಸಾಂಗಾಃ, ಸಾಂಗಾಶ್ಚ ತೇ ವೇದಾಶ್ಚ ಸಾಂಗವೇದಾಃ, ಸಾಂಗ-ವೇದೇಷು ಚತುರಾಃ ಸಾಂಗವೇದಚತುರಾಃ ।
**ಸುಬಹವಃ—** (ಅತ್ಯಂತಂ) ಬಹವಃ ಸುಬಹವಃ ।
**ಅತಿಧೃಷ್ಟಾಃ—** ಅತ್ಯಂತಂ ಧೃಷ್ಟಾಃ ಅತಿಧೃಷ್ಟಾಃ ।
ಏತದೀರಿತಂ— ಏತೇನ ಈರಿತಂ ಏತದೀರಿತಂ ।

**ಕ್ರಿಯಾಪದ— ಜಗೃಹುಃ**- ಗ್ರಹ ಉಪಾದಾನೇ ಇತಿ ಉಪಾದಾನಾರ್ಥಕಾತ್ ಗ್ರಹಧಾತೋಃ ಪ್ರಥಮಪುರುಷೇ ಬಹುವಚನೇ ''ಜಗೃಹುಃ'' ಇತಿ ರೂಪಮ್।

ಜಗ್ರಾಹ ಜಗೃಹತುಃ ಜಗೃಹುಃ, ಜಗಂಥ ಜಗ್ರಹಿಥ, ಜಗೃಹಥುಃ ಜಗೃಪ, ಜಗ್ರಾಹ ಜಗ್ರಹ ಜಗೃಹಿವ ಜಗೃಹಿಮ ॥

★ ★ ★

### ದೇವತೆಗಳಲ್ಲೂ ಕಾಣಸಿಗದ ಆಚಾರ್ಯರ ಪ್ರತಿಭೆ - ಪಂಡಿತರ ಶರಣಾಗತಿ

**ದೇವತಾಸ್ವಸುಲಭಾ ಪ್ರತಿಭಾ ತೇ ಮಾನುಷೇಷು ಚಪಲೇಷು ಕಥಾ ಕಾ ।**
**ಕ್ಷಾಮ್ಯ ಸೌಮ್ಯ ಸಕಲಜ್ಞ ನಮಸ್ತೇ ತೇ ಬ್ರುವಂತ ಇತಿ ತಂ ಕಿಲನೇಮುಃ ॥ 10 ॥**

**ಪದಚ್ಛೇದ—** ದೇವಾತಸು, ಅಸುಲಭಾ, ಪ್ರತಿಭಾ, ತೇ, ಮಾನುಷೇಷು, ಚಪಲೇಷು, ಕಥಾ ಕಾ, ಕ್ಷಾಮ್ಯ, ಸೌಮ್ಯ, ಸಕಲಜ್ಞ, ನಮಃ, ತೇ, ತೇ, ಬ್ರುವಂತಃ, ಇತಿ, ತಂ, ಕಿಲನೇಮುಃ ।

**ಅನ್ವಯ—** ಹೇ ಸಕಲಜ್ಞ ! ತೇ ಪ್ರತಿಭಾ ದೇವತಾಸು ಅಸುಲಭಾ, ಏವಂ ಸತಿ ಚಪಲೇಷು ಮಾನುಷೇಷು ಕಾ ಕಥಾ ? ಹೇ ಸೌಮ್ಯ, ಕ್ಷಾಮ್ಯ ತೇ ನಮಃ, ನಮಃ ಇತಿ ಬ್ರುವಂತಃ ತೇ ತಂ ನೇಮುಃ ಕಿಲ ।

**ಅನ್ವಯಾರ್ಥ—**

**ಹೇ ಸಕಲಜ್ಞ** = ಎಲೈ ಪೂರ್ಣಪ್ರಜ್ಞಾಚಾರ್ಯರೇ,
**ತೇ ಪ್ರತಿಭಾ** = ನಿಮ್ಮ ಬುದ್ಧಿಪ್ರಕಾಶವು
**ದೇವತಾಸು** = ದೇವತೆಗಳಲ್ಲಿಯೂ ಸಹ
**ಅಸುಲಭಾ** = ಹೊಂದಲು ಅಸಾಧ್ಯವಾದದ್ದು.
**ಚಪಲೇಷು** = ಚಂಚಲವಾದ ಮನಸ್ಸುಳ್ಳ
**ಮಾನುಷೇಷು** = ಮನುಷ್ಯರಲ್ಲಿ
**ಕಾ ಕಥಾ** = ಏನು ಹೇಳಬೇಕು ?
**ಹೇ ಸೌಮ್ಯ** = ಎಲೈ ಸೌಮ್ಯರೇ !
**ಕ್ಷಾಮ್ಯ** = ನಮ್ಮನ್ನು ಕ್ಷಮಿಸಿರಿ,
**ತೇ ನಮಃ** = ನಿಮಗೆ ನಮಸ್ಕಾರವು
**ಇತಿ** = ಹೀಗೆಂದು
**ಬ್ರುವಂತಃ ತೇ** = ಹೇಳುತ್ತಿರುವ ಆ ಪಂಡಿತರು
**ತಂ** = ಆ ಪೂರ್ಣಪ್ರಜ್ಞಾಚಾರ್ಯರನ್ನು
**ನೇಮುಃ ಕಿಲ** = ನಮಸ್ಕರಿಸಿದರಷ್ಟೆ !

**ತಾತ್ಪರ್ಯ—** ಪಯಸ್ವಿನೀ ನದೀತೀರದ ಬ್ರಾಹ್ಮಣರೆಲ್ಲರೂ ಒಂದಾಗಿ ಪೂರ್ಣಪ್ರಜ್ಞಾಚಾರ್ಯರಿಗೆ ನಮಸ್ಕರಿಸಿದರು. ಅನಂತರ ಆ ಬ್ರಾಹ್ಮಣರು ಪೂರ್ಣಪ್ರಜ್ಞಾಚಾರ್ಯರನ್ನು ಕುರಿತು, 'ಎಲೈ ಸರ್ವಜ್ಞರೇ ! ನಿಮ್ಮಲ್ಲಿರುವ ಬುದ್ಧಿಶಕ್ತಿಯು ದೇವತೆಗಳಿಂದಲೂ ಕೂಡ ಹೊಂದಲು ಅಸಾಧ್ಯವಾದದ್ದು. ಹೀಗಿದ್ದ ಮೇಲೆ ಚಂಚಲ ಸ್ವಭಾವದ ಮನುಷ್ಯರಲ್ಲಿ ದುರ್ಲಭವೆಂದು ಹೇಳಬೇಕಾದದ್ದೇನಿದೆ ? ನಮ್ಮ ತಪ್ಪನ್ನು ಕ್ಷಮಿಸಿರಿ' ಎಂದು ಹೇಳಿ ನಮಸ್ಕರಿಸಿದರು.

**ವಿಗ್ರಹ—**

**ಸಕಲಜ್ಞಃ—** ಸಕಲಂ ಜಾನಾತಿ ಇತಿ ಸಕಲಜ್ಞಃ ।

**ಕ್ರಿಯಾಪದ—** ಕ್ಷಾಮ್ಯ- ಕ್ಷಮೂಷ್ ಸಹನೇ ಇತ್ಯಸ್ಮಾತ್ ಧಾತೋಃ ಲೋಟ್ ಪರಸ್ಮೈಪದಿನಃ ಮಧ್ಯಮಪುರುಷೇ ಏಕವಚನೇ ''ಕ್ಷಾಮ್ಯ'' ಇತಿ ರೂಪಮ್ ।

ಕ್ಷಾಮ್ಯತು ಕ್ಷಾಮ್ಯತಾತ್, ಕ್ಷಾಮ್ಯತಾಂ ಕ್ಷಾಮ್ಯಂತು, ಕ್ಷಾಮ್ಯ ಕ್ಷಾಮ್ಯತಾತ್, ಕ್ಷಾಮ್ಯತಂ ಕ್ಷಾಮ್ಯತ,
ಕ್ಷಾಮ್ಯಾನಿ ಕ್ಷಾಮ್ಯಾವ ಕ್ಷಾಮ್ಯಾಮ ॥

★ ★ ★

**ಆಚಾರ್ಯರಿಂದ ದಾನಸೂಕ್ತಾರ್ಥ ಕಥನ**
**ಕೇರಳ ಪಂಡಿತರ ಶರಣಾಗತಿ**

**ವೇದಶಾಸ್ತ್ರಚತುರೈರಿಹವಿದ್ಯಾವಿತ್ತಲಿಪ್ಸುಭಿರವಾಪ್ತಮಶೇಷೈಃ ।**
**ಪ್ರಾಪ ಕೇರಲಸುಮಂಡಲಜಾತೈರನ್ಯದಾಯತನಮಾಯತಚೇತಾಃ ॥ 11 ॥**

**ಪದಚ್ಛೇದ—** ವೇದಶಾಸ್ತ್ರಚತುರೈಃ, ಇಹ, ವಿದ್ಯಾವಿತ್ತಲಿಪ್ಸುಭಿಃ, ಅವಾಪ್ತಂ, ಅಶೇಷೈಃ, ಪ್ರಾಪ, ಕೇರಲಸುಮಂಡಲ-ಜಾತೈಃ, ಅನ್ಯತ್, ಆಯತನಂ, ಆಯತಚೇತಾಃ ।

**ಅನ್ವಯ—** ಆಯತಚೇತಾಃ, ವೇದಶಾಸ್ತ್ರಚತುರೈಃ, ವಿದ್ಯಾವಿತ್ತಲಿಪ್ಸುಭಿಃ, ಅಶೇಷೈಃ ಕೇರಲಸುಮಂಡಲಜಾತೈಃ ಅವಾಪ್ತಂ, ಇಹ ಅನ್ಯತ್ ಆಯತನಂ ಪ್ರಾಪ ।

**ಅನ್ವಯಾರ್ಥ—**

**ಆಯತಚೇತಾಃ** = ವಿಸ್ತಾರವಾದ ಮನಸ್ಸುಳ್ಳಂತಹ ಶ್ರೀ ಮಧ್ವಾಚಾರ್ಯರು,
**ವೇದಶಾಸ್ತ್ರಚತುರೈಃ** = ವೇದಶಾಸ್ತ್ರಗಳಲ್ಲಿ ನಿಪುಣರಾದ
**ವಿದ್ಯಾವಿತ್ತಲಿಪ್ಸುಭಿಃ** = ವಿದ್ಯಾಭ್ಯಾಸದಿಂದ ಹಣವನ್ನು ಹೊಂದಲು ಇಚ್ಛೆಯುಳ್ಳ
**ಅಶೇಷೈಃ** = ಎಲ್ಲಾ
**ಕೇರಲಸುಮಂಡಲಜಾತೈಃ** = ಕೇರಳ ಎಂಬ ಶೋಭನವಾದ ದೇಶದಲ್ಲಿ ಉತ್ಪನ್ನರಾದ ಬ್ರಾಹ್ಮಣರಿಂದ
**ಅವಾಪ್ತಂ** = ಹೊಂದಲ್ಪಟ್ಟ
**ಇಹ** = ಈ ಪಯಸ್ವಿನೀ ನದೀತೀರದಲ್ಲಿರುವ
**ಅನ್ಯತ್ ಆಯತನಂ** = ಬೇರೆ ದೇವಾಲಯವನ್ನು
**ಪ್ರಾಪ** = ಸೇರಿದರು.

**ತಾತ್ಪರ್ಯ—** ಈ ಮಧ್ವಾಚಾರ್ಯರು ಪಯಸ್ವಿನೀ ನದೀತೀರದಿಂದ ಹೊರಟು ಬೇರೆ ದೇವಾಲಯಕ್ಕೆ ಹೋದರು. ಆ ದೇವಾಲಯದಲ್ಲಿ ಎಲ್ಲಾ ವೇದ ಮತ್ತು ಶಾಸ್ತ್ರಗಳನ್ನು ತಿಳಿದಿರತಕ್ಕ ಮತ್ತು ಕೇರಳದೇಶದಲ್ಲಿ ಹುಟ್ಟಿರತಕ್ಕಂತಹ ಬ್ರಾಹ್ಮಣರು ಹೊಸದಾಗಿ ಬಂದಿರತಕ್ಕ ಮಧ್ವಾಚಾರ್ಯರನ್ನು ನೋಡಿ ವಿದ್ಯೆ ಪರೀಕ್ಷೆ ಮಾಡಬೇಕೆಂದು ಎಲ್ಲಾ ಬ್ರಾಹ್ಮಣರಿಂದಲೂ ಕೂಡಿದವರಾಗಿ ಬಂದರು.

**ವಿಗ್ರಹ—**

**ಆಯತಚೇತಾಃ—** ಆಯತಂ ಚೇತಾಃ ಯಸ್ಯ ಸಃ ಆಯತಚೇತಾಃ ।
**ವೇದಶಾಸ್ತ್ರಚತುರೈಃ—** ವೇದಾಶ್ಚ ಶಾಸ್ತ್ರಾಣಿ ಚ ವೇದಶಾಸ್ತ್ರಾಣಿ, ವೇದಶಾಸ್ತ್ರೇಷು ಚತುರಾಃ ವೇದ-ಶಾಸ್ತ್ರಚತುರಾಃ, ತೈಃ ವೇದಶಾಸ್ತ್ರಚತುರೈಃ ।

**ಕ್ರಿಯಾಪದ—** ಪ್ರ ಇತ್ಯುಪಸರ್ಗಪೂರ್ವಕಾತ್ ಆಪ್ಲೃ ವ್ಯಾಪ್ತೌ ಇತ್ಯಸ್ಮಾತ್ ಧಾತೋಃ ಲಿಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಪ್ರಾಪ ಇತಿ ರೂಪಮ್ ।

ಪ್ರಾಪ ಪ್ರಾಪತುಃ ಪ್ರಾಪುಃ, ಪ್ರಾಪಿಥ ಪ್ರಾಪಥುಃ ಪ್ರಾಪ, ಪ್ರಾಪ ಪ್ರಾಪಿವ ಪ್ರಾಪಿಮ ॥

★ ★ ★

### ಆಚಾರ್ಯರ ಪಾಂಡಿತ್ಯ - ಕಳವಳಗೊಂಡ ಪಂಡಿತರು

**ತರ್ಕತಂತ್ರಕುಶಲಾನಪಿ ಪುಂಸಶ್ಚರ್ಕರೀತಿ ಬತ ಸೋಽಯಮಮಾನಾನ್ ।**
**ಮಾನಮಾನಮಯತೀಹ ಕಥಂ ನೋ ನೈಷ ಮಂಡಲಭುವಾಂ ಸಮಿತಾನಾಮ್॥ 12 ॥**

**ಪದಚ್ಛೇದ—** ತರ್ಕತಂತ್ರಕುಶಲಾನ್, ಅಪಿ, ಪುಂಸಃ, ಚರ್ಕರೀತಿ, ಬತ, ಸಃ, ಅಯಂ, ಅಮಾನಾನ್, ಮಾನಂ, ಆನಮಯತಿ, ಇಹ, ಕಥಂ, ನಃ ನ, ಏಷಃ, ಮಂಡಲಭುವಾಂ, ಸಮಿತಾನಾಂ ।

**ಅನ್ವಯ—** ಸಃ, ಅಯಂ, ತರ್ಕತಂತ್ರಕುಶಲಾನ್ ಪುಂಸಃ ಅಪಿ ಅಮಾನಾನ್ ಚರ್ಕರೀತಿ, ಬತ ಏಷಃ ಇಹ ಸಮಿತಾನಾಂ ಮಂಡಲಭುವಾಂ ನಃ ಮಾನಂ ಕಥಂ ನ ಆನಮಯತಿ ।

**ಅನ್ವಯಾರ್ಥ—**

**ಸಃ ಅಯಂ** = ಜಗತ್ಪ್ರಸಿದ್ಧರಾದ ಈ ಮಧ್ವಾಚಾರ್ಯರು
**ತರ್ಕತಂತ್ರಕುಶಲಾನ್** = ಬ್ರಹ್ಮಮೀಮಾಂಸಾ ಮೊದಲಾದ ಶಾಸ್ತ್ರಗಳಲ್ಲಿ ಸಮರ್ಥರಾದ
**ಪುಂಸಃ** = ಪುರುಷರನ್ನೂ
**ಅಮಾನಾನ್** = ಅಹಂಕಾರರಹಿತರನ್ನಾಗಿ
**ಚರ್ಕರೀತಿ** = ಮಾಡುತ್ತಾರೆ.
**ಬತ** = ಅಯ್ಯೋ !
**ಏಷಃ** = ಈ ಮಧ್ವಾಚಾರ್ಯರು
**ಇಹ** = ಈ ದೇವಾಲಯದಲ್ಲಿ
**ಸಮಿತಾನಾಂ** = ಸೇರಿರುವ
**ಮಂಡಲಭುವಾಂ** = ಕೇರಲದೇಶದಲ್ಲಿ ಹುಟ್ಟಿರುವ
**ನಃ** = ನಮಗೆ
**ಮಾನಂ** = ಅಹಂಕಾರವನ್ನು
**ಕಥಂ** = ಹೇಗೆ
**ನ ಆನಮಯತಿ** = ಖಂಡಿಸುವುದಿಲ್ಲ ?

**ತಾತ್ಪರ್ಯ—** ಈ ಮಧ್ವಾಚಾರ್ಯರು ತರ್ಕಶಾಸ್ತ್ರದಲ್ಲಿಯೂ, ವೇದಾಂತಶಾಸ್ತ್ರದಲ್ಲಿಯೂ ಪಂಡಿತರಾದ ಜನರ ಅಹಂಕಾರವನ್ನು ಬಹಳ ಬೇಗನೆ ಖಂಡಿಸುತ್ತಾರೆ. ಅಯ್ಯೋ ! ಹೀಗಿದ್ದ ಮೇಲೆ ಈ ದೇವಾಲಯದಲ್ಲಿ ಕೂಡಿರುವ ಕೇರಳ ದೇಶದಲ್ಲಿ ಹುಟ್ಟಿರುವ ವಿದ್ವಾಂಸರೆಂದು ಪ್ರಖ್ಯಾತರಾಗಿರುವ ನಮ್ಮ ಅಹಂಕಾರವನ್ನು ಖಂಡಿಸದೆ ಬಿಡುತ್ತಾರೆಯೇ ? ಎಂದು ಆ ಪಂಡಿತರು ಆಲೋಚಿಸಿದರು.

**ವಿಗ್ರಹ—**

**ತರ್ಕತಂತ್ರಕುಶಲಾನ್—** ತರ್ಕಂ ಚ ತಂತ್ರಂ ಚ ತರ್ಕತಂತ್ರೇ, ತರ್ಕತಂತ್ರಯೋಃ ಕುಶಲಾನ್ ತರ್ಕತಂತ್ರಕುಶಲಾನ್ ।

**ಅಮಾನಾನ್—** ಅವಿದ್ಯತೇ ಮಾನಃ ಯೇಷಾಂ ತೇ ಅಮಾನಾಃ, ತಾನ್ ಅಮಾನಾನ್ ।

**ಮಂಡಲಭುವಾಂ—** ಮಂಡಲೇ ಭುವಃ ತೇಷಾಂ ಮಂಡಲಭುವಃ ಮಂಡಲಭುವಾಂ ।

**ಕ್ರಿಯಾಪದ— ಚರ್ಕರೀತಿ-** ಡುಕೃಞ್‌ಕರಣೇ ಇತ್ಯಸ್ಮಾತ್ ಧಾತೋಃ ಯಙ್‌ಲುಗಂತಾತ್ ಲಟ್ ಪರಸ್ಮೈ ಪದಿನಃ ಪ್ರಥಮಪುರುಷೇ ಏಕವಚನೇ ''ಚರ್ಕರೀತಿ'' ಇತಿ ರೂಪಮ್ ।

ಚರ್ಕರೀತಿ ಚರ್ಕೃತಃ ಚರ್ಕರತಿ, ಚರ್ಕರೀಷಿ ಚರ್ಕೃಥಃ ಚರ್ಕೃಥ, ಚರ್ಕರೀಮಿ ಚರ್ಕೃವ ಚರ್ಕೃಮ ॥

★ ★ ★

### ದಾನಸೂಕ್ತಾರ್ಥವನ್ನು ವಿವರಿಸಲು ಪ್ರಾರ್ಥನೆ

## ಮಂತ್ರಯಂತ ಇತಿ ತೇ ದ್ವಿಜವರ್ಯಾಃ ಅನ್ಯದೇಶಜಮುಖಾಸ್ತಮಪೃಚ್ಛನ್ ।
## ಸದ್ದದಾದದಸುಶಂಸನನಿಂದಾಕಾರಿಸೂಕ್ತಗತಮರ್ಥಮುಪೇತ್ಯ ॥ 13 ॥

**ಪದಚ್ಛೇದ—** ಮಂತ್ರಯಂತ, ಇತಿ, ತೇ, ದ್ವಿಜವರ್ಯಾಃ, ಅನ್ಯದೇಶಜಮುಖಾಃ, ತಂ, ಅಪೃಚ್ಛನ್, ಸದ್ದದಾದ-ದಸುಶಂಸನನಿಂದಾಕಾರಿ ಸೂಕ್ತಗತಂ ಅರ್ಥಂ, ಉಪೇತ್ಯ ।

**ಅನ್ವಯ—** ಇತಿ ಮಂತ್ರಯಂತಃ ದ್ವಿಜವರ್ಯಾಃ, ಅನ್ಯದೇಶಜಮುಖಾಃ ತಂ ಉಪೇತ್ಯ, ಸದ್ದದಾದದಸುಶಂಸನ-ನಿಂದಾಕಾರಿಸೂಕ್ತಗತಂ ಅರ್ಥಂ ಅಪೃಚ್ಛನ್ ।

**ಅನ್ವಯಾರ್ಥ—**

**ಇತಿ ಮಂತ್ರಯಂತಃ** = ಹೀಗೆ ಆಲೋಚಿಸುತ್ತಿದ್ದ
**ದ್ವಿಜವರ್ಯಾಃ** = ಬ್ರಾಹ್ಮಣಶ್ರೇಷ್ಠರು
**ಅನ್ಯದೇಶಜಮುಖಾಃ** = ಬೇರೆದೇಶದಲ್ಲಿ ಹುಟ್ಟಿದ
**ತಂ** = ಆ ಮಧ್ವಾಚಾರ್ಯರನ್ನು
**ಉಪೇತ್ಯ** = ಸಮೀಪಿಸಿ
**ಸದ್ದದಾದದಸುಶಂಸನನಿಂದಾಕಾರಿಸೂಕ್ತಗತಂ** = ಸಜ್ಜನರಿಗೆ ದಾನ ಮಾಡುವವನ, ದಾನ ಕೊಡದಿರುವವನ ಚೆನ್ನಾಗಿರುವ ಹೊಗಳಿಕೆ ಮತ್ತು ನಿಂದೆಗಳನ್ನು ಮಾಡುವ ಸೂಕ್ತದಲ್ಲಿರುವ
**ಅರ್ಥಂ ಅಪೃಚ್ಛನ್** = ಅರ್ಥವನ್ನು ಕೇಳಿದರು.

**ತಾತ್ಪರ್ಯ—** ಹೀಗೆ ಆಲೋಚಿಸುತ್ತಾ ಆ ಕೇರಳದೇಶದ ಪಂಡಿತರು ಬೇರೆ ದೇಶದ ಪಂಡಿತನನ್ನು ಮುಂದಿಟ್ಟುಕೊಂಡು ಶ್ರೀಮಧ್ವಾಚಾರ್ಯರನ್ನು ಸಮೀಪಿಸಿ ಸಜ್ಜನರಿಗೆ ದಾನಮಾಡಿದವನನ್ನು ಹೊಗಳತಕ್ಕ ಮತ್ತು ದಾನಮಾಡದೇ ಇದ್ದವನನ್ನು ನಿಂದಿಸತಕ್ಕ ವೇದಸೂಕ್ತದ ಅರ್ಥವನ್ನು ಪ್ರಶ್ನಿಸಿದರು. ತಾವೇ ಪ್ರಶ್ನೆ ಮಾಡಿದರೆ ತಮ್ಮಲ್ಲಿ ಯಾರಾದರೊಬ್ಬರು ಸೋತರೂ ತಮ್ಮ ದೇಶಕ್ಕೆ ಅಪಕೀರ್ತಿ ಬರುವುದೆಂದು ಬೇರೆ ದೇಶದ ಪಂಡಿತರನ್ನು ಮುಂದೆ ಮಾಡಿ ಅವರ ಮೂಲಕ ಪ್ರಶ್ನೆಯನ್ನು ಕೇಳಿಸಿದರು.

**ವಿಗ್ರಹ—**

**ಸದ್ದದಾದದಸುಶಂಸನನಿಂದಾಕಾರಿಸೂಕ್ತಗತಂ—** ದದಾತೀತಿ ದದಃ ದದಶ್ಚಾಸೌ ಅದದಶ್ಚ ದದಾದದೌ, ಸಜ್ಜನೇಭ್ಯಃ ದದಾದದೌ ಸದ್ದದಾದದೌ, ಸುಶಂಸನಂ ಚ ನಿಂದಾ ಚ ಸುಶಂಸನನಿಂದಾ, ಸದ್ದದಾದ-ದಯೋಃ ಸುಶಂಸನನಿಂದೇ ಸದ್ದದಾದದಸುಶಂಸನನಿಂದೇ, ಸದ್ದದಾದದಸುಶಂಸನನಿಂದೇ ಕರೋತೀತಿ ಸದ್ದದಾದದಸುಶಂಸನನಿಂದಾಕಾರೀ, ಸದ್ದದಾದದಸುಶಂಸನನಿಂದಾಕಾರೀ ಚ ತತ್ ಸೂಕ್ತಂ ಚ ಸದ್ದ-ದಾದದಸುಶಂಸನನಿಂದಾಕಾರಿಸೂಕ್ತಂ, ಸದ್ದದಾದದಸುಶಂಸನನಿಂದಾಕಾರಿಸೂಕ್ತಂ ಚ ತತ್ ಗತಂ ಚ ಸದ್ದದಾದದಸುಶಂಸನನಿದಾಕಾರಿಸೂಕ್ತಗತಂ ।

**ಅನ್ಯದೇಶಜಮುಖಾಃ—** ಅನ್ಯಶ್ಚಾಸೌ ದೇಶಶ್ಚ ಅನ್ಯದೇಶಃ, ಅನ್ಯದೇಶೇ ಜಾಯತೇತಿ ಅನ್ಯದೇಶಜಃ, ಅನ್ಯದೇಶಜ ಏವ ಮುಖಂ ಯೇಷಾಂ ತೇ ಅನ್ಯದೇಶಜಮುಖಾಃ ।

**ದ್ವಿಜವರ್ಯಾಃ—** ದ್ವಿಜೇಷು ವರ್ಯಾಃ ದ್ವಿಜವರ್ಯಾಃ ।

**ಕ್ರಿಯಾಪದ— ಅಪೃಚ್ಛನ್-** ಪ್ರಚ್ಛ ಜ್ಞೀಪ್ಸಾಯಾ ಇತಿ ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಅಪೃಚ್ಛನ್ ಇತಿ ರೂಪಮ್ ।

ಅಪೃಚ್ಛತ್ ಅಪೃಚ್ಛತಾಂ ಅಪೃಚ್ಛನ್, ಅಪೃಚ್ಛಃ ಅಪೃಚ್ಛತಂ ಅಪೃಚ್ಛತ, ಅಪೃಚ್ಛಂ ಅಪೃಚ್ಛಾವ ಅಪೃಚ್ಛಾಮ ॥

★ ★ ★

ಪ್ರಣೇಯಾತ್ ಪದದ ಜಿಜ್ಞಾಸೆ

**ತಂ ಸ್ಫುಟಂ ಪ್ರಕಟಯನ್ ಸ ಪೃಣೇಯಾ**
**-ಚ್ಛಬ್ದಮೂಲಮವದತ್ ಪೃಣಧಾತುಮ್ ।**
**ತಂ ಜಿಗೀಷುಮಥ ವಿಪ್ರಮದಃ ಪ್ರೀಙ್**
**ಧಾತುಮೇಷನಿಗದಂತಮುವಾಚ ॥ 14 ॥**

**ಪದಚ್ಛೇದ—** ತಂ, ಸ್ಫುಟಂ, ಪ್ರಕಟಯನ್, ಸ, ಪೃಣೇಯಾಚ್ಛಬ್ದಮೂಲಂ, ಅವದತ್, ಪೃಣಧಾತುಂ, ತಂ, ಜಿಗೀಷುಂ, ಅಥ, ವಿಪ್ರಂ, ಅದಃ, ಪ್ರೀಙ್‌ಧಾತುಂ, ಏಷಃ, ನಿಗದಂತಂ, ಉವಾಚ ।

**ಅನ್ವಯ—** ತಂ ಸ್ಫುಟಂ ಪ್ರಕಟಯನ್, ಸಃ ಪೃಣೇಯಾಚ್ಛಬ್ದಮೂಲಂ ಪೃಣಧಾತುಂ ಅವದತ್, ಅಥ ಏಷಃ ಜಿಗೀಷುಂ, ಅದಃ ಪ್ರೀಙ್‌ಧಾತುಂ ನಿಗದಂತಂ ತಂ ವಿಪ್ರಂ ಉವಾಚ ।

**ಅನ್ವಯಾರ್ಥ—**

**ತಂ** = ಪ್ರಸ್ತುತದಲ್ಲಿರತಕ್ಕ ಸೂಕ್ತದ ಅರ್ಥವನ್ನು
**ಸ್ಫುಟಂ** = ಸ್ಪಷ್ಟವಾಗಿ
**ಪ್ರಕಟಯನ್** = ಹೇಳುತ್ತಿರುವ
**ಸಃ** = ಆ ಮಧ್ವಾಚಾರ್ಯರು
**ಪೃಣೇಯಾಚ್ಛಬ್ದಮೂಲಂ** = 'ಪೃಣೇಯಾತ್' ಎಂಬ ಶಬ್ದ ಸ್ವರೂಪವನ್ನು
**ಪೃಣಧಾತುಂ** = ಪೃಣ ದಾನೇ ಎಂಬ ಹೆಸರುಳ್ಳ ಧಾತುವನ್ನಾಗಿ, **ಅವದತ್** = ಹೇಳಿದರು,
**ಅಥ** = ಅನಂತರದಲ್ಲಿ
**ಏಷಃ** = ಈ ಮಧ್ವಾಚಾರ್ಯರು
**ಜಿಗೀಷುಂ** = ತಮ್ಮನ್ನು ಜಯಿಸಲು ಇಚ್ಛಿಸುವ
**ಅದಃ** = 'ಪೃಣೇಯಾತ್' ಎಂಬ ಶಬ್ದದ ಸ್ವರೂಪವನ್ನು
**ಪ್ರೀಙ್‌ಧಾತುಂ** = ಪ್ರೀಙ್‌ಪ್ರೀಣನೇ ಎಂಬ ಧಾತುವನ್ನಾಗಿ
**ನಿಗದಂತಂ** = ಹೇಳುತ್ತಿರುವ
**ತಂ ವಿಪ್ರಂ** = ಆ ಬ್ರಾಹ್ಮಣನನ್ನು ಕುರಿತು
**ಉವಾಚ** = ಹೇಳಿದರು.

**ತಾತ್ಪರ್ಯ—** ಶ್ರೀ ಮಧ್ವಾಚಾರ್ಯರು 'ನ ವಾ ಉ ದೇವಾಃ' ಎಂಬ ಸೂಕ್ತದ ಅರ್ಥವನ್ನು ಹೇಳುತ್ತಿರುವ ಸಮಯದಲ್ಲಿ ಆ ಸೂಕ್ತದಲ್ಲಿರತಕ್ಕ 'ಪೃಣೇಯಾತ್' ಎಂಬ ಪದಕ್ಕೆ 'ಪೃಣದಾನೇ' ಎಂಬ ದಾನಾರ್ಥಕವಾಗಿರತಕ್ಕಂತಹ ಪೃಣಧಾತುವು ಮೂಲವಾಗಿದೆ. ಎಂದು ಹೇಳಿದರು. ಆಗ ಆ ಪಂಡಿತನು ಶ್ರೀಮಧ್ವಾಚಾರ್ಯರನ್ನು ಜಯಿಸುವ ಇಚ್ಛೆಯಿಂದ 'ಪೃಣೇಯಾತ್' ಎಂಬ ಶಬ್ದಕ್ಕೆ ಮೂಲ ಧಾತುವು 'ಪ್ರೀಙ್‌ಪ್ರೀಣನೇ' ಪ್ರೀತಿ ಎಂಬ ಅರ್ಥದಲ್ಲಿರುವ 'ಪ್ರೀ' ಧಾತುವಿನ ರೂಪವು ಎಂದು ಹೇಳಿದನು. ಆ ಬ್ರಾಹ್ಮಣನನ್ನು ಕುರಿತು ಮಧ್ವಾಚಾರ್ಯರು ಹೀಗೆ ಹೇಳಿದರು.

**ವಿಗ್ರಹ—**

**ಪೃಣೇಯಾಚ್ಛಬ್ದಮೂಲಂ—** ಪೃಣೇಯಾಚ್ಛಬ್ದಸ್ಯ ಮೂಲಂ ಪೃಣೇಯಾಚ್ಛಬ್ದಮೂಲಂ ।
**ಜಿಗೀಷುಂ—** ಜೇತುಂ ಇಚ್ಛುಃ ಜಿಗೀಷುಃ, ತಂ ಜಿಗೀಷುಂ ।

**ಕ್ರಿಯಾಪದ—** **ಉವಾಚ-** ಬ್ರೂಞ್ ವ್ಯಕ್ತಾಯಾಂ ವಾಚಿ ಇತ್ಯಸ್ಮಾದ್ಧಾತೋಃ ಲಿಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಉವಾಚ'' ಇತಿ ರೂಪಮ್ ।

ಉವಾಚ ಊಚತುಃ ಊಚುಃ, ಉವಚಿಥ ಉವಕ್ಥ ಊಚಥುಃ ಊಚ, ಉವಾಚ ಉವಚ ಊಚಿವ ಊಚಿಮ ॥

**ಅವದತ್-** ವದ ವ್ಯಕ್ತಾಯಾಂ ವಾಚಿ ಇತಿ ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಅವದತ್'' ಇತಿ ರೂಪಮ್ ।

ಅವದತಃ ಅವದತಾಂ ಅವಹನ, ಅವದಃ ಅವದತಂ ಅವದತ, ಅವದಂ ಅವದಾನ ಅವದಾಮ॥

★ ★ ★

ಆಚಾರ್ಯರಿಂದ ವಿವರಣೆ - ಪಂಡಿತರ ನಿರುತ್ತರ

**ಪ್ರಾದಿಭೇದಮವಿದನ್ ಗುಣಯ ತ್ವಂ ಮೂಢ ಪಾಂಸುಷು ಲಿಖನ್ ಲಿಪಿಸಂಘಮ್ ।**
**ಭರ್ತ್ಸಯನ್ನಿತಿ ಜಹಾಸ ಸುಹಾಸೋ ಮತ್ಸರಾಕುಲಧಿಯೋ ಜಡಯನ್ ಸಃ ॥ 15 ॥**

**ಪದಚ್ಛೇದ—** ಪ್ರಾದಿಭೇದಂ, ಅವಿದನ್, ಗುಣಯ, ತ್ವಂ, ಮೂಢ, ಪಾಂಸುಷು, ಲಿಖನ್, ಲಿಪಿಸಂಘಂ, ಭರ್ತ್ಸಯನ್, ಇತಿ, ಜಹಾಸ, ಸುಹಾಸಃ, ಮತ್ಸರಾಕುಲಧಿಯಃ, ಜಡಯನ್, ಸಃ ।

**ಅನ್ವಯ—** ಪ್ರಾದಿಭೇದಂ ಅವಿದನ್, ಹೇ ಮೂಢ ! ತ್ವಂ ಪಾಂಸುಷು ಲಿಪಿಸಂಘಂ ಲಿಖನ್ ಗುಣಯ, ಇತಿ ಭರ್ತ್ಸಯನ್ ಸುಹಾಸಃ ಸಃ, ಮತ್ಸರಾಕುಲಧಿಯಃ ಜಡಯನ್ ಜಹಾಸ ।

**ಅನ್ವಯಾರ್ಥ—**

**ಹೇ ಮೂಢ !** = ಎಲೈ ಮೂಢನೇ !
**ಪ್ರಾದಿಭೇದಂ** = ಪ್ರ ಎಂಬಲ್ಲಿರತಕ್ಕ ಆದಿಯಲ್ಲಿರತಕ್ಕ ಪೃವರ್ಣ ಎಂಬುದಾಗಿ
**ಅವಿದನ್** = ತಿಳಿಯದಿರುವ
**ತ್ವಂ** = ನೀನು
**ಪಾಂಸುಷು** = ಧೂಳುಗಳಲ್ಲಿ (ಮರಳಿನಲ್ಲಿ)
**ಲಿಪಿಸಂಘಂ** = ಅಕ್ಷರಗಳ ಸಮೂಹವನ್ನು
**ಲಿಖನ್** = ಬರೆಯುತ್ತ
**ಗುಣಯ** = ಅಭ್ಯಾಸ ಮಾಡು
**ಇತಿ** = ಈ ರೀತಿಯಾಗಿ ಹೇಳಿ
**ಭರ್ತ್ಸಯನ್** = ಧಿಕ್ಕಾರ ಮಾಡುತ್ತಿರುವ
**ಸುಹಾಸಃ** = ಒಳ್ಳೆಯ ಮಂದಹಾಸವುಳ್ಳ
**ಸಃ** = ಆ ಮಧ್ವಾಚಾರ್ಯರು
**ಮತ್ಸರಾಕುಲಧಿಯಃ** = ಅಸೂಯೆಯಿಂದ ಕೂಡಿರತಕ್ಕಂತಹ ಬುದ್ಧಿಯುಳ್ಳ ಬ್ರಾಹ್ಮಣರನ್ನು
**ಜಡಯನ್** = ಸ್ತಬ್ಧರನ್ನಾಗಿ ಮಾಡುತ್ತಾ
**ಜಹಾಸ** = ಮಂದಹಾಸ ಮಾಡಿದರು.

**ತಾತ್ಪರ್ಯ—** ಪೃಣೇಯಾತ್ ಎಂಬ ಪದಕ್ಕೆ ಮೂಲವು ಪ್ರೀಙ್‌ಪ್ರೀಣನ ಈ ರೀತಿಯಾಗಿ ಹೇಳಿದ ಬ್ರಾಹ್ಮಣರನ್ನು ಕುರಿತು ಪೃಪ್ರೀವರ್ಣಗಳು, ಪ್ರಾದಿಗಳಿಗೆ ಪೃಪ್ರೀವರ್ಣ ಎಂಬುದಾಗಿ ಅರ್ಥ. ಪೃಪ್ರೀ ವರ್ಣಗಳಿಗೆ ಭೇದವನ್ನು ತಿಳಿದಿರುವ

ನೀನು ಭೂಮಿಯಿಂದ ಧೂಳನ್ನು ಎರಚಿ ಬೆರಳಿನಿಂದ ಉಗುರಿನ ಸಂಬಂಧವನ್ನು ಮಾಡಿದಾಗ ಇದು ರೇಖಾವಿಶೇಷ ಪ್ರವರ್ಣ, ಅದು ಪ್ರೀವರ್ಣ, ಇದನ್ನು ಪ್ರಿವರ್ಣವೆಂದರೆ ಮತ್ತೆ ಮತ್ತೆ ಅಭ್ಯಾಸವನ್ನು ಮಾಡು ಎಂದು ಮಧ್ವಾಚಾರ್ಯರು ಹೇಳಿದರು. ಈ ರೀತಿಯಾಗಿ ಮಧ್ವಾಚಾರ್ಯರು ಬ್ರಾಹ್ಮಣರ ಪ್ರಶ್ನೆಗೆ ಉತ್ತರವನ್ನು ಹೇಳಿ ಮಂದಹಾಸವನ್ನು ಮಾಡಿದರು.

**ವಿಗ್ರಹ—**

**ಲಿಪಿಸಂಘಂ—** ಲಿಪೀನಾಂ ಸಂಘಂ ಲಿಪಿಸಂಘಂ ।

**ಸುಹಾಸಃ—** ಶೋಭನಃ ಹಾಸಃ ಯಸ್ಯ ಸಃ ಸುಹಾಸಃ ।

**ಮತ್ಸರಾಕುಲಧಿಯಃ—** ಮತ್ಸರೇಣ ಆಕುಲಾಃ ಧೀಃ ಯೇಷಾಂ ತೇ ಮತ್ಸರಾಕುಲಧೀಃ, ತಾನ್ ಮತ್ಸರಾ-ಕುಲಧಿಯಃ ।

**ಕ್ರಿಯಾಪದ—** ಹಸ್ ಹಸನೇ ಇತ್ಯಸ್ಮಾದ್ಧಾತೋಃ ಲಿಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಜಹಾಸ ಇತಿ ರೂಪಮ್ ।

ಜಹಾಸ ಜಹಸತುಃ ಜಹಸುಃ, ಜಹಾಸಿಥ ಜಹಾಸಥುಃ ಜಹಾಸ, ಜಹಾಸ, ಜಹಸ ಜಹಾಸಿವ ಜಹಾಸಿಮ ॥

★ ★ ★

ಪೂರ್ಣಪ್ರಜ್ಞರ ಸರ್ವಜ್ಞತ್ವ

**ತತ್ಪ್ರಸಂಗಬಲತೋಽಖಿಲವಿದ್ಯಾಪಾಟವಂ ಪೃಥುಹೃದಃ ಪ್ರತಿಬುಧ್ಯ ।**
**ಆನಮನ್ ಸಬಹುಮಾನಮಮೀ ತಂ ಯಂ ನಮಂತಿ ಕಿಲ ನಾಕಿನಿಕಾಯಾಃ ॥ 16 ॥**

**ಪದಚ್ಛೇದ—** ತತ್ಪ್ರಸಂಗಬಲತಃ, ಅಖಿಲವಿದ್ಯಾಪಾಟವಂ, ಪೃಥುಹೃದಃ, ಪ್ರತಿಬುಧ್ಯ, ಆನಮನ್, ಸಬಹುಮಾನಂ, ಅಮೀ, ತಂ, ಯಂ, ನಮಂತಿ, ಕಿಲ, ನಾಕಿನಿಕಾಯಾಃ ।

**ಅನ್ವಯ—** ಅಮೀ ತತ್ಪ್ರಸಂಗಬಲತಃ, ಪೃಥುಹೃದಃ ಅಖಿಲವಿದ್ಯಾಪಾಟವಂ ಪ್ರತಿಬುದ್ಧ್ಯ, ನಾಕಿನಿಕಾಯಾಃ ಯಂ ನಮಂತಿ, ತಂ ಸಬಹುಮಾನಂ ಆನಮನ್ ಕಿಲ ।

**ಅನ್ವಯಾರ್ಥ—**

**ಅಮೀ** = ಈ ಬ್ರಾಹ್ಮಣರು

**ತತ್ಪ್ರಸಂಗಬಲತಃ** = ಆ ಯಾವ ಸೂಕ್ತಾರ್ಥವನ್ನು ಹೇಳುವ ಸಂದರ್ಭಬಲದಿಂದ

**ಪೃಥುಹೃದಃ** = ಸಂತೋಷಗೊಂಡ ಮನಸ್ಸುಳ್ಳ ಮಧ್ವಾಚಾರ್ಯರ

**ಅಖಿಲವಿದ್ಯಾಪಾಟವಂ** = ಎಲ್ಲಾ ವಿದ್ಯೆಗಳಲ್ಲಿನ ದಕ್ಷತ್ವವನ್ನು

**ಪ್ರತಿಬುದ್ಧ್ಯ** = ತಿಳಿದು

**ನಾಕಿನಿಕಾಯಾಃ** = ದೇವತೆಗಳ ಸಮೂಹವು

**ಯಂ** = ಯಾರನ್ನು

**ನಮಂತಿ** = ನಮಸ್ಕರಿಸುತ್ತಾರೋ

**ತಂ** = ಅಂತಹ ಶ್ರೀ ಮಧ್ವಾಚಾರ್ಯರನ್ನು

**ಸಬಹುಮಾನಂ** = ಆದರದಿಂದ ಸಹಿತವಾಗಿ

**ಆನಮನ್ ಕಿಲ** = ನಮಸ್ಕರಿಸಿದರಷ್ಟೇ.

**ತಾತ್ಪರ್ಯ—** ಕೇರಳದ ಆ ಪಂಡಿತಶ್ರೇಷ್ಠರಾದ ಬ್ರಾಹ್ಮಣರು ಆ ಸೂಕ್ತದ ಅರ್ಥವನ್ನು ಹೇಳುವ ಸಂದರ್ಭದಲ್ಲಿ ಮಧ್ವಾಚಾರ್ಯರ ಸರ್ವವಿದ್ಯಾ ಪ್ರಾವೀಣ್ಯವನ್ನು ತಿಳಿದು ಬಹಳ ಗೌರವದಿಂದ ಅವರಿಗೆ ನಮಸ್ಕಾರ ಮಾಡಿದರು. ಸರ್ವಜ್ಞರಾದ ಮಧ್ವಾಚಾರ್ಯರು ರುದ್ರಾದಿ ದೇವತೆಗಳಿಂದಲೂ ನಮಸ್ಕರಿಸಿಕೊಳ್ಳಲ್ಪಟ್ಟವರು. ಅಂತಹ ಮಧ್ವಾಚಾರ್ಯ-ರಿಗೆ ಸಾಮಾನ್ಯ ಮಾನವರು ನಮಸ್ಕರಿಸಿದ್ದು ದೊಡ್ಡ ವಿಷಯವೇನಲ್ಲ.

**ವಿಗ್ರಹ—**

**ತತ್ಪ್ರಸಂಗಬಲಾತ್—** ತಸ್ಯ ಪ್ರಸಂಗಃ ತತ್ಪ್ರಸಂಗಃ, ತತ್ಪ್ರಸಂಗ ಏವ ಬಲಂ ತತ್ಪ್ರಸಂಗಬಲಂ, ತಸ್ಮಾತ್ ತತ್ಪ್ರಸಂಗಬಲಾತ್ ।

**ಪೃಥುಹೃದಃ—** ಪೃಥು ಹೃತ್ ಯಸ್ಯ ಸಃ ಪೃಥುಹೃದಃ ।

**ಅಖಿಲವಿದ್ಯಾಪಾಟವಂ—** ಅಖಿಲಾಶ್ಚ ತಾಃ ವಿದ್ಯಾಶ್ಚ ಅಖಿಲವಿದ್ಯಾಃ, ಅಖಿಲವಿದ್ಯಾಸು ಪಾಟವಂ ಅಖಿಲವಿದ್ಯಾಪಾಟವಂ ।

**ಸಬಹುಮಾನಂ—** ಬಹುಮಾನೇನ ಸಹಿತಂ ಯಥಾ ಭವತಿ ತಥಾ ಸಬಹುಮಾನಂ ।

**ನಾಕಿನಿಕಾಯಾಃ—** ನಾಕಃ ಏಷಾಂ ಅಸ್ತೀತಿ ನಾಕಿನಃ, ನಾಕಿನಾಂ ನಿಕಾಯಾಃ ನಾಕಿನಿಕಾಯಾಃ ।

**ಕ್ರಿಯಾಪದ—** **ಆನಮನ್**- ಆಙ್ ಇತ್ಯುಪಸರ್ಗಪೂರ್ವಕಾತ್ ಣಮು ಪ್ರಹ್ವತ್ವೇ ಶಬ್ದೇ ಚ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷ ಬಹುವಚನೇ ''ಆನಮನ್'' ಇತಿ ರೂಪಮ್ ।

ಆನಮತ್ ಆನಮತಾಂ ಆನಮನ್, ಆನಮಃ ಆನಮತಂ ಆನಮತ, ಆನಮಂ ಆನಮಾವ ಆನಮಾಮ ॥

**ನಮಂತಿ**- ಣಮು ಪ್ರಹ್ವತ್ವೇ ಶಬ್ದೇ ಚ ಇತ್ಯಸ್ಮಾದ್ಧಾತೋಃ ಲಟ್ ಪರಸ್ಮೈಪದಂ ಪ್ರಥಮಪುರುಷೇ ಬಹುವಚನೇ ''ನಮಂತಿ'' ಇತಿ ರೂಪಮ್ ।

ನಮತಿ ನಮತಃ ನಮಂತಿ, ನಮಸಿ ನಮಥಃ ನಮಥ, ನಮಾಮಿ ನಮಾವಃ ನಮಾಮಃ ॥

★ ★ ★

### ಅಪಾಲಾ ಶಬ್ದದ ಅಪೂರ್ವ ಆವಿಷ್ಕಾರ

**ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿವರಸೂಕ್ತಹೃದುಕ್ತೌ ।**
**ಕುತ್ರಚಿತ್ ಸದಸಿ ತಾವದಪಾಲಾ ಕೀರ್ತಿತಾತಿತರುಣೇತ್ಯಯಮೂಚೇ ॥ 17 ॥**

**ಪದಚ್ಛೇದ—** ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿವರಸೂಕ್ತಹೃದುಕ್ತೌ, ಕುತ್ರಚಿತ್, ಸದಸಿ, ತಾವತ್, ಅಪಾಲಾ, ಕೀರ್ತಿತಾ, ಅತಿತರುಣೇ, ಇತಿ, ಅಯಂ, ಊಚೇ ।

**ಅನ್ವಯ—** ಅಯಂ ಕುತ್ರಚಿತ್ ಸದಸಿ ಕನ್ಯಕಾದೃತಸುರೇಂದ್ರವಪುಃ ಶ್ರೀದಾನವಾಚಿವರಸೂಕ್ತಹೃತ್ ಉಕ್ತೌ ತಾವತ್ ಕೀರ್ತಿತಾ ಅಪಾಲಾ ಅತಿತರುಣೇ ಇತಿ ಊಚೇ ।

**ಅನ್ವಯಾರ್ಥ—**

**ಅಯಂ** = ಈ ಮಧ್ವಾಚಾರ್ಯರು

**ಕುತ್ರಚಿತ್ ಸದಸಿ** = ಒಂದಾನೊಂದು ಸಭೆಯಲ್ಲಿ

**ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿವರಸೂಕ್ತಹೃದುಕ್ತೌ** = ಒಬ್ಬಳು ಕನ್ಯೆಯಿಂದ ಸಂತೋಷಗೊಂಡ ದೇವೇಂದ್ರನಿಂದ ಆ ಕನ್ಯೆಯ ಶರೀರಕ್ಕೆ ಕಾಂತಿಪ್ರದಾನವನ್ನು ಮಾಡಲ್ಪಟ್ಟಿದ್ದನ್ನು ಹೇಳುವ ಉತ್ತಮವಾದ ಸೂಕ್ತದ ಅಭಿಪ್ರಾಯವನ್ನು ಹೇಳುವ ಸಮಯದಲ್ಲಿ

**ತಾವತ್** = ಆಗಲೇ (ಅದರಲ್ಲಿ)

**ಕೀರ್ತಿತಾ** = ಹೇಳಲ್ಪಡುತ್ತಿರುವ

**ಅಪಾಲಾ** = ಅಪಾಲಾ ಎಂಬ ಶಬ್ದವಾಚ್ಯೆಯಾದ ಸ್ತ್ರೀ

**ಅತಿತರುಣೀ** = ಅತ್ಯಂತ ಸುಂದರವತಿ

**ಇತಿ** = ಹೀಗೆಂದು

**ಊಚೇ** = ಹೇಳಿದರು.

**ತಾತ್ಪರ್ಯ—** ''ಕನ್ಯಾ ವಾರವಾಯತಿ ಸೋಮಂ'' ಈ ಸೂಕ್ತದಲ್ಲಿ ದೇವೇಂದ್ರನು ಯಾವಳೋ ಒಬ್ಬಳು ಕನ್ಯೆಯಿಂದ ಸಂತೋಷಗೊಂಡವನಾಗಿ ಆ ಕನ್ಯೆಯ ಶರೀರಕ್ಕೆ ಸೂರ್ಯಸದೃಶವಾಗಿರತಕ್ಕಂತಹ ಕಾಂತಿಯನ್ನು ಕೊಟ್ಟನು ಎಂಬುದಾಗಿ ಹೇಳಿದೆ. ಈ ಸೂಕ್ತದ ಅರ್ಥವನ್ನು ಹೇಳುವ ಸಮಯದಲ್ಲಿ ಇದೇ ಸೂಕ್ತದಲ್ಲಿ ''ಅಪಾಲಾಂ ಇಂದ್ರತ್ರಿಷೂತ್ವ್ಯಕೃಣೋಃ ಸೂರ್ಯತ್ವಚಂ'' ಎಂಬುದಾಗಿ ಹೇಳಿದೆ. ಆ ಯಾವ 'ಅಪಾಲಾಂ' ಎಂಬ ಸೂಕ್ತಕ್ಕೆ ನೂತನ ತರುಣೀ ಸ್ತ್ರೀ ಎಂಬುದಾಗಿ ಪೂರ್ಣಪ್ರಜ್ಞಾಚಾರ್ಯರು ಅರ್ಥವನ್ನು ಹೇಳಿದರು.

**ವಿಗ್ರಹ—**

**ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿವರಸೂಕ್ತಹೃದುಕ್ತೌ—** ಕನ್ಯಕಯಾ ಆದೃತಃ ಕನ್ಯಕಾದೃತಃ, ಕನ್ಯಕಾದೃತಶ್ಚಾಸೌ ಸುರೇಂದ್ರಶ್ಚ ಕನ್ಯಕಾದೃತಸುರೇಂದ್ರಃ, ವಪುಷಃ ಶ್ರೀಃ ವಪುಃಶ್ರೀಃ, ವಪುಃಶ್ರಿಯಃ ದಾನಂ ವಪುಃಶ್ರೀದಾನಂ, ಕನ್ಯಕಾದೃತಸುರೇಂದ್ರೇಣ ವಪುಃಶ್ರೀದಾನಂ ಕನ್ಯಕಾದೃತಸುರೇಂದ್ರವಪುಃಶ್ರೀದಾನಂ, ಕನ್ಯಕಾದೃತಸುರೇಂದ್ರವಪುಃ- ಶ್ರೀದಾನಂ ವಕ್ತೀತಿ ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿ, ತಾದೃಶಂ ವರಂ ಚ ಸೂಕ್ತಂ ಚ ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿವರಸೂಕ್ತಂ, ತಸ್ಯ ಹೃತ್ ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿವರಸೂಕ್ತಹೃದಃ ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿವರಸೂಕ್ತಹೃದಃ ಉಕ್ತಿಃ ಕನ್ಯಕಾದೃತಸುರೇಂದ್ರವಪುಃಶ್ರೀದಾನವಾಚಿವರಸೂಕ್ತಹೃದುಕ್ತಿಃ, ತಸ್ಯಾಂ ಕನ್ಯಕಾದೃತಸುರೇಂದ್ರವಪುಃ ಶ್ರೀದಾನವಾಚಿವರಸೂಕ್ತಹೃದುಕ್ತೌ ।

**ಕ್ರಿಯಾಪದ—** ಊಚೇ- ವಚಪರಿಭಾಷಣೇ ಇತ್ಯಸ್ಮಾದ್ಧಾತೋಃ ಲಿಟ್ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ ''ಊಚೇ'' ಇತಿ ರೂಪಮ್ ।

ಊಚೇ ಊಚಾತೇ ಊಚಿರೇ, ಊಚಿಷೇ ಊಚಾಥೇ ಊಚಿಧ್ವೇ, ಊಚೇ ಊಚಿವಹೇ ಊಚಿಮಹೇ॥

★ ★ ★

ಭವಿಷ್ಯ ನುಡಿದ ಆಚಾರ್ಯವರ್ಯರು

**ಶ್ವಿತ್ರಿಣೀ ಭವತಿ ತತ್ಪದವಾಚ್ಯೇತ್ಯಾಗ್ರಹೇಣ ವದತೋಽವಿದುಷೋಽತ್ರ ।**
**ಕಶ್ಚಿದೇಷ್ಯತಿ ವಿಪಶ್ಚಿದಿಹೈನಂ ಪೃಚ್ಛತೇತ್ಯಯಮಗಚ್ಛದಥೋಕ್ತ್ವಾ ॥ 18 ॥**

**ಪದಚ್ಛೇದ—** ಶ್ವಿತ್ರಿಣೀ, ಭವತಿ, ತತ್ಪದವಾಚ್ಯಾ, ಇತಿ, ಆಗ್ರಹೇಣ, ವದತಃ, ಅವಿದುಷಃ, ಅತ್ರ, ಕಶ್ಚಿತ್, ಏಷ್ಯತಿ, ವಿಪಶ್ಚಿತ್, ಇಹ, ಏನಂ, ಪೃಚ್ಛತ, ಇತಿ, ಅಯಂ, ಅಗಚ್ಛತ್, ಅಥ, ಉಕ್ತ್ವಾ ।

**ಅನ್ವಯ—** ಅಥ ತತ್ಪದವಾಚ್ಯಾ ಶ್ವಿತ್ರಿಣೀ ಭವತಿ, ಇತಿ ಆಗ್ರಹೇಣ ವದತಃ ಅವಿದುಷಃ, ''ಅತ್ರ ಕಶ್ಚಿತ್ ವಿಪಶ್ಚಿತ್, ಏಷ್ಯತಿ, ಇಹ ಏನಂ ಪೃಚ್ಛತ'' ಇತಿ ಉಕ್ತ್ವಾ ಅಯಂ ಅಗಚ್ಛತ್ ।

**ಅನ್ವಯಾರ್ಥ—**

**ಅಥ** = ಶ್ರೀಮಧ್ವಾಚಾರ್ಯರು ಹೇಳಿದ ಅನಂತರದಲ್ಲಿ

**ತತ್ಪದವಾಚ್ಯಾ** = ಅಪಾಲಾ ಎಂಬ ಶಬ್ದದಿಂದ ವಾಚ್ಯವಾಗಿರತಕ್ಕಂತಹ ಸ್ತ್ರೀಯು

**ಶ್ವಿತ್ರಿಣೀ** = ಕುಷ್ಠರೋಗವುಳ್ಳವಳು

**ಭವತಿ ಇತಿ** = ಆಗುತ್ತಾಳೆ ಎಂದು

**ಆಗ್ರಹೇಣ** = ಇದೇ ಸರಿಯಾದ ಅರ್ಥ ಎಂಬುದಾಗಿ ಹಠದಿಂದ

**ವದತಃ** = ಹೇಳುತ್ತಿರುವ

**ಅವಿದುಷಃ** = ಪಂಡಿತನಲ್ಲದೇ ಇರತಕ್ಕವನನ್ನು ಕುರಿತು,

**ಅತ್ರ** = ಇಲ್ಲಿಗೆ

**ಕಶ್ಚಿತ್ ವಿಪಶ್ಚಿತ್** = ಯಾವನೋ ಒಬ್ಬ ಪಂಡಿತನು

**ಏಷ್ಯತಿ** = ಬರುತ್ತಾನೆ

**ಇಹ** = ಈ ಶಬ್ದಾರ್ಥವಿಷಯದಲ್ಲಿ

**ಏನಂ** = ಈ ಬ್ರಾಹ್ಮಣನನ್ನು

**ಪೃಚ್ಛತ** = ಕೇಳಿರಿ

**ಇತಿ** = ಎಂದು

**ಉಕ್ತ್ವಾ** = ಹೇಳಿ

**ಅಯಂ** = ಶ್ರೀಮಧ್ವಾಚಾರ್ಯರು

**ಅಗಚ್ಛತ್** = ಬೇರೆ ದೇಶವನ್ನು ಕುರಿತು ಹೋದರು.

**ತಾತ್ಪರ್ಯ—** ಶ್ರೀ ಮಧ್ವಾಚಾರ್ಯರು ಸೂಕ್ತದಲ್ಲಿ 'ಅಪಾಲಾ' ಎಂಬ ಶಬ್ದಕ್ಕೆ ಅತ್ಯಂತ ತರುಣಿ ಎಂಬುವುದಾಗಿ ಅರ್ಥವನ್ನು ಹೇಳುತ್ತಿದ್ದಾಗ ಈ ಪಂಡಿತರೆಲ್ಲರೂ ಒಂದು ಸೇರಿ ನೀವು ಹೇಳಿದ 'ಅಪಾಲಾ' ಎಂಬ ಶಬ್ದಕ್ಕೆ 'ಅತ್ಯಂತ ತರುಣಿ' ಎಂಬ ಅರ್ಥ ಸರಿಯಲ್ಲ ತಪ್ಪು ಎಂದು ಪ್ರಮಾಣವಿಲ್ಲದಿದ್ದರೂ ಹಠದಿಂದ ಹೇಳಿದರು. ಆಗ ಮಧ್ವಾಚಾರ್ಯರು ''ಸದ್ಯದಲ್ಲಿಯೇ ಯಾವನೋ ಒಬ್ಬ ಪಂಡಿತನು ಇಲ್ಲಿಗೆ ಬರುವನು. ಅವನನ್ನು ಕುರಿತು ಅಪಾಲಾ ಶಬ್ದದ ಅರ್ಥವನ್ನು ಕೇಳಿರಿ'' ಎಂದು ಹೇಳಿ ಹೊರಟುಹೋದರು.

ವಿಗ್ರಹ—

**ತತ್ಪದವಾಚ್ಯಾ—** ತತ್ ಚ ತತ್ ಪದಂ ಚ ತತ್ಪದಂ, ತತ್ಪದೇನ ವಾಕ್ ತತ್ಪದವಾಕ್, ತೇನ ತತ್ಪದವಾಚ್ಯಾ ।

**ಕ್ರಿಯಾಪದ—** ಭವತಿ- ಭೂಸತ್ತಾಯಾಂ ಇತ್ಯಸ್ಮಾದ್ಧಾತೋಃ ಲಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಭವತಿ'' ಇತಿ ರೂಪಮ್ ।

ಭವತಿ ಭವತಃ ಭವಂತಿ, ಭವಸಿ ಭವಥಃ ಭವಥ, ಭವಾಮಿ ಭವಾವಃ ಭವಾಮಃ ॥

ಏಷ್ಯತಿ- ಇಣ್‌ಗತೌ ಇತ್ಯಸ್ಮಾದ್ಧಾತೋಃ ಲಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಏಷ್ಯತಿ'' ಇತಿ ರೂಪಮ್ ।

ಏಷ್ಯತಿ ಏಷ್ಯತಃ ಏಷ್ಯಂತಿ, ಏಷ್ಯಸಿ ಏಷ್ಯಥಃ ಏಷ್ಯಥ, ಏಷ್ಯಾಮಿ ಏಷ್ಯಾವಃ ಏಷ್ಯಾಮಃ ॥

ಪೃಚ್ಛತ- ಪೃಚ್ಛ ಜ್ಞೀಪ್ಸಾಯಾಂ ಇತ್ಯಸ್ಮಾದ್ಧಾತೋಃ ಲೋಟ್ ಪರಸ್ಮೈಪದಿನಃ ಮಧ್ಯಮಪುರುಷೇ ಬಹುವಚನೇ ''ಪೃಚ್ಛತ'' ಇತಿ ರೂಪಮ್ ।

ಪೃಚ್ಛತು ಪೃಚ್ಛತಾತ್, ಪೃಚ್ಛತಾಂ ಪೃಚ್ಛಂತು, ಪೃಚ್ಛ ಪೃಚ್ಛತಾತ್, ಪೃಚ್ಛತಂ ಪೃಚ್ಛತ, ಪೃಚ್ಛಾನಿ ಪೃಚ್ಛಾವ ಪೃಚ್ಛಾಮ॥

**ಅಗಚ್ಛತ್**- ಗಮ್ಲೃಗತ್ ಇತಿ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲಙ್ ಪ್ರಥಮಪುರುಷೇ ಏಕವಚನೇ 'ಅಗಚ್ಛತ್' ಇತಿ ರೂಪಮ್ ।

ಅಗಚ್ಛತ್ ಅಗಚ್ಛತಾಂ ಅಗಚ್ಛನ್, ಅಗಚ್ಛಃ ಅಗಚ್ಛತಂ ಅಗಚ್ಛತ, ಅಗಚ್ಛಂ ಅಗಚ್ಛಾವ ಅಗಚ್ಛಾಮ ॥

★ ★ ★

ದರ್ಶನಾಚಾರ್ಯರ ತ್ರಿಕಾಲದರ್ಶನ

**ದೇಶಮೇನಮಚಿರಾದುಪಯಾತಸ್ತಾದೃಶಾಕೃತಿರಹೋ ಕೃತಬುದ್ಧಿಃ ।**
**ತಾಂಸ್ತಥಾಭ್ಯಧಿತ ತತ್ಪದಭಾವಂ ಸೂರಿಮೌಲಿಮಣಿನಾಽತ್ರ ಯಥೋಚೇ ॥ 19 ॥**

**ಪದಚ್ಛೇದ—** ದೇಶಂ ಏನಂ, ಅಚಿರಾತ್, ಉಪಯಾತಃ, ತಾದೃಶಾಕೃತಿಃ, ಅಹೋ, ಕೃತಬುದ್ಧಿಃ, ತಾನ್, ತಥಾ, ಅಭ್ಯಧಿತ, ತತ್ಪದಭಾವಂ, ಸೂರಿಮೌಲಿಮಣಿನಾ, ಅತ್ರ ಯಥಾ, ಊಚೇ ।

**ಅನ್ವಯ—** ಏನಂ ದೇಶಂ ಅಚಿರಾತ್ ಉಪಯಾತಃ ತಾದೃಶಾಕೃತಿಃ ಕೃತಬುದ್ಧಿಃ ತಾನ್, ತತ್ಪದಭಾವಂ, ಅತ್ರ ಮಥಾ, ಅಭ್ಯಧಿತ, ಸೂರಿಮೌಲಿಮಣಿನಾ, ತಥಾ ಊಚೇ ।

**ಅನ್ವಯಾರ್ಥ—**

**ಏನಂ ದೇಶಂ** = ಆ ವಿದ್ವಾಂಸರು ಇದ್ದ ದೇಶವನ್ನು ಕುರಿತು
**ಅಚಿರಾತ್** = ಸ್ವಲ್ಪಕಾಲದಲ್ಲಿಯೇ
**ಉಪಯಾತಃ** = ಬಂದಿರತಕ್ಕ
**ತಾದೃಶಾಕೃತಿಃ** = ಮಧ್ವಾಚಾರ್ಯರಿಂದ ಹೇಳಲ್ಪಟ್ಟ ಲಕ್ಷಣದಿಂದ ಕೂಡಿದ ದೇಹವುಳ್ಳ
**ಕೃತಬುದ್ಧಿಃ** = ಬುದ್ಧಿಯುಳ್ಳ ಬ್ರಾಹ್ಮಣರು
**ತಾನ್** = 'ಅಪಾಲಾ' ಅರ್ಥದ ಬಗ್ಗೆ ತಿಳಿಯದ ಬ್ರಾಹ್ಮಣನನ್ನು ಕುರಿತು
**ತತ್ಪದಭಾವಂ** = 'ಅಪಾಲಾ' ಎಂಬ ಶಬ್ದಕ್ಕೆ ಅಭಿಪ್ರಾಯವನ್ನು
**ಅತ್ರ** = ಈ ಪದದ ಅಭಿಪ್ರಾಯುವು
**ಸೂರಿಮೌಲಿಮಣಿನಾ** = ಪಂಡಿತಶ್ರೇಷ್ಠರಾದ ಶ್ರೀಮಧ್ವಾಚಾರ್ಯರಿಂದ
**ಯಥಾ** = ಹೇಗೆ
**ಊಚೇ** = ಹೇಳಲ್ಪಟ್ಟಿತ್ತೋ
**ತಥಾ** = ಹಾಗೆಯೇ
**ಅಭ್ಯಧಾತ್** = ಹೇಳಿದರು.
**ಅಹೋ !** = ಆಶ್ಚರ್ಯ !

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಆ ದೇಶವನ್ನು ಬಿಟ್ಟು ಹೋದ ಕೂಡಲೇ ಒಬ್ಬ ಬ್ರಾಹ್ಮಣನು ಪೂರ್ಣಪ್ರಜ್ಞಾ-ಚಾರ್ಯರಿಂದ ಹೇಳಲ್ಪಟ್ಟ ದೇಹಲಕ್ಷಣದಿಂದ ಸಹಿತನಾಗಿ ಬಂದನು. ಅಲ್ಲಿಯ ಪಂಡಿತರು ಅಪಾಲಾಶಬ್ದಾರ್ಥ ವಿಷಯ-ದಲ್ಲಿ ಕೇಳಿದಾಗ ಆ ಪಂಡಿತನು ಶ್ರೀಮಧ್ವಾಚಾರ್ಯರು ಹೇಳಿದಂತೆಯೇ 'ಅಪಾಲಾ' ಶಬ್ದಕ್ಕೆ 'ಅತಿತರುಣಿ' ಎಂದೇ ಅರ್ಥವನ್ನು ಹೇಳಿದನು. ಆಶ್ಚರ್ಯ !

**ವಿಗ್ರಹ—**

**ಕೃತಬದ್ಧಿಃ—** ಕೃತಾ ಬುದ್ಧಿಃ ಯಸ್ಯ ಸಃ ಕೃತಬುದ್ಧಿಃ ।

**ತಾದೃಶಾಕೃತಿಃ—** ತಾದೃಶಾ ಆಕೃತಿಃ ಯಸ್ಯ ಸಃ ತಾದೃಶಾಕೃತಿಃ ।

**ತತ್ಪದಭಾವಂ—** ತತ್ ಚ ತತ್ ಪದಂ ಚ ತತ್ಪದಂ, ತತ್ಪದಸ್ಯ ಭಾವಂ ತತ್ಪದಭಾವಂ ।

**ಸೂರಿಮೌಲಿಮಣಿನಾ—** ಮೌಲೇ ಮಣಿಃ, ಸೂರೀಣಾಂ ಮೌಲಿಮಣಿಃ, ತೇನ ಸೂರಿಮೌಲಿಮಣಿನಾ ।

**ಕ್ರಿಯಾಪದ—** ಊಚೇ- ವಚಪರಿಭಾಷಣೇ ಇತ್ಯಸ್ಮಾದ್ಧಾತೋಃ ಲಿಟ್ ಆತ್ಮನೇಪದಂ ಪ್ರಥಮಪುರುಷೇ ಏಕವಚನೇ ''ಊಚೇ'' ಇತಿ ರೂಪಮ್ ।

ಊಚೇ ಊಚಾತೇ ಊಚಿರೇ, ಊಚಿಷೇ ಊಚಾಥೇ ಊಚಿಧ್ವೇ, ಊಚೇ ಊಚಿವಹೇ ಊಚಿಮಹೇ ॥

★ ★ ★

### ಪ್ರಮಾಣಪ್ರಮಿತವಾದ ಆಚಾರ್ಯವಾಣಿ

**ಕೇವಲಂ ನ ಸಕಲಾಃ ಶ್ರುತಿವಿದ್ಯಾ ಮಾನಪೂರ್ವಕಸಮಸ್ತಗಿರೋಽಸ್ಯ ।**
**ಅಪ್ಯನಾಗತಗತಪ್ರತಿಪತ್ತಿಂ ಶ್ರದ್ದಧುಃ ಪೃಥುಲಚೇತಸ ಏತೇ ॥ 20 ॥**

**ಪದಚ್ಛೇದ—** ಕೇವಲಂ, ನ, ಸಕಲಾಃ, ಶ್ರುತಿವಿದ್ಯಾಃ, ಮಾನಪೂರ್ವಕಸಮಸ್ತಗಿರಃ, ಅಸ್ಯ, ಅಪಿ, ಅನಾಗತ-ಗತಪ್ರತಿಪತ್ತಿಃ, ಶ್ರದ್ದಧುಃ, ಪೃಥುಲಚೇತಸಃ, ಏತೇ ।

**ಅನ್ವಯ—** ಏತೇ ಮಾನಪೂರ್ವಕಸಮಸ್ತಗಿರಃ ಅಸ್ಯ ಪೃಥುಲಚೇತಸಃ ಕೇವಲಂ ಸಕಲಾಃ ಶ್ರುತಿವಿದ್ಯಾಃ ನ ಶ್ರದ್ದಧುಃ ಅನಾಗತಗತಪ್ರತಿಪತ್ತಿಂ ಅಪಿ ಶ್ರದ್ದಧುಃ ।

**ಅನ್ವಯಾರ್ಥ—**

**ಏತೇ** = ಈ ಬ್ರಾಹ್ಮಣರು

**ಮಾನಪೂರ್ವಕಸಮಸ್ತಗಿರಃ** = ಪ್ರಮಾಣಸಹಿತವಾದ ಎಲ್ಲಾ ಮಾತುಗಳ

**ಅಸ್ಯ ಪೃಥುಲಚೇತಸಃ** = ಈ ವಿಶಾಲ ಮನಸ್ಸುಳ್ಳ ಶ್ರೀ ಮಧ್ವಾಚಾರ್ಯರಿಗೆ

**ಕೇವಲಂ** = ಕೇವಲ

**ಸಕಲಾಃ** = ಎಲ್ಲಾ ಕಲೆಗಳಿಂದ ಕೂಡಿರತಕ್ಕ

**ಶ್ರುತಿವಿದ್ಯಾಃ** = ವೇದವಿದ್ಯೆಗಳನ್ನು

**ನ ಶ್ರದ್ದಧುಃ** = ನಂಬಲಿಲ್ಲ.

**ಅನಾಗತಗತಪ್ರತಿಪತ್ತಿಂ** = ಭವಿಷ್ಯತ್ತಿನ, ಕಳೆದ ವಿಷಯಗಳ ಜ್ಞಾನವನ್ನೂ ಕೂಡ

**ಶ್ರದ್ದಧುಃ** = ನಂಬಿದರು.

**ತಾತ್ಪರ್ಯ—** ಈ ಬ್ರಾಹ್ಮಣರು, ಯಾವುದೇ ಒಂದು ಮಾತಿನಲ್ಲಿಯೂ ಉದಾಹರಣಪೂರ್ವಕವಾಗಿರುವಂತಹ ಮತ್ತು ವಿಸ್ತಾರವಾದ ಮನಸ್ಸುಳ್ಳಂತಹ ಈ ಮಧ್ವಾಚಾರ್ಯರು ಎಲ್ಲಾ ಕಲೆಗಳಿಂದ ಕೂಡಿರುವ ವೇದವಿದ್ಯೆಗಳನ್ನು ಹೇಳಬಲ್ಲವರಷ್ಟೇ ಅಲ್ಲ. ಹಿಂದೆ ಕಳೆದಿರತಕ್ಕಂತಹ ಮತ್ತು ಮುಂದೆ ಆಗತಕ್ಕಂತಹ ಜ್ಞಾನವನ್ನೂ ಕೂಡ ಹೇಳಬಲ್ಲವರು ಎಂದು ತಿಳಿದರು.

**ವಿಗ್ರಹ—**

**ಮಾನಪೂರ್ವಕಸಮಸ್ತಗಿರಃ—** ಮಾನಂ ಪೂರ್ವಕಂ ಯಾಸಾಂ ತಾಃ ಮಾನಪೂರ್ವಕಾಃ, ಮಾನಪೂರ್ವಕಾಃ ಸಮಸ್ತಾಃ ಗಿರಃ ಯಸ್ಯ ಸಃ ಮಾನಪೂರ್ವಕಸಮಸ್ತಗಿರಃ ।

**ಪೃಥುಲಚೇತಸಃ—** ಪೃಥುಲಂ ಚೇತಃ ಯಸ್ಯ ಸಃ ಪೃಥುಲಚೇತಾಃ, ತಸ್ಯ ಪೃಥುಲಚೇತಸಃ ।

**ಅನಾಗತಗತಪ್ರತಿಪತ್ತಿಂ—** ಆಗತಂ ಪ್ರಾಪ್ತಂ ನ ಭವ ಇತಿ ಅನಾಗತಂ, ಅನಾಗತಂ ಚ ಗತಂ ಚ ಅನಾಗತಗತೇ ಅನಾಗತಗತಯೋಃ ಪ್ರತಿಪತ್ತಿ, ಅನಾಗತಗತಪ್ರತಿಪತ್ತಿಃ ತಂ ಅನಾಗತಗತಪ್ರತಿಪತ್ತಿಂ ।

**ಕ್ರಿಯಾಪದ—** **ಶ್ರದ್ದಧುಃ**- ಶ್ರತ್ ಪೂರ್ವಕಾತ್ ಡು ಧಾಞ್ ಧಾರಣಪೋಷಣಯೋಃ ಇತ್ಯಸ್ಮಾದ್ಧಾತೋಃ ಲಿಟ್ ಪರಸ್ಮೈಪದಿನಃ ಪ್ರಥಮಪುರುಷೇ ಬಹುವಚನೇ ''ಶ್ರದ್ದಧುಃ'' ಇತಿ ರೂಪಮ್ ।

ಶ್ರದ್ದಧೌ ಶದ್ದಧತುಃ ಶ್ರದ್ದಧುಃ, ಶ್ರದ್ದಧಿಥ ಶ್ರದ್ದಧಾಥ ಶ್ರದ್ದಧಥುಃ ಶದ್ದಧ, ಶ್ರದ್ದಧೌ ಶ್ರದ್ದಧಿವ ಶ್ರದ್ದಧಿಮ ॥

★ ★ ★

ಆಚಾರ್ಯರ ಸರ್ವಜ್ಞತ್ವ ಮನಗಂಡ ಪಂಡಿತರು

**ಯದ್ಯದೇವ ಸಪದಿ ಪ್ರಕೃತಂ ಸ್ಯಾತ್ತತ್ತದೇಷ ಯದವೇದಖಿಲಂ ಚ ।**
**ಸರ್ವದಾ ಸದಸಿ ಸರ್ವಬುಧಾನಾಂ ಸರ್ವವಿದ್ಯತಿರಿತಿ ಪ್ರಥಿತೋಽಭೂತ್ ॥ 21 ॥**

**ಪದಚ್ಛೇದ—** ಯದ್ಯದೇವ, ಸಪದಿ, ಪ್ರಕೃತಂ, ಸ್ಯಾತ್, ತತ್, ತತ್, ಏಷಃ, ಯತ್, ಅವೇತ್, ಅಖಿಲಂ, ಚ, ಸರ್ವದಾ, ಸದಸಿ, ಸರ್ವಬುಧಾನಾಂ, ಸರ್ವವಿತ್, ಯತಿಃ, ಇತಿ, ಪ್ರಥಿತಃ, ಅಭೂತ್ ।

**ಅನ್ವಯ—** ಸರ್ವದಾ, ಸದಸಿ, ಸಪದಿ, ಯದ್ಯದೇವ, ಪ್ರಕೃತಂ, ಸ್ಯಾತ್, ತತ್ತದಖಿಲಂ ಚ ಏಷಃ, ಯತ್, ಅವೇತ್, ಸರ್ವಬುಧಾನಾಂ, ಸದಸಿ, ಸರ್ವವಿತ್ ಯತಿಃ, ಇತಿ, ಪ್ರಥಿತಃ, ಅಭೂತ್ ।

**ಅನ್ವಯಾರ್ಥ—**

**ಸರ್ವದಾ** = ಯಾವಾಗಲೂ
**ಸದಸಿ** = ಎಲ್ಲಾ ಸಭೆಗಳಲ್ಲಿಯೂ
**ಸಪದಿ** = ತಕ್ಷಣದಲ್ಲಿಯೇ
**ಯದ್ಯದೇವ** = ಯಾವ ಯಾವ ಶ್ರುತಿಪುರಾಣಾದಿಗಳು
**ಪ್ರಕೃತಂ ಸ್ಯಾತ್** = ಪ್ರಸಕ್ತವಾಗುತ್ತವೆಯೋ
**ತತ್ತಖಿಲಂ ಚ** = ಆ ಎಲ್ಲವನ್ನೂ ಕೂಡ
**ಏಷಃ** = ಈ ಮಧ್ವಾಚಾರ್ಯರು
**ಯತ್** = ಯಾವ ಕಾರಣದಿಂದ
**ಅವೇತ್** = ತಿಳಿದಿದ್ದಾರೋ (ಆದ್ದರಿಂದ)
**ಸರ್ವಬುಧಾನಾಂ** = ಎಲ್ಲ ಪಂಡಿತರ
**ಸದಸಿ** = ಸಭೆಗಳಲ್ಲಿ
**ಸರ್ವವಿತ್** = ಸರ್ವಜ್ಞರಾದ
**ಯತಿಃ** = ಸನ್ಯಾಸಿಗಳು
**ಇತಿಃ** = ಎಂಬುದಾಗಿ
**ಪ್ರಥಿತಃ** = ಪ್ರಖ್ಯಾತರಾದವರು
**ಅಭೂತ್** = ಆದರು.

**ತಾತ್ಪರ್ಯ—** ಈ ಪೂರ್ಣಪ್ರಜ್ಞಾಚಾರ್ಯರು ಎಲ್ಲಾ ಕಾಲದಲ್ಲಿಯೂ ಎಲ್ಲಾ ಸಭೆಗಳಲ್ಲಿಯೂ ಶ್ರುತಿಪುರಾಣಗಳಿಗೆ ಅರ್ಥಗಳನ್ನು ಕೂಡಲೇ ಹೇಳಲು ಸಮರ್ಥರು. ಆ ಶ್ರುತಿಪುರಾಣಾದಿಗಳನ್ನು ತಿಳಿದಿರತಕ್ಕ ಈ ಮಧ್ವಾಚಾರ್ಯರು ಎಲ್ಲಾ ಪಂಡಿತರುಗಳ ಸಭೆಯಲ್ಲಿ ಎಲ್ಲವನ್ನೂ ತಿಳಿದಿರುವ ಸರ್ವಜ್ಞರಾದ ಯತಿಗಳು ಎಂಬುದಾಗಿ ಪ್ರಖ್ಯಾತಿಯನ್ನು ಹೊಂದಿದರು.

ವಿಗ್ರಹ—

ಸರ್ವವಿತ್— ಸರ್ವಂ ವೇತ್ತಿ ಇತಿ ಸರ್ವವಿತ್ ।

ಸರ್ವಬುಧಾನಾಂ— ಸರ್ವಾಶ್ಚ ತೇ ಬುಧಾಶ್ಚ ಸರ್ವಬುಧಾಃ ತೇಷಾಂ ಸರ್ವಬುಧಾನಾಂ ।

ಕ್ರಿಯಾಪದ— **ಅವೇತ್**- ವಿದಜ್ಞಾನೇ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಅವೇತ್'' ಇತಿ ರೂಪಮ್ ।

ಅವೇತ್ ಅವಿತ್ತಾಂ ಅವಿದುಃ, ಅವೇಃ ಅವೇತ್ ಅವಿತ್ತಂ ಅವಿತ್ತ, ಅವೇದಂ ಅವಿದ್ವ ಅವಿದ್ಮ ॥

**ಅಭೂತ್**- ಭೂಃ ಸತ್ತಾಯಾಂ ಇತಿ ಧಾತೋಃ ಪರಸ್ಮೈಪದಿನಃ ಲುಙ್ ಪ್ರಥಮಪುರುಷೇ ಏಕವಚನೇ 'ಅಭೂತ್' ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಬುತ, ಅಭೂವಂ ಅಭೂವ ಅಭೂಮ ॥

★ ★ ★

ಶ್ರೀಪೂರ್ಣಪ್ರಜ್ಞರ ಕೀರ್ತಿಚಂದ್ರಿಕೆ

**ಅಪ್ರಯಾತಮಪಿ ದೇಶಮಶೇಷಂ ವ್ಯಾನಶೇ ಸುಜನಕೈರವಬಂಧುಃ ।**
**ಪೂರ್ಣದೃಕ್ ಪ್ರತತಯಾ ನಿಜಕೀರ್ತ್ಯಾ ಪೂರ್ಣಚಂದ್ರ ಇವ**
**ಚಂದ್ರಿಕಯಾಽಲಮ್ ॥ 22 ॥**

**ಪದಚ್ಛೇದ**— ಅಪ್ರಯಾತಂ, ಅಪಿ, ದೇಶಂ, ಅಶೇಷಂ, ವ್ಯಾನಶೇ, ಸುಜನಕೈರವಬಂಧುಃ, ಪೂರ್ಣದೃಕ್ಃ, ಪ್ರತತಯಾ, ನಿಜಕೀರ್ತ್ಯಾ, ಪೂರ್ಣಚಂದ್ರಃ, ಇವ ಚಂದ್ರಿಕಯಾ, ಅಲಂ ।

**ಅನ್ವಯ**— ಸುಜನಕೈರವಬಂಧುಃ ಪೂರ್ಣದೃಕ್, ಪ್ರತತಯಾ ನಿಜಕೀರ್ತ್ಯಾ, ಅಪ್ರಯಾತಂ ಅಪಿ ಅಶೇಷಂ ದೇಶಂ, ಪೂರ್ಣಚಂದ್ರಃ ಚಂದ್ರಿಕಯಾ ಇವ ಅಲಂ ವ್ಯಾನಶೇ ।

**ಅನ್ವಯಾರ್ಥ**—

**ಸುಜನಕೈರವಬಂಧುಃ** = ಸಜ್ಜನರೆಂಬ ಕುಮುದಗಳಿಂದ ಸಂತೋಷಗೊಳಿಸಿರುವ

**ಪೂರ್ಣದೃಕ್** = ಪೂರ್ಣವಾದ ಜ್ಞಾನವುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು

**ಪ್ರತತಯಾ** = ಚೆನ್ನಾಗಿ ವ್ಯಾಪಿಸಿದ

**ನಿಜಕೀರ್ತ್ಯಾ** = ತಮ್ಮ ಕೀರ್ತಿಯಿಂದ

**ಅಪ್ರಯಾತಂ** = ತಾವು ಹೋಗದಿದ್ದರೂ

**ಅಪಿ** = ಕೂಡ

**ಅಶೇಷಂ ದೇಶಂ** = ಎಲ್ಲಾ ದೇಶವನ್ನು

**ಪೂರ್ಣಚಂದ್ರಃ** = ಹುಣ್ಣಿಮೆಯ ಚಂದ್ರನು

**ಚಂದ್ರಿಕಯಾ ಇವ** = ಬೆಳದಿಂಗಳಿನಿಂದ ಜಗತ್ತನ್ನು ಪ್ರಕಾಶಗೊಳಿಸುವಂತೆ

**ಅಲಂ** = ಚೆನ್ನಾಗಿ

**ವ್ಯಾನಶೇ** = ವ್ಯಾಪಿಸಿದರು.

**ತಾತ್ಪರ್ಯ**— ಕುಮುದಗಳಿಗೆ ಚಂದ್ರನಂತೆ ಸಜ್ಜನರಿಗೆ ಸಂತೋಷಪಡಿಸುತ್ತಿದ್ದ ಸಂಪೂರ್ಣವಾದ ಜ್ಞಾನವುಳ್ಳಂತಹ ಈ ಪೂರ್ಣಪ್ರಜ್ಞಾಚಾರ್ಯರ ಕೀರ್ತಿಯು ದೇಶದ ಎಲ್ಲ ಕಡೆಯಲ್ಲಿಯೂ ವ್ಯಾಪಿಸಿತು. ಚಂದ್ರನು ಹೇಗೆ ತಾನು ಎಲ್ಲಾ

ಸ್ಥಳಗಳಿಗೆ ಹೋಗದಿದ್ದರೂ ತನ್ನ ಬೆಳದಿಂಗಳನ್ನು ಎಲ್ಲಾ ಕಡೆಯಲ್ಲಿ ಹರಡುತ್ತಾನೋ ಹಾಗೆ ಶ್ರೀಮಧ್ವಾಚಾರ್ಯರು ಎಲ್ಲ ಸ್ಥಳಗಳಿಗೆ ಹೋಗದಿದ್ದರೂ ಅವರ ಕೀರ್ತಿಯು ಹುಣ್ಣಿಮೆಯ ಚಂದ್ರನ ಬೆಳದಿಂಗಳಿನಂತೆ ದೇಶದ ಮೂಲೆ ಮೂಲೆಗಳಲ್ಲಿ ವ್ಯಾಪಿಸಿತು.

**ವಿಗ್ರಹ—**

**ಸುಜನಕೈರವಾಣಿ—** ಸುಜನಾ ಏವ ಕೈರವಾಣಿ ಸುಜನಕೈರವಾಣಿ, ಸುಜನಕೈರವಾಣಾಂ ಬಂಧುಃ ಸುಜನಕೈರವಬಂಧುಃ ।

**ಪೂರ್ಣದೃಕ್—** ಪೂರ್ಣಾ ದೃಕ್ ಯಸ್ಯ ಸಃ ಪೂರ್ಣದೃಕ್ ।

**ನಿಜಕೀರ್ತಿಃ—** ನಿಜಾ ಚ ಸಾ ಕೀರ್ತಿಶ್ಚ ನಿಜಕೀರ್ತಿಃ ತಯಾ ।

**ಕ್ರಿಯಾಪದ—** ವ್ಯಾನಶೇ- ವಿ ಇತ್ಯುಪಸರ್ಗಪೂರ್ವಕಾತ್ ಅಶ ವ್ಯಾಪ್ತೌ ಸಂಘಾತೇ ಚ ಇತಿ ಧಾತೋಃ ಲಿಟ್ ಆತ್ಮನೇಪದಂ ಪ್ರಥಮಪುರುಷೇ ಏಕವಚನೇ ''ವ್ಯಾನಶೇ'' ಇತಿ ರೂಪಮ್ ।

ವ್ಯಾನಶೇ ವ್ಯಾನಶಾತೇ ವ್ಯಾನಶಿರೇ, ವ್ಯಾನಶಿಷೇ ವ್ಯಾನಶಾಥೇ ವ್ಯಾನಶಿಧ್ವೇ, ವ್ಯಾನಶೇ ವ್ಯಾನಶಿವಹೇ ವ್ಯಾನಶಿಮಹೇ ॥

★ ★ ★

### ಪರಿಸಮಾಪ್ತಿಯಾದ ದಕ್ಷಿಣದಿಗ್ವಿಜಯ

**ಸುಂದರೇಷು ಸುರಮಂದಿರವೃಂದೇಷ್ವಿಂದಿರಾರಮಣವಂದನಕೃತ್ಯಮ್ ।**
**ಆಚರನ್ನಸುಚಿರಾತ್ ಸುವಿಚಾರೋ ರೂಪ್ಯಪೀಠಪತಿಮಾಪ ಮುಕುಂದಮ್ ॥ 23 ॥**

**ಪದಚ್ಛೇದ—** ಸುಂದರೇಷು, ಸುರಮಂದಿರವೃಂದೇಷು, ಇಂದಿರಾರಮಣವಂದನಕೃತ್ಯಂ, ಆಚರನ್, ಅಸುಚಿರಾತ್, ಸುವಿಚಾರಃ, ರೂಪ್ಯಪೀಠಪತಿಂ, ಆಪ, ಮುಕುಂದಂ ।

**ಅನ್ವಯ—** ಸುಂದರೇಷು ಸುರಮಂದಿರವೃಂದೇಷು ಇಂದಿರಾರಮಣವಂದನಕೃತ್ಯಂ ಆಚರನ್, ಸುವಿಚಾರಃ ಅಸುಚಿರಾತ್ ರೂಪ್ಯಪೀಠಪತಿಂ ಮುಕುಂದಂ ಆಪ ।

**ಅನ್ವಯಾರ್ಥ—**

**ಸುವಿಚಾರಃ** = ಆಶ್ರಮಕ್ಕೆ ಉಚಿತವಾಗಿರತಕ್ಕ ಒಳ್ಳೆಯ ಆಚಾರದಿಂದ ಕೂಡಿರುವ ಶ್ರೀ ಪೂರ್ಣಪ್ರಜ್ಞಾಚಾರ್ಯರು

**ಸುಂದರೇಷು** = ಮನೋಹರವಾದ

**ಸುರಮಂದಿರವೃಂದೇಷು** = ದೇವತೆಗಳ ಮಂದಿರಗಳ ಸಮೂಹಗಳಲ್ಲಿ

**ಇಂದಿರಾರಮಣವಂದನಕೃತ್ಯಂ** = ಲಕ್ಷ್ಮೀದೇವಿಯ ಪತಿಯಾದ ಶ್ರೀಮನ್ನಾರಾಯಣನ ನಮಸ್ಕಾರದ ಕಾರ್ಯವನ್ನು

**ಆಚರನ್** = ಮಾಡುತ್ತಾ

**ನಸುಚಿರಾತ್** = ಬೇಗನೆ

**ರೂಪ್ಯಪೀಠಪತಿಂ** = ರಜತಪೀಠಸ್ವಾಮಿಯಾದ

**ಮುಕುಂದಂ** = ಅನಂತೇಶ್ವರನನ್ನು

**ಆಪ** = ಹೊಂದಿದರು.

**ತಾತ್ಪರ್ಯ—** ತಮ್ಮ ಆಶ್ರಮಕ್ಕೆ ಉಚಿತವಾದ ಒಳ್ಳೆಯ ಆಚಾರ ಮತ್ತು ವಿಚಾರವುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು ದಕ್ಷಿಣದಿಕ್ಕಿನಲ್ಲಿರುವ ಸುಂದರವಾದ ದೇವಾಲಯಗಳಲ್ಲಿ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನನ್ನೇ ನಮಸ್ಕರಿಸುತ್ತಾ ಬೇಗನೆ ರಜತಪೀಠಪುರಸ್ವಾಮಿಯಾದ ಅನಂತೇಶ್ವರ ದೇವರ ಬಳಿ ಬಂದು ಸೇರಿದರು.

**ವಿಗ್ರಹ—**

**ಇಂದಿರಾರಮಣವಂದನಕೃತ್ಯಂ—** ಇಂದಿರಾಯಾಃ ರಮಣಃ ಇಂದಿರಾರಮಣಃ, ಇಂದಿರಾರಮಣಸ್ಯ ವಂದನಾಖ್ಯಂ ಕೃತ್ಯಂ ಇಂದಿರಾರಮಣ ವಂದನಕೃತ್ಯ ।

**ಸುವಿಚಾರಃ—** ಶೋಭನಃ ವಿಚಾರಃ ಸುವಿಚಾರಃ, ನ ಸುಚಿರಾತ್‌ಃ ಅಸುಚಿರಾತ್ ।

**ಸುರಮಂದಿರವೃಂದೇಷು—** ಸುರಾಣಾಂ ಮಂದಿರಾಣಿ ಸುರಮಂದಿರಾಣಿ, ಸುರಮಂದಿರಾಣಾಂ ವೃಂದಃ ಸುರಮಂದಿರವೃಂದಃ, ತೇಷು ಸುರಮಂದಿರವೃಂದೇಷು । ರೂಪ್ಯಪೀಠಸ್ಯ ಪತಿಃ ರೂಪ್ಯಪೀಠಪತಿಃ ತಂ ।

**ಕ್ರಿಯಾಪದ—** ಆಪ- ಆಪ್ಲೃ ವ್ಯಾಪ್ತೌ ಇತಿ ಧಾತೋಃ ಲಿಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಆಪ'' ಇತಿ ರೂಪಮ್ ।

ಆಪ ಆಪತುಃ ಆಪುಃ, ಆಪಿಥ ಆಪಥುಃ ಆಪ, ಆಪ ಆಪಿವ ಆಪಿಮ ॥

★ ★ ★

ಈ ಶ್ಲೋಕದಿಂದ ಆರಂಭಿಸಿ ಏಳು ಶ್ಲೋಕಗಳ ಅರ್ಥಗಳು 31ನೇ ಶ್ಲೋಕದೊಡನೆ ಪೂರ್ಣಗೊಳ್ಳುವುದು. ಇದನ್ನು ಕುಲಕವೆನ್ನುವರು. ಇಲ್ಲಿ ವೇದಗಳಿಗೂ, ದ್ರೌಪದೀದೇವಿಗೂ ಸಮಾನವಾಗಿ ಅನ್ವಯಿಸಿ ಅರ್ಥ ತಿಳಿಯಬೇಕು.

ಅಪವ್ಯಾಖ್ಯಾನದ ಖಂಡನೆ

**ಭೂಸುರಪ್ರವರಬುದ್ಧಿಸಮೃದ್ಧಿವ್ಯಕ್ತ-**
**ಯುಕ್ತವಪುಷಂ ರುಚಿರಾಂಗೀಮ್ ।**
**ಸೂತ್ರದೀಪ್ತಮಣಿಮಾಲಿಕಯಾಽಲಂ**
**ಭೂಷಿತಾಂ ಭುವನಭೂಷಣಭೂತಾಮ್ ॥ 24 ॥**

**ಪದಚ್ಛೇದ—** ಭೂಸುರಪ್ರವರಬುದ್ಧಿಸಮೃದ್ಧವ್ಯಕ್ತಯುಕ್ತವಪುಷಂ, ರುಚಿರಾಂಗೀಂ, ಸೂತ್ರದೀಪ್ತಮಣಿಮಾಲಿಕಯಾ, ಅಲಂ, ಭೂಷಿತಾಂ, ಭುವನಭೂಷಣಭೂತಾಮ್ ।

**ಅನ್ವಯ—** ಭೂಸುರಪ್ರವರಬುದ್ಧಿಸಮೃದ್ಧವ್ಯಕ್ತಯುಕ್ತವಪುಷಂ ರುಚಿರಾಂಗೀಂ ಸೂತ್ರದೀಪ್ತಮಣಿಮಾಲಿಕಯಾ ಅಲಂ ಭೂಷಿತಾಂ ಭುವನಭೂಷಣಭೂತಾಂ

**ಅನ್ವಯಾರ್ಥ—**

**ಭೂಸುರಪ್ರವರಬುದ್ಧಿಸಮೃದ್ಧವ್ಯಕ್ತಯುಕ್ತವಪುಷಂ** = ಬ್ರಾಹ್ಮಣಶ್ರೇಷ್ಠರಾದ ಋಷಿಗಳ ಅಂತಃಕರಣಗಳ ಆಧಿಕ್ಯದಲ್ಲಿ ಅಭಿವ್ಯಕ್ತವಾದ ಯೋಗ್ಯವಾದ ತನ್ನ ಸ್ವರೂಪವನ್ನು

**ರುಚಿರಾಂಗೀಂ** = ಮನೋಹರವಾದ ಶ್ರುತಿವ್ಯಾಖ್ಯಾನ ಇವುಗಳಿಂದ ಉಪಯುಕ್ತವಾದ ಶಿಕ್ಷಾಕಲ್ಪ ಮೊದಲಾದ ಆರು ಅಂಗಗಳಿಂದ

**ಸೂತ್ರದೀಪ್ತಮಣಿಮಾಲಿಕಯಾ** = ಪ್ರಕಾಶಮಾನವಾದ ಬ್ರಹ್ಮಸೂತ್ರಗಳೆಂಬ ರತ್ನಗಳಮಾಲೆಯ ಸಮೂಹದಿಂದ

**ಅಲಂ ಭೂಷಿತಾಂ** = ಚೆನ್ನಾಗಿ ವ್ಯಾಖ್ಯಾನ ಮಾಡಿರತಕ್ಕ

**ಭುವನಭೂಷಣಭೂತಾಂ** = ವೇದಾಧಿಕಾರಿಗಳ ಭೂಷಣಸ್ಥಾನೀಯವಾದ ಬ್ರಾಹ್ಮಣರುಗಳ ಭೂಷಣವನ್ನು ಉಂಟುಮಾಡುವ

**ದ್ರೌಪದಿಯ ಪಕ್ಷದಲ್ಲಿ –**

**ಭೂಸುರಪ್ರವರಬುದ್ಧಿಸಮೃದ್ಧವ್ಯಕ್ತಯುಕ್ತವಪುಷಂ** = ಬ್ರಾಹ್ಮಣಶ್ರೇಷ್ಠರ ಆಧಿಕ್ಯದಿಂದ ಪ್ರಾದುರ್ಭೂತವಾದ ಮನುಷ್ಯಯೋಗ್ಯವಾದ ಶರೀರವನ್ನು

**ರುಚಿರಾಂಗೀಂ**= ಸಂದರವಾದ ಹಸ್ತವೇ ಮೊದಲಾದ ಅವಯವಗಳುಳ್ಳ

**ಸೂತ್ರದೀಪ್ತಮಣಿಮಾಲಿಕಯಾ** = ಭಂಗಾರದ ತಂತಿಗಳಲ್ಲಿ ಪ್ರಕಾಶಮಾನವಾದ ನವರತ್ನಗಳ ಮಾಲೆಯಿಂದ

**ಅಲಂ ಭೂಷಿತಾಂ** = ಚೆನ್ನಾಗಿ ಅಲಂಕೃತವಾದ

**ಭುವನಭೂಷಣಭೂತಾಂ** = ಮೂರು ಲೋಕಕ್ಕೆ ಅಲಂಕಾರ ಸ್ಥಾನೀಯವಾದ

**ತಾತ್ಪರ್ಯ—** ಹಿಂದೆ ದುಶ್ಶಾಸನನು ಸಭೆಯಲ್ಲಿ ದ್ರೌಪದಿಯ ವಸ್ತ್ರವನ್ನು ಎಳೆಯುತ್ತಿರಲು ಮುಖ್ಯಪ್ರಾಣದೇವರ ಅವತಾರವಾದ ಭೀಮಸೇನದೇವರು ದುಷ್ಟಕೌರವರನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದರು. ದ್ರೌಪದಿಯು ದ್ರುಪದನ ಪುರೋಹಿತರು ಅಗ್ನಿಯಲ್ಲಿ ಹಾಕಿದ ಹವಿಸ್ಸಿನಿಂದ ಹೋಮದಿಂದ ಹುಟ್ಟಿದವಳು. ಸುಂದರ ಅವಯವವುಳ್ಳವಳು. ಶ್ರೇಷ್ಠ ರತ್ನಮಾಲೆಯಿಂದ ಅಲಂಕಾರಗೊಂಡು ಪ್ರಪಂಚಕ್ಕೇ ಅಲಂಕಾರಪ್ರಾಯಳಾಗಿದ್ದವಳು. ಅದರಂತೆ ಮಧ್ವಾಚಾರ್ಯರು ಇತರರಿಂದ ತಪ್ಪಾಗಿ ವ್ಯಾಖ್ಯಾನಿಸಲ್ಪಟ್ಟ ವೇದಗಳನ್ನು ನೋಡಿ ಪರರ ಸಿದ್ಧಾಂತವನ್ನು ಖಂಡಿಸಲು ಪ್ರತಿಜ್ಞೆ ಮಾಡಿದರು. ಆ ವೇದಸಮೂಹವನ್ನು ಬ್ರಾಹ್ಮಣೋತ್ತಮರಾದ ವಸಿಷ್ಠ ವಾಮದೇವ ಮೊದಲಾದವರು ಕಂಡುಹಿಡಿದಿರುವರು. ಅದಕ್ಕೆ ಸುಂದರವಾದ ಶಿಕ್ಷಾದಿ ಷಡಂಗಗಳಿರುವುವು. ಅದು ಬ್ರಹ್ಮಸೂತ್ರಗಳೆಂಬ ರತ್ನಗಳ ಮಾಲೆಯಿಂದ ಅಲಂಕೃತವಾಗಿ ಲೋಕಕ್ಕೆ ಅಲಂಕಾರದಂತಿರುವುದು.

**ವಿಗ್ರಹ—**

**ಭೂಸುರಪ್ರವರಬುದ್ಧಿಸಮೃದ್ಧಿವ್ಯಕ್ತಯುಕ್ತವಪುಷಂ—** ಭೂಸುರಾಣಾಂ ಪ್ರವರಾಃ ಭೂಸುರಪ್ರವರಾಃ, ಬುದ್ಧೀನಾಂ ಸಮೃದ್ಧಿಃ ಬುದ್ಧಿಸಮೃದ್ಧಿಃ ತೇಷಾಂ ಭೂಸುರಪ್ರವರಬುದ್ಧಿಸಮೃದ್ಧಿಃ, ಭೂಸುರಪ್ರವರ-ಬುದ್ಧಿಸಮೃದ್ಧ್ಯಾ ವ್ಯಕ್ತಂ ಯುಕ್ತಂ ಯಸ್ಯ ವಪುಃ ಸಃ ಭೂಸುರಪ್ರವರಬುದ್ಧಿಸಮೃದ್ಧಿವ್ಯಕ್ತಯುಕ್ತವಪುಃ ತಂ ಭೂಸುರಪ್ರವರಬುದ್ಧಿಸಮೃದ್ಧಿವ್ಯಕ್ತಯುಕ್ತವಪುಷಂ ।

**ರುಚಿರಾಂಗೀಂ—** ರುಚಿರಾಣಿ ಅಂಗಾನಿ ಯಸ್ಯಾಃ ಸಾ ರುಚಿರಾಂಗೀ ತಾಂ ।

**ಸೂತ್ರದೀಪ್ತಮಣಿಮಾಲಿಕಯಾ—** ದೀಪ್ತಾಃ ಮಣಯಃ ದೀಪ್ತಮಣಯಃ, ಸೂತ್ರಾಣ್ಯೇವ ದೀಪ್ತಮಣಯಃ ಸೂತ್ರದೀಪ್ತಮಣಯಃ, ಸೂತ್ರದೀಪಮಣೀನಾಂ ಮಾಲಿಕಾ, ಸೂತ್ರದೀಪ್ತಮಣಿಮಾಲಿಕಾ, ತಯಾ ಸೂತ್ರದೀಪ್ತಮಣಿಮಾಲಿಕಯಾ ।

**ಭುವನಭೂಷಣತಾ—** ಭುವನಾನಾಂ ಭೂಷಣಭೂತಾ ಭುವನಭೂಷಣಂ ತಾಂ ।

★ ★ ★

ವೇದವಿದ್ಯೆಯ ವರ್ಣನೆ

**ಪಾದಸುಂದರಪದಕ್ರಮಭಾವ್ಯೈಃ ಭಾಸಿತಾಂ ಪ್ರಕಟವರ್ಣಗುಣಾಢ್ಯಾಮ್ ।**

**ಭಾರತೋತ್ತಮಭೃತಾಮನುರೂಪಾಚ್ಛಾದನಾಂ ಸಮಧಿಕಸ್ವರಶೋಭಾಮ್ ॥ 25 ॥**

**ಪದಚ್ಛೇದ—** ಪಾದಸುಂದರಪದಕ್ರಮಭಾವ್ಯೈಃ, ಭಾಸಿತಾಂ, ಪ್ರಕಟವರ್ಣಗುಣಾಢ್ಯಾಂ, ಭಾರತೋತ್ತಮಭೃತಾಂ, ಅನುರೂಪಾಚ್ಛಾದನಾಂ, ಸಮಧಿಕಸ್ವರಶೋಭಾಂ ।

**ಅನ್ವಯ—** ಪಾದಸುಂದರಪದಕ್ರಮಭಾವೈಃ ಭಾಸಿತಾಂ ಪ್ರಕಟವರ್ಣಗುಣಾಢ್ಯಾಂ ಭಾರತೋತ್ತಮಭೃತಾಂ ಅನುರೂಪಾಚ್ಛಾದನಾಂ ಸಮಧಿಕಸ್ವರಶೋಭಾಂ ।

**ಅನ್ವಯಾರ್ಥ—**

**ಪಾದಸುಂದರಪದಕ್ರಮಭಾವೈಃ** = ಕೇಳಲು ಸುಂದರವಾದ ಪದಗಳ ಅಭಿಪ್ರಾಯಗಳಿಂದ

**ಭಾಸಿತಾಂ** = ಪ್ರಕಾಶಿಸಲ್ಪಟ್ಟ

**ಪ್ರಕಟವರ್ಣಗುಣಾಢ್ಯಾಂ** = ಅಕ್ಷರಗಳ ಸ್ಪಷ್ಟತ್ವಾದಿಗಳಿಂದ ಕೂಡಿದ

**ಭಾರತೋತ್ತಮಭೃತಾಂ** = ಮಹಾಭಾರತ, ಉತ್ತಮಸಾತ್ವಿಕಪುರಾಣಗಳು, ಇವುಗಳಿಂದ ಪೋಷಿಸಲ್ಪಟ್ಟ (ವ್ಯಾಖ್ಯಾನಿಸಲ್ಪಟ್ಟ)

**ಅನುರೂಪಾಚ್ಛಾದನಾಂ** = ಉಚಿತವಾದ ವೇದಾಧಿಕಾರಿಗಳಾದ ಶೂದ್ರರಲ್ಲಿ ಉಪದೇಶ ಮಾಡದಿರುವುದು ಎಂಬ ಮರೆಮಾಚಿಕೆಯುಳ್ಳ

**ಸಮಧಿಕಸ್ವರಶೋಭಾಂ** = ಬಹಳವಾಗಿ ಉದಾತ್ತಾದಿಸ್ವರಗಳ ಸುಂದರವಾದ ವಿಕಾಸವುಳ್ಳ

**ದ್ರೌಪದಿಯ ಪಕ್ಷದಲ್ಲಿ**

**ಪಾದಸುಂದರಪದಕ್ರಮಭಾವೈಃ** = ಮನೋಹರವಾದ ಕಾಲುಗಳ ಹೆಜ್ಜೆಯಿಡುವ ಚಮತ್ಕಾರಗಳಿಂದ ಕೂಡಿ

**ಭಾಸಿತಾಂ** = ಶೋಭಿಸಲ್ಪಟ್ಟ

**ಪ್ರಕಟವರ್ಣಗುಣಾಢ್ಯಾಂ** = ಕೃಷ್ಣವರ್ಣದಿಂದ, ವಿಷ್ಣುಭಕ್ತ್ಯಾದಿಗುಣಗಳಿಂದ ಕೂಡಿದ,

**ಭಾರತೋತ್ತಮಭೃತಾಂ** = ಭರತಕುಲದಲ್ಲಿ ಉತ್ಪನ್ನರಾದ ರಾಜರುಗಳಲ್ಲಿ ಶ್ರೇಷ್ಠರಾದ ಪಾಂಡವರಿಂದ ಪಾಣಿ-ಗ್ರಹಣವನ್ನು ಮಾಡಿಸಿಕೊಳ್ಳಲ್ಪಟ್ಟ

**ಅನುರೂಪಾಚ್ಛಾದನಾಂ** = ಯೋಗ್ಯವಾದ ವಸ್ತ್ರವುಳ್ಳ

**ಸಮಧಿಕಸ್ವರಶೋಭಾಂ** = ಅತ್ಯುತ್ತಮವಾದ ಸ್ವರದ ಧ್ವನಿಯಿಂದ ಶೋಭೆಯುಳ್ಳ

**ತಾತ್ಪರ್ಯ—** ದ್ರೌಪದಿಯು ಕಾಲುಗಳ ಮನೋಹರವಾದ ಹೆಜ್ಜೆಯಿಡುವ ಚಮತ್ಕಾರಗಳಿಂದಲೂ, ವಿಲಾಸ-ಗಳಿಂದಲೂ ಕೂಡಿದ್ದಳು. ಆಕರ್ಷಕವಾದ ಕಪ್ಪಾದ ಮೈ ಬಣ್ಣ ಮತ್ತು ಹರಿಭಕ್ತ್ಯಾದಿ ಗುಣಗಳಿಂದ ಕೂಡಿದ್ದಳು. ಭರತ-ವಂಶದಲ್ಲಿ ಹುಟ್ಟಿದವರಲ್ಲಿ ಶ್ರೇಷ್ಠರಾದ ಪಾಂಡವರಿಂದ ಪತ್ನಿಯಾಗಿ ವರಿಸಲ್ಪಟ್ಟಿದ್ದಳು. ಯೋಗ್ಯವಾದ ವಸ್ತ್ರವನ್ನುಟ್ಟು ಕಿವಿ-ಗಿಂಪಾದ ಕಂಠಸ್ವರದಿಂದ ಪ್ರಕಾಶಿಸುತ್ತಿದ್ದಳು. ಅವಳಂತೆಯೇ ವೇದಸಮೂಹವು ಪಾದ (ಋಕ್ಕಿನ ನಾಲ್ಕನೆಯ ಒಂದಂಶ), ಸುಂದರವಾದ ಪದಗಳು, ವೇದಪಾಠದ ಕ್ರಮವೂ ಮತ್ತು ಒಳ್ಳೆಯ ಅಭಿಪ್ರಾಯ ಇವುಗಳಿಂದ ಅಲಂಕೃತವಾಗಿತ್ತು. ಅಕ್ಷರಗಳ ಸ್ಪಷ್ಟ ಮೊದಲಾದ ಗುಣಗಳಿಂದ ಕೂಡಿದ್ದಿತು. ಭಾರತವೂ ಉತ್ತಮವಾದ ಸಾತ್ವಿಕ ಪುರಾಣಗಳೂ ಇವುಗಳಿಂದ ಕೂಡಿದ್ದಿತು. ಭಾರತವೂ ಉತ್ತಮವಾದ ಸಾತ್ವಿಕ ಪುರಾಣಗಳೂ ಇವುಗಳಿಂದ ತನ್ನ ತಾತ್ಪರ್ಯವನ್ನು ಪ್ರಕಟಗೊಳಿಸುತ್ತಿತ್ತು. ವೇದಾಧಿಕಾರಿಗಳಲ್ಲದ ಶೂದ್ರಾದಿ ಜನರಿಗೆ ಕಾಣದಂತೆ ಅಡಗಿರುತ್ತಿತ್ತು. ಉದಾತ್ತಾದಿ ಸ್ವರಗಳಿಂದ ಶೋಭಿಸುತ್ತಿತ್ತು.

**ವಿಗ್ರಹ—**

**ಪಾದಸುಂದರಪದಕ್ರಮಭಾವೈಃ—** (ಸುಂದರಾಣಿ ಚ ತಾನಿ ಪದಾನಿ ಚ ಸುಂದರಪದಾನಿ), ಪಾದಾಶ್ಚ ಸುಂದರಪದಾನಿ ಚ ಕ್ರಮಾಶ್ಚ ಪಾದನುಹರಪದ ಕ್ರಮಾಃ ಪಾದಸುಂದರಪದಕ್ರಮಾಣಾಂ ಭಾವಃ ಪಾದಸುಂದರಪದಕ್ರಮಭಾವಃ ತೈಃ ।

**ಪ್ರಕಟವರ್ಣಗುಣಾಢ್ಯಾಂ—** ವರ್ಣಾನಾಂ ಗುಣಾಃ ವರ್ಣಗುಣಾಃ, ಪ್ರಕಟಾಶ್ಚ ತೇ ವರ್ಣಗುಣಾಶ್ಚ ಪ್ರಕಟ-ವರ್ಣಗುಣಾಃ, ತೈಃ ಪ್ರಕಟವರ್ಣಗುಣೈಃ, ಆಢ್ಯಾಪ್ರಕಟವರ್ಣ ಗುಣಾಢ್ಯಾ ತಾಂ ।

**ಭಾರತೋತ್ತಮಭೃತಾಂ**— ಭಾರತಂ ಚ ಉತ್ತಮಂ ಚ ಭಾರತೋತ್ತಮಂ, ಭಾರತೋತ್ತಮಾಭ್ಯಾಂ ಭೃತಾ ಭಾರತೋತ್ತಮಭೃತಾಂ ।

**ಅನುರೂಪಾಚ್ಛಾದನಾಂ**— ಅನುರೂಪಂ ಆಚ್ಛಾದನಂ ಯಸ್ಯಾಸಾ ಅನುರೂಪಾಚ್ಛಾದನಾ ತಾಂ ।

★ ★ ★

**ದ್ರೌಪದಿಯ ಭಕ್ತಿ ವಿವರಣೆ**

**ರಾಜಸೂಯಮುಖಸನ್ಮಖವೃತ್ತಾಂ ವಾಸುದೇವಗುಣನಿಶ್ಚಿತಭಾವಾಮ್ ।**
**ಸರ್ವಧರ್ಮಪರಿಶಿಕ್ಷಣದಕ್ಷಾಂ ವಂದಿತಾಂ ಜನತಯಾ ಜನನೀವತ್ ॥ 26 ॥**

**ಪದಚ್ಛೇದ**— ರಾಜಸೂಯಮುಖಸನ್ಮಖವೃತ್ತಾಂ, ವಾಸುದೇವಗುಣನಿಶ್ಚಿತಭಾವಾಂ, ಸರ್ವಧರ್ಮಪರಿಶಿಕ್ಷಣ-ದಕ್ಷಾಂ, ವಂದಿತಾಂ, ಜನತಯಾ, ಜನನೀವತ್ ।

**ಅನ್ವಯ**— ರಾಜಸೂಯಮುಖಸನ್ಮಖವೃತ್ತಾಂ ವಾಸುದೇವಗುಣನಿಶ್ಚಿತಭಾವಾಂ ಸರ್ವಧರ್ಮಪರಿಶಿಕ್ಷಣದಕ್ಷಾಂ ಜನತಯಾ ಜನನೀವತ್ ವಂದಿತಾಂ।

**ಅನ್ವಯಾರ್ಥ**—

**ರಾಜಸೂಯಮುಖಸನ್ಮಖವೃತ್ತಾಂ** = ರಾಜಸೂಯಯಜ್ಞವೇ ಆದಿಯಾದ ಸಜ್ಜನರ ಯಜ್ಞಗಳಲ್ಲಿ ಪ್ರವೃತ್ತರಾದ,
**ವಾಸುದೇವಗುಣನಿಶ್ಚಿತಭಾವಾಂ** = ನಾರಾಯಣನ ಜ್ಞಾನಾನಂದಾದಿ ಶುಭಧರ್ಮಗಳಲ್ಲಿ ಅಭಿಪ್ರಾಯವುಳ್ಳ,
**ಸರ್ವಧರ್ಮಪರಿಶಿಕ್ಷಣದಕ್ಷಾಂ** = ಸಂಧ್ಯೋಪಾಸನ ಮೊದಲಾದ ಧರ್ಮಗಳ ಜ್ಞಾಪಕ ವಿಷಯದಲ್ಲಿ ಚತುರರಾದ,
**ಜನತಯಾ** = ಜನಸಮೂಹದಿಂದ
**ಜನನೀವತ್** = ಜನನಿಯಂತೆ
**ವಂದಿತಾಂ** = ವಂದಿಸಲ್ಪಟ್ಟ

**ತಾತ್ಪರ್ಯ**— ವೇದಸಮೂಹವು ರಾಜಸೂಯ ಮೊದಲಾದ ಯಾಗಗಳಲ್ಲಿ ಮಂತ್ರರೂಪವಾಗಿರುವುದ, ಶ್ರೀಹರಿಯ ಗುಣಗಳನ್ನು ಮುಖ್ಯವಾಗಿ ಹೇಳುವುದು, ಸಂಧ್ಯಾದಿ ಎಲ್ಲ ಧರ್ಮಗಳನ್ನು ಬೋಧಿಸುವುದು. ತಾಯಿಯಂತೆ ಈ ವೇದಸಮೂಹವನ್ನು ಸಜ್ಜನರು ನಮಸ್ಕಾರ ಮಾಡುವರು. ಹಾಗೆಯೇ ದ್ರೌಪದೀದೇವಿಯರು ಧರ್ಮರಾಜನು ಮಾಡಿದ ರಾಜಸೂಯಾದಿ ಯಾಗಗಳಲ್ಲಿ ಸಹಕಾರಿಣಿಯಾಗಿದ್ದಳು. ಶ್ರೀಕೃಷ್ಣನಲ್ಲಿ ದೃಢಮನಸ್ಸುಳ್ಳವಳು. ಎಲ್ಲ ಧರ್ಮಸೂಕ್ಷ್ಮಗಳನ್ನು ತಿಳಿಸುವುದರಲ್ಲಿ ಸಮರ್ಥಳು. ಆದ್ದರಿಂದ ಜನರು ಆಕೆಯನ್ನು ತಾಯಿಯಂತೆ ನಮಸ್ಕಾರ ಮಾಡುತ್ತಿದ್ದರು.

ವಿಗ್ರಹ—

**ರಾಜಸೂಯಮುಖಸನ್ಮಖವೃತ್ತಾಂ**— ರಾಜಸೂಯಃ ಮುಖಂ ಯೇಷಾಂ ತೇ ರಾಜಸೂಯಮುಖಾಃ, ಸತಾಂ ಮಖಾಃ ಸನ್ಮಖಾಃ, ರಾಜಸೂಯಮುಖಾಶ್ಚ ತೇ ಸನ್ಮಖಾಶ್ಚ ರಾಜಸೂಯಮುಖಸನ್ಮಖಾಃ, ತೇಷು ವೃತ್ತಾಂ ರಾಜಸೂಯಮುಖಸನ್ಮಖವೃತ್ತಾಂ ।

**ವಾಸುದೇವಗುಣನಿಶ್ಚಿತಭಾವಾಂ**— ವಾಸುದೇವಸ್ಯ ಗುಣೇ ನಿಶ್ಚಿತಃ ಭಾವಃ ಯಸ್ಯಾಃ ಸಾ ವಾಸುದೇವ-ಗುಣನಿಶ್ಚಿತಭಾವಾ ತಾಂ ।

**ಸರ್ವಧರ್ಮಪರಿಶಿಕ್ಷಣದಕ್ಷಾಂ**— ಸರ್ವೇ ಚ ತೇ ಧರ್ಮಾಶ್ಚ ಸರ್ವಧರ್ಮಾಃ, ಸರ್ವಧರ್ಮಾಣಾಂ ಪರಿ-ಶಿಕ್ಷಣಃ ಸರ್ವಧರ್ಮಪರಿಶಿಕ್ಷಣಃ, ಸರ್ವಧರ್ಮಪರಿಶಿಕ್ಷಣೇ ದಕ್ಷಾಂ ಸರ್ವಧರ್ಮಪರಿಶಿಕ್ಷಣದಕ್ಷಾ ತಾಂ।

### ಕೌರವರ ಕ್ರೌರ್ಯ - ಮಾಯಾವಾದಿಗಳ ಸಾಧನೆ

**ಮೌಲಿಸಂಗ್ರಹವಿಕರ್ಷಣದೂನಾಂ ಮಾಯಿನಾ ಸದಸಿ ದುಷ್ಷಜನೇನ ।**
**ನ್ಯಾಯಮಾರ್ಗಮಪಹಾಯ ಮಹಾಂತಂ ಸ್ವೇಶ್ವರತ್ವಮಪಿ ಸಾಧಯತಾಲಮ್ ॥ 27 ॥**

**ಪದಚ್ಛೇದ—** ಮೌಲಿಸಂಗ್ರಹವಿಕರ್ಷಣದೂನಾಂ, ಮಾಯಿನಾ, ಸದಸಿ, ದುಷ್ಷಜನೇನ, ನ್ಯಾಯಮಾರ್ಗಂ, ಅಪಹಾಯ, ಮಹಾಂತಂ, ಸ್ವೇಶ್ವರತ್ವಂ, ಅಪಿ, ಸಾಧಯತಾ, ಅಲಂ ।

**ಅನ್ವಯ—** ಸದಸಿ, ದುಷ್ಷಜನೇನ, ಮಾಯಿನಾ, ಮೌಲಿಸಂಗ್ರಹವಿಕರ್ಷಣದೂನಾಂ, ಮಹಾಂತಂ, ನ್ಯಾಯ-ಮಾರ್ಗಂ, ಅಪಹಾಯ, ಅಲಂ, ಸ್ವೇಶ್ವರತ್ವಂ, ಸಾಧಯತಾ ।

**ಅನ್ವಯಾರ್ಥ—**

**ಸದಸಿ** = ಸಭೆಯಲ್ಲಿ

**ದುಷ್ಷಜನೇನ** = ದುಷ್ಟಜನರಾದ

**ಮಾಯಿನಾ** = ಮಾಯಾವಾದಿಗಳಿಂದ

**ಮೌಲಿಸಂಗ್ರಹವಿಕರ್ಷಣದೂನಾಂ** = ವೇದಶಿರೋಭೂತವಾದ ಉಪನಿಷತ್ತಿನ ಗ್ರಹಣದಿಂದ ಬೇರೆಯಾದ ಯೋಜನೆಯಿಂದ ಸಂತಾಪಿತವಾದ

**ಮಹಾಂತಂ** = ಮಹಾತ್ಮನಾದ

**ನ್ಯಾಯಮಾರ್ಗಂ** = ಭಗವಂತನಿಂದಲೇ ಎಲ್ಲಾ ಈಶ್ವರತ್ವಪ್ರತಿಪಾದಿಕವಾದ ಬ್ರಹ್ಮಮೀಮಾಂಸಾಶಾಸ್ತ್ರಸಿದ್ಧ-ಯುಕ್ತವಾದ ಮಾರ್ಗವಿಚಾರವನ್ನು

**ಅಪಹಾಯ** = ಬಿಟ್ಟು

**ಸ್ವೇಶ್ವರತ್ವಂ** = ತಾನೇ ಈಶ್ವರತ್ವ ಮತ್ತು ಸಾಮ್ರಾಜ್ಯತ್ವ ಎಂಬುದಾಗಿ

**ಸಾಧಯತಾ** = ಹೇಳುತ್ತಿರುವ (ಅದರಿಂದ ದುಃಖಿತವಾದ ವೇದಸಮೂಹವನ್ನು)

**ದ್ರೌಪದೀಪಕ್ಷದಲ್ಲಿ-**

**ಮಹಾಂತಂ ನ್ಯಾಯಮಾರ್ಗಂ** = ಉತ್ತಮವಾದ ಧರ್ಮದ ದಾರಿಯನ್ನು

**ಅಪಹಾಯ** = ತೊರೆದು

**ಅಲಂ** = ಚೆನ್ನಾಗಿ

**ಸ್ವೇಶ್ವರತ್ವಂ ಅಪಿ** = ತನ್ನ ಒಡೆತನವನ್ನು

**ಸಾಧಯತಾ** = ಸಾಧಿಸುವ

**ಮಾಯಿನಾ** = ಕಪಟನಾದ

**ದುಷ್ಷಜನೇನ** = ದುಃಶ್ಯಾಸನನಿಂದ

**ಸದಸಿ** = ಸಭೆಯಲ್ಲಿ

**ಮೌಲಿಸಂಗ್ರಹವಿಕರ್ಷಣದೂನಾಂ** = ಕೇಶಪಾಶವನ್ನು ಎಳೆಯುವುದರಿಂದ ದುಃಖಿಗೊಂಡಿರತಕ್ಕ ತಲೆಯಿಂದ ಕೂಡಿದ ದ್ರೌಪದಿಯನ್ನು

**ತಾತ್ಪರ್ಯ—** ಪಾಂಡವರಿಗೆ ಕೊಡಬೇಕಾದ ರಾಜ್ಯವನ್ನು ಕೊಡದೆ ಸಕಲ ರಾಜ್ಯಕ್ಕೂ ದುರ್ಯೋಧನ ಮತ್ತು ತಾನೇ ರಾಜರೆಂದು ಹೇಳುತ್ತಾ ಉತ್ತಮಾದ ಧರ್ಮಮಾರ್ಗವನ್ನು ತ್ಯಜಿಸಿ ದುಶ್ಶಾಸನನು ಸಭೆಯಲ್ಲಿ ದ್ರೌಪದಿಯ ಜಡೆಯನ್ನು ಹಿಡಿದೆಳೆದನು. ಆದರಿಂದ ಅವಳು ತುಂಬಾ ದುಃಖಿತಳಾದಳು. ಅದರಂತೆ ಎಲ್ಲರಿಗೂ ಸಮ್ಮತವಾದ ಹರಿಯೇ

ಸರ್ವೋತ್ತಮನೆಂದು ಸಾಧಿಸುವ ಬ್ರಹ್ಮಸೂತ್ರಗಳ ನ್ಯಾಯಮಾರ್ಗವನ್ನು ಬಿಟ್ಟು, ತಾನೇ ಪರಬ್ರಹ್ಮನು, ಈಶ್ವರನು ಎಂದು ಮಾಯಾವಾದಿ ಜನರು ಸಾಧಿಸುತ್ತಾರೆ. ಸಭೆಗಳಲ್ಲಿ ವೇದಶಿರಸ್ಸುಗಳಾದ ಉಪನಿಷತ್ತುಗಳಿಗೆ ಸಮ್ಮತವಲ್ಲದ - ''ಜೀವರೂ ಈಶ್ವರನೂ ಒಂದೇ. ಈಶ್ವರನಿಗಿಂತ ಬೇರೆಯಾದ ಪ್ರಪಂಚವೇ ಇಲ್ಲ'' ಇತ್ಯಾದಿ ವಿರುದ್ಧಾರ್ಥಗಳನ್ನು ಮಾಡಿದ ಪ್ರಯುಕ್ತ ವೇದಸಮೂಹವೂ ದುಃಖಿತವಾಗಿತ್ತು, ಶೋಭಾರಹಿತವಾಗಿತ್ತು.

**ವಿಗ್ರಹ—**

**ಸ್ವೈಶ್ವರತ್ವಂ—** ಈಶ್ವರಸ್ಯ ಭಾವಃ ಈಶ್ವರತ್ವಂ ಸ್ವಸ್ಯ ಈಶ್ವರತ್ವಂ ಸ್ವೈಶ್ವರತ್ವಂ ।

**ನ್ಯಾಯಮಾರ್ಗಂ—** ನ್ಯಾಯಸ್ಯ ಮಾರ್ಗಂ ನ್ಯಾಯಮಾರ್ಗಂ ।

**ದುಷ್ಟಜನೇನ—** ದುಷ್ಟಶ್ಚಾಸೌ ಜನಶ್ಚ ದುಷ್ಟಜನಃ, ತೇನ ದುಷ್ಟಜನೇನ ।

**ಮೌಲಿಸಂಗ್ರಹವಿಕರ್ಷಣದೂನಾಂ—** ಮೌಲೀನಾಂ ಸಂಗ್ರಹಃ ಮೌಲಿಸಂಗ್ರಹಃ, ಮೌಲಿಸಂಗ್ರಹೇಣ ವಿಕರ್ಷಣಂ ಮೌಲಿಸಂಗ್ರಹವಿಕರ್ಷಣಂ, ಮೌಲಿಸಂಗ್ರಹವಿಕರ್ಷಣೇನ ದೂನಾಂ ಮೌಲಿಸಂಗ್ರಹ-ವಿಕರ್ಷಣದೂನಾಂ ।

★ ★ ★

ವೇದಸಮೂಹದಂತಿರುವ ದ್ರೌಪದಿಯ ರಕ್ಷಣೆ

## ಸಜ್ಜನೈಃ ಕತಿಪಯೈರತಿದೀನೈಶ್ಚಾಲಿತೈಃ ಕಲಿಬಲಾಚ್ಛುಭಮಾರ್ಗಾತ್ ।
## ಅಪ್ಯುಪೇಕ್ಷಿತವಿಕರ್ಷಣದುಃಖಾಂ ಸಾತಿಶೋಕಮಪಿ ಕೈಶ್ಚನ ದೃಷ್ಟಾಮ್ ॥ 28 ॥

**ಪದಚ್ಛೇದ—** ಸಜ್ಜನೈಃ, ಕತಿಪಯೈಃ, ಅತಿದೀನೈಃ, ಚಾಲಿತೈಃ, ಕಲಿಬಲಾತ್, ಶುಭಮಾರ್ಗಾತ್, ಅಪಿ, ಉಪೇಕ್ಷಿತ-ವಿಕರ್ಷಣದುಃಖಾಂ, ಸಾತಿಶೋಕಂ, ಅಪಿ, ಕೈಶ್ಚನ, ದೃಷ್ಟಾಂ ।

**ಅನ್ವಯ—** ಕಲಿಬಲಾತ್ ಶುಭಮಾರ್ಗಾತ್ ಚಾಲಿತೈಃ ಅತಿದೀನೈಃ ಕತಿಪಯೈಃ, ಕೈಶ್ಚನ ಸಜ್ಜನೈರಪಿ ಉಪೇಕ್ಷಿತ-ವಿಕರ್ಷಣದುಃಖಾಂ, ಕೈಶ್ಚನ ಸಜ್ಜನೈಃ, ಸಾತಿಶೋಕಂ, ದೃಷ್ಟಾಂ ।

**ಅನ್ವಯಾರ್ಥ—**

**ಕಲಿಬಲಾತ್** = ಕಲಿ ಎಂಬ ಹೆಸರಿನ ದೈತ್ಯನ ಸಾಮರ್ಥ್ಯದಿಂದ

**ಶುಭಮಾರ್ಗಾತ್** = ಧರ್ಮಮಾರ್ಗದಿಂದ

**ಚಾಲಿತೈಃ** = ತಪ್ಪುವಂತೆ ಮಾಡಲ್ಪಟ್ಟ

**ಅತಿದೀನೈಃ** = ಅತ್ಯಂತ ದೀನರಾದ

**ಕತಿಪಯೈಃ ಕೈಶ್ಚನ ಸಜ್ಜನೈರಪಿ ಉಪೇಕ್ಷಿತವಿಕರ್ಷಣದುಃಖಾಂ** = ಕೆಲವು ಸಜ್ಜನರಿಂದಲೂ ಕೂಡ ಮಾಯಾ-ವಾದಿಗಳ ವಿಷಯಗಳಲ್ಲಿ ಉದಾಸೀನ ಮಾಡಲ್ಪಡಲು ಕೆಲವರು ಸಿದ್ಧಾಂತವನ್ನು ನಿರಾಕರಣೆ ಮಾಡಲು ದುಃಖಗೊಂಡ

**ಕೈಶ್ಚನ ಸಜ್ಜನೈಃ ಸಾತಿಶೋಕಂ** = ಕೆಲವು ಋಷಿಗಳಿಂದ ಬಹಳದುಃಖದಿಂದ ಕೂಡಿದ್ದು ಹೇಗಾಗುತ್ತದೋ ಹಾಗೆ

**ದೃಷ್ಟಾಂ** = ಮಾಯಾವಾದಿಸಿದ್ಧಾಂತವೂ ಕೂಡ ಭಗವನ್ಮಹಿಮೆಯನ್ನು ಅಪಲಾಪಿಸುತ್ತದೆ ಎಂಬ ದುಃಖವುಳ್ಳ (ವೇದಸಮೂಹವು)

**ದ್ರೌಪದೀಪಕ್ಷ**

**ಕಲಿಬಲಾತ್ ಶುಭಮಾರ್ಗಾತ್ ಚಾಲಿತೈಃ ಅತಿದೀನೈಃ ಕತಿಪಯೈಃ ಕೈಶ್ಚನ ಸಜ್ಜನೈರಪಿ ಉಪೇಕ್ಷಿತವಿಕರ್ಷಣ-ದುಃಖಾಂ** = ಭೀಷ್ಮ ಮೊದಲಾದವರೂ ಕೂಡ ಮದದಿಂದ ಕೂಡಿರುವ ದುಶ್ಶಾಸನನನ್ನು ಉಪೇಕ್ಷಿಸಿ-

ದರು. ತುಂಬಿದ ಸಭೆಯಲ್ಲಿ ಕೂದಲನ್ನು ಹಿಡಿದು ಎಳೆದರೂ ಕೂಡ ಭೀಷ್ಮ ಮೊದಲಾದವರು ಕಲಿಯ ಆವೇಶದಿಂದ ಮೋಹಿತರಾಗಿ ಧರ್ಮಮಾರ್ಗವನ್ನು ಬಿಟ್ಟವರಾಗಿ ದುಶ್ಶಾಸನನನ್ನು ಉದಾಸೀನ ಮಾಡಿದ್ದರಿಂದ ದುಃಖಿಗೊಂಡ

**ಕೈಶ್ಚನ ಸಜ್ಜನೈಃ ಸಾತಿಶೋಕಂ ದೃಷ್ಟಾಂ** = ವಿದುರಾದಿಗಳಿಂದ ಅತ್ಯಂತ ದುಃಖದಿಂದ ನೋಡಲ್ಪಟ್ಟ ದ್ರೌಪದಿಯು

**ತಾತ್ಪರ್ಯ—** ಸಜ್ಜನರಾದ ಭೀಷ್ಮದ್ರೋಣಾದಿಗಳು ಕೆಲವರು ಕಲಿಯ ಆವೇಶಬಲದಿಂದ ನ್ಯಾಯಧರ್ಮದ ಮಾರ್ಗವನ್ನು ಬಿಟ್ಟು ದುಷ್ಟನಾದ ದುಶ್ಶಾಸನ ತನ್ನ ಜಡೆಯನ್ನು ಹಿಡಿದು ಎಳೆಯುವಾಗಲೂ ಉದಾಸೀನರಾಗಿ ಅವನನ್ನು ಶಿಕ್ಷಿಸದೆ ಇದ್ದಾರಲ್ಲಾ ಎಂದು ದ್ರೌಪದಿಯು ದುಃಖಿತಳಾಗಿದ್ದಳು. ವಿದುರನೇ ಮೊದಲಾದ ಕೆಲವರೂ, ಸೂರ್ಯಾದಿ ಧರ್ಮಸಾಕ್ಷಿ ದೇವತೆಗಳು ಕಲಿಯ ಆವೇಶವಿಲ್ಲದುದರಿಂದ ತನಗಾಗುವ ಪೀಡೆಯನ್ನು ಬಹುಕಷ್ಟದಿಂದ ನೋಡುತ್ತಿದ್ದರು. ಕಲಿಯ ಸಾಮರ್ಥ್ಯದಿಂದ ಧರ್ಮಮಾರ್ಗವನ್ನು ಬಿಟ್ಟು ದುರ್ಬಲರಾದ ಕೆಲವು ಮಂದಿ ಸಜ್ಜನರು ಜೀವೇಶ್ವರರಿಗೆ ಐಕ್ಯವನ್ನು ಹೇಳುವ ಸಿದ್ಧಾಂತವನ್ನು ನಿರಾಕರಿಸದೆ, ವೇದಕ್ಕೆ ಮಾಡಿರುವ ಅಪಾರ್ಥವನ್ನು ನೋಡಿಯೂ ಉದಾಸೀನರಾಗಿದ್ದರು. ಕಲಿಬಾಧೆಗೆ ಒಳಗಾಗದ ಕೆಲವು ಮಹರ್ಷಿಗಳು ಮತ್ತು ಸಜ್ಜನರು ವೇದಮಾರ್ಗವು ಹಾಳಾಯಿತಲ್ಲಾ ಎಂದು ಮನಸ್ಸಿನಲ್ಲಿ ನೊಂದುಕೊಳ್ಳುತ್ತಿದ್ದರು. ವೇದದ ಸತ್ಯವಾದ ತಾತ್ಪರ್ಯವನ್ನು ಪ್ರಕಟಿಸುವವರು ಯಾರೂ ಇರಲಿಲ್ಲ. ಹೀಗೆ ವೇದಸಮೂಹವನ್ನು ದ್ರೌಪದಿಯಂತಿತ್ತು.

**ವಿಗ್ರಹ—**

**ಕಲಿಬಲಾತ್—** ಕಲೇಃ ಬಲಂ ಕಲಿಬಲಂ ತಸ್ಮಾತ್ ಕಲಿಬಲಾತ್ ।

**ಉಪೇಕ್ಷಿತವಿಕರ್ಷಣದುಃಖಾಂ—** ಉಪೇಕ್ಷಿತೇನ ವಿಕರ್ಷಣಃ ಉಪೇಕ್ಷಿತವಿಕರ್ಷಣಃ, ಉಪೇಕ್ಷಿತವಿಕರ್ಷಣೇನ ದುಃಖಂ ಯಸ್ಯಾಃ ಸಾ ಉಪೇಕ್ಷಿತವಿಕರ್ಷಣದುಃಖಾ, ತಾಂ ಉಪೇಕ್ಷಿತವಿಕರ್ಷಣದುಃಖಾಂ ।

**ಅತಿದೀನೈಃ—** ಅತ್ಯಂತ ದೀನಾಃ ಅತಿದೀನೈಃ ।

**ಶುಭಮಾರ್ಗಾತ್—** ಶುಭಶ್ಚಾಸೌ ಮಾರ್ಗಶ್ಚ ಶುಭಮಾರ್ಗಃ ತಸ್ಮಾತ್ ಶುಭಮಾರ್ಗಾತ್ ।

★ ★ ★

### ರಕ್ಷಣೆಗಾಗಿ ವಾಸುದೇವನ ಪ್ರಾರ್ಥನೆ

**ವಾಸುದೇವಧರಣೀಧರನಾಥೇತ್ಯುಚ್ಚೈರಪಿ ಮುಹುಃ ಪ್ರವದಂತೀಮ್ ।**
**ಪೂರ್ಣಷಡ್ಗುಣಮಜಂ ಗತದೋಷಂ ಬಿಭ್ರತೀಂ ಹೃದಿ ವಿವಿಕ್ತಮಶೇಷಾತ್ ॥ 29 ॥**

**ಪದಚ್ಛೇದ—** ವಾಸುದೇವಧರಣೀಧರನಾಥ, ಇತಿ, ಉಚ್ಚೈಃ, ಅಪಿ, ಮುಹುಃ, ಪ್ರವದಂತೀಂ, ಪೂರ್ಣಷಡ್ಗುಣಂ, ಅಜಂ, ಗತದೋಷಂ, ಬಿಭ್ರತೀಂ, ಹೃದಿ, ವಿವಿಕ್ತಂ, ಅಶೇಷಾತ್ ।

**ಅನ್ವಯ—** ವಾಸುದೇವ ಧರಣೀಧರ ನಾಥ! ಇತಿ ಮುಹುಃ ಉಚ್ಚೈಃ ಪ್ರವದಂತೀಂ ಪೂರ್ಣಷಡ್ಗುಣಂ ಗತ-ದೋಷಂ ಅಶೇಷಾತ್ ವಿವಿಕ್ತಂ ಅಜಂ ಹೃದಿ ಬಿಭ್ರತೀಂ ।

**ಅನ್ವಯಾರ್ಥ—**

**ವಾಸುದೇವಧರಣೀನಾಥ** = ವಾಸುದೇವನೇ ! ಧರಣೀಧರನೇ ! ಸ್ವಾಮಿಯೇ !

**ಇತಿ ಮುಹುಃ** = ಎಂದು ಮತ್ತೆ ಮತ್ತೆ

**ಉಚ್ಚೈಃ** = ಸ್ಪಷ್ಟವಾಗಿ, ಗಟ್ಟಿಯಾಗಿ

**ಪ್ರವದಂತೀಂ** = ಉಚ್ಚಾರಣೆ ಮಾಡುತ್ತಿರುವ,

**ಪೂರ್ಣಷಡ್ಗುಣಂ** = ಪೂರ್ಣವಾದ ಐಶ್ವರ್ಯಾದಿ ಷಡ್ಗುಣಗಳುಳ್ಳ,

**ಗತದೋಷಂ** = ದೋಷವಿಲ್ಲದ,

**ಅಶೇಷಾತ್** = ಚೇತನಾಚೇತನಾತ್ಮಕವಾದ ಸಮಸ್ತ ಜಗತ್ತಿಗಿಂತ

**ವಿವಿಕ್ತಂ** = ವಿಲಕ್ಷಣನಾದ,

**ಅಜಂ** = ಉತ್ಪತ್ತಿರಹಿತನಾದ ಭಗವಂತನನ್ನು

**ಹೃದಿ** = ತನ್ನ ಮುಖ್ಯವಾದ ಅಭಿಪ್ರಾಯದಲ್ಲಿ

**ಬಿಭ್ರತೀಂ** = ಹೇಳುತ್ತಿರುವ

**ದ್ರೌಪದೀ ಪಕ್ಷದಲ್ಲಿ**

**ವಾಸುದೇವಧರಣೀಧರನಾಥ** = ವಾಸುದೇವ ! ಧರಣೀಧರ ! ಸ್ವಾಮಿಯೇ !

**ಇತಿ ಮುಹುಃ ಉಚ್ಚೈಃ** = ಎಂದು ಮತ್ತೆ ಮತ್ತೆ ಗಟ್ಟಿಯಾದ ಧ್ವನಿಯಿಂದ

**ಪ್ರವದಂತೀಂ** = ಉಚ್ಚಾರಣೆ ಮಾಡುತ್ತಿರುವ

**ಅಜಂ** = ಉತ್ಪತ್ತಿಶೂನ್ಯನಾದ ನಾರಾಯಣನನ್ನು

**ಹೃದಿ** = ಮನಸ್ಸಿನಲ್ಲಿ

**ಬಿಭ್ರತೀಂ** = ಧ್ಯಾನ ಮಾಡುತ್ತಿರುವ

**ತಾತ್ಪರ್ಯ—** ದ್ರೌಪದಿಯು 'ಹಾ ವಾಸುದೇವ! ಧರಣೀಧರ! ಸ್ವಾಮೀ! ಚಕ್ರಪಾಣಿಯೇ! ನರಸಿಂಹ!' ಇವೇ ಮೊದಲಾದ ಶ್ರೀಕೃಷ್ಣನ ನಾಮಗಳನ್ನು ಗಟ್ಟಿಯಾಗಿ ತಿರುಗಿತಿರುಗಿ ಉಚ್ಚರಿಸುತ್ತಿದ್ದಳು. ಸಕಲಪ್ರಪಂಚದಿಂದಲೂ ಅತ್ಯಂತ ಭಿನ್ನನಾದ, ಸಮಸ್ತ ಶುಭಗುಣ ಪರಿಪೂರ್ಣನಾದ (ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಸಾಮಾನ್ಯಜ್ಞಾನ, ವಿಶೇಷಜ್ಞಾನ ಎಂಬ ಆರು ಗುಣಗಳುಳ್ಳ), ಉತ್ಪತ್ತಿ ಇಲ್ಲದ, ಯಾವ ದೋಷಗಳೂ ಇಲ್ಲದ ಶ್ರೀಕೃಷ್ಣನನ್ನು ಮನಸ್ಸಿನಲ್ಲಿ ಧರಿಸಿದ್ದಳು. ನೇರಮಾತಯೂ ಹೀಗೇ ಇರುತ್ತಾಳೆ.

**ವಿಗ್ರಹ—**

**ಧರಣೀಧರ—** ಧರಣ್ಯಾಃ ಧರಃ ಧರಣೀಧರಃ ತಸ್ಯ ಸಂಬುದ್ಧಿ ಹೇ ಧರಣೀಧರ!

**ಪೂರ್ಣಷಡ್ಗುಣಂ—** ಷಟ್ ಚ ತೇ ಗುಣಾಶ್ಚ ಷಡ್ಗುಣಾಃ, ಪೂರ್ಣಾಃ ಷಡ್ಗುಣಾಃ ಯಸ್ಯ ಸಃ ಪೂರ್ಣಷಡ್ಗುಣಃ, ತಂ ಪೂರ್ಣಷಡ್ಗುಣಂ ।

**ಗತದೋಷಃ—** ಗತಾಃ ದೋಷಾಃ ಯಸ್ಮಾತ್ ಸಃ ಗತದೋಷಃ, ತಂ ಗತದೋಷಂ ।

★ ★ ★

### ದ್ರೌಪದಿಯ ಅವಮಾನದಂತೆ ವೇದಸಮೂಹದ ಅವಮಾನ

**ವಾರ್ಯತಾಂ ಬುಧಜನೈರ್ನನು ಹಾಹಾ ನೈಷ ಧರ್ಮ ಇತಿ ಚಾಭಿದಧಾನಾಮ್ ।**
**ಕೃಷ್ಣಪಾಲಿತತಮಾಮನವದ್ಯಾಮಪ್ಯನನ್ಯಶರಣಾಂ ಶರಣೋತ್ಕಾಮ್ ॥ 30 ॥**

**ಪದಚ್ಛೇದ—** ವಾರ್ಯತಾಂ, ಬುಧಜನೈಃ, ನನು, ಹಾಹಾ ನ ಏಷ, ಧರ್ಮಃ, ಇತಿ, ಚಾಭಿದಧಾನಾಂ, ಕೃಷ್ಣ-ಪಾಲಿತತಮಾಂ, ಅನವದ್ಯಾಂ, ಅಪಿ, ಅನನ್ಯಶರಣಾಂ, ಶರಣೋತ್ಕಾಂ ।

**ಅನ್ವಯ—** ಬುಧಜನೈಃ ವಾರ್ಯತಾಂ, ಏಷಃ ಧರ್ಮಃ ನ ನನು ಇತ್ಯಭಿದಧಾನಾಂ, ಹಾ ! ಹಾ ! ಇತಿ ಚ ಅಭಿದಧಾನಾಂ ಕೃಷ್ಣಪಾಲಿತತಮಾಂ, ಅನವದ್ಯಾಂ ಅನನ್ಯಶರಣಾಂ ಶರಣೋತ್ಕಾಂ ।

**ಅನ್ವಯಾರ್ಥ—**

**ಬುಧಜನೈಃ** = ಪಂಡಿತಜನರಿಂದ

**ವಾರ್ಯತಾಂ** = ಜೀವೇಶ್ವರರಿಗೆ ಐಕ್ಯವನ್ನು ಹೇಳುವ ಮಾಯಾವಾದಿಮತವು ನಿರಾಕರಿಸಲ್ಪಡಲಿ,

**ಏಷಃ** = ಈ ಐಕ್ಯವಾದವು

**ಧರ್ಮಃ ನ ನನು ಹಿ** = ಧರ್ಮವಲ್ಲವಷ್ಟೆ ?

**ಹಾಹಾ** = ಅಯ್ಯೋ ! ಅಯ್ಯೋ !

**ಇತ್ಯಭಿದಧಾನಾಂ** = ಎಂದು ಹೇಳುತ್ತಿರುವ

**ಕೃಷ್ಣಪಾಲಿತತಮಾಂ** = ಶ್ರೀವೇದವ್ಯಾಸದೇವರಿಂದ ಬಹಳವಾಗಿ ಕಾಪಾಡಲ್ಪಟ್ಟ

**ಅನವದ್ಯಾಂ** = ದೋಷರಹಿತನಾದ

**ಅನನ್ಯಶರಣಾಂ ಅಪಿ** = ತನಗಿಂತ ವ್ಯತಿರಿಕ್ತನಾದ ರಕ್ಷಕನು (ಮಧ್ವಾಚಾರ್ಯರನ್ನು ಬಿಟ್ಟು ಬೇರೆ ರಕ್ಷಕ-ರಿಲ್ಲದವಳಾಗಿ)

**ಶರಣೋತ್ಕಾಮ್** = ಮಧ್ವಾಚಾರ್ಯರಿಂದ ರಕ್ಷಣೆಯನ್ನು ಪಡೆಯುವುದರಲ್ಲಿ ಉತ್ಕಂಠಿತವಾದ (ವೇದ-ಸಮೂಹವನ್ನು)

**ದ್ರೌಪದೀಪಕ್ಷ**

**ಬುಧಜನೈಃ** = ಭೀಷ್ಮಾದಿಗಳಿಂದ

**ವಾರ್ಯತಾಂ** = ದುರ್ಯೋಧನನಿಂದ ಮಾಡಲ್ಪಟ್ಟ ಕೆಲಸವು ತಡೆಯಲ್ಪಡಲಿ

**ಇತಿ ಏಷಃ ಧರ್ಮಃ ನ ನನು ಹಿ** = ಇವರಿಂದ ಮಾಡಲ್ಪಟ್ಟ ಕೆಲಸವು ಧರ್ಮವಲ್ಲವಷ್ಟೆ !

**ಹಾ ಹಾ** = ಅಯ್ಯೋ ! ಅಯ್ಯೋ !

**ಇತಿ ಚ ಅಭಿದಧಾನಾಂ** = ಎಂದು ಹೇಳುತ್ತಿರುವ

**ಕೃಷ್ಣಪಾಲಿತತಮಾಂ** = ಶ್ರೀವಾಸುದೇವನಿಂದ ಕಾಪಾಡಲ್ಪಟ್ಟ

**ಅನವದ್ಯಾಂ** = ಅಜ್ಞಾನ ಮೊದಲಾದ ದೋಷರಹಿತಳಾದ

**ಅನನ್ಯಶರಣಾಂ ಅಪಿ** = ಭೀಮಸೇನದೇವರನ್ನು ಬಿಟ್ಟು ಬೇರೆ ರಕ್ಷಕರಿಲ್ಲದಿದ್ದವಳಾಗಿ

**ಶರಣೋತ್ಕಾಂ** = ತನ್ನ ರಕ್ಷಣೆಯ ವಿಷಯದಲ್ಲಿ ಉತ್ಕಂಠಿತಳಾದ

**ತಾತ್ಪರ್ಯ—** ಮತ್ತು, ದ್ರೌಪದಿಯು ಹೇಗಿದ್ದಳೆಂದರೆ- ದುಶ್ಶಾಸನನು ಸೀರೆಯನ್ನು ಸೆಳೆಯುತ್ತಿರುವಾಗ 'ಎಲೈ ಭೀಷ್ಮಾದಿಗಳಿರಾ! ನೀವು ಎಲ್ಲಾ ಧರ್ಮತತ್ವವನ್ನು ತಿಳಿದವರಾಗಿದ್ದೀರಿ. ಈ ದುಷ್ಟನಾದ ದುಶ್ಶಾಸನನು ನನ್ನ ಮಾನಭಂಗ ಮಾಡುತ್ತಾನೆ. ಇದನ್ನು ತಡೆಯಿರಿ. ಈ ಜೂಜು ಧರ್ಮವಲ್ಲ. ಪತಿವ್ರತೆಯ ಮಾನಭಂಗ ಧರ್ಮವಲ್ಲ! ಹಾ ಅಯ್ಯೋ!' ಎಂದು ಕೂಗಿ ಹೇಳುತ್ತಿದ್ದಳು. ಅಂತಹ ಕಷ್ಟಕಾಲದಲ್ಲಿಯೂ ಧರ್ಮದ ವಿಷಯದಲ್ಲಿ ಅಜ್ಞಾನಾದಿ ದೋಷಗಳು ಅವಳಿಗಿರಲಿಲ್ಲ. ಶ್ರೀಕೃಷ್ಣನ ಆದರ ವಿಶ್ವಾಸಗಳಿಗೆ ಪಾತ್ರಳಾದ ಅವಳನ್ನು ಶ್ರೀಕೃಷ್ಣನು ಸಂತೈಸಿದನು. ಭೀಮಸೇನನೊಬ್ಬನಲ್ಲದೆ ತನಗೆ ಬೇರೆ ಯಾರೂ ರಕ್ಷಕರಿಲ್ಲವೆಂದು ಅವಳು ತಿಳಿದಿದ್ದು, ಅವಳ ಶತ್ರುವು ತನ್ನನ್ನು ಮಾನಭಂಗ ಮಾಡಲು ಎಳೆಯುತ್ತಿದ್ದಾಗ ಯಾರಾದರೂ ಕಾಪಾಡಬೇಕೆಂದು ರಕ್ಷಕರನ್ನು ಅವಳು ಅಪೇಕ್ಷಿಸುತ್ತಿದ್ದಳು. ಅದರಂತೆಯೇ, ವೇದಸಮೂಹವು 'ಅಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ' ಇತ್ಯಾದಿ ತನ್ನ ವಚನಗಳಿಂದಲೇ ದುಷ್ಟ ಮತಗಳನ್ನು ನಿರಾಕರಿಸದೇ ಇದ್ದರೆ ಅಂಧತಮಸವೇ ಪ್ರಾಪ್ತವಾಗುವುದರಿಂದ ಜೀವೇಶ್ವರರಿಗೆ ಐಕ್ಯವನ್ನು ಸಾಧಿಸುವ ದುಷ್ಟಮತಗಳನ್ನು 'ಎಲೈ ಪಂಡಿತಶ್ರೇಷ್ಠರೇ! ನಿರಾಕರಿಸಿರಿ. ಈ ಐಕ್ಯವಾದವು ಧರ್ಮವಲ್ಲ. ಅಯ್ಯೋ! ಅಯ್ಯೋ! ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ ಎಂದು ನಾನೇ ಭೇದವು ಸತ್ಯವೆಂದು ಶಪಥ ಪೂರ್ವಕವಾಗಿ ಹೇಳುತ್ತಿದ್ದೇನೆ' ಎಂದ

ಹೇಳುತ್ತಿತ್ತು. ಈ ವೇದಸಮೂಹವು ಶ್ರೀ ವೇದವ್ಯಾಸರಿಂದ ಆದರಿಸಲ್ಪಡತಕ್ಕದ್ದಾಗಿದೆ. ನಿತ್ಯವಾದುದು, ಯಾವ ಪುರುಷನೂ ನಿರ್ಮಿಸಿಲ್ಲವಾದ್ದರಿಂದ ಯಾವ ದೋಷವೂ ಇಲ್ಲದ್ದು. ಶ್ರೀಮಧ್ವಾಚಾರ್ಯರನ್ನು ಬಿಟ್ಟು ಬೇರೆ ರಕ್ಷಕರಿಲ್ಲದ್ದು. ದುರ್ವಾದಿಗಳ ಉಪದ್ರವಗಳಿಂದ ತನ್ನನ್ನು ಯಾರಾದರೂ ಕಾಪಾಡಬೇಕೆಂದು ಅಪೇಕ್ಷಿಸುತ್ತಿತ್ತು.

**ವಿಗ್ರಹ—**

**ಬುಧಜನೈಃ—** ಬುಧಾಶ್ಚ ತೇಃ ಜನಾಶ್ಚ ಬುಧಜನಾಃ, ತೈಃ ಬುಧಜನೈಃ ।

**ಕೃಷ್ಣಪಾಲಿತತಮಾಂ—** ಕೃಷ್ಣೇನ ಪಾಲಿತತಮಾ ಕೃಷ್ಣಪಾಲಿತತಮಾ ತಾಂ ।

**ಅನವದ್ಯಾಂ—** ನ ವಿದ್ಯತೇ ಅವದ್ಯಂ ಯಸ್ಯಾಃ ಸಾ ಅನವದ್ಯಾ, ತಾಂ ಅನವದ್ಯತಾಂ ।

**ಅನನ್ಯಶರಣಾಂ—** ನ ವಿದ್ಯತೇ ಶರಣಂ ಯಸ್ಯಾಃ ಸಾ ಅನನ್ಯಶರಣಾ, ತಾಂ ಅನನ್ಯಶರಣಾಂ ।

**ಶರಣೋತ್ಕಾಂ—** ಶರಣೇ ಉತ್ಕಾ ಶರಣೋತ್ಕಾ ತಾಂ ।

ವೇದಿಜಾಂ ಎಂಬ ಶ್ಲೋಕವನ್ನು ಮೊದಲ್ಲೇ ವ್ಯಾಖ್ಯಾನ ಮಾಡಿದೆ.

★ ★ ★

### ಮಾಯಾವಾದ ಖಂಡಿಸಲು ಆಚಾರ್ಯರ ಪ್ರತಿಜ್ಞೆ

**ವೇದಿಜಾಮಿವ ಪುರಾ ಭರತಾಗ್ರ್ಯಃ ಸಸ್ವಯಂ ಶ್ರುತಿತತಿಂ ಖಲು ದೃಷ್ಟ್ವಾ।**
**ಪುಷ್ಟಬುದ್ಧಿಕರೋತ್ ಕರುಣಾಬ್ಧಿಃ ದುಷ್ಟಪಕ್ಷದಮನಸ್ಥಿರಸಂಧಾಮ್ ॥ 31 ॥**

**ಪದಚ್ಛೇದ—** ವೇದಿಜಾಂ, ಇವ, ಪುರಾ, ಭರತಾಗ್ರ್ಯಃ, ಸಃ, ಸ್ವಯಂ, ಶ್ರುತಿತತಿಂ, ಖಲು, ದೃಷ್ಟ್ವಾ, ಪುಷ್ಟಬುದ್ಧಿಃ, ಅಕರೋತ್, ಕರುಣಾಬ್ಧಿಃ, ದುಷ್ಟಪಕ್ಷದಮನಸ್ಥಿರಸಂಧಾಂ ।

**ಅನ್ವಯ—** ಕರುಣಾಬ್ಧಿಃ ಪುಷ್ಟಬುದ್ಧಿಃ ದುಷ್ಟಪಕ್ಷದಮನಸ್ಥಿರಸಂಧಾಂ ಅಕರೋತ್, ಶ್ರುತಿತತಿಂ ದೃಷ್ಟ್ವಾ ಪುರಾ ವೇದಿಜಾಂ ದೃಷ್ಟ್ವಾ ಭರತಾಗ್ರ್ಯಃ ।

**ಅನ್ವಯಾರ್ಥ—**

**ಕರುಣಾಬ್ಧಿಃ** = ಕರುಣೆ ಎಂಬ ಸಮುದ್ರದಂತಿರತಕ್ಕ

**ಪುಷ್ಟಬುದ್ಧಿಃ** = ಪೂರ್ಣವಾದ ಬುದ್ಧಿಯುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು

**ದುಷ್ಟಪಕ್ಷದಮನಸ್ಥಿರಸಂಧಾಂ** = ಮಾಯಿಗಳ ಸಿದ್ಧಾಂತಗಳ ನಿರಾಕರಣೆಯಲ್ಲಿ ದೃಢವಾದ ಪ್ರತಿಜ್ಞೆಯನ್ನು

**ಅಕರೋತ್** = ಮಾಡಿದರು.

**ಶ್ರುತಿತತಿಂ** = ವೇದಗಳ ಸಮೂಹವನ್ನು

**ದೃಷ್ಟ್ವಾ** =ನೋಡಿ

**ಪುರಾ** = ಹಿಂದಿನ ಜನ್ಮದಲ್ಲಿ

**ವೇದಿಜಾಂ** = ದ್ರೌಪದಿಯನ್ನು

**ದೃಷ್ಟ್ವಾ** = ನೋಡಿ

**ಭರತಾಗ್ರ್ಯಃ** = ಭರತಕುಲೋತ್ಪನ್ನರಾದ ರಾಜರಲ್ಲಿ ಶ್ರೇಷ್ಠನಾದ ಭೀಮಸೇನನು ಪ್ರತಿಜ್ಞೆಯನ್ನು ಮಾಡಿದನು.

**ತಾತ್ಪರ್ಯ—** ಹಿಂದೆ ಭೀಮನು ದುರ್ಯೋಧನನೇ ಮೊದಲಾದವರುಗಳಿಂದ ಕಳವಳಗೊಂಡ ದ್ರೌಪದಿಯನ್ನು ನೋಡಿ ದುರ್ಯೋಧನನ ಸಂಹಾರ ಮಾಡುವುದಾಗಿ ದೃಢವಾದ ಪ್ರತಿಜ್ಞೆಯನ್ನು ಹೇಗೆ ಮಾಡಿದನೋ ಹಾಗೆ ಈ

ಮಧ್ವಾಚಾರ್ಯರು ಮಾಯಿಗಳಿಂದ ಕಳವಳಗೊಂಡ ವೇದಸಮೂಹವನ್ನು ನೋಡಿ ಮಾಯಿಗಳ ಸಿದ್ಧಾಂತವನ್ನು ಖಂಡಿಸುತ್ತೇನೆ ಎಂಬ ಪ್ರತಿಜ್ಞೆಯನ್ನು ಮಾಡಿದರು.

ವಿಗ್ರಹ—

**ಕರುಣಾಬ್ಧಿಃ—** ಕರುಣ ಏವ ಅಬ್ಧಿಃ ಯಸ್ಯ ಸಃ ಕರುಣಾಬ್ಧಿಃ ।

**ಪುಷ್ಟಬುದ್ಧಿಃ—** ಪುಷ್ಟಾ ಬುದ್ಧಿಃ ಯಸ್ಯ ಸಃ ಪುಷ್ಟಬುದ್ಧಿಃ ।

**ದುಷ್ಟಪಕ್ಷದಮನಸ್ಥಿರಸಂಧಾಂ—** ದುಷ್ಟಾನಾಂ ಪಕ್ಷಾಃ ದುಷ್ಟಪಕ್ಷಾಃ, ದುಷ್ಟಪಕ್ಷಾಣಾಂ ದಮನೇ ಸ್ಥಿರಃ ದುಷ್ಟಪಕ್ಷದಮನಸ್ಥಿರಃ, ದುಷ್ಟಪಕ್ಷದಮನಸ್ಥಿರಾಃ ಸಂಧಾಃ ಯಸ್ಯಾಃ ಸಾ ದುಷ್ಟಪಕ್ಷದಮನಸ್ಥಿರಸಂಧಾ ತಾಂ ।

**ಶ್ರುತಿತತಿಂ—** ಶ್ರುತೀನಾಂ ತತಿಂ ಶ್ರುತಿತತಿಂ ।

**ಭರತಾಗ್ರ್ಯಃ—** ಭರತಾನಾಂ ಅಗ್ರ್ಯಃ ಭರತಾಗ್ರ್ಯಃ ।

**ಕ್ರಿಯಾಪದ— ಅಕರೋತ್-** ಡುಕೃಞ್ ಕರಣೇ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಅಕರೋತ್' ಇತಿ ರೂಪಮ್ ।

ಅಕರೋತ್ ಅಕುರುತಾಂ ಅಕುರ್ವನ್, ಅಕರೋಃ ಅಕುರುತಂ ಅಕುರುತ, ಅಕರವಂ ಅಕುರ್ವ ಅಕುರ್ಮ ॥

★ ★ ★

ಗೀತಾಭಾಷ್ಯದ ರಚನೆ

**ಅವ್ಯಯಂ ಸತತಮಪ್ಯುಪಭುಕ್ತ್ಯಾ ವಿತ್ತಮಗ್ರ್ಯಮಿವ ದೂರಯಿಯಾಸುಃ ।**
**ಜ್ಯಾಯಸೇ ಸಗುರವೇ ಹರಿಗೀತಾಭಾಷ್ಯಮೇಷ ವಿರಚಯ್ಯ ತದಾಽದಾತ್ ॥ 32 ॥**

**ಪದಚ್ಛೇದ—** ಅವ್ಯಯಂ, ಸತತಂ, ಅಪಿ, ಉಪಭುಕ್ತ್ಯಾ, ವಿತ್ತಂ, ಅಗ್ರ್ಯಂ, ಇವ, ದೂರಯಿಯಾಸುಃ, ಜ್ಯಾಯಸೇ, ಸಗುರವೇ, ಹರಿಗೀತಾಭಾಷ್ಯಂ, ಏಷಃ, ವಿರಚಯ್ಯ, ತದಾ, ಅದಾತ್ ।

**ಅನ್ವಯ—** ಏಷಃ ದೂರಯಿಯಾಸುಃ ತದಾ, ಹರಿಗೀತಾಭಾಷ್ಯಂ ವಿರಚಯ್ಯ ಸಗುರವೇ ಜ್ಯಾಯಸೇ ಅದಾತ್, ದೂರಯಿಯಾಸುಃ ಸತತಂ ಉಪಭುಕ್ತ್ಯಾಪಿ ಅವ್ಯಯಂ ಅಗ್ರ್ಯಂ ವಿತ್ತಂ ।

**ಅನ್ವಯಾರ್ಥ—**

**ಏಷಃ** = ಈ ಮಧ್ವಾಚಾರ್ಯರು

**ದೂರಯಿಯಾಸುಃ** = ದೂರದೇಶವಾದ ಬದರಿಕಾಶ್ರಮವನ್ನು ಕುರಿತು ಹೋಗಲು ಇಚ್ಛೆ ಉಳ್ಳವರಾಗಿ

**ತದಾ** = ಆಗ, ರಜತಪೀಠಪುರವಾಸ ಸಮಯದಲ್ಲಿ

**ಹರಿಗೀತಾಭಾಷ್ಯಂ** = ಭಗವದ್ಗೀತೆಯ ವ್ಯಾಖ್ಯಾನವನ್ನು

**ವಿರಚಯ್ಯ** = ನಿರ್ಮಾಣ ಮಾಡಿ

**ಸಗುರವೇ** = ತಮ್ಮ ಗುರುಗಳಾದ ಅಚ್ಯುತಪ್ರೇಕ್ಷರಿಂದ ಸಹಿತರಾದ

**ಜ್ಯಾಯಸೇ** = ಜ್ಯೇಷ್ಠ ಯತಿಗಳಿಗೆ

**ಅದಾತ್** = ಕೊಟ್ಟರು.

**ದೂರಯಿಯಾಸುಃ** = ದೂರದೇಶವನ್ನು ಕುರಿತು ಹೋಗಲು ಇಚ್ಛೆಯುಳ್ಳ ಒಬ್ಬ ಪುರುಷನು ತನ್ನ ಜನರಿಂದ

**ಸತತಂ** = ಯಾವಾಗಲೂ

**ಉಪಭುಕ್ತ್ವಾಪಿ** = ಭೋಗಿಸಿದರೂ ಕೂಡ

**ಅವ್ಯಯಂ** = ಕಡಿಮೆಯಾಗದಿರುವ

**ಅಗ್ರ್ಯಂ** = ಉತ್ತಮವಾದ

**ವಿತ್ತಂ** = ಹಣವನ್ನು (ಕೊಡುವಂತೆ) ಗೀತಾಭಾಷ್ಯವನ್ನು ಕೊಟ್ಟರು.

**ತಾತ್ಪರ್ಯ—** ಈ ಮಧ್ವಾಚಾರ್ಯರು ದೂರದೇಶದಲ್ಲಿರತಕ್ಕ ಬದರಿಕಾಶ್ರಮಕ್ಕೆ ಹೋಗಬೇಕೆಂದು ಇಚ್ಛಿಸಿದರು. ಅವರು ಹೋಗುವ ಮುನ್ನ ಭಗವದ್ಗೀತೆಗೆ ವ್ಯಾಖ್ಯಾನವನ್ನು ಬರೆದು ತಮ್ಮ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಂದ ಕೂಡಿಕೊಂಡ ಜ್ಯೇಷ್ಠ ಯತಿಗಳಿಗೆ ಕೊಟ್ಟರು. ಹೇಗೆ ಒಬ್ಬ ಪುರುಷನು ದೂರದೇಶವನ್ನು ಕುರಿತು ಹೋಗಲು ಇಚ್ಛಿಸಿದಾಗ ಅವನು ತನ್ನ ಹತ್ತಿರ ಇರತಕ್ಕ ಉತ್ತಮವಾದ ಹಣವನ್ನು ತನ್ನ ಬಂಧುಗಳಿಗೆ ಕೊಡುತ್ತಾನೋ, ಹಾಗೆ ಈ ಮಧ್ವಾಚಾರ್ಯರು ಎಷ್ಟು ಬಾರಿ ಓದಿ ಕೇಳಿದರೂ ಅರ್ಥವು ಕಡಿಮೆಯಾಗದ ಶ್ರೇಷ್ಠವಾದ ''ಗೀತಾಭಾಷ್ಯ'' ವನ್ನು ಕೊಟ್ಟರು.

**ವಿಗ್ರಹ—**

**ದೂರಯಿಯಾಸುಃ—** ದೂರಂ ಯಾತುಂ ಇಚ್ಛುಃ ದೂರಯಿಯಾಸುಃ

**ಹರಿಗೀತಾಭಾಷ್ಯಂ—** ಹರಿಗೀತಾಯಾಃ ಭಾಷ್ಯಂ ಹರಿಗೀತಾಭಾಷ್ಯಂ ।

**ಕ್ರಿಯಾಪದ— ಅದಾತ್**- ಡು ದಾಞ್ ದಾನೇ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಅದಾತ್' ಇತಿ ರೂಪಮ್।

ಅದಾತ್ ಅದಾತಾಂ ಅದುಃ, ಅದಾಃ ಅದಾತಂ ಅದಾತ, ಅದಾಂ ಅದಾವ ಅದಾಮ ॥

★ ★ ★

ಪ್ರಥಮಬದರೀಯಾತ್ರೆಗೆ ಸಿದ್ಧತೆ

**ಹೇತುವಾದಿನಿ ವಿಶಂಕಟಬುದ್ಧೌ**
**ತೀರ್ಥಮರ್ಥಯತಿ ಗಂತುಮನುಜ್ಞಾಮ್ ।**
**ತಾಂ ದಿದೇಶ ಪುರುಷೋತ್ತಮತೀರ್ಥ-**
**ಶ್ಚಿಂತಯನ್ ಸ ಪುರುಷೋತ್ತಮರಕ್ಷಾಮ್ ॥ 33 ॥**

**ಪದಚ್ಛೇದ—** ಹೇತುವಾದಿನಿ, ವಿಶಂಕಟಬುದ್ಧೌ, ತೀರ್ಥಂ, ಅರ್ಥಯತಿ, ಗಂತುಂ, ಅನುಜ್ಞಾಂ, ತಾಂ, ದಿದೇಶ, ಪುರುಷೋತ್ತಮತೀರ್ಥಃ, ಚಿಂತಯನ್, ಸಃ, ಪುರುಷೋತ್ತಮರಕ್ಷಾಂ ।

**ಅನ್ವಯ—** ಹೇತುವಾದಿನಿ ವಿಶಂಕಟಬುದ್ಧೌ ತೀರ್ಥಂ ಗಂತುಂ ಅನುಜ್ಞಾಂ ಅರ್ಥಯತಿ(ಸತಿ), ಪುರುಷೋತ್ತಮ-ತೀರ್ಥಃ ಸಃ ತಾಂ ದಿದೇಶ, ಪುರುಷೋತ್ತಮರಕ್ಷಾಂ ಚಿಂತಯನ್ ।

**ಅನ್ವಯಾರ್ಥ—**

**ಹೇತುವಾದಿನಿ** = ದೇವಕಾರ್ಯಾರ್ಥವಾದ ಯಾವ ಗಮನಕಾರಣವನ್ನು ಹೇಳುತ್ತಿರುವ

**ವಿಶಂಕಟಬುದ್ಧೌ** = ವಿಶಾಲವಾದ ಬುದ್ಧಿಯುಳ್ಳ ಪೂರ್ಣಪ್ರಜ್ಞಾಚಾರ್ಯರು,

**ತೀರ್ಥಂ** = ಭಾಗೀರಥಿ ಮೊದಲಾದ ತೀರ್ಥಕ್ಷೇತ್ರಗಳನ್ನು ಕುರಿತು

**ಗಂತುಂ** = ಹೋಗಲು

**ಅನುಜ್ಞಾಂ** = ಅನುಮತಿಯನ್ನು

**ಅರ್ಥಯತಿ(ಸತಿ)** = ಪ್ರಾರ್ಥಿಸುತ್ತಿರಲು,

**ಪುರುಷೋತ್ತಮತೀರ್ಥಂ** = ಸಂನ್ಯಾಸಿಗಳಲ್ಲಿ ಉತ್ತಮರಾದ, ಗುರುಗಳಾದ

**ಸಃ** = ಆ ಅಚ್ಯುತಪ್ರೇಕ್ಷಾಚಾರ್ಯರು,

**ಪುರುಷೋತ್ತಮರಕ್ಷಾಂ** = ಸರ್ವೋತ್ತಮನಾದ ಶ್ರೀಮನ್ನಾರಾಯಣನ ರಕ್ಷೆಯನ್ನು

**ಚಿಂತಯನ್** = ಆಲೋಚಿಸುತ್ತಾ, ಶ್ರೀಮನ್ನಾರಾಯಣನು ಈ ಪೂರ್ಣಪ್ರಜ್ಞಾಚಾರ್ಯರನ್ನು ಮಾರ್ಗದಲ್ಲಿ ರಕ್ಷಿಸಲಿ ಎಂದು ನಾರಾಯಣನನ್ನು ಪ್ರಾರ್ಥಿಸುತ್ತಾ

**ತಾಂ** = ಅನುಜ್ಞೆಯನ್ನು

**ದಿದೇಶ** = ಕೊಟ್ಟರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಭಾಗೀರಥಿ ಮೊದಲಾದ ತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡಿಕೊಂಡು ಬರುತ್ತೇನೆ ಎಂದು ಸಕಾರಣವನ್ನು ಹೇಳಿ ತಮ್ಮ ಗುರುಗಳಾದ ಶ್ರೀ ಅಚ್ಯುತಪ್ರೇಕ್ಷಾಚಾರ್ಯರನ್ನು ಅನುಮತಿ ಕೇಳುತ್ತಾರೆ. ಆಗ ಅಚ್ಯುತಪ್ರೇಕ್ಷಾಚಾರ್ಯರು ಶ್ರೀಮನ್ನಾರಾಯಣನು ಈ ನನ್ನ ಶಿಷ್ಯನನ್ನು ರಕ್ಷಿಸಲಿ ಎಂದು ದೇವರಧ್ಯಾನವನ್ನು ಮಾಡುತ್ತಾ ಶ್ರೀಮಧ್ವಾಚಾರ್ಯರ ಬದರೀಯಾತ್ರೆಗೆ ಅನುಮತಿಯನ್ನು ಕೊಟ್ಟರು.

**ವಿಗ್ರಹ—**

**ಪುರುಷೋತ್ತಮರಕ್ಷಾಂ—** ಪುರುಷೋತ್ತಮರಕ್ಷಾಂ ಪುರುಷೋತ್ತಮಸ್ಯ ರಕ್ಷಾ ಪುರುಷೋತ್ತಮರಕ್ಷಾ ತಾಂ ಪುರುಷೋತ್ತಮರಕ್ಷಾಂ ।

**ವಿಶಂಕಟಬುದ್ಧೌ—** ವಿಶಂಕಟಾ ಬುದ್ಧಿಃ ಯಸ್ಯ ಸಃ ವಿಶಂಕಟಬುದ್ಧಿಃ, ತಸ್ಮಿನ್ ।

**ಪುರುಷೋತ್ತಮತೀರ್ಥಂ—** ಪುರುಷೇಷು ಉತ್ತಮಃ ಪುರುಷೋತ್ತಮಃ, ಪುರುಷೋತ್ತಮಶ್ಚಾಸೌ ತೀರ್ಥಶ್ಚ ಪುರುಷೋತ್ತಮತೀರ್ಥಃ, ತಂ ಪುರುಷೋತ್ತಮತೀರ್ಥಂ ।

**ಕ್ರಿಯಾಪದ—** ದಿದೇಶ- ದಿಶ ಅತಿಸರ್ಜನೇ ಇತ್ಯಸ್ಮಾದ್ಧಾತೋಃ ಲಿಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ದಿದೇಶ''ಇತಿ ರೂಪಮ್ ।

ದಿದೇಶ ದಿದಿಶತುಃ ದಿದಿಶುಃ, ದಿದಿಶಿಥ ದಿದಿಶಥುಃ ದಿದಿಶ, ದಿದೇಶ ದಿದಿಶ ದಿದಿಶಿವ ದಿದಿಶಿಮ ॥

★ ★ ★

**ನೀರಜಾ ಮಲಯಮಂಡಲವೃತ್ತ್ಯಾ ಶ್ಲಾಘಿತೋ ಭುವಿ ಸದಾಲ್ಯನುಯಾತಃ ।**
**ಸಾಧುಪಾಂಥಪರಿತಾಪಮಪಾಸ್ಯನ್ನುತ್ತರಾಂ ದಿಶಮಯಾನ್ಮರುದಂಶಃ ॥ 34 ॥**

**ಪದಚ್ಛೇದ—** ನೀರಜಾಃ, ಮಲಯಮಂಡಲವೃತ್ತ್ಯಾ, ಶ್ಲಾಘಿತಃ, ಭುವಿ ಸದಾಲ್ಯನುಯಾತಃ, ಸಾಧುಪಾಂಥ-ಪರಿತಾಪಂ, ಅಪಾಸ್ಯನ್, ಉತ್ತರಾಂ, ದಿಶಂ, ಅಯಾತ್ ಮರುದಂಶಃ ।

**ಅನ್ವಯ—** ಮರುದಂಶಃ ಉತ್ತರಾಂ ದಿಶಂ ಅಯಾತ್, ನೀರಜಾಃ ಮಲಯಮಂಡಲವೃತ್ತ್ಯಾ ಭುವಿ ಶ್ಲಾಘಿತಃ, ಸದಾಲ್ಯನುಯಾತಃ ಸಾಧುಪಾಂಥಪರಿತಾಪಂ ಅಪಾಸ್ಯನ್ ।

**ಅನ್ವಯಾರ್ಥ—**

**ಮರುದಂಶಃ** = ವಾಯುವಿನ ಅವತಾರರಾದ ಶ್ರೀಪೂರ್ಣಪ್ರಜ್ಞಾಚಾರ್ಯರು

**ಉತ್ತರಾಂ** = ಉತ್ತರಾದಿ

**ದಿಶಂ** = ದಿಕ್ಕನ್ನು ಕುರಿತು

**ಆಯಾತ್** = ಹೋದರು.

**ನೀರಜಾಃ** = ರಜೋಗುಣವು ಇಲ್ಲದ

**ಮಲಯಮಂಡಲವೃತ್ಯಾ** = ಮಲಯಪರ್ವತದ ಸ್ಥಳದಲ್ಲಿ ಇರುವುದರಿಂದ

**ಭುವಿ** = ಭೂಮಿಯಲ್ಲಿ

**ಶ್ಲಾಘಿತಃ** = ಪ್ರಶಂಸಿಸಲ್ಪಟ್ಟ

**ಸದಾಲ್ಯನುಯಾತಃ** = ಸಜ್ಜನರ ಸಮೂಹದಿಂದ ಅನುಸರಿಸಲ್ಪಟ್ಟ

**ಸಾಧುಪಾಂಥಪರಿತಾಪಂ** = ಸಜ್ಜನರಾದ ಮಾರ್ಗಸ್ಥರ ತಾಪತ್ರಯವನ್ನು

**ಅಪಾಸ್ಯನ್** = ಹೋಗಲಾಡಿಸಿದರು.

**ತಾತ್ಪರ್ಯ—** ಪೂರ್ಣಪ್ರಜ್ಞಾಚಾರ್ಯರು ಉತ್ತರ ದಿಕ್ಕಿಗೆ ಹೊರಟರು. ಮಲಯ ಪರ್ವತದ ಸ್ಥಳದಲ್ಲಿ ಸಂಚಾರ ಮಾಡಿದರು. ಅವರು ಮಲಯಪರ್ವತದ ಸಮೀಪದಲ್ಲಿ ದಕ್ಷಿಣದೇಶದಲ್ಲಿ ವಾದಿಗಳನ್ನು ಜಯಿಸಿ ಸಜ್ಜನರ ಸಮೂಹದಿಂದ ಕೂಡಿಕೊಂಡು ಅವರ ಮಾರ್ಗಸ್ಥರ ಸಂಸಾರತಾಪವನ್ನು ಚೆನ್ನಾಗಿ ಪರಿಹರಿಸಿದರು. ಹೀಗೆ ಮಾಡುತ್ತಾ ಮರುತನ ಅಂಶರಾದ ಅವರು ಮಾರುತನ ಅಂಶದಂತೆ (ಗಾಳಿಯಂತೆ) ಮುಂದುವರಿದರು.

**ವಿಗ್ರಹ—**

**ಮರುದಂಶ—** ಮರುತಃ ಅಂಶಃ ಮರುದಂಶಃ ।

**ಮಲಯಮಂಡಲವೃತ್ಯಾ—** ಮಲಯಸ್ಯ ಮಂಡಲಂ ಮಲಯಮಂಡಲಂ, ಮಲಯಮಂಡಲೇ ವರ್ತತೇ ಇತಿ ಮಲಯಮಂಡಲ ವೃತ್ತಿಃ ತಸ್ಮಿನ್ ।

**ಸದಾಲ್ಯನುಯಾತಃ—** ಸತಾಂ ಆಲಿಃ ಸದಾಲಿಃ, ಸದಾಲ್ಯಾ ಅನುಯಾತಃ ಸದಾಲ್ಯನುಯಾತಃ ।

**ಸಾಧುಪಾಂಥಪರಿತಾಪಂ—** ಸಾಧುನಾಂ ಪಾಂಥಂ ಸಾಧುಪಾಂಥಂ, ಸಾಧುಪಾಂಥಾನಾಂ ಪರಿತಾಪಂ ಸಾಧುಪಾಂಥಪರಿತಾಪಂ ।

**ಕ್ರಿಯಾಪದ— ಆಯಾತ್**- ಯಾ ಪ್ರಾವಣೇ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಆಯಾತ್'' ಇತಿ ರೂಪಮ್ ।

ಅಯಾತ್ ಅಯಾತಾಂ ಅಯುಃ, ಅಯಾಃ ಅಯಾತಂ ಅಯಾತ, ಅಯಾಂ ಅಯಾವ ಅಯಾಮ ॥

★ ★ ★

**ಬುದ್ಧಿಶುದ್ಧಿಕರಗೋನಿಕರಾಢ್ಯಂ ತೀರ್ಥಜಾತಮುಭಯಂ ಚ ಧರಣ್ಯಾಮ್ ।**
**ಆತ್ಮಮಜ್ಜನತ ಏವ ನಿಕಾಮಂ ಪರ್ಯಶೋಧಯದಮಂದಮನೀಷಃ ॥ 35 ॥**

**ಪದಚ್ಛೇದ—** ಬುದ್ಧಿಶುದ್ಧಿಕರಗೋನಿಕರಾಢ್ಯಂ, ತೀರ್ಥಜಾತಂ, ಉಭಯಂ, ಚ, ಧರಣ್ಯಾಂ, ಆತ್ಮಮಜ್ಜನತ, ಏವ, ನಿಕಾಮಂ, ಪರ್ಯಶೋಧಯತ್, ಅಮಂದಮನೀಷಃ ।

**ಅನ್ವಯ—** ಅಮಂದಮನೀಷಃ ಧರಣ್ಯಾಂ, ಬುದ್ಧಿಶುದ್ಧಿಕರಗೋನಿಕರಾಢ್ಯಂ ಉಭಯಂ ತೀರ್ಥಜಾತಂ ಚ, ಆತ್ಮಮಜ್ಜನತಃ ಏವ ನಿಕಾಮಂ ಪರ್ಯಶೋಧಯತ್ ।

**ಅನ್ವಯಾರ್ಥ—**

**ಅಮಂದಮನೀಷಃ** = ಪೂರ್ಣಪ್ರಜ್ಞಾಚಾರ್ಯರು

**ಧರಣ್ಯಾಂ** = ಭೂಮಿಯಲ್ಲಿ

**ಬುದ್ಧಿಶುದ್ಧಿಕರಗೋನಿಕರಾಢ್ಯಂ** = ಮೈಮನಸ್ಸನ್ನು ಶುದ್ಧಗೊಳಿಸುವ ನೀರಿನ ಸಮೂಹದಿಂದ, ಮನಸ್ಸನ್ನು ಶುದ್ಧಿಗೊಳಿಸುವ ಮಾತುಗಳ ಸಮೂಹದಿಂದ ಸಂಪನ್ನವಾದ

**ಉಭಯಂ** = ಎರಡು ವಿಧವಾದ

**ತೀರ್ಥಜಾತಂ** = ಭಾಗವತಾದಿ ಶಾಸ್ತ್ರಗಳ ಮತ್ತು ನದಿ ಮೊದಲಾದ ಜಲಗಳ ಸಮೂಹವನ್ನು

**ಆತ್ಮಮಜ್ಜನತ ಏವ** = ತಮ್ಮ ಪರಾಮರ್ಶದಿಂದ ಅಥವಾ ಮುಳುಗುವಿಕೆಯಿಂದಲೇ

**ನಿಕಾಮಂ** = ಅತ್ಯಂತವಾಗಿ

**ಪರ್ಯಶೋಧಯತ್** = ಪವಿತ್ರಗೊಳಿಸಿದರು ।

**ತಾತ್ಪರ್ಯ**— ಪೂರ್ಣಪ್ರಜ್ಞಾಚಾರ್ಯರು ಭೂಮಿಯಲ್ಲಿ ಎರಡು ವಿಧವಾಗಿ ಭಾಗವತ ಮೊದಲಾದ ಶಾಸ್ತ್ರಗಳನ್ನು ಮತ್ತು ನದಿಮೊದಲಾದ ಜಲಗಳನ್ನು ಪವಿತ್ರಗೊಳಿಸಿದರು. ಉತ್ತರ ದಿಕ್ಕಿನಲ್ಲಿರುವ ಅನೇಕ ನದಿಗಳನ್ನು ತಮ್ಮ ಸ್ನಾನದಿಂದಲೇ ಶುದ್ಧಗೊಳಿಸಿದರು. ಭಾಗವತ ಮೊದಲಾದ ಶಾಸ್ತ್ರಗಳನ್ನು ಪರಾಮರ್ಶಿಸಿ ಅದಕ್ಕೆ ವ್ಯಾಖ್ಯಾನ ನಿರಾಕರಣಪೂರ್ವಕವಾದ ಗ್ರಂಥೋದ್ಧಾರದಿಂದ ವೇದವ್ಯಾಸದೇವರಿಗೆ ಸಂಮತವಾದ ಪಾಠವನ್ನು ಸ್ಥಿರಗೊಳಿಸಿದರು.

**ವಿಗ್ರಹ**—

**ಆತ್ಮಮಜ್ಜನತಃ**— ಆತ್ಮನಃ ಮಜ್ಜನಂ ಆತ್ಮಮಜ್ಜನಂ, ತಸ್ಮಾತ್ ಆತ್ಮಮಜ್ಜನತಃ ।

**ಅಮಂದಮನೀಷಃ**— ಅಮಂದಾ ಮನೀಷಾ ಯಸ್ಯ ಸಃ ಅಮಂದಮನೀಷಃ ।

**ತೀರ್ಥಜಾತಂ**— ತೀರ್ಥಾನಾಂ ಜಾತಂ ತೀರ್ಥಜಾತಂ ।

**ಬುದ್ಧಿಶುದ್ಧಿಕರಗೋನಿಕರಾಢ್ಯಂ**— ಕುರ್ವಂತೀತಿ ಕರಾಃ, ಶುದ್ಧೇಃ ಕರಾಃ ಶುದ್ಧಿಕರಾಃ, ಬುದ್ಧೇಃ ಶುದ್ಧಿಕರಾಃ ಬುದ್ಧಿಶುದ್ಧಿಕರಾಃ, ಬುದ್ಧಿಶುದ್ಧಿಕರಾಶ್ಚ ತೇ ಗವಶ್ಚ ಬುದ್ಧಿಶುದ್ಧಿಕರಗವಃ, ಬುದ್ಧಿಶುದ್ಧಿಕರಗವಾಂ ನಿಕರೇಣ ಆಢ್ಯಂ ಬುದ್ಧಿಶುದ್ಧಿಕರಗೋನಿಕರಾಢ್ಯಂ ।

**ಕ್ರಿಯಾಪದ**—ಪರಿ ಇತ್ಯುಪಸರ್ಗಪೂರ್ವಕಾತ್ ಶುಧ್ ಶುದ್ಧೌ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮ-ಪುರುಷೇ ಏಕವಚನೇ ''ಪರ್ಯಶೋಧಯತ್'' ಇತಿ ರೂಪಮ್ ।

| | | |
|---|---|---|
| ಪರ್ಯಶೋಧಯತ್ | ಪರ್ಯಶೋಧಯತಾಂ | ಪರ್ಯಶೋಧಯನ್ |
| ಪರ್ಯಶೋಧಯಃ | ಪರ್ಯಶೋಧಯತಂ | ಪರ್ಯಶೋಧಯತ |
| ಪರ್ಯಶೋಧಯಂ | ಪರ್ಯಶೋಧಯಾವ | ಪರ್ಯಶೋಧಯಾಮ ॥ |

★ ★ ★

**ವಾಸುದೇವಪದಸಂತತಸಂಗೀ ತೇಜಸಾಪ್ಯಲಮಧಃಕೃತಶರ್ವಃ ।**
**ಅತ್ಯವರ್ತತ ನಿತಾಂತಮಥಾಸೌ ಗಾಂಗಮೋಘಮಘನಾಶನಕೀರ್ತಿಃ ॥ 36 ॥**

**ಪದಚ್ಛೇದ**— ವಾಸುದೇವಪದಸಂತತಸಂಗೀ, ತೇಜಸಾಪಿ, ಅಲಂ, ಅಧಃಕೃತಶರ್ವಃ, ಅತ್ಯವರ್ತತ, ನಿತಾಂತಂ, ಅಥ, ಅಸೌ, ಗಾಂಗಂ, ಓಘಂ, ಅಘನಾಶನಕೀರ್ತಿಃ ।

**ಅನ್ವಯ**— ಅಥ ವಾಸುದೇವಪದಸಂತತಸಂಗೀ ತೇಜಸಾಪಿ ಅಲಂ ಅಧಃಕೃತಶರ್ವಃ ಅಘನಾಶನಕೀರ್ತಿಃ ಅಸೌ, ಗಾಂಗಂ ಓಘಂ ನಿತಾಂತಂ ಅತ್ಯವರ್ತತ ।

**ಅನ್ವಯಾರ್ಥ—**

**ಅಥ** = ಉತ್ತರದೇಶಕ್ಕೆ ಬಂದ ಅನಂತರ

**ವಾಸುದೇವಪದಸಂತತಸಂಗೀ** = ಯಾವಾಗಲೂ ಶ್ರೀವಿಷ್ಣುವಿನ ಪಾದಸ್ಮರಣರೂಪವಾದ ಸಂಗದಿಂದಲೂ,

**ತೇಜಸಾಪಿ** = ತಮ್ಮ ಸಾಮರ್ಥ್ಯದಿಂದಲೂ

**ಅಲಂ** = ಅತ್ಯಂತವಾಗಿ

**ಅಧಃಕೃತಶರ್ವಃ** = ರುದ್ರನಿಂದ ಉತ್ತಮ ಎಂಬುದಾಗಿ

**ಅಘನಾಶನಕೀರ್ತಿಃ** = ಪಾಪವನ್ನು ನಾಶಮಾಡತಕ್ಕ ಮಹಾತ್ಮೆಯುಳ್ಳ

**ಅಸೌ** = ಈ ಮಧ್ವಾಚಾರ್ಯರು,

**ಗಾಂಗಂ ಓಘಂ** = ಗಂಗೆಯ ಪ್ರವಾಹವನ್ನು

**ನಿತಾಂತಂ** = ಅತಿಶಯವಾಗಿ

**ಅತ್ಯವರ್ತತ** = ಅತಿಕ್ರಮಿಸಿದರು (ದಾಟಿದರು).

**ತಾತ್ಪರ್ಯ—** ಪಾಪವನ್ನು ನಾಶಮಾಡುವ ಮಹಾತ್ಮೆ ಉಳ್ಳ ಈ ಪೂರ್ಣಪ್ರಜ್ಞಾಚಾರ್ಯರು ಬಹಳ ರಭಸವಾಗಿದ್ದ ಗಂಗೆಯ ಪ್ರವಾಹವನ್ನು ಅತಿಕ್ರಮಿಸಿದರು. ಭಾಗೀರಥೀ ನದಿಯ ಪ್ರವಾಹವನ್ನು ಸುಭವಾಗಿ ದಾಟಲು ಸಾಧ್ಯವಿಲ್ಲ. ಆದರೆ ಗುಣದಿಂದ ದಾಟಲು ಸುಲಭ ಎಂದು ತಿಳಿಯಬೇಕು. ಈ ಮಧ್ವಾಚಾರ್ಯರು ಗಂಗಾನದಿಯ ಹತ್ತಿರ ಬಂದ ತಕ್ಷಣ ಗಂಗೆಯು ತಲೆಬಾಗಿ ನಮಸ್ಕಾರ ಮಾಡಿದಳು. ಗಂಗೆಯು ಶ್ರೀಹರಿಯ ಪಾದಗಳಿಂದ ಹುಟ್ಟಿದ್ದರೂ ಕೆಳಗೆ ಇಳಿದು ಬಂದುದರಿಂದ ನಿತ್ಯದಲ್ಲಿ ತನ್ನ ತಂದೆಯ ಪಾದಸಂಗವಿಲ್ಲದವಳು. ವಾಸುದೇವ ರೂಪಿಯಾದ ಪರಮಾತ್ಮನ ಪಾದಗಳಲ್ಲಿ ನಿತ್ಯದಲ್ಲಿಯೂ ಆಸಕ್ತರಾದ, ತನ್ನ ಸಾಮರ್ಥ್ಯದಿಂದ ಮಹಾರುದ್ರದೇವರನ್ನು ತಿರಸ್ಕರಿಸುವವರೂ ಆಗಿರುವ ಶ್ರೀಮಧ್ವಾಚಾರ್ಯರು ಗಂಗೆಯ ಪ್ರವಾಹವನ್ನು ಸುಲಭವಾಗಿಯೇ ದಾಟಿದರು. ಹೀಗೆ ತಮ್ಮ ಗುಣಗಳಿಂದ ಗಂಗೆಯನ್ನು ಜಯಿಸಿದರು.

ವಿಗ್ರಹ—

**ವಾಸುದೇವಪದಸಂತತಸಂಗೀ—** ವಾಸುದೇವಸ್ಯ ಪದೇ ವಾಸುದೇವಪದೇ, ಸಂತತಂ ಸಂಗಃ ಅಸ್ಯ ಅಸ್ತೀತಿ ಸಂತತಸಂಗೀ, ವಾಸುದೇವಪದಯೋಃ ಸಂತತಸಂಗೀ ವಾಸುದೇವಪದಸಂತತಸಂಗೀ ।

**ಅಧಃಕೃತಶರ್ವಃ—** ಅಧಃಕೃತ ಶರ್ವಃ ಯೇನ ಸಃ ಅಧಃಕೃತಶರ್ವಃ ।

**ಗಾಂಗಂ—** ಗಂಗಾಯಾಃ ಅಯಂ ಗಾಂಗಃ, ತಂ ಗಾಂಗಂ ।

**ಅಘನಾಶನಕೀರ್ತಿಃ—** ಅಘಾನಾಂ ನಾಶನಂ ಯಯಾ ಸಾ ಅಘನಾಶನಾ ತಾದೃಶೀ ಕೀರ್ತಿಃ ಯಸ್ಯ ಸಃ ಅಘನಾಶನಕೀರ್ತಿಃ ।

**ಕ್ರಿಯಾಪದ—** ಅತಿ ಇತ್ಯುಪಸರ್ಗಪೂರ್ವಕಾತ್ ವೃತ್‌ವರ್ತನೇ ಇತ್ಯಸ್ಮಾದ್ಧಾತೋಃ ಲಙ್ ಆತ್ಮನೇ ಪದಿನಃ ಪ್ರಥಮಪುರುಷೇ ಏಕವಚನೇ ''ಅತ್ಯವರ್ತತ'' ಇತಿ ರೂಪಮ್ । ।

| | | |
|---|---|---|
| ಅತ್ಯವರ್ತತ | ಅತ್ಯವರ್ತೇತಾಂ | ಅತ್ಯವರ್ತಂತ |
| ಅತ್ಯವರ್ತಥಾಃ | ಅತ್ಯವರ್ತೇಥಾಂ | ಅತ್ಯವರ್ತಧ್ವಂ |
| ಅತ್ಯವರ್ತೇ | ಅತ್ಯವರ್ತಾವಹಿ | ಅತ್ಯವರ್ತಾಮಹಿ ॥ |

★ ★ ★

**ತತ್ರ ತತ್ರ ಸ ಜಗತ್ತ್ರಯಚಿತ್ರಂ ಕರ್ಮಶರ್ಮದಮನುಸ್ಮೃತಿಮಾತ್ರಾತ್ ।**
**ಸಂಚರನ್ ವಿದಧದಾಪ ನರಾಣಾಂ ಗೋಚರಂ ಬದರಿಕಾಶ್ರಮಪಾರ್ಶ್ವಮ್ ॥ 37 ॥**

**ಪದಚ್ಛೇದ—** ತತ್ರ, ತತ್ರ, ಸಃ, ಜಗತ್ತ್ರಯಚಿತ್ರಂ, ಕರ್ಮ, ಶರ್ಮದಂ, ಅನುಸ್ಮೃತಿಮಾತ್ರಾತ್, ಸಂಚರನ್, ವಿದಧತ್, ಆಪ, ನರಾಣಾಂ, ಗೋಚರಂ, ಬದರಿಕಾಶ್ರಮಪಾರ್ಶ್ವಂ ।

**ಅನ್ವಯ—** ಸಃ ತತ್ರ ತತ್ರ ಸಂಚರನ್ ಅನುಸ್ಮೃತಿಮಾತ್ರಾತ್ ಶರ್ಮದಂ ಜಗತ್ತ್ರಯಚಿತ್ರಂ ಕರ್ಮ ವಿದಧತ್, ನರಾಣಾಂ ಗೋಚರಂ ಬದರಿಕಾಶ್ರಮಪಾರ್ಶ್ವಂ ಆಪ ।

**ಅನ್ವಯಾರ್ಥ—**

**ಸಃ** = ಆ ಶ್ರೀ ಮಧ್ವಾಚಾರ್ಯರು
**ತತ್ರ ತತ್ರ** = ಆಯಾ ತೀರ್ಥಕ್ಷೇತ್ರಗಳಲ್ಲಿ
**ಸಂಚರನ್** = ಸಂಚರಿಸುತ್ತಾ
**ಅನುಸ್ಮೃತಿಮಾತ್ರಾತ್** = ಸ್ಮರಣಮಾತ್ರದಿಂದ
**ಶರ್ಮದಂ** = ಸುಖವನ್ನುಂಟುಮಾಡುವ,
**ಜಗತ್ತ್ರಯಚಿತ್ರಂ** = ಮೂರು ಲೋಕಗಳಲ್ಲಿಯೂ ಆಶ್ಚರ್ಯಪಡುವಂತಹ
**ಕರ್ಮ** = ಚರಿತ್ರೆಯನ್ನು (ಕಾರ್ಯಗಳನ್ನು)
**ವಿದಧತ್** = ಮಾಡುತ್ತಾ,
**ನರಾಣಾಂ** = ಮನುಷ್ಯರಿಗೆ
**ಗೋಚರಂ** = ಹೋಗಲು ಯೋಗ್ಯವಾದ
**ಬದರಿಕಾಶ್ರಮಪಾರ್ಶ್ವಂ** = ಹಿಮವತ್ ಪರ್ವತದ ದಕ್ಷಿಣದಿಕ್ಕಿನಲ್ಲಿರುವ 'ಬದರೀ' ಎಂಬ ಹೆಸರುಳ್ಳ ಆಶ್ರಮದ ಕ್ಷೇತ್ರವಾದ ನಾರಾಯಣಸ್ಥಾನದ ಸಮೀಪವನ್ನು
**ಆಪ** = ಹೊಂದಿದರು.

**ತಾತ್ಪರ್ಯ—** ಈ ಪೂರ್ಣಪ್ರಜ್ಞಾಚಾರ್ಯರು ಅಲ್ಲಲ್ಲಿ ಇದ್ದಂತಹ ತೀರ್ಥಕ್ಷೇತ್ರಗಳಲ್ಲಿ ಸಂಚರಿಸಿ ಮೂರೂ ಲೋಕಗಳಲ್ಲಿ ಅದ್ಭುತ ಹಾಗೂ ಆಶ್ಚರ್ಯಪಡುವಂತಹ, ಸ್ಮರಣಮಾತ್ರದಿಂದಲೇ ಸುಖವನ್ನು ನೀಡುವ ಕಾರ್ಯಗಳನ್ನು ಮಾಡುತ್ತಾ, ಹಿಮವತ್ಪರ್ವತದ ದಕ್ಷಿಣದಿಕ್ಕಿನಲ್ಲಿರುವ ಬದರೀ ಎಂಬ ಹೆಸರುಳ್ಳ ಆಶ್ರಮದ ಕ್ಷೇತ್ರವಾದ ನಾರಾಯಣಸ್ಥಾನದ ಸಮೀಪವನ್ನು ಹೊಂದಿದರು.

**ವಿಗ್ರಹ—**

**ಅನುಸ್ಮೃತಿಮಾತ್ರಂ—** ಕೇವಲಂ ಅನುಸ್ಮೃತಿಃ ಅನುಸ್ಮೃತಿಮಾತ್ರಂ, ತಸ್ಮಾತ್ ।
**ಜಗತ್ತ್ರಯಚಿತ್ರಂ—** ಜಗತಾಂ ತ್ರಯಂ ಜಗತ್ತ್ರಯಂ, ಜಗತ್ತ್ರಯೇ ಚಿತ್ರಂ ಜಗತ್ತ್ರಯಚಿತ್ರಂ ।

**ಕ್ರಿಯಾಪದ—** ಆಪ್ಲೃ ವ್ಯಾಪ್ತೌ ಇತ್ಯಸ್ಮಾದ್ಧಾತೋಃ ಲಿಟ್ ಪರಸ್ಮೈಪದನಃ ಪ್ರಥಮಪುರುಷೇ ಏಕವಚನೇ ''ಆಪ'' ಇತಿ ರೂಪಮ್ ।

ಆಪ ಆಪತುಃ ಆಪುಃ, ಆಪಿಥ ಆಪಥುಃ ಆಪ, ಆಪ ಆಪಿವ ಆಪಿಮ ॥

★ ★ ★

**ಮಂಡಯನ್ ಭರತಖಂಡಮಖಂಡಂ ನಾದಿರಾಯಣಪದೋಽತ್ರ ಪರೋ ಯಃ ।**
**ತಂ ನಮನ್ ಪ್ರಚುರಧೀರ್ಹರಿಗೀತಾಭಾಷ್ಯಮಾರ್ಪಯದುಪಾಯನಮಸ್ಮೈ ॥ 38 ॥**

**ಪದಚ್ಛೇದ—** ಮಂಡಯನ್, ಭರತಖಂಡಮಖಂಡಂ, ನಾದಿರಾಯಣಪದಃ, ಅತ್ರ, ಪರಃ, ಯಃ, ತಂ, ನಮನ್, ಪ್ರಚುರಧೀಃ, ಹರಿಗೀತಾಭಾಷ್ಯಂ, ಆರ್ಪಯತ್, ಉಪಾಯನಂ, ಅಸ್ಮೈ ।

**ಅನ್ವಯ—** ಅಖಂಡಂ ಭರತಖಂಡಂ ಮಂಡಯನ್, ಯಃ ನಾದಿರಾಯಣಪದಃ, ಪರಃ ಅತ್ರ ತಂ ನಮನ್ ಪ್ರಚುರಧೀಃ ಅಸ್ಮೈ ಹರಿಗೀತಾಭಾಷ್ಯಂ ಉಪಾಯನಂ ಆರ್ಪಯತ್ ।

**ಅನ್ವಯಾರ್ಥ—**

**ಅಖಂಡಂ** = ಸಮಸ್ತವಾದ ಹಿಮವತ್ಪರ್ವತದಿಂದ ಆರಂಭಿಸಿ ದಕ್ಷಿಣದಿಕ್ಕಿನಲ್ಲಿ ಇರತಕ್ಕ ಶ್ರೀರಾಮಚಂದ್ರ-ಸೇತುವಿನ ಪರ್ಯಂತ ಇರುವ ಒಂಬತ್ತು ಸಾವಿರ ಯೋಜನ ಧನುರಾಕಾರವಾದ

**ಭರತಖಂಡಂ** = ಭರತಖಂಡವನ್ನು

**ಮಂಡಯನ್** = ಅಲಂಕರಿಸುತ್ತಿರುವ

**ಯಃ ನಾದಿರಾಯಣಪದಃ** = ಯಾವ, 'ನಾ' ಎಂಬ ಅಕ್ಷರವು ಆದಿಯಾಗಿರುವ 'ರಾಯಣ' ಎಂಬ ನಾಮವುಳ್ಳ

**ಪರಃ** = ಪರಮಾತ್ಮನು

**ಅತ್ರ** = ಈ ಕ್ಷೇತ್ರದಲ್ಲಿ

**ವರ್ತತೇ** = ಸನ್ನಿಹಿತನಾಗಿದ್ದಾನೋ,

**ತಂ** = ಅಂತಹ ಪರಮಾತ್ಮನನ್ನು

**ನಮನ್** = ನಮಸ್ಕರಿಸುವವರಾಗಿ

**ಪ್ರಚುರಧೀಃ** = ಸರ್ವಜ್ಞಾಚಾರ್ಯರು

**ಅಸ್ಮೈ** = ನಾರಾಯಣನಿಗೋಸ್ಕರ

**ಹರಿಗೀತಾಭಾಷ್ಯಂ** = ತಾವು ಮಾಡಿದ ಭಗವದ್ಗೀತೆಯ ಭಾಷ್ಯವನ್ನು

**ಉಪಾಯನಂ** = ಕಾಣಿಕೆಯಾಗಿ

**ಆರ್ಪಯತ್** = ಅರ್ಪಿಸಿದರು.

**ತಾತ್ಪರ್ಯ—** ಪೂರ್ಣಪ್ರಜ್ಞಾಚಾರ್ಯರು ಬದರಿಕಾಶ್ರಮದಲ್ಲಿ ಹಿಮವತ್ಪರ್ವತದಿಂದ ಆರಂಭಿಸಿ ದಕ್ಷಿಣದಿಕ್ಕಿನಲ್ಲಿ-ರುವ ಶ್ರೀರಾಮಚಂದ್ರಸೇತುವಿನ ಪರ್ಯಂತ ಇರುವ 9 ಸಾವಿರ ಯೋಜನ ಬಿಲ್ಲಿನ ಆಕಾರವಾದ ಭರತ ಖಂಡವನ್ನು ಅಲಂಕರಿಸುತ್ತಿರುವ ನಕಾರವೇ ಆದಿಯಾಗಿರುವ ಯಾವ ಪರಮಾತ್ಮನಿದ್ದಾನೋ ಆ ಯಾವ ನಾರಾಯಣನನ್ನು ನಮಸ್ಕರಿಸಿ ತಾವು ಮಾಡಿರತಕ್ಕ ಭಗವದ್ಗೀತೆಯ ಭಾಷ್ಯವನ್ನು ಕಾಣಿಕೆಯಾಗಿ ಅರ್ಪಿಸಿದರು.

**ವಿಗ್ರಹ—**

**ನಾದಿರಾಯಣಪದಃ—** ನಕಾರಃ ಆದಿಃ ಯಸ್ಯ ಸಃ ನಾದಿಃ, ನಾದಿಶ್ಚಾಸೌ ರಾಯಣಶ್ಚ ನಾದಿರಾಯಣಃ, ನಾದಿರಾಯಣ ಇತಿ ಪದಂ (ನಾಮ) ಯಸ್ಯ ಸಃ ನಾದಿರಾಯಣಪದಃ ।

**ಪ್ರಚುರಧೀಃ—** ಪ್ರಚುರಾ ಧೀಃ ಯಸ್ಯ ಸಃ ಪ್ರಚುರಧೀಃ ।

**ಹರಿಗೀತಾಭಾಷ್ಯಃ—** ಹರೇಃ ಗೀತಾ ಹರಿಗೀತಾಃ, ಹರಿಗೀತಾಯಾಃ ಭಾಷ್ಯಂ ಹರಿಗೀತಾಭಾಷ್ಯಂ ತತ್ ।

**ಕ್ರಿಯಾಪದ—** **ಆರ್ಪಯತ್**- ಆಙ್ ಇತ್ಯುಪಸರ್ಗಪೂರ್ವಕಾತ್ ಋಗತೌ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಆರ್ಪಯತ್'' ಇತಿ ರೂಪಮ್।

ಆರ್ಪಯತ್ ಆರ್ಪಯತಾಂ ಆರ್ಪಯನ್, ಆರ್ಪಯಃ ಆರ್ಪಯತಂ ಆರ್ಪಯತ, ಆರ್ಪಯಂ ಆರ್ಪಯಾವ ಆರ್ಪಯಾಮ ॥

★ ★ ★

**ಪ್ರೀತಯೇऽಸ್ಯ ಪುರತೋ ವರಭಾಷ್ಯಂ ವಾಚಯನ್ ಸ ಜನತಾಮಪಸಾರ್ಯ ।**
**ವಚ್ಮಿ ಶಕ್ತಿತ ಉರುಕ್ರಮಗೀತಾಭಾವಮಿತ್ಯಕಥಯತ್ ಪುರುಸಂಖ್ಯಃ ॥ 39 ॥**

**ಪದಚ್ಛೇದ—** ಪ್ರೀತಯೇ, ಅಸ್ಯ, ಪುರತೋ, ವರಭಾಷ್ಯಂ, ವಾಚಯನ್, ಸಃ, ಜನತಾಂ, ಅಪಸಾರ್ಯ, ವಚ್ಮಿ, ಶಕ್ತಿತಃ, ಉರುಕ್ರಮಗೀತಾಭಾವಂ, ಇತಿ, ಅಕಥಯತ್, ಪುರುಸಂಖ್ಯಃ ।

**ಅನ್ವಯ—** ಸಃ ಪುರುಸಂಖ್ಯಃ ಜನತಾಂ ಅಪಸಾರ್ಯ, ಅಸ್ಯ ಪ್ರೀತಯೇ ಪುರತಃ ವರಭಾಷ್ಯಂ ವಾಚಯನ್, ಉರುಕ್ರಮಗೀತಾಭಾವಂ, ಶಕ್ತಿತಃ ವಚ್ಮಿ, ಇತಿ ಅಕಥಯತ್ ।

**ಅನ್ವಯಾರ್ಥ—**

**ಪುರುಸಂಖ್ಯಃ** = ಪೂರ್ಣವಾದ ಜ್ಞಾನವುಳ್ಳ
**ಸಃ** = ಆ ಪೂರ್ಣಪ್ರಜ್ಞಾಚಾರ್ಯರು
**ಜನತಾಂ** = ಜನರ ಸಮೂಹವನ್ನು
**ಅಪಸಾರ್ಯ** = ದೂರ ಮಾಡಿ
**ಅಸ್ಯ** = ಈ ಶ್ರೀಮನ್ನಾರಯಣನ
**ಪ್ರೀತಯೇ** = ಸಂತೋಷಕ್ಕೋಸ್ಕರ
**ಪುರತಃ** = ಶ್ರೀಮನ್ನಾರಾಯಣನ ಮುಂದೆ
**ವರಭಾಷ್ಯಂ** = ತಾವು ರಚಿಸಿದ ಶ್ರೇಷ್ಠವಾದ ಗೀತಾಭಾಷ್ಯವನ್ನು
**ವಾಚಯನ್** = ಓದುತ್ತಾ
**ಉರುಕ್ರಮಗೀತಾಭಾವಂ** = ಶ್ರೀಪರಮಾತ್ಮನ ಗೀತಾ ಗ್ರಂಥದ ಅಭಿಪ್ರಾಯವನ್ನು
**ಶಕ್ತಿತಃ** = ಶಕ್ತ್ಯನುಸಾರವಾಗಿ
**ವಚ್ಮಿ** = ಹೇಳುತ್ತೇನೆ
**ಇತಿ** = ಈ ರೀತಿಯಾಗಿ
**ಅಕಥಯತ್** = ಹೇಳಿದರು.

**ತಾತ್ಪರ್ಯ—** ಈ ಪೂರ್ಣಪ್ರಜ್ಞಾಚಾರ್ಯರು ತಮ್ಮ ಶಿಷ್ಯರೆಲ್ಲರನ್ನೂ ಮಲಗಿಸಿ ರಾತ್ರಿಯ ಸಮಯದಲ್ಲಿ ಶ್ರೀಮನ್ನಾರಾಯಣನ ವಿಗ್ರಹ ಇರುವ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ತಾವು ಬರೆದಿರುವ ಉತ್ತಮವಾದ ಭಗವದ್ಗೀತಾಭಾಷ್ಯವನ್ನು ಹೇಳಿದರು. ಆಗ ಆ ಗೀತೆಯ ಮಂಗಳಾಚರಣೆಯಲ್ಲಿ 'ಪರಿಪೂರ್ಣಗುರೂಂಶ್ಚಾನ್ ಗೀತಾರ್ಥಂ ವಕ್ಷ್ಯಾಮಿ ಶಕ್ತಿತಃ' ಎಂಬುದಾಗಿ ಓದಿ ಹೇಳಿದರು.

**ವಿಗ್ರಹ—**

**ಪುರುಸಂಖ್ಯಃ—** ಪುರುಃ ಸಂಖ್ಯಾ ಯಸ್ಯ ಸಃ ಪುರುಸಂಖ್ಯಃ ।

**ಜನತಾಂ—** ಜನಾನಾಂ ಸಮೂಹಃ ಜನತಾ ತಾಂ ।

**ವರಭಾಷ್ಯಂ—** ವರಂ ಚ ತತ್ ಭಾಷ್ಯಂ ಚ ವರಭಾಷ್ಯಂ ।

**ಉರುಕ್ರಮಗೀತಾಭಾವಂ—** ಉರುಃ ಕ್ರಮಃ ಯಸ್ಯ ಸಃ ಉರುಕ್ರಮಃ, ಉರುಕ್ರಮಸ್ಯ ಗೀತಾ ಉರುಕ್ರಮಗೀತಾ, ಉರುಕ್ರಮಗೀತಾಯಾಃ ಭಾವಂ ಉರುಕ್ರಮಗೀತಾಭಾವಂ ।

**ಕ್ರಿಯಾಪದ— ಅಕಥಯತ್-** ಕಥಸಂಕಥನೇ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕ-ವಚನೇ 'ಅಕಥಯನ್' ಇತಿ ರೂಪಮ್ ।

ಅಕಥಯತ್ ಅಕಥಯತಾಂ ಅಕಥಯನ್, ಅಕಥಯಃ ಅಕಥಯತಂ ಅಕಥಯತ, ಅಕಥಯಂ ಅಕಥಯಾವ ಅಕಥಯಾಮ ॥

★ ★ ★

**ಏತದರ್ಥಮತಿಸೂಕ್ಷ್ಮಮಪಿ.ತ್ವಂ ಶಕ್ತ ಏವ ನ ಯದಾತ್ಥ ಸಮಸ್ತಮ್ ।**
**ತೇನ ಲೇಶತ ಇತೀಹ ಪದಂ ಸ್ಯಾದಿತ್ಯಗದ್ಯತ ಜಗಜ್ಜನಕೇನ ॥ 40 ॥**

**ಪದಚ್ಛೇದ—** ಏತತ್, ಅರ್ಥಂ, ಅತಿಸೂಕ್ಷ್ಮಂ, ಅಪಿ, ತ್ವಂ, ಶಕ್ತ, ಏವ, ನ, ಯತ್, ಆತ್ಥ ಸಮಸ್ತಂ, ತೇನ, ಲೇಶತ, ಇತಿ, ಇಹ, ಪದಂ, ಸ್ಯಾತ್, ಇತಿ, ಅಗದ್ಯತ, ಜಗಜ್ಜನಕೇನ ।

**ಅನ್ವಯ—** ಹೇ ಮಧ್ವ, ತ್ವಂ ಅತಿಸೂಕ್ಷ್ಮಮಪಿ ಏತದರ್ಥಂ ವಕ್ತುಂ ಶಕ್ತಃ, ಏವ ಯತ್ ಸಮಸ್ತಂ ನ ಆತ್ಥ ತೇನ, ಇಹ ಲೇಶತಃ ಇತಿ ಪದಂ ಸ್ಯಾತ್ ಇತಿ ಜಗಜ್ಜನಕೇನ ಅಗದ್ಯತ ।

**ಅನ್ವಯಾರ್ಥ—**

**ಹೇ ಮಧ್ವ!** = ಎಲೈ ಪೂರ್ಣಪ್ರಜ್ಞರೇ !
**ತ್ವಂ** = ನೀನು
**ಅತಿಸೂಕ್ಷ್ಮಮಪಿ** = ಅತಿ ಸೂಕ್ಷ್ಮವಾದರೂ
**ಏತದರ್ಥಂ** = ಈ ಭಗವದ್ಗೀತೆಯ ಅರ್ಥವನ್ನು
**ವಕ್ತುಂ** = ಹೇಳುವುದಕ್ಕೆ
**ಶಕ್ತಃ ಏವ** = ಸಮರ್ಥನೇ ಆಗಿರುವೆ.
**ಯತ್ ಸಮಸ್ತಂ** = ಯಾವ ಕಾರಣದಿಂದ ಎಲ್ಲಾ ಅರ್ಥವನ್ನು
**ನ ಆತ್ಥ** = ಹೇಳಲಿಲ್ಲವೋ
**ತೇನ** = ಆ ಕಾರಣದಿಂದ
**ಇಹ** = ಇಲ್ಲಿ 'ಶಕ್ತಿತಃ' ಎಂಬ ಪದದ ಸ್ಥಳದಲ್ಲಿ
**ಲೇಶತಃ ಇತಿ ಪದಂ** = 'ಲೇಶತಃ' ಎಂಬ ಪದವು
**ಸ್ಯಾತ್ ಇತಿ** = ಇರಬೇಕೆಂದು
**ಜಗಜ್ಜನಕೇನ** = ಜಗಜ್ಜನಕನಾದ ನಾರಾಯಣನಿಂದ
**ಅಗದ್ಯತ** = ಹೇಳಲ್ಪಟ್ಟಿತು.

ತಾತ್ಪರ್ಯ— ಎಲೈ ಪೂರ್ಣಪ್ರಜ್ಞನೇ! ಎಲ್ಲವನ್ನೂ ತಿಳಿದಿರತಕ್ಕ ನೀನು ಅತ್ಯಂತ ಸೂಕ್ಷ್ಮವಾಗಿರುವ ಈ ಭಗವದ್ಗೀತೆಯ ಸಂಪೂರ್ಣ ಅರ್ಥವನ್ನು ಹೇಳಲು ಸಮರ್ಥನಾಗಿರುವೆ. ಹಾಗಿದ್ದರೂ ಎಲ್ಲವನ್ನೂ ಹೇಳದೆ ಸ್ವಲ್ಪವನ್ನೇ ಹೇಳಿರುವೆ. ಆದ್ದರಿಂದ ಪ್ರಥಮ ಶ್ಲೋಕದಲ್ಲಿ 'ಶಕ್ತಿತಃ' ಎಂಬ ಪದವನ್ನು ತೆಗೆದು 'ಲೇಶತಃ' ಎಂಬ ಪದವನ್ನು ಹಾಕು ಎಂದು ನಾರಾಯಣನಿಂದ ಹೇಳಲ್ಪಟ್ಟಿತು.

ಕ್ರಿಯಾಪದ— ಆತ್ಥ- ಬ್ರೂಞ್ ವ್ಯಕ್ತಾಯಾಂ ವಾಚಿ ಇತ್ಯಸ್ಮಾದ್ಧಾತೋಃ ಲಟ್ ಪರಸ್ಮೈಪದಿನಃ ಮಧ್ಯಮಪುರುಷೇ ಏಕವಚನೇ ''ಆತ್ಥ'' ಇತಿ ರೂಪಮ್ ।

ಆಹ ಆಹತುಃ ಆಹುಃ, ಆತ್ಥ ಆಹಥುಃ ಬ್ರೂಥ, ಬ್ರವೀಮಿ ಬ್ರೂವಃ ಬ್ರೂಮಃ ॥

★ ★ ★

**ತೇನ ತತ್ಪ್ರವಚನೇ ವಿಹಿತೇಽಲಂ ಶುಶ್ರುವುಃ ಪ್ರಶಯಿತಾ ಅಪಿ ಶಿಷ್ಯಾಃ ।**
**ಉಚ್ಯತಾಮಿತಿ ಮುಹುಃ ಸಪೃಥಿವ್ಯಾಸ್ಫಾಲನಂ ಪದಮಹೋ ಹರಿಣೋಕ್ತಮ್ ॥ 41 ॥**

ಪದಚ್ಛೇದ— ತೇನ, ತತ್‌ಪ್ರವಚನೇ, ವಿಹಿತೇ, ಅಲಂ, ಶುಶ್ರುವುಃ, ಪ್ರಶಯಿತಾ, ಅಪಿ, ಶಿಷ್ಯಾಃ, ಉಚ್ಯತಾಂ, ಇತಿ, ಮುಹುಃ, ಸಪೃಥಿವ್ಯಾಸ್ಫಾಲನಂ, ಪದಂ, ಅಹೋ, ಹರಿಣಾ, ಉಕ್ತಂ ।

ಅನ್ವಯ— ತೇನ ತತ್‌ಪ್ರವಚನೇ ವಿಹಿತೇ ಸತಿ, ಮುಹುಃ ಉಚ್ಯತಾಂ ಇತಿ ಸಪೃಥಿವ್ಯಾಸ್ಫಾಲನಂ ಹರಿಣಾ ಉಕ್ತಂ ಪದಂ, ಪ್ರಶಯಿತಾಃ ಶಿಷ್ಯಾಃ ಅಪಿ, ಅಲಂ ಶುಶ್ರುವುಃ ಅಹೋ !

ಅನ್ವಯಾರ್ಥ—

ತೇನ = ಆ ಮಧ್ವಾಚಾರ್ಯರಿಂದ
ತತ್ ಪ್ರವಚನೇ = ಭಗವದ್ಗೀತೆಯ ವ್ಯಾಖ್ಯಾನವನ್ನು
ವಿಹಿತೇ ಸತಿ = ಮಾಡಲ್ಪಡುತ್ತಿರಲು,
ಮುಹುಃ ಉಚ್ಯತಾಂ ಇತಿ = ಮತ್ತೆ ಮತ್ತೆ ಹೇಳಲ್ಪಡಲಿ ಎಂದು,
ಸಪೃಥಿವ್ಯಾಸ್ಫಾಲನಂ = ಭೂಮಿಯನ್ನು ತಟ್ಟುವುದರಿಂದ ಸಹಿತವಾಗಿ
ಹರಿಣಾ = ಶೀನಾರಾಯಣನಿಂದ
ಉಕ್ತಂ = ಹೇಳಲ್ಪಟ್ಟ
ಪದಂ = ಮಾತನ್ನು
ಪ್ರಶಯಿತಾಃ = ಮಲಗಿದ್ದ
ಶಿಷ್ಯಾಃ ಅಪಿ = ಶಿಷ್ಯರೂ ಕೂಡ
ಅಲಂ = ಚೆನ್ನಾಗಿ
ಶುಶ್ರುವುಃ = ಕೇಳಿದರು.
ಅಹೋ ! = ಆಶ್ಚರ್ಯ !

ತಾತ್ಪರ್ಯ— ರಾತ್ರಿಯಲ್ಲಿ ಭಗವದ್ಗೀತೆಯ ವ್ಯಾಖ್ಯಾನ ಮುಗಿದನಂತರ ನಿದ್ರೆ ಮಾಡುತ್ತಿದ್ದ ಪೂರ್ಣಪ್ರಜ್ಞಾಚಾರ್ಯರನ್ನು ಶ್ರೀಮನ್ನಾರಾಯಣನು ತನ್ನ ಕೈಯಿಂದ ಭೂಮಿಯನ್ನು ಹೊಡೆದು ಶಬ್ದವನ್ನು ಮಾಡಿ ಎಬ್ಬಿಸಿ, ಪುನಃ ಪುನಃ ಭಗವದ್ಗೀತೆಯ ಅರ್ಥವು ಹೇಳಲ್ಪಡಲಿ, ಎಂಬುದಾಗಿ ಶಬ್ದ ಮಾಡಿದ್ದನ್ನು, ನಿದ್ರೆ ಮಾಡುತ್ತಿದ್ದ ಶಿಷ್ಯರೂ ಕೂಡ ಎಚ್ಚರಗೊಂಡು ಆ ಶಬ್ದವನ್ನು ಆಶ್ಚರ್ಯದಿಂದ ಕೇಳಿದರು.

ವಿಗ್ರಹ—

**ತತ್ಪ್ರವಚನೇ—** ತಸ್ಯಾಃ ಪ್ರವಚನಂ ತತ್ಪ್ರವಚನಂ ತಸ್ಮಿನ್ ।

**ಸಪೃಥಿವ್ಯಾಸ್ಫಾಲನಂ—** ಪೃಥಿವ್ಯಾಃ ಆಸ್ಫಾಲನಂ ಪೃಥಿವ್ಯಾಸ್ಫಾಲನಂ, ಪೃಥಿವ್ಯಾಸ್ಫಾಲನೇನ ಸಹಿತಂ ಯಥಾ ಭವತಿ ತಥಾ ಸಪೃಥಿವ್ಯಾಸ್ಫಾಲನಂ ।

**ಕ್ರಿಯಾಪದ— ಶುಶ್ರುವುಃ-** ಶ್ರುಶ್ರವಣೇ ಇತ್ಯಸ್ಮಾದ್ಧಾತೋಃ ಲಿಟ್ ಪರಸ್ಮೈಪದಿನಃ ಪ್ರಥಮಪುರುಷೇ ಬಹುವಚನೇ ''ಶುಶ್ರುವುಃ'' ಇತಿ ರೂಪಮ್ ।

ಶುಶ್ರಾವ ಶುಶ್ರುವತುಃ ಶುಶ್ರುವುಃ, ಶುಶ್ರೋಥ ಶುಶ್ರುವಥುಃ ಶುಶ್ರುವ, ಶುಶ್ರಾವ ಶುಶ್ರವ ಶುಶ್ರುವ ಶುಶ್ರುಮ ॥

★ ★ ★

**ಶಬ್ದಭೇದಮವಧಾರ್ಯ ತಮರ್ಚಾಸನ್ನಿಷಣ್ಣವಪುಷಃ ಪರಮಸ್ಯ ।**
**ತಸ್ಯ ಭಾವವಿದಮಂದಮನೀಷಃ ಪ್ರೋತ್ಥಿತಃ ಪ್ರವಚನಂ ವ್ಯಧಿತೈಭ್ಯಃ ॥ 42 ॥**

**ಪದಚ್ಛೇದ—** ಶಬ್ದಭೇದಂ, ಅವಧಾರ್ಯ, ತಂ, ಅರ್ಚಾಸನ್ನಿಷಣ್ಣವಪುಷಃ, ಪರಮಸ್ಯ, ತಸ್ಯ, ಭಾವವಿತ್, ಅಮಂದಮನೀಷಃ, ಪ್ರೋತ್ಥಿತಃ, ಪ್ರವಚನಂ, ವ್ಯಧಿತ, ಏಭ್ಯಃ ।

**ಅನ್ವಯ—** ಅಮಂದಮನೀಷಃ ಅರ್ಚಾಸನ್ನಿಷಣ್ಣವಪುಷಃ ಪರಮಸ್ಯ ತಂ ಶಬ್ದಭೇದಂ, ಅವಧಾರ್ಯ ತಸ್ಯ ಭಾವವಿತ್ ಪ್ರೋತ್ಥಿತಃ, ಏಭ್ಯಃ ಪ್ರವಚನಂ ವ್ಯಧಿತ ।

**ಅನ್ವಯಾರ್ಥ—**

**ಅಮಂದಮನೀಷಃ** = ಬಹಳವಾದ ಬುದ್ಧಿಯುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು

**ಅರ್ಚಾಸನ್ನಿಷಣ್ಣವಪುಷಃ** = ಪ್ರತಿಮೆಯಲ್ಲಿ ಸನ್ನಿಹಿತವಾದ ಸ್ವರೂಪವುಳ್ಳ

**ಪರಮಸ್ಯ** = ಪರಮಾತ್ಮನ

**ತಂ ಶಬ್ದಭೇದಂ** = ನಾರಾಯಣನಿಂದ ಹೇಳಲ್ಪಟ್ಟ, 'ಪುನಃ ಹೇಳಲ್ಪಡಲಿ' ಎಂಬ ಶಬ್ದವಿಶೇಷವನ್ನು

**ಅವಧಾರ್ಯ** = ಸಾವಧಾನವಾಗಿ ಕೇಳಿ

**ತಸ್ಯ ಭಾವವಿತ್** = ಆ ಶ್ರೀನಾರಾಯಣ ದೇವರ ಅಭಿಪ್ರಾಯವನ್ನು ತಿಳಿದು

**ಪ್ರೋತ್ಥಿತಃ** = ಎದ್ದವರಾಗಿ,

**ಏಭ್ಯಃ** = ಈ ಶಿಷ್ಯರಿಗೆ

**ಪ್ರವಚನಂ** = ಪ್ರವಚನವನ್ನು

**ವ್ಯಧಿತ** = ಮಾಡಿದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞಾಚಾರ್ಯರಿಗೆ ಪ್ರತಿಮೆಯಲ್ಲಿ ಸನ್ನಿಹಿತರಾದ ಶ್ರೀನಾರಾಯಣದೇವರಿಂದ ಮತ್ತೆ ವ್ಯಾಖ್ಯಾನವನ್ನು ಮಾಡಲ್ಪಡಲಿ ಎಂದು ಹೇಳಲ್ಪಡಲು, ಇದು ಆಜ್ಞಾರೂಪವಾದ ಶಬ್ದ ಎಂಬುದನ್ನರಿತ ಶ್ರೀಪೂರ್ಣಪ್ರಜ್ಞಾ-ಚಾರ್ಯರು ಪದದ ಅಭಿಪ್ರಾಯವನ್ನು ತಿಳಿದು ಶಿಷ್ಯರನ್ನು ಎಬ್ಬಿಸಿ ಗೀತಾಭಾಷ್ಯದ ಪ್ರವಚನವನ್ನು ಮಾಡಿದರು.

ವಿಗ್ರಹ—

**ಅಮಂದಮನೀಷಃ—** ಅಮಂದಾ ಮನೀಷಾ ಯಸ್ಯ ಸಃ ಅಮಂದಮನೀಷಃ ।

ಶಬ್ದಭೇದಂ— ಶಬ್ದಸ್ಯ ಭೇದಂ ಶಬ್ದಭೇದಂ ।

ಅರ್ಚಾಸನ್ನಿಷಣ್ಣವಪುಃ— ಅರ್ಚಾಯಾಂ ಸನ್ನಿಷಣ್ಣಂ ಅರ್ಚಾಸನ್ನಿಷಣ್ಣಂ, ಅರ್ಚಾಸನ್ನಿಷಣ್ಣಂ ವಪುಃ ಯಸ್ಯ ಸಃ ಅರ್ಚಾಸನ್ನಿಷಣ್ಣವಪುಃ, ತಸ್ಯ ಅರ್ಚಾಸನ್ನಿಷಣ್ಣವಪುಷಃ ।

ಕ್ರಿಯಾಪದ— ವ್ಯಧಿತ- ವಿ ಇತ್ಯುಪಸರ್ಗಪೂರ್ವಕಾತ್ ಡುಧಾಞ್ ದಾನೇ ಇತ್ಯಸ್ಮಾದ್ಧಾತೋಃ ಲುಙ್ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ ''ವ್ಯಧಿತ'' ಇತಿ ರೂಪಮ್ ।

ವ್ಯಧಿತ ವ್ಯಧಿಷಾತಾಂ ವ್ಯಧಿಷತ, ವ್ಯಧಿಥಾಃ ವ್ಯಧಿಷಾಥಾಂ ವ್ಯಧಿಢ್ವಂ, ವ್ಯಧಿಷಿ ವ್ಯಧಿಷ್ವಹಿ ವ್ಯಧಿಷ್ಮಹಿ ॥

★ ★ ★

**ಮಜ್ಜನಂ ವ್ಯಧಿತ ಶೀತಲಗಂಗಾವಾರಿ ನಿತ್ಯಮರುಣೋದಯಕಾಲೇ ।**
**ಯತ್ ಸ್ಪೃಶಂತಿ ನ ನರಾ ಹಿಮಭೀತಾ ಅಂಶ ಏಷ ಪೃಷತಾಮಧಿಪಸ್ಯ ॥ 43 ॥**

ಪದಚ್ಛೇದ— ಮಜ್ಜನಂ, ವ್ಯಧಿತ, ಶೀತಲಗಂಗಾವಾರಿ, ನಿತ್ಯಂ, ಅರುಣೋದಯಕಾಲೇ, ಯತ್, ಸ್ಪೃಶಂತಿ, ನ, ನರಾಃ, ಹಿಮಭೀತಾಃ, ಅಂಶಃ, ಏಷಃ, ಪೃಷತಾಂ, ಅಧಿಪಸ್ಯ ।

ಅನ್ವಯ— ಪೃಷತಾಂ ಅಧಿಪಸ್ಯ ಅಂಶಃ ಏಷಃ, ನರಾಃ ಹಿಮಭೀತಾಃ ಯತ್ ನ ಸ್ಪೃಶಂತಿ, ತಸ್ಮಿನ್ ಶೀತಲಗಂಗಾವಾರಿ, ನಿತ್ಯಂ ಅರುಣೋದಯಕಾಲೇ, ಮಜ್ಜನಂ ವ್ಯಧಿತ ।

ಅನ್ವಯಾರ್ಥ—

ಪೃಷತಾಂ = ವಾಯುಗಳಿಗೆ
ಅಧಿಪಸ್ಯ = ಒಡೆಯರಾದ, ಮುಖ್ಯಪ್ರಾಣರ
ಅಂಶಃ = ಅವತಾರರಾದ
ಏಷಃ = ಈ ಮಧ್ವಾಚಾರ್ಯರು,
ನರಾಃ = ಬದರಿಕಾಶ್ರಮದಲ್ಲಿದ್ದ ಇತರ ಜನರು
ಹಿಮಭೀತಾಃ = ಹಿಮದ ಚಳಿಯಿಂದ ಹೆದರಿದವರಾಗಿ
ಯತ್ = ಯಾವ ನೀರನ್ನು
ನ ಸ್ಪೃಶಂತಿ = ಮುಟ್ಟುವುದಿಲ್ಲವೋ,
ತಸ್ಮಿನ್ = ಅಂತಹ
ಶೀತಲಗಂಗಾವಾರಿ = ತಣ್ಣಗಿರುವ ಗಂಗೆಯ ನೀರಿನಲ್ಲಿ
ನಿತ್ಯಂ = ಪ್ರತಿದಿನವೂ
ಅರುಣೋದಯಕಾಲೇ = ಸೂರ್ಯೋದಕ್ಕಿಂತ ನಾಲ್ಕು ಘಳಿಗೆ ಮೊದಲು
ಮಜ್ಜನಂ = ಸ್ನಾನವನ್ನು
ವ್ಯಧಿತ = ಮಾಡಿದರು.

ತಾತ್ಪರ್ಯ— ಬದರಿಯಲ್ಲಿ ವಾಸವಾಗಿರುವ ಜನರೂ ಕೂಡ ಚಳಿಯ ಭಯದಿಂದ 'ಅಲಕನಂದಾ' ಎಂದು ಪ್ರಸಿದ್ಧವಾದ ಆ ಶೀತಲವಾದ ಗಂಗಾನದಿಯ ಜಲವನ್ನು ಅರುಣೋದಯ ಕಾಲಕ್ಕೆ ಮುಟ್ಟಲೂ ಹೆದರುತ್ತಾರೆ. ಅಂತಹ ಹಿಮದಿಂದ ತಣ್ಣಾಗಾದ ನೀರಿನಲ್ಲಿ ಪ್ರತಿದಿನವೂ ಸ್ನಾನ ಮಾಡಿ ನಿತ್ಯಾನುಷ್ಠಾನವನ್ನು ವಾಯುವಿನ ಅಂಶಭೂತರಾದ ಶ್ರೀ ಪೂರ್ಣಪ್ರಜ್ಞಾಚಾರ್ಯರು ಮಾಡಿದರು.

ವಿಗ್ರಹ—

**ಹಿಮಭೀತಾಃ—** ಹಿಮೇನಭೀತಾಃ

**ಅರುಣೋದಯಕಾಲೇ—** ಅರುಣಸ್ಯ ಉದಯಃ ಅರುಣೋದಯಃ, ಅರುಣೋದಯಶ್ಚಾಸೌ ಕಾಲಶ್ಚ ಅರುಣೋದಯಕಾಲಃ ತಸ್ಮಿನ್ ಅರುಣೋದಯಕಾಲೇ ।

**ಶೀತಲಗಂಗಾವಾರಿ—** ಶೀತಲಂ ಚ ತತ್ ಗಂಗಾವಾಃ ಚ ಶೀತಲಗಂಗಾವಾಃ, ತಸ್ಮಿನ್ ಶೀತಲಗಂಗಾವಾರಿ ।

**ಕ್ರಿಯಾಪದ—** **ಸ್ಪೃಶಂತಿ**- ಸ್ಪೃಶಸ್ಪರ್ಶನೇ ಇತ್ಯಸ್ಮಾದ್ಧಾತೋಃ ಲಟ್ ಪರಸ್ಮೈಪದಿನಃ ಪ್ರಥಮಪುರುಷೇ ಬಹುವಚನೇ ''ಸ್ಪೃಶಂತಿ'' ಇತಿ ರೂಪಮ್ ।

ಸ್ಪೃಶತಿ ಸ್ಪೃಶತಃ ಸ್ಪೃಶಂತಿ, ಸ್ಪೃಶಸಿ ಸ್ಪೃಶಥಃ ಸ್ಪೃಶಥ, ಸ್ಪೃಶಾಮಿ ಸ್ಪೃಶಾವಃ ಸ್ಪೃಶಾಮಃ ॥

★ ★ ★

**ಕಾಷ್ಠಮೌನಮದಧಾದುಪವಾಸಂ ಶುದ್ಧಮಪ್ಯಕೃತ ಶುದ್ಧಹೃದಿಚ್ಛನ್ ।**
**ನಿತ್ಯತುಷ್ಟಹರಿತೋಷವಿಶೇಷಂ ಚಿಂತಯನ್ ಪ್ರಭುಮನಂತಮಠಾಂತಃ ॥ 44 ॥**

**ಪದಚ್ಛೇದ—** ಕಾಷ್ಠಮೌನಂ, ಅದಧಾತ್, ಉಪವಾಸಂ, ಶುದ್ಧಂ ಅಪಿ, ಅಕೃತ, ಶುದ್ಧಹೃತ್, ಇಚ್ಛನ್, ನಿತ್ಯ-ತುಷ್ಟಹರಿತೋಷವಿಶೇಷಂ, ಚಿಂತಯನ್, ಪ್ರಭುಂ, ಅನಂತಮಠಾಂತಃ ।

**ಅನ್ವಯ—** ಶುದ್ಧಹೃತ್ ನಿತ್ಯತುಷ್ಟಹರಿತೋಷವಿಶೇಷಂ ಇಚ್ಛನ್, ಅನಂತಮಠಾಂತಃ ಪ್ರಭುಂ ಚಿಂತಯನ್ ಕಾಷ್ಠಮೌನಂ ಅದಧಾತ್, ಶುದ್ಧಂ ಉಪವಾಸಂ ಅಪಿ ಅಕೃತ ।

**ಅನ್ವಯಾರ್ಥ—**

**ಶುದ್ಧಹೃತ್** = ನಿರ್ಮಲವಾದ ಅಂತಃಕರಣವುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು

**ನಿತ್ಯತುಷ್ಟಹರಿತೋಷಂ** = ಯಾವಾಗಲೂ ಸಂತೋಷವಾಗಿರುವ ಹರಿಯ ಪ್ರೀತಿಯ ಅತಿಶಯವನ್ನು

**ಇಚ್ಛನ್** = ಇಚ್ಛಿಸುವವರಾಗಿ,

**ಅನಂತಮಠಾಂತಃ** = 'ಅನಂತಮಠ' ಎಂಬ ಹೆಸರುಳ್ಳ ಬದರೀನಾರಾಯಣದೇವಾಲಯದ ಮಧ್ಯದಲ್ಲಿ

**ಪ್ರಭುಂ** = ಶ್ರೀನಾರಾಯಣನನ್ನು

**ಚಿಂತಯನ್** = ಧ್ಯಾನ ಮಾಡುತ್ತಾ

**ಕಾಷ್ಠಮೌನಂ** = ಕಾಷ್ಠಮೌನ ಎಂಬ ವ್ರತವನ್ನು

**ಅದಧಾತ್** = ಮಾಡಿದರು.

**ಶುದ್ಧಂ** = ಆಚಮನ ಒಂದು ಬಿಟ್ಟು ನೀರು ಆಹಾರ ಮೊದಲಾದವುಗಳಿಂದ ರಹಿತವಾದ

**ಉಪವಾಸಂ ಅಪಿ** = ಉಪವಾಸದ ವ್ರತವನ್ನೂ ಕೂಡ

**ಅಕೃತ** = ಮಾಡಿದರು.

**ತಾತ್ಪರ್ಯ—** ನಿರ್ಮಲವಾದ ಅಂತಃಕರಣವುಳ್ಳ ಈ ಶ್ರೀ ಪೂರ್ಣಪ್ರಜ್ಞಾಚಾರ್ಯರು ನಿತ್ಯಸಂತುಷ್ಟನಾದ ಪರಮಾತ್ಮನನ್ನು ಸಂತುಷ್ಟನನ್ನಾಗಿ ಮಾಡಬೇಕೆಂದು ನಿರ್ಧಾರ ಮಾಡಿ ಅನಂತಮಠ ಎಂಬ ಹೆಸರುಳ್ಳ ದೇವಾಲಯಕ್ಕೆ ಹೋಗಿ ನಾರಾಯಣನನ್ನು ಧ್ಯಾನ ಮಾಡುತ್ತಾ ಯಾರ ಹತ್ತಿರವೂ ಮಾತನಾಡದೆ ಆಚಮನಾದಿಗಳನ್ನು ಹೊರತುಪಡಿಸಿ, ಹಣ್ಣು ಆಹಾರ ಮೊದಲಾದವುಗಳನ್ನು ತ್ಯಜಿಸಿ ಉಪವಾಸವನ್ನು ಮಾಡಿ ವ್ರತವನ್ನು ಆಚರಿಸಿದರು.

ವಿಗ್ರಹ—

**ಶುದ್ಧಹೃತ್**— ಶುದ್ಧಂ ಹೃತ್ ಯಸ್ಯ ಸಃ ಶುದ್ಧಹೃತ್ ।

**ಅನಂತಮಠಾಂತಃ**— ಅನಂತಮಠಸ್ಯ ಅಂತಃ ಅನಂತಮಠಾಂತಃ ।

**ಕಾಷ್ಠಮೌನಂ**— ಕಾಷ್ಠಯಾ ಮೌನಂ ಕಾಷ್ಠಮೌನಂ ಕಾಷ್ಠಮೌನಂ ।

**ಕ್ರಿಯಾಪದ— ಅದಧಾತ್**- ಡು ಧಾಞ್ ಧಾರಣಪೋಷಣಯೋಃ ಇತ್ಯಸ್ಮಾತ್ ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ 'ಅದಧಾತ್' ಇತಿ ರೂಪಮ್ ।

ಅದಧಾತ್ ಅದಧಾತಾಂ ಅದಧುಃ, ಅದಧಾಃ ಅದಧಾಥಾಂ ಅದಧಾಥ, ಅದಧಾಂ ಅದಧಾವ ಅದಧಾಮ ॥

**ಅಕೃತ**- ಡುಕೃಞ್ ಕರಣೇ ಇತ್ಯಸ್ಮಾದ್ಧಾತೋಃ ಲುಙ್ ಆತ್ಮನೇಪದಂ ಪ್ರಥಮಪುರುಷೇ ಏಕವಚನೇ ''ಅಕೃತ'' ಇತಿ ರೂಪಮ್ ।

ಅಕೃತ ಅಕೃಷಾತಾಂ ಅಕೃಷತ, ಅಕೃಥಾಃ ಅಕೃಷಾಥಾಂ ಅಕೃಢ್ವಂ, ಅಕೃಷಿ ಅಕೃಷ್ವಹಿ ಅಕೃಷ್ಮಹಿ ॥

★ ★ ★

**ಪ್ರೈರಯತ್ ಸ್ವಚರಣೇ ರತಚಿತ್ತಂ ಮಧ್ವಮತ್ರ ದಿನಮಂಡಲಮೇನಮ್ ।**
**ಸ್ವಾಶ್ರಮೋಪಗಮನಾಯ ಮುಕುಂದೋ ದೀಪ್ತಿದೃಷ್ಟಿವಿದಿತಾಗತಿರನ್ಯೈಃ ॥ 45 ॥**

**ಪದಚ್ಛೇದ**— ಪ್ರೇರಯತ್, ಸ್ವಚರಣೇ, ರತಚಿತ್ತಂ, ಮಧ್ವಂ, ಅತ್ರ, ದಿನಮಂಡಲಂ, ಏನಂ, ಸ್ವಾಶ್ರಮೋ-ಪಗಮನಾಯ, ಮುಕುಂದಃ, ದೀಪ್ತಿದೃಷ್ಟವಿದಿತಾಗತಿಃ, ಅನ್ಯೈಃ ।

**ಅನ್ವಯ**— ಅನ್ಯೈಃ ದೀಪ್ತಿದೃಷ್ಟಿವಿದಿತಾಗತಿಃ ಮುಕುಂದಃ, ಅತ್ರ ದಿನಮಂಡಲಂ ಸ್ವಚರಣೇ ರತಚಿತ್ತಂ ಏನಂ, ಸ್ವಾಶ್ರಮೋಪಗಮನಾಯ ಪ್ರೈರಯತ್ ।

**ಅನ್ವಯಾರ್ಥ**—

**ಅನ್ಯೈಃ** = ಮಧ್ವಾಚಾರ್ಯರಿಗಿಂತ ಭಿನ್ನವಾದ ಶಿಷ್ಯರಿಂದ
**ದೀಪ್ತಿದೃಷ್ಟಿವಿದಿತಾಗತಿಃ** = ಪ್ರಕಾಶವಿಶೇಷವಾದ ದರ್ಶನದಿಂದ ತಿಳಿಯಲ್ಪಟ್ಟ ಆಗಮನವುಳ್ಳ
**ಮುಕುಂದಃ** = ಶ್ರೀವೇದವ್ಯಾಸದೇವರು,
**ಅತ್ರ** = ಅನಂತಮಠದಲ್ಲಿ
**ದಿನಮಂಡಲಂ** = 48 ದಿನಗಳ ಪರ್ಯಂತವಾಗಿ
**ಸ್ವಚರಣೇ** = ತನ್ನ ಪಾದಗಳಲ್ಲಿ
**ರತಚಿತ್ತಂ** = ಆಸಕ್ತವಾದ ಮನಸ್ಸುಳ್ಳಂತಹ
**ಏನಂ** = ಈ ಪೂರ್ಣಪ್ರಜ್ಞಾಚಾರ್ಯರನ್ನು
**ಸ್ವಾಶ್ರಮೋಪಗಮನಾಯ** = ಹಿಮವತ್ಪರ್ವತದ ಉತ್ತರಭಾಗದಲ್ಲಿರುವ ತನ್ನ ದೊಡ್ಡ ಬದರಿಕಾಶ್ರಮಕ್ಕೆ ಬರುವುದಕ್ಕೋಸ್ಕರ
**ಪ್ರೈರಯತ್** = ಪ್ರೇರಿಸಿದರು.

**ತಾತ್ಪರ್ಯ**— ಶ್ರೀಪೂರ್ಣಪ್ರಜ್ಞಾಚಾರ್ಯರು 48 ದಿವಸಗಳನ್ನು ಅನಂತಮಠದಲ್ಲಿ ವ್ರತ-ಉಪವಾಸಗಳಿಂದ ಸಹಿತ-ವಾಗಿ ಕಳೆಯಲು ಒಂದು ದಿನ ಶ್ರೀ ವೇದವ್ಯಾಸದೇವರು ರಾತ್ರಿಯಲ್ಲಿ ಬಂದು ಈ ಶ್ರೀ ಪೂರ್ಣಪ್ರಜ್ಞಾಚಾರ್ಯರನ್ನು ತನ್ನ

ಬದರಿಕಾಶ್ರಮವನ್ನು ಕುರಿತು ಬರಲು ಪ್ರೇರಿಸಿದರು. ಆ ಯಾವ ಶ್ರೀ ವೇದವ್ಯಾಸರ ಆಗಮನವು ಶಿಷ್ಯರುಗಳಿಂದ ಪ್ರಕಾಶವಿಶೇಷವನ್ನು ನೋಡಿ ತಿಳಿಯಲ್ಪಟ್ಟಿತು.

**ವಿಗ್ರಹ—**

**ರತಚಿತ್ತಂ—** ರತಂ ಚಿತ್ತಂ ಯಸ್ಯ ಸಃ ರತಚಿತ್ತಃ, ತಂ ರತಚಿತ್ತಂ ।

**ಸ್ವಾಶ್ರಮೋಪಗಮನಾಯ—** ಸ್ವಸ್ಯ ಆಶ್ರಮಸ್ಯ ಉಪಗಮನಂ, ತಸ್ಮೈ ।

**ದೀಪ್ತಿದೃಷ್ಟಿವಿದಿತಾಗತಿಃ—** ದೀಪ್ತೇಃ ದೃಷ್ಟಿಃ ದೀಪ್ತಿದೃಷ್ಟಿಃ, ದೀಪ್ತಿದೃಷ್ಟಿನಾ ವಿದಿತಾ ಆಗತಿಃ ಯಸ್ಯ ಸಃ ದೀಪ್ತಿದೃಷ್ಟಿವಿದಿತಾಗತಿಃ ।

**ಕ್ರಿಯಾಪದ— ಪ್ರೈರಯತ್**- ಪ್ರ ಇತ್ಯುಪಸರ್ಗಪೂರ್ವಕಾತ್ ಈರಪ್ರೇರಣೇ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಪ್ರೇರಯತ್'' ಇತಿ ರೂಪಮ್ ।

ಪ್ರೇರಯತ್ ಪ್ರೇರಯತಾಂ ಪ್ರೇರಯನ್, ಪ್ರೇರಯಃ ಪ್ರೇರಯತಂ ಪ್ರೇರಯತ, ಪ್ರೇರಯಂ ಪ್ರೇರಯಾವ ಪ್ರೇರಯಾಮ ॥

★ ★ ★

**ನಕ್ತಮೇವ ಭಗವತ್ಯುಪಯಾತೇ ಪ್ರೋದಿತೇ ಸತಿ ಸಹಸ್ರಮರೀಚೌ ।**
**ಮೌನವಾನಲಿಖದುತ್ತಮಚಿತ್ತಃ ಶಿಷ್ಯಶಿಕ್ಷಣಪರಃ ಕರುಣಾವಾನ್ ॥ 46 ॥**

**ಪದಚ್ಛೇದ—** ನಕ್ತಂ, ಏವ, ಭಗವತಿ, ಉಪಯಾತೇ, ಪ್ರೋದಿತೇ, ಸತಿ, ಸಹಸ್ರಮರೀಚೌ, ಮೌನವಾನ್, ಅಲಿಖತ್, ಉತ್ತಮಚಿತ್ತಃ, ಶಿಷ್ಯಶಿಕ್ಷಣಪರಃ, ಕರುಣಾವಾನ್ ।

**ಅನ್ವಯ—** ಭಗವತಿ ನಕ್ತಮೇವ ಉಪಯಾತೇ, ಸಹಸ್ರಮರೀಚೌ ಪ್ರೋದಿತೇ, ಮೌನವಾನ್, ಕರುಣಾವಾನ್, ಉತ್ತಮಚಿತ್ತಃ, ಶಿಷ್ಯಶಿಕ್ಷಣಪರಃ ಅಲಿಖತ್ ।

**ಅನ್ವಯಾರ್ಥ—**

**ಭಗವತಿ** = ಶ್ರೀವೇದವ್ಯಾಸರು

**ನಕ್ತಮೇವ** = ರಾತ್ರಿಯಲ್ಲಿಯೇ

**ಉಪಯಾತೇ** = ಹೋಗುತ್ತಿರಲು,

**ಸಹಸ್ರಮರೀಚೌ** = ಸಾವಿರಾರು ಕಿರಣಗಳುಳ್ಳಂತಹ ಸೂರ್ಯನು

**ಪ್ರೋದಿತೇ** = ಉದಯಿಸಿದ ನಂತರದಲ್ಲಿ

**ಮೌನವಾನ್** = ಮಾತಿನ ನಿಯಮವುಳ್ಳಂತಹ,

**ಕರುಣಾವಾನ್** = ಶಿಷ್ಯರುಗಳಲ್ಲಿ ಕರುಣೆಯುಳ್ಳಂತಹ,

**ಉತ್ತಮಚಿತ್ತಃ** = ಸರ್ವೋತ್ತಮನಾದ ಪರಮಾತ್ಮನಲ್ಲಿಯೇ ಮನಸ್ಸುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು

**ಶಿಷ್ಯಶಿಕ್ಷಣಪರಃ** = ಶಿಷ್ಯರ ಹಿತೋಪದೇಶದಲ್ಲಿ ಆಸಕ್ತರಾಗಿ

**ಅಲಿಖತ್** = ಬರೆದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞಾಚಾರ್ಯರು ರಾತ್ರಿಯೇ ದೊಡ್ಡ ಬದರೀಕಾಶ್ರಮವನ್ನು ಕುರಿತು ಹೋಗಲು ನಿಶ್ಚಯಮಾಡಿರಲು, ಕಾಷ್ಠಮೌನವ್ರತದಲ್ಲಿ ಇದ್ದುದರಿಂದ, ಶಿಷ್ಯರುಗಳಲ್ಲಿದ್ದ ದಯೆಯಿಂದ, ಅವರಿಗೆ ಹಿತೋಪದೇಶವನ್ನು ಪತ್ರಮುಖದಿಂದ ಬರೆದು ತಿಳಿಸಿದರು.

**ವಿಗ್ರಹ—**

**ಸಹಸ್ರಮರೀಚೌ—** ಸಹಸ್ರ ಸಂಖ್ಯಾಃ ಮರೀಚಯಃ ಯಸ್ಯ ಸಃ ಸಹಸ್ರಮರೀಚಯಃ, ತಸ್ಮಿನ್ ಸಹಸ್ರ-ಮರೀಚೌ ।

**ಮೌನವಾನ್—** ಮೌನಂ ಅಸ್ಯ ಅಸ್ತಿ ಇತಿ ಮೌನವಾನ್ ।

**ಕರುಣಾವಾನ್—** ಕರುಣಾ ಅಸ್ಯ ಅಸ್ತಿ ಇತಿ ಕರುಣಾವಾನ್ ।

**ಉತ್ತಮಚಿತ್ತಃ—** ಉತ್ತಮೇ ಚಿತ್ತಂ ಯಸ್ಯ ಸಃ ಉತ್ತಮಚಿತ್ತಃ ।

**ಶಿಷ್ಯ ಶಿಕ್ಷಣಪರಃ—** ಶಿಷ್ಯಾನಾಂ ಶಿಕ್ಷಣಂ ಶಿಷ್ಯಶಿಕ್ಷಣಂ, ಶಿಷ್ಯಶಿಕ್ಷಣೇ ಪರಃ ಶಿಷ್ಯಶಿಕ್ಷಣಪರಃ ।

**ಕ್ರಿಯಾಪದ—** ಅಲಿಖತ್- ಲಿಖ ಅಕ್ಷರವಿನ್ಯಾಸೇ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಂ ಪ್ರಥಮಪುರುಷೇ ಏಕವಚನೇ ''ಅಲಿಖತ್'' ಇತಿ ರೂಪಮ್ ॥

ಅಲಿಖತ್ ಅಲಿಖತಾಂ ಅಲಿಖನ್, ಅಲಿಖಃ ಅಲಿಖತಂ ಅಲಿಖತ, ಅಲಿಖಂ ಅಲಿಖಾವ ಅಲಿಖಾಮ ।

★ ★ ★

**ನೇದೃಶಂ ಸ್ಥಲಮಲಂ ಶಮಲಘ್ನಂ**
**ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ ।**
**ನಾಸ್ತಿ ವಿಷ್ಣುಸದೃಶಂ ನನು ದೈವಂ**
**ನಾಸ್ಮದುಕ್ತಿಸದೃಶಂ ಹಿತರೂಪಮ್ ॥ 47 ॥**

**ಪದಚ್ಛೇದ—** ನ, ಈದೃಶಂ, ಸ್ಥಲಂ, ಅಲಂ, ಶಮಲಘ್ನಂ, ನ, ಅಸ್ಯ ತೀರ್ಥಸಲಿಲಸ್ಯ, ಸಮಂ, ವಾಃ ನಾಸ್ತಿ, ವಿಷ್ಣುಸದೃಶಂ, ನನು, ದೈವಂ, ನ ಅಸ್ಮದುಕ್ತಿಸದೃಶಂ, ಹಿತರೂಪಂ ।

**ಅನ್ವಯ—** ಅಲಂ ಶಮಲಘ್ನಂ ಈದೃಶಂ ಸ್ಥಲಂ ನಾಸ್ತಿ, ಅಸ್ಯ ತೀರ್ಥಸಲಿಲಸ್ಯ ಸಮಂ ವಾಃ ನಾಸ್ತಿ, ವಿಷ್ಣುಸದೃಶಂ ದೈವಂ ನಾಸ್ತಿ ನನು, ಅಸ್ಮದುಕ್ತಿಸದೃಶಂ ಹಿತರೂಪಂ ನಾಸ್ತಿ ।

**ಅನ್ವಯಾರ್ಥ—**

**ಅಲಂ** = ಅತ್ಯಂತವಾಗಿ

**ಶಮಲಘ್ನಂ** = ಪಾಪನಾಶಕವಾದ

**ಈದೃಶಂ** = ಈ ಕ್ಷೇತ್ರಸದೃಶವಾದ

**ಸ್ಥಲಂ ನಾಸ್ತಿ** = ಸ್ಥಳವು ಇಲ್ಲ

**ಅಸ್ಯ ತೀರ್ಥಸಲಿಲಸ್ಯ** = ಈ ಗಂಗಾತೀರ್ಥಕ್ಕೆ

**ಸಮಂ ವಾಃ ನಾಸ್ತಿ** = ಸಮಾನವಾದ ಜಲವು ಇಲ್ಲ.

**ವಿಷ್ಣುಸದೃಶಂ** = ವಿಷ್ಣುವಿನ ಸಮಾನವಾದ

**ದೈವಂ** = ದೇವತೆಯು

**ನಾಸ್ತಿ ನನು** = ಇಲ್ಲವಷ್ಟೆ !

**ಅಸ್ಮದುಕ್ತಿಸದೃಶಂ** = ನಮ್ಮ ಮಾತಿಗೆ ಸಮಾನವಾದ

**ಹಿತರೂಪಂ** = ಹಿತರೂಪವಾದ ಮಾತು

**ನಾಸ್ತಿ** = ಇಲ್ಲ

**ತಾತ್ಪರ್ಯ**— ಎಲ್ಲಾ ಪಾಪಗಳ ಸಮೂಹವನ್ನು ನಾಶ ಮಾಡುವುದರಲ್ಲಿ ಈ ಕ್ಷೇತ್ರಕ್ಕೆ ಸದೃಶವಾದ ಬೇರೆ ಕ್ಷೇತ್ರ ಇಲ್ಲ ಮತ್ತು ಇಲ್ಲಿಯ ಭಾಗೀರಥಿ ತೀರ್ಥದ ನದಿಗಿಂತ ಬೇರೆ ನದಿ ಇಲ್ಲ. ವಿಷ್ಣುವಿಗೆ ಸದೃಶವಾಗಿ ಬೇರೆ ಯಾವ ದೇವರೂ ಇಲ್ಲ. ನಮ್ಮ ಮಾತಿನ ಸದೃಶವಾದ ಬೇರೆ ಹಿತರೂಪವಾದ ಮಾತೂ ಕೂಡ ಇಲ್ಲ.

**ವಿಗ್ರಹ**—

**ತೀರ್ಥಸಲಿಲಸ್ಯ**— ತೀರ್ಥಸ್ಯ ಸಲಿಲಂ ತೀರ್ಥಸಲಿಲಂ ತಸ್ಯ ।

**ವಿಷ್ಣುಸದೃಶಂ**— ವಿಷ್ಣೋಃ ಸದೃಶಃ ವಿಷ್ಣುಸದೃಶಃ ತಂ ।

**ಶಮಲಘ್ನಂ**— ಶಮಲಾನಿ ಹಂತೀ ಇತಿ ಶಮಲಘ್ನಂ ।

★ ★ ★

**ಯಾತಿ ತಾವದಧುನೈವ ಜನೋಽಯಂ ವ್ಯಾಸರೂಪಮಜಿತಂ ಪ್ರದಿದೃಕ್ಷುಃ ।**
**ಆವ್ರಜೇದಿಹ ನ ವಾ ಸ ಹಿ ವೇದ ಸ್ವಸ್ತಿ ವೋಽಸ್ತ್ವಿತಿ ಯಯಾವಥ ಮಧ್ವಃ ॥ 48 ॥**

**ಪದಚ್ಛೇದ**— ಯಾತಿ, ತಾವತ್, ಅಧುನೈವ, ಜನಃ, ಅಯಂ, ವ್ಯಾಸರೂಪಂ, ಅಜಿತಂ, ಪ್ರದಿದೃಕ್ಷುಃ, ಆವ್ರಜೇತ್, ಇಹ, ನ ವಾ, ಸ, ಹಿ, ವೇದ ಸ್ವಸ್ತಿ, ವಃ ಅಸ್ತು, ಇತಿ, ಯಯೌ, ಅಥ, ಮಧ್ವಃ ।

**ಅನ್ವಯ**— ಅಯಂ ಜನಃ ವ್ಯಾಸರೂಪಂ ಅಜಿತಂ ಪ್ರದಿದೃಕ್ಷುಃ, ಅಧುನೈವ ಯಾತಿ ತಾವತ್, ಇಹ ಆವ್ರಜೇತ್ ನ ವಾ ಇತಿ ಸಃ ವೇದ ಹಿ, ವಃ ಸ್ವಸ್ತಿ ಅಸ್ತು ಅಥ ಮಧ್ವಃ ಯಯೌ ।

**ಅನ್ವಯಾರ್ಥ**—

**ಅಯಂ ಜನಃ** = ಈ ಮಧ್ವಾಚಾರ್ಯರೆಂಬ ವ್ಯಕ್ತಿಯು
**ವ್ಯಾಸರೂಪಂ** = ಶ್ರೀವೇದವ್ಯಾಸ ರೂಪವುಳ್ಳ
**ಅಜಿತಂ** = ಶ್ರೀಹರಿಯನ್ನು
**ಪ್ರದಿದೃಕ್ಷುಃ** = ನೋಡಲು ಇಚ್ಛೆಯುಳ್ಳವರಾಗಿ
**ಅಧುನೈವ** = ಈಗಲೇ
**ಯಾತಿ** = ಹೋಗುತ್ತಾರೆ.
ಇಹ = ಈ ಅನಂತಮಠದಲ್ಲಿ
ಆವ್ರಜೇತ್ ನ ವಾ = ಮತ್ತೆ ಬರುತ್ತಾರೋ ಇಲ್ಲವೋ, (ಬರುವಿಕೆಯನ್ನು ನಾನು ತಿಳಿದಿಲ್ಲ)
ಇತಿ = ಎಂದು
**ಸಃ** = ಆ ವೇದವ್ಯಾಸರೇ
**ವೇದ ಹಿ** = ತಿಳಿದಿದ್ದಾರೆ.
**ವಃ ಸ್ವಸ್ತಿ ಅಸ್ತು** = ನಿಮಗೆ ಮಂಗಳವಾಗಲಿ
**ಅಥ** = ಹೀಗೆ ಬರೆದ ಮೇಲೆ,
**ಮಧ್ವಃ ಯಯೌ** = ಶ್ರೀಮಧ್ವಾಚಾರ್ಯರು ಹೊರಟರು.

**ತಾತ್ಪರ್ಯ**— ನಾನು ವೇದವ್ಯಾಸರನ್ನು ನೋಡಬೇಕೆಂಬ ಇಚ್ಛೆಯಿಂದ ಈಗಲೇ ಬದರಿಕಾಶ್ರಮಕ್ಕೆ ಹೋಗುತ್ತಲಿದ್ದೇನೆ. ನಾನು ಅಲ್ಲಿಂದ ಹಿಂದೆ ತಿರುಗಿ ಬರುತ್ತೇನೋ ಇಲ್ಲವೋ ಎಂಬುವುದು ಆ ವೇದವ್ಯಾಸರಿಗೆ ತಿಳಿದಿದೆ. ಆದ್ದರಿಂದ ನಿಮಗೆ ಆಶೀರ್ವಾದವನ್ನು ಮಾಡಿ ನಾನು ಹೊರಡುತ್ತೇನೆ ಎಂದು ಬರೆದು ಹೊರಟರು.

**ಕ್ರಿಯಾಪದ—** **ಆವ್ರಜೇತ್**- ವ್ರಜಗತೌ ಇತ್ಯಸ್ಮಾದ್ಧಾತೋಃ ವಿಧಿಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಆವ್ರಜೇತ್'' ಇತಿ ರೂಪಮ್ ।

ಆವ್ರಜೇತ್ ಆವ್ರಜೇತಾಂ ಆವ್ರಜೇಯುಃ, ಆವ್ರಜೇಃ ಆವ್ರಜೇತಂ ಆವ್ರಜೇತ, ಆವ್ರಜೇಯಂ ಆವ್ರಜೇವ ಆವ್ರಜೇಮ ॥

**ವೇದ**- ವಿದಜ್ಞಾನೇ ಇತ್ಯಸ್ಮಾದ್ಧಾತೋಃ ಲಟ್ ಪರಸ್ಮೈಪದಿನಃ ಪ್ರಥಮಪುರಷೇ ಏಕವಚನೇ ''ವೇದ'' ಇತಿ ರೂಪಮ್ ।

ವೇದ ವಿದತುಃ ವಿದುಃ, ವೇತ್ಥ ವಿದಥುಃ ವಿದ, ವೇದ ವಿದ್ವ ವಿದ್ಮ ॥

**ಅಸ್ತು**- ಅಸಭುವಿ ಇತ್ಯಸ್ಮಾದ್ಧಾತೋ ಲೋಟ್ ಪರಸ್ಮೈಪದಿನಃ ''ಅಸ್ತು'' ಇತಿ ರೂಪಮ್ ।

ಅಸ್ತು ಸ್ತಾತ್, ಸ್ತಾಂ ಸಂತು, ಏಧಿ ಸ್ತಾತ್, ಸ್ತಂ ಸ್ತ, ಅಸಾನಿ ಅಸಾವ ಅಸಾಮ ॥

**ಯಯೌ**- ಯಾಪ್ರಾಪಣೇ ಇತ್ಯಸ್ಮಾದ್ಧಾತೋಃ ಲಿಟ್ ಪರಸ್ಮೈಪದಿನಃ ''ಯಯೌ'' ಇತಿ ರೂಪಮ್ ।

ಯಯೌ ಯಯತುಃ ಯಯುಃ, ಯಯಿಥ ಯಯಾಥ, ಯಯಥುಃ ಯಯ, ಯಯೌ ಯಯಿವ ಯಯಿಮ ॥

★ ★ ★

**ನಾಥ ನಾಥ ಬತ ನೋಽತ್ರ ವಿನಾಥಾನ್ ಮಾ ತ್ಯಜೋರುಕರುಣೋ ಭಗವಂಸ್ತ್ವಮ್ ।**
**ನೋದಿತಂ ಸ್ಮೃತಮಪೀತಿ ಹಿ ಶಿಷ್ಯೈಃ ಸ್ವಾಮಿನೋಽಭಿಮತಭಂಗಭಯೇನ ॥ 49 ॥**

**ಪದಚ್ಛೇದ—** ನಾಥ, ನಾಥ, ಬತ, ನಃ, ಅತ್ರ, ವಿನಾಥಾನ್, ಮಾ, ತ್ಯಜ, ಉರುಕರುಣಃ, ಭಗವನ್, ತ್ವಂ, ನ, ಉದಿತಂ, ಸ್ಮೃತಂ, ಅಪಿ, ಇತಿ, ಹಿ,ಶಿಷ್ಯೈಃ, ಸ್ವಾಮಿನಃ, ಅಭಿಮತಭಂಗಭಯೇನ ।

**ಅನ್ವಯ—** ಹೇ ನಾಥ ! ಹೇ ನಾಥ ! ಹೇ ಭಗವನ್ ! ಉರುಕರುಣಃ, ತ್ವಂ ವಿನಾಥಾನ್ ನಃ, ಅತ್ರ ಮಾ ತ್ಯಜ ಇತಿ ಬತ ಶಿಷ್ಯೈಃ ಸ್ಮೃತಂ ಅಪಿ, ಸ್ವಾಮಿನಃ ಅಭಿಮತಭಂಗಭಯೇನ ನೋದಿತಂ ಹಿ ।

**ಅನ್ವಯಾರ್ಥ—**

**ಹೇ ನಾಥ, ಹೇ ನಾಥ, ಹೇ ಭಗವನ್** = ಎಲೋ ಸ್ವಾಮಿಯೇ ! ಎಲೋ ಭಗವಂತನೆ,
**ಉರುಕರುಣಃ** = ಬಹಳ ಕರುಣೆಯುಳ್ಳ
**ತ್ವಂ ವಿನಾಥಾನ್** = ನಿಮ್ಮನ್ನು ಹೊರತಾಗಿ ರಕ್ಷಕರಹಿತರಾದ
**ನಃ ಅತ್ರ** = ನಮ್ಮನ್ನು, ಬೇರೆ ದೇಶದಲ್ಲಿ
**ಮಾ ತ್ಯಜ** = ಬಿಡಬೇಡಿರಿ.
**ಇತಿ** = ಈ ರೀತಿಯಾಗಿ ದುಃಖವು
**ಬತ** = ಅಯ್ಯೋ !
**ಶಿಷ್ಯೈಃ ಸ್ಮೃತಂ ಅಪಿ** = ಈ ರೀತಿಯಾಗಿ ಹೇಳಿ ಮನಸ್ಸಿನಲ್ಲಿ ಚಿಂತಿಸಿದರೂ ಕೂಡ,
**ಸ್ವಾಮಿನಃ** = ಗುರುಗಳಾದ ಶ್ರೀಮಧ್ವಾಚಾರ್ಯರ
**ಅಭಿಮತಭಂಗಭಯೇನ** = ಇಷ್ಟವಾದ ಗಮನದ ನಾಶದ ಭಯದಿಂದ
**ನೋದಿತಂ ಹಿ** = ಹೇಳಲ್ಪಡಲಿಲ್ಲವಷ್ಟೆ !

**ಕ್ರಿಯಾಪದ—** ತ್ಯಜ- ತ್ಯಜವಿಸರ್ಗೇ ಇತಿ ಧಾತೋಃ ಲೋಟ್ ಪರಸ್ಮೈಪದಿನಃ ಮಧ್ಯಮಪುರುಷೇ ಏಕವಚನೇ "ತ್ಯಜ" ಇತಿ ರೂಪಮ್ ।

ತ್ಯಜತು ತ್ಯಜತಾತ್ ತ್ಯಜತಾಂ ತ್ಯಜಂತು, ತ್ಯಜ ತ್ಯಜತಾತ್ ತ್ಯಜತಂ ತ್ಯಜತ, ತ್ಯಜಾನಿ ತ್ಯಜಾವ ತ್ಯಜಾಮ ॥

★ ★ ★

**ಸದ್ಗುರೋರ್ನ ವಿರಹಂ ಸಹಮಾನಃ ಸತ್ಯತೀರ್ಥಯತಿರನ್ವಗಮತ್ತಮ್ ।**
**ಯಸ್ತ್ರಿವಾರಮಿತರಾಸುತಶಾಖಾಸ್ವರ್ಥಮಗ್ರ್ಯಮಶೃಣೋತ್ ಪುರುಸಂಖ್ಯಾತ್ ॥ 50 ॥**

**ಪದಚ್ಛೇದ—** ಸದ್ಗುರೋಃ, ನ, ವಿರಹಂ, ಸಹಮಾನಃ, ಸತ್ಯತೀರ್ಥಯತಿಃ, ಅನ್ವಗಮತ್, ತಂ, ಯಃ, ತ್ರಿವಾರಂ, ಇತರಾಸುತಶಾಖಾಸು, ಅರ್ಥಂ ಅಗ್ರ್ಯಂ, ಅಶೃಣೋತ್, ಪುರುಸಂಖ್ಯಾತ್ ।

**ಅನ್ವಯ—** ಯಃ ಇತರಾಸುತಶಾಖಾಸು ಅಗ್ರ್ಯಂ ಅರ್ಥಂ ಪುರುಸಂಖ್ಯಾತ್ ತ್ರಿವಾರಂ ಅಶೃಣೋತ್, ಸತ್ಯತೀರ್ಥಯತಿಃ ಸದ್ಗುರೋಃ ವಿರಹಂ ನ ಸಹಮಾನಃ, ತಂ ಅನ್ವಗಮತ್ ।

**ಅನ್ವಯಾರ್ಥ—**

**ಯಃ** = ಯಾರು

**ಇತರಾಸುತಶಾಖಾಸು** = ಇತರಾದೇವಿಯ ಮಗನಾದ ಮಹಿದಾಸನೆಂಬ ಪರಮಾತ್ಮನಿಂದ ದೃಷ್ಟವಾದ ಐತರೇಯೋಪನಿಷತ್ತುಗಳಲ್ಲಿರುವ

**ಅಗ್ರ್ಯಂ** = ಶ್ರೇಷ್ಠವಾದ

**ಅರ್ಥಂ** = ಅರ್ಥವನ್ನು

**ಪುರುಸಂಖ್ಯಾತ್** = ಶ್ರೀಮಧ್ವಾಚಾರ್ಯರಿಂದ

**ತ್ರಿವಾರಂ** = ಮೂರು ಬಾರಿ

**ಅಶೃಣೋತ್** = ಕೇಳಿದ್ದರೋ,

**(ಸಃ) ಸತ್ಯತೀರ್ಥಯತಿಃ** = ಆ ಸತ್ಯತೀರ್ಥರೆಂಬ ಸಂನ್ಯಾಸಿಗಳು

**ಸದ್ಗುರೋಃ** = ಶ್ರೇಷ್ಠಗುರುಗಳಾದ ಶ್ರೀಮಧ್ವಾಚಾರ್ಯರ

**ವಿರಹಂ** = ವಿಯೋಗವನ್ನು

**ನ ಸಹಮಾನಃ** = ಸಹಿಸದಿರುವವರಾಗಿ,

**ತಂ ಅನ್ವಗಮತ್** = ಆ ಮಧ್ವಾಚಾರ್ಯರನ್ನು ಅನುಸರಿಸಿ ಹೋದರು.

**ತಾತ್ಪರ್ಯ—** ಐತರೇಯೋಪನಿಷತ್ ಭಾಷ್ಯಾರ್ಥವನ್ನು ಶ್ರೀಮದಾಚಾರ್ಯರಿಂದ ಕೇಳಿದವರಾದ ಸತ್ಯತೀರ್ಥರೆಂಬ ಹೆಸರುಳ್ಳ ಸನ್ಯಾಸಿಗಳು ಈ ಮಧ್ವಾಚಾರ್ಯರ ವಿಯೋಗವನ್ನು ಸಹಿಸದೇ ಅವರನ್ನು ಅನುಸರಿಸಿಕೊಂಡು ಹೋದರು.

ವಿಗ್ರಹ—

**ಇತರಾಸುತಶಾಖಾಸು—** ಇತರಾಯೋಃ ಸುತಃ, ಸುತಸ್ಯ ಶಾಖಾಃ, ತಾಸು ।

**ಸತ್ಯತೀರ್ಥಯತಿಃ—** ಸತ್ಯತೀರ್ಥಶ್ಚಾಸೌ ಯತಿಶ್ಚ ಸತ್ಯತೀರ್ಥಯತಿಃ ।

**ಕ್ರಿಯಾಪದ—** **ಅನ್ವಗಮತ್**- ಅನು ಇತ್ಯುಪಸರ್ಗಪೂರ್ವಕಾತ್ ಗಮ್ಲೃಗತೌ ಲುಙ್ ಪರಸ್ಮೈಪದಿನಃ ಪ್ರಥಮ-ಪುರುಷೇ ಏಕವಚನೇ 'ಅನ್ವಗಮತ್' ಇತಿ ರೂಪಮ್।

ಅನ್ವಗಮತ್ ಅನ್ವಗಮತಾಂ ಅನ್ವಗಮನ್, ಅನ್ವಗಮಃ ಅನ್ವಗಮತಂ ಅನ್ವಗಮತ, ಅನ್ವಗಮಂ ಅನ್ವಗಮಾವ ಅನ್ವಗಮಾಮ ॥

**ಅಶ್ರುಣೋತ್-** ಶ್ರುಶ್ರವಣೇ ಇತ್ಯಸ್ಮಾದ್ಧಾತೋಃ ಲಙ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ''ಅಶ್ರುಣೋತ್'' ಇತಿ ರೂಪಮ್।

ಅಶ್ರುಣೋತ್ ಅಶ್ರುಣುತಾಂ ಅಶ್ರುಣ್ವನ್, ಅಶ್ರುಣೋಃ ಅಶ್ರುಣುತಂ ಅಶ್ರುಣುತ, ಅಶ್ರುಣುವಂ ಅಶ್ರುಣುವ ಅಶ್ರುಣುಮ ॥

★ ★ ★

**ದುರ್ಗಮಾರ್ಗಗತಮಪ್ಯನುಧಾವನ್ನಾಪ ಸೋಽಯಮರುಣೀಭವತೀನೇ ।**
**ಲೀಲಯಾ ಸಜವಮಾಕ್ರಮಮಾಣಂ ವ್ಯಾಶ್ರಯಾಂತರಸುದೂರಶಿಲಾಸು ॥ 51 ॥**

**ಪದಚ್ಛೇದ—** ದುರ್ಗಮಾರ್ಗಗತಂ, ಅಪಿ, ಅನುಧಾವನ್, ನ, ಆಪ, ಸಃ, ಅಯಂ, ಅರುಣೀಭವತಿ, ಇನೇ, ಲೀಲಯಾ, ಸಜವಂ, ಆಕ್ರಮಮಾಣಂ, ವ್ಯಾಶ್ರಯಾಂತರಸುದೂರಶಿಲಾಸು ।

**ಅನ್ವಯ—** ಸಃ ಅಯಂ ದುರ್ಗಮಾರ್ಗಗತಂ ಅಪಿ ಅನುಧಾವನ್ ಇನೇ ಅರುಣೀಭವತಿ, ವ್ಯಾಶ್ರಯಾಂತರ-ಸುದೂರಶಿಲಾಸು, ಲೀಲಯಾ ಸಜವಂ ಆಕ್ರಮಮಾಣಂ ನ ಆಪ ।

**ಅನ್ವಯಾರ್ಥ—**

**ಸಃ ಅಯಂ** = ಅಂತಹ ಈ ಸತ್ಯತೀರ್ಥರು
**ದುರ್ಗಮಾರ್ಗಗತಂ ಅಪಿ** = ಇತರರಿಂದ ಹೋಗಲು ಸಾಧ್ಯವಾಗದ ದಾರಿಯನ್ನು ಕ್ರಮಿಸುತಿದ್ದಾಗ್ಯೂ
**ಅನುಧಾವನ್** = ಮಧ್ವಾಚಾರ್ಯರನ್ನು ಹಿಂಬಾಲಿಸಿ ಓಡುತ್ತಾ
**ಇನೇ** = ಸೂರ್ಯನು
**ಅರುಣೀಭವತಿ** = ಕೆಂಪಾಗುತ್ತಿರಲು (ಅಸ್ತಂಗತನಾಗುತ್ತಿರಲು),
**ವ್ಯಾಶ್ರಯಾಂತರಸುದೂರಶಿಲಾಸು** = ಮಧ್ಯದಲ್ಲಿ ಆಶ್ರಯವಿಲ್ಲದ ಬಹುದೂರದ ಬಂಡೆಕಲ್ಲುಗಳಲ್ಲಿ
**ಲೀಲಯಾ** = ಅನಾಯಾಸದಿಂದ
**ಸಜವಂ** = ವೇಗದಿಂದ ಸಹಿತವಾಗಿ
**ಆಕ್ರಮಮಾಣಂ** = ಹಾರಿಕೊಂಡು ಹೋಗುತ್ತಿರುವ ಗುರುಗಳನ್ನು
**ನಾಪ** = ಸೇರಲಿಲ್ಲ.

**ತಾತ್ಪರ್ಯ—** ಅಂತಹ ಸತ್ಯತೀರ್ಥಯತಿಗಳು ಮಧ್ವಾಚಾರ್ಯರು ಕಲ್ಲುಮುಳ್ಳುಗಳಿಂದ ತುಂಬಿದ ದುರ್ಗಮ ಮಾರ್ಗದಲ್ಲಿ ಹೋಗುತ್ತಿದ್ದರೂ ಅವರನ್ನು ಹಿಂಬಾಲಿಸಿ ಓಡಿದರು. ಹೀಗೆಯೇ ಸಾಯಂಕಾಲವಾಯಿತು, ಸೂರ್ಯನು ಕೆಂಪಾದನು. ಆಚಾರ್ಯರು ನಡುವಿನಲ್ಲಿ ಒಂದಕ್ಕೊಂದು ಸಂಬಂಧವಿಲ್ಲದ ದೊಡ್ಡ ದೊಡ್ಡ ಬಂಡೆಗಳ ಮೇಲೆ ಆಯಾಸವಿಲ್ಲದೆ ಹಾರಿ ಹಾರಿ ಬೇಗನೆ ಹೋಗುತ್ತಿದ್ದುದರಿಂದ, ಸತ್ಯತೀರ್ಥರು ಅವರ ಜೊತೆಗೆ ಸೇರಲು ಸಾಧ್ಯವಾಗಲಿಲ್ಲ. ಸಾಯಂಕಾಲದ ಪರ್ಯಂತವಾಗಿ ಶ್ರೀಮಧ್ವರನ್ನು ಅನುಸರಿಸಿ ಓಡಿದರೂ ವೇಗವಾಗಿ ಬಂಡೆಯಿಂದ ಬಂಡೆಗೆ ಹಾರಿ ಹೋಗುತ್ತಿರುವ ಶ್ರೀಮಧ್ವಾಚಾರ್ಯರನ್ನು ಹಿಂಬಾಲಿಸಿ ಹೋಗಲು ಅಶಕ್ತರಾಗಿ ಸತ್ಯತೀರ್ಥರು ಸಾಯಂಕಾಲವಾದ ಮೇಲೆ ಅಲ್ಲಿಯೇ ನಿಂತುಬಿಟ್ಟರು.

**ವಿಗ್ರಹ—**

**ದುರ್ಗಮಾರ್ಗಗತಂ—** ದುರ್ಗಶ್ಚಾಸೌ ಮಾರ್ಗಶ್ಚ ದುರ್ಗಮಾರ್ಗಃ, ದುರ್ಗಮಾರ್ಗಂ ಗತಃ ದುರ್ಗ-ಮಾರ್ಗಗತಃ, ತಂ ದುರ್ಗಮಾರ್ಗಗತಂ ।

**ಅರುಣೀಭವತಿ**— ಅನರುಣಃ ಅರುಣಃ ಸಂಪದ್ಯಮಾನಃ ಭವನ್ ಅರುಣೀಭವನ್, ತಸ್ಮಿನ್ ಅರುಣೀಭವತಿ ।

**ಸಜವಂ**— ಜವೇನ ಸಹಿತಂ ಯಸ್ಮಿನ್ ಕರ್ಮಣಿ ತತ್ ಯಥಾ ಭವತಿ ತಥಾ ಸಜವಂ ।

**ವ್ಯಾಶ್ರಯಾಂತರಸುದೂರಶಿಲಾಸು**— ವಿಗತಃ ಆಶ್ರಯಃ ಯಸ್ಯ ತತ್ ವ್ಯಾಶ್ರಯಂ, ವ್ಯಾಶ್ರಯಂ ಅಂತರಂ ಯಾಸಾಂ ತಾಃ, ವ್ಯಾಶ್ರಯಾಂತರಾಃ, ಸುದೂರೇ ಶಿಲಾಃ ಸುದೂರಶಿಲಾಃ, ವ್ಯಾಶ್ರಯಾಂತರಾಶ್ಚ ತಾಃ ಸುದೂರಶಿಲಾಶ್ಚ ವ್ಯಾಶ್ರಯಾಂತರ- ಸುದೂರಶಿಲಾಃ, ತಾಸು ವ್ಯಾಶ್ರಯಾಂತರಸುದೂರಶಿಲಾಸು ।

**ಕ್ರಿಯಾಪದ**— **ಆಪ**- ಆಪ್ಲೃವ್ಯಾಪ್ತೌ ಇತ್ಯಸ್ಮಾತ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನ-ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ಆಪ'' ಇತಿ ರೂಪಮ್ ।

ಆಪ ಆಪತುಃ ಆಪುಃ, ಆಪಿಥ ಆಪಥುಃ ಆಪ, ಆಪ ಆಪಿವ ಆಪಿಮ ॥

★ ★ ★

**ಆನಿವೃತ್ತವಪುಷಾ ಗುರುಣಾಽಽರಾತ್ ಪಾಣಿನಾ ಹ್ಯಭಿನಯೇನ ಸುನುನ್ನಃ ।**
**ತ್ರಸ್ತಧೀರತಿಯಯೌ ಸ ಮುಹೂರ್ತಾತ್ ತದ್ದಿನೋಪಗತಮಾರ್ಗಮಶೇಷಮ್॥ 52 ॥**

**ಪದಚ್ಛೇದ**— ಆನಿವೃತ್ತವಪುಷಾ, ಗುರುಣಾ, ಆರಾತ್, ಪಾಣಿನಾ, ಹಿ ಅಭಿನಯೇನ, ಸುನುನ್ನಃ, ತ್ರಸ್ತಧೀಃ, ಅತಿಯಯೌ, ಸಃ, ಮುಹೂರ್ತಾತ್, ತದ್ದಿನೋಪಗತಮಾರ್ಗಂ, ಅಶೇಷಂ ।

**ಅನ್ವಯ**— ಆನಿವೃತ್ತವಪುಷಾ ಗುರುಣಾ, ಪಾಣಿನಾ ಅಭಿನಯೇನ ಆರಾತ್ ಸುನುನ್ನಃ, ಸಃ ತ್ರಸ್ತಧೀಃ ಅಶೇಷಂ ತದ್ದಿನೋಪಗತಮಾರ್ಗಂ ಮುಹೂರ್ತಾತ್ ಅತಿಯಯೌ ಹಿ ।

**ಅನ್ವಯಾರ್ಥ**—

**ಆನಿವೃತ್ತವಪುಷಾ** = ಹಿಂದೆ ನೋಡಲು ಸ್ವಲ್ಪ ಹಿಂದಿರುಗಿದ ದೇಹವುಳ್ಳ
**ಗುರುಣಾ** = ಶ್ರೀಮಧ್ವಾಚಾರ್ಯರಿಂದ
**ಪಾಣಿನಾ** = ಕೈಯಿಂದ
**ಅಭಿನಯೇನ** = ಹಿಂದಿರುಗಿ ಹೋಗು ಎಂಬುದನ್ನು ಸೂಚಿಸುವ ಸನ್ನೆಯಿಂದ
**ಆರಾತ್** = ದೂರದಲ್ಲಿ
**ಸುನನ್ನಃ** = ಚೆನ್ನಾಗಿ ಪ್ರೇರಿಸಲ್ಪಟ್ಟ
**ಸಃ** = ಆ ಸತ್ಯತೀರ್ಥರು
**ತ್ರಸ್ತಧೀಃ** = ಭಯ ಹೊಂದಿದ ಬುದ್ಧಿಯುಳ್ಳವರಾಗಿ
**ಅಶೇಷಂ** = ಸಂಪೂರ್ಣವಾದ
**ತದ್ದಿನೋಪಗತಮಾರ್ಗಂ** = ಆ ದಿನ ಸಾಗಿದ ದಾರಿಯನ್ನು,
**ಮುಹೂರ್ತಾತ್** = ಸ್ವಲ್ಪ ಹೊತ್ತಿನಲ್ಲಿಯೇ
**ಅತಿಯಯೌ ಹಿ** = ದಾಟಿದರಷ್ಟೆ !

**ತಾತ್ಪರ್ಯ**— ಹೀಗೆ ಸತ್ಯತೀರ್ಥರು ಹಿಂಬಾಲಿಸಿ ಹೋಗುತ್ತಿದ್ದರು. ಆಗ ಗುರುಗಳು ಒಂದು ಸಲ ಸ್ವಲ್ಪ ಹಿಂದಿರುಗಿ ನೋಡಿದರು. ಹಿಂಬಾಲಿಸುತ್ತಿದ್ದ ಶಿಷ್ಯರನ್ನು ನೋಡಿ ''ನೀವು ಹಿಂದಿರುಗಿರಿ, ನನ್ನೊಡನೆ ಬರಬೇಡಿರಿ'' ಎಂದು ಕೈಸನ್ನೆಯಿಂದ

ಸೂಚಿಸಿದರು. ಆಗ ಸತ್ಯತೀರ್ಥರು ಆ ಪರ್ವತದಲ್ಲಿರುವ ಹುಲಿ, ಸಿಂಹ ಮುಂತಾದ ಕ್ರೂರ ಮೃಗಗಳಿಂದ ಭಯ-ಗೊಂಡಿದ್ದರೂ ಕ್ಷಣಮಾತ್ರದಲ್ಲಿ ತಾವು ಆ ದಿನವಿಡೀ ಸಾಗಿದ ದಾರಿಯನ್ನು ಗುರುಗಳ ಅನುಗ್ರಹದಿಂದ ದಾಟಿ ಮೊದಲಿದ್ದ ಸ್ಥಳಕ್ಕೆ ಬಂದು ಸೇರಿದರು.

**ವಿಗ್ರಹ—**

**ತ್ರಸ್ತಧೀಃ—** ತ್ರಸ್ತಾ ಧೀಃ ಯಸ್ಯ ಸಃ ತ್ರಸ್ತಧೀಃ ।

**ಅನಿವೃತ್ತವಪುಷಾ—** ಅನಿವೃತ್ತಂ ವಪುಃ ಯಸ್ಯ ಸಃ ಅನಿವೃತ್ತವಪುಃ, ತೇನ, ಅನಿವೃತ್ತವಪುಷಾ ।

**ತದ್ದಿನಂ—** ತತ್ ಚ ದಿನಂ ಚ ತದ್ದಿನಂ, ತದ್ದಿನೇ ಉಪಗತಃ ತದ್ದಿನೋಪಗತಃ, ತದ್ದಿನೋಪಗತಶ್ಚಾಸೌ ಮಾರ್ಗಶ್ಚ ತದ್ದಿನೋಪಗತಮಾರ್ಗಃ, ತಂ ತದ್ದಿನೋಪಗತಮಾರ್ಗಂ ।

**ಕ್ರಿಯಾಪದ— ಅತಿಯಯೌ-** ಅತಿ ಇತ್ಯುಪಸರ್ಗಪೂರ್ವಕಾತ್ ಯಾ ಪ್ರಾಪಣೇ ಇತ್ಯಸ್ಮಾತ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ಅತಿಯಯೌ'' ಇತಿ ರೂಪಮ್ ।

ಯಯೌ ಯಯತುಃ ಯಯುಃ, ಯಯಿಥ ಯಯಾಥ, ಯಯಥುಃ ಯಯ ಯಯೌ ಯಯಿವ ಯಯಿಮ ॥

★ ★ ★

**ಆಶ್ರಮೇ ನಿಜಜನಾನಿಹ ದೃಷ್ಟ್ವಾ ತಂ ಪ್ರಸಾದಮಹಿಮಾನಮಮುಷ್ಯ ।**
**ಪ್ರೋಚ್ಯ ತತ್ ಪ್ಲವನಮಪ್ಯತಿಚಿತ್ರಂ ತಸ್ಯ ತೈಸ್ಸಹ ಸದಾಽಸ್ಮರದೇಷಃ ॥ 53 ॥**

**ಪದಚ್ಛೇದ—** ಆಶ್ರಮೇ, ನಿಜಜನಾನ್, ಇಹ, ದೃಷ್ಟ್ವಾ, ತಂ, ಪ್ರಸಾದಮಹಿಮಾನಂ, ಅಮುಷ್ಯ, ಪ್ರೋಚ್ಯ, ತತ್‌ಪ್ಲವನಂ, ಅಪಿ, ಅತಿಚಿತ್ರಂ, ತಸ್ಯ, ತೈಃ, ಸಹ, ಸದಾ, ಅಸ್ಮರತ್, ಏಷಃ ।

**ಅನ್ವಯ—** ಏಷಃ ಇಹ ಆಶ್ರಮೇ ನಿಜಜನಾನ್ ದೃಷ್ಟ್ವಾ ಅಮುಷ್ಯ ತಂ ಪ್ರಸಾದಮಹಿಮಾನಂ ಅತಿಚಿತ್ರಂ, ತತ್ ಪ್ಲವನಂ ಅಪಿ, ಪ್ರೋಚ್ಯ ತೈಃ ಸಹ ಸದಾ ತಸ್ಯ ಅಸ್ಮರತ್ ।

**ಅನ್ವಯಾರ್ಥ—**

**ಏಷಃ** = ಈ ಸತ್ಯತೀರ್ಥರು

**ಇಹ ಆಶ್ರಮೇ** = ಈ ಅನಂತಮಠದಲ್ಲಿ

**ನಿಜಜನಾನ್** = ತಮ್ಮ ಜನರನ್ನು

**ದೃಷ್ಟ್ವಾ** = ನೋಡಿ

**ಅಮುಷ್ಯ** = ಶ್ರೀ ಮಧ್ವಾಚಾರ್ಯರ

**ತಂ** = ತಮಗೆ ಅವರು ಮಾಡಿದ ಅಂತಹ

**ಪ್ರಸಾದಮಹಿಮಾನಂ** = ಅನುಗ್ರಹದ ಮಹತ್ವವನ್ನು

**ಅಪಿ** = ಮತ್ತು

**ಅತಿಚಿತ್ರಂ** = ಅತ್ಯಂತ ಆಶ್ಚರ್ಯಕರವಾದ

**ತತ್ ಪ್ಲವನಂ** = ಆ ಮಧ್ವರ ಹಾರುವಿಕೆಯನ್ನು

**ಪ್ರೋಚ್ಯ** = ಹೇಳಿ

**ತೈಃ ಸಹ** = ಅವರಿಂದ ಕೂಡಿಕೊಂಡು

**ಸದಾ** = ಯಾವಾಗಲೂ

**ತಸ್ಯ** = ಆ ಮಧ್ವಾಚಾರ್ಯರನ್ನು

**ಅಸ್ಮರತ್** = ಸ್ಮರಿಸಿದರು.

**ತಾತ್ಪರ್ಯ—** ಈ ಸತ್ಯತೀರ್ಥರು ಅನಂತಮಠಕ್ಕೆ ಬಂದು ಅಲ್ಲಿರುವ ತಮ್ಮ ಜನರನ್ನು ಕಂಡರು. ತಾನು ಆಚಾರ್ಯರನ್ನು ಹಿಂಬಾಲಿಸಿ ಹೋದ ವಿಷಯವನ್ನು, ಆಚಾರ್ಯರು ಅನುಗ್ರಹ ಮಾಡಿ ತನ್ನನ್ನು ಹಿಂದೆ ಕಳುಹಿಸಿದ ಕ್ರಮವನ್ನು ಹೇಳಿದರು. ಆಚಾರ್ಯರು ಒಂದು ಬಂಡೆಯಿಂದ ದೂರದ ಮತ್ತೊಂದು ಬಂಡೆಗೆ ಹಾರುತ್ತಾ ಮುಂದಕ್ಕೆ ಹೋಗುತ್ತಿದ್ದ ಅವರ ವಿಚಿತ್ರವಾದ ಮಹಿಮೆಯನ್ನು ವರ್ಣಿಸಿದರು. ಹಾಗೆಯೇ ಅವರೊಡನೆ ಯಾವಾಗಲೂ ಆಚಾರ್ಯರನ್ನು ಸ್ಮರಿಸುತ್ತಾ ಅನಂತಮಠದಲ್ಲಿ ಕಾಲ ಕಳೆಯುತ್ತಿದ್ದರು.

**ವಿಗ್ರಹ—**

**ನಿಜಜನಾಃ—** ನಿಜಾಶ್ಚ ತೇ ಜನಾಶ್ಚ ನಿಜಜನಾಃ, ತಾನ್ ನಿಜಜನಾನ್ ।

**ಪ್ರಸಾದಮಹಿಮಾನಂ—** ಪ್ರಸಾದಸ್ಯ ಮಾಹಿಮಾ ಪ್ರಸಾದಮಹಿಮಾ, ತಂ ಪ್ರಸಾದಮಹಿಮಾನಂ ।

**ತತ್ಪ್ಲವನಂ—** ತಸ್ಯ ಪ್ಲವನಂ ತತ್ಪ್ಲವನಂ, ತತ್ ।

**ಕ್ರಿಯಾಪದ— ಅಸ್ಮರತ್** - ಸ್ಮೃ ಚಿಂತಾಯಾಂ ಇತ್ಯಸ್ಮಾದ್ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನ-ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಅಸ್ಮರತ್'' ಇತಿ ರೂಪಮ್ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

★ ★ ★

## ವಾನರೇಂದ್ರ ಇವ ವಾಯುಜವೋಽಸೌ ಭೀಮಸೇನ ಇವ ದಾನವಭೀಮಃ ।
## ಉಲ್ಲಲಾಸ ಗಿರಿಪುಂಗವಶೃಂಗೇ ಸ ವ್ರಜನ್ ವೃಜಿನನಾಶನನಾಮಾ ॥ 54 ॥

**ಪದಚ್ಛೇದ—** ವಾನರೇಂದ್ರಃ, ಇವ, ವಾಯುಜವಃ, ಅಸೌ, ಭೀಮಸೇನ ಇವ ದಾನವಭೀಮಃ, ಉಲ್ಲಲಾಸ ಗಿರಿಪುಂಗವಶೃಂಗೇ ಸಃ ವ್ರಜನ್ ವೃಜಿನನಾಶನನಾಮಾ ।

**ಅನ್ವಯ—** ಗಿರಿಪುಂಗವಶೃಂಗೇ ವ್ರಜನ್ ವೃಜಿನನಾಶನನಾಮಾ ಸಃ, ಅಸೌ ವಾಯುಜವಃ ವಾನರೇಂದ್ರಃ ಇವ, ದಾನವಭೀಮಃ ಭೀಮಸೇನಃ ಇವ ಉಲ್ಲಲಾಸ ।

**ಅನ್ವಯಾರ್ಥ—**

**ಗಿರಿಪುಂಗವ ಶೃಂಗೇ** = ಪರ್ವತ ಶ್ರೇಷ್ಠವಾದ ಹಿಮಾಲಯದ ಶಿಖರದಲ್ಲಿ

**ವ್ರಜನ್** = ಹೋಗುತ್ತಿರುವ

**ವೃಜಿನ ನಾಶನ** = ಪಾಪವನ್ನು ಪರಿಹರಿಸುವ

**ನಾಮಾ** = ಹೆಸರುಳ್ಳ

**ಸಃ** = ಆ ಪ್ರಸಿದ್ಧರಾದ

**ಅಸೌ** = ಈ ಮಧ್ವಾಚಾರ್ಯರು,

**ವಾಯುಜವಃ** = ವಾಯುವಿನಂತೆ ವೇಗವುಳ್ಳ,

**ವಾನರೇಂದ್ರಃ ಇವ** = ಕಪಿಶ್ರೇಷ್ಠನಾದ ಹನುಮಂತನಂತೆ,

**ದಾನವಭೀಮಃ** = ದೈತ್ಯರಿಗೆ ಭಯಂಕರನಾದ ಭೀಮಸೇನನಂತೆ

**ಉಲ್ಲಲಾಸ** = ಪ್ರಕಾಶಿಸಿದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ನಾಮಸ್ಮರಣೆಯೇ ಸಮಸ್ತ ಪಾಪ ಪರಿಹಾರಕವಾಗಿದೆ. ಅಂತಹ ಮಹಾಮಹಿಮ ಸಂಪನ್ನರಾದ ಆಚಾರ್ಯರು ಹಿಮಾಲಯದ ಶಿಖರದಲ್ಲಿ ಬಂಡೆಯಿಂದ ಬಂಡೆಗೆ ಹಾರಿ ಹೋಗುತ್ತಿದ್ದರು. ಆಗ ಅವರು ವಾಯುವಿನಂತೆ ವೇಗದಿಂದ ಸಮುದ್ರವನ್ನು ದಾಟುತ್ತಿದ್ದ ಹನುಮಂತನಂತೆಯೂ, ಸೌಗಂಧಿಕಾ ವನಕ್ಕೆ ಹೋಗುತ್ತಾ ದಾನವರಿಗೆ ಭಯವನ್ನುಂಟು ಮಾಡುತ್ತಿದ್ದ ಭೀಮಸೇನನಂತೆಯೂ ಪ್ರಕಾಶಿಸಿದರು.

**ವಿಗ್ರಹ—**

**ವಾನರೇಂದ್ರಃ—** ವಾನರಾಣಾಂ ಇಂದ್ರಃ ವಾನರೇಂದ್ರಃ ।

**ವಾಯುಜವಃ—** ವಾಯೋಃ ಜವಃ ಇವ ಜವಃ ಯಸ್ಯ ಸಃ ವಾಯುಜವಃ ।

**ದಾನವಭೀಮಃ—** ದಾನವಾನಾಂ ಭೀಮಃ ದಾನವಭೀಮಃ ।

**ಗಿರಿಪುಂಗವಶೃಂಗೇ—** ಪುಮಾನ್ ಗೌರಿವ ಪುಂಗವಃ, ಗಿರಿಷು ಪುಂಗವಃ ಗಿರಿಪುಂಗವಃ, ಗಿರಿಪುಂಗವಸ್ಯ ಶೃಂಗಂ ಗಿರಿಪುಂಗವ- ಶೃಂಗಂ, ತಸ್ಮಿನ್ ಗಿರಿಪುಂಗವಶೃಂಗೇ ।

**ವೃಜಿನನಾಶನನಾಮಾ—** ವೃಜಿನಾನಾಂ ನಾಶನಂ ಯಸ್ಮಾತ್ ತತ್ ವೃಜಿನನಾಶನಂ, ವೃಜಿನನಾಶನಂ ನಾಮ ಯಸ್ಯ ಸಃ ವೃಜಿನ- ನಾಶನನಾಮಾ ।

**ಕ್ರಿಯಾಪದ—** ಉಲ್ಲಲಾಸ- ಉತ್ ಇತ್ಯುಪಸರ್ಗಪೂರ್ವಕಾತ್ ಲಸ ಕಾಂತೌ ಇತ್ಯಸ್ಮಾತ್ ಧಾತೋಃ ಅಕರ್ಮಕಾತ್ ಲಿಟಿ ಪರಸ್ಮೈಪದಿನಃ ಭೂತಾನದ್ಯತನಪರೋಕ್ಷೇ ಲಿಟಿ ಪ್ರಥಮಪುರುಷೇ ಏಕವಚನೇ ''ಉಲ್ಲಲಾಸ'' ಇತಿ ರೂಪಮ್ ।

| | | |
|---|---|---|
| ಉಲ್ಲಲಾಸ | ಉಲ್ಲಲೇಸತುಃ | ಉಲ್ಲಲೇಸುಃ, |
| ಉಲ್ಲಲೇಸಿಥ | ಉಲ್ಲಲೇಸಥುಃ | ಉಲ್ಲಲೇಸ, |
| ಉಲ್ಲಲಾಸ-ಉಲ್ಲಲಸ | ಉಲ್ಲಲೇಸಿವ | ಉಲ್ಲಲೇಸಿಮ ॥ |

★ ★ ★

**ಬಹುಸತ್ತ್ವಗಣಂ ಸವಿಕಂ ಸಮಹಾವಿಷಮೋಕ್ಷಮಹಾಹಿಮವಂತಮಯಮ್ ।**
**ವಿಷಮೋಕ್ಷಮಹಾ ಹಿಮವಂತಮಯನ್ನಗಮೈಕ್ಷತ ಫುಲ್ಲದೃಗಸ್ತಭಯಃ ॥ 55 ॥**

**ಪದಚ್ಛೇದ—** ಬಹುಸತ್ತ್ವಗಣಂ, ಸವಿಕಂ, ಸಮಹಾವಿಷಮೋಕ್ಷಮಹಾಹಿಂ, ಅವಂತಂ ಅಯಂ ವಿಷಮೋಕ್ಷಮಹಾಃ, ಹಿಮವಂತಂ ಅಯನ್, ನಗಂ, ಐಕ್ಷತ, ಫುಲ್ಲದೃಕ್, ಅಸ್ತಭಯಃ ।

**ಅನ್ವಯ—** ಅಯನ್, ವಿಷಮೋಕ್ಷಮಹಾಃ ಫುಲ್ಲದೃಕ್ ಅಸ್ತಭಯಃ, ಅಯಂ ಸವಿಕಂ ಸಮಹಾವಿಷಮೋಕ್ಷ-ಮಹಾಹಿಂ ಬಹುಸತ್ತ್ವಗಣಂ ಅವಂತಂ ಹಿಮವಂತಂ ನಗಂ ಐಕ್ಷತ ।

**ಅನ್ವಯಾರ್ಥ—**

**ಅಯನ್** = ಉತ್ತರಬದರಿಕಾಶ್ರಮಕ್ಕೆ ಹೋಗುತ್ತಿರುವ

**ವಿಷಮ** = ಕೋಪಗೊಂಡ (ಬಲಾಢ್ಯವಾದ)

**ಉಕ್ಣ** = ಗೂಳಿಯಂತೆ

**ಮಹಾಃ** = ತೇಜಸ್ಸುಳ್ಳ

**ಪುಲ್ಲದೃಕ್** = ಅರಳಿದ ಕಣ್ಣುಗಳುಳ್ಳ ಪೂರ್ಣವಾದ ಜ್ಞಾನವುಳ್ಳ

**ಅಸ್ತಭಯಃ** = ದೂರವಾದ ಭಯವುಳ್ಳ (ಹೆದರಿಕೆಯಿಲ್ಲದ)

**ಅಯಂ** = ಈ ಮಧ್ವಾಚಾರ್ಯರು,

**ಸವಿಕಂ** = ಪಕ್ಷಿಗಳಿಂದ ಕೂಡಿದ

**ಸಮಹಾವಿಷಮೋಕ್ಷಮಹಾಹಿಂ** = ಹೆಚ್ಚಾದ ವಿಷವನ್ನು ಕಾರುವ ದೊಡ್ಡ ಹಾವುಗಳಿಂದ ಸಹಿತವಾದ

**ಬಹುಸತ್ವಗಣಂ** = ಅನೇಕ ಪ್ರಾಣಿಗಳ ಸಮೂಹವನ್ನು

**ಅವಂತಂ** = ಕಾಪಾಡುತ್ತಿರುವ

**ಹಿಮವಂತಂ** = ಹಿಮಾಲಯವೆಂಬ

**ನಗಂ** = ಪರ್ವತವನ್ನು

**ಐಕ್ಷತ** = ಕಂಡರು.

**ತಾತ್ಪರ್ಯ—** ಕೊಬ್ಬಿದ ಬಲಶಾಲಿಯಾದ ಹಾಗೂ ಸಿಟ್ಟಿಗೇರಿದ ಗೂಳಿಯಂತೆ ಶ್ರೀಮಧ್ವಾಚಾರ್ಯರು ರಭಸದಿಂದ ಮುಂದುವರಿಯುತ್ತಿದ್ದರು. ಹಾಗೂ ತಮ್ಮ ಮುಂದೆ ಮಹೋನ್ನತವಾದ ಹಿಮಾಲಯವನ್ನು ಕಂಡರು. ಆ ಪರ್ವತದಲ್ಲಿ ನಾನಾವಿಧ ಪಕ್ಷಿಗಳೂ, ವಿಷಪೂತ್ಕಾರಮಾಡುತ್ತಿರುವ ಮಹಾಸರ್ಪಗಳೂ ಮತ್ತು ನಾನಾಬಗೆಯಾದ ಪ್ರಾಣಿಗಳೂ ಇದ್ದವು. ಹಿಮವಂತನು ಅವುಗಳನ್ನೆಲ್ಲಾ ಕಾಪಾಡುತ್ತಿದ್ದನು.

**ವಿಗ್ರಹ—**

**ಬಹುಸತ್ತ್ವಗಣಂ—** ಬಹವಶ್ಚ ತೇ ಸತ್ತ್ವಾಶ್ಚ ಬಹುಸತ್ತ್ವಾಃ, ಬಹುಸತ್ತ್ವಾನಾಂ ಗಣಃ ಬಹುಸತ್ತ್ವಗಣಃ, ತಂ ಬಹುಸತ್ತ್ವಗಣಂ ।

**ಸವಿಕಂ—** ವಿಭಿಃ ಸಹಿತಃ ಸವಿಃ ಸವಿರೇವ ಸವಿಕಃ ತಂ ।

**ಸಮಹಾವಿಷಮೋಕ್ಷಮಹಾಹಿಂ—** ಮಹಚ್ಚ ತತ್ ವಿಷಂ ಚ ಮಹಾವಿಷಂ, ಮಹಾವಿಷಸ್ಯ ಮೋಕ್ಷಃ ಮಹಾ- ವಿಷಮೋಕ್ಷಃ, ಮಹಾವಿಷಮೋಕ್ಷೇಣ ಸಹ ವರ್ತಂತ ಇತಿ ಸಮಹಾವಿಷಮೋಕ್ಷಾಃ, (ಮಹಾಂತಶ್ಚ ತೇ ಅಹಯಶ್ಚ ಮಹಾಹಯಃ) ಸಮಹಾವಿಷಮೋಕ್ಷಾಃ ಮಹಾಹಯಃ ಯಸ್ಮಿನ್ ಸಃ ಸಮಹಾ- ವಿಷಮೋಕ್ಷಮಹಾಹಿಃ, ತಂ ಸಮಹಾವಿಷಮೋಕ್ಷಮಹಾಹಿಂ ।

**ವಿಷಮೋಕ್ಷಮಹಾಃ—** ವಿಷಮಶ್ಚಾಸೌ ಉಕ್ಷಾ ಚ ವಿಷಮೋಕ್ಷಾ, ವಿಷಮೋಕ್ಷ್ಣ ಮಹ ಇವ ಮಹಃ ಯಸ್ಯ ಸಃ ವಿಷ- ಮೋಕ್ಷಮಹಾಃ ।

**ಪುಲ್ಲದೃಕ್—** ಪುಲ್ಲೇ ದೃಶೌ ಯಸ್ಯ ಸಃ ಪುಲ್ಲದೃಕ್ (ಪುಲ್ಲಾ ದೃಕ್ ಯಸ್ಯ ಸಃ ಇತಿ ವಾ)

**ಅಸ್ತಭಯಃ—** ಅಸ್ತಂ ಭಯಂ ಯಸ್ಮಾತ್ ಸಃ ಅಸ್ತಭಯಃ ।

**ಕ್ರಿಯಾಪದ—** ಐಕ್ಷತ- ಈಕ್ಷದರ್ಶನಾಂಕನಯೋಃ ಇತ್ಯಸ್ಮಾದ್ಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಅನದ್ಯತನ- ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಐಕ್ಷತ'' ಇತಿ ರೂಪಮ್ ।

ಐಕ್ಷತ ಐಕ್ಷೇತಾಂ ಐಕ್ಷಂತ, ಐಕ್ಷಥಾಃ ಐಕ್ಷೇಥಾಂ ಐಕ್ಷಧ್ವಂ, ಐಕ್ಷೇ ಐಕ್ಷಾವಹಿ ಐಕ್ಷಾಮಹಿ ॥

★ ★ ★

**ಸುಹಸಿತಕಮಲಾಕರೋಪಗೂಢಂ ಸುಜನಸುಖಾರ್ಥಮನಂತಭೋಗಶಯ್ಯಮ್ ।**
**ವಿಕಸಿತಸುಮನೋಘಟಾಗಮುಚ್ಚಂ ಮರಕತರತ್ನಮಯಸ್ಥಲಾಗ್ರ್ಯಶೋಭಮ್॥ 56 ॥**

**ಪದಚ್ಛೇದ—** ಸುಹಸಿತಕಮಲಾಕರೋಪಗೂಢಂ, ಸುಜನಸುಖಾರ್ಥಂ, ಅನಂತಭೋಗಶಯ್ಯಂ, ವಿಕಸಿತಸುಮ-ನೋಘಟಾಗಂ, ಉಚ್ಚಂ, ಮರಕತರತ್ನಮಯಸ್ಥಲಾಗ್ರ್ಯಶೋಭಂ (ತಂ ಧರಣೀಧರಂ ದೃಷ್ಟ್ವಾ ಮುರರಿಪುಂ ಅಸ್ಮರತ್) ।

**ಅನ್ವಯ—** ಸುಹಸಿತಕಮಲಾಕರೋಪಗೂಢಂ ಸುಜನಸುಖಾರ್ಥಂ ಅನಂತಭೋಗಶಯ್ಯಂ ವಿಕಸಿತಸುಮನೋ-ಘಟಾಗಂ ಉಚ್ಚಂ ಮರಕತರತ್ನಮಯಸ್ಥಲಾಗ್ರ್ಯಶೋಭಂ ।

**ಅನ್ವಯಾರ್ಥ—** (ಈ ಶ್ಲೋಕಕ್ಕೂ ಮುಂದಿನ ಶ್ಲೋಕಕ್ಕೂ ಸೇರಿ ಒಟ್ಟಿಗೆ ಅನ್ವಯಿಸಿ ಅರ್ಥವನ್ನು ಹೇಳಬೇಕು. ಎರಡು ಶ್ಲೋಕಗಳಿಗೆ ಸೇರಿ ಏಕಾನ್ವಯವಾದರೆ ಅದಕ್ಕೆ ಯುಗ್ಮವೆಂದು ಹೆಸರು. ಅದರಲ್ಲಿಯೂ ಕೊನೆಯ ಶ್ಲೋಕದೊಡನೆ ಏಕಾನ್ವಯ ಹೇಳುವಾಗ ಅಂತ್ಯಯುಗ್ಮವೆನಿಸಿಕೊಳ್ಳುವುದು.)

(ದ್ವಾಭ್ಯಾಂ ಯುಗ್ಮಮಿತಿ ಪ್ರೋಕ್ತಂ ತ್ರಿಭಿಃ ಶ್ಲೋಕೈಃ ವಿಶೇಷಕಂ । ಕಲಾಪಕಂ ಚತುರ್ಭಿಃ ಸ್ಯಾತ್ ತದೂರ್ಧ್ವಂ ಕುಲಕಂ ಸ್ಮೃತಂ - ಎರಡು ಶ್ಲೋಕಗಳಿಗೆ ಏಕಾನ್ವಯವಾದರೆ ಯುಗ್ಮ, ಮೂರು ಶ್ಲೋಕಗಳಿಗೆ ಏಕಾನ್ವಯವಾದರೆ ವಿಶೇಷಕಂ, ನಾಲ್ಕು ಶ್ಲೋಕಗಳಿಗೆ ಏಕಾನ್ವಯವಾದರೆ ಕಲಾಪಕಂ, ಐದು ಅಥವಾ ಅದಕ್ಕಿಂತ ಹೆಚ್ಚು ಶ್ಲೋಕಗಳಿಗೆ ಏಕಾನ್ವಯವಾದರೆ ಕುಲಕವೆಂದೂ ಹೆಸರು.) (ಇಲ್ಲಿ ಹಿಮಾಲಯ ಮತ್ತು ಶ್ರೀಮಹಾವಿಷ್ಣುವಿಗೆ ಅನ್ವಯಿಸುವಂತೆ ಎರಡು ಅರ್ಥಗಳನ್ನು ಇಟ್ಟುಕೊಳ್ಳಬೇಕು.)

**ಹಿಮಾಲಯ ಪಕ್ಷದಲ್ಲಿ:**

**ಸುಹಸಿತ ಕಮಲಾಕರ ಉಪಗೂಢಂ** = ಚೆನ್ನಾಗಿ ಅರಳಿದ ತಾವರೆ ಕೆರೆಗಳಿಂದ ಸುತ್ತುವರಿಯಲ್ಪಟ್ಟ

**ಸುಜನ ಸುಖಾರ್ಥಂ** = ಸಜ್ಜನರ ಸೌಖ್ಯಕ್ಕಾಗಿ,

**ಅನಂತ ಭೋಗಶಯ್ಯಂ** = ಸಂಖ್ಯೆಯಿಲ್ಲದ ಸುಖಾನುಭವಕ್ಕೆ ಯೋಗ್ಯವಾದ ಹೂವುಗಳು ಮತ್ತು ಹಾಸಿಗೆಗಳು ಇವುಗಳುಳ್ಳ

**ವಿಕಸಿತ ಸುಮನಸ್ ಘಟ ಅಗಂ** = ಅರಳಿದ ಹೂವುಗಳ ಸಮೂಹವುಳ್ಳ, ಮರಗಳಿಂದ ಕೂಡಿದ

**ಉಚ್ಚಂ** = ಎತ್ತರವಾದ

**ಮಕರರತ್ನಮಯಸ್ಥಲ** = ಗರುಡಪಚ್ಚೆಮಣಿಯೇ ಹೆಚ್ಚಾಗಿರುವ ನೆಲದಿಂದ,

**ಅಗ್ರ್ಯ** = ಶ್ರೇಷ್ಠವಾದ

**ಶೋಭಂ** = ಕಾಂತಿಯುಳ್ಳ

**ಧರಣೀಧರಂ** = ಹಿಮವಂತನನ್ನು

**ದೃಷ್ಟ್ವಾ** = ನೋಡಿ

**ಮುರರಿಪುಂ** = ಶ್ರೀಮನ್ನಾರಾಯಣನನ್ನು

**ಅಸ್ಮರತ್** = ಸ್ಮರಿಸಿದರು.

**ಹರಿಯ ಪಕ್ಷದಲ್ಲಿ:**

**ಸುಹಸಿತ ಕಮಲಾಕರ ಉಪಗೂಢಂ** = ಒಳ್ಳೆಯ ನಗುವುಳ್ಳ ಲಕ್ಷ್ಮಿಯ ಕೈಗಳಿಂದ ಆಲಿಂಗಿತನಾದ,

**ಸುಜನ ಸುಖಾರ್ಥಂ** = ಸಜ್ಜನರ ಸೌಖ್ಯಕ್ಕಾಗಿ

**ಅನಂತ ಭೋಗಶಯ್ಯಂ** = ಶೇಷನ ಶರೀರವೇ ಹಾಸಿಗೆಯಾಗಿ ಉಳ್ಳ

**ವಿಕಸಿತ ಸುಮನಸ್ ಘಟಾಗಂ** = ಸಂತುಷ್ಟರಾದ ದೇವತೆಗಳ ಸಮೂಹದಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವ,

**ಉಚ್ಚಂ** = ಸರ್ವೋತ್ತಮನಾದ

**ಮಕರರತ್ನಮಯಸ್ಥಲ** = ಗರುಡಪಚ್ಚೆ ಮಣಿಯ ಸ್ಥಳದಂತೆ

**ಅಗ್ರ್ಯಶೋಭಂ** = ಶ್ರೇಷ್ಠವಾದ ಕಾಂತಿಯುಳ್ಳ

**ಧರಣೀಧರಂ** = ಹಿಮವಂತನನ್ನು

**ದೃಷ್ಟ್ವಾ** = ನೋಡಿ

**ಮುರರಿಪುಂ** = ಶ್ರೀಮನ್ನಾರಾಯಣನನ್ನು

**ಅಸ್ಮರತ್** = ಸ್ಮರಿಸಿದರು.

**ತಾತ್ಪರ್ಯ—** ಶ್ರೀಮನ್ನಾರಾಯಣನು ಉತ್ತಮ ಮಂದಹಾಸಭರಿತಳಾದ ಲಕ್ಷ್ಮೀದೇವಿಯ ಕೈಗಳಿಂದ ಆಲಿಂಗಿಸಲ್ಪಟ್ಟಿರುವನು. ಸಜ್ಜನರಿಗೆ ಸೌಖ್ಯವನ್ನುಂಟುಮಾಡುವುದಕ್ಕಾಗಿ ನಾಲ್ಕು ತಿಂಗಳು ಶೇಷನೆಂಬ ಹಾಸಿಗೆಯಲ್ಲಿ ಮಲಗಿರುತ್ತಾನೆ. ಸಂತೋಷಪಟ್ಟಿರುವ ದೇವತೆಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿರುತ್ತಾನೆ. ಸರ್ವೋತ್ತಮನು ಗರುಡಪಚ್ಚೆಮಣಿಯ ಸ್ಥಳದಂತೆ ಹೊಳೆಯುವ ನೀಲದೇಹ ಉಳ್ಳವನು. ಈ ಹಿಮವಂತನೂ ಅವನಂತೆಯೇ ಅರಳಿರುವ ತಾವರೆಗಳಿಂದ ಕಂಗೊಳಿಸುವ ಕೊಳಗಳಿಂದ ಕೂಡಿದ್ದಾನೆ. ಸಜ್ಜನರ ಭೋಗಕ್ಕಾಗಿ ಅಸಂಖ್ಯವಾದ ಹೂವುಗಳು, ಹಾಸಿಗೆಗಳು ಮುಂತಾದ ಉತ್ತಮವಸ್ತುಗಳನ್ನು ತನ್ನಲ್ಲಿ ತುಂಬಿಕೊಂಡಿದ್ದಾನೆ. ಅರಳಿದ ಹೂವುಗಳಿಂದ ತುಂಬಿದ ಮರಗಳಿಂದ ಕಂಗೊಳಿಸುತ್ತಿದ್ದಾನೆ. ಮರಕತರತ್ನಮಯವಾದ ಭೂಮಿಯಿಂದ ಹೊಳೆಯುತ್ತಿದ್ದಾನೆ. ಶ್ರೀಮಧ್ವಾಚಾರ್ಯರು ಇಂತಹ ಹಿಮವಂತನನ್ನು ಕಂಡು ಅವನಂತೆಯೇ ಇರುವ ಶ್ರೀಮನ್ನಾರಾಯಣನನ್ನು ಉತ್ಕಂಠತೆಯಿಂದ ಸ್ಮರಿಸಿದರು.

*ವಿಶೇಷಾಂಶ:*

''ಮಾಧವಶ್ಚತುರೋ ಮಾಸಾನ್ ಸರ್ವಭೂತಹಿತಾಯ ವೈ । ಸ್ವಾಪಂ ಯಾಸ್ಯತಿ ಶೇಷಾಂಗೇ ಲಕ್ಷ್ಮ್ಯಾ ಸಹ ಜಗತ್ಪತಿಃ ॥'' ಎಂಬ ಪ್ರಮಾಣಾನುಸಾರವಾಗಿ ಲಕ್ಷ್ಮೀಪತಿಯಾದ ಶ್ರೀಹರಿಯು ಸರ್ವಸಜ್ಜನರ ಹಿತಕ್ಕಾಗಿ ಆಷಾಢಶುದ್ಧ ಏಕಾದಶಿಯಿಂದ ಕಾರ್ತಿಕಶುದ್ಧ ಏಕಾದಶಿಯವರೆಗೆ ಶೇಷನೆಂಬ ಹಾಸಿಗೆಯ ಮೇಲೆ ಲಕ್ಷ್ಮೀಸಹಿತನಾಗಿ ಮಲಗಿರುವನು ಎಂದು ತಿಳಿದು ಬರುತ್ತದೆ. ಆ ಪ್ರಸಿದ್ಧಿಯನ್ನಿಟ್ಟುಕೊಂಡು ''ಸುಜನಸುಖಾರ್ಥಮನಂತಭೋಗಶಯ್ಯಂ'' ಎಂದು ವರ್ಣಿಸಿರುತ್ತಾರೆ. ಇಲ್ಲಿ ಎಲ್ಲಾ ವಿಶೇಷಣಗಳನ್ನು ಹಿಮವಂತ ಮತ್ತು ಶ್ರೀಮನ್ನಾರಾಯಣನಿಗೆ ಅನ್ವಯಿಸುವಂತೆ ಚಮತ್ಕಾರವಾಗಿ ಜೋಡಿಸಿದ್ದಾರೆ. ಪುಷ್ಪಭರಿತವಾದ ಹಿಮಾಲಯದ ವರ್ಣನೆಯ ಸಂದರ್ಭದಲ್ಲಿ ಪುಷ್ಪಿತಾಗ್ರಾವೃತ್ತವನ್ನು ಬಳಸಿರುತ್ತಾರೆ. ''ಅಯುಜಿನಯುಗರೇಫತೋ ಯಕಾರೋ ಯುಜಿ ತು ನಜೌ ಜರಗಾಶ್ಚ ಪುಷ್ಪಿತಾಗ್ರಾ'' ಎಂದು ಅದರ ಲಕ್ಷಣ.

ಸುಹಸಿ, ತಕಮ, ಲಾಕರೋ, ಪಗೂಢಂ, ಸುಜನ, ಸುಖಾರ್ಥ, ಮನಂತ, ಭೋಗಶಯ್ಯಂ

**ವಿಗ್ರಹ—**

**ಸುಹಸಿತಕಮಲಾಕರೋಪಗೂಢಂ—** ಸುಹಸಿತಾನಿ ಚ ತಾನಿ ಕಮಲಾನಿ ಚ, ಸುಹಸಿತಕಮಲಾನಿ, ಸುಹಸಿತಕಮಲಾನಾಂ ಆಕರಾಃ ಸುಹಸಿತಕಮಲಾಕರಾಃ, ಸುಹಸಿತಕಮಲಾಕರೈಃ ಉಪಗೂಢಃ ಸುಹಸಿತಕಮಲಾಕರೋಪಗೂಢಃ, ತಂ ಸುಹಸಿತಕಮಲಾಕರೋಪಗೂಢಂ ।

**ಸುಹಸಿತಕಮಲಾಕರೋಪಗೂಢಂ—** ಸುಶೋಭನಂ ಹಸಿತಂ ಯಸ್ಯಾಃ ಸಾ ಸುಹಸಿತಾ, ಸುಹಸಿತಾ ಚ ಸಾ ಕಮಲಾ ಚ ಸುಹಸಿತಕಮಲಾ, ಸುಹಸಿತಕಮಲಾಯಾಃ ಕರೌ ಸಹಸಿತಕಮಲಾಕರೌ, ಸುಹಸಿತ-

ಕಮಲಾಕರಾಭ್ಯಾಂ ಉಪಗೂಢಃ ಸುಹಸಿತಕಮಲಾಕರೋಪಗೂಢಃ, ತಂ ಸುಹಸಿತಕಮಲಾಕರೋ-ಪಗೂಢಂ ।

**ಸುಜನಸುಖಾರ್ಥಂ**— ಶೋಭನಾಶ್ಚ ತೇ ಜನಾಶ್ಚ ಸುಜನಾಃ, ಸುಜನಾನಾಂ ಸುಖಂ ಸುಜನಸುಖಂ, ಸುಜನಸುಖಾಯ ಇತಿ ಸುಜನಸುಖಾರ್ಥಂ ।

**ಅನಂತಭೋಗಶಯ್ಯಂ**— ಭೋಗಾಶ್ಚ ಶಯ್ಯಾಶ್ಚ ಭೋಗಶಯ್ಯಾಃ, ಅನಂತಾಃ ಭೋಗಶಯ್ಯಾಃ ಯಸ್ಮಿನ್ ಸಃ, ತಂ ಅನಂತಭೋಗಶಯ್ಯಂ ।

**ವಿಕಸಿತಸುಮನೋಘಟಾಗಂ**— ವಿಕಸಿತಾಶ್ಚ ತಾಃ ಸುಮನಸ್ಚ ವಿಕಸಿತಸುಮನಸಃ, ವಿಕಸಿತಸುಮನಸಾಂ ಘಟಾ ಯೇಷಾಂ ತೇ ವಿಕಸಿತಸುಮನೋಘಟಾಃ, ವಿಕಸಿತಸುಮನೋಘಟಾಃ ಅಗಾಃ ಯಸ್ಮಿನ್ ಸಃ ವಿಕಸಿತ-ಸುಮನೋಘಟಾಗಃ, ತಂ ವಿಕಸಿತಸುಮನೋಘಟಾಗಂ ।

**ವಿಕಸಿತಸುಮನೋಘಟಾಗಂ**— ವಿಕಸಿತಾಶ್ಚ ತೇ ಸುಮನಸಶ್ಚ ವಿಕಸಿತಸುಮನಸಃ, ವಿಕಸಿತಸುಮನಸಾಂ ಘಟಾ ವಿಕಸಿತಸುಮನೋಘಟಾ, ವಿಕಸಿತಸುಮನೋಘಟಾಂ ಗಚ್ಛತೀತಿ ವಿಕಸಿತಸುಮನೋಘಟಾಗಃ, ತಂ ವಿಕಸಿತಸುಮನೋಘಟಾಗಂ ।

**ಮರಕತರತ್ನಮಯಸ್ಥಲಾಗ್ರ್ಯಶೋಭಂ**— ಮರಕತಂ ಇತಿ ರತ್ನಂ ಮರಕತರತ್ನಂ, ಮರಕತರತ್ನಾನಿ ಪ್ರಚುರಾಣಿ ಮರಕತರತ್ನಮಯಾನಿ, ಮರಕತರತ್ನಮಯಾನಿ ಚ ತಾನಿ ಸ್ಥಲಾನಿ ಚ ಮರಕತರತ್ನಮಯಸ್ಥಲಾನಿ, ಮರಕತರತ್ನಮಯಸ್ಥಲೈಃ ಅಗ್ರ್ಯಾ ಶೋಭಾ ಯಸ್ಯ ಸಃ ಮರಕತರತ್ನಮಯಸ್ಥಲಾಗ್ರ್ಯಶೋಭಃ, ತಂ ಮರಕತರತ್ನಮಯಾಸ್ಥಲಾಗ್ಯ್ರಶೋಭಂ ।

★ ★ ★

**ಪಾದೋಪಾಂತನಮನ್ಮಹಾಮುನಿಗಣಂ ಹೇಮಪ್ರದೀಪ್ತಾಂಬರಂ**
**ಶ್ರೀಮದ್ರತ್ನಕಲಾಪಮಗ್ರ್ಯಕಟಕೈರ್ವಿಭ್ರಾಜಿತಂ ಹಾಟಕೈಃ ।**
**ದೃಷ್ಟ್ವಾ ತಂ ಧರಣೀಧರಂ ಸುವನಮಾಲೋಲ್ಲಾಸಿನಂ ಸುಂದರಂ**
**ಸ್ವಾನಂದಾಕೃತಿಮಸ್ಮರನ್ ಮುರರಿಪುಂ ಸ್ವಾನಂದತೀರ್ಥಸ್ತದಾ ॥ 57 ॥**

**ಪದಚ್ಛೇದ**— ಪಾದೋಪಾಂತನಮನ್ಮಹಾಮುನಿಗಣಂ, ಹೇಮಪ್ರದೀಪ್ತಾಂಬರಂ, ಶ್ರೀಮದ್ರತ್ನಕಲಾಪಂ, ಅಗ್ರ್ಯ-ಕಟಕೈಃ, ವಿಭ್ರಾಜಿತಂ, ಹಾಟಕೈಃ, ದೃಷ್ಟ್ವಾ, ತಂ, ಧರಣೀಧರಂ, ಸುವನಮಾಲೋಲ್ಲಾಸಿನಂ, ಸುಂದರಂ, ಸ್ವಾನಂದಾಕೃತಿಂ, ಅಸ್ಮರತ್, ಮುರರಿಪುಂ, ಸ್ವಾನಂದತೀರ್ಥಃ, ತದಾ ।

**ಅನ್ವಯ**— ಸ್ವಾನಂದತೀರ್ಥಃ ತದಾ ಪಾದೋಪಾಂತನಮನ್ಮಹಾಮುನಿಗಣಂ, ಹೇಮಪ್ರದೀಪ್ತಾಂಬರಂ, ಶ್ರೀಮ-ದ್ರತ್ನಕಲಾಪಂ, ಹಾಟಕೈಃ ಅಗ್ರ್ಯಕಟಕೈಃ, ವಿಭ್ರಾಜಿತಂ, ಸುವನಮಾಲೋಲ್ಲಾಸಿನಂ, ಸುಂದರಂ ಸ್ವಾನಂದಾಕೃತಿಂ ತಂ ಧರಣೀಧರಂ, ದೃಷ್ಟ್ವಾ ಮುರರಿಪುಂ ಅಸ್ಮರತ್ ।

**ಅನ್ವಯಾರ್ಥ**—

**ಸ್ವಾನಂದತೀರ್ಥಃ** = ಉತ್ತಮವಾದ ಆನಂದವನ್ನು ಕೊಡುವ ಶಾಸ್ತ್ರವನ್ನು ರಚಿಸಿದ ಶ್ರೀಮಧ್ವಾಚಾರ್ಯರು

**ತದಾ** = ಆಗ,

ಹಿಮಾಲಯಪಕ್ಷದಲ್ಲಿ

ಪಾದೋಪಾಂತ ನಮತ್ ಮಹಾಮುನಿ = ತಪ್ಪಲು ಪ್ರದೇಶದಲ್ಲಿ ನಮಸ್ಕಾರ ಮಾಡುವ ಮಹರ್ಷಿಗಳ
ಗಣಂ = ಸಮೂಹವುಳ್ಳ,
ಹೇಮಪ್ರದೀಪ್ತಾಂಬರಂ = ಶಿಖರಗಳಲ್ಲಿರುವ ಚಿನ್ನದಿಂದ ಪ್ರಕಾಶಗೊಳಿಸಲ್ಪಟ್ಟ ಆಕಾಶವುಳ್ಳ,
ಶ್ರೀಮತ್ ರತ್ನ ಕಲಾಪಂ = ಕಾಂತಿಯುಳ್ಳ ರತ್ನಗಳ ಸಮೂಹವುಳ್ಳ,
ಹಾಟಕೈಃ = ಚಿನ್ನದ
ಅಗ್ರ್ಯಕಟಕೈಃ = ಶ್ರೇಷ್ಠ ತಪ್ಪಲು ಪ್ರದೇಶಗಳಿಂದ,
ಸುವನಮಾಲಾ ಉಲ್ಲಾಸಿನಂ = ಒಳ್ಳೆಯ ವನಗಳ ಸಾಲುಗಳಿಂದ ಪ್ರಕಾಶಿಸುವ,
ಸ್ವಾನಂದಾಕೃತಿಂ = ಒಳ್ಳೆಯ ಸಂತೋಷವನ್ನುಂಟುಮಾಡುವ ಆಕಾರವುಳ್ಳ
ತಂ = ಆ
ಧರಣೀಧರಂ = ಹಿಮಾಲಯ ಪರ್ವತವನ್ನು
ದೃಷ್ಟ್ವಾ = ನೋಡಿ
ಧರಣೀಧರಂ = ಭೂಮಿಯನ್ನು ಧರಿಸಿರುವ
ಮುರರಿಪುಂ = ಮುರನ ಶತ್ರುವಾದ ವಿಷ್ಣುವನ್ನು
ಅಸ್ಮರತ್ = ಉತ್ಕಂಠತೆಯಿಂದ ಧ್ಯಾನಿಸಿದರು.

ಹರಿಯ ಪಕ್ಷದಲ್ಲಿ

ಪಾದೋಪಾಂತ ನಮತ್ ಮಹಾಮುನಿಗಣಂ = ಕಾಲುಗಳ ಹತ್ತಿರ ನಮಸ್ಕರಿಸುತ್ತಿರುವ ಮಹರ್ಷಿಗಳ ಸಮೂಹವುಳ್ಳ,
ಹೇಮಪ್ರದೀಪ್ತಾಂಬರಂ = ಚಿನ್ನದಂತೆ ಹೊಳೆಯುವ ಪೀತಾಂಬರವುಳ್ಳ,
ಶ್ರೀಮತ್ ರತ್ನ ಕಲಾಪಂ = ಹೊಳೆಯುವ ರತ್ನಗಳ ಭೂಷಣಗಳುಳ್ಳ,
ಹಾಟಕೈಃ ಅಗ್ರ್ಯಕಟಕೈಃ = ಚಿನ್ನದ ಉತ್ತಮ ಬಳೆಗಳಿಂದ
ವಿಭ್ರಾಜಿತಂ = ಪ್ರಕಾಶಗೊಳಿಸಲ್ಪಟ್ಟ
ಸುವನಮಾಲಾ = ಒಳ್ಳೆಯ ವನಮಾಲೆಯೆಂಬ ಪುಷ್ಪಹಾರದಿಂದ
ಉಲ್ಲಾಸಿನಂ = ಪ್ರಕಾಶಿಸುವ,
ಸ್ವಾನಂದಾಕೃತಿಂ = ದೋಷವಿಲ್ಲದ ಸ್ವರೂಪಾನಂದವೇ ಆಕಾರವಾಗಿ ಉಳ್ಳ
ತಂ = ಆ
ಧರಣೀಧರಂ = ಹಿಮಾಲಯ ಪರ್ವತವನ್ನು
ದೃಷ್ಟ್ವಾ = ನೋಡಿ
ಧರಣೀಧರಂ = ಭೂಮಿಯನ್ನು ಧರಿಸಿರುವ
ಮುರರಿಪುಂ = ಮುರನ ಶತ್ರುವಾದ ವಿಷ್ಣುವನ್ನು
ಅಸ್ಮರತ್ = ಉತ್ಕಂಠತೆಯಿಂದ ಧ್ಯಾನಿಸಿದರು.

ತಾತ್ಪರ್ಯ— ಶ್ರೀಮನ್ನಾರಾಯಣನ ಕಾಲುಗಳಿಗೆ ಮಹರ್ಷಿಗಳು ನಮಸ್ಕರಿಸುತ್ತಿರುವರು. ಅವನು ಚಿನ್ನದಂತೆ ಪ್ರಕಾಶಿಸುವ ಪೀತಾಂಬರವನ್ನು ಧರಿಸಿರುವನು. ನಾರಾಯಣನು ಪ್ರಕಾಶಿಸುತ್ತಿರುವ ರತ್ನಾಭರಣಗಳನ್ನು ಧರಿಸಿರುವನು. ಶ್ರೇಷ್ಠವಾದ ಸುವರ್ಣಕಂಕಣಗಳನ್ನು ಕೈಗಳಲ್ಲಿ ಧರಿಸಿರುವನು. ಉತ್ತಮವಾದ ವನಮಾಲೆಯೆಂಬ ಹಾರವನ್ನು ಧರಿಸಿ

ಸುಂದರನಾಗಿರುತ್ತಾನೆ. ನಿರ್ದೋಷಾನಂದಸ್ವರೂಪನಾಗಿಯೂ ಇರುವನು. ಹಾಗೆಯೇ ಹಿಮಾಲಯ ಪರ್ವತದ ತಪ್ಪಲು ಪ್ರದೇಶಗಳಲ್ಲಿ, ಮಹರ್ಷಿಗಳು ಪರಮಾತ್ಮನನ್ನು ನಮಿಸುತ್ತಾ ತಪಸ್ಸಾಧನ ಮಾಡುತ್ತಿರುವರು. ಹಿಮಾಲಯವೂ ಸುವರ್ಣ ಶಿಖರಗಳಿಂದ ಆಕಾಶವನ್ನು ಪ್ರಕಾಶಗೊಳಿಸುತ್ತಿದೆ. ಹಿಮಾಲಯದಲ್ಲಿ ಕಾಂತಿಯುಕ್ತವಾದ ರತ್ನಗಳ ರಾಶಿಗಳೇ ಇವೆ. ಹಿಮಾಲಯವು ಶ್ರೇಷ್ಠವಾದ ಭಂಗಾರದ ತಪ್ಪಲು ಪ್ರದೇಶಗಳಿಂದ ರಾರಾಜಿಸುತ್ತಿದೆ. ಹಿಮಾಲಯವು ಒಳ್ಳೆಯ ವನಗಳ ಸಾಲುಗಳಿಂದ ಕಂಗೊಳಿಸುತ್ತಾ ಸುಂದರವಾಗಿದೆ. ಇಂತಹ ಆನಂದಪ್ರದವಾದ ಆಕಾರವುಳ್ಳ ಪರ್ವತವನ್ನು ಕಂಡು ಶ್ರೀಮಧ್ವಾಚಾರ್ಯರು ಹಿಮಾಲಯದಂತೆಯೇ ಕಂಗೊಳಿಸುವ ಶ್ರೀಮನ್ನಾರಾಯಣನನ್ನು ಸ್ಮರಿಸಿದರು ಮತ್ತು ಉತ್ಕಂಠತೆಯಿಂದ ಧ್ಯಾನ ಮಾಡಿದರು.

ವಿಗ್ರಹ—

**ಪಾದೋಪಾಂತನಮನ್ಮಹಾಮುನಿಗಣಂ—** ಪಾದಾನಾಂ ಉಪಾಂತಾಃ ಪಾದೋಪಾಂತಾಃ, ಪಾದೋಪಾಂತೇಷು ನಮಂತಃ ಪಾದೋಪಾಂತನಮಂತಃ, ಮಹಾಂತಶ್ಚ ತೇ ಮುನಯಶ್ಚ ಮಹಾಮುನಯಃ, ಪಾದೋಪಾಂತನಮಂತಶ್ಚ ತೇ ಮಹಾಮುನಯಶ್ಚ ಪಾದೋಪಾಂತನಮನ್ಮಹಾಮುನಯಃ, ಪಾದೋಪಾಂತನಮನ್ಮಹಾಮುನೀನಾಂ ಗಣಃ ಯಸ್ಮಿನ್ ಸಃ ಪಾದೋಪಾಂತನಮನ್ಮಹಾಮುನಿಗಣಃ, ತಂ ಪಾದೋಪಾಂತನಮನ್ಮಹಾಮುನಿಗಣಂ ।

**ಪ್ರದೀಪ್ತಾಂಬರಂ—** ಹೇಮ್ನಾ ಪ್ರದೀಪ್ತಂ ಅಂಬರಂ ಯೇನ ಸಃ ಹೇಮಪ್ರದೀಪ್ತಾಂಬರಃ, ತಂ ಹೇಮಪ್ರದೀಪ್ತಾಂಬರಂ । ಹೇಮವತ್ ಪ್ರದೀಪ್ತಂ ಅಂಬರಂ ಯಸ್ಯ ಸಃ ಹೇಮಪ್ರದೀಪ್ತಾಂಬರಃ, ತಂ ಹೇಮಪ್ರದೀಪ್ತಾಂಬರಂ ।

**ಶ್ರೀಮದ್ರತ್ನಕಲಾಪಂ—** ಶ್ರೀಃ ಏಷಾಂ ಅಸ್ತೀತಿ ಶ್ರೀಮಂತಿ, ಶ್ರೀಮಂತಿ ಚ ತಾನಿ ರತ್ನಾನಿ ಚ ಶ್ರೀಮದ್ರತ್ನಾನಿ, ಶ್ರೀಮದ್ರತ್ನಾನಾಂ ಕಲಾಪಃ ಯಸ್ಮಿನ್ ಸಃ ಶ್ರೀಮದ್ರತ್ನಕಲಾಪಃ, ತಂ ಶ್ರೀಮದ್ರತ್ನಕಲಾಪಂ ।

**ಅಗ್ರ್ಯಕಟಕೈಃ—** ಅಗ್ರ್ಯಾಣಿ ಚ ತಾನಿ ಕಟಕಾನಿ ಚ ಅಗ್ರ್ಯಕಟಕಾನಿ ತೈಃ ಅಗ್ರ್ಯಕಟಕೈಃ ।

**ಧರಣೀಧರಂ—** ಧರತಿ ಇತಿ ಧರಃ, ಧರಣ್ಯಾಃ ಧರಃ ಧರಣೀಧರಃ, ತಂ ಧರಣೀಧರಂ ।

**ಸುವನಮಾಲೋಲ್ಲಾಸಿತಂ—** ವನಾನಾಂ ಮಾಲಾ ವನಮಾಲಾ, ಶೋಭನಾ ಚ ಸಾ ವನಮಾಲಾ ಚ ಸುವನಮಾಲಾ, ಸುವನಮಾಲಯಾ ಉಲ್ಲಸತೀತಿ ಸುವನಮಾಲೋಲ್ಲಾಸೀ, ತಂ ಸುವನಮಾಲೋಲ್ಲಾಸಿತಂ ।

**ಸ್ವಾನಂದಾಕೃತಿಂ—** ಶೋಭನಃ ಆನಂದಃ ಯಸ್ಯಾಃ ಸಾ ಸ್ವಾನಂದಾ, ಸ್ವಾನಂದಾ ಆಕೃತಿಃ ಯಸ್ಯ ಸಃ ಸ್ವಾನಂದಾಕೃತಿಃ, ತಂ ಸ್ವಾನಂದಾಕೃತಿಂ । ಶೋಭನಶ್ಚಾಸೌ ಆನಂದಶ್ಚ ಸ್ವಾನಂದಃ, ಸ್ವಾನಂದ ಏವ ಆಕೃತಿಃ ಯಸ್ಯ ಸಃ ಸ್ವಾನಂದಾಕೃತಿಃ, ತಂ ಸ್ವಾನಂದಾಕೃತಿಂ ।

**ಮುರರಿಪುಂ—** ಮುರಸ್ಯ ರಿಪುಃ ಮುರರಿಪುಃ, ತಂ ಮುರರಿಪುಂ ।

**ಸ್ವಾನಂದತೀರ್ಥಃ—** ಶೋಭನಶ್ಚಾಸೌ ಆನಂದತೀರ್ಥಶ್ಚ ಸ್ವಾನಂದತೀರ್ಥಃ ।

**ವೃತ್ತವಿಚಾರ-** ಈ ಶ್ಲೋಕದಲ್ಲಿ ಶಾರ್ದೂಲವಿಕ್ರೀಡಿತ ವೃತ್ತವಿದೆ. ಸೂರ್ಯಾಶ್ವೈಃ ಮಃ ಸಜೌ ಸತತಗಾಃ ಶಾರ್ದೂಲವಿಕ್ರೀಡಿತಂ ।

ಪಾದೋಪಾಂ, ತನಮ, ನ್ಮಹಾಮು, ನಿಗಣಂ, ಹೇಮಪ್ರದೀಪ್ತಾಂಬರಂ ।

**ಕ್ರಿಯಾಪದ—** **ಅಸ್ಮರತ-** ಪ್ರಯೋಗ ಸ್ವಾನಂದತೀರ್ಥೇನ ಮುರರಿಪುಃ ಅಸ್ಮರ್ಯತ ॥

***ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ ಷಷ್ಠಃ ಸರ್ಗಃ ಸಮಾಪ್ತಃ ॥***

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಸಪ್ತಮಃ ಸರ್ಗಃ

ಶ್ರೀ ಪೂರ್ಣಪ್ರಜ್ಞರು ಹಿಮಾಲಯವನ್ನು ದಾಟಿ ಬದರೀವೃಕ್ಷಗಳಿಂದ ಅಲಂಕೃತವಾದ ಶ್ರೀವೇದವ್ಯಾಸರ ನಿವಾಸಸ್ಥಾನವಾದ ಬದರಿಕಾಶ್ರಮವನ್ನು ಕಂಡರು. ಅಲ್ಲಿ ಶುಕಮುನಿಗಳೇ ಮುಂತಾದ ಮಹನೀಯರು ವೇದವ್ಯಾಸರಿಂದ ಉಪದೇಶವನ್ನು ಪಡೆದು ವೈಷ್ಣವಸಿದ್ಧಾಂತವನ್ನು ಶಿಷ್ಯರಿಗೆ ಬೋಧಿಸುತ್ತಿದ್ದರು. ರಾಗದ್ವೇಷಾದಿರಹಿತರಾದ ಮುನಿವರ್ಯರಿಂದ ಕೂಡಿದ ಬದರಿಕಾಶ್ರಮವು ವಿಷ್ಣುಸನ್ನಿಧಾನ ಪಾತ್ರವಾದ ವೈಕುಂಠದಂತೆ ಇದ್ದಿತು. ಅಲ್ಲಿಯೇ ಶ್ರೀವೇದವ್ಯಾಸರೂ ವಾಸವಾಗಿದ್ದರು. ಆಶ್ರಮವನ್ನು ಪ್ರವೇಶಿಸುತ್ತಿರುವ ಸಕಲಶುಭಲಕ್ಷಣಸಂಪನ್ನರಾದ ಶ್ರೀ ಮಧ್ವಾಚಾರ್ಯರನ್ನು ಕಂಡು ಅಲ್ಲಿರುವ ಮುನಿಗಳು ಇವರು ''ಬ್ರಹ್ಮನೋ, ಮುಖ್ಯಪ್ರಾಣನೋ?, ಇವರಿಬ್ಬರಲ್ಲಿ ಒಬ್ಬನಾಗಿರಬೇಕು'' ಎಂದು ಊಹಿಸಿದರು. ಶ್ರೀ ಮಧ್ವಾಚಾರ್ಯರು ದೂರದಿಂದಲೇ ಬರುತ್ತಾ ಅಲ್ಲಿರುವ ಅದ್ಭುತವಾದ ಒಂದು ವೃಕ್ಷದ ಕೆಳಗೆ ಅನೇಕ ಮಂದಿ ಋಷಿಗಳನ್ನು ಕಂಡರು. ಆ ಋಷಿಗಳ ಮಧ್ಯದಲ್ಲಿ ಮೂರು ಲೋಕಕ್ಕೂ ಅಲಂಕಾರದಂತಿರುವ ಸತ್ಯವತೀಪುತ್ರರಾದ ವೇದವ್ಯಾಸರು ವಿರಾಜಿಸುತ್ತಿದ್ದರು. ಆಚಾರ್ಯರು ಅವರನ್ನು ಕಂಡು ಬಹಳವಾಗಿ ಸ್ತುತಿಸಿದರು. ''ಈ ವೇದವ್ಯಾಸರು ವೇದವನ್ನು ವಿಭಾಗಿಸಿ ಸಜ್ಜನರಿಗೆ ಉಪದೇಶಿಸಿದರು. ಹದಿನೆಂಟು ಪುರಾಣಗಳನ್ನು ಮಹಾಭಾರತವನ್ನು, ಬ್ರಹ್ಮಸೂತ್ರಗಳನ್ನೂ ರಚಿಸಿ ಪಾಂಡವರೇ ಮೊದಲಾದ ಸಜ್ಜನರಿಗೆ ಪೂರ್ಣಾನುಗ್ರಹವನ್ನು ಮಾಡುತ್ತಾ ಇದ್ದರು. ಈಗ ತಾನು ಭೂಮಿಯಲ್ಲಿ ಸಂಚರಿಸಿದರೆ ಕಲಿಕಾಲವು ನಡೆಯದೆಂದು ಇಲ್ಲಿಗೆ ಬಂದು ಸಾಮಾನ್ಯರಿಗೆ ಕಾಣದಂತೆ ಇದ್ದಾರೆ. ಇವರ ಶರೀರವು ಸಮಸ್ತದೋಷರಹಿತ, ಜ್ಞಾನಾನಂದ ಸ್ವರೂಪ. ಇವರ ಪಾದಧೂಳಿಯನ್ನು ನಾನು ಶಿರಸಾ ವಹಿಸುತ್ತೇನೆ. ಈ ದೇವನ ಪಾದತಲ, ಉಗುರುಗಳು, ಪಾದದ ಗಂಟುಗಳು ಎಲ್ಲವೂ ಅತಿ ಸುಂದರವಾಗಿ ಸಕಲಸಲ್ಲಕ್ಷಣಭರಿತವಾಗಿವೆ. ಇವರ ಈ ಎರಡು ಮೊಣಕಾಲುಗಳು ಶುಚಿಯಾಗಿ ತೇಜಸ್ವಿಯಾಗಿದ್ದು ತಮ್ಮನ್ನು ಸೇವಿಸುವವರನ್ನೂ ಅವುಗಳಂತೆಯೇ ಶುಚಿಯಾಗಿಯೂ ತೇಜಸ್ವಿಯಾಗಿಯೂ ಮಾಡುತ್ತವೆ. ಯೋಗ ಪಟ್ಟಿಕಾ ಕೃಷ್ಣಾಜಿನಧಾರಿಗಳಾದ ಈ ಸ್ವಾಮಿಯ ಉದರವು ತ್ರಿವಳಿಗಳಿಂದ ಮನೋಹರವಾಗಿ ಸಮಸ್ತ ಬ್ರಹ್ಮಾಂಡವನ್ನು ಒಳಗೊಂಡಿದೆ. ಕುತ್ತಿಗೆಯಲ್ಲಿ ಕೌಸ್ತುಭವು ಶೋಭಿಸುತ್ತಿದೆ. ''ಇವರು ತರ್ಕಾಭಯ ಮುದ್ರೆಯಿಂದ ಭಕ್ತರ ಅಜ್ಞಾನ ಭಯಗಳನ್ನು ಪರಿಹರಿಸುತ್ತಾರೆ.'' ಇತ್ಯಾದಿಯಾಗಿ ಆಚಾರ್ಯರು ಮನಸ್ಸಿನಲ್ಲಿಯೇ ತನ್ನ ಗುರು ಮತ್ತು ದೇವತೆಯಾದ ವ್ಯಾಸರನ್ನು ಸ್ತುತಿಸಿ ಸಾಷ್ಟಾಂಗ ನಮಸ್ಕಾರ ಮಾಡಿದರು. ಕೂಡಲೇ ವ್ಯಾಸರು ಅವರನ್ನು ಮೇಲೆತ್ತಿ ಆಲಿಂಗಿಸಿದರು. ಋಷಿಗಳು ಶುಕಮುನಿಗಳಿಗೂ ಸಿಗದ ಈ ಸನ್ಮಾನವನ್ನು ಕಂಡು ಬೆರಗಾದರು. ಅನಂತರ ಗುರುಗಳ ಅಭಿಪ್ರಾಯವನ್ನರಿತ ಅವರು ಬೇಗನೆ ಆಚಾರ್ಯರಿಗೆ ಉಚಿತಾಸನವನ್ನಿತ್ತರು. ವ್ಯಾಸರು ಆಚಾರ್ಯರನ್ನು ಕುಳಿತುಕೊಳ್ಳಲು ಹೇಳಿ ತಾವೂ ಕುಳಿತುಕೊಂಡರು. ಅಲ್ಲಿದ್ದವರಿಗೆ ಇವರು ಮುಖ್ಯಪ್ರಾಣನ ಅವತಾರರಾದ ಮಧ್ವಾಚಾರ್ಯರೆಂದು ತಿಳಿಸಿದರು. ಶಾಸ್ತ್ರಜ್ಞರಾದ ಆ ಮುನಿಗಳು ಆಚಾರ್ಯರನ್ನು ಸತ್ಕರಿಸಿ ಅಲ್ಲಿ ನಡೆದ

ಗುರುಶಿಷ್ಯರ ಸಂವಾದವನ್ನು ಕೇಳಿ ಪರಮಾನಂದಭರಿತರಾದರು. ಹೀಗೆ ಸಜ್ಜನರಿಗೆ ತತ್ತ್ವೋಪದೇಶ ಮಾಡಿ ಉದ್ಧರಿಸಲು ಭೂಮಿಯಲ್ಲಿ ಅವತರಿಸಿದ ಶ್ರೀಮನ್ನಾರಾಯಣ ಮತ್ತು ಮುಖ್ಯಪ್ರಾಣನ ಅವತಾರರಾದ ಶ್ರೀಮದ್ ವೇದವ್ಯಾಸರು ಮತ್ತು ಶ್ರೀಮಧ್ವಾಚಾರ್ಯರು ಬದರಿಕಾಶ್ರಮದಲ್ಲಿ ಮುನಿಮಂಡಲ ಮಧ್ಯದಲ್ಲಿ ವಿರಾಜಿಸಿದರು.

**ಅಥ ಹೈಮವತೇ ತಟಾಂತರೇ ಬದರೀಷಂಡವಿಶೇಷಮಂಡಿತಮ್ ।**
**ಪರಮಾಶ್ರಮಮಾಶ್ರಯಂ ಶ್ರಿಯಃ ಸಕಲಜ್ಞಃ ಸ ದದರ್ಶ ವಿಶ್ರುತಂ ॥ 1 ॥**

**ಪದಚ್ಛೇದ—** ಅಥ, ಹೈಮವತೇ, ತಟಾಂತರೇ, ಬದರೀಷಂಡವಿಶೇಷಮಂಡಿತಂ, ಪರಮಾಶ್ರಮಂ, ಆಶ್ರಯಂ, ಶ್ರಿಯಃ, ಸಕಲಜ್ಞಃ, ಸಃ ದದರ್ಶ, ವಿಶ್ರುತಂ ।

**ಅನ್ವಯ—** ಅಥ ಸಕಲಜ್ಞಃ ಸಃ, ಹೈಮವತೇ ತಟಾಂತರೇ, ಬದರೀಷಂಡವಿಶೇಷಮಂಡಿತಂ ಶ್ರಿಯಃ ಆಶ್ರಯಂ, ವಿಶ್ರುತಂ, ಪರಮಾಶ್ರಮಂ ದದರ್ಶ ।

**ಅನ್ವಯಾರ್ಥ—**

**ಅಥ** = ಹಿಮಾಲಯವನ್ನು ದಾಟಿದ ಅನಂತರ
**ಸಕಲಜ್ಞಃ** = ಸರ್ವಜ್ಞರಾದ
**ಸಃ** = ಆ ಮಧ್ವಾಚಾರ್ಯರು,
**ಹೈಮವತೇ** = ಹಿಮಾಲಯಕ್ಕೆ ಸಂಬಂಧಿಸಿದ
**ತಟಾಂತರೇ** = ಉತ್ತರದ ಮತ್ತೊಂದು ದಡದಲ್ಲಿ (ತಪ್ಪಲು ಪ್ರದೇಶದಲ್ಲಿ),
**ಬದರೀಷಂಡ** = ಎಲಚೀ ಮರಗಳ ಸಮೂಹದಿಂದ
**ವಿಶೇಷ** = ಹೆಚ್ಚಾಗಿ
**ಮಂಡಿತಂ** = ಅಲಂಕೃತವಾದ,
**ಶ್ರಿಯಃ** = ಲಕ್ಷ್ಮಿಗೆ
**ಆಶ್ರಯಂ** = ಆಶ್ರಯವಾದ,
**ವಿಶ್ರುತಂ** = ಪ್ರಸಿದ್ಧವಾದ
**ಪರಮಾಶ್ರಮಂ** = ಉತ್ತಮವಾದ ಬದರಿಕಾಶ್ರಮವನ್ನು (ಪರಮ= ಸರ್ವೋತ್ತಮರಾದ ಶ್ರೀವೇದವ್ಯಾಸರ, ಆಶ್ರಮಂ= ಆಶ್ರಮವನ್ನು)
**ದದರ್ಶ** = ನೋಡಿದರು.

**ತಾತ್ಪರ್ಯ—** ಸರ್ವಜ್ಞರಾದ ಆ ಮಧ್ವಾಚಾರ್ಯರು ಹಿಮಾಲಯವನ್ನು ದಾಟಿದ ಬಳಿಕ, ಅದರ ಉತ್ತರ ಭಾಗದ ತಪ್ಪಲು ಪ್ರದೇಶದಲ್ಲಿ ಉತ್ತಮವಾದ ಪ್ರಸಿದ್ಧವಾದ ಶ್ರೀವೇದವ್ಯಾಸರ ಉತ್ತರ ಬದರಿಕಾಶ್ರಮವನ್ನು ಕಂಡರು. ಆ ಆಶ್ರಮವು ಎಲಚಿ ಮರಗಳಿಂದ ಹೆಚ್ಚಾಗಿ ಅಲಂಕಾರಗೊಂಡು ಲಕ್ಷ್ಮಿಗೂ ಕಾಂತಿಗೂ ಆಶ್ರಯವಾಗಿತ್ತು.

**ವಿಗ್ರಹ—**

**ಹೈಮವತೇ—** ಹಿಮವತಃ ಇದಂ ಹೈಮವತಂ, ತಸ್ಮಿನ್ ಹೈಮವತೇ ।
**ತಟಾಂತರೇ—** ಅನ್ಯತ್ ತಟಂ ತಟಾಂತರಂ, ತಸ್ಮಿನ್ ತಟಾಂತರೇ ।
**ಬದರೀಷಂಡವಿಶೇಷಮಂಡಿತಂ—** ಬದರೀಣಾಂ ಷಂಡಾನಿ ಬದರೀಷಂಡಾನಿ, ವಿಶೇಷೇಣ ಮಂಡಿತಃ ವಿಶೇಷಮಂಡಿತಃ, ಬದರೀಷಂಡೈಃ ವಿಶೇಷಮಂಡಿತಃ ಬದರೀಷಂಡವಿಶೇಷಮಂಡಿತಃ, ತಂ ಬದರೀಷಂಡವಿಶೇಷಮಂಡಿತಂ ।

**ಪರಮಾಶ್ರಮಂ—** ಪರಮಶ್ಚಾಸೌ ಆಶ್ರಮಶ್ಚ ಪರಮಾಶ್ರಮಃ, ತಂ ಪರಮಾಶ್ರಮಂ । (ಪರಮಸ್ಯ ಆಶ್ರಮಃ ಪರಮಾಶ್ರಮಃ, ತಂ, ಪರಮಾಶ್ರಮಂ ।

**ಸಕಲಜ್ಞಃ—** ಸಕಲಂ ಜಾನಾತಿ ಇತಿ ಸಕಲಜ್ಞಃ ।

**ಕ್ರಿಯಾಪದ— ದದರ್ಶ-** ದೃಶಿರ್ ಪ್ರೇಕ್ಷಣೇ ಇತ್ಯಸ್ಮಾತ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟಿ ಪ್ರಥಮಪುರುಷೇ ಏಕವಚನೇ ''ದದರ್ಶ'' ಇತಿ ರೂಪಮ್ ।

ದದರ್ಶ ದದೃಶತುಃ ದದೃಶುಃ, ದದರ್ಶಿಥ ದದೃಶಥುಃ ದದೃಶ, ದದರ್ಶ ದದೃಶಿವ ದದೃಶಿಮ ॥

ವೃತ್ತ- ಈ ಸರ್ಗದಲ್ಲಿ ಶ್ರೀವೇದವ್ಯಾಸರ ಮತ್ತು ಅವರ ಆಶ್ರಮದ ಸೌಂದರ್ಯವನ್ನು ವಿಶೇಷವಾಗಿ ವರ್ಣಿಸುತ್ತಾರೆ. ಆದ್ದರಿಂದ ಇಲ್ಲಿ ಸುಂದರೀವೃತ್ತ. ಅಯುಜೋರ್ಯದಿ ಸಾ ಲಗೌ ಲಗೌ ಸಮಮ್ ಸ್ಥಾ ರಲಗಾಶ್ಚ ಸುಂದರೀ ಇತಿ ।

--ಉ --u-u- --u u-- u-u--

ಅಥಹೈ, ಮವತೇ, ತಟಾಂ, ತರೇ,-ಬದರೀ, ಷಂಡವಿ, ಶೇಷಮಂ, ಡಿತಂ ।

ಸ ಸ (ಲಗ್ವುಲ) ಗು ಸ ಭ ರ ಲಗು

ಇದೇ ವಿಯೋಗಿನೀವೃತ್ತ, ವಿಷಮೇ ಸಮಜಾಗುರುಸ್ಸಮೇ ಸಭರಾಲೋಽಥ ಗುರುರ್ವಿಯೋಗಿನೀ, ವೃತ್ತರತ್ನಾಕರ

★ ★ ★

**ಹಿಮವರ್ಷರವಿಪ್ರಭಾಸಹಾಃ ಪ್ರಥುಸತ್ರಪ್ರಥಿತಾ ದ್ವಿಜಾಶ್ರಯಾಃ ।**
**ಅಪಿ ವಿಷ್ಣುಪದಸ್ಪೃಶೋಽಲಸನ್ ಉಭಯೇ ಯತ್ರ ವಿಚಿತ್ರಶಾಖಿನಃ ॥ 2 ॥**

**ಪದಚ್ಛೇದ—** ಹಿಮವರ್ಷರವಿಪ್ರಭಾಸಹಾಃ, ಪ್ರಥುಸತ್ರಪ್ರಥಿತಾಃ, ದ್ವಿಜಾಶ್ರಯಾಃ, ಅಪಿ, ವಿಷ್ಣುಪದಸ್ಪೃಶಃ, ಅಲಸನ್, ಉಭಯೇ, ಯತ್ರ, ವಿಚಿತ್ರಶಾಖಿನಃ ।

**ಅನ್ವಯ—** ಯತ್ರ ಹಿಮವರ್ಷರವಿಪ್ರಭಾಸಹಾಃ, ಪ್ರಥುಸತ್ರಪ್ರಥಿತಾಃ, ದ್ವಿಜಾಶ್ರಯಾಃ, ವಿಷ್ಣುಪದಸ್ಪೃಶಃ, ಉಭಯೇಅಪಿ ವಿಚಿತ್ರಶಾಖಿನಃ ಅಲಸನ್ ।

**ಅನ್ವಯಾರ್ಥ—**

**ಯತ್ರ** = ಯಾವ ಬದರಿಕಾಶ್ರಮದಲ್ಲಿ

**ಹಿಮ ವರ್ಷ ರವಿಪ್ರಭಾ ಸಹಾಃ** = ಮಂಜು, ಮಳೆ, ಸೂರ್ಯಪ್ರಕಾಶ (ಬಿಸಿಲು) ಇವುಗಳನ್ನು ಸಹಿಸುವ,

**ಪೃಥು** = ದೊಡ್ಡದಾದ

**ಸತ್ರ** = ಯಜ್ಞಗಳಲ್ಲಿ (ಕಾಡುಗಳಲ್ಲಿ)

**ಪ್ರಥಿತಾಃ** = ಪ್ರಖ್ಯಾತರಾದ (ಪ್ರಸಿದ್ಧವಾದ),

**ದ್ವಿಜಾಶ್ರಯಾಃ** = ಬ್ರಾಹ್ಮಣರಿಗೆ ಆಶ್ರಯರಾದ (ಪಕ್ಷಿಗಳಿಗೆ ಆಶ್ರಯವಾದ)

**ವಿಷ್ಣುಪದ ಸ್ಪೃಶಃ** = ಶ್ರೀಮನ್ನಾರಾಯಣನಪಾದಗಳನ್ನು (ವಿಷ್ಣುಪದವೆಂಬ ಹೆಸರುಳ್ಳ ಆಕಾಶವನ್ನು) ಭಜಿಸುವ

**ಉಭಯೇ ಅಪಿ ವಿಚಿತ್ರಶಾಖಿನಃ** = ಎರಡೂ ವಿಧವಾಗಿ ಶಾಖೆಗಳುಳ್ಳ, ಬೇರೆ ಬೇರೆ ವೇದಶಾಖಾಧ್ಯಾಯಿಗಳಾದ ಮುನಿಗಳು, (ಆಶ್ಚರ್ಯಕರವಾದ ಕೊಂಬೆಗಳುಳ್ಳ ಮರಗಳು)

**ಅಲಸನ್** = ಪ್ರಕಾಶಿಸಿದವು.

**ತಾತ್ಪರ್ಯ**— ಆ ಬದರಿಕಾಶ್ರಮದಲ್ಲಿ ಬಗೆ ಬಗೆಯ ಮರಗಳು ಕಂಗೊಳಿಸುತ್ತಿದ್ದವು. ಅವು ಮಂಜು, ಮಳೆ, ಬಿಸಿಲುಗಳನ್ನು ಸಹಿಸಿಕೊಂಡು ಬೆಳೆದಿದ್ದವು. ಅಲ್ಲಿದ್ದವರಿಗೆ ಮಂಜು, ಮಳೆ, ಬಿಸಿಲುಗಳಿಂದ ರಕ್ಷಣೆ ಕೊಡುತ್ತಿದ್ದವು. ಈ ಮರಗಳು ದೊಡ್ಡ ದೊಡ್ಡ ಕಾಡುಗಳಲ್ಲಿ ವಿಸ್ತಾರವಾಗಿ ಬೆಳೆದು ಪ್ರಸಿದ್ಧವಾಗಿದ್ದುವು. ಪಕ್ಷಿಗಳು ಅವುಗಳಲ್ಲಿ ಗೂಡುಗಳನ್ನು ಕಟ್ಟಿಕೊಂಡು ಇದ್ದುವು. ಅವುಗಳು ಆಕಾಶವನ್ನು ವ್ಯಾಪಿಸುಷ್ಟು ಎತ್ತರವಾಗಿದ್ದುವು. ಹೀಗೆಯೇ ಅಲ್ಲಿ ನಾನಾವಿಧ ಶಾಖೆಗಳ ಅಧ್ಯಯನ ಮಾಡುವ ಮಹರ್ಷಿಗಳಿದ್ದರು. ಅವರು ಹಿಮ, ಮಳೆ, ಬಿಸಿಲುಗಳನ್ನು ತಡೆದುಕೊಂಡು ತಪಸ್ಸು ಮಾಡುತ್ತಿದ್ದರು. ದೊಡ್ಡ ದೊಡ್ಡ ಯಜ್ಞಗಳನ್ನು ಮಾಡಿಸಿ ಪ್ರಸಿದ್ಧರಾಗಿದ್ದರು ಹಾಗೂ ಬ್ರಾಹ್ಮಣರಿಗೆ ಆಶ್ರಯರಾಗಿದ್ದರು. ಶ್ರೀ ವಿಷ್ಣುವಿನ ಪಾದ ಧ್ಯಾನವಲ್ಲಿ ಆಸಕ್ತರಾಗಿ ಪ್ರಕಾಶಮಾನರಾಗಿದ್ದರು. ಇಂತಹ ಎರಡು ವಿಧವಾದ ಶಾಖೆಗಳಿಂದ (ವೃಕ್ಷ ಮತ್ತು ಶಾಖಾಧ್ಯಯನ ನಿರತರಾದ ಋಷಿಗಳಿಂದ) ಕೂಡಿರುವ ಬದರಿಕಾಶ್ರಮವನ್ನು ಆಚಾರ್ಯರು ಕಂಡರು.

**ವಿಗ್ರಹ**—

**ಹಿಮವರ್ಷರವಿಪ್ರಭಾಸಹಾಃ**— ಸಹಂತೇ ಇತಿ ಸಹಾಃ, ರವೇಃ ಪ್ರಭಾ ರವಿಪ್ರಭಾ, ಹಿಮಂ ಚ ವರ್ಷಂ ಚ ರವಿಪ್ರಭಾ ಚ ಹಿಮವರ್ಷರವಿಪ್ರಭಾಃ, ಹಿಮವರ್ಷರವಿಪ್ರಭಾಣಾಂ ಸಹಾಃ ಹಿಮವರ್ಷರವಿ-ಪ್ರಭಾಸಹಾಃ ।

**ಪ್ರಥುಸತ್ರಪ್ರಥಿತಾಃ**— ಪೃಥೂನಿ ಚ ತಾನಿ ಸತ್ರಾಣಿ ಚ, ಪೃಥುಸತ್ರಾಣಿ, ಪೃಥುಸತ್ರೇಷು ಪ್ರಥಿತಾಃ ಪೃಥುಸತ್ರಪ್ರಥಿತಾಃ ।

**ದ್ವಿಜಾಶ್ರಯಾಃ**— ದ್ವಿಜಾನಾಂ ಆಶ್ರಯಾಃ ದ್ವಿಜಾಶ್ರಯಾಃ ।

**ವಿಷ್ಣುಪದಸ್ಪೃಶಃ**— ವಿಷ್ಣೋಃ ಪದಂ ವಿಷ್ಣುಪದಂ, ವಿಷ್ಣುಪದಂ ಸ್ಪೃಶಂತೀತಿ ವಿಷ್ಣುಪದಸ್ಪೃಶಃ ।

**ವಿಚಿತ್ರಶಾಖಿನಃ**— ಶಾಖಾಃ ಏಷಾಂ ಸಂತೀತಿ ಶಾಖಿನಃ, ವಿಚಿತ್ರಾಶ್ಚ ತೇ ಶಾಖಿನಶ್ಚ ವಿಚಿತ್ರಶಾಖಿನಃ ।

**ಕ್ರಿಯಾಪದ**— **ಅಲಸನ್**- ಲಸ ವಿಕಾಸೇ ಇತಿಧಾತೋಃ ಅನದ್ಯತನ ಭೂತೇ ಲಙ್ ಪ್ರ 'ಪು' ಬಹು. ''ಅಲಸನ್'' ಇತಿ ರೂಪಮ್ ।

ಅಲಸತ್ ಅಲಸತಾಂ ಅಲಸನ್, ಅಲಸಃ ಅಲಸತಂ ಅಲಸತ, ಅಲಸಂ ಅಲಸಾವ ಅಲಸಾಮ ॥

★ ★ ★

**ಶ್ರವಣಾಮೃತಗೀರ್ಗಣೈರ್ದ್ವಿಜೈಃ ಶುಕಮುಖ್ಯೈಃ ಶುಭಪಕ್ಷಿಭಿರ್ಯುತಂ ।**
**ಕಮಲೇಷ್ಟತಮಸ್ಥಿರಾಂತರೈರಪಿ ಹಂಸೈಃ ಪರಮೈರಮೇಚಕೈಃ ॥ 3 ॥**

**ಪದಚ್ಛೇದ**— ಶ್ರವಣಾಮೃತಗೀರ್ಗಣೈಃ, ದ್ವಿಜೈಃ, ಶುಕಮುಖ್ಯೈಃ, ಶುಭಪಕ್ಷಿಭಿಃ, ಯುತಂ, ಕಮಲೇಷ್ಟ-ತಮಸ್ಥಿರಾಂತರೈಃ, ಅಪಿ, ಹಂಸೈಃ, ಪರಮೈಃ, ಅಮೇಚಕೈಃ ।

**ಅನ್ವಯ**— (ಸಃ ಶ್ರೀಮಧ್ವಾಚಾರ್ಯಃ) ಶ್ರವಣಾಮೃತಗೀರ್ಗಣೈಃ, ಶುಕಮುಖ್ಯೈಃ, ಶುಭಪಕ್ಷಿಭಿಃ ಕಮಲೇಷ್ಟ-ತಮಸ್ಥಿರಾಂತರೈಃ ಅಮೇಚಕೈಃ, ಪರಮೈಃ ಹಂಸೈಃ ಅಪಿ ಯುತಂ (ಪರಮಾಶ್ರಮಂ ದದರ್ಶ)

**ಅನ್ವಯಾರ್ಥ**—

(**ಸಃ** = ಆ ಶ್ರೀಮಧ್ವಾಚಾರ್ಯರು)

**ಶ್ರವಣ ಅಮೃತ ಗೀಃ ಗಣೈಃ** = ಕಿವಿಗಳಿಗೆ ಅಮೃತದಂತಿರುವ (ಭಗವದ್ಗುಣಪ್ರತಿಪಾದಕವಾದ) ಮಾತುಗಳ ಸಮೂಹವುಳ್ಳ

**ಶುಕಮುಖ್ಯೈಃ** = ಗಿಣಿಯೇ ಮೊದಲಾಗಿ ಉಳ್ಳ (ಶುಕಾಚಾರ್ಯರೇ ಮೊದಲಾಗಿ ಉಳ್ಳ),

**ಶುಭಪಕ್ಷಿಭಿಃ** = ಚೆನ್ನಾಗಿರುವ ರೆಕ್ಕೆಗಳುಳ್ಳ (ಒಳ್ಳೆಯ ಸಿದ್ಧಾಂತವುಳ್ಳ)

**ದ್ವಿಜೈಃ** = ಹಕ್ಕಿಗಳಿಂದ (ಬ್ರಾಹ್ಮಣರಿಂದ),

**ಕಮಲೇಷ್ಟತಮ ಸ್ಥಿರ ಅಂತರೈಃ** = ಕಮಲವೆಂಬ ಅತ್ಯಂತ ಇಷ್ಟವಾದ ವಸ್ತುವಿನಲ್ಲಿ ದೃಢವಾದ ಮನಸ್ಸುಳ್ಳ (ಕಮಲಾ = ಲಕ್ಷ್ಮೀದೇವಿಗೆ, ಇಷ್ಟತಮ = ಅತ್ಯಂತ ಪ್ರೀತಿಪಾತ್ರನಾದ ನಾರಾಯಣನಲ್ಲಿ ಸ್ಥಿರಾಂತರೈಃ = ಸ್ಥಿರವಾದ ಮನಸ್ಸುಳ್ಳ),

**ಅಮೇಚಕೈಃ** = ಬೆಳ್ಳಗಿರುವ (ನಿರ್ಮಲರಾದ),

**ಪರಮೈಃ** = ಉತ್ತಮವಾದ (ಶ್ರೇಷ್ಠರಾದ),

**ಹಂಸೈಃ** = ಹಂಸ ಪಕ್ಷಿಗಳಿಂದಲೂ (ಪರಮಹಂಸ ಸಂನ್ಯಾಸಿಗಳಿಂದಲೂ)

**ಯುತಂ** = ಸಹಿತವಾದ

**(ಪರಮಾಶ್ರಮಂ** = ಶ್ರೇಷ್ಠವಾದ ಬದರಿಕಾಶ್ರಮವನ್ನು

**ದದರ್ಶ** = ಕಂಡರು.)

**ತಾತ್ಪರ್ಯ—** ಆ ಬದರಿಕಾಶ್ರಮದಲ್ಲಿ ಕಿವಿಗೆ ಇಂಪಾಗಿ ಮಾತಾಡುವ ಮನೋಹರವಾದ ರೆಕ್ಕೆಗಳುಳ್ಳ ಗಿಣಿ ಮುಂತಾದ ಪಕ್ಷಿಗಳಿದ್ದುವು ಮತ್ತು ಅಲ್ಲಿ ತಾವರೆ ಹೂವುಗಳಲ್ಲಿ ಆಸಕ್ತವಾದ ಮನಸ್ಸುಳ್ಳ ಬಿಳಿಯ ಬಣ್ಣದ ಉತ್ತಮ ಹಂಸಗಳಿದ್ದವು. ಇದಲ್ಲದೆ ಆ ಆಶ್ರಮದಲ್ಲಿ ಕಿವಿಗೆ ಇಂಪಾಗಿರುವ ಭಗವಂತನ ಗುಣಗಳನ್ನು ಗಾನ ಮಾಡುವ ಶುಕಾಚಾರ್ಯರೇ ಮೊದಲಾದ ಬ್ರಾಹ್ಮಣರಿದ್ದರು. ಅವರೆಲ್ಲರೂ ಉತ್ತಮವಾದ ವೈಷ್ಣವ ಸಿದ್ಧಾಂತವನ್ನೇ ಅವಲಂಬಿಸಿದ್ದರು. ಅಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ತಮ್ಮ ಅಂತಃಕರಣದಲ್ಲಿ ಚೆನ್ನಾಗಿ ಧ್ಯಾನಿಸುತ್ತಿದ್ದ ಪರಮಹಂಸ ಸಂನ್ಯಾಸಿಗಳೂ ಇದ್ದರು. ಇಂತಹ ಉತ್ತಮವಾದ ಬದರಿಕಾಶ್ರಮವನ್ನು ಶ್ರೀಮಧ್ವಾಚಾರ್ಯರು ನೋಡಿದರು.

ವಿಗ್ರಹ—

**ಶ್ರವಣಾಮೃತಗೀರ್ಗಣೈಃ—** ಶ್ರವಣಯೋ ಅಮೃತಾನಿ ಶ್ರವಣಾಮೃತಾನಿ, ಶ್ರವಣಾಮೃತಾನಿ ಚ ತಾಃ ಗಿರಶ್ಚ ಶ್ರವಣಾಮೃತಗಿರಃ, ಶ್ರವಣಾಮೃತಗಿರಾಂ ಗಣಾಃ ಯೇಷಾಂ ತೇ ಶ್ರವಣಾಮೃತಗೀರ್ಗಣಾಃ, ತೈಃ ಶ್ರವಣಾಮೃತಗೀರ್ಗಣೈಃ । (ಶ್ರವಣಾಮೃತಾನಿ ಗೀರ್ಗಣಾಃ ಯೇಷಾಂ ತೇ ತೈಃ ಇತಿ ವಾ ವಿಗ್ರಹಃ)

**ಶುಕಮುಖ್ಯೈಃ—** ಶುಕಃ ಮುಖ್ಯಃ ಯೇಷಾಂ ತೇ ಶುಕಮುಖ್ಯಾಃ, ತೈಃ ಶುಕಮುಖ್ಯೈಃ ।

**ಶುಭಪಕ್ಷಿಭಿಃ—** ಶುಭಶ್ಚಾಸೌ ಪಕ್ಷಶ್ಚ ಶುಭಪಕ್ಷಃ, ಶುಭಪಕ್ಷಃ ಏಷಾಂ ಅಸ್ತೀತಿ ಶುಭಪಕ್ಷಿಣಃ, ತೈಃ ಶುಭಪಕ್ಷಿಭಿಃ । (ಶುಭಾಃ ಪಕ್ಷಾಃ ಯೇಷಾಂ ತೇ ಶುಭಪಕ್ಷಿಣಃ, ತೈಃ ಶುಭಪಕ್ಷಿಭಿಃ)

**ಕಮಲೇಷ್ಟತಮಸ್ಥಿರಾಂತರೈಃ—** ಅತಿಶಯೇನ ಇಷ್ಟಂ ಇಷ್ಟತಮಂ, ಕಮಲಂ ಚ ತತ್ ಇಷ್ಟತಮಂ ಚ ಕಮಲೇಷ್ಟತಮಂ (ಅತಿಶಯೇನ ಇಷ್ಟಃ ಇಷ್ಟತಮಃ, ಕಮಲಾಯಾಃ ಇಷ್ಟತಮಃ ಕಮಲೇಷ್ಟತಮಃ,) ಕಮಲೇಷ್ಟತಮೇ ಸ್ಥಿರಂ ಅಂತರಂ ಯೇಷಾಂ ತೇ ಕಮಲೇಷ್ಟತಮಸ್ಥಿರಾಂತರಾಃ, ತೈಃ ಕಮಲೇಷ್ಟ-ತಮಸ್ಥಿರಾಂತರೈಃ ।

**ಅಮೇಚಕೈಃ—** ನ ಮೇಚಕಾಃ ಅಮೇಚಕಾಃ, ತೈಃ ಅಮೇಚಕೈಃ ।

★ ★ ★

**ಸುಮನೋನಿಕರೇಣ ಪೂರಿತಂ ಸ್ವಮನೋಽಭೀಷ್ಟದಮಲ್ಪದುರ್ಗಮಂ ।**
**ಅಪರಸ್ವರಮತ್ಸರಪ್ರಜಂ ನನು ವೈಕುಂಠಮಿವಾಚ್ಯುತಾಲಯಂ ॥ 4 ॥**

**ಪದಚ್ಛೇದ**— ಸುಮನೋನಿಕರೇಣ, ಪೂರಿತಂ, ಸ್ವಮನೋಭೀಷ್ಟದಂ, ಅಲ್ಪದುರ್ಗಮಂ, ಅಪರಸ್ಪರಮತ್ಸರಪ್ರಜಂ, ನನು, ವೈಕುಂಠಂ, ಇವ, ಅಚ್ಯುತಾಲಯಂ ।

**ಅನ್ವಯ**— (ಸಃ ಶ್ರೀಮಧ್ವಾಚಾರ್ಯಃ) ಸುಮನೋನಿಕರೇಣ ಪೂರಿತಂ, ಸ್ವಮನೋಽಭೀಷ್ಟದಂ, ಅಲ್ಪದುರ್ಗಮಂ, ಅಪರಸ್ಪರಮತ್ಸರಪ್ರಜಂ, ವೈಕುಂಠಂ ಇವ, ನನು ಅಚ್ಯುತಾಲಯಂ (ಪರಮಾಶ್ರಮಂ ದದರ್ಶ)

**ಅನ್ವಯಾರ್ಥ**—

(ಸಃ = ಆ ಶ್ರೀಮಧ್ವಾಚಾರ್ಯರು)

**ಸುಮನೋನಿಕರೇಣ** = ಹೂವುಗಳ ಸಮೂಹದಿಂದ (ಮುನಿಗಳ ಸಮೂಹದಿಂದ), (ದೇವತೆಗಳ ಸಮೂಹದಿಂದ)

**ಪೂರಿತಂ** = ತುಂಬಿರುವ

**ಸ್ವಮನಃ** = ಭಗವದ್ಭಕ್ತರಾದ ಸಜ್ಜನರ ಮನಸ್ಸಿನ

**ಅಭೀಷ್ಟದಂ** = ಇಷ್ಟಾರ್ಥವನ್ನು ಕೊಡುವ,

**ಅಲ್ಪದುರ್ಗಮಂ** = ಜ್ಞಾನ ಭಕ್ತ್ಯಾದಿಗಳಿಲ್ಲದ ಅಶಕ್ತರಿಂದ ಹೊಂದಲು ಅಸಾಧ್ಯವಾದ,

**ಅಪರಸ್ಪರಮತ್ಸರಪ್ರಜಂ** = ಒಬ್ಬರು ಇನ್ನೊಬ್ಬರಿಗೆ ದ್ವೇಷವಿಲ್ಲದ ಜನರುಳ್ಳ,

**ವೈಕುಂಠಂ ಇವ ನನು** = ವೈಕುಂಠದಂತೆಯೇ ಇರುವ

**ಅಚ್ಯುತಾಲಯಂ** = ಶ್ರೀಮನ್ನಾರಾಯಣನ ವಾಸಸ್ಥಾನವಾದ

(**ಪರಮಾಶ್ರಮಂ** = ಶ್ರೇಷ್ಠವಾದ ಬದರಿಕಾಶ್ರಮವನ್ನು

**ದದರ್ಶ** = ನೋಡಿದರು.)

**ತಾತ್ಪರ್ಯ**— ಶ್ರೀಮನ್ನಾರಾಯಣನ ವಾಸಸ್ಥಾನವಾದ ವೈಕುಂಠಲೋಕವು ದೇವತೆಗಳಿಂದ ತುಂಬಿರುತ್ತದೆ. ಭಕ್ತರ ಮನಸ್ಸಿಗೆ ಬೇಕಾದುದನ್ನು ಕೊಡುತ್ತದೆ. ಅಲ್ಲಿ ಜ್ಞಾನಭಕ್ತ್ಯಾದಿಗಳಿಲ್ಲದವರು ಪ್ರವೇಶಿಸಲು ಸಾಧ್ಯವಿಲ್ಲ. ಅಲ್ಲಿರುವ ಜನರು ಇನ್ನೊಬ್ಬರ ಮೇಲೆ ಅಸೂಯೆ ಪಡುವುದಿಲ್ಲ. ಅದರಂತೆ ಈ ಬದರಿಕಾಶ್ರಮವೂ ಹೂವು ಮತ್ತು ಮುನಿಗಳ ಸಮೂಹದಿಂದ ತುಂಬಿರುತ್ತದೆ. ಭಕ್ತರಿಗೆ ಅವರ ಇಷ್ಟಾರ್ಥವನ್ನು ನೆರವೇರಿಸುತ್ತದೆ. ಭಕ್ತಿ ಜ್ಞಾನಾದಿಗಳಿಲ್ಲದವರಿಗೆ ಅಲ್ಲಿ ಪ್ರವೇಶವಿಲ್ಲ. ಅಲ್ಲಿರುವ ಜನರು ಒಬ್ಬರು ಇನ್ನೊಬ್ಬರ ಮೇಲೆ ಅಸೂಯೆ ಪಡುವುದಿಲ್ಲ. ಅದು ಶ್ರೀಮನ್ನಾರಾಯಣನ ಅವತಾರರಾದ ವೇದವ್ಯಾಸರ ಆವಾಸಸ್ಥಾನವಾಗಿದೆ. ಇಂತಹ ಬದರಿಕಾಶ್ರಮವನ್ನು ಶ್ರೀಮಧ್ವಾಚಾರ್ಯರು ಕಂಡರು.

ವಿಗ್ರಹ—

**ಸುಮನೋನಿಕರೇಣ**— ಸುಮನಸಾಂ ನಿಕರಃ ಸುಮನೋನಿಕರಃ, ತೇನ ಸುಮನೋನಿಕರೇಣ ।

**ಸ್ವಮನೋಽಭೀಷ್ಟದಂ**— ಸ್ವೇಷಾಂ ಮನಃ ಸ್ವಮನಃ, ಸ್ವಮನಸಃ ಅಭೀಷ್ಟಂ ಸ್ವಮನೋಽಭೀಷ್ಟಂ, ತದ್ದದಾತೀತಿ ಸ್ವಮನೋಽಭೀಷ್ಟದಃ, ತಂ ಸ್ವಮನೋಽಭೀಷ್ಟದಂ । ಸ್ವೇ (ಭಗವತಿ) ಮನಃ ಯೇಷಾಂ ತೇ ಸ್ವಮನಸಃ, ತೇಷಾಂ ಅಭೀಷ್ಟಂ, ಸ್ವಮನೋಽಭೀಷ್ಟಂ, ಸ್ವಮನೋಽಭೀಷ್ಟಂ ದದಾತೀತಿ ಸ್ವಮನೋಽಭೀಷ್ಟದಃ, ತಂ ಸ್ವಮನೋಽಭೀಷ್ಟದಂ ।

**ಅಲ್ಪದುರ್ಗಮಂ**— ದುಃಖೇನ ಗಂತುಂ ಶಕ್ಯಃ ದುರ್ಗಮಃ, ಅಲ್ಪೈಃ ದುರ್ಗಮಃ ಅಲ್ಪದುರ್ಗಮಃ, ತಂ ಅಲ್ಪದುರ್ಗಮಂ ।

**ಅಪರಸ್ಪರಮತ್ಸರಪ್ರಜಂ**— ನ ವಿದ್ಯತೇ ಪರಸ್ಪರಂ ಮತ್ಸರಃ ಯಾಸಾಂತಾಃ ಅಪರಸ್ಪರಮತ್ಸರಾಃ, ಅಪರ-ಸ್ಪರಮತ್ಸರಾಃ ಪ್ರಜಾಃ ಯಸ್ಮಿನ್ ಸಃ ಅಪರಸ್ಪರಮತ್ಸರಪ್ರಜಃ, ತಂ ಅಪರಸ್ಪರಮತ್ಸರಪ್ರಜಂ,

**ಅಚ್ಯುತಾಲಯಂ**— ಅಚ್ಯುತಸ್ಯ ಆಲಯಃ ಅಚ್ಯುತಾಲಯಃ, ತಂ ಅಚ್ಯುತಾಲಯಂ ।

★ ★ ★

**ತಮಿಮಂ ಪ್ರವಿಶಂತಮಾಶ್ರಮಂ ದ್ವ್ಯಧಿಕತ್ರಿಂಶದುದಾರಲಕ್ಷಣಂ ।**
**ಗುಣಸಾರವಿದಃ ಕುತೂಹಲಾತ್ ಅವಲೋಕ್ಯರ್ಷಯ ಇತ್ಯಚಿಂತಯನ್ ॥ 5 ॥**

**ಪದಚ್ಛೇದ—** ತಂ, ಇಮಂ, ಪ್ರವಿಶಂತಂ, ಆಶ್ರಮಂ, ದ್ವ್ಯಧಿಕತ್ರಿಂಶದುದಾರಲಕ್ಷಣಂ, ಗುಣಸಾರವಿದಃ, ಕುತೂಹಲಾತ್, ಅವಲೋಕ್ಯ, ಋಷಯಃ, ಇತಿ, ಅಚಿಂತಯನ್

**ಅನ್ವಯ—** ಗುಣಸಾರವಿದಃ, ಋಷಯಃ, ಆಶ್ರಮಂ, ಪ್ರವಿಶಂತಂ, ದ್ವ್ಯಧಿಕತ್ರಿಂಶದುದಾರಲಕ್ಷಣಂ, ತಂ ಇಮಂ, ಅವಲೋಕ್ಯ, ಕುತೂಹಲಾತ್, ಇತಿ ಅಚಿಂತಯನ್ ।

**ಅನ್ವಯಾರ್ಥ—**

**ಗುಣ ಸಾರ** = ಗುಣಗಳ ಮುಖ್ಯಾಂಶವನ್ನು
**ವಿದಃ** = ತಿಳಿದ
**ಋಷಯಃ** = (ಆ ಬದರಿಕಾಶ್ರಮದಲ್ಲಿದ್ದ) ಋಷಿಗಳು
**ಆಶ್ರಮಂ** = ಬದರಿಕಾಶ್ರಮವನ್ನು
**ಪ್ರವಿಶಂತಂ** = ಪ್ರವೇಶಿಸುತ್ತಿರುವ,
**ದ್ವ್ಯಧಿಕ ತ್ರಿಂಶತ್ ಉದಾರಲಕ್ಷಣಂ** = ಮೂವತ್ತ ಎರಡು ಉತ್ತಮಗುಣಗಳುಳ್ಳ
**ತಂ, ಇಮಂ** = ಆ ಪ್ರಸಿದ್ಧರಾದ ಈ ಮಧ್ವಾಚಾರ್ಯರನ್ನು ,
**ಅವಲೋಕ್ಯ** = ನೋಡಿ
**ಕುತೂಹಲಾತ್** = ಕೌತುಕದಿಂದ
**ಇತಿ** = ಈ ರೀತಿ
**ಅಚಿಂತಯನ್** = ಆಲೋಚಿಸಿದರು.

**ತಾತ್ಪರ್ಯ—** ಆ ಬದರಿಕಾಶ್ರಮದ ಮುನಿಗಳು ಗುಣಗಳ ಸಾರಾಸಾರ ವಿವೇಕ ಉಳ್ಳವರಾಗಿದ್ದರು. ಅವರು ಬದರಿಕಾಶ್ರಮವನ್ನು ಪ್ರವೇಶಿಸುತ್ತಿರುವ ಶ್ರೀ ಮಧ್ವಾಚಾರ್ಯರಲ್ಲಿ ಮೂವತ್ತ ಎರಡು ಉತ್ತಮ ಲಕ್ಷಣಗಳನ್ನು ಕಂಡು ಕೌತುಕದಿಂದ ಹೀಗೆ ಆಲೋಚಿಸಿದರು.

**ವಿಗ್ರಹ—**

**ದ್ವ್ಯಧಿಕತ್ರಿಂಶದುದಾರಲಕ್ಷಣಂ—** ದ್ವಾಭ್ಯಾಂ ಅಧಿಕಾ ದ್ವ್ಯಧಿಕಾ, ದ್ವ್ಯಧಿಕಾ ಚ ಸಾ ತ್ರಿಂಶಚ್ಚ ದ್ವ್ಯಧಿಕತ್ರಿಂಶತ್, ದ್ವ್ಯಧಿಕತ್ರಿಂಶತ್ ಉದಾರಾಣಿ ಲಕ್ಷಣಾನಿ ಯಸ್ಯ ಸಃ ದ್ವ್ಯಧಿಕತ್ರಿಂಶದುದಾರಲಕ್ಷಣಃ ತಂ, ದ್ವ್ಯಧಿಕತ್ರಿಂಶದುದಾರಲಕ್ಷಣಂ ।

**ಗುಣಸಾರವಿದಃ—** ಗುಣಾನಾಂ ಸಾರಃ ಗುಣಸಾರಃ, ಗುಣಸಾರಂ ವಿದಂತೀತಿ ಗುಣಸಾರವಿದಃ ।

**ಕ್ರಿಯಾಪದ—** ಚಿತಿಸ್ಮೃತ್ಯಾಂ ಇತ್ಯಸ್ಮಾದ್ಧಾತೋಃ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಬಹುವಚನೇ ಅಚಿಂತಯನ್ ಇತಿ ರೂಪಮ್ ।

| | | |
|---|---|---|
| ಅಚಿಂತಯತ್ | ಅಚಿಂತಯತಾಂ | ಅಚಿಂತಯನ್, |
| ಅಚಿಂತಯಃ | ಅಚಿಂತಯತಂ | ಅಚಿಂತಯತ, |
| ಅಚಿಂತಯಂ | ಅಚಿಂತಯಾವ | ಅಚಿಂತಯಾಮ ॥ |

★ ★ ★

**ಕನಕಾತುಲತಾಲಸನ್ನಿಭಃ ಕಮಲಾಕ್ಷೋ ವಿಮಲೇಂದುಸನ್ಮುಖಃ ।**
**ಗಜರಾಜಗತಿರ್ಮಹಾಭುಜಃ ಪ್ರತಿಯಾನ್ ಕೋಽಯಮಪೂರ್ವಪೂರುಷಃ ॥ 6 ॥**

**ಪದಚ್ಛೇದ—** ಕನಕಾತುಲತಾಲಸನ್ನಿಭಃ, ಕಮಲಾಕ್ಷಃ, ವಿಮಲೇಂದುಸನ್ಮುಖಃ, ಗಜರಾಜಗತಿಃ, ಮಹಾಭುಜಃ, ಪ್ರತಿಯಾನ್, ಕಃ, ಅಯಂ, ಅಪೂರ್ವಪೂರುಷಃ ।

**ಅನ್ವಯ—** ಕನಕಾತುಲತಾಲಸನ್ನಿಭಃ, ಕಮಲಾಕ್ಷಃ, ವಿಮಲೇಂದುಸನ್ಮುಖಃ, ಗಜರಾಜಗತಿಃ, ಮಹಾಭುಜಃ, ಪ್ರತಿಯಾನ್ ಅಪೂರ್ವಪೂರುಷಃ ಅಯಂ ಕಃ ?

**ಅನ್ವಯಾರ್ಥ—**

**ಕನಕ ಅತುಲ ತಾಲ** = ಚಿನ್ನದ ಎಣೆಯಿಲ್ಲದ ತಾಳೆ ಮರಕ್ಕೆ
**ಸನ್ನಿಭಃ** = ಸಮಾನನಾದ,
**ಕಮಲಾಕ್ಷಃ** = ಕಮಲದಂತಹ ಕಣ್ಣುಗಳುಳ್ಳ,
**ವಿಮಲ ಇಂದು ಸನ್ಮುಖಃ** = ಕಳಂಕವಿಲ್ಲದ ಚಂದ್ರನಂತೆ ಒಳ್ಳೆಯ ಮುಖವುಳ್ಳ,
**ಗಜರಾಜ ಗತಿಃ** = ಆನೆಯಂತೆ ನಡಿಗೆಯುಳ್ಳ,
**ಮಹಾಭುಜಃ** = ಉದ್ದವಾದ ತೋಳುಳ್ಳ,
**ಪ್ರತಿಯಾನ್** = ಈ ಕಡೆ ಬರುತ್ತಿರುವ (ಶ್ರೀವೇದವ್ಯಾಸರನ್ನು ಕುರಿತು ಬರುತ್ತಲಿರುವ)
**ಅಪೂರ್ವ ಪೂರುಷಃ** = ಹಿಂದೆ ಎಂದೂ ಕಾಣದ ವಿಲಕ್ಷಣ ಮನುಷ್ಯನಾದ
**ಅಯಂ** = ಇವನು
**ಕಃ** = ಯಾವನು ?

**ತಾತ್ಪರ್ಯ—** ವ್ಯಾಸರಿಗೆ ಅಭಿಮುಖವಾಗಿ ಬರುತ್ತಿರುವ ಈ ಅಪೂರ್ವ ಪುರುಷನು ಚಿನ್ನದ ತಾಳೆಯ ಮರದಂತೆ ಗುಂಡಾದ, ಪುಷ್ಟವಾದ, ದಪ್ಪವಾದ ದೇಹವುಳ್ಳವನಾಗಿ ಕಾಣಸುತ್ತಿದ್ದಾನೆ. ಕಣ್ಣುಗಳು ಅರಳಿದ ಕಮಲಗಳಂತಿವೆ. ಮುಖವು ಕಳಂಕವಿಲ್ಲದ ಚಂದ್ರನಂತಿದೆ. ತೋಳುಗಳು ಉದ್ದವಾಗಿವೆ. ಅಜಾನುಬಾಹುಗಳನ್ನುಳ್ಳ ಇವನ ನಡಿಗೆಯು ಆನೆಯ ನಡಿಗೆಯಂತಿದೆ. ಈ ಪುರುಷನು ಯಾರು ?

ವಿಗ್ರಹ—

**ಕನಕಾತುಲತಾಲಸನ್ನಿಭಃ—** ಅತುಲಶ್ಚಾಸೌ ತಾಲಶ್ಚ ಅತುಲತಾಲಃ, ಕನಕಮಯಶ್ಚಾಸೌ ಅತುಲತಾಲಶ್ಚ ಕನಕಾತುಲತಾಲಃ, ಕನಕಾತುಲತಾಲೇನ ಸದೃಶಃ ಕನಕಾತುಲತಾಲಸನ್ನಿಭಃ । (ಕನಕಾತುಲತಾಲಸ್ಯ ಸನ್ನಿಭೋ ವಾ ಕನಕಾತುಲತಾಲಸನ್ನಿಭಃ)
**ಕಮಲಾಕ್ಷಃ—** ಕಮಲವತ್ ಅಕ್ಷಿಣೀ ಯಸ್ಯ ಸಃ ಕಮಲಾಕ್ಷಃ ।
**ವಿಮಲೇಂದುಸನ್ಮುಖಃ—** ವಿಮಲಶ್ಚಾಸೌ ಇಂದುಶ್ಚ ವಿಮಲೇಂದುಃ, ಸಚ್ಚ ತತ್ ಮುಖಂ ಚ ಸನ್ಮುಖಂ, ವಿಮಲೇಂದುವತ್ ಸನ್ಮುಖಂ ಯಸ್ಯ ಸಃ ವಿಮಲೇಂದುಸನ್ಮುಖಃ ।
**ಗಜರಾಜಗತಿಃ—** ಗಜಾನಾಂ ರಾಜಃ ಗಜರಾಜಃ, ಗಜರಾಜಸ್ಯಗತಿರಿವ ಗತಿಃ ಯಸ್ಯ ಸಃ ಗಜರಾಜಗತಿಃ ।
**ಮಹಾಭುಜಃ—** ಮಹಾಂತೌ ಭುಜೌ ಯಸ್ಯ ಸಃ ಮಹಾಭುಜಃ ।
**ಪ್ರತಿಯಾನ್—** ಪ್ರತಿಯಾತಿ ಇತಿ ಪ್ರತಿಯಾನ್ ।
**ಅಪೂರ್ವಪೂರುಷಃ—** ನ ಪೂರ್ವಃ ಅಪೂರ್ವಃ, ಅಪೂರ್ವಶ್ಚಾಸೌ ಪೂರುಷಶ್ಚ ಅಪೂರ್ವಪೂರುಷಃ ।

★ ★ ★

**ಅತಿಶಾಂತವಪುರ್ನಿಶಾಕರಃ ಸ್ವಯಮೇಕಾಂತಖರೋ ದಿವಾಕರಃ ।**
**ಇತಿ ನಾಸ್ಯ ಗುಣಾರ್ಣವಾಕೃತೇರುಪಮಾನಂ ಭುವನೇಷು ಲಭ್ಯತೇ ॥ 7 ॥**

**ಪದಚ್ಛೇದ—** ಅತಿಶಾಂತವಪುಃ, ನಿಶಾಕರಃ, ಸ್ವಯಂ, ಏಕಾಂತಖರಃ, ದಿವಾಕರಃ, ಇತಿ, ನ, ಅಸ್ಯ, ಗುಣಾರ್ಣವಾಕೃತೇಃ, ಉಪಮಾನಂ, ಭುವನೇಷು, ಲಭ್ಯತೇ ।

**ಅನ್ವಯ—** ನಿಶಾಕರಃ ಅತಿಶಾಂತವಪುಃ, ದಿವಾಕರಃ ಸ್ವಯಂ ಏಕಾಂತಖರಃ, ಇತಿ ಗುಣಾರ್ಣವಾಕೃತೇಃ ಅಸ್ಯ ಉಪಮಾನಂ ಭುವನೇಷು ನ ಲಭ್ಯತೇ ।

**ಅನ್ವಯಾರ್ಥ—**

**ನಿಶಾಕರಃ** = ಚಂದ್ರನು
**ಅತಿಶಾಂತವಪುಃ** = ಅತ್ಯಂತ ಸೌಮ್ಯವಾದ ಸ್ವರೂಪವುಳ್ಳವನು,
**ದಿವಾಕರಃ** = ಸೂರ್ಯನು
**ಸ್ವಯಂ** = ಸ್ವತಃ
**ಏಕಾಂತಖರಃ** = ನಿಯತವಾಗಿ ಯಾವಾಗಲೂ ತೀಕ್ಷ್ಣನು,
**ಇತಿ** = ಆದುದರಿಂದ
**ಗುಣಾರ್ಣವ ಆಕೃತೇಃ** = ಗುಣಗಳ ಸಮುದ್ರದಂತಿರುವ ಆಕಾರವುಳ್ಳ (ಎಲ್ಲಾ ಸಲ್ಲಕ್ಷಣಗಳಿಗೆ ಆಶ್ರಯನಾದ)
**ಅಸ್ಯ** = (ಗಂಭೀರ ನಡಿಗೆಯಿಂದ ಬರುತ್ತಿರುವ) ಈ ಪುರುಷನಿಗೆ
**ಉಪಮಾನಂ** = ದೃಷ್ಟಾಂತವು
**ಭುವನೇಷು** = ಲೋಕಗಳಲ್ಲಿ
**ನ ಲಭ್ಯತೇ** = ಕಾಣಲ್ಪಡುವುದಿಲ್ಲ.

**ತಾತ್ಪರ್ಯ—** ಚಂದ್ರನ ಸ್ವರೂಪವು ಶಾಂತವಾದುದು. ಸೂರ್ಯನು ಅತ್ಯಂತ ತೀಕ್ಷ್ಣನು. ಆದುದರಿಂದ ಎಲ್ಲಾ ಉತ್ತಮ ಲಕ್ಷಣಗಳಿಗೂ ಶಾಂತ, ಪ್ರಕಾಶ ಮುಂತಾದ ಗುಣಗಳಿಗೂ ಆಶ್ರಯನಾದ ಈ ಮಹಾಪುರುಷನಿಗೆ ಚಂದ್ರ ಸೂರ್ಯರು ಉಪಮಾನವಾಗಲು ಅರ್ಹರಲ್ಲ. ಲೋಕದಲ್ಲಿ ಈ ಮಹಾಪುರುಷನಿಗೆ ಸರಿತೂಗುವ ವಸ್ತುವೇ ದುರ್ಲಭವಾಗಿದೆ.

**ವಿಗ್ರಹ—**

**ಅತಿಶಾಂತವಪುಃ—** ಅತ್ಯಂತಂ ಶಾಂತಂ, ಅತಿಶಾಂತಂ, ಅತಿಶಾಂತಂ ವಪುಃ ಯಸ್ಯ ಸಃ ಅತಿಶಾಂತವಪುಃ ।
**ನಿಶಾಕರಃ—** ಕರೋತೀತಿ ಕರಃ ನಿಶಾಯಾಃ ಕರಃ ನಿಶಾಕರಃ ।
**ಏಕಾಂತಖರಃ—** ಏಕಾಂತೇನ ಖರಃ ಏಕಾಂತಖರಃ ।
**ಗುಣಾರ್ಣವಾಕೃತೇಃ—** ಗುಣೈಃ (ಗುಣಾನಾಂ ವಾ) ಅರ್ಣವಃ ಇವ ಗುಣಾರ್ಣವಃ, ಗುಣಾರ್ಣವಃ ಆಕೃತಿಃ ಯಸ್ಯ ಸಃ ಗುಣಾರ್ಣವಾಕೃತಿಃ, ತಸ್ಯ ಗುಣಾರ್ಣವಾಕೃತೇಃ ।

**ಕ್ರಿಯಾಪದ—** **ಲಭ್ಯತೇ-** ಡುಲಭಷ್ ಪ್ರಾಪ್ತೌ ಇತ್ಯಸ್ಮಾದ್ಧಾತೋಃ ಕರ್ಮಣಿ ಲಟ್ ಪ್ರಥಮಪುರುಷೇ ಏಕವಚನೇ ''ಲಭ್ಯತೇ'' ಇತಿ ರೂಪಮ್ ।

ಲಭ್ಯತೇ ಲಭ್ಯೇತೇ ಲಭ್ಯಂತೇ, ಲಭ್ಯಸೇ ಲಭ್ಯೇಥೇ ಲಭ್ಯಧ್ವೇ, ಲಭ್ಯೇ ಲಭ್ಯಾವಹೇ ಲಭ್ಯಾಮಹೇ ॥

★ ★ ★

**ಪರಮಾಶ್ರಮಿಣಾಂ ಗತಶ್ರಮೋ ನನು ಚಿಹ್ನಾನಿ ಬಿಭರ್ತಿ ಧೀರಧೀಃ ।**
**ಅಪಿ ಮಾನುಷಭಾವವಿಗ್ರಹೋ ವಿಪುಲಂ ವಿಸ್ಮಯಮಾತನೋತಿ ನಃ ॥ 8 ॥**

**ಪದಚ್ಛೇದ**— ಪರಮಾಶ್ರಮಿಣಾಂ, ಗತಶ್ರಮಃ, ನನು, ಚಿಹ್ನಾನಿ, ಬಿಭರ್ತಿ, ಧೀರಧೀಃ, ಅಪಿ, ಮಾನುಷ-ಭಾವವಿಗ್ರಹಃ, ವಿಪುಲಂ, ವಿಸ್ಮಯಂ, ಆತನೋತಿ, ನಃ ।

**ಅನ್ವಯ**— ಗತಶ್ರಮಃ, ಧೀರಧೀಃ, ಪರಮಾಶ್ರಮಿಣಾಂ ಚಿಹ್ನಾನಿ ಬಿಭರ್ತಿ ನನು, ಮಾನುಷಭಾವವಿಗ್ರಹಃ ಅಪಿ, ನಃ ವಿಪುಲಂ ವಿಸ್ಮಯಂ ಆತನೋತಿ ।

**ಅನ್ವಯಾರ್ಥ**—

**ಗತಶ್ರಮಃ** = ಆಯಾಸವಿಲ್ಲದ,
**ಧೀರಧೀಃ** = ಭಯರಹಿತವಾದ ಮನಸ್ಸುಳ್ಳ (ಇವನು)
**ಪರಮಾಶ್ರಮಿಣಾಂ** = ಯತಿಗಳ
**ಚಿಹ್ನಾನಿ** = ಗುರುತುಗಳನ್ನು
**ಬಿಭರ್ತಿ ನನು** = ಧರಿಸಿದ್ದಾನಷ್ಟೆ ?
**ಮಾನುಷಭಾವವಿಗ್ರಹಃ ಅಪಿ** = ಮನುಷ್ಯ ಸ್ವಭಾವವುಳ್ಳ ಶರೀರದಿಂದ ಸಹಿತನಾಗಿದ್ದರೂ,
**ನಃ** = ನಮಗೆ
**ವಿಪುಲಂ** = ಹೆಚ್ಚಾದ
**ವಿಸ್ಮಯಂ** = ಆಶ್ಚರ್ಯವನ್ನು
**ಆತನೋತಿ** = ಉಂಟು ಮಾಡುತ್ತಿದ್ದಾನೆ.

**ತಾತ್ಪರ್ಯ**— ಇಷ್ಟು ದೂರ ದಾರಿ ನಡೆದಿದ್ದರೂ ಇವನಿಗೆ ಆಯಾಸವೇ ಕಾಣಸುತ್ತಿಲ್ಲ. ಪರಸ್ಥಳವಾದರೂ ''ನಾನು ಒಬ್ಬಂಟಿಗನಾಗಿ ಇಲ್ಲಿ ಹೇಗೆ ಹೋಗಲಿ ?'' ಎಂಬ ಭಯವು ಈ ಪುರುಷನಲ್ಲಿ ಕಾಣಿಸುವುದಿಲ್ಲ. ಸಂನ್ಯಾಸಿಗಳ ಚಿಹ್ನೆಯಾದ ದಂಡ ಕಮಂಡಲು ಕಾಷಾಯ ವಸ್ತ್ರಾದಿಗಳನ್ನು ಧರಿಸಿದ್ದಾನೆ. ದೇಹವು ಮನುಷ್ಯ ದೇಹದಂತಿದ್ದರೂ ಇವನು ನಮಗೆ ಬಹಳ ಆಶ್ಚರ್ಯವನ್ನುಂಟು ಮಾಡುತ್ತಿದ್ದಾನೆ.

ವಿಗ್ರಹ—

**ಪರಮಾಶ್ರಮಿಣಾಂ**— ಪರಮಶ್ಚಾಸೌ ಆಶ್ರಮಶ್ಚ ಪರಮಾಶ್ರಮಃ, ಪರಮಾಶ್ರಮಃ ಏಷಾಂ ಅಸ್ತೀತಿ ಪರಮಾಶ್ರಮಿಣಃ, ತೇಷಾಂ ಪರಮಾಶ್ರಮಿಣಾಂ ।

**ಗತಶ್ರಮಃ**— ಗತಃ ಶ್ರಮಃ ಯಸ್ಮಾತ್ ಸಃ ಗತಶ್ರಮಃ ।

**ಧೀರಧೀಃ**— ಧೀರಾ ಧೀಃ ಯಸ್ಯ ಸಃ ಧೀರಧೀಃ ।

**ಮಾನುಷಭಾವವಿಗ್ರಹಃ**— ಮಾನುಷಃ ಭಾವಃ ಯಸ್ಯ ಸಃ ಮಾನುಷಭಾವಃ, ಮಾನುಷಭಾವಃ ವಿಗ್ರಹಃ ಯಸ್ಯ ಸಃ ಮಾನುಷಭಾವವಿಗ್ರಹಃ ।

**ಕ್ರಿಯಾಪದ**— ಬಿಭರ್ತಿ- ಭೃಞ್‌ಭರಣೇ ಇತ್ಯಸ್ಮಾತ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲಟ್ ಪ್ರಥಮಪುರುಷೇ ಏಕವಚನೇ ''ಬಿಭರ್ತಿ'' ಇತಿ ರೂಪಮ್ ।

ಬಿಭರ್ತಿ ಬಿಭೃತಃ ಬಿಭ್ರತಿ, ಬಿಭರ್ಷಿ ಬಿಭೃಥಃ ಬಿಭೃಥ, ಬಿಭರ್ಮಿ ಬಿಭೃವಃ ಬಿಭೃಮಃ ॥

**ಆತನೋತಿ-** ಆಙ್ ಇತ್ಯುಪಸರ್ಗಪೂರ್ವಕಾತ್ ತನು ವಿಸ್ತಾರೇ ಇತ್ಯಸ್ಮಾತ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲಟ್ ಪ್ರಥಮಪುರುಷೇ ಏಕವಚನೇ ''ಆತನೋತಿ'' ಇತಿ ರೂಪಮ್ ।

ಆತನೋತಿ ಆತನುತಃ ಆತನ್ವಂತಿ, ಆತನೋಷಿ ಆತನುಥಃ ಆತನುಥ, ಆತನೋಮಿ ಆತನುವಃ-ಆತನ್ವಃ ಆತನುಮಃ-ಆತನ್ಮಃ ॥

★ ★ ★

**ಚತುರಶ್ಚತುರಾನನಃ ಸ್ವಯಂ ಪವನೋ ವಾ ವ್ರತಿರೂಪ ಆವ್ರಜನ್ ।**
**ಶ್ರುತಿನಾಥದಿದೃಕ್ಷಯಾನ್ಯಥಾ ನ ಖಲು ಸ್ಯಾನ್ನಿಖಿಲಾಗ್ರ್ಯಲಕ್ಷ್ಮವಾನ್ ॥ 9 ॥**

**ಪದಚ್ಛೇದ—** ಚತರಃ, ಚತುರಾನನಃ, ಸ್ವಯಂ, ಪವನಃ, ವಾ, ವ್ರತಿರೂಪಃ, ಆವ್ರಜನ್, ಶ್ರುತಿನಾಥದಿದೃಕ್ಷಯಾ, ಅನ್ಯಥಾ, ನ, ಖಲು, ಸ್ಯಾತ್, ನಿಖಿಲಾಗ್ರ್ಯಲಕ್ಷ್ಮವಾನ್ ।

**ಅನ್ವಯ—** ಶ್ರುತಿನಾಥದಿದೃಕ್ಷಯಾ, ವ್ರತಿರೂಪಃ, ಆವ್ರಜನ್, ಸ್ವಯಂ, ಚತುರಃ, ಚತುರಾನನಃ ವಾ, ಪವನಃ, ಅನ್ಯಥಾ, ನಿಖಿಲಾಗ್ರ್ಯ, ಲಕ್ಷ್ಮವಾನ್, ನ, ಸ್ಯಾತ್, ಖಲು ।

**ಅನ್ವಯಾರ್ಥ—**

**ಶ್ರುತಿನಾಥ** = ವೇದಗಳಿಗೆ ಸ್ವಾಮಿಯಾದ ವೇದವ್ಯಾಸರನ್ನು
**ದಿದೃಕ್ಷಯಾ** = ನೋಡುವ ಇಚ್ಛೆಯಿಂದ
**ವ್ರತಿರೂಪ** = ಸಂನ್ಯಾಸಿ ವೇಷವುಳ್ಳ
**ಆವ್ರಜನ್** = ಬರುತ್ತಿರುವ (ಈ ಪುರುಷನು)
**ಸ್ವಯಂ** = ಸ್ವತಃ (ತಾನೇ)
**ಚತರಃ** = ಎಲ್ಲ ವಿಷಯಗಳಲ್ಲಿ ಪ್ರವೀಣನಾದ
**ಚತುರಾನನಃ** = ಬ್ರಹ್ಮನೋ ?
**ವಾ** = ಅಥವಾ
**ಪವನಃ** = ವಾಯುವೋ ?,
**ಅನ್ಯಥಾ** = ಹೀಗಿಲ್ಲದಿದ್ದರೆ
**ನಿಖಿಲ ಅಗ್ರ್ಯ ಲಕ್ಷ್ಮವಾನ್** = ಎಲ್ಲಾ ಶ್ರೇಷ್ಠವಾದ ಲಕ್ಷಣವುಳ್ಳವನು
**ನ ಸ್ಯಾತ್ ಖಲು** = ಆಗಿರಲಾರನಷ್ಟೆ ?

**ತಾತ್ಪರ್ಯ—** ಸಂನ್ಯಾಸಿಯ ವೇಷವನ್ನು ತಾಳಿ ಸಮಸ್ತವೇದಾಧಿಪತಿಯಾದ ಶ್ರೀವೇದವ್ಯಾಸರನ್ನು ನೋಡಲು ಬರುತ್ತಿರುವ ಇವನು ಸರ್ವಲಕ್ಷಣ ಸಂಪನ್ನನಾದ ಸಾಕ್ಷಾತ್ ಚತುರ್ಮುಖ ಬ್ರಹ್ಮನೋ ? ಅಥವಾ ಮುಖ್ಯಪ್ರಾಣನೋ ? ಇವರಿಬ್ಬರಲ್ಲಿ ಒಬ್ಬನಾಗಿರಲೇಬೇಕು. ಹಾಗಿಲ್ಲದಿದ್ದರೆ 32 ಲಕ್ಷಣಗಳು ಇವನಲ್ಲಿ ಇರಲು ಸಾಧ್ಯವಿಲ್ಲ.

**ವಿಗ್ರಹ—**

**ಚತುರಾನನಃ—** ಚತ್ವಾರಿ ಆನನಾನಿ ಯಸ್ಯ ಸಃ ಚತುರಾನನಃ ।
**ವ್ರತಿರೂಪಃ—** ವ್ರತಂ ಅಸ್ಯಾಸ್ತೀತಿ ವ್ರತೀ, ವ್ರತಿನಃ ರೂಪಂ ಯಸ್ಯ ಸಃ ವ್ರತಿರೂಪಃ ।
**ಆವ್ರಜನ್—** ಆವ್ರಜತೀತಿ ಆವ್ರಜನ್ ।

**ಶ್ರುತೀನಾಥದಿದೃಕ್ಷಯಾ—** ಶ್ರುತೀನಾಂ ನಾಥಃ ಶ್ರುತಿನಾಥಃ, ಶ್ರುತಿನಾಥಸ್ಯ ದಿದೃಕ್ಷಾ ಶ್ರುತಿನಾಥದಿದೃಕ್ಷಾ, ತಯಾ ಶ್ರುತಿನಾಥದಿದೃಕ್ಷಯಾ ।

**ಅಗ್ರ್ಯಲಕ್ಷ್ಮವಾನ್—** ಅಗ್ರ್ಯಾಣಿ ಚ ತಾನಿ ಲಕ್ಷ್ಮಾಣಿ ಚ ಅಗ್ರ್ಯಲಕ್ಷ್ಮಾಣಿ, ನಿಖಿಲಾನಿ ಚ ತಾನಿ ಅಗ್ರ್ಯಲಕ್ಷ್ಮಾಣಿ ಚ ನಿಖಿಲಾ- ಗ್ರ್ಯಲಕ್ಷ್ಮಾಣಿ, ನಿಖಿಲಾಗ್ರ್ಯಲಕ್ಷ್ಮಾಣಿ ಅಸ್ಯ ಸಂತೀತಿ ನಿಖಿಲಾಗ್ರ್ಯಲಕ್ಷ್ಮವಾನ್ ।

**ಕ್ರಿಯಾಪದ—** ಸ್ಯಾತ್- ಅಸ್ ಭುವಿ ಇತ್ಯಸ್ಮಾತ್ ಧಾತೋಃ ಸತ್ತಾರ್ಥಕಾತ್ ಅಕರ್ಮಕಾತ್ ಪರಸ್ಮೈಪದಿನಃ ವಿಧಿ ಲಿಙ್ ಪ್ರಥಮಪುರುಷೇ ಏಕವಚನೇ ''ಸ್ಯಾತ್'' ಇತಿ ರೂಪಮ್ ।

ಸ್ಯಾತ್ ಸ್ಯಾತಾಂ ಸ್ಯುಃ, ಸ್ಯಾಃ ಸ್ಯಾತಂ ಸ್ಯಾತ, ಸ್ಯಾಂ ಸ್ಯಾವ ಸ್ಯಾಮ ॥

★ ★ ★

**ಅವಲೋಕಿತಲಕ್ಷಣಃ ಸತೈರಿತಿ ಸಂಚಿಂತ್ಯ ಕುತೂಹಲಾಕುಲೈಃ ।**
**ಅವಿಲಂಬಗತಿರ್ನ್ಯಶಾಮಯತ್ ತರುಮಾರಾತ್ ಸುರಪಾದಪೋತ್ತಮಮ್ ॥ 10 ॥**

**ಪದಚ್ಛೇದ—** ಅವಲೋಕಿತಲಕ್ಷಣಃ, ಸಃ, ತೈಃ, ಇತಿ, ಸಂಚಿಂತ್ಯ, ಕುತೂಹಲಾಕುಲೈಃ, ಅವಿಲಂಬಗತಿಃ, ನ್ಯಶಾಮಯತ್, ತರುಂ, ಆರಾತ್, ಸುರಪಾದಪೋತ್ತಮಂ ।

**ಅನ್ವಯ—** ಕುತೂಹಲಾಕುಲೈಃ, ತೈಃ, ಇತಿ, ಸಂಚಿಂತ್ಯ, ಅವಲೋಕಿತಲಕ್ಷಣಃ, ಅವಿಲಂಬಗತಿಃ, ಸಃ, ಆರಾತ್, ಸುರಪಾದಪೋತ್ತಮಂ, ತರುಂ, ನ್ಯಶಾಮಯತ್ ।

**ಅನ್ವಯಾರ್ಥ—**

**ಕುತೂಹಲಾಕುಲೈಃ** = ಕೌತುಕದಿಂದ ತುಂಬಿರುವ
**ತೈಃ** = ಆಶ್ರಮದಲ್ಲಿರುವ ಮುನಿಗಳಿಂದ,
**ಇತಿ** = ಹಿಂದೆ ಹೇಳಿರುವ ರೀತಿಯಿಂದ
**ಅವಲೋಕಿತಲಕ್ಷಣಃ** = ನೋಡಲ್ಪಟ್ಟ ಲಕ್ಷಣವುಳ್ಳ
**ಅವಿಲಂಬಗತಿಃ** = ವೇಗವಾದ ಗಮನವುಳ್ಳ
**ಸಃ** = ಆ ಶ್ರೀಮಧ್ವಾಚಾರ್ಯರು,
**ಆರಾತ್** = ದೂರದಲ್ಲಿ
**ಸುರಪಾದಪ ಉತ್ತಮಂ** = ದೇವತೆಗಳ ವೃಕ್ಷವಾದ ಕಲ್ಪವೃಕ್ಷದಂತೆ (ಪಾರಿಜಾತವೃಕ್ಷದಂತೆ) ಶ್ರೇಷ್ಠವಾದ
**ತರುಂ** = ಬದರೀವೃಕ್ಷವನ್ನು
**ನ್ಯಶಾಮಯತ್** = ನೋಡಿದರು.

**ತಾತ್ಪರ್ಯ—** ಈ ರೀತಿಯಾಗಿ ಆ ಬದರಿಕಾಶ್ರಮದಲ್ಲಿದ್ದ ಮುನಿಗಳು ಆಶ್ಚರ್ಯಭರಿತರಾಗಿ ಶ್ರೀಮನ್ಮಧ್ವಾಚಾರ್ಯರ ದೇಹಲಕ್ಷಣಗಳನ್ನು ಕಂಡು, ಈ ಮಹಾನುಭಾವರು ಬ್ರಹ್ಮದೇವರಾಗಲಿ ಅಥವಾ ವಾಯುದೇವರಾಗಲಿ ಆಗಿರಲೇ- ಬೇಕೆಂದು ಆಲೋಚಿಸುತ್ತಿರುವಾಗ ಶ್ರೀಮಧ್ವರು ಬೇಗನೆ ಮುಂದೆ ನಡೆಯುತ್ತಾ ಸಮೀಪದಲ್ಲಿದ್ದ ಕಲ್ಪವೃಕ್ಷದಂತಿರುವ ಬದರೀವೃಕ್ಷವನ್ನು ಕಂಡರು.

**ವಿಗ್ರಹ—**

**ಅವಲೋಕಿತಲಕ್ಷಣಃ—** ಅವಲೋಕಿತಾನಿ ಲಕ್ಷಣಾನಿ ಯಸ್ಯ ಸಃ ಅವಲೋಕಿತಲಕ್ಷಣಃ ।

**ಕುತೂಹಲಾಕುಲೈಃ—** ಕುತೂಹಲೇನ ಆಕುಲಾಃ ಕುತೂಹಲಾಕುಲಾಃ, ತೈಃ ಕುತೂಹಲಾಕುಲೈಃ ।

**ಅವಿಲಂಬಗತಿಃ—** ನ ವಿದ್ಯತೇ ವಿಲಂಬಃ ಯಸ್ಯಾಃ ಸಾ ಅವಿಲಂಬಾ, ಅವಿಲಂಬಾ ಗತಿಃ ಯಸ್ಯ ಸಃ ಅವಿಲಂಬಗತಿಃ ।

**ಸುರಪಾದಪೋತ್ತಮಂ—** ಸುರಾನಾಂ ಪಾದಪಃ ಸುರಪಾದಪಃ, ಸುರಪಾದಪವತ್ ಉತ್ತಮಃ ಸುರಪದಾ-ಪೋತ್ತಮಃ, ತಂ ಸುರಪಾದಪೋತ್ತಮಂ ।

**ಕ್ರಿಯಾಪದ—** **ನ್ಯಶಾಮಯತ್**- ನಿ ಇತ್ಯುಪಸರ್ಗಪೂರ್ವಕಾತ್ ಶಮ ಆಲೋಚನೇ ಇತ್ಯಸ್ಮಾತ್ ಧಾತೋಃ ಅನದ್ಯತನ ಭೂತೇ ಲಙ ಪ್ರಥಮಪುರುಷೇ ಏಕವಚನೇ ''ನ್ಯಶಾಮಯತ್'' ಇತಿ ರೂಪಮ್ ।

| | | |
|---|---|---|
| ನಿ+ ಅಶಾಮಯತ್ | ಅಶಾಮಯತಾಂ | ಅಶಾಮಯನ್, |
| ಅಶಾಮಯಃ | ಅಶಾಮಯತಂ | ಅಶಾಮಯತ, |
| ಅಶಾಮಯಂ | ಅಶಾಮಯಾವ | ಅಶಾಮಯಾಮ ॥ |

★ ★ ★

**ಮಸೃಣತ್ವಚಮುನ್ನತಂ ತತಂ ಬಹುಶಾಖಾ ಫಣಸೂನರತ್ನಕಂ ।**
**ಭಗವಂತಮನಂತಮಂತಿಕೇ ಸ್ಥಿತಮೀಶಸ್ಯ ನಿಷೇವಣಾಯ ವಾ ॥ 11 ॥**

**ಪದಚ್ಛೇದ—** ಮಸೃಣತ್ವಚಂ, ಉನ್ನತಂ, ತತಂ, ಬಹುಶಾಖಾಫಣಸೂನರತ್ನಕಂ, ಭಗವಂತಂ, ಅನಂತಂ, ಅಂತಿಕೇ, ಸ್ಥಿತಂ, ಈಶಸ್ಯ , ನಿಷೇವಣಾಯ ವಾ ।

**ಅನ್ವಯ—** ಮಸೃಣತ್ವಚಂ, ಉನ್ನತಂ ತತಂ, ಬಹುಶಾಖಾಫಣಸೂನರತ್ನಕಂ, ಈಶಸ್ಯ ನಿಷೇವಣಾಯ ಅಂತಿಕೇ ಸ್ಥಿತಂ, ಭಗವಂತಂ ಅನಂತ ವಾ (ತರುಂ ನ್ಯಶಾಮಯತ್) ।

**ಅನ್ವಯಾರ್ಥ—**

**ಮಸೃಣ ತ್ವಚಂ ಉನ್ನತಂ** = ಕೋಮಲವಾದ ತೊಗಟೆಯುಳ್ಳ, ಮೃಚರ್ಮವುಳ್ಳ, ಎತ್ತರವಾದ, ಶ್ರೇಷ್ಠವಾದ

**ತತಂ** = ಕೊಂಬೆಗಳಿಂದ, ಹೆಡೆಗಳಿಂದ ವ್ಯಾಪಿಸಿಕೊಂಡಿರುವ

**ಬಹು ಶಾಖಾ ಫಣ ಸೂನ ರತ್ನಕಂ** = ಬಹಳವಾದ ಕೊಂಬೆಗಳೆಂಬ ಹೆಡೆಗಳಲ್ಲಿ ಹೂವುಗಳೆಂಬ (ಫಲಗಳೆಂಬ) ರತ್ನವುಳ್ಳ, ಬಹಳ ಕೊಂಬೆಗಳಂತಿರುವ ಹೆಡೆಗಳಲ್ಲಿ (ಸೂನ) ಉಬ್ಬಿದ ರತ್ನಗಳುಳ್ಳ (ಸೂನರತ್ನಕಂ = ಹೂವಿನಂತಿರುವ ರತ್ನಗಳುಳ್ಳ)

**ಈಶಸ್ಯ** = ವೇದವ್ಯಾಸದೇವರ

**ನಿಷೇವಣಾಯ** = ಸೇವೆಗಾಗಿ

**ಅಂತಿಕೇ** = ಸಮೀಪದಲ್ಲಿ

**ಸ್ಥಿತಂ** = ಇರುವ

**ಭಗವಂತಂ** = ಪೂಜ್ಯನಾದ

**ಅನಂತಂ ವಾ** = ಶೇಷನಂತಿರುವ (ತರುಂ = ಮರವನ್ನು, ನ್ಯಶಾಮಯತ್ = ನೋಡಿದರು) ಇದು ಆದಿಕಲಾಪಕಃ ।

**ತಾತ್ಪರ್ಯ—** ಮೃದುವಾದ ತೊಗಟೆಯುಳ್ಳ ಆ ಮರವು ಎತ್ತರವಾಗಿದ್ದು ಸುತ್ತಲೂ ಇರುವ ಕೊಂಬೆಗಳಿಂದ ಕೊಡೆಯಂತೆ ಹರಡಿಕೊಂಡಿತ್ತು. ಅದರ ಕೊಂಬೆಗಳು ಹಾವಿನ ಹೆಡೆಯಂತಿದ್ದು ಅವುಗಳಲ್ಲಿ ರತ್ನದಂತಿರುವ ಹೂವುಗಳು ಹಣ್ಣುಗಳು ಶೋಭಿಸುತ್ತಿದ್ದವು. ಇಂತಹ ಮರವನ್ನು ನೋಡಿದರೆ. ಮೃದುವಾದ ತೊಗಲುಗಳುಳ್ಳ ಶ್ರೇಷ್ಠವಾದ ಸುತ್ತಲೂ

ಹೂವುಗಳಂತಿರುವ ರತ್ನಗಳಿಂದ ಕೂಡಿದ ಹೆಡೆಗಳನ್ನು ಬಿಚ್ಚಿಕೊಂಡುರುವ ಆದಿಶೇಷನು ತನ್ನ ಸ್ವಾಮಿಯಾದ ವೇದ-ವ್ಯಾಸರನ್ನು ಸೇವಿಸಲು ಹತ್ತಿರ ಬಂದು ನಿಂತಿರುವನೋ ಎಂಬಂತೆ ಕಾಣುತ್ತಿದ್ದಿತು ।

ವಿಗ್ರಹ—

**ಮಸೃಣತ್ವಚಂ—** ಮಸೃಣಾ ತ್ವಕ್ ಯಸ್ಯ ಸಃ ಮಸೃಣತ್ವಕ್, ತಂ ಮಸೃಣತ್ವಚಂ ।

**ಬಹುಶಾಖಾಫಣಸೂನರತ್ನಕಂ—** ಬಹೂಶ್ಚತಾಃ ಶಾಖಾಚ್ಚ ಬಹುಶಾಖಾಃ ಫಣಾಃ ಇವ ಬಹುಶಾಖಾಫಣಾಃ ಸೂನಾನಿ ರತ್ನಾನೀವ ಸೂನರತ್ನಾನಿ, ಬಹುಶಾಖಾಫಣೇಷು ಸೂನರತ್ನಾನಿ ಯಸ್ಯ ಸಃ ಬಹುಶಾಖಾ-ಫಣಸೂನರತ್ನಕಃ, ತಂ ಬಹುಶಾಖಾಫಣಸೂನರತ್ನಕಂ ।

**(ಶೇಷಪಕ್ಷದಲ್ಲಿ -)** ಬಹುಶಾಖಾ ಇವ ಫಣಾಃ ಬಹುಶಾಖಾಫಣಾಃ, ಸೂನಾನೀವ ರತ್ನಾನಿ ಸೂನರತ್ನಾನಿ, ಬಹುಶಾಖಾಫಣೇಷು ಸೂನರತ್ನಾನಿ ಯಸ್ಯ ಸಃ ಬಹುಶಾಖಾಫಣಸೂನರತ್ನಕಃ, ತಂ ಬಹುಶಾಖಾ-ಫಣಸೂನರತ್ನಕಂ ।

**ಭಗವಂತಂ—** ಭಗಃ ಅಸ್ಯ ಅಸ್ತೀತಿ ಭಗವಾನ್, ತಂ ಭಗವಂತಂ ।

★ ★ ★

**ಅತಿಚಿತ್ರವಿಚಿತ್ರಪತ್ರಿಣಂ ಬಹುವರ್ಣಂ ಹರಿಗೋನಿವಾರಕಂ ।**
**ಮುನಿನಂದನಮಿಂದಿರಾಪತೇರಧಿಕೇಷ್ಟಂ ಪತತಾಮಿವಾಧಿಪಮ್ ॥ 12 ॥**

ಪದಚ್ಛೇದ— ಅತಿಚಿತ್ರವಿಚಿತ್ರಪತ್ರಿಣಂ, ಬಹುವರ್ಣಂ, ಹರಿಗೋನಿವಾರಕಂ, ಮುನಿನಂದನಂ, ಇಂದಿರಾಪತೇಃ, ಅಧಿಕೇಷ್ಟಂ, ಪತತಾಂ, ಇವ, ಅಧಿಪಂ ।

**ಅನ್ವಯ—** ಅತಿಚಿತ್ರವಿಚಿತ್ರಪತ್ರಿಣಂ, ಬಹುವರ್ಣಂ, ಹರಿಗೋನಿವಾರಕಂ, ಮುನಿನಂದನಂ, ಇಂದಿರಾಪತೇಃ ಅಧಿಕೇಷ್ಟಂ, ಪತತಾಂ ಅಧಿಪಂ ಇವ (ತರುಂ ನ್ಯಶಾಮಯತ್) ।

**ಅನ್ವಯಾರ್ಥ—**

**ಅತಿಚಿತ್ರ ವಿಚಿತ್ರ ಪತ್ರಿಣಂ** = ಅತ್ಯಂತ ಆಶ್ಚರ್ಯಕರವಾದ, ನಾನಾ ವರ್ಣದ ಎಲೆಗಳುಳ್ಳ
**ಬಹುವರ್ಣಂ** = ಅನೇಕ ಬಣ್ಣಗಳುಳ್ಳ
**ಹರಿಗೋನಿವಾರಕಂ** = ಸೂರ್ಯನ ಕಿರಣಗಳನ್ನು ತಡೆಯುವ,
**ಮುನಿನಂದನಂ** = ಋಷಿಗಳಿಗೆ ಸಂತೋಷವನ್ನುಂಟುಮಾಡುವ
**ಇಂದಿರಾಪತೇಃ** = ಲಕ್ಷ್ಮೀಪತಿಯಾದ ವೇದವ್ಯಾಸರಿಗೆ
**ಅಧಿಕೇಷ್ಟಂ** = ಅತ್ಯಂತ ಪ್ರಿಯವಾದ,

*ಗರುಡನ ಪಕ್ಷದಲ್ಲಿ*

**ಅತಿಚಿತ್ರವಿಚಿತ್ರಪತ್ರಿಣಂ** = ವೇದಾತ್ಮಕವಾದ್ದರಿಂದ ಆಶ್ಚರ್ಯವನ್ನುಂಟುಮಾಡುವ ನಾನಾಬಣ್ಣದ ರೆಕ್ಕೆಗಳುಳ್ಳ
**ಬಹುವರ್ಣಂ** = ನಾನಾ ಬಣ್ಣಗಳುಳ್ಳ
**ಹರಿಗೋನಿವಾರಕಂ** = ಇಂದ್ರನು ಪ್ರಯೋಗಿಸಿದ ವಜ್ರಾಯುಧವನ್ನು ತಡೆಯುವ,
**ಮುನಿನಂದನಂ** = ಕಶ್ಯಪಮುನಿಗಳಿಗೆ ಆನಂದವನ್ನುಂಟು ಮಾಡುವ (ಕಶ್ಯಪಋಷಿಗಳ ಪುತ್ರನಾದ),
**ಇಂದಿರಾಪತೇಃ** = ಶ್ರೀಮನ್ನಾರಾಯಣನಿಗೆ

**ಅಧಿಕೇಷ್ಟಂ** = ಅತ್ಯಂತ ಪ್ರಿಯನಾದ,

**ಪತತಾಂ ಅಧಿಪಂ ಇವ** = ಪಕ್ಷಿಗಳಿಗೆ ಒಡೆಯನಾದ ಗರುಡನಂತಿರುವ (ತರುಂ ನ್ಯಶಾಮಯತ್).

**ತಾತ್ಪರ್ಯ—** 'ಛಂದೋಮಯೇನ ಗರುಡೇನ ಸಮೂಹ್ಯಮಾನಃ' ಎಂಬ ಭಾಗವತೋಕ್ತಿಯಂತೆ ಗರುಡನು ವೇದಾತ್ಮಕವಾದ ಬಗೆಬಗೆ ಬಣ್ಣದ ರೆಕ್ಕೆಗಳಿಂದ ಕೂಡಿರುತ್ತಾನೆ. (ಅಜಾನುತಃ ಸ್ವರ್ಣವರ್ಣಃ ಆನಾಭೇಃ ಹಾರಗೌರಭಾಃ । ಮಾಣಿಕ್ಯಶೋಣ ಆಕಂಠಾತ್, ಆಕೇಶಾತ್ ಹರಿತಪ್ರಭಃ । ನೀಲಕೇಶೋ ಲ್ಲಸನ್ ಮಾಲ್ಯಃ ಎಂಬಂತೆ, ಮೊಣಗಂಟಿನವರೆಗೆ ಬಂಗಾರದ ಬಣ್ಣ, ನಾಭಿಯವರೆಗೆ ಮುತ್ತಿನಸರದಂತೆ ಬಿಳಿಬಣ್ಣ, ಕತ್ತಿನವರೆಗೆ ಮಾಣಿಕ್ಯದಂತೆ ಶೋಣ (ಕೆಂಪುನ್ಬದಿಲೆ) ವರ್ಣ, ತಲೆ ಕೂದಲಿನವರೆಗೆ ಹಸುರು ಬಣ್ಣ, ಕಪ್ಪಾದ ಕೂದಲು, ಪ್ರಕಾಶಿಸುವ ಹೂವಿನಸರ ಇವುಗಳಿಂದ ಕೂಡಿರುವವನು ಗರುಡದೇವರು) ಎಂಬ ಮಾತಿನಂತೆ ಗರುಡನು ಐದು ವರ್ಣಗಳುಳ್ಳವನು, ಅಮೃತವನ್ನು ತರಲು ಹೋದಾಗ ಇಂದ್ರನ ವಜ್ರಾಯುಧ ಪ್ರಹಾರವನ್ನು ಲೆಕ್ಕಿಸದೆ ಇದ್ದನು, ತಂದೆಯಾದ ಕಶ್ಯಪರನ್ನು ಆನಂದಗೊಳಿಸುವವನು, ಶ್ರೀಮನ್ನಾರಾಯಣ-ನಿಗೆ ವಾಹನವಾದ್ದರಿಂದ ಅತ್ಯಂತ ಪ್ರಿಯನು, ಹಾಗೆಯೇ ಈ ಬದರೀವೃಕ್ಷವೂ ಕೂಡ ಅತ್ಯಾಶ್ಚರ್ಯವನ್ನುಂಟು ಮಾಡುವ ಅನೇಕ ಬಣ್ಣದ ಎಲೆಗಳಿಂದ ಕೂಡಿದೆ. ಬುಡದಿಂದ ತುದಿಯವರೆಗೆ ನಾನಾಬಣ್ಣಗಳಿಂದ ಕೂಡಿದೆ. ದಟ್ಟವಾದ ಎಲೆಗಳಿಂದ ಕೂಡಿರುವುದರಿಂದ ಸೂರ್ಯನಕಿರಣವನ್ನೂ ತಡೆಯುತ್ತದೆ. ಮುನಿಗಳಿಗೆ ಸಂತೋಷವನ್ನುಂಟುಮಾಡುತ್ತದೆ. ಲಕ್ಷ್ಮೀಪತಿ ಶ್ರೀಮನ್ನಾರಾಯಣಾಭಿನ್ನರಾದ ವೇದವ್ಯಾಸರಿಗೆ ಅತ್ಯಂತ ಪ್ರೀತಿಪಾತ್ರವಾಗಿದೆ. ಇಂತಹ ಬದರೀವೃಕ್ಷವನ್ನು ಆಚಾರ್ಯರು ಕಂಡರು.

**ವಿಗ್ರಹ—**

**ಅತಿಚಿತ್ರವಿಚಿತ್ರಪತ್ರಿಣಂ—** ವಿಚಿತ್ರಾಣಿ ಚ ತಾನಿ ಪತ್ರಾಣಿ ಚ ವಿಚಿತ್ರಪತ್ರಾಣಿ, ಅತ್ಯಂತಂ ಚಿತ್ರಾಣಿ ಅತಿಚಿತ್ರಾಣಿ, ಅತಿಚಿತ್ರಾಣಿ ಚ ತಾನಿ ವಿಚಿತ್ರಪತ್ರಾಣಿ ಚ ಅತಿಚಿತ್ರವಿಚಿತ್ರಪತ್ರಾಣಿ, ತಾನಿ ಅಸ್ಯ ಸಂತೀತಿ ಅತಿಚಿತ್ರವಿಚಿತ್ರಪತ್ರೀ, ತಂ ಅತಿಚಿತ್ರ- ವಿಚಿತ್ರಪತ್ರಿಣಂ।

**ಬಹುವರ್ಣಂ—** ಬಹವಃ ವರ್ಣಾಃ ಯಸ್ಯ ಸಃ ಬಹುವರ್ಣಃ, ತಂ ಬಹುವರ್ಣಂ ।

**ಹರಿಗೋನಿವಾರಕಂ—** ಹರೇಃ ಗಾವಃ ಹರಿಗಾವಃ, ಹರಿಗವಾಂ ನಿವಾರಕಃ ಹರಿಗೋನಿವಾರಕಃ, ತಂ ಹರಿ-ಗೋನಿವಾರಕಂ । *ಗರುಡಪಕ್ಷದಲ್ಲಿ* - ಹರೇಃ ಗೌಃ ಹರಿಗೌಃ, ಹರಿಗೋಃ ನಿವಾರಕಃ ಹರಿಗೋನಿವಾರಕಃ, ತಂ ಹರಿಗೋನಿವಾರಕಂ ।

**ಮುನಿನಂದನಂ—** ನಂದಯತೀತಿ ನಂದನಃ, ಮುನೀನಾಂ ನಂದನಃ ಮುನಿನಂದನಃ, ತಂ ಮುನಿನಂದನಂ । *ಗರುಡಪಕ್ಷದಲ್ಲಿ* - ಮುನೇಃ ನಂದನಃ ಮುನಿನಂದನಃ ।

**ಇಂದಿರಾಪತೇಃ—** ಇಂದಿರಾಯಾಃ ಪತಿಃ ಇಂದಿರಾಪತಿಃ, ತಸ್ಯ ಇಂದಿರಾಪತೇಃ ।

**ಅಧಿಕೇಷ್ಟಂ—** ಅಧಿಕಂ ಇಷ್ಟಃ ಅಧಿಕೇಷ್ಟಃ, ಇಂದಿರಾಪತೇಃ ಅಧಿಕೇಷ್ಟಃ ಇಂದಿರಾಪತಿರಧಿಕೇಷ್ಟಃ, ।

★ ★ ★

**ಅಮೃತಾತ್ಮಮಹಾಫಲಪ್ರದಂ ದುರವಾಪಂ ಹರಿಭಕ್ತಿವರ್ಜಿತೈಃ ।**
**ಶ್ರಿತಸಾಧುಪುರಾಣಭಾರತಂ ನಿಗಮಂ ಮೂರ್ತಮಿವೋರುಶಾಖಿನಮ್ ॥ 13 ॥**

**ಪದಚ್ಛೇದ—** ಅಮೃತಾತ್ಮಮಹಾಫಲಪ್ರದಂ, ದುರವಾಪಂ, ಹರಿಭಕ್ತಿವರ್ಜಿತೈಃ, ಶ್ರಿತಸಾಧುಪುರಾಣಭಾರತಂ, ನಿಗಮಂ, ಮೂರ್ತಂ, ಇವ, ಉರುಶಾಖಿನಂ ।

**ಅನ್ವಯ—** ಅಮೃತಾತ್ಮಮಹಾಫಲಪ್ರದಂ, ಹರಿಭಕ್ತಿವರ್ಜಿತೈಃ, ದುರವಾಪಂ, ಶ್ರಿತಸಾಧುಪುರಾಣಭಾರತಂ, ಉರು-ಶಾಖಿನಂ, ಮೂರ್ತಂ ನಿಗಮಂ ಇವ (ತರುಂ ನ್ಯಶಾಮಯತ್)

ಅನ್ವಯಾರ್ಥ—

**ಅಮೃತಾತ್ಮ ಮಹಾಫಲಪ್ರದಂ** = ರುಚಿಯಾಗಿರುವುದರಿಂದ ಅಮೃತಮಯವಾದ (ವೇದಪಕ್ಷದಲ್ಲಿ - ಮೋಕ್ಷರೂಪವಾದ) ದೊಡ್ಡ ದೊಡ್ಡ ಹಣ್ಣುಗಳನ್ನು (ಉತ್ತಮವಾದ ಪ್ರಯೋಜನವನ್ನು) ಕೊಡುವ,

**ಹರಿಭಕ್ತಿವರ್ಜಿತೈಃ** = ವಿಷ್ಣುವಿನಲ್ಲಿ ಮಹಾತ್ಮ್ಯಜ್ಞಾನಪೂರ್ವಕವಾದ ಸುದೃಢಸ್ನೇಹವಿಲ್ಲದವರಿಂದ ಅಂದರೆ ವಿಷ್ಣುಭಕ್ತಿ- ಯಿಲ್ಲದವರಿಂದ (ವೈಷ್ಣವರಲ್ಲದವರಿಂದ)

**ದುರವಾಪಂ** = ಹೊಂದಲಶಕ್ಯವಾದ,

**ಶ್ರಿತ ಸಾಧು ಪುರಾಣಭಾರತಂ** = ಆಶ್ರಯಿಸಿದ ಉತ್ತಮವಾದ (ಸಾತ್ತ್ವಿಕವಾದ) ಪುರಾಣ ಮತ್ತು ಭಾರತ- ಪುಸ್ತಕಗಳುಳ್ಳ

**ಶ್ರಿತ** = ಉಪಜೀವ್ಯವಾದ (ಮೂಲವಾದ) ಪ್ರಮಾಣವಾಗಿ ಆಶ್ರಯಿಸಿದ,

**ಸಾಧುಪುರಾಣಭಾರತಂ** = ಸಾತ್ವಿಕ ಪುರಾಣಗಳು ಮತ್ತು ಮಹಾಭಾರತವುಳ್ಳ,

**ಉರುಶಾಖಿನಂ** = ಬಹಳ ಕೊಂಬೆಗಳುಳ್ಳ (ಐತರೇಯ ಮುಂತಾದ ಅನೇಕ ವಿಭಾಗಗಳುಳ್ಳ)

**ಮೂರ್ತಂ** = ದೇಹವನ್ನು ಧರಿಸಿದ

**ನಿಗಮಂ ಇವ** = ವೇದವನ್ನೋಪಾದಿಯಲ್ಲಿ (ತರುಂ ನ್ಯಶಾಮಯತ್) ।

**ತಾತ್ಪರ್ಯ—** ವೇದವು ಅರ್ಥಜ್ಞಾನಪುರಸ್ಸರವಾಗಿ ಅಧ್ಯಯನ ಮಾಡುವವರಿಗೆ ಮೋಕ್ಷವೆಂಬ ಮಹಾಫಲವನ್ನು ಕೊಡುತ್ತದೆ. ವೇದಾರ್ಥವಿಚಾರಪೂರ್ವಕವಾಗಿ ಪರಮಾತ್ಮನ ಸ್ವರೂಪಜ್ಞಾನದಿಂದ ಮೋಕ್ಷವು ಉಂಟಾಗುತ್ತದೆಯೆಂದು ಶಾಸ್ತ್ರಗಳಲ್ಲಿ ದೃಢವಾಗಿ ಹೇಳಿದ್ದಾರೆಂಬ ವಿಷಯವು ಪ್ರಸಿದ್ಧವಾಗಿದೆ. ''ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ'', ವೈಷ್ಣವನಲ್ಲದವನಿಗೆ ವಿಷ್ಣುಭಕ್ತಿ ಇಲ್ಲದವನಿಗೆ ವೇದಾಧ್ಯಯನದಲ್ಲಿ ಅಧಿಕಾರವಿಲ್ಲ'' ಎಂಬ ವಚನದಂತೆ ವೇದವು ಹರಿಭಕ್ತಿ- ಯಿಲ್ಲದವರಿಗೆ ಹೊಂದಲು ಅನರ್ಹ ಮತ್ತು ಅಸಾಧ್ಯವಾಗಿರುತ್ತದೆ. ಎಲ್ಲಾ ಸಾತ್ತ್ವಿಕಪುರಾಣಗಳು ಮತ್ತು ಮಹಾಭಾರತವು ತನಗೆ ಉಪಜೀವ್ಯವಾದ ಮೂಲಭೂತ ಪ್ರಮಾಣವನ್ನಾಗಿ ವೇದವನ್ನೇ ಆಶ್ರಯಿಸಿವೆ. ''ಇತಿಹಾಸಪುರಾಣಾಭ್ಯಾಂ ವೇದಂ ಸಮುಪ ಬೃಂಹಯೇತ್'' ಎಂಬ ಪ್ರಮಾಣಾನುಸಾರ ವೇದದಲ್ಲಿ ಇರುವ ಅರ್ಥವನ್ನು ವಿಸ್ತರಿಸುವ ಇತಿಹಾಸಪುರಾಣಗಳು ವೇದವನ್ನೇ ಮೂಲಭೂತ ಪ್ರಮಾಣವನ್ನಾಗಿ ಅನುಸರಿಸಿವೆ. ವೇದವು ಐತರೇಯ, ಕೌಷೀತಕ, ಬಾಷ್ಕಲ, ಶಾಕಲ, ಪೈಂಗಿ, ಕಾಠಕ ಮುಂತಾದ ಅನೇಕ ಶಾಖೆಗಳಿಂದ ಕೂಡಿರುತ್ತದೆ. ಅಲ್ಲಿರುವ ಬದರೀವೃಕ್ಷವೂ ಶರೀರಧಾರಿಯಾದ ಆ ವೇದದಂತೆಯೇ ಇದೆ. ಅಮೃತದಂತೆ ರುಚಿಯಾದ ಮತ್ತು ಜರಾಮರಣಗಳನ್ನು ಪರಿಹರಿಸುವ ದೊಡ್ಡ ದೊಡ್ಡ ಹಣ್ಣುಗಳನ್ನು ಆ ಬದರೀ ವೃಕ್ಷವು ಕೊಡುತ್ತದೆ. ಆ ಬದರೀವೃಕ್ಷವೂ, ಅದಕ್ಕೆ ಆಶ್ರಯವಾದ ಬದರಿಕಾಶ್ರಮವೂ ವಿಷ್ಣುಭಕ್ತಿಯಿಲ್ಲದವರಿಂದ ಹೊಂದಲು ಅಸಾಧ್ಯವಾದುದು. ಮುನಿಗಳು ದೇವರ ಪೂಜೆ ಧ್ಯಾನ, ತಪಸ್ಸು, ಸಮಾಧಿ ಮುಂತಾದ ಸ್ಥಿತಿಗಳಲ್ಲಿ ತಮ್ಮ ಪಾರಾಯಣದ ಪುರಾಣಭಾರತಾದಿ ಪುಸ್ತಕಗಳನ್ನು ಬದರೀವೃಕ್ಷದ ಶಾಖೆಗಳಲ್ಲಿ ತಗಲಿಹಾಕುತ್ತದ್ದರು. ಹೀಗೆ ಪುರಾಣ- ಭಾರತಾದಿಗಳು ಆ ಬದರೀ ವೃಕ್ಷವನ್ನು ಆಶ್ರಯಿಸಿದ್ದವು. ವೇದಕ್ಕೆ ಅನೇಕ ಶಾಖೆಗಳಿದ್ದಂತೆ ಆ ಬದರೀವೃಕ್ಷಕ್ಕೂ ಅನೇಕ ಶಾಖೆಗಳಿದ್ದುವು. ಶ್ರೀ ಮಧ್ವಾಚಾರ್ಯರು ಇಂತಹ ಮೂರ್ತಿಮತ್ತಾದ ವೇದದಂತಿರುವ ಆ ಬದರಿ ವೃಕ್ಷವನ್ನು ಕಂಡರು.

ವಿಗ್ರಹ—

**ಅಮೃತಾತ್ಮಮಹಾಫಲಪ್ರದಂ—** ಅಮೃತಂ ಆತ್ಮಾ ಯೇಷಾಂ ತಾನಿ ಅಮೃತಾತ್ಮಾನಿ, ಮಹಾಂತಿ ಚ ತಾನಿ ಫಲಾನಿ ಚ ಮಹಾಫಲಾನಿ, ಅಮೃತಾತ್ಮಾನಿ ಚ ತಾನಿ ಮಹಾಫಲಾನಿ ಚ ಅಮೃತಾತ್ಮಮಹಾಫಲಾನಿ, ಅಮೃತಾತ್ಮಮಹಾಫಲಾನಿ ಪ್ರದದಾತೀತಿ ಅಮೃತಾತ್ಮಮಹಾಫಲಪ್ರದಃ, ತಂ ಅಮೃತಾತ್ಮಮಹಾ- ಫಲಪ್ರದಂ ।

**ವೇದಪಕ್ಷದಲ್ಲಿ** - ಅಮೃತಂ ಆತ್ಮಾ ಯಸ್ಯ ತತ್ ಅಮೃತಾತ್ಮ, ಮಹಚ್ಚ ತತ್ ಫಲಂ ಚ ಮಹಾಫಲಂ, ಅಮೃತಾತ್ಮ ಚ ತತ್ ಮಹಾಫಲಂ ಚ ಅಮೃತಾತ್ಮಮಹಾಫಲಂ, ತತ್ ಪ್ರದದಾತೀತಿ ಅಮೃತಾತ್ಮ-ಮಹಾಫಲಪ್ರದಃ, ತಂ ಅಮೃತಾತ್ಮಮಹಾಫಲಪ್ರದಂ ।

**ದುರವಾಪಂ**— ದುಃಖೇನ ಅವಾಪ್ತುಂ ಯೋಗ್ಯಃ ದುರವಾಪಃ, ತಂ ದುರವಾಪಂ ।

**ಹರಿಭಕ್ತಿವರ್ಜಿತೈಃ**— ಹರೇಃ ಭಕ್ತಿಃ ಹರಿಭಕ್ತಿಃ, ಹರಿಭಕ್ತ್ಯಾ ವರ್ಜಿತಾಃ ಹರಿಭಕ್ತಿವರ್ಜಿತಾಃ, ತೈಃ ಹರಿ-ಭಕ್ತಿವರ್ಜಿತೈಃ ।

**ಶ್ರಿತಸಾಧುಪುರಾಣಭಾರತಂ**— ಪುರಾಣಾನಿ ಚ ಭಾರತಂ ಚ ಪುರಾಣಭಾರತಾನಿ, ಸಾಧೂನಿ ಚ ತಾನಿ ಪುರಾಣಭಾರತಾನಿ ಚ ಸಾಧುಪುರಾಣಭಾರತಾನಿ, ಶ್ರಿತಾನಿ ಸಾಧುಪುರಾಣಭಾರತಾನಿ ಯಸ್ಮಿನ್ ಸಃ ಶ್ರಿತಸಾಧುಪುರಾಣಭಾರತಃ, ತಂ ಶ್ರಿತಸಾಧುಪುರಾಣಭಾರತಂ ।

**ಉರುಶಾಖಿನಂ**— ಉರವಶ್ಚ ತಾಃ ಶಾಖಾಶ್ಚ ಉರುಶಾಖಾಃ, ಉರುಶಾಖಾಃ ಅಸ್ಯ ಸಂತೀತಿ ಉರುಶಾಖೀ, ತಂ ಉರುಶಾಖಿನಂ ।

★ ★ ★

**ಅಥ ತಸ್ಯ ಸ ವೇದಿಕಾಂತರೇ ಸುವಿಶಾಲೇ ವಿಮಲೇ ಮನೋಹರೇ ।**
**ಅವಲೋಕಿತವಾನನಂತಧೀಃ ದಿವಿ ದೇವಾನಿವ ತಾಪಸೋತ್ತಮಾನ್ ॥ 14 ॥**

**ಪದಚ್ಛೇದ**— ಅಥ, ತಸ್ಯ, ಸಃ, ವೇದಿಕಾಂತರೇ, ಸುವಿಶಾಲೇ, ವಿಮಲೇ, ಮನೋಹರೇ, ಅವಲೋಕಿತವಾನ್, ಅನಂತಧೀಃ, ದಿವಿ, ದೇವಾನ್, ಇವ, ತಾಪಸೋತ್ತಮಾನ್ ।

**ಅನ್ವಯ**— ಅಥ, ಅನಂತಧೀಃ, ಸಃ, ತಸ್ಯ, ಸುವಿಶಾಲೇ, ವಿಮಲೇ, ಮನೋಹರೇ, ವೇದಿಕಾಂತರೇ, ದಿವಿ, ದೇವಾನ್, ಇವ, ತಾಪಸೋತ್ತಮಾನ್, ಅವಲೋಕಿತವಾನ್ ।

**ಅನ್ವಯಾರ್ಥ**—

**ಅಥ** = ಅನಂತರ

**ಅನಂತಧೀಃ** = ಪೂರ್ಣಜ್ಞಾನವುಳ್ಳ

**ಸಃ** = ಆ ಪೂರ್ಣಪ್ರಜ್ಞಾಚಾರ್ಯರು,

**ತಸ್ಯ** = ಆ ಬದರೀವೃಕ್ಷದ

**ಸುವಿಶಾಲೇ** = ಅತಿವಿಸ್ತಾರವುಳ್ಳ

**ವಿಮಲೇ** = ಪರಿಶುದ್ಧವಾದ,

**ಮನೋಹರೇ** = ಸುಂದರವಾದ

**ವೇದಿಕಾಂತರೇ** = ಕಟ್ಟೆಯ ಮಧ್ಯದಲ್ಲಿ (ಜಗಲಿಯ ಮೇಲೆ)

**ದಿವಿ** = ಸ್ವರ್ಗದಲ್ಲಿರುವ

**ದೇವಾನ್ ಇವ** = ದೇವತೆಗಳಂತಿರುವ

**ತಾಪಸೋತ್ತಮಾನ್** = ಮುನಿಶ್ರೇಷ್ಠರನ್ನು

**ಅವಲೋಕಿತವಾನ್** = ನೋಡಿದರು.

ತಾತ್ಪರ್ಯ— ಬಳಿಕ ಶ್ರೀಮಧ್ವಾಚಾರ್ಯರು ಆ ಬದರೀವೃಕ್ಷದ ಬಹಳ ಅಗಲವಾದ, ಶುದ್ಧವಾದ, ಸುಂದರವಾದ ಜಗಲಿಯ ಮೇಲೆ ಮಂಡಿಸಿರುವ, ದೇವಲೋಕದ ದೇವತೆಗಳಂತಿರುವ ಶ್ರೇಷ್ಠರಾದ ಮುನಿಗಳನ್ನು ಕಂಡರು.

ವಿಗ್ರಹ—

**ವೇದಿಕಾಂತರೇ—** ವೇದಿಕಾಯಾಃ ಅಂತರಂ ವೇದಿಕಾಂತರಂ, ತಸ್ಮಿನ್ ವೇದಿಕಾಂತರೇ ।

**ಅನಂತಧೀಃ—** ಅನಂತಾ ಧೀಃ ಯಸ್ಯ ಸಃ ಅನಂತಧೀಃ ।

**ತಾಪಸೋತ್ತಮಾನ್—** ತಾಪಸೇಷು ಉತ್ತಮಾಃ ತಾಪಸೋತ್ತಮಾಃ, ತಾನ್ ತಾಪಸೋತ್ತಮಾನ್ ।

★ ★ ★

**ಅಪಿ ಸಪ್ತತಯಾ ವಿರಾಜಿತಾನ್ ಗತಸಂಖ್ಯಾನ್ ಗುಣಿನೋ ಗುಣೋಜ್ಝಿತಾನ್ ।**
**ಅಪಿ ಮನ್ಯುಮದಾದಿವರ್ಜಿತಾನ್ ಗತಭೋಗಾನ್ ಪವನಾಶನಾನ್ ಸದಾ ॥ 15 ॥**

ಪದಚ್ಛೇದ— ಅಪಿ, ಸಪ್ತತಯಾ, ವಿರಾಜಿತಾನ್, ಗತಸಂಖ್ಯಾನ್, ಗುಣಿನಃ, ಗುಣೋಜ್ಝಿತಾನ್, ಅಪಿ, ಮನ್ಯು-ಮದಾದಿವರ್ಜಿತಾನ್, ಗತಭೋಗಾನ್, ಪವನಾಶನಾನ್, ಸದಾ ।

ಅನ್ವಯ— ಸಪ್ತತಯಾ ವಿರಾಜಿತಾನ್, ಅಪಿ, ಗತಸಂಖ್ಯಾನ್, ಗುಣಿನಃ (ಅಪಿ), ಗುಣೋಜ್ಝಿತಾನ್, ಮನ್ಯುಮದಾದಿವರ್ಜಿತಾನ್, ಗತಭೋಗಾನ್ ಅಪಿ, ಸದಾ, ಪವನಾಶನಾನ್ (ತಾಪಸೋತ್ತಮಾನ್ ಅವಲೋಕಿತವಾನ್) ।

ಅನ್ವಯಾರ್ಥ—

(ಸಃ = ಆ ಶ್ರೀಮಧ್ವಾಚಾರ್ಯರು)

**ಸಪ್ತತಯಾ** = ಏಳು ಎಂಬ ಸಂಖ್ಯೆಯಿಂದ (ಜಟೆಯನ್ನು ಧರಿಸುವುದರಿಂದ)

**ವಿರಾಜಿತಾನ್ ಅಪಿ** = ಪ್ರಕಾಶಮಾನರಾಗಿದ್ದರೂ

**ಗತಸಂಖ್ಯಾನ್** = ಸಂಖ್ಯೆಯಿಲ್ಲದ (ಬಹುಮಂದಿಯಾದ)

**ಗುಣಿನಃ ಅಪಿ** = ಜ್ಞಾನಭಕ್ತ್ಯಾದಿಗುಣವುಳ್ಳವರಾದಾಗ್ಯೂ

**ಗುಣೋಜ್ಝಿತಾನ್** = (ಸತ್ತ್ವಾದಿಗುಣವಿಲ್ಲದ) ಗುಣವಿಲ್ಲದ (ಸಂನ್ಯಾಸಿಗಳಾದುದರಿಂದ ಯಜ್ಞೋಪವೀತ-ವಿಲ್ಲದ ಪರಮಹಂಸರನ್ನು)

**ಮನ್ಯುಮದಆದಿವರ್ಜಿತಾನ್** = ಕೋಪವು, ಅಹಂಕಾರವು ಇವುಗಳೇ ಮೊದಲಾದವುಗಳಿಂದ (ಕಾಮ-ಕ್ರೋಧಾದ್ಯರಿಷಡ್ವರ್ಗಗಳಿಂದ) ಬಿಡಲ್ಪಟ್ಟ

**ಗತಭೋಗಾನ್ ಅಪಿ** = (ಸರ್ಪದ) ದೇಹವಿಲ್ಲದವರಾದಾಗ್ಯೂ (ಸುಖಭೋಗವಿಲ್ಲದವರಾದಾಗ್ಯೂ),

**ಸದಾ** = ಯಾವಾಗಲೂ

**ಪವನಾಶನಾನ್** = ಗಾಳಿಯೇ ಆಹಾರವಾಗಿ ಉಳ್ಳ (ಆಹಾರ ರಹಿತರಾದಾಗ್ಯೂ, ಗಾಳಿಯೇ ಆಹಾರ-ವುಳ್ಳವರಾದ) ಸರ್ಪಗಳಂತಿರುವ (ಗಾಳಿಯನ್ನು ಮಾತ್ರ ಸೇವಿಸಿ ಜೀವಿಸುತ್ತಿರುವ) ಇಂತಹ (ತಪಸ್ವಿಶ್ರೇಷ್ಠರನ್ನು ಕಂಡರು)

ತಾತ್ಪರ್ಯ— ಅಲ್ಲಿ ಅಸಂಖ್ಯರಾದ ಋಷಿಗಳಿದ್ದರು ಅಂದರೆ ಏಳು ಸಂಖ್ಯೆಯಿಂದ ಮತ್ತು ಅವರು ಸಪ್ತತೆಯಿಂದ ಜಟಾಧಾರಣೆಯಿಂದ ವಿರಾಜಮಾನರಾಗಿದ್ದರು. ಅವರು ಜ್ಞಾನ ಭಕ್ತ್ಯಾದಿ ಗುಣಗಳಿಂದ ಕೂಡಿದ್ದರೂ ಸತ್ತ್ವರಜಸ್ತಮೋ-ಗುಣಗಳನ್ನು ತ್ಯಜಿಸಿದ್ದರು. ಅವರಲ್ಲಿ ಯಜ್ಞೋಪವೀತಧಾರಿಗಳಾದ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥರೂ, ಯಜ್ಞೋಪ-ವೀತವಿಲ್ಲದ ಸಂನ್ಯಾಸಿಗಳೂ, ಇದ್ದರು. ಅವರು ಸರ್ಪಗಳಂತೆ ಕೇವಲ ವಾಯುವನ್ನು ಸೇವಿಸುತ್ತಿದ್ದರೂ, ಕೋಪ ಅಹಂಕಾರ

ರಹಿತರಾಗಿ ಸ್ರಕ್ ಚಂದನವನಿತಾದಿ ಭೋಗಗಳನ್ನು ಬಿಟ್ಟಿದ್ದರು. ಇಂತಹ ಮುನಿಗಳನ್ನು ಶ್ರೀಮಧ್ವಾಚಾರ್ಯರು ಕಂಡರು. (ಇಲ್ಲಿ ಶಬ್ದಾರ್ಥಗಳಿಗೆ ಮೇಲಿಂದ ಮೇಲೆ ವಿರೋಧವಿರುವಂತೆ ಕಂಡು ಬರುತ್ತದೆ. ಬೇರೊಂದು ಅರ್ಥ ಮಾಡಿದಾಗ ವಿರೋಧ ಪರಿಹಾರವಾಗುತ್ತದೆ). ಗತಸಂಖ್ಯಾತ್ = ಲೆಕ್ಕವಿಲ್ಲದಷ್ಟು ಮಂದಿ, ಸಪ್ತತಯಾ ವಿರಾಜಿತಾಃ ಏಳು ಮಂದಿ ಎಂದಾಗ ವಿರೋಧ, ಸಪ್ತತಾ ಎಂದರೆ ಜಟಾಧರಿತ್ವ ಎಂದು ಅರ್ಥ ಮಾಡಿದಾಗ ವಿರೋಧ ಪರಿಹಾರ. ಇಲ್ಲಿ ವಿರೋಧಾಭಾಸ ಎಂಬ ಅಲಂಕಾರವಿದೆ.

**ಸಮಾಸವಿಗ್ರಹ—**

**ಸಪ್ತತಯಾ—** ಸಪ್ತಾನಾಂ ಭಾವಃ ಸಪ್ತತಾ, ತಯಾ ಸಪ್ತತಯಾ । (ಪ್ತಾ – ಜಟೆ) ಸಪ್ತಯಾ ಸಹ ವರ್ತಂತ ಇತಿ ಸಪ್ತಾಃ, ಸಪ್ತಾನಾಂ ಭಾವಃ ಸಪ್ತತಾ, ತಯಾ ಸಪ್ತತಯಾ ।

**ಗತಸಂಖ್ಯಾನ್—** ಗತಾ ಸಂಖ್ಯಾ ಯೇಭ್ಯಃ ತೇ ಗತಸಂಖ್ಯಾಃ ತಾನ್ ಗತಸಂಖ್ಯಾನ್ । (ಗುಣಃ)

**ಗುಣೋಜ್ಝಿತಾನ್—** ಗುಣಾಃ ಏಷಾಂ ಸಂತೀತಿ ಗುಣಿನಃ, ಗುಣ್ಯೈಃ ಉಜ್ಝಿತಾಃ ಗುಣೋಜ್ಝಿತಾಃ, ತಾನ್ ಗುಣೋಜ್ಝಿತಾನ್ ।

**ಮನ್ಯುಮದಾದಿವರ್ಜಿತಾನ್—** ಮನ್ಯುಶ್ಚ ಮದಶ್ಚ ಮನ್ಯುಮದೌ, ತೌ ಆದೀ ಯೇಷಾಂ ತೇ ಮನ್ಯುಮದಾದಯಃ, ಮನ್ಯುಮದಾದಿಭಿಃ ವರ್ಜಿತಾಃ ಮನ್ಯುಮದಾದಿವರ್ಜಿತಾಃ, ತಾನ್ ಮನ್ಯುಮದಾದಿವರ್ಜಿತಾನ್ ।

**ಗತಭೋಗಾಃ—** ಗತಃ ಭೋಗಃ ಯೇಭ್ಯಃ ತೇ, ಗತಭೋಗಾಃ, ತಾನ್ ಗತಭೋಗಾನ್ ।

**ಪವನಾಶನಾನ್—** ಪವನಃ ಅಶನಂ ಯೇಷಾಂ ತೇ ಪವನಾಶನಾಃ, ತಾನ್ ಪವನಾಶನಾನ್ ।

★ ★ ★

**ಮುನಿಮಂಡಲಮಧ್ಯವರ್ತಿನಂ ತ್ರಿಜಗನ್ಮಂಡಲಮಂಡನಾಯಿತಂ ।**
**ಇಹ ಸತ್ಯವತೀಸುತಂ ಹರಿಂ ಪರಿಪೂರ್ಣಪ್ರಮತಿಃ ಸಮೈಕ್ಷತ ॥ 16 ॥**

**ಪದಚ್ಛೇದ—** ಮುನಿಮಂಡಲಮಧ್ಯವರ್ತಿನಂ, ತ್ರಿಜಗನ್ಮಂಡಲಮಂಡನಾಯಿತಂ, ಇಹ, ಸತ್ಯವತೀಸುತಂ, ಹರಿಂ, ಪರಿಪೂರ್ಣಪ್ರಮತಿಃ, ಸಮೈಕ್ಷತ ।

**ಅನ್ವಯ—** ಪರಿಪೂರ್ಣಪ್ರಮತಿಃ ಇಹ ಮುನಿಮಂಡಲಮಧ್ಯವರ್ತಿನಂ, ತ್ರಿಜಗನ್ಮಂಡಲಮಂಡನಾಯಿತಂ, ಸತ್ಯವತೀಸುತಂ, ಹರಿಂ, ಸಮೈಕ್ಷತ ।

**ಅನ್ವಯಾರ್ಥ—**

**ಪರಿಪೂರ್ಣಪ್ರಮತಿಃ** = ಶ್ರೀಪೂರ್ಣಪ್ರಜ್ಞಾಚಾರ್ಯರು
**ಇಹ** = ಈ ಜಗಲಿಯಲ್ಲಿ
**ಮುನಿ ಮಂಡಲ** = ಋಷಿಗಳ ಸಮುದಾಯದ
**ಮಧ್ಯವರ್ತಿನಂ** = ಮಧ್ಯದಲ್ಲಿರುವ
**ತ್ರಿಜಗನ್ಮಂಡಲ ಮಂಡನಾಯಿತಂ** = ಮೂರು ಲೋಕಪ್ರದೇಶಗಳಿಗೆ ಅಲಂಕಾರದಂತಿರುವ
**ಸತ್ಯವತೀಸುತಂ** = ಸತ್ಯವತೀದೇವಿಯ ಪುತ್ರರಾದ
**ಹರಿಂ** = ಶ್ರೀವೇದವ್ಯಾಸರನ್ನು
**ಸಮೈಕ್ಷತ** = ನೋಡಿದರು.

**ತಾತ್ಪರ್ಯ—** ಆ ಬದರೀ ವೃಕ್ಷದ ಕೆಳಗಿರುವ ವಿಶಾಲವಾದ ಜಗಲಿಯಲ್ಲಿ ಮುನಿಗಳೆಲ್ಲರೂ ಮಂಡಲಾಕಾರದಿಂದ ಮಂಡಿಸಿದ್ದರು. ಅವರ ಮಧ್ಯದಲ್ಲಿ ಮೂರು ಲೋಕಗಳಿಗೂ ಅಲಂಕಾರದಂತಿರುವ ಸತ್ಯವತೀ ದೇವಿಯ ಮಗನಾದ ಶ್ರೀವೇದವ್ಯಾಸರು ಕುಳಿತಿದ್ದರು. ಅಂತಹ ಶ್ರೀವೇದವ್ಯಾಸದೇವರನ್ನು ಶ್ರೀಪೂರ್ಣಪ್ರಜ್ಞರು ಕಂಡರು.

**ವಿಗ್ರಹ—**

**ಮುನಿಮಂಡಲಮಧ್ಯವರ್ತಿನಂ—** ಮುನೀನಾಂ ಮಂಡಲಂ ಮುನಿಮಂಡಲಂ, ಮುನಿಮಂಡಲಸ್ಯ ಮಧ್ಯಂ ಮುನಿಮಂಡಲಮಧ್ಯಂ, ಮುನಿಮಂಡಲಮಧ್ಯೇ ವರ್ತಿತುಂ ಶೀಲಂ ಅಸ್ಯೇತಿ ಮುನಿಮಂಡಲ-ಮಧ್ಯವರ್ತೀ, ತಂ ಮುನಿಮಂಡಲಮಧ್ಯವರ್ತಿನಂ ।

**ತ್ರಿಜಗನ್ಮಂಡಲಮಂಡನಾಯಿತಃ—** ತ್ರೀಣಿ ಚ ತಾನಿ ಜಗಂತಿ ಚ, ತ್ರಿಜಗಂತಿ, ತ್ರಿಜಗತಾಂ ಮಂಡಲಂ ತ್ರಿಜಗನ್ಮಂಡಲಂ, ಮಂಡನವತ್ ಆಚರಿತವಾನ್ ಮಂಡನಾಯಿತಃ, ತ್ರಿಜಗನ್ಮಂಡಲಸ್ಯ ಮಂಡನಾಯಿತಃ ತ್ರಿಜಗನ್ಮಂಡನಾಯಿತಃ, ತಂ ತ್ರಿಜಗನ್ಮಂಡನಾಯಿತಂ ।

**ಸತ್ಯವತೀಸುತಂ—** ಸತ್ಯವತ್ಯಾಃ ಸುತಃ ಸತ್ಯವತೀಸುತಃ, ತಂ ।

**ಪರಿಪೂರ್ಣಪ್ರಮತಿಃ—** ಪರಿಪೂರ್ಣಾಪ್ರಮತಿಃ, ಯಸ್ಯ ಸಃ ಪರಿಪೂರ್ಣಪ್ರಮತಿಃ ।

**ಕ್ರಿಯಾಪದ—** ಸಂ ಐಕ್ಷತ ಐದನೇ ಸರ್ಗದ 55ನೇ ಶ್ಲೋಕವನ್ನು ನೋಡಿರಿ. ।

★ ★ ★

**ನಿಜಹೃತ್ಕಮಲೇಽತಿನಿರ್ಮಲೇ ಸತತಂ ಸಾಧು ನಿಶಾಮಯನ್ನಪಿ ।**
**ಅವಲೋಕ್ಯ ಪುನಃ ಪುನರ್ನವಂ ತಮಸೌ ವಿಸ್ಮಿತ ಇತ್ಯಚಿಂತಯತ್ ॥ 17 ॥**

**ಪದಚ್ಛೇದ—** ನಿಜಹೃತ್ಕಮಲೇ, ಅತಿನಿರ್ಮಲೇ, ಸತತಂ, ಸಾಧು, ನಿಶಾಮಯನ್, ಅಪಿ, ಅವಲೋಕ್ಯ, ಪುನಃ ಪುನಃ, ನವಂ, ತಮ್, ಅಸೌ, ವಿಸ್ಮಿತಃ, ಇತಿ, ಅಚಿಂತಯತ್ ।

**ಅನ್ವಯ—** ಅಸೌ ಅತಿನಿರ್ಮಲೇ ನಿಜಹೃತ್ಕಮಲೇ ಸತತಂ ಸಾಧು ನಿಶಾಮಯನ್ ಅಪಿ ತಂ ಪುನಃ ಪುನಃ ನವಂ ಅವಲೋಕ್ಯ ವಿಸ್ಮಿತಃ ಇತಿ ಅಚಿಂತಯತ್ ।

**ಅನ್ವಯಾರ್ಥ—**

**ಅಸೌ** = ಈ ಮಧ್ವಾಚಾರ್ಯರು

**ಅತಿನಿರ್ಮಲೇ** = ಅತ್ಯಂತ ಶುದ್ಧವಾದ

**ನಿಜ** = ತಮ್ಮ

**ಹೃತ್ಕಮಲೇ** = ಹೃದಯಕಮಲದಲ್ಲಿ

**ಸತತಂ** = ಯಾವಾಗಲೂ

**ಸಾಧು** = ಚೆನ್ನಾಗಿ

**ನಿಶಾಮಯನ್ ಅಪಿ** = ಪರಮಾತ್ಮನನ್ನು ನೋಡುತ್ತಿದ್ದರೂ ಸಹ

**ತಂ** = ಆ ವೇದವ್ಯಾಸರನ್ನು

**ಪುನಃ ಪುನಃ ನವಂ** = ಮತ್ತೆ ಮತ್ತೆ ಹೊಸದಾದವರನ್ನಾಗಿ

**ಅವಲೋಕ್ಯ** = ನೋಡಿ

**ವಿಸ್ಮಿತಃ** = ಆಶ್ಚರ್ಯಪಟ್ಟವರಾಗಿ

**ಇತಿ** = ಈ ರೀತಿ (ಮುಂದೆ ತಿಳಿಸುವ ರೀತಿಯಲ್ಲಿ)

**ಅಚಿಂತಯತ್** = ಆಲೋಚಿಸಿದರು.

**ತಾತ್ಪರ್ಯ—** ಕಾಮಕ್ರೋಧಾದಿ ದೂಷದೂರರಾದ ಶ್ರೀಪೂರ್ಣಪ್ರಜ್ಞರು ತಮ್ಮ ಅತ್ಯಂತ ನಿರ್ಮಲವಾದ ಹೃದಯಕಮಲದಲ್ಲಿ ಯಾವಾಗಲೂ ಶ್ರೀವೇದವ್ಯಾಸರನ್ನು ನೋಡುತ್ತಲೇ ಇರುತ್ತಾರೆ. ಆದರೂ ಈಗ ಬದರಿಕಾಶ್ರಮದಲ್ಲಿ ವಾಸವಾಗಿರುವ ಶ್ರೀವೇದವ್ಯಾಸರು ಆಚಾರ್ಯರಿಗೆ ಪ್ರತಿಕ್ಷಣದಲ್ಲಿಯೂ ಹೊಸ ಹೊಸದಾಗಿಯೇ ಕಂಡರು. ಆದ್ದರಿಂದ ಅವರು ಆಶ್ಚರ್ಯಪಟ್ಟು ಈ ರೀತಿಯಾಗಿ (ಮುಂದೆ ವರ್ಣಿಸುವ ರೀತಿಯಲ್ಲಿ) ಆಲೋಚಿಸಿದರು.

**ವಿಗ್ರಹ—**

ನಿಜಹೃತ್ಕಮಲೇ— ಹೃದೇವ ಕಮಲಂ ಹೃತ್ಕಮಲಂ, ನಿಜಂ ಚ ತತ್ ಹೃತ್ಕಮಲಂ ಚ ನಿಜಹೃತ್ಕಮಲಂ, ತಸ್ಮಿನ್ ನಿಜಹೃತ್ಕಮಲೇ, ನಿರ್ಗತಂ ಮಲಂ ಯಸ್ಮಾತ್ ತತ್ ನಿರ್ಮಲಂ ಅತ್ಯಂತಂ ನಿರ್ಮಲಂ ಅತಿನಿರ್ಮಲಂ, ತಸ್ಮಿನ್ ಅತಿನಿರ್ಮಲೇ, ನಿಜಹೃತ್ಕಮಲೇ ಚ ಅತಿನಿರ್ಮಲೇ ।

**ಕ್ರಿಯಾಪದ— ಅಚಿಂತಯತ್**- ಕ್ರಿಯಾಪದ – ಅಚಿಂತಯತ್ 2ನೇ ಸರ್ಗದ 4ನೆಯ ಶ್ಲೋಕವನ್ನು ನೋಡಿರಿ.

★ ★ ★

**ಅಗಣಯ್ಯ (ಣೇಯ) ಗುಣಾರ್ಣವೋಽಮಲಃ ಸ ಹಿ ನಾರಾಯಣ ಏಷ ಕೇವಲಂ ।**
**ವಿಧಿನಾಽನುಸೃತಂ ಪರಾಶರಾತ್ ಸುಷುವೇ ಸತ್ಯವತೀ ಕಿಲಾತ್ರ ಯಮ್ ॥ 18 ॥**

**ಪದಚ್ಛೇದ—** ಅಗಣಯ್ಯ(ಣೇಯ), ಗುಣಾರ್ಣವಃ, ಅಮಲಃ, ಸಃ, ಹಿ, ನಾರಾಯಣಃ, ಏಷಃ, ಕೇವಲಂ, ವಿಧಿನಾ, ಅನುಸೃತಂ, ಪರಾಶರಾತ್, ಸುಷವೇ, ಸತ್ಯವತೀ, ಕಿಲ, ಅತ್ರ, ಯಂ ।

**ಅನ್ವಯ—** ಸತ್ಯವತೀ, ವಿಧಿನಾ, ಅನುಸೃತಂ, ಯಂ, ಅತ್ರ, ಪರಾಶರಾತ್, ಸುಷುವೇ, ಕಿಲ, ಸಃ, ಏಷಃ, ಅಗಣಯ್ಯ (ಣೇಯ), ಗುಣಾರ್ಣವಃ, ಅಮಲಃ, ಕೇವಲಂ, ನಾರಾಯಣಃ ಹಿ ।

**ಅನ್ವಯಾರ್ಥ—**

**ಸತ್ಯವತೀ** = ದಾಶರಾಜನ ಮಗಳಾದ ಸತ್ಯವತಿಯು

**ವಿಧಿನಾ** = ಚತುರ್ಮುಖ ಬ್ರಹ್ಮನಿಂದ

**ಅನುಸೃತಂ** = ಪ್ರಾರ್ಥಿಸಲ್ಪಟ್ಟ

**ಯಂ** = ಯಾವ ವೇದವ್ಯಾಸರನ್ನು

**ಅತ್ರ** = ಭರತ ಖಂಡದ ಭೂಮಿಯಲ್ಲಿ

**ಪರಾಶರಾತ್** = ಪರಾಶರ ಮುನಿಯಿಂದ

**ಸುಷುವೇ ಕಿಲ** = ಪ್ರಸವಿಸಿದಳಷ್ಟೆ,

**ಸಃ ಏಷಃ** = ಅಂತಹ ಈ ಸತ್ಯವತೀ ಪುತ್ರರಾದ ವ್ಯಾಸರು,

**ಅಗಣಯ್ಯ(ಅಗಣೇಯ)** = ಎಣಿಸಲು ಸಾಧ್ಯವಾಗದ

**ಗುಣಾರ್ಣವಃ** = ಗುಣಗಳಿಗೆ ಸಮುದ್ರದಂತಿರುವ

**ಅಮಲಃ** = ದೋಷವಿಲ್ಲದ

**ಕೇವಲಂ** = ಸಾಕ್ಷಾತ್

**ನಾರಾಯಣಃ ಹಿ** = ನಾರಾಯಣನೇ (ಆಗಿದ್ದಾರೆ)

(**ಹಿ** = ಪ್ರಸಿದ್ಧಿಯು)

**ತಾತ್ಪರ್ಯ—** ಚತುರ್ಮುಖ ಬ್ರಹ್ಮಾದಿ ದೇವತೆಗಳ ಪ್ರಾರ್ಥನಾನುಸಾರವಾಗಿ, ಈ ನಮ್ಮ ಭರತ ಖಂಡದಲ್ಲಿ ಶ್ರೀ ಪರಾಶರ ಮುನಿಗಳಿಂದ, ಸತ್ಯವತೀ ದೇವಿಯನ್ನು ನಿಮಿತ್ತ ಮಾಡಿಕೊಂಡು ಅವತರಿಸಿದ (ಪ್ರಾದುರ್ಭವಿಸಿದ), ಈ ಶ್ರೀ ವೇದವ್ಯಾಸರು ಸಕಲಗುಣಪರಿಪೂರ್ಣ, ಸಮಸ್ತದೋಷದೂರನಾದ ಶ್ರೀಮನ್ನಾರಾಯಣನೇ ಆಗಿದ್ದಾರೆ. ನಾರಾಯಣ-ನಿಗೂ ಇವರಿಗೂ ಸ್ವಲ್ಪವೂ ಭೇದವಿಲ್ಲ. ಶ್ರೀಮನ್ನಾರಾಯಣನಿಗೆ ಜನ್ಮವಿಲ್ಲ. ಪರಾಶರ ಸತ್ಯವತಿಯರ ಮಗನೆಂಬುದು ಕೇವಲ ತೋರಿಕೆ ಮಾತ್ರ. ಅವರು ಲೋಕದಲ್ಲಿ ಪ್ರಾದುರ್ಭವಿಸಿ ವೇದವ್ಯಾಸ ಎಂಬ ಹೆಸರಿನಿಂದ ಓಡಾಡುತ್ತಿದ್ದಾರೆ.

**ವಿಗ್ರಹ—**

**ಅಗಣಯ್ಯಗುಣಾರ್ಣವಃ—** ಗಣಯಿತುಂ ಅಶಕ್ಯಾಃ ಅಗಣಯ್ಯಾಃ (ಅಗಣೇಯಾಃ), ಅಗಣಯ್ಯಾಶ್ಚ ತೇ ಗುಣಾಶ್ಚ ಅಗಣಯ್ಯಗುಣಾಃ, ಅಗಣಯ್ಯಗುಣಾನಾಂ ಅರ್ಣವಃ ಅಗಣಯ್ಯಗುಣಾರ್ಣವಃ । (ಅಗಣಯ್ಯಗುಣೈರರ್ಣವ ಇವಾರ್ಣವ ಇತಿ ವಾ ವಿಗ್ರಹಃ)

**ಅಮಲಃ—** ನ ವಿದ್ಯತೇ ಮಲಂ ಯಸ್ಯ ಸಃ ಅಮಲಃ ।

**ಕ್ರಿಯಾಪದ— ಸುಷುವೇ-** ಷೂಙ್ ಪ್ರಾಣಿಗರ್ಭ ವಿಮೋಚನೇ ಇತ್ಯಸ್ಮಾದ್ ಧಾತೋಃ ಆತ್ಮನೇ ಪದಿನಃ ಭೂತಾನ-ದ್ಯತನಪರೋಕ್ಷೇ ಲಿಟಿ ಪ್ರಥಮಪುರುಷೇ ಏಕವಚನೇ "ಸುಷುವೇ" ಇತಿ ರೂಪಮ್ ।

ಸುಷುವೇ ಸುಷುವಾತೇ ಸುಷುವಿರೇ, ಸುಷುವಿಷೇ ಸುಷುವಾಥೇ ಸುಷವಿಧ್ವೇ, ಸುಷುವೇ ಸುಷುವಿವಹೇ ಸುಷುವಿಮಹೇ ॥

★ ★ ★

**ಧವಲೇಽಸ್ಯ ಮನಃ ಪಯೋನಿಧೌ ಸದನುಕ್ರೋಶಗಿರೀಂದ್ರಲೋಲಿತೇ ।**
**ಪ್ರಕಟೀಭವತಿ ಸ್ಮ ಸುಂದರೀ ದಯಿತಾ ದೈತ್ಯರಿಪೋಸ್ತ್ರಯೀಮಯೀ ॥ 19 ॥**

**ಪದಚ್ಛೇದ—** ಧವಲೇ, ಅಸ್ಯ, ಮನಃ ಪಯೋನಿಧೌ, ಸದನುಕ್ರೋಶಗಿರೀಂದ್ರಲೋಲಿತೇ, ಪ್ರಕಟೀಭವತಿ, ಸ್ಮ, ಸುಂದರೀ, ದಯಿತಾ, ದೈತ್ಯರಿಪೋಃ, ತ್ರಯೀಮಯೀ ।

**ಅನ್ವಯ—** ಧವಲೇ, ಅಸ್ಯ, ಮನಃಪಯೋನಿಧೌ, ಸದನುಕ್ರೋಶಗಿರೀಂದ್ರಲೋಲಿತೇ, ದೈತ್ಯರಿಪೋಃ, ದಯಿತಾ, ತ್ರಯೀಮಯೀ, ಸುಂದರೀ, ಪ್ರಕಟೀಭವತಿಸ್ಮ ।

**ಅನ್ವಯಾರ್ಥ—**

**ಧವಲೇ** = ಪರಿಶುದ್ಧವಾದ (ಬೆಳ್ಳಗಿರುವ)

**ಅಸ್ಯ** = ಈ ವೇದವ್ಯಾಸರ

**ಮನಃ ಪಯೋನಿಧೌ** = ಮನಸ್ಸೆಂಬ ಕ್ಷೀರ ಸಮುದ್ರವು,

**ಸತ್‌ಅನುಕ್ರೋಶ ಗಿರೀಂದ್ರಲೋಲಿತೇ** = ಸಜ್ಜನರಲ್ಲಿರುವ ದಯೆಯೆಂಬ ಮಂದರಪರ್ವತದಿಂದ ಕಡೆ-ಯಲ್ಪಟ್ಟಾಗ,

**ದೈತ್ಯರಿಪೋಃ** = ಕಲ್ಯಾದಿ ದೈತ್ಯರಿಗೆ ಶತ್ರುವಾದ ವೇದವ್ಯಾಸರಿಗೆ

**ದಯಿತಾ** = ಪ್ರಿಯಳಾದ

**ತ್ರಯೀಮಯೀ** = ಋಗ್ಯಜುಸ್ಸಾಮರೂಪಳಾದ
**ಸುಂದರೀ** = ಸುಂದರ ಸ್ತ್ರೀರೂಪಳಾದ (ಹೆಂಗಸು) ಲಕ್ಷ್ಮಿಯು
**ಪ್ರಕಟೀಭವತಿಸ್ಮ** = ಪ್ರಾದುರ್ಭವಿಸಿದಳು (ಕಾಣಿಸಿಕೊಂಡಳು).

**ತಾತ್ಪರ್ಯ**— ಶ್ರೀವೇದವ್ಯಾಸರು ಸಜ್ಜನರ ಮೇಲಿನ ದಯೆಯಿಂದ, ಅವರ ದುಃಖವನ್ನು ಪರಿಹರಿಸಲು ಇಚ್ಛಿಸಿ, ತಮಗೆ ಅತ್ಯಂತ ಪ್ರಿಯವಾದ ವೇದಗಳನ್ನು ವಿಭಾಗಿಸಿ ಸಜ್ಜನರಿಗೆ ಉಪದೇಶ ಮಾಡಿದರು. ದೇವತೆಗಳೂ ದಾನವರೂ ಸೇರಿ ಮಂದರಪರ್ವತದಿಂದ ಕ್ಷೀರ ಸಮುದ್ರವನ್ನು ಕಡೆದಾಗ ಲಕ್ಷ್ಮೀದೇವಿಯು ಆವಿರ್ಭವಿಸಿದಂತೆ ವೇದವ್ಯಾಸರ ಮನಸ್ಸೆಂಬ ಕ್ಷೀರಸಮುದ್ರವು ಸಜ್ಜನರ ಮೇಲಿನ ದಯೆಯೆಂಬ ಮಂದರದಿಂದ ಕಡೆಯಲ್ಪಟ್ಟಾಗ ವೇದತ್ರಯಿಯು ಲಕ್ಷ್ಮಿಯಂತೆ ಅವಿರ್ಭಾವ ಹೊಂದಿತು.

**ವಿಗ್ರಹ**—

**ಮನಃಪಯೋನಿಧೌ**— ಮನ ಏವ ಪಯೋನಿಧಿಃ ಮನಃಪಯೋನಿಧಿಃ, ತಸ್ಮಿನ್ ಮನಃಪಯೋನಿಧೌ ।
**ಸದನುಕ್ರೋಶಗಿರೀಂದ್ರಲೋಲಿತೇ**— ಸತ್ಸು ಅನುಕ್ರೋಶಃ ಸದನುಕ್ರೋಶಃ, ಸದನುಕ್ರೋಶ ಏವ ಗಿರೀಂದ್ರಃ ಸದನುಕ್ರೋಶಗಿರೀಂದ್ರಃ, ಸದನುಕ್ರೋಶಗಿರೀಂದ್ರೇಣ ಲೋಲಿತಃ ಸದನುಕ್ರೋಶಗಿರೀಂದ್ರಲೋಲಿತಃ, ತಸ್ಮಿನ್ ಸದನುಕ್ರೋಶಗಿರೀಂದ್ರಲೋಲಿತೇ ।
**ಪ್ರಕಟೀಭವತಿಸ್ಮ**— ಅಪ್ರಕಟಾ ಪ್ರಕಟಾ ಸಂಪದ್ಯಮಾನಾ ಭವತಿ ಸ್ಮ ಪ್ರಕಟೀಭವತಿಸ್ಮ ।
**ದೈತ್ಯರಿಪೋಃ**— ದೈತ್ಯಾನಾಂ ರಿಪುಃ ದೈತ್ಯರಿಪುಃ, ತಸ್ಯ ದೈತ್ಯರಿಪೋಃ ।
**ತ್ರಯಿಮಯಾ**— ತ್ರಯ್ಯೇವ ತ್ರಯೀಮಯಾ ।

★ ★ ★

**ಇತ ಏವ ಪುರಾಣಗೌರಗೌ ಸಮಹಾಭಾರತಪಾರಿಜಾತಕೇ ।**
**ಸತಿ ಜಾತವತಿ ವ್ಯಜಾಯತ ಪ್ರವರಂ ಸೂತ್ರಗಣಾಮೃತಂ ಸ್ವಯಂ ॥ 20 ॥**

**ಪದಚ್ಛೇದ**— ಇತ, ಏವ, ಪುರಾಣಗೌರಗೌ, ಸಮಹಾಭಾರತಪಾರಿಜಾತಕೇ, ಸತಿ, ಜಾತವತಿ, ವ್ಯಜಾಯತ, ಪ್ರವರಂ, ಸೂತ್ರಗಣಾಮೃತಂ, ಸ್ವಯಂ ।

**ಅನ್ವಯ**— ಇತಃ, ಏವ, ಸಮಹಾಭಾರತಪಾರಿಜಾತಕೇ, ಪುರಾಣಗೌರಗೌ, ಜಾತವತಿ, ಸತಿ, ಪ್ರವರಂ, ಸ್ವಯಂ, ಸೂತ್ರಗಣಾಮೃತಂ, ವ್ಯಜಾಯತ ।

**ಅನ್ವಯಾರ್ಥ**—

**ಇತ ಏವ** = ಈ ವೇದವ್ಯಾಸರಿಂದಲೇ
**ಸಮಹಾಭಾರತಪಾರಿಜಾತಕೇ** = ಮಹಾಭಾರತವೆಂಬ ಪಾರಿಜಾತ ವೃಕ್ಷದಿಂದ ಸಹಿತವಾದ
**ಪುರಾಣಗೌರಗೌ** = ಹದಿನೆಂಟು ಪುರಾಣಗಳೆಂಬ ಚಂದ್ರನು
**ಜಾತವತಿ ಸತಿ** = ಹುಟ್ಟಲಾಗಿ,
**ಪ್ರವರಂ** = ಉತ್ತಮವಾದ (ನಿರ್ಣಾಯಕ ಶಾಸ್ತ್ರೋತ್ತಮವಾದ)
**ಸ್ವಯಂ** = ಸಾಕ್ಷಾತ್ತಾದ
**ಸೂತ್ರಗಣಾಮೃತಂ** = ಬ್ರಹ್ಮಸೂತ್ರಗಳ ಸಮೂಹವೆಂಬ ಅಮೃತವು
**ವ್ಯಜಾಯತ** = ಹುಟ್ಟಿತು.

**ತಾತ್ಪರ್ಯ—** ಕ್ಷೀರಸಮುದ್ರದಿಂದ ಪಾರಿಜಾತ ವೃಕ್ಷ ಮತ್ತು ಚಂದ್ರನು ಹುಟ್ಟಿದ ನಂತರ ಅಮೃತವು ಹುಟ್ಟಿದಂತೆ, ಈ ವೇದವ್ಯಾಸರ ಮನಸ್ಸೆಂಬ ಕ್ಷೀರಸಮುದ್ರದಿಂದ ಮಹಾಭಾರತವೆಂಬ ಪಾರಿಜಾತ ವೃಕ್ಷವೂ, ಅಷ್ಟಾದಶ ಪುರಾಣಗಳೆಂಬ ಚಂದ್ರನೂ, ಬ್ರಹ್ಮಸೂತ್ರ ಸಮೂಹವೆಂಬ ಅಮೃತವೂ ಹುಟ್ಟಿದವು. ಶ್ರೀವೇದವ್ಯಾಸರು ಮಹಾಭಾರತ, ಅಷ್ಟಾದಶ-ಪುರಾಣಗಳು ಮತ್ತು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚಿಸಿದರು. ಅಶೇಷ ಪುರುಷಾರ್ಥ ಪ್ರದತ್ವೇನ ಭಾರತ, ಪಾರಿಜಾತ-ಗಳಿಗೆ ಸಾಮ್ಯವನ್ನೂ, ಪದಾರ್ಥ ಪ್ರಕಾಶಕತ್ವೇನ ಪುರಾಣಗಳಿಗೂ ಚಂದ್ರನಿಗೂ ಸಾಮ್ಯವನ್ನೂ, ಜರಾಮರಣನಾಶಕತ್ವೇನ ಬ್ರಹ್ಮಸೂತ್ರಗಳಿಗೂ ಅಮೃತಕ್ಕೂ ಹೋಲಿಕೆಯನ್ನು ತಿಳಿಯಬೇಕು.

**ವಿಗ್ರಹ—**

**ಪುರಾಣಗೌರಗೌ—** ಗೌರಾಃ ಗಾವಃ ಯಸ್ಯ ಸಃ ಗೌರಗುಃ, ಪುರಾಣಾನ್ಯೇವ ಗೌರಗುಃ ಪುರಾಣಗೌರಗುಃ, ತಸ್ಮಿನ್ ಪುರಾಣಗೌರಗೌ ।

**ಸಮಹಾಭಾರತಪಾರಿಜಾತಕೇ—** ಮಹಾಭಾರತಮೇವ ಪಾರಿಜಾತಃ ಮಹಾಭಾರತಪಾರಿಜಾತಃ, ಮಹಾ-ಭಾರತಪಾರಿಜಾತೇನ ಸಹ ವರ್ತತೇ ಇತಿ ಸಮಹಾಭಾರತಪಾರಿಜಾತಕಃ, ತಸ್ಮಿನ್ ಸಮಹಾಭಾರತ-ಪಾರಿಜಾತಕೇ ।

**ಸೂತ್ರಗಣಾಮೃತಂ—** ಸೂತ್ರಗಣ ಏವ ಅಮೃತಂ ಸೂತ್ರಗಣಾಮೃತಂ ।

**ಕ್ರಿಯಾಪದ—** ವ್ಯಜಾಯತ- ವಿ ಇತ್ಯುಪಸರ್ಗಪೂರ್ವಕಾತ್ ಜನೀಪ್ರಾದುರ್ಭಾವೇ ಇತ್ಯಸ್ಮಾದ್ಧಾತೋಃ ಆತ್ಮನೇ-ಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ವ್ಯಜಾಯತ ಇತಿ ರೂಪಮ್ ।

ವಿ-ಅಜಾಯತ ಅಜಾಯೇತಾಂ ಅಜಾಯಂತ, ಅಜಾಯಥಾಃ ಅಜಾಯೇಥಾಂ ಅಜಾಯಧ್ವಂ,
ಅಜಾಯೇ ಅಜಾಯಾವಹಿ ಅಜಾಯಾಮಹಿ ॥

★ ★ ★

**ನಿರವಗ್ರಹಮುರ್ವನುಗ್ರಹಂ ವಿದಧತ್ ಪಾಂಡುಸುತಾದಿಸಜ್ಜನೇ ।**
**ಅವನಾಯವನಾಯ ಸಂವಿದಾಂ ಸುಚಿರಾಯೈಷ ಚಚಾರ ಚಾರುಗೀಃ ॥ 21 ॥**

**ಪದಚ್ಛೇದ—** ನಿರವಗ್ರಹಂ, ಉರ್ವನುಗ್ರಹಂ, ವಿದಧತ್, ಪಾಂಡುಸುತಾದಿಸಜ್ಜನೇ, ಅವನೌ, ಅವನಾಯ, ಸಂವಿದಾಂ, ಸುಚಿರಾಯ, ಏಷಃ, ಚಚಾರ, ಚಾರುಗೀಃ ।

**ಅನ್ವಯ—** ಚಾರುಗೀಃ, ಏಷಃ, ಪಾಂಡುಸುತಾದಿಸಜ್ಜನೇ, ನಿರವಗ್ರಹಂ, ಊರ್ವನುಗ್ರಹಂ, ವಿದಧತ್, ಸಂವಿದಾಂ, ಅವನಾಯ, ಅವನೌ, ಸುಚಿರಾಯ, ಚಚಾರ ।

**ಅನ್ವಯಾರ್ಥ—**

**ಚಾರು** = ಮನೋಹರವಾದ
**ಗೀಃ** = ಮಾತುಳ್ಳ
**ಏಷಃ** = ಈ ವೇದವ್ಯಾಸರು,
**ಪಾಂಡುಸುತಾದಿ ಸಜ್ಜನೇ** = ಪಾಂಡವರೇ ಮೊದಲಾಗಿ ಉಳ್ಳ ಸಾಧುಜನರಲ್ಲಿ
**ನಿರವಗ್ರಹಂ** = ತಡೆಯಿಲ್ಲದ (ಪೂರ್ಣವಾದ)
**ಉರು** = ಹೆಚ್ಚಾದ
**ಅನುಗ್ರಹಂ** = ಪ್ರಸಾದವನ್ನು

**ವಿದಧತ್** = ಮಾಡುತ್ತಾ

**ಸಂವಿದಾಂ** = ತತ್ತ್ವಜ್ಞಾನಗಳ (ತತ್ತ್ವಜ್ಞಾನಿಗಳ) (ತತ್ತ್ವಜ್ಞಾನ ವಿಷಯದ ವಸ್ತುಗಳ)

**ಅವನಾಯ** = ರಕ್ಷಣೆಗೋಸ್ಕರ

**ಅವನೌ** = ಭೂಮಿಯಲ್ಲಿ

**ಸುಚಿರಾಯ** = ಬಹಳ ಕಾಲದವರೆಗೆ

**ಚಚಾರ** = ಸಂಚರಿಸಿದರು.

**ತಾತ್ಪರ್ಯ—** ಈ ವೇದವ್ಯಾಸರು ಮನೋಹರವಾದ ಮಾತುಳ್ಳವರು, ಇವರು ಪಾಂಡವರೇ ಮುಂತಾದ ಸಜ್ಜನರಲ್ಲಿ ಮಹತ್ತಾದ ಅನುಗ್ರಹವನ್ನು ಮಾಡುತ್ತಾ, ತತ್ತ್ವಜ್ಞಾನ, ತತ್ತ್ವಜ್ಞಾನಿಗಳು ಮತ್ತು ತತ್ತ್ವಜ್ಞಾನ ವಿಷಯವಾದ ವಸ್ತುಗಳನ್ನು ಕಾಪಾಡುತ್ತಾ ಬಹಳ ಕಾಲದವರೆಗೆ ಭರತಭೂಮಿಯಲ್ಲಿ ಸಂಚರಿಸಿಕೊಂಡಿದ್ದರು.

**ವಿಗ್ರಹ—**

**ನಿರವಗ್ರಹಂ—** ನಿಷ್ಕ್ರಾಂತಃ ಅವಗ್ರಹಾತ್ ನಿರವಗ್ರಹಃ, ತಂ ನಿರವಗ್ರಹಂ ।

**ಉರ್ವನುಗ್ರಹಂ—** ಉರುಶ್ಚಾಸೌ ಅನುಗ್ರಹಶ್ಚ ಉರ್ವನುಗ್ರಹಃ, ತಂ ಉರ್ವನುಗ್ರಹಂ ।

**ಪಾಂಡುಸುತಾದಿಸಜ್ಜನಃ—** ಪಾಂಡೋಃ ಸುತಾಃ ಪಾಂಡುಸುತಾಃ, ಪಾಂಡುಸುತಾಃ ಆದಯಃ ಯಸ್ಯ ಸಃ ಪಾಂಡುಸುತಾದಿಃ, ಸಂಶ್ಚಾಸೌ ಜನಶ್ಚ ಸಜ್ಜನಃ ಪಾಂಡುಸುತಾದಿಶ್ಚಾಸೌ ಸಜ್ಜನಶ್ಚ ಪಾಂಡುಸುತಾದಿಸಜ್ಜನಃ, ತಸ್ಮಿನ್ ಪಾಂಡವಸುತಾದಿಸಜ್ಜನೇ ।

**ಚಾರುಗೀಃ—** ಚಾರು ಗೀಃ ಯಸ್ಯ ಸಃ ಚಾರುಗೀಃ । ಚಾರ್ವ್ಯಃ ಗಿರಃ ಯಸ್ಯ ಸಃ ಚಾರುಗೀಃ ।

**ಕ್ರಿಯಾಪದ— ಚಚಾರ-** ಚರಗತಿಭಕ್ಷಣಯೋರಿತಿ ಗತಿಭಕ್ಷಣಾರ್ಥಕಾತ್ ಚರಧಾತೋಃ ಪರಸ್ಮೈಪದಿನಃ ಭೂತಾನದ್ಯತನಪರೋಕ್ಷೇ ಲಿಟಿ ಪ್ರಥಮಪುರುಷೇ ಏಕವಚನೇ ''ಚಚಾರ'' ಇತಿ ರೂಪಮ್ ।

ಚಚಾರ ಚೇರತುಃ ಚೇರುಃ, ಚೇರಿಥ ಚೇರಥುಃ ಚೇರ, ಚಚಾರ-ಚಚರ, ಚೇರಿವ, ಚೇರಿಮ ॥

★ ★ ★

**ಅಧುನಾ ಕಲಿಕಾಲವೃತ್ತಯೇ ಸವಿತೇವ ಕ್ಷಣದಾನುವೃತ್ತಯೇ ।**
**ಜನದೃಗ್ವಿಷಯತ್ವಮತ್ಯಜನ್ ಭಗವಾನಾಶ್ರಮಮಾವಸನ್ನಿಮಮ್ ॥ 22 ॥**

**ಪದಚ್ಛೇದ—** ಅಧುನಾ, ಕಲಿಕಾಲವೃತ್ತಯೇ, ಸವಿತಾ, ಇವ, ಕ್ಷಣದಾನುವೃತ್ತಯೇ, ಜನದೃಗ್ವಿಷಯತ್ವಂ, ಅತ್ಯಜತ್, ಭಗವಾನ್, ಆಶ್ರಮಂ, ಆವಸನ್, ಇಮಮ್ ।

**ಅನ್ವಯ—** ಅಧುನಾ, ಇಮಂ, ಆಶ್ರಮಂ, ಆವಸನ್, ಭಗವಾನ್, ಕಲಿಕಾಲವೃತ್ತಯೇ, ಕ್ಷಣದಾನುವೃತ್ತಯೇ, ಸವಿತಾ, ಇವ, ಜನದೃಗ್ವಿಷಯತ್ವಂ, ಅತ್ಯಜತ್ ।

**ಅನ್ವಯಾರ್ಥ—**

**ಅಧುನಾ** = ಈಗ

**ಇಮಂ ಆಶ್ರಮಂ** = ಈ ಬದರಿಕಾಶ್ರಮದಲ್ಲಿ

**ಆವಸನ್** = ವಾಸ ಮಾಡುತ್ತಿರುವ

**ಭಗವಾನ್** = ಪೂರ್ಣಷಡ್ಗುಣೈಶ್ವರ್ಯಸಂಪನ್ನರಾದ ವ್ಯಾಸರು

**ಕಲಿಕಾಲವೃತ್ತಯೇಕ್ಷಣದಾ** = ಕಲಿಯುಗ ಸಮಯದ ಪ್ರವೃತ್ತಿಗೋಸ್ಕರ ರಾತ್ರಿಯ

**ಅನುವೃತ್ತಯೇ** = ನಿರಂತರ ನಡೆಯುವಿಕೆಗಾಗಿ,

**ಸವಿತಾ ಇವ** = ಸೂರ್ಯನಂತೆ (ಸೂರ್ಯನು ಕಣ್ಮರೆಯಾಗುವಂತೆ)

**ಜನ** = ಜನರ

**ದೃಗ್ವಿಷಯತ್ವಂ** = ಕಣ್ಣಿಗೆ ಗೋಚರವಾಗುವಿಕೆಯನ್ನು

**ಅತ್ಯಜತ್** = ಬಿಟ್ಟರು.

**ತಾತ್ಪರ್ಯ—** ದೇವತೆಗಳು, ಋಷಿಗಳು ಭೂಲೋಕದಲ್ಲಿ ಸಂಚರಿಸುತ್ತಿದ್ದರೆ ಇಲ್ಲಿ ಕಲಿಯುಗ ಧರ್ಮಗಳು ನಡೆಯಲಾರವು ಎಂದು ಶಾಸ್ತ್ರವಿದೆ. ಆದುದರಿಂದ ಈಗ ಈ ವೇದವ್ಯಾಸರು ಈ ಬದರಿಕಾಶ್ರಮದಲ್ಲಿ ಸಾಧಾರಣ ಜನರ ಕಣ್ಣಿಗೆ ಗೋಚರರಾಗದೆ ವಾಸಿಸುತ್ತಿದ್ದಾರೆ. ರಾತ್ರಿಯು ಬರುವುದರ ಸಲುವಾಗಿ ಸೂರ್ಯನು ಹೇಗೆ ಜನರ ಕಣ್ಮರೆ-ಯಾಗುತ್ತಾನೋ ಅದರಂತೆ ತಾನು ಭೂಮಿಯಲ್ಲಿದ್ದರೆ ಕಲಿಯುಗವು ಹೋಗಿ ಕೃತಯುಗವೇ ಆದೀತೆಂದು ಯುಗ-ಪ್ರವರ್ತಕರಾದ ಜಗದ್ಗುರು ವೇದವ್ಯಾಸರು ಕಣ್ಮರೆಯಾಗಿ ಇಲ್ಲಿ ವಾಸಿಸುತ್ತಿದ್ದಾರೆ.

**ವಿಗ್ರಹ—**

**ಕಲಿಕಾಲವೃತ್ತಯೇ—** ಕಲೇಃ ಕಾಲಃ ಕಲಿಕಾಲಃ, ಕಾಲಿಕಾಲಸ್ಯ ವೃತ್ತಿಃ ಕಲಿಕಾಲವೃತ್ತಿಃ, ತಸ್ಯೈ ಕಲಿಕಾಲವೃತ್ತಯೇ।

**ಕ್ಷಣದಾನುವೃತ್ತಯೇ—** ಕ್ಷಣದಾಯಾಃ ಅನುವೃತ್ತಿಃ ಕ್ಷಣದಾನುವೃತ್ತಿಃ, ತಸ್ಯೈ ಕ್ಷಣದಾನುವೃತ್ತಯೇ ।

**ಜನದೃಗ್ವಿಷಯತ್ವಂ—** ಜನಾನಾಂ ದೃಶಃ ಜನದೃಶಃ, ವಿಷಯಸ್ಯ ಭಾವಃ ವಿಷಯತ್ವಂ । ಜನದೃಶಾಂ ವಿಷಯತ್ವಂ ಜನದೃಗ್ವಿಷಯತ್ವಂ।

**ಭಗವಾನ್—** ಭಗಃ ಅಸ್ಯ ಅಸ್ತೀತಿ ಭಗವಾನ್ ।

**ಕ್ರಿಯಾಪದ— ಅತ್ಯಜತ್**- ತ್ಯಜಹಾನೌ ಇತಿ ಹಾನ್ಯರ್ಥಕಾತ್ ತ್ಯಜಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಅತ್ಯಜತ್'' ಇತಿ ರೂಪಮ್ ।

ಅತ್ಯಜತ್ ಅತ್ಯಜತಾಂ ಅತ್ಯಜನ್, ಅತ್ಯಜಃ ಅತ್ಯಜತಂ ಅತ್ಯಜತ, ಅತ್ಯಜಂ ಅತ್ಯಜಾವ ಅತ್ಯಜಾಮ ॥

**ವ್ಯಾಕರಣ ವಿಶೇಷ**- ಇಮಂ ಆಶ್ರಮಂ ಆವಸನ್ ಇಲ್ಲಿ 'ಉಪಾನ್ವಧ್ಯಾಙ್‌ವಸಃ' ಎಂಬ ಸೂತ್ರದಿಂದ ಆಧಾರಕ್ಕೆ ಕರ್ಮಸಂಜ್ಞೆಯು ಬಂದು ದ್ವಿತೀಯಾ ವಿಭಕ್ತಿಯು ಬಂದಿದೆ.

★ ★ ★

**ತದಿದಂ ವಪುರಸ್ಯ ದೃಶ್ಯತೇ ದಲಿತೇಂದೀವರಸುಂದರದ್ಯುತಿ ।**
**ಪರಮಾಜಿನಯೋಗಪೀಠಗಂ ಮಮ ಚೇತೋನಯನಾಭಿನಂದನಮ್ ॥ 23 ॥**

**ಪದಚ್ಛೇದ—** ತತ್, ಇದಂ, ವಪುಃ, ಅಸ್ಯ, ದೃಶ್ಯತೇ, ದಲಿತೇಂದೀವರಸುಂದರದ್ಯುತಿ, ಪರಮಾಜಿನಯೋಗ-ಪೀಠಗಂ, ಮಮ, ಚೇತೋನಯನಾಭಿನಂದನಂ ।

**ಅನ್ವಯ—** ದಲಿತೇಂದೀವರಸುಂದರದ್ಯುತಿ, ಪರಮಾಜಿನಯೋಗಪೀಠಗಂ, ಮಮ ಚೇತೋನಯನಾಭಿನಂದನಂ ಅಸ್ಯ, ತತ್, ಇದಂ ವಪುಃ, (ಮಯಾ) ದೃಶ್ಯತೇ ।

**ಅನ್ವಯಾರ್ಥ—**

**ದಲಿತ ಇಂದೀವರ ಸುಂದರ ದ್ಯುತಿ** = ಅರಳಿದ ಕನ್ನೈದಿಲೆ ಹೂವಿನಂತೆ ಮನೋಹರವಾದ ಕಾಂತಿಯುಳ್ಳ

**ಪರಮಾಜಿನ ಯೋಗಪೀಠಗಂ** = ಉತ್ತಮವಾದ ಕೃಷ್ಣಾಜಿನವೆಂಬ ಯೋಗಾಸನದಲ್ಲಿರುವ,

**ಮಮ** = ನನ್ನ

**ಚೇತಃ** = ಮನಸ್ಸು (ಮತ್ತು)

**ನಯನ** = ಕಣ್ಣುಗಳನ್ನು

**ಅಭಿನಂದನಂ** = ಸಂತೋಷಗೊಳಿಸುವ,

**ಅಸ್ಯ** = ಈ ವ್ಯಾಸರ

**ತತ್** = ಆ ಸುಪ್ರಸಿದ್ಧವಾದ ಸಾಧಾರಣ ಜನರ ಕಣ್ಣಿಗೆ ಗೋಚರವಾಗದ

**ಇದಂ** = ಎದುರಿನಲ್ಲಿರುವ

**ವಪುಃ** = ದೇಹವು

**(ಮಯಾ** = ನನ್ನಿಂದ)

**ದೃಶ್ಯತೇ** = ನೋಡಲ್ಪಡುತ್ತದೆ.

**ತಾತ್ಪರ್ಯ**— ಎದುರಿಗೆ ಕಾಣಸುತ್ತಿರುವ ಈ ಅದ್ಭುತ ಮೂರ್ತಿಯು ಅರಳಿದ ಕನ್ನೈದಿಲೆ ಹೂವಿನಂತೆ ಸುಂದರ ಕಾಂತಿಯುಳ್ಳದ್ದಾಗಿದೆ. ನನ್ನ ಮನಸ್ಸಿಗೂ ಕಣ್ಣುಗಳಿಗೂ ತುಂಬಾ ಆನಂದವನ್ನು ಉಂಟು ಮಾಡುತ್ತಿದೆ. ಸಾಧಾರಣ ಜನರ ಕಣ್ಣಿಗೆ ಕಾಣಸದಿದ್ದರೂ ನನ್ನ ಕಣ್ಣಿಗೆ ಕಾಣಸುತ್ತಿರುವ ಈ ಸುಂದರ ಸ್ವರೂಪವು ಕೃಷ್ಣಾಜಿನದ ಧ್ಯಾನಾಸನದಲ್ಲಿ ಮಂಡಿಸಿದೆ. ಇಂತಹ ರೂಪವನ್ನು ನಾನು ಈಗ ನೋಡುತ್ತಿದ್ದೇನೆ.

ವಿಗ್ರಹ—

**ದಲಿತೇಂದೀವರಸುಂದರದ್ಯುತಿ**— ದಲಿತಂ ಚ ತತ್ ಇಂದೀವರಂ ಚ ದಲಿತೇಂದೀವರಂ, ದಲಿತೇಂದೀವರವತ್ ಸುಂದರೀ ದಲಿತೇಂದೀವರಸುಂದರೀ, ದಲಿತೇಂದೀವರಸುಂದರೀ ದ್ಯುತಿಃ ಯಸ್ಯ ತತ್ ದಲಿತೇಂದೀವರಸುಂದರದ್ಯುತಿ ।

**ಪರಮಾಜಿನಯೋಗಪೀಠಗಂ**— ಪರಮಂ ಚ ತತ್ ಅಜಿನಂ ಚ ಪರಮಾಜಿನಂ, ಯೋಗಸ್ಯ ಪೀಠಂ ಯೋಗಪೀಠಂ, ಪರಮಾಜಿನಂ ಚ ತತ್ ಯೋಗಪೀಠಂ ಚ ಪರಮಾಜಿನಯೋಗಪೀಠಂ, ತತ್ ಗಚ್ಛತೀತಿ ಪರಮಾಜಿನಯೋಗಪೀಠಗಂ।

**ಚೇತೋನಯನಾಭಿನಂದನಂ**— ಚೇತಶ್ಚ ನಯನೇ ಚ ಚೇತೋನಯನಾನಿ, ತಾನಿ ಅಭಿನಂದಯತೀತಿ ಚೇತೋನಯನಾಭಿನಂದನಂ ।

**ಕ್ರಿಯಾಪದ**— ದೃಶಿರ್ ಪ್ರೇಕ್ಷಣೇ ಇತಿ ಪ್ರೇಕ್ಷಣಾರ್ಥಕಾತ್ ದೃಶ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಪ್ರಕೃತೇ ಕರ್ಮಣಿ ಆತ್ಮನೇಪದಿನಃ ವರ್ತಮಾನೇ ಲಟಿ ಪ್ರಥಮಪುರುಷೇ ಏಕವಚನೇ ''ದೃಶ್ಯತೇ'' ಇತಿ ರೂಪಮ್ ।

ದೃಶ್ಯತೇ ದೃಶ್ಯೇತೇ ದೃಶ್ಯಂತೇ, ದೃಶ್ಯಸೇ ದೃಶ್ಯೇಥೇ ದೃಶ್ಯಧ್ವೇ, ದೃಶ್ಯೇ ದೃಶ್ಯಾವಹೇ ದೃಶ್ಯಾಮಹೇ ॥

**ಪ್ರಯೋಗ ಪರಿವರ್ತನ**- ಮಯಾ ವಪುಃ ದೃಶ್ಯತೇ (ಕರ್ಮಣಿ) ಅಹಂ ವಪುಃ ಪಶ್ಯಾಮಿ (ಕರ್ತರಿ)

★ ★ ★

**ಅಗಣಯ್ಯ(ಹೇಯ) ಗುಣ್ಯೈಃ ಸುಪೂರಿತಂ ಪರಿಪೂರ್ಣಾಗಣಿತಾತ್ಮಸದ್ಗುಣೈಃ ।**
**ಇದಮಸ್ತಸಮಸ್ತದೂಷಣಂ ಸಚಿದಾನಂದಮಯಂ ಹಿ ಕೇವಲಂ ॥ 24 ॥**

**ಪದಚ್ಛೇದ—** ಅಗಣಯ್ಯಗುಣ್ಯೈಃ, ಸುಪೂರಿತಂ, ಪರಿಪೂರ್ಣಾಗಣಿತಾತ್ಮಸದ್ಗುಣ್ಯೈಃ, ಇದಂ, ಅಸ್ತಸಮಸ್ತದೂಷಣಂ, ಸಚಿದಾನಂದಮಯಂ, ಹಿ, ಕೇವಲಂ ।

**ಅನ್ವಯ—** ಇದಂ, (ವಪುಃ), ಅಗಣಯ್ಯ (ಹೇಯ), ಗುಣ್ಯೈಃ, ಪರಿಪೂರ್ಣಾಗಣಿತಾತ್ಮಸದ್ಗುಣ್ಯೈಃ ಸುಪೂರಿತಂ, ಅಸ್ತಸಮಸ್ತದೂಷಣಂ, ಕೇವಲಂ, ಸಚಿದಾನಂದಮಯಂ, ಹಿ (ಮಯಾ ದೃಶ್ಯತೇ) ।

**ಅನ್ವಯಾರ್ಥ—**

**ಇದಂ** = ಎದುರಿಗೆ ಕಾಣಸುತ್ತಿರುವ ಶ್ರೀ ವ್ಯಾಸರ ಈ ದೇಹವು

**ಅಗಣಯ್ಯ(ಹೇಯ) ಗುಣ್ಯೈಃ** = ಎಣಿಸಲು ಸಾಧ್ಯವಾಗದ ಗುಣ(ಧರ್ಮ)ಗಳುಳ್ಳ

**ಪರಿಪೂರ್ಣ ಅಗಣಿತ ಆತ್ಮ ಸತ್‌ಗುಣ್ಯೈಃ** = (ಪ್ರತ್ಯೇಕವಾಗಿ ಪೂರ್ಣವಾದ) ಸಂಪೂರ್ಣವಾದ ಲೆಕ್ಕವಿಲ್ಲದ ಸ್ವರೂಪಭೂತವಾಗಿರುವ, ಉತ್ಪತ್ತಿನಾಶಾದಿ ದೋಷರಹಿತವಾದ, ಜ್ಞಾನ, ಆನಂದ ಮೊದಲಾದ ಕಲ್ಯಾಣ ಧರ್ಮಗಳಿಂದ

**ಸುಪೂರಿತಂ** = ಚೆನ್ನಾಗಿ ತುಂಬಿದ,

**ಅಸ್ತ** = ಮುಟ್ಟದಿರುವ (ಅಸ್ಪೃಷ್ಟವಾದ ಅಥವಾ ನಿರಸ್ತವಾದ)

**ಸಮಸ್ತ** = ಎಲ್ಲಾ

**ದೂಷಣಂ** = ಶರೀರ ದೋಷವುಳ್ಳ

**ಕೇವಲಂ** = ಜಡಾ ಮಿಶ್ರವಾಗಿ (ಮುಖ್ಯವಾಗಿ)

**ಸಚಿದಾನಂದಮಯಂ** = ಜ್ಞಾನದಿಂದ ಸಹಿತವಾದ ಆನಂದವೇ ಸ್ವರೂಪವಾಗಿ ಉಳ್ಳದ್ದಾಗಿ

**ಹಿ** = ಪ್ರಸಿದ್ಧವಾಗಿ

(**ಮಯಾ** = ನನ್ನಿಂದ

**ದೃಶ್ಯತೇ** = ನೋಡಲ್ಪಡುತ್ತದೆ).

**ತಾತ್ಪರ್ಯ—** ನಾನು ಈ ಶ್ರೀ ವೇದವ್ಯಾಸರ ಸ್ವರೂಪವೇ ಆಗಿರುವ ದೇಹವನ್ನು ಎದುರಿನಲ್ಲಿಯೇ ನೋಡುತ್ತಿದ್ದೇನೆ. ಇದು ಅನಂತವಾದ ಸ್ವರೂಪವೇ ಆಗಿರುವ ಪ್ರತ್ಯೇಕವಾಗಿಯೂ ಸತ್ಯವಾಗಿರುವ ಉತ್ಪತ್ತಿನಾಶಾದಿ ದೋಷರಹಿತವಾದ, ನಿರತಿಶಯವಾದ ಜ್ಞಾನಾನಂದಾದಿ ಕಲ್ಯಾಣ ಧರ್ಮಗಳಿಂದ ಎಲ್ಲಾ ರೀತಿಯಿಂದಲೂ ಅತ್ಯಂತ ಪೂರ್ಣವಾಗಿದೆ. ಈ ಒಂದೊಂದು ಗುಣಗಳೂ ಲೆಕ್ಕ ಮಾಡಲು ಸಾಧ್ಯವಾಗದ ಗುಣಗಳಿಂದ ಕೂಡಿಕೊಂಡಿವೆ. ಜ್ಞಾನವು ಕಳೆದು ಹೋದ, ಈಗಿರುವ, ಮುಂದೆ ಬರಲಿರುವ (ತ್ರಿಕಾಲದ) ಎಲ್ಲಾ ದೋಷಗಳಿಂದಲೂ ಹೊರಗೊಂಡಿದೆ. ಆನಂದವು ಅತ್ಯಂತ ಉದ್ರಿಕ್ತ-ವಾಗಿದೆ. (ದುಃಖಾಮಿಶ್ರಿತವಾಗಿದೆ), ಶಕ್ತಿಯು ನಿರತಿಶಯವಾಗಿದೆ. (ಅಪ್ರತಿಹತವಾಗಿದೆ). ಇಂತಹ ಪರಮಾತ್ಮನ ಸ್ವರೂಪ ಭೂತವಾದ ಶರೀರದಲ್ಲಿ ಸಾಮುದ್ರಿಕ ಶಾಸ್ತ್ರೋಕ್ತವಾದ ಮತ್ತಾವ ದೋಷಗಳೂ ಇಲ್ಲ. ಇದು ಅತ್ಯಂತ ಉತ್ತಮೋತ್ತಮವಾದ ಮೂವತ್ತ ಎರಡು ಲಕ್ಷಣಗಳಿಂದ ತುಂಬಿದೆ. ಸಮೀಚೀನ ಜ್ಞಾನ ಮತ್ತು ಆನಂದಗಳೇ ಈ ದೇಹವು. ಇಂತಹ ಸರ್ವಥಾ ಜಡಾಮಿಶ್ರವಾದ ದೇಹವನ್ನು ನಾನು ಎದುರಿನಲ್ಲಿಯೇ ನೋಡುತ್ತಿದ್ದೇನೆ.

ವಿಗ್ರಹ—

**ಅಗಣಯ್ಯಗುಣ್ಯೈಃ—** ಗಣಯಿತುಮಶಕ್ಯಾಃ ಅಗಣಯ್ಯಾಃ(ಅಗಣೇಯಾಃ), ಅಗಣಯ್ಯಾಃ(ಅಗಣೇಯಾಃ) ಗುಣಾಃ ಯೇಷಾಂ ತೇ ಅಗಣಯ್ಯ(ಅಗಣೇಯ)ಗುಣಾಃ , ತೈಃ ಅಗಣಯ್ಯಗುಣ್ಯೈಃ ।

**ಸುಪೂರಿತಂ—** ಸುಷ್ಠು ಪೂರಿತಂ ಸುಪೂರಿತಂ ।

**ಪರಿಪೂರ್ಣಗಣಿತಾತ್ಮಸದ್ಗುಣೈಃ—** ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಆತ್ಮಾನಶ್ಚ ತೇ ಸದ್ಗುಣಾಶ್ಚ ಆತ್ಮ-ಸದ್ಗುಣಾಃ, ಅಗಣಿತಾಶ್ಚ ತೇ ಆತ್ಮಸದ್ಗುಣಾಶ್ಚ ಅಗಣಿತಾತ್ಮಸದ್ಗುಣಾಃ, ಪರಿಪೂರ್ಣಾಶ್ಚ ತೇ ಅಗಣಿತಾತ್ಮಸದ್ಗುಣಾಶ್ಚ ಪರಿಪೂರ್ಣಾಗಣಿತಾತ್ಮಸದ್ಗುಣಾಃ, ತೈಃ ಪರಿಪೂರ್ಣಾಗಣಿತಾತ್ಮಸದ್ಗುಣೈಃ ।

**ಅಸ್ತಸಮಸ್ತದೂಷಣಂ—** ಸಮಸ್ತಾನಿ ಚ ತಾನಿ ದೂಷಣಾನಿ ಚ ಸಮಸ್ತದೂಷಣಾನಿ, ಅಸ್ತಾನಿ ಸಮಸ್ತ-ದೂಷಣಾನಿ ಯಸ್ಮಾತ್ ತತ್ ಅಸ್ತಸಮಸ್ತದೂಷಣಂ ।

**ಸಚಿದಾನಂದಮಯಂ—** ಚಿತಾ ಸಹ ವರ್ತತೇ ಇತಿ ಸಚಿತ್, ಸಚಿಚ್ಚಾಸೌ ಆನಂದಶ್ಚ ಸಚಿದಾನಂದಃ ಸಚಿದಾನಂದ ಏವ ಸಚಿದಾನಂದಮಯಂ, ಸಚಿದಾನಂದಃ ಮಯ (ಸ್ವರೂಪಂ) ಯಸ್ಯ ತತ್ ಸಚಿದಾನಂದಮಯಮಿತಿ ವಾ ।

ಈ ರೀತಿಯಾಗಿ ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸರ ದೇಹವನ್ನು ವರ್ಣಿಸಿದ ತರುವಾಯ ಶ್ರೀವೇದವ್ಯಾಸ ದೇವರ ಪಾದಗಳ ಧೂಳಿಯನ್ನಾರಂಭಿಸಿ ಶಿರಸ್ಸಿನವರೆವಿಗೆ ವರ್ಣಿಸಲು ಆರಂಭಿಸುತ್ತಾರೆ.

★ ★ ★

**ಕಮಲಾಕಮಲಾಸನಾನಿಲೈಃ ವಿಹಗಾಹೀಂದ್ರಶಿವೇಂದ್ರಪೂರ್ವಕೈಃ ।**
**ಪದಪದ್ಮರಜೋऽಸ್ಯ ಧಾರಿತಂ ಶಿರಸಾ ಹಂತ ವಹಾಮ್ಯಹಂ ಮುಹುಃ ॥ 25 ॥**

**ಪದಚ್ಛೇದ—** ಕಮಲಾಕಮಲಾಸನಾನಿಲೈಃ, ವಿಹಗಾಹೀಂದ್ರಶಿವೇಂದ್ರಪೂರ್ವಕೈಃ, ಪದಪದ್ಮರಜಃ, ಅಸ್ಯ, ಧಾರಿತಂ, ಶಿರಸಾ, ಹಂತ, ವಹಾಮಿ, ಅಹಂ, ಮುಹುಃ ।

**ಅನ್ವಯ—** ವಿಹಗಾಹೀಂದ್ರಶಿವೇಂದ್ರಪೂರ್ವಕೈಃ, ಕಮಲಾಕಮಲಾಸನಾನಿಲೈಃ, ಶಿರಸಾ, ಧಾರಿತಂ, ಅಸ್ಯ, ಪದ-ಪದ್ಮರಜಃ, ಅಹಂ, ಮುಹುಃ, ವಹಾಮಿ, ಹಂತ ।

**ಅನ್ವಯಾರ್ಥ—**

**ವಿಹಗ ಅಹಿ ಇಂದ್ರ ಶಿವ ಇಂದ್ರ** = ಪಕ್ಷಿಗಳು, ಸರ್ಪಗಳು ಇವುಗಳಿಗೆ ಒಡೆಯರಾದ (ವಿಹಗೇಂದ್ರ, ಅಹೀಂದ್ರ) ಗರುಡಶೇಷರು, ಮಹಾದೇವರು, ದೇವೇಂದ್ರನು, ಇವರೇ

**ಪೂರ್ವಕೈಃ** = ಮೊದಲಾಗಿ ಉಳ್ಳ

**ಕಮಲಾ ಕಮಲಾಸನ ಅನಿಲೈಃ** = ಲಕ್ಷ್ಮೀದೇವಿಯು, ಬ್ರಹ್ಮದೇವರು, ಮುಖ್ಯಪ್ರಾಣರು ಇವರಿಂದ,

**ಶಿರಸಾ** = ಶಿರದಲ್ಲಿ

**ಧಾರಿತಂ** = ಧರಿಸಲ್ಪಟ್ಟ

**ಅಸ್ಯ** = ಈ ವೇದವ್ಯಾಸ ದೇವರ

**ಪದಪದ್ಮರಜಃ** = ತಾವರೆಯಂತಿರುವ ಪಾದಗಳ ಧೂಳಿಯನ್ನು

**ಅಹಂ** = ನಾನು (ಶಿರಸಾ = ತಲೆಯಲ್ಲಿ)

**ಮುಹುಃ** = ಬಾರಿಬಾರಿಗೂ

**ವಹಾಮಿ** = ಧರಿಸುತ್ತೇನೆ

**ಹಂತ** = ಎಷ್ಟು ಸಂತೋಷವು !

**ತಾತ್ಪರ್ಯ—** ದೇವೇಂದ್ರ, ಮಹಾದೇವರು, ಗರುಡ, ಶೇಷ, ಮುಖ್ಯಪ್ರಾಣ, ಬ್ರಹ್ಮ, ಲಕ್ಷ್ಮೀದೇವಿ ಇವರು ಈ ವೇದವ್ಯಾಸರ ಕಮಲದಂತಿರುವ ಪಾದಗಳಿಗೆ ಪ್ರಣಾಮ ಮಾಡಿ ಅವರ ಪಾದಗಳ ಧೂಳಿಯನ್ನು ಪ್ರಸಾದದಂತೆ ಶಿರಸ್ಸಿನಲ್ಲಿ

ಧರಿಸುತ್ತಾರೆ. ನಾನೂ ಕೂಡ ಇಂತಹ ಪಾದಗಳಿಗೆ ನಮಿಸಿ, ಅವುಗಳ ಧೂಳಿಯನ್ನು ಪ್ರಸಾದ ರೂಪವಾಗಿ ಮತ್ತು ಮತ್ತು ಧರಿಸುತ್ತೇನೆ. ಆನಂದ ಪಡುತ್ತೇನೆ.

**ವಿಗ್ರಹ—**

**ಕಮಲಾಕಮಲಾಸನಾನಿಲೈಃ—** ಕಮಲಂ ಆಸನಂ ಯಸ್ಯ ಸಃ ಕಮಲಾಸನಃ, ಕಮಲಾ ಚ ಕಮಲಾಸನಶ್ಚ, ಅನಿಲಶ್ಚ, ಕಮಲಾಕಮಲಾಸನಾನಿಲಾಃ, ತೈಃ ಕಮಲಾಕಮಲಾಸನಾನಿಲೈಃ ।

**ವಿಹಗಾಹೀಂದ್ರಶಿವೇಂದ್ರಪೂರ್ವಕೈಃ—** ಇಂದ್ರಶ್ಚ ಇಂದ್ರಶ್ಚ ಇಂದ್ರೌ, ವಿಹಗಾಶ್ಚ ಅಹಯಶ್ಚ ವಿಹಗಾಹಯಃ, ವಿಹಗಾಹೀನಾಂ ಇಂದ್ರೌ ವಿಹಗಾಹೀಂದ್ರೌ, ವಿಹಗಾಹೀಂದ್ರೌ ಚ ಶಿವಶ್ಚ ಇಂದ್ರಶ್ಚ ವಿಹಗಾಹೀಂದ್ರ-ಶಿವೇಂದ್ರಾಃ, ವಿಹಗಾಹೀಂದ್ರಶಿವೇಂದ್ರಾಃ ಪೂರ್ವೇ ಯೇಷಾಂ ತೇ ವಿಹಗಾಹೀಂದ್ರಶಿವೇಂದ್ರ-ಪೂರ್ವಕಾಃ, ತೈಃ ವಿಹಗಾಹೀಂದ್ರಶಿವೇಂದ್ರಪೂರ್ವಕೈಃ ।

**ಪದಪದ್ಮರಜಃ—** ಪದೇ ಪದ್ಮೇ ಇವ ಪದಪದ್ಮೇ, ಪದ ಪದ್ಮಯೋಃ ರಜಃ ಪದಪದ್ಮರಜಃ, ತತ್ ಪದಪದ್ಮ-ರಜಃ।

**ಕ್ರಿಯಾಪದ—** **ವಹಾಮಿ**- ವಹಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ವಹಧಾತೋಃ, ಸಕರ್ಮಕಾತ್ ಪರಸ್ಮೈಪದಿನಃ, ವರ್ತಮಾನೇ ಲಟಿ, ಉತ್ತಮಪುರುಷೇ ಏಕವಚನೇ ''ವಹಾಮಿ'' ಇತಿ ರೂಪಮ್ ।

ವಹತಿ ವಹತಃ ವಹಂತಿ, ವಹಸಿ ವಹಥಃ ವಹಥ, ವಹಾಮಿ ವಹಾವಃ ವಹಾಮಃ ॥

**ಪ್ರಯೋಗ-** ಅಹಂ ಪದಪದ್ಮರಜಃ ವಹಾಮಿ (ಕರ್ತರಿ) ಮಯಾ ಪದಪದ್ಮರಜಃ ಉಹ್ಯತೇ (ಕರ್ಮಣಿ)

ವ್ಯಾಕರಣ ವಿಶೇಷ- ಆಚಾರ್ಯರು ಈಗ ಇನ್ನೂ ಪಾದಧೂಳಿಯನ್ನು ಶಿರಸಾ ಧರಿಸಿಲ್ಲ, ಆದರೂ ಧರಿಸುತ್ತೇನೆ ಎಂದು ಹೇಳಿದ್ದಾರೆ. ಇಲ್ಲಿ ವರ್ತಮಾನ ಸಾಮೀಪ್ಯೇ ವರ್ತಮಾನವದ್ವಾ ಎಂಬ ಪಾಣಿನೀಯ ಸೂತ್ರದಿಂದ ವರ್ತಮಾನ ಕಾಲದ ಹತ್ತಿರದಲ್ಲಿರುವ ಭವಿಷ್ಯತ್ ಕ್ರಿಯೆಯಲ್ಲಿಯೂ ವರ್ತಮಾನ ಕಾಲದಂತೆ ವ್ಯವಹಾರ ಮಾಡಿದ್ದಾರೆ.

★ ★ ★

ಶ್ರೀವೇದವ್ಯಾಸದೇವರ ಪಾದಗಳನ್ನು ವರ್ಣಿಸುತ್ತಾರೆ

**ಪ್ರಣಮಾಮಿ ಪದದ್ವಯಂ ವಿಭೋಃ ಧ್ವಜವಜ್ರಾಂಕುಶಪದ್ಮಚಿಹ್ನವತ್ ।**
**ನಿಜಮಾನಸರಾಗಪೀಡನಾತ್ ಅರುಣೀಭೂತಮಿವಾರುಣಂ ಸ್ವಯಂ ॥ 26 ॥**

**ಪದಚ್ಛೇದ—** ಪ್ರಣಮಾಮಿ, ಪದದ್ವಯಂ, ವಿಭೋಃ, ಧ್ವಜವಜ್ರಾಂಕುಶಪದ್ಮಚಿಹ್ನವತ್, ನಿಜಮಾನಸರಾಗ-ಪೀಡನಾತ್, ಅರುಣೀಭೂತಂ, ಇವ, ಅರುಣಂ, ಸ್ವಯಂ ।

**ಅನ್ವಯ—** (ಅಹಂ) ಧ್ವಜವಜ್ರಾಂಕುಶಪದ್ಮಚಿಹ್ನವತ್ ಸ್ವಯಂ ಅರುಣಂ (ಅಪಿ) ನಿಜಮಾನಸರಾಗಪೀಡನಾತ್, ಅರುಣೀಭೂತಂ, ಇವ ವಿಭೋಃ ಪದದ್ವಯಂ ಪ್ರಣಮಾಮಿ ।

**ಅನ್ವಯಾರ್ಥ—**

(**ಅಹಂ** = ನಾನು)

**ಧ್ವಜವಜ್ರಾಂಕುಶ ಪದ್ಮ ಚಿಹ್ನವತ್** = ಪತಾಕೆಯ ವಜ್ರಾಯುಧದ ಅಂಕುಶದ ತಾವರೆಯ (ಇವುಗಳ) ಚಿಹ್ನ (ಗುರುತು)ವುಳ್ಳ

**ಸ್ವಯಂ** = ಸ್ವಭಾವದಿಂದಲೇ

**ಅರುಣಂ (ಅಪಿ)** = ಕೆಂಪಾಗಿದ್ದರೂ

**ನಿಜ ಮಾನಸ ರಾಗ ಪೀಡನಾತ್** = ತನ್ನ ಭಕ್ತರ ಮನಸ್ಸಿನಲ್ಲಿರುವ ವಿಷಯಾಭಿಲಾಷೆಯೆಂಬ ಕೆಂಪುಬಣ್ಣದ ತುಳಿಯುವಿಕೆಯಿಂದ (ನಿರಾಕರಿಸುವಿಕೆಯಿಂದ)

**ಅರುಣೀಭೂತಂ ಇವ** = ಕೆಂಪಾಗಿದೆಯೋ ಎಂಬಂತಿರುವ

**ವಿಭೋಃ** = ಸಮರ್ಥರಾದ ಶ್ರೀವೇದವ್ಯಾಸರ

**ಪದದ್ವಯಂ** = ಎರಡು ಪಾದಗಳನ್ನು

**ಪ್ರಣಮಾಮಿ** = ನಮಸ್ಕರಿಸುತ್ತೇನೆ.

**ತಾತ್ಪರ್ಯ—** ಶ್ರೀ ವೇದವ್ಯಾಸರ ಎರಡು ಪಾದಗಳ ತಳ (ಕೆಳಗಿನ) ಭಾಗದಲ್ಲಿಯೂ ಧ್ವಜವಜ್ರ, ಅಂಕುಶ ಮತ್ತು ಪದ್ಮದ ರೇಖಾಚಿಹ್ನಗಳಿವೆ. ಇವು ಲೋಕೋತ್ತರ ಮಹಾಪುರುಷರ ಚಿಹ್ನೆಗಳು. ಈ ಎರಡು ಪಾದಗಳ ತಳಗಳು ಮತ್ತು ಪಾದಗಳೂ ಸ್ವತಃ ಕೆಂಪಾಗಿದ್ದರೂ ಸಹ ಭಕ್ತರ ಮನಸ್ಸಿನ ವಿಷಯಾಭಿಲಾಷೆಯೆಂಬ ಕೆಂಪು ಬಣ್ಣವನ್ನು ಮರ್ದಿಸಿದ್ದರಿಂದ ಕೆಂಪಾಗಿವೆಯೋ ಎಂಬಂತಿವೆ. ಇಂತಹ ಸಮರ್ಥರಾದ ವೇದವ್ಯಾಸದೇವರ ಪಾದದ್ವಯವನ್ನು ನಾನು ನಮಸ್ಕರಿಸುತ್ತೇನೆ. (ಕೆಂಪು ಬಣ್ಣವನ್ನು ತುಳಿದರೆ ಕಾಲು ಕೆಂಪಾಗುತ್ತದೆ. ಶ್ರೀ ವ್ಯಾಸರು ಭಕ್ತರ ಮನಸ್ಸಿಗೆ ವಿಷಯಾಭಿಲಾಷೆಯೆಂಬ ಕೆಂಪನ್ನು ತುಳಿದು ನಿರಾಕರಿಸಿದ್ದರಿಂದ ಅವರ ಕಾಲುಗಳೆರಡೂ ಕೆಂಪಾಗಿವೆಯೋ ಎಂದು ಕಾಣಿಸುತ್ತಿದೆ. ರಾಗ-ವಿಷಯಾಭಿಲಾಷೆ, ಕೆಂಪು ಬಣ್ಣ ಇವೆರಡನ್ನೂ ಕವಿಗಳಲ್ಲಿ ರಾಗ ಶಬ್ದದ ಅರ್ಥವಾಗಿ ವರ್ಣಿಸುವ ರೂಢಿಯಿದೆ. ಪರಮಾತ್ಮನ ಪಾದಗಳನ್ನು ಸಾಕ್ಷಾತ್ಕರಿಸಿದವರಿಗೆ ವಿಷಯಾಭಿಲಾಷೆಯು ನಿವೃತ್ತವಾಗುತ್ತದೆ ಎಂದು ಭಾವ).

ವಿಗ್ರಹ—

**ಪದದ್ವಯಂ—** ಪದಯೋಃ ದ್ವಯಂ ಪದದ್ವಯಂ, ತತ್ ಪದದ್ವಯಂ ।

**ಧ್ವಜವಜ್ರಾಂಕುಶಪದ್ಮಚಿಹ್ನವತ್—** ಧ್ವಜಶ್ಚ ವಜ್ರಂಚ ಅಂಕುಶಶ್ಚ ಪದ್ಮಂಚ ಧ್ವಜವಜ್ರಾಂಕುಶಪದ್ಮಾನಿ, ತೇಷಾಂ ಚಿಹ್ನಾನಿ ಧ್ವಜವಜ್ರಾಂಕುಶಪದ್ಮಚಿಹ್ನಾನಿ, ತಾನಿ ಅಸ್ಯ ಸಂತೀತಿ ಧ್ವಜವಜ್ರಾಂಕುಶಪದ್ಮಚಿಹ್ನವತ್ ।

**ನಿಜಮಾನಸರಾಗಪೀಡನಾತ್—** ಮನಸಃ ಅಯಂ ಮಾನಸಃ, ಮಾನಸಶ್ಚಾಸೌ ರಾಗಶ್ಚ ಮಾನಸರಾಗಃ, ನಿಜಾನಾಂ ಮಾನಸರಾಗಃ ನಿಜಮಾನಸರಾಗಃ, ನಿಜಮಾನಸರಾಗಸ್ಯ ಪೀಡನಂ ನಿಜಮಾನಸರಾಗ-ಪೀಡನಂ, ತಸ್ಮಾತ್ ನಿಜಮಾನಸರಾಗಪೀಡನಾತ್ ।

**ಅರುಣೀಭೂತಂ—** ಅನರುಣಂ ಅರುಣಂ ಸಂಪದ್ಯಮಾನಂ ಭೂತಂ ಅರುಣೀಭೂತಂ ।

**ಕ್ರಿಯಾಪದ—** ಪ್ರಣಮಾಮಿ- ಪ್ರ ಇತ್ಯುಪಸರ್ಗಪೂರ್ವಕಾತ್ ಣಮು ಪ್ರಹ್ವತ್ವೇ ಶಬ್ದೇ ಚ ಇತಿ ಪ್ರಹ್ವತ್ವ ಶಬ್ದಾರ್ಥ-ಕಾತ್ ಧಾತೋಃ ಸಕರ್ಮಕಾತ್ ವರ್ತಮಾನೇ ಲಟ್ ಉತ್ತಮಪುರುಷೇ ಏಕವಚನೇ ''ಪ್ರಣಮಾಮಿ'' ಇತಿ ರೂಪಮ್ ।

ಪ್ರ-ನಮತಿ ನಮತಃ ನಮಂತಿ, ನಮಸಿ ನಮಥಃ ನಮಥ, ನಮಾಮಿ ನಮಾವಃ ನಮಾಮಃ ॥

ಪ್ರಯೋಗ ಪರಿವರ್ತನೆ- ಅಹಂ ಪದದ್ವಯಂ ಪ್ರಣಮಾಮಿ (ಕರ್ತರಿ), ಮಯಾ ಪದದ್ವಯಂ ಪ್ರಣಮ್ಯತೇ (ಕರ್ಮಣಿ).

★ ★ ★

ಶ್ರೀವೇದವ್ಯಾಸ ದೇವರ ಪಾದಗಳ ಉಗುರುಗಳನ್ನು ವರ್ಣಿಸುತ್ತಾರೆ.

**ನನು ಕೇವಲಮೇವ ವೈಷ್ಣವಂ ಶ್ರಿತವಂತಃ ಪದಮಾತ್ಮರೋಚಿಷಾ ।**
**ತಮಸೋಽಪ್ಯುಭಯಸ್ಯ ನಾಶಕಾಃ ವಿಜಯಂತೇ ನಖರಾ ನವಂ ರವಿಂ ॥ 27 ॥**

**ಪದಚ್ಛೇದ—** ನನು, ಕೇವಲಂ, ಏವ, ವೈಷ್ಣವಂ, ಶ್ರಿತವಂತಃ, ಪದಂ, ಆತ್ಮರೋಚಿಷಾ, ತಮಸಃ, ಅಪಿ, ಉಭಯಸ್ಯ, ನಾಶಕಾಃ, ವಿಜಯಂತೇ, ನಖರಾಃ, ನವಂ, ರವಿಂ ।

**ಅನ್ವಯ—** ಕೇವಲಂ, ಏವ, ವೈಷ್ಣವಂ, ಪದಂ, ಶ್ರಿತವಂತಃ, ಆತ್ಮರೋಚಿಷಾ, ಉಭಯಸ್ಯ, ತಮಸಃ, ಅಪಿ, ನಾಶಕಾಃ, ನಖರಾಃ, ನವಂ, ರವಿಂ, ವಿಜಯಂತೇ, ನನು ।

**ಅನ್ವಯಾರ್ಥ—**

**ಕೇವಲಂ ಏವ** = ಮುಖ್ಯವಾಗಿಯೇ (ಅಂದರೆ ಮಹಾಯೋಗವೃತ್ತಿಯಿಂದ)
**ವೈಷ್ಣವಂ** = ವಿಷ್ಣುಸಂಬಂಧಿಯಾದ
**ಪದಂ** = ಪಾದವನ್ನು
**ಶ್ರಿತವಂತಃ** = ಆಶ್ರಯಿಸಿರುವ,
**ಆತ್ಮರೋಚಿಷಾ** = ತಮ್ಮ ತೇಜಸ್ಸಿನಿಂದ
**ಉಭಯಸ್ಯ** = (ಕತ್ತಲೆ ಮತ್ತು ಅಜ್ಞಾನವೆಂಬ) ಎರಡು ವಿಧವಾದ
**ತಮಸಃ ಅಪಿ** = ತಮಸ್ಸನ್ನೂ
**ನಾಶಕಾಃ** = ಪರಿಹಾರ ಮಾಡುವ
**ನಖರಾಃ** = ಉಗುರುಗಳು
**ನವಂ** = ಹೊಸದಾದ
**ರವಿಂ** = ಸೂರ್ಯನನ್ನು
**ವಿಜಯಂತೇ ನನು** = ಮೀರಿಸುತ್ತವೆಯಷ್ಟೆ ?

**ತಾತ್ಪರ್ಯ—** ಸೂರ್ಯನು ರೂಢಿಯಿಂದ ವಿಷ್ಣುಪದ ಎಂಬ ಹೆಸರಿನಿಂದ ಕರೆಯಲ್ಪಡುವ ಆಕಾಶದಲ್ಲಿ ಹಗಲಿನಲ್ಲಿ ಮಾತ್ರ ಇರುತ್ತಾನೆ. ತನ್ನ ತೇಜಸ್ಸಿನಿಂದ ಹೊರಗಿನ ತಮಸ್ಸನ್ನು ಮಾತ್ರ ಪರಿಹರಿಸುತ್ತಾನೆ. ಆದರೆ ಈ ಶ್ರೀವೇದವ್ಯಾಸರ ಪಾದದ ಉಗುರುಗಳು ವಿಷ್ಣುಪದ, ಶ್ರೀಮನ್ನಾರಾಯಣನ ಪಾದ ಎಂಬ ಅವಯವಾರ್ಥವನ್ನು ಒಳಗೊಂಡು ವಿಷ್ಣುವೇ ಆಗಿರುವ ಇವರ ಪಾದಗಳು ಹೊರಗಿನ ತಮಸ್ಸು-ಕತ್ತಲೆ, ಒಳಗಿನ ತಮಸ್ಸು-ಅಜ್ಞಾನ ಇವೆರಡನ್ನೂ ನಾಶ ಮಾಡುತ್ತವೆ. ಆದುದರಿಂದ ಇವು ಉದಯಿಸುತ್ತಿರುವ ಸೂರ್ಯನನ್ನೂ ಸಹ ಮೀರಿಸುತ್ತಿವೆ.

**ವಿಗ್ರಹ—**

**ವೈಷ್ಣವಂ—** ವಿಷ್ಣೋಃ ಇದಂ ವೈಷ್ಣವಂ, ತತ್ ವೈಷ್ಣವಂ ।
**ಆತ್ಮರೋಚಿಷಾ—** ಆತ್ಮನಾಂ ರೋಚಿಃ ಆತ್ಮರೋಚಿಃ, ತೇನ ಆತ್ಮರೋಚಿನಾ ।

**ಕ್ರಿಯಾಪದ—** ವಿಜಯಂತೇ- ವಿ ಉಪಸರ್ಗಪೂರ್ವಕಾತ್ ಜಿ ಜಯೇ ಇತ್ಯಸ್ಮಾತ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ (ಪ್ರಕೃತೇ ಆತ್ಮನೇಪದಿನಃ) ವರ್ತಮಾನೇ ಲಟಿ ಪ್ರಥಮಪುರುಷೇ ಬಹುವಚನೇ ವಿಜಯಂತೇ ಇತಿ ರೂಪಮ್ ।

ವಿ-ಜಯತೇ ಜಯೇತೇ ಜಯಂತೇ, ಜಯಸೇ ಜಯೇಥೇ ಜಯಧ್ವೇ, ಜಯೇ ಜಯಾವಹೇ ಜಯಾಮಹೇ ॥

**ವ್ಯಾಕರಣ ವಿಶೇಷ -** ಇಲ್ಲಿ ವಿ ಉಪಸರ್ಗವನ್ನು ಸೇರಿಸಿಯೇ ಧಾತುವಿನ ರೂಪವನ್ನು ಹೇಳಬೇಕು. ಅನೇಕ ಬಾರಿ ಬರೆಯಲು ತೊಂದರೆಯಾಗುತ್ತದೆಂದು ಒಂದೇ ಬಾರಿ ಬರೆದಿದೆ. ವಿಪರಾಭ್ಯಾಂಜೇ ಎಂಬ ಪಾಣಿನಿ ಸೂತ್ರದಿಂದ ವಿ ಮತ್ತು ಪರಾ ಉಪಸರ್ಗ ಪೂರ್ವಕವಾದ ಜಿ ಧಾತುವಿಗೆ ಆತ್ಮನೇ ಪದ ಬಂದಿದೆ.

**ಪ್ರಯೋಗ-** ನಖರಾಃ ನವಂ ರವಿಂ ವಿಜಯಂತೇ (ಕರ್ತರಿ) ನಖರೈಃ ನವಃ ರವಿಃ ವಿಜೀಯತೇ (ಕರ್ಮಣಿ) ।

★ ★ ★

ಮನೋಹರಗಳಾದ ಅಂಗುಲಿಗಳನ್ನುಳ್ಳ, ನಿಗೂಢಗಳಾದ ಗಂಟುಗಳನ್ನುಳ್ಳ ಶ್ರೀವೇದವ್ಯಾಸದೇವರ ಪರಸ್ಪರ ಹೋಲಿಕೆಯಿಂದ ಕೂಡಿದ ಬೇರೆ ದೃಷ್ಟಾಂತವಿಲ್ಲದ ಪದಯುಗ್ಮವನ್ನು ವರ್ಣಿಸುತ್ತಾರೆ.

**ಸುಕುಮಾರತಲಾಂಗುಲೀಮತೋಃ ಪದಯೋರಸ್ಯ ನಿಗೂಢಗುಲ್ಫಯೋಃ ।**
**ಉಪಮಾನಮಹೋ ನ ದೃಶ್ಯತೇ ಕವಿವರ್ಯೈರಿತರೇತರಂ ವಿನಾ ॥ 28 ॥**

**ಪದಚ್ಛೇದ—** ಸುಕುಮಾರತಲಾಂಗುಲೀಮತೋಃ, ಪದಯೋಃ, ಅಸ್ಯ, ನಿಗೂಢಗುಲ್ಫಯೋಃ, ಉಪಮಾನಂ, ಅಹೋ, ನ, ದೃಶ್ಯತೇ, ಕವಿವರ್ಯೈಃ, ಇತರೇತರಂ, ವಿನಾ ।

**ಅನ್ವಯ—** ಕವಿವರ್ಯೈಃ, ಸುಕುಮಾರತಲಾಂಗುಲೀಮತೋಃ, ನಿಗೂಢಗುಲ್ಫಯೋಃ, ಅಸ್ಯ, ಪದಯೋಃ, ಇತರೇತರಂ, ವಿನಾ, ಉಪಮಾನಂ, ನ, ದೃಶ್ಯತೇ, ಅಹೋ ।

**ಅನ್ವಯಾರ್ಥ—**

**ಕವಿವರ್ಯೈಃ** = ಕವಿಶ್ರೇಷ್ಠರಿಂದ
**ಸುಕುಮಾರ ತಲ** = ಅತ್ಯಂತ ಕೋಮಲವಾದ ಪಾದದ ಕೆಳಭಾಗ
**ಅಂಗುಲೀಮತೋಃ** = ಮತ್ತು ಬೆರಳುಗಳುಳ್ಳ
**ನಿಗೂಢ** = ಮುಚ್ಚಿದ (ಮೇಲಕ್ಕೆದ್ದು ಕಾಣಿಸದಿರುವ)
**ಗುಲ್ಫಯೋಃ** = ಕಾಲಿನ ಹರಡು (ಗಿಣ್ಣು)ಗಳುಳ್ಳ
**ಅಸ್ಯ** = ಈ ವೇದವ್ಯಾಸರ
**ಪದಯೋಃ** = ಕಾಲುಗಳಿಗೆ,
**ಇತರೇತರಂ ವಿನಾ** = ಅನ್ಯೋನ್ಯವಾಗಿ, ಹೊರತು
**ಉಪಮಾನಂ** = ಹೋಲಿಸಲು ಬೇಕಾದ ವಸ್ತುವು
**ಮಯಾ** = ನನ್ನಿಂದ
**ನ ದೃಶ್ಯತೇ** = ನೋಡಲ್ಪಡುವುದಿಲ್ಲ
**ಅಹೋ** = ಆಶ್ಚರ್ಯವು.

**ತಾತ್ಪರ್ಯ—** ಈ ವೇದವ್ಯಾಸರ ಕಾಲುಗಳೆರಡು ಅತ್ಯಂತ ಕೋಮಲವಾದ ಕೆಳಭಾಗ ಮತ್ತು ಬೆರಳುಗಳಿಂದ ಕೂಡಿವೆ. ಈ ಎರಡು ಕಾಲುಗಳ ಗಂಟುಗಳೂ ಮೇಲಕ್ಕೆದ್ದು ಕಾಣಸದಿರುವುದರಿಂದ ಕಾಲುಗಳು ಬಹಳ ಸುಂದರವಾಗಿವೆ. ಆದುದರಿಂದ ವೇದವ್ಯಾಸರ ಈ ಎರಡು ಪಾದಗಳಿಗೆ ಪರಸ್ಪರವಾಗಿ ಹೊರತು ಬೇರೊಂದು ಹೋಲಿಕೆಯ ವಸ್ತುವು ಕಾಣುವುದಿಲ್ಲ. ಇದು ಪರಮಾಶ್ಚರ್ಯವು.

**ವಿಗ್ರಹ—**

**ಸುಕುಮಾರತಲಾಂಗುಲೀಮತೋಃ—** ತಲೇ ಚ ಅಂಗುಲ್ಯಶ್ಚ ತಲಾಂಗುಲ್ಯಃ, ಸುಕುಮಾರಾಶ್ಚ ತಾಃ ತಲಾಂಗುಲ್ಯಶ್ಚ ಸುಕುಮಾರತಲಾಂಗುಲ್ಯಃ, ತಾಃ ಅನಯೋಃ ಸಂತೀತಿ ಸುಕುಮಾರತಲಾಂಗುಲೀಮತೀ, ತಯೋಃ ಸುಕುಮಾರತಲಾಂಗುಲೀಮತೋಃ ।

**ನಿಗೂಢಗುಲ್ಫಯೋಃ—** ನಿಗೂಢೌ ಗುಲ್ಫೌ ಯಯೋಸ್ತೇ ನಿಗೂಢಗುಲ್ಫೇ, ತಯೋಃ ನಿಗೂಢಗುಲ್ಫಯೋಃ।

**ಕವಿವರ್ಯೈಃ—** ಕವಿಷು ವರ್ಯಾಃ ಕವಿವರ್ಯಾಃ, ತೈಃ ಕವಿವರ್ಯೈಃ ।

**ಪ್ರಯೋಗ—** ಮಯಾ ಉಪಮಾನಂ ನ ದೃಶ್ಯತೇ (ಕರ್ಮಣಿ) ಅಹಂ ಉಪಮಾನಂ ನ ಪಶ್ಯಾಮಿ (ಕರ್ತರಿ).

★ ★ ★

ಶ್ರೀವೇದವ್ಯಾಸರ ಮೊಣಕಾಲುಗಳನ್ನು ವರ್ಣಿಸುತ್ತಾರೆ

**ಉಚಿತಾಂ ಗುರುತಾಂ ದಧತ್ ಕ್ರಮಾತ್ ಶುಚಿ ತೇಜಸ್ವಿ ಸುವೃತ್ತಮುತ್ತಮಂ ।**
**ಭಜತೋಽತ್ರ ಚ ಭಾಜಯತ್ಯದೋ ವಿಭುಜಂಘಾಯುಗಲಂ ಸರೂಪತಾಂ ॥ 29 ॥**

**ಪದಚ್ಛೇದ—** ಉಚಿತಾಂ, ಗುರುತಾಂ, ದಧತ್, ಕ್ರಮಾತ್, ಶುಚಿ, ತೇಜಸ್ವಿ, ಸುವೃತ್ತಂ, ಉತ್ತಮಂ, ಭಜತಃ, ಅತ್ರ, ಚ, ಭಾಜಯತಿ, ಅದಃ, ವಿಭುಜಂಘಾಯುಗಲಂ, ಸರೂಪತಾಂ ।

**ಅನ್ವಯ—** ಕ್ರಮಾತ್, ಉಚಿತಾಂ, ಗುರುತಾ, ದಧತ್, ಶುಚಿ, ತೇಜಸ್ವಿ, ಸುವೃತ್ತಂ, ಉತ್ತಮಂ, ಅದಃ, ವಿಭು-ಜಂಘಾಯುಗಲಂ, ಭಜತಃ, ಅತ್ರ, ಚ, ಸರೂಪತಾಂ, ಭಾಜಯತಿ ।

**ಅನ್ವಯಾರ್ಥ—**

**ಕ್ರಮಾತ್** = ಕ್ರಮವಾಗಿ
**ಉಚಿತಾಂ** = ಯೋಗ್ಯವಾದ
**ಗುರುತಾಂ** = ದಪ್ಪವಾಗಿರುವಿಕೆಯನ್ನು (ಉಪದೇಶಕತ್ವವನ್ನು)
**ದಧತ್** = ಧರಿಸಿರುವ
**ಶುಚಿ** = ದೋಷವಿಲ್ಲದ
**ತೇಜಸ್ವಿ** = ಕಾಂತಿಯುಳ್ಳ
**ಸುವೃತ್ತಂ** = ಚೆನ್ನಾಗಿ ಗುಂಡಗೆ ಇರುವ, (ಒಳ್ಳೆಯ ಆಚಾರವುಳ್ಳ)
**ಉತ್ತಮಂ** = ಶ್ರೇಷ್ಠವಾದ
**ಅದಃ** = ಈ
**ವಿಭುಜಂಘಾಯುಗಲಂ** = ಶ್ರೀ ವೇದವ್ಯಾಸರ ಎರಡು ಮೊಣಕಾಲುಗಳು,
**ಭಜತಃ** = ಸೇವಿಸುವವರನ್ನು
**ಅತ್ರ ಚ** = ಈ ಲೋಕದಲ್ಲಿಯೇ
**ಸುರೂಪತಾಂ** = ಸಮಾನವಾದರೂಪವುಳ್ಳತನವನ್ನು
**ಭಾಜಯಂತಿ** = ಹೊಂದಿಸುತ್ತದೆ.

**ತಾತ್ಪರ್ಯ—** ಶ್ರೀ ವೇದವ್ಯಾಸರ ಈ ಎರಡು ಮೊಣಕಾಲುಗಳು ಪಾದದ ಮೇಲ್ಭಾಗದಲ್ಲಿ ಕ್ರಮವಾಗಿ ಔಚಿತ್ಯವನ್ನು ಅನುಸರಿಸಿ ಪುಷ್ಟವಾಗಿ ದಪ್ಪವಾಗಿವೆ. ಇವುಗಳಲ್ಲಿ ಯಾವ ದೋಷವೂ ಇಲ್ಲ. ಇವುಗಳು ತುಂಬಾ ಕಾಂತಿಯಿಂದ ಕೂಡಿವೆ. ಗುಂಡಗಿದ್ದು ಶ್ರೇಷ್ಠವಾಗಿವೆ. ಇವುಗಳು ತಮ್ಮನ್ನು ಸೇವಿಸುವ ಭಕ್ತರನ್ನು ಮುಕ್ತಿಗಿಂತ ಮುಂಚೆಯೇ ಈ ಲೋಕದಲ್ಲಿಯೇ ಸ್ವಾವರರಿಗೆ ಯೋಗ್ಯರಾದ ಗುರುಗಳನ್ನಾಗಿ ಮಾಡುತ್ತವೆ. ಅವರನ್ನು ದೋಷವಿಲ್ಲದವರನ್ನಾಗಿಯೂ, ತೇಜಸ್ವಿಗಳನ್ನಾಗಿಯೂ ಒಳ್ಳೆಯ ನಡತೆಯಿಂದ ಕೂಡಿದವರನ್ನಾಗಿಯೂ ಮತ್ತು ಜ್ಞಾನ ಭಕ್ತ್ಯಾದಿಗಳಿಂದ ಉತ್ತಮರನ್ನಾಗಿಯೂ ಮಾಡುತ್ತವೆ. ಪರಮಾತ್ಮ ಮತ್ತು ಅವನ ಅಂಗಗಳಿಗೆ ಭೇದವಿಲ್ಲ. ಪರಮಾತ್ಮನನ್ನು ಉಪಾಸಿಸುವವರು ಅವನ ಸಾರೂಪ್ಯವನ್ನು ಹೊಂದು-ವಂತೆ ಅವನ ಜಂಘೆಗಳನ್ನು ಸೇವಿಸುವವರೂ ಅವುಗಳಂತೆಯೇ ಇಲ್ಲಿಯೇ ಆಗುತ್ತಾರೆ. ಮುಕ್ತಿಯಲ್ಲಿ ಸಾರೂಪ್ಯವನ್ನು ಪಡೆಯುವುದರಲ್ಲಿ ಹೇಳತಕ್ಕದ್ದೇನಿದೆ.

**ವಿಗ್ರಹ—**

**ತೇಜಸ್ವಿ—** ತೇಜಃ ಅಸ್ಯ ಅಸ್ತೀತಿ ತೇಜಸ್ವಿ ।

**ಸುವೃತ್ತಂ—** ಶೋಭನಂ ವೃತ್ತಂ ಯಸ್ಯ ತತ್ ಸುವೃತ್ತಂ।

**ವಿಭುಜಂಘಾಯುಗಲಂ—** ಜಂಘಯೋಃ ಯುಗಲಂ ಜಂಘಾಯುಗಲಂ, ವಿಭೋಃ ಜಂಘಾಯುಗಲಂ ವಿಭುಜಂಘಾಯುಗಲಂ ।

**ಸರೂಪತಾಂ—** ಸಮಾನಂ ರೂಪಂ ಯೇಷಾಂ ತೇ ಸರೂಪಾಃ, ಸರೂಪಾಣಾಂ ಭಾವಃ ಸರೂಪತಾ, ತಾಂ ಸರೂಪತಾಂ ।

**ಕ್ರಿಯಾಪದ— ಭಾಜಯಂತಿ-** ಭಜಸೇವಾಯಾಂ ಇತ್ಯಸ್ಮಾದ್ಧಾತೋಃ ಣಿಜಂತಾತ್ ಪರಸ್ಮೈಪದಿನಃ ಕರ್ತರಿ ವರ್ತಮಾನೇ ಲಟಿ ಪ್ರಥಮಪುರುಷೇ ಏಕವಚನೇ "ಭಾಜಯತಿ" ಇತಿ ರೂಪಮ್ ।

ಭಾಜಯತಿ ಭಾಜಯತಃ ಭಾಜಯಂತಿ, ಭಾಜಯಸಿ ಭಾಜಯಥಃ ಭಾಜಯಥ, ಭಾಜಯಾಮಿ ಭಾಜಯಾವಃ ಭಾಜಯಾಮಃ ॥

★ ★ ★

ಶ್ರೀಮಧ್ವಾಚಾರ್ಯರು ಶ್ರೀ ವೇದವ್ಯಾಸರ ಯೋಗಪಟ್ಟಿಕೆಯನ್ನು ವರ್ಣಿಸುತ್ತಾರೆ

**ಅಚಲಾಸನಯೋಗಪಟ್ಟಿಕಾ ವರಕಕ್ಷ್ಯಾ ಸಕೃದಾಪ್ತಮಿಷ್ಟದಂ ।**
**ಪರಿತೋಽಪಿ ಹರಿಂ ಸ್ಫುರಂತ್ಯಹೋ ಅನಿಶಂ ಧನ್ಯತಮೇತಿ ಮೇ ಮತಿಃ ॥ 30 ॥**

**ಪದಚ್ಛೇದ—** ಅಚಲಾಸನಯೋಗಪಟ್ಟಿಕಾ, ವರಕಕ್ಷ್ಯಾ, ಸಕೃತ್, ಆಪ್ತಂ, ಇಷ್ಟದಂ, ಪರಿತಃ, ಅಪಿ, ಹರಿಂ, ಸ್ಫುರಂತೀ, ಅಹೋ, ಅನಿಶಂ, ಧನ್ಯತಮಾ, ಇತಿ, ಮೇ, ಮತಿಃ ।

**ಅನ್ವಯ—** ವರಕಕ್ಷ್ಯಾ, ಅಚಲಾಸನಯೋಗಪಟ್ಟಿಕಾ, ಸಕೃತ್, ಆಪ್ತಂ, ಇಷ್ಟದಂ, ಹರಿಂ, ಪರಿತಃ, ಅನಿಶಂ, ಸ್ಫುರಂತೀ, ಧನ್ಯತಮಾ, ಹಿ, ಇತಿ, ಮೇ, ಮತಿಃ, ಅಹೋ ।

**ಅನ್ವಯಾರ್ಥ—**

**ವರಕಕ್ಷ್ಯಾ** = ಉತ್ತಮವಾದ ಮಧ್ಯಭಾಗದ ಪಟ್ಟಿಯಾದ

**ಅಚಲಾಸನ ಯೋಗಪಟ್ಟಿಕಾ** = ಅಲ್ಲಾಡದಿರುವ ಕುಳಿತುಕೊಳ್ಳುವಿಕೆಗೇ (ಆಸನಕ್ಕೆ) ಇರುವ ಯೋಗಪಟ್ಟಿಕಾ ಎಂಬ ಕೃಷ್ಣಾಜಿನ, ವಸ್ತ್ರ ಅಥವಾ ಲತಾದಿಗಳಿಂದ ಮೂಡಿದ ಯೋಗಿಗಳ ಬಂಧನ ವಿಶೇಷವು

**ಸಕೃತ್** = ಒಂದು ಬಾರಿ

**ಆಪ್ತಂ** = ಶರಣು ಹೊಂದಲ್ಪಟ್ಟರೂ,

**ಇಷ್ಟದಂ** = ಅಭೀಷ್ಟಪ್ರದನಾದ

**ಹರಿಂ ಪರಿತಃ** = ಶ್ರೀವೇದವ್ಯಾಸರ ಸುತ್ತಲೂ

**ಅನಿಶಂ** = ಯಾವಾಗಲೂ

**ಸ್ಫುರಂತೀ** = ಪ್ರಕಾಶಿಸುತ್ತಾ

**ಧನ್ಯತಮಾ ಹಿ** = ಹೆಚ್ಚು ಪುಣ್ಯವುಳ್ಳದ್ದು ಆಗಿದೆಯಷ್ಟೆ !

**ಇತಿ** = ಹೀಗೆಂದು

**ಮೇ** = ನನ್ನ

**ಮತಿಃ** = ಬುದ್ಧಿಯು

**ಅಹೋ** = ಆಶ್ಚರ್ಯವು.

**ತಾತ್ಪರ್ಯ—** ಶ್ರೀವೇದವ್ಯಾಸರು ಶರಣು ಹೊಂದಿ ಒಂದು ಬಾರಿ ದರ್ಶನ ಮಾಡಿದವರಿಗೂ ಸಕಲಾಭೀಷ್ಟಾರ್ಥ-ವನ್ನು ಕೊಡುತ್ತಾರೆ. ಅವರು ಸ್ಥಿರವಾದ ಆಸನದ ಸಿದ್ಧಿಗಾಗಿ ನಡುವಿನಲ್ಲಿ ಕಟ್ಟಿಕೊಂಡಿರುವ ಯೋಗಪಟ್ಟಿಕೆಯು ಅವರ ಸುತ್ತಲೂ ಯಾವಾಗಲೂ ಶೋಭಿಸಿಕೊಂಡಿದೆ. ಆಶ್ಚರ್ಯ ! ಇದು ಯಾವಾಗಲೂ ಹರಿಯನ್ನು ಹೊಂದಿಕೊಂಡೇ ಇರುವುದರಿಂದ ಅತ್ಯಂತ ಪುಣ್ಯಶಾಲಿನಿಯೆಂದು ನಾನು ತಿಳಿಯುತ್ತೇನೆ.

**ವಿಗ್ರಹ—**

**ಅಚಲಾಸನಯೋಗಪಟ್ಟಿಕಾ—** ನ ವಿದ್ಯತೇ ಚಲಃ ಯಸ್ಯ ತತ್ ಅಚಲಂ, ಅಚಲಂ ಚ ತತ್ ಆಸನಂ ಚ ಅಚಲಾಸನಂ (ಅಚಲಂ ಆಸನಂ ಯಥಾ ಭವತಿ ತಥಾ ಅಚಲಾಸನಂ) ಯೋಗಸ್ಯ ಪಟ್ಟಿಕಾ ಯೋಗ-ಪಟ್ಟಿಕಾ, ಅಚಲಾಸನಾಯ ಯೋಗಪಟ್ಟಿಕಾ ಅಚಲಾಸನಯೋಗಪಟ್ಟಿಕಾ ।

**ವರಕಕ್ಷ್ಯಾ—** ವರಾ ಚ ಸಾ ಕಕ್ಷ್ಯಾ ಚ ವರಕಕ್ಷ್ಯಾ ।

**ಇಷ್ಟದಂ—** ಇಷ್ಟಂ ದದಾತಿ ಇತಿ ಇಷ್ಟದಃ, ತಂ ಇಷ್ಟದಂ ।

**ಧನ್ಯತಮಾ—** ಅತಿಶಯೇನ ಧನ್ಯಾ ಧನ್ಯತಮಾ ।

**ವ್ಯಾಕರಣ ವಿಶೇಷ—** 'ಹರಿಂ ಪರಿತಃ' ಎಂಬಲ್ಲಿ 'ಅಭಿತಃ ಪರಿತಃ ಸಮಯಾನಿಕಷಾಹಾಪ್ರತಿಯೋಗೇಽಪಿ' ಎಂಬ ವಾರ್ತಿಕದಿಂದ ಪರಿತಃ ಎಂಬ ಶಬ್ದದ ಯೋಗವಿದ್ದಾಗ ದ್ವಿತೀಯಾ ವಿಭಕ್ತಿಯು ಬಂದಿದೆ. ಅಹೋ ಅನಿಶಂ ಎಂಬಲ್ಲಿ 'ಓತ್' ಎಂಬ ಸೂತ್ರದಿಂದ ಪ್ರಗೃಹ್ಯ ಸಂಜ್ಞೆ ಬಂದು ಪ್ರಕೃತಿಭಾವ ಬಂದಿದೆ.

★ ★ ★

ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸದೇವರ ಸೊಂಟದಲ್ಲಿ ಪ್ರಕಾಶಮಾನವಾದ ಕೃಷ್ಣಾಜಿನವನ್ನು ವರ್ಣಿಸುತ್ತಾರೆ.

**ರುಚಿರೇಣ ವರೈಣಚರ್ಮಣಾ ರುಚಿರಾಜದ್ಯುತಿಚಾರುರೋಚಿಷಾ ।**
**ಪರಮೋರುನಿತಂಬಸಂಗಿನಾ ಪರಮಾಶ್ಚರ್ಯತಯಾ ವಿರಾಜ್ಯತೇ ॥ 31 ॥**

**ಪದಚ್ಛೇದ—** ರುಚಿರೇಣ, ವರೈಣಚರ್ಮಣಾ, ರುಚಿರಾಜದ್ಯುತಿಚಾರುರೋಚಿಷಾ, ಪರಮೋರುನಿತಂಬಸಂಗಿನಾ, ಪರಮಾಶ್ಚರ್ಯತಯಾ, ವಿರಾಜ್ಯತೇ ।

**ಅನ್ವಯ—** ರುಚಿರಾಜದ್ಯುತಿಚಾರುರೋಚಿಷಾ, ಪರಮೋರುನಿತಂಬಸಂಗಿನಾ, ರುಚಿರೇಣ ವರೈಣಚರ್ಮಣಾ, ಪರಮಾಶ್ಚರ್ಯತಯಾ, ವಿರಾಜ್ಯತೇ ।

**ಅನ್ವಯಾರ್ಥ—**

**ರುಚಿರಾಜ ದ್ಯುತಿ ಚಾರು ರೋಚಿಷಾ** = ಸೂರ್ಯನ ಕಾಂತಿಯಂತೆ ಮನೋಹರವಾದ ಕಾಂತಿಯುಳ್ಳ,

**ಪರಮೋರು ನಿತಂಬಸಂಗಿನಾ** = ಸರ್ವೋತ್ತಮರಾದ ಶ್ರೀವೇದವ್ಯಾಸರ ಉತ್ಕೃಷ್ಟವಾದ ಸೊಂಟದ ಸಂಬಂಧವುಳ್ಳ,

**ರುಚಿರೇಣ** = ಸುಂದರವಾದ

**ವರೈಣಚರ್ಮಣಾ** = ಉತ್ತಮವಾದ ಕೃಷ್ಣಾಜಿನದಿಂದ,

**ಪರಮಾಶ್ಚರ್ಯತಯಾ** = ಅತ್ಯಂತ ಆಶ್ಚರ್ಯಕರವಾದ ರೀತಿಯಿಂದ

**ವಿರಾಜ್ಯತೇ** = ಪ್ರಕಾಶಿಸೋಣವಾಗುತ್ತದೆ.

**ತಾತ್ಪರ್ಯ—** ಶ್ರೀವೇದವ್ಯಾಸರು ತಮ್ಮ ಉತ್ಕೃಷ್ಟವಾದ ತೊಡೆಗಳು ಮತ್ತು ಸೊಂಟದಲ್ಲಿ ಕೃಷ್ಣಾಜಿನವನ್ನು ಧರಿಸಿ-ರುತ್ತಾರೆ. ಅದು ಸೂರ್ಯನಂತೆ ಕಾಂತಿಯುಳ್ಳದ್ದಾಗಿ, ಮನೋಹರವಾಗಿದೆ. ಅದು ಅತ್ಯಾಶ್ಚರ್ಯಕರವಾಗಿ ಹೊಳೆಯುತ್ತಿದೆ.

ವಿಗ್ರಹ—

**ಪರಮೋರುನಿತಂಬಸಂಗಿನಾ—** ಉರುಶ್ಚಾಸೌ ನಿತಂಬಶ್ಚ ಉರುನಿತಂಬಃ, ಪರಮಸ್ಯ ಉರುನಿತಂಬಃ ಪರಮೋರುನಿತಂಬಃ, ಸಂಗಃ ಅಸ್ಯ ಅಸ್ತೀತಿ ಸಂಗಿ, ಪರಮಸ್ಯ ಉರುನಿತಂಬಸಂಗಿ ಪರಮೋರು-ನಿತಂಬಸಂಗಿ **ಅಥವಾ** ಊರೂ ಚ ನಿತಂಬಶ್ಚ ಊರುನಿತಂಬಾಃ, ಪರಮಸ್ಯ ಊರುನಿತಂಬಾಃ, ತೈಃ ಸಂಗಿ ಪರಮೋರುನಿತಂಬಸಂಗಿ, ತೇನ ಪರಮೋರುನಿತಂಬಸಂಗಿನಾ ।

**ವರೈಣಚರ್ಮಣಾ—** ಏಣಸ್ಯ ಚರ್ಮ ಏಣಚರ್ಮ, ವರಂ ಚ ತತ್ ಏಣಚರ್ಮ ಚ ವರೈಣಚರ್ಮ, ತೇನ ವರೈಣಚರ್ಮಣಾ ।

**ರುಚಿರಾಜದ್ಯುತಿಚಾರುರೋಚಿಷಾ—** ರುಚೀನಾಂ ರಾಜಾ ರುಚಿರಾಜಃ, ರುಚಿರಾಜಸ್ಯ ದ್ಯುತಿಃ ರುಚಿ-ರಾಜದ್ಯುತಿಃ ರುಚಿರಾಜದ್ಯುತಿವತ್ ಚಾರು ರೋಚಿಃ ಯಸ್ಯ ತತ್ ರುಚಿರಾಜದ್ಯುತಿಚಾರುರೋಚಿಃ, ತೇನ ರುಚಿರಾಜದ್ಯುತಿಚಾರುರೋಚಿಷಾ ।

**ಪರಮಾಶ್ಚರ್ಯತಯಾ—** ಪರಮಂ ಚ ತತ್ ಆಶ್ಚರ್ಯಂ ಚ, ಪರಮಾಶ್ಚರ್ಯಂ, ಪರಮಾಶ್ಚರ್ಯಸ್ಯ ಭಾವಃ ಪರಮಾಶ್ಚರ್ಯತಾ, ತಯಾ ಪರಮಾಶ್ಚರ್ಯತಯಾ ।

**ಕ್ರಿಯಾಪದ—** ವಿರಾಜ್ಯತೇ-'ವಿ' ಉಪಸರ್ಗಪೂರ್ವಕಾತ್ ರಾಜ್ಯ 'ದೀಪ್ತೌ' ಇತಿ ದೀಪ್ತ್ಯರ್ಥಕಾತ್ ರಾಜ್ ಧಾತೋಃ ಅಕರ್ಮಕಾತ್ ಆತ್ಮನೇಪದಿನಃ ಭಾವೇ ವರ್ತಮಾನೇ ಲಟಿ ವಿರಾಜ್ಯತೇ ಇತಿ ರೂಪಮ್ (ಭಾವೇ ಪ್ರಯೋಗದಲ್ಲಿ ಒಂದೇ ರೂಪ) ।

**ಪ್ರಯೋಗಃ-** ವರೈಣಚರ್ಮಣಾ ವಿರಾಜ್ಯತೇ (ಭಾವೇ) ವರೈಣಚರ್ಮ ವಿರಾಜತೇ ।

★ ★ ★

ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸದೇವರ ಹೊಟ್ಟೆಯನ್ನು ವರ್ಣಿಸುತ್ತಾರೆ

**ತನುನಿಮ್ನಸುನಾಭಿಶೋಭಿತೇ ವಲಿಭೇ ವಾರಿಜನಾಭ ಆದಧೇ ।**
**ಪ್ರತನಾವತಿಸುಂದರೇ ಮೃದಾವುದರೇಽಸ್ಮಿನ್ ಜಗದಂಡಮಂಡಲಮ್ ॥ 32 ॥**

**ಪದಚ್ಛೇದ—** ತನುನಿಮ್ನಸುನಾಭಿಶೋಭಿತೇ, ವಲಿಭೇ, ವಾರಿಜನಾಭಃ, ಆದಧೇ, ಪ್ರತನೌ, ಅತಿಸುಂದರೇ, ಮೃದೌ, ಉದರೇ, ಅಸ್ಮಿನ್, ಜಗದಂಡಮಂಡಲಮ್ ।

**ಅನ್ವಯ—** ವಾರಿಜನಾಭಃ, ತನುನಿಮ್ನಸುನಾಭಿಶೋಭಿತೇ, ವಲಿಭೇ, ಪ್ರತನೌ, ಅತಿಸುಂದರೇ, ಮೃದೌ, ಅಸ್ಮಿನ್, ಉದರೇ, ಜಗದಂಡಮಂಡಲಂ, ಆದಧೇ ।

**ಅನ್ವಯಾರ್ಥ—**

**ವಾರಿಜನಾಭಃ** = ಪದ್ಮನಾಭನು (ಹೊಕ್ಕುಳಲ್ಲಿ ಪದ್ಮವನ್ನು ಧರಿಸಿದ ಶ್ರೀವೇದವ್ಯಾಸರು)

**ತನು ನಿಮ್ನ ಸುನಾಭಿ ಶೋಭಿತೇ** = ಸಣ್ಣದಾದ, ಆಳವಾದ ಸುಂದರವಾದ ಹೊಕ್ಕುಳಿನಿಂದ ಪ್ರಕಾಶಮಾನವಾದ, ಅಲಂಕೃತವಾದ

**ವಲಿಭೇ** = ತ್ರಿವಳಿಯಿಂದ ಕೂಡಿದ,

**ಪ್ರತನೌ** = ಅತಿ ಸಣ್ಣದಾದ,

**ಅತಿಸುಂದರೇ** = ಬಹಳ ಮನೋಹರವಾದ,

**ಮೃದೌ** = ಮೃದುವಾದ ಕೋಮಲವಾದ

**ಅಸ್ಮಿನ್ ಉದರೇ** = ಈ ಹೊಟ್ಟೆಯಲ್ಲಿ

**ಜಗದಂಡ ಮಂಡಲಂ** = ಬ್ರಹ್ಮಾಂಡಗಳ ಸಮೂಹವನ್ನು (ಅನೇಕ ಕೋಟಿ ಬ್ರಹ್ಮಾಂಡಗಳನ್ನು)

**ಆದಧೇ** = ಧರಿಸಿದ್ದಾರೆ.

**ತಾತ್ಪರ್ಯ—** ಶ್ರೀವೇದವ್ಯಾಸರೇ ತಾವರೆಯನ್ನು ಹೊಕ್ಕುಳಿನಲ್ಲಿ ಧರಿಸಿರುವ ಪದ್ಮನಾಭರೂಪಿಯಾದ ನಾರಾಯಣ ದೇವರು. ಈ ವೇದವ್ಯಾಸರ ಈ ಹೊಟ್ಟೆಯು ಸಣ್ಣದಾದ ಆಳವಾದ ಸುಂದರವಾದ ಹೊಕ್ಕಳಿನಿಂದ ಅಲಂಕೃತವಾಗಿದೆ. ಅದರಲ್ಲಿ ಮೂರು ರೇಖೆಗಳು (ಸುಕ್ಕುಗಳು ಇವೆ. ಇದು ಅತಿ ಮನೋಹರವೂ ಸುಕೋಮಲವೂ ಆಗಿದೆ. ಆದರೆ ಇಂತಹ ಸಣ್ಣ ಹೊಟ್ಟೆಯಲ್ಲಿ ಇವರು ಸಮಗ್ರ ಬ್ರಹ್ಮಾಂಡಕೋಟಿಯನ್ನು ಧರಿಸಿದ್ದಾರೆ. ಇದೂ ಒಂದು ಅತ್ಯಾಶ್ಚರ್ಯ.

**ವಿಗ್ರಹ—**

**ತನುನಿಮ್ನಸುನಾಭಿಶೋಭಿತೇ—** ಶೋಭನಶ್ಚಾಸೌ ನಾಭಿಶ್ಚ ಸುನಾಭಿಃ, ತನುಶ್ಚಾಸೌ (ತನುಶ್ಚ ಸಾ ನಿಮ್ನಾ ಚ ತನುನಿಮ್ನಾ) ನಿಮ್ನಾ ಚ ತನುನಿಮ್ನಾ, ತನುನಿಮ್ನಾ ಚ ಸಾ ಸುನಾಭಿಶ್ಚ ತನುನಿಮ್ನಸುನಾಭಿಃ, ತನು-ನಿಮ್ನಸುನಾಭ್ಯಾ ಶೋಭಿತಂ ತನುನಿಮ್ನಸುನಾಭಿಶೋಭಿತಂ, ತಸ್ಮಿನ್ ತನುನಿಮ್ನಸುನಾಭಿಶೋಭಿತೇ ।

**ವಲಿಭೇ—** ವಲಯಃ ಅಸ್ಯ ಸಂತೀತಿ ವಲಿಭಂ (ವಲಿಭಿಃ ಭಾ ಯಸ್ಯ ತತ್, ತಸ್ಮಿನ್), ತಸ್ಮಿನ್ ವಲಿಭೇ ।

**ವಾರಿಜನಾಭಃ—** ವಾರಿಣಃ ಜಾಯತ ಇತಿ ವಾರಿಜಂ (ವಾರಿಣಿಮಿ ಜಾತಂ ವಾರಿಜಂ), ವಾರಿಜಂ ನಾಭೌ ಯಸ್ಯ ಸಃ ವಾರಿಜನಾಭಃ ।

**ಜಗದಂಡಮಂಡಲಂ—** ಜಗತಾಂ ಅಂಡಾನಿ ಜಗದಂಡಾನಿ, ಜಗದಂಡಾನಾಂ ಮಂಡಲಂ ಜಗದಂಡ-ಮಂಡಲಂ, ತತ್ ಜಗದಂಡಮಂಡಲಂ ।

**ಕ್ರಿಯಾಪದ—** ಆದಧೇ- 'ಆಙ್' ಉಪಸರ್ಗಪೂರ್ವಕಾತ್ 'ಡುಧಾಞ್' ಧಾರಣಪೋಷಣಯೋಃ ಇತಿ ಧಾರಣ-ಪೋಷಣಾರ್ಥಕಾತ್ ಧಾಧಾತೋಃ ಸಕರ್ಮಕಾತ್, ಆತ್ಮನೇಪದಿನಃ ಭೂತಾನದ್ಯತನಪರೋಕ್ಷೇ ಲಿಟಿ ಪ್ರಥಮಪುರುಷೇ ಏಕವಚನೇ ''ಆದಧೇ'' ಇತಿ ರೂಪಮ್ ।

ಆ-ದಧೇ ದಧಾತೇ ದಧಿರೇ, ದಧಿಷೇ ದಧಾಥೇ ದಧಿಧ್ವೇ, ದಧೇ ದಧಿವಹೇ ದಧಿಮಹೇ ॥

**ಪ್ರಯೋಗ—** ವಾರಿಜನಾಭಃ ಜಗದಂಡಮಂಡಲಂ ಆದಧೇ । (ಕರ್ತರಿ) ವಾರಿಜನಾಭೇನ ಜಗದಂಡಮಂಡಲಂ ಆದಧೇ (ಕರ್ಮಣಿ) ।

★ ★ ★

ಶ್ರೀವೇದವ್ಯಾಸರು ಎದೆಯ ಮೇಲೆ ಧರಿಸಿರುವ ಯಜ್ಞೋಪವೀತವನ್ನೂ,
ಮನಸ್ಸಿನಲ್ಲಿ ಧರಿಸಿರುವ ಬ್ರಹ್ಮಸೂತ್ರವನ್ನೂ ವರ್ಣಿಸುತ್ತಾರೆ.

**ಹೃದಯೇ ಕೃತಸಜ್ಜನೋದಯೇ ಸುವಿಶಾಲೇ ಮುನಿವಂಶಶೇಖರಃ ।**
**ಉಭಯಂ ವಹತಿ ತ್ರಯೀಮಯಂ ವಿಮಲಂ ಬ್ರಹ್ಮಸುಸೂತ್ರಮುತ್ತಮಂ ॥ 33 ॥**

**ಪದಚ್ಛೇದ—** ಹೃದಯೇ, ಕೃತಸಜ್ಜನೋದಯೇ, ಸುವಿಶಾಲೇ, ಮುನಿವಂಶಶೇಖರಃ, ಉಭಯಂ, ವಹತಿ, ತ್ರಯೀಮಯಂ, ವಿಮಲಂ, ಬ್ರಹ್ಮಸುಸೂತ್ರಂ, ಉತ್ತಮಂ ।

**ಅನ್ವಯ—** ಮುನಿವಂಶಶೇಖರಃ ಕೃತಸಜ್ಜನೋದಯೇ, ಸುವಿಶಾಲೇ, ಹೃದಯೇ, ತ್ರಯೀಮಯಂ, ಉತ್ತಮಂ, ವಿಮಲಂ, ಉಭಯಂ, ಬ್ರಹ್ಮಸುಸೂತ್ರಂ, ವಹತಿ ।

ಅನ್ವಯಾರ್ಥ—

**ಮುನಿವಂಶಶೇಖರಃ** = ವಸಿಷ್ಠರ ಕುಲದಲ್ಲಿ ಶ್ರೇಷ್ಠರಾದ ಈ ವ್ಯಾಸರು

**ಕೃತಸಜ್ಜನೋದಯೇ** = ಮಾಡಲ್ಪಟ್ಟ ಸಜ್ಜನರ ಅಭಿವೃದ್ಧಿಯುಳ್ಳ

**ಸುವಿಶಾಲೇ** = ಬಹಳ ವಿಸ್ತಾರವಾದ

**ಹೃದಯೇ** = ಎದೆಯಲ್ಲಿ (ಮನಸ್ಸಿನಲ್ಲಿ),

**ತ್ರಯೀಮಯಂ** = ಮೂರು ವೇದಗಳ ರೂಪವಾದ (ಮೂರು ವೇದಗಳ ಸಾರರೂಪವಾದ),

**ಉತ್ತಮಂ** = ಶ್ರೇಷ್ಠವಾದ,

**ವಿಮಲಂ** = ಶುದ್ಧವಾದ (ಬಿಳಿಯ ಬಣ್ಣದ),

**ಉಭಯಂ** = ಎರಡು ಬಗೆಯಾದ

**ಬ್ರಹ್ಮಸುಸೂತ್ರಂ** = ಒಳ್ಳೆಯ ಯಜ್ಞೋಪವೀತವನ್ನು (ಜನಿವಾರವನ್ನು) ಉತ್ತಮವಾದ ಬ್ರಹ್ಮಸೂತ್ರವನ್ನು

**ವಹತಿ** = ಧರಿಸಿದ್ದಾರೆ

**ತಾತ್ಪರ್ಯ**— ವಸಿಷ್ಠಮುನಿಗಳ ವಂಶದಲ್ಲಿ ಶ್ರೇಷ್ಠರಾದ ಈ ವೇದವ್ಯಾಸರ ಹೃದಯವು ವಿಶಾಲವಾಗಿದೆ. ಇವರು ಈ ಹೃದಯದಿಂದ ಯಾವಾಗಲೂ ಸಜ್ಜನರ ಏಳಿಗೆಯನ್ನು ಚಿಂತಿಸುತ್ತ ಅದನ್ನು ನೆರವೇರಿಸುತ್ತಿರುವರು. ಒಳಗಿನ ಹೃದಯದಿಂದ (ಮನಸ್ಸಿನಿಂದ) ನಾಲ್ಕು ಅಧ್ಯಾಯದ ಪವಿತ್ರವಾದ ಮೂರುವೇದಸಾರರೂಪವಾದ, ವೇದಾರ್ಥ ನಿರ್ಣಾಯಕವಾದ ಬ್ರಹ್ಮಸೂತ್ರವನ್ನು ಧರಿಸಿರುವರು. ಎದೆಯಿಂದ ಬೆಳ್ಳಗಿರುವ ವೇದತ್ರಯಸಿದ್ಧವಾದ ಮೂರು ಎಳೆಗಳುಳ್ಳ ಶ್ರೇಷ್ಠವಾದ ಯಜ್ಞೋಪವೀತವನ್ನು ಧರಿಸಿರುತ್ತಾರೆ.

ವಿಗ್ರಹ—

**ಕೃತಸಜ್ಜನೋಯೇ**— ಕೃತಃ ಸಜ್ಜನಾನಾಂ ಉದಯಃ ಯೇನ ತತ್ ಕೃತಸಜ್ಜನೋದಯಂ ತಸ್ಮಿನ್ ಕೃತ-ಸಜ್ಜನೋದಯೇ ।

**ಮುನಿವಂಶಶೇಖರಃ**— ಮುನೇಃ ವಂಶಃ ಮುನಿವಂಶಃ, ಮುನಿವಂಶೇ ಶೇಖರಃ ಮುನಿವಂಶಶೇಖರಃ ।

**ಕ್ರಿಯಾಪದ**— 'ವಹತಿ' ಇದೇ ಸರ್ಗದ 25ನೇ ಶ್ಲೋಕ ನೋಡಿರಿ. ।

**ಪ್ರಯೋಗ**— ಮುನಿವಂಶಶೇಖರಃ ಬ್ರಹ್ಮ ಸುಸೂತ್ರಂ ವಹತಿ (ಕರ್ತರಿ) । ಮುನಿವಂಶಶೇಖರೇಣ ಬ್ರಹ್ಮಸುಸೂತ್ರಂ ಉಹ್ಯತೇ (ಕರ್ಮಣಿ) ।

★ ★ ★

**ಚತುರ್ಮುಖ ಬ್ರಹ್ಮದೇವನು ಶ್ರೀವೇದವ್ಯಾಸರಿಗೆ ಕೌಸ್ತುಭರತ್ನವನ್ನು ಕಾಣಿಕೆಯಾಗಿ ಕೊಟ್ಟದ್ದಕ್ಕೆ ಕಾರಣವನ್ನು ಶ್ರೀಮಧ್ವಾಚಾರ್ಯರು ವಿವರಿಸುತ್ತಾರೆ.**

**ಅಸಮೇಽನಧಿಕೇ ಸುಸಾಧಿತೇ ನಿಜತಾತೇ ರವಿರಾಶಿದೀಧಿತಿ ।**

**ಪ್ರದದೌ ತ್ರಿಜಗಜ್ಜಯಧ್ವಜಂ ವಿಧಿರೇತದ್ ಗಲಸಂಗಿಭೂಷಣಮ್ ॥ 34 ॥**

**ಪದಚ್ಛೇದ**— ಅಸಮೇ, ಅನಧಿಕೇ, ಸುಸಾಧಿತೇ, ನಿಜತಾತೇ, ರವಿರಾಶಿದೀಧಿತಿ, ಪ್ರದದೌ, ತ್ರಿಜಗಜ್ಜಯಧ್ವಜಂ, ವಿಧಿಃ, ಏತತ್, ಗಲಸಂಗಿಭೂಷಣಂ ।

**ಅನ್ವಯ**— ವಿಧಿಃ, ನಿಜತಾತೇ, ಅಸಮೇ, ಅನಧಿಕೇ, ಸುಸಾಧಿತೇ, ರವಿರಾಶಿದೀಧಿತಿ, ತ್ರಿಜಗಜ್ಜಯಧ್ವಜಂ, ಏತತ್, ಗಲಸಂಗಿಭೂಷಣಂ, ದದೌ ।

**ಅನ್ವಯಾರ್ಥ—**

**ವಿಧಿಃ** = ಚತುರ್ಮುಖ ಬ್ರಹ್ಮನು,
**ನಿಜತಾತೇ** = ತನ್ನ ತಂದೆಯಾದ ನಾರಾಯಣ ದೇವರು
**ಅಸಮೇ** = ಸಮಾನರಿಲ್ಲದವರು,
**ಅನಧಿಕೇ** = ಉತ್ತಮರಿಲ್ಲದವರು ಎಂದು
**ಸುಸಾಧಿತೇ** = ಚೆನ್ನಾಗಿ ಸಾಧಿಸಲ್ಪಟ್ಟಾಗ
**ರವಿರಾಶಿ ದೀಧಿತಿ** = ಸೂರ್ಯರ ಸಮೂಹದ ಕಾಂತಿಯಂತೆ ಕಾಂತಿಯುಳ್ಳ,
**ತ್ರಿಜಗಜ್ಜಯ ಧ್ವಜಂ** = ಮೂರು ಲೋಕದ ಜಯದ ಧ್ವಜದಂತಿರುವ,
**ಏತತ್** = ಈ
**ಗಲಸಂಗಿ ಭೂಷಣಂ** = ಕುತ್ತಿಗೆಯ ಸಂಬಂಧವನ್ನು ಹೊಂದಿರುವ ಕೌಸ್ತುಭಮಣಿಯೆಂಬ ಅಲಂಕಾರವನ್ನು
**ಪ್ರದದೌ** = ಕೊಟ್ಟನು.

**ತಾತ್ಪರ್ಯ—** ಶ್ರೀವೇದವ್ಯಾಸರು ನಾರಾಯಣನಿಗೆ ಸಮರೂ ಅಧಿಕರೂ ಯಾರೂ ಇಲ್ಲವೆಂದು ಸಾಧಿಸಿದರು. ಆಗ ಚತುರ್ಮುಖ ಬ್ರಹ್ಮನು ತನ್ನ ತಂದೆಯಾದ ನಾರಾಯಣನ ಸರ್ವೋತ್ತಮತ್ವ ಸಾಧನೆಯಿಂದ ಸಂತೋಷಗೊಂಡು ಸೂರ್ಯಸಮೂಹದಂತೆ ಹೊಳೆಯುವ, ಮೂರು ಲೋಕದ ಜಯಕ್ಕೆ ಸೂಚಕವಾದ ಧ್ವಜದಂತಿರುವ ಕಂಠಾಲಂಕಾರವಾದ ಕೌಸ್ತುಭ ಮಣಿಯನ್ನು ಶ್ರೀವೇದವ್ಯಾಸರಿಗೆ ಕಾಣಿಕೆಯಾಗಿ ಕೊಟ್ಟನು.

**ವಿಶೇಷಾಂಶ—** ಬ್ರಹ್ಮಸಭೆಯಲ್ಲಿ ''**ನಾಸ್ತಿನಾರಾಯಣಸಮಂ ನ ಭೂತಂ ನ ಭವಿಷ್ಯತಿ, ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಂ - ನಾರಾಯಣನಿಗೆ ಸಮರು ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆ ಇರುವುದಿಲ್ಲ. ಈ ಸತ್ಯವಾಕ್ಯದಿಂದ ನಾನು ಎಲ್ಲವನ್ನೂ ಸಾಧಿಸುತ್ತೇನೆ.**'' ಎಂದು ವ್ಯಾಸರು ಪ್ರತಿಜ್ಞೆ ಮಾಡಿ ಈ ಶ್ಲೋಕವನ್ನು ಪತ್ರದಲ್ಲಿ ಬರೆದು ಚತುರ್ಮುಖ ಬ್ರಹ್ಮನ ಸಭೆಯಲ್ಲಿ ನೇತುಹಾಕಿದರು. ಆಗ ಸಾವಿರ ಮಂದಿ ಋಷಿಗಳು ಒಬ್ಬೊಬ್ಬರು ಒಂದೊಂದು ಪ್ರಶ್ನೆಯಂತೆ ಒಟ್ಟಿಗೆ ಸಾವಿರ ಪ್ರಶ್ನೆಯನ್ನು ಒಂದೇ ಬಾರಿ ಕೇಳಿದರು. ಶ್ರೀವ್ಯಾಸರು ಅವರ ಸಾವಿರ ಆಕ್ಷೇಪಗಳಿಗೂ ಏಕ-ಕಾಲದಲ್ಲಿ ಉತ್ತರವನ್ನು ಕೊಟ್ಟು ಅವರಿಗೆ ಸಂತೋಷವುಂಟಾಗುವಂತೆ ಮಾಡಿದರು. ''**ಸಹಸ್ರಾರ್ಥಾನ್ ಋಷೀನ್ ಏಷಃ ಯೌಗಪದ್ಯೇನ ಪೃಚ್ಛತಃ । ಸಹಸ್ರೋತ್ತರದಾನೇನಯುಗಪತ್ ಪರ್ಯತೋಷಯತ್ ॥**'' ಎಂಬ ಪ್ರಮಾಣದಲ್ಲಿ ಈ ವಿಷಯವು ಉಲ್ಲಿಖಿತವಾಗಿದೆ. ಹೀಗೆ ನಾರಾಯಣನ ಸರ್ವೋತ್ತಮತ್ವವನ್ನು ಸಾಧಿಸಿದಾಗ ಚತುರ್ಮುಖ ಬ್ರಹ್ಮದೇವರು ಆನಂದಭರಿತರಾಗಿ ಭಕ್ತಿಭಾವದಿಂದ ಕೌಸ್ತುಭಮಣಿಯನ್ನು ಶ್ರೀವ್ಯಾಸರಿಗೆ ಕಾಣಿಕೆಯಾಗಿ ಕೊಟ್ಟರು.

**ವಿಗ್ರಹ—**

**ಅಸಮೇ—** ನ ವಿದ್ಯತೇ ಸಮಃ ಯಸ್ಯ ಸಃ ಅಸಮಃ, ತಸ್ಮಿನ್ ಅಸಮೇ ।
**ಅನಧಿಕೇ—** ನ ವಿದ್ಯತೇ ಅಧಿಕಃ ಯಸ್ಮಾತ್ ಸಃ ಅನಧಿಕಃ, ತಸ್ಮಿನ್ ಅನಧಿಕೇ ।
**ಸುಸಾಧಿತೇ—** ಸಮ್ಯಕ್ ಸಾಧಿತಃ ಸುಸಾಧಿತಃ, ತಸ್ಮಿನ್ ಸುಸಾಧಿತೇ ।
**ನಿಜತಾತೇ—** ನಿಜಶ್ಚಾಸೌ ತಾತಶ್ಚ ನಿಜತಾತಃ ತಸ್ಮಿನ್ ನಿಜತಾತೇ ।
**ರವಿರಾಶಿದೀಧಿತಿ—** ರವೀಣಾಂ ರಾಶಿಃ ರವಿರಾಶಿಃ, ರವಿರಾಶೇಃ ದೀಧಿತಯ ಇವ ದೀಧಿತಯಃ ಯಸ್ಯ ತತ್ ರವಿರಾಶಿದೀಧಿತಿ, ತತ್ ರವಿರಾಶಿದೀಧಿತಿ ।
**ತ್ರಿಜಗಜ್ಜಯಧ್ವಜಂ—** ತ್ರಯಾಣಾಂ ಜಗತಾಂ ಸಮಾಹಾರಃ ತ್ರಿಜಗತ್, ತ್ರಿಜಗತಃ ಜಯಃ ತ್ರಿಜಗಜ್ಜಯಃ (ತ್ರೀಣಿ ಚ ತಾನಿ ಜಗಂತಿ ಚ ತ್ರಿಜಗಂತಿ, ತ್ರಿಜಗತಾಂ ಜಯಃ ತಸ್ಯ), ತ್ರಿಜಗಜ್ಜಯಸ್ಯ ಧ್ವಜಃ ತ್ರಿಜಗಜ್ಜಯಧ್ವಜಃ ತಂ ತ್ರಿಜಗಜ್ಜಯಧ್ವಜಂ ।

**ಗಲಸಂಗಿಭೂಷಣಂ—** ಸಂಗಃ ಅಸ್ಯ ಅಸ್ತೀತಿ ಸಂಗಿ, ಗಲೇನ ಸಂಗಿ ಗಲಸಂಗಿ (ಗಲಸಂಗೋ ಅಸ್ಯಾಸ್ತೀತಿ ಗಲಸಂಗಿ) ಗಲಸಂಗೀ ಚ ತತ್ ಭೂಷಣಂ ಚ ಗಲಸಂಗಿಭೂಷಣಂ, ತತ್ ಗಲಸಂಗಿಭೂಷಣಂ ।

**ಕ್ರಿಯಾಪದ— ಪ್ರದದೌ-** ಪ್ರ ಉಪಸರ್ಗಪೂರ್ವಕಾತ್ 'ಡುದಾಞ್' ದಾನೇ ಇತಿ ದಾನಾರ್ಥಕಾತ್ ದಾಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟಿ ಪ್ರಥಮಪುರುಷೇ ಏಕವಚನೇ ''ಪ್ರದದೌ'' ಇತಿ ರೂಪಮ್ ।

ಪ್ರ-ದದೌ ದದತುಃ ದದುಃ, ದದಿಥ ದದಾಥ, ದದಥುಃ, ದದ ದದೌ ದದಿವ ದದಿಮ ॥

**ಪ್ರಯೋಗ—** ವಿಧಿಃ ಭೂಷಣಂ ಪ್ರದದೌ (ಕರ್ತರಿ) । ವಿಧಿನಾ ಭೂಷಣಂ ಪ್ರದದೇ (ಕರ್ಮಣಿ) ।

★ ★ ★

ಶ್ರೀಮಧ್ವರು ಶ್ರೀವೇದವ್ಯಾಸರ ಹಸ್ತಗಳನ್ನು ವರ್ಣಿಸುತ್ತಾರೆ.

**ಅರಿವಾರಿಜಲಕ್ಷಣೋಲ್ಲಸತ್ ಸುಕುಮಾರಾರುಣಪಾಣಿಪದ್ಮಯೋಃ ।**
**ಪೃಥುಪೀವರವೃತ್ತಹಸ್ತಯೋ ರುಪಮಾಂ ನೈವ ಲಭಾಮಹೇಽನಯೋಃ ॥ 35 ॥**

**ಪದಚ್ಛೇದ—** ಅರಿವಾರಿಜಲಕ್ಷಣೋಲ್ಲಸತ್ಸುಕುಮಾರಾರುಣಪಾಣಿಪದ್ಮಯೋಃ, ಪೃಥುಪೀವರವೃತ್ತಹಸ್ತಯೋಃ, ಉಪಮಾಂ, ನ, ಏವ ಲಭಾಮಹೇ, ಅನಯೋಃ ।

**ಅನ್ವಯ—** ಅರಿವಾರಿಜಲಕ್ಷಣೋಲ್ಲಸತ್ಸುಕುಮಾರಾರುಣಪಾಣಿಪದ್ಮಯೋಃ ಅನಯೋಃ ಪೃಥುಪೀವರವೃತ್ತ-ಹಸ್ತಯೋಃ, ಉಪಮಾಂ ನೈವ ಲಭಾಮಹೇ ।

**ಅನ್ವಯಾರ್ಥ—**

**ಅರಿವಾರಿಜಲಕ್ಷಣ ಉಲ್ಲಸತ್** = ಚಕ್ರ, ಶಂಖ ಇವುಗಳ ರೇಖಾತ್ಮಕವಾದ ಚಿಹ್ನೆಗಳಿಂದ ಪ್ರಕಾಶಿಸುವ

**ಸುಕುಮಾರ ಅರುಣ ಪಾಣಿಪದ್ಮಯೋಃ** = ಮೃದುವಾದ ಕೆಂಪಾದ ಕಮಲದಂತಿರುವ ಅಂಗೈಗಳುಳ್ಳ

**ಅನಯೋಃ** = ಇಂತಹ

**ಪೃಥು ಪೀವರ ವೃತ್ತ ಹಸ್ತಯೋಃ** = ವಿಶಾಲವಾದ ಪುಷ್ಟವಾದ ಗುಂಡಗಿರುವ ಎರಡು ಕೈಗಳಿಗೆ

**ಉಪಮಾಂ** = ಹೋಲಿಕೆಯನ್ನು

**ವಯಂ** = ನಾವು

**ನೈವ ಲಭಾಮಹೇ** = ಹೊಂದುವುದೇ ಇಲ್ಲ.

**ತಾತ್ಪರ್ಯ—** ಈ ವೇದವ್ಯಾಸರ ಎರಡು ಕೈಗಳೂ ವಿಶಾಲವೂ ಪುಷ್ಟವೂ ಮತ್ತು ಗುಂಡಾಗಿಯೂ ಇವೆ. ಈ ಕೈಗಳ ಅಂಗೈಗಳ ತಲಗಳು ಮೃದುವಾಗಿಯೂ ಕಮಲದಂತೆ ಕೆಂಪಗೆಯೂ ಇವೆ. ಇವುಗಳಲ್ಲಿ ಚಕ್ರ ಶಂಖದ ರೇಖಾ ರೂಪವಾದ ಚಿಹ್ನೆಗಳಿವೆ. ಇಂತಹ ಸುಂದರವಾದ ಕೈಗಳಿಗೆ ಮೂರು ಲೋಕದಲ್ಲಿಯೂ ಹೋಲಿಸಲು ಅರ್ಹವಾದ ಬೇರೊಂದು ವಸ್ತುವನ್ನು ನಾವು ನೋಡಿಯೇ ಇಲ್ಲ.

**ವಿಗ್ರಹ—**

**ಅರಿವಾರಿಜಲಕ್ಷಣೋಲ್ಲಸತ್ಸುಕುಮಾರಾರುಣಪಾಣಿಪದ್ಮಯೋಃ—** ಅರಾಣಿ ಅಸ್ಯ ಸಂತೀತಿ ಅರಿಃ, ವಾರಿಣಿ ಜಾಯತೇ ಇತಿ ವಾರಿಜಃ, ಅರಿಶ್ಚ ವಾರಿಜಶ್ಚ ಅರಿವಾರಿಜೌ, ಅರಿವಾರಿಜಯೋಃ ಲಕ್ಷಣೇ ಅರಿ-ವಾರಿಜಲಕ್ಷಣೇ, ಪಾಣೀ ಏವ ಪದ್ಮೇ ಪಾಣಿಪದ್ಮೇ, ಸುಕುಮಾರೇ ಚ ಅರುಣೇ ಚ ತೇ ಪಾಣಿಪದ್ಮೇ ಚ

ಸುಕುಮಾರಾರುಣಪಾಣಿಪದ್ಮೇ, ಅರಿವಾರಿಜಲಕ್ಷಣಾಭ್ಯಾಂ ಉಲ್ಲಸತೀ ಅರಿವಾರಿಜಲಕ್ಷಣೋಲ್ಲಸತೀ, ಅರಿವಾರಿಜಲಕ್ಷಣೋಲ್ಲಸತೀ ಸುಕುಮಾರಾರುಣಪಾಣಿಪದ್ಮೇ ಯಯೋಃ ತೌ ಅರಿವಾರಿಜಲಕ್ಷಣೋ-ಲ್ಲಸತ್‌ಸುಕುಮಾರಾರುಣಪಾಣಿಪದ್ಮೌ, ತಯೋಃ ಅರಿವಾರಿಜಲಕ್ಷಣೋಲ್ಲಸತ್‌ಸುಕುಮಾರಾರುಣ-ಪಾಣಿಪದ್ಮಯೋಃ ।

**ಪೃಥುಪೀವರವೃತ್ತಹಸ್ತಯೋಃ—** ಪೃಥೂ ಚ ಪೀವರೌ ಚ ಪೃಥುಪೀವರೌ, ವೃತ್ತೌ ಚ ತೌ ಹಸ್ತೌ ಚ ವೃತ್ತಹಸ್ತೌ, ಪೃಥುಪೀವರೌ ಚ ಚಿತೌ ವೃತ್ತಹಸ್ತೌ ಚ ಪೃಥುಪೀವರವೃತ್ತಹಸ್ತೌ, ತಯೋಃ ಪೃಥುಪೀವರವೃತ್ತ-ಹಸ್ತಯೋಃ ।

**ಕ್ರಿಯಾಪದ—** **ಲಭಾಮಹೇ**- ಡುಲಭಷ್ ಪ್ರಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ 'ಲಭ್' ಧಾತೋಃ ಸಕರ್ಮಕಾತ್ ಆತ್ಮನೇ ಪದಿನಃ ವರ್ತಮಾನೇ ಲಟಿ ಉತ್ತಮಪುರುಷೇ ಬಹುವಚನೇ 'ಲಭಾಮಹೇ' ಇತಿ ರೂಪಮ್ ।

ಲಭತೇ ಲಭೇತೇ ಲಭಂತೇ, ಲಭಸೇ ಲಭೇಥೇ ಲಭಧ್ವೇ, ಲಭೇ ಲಭಾವಹೇ ಲಭಾಮಹೇ ॥

**ಪ್ರಯೋಗ—** ವಯಂ ಉಪಮಾಂ ನ ಲಭಾಮಹೇ (ಕರ್ತರಿ) । ಅಸ್ಮಾಭಿಃ ಉಪಮಾ ನ ಲಭ್ಯತೇ (ಕರ್ಮಣಿ) ।

★ ★ ★

ಶ್ರೀವೇದವ್ಯಾಸದೇವರ ಜ್ಞಾನಮುದ್ರಾಯುತವಾದ ಬಲಗೈಯನ್ನೂ
ಅಭಯಮುದ್ರಾಯುತವಾದ ಎಡಗೈಯನ್ನೂ ವರ್ಣಿಸುತ್ತಾರೆ.

**ಭಜತಾಂ ವರತರ್ಕಮುದ್ರಯಾ ದ್ಯತಿ ಹಸ್ತಾಗ್ರಮಬೋಧಮೀಶಿತುಃ ।**
**ಅಧಿಜಾನು ಸಮರ್ಪಿತಂ ಪರಂ ಕೃತಭೂಯೋಭಯಭಂಗಮಂಗಲಂ ॥ 36 ॥**

**ಪದಚ್ಛೇದ—** ಭಜತಾಂ, ವರತರ್ಕಮುದ್ರಯಾ, ದ್ಯತಿ, ಹಸ್ತಾಗ್ರಂ, ಅಬೋಧಂ, ಈಶಿತುಃ, ಅಧಿಜಾನು, ಸಮರ್ಪಿತಂ, ಪರಂ, ಕೃತಭೂಯೋಭಯಭಂಗಮಂಗಲಂ ।

**ಅನ್ವಯ—** ಈಶಿತುಃ ಹಸ್ತಾಗ್ರಂ, ವರತರ್ಕಮುದ್ರಯಾ ಭಜತಾಂ ಅಬೋಧಂ ದ್ಯತಿ, ಅಧಿಜಾನು ಸಮರ್ಪಿತಂ ಪರಂ, ಕೃತಭೂಯೋಭಯಭಂಗಮಂಗಲಂ ।

**ಅನ್ವಯಾರ್ಥ—**

**ಈಶಿತುಃ** = ಪ್ರಭುವಾದ ಶ್ರೀವೇದವ್ಯಾಸದೇವರ
**ಹಸ್ತಾಗ್ರಂ** = ಬಲಗೈಯ ತುದಿಯ ಭಾಗವು,
**ವರ ತರ್ಕಮುದ್ರಯಾ** = ಉತ್ತಮವಾದ ಜ್ಞಾನಮುದ್ರೆಯಿಂದ
**ಭಜತಾಂ** = ಸೇವಿಸುವ ಭಕ್ತರ
**ಅಬೋಧಂ** = ಅಜ್ಞಾನವನ್ನು
**ದ್ಯತಿ** = ಖಂಡಿಸುತ್ತದೆ (ನಿವಾರಿಸುತ್ತದೆ),
**ಅಧಿಜಾನು** = ಎಡ ಮೊಣಗಂಟಿನ ಮೇಲೆ (ಮೊಣಕಾಲಿನ ಮೇಲೆ)
**ಸಮರ್ಪಿತಂ** = ಇಡಲ್ಪಟ್ಟ
**ಪರಂ** = ಎಡಗೈಯ ತುದಿಭಾಗವು,
**ಕೃತ** = ಮಾಡಲ್ಪಟ್ಟ

**ಭೂಯೋಭಯ ಭಂಗ** = ಹೆಚ್ಚಾದ ಅಧಿಕವಾದ ಸಂಸಾರಭಯದ ನಾಶವುಳ್ಳದ್ದು

**ಮಂಗಲಂ** = ಕಲ್ಯಾಣ ಸ್ವರೂಪವಾದುದು (ಮಂಗಲವುಳ್ಳದ್ದು).

**ತಾತ್ಪರ್ಯ—** ಲೋಕಸ್ವಾಮಿಯಾದ ನನ್ನ ಸ್ವಾಮಿಯಾದ ಶ್ರೀವೇದವ್ಯಾಸದೇವರು, ಬಲಗೈಯ ತುದಿ ಬೆರಳುಗಳಿಂದ ಜ್ಞಾನಮುದ್ರೆಯನ್ನು ತೋರಿಸುತ್ತಾ, ತನ್ನನ್ನು ಭಕ್ತಿಯಿಂದ ಸೇವಿಸುವವರ ಅಜ್ಞಾನವನ್ನು ಪರಿಹರಿಸುತ್ತಾರೆ. ಮೊಣಗಂಟಿನ ಮೇಲೆ ಇಟ್ಟುಕೊಂಡಿರುವ ಎಡಗೈಯ ತುದಿ ಬೆರಳುಗಳಿಂದ ಅಭಯ ಮುದ್ರೆಯನ್ನು ತೋರಿಸುತ್ತಾ, ಭಕ್ತರಿಗೆ ಉಂಟಾದ ಸಂಸಾರದ ಭಯವನ್ನು ದೂರ ಮಾಡಿ ಸಮಸ್ತ ಮಂಗಲವನ್ನೂ, ಮುಕ್ತಿಯನ್ನೂ ಕರುಣಿಸುತ್ತಾರೆ.

**ವಿಶೇಷಾಂಶ— ವಿಜ್ಞಾನರೋಚಿಃ ಪರಿಪೂರಿತಾಂತರ್ಬಾಹ್ಯಾಂಡಕೋಶಂ ಹರಿತೋಪಲಾಭಂ । ತರ್ಕಾಭಯೇತಂ ವಿಧಿ ಶರ್ವ ಪೂರ್ವಗೀರ್ವಾಣವಿಜ್ಞಾನದಮಾನತೋಽಸ್ಮಿ ॥** "ಸರ್ವವಿಷಯಕವಾದ ತನ್ನ ನಿರವಧಿಕ ಜ್ಞಾನದ ಕಾಂತಿಯಿಂದ **ಬ್ರಹ್ಮಾಂಡದ ಒಳಹೊರಗಿನ ಭಾಗವನ್ನು ಪ್ರಕಾಶಗೊಳಿಸುತ್ತಿರುವ ಪಚ್ಚೆ ಮಣಿಯಂತಹ ಪ್ರಕಾಶವುಳ್ಳ, ತರ್ಕಮುದ್ರಾ ಮತ್ತು ಅಭಯ ಮುದ್ರೆಯನ್ನು ಧರಿಸಿರುವ, ಬ್ರಹ್ಮ ರುದ್ರ ಮುಂತಾದ ದೇವೋತ್ತಮರಿಗೆ ಜ್ಞಾನಪ್ರದರಾದ ಶ್ರೀವೇದವ್ಯಾಸ-ರನ್ನು ನಮಸ್ಕರಿಸುವವನಾಗುತ್ತೇನೆ."** ಎಂಬ ಧ್ಯಾನ ಶ್ಲೋಕದಂತೆ ವೇದವ್ಯಾಸರು ಬಲಗೈಯ ಎರಡು ಬೆರಳುಗಳಿಂದ ಜ್ಞಾನಮುದ್ರೆಯನ್ನೂ, ಎಡಗೈಯ ಬೆರಳುಗಳಿಂದ ಅಭಯ ಮುದ್ರೆಯನ್ನೂ ಉಳ್ಳವರಾಗಿರುತ್ತಾರೆ. ಹೆಬ್ಬೆರಳು ಮತ್ತು ತೋರ್ಬೆರಳುಗಳನ್ನು ತುದಿಯಲ್ಲಿ ಸೇರಿಸುವುದೇ ತರ್ಕಮುದ್ರೆ (ಜ್ಞಾನಮುದ್ರೆ).

**ವಿಗ್ರಹ—**

**ವರತರ್ಕಮುದ್ರಯಾ—** ತರ್ಕಸ್ಯ ಮುದ್ರಾ ತರ್ಕಮುದ್ರಾ, ವರಾ ಚ ಸಾ ತರ್ಕಮುದ್ರಾ ಚ ವರ-ತರ್ಕಮುದ್ರಾ, ತಯಾ ವರತರ್ಕಮುದ್ರಯಾ ।

**ಹಸ್ತಾಗ್ರಂ—** ಹಸ್ತಸ್ಯ ಅಗ್ರಂ ಹಸ್ತಾಗ್ರಂ।

**ಅಬೋಧಂ—** ಬೋಧಸ್ಯ ಅಭಾವಃ ಅಬೋಧಃ, ತಂ ಅಬೋಧಂ ।

**ಅಧಿಜಾನು—** ಜಾನುನಿ ಇತಿ ಅಧಿಜಾನು ।

**ಕೃತಭೂಯೋಭಯಭಂಗಮಂಗಲಂ—** ಭೂಯಶ್ಚ ತತ್ ಭಯಂ ಚ ಭೂಯೋಭಯಂ, (ಭೂಯಃ ಭಯಂ ಯಸ್ಮಿನ್ ತತ್ ಭೂಯೋಭಯಂ ಸಂಸಾರಲಕ್ಷಣಂ), ಭೂಯೋಭಯಸ್ಯ ಭಂಗಃ ಭೂಯೋಭಯಭಂಗಃ, ಕೃತಃ ಭೂಯೋಭಯಭಂಗಃ ಯೇನ ತತ್ ಕೃತಭೂಯೋಭಯಭಂಗಂ, ತಚ್ಚ ತತ್ ಮಂಗಲಂ ಚ ಕೃತಭೂಯೋಭಯಭಂಗಮಂಗಲಂ, (ಭೂಯೋಭಯಭಂಗಶ್ಚ ಮಂಗಲಂ ಚ ಭೂಯೋಭಯಭಂಗಮಂಗಲೇ ಕೃತೇ ಭೂಯೋಭಯಭಂಗಮಂಗಲೇ ಯೇನ ತತ್)

**ಕ್ರಿಯಾಪದ—** ದ್ಯತಿ- ದೋ ಅವಖಂಡನೇ ಇತಿ ಅವಖಂಡನಾರ್ಥಕಾತ್ ದೋಧಾತೋಃ ಪರಸ್ಮೈಪದಿನಃ ಸಕರ್ಮಕಾತ್ ವರ್ತಮಾನೇ ಲಟಿ ಪ್ರಥಮಪುರುಷೇ ಏಕವಚನೇ "ದ್ಯತಿ" ಇತಿ ರೂಪಮ್ ।

ದ್ಯತಿ ದ್ಯತಃ ದ್ಯಂತಿ, ದ್ಯಸಿ ದ್ಯಥಃ ದ್ಯಥ, ದ್ಯಮಿ ದ್ಯವಃ ದ್ಯಮಃ ॥

**ಪ್ರಯೋಗ—** ಹಸ್ತಾಗ್ರಂ ಅಬೋಧಂ ದ್ಯತಿ (ಕರ್ತರಿ) । ಹಸ್ತಾಗ್ರೇಣ ಅಬೋಧಃ ದಾಯತೇ (ಕರ್ಮಣಿ) ।

★ ★ ★

ಶ್ರೀಮಧ್ವರು ಶ್ರೀವೇದವ್ಯಾಸರ ಕುತ್ತಿಗೆಯನ್ನು ವರ್ಣಿಸುತ್ತಾರೆ

**ಸತತಂ ಗಲತಾ ಸ್ವತಃ ಶ್ರುತಿತ್ರಿತಯೇನ ನೈವ ನಿಕಾಮಮಂಕಿತಃ ।**
**ಸುವಿಡಂಬಿತಕಂಬುರೀಕ್ಷ್ಯತೇ ವರರೇಖಾತ್ರಯವಾನ್ ಗುರೋರ್ಗಲಃ ॥ 37 ॥**

**ಪದಚ್ಛೇದ—** ಸತತಂ, ಗಲತಾ, ಸ್ವತಃ, ಶ್ರುತಿತ್ರಿತಯೇನ, ಇವ, (ಏವ) ನಿಕಾಮಂ, ಅಂಕಿತಃ, ಸುವಿಡಂಬಿತಕಂಬುಃ, ಈಕ್ಷ್ಯತೇ, ವರರೇಖಾತ್ರಯವಾನ್, ಗುರೋಃ, ಗಲಃ ।

**ಅನ್ವಯ—** ಸ್ವತಃ, ಸತತಂ, ಗಲತಾ, ಶ್ರುತಿತ್ರಿತಯೇನ (ಏವ), ನಿಕಾಮಂ, ಅಂಕಿತಃ, ಇವ, ವರರೇಖಾತ್ರಯವಾನ್, ಸುವಿಡಂಬಿತಕಂಬುಃ, ಗುರೋಃ, ಗಲಃ, ಈಕ್ಷ್ಯತೇ ।

**ಅನ್ವಯಾರ್ಥ—**

**ಸ್ವತಃ** = ತನ್ನಿಂದ

**ಸತತಂ** = ಯಾವಾಗಲೂ

**ಗಲತಾ** = ಹೊರಡುತ್ತಿರುವ

**ಶ್ರುತಿತ್ರಯೇನ (ಏವ)** = ಮೂರೂ ವೇದಗಳಿಂದ (ಮೂರು ವೇದಗಳಿಂದಲೇ),

**ನಿಕಾಮಂ** = ಚೆನ್ನಾಗಿ

**ಅಂಕಿತಃ ಇವ** = ಗುರುತು ಮಾಡಲ್ಪಟ್ಟಿದೆಯೋ ಎಂಬಂತಿರುವ

**ವರ** = ಉತ್ತಮವಾದ

**ರೇಖಾತ್ರಯವಾನ್** = ಮೂರು ಗೆರೆಗಳುಳ್ಳ,

**ಸುವಿಡಂಬಿತ ಕಂಬುಃ** = ಚೆನ್ನಾಗಿ ಹೋಲಿಕೆಯನ್ನು ಹೊಂದಿರುವ ಶಂಖವುಳ್ಳ

**ಗುರೋಃ** = ಶ್ರೀವೇದವ್ಯಾಸರ

**ಗಲಃ** = ಕುತ್ತಿಗೆಯು

**ಈಕ್ಷ್ಯತೇ** = ನೋಡಲ್ಪಡುತ್ತದೆ.

**ತಾತ್ಪರ್ಯ—** ಈ ವೇದವ್ಯಾಸರ ಕಂಠವು ಶಂಖದಂತಿದೆ. ಅದರಿಂದ ಋಕ್, ಯಜುಸ್, ಸಾಮ ಎಂಬ ಮೂರು ವೇದಗಳೂ ಯಾವಾಗಲೂ ಧ್ವನಿಸುತ್ತಾ ಹೊರಬರುತ್ತಿವೆ. ಆದ್ದರಿಂದಲೇ ಕಂಠದಲ್ಲಿ ಮೂರು ರೇಖೆಗಳು ಉಂಟಾಗಿವೆಯೋ ಎಂದು ಕಾಣಸುತ್ತಿದೆ. (ಕಂಠದಲ್ಲಿ ಅಡ್ಡಲಾಗಿ ಮೂರು ರೇಖೆಗಳು ಮಹಾಪುರುಷರಿಗೆ ಇರುತ್ತವೆ).

**ವಿಗ್ರಹ—**

**ಶ್ರುತಿತ್ರಿತಯೇನ—** ತ್ರಯಃ ಅವಯವಾಃ ಅಸ್ಯೇತಿ ತ್ರಿತಯಂ, ಶ್ರುತೀನಾಂ ತ್ರಿತಯಂ ಶ್ರುತಿತ್ರಿತಯಂ, ತೇನ ಶ್ರುತಿತ್ರಿತಯೇನ ।

**ಸುವಿಡಂಬಿತಕಂಬುಃ—** ಸುವಿಡಂಬಿತಃ ಕಂಬುಃ ಯೇನ ಸಃ ಸುವಿಡಂಬಿತಕಂಬುಃ ।

**ವರರೇಖಾತ್ರಯವಾನ್—** ತ್ರಯಃ ಅವಯವಾಃ ಅಸ್ಯೇತಿ ತ್ರಯಂ, ರೇಖಾಣಾಂ ತ್ರಯಂ ರೇಖಾತ್ರಯಂ, ವರಂ ಚ ತತ್ ರೇಖಾತ್ರಯಂ, ತತ್ ಅಸ್ಯ ಅಸ್ತೀತಿ ವರರೇಖಾತ್ರಯವಾನ್ ।

**ಕ್ರಿಯಾಪದ—** ಈಕ್ಷದರ್ಶನೇ ಇತಿ ದರ್ಶನಾರ್ಥಕಾತ್ ಈಕ್ಷಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ಕರ್ಮಣಿ ವರ್ತಮಾನೇ ಲಟಿ ಪ್ರಥಮಪುರುಷೇ ಏಕವಚನೇ ''ಈಕ್ಷ್ಯತೇ'' ಇತಿ ರೂಪಮ್ ।

ಈಕ್ಷ್ಯತೇ ಈಕ್ಷ್ಯೇತೇ ಈಕ್ಷ್ಯಂತೇ, ಈಕ್ಷ್ಯಸೇ ಈಕ್ಷ್ಯೇಥೇ ಈಕ್ಷ್ಯಧ್ವೇ, ಈಕ್ಷ್ಯೇ ಈಕ್ಷ್ಯಾವಹೇ ಈಕ್ಷ್ಯಾಮಹೇ ॥

**ಪ್ರಯೋಗ—** ಅಹಂ ಗುರೋಃ ಗಲಂ ಈಕ್ಷೇ (ಕರ್ತರಿ) । ಮಯಾ ಗುರೋಃ ಗಲಃ ಈಕ್ಷ್ಯತೇ (ಕರ್ಮಣಿ) ।

★ ★ ★

ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸರ ಮುಖವನ್ನು ವರ್ಣಿಸುತ್ತಾರೆ.

**ಸಕಲಾಸ್ತಕಲಂಕಕಾಲಿಮಸ್ಫುರದಿಂದುಪ್ರಕರೋರುವಿಭ್ರಮಂ ।**
**ಅಧರೀಕುರುತೇ ಸ್ವಶೋಭಯಾ ವದನಂ ದೇವಶಿಖಾಮಣೇರಿದಂ ॥ 38 ॥**

**ಪದಚ್ಛೇದ—** ಸಕಲಾಸ್ತಕಲಂಕಕಾಲಿಮಸ್ಫುರದಿಂದುಪ್ರಕರೋರುವಿಭ್ರಮಂ, ಅಧರೀಕುರುತೇ, ಸ್ವಶೋಭಯಾ, ವದನಂ, ದೇವಶಿಖಾಮಣೇಃ, ಇದಂ ।

**ಅನ್ವಯ—** ದೇವಶಿಖಾಮಣೇಃ, ಇದಂ, ವದನಂ, ಸ್ವಶೋಭಯಾ, ಸಕಲಾಸ್ತಕಲಂಕಕಾಲಿಮಸ್ಫುರದಿಂದು-ಪ್ರಕರೋರುವಿಭ್ರಮಂ, ಅಧರೀಕುರುತೇ ।

**ಅನ್ವಯಾರ್ಥ—**

**ದೇವಶಿಖಾಮಣೇಃ** = ದೇವಶ್ರೇಷ್ಠರಾದ ಈ ವೇದವ್ಯಾಸರ
**ಇದಂ** = ಎದುರಿಗೆ ಕಾಣಸುತ್ತಿರುವ
**ವದನಂ** = ಮುಖವು
**ಸ್ವಶೋಭಯಾ** = ತನ್ನ ಕಾಂತಿಯಿಂದ,
**ಸಕಲ** = ಹದಿನಾರು ಕಲೆಗಳಿಂದ ಕೂಡಿದ
**ಅಸ್ತ** = ಹೋಗಲಾಡಿಸಲ್ಪಟ್ಟ
**ಕಲಂಕಕಾಲಿಮ** = ಕಲಂಕದ ಕಪ್ಪುಳ್ಳ,
**ಸ್ಫುರತ್** = ಪ್ರಕಾಶಮಾನರಾದ
**ಇಂದು** = ಚಂದ್ರರ
**ಪ್ರಕರ** = ಸಮೂಹದ,
**ಉರುವಿಭ್ರಮಂ** = ಹೆಚ್ಚಾದ ವಿಲಾಸವನ್ನು
**ಅಧರೀಕುರುತೇ** = ತಿರಸ್ಕರಿಸುತ್ತದೆ.

**ತಾತ್ಪರ್ಯ—** ಈ ವ್ಯಾಸರು ದೇವದೇವೋತ್ತಮರು, ಸರ್ವೋತ್ತಮರು. ಇವರ ಮುಖವು ಜಗದ್ ವಿಲಕ್ಷಣವಾದ ಕಾಂತಿಯಿಂದ ತುಂಬಿದೆ. ತಮ್ಮಲ್ಲಿರುವ ಕಲಂಕದ ಕಪ್ಪನ್ನು ಪರಿಹರಿಸಿಕೊಂಡ ಅಸಂಖ್ಯಾತಪೂರ್ಣಚಂದ್ರರ ಸಮೂಹದ ಕಾಂತಿಯನ್ನೂ ಈ ಮುಖವು ಧಿಕ್ಕರಿಸುತ್ತದೆ. ಅನಂತ ನಿಷ್ಕಲಂಕ ಚಂದ್ರರ ಕಾಂತಿಗಿಂತಲೂ ಹೆಚ್ಚು ಕಾಂತಿಯುಳ್ಳದ್ದಾಗಿದೆ.

**ವಿಗ್ರಹ—**

**ಸಕಲಾಸ್ತಕಲಂಕಕಾಲಿಮಸ್ಫುರದಿಂದುಪ್ರಕರೋರುವಿಭ್ರಮಂ—** ಕಲಾಭಿಃ ಸಹವರ್ತಂತೇ ಇತಿ ಸಕಲಾಃ, ಕಾಲಸ್ಯ ಭಾವಃ ಕಾಲಿಮಾ, ಕಲಂಕಸ್ಯ ಕಾಲಿಮಾ ಕಲಂಕಕಾಲಿಮಾ, ಕಲಂಕಕಾಲಿಮಾ ಅಸ್ತಃ ಯೇಭ್ಯಃ ತೇ ಅಸ್ತಕಲಂಕಕಾಲಿಮಾನಃ, ಸಕಲಾಶ್ಚ ತೇ ಅಸ್ತಕಲಂಕಕಾಲಿಮಾನಶ್ಚ ಸಕಲಾಸ್ತಕಲಂಕಕಾಲಿಮಾನಃ, ಸ್ಫುರಂತಶ್ಚ ತೇ ಇಂದವಶ್ಚ ಸ್ಫುರದಿಂದವಃ, ಸಕಲಾಸ್ತಕಲಂಕಕಾಲಿಮಾನಶ್ಚ ತೇ ಸ್ಫುರದಿಂದವಶ್ಚ ಸಕಲಾಸ್ತ-ಕಲಂಕಕಾಲಿಮಸ್ಫುರದಿಂದವಃ, ಸಕಲಾಸ್ತಕಲಂಕಕಾಲಿಮಸ್ಫುರದಿಂದೂನಾಂ ಪ್ರಕರಃ ಸಕಲಾಸ್ತಕಲಂಕ-ಕಾಲಿಮಸ್ಫುರದಿಂದುಪ್ರಕರಃ, ಉರುಶ್ಚಾ ಸೌವಿಭ್ರಮಶ್ಚ ಉರುವಿಭ್ರಮಃ, ಸಕಲಾಸ್ತಕಲಂಕಕಾಲಿಮ-ಸ್ಫುರದಿಂದುಪ್ರಕರಸ್ಯ ಉರುವಿಭ್ರಮಃ ಸಕಲಾಸ್ತಕಲಂಕಕಾಲಿಮಸ್ಫುರದಿಂದುಪ್ರಕರೋರುವಿಭ್ರಮಃ, ತಂ ಸಕಲಾಸ್ತಕಲಂಕಕಾಲಿಮಸ್ಫುರದಿಂದುಪ್ರಕರೋರುವಿಭ್ರಮಂ ।

**ಸ್ವಶೋಭಯಾ—** ಸ್ವಸ್ಯ ಶೋಭಾ ಸ್ವಶೋಭಾ, ತಯಾ ಸ್ವಶೋಭಯಾ ।

**ದೇವಶಿಖಾಮಣೇಃ**— ಶಿಖಾಯಾಃ ಮಣಿಃ ಶಿಖಾಮಣಿಃ, ದೇವಾನಾಂ ಶಿಖಾಮಣಿಃ ದೇವಶಿಖಾಮಣಿಃ, ತಸ್ಯ ದೇವಶಿಖಾಮಣೇಃ ।

**ಅಧರೀಕುರುತೇಃ**— ಅನಧರಂ ಅಧರಂ ಸಂಪದ್ಯಮಾನಂ ಕುರತೇ ಅಧರೀಕುರುತೇ ।

**ಕ್ರಿಯಾಪದ**— **ಅಧರೀಕುರುತೇ**- ಡುಕೃಞ್‌ಕರಣೇ ಕರಣಾರ್ಥಕಾತ್ ಕೃಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇ ಪದಿನಃ ವರ್ತಮಾನೇ ಲಟಿ ಪ್ರಥಮಪುರುಷೇ ಏಕವಚನೇ ''ಅಧರೀಕುರುತೇ'' ಇತಿ ರೂಪಮ್ ।

ಅಧರೀ-ಅಧರೀಕುರುತೇ ಕುರ್ವಾತೇ ಕುರ್ವತೇ, ಕುರುಷೇ ಕುರ್ವಾಥೇ ಕುರುಧ್ವೇ, ಕುರ್ವೇ ಕುರ್ವಹೇ ಕುರ್ಮಹೇ ॥

**ಪ್ರಯೋಗ**— ದೇವಶಿಖಾಮಣೇಃ ಇದಂ ವದನಂ ಇಂದು ಪ್ರಕರೋರುವಿಭ್ರಮಂ ಅಧರೀಕುರುತೇ (ಕರ್ತರಿ) । ದೇವಶಿಖಾಮಣೇಃ ಅನೇನ ವದನೇನ ಇಂದು ಪ್ರಕರೋರು ವಿಭ್ರಮಃ ಅಧರೀಕ್ರಿಯತೇ (ಕರ್ಮಣಿ)

★ ★ ★

ಶ್ರೀವೇದವ್ಯಾಸದೇವರ ತುಟಿಯನ್ನೂ ಹಲ್ಲುಗಳನ್ನೂ ವರ್ಣಿಸುತ್ತಾರೆ

**ಅರುಣಾಶ್ಮದಲಾಂತರೋಲ್ಲಸನ್ನವಮುಕ್ತಾವಲಿಮಸ್ಯ ಲಜ್ಜಯೇತ್ ।**
**ಹಸತಃ ಸಿತದಂತಸಂತತಿಃ ಪರಮಶ್ರೀರರುಣೋಷ್ಠರೋಚಿಷಃ ॥ 39 ॥**

**ಪದಚ್ಛೇದ**— ಅರುಣಾಶ್ಮದಲಾಂತರೋಲ್ಲಸನ್ನವಮುಕ್ತಾವಲಿಂ, ಅಸ್ಯ, ಲಜ್ಜಯೇತ್, ಹಸತಃ, ಸಿತದಂತಸಂತತಿಃ, ಪರಮಶ್ರೀಃ, ಅರುಣೋಷ್ಠರೋಚಿಷಃ ।

**ಅನ್ವಯ**— ಅರುಣೋಷ್ಠರೋಚಿಷಃ, ಹಸತಃ, ಅಸ್ಯ, ಪರಮಶ್ರೀಃ, ಸಿತದಂತಸಂತತಿಃ, ಅರುಣಾಶ್ಮದಲಾಂತರೋಲ್ಲಸನ್ನವಮುಕ್ತಾವಲಿಂ ಲಜ್ಜಯೇತ್ ।

**ಅನ್ವಯಾರ್ಥ**—

**ಅರುಣ ಓಷ್ಠ ರೋಚಿಷಃ** = ಕೆಂಪಾದ ತುಟಿಗಳ ಕಾಂತಿಯುಳ್ಳ

**ಹಸತಃ** = ನಗುತ್ತಿರುವ

**ಅಸ್ಯ** = ಈ ವೇದವ್ಯಾಸರ

**ಪರಮಶ್ರೀಃ** = ಹೆಚ್ಚಾದ ಕಾಂತಿಯುಳ್ಳ

**ಸಿತದಂತಸಂತತಿಃ** = ಬಿಳಿದಾಗಿರುವ ಹಲ್ಲುಗಳ ಸಾಲು

**ಅರುಣಾಶ್ಮದಲಾಂತರೋಲ್ಲಸನ್ನವಮುಕ್ತಾವಲಿಂ** = ಪದ್ಮರಾಗಮಣಿಯ ಎರಡು ಸೀಳುಗಳ ಮಧ್ಯದಲ್ಲಿ (ಒಳಗೆ) ಪ್ರಕಾಶಿಸುವ ಹೊಸದಾದ ಮುತ್ತಿನ ಸಾಲನ್ನು

**ಲಜ್ಜಯೇತ್** = ನಾಚಿಕೆಗೊಳಿಸಿತು.

**ತಾತ್ಪರ್ಯ**— ಈ ವೇದವ್ಯಾಸರ ತುಟಿಗಳು ಕೆಂಪಗಿವೆ. ಇವರು ನಗುತ್ತಿರುವಾಗ ಬೆಳ್ಳಗಿರುವ ಹಲ್ಲುಗಳ ಸಾಲು ಹೊಳೆಯುತ್ತಿರುತ್ತದೆ. ಆಗ ಪದ್ಮರಾಗ ಮಣಿಗಳ ಎರಡು ಸೀಳಿನ ನಡುವೆ ಪೋಣಿಸಿದ ಹೊಸದಾದ ಮುತ್ತಿನ ಸಾಲಿಗಿಂತಲೂ ಹೆಚ್ಚಾಗಿ ಈ ಹಲ್ಲುಗಳ ಪಂಕ್ತಿಯು ಶೋಭಿಸುತ್ತದೆ.

**ವಿಗ್ರಹ**—

**ಅರುಣಾಶ್ಮದಲಾಂತರೋಲ್ಲಸನ್ನವಮುಕ್ತಾವಲಿಂ**— ಅರುಣಶ್ಚಾಸೌ ಅಶ್ಮಾ ಚ ಅರುಣಾಶ್ಮಾ, ಅರುಣಾಶ್ಮನಃ ದಲೇ ಅರುಣಾಶ್ಮದಲೇ, ಅರುಣಾಶ್ಮದಲಯೋಃ ಅಂತರಂ ಅರುಣಾಶ್ಮದಲಾಂತರಂ, ಅರುಣಾಶ್ಮ-

ದಲಾಂತರೇ ಉಲ್ಲಸಂತೀ ಅರುಣಾಶ್ಮದಲಾಂತರೋಲ್ಲಸಂತೀ, ಮುಕ್ತಾನಾಂ ಆವಲಿಃ ಮುಕ್ತಾವಲಿಃ, ನವಾ ಚ ಸಾ ಮುಕ್ತಾವಲಿಶ್ಚ ನವಮುಕ್ತಾವಲಿಃ, ಅರುಣಾಶ್ಮದಲಾಂತರೋಲ್ಲಸಂತೀ ಚ ಸಾ ನವಮುಕ್ತಾವಲಿಶ್ಚ ಅರುಣಾಶ್ಮದಲಾಂತರೋಲ್ಲಸನ್ನವಮುಕ್ತಾವಲಿಃ, ತಾಂ ಅರುಣಾಶ್ಮದಲಾಂತರೋ-ಲ್ಲಸನ್ನವಮುಕ್ತಾವಲಿಂ ।

**ಸಿತದಂತಸಂತತಿಃ—** ದಂತಾನಾಂ ಸಂತತಿಃ ದಂತಸಂತತಿಃ, ಸಿತಾ ಚ ಸಾ ದಂತಸಂತತಿಶ್ಚ ಸಿತದಂತಸಂತತಿಃ ।

**ಪರಮಶ್ರೀಃ—** ಪರಮಾ ಶ್ರೀಃ ಯಸ್ಯಾಃ ಸಾ ಪರಮಶ್ರೀಃ ।

**ಅರುಣೋಷ್ಠರೋಚಿಷಃ—** ಓಷ್ಠಯೋಃ ರೋಚಿಃ ಓಷ್ಠರೋಚಿಃ, ಅರುಣಂ ಓಷ್ಠರೋಚಿಃ ಯಸ್ಯ ಸಃ ಅರುಣೋಷ್ಠರೋಚಿಃ ತಸ್ಯ ಅರುಣೋಷ್ಠರೋಚಿಷಃ, ಅಥವಾ ಅರುಣೌ ಚ ತೌ ಓಷ್ಠೌ ಚ ಅರುಣೋಷ್ಠೌ, ಅರುಣೋಷ್ಠಯೋಃ ರೋಚಿಃ ಯಸ್ಯ ಸಃ ತಸ್ಯ ಅರುಣೋಷ್ಠರೋಚಿಷಃ ।

**ಕ್ರಿಯಾಪದ— ಲಜ್ಜಯೇತ್-** ಓಲಸ್ಜೀ ವ್ರೀಡಾಯಾಂ ಇತಿ ವ್ರೀಡಾರ್ಥಕಾತ್ ಲಜ್ಜಧಾತೋಃ ಅಕರ್ಮಕಾತ್ ಆತ್ಮನೇಪದಿನಃ, ಪ್ರಕೃತೇ ಪ್ರೇರಣಾರ್ಥಕಣಿಜಂತಾತ್ ಪರಸ್ಮೈಪದಿನಃ ಸಕರ್ಮಕಾತ್ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ''ಲಜ್ಜಯೇತ್'' ಇತಿ ರೂಪಮ್ ।

ಲಜ್ಜಯೇತ್ ಲಜ್ಜಯೇತಾಂ ಲಜ್ಜಯೇಯುಃ, ಲಜ್ಜಯೇಃ ಲಜ್ಜಯೇತಂ ಲಜ್ಜಯೇತ, ಲಜ್ಜಯೇಯಂ ಲಜ್ಜಯೇವ ಲಜ್ಜಯೇಮ ॥

**ಪ್ರಯೋಗ—** ಸಿತದಂತಸಂತತಿಃ ನವಮುಕ್ತಾವಲಿಂ ಲಜ್ಜಯೇತ್ (ಕರ್ತರಿ) । ಸಿತದಂತಸಂತತ್ಯಾ ನವಮುಕ್ತಾವಲಿಃ ಲಜ್ಜ್ಯೇತ (ಕರ್ಮಣಿ) ।

★ ★ ★

ಶ್ರೀಮಧ್ವಾಚಾರ್ಯರು ಶ್ರೀ ವೇದವ್ಯಾಸರ ಮಾತಿನ ಅದ್ಭುತ ಚಾತುರ್ಯವನ್ನು ವರ್ಣಿಸುತ್ತಾರೆ

**ದ್ವಿಜವೃಂದಕೃತಂ ಮಹಾದರಾ (ಕುತೂಹಲಾತ್)**
**ದನುಯೋಗಾಂಧುಸಹಸ್ರಮುತ್ತಮಂ।**
**ಇಯಮೇಕಪದೇ ಸರಸ್ವತೀ**
**ಶ್ರುತಿಭರ್ತುಃ ಪರಿಪೂರಯತ್ಯಹೋ ॥ 40 ॥**

**ಪದಚ್ಛೇದ—** ದ್ವಿಜವೃಂದಕೃತಂ, ಮಹಾದರಾತ್, (ಕುತೂಹಲಾತ್), ಅನುಯೋಗಾಂಧುಸಹಸ್ರಂ, ಉತ್ತಮಂ, ಇಯಂ, ಏಕಪದೇ, ಸರಸ್ವತೀ, ಶ್ರುತಿಭರ್ತುಃ, ಪರಿಪೂರಯತಿ ಅಹೋ ।

**ಅನ್ವಯ—** ಶ್ರುತಿಭರ್ತುಃ, ಇಯಂ, ಸರಸ್ವತೀ, ಮಹಾದರಾತ್, ಕುತೂಹಲಾತ್, ದ್ವಿಜವೃಂದಕೃತಂ, ಉತ್ತಮಂ, ಅನುಯೋಗಾಂಧುಸಹಸ್ರಂ, ಏಕಪದೇ, ಪರಿಪೂರಯತಿ, ಅಹೋ ।

**ಅನ್ವಯಾರ್ಥ—**

**ಶ್ರುತಿಭರ್ತುಃ** = ವೇದಗಳಿಗೆ ಸ್ವಾಮಿಯಾದ ಈ ವೇದವ್ಯಾಸರ

**ಇಯಂ** = ಈ

**ಸರಸ್ವತೀ** = ಮಾತು (ಸರಸ್ವತೀ ನದಿಯು, ನದಿಯು)

**ಮಹಾದರಾತ್** = ಅತ್ಯಂತ ಗೌರವ ಮತ್ತು ಪ್ರೀತಿಯಿಂದ

**(ಕುತೂಹಲಾತ್** = ಕೌತುಕದಿಂದ)
**ದ್ವಿಜವೃಂದಕೃತಂ** = ಬ್ರಾಹ್ಮಣರ (ಋಷಿಗಳ) ಸಮೂಹದಿಂದ ಮಾಡಲ್ಪಟ್ಟ
**ಉತ್ತಮಂ ಅನುಯೋಗಾಂಧುಸಹಸ್ರಂ**= ಶ್ರೇಷ್ಠವಾದ ಪ್ರಶ್ನೆಗಳೆಂಬ ಭಾವಿಗಳ ಸಾವಿರವನ್ನು
**ಏಕಪದೇ** = ಒಂದೇ ಮಾತಿನಲ್ಲಿ (ಒಟ್ಟಿಗೆ)
**ಪರಿಪೂರಯತಿ** = ತುಂಬಿಸುತ್ತದೆ
**ಅಹೋ** = ಆಶ್ಚರ್ಯವು.

**ತಾತ್ಪರ್ಯ—** ಸರಸ್ವತೀ ಮುಂತಾದ ನದಿಗಳ ಪ್ರವಾಹವು ಹೆಚ್ಚಿದಾಗ ಅದು ದಡದಲ್ಲಿರುವ ಬ್ರಾಹ್ಮಣ, ಕ್ಷತ್ರಿಯ ವೈಶ್ಯರೆಂಬ ದ್ವಿಜರ ಮತ್ತಿತರರ ಅದುವರೆಗೆ ಬತ್ತಿದ ಬಾವಿಗಳನ್ನು ಒಂದೇ ಸಲ ತುಂಬಿಸುತ್ತದೆ. ಹಾಗೆಯೇ ಸಾವಿರ ಬ್ರಾಹ್ಮಣರು ಮತ್ತು ಋಷಿಗಳು ಒಂದು ಬಾರಿ ಈ ವೇದವ್ಯಾಸರ ಬಳಿ ಸಾವಿರ ಪ್ರಶ್ನೆಗಳನ್ನು ಕೇಳಿದಾಗ ವೇದಸ್ವಾಮಿಯಾದ ಇವರು ಒಂದೇ ಮಾತಿನಿಂದ, ಒಂದೇ ಸಲ ಸಾವಿರ ಉತ್ತರವನ್ನು ಕೊಟ್ಟು ಅವರ ಪ್ರಶ್ನೆಗಳನ್ನು ಪರಿಹರಿಸಿದರು. ಅವರ ಪ್ರಶ್ನೆಗಳೆಂಬ ಭಾವಿಗಳನ್ನು ತನ್ನ ಸರಸ್ವತಿಯಿಂದ (ಮಾತಿನಿಂದ) ತುಂಬಿಸಿದರು, ಸಮಾಧಾನಗೊಳಿಸಿದರು. (ಇದೇ ಸರ್ಗದ 34ನೆಯ ಶ್ಲೋಕದ ತಾತ್ಪರ್ಯವನ್ನು ನೋಡಿರಿ)

**ವಿಗ್ರಹ—**

**ದ್ವಿಜವೃಂದಕೃತಂ—** ದ್ವಿಜಾನಾಂ ವೃಂದಂ ದ್ವಿಜವೃಂದಂ, ದ್ವಿಜವೃಂದೇನ ಕೃತಂ ದ್ವಿಜವೃಂದಕೃತಂ ।
**ಮಹಾದರಾತ್—** ಮಹಾಂಶ್ಚಾಸೌ ಆದರಶ್ಚ ಮಹಾದರಃ, ತಸ್ಮಾತ್ ಮಹಾದರಾತ್ ।
**ಅನುಯೋಗಾಂಧುಸಹಸ್ರಂ—** ಅನುಯೋಗಾ ಏವ ಅಂಧವಃ ಅನುಯೋಗಾಂಧವಃ, ಅನು-ಯೋಗಾಂಧೂನಾಂ ಸಹಸ್ರಂ ಅನುಯೋಗಾಂಧುಸಹಸ್ರಂ, ತತ್ ಅನುಯೋಗಾಂಧುಸಹಸ್ರಂ ।
**ಶ್ರುತಿಭರ್ತುಃ—** ಶ್ರುತೀನಾಂ ಭರ್ತಾ ಶ್ರುತಿಭರ್ತಾ, ತಸ್ಯ ಶ್ರುತಿಭರ್ತುಃ ।

**ಕ್ರಿಯಾಪದ—** ಪರಿಪೂರಯಂತಿ- 'ಪರಿ' ಉಪಸರ್ಗಪೂರ್ವಕಾತ್ 'ಪೂರೀ ಅಪ್ಯಾಯನೇ' ಇತಿ ಆಪ್ಯಾಯ-ನಾರ್ಥಕಾತ್ 'ಪೂರ್' ಧಾತೋಃ ಸಕರ್ಮಕಾತ್ ಉಭಯಪದಿನಃ ಪ್ರಕೃತೇ ಪರಸ್ಮೈಪದಿನಃ ವರ್ತಮಾನೇ ಲಟಿ ಪ್ರಥಮ-ಪುರುಷೇ ಏಕವಚನೇ ''ಪರಿಪೂರಯತಿ'' ಇತಿ ರೂಪಮ್ ।

| | | |
|---|---|---|
| ಪರಿ-ಪೂರಯತಿ | ಪೂರಯತಃ | ಪೂರಯಂತಿ, |
| ಪೂರಯಸಿ | ಪೂರಯಥಃ | ಪೂರಯಥ, |
| ಪೂರಯಾಮಿ | ಪೂರಯಾವಃ | ಪೂರಯಾಮಃ ॥ |

**ಪ್ರಯೋಗ—** ಸರಸ್ವತೀ ಅನುಯೋಗಾಂಧುಸಹಸ್ರಂ ಪರಿಪೂರಯಂತಿ (ಕರ್ತರಿ) । ಸರಸ್ವತ್ಯಾ ಅನುಯೋಗಾಂಧು ಸಹಸ್ರಂ ಪರಿಪೂರ್ಯತೇ (ಕರ್ಮಣಿ) ।

★ ★ ★

ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸರ ಕಣ್ಣೋಟವನ್ನು ವರ್ಣಿಸುತ್ತಾರೆ.

**ಜಲಜಾಯತಲೋಚನಸ್ಯ ಮಾಮವಲೋಕೋಽಯಮುಪೇತ್ಯ ಲಾಲಯನ್ ।**
**ಕುರುತೇ ಪರಿರಭ್ಯ ಪೂರಿತಂ ಭುವನಾನಂದಕರಸ್ಮಿತಾನ್ವಿತಃ ॥ 41 ॥**

**ಪದಚ್ಛೇದ—** ಜಲಜಾಯತಲೋಚನಸ್ಯ, ಮಾಂ, ಅವಲೋಕಃ, ಅಯಂ, ಉಪೇತ್ಯ, ಲಾಲಯನ್, ಕುರುತೇ, ಪರಿರಭ್ಯ, ಪೂರಿತಂ ಭುವನಾನಂದಕರಸ್ಮಿತಾನ್ವಿತಃ ।

**ಅನ್ವಯ—** ಜಲಜಾಯತಲೋಚನಸ್ಯ ಭುವನಾನಂದಕರಸ್ಮಿತಾನ್ವಿತಃ ಅಯಂ ಅವಲೋಕಃ, ಲಾಲಯನ್ ಮಾಂ ಉಪೇತ್ಯ, ಪರಿರಭ್ಯ, ಪೂರಿತಂ ಕುರುತೇ ।

**ಅನ್ವಯಾರ್ಥ—**

**ಜಲಜ** = ಕಮಲದಂತೆ
**ಆಯತ** = ವಿಶಾಲವಾದ
**ಲೋಚನಸ್ಯ** = ಕಣ್ಣುಗಳುಳ್ಳ ಶ್ರೀವ್ಯಾಸರ
**ಭುವನಾನಂದಕರಸ್ಮಿತಾನ್ವಿತಃ** = ಲೋಕಗಳಿಗೆ ಸಂತೋಷವನ್ನುಂಟು ಮಾಡುವ ಮಂದಹಾಸದಿಂದ ಕೂಡಿದ
**ಅಯಂ** = ಈ
**ಅವಲೋಕಃ** = ನೋಟವು,
**ಲಾಲಯನ್** = ಲಾಲನ ಮಾಡುತ್ತಾ
**ಮಾಂ** = ನನ್ನನ್ನು
**ಉಪೇತ್ಯ** = ಸಮೀಪಿಸಿ,
**ಪರಿರಭ್ಯ** = ಆಲಿಂಗಿಸಿ,
**ಪೂರಿತಂ** = ಪೂರ್ಣವನ್ನಾಗಿ (ಧನ್ಯನನ್ನಾಗಿ)
**ಕುರುತೇ** = ಮಾಡುತ್ತದೆ.

**ತಾತ್ಪರ್ಯ—** ಶ್ರೀವ್ಯಾಸರ ಎರಡು ಕಣ್ಣುಗಳು ತಾವರೆ ಹೂವಿನಂತೆ ಸುಂದರವಾಗಿವೆ. ಇಂತಹ ಇವರ ಕಣ್ಣುಗಳ ನೋಟವು ಸಮಸ್ತ ಪ್ರಪಂಚವನ್ನೇ ಸಂತೋಷಗೊಳಿಸುತ್ತದೆ. ಆ ನೋಟದ ಜತೆಗೆ ಮುಗುಳುನಗೆಯೂ ಕೂಡಿ ಮತ್ತಷ್ಟು ಆನಂದಕರವಾಗಿದೆ. ಇಂತಹ ನೋಟದಿಂದ ಇವರು ನನ್ನನ್ನು ಲಾಲಿಸುತ್ತಾ ನೋಡುತ್ತಿದ್ದಾರೆ ನಾನು ಇದರಿಂದ ಧನ್ಯ-ನಾಗುತ್ತಿದ್ದೇನೆ.

**ವಿಗ್ರಹ—**

**ಜಲಜಾಯತಲೋಚನಸ್ಯ—** ಜಲೇ ಜಾಯೇತೇ ಇತಿ ಜಲಜೇ, ಜಲಜೇ ಇವ ಆಯತೇ ಲೋಚನೇ ಯಸ್ಯ ಸಃ ಜಲಜಾಯತಲೋಚನಃ, ತಸ್ಯ ಜಲಜಾಯತಲೋಚನಸ್ಯ ।

**ಭುವನಾನಂದಕರಸ್ಮಿತಾನ್ವಿತಃ—** ಕರೋತೀತಿ ಕರಂ, ಆನಂದಸ್ಯ ಕರಂ ಆನಂದಕರಂ, ಭುವನಾನಾಂ ಆನಂದಕರಂ ಭುವನಾನಂದಕರಂ, ಭುವನಾನಂದಕರಂ ಚ ತತ್ ಸ್ಮಿತಂ ಚ ಭುವನಾನಂದಕರಸ್ಮಿತಂ, ಭುವನಾನಂದಕರಸ್ಮಿತೇನ ಅನ್ವಿತಃ ಭುವನಾನಂದಕರಸ್ಮಿತಾನ್ವಿತಃ ।

**ಕ್ರಿಯಾಪದ—** ಕುರುತೇ, 38ನೆಯ ಶ್ಲೋಕವನ್ನು ನೋಡಿರಿ ।

**ಪ್ರಯೋಗ—** ಅವಲೋಕಃ ಮಾಂ ಪೂರಿತಂ ಕುರುತೇ (ಕರ್ತರಿ) । ಅವಲೋಕೇನ ಅಹಂ ಪೂರಿತಃ ಕ್ರಿಯೇ (ಕರ್ಮಣಿ) ।

★ ★ ★

ಶ್ರೀಮಧ್ವರು ಶ್ರೀವೇದವ್ಯಾಸರಿಂದ ಕಿವಿಯಲ್ಲಿ ಧರಿಸಲ್ಪಟ್ಟಿರುವ ತುಳಸೀದಳಗಳನ್ನು ವರ್ಣಿಸುತ್ತಾರೆ

**ಉಪಕರ್ಣಮಮುಷ್ಯ ಭಾಸಿತಾ ತುಲಸೀ ಮಂತ್ರಯತೀವ ಲಾಲಿತಾ ।**
**ಮಮ ನಾಥ ಪದಂ ನ ಮತ್ಸರಾಜ್ಜಲಜಾದ್ಯಾನಿ ಹರೇಯುರಿತ್ಯಲಂ ॥ 42 ॥**

**ಪದಚ್ಛೇದ—** ಉಪಕರ್ಣಂ, ಅಮುಷ್ಯ, ಭಾಸಿತಾ, ತುಲಸೀ, ಮಂತ್ರಯತಿ, ಇವ, ಲಾಲಿತಾ, ಮಮ, ನಾಥ, ಪದಂ, ನ, ಮತ್ಸರಾತ್, ಜಲಜಾದ್ಯಾನಿ, ಹರೇಯುಃ, ಇತಿ, ಅಲಂ ।

**ಅನ್ವಯ—** ಅಮುಷ್ಯ, ಉಪಕರ್ಣಂ, ಭಾಸಿತಾ, ತುಲಸೀ, ಲಾಲಿತಾ, ನಾಥ, ಜಲಜಾದ್ಯಾನಿ, ಮತ್ಸರಾತ್, ಮಮ, ಪದಂ, ನ, ಹರೇಯುಃ, ಇತಿ, ಅಲಂ, ಮಂತ್ರಯತಿ, ಇವ ।

**ಅನ್ವಯಾರ್ಥ—**

**ಅಮುಷ್ಯ** = ಈ ವೇದವ್ಯಾಸದೇವರ
**ಉಪಕರ್ಣಂ** = ಕಿವಿಗಳ ಸಮೀಪದಲ್ಲಿ
**ಭಾಸಿತಾ** = ಪ್ರಕಾಶಮಾನವಾದ (ಅಲಂಕಾರಗೊಂಡ)
**ತುಲಸೀ** = ತುಳಸಿಯು
**ಲಾಲಿತಾ** = ಆದರ ಹೊಂದಿದ್ದಾಗಿ,
**ನಾಥ** = ಸ್ವಾಮಿಯೇ
**ಜಲಜಾದ್ಯಾನಿ** = ತಾವರೆಯ ಹೂವು ಮೊದಲಾದವುಗಳು
**ಮತ್ಸರಾತ್** = ಅಸೂಯೆಯಿಂದ
**ಮಮ** = ನನ್ನ
**ಪದಂ** = ಸ್ಥಾನವನ್ನು
**ನ ಹರೇಯುಃ** = ಅಪಹರಿಸದಿರಲಿ,
**ಇತಿ** = ಹೀಗೆಂದು
**ಅಲಂ** = ಚೆನ್ನಾಗಿ
**ಮಂತ್ರಯತೀವ** = ಗುಟ್ಟಾಗಿ ಹೇಳುತ್ತಿದೆಯೋ ಎಂಬಂತಿದೆ.

**ತಾತ್ಪರ್ಯ—** ಶ್ರೀವೇದವ್ಯಾಸರು ಕಿವಿಯಲ್ಲಿ ತುಳಸೀದಳವನ್ನು ಇಟ್ಟುಕೊಂಡಿದ್ದಾರೆ. ದೇವರ ಕಿವಿಯ ಸಂಪರ್ಕದಿಂದ ತುಳಸಿಯು ಅಲಂಕಾರಗೊಂಡು ಪ್ರಕಾಶಮಾನವಾಗಿದೆ. ಹೀಗೆ ಪರಮಾತ್ಮನಿಂದ ಆದರಿಸಲ್ಪಟ್ಟ ತುಳಸಿಯು ಕಿವಿಯ ಹತ್ತಿರದಲ್ಲಿಯೇ ಇರುವುದರಿಂದ 'ಸ್ವಾಮಿಯೇ ನನ್ನ ಈ ಸ್ಥಾನವನ್ನು ತಾವರೆಹೂವೇ ಮೊದಲಾದವುಗಳು ಮತ್ಸರದಿಂದ ಎಂದೂ ಅಪಹರಿಸದಿರಲಿ. ನನ್ನ ಈ ಸ್ಥಾನವನ್ನು ತಾವರೆ ಮುಂತಾದ ಹೂವುಗಳಿಗೆ ತಾವು ಎಂದೂ ಆಕ್ರಮಿಸಲು ಅವಕಾಶ ಕೊಡಬಾರದು. ಅವುಗಳನ್ನು ಕಿವಿಯಲ್ಲಿಟ್ಟುಕೊಂಡು ನನಗೆ ಈ ಸ್ಥಾನವಿಲ್ಲದಂತೆ ಮಾಡಬೇಡಿರಿ' ಎಂದು ಗುಟ್ಟಾಗಿ ಕಿವಿಯ ಹತ್ತಿರ ಹೇಳುತ್ತಿದೆಯೋ ಎಂಭಂತಿದೆ.

**ವಿಗ್ರಹ—**

**ಉಪಕರ್ಣಂ—** ಕರ್ಣಯೋಃ ಸಮೀಪಂ ಉಪಕರ್ಣಂ ।

**ಜಲಜಾದ್ಯಾನಿ—** ಜಲಜಂ ಆದ್ಯಂ ಯೇಷಾಂ ತಾನಿ ಜಲಜಾದ್ಯಾನಿ ।

**ಕ್ರಿಯಾಪದ—** ಮಂತ್ರಯತಿ- ಮಂತ್ರಗುಪ್ತಭಾಷಣೇ ಇತಿ ಗುಪ್ತಭಾಷಣಾರ್ಥಕಾತ್ ಮಂತ್ರಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಕರ್ತರಿ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ''ಮಂತ್ರಯತಿ'' ಇತಿ ರೂಪಮ್ । (ಮಂತ್ರಂ ಕರೋತಿ ಮಂತ್ರಯತಿ ಇತಿ ವಿಗ್ರಹಃ)

ಮಂತ್ರಯತಿ ಮಂತ್ರಯತಃ ಮಂತ್ರಯಂತಿ,
ಮಂತ್ರಯಸಿ ಮಂತ್ರಯಥಃ ಮಂತ್ರಯಥ,
ಮಂತ್ರಯಾಮಿ ಮಂತ್ರಯಾವಃ ಮಂತ್ರಯಾಮಃ ॥

**ಹರೇಯುಃ-** ಹೃಞಾಹರಣೇ ಇತಿ ಹರಣಾರ್ಥಕಾತ್ ಹೃಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೇ ಬಹುವಚನೇ ''ಹರೇಯುಃ'' ಇತಿ ರೂಪಮ್ ।

ಹರೇತ್ ಹರೇತಾಂ ಹರೇಯುಃ, ಹರೇಯುಃ, ಹರೇಃ ಹರೇತಂ ಹರೇತ, ಹರೇಯಂ ಹರೇವ ಹರೇಮ ॥

**ವ್ಯಾಕರಣ ವಿಶೇಷ—** ಉಪಕರ್ಣಂ 'ಅವ್ಯಯಂ ವಿಭಕ್ತಿ ಸಮೀಪ' ಎಂಬ ಸೂತ್ರದಿಂದ ಅವ್ಯಯೀಭಾವ ಸಮಾಸಃ ।

**ಪ್ರಯೋಗ—** ತುಲಸೀ (ರಹಸ್ಯಂ) ಮಂತ್ರಯತೀವ (ಕರ್ತರಿ) । ತುಲಸ್ಯಾ (ರಹಸ್ಯಂ) ಮಂತ್ರ್ಯತೇ ಇವ (ಕರ್ಮಣಿ) । ಜಲಜಾದ್ಯಾನಿ ಮಮ ಪದಂ ನ ಹರೇಯುಃ (ಕರ್ತರಿ) । ಜಲಜಾದ್ಯೈಃ ಮಮ ಪದಂ ನ ಹ್ರಿಯೇತ (ಕರ್ಮಣಿ) ।

★ ★ ★

ಶ್ರೀಮಧ್ವರು ಶ್ರೀವೇದವ್ಯಾಸರ ಹುಬ್ಬುಗಳ ವಿಲಾಸವನ್ನು ವರ್ಣಿಸುತ್ತಾರೆ.

**ವಿಭವಾಭಿಭವೋದ್ಭವಾದಿಕಂ ಭುವನಾನಾಂ ಭುವನಪ್ರಭೋರ್ಭ್ರುವೋಃ ।**
**ಅನಯೋರಪಿ ದಭ್ರವಿಭ್ರಮಾತ್ ಸಭವಾಂಭೋಜಭವಾತ್ಮನಾಂ ಭವೇತ್ ॥ 43 ॥**

**ಪದಚ್ಛೇದ—** ವಿಭವಾಭಿಭವೋದ್ಭವಾದಿಕಂ, ಭುವನಾನಾಂ, ಭುವನಪ್ರಭೋಃ, ಭ್ರುವೋಃ, ಅನಯೋಃ, ಅಪಿ, ದಭ್ರವಿಭ್ರಮಾತ್, ಸಭವಾಂಭೋಜಭವಾತ್ಮನಾಂ, ಭವೇತ್ ।

**ಅನ್ವಯ—** ಭುವನಪ್ರಭೋಃ, ಅನಯೋಃ, ಭ್ರುವೋಃ, ದಭ್ರವಿಭ್ರಮಾತ್, ಅಪಿ, ಸಭವಾಂಭೋಜಭವಾತ್ಮನಾಂ, ಭುವನಾನಾಂ, ವಿಭವಾಭಿಭವೋದ್ಭವಾದಿಕಂ, ಭವೇತ್ ।

**ಅನ್ವಯಾರ್ಥ—**

**ಭುವನಪ್ರಭೋಃ** = ಪ್ರಪಂಚಕ್ಕೆ ಒಡೆಯರಾದ ಶ್ರೀವೇದವ್ಯಾಸರ
**ಅನಯೋಃ** = ಈ
**ಭ್ರುವೋಃ** = ಎರಡು ಹುಬ್ಬುಗಳ
**ದಭ್ರವಿಭ್ರಮಾತ್ ಅಪಿ** = ಸ್ವಲ್ಪವಾದ ವಿಲಾಸದಿಂದಲೂ
**ಸಭವಾಂಭೋಜಭವಾತ್ಮನಾಂ** = ಈಶ್ವರ ಮತ್ತು ಕಮಲದಿಂದ ಹುಟ್ಟಿದ ಬ್ರಹ್ಮನೆಂಬ ಒಡೆಯರಿಂದ ಕೂಡಿದ
**ಭುವನಾನಾಂ** = ಎಲ್ಲಾ ಲೋಕಗಳ
**ವಿಭವಾಭಿಭವೋದ್ಭವಾದಿಕಂ** = ಐಶ್ವರ್ಯವು ಸಂಹಾರವು ಉತ್ಪತ್ತಿಯೇ ಮೊದಲಾಗಿ ಉಳ್ಳದ್ದು
**ಭವೇತ್** = ಆಗಿಯೇ ತೀರುತ್ತದೆ.

**ತಾತ್ಪರ್ಯ—** ಈ ಪ್ರಪಂಚಕ್ಕೆ ರುದ್ರಬ್ರಹ್ಮರೂ ಸ್ವಾಮಿಗಳಾಗಿದ್ದಾರೆ. ಆದರೆ ಈ ವೇದವ್ಯಾಸರ ಹುಬ್ಬುಗಳ ಅತ್ಯಲ್ಪ ವಿಲಾಸ ಮಾತ್ರದಿಂದಲೇ ಸಮಸ್ತ ಪ್ರಪಂಚಗಳ ಉತ್ಪತ್ತಿ, ಸ್ಥಿತಿ ಎಂಬ ಸಂಪತ್ತು, ಸಂಹಾರಗಳು ಆಗಿಯೇ ತೀರುತ್ತವೆ. ಈ ಪ್ರಪಂಚಕ್ಕೆ ಮುಖ್ಯವಾಗಿ ಸ್ಥಿತ್ಯಾದಿ ಕರ್ತೃಗಳು ವೇದವ್ಯಾಸರೇ ಹೊರತು ಸ್ವತಂತ್ರರಾದವರು ಬೇರೆ ಇನ್ನು ಯಾರೂ ಅಲ್ಲ.

**ವಿಗ್ರಹ—**

**ವಿಭವಾಭಿಭವೋದ್ಭವಾದಿಕಂ—** ವಿಭವಶ್ಚ ಅಭಿಭವಶ್ಚ ಉದ್ಭವಶ್ಚ ವಿಭವಾಭಿಭವೋದ್ಭವಾಃ, ವಿಭವಾಭಿಭವೋದ್ಭವಾಃ ಆದಯಃ ಯಸ್ಯ ತತ್ ವಿಭವಾಭಿಭವೋದ್ಭವಾದಿಕಂ ।

**ಭುವನಪ್ರಭೋಃ—** ಭುವನಾನಾಂ ಪ್ರಭುಃ ಭುವನಪ್ರಭುಃ, ತಸ್ಯ ಭುವನಪ್ರಭೋಃ ।

**ದಭ್ರವಿಭ್ರಮಾತ್**— ದಭ್ರಶ್ಚಾಸೌ ವಿಭ್ರಮಶ್ಚ ದಭ್ರವಿಭ್ರಮಃ, ತಸ್ಮಾತ್ ದಭ್ರವಿಭ್ರಮಾತ್ ।

**ಸಭವಾಂಭೋಜಭವಾತ್ಮನಾಂ**— ಅಂಭೋಜಾತ್ ಭವಃ ಯಸ್ಯ ಸಃ ಅಂಭೋಜಭವಃ, ಭವಶ್ಚ ಅಂಭೋಜ-ಭವಶ್ಚ ಭವಾಂಭೋಜಭವೌ ಇತಿ ಆತ್ಮಾನೌ ಭವಾಂಭೋಜಭವಾತ್ಮಾನೌ, ಭವಾಂಭೋಜಭವಾತ್ಮಭ್ಯಾಂ ಸಹ ವರ್ತಂತೇ ಇತಿ ಸಭವಾಂಭೋಜಭವಾತ್ಮಾನಿ, ತೇಷಾಂ ಸಭವಾಂಭೋಜಭವಾತ್ಮನಾಂ ।

**ಕ್ರಿಯಾಪದ**— **ಭವೇತ್**- ಭೂಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ವಿಧಿ ಲಿಙ್ ಪ್ರಥಮಪುರುಷೇ ಏಕವಚನೇ ''ಭವೇತ್'' ಇತಿ ರೂಪಮ್ ।

ಭವೇತ್ ಭವೇತಾಂ ಭವೇಯುಃ, ಭವೇಃ ಭವೇತಂ ಭವೇತ, ಭವೇಯಂ ಭವೇವ ಭವೇಮ ॥

**ಪ್ರಯೋಗ**—ವಿಭವಾಭಿಭವೋದ್ಭವಾದಿಕಂ ಭವೇತ್ (ಕರ್ತರಿ) । ವಿಭವಾಭಿಭವೋದ್ಭವಾದಿಕೇನ ಭೂಯತೇ (ಭಾವೇ) ।

★ ★ ★

**ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸದೇವರ ಹಣೆಯಲ್ಲಿ ಪ್ರಕಾಶಮಾನವಾದ ತಿಲಕದ ಬೊಟ್ಟನ್ನು ವರ್ಣಿಸುತ್ತಾರೆ.**

**ತ್ರಿಜಗತ್ತಿಲಕಾಲಿಕಾಂತರೇ ತಿಲಕೋಽಯಂ ಪರಭಾಗಮಾಪ್ತವಾನ್ ।**
**ಹರಿನೀಲಗಿರೀಂದ್ರಮಸ್ತಕಸ್ಫುಟಶೋಣೋಪಲಪಂಕ್ತಿಸನ್ನಿಭಃ ॥ 44 ॥**

**ಪದಚ್ಛೇದ**— ತ್ರಿಜಗತ್ತಿಲಕಾಲಿಕಾಂತರೇ, ತಿಲಕಃ, ಅಯಂ, ಪರಭಾಗಂ, ಆಪ್ತವಾನ್, ಹರಿನೀಲಗಿರೀಂದ್ರಮಸ್ತಕ-ಸ್ಫುಟಶೋಣೋಪಲಪಂಕ್ತಿಸನ್ನಿಭಃ ।

**ಅನ್ವಯ**— ತ್ರಿಜಗತ್ತಿಲಕಾಲಿಕಾಂತರೇ, ಪರಭಾಗಂ ಆಪ್ತವಾನ್, ಅಯಂ, ತಿಲಕಃ, ಹರಿನೀಲಗಿರೀಂದ್ರಮಸ್ತಕಸ್ಫುಟ-ಶೋಣೋಪಲಪಂಕ್ತಿಸನ್ನಿಭಃ ।

**ಅನ್ವಯಾರ್ಥ**—

**ತ್ರಿಜಗತ್ತಿಲಕಾಲಿಕಾಂತರೇ** = ಮೂರು ಲೋಕಗಳಿಗೆ ತಿಲಕದಂತಿರುವ (ಹಣೆಯ ನಾಮದಂತೆ ಅಲಂಕಾರ-ವಾಗಿರುವ) ಶ್ರೀ ವೇದವ್ಯಾಸರ ಹಣೆಯ ಮಧ್ಯದಲ್ಲಿ,

**ಪರಭಾಗಂ** = ಬೇರೊಂದು ಬಣ್ಣದ ಸಂಬಂಧದಿಂದ ಗುಣೋತ್ಕರ್ಷವನ್ನು

**ಆಪ್ತವಾನ್** = ಹೊಂದಿದ

**ಅಯಂ** = ಈ

**ತಿಲಕಃ** = ಕೆಂಪಾದ ಅಗುರು ಚಂದನಾದಿ ವಸ್ತು ವಿಶೇಷದಿಂದ ರಚಿತವಾದ ನಾಮವು (ಬೊಟ್ಟು),

**ಹರಿನೀಲಗಿರೀಂದ್ರಮಸ್ತಕಸ್ಫುಟಶೋಣೋಪಲಪಂಕ್ತಿ** = ಇಂದ್ರನೀಲಮಣಿಯ ಶ್ರೇಷ್ಠವಾದ ಪರ್ವತದ ಶಿಖರದಲ್ಲಿ ಸ್ಪಷ್ಟವಾಗಿರುವ (ಹೊಳೆಯುವ) ಪದ್ಮರಾಗ ಮಣಿಗಳ ಸಾಲುಗಳಿಗೆ ಸದೃಶವಾಗಿ

(**ವಿರಾಜತೇ** = ಪ್ರಕಾಶಿಸುತ್ತದೆ)

**ತಾತ್ಪರ್ಯ**— ಇಂದ್ರ ನೀಲಮಣಿಮಯವಾದ ಒಂದು ಪರ್ವತ. ಅದರ ಮೇಲ್ಭಾಗದಲ್ಲಿ ಕೆಂಪಾದ ಪದ್ಮರಾಗ ಮಣಿಯ ಎರಡು ಸಾಲುಗಳು ಮೇಲ್ಮುಖವಾಗಿ ಉದ್ದಕ್ಕೆ ವಿರಾಜಿಸುತ್ತಿವೆ. ಆ ಎರಡು ಸಾಲುಗಳ ಕೆಳಭಾಗದಲ್ಲಿಯೂ ಅಡ್ಡಲಾಗಿ ಪದ್ಮರಾಗಮಣಿಯ ಸಾಲು ಬಂದಿದೆ. ನೀಲವರ್ಣದ ಪರ್ವತದ ಸಂಬಂಧದಿಂದ ಪದ್ಮರಾಗಮಣಿಯ ಕೆಂಪು ಬಣ್ಣವು ತುಂಬಾ ಉತ್ಕೃಷ್ಟವಾಗಿ ಪ್ರಕಾಶಿಸುತ್ತದೆ. ಅದರಂತೆ ಇಂದ್ರ ನೀಲಮಣಿಯಂತೆ ಮೈಬಣ್ಣವುಳ್ಳ ಶ್ರೀ ವೇದವ್ಯಾಸರು

ತಮ್ಮ ಹಣೆಯ ಮಧ್ಯದಲ್ಲಿ ಅಗುರು ಚಂದನಾದಿ ಕೆಂಪಾದ ವಸ್ತುಗಳಿಂದ ಮಾಡಿದ ಊರ್ಧ್ವಪುಂಡ್ರ ನಾಮರೂಪದ ತಿಲಕವನ್ನು ಧರಿಸಿದ್ದಾರೆ. ಅದು ನೀಲಕಾಂತಿಯ ಸಂಬಂಧದಿಂದ ಪರಮೋತ್ಕರ್ಷವನ್ನು ಹೊಂದಿದೆ. ಹೀಗೆ ವೇದವ್ಯಾಸರ ಸಂಬಂಧದಿಂದಲೇ ಊರ್ಧ್ವಪುಂಡ್ರತಿಲಕದ ನಾಮಕ್ಕೆ ಅಲಂಕಾರವು. ತಿಲಕ ಸಂಬಂಧದಿಂದ ವೇದವ್ಯಾಸರಿಗೆ ಅಲಂಕಾರವಲ್ಲ. ವೇದವ್ಯಾಸರು ಸ್ವರಸ ಸುಂದರರು, ಸ್ವತಃ ಸುಂದರರು. ಅವರಿಗೆ ಅಲಂಕಾರದ ಅಪೇಕ್ಷೆಯಿಲ್ಲ.

**ವಿಗ್ರಹ—**

**ತ್ರಿಜಗತ್ತಿಲಕಾಲಿಕಾಂತರೇ—** ತ್ರಯಾಣಾಂ ಜಗತಾಂ ಸಮಾಹಾರಃ ತ್ರಿಜಗತ್ (ತ್ರೀಣಿ ಚ ತಾನಿ ಜಗಂತಿ ಚ ತ್ರಿಜಗಂತಿ) (ತ್ರಿಜಗತಾಂ) ತ್ರಿಜಗತಃ ತಿಲಕಃ ತ್ರಿಜಗತ್ತಿಲಕಃ, ತ್ರಿಗತ್ತಿಲಕಸ್ಯ ಅಲಿಕಂ ತ್ರಿಜಗತ್ತಿಲಕಾಲಿಕಂ, ತ್ರಿಜಗತ್ತಿಲಕಾಲಿಕಸ್ಯ ಅಂತರಂ ತ್ರಿಜಗತ್ತಿಲಕಾಲಿಕಾಂತರಂ, ತಸ್ಮಿನ್ ತ್ರಿಜಗತ್ತಿಲಕಾಲಿಕಾಂತರೇ ।

**ಹರಿನೀಲಗಿರೀಂದ್ರಮಸ್ತಕಸ್ಫುಟಶೋಣೋಪಲಪಂಕ್ತಿಸನ್ನಿಭಃ—** ಗಿರಿಷು ಇಂದ್ರಃ ಗಿರೀಂದ್ರಃ, ಹರಿನೀಲಶ್ಚಾಸೌ ಗಿರೀಂದ್ರಶ್ಚ ಹರಿನೀಲಗಿರೀಂದ್ರಃ, ಹರಿನೀಲಗಿರೀಂದ್ರಸ್ಯ ಮಸ್ತಕಃ ಹರಿನೀಲಗಿರೀಂದ್ರಮಸ್ತಕಃ, ಶೋಣಾಶ್ಚ ತೇ ಉಪಲಾಶ್ಚ ಶೋಣೋಪಲಾಃ, ಸ್ಫುಟಾಶ್ಚ ತೇ ಶೋಣೋಪಲಾಶ್ಚ ಸ್ಫುಟಶೋಣೋಪಲಾಃ, ಹರಿನೀಲಗಿರೀಂದ್ರಮಸ್ತಕೇ ಸ್ಫುಟಶೋಣೋಪಲಾಃ ಹರಿನೀಲಗಿರೀಂದ್ರಮಸ್ತಕಸ್ಫುಟಶೋಣೋಪಲಾಃ, ತೇಷಾಂ ಪಂಕ್ತಯಃ, ಹರಿನೀಲಗಿರೀಂದ್ರಮಸ್ತಕಸ್ಫುಟಶೋಣೋಪಲಪಂಕ್ತೇಃ (ಸನ್ನಿಭಃ) ಸದೃಶಃ ಹರಿನೀಲಗಿರೀಂದ್ರಮಸ್ತಕಸ್ಫುಟಶೋಣೋಪಲಪಂಕ್ತಿಸನ್ನಿಭಃ ।

★ ★ ★

ಶ್ರೀಮಧ್ವರು ಶ್ರೀವೇದವ್ಯಾಸದೇವರ ಜಟಾಲಂಕೃತವಾದ ದೇಹವನ್ನು ವರ್ಣಿಸುತ್ತಾರೆ.

**ನವಮಂಬುಧರಂ ವಿಡಂಬಯದ್ವರವಿದ್ಯುದ್ವಲಯಂ ಜಗದ್ಗುರೋಃ ।**
**ಅವಲೋಕ್ಯ ಕೃತಾರ್ಥತಾಮಗಾಂ ಸಜಟಾಮಂಡಲಮಂಡನಂ ವಪುಃ ॥ 45 ॥**

**ಪದಚ್ಛೇದ—** ನವಂ, ಅಂಬುಧರಂ, ವಿಡಂಬಯತ್, ವರವಿದ್ಯುದ್ವಲಯಂ, ಜಗದ್ಗುರೋಃ, ಅವಲೋಕ್ಯ, ಕೃತಾರ್ಥತಾಂ, ಅಗಾಂ, ಸಜಟಾಮಂಡಲಮಂಡನಂ, ವಪುಃ ।

**ಅನ್ವಯ—** ವರವಿದ್ಯುದ್ವಲಯಂ, ನವಂ, ಅಂಬುಧರಂ, ವಿಡಂಬಯತ್, ಸಜಟಾಮಂಡಲಮಂಡನಂ, ಜಗದ್ಗುರೋಃ, ವಪುಃ, ಅವಲೋಕ್ಯ, ಕೃತಾರ್ಥತಾಂ, ಅಗಾಂ ।

**ಅನ್ವಯಾರ್ಥ—**

**ವರವಿದ್ಯುದ್ವಲಯಂ** = ಉತ್ತಮವಾದ ಮಿಂಚುಗಳ ವರ್ತುಲವುಳ್ಳ (ಸಮೂಹವುಳ್ಳ),
**ನವಂಅಂಬುಧರಂ** = ಹೊಸದಾದ ನೀರನ್ನು ಧರಿಸಿರುವ ಮೋಡವನ್ನು
**ವಿಡಂಬಯತ್** = ಅನುಕರಿಸುವ
**ಸಜಟಾಮಂಡಲಮಂಡನಂ** = ಜಟೆಗಳ ವರ್ತುಲ ಮಂಡಲವೇ ಅಲಂಕಾರವಾಗಿ ಉಳ್ಳ
**ಜಗದ್ಗುರೋಃ** = ಲೋಕಗುರುಗಳಾದ ಶ್ರೀವ್ಯಾಸರ
**ವಪುಃ** = ಶರೀರವನ್ನು
**ಅವಲೋಕ್ಯ** = ನೋಡಿ
**ಕೃತಾರ್ಥತಾಂ** = ಕೃತಕೃತ್ಯತೆಯನ್ನು
**ಅಗಾಂ** = ಹೊಂದಿದೆನು.

**ತಾತ್ಪರ್ಯ**— ನೀಲಕಾಂತಿಯ ಹೊಸದಾದ ಮೇಘಗಳ ಸಮೂಹದಲ್ಲಿ ಮಿಂಚಿನ ವರ್ತುಲವು ಹೇಗೆ ಶೋಭಿಸುತ್ತಿದೆಯೋ ಅದರಂತೆ ನೀಲವರ್ಣದ ವ್ಯಾಸರು ಅರುಣವರ್ಣದ ಜಟೆಯನ್ನು ಧರಿಸಿ ಶೋಭಿಸುತ್ತಿದ್ದಾರೆ. ಶ್ರೀ ವ್ಯಾಸರ ಇಂತಹ ಉತ್ಕೃಷ್ಟವಾದ ಶರೀರವನ್ನು ನೋಡಿ ನಾನು ಧನ್ಯನಾದೆನು.

**ವಿಗ್ರಹ**—

**ಅಂಬುಧರಂ**— ಧರತೀತಿ ಧರಃ ಅಂಬುನಃ ಧರಃ ಅಂಬುಧರಃ, ತಂ ಅಂಬುಧರಂ ।

**ವರವಿದ್ಯುದ್ವಲಯಂ**— ವಿದ್ಯುತಾಂ ವಲಯಃ ವಿದ್ಯುದ್ವಲಯಃ, ವರಃ ವಿದ್ಯುದ್ವಲಯಃ ಯಸ್ಮಿನ್ ಸಃ ವರವಿದ್ಯುದ್ವಲಯಃ, ತಂ ವರವಿದ್ಯುದ್ವಲಯಂ ।

**ಜಗದ್ಗುರೋಃ**— ಜಗತಾಂ ಗುರುಃ ಜಗದ್ಗುರುಃ, ತಸ್ಯ ಜಗದ್ಗುರೋಃ ।

**ಕೃತಾರ್ಥತಾಂ**— ಕೃತಃ ಅರ್ಥಃ ಯೇನ ಸಃ ಕೃತಾರ್ಥಃ, ಕೃತಾರ್ಥಸ್ಯ ಭಾವಃ ಕೃತಾರ್ಥತಾ, ತಾಂ ಕೃತಾರ್ಥತಾಂ ।

**ಸಜಟಾಮಂಡಲಮಂಡನಂ**— ಜಟಾನಾಂ ಮಂಡಲಂ ಜಟಾಮಂಡಲಂ, ಜಟಾಮಂಡಲಮೇವ ಮಂಡನಂ ಜಟಾಮಂಡಲಮಂಡನಂ, ಜಟಾಮಂಡಲಮಂಡನೇನ ಸಹವರ್ತತ ಇತಿ ಸಜಟಾಮಂಡಲ-ಮಂಡನಂ, ತತ್ ಸಜಟಾಮಂಡಲಮಂಡನಂ ।

**ಕ್ರಿಯಾಪದ**— **ಅಗಾಂ**- ಇಣ್‌ಗತೌ ಇತಿ ಗತ್ಯರ್ಥಕಾತ್ ಇಣ್‌ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತೇ ಲುಙ್ ಉತ್ತಮಪುರುಷೇ ಬಹುವಚನೇ ''ಅಗಾಂ'' ಇತಿ ರೂಪಮ್ ।

ಅಗುಃ ಅಗಾತ್ ಅಗಾತಾಂ, ಅಗುಃ ಅಗಾಃ ಅಗಾತಂ ಅಗಾತ, ಅಗಾಂ ಅಗಾವ ಅಗಾಮ ॥

**ಪ್ರಯೋಗ**— ಅಹಂ ಕೃತಾರ್ಥತಾಂ ಅಗಾಂ (ಕರ್ತರಿ) । ಮಯಾ ಕೃತಾರ್ಥತಾ ಅಗಾಯಿ (ಕರ್ಮಣಿ) ।

★ ★ ★

**ಅನಂತಾನಂತ ಸದ್ಗುಣಪರಿಪೂರ್ಣನಾದ ಪರಮಾತ್ಮನ ಗುಣಗಳನ್ನು ಎಣಿಸಲು ಸಾಕ್ಷಾತ್ ಶ್ರೀಮಹಾಲಕ್ಷ್ಮಿಗೂ ಕೂಡ ಸಾಧ್ಯವಿಲ್ಲವೆಂದು ಶ್ರೀಮಧ್ವರು ಶ್ರೀವೇದವ್ಯಾಸರೂಪಿ ಪರಮಾತ್ಮನ ಅದ್ಭುತ ಮಹಿಮೆಯನ್ನು ವರ್ಣಿಸುತ್ತಾರೆ.**

**ನ ರಮಾಪಿ ಪದಾಂಗುಲೀಲಸ-**
**ನ್ನಖಧೂರಾಜದನಂತಸದ್ಗುಣಾನ್ ।**
**ಗಣಯೇದ್ಗಣಯಂತ್ಯನಾರತಂ**
**ಪರಮಾನ್ ಕೋಽಸ್ಯ ಪರೋ ಗುಣಾನ್ ವದೇತ್ ॥ 46 ॥**

**ಪದಚ್ಛೇದ**— ನ, ರಮಾ, ಅಪಿ, ಪದಾಂಗುಲೀಲಸನ್ನಖಧೂರಾಜದನಂತಸದ್ಗುಣಾನ್, ಗಣಯೇತ್, ಗಣಯಂತೀ, ಅನಾರತಂ, ಪರಮಾನ್, ಕಃ, ಅಸ್ಯ, ಗುಣಾನ್, ವದೇತ್ ।

**ಅನ್ವಯ**— ರಮಾ ಅಪಿ, ಅಸ್ಯ, ಪದಾಂಗುಲೀಲಸನ್ನಖಧೂರಾಜದನಂತಸದ್ಗುಣಾನ್, ಅನಾರತಂ, ಗಣಯಂತೀ, ಅಪಿ, ನ ಗಣಯೇತ್, ಪರಃ, ಕಃ, ಪರಮಾನ್, ಗುಣಾನ್, ವದೇತ್ ।

**ಅನ್ವಯಾರ್ಥ**—

**ರಮಾ ಅಪಿ** = ಲಕ್ಷ್ಮೀದೇವಿಯೂ ಕೂಡ,

**ಅಸ್ಯ** = ಈ ಶ್ರೀವೇದವ್ಯಾಸದೇವರ

**ಪದಾಂಗುಲೀಲಸನ್ನಖಧೂರಾಜದನಂತಸದ್ಗುಣಾನ್**= ಕಾಲಿನ ಕಿರುಬೆರಳಿನಲ್ಲಿ ಪ್ರಕಾಶಿಸುವ ಉಗುರಿನ ವ್ಯಾಪಾರದಿಂದ ಪ್ರಕಾಶಿಸುವ ಲೆಕ್ಕವಿಲ್ಲದ ಒಳ್ಳೆಯಗುಣಗಳನ್ನು,

**ಅನಾರತಂ** = ಯಾವಾಗಲೂ

**ಗಣಯಂತೀ (ಅಪಿ)** = ಲೆಕ್ಕ ಮಾಡುತ್ತಿದ್ದರೂ (ಎಣಿಕೆ ಮಾಡುತ್ತಿರುವವಳಾದಾಗ್ಯೂ),

**ನ ಗಣಯೇತ್** = (ಪೂರ್ತಿಯಾಗಿ) ಲೆಕ್ಕಿಸಲಾರಳು.

**ಪರಃ** = ಬೇರೆಯವನು

**ಕಃ** = ಯಾವನು

**ಪರಮಾನ್** = ಅತ್ಯುತ್ತಮವಾದ

**ಗುಣಾನ್** = (ಪರಮಾತ್ಮನ ಅನಂತ ಗುಣಗಳನ್ನು) ಗುಣಗಳನ್ನು

**ವದೇತ್** = ಹೇಳಿಯಾನು.

**ತಾತ್ಪರ್ಯ—** ಶ್ರೀವೇದವ್ಯಾಸರ ಕಾಲಿನ ಕಿರುಬೆರಳಿನಲ್ಲಿ ವಿರಾಜಿಸುವ ಒಂದು ಉಗುರಿನ ಕ್ರಿಯೆಯಲ್ಲಿ ರಾಜಿಸುವ ಸದ್ಗುಣಗಳೇ ಅನಂತವಾಗಿರುವುವು. ಆ ಒಂದು ಅವಯವದ ವ್ಯಾಪಾರದ ಸದ್ಗುಣಗಳನ್ನು ಶ್ರೀ ಲಕ್ಷ್ಮೀದೇವಿಯು ಯಾವಾಗಲೂ ಎಣಿಸುತ್ತಿದ್ದರೂ ಪೂರ್ತಿಯಾಗಿ ಎಣಿಸಿ ಮುಗಿಸಲಾರಳು. ಆದ್ದರಿಂದ ಈ ವ್ಯಾಸರ ಮತ್ತು ಅವರ ಸಕಲಾವಯವಗಳ ಅವುಗಳ ವ್ಯಾಪಾರಗಳ ಸಂಪೂರ್ಣವಾದ ಗುಣಗಳನ್ನು ಬೇರೆ ಯಾರು ತಾನೇ ವರ್ಣಿಸಲು ಶಕ್ತರಾಗುತ್ತಾರೆ ? ಯಾರೂ ಶಕ್ತರಾಗುವುದಿಲ್ಲ. ಪರಮಾತ್ಮನ ಗುಣಕ್ರಿಯಾ ಅವಯವಗಳಿಗೂ ಪರಮಾತ್ಮನಿಗೂ ಅತ್ಯಂತಾಭೇದವಿರುವುದರಿಂದ ಪರಮಾತ್ಮನ ಉಗುರಿನ ವ್ಯಾಪಾರವೂ ಅನಂತವಾಗಿದೆ. ಬ್ರಹ್ಮಾದಿಗಳಿಗಿಂತಲೂ ಉತ್ತಮಳಾದ ರಮಾದೇವಿಯೂ ಕೂಡ ಸಂಪೂರ್ಣವಾಗಿ ಪರಮಾತ್ಮನ ಒಂದು ಅವಯವದ ಗುಣಕ್ರಿಯೆಗಳನ್ನು ವರ್ಣಿಸಲಾರಳು ಎಂದಮೇಲೆ ಮತ್ತಾರೂ ಸಮರ್ಥರಾಗುವುದಿಲ್ಲವೆಂದು ಹೇಳಬೇಕಾಗಿಯೇ ಇಲ್ಲ ಎಂದು ಭಾವ. ಅಂದರೆ ಪರಮಾತ್ಮನು ಅನಂತಾನಂತ ಕಲ್ಯಾಣಗುಣ ಪರಿಪೂರ್ಣನೆಂದು ತಾತ್ಪರ್ಯ.

**ವಿಶೇಷಾಂಶ—** ಈ ಕಾವ್ಯಕರ್ತೃಗಳಾದ ಶ್ರೀಮನ್ನಾರಾಯಣಪಂಡಿತಾಚಾರ್ಯರ ತಂದೆಗಳಾದ ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯರು ತಾವು ಮಾಡಿರುವ ವಿಷ್ಣುಸ್ತುತಿಯಲ್ಲಿ ಈ ವಿಷಯವನ್ನು ಹೃದಯಂಗಮವಾಗಿ ಹೀಗೆ ವರ್ಣಿಸಿದ್ದಾರೆ.

**ಲಕ್ಷ್ಮೀರಕ್ಷೀಣದೀಕ್ಷಾಗಣಯಿತುಮನುಪಕ್ರಾಂತ ಸಂವಿದ್ಗುಣಾನಾಂ**
**ಅನಂತ್ಯಾನಿಸ್ವಭರ್ತುಃ ಪದಕಮಲಕನಿಷ್ಠಾಂಗುಲೀಸನ್ನಖಸ್ಯ ।**
**ಪಶ್ಯಂತೀ ಸಂತತಂ ಸಾ ನವನವಸುವಿಶೇಷೋಪಲಂಭೇನ ತತ್ತತ್**
**ಕಾಲೇಕೌತೂಹಲಾಬ್ಧೌ ಸುಮಹತಿಗಹನೇ ಗಾಹಮಾನಾವತಾನ್ನ ॥**

ವಿಗ್ರಹ—

**ಪದಾಂಗುಲೀಲಸನ್ನಖಧೂರಾಜದನಂತಸದ್ಗುಣಾನ್—** ಪದಸ್ಯ ಅಂಗುಲೀ ಪದಾಂಗುಲೀ, ಪದಾಂಗುಲ್ಯಾಂ ಲಸನ್ ಪದಾಂಗುಲೀಲಸನ್, ಪದಾಂಗುಲೀಲಸಂಶ್ಚಾಸೌ ನಖಶ್ಚ ಪದಾಂಗುಲೀಲಸನ್ನಖಃ, ಪದಾಂಗುಲೀಲಸನ್ನಖಸ್ಯ ಧೂಃ ಪದಾಂಗುಲೀಲಸನ್ನಖಧೂಃ, ಪದಾಂಗುಲೀಲಸನ್ನಖಧುರಾ ರಾಜಂತಃ ಪದಾಂಗುಲೀಲಸನ್ನಖಧೂರಾಜಂತಃ, ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಅನಂತಾಶ್ಚ ತೇ ಸದ್ಗುಣಾಶ್ಚ ಅನಂತಸದ್ಗುಣಾಃ, ಪದಾಂಗುಲೀಲಸನ್ನಖಧೂರಾಜಂತಶ್ಚ ತೇ ಅನಂತಸದ್ಗುಣಾಶ್ಚ ಪದಾಂಗುಲೀಲ-ಸನ್ನಖಧೂರಾಜದನಂತಸದ್ಗುಣಾಃ, ತಾನ್ ಪದಾಂಗುಲೀಲಸನ್ನಖಧೂರಾಜದನಂತಸದ್ಗುಣಾನಾಂ ।

**ಕ್ರಿಯಾಪದ—** **ಗಣಯೇತ್**- ಗಣ ಸಂಖ್ಯಾನೇ ಇತಿ ಸಂಖ್ಯಾನಾರ್ಥಕಾತ್ ಗಣಧಾತೋಃ ಸಕರ್ಮಕಾತ್ ಪರಸ್ಮೈ-ಪದಿನಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ''ಗಣಯೇತ್'' ಇತಿ ರೂಪಮ್ ।।

ಗಣಯೇತ್ ಗಣಯೇತಾಂ ಗಣಯೇಯುಃ,
ಗಣಯೇಃ ಗಣಯೇತಂ ಗಣಯೇತ,
ಗಣಯೇಯಂ ಗಣಯೇವ ಗಣಯೇಮ ॥

**ಕ್ರಿಯಾಪದ—** **ವದೇತ್**- ವದವ್ಯಕ್ತಾಯಾಂ ವಾಚಿ ಇತಿ ವ್ಯಕ್ತ ವಾಗರ್ಥಕಾತ್ ವದಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ''ವದೇತ್'' ಇತಿ ರೂಪಮ್ ।।

ವದೇತ್ ವದೇತಂ ವದೇಯುಃ, ವದೇಃ ವದೇತಂ ವದೇತ, ವದೇಯಂ ವದೇವ ವದೇಮ

**ಪ್ರಯೋಗ—** ರಮಾ ಸದ್ಗುಣಾನ್ ನ ಗಣಯೇತ್ (ಕರ್ತರಿ) । ರಮಯಾ ಸದ್ಗುಣಾಃ ನ ಗಣ್ಯೇರನ್ (ಕರ್ಮಣಿ) । ಪರಃ ಕಃ ಗುಣಾನ್ ವದೇತ್ (ಕರ್ತರಿ) । ಪರೇಣ ಕೇನ ಗುಣಾಃ ಉದ್ಯೇರನ್ (ಕರ್ಮಣಿ) ।

★ ★ ★

ನವಾವರಣಗಳಿಂದ ಕೂಡಿದ ಬ್ರಹ್ಮಾಂಡ ದರ್ಶನದಿಂದ ಆಗದಿರುವ ಆಶ್ಚರ್ಯವು
ಶ್ರೀವೇದವ್ಯಾಸರ ದೇಹದ ದರ್ಶನದಿಂದುಂಟಾಗುತ್ತಿದೆಯೆಂದು ಶ್ರೀಮಧ್ವರು ವರ್ಣಿಸುತ್ತಿದ್ದಾರೆ.

**ನ ಕುತೂಹಲಿತಾ ಕುತೂಹಲಂ ತನುಮೇನಾಮವಲೋಕ್ಯ ಸದ್ಗುರೋಃ ।**
**ಸನವಾವರಣಾಂಡದರ್ಶಿನೋ ಗೃಹಬುದ್ಧ್ಯಾ ಮಮ ನಿಷ್ಕುತೂಹಲಂ ॥ 47 ॥**

**ಪದಚ್ಛೇದ—** ನ, ಕುತೂಹಲಿತಾ, ಕುತೂಹಲಂ, ತನುಂ, ಏನಾಂ, ಅವಲೋಕ್ಯ, ಸದ್ಗುರೋಃ, ಸನವಾವರಣಾಂಡ-ದರ್ಶಿನಃ, ಗೃಹಬುದ್ಧ್ಯಾ, ಮಮ, ನಿಷ್ಕುತೂಹಲಂ ।

**ಅನ್ವಯ—** ಸದ್ಗುರೋಃ, ಏನಾಂ, ತನುಂ, ಅವಲೋಕ್ಯ, ನಿಷ್ಕುತೂಹಲಂ, ಗೃಹಬುದ್ಧ್ಯಾ, ಸನವಾವರಣಾಂಡ-ದರ್ಶಿನಃ, ಮಮ, ಕುತೂಹಲಿತಾ, ಕುತೂಹಲಂ, ನ ।

**ಅನ್ವಯಾರ್ಥ—**

**ಸದ್ಗುರೋಃ** = ಸಜ್ಜನರಿಗೆ ಗುರುಗಳಾದ ಈ ವೇದವ್ಯಾಸರ
**ಏನಾಂ** = ಮುಂದೆ ಇರುವ ಈ
**ತನುಂ** = ಶರೀರವನ್ನು
**ಅವಲೋಕ್ಯ** = ನೋಡಿ,
**ನಿಷ್ಕುತೂಹಲಂ** = ಆಶ್ಚರ್ಯವಿಲ್ಲದೆ
**ಗೃಹಬುದ್ಧ್ಯಾ** = ಮನೆಯೆಂಬ ಜ್ಞಾನದಿಂದ
**ಸನವಾವರಣಾಂಡದರ್ಶಿನಃ** = ಜಲ ಮುಂತಾದ ಒಂಬತ್ತು ಆವರಣಗಳಿಂದ ಕೂಡಿದ ಬ್ರಹ್ಮಾಂಡವನ್ನು ನೋಡುತ್ತಿರುವ
**ಮಮ** = ನನಗೆ
**ಕುತೂಹಲಿತಾ** = ಆಶ್ಚರ್ಯವುಳ್ಳತನವು
**ಕುತೂಹಲಂ ನ** = ಆಶ್ಚರ್ಯವಲ್ಲ.

**ತಾತ್ಪರ್ಯ—** ಜಲ, ತೇಜಸ್ಸು, ವಾಯು, ಆಕಾಶ, ಅಹಂಕಾರ ತತ್ತ್ವ, ಮಹತ್ತತ್ತ್ವ, ಸತ್ತ್ವ, ರಜಸ್, ತಮಸ್ ಎಂಬ ಒಂಭತ್ತು ಆವರಣಗಳು ಈ ಬ್ರಹ್ಮಾಂಡಕ್ಕೆ ಇವೆ. ಇಂತಹ ಬ್ರಹ್ಮಾಂಡವನ್ನು ನಾನು ಮನೆಯನ್ನು ನೋಡುವಂತೆ ಆಶ್ಚರ್ಯವಿಲ್ಲದೆ ನೋಡುತ್ತಿದ್ದನು. ಆದರೆ ಈ ದಿನ ಈಗ ವ್ಯಾಸರ ದಿವ್ಯ ಅದ್ಭುತ ಸ್ವರೂಪವನ್ನು ನೋಡಿದ ಕೂಡಲೆ ಆಶ್ಚರ್ಯವಾಗಿದೆ, ಆಶ್ಚರ್ಯವಾಗುತ್ತಿದೆ. ವ್ಯಾಸರ ಈ ಜ್ಞಾನಾನಂದಾತ್ಮಕ ಸ್ವರೂಪಾತ್ಮಕ ದೇಹವು ಪ್ರತಿಕ್ಷಣದಲ್ಲಿಯೂ ಹೊಸ ಹೊಸದಾಗಿ ತೋರುತ್ತಿದೆಯಾದುದರಿಂದ ಹೀಗೆ ಆಶ್ಚರ್ಯವಾಗುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಇದು ಪರಮಾದ್ಭುತ ದೇಹ, ಇದಕ್ಕೆ ಸಮಾನವಾದುದು ಯಾವುದೂ ಇಲ್ಲ.

**ವಿಗ್ರಹ—**

**ಕುತೂಹಲಿತಾ—** ಕುತೂಹಲಂ ಅಸ್ಯ ಅಸ್ತೀತಿ ಕುತೂಹಲೀ, ಕುತೂಹಲಿನಃ ಭಾವಃ ಕುತೂಹಲಿತಾ ।

**ಸದ್ಗುರೋಃ—** ಸತಾಂ ಗುರುಃ ಸದ್ಗುರುಃ, ತಸ್ಯ ಸದ್ಗುರೋಃ ।

**ಸನವಾವರಣಾಂಡದರ್ಶಿನಃ—** ನವ ಚ ತಾನಿ ಆವರಣಾನಿ ಚ ನವಾವರಣಾನಿ, ನವಾವರಣೈಃ ಸಹ ವರ್ತತೇ ಇತಿ ಸನವಾವರಣಂ, ಸನವಾವರಣಂ ಚ ತತ್ ಅಂಡಂ ಚ ಸನವಾವರಣಾಂಡಂ, ಸನವಾವರಣಾಂಡಂ ಪಶ್ಯತಿ ತಾಚ್ಛೀಲ್ಯೇನೇತಿ ಸನವಾವರಣಾಂಡದರ್ಶೀ, ತಸ್ಯ ಸನವಾವರಣಾಂಡದರ್ಶಿನಃ ।

**ಗೃಹಬುದ್ಧ್ಯಾ—** ಗೃಹಂ ಇತಿ ಬುದ್ಧಿಃ ಗೃಹಬುದ್ಧಿಃ, ತಯಾ ಗೃಹಬುದ್ಧ್ಯಾ ।

**ನಿಷ್ಕುತೂಹಲಂ—** ನಿರ್ಗತಂ ಕುತೂಹಲಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ನಿಷ್ಕುತೂಹಲಂ ।

★ ★ ★

ಈ ರೀತಿ ಶ್ರೀವೇದವ್ಯಾಸರನ್ನು ವರ್ಣಿಸಿ, ಕಣ್ಣನಗಳಿಂದ ಮೊದಲೇ ಶ್ರೀವೇದವ್ಯಾಸರ ಸನ್ನಿಧಾನವನ್ನುಳ್ಳವರಾದಾಗ್ಯೂ, ಈಗ ಸಾಕ್ಷಾತ್ತಾಗಿ ದೇಹದಿಂದಲೂ ಅವರ ಸಮೀಪಕ್ಕೆ ಹೋದರೆಂದು ಈ ಪದ್ಯದಲ್ಲಿ ವರ್ಣಿಸಲಾಗಿದೆ.

**ಇತಿ ಚಿಂತಯತಾ ಮಹಾಧಿಯಾ ಪದವೀಂ ಬಾಹ್ಯಗತಾಮತೀಯುಷಾ ।**
**ಸ ಮನೋನಯನೈಃ ಪುರಾ ಗತಸ್ತತ ಆಪೇ ವಪುಷಾಪಿ ವೇದರಾಟ್ ॥ 48 ॥**

**ಪದಚ್ಛೇದ—** ಇತಿ, ಚಿಂತಯತಾ, ಮಹಾಧಿಯಾ, ಪದವೀಂ, ಬಾಹ್ಯಗತಾಂ, ಅತೀಯುಷಾ, ಸಃ, ಮನೋನಯನೈಃ, ಪುರಾ, ಗತಃ, ತತಃ, ಆಪೇ, ವಪುಷಾ, ಅಪಿ, ವೇದರಾಟ್ ।

**ಅನ್ವಯ—** ಇತಿ, ಚಿಂತಯತಾ, ಬಾಹ್ಯಗತಾಂ, ಪದವೀಂ, ಅತೀಯುಷಾ, ಮಹಾಧಿಯಾ, ಮನೋನಯನೈಃ, ಪುರಾ, ಗತಃ, ಸಃ, ವೇದರಾಟ್, ತತಃ, ವಪುಷಾ, ಅಪಿ, ಆಪೇ ।

**ಅನ್ವಯಾರ್ಥ—**

ಇತಿ = ಈ ರೀತಿ

ಚಿಂತಯತಾ = ಆಲೋಚಿಸುತ್ತಿರುವ

ಬಾಹ್ಯಗತಾಂ = ಹೊರಗಿನ

ಪದವೀಂ = ದಾರಿಯನ್ನು

ಅತೀಯುಷಾ = ದಾಟಿ ಬಂದಿರುವ

ಮಹಾಧಿಯಾ = ಶ್ರೀಮಧ್ವಾಚಾರ್ಯರಿಂದ,

ಮನಃ = ಮನಸ್ಸು

**ನಯನೈಃ** = ಕಣ್ಣುಗಳು ಇವುಗಳಿಂದ

**ಪುರಾ** = ಮೊದಲು

**ಗತಃ** = ಹೊಂದಲ್ಪಟ್ಟ

**ಸಃ** = ಅಂತಹ

**ವೇದರಾಟ್** = ವೇದಾಧೀಶರಾದ ಶ್ರೀವೇದವ್ಯಾಸರು,

**ತತಃ** = ತರುವಾಯ

**ವಪುಷಾ ಅಪಿ** = ದೇಹದಿಂದಲೂ ಕೂಡ

**ಆಪೇ** = ಹೊಂದಲ್ಪಟ್ಟರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ಆಶ್ರಮದ ಹೊರಗಿನ ದಾರಿಯುದ್ದಕ್ಕೂ ಕಣ್ಣುಗಳಿಂದ ವೇದವ್ಯಾಸರನ್ನು ನೋಡುತ್ತಾ, ಮನಸ್ಸಿನಿಂದ ಎಣಿಸಲಾಗದ ಗುಣಗಳಿಗೆ ಸಮುದ್ರನೂ, ದೋಷದೂರನೂ ಆದ ಶ್ರೀಮನ್ನಾರಾಯಣನೇ ಇವರು. ''ಅಗಣೇಯಗುಣಾರ್ಣವೋಽಮಲಃ ಸಹಿ ನಾರಾಯಣ ಏಷ ಕೇವಲಂ''. ಎಂಬಲ್ಲಿಂದ ಇಲ್ಲಿಯವರೆಗೆ ಹೇಳಿದ ರೀತಿಯಿಂದ ಧ್ಯಾನ ಮಾಡುತ್ತಾ ಆಶ್ರಮವನ್ನು ಸಮೀಪಿಸಿದರು. ಹೀಗೆ ಕಣ್ಣು ಮನಸ್ಸುಗಳಿಂದ ವ್ಯಾಸರನ್ನು ನೋಡುತ್ತಾ ಇದ್ದ ಆಚಾರ್ಯರು ದೇಹದಿಂದಲೂ ಗುರುಗಳನ್ನು ಸಮೀಪಿಸಿದರು, ವ್ಯಾಸರ ಹತ್ತಿರಕ್ಕೆ ಬಂದರು.

**ವಿಗ್ರಹ**—

**ಬಾಹ್ಯಗತಾಂ**— ಬಾಹ್ಯೇ ಗತಾ ಬಾಹ್ಯಗತಾಂ ।

**ಮಹಾಧಿಯಾ**— ಮಹತೀ ಧೀಃ ಯಸ್ಯ ಸಃ ಮಹಾಧೀಃ, ತೇನ ಮಹಾಧಿಯಾ ।

**ಮನೋನಯನೈಃ**— ಮನಶ್ಚ ನಯನೇ ಚ ಮನೋನಯನಾನಿ, ತೈಃ ಮನೋನಯನೈಃ ।

**ವೇದರಾಟ್**— ವೇದಾನಾಂ ರಾಟ್ ವೇದರಾಟ್ ।

**ಕ್ರಿಯಾಪದ**— ಆಪೇ- ಆಪ್‌ಲೃ ವ್ಯಾಪ್ತೌ ಇತಿ ಆಪ್ತ್ಯರ್ಥಕಾತ್ ಆಪ್ ಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಭೂತಾನದ್ಯತನಪರೋಕ್ಷೇ ಕರ್ಮಣಿ ಲಿಟಿ ಪ್ರಥಮಪುರುಷೇ ಏಕವಚನೇ ''ಆಪೇ'' ಇತಿ ರೂಪಮ್ ।

ಆಪೇ ಆಪಾತೇ ಆಪಿರೇ, ಆಪಿಷೇ ಆಪಾಥೇ ಆಪಿಧ್ವೇ, ಆಪೇ ಆಪಿವಹೇ ಆಪಿಮಹೇ ॥

**ಪ್ರಯೋಗ**— ಮಹಾಧಿಯಾ ವೇದರಾಟ್ ಆಪೇ (ಕರ್ಮಣಿ) । ಮಹಾಧೀಃ ವೇದರಾಜಂ ಆಪ (ಕರ್ತರಿ) ।

★ ★ ★

ಶ್ರೀವೇದವ್ಯಾಸರ ದಿವ್ಯ ಸನ್ನಿಧಾನಕ್ಕೆ ಹೋಗಿ ಭಕ್ತಿ ಭಾವದಿಂದ ಬಗ್ಗಿದ ದೇಹವುಳ್ಳವರಾಗಿ ಕ್ಷಣಕಾಲ ಕಣ್ಣುಗಳನ್ನು ಸ್ವಲ್ಪ ಮುಚ್ಚಿಕೊಂಡು ಕೈ ಮುಗಿದುಕೊಂಡು ಆನಂದ ಪರವಶರಾಗಿ ಶ್ರೀಮಧ್ವರು ಶ್ರೀವೇದವ್ಯಾಸರನ್ನು ಸ್ತುತಿಸಿದರು.

**ಗುರುಭಕ್ತಿಭರಾನತಾಕೃತಿಃ ವಿರಚಯ್ಯಾಂಜಲಿಬಂಧಮಂಜಸಾ ।**
**ಕ್ಷಣಮಾಮುಕುಲೀಕೃತೇಕ್ಷಣಃ ಸ ಗುರುಂ ಕೇವಲಮಭ್ಯವಂದತ ॥ 49 ॥**

**ಪದಚ್ಛೇದ**— ಗುರುಭಕ್ತಿಭರಾನತಾಕೃತಿಃ, ವಿರಚಯ್ಯ , ಅಂಜಲಿಬಂಧಂ, ಅಂಜಸಾ, ಕ್ಷಣಂ, ಆಮುಕುಲೀಕೃತೇಕ್ಷಣಃ, ಸಃ, ಗುರುಂ, ಕೇವಲಂ, ಅಭ್ಯವಂದತ ।

**ಅನ್ವಯ**— ಗುರುಭಕ್ತಿಭರಾನತಾಕೃತಿಃ, ಕ್ಷಣಂ ಆಮುಕುಲೀಕೃತೇಕ್ಷಣಃ ಸಃ, ಅಂಜಲಿಬಂಧಂ ಅಂಜಸಾ ವಿರಚಯ್ಯ, ಕೇವಲಂ ಗುರುಂ ಅಭ್ಯವಂದತ ।

ಅನ್ವಯಾರ್ಥ—

**ಗುರು** = ಹೆಚ್ಚಾದ

**ಭಕ್ತಿಭರಾನತಾಕೃತಿಃ** = ಭಕ್ತಿಯ ಅತಿಶಯದಿಂದ (ಭಾರದಿಂದ) ಸ್ವಲ್ಪ ಬಗ್ಗಿದ ಆಕಾರವುಳ್ಳ

**ಕ್ಷಣಂ** = ಸ್ವಲ್ಪ ಹೊತ್ತು

**ಆಮುಕುಲೀಕೃತೇಕ್ಷಣಃ** = ಸ್ವಲ್ಪ ಮುಚ್ಚಿದ ಕಣ್ಣುಳ್ಳ

**ಸಃ** = ಆ ಮಧ್ವಾಚಾರ್ಯರು,

**ಅಂಜಲಿಬಂಧಂ** = ಕೈ ಮುಗಿಯುವಿಕೆಯನ್ನು

**ಅಂಜಸಾ** = ಸರಿಯಾಗಿ (ಭಕ್ತಿಪೂರ್ವಕವಾಗಿ)

**ವಿರಚಯ್ಯ** = ಮಾಡಿ,

**ಕೇವಲಂ** = ಮುಖ್ಯರಾದ

**ಗುರುಂ** = ಗುರುಗಳಾದ ವ್ಯಾಸರನ್ನು

**ಅಭ್ಯವಂದತ** = ಸ್ತುತಿಸಿದರು.

**ತಾತ್ಪರ್ಯ**— ಆ ಮಧ್ವಾಚಾರ್ಯರು ವ್ಯಾಸರ ಹತ್ತಿರಕ್ಕೆ ಹೋದಕೂಡಲೇ ವಿಶೇಷವಾದ ಭಕ್ತಿಯಿಂದ ಸ್ವಲ್ಪ ಬಾಗಿ ಭಕ್ತಿಯ ಅತಿಶಯದಿಂದ ಉಂಟಾದ ಆನಂದಬಾಷ್ಪದಿಂದ ಸ್ವಲ್ಪ ಹೊತ್ತು ಕಣ್ಣು ಮುಚ್ಚಿಕೊಂಡರು. ಅನಂತರ ಭಕ್ತಿಪೂರ್ವಕವಾಗಿ ಕೈಮುಗಿದು ತನಗೇ ಮುಖ್ಯ ಗುರುಗಳಾದ ಶ್ರೀವೇದವ್ಯಾಸರನ್ನು ಸ್ತೋತ್ರ ಮಾಡಿದರು.

ವಿಗ್ರಹ—

**ಗುರುಭಕ್ತಿಭರಾನತಾಕೃತಿಃ**— ಭಕ್ತೇಃ ಭರಃ ಭಕ್ತಿಭರಃ, ಗುರುಶ್ಚ ಅಸೌ ಭಕ್ತಿಭರಶ್ಚ ಗುರುಭಕ್ತಿಭರಃ, ಗುರು-ಭಕ್ತಿಭರೇಣ ಆನತಾ ಆಕೃತಿಃ ಯಸ್ಯ ಸಃ ಗುರುಭಕ್ತಿಭರಾನತಾಕೃತಿಃ ।

**ಅಂಜಲಿಬಂಧಂ**— ಅಂಜಲೇಃ ಬಂಧಃ ಅಂಜಲಿಬಂಧಃ, ತಂ ಅಂಜಲಿಬಂಧಂ ।

**ಆಮುಕುಲೀಕೃತೇಕ್ಷಣಃ**— ಅನಾಮುಕುಲೇ ಆಮುಕುಲೇ ಸಂಪದ್ಯಮಾನೇ ಕೃತೇ ಆಮುಕುಲೀಕೃತೇ, ಆಮುಕುಲೀಕೃತೇ ಈಕ್ಷಣೇ ಯಸ್ಯ ಸಃ ಆಮುಕುಲೀಕೃತೇಕ್ಷಣಃ ।

**ಕ್ರಿಯಾಪದ**— **ಅಭಿವಾದನಃ**- ಅಭಿ ಇತ್ಯುಪಸರ್ಗಪೂರ್ವಕಾತ್, ವದಿ, ಅಭಿವಾದನಸ್ತುತ್ಯೋಃ ಇತಿ ಅಭಿವಾದನ ಸ್ತುತ್ಯರ್ಥಕಾತ್, ವಂದ ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ಅನದ್ಯತನಭೂತೇ ಲಙ್ ।

ಅಭ್ಯವಂದತ ಅಭ್ಯವಂದೇತಾಂ ಅಭ್ಯವಂದಂತ, ಅಭ್ಯವಂದಥಾಃ ಅಭ್ಯವಂದೇಥಾಂ ಅಭ್ಯವಂದಧ್ವಂ, ಅಭ್ಯವಂದೇ ಅಭ್ಯವಂದಾವಹಿ ಅಭ್ಯವಂದಾಮಹಿ ।

ಪ್ರಯೋಗ— ಸಃ ಗುರುಂ ಅಭ್ಯವಂದತ (ಕರ್ತರಿ) । ತೇನ ಗುರುಃ ಅಭ್ಯವಂದ್ಯತ (ಕರ್ಮಣಿ) ।

★ ★ ★

ಶ್ರೀಮಧ್ವಾಚಾರ್ಯರು ವಿನಯಾತಿಶಯದಿಂದ ಶ್ರೀವೇದವ್ಯಾಸರ ಪಾದಕಮಲಗಳಿಗೆ
ನಮಸ್ಕಾರ ಮಾಡಿದ್ದನ್ನು ಕವಿಗಳು ಇಲ್ಲಿ ವಿವರಿಸುತ್ತಾರೆ.

**ವಿನಯಾಭರಣೇನ ಭೂಷಿತಃ ಸ್ಫುಟಮಷ್ಟಾಂಗವಿಶಿಷ್ಟಚೇಷ್ಟಿತಃ ।**
**ಭಗವತ್ತಮಪಾದಪಂಕಜೇ ಭಗವಾನ್ ಸ ಪ್ರಣನಾಮ ಭಾಗ್ಯವಾನ್ ॥ 50 ॥**

**ಪದಚ್ಛೇದ—** ವಿನಯಾಭರಣೇನ ಭೂಷಿತಃ, ಸ್ಫುಟಂ, ಅಷ್ಟಾಂಗವಿಶಿಷ್ಟಚೇಷ್ಟಿತಃ, ಭಗವತ್ತಮಪಾದಪಂಕಜೇ, ಭಗವಾನ್, ಸಃ, ಪ್ರಣನಾಮ, ಭಾಗ್ಯವಾನ್ ।

**ಅನ್ವಯ—** ವಿನಯಾಭರಣೇನ ಭೂಷಿತಃ, ಅಷ್ಟಾಂಗವಿಶಿಷ್ಟಚೇಷ್ಟಿತಃ, ಭಾಗ್ಯವಾನ್, ಭಗವಾನ್, ಸಃ, ಭಗವತ್ತಮ-ಪಾದಪಂಕಜೇ ಸ್ಫುಟಂ, ಪ್ರಣನಾಮ ।

**ಅನ್ವಯಾರ್ಥ—**

**ವಿನಯಾಭರಣೇನ ಭೂಷಿತಃ** = ನಮ್ರತೆಯೆಂಬ ಅಲಂಕಾರದಿಂದ ಅಲಂಕೃತರಾದ,

**ಅಷ್ಟಾಂಗ** = ಎದೆ, ತಲೆ, ದೃಷ್ಟಿ, ಮನಸ್ಸು, ಮಾತು, ಪಾದಗಳು, ಕೈಗಳು, ಮೊಣಕಾಲುಗಳೆಂಬ ಎಂಟು ಅಂಗಗಳಿಂದ

**ವಿಶಿಷ್ಟ ಚೇಷ್ಟಿತಃ** = ಕೂಡಿದ ನಮಸ್ಕಾರ ವ್ಯಾಪಾರವುಳ್ಳ,

**ಭಾಗ್ಯವಾನ್** = ಪ್ರಶಸ್ತವಾದ ಪುಣ್ಯವುಳ್ಳ,

**ಭಗವಾನ್** = ಐಶ್ವರ್ಯಾದಿ ಷಡ್ಗುಣಸಂಪತ್ತು ಉಳ್ಳ

**ಸಃ** = ಆ ಮಧ್ವಾಚಾರ್ಯರು,

**ಭಗವತ್ತಮ ಪದಪಂಕಜೇ** = ನಿರವಧಿಕೈಶ್ವರ್ಯಾದಿ ಷಡ್ಗುಣಸಂಪತ್ತು ಉಳ್ಳವರಲ್ಲಿ ಶ್ರೇಷ್ಠರಾದ ಶ್ರೀವೇದ-ವ್ಯಾಸದೇವರ ಕಮಲದಂತಿರುವ ಕಾಲುಗಳಲ್ಲಿ

**ಸ್ಫುಟಂ** = ಸ್ಪಷ್ಟವಾಗಿ

**ಪ್ರಣನಾಮ** = ನಮಸ್ಕರಿಸಿದರು.

ತಾತ್ಪರ್ಯ— ವಿನಯಾಭರಣಾಲಂಕೃತರೂ, ಉತ್ತಮ ಪುಣ್ಯವಂತರೂ ಆದ ಆ ಮಧ್ವಾಚಾರ್ಯರು, ಐಶ್ವರ್ಯಾದಿ ಷಡ್ಗುಣಸಂಪನ್ನರೂ ಆಗಿದ್ದರು. ಅವರು ಷಡ್ಗುಣ ಸಂಪತ್ತುಳ್ಳವರಲ್ಲಿ ಶ್ರೇಷ್ಠರಾದ ನಿರವಧಿಕಗುಣೈಶ್ವರ್ಯಾದಿ ಸಂಪನ್ನರಾದ ವೇದವ್ಯಾಸರ ಪಾದಕಮಲಗಳಿಗೆ ಎಲ್ಲಾ ಋಷಿಗಳೂ ನೋಡುತ್ತಿರುವಾಗಲೇ ಸಾಷ್ಟಾಂಗ ನಮಸ್ಕಾರ ಮಾಡಿದರು.

ವಿಶೇಷಾಂಶ—

**ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।**
**ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥**

ಸಮಗ್ರ ಐಶ್ವರ್ಯ (ಒಡೆಯತನ) ವೀರ್ಯ (ಪ್ರಾರಂಭ ಮಾಡಿದ ಕಾರ್ಯವನ್ನು ಕೊನೆ ಮುಟ್ಟಿಸುವ ಸಾಮರ್ಥ್ಯ) ಕೀರ್ತಿ, ಸಂಪತ್ತು, ಸಾಮಾನ್ಯಜ್ಞಾನ, ವಿಶೇಷಜ್ಞಾನ ಇವುಗಳಿಗೆ 'ಭಗ' ಎಂದು ಹೆಸರು. ಇವುಗಳು ಉಳ್ಳವನೇ ಭಗವಂತ.

**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥**

ಎಂಬ ಪ್ರಮಾಣಾನುಸಾರವಾಗಿ (1) ಎದೆ, (2) ತಲೆ, (3) ನೋಟ, (4) ಮನಸ್ಸು, (5) ಮಾತು, ಸ್ತೋತ್ರ, (6) ಎರಡು ಕಾಲುಗಳು, (7) ಎರಡು ಕೈಗಳು, (8) ಎರಡು ಮೊಣಕಾಲುಗಳು. ಇವುಗಳಿಂದ ಮಾಡುವ ಪರಮಾತ್ಮ ವಿಷಯಕವಾದ ಆಸಕ್ತಿ ವಿಶೇಷ ಸೂಚಕ ವ್ಯಾಪಾರವೇ ಸಾಷ್ಟಾಂಗ ನಮಸ್ಕಾರ.

ವಿಗ್ರಹ—

**ವಿನಯಾಭರಣೇನ—** ವಿನಯ ಏವ ಆಭರಣಂ ವಿನಯಾಭರಣಂ, ತೇನ ವಿನಯಾಭರಣೇನ ।

**ಅಷ್ಟಾಂಗವಿಶಿಷ್ಟಚೇಷ್ಟಿತಃ—** ಅಷ್ಟಾನಾಂ ಅಂಗಾನಾಂ ಸಮಾಹಾರಃ ಅಷ್ಟಾಂಗಂ, (ಅಷ್ಟ ಚ ತಾನಿ ಅಂಗಾನಿ ಚ ಅಷ್ಟಾಂಗಾನಿ ತೈರ್ವಿಶಿಷ್ಟಂ) ಅಷ್ಟಾಂಗೇನ ವಿಶಿಷ್ಟಂ ಅಷ್ಟಾಂಗವಿಶಿಷ್ಟಂ, ಅಷ್ಟಾಂಗವಿಶಿಷ್ಟಂ ಚೇಷ್ಟಿತಂ ಯಸ್ಯ ಸಃ ಅಷ್ಟಾಂಗವಿಶಿಷ್ಟಚೇಷ್ಟಿತಃ ।

**ಭಗವತ್ತಮಪಾದಪಂಕಜೇ—** ಭಗಃ ಅಸ್ಯ ಅಸ್ತೀತಿ ಭಗವಾನ್, ಅತಿಶೇಯೇನ ಭಗವಾನ್ ಭಗವತ್ತಮಃ, (ಪಾದಾವೇವ ಪಂಕಜೇ ಇತಿ ವಾ) ಪಾದೌ ಪಂಕಜೇ ಇವ ಪಾದಪಂಕಜೇ, ಭಗವತ್ತಮಸ್ಯ ಪಾದಪಂಕಜೇ ಭಗವತ್ತಮಪಾದಪಂಕಜೇ, ತೇ ಭಗವತ್ತಮಪಾದಪಂಕಜೇ ।

**ಭಾಗ್ಯವಾನ್—** ಭಾಗ್ಯಂ ಅಸ್ಯ ಅಸ್ತೀತಿ ಭಾಗ್ಯವಾನ್ ।

**ಕ್ರಿಯಾಪದ—** ಪ್ರಣನಾಮ- ಪ್ರ ಉಪಸರ್ಗ ಪೂರ್ವಕಾತ್ 'ಣಮು ಪ್ರಹ್ವತ್ವೇ ಶಬ್ದೇ ಚ' ಇತಿ ಪ್ರಹ್ವತ್ವಶಬ್ದಾರ್ಥಕಾತ್ ನಮ್ ಧಾತೋಃ ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ಪ್ರಣನಾಮ'' ಇತಿ ರೂಪಮ್ ।

ಪ್ರ-ನನಾಮ ನೇಮತುಃ ನೇಮುಃ, ನೇಮಿಥ ನನಂಥ ನೇಮಥುಃ ನೇಮ, ನನಾಮ ನನಮ ನೇಮಿವ ನೇಮಿಮ ॥

**ಪ್ರಯೋಗ—** ಸಃ ಭಗವತ್ತಮಪಾದಪಂಕಜೇ ಪ್ರಣನಾಮ (ಕರ್ತರಿ) । ತೇನ ಭಗವತ್ತಮಪಾದಪಂಕಜೇ ಪ್ರಣೇಮಾತೇ (ಕರ್ಮಣಿ) ।

★ ★ ★

**ಸಾಷ್ಟಾಂಗ ಪ್ರಣಾಮಗೈದ ಶ್ರೀಮಧ್ವರನ್ನು ಶ್ರೀವೇದವ್ಯಾಸರು ತಮ್ಮ ಎರಡು ಕೈಗಳಿಂದ ಮೇಲಕ್ಕೆ ಎತ್ತಿದರು.**

**ಸ ನಿರೀಕ್ಷ್ಯ ಪರಾಶರಾತ್ಮಜಃ ಪ್ರಣತಂ ಪ್ರೇಷ್ಠಮಶೇಷಸದ್ಗುಣೈಃ ।**
**ಕರಯೋರ್ಯುಗಲೇನ ವಲ್ಗುನಾ ತಮುದಸ್ಥಾಪಯದಾಶುಪತಿನಾ ॥ 51 ॥**

**ಪದಚ್ಛೇದ—** ಸಃ, ನಿರೀಕ್ಷ್ಯ, ಪರಾಶರಾತ್ಮಜಃ, ಪ್ರಣತಂ, ಪ್ರೇಷ್ಠಂ, ಅಶೇಷಸದ್ಗುಣೈಃ, ಕರಯೋಃ, ಯುಗಲೇನ, ವಲ್ಗುನಾ, ತಂ, ಉದಸ್ಥಾಪಯತ್, ಆಶುಪಾತಿನಾ ।

**ಅನ್ವಯ—** ಪರಾಶರಾತ್ಮಜಃ, ಸಃ, ಅಶೇಷಸದ್ಗುಣೈಃ, ಪ್ರೇಷ್ಠಂ, ಪ್ರಣತಂ, ತಂ, ನಿರೀಕ್ಷ್ಯ, ವಲ್ಗುನಾ, ಆಶುಪಾತಿನಾ, ಕರಯೋಃ, ಯುಗಲೇನ, ಉದಸ್ಥಾಪಯತ್ ।

**ಅನ್ವಯಾರ್ಥ—**

**ಪರಾಶರಾತ್ಮಜಃ** = ಪರಾಶರಮುನಿಗಳ ಮಗನಾದ
**ಸಃ** = ಆ ವ್ಯಾಸರು
**ಅಶೇಷಸದ್ಗುಣೈಃ** = ಎಲ್ಲಾ ಜ್ಞಾನ, ಭಕ್ತಿ, ವೈರಾಗ್ಯಾದಿಗುಣಗಳಿಂದ
**ಪ್ರೇಷ್ಠಂ** = ಅತ್ಯಂತ ಪ್ರಿಯರಾದ
**ಪ್ರಣತಂ** = ನಮಸ್ಕರಿಸಿರುವ
**ತಂ ನಿರೀಕ್ಷ್ಯ** = ಆ ಮಧ್ವಾಚಾರ್ಯರನ್ನು ನೋಡಿ
**ವಲ್ಗುನಾ** = ಸುಂದರವಾದ ಅಥವಾ ಮೃದುವಾದ
**ಆಶುಪಾತಿನಾ** = ಬೇಗನೆ ಮುಂದಕ್ಕೆ ಚಾಚಿದ
**ಕರಯೋಃ** = ಕೈಗಳ

**ಯುಗಲೇನ** = ಜೋಡಿಯಿಂದ

**ಉದಸ್ಥಾಪಯತ್** = ಮೇಲಕ್ಕೆತ್ತಿದರು.

**ತಾತ್ಪರ್ಯ**— ಜ್ಞಾನ, ಭಕ್ತಿ, ವೈರಾಗ್ಯಾದಿ ಸಕಲ ಸದ್ಗುಣಗಳಿಂದ ಶ್ರೀಮಧ್ವಾಚಾರ್ಯರು ವೇದವ್ಯಾಸರಿಗೆ ಅತ್ಯಂತ ಪ್ರಿಯತಮರಾಗಿದ್ದರು. ಭಕ್ತಿಯಿಂದ ಶ್ರೀಮಧ್ವರು ತಮಗೆ ನಮಸ್ಕಾರ ಮಾಡಿದ್ದನ್ನು ನೋಡಿ ಶ್ರೀವೇದವ್ಯಾಸರು ಕೂಡಲೇ ಸುಂದರವಾದ ತನ್ನ ಎರಡು ಕೈಗಳನ್ನು ಮುಂದಕ್ಕೆ ಚಾಚಿ ಅವರನ್ನು ಮೇಲಕ್ಕೆತ್ತಿದರು.

**ವಿಗ್ರಹ**—

**ಪರಾಶರಾತ್ಮಜಃ**— ಪರಾಶರಸ್ಯ ಆತ್ಮಜಃ ಪರಾಶರಾತ್ಮಜಃ ।

**ಪ್ರೇಷ್ಠಂ**— ಅತಿಶಯೇನ ಪ್ರಿಯಃ ಪ್ರೇಷ್ಠಃ, ತಂ ಪ್ರೇಷ್ಠಂ ।

**ಅಶೇಷಸದ್ಗುಣೈಃ**— ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಅಶೇಷಾಶ್ಚ ತೇ ಸದ್ಗುಣಾಶ್ಚ ಅಶೇಷಸದ್ಗುಣಾಃ, ತೈಃ ಅಶೇಷಸದ್ಗುಣೈಃ ।

**ಆಶುಪಾತಿನಾ**— ಆಶು ಪತಿತುಂ ಶೀಲಂ ಅಸ್ತೀತಿ ಆಶುಪಾತಿ, ತೇನ ಆಶುಪಾತಿನಾ ।

**ಕ್ರಿಯಾಪದ**— **ಉದಸ್ಥಾಪಯತ್**- ಉದ್ ಉಪಸರ್ಗಪೂರ್ವಕಾತ್ ಷ್ಠಾಗತಿ ನಿವೃತ್ತೌ ಇತಿ ಗತಿನಿವೃತ್ತ್ಯರ್ಥಕಾತ್ ಸ್ಥಾಧಾತೋಃ ಣಿಜಂತಾತ್ ಪರಸ್ಮೈಪದಿನಃ ಸಕರ್ಮಕಾತ್ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಉದಸ್ಥಾಪಯತ್'' ಇತಿ ರೂಪಂ । ಸಃ (ಮಧ್ವಃ) ಉದತಿಷ್ಠತ್ (ಅಪ್ರೇರಣಾರ್ಥಕ) । ಪರಾಶರಾತ್ಮಜಃ ತಂ ಉದ-ಸ್ಥಾಪಯತ್ (ಪ್ರೇರಣಾರ್ಥಕ) ।

| | | |
|---|---|---|
| ಉದ್-ಅಸ್ಥಾಪಯತ್ | ಅಸ್ಥಾಪಯತಾಂ | ಅಸ್ಥಾಪಯನ್, |
| ಅಸ್ಥಾಪಯಃ | ಅಸ್ಥಾಪಯತಂ | ಅಸ್ಥಾಪಯತ, |
| ಅಸ್ಥಾಪಯಂ | ಅಸ್ಥಾಪಯಾವ | ಅಸ್ಥಾಪಯಾಮ ॥) |

**ಪ್ರಯೋಗ**— ಪರಾಶರಾತ್ಮಜಃ ತಂ ಉದಸ್ಥಾಪಯತ್ (ಕರ್ತರಿ)। ಪರಾಶರಾತ್ಮಜೇನ ಸಃ ಉದಸ್ಥಾಪ್ಯತ (ಕರ್ಮಣಿ)।

★ ★ ★

ದಂಡಪ್ರಣಾಮ ಮಾಡುತ್ತಿರುವ ಶ್ರೀಮಧ್ವರನ್ನು ಮೇಲಕ್ಕೆ ಎಬ್ಬಿಸಿ ಶ್ರೀವೇದವ್ಯಾಸರು ಸಂತೋಷದಿಂದ ಆಲಿಂಗಿಸಿದರು

**ಅಮಿತಪ್ರಮತಿಂ ಶ್ರುತೀಶ್ವರಃ ಪರಿರೇಭೇ ಪರಿಗೃಹ್ಯ ತಂ ದ್ರುತಂ ।**
**ಪ್ರಣಯಾಮೃತಪೂರ್ಣಮಾನಸಃ ಸ್ಮಿತವಕ್ತ್ರಃ ಪರಿಫುಲ್ಲಲೋಚನಃ ॥ 52 ॥**

**ಪದಚ್ಛೇದ**— ಅಮಿತಪ್ರಮತಿಂ, ಶ್ರುತೀಶ್ವರಃ, ಪರಿರೇಭೇ, ಪರಿಗೃಹ್ಯ, ತಂ, ದ್ರುತಂ, ಪ್ರಣಯಾಮೃತಪೂರ್ಣ-ಮಾನಸಃ, ಸ್ಮಿತವಕ್ತ್ರಃ, ಪರಿಫುಲ್ಲಲೋಚನಃ ।

**ಅನ್ವಯ**— ಪ್ರಣಯಾಮೃತಪೂರ್ಣಮಾನಸಃ, ಸ್ಮಿತವಕ್ತ್ರಃ, ಪರಿಫುಲ್ಲಲೋಚನಃ ಶ್ರುತೀಶ್ವರಃ, ಅಮಿತಪ್ರಮತಿಂ ತಂ, ದ್ರುತಂ ಪರಿಗೃಹ್ಯ ಪರಿರೇಭೇ ।

**ಅನ್ವಯಾರ್ಥ**—

**ಪ್ರಣಯಾಮೃತಪೂರ್ಣಮಾನಸಃ** = ಶಿಷ್ಯವಾತ್ಸಲ್ಯವೆಂಬ ಸ್ನೇಹರೂಪವಾದ ಅಮೃತದಿಂದ ತುಂಬಿದ ಮನಸ್ಸುಳ್ಳ

**ಸ್ಮಿತವಕ್ತ್ರಃ** = ಮುಗುಳ್ನಗೆಯ ಮುಖವುಳ್ಳ

**ಪರಿಫುಲ್ಲಲೋಚನಃ** = ಅರಳಿದ ಕಣ್ಣುಗಳುಳ್ಳ

**ಶ್ರುತೀಶ್ವರಃ** = ವೇದಗಳಿಗೆ ಒಡೆಯರಾದ ವೇದವ್ಯಾಸರು

**ಅಮಿತಪ್ರಮತಿಂ** = ಪರಿಪೂರ್ಣ ಜ್ಞಾನವುಳ್ಳ

**ತಂ** = ಆ ಮಧ್ವಾಚಾರ್ಯರನ್ನು

**ದ್ರುತಂ** = ಬೇಗನೆ

**ಪರಿಗೃಹ್ಯ** = ಎತ್ತಿಹಿಡಿದು

**ಪರಿರೇಭೇ** = ಆಲಿಂಗಿಸಿದರು.

**ತಾತ್ಪರ್ಯ—** ಶ್ರೀವೇದವ್ಯಾಸರ ಹೃದಯವು ಶಿಷ್ಯ ವಾತ್ಸಲ್ಯವೆಂಬ ಅಮೃತದಿಂದ ತುಂಬಿತ್ತು. ಅವರು ಮಂದಹಾಸ ಮಾಡುತ್ತಾ ಇದ್ದರು. ಕಣ್ಣುಗಳೆರಡೂ ಅರಳಿದ್ದವು. ಹೀಗೆ ಪರಿಪೂರ್ಣಾನಂದರಾದ ಶ್ರೀವೇದವ್ಯಾಸರು ಸಂತೋಷದಿಂದ ಆ ಮಧ್ವಾಚಾರ್ಯರನ್ನು ಬೇಗನೆ ತಬ್ಬಿಕೊಂಡರು.

**ವಿಗ್ರಹ—**

**ಪ್ರಣಯಾಮೃತಪೂರ್ಣಮಾನಸಃ—** ಪ್ರಣಯ ಏವ ಅಮೃತಂ ಪ್ರಣಯಾಮೃತಂ, ಪ್ರಣಯಾಮೃತೇನ ಪೂರ್ಣಂ ಪ್ರಣಯಾಮೃತಪೂರ್ಣಂ, ಪ್ರಣಯಾಮೃತಪೂರ್ಣಂ ಮಾನಸಂ ಯಸ್ಯ ಸಃ ಪ್ರಣಯಾಮೃತಪೂರ್ಣಮಾನಸಃ ।

**ಸ್ಮಿತವಕ್ತ್ರಃ—** ಸ್ಮಿತಂ ವಕ್ತ್ರಂ ಯಸ್ಯ ಸಃ ಸ್ಮಿತವಕ್ತ್ರಃ।

**ಪರಿಫುಲ್ಲಲೋಚನಃ—** ಪರಿಫುಲ್ಲೇ ಲೋಚನೇ ಯಸ್ಯ ಸಃ ಪರಿಫುಲ್ಲಲೋಚನಃ ।

**ಅಮಿತಪ್ರಮತಿಃ—** ಅಮಿತಾ ಪ್ರಮತಿಃ ಯಸ್ಯ ಸಃ ಅಮಿತಪ್ರಮತಿಃ, ತಂ ಅಮಿತಪ್ರಮತಿಂ ।

**ಕ್ರಿಯಾಪದ— ಪರಿರೇಭೇ-** ಪರಿ ಇತ್ಯುಪಸರ್ಗ ಪೂರ್ವಕಾತ್ ರಭರಾಭಸ್ಯೇ ಇತಿ ರಾಭಸ್ಯಾರ್ಥಕಾತ್ (ಆಲಿಂಗನಾರ್ಥಕಾತ್) ರಭ್‌ಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ "ಪರಿರೇಭೇ" ಇತಿ ರೂಪಮ್ ।

ಪರಿ-ರೇಭೇ ರೇಭಾತೇ ರೇಭಿರೇ, ರೇಭಿಷೇ ರೇಭಾಥೇ ರೇಭಿಧ್ವೇ, ರೇಭೇ ರೇಭಿವಹೇ ರೇಭಿಮಹೇ ॥

**ಪ್ರಯೋಗ—** ಶ್ರುತೀಶ್ವರಃ ತಂ ಪರಿರೇಭೇ (ಕರ್ತರಿ) । ಶ್ರುತೀಶ್ವರೇಣ ಸಃ ಪರಿರೇಭೇ (ಕರ್ಮಣಿ) ।

★ ★ ★

**ಆಲಿಂಗನ ಕಾಲದಲ್ಲಿ ಅವರಿಬ್ಬರಿಗೆ ಹೋಲಿಕೆಯನ್ನು ಹೇಳಲು ಯಾವುದೂ ಇಲ್ಲವಾದುದರಿಂದ ಅಭೂತೋಪಮೆಯಿಂದ ಗ್ರಂಥಕಾರರು ವರ್ಣಿಸುತ್ತಾರೆ.**

**ಯಮಜಾಮ್ಬುದವಾಹ ಊರ್ಜಿತೋ ಯದಿ ಜಾಂಬೂನದವಾರಿ ಸಂವ್ರಜೇತ್ ।**
**ಕನಕದ್ಯುತಿಮಧ್ವಸಂಗವಾನ್ ಉಪಮೀಯೇತ ಸ ತೇನ ನೀಲಭಾಃ ॥ 53 ॥**

**ಪದಚ್ಛೇದ—** ಯಮಜಾಮ್ಬುದವಾಹಃ, ಊರ್ಜಿತಃ, ಯದಿ, ಜಾಂಬೂನದವಾರಿ, ಸಂವ್ರಜೇತ್, ಕನಕದ್ಯುತಿ-ಮಧ್ವಸಂಗವಾನ್, ಉಪಮೀಯೇತ, ಸಃ, ತೇನ, ನೀಲಭಾಃ ।

**ಅನ್ವಯ—** ಊರ್ಜಿತಃಸ ಯಮಜಾಮ್ಬುದವಾಹಃಸ ಜಾಂಬೂನದವಾರಿಸ ಸಂವ್ರಜೇತ್‌ಸ ಯದಿ, ಕನಕದ್ಯುತಿ-ಮಧ್ವಸಂಗವಾನ್‌ಸ ನೀಲಭಾಃಸ ಸಃ, ತೇನ, ಉಪಮೀಯೇತಃ ।

**ಅನ್ವಯಾರ್ಥ—**

**ಊರ್ಜಿತಃ** = ಉತ್ಕೃಷ್ಟವಾದ

**ಯಮಜಾಮ್ಯುದವಾಹಃ** = ಯಮನ ಸಹೋದರಿಯಾದ ಯಮುನಾ ನದಿಯ ಜಲಪ್ರವಾಹವು,

**ಜಾಂಬೂನದ ವಾರಿ** = ಚಿನ್ನದ ನದಿಯ ನೀರನ್ನು

**ಸಂವ್ರಜೇತ್ ಯದಿ** = ಸೇರಿದ್ದೇ ಆದರೆ

**ಕನಕದ್ಯುತಿ** = ಚಿನ್ನದಂತಹ ಕಾಂತಿಯುಳ್ಳ

**ಮಧ್ವಸಂಗವಾನ್** = ಶ್ರೀಮಧ್ವಾಚಾರ್ಯರ ಆಲಿಂಗನವೆಂಬ ಸೇರುವಿಕೆಯುಳ್ಳ

**ನೀಲಭಾಃ** = ನೀಲಕಾಂತಿಯುಳ್ಳ

**ಸಃ** = ಆ ವ್ಯಾಸರು,

**ತೇನ (ಸಹ)** = ಆ ಕಪ್ಪಾದ ಯಮುನಾ ನದಿಯ ನೀರಿನಿಂದ ಕೂಡಿದ ಚಿನ್ನದ ನದಿಯ ನೀರಿನೊಡನೆ

**ಉಪಮೀಯೇತ** = ಹೋಲಿಸಲ್ಪಡಬಹುದು.

**ತಾತ್ಪರ್ಯ—** ಶ್ರೀ ವ್ಯಾಸರು ನೀಲವರ್ಣದವರು. ಶ್ರೀಮಧ್ವಾಚಾರ್ಯರು ಚಿನ್ನದ ಬಣ್ಣವುಳ್ಳವರು. ಈಗ ಶ್ರೀವ್ಯಾಸರು ಮಧ್ವಾಚಾರ್ಯರನ್ನು ಅಪ್ಪಿಕೊಂಡಾಗ ಅವರಿಗೆ ಹೋಲಿಕೆಯಾಗಿ ಕೊಡಲು ಯಾವ ವಸ್ತುವೂ ಇಲ್ಲ. ಒಂದು ವೇಳೆ ಯಮುನಾನದಿಯ ಕಪ್ಪಾದ ನೀರು ಉಕ್ಕಿ ಹರಿದು ಚಿನ್ನದ ನದಿಯ ನೀರನ್ನು ಅಪ್ಪಿಕೊಂಡು ಸೇರಿದರೆ ಆಗ ಅದನ್ನು ಉಪಮಾನವಾಗಿ ಕೊಡಬಹುದು. ಆದರೆ ಚಿನ್ನದ ನದಿ, ಚಿನ್ನದ ಬಣ್ಣದ ನೀರು ಅಸಂಭಾವಿತ. ಆದ್ದರಿಂದ ಇಲ್ಲಿ ಯಾವ ಉಪಮೆಯೂ ಇಲ್ಲ. (ಇದನ್ನು ಅಭೂತೋಪಮಾ ಎಂದು ಹೇಳುತ್ತಾರೆ).

**ವಿಗ್ರಹ—**

**ಯಮಜಾಮ್ಯುದವಾಹಃ—** ಯಮಸ್ಯ ಜಾಮಿಃ ಯಮಜಾಮಿಃ, ಉದಕಸ್ಯ ವಾಹಃ ಉದವಾಹಃ, ಯಮಜಾಮೇಃ ಉದವಾಹಃ ಯಮಜಾಮ್ಯುದವಾಹಃ ।

**ಜಾಂಬೂನದವಾರಿ—** ಜಂಬೂನದ್ಯಾಃ ಇದಂ ಜಾಂಬೂನದಂ, ಜಾಂಬೂನದಂ ಚ ತದ್ವಾರಿ ಚ ಜಾಂಬೂನದವಾರಿ ।

**ಕನಕದ್ಯುತಿಮಧ್ವಸಂಗವಾನ್—** ಕನಕವತ್ ದ್ಯುತಿಃ ಯಸ್ಯ ಸಃ ಕನಕದ್ಯುತಿಃ, ಕನಕದ್ಯುತಿಶ್ಚಾಸೌ ಮಧ್ವಶ್ಚ ಕನಕದ್ಯುತಿಮಧ್ವಃ, ಕನಕದ್ಯುತಿಮಧ್ವಸ್ಯ ಸಂಗಃ ಕನಕದ್ಯುತಿಮಧ್ವಸಂಗಃ, ಕನಕದ್ಯುತಿಮಧ್ವಸಂಗಃ ಅಸ್ಯ ಅಸ್ತೀತಿ ಕನಕದ್ಯುತಿಮಧ್ವಸಂಗವಾನ್ ।

**ನೀಲಭಾಃ—** ನೀಲಾ ಭಾಃ ಯಸ್ಯ ಸಃ ನೀಲಭಾಃ ।

**ಕ್ರಿಯಾಪದ—** **ಸಂವ್ರಜೇತ್**- 'ಸಮ್'ಉಪಸರ್ಗಪೂರ್ವಕಾತ್ ವ್ರಜಗತೌ ಇತಿ ಗತ್ಯರ್ಥಕಾತ್ ವ್ರಜಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ವಿಧಿಲಿಙ್ ''ಸಂವ್ರಜೇತ್'' ಇತಿ ರೂಪಮ್ ।

ಸಂ-ವ್ರಜೇತ್ ವ್ರಜೇತಾಂ ವ್ರಜೇಯುಃ, ವ್ರಜೇಃ ವ್ರಜೇತಂ ವ್ರಜೇತ, ವ್ರಜೇಯಂ ವ್ರಜೇವ ವ್ರಜೇಮ ॥

**ಉಪಮೀಯೇತ**- 'ಉಪ' ಇತ್ಯುಪಸರ್ಗ ಪೂರ್ವಕಾತ್ ಮಾಙ್ ಮಾನೇ ಇತಿ ಮಾನಾರ್ಥಕಾತ್ ಮಾಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಕರ್ಮಣಿ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ''ಉಪಮೀಯೇತ'' ಇತಿ ರೂಪಮ್ ।

| | | |
|---|---|---|
| ಉಪ-ಮೀಯೇತ | ಮೀಯೇಯಾತಾಂ | ಮಿಯೇರನ್, |
| ಮಿಯೇಥಾಃ | ಮಿಯೇಯಾಥಾಂ | ಮಿಯೇಧ್ವಂ, |
| ಮೀಯೇಯ | ಮೀಯೇವಹಿ | ಮೀಯೇಮಹಿ ॥ |

**ಪ್ರಯೋಗ—** ಯಮಜಾಮ್ಯುದವಾಹಃ ಜಾಂಬೂನದವಾರಿ ಸಂವ್ರಜೇತ್ (ಕರ್ತರಿ) । ಯಮಜಾಮ್ಯುದವಾಹೇನ ಜಾಂಬೂನದವಾರಿ ಸಂವ್ರಜ್ಯೇತ (ಕರ್ಮಣಿ) । ತೇನ ಸಃ ಉಪಮೀಯೇತ (ಕರ್ಮಣಿ) । ಸಃ ತಂ ಉಪಮಿನುಯಾತ್ (ಕರ್ತರಿ) ।

**ವ್ಯಾಕರಣ ವಿಶೇಷ—** ಉದವಾಹ ಎಂಬಲ್ಲಿ 'ಷಂವಾಸವಾಹನಧಿಷು ಚ' ಎಂಬ ಸೂತ್ರದಿಂದ ಉದಕ ಶಬ್ದಕ್ಕೆ 'ಉದ' ಎಂಬ ರೂಪ.

★ ★ ★

## ಯದಿ ರಾಜವಿಭೂಷಣೈರ್ಯುತೌ ದ್ವಿಜವರ್ಯಾನ್ವಯಜಾವಿಮೌ ಹರೀ ।
## ನೃಪಗೋತ್ರಭುವೋಃ ಪುರಾತ್ಮನೋಃ ಸ್ಫುಟತುಲ್ಯಾವುಪಗೂಢಯೋರ್ಮಿಥಃ ॥ 54 ॥

**ಪದಚ್ಛೇದ—** ಯದಿ, ರಾಜವಿಭೂಷಣೈಃ, ಯುತೌ, ದ್ವಿಜವರ್ಯಾನ್ವಯಜೌ, ಇಮೌ, ಹರೀ, ನೃಪ-ಗೋತ್ರಭುವೋಃ, ಪುರಾ, ಆತ್ಮನೋಃ, ಸ್ಫುಟತುಲ್ಯೌ, ಉಪಗೂಢಯೋಃ, ಮಿಥಃ ।

**ಅನ್ವಯ—** ದ್ವಿಜವರ್ಯಾನ್ವಯಜೌ, ಇಮೌ, ಹರೀ, ರಾಜವಿಭೂಷಣೈಃ, ಯುತೌ, ಯದಿ, ಪುರಾ, ನೃಪಗೋತ್ರ-ಭುವೋಃ, ಮಿಥಃ, ಉಪಗೂಢಯೋಃ, ಆತ್ಮನೋಃ, ಸ್ಫುಟತುಲ್ಯೌ ।

**ಅನ್ವಯಾರ್ಥ—**

**ದ್ವಿಜವರ್ಯಾನ್ವಯಜೌ** = ವಸಿಷ್ಠ ಮತ್ತು ಮಧ್ಯಗೇಹಭಟ್ಟರ ವಂಶದಲ್ಲಿ ಜನಿಸಿದ

**ಇಮೌ** = ಈ

**ಹರೀ** = ಶ್ರೀವಿಷ್ಣುಸ್ವರೂಪರಾದ ವೇದವ್ಯಾಸರು ಮತ್ತು ಮುಖ್ಯವಾಯು ಸ್ವರೂಪರಾದ ಮಧ್ವರು,

**ರಾಜವಿಭೂಷಣೈಃ** = ರಾಜರ ಆಭರಣಗಳಾದ ಕಿರೀಟ, ಕುಂಡಲ, ಕಡಗ ಮುಂತಾದವುಗಳಿಂದ

**ಯುತೌ ಯದಿ** = ಸಹಿತರಾಗಿದ್ದರೆ,

**ಪುರಾ** = ಹಿಂದೆ

**ನೃಪಗೋತ್ರ ಭುವೋಃ** = ರಾಜರಾದ ಯದುಕುರುಗಳ ವಂಶದಲ್ಲಿ ಹುಟ್ಟಿದ,

**ಮಿಥಃ** = ಒಬ್ಬರನ್ನೊಬ್ಬರು

**ಉಪಗೂಢಯೋಃ** = ಆಲಂಗಿಸಿಕೊಂಡಿರುವ

**ಆತ್ಮನೋಃ** = ತಮಗೆ,

**ಸ್ಫುಟತುಲ್ಯೌ** = ಸ್ಪಷ್ಟವಾಗಿ ಸಮರು

(ಸ್ಯಾತಾಂ = ಆದಾರು).

**ತಾತ್ಪರ್ಯ—** ಶ್ರೀವೇದವ್ಯಾಸರು ವಸಿಷ್ಠ ವಂಶದಲ್ಲಿ ಹುಟ್ಟಿದವರು, ಶ್ರೀಮಧ್ವಾಚಾರ್ಯರು ಮಧ್ಯಗೇಹ ಭಟ್ಟರ ಕುಲದಲ್ಲಿ ಜನಿಸಿದವರು. ಈಗ ಅವರಿಬ್ಬರು ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡಿದ್ದಾರೆ. ಈ ಸಂದರ್ಭದಲ್ಲಿ ಇವರಿಗೆ ಉಪಮಾನವಾಗಿ ಕೊಡಲು ಸರಿಯಾದವರು ಯಾರೂ ಸಿಗುವುದಿಲ್ಲ. ಆದರೆ, ಇವರೇ ಹಿಂದೆ ಯದುವಂಶದಲ್ಲಿ ಕೃಷ್ಣನಾಗಿಯೂ, ಕುರುವಂಶದಲ್ಲಿ ಭೀಮಸೇನನಾಗಿಯೂ ಅವತರಿಸಿದಾಗ ರಾಜಯೋಗ್ಯವಾದ ಕಿರೀಟ, ಕುಂಡಲ, ಬಳೆ, ಹಾರ ಮುಂತಾದವುಗಳನ್ನು ಧರಿಸಿ ಪರಸ್ಪರವಾಗಿ ಆಲಿಂಗಿಸಿಕೊಂಡ ತಮ್ಮ ಕೃಷ್ಣ ಭೀಮಸೇನ ರೂಪಗಳಿಗೆ ಇವರನ್ನು ಹೋಲಿಸಬಹುದು. ಬೇರೆ ಯಾವ ರೂಪವೂ ಇವರಿಗೆ ಹೋಲಿಕೆ ಕೊಡಲು ಸಿಗಲಾರದು.

ವಿಗ್ರಹ—

**ರಾಜವಿಭೂಷಣೈಃ**— ರಾಜ್ಞಾಂ ವಿಭೂಷಣಾನಿ ರಾಜವಿಭೂಷಣಾನಿ, ತೈಃ ರಾಜವಿಭೂಷಣೈಃ ।

**ದ್ವಿಜವರ್ಯಾನ್ವಯಜೌ**— ದ್ವಿಜಾನಾಂ ವರ್ಯೌ ದ್ವಿಜವರ್ಯೌ, ದ್ವಿಜವರ್ಯಯೋಃ ಅನ್ವಯಃ ದ್ವಿಜವರ್ಯಾನ್ವಯಃ, ದ್ವಿಜವರ್ಯಾನ್ವಯೇ ಜಾಯೇತೇ ಇತಿ ದ್ವಿಜವರ್ಯಾನ್ವಯಜೌ ।

**ನೃಪಗೋತ್ರಭುವೋಃ**— ನೃಪಯೋಃ ಗೋತ್ರಂ ನೃಪಗೋತ್ರಂ, ನೃಪಗೋತ್ರೇ ಭವತಃ ಇತಿ ನೃಪಗೋತ್ರಭುವೌ, ತಯೋಃ ನೃಪಗೋತ್ರಭುವೋಃ ।

**ಸ್ಫುಟತುಲ್ಯೌ**— ಸ್ಫುಟಂ ತುಲ್ಯೌ ಸ್ಫುಟತುಲ್ಯೌ ।

★ ★ ★

**ಶ್ರೀವೇದವ್ಯಾಸರು ಶ್ರೀಮಧ್ವಾಚಾರ್ಯರಲ್ಲಿ ತೋರಿಸಿದ ಮಮತೆಯನ್ನು ಶುಕಾಚಾರ್ಯರಲ್ಲಿಯೂ ತೋರಿಸಲಿಲ್ಲವೆಂದು ಬದರೀನಿವಾಸಿಗಳಾದ ಮುನಿಗಳು ಆಶ್ಚರ್ಯಪಟ್ಟರೆನ್ನುತ್ತಾರೆ.**

**ಇದಮಾಪ ಶುಕೋಽಪಿ ಲಾಲನಂ ನ ಸಮಗ್ರಂ ಜಗತಾಂ ಪಿತುಃ ಪಿತುಃ ।**

**ಅಲಭಿಷ್ಟ ಯದೇಷ ಧನ್ಯ ಇತ್ಯತಿ ಕೌತೂಹಲಮಾಪಿ ತಾಪಸೈಃ ॥ 55 ॥**

**ಪದಚ್ಛೇದ**— ಇದಂ, ಆಪ, ಶುಕಃ, ಅಪಿ, ಲಾಲನಂ, ನ, ಸಮಗ್ರಂ, ಜಗತಾಂ, ಪಿತುಃ, ಪಿತುಃ, ಅಲಭಿಷ್ಟ, ಯತ್, ಏಷಃ, ಧನ್ಯಃ, ಇತಿ, ಅತಿಕೌತೂಹಲಂ, ಆಪಿ, ತಾಪಸೈಃ ।

**ಅನ್ವಯ**— ಧನ್ಯಃ, ಏಷಃ, ಯತ್, ಲಾಲನಂ, ಅಲಭಿಷ್ಟ ಸಮಗ್ರಂ, ಇದಂ, ಶುಕಃ, ಅಪಿ, ಜಗತಾಂ, ಪಿತುಃ, ಪಿತುಃ, ನ, ಆಪ, ಇತಿ, ತಾಪಸೈಃ, ಅತಿಕೌತೂಹಲಂ, ಆಪಿ ।

**ಅನ್ವಯಾರ್ಥ**—

**ಧನ್ಯಃ** = ಕೃತಕೃತ್ಯನಾದ

**ಏಷಃ** = ಈ ಮಹಾಪುರುಷನು (ಈ ಮಧ್ವಾಚಾರ್ಯರು).

**ಯತ್** = ಯಾವ

**ಲಾಲನಂ** = ಆದರ (ಸನ್ಮಾನ)ವನ್ನು

**ಅಲಭಿಷ್ಟ** = ಪಡೆದನೋ,

**ಸಮಗ್ರಂ** = ಸಂಪೂರ್ಣವಾದ

**ಇದಂ** = ಈ ಸನ್ಮಾನವನ್ನು

**ಶುಕಃ ಅಪಿ** = ಶುಕಾಚಾರ್ಯರೂ ಕೂಡ,

**ಜಗತಾಂ** = ಲೋಕಗಳಿಗೆ

**ಪಿತುಃ** = ತಂದೆಯಾದ

**ಪಿತುಃ** = ತಮ್ಮ ತಂದೆಯಾದ ಶ್ರೀವ್ಯಾಸರ ದೆಶೆಯಿಂದ

(**ಜಗತಾಂ ಪಿತುಃ** = ಲೋಕಗಳಿಗೆಲ್ಲ ತಂದೆಯಾದ ಬ್ರಹ್ಮದೇವರ ತಂದೆಯಾದ ಈ ವೇದವ್ಯಾಸರ ದೆಶೆಯಿಂದ)

**ನ ಆಪ** = ಹೊಂದಲಿಲ್ಲ,

**ಇತಿ** = ಹೀಗೆಂದು

**ತಾಪಸೈಃ** = ಮುನಿಗಳಿಂದ

**ಅತಿಕೌತೂಹಲಂ** = ಅತ್ಯಂತ ಆಶ್ಚರ್ಯವು

**ಆಪಿ** = ಹೊಂದಲ್ಪಟ್ಟಿತು.

**ತಾತ್ಪರ್ಯ—** ಇಲ್ಲಿ ಬಂದು ಶ್ರೀವ್ಯಾಸರಿಂದ ಅಸಾಧಾರಣ ಸನ್ಮಾನವನ್ನು ಪಡೆದ ಈ ಮಹಾಪುರುಷನು (ಈ ಮಧ್ವಾಚಾರ್ಯರು) ಧನ್ಯನೇ ಸರಿ. ಇಂತಹ ಗೌರವಾದರವನ್ನು ಸ್ವಂತ ಮಗನಾದ ಶುಕಾಚಾರ್ಯರೂ ತಮ್ಮ ತಂದೆಯಾದ ಬ್ರಹ್ಮದೇವರಿಗೂ ತಂದೆಯಾದ ಶ್ರೀವೇದವ್ಯಾಸರಿಂದ ಪಡೆಯಲಿಲ್ಲ ಎಂಬುದಾಗಿ ಅಲ್ಲಿರುವ ಋಷಿಗಳು ಆಶ್ಚರ್ಯಪಟ್ಟರು.

**ವಿಗ್ರಹ—**

**ಅತಿಕೌತೂಹಲಂ—** ಅತ್ಯಂತಂ ಕೌತೂಹಲಂ ಅತಿಕೌತೂಹಲಂ ।

**ಕ್ರಿಯಾಪದ— ಆಪ-** ಆಪ್‌ಲೃ ವ್ಯಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ ಆಪ್ ಧಾತೋಃ ಸಕರ್ಮಕಾತ್ ಕರ್ತರಿ ಭೂತಾ-ನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ಆಪ'' ಇತಿ ರೂಪಮ್ ।

ಆಪ ಆಪತುಃ ಆಪುಃ, ಆಪಿಥ ಆಪಥುಃ ಆಪ, ಆಪ ಆಪಿವ ಆಪಿಮ ॥

**ಅಲಭಿಷ್ಟ-** ಡುಲಭಷ್‌ಪ್ರಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ ಲಭ್ ಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಕರ್ತರಿ ಭೂತೇ ಲುಙ್ ಲಿಟ್ ''ಅಲಭಿಷ್ಟ'' ಇತಿ ರೂಪಮ್ । ಈ ಧಾತುವು ಅನಿಟ್ ಆದ್ದರಿಂದ ಅಲಬ್ಧ ಎಂದು ರೂಪವಾಗಬೇಕಿತ್ತು. ಆದರೆ ಆಗಮಶಾಸ್ತ್ರಮನಿತ್ಯಂ ಎಂಬ ವಚನದಿಂದ ಇಟ್ ಬಂದಿದೆಯೆಂದು ತಿಳಿಯಬೇಕು.

| | | |
|---|---|---|
| ಅಲಬ್ಧಃ | ಅಳಪ್ಸಾತಾಂ | ಅಲಪ್ಸತ |
| ಅಲಬ್ಧಾಃ | ಅಲಪ್ಸಾಥಾಂ | ಅಲಬ್ಧಂ |
| ಅಲಪ್ಸಿ | ಅಲಪ್ಸ್ವಹಿ | ಅಲಪ್ಸ್ಮಹಿ |

**ಆಪಿ-** ಆಪಲೃವ್ಯಾಪ್ತೌ ಇತಿ ಆಪ್ತ್ಯರ್ಥಕಾತ್ ಆಪ್ ಧಾತೋಃ ಸಕರ್ಮಕಾತ್ ಕರ್ಮಣಿ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ''ಆಪಿ'' ಇತಿ ರೂಪಮ್ ।

ಆಪಿ ಆಪ್ಸಾತಾಂ ಆಪ್ಸತ, ಆಪ್ಧಾಃ ಆಪ್ಸಾಥಾಂ ಆಬ್‌ಧ್ವಂ, ಆಪ್ಸಿ ಆಪ್ಸ್ವಹಿ ಆಪ್ಸ್ಮಹಿ ॥

**ಪ್ರಯೋಗ—** ಇದಂ ಲಾಲನಂ ಶುಕಃ ನ ಆಪ (ಕರ್ತರಿ) । ಇದಂ ಲಾಲನಂ ಶುಕೇನ ನ ಆಪೇ (ಕರ್ಮಣಿ) । ಏಷಃ ಯತ್ ಅಲಭಿಷ್ಟ (ಕರ್ತರಿ) । ಏತೇನ ಯತ್ ಅಲಂಭಿ (ಅಲಾಭಿ) (ಕರ್ಮಣಿ) । ತಾಪಸೈಃ ಅತಿಕೌತೂಹಲಂ ಆಪಿ (ಕರ್ಮಣಿ) । ತಾಪಸಾಃ ಅಪಿ ಕೌತೂಹಲಂ ಆಪನ್ (ಕರ್ತರಿ) ।

★ ★ ★

ಶ್ರೀವೇದವ್ಯಾಸರ ಶಿಷ್ಯರು ಶ್ರೀ ವ್ಯಾಸರ ಅಭಿಪ್ರಾಯವನ್ನರಿತು
ಶ್ರೀಮಧ್ವಾಚಾರ್ಯರಿಗೆ ಉಚಿತವಾದ ಆಸನವನ್ನು ಕೊಟ್ಟರೆನ್ನುತ್ತಾರೆ.

**ಅಮುಷ್ಯ ಶಿಷ್ಯಾ ವಿನಯೇನ ತಸ್ಮೈ ಗುರೋರಭಿಪ್ರಾಯವಿದೋ ವಿದಗ್ಧಾಃ ।**
**ತದಾನುರೂಪಂ ದದುರಾಸನಂ ತೇ ಚತುರ್ಮುಖಾಯೇವ ಮುಕುಂದದಾಸಾಃ ॥ 56 ॥**

**ಪದಚ್ಛೇದ—** ಅಮುಷ್ಯ, ಶಿಷ್ಯಾಃ, ವಿನಯೇನ, ತಸ್ಮೈ, ಗುರೋಃ, ಅಭಿಪ್ರಾಯವಿದಃ, ವಿದಗ್ಧಾಃ, ತದಾ, ಅನುರೂಪಂ, ದದುಃ, ಆಸನಂ, ತೇ, ಚತುರ್ಮುಖಾಯ, ಇವ, ಮುಕುಂದದಾಸಾಃ ।

**ಅನ್ವಯ—** ತದಾ ಗುರೋಃ ಅಭಿಪ್ರಾಯವಿದಃ ವಿದಗ್ಧಾಃ ತೇ ಅಮುಷ್ಯ ಶಿಷ್ಯಾಃ ವಿನಯೇನ ತಸ್ಮೈ ಅನುರೂಪಂ ಆಸನಂ ಮುಕುಂದದಾಸಾಃ ಚತುರ್ಮುಖಾಯ ಇವ ದದುಃ ।

**ಅನ್ವಯಾರ್ಥ—**

**ತದಾ** = ಆಗ

**ಗುರೋಃ** = ಶ್ರೀವ್ಯಾಸರ

**ಅಭಿಪ್ರಾಯವಿದಃ** = ಅಭಿಪ್ರಾಯವನ್ನು ತಿಳಿದ

**ವಿದಗ್ಧಾಃ** = ನಿಪುಣರಾದ

**ತೇ** = ಆ

**ಅಮುಷ್ಯ** = ಈ ವೇದವ್ಯಾಸರ

**ಶಿಷ್ಯಾಃ** = ಶಿಷ್ಯರು

**ವಿನಯೇನ** = ವಿಧೇಯತೆಯಿಂದ

**ತಸ್ಮೈ** = ಆ ಮಧ್ವಾಚಾರ್ಯರಿಗೆ

**ಅನುರೂಪಂ** = ಯೋಗ್ಯವಾದ

**ಆಸನಂ** = ಪೀಠವನ್ನು

**ಮುಕುಂದದಾಸಾಃ** = ಶ್ರೀಮನ್ನಾರಾಯಣನ ಸೇವಕರು

**ಚತುರ್ಮುಖಾಯ ಇವ** = ಚತುರ್ಮುಖ ಬ್ರಹ್ಮನಿಗೆಂಬಂತೆ

**ದದುಃ** = ಕೊಟ್ಟರು.

**ತಾತ್ಪರ್ಯ—** ಶ್ರೀವ್ಯಾಸರ ಶಿಷ್ಯರು ಬಹಳ ಊಹಾಪೋಹ ಕುಶಲರು. ಮಧ್ವಾಚಾರ್ಯರಿಗೆ ಆಸನ ಕೊಡಬೇಕೆಂಬ ಗುರುವಿನ ಅಭಿಪ್ರಾಯವನ್ನರಿತ ಅವರು ಕೂಡಲೆ ವಿನಯದಿಂದ ಮಧ್ವಾಚಾರ್ಯರಿಗೆ ಯೋಗ್ಯವಾದ ಆಸನವನ್ನು ಕೊಟ್ಟರು. ಅದು, ಚತುರ್ಮುಖಬ್ರಹ್ಮದೇವರು ವೈಕುಂಠಕ್ಕೆ ಬಂದಾಗ ಶ್ರೀಮನ್ನಾರಾಯಣನ ಸೇವಕರು ಅವರಿಗೆ ಆಸನ-ವನ್ನು ಕೊಟ್ಟಂತಾಯಿತು.

**ವಿಗ್ರಹ—**

**ಅಭಿಪ್ರಾಯವಿದಃ—** ಅಭಿಪ್ರಾಯಂ ವಿದಂತೀತಿ ಅಭಿಪ್ರಾಯವಿದಃ ।

**ಮುಕುಂದದಾಸಾಃ—** ಮುಕುಂದಸ್ಯ ದಾಸಾಃ ಮುಕುಂದದಾಸಾಃ ।

**ಕ್ರಿಯಾಪದ—** ದದುಃ- ಡುದಾಞ್‌ದಾನೇ ದಾನಾರ್ಥಕಾತ್ ದಾಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಬಹುವಚನೇ ದದುಃ ಇತಿ ರೂಪಮ್ ।

ದದೌ ದದತುಃ ದದುಃ, ದದಿಥ ದದಾಥ ದದಥುಃ ದದ, ದದೌ ದದಿವ ದದಿಮ ॥

**ಪ್ರಯೋಗ—** ಅಮುಷ್ಯ ಶಿಷ್ಯಾಃ ಆಸನಂ ದದುಃ (ಕರ್ತರಿ) । ಅಮುಷ್ಯ ಶಿಷ್ಯೈಃ ಆಸನಂ ದದೇ (ಕರ್ಮಣಿ) ।

**ವೃತ್ತ—** ಈ ಪದ್ಯದಲ್ಲಿ ಉಪೇಂದ್ರವಜ್ರಾವೃತ್ತವಿದೆ. ಉಪೇಂದ್ರವಜ್ರಾ ಜತಜಾಸ್ತತೋ ಗೌ ಎಂದು ಲಕ್ಷಣ.

ಪ್ರಸ್ತಾರ

ಅಮುಷ್ಯ ಶಿಷ್ಯಾವಿ ನ ಯೇನ ತಸ್ಮೈ

I S I S S I I S I S S

ಒಂದು ಪಾದಕ್ಕೆ 11 ಅಕ್ಷರಗಳು.

★ ★ ★

ಶ್ರೀವೇದವ್ಯಾಸರು ಆಸನವನ್ನು ಅಲಂಕರಿಸಿದ ಮೇಲೆ ಅವರಿಂದ ಅಪ್ಪಣೆಯನ್ನು ಪಡೆದನಂತರ ಶ್ರೀಮಧ್ವಾಚಾರ್ಯರು ಅಲ್ಲಿದ್ದ ಮುನಿವರ್ಯರನ್ನು ಮುಗುಳ್ನಗೆಯಿಂದ ಮಾನಿಸುವವರಾಗಿ ತಮಗೆ ಕೊಟ್ಟಿದ್ದ ಆಸನದಲ್ಲಿ ಕುಳಿತುಕೊಂಡರು.

**ಆಸ್ಯತಾಮಿತ್ಯುದೀರ್ಯೋಪವಿಷ್ಟೇ ಸತ್ಯವತ್ಯಾಃ ಸುತೇ ಸತ್ಯವಾಚೀ ।**
**ಮಾನಯನ್ ಮಂದಹಾಸಾವಲೋಕೈಸ್ತಾನ್ ಮುನೀಂದ್ರಾನಿಹೋಪಾವಿಶತ್ಸಃ ॥ 57 ॥**

**ಪದಚ್ಛೇದ—** ಆಸ್ಯತಾಂ, ಇತಿ, ಉದೀರ್ಯ, ಉಪವಿಷ್ಟೇ, ಸತ್ಯವತ್ಯಾಃ, ಸುತೇ, ಸತ್ಯವಾಚಿ, ಮಾನಯನ್, ಮಂದಹಾಸಾವಲೋಕೈಃ, ತಾನ್, ಮುನೀಂದ್ರಾನ್, ಇಹ, ಉಪಾವಿಶತ್, ಸಃ ।

**ಅನ್ವಯ—** ಸತ್ಯವಾಚಿ, ಸತ್ಯವತ್ಯಾಃ, ಸುತೇ, 'ಆಸ್ಯತಾಂ', ಇತ್ಯುದೀರ್ಯ, ಉಪವಿಷ್ಟೇ (ಸತಿ), ಮಂದಹಾಸಾವಲೋಕೈಃ, ತಾನ್, ಮುನೀಂದ್ರಾನ್, ಮಾನಯನ್, ಸಃ, ಇಹ, ಉಪಾವಿಶತ್ ।

**ಅನ್ವಯಾರ್ಥ—**

**ಸತ್ಯವಾಚಿ** = ಸತ್ಯವಾದ ಮಾತುಳ್ಳ
**ಸತ್ಯವತ್ಯಾಃ** = ಸತ್ಯವತೀ ದೇವಿಯ
**ಸುತೇ** = ಮಗನಾದ ವ್ಯಾಸರು
**'ಆಸ್ಯತಾಂ** = ಕುಳಿತುಕೊಳ್ಳೋಣವಾಗಲಿ'
**ಇತಿ** = ಎಂದು
**ಉದೀರ್ಯ** = ಹೇಳಿ
**ಉಪವಿಷ್ಟೇ (ಸತಿ)** = ಕುಳಿತುಕೊಳ್ಳಲಾಗಿ,
**ಮಂದಹಾಸ** = ಮುಗುಳುನಗೆಯ
**ಅವಲೋಕೈಃ** = ನೋಟಗಳಿಂದ
**ತಾನ್** = ಆ
**ಮುನೀಂದ್ರಾನ್** = ಮುನಿಶ್ರೇಷ್ಠರನ್ನು
**ಮಾನಯನ್** = ಗೌರವಿಸುತ್ತಿರುವ,
**ಸಃ** = ಆ ಮಧ್ವಾಚಾರ್ಯರು
**ಇಹ** = ಇಲ್ಲಿ (ಪೀಠದಲ್ಲಿ)
**ಉಪಾವಿಶತ್** = ಕುಳಿತುಕೊಂಡರು.

**ತಾತ್ಪರ್ಯ—** ಸತ್ಯವಾದಿಗಳಾದ ಸತ್ಯವತೀ ಪುತ್ರರಾದ ವೇದವ್ಯಾಸರು ಶ್ರೀಮಧ್ವಾಚಾರ್ಯರನ್ನು ಕುರಿತು 'ಕುಳಿತುಕೊಳ್ಳಿ' ಎಂದು ಹೇಳಿದರು ಮತ್ತು ತಾವು ಕುಳಿತುಕೊಂಡರು. ಆಗ ಶ್ರೀಮಧ್ವಾಚಾರ್ಯರು ಅಲ್ಲಿ ಸೇರಿದ್ದ ಮುನಿಗಳನ್ನೆಲ್ಲಾ ತನ್ನ ಮುಗುಳುನಗೆಯ ನೋಟದಿಂದಲೇ ಗೌರವಿಸುತ್ತಾ ತನಗಾಗಿ ತೋರಿಸಿದ ಆಸನದಲ್ಲಿ ಕುಳಿತರು.

**ವಿಗ್ರಹ—**

**ಸತ್ಯವಾಚಿ—** ಸತ್ಯಾ ವಾಕ್ ಯಸ್ಯ ಸಃ ಸತ್ಯವಾಕ್, ತಸ್ಮಿನ್ ಸತ್ಯವಾಚಿ ।

**ಮಂದಹಾಸಾವಲೋಕೈಃ—** ಮಂದಃ ಹಾಸಃ ಯೇಷು ತೇ ಮಂದಹಾಸಾಃ, ಮಂದಹಾಸಾಶ್ಚ ತೇ ಅವಲೋಕಾಶ್ಚ ಮಂದಹಾಸಾವಲೋಕಾಃ, ತೈಃ ಮಂದಹಾಸಾವಲೋಕೈಃ ।

**ಮುನೀಂದ್ರಾನ್—** ಮುನಿಷು ಇಂದ್ರಾಃ ಮುನೀಂದ್ರಾಃ, ತಾನ್ ಮುನೀಂದ್ರಾನ್ ।

**ಕ್ರಿಯಾಪದ—** ಆಸ್ಯತಾಂ ಆಸ ಉಪವೇಶನೇ ಇತಿ ಉಪವೇಶನಾರ್ಥಕಾತ್ ಆಸ್‌ಧಾತೋಃ ಆತ್ಮನೇಪದಿನಃ ಭಾವೇ ಲೋಟ್ ಪ್ರಥಮಪುರುಷೇ ಏಕವಚನೇ 'ಆಸ್ಯತಾಂ' ಇತಿ ರೂಪಮ್ । ಭಾವೇ ಪ್ರಯೋಗದಲ್ಲಿ ಒಂದೇ ರೂಪ.

**ಉಪಾವಿಶತ್-** ಉಪ ಆಙ್ ಇತ್ಯುಪಸರ್ಗ ದ್ವಯ ಪೂರ್ವಕಾತ್ ವಿಶ ಪ್ರವೇಶನೇ ಪ್ರವೇಶನಾರ್ಥಕಾತ್ ವಿಶಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ 'ಉಪಾವಿಶತ್' ಇತಿ ರೂಪಮ್ ।

ಉಪ-ಅವಿಶತ್ ಅವಿಶತಾಂ ಅವಿಶನ್, ಅವಿಶಃ ಅವಿಶಥಂ ಅವಿಶತ, ಅವಿಶಂ ಅವಿಶಾವ ಅವಿಶಾಮ ॥

**ಪ್ರಯೋಗ—** (ಭವತಾ), ಆಸ್ಯತಾಂ (ಭಾವೇ) ಭವಾನ್ ಆಸ್ತಾಂ (ಕರ್ತರಿ) ಅಥವಾ (ತ್ವಯಾ) ಆಸ್ಯತಾಂ (ಭಾವೇ) (ತ್ವಂ) ಆಸ್ಸ್ವ (ಕರ್ತರಿ) ।

★ ★ ★

ಬದರಿಕಾಶ್ರಮವಾಸಿಗಳಾದ ಮುನಿಗಳು ಶ್ರೀವೇದವ್ಯಾಸರಿಂದ ಶ್ರೀಮಧ್ವಾಚಾರ್ಯರನ್ನು ಶ್ರೀಮುಖ್ಯಪ್ರಾಣನ ಅವತಾರ ರೂಪರೆಂದು ಅರಿತು ಅವರನ್ನು ಯೋಗ್ಯ ರೀತಿಯಲ್ಲಿ ಸನ್ಮಾನಿಸಿದರು.

**ಅವಗಮ್ಯ ತಂ ಮುನಿಗಣಾ ವರಿಷ್ಠತೋ**
**ವಿಧಿವದ್ ವ್ಯಧುರ್ವಿಧಿವಿದೋಽಸ್ಯ ಮಾನನಾಂ ।**
**ಅಪಿ ಸತ್ಕಥಾಃ (ಸಂಕಥಾಃ) ಶ್ರುತಿಸುಖಾಃ ಕವೀಂದ್ರಯೋ-**
**ರನಯೋರ್ನಿಶಮ್ಯ ಪರಮಾಂ ಮುದಂ ಯಯುಃ ॥ 58 ॥**

**ಪದಚ್ಛೇದ—** ಅವಗಮ್ಯ, ತಂ, ಮುನಿಗಣಾಃ, ವರಿಷ್ಠತಃ, ವಿಧಿವತ್, ವ್ಯಧುಃ, ವಿಧಿವಿದಃ, ಅಸ್ಯ, ಮಾನನಾಮ್, ಅಪಿ, ಸತ್ಕಥಾಃ (ಸಂಕಥಾಃ), ಶ್ರುತಿಸುಖಾಃ, ಕವೀಂದ್ರಯೋಃ, ಅನಯೋಃ, ನಿಶಮ್ಯ, ಪರಮಾಂ, ಮುದಂ, ಯಯುಃ ।

**ಅನ್ವಯ—** ಮುನಿಗಣಾಃ ವರಿಷ್ಠತಃ ತಂ ಅವಗಮ್ಯ, ವಿಧಿವಿದಃ, ಅಸ್ಯ, ವಿಧಿವತ್, ಮಾನನಾಂ, ವ್ಯಧುಃ । ಕವೀಂದ್ರಯೋಃ, ಅನಯೋಃ, ಶ್ರುತಿಸುಖಾಃ, ಸತ್ಕಥಾಃ (ಸಂಕಥಾಃ), ನಿಶಮ್ಯ, ಪರಮಾಂ, ಮುದಂ, ಯಯುಃ ।

**ಅನ್ವಯಾರ್ಥ—**

**ಮುನಿಗಣಾಃ** = ಮುನಿಗಳ ಸಮೂಹಗಳು (ಗುಂಪುಗುಂಪಾಗಿರುವ ಮುನಿಗಳು)
**ವರಿಷ್ಠತಃ** = ಶ್ರೇಷ್ಠರಾದ ಶ್ರೀವ್ಯಾಸರಿಂದ
**ತಂ** = ಆ ಮಧ್ವಾಚಾರ್ಯರನ್ನು
**ಅವಗಮ್ಯ** = (ಶ್ರೀ ಮುಖ್ಯಪ್ರಾಣಾವತಾರರೆಂದು) ತಿಳಿದು,
**ವಿಧಿವಿದಃ** = ಶಾಸ್ತ್ರಕ್ರಮವನ್ನು ಅರಿತವರಾಗಿ
**ವಿಧಿವತ್** = ವಿಧಿಯಲ್ಲಿ ಹೇಳಿದಂತೆ
**ಮಾನನಾಂ** = ಸನ್ಮಾನವನ್ನು
**ವ್ಯಧುಃ** = ಮಾಡಿದರು.
**ಕವೀಂದ್ರಯೋಃ** = ಜ್ಞಾನಿ ಶ್ರೇಷ್ಠರಾದ
**ಅನಯೋಃ** = ಈ ಶ್ರೀವ್ಯಾಸ ಮತ್ತು ಶ್ರೀಮಧ್ವರ

**ಶ್ರುತಿಸುಖಾಃ** = ಕಿವಿಗಳಿಗೆ ಇಂಪಾದ
**ಸತ್ಕಥಾಃ ಅಪಿ (ಸಂಕಥಾಃ ಅಪಿ)** = ಉತ್ತಮವಾದ ಸಲ್ಲಾಪಗಳನ್ನೂ
**ನಿಶಮ್ಯ** = ಕೇಳಿ,
**ಪರಮಾಂ** = ಹೆಚ್ಚಾದ
**ಮುದಂ** = ಸಂತೋಷವನ್ನು
**ಯಯುಃ** = ಹೊಂದಿದರು.

**ತಾತ್ಪರ್ಯ—** ಸರ್ವೋತ್ತಮರಾದ ಶ್ರೀವೇದವ್ಯಾಸದೇವರು ಆ ಮುನಿಗಳಿಗೆ ಇವರು ಮುಖ್ಯಪ್ರಾಣನ ಅವತಾರ-ರಾದ ಮಧ್ವಾಚಾರ್ಯರು ಎಂದು ತಿಳಿಸಿದರು. ಆಗ ಶಾಸ್ತ್ರವನ್ನರಿತ ಆ ಮುನಿಗಳು ಶ್ರೀಮಧ್ವಾಚಾರ್ಯರಿಗೆ ಶಾಸ್ತ್ರೋಕ್ತವಾದ ಕ್ರಮದಿಂದ ಸತ್ಕಾರ ಮಾಡಿದರು. ಅವರೆಲ್ಲರೂ ಅನಂತರ ಜ್ಞಾನಿಶ್ರೇಷ್ಠರಾದ ಶ್ರೀವೇದವ್ಯಾಸರ ಮತ್ತು ಶ್ರೀಮಧ್ವರ ಇಂಪಾದ ಸಂಭಾಷಣೆಗಳನ್ನು ಕೇಳಿ ತುಂಬಾ ಸಂತೋಷ ಪಟ್ಟರು.

**ವಿಗ್ರಹ—**

**ಮುನಿಗಣಾಃ—** ಮುನೀನಾಂ ಗಣಾಃ ಮುನಿಗಣಾಃ ।
**ವರಿಷ್ಠತಃ—** ಅತಿಶಯೇನ ವರಃ ವರಿಷ್ಠಃ, ತಸ್ಮಾತ್ ವರಿಷ್ಠತಃ ।
**ವಿಧಿವಿದಃ—** ವಿಧಿನಾ ತುಲ್ಯಂ ವಿಧಿವತ್, ವಿಧಿಂ ವಿದಂತಿ ಇತಿ ವಿಧಿವಿದಃ ।
**ಸತ್ಕಥಾಃ—** ಸತ್ಯಶ್ಚ ತಾಃ ಕಥಾಶ್ಚ ಸತ್ಕಥಾಃ, ತಾಃ ಸತ್ಕಥಾಃ ।
**ಶ್ರುತಿಸುಖಾಃ—** ಶ್ರುತೀನಾಂ ಸುಖಂ ಯಾಭ್ಯಸ್ತಾಃ ಶ್ರುತಿಸುಖಾಃ, ತಾಃ ಶ್ರುತಿಸುಖಾಃ ।
**ಕವೀಂದ್ರಯೋಃ—** ಕವೀನಾಂ ಇಂದ್ರೌ ಕವೀಂದ್ರೌ, ತಯೋಃ ಕವೀಂದ್ರಯೋಃ ।

**ಕ್ರಿಯಾಪದ—** ವ್ಯಧುಃ- 'ವಿ' ಇತ್ಯುಪಸರ್ಗ ಪೂರ್ವಕಾತ್ ಡುಧಾಞ್ ಧಾರಣಪೋಷಣಯೋಃ, ಇತಿ ಧಾರಣ-ಪೋಷಣಾರ್ಥಕಾತ್ ಧಾಧಾತೋಃ ಪರಸ್ಮೈಪದಿನಃ ಭೂತೇ ಲುಙ್ ಪ್ರಥಮಪುರುಷೇ ಬಹುವಚನೇ ''ವ್ಯಧುಃ'' ಇತಿ ರೂಪಮ್ ।

ವಿ-ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ ॥

ಯಯುಃ- 'ಯಾಪ್ರಾಪಣೇ ಇತಿ' ಪ್ರಾಪಣಾರ್ಥಕಾತ್ ಯಾಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾ-ನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಬಹುವಚನೇ ''ಯಯುಃ'' ಇತಿ ರೂಪಮ್ ।

ಯಯೌ ಯಯತುಃ ಯಯುಃ, ಯಯಿಥ-ಯಯಾಥ ಯಯಥುಃ ಯಯ, ಯಯೌ ಯಯಿವ ಯಯಿಮ ॥

**ಪ್ರಯೋಗ—** ಮುನಿಗಣಾಃ ಮಾನನಾಂ ವ್ಯಧುಃ (ಕರ್ತರಿ) । ಮುನಿಗಣೈಃ ಮಾನನಾ ವ್ಯಧಾಯಿ (ಕರ್ಮಣಿ) । (ಮುನಿಗಣಾಃ) ಮುದಂ ಯಯುಃ (ಕರ್ತರಿ) । (ಮುನಿಗಣೈ) ಮುತ್‌ಯಯೇ (ಕರ್ಮಣಿ) ।

**ವೃತ್ತ—** ಈ ಪದ್ಯದಲ್ಲಿ ಮಂಜುಭಾಷಿಣೀ ವೃತ್ತ. ಸಹಜಾಂ ಜಗೌ ಭವತಿ ಮಂಜುಭಾಷಿಣೀ ಇದು ಲಕ್ಷಣ ।

**ಪ್ರಸ್ತಾರ—** ಅವಗ, ಮ್ಯತಂಮು, ನಿಗಣಾ, ವರಿಷ್ಠ, ತೋ ।
I I S, I S I    I I S I S I    I

★ ★ ★

**ಈ ರೀತಿ ತತ್ತ್ವಜ್ಞಾನಕಾರ್ಯಕ್ಕಾಗಿ ಅವತರಿಸಿದ ಬದರಿಕಾಶ್ರಮದಲ್ಲಿ ಮಿಳಿತರಾದ**
**ಶ್ರೀವಿಷ್ಣು ಮತ್ತು ಶ್ರೀವಾಯುದೇವರ ಅವತಾರ ರೂಪಗಳ ವೈಭವವನ್ನು ವರ್ಣಿಸುತ್ತಾರೆ.**

**ಸಜ್ಞಾನಾಯಾನಂದವಿಜ್ಞಾನಮೂರ್ತೀ ಪ್ರಾಪ್ತೌ ಪೃಥ್ವೀಮಾಶ್ರಮೇ ತತ್ರ ತಾವತ್ ।**
**ಜಾಜ್ವಲ್ಯೇತೇ ವಿಷ್ಣುವಾಯೂ ಸ್ಮ ದೇವೌ ವೇದವ್ಯಾಸಾನಂದತೀರ್ಥಾಭಿಧಾನೌ ॥ 59 ॥**

**ಪದಚ್ಛೇದ—** ಸಜ್ಞಾನಾಯ, ಆನಂದವಿಜ್ಞಾನಮೂರ್ತೀ, ಪ್ರಾಪ್ತೌ, ಪೃಥ್ವೀಂ, ಆಶ್ರಮೇ, ತತ್ರ, ತಾವತ್, ಜಾಜ್ವಲ್ಯೇತೇ, ವಿಷ್ಣುವಾಯೂ, ಸ್ಮ, ದೇವೌ, ವೇದವ್ಯಾಸಾನಂದತೀರ್ಥಾಭಿಧಾನೌ ।

**ಅನ್ವಯ—** ಸಜ್ಞಾನಾಯ, ಪೃಥ್ವೀಂ, ಪ್ರಾಪ್ತೌ, ವೇದವ್ಯಾಸಾನಂದತೀರ್ಥಾಭಿಧಾನೌ, ಆನಂದವಿಜ್ಞಾನಮೂರ್ತೀ, ವಿಷ್ಣುವಾಯೂ, ದೇವೌ, ತತ್ರ, ಆಶ್ರಮೇ, ತಾವತ್, ಜಾಜ್ವಲ್ಯೇತೇ, ಸ್ಮ ।

**ಅನ್ವಯಾರ್ಥ—**

**ಸಜ್ಞಾನಾಯ** = ಸಜ್ಜನರಿಗೆ ಉತ್ತಮ ಜ್ಞಾನೋಪದೇಶಕ್ಕೋಸ್ಕರ
**ಪೃಥ್ವೀಂ** = ಭೂಮಿಯನ್ನು
**ಪ್ರಾಪ್ತೌ** = ಹೊಂದಿದ,
**ವೇದವ್ಯಾಸಾನಂದತೀರ್ಥಾಭಿಧಾನೌ** = ಶ್ರೀವೇದವ್ಯಾಸರು, ಶ್ರೀಆನಂದತೀರ್ಥ ಎಂಬ ಹೆಸರುಳ್ಳ,
**ಆನಂದವಿಜ್ಞಾಮೂರ್ತೀ** = ಆನಂದ ಮತ್ತು ವಿಶೇಷ ಜ್ಞಾನಗಳೇ ಸ್ವರೂಪವಾಗಿ ಉಳ್ಳ,
**ವಿಷ್ಣುವಾಯೂ ದೇವೌ** = ಶ್ರೀಮನ್ನಾರಾಯಣ ಮತ್ತು ವಾಯುದೇವರು
**ತತ್ರ** = ಆ ಆಶ್ರಮದಲ್ಲಿ
**ತಾವತ್** = ಸಂಪೂರ್ಣವಾಗಿ
**ಜಾಜ್ವಲ್ಯೇತೇ ಸ್ಮ** = ಅತಿಶಯವಾಗಿ ಪ್ರಕಾಶಿಸಿದರಷ್ಟೇ.

**ತಾತ್ಪರ್ಯ—** ಸಜ್ಜನರಿಗೆ ತತ್ತ್ವಜ್ಞಾನೋಪದೇಶಕ್ಕಾಗಿ ಆ ಶ್ರೀ ವೇದವ್ಯಾಸರು ಮತ್ತು ಶ್ರೀಮದಾನಂದತೀರ್ಥರು ಭೂಮಿಯಲ್ಲಿ ಅವತಾರ ಮಾಡಿರುವರು. ಆನಂದ ವಿಜ್ಞಾನಗಳೇ ಶರೀರವಾದ ವಿಷ್ಣು ಮತ್ತು ವಾಯುದೇವರ ಅವತಾರರಾದ ಅವರಿಬ್ಬರೂ ಆ ಬದರಿಕಾಶ್ರಮದಲ್ಲಿ ಮುನಿಗಳ ನಡುವೆ ಬಹಳ ಚೆನ್ನಾಗಿ ಪ್ರಕಾಶಿಸುತ್ತಿದ್ದರು.

**ವಿಗ್ರಹ—**

**ಸಜ್ಞಾನಾಯ—** ಸತಾಂ ಜ್ಞಾನಂ ಸಜ್ಞಾನಂ, ತಸ್ಮೈ ಸಜ್ಞಾನಾಯ ।

**ಆನಂದವಿಜ್ಞಾನಮೂರ್ತೀ—** ಆನಂದಶ್ಚ ವಿಜ್ಞಾನಂ ಚ ಆನಂದವಿಜ್ಞಾನೇ, ತೇ ಮೂರ್ತಿಃ ಯಯೋಃ ತೌ ಆನಂದವಿಜ್ಞಾನಮೂರ್ತೀ ।

**ವಿಷ್ಣುವಾಯೂ—** ವಿಷ್ಣುಶ್ಚ ವಾಯುಶ್ಚ ವಿಷ್ಣುವಾಯೂ ।

**ವೇದವ್ಯಾಸಾನಂದತೀರ್ಥಾಭಿಧಾನೌ—** ವೇದವ್ಯಾಸಶ್ಚ ಆನಂದತೀರ್ಥಶ್ಚ ವೇದವ್ಯಾಸಾನಂದತೀರ್ಥೌ, ವೇದವ್ಯಾಸಾನಂದತೀರ್ಥೌ ಇತಿ ಅಭಿಧಾನೇ ಯಯೋಃ ತೌ, ವೇದವ್ಯಾಸಾನಂದತೀರ್ಥಾಭಿಧಾನೌ ।

**ಕ್ರಿಯಾಪದ—** **ಜಾಜ್ವಲ್ಯೇತೇ-** 'ಜ್ವಲದೀಪ್ತೌ' ಇತಿ ದೀಪ್ತ್ಯರ್ಥಕಾತ್ ಜ್ವಲಧಾತೋಃ ಅಕರ್ಮಕಾತ್ ಯಙಂತಾತ್ ಆತ್ಮನೇಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ದ್ವಿವಚನೇ ''ಜಾಜ್ವಲ್ಯೇತೇ'' ಇತಿ ರೂಪಮ್ ।

ಜಾಜ್ವಲ್ಯತೇ ಜಾಜ್ವಲ್ಯೇತೇ ಜಾಜ್ವಲ್ಯಂತೇ, ಜಾಜ್ವಲ್ಯಸೇ ಜಾಜ್ವಲ್ಯೇಥೇ ಜಾಜ್ವಲ್ಯಧ್ವೇ, ಜಾಜ್ವಲ್ಯೇ ಜಾಜ್ವಲ್ಯಾವಹೇ ಜಾಜ್ವಲ್ಯಾಮಹೇ ॥

**ವ್ಯಾಕರಣ ವಿಶೇಷ**— ಅತಿಶಯೇನ ಜ್ವಲತಿ ಜಾಜ್ವಲ್ಯತೇ, 'ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿ-ಹಾರೇಯಙ್' ಎಂಬ ಸೂತ್ರದಿಂದ 'ಅತಿಶಯವಾಗಿ' ಎಂಬ ಅರ್ಥದಲ್ಲಿ ಯಙ್ ಬಂದಿದೆ. 'ಲಟ್ಸ್ಮೆ' ಎಂಬ ಸೂತ್ರದಿಂದ ಲಟ್‌ಗೆ ಸ್ಮ ಸೇರಿಸಿದಾಗ ಭೂತಕಾಲದ ಅರ್ಥ ಬರುತ್ತದೆ.

**ವೃತ್ತ**— ಈ ಶ್ಲೋಕದಲ್ಲಿ ಶಾಲಿನೀ ವೃತ್ತವಿದೆ.

ಮಸ್ತೌ ಗೌ ಚೇಚ್ಛಾಲಿನೀ ವೇದಲೋಕೈಃ - ಇದು ವೃತ್ತ ಲಕ್ಷಣ.

**ಪ್ರಸ್ತಾರ**— ಸಜ್ಞಾನಾ, ಯಾನಂದ, ವಿಜ್ಞಾನ, ಮೂರ್ತೀ
S S S S S I S S I S S

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ಪ್ರಥಮಃ ಸರ್ಗಃ ಸಮಾಪ್ತಃ ॥*

★ ★ ★

|| ಶ್ರೀಃ ||

# ಶ್ರೀಸುಮಧ್ವವಿಜಯ

## ಸಂಪುಟ – 2

## ಸರ್ಗ 8 ರಿಂದ 10

*ಅನುವಾದಕರು:*

ದಿ|| ವಿದ್ವಾನ್ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯ

ದಿ|| ಮಾಗಡಿ ರಂಗನಾಥಾಚಾರ್ಯ

ದಿ|| ವಿದ್ವಾನ್ ಎಸ್. ವಿ. ಭೀಮಭಟ್ಟರು



*ಪ್ರಕಾಶಕರು:*

ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

# Śrī Sumadhva Vijaya
## Part - 2
Sargas : 8 to 10

*First Edition :* 2012 - 2000 Copies.

Price : Rs.

*Hon. Editors :*
**Śrī Rājā S. Rājagopālāchārya**
*Āpta Kāryadarśī, and*
**Śrī S. N. Suyamīndrāchārya**
*Additional Āpta Kāryadarśī*
Śrī Rāghavendra Swāmy Mutt
Mantrālayam, Dist. Kurnool, A.P.

*Edited By :*
**Vidwān Rājā S. Pavamānāchārya**
**Vidwān Kaḍapa Rāghavendrāchārya**
**Vidwān Dr. N. Vādirājāchārya**
**Vidwān Purāṇik Subrahmaṇyāchārya**

*Published By :*
**Śrī Gurusārvabhouma Sanskrit Vidyāpīṭha**
Jagadguru Śrīman Madhvācharya Mūla Mahāsamsthānam
Śrī Rāghavendra Swāmi Mutt, Mantralayam (A.P)

*Printed By :*
**Dhananjay Warkhedkar**
at : **Sudhā Mudraṇa**
Śankarpuram, Bangalore - 560 004.
☎ 6560 2836, 2672 5340, Mobile : 92430 74414

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥



ಸ್ವಸ್ತಿಶ್ರೀ ವಿಜಯಾಭ್ಯುದಯ ಗತ ಶಾಲಿವಾಹನ ಶಕ 1934 ನೇ
ಶ್ರೀನಂದನನಾಮ ಸಂವತ್ಸರ, ಶ್ರಾವಣ ಶುದ್ಧ ನವಮಿ, ದಿನಾಂಕ : 27-7-2012, ಶುಕ್ರವಾರ.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿವೇದವ್ಯಾಸದೇವರ
ದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ
ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ

## ಶ್ರೀ 108 ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

# ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ

## ಅನುಗ್ರಹ ಸಂದೇಶ

*''ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ॥''*

ಎಂಬ ವಚನದಂತೆ ಲೋಕದಲ್ಲಿ ಸರ್ವೋತ್ತಮನಾದ ಭಗವಂತನಿಗೆ ಸಮಾನನಾದ ದೇವರೇ ಇಲ್ಲ. ಹಾಗೂ ಜೀವೋತ್ತಮರಾದ ವಾಯ್ವವತಾರಿಗಳಾದ ಮಧ್ವರ ಸಮಾನರಾದ ಗುರುಗಳೇ ಇಲ್ಲ. ಇಂಥಹ ಲೋಕಪಾವನರಾದ ಆಚಾರ್ಯ ಮಧ್ವರ ಚರಿತ್ರೆ, ಮಹಿಮೆಯ ತಿಳಿವು ಅತ್ಯಂತ ಅವಶ್ಯವಾಗಿದೆ - ಎಂದು ''ಮುಕುಂದಭಕ್ತ್ಯೈ ಗುರುಭಕ್ತಿಜಾಯೈ'' ಎಂಬ ಸುಮಧ್ವವಿಜಯದ ಮಾತು ಸಮರ್ಥಿಸುತ್ತದೆ. ಇಂಥಹ ಶ್ರೀಮದಾಚಾರ್ಯರ ಚರಿತ್ರೆಯನ್ನು ಮಹಿಮೆಯನ್ನು, ವರ್ಣಿಸುವ ಸುಮಧ್ವವಿಜಯವೆಂಬ ಮಹಾಕಾವ್ಯವು ಸುಂದರವಾದ ಅನೇಕ ಸುವೃತ್ತಗಳಿಂದ ಶಾಸ್ತ್ರವಿಷಯಗಳಿಂದ ಶೋಭಿತವಾಗಿದೆ. ಇದನ್ನು ಅರ್ಥಪುರಃಸರವಾಗಿ ಎಲ್ಲರಿಗೂ ಮುಟ್ಟಿಸುವ ಯೋಚನೆಯಿಂದ ನಮ್ಮ ಪರಮಗುರುಗಳಾದ ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರು ಶ್ರೀಮಠದ ಅಧಿಕೃತ ಮಾಸಪತ್ರಿಕೆಯಲ್ಲಿ ಧಾರಾವಾಹಿರೂಪದಲ್ಲಿ ಬರುವಂತೆ ಮಾಡಿದ್ದರು. ಇದನ್ನು ಯೋಗ್ಯ ರೀತಿಯಲ್ಲಿ ಅನುವಾದವನ್ನು ಶ್ರೇಷ್ಠ ವಿದ್ವಾಂಸರುಗಳಾದ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು, ಮಾಗಡಿ ರಂಗನಾಥಾಚಾರ್ಯರು ಹಾಗೂ ಎಸ್. ವಿ. ಭೀಮಭಟ್ಟರು ಮಾಡಿದ್ದರು. ಪ್ರಕೃತ ಇದನ್ನು ಒಂದು ಪುಸ್ತಕರೂಪದಲ್ಲಿ ಹೊರತರುವ ಆದೇಶವನ್ನು ಮಾಡಿದ್ದೆವು. ನಮ್ಮ ಆದೇಶದಂತೆ ವಿದ್ವಾಂಸರಾದ ರಾಜಾ ಎಸ್. ಪವಮಾನಾಚಾರ್ಯರು, ಕಡಪ ರಾಘವೇಂದ್ರಾ-ಚಾರ್ಯರು, ಎನ್. ವಾದಿರಾಜಾಚಾರ್ಯರು, ಪುರಾಣಿಕ ಸುಬ್ರಹ್ಮಣ್ಯಾಚಾರ್ಯರು ಮತ್ತು ನಮ್ಮ ವಿದ್ಯಾಪೀಠದ ಅನೇಕ ವಿದ್ವಾಂಸರ ಸಹಯೋಗದೊಂದಿಗೆ ಸಂಪಾದಿಸಿದ್ದಾರೆ. ಇವರೆಲ್ಲರಿಗೂ ಹಾಗೂ ಅಂದವಾಗಿ ಮುದ್ರಿಸಿದ 'ಸುಧಾ ಮುದ್ರಣ'ದ ಮಾಲೀಕರಾದ ಧನಂಜಯ ವರಖೇಡಕರ್ ಇವರಿಗೂ, ಇದನ್ನು ಕೊಂಡು ಅಧ್ಯಯನವನ್ನು ಮಾಡುವ ಪ್ರತಿಯೊಬ್ಬರಿಗೂ ಸಕಲಸನ್ಮಂಗಳವನ್ನುಂಟು ಮಾಡಲೆಂದು ಅಸ್ಮದ್ಗುರ್ವಂತರ್ಗತ ಶ್ರೀರಾಘವೇಂದ್ರತೀರ್ಥ-ಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಪ್ರಾಸ್ತಾವಿಕ

ವಿಜಯ ಪರಂಪರೆ ಆರಂಭವಾದದ್ದೇ ಶ್ರೀಮಧ್ವಾಚಾರ್ಯರಿಂದ.

ಹಾಗಾಗಿ ಅದು ಮಧ್ವವಿಜಯ.

ಅದು ಸಜ್ಜನರಿಗೆ – ಸಾಧುಸಂತರಿಗೆ ಸಂತಸ ಕೊಡುವ ವಿಜಯವಾದ್ದರಿಂದ ಸುಮಧ್ವವಿಜಯವೂ ಹೌದು.

ಹದಿನಾರು ಸರ್ಗಗಳೂ ಸ್ವರ್ಗದ ಒಂದೊಂದೇ ಮೆಟ್ಟಿಲು.

ನೀವು ಗಮನಿಸಿರುತ್ತೀರಿ.

ಯತಿಗಳು – ಪೀಠಾಧೀಶ್ವರರು 108 – 1008 ಇಂತಹ ಸಂಖ್ಯೆಗಳನ್ನು ತಮ್ಮ ಹೆಸರಿನ ಮೊದಲು ಹಾಕಿಕೊಳ್ಳುತ್ತಾರೆ. ಸುಮಧ್ವವಿಜಯದ ಒಟ್ಟು ಶ್ಲೋಕಗಳು 1008. ಹೀಗಾಗಿ ಅದನ್ನು ತಮ್ಮ ಹೆಸರಿನ ಮೊದಲು ಜೋಡಿಸಿಕೊಂಡರೆ ತಾವು ಅಂದುಕೊಳ್ಳುವ ಕಾರ್ಯಗಳು ಜಯಪ್ರದವಾಗುತ್ತವೆ ಎಂಬ ನಂಬಿಕೆಯಿಂದ ಹಾಕಿಕೊಳ್ಳುತ್ತಾರೆ ಎಂದೆನಿಸುತ್ತದೆ.

ಸುಮಧ್ವವಿಜಯಕ್ಕೆ ಉಪಲಬ್ಧವಿರುವ ವ್ಯಾಖ್ಯಾನಗಳು ನಾಲಕ್ಕು. ಶ್ರೀಮಧ್ವಾಚಾರ್ಯರ ಪ್ರಮುಖ ಶಿಷ್ಯರು ನಾಲ್ವರು. (ಪದ್ಮನಾಭ-ನರಹರಿ-ಮಾಧವ-ಅಕ್ಷೋಭ್ಯತೀರ್ಥರು).

ಶ್ರೀ ರಾಯರ ಸೋದರಳಿಯಂದಿರಾದ ಆನಂದತೀರ್ಥಾಚಾರ್ಯರ ಸುಮಧ್ವವಿಜಯ ಮೇಲಿನ ವ್ಯಾಖ್ಯಾನ 'ಪದಾರ್ಥದೀಪಿಕಾ' ಮಾತ್ರ ಇನ್ನೂವರೆಗೂ ಮುದ್ರಣಪ್ರಪಂಚ ಕಂಡಿಲ್ಲ. ಚೆನ್ನೈನ O.R.I ನಲ್ಲಿ ಸಂರಕ್ಷಿಸಲ್ಪಟ್ಟಿದೆ.

ಸುಮಧ್ವವಿಜಯ 50ಕ್ಕೂ ಹೆಚ್ಚು ವ್ಯಕ್ತಿಗಳನ್ನು ಉಲ್ಲೇಖಿಸುತ್ತದೆ. 56ಕ್ಕೂ ಮಿಗಿಲಾದ ಸ್ಥಳಗಳನ್ನು ಪರಿಚಯಿ-ಸುತ್ತದೆ.

ಆಚಾರ್ಯರ ಅವತಾರ ಮೂರು.

ಸುಮಧ್ವವಿಜಯವು ಒಂದರ್ಥದಲ್ಲಿ 'ತ್ರಿವೇಣೀ ಸಂಗಮ'. ಇಲ್ಲಿ ಸಂಸ್ಕೃತವಿದೆ. ಭಾಷಾತಜ್ಞರಿಗೆ ಆಸಕ್ತಿ ತರುವ ಮೂರು ಭಾಷೆಗಳ ಕೊಡುವಿಕೆ ಇಲ್ಲಿದೆ. ಕವಿ ನಾರಾಯಣಪಂಡಿತಾಚಾರ್ಯರು ಈ ಕಾವ್ಯದಲ್ಲಿ ಹೇಳಿದ್ದು, ಕೇಳಿದ – ಅಂದಿನ ಕಥನವಲ್ಲ, ತಾವು ನೇರವಾಗಿ ಕಂಡ ಸಮಕಾಲೀನ ಗಣ್ಯ ವ್ಯಕ್ತಿಗಳಲ್ಲಿ ರಾರಾಜಿಸಿದ ಒಬ್ಬ ನಾಯಕ(Hero)ನ ಚಿತ್ರಣ. ಹೀಗಾಗಿ ಐತಿಹಾಸಿಕ ಮಹತ್ವವಿದೆ. ಇದು ಮುಂದೆ 'ರಾಘವೇಂದ್ರವಿಜಯ'ಕ್ಕೆ ಪ್ರೇರಣೆಯಾಯಿತು.

ಸುಮಧ್ವವಿಜಯವನ್ನು ಮುಖೋದ್ಗತವಾಗಿ ಸ್ವಚ್ಛವಾಗಿ – ಸುಂದರವಾಗಿ ಅನ್ನುವ ಸಾತ್ತ್ವಿಕರು ನಮಗೆ ಅಲ್ಲಲ್ಲಿ ಇಂದಿಗೂ ಕಾಣಸುತ್ತಾರೆ. ಪರಮಪೂಜ್ಯ 1008 ಶ್ರೀ ಸುವಿದ್ಯೇಂದ್ರತೀರ್ಥರು ಅಂತಹವರಲ್ಲಿ ಒಬ್ಬರು. ಅವರ ಅಸ್ಖಲಿತ ಸುಮಧ್ವವಿಜಯ ಪಾರಾಯಣ – ನಮಗೆ ಇವತ್ತಿಗೂ ರೋಮಾಂಚನ.

ಶ್ರೀಹರಿಯ ಬಗೆಗಿನ ಚಿಂತನೆಯನ್ನು – ಸಿದ್ಧಾಂತವನ್ನು ಪ್ರತಿಷ್ಠಾಪಿಸುವ ಸಂದರ್ಭದಲ್ಲಿ, ಆಚಾರ್ಯ ಮಧ್ವರು ಎದುರಿಸಿದ ವಿರೋಧಗಳು – ದೈಹಿಕ ಹೋರಾಟಗಳು ಅಸಂಖ್ಯಾತ. ಆದರೆ ಅದನ್ನು ಸುಲಲಿತವಾಗಿ ಮಂಡಿಸಿದ ರೀತಿ – ''ನ ಚ ಮಧ್ವಸಮೋ ಗುರುಃ'' ।

'ಸರ್ವಮೂಲ' ಅದೊಂದು ಮಹಾನ್ ಆಧ್ಯಾತ್ಮ ಆಗಸದ ಪ್ರಮುಖ ವೆಬ್‌ಸೈಟ್. ಆದರೆ ಅದನ್ನು ನೋಡಬೇಕಾದರೆ 'ಸುಮಧ್ವವಿಜಯ'ವೆಂಬ ಪಾಸ್‌ವರ್ಡ್ ಬೇಕೇಬೇಕು.

ಕವಿ ಡಾ. ಪ್ರದೀಪ್ ಕುಮಾರ್ ಹೆಬ್ರಿ ಬಹಳ ಸೊಗಸಾಗಿ ಕನ್ನಡದ 'ಮಧ್ವಾಚಾರ್ಯ'ರನ್ನು ಚಿತ್ರಿಸಿದ್ದಾರೆ.

ಕನ್ನಡದ ಧೀಮಂತ ಕರುನಾಡ ಹೇಮಂತ
ಕಡಲ ತೀರದ ಪರುಷ ಆಚಾರ್ಯ ಮಧ್ವ ।
ಕನ್ನಡಕೆ ಕೃಷ್ಣವನು ಕಾಯಕಕೆ ತತ್ತ್ವವನು
ತಂದು ಇರಿಸಿದೆ ನೀನು ಬದುಕು ಪೂರ್ಣತೆಗೆ ।।

## ಸುಮಧ್ವವಿಜಯ ಮತ್ತು ಕನ್ನಡ

ಮೂಲ ಸಂಸ್ಕೃತದಲ್ಲಿದ್ದ ಅದನ್ನು ಕನ್ನಡ ಭಾಷೆಯಲ್ಲಿ ತಂದವರು ಅನೇಕರು.

ಕೆ. ತಿಮ್ಮಣ್ಣಾಚಾರ್ 'ಶ್ರೀಸುಮಧ್ವವಿಜಯ ಮಹಾಕಾವ್ಯ - ಸಂದರ್ಶನ' (1961) ದಲ್ಲಿ ಇಡೀ ಕಾವ್ಯವನ್ನು ಸಿಂಹಾವಲೋಕನ ಮಾಡಿದ್ದಾರೆ. ವಿಮರ್ಶಕರ ಅಚ್ಚುಮೆಚ್ಚಿನ ಕೃತಿ - ಮಂಡ್ಯ ನಗರದ ಡಾ. ಪ್ರದೀಪ್‌ಕುಮಾರ್ ಹೆಬ್ರಿಯವರು ಸುಮಾರು ನಾಲ್ಕು ಸಾವಿರ ಪದ್ಯಗಳನ್ನು ಮೀರಿದ ಕನ್ನಡದ ಸರಳ ಛಂದಸ್ಸಿನ ಬೃಹತ್ ಕಾವ್ಯ ರಚಿಸಿದ್ದಾರೆ. ಒಂದು ರೀತಿಯಲ್ಲಿ ಕನ್ನಡದ ಮಧ್ವವಿಜಯ.

ಬೆಂಗಳೂರು ಸಂಸ್ಕೃತ ಕಾಲೇಜಿನ ಕೆ. ನರಸಿಂಹಾಚಾರ್ಯರು ಇಡೀ 16 ಸರ್ಗವನ್ನು ಅನ್ವಯ-ಅರ್ಥ-ತಾತ್ಪರ್ಯಸಹಿತ 1967ರಲ್ಲಿ ಅನುವಾದಿಸಿದ್ದು ಓದುಗರಿಗೆ ಉಪಯುಕ್ತ ಕೃತಿಯಾಯಿತು. ಪಂಡಿತ ಶ್ರೀನಿವಾಸ. ಸು. ಮಠದ ಇವರು ಚಿಕ್ಕದಾದರೂ ಚೊಕ್ಕದಾದ 'ಶ್ರೀಸುಮಧ್ವವಿಜಯ ಮಹಾಕಾವ್ಯ ಚಿಂತನ-ಮಂಥನ' ವೆಂಬ ಕೃತಿಯ ಮೂಲಕ ಜನಸಾಮಾನ್ಯರಿಗೆ ಸರಳವಾಗಿ ಅರ್ಥವಾಗುವಂತೆ ಸಹಾಯ ಮಾಡಿದ್ದಾರೆ. (2007)

ಉಡುಪಿಯಿಂದ 1932ರಲ್ಲೇ ಬಂದ 'ಸುಖಬೋಧಿನೀ' ಎಂಬ ಕನ್ನಡ ಟೀಕಾ ಸಹಿತ ಸುಮಧ್ವ ವಿಜಯದ ರಚನೆಕಾರರು ಬಿ. ಶ್ರೀನಿವಾಸಭಟ್ಟರು. ಪಾವಂಜೆ ಗುರುರಾವ್ ಇವರಿಂದ ಪ್ರಕಾಶಿತ.

1977 ರಲ್ಲಿ ಜೆ. ಹೆಚ್. ಬಿ. ಆಚಾರ್ಯರವರು ಸುಮಧ್ವವಿಜಯ(ವಚನಕಾವ್ಯ)ವನ್ನು ಅನುವಾದಿಸಿ ಕನ್ನಡದ ಸೇವೆ ಸಲ್ಲಿಸಿದರು.

ಧಾರವಾಡ ನಗರದ ಶ್ರೀಮಾಧ್ವ ವಿದ್ಯಾಪೀಠದ ಪಂಡಿತ ತೆರಗುಂಡಿ ಶ್ರೀ ಗೋಪಾಲಕೃಷ್ಣಾಚಾರ್ಯರು 1967ರಲ್ಲಿ ಸಂಪೂರ್ಣ ಸುಮಧ್ವವಿಜಯವನ್ನು ಭಾವಾರ್ಥ, ಅನ್ವಯಾರ್ಥ ಮಾಡಿದ್ದರ ಜೊತೆಜೊತೆಯಾಗಿ ಅದ್ಭುತವಾಗಿ ಭಾಮಿನೀ ಷಟ್ಪದಿಯಲ್ಲಿ ಕನ್ನಡೀಕರಿಸಿ ಕನ್ನಡಿಗರು ಸವಿಯುವಂತೆ ಮಾಡಿದ್ದಾರೆ.

ಸೀತಾಪತಿ ಅಗ್ರಹಾರ ಬೆಂಗಳೂರಿನ ಶ್ರೀಹರಿಸರ್ವೋತ್ತಮ - ಶ್ರೀವಾಯುಜೀವೋತ್ತಮ ಪ್ರಕಾಶನದಿಂದ ಆದ್ಯಂತ ಶ್ಲೋಕ - ಪ್ರತಿ ಸರ್ಗದ ತಾತ್ಪರ್ಯದೊಡನೆ (16 ಸರ್ಗದ್ದು) ಮುದ್ರಿತವಾಗಿದೆ. ಇದೊಂದು ರೀತಿಯಲ್ಲಿ ಕಾವ್ಯದ ಕಥಾಸಾರ.

ಜನಪ್ರಿಯ ಮತ್ತೊಂದು ಕನ್ನಡ ಅನುವಾದವೆಂದರೆ ಅದು ಮಹಾಮಹೋಪಾಧ್ಯಾಯ, ಮಧ್ವರತ್ನಾಕರರೆಂಬ ಬಿರುದು ಗಳಿಸಿದವರೂ ಸಾತ್ತ್ವಿಕರು, ಶಾಂತರೂ ಆದ ದಿ।। ಆಚಾರ್ಯ ಸಾಣೂರು ಭೀಮಭಟ್ಟರದ್ದು. ಈಗಾಗಲೆ ಜನಪ್ರಿಯ ನಾಲ್ಕು ಮುದ್ರಣಗಳಾಗಿವೆ. ಅದರಲ್ಲಿ ಕ್ರಮವಾಗಿ ಮೂಲ-ಅನ್ವಯ-ಅರ್ಥ-ವ್ಯಾಕರಣವಿಶೇಷ - ಅವತಾರಿಕೆಗಳಿದ್ದು ಅಧ್ಯಯನಶೀಲರಿಗೆ - ಆಸಕ್ತರಿಗೆ ಅತ್ಯಂತ ಉಪಯೋಗವಾಗುವಂತೆ 'ಸಿದ್ಧ ಅಡಿಗೆ'ಯನ್ನು ಮಾಡಿಕೊಟ್ಟಿದ್ದಾರೆ. (ಮೊದಲನೆ ಮುದ್ರಣ 1985).

ದಾಸಸಾಹಿತ್ಯರಂಗದ ಭೀಷ್ಮಾಚಾರ್ಯರಾದ ಲಿಂಗಸ್ಗೂರಿನ ಹನುಮಂತರಾವ್ ವೆಂಕಟರಾವ್ ಕುಲಕರ್ಣಿಯವರು 1936ರಲ್ಲಿಯೇ ಅದ್ಭುತವಾಗಿ ಕನ್ನಡಕ್ಕೆ 'ಸುಮಧ್ವವಿಜಯ'ವನ್ನು ತಂದರು. ಪ್ರತಿಯೊಂದು ಶ್ಲೋಕಕ್ಕೂ ವಾರ್ಧಿಕ ಶೈಲಿಯಲ್ಲಿ ಕನ್ನಡಕ್ಕೆ ತರುವುದು ಸುಲಭದ ಕೆಲಸವಲ್ಲ.

ಇದನ್ನು ಗಮನಿಸಿ ಸುಮಧ್ವವಿಜಯದಲ್ಲಿನ ಹೀಗೊಂದು ಪ್ರಸಂಗ.

ಶ್ರೀ ಸರ್ವಜ್ಞರು ಶಂಖಪೂರಿತ ವಾರಿಯಿಂದ, ಶಾಲಿಗ್ರಾಮಶಿಲೆಗಳಿಗೆ ಅಭಿಷೇಕ ಮಾಡಿ ನಿರ್ಮಾಲ್ಯತೀರ್ಥ ಪ್ರಾಶನ ಮಾಡಿದ ಕ್ರಮವನ್ನು ನಾರಾಯಣಪಂಡಿತಾಚಾರ್ಯರು ಹೇಳಿದ್ದು ಹೀಗಷ್ಟೆ.

ಅಭಿದಧತಿ ಮುನೀಂದ್ರಾ ದ್ವಾದಶಾಬ್ದೋಪವಾಸ-
ಪ್ರತಿಮಫಲಮಲಂ ಯತ್ಸೇವನಂ ಭಕ್ತಿಯುಕ್ತಮ್ ।
ಅಧಿಕಮಮರನದ್ಯಾದ್ಯಾಪ್ಲವಾದನ್ಯಮಾನ್ಯಾ-
ದಪಿಬದಲವಬೋಧೋ ವಿಷ್ಣುಪಾದೋದಕಂ ತತ್ ॥ *(16ನೇ ಸರ್ಗ - 29 ಶ್ಲೋಕ)*

ಇದನ್ನು ಸುಂದರ ವಿಠಲಾಂಕಿತರಾದ ಶ್ರೀ ಗೋರೆಬಾಳ-ಹನುಮಂತರಾಯರು ಕನ್ನಡದ ಕನ್ನಡಿಯಲ್ಲಿ ತೋರಿಸಿದ್ದು ಹೀಗೆ—

ವಾರ್ಧಿಕ ॥ ಮುನಿವರರು ಅತಿ ಭಕುತಿಯಿಂ ಯಾವ ಶ್ರೀವಿಷ್ಣು-
ವಿನ ಸುಪಾದೋದಕಂ ಶಾಲಗ್ರಾಮದ ತೀರ್ಥ-
ವನು ಪ್ರಾಶನಂ ಮಾಡೆ ವಿಧಿವತ್ತು ಹನ್ನೆರಡು ವರ್ಷ ಉಪವಾಸ ಗೈದ ॥

ಅನಶನಂ ವ್ರತಫಲಕೆ ಸರಿ ಧನ್ಯಮಾನ್ಯರಿಂ-
ದನಿತೆ ಗಂಗಾದ್ಯೆಲ್ಲ ತೀರ್ಥ ಮಜ್ಜನದಧಿಕ ।
ಘನಫಲವಿದೆಂದು ಪೇಳುವರಿಂಥ ಮಹಾ ಮಹಿಮೆಯಾ ತೀರ್ಥಪಾನ ಮಾಡ್ದರ್ ॥

ಇಂತಹ ಕನ್ನಡ ಅನುವಾದ ಈಗೆಲ್ಲಿ ಸಾಧ್ಯ. ಇದ್ದರೂ ಓದುವವರು ಯಾರು ?

ಗದಗಿನ ಪ್ರಖ್ಯಾತ ಪ್ರಕಾಶನ ಶ್ರೀನಿವಾಸಾಚಾರ್ಯ ಹೊಂಬಾಳಿಯವರು 1982ರಲ್ಲಿ ಮತ್ತೊಮ್ಮೆ ಕೋಟೇಶ್ವರ ನರಸಿಂಹಾಚಾರ್ಯರ ಕನ್ನಡ ಅನುವಾದವನ್ನು ಪ್ರಕಟಿಸಿದರು.

ಮೂಲ ಸಂಸ್ಕೃತದಲ್ಲಿನ ಹಸ್ತಪ್ರತಿಯಲ್ಲೇ ಉಳಿದು ಹೋಗಿದ್ದ ಶ್ರೀಸುಮಧ್ವವಿಜಯದ ವ್ಯಾಖ್ಯಾನ 'ಶುಭಾಭರಣಂ' ಶ್ರೀವಾರಿ ಅನಂತಾಚಾರ್ಯಸುತ ವಿದ್ವನ್ಮಣಿ ಬಾಲಶರ್ಮ ಅವರು ರಚಿಸಿದ್ದು ಅದನ್ನು ಬೆಳಕಿಗೆ ತಂದಿದ್ದೇ ಅಲ್ಲದೇ ಅನುವಾದ ಮಾಡಿದವರು ವಿದ್ವಾನ್ ಅಯಾಚಿತ ಧೀರೇಂದ್ರಾಚಾರ್ಯರು. 2007ರಲ್ಲಿ ಇದು ಪ್ರಕಟಗೊಂಡಿದೆ. ಇದರ ವಿಶೇಷವೇನೆಂದರೆ ಬಾಲಶರ್ಮರು, ಶ್ರೀಸುಮಧ್ವವಿಜಯದ 1008 ಶ್ಲೋಕಗಳಿಂದ 108 ಶ್ಲೋಕಗಳನ್ನೇ ಆರಿಸಿ ಸಂಸ್ಕೃತದಲ್ಲಿ ವ್ಯಾಖ್ಯಾನ ಮಾಡಿರುವುದು. ಕನ್ನಡ ಅನುವಾದ ಕೂಡ ಅಷ್ಟೇ ವಿದ್ವತ್‌ಪೂರ್ಣವಾಗಿ ಬಂದಿದೆ.

'ಶ್ರೀರಾಘವೇಂದ್ರಾನುಗ್ರಹ' ಪ್ರಶಸ್ತಿ ವಿಜೇತ - ಬನ್ನಂಜೆ ಗೋವಿಂದಾಚಾರ್ಯರು ಶ್ರೀ ವೇದಾಂಗತೀರ್ಥರ ಟೀಕಾನುಸಾರಿಯಾದ ಶ್ರೀಮಧ್ವವಿಜಯವನ್ನು ಕನ್ನಡಕ್ಕೆ ತಂದು ಹೊಸ ಅನುಭವ ತಂದು ಕೊಟ್ಟಿದ್ದಾರೆ (2005).

*ಕೆಲವು ಆಂಗ್ಲ ಪ್ರಕಟನೆಗಳು*

1. **Sumadhva Vijaya** — Edited with Translation and Notes by D. R. Vasudeva Rao., 1983. Srimadananda Tīrtha Publications, Vishakhapatnam.
2. **Sumadhva Vijaya** of Narayana Panditacharya — Rendered into English with text by Prof. G. V. Nadagauda. 1991.
3. **Sri Madhva Vijaya** — (A Gist in English) By 16 Eminent scholars. 1969. Devaranama Bhajana Sangam. Tamilnadu. (Introduction by Dr. B.N.K. Sharma)
4. **Sri Sumadhva Vijaya — Sarasangraha** Tamil and English. Dr. C.B.H. Rao. 1974. Srirangam.

*ಸಂಸ್ಕೃತದಲ್ಲಿರುವ 'ಸುಮಧ್ವವಿಜಯ' ಪ್ರಕಾಶನಗಳು*

1. श्रीसुमध्वविजयः — श्रीविश्वपतितीर्थविरचित पदार्थदीपिकासमेता यम्. नारायणाचार्यः, 1951. Udupi (With B.N.K. introduction)

२. श्रीसुमध्वविजयः — छलारी शेषाचार्य व्याख्यानसमेता 1952. श्रीरामकृष्ण द्वैतवेदान्त पाठशाला

३. सुमध्वविजयः — श्रीनारायणपंडिताचार्य-श्रीविश्वपतितीर्थ-श्रीछलारी शेषाचार्य (इति व्याख्यानत्रयोपेता) Edited by A. B. Shyamachar and S. R. Pandurangi. 2000.

४. श्रीसुमध्वविजयः (छलारी व्याख्यानसमेता) — निर्णयसागर मुद्रणालय, मुंबई. 1943.

५. श्रीसुमध्वविजयः — वेदांगतीर्थकृतपदार्थदीपिकया, आचार्यगोविंदकृतया तत्त्वचन्द्रिकया च संवलितः. 2003. Udupi

६. "श्रीसुमध्वविजयसारसङ्ग्रहभूत श्रीशुभाभरणम्" — श्री पुरी अनंताचार्यतनुजेन श्री बालाशर्मणा रचितं व्याख्यानम् - अनु० विद्वान् अयाचित धीरेंद्राचार्य चिंतामणि - 2007

### ಸುಮಧ್ವ ವಿಜಯದ 'ಕನ್ನಡ ಪ್ರಕಟನೆ'ಗಳು

1. ಶ್ರೀಮಧ್ವವಿಜಯ ಸಾರಸಂಗ್ರಹಃ - ಲಿಪಿ ಸಂಸ್ಕೃತ, ಭಾಷೆ ಕನ್ನಡ. ನಾಯಕಲ್ ತಿರುಮಲರಾವ್ ವಕೀಲ್ ಹೈಕೋರ್ಟ್, ಹೈದ್ರಾಬಾದ್ 1933.
2. ಶ್ರೀಮನ್ಮಧ್ವವಿಜಯ ಕಥಾಮೃತಂ - ಸಿ. ಎಮ್. ಪದ್ಮನಾಭಾಚಾರ್ಯ ವಿರಚಿತ - 1991, ಸಂ॥ ತಾಮ್ರಪರ್ಣಿ ಶ್ರೀನಿವಾಸಾಚಾರ್ಯ, ಬೆಂಗಳೂರು.
3. ಶ್ರೀಮನ್ಮಧ್ವಚರಿತಮಾನಸ - (ಶ್ರೀಸುಮಧ್ವವಿಜಯದ ಗದ್ಯಾನುವಾದ) ಮೈ. ಶೇ. - ಅನಂತಪದ್ಮನಾಭರಾವ್, ಬೆಂಗಳೂರು.
4. ಶ್ರೀಸುಮಧ್ವವಿಜಯ ಸಾರಸಂಗ್ರಹ - ಶ್ರೀವಿದ್ಯಾರತ್ನಾಕರತೀರ್ಥ ಶ್ರೀಪಾದಂಗಳವರಿಂದ ರಚಿತ - ಕನ್ನಡ ಅನುವಾದ ಶ್ರೀಗುರುವೇಂಕಟಾಚಾರ್ಯರು. ಬೆಂಗಳೂರು. 1992.
5. ಶ್ರೀಮತ್ಸುಮಧ್ವವಿಜಯವು - ಪ್ರತಿಸರ್ಗದ ಕನ್ನಡ ತಾತ್ಪರ್ಯ ಸಹಿತ. 1927. Udupi ಪಾವಂಜೆ ಗುರುರಾವ್ (ಪ್ರ).

### 'ಸುಮಧ್ವ ವಿಜಯ'ದ ವ್ಯಾಖ್ಯಾನಗಳು *(ಸಂಸ್ಕೃತದಲ್ಲಿದೆ)*

1. ನಾರಾಯಣಪಂಡಿತಾಚಾರ್ಯರು - ಭಾವಪ್ರಕಾಶಿಕಾ (ಭಾವದೀಪ)
2. ವೇದಾಂಗತೀರ್ಥರು - ಪದಾರ್ಥದೀಪಿಕಾ
3. ವಿಶ್ವಪತಿತೀರ್ಥರು - ಪದಾರ್ಥದೀಪಿಕಾ ಉದ್ಬೋಧಿಕಾ
4. ಛಲಾರಿ ನರಸಿಂಹಾಚಾರ್ಯರು - ಮಂದೋಪಕಾರಿಣೀ
5. ಛಲಾರಿ ಶೇಷಾಚಾರ್ಯರು - ಪ್ರಕಾಶಿಕಾ
6. ಆನಂದತೀರ್ಥಾಚಾರ್ಯರು - ಮಂದೋಪಕಾರಿಣೀ
7. ಮುದ್ಗಲ ಆನಂದತೀರ್ಥಾಚಾರ್ಯ
8. ಲಿಂಗೇರಿ ವ್ಯಾಸಾಚಾರ್ಯರು
9. ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು

(7–9) ಇವರೆಲ್ಲರೂ ವ್ಯಾಖ್ಯಾನ ರಚಿಸಿರುತ್ತಾರೆ.

### 'ಸುಮಧ್ವ ವಿಜಯ'ಕ್ಕೆ ಸಂಬಂಧಿಸಿದ ಕೃತಿಗಳು *(ಸಂಸ್ಕೃತದಲ್ಲಿವೆ)*

1. ಅಣುಮಧ್ವವಿಜಯ: (ಪ್ರಮೇಯನವಮಾಲಿಕಾ) - ಶ್ರೀನಾರಾಯಣಪಂಡಿತಾಚಾರ್ಯರು.
2. ಗೂಢಭಾವಪ್ರಕಾಶಿಕಾ - ಶ್ರೀರಾಘವೇಂದ್ರತೀರ್ಥರು
3. ವೇದಾಂಗತೀರ್ಥರು
4. ಸತ್ಯವ್ರತ ತೀರ್ಥರು
5. ರಘುವರ್ಯರು
6. ಛಲಾರೀ ಶ್ರೀನಿವಾಸಾಚಾರ್ಯರು

(3–6) ಇವರು ಕೂಡ ಅಣುಮಧ್ವವಿಜಯಕ್ಕೆ ವ್ಯಾಖ್ಯಾನ ರಚಿಸಿರುತ್ತಾರೆ.

7. ಭಗವಂತರಾಯರು - ಸುಮಧ್ವವಿಜಯ ವ್ಯಾಖ್ಯಾನ ಸಂಗ್ರಹ

8. ವಿದ್ಯಾರತ್ನಾಕರತೀರ್ಥರು – ಸುಮಧ್ವವಿಜಯಸಾರಸಂಗ್ರಹ
9. ಭಾಗವತ ಶ್ಯಾಮಾಚಾರ್ಯರು – ಶ್ರೀಮನ್ಮಧ್ವಕಥಾಸುದರ್ಪಣಂ
10. ಏರಿ ಬಾಳಾಚಾರ್ಯರು – ಶ್ರೀಮನ್ಮಧ್ವವಿಜಯ – ಶುಭಾಭರಣ
11. ಮಾದನೂರು ವಿಷ್ಣುತೀರ್ಥರು – ಸುಮಧ್ವವಿಜಯ – ಪ್ರಮೇಯಫಲಮಾಲಿಕಾ
12. ಬಿದರಳ್ಳಿ ಶ್ರೀನಿವಾಸಾಚಾರ್ಯರು – ಶ್ರೀಮಧ್ವನಾಮಾವಲಿಃ

ಪ್ರಸ್ತುತ ಮಂತ್ರಾಲಯದ ಶ್ರೀಮಠದಿಂದ 'ಸುಮಧ್ವವಿಜಯ'ದ ಕನ್ನಡ ಅನುವಾದ ಹೊರಗೆ ಬರುತ್ತಿದೆ. ಇದು ಈ ಹಿಂದೆ ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯಲ್ಲಿ ಧಾರಾವಾಹಿಯಾಗಿ ಹರಿದು ವಿದ್ವಾಂಸರ – ವಿದ್ಯಾರ್ಥಿಗಳ ಮನಸೂರೆಗೊಂಡಿತ್ತು. ಇಷ್ಟೊಂದು ವಿಸ್ತೃತವಾಗಿ ಕನ್ನಡದಲ್ಲಿ ಇಂತಹ ಪುಸ್ತಕ ಹೊರಬಂದಿಲ್ಲವೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಏಕೆಂದರೆ ಇದು ಜನಸಾಮಾನ್ಯರಿಗೂ ಅಚ್ಚು-ಮೆಚ್ಚು. ವಿದ್ವಾಂಸನಿಗೂ ಬೆಲ್ಲದ ಅಚ್ಚು. ಓತ-ಪ್ರೋತವಾಗಿ ಸಾಗಿದ ಶಬ್ದಸಾಗರವದು. ಕನ್ನಡ ಭಾಷೆಯಲ್ಲಿ ಕನ್ನಡದ ನಾಯಕ ಮಧ್ವಾಚಾರ್ಯರ ಚಿತ್ರಣ ಕೊಟ್ಟ ಕಾವ್ಯವದು. ದಿವಂಗತ ಪಣಿಯಾಡಿ, ಪಂಚಾಂಗಂ ಶ್ರೀ ಲಕ್ಷ್ಮೀನಾರಾಯಣ ಉಪಾಧ್ಯಾಯರು (ಪಿ. ಪಿ. ಲಕ್ಷ್ಮೀ-ನಾರಾಯಣ ಉಪಾಧ್ಯಾಯ), ಶ್ರೀ ಮಾಗಡಿ ರಂಗನಾಥಾಚಾರ್ಯರು, ಮತ್ತು ಶ್ರೀ ಎಸ್. ವಿ. ಭೀಮಭಟ್ಟರು ಶ್ರದ್ಧಾ-ಭಕ್ತಿಯಿಂದ ಹೆಣೆದ ವೈಭವದ ಕೃತಿಯಿದು. 'ಶ್ರೀಗುರುಸಾರ್ವಭೌಮ' ಮಾಸಪತ್ರಿಕೆಯಲ್ಲಿ ಆಗಸ್ಟ್ 1978ರಲ್ಲಿ ಧಾರಾವಾಹಿಯಾಗಿ ಆರಂಭವಾಯಿತು. ಡಿಸೆಂಬರ್ 1986 ರಲ್ಲಿ ಪೂರ್ಣವಾಯಿತು.

ಆಶ್ಚರ್ಯವೆಂದರೆ ಅದೇ ತಿಂಗಳಲ್ಲಿ ಅಂದರೆ ದಿನಾಂಕ 11.8.1978ರಲ್ಲಿ ಭಾರತದ ಅಂದಿನ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿಯವರು ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರಿಗೆ 'ರಾಷ್ಟ್ರಪ್ರಶಸ್ತಿ'ಯನ್ನು ಕೊಟ್ಟು ಗೌರವಿಸಿದರು. ಅದಕ್ಕೆ ನಾನು ಮೊದಲು ಹೇಳಿದ್ದು 'ಸುಮಧ್ವವಿಜಯ'ದ ಆರಂಭ 'ವಿಜಯದ ಆರಂಭ'. ಸರಳ ಶೈಲಿ, ಗಂಭೀರ ಭಾಷೆ ವಿಶೇಷಾಂಶಗಳ ಖಜಾನೆ ಇಲ್ಲಿದೆ.

ಕರ್ನಾಟಕದ ಎಲ್ಲ ವಿದ್ಯಾಪೀಠಗಳಲ್ಲಿ ವಿಶೇಷವಾಗಿ ಸಂಸ್ಕೃತ ವೈಷ್ಣವ ವಿದ್ಯಾಪೀಠಗಳಲ್ಲಿ ಪಠ್ಯವಾಗಿ ಅಂಗೀ-ಕರಿಸಬೇಕಾದ – ಅಂಗೀಕರಿಸಬಹುದಾದ ಅನುವಾದ ಇದಾಗಿದೆ.

'ಪತ್ರಿಕೆ'ಯಿಂದ 'ಪುಸ್ತಕ'ಕ್ಕೆ ವಿದ್ವಾನ್ ಧನಂಜಯಾಚಾರ್ಯ ವರಖೇಡಕರ್ ಅಂದವಾಗಿ ರೂಪಾಂತರ ಮಾಡಿ ಕೊಟ್ಟಿದ್ದಾರೆ. ಮಸ್ತಕದಲ್ಲಿಟ್ಟುಕೊಳ್ಳಬಹುದಾದ 'ಅಂಬರಚುಂಬಿತ'ವಿದು. ಈ ಕೃಷಿ ನಿರಂತರವಾಗಿರಲಿ.

ಭಾಟ್ಟಸಂಗ್ರಹದ ಮರುಮುದ್ರಣ, ಗೀತೆಯ 15 ವ್ಯಾಖ್ಯಾನಗಳ ಪ್ರಕಾಶನ, ಶ್ರೀಮನ್ನ್ಯಾಯಸುಧೆಯ 16 ರಿಂದ 22ರ ಬೃಹತ್ ಸಂಪುಟಗಳು, ಶ್ರೀರಾಘವೇಂದ್ರವಿಜಯದ ವಿಸ್ತೃತ ವ್ಯಾಖ್ಯಾನಗಳು ಮುಂತಾದ ಗ್ರಂಥಗಳನ್ನು ಹೊರತಂದ ಕೀರ್ತಿ ಶ್ರೀ ಶ್ರೀಸುಶಮೀಂದ್ರತೀರ್ಥರ ವರಕುಮಾರಕರಾದ ಪರಮಪೂಜ್ಯ ಶ್ರೀ ಶ್ರೀ ಸುಯತೀಂದ್ರ-ತೀರ್ಥರಿಗೆ ಸಲ್ಲುತ್ತದೆ. ಭಕ್ತವೃಂದ ಈ 'ಯತಿಶಿರೋಮಣಿ'ಗಳಿಗೆ ಆಜನ್ಮ ಪರ್ಯಂತ ಋಣಿಯಾಗಿರುತ್ತದೆ. ವಿಷ್ಣುವಿನ ಹೃದಯವಾದ ವೈಷ್ಣವರು ಇದನ್ನು ಯಾವಾಗಲೂ ಧರಿಸಲಿ. ಇದರಿಂದ ಇಲ್ಲಿ ಮತ್ತು ಅಲ್ಲಿ ಎರಡರಲ್ಲೂ ಸುಖವುಂಟು.

*''ಮಧ್ವಸ್ಯ ಕೀರ್ತಿರ್ದಿನನಾಥದೀಪ್ತಿಮ್ ॥''*.

ಸಜ್ಜನರ ಕಿಂಕರ

**ರಾಜಾ ಎಸ್. ರಾಜಗೋಪಾಲಾಚಾರ್ಯ**

*ಶ್ರೀಶ್ರೀಗಳವರ ಆಪ್ತಕಾರ್ಯದರ್ಶಿ*

**ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ**

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಮುನ್ನುಡಿ

ಕರಾಳ ಕಲಿಯುಗದ ಪ್ರಭಾವದಿಂದ ಸಜ್ಜನರು ಕಂಗೆಟ್ಟು ಧರ್ಮಮಾರ್ಗದಿಂದ ಚ್ಯುತರಾಗಲು ಸಜ್ಜನರ ಮೇಲಿನ ಕೃಪೆಯಿಂದ ಬ್ರಹ್ಮಾದಿದೇವತೆಗಳು ಭಗವಂತನನ್ನು ಜಗತ್ಕಲ್ಯಾಣಕ್ಕಾಗಿ ಪ್ರಾರ್ಥಿಸಿದರು. ಮೂರು ಯುಗಗಳಲ್ಲಿ ಮಾತ್ರ ಅವತಾರವುಳ್ಳ ಭಗವಂತನು ಬ್ರಹ್ಮನಿಗೆ ಭೂಲೋಕದಲ್ಲಿ ಅವತಾರವಿಲ್ಲದ್ದನ್ನು ಮನಗಂಡು ಜೀವೋತ್ತಮರಾದ ವಾಯುದೇವರಿಗೆ ಅವತರಿಸಲು ಸೂಚನೆಯನ್ನಿತ್ತರು.

ಭಗವದಾಜ್ಞೆಯನ್ನು ಶಿರಸಾವಹಿಸಿ ವಾಯುದೇವರು ಮಧ್ಯಗೇಹಭಟ್ಟದಂಪತಿಗಳಲ್ಲಿ ವಿಜಯದಶಮಿಯ ಶುಭದಿನದಂದು ಅವತರಿಸಿ ತಂದೆತಾಯಿಗಳಿಂದ ಇಡಲ್ಪಟ್ಟ ವಾಸುದೇವನೆಂಬನಾಮಕರಣದಿಂದ ಪ್ರಸಿದ್ಧರಾದರು. ಬಾಲ್ಯದಲ್ಲೇ ಅನನ್ಯಾದೃಶಮಹಿಮೆಗಳನ್ನು ತೋರಿಸುತ್ತಾ ನಾನು ಜ್ಞಾನಕ್ಕಾಗಿ ಅವತರಿಸಿದ ಅಸುದೇವ = ಪ್ರಾಣದೇವರು ಎಂಬುದನ್ನು ಅಭಿವ್ಯಕ್ತಗೊಳಿಸಿದರು.

ಕಾಲಕ್ಕೆ ಅನುಗುಣವಾಗಿ ವೇದೋಕ್ತ ಸಂಸ್ಕಾರಗಳಿಂದ ಸುಸಂಸ್ಕೃತರಾದ ಇವರು ಉಪನಯನವಾದ ಅನಂತರದಲ್ಲಿ ಅಚ್ಯುತಪ್ರೇಕ್ಷಾಚಾರ್ಯರಿಂದ ಪೂರ್ಣಬೋಧ ಎಂಬ ನಾಮದೊಂದಿಗೆ ತುರ್ಯಾಶ್ರಮವನ್ನು ಸ್ವೀಕರಿಸಿದರು. ಹಂಸ-ನಾಮಕ ಪರಮಾತ್ಮನ ದಿವ್ಯಪೀಠದಲ್ಲಿ ಇವರನ್ನು ಕೂಡಿಸಿ ಅಚ್ಯುತಪ್ರೇಕ್ಷರು ಆನಂದತೀರ್ಥರೆಂಬ ಅನ್ವರ್ಥನಾಮ-ವನ್ನಿತ್ತರು. ಭಗವಂತನ ಆದೇಶದಂತೆ ಸೂತ್ರಭಾಷ್ಯವನ್ನು ರಚಿಸಿ ಅವರನ್ನು ಸಂತೋಷಪಡಿಸಿದರು. ಸಮಸ್ತ ಭಾರತ-ದೇಶವನ್ನು ಸಂಚರಿಸಿ ಆ ಕಾಲದಲ್ಲಿದ್ದ ಇಪ್ಪತ್ತೊಂದು ದುರ್ಮತಗಳನ್ನು ಖಂಡಿಸಿ ಸಿದ್ಧಾಂತಸ್ಥಾಪನೆಯನ್ನು ಮಾಡಿದರು. ಉಪನಿಷತ್ಪ್ರಸ್ಥಾನ, ಸೂತ್ರಪ್ರಸ್ಥಾನ, ಗೀತಾಪ್ರಸ್ಥಾನ, ಪುರಾಣಪ್ರಸ್ಥಾನ ಹೀಗೆ ಹಲವು ವಿಷಯಗಳನ್ನಾಧರಿಸಿ ಮೂವತ್ತೇಳು ಗ್ರಂಥಗಳನ್ನು ರಚನೆ ಮಾಡಿದರು.

ತ್ರಿವಿಕ್ರಮಪಂಡಿತರನ್ನು, ಶೋಭನಭಟ್ಟರನ್ನು ವಾದದಲ್ಲಿ ಗೆದ್ದು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಹೀಗೆ ತಾವು ಸಂಚರಿಸಿದ ಕಾಲದಲ್ಲಿ ಅನೇಕ ಪವಾಡಗಳನ್ನು ತೋರಿಸುವುದರ ಮೂಲಕ ಸಜ್ಜನರನ್ನು ಉದ್ಧಾರಮಾಡಿದರು.

ತಮ್ಮ ಈ ತತ್ತ್ವಜ್ಞಾನದ ಸಂಪ್ರದಾಯದ ಪದ್ಧತಿಯು ಮುಂದುವರಿಯಲು ಪದ್ಮನಾಭತೀರ್ಥರನ್ನು ತಮ್ಮ ಪ್ರಥಮ ಸಂನ್ಯಾಸಿಶಿಷ್ಯರನ್ನಾಗಿ ಸ್ವೀಕರಿಸಿ ಒಂದು ಪೀಠವನ್ನು ಸ್ಥಾಪನೆ ಮಾಡಿದರು. ಉಡುಪಿಯ ಪ್ರಾಂತ್ಯಕ್ಕೆ ಎಂಟು ಜನರನ್ನು ಸಂನ್ಯಾಸಿಶಿಷ್ಯರನ್ನಾಗಿ ಸ್ವೀಕರಿಸಿ ತಾವೇ ಪ್ರತಿಷ್ಠಾಪಿಸಿದ ಶ್ರೀಕೃಷ್ಣನ ಆರಾಧನೆಗೆ, ತತ್ತ್ವಪ್ರಚಾರಕ್ಕಾಗಿ ಮೀಸಲಿಟ್ಟರು. ತಮ್ಮ ಅವತಾರಕಾರ್ಯಸಮಾಪ್ತಿಯಾಗುವ ಪ್ರಸಂಗವು ಒದಗಿಬಂದಾಗ ಉಡುಪಿಯ ಅನಂತೇಶ್ವರದೇವಸ್ಥಾನದಲ್ಲಿ ಶಿಷ್ಯರಿಗೆ ಐತರೇಯೋಪನಿಷತ್ತಿನ ಪಾಠವನ್ನು ಹೇಳುತ್ತಿರುವಾಗ ದೇವತೆಗಳು ಪುಷ್ಪವೃಷ್ಟಿಯನ್ನು ಗೈದರು. ಆ ಪುಷ್ಪದ ರಾಶಿಯಿಂದ ಆಚಾರ್ಯರು ಕಾಣದಿರುವಾಗ ಆ ಪುಷ್ಪಗಳನ್ನು ಸರಿಸಿ ನೋಡಲಾಗಿ ಅಲ್ಲಿ ಶ್ರೀಮದಾಚಾರ್ಯರು ಅದೃಶ್ಯರಾಗಿದ್ದರು.

ಅಂದು ಅದೃಶ್ಯರಾದ ಶ್ರೀಮದಾಚಾರ್ಯರು ಇಂದಿಗೂ ಕೂಡ ಉತ್ತರಬದರಿಕಾಶ್ರಮದಲ್ಲಿ ವೇದವ್ಯಾಸರ ಸನ್ನಿಧಾನದಲ್ಲಿ ಇರುವರು. ಅದಕ್ಕಾಗಿ ''ಅದೃಶ್ಯೋ ರೂಪ್ಯಪೀಠೇಽಸ್ತಿ ದೃಶ್ಯೋಽಸ್ತಿ ಬದರೀತಟೇ'' ಎನ್ನುವ ಮಾತು ಪ್ರಚಲಿತವಾಗಿದೆ.

## ಶ್ರೀಮದಾಚಾರ್ಯರು ರಚಿಸಿದ ಗ್ರಂಥಗಳು
## (ಸರ್ವಮೂಲಗ್ರಂಥಗಳು)

*ಗೀತಾಪ್ರಸ್ಥಾನಗ್ರಂಥಗಳು:*

ಶ್ರೀಮದ್ಭಗವದ್ಗೀತಾಭಾಷ್ಯಮ್

ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯಃ

*ಸೂತ್ರಪ್ರಸ್ಥಾನಗ್ರಂಥಗಳು :*

ಶ್ರೀಮದ್ಬ್ರಹ್ಮಸೂತ್ರಭಾಷ್ಯಮ್

ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನಮ್

ಶ್ರೀಮದ್ಬ್ರಹ್ಮಸೂತ್ರಾಣುಭಾಷ್ಯಮ್

ನ್ಯಾಯವಿವರಣಮ್

*ಉಪನಿಷತ್ಪ್ರಸ್ಥಾನಗ್ರಂಥಗಳು :*

ಐತರೇಯೋಪನಿಷದ್ಭಾಷ್ಯಮ್

ಛಾಂದೋಗ್ಯೋಪನಿಷದ್ಭಾಷ್ಯಮ್

ಬೃಹದಾರಣ್ಯಕೋಪನಿಷದ್ಭಾಷಮ್

ಈಶಾವಾಸ್ಯೋಪನಿಷದ್ಭಾಷ್ಯಮ್

ತಲವಕಾರೋಪನಿಷದ್ಭಾಷ್ಯಮ್

ಷಟ್ಪ್ರಶ್ನೋಪನಿಷದ್ಭಾಷ್ಯಮ್

ಕಾಠಕೋಪನಿಷದ್ಭಾಷ್ಯಮ್

ಆಥರ್ವಣೋಪನಿಷದ್ಭಾಷ್ಯಮ್

ಮಾಂಡೂಕ್ಯೋಪನಿಷದ್ಭಾಷ್ಯಮ್

ತೈತ್ತಿರೀಯೋಪನಿಷದ್ಭಾಷ್ಯಮ್

*ಶ್ರುತಿಪ್ರಸ್ಥಾನಗ್ರಂಥ :*

ಋಗ್ಭಾಷ್ಯಮ್

*ಇತಿಹಾಸಪ್ರಸ್ಥಾನಗ್ರಂಥಗಳು :*

ಮಹಾಭಾರತತಾತ್ಪರ್ಯನಿರ್ಣಯಃ

ಯಮಕಭಾರತಮ್

*ಪುರಾಣಪ್ರಸ್ಥಾನಗ್ರಂಥ :*

ಭಾಗವತತಾತ್ಪರ್ಯನಿರ್ಣಯಃ

*ಪ್ರಕರಣಗ್ರಂಥಗಳು :*

ತತ್ತ್ವಸಂಖ್ಯಾನಮ್

ತತ್ತ್ವವಿವೇಕಃ

ತತ್ತ್ವೋದ್ಯೋತಃ

ವಿಷ್ಣುತತ್ತ್ವನಿರ್ಣಯಃ

ಪ್ರಮಾಣಲಕ್ಷಣಮ್

ಕಥಾಲಕ್ಷಣಮ್

ಉಪಾಧಿಖಂಡನಮ್

ಮಾಯಾವಾದಖಂಡನಮ್

ಪ್ರಪಂಚಮಿಥ್ಯಾತ್ವಾನುಮಾನಖಂಡನಮ್

ಕರ್ಮನಿರ್ಣಯಃ

*ಆಚಾರಗ್ರಂಥಗಳು :*

ತಂತ್ರಸಾರಸಂಗ್ರಹಃ

ಸದಾಚಾರಸ್ಮೃತಿಃ

ಜಯಂತೀನಿರ್ಣಯಃ

ಕೃಷ್ಣಾಮೃತಮಹಾರ್ಣವಃ

ಯತಿಪ್ರಣವಕಲ್ಪಃ

*ಸ್ತೋತ್ರಗ್ರಂಥಗಳು :*

ನಖಸ್ತುತಿಃ

ದ್ವಾದಶಸ್ತೋತ್ರಮ್

ಕಂದುಕಸ್ತುತಿಃ (ಪೂರ್ವಾಶ್ರಮದಲ್ಲಿ ರಚಿತವಾದದ್ದು)

## ಸುಮಧ್ವವಿಜಯದ ಬಗ್ಗೆ ಒಂದು ಮಾತು

ಹದಿನಾರು ಸರ್ಗಾತ್ಮಕವಾದ ಈ ಕೃತಿಯು ಮಹಾಕಾವ್ಯವೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಅಪೂರ್ವ ಛಂದಸ್ಸುಗಳಿಂದ ಅಲಂಕೃತವಾದ ಈ ಕಾವ್ಯವು ಶಾಸ್ತ್ರಗ್ರಂಥವೆಂದರೂ ತಪ್ಪಾಗಲಾರದು. ಶ್ರೀಮದಾಚಾರ್ಯರ ನೈಜ ಚರಿತ್ರೆಯನ್ನು ತಿಳಿಸಲು ಹೊರಟ ಈ ಕಾವ್ಯದಲ್ಲಿ ಎಲ್ಲಿಯೂ ಇಲ್ಲದ ಉತ್ಪ್ರೇಕ್ಷೆಗಳನ್ನು ವರ್ಣಿಸಿ ಕಾವ್ಯದ ಸೊಬಗನ್ನು ಹೆಚ್ಚಿಸಿಲ್ಲ ಎಂಬ ಮಾತನ್ನು ಸ್ವಯಂ ನಾರಾಯಣಪಂಡಿತಾಚಾರ್ಯರೇ ತಮ್ಮ ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಈ ಗ್ರಂಥವು ಇವತ್ತು ಸಂಸ್ಕೃತವಾಙ್ಮಯದಲ್ಲಿ ಕಂಡುಬರುವ ಎಲ್ಲ ವಿಜಯಕಾವ್ಯಗಳಿಗೆ ಮೂಲವೆಂದರೆ ತಪ್ಪಾಗಲಾರದು. ಜೀವೋತ್ತಮರಾದ ಇವರ ವಿಶಿಷ್ಟಲೀಲೆಗಳನ್ನು ಇದರಲ್ಲಿ ವರ್ಣಿಸಿರುವುದರಿಂದ ನಿತ್ಯ ಪಾರಾಯಣಕ್ಕೆ ಅತ್ಯಂತ ಸೂಕ್ತವಾದ ಗ್ರಂಥವಾಗಿದೆ.

ಸುಮಧ್ವವಿಜಯದ ಮೇಲೆ ಅನೇಕ ವ್ಯಾಖ್ಯಾನಗಳು ಹೊರಟಿವೆ. ಅವು ಈ ಕೆಳಗಿನಂತೆ ತಿಳಿಯಬಹುದು.

1) ಶ್ರೀ ನಾರಾಯಣ ಪಂಡಿತಾಚಾರ್ಯರ ಭಾವಪ್ರಕಾಶಿಕಾ
2) ಶ್ರೀ ವೇದಾಂಗತೀರ್ಥರ ಪದಾರ್ಥದೀಪಿಕಾ
3) ಶ್ರೀ ಸುಮತೀಂದ್ರತೀರ್ಥರ ವ್ಯಾಖ್ಯಾನ
4) ಶ್ರೀ ವಿಶ್ವಪತಿತೀರ್ಥರ ಪದಾರ್ಥದೀಪಿಕೋದ್ಬೋಧಿಕಾ
5) ಶ್ರೀ ಲಿಂಗೇರಿ ಶ್ರೀನಿವಾಸಾಚಾರ್ಯರ ವ್ಯಾಖ್ಯಾನ
6) ಆನಂದತೀರ್ಥಾಚಾರ್ಯರ ಪದಾರ್ಥಪ್ರಕಾಶಿಕಾ
7) ಛಲಾರಿ ಶೇಷಾಚಾರ್ಯರ ಮಂದೋಪಕಾರಿಣೀ
8) ಗರುಡವಾಹನ ಲಕ್ಷ್ಮೀನಾರಾಯಣಾಚಾರ್ಯರು
   (ಇವರು ರಾಯರ ಪೂರ್ವಾಶ್ರಮದ ಸಂತತಿ)

ಇದಲ್ಲದೇ ನಮ್ಮ ಶ್ರೀಮಠದ ಪೂರ್ವಿಕ ಗುರುಗಳಾದ ಶ್ರೀಸುಜನೇಂದ್ರತೀರ್ಥರು ಒಂದು ವ್ಯಾಖ್ಯಾನವನ್ನು ಬರೆದಿದ್ದಾರೆಂದು ತಿಳಿದು ಬರುತ್ತದೆ.

ಇತ್ತೀಚಿನ ದಿನಗಳಲ್ಲಿ ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರು ತತ್ವಚಂದ್ರಿಕಾ ಎಂಬ ವ್ಯಾಖ್ಯಾನವನ್ನು ರಚಿಸಿ ಪ್ರಕಾಶನಗೊಳಿಸಿದ್ದಾರೆ.

## ಗ್ರಂಥಕರ್ತೃಗಳ ಪರಿಚಯ

ಶ್ರೀಸುಮಧ್ವವಿಜಯವನ್ನು ಬರೆದ ನಾರಾಯಣಪಂಡಿತಾಚಾರ್ಯರು ಶ್ರೀಸುಬ್ರಹ್ಮಣ್ಯಪಂಡಿತರ ಮೊಮ್ಮಕ್ಕಳು, ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು ಎಂದು ತಿಳಿದು ಬರುತ್ತದೆ. ಆಶುಕವಿಗಳಾದ ಇವರು ಲಿಕುಚವಂಶದವ-ರೆಂದು ಆಂಗೀರಸ ಗೋತ್ರದಲ್ಲಿ ಜನಿಸಿದವರೆಂದು ತಿಳಿದುಬರುತ್ತದೆ. ಎಂಥ ಜಟಿಲವಾದ ಶಾಸ್ತ್ರಪ್ರಮೇಯಗಳನ್ನು ಸುಲಭವಾದ ಕಾವ್ಯಶೈಲಿಯಲ್ಲಿ ಬರೆಯುವುದರಲ್ಲಿ ಅಪ್ರತಿಮರು ಇವರು. ಶ್ರೀಮದಾಚಾರ್ಯರ ವೈಭವವನ್ನು ಕಣ್ಣಾರೆ ಕಂಡು ಪುಟಕ್ಕಿಳಿಸಿದ ಪೂತಾತ್ಮರು.

## ಇವರು ರಚಿಸಿದ ಗ್ರಂಥಗಳು

1) ಸುಮಧ್ವವಿಜಯಃ
2) ಭಾವದೀಪಃ (ಸುಮಧ್ವವಿಜಯಭಾವಪ್ರಕಾಶಿಕಾ)
3) ಅಣುಮಧ್ವವಿಜಯಃ (ಪ್ರಮೇಯನವಮಾಲಿಕಾ)
4) ಮಣಿಮಂಜರೀ
5) ನಯಚಂದ್ರಿಕಾ (ಅನುವ್ಯಾಖ್ಯಾನಟೀಕಾ)
6) ತತ್ತ್ವಮಂಜರೀ (ವಿಷ್ಣುತತ್ತ್ವನಿರ್ಣಯಟೀಕಾ)
7) ಯಮಕಭಾರತಟೀಕಾ
8) ಅಣುಭಾಷ್ಯಟೀಕಾ
9) ಕೃಷ್ಣಾಮೃತಮಹಾರ್ಣವಟೀಕಾ
10) ಮಿಥ್ಯಾತ್ವಾನುಮಾನಖಂಡನಟೀಕಾ (ಶ್ಲೋಕರೂಪ)

11) ಸಂಗ್ರಹರಾಮಾಯಣಮ್ (ನಿರ್ಣಯಾನುಸಾರಿಯಾಗಿ ರಾಮಾಯಣಕಥಾಸಂಗ್ರಹ)

12) ಶುಭೋದಯಮ್ (ಒಂದು ಆಧ್ಯಾತ್ಮಿಕ ಕಾವ್ಯ)

13) ಪಾರಿಜಾತಹರಣಮ್ (ಯಮಕಕಾವ್ಯ)

14) ಯೋಗದೀಪಿಕಾ (ಸದಾಚಾರವಿವರಣರೂಪ ಗ್ರಂಥ)

15) ಮಧ್ವಾಮೃತಮಹಾರ್ಣವಃ (ಶ್ರೀಮಧ್ವಮಾಹಾತ್ಮ್ಯಪ್ರತಿಪಾದಕ ಕೃತಿ)

16) ಅಂಶಾವತಾರ (ಅಕಾರಾದಿಯಾಗಿ ದೇವದೈತ್ಯರ ಅಂಶಾವೇಶಾವತಾರಗಳನ್ನು ನಿರೂಪಿಸುವ ಶ್ಲೋಕರೂಪ ಕೃತಿ)

17) ನರಸಿಂಹಸ್ತುತಿಃ

18) ರಾಮಗೀತ್ಯಷ್ಟಕಮ್

19) ದಾಶರಥ್ಯಷ್ಟಕಮ್

20) ಕೃಷ್ಣಮಾಲಾಸ್ತೋತ್ರಮ್ (ಮಹಾಭಾರತತಾತ್ಪರ್ಯನಿರ್ಣಯೋಕ್ತ-ಕೃಷ್ಣಕಥಾಸಂಗ್ರಹ)

21) ಮಹಾಲಕ್ಷ್ಮೀಸ್ತುತಿಃ

22) ಮಧ್ವಕವಚಮ್

23) ಅಣುವಾಯುಸ್ತುತಿಃ

24) ಶಿವಸ್ತುತಿಃ

25) ತಾರತಮ್ಯಸ್ತೋತ್ರಮ್

- ಇವುಗಳಲ್ಲಿನ ಕೆಲವು ಯಮಕಶ್ಲೋಕಗಳೂ, ಇನ್ನೂ ಕೆಲವು ಸ್ತೋತ್ರಗಳೂ ಸಹ ನಾರಾಯಣಪಂಡಿತರ ಹೆಸರಿನಲ್ಲಿ ಪ್ರಸಿದ್ಧವಾಗಿವೆ.

ಇಂತಹ ಮೇರುಕೃತಿಯನಿಸಿದ ಸುಮಧ್ವವಿಜಯದ ಅಧ್ಯಯನಶೀಲರಾದ ವಿದ್ಯಾರ್ಥಿಗಳಿಗೂ, ಜಿಜ್ಞಾಸುಗಳಿಗೂ ಅತ್ಯಂತ ಉಪಕಾರಕವಾದ ರೀತಿಯಲ್ಲಿ ಪದಚ್ಛೇದ ಅನ್ವಯಾನುಸಾರೇಣ ಅರ್ಥ, ತಾತ್ಪರ್ಯ, ವಿಗ್ರಹ, ವ್ಯಾಕರಣ, ಅಲಂಕಾರ, ಛಂದೋವಿಶೇಷಗಳನ್ನೊಳಗೊಂಡ ರೀತಿಯಲ್ಲಿ ಅನುವಾದಿಸಿ ಈ ಹಿಂದೆ ನಮ್ಮ ಶ್ರೀಮಠದ ಅಧಿಕೃತ ಮಾಸಪತ್ರಿಕೆಯಾದ ಗುರುಸಾರ್ವಭೌಮದಲ್ಲಿ ಧಾರಾವಾಹಿರೂಪದಿಂದ ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ ಶ್ರೀ 1008 ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು ಪ್ರಕಾಶನಗೊಳಿಸಿದ್ದರು. ಇದರ ಅನುವಾದವನ್ನು ಪ್ರಸಿದ್ಧ ವಿದ್ವಾಂಸರಾದ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು, ಮಾಗಡಿ ರಂಗನಾಥಾಚಾರ್ಯರು, ಹಾಗೂ ಎಸ್. ವಿ. ಭೀಮಭಟ್ಟರು, ಮಾಡಿದ್ದರು. ಪ್ರಕೃತ ಈ ಪ್ರಕಾಶನಕಾರ್ಯದಲ್ಲಿ ಮಾರ್ಗದರ್ಶನವನ್ನು ನೀಡಿದ, ಆಗಿನ ಶ್ರೀಗುರು-ಸಾರ್ವಭೌಮ ಪತ್ರಿಕೆಯ ಪ್ರಧಾನ ಸಂಪಾದಕರಾದ ಹಾಗು ನಮ್ಮ ವಿದ್ಯಾಗುರುಗಳಾದ ರಾಜಾ. ಎಸ್. ಗಿರಿಯಾ-ಚಾರ್ಯರ ನೇತೃತ್ವದಲ್ಲಿ ಈ ಅನುವಾದವು ಪ್ರಕಾಶನಗೊಂಡು ಎಲ್ಲರ ಕೈಸೇರಿತು. ಪ್ರಕೃತ ಪ್ರಸ್ತುತ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀ ಶ್ರೀ 1008 ಸುಯತೀಂದ್ರತೀರ್ಥ ಶ್ರೀಪಾದಂಗಳವರು ಮಾಸಪತ್ರಿಕೆಯಲ್ಲಿ ಪ್ರಕಟಗೊಂಡ ಶ್ರೀ ಸುಮಧ್ವವಿಜಯದ ಹದಿನಾರು ಸರ್ಗಾತ್ಮಕವಾದ ಈ ಕೃತಿಯನ್ನು ಸಂಪಾದಿಸಿ, ಪ್ರಕಾಶಿಸಲು ನಮಗೆ ಆದೇಶವನ್ನಿತ್ತಿದ್ದರು. ನಾವು ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದ ಅನೇಕ ವಿದ್ವಾಂಸರ ಸಹಕಾರದೊಂದಿಗೆ ಸಂಪಾದಿಸಿ, ಜಿಜ್ಞಾಸುಗಳ ಕೈಸೇರುವ ಪ್ರಯತ್ನವನ್ನು ಮಾಡಿದ್ದೇವೆ. ಈ ನಿಟ್ಟಿನಲ್ಲಿ ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳಾದ

ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರ ಹಾಗೂ ಹೆಚ್ಚುವರಿ ಆಪ್ತಕಾರ್ಯದರ್ಶಿಗಳಾದ ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರ ಸಹಕಾರವು ಅಭಿನಂದನೀಯವಾಗಿದೆ. ಇಂತಹ ಉತ್ತಮ ಕಾರ್ಯದಲ್ಲಿ ನಮ್ಮನ್ನು ತೊಡಗುವಂತೆ ಮಾಡಿದ ಪರಮಪೂಜ್ಯ ಶ್ರೀಪಾದಂಗಳವರಿಗೆ ನಮ್ಮ ಅನಂತ ಶಿ।।ಸಾ।। ನಮನಗಳು.

ಹಾಗೆಯೇ ನಮಗೆ ಉತ್ತಮ ಮಾರ್ಗದರ್ಶನವನ್ನು ನೀಡಿದ ನಮ್ಮ ಗುರುಗಳಾದ ಪಂಡಿತಕೇಸರೀ ರಾಜಾ ಎಸ್. ಗಿರಿಯಾಚಾರ್ಯರಿಗೆ ಅನಂತ ನಮನಗಳು. ಹಾಗೆಯೇ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರನ್ನು ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಅಭಿನಂದಿಸುತ್ತೇವೆ ಕರಡು ತಿದ್ದುವ ಕಾರ್ಯದಲ್ಲಿ ಸಹಕರಿಸಿದ ನಮ್ಮ ಶ್ರೀ ಗುರುಸಾರ್ವಭೌಮಸಂಸ್ಕೃತವಿದ್ಯಾಪೀಠದ ವಿದ್ವಾಂಸರಿಗೆ ಹೃತ್ಪೂರ್ವಕ ಧನ್ಯ-ವಾದಗಳು. ಸರಿಯಾದ ಸಮಯಕ್ಕೆ ಅಂದವಾಗಿ ಮುದ್ರಿಸಿದ ಶ್ರೀ ಸುಧಾ ಮುದ್ರಣದ ಮಾಲೀಕರಾದ ಶ್ರೀ ಧನಂಜಯ ವರಖೇಡಕರ್ ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

*ವಿದ್ವಾನ್ ರಾಜಾ ಎಸ್. ಪವಮಾನಾಚಾರ್ಯ*
*ವಿದ್ವಾನ್ ಕಡಪ ರಾಘವೇಂದ್ರಾಚಾರ್ಯ*
*ವಿದ್ವಾನ್ ಡಾ।। ಎನ್. ವಾದಿರಾಜಾಚಾರ್ಯ*
*ವಿದ್ವಾನ್ ಪುರಾಣಿಕ ಸುಬ್ರಹ್ಮಣ್ಯಾಚಾರ್ಯ*
ಸಂಪಾದಕರು.

## ॥ श्री वेदव्यास भगवान् ॥



## ॥ ಶ್ರೀ ವೇದವ್ಯಾಸ ಭಗವಾನ್ ॥

येन प्रादुरभावि भूमिवलये व्यस्तारि गोसन्ततिः
प्राबोधि श्रुतिपङ्कजं करुणया प्राकाशि तत्त्वं परम् ।
ध्वान्तं ध्वंसमनायि साधुनिकरश्चाकारि सन्मार्गग-
स्तेन व्यासदिवाकरेण सततं मा त्याजि मे मानसम् ॥

## ॥ श्री श्री १००८ श्री सुयतीन्द्रतीर्थाः ॥



॥ ಶ್ರೀ ಶ್ರೀ 1008 ಶ್ರೀ ಸುಯತೀಂದ್ರತೀರ್ಥಾಃ ॥

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಅಷ್ಟಮಃ ಸರ್ಗಃ

### ಎಂಟನೆಯ ಸರ್ಗದ ಕಥಾಸಾರ

ಆ ಬದರಿಕಾಶ್ರಮದಲ್ಲಿರುವ ಮುನಿಗಳು ಶ್ರೀಪೂರ್ಣಪ್ರಜ್ಞರ ಪ್ರತಿಭೆ, ತೇಜಸ್ಸು ಮುಂತಾದವುಗಳನ್ನು ಕಂಡು ಆಶ್ಚರ್ಯಪಟ್ಟರು. ಒಂದು ದಿನ ಶ್ರೀಮಧ್ವಾಚಾರ್ಯರು ಗರುಡ, ಶೇಷ, ರುದ್ರಾದಿಗಳಿಂದಲೂ ತಿಳಿಯಲಾಗದಿರುವ ವಿಶೇಷ ವಿಷಯಗಳನ್ನು ತಿಳಿದುಕೊಳ್ಳಲು ಏಕಾಂತದಲ್ಲಿ ಶ್ರೀವೇದವ್ಯಾಸರನ್ನು ಸಮೀಪಿಸಿದರು. ಇದನ್ನು ನೋಡಿದ ದೇವತೆಗಳು ಅವರಿಬ್ಬರ ಆ ಗುರುಶಿಷ್ಯ ಭಾವವು ಅತ್ಯಂತ ಉಚಿತವೆಂದು ಗೌರವಿಸಿದರು. ಆಚಾರ್ಯರು ಸಂಪೂರ್ಣ ತತ್ತ್ವಜ್ಞಾನವನ್ನು ತಿಳಿಯಲು ಸಮರ್ಥರು. ಆದುದರಿಂದ ಶ್ರೀವ್ಯಾಸರು ವೇದ, ಮಹಾಭಾರತಾದಿಗಳಲ್ಲಿ ಅಡಗಿರುವ ರಹಸ್ಯವಾದ ತತ್ತ್ವವನ್ನು ಬಹಳ ಪ್ರೀತಿಯಿಂದ ಉಪದೇಶಿಸಿದರು. ಎಲ್ಲವನ್ನೂ ಮೊದಲೇ ತಿಳಿದಿದ್ದ ಆಚಾರ್ಯರ ಬುದ್ಧಿಯು ಶ್ರೀವ್ಯಾಸರ ಅನುಗ್ರಹದಿಂದ ಅನೇಕ ಹೊಸ ವಿಷಯಗಳನ್ನು ಒಳಗೊಂಡು ಅಭಿವ್ಯಕ್ತವಾಯಿತು. ತರುವಾಯ ಆಚಾರ್ಯರು ಶ್ರೀವೇದವ್ಯಾಸರ ಸಹಾಯ ಸಂಪತ್ತಿನಿಂದ ಅವರನ್ನು ಹಿಂಬಾಲಿಸಿ ಅವರೊಡನೆ ಬೇರೊಂದು ಆಶ್ರಮದಲ್ಲಿ ನೆಲೆಸಿರುವ ಶ್ರೀಮನ್ನಾರಾಯಣನ ಮತ್ತೊಂದು ಅವತಾರವಾದ ಶ್ರೀನಾರಾಯಣ ಮುನಿಗಳನ್ನು ನೋಡಲು ಹೋದರು. ಶ್ರೀಮನ್ನಾರಾಯಣರು ಶಾಶ್ವತಸ್ವರೂಪಾನಂದದ ಅನುಭವದಲ್ಲಿ ನಿರತರಾಗಿದ್ದರೂ ಅಲ್ಲಿ ಇತರ ಮುನಿಗಳಂತೆ ತಾಪಸ ವೇಷಧಾರಿಯಾಗಿ ತಪೋನಿರತರಾಗಿದ್ದರು. ಯಮಧರ್ಮನ ಪುತ್ರನಾಗಿ ಅವತರಿಸಿದ್ದ ಆ ನಾರಾಯಣ ಮುನಿಗಳನ್ನು ನೋಡಿದ ಕೂಡಲೇ ಆಚಾರ್ಯರು ತಮ್ಮ ಮನಸ್ಸಿನಲ್ಲಿ ಈ ರೀತಿ ಆಲೋಚಿಸತೊಡಗಿದರು.

ಹದಿನಾಲ್ಕು ಲೋಕಗಳನ್ನು ಲಯಗೊಳಿಸುವ ನಾರಾಯಣನೇ ಇವನು. ಇಂದು ಇವನು ಯಮಧರ್ಮನ ಸುತನಾಗಿ ಅವತರಿಸಿರುವನು. ಇವನೇ ಸಮಸ್ತ ಲೋಕಗಳನ್ನೂ ಬ್ರಹ್ಮಾದಿದೇವತೆಗಳನ್ನೂ ಲೀಲಾಮಾತ್ರದಿಂದ ಸೃಷ್ಟಿಸಿ, ಅವರಲ್ಲಿ ಅಂತರ್ಯಾಮಿಯಾಗಿದ್ದು, ತ್ರಿವಿಧ ಜೀವರಿಗೆ ಅವರವರ ಯೋಗ್ಯತೆಯನ್ನು ಅನುಸರಿಸಿ ಮೋಕ್ಷ, ನಿತ್ಯ ಸಂಸಾರ, ಅಂಧಂತಮಸ್ಸುಗಳನ್ನು ಈಯುವವನು. ಇವನು ತನ್ನ ಭಕ್ತರು, ತನ್ನನ್ನು ಧ್ಯಾನ ಮಾಡಿ, ಸ್ಮರಿಸಿ, ವಂದಿಸಿ, ಮೋಕ್ಷವನ್ನು ಪಡೆಯಲೆಂದು ವಾಸುದೇವ ಮುಂತಾದ ಅವತಾರಗಳನ್ನು ಸ್ವೀಕರಿಸುತ್ತಾನೆ. ಇವನು ಮೀನಿನ ರೂಪವನ್ನೂ, ಹಯಗ್ರೀವ ರೂಪವನ್ನೂ ತಾಳಿ ವೇದವನ್ನು ಕದ್ದ ಹಯಗ್ರೀವಾಸುರನನ್ನು ಮತ್ತು ಮಧು ಎಂಬ ದೈತ್ಯರನ್ನು ಕೊಂದನು. ಅವರು ಅಪಹರಿಸಿದ ವೇದಗಳನ್ನು ಬ್ರಹ್ಮದೇವರಿಗೆ ಮರಳಿ ತಂದುಕೊಟ್ಟನು. ಇವನೇ ಮಹಾವರಾಹನಾಗಿ ಹಿರಣ್ಯಾಕ್ಷನನ್ನು ಸಂಹರಿಸಿದ್ದಾನೆ. ಕೂರ್ಮನಾಗಿ ಮಂದರ ಪರ್ವತವನ್ನು ಬೆನ್ನಿನಿಂದ ಹೊತ್ತು, ದೇವ-ದಾನವರಿಗೆ ಕ್ಷೀರಸಮುದ್ರವನ್ನು ಮಥಿಸಲು ಸಹಾಯ ಮಾಡಿದ್ದಾನೆ. ನರಸಿಂಹನಾಗಿ ಹಿರಣ್ಯಕಶಿಪುವನ್ನು ಉಗುರುಗಳಿಂದ ಸೀಳಿ ಭಕ್ತಪ್ರಹ್ಲಾದನನ್ನು ರಕ್ಷಿಸಿದ್ದಾನೆ. ಗಜೇಂದ್ರನ ಮೊರೆಯನ್ನು ಕೇಳಿ ಗರುಡನ ಮೇಲೇರಿ ಓಡಿ ಬಂದು ಚಕ್ರಾಯುಧದಿಂದ ಮೊಸಳೆಯನ್ನು ಸೀಳಿ

ಗಜೇಂದ್ರನನ್ನು ಬಿಡಿಸಿದ್ದಾನೆ. ವಾಮನನಾಗಿ ಅಸುರ ರಾಜನಾದ ಬಲಿಚಕ್ರವರ್ತಿಯನ್ನು ಕೆಳಗಿನ ಲೋಕಕ್ಕೆ ತಳ್ಳಿದ್ದಾನೆ. ಜಿನ ಎಂಬವನ ಮಗನಾಗಿ ಬುದ್ಧರೂಪದಿಂದ ಅವತರಿಸಿ ಅಸುರರನ್ನು ಭ್ರಾಂತಿಗೊಳಿಸಿದ್ದಾನೆ. ಜಮದಗ್ನಿ ಮುನಿಗಳ ಪುತ್ರನಾದ ಪರಶುರಾಮನಾಗಿ 21 ಬಾರಿ ದುಷ್ಟಕ್ಷತ್ರಿಯರನ್ನು ಸಂಹರಿಸಿರುತ್ತಾನೆ. ತ್ರೇತಾಯುಗದಲ್ಲಿ ದಶರಥರಾಜನ ಮಗನಾಗಿ ಅವತರಿಸಿ ದುಷ್ಟನಾದ ರಾವಣನನ್ನು ಸಂಹರಿಸಿದನು. ಆಗ ಶ್ರೀರಾಮಚಂದ್ರನೆಂದು ಪ್ರಸಿದ್ಧನಾದ ಶ್ರೀಮನ್ನಾರಾಯಣನಿಗೆ ಲಕ್ಷ್ಮಣ, ಭರತ, ಶತ್ರುಘ್ನರು ತಮ್ಮಂದಿರಾಗಿದ್ದರು. ಒಂದಾನೊಂದು ದಿನ ವಿಶ್ವಾಮಿತ್ರಮುನಿಯು ಲಕ್ಷ್ಮಣ ಸಹಿತನಾದ ಶ್ರೀರಾಮನನ್ನು ಸಿದ್ಧಾಶ್ರಮಕ್ಕೆ ಕರೆದುಕೊಂಡು ಹೋದನು. ದಾರಿಯಲ್ಲಿ ಶ್ರೀರಾಮನು ತಾಟಕೆಯನ್ನು ಸಂಹರಿಸಿ, ವಿಶ್ವಾಮಿತ್ರರ ಯಜ್ಞಕ್ಕೆ ವಿಘ್ನಕರನಾದ ಸುಬಾಹುವನ್ನು ಕೊಂದನು. ಅನಂತರ ವಿಶ್ವಾಮಿತ್ರರ ಜೊತೆಯಲ್ಲಿ ಮಿಥಿಲಾಪಟ್ಟಣಕ್ಕೆ ತೆರಳಿ ಅಲ್ಲಿ ಸ್ವಯಂವರಕ್ಕಾಗಿ ಪಣವಾಗಿಟ್ಟಿದ್ದ ಶಿವಧನುಸ್ಸನ್ನು ಮುರಿದು ಶ್ರೀಸೀತಾದೇವಿಯನ್ನು ವಿವಾಹವಾದನು. ಅಲ್ಲಿಂದ ತಂದೆಯೊಡನೆ ಅಯೋಧ್ಯೆಗೆ ಹೋಗುತ್ತಿರುವಾಗ ಅಲ್ಲಿ ಯುದ್ಧಸನ್ನದ್ಧನಾಗಿ ಪರಶುರಾಮರ ಜೊತೆಗೆ ಲೀಲಾಕಲಹವನ್ನು ಮಾಡಿ, ಅವರನ್ನು ಸೋಲಿಸಿದಂತೆ ತೋರಿಸಿ ಅಯೋಧ್ಯೆಯನ್ನು ಸೇರಿದನು. ಅಲ್ಲಿ ಚಿಕ್ಕಮ್ಮನಾದ ಕೈಕೇಯಿಯನ್ನು ಸಂತೋಷ ಪಡಿಸಲು ಸೀತಾ ಲಕ್ಷ್ಮಣರೊಡನೆ ವನವಾಸಕ್ಕೆ ತೆರಳಿ, ಅಲ್ಲಿ ಚಿತ್ರಕೂಟಾದಿಪರ್ವತಪ್ರದೇಶಗಳನ್ನು ದಾಟಿ, ಖರ-ದೂಷಣಾದಿ ರಾಕ್ಷಸರನ್ನು ಕೊಂದನು. ಪಂಚವಟಿಯ ಆಶ್ರಮದಲ್ಲಿ ಲಕ್ಷ್ಮೀ ಸ್ವರೂಪಳಾದ ಸೀತೆಯೊಡನೆ ವಾಸಿಸುತ್ತಿದ್ದಾಗ ದುಷ್ಟರಾವಣನು ಸೀತಾಕೃತಿಯನ್ನು ಅಪಹರಿಸಿದನು. ಶ್ರೀರಾಮಚಂದ್ರನು ಮುಂದೆ ಆಗಬೇಕಾದ ಅನೇಕ ದುಷ್ಟರ ಸಂಹಾರ ಮುಂತಾದ ಅನೇಕ ಪ್ರಯೋಜನಗಳ ದೃಷ್ಟಿಯಿಂದ ಅವನನ್ನು ಆಗಲೇ ಕೊಲ್ಲದೆ ಬಿಟ್ಟನು. ಬಳಿಕ ಸೀತಾವಿರಹದಿಂದ ದುಃಖಾತುರನಂತೆ ತೋರಿಸಿಕೊಳ್ಳುತ್ತಾ, ಸೀತೆಯನ್ನು ಹುಡುಕುತ್ತಾ, ಋಷ್ಯಮೂಕಪರ್ವತಕ್ಕೆ ತೆರಳಿ ಆಂಜನೇಯನ ಮೂಲಕ ಅಲ್ಲಿ ಸುಗ್ರೀವನೊಡನೆ ಸ್ನೇಹ ಬೆಳೆಸಿ, ಆಂಜನೇಯ ಮೊದಲಾದ ವಾನರರನ್ನು ಆನಂದಗೊಳಿಸಿದನು. ಸುಗ್ರೀವನ ಅಣ್ಣನೇ ಆದರೂ ಭಾರ್ಯಾಪಹಾರಾದಿ ನಿಮಿತ್ತದಿಂದ ಅವನ ಶತ್ರುವಾದ ವಾಲಿಯನ್ನು ಕೊಂದು ಶತ್ರುಗಳಿಲ್ಲದ ಕಿಷ್ಕಿಂಧಾ ರಾಜ್ಯವನ್ನು ಸುಗ್ರೀವನಿಗಿತ್ತನು. ಅಲ್ಲಿ ಹನುಮಂತನಿಂದ ಸುಗ್ರೀವನ ವೃತ್ತಾಂತವನ್ನು ತಿಳಿದು ಕಪಿಸೇನೆಯೊಡನೆ ಲಂಕೆಯನ್ನು ಹೊಕ್ಕು, ರಾವಣ, ಕುಂಭಕರ್ಣ ಮೊದಲಾದವರನ್ನು ಸಂಹರಿಸಿದನು. ಅನಂತರ ಅಗ್ನಿಯ ಮೂಲಕವಾಗಿ ಬಂದ ಸೀತೆಯೊಡನೆ ಅಯೋಧ್ಯೆಯನ್ನು ಪ್ರವೇಶಿಸಿ ಅಲ್ಲಿ ಅನೇಕ ವರ್ಷಕಾಲ ಸಜ್ಜನರನ್ನು ಕಾಪಾಡುತ್ತಾ ಕೊನೆಯಲ್ಲಿ ವೈಕುಂಠಕ್ಕೆ ಹೋಗಿ ಅಲ್ಲಿ ತನ್ನ ಮೂಲರೂಪದೊಡನೆ ಐಕ್ಯ ಹೊಂದಿದನು.

ದ್ವಾಪರ ಯುಗದಲ್ಲಿ ಈ ನಾರಾಯಣನು ಚಂದ್ರವಂಶದ ವಸುದೇವನಿಗೆ ಮಗನಾದ ಶ್ರೀಕೃಷ್ಣನಾಗಿ ಜನಿಸಿ ತಂದೆಗೆ ಆನಂದವನ್ನುಂಟು ಮಾಡಿರುತ್ತಾನೆ. ಆಗ ಬಲರಾಮನು ಇವನಿಗೆ ಅಣ್ಣನಾಗಿದ್ದನು. ಇವನು ನಂದಗೋಪನ ಮನೆಯಲ್ಲಿ ಬೆಳೆಯುತ್ತಾ ವಿಷ ತುಂಬಿದ ಎದೆ ಹಾಲುಣಿಸಿ ತನ್ನನ್ನು ಕೊಲ್ಲಲು ಬಂದ ಪೂತನೆಯನ್ನು ಕೊಂದಿರುವನು. ಕೇಶಿ ಮತ್ತು ಅರಿಷ್ಟ ಎಂಬ ಇಬ್ಬರು ದಾನವರನ್ನೂ ಸಂಹರಿಸಿದನು. ಇವನು ವೃಂದಾವನದಲ್ಲಿ ಗೋಪಿಕಾಸ್ತ್ರೀಯರೊಡನೆ ವಿಹರಿಸಿದನು. ಅನಂತರ ಬಲರಾಮಾದಿಗಳೊಡನೆ ಮಥುರಾಪಟ್ಟಣಕ್ಕೆ ಹೋದಾಗ, ಅಲ್ಲಿರುವ ಜನರು ಇವನನ್ನು ನೋಡಿ ಆನಂದ ಪಟ್ಟರು. ಅಲ್ಲಿ ಕಂಸ ಸಂಹಾರ ಮಾಡಿ, ಸಾಂದೀಪನಿ ಎಂಬ ಗುರುಗಳಲ್ಲಿ ನೆಪ ಮಾತ್ರಕ್ಕೆ ವಿದ್ಯಾಭ್ಯಾಸ ಮಾಡಿ ಬಂದು, ವಸುದೇವ ಮೊದಲಾದ ಬಂಧುಗಳನ್ನು ಆನಂದಪಡಿಸಿದನು. ಭೀಷ್ಮಕನ ಮಗಳಾದ ರಕ್ಮಿಣಿಯನ್ನು ವರಿಸಿ, ತನ್ನೊಡನೆ ಯುದ್ಧಕ್ಕೆ ಬಂದ ಅವಳ ಅಣ್ಣನಾದ ರುಕ್ಮಿಯನ್ನು ಗೆದ್ದು ದ್ವಾರಕೆಗೆ ತೆರಳಿದನು. ತಾಯಿಯಾದ ಅದಿತಿದೇವಿಯ ಕುಂಡಲಗಳನ್ನು ಅಪಹರಿಸಿದ ನರಕಾಸುರನನ್ನೂ, ಅವನ ಸೇನಾಪತಿಯಾದ ಮುರನನ್ನೂ ಕೊಂದು ನರಕಕ್ಕೆ ಕಳುಹಿಸಿದನು. ಅಸುರಾವೇಶದಿಂದ ಗರ್ವಿತನಾದ ಇಂದ್ರನನ್ನು ಸೋಲಿಸಿ, ದೇವಲೋಕದ ಪಾರಿಜಾತವನ್ನು ಭೂಮಿಗೆ ತಂದು, ಸತ್ಯಭಾಮೆಯೊಡನೆ ದ್ವಾರಕೆಗೆ ತೆರಳಿ ಪಾರಿಜಾತ ವೃಕ್ಷವನ್ನು ಅಲ್ಲಿ ನೆಡೆಸಿದನು. ಕಾಲವನ್ನು ಎದುರು ನೋಡುತ್ತಾ ಈ ಶ್ರೀಕೃಷ್ಣನು ತನ್ನ ಪ್ರಿಯಪಾಂಡವರ ಸಂಪತ್ತನ್ನು ದುರ್ಯೋಧನನು ಜೂಜಿನಲ್ಲಿ ಅಪಹರಿಸಿದರೂ ಸುಮ್ಮನಿದ್ದನು. ಅನಂತರ ನಡೆದ ಕುರುಪಾಂಡವರ ಯುದ್ಧದಲ್ಲಿ ತಾನು ಪಾಂಡವರ ಪಕ್ಷದಲ್ಲಿದ್ದು ಅವರಿಗೆ ಜಯಗಳಿಸಿಕೊಟ್ಟು ಕುರು ರಾಜ್ಯವನ್ನು

ಪಾಂಡವರಲ್ಲಿ ಜ್ಯೇಷ್ಠನಾದ ಧರ್ಮರಾಜನಿಗಿತ್ತನು. ಶ್ರೀಕೃಷ್ಣನ ಪರಂಧಾಮಗಮನ ಕಾಲದಲ್ಲಿ ರುಕ್ಮಿಣಿಯು ಅಗ್ನಿಪ್ರವೇಶ ಮಾಡಿದಳು. ಬಲರಾಮನು ತನ್ನ ಮೂಲರೂಪವಾದ ಶೇಷ ರೂಪದಲ್ಲಿ ಐಕ್ಯ ಹೊಂದಿದನು. ಶ್ರೀಕೃಷ್ಣನು ತನ್ನ ಮೂಲರೂಪದಲ್ಲಿ ಐಕ್ಯ ಹೊಂದಿದನು.

ಹೀಗೆಯೇ, ಈ ನಾರಾಯಣನು ಇತರಾದೇವಿಯಲ್ಲಿ ಮಹಿದಾಸನಾಗಿ ಅವತರಿಸಿ ವೈಷ್ಣವ ತಂತ್ರಶಾಸ್ತ್ರವನ್ನು ರಚಿಸಿದನು. ವಿಷ್ಣು ಯಶಸ್ಸು ಎಂಬ ಬ್ರಾಹ್ಮಣನಿಂದ ಕಲ್ಕಿಯಾಗಿ ಅವತರಿಸಿ, ಹರಿತವಾದ ಆಯುಧಗಳಿಂದ ಕಳ್ಳರನ್ನೂ, ದುಷ್ಟರನ್ನೂ ಸಂಹರಿಸಿದನು. ರುಚಿಪ್ರಜಾಪತಿಯ ಪತ್ನಿಯಾದ ಸ್ವಾಯಂಭುವಮನುವಿನ ಮಗಳಾದ ಆಕೂತಿಯಲ್ಲಿ ಯಜ್ಞನೆಂಬ ಹೆಸರಿನಿಂದ ಅವತರಿಸಿ ದೇವತೆಗಳನ್ನು ತನ್ನ ಮಕ್ಕಳನ್ನಾಗಿ ಪಡೆದನು. ಕರ್ದಮಪ್ರಜಾಪತಿಯ ಹೆಂಡತಿಯಾದ ದೇವಹೂತಿಯಲ್ಲಿ ಕಪಿಲನಾಗಿ ಅವತರಿಸಿ ಸಾಂಖ್ಯಯೋಗಶಾಸ್ತ್ರಗಳನ್ನು ರಚಿಸಿದನು. ಸಮುದ್ರಮಥನಕಾಲದಲ್ಲಿ ಧನ್ವಂತರಿ ಮತ್ತು ಮೋಹಿನೀರೂಪಗಳನ್ನು ತಾಳಿ ದೇವತೆಗಳಿಗೆ ಮಾತ್ರ ಅಮೃತವು ಸಿಗುವಂತೆ ಹಂಚಿದನು. ಅತ್ರಿಮುನಿಯ ಪತ್ನಿಯಾದ ಅನಸೂಯೆಯಲ್ಲಿ ದತ್ತಾತ್ರೇಯನಾಗಿ ಜನಿಸಿದವನೂ ಈತನೇ. ಇವನೇ ಸನತ್ಕುಮಾರನಾಗಿಯೂ ಅವತರಿಸಿ ಭಕ್ತರಾದ ಸಜ್ಜನರಿಗೆ ಜ್ಞಾನವನ್ನು ಉಪದೇಶಿಸಿ ಮೋಕ್ಷಸ್ಥಾನವನ್ನು ಕೊಟ್ಟನು. ಋಷಭನೆಂಬ ಚಕ್ರವರ್ತಿಯಾಗಿಯೂ, ಹಂಸನಾಗಿಯೂ ಅವತರಿಸಿ ಸನಕಾದಿಗಳಿಗೆ ಪರತತ್ತ್ವದ ಉಪದೇಶವನ್ನು ಮಾಡಿದ್ದಾನೆ. ನರ, ನಾರಾಯಣ, ಹರಿ, ಕೃಷ್ಣರೂಪಗಳು ಯಮಧರ್ಮನ ಮಕ್ಕಳು. ಅವರಲ್ಲಿ ನರನು ಶೇಷನು. ಉಳಿದ ಮೂರೂ ರೂಪಗಳು ಭಗವಂತನ ಅವತಾರಗಳು. ಆ ಶೇಷಾವತಾರನಾದ ನರನಿಗೆ ಸೋದರನಾಗಿ, ತಪಸ್ಸನ್ನು ಮಾಡುತ್ತಿದ್ದಾನೆ. ಇಂತಹ ಅನೇಕಾವತಾರಗಳನ್ನು ಮಾಡಿ ದುಷ್ಟಶಿಕ್ಷಣ-ಶಿಷ್ಟಪರಿಪಾಲನ ಮಾಡಿದ ಶ್ರೀಮನ್ನಾರಾಯಣನೆ, ನಿನಗೆ ಸಾಷ್ಟಾಂಗ ನಮಸ್ಕಾರಗಳು. ಈ ರೀತಿ ಶ್ರೀಪೂರ್ಣಪ್ರಜ್ಞರು ನಾರಾಯಣನನ್ನು ಧ್ಯಾನಿಸಿ, ವಂದಿಸಿ ಆ ಶ್ರೀವ್ಯಾಸನಾರಾಯಣರ ಹತ್ತಿರದಲ್ಲಿ ಕುಳಿತರು.

ಅನಂತರ ಶ್ರೀನಾರಾಯಣನು ಶ್ರೀಮಧ್ವಾಚಾರ್ಯರನ್ನು ಕುರಿತು ಹೀಗೆಂದನು. ನಾನೀಗ ನಿನ್ನಲ್ಲಿ ಒಂದು ಉತ್ತಮವಾದ ದೇವಕಾರ್ಯವನ್ನು ಹೇಳುತ್ತಿದ್ದೇನೆ. ಇದನ್ನು ನೆರವೇರಿಸಿ ನಿನ್ನ ಮೂರನೆಯ ಅವತಾರವನ್ನು ನೀನು ಸಫಲಗೊಳಿಸು. ಈಗ ಮಾಯಾವಾದಿಗಳ ದುರ್ಭಾಷ್ಯದಿಂದ ತತ್ತ್ವಜ್ಞಾನವು ಮರೆಯಾಗಿದೆ. ಆದುದರಿಂದ ನೀನು ಆ ವ್ಯಾಖ್ಯಾನವನ್ನು ಖಂಡಿಸಿ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ರಚಿಸಿ ಶೃತಿಸ್ಮೃತಿಗಳ ನಿಜವಾದ ಅರ್ಥವನ್ನು ಸ್ಪಷ್ಟಪಡಿಸು.

ಇದನ್ನು ಕೇಳಿದ ಶ್ರೀಪೂರ್ಣಪ್ರಜ್ಞರು ಆ ವ್ಯಾಸನಾರಾಯಣರ ಅಗಲಿಕೆಯನ್ನು ಸಹಿಸಲಾರದೆ ಸ್ವಾಮಿ ! ನಾನು ಇಲ್ಲಿಯೇ ಇದ್ದು ತಮ್ಮಿರ್ವರನ್ನು ಸೇವಿಸುವಂತೆ ಅನುಗ್ರಹಿಸಿರಿ. ಈಗ ಪ್ರಪಂಚದಲ್ಲಿ ತತ್ತ್ವಜ್ಞಾನಕ್ಕೆ ಯೋಗ್ಯರಾದ ಜನರೇ ಇಲ್ಲ. ಅಯೋಗ್ಯರಿಗೆ ತತ್ತ್ವೋಪದೇಶ ಮಾಡಿದರೆ ನಾಯಿಗೆ ಯಜ್ಞದ ಹವಿಸ್ಸನ್ನು ಕೊಟ್ಟಂತಾಗುವುದು ಎಂದರು. ಆಗ ಶ್ರೀನಾರಾಯಣನು, ಪೂರ್ಣಪ್ರಜ್ಞ ! ಭೂಮಿಯಲ್ಲಿ ಅನೇಕ ಮಂದಿ ಸಜ್ಜನರಿದ್ದಾರೆ. ಅವರು ಸಹವಾಸದೋಷದಿಂದ ದುಷ್ಟರಾಗಿ ತೋರುತ್ತಾರೆ. ಕೆಸರಿನಲ್ಲಿ ಹೂತುಹೋದ ಮಣಿಗಳನ್ನು ಆರಿಸಿ ಶುದ್ಧಪಡಿಸುವಂತೆ ಇಂತಹವರನ್ನು ಆರಿಸಿ, ಉಪದೇಶದಿಂದ ಜ್ಞಾನಿಗಳನ್ನಾಗಿ ಮಾಡು ಎಂದನು. ಶ್ರೀಮದಾನಂದತೀರ್ಥರು ಶ್ರೀನಾರಾಯಣನ ಅಪ್ಪಣೆಯನ್ನು ಮೀರಲಾರದೆ ಶಿರಸಾವಹಿಸಿದರು. ಭಕ್ತಿಯಿಂದ ವಂದಿಸಿದರು. ಆಗ ಆ ನಾರಾಯಣಾಶ್ರಮದಲ್ಲಿರುವ ಶ್ರೀ ವ್ಯಾಸ-ನಾರಾಯಣಮಧ್ವರು ಅಗ್ನಿತ್ರಯದಂತೆ ಜಾಜ್ವಲ್ಯಮಾನರಾಗಿ ಆನಂದದಿಂದ ಮೆರೆದರು.



॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಅಷ್ಟಮಃ ಸರ್ಗಃ

**ಅವತಾರಿಕಾ**— ಶ್ರೀಮನ್ಮಧ್ವಾಚಾರ್ಯರು ಬದರಿಕಾಶ್ರಮದಲ್ಲಿ ಒಂದು ದಿನ ಏಕಾಂತದಲ್ಲಿ ತತ್ತ್ವರಹಸ್ಯವನ್ನು ಅರಿಯುವುದಕ್ಕಾಗಿ ಶ್ರೀವೇದವ್ಯಾಸರ ಬಳಿಗೆ ಬಂದುದನ್ನು ವಿವರಿಸುತ್ತಾರೆ.

**ಪ್ರತಿಭಾಪ್ರಭಾವ (ಭಾಪ್ರ) ಮುಖಸದ್ಗುಣೈರ್ನಿಜೈ**
**ರತಿವಿಸ್ಮಯಂ ನಿಯಮಿನಾಂ ಮನೋ ನಯನ್ ।**
**ಪುರುಧೀಃ ಕದಾಚಿದಥವೇದನಾಯಕಂ**
**ವಿಜನೇ ಶನೈರುಪಸಸಾದ ತಂ ವನೇ ॥ 1 ॥**

**ಪದಚ್ಛೇದ**— ಪ್ರತಿಭಾಪ್ರಭಾವ (ಭಾಪ್ರ) ಮುಖಸದ್ಗುಣೈಃ, ನಿಜೈಃ, ಅತಿವಿಸ್ಮಯಂ, ನಿಯಮಿನಾಂ, ಮನಃ, ನಯನ್, ಪುರುಧೀಃ, ಕದಾಚಿತ್, ಅಥ, ವೇದನಾಯಕಂ, ವಿಜನೇ, ಶನೈಃ, ಉಪಸಸಾದ, ತಂ, ವನೇ ।

**ಅನ್ವಯ**— ಅಥ, ನಿಜೈಃ, ಪ್ರತಿಭಾಪ್ರಭಾವಮುಖಸದ್ಗುಣೈಃ, ನಿಯಮಿನಾಂ, ಮನಃ, ಅತಿವಿಸ್ಮಯಂ, ನಯನ್, ಪುರುಧೀಃ, ಕದಾಚಿತ್, ವೇದನಾಯಕಂ, ತಂ, ವನೇ, ವಿಜನೇ, ಶನೈಃ, ಉಪಸಸಾದ ।

**ಅನ್ವಯಾರ್ಥ**—

**ಅಥ** = ವೇದವ್ಯಾಸರನ್ನು ದರ್ಶನ ಮಾಡಿದ ಮೇಲೆ, ಬದರಿಕಾಶ್ರಮದಲ್ಲಿ ವಾಸ ಮಾಡಿದ ನಂತರ,

**ನಿಜೈಃ** = ಸ್ವಾಭಾವಿಕವಾದ ತಮ್ಮ,

**ಪ್ರತಿಭಾಪ್ರಭಾವ (ಭಾಪ್ರ) ಮುಖಸದ್ಗುಣೈಃ**-

**ಪ್ರತಿಭಾ** = ಹೊಸ ಹೊಸ ವಿಷಯಗಳನ್ನು ಸ್ಫುರಿಸುತ್ತಿರುವ ಬುದ್ಧಿ ವಿಶೇಷವೂ

**ಪ್ರಭಾವ** = ಬ್ರಹ್ಮವರ್ಚಸ್ಸು (ತೇಜಸ್ಸು)

**ಪ್ರಮುಖ** = ಮೊದಲಾಗಿ ಉಳ್ಳ,

**ಸದ್ಗುಣೈಃ** = ಉತ್ತಮ ಗುಣಗಳಿಂದ

**ನಿಯಮಿನಾಂ** = ಮುನಿಗಳ

**ಮನಃ** = ಮನಸ್ಸನ್ನು (ಮನಸ್ಸಿಗೆ)

**ಅತಿವಿಸ್ಮಯಂ** = ಅತ್ಯಂತ ಆಶ್ಚರ್ಯವನ್ನು

**ನಯನ್** = ಹೊಂದಿಸುತ್ತಿರುವ

**ಪುರುಧೀಃ** = ಶ್ರೀಪೂರ್ಣಪ್ರಜ್ಞರು,

**ಕದಾಚಿತ್** = ಒಂದಾನೊಂದು ಸಮಯದಲ್ಲಿ

**ವೇದನಾಯಕಂ** = ವೇದಗಳಿಗೆ ಒಡೆಯರಾದ

**ತಂ** = ಆ ವೇದವ್ಯಾಸರನ್ನು

**ವನೇ** = ಕಾಡಿನಲ್ಲಿ

**ವಿಜನೇ** = ಗುಟ್ಟಿನಲ್ಲಿ (ರಹಸ್ಯವಾಗಿ)

**ಶನೈಃ** = ಮೆಲ್ಲನೆ

**ಉಪಸಸಾದ** = ಸಮೀಪಿಸಿದರು.

**ತಾತ್ಪರ್ಯ**— ಪೂರ್ಣಪ್ರಜ್ಞರಲ್ಲಿ ಸ್ವಭಾವಸಿದ್ಧವಾದ ಪ್ರತಿಭಾಶಕ್ತಿ, ಬ್ರಹ್ಮವರ್ಚಸ್ಸಿನ ಕಾಂತಿ ಮುಂತಾದ ಉತ್ತಮವಾದ ಗುಣಗಳಿದ್ದುವು. ಈ ಗುಣಗಳನ್ನು ಕಂಡು ಬದರಿಕಾಶ್ರಮದಲ್ಲಿರುವ ಮುನಿಗಳಿಗೆ ಆಶ್ಚರ್ಯವಾಗುತ್ತಿತ್ತು. ಶ್ರೀವೇದವ್ಯಾಸರ ಜೊತೆಗೆ ಬದರಿಕಾಶ್ರಮದಲ್ಲಿ ವಾಸಿಸುತ್ತಿರುವಾಗ ಒಂದಾನೊಂದು ದಿನ ಅವರು ಆ ನಿರ್ಜನಾರಣ್ಯದಲ್ಲಿಯೂ ಏಕಾಂತದಲ್ಲಿ ಶ್ರೀವೇದವ್ಯಾಸರಿಂದ ವಿಶೇಷ ವಿಷಯಗಳನ್ನು ತಿಳಿದುಕೊಳ್ಳಲು ಅವರ ಬಳಿಗೆ ಹೋದರು. (ಉಪಸತ್ತಿ ಮಾಡಿದರು)

**ವಿಗ್ರಹ**—

**ಪ್ರತಿಭಾಪ್ರಭಾವಮುಖಸದ್ಗುಣೈಃ**— ಪ್ರತಿಭಾ ಚ ಪ್ರಭಾವಶ್ಚ (ಪ್ರಭಾಚ) ಪ್ರತಿಭಾಪ್ರಭಾವೌ, (ಪ್ರತಿಭಾಪ್ರಭೇ) ಪ್ರತಿಭಾಪ್ರಭಾವೌ (ಪ್ರತಿಭಾಪ್ರಭೇ) ಪ್ರಮುಖೌ (ಪ್ರಮುಖೇ) ಯೇಷಾಂ ತೇ ಪ್ರತಿಭಾಪ್ರಭಾ (ವ) (ಪ್ರ) ಮುಖಾಃ, ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಪ್ರತಿಭಾಪ್ರಭಾವಮುಖಾಶ್ಚ ತೇ ಸದ್ಗುಣಾಶ್ಚ ಪ್ರತಿಭಾಪ್ರಭಾವಮುಖಸದ್ಗುಣಾಃ, ತೈಃ ಪ್ರತಿಭಾಪ್ರಭಾವ (ಭಾಪ್ರ) ಮುಖಸದ್ಗುಣೈಃ ।

**ಅತಿವಿಸ್ಮಯಂ**— ಅತ್ಯಂತಂ ವಿಸ್ಮಯಃ ಅತಿವಿಸ್ಮಯಃ, ತಂ ಅತಿವಿಸ್ಮಯಂ ।

**ನಿಯಮಿನಾಂ**— ನಿಯಮಃ ಏಷಾಂ ಅಸ್ತೀತಿ ನಿಯಮಿನಃ, ತೇಷಾಂ ನಿಯಮಿನಾಂ ।

**ಪುರುಧೀಃ**— ಪುರುಃ ಧೀಃ ಯಸ್ಯ ಸಃ ಪುರುಧೀಃ ।

**ವೇದನಾಯಕಂ**— ವೇದಾನಾಂ ನಾಯಕಃ ವೇದನಾಯಕಃ ।

ವಿಜನೇ— ವಿಗತಾಃ ಜನಾಃ ಯಸ್ಮಾತ್ ಸಃ ವಿಜನಃ, ತಸ್ಮಿನ್ ವಿಜನೇ ।

**ಕ್ರಿಯಾಪದ**— 'ಉಪ' ಉಪಸರ್ಗಪೂರ್ವಕಾತ್ ಷದ್ಲ್ವಿಶರಣ ಗತ್ಯವಸಾದನೇಷು ಇತಿ ವಿಶರಣಗತ್ಯವಸಾದ-ನಾರ್ಥಕಾತ್ ಸದ್‌ಧಾತೋಃ ಭೂತಾನದ್ಯತನ ಪರೋಕ್ಷೇ ಲಿಟಿ ಪ್ರಥಮಪುರುಷೇ ಏಕವಚನೇ ''ಉಪಸಸಾದ'' ಇತಿ ರೂಪಮ್ ।

ಉಪ-ಸಸಾದ ಸೇದತುಃ ಸೇದುಃ, ಸೇದಿಥ-ಸಸತ್ಥ ಸೇದಥುಃ ಸೇದ, ಸಸಾದ-ಸಸದ ಸೇದಿವ ಸೇದಿಮ ॥

**ಪ್ರಯೋಗ**— ಪುರುಧೀಃ ವೇದನಾಯಕಂ ಉಪಸಸಾದ (ಕರ್ತರಿ) । ಪುರುಧಿಯಾ ವೇದನಾಯಕಃ ಉಪಸೇದೇ (ಕರ್ಮಣಿ) ।

**ವೃತ್ತ**— ಸಜಸಾ, ಜಗೌ ಚ, ಯದಿಮಂಜು ಭಾಷಿಣೀ । ಪ್ರತಿಭಾ, ಪ್ರಭಾಪ್ರ, ಮುಖಸ, ದ್ಗುಣೈರ್ನಿ, ಜೈಃ

ಈ ಲಕ್ಷಣದಂತೆ ಈ ಸರ್ಗದಲ್ಲಿ 53ನೆಯ ಶ್ಲೋಕದವರೆಗೆ ಮಂಜುಭಾಷಿಣೀ ವೃತ್ತವು ಇದೆ.

★ ★ ★

**ಅವತಾರಿಕಾ—** ಶ್ರೀವೇದವ್ಯಾಸರಿಗೆ ಶ್ರೀಮಧ್ವರ ಗುರುತ್ವವೂ, ಶ್ರೀಮಧ್ವಾಚಾರ್ಯರಿಗೆ ಶ್ರೀವೇದವ್ಯಾಸರ ಶಿಷ್ಯತ್ವವೂ ಯೋಗ್ಯವಾದುದೆಂದು ವರ್ಣಿಸುತ್ತಾರೆ.

**ಸುವಿಶೇಷಶೇಷವದಶೇಷವರ್ಣಿತ-**
**ಪ್ರತಿಬೋದ್ಧುರಸ್ಯ ನನು ಶಿಷ್ಯತೋಚಿತಾ ।**
**ಗುರುಮಾನಸಸ್ಯ ಗುರುತಾऽಪಿ ಸತ್ಪತೇ-**
**ರಿತಿ ಸೋಪಸತ್ತಿರಮರ್ತ್ಯೈರಮಾನ್ಯತ ॥ 2 ॥**

**ಪದಚ್ಛೇದ—** ಸುವಿಶೇಷಶೇಷವದಶೇಷವರ್ಣಿತಪ್ರತಿಬೋದ್ಧುಃ, ಅಸ್ಯ, ನನು, ಶಿಷ್ಯತಾ, ಉಚಿತಾ, ಗುರು-ಮಾನಸಸ್ಯ, ಗುರುತಾ, ಅಪಿ, ಸತ್ಪತೇಃ, ಇತಿ, ಸಾ, ಉಪಸತ್ತಿಃ, ಅಮರ್ತ್ಯೈಃ, ಅಮಾನ್ಯತ ।

**ಅನ್ವಯ—** ಸುವಿಶೇಷಶೇಷವದಶೇಷವರ್ಣಿತಪ್ರತಿಬೋದ್ಧುಃ, ಗುರುಮಾನಸಸ್ಯ, ಅಸ್ಯ, ಶಿಷ್ಯತಾ, ಉಚಿತಾ, ನನು, ಸತ್ಪತೇಃ (ಅಸ್ಯ = ಈ ವೇದವ್ಯಾಸರಿಗೆ) ಗುರುತಾऽಪಿ (ಉಚಿತಾ) ಇತಿ, ಸಾ, ಉಪಸತ್ತಿಃ, ಅಮರ್ತ್ಯೈಃ, ಅಮಾನ್ಯತ ।

**ಅನ್ವಯಾರ್ಥ—**

**ಸುವಿಶೇಷಶೇಷವದಶೇಷವರ್ಣಿತಪ್ರತಿಬೋದ್ಧುಃ-**

**ಸುವಿಶೇಷ** = ಒಳ್ಳೆಯ ರಹಸ್ಯವಾದ ತತ್ತ್ವಗಳ

**ಶೇಷವತ್** = ಉಳಿದ ಅಂಶವುಳ್ಳ

**ಅಶೇಷ** = ಪೂರ್ತಿಯಾಗಿ

**ವರ್ಣಿತ** = ಹೇಳಲ್ಪಟ್ಟ ಪ್ರಮೇಯವನ್ನು

**ಪ್ರತಿಬೋದ್ಧುಃ** = ಚೆನ್ನಾಗಿ ತಿಳಿಯುವ

**ಗುರುಮಾನಸಸ್ಯ** = ಶ್ರೇಷ್ಠವಾದ ಮನಸ್ಸುಳ್ಳ ಶ್ರೀಪೂರ್ಣಪ್ರಜ್ಞರಿಗೆ

**ಅಸ್ಯ** = ಈ ವೇದವ್ಯಾಸರ

**ಶಿಷ್ಯತಾ** = ಶಿಷ್ಯರಾಗುವಿಕೆಯು

**ಉಚಿತಾ ನನು** = ಯೋಗ್ಯವಾಗಿದೆಯಷ್ಟೆ ?

**ಸತ್ಪತೇಃ** = ಸಜ್ಜನರಕ್ಷಕರಾದ (ಅಸ್ಯ) ಈ ವೇದವ್ಯಾಸರಿಗೆ

**ಗುರುತಾऽಪಿ** = ಗುರುತ್ವವೂ (ಉಚಿತಾ = ಯೋಗ್ಯವಾದುದು)

**ಇತಿ** = ಎಂಬುದಾಗಿ

**ಸಾ ಉಪಸತ್ತಿಃ** = ಆ ಗುರುಸಮೀಪಪ್ರಾಪ್ತಿಯು

**ಅಮರ್ತ್ಯೈಃ** = ದೇವತೆಗಳಿಂದ

**ಅಮಾನ್ಯತ** = ಗೌರವಿಸಲ್ಪಟ್ಟಿತ್ತು.

**ತಾತ್ಪರ್ಯ—** ಬ್ರಹ್ಮಾದಿ ಸಮಸ್ತ ದೇವತೆಗಳಿಗೂ ಶ್ರೀಮನ್ನಾರಾಯಣನೇ ಅವರವರ ಯೋಗ್ಯತೆಗೆ ತಕ್ಕಂತೆ ಪರತತ್ತ್ವವನ್ನು ಬೋಧಿಸುವನು. ಆದರೂ ಬ್ರಹ್ಮ ವಾಯುಗಳಿಗೆ ಹೇಗೆ ಬೋಧಿಸುವನೋ ಹಾಗೆ ರುದ್ರಾದಿಗಳಿಗೆ ಬೋಧಿಸುವುದಿಲ್ಲ. ಕೆಲವು ರಹಸ್ಯವಿಶೇಷಗಳನ್ನು ಉಳಿಸಿಕೊಂಡೇ ಅವರ ಯೋಗ್ಯತೆಗೆ ತಕ್ಕಷ್ಟು ತತ್ತ್ವವಿಶೇಷಗಳನ್ನು ಮಾತ್ರವೇ ಬೋಧಿಸುವನು. ಆದುದರಿಂದ ರುದ್ರಾದಿಗಳಿಗೆ ತತ್ತ್ವವನ್ನು ಬೋಧಿಸುವಾಗ ಪರಮಾತ್ಮನು ಯಾವ

ತತ್ತ್ವವಿಶೇಷಗಳನ್ನು ಉಳಿಸಿಕೊಂಡಿರುವನೋ ಅವುಗಳನ್ನೇ ಬ್ರಹ್ಮ ವಾಯುಗಳಿಗೆ ವರ್ಣಿಸುತ್ತಾನೆ. ಪ್ರಕೃತ ಈ ಮಧ್ವಾಚಾರ್ಯರು ಮೂಲವಾಯುದೇವರ ಅಂಶಸಂಭೂತರಾದುದರಿಂದ ಅವರು ಶ್ರೀ ವೇದವ್ಯಾಸರು ಹೇಳುವ ಎಲ್ಲಾ ರಹಸ್ಯತತ್ತ್ವಗಳನ್ನು ತಿಳಿಯಲು ಸಮರ್ಥರು. ಅವರು ಶ್ರೀವೇದವ್ಯಾಸರಿಗೆ ಶಿಷ್ಯರಾಗುವುದೂ, ಸಜ್ಜನರಿಗೆ ಸ್ವಾಮಿಯಾದ ಈ ಶ್ರೀವೇದವ್ಯಾಸರು ಶ್ರೀಮಧ್ವರಿಗೆ ಸಾಕ್ಷಾತ್ತಾಗಿ ಗುರುವಾಗುವುದೂ ಯೋಗ್ಯವಾಗಿದೆ ಎಂದು ದೇವತೆಗಳು ಈ ಗುರುಶಿಷ್ಯಸಮಾಗಮವನ್ನು ಗೌರವಿಸಿದರು.

ವಿಗ್ರಹ—

**ಸುವಿಶೇಷಶೇಷವದಶೇಷವರ್ಣಿತಪ್ರತಿಬೋದ್ಧುಃ—** ಶೋಭನಾಶ್ಚ ತೇ ವಿಶೇಷಾಶ್ಚ ಸುವಿಶೇಷಾಃ, ಸುವಿಶೇಷಾಣಾಂ ಶೇಷಾಃ ಸುವಿಶೇಷಶೇಷಾಃ, ಸುವಿಶೇಷಶೇಷಾಃ ಅಸ್ಯ ಸಂತೀತಿ ಸುವಿಶೇಷಶೇಷವತ್, ಅಶೇಷಂ ಚ ತತ್ ವರ್ಣಿತಂ ಚ ಅಶೇಷವರ್ಣಿತಂ, ಸುವಿಶೇಷಶೇಷವಚ್ಚ ತತ್ ಅಶೇಷವರ್ಣಿತಂ ಚ ಸುವಿಶೇಷಶೇಷವದಶೇಷವರ್ಣಿತಂ, ಸುವಿಶೇಷಶೇಷವದಶೇಷವರ್ಣಿತಸ್ಯ ಪ್ರತಿಬೋದ್ಧಾ ಸುವಿಶೇಷ-ಶೇಷವದಶೇಷವರ್ಣಿತಪ್ರತಿಬೋದ್ಧಾ, ತಸ್ಯ ಸುವಿಶೇಷಶೇಷವದಶೇಷವರ್ಣಿತಪ್ರತಿಬೋದ್ಧುಃ ।

**ಶಿಷ್ಯತಾ—** ಶಿಷ್ಯಸ್ಯ ಭಾವಃ ಶಿಷ್ಯತಾ ।

**ಗುರುಮಾನಸಸ್ಯ—** ಗುರು ಮಾನಸಂ ಯಸ್ಯ ಸಃ ಗುರುಮಾನಸಃ, ತಸ್ಯ ಗುರುಮಾನಸಸ್ಯ ।

**ಗುರುತಾ—** ಗುರೋಃ ಭಾವಃ ಗುರುತಾ ।

**ಸತ್ಪತೇಃ—** ಸತಾಂ ಪತಿಃ ಸತ್ಪತಿಃ ತಸ್ಯ ಸತ್ಪತೇಃ ।

**ಕ್ರಿಯಾಪದ—** ಅಮಾನ್ಯತ- ಮಾನಪೂಜಾಯಾಂ ಇತಿ ಪೂಜಾರ್ಥಕಾತ್ ಮಾನಧಾತೋಃ ಕರ್ಮಣಿ ಅನದ್ಯತನ-ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಅಮಾನ್ಯತ'' ಇತಿ ರೂಪಮ್ ।

ಅಮಾನ್ಯತ ಅಮಾನ್ಯೇತಾಂ ಅಮಾನ್ಯಂತ,
ಅಮಾನ್ಯಥಾಃ ಅಮಾನ್ಯೇಥಾಂ ಅಮಾನ್ಯಧ್ವಂ,
ಅಮಾನ್ಯೇ ಅಮಾನ್ಯಾವಹೇ ಅಮಾನ್ಯಾಮಹೇ ॥

**ಪ್ರಯೋಗ—** ಸಾ ಉಪಸತ್ತಿಃ ಅಮರ್ತ್ಯೈಃ ಅಮಾನ್ಯತ (ಕರ್ಮಣಿ) । ತಾಂ ಉಪಸತ್ತಿಂ ಅಮರಾಃ ಅಮಾನಯನ್ (ಕರ್ತರಿ) ।

★ ★ ★

**ಅವತಾರಿಕಾ—** ಮೊದಲೇ ಜ್ಞಾನಪರಿಪೂರ್ಣರಾದ ಶ್ರೀಮನ್ಮಧ್ವಾಚಾರ್ಯರ ಹೃದಯದಲ್ಲಿ ಶ್ರೀವೇದವ್ಯಾಸರು ಮತ್ತಷ್ಟು ಹೆಚ್ಚಾದ ತತ್ತ್ವಜ್ಞಾನವನ್ನು ತುಂಬಿಸಿದರೆಂದು ವರ್ಣಿಸುತ್ತಾರೆ.

**ಪುರ ಏವ ಪೂರಿತಮಪೂರಯತ್ ಪುನ-**
**ರ್ನನು ಕೃಷ್ಣ ಏಷ ಪರಮಾರ್ಥಸಂಖ್ಯಯಾ ।**
**ಭಗವನ್ಮನಃ ಪುರಮಿವಾಯತಂ ಪುರಾ**
**ನಿಜಧಾಮ ತಾಂ ಚ ಜಗೃಹೇತದದ್ಭುತಮ್ ॥ 3 ॥**

**ಪದಚ್ಛೇದ—** ಪುರಃ, ಏವ, ಪೂರಿತಂ, ಅಪೂರಯತ್, ಪುನಃ, ನನು, ಕೃಷ್ಣಃ, ಏಷಃ, ಪರಮಾರ್ಥಸಂಖ್ಯಯಾ, ಭಗವನ್ಮನಃ, ಪುರಂ, ಇವ, ಆಯತಂ, ಪುರಾ, ನಿಜಧಾಮ, ತಾಂ, ಚ, ಜಗೃಹೇ, ತತ್, ಅದ್ಭುತಂ ।

**ಅನ್ವಯ—** ಏಷಃ ಪುರಃ ಏವ ಪರಮಾರ್ಥಸಂಖ್ಯಯಾ ಪೂರಿತಂ ನಿಜಧಾಮ ಆಯತಂ ಭಗವನ್ಮನಃ, ಪುರಾ (ಪೂರಿತಂ) ನಿಜಧಾಮ ಪುರಂ ಪರಮಾರ್ಥಸಂಖ್ಯಯಾ ಇವ ಪುನಃ ಅಪೂರಯತ್, ತತ್ ಚ ತಾಂ ಜಗೃಹೇ (ಇತಿ) ಅದ್ಭುತಂ ನನು ।

**ಅನ್ವಯಾರ್ಥ—**

**ಏಷಃ** = ಈ ವ್ಯಾಸರೂಪಿಯಾದ ಕೃಷ್ಣನು
**ಪುರಃ ಏವ** = ಮೊದಲೇ
**ಪರಮಾರ್ಥಸಂಖ್ಯಯಾ** = ತತ್ತ್ವಜ್ಞಾನದಿಂದ
**ಪೂರಿತಂ** = ತುಂಬಿದ
**ನಿಜಧಾಮ** = ತನ್ನ ಮನೆಯಾದ
**ಆಯತಂ** = ವಿಶಾಲವಾದ
**ಭಗವನ್ಮನಃ** = ಷಡ್ಗುಣೈಶ್ವರ್ಯಸಂಪನ್ನರಾದ ಶ್ರೀಮಧ್ವರ ಮನಸ್ಸನ್ನು
**ಪುರಾ** = ಹಿಂದೆ
**(ಪೂರಿತಂ** = ತುಂಬಿದ್ದ)
**ನಿಜಧಾಮ** = ತನ್ನ ಮನೆಯಾದ
**ಪುರಂ** = ದ್ವಾರಕಾ ಪಟ್ಟಣವನ್ನು
**ಪರಮಾರ್ಥಸಂಖ್ಯಯಾ ಇವ** = ಹೆಚ್ಚಾದ ಕೋಟಿ ಸಂಖ್ಯೆಯಂತೆ
**ಪುನಃ** = ತಿರುಗಿ
**ಅಪೂರಯತ್** = ತುಂಬಿಸಿದನು,
**ತತ್ ಚ** = ಆ ಮಧ್ವರ ಮನಸ್ಸು ಮತ್ತು ದ್ವಾರಕಾಪಟ್ಟಣವೂ
**ತಾಂ** = ಆ ತತ್ತ್ವಜ್ಞಾನವನ್ನು, ಬಹು ಸಂಪತ್ತನ್ನೂ,
**ಜಗೃಹೇ** = ಸ್ವೀಕರಿಸಿತು (ಇತಿ = ಎಂಬುದು)
**ಅದ್ಭುತಂ** = ಆಶ್ಚರ್ಯವು.

**ತಾತ್ಪರ್ಯ—** ಹಿಂದೆ ಶ್ರೀಕೃಷ್ಣನು ಅನೇಕ ಕೋಟಿ ಸಂಖ್ಯೆಯ ಹಣದಿಂದ ತುಂಬಿದ್ದ ತನ್ನ ವಾಸಸ್ಥಳವಾದ ದ್ವಾರಕಾ ಪಟ್ಟಣಕ್ಕೆ, ಜರಾಸಂಧ, ಕಾಲಯವನ, ನರಕಾಸುರ, ಬಾಣಾಸುರ ಮುಂತಾದವರನ್ನು ಕೊಂದು, ಪರಾಜಯಗೊಳಿಸಿ, ಅಲ್ಲಿದ್ದ ಅಸಂಖ್ಯಾತವಾದ ಧನವನ್ನು ಪುನಃ ತುಂಬಿದ್ದನು. ಹಾಗೆಯೇ ಈಗ ವ್ಯಾಸರೂಪಿಯಾದ ಕೃಷ್ಣನು ತನ್ನ ವಾಸಸ್ಥಳವಾದ ಶ್ರೀಮಧ್ವಾಚಾರ್ಯರ ಮನಸ್ಸು ಮೊದಲೇ ತುಂಬಿದ್ದರೂ ಪುನಃ ರುದ್ರಾದಿಗಳಿಗೆ ಮೀರಿದ ವಿಶೇಷ ವಿಷಯಕವಾದ ತತ್ತ್ವಜ್ಞಾನವನ್ನು ಅಲ್ಲಿ ತುಂಬಿದನು. ಈ ರೀತಿ ಮೊದಲೇ ತುಂಬಿಕೊಂಡಿದ್ದರೂ ದ್ವಾರಕಾಪಟ್ಟಣ ಮತ್ತು ಆಚಾರ್ಯರ ಮನಸ್ಸು ಮರಳಿ ತುಂಬಲು ಅವಕಾಶವಿರುವಷ್ಟು ವಿಶಾಲವಾದುದು. ಆಶ್ಚರ್ಯಕರ !

ವಿಗ್ರಹ—

**ಪರಮಾರ್ಥಸಂಖ್ಯಯಾ—** ಪರಮಾರ್ಥಾ ಚ ಸಾ ಸಂಖ್ಯಾ ಚ ಪರಮಾರ್ಥಸಂಖ್ಯಾ, ತಯಾ । ಪರಮಾಶ್ಚ ತೇ ಅರ್ಥಾಶ್ಚ ಪರಮಾರ್ಥಾಃ, ಪರಮಾರ್ಥಾನಾಂ ಸಂಖ್ಯಾ ಪರಮಾರ್ಥಸಂಖ್ಯಾ, ತಯಾ ಪರಮಾರ್ಥಸಂಖ್ಯಯಾ ।

**ಭಗವನ್ಮನಃ—** ಭಗಃ ಅಸ್ಯ ಅಸ್ತೀತಿ ಭಗವಾನ್, ಭಗವತಃ ಮನಃ ಭಗವನ್ಮನಃ ।

**ನಿಜಧಾಮ—** ನಿಜಂ ಚ ತತ್ ಧಾಮ ಚ ನಿಜಧಾಮ ।

**ಕ್ರಿಯಾಪದ— ಅಪೂರಯತ್**- ಪೂರೀ ಆಪ್ಯಾಯನೇ ಇತಿ ಅಪ್ಯಾಯನಾರ್ಥಕಾತ್ ಪೂರಧಾತೋಃ ಸಕರ್ಮಕಾತ್ ಕರ್ತರಿ, ಭೂತಾನದ್ಯತನಕ್ರಿಯಾರ್ಥಕಲಙ್ ಪ್ರಥಮಪುರುಷೇ ಏಕವಚನೇ ''ಅಪೂರಯತ್'' ಇತಿ ರೂಪಮ್ ।

ಅಪೂರಯತ್ ಅಪೂರಯತಾಂ ಅಪೂರಯನ್,
ಅಪೂರಯಃ ಅಪೂರಯತಂ ಅಪೂರಯತ,
ಅಪೂರಯಂ ಅಪೂರಯಾವ ಅಪೂರಯಾಮ ॥

**ಜಗೃಹೇ**- ಗ್ರಹ ಉಪಾದಾನೇ ಇತಿ ಉಪಾದಾನಾರ್ಥಕಾತ್ ಗ್ರಹಧಾತೋಃ ಭೂತಾನದ್ಯತನಪರೋಕ್ಷೇ ಲಿಟ ಪ್ರಥಮಪುರುಷೇ ಏಕವಚನೇ ''ಜಗೃಹೇ'' ಇತಿ ರೂಪಮ್।

ಜಗೃಹೇ ಜಗೃಹಾತೇ ಜಗೃಹಿರೇ, ಜಗೃಹಿಷೇ ಜಗೃಹಾಥೇ ಜಗೃಹಿಧ್ವೇ, ಜಗೃಹೇ ಜಗೃಹಿವಹೇ ಜಗೃಹಿಮಹೇ ॥

**ಪ್ರಯೋಗ—** ಏಷ ಕೃಷ್ಣಃ ಭಗವನ್ಮನಃ ಅಪೂರಯತ್ (ಕರ್ತರಿ) । ಏತೇನ ಕೃಷ್ಣೇನ ಭಗವನ್ಮನಃ ಅಪೂರ್ಯತ (ಕರ್ಮಣಿ) ತತ್ ತಾಂ ಜಗೃಹೇ (ಕರ್ತರಿ) । ತೇನ ಸಾ ಜಗೃಹೇ (ಕರ್ಮಣಿ) ।

★ ★ ★

**ಅವತಾರಿಕಾ—** ಶ್ರೀಮನ್ಮಧ್ವಾಚಾರ್ಯರು ವೇದಭಾರತ ಪುರಾಣಗಳ ರಹಸ್ಯತತ್ತ್ವಾರ್ಥಗಳನ್ನು ಅತ್ಯಲ್ಪಕಾಲದಲ್ಲಿಯೇ ಶ್ರವಣ ಮಾಡಿದರು.

**ಇತಿಹಾಸಸುಂದರಪುರಾಣಸೂತ್ರಸ-**
**ತ್ಕ್ರಿಯಪಂಚರಾತ್ರನಿಜಭಾವಸಂಯುತಮ್ ।**
**ಅಶೃಣೋದನಂತಹೃದನಂತತೋಽಚಿರಾತ್**
**ಪರಮಾರ್ಥಮಪ್ಯಗಣಿತಾಗಮಾವಲೇಃ ॥ 4 ॥**

**ಪದಚ್ಛೇದ—** ಇತಿಹಾಸಸುಂದರಪುರಾಣಸೂತ್ರಸತ್ಕ್ರಿಯಪಂಚರಾತ್ರನಿಜಭಾವಸಂಯುತಂ, ಅಶೃಣೋತ್, ಅನಂತ-ಹೃತ್, ಅನಂತತಃ, ಅಚಿರಾತ್, ಪರಮಾರ್ಥಂ, ಅಪಿ, ಅಗಣಿತಾಗಮಾವಲೇಃ ।

**ಅನ್ವಯ—** ಅನಂತಹೃತ್, ಅನಂತತಃ ಅಗಣಿತಾಗಮಾವಲೇಃ, ಇತಿಹಾಸ ಸುಂದರ ಪುರಾಣ ಸೂತ್ರ ಸತ್ಕ್ರಿಯ ಪಂಚರಾತ್ರ ನಿಜಭಾವ ಸಂಯುತಂ, ಪರಮಾರ್ಥಂ ಅಪಿ, ಅಚಿರಾತ್ ಅಶೃಣೋತ್ ।

**ಅನ್ವಯಾರ್ಥ—**

**ಅನಂತಹೃತ್** = ಅಪರಿಮಿತವಾದ ಜ್ಞಾನವುಳ್ಳ ಶ್ರೀಮಧ್ವರು,
**ಅನಂತತಃ** = ಅನಂತ ನಾಮಕರಾದ ಶ್ರೀವೇದವ್ಯಾಸ ದೇವರ ದೆಸೆಯಿಂದ
**ಅಗಣಿತಾಗಮಾವಲೇಃ** = ಅಸಂಖ್ಯಾಕವಾದ ವೇದಗಳ ಸಮೂಹದ
**ಇತಿಹಾಸಸುಂದರಪುರಾಣಸೂತ್ರಸತ್ಕ್ರಿಯಪಂಚರಾತ್ರನಿಜಭಾವಸಂಯುತಂ-**
**ಇತಿಹಾಸ** = ಭಾರತ ಮೂಲರಾಮಾಯಣವೆಂಬ ಇತಿಹಾಸಗಳು
**ಸುಂದರ** = ಸಾತ್ತ್ವಿಕವಾದ

**ಪುರಾಣ** = ಪುರಾಣಗಳ (ಪುರಾಣಗಳ ಸಾತ್ವಿಕ ಭಾಗಗಳ)

**ಸೂತ್ರ** = ಬ್ರಹ್ಮಸೂತ್ರಗಳು

**ಸತ್‌ಪ್ರಿಯ** = ವಿಷ್ಣುಭಕ್ತರಿಗೆ ಸಂತೋಷಪ್ರದವಾದ

**ಪಂಚರಾತ್ರ** = ಪಂಚರಾತ್ರಾಗಮದ, ಇವುಗಳ

**ನಿಜಭಾವ** = ಸ್ವಾಭಾವಿಕವಾದ ಮುಖ್ಯ ಅಭಿಪ್ರಾಯದಿಂದ

**ಸಂಯುತಂ** = ಕೂಡಿರುವ

**ಪರಮಾರ್ಥಂ ಅಪಿ** = ಉತ್ತಮವಾದ ಪ್ರತಿಪಾದ್ಯಾಭಿಪ್ರಾಯವನ್ನೂ

**ಅಚಿರಾತ್** = ಬೇಗನೆ

**ಅಶೃಣೋತ್** = ಕೇಳಿದರು.

**ತಾತ್ಪರ್ಯ**— ಮಹಾಭಾರತ ಮತ್ತು ಮೂಲರಾಮಾಯಣಗಳೆಂಬ ಇತಿಹಾಸಗಳು, ಸಾತ್ತ್ವಿಕ ಪುರಾಣಗಳು ಮತ್ತು ಸಾತ್ವಿಕವಾದ ಇತರ ಪುರಾಣ ಭಾಗಗಳು, ಬ್ರಹ್ಮಮೀಮಾಂಸಾಶಾಸ್ತ್ರ, ಸಜ್ಜನರಿಗೆ ಆನಂದಕರವಾದ ಪಂಚರಾತ್ರಾಗಮ ಇವುಗಳ ಸ್ವಾಭಾವಿಕವಾದ ಮುಖ್ಯ ಅಭಿಪ್ರಾಯಸಹಿತವಾಗಿ ಅನಂತವೇದಗಳ ಉತ್ತಮವಾದ ಅರ್ಥವನ್ನು ಶ್ರೀವೇದ-ವ್ಯಾಸರು ಪೂರ್ಣಜ್ಞಾನವುಳ್ಳವರಾದ ಶ್ರೀಮದಾನಂದತೀರ್ಥರಿಗೆ ಮತ್ತೂ ವಿಶೇಷರಹಸ್ಯಾರ್ಥಗಳ ಸಹಿತವಾಗಿ ಉಪದೇಶಿಸಿದರು. ಶ್ರೀಮಧ್ವರು ಬಹಳ ಬೇಗನೆ ಆ ವಿಷಯಗಳನ್ನು ಜಗದ್ಗುರುಗಳಾಗಿಯೂ, ತನಗೆ ವಿಶೇಷತಃ ಗುರುಗಳಾಗಿಯೂ ಇರುವ ಶ್ರೀವೇದವ್ಯಾಸರಿಂದ ಕೇಳಿದರು.

**ವಿಶೇಷಾಂಶ**— ''ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್'' ಎಂಬ ವಚನದಂತೆ ಸಾತ್ತ್ವಿಕವಾದ ಇತಿಹಾಸ ಪುರಾಣಾದಿಗಳಲ್ಲಿ ಹೇಳಿರುವಂತೆ ವೇದಾರ್ಥವನ್ನು ತಿಳಿಯಬೇಕು. ವೇದದ ಆಪಾತಾರ್ಥವನ್ನಾಗಲೀ, ರಾಜಸ ತಾಮಸ ಗ್ರಂಥಾನುಸಾರಿಯಾದ ಅರ್ಥವನ್ನಾಗಲೀ ಪ್ರಮಾಣವೆಂದು ತಿಳಿಯಬಾರದು.

**ವಿಗ್ರಹ**—

**ಇತಿಹಾಸಸುಂದರಪುರಾಣಸೂತ್ರಸತ್ಪ್ರಿಯಪಂಚರಾತ್ರನಿಜಭಾವಸಂಯುತಂ**— ಸುಂದರಾಣಿ ಚ ತಾನಿ ಪುರಾಣಾನಿ ಚ ಸುಂದರಪುರಾಣಾನಿ, ಸತಾಂ ಪ್ರಿಯಂ ಸತ್‌ಪ್ರಿಯಂ, ಸತ್‌ಪ್ರಿಯಂ ಚ ತತ್ ಪಂಚರಾತ್ರಂ ಚ ಸತ್‌ಪ್ರಿಯಪಂಚರಾತ್ರಂ, ಇತಿಹಾಸಶ್ಚ ಇತಿಹಾಸಶ್ಚ ಇತಿಹಾಸೌ, ಇತಿಹಾಸೌ ಚ ಸುಂದರಪುರಾಣಾನಿ ಚ ಸೂತ್ರಾಣಿ ಚ ಸತ್‌ಪ್ರಿಯಪಂಚರಾತ್ರಂ ಚ ಇತಿಹಾಸಸುಂದರಪುರಾಣ ಸೂತ್ರಸತ್‌ಪ್ರಿಯಪಂಚರಾತ್ರಾಣಿ, ನಿಜಶ್ಚಾಸೌ ಭಾವಶ್ಚ ನಿಜಭಾವಃ, ಇತಿಹಾಸಸುಂದರಪುರಾಣ-ಸೂತ್ರಸತ್ಪ್ರಿಯಪಂಚರಾತ್ರಾಣಾಂ ನಿಜಭಾವಃ ಇತಿಹಾಸಸುಂದರಪುರಾಣಸೂತ್ರಸತ್ಪ್ರಿಯಪಂಚರಾತ್ರ-ನಿಜಭಾವಃ, ಇತಿ ಭಾವೇನ ಸಂಯುತಃ, ತಂ ಇತಿಹಾಸಸುಂದರಪುರಾಣಸೂತ್ರಸತ್ಪ್ರಿಯಪಂಚರಾತ್ರ-ನಿಜಭಾವಸಂಯುತಂ ।

**ಅನಂತಹೃತ್**— ಅನಂತಂ ಹೃತ್ ಯಸ್ಯ ಸಃ ಅನಂತಹೃತ್ ।

**ಅನಂತತಃ**— ಅನಂತಾತ್ ಇತಿ ಅನಂತತಃ ।

**ಪರಮಾರ್ಥಂ**— ಪರಮಶ್ಚಾಸೌ ಅರ್ಥಶ್ಚ ಪರಮಾರ್ಥಃ, ತಂ ಪರಮಾರ್ಥಂ ।

**ಅಗಣಿತಾಗಮಾವಲೇಃ**— ಆಗಮಾನಾಂ ಆವಲಿಃ ಆಗಮಾವಲಿಃ, ಅಗಣಿತಾ ಚ ಸಾ ಆಗಮಾವಲಿಶ್ಚ ಅಗಣಿತಾಗಮಾವಲಿಃ, ತಸ್ಯಾಃ ಅಗಣಿತಾಗಮಾವಲೇಃ ।

ಕ್ರಿಯಾಪದ— ಶ್ರುಶ್ರವಣೇ ಇತಿ ಶ್ರವಣಾರ್ಥಕಾತ್ ಶ್ರುಧಾತೋಃ ಪರಸ್ಮೈಪದಿನಃ ಕರ್ತರಿ ಅನದ್ಯತನಭೂತೇ ಲಙ್, ಪ್ರಥಮಪುರುಷೇ ಏಕವಚನೇ ''ಅಶೃಣೋತ್'' ಇತಿ ರೂಪಮ್ ।

ಅಶೃಣೋತ್ ಅಶೃಣುತಾಂ ಅಶೃಣ್ವನ್, ಅಶೃಣೋಃ ಅಶೃಣುತಂ ಅಶೃಣುತ, ಅಶೃಣವಂ ಅಶೃಣುವ-ಅಶೃಣ್ವ ಅಶೃಣುಮ-ಅಶೃಣ್ಮ ॥

ಪ್ರಯೋಗ— ಅನಂತಹೃತ್ ಆಗಮಾವಲೇಃ ಪರಮಾರ್ಥಂ ಅಪಿ ಅಶೃಣೋತ್ (ಕರ್ತರಿ) । ಅನಂತಹೃದಾ ಆಗಮಾವಲೇಃ ಪರಮಾರ್ಥಃ ಅಪಿ ಅಶ್ರೂಯತ (ಕರ್ಮಣಿ) ।

★ ★ ★

ಅವತಾರಿಕಾ— ಹಿಂದೆ ಅನೇಕ ಜನ್ಮಗಳಲ್ಲಿ ಋಜುಶ್ರೇಷ್ಠರಾದ ಶ್ರೀಮಧ್ವಾಚಾರ್ಯರು ತತ್ತ್ವರಹಸ್ಯ-ವನ್ನು ಅರಿತವರಾದಾಗ್ಯೂ, ಶ್ರೀವ್ಯಾಸರು ವಿಶೇಷಾನುಗ್ರಹವನ್ನು ಮಾಡಿ ಮತ್ತೂ ವಿಶೇಷ ಪ್ರತಿಭೆಯುಳ್ಳವರನ್ನಾಗಿ ಮಾಡಿದರು.

**ಋಜುಪುಂಗವಸ್ಯ ಪರಿಜಾನತಃ ಸ್ವಯಂ**
**ಸಕಲಂ ತದಪ್ಯಲಮನಂತಜನ್ಮಸು ।**
**ಸ್ವಕೃತೋರ್ವನುಗ್ರಹಬಲಾದಮುಷ್ಯತಾಂ**
**ವಿಶಿಶೇಷ ಶೇಷಶಯನಃ ಪುನರ್ಧಿಯಮ್ ॥ 5 ॥**

ಪದಚ್ಛೇದ— ಋಜುಪುಂಗವಸ್ಯ, ಪರಿಜಾನತಃ, ಸ್ವಯಂ, ಸಕಲಂ, ತತ್, ಅಪಿ, ಅನಂತಜನ್ಮಸು, ಸ್ವಕೃತೋರ್ವ-ನುಗ್ರಹಬಲಾತ್, ಅಮುಷ್ಯ, ತಾಂ, ವಿಶಿಶೇಷ, ಶೇಷಶಯನಃ, ಪುನಃ, ಧಿಯಂ ।

ಅನ್ವಯ— ಶೇಷಶಯನಃ ಅನಂತಜನ್ಮಸು ಸ್ವಕೃತೋರ್ವನುಗ್ರಹಬಲಾತ್, ತತ್ ಸಕಲಂ ಅಪಿ ಸ್ವಯಂ ಪರಿಜಾನತಃ ಅಮುಷ್ಯ ಋಜುಪುಂಗವಸ್ಯ, ತಾಂ ಧಿಯಂ ಪುನಃ ಅಲಂ ವಿಶಿಶೇಷ ।

ಅನ್ವಯಾರ್ಥ—

ಶೇಷಶಯನಃ = ಶೇಷಶಾಯಿಯಾದ ನಾರಾಯಣನಿಗಿಂತ ಅಭಿನ್ನರಾದ ಶ್ರೀವೇದವ್ಯಾಸರು,
ಅನಂತಜನ್ಮಸು = ಹಿಂದೆ ಕಳೆದ ಜನ್ಮಗಳಲ್ಲಿ (ಕಳೆದ ಸರ್ವಕಾಲದಲ್ಲಿಯೂ)
ಸ್ವಕೃತೋರ್ವನುಗ್ರಹಬಲಾತ್-
ಸ್ವಕೃತ = ತನ್ನಿಂದ ಮಾಡಲ್ಪಟ್ಟ
ಉರು = ಹೆಚ್ಚಾದ
ಅನುಗ್ರಹಬಲಾತ್ = ಪ್ರಸಾದ (ಸ್ನೇಹ ವಿಶೇಷ)ದ ಸಾಮರ್ಥ್ಯದಿಂದ,
ತತ್ = (ಆಗ) ಉಪದೇಶಿಸಲ್ಪಟ್ಟ
ಸಕಲಂ ಅಪಿ = ಎಲ್ಲವನ್ನು
ಸ್ವಯಂ = ತಾನಾಗಿಯೇ
ಪರಿಜಾನತಃ = (ತನ್ನ ಪ್ರತಿಭೆಯ ಬಲದಿಂದ) ತಿಳಿದಿರುವ
ಅಮುಷ್ಯ = ಈ
ಋಜುಪುಂಗವಸ್ಯ = ಶ್ರೇಷ್ಠ ಋಜುಯೋಗಿಗಳಾದ ಶ್ರೀಮಧ್ವಾಚಾರ್ಯರ,

**ತಾಂ** = ಹಿಂದೆಯೇ ಇದ್ದಂತಹ

**ಮತಿಂ** = ಸರ್ವವಿಷಯಕವಾದ ಜ್ಞಾನವನ್ನು

**ಪುನಃ** = ಮತ್ತೆ

**ಅಲಂ** = ಚೆನ್ನಾಗಿ

**ವಿಶಿಶೇಷ** = ವಿಶೇಷದಿಂದ ಕೂಡಿದ್ದನ್ನಾಗಿ ಮಾಡಿದರು.

**ತಾತ್ಪರ್ಯ—** ಶೇಷಶಯನನಾದ ಶ್ರೀಮನ್ನಾರಾಯಣನಿಗಿಂತ ಅಭಿನ್ನರು ಶ್ರೀವೇದವ್ಯಾಸರು. ಅವರೇ ಜಗದ್ಗುರುಗಳಾದ ಮುಖ್ಯಪ್ರಾಣಾವತಾರಿಗಳಾದ ಶ್ರೀಮಧ್ವಾಚಾರ್ಯರಿಗೆ ಮುಖ್ಯ ಗುರುಗಳು. ಈ ಮಧ್ವಾಚಾರ್ಯರು ಹಿಂದಿನ ಅನೇಕಜನ್ಮಗಳಲ್ಲಿ ಗತಕಾಲದಲ್ಲೆಲ್ಲಾ ತನ್ನ ಸ್ವಾಭಾವಿಕಪ್ರತಿಭಾ ಬಲದಿಂದ ಈಗ ವೇದವ್ಯಾಸರು ಉಪದೇಶ ಮಾಡುತ್ತಿರುವ ವಿಷಯವನ್ನೆಲ್ಲಾ ತಿಳಿದಿದ್ದರು. ಋಜುಯೋಗಿಶ್ರೇಷ್ಠರಾದ ಶ್ರೀಮಧ್ವಾಚಾರ್ಯರು ಸರ್ವಜ್ಞರು. ಆದರೂ ಶ್ರೀವೇದವ್ಯಾಸರು ತನ್ನ ಪರಮಾನುಗ್ರಹದಿಂದ ಮಧ್ವಾಚಾರ್ಯರ ಸರ್ವವಿಷಯಕವಾದ ಬುದ್ಧಿಯಲ್ಲಿಯೂ ಉಪದೇಶದಿಂದ ವಿಶೇಷವನ್ನುಂಟು ಮಾಡಿದರು. ಇದು ಅಚಿಂತ್ಯಾದ್ಭುತ ಶಕ್ತಿಯುಳ್ಳ ಪರಮಾತ್ಮನಿಗೆ ಮಾತ್ರವೇ ಸಾಧ್ಯ. ಇದು ದೇವಶ್ರೇಷ್ಠರಿಗೆ ಮಾತ್ರವೇ ತಿಳಿಯತಕ್ಕ ಪ್ರಮೇಯ. (ಸರ್ವಜ್ಞರಾದ ಶ್ರೀಮಧ್ವರಿಗೆ ಶ್ರೀವೇದವ್ಯಾಸರ ಉಪದೇಶದಿಂದ ಏನು ಪ್ರಯೋಜನ ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಹೇಳಿದಂತಾಯಿತು).

**ವಿಶೇಷಾಂಶ—**

(1) ಬ್ರಹ್ಮಪದವಿಗೆ ಯೋಗ್ಯರಾದ ದೇವತೆಗಳಿಗೆ ಋಜುಗಳೆಂದು ಹೆಸರು. ಅವರು 100 ಗುಂಪಾಗಿ ಇರುತ್ತಾರೆ. ಅವರೆಲ್ಲರೂ ಒಬ್ಬರಾದ ಮೇಲೆ ಒಬ್ಬರು ವಾಯುಪದವನ್ನು ಹೊಂದಿ ಅನಂತರ ಬ್ರಹ್ಮಪದವಿಗೆ ಬರುತ್ತಾರೆ. ಅವರೆಲ್ಲರೂ ಸಮಾನರು. ಒಬ್ಬರಿಗಿಂತ ಇನ್ನೊಬ್ಬರಿಗೆ ಉತ್ತಮತ್ವವಿಲ್ಲ. ಆದ್ದರಿಂದ 'ಋಜುಪುಂಗವಸ್ಯ' ಎಂಬಲ್ಲಿ 'ಋಜುಶ್ಚಾಸೌ ಪುಂಗವಶ್ಚ' ಎಂದು ವಿಗ್ರಹ ಮಾಡಬೇಕು. ಋಜುಯೋಗಿಗಳು ರುದ್ರಾದಿಗಳಿಗಿಂತ ಶ್ರೇಷ್ಠರು ಎಂದು ಅದರ ಅರ್ಥ.

(2) ಅಥವಾ 'ಋಜೂನಾಂ ಪುಂಗವಃ' ಎಂದು ವಿಗ್ರಹ ಮಾಡಬಹುದು. ಆಗ ಋಜುಗಳೆಂದರೆ ಮನೋವಾಕ್ಕಾಯಕರ್ಮಗಳಲ್ಲಿ ಶ್ರೀಹರಿಗೆ ವಿರೋಧವನ್ನು ಮಾಡದಿರುವ ಭಗವದ್ಭಕ್ತರಾದ ದೇವತೆಗಳ (ಸಜ್ಜನರ) ಮಧ್ಯದಲ್ಲಿ ಶ್ರೇಷ್ಠರು ಎಂದು ಅರ್ಥ.

(3) ಅಥವಾ 'ಋಜೂನಾಂ ಪುಂಗವಃ' ಎಂದೇ ವಿಗ್ರಹ. ಋಜು ಎಂದರೆ ಋಜುಯೋಗಿಗಳೆಂದೇ ಅರ್ಥ. ಋಜುಯೋಗಿಗಳಲ್ಲಿ ಸ್ವರೂಪದ ದೃಷ್ಟಿಯಿಂದ ಒಬ್ಬರಿಗಿಂತ ಒಬ್ಬರಿಗೆ ಶ್ರೇಷ್ಠತ್ವವಿಲ್ಲದಿದ್ದರೂ ವಾಯುಪದವಿಯನ್ನು ಹೊಂದದಿರುವವರ ಮಧ್ಯದಲ್ಲಿ ವಾಯುಪದವಿಯನ್ನು ಹೊಂದಿರುವ ಶ್ರೀಮಧ್ವಾಚಾರ್ಯರು ಶ್ರೇಷ್ಠರೆಂದು ತಿಳಿಯಬೇಕು. ಒಟ್ಟಿನಲ್ಲಿ ಸರ್ವಾಧಿಕಾರಿಗಳಲ್ಲಿ ವಾಯುದೇವರು ಉತ್ತಮರೆಂದು ತಿಳಿಯಬೇಕು.

**ವಿಗ್ರಹ—**

**ಅನಂತಜನ್ಮಸು—** ಅನಂತಾನಿ ಚ ತಾನಿ ಜನ್ಮಾನಿ ಚ ಅನಂತಜನ್ಮಾನಿ, ತೇಷು ಅನಂತಜನ್ಮಸು ।

**ಸ್ವಕೃತೋರ್ವನುಗ್ರಹಬಲಾತ್—** ಸ್ವೇನ ಕೃತಃ ಸ್ವಕೃತಃ, ಉರುಶ್ಚಾಸೌ ಅನುಗ್ರಹಶ್ಚ ಉರ್ವನುಗ್ರಹಃ, ಸ್ವಕೃತಶ್ಚಾಸೌ ಉರ್ವನುಗ್ರಹಶ್ಚ ಸ್ವಕೃತೋರ್ವನುಗ್ರಹಃ, ಸ್ವಕೃತೋರ್ವನುಗ್ರಹಸ್ಯ ಬಲಂ ಸ್ವಕೃತೋರ್ವನುಗ್ರಹಬಲಂ, ತಸ್ಮಾತ್ ಸ್ವಕೃತೋರ್ವನುಗ್ರಹಬಲಾತ್ ।

**ಶೇಷಶಯನಃ—** ಶೇಷಃ ಶಯನಂ ಯಸ್ಯ ಸಃ ಶೇಷಶಯನಃ ।

**ಕ್ರಿಯಾಪದ—** **ವಿಶಿಶೇಷ-** ವಿ ಉಪಸರ್ಗ ಪೂರ್ವಕಾತ್ ಶಿಷ್‌ಲೃ ವಿಶೇಷಣೇ (ಶೇಷಣೆ) (ಶಿಷ, ಅತಿಶಯೇ) ಇತಿ ವಿಶೇಷಣಾರ್ಥಕಾತ್ (ಅತಿಶಯಾರ್ಥಕಾತ್) ಶಿಷಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಕರ್ತರಿ ಭೂತಾನದ್ಯತನ-ಪರೋಕ್ಷೇ ಲಿಟಿ ಪ್ರಥಮಪುರುಷೇ ಏಕವಚನೇ ವಿಶಿಶೇಷ ಇತಿ ರೂಪಮ್ ।

ವಿ-ಶಿಶೇಷ ಶಿಶಿಷತುಃ ಶಿಶಿಷುಃ, ಶಿಶೇಷಿಥ ಶಿಶಿಷಥುಃ ಶಿಶಿಷ, ಶಿಶೇಷ ಶಿಶಿಷಿವ ಶಿಶಿಷಿಮ ॥

**ಪ್ರಯೋಗ—** ಶೇಷಶಯನಃ ತಾಂ ಧಿಯಂ ವಿಶಿಶೇಷ (ಕರ್ತರಿ) ।
ಶೇಷಶಯನೇನ ಸಾ ಧೀಃ ವಿಶಿಶೇಷೇ (ಕರ್ಮಣಿ)।

★ ★ ★

**ಅವತಾರಿಕಾ—** ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸರೊಂದಿಗೆ ಆ ಬದರಿಕಾಶ್ರಮದ ಸಮೀಪದಲ್ಲಿರುವ ಮತ್ತೊಂದು ಆಶ್ರಮದಲ್ಲಿರುವ ಶ್ರೀಮನ್ನಾರಾಯಣನ ಮತ್ತೊಂದು ರೂಪವನ್ನು ವಂದಿಸುವುದಕ್ಕಾಗಿ ತೆರಳಿದರು.

**ಅಥ ಬಾದರಾಯಣಸಹಾಯಸಂಪದಾ**
**ಪ್ರಯಯೌ ಪ್ರಣೇತು(ಪ್ರಣಂತು)ಮಮಿತಾಂತರೋ ಯುತಃ ।**
**ಅಪಿ ನಾದಿರಾಯಣಪದೋದಿತಂ ಹರೇ-**
**ರ್ವಪುರಂತರಂ ಲಸಿತಮಾಶ್ರಮಾಂತರೇ ॥ 6 ॥**

**ಪದಚ್ಛೇದ—** ಅಥ, ಬಾದರಾಯಣಸಹಾಯಸಂಪದಾ, ಪ್ರಯಯೌ, ಪ್ರಣೇತುಂ, (ಪ್ರಣಂತುಂ) ಅಮಿತಾಂತರಃ, ಯುತಃ, ಅಪಿ, ನಾದಿರಾಯಣಪದೋದಿತಂ, ಹರೇಃ, ವಪುರಂತರಂ, ಲಸಿತಂ, ಆಶ್ರಮಾಂತರೇ ।

**ಅನ್ವಯ—** ಅಥ, ಬಾದರಾಯಣಸಹಾಯಸಂಪದಾ ಯುತಃ ಅಮಿತಾಂತರಃ, ಆಶ್ರಮಾಂತರೇ ಲಸಿತಂ, ನಾದಿರಾಯಣಪದೋದಿತಂ ಹರೇಃ ವಪುರಂತರಂ ಅಪಿ ಪ್ರಣೇತುಂ (ಪ್ರಣಂತುಂ) ಪ್ರಯಯೌ ।

**ಅನ್ವಯಾರ್ಥ—**

**ಅಥ** = ಶ್ರೀವೇದವ್ಯಾಸರಿಂದ ಸಕಲ ಶಾಸ್ತ್ರಗಳನ್ನು ಶ್ರವಣ ಮಾಡಿದ ನಂತರ,

**ಬಾದರಾಯಣಸಹಾಯಸಂಪದಾ-**

**ಬಾದರಾಯಣ** = ಶ್ರೀವೇದವ್ಯಾಸರೆಂಬ (ರ)

**ಸಹಾಯ ಸಂಪದಾ** = ಸಹಾಯ ಸಂಪತ್ತಿಯಿಂದ

**ಯುತಃ** = ಕೂಡಿದ

**ಅಮಿತಾಂತರಃ** = ಶ್ರೀಪೂರ್ಣಪ್ರಜ್ಞರು

**ಆಶ್ರಮಾಂತರೇ** = ಮತ್ತೊಂದು ಆಶ್ರಮದಲ್ಲಿ

**ಲಸಿತಂ** = ವಿರಾಜಿತವಾದ

**ನಾದಿ** = ನಾ ಎಂಬ ಅಕ್ಷರವು ಆದಿಯಲ್ಲಿ ಉಳ್ಳ

**ರಾಯಣಪದ** = ರಾಯಣ ಎಂಬ ಪದದಿಂದ (ನಾರಾಯಣ ಎಂಬ ಶಬ್ದದಿಂದ)

**ಉದಿತಂ** = ಹೇಳಲ್ಪಟ್ಟ

**ಹರೇಃ** = ಶ್ರೀಮನ್ನಾರಾಯಣನ

**ವಪುರಂತರಂ ಅಪಿ** = ಮತ್ತೊಂದು ರೂಪವನ್ನು ಕೂಡ

**ಪ್ರಣೇತುಂ (ಪ್ರಣಂತಂ)** = ನಮಸ್ಕರಿಸುವುದಕ್ಕಾಗಿ

**ಪ್ರಯಯೌ** = ಹೋದರು.

**ತಾತ್ಪರ್ಯ**— ಶ್ರೀಮಧ್ವರು, ಶ್ರೀವೇದವ್ಯಾಸರಿಂದ ಸಮಸ್ತಸಚ್ಛಾಸ್ತ್ರಗಳನ್ನೂ ವಿಶೇಷವಾಗಿ ಶ್ರವಣ ಮಾಡಿದರು. ಅನಂತರ ಮೂಲರೂಪಿಯಾದ ನಾರಾಯಣನಿಗಿಂತ ಅಭಿನ್ನರಾದ ನಾರಾಯಣಮುನಿಗಳು ಅಲ್ಲಿಯೇ ಸಮೀಪದ ಮತ್ತೊಂದು ಆಶ್ರಮದಲ್ಲಿ ತಪಸ್ಸು ಮಾಡುತ್ತಾ ವಿರಾಜಿಸುತ್ತಿದ್ದರು. ಅವರನ್ನೂ ಸಹ ನಮಸ್ಕರಿಸಲು ಶ್ರೀಪೂರ್ಣಪ್ರಜ್ಞರು ಶ್ರೀವೇದವ್ಯಾಸರ ಸಹಾಯದಿಂದ ಹೋದರು.

**ವಿಗ್ರಹ**—

**ಬಾದರಾಯಣಸಹಾಯಸಂಪದಾ**— ಬದರಾಣಾಂ ಇದಂ ಬಾದರಂ, ಬಾದರಂ ಅಯನಂ ಯಸ್ಯ ಸಃ ಬಾದರಾಯಣಃ, ಸಹಾಯ ಏವ ಸಂಪತ್ ಸಹಾಯಸಂಪತ್, ಬಾದರಾಯಣಸ್ಯ ಸಹಾಯಸಂಪತ್ ಬಾದರಾಯಣಸಹಾಯಸಂಪತ್, ತಯಾ ಬಾದರಾಯಣಸಹಾಯಸಂಪದಾ ।

**ಅಮಿತಾಂತರಃ**— ಅಮಿತಂ ಅಂತರಂ ಯಸ್ಯ ಸಃ ಅಮಿತಾಂತರಃ ।

**ನಾದಿರಾಯಣಪದೋದಿತಂ**— ನಾ ಆದಿಃ ಯಸ್ಯ ತತ್ ನಾದಿ, ರಾಯಣ ಇತಿ ಪದಂ ರಾಯಣಪದಂ, ನಾದಿ ಚ ತತ್ ರಾಯಣಪದಂ ಚ ನಾದಿರಾಯಣಪದಂ, ನಾದಿರಾಯಣಪದೇನ ಉದಿತಂ ನಾದಿರಾಯಣಪದೋದಿತಂ, ತತ್ ನಾದಿರಾಯಣಪದೋದಿತಂ ।

**ವಪುರಂತರಂ**— ಅನ್ಯತ್ ವಪುಃ ವಪುರಂತರಂ, ತತ್ ವಪುರಂತರಂ ।

**ಆಶ್ರಮಾಂತರಂ**— ಅನ್ಯಃ ಆಶ್ರಮಃ ಆಶ್ರಮಾಂತರಂ ।

**ಕ್ರಿಯಾಪದ**— ಪ್ರ-ಯಯೌ (ಸರ್ಗ7 ಶ್ಲೋಕ 58 ನೋಡಿರಿ) ।

**ಪ್ರಯೋಗ**— ಅಮಿತಾಂತರಃ ಪ್ರಯಯೌ (ಕರ್ತರಿ) । ಅಮಿತಾಂತರೇಣ ಪ್ರಯಯೇ (ಭಾವೇ) ।

★ ★ ★

**ಅವತಾರಿಕಾ**— ನಾರಾಯಣಾಶ್ರಮದಲ್ಲಿ ತಾಪಸರೂಪಿಯಾದ ಶ್ರೀಮನ್ನಾರಾಯಣನನ್ನು ಶ್ರೀಮಧ್ವರು ಕಂಡರೆಂದು ವರ್ಣಿಸುತ್ತಾರೆ.

**ತಮಪಶ್ಯದಾಶ್ರಮವರೇ ಪ್ರಭೂತಧೀ-**
**ರ್ಜ್ವಲನಂ ಜ್ವಲಂತಮಿವ ಧೂಮವರ್ಜಿತಮ್ ।**
**ವರವಲ್ಕಲಾಕಲಿತಮೌಂಜಿಮೇಖಲಂ**
**ವಿಲಸಜ್ಜಟಾವಲಯಮಾದಿಪೂರುಷಮ್ ॥ 7 ॥**

**ಪದಚ್ಛೇದ**— ತಂ, ಅಪಶ್ಯತ್, ಆಶ್ರಮವರೇ, ಪ್ರಭೂತಧೀಃ, ಜ್ವಲನಂ, ಜ್ವಲಂತಂ, ಇವ, ಧೂಮವರ್ಜಿತಂ, ವರವಲ್ಕಲಾಕಲಿತಮೌಂಜಿಮೇಖಲಂ, ವಿಲಸಜ್ಜಟಾವಲಯಂ, ಆದಿಪೂರುಷಂ ।

**ಅನ್ವಯ**— ಪ್ರಭೂತಧೀಃ ಆಶ್ರಮವರೇ, ವರವಲ್ಕಲಾಕಲಿತಮೌಂಜಿಮೇಖಲಂ, ವಿಲಸಜ್ಜಟಾವಲಯಂ, ಆದಿ-ಪೂರುಷಂ ತಂ ಧೂಮವರ್ಜಿತಂ ಜ್ವಲಂತಂ ಜ್ವಲನಂ ಇವ, ಅಪಶ್ಯತ್ ।

**ಅನ್ವಯಾರ್ಥ**—

**ಪ್ರಭೂತಧೀಃ** = ಶ್ರೀಪೂರ್ಣಬೋಧರು

**ಆಶ್ರಮವರೇ** = ಶ್ರೇಷ್ಠವಾದ ಆಶ್ರಮದಲ್ಲಿ

**ವರವಲ್ಕಲಾಕಲಿತಮೌಂಜಿಮೇಖಲಂ** -

**ವರವಲ್ಕಲ** = ಶ್ರೇಷ್ಠವಾದ ನಾರುಬಟ್ಟೆಯಿಂದ

**ಆಕಲಿತ** = ಕೂಡಿದ

**ಮೌಂಜಿಮೇಖಲಂ** = ಮುಂಜವೆಂಬ ತೃಣದಿಂದ ನಿರ್ಮಿತವಾದ ಉಡಿದಾರವುಳ್ಳ,

**ವಿಲಸತ್** = ಶೋಭಿಸುತ್ತಿರುವ,

**ಜಟಾವಲಯಂ** = ಜಟಾಮಂಡಲವುಳ್ಳ,

**ಆದಿಪೂರುಷಂ** = ಪುರಾಣ ಪುರುಷನಾದ

**ತಂ** = ಆ ನಾರಾಯಣ ಮುನಿಯನ್ನು

**ಧೂಮವರ್ಜಿತಂ** = ಹೊಗೆ ಇಲ್ಲದಿರುವ

**ಜ್ವಲಂತಂ** = ಉರಿಯುತ್ತಿರುವ

**ಜ್ವಲನಂ ಇವ** = ಅಗ್ನಿಯನ್ನೆಂಬಂತೆ

**ಅಪಶ್ಯತ್** = ನೋಡಿದರು.

**ತಾತ್ಪರ್ಯ**— ನಾರಾಯಣಮುನಿಗಳು ಬ್ರಹ್ಮಚಾರಿಗಳು. ಅವರು ಮುಂಜವೆಂಬ ಹುಲ್ಲಿನಿಂದ ನಿರ್ಮಿತವಾದ ಉಡಿದಾರವನ್ನು ಕಟ್ಟಿಕೊಂಡು ನಾರುಬಟ್ಟೆಯ ಕೌಪೀನವನ್ನು ಧರಿಸಿದ್ದರು. ಅವರು ತಲೆಯಲ್ಲಿ ಧರಿಸಿದ್ದ ಜಟೆಯ ಸುತ್ತಲೂ ಪ್ರಭಾಮಂಡಲವು ಶೋಭಿಸುತ್ತಿತ್ತು. ಹೊಗೆಯಿಲ್ಲದೆ ಉರಿಯುತ್ತಿರುವ ಅಗ್ನಿಯಂತೆ ಪ್ರಕಾಶಮಾನರಾದ ಇಂತಹ ನಾರಾಯಣಮುನಿಗಳನ್ನು ಪೂರ್ಣಬೋಧರು ಬದರಿಕಾಶ್ರಮದ ಸಮೀಪದಲ್ಲಿರುವ ಅವರ ಮತ್ತೊಂದು ಆಶ್ರಮದಲ್ಲಿ ನೋಡಿದರು.

**ವಿಗ್ರಹ**—

**ಆಶ್ರಮವರೇ**— ಆಶ್ರಮೇಷು ವರಃ ಆಶ್ರಮವರಃ, ತಸ್ಮಿನ್ ಆಶ್ರಮವರೇ ।

**ಪ್ರಭೂತಧೀಃ**— ಪ್ರಭೂತಾ ಧೀಃ ಯಸ್ಯ ಸಃ ಪ್ರಭೂತಧೀಃ ।

**ಧೂಮವರ್ಜಿತಂ**— ಧೂಮೇನ ವರ್ಜಿತಃ ಧೂಮವರ್ಜಿತಃ, ತಂ ಧೂಮವರ್ಜಿತಂ ।

**ವರವಲ್ಕಲಾಕಲಿತಮೌಂಜಿಮೇಖಲಂ**— ವರಂ ಚ ತತ್ ವಲ್ಕಲಂ ವರವಲ್ಕಲಂ, ವರವಲ್ಕಲೇನ ಆಕಲಿತಾ ವರವಲ್ಕಲಾಕಲಿತಾ, ಮುಂಜಾನಾಂ ಇಯಂ ಮೌಂಜಿಃ, ಮೌಂಜಿರೇವ ಮೇಖಲಾ ಮೌಂಜಿ-ಮೇಖಲಾ, ವರವಲ್ಕಲಾಕಲಿತಾ ಮೌಂಜಿಮೇಖಲಾ ಯಸ್ಯ ಸಃ ವರವಲ್ಕಲಾಕಲಿತಮೌಂಜಿಮೇಖಲಃ, ತಂ ವರವಲ್ಕಲಾಕಲಿತಮೌಂಜಿಮೇಖಲಂ । (ಮುಂಜಾನಾಂ ಇಯಂ ಮೌಂಜೀ, ಮೌಂಜೀ ಚ ಸಾ ಮೇಖಲಾ ಚ ಮೌಂಜಿಮೇಖಲಾ । ಙ್ಯಾಪೋಃ ಸಂಜ್ಞಾಚ್ಛಂದಸೋರ್ಬಹುಲಂ ಇತಿ ಹ್ರಸ್ವಃ) ।

**ವಿಲಸಜ್ಜಟಾವಲಯಂ**— ವಿಲಸನ್ ಜಟಾವಲಯಃ ಯಸ್ಯ ಸಃ ವಿಲಸಜ್ಜಟಾವಲಯಃ, ತಂ ವಿಲಸಜ್ಜಟಾ-ವಲಯಂ ।

**ಆದಿಪೂರುಷಂ**— ಆದಿಶ್ಚಾಸೌ ಪೂರುಷಶ್ಚ ಆದಿಪೂರುಷಃ, ತಂ ಆದಿಪೂರುಷಂ ।

**ಕ್ರಿಯಾಪದ**— **ಅಪಶ್ಯತ್**- ದೃಶಿರ್ ಪ್ರೇಕ್ಷಣೇ ಇತಿ ಪ್ರೇಕ್ಷಣಾರ್ಥಕಾತ್ ದೃಶ್‌ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ "ಅಪಶ್ಯತ್" ಇತಿ ರೂಪಮ್ । ।

ಅಪಶ್ಯತ್ ಅಪಶ್ಯತಾಂ ಅಪಶ್ಯನ್, ಅಪಶ್ಯಃ ಅಪಶ್ಯತಂ ಅಪಶ್ಯತ, ಅಪಶ್ಯಂ ಅಪಶ್ಯಾವ ಅಪಶ್ಯಾಮ ॥

**ಪ್ರಯೋಗ**— ಪ್ರಭೂತಧೀಃ ತಂ ಅಪಶ್ಯತ್ (ಕರ್ತರಿ) । ಪ್ರಭೂತಧಿಯಾ ಸಃ ಅದೃಶ್ಯತ (ಕರ್ಮಣಿ) ।

★ ★ ★

**ಅವತಾರಿಕಾ**— ಶ್ರೀಮಧ್ವಾಚಾರ್ಯರು ಕಂಡ ತಾಪಸರೂಪಿಯಾದ ನಾರಾಯಣನನ್ನು ವರ್ಣಿಸುತ್ತಾರೆ.

**ಅತಿದುರ್ಜಯೇಂದ್ರಿಯಜಯಾದಿರೂಪಿಣಾ**
**ತಪಸಾ ವಸಂತಮಿವ ಸಂತತಂ ವನೇ ।**
**ನಿಜರೂಪಭೂತನಿರಪೇಕ್ಷನಿರ್ಮಲ-**
**ಪ್ರಚುರಾತ್ಮಸೌಖ್ಯರತಮಪ್ಯನಾರತಮ್ ॥ 8 ॥**

**ಪದಚ್ಛೇದ**— ಅತಿದುರ್ಜಯೇಂದ್ರಿಯಜಯಾದಿರೂಪಿಣಾ, ತಪಸಾ, ವಸಂತಂ, ಇವ, ಸಂತತಂ, ವನೇ, ನಿಜ-ರೂಪಭೂತನಿರಪೇಕ್ಷ ನಿರ್ಮಲಪ್ರಚುರಾತ್ಮಸೌಖ್ಯರತಂ, ಅಪಿ, ಅನಾರತಂ ।

**ಅನ್ವಯ**— ಅನಾರತಂ ನಿಜರೂಪಭೂತನಿರಪೇಕ್ಷನಿರ್ಮಲಪ್ರಚುರಾತ್ಮಸೌಖ್ಯರತಂ ಅಪಿ, ಸಂತತಂ ಅತಿ-ದುರ್ಜಯೇಂದ್ರಿಯಜಯಾದಿರೂಪಿಣಾ, ತಪಸಾ ವನೇ ವಸಂತಂ ಇವ (ಅಪಶ್ಯತ್) ।

**ಅನ್ವಯಾರ್ಥ**—

**ಅನಾರತಂ** = ಯಾವಾಗಲೂ

**ನಿಜರೂಪಭೂತನಿರಪೇಕ್ಷನಿರ್ಮಲಪ್ರಚುರಾತ್ಮಸೌಖ್ಯರತಂ-**

**ನಿಜ** = ನಿತ್ಯವಾದ

**ರೂಪಭೂತ** = ಸ್ವರೂಪಾತ್ಮಕವಾದ

**ನಿರಪೇಕ್ಷ** = ವಿಷಯಾಪೇಕ್ಷೆ ಇಲ್ಲದಿರುವ

**ನಿರ್ಮಲ** = ದೋಷರಹಿತವಾದ

**ಪ್ರಚುರ** = ಪರಿಪೂರ್ಣವಾದ

**ಆತ್ಮಸೌಖ್ಯ** = ಸ್ವರೂಪಾನಂದದಲ್ಲಿ

**ರತಂ ಅಪಿ** = ನಿರತನಾಗಿದ್ದರೂ (ಸ್ವರೂಪಾನಂದವನ್ನು ಅನುಭವಿಸುತ್ತಿದ್ದರೂ),

**ಸಂತತಂ** = ಯಾವಾಗಲೂ

**ಅತಿದುರ್ಜಯೇಂದ್ರಿಯಜಯಾದಿರೂಪಿಣಾ-**

**ಅತಿದುರ್ಜಯ** = ನಿಗ್ರಹಿಸಲು ಅತ್ಯಂತ ಅಶಕ್ಯವಾದ

**ಇಂದ್ರಿಯಜಯಾದಿರೂಪಿಣಾ** = ಮನಸ್ಸು, ನಾಲಿಗೆ ಮುಂತಾದ ಇಂದ್ರಿಯಗಳ ನಿಗ್ರಹದಿಂದ ಭೂಶಯನ ಮೊದಲಾದ ಸ್ವರೂಪವುಳ್ಳ,

**ತಪಸಾ ವನೇ** = ತಪಸ್ಸಿನಿಂದ (ಕೂಡಿಕೊಂಡು) ಕಾಡಿನಲ್ಲಿ

**ವಸಂತಂ ಇವ** = ವಾಸ ಮಾಡುವವನೋ ಎಂಬಂತಿರುವ ,

**(ತಂ ನಾರಾಯಣಂ) ಅಪಶ್ಯತ್** = ಆ ನಾರಾಯಣ ಮುನಿಯನ್ನು ನೋಡಿದರು.

**ತಾತ್ಪರ್ಯ**— ಸ್ವಯಂ ಮೂಲರೂಪಿಯಾದ ನಾರಾಯಣಾಭಿನ್ನನಾದ ಆ ನಾರಾಯಣಮುನಿಯು ತನ್ನ ಸ್ವರೂಪವೇ ಆಗಿರುವ ಯಾವ ಒಂದು ಪ್ರಾಕೃತ ಬಾಹ್ಯ ವಿಷಯಾಪೇಕ್ಷೆ ಇಲ್ಲದಿರುವ ಪರಿಪೂರ್ಣವಾದ ಆನಂದವನ್ನು ನಿರಂತರವಾಗಿ ಅನುಭವಿಸುತ್ತಾ ಇರುತ್ತಾನೆ. ಹೀಗಿದ್ದರೂ ಅವನು ಜಯಿಸಲು ಅತ್ಯಂತ ಕಷ್ಟಸಾಧ್ಯಗಳಾದ ಇಂದ್ರಿಯಗಳನ್ನು ನಿಗ್ರಹಿಸುವುದು, ಭೂಮಿಯಲ್ಲಿಯೇ ಮಲಗುವುದು, ಚಳಿ, ಗಾಳಿ, ಮುಂತಾದವುಗಳನ್ನು ಸಹಿಸುವುದು ಇವೇ ಮುಂತಾದ

ತಪಸ್ಸನ್ನು ಮಾಡುತ್ತಾ ಕ್ಲೇಶವನ್ನು ಅನುಭವಿಸುತ್ತಿದ್ದಾನೆಂದು ಅಜ್ಞರಿಗೆ ಭ್ರಾಂತಿಯನ್ನುಂಟು ಮಾಡುತ್ತಾ ಕಾಡಿನಲ್ಲಿ ವಾಸ ಮಾಡುತ್ತಿದ್ದನು. ಇಂತಹ ನಾರಾಯಣ ಮುನಿಯನ್ನು ಶ್ರೀಪೂರ್ಣಬೋಧರು ನೋಡಿದರು.

ವಿಗ್ರಹ—

**ಅತಿದುರ್ಜಯೇಂದ್ರಿಯಜಯಾದಿರೂಪಿಣಾ—** ದುಃಖೇನ ಜೇತುಂ ಶಕ್ಯಾನಿ ದುರ್ಜಯಾನಿ, ಅತ್ಯಂತಂ ದುರ್ಜಯಾನಿ ಅತಿದುರ್ಜಯಾನಿ, ಅತಿದುರ್ಜಯಾನಿ ಚ ತಾನಿ ಇಂದ್ರಿಯಾಣಿ ಚ ಅತಿ-ದುರ್ಜಯೇಂದ್ರಿಯಾಣಿ, ಅತಿದುರ್ಜಯೇಂದ್ರಿಯಾಣಾಂ ಜಯಃ ಅತಿದುರ್ಜಯೇಂದ್ರಿಯಜಯಃ, ಸಃ ಆದಿಃ ಯಸ್ಯ ತತ್ ಅತಿದುರ್ಜಯೇಂದ್ರಿಯಜಯಾದಿ, ತಚ್ಚ ತತ್ ರೂಪಂ ಚ ಅತಿದುರ್ಜಯೇಂದ್ರಿಯಜಯಾದಿರೂಪಂ, ಅತಿದುರ್ಜಯೇಂದ್ರಿಯಜಯಾದಿರೂಪಂ ಅಸ್ಯ ಅಸ್ತೀತಿ ಅತಿದುರ್ಜಯೇಂದ್ರಿಯಜಯಾದಿರೂಪೀ, ತೇನ ಅತಿದುರ್ಜಯೇಂದ್ರಿಯಜಯಾದಿ-ರೂಪಿಣಾ ।

**ನಿಜರೂಪಭೂತನಿರಪೇಕ್ಷನಿರ್ಮಲಪ್ರಚುರಾತ್ಮಸೌಖ್ಯರತಂ—** ಸುಖಮೇವ ಸೌಖ್ಯಂ, ಆತ್ಮನಃ ಸೌಖ್ಯಂ ಆತ್ಮಸೌಖ್ಯಂ, ನಿಜಂ ಚ ತತ್ ರೂಪಂ ಚ ನಿಜರೂಪಂ, ನಿಷ್ಕ್ರಾಂತಂ ಅಪೇಕ್ಷಾಯಾಃ ನಿರಪೇಕ್ಷಂ (ನಿರ್ಗತಾ ಅಪೇಕ್ಷಾ ಯಸ್ಮಾತ್ ತತ್ ನಿರಪೇಕ್ಷಂ), ನಿಷ್ಕ್ರಾಂತಂ ಮಲಾತ್ ನಿರ್ಮಲಂ, (ನಿರ್ಗತಂ ಮಲಂ ಯಸ್ಮಾತ್ ತತ್ ನಿರ್ಮಲಂ), ನಿಜರೂಪಂ ಚ ತತ್ ಭೂತಂ ಚ ನಿರಪೇಕ್ಷಂ ಚ ನಿರ್ಮಲಂ ಚ ತತ್ ಪ್ರಚುರಂ ಚ ತತ್ ಆತ್ಮಸೌಖ್ಯಂ ಚ ನಿಜರೂಪಭೂತನಿರಪೇಕ್ಷನಿರ್ಮಲಪ್ರಚುರಾತ್ಮಸೌಖ್ಯರತಃ, ತಂ ನಿಜರೂಪಭೂತನಿರಪೇಕ್ಷನಿರ್ಮಲಪ್ರಚುರಾತ್ಮಸೌಖ್ಯರತಂ ।

**ಕ್ರಿಯಾಪದ—** ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ.

★ ★ ★

**ಅವತಾರಿಕಾ—** ಶ್ರೀಮನ್ಮಧ್ವಾಚಾರ್ಯರು ಶ್ರೀಮನ್ನಾರಾಯಣನನ್ನು ಸಂದರ್ಶಿಸಿದ ನಂತರ ಮನಸ್ಸಿನಲ್ಲಿ ಆಲೋಚಿಸಿದ ಬಗೆಯ ವಿವರಣೆ.

**ನಯನದ್ವಯೇನ ನಲಿನಪ್ರಭಾಮುಷಾ**
**ಪರಿಫುಲ್ಲತಾವಿಲಸಿತೇನ ವಿಸ್ಮಯಾತ್ ।**
**ತಮವೇಕ್ಷ್ಯ ಧರ್ಮಜಮಧರ್ಮದುರ್ಲಭಂ**
**ಮನಸೇತಿ ಭೂರಿತರಮಾನಸೋಽಸ್ಮರತ್ ॥ 9 ॥**

**ಪದಚ್ಛೇದ—** ನಯನದ್ವಯೇನ, ನಲಿನಪ್ರಭಾಮುಷಾ, ಪರಿಫುಲ್ಲತಾವಿಲಸಿತೇನ, ವಿಸ್ಮಯಾತ್, ತಂ, ಅವೇಕ್ಷ್ಯ, ಧರ್ಮಜಂ, ಅಧರ್ಮದುರ್ಲಭಂ, ಮನಸಾ, ಇತಿ, ಭೂರಿತರಮಾನಸಃ, ಅಸ್ಮರತ್ ।

**ಅನ್ವಯ—** ಭೂರಿತರಮಾನಸಃ, ಪರಿಫುಲ್ಲತಾವಿಲಸಿತೇನ ನಲಿನಪ್ರಭಾಮುಷಾ ನಯನದ್ವಯೇನ, ಅಧರ್ಮ-ದುರ್ಲಭಂ ಧರ್ಮಜಂ ತಂ ಅವೇಕ್ಷ್ಯ, ವಿಸ್ಮಯಾತ್ ಮನಸಾ ಇತಿ ಅಸ್ಮರತ್ ।

**ಅನ್ವಯಾರ್ಥ—**

**ಭೂರಿತರಮಾನಸಃ** = ಶ್ರೀಪೂರ್ಣಪ್ರಜ್ಞರು

**ಪರಿಫುಲ್ಲತಾ ವಿಲಸಿತೇನ** = ಅರಳಿರುವುದರಿಂದ (ತೆರೆದಿರುವುದರಿಂದ) ಶೋಭಿಸುತ್ತಿರುವ

**ನಲಿನ ಪ್ರಭಾಮುಷಾ** = ತಾವರೆಯ ಕಾಂತಿಯನ್ನು ಅಪಹರಿಸುತ್ತಿರುವ
**ನಯನದ್ವಯೇನ** = ಎರಡು ಕಣ್ಣುಗಳಿಂದ,
**ಅಧರ್ಮ ದುರ್ಲಭಂ** = ಪುಣ್ಯವಿಲ್ಲದ ಪುರುಷರಿಂದ (ಪಾಪಿಗಳಿಂದ) ಹೊಂದಲು ಅಶಕ್ಯನಾದ,
**ಧರ್ಮಜಂ** = ಯಮಧರ್ಮನ ಮಗನಾದ
**ತಂ** = ಆ ನಾರಾಯಣ ಮುನಿಯನ್ನು
**ಅವೇಕ್ಷ್ಯ** = ನೋಡಿ,
**ವಿಸ್ಮಯಾತ್** = ಆಶ್ಚರ್ಯದಿಂದ
**ಮನಸಾ** = ಮನಸ್ಸಿನಿಂದ
**ಇತಿ** = ಮುಂದೆ ಹೇಳುವ ರೀತಿಯಿಂದ
**ಅಸ್ಮರತ್** = ಸ್ಮರಿಸಿದರು.

**ತಾತ್ಪರ್ಯ—** ಆ ನಾರಾಯಣ ಮುನಿಯು ಯಮಧರ್ಮನ ಮಗನು. ಪುಣ್ಯ ಮಾಡದವರಿಂದ ಅವನನ್ನು ನೋಡಲು ಮತ್ತು ಹೊಂದಲು ಸಾಧ್ಯವಿಲ್ಲ. ಶ್ರೀಪೂರ್ಣಪ್ರಜ್ಞರು ಅರಳಿದ ತಾವರೆ ಹೂವಿನ ಸೌಂದರ್ಯಕ್ಕಿಂತಲೂ ಮಿಗಿಲಾದ ಸೌಂದರ್ಯವುಳ್ಳ ತನ್ನ ತೆರೆದ ಎರಡು ಕಣ್ಣುಗಳಿಂದ ಆ ನಾರಾಯಣ ಮುನಿಯನ್ನು ನೋಡಿ ಆಶ್ಚರ್ಯಪಟ್ಟರು ಮತ್ತು ಮನಸ್ಸಿನಲ್ಲಿಯೇ ಮುಂದೆ ಹೇಳುವ ರೀತಿಯಿಂದ ಸ್ಮರಿಸಿದರು.

ವಿಗ್ರಹ—

**ನಯನದ್ವಯೇನ—** ನಯನಯೋಃ ದ್ವಯಂ ನಯನದ್ವಯಂ, ತೇನ ನಯನದ್ವಯೇನ ।

**ನಲಿನಪ್ರಭಾಮುಷಾ—** ನಲಿನಯೋಃ ಪ್ರಭಾ ನಲಿನಪ್ರಭಾ, ನಲಿನಪ್ರಭಾಂ ಮುಷ್ಣಾತೀತಿ ನಲಿನಪ್ರಭಾ-ಮುಟ್, ತೇನ ನಲಿನಪ್ರಭಾಮುಷಾ । (ಮುಟ್ ಮುಷೀ ಮುಂಷಿ)

**ಪರಿಫುಲ್ಲತಾವಿಲಸಿತೇನ—** ಪರಿಫುಲ್ಲಯೋಃ ಭಾವಃ ಪರಿಫುಲ್ಲತಾ, ಪರಿಫುಲ್ಲತಯಾ ವಿಲಸಿತಂ ಪರಿಫುಲ್ಲತಾ-ವಿಲಸಿತಂ, ತೇನ ಪರಿಫುಲ್ಲತಾವಿಲಸಿತೇನ ।

**ಧರ್ಮಜಂ—** ಧರ್ಮಾತ್ ಜಾಯತೇ ಇತಿ ಧರ್ಮಜಃ, ತಂ ಧರ್ಮಜಂ ।

**ಅಧರ್ಮದುರ್ಲಭಂ—** ನ ವಿದ್ಯತೇ ಧರ್ಮಃ ಯೇಷಾಂ ತೇ ಅಧರ್ಮಾಃ, ದುಃಖೇನ ಲಬ್ಧುಂ ಶಕ್ಯಃ ದುರ್ಲಭಃ, ಅಧರ್ಮೈಃ ದುರ್ಲಭಃ ಅಧರ್ಮದುರ್ಲಭಃ, ತಂ ಅಧರ್ಮದುರ್ಲಭಂ । (ನ ಧರ್ಮ ಅಧರ್ಮ, ಅಧರ್ಮೇಣ ದುರ್ಲಭಃ ಅಧರ್ಮದುರ್ಲಭಃ, ತಂ ಅಧರ್ಮದುರ್ಲಭಂ ) ।

**ಭೂರಿತರಮಾನಸಃ—** ಅತಿಶಯೇನ ಭೂರಿ ಭೂರಿತರಂ, ಭೂರಿತರಂ ಮಾನಸಂ ಯಸ್ಯ ಸಃ ಭೂರಿತರಮಾನಸಃ ।

**ಕ್ರಿಯಾಪದ—** ಅಸ್ಮರತ್- ಸ್ಮೃ ಸ್ಮರಣೇ (ಚಿಂತಾಯಾಂ) ಇತಿ ಸ್ಮರಣಾರ್ಥಕಾತ್ (ಚಿಂತಾರ್ಥಕಾತ್) ಸ್ಮೃಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಅಸ್ಮರತ್'' ಇತಿ ರೂಪಮ್ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

**ಪ್ರಯೋಗ—** ಭೂರಿತರಮಾನಸಃ ಮಾನಸಾ ಇತಿ ಅಸ್ಮರತ್ (ಕರ್ತರಿ)। ಭೂರಿತರಮಾನಸೇನ ಮನಸಾ ಇತಿ ಅಸ್ಮರ್ಯತ (ಕರ್ಮಣಿ)।

★ ★ ★

**ಅವತಾರಿಕಾ—** ಶ್ರೀಮಧ್ವರು ಆ ನಾರಾಯಣನನ್ನು ನೋಡಿ ಮನಸ್ಸಿನಿಂದ ಚಿಂತಿಸಿದ ಪ್ರಕಾರವನ್ನು ವರ್ಣಿಸುತ್ತಾರೆ.

**ಜಗತಾಂ ಚತುರ್ದಶತಯಂ ಚತುರ್ಮುಖ**
**ಪ್ರಮುಖೈರ್ಯುತಂ ಪ್ರಲಯಮಾನಿನಾಯ ಯಃ ।**
**ಸಮಮುಲ್ಲಸನ್ ಕಮಲಯೈವ ಕೇವಲಂ**
**ಪರಮಃ ಸ ಏಷ ಹಿ ಪುರಾಣಪೂರುಷಃ ॥ 10 ॥**

**ಪದಚ್ಛೇದ—** ಜಗತಾಂ, ಚತುರ್ದಶತಯಂ, ಚತುರ್ಮುಖಪ್ರಮುಖೈಃ, ಯುತಂ, ಪ್ರಲಯಂ, ಆನಿನಾಯ, ಯಃ, ಸಮಂ, ಉಲ್ಲಸನ್, ಕಮಲಯಾ, ಏವ, ಕೇವಲಂ, ಪರಮಃ, ಸಃ, ಏಷಃ, ಹಿ, ಪುರಾಣಪೂರುಷಃ ।

**ಅನ್ವಯ—** ಕೇವಲಂ ಕಮಲಯೈವ ಸಮಂ ಉಲ್ಲಸನ್ ಯಃ, ಚತುರ್ಮುಖಪ್ರಮುಖೈಃ ಯುತಂ ಜಗತಾಂ ಚತುರ್ದಶತಯಂ ಪ್ರಲಯಂ ಆನಿನಾಯ, ಪರಮಃ ಪುರಾಣಪೂರುಷಃ ಸಃ ಏಷಃ ಹಿ ।

**ಅನ್ವಯಾರ್ಥ—**

**ಕೇವಲಂ** = ಅತಿಶಯವಾಗಿ (ಹೆಚ್ಚಾಗಿ)
**ಕಮಲಯಾ ಏವ ಸಮಂ** = ಲಕ್ಷ್ಮೀದೇವಿಯೊಡನೆಯೇ
**ಉಲ್ಲಸನ್** = ಪ್ರಕಾಶಿಸುತ್ತಿರುವ (ವಿಹರಿಸುತ್ತಿರುವ)
**ಯಃ** = ಯಾವ ನಾರಾಯಣನು
**ಚತುರ್ಮುಖಪ್ರಮುಖೈಃ** = ಚತುರ್ಮುಖ ಬ್ರಹ್ಮನೇ ಮೊದಲಾದವರಿಂದ
**ಯುತಂ** = ಕೂಡಿದ
**ಜಗತಾಂ** = ಲೋಕಗಳ
**ಚತುರ್ದಶತಯಂ** = ಹದಿನಾಲ್ಕರ ಸಮುದಾಯವನ್ನು
**ಪ್ರಲಯಂ** = ನಾಶವನ್ನು
**ಆನಿನಾಯ** = ಹೊಂದಿಸಿದನೋ,
**ಪರಮಃ** = ಸರ್ವೋತ್ತಮನಾದ
**ಪುರಾಣಪೂರುಷಃ** = ಅನಾದಿಪುರುಷನಾದ
**ಸಃ** = ಅವನೇ
**ಏಷಃ ಹಿ** = ಈ ಯಮಧರ್ಮನ ಮಗನಾಗಿ (ಅವತಾರ ಮಾಡಿ)ದ್ದಾನಷ್ಟೆ.

**ತಾತ್ಪರ್ಯ—** ಚತುರ್ಮುಖ ಬ್ರಹ್ಮನೇ ಮೊದಲಾದ ಅನಂತಾನಂತಜೀವರಾಶಿಗಳಿಂದ ಕೂಡಿರುವ ಹದಿನಾಲ್ಕು ಲೋಕಸಮುದಾಯವನ್ನು ನಾಶಗೊಳಿಸಿ ಲಕ್ಷ್ಮೀದೇವಿಯನ್ನು ಮಾತ್ರ ಕೂಡಿಕೊಂಡು ಶ್ರೀಮನ್ನಾರಾಯಣನು ಅತಿಶಯ-ವಾಗಿ ವಿಹರಿಸುವನು. ಅಂತಹ ಸರ್ವೋತ್ತಮನಾದ ಜಗತ್‌ಪ್ರಭುವೆ ಯಮಧರ್ಮನ ಮಗನಾಗಿ ಅವತರಿಸಿ ನನ್ನ ಕಣ್ಣೆದುರಿಗೆ ಕಾಣಿಸುತ್ತಿದ್ದಾನಷ್ಟೆ.

**ವಿಗ್ರಹ—**

**ಚತುರ್ದಶತಯಂ—** ಚತುರ್ದಶ ಅವಯವಾಃ ಅಸ್ಯೇತಿ (ಯಸ್ಯ ತತ್) ಚತುರ್ದಶತಯಂ, ತತ್ ಚತುರ್ದಶತಯಂ ।

**ಚತುರ್ಮುಖಪ್ರಮುಖ್ಯೈಃ**— ಚತ್ವಾರಿ ಮುಖಾನಿ ಯಸ್ಯ ಸಃ ಚತುರ್ಮುಖಃ, ಚತುರ್ಮುಖಃ ಪ್ರಮುಖಃ ಯೇಷಾಂ ತೇ ಚತುರ್ಮುಖಪ್ರಮುಖಾಃ, ತೈಃ ಚತುರ್ಮುಖಪ್ರಮುಖ್ಯೈಃ ।

**ಪುರಾಣಪೂರುಷಃ**— ಪುರಾಣಶ್ಚಾಸೌ ಪೂರುಷಶ್ಚ ಪುರಾಣಪೂರುಷಃ ।

**ಕ್ರಿಯಾಪದ**— **ಆನಿನಾಯ**- ಆಙ್ ಪೂರ್ವಕಾತ್ ಣೀಞ್ ಪ್ರಾಪಣೇ (ನೀ) ಇತಿ ಪ್ರಾಪಣಾರ್ಥಕಾತ್ ನಿಧಾತೋಃ ದ್ವಿಕರ್ಮಕಾತ್ ಪರಸ್ಮೈಪದಿನಃ ಕರ್ತರಿ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ಆನಿನಾಯ'' ಇತಿ ರೂಪಮ್ ।

ಆ-ನಿನಾಯ ನಿನ್ಯತುಃ ನಿನ್ಯುಃ, ನಿನಯಿಥ-ನಿನೇಥ ನಿನ್ಯಥುಃ ನಿನ್ಯ, ನಿನಾಯ-ನಿನಯ ನಿನ್ಯಿವ ನಿನ್ಯಿಮ॥

**ಪ್ರಯೋಗ**— ಯಃ ಜಗತಾಂ ಚತುರ್ದಶತಯಂ ಪ್ರಲಯಂ ಆನಿನಾಯ (ಕರ್ತರಿ) । ಯೇನ ಜಗತಾಂ ಚತುರ್ದಶತಯಂ (ದ್ವಿತೀಯಾ) ಪ್ರಲಯಃ ಆನಿನ್ಯೇ (ಕರ್ಮಣಿ) ।

★ ★ ★

**ಅವತಾರಿಕಾ**— ಈ ರೀತಿ ಸಂಹಾರವನ್ನು ಮಾತ್ರ ಮಾಡತಕ್ಕವನೆಂಬುದು ಮಾತ್ರವಲ್ಲ. ಯಥಾಯೋಗ್ಯವಾಗಿ ಸ್ವೇತರ ಸಕಲ ಸೃಷ್ಟಿಕರ್ತನೂ ಈತನೇ ಎಂದು ಚಿಂತಿಸಿದರೆನ್ನುತ್ತಾರೆ.

**ತ್ರಿಗುಣಾಕೃತಿಪ್ರಕೃತಿತೋ ಮಹತ್ತತ-**
**ಸ್ತ್ರಿವಿಧಾಮಹಂಕೃತಿಮಮರ್ತ್ಯಖಾನ್ಯತಃ ।**
**ಅಪಿಭೂತಪಂಚಕಮಿತೋಽಂಡಮಂಡಲಂ**
**ಭಗವಾನಸಾವಿಹ ಜಗಂತಿ ಚಾಸೃಜತ್ ॥ 11 ॥**

**ಪದಚ್ಛೇದ**— ತ್ರಿಗುಣಾಕೃತಿಪ್ರಕೃತಿತಃ, ಮಹತ್, ತತಃ, ತ್ರಿವಿಧಾಂ, ಅಹಂಕೃತಿಂ, ಅಮರ್ತ್ಯಖಾನಿ, ಅತಃ, ಅಪಿ, ಭೂತಪಂಚಕಂ, ಇತಃ, ಅಂಡಮಂಡಲಂ, ಭಗವಾನ್, ಅಸೌ, ಇಹ, ಜಗಂತಿ, ಚ, ಅಸೃಜತ್ ।

**ಅನ್ವಯ**— ಭಗವಾನ್ ಅಸೌ, ತ್ರಿಗುಣಾಕೃತಿಪ್ರಕೃತಿತಃ, ಮಹತ್ ತತಃ ತ್ರಿವಿಧಾಂ ಅಹಂಕೃತಿಂ, ಅತಃ ಅಮರ್ತ್ಯಖಾನಿ, ಭೂತಪಂಚಕಂ, ಅಪಿ, ಇತಃ ಅಂಡಮಂಡಲಂ ಇಹ, ಜಗಂತಿ ಚ, ಅಸೃಜತ್ ।

**ಅನ್ವಯಾರ್ಥ**—

**ಭಗವಾನ್** = ಷಡ್ಗುಣೈಶ್ವರ್ಯಸಂಪನ್ನನಾದ

**ಅಸೌ** = ಈ ಪುರಾಣ ಪುರುಷನಾದ ನಾರಾಯಣನು,

**ತ್ರಿಗುಣಾಕೃತಿಪ್ರಕೃತಿತಃ** = ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೇ ಸ್ವರೂಪವಾಗಿ ಉಳ್ಳ ಪ್ರಧಾನ, ಜಡ ಪ್ರಕೃತಿ, ಎಂಬ ಹೆಸರುಳ್ಳ (ಲಕ್ಷ್ಮೀದೇವಿಯೇ ಅಭಿಮಾನಿಯಾಗಿ ಉಳ್ಳ) ಮೂಲ ಪ್ರಕೃತಿಯ ದೆಸೆಯಿಂದ

**ಮಹತ್** = ಮಹತ್ತತ್ತ್ವವನ್ನೂ, ಮಹತ್ತತ್ವಾಭಿಮಾನಿಯಾದ ಚತುರ್ಮುಖ ಬ್ರಹ್ಮನನ್ನೂ,

**ತತಃ** = ಆ ಬ್ರಹ್ಮನಿಂದ ಆ ಮಹತ್ತತ್ತ್ವದ ದೆಶೆಯಿಂದ

**ತ್ರಿವಿಧಾಂ** = ವೈಕಾರಿಕ, ತೈಜಸ, ತಾಮಸ, ಎಂಬ ಮೂರು ವಿಧವಾದ

**ಅಹಂಕೃತಿಂ** = ಅಹಂಕಾರ ತತ್ತ್ವವನ್ನೂ (ಅಹಂಕಾರತತ್ತ್ವಾಭಿಮಾನಿಯಾದ ರುದ್ರನನ್ನೂ) ,

**ಅತಃ** = ಈ ಮೂರು ಬಗೆಯ ಅಹಂಕಾರ ತತ್ತ್ವಗಳಿಂದ

**ಅಮರ್ತ್ಯಖಾನಿ** = ದೇವತೆಗಳು, ಇಂದ್ರಿಯಗಳು,

**ಭೂತಪಂಚಕಂ ಅಪಿ** = ಭೂಮಿ, ನೀರು, ತೇಜಸ್ಸು, ವಾಯು, ಆಕಾಶವೆಂಬ ಐದು ಭೂತಗಳನ್ನೂ

**ಇತಃ** = ಈ ಪಂಚಮಹಾಭೂತಗಳಿಂದ

**ಅಂಡಮಂಡಲಂ** = ಬ್ರಹ್ಮಾಂಡವನ್ನು

**ಇಹ** = ಈ ಬ್ರಹ್ಮಾಂಡದಲ್ಲಿ

**ಜಗಂತಿ ಚ** = ಹದಿನಾಲ್ಕು ಲೋಕಗಳನ್ನೂ, ಲೋಕದಲ್ಲಿರುವ ಜನರನ್ನೂ

**ಅಸೃಜತ್** = ಸೃಷ್ಟಿಸಿದನು.

**ತಾತ್ಪರ್ಯ—** ನಿರವಧಿಕ ಸಮಗ್ರ ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಜ್ಞಾನ, ವಿಜ್ಞಾನ ಎಂಬ ಷಡ್ಗುಣಗಳಿಂದ ಪರಿಪೂರ್ಣವಾದುದರಿಂದಲೂ ಪ್ರಾಣಿಗಳ ಉತ್ಪತ್ತಿ, ನಾಶ, ಆಗಮನ, ಗಮನ, ವಿದ್ಯೆ, ಅವಿದ್ಯೆ ಎಂಬ ಆರನ್ನು ತಿಳಿದವನಾದುದರಿಂದಲೂ ಈ ನಾರಾಯಣಮುನಿಯು ಭಗವಂತನು, ಇವನು ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೇ ಸ್ವರೂಪವಾಗಿ ಉಳ್ಳ 'ಪ್ರಧಾನ' ಎಂಬ ಹೆಸರುಳ್ಳ ಮೂಲಪ್ರಕೃತಿಯಿಂದ ಮಹತ್ತತ್ತ್ವಕ್ಕೆ ಅಭಿಮಾನಿಯಾದ ಚತುರ್ಮುಖಬ್ರಹ್ಮನನ್ನು ಸೃಷ್ಟಿಸಿದನು. ಮಹತ್ತತ್ತ್ವದಿಂದ ಚತುರ್ಮುಖನನ್ನು ನಿಮಿತ್ತವಾಗಿ ಮಾಡಿಕೊಂಡು 'ವೈಕಾರಿಕ, ತೈಜಸ, ತಾಮಸ' ಎಂದು ಮೂರು ಬಗೆಯಾದ ಅಹಂಕಾರತತ್ತ್ವವನ್ನೂ ಅದಕ್ಕೆ ಅಭಿಮಾನಿಯಾದ ರುದ್ರನನ್ನೂ, ಆ ಅಹಂಕಾರತತ್ತ್ವಗಳಿಂದ ದೇವತೆಗಳು, ಇಂದ್ರಿಯಗಳು ಮತ್ತು ಪಂಚ ಮಹಾಭೂತಗಳು ಇವುಗಳನ್ನು ಸೃಷ್ಟಿಸಿದನು. (ಎಂದರೆ ವೈಕಾರಿಕಾಹಂಕಾರತತ್ತ್ವದಿಂದ ಹತ್ತು ಇಂದ್ರಿಯಾಭಿಮಾನಿ ದೇವತೆಗಳನ್ನೂ, ತೈಜಸಾಹಂಕಾರದಿಂದ ಕಿವಿ, ಕಣ್ಣು, ತ್ವಕ್, ನಾಲಿಗೆ, ಮೂಗು ಎಂಬ ಪಂಚ ಜ್ಞಾನೇಂದ್ರಿಯಗಳು ಮತ್ತು ವಾಕ್, ಪಾಣಿ (ಕೈ) ಪಾದ, ಪಾಯು (ಮಲವಿಸರ್ಜನೇಂದ್ರಿಯ) ಉಪಸ್ಥ (ಗುಹ್ಯೇಂದ್ರಿಯ) ಎಂಬ ಐದು ಕರ್ಮೇಂದ್ರಿಯಗಳನ್ನು, ತಾಮಸಾಹಂಕಾರದಿಂದ ಶಬ್ದಾದಿ ಗುಣಗಳೊಡನೆ ಆಕಾಶಾದಿ ಪಂಚಮಹಾಭೂತಗಳನ್ನೂ ಸೃಷ್ಟಿಸಿದನು. ಇವುಗಳನ್ನೆಲ್ಲಾ ಒಟ್ಟು ಸೇರಿಸಿ ಅವುಗಳಿಂದ ಬ್ರಹ್ಮಾಂಡವನ್ನೂ, ಈ ಬ್ರಹ್ಮಾಂಡದಲ್ಲಿ ಹದಿನಾಲ್ಕು ಲೋಕ-ಗಳನ್ನೂ, ಅಲ್ಲಿರುವ ಸಮಸ್ತ ಪ್ರಾಣಿಗಳನ್ನೂ ಸೃಷ್ಟಿಸಿದನು. ಹೇಗೆ ಇವನು ಸಂಹಾರ ಕರ್ತೃ ಅಷ್ಟೇ ಅಲ್ಲ. ಸೃಷ್ಟಿಕರ್ತೃವೂ ಆಗಿದ್ದಾನೆ. (ವಿಶೇಷ-ಇಲ್ಲಿ 'ತ್ರಿಗುಣಾಕೃತಿ ಪ್ರಕೃತಿತಃ ಗುರುಂ ತತಃ' ಎಂದೂ ಪಾಠವಿದೆ. ಆ ಪಕ್ಷದಲ್ಲಿ ತ್ರಿಗುಣಾತ್ಮಕವಾದ ಪ್ರಕೃತಿಯಿಂದ ಮಹತ್ತತ್ತ್ವಾಭಿಮಾನಿಯಾದ ಗುರು ಎಂದು ಪ್ರಸಿದ್ಧನಾದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿ ಮಾಡಿದನು ಎಂದು ಅರ್ಥ.) ''ಪ್ರಜ್ಞಾ ಜ್ಞಾನಂ ಮಹಾಗುರುಃ'' ಎಂಬ ವಚನಾನುಸಾರವಾಗಿ ಬ್ರಹ್ಮದೇವರು ಗುರು ಎಂದು ಪ್ರಸಿದ್ಧರಾಗಿದ್ದಾರೆ ಎಂದು ಅಭಿಪ್ರಾಯವನ್ನು ತಿಳಿಯಬೇಕು.

ವಿಗ್ರಹ—

**ತ್ರಿಗುಣಾಕೃತಿಪ್ರಕೃತಿತಃ—** ತ್ರಯಶ್ಚ ತೇ ಗುಣಾಶ್ಚ ತ್ರಿಗುಣಾಃ, ತ್ರಿಗುಣಾಃ ಏವ ಆಕೃತಿಃ ಯಸ್ಯಾಃ ಸಾ ತ್ರಿಗುಣಾಕೃತಿಃ, ತ್ರಿಗುಣಾಕೃತಿಶ್ಚ ಸಾ ಪ್ರಕೃತಿಶ್ಚ ತ್ರಿಗುಣಾಕೃತಿಪ್ರಕೃತಿಃ, ತಸ್ಯಾಃ ಇತಿ ತ್ರಿಗುಣಾಕೃತಿಪ್ರಕೃತಿತಃ ।

**ತ್ರಿವಿಧಾಂ—** ತಿಸ್ರಃ ವಿಧಾಃ ಯಸ್ಯಾಃ ಸಾ ತ್ರಿವಿಧಾಃ, ತಾಂ ತ್ರಿವಿಧಾಂ ।

**ಅಮರ್ತ್ಯಖಾನಿ—** ಅಮರ್ತ್ಯಾಶ್ಚ ಖಾನಿ ಚ ಅಮರ್ತ್ಯಖಾನಿ, ತಾನಿ ಅಮರ್ತ್ಯಖಾನಿ ।

**ಭೂತಪಂಚಕಂ—** ಪಂಚಾನಾಂ ಸಮೂಹಃ ಪಂಚಕಂ, ಭೂತಾನಾಂ ಪಂಚಕಂ ಭೂತಪಂಚಕಂ ।

**ಅಂಡಮಂಡಲಂ—** ಅಂಡಸ್ಯ ಮಂಡಲಂ ಅಂಡಮಂಡಲಂ, ತತ್ ಅಂಡಮಂಡಲಂ ।

**ಭಗವಾನ್—** ಭಗಃ ಅಸ್ಯ ಅಸ್ತೀತಿ ಭಗವಾನ್ ।

**ಕ್ರಿಯಾಪದ**— ಅಸೃಜತ್- ಸೃಜ ವಿಸರ್ಗೇ ಇತಿ ವಿಸರ್ಗಾರ್ಥಕಾತ್ ಸೃಜಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಅಸೃಜತ್'' ಇತಿ ರೂಪಮ್ ।

ಅಸೃಜತ್ ಅಸೃಜತಾಂ ಅಸೃಜನ್, ಅಸೃಜಃ ಅಸೃಜತಂ ಅಸೃಜತ, ಅಸೃಜಂ ಅಸೃಜಾವ ಅಸೃಜಾಮ ॥

**ಪ್ರಯೋಗ**— ಭಗವಾನ್ ಜಗಂತಿ ಅಸೃಜತ್ (ಕರ್ತರಿ) । ಭಗವತಾ ಜಗಂತಿ ಅಸೃಜ್ಯಂತ (ಕರ್ಮಣಿ) ।

★ ★ ★

**ಅವತಾರಿಕಾ**— ಚತುರ್ಮುಖಬ್ರಹ್ಮಾದಿ ಸಕಲಪ್ರಪಂಚದ ಸೃಷ್ಟಿ, ರಕ್ಷಣೆ ಸಂಹಾರಾದಿಗಳನ್ನು ಲೀಲಾಮಾತ್ರದಿಂದ ಮಾಡುವವನೂ ಈತನೇ ಎಂದು ನೆನೆಸಿದರೆನ್ನುತ್ತಾರೆ.

**ವಿಧಿವಾಯುವೀಂದ್ರಶಿವಕೌಶಿಕೇಶಕಾ-**
**ನಮರಾಮರಾನುಗನರಾಸುರಾದಿಕಾನ್ ।**
**ಸೃಜತಿ ಪ್ರಪಾಲಯತಿ ಹಂತಿ ಸಂತತಂ**
**ಸ್ವಗತಿಂ ಪ್ರಯಾಪಯತಿ ಚೈಷಲೀಲಯಾ ॥ 12 ॥**

**ಪದಚ್ಛೇದ**— ವಿಧಿವಾಯುವೀಂದ್ರಶಿವಕೌಶಿಕೇಶಕಾನ್, ಅಮರಾಮರಾನುಗನರಾಸುರಾದಿಕಾನ್, ಸೃಜತಿ, ಪ್ರಪಾಲಯತಿ, ಹಂತಿ, ಸಂತತಂ, ಸ್ವಗತಿಂ, ಪ್ರಯಾಪಯತಿ, ಚ, ಏಷಃ, ಲೀಲಯಾ ।

**ಅನ್ವಯ**— ಏಷಃ ವಿಧಿವಾಯುವೀಂದ್ರಶಿವಕೌಶಿಕೇಶಕಾನ್, ಅಮರಾಮರಾನುಗನರಾಸುರಾದಿಕಾನ್, ಸಂತತಂ ಲೀಲಯಾ ಸೃಜತಿ, ಪ್ರಪಾಲಯತಿ, ಹಂತಿ ಚ ಸ್ವಗತಿಂ ಪ್ರಯಾಪಯತಿ ।

**ಅನ್ವಯಾರ್ಥ**—

**ಏಷಃ** = ಈ ನಾರಾಯಣನು

**ವಿಧಿ ವಾಯುವೀಂದ್ರ ಶಿವಕೌಶಿಕ ಈಶಕಾನ್** = ಚತುರ್ಮುಖ ಬ್ರಹ್ಮನು, ಮುಖ್ಯಪ್ರಾಣನು, ಪಕ್ಷಿರಾಜನಾದ ಗರುಡನು, ರುದ್ರನು, ದೇವೇಂದ್ರನು ಇವರೇ ಒಡೆಯರಾಗಿ ಉಳ್ಳ

**ಅಮರ ಅಮರಾನುಗ ನರ ಅಸುರ ಆದಿಕಾನ್** = ದೇವತೆಗಳು, ದೇವತೆಗಳ ಅನುಚರರು ಮತ್ತು ಸೇವಕರಾದ ಗಂಧರ್ವರು ಮೊದಲಾದವರು, ಮನುಷ್ಯರು, ದೈತ್ಯರು, ಮೊದಲಾಗಿ ಉಳ್ಳವರನ್ನು,

**ಸಂತತಂ** = ಯಾವಾಗಲೂ

**ಸೃಜತಿ** = ಸೃಷ್ಟಿಸುತ್ತಾನೆ

**ಪ್ರಪಾಲಯತಿ** = ಚೆನ್ನಾಗಿ ಕಾಪಾಡುತ್ತಾನೆ

**ಹಂತಿ** = ಸಂಹರಿಸುತ್ತಾನೆ

**ಚ** = ಮತ್ತು

**ಸ್ವಗತಿಂ** = ಅವರವರಿಗೆ ಯೋಗ್ಯವಾದ ಗತಿಯನ್ನು

**ಪ್ರಯಾಪಯತಿ** = ಹೊಂದಿಸುತ್ತಾನೆ.

**ತಾತ್ಪರ್ಯ**— ದೇವತೆಗಳು, ಗಂಧರ್ವಾದಿಗಳು, ಮಾನವರು, ಅಸುರರೇ ಮೊದಲಾದವರಿಗೆ, ಬ್ರಹ್ಮ, ವಾಯು, ಗರುಡ, (ಶೇಷ) ಶಿವ, ದೇವೇಂದ್ರ ಮೊದಲಾದವರು ನೆಪಮಾತ್ರಕ್ಕೆ ಒಡೆಯರಾಗಿದ್ದಾರೆ. ಈ ನಾರಾಯಣನು

ಅವರೆಲ್ಲರನ್ನೂ, ಅನಾಯಾಸವಾಗಿ, ಲೀಲೆಯಿಂದ, ಸೃಷ್ಟಿಸುತ್ತಾನೆ, ಕಾಪಾಡುತ್ತಾನೆ, ಸಂಹರಿಸುತ್ತಾನೆ. ಮತ್ತು ಉತ್ತಮ ಜೀವರಿಗೆ ಮೋಕ್ಷವನ್ನು, ಅಧಮಜೀವರಾದ ಅಸುರರಿಗೆ ತಮಸ್ಸನ್ನೂ, ಮಧ್ಯಮಜೀವರಾದ ನಿತ್ಯಸಂಸಾರಿ ಜೀವರಿಗೆ ಸ್ವರ್ಗ ನರಕ ಭೂಮಿಗಳಲ್ಲಿ ಪರಿವರ್ತನೆಯನ್ನು ಕೊಡುತ್ತಾನೆ. ಈ ಉತ್ಪತ್ತಿ-ಪಾಲನ-ನಾಶ ಮುಂತಾದವುಗಳ ಪ್ರವಾಹಕ್ಕೆ ಎಂದೂ ವಿಚ್ಛೇದವಿಲ್ಲ. ಪ್ರವಾಹದಂತೆ ಅನಾದಿಯಾಗಿ ಇದು ನಡೆದು ಬರುತ್ತಿದೆ.

**ವಿಗ್ರಹ—**

**ವಿಧಿವಾಯುವೀಂದ್ರಶಿವಕೌಶಿಕೇಶಕಾನ್—** ವೀನಾಂ ಇಂದ್ರಃ ವೀಂದ್ರಃ, ವಿಧಿಶ್ಚ ವಾಯುಶ್ಚ ವೀಂದ್ರಶ್ಚ ಶಿವಶ್ಚ ಕೌಶಿಕಶ್ಚ ವಿಧಿವಾಯುವೀಂದ್ರಶಿವಕೌಶಿಕಾಃ, ತೇ ಈಶಾಃ ಯೇಷಾಂ ತೇ ವಿಧಿವಾಯುವೀಂದ್ರ-ಶಿವಕೌಶಿಕೇಶಕಾಃ, ತಾನ್ ವಿಧಿವಾಯುವೀಂದ್ರಶಿವಕೌಶಿಕೇಶಕಾನ್ ।

**ಅಮರಾಮರಾನುಗನರಾಸುರಾದಿಕಾನ್—** ಅನುಗಚ್ಛಂತೀತಿ ಅನುಗಾಃ, ಅಮರಾಣಾಂ ಅನುಗಾಃ ಅಮರಾನುಗಾಃ, ಅಮರಾಶ್ಚ ಅಮರಾನುಗಾಶ್ಚ ನರಾಶ್ಚ ಅಸುರಾಶ್ಚ ಅಮರಾಮರಾನುಗನರಾಸುರಾಃ, ತೇ ಆದಯಃ ಯೇಷಾಂ ತೇ ಅಮರಾಮರಾನುಗನರಾಸುರಾದಿಕಾಃ, ತಾನ್ ಅಮರಾ-ಮರಾನುಗನರಾಸುರಾದಿಕಾನ್ ।

**ಸ್ವಗತಿಂ—** ಸ್ವೇಷಾಂ ಗತಿಃ ಸ್ವಗತಿಃ, ತಾಂ ಸ್ವಗತಿಂ ।

**ಕ್ರಿಯಾಪದ— ಸೃಜತಿ-** ಸೃಜ ವಿಸರ್ಗೇ ಇತಿ ವಿಸರ್ಗಾರ್ಥಕಾತ್ ಸೃಜಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈ-ಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ''ಸೃಜತಿ'' ಇತಿ ರೂಪಮ್ ।

ಸೃಜತಿ ಸೃಜತಃ ಸೃಜಂತಿ, ಸೃಜಸಿ ಸೃಜಥಃ ಸೃಜಥ, ಸೃಜ್ಯಾಮಿ ಸೃಜ್ಯಾಮಃ ಸೃಜ್ಯಾವಃ ॥

**ಪ್ರಪಾಲಯತಿ-** ಪ್ರ ಉಪಸರ್ಗ ಪೂರ್ವಕಾತ್ ಪಾಲರಕ್ಷಣೇ ಇತಿ ರಕ್ಷಣಾರ್ಥಕಾತ್ ಪಾಲಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ''ಪ್ರಪಾಲಯತಿ'' ಇತಿ ರೂಪಮ್ ।

ಪ್ರ-ಪಾಲಯತಿ ಪಾಲಯತಃ ಪಾಲಯಂತಿ,
ಪಾಲಯಸಿ ಪಾಲಯಥಃ ಪಾಲಯಥ,
ಪಾಲಯಾಮಿ ಪಾಲಯಾವಃ ಪಾಲಯಾಮಃ ॥

**ಹಂತಿ-** ಹನ ಹಿಂಸಾಗತ್ಯೋಃ, ಇತ್ಯಸ್ಮಾತ್ ಹಿಂಸಾಗರ್ಥಕಾತ್ ಹನ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ಹಂತಿ ಇತಿ ರೂಪಮ್ ।

ಹಂತಿ ಹತಃ ಘ್ನಂತಿ, ಹಂಸಿ ಹಥಃ ಹಥ, ಹನ್ಮಿ ಹನ್ವಃ ಹನ್ಮಃ ॥

**ಪ್ರಯಾಪಯತಿ-** ಯಾ ಪ್ರಾಪಣೇ ಇತ್ಯಸ್ಮಾತ್ ಪ್ರಾಪಣಾರ್ಥಕಾತ್ ಯಾಧಾತೋಃ ಣಿಜಂತಾತ್ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲಟ್‌ಪ್ರಥಮಪುರುಷೇ ಏಕವಚನೇ ''ಪ್ರಯಾಪಯತೀತಿ'' ರೂಪಮ್ ।

ಪ್ರ-ಯಾಪಯತಿ ಯಾಪಯತಃ ಯಾಪಯಂತಿ,
ಯಾಪಯಸಿ ಯಾಪಯಥಃ ಯಾಪಯಥ,
ಯಾಪಯಾಮಿ ಯಾಪಯಾವಃ ಯಾಪಯಾಮಃ ॥

**ಪ್ರಯೋಗ—** ಏಷಃ ಅಸುರಾದಿಕಾನ್ ಸೃಜತಿ (ಕರ್ತರಿ) । ಏತೇನ ಅಸುರಾದಿಕಾಃ ಸೃಜ್ಯಂತೇ (ಕರ್ಮಣಿ) । ಹೀಗೆಯೇ, ಏತೇನ ಅಸುರಾದಿಕಾಃ ಪ್ರಪಾಲ್ಯಂತೇ, ಏತೇನ ಅಸುರಾದಿಕಾಃ ಸ್ವಗತಿಂ ಪ್ರಯಾಪ್ಯಂತೇ ಎಂಬ ಕರ್ಮಣಿ ಪ್ರಯೋಗಗಳು.

★ ★ ★

**ಅವತಾರಿಕಾ**— ಈ ಮಹಾನುಭಾವನು ತನ್ನ ಭಕ್ತವರ್ಗದ ಇಷ್ಟಾರ್ಥಗಳನ್ನು ಅನುಗ್ರಹಿಸುವುದಕ್ಕಾಗಿಯೇ ನಾನಾ ರೂಪಗಳನ್ನು ತಾಳುತ್ತಾನೆಂದು ಚಿಂತಿಸಿದರೆನ್ನುತ್ತಾರೆ.

**ಅಗಣಯ್ಯ(ಅಗಣೇಯ)ಸದ್ಗುಣಗಣೋ ವಿದೂಷಣಃ**
**ಸ್ವವಶಾಖಿಲೋಽಪ್ಯನುಪಚಾರತಃ ಸ್ವಯಮ್ ।**
**ಸ್ಮೃತಿಕೀರ್ತನಪ್ರಣತಿಭಿರ್ವಿಮುಕ್ತಯೇ**
**ಸ್ವಜನಸ್ಯ ಯಾತ್ಯಯಮನೇಕರೂಪತಾಮ್ ॥ 13 ॥**

**ಪದಚ್ಛೇದ**— ಅಗಣಯ್ಯಸದ್ಗುಣಗಣಃ, ವಿದೂಷಣಃ, ಸ್ವವಶಾಖಿಲಃ, ಅಪಿ, ಅನುಪಚಾರತಃ, ಸ್ವಯಂ, ಸ್ಮೃತಿ-ಕೀರ್ತನಪ್ರಣತಿಭಿಃ, ವಿಮುಕ್ತಯೇ, ಸ್ವಜನಸ್ಯ, ಯಾತಿ, ಅಯಂ, ಅನೇಕರೂಪತಾಂ ।

**ಅನ್ವಯ**— ಅಗಣಯ್ಯ (ಣೇಯ) ಸದ್ಗುಣಗಣಃ, ವಿದೂಷಣಃ, ಅನುಪಚಾರತಃ ಸ್ವಯಂ ಸ್ವವಶಾಖಿಲಃ ಅಪಿ, ಅಯಂ ಸ್ಮೃತಿಕೀರ್ತನಪ್ರಣತಿಭಿಃ, ಸ್ವಜನಸ್ಯ ವಿಮುಕ್ತಯೇ ಅನೇಕರೂಪತಾಂ ಯಾತಿ ।

**ಅನ್ವಯಾರ್ಥ**—

**ಅಗಣಯ್ಯ(ಣೇಯ) ಸದ್ಗುಣಗಣಃ** = ಎಣಿಸಲು ಸಾಧ್ಯವಾಗದ ಉತ್ಕೃಷ್ಟವಾದ ಗುಣಗಳ ಸಮೂಹವುಳ್ಳ

**ವಿದೂಷಣಃ** = ದೋಷವಿಲ್ಲದ

**ಅನುಪಚಾರತಃ** = ಮುಖ್ಯವಾಗಿ

**ಸ್ವಯಂ** = ತಾನು

**ಸ್ವವಶಾಖಿಲಃ**-

**ಸ್ವವಶ** = ತನ್ನ ಅಧೀನವಾದ

**ಅಖಿಲಃ ಅಪಿ** = ಎಲ್ಲಾ ಲೋಕವುಳ್ಳವನಾದರೂ,

**ಅಯಂ** = ಇವನು

**ಸ್ಮೃತಿಕೀರ್ತನ ಪ್ರಣತಿಭಿಃ** = ಸ್ಮರಣೆಯು, ಭಗವಂತನ ನಾಮಗಳ ಉಚ್ಚಾರಣೆಯು ನಮಸ್ಕಾರ ಇವುಗಳಿಂದ,

**ಸ್ವಜನಸ್ಯ** = ತನ್ನ ಭಕ್ತರ

**ವಿಮುಕ್ತಯೇ** = ಮೋಕ್ಷಕ್ಕಾಗಿ

**ಅನೇಕರೂಪತಾಂ** = ವಾಸುದೇವಾದಿ ಅನೇಕ ರೂಪಗಳನ್ನು

**ಯಾತಿ** = ಹೊಂದುತ್ತಾನೆ.

ತಾತ್ಪರ್ಯ— ಈ ನಾರಾಯಣನ ಗುಣಗಳು ನಿರತಿಶಯವಾದ ಉತ್ಕರ್ಷವುಳ್ಳವುಗಳು. ಅವುಗಳ ಸಂಖ್ಯೆಯನ್ನು ಹೇಳಲು ಯಾರಿಗೂ ಸಾಧ್ಯವಾಗದು. ಅವನಲ್ಲಿ ದೋಷಲೇಶವೂ ಇಲ್ಲ. ಎಲ್ಲಾ ಲೋಕಗಳೂ ಮುಖ್ಯವಾಗಿ ಇವನ ಅಧೀನವಾಗಿದೆ. ಇವನು ಒಂದೇ ರೂಪದಿಂದ ಎಲ್ಲಾ ಕಾರ್ಯಗಳನ್ನೂ ಮಾಡಲು ಸಮರ್ಥನು. ಆದರೂ ತನ್ನ ಭಕ್ತರು ಅವರವರ ಯೋಗ್ಯತಾನುಸಾರವಾಗಿ ಅವತಾರ ರೂಪಗಳನ್ನೂ, ಅವತಾರ ಚರಿತ್ರಗಳನ್ನೂ, ಧ್ಯಾನಿಸುವುದರಿಂದಲೂ, ನಾಮಗಳನ್ನು ಉಚ್ಚರಿಸುವುದರಿಂದಲೂ ನಮಸ್ಕಾರ ಮಾಡುವುದರಿಂದಲೂ, ಮೋಕ್ಷವನ್ನು ಪಡೆಯಲೆಂದು ಅನಂತ ರೂಪಗಳನ್ನು ಸ್ವೀಕರಿಸುತ್ತಾನೆ. ಒಂದೇ ರೂಪದಿಂದ ಕಾರ್ಯವನ್ನು ಮಾಡಲು ಅಸಾಮರ್ಥ್ಯದಿಂದಲ್ಲ.

ವಿಗ್ರಹ—

**ಅಗಣಯ್ಯಸದ್ಗುಣಗಣಃ**— ಗಣಯಿತುಮಶಕ್ಯಾಃ ಅಗಣಯ್ಯಾಃ (ಅಗಣೇಯಾಃ), ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಸದ್ಗುಣಾನಾಂ ಗಣಾಃ ಸದ್ಗುಣಗಣಾಃ, ಅಗಣಯ್ಯಾಃ ಸದ್ಗುಣಗಣಾಃ ಯಸ್ಯ ಸಃ ಅಗಣಯ್ಯಸದ್ಗುಣಗಣಃ ।

**ವಿದೂಷಣಃ**— ವಿಗತಂ ದೂಷಣಂ ಯಸ್ಮಾತ್ ಸಃ ವಿದೂಷಣಃ ।

**ಸ್ವವಶಾಖಿಲಃ**— ಸ್ವಸ್ಯ ವಶಂ ಸ್ವವಶಂ, ಸ್ವವಶಂ ಅಖಿಲಂ ಯಸ್ಯ ಸಃ ಸ್ವವಶಾಖಿಲಃ । (ಸ್ವವಶಃ ಅಖಿಲಃ ಯಸ್ಯ ಸಃ ಇತಿ ವಾ) ।

**ಅನುಪಚಾರತಃ**— ಉಪಚಾರಸ್ಯ ಅಭಾವಃ ಅನುಪಚಾರಃ, ತಸ್ಮಾತ್ ಅನುಪಚಾರತಃ ।

**ಸ್ಮೃತಿಕೀರ್ತನಪ್ರಣತಿಭಿಃ**— ಸ್ಮೃತಿಶ್ಚ ಕೀರ್ತನಂ ಚ ಪ್ರಣತಿಶ್ಚ ಸ್ಮೃತಿಕೀರ್ತನಪ್ರಣತಯಃ, ತಾಭಿಃ ಸ್ಮೃತಿ-ಕೀರ್ತನಪ್ರಣತಿಭಿಃ ।

**ಸ್ವಜನಸ್ಯ**— ಸ್ವಸ್ಯ ಜನಃ ಸ್ವಜನಃ, ತಸ್ಯ ಸ್ವಜನಸ್ಯ ।

**ಅನೇಕರೂಪತಾಂ**— ಅನೇಕಾನಿ ರೂಪಾಣಿ ಯಸ್ಯ ಸಃ ಅನೇಕರೂಪಃ, ಅನೇಕರೂಪಸ್ಯ ಭಾವಃ ಅನೇಕ-ರೂಪತಾ, ತಾಂ ಅನೇಕರೂಪತಾಂ ।

**ಪ್ರಯೋಗ**— ಅಯಂ ಅನೇಕರೂಪತಾಂ ಯಾತಿ (ಕರ್ತರಿ) । ಅನೇನ ಅನೇಕರೂಪತಾ ಯಾಯತೇ (ಕರ್ಮಣಿ)।

★ ★ ★

**ಅವತಾರಿಕಾ**— ಅವತಾರ ರೂಪಗಳಲ್ಲಿ ಮೊದಲು ಮತ್ಸ್ಯಾವತಾರ ಮತ್ತು ಹಯಗ್ರೀವಾವತಾರಗಳನ್ನು ಒಂದೇ ಶ್ಲೋಕದಲ್ಲಿ ಎರಡು ಅರ್ಥದ ಶಬ್ದಗಳಿಂದ ವರ್ಣಿಸಿದರೆಂದು ಹೇಳುತ್ತಾರೆ.

**ಚತುರಾನನಾಯ ಚತುರಃ ಪುರಾಽಗಮಾನ್**
**ಪ್ರದದಾವಸಾವನಿಮಿಷೇಶ್ವರಃ ಪ್ರಭುಃ ।**
**ವಿನಿಹತ್ಯ ಹಿ ಶ್ರುತಿಮುಷಂ ಪುರಾತನಂ**
**ವಪುಷೋದ್ಧೃತಂ ಹಯಮುಖೇನ ಸದ್ರಿಪುಮ್ ॥ 14 ॥**

**ಪದಚ್ಛೇದ**— ಚತುರಾನನಾಯ, ಚತುರಃ, ಪುರಾ, ಆಗಮಾನ್, ಪ್ರದದೌ, ಅಸೌ, ಅನಿಮಿಷೇಶ್ವರಃ, ಪ್ರಭುಃ, ವಿನಿಹತ್ಯ , ಹಿ, ಶ್ರುತಿಮುಷಂ, ಪುರಾತನಂ, ವಪುಷೋದ್ಧೃತಂ, ಹಯಮುಖೇನ, ಸದ್ರಿಪುಂ ।

**ಅನ್ವಯ**— (1) ಅಸೌ ಪ್ರಭುಃ ಪುರಾ ಅನಿಮಿಷೇಶ್ವರಃ (ಸನ್), ಹಯಮುಖೇನ, ವಪುಷಾ ಉದ್ಧೃತಂ ಶ್ರುತಿಮುಷಂ, ಪುರಾತನಂ ಸದ್ರಿಪುಂ ವಿನಿಹತ್ಯ, ಚತುರಾನನಾಯ ಚತುರಃ ಆಗಮಾನ್ (ಆನೀಯ) ಪ್ರದದೌ ಹಿ ।

(2) ಅನಿಮಿಷೇಶ್ವರಃ ಪ್ರಭುಃ ಅಸೌ, ಪುರಾ ಹಯಮುಖೇನ ವಪುಷಾ (ಅವತೀರ್ಣಃ ಸನ್) ಶ್ರುತಿಮುಷಂ, ಉದ್ಧೃತಂ ಪುರಾತನಂ ಸದ್ರಿಪುಂ ವಿನಿಹತ್ಯ, ಚತುರಾನನಾಯ ಚತುರಃ ಆಗಮಾನ್ ಪ್ರದದೌ ಹಿ ।

**ಅನ್ವಯಾರ್ಥ**— ಈ ಶ್ಲೋಕದಿಂದ ಆರಂಭಿಸಿ ''ಉದಪಾದಿ ಧರ್ಮತನಯಃ'' ಎಂಬ ಈ ಸರ್ಗದ 40ನೆಯ ಶ್ಲೋಕದವರೆಗೆ ಪ್ರತಿಯೊಂದು ಶ್ಲೋಕಕ್ಕೂ ಎರಡು ಅರ್ಥಗಳಿವೆ.

***(2) ಮತ್ಸ್ಯಾವತಾರ ಪರವಾದ ಅರ್ಥ-***

**ಅಸೌ** = ಈ

**ಪ್ರಭುಃ** = ಸಮರ್ಥನಾದ ನಾರಾಯಣನು

**ಪುರಾ** = ಹಿಂದೆ

**ಅನಿಮಿಷೇಶ್ವರಃ (ಸನ್)** = ಮೀನುಗಳಿಗೆ ಒಡೆಯನಾದ ಶ್ರೇಷ್ಠವಾದ ಮತ್ಸ್ಯಾವತಾರವುಳ್ಳವನಾಗಿ,

**ಹಯಮುಖೇನ** = ಕುದುರೆಯ ಮುಖದಂತೆ ಮುಖವುಳ್ಳ

**ವಪುಷಾ** = ಶರೀರದಿಂದ

**ಉದ್ಧತಂ** = ಕೊಬ್ಬಿದ

**ಶ್ರುತಿಮುಷಂ** = ವೇದಗಳನ್ನು ಅಪಹರಿಸಿದ,

**ಪುರಾತನಂ** = ಬಹಳ ಹಿಂದಿನವನಾದ (ಆದಿದೈತ್ಯನಾದ)

**ಸದ್ರಿಪುಂ** = ಸಜ್ಜನರಿಗೆ ಶತ್ರುವಾದವನನ್ನು (ಹಯಗ್ರೀವಾಸುರನನ್ನು)

**ವಿನಿಹತ್ಯ** = ಕೊಂದು,

**ಚತುರಾನನಾಯ** = ಬ್ರಹ್ಮದೇವರಿಗೆ

**ಚತುರಃ** = ನಾಲ್ಕು

**ಆಗಮಾನ್** = ವೇದಗಳನ್ನು (ಆನೀಯ = ತಂದು)

**ಪುದದೌ ಹಿ** = ಕೊಟ್ಟನಷ್ಟೆ.

*(2) ಹಯಗ್ರೀವ ಪರವಾದ ಅರ್ಥ-*

**ಅನಿಮಿಷೇಶ್ವರಃ** = ದೇವತೆಗಳಿಗೆ ಸ್ವಾಮಿಯಾದ

**ಅಸೌ ಪ್ರಭುಃ** = ಈ ನಾರಾಯಣನು

**ಪುರಾ** = ಹಿಂದೆ

**ಹಯಮುಖೇನ** = ಕುದುರೆಯ ಮುಖದಂತಹ ಮುಖವುಳ್ಳ

**ವಪುಷಾ** = ಶರೀರದಿಂದ (ಅವತೀರ್ಣಃ ಸನ್ = ಅವತಾರ ಮಾಡಿದವನಾಗಿ)

**ಶ್ರುತಿಮುಷಂ** = ವೇದಗಳನ್ನು ಅಪಹರಿಸಿದ

**ಪುರಾತನಂ** = ಬಹಳ ಹಿಂದಿನ ಕಾಲದವನಾದ (ಆದಿ ದೈತ್ಯನಾದ)

**ಸದ್ರಿಪುಂ** = ಸಜ್ಜನರಿಗೆ ಶತ್ರುವಾದವನನ್ನು (ಮಧು ಎಂಬ ದೈತ್ಯನನ್ನು)

**ವಿನಿಹತ್ಯ** = ಕೊಂದು

**ಚತುರಾನನಾಯ** = ಬ್ರಹ್ಮದೇವರಿಗೆ

**ಚತುರಃ ಆಗಮಾನ್** = ನಾಲ್ಕು ವೇದಗಳನ್ನು

**ಪ್ರದದೌ ಹಿ** = ಕೊಟ್ಟನಷ್ಟೆ.

**ತಾತ್ಪರ್ಯ—** ಹೀಗೆ ಶ್ರೀಮದಾನಂದತೀರ್ಥರು, ಹಿಂದೆ ಸಾಮಾನ್ಯವಾದ ರೀತಿಯಲ್ಲಿ ಸ್ಮರಿಸಿದ ಹರಿಯನ್ನೂ, ಅವನ ಸೃಷ್ಟ್ಯಾದಿ ವ್ಯಾಪಾರಗಳನ್ನೂ ಅನುವಾದ ಮಾಡಿದ್ದಾಯಿತು. ಈಗ ವಿಶೇಷವಾಗಿ ಆಚಾರ್ಯರು ಧ್ಯಾನ ಮಾಡಿದ ಪರಮಾತ್ಮನ ಅವತಾರಗಳು ಮತ್ತು ಅವುಗಳಿಂದ ಮಾಡಿದ ಅಸಾಧಾರಣ ಕಾರ್ಯಗಳನ್ನು ವರ್ಣಿಸಲು ಪ್ರಾರಂಭಿಸುತ್ತಾರೆ. ಪರಮಾತ್ಮನ ರೂಪಗಳೂ, ಅವನು ಮಾಡಿದ ಕಾರ್ಯಗಳೂ ಅನಂತವಾಗಿವೆ. ಆದರೂ ಶ್ರೀಮನ್ಮಧ್ವಾಚಾರ್ಯರು ಸ್ಮರಿಸಿದ ಅವತಾರ ರೂಪಗಳಲ್ಲಿ ಕೆಲವನ್ನೂ, ಆ ಅವತಾರ ರೂಪಗಳಿಂದ ಮಾಡಿದ ಅಸಾಧಾರಣ ವ್ಯಾಪಾರಗಳಲ್ಲಿ ಕೆಲವನ್ನು ಇಲ್ಲಿ

ನಾರಾಯಣ ಪಂಡಿತಾಚಾರ್ಯರು ಅನುವಾದ ಮಾಡುತ್ತಿದ್ದಾರೆ. ಈ ಶ್ಲೋಕದಿಂದ ಆರಂಭಿಸಿ 40ನೆಯ ''ಉದಪಾದಿ ಧರ್ಮತನಯಃ'' ಎಂಬ ಶ್ಲೋಕದವರೆಗೆ ಒಟ್ಟು 27 ಶ್ಲೋಕಗಳಿಗೆ ಪರಮಾತ್ಮನ ಎರಡು ಅವತಾರಗಳ ಪರವಾದ ಬೇರೆ ಬೇರೆ ಅರ್ಥಗಳಿವೆ. ಅವುಗಳಲ್ಲಿ ಈ ಶ್ಲೋಕದಲ್ಲಿ ಮೊದಲು ಮತ್ಸ್ಯಾವತಾರ, ಅನಂತರ ಹಯಗ್ರೀವಾವತಾರ ಎಂಬ ಎರಡು ಅವತಾರಗಳನ್ನು ಮತ್ತು ಆ ಅವತಾರಗಳಿಂದ ಮಾಡಿದ ಅದ್ಭುತ ವ್ಯಾಪಾರಗಳನ್ನೂ ಇಲ್ಲಿ ವರ್ಣಿಸುತ್ತಾರೆ. ಹೀಗೆಯೇ ಮುಂದಿನ ಶ್ಲೋಕಗಳಲ್ಲಿಯೂ ಎರಡೆರಡು ಅರ್ಥಗಳನ್ನು ತಿಳಿದುಕೊಳ್ಳಬೇಕು.

(1) ಈ ಸಮರ್ಥನಾದ ನಾರಾಯಣನು ಮೀನಿನ ಆಕಾರದಂತೆ ಆಕಾರವುಳ್ಳ ಶ್ರೇಷ್ಠವಾದ ಮತ್ಸ್ಯಾವತಾರವನ್ನು ಮಾಡಿದನು. ಕುದುರೆಯ ಮುಖದಂತೆ ಮುಖವುಳ್ಳ ದುಷ್ಟನಾದ ಹಯಗ್ರೀವಾಸುರನೆಂಬ ಪುರಾತನನಾದ ದೇವಶತ್ರುವು ವೇದಗಳನ್ನು ಅಪಹರಿಸಿದಾಗ ಅವನನ್ನು ಕೊಂದು, ಅವನು ಅಪಹರಿಸಿದ ವೇದಗಳನ್ನು ತಂದು ಬ್ರಹ್ಮದೇವರಿಗೆ ಕೊಟ್ಟನು. (ಇದು ಮತ್ಸ್ಯಾವತಾರದ ಸಂಕ್ಷಿಪ್ತವರ್ಣನೆ).

(2) ದೇವತೆಗಳಿಗೆ ಪ್ರಭುವಾದ ಸಮರ್ಥನಾದ ಈ ನಾರಾಯಣನು ತಾನೇ ಸ್ವತಃ ಕುದುರೆಯ ಮುಖದಂತೆ ಮುಖವುಳ್ಳ ಹಯಗ್ರೀವಾವತಾರವನ್ನು ಮಾಡಿ ವೇದಗಳನ್ನು ಅಪಹರಿಸಿದ, ಸಜ್ಜನರಿಗೆ ಶತ್ರುವಾದ, ಪುರಾತನನಾದ ಮಧು ಎಂಬ ದೈತ್ಯನನ್ನು ಕೊಂದು, ಅವನು ಅಪಹರಿಸಿದ ವೇದಗಳನ್ನು ಮರಳಿ ತಂದು ಚತುರ್ಮುಖ ಬ್ರಹ್ಮದೇವರಿಗೆ ಕೊಟ್ಟನು. (ಹಯಗ್ರೀವಾವತಾರ).

**ವಿಗ್ರಹ—**

**ಚತುರಾನನಾಯ—** ಚತ್ವಾರಿ ಆನನಾನಿ ಯಸ್ಯ ಸಃ ಚತುರಾನನಃ, ತಸ್ಮೈ ಚತುರಾನನಾಯ ।

**ಅನಿಮಿಷೇಶ್ವರಃ—** ಅನಿಮಿಷಾಣಾಂ ಈಶ್ವರಃ ಅನಿಮಿಷೇಶ್ವರಃ ।

**ಶ್ರುತಿಮುಷಂ—** ಶ್ರುತೀಃ ಮುಷ್ಣಾತಿ ಇತಿ ಶ್ರುತಿಮುಟ್, ತಂ ಶ್ರುತಿಮುಷಂ ।

**ಹಯಮುಖೇನ—** ಹಯಸ್ಯ ಮುಖಂ ಇವ ಮುಖಂ ಯಸ್ಯ ತತ್ ಹಯಮುಖಂ, ತೇನ ಹಯಮುಖೇನ ।

**ಸದ್ರಿಪುಂ—** ಸತಾಂ ರಿಪುಃ ಸದ್ರಿಪುಃ, ತಂ ಸದ್ರಿಪುಂ ।

**ಕ್ರಿಯಾಪದ—** ಪ್ರದದೌ- ಪ್ರ ಇತ್ಯುಪಸರ್ಗಪೂರ್ವಕಾತ್ ಡುದಾಞ್ (ದಾ) ದಾನೇ ಇತಿ ದಾನಾರ್ಥಕಾತ್ ದಾಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ದದೌ'' ಇತಿ ರೂಪಮ್ ॥

ಪ್ರ-ದದೌ ದದತುಃ ದದುಃ, ದದಿಥ-ದದಾಥ ದದಥುಃ ದದ, ದದೌ ದದಿವ ದದಿಮ ॥

**ಪ್ರಯೋಗ—** ಅಸೌ ಪ್ರಭುಃ ಚತುರಃ ಆಗಮಾನ್ ಪ್ರದದೌ (ಕರ್ತರಿ) । ಅನೇನ ಪ್ರಭುಣಾ ಚತ್ವಾರಃ ಆಗಮಾಃ ಪ್ರದದಿರೇ (ಕರ್ಮಣಿ) ।

★ ★ ★

**ಅವತಾರಿಕಾ—** ಪರಮಾತ್ಮನ ಕೂರ್ಮ ಮತ್ತು ವರಾಹವೆಂಬ ಎರಡು ಅವತಾರಗಳನ್ನೂ ವರ್ಣಿಸುತ್ತಾರೆ.

**ಅಮರೇಂದ್ರವೈರಿಭುಜದಂಡಮಂಡಲ-**
**ಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಃ ।**
**ವಿದಧೇ ವರಾಹವಪುಷಾऽऽಮುನೋರ್ಮಿಮತ್-**
**ಸ್ಮೃತಿಸಿಂಧುಕಚ್ಛಪತಯಾಪ್ತರಕ್ಷಿಣಾ ॥ 15 ॥**

**ಪದಚ್ಛೇದ—** ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಃ, ವಿದಧೇ, ವರಾಹ-ವಪುಷಾ, ಅಮುನಾ, ಊರ್ಮಿಮತ್ಸ್ಮೃತಿಸಿಂಧುಕಚ್ಛಪತಯಾ, ಆಪ್ತರಕ್ಷಿಣಾ ।

**ಅನ್ವಯ—** ವರಾಹವಪುಷಾ, ಆಪ್ತರಕ್ಷಿಣಾ ಅಮುನಾ, ಊರ್ಮಿಮತ್ಸ್ಮೃತಿಸಿಂಧುಕಚ್ಛಪತಯಾ, ಅಮರೇಂದ್ರ-ವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಃ, ವಿದಧೇ ।

**ಅನ್ವಯಾರ್ಥ—**

***ಕೂರ್ಮಾವತಾರ ಪರವಾದ ಅರ್ಥ-***

**ವರ ಆಹವ ಪುಷಾ** = ಉತ್ತಮವಾದ ಯುದ್ಧವನ್ನು ಪುಷ್ಟೀಕರಿಸುವ ಅಥವಾ (ವರ = ಉತ್ತಮರಾದ ದೇವತೆಗಳು, ಆಹವ = ಪ್ರಾರ್ಥನಾರೂಪವಾದ ಆಹ್ವಾನವನ್ನು, ಪುಷಾ = ಅಂಗೀಕರಿಸಿರುವ)

**ಆಪ್ತರಕ್ಷಿಣಾ** = ಶರಣಾಗತರನ್ನು ರಕ್ಷಿಸುವ

**ಅಮುನಾ** = ಈ ನಾರಾಯಣನಿಂದ

**ಊರ್ಮಿಮತ್** = ಅಲೆಗಳುಳ್ಳ

**ಸ್ಮೃತಿಸಿಂಧುಕಚ್ಛಪತಯಾ** = ವ್ಯಾಪ್ತಿಯುಳ್ಳ ಕ್ಷೀರ ಸಮುದ್ರದಲ್ಲಿ ಆಮೆಯ ಶರೀರದಿಂದ

**ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಃ-**

**ಅಮರ** = ದೇವತೆಗಳು

**ಇಂದ್ರವೈರಿ** = ದಾನವರು ಇವರ

**ಭುಜ** = ತೋಳುಗಳೆಂಬ

**ದಂಡ** = ದಪ್ಪವಾದ ಕೋಲುಗಳ (ದೊಣ್ಣೆಗಳ)

**ಮಂಡಲ** = ಸಮೂಹಗಳಿಂದ

**ಪ್ರತಿಕರ್ಷ** = ಎಳೆಯುವುದರಿಂದ

**ಪುಷ್ಕರ** = ನೀರಿನಲ್ಲಿ

**ಪತತ್** = ಬೀಳುತ್ತಿರುವ

**ಧರ** = ಮಂದರ ಪರ್ವತದ

**ಉದ್ಧೃತಿಃ** = ಉದ್ಧಾರವು (ಎತ್ತುವಿಕೆಯು)

**ವಿದಧೇ** = ಮಾಡಲ್ಪಟ್ಟಿತು.

***ವರಾಹಾವತಾರ ಪರವಾದ ಅರ್ಥ-***

**ಊರ್ಮಿಮತ್** = ಗರ್ಭವಾಸ, ಹುಟ್ಟುವುದು, ಬೆಳೆಯುವುದು, ವಿಪರಿಣಾಮ (ವ್ಯತ್ಯಾಸ ಹೊಂದುವುದು), ಕ್ಷೀಣತೆ, ನಾಶ, ಎಂಬ ಆರು ಊರ್ಮಿಗಳುಳ್ಳ,

**ಸ್ಮೃತಿ ಸಿಂಧು ಕಚ್ಛಪತಯಾ ಆಪ್ತರಕ್ಷಿಣಾ** = ಸಂಸಾರವೆಂಬ ಸಮುದ್ರದ ದಡದ ಕಾಪಾಡುವಿಕೆಯಿಂದ (ಸಂಸಾರ ಸಮುದ್ರದ ಆಚೆಯ ದಡವಾಗಿರುವ ಮೋಕ್ಷದ ರಕ್ಷಣೆಯುಳ್ಳ), (ಸ್ಮರಣೆ ಮುಂತಾದವುಗಳ ಮೂಲಕ) ಶರಣಾಗತರಾದ ಭಕ್ತರಿಗೆ ಮೋಕ್ಷವನ್ನಿತ್ತು ಕಾಪಾಡುವ,

**ವರಾಹವಪುಷಾ** = (ಕಾಡು) ಹಂದಿಯಂತೆ ದೇಹವುಳ್ಳ

**ಅಮುನಾ** = ಈ ನಾರಾಯಣನಿಂದ,

**ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಃ-**

**ಅಮರೇಂದ್ರ** = ದೇವಶ್ರೇಷ್ಠರ

**ವೈರಿ** = ಶತ್ರುವಾದ ಹಿರಣ್ಯಾಕ್ಷನ

**ಭುಜದಂಡಮಂಡಲ** = ದಂಡದಂತಿರುವ ತೋಳುಗಳ ಸಮೂಹದಿಂದ

**ಪ್ರತಿಕರ್ಷ** = ಎಳೆಯುವುದರಿಂದ,

**ಪುಷ್ಕರ** = ನೀರಿನಲ್ಲಿ

**ಪತತ್** = ಬೀಳುತ್ತಿರುವ

**ಧರಾ** = ಭೂಮಿಯ

**ಉದ್ಧೃತಿಃ** = ಎತ್ತುವಿಕೆಯು

**ವಿದಧೇ** = ಮಾಡಲ್ಪಟ್ಟಿತು.

**ತಾತ್ಪರ್ಯ**— ಈ ಶ್ಲೋಕದಿಂದ ಕೂರ್ಮ ಮತ್ತು ವರಾಹಾವತಾರಗಳನ್ನು ಒಟ್ಟಿಗೆ ವರ್ಣಿಸುತ್ತಾರೆ.

**(ಕೂರ್ಮಾವತಾರ ಪಕ್ಷದಲ್ಲಿ)** ಈ ನಾರಾಯಣನು ಉತ್ತಮ ರೀತಿಯಿಂದ, ಉತ್ತಮವಾದ ಯುದ್ಧವನ್ನು ಮಾಡಿಯೇ ಶತ್ರುಗಳನ್ನು ಜಯಿಸುತ್ತಾನೆ. ಆದರೂ ದೇವತೆಗಳಿಗೆ ಅಮೃತವನ್ನು ದೊರಕಿಸಿ ಕೊಡುವುದಕ್ಕಾಗಿ ಅವರ ಪ್ರಾರ್ಥನೆಯನ್ನು ಮನ್ನಿಸಿ ಅವರ ಸಹಾಯಕ್ಕಾಗಿ ಬಂದನು. ದೇವದಾನವರು ಸೇರಿ ಅಮೃತವನ್ನು ಪಡೆಯಲು ಕ್ಷೀರ ಸಮುದ್ರವನ್ನು ಮಂದರ ಪರ್ವತದಿಂದ ತಮ್ಮ ತೋಳುಗಳ ಬಲವನ್ನುಪಯೋಗಿಸಿ ಕಡೆಯಲು ಆರಂಭಿಸಿದಾಗ ಆ ಪರ್ವತವು ಅಲೆಗಳಿಂದ ಕೂಡಿದ ಅಬ್ಬರಗೈಯುತ್ತಿರುವ ಕ್ಷೀರಸಮುದ್ರದಲ್ಲಿ ಮುಳುಗಲಾರಂಭಿಸಿತು. ಅಷ್ಟರಲ್ಲಿ ಶರಣಾಗತರಾದ ಭಕ್ತರನ್ನು ಕಾಪಾಡುವ ವ್ರತವುಳ್ಳ ಈ ಸ್ವಾಮಿಯು, ದೊಡ್ಡ ಆಮೆಯ ರೂಪವನ್ನು ಸ್ವೀಕರಿಸಿ ಪರ್ವತವನ್ನು ಮೇಲಕ್ಕೆತ್ತಿ, ಕಡೆಯಲು ಅನುಕೂಲ ಮಾಡಿಕೊಟ್ಟನು.

**(ವರಾಹಾವತಾರ ಪಕ್ಷದಲ್ಲಿ)** ಗರ್ಭವಾಸ ಮುಂತಾದ ಆರು ಊರ್ಮಿ (ದೋಷ)ಗಳಿಂದ ಈ ಸಂಸಾರ ಸಮುದ್ರವು ತುಂಬಿದೆ. ಭಕ್ತರನ್ನು ಇಲ್ಲಿಂದ ಉದ್ಧರಿಸಿ ಮೋಕ್ಷವನ್ನು ಕೊಡುವವನು ಶ್ರೀಮನ್ನಾರಾಯಣನು. ಹಿಂದೆ ಹಿರಣ್ಯಾಕ್ಷನೆಂಬ ದಾನವನು ತನ್ನ ತೋಳುಗಳ ಸಮೂಹದಿಂದ ಭೂಮಿಯನ್ನು ಬಲಾತ್ಕಾರದಿಂದ ಸೆಳೆದು ನೀರಿನಲ್ಲಿ ಮುಳುಗಿಸುತ್ತಿದ್ದನು. ಆಗ ಈ ನಾರಾಯಣನು ವರಾಹಾವತಾರ ಮಾಡಿ ಆ ದಾನವನನ್ನು ಸಂಹರಿಸಿ ಈ ಭೂಮಿಯನ್ನು ಕಾಪಾಡಿದನು.

**ವಿಗ್ರಹ**—

**ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಃ**— ಇಂದ್ರಸ್ಯ ವೈರಿಣಃ ಇಂದ್ರ-ವೈರಿಣಃ, ಅಮರಾಶ್ಚ ಇಂದ್ರವೈರಿಣಶ್ಚ ಅಮರೇಂದ್ರವೈರಿಣಃ, ಭುಜಾ ಏವ ದಂಡಾಃ (ಭುಜಾಃ ದಂಡಾಃ ಇವ ಇತಿ ವಾ) ಭುಜದಂಡಾಃ, ಭುಜದಂಡಾನಾಂ ಮಂಡಲಾನಿ ಭುಜದಂಡಮಂಡಲಾನಿ, ಅಮರೇಂದ್ರವೈರಿಣಾಂ ಭುಜದಂಡಮಂಡಲಾನಿ ಅಮರೇಂದ್ರವೈರಿಭುಜದಂಡಮಂಡಲಾನಿ, ಅಮರೇಂದ್ರವೈರಿಭುಜದಂಡಮಂಡಲೈಃ ಪ್ರತಿಕರ್ಷಃ ಅಮರೇಂದ್ರವೈರಿಭುಜದಂಡಮಂಡಲಪ್ರತಿ-ಕರ್ಷಃ, ಪುಷ್ಕರೇ ಪತನ್ ಪುಷ್ಕರಪತನ್ (ಪುಷ್ಕರೇ ಪತಂತೀ ಪುಷ್ಕರಪತಂತೀ), ಪುಷ್ಕರಪತಂಶ್ಚಾಸೌ ಧರಶ್ಚ ಪುಷ್ಕರಪತದ್ಧರಃ (ಪುಷ್ಕರಪತದ್ಧರಾ), ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರ-ಪತದ್ಧರಃ (ಪತದ್ಧರಾ) ತಸ್ಯ (ತಸ್ಯಾಃ) ಉದ್ಧೃತಿಃ ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷ-ಪುಷ್ಕರಪತದ್ಧರೋದ್ಧೃತಿಃ ।

**ವರಾಹವಪುಷಾ**— ವರಶ್ಚಾಸೌ ಆಹವಶ್ಚ ವರಾಹವಃ, ವರಾಹವಂ ಪುಷ್ಣಾತೀತಿ ವರಾಹವಪುಟ್, ತೇನ ವರಾಹವಪುಷಾ । ವರಾಣಾಮುತ್ತಮಾನಾಂ ದೇವಾನಾಂ ಆಹವಂ ಪ್ರಾರ್ಥನಾರೂಪಮಾಹ್ವಾನಂ

ಪುಷ್ಣಾತ್ಯಂಗೀಕರೋತೀತಿ ವರಾಹವಪುಟ್, ತೇನ ವರಾಹವಪುಷಾ । (ವರಾಹಸ್ಯ ವಪುರಿವ ವಪುಃ ಯಸ್ಯ ಸಃ ವರಾಹವಪುಃ ತೇನ ವರಾಹವಪುಷಾ) ।

**ಊರ್ಮಿಮತ್ಸ್ಮೃತಿಸಿಂಧುಕಚ್ಛಪತಯಾ—** ಊರ್ಮಯಃ ಅಸ್ಯಾಃ ಸಂತೀತಿ ಊರ್ಮಿಮತೀ, ಊರ್ಮಿಮತೀ ಸ್ಮೃತಿಃ ಯಸ್ಯ ಸ಼ಃ ಊರ್ಮಿಮತ್ಸ್ಮೃತಿಃ, ಊರ್ಮಿಮತ್ಸ್ಮೃತಿಶ್ಚಾಸೌ ಸಿಂಧುಶ್ಚ ಊರ್ಮಿಮತ್ಸ್ಮೃತಿಸಿಂಧುಃ, ಕಚ್ಛಪಸ್ಯ ಭಾವಃ ಕಚ್ಛಪತಾ, ಊರ್ಮಿಮತ್ಸ್ಮೃತಿಸಿಂಧೌ ಕಚ್ಛಪತಾ ಊರ್ಮಿಮತ್ಸಿಂಧುಕಚ್ಛಪತಾ, ತಯಾ ಊರ್ಮಿಮತ್ಸಿಂಧುಕಚ್ಛಪತಯಾ (ಊರ್ಮಯಃ ಅಸ್ಯಾಃ (ಅಸ್ಯಾಂ) ಸಂತೀತಿ ಊರ್ಮಿಮತೀ, ಊರ್ಮಿಮತೀ ಚ ಅಸೌ ಸ್ಮೃತಿಶ್ಚ ಊರ್ಮಿಮತ್ಸ್ಮೃತಿಃ, ಊರ್ಮಿಮತ್ಸ್ಮೃತಿರೇವ ಸಿಂಧುಃ ಊರ್ಮಿಮತ್ಸ್ಮೃತಿಸಿಂಧುಃ, ಕಚ್ಛಂ ಪಾತೀತಿ ಕಚ್ಛಪಃ, ತಸ್ಯ ಭಾವಃ ಕಚ್ಛಪತಾ, ಊರ್ಮಿಮತ್ಸ್ಮೃತಿಸಿಂಧೋಃ ಕಚ್ಛಪತಾ ಊರ್ಮಿಮತ್ಸ್ಮೃತಿಸಿಂಧುಕಚ್ಛಪತಾ, ತಯಾ ಊರ್ಮಿಮತ್ಸ್ಮೃತಿಸಿಂಧುಕಚ್ಛಪತಯಾ)

**ಆಪ್ತರಕ್ಷಿಣಾ—** ರಕ್ಷತೀತಿ ರಕ್ಷೀ, ಆಪ್ತಾನಾಂ ರಕ್ಷೀ ಆಪ್ತರಕ್ಷೀ, ತೇನ ಆಪ್ತರಕ್ಷಿಣಾ ।

**ಕ್ರಿಯಾಪದ—** **ವಿದಧೇ-** 'ವಿ' ಉಪಸರ್ಗ ಪೂರ್ವಕಾತ್ ಡುಧಾಞ್ ಧಾರಣಪೋಷಣಯೋಃ, ಇತಿ ಧಾರಣ-ಪೋಷಣಾರ್ಥಕಾತ್ 'ದಾಧಾತೋಃ' ಸಕರ್ಮಕಾತ್ ಆತ್ಮನೇಪದಿನಃ ಕರ್ಮಣಿ ಲಿಟ್ ಪ್ರಥಮಪುರುಷೇ ಏಕವಚನೇ ''ವಿದಧೇ'' ಇತಿ ರೂಪಮ್ ।

ವಿ-ದಧೇ ದಧಾತೇ ದಧಿರೇ, ದಧಿಷೇ ದಧಾಥೇ ದಧಿಧ್ವೇ, ದಧೇ ದಧಿವಹೇ ದಧಿಮಹೇ ॥

**ಪ್ರಯೋಗ—** ಅಮುನಾ ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಃ ವಿದಧೇ (ಕರ್ಮಣಿ) । ಅಯಂ ಅಮರೇಂದ್ರವೈರಿಭುಜದಂಡಮಂಡಲಪ್ರತಿಕರ್ಷಪುಷ್ಕರಪತದ್ಧರೋದ್ಧೃತಿಂ ವಿದಧೇ (ವಿದಧೌ ಇತಿ ವಾ) (ಕರ್ತರಿ) ।

★ ★ ★

**ಅವತಾರಿಕಾ—** ಪರಮಾತ್ಮನ ನರಸಿಂಹಾವತಾರ ಮತ್ತು ತಾಪಸಾವತಾರಗಳನ್ನು ವರ್ಣಿಸುತ್ತಾರೆ.

**ನರಸಿಂಹ ಏಷ ವಿದದಾರ ದಾರುಣಂ**
**ಪ್ರತಿಘೋದಯೇನ ಖರಚಕ್ರತೇಜಸಾ ।**
**ಸ್ವರಿಪುಂ ಕ್ಷಣೇನ ಸರಸಃ ಸ್ಫುರತ್ತನುಂ**
**ಪೃಥುಸತ್ತ್ವಮಿಷ್ಟಜನಭೀತಿಭಂಜನಃ ॥ 16 ॥**

**ಪದಚ್ಛೇದ—** ನರಸಿಂಹಃ, ಏಷಃ, ವಿದದಾರ, ದಾರುಣಂ, ಪ್ರತಿಘೋದಯೇ, ನಖರಚಕ್ರತೇಜಸಾ, ಸ್ವರಿಪುಂ, ಕ್ಷಣೇನ, ಸರಸಃ, ಸ್ಫುರತ್ತನುಂ, ಪೃಥುಸತ್ತ್ವಂ, ಇಷ್ಟಜನಭೀತಿಭಂಜನಃ, (ಪ್ರತಿಘೋದಯೇನ, ಖರಚಕ್ರತೇಜಸಾ - ಎರಡನೆಯ ಅರ್ಥ ಹೇಳುವಾಗ ಹೀಗೆ ಪದಚ್ಛೇದ ವಿಟ್ಟುಕೊಳ್ಳಬೇಕು)

**ಅನ್ವಯ—** ಇಷ್ಟಜನಭೀತಿಭಂಜನಃ, ಸರಸಃ, ಏಷಃ ನರಸಿಂಹಃ ಪ್ರತಿಘೋದಯೇ ನಖರಚಕ್ರತೇಜಸಾ, ಸ್ಫುರತ್ತನುಂ, ಪೃಥುಸತ್ತ್ವಂ, ದಾರುಣಂ ಸ್ವರಿಪುಂ ಕ್ಷಣೇನ ವಿದದಾರ ।

**ಅನ್ವಯಾರ್ಥ—** *(ನರಸಿಂಹಾವತಾರ)*

**ಇಷ್ಟಜನ ಭೀತಿಭಂಜನಃ** = ಭಕ್ತಜನರ ಭಯವನ್ನು ಪರಿಹರಿಸುವ,

**ಸರಸಃ** = ಪರಾಕ್ರಮದಿಂದ ಕೂಡಿದ

ಏಷಃ = ಈ ನಾರಾಯಣನು

ನರಸಿಂಹಃ (ಸನ್) = ನರಸಿಂಹಾವತಾರವುಳ್ಳವನಾಗಿ,

ಪ್ರತಿಘೋದಯೇ (ಸತಿ) = ಕೋಪವುಂಟಾದಾಗ

ನಖರಚಕ್ರತೇಜಸಾ = ಉಗುರುಗಳ ಸಮೂಹದ ಸಾಮರ್ಥ್ಯದಿಂದ

ಸ್ಫುರತ್ತನುಂ = ಪ್ರಕಾಶಿಸುವ ಶರೀರವುಳ್ಳ,

ಪೃಥುಸತ್ತ್ವಂ = ಅಧಿಕವಾದ ಬಲವುಳ್ಳ,

ದಾರುಣಂ = ಭಯಂಕರನಾದ

ಸ್ವರಿಪುಂ = ತನ್ನ ಮತ್ತು ತನ್ನವನಾದ ಪ್ರಹ್ಲಾದನ ಶತ್ರುವಾದ ಹಿರಣ್ಯಕಶಿಪುವನ್ನು

ಕ್ಷಣೇನ = ಕ್ಷಣಕಾಲದಲ್ಲಿ

ವಿದದಾರ = ಸೀಳಿದನು.

**ಅನ್ವಯ—** ನರಸಿಂಹಃ, ಇಷ್ಟಜನ ಭೀತ್ರಿಭಂಜನಃ ಏಷಃ, ದಾರುಣಂ ಸ್ವರಿಪುಂ ಸ್ಫುರತ್ತನುಂ ಪೃಥುಸತ್ತ್ವಂ, ಪ್ರತಿಘೋದಯೇನ ಸರಸಃ ಖರಚಕ್ರತೇಜಸಾ, ಕ್ಷಣೇನ ವಿದದಾರ ।

**ಅನ್ವಯಾರ್ಥ—** *(ತಾಪಸಾವತಾರ)*

ನರಸಿಂಹಃ = ಪುರುಷಶ್ರೇಷ್ಠನಾದ

ಇಷ್ಟಜನಭೀತಿಭಂಜನ = ಭಕ್ತರ ಭಯಪರಿಹಾರಕನಾದ

ಏಷಃ = ಈ ನಾರಾಯಣನು

ದಾರುಣಂ = ಕ್ರೂರನಾದ

ಸ್ವರಿಪುಂ = ತನ್ನ ಭಕ್ತ ಗಜೇಂದ್ರನ ಶತ್ರುವಾದ

ಸ್ಫುರತ್ತನುಂ = ಪ್ರಕಾಶಿಸುವ ದೇಹವುಳ್ಳ

ಪೃಥುಸತ್ತ್ವಂ = ದೊಡ್ಡ ಪ್ರಾಣಿಯಾದ ಮೊಸಳೆಯನ್ನು

ಪ್ರತಿಘೋದಯೇನ = ಕೋಪದ ಆವಿರ್ಭಾವದಿಂದ,

ಸರಸಃ = ಸರೋವರದ ದೆಸೆಯಿಂದ (ಆಕೃಷ್ಯ = ಸೆಳೆದು)

ಖರಚಕ್ರತೇಜಸಾ = ಹರಿತವಾದ ಸುದರ್ಶನದ ಶಕ್ತಿಯಿಂದ

ಕ್ಷಣೇನ = ಸ್ವಲ್ಪ ಕಾಲದಲ್ಲಿಯೇ

ವಿದದಾರ = ಸೀಳಿದನು.

**ತಾತ್ಪರ್ಯ—** *(ನರಸಿಂಹಾವತಾರ ಪರ)* ಈ ನಾರಾಯಣನು ಭಕ್ತಜನರ ಸಮಸ್ತ ಭಯವನ್ನು ಪರಿಹರಿಸುವವನು ಮತ್ತು ಬಹುಬಲವೀರ್ಯಶಾಲಿಯು. ಇವನು ಹಿಂದೆ, ತಂದೆಯಾದ ಹಿರಣ್ಯಕಶಿಪುವು ಮಗನಾದ ಪ್ರಹ್ಲಾದನಿಗೆ ಬಹಳ ತೊಂದರೆ ಕೊಡುತ್ತಿದ್ದಾಗ, ಹಿರಣ್ಯಕಶಿಪುವಿನ ಮೇಲೆ ಸಿಟ್ಟಾಗಿ ನರಸಿಂಹಾವತಾರ ಮಾಡಿ ಅತ್ಯಂತ ಬಲಶಾಲಿಯಾದ ಅವನನ್ನು ತನ್ನ ಹತ್ತು ಬೆರಳುಗಳ ಉಗುರುಗಳಿಂದಲೇ ಬಗೆದು ಕೊಂದಿರುವನು.

*(ತಾಪಸಾವತಾರ ಪರ)* ಈ ನಾರಾಯಣನು ಪುರುಷೋತ್ತಮನು. ಆಪ್ತರಾದ ಭಕ್ತರ ಭಯವನ್ನು ಪರಿಹರಿಸುವನು. ಹಿಂದೆ ತನ್ನ ಭಕ್ತನಾದ ಗಜೇಂದ್ರನನ್ನು, ಪ್ರಕಾಶಮಾನವಾದ ದೊಡ್ಡ ದೇಹವುಳ್ಳ ಭಯಂಕರವಾದ ಮೊಸಳೆಯೊಂದು

ಹಿಡಿದಾಗ, ಆ ಆನೆಯ ಮೊರೆಯನ್ನು ಕೇಳಿ ಈ ಹರಿಯು, ತನ್ನ ಭಕ್ತನ ಶತ್ರುವಿನ ಮೇಲೆ ಸಿಟ್ಟಾಗಿ ಕೂಡಲೇ ಬಂದು ತನ್ನ ಹರಿತವಾದ ಸುದರ್ಶನ ಚಕ್ರದಿಂದ ಒಂದು ಕ್ಷಣದಲ್ಲಿಯೇ ಮೊಸಳೆಯನ್ನು ಸೀಳಿ ತನ್ನ ಭಕ್ತನನ್ನು ಕಾಪಾಡಿದನು.

**ವಿಗ್ರಹ—**

**ನರಸಿಂಹಃ—** ನರಶ್ಚಾಸೌ ಸಿಂಹಶ್ಚ ನರಸಿಂಹಃ, (ನರೇಷು (ನರಾಣಾಂ ವಾ) ಸಿಂಹಃ ನರಸಿಂಹಃ) ।

**ಪ್ರತಿಘೋದಯೇ—** ಪ್ರತಿಘಸ್ಯ ಉದಯಃ ಪ್ರತಿಘೋದಯಃ, ತಸ್ಮಿನ್ ಪ್ರತಿಘೋದಯೇ (ಅಥವಾ ತೇನ ಪ್ರತಿಘೋದಯೇನ) ।

**ನಖರಚಕ್ರತೇಜಸಾ—** ನಖರಾಣಾಂ ಚಕ್ರಂ ನಖರಚಕ್ರಂ, ನಖರಚಕ್ರಸ್ಯ ತೇಜಃ ನಖರಚಕ್ರತೇಜಃ, ತೇನ ನಖರಚಕ್ರತೇಜಸಾ, (ಅಥವಾ ಖರಂ ಚ ತತ್ ಚಕ್ರಂ ಚ ಖರಚಕ್ರಂ ಖರಚಕ್ರಸ್ಯ ತೇಜಃ ಖರಚಕ್ರತೇಜಃ, ತೇನ ಖರಚಕ್ರತೇಜಸಾ) ।

**ಸ್ವರಿಪುಂ—** ಸ್ವಸ್ಯ ರಿಪುಃ ಸ್ವರಿಪುಃ, ತಂ ಸ್ವರಿಪುಂ ।

**ಸರಸಃ—** ರಸೇನ ಸಹವರ್ತತೇ ಇತಿ ಸರಸಃ (ಇನ್ನೊಂದು ಅರ್ಥದಲ್ಲಿ ಸಕಾರಾಂತ ನಪುಂಸಕಲಿಂಗ ಸರಸ್‌ಶಬ್ದ ಪಂಚಮೀ ಏಕವಚನ)

**ಸ್ಫುರತ್ತನುಂ—** ಸ್ಫುರಂತೀ ತನುಃ ಯಸ್ಯ ಸಃ ಸ್ಫುರತ್ತನುಃ, ತಂ ಸ್ಫುರತ್ತನುಂ ।

**ಪೃಥುಸತ್ತ್ವಂ—** ಪೃಥು ಸತ್ತ್ವಂ ಯಸ್ಯ ಸಃ ಪೃಥುಸತ್ತ್ವಃ, ತಂ ಪೃಥುಸತ್ತ್ವಂ । (ಪೃಥುಶ್ಚಾಸೌ ಸತ್ತ್ವಶ್ಚ ಪೃಥು-ಸತ್ತ್ವಃ, ತಂ ಪೃಥುಸತ್ತ್ವಂ )

**ಕ್ರಿಯಾಪದ—** ವಿದದಾರ- 'ವಿ' ಇತ್ಯುಪಸರ್ಗಪೂರ್ವಕಾತ್ ವಿದಾರಣಾರ್ಥಕಾತ್ ದೃ ವಿದಾರಣೇ ಇತ್ಯಸ್ಮಾದ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''(ವಿ)ದದಾರ'' ಇತಿ ರೂಪಮ್ ।।

| | | |
|---|---|---|
| ವಿ-ದದಾರ | ದದ್ರತುಃ-ದದರತುಃ | ದದ್ರುಃ ದದರುಃ, |
| ದದರಿಥ | ದದ್ರಥುಃ-ದದರಥುಃ | ದದ್ರ-ದದರ, |
| ದದಾರ-ದದರ | ದದ್ರಿವ-ದದರಿವ | ದದ್ರಿಮ-ದದರಿಮ ।।) |

**ಪ್ರಯೋಗ—** ಏಷಃ ಸ್ವರಿಪುಂ ವಿದದಾರ (ಕರ್ತರಿ) । ಏತೇನ ಸ್ವರಿಪುಃ ವಿದದ್ರೇ (ಕರ್ಮಣಿ) ।

★ ★ ★

**ಅವತಾರಿಕಾ—** ಈಗ ಒಂದು ಶ್ಲೋಕದಿಂದ ವಾಮನ ಮತ್ತು ಬುದ್ಧಾವತಾರಗಳನ್ನು ವರ್ಣಿಸುತ್ತಾರೆ.

**ಅಪಿ ವಾಮನೋ ಲಲಿತಬಾಲ್ಯವಾನಯಂ**
**ಪ್ರತಿಭಾಬಲೇನ ಕೃತದೈತ್ಯಕೌತುಕಃ ।**
**ಉಪಧೇರಧಃಕೃತಬಲೀಂದ್ರಶಾತ್ರವಃ**
**ಸ್ವಜನಾಯ ಕೇವಲಮದಾತ್ ಪರಂ ಪದಮ್ ।। 17 ।।**

**ಪದಚ್ಛೇದ—** ಅಪಿ, ವಾಮನಃ, ಲಲಿತಬಾಲ್ಯವಾನ್, ಅಯಂ, ಪ್ರತಿಭಾಬಲೇನ, ಕೃತದೈತ್ಯಕೌತುಕಃ, ಉಪಧೇಃ, ಅಧಃಕೃತಬಲೀಂದ್ರಶಾತ್ರವಃ, ಸ್ವಜನಾಯ, ಕೇವಲಂ, ಅದಾತ್, ಪರಂ, ಪದಂ ।

**ಅನ್ವಯ—** (ವಾಮನಾವತಾರ ಪಕ್ಷದಲ್ಲಿ) ಅಯಂ, ಲಲಿತಬಾಲ್ಯವಾನ್ ವಾಮನಃ ಅಪಿ (ಸನ್), ಪ್ರತಿಭಾಬಲೇನ ಕೃತದೈತ್ಯಕೌತುಕಃ (ಸನ್) ಉಪಧೇಃ ಅಧಃಕೃತಬಲೀಂದ್ರಶಾತ್ರವಃ (ಸನ್), ಸ್ವಜನಾಯ ಕೇವಲಂ ಪರಂ ಪದಂ ಅದಾತ್ ।

**ಅನ್ವಯಾರ್ಥ**— (ವಾಮನಾವತಾರ ಪರವಾದ ಅರ್ಥ)

**ಅಯಂ** = ಈ ನಾರಾಯಣನು

**ಲಲಿತಬಾಲ್ಯವಾನ್** = ಮನೋಹರವಾದ ಬಾಲ್ಯವುಳ್ಳ

**ವಾಮನಃ ಅಪಿ (ಸನ್)** = ಕುಳ್ಳಾದ ವಾಮನಾವತಾರ ಉಳ್ಳವನಾದರೂ,

**ಪ್ರತಿಭಾಬಲೇನ** = ಬುದ್ಧಿ ಸಾಮರ್ಥ್ಯದಿಂದ

**ಕೃತದೈತ್ಯಕೌತುಕಃ ಸನ್**–

**ಕೃತ** = ಮಾಡಲ್ಪಟ್ಟ

**ದೈತ್ಯ** = ದೈತ್ಯರಿಗೆ

**ಕೌತುಕಃ (ಸನ್)** = ಕುತೂಹಲವುಳ್ಳವನಾಗಿ,

**ಉಪಧೇಃ** = ಕಪಟದಿಂದ

**ಅಧಃಕೃತ ಬಲೀಂದ್ರಶಾತ್ರವಃ** = ಕೆಳಗೇ (ಪಾತಾಳಕ್ಕೆ) ತಳ್ಳಲ್ಪಟ್ಟ ಬಲಿಯೆಂಬ ಇಂದ್ರನ ಶತ್ರುವುಳ್ಳವನಾಗಿ,

**ಸ್ವಜನಾಯ** = ತನ್ನ ಭಕ್ತನಾದ ಇಂದ್ರನಿಗೆ

**ಕೇವಲಂ** = ಮುಖ್ಯವಾದ

**ಪರಂ** = ಉತ್ತಮವಾದ

**ಪದಂ** = ಸಾಂಕಲ್ಪಿಕ ಸ್ವರ್ಗಕ್ಕಿಂತ ಭಿನ್ನವಾದ ಸ್ವರ್ಗದ ಇಂದ್ರ ಪದವಿಯನ್ನು

**ಅದಾತ್** = ಕೊಟ್ಟನು.

**ಅನ್ವಯ**— (ಬುದ್ಧಾವತಾರ ಪಕ್ಷದಲ್ಲಿ) ಅಯಂ ವಾಮನಃ (ಸನ್), ಲಲಿತಬಾಲ್ಯವಾನ್ (ಸನ್), ಪ್ರತಿಭಾಬಲೇನ ಕೃತದೈತ್ಯಕೌತುಕಃ, ಉಪಧೇಃ ಅಧಃಕೃತಬಲೀಂದ್ರಶಾತ್ರವಃ ಸ್ವಜನಾಯ ಕೇವಲಂ ಪರಂ ಪದಮಪಿ ಅದಾತ್ ।

**ಅನ್ವಯಾರ್ಥ**—

**ಅಯಂ** = ಈ ನಾರಾಯಣನು

**ವಾಮನಃ ಅಪಿ ಸನ್** = ಚಿಕ್ಕವನಾದರೂ

**ಲಲಿತ ಬಾಲ್ಯವಾನ್ (ಸನ್)** ಆದರಿಸಲ್ಪಟ್ಟ , ಶ್ಲಾಘ್ಯವಾದ ಬಾಲ್ಯವುಳ್ಳವನಾಗಿ

**ಪ್ರತಿಭಾಬಲೇನ** = ಬುದ್ಧಿ ಸಾಮರ್ಥ್ಯದಿಂದ

**ಕೃತ ದೈತ್ಯಕೌತುಕಃ** = ಮಾಡಲ್ಪಟ್ಟ ಜಿನ ಮುಂತಾದ ದೈತ್ಯರ ಕುತೂಹಲವುಳ್ಳವನಾಗಿ,

**ಉಪಧೇಃ** = ಕಪಟದಿಂದ

**ಅಧಃಕೃತ ಬಲೀಂದ್ರಶಾತ್ರವಃ** = ಅಂಧ ತಮಸ್ಸಿನಲ್ಲಿ ಹಾಕಿರುವ ಬಲಶಾಲಿಗಳಾದ, ಇಂದ್ರನಿಗೆ ಶತ್ರುಗಳಾದ ಜಿನನೇ ಮೊದಲಾದವರು ಉಳ್ಳವನಾಗಿ,

**ಸ್ವಜನಾಯ** = ತನ್ನ ಭಕ್ತ ಜನರಿಗೆ

**ಕೇವಲಂ** = ಮುಖ್ಯವಾದ

**ಪರಂ ಪದಂ** = ಉತ್ತಮವಾದ ವೈಕುಂಠ ಲೋಕವನ್ನು

**ಅದಾತ್** = ಕೊಟ್ಟನು.

**ತಾತ್ಪರ್ಯ**— *(ವಾಮನಾವತಾರ)* ಈ ನಾರಾಯಣನು ಗಿಡ್ಡಾದ ವಾಮನ ರೂಪವನ್ನು ಸ್ವೀಕರಿಸಿ ಬಾಲಕನಂತೆ ಇದ್ದುದರಿಂದ ಎಲ್ಲರಿಂದಲೂ ಆದರವನ್ನು ಪಡೆದನು. ಅನಂತರ ಬಲಿಚಕ್ರವರ್ತಿಯ ಯಜ್ಞಶಾಲೆಗೆ ಹೋಗಿ ಅವನಿಂದ

ಮೂರು ಹೆಜ್ಜೆಯಷ್ಟು ಭೂಮಿಯನ್ನು ದಾನವಾಗಿ ಬೇಡಿದನು. ಅನಂತರ ಆ ಮೂರು ಹೆಜ್ಜೆ ಭೂಮಿಯನ್ನು ಅಳೆದು ತೆಗೆದುಕೊಳ್ಳುವಾಗ, ತ್ರಿಭುವನ ವ್ಯಾಪಿಯಾದ ತ್ರಿವಿಕ್ರಮ ರೂಪವನ್ನು ಸ್ವೀಕರಿಸಿ, ಎರಡು ಹೆಜ್ಜೆಗಳಿಂದ ಭೂಮಿ ಮತ್ತು ಮೇಲಿನ ಲೋಕಗಳನ್ನು ಅಳೆದು, ಮೂರನೆಯ ಹೆಜ್ಜೆಯನ್ನು ಬಲಿಯ ತಲೆಯ ಮೇಲಿಟ್ಟು, ಅವನನ್ನು (ಪಾತಾಳಕ್ಕೆ) ರಸಾತಲ ಲೋಕಕ್ಕೆ ಕಳುಹಿಸಿದನು. ಹೀಗೆ ತನ್ನ ಭಕ್ತನಾದ ದೇವೇಂದ್ರನಲ್ಲಿ ಅನುಗ್ರಹಕ್ಕೋಸ್ಕರ, ಕಪಟದಿಂದ ಬಲಿಯನ್ನು ನಿಗ್ರಹಿಸಿ, ತನ್ನವನಾದ ದೇವೇಂದ್ರನಿಗೆ, ತ್ರೈಲೋಕ್ಯಾಧಿಪತ್ಯವನ್ನಿತ್ತನು.

*(ಬುದ್ಧಾವತಾರ ಪರ)* ಈ ನಾರಾಯಣನು ತ್ರಿಪುರಾಸುರರು ಜಿನ ಮುಂತಾದ ಹೆಸರಿನಿಂದ ಭೂಮಿಯಲ್ಲಿ ಹುಟ್ಟಿ, ವೇದಮತಾವಲಂಬಿಗಳಾಗಿ, ವೈದಿಕ ಮತವನ್ನು ಹಾಳು ಮಾಡುತ್ತಿರುವಾಗ ಜಿನನೆಂಬ ರಾಜನ ಮಗನಾಗಿ ಬುದ್ಧ ರೂಪದಿಂದ ಅವತರಿಸಿದನು, ಅತ್ಯಂತ ಬಾಲಕನಾದರೂ ತನ್ನ ಪ್ರತಿಭೆಯಿಂದ ದೈತ್ಯರನ್ನು ಆಶ್ಚರ್ಯಗೊಳಿಸಿದನು. ಪ್ರಪಂಚವು ಶೂನ್ಯ, ಕ್ಷಣಿಕ ಎಂದು ಮುಂತಾಗಿ ಅವರಿಗೆ ಉಪದೇಶ ಮಾಡಿ ಅವರನ್ನು ಭ್ರಾಂತರನ್ನಾಗಿ ಮಾಡಿ, ಅವರಿಗೆ ಅಧೋಲೋಕಪ್ರಾಪ್ತಿಯಾಗುವಂತೆ ಮಾಡಿದನು. ತನ್ನ ಭಕ್ತರಾದ ದೇವತೆಗಳಿಗೆ ಎಲ್ಲರೂ ತನ್ನ ಅಧೀನರು, ತಾನೇ ಸರ್ವೋತ್ತಮ ಇತ್ಯಾದಿ ಸದುಪದೇಶವನ್ನು ಮಾಡಿ ಅವರಿಗೆ ಮೋಕ್ಷಸ್ಥಾನವನ್ನು ಕೊಟ್ಟನು.

**ವಿಶೇಷಾಂಶ—**

ತತಃ ಕಲೌ ಸಂಪ್ರವೃತ್ತೇ ಸಂಮೋಹಾಯ ಸುರದ್ವಿಷಾಂ ।
ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ ॥

ಎಂಬ ಭಾಗವತಾದಿ ಪ್ರಮಾಣಾನುಸಾರ ಮಗಧ ದೇಶದ ರಾಜನಾದ ಜಿನ ಎಂಬುವನಿಗೆ ಒಂದು ಮಗು ಹುಟ್ಟಿದಾಗ ಪರಮಾತ್ಮನು ಆ ಮಗುವನ್ನು ಮಾಯ ಮಾಡಿ, ತಾನು ಅಲ್ಲಿ ಶಿಶುರೂಪಿಯಾಗಿ ನಿಂತು ಎಲ್ಲವೂ ಶೂನ್ಯ, ಸ್ವಲಕ್ಷಣ, ಕ್ಷಣಿಕ, ದುಃಖ, ಇತ್ಯಾದಿ ಅಸದ್ವಿಷಯಗಳನ್ನು ಉಪದೇಶ ಮಾಡಿ ಅವರನ್ನು ಭ್ರಾಂತರನ್ನಾಗಿ ಮಾಡಿ ತಾನು ಮಾಯವಾಗಿ ಜಿನನ ಮೊದಲಿನ ಮಗುವನ್ನೇ ಅಲ್ಲಿ ಕೂಡಿಸಿದನು. ಆ ಮಗುವೂ ಅಸುರನಾದುದರಿಂದ ಎಲ್ಲವೂ ಕ್ಷಣಿಕ ಇತ್ಯಾದಿ ಉಪದೇಶವನ್ನೇ ಮಾಡುತ್ತ, ಬುದ್ಧ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಬುದ್ಧಾವತಾರಿಯಾದ ಪರಮಾತ್ಮನು ದೇವಲೋಕಕ್ಕೆ ಹೋಗಿ ಶೂನ್ಯ, ಕ್ಷಣಿಕ ಇತ್ಯಾದಿ ಶಬ್ದಗಳಿಗೆ ತನಗೆ ಅಭಿಮತವಾದ ಅರ್ಥವನ್ನು ದೇವತೆಗಳಿಗೆ ಹೇಳಿ ಅವರಿಗೆ ಉತ್ತಮ ಜ್ಞಾನವನ್ನು ಸದ್ಗತಿಯನ್ನು ಕೊಟ್ಟನು. ಸಾತ್ವಿಕಪುರಾಣಾನುಸಾರವಾಗಿ ಇದೇ ಬುದ್ಧಾವತಾರದ ರಹಸ್ಯ. ತ್ರಿಪುರಾಸುರರ ಪತ್ನಿಯರನ್ನು ಮೋಹಗೊಳಿಸಿ ಅವರ ಪಾತಿವ್ರತ್ಯಹರಣಕ್ಕಾಗಿ ನಾರಾಯಣನು ನಗ್ನ ರೂಪವನ್ನು ಸ್ವೀಕಾರ ಮಾಡಿದನು. ಅದೂ ಒಂದು ಬುದ್ಧಾವತಾರವು. ಈ ಬುದ್ಧಾವತಾರಕ್ಕಿಂತ ಹಿಂದಿನದು ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯವು ಕೆಟ್ಟುಹೋದುದ-ರಿಂದಲೇ ಈಶ್ವರನು ಅವರನ್ನು ಸುಡಲು ಸಮರ್ಥನಾದನು. ಈಗ ಕಲಿಯುಗದಲ್ಲಿ ಕಪಿಲವಸ್ತು ಎಂಬಲ್ಲಿದ್ದ ಶಾಕ್ಯರಾಜ ಶುದ್ಧೋದನನ ಮಗನಾಗಿ ಪರಮಾತ್ಮನು ಒಂದು ಬಾರಿ ಬುದ್ಧಾವತಾರವನ್ನು ಮಾಡಿದ್ದಾನೆ. ಅದೂ ಕೂಡ ಮೊದಲನೆ ಬುದ್ಧಾವತಾರದಂತೆಯೇ ಎಂದು ತಿಳಿಯಬೇಕು. ಆಚಾರ್ಯರು ಮಹಾಭಾರತ ತಾತ್ಪರ್ಯನಿರ್ಣಯ 32ನೆಯ ಅಧ್ಯಾಯದಲ್ಲಿ ಈ ವಿಷಯವನ್ನು ವಿಸ್ತಾರವಾಗಿ ಹೇಳಿದ್ದಾರೆ.

''ಶೌದ್ಧೋದನಿ ಪ್ರಭೃತಿ ಸೌದ್ಧಾಂತಿಕಾಸುಗಮಬೌದ್ಧಾಗಮಪ್ರಣಯಿನೀ'' ಎಂದು ಶ್ರೀರಾಜರೂ ಸೂಚಿಸಿರುವರು.

**ವಿಗ್ರಹ—**

**ಲಲಿತಬಾಲ್ಯವಾನ್—** ಬಾಲಸ್ಯ ಭಾವಃ ಬಾಲ್ಯಂ, ಲಲಿತಂ ಚ ತತ್ ಬಾಲ್ಯಂ ಚ, ಲಲಿತಬಾಲ್ಯಂ, ಲಲಿತ-ಬಾಲ್ಯಂ ಅಸ್ಯ ಅಸ್ತೀತಿ ಲಲಿತಬಾಲ್ಯವಾನ್ ।

**ಪ್ರತಿಭಾಬಲೇನ—** ಪ್ರತಿಭಾಯಾಃ ಬಲಂ ಪ್ರತಿಭಾಬಲಂ, ತೇನ ಪ್ರತಿಭಾಬಲೇನ ।

**ಕೃತದೈತ್ಯಕೌತುಕಃ—** ದೈತ್ಯಾನಾಂ ಕೌತುಕಂ ದೈತ್ಯಕೌತುಕಂ, ಕೃತಂ ದೈತ್ಯಕೌತುಕಂ ಯೇನ ಸಃ ಕೃತದೈತ್ಯಕೌತುಕಃ ।

**ಅಧಃಕೃತಬಲೀಂದ್ರಶಾತ್ರವಃ—** ಇಂದ್ರಸ್ಯ ಶಾತ್ರವಃ ಇಂದ್ರಶಾತ್ರವಃ, ಬಲೀ ಇತಿ ಇಂದ್ರಶಾತ್ರವಃ, ಬಲೀಂದ್ರ-ಶಾತ್ರವಃ, ಅಧಃಕೃತಃ ಬಲೀಂದ್ರಶಾತ್ರವಃ ಯೇನ ಸಃ ಅಧಃಕೃತಬಲೀಂದ್ರಶಾತ್ರವಃ। (ಇಂದ್ರಸ್ಯ ಶಾತ್ರವಾಃ ಇಂದ್ರಶಾತ್ರವಾಃ, ಬಲಂ ಏಷಾಂ ಅಸ್ತೀತಿ ಬಲಿನಃ, ಬಲಿನಶ್ಚ ತೇ ಇಂದ್ರಶಾತ್ರವಾಶ್ಚ ಬಲೀಂದ್ರ-ಶಾತ್ರವಾಃ, ಅಧಃಕೃತಾಃ ಬಲೀಂದ್ರಶಾತ್ರವಾಃ ಯೇನ ಸಃ ಅಧಃಕೃತಬಲೀಂದ್ರಶಾತ್ರವಃ ।)

**ಸ್ವಜನಾಯ—** ಸ್ವಸ್ಯ ಜನಃ ಸ್ವಜನಃ, ತಸ್ಮೈ ಸ್ವಜನಾಯ ।

**ಕ್ರಿಯಾಪದ—** ಅದಾತ್- ''ಡುದಾಞ್'' ದಾನೇ ಇತಿ ದಾನಾರ್ಥಕಾತ್ ದಾಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಅದಾತ್'' ಇತಿ ರೂಪಮ್ ।

ಅದಾತ್ ಅದಾತಾಂ ಅದುಃ, ಅದಾಃ ಅದಾತಂ ಅದಾತ, ಅದಾಂ ಅದಾವ ಅದಾಮ ॥

ಪ್ರಯೋಗ— ಅಯಂ ಪರಂ ಪದಂ ಅದಾತ್ (ಕರ್ತರಿ) । ಅನೇನ ಪರಂ ಪದಂ ಅದಾಯಿ (ಕರ್ಮಣಿ) ।

★ ★ ★

ಅವತಾರಿಕಾ— ಈ ಶ್ಲೋಕದಿಂದ ಪರಶುರಾಮಾವತಾರ ಮತ್ತು ವೇದವ್ಯಾಸಾವತಾರ ಎರಡನ್ನು ವರ್ಣಿಸುತ್ತಾರೆ.

**ಕಥಯಂತ್ಯಮುಂ ಪರಶುಭಾಸಮಾನಗೋ-**
**ಹತಮರ್ತ್ಯದೇವತಮಸಂ ಮುಹುರ್ಮುಹುಃ ।**
**ಜಗತಾಂ ಹಿತಂ ಹರಿಮಿವಾಪರಂ ಹರಿಂ**
**ಗುರುಶಕ್ತಿತಾಪಸವರಾನ್ವಯೋದ್ಭವಮ್ ॥ 18 ॥**

ಪದಚ್ಛೇದ— ಕಥಯಂತಿ ಅಮುಂ, ಪರಶುಭಾಸಮಾನ-ಗೋ-ಹತ-ಮರ್ತ್ಯದೇವತಮಸಂ, (ಪರ-ಶುಭ-ಅಸಮಾನ- ಗೋ-ಹತ-ಮರ್ತ್ಯ-ದೇವ-ತಮಸಂ) ಮುಹುಃ, ಮುಹುಃ, ಜಗತಾಂ, ಹಿತಂ, ಹರಿಂ, ಇವ, ಅಪರಂ, ಹರಿಂ, ಗುರು-ಶಕ್ತಿ-ತಾಪಸವರಾನ್ವಯೋದ್ಭವಂ (ಗುರುಶಕ್ತಿತಾಪಸವರಾನ್ವಯೋದ್ಭವಂ) ।

ಅನ್ವಯ— (ಜ್ಞಾನಿನಃ) ಮುಹುಃ ಮುಹುಃ ಪರಶುಭಾಸಮಾನಗೋಹತಮರ್ತ್ಯದೇವತಮಸಂ ಜಗತಾಂ, ಹಿತಂ, ಗುರುಶಕ್ತಿತಾಪಸವರಾನ್ವಯೋದ್ಭವಂ, ಅಮುಂ, ಹರಿಂ ಅಪರಂ ಹರಿಂ ಇವ ಕಥಯಂತಿ ।

ಅನ್ವಯಾರ್ಥ—

**ಮುಹುಃ ಮುಹುಃ** = ಮತ್ತೂ ಮತ್ತೂ (ಇಪ್ಪತ್ತೊಂದು ಬಾರಿ)

**ಪರಶು** = ಕೊಡಲಿಯಲ್ಲಿ

**ಭಾಸಮಾನ** = ಪ್ರಕಾಶಿಸುವ

**ಗೋಹತಮರ್ತ್ಯದೇವ ತಮಸಂ** = ತೇಜಸ್ಸಿನಿಂದ ನಾಶಗೊಳಿಸಲ್ಪಟ್ಟ ಕ್ಷತ್ರಿಯರೆಂಬ ಕತ್ತಲೆಯುಳ್ಳ

**ಜಗತಾಂ** = ಲೋಕಗಳಿಗೆ

**ಹಿತಂ** = ಹಿತಕಾರಿಯಾದ (ಪ್ರಿಯವನ್ನುಂಟು ಮಾಡುವ)

**ಗುರುಶಕ್ತಿ ತಾಪಸವರಾನ್ವಯೋದ್ಭವಂ** = ಹೆಚ್ಚಾದ ಸಾಮರ್ಥ್ಯವುಳ್ಳ ಮುನಿಶ್ರೇಷ್ಠನಾದ ಭೃಗುವಿನ ವಂಶದಲ್ಲಿ ಹುಟ್ಟಿದ ಪರಶುರಾಮನಾದ

**ಅಮುಂ** = ಈ

**ಹರಿಂ** = ಶ್ರೀಮನ್ನಾರಾಯಣನನ್ನು

ಅನ್ವಯಾರ್ಥ—

**ಮುಹುಃ ಮುಹುಃ** = ಬಾರಿಬಾರಿಗೂ (ಅನೇಕ ಬಾರಿ)

**ಪರ** = ಉತ್ತಮವಾದ

**ಶುಭ** = ಮಂಗಳಕರವಾದ

**ಅಸಮಾನ** = ಅಸದೃಶವಾದ (ಅನೇಕ ಬಾರಿ)

**ಗೋ** = ಬ್ರಹ್ಮಸೂತ್ರ ಭಾರತಾದಿ ರೂಪವಾದ ಮಾತುಗಳಿಂದ

**ಹತ** = ಪರಿಹರಿಸಲ್ಪಟ್ಟ

**ಮರ್ತ್ಯದೇವತಮಸಂ** = ಮನುಷ್ಯರು, ದೇವತೆಗಳು, ಇವರ ಅಜ್ಞಾನವುಳ್ಳ

**ಜಗತಾಂ** = ಲೋಕಗಳಿಗೆ

**ಹಿತಂ** = ಹಿತವನ್ನುಂಟುಮಾಡುವ

**ಗುರುಶಕ್ತಿ ತಾಪಸವರಾನ್ವಯೋದ್ಭವಂ** = ಋಷಿಗಳಿಗೆ ಗುರುವಾದ ಶಕ್ತಿಯೆಂಬ ಮುನಿಶ್ರೇಷ್ಠರ ವಂಶದಲ್ಲಿ ಅವತಾರವುಳ್ಳ

**ಅಪರಂ** = ಬೇರೊಬ್ಬ

**ಹರಿಂ ಇವ** = ವೇದವ್ಯಾಸರಂತೆ ಇರುವವನಾಗಿಯೂ

ಅನ್ವಯಾರ್ಥ—

**ಪರಶುಭಾಸಮಾನಗೋಹತಮರ್ತ್ಯದೇವತಮಸಂ**

(**ಪರ ಶುಭ ಅಸಮಾನ ಗೋ ಹತ ಮರ್ತ್ಯದೇವ ತಮಸಂ** = ಉತ್ತಮವಾದ ಮಂಗಳಕರವಾದ ಎಣೆಯಿಲ್ಲದ ಕಿರಣಗಳಿಂದ ನಿವಾರಿಸಲ್ಪಟ್ಟ ಮನುಷ್ಯರು ದೇವತೆಗಳೂ ಇವರ ಕತ್ತಲುಳ್ಳ

**ಜಗತಾಂ ಹಿತಂ** = ಲೋಕಗಳಿಗೆ ಹಿತಕಾರಿಯಾದ

**ಗುರುಶಕ್ತಿ ತಾಪಸವರಾನ್ವಯೋದ್ಭವಂ** = ಹೆಚ್ಚಾದ ಸಾಮರ್ಥ್ಯವುಳ್ಳ ಮುನಿಶ್ರೇಷ್ಠರಾದ ಕಶ್ಯಪರ ವಂಶದಲ್ಲಿ ಉತ್ಪತ್ತಿಯುಳ್ಳ

**ಅಪರಂ** = ಬೇರೊಬ್ಬ

**ಹರಂ ಇವ** = ಸೂರ್ಯನಂತೆ ಇರುವವನನ್ನಾಗಿಯೂ

**ಕಥಯಂತಿ** = ಹೇಳುತ್ತಾರೆ.)

(ಇಲ್ಲಿ ಮೊದಲನೆಯ ಯೋಜನೆಯಿಂದ ಪರಶುರಾಮಾವತಾರವು, ಎರಡನೆಯ ಯೋಜನೆಯಲ್ಲಿ ಶ್ರೀವೇದವ್ಯಾಸಾವತಾರದ ಪ್ರಯೋಜನವು ಉತ್ತಮವಾಗಿದೆ. ಮೂರನೇ ಯೋಜನೆಯು ದೃಷ್ಟಾಂತತ್ವೇನ ಸೂರ್ಯನ ಪರವಾಗಿದೆ).

**ತಾತ್ಪರ್ಯ—** ಶ್ರೀಮನ್ನಾರಾಯಣನು ಹಿಂದೆ ಅತಿಸಮರ್ಥರಾದ ತಾಪಸ ಶ್ರೇಷ್ಠರಾದ ಭೃಗುಮುನಿಗಳ ವಂಶದಲ್ಲಿ (ಜಮದಗ್ನಿ ಋಷಿಗಳ ವಂಶದಲ್ಲಿ) ಜನಿಸಿ ಪರಶುರಾಮನೆಂದು ಪ್ರಖ್ಯಾತನಾದನು. ಜಗತ್ತಿಗೆ ಹಿತಕಾರಿಯಾದ ಆ ಪರಶುರಾಮನು ಆಗ ತೇಜಸ್ಸಿನಿಂದ ಜ್ವಲಿಸುತ್ತಿರುವ ತನ್ನ ಕೊಡಲಿಯಿಂದ ಇಪ್ಪತ್ತ ಒಂದು ಬಾರಿ ಭೂಮಂಡಲ ಪರ್ಯಟನ ಮಾಡಿ ಕತ್ತಲೆಯಂತಿರುವ ದುಷ್ಟ ಕ್ಷತ್ರಿಯರನ್ನು ಸಂಹರಿಸಿದನು. ಆ ಪರಶುರಾಮರೇ ಈ ನಾರಾಯಣದೇವರು. ಮುನಿ-

ಗಳಿಗೆ ಗುರುಗಳಾದ ಶಕ್ತಿಯೆಂಬ ತಾಪಸ ಶ್ರೇಷ್ಠರ ವಂಶದಲ್ಲಿ ಆವಿರ್ಭೂತರಾದ ಶ್ರೀವೇದವ್ಯಾಸರು ಅನೇಕ ಬಾರಿ ತಮ್ಮ ಉತ್ತಮವಾದ ಶಾಸ್ತ್ರರೂಪವಾದ ಮಾತುಗಳಿಂದ ಯೋಗ್ಯಮನುಷ್ಯರ ಮತ್ತು ದೇವತೆಗಳ ಅಜ್ಞಾನವನ್ನು ಹೋಗಲಾಡಿಸಿದ್ದಾರೆ. ಆ ವೇದವ್ಯಾಸರೇ ಈ ನಾರಾಯಣದೇವರು. ಸೂರ್ಯನು ಅತಿ ಸಮರ್ಥರಾದ ತಾಪಸಶ್ರೇಷ್ಠರಾದ ಕಶ್ಯಪರ ವಂಶದಲ್ಲಿ ಹುಟ್ಟಿದ್ದಾನೆ. ತನ್ನ ಉತ್ತಮವಾದ ಮಂಗಳಕರವಾದ ಅಸದೃಶಕಿರಣಗಳ ಸಾಮರ್ಥ್ಯದಿಂದ ಮನುಷ್ಯರಿಗೂ ದೇವತೆಗಳಿಗೂ ತೊಂದರೆಯನ್ನುಂಟುಮಾಡುವ ಕತ್ತಲೆಯನ್ನು ಪರಿಹರಿಸಿ ಲೋಕಕ್ಕೆ ಹಿತವನ್ನುಂಟು ಮಾಡುತ್ತಾನೆ. ಪರಶುರಾಮ ಮತ್ತು ವೇದವ್ಯಾಸ ರೂಪದಿಂದ ಅವತರಿಸಿದ ಈ ನಾರಾಯಣನು ಇಂತಹ ಸೂರ್ಯ-ನಂತಿದ್ದಾನೆಂದು ಜ್ಞಾನಿಗಳು ಹೇಳುತ್ತಾರೆ.

ವಿಗ್ರಹ—

**ಗುರುಶಕ್ತಿತಾಪಸವರಾನ್ವಯೋದ್ಭವಂ—** ಗುರ್ವೀ ಶಕ್ತಿಃ ಯಸ್ಯ ಸಃ ಗುರುಶಕ್ತಿಃ, ತಾಪಸೇಷು ವರಃ ತಾಪಸವರಃ, ಗುರುಶಕ್ತಿಶ್ಚಾಸೌ ತಾಪಸವರಶ್ಚ ಗುರುಶಕ್ತಿತಾಪಸವರಃ, ಗುರುಶಕ್ತಿತಾಪಸವರಸ್ಯ ಅನ್ವಯಃ ಗುರುಶಕ್ತಿತಾಪಸವರಾನ್ವಯಃ, ಗುರುಶಕ್ತಿತಾಪಸವರಾನ್ವಯೇ ಉದ್ಭವಃ ಯಸ್ಯ ಸಃ ಗುರುಶಕ್ತಿ-ತಾಪಸವರಾನ್ವಯೋದ್ಭವಃ, ತಂ ಗುರುಶಕ್ತಿತಾಪಸವರಾನ್ವಯೋದ್ಭವಂ । (ಗುರುಶ್ಚಾಸೌ ಶಕ್ತಿಶ್ಚ ಗುರುಶಕ್ತಿಃ, ಗುರುಶಕ್ತಿಃ ಇತಿ ತಾಪಸವರಃ ಗುರುಶಕ್ತಿತಾಪಸವರಃ, ಗುರುಶಕ್ತಿತಾಪಸವರಸ್ಯ ಅನ್ವಯೇ ಉದ್ಭವಃ ಯಸ್ಯ ಸಃ ಗುರುಶಕ್ತಿತಾಪಸವರಾನ್ವಯೋದ್ಭವಃ, ತಂ ಗುರುಶಕ್ತಿತಾಪಸ-ವರಾನ್ವಯೋದ್ಭವಂ) । ಗುರುರ್ಮಹತೀ ಶಕ್ತಿಃ ಯಸ್ಯ ಸಃ ಗುರುಶಕ್ತಿಃ, ಸ ಚಾಸೌ ತಾಪಸವರಶ್ಚೇತಿ ವಾ ವಿಗ್ರಹಃ ।

**ಪರಶುಭಾಸಮಾನಗೋಹತಮರ್ತ್ಯದೇವತಮಸಂ—** ಪರಶೌ ಭಾಸಮಾನಾಃ ಪರಶುಭಾಸಮಾನಾಃ, ಪರಶುಭಾಸಮಾನಾಶ್ಚ ತಾಃ ಗಾವಶ್ಚ ಪರಶುಭಾಸಮಾನಗಾವಃ, ಮರ್ತ್ಯಾನಾಂ ದೇವಾಃ ಮರ್ತ್ಯ-ದೇವಾಃ, ಮರ್ತ್ಯದೇವಾ (ಕ್ಷತ್ರಿಯಾ ಏವ) ಏವ ತಮಾಂಸಿ ಮರ್ತ್ಯದೇವತಮಾಂಸಿ, ಪರಶು-ಭಾಸಮಾನಗೋಭಿಃ ಹತಾನಿ ಮರ್ತ್ಯದೇವತಮಾಂಸಿ ಯೇನ ಸಃ ಪರಶುಭಾಸಮಾನಗೋಹತ-ಮರ್ತ್ಯದೇವತಮಾಃ, ತಂ ಪರಶುಭಾಸಮಾನಗೋಹತಮರ್ತ್ಯದೇವತಮಸಂ ।

(**ವೇದವ್ಯಾಸರ ಪಕ್ಷದಲ್ಲಿ** - ಪರಾಶ್ಚ ಶುಭಾಶ್ಚ ಅಸಮಾನಶ್ಚ ತಾಃ ಗಾವಶ್ಚ ಪರಶುಭಾಸಮಾನಗಾವಃ, ಮರ್ತ್ಯಾಶ್ಚ ದೇವಾಶ್ಚ ಮರ್ತ್ಯದೇವಾಃ, ಮರ್ತ್ಯದೇವಾನಾಂ ತಮಾಂಸಿ ಮರ್ತ್ಯದೇವತಮಾಂಸಿ, ಪರ-ಶುಭ-ಅಸಮಾನ-ಗೋಭಿಃ ಹತಾನಿ ಮರ್ತ್ಯದೇವತಮಾಂಸಿ ಯೇನ ಸಃ ಪರ-ಶುಭಾ-ತಮಾಃ, ತಂ ಪರಶುಭಾಸಮಾನಗೋಹತಮರ್ತ್ಯದೇವತಮಸಂ ।

**ಕ್ರಿಯಾಪದ—** ಕಥಯಂತಿ- ಕಥ ವಾಕ್ಯ ಪ್ರಬಂಧೇ ಇತಿ ವಾಕ್ಯಪ್ರಬಂಧಾರ್ಥಕಾತ್ ಕಥಧಾತೋಃ ಚೌರಾದಿಕಾತ್ ಕರ್ತರಿ ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ ಕಥಯಂತಿ ಇತಿ ರೂಪಮ್ ।

ಕಥಯತಿ ಕಥಯತಃ ಕಥಯಂತಿ, ಕಥಯಸಿ ಕಥಯಥಃ ಕಥಯಥ, ಕಥಯಾಮಿ ಕಥಯಾವಃ ಕಥಯಾಮಃ ॥

**ಪ್ರಯೋಗ—** (ಜ್ಞಾನಿನಃ) ಅಮುಂ ಹರಿಂ ಅಪರಂ ಹರಿಮಿವ ಕಥಯಂತಿ (ಕರ್ತರಿ) । (ಜ್ಞಾನಿಭಿಃ) ಅಸೌ ಹರಿಃ ಅಪರಃ ಹರಿಃ ಇವ ಕಥ್ಯತೇ (ಕರ್ಮಣಿ) (ಶ್ಲೇಷಸಂಕೀರ್ಣ ಉಪಮಾಲಂಕಾರ) ।

★ ★ ★

**ಅವತಾರಿಕಾ—** ಈ ಪದ್ಯದಿಂದ ಆರಂಭಿಸಿ 34ನೆಯ ಪದ್ಯದವರೆಗೆ ಶ್ರೀರಾಮಾವತಾರ ಮತ್ತು ಶ್ರೀಕೃಷ್ಣಾವತಾರಗಳನ್ನು ಒಟ್ಟಿಗೇ ವರ್ಣಿಸುತ್ತಾರೆ. ಒಟ್ಟು ಹದಿನೈದು ಪದ್ಯಗಳಲ್ಲಿ ಶ್ರೀಮಧ್ವಾಚಾರ್ಯರಿಂದ ಧ್ಯಾನ ಮಾಡಲ್ಪಟ್ಟ ಶ್ರೀರಾಮಕೃಷ್ಣಾವತಾರಗಳನ್ನು ನಿರೂಪಿಸುತ್ತಾರೆ.

**ಕರುಣಾಕರಃ ಸವಸುದೇವಮೋದದೋ**
**ಭಗವಾನ್ ಪುರಾಽಹಿಮಕರಾನ್ವಯೇಽಭವತ್ ।**
**ಜಿತವಾನ್ ದಿಶೋ ದಶರಥೋಽಗ್ರ್ಯಸಂಪದೋ**
**ಜನಕೋ ಬಭೂವ ಭುವಿ ಯಸ್ಯ ವೈರಿಹಾ ॥ 19 ॥**

ರಾಮಾವತಾರ ಪಕ್ಷದಲ್ಲಿ -

**ಪದಚ್ಛೇದ—** ಕರುಣಾಕರಃ, ಸವಸುದೇವಮೋದದಃ, ಭಗವಾನ್, ಪುರಾ, ಅಹಿಮಕರಾನ್ವಯೇ, ಅಭವತ್, ಜಿತವಾನ್, ದಿಶಃ, ದಶರಥಃ, ಅಗ್ರ್ಯಸಂಪದಃ, ಜನಕಃ, ಬಭೂವ, ಭುವಿ, ಯಸ್ಯ, ವೈರಿಹಾ ।

**ಅನ್ವಯ—** ಸವಸುದೇವಮೋದದಃ, ಕರುಣಾಕರಃ ಭಗವಾನ್, ಪುರಾ ಭುವಿ ಅಹಿಮಕರಾನ್ವಯೇ ಅಭವತ್, ಯಸ್ಯ ಅಗ್ರ್ಯಸಂಪದಃ ದಶ ದಿಶಃ ಜಿತವಾನ್, ವೈರಿಹಾ ದಶರಥಃ ಜನಕಃ ಬಭೂವ ।

**ಅನ್ವಯಾರ್ಥ—**

**ಸವಸುದೇವಮೋದದಃ** = ವಸುಗಳಿಂದ ಸಹಿತರಾದ ದೇವತೆಗಳಿಗೆ ಸಂತೋಷವನ್ನುಂಟು ಮಾಡುವ (ಸವಸು = ರತ್ನ, ಧನಗಳಿಂದ ಸಹಿತಳಾದ ಭೂದೇವಿಯ, ದೇವ = ದೇವತೆಗಳಾದ ವಿಶ್ವಾಮಿತ್ರಾದಿ ಬ್ರಾಹ್ಮಣರಿಗೆ, ಮೋದದಃ = ಸಂತೋಷವನ್ನುಂಟು ಮಾಡುವ),
**ಕರುಣಾಕರಃ** = ದಯೆಗೆ ಉತ್ಪತ್ತಿ ಸ್ಥಾನವಾದ (ದಯಾ ಸಮೂಹರೂಪನಾದ) ದಯಾಳುವಾದ,
**ಭಗವಾನ್** = ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನು
**ಪುರಾ** = ಹಿಂದೆ ತ್ರೇತಾಯುಗದಲ್ಲಿ
**ಭುವಿ** = ಭೂಮಿಯಲ್ಲಿ
**ಅಹಿಮಕರಾನ್ವಯೇ** = ಸೂರ್ಯವಂಶದಲ್ಲಿ
**ಅಭವತ್** = (ಶ್ರೀರಾಮನಾಗಿ) ಹುಟ್ಟಿದನು.
**ಯಸ್ಯ** = ಸೂರ್ಯ ವಂಶದಲ್ಲಿ ಹುಟ್ಟಿದ ಶ್ರೀರಾಮನಿಗೆ
**ಅಗ್ರ್ಯಸಂಪದಃ** = ಶ್ರೇಷ್ಠವಾದ ಸಂಪತ್ತುಳ್ಳ
**ದಶ** = ಹತ್ತು,
**ದಿಶಃ** = ದಿಕ್ಕುಗಳನ್ನು
**ಜಿತವಾನ್** = ಜಯಿಸಿದ
**ವೈರಿಹಾ** = ಶತ್ರು ಸಂಹಾರಕನಾದ
**ದಶರಥಃ** = ದಶರಥ ಮಹಾರಾಜನು
**ಜನಕಃ** = ಪ್ರಾದುರ್ಭಾವಕ್ಕೆ ಕಾರಣನಾಗಿ (ತಂದೆಯಾಗಿ)
**ಬಭೂವ** = ಆದನೋ

**ತಾತ್ಪರ್ಯ**— ದಯಾ ಸಮುದ್ರನಾದ ಈ ನಾರಾಯಣನು ವಸುಗಳಿಗೂ, ದೇವತೆಗಳಿಗೂ, ಸೂರ್ಯನಿಗೂ, ವಿಶ್ವಾಮಿತ್ರಾದಿ ಭೂಸುರರಿಗೂ ಆನಂದವನ್ನುಂಟುಮಾಡುತ್ತಾ, ಹಿಂದೆ ತ್ರೇತಾಯುಗದಲ್ಲಿ ಸೂರ್ಯವಂಶದಲ್ಲಿ, ಶ್ರೀರಾಮಚಂದ್ರನೆಂಬ ಹೆಸರಿನಿಂದ ಅವತರಿಸಿದನು. ಆಗ ಇವನಿಗೆ ನಾನಾ ದಿಕ್ಕುಗಳಲ್ಲಿ ಶ್ರೇಷ್ಠವಾದ ಐಶ್ವರ್ಯಗಳನ್ನು ಗೆದ್ದು ತಂದಿರುವ, ಶತ್ರು ಸಂಹಾರಕನಾದ ದಶರಥ ಮಹಾರಾಜನು ತಂದೆ ಎನಿಸಿಕೊಂಡನು.

**ಕೃಷ್ಣಾವತಾರ ಪಕ್ಷದಲ್ಲಿ –**

**ಪದಚ್ಛೇದ**— ಕರುಣಾಕರಃ, ಸಃ, ವಸುದೇವಮೋದದಃ, ಭಗವಾನ್, ಪುರಾ, ಹಿಮಕರಾನ್ವಯೇ, ಅಭವತ್, ಜಿತವಾನ್, ದಿಶ, ರಥಃ, ಅಗ್ರ್ಯಸಂಪದಃ, ಜನಕಃ, ಬಭೂವ, ಭುವಿ, ಯಸ್ಯ , ವೈರಿಹಾ ।

**ಅನ್ವಯ**— ಕರುಣಾಕರಃ ಸಃ ಭಗವಾನ್, ವಸುದೇವಮೋದದಃ ಪುರಾ ಭುವಿ ಹಿಮಕರಾನ್ವಯೇ ಅಭವತ್, ಯಸ್ಯ ದಶ ದಿಶಃ ಜಿತವಾನ್ ವೈರಿಹಾ ರಥಃ ಅಗ್ರ್ಯಸಂಪದಃ ಜನಕಃ ಬಭೂವ ।

**ಅನ್ವಯಾರ್ಥ**—

**ಕರುಣಾಕರಃ** = ದಯಾಳುವಾದ

**ಸಃ** = ಅಂತಹ

**ಭಗವಾನ್** = ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನು,

**ವಸುದೇವಮೋದದಃ** = ವಸುದೇವನಿಗೆ ಸಂತೋಷವನ್ನುಂಟು ಮಾಡುವವನಾಗಿ

**ಪುರಾ** = ಹಿಂದೆ ದ್ವಾಪರಯುಗದ ಕೊನೆಯಲ್ಲಿ

**ಭುವಿ** = ಭೂಮಿಯಲ್ಲಿ

**ಹಿಮಕರಾನ್ವಯೇ** = ಚಂದ್ರ ವಂಶದಲ್ಲಿ

**ಅಭವತ್** = (ಕೃಷ್ಣನಾಗಿ) ಅವತರಿಸಿದನು.

**ಯಸ್ಯ** = ಯಾವ ಕೃಷ್ಣನಿಗೆ

**ದಶ** = ಹತ್ತು

**ದಿಶಃ** = ದಿಕ್ಕುಗಳನ್ನು

**ಜಿತವಾನ್** = ಜಯಿಸಿದ

**ವೈರಿಹಾ** = ಶತ್ರುಗಳನ್ನು ಸಂಹರಿಸುವ

**ರಥಃ** = ರಥವು

**ಅಗ್ರ್ಯಸಂಪದಃ** = ಶ್ರೇಷ್ಠವಾದ ಐಶ್ವರ್ಯಕ್ಕೆ

**ಜನಕಃ** = ಉಂಟು ಮಾಡತಕ್ಕಂತದ್ದಾಗಿ

**ಬಭೂವ** = ಆಯಿತೋ.

**ತಾತ್ಪರ್ಯ**— ದಯಾಳುವಾದ ಪೂಜ್ಯನಾದ ಈ ನಾರಾಯಣನು ಹಿಂದೆ ದ್ವಾಪರಯುಗದ ಕೊನೆಯಲ್ಲಿ ಚಂದ್ರವಂಶದಲ್ಲಿ ಶ್ರೀಕೃಷ್ಣನಾಗಿ ಅವತರಿಸಿ, ತನಗೆ ತಂದೆಯೆನಿಸಿಕೊಂಡ ವಸುದೇವನಿಗೂ, ಭೂದೇವಿಗೂ, ದೇವತೆ-ಗಳಿಗೂ ಆನಂದವನ್ನುಂಟುಮಾಡಿದನು. ಈ ಶ್ರೀಕೃಷ್ಣನಲ್ಲಿ ಹತ್ತು ದಿಕ್ಕುಗಳಲ್ಲಿಯೂ ತಡೆಯಿಲ್ಲದೆ ಸಂಚರಿಸಲ್ಪಟ್ಟ ಶತ್ರುಗಳನ್ನು ನಿಗ್ರಹಿಸಲು ಸಾಧನವಾದ ಉತ್ತಮವಾದ ರಥವಿತ್ತು. ಶ್ರೀಕೃಷ್ಣ ಪರಮಾತ್ಮನ ಸನ್ನಿಧಾನದಿಂದ ಜಯಪ್ರದವಾದ ಆ ರಥವನ್ನೇರಿ ಶ್ರೀಕೃಷ್ಣನು ಶತ್ರುಗಳನ್ನು ಗೆದ್ದು ಅವರ ಸಂಪತ್ತನ್ನು ತಂದನು.

**ವಿಶೇಷಾಂಶ—** 'ಗೌರ್ಭೂತ್ವಾ ಅಶ್ರುಮುಖೀಖಿನ್ನಾ' ಎಂಬ ಪ್ರಮಾಣಾನುಸಾರವಾಗಿ ಗೋರೂಪವನ್ನು ಧರಿಸಿ ತನ್ನ ಭಾರವನ್ನು ಕಡಿಮೆ ಮಾಡುವಂತೆ ಭೂದೇವಿಯ ಪ್ರಾರ್ಥನಾನುಸಾರವಾಗಿ ನಾರಾಯಣನು ಶ್ರೀಕೃಷ್ಣಾವತಾರವನ್ನು ಮಾಡಿದ್ದಾನೆ. ಆದ್ದರಿಂದ ಅವನ ಅವತಾರವು ಭೂದೇವಿಗೆ ಸಂತೋಷಪ್ರದವೆಂದು ತಿಳಿಯಬೇಕು. 'ನ ಕೇಶವರಥೇ ಕಶ್ಚಿತ್ ಸ್ಥಿತೋ ಯಾತಿ ಪರಾಭವಂ' ಎಂಬ ಪ್ರಮಾಣಾನುಸಾರವಾಗಿ ಶ್ರೀಕೃಷ್ಣನ ರಥವು ಶತ್ರುಗಳನ್ನು ನಿಗ್ರಹಿಸಿ ಸರ್ವದಾ ಜಯವನ್ನೇ ಕೊಡುತ್ತಿತ್ತು ಎಂದು ತಿಳಿಯಬೇಕು.

**ವಿಗ್ರಹ—**

**ಕರುಣಾಕರಃ—** ಕರುಣಾಯಾಃ ಆಕರಃ ಕರುಣಾಕರಃ ।

**ಸವಸುದೇವಮೋದದಃ—** ವಸುಭಿಃ ಸಹಿತಾಃ ಸವಸವಃ, ಸವಸವಶ್ಚ ತೇ ದೇವಾಶ್ಚ ಸವಸುದೇವಾಃ, ಮೋದಂ ದದಾತೀತಿ ಮೋದದಃ, ಸವಸುದೇವಾನಾಂ ಮೋದದಃ ಸವಸುದೇವಮೋದದಃ । (ವಸುಭಿಃ ಸಹ ವರ್ತತೇ ಇತಿ ಸವಸುಃ, ಸವಸೋಃ ದೇವಾಃ ಸವಸುದೇವಾಃ, ಸವಸುದೇವಾನಾಂ ಮೋದದಃ ಸವಸುದೇವಮೋದದಃ । ವಸುಭಿಃ ಸಹ ವರ್ತತ ಇತಿ ಸವಸುಃ, ಸವಸುಶ್ಚಾಸೌ ದೇವಶ್ಚ ಸವಸುದೇವಃ, ತಸ್ಯ ಮೋದದಃ (ಸವಸೋಃ ದೇವಾನಾಂ ಚ ಮೋದದಃ ಸವಸುದೇವಮೋದದಃ) ।

**ಭಗವಾನ್—** ಭಗಃ ಅಸ್ಯ ಅಸ್ತೀತಿ ಭಗವಾನ್ ।

**ಹಿಮಕರಾನ್ವಯೇ—** ಹಿಮಾಃ ಕರಾಃ ಯಸ್ಯ ಸಃ ಹಿಮಕರಃ, ಹಿಮಕರಸ್ಯ ಅನ್ವಯಃ ಹಿಮಕರಾನ್ವಯಃ, ತಸ್ಮಿನ್ ಹಿಮಕರಾನ್ವಯೇ ।

**ಅಹಿಮಕರಾನ್ವಯೇ—** ನ ಹಿಮಾಃ ಅಹಿಮಾಃ, ಅಹಿಮಾಃ ಕರಾಃ ಯಸ್ಯ ಸಃ ಅಹಿಮಕರಃ, ತಸ್ಯ ಅನ್ವಯಃ, ತಸ್ಮಿನ್ ಅಹಿಮಕರಾನ್ವಯೇ ।

**ದಶರಥಃ—** ದಶಸು (ದಿಕ್ಷು) ರಥಃ ಯಸ್ಯ ಸಃ ದಶರಥಃ ।

**ಅಗ್ರ್ಯಸಂಪದಃ—** ಅಗ್ರ್ಯಾ ಸಂಪತ್ ಯಾಸು ತಾಃ ಅಗ್ರ್ಯಸಂಪದಃ, (ಬಹುವ್ರೀಹಿ) । ಅಗ್ರ್ಯಾ ಚ ಸಾ ಸಂಪತ್ ಚ ಅಗ್ರ್ಯಸಂಪತ್, ತಸ್ಯಾಃ (ಕರ್ಮಧಾರಯ) ಅಗ್ರ್ಯಸಂಪದಾ ।

**ವೈರಿಹಾ—** ವೈರಿಣಃ ಹಂತೀತಿ ವೈರಿಹಾ ।

**ಕ್ರಿಯಾಪದ—** ಅಭವತ್ ಅಭವತಾಂ ಇತ್ಯಾದಿ ಭೂಸತ್ತಾಯಾಂ ಲಙ್, ಬಭೂವ ಬಭೂವತುಃ ಇತ್ಯಾದಿ ಭೂಸತ್ತಾಯಾಂ ಲಿಟ್ ।

ಪ್ರಯೋಗ— ಭಗವಾನ್ (ಅ) ಹಿಮಕರಾನ್ವಯೇ ಅಭವತ್ (ಕರ್ತರಿ) । ಭಗವತಾ (ಅ) ಹಿಮಕರಾನ್ವಯೇ ಅಭೂಯತ (ಭಾವೇ) । ಯಸ್ಯ ಜನಕಃ ಬಭೂವ (ಕರ್ತರಿ) ಯಸ್ಯ ಜನಕೇನ ಬಭೂವೇ (ಭಾವೇ)

★ ★ ★

**ಭುಜಗೇಶ್ವರೋಽಪಿ ಭುವನೇಶ್ವರಪ್ರಿಯಃ**
**ಸಮಜನ್ಯಥಾರಿದರಜನ್ಮ ಭುವ್ಯಭೂತ್ ।**
**ತಮಮುಷ್ಯಕಾಂತಿವಿಜಿತೇಂದುಮಗ್ರಜಂ**
**ರಮಣೀಯಮಾಹುರಿಹ ರಾಮನಾಮಕಮ್ ॥ 20 ॥**

**ಪದಚ್ಛೇದ—** ಭುಜಗೇಶ್ವರಃ, ಅಪಿ, ಭುವನೇಶ್ವರಪ್ರಿಯಃ, ಸಮಜನಿ, ಅಥ, ಅರಿದರಜನ್ಮ, ಭುವಿ, ಅಭೂತ್, ತಂ, ಅಮುಷ್ಯ, ಕಾಂತಿವಿಜಿತೇಂದುಂ, ಅಗ್ರಜಂ, ರಮಣೀಯಂ, ಆಹುಃ, ಇಹ, ರಾಮನಾಮಕಂ ।

**ಅನ್ವಯ—** ಭುವನೇಶ್ವರಪ್ರಿಯಃ ಭುಜಗೇಶ್ವರಃ ಅಪಿ ಭುವಿ ಸಮಜನಿ, ಅಥ ಅರಿದರಜನ್ಮ ಅಭೂತ್, ಇಹ ಅಮುಷ್ಯ ಅಗ್ರಜಂ ಕಾಂತಿವಿಜಿತೇಂದುಂ, ರಮಣೀಯಂ ತಂ, ರಾಮನಾಮಕಂ ಆಹುಃ ।

**ಅನ್ವಯಾರ್ಥ—**

***ಶ್ರೀರಾಮಪರವಾದ ಅರ್ಥ*** -

**ಭುವನೇಶ್ವರ ಪ್ರಿಯಃ** = ಲೋಕಗಳಿಗೆ ಸ್ವಾಮಿಯಾದ ಶ್ರೀಮನ್ನಾರಾಯಣನಿಗೆ ಪ್ರೀತಿಪಾತ್ರನಾದ

**ಭುಜಗೇಶ್ವರಃ ಅಪಿ** = ಮಹಾಶೇಷನೂ ಕೂಡ

**ಭುವಿ** = ಭೂಮಿಯಲ್ಲಿ

**ಸಮಜನಿ** = (ಲಕ್ಷ್ಮಣನೆಂಬ ಹೆಸರಿನಿಂದ) ಹುಟ್ಟಿದನು.

**ಅಥ** = ಅನಂತರ

**ಅರಿದರಜನ್ಮ** = ಸುದರ್ಶನ ಚಕ್ರವೂ ಪಾಂಚಜನ್ಯ ಶಂಖವೂ ಇವುಗಳ ಉತ್ಪತ್ತಿಯು

**ಅಭೂತ್** = ಆಯಿತು.

**ಇಹ** = ಇವರಲ್ಲಿ

**ಅಮುಷ್ಯ** = ಈ ಲಕ್ಷ್ಮಣನ

**ಅಗ್ರಜಂ** = ಅಣ್ಣನಾದ

**ಕಾಂತಿ ವಿಜಿತ ಇಂದುಂ** = ತೇಜಸ್ಸಿನಿಂದ ಜಯಿಸಲ್ಪಟ್ಟ ಚಂದ್ರನುಳ್ಳ

**ತಂ** = ಆ ದಶರಥನ ಮಗನನ್ನು

**ರಾಮನಾಮಕಂ** = ರಾಮನೆಂದು ಹೆಸರು ಉಳ್ಳವನಾಗಿ

**ಆಹುಃ** = ಹೇಳುತ್ತಾರೆ.

***ಶ್ರೀಕೃಷ್ಣಪರವಾದ ಅರ್ಥ*** -

**ಭುವನೇಶ್ವರಪ್ರಿಯಃ** = ಸಮಸ್ತ ಲೋಕ ಸ್ವಾಮಿಯಾದ ಶ್ರೀಮನ್ನಾರಾಯಣನಿಗೆ ಇಷ್ಟನಾದ

**ಭುಜಗೇಶ್ವರಃ ಅಪಿ** = ನಾಗಾಧಿಪತಿಯಾದ ಶೇಷನೂ ಕೂಡ

**ಭುವಿ** = ಭೂಮಿಯಲ್ಲಿ

**ಸಮಜನಿ** = (ಬಲರಾಮನಾಗಿ) ಹುಟ್ಟಿದನು,

**ಅಥ** = ಬಳಿಕ

**ಅರಿದರಜನ್ಮ** = ಶತ್ರುಗಳಿಗೆ ಹೆದರಿಕೆಯ ಹುಟ್ಟುವಿಕೆಯು

**ಅಭೂತ್** = ಆಯಿತು.

**ಕಾಂತಿವಿಜಿತೇಂದುಂ** = ದೇಹಕಾಂತಿಯಿಂದ ಜಯಿಸಲ್ಪಟ್ಟ ಚಂದ್ರನುಳ್ಳ,

**ರಮಣೀಯಂ** = ಸುಂದರನಾದ

**ಅಮುಷ್ಯ** = ಈ ಶ್ರೀಕೃಷ್ಣನ

**ಅಗ್ರಜಂ** = ಅಣ್ಣನಾದ

**ತಂ** = ಆ ಬಲಭದ್ರನನ್ನು

**ಇಹ** = ಈ ಲೋಕದಲ್ಲಿ

**ರಾಮನಾಮಕಂ** = ಬಲರಾಮನೆಂಬ ಹೆಸರು ಉಳ್ಳವನನ್ನಾಗಿ

**ಆಹುಃ** = ಹೇಳುತ್ತಾರೆ.

**ತಾತ್ಪರ್ಯ— *(ಶ್ರೀರಾಮಾವತಾರ ಪಕ್ಷದಲ್ಲಿ)*** ಶ್ರೀರಾಮನು ಅವತರಿಸಿದ ತರುವಾಯ ಶ್ರೀಮನ್ನಾರಾಯಣನಿಗೆ ಪ್ರಿಯನಾದ ಮಹಾಶೇಷನು ಲಕ್ಷ್ಮಣನಾಗಿ ಭೂಮಿಯಲ್ಲಿ ಅವತರಿಸಿದನು. ಅನಂತರ ಶ್ರೀಹರಿಯ ಚಕ್ರಾಭಿಮಾನಿಯಾದ ಕಾಮನು ಭರತನಾಗಿಯೂ, ಶಂಖಾಭಿಮಾನಿಯಾದ ಮನ್ಮಥಪುತ್ರನಾದ ಅನಿರುದ್ಧನು ಶತ್ರುಘ್ನನಾಗಿಯೂ ಅವತರಿಸಿದನು. ಇವರಲ್ಲಿ ಲಕ್ಷ್ಮಣನ ಅಣ್ಣನಾದವನನ್ನು, ಚಂದ್ರನಿಗಿಂತಲೂ ಅಧಿಕ ಕಾಂತಿಯುಳ್ಳ ಸುಂದರನಾದ ಶ್ರೀರಾಮಚಂದ್ರನೆಂದು ಹೇಳುತ್ತಾರೆ.

***(ಶ್ರೀಕೃಷ್ಣಾವತಾರ ಪಕ್ಷದಲ್ಲಿ)*** ಶ್ರೀಕೃಷ್ಣನು ಅವತರಿಸುವುದಕ್ಕೂ ಮೊದಲು ಶ್ರೀಮನ್ನಾರಾಯಣನಿಗೆ ಅತ್ಯಂತ ಪ್ರಿಯನಾದ ಮಹಾಶೇಷನು ಬಲರಾಮನಾಗಿ ಅವತರಿಸಿದನು. ಅನಂತರ ಶ್ರೀಕೃಷ್ಣನೂ ಅವತರಿಸಿದನು. ಈ ಶ್ರೀಕೃಷ್ಣ ಬಲಭದ್ರ ಇವರಿಬ್ಬರ ಅವತಾರದಿಂದ ಭಗವಂತನ ದ್ವೇಷಿಗಳಾದ ಶತ್ರುಗಳಿಗೆ ಭಯವುಂಟಾಯಿತು. ಚಂದ್ರನಿಗಿಂತಲೂ ಹೆಚ್ಚು ಕಾಂತಿಯುಳ್ಳ ಸುಂದರನಾದ ಶ್ರೀಕೃಷ್ಣನ ಅಣ್ಣನಾದ ಈ ಬಲಭದ್ರನನ್ನು ಬಲರಾಮನೆಂದು ಹೇಳುತ್ತಾರೆ.

**ವಿಗ್ರಹ—**

**ಭುಜಗೇಶ್ವರಃ—** ಭುಜಾಭ್ಯಾಂ ಗಚ್ಛಂತೀತಿ ಭುಜಗಾಃ, ಭುಜಗಾನಾಂ ಈಶ್ವರಃ ಭುಜಗೇಶ್ವರಃ ।

**ಭುವನೇಶ್ವರಪ್ರಿಯಃ—** ಭುವನಾನಾಂ ಈಶ್ವರಃ ಭುವನೇಶ್ವರಃ, ಭುವನೇಶ್ವರಸ್ಯ ಪ್ರಿಯಃ ಭುವನೇಶ್ವರಪ್ರಿಯಃ ।

**ಅರಿದರಜನ್ಮ—** ಅರಿಶ್ಚ ದರಶ್ಚ ಅರಿದರೌ ಅರಿದರಯೋಃ ಜನ್ಮ ಅರಿದರಜನ್ಮ (ಅರೀಣಾಂ ದರಃ ಅರಿದರಃ, ಅರಿದರಸ್ಯ ಜನ್ಮ ಅರಿದರಜನ್ಮ) ।

**ಕಾಂತಿವಿಜಿತೇಂದುಃ—** ಕಾಂತ್ಯಾ ವಿಜಿತಃ ಕಾಂತಿವಿಜಿತಃ, ಕಾಂತಿವಿಜಿತಃ ಇಂದುಃ ಯೇನ ಸಃ ಕಾಂತಿವಿಜಿತೇಂದುಃ ।

**ಅಗ್ರಜಂ—** ಅಗ್ರೇ ಜಾಯತೇ ಇತಿ ಅಗ್ರಜಃ, ತಂ ಅಗ್ರಜಂ ।

**ರಾಮನಾಮಕಂ—** ರಾಮ ಇತಿ ನಾಮ ಯಸ್ಯ ಸಃ ರಾಮನಾಮಕಃ, ತಂ ರಾಮನಾಮಕಂ ।

**ಕ್ರಿಯಾಪದ—** **ಸಮಜನಿ**- ಸಮ್ ಇತ್ಯುಪಸರ್ಗಪೂರ್ವಕಾತ್ ಜನೀ ಪ್ರಾದುರ್ಭಾವೇ ಇತಿ ಪ್ರಾದುರ್ಭಾವಾರ್ಥ-ಕಾತ್ ಜನ್ ಧಾತೋಃ ಅಕರ್ಮಕಾತ್ ಆತ್ಮನೇಪದಿನಃ ಭೂತೇ ಲುಙ್ ಪ್ರಥಮಪುರುಷ ಏಕವಚನೇ ಸಮಜನಿ ಇತಿ ರೂಪಮ್ ॥

| | | |
|---|---|---|
| ಸಮ್-ಅಜನಿ | ಅಜನಿಷ್ಟ-ಅಜನಿಷಾತಾಂ | ಅಜನಿಷತ, |
| ಅಜನಿಷ್ಠಾಃ | ಅಜನಿಷಾಥಾಂ | ಅಜನಿಢ್ವಂ (ಧ್ವಂ), |
| ಅಜನಿಷಿ | ಅಜನಿಷ್ವಹಿ | ಅಜನಿಷ್ಮಹಿ ॥ |

**ಅಭೂತ್**- ಭೂಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ''ಅಭೂತ್'' ಇತಿ ರೂಪಮ್ ।

ಅಭೂತ್ ಅಭೂತಾಂ ಅಭೂವನ್, ಅಭೂಃ ಅಭೂತಂ ಅಭೂತ, ಅಭೂವಂ ಅಭೂವ ಅಭೂಮ

**ಆಹುಃ**- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ 'ಆಹುಃ' ಇತಿ ರೂಪಮ್ । ಬ್ರುವಃ ಪಂಚಾನಾಂ ಆದಿತ ಆಹೋ ಬ್ರುವಃ 3-4-84 ಎಂಬ ಸೂತ್ರದಿಂದ ಲಟ್‌ನಲ್ಲಿ ಮೊದಲಿನ ಐದು ರೂಪಗಳಲ್ಲಿ 'ಬ್ರೂ' ಧಾತುವಿಗೆ ಆಹ್ ಎಂದು ಆದೇಶ ಮತ್ತು ಲಟ್ ಪ್ರತ್ಯಯದ ಸ್ಥಾನದಲ್ಲಿ ಲಿಟ್ ಪ್ರತ್ಯಯಗಳ ಆದೇಶ.

ಆಹ ಆಹತುಃ, ಆಹುಃ ಆತ್ಥ ಆಹಥುಃ -ಬ್ರೂಥ, ಬ್ರವೀಮಿ ಬ್ರೂವಃ ಬ್ರೂಮಃ ॥

**ಪ್ರಯೋಗ—** ಭುಜಗೇಶ್ವರಃ ಸಮಜನಿ (ಕರ್ತರಿ) । ಭುಜಗೇಶ್ವರೇಣ ಅಜನಿ (ಭಾವೇ) ಅರಿದರಜನ್ಮ ಅಭೂತ್ (ಕರ್ತರಿ) ಅರಿದರಜನ್ಮನಾ ಅಭಾವಿ (ಭಾವೇ) (ಜನಾಃ) ತಂ ರಾಮನಾಮಕಂ ಆಹುಃ (ಕರ್ತರಿ) । (ಜನ್ಯೈಃ) ಸಃ ರಾಮನಾಮಕಃ ಉಚ್ಯತೇ (ಕರ್ಮಣಿ) ।

★ ★ ★

**ಜನಕೇನ ಸೋಽಥ ವಿರಹಾಸಹಿಷ್ಣುನಾ**
**ಮುಹುರೀಕ್ಷಿತೋ ವನಮನೀಯತ ಪ್ರಭುಃ ।**
**ಚಕಿತೇನ ದುಷ್ಟಜನತಸ್ತಪಸ್ವಿನಾ**
**ತತ ಆಸುರೀಂ ನಿಶಿಚರೀಂ ಜಘಾನ ಸಃ ॥ 21 ॥**

**ಪದಚ್ಛೇದ—** ಜನಕೇನ, ಸಃ, ಅಥ, ವಿರಹಾಸಹಿಷ್ಣುನಾ, ಮುಹುಃ, ಈಕ್ಷಿತಃ, ವನಂ, ಅನೀಯತ, ಪ್ರಭುಃ, ಚಕಿತೇನ, ದುಷ್ಟಜನತಃ, ತಪಸ್ವಿನಾ, ತತಃ, ಆಸುರೀಂ, ನಿಶಿಚರೀಂ, ಜಘಾನ, ಸಃ ।

**ಅನ್ವಯ—** ಅಥ, ವಿರಹಾಸಹಿಷ್ಣುನಾ ಜನಕೇನ ಮುಹುಃ ಈಕ್ಷಿತಃ ಪ್ರಭುಃ ಸಃ, ದುಷ್ಟಜನತಃ ಚಕಿತೇನ ತಪಸ್ವಿನಾ ವನಂ ಅನೀಯತ । ತತಃ ಸಃ ಆಸುರೀಂ ನಿಶಿಚರೀಂ ಜಘಾನ ।

**ಅನ್ವಯಾರ್ಥ—**

ಶ್ರೀರಾಮಾವತಾರ ಪಕ್ಷದಲ್ಲಿ -

**ಅಥ** = ಅನಂತರ
**ವಿರಹಾಸಹಿಷ್ಣುನಾ** = (ಪುತ್ರನ) ಅಗಲುವಿಕೆಯನ್ನು ಸಹಿಸಲಾರದ
**ಜನಕೇನ** = ತಂದೆಯಾದ ದಶರಥನಿಂದ
**ಮುಹುಃ** = ಮತ್ತೂ ಮತ್ತೂ, (ಬಾರಿಬಾರಿಗೂ)
**ಈಕ್ಷಿತಃ** = ನೋಡಲ್ಪಟ್ಟ
**ಪ್ರಭುಃ** = ಸಮರ್ಥನಾದ
**ಸಃ** = ಆ ಶ್ರೀರಾಮನು
**ದುಷ್ಟಜನತಃ** = ಕೆಟ್ಟ ಜನರಾದ ಸುಬಾಹುಮಾರೀಚಾದಿಗಳಿಂದ
**ಚಕಿತೇನ** = ಹೆದರಿದ
**ತಪಸ್ವಿನಾ** = ವಿಶ್ವಾಮಿತ್ರ ಋಷಿಯಿಂದ
**ವನಂ** = ಕಾಡಿಗೆ
**ಅನೀಯತ** = ಒಯ್ಯಲ್ಪಟ್ಟನು
**ತತಃ** = ಅನಂತರ
**ಸಃ** = ಆ ಶ್ರೀರಾಮನು
**ಆಸುರೀಂ** = ರಾಕ್ಷಸವಂಶದಲ್ಲಿ ಜನಿಸಿದ
**ನಿಶಿಚರೀಂ** = ರಾಕ್ಷಸಿಯಾದ ತಾಟಕೆಯನ್ನು
**ಜಘಾನ** = ಕೊಂದನು.

*ಶ್ರೀಕೃಷ್ಣಾವತಾರ ಪಕ್ಷದಲ್ಲಿ -*

**ಅಥ** = ತರುವಾಯ

**ವಿರಹ** = ಪುತ್ರ ವಿರಹವನ್ನು

**ಅಸಹಿಷ್ಣುನಾ** = ಸಹಿಸಲಾರದ

**ಜನಕೇನ** = ತಂದೆಯಾದ ವಸುದೇವನಿಂದ,

**ಮುಹುಃ** = ಬಾರಿಬಾರಿಗೂ

**ಈಕ್ಷಿತಃ** = ನೋಡಲ್ಪಟ್ಟ

**ಪ್ರಭುಃ** = ಸಮರ್ಥನಾದ

**ಸಃ** = ಆ ಶ್ರೀಕೃಷ್ಣನು

**ದುಷ್ಟಜನತಃ** = ದುಷ್ಟನಾದ ಕಂಸನ ದೆಸೆಯಿಂದ

**ಚಕಿತೇನ** = ಹೆದರಿದ

**ತಪಸ್ವಿನಾ** = ಶೋಚನೀಯಾವಸ್ಥೆಯಲ್ಲಿರುವ (ಭಗವಂತನ ಧ್ಯಾನದಲ್ಲಿ ನಿರತನಾದ) ವಸುದೇವನಿಂದ

**ವನಂ** = ನಂದಗೋಪನ ವಾಸಸ್ಥಳವಾದ ಬೃಹದ್ವನಕ್ಕೆ (ಗೋಕುಲಕ್ಕೆ) (ವೃಂದಾವನಕ್ಕೆ)

**ಅನೀಯತ** = ಒಯ್ಯಲ್ಪಟ್ಟನು.

**ತತಃ** = ಅನಂತರ

**ಸಃ** = ಆ ಶ್ರೀಕೃಷ್ಣನು

**ಆಸುರೀಂ** = ಅಸುರಸ್ವಭಾವದ

**ನಿಶಿಚರೀಂ** = ರಾಕ್ಷಸಿಯಾದ ಪೂತನೆಯನ್ನು

**ಜಘಾನ** = ಕೊಂದನು.

**ತಾತ್ಪರ್ಯ— (ಶ್ರೀರಾಮಾವತಾರ)** ಶ್ರೀರಾಮಚಂದ್ರನಿಗೆ ಸುಮಾರು ಹದಿನಾರು ವರ್ಷ ವಯಸ್ಸಾದಾಗ, ವಿಶ್ವಾಮಿತ್ರರೆಂಬ ಋಷಿಗಳು ದಶರಥನ ಬಳಿಗೆ ಬಂದರು. ಸುಬಾಹುಮಾರೀಚಾದಿ ದುಷ್ಟ ರಾಕ್ಷಸರಿಂದ ಭೀತರಾದ ಅವರು ತನ್ನ ಯಜ್ಞ ಸಂರಕ್ಷಣೆಗಾಗಿ ಶ್ರೀರಾಮನನ್ನು ತನ್ನೊಡನೆ ಕಳುಹಿಸಬೇಕೆಂದು ದಶರಥನನ್ನು ಕೇಳಿದರು. ಆಗ ದಶರಥನು ಮಗನ ಅಗಲಿಕೆಯನ್ನು ಸಹಿಸಲಾರದೆ, ವ್ಯಥೆ ಮತ್ತು ಶೋಕದಿಂದ ಮಗನ ಮುಖವನ್ನು ನೋಡುತ್ತಾ, ಬೇರೆ ಉಪಾಯವಿಲ್ಲದೆ ಶ್ರೀರಾಮನನ್ನು ಲಕ್ಷ್ಮಣನ ಜೊತೆಗೆ ವಿಶ್ವಾಮಿತ್ರರಿಗೆ ಒಪ್ಪಿಸಿದನು. ವಿಶ್ವಾಮಿತ್ರರ ಜತೆಯಲ್ಲಿ ವಿಶ್ವಾಮಿತ್ರರ ತಪೋವನದ ಕಾಡಿಗೆ ತೆರಳುತ್ತಾ, ಶ್ರೀರಾಮನು ದಾರಿಯಲ್ಲಿ ತಾಟಕೆಯೆಂಬ ಅಸುರ ಸ್ವಭಾವದ ದುಷ್ಟ ರಾಕ್ಷಸಿಯನ್ನು ಕೊಂದನು.

**ತಾತ್ಪರ್ಯ— (ಶ್ರೀಕೃಷ್ಣಾವತಾರ)** ಶ್ರೀಕೃಷ್ಣನು ಮಥುರೆಯ ಕಾರಾಗೃಹದಲ್ಲಿ ಅವತರಿಸಿದನು. ಆದರೆ ಕಂಸನು ಅವನಿಗೆ ತೊಂದರೆಯುಂಟುಮಾಡಬಹುದೆಂದು ಹೆದರಿದ ವಸುದೇವನು ಶ್ರೀಕೃಷ್ಣನು ಜನಿಸಿದ ಕೂಡಲೇ, ಅವನ ವಿರಹವನ್ನು ಸಹಿಸಲಾರದವನಾಗಿದ್ದರೂ, ಪುನಃ ಪುನಃ ಮಗನ ಮುಖವನ್ನು ನೋಡುತ್ತಾ ಪರಮಾತ್ಮನನ್ನು ಧ್ಯಾನಿಸುತ್ತಾ ಪರಮಾತ್ಮನ ಸಂಕಲ್ಪದಂತೆ ಯಮುನಾ ನದಿಯನ್ನು ದಾಟಿ, ನಂದಗೋಕುಲಕ್ಕೆ ಶ್ರೀಕೃಷ್ಣನನ್ನು ಒಯ್ದು, ಅಲ್ಲಿ ನಂದಗೋಪನ ಮನೆಯಲ್ಲಿಟ್ಟನು. ಅಲ್ಲಿ ಶ್ರೀಕೃಷ್ಣನು ಅತಿಬಾಲ್ಯಾವಸ್ಥೆಯಲ್ಲಿಯೇ, ಕಂಸನು ಕಳುಹಿಸಿದ ಅವನ ದಾದಿಯಾದ, ಪೂತನೆಯೆಂಬ ಅಸುರ ರಾಕ್ಷಸಿಯನ್ನು ಕೊಂದನು.

**ವಿಗ್ರಹ—**

**ವಿರಹಾಸಹಿಷ್ಣುನಾ—** ಸೋಢುಂ ಶೀಲಂ ಅಸ್ತೀತಿ ಸಹಿಷ್ಣುಃ, ನ ಸಹಿಷ್ಣುಃ ಅಸಹಿಷ್ಣುಃ, ವಿರಹಸ್ಯ ಅಸಹಿಷ್ಣುಃ ವಿರಹಾಸಹಿಷ್ಣುಃ, ತೇನ ವಿರಹಾಸಹಿಷ್ಣುನಾ ।

**ದುಷ್ಟಜನತಃ**— ದುಷ್ಟಶ್ಚಾಸೌ ಜನಶ್ಚ ದುಷ್ಟಜನಃ, ದುಷ್ಟಜನಾತ್ ಇತಿ ದುಷ್ಟಜನತಃ ।

**ತಪಸ್ವಿನಾ**— ತಪಃ ಅಸ್ಯ ಅಸ್ತೀತಿ ತಪಸ್ವೀ, ತೇನ ತಪಸ್ವಿನಾ ।

**ಆಸುರೀಂ**— ಅಸುರಾಣಾಂ ಇಯಂ ಆಸುರೀ, ತಾಂ ಆಸುರೀಂ ।

**ನಿಶಿಚರೀಂ**— ನಿಶಿ ಚರತೀ ನಿಶಿಚರೀ, ತಾಂ ನಿಶಿಚರೀಂ ।

**ಕ್ರಿಯಾಪದ**— ಜಘಾನ- ಹನಹಿಂಸಾಗತ್ಯೋಃ ಇತಿ ಹಿಂಸಾಗತ್ಯರ್ಥಕಾತ್ ಹನ್ ಧಾತೋಃ ಪರಸ್ಮೈಪದಿನಃ ದ್ವಿಕರ್ಮಕಾತ್ ಕರ್ತರಿ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ಜಘಾನ'' ಇತಿ ರೂಪಮ್ ।

ಜಘಾನ, ಜಘ್ನತುಃ ಜಘ್ನುಃ ಜಘನಿಥ- ಜಘಂಥ, ಜಘ್ನಥುಃ, ಜಘ್ನ, ಜಘಾನ- ಜಘನ ಜಘ್ನಿವ ಜಘ್ನಿಮ ॥

**ಪ್ರಯೋಗ**— ಸಃ ಪ್ರಭುಃ ಜನಕೇನ ವನಂ ಅನೀಯತ (ಕರ್ಮಣಿ) । ತಂ ಪ್ರಭುಂ ಜನಕಃ ವನಂ ಅನಯತ್ (ಕರ್ತರಿ) । ಸಃ ನಿಶಿಚರೀಂ ಜಘಾನ (ಕರ್ತರಿ) । ತೇನ ನಿಶಿಚರೀ ಜಘ್ನೇ (ಕರ್ಮಣಿ) ।

★ ★ ★

**ಮುನಿಸಪ್ತತಂತುಕೃತವೈರಬಂಧನಂ**
**ಕಟುಕೇಶ್ಯರಿಷ್ಟಪದಮುಖ್ಯದುರ್ಜನಮ್ ।**
**ಕ್ಷಪಯಂತಮುದ್ಯತಸುಬಾಹುಮಾಹವೇ**
**ತಮಥಾಭ್ಯನಂದದಮರಾದಿಸದ್ಗಣಃ ॥ 22 ॥**

**ಪದಚ್ಛೇದ**— ಮುನಿಸಪ್ತತಂತುಕೃತವೈರಬಂಧನಂ, ಕಟುಕೇಶ್ಯರಿಷ್ಟಪದಮುಖ್ಯದುರ್ಜನಂ, ಕ್ಷಪಯಂತಂ, ಉದ್ಯತ-ಸುಬಾಹುಂ, ಆಹವೇ, ತಂ, ಅಥ, ಅಭ್ಯನಂದತ್, ಅಮರಾದಿಸದ್ಗಣಃ ।

**ರಾಮಾವತಾರ ಪಕ್ಷದಲ್ಲಿ -**

**ಅನ್ವಯ**— ಅಥ, ಅಮರಾದಿಸದ್ಗಣಃ, ಮುನಿಸಪ್ತತಂತುಕೃತವೈರಬಂಧನಂ, ಕಟುಕೇಶ್ಯರಿಷ್ಟಪದಮುಖ್ಯದುರ್ಜನಂ ಉದ್ಯತಸುಬಾಹುಂ, ಆಹವೇ ಕ್ಷಪಯಂತಂ ತಂ ಅಭ್ಯನಂದತ್ ।

**ಅನ್ವಯಾರ್ಥ**—

**ಅಥ** = ಬಳಿಕ

**ಅಮರ ಆದಿ ಸದ್ಗಣಃ** = ದೇವತೆಗಳೇ ಮೊದಲಾಗಿ ಉಳ್ಳ ಸಜ್ಜನರ ಸಮೂಹವು,

**ಮುನಿಸಪ್ತತಂತು ಕೃತ ವೈರ ಬಂಧನಂ** = ವಿಶ್ವಾಮಿತ್ರ ಮುನಿಯ ಯಜ್ಞದ ವಿಷಯದಲ್ಲಿ ಮಾಡಲ್ಪಟ್ಟ ದ್ವೇಷದ ಅನುಸಂಧಾನ (ದುರಾಲೋಚನೆ)ವುಳ್ಳ

**ಕಟು** = ಒರಟಾದ

**ಮುಖ್ಯದುರ್ಜನಂ** = ಅತ್ಯಂತ ದುಷ್ಟನಾದ

**ಉದ್ಯತಸುಬಾಹುಂ** = ಯುದ್ಧದಲ್ಲಿ ತೊಡಗಿದ ಸುಬಾಹುವನ್ನು (ಸುಬಾಹುವೆಂಬ ರಾಕ್ಷಸನನ್ನು),

**ಆಹವೇ** = ಯುದ್ಧದಲ್ಲಿ

**ಕ್ಷಪಯಂತಂ** = ನಾಶಗೊಳಿಸುತ್ತಿರುವ

**ತಂ** = ಆ ಶ್ರೀರಾಮಚಂದ್ರನನ್ನು

**ಅಭ್ಯನಂದತ್** = ಶ್ಲಾಘಿಸಿತು.

**ತಾತ್ಪರ್ಯ—** ಸುಬಾಹು ಮಾರೀಚ ಮತ್ತು ಅವರ ಅನುಯಾಯಿಗಳು ಅನೇಕರು ವಿಶ್ವಾಮಿತ್ರ ಮುನಿಯ ಯಜ್ಞದಲ್ಲಿ ದ್ವೇಷ ಉಳ್ಳವರಾಗಿದ್ದರು. ಸುಬಾಹುವು ಒರಟಾದ, ಭಯಂಕರವಾದ ಕೂದಲುಳ್ಳವನಾಗಿ ಯಜ್ಞಕ್ಕೆ ಅನಿಷ್ಟ-ವನ್ನುಂಟುಮಾಡುವ ಮುಖ್ಯ ದುರ್ಜನನಾಗಿದ್ದನು. ಕೈಯನ್ನು ಮೇಲಕ್ಕೆತ್ತಿ ಯಜ್ಞವನ್ನು ಹಾಳು ಮಾಡಲು ಬರುತ್ತಿರುವ ಆ ಸುಬಾಹುವನ್ನು ಶ್ರೀರಾಮನು ಕೊಲ್ಲುತ್ತಿರುವಾಗ, ಆ ಶ್ರೀರಾಮನನ್ನು ಕಂಡು ದೇವತೆಗಳೇ ಮೊದಲಾದ ಸಜ್ಜನರು ಆನಂದ ಪಟ್ಟು ಹೊಗಳಿದರು.

**ಶ್ರೀಕೃಷ್ಣಾವತಾರ ಪಕ್ಷದಲ್ಲಿ-**

**ಅನ್ವಯ—** ಅಥ, ಅಮರಾದಿಸದ್ಗಣಃ ಮುನಿಸಪ್ತತಂತುಕೃತವೈರಬಂಧನಂ, ಕಟುಕೇಶ್ಯರಿಷ್ಟಪದಮುಖ್ಯದುರ್ಜನಂ ಕ್ಷಪಯಂತಂ, ಅಹವೇ ಉದ್ಧೃತಸುಬಾಹುಂ ತಂ ಅಭ್ಯನಂದತ್ ।

**ಅನ್ವಯಾರ್ಥ—**

**ಅಥ** = ತರುವಾಯ

**ಅಮರಾದಿಸದ್ಗಣಃ** = ದೇವತೆಗಳೇ ಮೊದಲಾದ ಸಜ್ಜನರ ಸಮೂಹವು

**ಮುನಿಸಪ್ತ ತಂತು ಕೃತ ವೈರಬಂಧನಂ** = ಜಟಾಧಾರಿಗಳಾದ ಋಷಿಗಳ ಸಂತತಿಯಲ್ಲಿ ಮಾಡಲ್ಪಟ್ಟ ದ್ವೇಷದ ಅನುಸಂಧಾನವುಳ್ಳ

**ಕಟು ಕೇಶಿ ಅರಿಷ್ಟಪದ ಮುಖ್ಯ ದುರ್ಜನಂ** = ಕ್ರೂರರಾದ ಕೇಶಿ ಎಂಬ ಅರಿಷ್ಟ ಎಂಬ ಹೆಸರುಳ್ಳವರೇ ಮೊದಲಾಗಿ ಉಳ್ಳ ದುಷ್ಟ ಜನವನ್ನು

**ಕ್ಷಪಯಂತಂ** = ಕೊಲ್ಲುತ್ತಿರುವ

**ಉದ್ಧೃತ ಸುಬಾಹುಂ** = ಮೇಲಕ್ಕೆತ್ತಿದ ಒಳ್ಳೆಯ ತೋಳುಗಳುಳ್ಳ

**ತಂ** = ಆ ಕೃಷ್ಣನನ್ನು

**ಅಭ್ಯನಂದತ್** = ಹೊಗಳಿತು.

**ತಾತ್ಪರ್ಯ—** ಕೇಶಿ ಮತ್ತು ಅರಿಷ್ಟರೆಂಬ ಮುಖ್ಯರಾದ ದಾನವರು ಕಂಸನ ಅಪ್ಪಣೆಯಿಂದ ಜಟಾಧಾರಿಗಳಾದ ಮುನಿಗಳ ಮಕ್ಕಳನ್ನು ಹಿಂಸಿಸುತ್ತಿದ್ದರು. ಮಹಾ ವೀರನಾದ ಶ್ರೀಕೃಷ್ಣನು ಕೈಯನ್ನೆತ್ತಿ ಹೊಡೆದು ಅಪ್ಪಳಿಸಿ, ಅವರನ್ನು ಕೊಲ್ಲುತ್ತಿರುವಾಗ ದೇವತೆಗಳೇ ಮೊದಲಾದವರು ಶ್ರೀಕೃಷ್ಣನನ್ನು ಅಭಿನಂದಿಸಿದರು.

**ವಿಗ್ರಹ—**

**ಮುನಿಸಪ್ತತಂತುಕೃತವೈರಬಂಧನಂ—** ಮುನೇಃ ಸಪ್ತ ತಂತುಃ ಮುನಿಸಪ್ತತಂತುಃ, ವೈರಸ್ಯ ಬಂಧನಂ ವೈರ-ಬಂಧನಂ, ಮುನಿಸಪ್ತತಂತೌ ಕೃತಂ, ಮುನಿಸಪ್ತತಂತುಕೃತಂ, ಮುನಿಸಪ್ತತಂತುಕೃತಂ ವೈರಬಂಧನಂ ಯೇನ ಸಃ ಮುನಿಸಪ್ತತಂತುಕೃತವೈರಬಂಧನಃ, ತಂ ಮುನಿಸಪ್ತತಂತುಕೃತವೈರಬಂಧನಂ । (ಪ್ತಯಾ ಸಹಿತಃ ಸಪ್ತಃ, ಸಪ್ತಶ್ಚಾಸೌ ತಂತುಶ್ಚ ಸಪ್ತತಂತುಃ (ಪ್ತಾಭಿಃ ಸಹಿತಾಃ ಸಪ್ತಾಃ ತೇ ಚ ತೇ ಮುನಯಶ್ಚ ಮುನಿಸಪ್ತಾಃ ತೇಷಾಂ ತಂತುಃ ಸಂತತಿಃ) ಮುನೀನಾಂ ಸಪ್ತತಂತುಃ ಮುನಿಸಪ್ತತಂತುಃ, ಮುನಿಸಪ್ತ-ತಂತೌ ಪರನಿಪಾತೋಽಯಂ, ಕೃತಂ ವೈರಬಂಧನಂ ಯೇನ ಸಃ ಮುನಿಸಪ್ತತಂತುಕೃತವೈರಬಂಧನಃ, ತಂ ಮುನಿಸಪ್ತತಂತುಕೃತವೈರಬಂಧನಂ) ।

**ಕಟುಕೇಶ್ಯರಿಷ್ಟಪದಮುಖ್ಯದುರ್ಜನಂ—** ಕಟವಶ್ಚ ತೇ ಕೇಶಾಶ್ಚ ಕಟುಕೇಶಾಃ, ಕಟುಕೇಶಾಃ ಅಸ್ಯ ಸಂತೀತಿ ಕಟುಕೇಶೀ, ಅರಿಷ್ಟಸ್ಯ (ಅರಿಷ್ಟಾನಾಂ ವಾ ಪದಂ) ಪದಂ ಅರಿಷ್ಟಪದಂ, ದುಷ್ಟಶ್ಚಾಸೌ ಜನಶ್ಚ ದುರ್ಜನಃ, ಮುಖ್ಯಶ್ಚಾಸೌ ದುರ್ಜನಶ್ಚ ಮುಖ್ಯದುರ್ಜನಃ, ಅರಿಷ್ಟಪದಂ ಚಾಸೌ ಮುಖ್ಯದುರ್ಜನಶ್ಚ

ಅರಿಷ್ಟಪದಮುಖ್ಯದುರ್ಜನಃ, ಕಟುಕೇಶೀ ಚಾಸೌ ಅರಿಷ್ಟಪದಮುಖ್ಯದುರ್ಜನಶ್ಚ ಕಟುಕೇಶ್ವರಿಷ್ಟಪದ-ಮುಖ್ಯದುರ್ಜನಃ, ತಂ ಕಟುಕೇಶ್ಯರಿಷ್ಟಪದಮುಖ್ಯದುರ್ಜನಂ ।

**ಉದ್ಯತಸುಬಾಹುಃ—** ಉದ್ಯತಶ್ಚಾಸೌ ಸುಬಾಹುಶ್ಚ ಉದ್ಯತಸುಬಾಹುಃ, ತಂ ಉದ್ಯತಸುಬಾಹುಂ । (ಶೋಭನೌ ಚ ತೌ ಬಾಹೂ ಚ ಸುಬಾಹೂ, ಉದ್ಗತೌ ಸುಬಾಹೂ ಯಸ್ಯ ಸಃ ಉದ್ಯತಸುಬಾಹುಃ, ತಂ ಉದ್ಯತಸುಬಾಹುಂ) ।

**ಅಮರಾದಿಸದ್ಗಣಃ—** ಅಮರಾಃ ಆದಯಃ ಯಸ್ಯ ಸಃ ಅಮರಾದಿಃ, ಅಮರಾದಿಶ್ಚಾಸೌ ಸದ್ಗಣಶ್ಚ ಅಮರಾದಿಸದ್ಗಣಃ ।

**ಕ್ರಿಯಾಪದ—** **ಅಭ್ಯನಂದತ್**- ''ಅಭಿ'' ಉಪಸರ್ಗಪೂರ್ವಕಾತ್ ಟುನದಿಸಮೃದ್ಧೌ ಇತಿ ಸಮೃದ್ಧ್ಯರ್ಥಕಾತ್ ನಂದ್ ಧಾತೋಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಅಭ್ಯನಂದತ್'' ಇತಿ ರೂಪಮ್ ।

ಅಭಿ- ಅನಂದತ್ ಅನಂದತಾಂ ಅನಂದನ್, ಅನಂದಃ ಅನಂದತಂ ಅನಂದತ, ಅನಂದಂ ಅನಂದಾವ ಅನಂದಾಮ ॥

**ಪ್ರಯೋಗ—** ಅಮರಾದಿ ಸದ್ಗಣಃ ತಂ ಅಭ್ಯನಂದತ್ (ಕರ್ತರಿ) । ಅಮರಾದಿಸದ್ಗಣೇನ ಸಃ ಅಭ್ಯನಂದ್ಯತ (ಕರ್ಮಣಿ) ।

★ ★ ★

**ಸವನೇ ವಿಕಸ್ವರಗುಣಸ್ವರದ್ವಿಜೇ**
**ಸ್ಫುರಿತೇ ಚರನ್ ಸಕಲಗೋಕುಲಪ್ರಿಯಃ ।**
**ಇತಕಾಮತಾಪಸರಸಾರ್ದ್ರಧೀಗಿರಃ**
**ಪ್ರತಿಲಾಲಯನ್ನರಮತೈಷ ಸುಂದರೀ ॥ 23 ॥**

ಪದಚ್ಛೇದ— ಸವನೇ (ಸಃ, ವನೇ), ವಿಕಸ್ವರಗುಣಸ್ವರದ್ವಿಜೇ, ಸ್ಫುರಿತೇ, ಚರನ್, ಸಕಲಗೋಕುಲಪ್ರಿಯಃ, ಇತ-ಕಾಮತಾಪಸರಸಾರ್ದ್ರಧೀಗಿರಃ, ಪ್ರತಿಲಾಲಯನ್, ಅರಮತ, ಏಷಃ, ಸುಂದರೀಃ ।

ಶ್ರೀರಾಮ ಪಕ್ಷದಲ್ಲಿ -

ಅನ್ವಯ— ಸಕಲಗೋಕುಲಪ್ರಿಯಃ ಏಷಃ, ವಿಕಸ್ವರಗುಣಸ್ವದ್ವಿಜೇ, ಸ್ಫುರಿತೇ, ಸವನೇ ಚರನ್ ಸುಂದರೀಃ ಇತ-ಕಾಮತಾಪಸರಸಾರ್ದ್ರಧೀಗಿರಃ, ಪ್ರತಿಲಾಲಯನ್ ಅರಮತ ।

ಅನ್ವಯಾರ್ಥ—

**ಸಕಲಗೋಕುಲಪ್ರಿಯಃ** = ಎಲ್ಲಾ ವೇದಸಮೂಹವು ಪ್ರಿಯವಾಗಿ ಉಳ್ಳ (**ಸಕಲ ಗೋಕುಲ** = ಎಲ್ಲಾ ವೇದ-ಸಮೂಹವುಳ್ಳ, ವಿಶ್ವಾಮಿತ್ರಾದಿಗಳಿಗೆ ಪ್ರೀತಿಪಾತ್ರನಾದ)

**ಏಷಃ** = ಈ ಶ್ರೀರಾಮನು

**ವಿಕಸ್ವರ ಗುಣಸ್ವರ ದ್ವಿಜೇ** = ಪ್ರಕಾಶಮಾನವಾದ ಭಕ್ತ್ಯಾದಿ ಗುಣಗಳು ಉದಾತ್ತಾದಿ ಸ್ವರಗಳೂ, ಇವುಗಳುಳ್ಳ ಬ್ರಾಹ್ಮಣರುಳ್ಳ

**ಸ್ಫುರಿತೇ** = ವಿರಾಜಿಸುತ್ತಿರುವ

**ಸವನೇ** = ಯಜ್ಞದಲ್ಲಿ

**ಚರನ್** = ಸಂಚರಿಸುತ್ತಾ

**ಸುಂದರೀಃ** = ಮನೋಹರವಾದ

**ಇತಕಾಮ ತಾಪಸ ರಸಾರ್ದ್ರಧೀ** = ಇಷ್ಟಾರ್ಥವನ್ನು ಹೊಂದಿರುವ ವಿಶ್ವಾಮಿತ್ರ ಮುನಿಯ ಸ್ನೇಹ-ಪೂರ್ಣವಾದ (ಪ್ರೀತಿಯಿಂದ ಕೂಡಿದ) ಬುದ್ಧಿಯಿಂದ (ಹೇಳಲ್ಪಟ್ಟ)

**ಗಿರಃ** = ಮಾತುಗಳನ್ನು

**ಪ್ರತಿಲಾಲಯನ್** = ಗೌರವಿಸುತ್ತಾ

**ಅರಮತ** = ವಿಹರಿಸಿದನು.

**ತಾತ್ಪರ್ಯ—** ಶ್ರೀರಾಮಚಂದ್ರನು ಸಕಲ ವೇದಸಮೂಹದಲ್ಲಿಯೂ, ವೇದಜ್ಞರಾದ ವಿಶ್ವಾಮಿತ್ರಾದಿಗಳಲ್ಲಿಯೂ ಪ್ರೀತಿಯುಳ್ಳವನು, ಅವನು ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸುವುದಕ್ಕಾಗಿ ಸಿದ್ಧಾಶ್ರಮವೆಂಬ ವಿಶ್ವಾಮಿತ್ರರ ಆಶ್ರಮಕ್ಕೆ ಹೋಗಿದ್ದನು. ಅಲ್ಲಿ ಜ್ಞಾನಭಕ್ತಿವೈರಾಗ್ಯಾದಿ ಗುಣಭರಿತರಾದ ಬ್ರಾಹ್ಮಣರು ಉದಾತ್ತಾದಿ ಸ್ವರಗಳಿಂದ ವೇದಗಳ-ನ್ನುಚ್ಚರಿಸುತ್ತಿದ್ದರು. ಅವರಿಂದ ತುಂಬಿ ಕಂಗೊಳಿಸುವ ಯಜ್ಞದಲ್ಲಿ ಶ್ರೀರಾಮನು ರಕ್ಷಣೆಗಾಗಿ ಸುತ್ತಲೂ ಸಂಚರಿಸುತ್ತಿದ್ದನು. ನಿರ್ವಿಘ್ನವಾಗಿ ಯಜ್ಞವು ಸಮಾಪ್ತಿ ಹೊಂದಿದಾಗ ವಿಶ್ವಾಮಿತ್ರರು ಬಹಳ ಸಂತೋಷಪಟ್ಟು ''ರಾಮ! ಯಜ್ಞವು ಚೆನ್ನಾಗಿಯೇ ಕೊನೆಗೊಂಡಿತು. ಇನ್ನು ಮುಂದೆ ಮಿಥಿಲಾ ಪಟ್ಟಣದಲ್ಲಿ ನಡೆಯುವ ಜಾನಕಿಯ ಸ್ವಯಂವರಕ್ಕೆ ತೆರಳೋಣ'' ಎಂದು ಪ್ರೀತಿಯಿಂದ ನುಡಿದಾಗ, ಶ್ರೀರಾಮನು ಅವರ ಮಾತನ್ನು ಒಪ್ಪಿದನು, ಅವರನ್ನು ಗೌರವಿಸಿದನು.

**ಶ್ರೀಕೃಷ್ಣ ಪಕ್ಷದಲ್ಲಿ -**

**ಅನ್ವಯ—** ಸಕಲಗೋಕುಲಪ್ರಿಯಃ, ಇತಕಾಮತಾಪಸರಸಾರ್ದ್ರಧೀಗಿರಃ, ಸುಂದರೀಃ ಪ್ರತಿಲಾಲಯನ್, ಸಃ ಏಷಃ, ವಿಕಸ್ವರಗುಣಸ್ವರದ್ವಿಜೇ, ಸ್ಫುರಿತೇ ವನೇ, ಚರನ್ ಅರಮತ ।

**ಅನ್ವಯಾರ್ಥ—**

**ಸಕಲ** = ಎಲ್ಲಾ

**ಗೋಕುಲ ಪ್ರಿಯಃ** = ಗೋವುಗಳ ಸಮೂಹಕ್ಕೆ ಇಷ್ಟನಾದ (ಎಲ್ಲಾ ನಂದಗೋಕುಲದ ಜನರಿಗೆ ಇಷ್ಟನಾದ),

**ಇತ ಕಾಮತಾಪ ಸರಸಾರ್ದ್ರಧೀಗಿರಃ** = ಹೊಂದಲ್ಪಟ್ಟ ಮನ್ಮಥತಾಪವುಳ್ಳ ಪ್ರೀತಿಯಿಂದ ಸಹಿತವಾದ ಬುದ್ಧಿ ಮತ್ತು ಮಾತುಗಳುಳ್ಳ

**ಸುಂದರೀಃ** = ಸೌಂದರ್ಯಭರಿತರಾದ ಗೊಲ್ಲತಿಯರನ್ನು

**ಪ್ರತಿಲಾಲಯನ್** = ಸಂತೋಷಪಡಿಸುತ್ತಾ

**ಸಃ ಏಷಃ** = ಅಂತಹ ಈ ಶ್ರೀಕೃಷ್ಣನು

**ವಿಕಸ್ವರ ಗುಣ ಸ್ವರ ದ್ವಿಜೇ** = ಹೆಚ್ಚುತ್ತಿರುವ ಮಾಧುರ್ಯವೆಂಬ ಗುಣವುಳ್ಳ, ಧ್ವನಿಯುಳ್ಳ, ಪಕ್ಷಿಗಳುಳ್ಳ

**ಸ್ಫುರಿತೇ** = ಬೆಳದಿಂಗಳಿನಿಂದ ಪ್ರಕಾಶಿತವಾದ

**ವನೇ** = ವೃಂದಾವನದಲ್ಲಿ

**ಚರನ್** = ಸಂಚರಿಸುತ್ತಾ

**ಅರಮತ** = ಕ್ರೀಡಿಸಿದನು.

**ತಾತ್ಪರ್ಯ—** ಶ್ರೀಕೃಷ್ಣನು ಎಲ್ಲಾ ಗೋಕುಲದ ಜನರಿಗೂ, ಗೋವುಗಳ ಸಮೂಹಕ್ಕೂ ಪ್ರೀತಿಪಾತ್ರನು. ಅವನು ಪಕ್ಷಿಗಳ ಇಂಪಾದ ಧ್ವನಿಯಿಂದ ಮನಸ್ಸನ್ನು ಸೆಳೆಯುವ ವೃಂದಾವನದಲ್ಲಿ ಸಂಚರಿಸಿದನು. ಅಲ್ಲಿ ತನ್ನಲ್ಲಿ ಪರಮ ಭಕ್ತಿಯುಳ್ಳ, ಕೃಷ್ಣನನ್ನು ಪರಬ್ರಹ್ಮನೆಂದೇ ತಿಳಿದಿರುವ ಕಾಮಭಕ್ತಿಯಿಂದ ಪೀಡಿತರಾಗಿ ಪ್ರೀತಿಯ ಮಾತನ್ನಾಡುತ್ತಿದ್ದ

ಸುಂದರಿಯರಾದ ಹಾಗೂ ಚತುರರಾದ ಗೋಪಿಕಾಸ್ತ್ರೀಯರೊಡನೆ ಬೆಳದಿಂಗಳಿನಲ್ಲಿ ಅವರೊಡನೆ ಸರಸಸಲ್ಲಾಪ ಮಾಡುತ್ತಾ ವಿಹರಿಸಿದನು.

ವಿಗ್ರಹ—

**ಸಕಲಗೋಕುಲಪ್ರಿಯಃ—** ಗವಾಂ ಕುಲಂ ಗೋಕುಲಂ, ಸಕಲಂ ಗೋಕುಲಂ ಪ್ರಿಯಂ ಯಸ್ಯ ಸಃ ಸಕಲ-ಗೋಕುಲಪ್ರಿಯಃ । ಸಕಲಂ ಚ ತತ್ ಗೋಕುಲಂ ಚ ಸಕಲಗೋಕುಲಂ । ತಸ್ಯ ಪ್ರಿಯಃ ಸಕಲ-ಗೋಕುಲಪ್ರಿಯಃ, ಸಕಲಂ ಗೋಕುಲಂ ಯೇಷಾಂ ತೇ ಸಕಲ ಗೋಕುಲಾಃ, ಸಕಲಗೋಕುಲಾನಾಂ (ವಿಶ್ವಾಮಿತ್ರಾದಿ ಮುನೀನಾಂ) ಪ್ರಿಯಃ ಸಕಲಗೋಕುಲಪ್ರಿಯಃ ।

**ವಿಕಸ್ವರಗುಣಸ್ವರದ್ವಿಜೇ—** ಗುಣಾಶ್ಚ ಸ್ವರಾಶ್ಚ ಗುಣಸ್ವರಾಃ, ವಿಕಸ್ವರಾಃ ಗುಣಸ್ವರಾಃ ಯೇಷಾಂ ತೇ ವಿಕಸ್ವರ-ಗುಣಸ್ವರಾಃ, ವಿಕಸ್ವರಗುಣಸ್ವರಾಃ ದ್ವಿಜಾಃ ಯಸ್ಮಿನ್ ತತ್ ವಿಕಸ್ವರಗುಣಸ್ವರದ್ವಿಜಂ (ಸವನಂ) ತಸ್ಮಿನ್ ವಿಕಸ್ವರಗುಣಸ್ವರದ್ವಿಜೇ । ವಿಕಸ್ವರಃ ಗುಣಃ ಯಸ್ಯ ಸಃ ವಿಕಸ್ವರಗುಣಃ, ವಿಕಸ್ವರಗುಣಃ ಸ್ವರಃ ಯೇಷಾಂ ತೇ ವಿಕಸ್ವರಗುಣಸ್ವರಾಃ, ವಿಕಸ್ವರಗುಣಸ್ವರಾಃ ದ್ವಿಜಾಃ ಯಸ್ಮಿನ್ ತತ್ ವಿಕಸ್ವರಗುಣಸ್ವರದ್ವಿಜಂ (ವನಂ), ತಸ್ಮಿನ್ ವಿಕಸ್ವರಗುಣಸ್ವರದ್ವಿಜೇ ।

**ಇತಕಾಮತಾಪಸರಸಾರ್ದ್ರಧೀಗಿರಃ—** ಇತಃ ಕಾಮಃ ಯಸ್ಯ ಸಃ ಇತಕಾಮಃ, ಇತಕಾಮಶ್ಚಾಸೌ ತಾಪಸಶ್ಚ ಇತಕಾಮತಾಪಸಃ, ರಸೇನ ಆರ್ದ್ರಾ ರಸಾರ್ದ್ರಾ, ರಸಾರ್ದ್ರಾ ಚ ಸಾ ಧೀಶ್ಚ ರಸಾರ್ದ್ರಧೀಃ, ರಸಾರ್ದ್ರಧಿಯಾ ಗಿರಃ ರಸಾರ್ದ್ರಧೀಗಿರಃ, ಇತಕಾಮತಾಪಸಸ್ಯ ರಸಾರ್ದ್ರಧೀಗಿರಃ ಇತಕಾಮ-ತಾಪಸರಸಾರ್ದ್ರಧೀಗಿರಃ, ತಾಃ ಇತಕಾಮತಾಪಸರಸಾರ್ದ್ರಧೀಗಿರಃ । (ದ್ವಿತೀಯಾ ಬಹು) (ಇತಃ ಕಾಮಃ ಯಾಭಿಃ ತಾಃ ಇತಕಾಮಾಃ, ರಸೇನಾರ್ದ್ರಾಃ ರಸಾರ್ದ್ರಾಃ, ಧಿಯಶ್ಚ ಗಿರಶ್ಚ ಧೀಗಿರಃ, ರಸಾರ್ದ್ರಾಶ್ಚ ತಾಃ ಧೀಗಿರಶ್ಚ ರಸಾರ್ದ್ರಧೀಗಿರಃ, ರಸಾರ್ದ್ರಧೀಗೀರ್ಭಿಃ ಸಹಿತಾಃ ಸರಸಾರ್ದ್ರಧೀಗಿರಃ, ಇತಕಾಮತಾಪಸಶ್ಚ ತಾಃ ಸರಸಾರ್ದ್ರಧೀಗಿರಶ್ಚ ಇತಕಾಮತಾಪಸರಸಾರ್ದ್ರಧೀಗಿರಃ ತಾಃ (ದ್ವಿತೀಯಾ ಬಹು)।

**ಕ್ರಿಯಾಪದ—** ಅರಮತ- ರಮು ಕ್ರೀಡಾಯಾಂ ಇತಿ ಕ್ರೀಡಾರ್ಥಕಾತ್ ರಮ್ ಧಾತೋಃ ಅಕರ್ಮಕಾತ್ ಆತ್ಮನೇ ಪದಿನಃ ಕರ್ತರಿ ಭೂತಾನದ್ಯತನ ಪರೋಕ್ಷೇ ಲಙ್ ಪ್ರಥಮಪುರುಷೇ ಏಕವಚನೇ ''ಅರಮತ'' ಇತಿ ರೂಪಮ್ ।

ಅರಮತ ಅರಮೇತಾಂ ಅರಮಂತ, ಅರಮಥಾಃ ಅರಮೇಥಾಂ ಅರಮಧ್ವಂ, ಅರಮೇ ಅರಮಾವಹಿ ಅರಮಾಮಹಿ ॥

**ಪ್ರಯೋಗ—** ಏಷಃ ಅರಮತ (ಕರ್ತರಿ) ಏತೇನ ಅರಮ್ಯತ (ಭಾವೇ) ।

★ ★ ★

**ಸಹಜಾನ್ವಿತಃ ಸಕಲಮಿತ್ರಸಂಯುತೋ**
**ಮಧುರಾಂ ಪುರೀಂ ಜನಕವಲ್ಲಭಾಂ ಗತಃ ।**
**ಪ್ರವಿಶನ್ನಿಮಾಂ ಸಜಗದೇಕಸುಂದರೋ**
**ನರನಾರ್ಯುದಾರನಯನೋತ್ಸವೋಽಭವತ್ ॥ 24 ॥**

**ಪದಚ್ಛೇದ—** ಸಹಜಾನ್ವಿತಃ, ಸಕಲಮಿತ್ರಸಂಯುತಃ, ಮಧುರಾಂ, ಪುರೀಂ, ಜನಕವಲ್ಲಭಾಂ, ಗತಃ, ಪ್ರವಿಶನ್, ಇಮಾಂ, ಸಃ, ಜಗದೇಕಸುಂದರಃ, ನರನಾರ್ಯುದಾರನಯನೋತ್ಸವಃ, ಅಭವತ್ ।

ಅನ್ವಯ— ಸಹಜಾನ್ವಿತಃ ಸಕಲಮಿತ್ರಸಂಯುತಃ, ಮಧುರಾಂ ಜನಕವಲ್ಲಭಾಂ ಪುರೀಂ ಗತಃ, ಇಮಾಂ ಪ್ರವಿಶನ್ ಜಗದೇಕಸುಂದರಃ ಸಃ, ನರನಾರ್ಯುದಾರನಯನೋತ್ಸವಃ ಅಭವತ್ ।

**ಅನ್ವಯಾರ್ಥ—*(ಶ್ರೀರಾಮಪಕ್ಷದಲ್ಲಿ)***

**ಸಹಜಾನ್ವಿತಃ** = ತಮ್ಮನಾದ ಲಕ್ಷ್ಮಣನಿಂದ ಕೂಡಿದ,
**ಸಕಲಮಿತ್ರಸಂಯುತಃ** = ವಿಶ್ವಾಮಿತ್ರರಿಂದ ಸಹಿತನಾದ ರಾಮನು
**ಮಧುರಾಂ** = ಮನೋಹರವಾದ
**ಜನಕ ವಲ್ಲಭಾಂ** = ಜನಕ ಮಹಾರಾಜನಿಗೆ ಪ್ರಿಯವಾದ
**ಪುರೀಂ** = ಮಿಥಿಲಾ ಪಟ್ಟಣಕ್ಕೆ
**ಗತಃ** = ಹೋದನು.
**ಇಮಾಂ** = ಈ ಪಟ್ಟಣವನ್ನು
**ಪ್ರವಿಶನ್** = ಪ್ರವೇಶ ಮಾಡುತ್ತಿರುವ
**ಜಗದೇಕಸುಂದರಃ** = ಪ್ರಪಂಚದಲ್ಲಿ ಮುಖ್ಯ ಸುಂದರನಾದ
**ಸಃ** = ಆ ರಾಮನು,
**ನರನಾರೀ ಉದಾರ ನಯನ ಉತ್ಸವಃ** = ಗಂಡಸರು ಮತ್ತು ಹೆಂಗಸರ ಉತ್ತಮವಾದ ಕಣ್ಣುಗಳಿಗೆ ಸಂತೋಷ-ವನ್ನುಂಟು ಮಾಡುವವನಾಗಿ
**ಅಭವತ್** = ಆದನು.

**ತಾತ್ಪರ್ಯ—** ತಮ್ಮನಾದ ಲಕ್ಷ್ಮಣನೊಡಗೂಡಿ ಶ್ರೀರಾಮಚಂದ್ರನು ವಿಶ್ವಾಮಿತ್ರರಿಂದ ಸಹಿತನಾಗಿ ಜನಕ ಮಹಾರಾಜನಿಗೆ ಅತ್ಯಂತ ಪ್ರಿಯವಾದ ಸುಂದರವಾದ ಮಿಥಿಲಾನಗರಿಗೆ ಹೋದನು.

**ಅನ್ವಯಾರ್ಥ—*(ಶ್ರೀಕೃಷ್ಣಪಕ್ಷದಲ್ಲಿ )***

**ಸಹಜಾನ್ವಿತಃ** = ಅಣ್ಣನಾದ ಬಲರಾಮನಿಂದ ಸಹಿತನಾಗಿ
**ಸಕಲಮಿತ್ರ ಸಂಯುತಃ** = ಸ್ನೇಹಿತರಾದ ಎಲ್ಲಾ ಗೊಲ್ಲರಿಂದ ಕೂಡಿದ ಶ್ರೀಕೃಷ್ಣನು,
**ಜನಕವಲ್ಲಭಾಂ** = ತಂದೆಯಾದ ವಸುದೇವನಿಗೆ ಪ್ರಿಯವಾದ
**ಮಧುರಾಂ ಪುರೀಂ** = ಮಥುರಾ ಪಟ್ಟಣಕ್ಕೆ
**ಗತಃ** = ಹೋದನು.
**ಇಮಾಂ** = ಈ ಪಟ್ಟಣವನ್ನು
**ಪ್ರವಿಶನ್** = ಪ್ರವೇಶ ಮಾಡುತ್ತಿರುವ
**ಜಗದೇಕಸುಂದರಃ** = ಪ್ರಪಂಚದಲ್ಲಿ ಮುಖ್ಯ ಸುಂದರನಾದ
**ಸಃ** = ಆ ಕೃಷ್ಣನು,
**ನರನಾರೀ ಉದಾರ ನಯನ ಉತ್ಸವಃ** = ಗಂಡಸರು ಮತ್ತು ಹೆಂಗಸರ ವಿಶಾಲವಾದ (ಉತ್ಕೃಷ್ಟವಾದ) ಕಣ್ಣುಗಳಿಗೆ ಆನಂದವನ್ನುಂಟುಮಾಡುವವನಾಗಿ
**ಅಭವತ್** = ಆದನು.

**ತಾತ್ಪರ್ಯ—** ಪ್ರಪಂಚದಲ್ಲಿ ಅತ್ಯಂತ ಸುಂದರನಾದ ಆ ಶ್ರೀಕೃಷ್ಣನು ಮಥುರಾ ನಗರಿಯನ್ನು ಪ್ರವೇಶಿಸಿದಾಗ, ಆ ನಗರಿಯ ಗಂಡಸರೂ ಹೆಂಗಸರೂ ತಮ್ಮ ವಿಶಾಲವಾದ ಹಾಗೂ ಸುಂದರವಾದ ಕಣ್ಣುಗಳಿಂದ ಅವನನ್ನು ನೋಡಿ ಬಹಳ ಸಂತೋಷಪಟ್ಟರು.

ವಿಗ್ರಹ—

**ಸಹಜಾನ್ವಿತಃ**— ಸಹ ಜಾಯತೇ ಇತಿ ಸಹಜಃ, ಸಹಜೇನ ಅನ್ವಿತಃ ಸಹಜಾನ್ವಿತಃ ।

**ಸಕಲಮಿತ್ರಸಂಯುತಃ**— ಸಕಲಾನಾಂ ಮಿತ್ರಂ ಸಕಲಮಿತ್ರಂ, ಸಕಲಮಿತ್ರೇಣ ಸಂಯುತಃ ಸಕಲಮಿತ್ರ-ಸಂಯುತಃ, (ಸಕಲಾನಿ ಚ ತಾನಿ ಮಿತ್ರಾಣಿ ಚ ಸಕಲಮಿತ್ರಾಣಿ, ಸಕಲಮಿತ್ರೈಃ ಸಂಯುತಃ ಸಕಲ-ಮಿತ್ರಸಂಯುತಃ) ।

**ಜನಕವಲ್ಲಭಾಂ**— ಜನಕಸ್ಯ ವಲ್ಲಭಾ ಜನಕವಲ್ಲಭಾ, ತಾಂ ಜನಕವಲ್ಲಭಾಂ ।

**ಜಗದೇಕಸುಂದರಃ**— ಏಕಶ್ಚಾಸೌ ಸುಂದರಶ್ಚ ಏಕಸುಂದರಃ, ಜಗತಿ ಏಕಸುಂದರಃ ಜಗದೇಕಸುಂದರಃ ।

**ನರನಾರ್ಯುದಾರನಯನೋತ್ಸವಃ**— ನರಾಶ್ಚ ನಾರ್ಯಶ್ಚ ನರನಾರ್ಯಃ, ಉದಾರಾಣಿ ಚ ತಾನಿ ನಯನಾನಿ ಚ ಉದಾರನಯನಾನಿ, ನರನಾರೀಣಾಂ ಉದಾರನಯನಾನಿ ನಿರನಾರ್ಯುದಾರ- ನಯನಾನಿ, ನರನಾರ್ಯುದಾರನಯನಾನಾಂ ಉತ್ಸವಃ ನರನಾರ್ಯುದಾರನಯನೋತ್ಸವಃ ।

**ಕ್ರಿಯಾಪದ**— **ಅಭವತ್**- ಭೂಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನಕಾಲೇ ಲಙ್ ಪ್ರಥಮಪುರುಷೇ ಏಕವಚನೇ ''ಅಭವತ್'' ಇತಿರೂಪಮ್ ॥

ಅಭವತ್ ಅಭವತಾಂ ಅಭವನ್, ಅಭವಃ ಅಭವತಂ ಅಭವತ, ಅಭವಂ ಅಭವಾವ ಅಭವಾಮ ॥

ಪ್ರಯೋಗ— ಸಃ ಅಭವತ್ (ಕರ್ತರಿ) । ತೇನ ಅಭೂಯತ (ಕರ್ಮಣಿ)

★ ★ ★

**ಅಥ ಖಂಡಿತೇಶ್ವರಧನುಃ ಸ ಲೀಲಯಾ**
**ಕ್ಷಪಿತೋಗ್ರಸೇನನೃಪಪುತ್ರಪೌರುಷಃ ।**
**ಸಮುಪಾಸ್ಯ ವಿಪ್ರಗುರುಮಬ್ಜಭೂಗುರುಃ**
**ಸ್ವಜನಾನಮೋದಯದಮೇಯತೇಜಸಾ ॥ 25 ॥**

**ಪದಚ್ಛೇದ**— ಅಥ, ಖಂಡಿತೇಶ್ವರಧನುಃ, ಸಃ, ಲೀಲಯಾ, ಕ್ಷಪಿತೋಗ್ರಸೇನನೃಪಪುತ್ರಪೌರುಷಃ, ಸಮುಪಾಸ್ಯ, ವಿಪ್ರಗುರುಂ, ಅಬ್ಜಭೂಗುರುಃ, ಸ್ವಜನಾನ್, ಅಮೋದಯತ್, ಅಮೇಯತೇಜಸಾ ।

**ಅನ್ವಯ**— ಅಥ ಲೀಲಯಾ ಖಂಡಿತೇಶ್ವರಧನುಃ ಕ್ಷಪಿತೋಗ್ರಸೇನನೃಪಪುತ್ರಪೌರುಷಃ ಅಬ್ಜಭೂಗುರುಃ ಸಃ ವಿಪ್ರ-ಗುರುಂ ಸಮುಪಾಸ್ಯ ಅಮೇಯತೇಜಸಾ ಸ್ವಜನಾನ್ ಅಮೋದಯತ್ ।

**ಅನ್ವಯಾರ್ಥ**—ಶ್ರೀರಾಮಪಕ್ಷದಲ್ಲಿ

**ಅಥ** = ನಗರ ಪ್ರವೇಶಾನಂತರದಲ್ಲಿ

**ಲೀಲಯಾ** = ಅನಾಯಾಸದಿಂದ

**ಖಂಡಿತ ಈಶ್ವರಧನುಃ** ಮುರಿಯಲ್ಪಟ್ಟ ಶಿವಧನುಸ್ಸುಳ್ಳ,

**ಕ್ಷಪಿತೋಗ್ರಸೇನ ನೃಪಪುತ್ರ ಪೌರುಷಃ** = ನಾಶಗೊಳಿಸಲ್ಪಟ್ಟ ಭಯಂಕರವಾದ ಸೇನೆಯುಳ್ಳ ರಾಜಕುಮಾರರ ಸಾಮರ್ಥ್ಯವುಳ್ಳ (ಅಹಂಕಾರವುಳ್ಳ)

**ಅಬ್ಜಭೂ ಗುರುಃ** = ಕಮಲದಿಂದ ಉದ್ಭೂತರಾದ ಬ್ರಹ್ಮದೇವರ ತಂದೆಯೂ ಉಪಾಧ್ಯಾಯನೂ ಆದ

**ಸಃ** = ಆ ಶ್ರೀರಾಮನು

**ವಿಪ್ರಗುರುಂ** = ಬ್ರಾಹ್ಮಣ ಶ್ರೇಷ್ಠರಾದ ವಿಶ್ವಾಮಿತ್ರರನ್ನು
**ಸಮುಪಾಸ್ಯ** = ಸಮೀಪದಲ್ಲಿದ್ದು ಸೇವಿಸಿ
**ಅಮೇಯತೇಜಸಾ**= ಅಮಿತವಾದ ಸಾಮರ್ಥ್ಯದಿಂದ
**ಸ್ವಜನಾನ್** = ತನ್ನವರಾದ ಲಕ್ಷ್ಮಣ ಮೊದಲಾದವರನ್ನು
**ಅಮೋದಯತ್** = ಸಂತೋಷಗೊಳಿಸಿದನು.

ತಾತ್ಪರ್ಯ— ಮಿಥಿಲಾನಗರಿಯನ್ನು ಪ್ರವೇಶಿಸಿದ ಅನಂತರ, ಶ್ರೀರಾಮನು ಸೀತಾಸ್ವಯಂವರದ ಪಣವಾಗಿದ್ದ ಶಿವಧನುಸ್ಸನ್ನು ಅನಾಯಾಸವಾಗಿ ಮುರಿದನು. ಇದರಿಂದ ಆ ಶ್ರೀರಾಮನು ದೊಡ್ಡ ಸೇನೆಯನ್ನು ಹೊಂದಿದ್ದ ಮಹಾಬಲಾಢ್ಯರಾದ ಶಿವಧನುಸ್ಸನ್ನು ಎತ್ತಲಾರದಿದ್ದ ರಾಜಕುಮಾರರ ಅಹಂಕಾರವನ್ನು ನಾಶ ಮಾಡಿದಂತಾಯಿತು. ಬ್ರಹ್ಮದೇವರಿಗೂ ಗುರುವಾದ ಆ ಶ್ರೀರಾಮನು ವಿಶ್ವಾಮಿತ್ರರನ್ನು ಗುರುಗಳಂತೆ ಅನುವರ್ತಿಸಿ, ತನ್ನ ಅಪರಿಮಿತ ಪರಾಕ್ರಮದಿಂದ ಲಕ್ಷ್ಮಣನೇ ಮೊದಲಾದ ತನ್ನವರನ್ನೆಲ್ಲಾ ಸಂತೋಷಪಡಿಸಿದನು.

**ಅನ್ವಯಾರ್ಥ—ಶ್ರೀಕೃಷ್ಣಪಕ್ಷದಲ್ಲಿ**

**ಅಥ** = ಮಥುರಾ ಪಟ್ಟಣದ ಪ್ರವೇಶದ ತರುವಾಯ
**ಲೀಲಯಾ** = ಅನಾಯಾಸದಿಂದ
**ಖಂಡಿತ ಈಶ್ವರಧನುಃ** = ತುಂಡು ಮಾಡಲ್ಪಟ್ಟ ಶಿವಧನಸ್ಸುಳ್ಳ
**ಕ್ಷಪಿತೋಗ್ರಸೇನನೃಪ ಪುತ್ರ ಪೌರುಷಃ** = ನಾಶಗೊಳಿಸಲ್ಪಟ್ಟ ಉಗ್ರಸೇನರಾಜನ ಮಗನಾದ ಕಂಸನ ಸಾಮರ್ಥ್ಯವುಳ್ಳ
**ಅಬ್ಜಭೂಗುರುಃ** = ಬ್ರಹ್ಮನ ತಂದೆಯಾದ (ಮತ್ತು ಆಚಾರ್ಯನೂ ಆದ)
**ಸಃ** = ಆ ಶ್ರೀಕೃಷ್ಣನು
**ವಿಪ್ರಗುರುಂ** = ಬ್ರಾಹ್ಮಣ ಗುರುವಾದ ಸಾಂದೀಪನಿಯನ್ನು
**ಸಮುಪಾಸ್ಯ** = ಸೇವಿಸಿ
**ಅಮೇಯತೇಜಸಾ** = ಅಪರಿಮಿತ ಸಾಮರ್ಥ್ಯದಿಂದ
**ಸ್ವಜನಾನ್** = ತನ್ನವರಾದ ವಸುದೇವಾದಿಗಳನ್ನು
**ಅಮೋದಯತ್** = ಸಂತೋಷಪಡಿಸಿದನು.

ತಾತ್ಪರ್ಯ— ಶ್ರೀಕೃಷ್ಣನು ಮಥುರಾನಗರವನ್ನು ಹೊಕ್ಕು ಅನಂತರ, ಕಂಸನ ಆಯುಧ ಶಾಲೆಯನ್ನು ಪ್ರವೇಶಿಸಿ ಅಲ್ಲಿ ಕಂಸನಿಗೆ ಈಶ್ವರನು ಕೊಟ್ಟಿದ್ದ ಧನುಸ್ಸನ್ನು ಲೀಲೆಯಿಂದ ಮುರಿದನು. ಉಗ್ರಸೇನನ ಮಗನಾದ, ತನ್ನ ಸೋದರಮಾವನಾದ ಕಂಸನನ್ನು ಸಂಹರಿಸಿದನು. ಬ್ರಹ್ಮದೇವರಿಗೂ ತಂದೆಯೂ ಗುರುವೂ ಆದ ಸರ್ವಜ್ಞನಾದ ಶ್ರೀಕೃಷ್ಣನು ಸಾಂದೀಪನಿ ಎಂಬ ಬ್ರಾಹ್ಮಣ ಗುರುವನ್ನು ಸ್ವಲ್ಪಸಮಯ ಸೇವಿಸಿ, ಅವರಿಂದ ಎಲ್ಲಾ ವಿದ್ಯೆಗಳನ್ನು ಕಲಿತಂತೆ ತೋರಿಸಿದನು. ಗುರುಗಳಿಗೆ ಅವರ ಮೃತರಾದ ಮಕ್ಕಳನ್ನೇ ಹಿಂತಿರುಗಿ ತಂದೊಪ್ಪಿಸಿ, ತನ್ನ ಅದ್ಭುತವಾದ ಸಾಮರ್ಥ್ಯದಿಂದ ವಸುದೇವನೇ ಮೊದಲಾದ ಬಂಧುಗಳನ್ನು, ಭಕ್ತ ಜನರನ್ನು ಆನಂದಗೊಳಿಸಿದನು.

ವಿಗ್ರಹ—

**ಖಂಡಿತೇಶ್ವರಧನುಃ**— ಈಶ್ವರಸ್ಯ ಧನುಃ ಈಶ್ವರಧನುಃ, ಖಂಡಿತಂ ಈಶ್ವರಧನುಃ ಯೇನ ಸಃ ಖಂಡಿತೇಶ್ವರ-ಧನುಃ ।

**ಕ್ಷಪಿತೋಗ್ರಸೇನನೃಪಪುತ್ರಪೌರುಷಃ**— ಉಗ್ರಾ ಸೇನಾ ಯೇಷಾಂ ತೇ ಉಗ್ರಸೇನಾಃ, ನೃಪಾಣಾಂ ಪುತ್ರಾಃ ನೃಪಪುತ್ರಾಃ, ಉಗ್ರಸೇನಶ್ಚ ತೇ ನೃಪಪುತ್ರಾಶ್ಚ ಉಗ್ರಸೇನನೃಪಪುತ್ರಾಃ, ಉಗ್ರಸೇನನೃಪಪುತ್ರಾಣಾಂ

ಪೌರುಷಂ ಉಗ್ರಸೇನನೃಪಪುತ್ರಪೌರುಷಂ, ಕ್ಷಪಿತಂ ಉಗ್ರಸೇನನೃಪಪುತ್ರಪೌರುಷಂ ಯೇನ ಸಃ ಕ್ಷಪಿತೋಗ್ರಸೇನನೃಪಪುತ್ರಪೌರುಷಃ ।

**ವಿಪ್ರಗುರುಂ—** ವಿಪ್ರಾಣಾಂ ಗುರುಃ ವಿಪ್ರಗುರುಃ, ತಂ ವಿಪ್ರಗುರುಂ ।

**ಅಬ್ಜಭೂಗುರುಃ—** ಅಬ್ಜಾತ್ ಭವತೀತಿ ಅಬ್ಜಭೂಃ, ಅಬ್ಜಭುವಃ ಗುರುಃ ಅಬ್ಜಭೂಗುರುಃ ।

**ಸ್ವಜನಾನ್—** ಸ್ವೇ ಚ ತೇ ಜನಾಶ್ಚ ಸ್ವಜನಾಃ, ತಾನ್ ಸ್ವಜನಾನ್।

**ಅಮೇಯತೇಜಸಾ—** ಮಾತುಂ ಶಕ್ಯಂ ಮೇಯಂ, ನ ಮೇಯಂ ಅಮೇಯಂ, ಅಮೇಯಂ ಚ ತತ್ ತೇಜಶ್ಚ ಅಮೇಯತೇಜಃ, ತೇನ ಅಮೇಯತೇಜಸಾ ।

**ಕ್ರಿಯಾಪದ—** ಮುದ ಹರ್ಷೇ ಇತಿ ಹರ್ಷಾರ್ಥಕಾತ್ ಮುದ್ ಧಾತೋಃ ಣಿಜಂತಾತ್ ಸಕರ್ಮಕಾತ್ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅಮೋದಯತ್ ಇತಿ ರೂಪಮ್ ।

ಅಮೋದಯತ್ ಅಮೋದಯತಾಂ ಅಮೋದಯನ್,
ಅಮೋದಯಃ ಅಮೋದಯತಂ ಅಮೋದಯತ,
ಅಮೋದಯಂ ಅಮೋದಯಾವ ಅಮೋದಯಾಮ ॥

**ಪ್ರಯೋಗ—** ಸಃ ಸ್ವಜನಾನ್ ಅಮೋದಯತ್ (ಕರ್ತರಿ) । ತೇನ ಸ್ವಜನಾಃ ಅಮೋದ್ಯಂತ (ಕರ್ಮಣಿ) । ಪ್ರೇರಣಾರ್ಥೇ ಸಃ ಸ್ವಜನಾನ್ ಅಮೋದಯತ್ । ಅಪ್ರೇರಣಾರ್ಥೇ ಸ್ವಜನಾಃ ಅಮೋದಂತ ।

★ ★ ★

**ಕಮಲಾಮಯಂ ಕಮಲಪತ್ರಲೋಚನಾಂ**
**ಭುವಮಾಗತಾಂ ನೃಪಸುತಾಂ ಗೃಹೀತವಾನ್ ।**
**ನಿಜಲೀಲಯಾ ವಿಜಿತರಾಜಶಾತ್ರವೋ**
**ಮುದಮಾಪದಾಪ್ಯ ಪುರಮಬ್ಧಿದುರ್ಗಮಮ್ ॥ 26 ॥**

**ಪದಚ್ಛೇದ—** ಕಮಲಾಂ, ಅಯಂ, ಕಮಲಪತ್ರಲೋಚನಾಂ, ಭುವಂ, ಆಗತಾಂ, ನೃಪಸುತಾಂ, ಗೃಹೀತವಾನ್, ನೀಜಲೀಲಯಾ, ವಿಜಿತರಾಜಶಾತ್ರವಃ, ಮುದಂ, ಆಪತ್, ಆಪ್ಯ, ಪುರಂ, ಅಬ್ಧಿದುರ್ಗಮಂ ।

**ಅನ್ವಯ—** ಅಯಂ, ಕಮಲಪತ್ರಲೋಚನಾಂ ನೃಪಸುತಾಂ, ಭುವಂ ಆಗತಾಂ ಕಮಲಾಂ ಗೃಹೀತವಾನ್ (ತತಃ), ನಿಜಲೀಲಯಾ ವಿಜಿತರಾಜಶಾತ್ರವಃ ಅಬ್ಧಿದುರ್ಗಮಂ ಪುರಂ ಆಪ್ಯ, ಮುದಂ ಆಪತ್ ।

**ಅನ್ವಯಾರ್ಥ—**ಶ್ರೀರಾಮನ ಪಕ್ಷದಲ್ಲಿ

**ಅಯಂ** = ಈ ಶ್ರೀರಾಮಚಂದ್ರನು
**ಕಮಲಪತ್ರಲೋಚನಾಂ** = ತಾವರೆಯ ದಳದಂತೆ ಕಣ್ಣುಗಳುಳ್ಳ
**ನೃಪಸುತಾಂ** = ಜನಕರಾಜನ ಮಗಳಾದ,
**ಭುವಂ** = ಭೂಮಿಗೆ
**ಆಗತಾಂ** = ಬಂದಿರುವ
**ಕಮಲಾಂ** = ಲಕ್ಷ್ಮೀರೂಪಳಾದ ಸೀತೆಯನ್ನು
**ಗೃಹೀತವಾನ್** = ವಿವಾಹ ವಿಧಿಯಿಂದ ಸ್ವೀಕರಿಸಿದನು, (ತತಃ = ಅನಂತರ)
**ನಿಜನೀಲಯಾ** = ತನ್ನ ಲೀಲೆಯಿಂದ

ವಿಜಿತ ರಾಜಶಾತ್ರವಃ = ಜಯಿಸಲ್ಪಟ್ಟ ಪರಶುರಾಮನುಳ್ಳವನಾಗಿ,

ಅಬ್ಧಿದುರ್ಗಮಂ = ಸಮುದ್ರದಂತೆ (ಶತ್ರುಗಳಿಗೆ) ಪ್ರವೇಶಿಸಲಾಗದ

ಪುರಂ = ಅಯೋಧ್ಯಾನಗರವನ್ನು

ಆಪ್ಯ = ಸೇರಿ,

ಮುದಂ = ಸಂತೋಷವನ್ನು

ಆಪತ್ = ಹೊಂದಿದನು.

ತಾತ್ಪರ್ಯ— ಶ್ರೀರಾಮನು ಭೂಮಿಯಲ್ಲಿ ಅವತರಿಸಿದ ಲಕ್ಷ್ಮೀರೂಪಳಾದ, ಜನಕನ ಪುತ್ರಿಯಾದ ತಾವರೆ ದಳದಂತೆ ಕಣ್ಣುಗಳುಳ್ಳ, ಪರಮ ಸುಂದರಿಯಾದ ಸೀತೆಯನ್ನು ಮದುವೆಯಾದನು. ಅನಂತರ ಅಯೋಧ್ಯೆಗೆ ಹೋಗುತ್ತಾ ದಾರಿಯಲ್ಲಿ ಯುದ್ಧಕ್ಕೆ ಬಂದ ಪರಶುರಾಮನನ್ನು ಅನಾಯಾಸವಾಗಿ ಗೆದ್ದಂತೆ ತೋರಿಸಿ ಸಮುದ್ರದಂತೆ ಶತ್ರುಗಳಿಗೆ ಪ್ರವೇಶಿಸಲು ಅಸಾಧ್ಯವಾದ ಆ ಪರಶುರಾಮನ ದೇಹದಲ್ಲಿ ಬ್ರಹ್ಮನ ವರದಿಂದ ಅವಧ್ಯನಾಗಿ ಪ್ರವೇಶಿಸಿದ ಅತುಲನೆಂಬ ಅಸುರನನ್ನು ಪರಶುರಾಮನ ಸಮ್ಮತಿಯಿಂದ ಸಂಹರಿಸಿದನಂತರ ಅಯೋಧ್ಯೆಯನ್ನು ಸೇರಿ ಸಂತೋಷವಾಗಿದ್ದನು.

ಅನ್ವಯಾರ್ಥ—ಶ್ರೀಕೃಷ್ಣಪಕ್ಷದಲ್ಲಿ

ಅಯಂ = ಈ ಶ್ರೀಕೃಷ್ಣನು

ಕಮಲಪತ್ರಲೋಚನಾಂ = ತಾವರೆದಳದಂತೆ ಕಣ್ಣುಗಳುಳ್ಳ,

ನೃಪಸುತಾಂ = ಭೀಷ್ಮಕರಾಜನ ಮಗಳಾದ,

ಭುವಂ = ಭೂಮಿಗೆ

ಆಗತಾಂ = ಬಂದ

ಕಮಲಾಂ = ಲಕ್ಷ್ಮೀರೂಪಳಾದ ರುಕ್ಮಿಣಿಯನ್ನು

ಗೃಹೀತವಾನ್ = ಬಲಾತ್ಕಾರದಿಂದ ಸ್ವೀಕರಿಸಿದನು.

ನಿಜ ಲೀಲಯಾ = ತನ್ನ ಲೀಲೆಯಿಂದ

ವಿಜಿತ = ಜಯಿಸಲ್ಪಟ್ಟ

ರಾಜ ಶಾತ್ರವಃ = ರುಕ್ಮಿ, ಜರಾಸಂಧ ಮುಂತಾದ ರಾಜರೂಪರಾದ ಶತ್ರುಗಳುಳ್ಳವನಾಗಿ,

ಅಬ್ಧಿದುರ್ಗಮಂ = (ಸುತ್ತಲೂ ಇರುವ) ಸಮುದ್ರದಿಂದ ಪ್ರವೇಶಿಸಲಾಗದ

ಪುರಂ = ದ್ವಾರಕಾಪಟ್ಟಣವನ್ನು

ಆಪ್ಯ = ಸೇರಿ

ಮುದಂ = ಸಂತೋಷವನ್ನು

ಆಪತ್ = ಹೊಂದಿದನು.

ತಾತ್ಪರ್ಯ— ಶ್ರೀಕೃಷ್ಣನು ಭೂಮಿಯಲ್ಲಿ ಅವತರಿಸಿದ, ಭೀಷ್ಮಕನ ಮಗಳಾದ, ಲಕ್ಷ್ಮೀರೂಪಳಾದ ತಾವರೆ ದಳದಂತೆ ಕಣ್ಣುಗಳುಳ್ಳ ಪರಮಸುಂದರಿಯಾದ ರುಕ್ಮಿಣಿಯನ್ನು (ರಾಕ್ಷಸ ವಿವಾಹ) ವಿಧಿಯಿಂದ ಬಲಾತ್ಕಾರದಿಂದ ವರಿಸಿದನು. ಅನಂತರ ದಾರಿಯಲ್ಲಿ ಯುದ್ಧಕ್ಕೆ ಬಂದ ಜರಾಸಂಧ, ರುಕ್ಮಿ ಮೊದಲಾದ ಶತ್ರುಗಳನ್ನು ಜಯಿಸಿ ಸಮುದ್ರ ಮಧ್ಯದಲ್ಲಿರುವ ದುರ್ಗಮವಾದ ದ್ವಾರಕಾ ಪಟ್ಟಣವನ್ನು ಸೇರಿ ಸಂತೋಷಗೊಂಡನು.

ವಿಗ್ರಹ—

**ಕಮಲಪತ್ರಲೋಚನಾಂ—** ಕಮಲಸ್ಯ ಪತ್ರೇ ಕಮಲಪತ್ರೇ, ಕಮಲಪತ್ರೇ ಇವ ಲೋಚನೇ ಯಸ್ಯಾಃ ಸಾ, ಕಮಲಪತ್ರಲೋಚನಾ, ತಾಂ ಕಮಲಪತ್ರಲೋಚನಾಂ ।

**ನೃಪಸುತಾಂ—** ನೃಪಸ್ಯ ಸುತಾ ನೃಪಸುತಾ, ತಾಂ ನೃಪಸುತಾಂ ।

**ನಿಜಲೀಲಯಾ—** ನಿಜಾ ಚ ಸಾ ಲೀಲಾ ಚ ನಿಜಲೀಲಾ, ತಯಾ ನಿಜಲೀಲಯಾ ।

**ವಿಜಿತರಾಜಶಾತ್ರವಃ—** ರಾಜ್ಞಾಂ ಶಾತ್ರವಃ ರಾಜಶಾತ್ರವಃ, ವಿಜಿತಃ ರಾಜಶಾತ್ರವಃ ಯೇನ ಸಃ ವಿಜಿತ-ರಾಜಶಾತ್ರವಃ । (ರಾಜಾನಶ್ಚ ತೇ ಶಾತ್ರವಾಶ್ಚ ರಾಜಶಾತ್ರವಾಃ, ವಿಜಿತಾಃ ರಾಜಶಾತ್ರವಾಃ ಯೇನ ಸಃ ವಿಜಿತರಾಜಶಾತ್ರವಃ) ।

**ಅಬ್ಧಿದುರ್ಗಮಂ—** ದುಃಖೇನ ಗಂತುಂ ಶಕ್ಯಂ ದುರ್ಗಮಂ, ಅಬ್ಧಿವತ್ ದುರ್ಗಮಂ ಅಬ್ಧಿದುರ್ಗಮಂ, ತತ್ ಅಬ್ಧಿದುರ್ಗಮಂ । ( ಅಬ್ಧಿನಾ ದುರ್ಗಮಂ ಅಬ್ಧಿದುರ್ಗಮಂ, ತತ್ ಅಬ್ಧಿದುರ್ಗಮಂ ) ।

**ಕ್ರಿಯಾಪದ— ಆಪತ್-** ಆಪ್ಲೃ ವ್ಯಾಪ್ತೌ ಇತಿ ವ್ಯಾಪ್ತ್ಯರ್ಥಕಾತ್ 'ಆಪ್' ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ''ಆಪತ್'' ಇತಿ ರೂಪಮ್ ।

ಆಪತ್ ಆಪತಾಂ ಆಪನ್, ಆಪಃ ಆಪತಂ ಆಪತ, ಆಪಂ ಆಪಾವ ಆಪಾಮ ॥

ಪ್ರಯೋಗ— ಅಯಂ ಮುದಂ ಆಪತ್ (ಕರ್ತರಿ) । ಅನೇನ ಮುತ್ ಆಪಿ (ಕರ್ಮಣಿ) ।

★ ★ ★

**ಸ ಜಗಾಮ ಮಾತೃಜನತುಷ್ಟಯೇ ಕಿಲ**
**ತ್ವರಿತೋ(ಽ)ವನಂ ವಿದಧದೀಪ್ಸಿತಂ ಸತಾಮ್ ।**
**ಸಹ ಭಾರ್ಯಯಾಪಿ ಶುಭಯಾ ಮಹಾಜಯ-**
**ಧ್ವಜಲಕ್ಷ್ಮಣಾಗ್ರ್ಯಸುಹೃದಾ ವಿನಾ(ಽ)ಮುದಾ ॥ 27 ॥**

**ಪದಚ್ಛೇದ—** ಸಃ, ಜಗಾಮ, ಮಾತೃಜನತುಷ್ಟಯೇ, ಕಿಲ, ತ್ವರಿತಃ, (ಅ) ವನಂ, ವಿದಧತ್, ಈಪ್ಸಿತಂ, ಸತಾಂ, ಸಹ, ಭಾರ್ಯಯಾ, ಅಪಿ, ಶುಭಯಾ, ಮಹಾಜಯಧ್ವಜಲಕ್ಷ್ಮಣಾಗ್ರ್ಯಸುಹೃದಾ (ಮಹಾಜಯಧ್ವಜಲಕ್ಷ್ಮಣಾ, ಅಗ್ರ್ಯಸುಹೃದಾ) ವಿನಾ (ಅ)ಮುದಾ ।

**ಅನ್ವಯ—** ***(ಶ್ರೀರಾಮನ ಪಕ್ಷದಲ್ಲಿ)*** ಸತಾಂ ಈಪ್ಸಿತಂ ವಿದಧತ್ ಸಃ, ಮಾತೃಜನತುಷ್ಟಯೇ ಕಿಲ, ತ್ವರಿತಃ ಶುಭಯಾ ಭಾರ್ಯಯಾ ಅಪಿ, ಮಹಾಜಯಧ್ವಜಲಕ್ಷ್ಮಣಾಗ್ರ್ಯಸುಹೃದಾ ಸಹ, ಅಮುದಾ ವಿನಾ ವನಂ ಜಗಾಮ ।

**ಅನ್ವಯಾರ್ಥ—**

**ಸತಾಂ** = ಸಜ್ಜನರಾದ ಮುನಿಗಳಿಗೆ

**ಈಪ್ಸಿತಂ** = ಇಷ್ಟರಾದ (ರಾವಣ ಸಂಹಾರಾದಿ ಕಾರ್ಯವನ್ನು)

**ವಿದಧತ್** = ಮಾಡುತ್ತಿರುವ (ಮಾಡಲಿರುವ)

**ಸಃ** = ಆ ರಾಮನು

**ಮಾತೃಜನ ತುಷ್ಟಯೇ ಕಿಲ** = ಚಿಕ್ಕ ತಾಯಿಯಾದ ಕೈಕೆಯಿಯ ಸಂತೋಷಕ್ಕಾಗಿಯೋ ಎಂಬಂತೆ (ನಿಜವಾಗಿ ಕೈಕೇಯಿಯ ಸಂತೋಷಕ್ಕಾಗಿ ಮಾತ್ರವಲ್ಲ),

**ತ್ವರಿತಃ** = ವೇಗವುಳ್ಳವನಾಗಿ

**ಶುಭಯಾ** = ಮಂಗಳಕರಳಾದ

**ಭಾರ್ಯಯಾ** = ಪತ್ನಿಯಾದ ಸೀತೆಯಿಂದ

**ಅಪಿ** = ಮತ್ತು

**ಮಹಾಜಯ** = ಉತ್ತಮವಾದ ಜಯದ

**ಧ್ವಜಲಕ್ಷ್ಮಣಅಗ್ರ್ಯಸುಹೃದಾ** = ಧ್ವಜದಂತಿರುವ (ಅಥವಾ ಹೆಚ್ಚಾದ ಜಯವನ್ನುಂಟುಮಾಡುವ ಧ್ವಜ-ಸ್ತಂಭವುಳ್ಳ ಅಥವಾ ಕಾಲುಗಳಲ್ಲಿ ಜಯಸಂಪಾದಕವಾದ ಧ್ವಜರೇಖೆಯುಳ್ಳ), ಲಕ್ಷ್ಮಣನೆಂಬ

**ಸಹ** = ಉತ್ತಮ ಸ್ನೇಹಿತನೊಡನೆಯೂ,

**ಅಮುದಾ ವಿನಾ** = ದುಃಖವಿಲ್ಲದೆ

**ವನಂ** = ಕಾಡಿಗೆ

**ಜಗಾಮ** = ಹೋದನು.

**ತಾತ್ಪರ್ಯ**— ಆ ಶ್ರೀರಾಮನು ಸಜ್ಜನರ ಇಷ್ಟವನ್ನು ನೆರವೇರಿಸುತ್ತಿದ್ದನು. ವಾಸ್ತವವಾಗಿ ಅದಕ್ಕಾಗಿಯೇ ಅವನು ಅವತಾರ ಮಾಡಿದ್ದನು. ಅವನು ತನ್ನ ಚಿಕ್ಕ ತಾಯಿಯಾದ ಕೈಕೇಯಿಯನ್ನು ಸಂತೋಷ ಪಡಿಸುವುದಕ್ಕೆಂದು ತೋರಿಸುತ್ತಾ, ಪತಿವ್ರತೆಯಾದ, ಪರಮಮಂಗಳ ಸ್ವರೂಪಳಾದ ಸೀತೆಯೊಡನೆಯೂ, ಉತ್ತಮ ಮಿತ್ರನೂ, ಶ್ರೇಷ್ಠವಾದ ಜಯಧ್ವಜದಂತೆ ಇರುವವನೂ, ಶ್ರೇಷ್ಠವಾದ ಜಯಸೂಚಕವಾದ ಧ್ವಜವುಳ್ಳವನೂ, ಜಯಸೂಚಕವಾದ ಧ್ವಜಚಿಹ್ನೆಯಿಂದ ಕೂಡಿದ ಅಂಗವುಳ್ಳವನೂ ಆದ ಲಕ್ಷ್ಮಣನೊಡನೆ ಸಾಮ್ರಾಜ್ಯವನ್ನು ತ್ಯಜಿಸಿ ಕಾಡಿಗೆ ಹೋದನು.

**ಅನ್ವಯ**— ***(ಶ್ರೀಕೃಷ್ಣನ ಪಕ್ಷದಲ್ಲಿ)*** ಈಪ್ಸಿತಂ ಸತಾಂ ಅವನಂ ವಿದಧತ್ ಸಃ ಮಾತೃಜನತುಷ್ಟಯೇ, ಶುಭಯಾ ಭಾರ್ಯಯಾ ಅಪಿ, ಅಗ್ರ್ಯಸುಹೃದಾ ಮಹಾಜಯಧ್ವಜಲಕ್ಷ್ಮಣಾ ವಿನಾ ಸಹ, ಮುದಾ ಜಗಾಮ ಕಿಲ ।

**ಅನ್ವಯಾರ್ಥ**—

**ಈಪ್ಸಿತಂ** = ತನಗೆ ಇಷ್ಟವಾದ

**ಸತಾಂ** = ಸಜ್ಜನರಾದ ಋಷಿ ಮೊದಲಾದವರ

**ಅವನಂ** = ರಕ್ಷಣೆಯನ್ನು

**ವಿದಧತ್** = ಮಾಡುತ್ತಿರುವ

**ಸಃ** = ಆ ಶ್ರೀಕೃಷ್ಣನು

**ಮಾತೃಜನತುಷ್ಟಯೇ** = ತಾಯಿಯಾದ ಅದಿತಿ ದೇವಿಯ ಸಂತೋಷಕ್ಕಾಗಿ,

**ಶುಭಯಾ** = ಮಂಗಳಕರಳಾದ (ಪತಿವ್ರತೆಯಾದ)

**ಭಾರ್ಯಯಾ ಅಪಿ ಸಹ** = ಹೆಂಡತಿಯಾದ ಸತ್ಯಭಾಮೆಯಿಂದಲೂ ಕೂಡಿಕೊಂಡು,

**ಅಗ್ರ್ಯಸುಹೃದಾ** = ಉತ್ತಮ ಸ್ನೇಹಿತನಾದ

**ಮಹಾಜಯಧ್ವಜಲಕ್ಷ್ಮಣಾ** = = ಅತಿಶಯವಾದ ಜಯವನ್ನು ಸೂಚಿಸುವ ಧ್ವಜಕ್ಕೆ ಚಿಹ್ನೆಯಾಗಿರುವ

**ವಿನಾ ಸಹ** = ಗರುಡನಿಂದಲೂ ಕೂಡಿಕೊಂಡು,

**ಜಗಾಮ ಕಿಲ** = ಹೋದನಷ್ಟೆ.

**ತಾತ್ಪರ್ಯ**— 'ನರಕ' ಎಂಬ ಮಹಾಸುರನು ಬದರಿಕಾಶ್ರಮವಾಸಿಗಳಾದ ಮುನಿಗಳಿಗೆ ತೊಂದರೆ ಕೊಡುತ್ತಿದ್ದನು. ಆ ನರಕಾಸುರನು ದೇವಮಾತೆಯಾದ ಅದಿತಿದೇವಿಯ ಕುಂಡಲಗಳನ್ನು ಅಪಹರಿಸಿದ್ದನು. ಆಗ ಶ್ರೀಕೃಷ್ಣನು ಇಂದ್ರೋ-

ಪೇಂದ್ರರ ತಾಯಿಯಾದ ಅದಿತಿದೇವಿಗೆ ಕುಂಡಲಗಳನ್ನು ಹಿಂತಿರುಗಿ ತಂದುಕೊಟ್ಟು ಸಂತೋಷಪಡಿಸುವುದಕ್ಕಾಗಿಯೂ, ಋಷಿಗಳನ್ನು ಕಾಪಾಡುವುದಕ್ಕಾಗಿಯೂ ನರಕಾಸುರನ ಪ್ರಾಗ್ಜ್ಯೋತಿಷಪುರಕ್ಕೆ ಹೋದನು. ಅವನ ಜತೆಗೆ ಮಂಗಳ-ಸ್ವರೂಪಿಣಿಯಾದ ಪತಿವ್ರತೆಯಾದ ಸತ್ಯಭಾಮೆಯೂ ಹೋದಳು. ಆ ಶ್ರೀಕೃಷ್ಣನು ತನ್ನ ಅತಿಶಯವಾದ ಜಯಕ್ಕೆ ಸೂಚಕ-ವಾದ ಧ್ವಜದಂತಿರುವ ಗರುಡನನ್ನೇರಿ ಸತ್ಯಭಾಮೆಯನ್ನೂ ಜತೆಯಲ್ಲಿ ಕರೆದುಕೊಂಡು ಹೋದನು.

**ವಿಗ್ರಹ—**

**ಮಾತೃಜನತುಷ್ಟಯೇ—** ಮಾತಾ ಇತಿ ಜನಃ ಮಾತೃಜನಃ, ಮಾತೃಜನಸ್ಯ ತುಷ್ಟಿಃ ಮಾತೃಜನತುಷ್ಟಿಃ, ತಸ್ಯೈ ಮಾತೃಜನತುಷ್ಟಯೇ ।

**ಮಹಾಜಯಧ್ವಜಲಕ್ಷ್ಮಣಾಗ್ರ್ಯಸುಹೃದಾ—** ಮಹಾಂಶ್ಚಾಸೌ ಜಯಶ್ಚ ಮಹಾಜಯಃ, ಮಹಾಜಯಸ್ಯ ಧ್ವಜಃ ಮಹಾಜಯಧ್ವಜಃ ಅಥವಾ ಮಹಾನ್ ಜಯಃ ಯಸ್ಮಾತ್ ಸಃ ಮಹಾಜಯಃ, ಮಹಾಜಯಃ ಧ್ವಜಃ ಯಸ್ಯ ಸಃ ಮಹಾಜಯಧ್ವಜಃ, ಮಹಾಜಯಧ್ವಜಶ್ಚಾಸೌ ಲಕ್ಷ್ಮಣಾಶ್ಚ ಮಹಾಜಯಧ್ವಜಲಕ್ಷ್ಮಣಃ, ಅಗ್ರ್ಯಶ್ಚಾಸೌ ಸುಹೃಚ್ಚ ಅಗ್ರ್ಯಸುಹೃತ್, ಮಹಾಜಯಧ್ವಜಲಕ್ಷ್ಮಣಶ್ಚಾಸೌ ಅಗ್ರ್ಯಸುಹೃಚ್ಚ ಮಹಾಜಯ ಧ್ವಜಲಕ್ಷ್ಮಣಾಗ್ರ್ಯಸುಹೃತ್, ತೇನ (ಅಥವಾ ಮಹಾಂಶ್ಚಾಸೌ ಜಯಶ್ಚ ಮಹಾಜಯಃ, ಮಹಾಜಯಸ್ಯ ಧ್ವಜಃ ಮಹಾಜಯಧ್ವಜಃ, ತಸ್ಯ ಲಕ್ಷ್ಮ ಮಹಾಜಯಧ್ವಜಲಕ್ಷ್ಮ, ತೇನ ಮಹಾಜಯಧ್ವಜಲಕ್ಷ್ಮಣಾ) ।

**ಕ್ರಿಯಾಪದ— ಜಗಾಮ-** ಗಮ್ಲೃ ಗತೌ ಇತಿ ಗತ್ಯರ್ಥಕಾತ್ ಗಮ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಕರ್ತರಿ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ಜಗಾಮ'' ಇತಿ ರೂಪಮ್ ।

ಜಗಾಮ ಜಗ್ಮತುಃ ಜಗ್ಮುಃ, ಜಗಮಿಥ-ಜಗಂಥ ಜಗ್ಮಥುಃ ಜಗ್ಮ, ಜಗಾಮ-ಜಗಮ ಜಗ್ಮಿವ ಜಗ್ಮಿಮ ॥

**ಪ್ರಯೋಗ—** ಸಃ ವನಂ ಜಗಾಮ (ಕರ್ತರಿ) । ತೇನ ವನಂ ಜಗ್ಮೇ (ಕರ್ಮಣಿ) ।

★ ★ ★

**ಸಮತೀತಪರ್ವತಪುರೋಗದುರ್ಗಮಃ**
**ಖರದೂಷಣಾದಿಸುಜನದ್ವಿಷೋ ಬಹೂನ್ ।**
**ಸ ನಿಹತ್ಯ ವಿಶ್ವಭಯದಂ ಸುದುಸ್ಸಹಂ**
**ನರಕಂ ಮಹಾತಮ ಉಪಾನಯತ್ ಕ್ರಮಾತ್ ॥ 28 ॥**

**ಪದಚ್ಛೇದ—** ಸಮತೀತಪರ್ವತಪುರೋಗದುರ್ಗಮಃ, ಖರದೂಷಣಾದಿಸುಜನದ್ವಿಷಃ, ಬಹೂನ್, ಸಃ, ನಿಹತ್ಯ, ವಿಶ್ವಭಯದಂ, ಸುದುಸ್ಸಹಂ, ನರಕಂ, ಮಹಾತಮಃ, ಉಪಾನಯತ್, ಕ್ರಮಾತ್ ।

**ಅನ್ವಯ—** *(ಶ್ರೀರಾಮಪಕ್ಷದಲ್ಲಿ)* ಸಃ, ಸಮತೀತಪರ್ವತಪುರೋಗದುರ್ಗಮಃ, ಬಹೂನ್ ಖರದೂಷಣಾದಿ-ಸುಜನದ್ವಿಷಃ ನಿಹತ್ಯ, ಕ್ರಮಾತ್ ವಿಶ್ವಭಯದಂ, ಸುದುಸ್ಸಹಂ, ಮಹಾತಮಃ ನರಕಂ ಉಪಾನಯತ್ ।

**ಅನ್ವಯಾರ್ಥ—**

**ಸಃ** = ಆ ಶ್ರೀರಾಮನು

**ಸಮತೀತ ಪರ್ವತ ಪುರೋಗ ದುರ್ಗಮಃ** = ದಾಟಲ್ಪಟ್ಟ ಚಿತ್ರಕೂಟ ಮೊದಲಾದ ಪರ್ವತವೇ ಮೊದಲಾಗಿ ಉಳ್ಳ ದುರ್ಗಮ (ಹೋಗಲು ಅಸಾಧ್ಯವಾದ) ಪ್ರದೇಶವುಳ್ಳವನಾಗಿ,

**ಬಹೂನ್** = ಬಹಳ ಮಂದಿ

ಖರ ದೂಷಣ ಆದಿ ಸುಜನದ್ವಿಷಃ = ಖರಾಸುರನು, ದೂಷಣಾಸುರನು, ಮೊದಲಾಗಿ ಉಳ್ಳ ಸಜ್ಜನರ ದ್ವೇಷಿಗಳನ್ನು

ನಿಹತ್ಯ = ಕೊಂದು,

ಕ್ರಮಾತ್ = ಕ್ರಮವಾಗಿ (ಪ್ರಾರಬ್ಧ ಕರ್ಮಭೋಗಾನಂತರದ ಕ್ರಮದಿಂದ)

ವಿಶ್ವ ಭಯದಂ = ಸಮಸ್ತಜನರಿಗೂ ಹೆದರಿಕೆಯನ್ನುಂಟುಮಾಡುವ,

ಸುದುಸ್ಸಹಂ = ಅತ್ಯಂತವಾಗಿ ಸಹಿಸಲು ಸಾಧ್ಯವಾಗದ,

ಮಹಾತಮಃ = ಮಹಾತಮವೆಂಬ

ನರಕಂ = ನಿತ್ಯ ನರಕವನ್ನು

ಉಪಾನಯತ್ = ಹೊಂದಿಸಿದನು.

ತಾತ್ಪರ್ಯ— ಆ ಶ್ರೀರಾಮಚಂದ್ರನು ಚಿತ್ರಕೂಟಾದಿಪರ್ವತಗಳನ್ನು ದಾಟಿ ಹೋದನು. ಅಲ್ಲಿ ಋಷಿಗಳೇ ಮೊದಲಾದ ಸಜ್ಜನರಿಗೆ ಹಿಂಸೆಯನ್ನು ಮಾಡುತ್ತಿದ್ದ ಖರ ಮತ್ತು ದೂಷಣ ಮೊದಲಾದ ರಾಕ್ಷಸರನ್ನು ಕೊಂದನು. ಅವರೆಲ್ಲರೂ ಪ್ರಾರಬ್ಧಕರ್ಮವನ್ನು ಅನುಭವಿಸಿದ ತರುವಾಯ ಎಲ್ಲರಿಗೂ ಭಯವನ್ನುಂಟು ಮಾಡುವ, ಸಹಿಸಲು ಅತ್ಯಂತವಾಗಿ ಅಸಾಧ್ಯವಾದ ಮಹಾತಮವೆಂಬ ನರಕಕ್ಕೆ ಅವರನ್ನು ಕಳುಹಿಸಿದನು.

ವಿಗ್ರಹ—

ಸಮತೀತಪರ್ವತಪುರೋಗದುರ್ಗಮಃ— ಸಮ್ಯಗ್ ಅತೀತಾಃ ಸಮತೀತಾಃ, ಪರ್ವತಃ ಪುರೋಗಃ ಯೇಷಾಂ ತೇ ಪರ್ವತಪುರೋಗಾಃ, ಪರ್ವತಪುರೋಗಾಶ್ಚ ತೇ ದುರ್ಗಮಾಶ್ಚ ಪರ್ವತಪುರೋಗ-ದುರ್ಗಮಾಃ ಸಮತೀತಾಃ ಪರ್ವತ ಪುರೋಗದುರ್ಗಮಾಃ, ಯೇನ ಸಃ ಸಮತೀತಪರ್ವತ-ಪುರೋಗದುರ್ಗಮಃ ।

ಖರದೂಷಣಾದಿಸುಜನದ್ವಿಷಃ— ಖರಶ್ಚ ದೂಷಣಶ್ಚ ಖರದೂಷಣೌ, ಖರದೂಷಣೌ ಆದೀ ಯೇಷಾಂ ತೇ ಖರದೂಷಣಾದಯಃ, ಸುಜನಾನಾಂ ದ್ವಿಷಃ ಸುಜನದ್ವಿಷಃ, ಖರದೂಷಣಾದಯಶ್ಚ ತೇ ಸುಜನದ್ವಿಷಶ್ಚ ಖರದೂಷಣಾದಿಸುಜನದ್ವಿಷಃ, ತಾನ್ ಖರದೂಷಣಾದಿಸುಜನದ್ವಿಷಃ ।

ಅನ್ವಯ—(ಶ್ರೀಕೃಷ್ಣ ಪಕ್ಷದಲ್ಲಿ) ಸಮತೀತಪರ್ವತಪುರೋಗದುರ್ಗಮಃ ಸಃ, ಬಹೂನ್ ಖರದೂಷಣಾದಿ-ಸುಜನದ್ವಿಷಃ, ಕ್ರಮಾತ್ ನರಕಂ ನಿಹತ್ಯ, ವಿಶ್ವಭಯದಂ ಸುದುಸ್ಸಹಂ ಮಹಾತಮಃ ಅನಯತ್ ।

ಅನ್ವಯಾರ್ಥ—

ಸಮತೀತ ಪರ್ವತ ಪುರೋಗ ದುರ್ಗಮಃ =ದಾಟಲ್ಪಟ್ಟ, ಬೆಟ್ಟಗಳೇ ಮೊದಲಾಗಿ ಉಳ್ಳ, ದುರ್ಗಮ (ಹೋಗಲು ಸಾಧ್ಯವಾಗದ) ಪ್ರದೇಶವುಳ್ಳ,

ಸಃ = ಆ ಶ್ರೀಕೃಷ್ಣನು

ಬಹೂನ್ = ಬಹಳ

ಖರ ದೂಷಣ ಆದಿ ಸುಜನ ದ್ವಿಷಃ = ಕಠಿಣವಾದ ವಿಷ್ಣು ವೈಷ್ಣವದ್ವೇಷಾದಿ ದೋಷವುಳ್ಳ. ಮೊದಲೇ ಹುಟ್ಟಿರುವ (ಮೊದಲಿನಿಂದಲೂ ಸಜ್ಜನರ) ದೇವಶತ್ರುಗಳಾದ ಮುರಾದಿ ದೈತ್ಯರನ್ನೂ, (ಆದಿ = ಆದಿ ಕಾಲದ, ಸುಜನದ್ವಿಷಃ = ಸಜ್ಜನ ದ್ವೇಷಿಗಳಾದ ಮುರಾದಿ ದೈತ್ಯರನ್ನು),

ಕ್ರಮಾತ್ = ಕ್ರಮವಾಗಿ

ನರಕಂ = ನರಕಾಸುರನನ್ನೂ

ನಿಹತ್ಯ = ಕೊಂದು,

**ವಿಶ್ವಭಯದಂ** = ಎಲ್ಲರಿಗೂ (ಜಗತ್ತಿಗೆ) ಭಯವನ್ನುಂಟು ಮಾಡುವ

**ಸುದುಸ್ಸಹಂ** = ಸಹಿಸಲು ಅಸಾಧ್ಯವಾದ

**ಮಹಾತಮಃ** = ಅಂಧತಮಸ್ಸನ್ನು

**ಉಪಾನಯತ್** = ಹೊಂದಿಸಿದನು.

**ತಾತ್ಪರ್ಯ—** ನರಕಾಸುರನ ಪಟ್ಟಣದ ಸುತ್ತಲೂ ಪರ್ವತಗಳು, ನೀರು, ಮುರಪಾಶ, ಎಂಬ ಕೋಟೆಗಳು (ಆವರಣ) ಇದ್ದುವು. ಶ್ರೀಕೃಷ್ಣನು ಅವುಗಳನ್ನೆಲ್ಲಾ ದಾಟಿದನು. ಅಲ್ಲಿ ವಿಷ್ಣುದ್ವೇಷ, ವೈಷ್ಣವದ್ರೋಹ ಮೊದಲಾದ ಅನೇಕ ದೋಷಗಳುಳ್ಳ ಮುರ ಮೊದಲಾದವರಿದ್ದರು. ಅವರು ದೇವತೆಗಳಿಗಿಂತಲೂ ಮೊದಲು ಹುಟ್ಟಿದ ಸಜ್ಜನ ದ್ವೇಷಿಗಳಾದ ದೈತ್ಯರು. ಮೊದಲಿನಿಂದಲೂ ಸುಜನ ದ್ವೇಷಿಗಳಾದ ಆ ಮುರಾದಿ ದೈತ್ಯರನ್ನು ಶ್ರೀಕೃಷ್ಣನು ಕೊಂದನು. ಕ್ರಮವಾಗಿ ಮುಂದಕ್ಕೆ ಹೋಗಿ ನರಕಾಸುರನನ್ನು ಕೊಂದನು. ಸಮಸ್ತ ಜನರಿಗೂ ಭಯವನ್ನುಂಟು ಮಾಡುವ, ಸಹಿಸಲು ಅಸಾಧ್ಯವಾದ, ದುಃಖ-ವನ್ನುಂಟು ಮಾಡುವ ಮಹಾತಮ ಎಂಬ ಒಂದು ನಿತ್ಯ ನರಕವಿದೆ. ಅವರೆಲ್ಲರನ್ನೂ ಅಂತಹ ನರಕಕ್ಕೆ ಕಳುಹಿಸಿದನು.

ವಿಗ್ರಹ—

**ಖರದೂಷಣಾದಿಸುಜನದ್ವಿಷಃ—** ಖರಾಣಿ ದೂಷಣಾನಿ ಯೇಷಾಂ ತೇ ಖರದೂಷಣಾಃ, ಸುಶೋಭನಃ ಜನಃ ಯೇಷಾಂ ತೇ ಸುಜನಾಃ, ಆದೌ ಪೂರ್ವಂ ಸುಜನಂ ಯೇಷಾಂ ತೇ ಆದಿಸುಜನಾಃ, ಆದಿಸುಜನಾಶ್ಚ ತೇ ದ್ವಿಷಶ್ಚ ಆದಿಸುಜನದ್ವಿಷಃ, ಅಥವಾ ಸುಜನಾನಾಂ ದ್ವಿಷಃ ಸುಜನದ್ವಿಷಃ, ಆದಯಶ್ಚ ತೇ ಸುಜನ-ದ್ವಿಷಶ್ಚ ಆದಿಸುಜನದ್ವಿಷಃ, ಖರದೂಷಣಾಶ್ಚ ತೇ ಆದಿಸುಜನದ್ವಿಷಶ್ಚ ಖರದೂಷಣಾದಿಸುಜನದ್ವಿಷಃ ।

**ವಿಶ್ವಭಯದಂ—** ಭಯಂ ದದಾತೀತಿ ಭಯದಂ, ವಿಶ್ವೇಷಾಂ ಭಯದಂ । ಅಥವಾ, ವಿಶ್ವಸ್ಯ ಭಯದಂ ವಿಶ್ವಭಯದಂ, ತತ್ ವಿಶ್ವಭಯದಂ ।

**ಸುದುಸ್ಸಹಂ—** ದುಃಖೇನ ಸೋಢುಂ ಶಕ್ಯಂ ದುಸ್ಸಹಂ, ಅತ್ಯಂತಂ ದುಸ್ಸಹಂ ಸುದುಸ್ಸಹಂ, ತತ್ ಸುದುಸ್ಸಹಂ ।

**ಮಹಾತಮಃ—** ಮಹಚ್ಚ ತತ್ ತಮಶ್ಚ ಮಹಾತಮಃ, ತತ್ ಮಹಾತಮಃ ।

**ಕ್ರಿಯಾಪದ—** **ಉಪಾನಯತ್**- 'ಉಪ' ಇತಿ ಉಪಸರ್ಗಪೂರ್ವಕಾತ್ 'ಣೀಞ್ ಪ್ರಾಪಣೇ' ಇತಿ ಪ್ರಾಪಣಾರ್ಥ-ಕಾತ್ ನೀ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಉಪಾನಯತ್'' ಇತಿ ರೂಪಮ್ ।

ಉಪ- ಅನಯತ್ ಅನಯತಾಂ ಅನಯನ್, ಅನಯಃ ಅನಯತಂ ಅನಯತ, ಅನಯಂ ಅನಯಾವ ಅನಯಾಮ ॥

**ಪ್ರಯೋಗ—** ಸಃ ಮಹಾತಮಃ (ತಾನ್) ಉಪಾನಯತ್ (ಕರ್ತರಿ) । ತೇನ ಮಹಾತಮಃ ತೇ ಉಪಾನೀಯಂತ (ಕರ್ಮಣಿ) ।

★ ★ ★

**ರುಚಿರಾಶ್ರಮಾಜಿರಚಿತಾಗ್ರ್ಯತೇಜಸಾ**
**ಪ್ರಿಯಯಾ ಪ್ರಿಯೋ ಭುವನಮಾನ್ಯಯಾ ಸಮಮ್ ।**
**ಭೃಶಮಾಕುಲೀಕೃತಮದಪ್ರಮಾದವ-**
**ತ್ಸುರಪಾರಿಜಾತಹೃದವಾಪ ಧಾಮ ಸಃ ॥ 29 ॥**

**ಪದಚ್ಛೇದ—** ರುಚಿರಾಶ್ರಮಾಜಿರಚಿತಾಗ್ರ್ಯತೇಜಸಾ, ಪ್ರಿಯಯಾ, ಪ್ರಿಯಃ, ಭುವನಮಾನ್ಯಯಾ, ಸಮಂ, ಭೃಶಂ, ಆಕುಲೀಕೃತಮದಪ್ರಮಾದವತ್ಸುರಪಾರಿಜಾತಹೃತ್, ಅವಾಪ, ಧಾಮ, ಸಃ ।

**ಅನ್ವಯ—** ಭೃಶಂ, ಆಕುಲೀಕೃತಮದಪ್ರಮಾದವತ್ಸುರಪಾರಿಜಾತಹೃತ್, ಪ್ರಿಯಃ ಸಃ, ರುಚಿರಾಶ್ರಮಾಜಿರಚಿತಾಗ್ರ್ಯ-ತೇಜಸಾ, ಭುವನಮಾನ್ಯಯಾ ಪ್ರಿಯಯಾ ಸಮಂ, ಧಾಮ ಅವಾಪ ।

**ಅನ್ವಯಾರ್ಥ—***(ಶ್ರೀರಾಮನ ಪರವಾಗಿ)*

**ಭೃಶಂ** = ಬಹಳವಾಗಿ

**ಆಕುಲೀಕೃತಮದಪ್ರಮಾದವತ್ಸುರಪಾರಿಜಾತಹೃತ್** = (ಯುದ್ಧದಲ್ಲಿ ತನ್ನಿಂದ) ವ್ಯಥೆಗೊಳಿಸಲ್ಪಟ್ಟ, (ಐಶ್ವರ್ಯಾದಿಗಳಿಂದ ಉಂಟಾದ) ಅಹಂಕಾರವು (ಕರ್ತವ್ಯ ವಿಷಯದ) ವಿಸ್ಮರಣೆಯೂ ಇವುಗಳುಳ್ಳ ಇಂದ್ರನ ಶತ್ರುಗಳಾದ ಖರ ದೂಷಣಾದಿ ರಾಕ್ಷಸರ ಸಮೂಹವನ್ನು ಅಪಹರಿಸಿದ (ನಾಶಗೊಳಿಸಿದ),

**ಪ್ರಿಯಃ** = ಭಕ್ತ ಪ್ರಿಯನಾದ

**ಸಃ** = ಆ ಶ್ರೀರಾಮನು

**ರುಚಿರಾಶ್ರಮಾಜಿರಚಿತಾಗ್ರ್ಯತೇಜಸಾ** = ಮನೋಹರವಾದ ಪಂಚವಟಿಯ ಆಶ್ರಮದ ಅಂಗಳದಲ್ಲಿ ವ್ಯಾಪ್ತವಾದ, ಉತ್ತಮ ಕಾಂತಿಯುಳ್ಳ,

**ಭುವನಮಾನ್ಯಯಾ** = ಲೋಕಪೂಜ್ಯಳಾದ

**ಪ್ರಿಯಯಾ ಸಮಂ** = ಪತ್ನಿಯಾದ ಸೀತೆಯೊಡನೆ

**ಧಾಮ** = ತೇಜಸ್ಸನ್ನು

**ಅವಾಪ** = ಹೊಂದಿದನು.

**ತಾತ್ಪರ್ಯ—** ಖರ ದೂಷಣಾದಿ ರಾಕ್ಷಸರು ಐಶ್ವರ್ಯದ ಅಹಂಕಾರ ಮತ್ತು ಕರ್ತವ್ಯ ವಿಷಯದ ವಿಸ್ಮರಣೆ, ಪರಮಾತ್ಮ ಮತ್ತು ಅವನ ಭಕ್ತರಲ್ಲಿ ದ್ವೇಷ ಉಳ್ಳವರಾಗಿದ್ದರು. ಇದರಿಂದಾಗಿ ಅವರು ಭಗವಂತನ ಭಕ್ತನಾದ ದೇವೇಂದ್ರನಿಗೆ ಶತ್ರುಗಳಾಗಿದ್ದರು. ಶ್ರೀರಾಮನು ಯುದ್ಧದಲ್ಲಿ ಅವರಿಗೆ ವ್ಯಥೆಯನ್ನುಂಟು ಮಾಡಿ ಅವರನ್ನೆಲ್ಲಾ ಕೊಂದನು. ಮನೋಹರವಾದ ಪಂಚವಟಿಯ ಕುಟೀರದಲ್ಲಿ ಕಾಂತಿಯನ್ನು ಬೀರಿ ಕಂಗೊಳಿಸುತ್ತಿದ್ದ ಲೋಕಪೂಜ್ಯಳಾದ ಸೀತೆಯೊಡನೆ ತಾನೂ ವಿಶೇಷವಾದ ಕಾಂತಿಯಿಂದ ಶ್ರೀರಾಮಚಂದ್ರನು ವಿರಾಜಿಸಿದನು.

**ಅನ್ವಯಾರ್ಥ—***(ಶ್ರೀಕೃಷ್ಣನ ಪರವಾಗಿ)*

**ಭೃಶಂ** = ಅತ್ಯಂತವಾಗಿ

**ಆಕುಲೀಕೃತಮದಪ್ರಮಾದವತ್ಸುರಪಾರಿಜಾತಹೃತ್** = (ಪಾರಿಜಾತ ವೃಕ್ಷಾಪಹಾರದಿಂದ ತನ್ನಿಂದ) ವ್ಯಥೆ-ಗೊಳಿಸಲ್ಪಟ್ಟ ಐಶ್ವರ್ಯದ ಅಹಂಕಾರವೂ, ನಾರಾಯಣನ ವಿಸ್ಮರಣೆಯೆಂಬ ಪ್ರಮಾದವೂ, ಇವು-ಗಳುಳ್ಳ ದೇವತೆಗಳ ಪಾರಿಜಾತ ವೃಕ್ಷವನ್ನು ಅಪಹರಿಸಿದ,

**ಪ್ರಿಯಃ** = ಭಕ್ತರಾದ ದೇವತೆಗಳಲ್ಲಿ ಪ್ರೀತಿಯುಳ್ಳ

**ಸಃ** = ಆ ಕೃಷ್ಣನು

**ರುಚಿರ** = ಮನೋಹರಳಾದ

**ಅಶ್ರಮ** = ಆಯಾಸವಿಲ್ಲದೆ

**ಆಜಿ** = ಯುದ್ಧದಲ್ಲಿ

**ರಚಿತ** = ಮಾಡಲ್ಪಟ್ಟ (ತೋರಿಸಲ್ಪಟ್ಟ)

**ಅಗ್ರ್ಯತೇಜಸಾ** = ಶ್ರೇಷ್ಠವಾದ ಸಾಮರ್ಥ್ಯವುಳ್ಳ (ರುಚಿರ = ಮನೋಹರವಾಗಿ, ಅಶ್ರಮ = ಶ್ರಮವಿಲ್ಲದಿರುವ, ಅಜಿ = ಯುದ್ಧದಲ್ಲಿ, ರಚಿತ = ತೋರಿಸಲ್ಪಟ್ಟ, ಅಗ್ರ್ಯತೇಜಸಾ = ಉತ್ತಮ ಸಾಮರ್ಥ್ಯವುಳ್ಳ)

**ಭುವನಮಾನ್ಯಯಾ** = ಪ್ರಪಂಚದಲ್ಲಿ ಪೂಜ್ಯಳಾದ

**ಪ್ರಿಯಯಾಸಮಂ** = ಸತ್ಯಭಾಮೆಯೊಡನೆ

**ಧಾಮ** = ದ್ವಾರಕಾಪುರವನ್ನು (ದ್ವಾರಕಾಪುರವೆಂಬ ಮನೆಯನ್ನು)

**ಅವಾಪ** = ಹೊಂದಿದನು.

**ತಾತ್ಪರ್ಯ**— ಇಂದ್ರಾದಿ ದೇವತೆಗಳಲ್ಲಿಯೂ ಐಶ್ವರ್ಯದ ಅಹಂಕಾರವು ಮನೆ ಮಾಡಿತ್ತು. ಅಸುರಾವೇಶದಿಂದಾಗಿ ಶ್ರೀಕೃಷ್ಣನು ನಮ್ಮ ಸ್ವಾಮಿ ಎಂಬ ತಿಳುವಳಿಕೆಯು ಅವರಿಂದ ತತ್ಕಾಲದಲ್ಲಿ ದೂರವಾಗಿತ್ತು. ಆಗ ಶ್ರೀಕೃಷ್ಣನು ಅವರ ಹೆಮ್ಮೆಗೆ ಕಾರಣವಾದ ಪಾರಿಜಾತ ವೃಕ್ಷವನ್ನು ಕಿತ್ತು ತಂದು, ಅವರ ಅಹಂಕಾರವನ್ನು ಮುರಿದು ಅವರಿಗೆ ತನ್ನ ಸ್ವರೂಪವನ್ನು ನೆನಪಿಗೆ ತಂದುಕೊಟ್ಟು, ಅವರ ಪ್ರೀತಿಗೆ (ಭಕ್ತಿಗೆ) ವಿಷಯನಾದನು. ಪಾರಿಜಾತ ವೃಕ್ಷವನ್ನು ತರುವ ಸಮಯದಲ್ಲಿ ಮೊದಲು ಭಯಂಕರವಾದ ಯುದ್ಧವು ನಡೆಯಿತು. ಇಂದ್ರನೊಡನೆ ಮಾಡಿದ ಆ ಯುದ್ಧದಲ್ಲಿ ಮನೋಹರಳಾದ ಸತ್ಯಭಾಮಾ ದೇವಿಯು ಆಯಾಸವಿಲ್ಲದೆ ತನ್ನ ಸಾಮರ್ಥ್ಯವನ್ನು ಪ್ರಕಟಗೊಳಿಸಿ ಮನೋಹರವಾದ ಮತ್ತು ತನಗೆ ಅನಾಯಾಸಕರವಾದ ಆ ಯುದ್ಧದಲ್ಲಿ ಭಾಗವಹಿಸಿದಳು. ಅಂತಹ ಲೋಕಪೂಜ್ಯಳಾದ ಸತ್ಯಭಾಮಾದೇವಿಯೊಡನೆ ಶ್ರೀಕೃಷ್ಣನು ಪಾರಿಜಾತ ವೃಕ್ಷವನ್ನು ತೆಗೆದುಕೊಂಡು ಗರುಡಾರೂಢನಾಗಿ ದ್ವಾರಕೆಗೆ ತೆರಳಿದನು.

**ವಿಗ್ರಹ**—

**ಆಕುಲೀಕೃತಮದಪ್ರಮಾದವತ್ಸುರಪಾರಿಜಾತಹೃತ್**— ಅನಾಕುಲಂ ಆಕುಲಂ ಸಂಪದ್ಯಮಾನಂ ಕೃತಂ ಆಕುಲೀಕೃತಂ, ಮದಶ್ಚ ಪ್ರಮಾದಶ್ಚ ಮದಪ್ರಾಮಾದೌ, ಮದಪ್ರಾಮಾದೌ ಅಸ್ಯ ಸ್ತಃ ಇತಿ ಮದಪ್ರಾಮಾದವತ್, ಪಾತೀತಿ ಪಃ, ಸುರಾಣಾಂ ಪಃ ಸುರಪಃ (ಸುರಾನ್ ಪಾತೀತಿ ಸುರಪಃ, ಸುರಪಸ್ಯ ಅರಯಃ ಸುರಪಾರಯಃ, ಸುರಪಾರೀಣಾಂ ಜಾತಂ ಸುರಪಾರಿಜಾತಂ, ಆಕುಲೀಕೃತಂ ಚ ತತ್ ಮದಪ್ರಮಾದವಚ್ಚ ಸುರಪಾರಿಜಾತಂ ಚ, ಆಕುಲೀಕೃತಮದಪ್ರಮಾದವತ್‌ಸುರಪಾರಿಜಾತಂ, ತತ್ ಹರತೀತಿ ಆಕುಲೀಕೃಮದಪ್ರಮಾದವತ್ಸುರಪಾರಿಜಾತಹೃತ್ ।

***(ಶ್ರೀಕೃಷ್ಣಪಕ್ಷದಲ್ಲಿ)*** ಅನಾಕುಲಾಃ ಆಕುಲಾಃ ಸಂಪದ್ಯಮಾನಾಃ ಕೃತಾಃ ಆಕುಲೀಕೃತಾಃ, ಮದಶ್ಚ ಪ್ರಮಾದಶ್ಚ ಮದಪ್ರಮಾದೌ ತೌ ಏವ ಆಸ್ತಃ ಇತಿ ಮದಪ್ರಮಾದವಂತಃ, ಮದಪ್ರಮಾದವಂತಶ್ಚ ತೇ ಸುರಾಶ್ಚ ಮದಪ್ರಮಾದವತ್‌ಸುರಾಃ, ಆಕುಲೀಕೃತಾಶ್ಚ ತೇ ಮದಪ್ರಮಾದವತ್ ಸುರಾಶ್ಚ ಆಕುಲೀಕೃತಮದ-ಪ್ರಮಾದವತ್‌ಸುರಾಃ, ಆಕುಲೀಕೃತಮದಪ್ರಮಾದವತ್ ಸುರಾಣಾಂ ಪಾರಿಜಾತಃ ಆಕುಲೀಕೃತಮದ-ಪ್ರಮಾದವತ್ಸುರಪಾರಿಜಾತಃ, ತಂ ಹರತೀತಿ ಆಕುಲೀಕೃತಮದಪ್ರಮಾದವತ್ಸುರಪಾರಿಜಾತಹೃತ್ ।

**ರುಚಿರಾಶ್ರಮಾಜಿರಚಿತಾಗ್ರ್ಯತೇಜಸಾ**— ರುಚಿರಶ್ಚಾಸೌ ಆಶ್ರಮಶ್ಚ ರುಚಿರಾಶ್ರಮಃ, ರುಚಿರಾಶ್ರಮಸ್ಯ ಆಜಿರಂ ರುಚಿರಾಶ್ರಮಾಜಿರಂ, ರುಚಿರಾಶ್ರಮಾಜಿರೇ ರಚಿತಂ ರುಚಿರಾಶ್ರಮಾಜಿರಚಿತಂ, ಅಗ್ರ್ಯಂ ಚ ತತ್ ತೇಜಶ್ಚ ಅಗ್ರ್ಯತೇಜಃ, ರುಚಿರಾಶ್ರಮಾಜಿರಚಿತಂ ಅಗ್ರ್ಯತೇಜಃ ಯಸ್ಯಾಃ ಸಾ ರುಚಿರಾಶ್ರಮಾಜಿ-ರಚಿತಾಗ್ರ್ಯತೇಜಾಃ, ತಯಾ ರುಚಿರಾಶ್ರಮಾಜಿರಚಿತಾಗ್ರ್ಯತೇಜಸಾ । ನ ವಿದ್ಯತೇ ಶ್ರಮಃ ಯಸ್ಯಾಃ (ಯಸ್ಯಾಂ) ಸಾ ಆಶ್ರಮಾ, ರುಚಿರಾ ಚ ಸಾ ಆಶ್ರಮಾ ಚ ರುಚಿರಾಶ್ರಮಾ, ಆಜೌ ರಚಿತಂ ಆಜಿರಚಿತಂ, ಅಗ್ರ್ಯಂ ತೇಜಃ ಯಯಾ ಸಾ ಅಜಿರಚಿತಾಗ್ರ್ಯತೇಜಾಃ, ರುಚಿರಾಶ್ರಮಾ ಚ ಸಾ ಅಜಿರಚಿತಾಗ್ರ್ಯತೇಜಾಶ್ಚ ರುಚಿರಾಶ್ರಮಾಜಿರಚಿತಾಗ್ರ್ಯತೇಜಾಃ, ತಯಾ (ಅಥವಾ ರುಚಿರಾಶ್ರಮಾ ಚ ಸಾ ಅಜಿಶ್ಚ ರುಚಿರಾಶ್ರಮಾಜಿಃ, ರುಚಿರಾಶ್ರಮಾಜೌ ರಚಿತಂ ಅಗ್ರ್ಯತೇಜಃ ಯಯಾ ಸಾ) ।

**ಭುವನಮಾನ್ಯಯಾ**— ಭುವನೇಷು ಮಾನ್ಯಾ ಭುವನಮಾನ್ಯಾ, ತಯಾ ಭುವನಮಾನ್ಯಯಾ ।

**ಕ್ರಿಯಾಪದ—** ಅವಾಪ- ಆಪ್‌ಲೃ ವ್ಯಾಪ್ತೌ ಲಿಟ್ ಪರ, ಪ್ರಥಮಪುರುಷೇ ಏಕವಚನೇ ''ಅವಾಪ'' ಇತಿ ರೂಪಮ್।
ಅವಾಪ ಅವಾಪತುಃ ಅವಾಪುಃ, ಅವಾಪಿಥ ಅವಾಪಥುಃ ಅವಾಪ, ಅವಾಪ ಅವಾಪಿವ ಅವಾಪಿಮ ॥

**ಪ್ರಯೋಗ—** ಸಃ ಧಾಮ ಆಪ (ಕರ್ತರಿ) ।
ತೇನ ಧಾಮ ಆಪೇ (ಕರ್ಮಣಿ) ।

★ ★ ★

**ಹರಿತಾಮಧೀಶನರದೇವಮಂಡಲಂ**
**ದಶಕಂ ವಿಜಿತ್ಯ ಪರಭೀಷಣಂ ಮುಹುಃ ।**
**ಸ್ಫುರಿತಾಮಿಹ ಪ್ರಿಯತಮಾಂ ನಿಜಶ್ರಿಯಂ**
**ಭಗವಾನುಪೈಕ್ಷತ ಹರಂತಮಪ್ರಿಯಮ್ ॥ 30 ॥**

**ಪದಚ್ಛೇದ—** ಹರಿತಾಂ, ಅಧೀಶನರದೇವಮಂಡಲಂ, ದಶಕಂ, ವಿಜಿತ್ಯ, ಪರಭೀಷಣಂ, ಮುಹುಃ, ಸ್ಫುರಿತಾಂ, ಇಹ, ಪ್ರಿಯತಮಾಂ ನಿಜಶ್ರಿಯಂ, ಭಗವಾನ್, ಉಪೈಕ್ಷತ, ಹರಂತಂ, ಅಪ್ರಿಯಂ ।

**ಅನ್ವಯ—***(ಶ್ರೀರಾಮನ ಪಕ್ಷದಲ್ಲಿ)* ಭಗವಾನ್, ಇಹ ಸ್ಫುರಿತಾಂ, ಪ್ರಿಯತಮಾಂ, ನಿಜಶ್ರಿಯಂ ಹರಂತಂ ಅಪ್ರಿಯಂ, ಹರಿತಾಂ ಅಧೀಶನರದೇವಮಂಡಲಂ, ಮುಹುಃ ವಿಜಿತ್ಯ, ಪರಭೀಷಣಂ, ದಶಕಂ ಉಪೈಕ್ಷತ ।

**ಅನ್ವಯಾರ್ಥ—**

ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀರಾಮನು
ಇಹ = ಪಂಚವಟಿ ಎಂಬ ತನ್ನ ಆವಾಸವಾಗಿದ್ದ ಆಶ್ರಮ ಸ್ಥಳದಲ್ಲಿ
ಸ್ಫುರಿತಾಂ = ಪ್ರಕಾಶಿಸುತ್ತಿರುವ,
ಪ್ರಿಯತಮಾಂ = ಅತ್ಯಂತ ಪ್ರೀತಿ ವಿಷಯಳಾದ
ನಿಜಶ್ರಿಯಂ = ತನ್ನ ಸಂಪತ್ತಿನ ರೂಪಳಾದ ಲಕ್ಷ್ಮೀಸ್ವರೂಪಳಾದ ಸೀತೆಯನ್ನು (ಸೀತಾಕೃತಿಯನ್ನು)
ಹರಂತಂ = ಕದ್ದು ಒಯ್ಯುತ್ತಿರುವ
ಅಪ್ರಿಯಂ = ಶತ್ರುವಾದ,
ಹರಿತಾಂ = ದಿಕ್ಕುಗಳಿಗೆ
ಅಧೀಶ ನರದೇವಮಂಡಲಂ = ಒಡೆಯರಾದ ಮನುಷ್ಯರು, ದೇವತೆಗಳು, ಇವರ ಸಮೂಹವನ್ನು (ದಿಕ್ಕು-ಗಳಿಗೆ ಒಡೆಯರಾದ, ದಿಕ್ಪಾಲಕರ ಮತ್ತು ನರದೇವ = ರಾಜರ, ಮಂಡಲಂ = ಸಮೂಹವನ್ನು)
ಮುಹುಃ = ಬಾರಿಬಾರಿಗೂ
ವಿಜಿತ್ಯ = ಜಯಿಸಿ,
ಪರಭೀಷಣಂ = ಇತರರಿಗೆ (ಶತ್ರುಗಳಿಗೆ) ಭಯಂಕರನಾದ,
ದಶಕಂ = ಹತ್ತು ತಲೆಯುಳ್ಳ ರಾವಣನನ್ನು
ಉಪೈಕ್ಷತ = ಉದಾಸೀನ ಮಾಡಿದನು.

**ತಾತ್ಪರ್ಯ—** ಹತ್ತು ತಲೆಗಳುಳ್ಳ ಲಂಕಾಧಿಪತಿಯಾದ ರಾವಣನು ಅನೇಕ ಬಾರಿ ನಾನಾ ದೇಶದ ರಾಜರನ್ನೂ, ದಿಕ್ಪಾಲಕರನ್ನೂ, ದೇವತೆಗಳನ್ನೂ ಜಯಿಸಿ ಶತ್ರುಭಯಂಕರನಾಗಿದ್ದನು. ಶ್ರೀರಾಮನು ಪಂಚವಟಿಯಲ್ಲಿ ವಾಸಿಸುತ್ತಿದ್ದಾಗ ಅಲ್ಲಿ ತನ್ನೊಡನೆ ವಿರಾಜಿಸುತ್ತಿದ್ದ, ಸಾಕ್ಷಾತ್ ಲಕ್ಷ್ಮೀರೂಪಳಾದ ಸಂಪದಭಿಮಾನಿಯಾದ ಸೀತೆಯನ್ನು (ಸೀತಾದೇವಿಯು

ನಿರ್ಮಿಸಿದ ಅವಳ ಆಕೃತಿಯನ್ನೇ ಸೀತೆಯೆಂದು ತಿಳಿದು) ಸಂನ್ಯಾಸಿ ವೇಷದಿಂದ ಬಂದು, ಶ್ರೀರಾಮ ಲಕ್ಷ್ಮಣರನ್ನು ಮಾಯಾಮೃಗರೂಪಿಯಾದ ಮಾರೀಚನ ಮೂಲಕ ದೂರ ಮಾಡಿ ಕದ್ದೊಯ್ದನು. ಸರ್ವಜ್ಞತಮನಾದ ಶ್ರೀರಾಮ-ಚಂದ್ರನು ಇದೆಲ್ಲವನ್ನೂ ತಿಳಿದಿದ್ದರೂ ಮುಂದೆ ನಡೆಯಬೇಕಾದ ಕಾರ್ಯ ಮತ್ತು ಪ್ರಯೋಜನಗಳ ದೃಷ್ಟಿಯಿಂದ ರಾವಣನನ್ನು ತಡೆಯದೆ ಮತ್ತು ಸಂಹಾರ ಮಾಡದೆ ಉದಾಸೀನ ಮಾಡಿಬಿಟ್ಟನು. ಅಜ್ಞಾನ ಮತ್ತು ಅಶಕ್ತಿಯಿಂದ ರಾವಣನನ್ನು ಉಪೇಕ್ಷೆ ಮಾಡಿದ್ದಲ್ಲ.

**ಅನ್ವಯ—*(ಶ್ರೀಕೃಷ್ಣನ ಪಕ್ಷದಲ್ಲಿ)*** ಭಗವಾನ್, ಹರಿತಾಂ ದಶಕಂ ಮುಹುಃ ವಿಜಿತ್ಯ, ಪರಭೀಷಣಂ ಅಧೀಶ-ನರದೇವಮಂಡಲಂ (ವಿಜಿತ್ಯ), ಇಹ ಸ್ಫುರಿತಾಂ ಪ್ರಿಯತಮಾಂ, ನಿಜಶ್ರಿಯಂ ಹರಂತಂ, ಅಪ್ರಿಯಂ ಉಪೈಕ್ಷತ ।

**ಅನ್ವಯಾರ್ಥ—**

**ಭಗವಾನ್** = ಷಡ್ಗುಣೈಶ್ವರ್ಯಸಂಪನ್ನನಾದ ಪೂಜ್ಯನಾದ ಶ್ರೀಕೃಷ್ಣನು,
**ಹರಿತಾಂ** = ದಿಕ್ಕುಗಳ
**ದಶಕಂ** = ಹತ್ತನ್ನೂ
**ಮುಹುಃ** = ಬಾರಿಬಾರಿಗೂ
**ವಿಜಿತ್ಯ** = ಜಯಿಸಿ
**ಪರಭೀಷಣಂ** = ಶತ್ರುಗಳಿಗೆ ಭಯವನ್ನುಂಟು ಮಾಡುವ,
**ಅಧೀಶ ನರದೇವಮಂಡಲಂ** = ಹೆಚ್ಚು ಐಶ್ವರ್ಯವುಳ್ಳ ರಾಜರ ಸಮೂಹವನ್ನು
**ವಿಜಿತ್ಯ** = ಜಯಿಸಿ,
**ಇಹ** = ಇಂದ್ರಪ್ರಸ್ಥಪಟ್ಟಣದಲ್ಲಿ
**ಸ್ಫುರಿತಾಂ** = ವಿರಾಜಿಸುತ್ತಿರುವ,
**ಪ್ರಿಯತಮಾಂ** = ತನಗೆ ಅತ್ಯಂತ ಪ್ರೀತಿ ವಿಷಯವಾದ
**ನಿಜಶ್ರಿಯಂ** = ತನ್ನವರಾದ ಪಾಂಡವರ ಸಂಪತ್ತನ್ನು
**ಹರಂತಂ** = (ಜೂಜಿನಲ್ಲಿ) ಅಪಹರಿಸುತ್ತಿರುವ,
**ಅಪ್ರಿಯಂ** = ಶತ್ರುವಾದ ದುರ್ಯೋಧನನ್ನು
**ಉಪೈಕ್ಷತ** = ಉಪೈಕ್ಷಿಸಿದನು.

ತಾತ್ಪರ್ಯ— ಭೀಮಸೇನ ಅರ್ಜುನ ಮುಂತಾದ ಪಾಂಡವರು ಹತ್ತು ದಿಕ್ಕುಗಳಲ್ಲಿರುವ ಧನಿಕರಾದ ಶತ್ರುಭಯಂಕರರಾದ ರಾಜರನ್ನು ಗೆದ್ದು ಅವರ ಸಂಪತ್ತನ್ನೆಲ್ಲಾ ಇಂದ್ರಪ್ರಸ್ಥದಲ್ಲಿ ಶೇಖರಿಸಿದ್ದರು. ರಾಜಸೂಯಯಾಗದಲ್ಲಿ ವಿರಾಜಿಸುತ್ತಿದ್ದ ಆ ಅಧಿಕೈಶ್ವರ್ಯವನ್ನು ಕಂಡು ಕಪಟಿಯಾದ ದುರ್ಯೋಧನನು ಕಪಟದ ಜೂಜಿನಲ್ಲಿ ಅವರ ಐಶ್ವರ್ಯವನ್ನು ಅಪಹರಿಸಿದನು. ಇದೆಲ್ಲವನ್ನೂ ತಿಳಿದಿದ್ದರೂ ಮುಂದೆ ಆಗಬೇಕಾದ ಪ್ರಯೋಜನದ ದೃಷ್ಟಿಯಿಂದ ಆ ಶ್ರೀಕೃಷ್ಣನು ತನ್ನವರಾದ ಪಾಂಡವರ ಸಂಪತ್ತು ತನಗೂ ಅತ್ಯಂತ ಪ್ರೀತಿವಿಷಯವಾಗಿದ್ದರೂ ಅದನ್ನು ಅಪಹರಿಸುತ್ತಿರುವ ತನಗೂ ಶತ್ರುವಾದ ದುರ್ಯೋಧನನ್ನು ಉಪೇಕ್ಷಿಸಿದನು.

**ವಿಶೇಷಾಂಶ** - ತನ್ನ ಭಕ್ತರು ಹೆಚ್ಚು ಸಂಪತ್ತನ್ನು ತನ್ನ ಸೇವೆಗೆ, ತನ್ನ ಭಕ್ತರ ಸೇವೆಗೆ ವಿನಿಯೋಗಿಸುತ್ತಾ, ತಾವೂ ಅನುಭವಿಸುತ್ತಿರುವುದು ಪರಮಾತ್ಮನಿಗೆ ಬಹಳ ಪ್ರೀತಿಕರ. 'ತದ್ಭೋಗೋಽಪ್ಯತೀವ ಹರಿತೋಷಣಂ' ತಾನು ಕೊಟ್ಟ ಸಂಪತ್ತನ್ನು ಭಕ್ತರು ಭೋಗಿಸುತ್ತಿರುವುದು ಪರಮಾತ್ಮನಿಗೆ ಅತ್ಯಂತ ಪ್ರೀತಿಕರ ಎಂದು ಪ್ರಮಾಣವಾಕ್ಯವಿದೆ.

ವಿಗ್ರಹ—

**ಅಧೀಶನರದೇವಮಂಡಲಂ**— ನರಾಶ್ಚ ದೇವಾಶ್ಚ ನರದೇವಾಃ, ಅಧೀಶಾಶ್ಚ ತೇ ನರದೇವಾಶ್ಚ ಅಧೀಶ-ನರದೇವಾಃ ಅಥವಾ ನರಾಣಾಂ ದೇವಾಃ ನರದೇವಾಃ, ಅಧೀಶಾಶ್ಚ ತೇ ನರದೇವಾಶ್ಚ ಅಧೀಶನರ-ದೇವಾಃ, ಅಧೀಶನರದೇವಾನಾಂ ಮಂಡಲಂ ಅಧೀಶನರದೇವಮಂಡಲಂ, ತತ್ ಅಧೀಶನರದೇವ-ಮಂಡಲಂ ।

**ದಶಕಂ**— ದಶ ಕಾನಿ ಯಸ್ಯ ಸಃ ದಶಕಃ, ತಂ ದಶಕಂ । ದಶಾನಾಂ ಸಮೂಹಃ ದಶಕಂ, ತತ್ ದಶಕಂ ।

**ಪರಭೀಷಣಂ**— ಪರೇಷಾಂ (ಪರಾಣಾಂ ವಾ) ಭೀಷಣಃ ಪರಭೀಷಣಃ, ತಂ ಪರಭೀಷಣಂ ।

**ಪ್ರಿಯತಮಾಂ**— ಅತಿಶಯೇನ ಪ್ರಿಯಾ ಪ್ರಿಯತಮಾ, ತಾಂ ಪ್ರಿಯತಮಾಂ ।

**ನಿಜಶ್ರಿಯಂ**— ನಿಜಾ ಚ ಸಾ ಶ್ರೀಶ್ಚ ನಿಜಶ್ರೀಃ, ತಾಂ ನಿಜಶ್ರಿಯಂ । (ನಿಜಾನಾಂ ಶ್ರೀಃ ನಿಜಶ್ರೀಃ, ತಾಂ ನಿಜಶ್ರಿಯಂ) ।

**ಭಗವಾನ್**— ಭಗಃ ಅಸ್ಯ ಅಸ್ತೀತಿ ಭಗವಾನ್ ।

**ಅಪ್ರಿಯಂ**— ನ ಪ್ರಿಯಃ ಅಪ್ರಿಯಃ, ತಂ ಅಪ್ರಿಯಂ ।

**ಕ್ರಿಯಾಪದ— ಉಪೈಕ್ಷತ**- 'ಉಪ' ಇತ್ಯುಪಸರ್ಗಪೂರ್ವಕಾತ್, ದರ್ಶನಾರ್ಥಕಾತ್ ಈಕ್ಷ ದರ್ಶನೇ ಇತಿಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಐಕ್ಷತ ಇತಿ ರೂಪಮ್ ।

(ಉಪ- ಐಕ್ಷತ ಐಕ್ಷೇತಾಂ ಐಕ್ಷಂತ, ಐಕ್ಷಥಾಃ ಐಕ್ಷೇಥಾಂ ಐಕ್ಷಧ್ವಂ, ಐಕ್ಷೇ ಐಕ್ಷಾವಹಿ ಐಕ್ಷಾಮಹಿ ॥

ಪ್ರಯೋಗ— ಭಗವಾನ್ ಅಪ್ರಿಯಂ ಉಪೈಕ್ಷತ (ಕರ್ತರಿ) ಭಗವತಾ ಅಪ್ರಿಯಃ ಉಪೈಕ್ಷ್ಯತ (ಕರ್ಮಣಿ) ।

★ ★ ★

**ಅಭಿವಂದಿತಃ ಪವನನಂದನಾದಿಭಿಃ ಸ ಕದಾಚಿದಿಂದ್ರಸುತವರ್ಧಕೋ ಗವಾ ।**
**ನಿಜರಾಜ್ಯಮಾತ್ಮದಯಿತಾಯ ದತ್ತವಾನ್ ಹರಿಸೂನವೇ ಹತವಿಪಕ್ಷಮುತ್ತಮಮ್ ॥ 31 ॥**

ಪದಚ್ಛೇದ— ಅಭಿವಂದಿತಃ, ಪವನನಂದನಾದಿಭಿಃ, ಸಃ, ಕದಾಚಿತ್, ಇಂದ್ರಸುತವರ್ಧಕಃ, ಗವಾ, ನಿಜರಾಜ್ಯಂ, ಆತ್ಮದಯಿತಾಯ, ದತ್ತವಾನ್, ಹರಿಸೂನವೇ, ಹತವಿಪಕ್ಷಂ, ಉತ್ತಮಂ ।

ಅನ್ವಯ— ಪವನನಂದನಾದಿಭಿಃ ಅಭಿವಂದಿತಃ ಸಃ, ಕದಾಚಿತ್ ಗವಾ ಇಂದ್ರಸುತವರ್ಧಕಃ, ಆತ್ಮದಯಿತಾಯ ಹರಿಸೂನವೇ, ಹತವಿಪಕ್ಷಂ ಉತ್ತಮಂ, ನಿಜರಾಜ್ಯಂ ದತ್ತವಾನ್ ।

ಅನ್ವಯಾರ್ಥ— *(ಶ್ರೀರಾಮನ ಪಕ್ಷದಲ್ಲಿ)*

**ಪವನನಂದನಾದಿಭಿಃ** = ಮುಖ್ಯಪ್ರಾಣಾವತಾರನಾದ ಹನುಮಂತನೇ ಮೊದಲಾದ ವಾನರರಿಂದ

**ಅಭಿವಂದಿತಃ** = (ಋಷ್ಯಮೂಕ ಪರ್ವತದಲ್ಲಿ) ನಮಸ್ಕರಿಸಲ್ಪಟ್ಟ

**ಸಃ** = ಆ ಶ್ರೀರಾಮನು

**ಕದಾಚಿತ್** = ಒಂದಾನೊಂದು ಸಲ,

**ಗವಾ** = ಬಾಣದಿಂದ

**ಇಂದ್ರಸುತವರ್ಧಕಃ** = ಇಂದ್ರನ ಮಗನಾದ ವಾಲಿಯನ್ನು ಕತ್ತರಿಸಿದವನಾಗಿ,

**ಆತ್ಮದಯಿತಾಯ** = ತನಗೆ ಪ್ರಿಯನಾದ

**ಹರಿಸೂನವೇ** = ಸೂರ್ಯನ ಮಗನಾದ ಸುಗ್ರೀವನಿಗೆ,

**ಹತವಿಪಕ್ಷಂ** = ಕೊಲ್ಲಲ್ಪಟ್ಟ ಶತ್ರುವುಳ್ಳ
**ಉತ್ತಮಂ** = ಶ್ರೇಷ್ಠವಾದ,
**ನಿಜರಾಜ್ಯಂ** = ಅವನದೇ ಆದ ವಾನರ ರಾಜ್ಯವನ್ನು
**ದತ್ತವಾನ್** = ಕೊಟ್ಟನು.

**ತಾತ್ಪರ್ಯ—** ಶ್ರೀರಾಮನು ಸೀತೆಯನ್ನು ಹುಡುಕುತ್ತಿರುವವನಂತೆ, ಋಷ್ಯಮೂಕ ಪರ್ವತದ ಹತ್ತಿರ ಹೋದನು. ಅಲ್ಲಿ ಮುಖ್ಯಪ್ರಾಣಾವತಾರನಾದ ಹನುಮಂತನೇ ಮೊದಲಾದವರು ಶ್ರೀರಾಮನನ್ನು ನಮಸ್ಕರಿಸಿದರು. ಅನಂತರ ಹನುಮಂತನ ಪ್ರಾರ್ಥನೆಯಂತೆ ಸುಗ್ರೀವನೊಡನೆ ಸ್ನೇಹ ಬೆಳೆಸಿದ ಶ್ರೀರಾಮನು ಸುಗ್ರೀವನ ಶತ್ರುವಾದ, ಇಂದ್ರಾಂಶ ಸಂಭೂತನಾದ ವಾಲಿಯನ್ನು ಒಂದೇ ಬಾಣದಿಂದ ಕೊಂದನು. ಹೀಗೆ ನಿಷ್ಕಂಟಕವಾದ ಕಿಷ್ಕಿಂಧೆಯ ವಾನರ ರಾಜ್ಯವನ್ನು ತನ್ನ ಪ್ರೀತಿಪಾತ್ರನಾದ ಸೂರ್ಯಪುತ್ರನಾದ ಸುಗ್ರೀವನಿಗೆ ಕೊಟ್ಟನು.

**ಅನ್ವಯಾರ್ಥ—** ***(ಶ್ರೀಕೃಷ್ಣನ ಪಕ್ಷದಲ್ಲಿ)***

**ಪವನಂದನಾದಿಭಿಃ** = ವಾಯುಪುತ್ರನಾದ ಭೀಮಸೇನನೇ ಮೊದಲಾದವರಿಂದ
**ಅಭಿವಂದಿತಃ** = ನಮಸ್ಕರಿಸಲ್ಪಟ್ಟ
**ಸಃ** = ಆ ಶ್ರೀಕೃಷ್ಣನು
**ಕದಾಚಿತ್** = ಒಂದಾನೊಂದು ಸಮಯದಲ್ಲಿ (ಯುದ್ಧಾರಂಭ ಸಮಯದಲ್ಲಿ),
**ಗವಾ** = ಗೀತಾವಾಕ್ಯದಿಂದ
**ಇಂದ್ರಸುತವರ್ಧಕಃ** = ಇಂದ್ರಪುತ್ರನಾದ ಅರ್ಜುನನ ಉತ್ಸಾಹವನ್ನು ಹೆಚ್ಚಿಸುವವನಾಗಿ,
**ಆತ್ಮದಯಿತಾಯ** = ತನಗೆ ಪ್ರಿಯನಾದ
**ಹರಿಸೂನವೇ** = ಯಮನ ಮಗನಾದ ಯುಧಿಷ್ಠಿರನಿಗೆ
**ಹತವಿಪಕ್ಷಂ** = ನಿಹತರಾದ ಶತ್ರುಗಳುಳ್ಳ
**ಉತ್ತಮಂ** = ಶ್ರೇಷ್ಠವಾದ
**ನಿಜರಾಜ್ಯಂ** = ಅವನ ರಾಜ್ಯವನ್ನು
**ದತ್ತವಾನ್** = ಕೊಟ್ಟನು.

**ತಾತ್ಪರ್ಯ—** ಅಜ್ಞಾತವಾಸವನ್ನು ಮುಗಿಸಿದ ಭೀಮಸೇನನೇ ಮೊದಲಾದ ಪಾಂಡವರು ಉಪಪ್ಲಾವ್ಯನಗರದಲ್ಲಿ ಶ್ರೀಕೃಷ್ಣನನ್ನು ನಮಸ್ಕರಿಸಿದರು. ಅನಂತರ ಶ್ರೀಕೃಷ್ಣಸಂಧಾನವು ವಿಫಲವಾದಾಗ ಕೌರವ ಪಾಂಡವರಿಗೆ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಆದರೆ ಯುದ್ಧಾರಂಭದಲ್ಲಿ ಅರ್ಜುನನು ಬಂಧು ಬಾಂಧವರ ಮೇಲಿನ ಮೋಹಜಾಲ-ದಿಂದ ಕೂಡಿದವನಾಗಿ, ''ನಾನು ಬಂಧುಗಳನ್ನು ಕೊಲ್ಲಲಾರೆ'' ಎಂದು ಹೇಳಿ ಬಿಲ್ಲನ್ನು ಕೆಳಗಿಟ್ಟನು. ಶ್ರೀಕೃಷ್ಣನು ತತ್ತ್ವೋ-ಪದೇಶವನ್ನು ಮಾಡಿ (ಗೀತೆಯನ್ನು ಉಪದೇಶಿಸಿ) ಅವನಿಗೆ ಪುನಃ ಉತ್ಸಾಹವು ತುಂಬಿ ಬರುವಂತೆ ಮಾಡಿದನು. ಅನಂತರ ಕರ್ತವ್ಯಪರಾಯಣನಾದ ಅರ್ಜುನನೂ, ಭೀಮಸೇನನೂ ಮತ್ತಿತರ ರಾಜರೂ ಯುದ್ಧ ಮಾಡಿದರು. ಎಲ್ಲಾ ಶತ್ರುಗಳೂ ಕೊಲ್ಲಲ್ಪಟ್ಟರು. ಅನಂತರ ಶತ್ರುರಹಿತವಾದ ಈ ರಾಜ್ಯವನ್ನು, ತನಗೆ ಅತ್ಯಂತಪ್ರಿಯನಾದ ಪಾಂಡವರಲ್ಲಿ ಹಿರಿಯನಾದ, ಯಮಧರ್ಮ ಪುತ್ರನಾದ ಧರ್ಮರಾಜನಿಗೆ ಕೊಟ್ಟನು.

**ವಿಶೇಷಾಂಶ** – 'ಹರಿ' ಶಬ್ದಕ್ಕೆ ಯಮ, ವಾಯು, ಇಂದ್ರ, ಚಂದ್ರ, ಸೂರ್ಯ, ವಿಷ್ಣು, ಸಿಂಹ, ಕಿರಣ, ಕುದುರೆ, ಗಿಣಿ, ಹಾವು, ಕಪ್ಪೆ, ಕಪಿಲವರ್ಣ ಎಂದು ಅನೇಕ ಅರ್ಥಗಳಿವೆ. ಹಾಗೆಯೇ 'ಗೋ' ಶಬ್ದಕ್ಕೆ ಸ್ವರ್ಗ, ಬಾಣ, ಹಸು, ಎತ್ತು, ದಿಕ್ಕು, ಕಣ್ಣು ಕಿರಣ, ಭೂಮಿ, ನೀರು, ಎಂದು ಅನೇಕ ಅರ್ಥಗಳಿವೆ.

**ವಿಗ್ರಹ—**

**ಪವನನಂದನಾದಿಭಿಃ—** ಪವನಸ್ಯ ನಂದನಃ ಪವನನಂದನಃ, ಪವನನಂದನಃ ಆದಿಃ ಯೇಷಾಂ ತೇ ಪವನನಂದನಾದಯಃ ತೈಃ ।

**ಇಂದ್ರಸುತವರ್ಧಕಃ—** ಇಂದ್ರಸ್ಯ ಸುತಃ ಇಂದ್ರಸುತಃ, ವರ್ಧಯತೀತಿ ವರ್ಧಕಃ, ಇಂದ್ರಸುತಸ್ಯ ವರ್ಧಕಃ ಇಂದ್ರಸುತವರ್ಧಕಃ । (ವರ್ಧಕಃ ವಧಕರ್ತಾ) ।

**ನಿಜರಾಜ್ಯಂ—** ನಿಜಂ ಚ ತತ್ ರಾಜ್ಯಂ ಚ ನಿಜರಾಜ್ಯಂ ।

**ಆತ್ಮದಯಿತಃ—** ಆತ್ಮನಃ ದಯಿತಃ ಆತ್ಮದಯಿತಃ ।

**ಹರಿಸೂನುಃ—** ಹರೇಃ ಸೂನುಃ ಹರಿಸೂನುಃ ।

**ಹತವಿಪಕ್ಷಂ—** ಹತಃ ವಿಪಕ್ಷಃ ಯಸ್ಮಿನ್ ತತ್ (ಹತಾಃ ವಿಪಕ್ಷಾಃ ಯಸ್ಮಿನ್ ತತ್) ಹತವಿಪಕ್ಷಂ ।

**ಪ್ರಯೋಗ—** ಸಃ ನಿಜರಾಜ್ಯಂ ದತ್ತವಾನ್ (ಕರ್ತರಿ) । ತೇನ ನಿಜರಾಜ್ಯಂ ದತ್ತಂ (ಕರ್ಮಣಿ) ।

★ ★ ★

**ಅವತಾರಿಕಾ—** ಶ್ರೀರಾಮಕೃಷ್ಣಾವತಾರಗಳ ಮುಂದಿನ ಕಥಾಭಾಗವನ್ನು ವಿವರಿಸುತ್ತಾರೆ.

**ಮುದಮಾಪ್ಯ ತತ್ರ ದಯಿತೋರುವಾರ್ತಯಾ**
**ಮಧುಹಾ ಮರುತ್ಸುತಮುಖಪ್ರವೃತ್ತಯಾ ।**
**ಹರಿತಿಗ್ಮಚಕ್ರಲಸಿತೋಽಬ್ಧಿಮಧ್ಯಗಂ**
**ಪ್ರಯಯೌ ಸ ಪುಣ್ಯಜನಸೇವಿತಂ ಪುರಮ್ ॥ 32 ॥**

**ಪದಚ್ಛೇದ—** ಮುದಂ, ಆಪ್ಯ, ತತ್ರ, ದಯಿತೋರುವಾರ್ತಯಾ, ಮಧುಹಾ, ಮರುತ್ಸುತಮುಖಪ್ರವೃತ್ತಯಾ, ಹರಿತಿಗ್ಮಚಕ್ರಲಸಿತಃ, ಅಬ್ಧಿಮಧ್ಯಗಂ, ಪ್ರಯಯೌ, ಸಃ, ಪುಣ್ಯಜನಸೇವಿತಂ, ಪುರಂ ।

**ಅನ್ವಯ—** ತತ್ರ ಮಧುಹಾ ಸಃ, ಮರುತ್ಸುತಮುಖಪ್ರವೃತ್ತಯಾ, ದಯಿತೋರುವಾರ್ತಯಾ ಮುದಂ ಆಪ್ಯ, ಹರಿತಿಗ್ಮಚಕ್ರಲಸಿತಃ, ಅಬ್ಧಿಮಧ್ಯಗಂ, ಪುಣ್ಯಜನಸೇವಿತಂ, ಪುರಂ ಪ್ರಯಯೌ ।

**ಅನ್ವಯಾರ್ಥ—** ***(ಶ್ರೀರಾಮ ಪಕ್ಷದಲ್ಲಿ)***

**ತತ್ರ** = ಆ ಋಷ್ಯಮೂಕ ಪರ್ವತದಲ್ಲಿ

**ಮಧುಹಾ** = ಮಧುವೆಂಬ ದೈತ್ಯನನ್ನು ಸಂಹಾರ ಮಾಡಿರುವ

**ಸಃ** = ಆ ಶ್ರೀರಾಮನು,

**ಮರುತ್ಸುತ ಮುಖಪ್ರವೃತ್ತಯಾ** = ವಾಯುಪುತ್ರನಾದ ಹನುಮಂತನ ಬಾಯಿಯಿಂದ ತಿಳಿದುಬಂದ,

**ದಯಿತೋರುವಾರ್ತಯಾ** = ಅತ್ಯಂತ ಪ್ರಿಯಳಾದ ಸೀತೆಯ ಉತ್ಕೃಷ್ಟವಾದ ಸಮಾಚಾರದಿಂದ

**ಮುದಂ** = ಸಂತೋಷವನ್ನು

**ಆಪ್ಯ** = ಹೊಂದಿ,

**ಹರಿ ತಿಗ್ಮ ಚಕ್ರ ಲಸಿತಃ, ಅಬ್ಧಿಮಧ್ಯಗಂ** = ಕಪಿಗಳ (ಪರಾಕ್ರಮದಿಂದ) ತೀಕ್ಷ್ಣವಾದ ಸೈನ್ಯದಿಂದ ಶೋಭೆ ಹೊಂದಿದವನಾಗಿ, ಸಮುದ್ರದ ನಡುವೆ ಇರುವ,

**ಪುಣ್ಯಜನಸೇವಿತಂ** = ರಾಕ್ಷಸರಿಂದ ಸೇವಿಸಲ್ಪಟ್ಟ

**ಪುರಂ** = ಲಂಕಾ ಪಟ್ಟಣವನ್ನು ಕುರಿತು

**ಪ್ರಯಯೌ** = ಹೋದನು.

**ತಾತ್ಪರ್ಯ**— ಶ್ರೀರಾಮನು ಋಷ್ಯಮೂಕ ಪರ್ವತದಲ್ಲಿರುವಾಗ, ದಕ್ಷಿಣ ದಿಕ್ಕಿಗೆ ಸೀತಾದೇವಿಯ ಅನ್ವೇಷಣೆಗಾಗಿ ಹೋದ ವಾಯುಪುತ್ರ ಹನುಮಂತನು ಹಿಂತಿರುಗಿ ಬಂದು, ಸೀತಾದೇವಿಯ ಉತ್ತಮವಾದ ಸಂದೇಶವನ್ನು ಶ್ರೀರಾಮನ ಬಳಿಯಲ್ಲಿ ವಿಜ್ಞಾಪಿಸಿದನು. ಆದರಿಂದ ಸಂತೋಷಪಟ್ಟ ಶ್ರೀರಾಮನು, ಕಪಿವೀರರ ಪರಾಕ್ರಮಶಾಲಿಯಾದ ಸೈನ್ಯದೊಡನೆ ಸಮುದ್ರದ ದಡಕ್ಕೆ ಬಂದು, ಸಮುದ್ರದ ಮೇಲೆ ನಲನಿಂದ ಸೇತುವನ್ನು ಕಟ್ಟಿಸಿ, ಅದರ ಮೂಲಕವಾಗಿ ಸಮುದ್ರ ಮಧ್ಯದಲ್ಲಿರುವ, ರಾಕ್ಷಸ ವಾಸಸ್ಥಾನವಾದ ಲಂಕಾ ಪಟ್ಟಣಕ್ಕೆ ಹೋದನು.

**ಅನ್ವಯಾರ್ಥ**— (ಶ್ರೀಕೃಷ್ಣನ ಪಕ್ಷದಲ್ಲಿ)

**ಮಧುಹಾ** = ಮಧು ಎಂಬ ದೈತ್ಯನನ್ನು ಸಂಹರಿಸಿದ

**ಸಃ** = ಆ ಶ್ರೀಕೃಷ್ಣನು

**ತತ್ರ** = ಆ ಉಪಪ್ಲಾವ್ಯ ನಗರದಲ್ಲಿ

**ಮರುತ್ಸುತಮುಖ ಪ್ರವೃತ್ತಯಾ** = ವಾಯುಪುತ್ರನಾದ ಭೀಮಸೇನನ ಬಾಯಿಯಿಂದ ಹೇಳಲ್ಪಟ್ಟ

**ದಯಿತೋರುವಾರ್ತಯಾ** = ಪ್ರಿಯರಾದ ಪಾಂಡವರ ಕೀಚಕ ಸಂಹಾರಾದಿ ಉತ್ಕೃಷ್ಟ ಸಮಾಚಾರದಿಂದ,

**ಮುದಂ** = ಸಂತೋಷವನ್ನು

**ಆಪ್ಯ** = ಹೊಂದಿ,

**ಹರಿ ತಿಗ್ಮ ಚಕ್ರ ಲಸಿತಃ** = ಸೂರ್ಯನಂತೆ ತೀಕ್ಷ್ಣವಾದ (ಹರಿತವಾದ) ಸುದರ್ಶನಚಕ್ರದಿಂದ ಪ್ರಕಾಶಗೊಂಡವನಾಗಿ,

**ಅಬ್ಧಿಮಧ್ಯಗಂ** = ಸಮುದ್ರದ ನಡುವಿನಲ್ಲಿರುವ

**ಪುಣ್ಯಜನಸೇವಿತಂ** = ಪವಿತ್ರವಾದ ಯಾದವ ಜನರಿಂದ ಸೇವಿಸಲ್ಪಟ್ಟ,

**ಪುರಂ** = ದ್ವಾರಕಾ ಪಟ್ಟಣವನ್ನು ಕುರಿತು

**ಪ್ರಯಯೌ** = ಹೋದನು.

**ತಾತ್ಪರ್ಯ**— ಶ್ರೀಕೃಷ್ಣನು ಉಪಪ್ಲಾವ್ಯ ನಗರದಲ್ಲಿಯೇ ಭೀಮಸೇನಾದಿ ಪಾಂಡವರು ತಿಳಿಸಿದ ಅಜ್ಞಾತವಾಸ ಸಮಯದಲ್ಲಿ ನಡೆದ ಕೀಚಕವಧಾದಿ ವೃತ್ತಾಂತವನ್ನು ಕೇಳಿ ಆನಂದ ಪಟ್ಟನು. ಅನಂತರ ಸೂರ್ಯನಂತೆ ಪ್ರಕಾಶಮಾನವಾದ ಸುದರ್ಶನ ಚಕ್ರವನ್ನು ಹಿಡಿದ ಆ ಶ್ರೀಕೃಷ್ಣನು ಪವಿತ್ರರಾದ ಯಾದವರು ವಾಸಿಸುವ ಸಮುದ್ರಮಧ್ಯದಲ್ಲಿರುವ ದ್ವಾರಕಾ ಪಟ್ಟಣವನ್ನು ಕುರಿತು ಹಿಂದಿರುಗಿ ಹೋದನು.

**ವಿಗ್ರಹ**—

**ದಯಿತೋರುವಾರ್ತಯಾ**— ಉರುಶ್ಚ ಸಾ ವಾರ್ತಾ ಚ ಉರುವಾರ್ತಾ, ದಯಿತಾಯಾಃ ಉರುವಾರ್ತಾ ದಯಿತೋರುವಾರ್ತಾ, (ದಯಿತಾನಾಂ ಉರುವಾರ್ತಾ ದಯಿತೋರುವಾರ್ತಾ), ತಯಾ ದಯಿತೋರುವಾರ್ತಯಾ ।

**ಮಧುಹಾ**— ಮಧುಂ ಹಂತೀತಿ ಮಧುಹಾ ।

**ಮರುತ್ಸುತಮುಖಪ್ರವೃತ್ತಯಾ**— ಮರುತಃ ಸುತಃ ಮರುತ್ಸುತಃ, ಮರುತ್ಸುತಸ್ಯ ಮುಖಂ ಮರುತ್ಸುತಮುಖಂ, ಮರುತ್ಸುತಮುಖಾತ್ ಪ್ರವೃತ್ತಾ ಮರುತ್ಸುತಮುಖಪ್ರವೃತ್ತಾ, ತಯಾ ಮರುತ್ಸುತಮುಖಪ್ರವೃತ್ತಯಾ ।

**ಹರಿತಿಗ್ಮಚಕ್ರಲಸಿತಃ**— ತಿಗ್ಮಂ ಚ ತತ್ ಚಕ್ರಂ ಚ ತಿಗ್ಮಚಕ್ರಂ, ಹರೀಣಾಂ ತಿಗ್ಮಚಕ್ರಂ ಹರಿತಿಗ್ಮಚಕ್ರಂ, (ಹರಿವತ್ ತಿಗ್ಮಚಕ್ರಂ ಹರಿತಿಗ್ಮಚಕ್ರಂ), ಹರಿತಿಗ್ಮಚಕ್ರೇಣ ಲಸಿತಃ ಹರಿತಿಗ್ಮಚಕ್ರಲಸಿತಃ ।

**ಅಬ್ಧಿಮಧ್ಯಗಂ**— ಅಬ್ಧೇಃ ಮಧ್ಯಂ ಅಬ್ಧಿಮಧ್ಯಂ, ಅಬ್ಧಿಮಧ್ಯಂ ಗಚ್ಛತೀತಿ ಅಬ್ಧಿಮಧ್ಯಗಂ ।

**ಪುಣ್ಯಜನಸೇವಿತಂ**— ಪುಣ್ಯಜನೈಃ (ಪುಣ್ಯಾಶ್ಚ ತೇ ಜನಾಶ್ಚ ಪುಣ್ಯಜನಾಃ, ತೈಃ ಪುಣ್ಯಜನೈಃ) ಸೇವಿತಂ ಪುಣ್ಯಜನಸೇವಿತಂ ।

**ಕ್ರಿಯಾಪದ**— ಪ್ರಯಯೌ- ಯಾ ಪ್ರಾಪಣೇ ಲಿಟ್ ।

**ಪ್ರಯೋಗ**— ಪ್ರ- ಯಯೌ ಯಯತುಃ ಯಯುಃ ಇತ್ಯಾದಿ ॥

ಸಃ ಪುರಂ ಪ್ರಯಯೌ (ಕರ್ತರಿ) । ತೇನ ಪುರಂ ಪ್ರಯಯೇ (ಕರ್ಮಣಿ) ।

ವಿಶೇಷಾಂಶ - 'ಯಾತುಧಾನಃ ಪುಣ್ಯಜನೋ ನೈರ್ಋತೋ ಯಾತುರಕ್ಷಸೀ' ಎಂದು ಅಮರಕೋಶದಲ್ಲಿ ರೂಢಿಯಿಂದ ಪುಣ್ಯಜನ ಶಬ್ದವು ವಾಚಕವೆಂದು ಹೇಳಿದೆ. ಆದರೆ ರಕ್ಷಃ ಸಂತೌ ಪುಣ್ಯಜನೌ ಎಂಬ ಕೋಶದಿಂದಲೂ ಪುಣ್ಯವಂತರಾದ ಜನರು (ಪುಣ್ಯಾಶ್ಚ ತೇ ಜನಾಶ್ಚ) ಎಂಬ ವಿಗ್ರಹದಿಂದಲೂ ಬೇರೊಂದು ಅರ್ಥವನ್ನು ಕೊಡುತ್ತದೆ.

★ ★ ★

**ಪೃಥುಕುಂಭಕರ್ಣಗಜರಾಜಮುದ್ಧತಂ**
**ಸಸಹೋದರಂ ಸವಿಬುಧೇಂದ್ರಶಾತ್ರವಮ್ ।**
**ಧರಣೀಭರಂ ಪೃಥುಲಚಕ್ರಮಕ್ಷಿಣೋ-**
**ನ್ನಿಶಿತೇಷು ಚಕ್ರಕೃತವಿಕ್ರಮಃ ಪ್ರಭುಃ ॥ 33 ॥**

**ಪದಚ್ಛೇದ**— ಪೃಥುಕುಂಭಕರ್ಣಗಜರಾಜಂ, ಉದ್ಧತಂ, ಸಸಹೋದರಂ, ಸವಿಬುಧೇಂದ್ರಶಾತ್ರವಂ, ಧರಣೀಭರಂ, ಪೃಥುಲಚಕ್ರಂ, ಅಕ್ಷಿಣೋತ್, ನಿಶಿತೇಷು ಚಕ್ರಕೃತವಿಕ್ರಮಃ, ಪ್ರಭುಃ ।

**ಅನ್ವಯ**— ನಿಶಿತೇಷುಚಕ್ರಕೃತವಿಕ್ರಮಃ ಪ್ರಭುಃ, ಉದ್ಧತಂ, ಸಸಹೋದರಂ, ಸವಿಬುಧೇಂದ್ರಶಾತ್ರವಂ, ಧರಣೀ-ಭರಂ, ಪೃಥುಲಚಕ್ರಂ ಪೃಥುಕುಂಭಕರ್ಣಗಜರಾಜಂ, ಅಕ್ಷಿಣೋತ್ ।

**ಅನ್ವಯಾರ್ಥ**— (ಶ್ರೀರಾಮ ಪಕ್ಷದಲ್ಲಿ)

**ನಿಶಿತೇಷುಚಕ್ರಕೃತವಿಕ್ರಮಃ** = ಹರಿತವಾದ ಬಾಣಗಳ ಸಮೂಹದಿಂದ ತೋರಿಸಲ್ಪಟ್ಟ (ಮಾಡಲ್ಪಟ್ಟ) ಪರಾಕ್ರಮವುಳ್ಳ

**ಪ್ರಭುಃ** = ಸಮರ್ಥನಾದ ಶ್ರೀರಾಮನು,

**ಉದ್ಧತಂ** = ಬಲದಿಂದ ಕೊಬ್ಬಿದ,

**ಸಸಹೋದರಂ** = ಅಣ್ಣನಾದ ರಾವಣನಿಂದ ಸಹಿತನಾದ,

**ಸವಿಬುಧೇಂದ್ರಶಾತ್ರವಂ** = ಇಂದ್ರನ ಶತ್ರುವಾದ ಇಂದ್ರಜಿತುವಿನಿಂದ ಕೂಡಿದ,

**ಧರಣೀಭರಂ** = ಭೂಮಿಗೆ ಭಾರನಾದ,

**ಪೃಥುಲಚಕ್ರಂ** = ಹೆಚ್ಚಾದ ಸೈನ್ಯವುಳ್ಳ

**ಪೃಥುಕುಂಭಕರ್ಣಗಜರಾಜಂ** = ಸ್ಥೂಲನಾದ (ದಪ್ಪಗಿರುವ) ಕುಂಭಕರ್ಣನೆಂಬ ದೊಡ್ಡ ಆನೆಯನ್ನು

**ಅಕ್ಷಿಣೋತ್** = ನಾಶಪಡಿಸಿದನು (ಕೊಂದನು).

**ತಾತ್ಪರ್ಯ**— ಕುಂಭಕರ್ಣನು ಸೀತಾಪಹಾರಿಯಾದ ರಾವಣನ ತಮ್ಮನು. ಅವನು ಮದಿಸಿದ ಆನೆಯಂತೆ ಕೊಬ್ಬಿದ್ದನು. ಅವನ ದೇಹವು ಬಹು ವಿಶಾಲ, ಬಹು ಉನ್ನತವಾಗಿ ಭೂಮಿಗೆ ಭಾರವಾಗಿತ್ತು. ಅವನ ಅಣ್ಣ ರಾವಣ. ಆ ರಾವಣನ ಮಗ ಇಂದ್ರಜಿತುವಿನೊಡನೆ ಕುಂಭಕರ್ಣನು ದೊಡ್ಡ ಸೈನ್ಯ ಸಹಿತವಾಗಿ ಯುದ್ಧ ಮಾಡಿದನು. ಶ್ರೀರಾಮನು ಹರಿತವಾದ ಬಾಣಗಳನ್ನು ರಾಶಿರಾಶಿಯಾಗಿ ಪ್ರಯೋಗಿಸಿ ಅವನನ್ನು ಕತ್ತರಿಸಿ ಕೊಂದನು.

**ಅನ್ವಯಾರ್ಥ**— *(ಶ್ರೀಕೃಷ್ಣನ ಪಕ್ಷದಲ್ಲಿ)*

**ನಿಶಿತೇಷುಚಕ್ರಕೃತವಿಕ್ರಮಃ** = ಹರಿತವಾದ ಬಾಣಗಳು, ಸುದರ್ಶನ ಚಕ್ರವೂ ಇವುಗಳಿಂದ ಮಾಡಲ್ಪಟ್ಟ ಪರಾಕ್ರಮವುಳ್ಳ

**ಪ್ರಭುಃ** = ಸಮರ್ಥನಾದ ಶ್ರೀಕೃಷ್ಣನು,

**ಪೃಥುಕುಂಭಕರ್ಣಗಜರಾಜಂ** = ದಪ್ಪವಾದ ಮತ್ತು ವಿಶಾಲವಾದ ಕುಂಭಸ್ಥಲಗಳು (ಆನೆಯ ತಲೆಯ ಮೇಲಿನ ಎತ್ತರವಾದ ಸ್ಥಳ), ಕಿವಿಗಳೂ ಇವುಗಳುಳ್ಳ ಶ್ರೇಷ್ಠವಾದ ಆನೆಗಳಿಂದ ಕೂಡಿದ,

**ಉದ್ಧತಂ** = ಕೊಬ್ಬಿದ

**ಸಸಹಃ ಅದರಂ** = ಬಲದಿಂದ ಕೂಡಿದ, ಭಯವಿಲ್ಲದ

**ಸವಿಬುಧೇಂದ್ರಶಾತ್ರವಂ** = ದೇವತಾ ಶತ್ರುಗಳಾದ ದೈತ್ಯರಿಂದ ಕೂಡಿರುವ,

**ಧರಣೀಭರಂ** = ಭೂಮಿಗೆ ಭಾರವಾಗಿರುವ,

**ಪೃಥುಲಚಕ್ರಂ** = ವಿಶಾಲವಾದ ಕೌರವರ ಸೈನ್ಯವನ್ನು

**ಅಕ್ಷಿಣೋತ್** = ನಾಶ ಮಾಡಿದನು.

**ತಾತ್ಪರ್ಯ**— ಪಾಂಡವರಿಗೂ ಕೌರವರಿಗೂ ಬಹು ಭಯಂಕರವಾದ ಯುದ್ಧವಾಯಿತು. ಕೌರವ ದುರ್ಯೋಧನನ ಸೈನ್ಯದಲ್ಲಿ ಗುಂಡಗಿರುವ ಕುಂಭಸ್ಥಳವುಳ್ಳ, ವಿಶಾಲವಾದ ಕಿವಿಗಳುಳ್ಳ ಶ್ರೇಷ್ಠ ಆನೆಗಳೂ ಇದ್ದವು. ಮನುಷ್ಯ ರೂಪದಿಂದ ಅವತರಿಸಿದ ದಾನವರೂ ಇದ್ದರು. ಅವರೆಲ್ಲರಿಂದ ಕೂಡಿದ ಆ ಸೈನ್ಯವು ಬಲ ಮದದಿಂದ ಕೊಬ್ಬಿತ್ತು. ಆ ಸೈನ್ಯವು ಯಾರಿಗೂ ಹೆದರುತ್ತಿರಲಿಲ್ಲ. ಭೂಮಿಗೆ ಭಾರವಾಗಿದ್ದ ಬಹು ಸಂಖ್ಯೆಯ ಆ ಸೈನ್ಯವನ್ನು ಶ್ರೀಕೃಷ್ಣನು ಅರ್ಜುನಾದಿಗಳ ಬಾಣಾದಿ ಆಯುಧಗಳ ಮೂಲಕವಾಗಿ, ತಾನೇ ಪರಾಕ್ರಮ ತೋರಿಸಿ ಸಂಹರಿಸಿದನು. ಸ್ವತಃ ಭೀಷ್ಮಾಚಾರ್ಯರ ಎದುರು ಚಕ್ರ ಹಿಡಿದು ಪರಾಕ್ರಮ ತೋರಿಸಿದನು.

**ವಿಗ್ರಹ**—

**ನಿಶಿತೇಷುಚಕ್ರಕೃತವಿಕ್ರಮಃ**— ನಿಶಿತಾಶ್ಚ ತೇ ಇಷವಶ್ಚ ನಿಶಿತೇಷವಃ, ನಿಶಿತೇಷೂಣಾಂ ಚಕ್ರಂ ನಿಶಿತೇಷುಚಕ್ರಂ, ನಿಶಿತೇಷು ಚಕ್ರೇಣ ಕೃತಃ ವಿಕ್ರಮಃ ಯೇನ ಸಃ ನಿಶಿತೇಷುಚಕ್ರಕೃತವಿಕ್ರಮಃ, (ನಿಶಿತೇಷವಶ್ಚ ಚಕ್ರಂ ಚ ನಿಶಿತೇಷುಚಕ್ರಾಣಿ, ನಿಶಿತೇಷುಚಕ್ರೈಃ ಕೃತಃ ವಿಕ್ರಮಃ ಯೇನ ಸಃ ನಿಶಿತೇಷುಚಕ್ರಕೃತವಿಕ್ರಮಃ) ।

**ಸಸಹೋದರಂ**— ಸಹೋದರೇಣ ಸಹ ವರ್ತತೇ ಇತಿ ಸಸಹೋದರಃ, ತಂ ಸಸಹೋದರಂ, (ಸಹಸಾ ಸಹವರ್ತತೇ ಇತಿ ಸಸಹಃ, ತತ್, ನವಿದ್ಯತೇ ದರಃ ಯಸ್ಯ ತತ್ ಅದರಂ, ತತ್) ।

**ಸವಿಬುಧೇಂದ್ರಶಾತ್ರವಂ**— ವಿಬುಧಾನಾಂ ಇಂದ್ರಃ ವಿಬುಧೇಂದ್ರಃ, ವಿಬುಧೇಂದ್ರಸ್ಯ ಶಾತ್ರವಃ ವಿಬು-ಧೇಂದ್ರಶಾತ್ರವಃ, ವಿಬುಧೇಂದ್ರಶಾತ್ರವೇಣ ಸಹ ವರ್ತತೇ ಇತಿ ಸವಿಬುಧೇಂದ್ರಶಾತ್ರವಃ, ತಂ ಸವಿಬು-ಧೇಂದ್ರಶಾತ್ರವಂ, (ವಿಬುಧೇಂದ್ರಸ್ಯ ಶಾತ್ರವಾಃ ವಿಬುಧೇಂದ್ರಶಾತ್ರವಾಃ, ತೈ ಸಹ ವರ್ತತೇ ಇತಿ ಸವಿಬುಧೇಂದ್ರಶಾತ್ರವಂ, ತತ್ ಸವಿಬುಧೇಂದ್ರಶಾತ್ರವಂ) ।

**ಧರಣೀಭರಂ**— ಧರಣ್ಯಾಃ ಭರಃ ಯಸ್ಮಾತ್ ಸಃ ಧರಣೀಭರಃ, ತಂ ಧರಣೀಭರಂ । (ಯಸ್ಮಾತ್ ತತ್ ಧರಣೀಭರಂ, ತತ್ ಧರಣೀಭರಂ) ।

**ಪೃಥುಲಚಕ್ರಂ**— ಪೃಥುಲಂ ಚಕ್ರಂ ಯಸ್ಯ ಸಃ ಪೃಥುಲಚಕ್ರಃ, ತಂ ಪೃಥುಲಚಕ್ರಂ । (ಪೃಥುಲಂ ಚ ತತ್ ಚಕ್ರಂ ಚ ಪೃಥುಲಚಕ್ರಂ, ತತ್ ಪೃಥುಲಚಕ್ರಂ) ।

**ಪೃಥುಕುಂಭಕರ್ಣಗಜರಾಜಂ**— ಗಜಾನಾಂ ರಾಜಾ ಗಜರಾಜಃ, ಕುಂಭಕರ್ಣ ಏವ ಗಜರಾಜಃ ಕುಂಭಕರ್ಣ-ಗಜರಾಜಃ, ಪೃಥುಶ್ಚಾಸೌ ಕುಂಭಕರ್ಣಗಜರಾಜಶ್ಚ ಪೃಥುಕುಂಭಕರ್ಣಗಜರಾಜಃ, ತಂ ಪೃಥುಕುಂಭ-ಕರ್ಣಗಜರಾಜಂ । (ಗಜಾನಾಂ ರಾಜಾನಃ ಗಜರಾಜಾಃ (ಕುಂಭವತ್ ಕರ್ಣೌ ಯೇಷಾಂ ತೇ ಪೃಥು-ಕುಂಭಕರ್ಣಾಃ) ಪೃಥವಃ ಕುಂಭಕರ್ಣಾಃ ಯೇಷಾಂ ತೇ ಪೃಥುಕುಂಭಕರ್ಣಾಃ, ಪೃಥುಕುಂಭಕರ್ಣಾಃ ಗಜರಾಜಾಃ ಯಸ್ಮಿನ್ ತತ್ ಪೃಥುಕುಂಭಕರ್ಣಗಜರಾಜಂ) ।

**ಕ್ರಿಯಾಪದ**— **ಅಕ್ಷ್ಣೋತ್**- 'ಅಕ್ಷ್ಣುಮ' ಹಿಂಸಾರ್ಥಕಾತ್ ಕ್ಷ್ಣು ಹಿಂಸಾಯಾಂ ಇತ್ಯಸ್ಮಾದ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ಅಕ್ಷ್ಣೋತ್'' ಇತಿ ರೂಪಮ್ ।

ಅಕ್ಷ್ಣೋತ್ ಅಕ್ಷ್ಣುತಾಂ ಅಕ್ಷ್ಣ್ವನ್, ಅಕ್ಷ್ಣೋಃ ಅಕ್ಷ್ಣುತಂ ಅಕ್ಷ್ಣುತ, ಅಕ್ಷ್ಣವಂ ಅಕ್ಷ್ಣ್ವ-ಅಕ್ಷ್ಣುವ ಅಕ್ಷ್ಣ್ಮ ಅಕ್ಷ್ಣುಮ ॥

**ಪ್ರಯೋಗ**— ಪ್ರಭುಃ ಪೃಥುಕುಂಭಕರ್ಣಗಜರಾಜಂ (ಪೃಥುಚಕ್ರಂ) ಅಕ್ಷ್ಣೋತ್ (ಕರ್ತರಿ) । ಪ್ರಭುಣಾ ಪೃಥು-ಕುಂಭಕರ್ಣಗಜರಾಜಃ (ಪೃಥುಚಕ್ರಂ) ಅಕ್ಷ್ಣ್ಯತ (ಕರ್ಮಣಿ) ।

★ ★ ★

**ಅವತಾರಿಕಾ**— ಶ್ರೀರಾಮಕೃಷ್ಣಾವತಾರಗಳ ವರ್ಣನೆಯನ್ನು ಮುಗಿಸುತ್ತಾರೆ.

**ಅಥ ಭಾರ್ಯಯಾ ಹುತವಹಂ ಪ್ರವಿಷ್ಟಯಾ**
**ಸಹಿತಃ ಸಹೋದರಪುರಸ್ಸರೈರಪಿ ।**
**ಅಯಮಾಪ್ಯ ಧಾಮ ಚಿರಮಿಷ್ಟದಃ ಸತಾಂ**
**ನಿಜಮೂಲರೂಪಪರಮೈಕ್ಯಮೇಯಿವಾನ್ ॥ 34 ॥**

**ಪದಚ್ಛೇದ**— ಅಥ, ಭಾರ್ಯಯಾ, ಹುತವಹಂ, ಪ್ರವಿಷ್ಟಯಾ, ಸಹಿತಃ, ಸಹೋದರಪುರಸ್ಸರೈಃ, ಅಪಿ, ಅಯಂ, ಆಪ್ಯ, ಚಿರಂ, ಇಷ್ಟದಃ, ಸತಾಂ, ನಿಜಮೂಲರೂಪಪರಮೈಕ್ಯಂ, ಏಯಿವಾನ್ ।

ಶ್ರೀರಾಮನ ಪಕ್ಷದಲ್ಲಿ -

**ಅನ್ವಯ**— ಅಥ, ಹುತವಹಂ ಪ್ರವಿಷ್ಟಯಾ ಭಾರ್ಯಯಾ ಅಪಿ, ಸಹೋದರಪುರಸ್ಸರೈಃ ಅಪಿ, ಸಹಿತಃ ಅಯಂ ಧಾಮ ಆಪ್ಯ, ಚಿರಂ ಸತಾಂ ಇಷ್ಟದಃ (ಸನ್), ನಿಜಮೂಲರೂಪಪರಮೈಕ್ಯಂ ಏಯಿವಾನ್ ।

**ಅನ್ವಯಾರ್ಥ**—

**ಅಥ** = ರಾವಣ, ಕುಂಭಕರ್ಣ ಮೊದಲಾದ ರಾಕ್ಷಸ ಸಂಹಾರಾನಂತರದಲ್ಲಿ,

**ಹುತವಹಂ** = ಅಗ್ನಿಯನ್ನು

**ಪ್ರವಿಷ್ಟಯಾ** = ಪ್ರವೇಶ ಮಾಡಿದ

**ಭಾರ್ಯಯಾ** = ಹೆಂಡತಿಯಾದ ಸೀತೆಯಿಂದಲೂ,

**ಸಹೋದರ ಪುರಸ್ಸರೈಃ ಅಪಿ** = ಲಕ್ಷ್ಮಣನೇ ಮೊದಲಾಗಿ ಉಳ್ಳ ಹನುಮಂತನೇ ಮೊದಲಾದವರಿಂದಲೂ,

**ಸಹಿತಃ** = ಕೂಡಿದ
**ಅಯಂ** = ಈ ಶ್ರೀರಾಮಚಂದ್ರನು,
**ಧಾಮ** = ವಾಸಸ್ಥಾನವಾದ ಅಯೋಧ್ಯೆಯನ್ನು
**ಆಪ್ಯ** = ಹೊಂದಿ,
**ಚಿರಂ** = ಬಹಳ ಕಾಲ
**ಸತಾಂ** = ಸಜ್ಜನರಿಗೆ
**ಇಷ್ಟದಃ (ಸನ್)** = ಅಭೀಷ್ಟಪ್ರದನಾಗಿದ್ದು
**ನಿಜ** = ತನ್ನ
**ಮೂಲರೂಪಪರಮೈಕ್ಯಂ** = ಮೂಲರೂಪವಾದ ನಾರಾಯಣರೂಪದೊಡನೆ ಅತ್ಯಂತಾಭೇದವನ್ನು
**ಏಯಿವಾನ್** = ಹೊಂದಿದನು.

**ತಾತ್ಪರ್ಯ**— ಶ್ರೀರಾಮನು ರಾವಣ, ಕುಂಭಕರ್ಣ ಮೊದಲಾದ ರಾಕ್ಷಸರನ್ನು ಕೊಂದಮೇಲೆ, ತನ್ನ ಪಾತಿವ್ರತ್ಯ ಪರಿಶುದ್ಧಿಯನ್ನು ಪ್ರಕಟಿಸುವುದಕ್ಕಾಗಿ ಸೀತೆಯ ಪ್ರತಿಕೃತಿಯು ಅಗ್ನಿಪ್ರವೇಶ ಮಾಡಿ ಸುವರ್ಣದಂತೆ ಮತ್ತಷ್ಟು ಕಂಗೊಳಿಸಿ-ದಳು. (ಆ ಪ್ರತಿಕೃತಿಯು ಅಗ್ನಿಪ್ರವೇಶ ಮಾಡಿದ ಕೂಡಲೇ ಕೈಲಾಸದಲ್ಲಿದ್ದ ಸೀತಾದೇವಿಯು ಅಗ್ನಿಕುಂಡದಿಂದ ಮೇಲಕ್ಕೆ ಬಂದಳು). ಎಲ್ಲರಿಗೂ ತಾನು ಪರಮ ಪರಿಶುದ್ಧಳೆಂದು ತೋರಿಸಿ ಕೊಟ್ಟಳು. ಅಂತಹ ಸೀತೆ, ಲಕ್ಷ್ಮಣ, ಹನುಮಂತ, ಸುಗ್ರೀವ ಮೊದಲಾದವರೊಡನೆ ಶ್ರೀರಾಮನು ಅಯೋಧ್ಯೆಗೆ ಬಂದು, ಪಟ್ಟಾಭಿಷಿಕ್ತನಾಗಿ ಬಹುಕಾಲ ಸಜ್ಜನರ ಸಮಸ್ತಾ-ಭೀಷ್ಟಗಳನ್ನು ಸಲ್ಲಿಸುತ್ತಾ, ಧರ್ಮದಿಂದ ಬಹುಕಾಲ ರಾಜ್ಯಭಾರ ಮಾಡುತ್ತಿದ್ದನು. ಅನಂತರ ವೈಕುಂಠವನ್ನು ಸೇರಿ ತನ್ನ ಮೂಲರೂಪದೊಡನೆ ಪರಮೈಕ್ಯವನ್ನು ಹೊಂದಿದನು.

*ಶ್ರೀಕೃಷ್ಣನ ಪಕ್ಷದಲ್ಲಿ* -

**ಅನ್ವಯ**— ಸತಾಂ ಚಿರಂ ಇಷ್ಟದಃ ಅಯಂ, ಅಥ ಹುತವಹಂ ಪ್ರವಿಷ್ಟಯಾ ಭಾರ್ಯಯಾ, ಸಹೋದರ-ಪುರಸ್ಸರೈರಪಿ ಸಹಿತಃ, ಧಾಮ ಆಪ್ಯ, ನಿಜಮೂಲರೂಪಪರಮೈಕ್ಯಂ ಏಯಿವಾನ್ ।

**ಅನ್ವಯಾರ್ಥ**—

**ಸತಾಂ** = ಸಜ್ಜನರಿಗೆ
**ಚಿರಂ** = ಬಹುಕಾಲ
**ಇಷ್ಟದಃ** = ಅಭೀಷ್ಟಪ್ರದನಾದ
**ಅಯಂ** = ಈ ಶ್ರೀಕೃಷ್ಣನು,
**ಅಥ** = ಭೂಭಾರಹರಣ ಮಾಡಿದ ಅನಂತರ
**ಹುತವಹಂ** = ಅಗ್ನಿಯನ್ನು
**ಪ್ರವಿಷ್ಟಯಾ** = ಪ್ರವೇಶ ಮಾಡಿದ
**ಭಾರ್ಯಯಾ** = ಹೆಂಡತಿಯಾದ ರುಕ್ಮಿಣಿಯಿಂದ,
**ಸಹೋದರಪುರುಸ್ಸರೈಃ ಅಪಿ ಸಹಿತಃ** = ಅಣ್ಣನಾದ ಬಲರಾಮನೇ ಮೊದಲಾಗಿ ಉಳ್ಳ ಯಾದವರಿಂದಲೂ ಕೂಡಿದವನಾಗಿ,
**ಧಾಮ** = ವೈಕುಂಠ ಲೋಕವನ್ನು
**ಆಪ್ಯ** = ಹೊಂದಿ,
**ನಿಜಮೂಲರೂಪಪರಮೈಕ್ಯಂ** = ತನ್ನ ಮೂಲರೂಪವಾದ ನಾರಾಯಣ ರೂಪದೊಡನೆ ಅತ್ಯಂತಾಭೇದವನ್ನು
**ಏಯಿವಾನ್** = ಹೊಂದಿದನು.

**ತಾತ್ಪರ್ಯ—** ಶ್ರೀಕೃಷ್ಣನು ಭಕ್ತರಿಗೆ ಅಭೀಷ್ಟಪ್ರದನಾಗಿ ಬಹುಕಾಲ ಭೂಮಿಯಲ್ಲಿ ವಾಸವಾಗಿದ್ದನು. ಭೂಭೂರ ಪರಿಹಾರ ಮಾಡಿದನಂತರ ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಲು ಸಂಕಲ್ಪಿಸಿದಾಗ ರುಕ್ಮಿಣಿಯು ಅಗ್ನಿಪ್ರವೇಶ ಮಾಡಿ ಅಜ್ಞ ಜನರ ದೃಷ್ಟಿಯಿಂದ ದೇಹವನ್ನು ಬಿಟ್ಟವಳಂತೆ ತೋರಿಸುತ್ತಾ ಅದೇ ಅಪ್ರಾಕೃತ ದಿವ್ಯರೂಪದಿಂದ ಮೂಲ ಮಹಾಲಕ್ಷ್ಮೀ ಸ್ವರೂಪದೊಡನೆ ಅತ್ಯಂತಾಭೇದವನ್ನು ಪ್ರಕಟಿಸಿದಳು. ಶ್ರೀಕೃಷ್ಣನ ಅಣ್ಣನಾದ ಶೇಷರೂಪಿಯಾದ ಬಲರಾಮನೂ, ದೇವತಾರೂಪಿಗಳಾದ ಯಾದವರೂ ತಮ್ಮ ತಮ್ಮ ಮೂಲರೂಪವನ್ನು ಹೊಂದಿದದರು, ಶ್ರೀಕೃಷ್ಣನು ಅವರೊಡನೆ ತನ್ನ ಮೂಲರೂಪವಾದ ಶ್ರೀಮನ್ನಾರಾಯಣ ರೂಪದೊಡನೆ ಮೊದಲೇ ಇದ್ದ ಅತ್ಯಂತಾಭೇದವನ್ನು ಪ್ರಕಟಗೊಳಿಸಿದನು.

**ವಿಗ್ರಹ—**

**ಹುತವಹಂ—** ವಹತೀತಿ ವಹಃ, ಹುತಸ್ಯ ವಹಃ ಹುತವಹಃ, ತಂ ಹುತವಹಂ ।

**ಸಹೋದರಪುರಸ್ಸರಾಃ—** ಪುರಃ ಸರತೀತಿ ಪುರಸ್ಸರಃ, ಸಹೋದರಃ ಪುರಸ್ಸರಃ ಯೇಷಾಂ ತೇ ಸಹೋದರ-ಪುರಸ್ಸರಾಃ ।

**ಇಷ್ಟದಃ—** ಇಷ್ಟಂ ದದಾತೀತಿ ಇಷ್ಟದಃ ।

**ನಿಜಮೂಲರೂಪಪರಮೈಕ್ಯಂ—** ಏಕಸ್ಯ ಭಾವಃ ಐಕ್ಯಂ, ಪರಮಂ ಚ ತತ್ ಐಕ್ಯಂ ಚ ಪರಮೈಕ್ಯಂ, ಮೂಲಂ ಚ ತತ್ ರೂಪಂ ಚ ಮೂಲರೂಪಂ, ನಿಜಂ ಚ ತತ್ ಮೂಲರೂಪಂ ಚ ನಿಜಮೂಲರೂಪಂ, ನಿಜಮೂಲರೂಪೇಣ ಪರಮೈಕ್ಯಂ ನಿಜಮೂಲರೂಪಪರಮೈಕ್ಯಂ ।

**ಕ್ರಿಯಾಪದ—** ಇಲ್ಲಿ ಆಖ್ಯಾತಪ್ರತ್ಯಯಾಂತ ಕ್ರಿಯಾಪದವಿಲ್ಲ. ಏಯಿವಾನ್ ಎಂಬುದನ್ನೇ ಕ್ರಿಯಾಪದದಂತೆ ಇಟ್ಟಕೊಳ್ಳಬೇಕು. ಸಕಾರಾಂತ ಪುಲ್ಲಿಂಗ ''ಏಯಿವಸ್'' ಶಬ್ದ ।

ಏಯಿವಾನ್ ಏಯಿವಾಂಸೌ ಏಯಿವಾಂಸಃ, ಹೇ ಏಯಿವನ್, ಏಯುಷಃ, ಏಯುಷಾ, ಏಯಿವದ್ಭ್ಯಾಂ ಇತ್ಯಾದಿ ರೂಪಗಳು ॥

**ಪ್ರಯೋಗ—** ಅಯಂ ಐಕ್ಯಂ ಏಯಿವಾನ್ (ಕರ್ತರಿ) । ಅನೇನ ಐಕ್ಯಂ ಇತಂ (ಕರ್ಮಣಿ) ।

★ ★ ★

**ಅವತಾರಿಕಾ—** ಮಹಿದಾಸಾವತಾರ ಮತ್ತು ಕಲ್ಕ್ಯವತಾರ ಇವೆರಡನ್ನೂ ಒಂದೇ ಶ್ಲೋಕದಲ್ಲಿ ಎರಡರ್ಥದ ಶಬ್ದಗಳಿಂದ ವರ್ಣಿಸುತ್ತಾರೆ.

**ಮಹಿದಾಸಪೂಜ್ಯಚರಣೋ ದ್ವಿಜಾದಭೂತ್**
**ವಿದಿತಾತ್ ಸ ವಿಷ್ಣುಯಶಸೋಽಮಲಾತ್ಮನಃ ।**
**ಇಹ ಯೋ ದಧೇ ಜಗತಿ ಪಾಪಶಾಂತಯೇ**
**ಬಹುಧಾ ಮಹೇತಿಮತಿ ದೀಪ್ತಗೋಸ್ಥಿತಿಮ್ ॥ 35 ॥**

**ಪದಚ್ಛೇದ—** ಮಹಿದಾಸಪೂಜ್ಯಚರಣಃ, ದ್ವಿಜಾತ್, ಅಭೂತ್, ವಿದಿತಾತ್, ಸಃ, ವಿಷ್ಣುಯಶಸಃ, ಅಮಲಾತ್ಮನಃ, ಇಹ, ಯಃ, ದಧೇ, ಜಗತಿ, ಪಾಪಶಾಂತಯೇ, ಬಹುಧಾ, ಮಹೇತಿಮತಿ, ದೀಪ್ತಗೋಸ್ಥಿತಿಂ (ಬಹುಧಾಮ ಹೇತಿಂ, ಅತಿದೀಪ್ತಗೋಸ್ಥಿತಿಂ) ।

**ಶ್ರೀಮಹಿದಾಸ ಪಕ್ಷದಲ್ಲಿ -**

**ಅನ್ವಯ—** ಸಃ ವಿಷ್ಣುಯಶಸಃ, ಅಮಲಾತ್ಮನಃ ವಿದಿತಾತ್ ದ್ವಿಜಾತ್, ಮಹಿದಾಸಪೂಜ್ಯಚರಣಃ ಅಭೂತ್, ಯಃ ಮಹೇತಿಮತಿ ಇಹ ಜಗತಿ, ಪಾಪಶಾಂತಯೇ ಬಹುಧಾ ದೀಪ್ತಗೋಸ್ಥಿತಿಂ ದಧೇ ।

ಅನ್ವಯಾರ್ಥ—

**ಸಃ** = ಆ ನಾರಾಯಣನು

**ವಿಷ್ಣುಯಶಸಃ** = ವಿಷ್ಣುವಿನ ಕೀರ್ತಿಯ ದೆಸೆಯಿಂದ (ವಿಷ್ಣುವಿನ ಕೀರ್ತಿಯನ್ನು ಕೇಳುವುದೇ ಮೊದಲಾದ್ದರಿಂದ),

**ಅಮಲಾತ್ಮನಃ** = ನಿರ್ಮಲ ಮನಸ್ಸುಳ್ಳ

**ವಿದಿತಾತ್** = ಪ್ರಸಿದ್ಧನಾದ

**ದ್ವಿಜಾತ್** = ಬ್ರಾಹ್ಮಣನಿಂದ (ಇತರಾ ದೇವಿಯಲ್ಲಿ),

**ಮಹಿದಾಸಪೂಜ್ಯಚರಣಃ** = ಮಹಿದಾಸನೆಂಬ ಭಗವತ್ಪಾದಾಚಾರ್ಯನಾಗಿ

**ಅಭೂತ್** = ಅವತಾರ ಮಾಡಿದನು.

**ಯಃ** = ಯಾವ ಮಹಿದಾಸನು

**ಮಹೇತಿಮತಿ** = ಬಹಳವಾದ ಉಪದ್ರವಗಳಿಂದ ಕೂಡಿದ

**ಇಹ ಜಗತಿ** = ಈ ಪ್ರಪಂಚದಲ್ಲಿ

**ಪಾಪಶಾಂತಯೇ** = ಪಾಪ ಪರಿಹಾರಕ್ಕಾಗಿ

**ಬಹುಧಾ** = ಬಹಳವಾಗಿ

**ದೀಪ್ತ ಗೋಸ್ಥಿತಿಂ** = ಸ್ಪಷ್ಟವಾದ ವೈಷ್ಣವತಂತ್ರಶಾಸ್ತ್ರ ರೂಪವಾದ ಮಾತುಗಳ ಸ್ಥಿತಿಯನ್ನು

**ದಧೇ** = ಮಾಡಿದನೋ.

ತಾತ್ಪರ್ಯ— ವಿಷ್ಣುವಿನ ಯಶಸ್ಸನ್ನು ಶ್ರವಣ ಮಾಡುವುದು, ಮನನ ಮಾಡುವುದು ಮುಂತಾದ್ದರಿಂದ ಮನಸ್ಸಿನ ಪರಿಶುದ್ಧತೆಯನ್ನು ಗಳಿಸಿದ ಪ್ರಸಿದ್ಧನಾದ ಬ್ರಾಹ್ಮಣನೊಬ್ಬನಿದ್ದನು. ಶ್ರೀಮನ್ನಾರಾಯಣನು ಆ ಬ್ರಾಹ್ಮಣನಿಂದ ಇತರಾದೇವಿ ಎಂಬುವಳಲ್ಲಿ ಮಹಿದಾಸ ಭಗವತ್ಪಾದಾಚಾರ್ಯನಾಗಿ ಅವತರಿಸಿದನು. ಪರಮಾತ್ಮನಿಂದ ತತ್ವಶ್ರವಣ ಮಾಡುವ ಉತ್ಸವವುಳ್ಳ ಬ್ರಹ್ಮಾದಿಗಳು ಅವನಿಗೆ ದಾಸರಾದುದರಿಂದ ಆ ಪರಮಾತ್ಮನಿಗೆ 'ಮಹಿದಾಸ' ಎಂದು ಹೆಸರು. 'ಇತರಾ' ಎಂಬವಳ ಮಗನಾದ್ದರಿಂದ 'ಐತರೇಯ' ಎಂದೂ ಹೆಸರು. ಆ ಪರಮಾತ್ಮನು ನಾನಾ ವಿಧವಾದ ತಾಪಗಳಿಂದ, ಸಂಕಟಗಳಿಂದ, ಉಪದ್ರವಗಳಿಂದ ಮತ್ತು ಭ್ರಮ ಪ್ರಮಾದಾದಿಗಳಿಂದ ಕಷ್ಟಪಡುತ್ತಿರುವ ಸಾತ್ತ್ವಿಕರಿಗೆ ಅನುಗ್ರಹ ಮಾಡುತ್ತಾ ಅತಿ ಸ್ಪಷ್ಟವಾದ ವೈಷ್ಣವತಂತ್ರಶಾಸ್ತ್ರವನ್ನು ರಚಿಸಿದನು. ಇದರಿಂದ ''ಮಹಿದಾಸಾವತಾರ'' ಮತ್ತು ಆ ಅವತಾರದಿಂದ ಮಾಡಿದ ''ವಿಷ್ಣುಪ್ರತಿಪಾದಕ ಶಾಸ್ತ್ರರಚನ''ವೆಂಬ ಅವತಾರ ಪ್ರಯೋಜನ ಈ ಎರಡನ್ನು ಹೇಳಿದಂತಾಯಿತು.

**ಮಹಿದಾಸಾಽಭಿಧೋ ಜಜ್ಞೇ, ಇತರಾಯಾಸ್ತಪೋಬಲಾತ್ ।**
**ಸಾಕ್ಷಾತ್ ಸ ಭಗವಾನ್ ವಿಷ್ಣುಃ ಯಸ್ತಂತ್ರಂ ವೈಷ್ಣವಂ ವ್ಯಧಾತ್ ॥**

ಎಂದು ಬ್ರಹ್ಮಾಂಡ ಪುರಾಣದಲ್ಲಿ ಈ ವಿಷಯವನ್ನು ಉಲ್ಲೇಖಿಸಿದ್ದಾರೆ.

**ತೃತೀಯಮೃಷಿಸರ್ಗಂ ವೈ ದೇವರ್ಷಿತ್ವಮುಪೇತ್ಯ ಸಃ ।**
**ತಂತ್ರಂ ಸಾತ್ವತಮಾಚಷ್ಟ ನೈಷ್ಕರ್ಮ್ಯಂ ಕರ್ಮಣಾಂ ಯತಃ ॥**

ಎಂದು ಭಾಗವತದಲ್ಲಿಯೂ ಉಲ್ಲೇಖವಿದೆ.

ಶ್ರೀಕಲ್ಕಿ ಪಕ್ಷದಲ್ಲಿ –

ಅನ್ವಯ— ಸಃ ವಿದಿತಾತ್ ಅಮಲಾತ್ಮನಃ ವಿಷ್ಣುಯಶಸಃ ದ್ವಿಜಾತ್ ಅಭೂತ್, ಮಹಿದಾಸಪೂಜ್ಯಚರಣಃ ಯಃ ಇಹ ಜಗತಿ, ಪಾಪಶಾಂತಯೇ ಅತಿದೀಪ್ತಗೋಸ್ಥಿತಿಂ ಬಹುಧಾಮಹೇತಿಂ ದಧೇ ।

ಅನ್ವಯಾರ್ಥ—

ಸಃ = ಆ ನಾರಾಯಣನು

ವಿದಿತಾತ್ = ಪ್ರಸಿದ್ಧನಾದ

ಅಮಲಾತ್ಮನಃ = ಶುದ್ಧವಾದ ಮನಸ್ಸುಳ್ಳ

ವಿಷ್ಣುಯಶಸಃ = ವಿಷ್ಣು ಯಶಸ್ಸು ಎಂಬ

ದ್ವಿಜಾತ್ = ಬ್ರಾಹ್ಮಣನ ದೆಸೆಯಿಂದ

ಅಭೂತ್ = ಕಲ್ಕಿಯಾಗಿ ಅವತರಿಸಿದನು.

ಮಹಿದಾಸ ಪೂಜ್ಯಚರಣಃ = ಪರಮಾತ್ಮನ ದರ್ಶನವೆಂಬ ಉತ್ಸವದಿಂದ ಕೂಡಿದ ಪರಮಾತ್ಮನ ಸೇವಕರಾದ ಬ್ರಹ್ಮಾದಿ ದೇವತೆಗಳಿಂದ ಪೂಜ್ಯವಾದ ಪಾದಗಳುಳ್ಳ

ಯಃ = ಯಾವ ಕಲ್ಕಿಯು

ಇಹ ಜಗತಿ = ಈ ಪ್ರಪಂಚದಲ್ಲಿ

ಪಾಪಶಾಂತಯೇ = ಪಾಪಿಗಳಾದ ಕಳ್ಳರನ್ನು (ದರೋಡೆಕೋರರನ್ನು) ನಾಶಗೊಳಿಸಲು

ಅತಿದೀಪ್ತಗೋಸ್ಥಿತಿಂ = ಅತ್ಯಂತ ಪ್ರಕಾಶಮಾನವಾದ ವಜ್ರದ ರೀತಿಯುಳ್ಳ

ಬಹುಧಾಮ = ಹೆಚ್ಚು ಪ್ರಕಾಶವುಳ್ಳ

ಹೇತಿಂ = ಖಡ್ಗವೆಂಬ ಆಯುಧವನ್ನು

ದಧೇ = ಧರಿಸಿದನು (ಪ್ರಯೋಗಿಸಿದನು).

ತಾತ್ಪರ್ಯ— 'ಸಂಬಲ'ವೆಂಬ ಗ್ರಾಮದಲ್ಲಿ ಪ್ರಸಿದ್ಧನಾದ ''ವಿಷ್ಣುಯಶಸ್ಸು'' ಎಂಬ ಬ್ರಾಹ್ಮಣನಿದ್ದನು. ಶುದ್ಧಾಂತಃಕರಣನಾದ ಆ ಬ್ರಾಹ್ಮಣನನ್ನು ನಿಮಿತ್ತವಾಗಿ ಮಾಡಿಕೊಂಡು ಭಗವಂತನು ''ಕಲ್ಕಿ'' ಎಂಬ ಹೆಸರಿನಿಂದ ಅವತರಿಸಿದನು. ಪರಮಾತ್ಮನ ಅವತಾರ ದರ್ಶನವೆಂಬ ಉತ್ಸವವುಳ್ಳ ಅವನ ದಾಸರಾದ ಬ್ರಹ್ಮಾದಿ ದೇವತೆಗಳು ಆ ಕಲ್ಕಿಯ ಪಾದಗಳಿಗೆ ನಮಸ್ಕರಿಸಿ ಅವನನ್ನು ಪೂಜಿಸಿದರು. ಆಗ ಲೋಕದಲ್ಲಿ ಬಹು ಮಂದಿ ಕಳ್ಳರು, ದಸ್ಯುಗಳು, ಪಾಪಿಗಳೂ ತುಂಬಿಕೊಂಡಿದ್ದರು. ಪರಮಾತ್ಮನು ಅವರನ್ನೆಲ್ಲಾ ನಾಶ ಮಾಡಲು ಅವತರಿಸಿದ್ದರಿಂದ, ವಜ್ರದಂತೆ ಅತ್ಯಂತ ದೃಢವಾದ, ತೇಜಸ್ಸುಳ್ಳ ಖಡ್ಗವನ್ನು ಧರಿಸಿ ಅವರನ್ನೆಲ್ಲಾ ಸಂಹರಿಸಿದನು. ಇದರಿಂದ 'ಕಲ್ಕ್ಯವತಾರ' ಮತ್ತು 'ದಸ್ಯವಧ'ವೆಂಬ ಆ ಅವತಾರದ ಪ್ರಯೋಜನ ಎರಡನ್ನೂ ಹೇಳಿದಂತಾಯಿತು. ಕಲ್ಕಿ ಅವತಾರವು ಮುಂದೆ ಆಗಲಿದೆ. ಆದರೂ ಭವಿಷ್ಯತ್ ಕಾಲದ ವಿಷಯವನ್ನು ಆದಂತೆಯೇ ಇಟ್ಟುಕೊಂಡು ವರ್ಣಿಸಿದ್ದಾರೆಂದೂ ತಿಳಿಯಬೇಕು. ಅಥವಾ ಹಿಂದೆ ಆದ ಕಲ್ಕಿಯ ಅವತಾರವನ್ನು ವರ್ಣಿಸಿದ್ದಾರೆಂದೂ ಇಟ್ಟುಕೊಳ್ಳಬಹುದು.

**ಅಥಾಸೌ ಯುಗಸಂಧ್ಯಾಯಾಂ ದಸ್ಯುಪ್ರಾಯೇಷು ರಾಜಸು ।**
**ಜನಿತಾ ವಿಷ್ಣುಯಶಸೋ ನಾಮ್ನಾ ಕಲ್ಕೀ ಜಗತ್ಪತಿಃ ॥**

– ಎಂದು ಭಾಗವತದ 3ನೇ ಅಧ್ಯಾಯದ 25ನೇ ಶ್ಲೋಕದಲ್ಲಿ ಹೇಳಿದ್ದಾರೆ.

ವಿಗ್ರಹ—

ಮಹಿದಾಸಪೂಜ್ಯಚರಣಃ— ಮಹಃ ಏಷಾಂ ಅಸ್ತೀತಿ ಮಹಿನಃ, ಮಹಿನಶ್ಚ ತೇ ದಾಸಾಶ್ಚ ಮಹಿದಾಸಾಃ, ಮಹಿದಾಸೈಃ ಪೂಜ್ಯೌ ಚರಣೌ ಯಸ್ಯ ಸಃ ಮಹಿದಾಸಪೂಜ್ಯಚರಣಃ ।

ವಿಷ್ಣುಯಶಸಃ— ವಿಷ್ಣೋಃ ಯಶಃ ವಿಷ್ಣುಯಶಃ, ತಸ್ಮಾತ್ ವಿಷ್ಣುಯಶಸಃ ।

**ಅಮಲಾತ್ಮನಃ**— ಅಮಲಃ ಆತ್ಮಾ ಯಸ್ಯ ಸಃ ಅಮಲಾತ್ಮಾ, ತಸ್ಮಾತ್ ಅಮಲಾತ್ಮನಃ ।

**ಪಾಪಶಾಂತಯೇ**— ಪಾಪಾನಾಂ ಶಾಂತಿಃ ಪಾಪಶಾಂತಿಃ, ತಸ್ಯೈ ಪಾಪಶಾಂತಯೇ ।

**ಮಹೇತಿಮತಿ**— ಮಹತ್ಯಶ್ಚ ತಾಃ ಈತಯಶ್ಚ ಮಹೇತಯಃ, ಮಹೇತಯಃ ಅಸ್ಮಿನ್ ಸಂತೀತಿ ಮಹೇತಿಮತ್, ತಸ್ಮಿನ್ ಮಹೇತಿಮತಿ ।

**ದೀಪ್ತಗೋಸ್ಥಿತಿಂ**— ದೀಪ್ತಾಶ್ಚ ತಾಃ ಗಾವಶ್ಚ ದೀಪ್ತಗಾವಃ, ದೀಪ್ತಗವಾಂ ಸ್ಥಿತಿಃ ದೀಪ್ತಗೋಸ್ಥಿತಿಃ, ತಾಂ ದೀಪ್ತಗೋಸ್ಥಿತಿಂ । (ಅತ್ಯಂತಂ ದೀಪ್ತಾ ಅತಿದೀಪ್ತಾ, ಅತಿದೀಪ್ತಾ ಚ ಸಾ ಗೌಶ್ಚ ಅತಿದೀಪ್ತಗೌಃ ಅತಿದೀಪ್ತಗೋವತ್ ಸ್ಥಿತಿಃ ಯಸ್ಯಾಃ ಸಾ ಅತಿದೀಪ್ತಗೋಸ್ಥಿತಿಃ, ತಾಂ ಅತಿದೀಪ್ತಗೋಸ್ಥಿತಿಂ) ।

**ಬಹುಧಾಮಹೇತಿಂ**— ಬಹು ಧಾಮ ಯಸ್ಯಾಃ ಸಾ ಬಹುಧಾಮ್ನೀ, ಬಹುಧಾಮ್ನೀ ಚ ಸಾ ಹೇತಿಶ್ಚ ಬಹುಧಾಮಹೇತಿಃ, ತಾಂ ಬಹುಧಾಮಹೇತಿಂ ।

**ಕ್ರಿಯಾಪದ**— ಧಾರಣಪೋಷಣಾರ್ಥಕಾತ್ ಡುಧಾಞ್ ಧಾರಣಪೋಷಣಯೋಃ ಇತ್ಯಸ್ಮಾದ್ ಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಕರ್ತರಿ ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ದಧೇ'' ಇತಿ ರೂಪಮ್ । (ಅಭೂತ್ ಸರ್ಗ 4 ಶ್ಲೋ. 7 ರಲ್ಲಿ ಬಂದಿದೆ)

ದಧೇ ದಧಾತೇ ದಧಿರೇ, ದಧಿಷೇ ದಧಾಥೇ ದಧಿಧ್ವೇ, ದಧೇ ದಧಿವಹೇ ದಧಿಮಹೇ ॥

**ಪ್ರಯೋಗ**— ಯಃ ದೀಪ್ತಗೋಸ್ಥಿತಿಂ (ಬಹುಧಾಮ ಹೇತಿಂ) ದಧೇ (ಕರ್ತರಿ) । ಯೇನ ದೀಪ್ತ ಗೋಸ್ಥಿತಿಃ (ಬಹುಧಾಮ ಹೇತಿಃ) ದಧೇ (ಕರ್ಮಣಿ) ।

★ ★ ★

**ಅವತಾರಿಕಾ**— ಪರಮಾತ್ಮನ ಶ್ರೀಯಜ್ಞ ಮತ್ತು ಕಪಿಲ ಎಂಬ ಎರಡು ಅವತಾರಗಳನ್ನು ವರ್ಣಿಸುತ್ತಾರೆ.

**ಸುತಪೋರುಚೇರಯಮಪಾಪಕರ್ದಮಾ-**
**ನ್ನನು ಮಾನವೀತನಯತಾಮುಪೇಯಿವಾನ್ ।**
**ಸಮಯೇನ ಭೂರಿನಿಜಭಕ್ತಿಪೂರಿತಾನ್**
**ಸಮಜೀಜನತ್ ಸುಮನಸಃ ಸ ದೇವರಾಟ್ ॥ 36 ॥**

**ಪದಚ್ಛೇದ**— ಸುತಪೋರುಚೇಃ, ಅಯಂ, ಅಪಾಪಕರ್ದಮಾತ್, ನನು, ಮಾನವೀತನಯತಾಂ, ಉಪೇಯಿ-ವಾನ್, ಸಮಯೇನ, ಭೂರಿನಿಜಭಕ್ತಿಪೂರಿತಾನ್, ಸಮಜೀಜನತ್, ಸುಮನಸಃ, ಸಃ, ದೇವರಾಟ್ ।

ಶ್ರೀಯಜ್ಞನಾಮಕ ಪರಮಾತ್ಮನ ಪಕ್ಷದಲ್ಲಿ -

**ಅನ್ವಯ**— ಅಯಂ, ಅಪಾಪಕರ್ದಮಾತ್ ಸುತಪೋರುಚೇಃ, ಮಾನವೀತನಯತಾಂ ಉಪೇಯಿವಾನ್ ನನು, ಸಃ ಸಮಯೇನ ದೇವರಾಟ್, ಭೂರಿನಿಜಭಕ್ತಿಪೂರಿತಾನ್ ಸುಮನಸಃ ಅಜೀಜನತ್ ।

**ಅನ್ವಯಾರ್ಥ**—

**ಅಯಂ** = ಈ ನಾರಾಯಣನು

**ಅಪಾದಕರ್ದಮಾತ್** = ಪಾಪವೆಂಬ ಕೆಸರಿಲ್ಲದ

**ಸುತಪೋರುಚೇಃ** = ಒಳ್ಳೆಯ ತಪಸ್ಸುಳ್ಳ ರುಚಿಯೆಂಬ ಪ್ರಜಾಪತಿಯಿಂದ

**ಮಾನವೀ** = ಸ್ವಾಯಂಭುವಮನುವಿನ ಮಗಳಾದ ಆಕೂತಿಯ

**ತನಯತಾಂ** = ಪುತ್ರತ್ವವನ್ನು (ಮಗನಾಗುವಿಕೆಯನ್ನು)

**ಉಪೇಯಿವಾನ್ ನನು** = ಹೊಂದಿದನಷ್ಟೆ

**ಸಃ** = ಆ ರುಚಿ ಪ್ರಜಾಪತಿಯ ಮಗನಾದ ಯಜ್ಞನೆಂಬ ಪರಮಾತ್ಮನು

**ಸಮಯೇನ** = ಕಾಲಾಂತರದಲ್ಲಿ

**ದೇವರಾಟ್ (ಸನ್)** = ದೇವೇಂದ್ರನಾಗಿ

**ಭೂರಿನಿಜಭಕ್ತಿಪೂರಿತಾನ್** = ಅಧಿಕವಾಗಿ ತನ್ನಲ್ಲಿಯ ಭಕ್ತಿಯಿಂದ ಪೂರ್ಣರಾದ

**ಸುಮನಸಃ** = ದೇವತೆಗಳನ್ನು

**ಅಜೀಜನತ್** = (ದಕ್ಷಿಣೆಯೆಂಬ ಲಕ್ಷ್ಮೀದೇವಿಯಲ್ಲಿ) ಉಂಟುಮಾಡಿದನು.

**ತಾತ್ಪರ್ಯ**— ಪಾಪಲೇಶವಿಲ್ಲದ ರುಚಿ ಎಂಬ ತಪೋಧನನಾದ ಪ್ರಜಾಪತಿಯಿದ್ದನು. ಸ್ವಾಯಂಭುವ ಮನುವಿನ ಮಗಳಾದ ಆಕೂತಿಯೆಂಬವಳು ಅವನ ಪತ್ನಿಯಾಗಿದ್ದಳು. ಆ ನಾರಾಯಣನು ರುಚಿ ಪ್ರಜಾಪತಿಯಿಂದ ಆಕೂತಿ ದೇವಿ-ಯಲ್ಲಿ 'ಯಜ್ಞ' ಎಂಬ ಹೆಸರಿನಿಂದ ಅವತರಿಸಿದನು. ಲಕ್ಷ್ಮೀದೇವಿಯು 'ದಕ್ಷಿಣಾ' ಎಂಬ ಹೆಸರಿನಿಂದ ಅವತರಿಸಿ ಈ ಯಜ್ಞನೆಂಬ ಹೆಸರಿನ ಪರಮಾತ್ಮನ ಪತ್ನಿಯಾಗಿದ್ದಳು. ಈ ಯಜ್ಞನಾಮಕ ಪರಮಾತ್ಮನು ಕಾಲಾಂತರದಲ್ಲಿ ತಾನು ದೇವೇಂದ್ರನ ಪದವಿಯಲ್ಲಿದ್ದು ತನ್ನಲ್ಲಿ ಸ್ವಾಭಾವಿಕವಾದ ಅಧಿಕವಾದ ಭಕ್ತಿಯನ್ನು ಮಾಡುವ ಅನೇಕ ದೇವತೆಗಳನ್ನು ಆಕೂತಿಯಲ್ಲಿ ಮಕ್ಕಳನ್ನಾಗಿ ಪಡೆದನು. ಇದರಿಂದ ಯಜ್ಞಾವತಾರ ಮತ್ತು ದೇವೇಂದ್ರ ಪದವಿಯಲ್ಲಿದ್ದ ಅವನು ದೇವತೆ-ಗಳನ್ನು ಮಕ್ಕಳನ್ನಾಗಿ ಪಡೆದದ್ದು ಎಂಬ ಅವತಾರ ಪ್ರಯೋಜನವೂ ಸೂಚಿತವಾಯಿತು.

*ಕಪಿಲನಾಮಕ ಪರಮಾತ್ಮನ ಪಕ್ಷದಲ್ಲಿ –*

**ಅನ್ವಯ**— ಅಯಂ, ಸುತಪೋರುಚೇಃ ಅಪಾಪಕರ್ದಮಾತ್ ಮಾನವೀತನಯತಾಂ ಉಪೇಯಿವಾನ್ ನನು, ದೇವರಾಟ್ ಸಃ, ಸುಮನಸಃ ಸಮಯೇನ ಭೂರಿನಿಜಭಕ್ತಿಪೂರಿತಾನ್ ಸಮಜೀಜನತ್ ।

**ಅನ್ವಯಾರ್ಥ**—

**ಅಯಂ** = ಈ ನಾರಾಯಣನು

**ಸುತಪೋರುಚೇಃ** = ಒಳ್ಳೆ ತಪಸ್ಸಿನಲ್ಲಿ ಅಭಿಲಾಷೆಯುಳ್ಳ

**ಅಪಾಪಕರ್ದಮಾತ್** = ಪಾಪವಿಲ್ಲದ ಕರ್ದಮನೆಂಬ ಪ್ರಜಾಪತಿಯಿಂದ

**ಮಾನವೀತನಯತಾಂ** = ಮನುವಿನ ಮಗಳಾದ ದೇವಹೂತಿಯ ಪುತ್ರತ್ವವನ್ನು (ಮಗನಾಗುವಿಕೆಯನ್ನು)

**ಉಪೇಯಿವಾನ್ ನನು** = ಹೊಂದಿದನಷ್ಟೆ

**ದೇವರಾಟ್** = ದೇವೋತ್ತಮನಾದ

**ಸಃ** = ಆ ಕಪಿಲನೆಂಬ ಹೆಸರುಳ್ಳ ಪರಮಾತ್ಮನು

**ಸುಮನಸಃ** = ಒಳ್ಳೆಯ ಮನಸ್ಸುಳ್ಳ ದೇವತೆಗಳು, ಮುನಿಗಳು ಮೊದಲಾದ ಸಜ್ಜನರನ್ನು

**ಸಮಯೇನ** = ತಾನು ಮಾಡಿದ ಸಾಂಖ್ಯಯೋಗಶಾಸ್ತ್ರದಿಂದ

**ಭೂರಿ** = ಅಧಿಕವಾದ

**ನಿಜ** = ತನ್ನಲ್ಲಿ

**ಭಕ್ತಿಭೂರಿತಾನ್** = ಭಕ್ತಿಭರಿತರನ್ನಾಗಿ

**ಸಮಜೀಜನತ್** = ಉಂಟು ಮಾಡಿದನು.

**ತಾತ್ಪರ್ಯ**— ತಪಸ್ಸಿನಲ್ಲಿ ಅಭಿಲಾಷೆಯುಳ್ಳ ಪಾಪದೂರನಾದ 'ಕರ್ದಮ ಪ್ರಜಾಪತಿ' ಎಂಬುವನಿದ್ದನು. ಸ್ವಾಯಂ-ಭುವ ಮನುವಿನ ಮಗಳಾದ ದೇವಹೂತಿಯು ಅವನ ಹೆಂಡತಿಯಾಗಿದ್ದಳು. ಈ ದಂಪತಿಗಳಲ್ಲಿ ಶ್ರೀಮನ್ನಾರಾಯಣನು 'ಕಪಿಲ' ಎಂಬ ರೂಪದಿಂದ ಅವತರಿಸಿದನು. ಈ ಕಪಿಲ ನಾಮಕನಾದ ಪರಮಾತ್ಮನು ಸಾಂಖ್ಯಯೋಗ ಶಾಸ್ತ್ರವನ್ನು ರಚಿಸಿ ಸಜ್ಜನರಾದ ದೇವತೆಗಳನ್ನು, ಮುನಿಗಳನ್ನು ತನ್ನಲ್ಲಿ ಸ್ವಾಭಾವಿಕವಾದ ಭಕ್ತಿಯನ್ನು ಮಾಡುವಂತೆ ಮಾಡಿದನು.

**ವಿಗ್ರಹ**—

**ಅಪಾಪಕರ್ದಮಾತ್**— ಪಾಪಮೇವ ಕರ್ದಮಃ ಪಾಪಕರ್ದಮಃ, ನ ವಿದ್ಯತೇ ಪಾಪಕರ್ದಮಃ ಯಸ್ಯ ಸಃ ಅಪಾಪಕರ್ದಮಃ, ತಸ್ಮಾತ್ ಅಪಾಪಕರ್ದಮಾತ್ । (ನ ವಿದ್ಯಂತೇ ಪಾಪಾನಿ ಯಸ್ಯ ಸಃ ಅಪಾಪಃ, ಅಪಾಪಶ್ಚಾಸೌ ಕರ್ದಮಶ್ಚ ಅಪಾಪಕರ್ದಮಃ, ತಸ್ಮಾತ್ ಅಪಾಪಕರ್ದಮಾತ್) ।

**ಸುತಪೋರುಚೇಃ**— ಶೋಭನಂ ತಪಃ ಯಸ್ಯ ಸಃ ಸುತಪಾಃ, ಸುತಪಾಶ್ಚಾಸೌ ರುಚಿಶ್ಚ ಸುತಪೋರುಚಿಃ, ತಸ್ಮಾತ್ ಸುತಪೋರುಚೇಃ । (ಶೋಭನಂ ಚ ತತ್ ತಪಶ್ಚ ಸುತಪಃ, ಸುತಪಸಿ ರುಚಿಃ ಯಸ್ಯ ಸಃ ಸುತಪರುಚಿಃ ತಸ್ಯ । (ಸುತಪಾಶ್ಚಾಸೌ ರುಚಿಶ್ಚ ಸುತಪೋರುಚಿಃ, ತಸ್ಮಾತ್ ಸುತಪೋರುಚೇಃ) ।

**ಮಾನವೀತನಯತಾಂ**— ಮನೋಃ ಅಪತ್ಯಂ ಸ್ತ್ರೀ ಮಾನವೀ, ಮಾನವ್ಯಾಃ ತನಯಃ ಮಾನವೀತನಯಃ, ಮಾನವೀತನಯಸ್ಯ ಭಾವಃ ಮಾನವೀತನಯತಾ, ತಾಂ ಮಾನವೀತನಯತಾಂ ।

**ಭೂರಿನಿಜಭಕ್ತಿಪೂರಿತಾನ್**— ನಿಜಾ ಚ ಸಾ ಭಕ್ತಿಶ್ಚ ನಿಜಭಕ್ತಿಃ, ಭೂರಿಶ್ಚ ಸಾ ನಿಜಭಕ್ತಿಶ್ಚ ಭೂರಿನಿಜಭಕ್ತಿಃ, ಭೂರಿನಿಜಭಕ್ತ್ಯಾ ಪೂರಿತಾಃ ಭೂರಿನಿಜಭಕ್ತಿಪೂರಿತಾಃ, ತಾನ್ ಭೂರಿನಿಜಭಕ್ತಿಪೂರಿತಾನ್ । (ನಿಜೇ ಭಕ್ತಿಃ ನಿಜಭಕ್ತಿಃ, ಭೂರಿಶ್ಚ ಸಾ ನಿಜಭಕ್ತಿಶ್ಚ ಭೂರಿನಿಜಭಕ್ತಿಃ, ಭೂರಿನಿಜಭಕ್ತ್ಯಾ ಪೂರಿತಾಃ ಭೂರಿನಿಜ-ಭಕ್ತಿಪೂರಿತಾಃ, ತಾನ್ ಭೂರಿನಿಜಭಕ್ತಿಪೂರಿತಾನ್) ।

**ಸುಮನಸಃ**— ಸುಶೋಭನಂ ಮನಃ ಯೇಷಾಂ ತೇ ಸುಮನಸಃ, ತಾನ್ ಸುಮನಸಃ ।

**ಕ್ರಿಯಾಪದ**— ಸಮಜೀಜನತ್- 'ಸಮ್' ಇತ್ಯುಪಸರ್ಗಪೂರ್ವಕಾತ್ ಪ್ರಾದುರ್ಭಾವಾರ್ಥಕಾತ್ ಜನೀ ಪ್ರಾದುರ್ಭಾವೇ ಇತ್ಯಸ್ಮಾದ್ ಧಾತೋಃ ಣಿಜಂತಾತ್ ಸಕರ್ಮಕಾತ್ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ''ಸಮಜೀಜನತ್'' ಇತಿ ರೂಪಮ್ ।

| | | |
|---|---|---|
| ಸಮ್- ಅಜೀಜನತ್ | ಅಜೀಜನತಾಂ | ಅಜೀಜನನ್, |
| ಅಜೀಜನಃ | ಅಜೀಜನತಂ | ಅಜೀಜನತ, |
| ಅಜೀಜನಂ | ಅಜೀಜನಾವ | ಅಜೀಜನಾಮ ॥ |

**ಪ್ರಯೋಗ**— ದೇವರಾಟ್ ಸುಮನಸಃ ಸಮಜೀಜನತ್ । ಇದು ಣಿಜಂತ ಕರ್ತರಿ ಪ್ರಯೋಗ. ಲುಙ್ ದೇವರಾಜಃ ಸುಮನಸಃ ಸಮಜನಿಷತ (ಅಣಿಜಂತ ಪ್ರಯೋಗ) ಕರ್ತರಿ ಲುಙ್ (ದೇವೋತ್ತಮನ ದೆಸೆಯಿಂದ ದೇವತೆಗಳು ಹುಟ್ಟಿದರು). ದೇವರಾಜಾ ಸುಮನಸಃ ಸಮಜನಿಷತ (ಕರ್ಮಣಿ) ಲುಙ್ ।

★ ★ ★

ಅವತಾರಿಕಾ— ಈ ಶ್ಲೋಕದಲ್ಲಿ ಧನ್ವಂತರಿ ಮತ್ತು ಮೋಹಿನೀ ಅವತಾರಗಳನ್ನು ವರ್ಣಿಸುತ್ತಾರೆ.

**ಸುಬೃಹತ್ಪಯೋಧರಮಿಥಃಪ್ರಹಸಂತಿ-**
**ಪ್ರಕಟೀಭವತ್ಪರಮಯೌವನಾಕೃತಿಃ ।**
**ಅಸುರಾಹಿತಾಂ ವರವಿಲಾಸಿನೀತನುಃ**
**ಪ್ರದದಾವಮುಷ್ಯ ಸುರರಾಶಯೇ ಸುಧಾಮ್ ॥ 37 ॥**

**ಪದಚ್ಛೇದ—** ಸುಬೃಹತ್ಪಯೋಧರಮಿಥಃಪ್ರಸಂಹತಿಪ್ರಕಟೀಭವತ್‌ಪರಮಯೌವನಾಕೃತಿಃ, ಅಸುರಾಹಿತಾಂ, ವರ-ವಿಲಾಸಿನೀತನುಃ, ಪ್ರದದೌ, ಅಮುಷ್ಯ, ಸುರರಾಶಯೇ, ಸುಧಾಮ್ ।

**ಅನ್ವಯ—** ಅಮುಷ್ಯ ಸುಬೃಹತ್ಪಯೋಧರಮಿಥಃಪ್ರಸಂಹತಿಪ್ರಕಟೀಭವತ್‌ಪರಮಯೌವನಾಕೃತಿಃ, ವರವಿಲಾಸಿನೀ-ತನುಃ, ಅಸುರಾಹಿತಾಂ ಸುಧಾಂ ಸುರರಾಶಯೇ ಪ್ರದದೌ ।

***ಧನ್ವಂತರಿ ರೂಪದಲ್ಲಿ -***

**ಅನ್ವಯಾರ್ಥ—**

**ಅಮುಷ್ಯ** = ಈ ನಾರಾಯಣನ

**ಸುಬೃಹತ್ಪಯೋಧರಮಿಥಃಪ್ರಸಂಹತಿಪ್ರಕಟೀಭವತ್‌ಪರಮಯೌವನಾಕೃತಿಃ** = ಬಹಳ ದೊಡ್ಡ ನೀರು ಮಂದರ ಪರ್ವತ ಇವುಗಳ ಪರಸ್ಪರವಾಗಿ ಸಂಘರ್ಷದಿಂದ ವ್ಯಕ್ತವಾದ ಉತ್ತಮವಾದ ತಾರುಣ್ಯದ ಆಕಾರವುಳ್ಳ

**ವರವಿಲಾಸಿನೀತನುಃ** = ಉತ್ತಮವಾದ ಮಂದಹಾಸಾದಿ ಲೀಲೆಗಳುಳ್ಳ ಧನ್ವಂತರಿ ರೂಪವು

**ಅಸುರ** = ದೈತ್ಯರಿಗೆ

**ಅಹಿತಾಂ** = ಸೇರಲು ಯೋಗ್ಯವಲ್ಲದಿರುವ,

**ಸುಧಾಂ** = ಅಮೃತವನ್ನು

**ಸುರರಾಶಯೇ** = ದೇವತೆಗಳ ಸಮೂಹಕ್ಕೆ

**ಪ್ರದದೌ** = ಕೊಟ್ಟಿತು. (ಧನ್ವಂತರಿಯು ದೇವತೆಗಳ ಸಮೂಹಕ್ಕೆ ಅಮೃತವನ್ನು ಕೊಟ್ಟನು).

**ತಾತ್ಪರ್ಯ—** ಹಿಂದೆ ದೇವತೆಗಳೂ ದಾನವರೂ ಸೇರಿ, ಅಮೃತವನ್ನು ಪಡೆಯುವುದಕ್ಕಾಗಿ, ಕ್ಷೀರಸಮುದ್ರವನ್ನು ಕಡೆಯಲು ನಿಶ್ಚಯಿಸಿದರು. ಅವರು ಮಂದರಪರ್ವತವನ್ನು ತಂದು ಅದನ್ನು ಕ್ಷೀರಸಮುದ್ರದಲ್ಲಿ ಹಾಕಿ ಕಡಗೋಲನ್ನಾಗಿ ಮಾಡಿಕೊಂಡು, ವಾಸುಕಿಯನ್ನು ಹಗ್ಗವನ್ನಾಗಿ ಮಾಡಿಕೊಂಡು ಕಡೆಯಲಾರಂಭಿಸಿದರು. ಆಗ ಮೊದಲು ಅನೇಕ ರತ್ನಗಳು ಸಮುದ್ರದಿಂದ ಹುಟ್ಟಿದುವು. ಕೊನೆಗೆ ಅಮೃತವು ಹುಟ್ಟಿತು. ಶ್ರೀಮನ್ನಾರಾಯಣನೇ ಸುಂದರವಾದ ಪರಮತಾರುಣ್ಯ-ಪೂರ್ಣವಾದ ಧನ್ವಂತರಿರೂಪದಿಂದ ಪ್ರಕಟನಾಗಿ ಕ್ಷೀರಸಮುದ್ರದ ಹಾಲು ಮತ್ತು ಮಂದರಪರ್ವತದ ಘರ್ಷಣದಿಂದ ಹುಟ್ಟಿದ ಅಮೃತವನ್ನು ಸುವರ್ಣಕಲಶದಲ್ಲಿಟ್ಟುಕೊಂಡು ಬಂದು, ಈ ಅಮೃತವು ದೈತ್ಯರಿಗೆ ಸೇವಿಸಲು ಯೋಗ್ಯವಲ್ಲವೆಂದು ಸೂಚಿಸುತ್ತಾ, ಮೊದಲು ಆ ಅಮೃತ ಕಲಶವನ್ನು ದೇವತೆಗಳಿಗೆ ಕೊಟ್ಟನು.

***ಮೋಹಿನೀ ರೂಪದಲ್ಲಿ -***

**ಅನ್ವಯಾರ್ಥ—**

**ಅಮುಷ್ಯ** = ಈ ನಾರಾಯಣನು

**ಸುಬೃಹತ್** = ಬಹಳ ದೊಡ್ಡದಾದ

**ಪಯೋಧರಮಿಥಃಪ್ರಸಂಹತಿಪ್ರಕಟೀಭವತ್‌ಪರಮಯೌವನಾಕೃತಿಃ** = ಸ್ತನಗಳ ಅನ್ಯೋನ್ಯವಾಗಿ ತಿಕ್ಕಾಟದಿಂದ ಸ್ಪಷ್ಟವಾಗುತ್ತಿರುವ ಉತ್ತಮವಾದ ತಾರುಣ್ಯದ ಆಕಾರವುಳ್ಳ

**ವರ** = ಉತ್ತಮವಾದ

**ವಿಲಾಸಿನೀ** = ಹಾವಭಾವ ಪೂರ್ಣವಾದ ಸ್ತ್ರೀಯ

**ತನುಃ** = ರೂಪವು (ಮೋಹಿನೀ ರೂಪವು),

**ಅಸುರ ಅಹಿತಾಂ** = ದೈತ್ಯರಲ್ಲಿ ಇಡಲ್ಪಟ್ಟ

**ಸುಧಾಂ** = ಅಮೃತವನ್ನು

**ಸುರರಾಶಯೇ** = ದೇವತೆಗಳ ಸಮೂಹಕ್ಕೆ

**ಪ್ರದದೌ** = ಕೊಟ್ಟಿತು. (ಅಸುರರು ಬಲಾತ್ಕಾರದಿಂದ ತಮ್ಮ ವಶಕ್ಕೆ ತೆಗೆದುಕೊಂಡಿದ್ದ ಅಮೃತ ಕಲಶವನ್ನು ತಾನು ತೆಗೆದುಕೊಂಡು ಮೋಹಿನಿಯ ರೂಪಧಾರಿಯಾದ ಪರಮಾತ್ಮನು ದೇವತೆಗಳಿಗೆ ಅಮೃತಪಾನ ಮಾಡಿಸಿದನು.)

**ತಾತ್ಪರ್ಯ—** ಅಸುರರು ಅಮೃತ ಕಲಶವನ್ನು ದೇವತೆಗಳಿಂದ ಕಿತ್ತುಕೊಂಡರು, ತಾವೇ ಅಮೃತವನ್ನು ಕುಡಿಯಬೇಕೆಂದು ಪ್ರಯತ್ನ ಪಟ್ಟರು. ಆಗ ಶ್ರೀಮನ್ನಾರಾಯಣನು ಈ ಅಸುರರಲ್ಲಿರುವ ಅಮೃತವನ್ನು ಬೇರೆ ಯಾವ ರೀತಿಯಿಂದಲೂ ಪಡೆಯಲು ಸಾಧ್ಯವಿಲ್ಲವೆಂದು ಭಾವಿಸಿ ಅವರನ್ನು ವಂಚಿಸಬೇಕೆಂದು ನಿರ್ಧರಿಸಿದನು. ಆ ಶ್ರೀಮನ್ನಾರಾಯಣನು ಮೋಹಿನೀ ರೂಪವನ್ನು ತಾಳಿದನು. ಉತ್ತಮವಾದ ದೊಡ್ಡ ಸ್ತನಗಳು ಪರಸ್ಪರ ಘರ್ಷಿಸುತ್ತಾ ಇರುವ ಆ ಮೋಹಿನೀ ರೂಪವು ದೈತ್ಯರಿಗೆ ಅತ್ಯಂತ ಮೋಹಕವಾಗಿತ್ತು. ಶ್ರೀಹರಿಯು ಈ ಮೋಹಿನೀ ರೂಪದ ಹಾವಭಾವಗಳಿಂದ ದೈತ್ಯರನ್ನು ಮೋಹಗೊಳಿಸಿ ಅವರ ಕೈಯಲ್ಲಿದ್ದ ಅಮೃತ ಕಲಶವನ್ನು ತಾನು ಕೈಗೆ ತೆಗೆದುಕೊಂಡನು. ದೇವತೆಗಳನ್ನು ದೈತ್ಯರನ್ನು ಎರಡು ಸಾಲಾಗಿ ಕುಳ್ಳಿರಿಸಿ ಮೊದಲು ದೇವತೆಗಳಿಗೆ ಅಮೃತವನ್ನು ಕುಡಿಸಿದನು. ಅನಂತರ ಅಮೃತಪಾನದಿಂದ ಬಲಶಾಲಿಗಳಾದ ದೇವತೆಗಳಿಂದ ದೈತ್ಯರನ್ನು ಪರಾಜಯಗೊಳಿಸಿ ಪಾತಾಳಲೋಕಕ್ಕೆ ಅಟ್ಟಿದನು. ಈ ರೀತಿ, ಯೋಗ್ಯರಿಗೆ ಮಾತ್ರವೇ ಅಮೃತವನ್ನು ಕೊಟ್ಟ ಮೋಹಿನೀ ರೂಪನಾದ ನಾರಾಯಣನೇ ಇವನು ಎಂದು ಆಚಾರ್ಯರು ಮನಸ್ಸಿನಲ್ಲಿ ಧ್ಯಾನಿಸಿದರು.

**ವಿಗ್ರಹ—**

**ಸುಬೃಹತ್ಪಯೋಧರಮಿಥಃಪ್ರಸಂಹತಿಪ್ರಕಟೀಭವತ್‌ಪರಮಯೌವನಾಕೃತಿಃ—** (ಹಯಗ್ರೀವಪಕ್ಷದಲ್ಲಿ) ಪಯಶ್ಚ ಧರಶ್ಚ ಪಯೋಧರೌ, ಅತಿಶಯೇನ ಬೃಹಂತೌ ಸುಬೃಹಂತೌ, ಸುಬೃಹಂತೌ ಚ ತೌ ಪಯೋಧರೌ ಚ ಸುಬೃಹತ್‌ಪಯೋಧರೌ, ಸುಬೃಹತ್‌ಪಯೋಧರಯೋಃ ಮಿಥಃ ಪ್ರಸಂಹತಿಃ ಸುಬೃಹತ್‌ಪಯೋಧರಮಿಥಃಪ್ರಸಂಹತಿಃ, ಪರಮಂ ಯೌವನಂ ಯಸ್ಯಾಃ ಸಾ ಪರಮಯೌವನಾ, ಪರಮಯೌವನಾ ಚ ಸಾ ಆಕೃತಿಶ್ಚ ಪರಮಯೌವನಾಕೃತಿಃ, ಸುಬೃಹತ್ ಪಯೋಧರಮಿಥಃಪ್ರಸಂಹತಿ-ಪ್ರಕಟೀಭವತ್‌ಪರಮಯೌವನಾಕೃತಿಃ । (ಮೋಹಿನೀ ಪಕ್ಷದಲ್ಲಿ) ಧರತಃ ಇತಿ ಧರೌ, ಪಯಸಾಂ ಧರೌ ಪಯೋಧರೌ, ಸುಬೃಹಂತೌ ಚ ತೌ ಪಯೋಧರೌ ಚ ಸುಬೃಹತ್‌ಪಯೋಧರೌ, ಸುಬೃಹತ್-ಪಯೋಧರಯೋಃ ಮಿಥಃ ಪ್ರಸಂಹತಿಃ ಸುಬೃಹತ್‌ಪಯೋಧರಮಿಥಃಪ್ರಸಂಹತಿಃ, ಸುಬೃಹತ್-ಪಯೋಧರಮಿಥಃಪ್ರಸಂಹತ್ಯಾ ಪ್ರಕಟೀಭವಂತೀ ಪರಮಯೌವನಾ ಆಕೃತಿಃ ಯಸ್ಯಾಃ ಸಾ ಸುಬೃಹತ್ಪ=ಯೋಧರಮಿಥಃಪ್ರಸಂಹತಿಪ್ರಕಟೀಭವತ್‌ಪರಮಯೌವನಾಕೃತಿಃ ।

**ವರವಿಲಾಸಿನೀತನುಃ—** ವರಶ್ಚಾಸೌ ವಿಲಾಸಶ್ಚ ವರವಿಲಾಸಃ, ವರವಿಲಾಸಃ ಅಸ್ಯಾಃ ಅಸ್ತೀತಿ ವರವಿಲಾಸಿನೀ । (ಮೋಹಿನೀ ಪಕ್ಷದಲ್ಲಿ) ವಿಲಾಸಃ ಅಸ್ಯಾಃ ಅಸ್ತೀತಿ ವಿಲಾಸಿನೀ, ವರಾ ಚ ಸಾ ವಿಲಾಸಿನೀ ಚ ವರ-ವಿಲಾಸಿನೀ, ವರವಿಲಾಸಿನ್ಯಾಃ ತನುಃ ವರವಿಲಾಸಿನೀತನುಃ । (ವರವಿಲಾಸಿನೀ ಚ ಸಾ ತನುಶ್ಚ ವರ-ವಿಲಾಸಿನೀತನುಃ ಇತಿ ವಾ) ।

**ಅಸುರಾಹಿತಾಂ—** ಅಸುರಾಣಾಂ ಅಹಿತಾ ಅಸುರಾಹಿತಾ, (ಅಸುರೇಷು ಅಹಿತಾ ಅಸುರಾಹಿತಾ), ತಾಂ ಅಸುರಾಹಿತಾಂ ।

**ಸುರರಾಶಯೇ—** ಸುರಾಣಾಂ ರಾಶಿಃ ಸುರರಾಶಿಃ, ತಸ್ಮೈ ಸುರರಾಶಯೇ ।

**ಕ್ರಿಯಾಪದ—** ಪ್ರದದೌ- 'ಪ್ರ' ಇತ್ಯುಪಸರ್ಗಪೂರ್ವಕಾತ್ ಡುದಾಞ್ ದಾನೇ ಇತಿ ದಾನಾರ್ಥಕಾತ್ ದಾಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ''ಪ್ರದದೌ'' ಇತಿ ರೂಪಮ್ ।

ಪ್ರ-ದದೌ ದದತುಃ ದದುಃ, ದದಿಥ-ದದಾಥ ದದಥುಃ ದದ, ದದೌ ದದಿವ ದದಿಮ ॥

**ಪ್ರಯೋಗ—** ಅಮುಷ್ಯ, ವರವಿಲಾಸಿನೀತನುಃ ಸುರರಾಶಯೇ ಸುಧಾಂ ಪ್ರದದೌ (ಕರ್ತರಿ) । ಅಮುಷ್ಯ ವರ-ವಿಲಾಸಿನೀತನ್ವಾ ಸುರರಾಶಯೇ ಸುಧಾ ಪ್ರದದೇ (ಕರ್ಮಣಿ) ।

★ ★ ★

**ಅವತಾರಿಕಾ—** ಈಗ ದತ್ತಾತ್ರೇಯ ಮತ್ತು ಸನತ್ಕುಮಾರಾವತಾರವನ್ನು ವರ್ಣಿಸುತ್ತಾರೆ.

**ಸುಜನಾಯ ದತ್ತಪದ ಆತ್ಮಶುದ್ಧಿದಃ**
**ಸುಕುಮಾರರೂಪ್ಯಭವದೇಷ ಶಾಶ್ವತಃ ।**
**ಅನಸೂಯಯಾ ಶುಚಿಮನೀಷಯಾ ಧೃತಃ**
**ಪರಮಾದರೇಣ ಮುನಿಪುಂಗವೋಢಯಾ ॥ 38 ॥**

**ಪದಚ್ಛೇದ—** ಸುಜನಾಯ, ದತ್ತಪದಃ, ಆತ್ಮಶುದ್ಧಿದಃ, ಸುಕುಮಾರರೂಪೀ, ಅಭವತ್, ಏಷಃ, ಶಾಶ್ವತಃ, ಅನಸೂಯಯಾ, ಶುಚಿಮನೀಷಯಾ, ಧೃತಃ, ಪರಮಾದರೇಣ, ಮುನಿಪುಂಗವೋಢಯಾ ।

**ದತ್ತಾತ್ರೇಯ ಪಕ್ಷದಲ್ಲಿ -**

**ಅನ್ವಯ—** ಸುಜನಾಯ ಆತ್ಮಶುದ್ಧಿದಃ, ಶಾಶ್ವತಃ ಏಷಃ, ಮುನಿಪುಂಗವೋಢಯಾ ಶುಚಿಮನೀಷಯಾ ಅನಸೂಯಯಾ, ಪರಮಾದರೇಣ ಧೃತಃ, ಸುಕುಮಾರರೂಪೀ ದತ್ತಪದಃ ಅಭವತ್ ।

**ಅನ್ವಯಾರ್ಥ—**

**ಸುಜನಾಯ** = ಸಜ್ಜನವರ್ಗಕ್ಕೆ
**ಆತ್ಮಶುದ್ಧಿದಃ** = ಅಂತಃಕರಣ ಶುದ್ಧಿಯನ್ನು ಉಂಟು ಮಾಡುವ
**ಶಾಶ್ವತಃ** = ಯಾವಾಗಲೂ ಒಂದೇ ರೀತಿಯಲ್ಲಿರುವ (ನಾಶ ರಹಿತನಾದ, ನಿತ್ಯನಾದ)
**ಏಷಃ** = ಈ ನಾರಾಯಣನು
**ಮುನಿಪುಂಗವೋಢಯಾ** = ಮುನಿಶ್ರೇಷ್ಠರಾದ ಅತ್ರಿ ಮುನಿಗಳಿಂದ ಮದುವೆ ಮಾಡಿಕೊಳ್ಳಲ್ಪಟ್ಟ
**ಶುಚಿಮನೀಷಯಾ** = ಶುದ್ಧವಾದ ಜ್ಞಾನವುಳ್ಳ
**ಅನಸೂಯಯಾ** = ಅನಸೂಯಾ ದೇವಿಯಿಂದ
**ಪರಮಾದರೇಣ** = ಅತಿಶಯವಾದ ಪ್ರೀತಿಯಿಂದ
**ಧೃತಃ** = ಗರ್ಭದಲ್ಲಿ ಧರಿಸಲ್ಪಟ್ಟ
**ಸುಕುಮಾರರೂಪೀ** = ಕೋಮಲವಾದ ಆಕಾರವುಳ್ಳ
**ದತ್ತಪದಃ** = ದತ್ತಾತ್ರೇಯನೆಂಬ ಹೆಸರುಳ್ಳವನಾಗಿ
**ಅಭವತ್** = ಆದನು.

**ತಾತ್ಪರ್ಯ**— ಈ ನಾರಾಯಣನು ತತ್ತ್ವೋಪದೇಶಕನಾದುದರಿಂದ ಮನಸ್ಸಿಗೆ ನೈರ್ಮಲ್ಯವನ್ನು ಕೊಡುತ್ತಾನೆ. ಸಜ್ಜನರ ಮನಸ್ಸನ್ನು ಶೋಧಿಸುತ್ತಾನೆ. ಇವನು ನಿತ್ಯನು, ಯಾವಾಗಲೂ ಒಂದೇ ರೀತಿಯಾಗಿ ಇರತಕ್ಕವನು. ಹಿಂದೆ 'ಅತ್ರಿ' ಎಂಬ ಮುನಿಗಳಿಗೆ 'ಅನಸೂಯಾ' ಎಂಬ ಸಾಧ್ವೀಮಣಿಯಾದ ಪತ್ನಿಯಿದ್ದಳು. ಅವಳ ಭಕ್ತಿಗೆ ಮೆಚ್ಚಿ ಈ ನಾರಾಯಣನು ಲೀಲೆಯಿಂದ ಅವಳ ಗರ್ಭದಲ್ಲಿ ಆವಿರ್ಭೂತನಾದನು. ಅವಳು ಪರಮ ಭಕ್ತಿಯಿಂದ ಈ ಹರಿಯನ್ನು ತನ್ನ ಗರ್ಭದಲ್ಲಿ ಧರಿಸಿದಳು. ಶ್ರೀಮನ್ನಾರಾಯಣನು ಅನುಸೂಯೆಯ ಮಗುವಾಗಿ ಪ್ರಾದುರ್ಭವಿಸಿ 'ದತ್ತಾತ್ರೇಯ'ನೆಂಬ ಹೆಸರನ್ನು ಪಡೆದನು. ಆ ದತ್ತಾತ್ರೇಯನು ಕಾರ್ತವೀರ್ಯಾರ್ಜುನನೇ ಮೊದಲಾದವರಿಗೆ ತತ್ತ್ವೋಪದೇಶವನ್ನು ಮಾಡಿದನು. ಆ ದತ್ತಾತ್ರೇಯನೇ ನಾರಾಯಣನು.

**ಸನತ್ಕುಮಾರ ಪಕ್ಷದಲ್ಲಿ -**

**ಅನ್ವಯ**— ಶಾಶ್ವತಃ ಏಷಃ, ಅನಸೂಯಯಾ ಮುನಿಪುಂಗವೋಢಯಾ ಶುಚಿಮನೀಷಯಾ, ಪರಮಾದರೇಣ ಧೃತಃ, ಸುಜನಾಯ ದತ್ತಪದಃ ಆತ್ಮಶುದ್ಧಿದಃ ಸುಕುಮಾರರೂಪೀ ಅಭವತ್ ।

**ಅನ್ವಯಾರ್ಥ**—

**ಶಾಶ್ವತಃ** = ನಾಶವಿಲ್ಲದ

**ಏಷಃ** = ಈ ಶ್ರೀಮನ್ನಾರಾಯಣನು

**ಅನಸೂಯಯಾ** = ಹೊಟ್ಟೆಕಿಚ್ಚು ಇಲ್ಲದ

**ಮುನಿಪುಂಗವೋಢಯಾ** = ಮುನಿಶ್ರೇಷ್ಠರಿಂದ ಸಂಪಾದಿಸಲ್ಪಟ್ಟ

**ಶುಚಿಮನೀಷಯಾ** = ಶುದ್ಧವಾದ ಜ್ಞಾನದಿಂದ,

**ಪರಮಾದರೇಣ** = ಅತಿಶಯವಾದ ಭಕ್ತಿಯಿಂದ,

**ಧೃತಃ** = ಧ್ಯಾನದ ಮೂಲಕವಾಗಿ ಹೃದಯದಲ್ಲಿ ಧರಿಸಲ್ಪಟ್ಟ

**ಸುಜನಾಯ** = ಸಾತ್ತ್ವಿಕರಾದ ಜನರಿಗೆ

**ದತ್ತಪದಃ** = ಕೊಡಲ್ಪಟ್ಟ ಮೋಕ್ಷಾದಿ ಸ್ಥಾನವುಳ್ಳ,

**ಆತ್ಮಶುದ್ಧಿದಃ** = ಅಂತಃಕರಣಕ್ಕೆ ಪವಿತ್ರತೆಯನ್ನುಂಟುಮಾಡುವ

**ಸುಕುಮಾರರೂಪೀ** = ಸನತ್ಕುಮಾರನೆಂಬ ರೂಪವುಳ್ಳವನಾಗಿ

**ಅಭವತ್** = ಆದನು.

**ತಾತ್ಪರ್ಯ**— ಈ ನಾರಾಯಣನು ಸಜ್ಜನರ ಮನಸ್ಸನ್ನು ಶುದ್ಧಿಗೊಳಿಸಿ ಅವರ ಮನಸ್ಸಿನಲ್ಲಿ ನೆಲೆಸುತ್ತಾನೆ. ಇವನು ನಿತ್ಯನು. ಮುನಿಶ್ರೇಷ್ಠರು ಹೊಟ್ಟೆಕಿಚ್ಚು ಮುಂತಾದ ದೋಷವಿಲ್ಲದ ಶುದ್ಧ ಮನಸ್ಸಿನಿಂದ, ಭಕ್ತಿಯಿಂದ ಈ ಪರಮಾತ್ಮನನ್ನು ಧ್ಯಾನಿಸುತ್ತಾರೆ. ಅಂತಹ ಈ ನಾರಾಯಣನೇ ಹಿಂದೆ ''ಭಗವಂತನೇ! ನಮಗೆ ಜ್ಞಾನೋಪದೇಶ ಮಾಡಲು ಬಾ'' ಎಂದು ಮುನಿಗಳು ಶುದ್ಧಾಂತಃಕರಣದಿಂದ ಪ್ರಾರ್ಥಿಸಿದಾಗ, ಆ ಮುನಿಗಳ ಎದುರು 'ಸನತ್ಕುಮಾರ' ಎಂಬ ರೂಪದಿಂದ ಪ್ರಾದುರ್ಭವಿಸಿ ಮುನಿಗಳಿಗೆ ತತ್ತ್ವೋಪದೇಶವನ್ನು ಮಾಡಿ ಅವರಿಗೆ ಮೋಕ್ಷಾದಿಸ್ಥಾನವನ್ನು ಕೊಟ್ಟನು. ಅಂತಹ ಸನತ್ಕುಮಾರನೇ ಇವನು.

**ವಿಗ್ರಹ**—

**ಸುಜನಾಯ**— ಶೋಭನಶ್ಚಾಸೌ ಜನಶ್ಚ ಸುಜನಃ, ತಸ್ಮೈ ಸುಜನಾಯ ।

**ದತ್ತಪದಃ**— ದತ್ತ ಇತಿ ಪದಂ ಯಸ್ಯ ಸಃ ದತ್ತಪದಃ । (ದತ್ತಂ ಪದಂ ಯೇನ ಸಃ ದತ್ತಪದಃ) ।

**ಆತ್ಮಶುದ್ಧಿದಃ**— ಆತ್ಮನಃ ಶುದ್ಧಿಃ ಆತ್ಮಶುದ್ಧಿಃ, ತಾಂ ದದಾತೀತಿ ಆತ್ಮಶುದ್ಧಿದಃ ।

**ಸುಕುಮಾರರೂಪೀ—** ಸುಕುಮಾರಂ ಚ ತತ್ ರೂಪಂ ಚ ಸುಕುಮಾರರೂಪಂ, ತತ್ ಅಸ್ಯ ಅಸ್ತೀತಿ ಸುಕುಮಾರರೂಪೀ । (ಸುಕುಮಾರಃ ಇತಿ ರೂಪಂ ಸುಕುಮಾರರೂಪಂ, ತತ್ ಅಸ್ಯ ಅಸ್ತೀತಿ ಸುಕುಮಾರರೂಪೀ) ।

**ಅನಸೂಯಯಾ—** ನ ವಿದ್ಯತೇ ಅಸೂಯಾ ಯಸ್ಯಾಃ ಸಾ ಅನಸೂಯಾ, ತಯಾ ಅನಸೂಯಯಾ ।

**ಶುಚಿಮನೀಷಯಾ—** ಶುಚಿಃ ಮನೀಷಾ ಯಸ್ಯಾಃ ಸಾ ಶುಚಿಮನೀಷಾ, ತಯಾ ಶುಚಿಮನೀಷಯಾ । (ಶುಚಿಶ್ಚ ಸಾ ಮನೀಷಾ ಚ ಶುಚಿಮನೀಷಾ, ತಯಾ ಶುಚಿಮನೀಷಯಾ) ।

**ಪರಮಾದರೇಣ—** ಪರಮಶ್ಚಾಸೌ ಆದರಶ್ಚ ಪರಮಾದರಃ, ತೇನ ಪರಮಾದರೇಣ ।

**ಮುನಿಪುಂಗವೋಢಯಾ—** ಮುನೀನಾಂ ಪುಂಗವಃ ಮುನಿಪುಂಗವಃ, ಮುನಿಪುಂಗವೇನ ಊಢಾ ಮುನಿ-ಪುಂಗವೋಢಾ, ತಯಾ ಮುನಿಪುಂಗವೋಢಯಾ । (ಮುನಿಪುಂಗವೈಃ ಊಢಾ ಮುನಿಪುಂಗವೋಢಾ, ತಯಾ ಮುನಿಪುಂಗವೋಢಯಾ) ।

**ಕ್ರಿಯಾಪದ—** ಅಭವತ್ ಭೂಧಾತು ಲಙ್ ।

**ಪ್ರಯೋಗ—** ಏಷಃ ದತ್ತಪದಃ (ಸುಕುಮಾರರೂಪೀ) ಅಭವತ್ (ಕರ್ತರಿ) । ಏತೇನ ದತ್ತಪದೇನ (ಸುಕುಮಾರ ರೂಪಿಣಾ) ಅಭೂಯತ (ಕರ್ಮಣಿ) ।

★ ★ ★

**ಅವತಾರಿಕಾ—** ಋಷಭಾವತಾರ ಮತ್ತು ಹಂಸಾವತಾರಗಳನ್ನು ವರ್ಣಿಸುತ್ತಾರೆ.

**ದಯಿತಃ ಸತಾಮೃಷಭ ಏಷ ಭೂಧರೋ**
**ವಪುರುದ್ವಹನ್ ಪರಮಹಂಸಲಕ್ಷಣಮ್ ।**
**ವ್ಯಹರದ್ ವಲಕ್ಷತಮಪಕ್ಷಶೋಭನಂ**
**ಪರತತ್ತ್ವಲಿಪ್ಸುಸನಕಾದಿವಂದಿತಃ ॥ 39 ॥**

**ಪದಚ್ಛೇದ—** ದಯಿತಃ, ಸತಾಂ, ಋಷಭಃ, ಏಷಃ, ಭೂಧರಃ, ವಪುಃ, ಉದ್ವಹನ್, ಪರಮಹಂಸಲಕ್ಷಣಂ, ವ್ಯಹರತ್, ವಲಕ್ಷತಮಪಕ್ಷಶೋಭನಂ, ಪರತತ್ತ್ವಲಿಪ್ಸುಸನಕಾದಿವಂದಿತಃ ।

**ಅನ್ವಯ—** ಸತಾಂ ದಯಿತಃ ಏಷಃ, ಋಷಭಃ ಭೂಧರಃ (ಋಷಭಃ ಭೂಧರಃ ಏಷಃ) ವಲಕ್ಷತಮಪಕ್ಷಶೋಭನಂ ಪರಮಹಂಸಲಕ್ಷಣಂ, ವಪುಃ ಉದ್ವಹನ್, ಪರತತ್ತ್ವಲಿಪ್ಸುಸನಕಾದಿವಂದಿತಃ ವ್ಯಹರತ್ ।

**ಅನ್ವಯಾರ್ಥ— (ಋಷಭಾವತಾರ)**

**ಸತಾಂ** = ಸಜ್ಜನರಿಗೆ

**ದಯಿತಃ** = ಪ್ರಿಯನಾದ

**ಏಷಃ** = ಈ ನಾರಾಯಣನು

**ಋಷಭಃ** = ಋಷಭನೆಂಬ

**ಭೂಧರಃ** = ರಾಜನಾಗಿ,

**ವಲಕ್ಷತಮ ಪಕ್ಷ ಶೋಭನಂ** = ಅತ್ಯಂತ ಶುದ್ಧವಾದ ಸಿದ್ಧಾಂತದಿಂದ ಮಂಗಳಕರವಾದ

**ಪರಮಹಂಸಲಕ್ಷಣಂ** = ಯತಿಯ ಚಿಹ್ನೆಯುಳ್ಳ

**ವಪುಃ** = ಶರೀರವನ್ನು

**ಉದ್ವಹನ್** = ಧರಿಸಿದವನಾಗಿ,

**ಪರತತ್ತ್ವ** = ಸರ್ವೋತ್ತಮ ತತ್ತ್ವವನ್ನು

**ಲಿಪ್ಸುಸನಕಾದಿ ವಂದಿತಃ** = ತಿಳಿಯುವ ಮತ್ತು ಹೊಂದುವ ಇಚ್ಛೆಯುಳ್ಳ ಸನಕ ಮುಂತಾದ ಮುನಿಗಳಿಂದ ಸ್ತೋತ್ರ ಮಾಡಲ್ಪಟ್ಟವನಾಗಿ

**ವ್ಯಹರತ್** = ವಿಹರಿಸಿದನು.

**ತಾತ್ಪರ್ಯ**— ಈ ಶ್ರೀಮನ್ನಾರಾಯಣನು ಸಾತ್ತ್ವಿಕರಾದ ಭಕ್ತರಿಗೆ ಅತ್ಯಂತ ಪ್ರೀತಿಪಾತ್ರನು. ಅಂತಹ ಮುಕ್ತಿಯೋಗ್ಯರಿಗೆ ಅತ್ಯಂತ ಶುದ್ಧವಾದ ಸಿದ್ಧಾಂತವನ್ನು ಬೋಧಿಸುವ ಇವನು ಪರಮಹಂಸ ಸಂನ್ಯಾಸಿಯ ಅವತಾರವನ್ನು ತಾಳಿದನು. ಆಗ ಈ ಪರಮಾತ್ಮನು ಜ್ಞಾನಾಪೇಕ್ಷಿಗಳಾದ ಸನಕಾದಿ ಮುನಿಗಳಿಗೆ ಸರ್ವೋತ್ತಮವಾದ ತತ್ತ್ವಜ್ಞಾನವನ್ನು ಉಪದೇಶಿಸುತ್ತಾ ವಿಹರಿಸಿದನು. ಋಷಭಾವತಾರ ಮಾಡಿ ಅರಸನಾಗಿ ಧರ್ಮದಿಂದ ರಾಜ್ಯವನ್ನಾಳಿ, ಕೊನೆಗೆ ಸನ್ನ್ಯಾಸಾಶ್ರಮವನ್ನು ಪಡೆದು ಸನಕಾದಿಗಳಿಗೆ ತತ್ತ್ವೋಪದೇಶವನ್ನು ಮಾಡಿದನು.

**ಅನ್ವಯಾರ್ಥ— (ಹಂಸಾವತಾರ)**

**ಸತಾಂ** = ಸಜ್ಜನರಿಗೆ

**ದಯಿತಃ** = ಪ್ರೀತಿಪಾತ್ರನಾದ

**ಋಷಭಃ** = ಸ್ವಾಮಿಯಾದ,

**ಭೂಧರಃ** = ಭೂಮಿಯನ್ನು ಧರಿಸಿರುವ

**ಏಷಃ** = ಈ ಶ್ರೀಮನ್ನಾರಾಯಣನು,

**ಪರತತ್ತ್ವಲಿಪ್ಸುಸನಕಾದಿವಂದಿತಃ** = ಪರತತ್ತ್ವವನ್ನು ಹೊಂದುವ ಇಚ್ಛೆಯುಳ್ಳ ಸನಕಾದಿಮುನಿಗಳಿಂದ ನಮಸ್ಕಾರ ಮಾಡಲ್ಪಟ್ಟವನಾಗಿ,

**ವಲಕ್ಷತಮ ಪಕ್ಷ ಶೋಭನಂ** = ಅತ್ಯಂತ ಬೆಳ್ಳಗಿರುವ ರೆಕ್ಕೆಗಳಿಂದ ಮಂಗಳಕರವಾದ

**ಪರಮಹಂಸ ಲಕ್ಷಣಂ** = ಉತ್ತಮ ಹಂಸದ ಚಿಹ್ನೆಯುಳ್ಳ (ಹಂಸದಂತಿರುವ),

**ವಪುಃ** = ಶರೀರವನ್ನು

**ಉದ್ವಹನ್** = ಧರಿಸಿದವನಾಗಿ

**ವ್ಯಹರತ್** = ವಿಹರಿಸಿದನು.

**ತಾತ್ಪರ್ಯ**— ಈ ನಾರಾಯಣನು ಸಜ್ಜನರಲ್ಲಿ ಪ್ರೀತಿಯುಳ್ಳವನು. ಅವರಿಗೆ ಸ್ವಾಮಿಯೂ ಆಗಿದ್ದಾನೆ. ಈ ಭೂಮಿಯನ್ನು ಕೂರ್ಮರೂಪದಿಂದ ಧರಿಸಿದವನು. ಸನಕಾದಿ ಮುನಿಗಳು ತಮಗೆ ತತ್ತ್ವವನ್ನು ಬೋಧಿಸಬೇಕೆಂದು ಪ್ರಾರ್ಥಿಸಿದಾಗ ಅತ್ಯಂತ ಬೆಳ್ಳಗಿರುವ ರೆಕ್ಕೆಗಳಿಂದ ಮನೋಹರವಾದ ಹಂಸಪಕ್ಷಿಯಾಗಿ, ಸನಕಾದಿಗಳಿಂದ ವಂದಿತನಾಗಿ ಅವರಿಗೆ ತತ್ತ್ವೋಪದೇಶವನ್ನು ಮಾಡುತ್ತಾ ವಿಹರಿಸಿದನು. ಈ ನಾರಾಯಣನು ತತ್ತ್ವಜ್ಞಾನಕ್ಕಾಗಿ ಸನಕಾದಿ ಮುನಿಗಳಿಂದ ಪ್ರಾರ್ಥಿತನಾಗಿ ಹಂಸಪಕ್ಷಿ ರೂಪಧಾರಿಯಾಗಿ ಅವರಿಗೆ ತತ್ತ್ವವನ್ನು ಉಪದೇಶಿಸಿ ವಿಹರಿಸಿದನು ಎಂದು ಅಭಿಪ್ರಾಯ.

**ವಿಗ್ರಹ**—

**ಭೂಧರಃ**— ಧರತೀತಿ ಧರಃ, ಭುವಃ ಧರಃ ಭೂಧರಃ ।

**ಪರಮಹಂಸಲಕ್ಷಣಂ**— ಪರಮಾಶ್ಚ ತೇ ಹಂಸಾಶ್ಚ ಪರಮಹಂಸಾಃ, ಪರಮಹಂಸಾನಾಂ ಲಕ್ಷಣಮಿವ ಲಕ್ಷಣಂ ಯಸ್ಯ ತತ್ ಪರಮಹಂಸಲಕ್ಷಣಂ, ತತ್ ಪರಮಹಂಸಲಕ್ಷಣಂ । (ಪರಮಶ್ಚಾಸೌ ಹಂಸಶ್ಚ ಪರಮ-ಹಂಸಃ, ಪರಮಹಂಸಸ್ಯ ಲಕ್ಷಣಮಿವ ಲಕ್ಷಣಂ ಯಸ್ಯ ತತ್, ಪರಮಹಂಸಲಕ್ಷಣಂ ತತ್ ಪರಮಹಂಸ ಲಕ್ಷಣಂ) ।

**ವಲಕ್ಷತಮಪಕ್ಷಶೋಭನಂ**— ಅತಿಶಯೇನ ವಲಕ್ಷಃ ವಲಕ್ಷತಮಃ, ವಲಕ್ಷತಮಶ್ಚಾಸೌ ಪಕ್ಷಶ್ಚ ವಲಕ್ಷತಮಪಕ್ಷಃ, ವಲಕ್ಷತಮಪಕ್ಷೇಣ ಶೋಭನಂ ವಲಕ್ಷತಮಪಕ್ಷಶೋಭನಂ, ತತ್ ವಲಕ್ಷತಮಪಕ್ಷಶೋಭನಂ । (ಅತಿಶಯೇನ ವಲಕ್ಷೌ ವಲಕ್ಷತಮೌ, ವಲಕ್ಷತಮೌ ಚ ತೌ ಪಕ್ಷೌ ಚ ವಲಕ್ಷತಮಪಕ್ಷೌ, ವಲಕ್ಷತಮ-ಪಕ್ಷಾಭ್ಯಾಂ ಶೋಭನಂ ವಲಕ್ಷತಮಪಕ್ಷಶೋಭನಂ, ತತ್ ವಲಕ್ಷತಮಪಕ್ಷಶೋಭನಂ) ।

**ಪರತತ್ತ್ವಲಿಪ್ಸುಸನಕಾದಿವಂದಿತಃ**— ಪರಂ ಚ ತತ್ ತತ್ತ್ವಂ ಚ ಪರತತ್ತ್ವಂ, ಪರತತ್ತ್ವಸ್ಯ ಲಿಪ್ಸವಃ ಪರತತ್ತ್ವಲಿಪ್ಸವಃ, ಸನಕಃ ಆದಿಃ ಯೇಷಾಂ ತೇ ಸನಕಾದಯಃ, ಪರತತ್ತ್ವಲಿಪ್ಸವಶ್ಚ ತೇ ಸನಕಾದಯಶ್ಚ ಪರತತ್ತ್ವಲಿಪ್ಸು ಸನಕಾದಯಃ, ಪರತತ್ತ್ವಲಿಪ್ಸು ಸನಕಾದಿಭಿಃ ವಂದಿತಃ ಪರತತ್ತ್ವಲಿಪ್ಸುಸನಕಾದಿ-ವಂದಿತಃ ।

**ಕ್ರಿಯಾಪದ**— **ವ್ಯಹರತ್**- 'ವಿ' ಇತ್ಯುಪಸರ್ಗಪೂರ್ವಕಾತ್ ಹೃಞ್ ಹರಣೇ ಇತಿ ಹರಣಾರ್ಥಕಾತ್ ಹೃಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ವ್ಯಹರತ್'' ಇತಿ ರೂಪಮ್ ।

ವಿ-ಅಹರತ್ ಅಹರತಾಂ ಅಹರನ್, ಅಹರಃ ಅಹರತಂ ಅಹರತ, ಅಹರಂ ಅಹರಾವ ಅಹರಾಮ ॥

**ಪ್ರಯೋಗ**— ಏಷಃ ವ್ಯಹರತ್ (ಅಕರ್ಮಕ ಕರ್ತರಿ) ಏತೇನ ವ್ಯಹ್ರಿಯತ (ಭಾವೇ) ।

★ ★ ★

**ಅವತಾರಿಕಾ**— ಹರಿ, ಕೃಷ್ಣ, ನರ, ನಾರಾಯಣ ಎಂಬ ನಾಲ್ಕು ಅವತಾರಗಳನ್ನೂ ವರ್ಣಿಸುತ್ತಾರೆ.

**ಉದಪಾದಿ ಧರ್ಮತನಯೋ ಹ್ಯಯಂ ಹರಿ-**
**ರ್ನರದೇವಸೋದರ ಉದಾರವಿಕ್ರಮಃ ।**
**ಅಪಿ ಕೃಷ್ಣ ಇತ್ಯಭಿಹಿತೋ ಮುದೇ ಸತಾಂ**
**ಸ್ವಯಮೇವ ಯಸ್ಯ ಸಹಜೋ ವ್ಯಜಾಯತ ॥ 40 ॥**

**ಪದಚ್ಛೇದ**— ಉದಪಾದಿ, ಧರ್ಮತನಯಃ, ಹಿ, ಅಯಂ, ಹರಿಃ, ನರದೇವಸೋದರಃ, ಉದಾರವಿಕ್ರಮಃ, ಅಪಿ, ಕೃಷ್ಣಃ, ಇತಿ, ಅಭಿಹಿತಃ, ಮುದೇ, ಸತಾಂ, ಸ್ವಯಂ, ಏವ, ಯಸ್ಯ, ಸಹಜಃ, ವ್ಯಜಾಯತ ।

**ಹರಿಕೃಷ್ಣಾವತಾರ -**

**ಅನ್ವಯ**— ಉದಾರವಿಕ್ರಮಃ ನರದೇವಸೋದರಃ ಅಯಂ, ಹರಿಃ (ಸನ್) ಧರ್ಮತನಯಃ (ಸನ್) ಉದಪಾದಿ ಹಿ, (ಅಯಂ) ಸ್ವಯಮೇವ ಸತಾಂ ಮುದೇ, ಕೃಷ್ಣ ಇತ್ಯಭಿಹಿತೋಽಪಿ (ಸನ್) ಯಸ್ಯ ಸಹಜಃ ವ್ಯಜಾಯತ ।

**ಅನ್ವಯಾರ್ಥ**—

**ಉದಾರವಿಕ್ರಮಃ** = ಹೆಚ್ಚಾದ ಪರಾಕ್ರಮ ಕಾಂತಿ ಮತ್ತು ಶಕ್ತಿಗಳುಳ್ಳ

**ನರದೇವಸೋದರಃ** = ದೇವತಾರೂಪಿ ಶೇಷಾವತಾರನಾದ ನರನ ಸಹೋದರನಾದ

**ಅಯಂ** = ಈ ನಾರಾಯಣನು,
**ಹರಿಃ (ಸನ್)** = ಹರಿನಾಮಕನಾಗಿ
**ಧರ್ಮತನಯಃ** = ಯಮಪುತ್ರನಾಗಿ
**ಉದಪಾದಿ ಹಿ** = ಹುಟ್ಟಿದನಷ್ಟೆ. (ಅಯಂ = ಈ ನಾರಾಯಣನು)
**ಸ್ವಯಮೇವ** = ತಾನಾಗಿಯೇ
**ಸತಾಂ** = ಸಜ್ಜನರ
**ಮುದೇ** = ಸಂತೋಷಕ್ಕೋಸ್ಕರ
**ಕೃಷ್ಣ ಇತಿ ಅಭಿಹಿತಃ ಅಪಿ (ಸನ್)** = ಕೃಷ್ಣ ಎಂಬುದಾಗಿ ಕರೆಯಲ್ಪಟ್ಟವನಾಗಿಯೂ,
**ಯಸ್ಯ** = ಯಾವ ಹರಿಗೆ
**ಸಹಜಃ** = ಸಹೋದರನಾಗಿ
**ವ್ಯಜಾಯತ** = ಹುಟ್ಟಿದನು (ಇದರಿಂದ ಹರಿಕೃಷ್ಣಾವತಾರಗಳನ್ನು ಹೇಳಿದ್ದಾಯಿತು).

**ತಾತ್ಪರ್ಯ—** ಈ ನಾರಾಯಣನು ಹರಿಯೆಂಬ ಹೆಸರಿನಿಂದ ಧರ್ಮಪ್ರಜಾಪತಿಯ (ಯಮಧರ್ಮನ) ಮಗನಾಗಿ ಅವತರಿಸಿದನು. ಇವನಲ್ಲಿ ಅತಿಶಯವಾದ ಪರಾಕ್ರಮ, ಕಾಂತಿ, ಶಕ್ತಿಗಳಿವೆ. ಇವನು ಶೇಷಾವತಾರನಾದ ನರನ ಸಹೋದರನು. ಇವನೇ ಸಜ್ಜನರನ್ನು ಸಂತೋಷಗೊಳಿಸಲು ಕೃಷ್ಣ ಎಂಬ ಹೆಸರಿನಿಂದ ಆ ಹರಿಯ ಸಹೋದರನಾಗಿ ಆವಿರ್ಭವಿಸಿದ್ದಾನೆ.

*ನರನಾರಾಯಣಾವತಾರ ಪಕ್ಷದಲ್ಲಿ -*

**ಅನ್ವಯ—** ಉದಾರವಿಕ್ರಮಃ ಅಯಂ ಹರಿಃ ನರದೇವಸೋದರಃ ಸನ್, ಧರ್ಮತನಯಃ ಉದಪಾದಿ ಹಿ, ಸ್ವಯಮೇವ ಕೃಷ್ಣ ಇತ್ಯಭಿಹಿತೋಽಪಿ ಸನ್, ಸತಾಂ ಮುದೇ ಯಸ್ಯ ಸಹಜಃ ವ್ಯಜಾಯತ ।

**ಅನ್ವಯಾರ್ಥ—**

**ಉದಾರವಿಕ್ರಮಃ** = ಅತಿಶಯ ಪರಾಕ್ರಮವುಳ್ಳ
**ಅಯಂ** = ಈ ಮುಂದೆ ಇರುವ
**ಹರಿಃ** = ನಾರಾಯಣನು,
**ನರದೇವಸೋದರಃ** = ಶೇಷಾವತಾರನಾದ ನರನ ಸೋದರನಾಗಿ (ನಾರಾಯಣನಾಗಿ)
**ಧರ್ಮತನಯಃ** = ಯಮನ ಮಗನಾಗಿ
**ಉದಪಾದಿ ಹಿ** = ಹುಟ್ಟಿದನಷ್ಟೆ
**ಸ್ವಯಮೇವ** = ತಾನಾಗಿಯೇ
**ಕೃಷ್ಣಃ ಇತಿ** = ಕೃಷ್ಣನೆಂದು
**ಅಭಿಹಿತಃ ಅಪಿ ಸನ್** = ಹೇಳಲ್ಪಟ್ಟಿದ್ದರೂ,
**ಸತಾಂ ಮುದೇ** = ಸಜ್ಜನರ ಸಂತೋಷಕ್ಕೋಸ್ಕರ
**ಯಸ್ಯ** = ಯಾವ ನಾರಾಯಣನ
**ಸಹಜಃ** = ಸಹೋದರನಾಗಿ (ನರನಾಗಿ)
**ವ್ಯಜಾಯತ** = ಹುಟ್ಟಿದನು.

**ತಾತ್ಪರ್ಯ—** ಈ ಆಶ್ರಮದಲ್ಲಿ ವಿರಾಜಿಸುವ ನಾರಾಯಣಮುನಿಯೂ ಯಮಧರ್ಮನ ಮಗನು. ಇವನೂ ಹೆಚ್ಚಾದ ಪರಾಕ್ರಮಾದಿಗಳುಳ್ಳವನು. ಇವನು ನರನ ಸಹೋದರನು. ಇವನು ಸಜ್ಜನರ ಸಂತೋಷಕ್ಕಾಗಿ, ನರನೆಂಬ ಶೇಷಾವತಾರನಲ್ಲಿ ಇದ್ದು ತಾನೇ ನರನೆಂದು ಆವಿರ್ಭವಿಸಿದ್ದಾನೆ.

(ನರ, ನಾರಾಯಣ, ಹರಿ, ಕೃಷ್ಣ, ಈ ನಾಲ್ವರೂ ಧರ್ಮಪ್ರಜಾಪತಿಯ (ಯಮಧರ್ಮನ) ಮಕ್ಕಳು. ಅವರಲ್ಲಿ ನರನು ಶೇಷಾವತಾರನು. ಅವನಲ್ಲಿ ನಾರಾಯಣನ ವಿಶೇಷಾವೇಶವಿದೆ. ನಾರಾಯಣ, ಹರಿ, ಕೃಷ್ಣರು ಮಹಾವಿಷ್ಣುವಿನ ಸಾಕ್ಷಾತ್ ಅವತಾರರು).

**ವಿಗ್ರಹ—**

**ಧರ್ಮತನಯಃ—** ಧರ್ಮಸ್ಯ ತನಯಃ ಧರ್ಮತನಯಃ ।

**ನರದೇವಸೋದರಃ—** ನರಶ್ಚಾಸೌ ದೇವಶ್ಚ ನರದೇವಃ, ನರದೇವಸ್ಯ ಸೋದರಃ ನರದೇವಸೋದರಃ ।

**ಉದಾರವಿಕ್ರಮಃ—** ಉದಾರಃ ವಿಕ್ರಮಃ ಯಸ್ಯ ಸಃ ಉದಾರವಿಕ್ರಮಃ ।

**ಸಹಜಃ—** ಸಹ ಜಾಯತೇ ಇತಿ ಸಹಜಃ ।

**ಕ್ರಿಯಾಪದ—** **ಉದಪಾದಿ-** ಪದ ಗತೌ ಇತಿ ಗತ್ಯರ್ಥಕಾತ್ ಉತ್ ಇತ್ಯುಪಸರ್ಗಪೂರ್ವಕಾತ್ ಪದ್‌ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ಉದಪಾದಿ ಇತಿ ರೂಪಮ್ ।

ಉದ-ಅಪಾದಿ ಅಪತ್ಸಾತಾಂ ಅಪತ್ಸತ, ಅಪತ್ಥಾಃ ಅಪತ್ಸಾಥಾಂ ಅಪದ್ಧ್ವಂ, ಅಪತ್ಸಿ ಅಪತ್ಸ್ವಹಿ ಅಪತ್ಸ್ಮಹಿ ॥

ವ್ಯಜಾಯತ- 'ವಿ' ಉಪಸರ್ಗಪೂರ್ವಕಾತ್ ಜನೀ ಪ್ರಾದುರ್ಭಾವೇ ಇತಿ ಪ್ರಾದುರ್ಭಾವಾರ್ಥಕಾತ್ ಜನ್ ಧಾತೋಃ ಅಕರ್ಮಕಾತ್ ಕರ್ತರಿ ಆತ್ಮನೇಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ''ವ್ಯಜಾಯತ'' ಇತಿ ರೂಪಮ್ ।

ವಿ-ಅಜಾಯತ ಅಜಾಯೇತಾಂ ಅಜಾಯಂತ,
ಅಜಾಯಥಾಃ ಅಜಾಯೇಥಾಂ ಅಜಾಯಧ್ವಂ,
ಅಜಾಯೇ ಅಜಾಯಾವಹಿ ಅಜಾಯಾಮಹಿ ॥

**ಪ್ರಯೋಗ—** ಅಯಂ ಹರಿಃ ಸನ್ ಉದಪಾದಿ (ಕರ್ತರಿ) । ಅನೇನ ಹರಿಣಾ ಸತಾ ಉದಪಾದಿ (ಕರ್ಮಣಿ) ।

ಸ್ವಯಮೇವ ಯಸ್ಯ ಸಹಜಃ ವ್ಯಜಾಯತ (ಕರ್ತರಿ) । ಸ್ವಯಮೇವ ಯೇನ ಸಹಜೇನ ವ್ಯಜಾಯತ (ಭಾವೇ) ।

★ ★ ★

**ಅವತಾರಿಕಾ—** ಹೀಗೆ ಕೆಲವು ಅವತಾರಗಳನ್ನು ಧ್ಯಾನಿಸಿ ಈಗ ವ್ಯೂಹಭೇದದಿಂದ ಅನಂತರೂಪಿಯಾಗಿರುವ ನಾರಾಯಣನನ್ನು ನಮಿಸುತ್ತಾರೆ

**ಪರಮಾತ್ಮನೇ ಸತತಮೇಕರೂಪಿಣೇ**
**ದಶರೂಪಿಣೇ ಶತಸಹಸ್ರರೂಪಿಣೇ ।**
**ಅವಿಕಾರಿಣೇ ಸ್ಫುಟಮನಂತರೂಪಿಣೇ**
**ಸುಖಚಿತ್ಸಮಸ್ತತನವೇ ನಮೋ ನಮಃ ॥ 41 ॥**

**ಪದಚ್ಛೇದ—** ಪರಮಾತ್ಮನೇ, ಸತತಂ, ಏಕರೂಪಿಣೇ, ದಶರೂಪಿಣೇ, ಶತಸಹಸ್ರರೂಪಿಣೇ, ಅವಿಕಾರಿಣೇ, ಸ್ಫುಟಂ, ಅನಂತರೂಪಿಣೇ, ಸುಖಚಿತ್ಸಮಸ್ತತನವೇ, ನಮಃ, ನಮಃ ।

**ಅನ್ವಯ**— ಸತತಂ ಸ್ಫುಟಂ ದಶರೂಪಿಣೇ, ಶತಸಹಸ್ರರೂಪಿಣೇ, ಅನಂತರೂಪಿಣೇ, ಅವಿಕಾರಿಣೇ ಸುಖಚಿತ್ಸಮಸ್ತ-ತನವೇ, ಏಕರೂಪಿಣೇ ಪರಮಾತ್ಮನೇ ನಮಃ ನಮಃ ।

**ಇನ್ನೊಂದು ರೀತಿಯ ಅನ್ವಯ-** ಪರಮಾತ್ಮನೇ ಸತತಂ ಏಕರೂಪಿಣೇ ದಶರೂಪಿಣೇ, ಶತಸಹಸ್ರರೂಪಿಣೇ ಅವಿಕಾರಿಣೇ ಸ್ಫುಟಂ ಅನಂತರೂಪಿಣೇ ಸುಖಚಿತ್ಸಮಸ್ತತನವೇ ನಮಃ ನಮಃ । (ಇದು ಶ್ಲೋಕದಲ್ಲಿ ಇದ್ದ ಹಾಗೆಯೇ ಅನ್ವಯ)

**ಅನ್ವಯಾರ್ಥ**—

**ಸತತಂ** = ಯಾವಾಗಲೂ

**ಸ್ಫುಟಂ** = ಸ್ಪಷ್ಟವಾಗಿ (ವೇದಗಳಲ್ಲಿ ಹೇಳಿದಂತೆ)

**ದಶರೂಪಿಣೇ** = ಮತ್ಸ್ಯಾದಿ ದಶರೂಪಗಳುಳ್ಳ

**ಶತಸಹಸ್ರರೂಪಿಣೇ** = ನಾರಾಯಣಾದಿ ಶತರೂಪಗಳೂ, ವಿಶ್ವಾದಿ ಸಹಸ್ರರೂಪಗಳೂ ಉಳ್ಳ

**ಅನಂತರೂಪಿಣೇ** = ಅಸಂಖ್ಯಾತವಾದ ರೂಪಗಳುಳ್ಳ

**ಅವಿಕಾರಿಣೇ** = ಯಾವ ವಿಕಾರ (ಪರಿಣಾಮ) ದೋಷಗಳಿಲ್ಲದಿರುವ,

**ಸುಖಚಿತ್ಸಮಸ್ತತನವೇ** = ಆನಂದವೂ ಜ್ಞಾನವೂ, ಇವುಗಳೇ ಶರೀರವಾಗಿ ಉಳ್ಳ

**ಏಕರೂಪಿಣೇ** = ಪರಸ್ಪರ ಭೇದ ವರ್ಜಿತವಾದ ಪ್ರಧಾನ ಸ್ವರೂಪವುಳ್ಳ (ಮೂಲರೂಪಿಯಾದ)

**ಪರಮಾತ್ಮನೇ** = ಸರ್ವೋತ್ತಮನಾದ ಪರಬ್ರಹ್ಮ ಸ್ವರೂಪಿಯಾದ ನಾರಾಯಣನಿಗೆ

**ನಮಃ ನಮಃ** = ನಮಸ್ಕಾರವು. (ಇನ್ನೊಂದು ಅನ್ವಯದಲ್ಲಿಯೂ ಇದೇ ರೀತಿ ಅರ್ಥವನ್ನಿಟ್ಟುಕೊಳ್ಳಬೇಕು).

**ತಾತ್ಪರ್ಯ**— ಎಲೈ ನಾರಾಯಣನೇ, ನೀನು ಶ್ರುತಿಸಿದ್ಧವಾದ ಮತ್ಸ್ಯಾದಿ ದಶಾವತಾರಗಳಿಂದ ಯಾವಾಗಲೂ ಆವಿರ್ಭೂತನಾಗಿಯೇ ಇದ್ದೀ. ಭಕ್ತರ ಅನುಗ್ರಹಕ್ಕಾಗಿ ಆ ರೂಪಗಳನ್ನು ಆಯಾ ಕಾಲದಲ್ಲಿ ನಿನ್ನ ಇಚ್ಛೆಯಂತೆ ವ್ಯಕ್ತ-ಪಡಿಸುತ್ತೀ. ನಿನಗೆ ನಾರಾಯಣಾದಿ ನೂರು ರೂಪಗಳಿವೆ. ವಿಶ್ವಾದಿ ಸಹಸ್ರ ರೂಪಗಳಿವೆ. ಅಜಿತಾದಿ ಅನಂತ ರೂಪಗಳಿವೆ. ಅನಂತಾನಂತ ಜೀವರಲ್ಲಿಯೂ, ಜಡಗಳಾದ ಅಣುಗಳಲ್ಲಿಯೂ, ನಿಯಾಮಕವಾದ ನಿನ್ನ ರೂಪಗಳಿಗೆ ಸಂಖ್ಯೆಯೇ ಇಲ್ಲ. ಇಂತಹ ಭೂತ ಭವಿಷ್ಯದ್ ವರ್ತಮಾನ ಕಾಲದಲ್ಲಿರುವ ಅನಂತಾನಂತ ಜೀವರಲ್ಲಿ, ಅಣುರೇಣುತೃಣಕಾಷ್ಠಗಳಲ್ಲಿರುವ ನಿನ್ನ ಅನಂತಾನಂತ ರೂಪಗಳಲ್ಲಿ ಪ್ರತಿಯೊಂದು ರೂಪವೂ ಜನ್ಮ, ಜರಾ, ಮೃತ್ಯು ಮುಂತಾದ ಯಾವ ವಿಕಾರಕ್ಕೂ ಒಳಗಾಗಿಲ್ಲ, ಯಾವ ದೋಷ ಲೇಶಕ್ಕೂ ನಿನ್ನ ರೂಪಗಳಲ್ಲಿ ಆಸ್ಪದವಿಲ್ಲ. ನಿನ್ನ ಪ್ರತಿಯೊಂದು ರೂಪಗಳೂ ಆನಂದಜ್ಞಾನರೂಪ-ವಾದವುಗಳು. ನಿನ್ನ ರೂಪಗಳಲ್ಲಿ ಪರಸ್ಪರ ಭೇದವಾಗಲಿ, ಸ್ವಗತ ಭೇದವಾಗಲಿ, (ತನ್ನ ಕೈ-ಕಾಲು ಮುಂತಾದವುಗಳಿಗೂ ಭೇದ, ತನ್ನ ಗುಣಗಳಲ್ಲಿ ಪರಸ್ಪರ ಭೇದ ಮುಂತಾದ ಭೇದವಾಗಲಿ) ಯಾವುದೂ ಇಲ್ಲ. ಎಲ್ಲವೂ ಮೂಲರೂಪದಂತೆ ಪ್ರಧಾನರೂಪ, ಸರ್ವೋತ್ತಮರೂಪ, ಪರಬ್ರಹ್ಮ ಎಂಬ ಪದದಿಂದ ಎಲ್ಲವೂ ವಾಚ್ಯವಾಗಿದೆ. ಇಂತಹ ನಿನಗೆ ನಮಸ್ಕಾರ, ನಮಸ್ಕಾರ.

(**ವಿಶೇಷ ಸೂಚನೆ-** ಈ ರೂಪಗಳೆಲ್ಲವೂ ಯಾವಾಗಲೂ ಇವೆ. ಈ ವಿಷಯದಲ್ಲಿ ಶ್ರುತಿಯಿದೆ. ''ಅಯಂ ವೈ ಹರಯೋಽಯಂ ವೈ ದಶ ಚ ಶತಾನಿ ಸಹಸ್ರಾಣಿ ಚ, ಬಹೂನಿ ಚ ಅನಂತಾನಿ ಚ'' (ಬೃಹದಾರಣ್ಯಕ 4-5-19). ಈ ಮೂಲರೂಪಿಯಾದ ನಾರಾಯಣನೇ ಹರಿನಾಮಕವಾದ ಮತ್ಸ್ಯಾದಿದಶರೂಪವುಳ್ಳವನಾಗಿದ್ದಾನೆ. ಈ ಮೂಲರೂಪಿ-ಯಾದ ನಾರಾಯಣನೇ ನಾರಾಯಣಾದಿ ನೂರು ರೂಪವುಳ್ಳವನು, ಇವನೇ ವಿಶ್ವಾದಿ ಸಹಸ್ರ ರೂಪವುಳ್ಳವನು. ಅಜಿತಾದಿ ಪರಾದಿ ಅನಂತ ರೂಪವುಳ್ಳವನೂ ಇವನೇ. ಹೀಗೆ ಮತ್ಸ್ಯಾದಿ ಪರಮಾತ್ಮ ರೂಪಗಳಿಗೆ ಯಾವ ಭೇದವೂ ಇಲ್ಲ.

ವಿಗ್ರಹ—

**ಪರಮಾತ್ಮನೇ**— ಪರಮಶ್ಚಾಸೌ ಆತ್ಮಾ ಚ ಪರಮಾತ್ಮಾ, ತಸ್ಮೈ ಪರಮಾತ್ಮನೇ ।

**ಏಕರೂಪಿಣೇ**— ಏಕಂ ಚ ತತ್ ರೂಪಂ ಚ ಏಕರೂಪಂ, ಏಕರೂಪಂ ಅಸ್ಯ ಅಸ್ತೀತಿ ಏಕರೂಪೀ, ತಸ್ಮೈ ಏಕರೂಪಿಣೇ ।

**ದಶರೂಪಿಣೇ**— ದಶ ಚ ತಾನಿ ರೂಪಾಣಿ ಚ ದಶರೂಪಾಣಿ, ದಶರೂಪಾಣಿ ಅಸ್ಯ ಸಂತೀತಿ ದಶರೂಪೀ, ತಸ್ಮೈ ದಶರೂಪಿಣೇ ।

**ಶತಸಹಸ್ರರೂಪಿಣೇ**— ಶತಾನಿ ಚ ತಾನಿ ಸಹಸ್ರಾಣಿ ಚ ಶತಸಹಸ್ರಾಣಿ, ಶತಸಹಸ್ರಾಣಿ ಚ ತಾನಿ ರೂಪಾಣಿ ಶತಸಹಸ್ರರೂಪಾಣಿ, ತಾನಿ ಅಸ್ಯ ಸಂತೀತಿ ಶತಸಹಸ್ರರೂಪೀ, ತಸ್ಮೈ ಶತಸಹಸ್ರರೂಪಿಣೇ ।

**ಅವಿಕಾರಿಣೇ**— ವಿಕಾರಃ ಅಸ್ಯ ಅಸ್ತೀತಿ ವಿಕಾರೀ, ನ ವಿಕಾರೀ ಅವಿಕಾರೀ ತಸ್ಮೈ ಅವಿಕಾರಿಣೇ ।

**ಅನಂತರೂಪಿಣೇ**— ಅನಂತಾನಿ ಚ ತಾನಿ ರೂಪಾಣಿ ಚ ಅನಂತರೂಪಾಣಿ, ಅನಂತರೂಪಾಣಿ ಅಸ್ಯ ಸಂತೀತಿ ಅನಂತರೂಪೀ, ತಸ್ಮೈ ಅನಂತರೂಪಿಣೇ ।

**ಸುಖಚಿತ್ಸಮಸ್ತತನವೇ**— ಸುಖಂ ಚ ಚಿತ್ ಚ ಸುಖಚಿತೌ, ಸಮಸ್ತಾಶ್ಚ ತಾಃ ತನವಶ್ಚ ಸಮಸ್ತ-ತನವಃ, ಸುಖಚಿತೌ ಏವ ಸಮಸ್ತತನವಃ ಯಸ್ಯ ಸಃ ಸುಖಚಿತ್ ಸಮಸ್ತತನುಃ, ತಸ್ಮೈ ಸುಖಚಿತ್-ಸಮಸ್ತತನವೇ ।

★ ★ ★

**ಅವತಾರಿಕಾ**— ಈ ರೀತಿಯಾಗಿ ಧ್ಯಾನಿಸುತ್ತಾ ಆಚಾರ್ಯರು ಶ್ರೀಮನ್ನಾರಾಯಣನಿಗೆ ನಮಸ್ಕಾರ ಮಾಡಿ ಶ್ರೀವ್ಯಾಸನಾರಾಯಣರ ಸಮೀಪದಲ್ಲಿ ಕುಳಿತುಕೊಂಡರೆನ್ನುತ್ತಾರೆ.

**ಇತಿ ಚಿಂತಯನ್ನವಿರಲಾಂತರೋ ಹರಿಂ**
**ಪ್ರಣನಾಮ ಸಪ್ರಣಯಮಾದೃತೋಽಮುನಾ ।**
**ಅಜಿತೌ ಪರಸ್ಪರಸಭಾಜಿತೌ ಸ ತೌ**
**ನಿಕಷಾ ನಿಷೀದತಿ ಪುರೋಪವೇಶಿನೌ ॥ 42 ॥**

**ಪದಚ್ಛೇದ**— ಇತಿ, ಚಿಂತಯನ್, ಅವಿರಲಾಂತರಃ, ಹರಿಂ, ಪ್ರಣನಾಮ, ಸಪ್ರಣಯಂ, ಆದೃತಃ, ಅಮುನಾ, ಅಜಿತೌ, ಪರಸ್ಪರಸಭಾಜಿತೌ, ಸಃ, ತೌ, ನಿಕಷಾ, ನಿಷೀದತಿ, ಪುರಾ, ಉಪವೇಶಿನಾ ।

**ಅನ್ವಯ**— ಇತಿ ಚಿಂತಯನ್ ಸಃ ಅವಿರಲಾಂತರಃ, ಹರಿಂ ಪ್ರಣನಾಮ । ಅಮುನಾ ಸಪ್ರಣಯಂ ಆದೃತಃ, ಪರಸ್ಪರಸಭಾಜಿತೌ ಉಪದೇಶಿನೌ ತೌ ಅಜಿತೌ ನಿಕಷಾ, ಪುರಾ ನಿಷೀದತಿ ।

**ಅನ್ವಯಾರ್ಥ**—

**ಇತಿ** = ''ಜಗತಾಂ ಚತುರ್ದಶತಯಂ'' ಎಂಬಲ್ಲಿಂದ ಇಲ್ಲಿಯವರೆಗೆ ಹೇಳಿದ ರೀತಿಯಿಂದ

**ಚಿಂತಯನ್** = ಆಲೋಚಿಸುತ್ತಿರುವ

**ಸಃ** = ಅಂತಹ

**ಅವಿರಲಾಂತರಃ** = ಪೂರ್ಣ ಜ್ಞಾನವುಳ್ಳ ಶ್ರೀಮಧ್ವಾಚಾರ್ಯರು,

**ಹರಿಂ** = ಶ್ರೀನಾರಾಯಣನನ್ನು

**ಪ್ರಣನಾಮ** = ಸಾಷ್ಟಾಂಗ ನಮಸ್ಕಾರ ಮಾಡಿದರು.

**ಅಮುನಾ** = ಈ ನಾರಾಯಣನಿಂದ

**ಸಪ್ರಣಯಂ** = ಪ್ರೀತಿಪೂರ್ವಕವಾಗಿ

**ಆದೃತಃ** = ಸನ್ಮಾನಿಸಲ್ಪಟ್ಟ ಆ ಮಧ್ವಾಚಾರ್ಯರು,

**ಪರಸ್ಪರಸಭಾಜಿತೌ** = ಅನ್ಯೋನ್ಯವಾಗಿ ಸನ್ಮಾನ ಮಾಡಿಸಿಕೊಂಡಿರುವ,

**ಉಪವೇಶಿನೌ** = ಕುಳಿತುಕೊಂಡಿರುವ,

**ತೌ** = ಅಂತಹ

**ಅಜಿತೌ** = ಯಾವಾಗಲೂ ಅಪಜಯವಿಲ್ಲದಿರುವುದರಿಂದ ಅಜಿತನಾಮಕರಾದ ಶ್ರೀವ್ಯಾಸನಾರಾಯಣರ

**ನಿಕಷಾ** = ಸಮೀಪದಲ್ಲಿ

**ಪುರಾ ನಿಷೀದತಿ** = ಕುಳಿತುಕೊಂಡರು.

**ತಾತ್ಪರ್ಯ**— 'ಜಗತಾಂ ಚತುರ್ದಶತಯಂ' (8ನೇ ಸರ್ಗ, ಶ್ಲೋಕ 10) ಎಂಬಲ್ಲಿಂದ, 'ಪರಮಾತ್ಮನೇ ಸತತ-ಮೇಕರೂಪಿಣೇ' (8ನೆಯ ಸರ್ಗ, 41ನೇ ಶ್ಲೋಕ) ಎಂಬಲ್ಲಿಯವರೆಗೆ (32) ಶ್ಲೋಕಗಳಲ್ಲಿ ಹೇಳಿದಂತೆ ಧ್ಯಾನಿಸುತ್ತಾ ಇರುವ ಆ ಪೂರ್ಣಪ್ರಜ್ಞಾಚಾರ್ಯರು ಅಲ್ಲಿರುವ ನಾರಾಯಣನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ನಾರಾಯಣನು ಪ್ರೀತಿಯಿಂದ ಶ್ರೀಮಧ್ವಾಚಾರ್ಯರನ್ನು ಯಥಾ ಯೋಗ್ಯವಾಗಿ ಗೌರವಿಸಿದನು. ವ್ಯಾಸನಾರಾಯಣರೂ ಒಬ್ಬರನ್ನೊಬ್ಬರು ಗೌರವಿಸಿ ತಮ್ಮ ತಮ್ಮ ಆಸನಗಳಲ್ಲಿ ಕುಳಿತರು. ಅನಂತರ ಅಜಿತನಾಮಕರಾದ ಆ ವ್ಯಾಸನಾರಾಯಣರ ಬಳಿಯಲ್ಲಿಯೇ ಆಚಾರ್ಯರು ಕುಳಿತರು.

ವಿಗ್ರಹ—

**ಅವಿರಲಾಂತರಃ**— ನ ವಿರಲಂ ಅವಿರಲಂ, ಅವಿರಲಂ ಆಂತರಂ ಯಸ್ಯ ಸಃ ಅವಿರಲಾಂತರಃ ।

**ಸಪ್ರಣಯಂ**— ಪ್ರಣಯೇನ ಸಹಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸಪ್ರಣಯಂ ।

**ಉಪವೇಶಿನೌ**— ಪರಸ್ಪರಂ ಸಭಾಜಿತೌ ಪರಸ್ಪರಸಭಾಜಿತೌ, ಉಪವಿಶತಃ ಇತಿ ಉಪವೇಶಿನೌ ।

**ಕ್ರಿಯಾಪದ**— ನಿಷೀದತಿ- ಷದ್ಲ್ (ಸದ್) ವಿಶರಣಗತ್ಯವಸಾದನೇಷು, ವಿಶರಣಗತ್ಯವಸಾದನಾರ್ಥಕಾತ್ ಸದ್‌ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ 'ನಿಷೀದತಿ' ಇತಿ ರೂಪಮ್ ।

ನಿ- ಸೀದತಿ ಸೀದತಃ ಸೀದಂತಿ, ಸೀದಸಿ ಸೀದಥಃ ಸೀದಥ, ಸೀದಾಮಿ ಸೀದಾವಃ ಸೀದಾಮಃ ॥

**ಪ್ರಯೋಗ**— ಸಃ ತೌ ನಿಕಷಾ ನಿಷೀದತಿ (ಅಕರ್ಮಕ ಕರ್ತರಿ) । ತೇನ ತೌ ನಿಕಷಾ ನಿಷದ್ಯತೇ (ಭಾವೇ) ।

**ವ್ಯಾಕರಣವಿಶೇಷ**— ತೌ ನಿಕಷಾ (ಅವರಿಬ್ಬರ ಹತ್ತಿರ) ತೌ ಎಂಬುದು ದ್ವಿತೀಯಾ ದ್ವಿವಚನ. 'ಅಭಿತಃ ಪರಿತಃ ಸಮಯಾ ನಿಕಷಾಹಾ ಪ್ರತಿಯೋಗೇಽಪಿ ಎಂಬ ವಾರ್ತಿಕದಿಂದ ನಿಕಷಾ ಶಬ್ದದ ಯೋಗವಿರುವಾಗ ದ್ವಿತೀಯಾ ವಿಭಕ್ತಿ ಬಂದಿದೆ.

**ಪುರಾನಿಷೀದತಿ**— ಕುಳಿತುಕೊಂಡರು. ಪುರಿ ಲುಙ್ ಚಾಸ್ಮೇ (3-2-122) (ಪುರಾ ಶಬ್ದದ ಯೋಗವಿದ್ದಾಗ ಭೂತ ಅನದ್ಯತನ ಕಾಲದಲ್ಲಿ ವಿಕಲ್ಪದಿಂದ ಲುಙ್ ಮತ್ತು ಲಟ್ ಬರುತ್ತದೆ. (ಈ ಸೂತ್ರದಿಂದ ಭೂತಾರ್ಥದಲ್ಲಿ ಪುರಾ ಶಬ್ದವಿದ್ದಾಗ ಲಟ್ ಬಂದಿದೆ).

★ ★ ★

**ಅವತಾರಿಕಾ**— ಶ್ರೀಮನ್ನಾರಾಯಣನು ಶ್ರೀವ್ಯಾಸರ ಸಮ್ಮತಿಯಿಂದ ಏಕಾಂತದಲ್ಲಿ (ರಹಸ್ಯವಾಗಿ) ಆಜ್ಞಾಪಿಸಲಿಕ್ಕೆ ಆರಂಭಿಸಿದರೆನ್ನುತ್ತಾರೆ.

**ವಿವಿಧಾ ವಿಧಾಯ ಕಿಲ ತತ್ರ ಸಂಕಥಾಃ (ಸತ್ಕಥಾಃ)**
**ವದನಂ ಮುನೀಂದ್ರತನಯಸ್ಯ ಸುಂದರಮ್ ।**
**ಅವಲೋಕ್ಯ ಲೋಕಪತಿರಾನತಂ ಮಹಾ-**
**ಸುಖತೀರ್ಥಮಾಹ ರಹಸಿ ಸ್ಮ ಗಾಮಿಮಾಮ್ ॥ 43 ॥**

**ಪದಚ್ಛೇದ**— ವಿವಿಧಾಃ, ವಿಧಾಯ, ಕಿಲ, ತತ್ರ, ಸಂಕಥಾಃ (ಸತ್ಕಥಾಃ) ವದನಂ, ಮುನೀಂದ್ರತನಯಸ್ಯ, ಸುಂದರಂ, ಅವಲೋಕ್ಯ, ಲೋಕಪತಿಃ, ಆನತಂ, ಮಹಾಸುಖತೀರ್ಥಂ, ಆಹ, ರಹಸಿ, ಸ್ಮ, ಗಾಂ, ಇಮಾಂ ।

**ಅನ್ವಯ**— ಲೋಕಪತಿಃ ತತ್ರ ವಿವಿಧಾಃ ಸಂಕಥಾಃ (ಸತ್ಕಥಾಃ) ವಿಧಾಯ, ಮುನೀಂದ್ರತನಯಸ್ಯ ಸುಂದರಂ ವದನಂ ಅವಲೋಕ್ಯ ಆನತಂ ಮಹಾಸುಖತೀರ್ಥಂ, ರಹಸಿ ಇಮಾಂ ಗಾಂ ಆಹ ಸ್ಮ ಕಿಲ ।

**ಅನ್ವಯಾರ್ಥ**—

**ಲೋಕಪತಿಃ** = ಜಗತ್ ಸ್ವಾಮಿಯಾದ ನಾರಾಯಣಮುನಿಯು
**ತತ್ರ** = ಆ ಆಶ್ರಮದಲ್ಲಿ
**ವಿವಿಧಾಃ** = ಅನೇಕ ಪ್ರಕಾರವಾದ
**ಸಂಕಥಾಃ** = (ಸತ್ಕಥಾಃ) ಪರಸ್ಪರ ಸಂಭಾಷಣಗಳನ್ನು
**ವಿಧಾಯ** = ಮಾಡಿ,
**ಮುನೀಂದ್ರತನಯಸ್ಯ** = ಪರಾಶರ ಪುತ್ರರಾದ ಶ್ರೀವೇದವ್ಯಾಸದೇವರ
**ಸುಂದರಂ** = ಮನೋಹರವಾದ
**ವದನಂ** = ಮುಖವನ್ನು
**ಅವಲೋಕ್ಯ** = ನೋಡಿ,
**ಆನತಂ** = ಭಕ್ತಿಯಿಂದ ನಮ್ರರಾದ
**ಮಹಾಸುಖತೀರ್ಥಂ** = ಉತ್ತಮವಾದ ಮೋಕ್ಷಸುಖಕ್ಕೆ ಕಾರಣವಾದ ಶಾಸ್ತ್ರವುಳ್ಳ ಶ್ರೀಮಧ್ವಾಚಾರ್ಯರನ್ನು (ಅಧಿಕಾರಿಗಳಲ್ಲಿ ಉತ್ತಮರಾದ ಆನಂದತೀರ್ಥರನ್ನು) ಕುರಿತು,
**ರಹಸಿ** = ಏಕಾಂತದಲ್ಲಿ
**ಇಮಾಂ** = ಮುಂದೆ ಹೇಳುವ
**ಗಾಂ** = ಮಾತನ್ನು
**ಆಹ ಸ್ಮ ಕಿಲ** = ಹೇಳಿದರಷ್ಟೆ.

**ತಾತ್ಪರ್ಯ**— ಆಗ ಲೋಕಸ್ವಾಮಿಯಾದ ಶ್ರೀನಾರಾಯಣ ಮುನಿಗಳು. ಆ ಆಶ್ರಮದಲ್ಲಿ, ಅನೇಕ ಬಗೆಯ ಪರಸ್ಪರ ಸಂಭಾಷಣೆಗಳನ್ನು ವ್ಯಾಸ ಮಧ್ವರೊಡನೆ ಮಾಡಿದರು. ಪರಾಶರ ಮುನೀಂದ್ರರ ನಂದನರಾದ ಶ್ರೀವೇದವ್ಯಾಸರ ಸುಂದರ ಮುಖವನ್ನು ಮುಂದೆ ಹೇಳುವ ತನ್ನ ಮಾತಿನ ಒಪ್ಪಿಗೆಗಾಗಿ ನೋಡಿದರು. ಅನಂತರ ಭಕ್ತಿಯಿಂದ ಬಾಗಿ ಗುರುಗಳಿಬ್ಬರ ಮುಂದೆ ಕುಳಿತಿರುವ ಆನಂದಕರವಾದ ಶಾಸ್ತ್ರ ರಚನೆಯಿಂದ ಸುಖತೀರ್ಥ ಎಂದು ಪ್ರಸಿದ್ಧರಾದ, ಅಧಿಕಾರಿಗಳಲ್ಲಿ ಉತ್ತಮರಾದ, ಶ್ರೀಮಧ್ವಾಚಾರ್ಯರನ್ನು ಕುರಿತು ಗುಟ್ಟಾಗಿ ಮುಂದೆ ಹೇಳಲಿರುವ ಮಾತನ್ನು ಹೇಳಿದರು. (ಈ ವಿಷಯ ಪ್ರಸಿದ್ಧವಾಗಿದೆ).

ವಿಗ್ರಹ—

**ಸತ್ಕಥಾಃ—** ಸತ್ಯಶ್ಚ ತಾಃ ಕಥಾಶ್ಚ ಸತ್ಕಥಾಃ, ತಾಃ ಸತ್ಕಥಾಃ ।

**ಮುನೀಂದ್ರತನಯಸ್ಯ—** ಮುನೀನಾಂ ಇಂದ್ರಃ ಮುನೀಂದ್ರಃ, ಮುನೀಂದ್ರಸ್ಯ ತನಯಃ ಮುನೀಂದ್ರ-ತನಯಃ, ತಸ್ಯ ಮುನೀಂದ್ರತನಯಸ್ಯ ।

**ಲೋಕಪತಿಃ—** ಲೋಕಾನಾಂ ಪತಿಃ ಲೋಕಪತಿಃ ।

**ಮಹಾಸುಖತೀರ್ಥಂ—** ಮಹಚ್ಚ ತತ್ ಸುಖಂ ಚ ಮಹಾಸುಖಂ, ಮಹಾಸುಖಹೇತುಃ ತೀರ್ಥಂ ಯಸ್ಮಾತ್ ಸಃ ಮಹಾಸುಖತೀರ್ಥಃ, ತಂ ಮಹಾಸುಖತೀರ್ಥಂ । (ಮಧ್ಯಮಪದಲೋಪಿ ಬಹುವ್ರೀಹಿ) (ಅಥವಾ ಸುಖಹೇತುಃ ತೀರ್ಥಂ ಯಸ್ಮಾತ್ ಸಃ ಸುಖತೀರ್ಥಃ, ಮಹಾಂಶ್ಚಾಸೌ ಸುಖತೀರ್ಥಶ್ಚ ಮಹಾಸುಖತೀರ್ಥಃ, ತಂ ಮಹಾಸುಖತೀರ್ಥಂ ।

**ಕ್ರಿಯಾಪದ—** ಆಹ- ಬ್ರೂಞ್ ವ್ಯಕ್ತಾಯಾಂ ವಾಚಿ, ಇತಿ ವ್ಯಕ್ತವಾಗರ್ಥಕಾತ್ ಬ್ರೂಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ಆಹೇತಿ ರೂಪಮ್ ।

ಆಹ ಆಹತುಃ ಆಹುಃ, ಆತ್ಥ ಆಹಥುಃ ಬ್ರೂಥ, ಬ್ರವೀಮಿ ಬ್ರೂವಃ ಬ್ರೂಮಃ ॥

**ಪ್ರಯೋಗ—** ಲೋಕಪತಿಃ ಇಮಾಂ ಗಾಂ ಆಹ ಸ್ಮ (ಕರ್ತರಿ) । ಲೋಕಪತಿನಾ ಇಯಂ ಗೌಃ ಉಚ್ಯತೇ ಸ್ಮ (ಕರ್ಮಣಿ) ।

**ವಿಶೇಷಾಂಶ—** ಇಲ್ಲಿ ಬ್ರೂ ಧಾತುವಿಗೆ ವರ್ತಮಾನ ಕಾಲದಲ್ಲಿ ಮೊದಲಿನ ಐದು ರೂಪಗಳಲ್ಲಿ, 'ಬ್ರುವಃ ಪಂಚಾನಾಂ ಆದಿತ ಆಹೋ ಬ್ರುವಃ (3-4-84)' ಎಂಬ ಸೂತ್ರದಿಂದ ಪ್ರಕೃತಿಗೆ ಆಹ್ ಆದೇಶ ಮತ್ತು ವರ್ತಮಾನ ಕಾಲದ ಪ್ರತ್ಯಯಗಳಿಗೆ ಬದಲಾಗಿ ಭೂತಕಾಲದ ಲಿಟ್‌ಪ್ರತ್ಯಯಗಳಿಗೆ ಬದಲಾಗಿ ಭೂತಕಾಲದ ಲಿಟ್ ಪ್ರತ್ಯಯಗಳು ಬಂದಿವೆ. ಆಹ ಎಂಬುದಕ್ಕೆ ಹೇಳುತ್ತಾನೆ ಎಂದು ಅರ್ಥ. ಸ್ಮ ಎಂಬ ಅವ್ಯಯವನ್ನು ಉಪಯೋಗಿಸಿದಾಗ ಲಟ್‌ಸ್ಮೇ (3-2-118) ಎಂಬ ಸೂತ್ರದಿಂದ ಭೂತಕಾಲದ ಲಟ್ ಗೆ ಅಪವಾದವಾಗಿ, ಭೂತಾರ್ಥದಲ್ಲಿಯೇ ಲಟ್ ಬರುತ್ತದೆ. ಆಹಸ್ಮ = ಉವಾಚ - ಹೇಳಿದನು ಎಂದು ಅರ್ಥ. ಸ್ಮಾತೀತೇ (ऽಸ್ತಮದರ್ಶನೇ) ಅಮರ ತೃತೀಯಕಾಂಡ ಅವ್ಯಯ ವರ್ಗ. ವಾರ್ತಾ ಸಂಭಾವ್ಯಯೋಃ ಕಿಲ ಹೀಗೆ ವೃತ್ತಾಂತ ಕೇಳಿ ಬರುತ್ತದೆ. ಹೀಗೆ ಊಹಿಸಬಹುದು ಎಂಬ ಅರ್ಥದಲ್ಲಿ ಕಿಲ ಎಂಬ ಅವ್ಯಯವು ಬರುತ್ತದೆ. ರಹಸಿ ಎಂಬುದು ವಿಭಕ್ತ್ಯಂತದಂತೆ ಕಾಣುವ ಅವ್ಯಯ, ರಹಶ್ಚೋಪಾಂಶುಚಾಲಿಂಗೇ ಎಂದು ಅಮರ, ರಹಃ, ಉಪಾಂಶು ಇವೆರಡೂ ಅವ್ಯಯಗಳು ಎಂದು ಅರ್ಥ.

'ಸಂಕಥಾನ್ಯೋऽನ್ಯಸಂವಾದಃ' ಎಂದು ಹಲಕೋಶ, 'ತೀರ್ಥಂ ಶಾಸ್ತ್ರೇ ಗುರೌ ಯಜ್ಞೇ ಪುಣ್ಯಕ್ಷೇತ್ರಾವತಾರಯೋಃ' ಎಂದು ಹೇಮಚಂದ್ರಕೋಶ.

★ ★ ★

**ಅವತಾರಿಕಾ—** ಶ್ರೀನಾರಾಯಣನು ರಹಸ್ಯದಲ್ಲಿ ಶ್ರೀಮಧ್ವಾಚಾರ್ಯರಿಗೆ ಹೇಳಿದ ಮಾತಿನ ವಿವರವು ಈ ರೀತಿ ಇದೆ.

**ಶೃಣು ದೇವಕಾರ್ಯಮವಧಾರ್ಯ ಧೈರ್ಯವದ್ (ಧೈರ್ಯವಾನ್)**
**ಯದು(ಮದು)ದೀರ್ಯಮಾಣಮಿದಮಾರ್ಯಸಂಮತಮ್ ।**
**ಭವಿತಾನ್ಯದುಷ್ಕರತರಂ ವಿಧಾಯ ಯತ್**
**ತರುಣಂ ತವಾವತರಣಂ ಮಹಾಫಲಮ್ ॥ 44 ॥**

**ಪದಚ್ಛೇದ—** ಶ್ರುಣು, ದೇವಕಾರ್ಯಂ, ಅವಧಾರ್ಯ, ಧೈರ್ಯವತ್, (ಧೈರ್ಯವಾನ್) ಯತ್, ಉದೀರ್ಯಮಾಣಂ, ಇದಂ, ಆರ್ಯಸಂಮತಂ, ಭವಿತಾ, ಅನ್ಯದುಷ್ಕರತರಂ, ವಿಧಾಯ, ಯತ್, ತರುಣಂ, ತವ, ಅವತರಣಂ, ಮಹಾಫಲಂ ।

**ಅನ್ವಯ—** ಧೈರ್ಯವತ್ (ಯಥಾ ಭವತಿ ತಥಾ) (ಧೈರ್ಯವಾನ್ ಸನ್) (ಮಯಾ) ಉದೀರ್ಯಮಾಣಂ ಆರ್ಯಸಮ್ಮತಂ ಯತ್ ಇದಂ ದೇವಕಾರ್ಯಂ ತತ್ ಶ್ರುಣು ಅನ್ಯದುಷ್ಕರತರಂ ಯತ್ ವಿಧಾಯ ತರುಣಂ ತವ ಅವತರಣಂ ಮಹಾಫಲಂ ಭವಿತಾ ।

**ಅನ್ವಯಾರ್ಥ—**

(**ಹೇ ಮಧ್ವ** = ಎಲೈ ಮಧ್ವಾಚಾರ್ಯನೇ)
**ಧೈರ್ಯವತ್** = ಧೀರತೆಯಿಂದ ಸಹಿತವಾಗಿ (ಧೈರ್ಯದಿಂದ)
**ಅವಧಾರ್ಯ** = ನಿರ್ಧರಿಸಿ
(**ಧೈರ್ಯವಾನ ಸನ್** = ಧೈರ್ಯವುಳ್ಳವನಾಗಿ)
(**ಮಯಾ** = ನನ್ನಿಂದ)
**ಉದೀರ್ಯಮಾಣಂ** = ಹೇಳಲ್ಪಡುವ
**ಆರ್ಯಸಮ್ಮತಂ** = ಪೂಜ್ಯರಾದ ಶ್ರೀವೇದವ್ಯಾಸರಿಗೆ ಇಷ್ಟವಾದ
**ಯತ್** = ಯಾವ
**ಇದಂ** = ಈ
**ದೇವಕಾರ್ಯಂ** = ದೇವತೆಗಳ ಕೆಲಸವು(ವನ್ನು)
(**ಅಸ್ತಿ** = ಇದೆಯೋ)
(**ತತ್** = ಅದನ್ನು)
**ಶ್ರುಣು** = ಕೇಳು
**ಅನ್ಯದುಷ್ಕರತರಂ** = ಇತರರಿಗೆ ಮಾಡಲು ಅತ್ಯಂತ ಅಸಾಧ್ಯವಾಗಿರುವ
**ಯತ್** = ಯಾವ ದೇವಕಾರ್ಯವನ್ನು
(**ಅವಧಾರ್ಯ** = ನಿಶ್ಚಯಿಸಿ)
**ವಿಧಾಯ** = ಮಾಡಿ
**ತರುಣಂ** = ಹೊಸದಾದ
**ತವ** = ನಿನ್ನ
**ಅವತರಣಂ** = ಅವತಾರವು
**ಮಹಾಫಲಂ** = ಹೆಚ್ಚು ಫಲವುಳ್ಳದ್ದಾಗಿ
**ಭವಿತಾ** = ಆಗುವುದು.

**ತಾತ್ಪರ್ಯ—** ಪೂರ್ಣಪ್ರಜ್ಞಾಚಾರ್ಯನೇ, ನಾನೀಗ ಧೈರ್ಯದಿಂದ ನಿರ್ಧರಿಸಿ ಹೇಳುತ್ತಿರುವುದು, ದೇವತೆಗಳ ಕೆಲಸ. ನೀನು ಇದನ್ನು ಧೀರನಾಗಿ ಕೇಳು. ಇದು ಪೂಜ್ಯರಾದ ವೇದವ್ಯಾಸರಿಗೂ ಸಮ್ಮತವಾದುದು, ಪ್ರಿಯವಾದುದು, ಈ ಕಾರ್ಯವನ್ನು ಇತರರು ಯಾರೂ ಮಾಡಲಾರರು. ನೀನು ನಿರ್ಧರಿಸಿ ಈ ಕೆಲಸವನ್ನು ಮಾಡು. ಇದರಿಂದ ನಿನ್ನ

ಹೊಸದಾದ ಮೂರನೆಯ ಅವತಾರವು ಮಹಾ ಪ್ರಯೋಜನವುಳ್ಳದ್ದಾಗುವುದು. (ದೇವಕಾರ್ಯವನ್ನು ಮಾಡಿದರೆ ನಿನ್ನ ಅವತಾರವು ಸಫಲವಾಗುವುದು. ನಿರ್ಧರಿಸಿ ನಾನು ಹೇಳುವ ಆ ದೇವಕಾರ್ಯವನ್ನು ಕೇಳು. ನೀನು ಭೂಮಿಯಲ್ಲಿ ಅವತಾರ ಮಾಡಿದ್ದಕ್ಕೆ ಪ್ರಯೋಜನವನ್ನು ಹೇಳುವೆನು, ಕೇಳು).

ವಿಗ್ರಹ—

**ಧೈರ್ಯವತ್**— ಧೀರಸ್ಯ ಭಾವಃ ಧೈರ್ಯಂ, ಧೈರ್ಯಂ ಅಸ್ಯ ಅಸ್ತೀತಿ ಧೈರ್ಯವತ್ । (ಯಥಾ ಭವತಿ ತಥಾ), (ಧೈರ್ಯಂ ಅಸ್ಯ ಅಸ್ತೀತಿ ಧೈರ್ಯವಾನ್) ।

**ದೇವಕಾರ್ಯಂ**— ದೇವಾನಾಂ ಕಾರ್ಯಂ ದೇವಕಾರ್ಯಂ ।

**ಆರ್ಯಸಮ್ಮತಂ**— ಆರ್ಯಸ್ಯ ಸಮ್ಮತಂ ಆರ್ಯಸಮ್ಮತಂ ।

**ದುಷ್ಕರತರಂ**— ದುಃಖೇನ ಕರ್ತುಂ ಶಕ್ಯಂ ದುಷ್ಕರಂ, ಅತಿಶಯೇನ ದುಷ್ಕರಂ ದುಷ್ಕರತರಂ, ಅನ್ಯೈಃ ದುಷ್ಕರತರಂ ಅನ್ಯದುಷ್ಕರತರಂ, ತತ್ ಅನ್ಯದುಷ್ಕರತರಂ ।

**ಮಹಾಫಲಂ**— ಮಹತ್ ಫಲಂ ಯಸ್ಯ ತತ್ ಮಹಾಫಲಂ ।

**ಕ್ರಿಯಾಪದ— ಶೃಣು-** ಶ್ರು ಶ್ರವಣೇ ಇತಿ ಶ್ರವಣಾರ್ಥಕಾತ್ ಶ್ರುಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲೋಟ್ ಮಧ್ಯಮಪುರುಷೇ ಏಕವಚನೇ ಶೃಣು ಇತಿ ರೂಪಂ ।

ಶೃಣೋತು ಶೃಣುತಾತ್ ಶೃಣುತಾಂ ಶೃಣ್ವಂತು, ಶೃಣು-ಶೃಣುತಾತ್, ಶೃಣುತಂ,
ಶೃಣುತ ಶೃಣುವಾನಿ ಶೃಣುವಾವ, ಶೃಣವಾಮ ॥

ಭವಿತಾ- ಭೂಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ಅನದ್ಯತನಭವಿಷ್ಯತಿ ಲುಟ್ ಪ್ರಥಮಪುರುಷೇ ಏಕವಚನೇ 'ಭವಿತಾ' ಇತಿ ರೂಪಮ್ ।

ಭವಿತಾ ಭವಿತಾರೌ ಭವಿತಾರಃ, ಭವಿತಾಸಿ ಭವಿತಾಸ್ಥಃ ಭವಿತಾಸ್ಥ, ಭವಿತಾಸ್ಮಿ ಭವಿತಾಸ್ವಃ ಭವಿತಾಸ್ಮಃ ॥

**ಪ್ರಯೋಗ**— (ತ್ವಂ) ದೇವಕಾರ್ಯಂ ಶೃಣು (ಕರ್ತರಿ) । ತ್ವಯಾ ದೇವಕಾರ್ಯಂ ಶ್ರೂಯತಾಂ (ಕರ್ಮಣಿ) । ತವ ಅವತರಣಂ ಮಹಾಫಲಂ ಭವಿತಾ (ಕರ್ತರಿ) । ತವ ಅವತರಣೇನ ಮಹಾಫಲೇನ ಭವಿತಾ (ಭಾವೇ)

**ವಿಶೇಷಾಂಶ**— 'ಮುಖ್ಯವರ್ಯವರೇಣ್ಯಾರ್ಯಾಃ' ಇತ್ಯಮರಃ ಎಂದು ಛಲಾರೀಯದಲ್ಲಿ ಆರ್ಯ ಎಂದರೆ ಶ್ರೇಷ್ಠ ಎಂಬ ಅರ್ಥದಲ್ಲಿ ಕೋಶವನ್ನು ಕೊಟ್ಟಿದ್ದಾರೆ.

★ ★ ★

ಅವತಾರಿಕಾ— ಆ ದೇವತಾಕಾರ್ಯವನ್ನೇ ವಿವರಿಸುವುದಕ್ಕಾಗಿ ಈಗ ಸಜ್ಜನರಿಗೆ ಉಂಟಾಗಿರುವ ಸಂಕಷ್ಟವನ್ನು ಮುಂದಿನ ಶ್ಲೋಕದಲ್ಲಿ ವಿವರಿಸುತ್ತಾರೆ.

**ಅಪಿಧಾಯ ಸೂತ್ರಹೃದಯಂ ಹತಾಂ ಪ್ರಿಯಂ**
**ಪ್ರವಿಧಾಯ ಭಾಷ್ಯಮಧುನಾ ನಿಜೇಚ್ಛಯಾ ।**
**ಅಪರೈಃ ಶ್ರುತಿಸ್ಮೃತಿನಿಜಾರ್ಥದೂಷಕೈಃ**
**ಸುತರಾಂ ತಿರೋಭವತಿ ಸಂವಿದಾಹತಾ ॥ 45 ॥**

**ಪದಚ್ಛೇದ**— ಅಪಿಧಾಯ, ಸೂತ್ರಹೃದಯಂ, ಸತಾಂ, ಪ್ರಿಯಂ, ಪ್ರವಿಧಾಯ, ಭಾಷ್ಯಂ, ಅಧುನಾ, ನಿಜೇಚ್ಛಯಾ, ಅಪರೈಃ, ಶ್ರುತಿಸ್ಮೃತಿನಿಜಾರ್ಥದೂಷಕೈಃ, ಸುತರಾಂ, ತಿರೋಭವತಿ, ಸಂವಿತ್, ಅಹತಾ ।

**ಅನ್ವಯ—** ಅಧುನಾ ಶ್ರುತಿಸ್ಮೃತಿನಿಜಾರ್ಥದೂಷಕೈಃ ಅಪರೈಃ ಸತಾಂ ಪ್ರಿಯಂ ಸೂತ್ರಹೃದಯಂ, ಅಪಿಧಾಯ ನಿಜೇಚ್ಛಯಾ ಭಾಷ್ಯಂ ಪ್ರವಿಧಾಯ ಆಹತಾ ಸಂವಿತ್ ಸುತರಾಂ ತಿರೋಭವತಿ ।

**ಅನ್ವಯಾರ್ಥ—**

**ಅಧುನಾ** = ಈಗ

**ಶ್ರುತಿಸ್ಮೃತಿನಿಜಾರ್ಥದೂಷಕೈಃ** = ವೇದಗಳು ಸ್ಮೃತಿಗಳು ಇವುಗಳ ಸ್ವಾಭಾವಿಕವಾದ ಅರ್ಥವನ್ನು ಕೆಡಿಸುವ

**ಅಪರೈಃ** = ಇತರರಿಂದ (ಅಸುರರಿಂದ)

**ಸತಾಂ** = ಸಜ್ಜನರಿಗೆ

**ಪ್ರಿಯಂ** = ಇಷ್ಟವಾದ

**ಸೂತ್ರಹೃದಯಂ** = ಬ್ರಹ್ಮಸೂತ್ರಗಳ ಅಭಿಪ್ರಾಯವನ್ನು

**ಅಪಿಧಾಯ** = ಮುಚ್ಚಿ (ಮರೆಮಾಚಿ)

**ನಿಜೇಚ್ಛಯಾ** = ತಮ್ಮ ಇಚ್ಛೆಯಿಂದ

**ಭಾಷ್ಯಂ** = ವೇದ, ಉಪನಿಷತ್, ಗೀತಾ, ಬ್ರಹ್ಮಸೂತ್ರಗಳ ಭಾಷ್ಯವನ್ನು

**ಪ್ರವಿಧಾಯ** = ಮಾಡಿ

**ಆಹತಾ** = ಹಾಳು ಮಾಡಲ್ಪಟ್ಟ

**ಸಂವಿತ್** = ತತ್ತ್ವಜ್ಞಾನವು

**ಸುತರಾಂ** = ಬಹಳವಾಗಿ

**ತಿರೋಭವತಿ** = ಮರೆಯಾಗುತ್ತಿದೆ.

**ತಾತ್ಪರ್ಯ—** ಈಗ ದೈತ್ಯರು ಭೂಮಿಯಲ್ಲಿ ಹುಟ್ಟಿ ಮಾಯಾವಾದವನ್ನು ಪ್ರಚಾರ ಮಾಡಿದ್ದಾರೆ. ಅವರು ವೇದ, ಸ್ಮೃತಿ, ಉಪನಿಷತ್ತು, ಬ್ರಹ್ಮಸೂತ್ರಾದಿಗಳಿಗೆ ಇರುವ ನಿಜವಾದ ತಾತ್ಪರ್ಯಸಿದ್ಧವಾದ ಅರ್ಥವನ್ನು ದೂಷಿಸಿದ್ದಾರೆ. ಬ್ರಹ್ಮಸೂತ್ರಗಳ ಸತ್ಯವಾದ ಮತ್ತು ಸಜ್ಜನರಿಗೆ ಪ್ರಿಯವಾದ ಅರ್ಥವನ್ನು ಮರೆಮಾಚಿ ತಮ್ಮ ಇಚ್ಛೆಯಂತೆ ಭಾಷ್ಯವನ್ನು ಬರೆದಿದ್ದಾರೆ. ಇದರಿಂದ ತತ್ತ್ವಜ್ಞಾನವು ಹಾಳಾಗಿ ಅತ್ಯಂತವಾಗಿ ಪ್ರಪಂಚದಿಂದ ಅಡಗಿ ಹೋಗುತ್ತಿದೆ.

ವಿಗ್ರಹ—

**ಸೂತ್ರಹೃದಯಂ—** ಸೂತ್ರಾಣಾಂ ಹೃದಯಂ ಸೂತ್ರಹೃದಯಂ, ತತ್ ಸೂತ್ರಹೃದಯಂ ।

**ನಿಜೇಚ್ಛಯಾ—** ನಿಜಾ ಚ ಸಾ ಇಚ್ಛಾ ಚ ನಿಜೇಚ್ಛಾ, ತಯಾ ನಿಜೇಚ್ಛಯಾ ।

**ಶ್ರುತಿಸ್ಮೃತಿನಿಜಾರ್ಥದೂಷಕೈಃ—** ಶ್ರುತಯಶ್ಚ ಸ್ಮೃತಯಶ್ಚ ಶ್ರುತಿಸ್ಮೃತಯಃ, ನಿಜಾಶ್ಚ ತೇ ಅರ್ಥಾಶ್ಚ ನಿಜಾರ್ಥಾಃ, ಶ್ರುತಿಸ್ಮೃತೀನಾಂ ನಿಜಾರ್ಥಾಃ ಶ್ರುತಿಸ್ಮೃತಿನಿಜಾರ್ಥಾಃ, ದೂಷಯಂತೀತಿ ದೂಷಕಾಃ, ಶ್ರುತಿಸ್ಮೃತಿನಿಜಾರ್ಥಾನಾಂ ದೂಷಕಾಃ ಶ್ರುತಿಸ್ಮೃತಿನಿಜಾರ್ಥದೂಷಕಾಃ, ತೈಃ ಶ್ರುತಿಸ್ಮೃತಿನಿಜಾರ್ಥ-ದೂಷಕೈಃ ।

**ಕ್ರಿಯಾಪದ—** ತಿರಸ್ - ಭವತಿ ತಿರಸ್ ಎಂಬ ಅವ್ಯಯಸಹಿತ ಭೂಧಾತು ಲಟ್, ತಿರಸ್ ಎಂಬುದು ಅಂತರ್ಧಾನ, ಮರೆಯಾಗುವುದು ಎಂಬ ಅರ್ಥದ ಅನ್ವಯ, 'ತಿರೋಽಂತರ್ಧೌ ತಿರ್ಯಗರ್ಥೇ' ಅಮರ ॥

**ಪ್ರಯೋಗ—** ಸಂವಿತ್ ತಿರೋಭವತಿ (ಕರ್ತರಿ) । ಸಂವಿದಾ ತಿರೋಭೂಯತೇ (ಭಾವೇ)

★ ★ ★

**ಅವತಾರಿಕಾ—** ದುರ್ಮತಗಳ ನಿರಾಕರಣೆಗಾಗಿಯೂ, ವೇದಗಳಿಗೆ ಮತ್ತು ಬ್ರಹ್ಮಸೂತ್ರಗಳಿಗೆ ಸಮ್ಮತವಾದ ಅರ್ಥವನ್ನು ತಿಳಿಸುವುದಕ್ಕಾಗಿಯೂ ಭಾಷ್ಯವನ್ನು ರಚಿಸೆಂದು ಅಪ್ಪಣೆ ಕೊಟ್ಟರೆನ್ನುತ್ತಾರೆ.

**ಅಪನೇತುಮೇನಮನಯಂ ಕೃತಂ ಖಲೈಃ**
**ಪ್ರತಿನೇತುಮಾತ್ಮಜನತಾಂ ಶುಭಾಂ ಗತಿಮ್ ।**
**ಕುರು ಸೂತ್ರಭಾಷ್ಯಮವಿಲಂಬಿತಂ ವ್ರಜೇಃ**
**ಸುಮತೇನ ಯೋಜಯ ಕವೇ (ಕವೇಃ) ಶ್ರುತಿಸ್ಮೃತೀಃ ॥ 46 ॥**

**ಪದಚ್ಛೇದ—** ಅಪನೇತುಂ, ಏನಂ, ಅನಯಂ, ಕೃತಂ, ಖಲೈಃ, ಪ್ರತಿನೇತುಂ, ಆತ್ಮಜನತಾಂ, ಶುಭಾಂ, ಗತಿಂ, ಕುರು, ಸೂತ್ರಭಾಷ್ಯಂ, ಅವಿಲಂಬಿತಂ, ವ್ರಜೇಃ, ಸುಮತೇನ, ಯೋಜಯ, ಕವೇ (ಕವೇಃ) ಶ್ರುತಿಸ್ಮೃತೀಃ ।

**ಅನ್ವಯ—** ಖಲೈಃ ಕೃತಂ ಏನಂ ಅನಯಂ ಅಪನೇತುಂ, ಆತ್ಮಜನತಾಂ ಶುಭಾಂಗತಿಂ ಪ್ರತಿನೇತುಂ, ಸೂತ್ರಭಾಷ್ಯಂ ಕುರು, ಅವಿಲಂಬಿತಂ ವ್ರಜೇಃ, ಕವೇ (ಕವೇಃ) ಶ್ರುತಿಸ್ಮೃತೀಃ ಸುಮತೇನ ಯೋಜಯ ।

**ಅನ್ವಯಾರ್ಥ—**

**ಖಲೈಃ** = ದುಷ್ಟ ಜನರಿಂದ
**ಕೃತಂ** = ಮಾಡಲ್ಪಟ್ಟ
**ಏನಂ** = ಈ
**ಅನಯಂ** = ಕುಯುಕ್ತಿ ಪೂರ್ಣವಾದ ದುಶ್ಶಾಸ್ತ್ರವನ್ನು
**ಅಪನೇತುಂ** = ಹೋಗಲಾಡಿಸಲು (ಖಂಡಿಸಲು)
**ಆತ್ಮಜನತಾಂ** = ನಮ್ಮ ಜನರ ಸಮೂಹವನ್ನು
**ಶುಭಾಂಗತಿಂ** = ಒಳ್ಳೆಯ ಗತಿಯನ್ನು (ಮೋಕ್ಷವನ್ನು)
**ಪ್ರತಿನೇತುಂ** = ಹೊಂದಿಸುವುದಕ್ಕೆ
**ಸೂತ್ರಭಾಷ್ಯಂ** = ಬ್ರಹ್ಮಸೂತ್ರಭಾಷ್ಯವನ್ನು
**ಕುರು** = ಮಾಡು
**ಅವಿಲಂಬಿತಂ** = ಬೇಗನೇ
**ವ್ರಜೇಃ** = ಹೋಗು,
**ಕವೇ** = ಜ್ಞಾನಿಯೇ (ಕವೇಃ = ಜ್ಞಾನಿಗಳಾದ ವೇದವ್ಯಾಸರ)
**ಶ್ರುತಿಸ್ಮೃತೀಃ** = ವೇದ ಮತ್ತು ಸ್ಮೃತಿಗಳನ್ನು
**ಸುಮತೇನ** = ಒಳ್ಳೆಯ ಸಿದ್ಧಾಂತದಿಂದ
**ಯೋಜಯ** = ಸೇರಿಸು.

**ತಾತ್ಪರ್ಯ—** ಜ್ಞಾನಿಯಾದ ಮಧ್ವನೇ! ನೀನು ದುಷ್ಟರು ಮಾಡಿರುವ ಈ ಕುಯುಕ್ತಿ ಪೂರ್ಣವಾದ ಶಾಸ್ತ್ರವನ್ನು ಖಂಡಿಸಬೇಕಾಗಿದೆ. ನಮ್ಮವರಾದ ಸಾತ್ತ್ವಿಕರಿಗೆ ಉತ್ತಮ ಗತಿಯನ್ನು, ಮೋಕ್ಷವನ್ನು ಕೊಡಬೇಕಾಗಿದೆ. ಅದಕ್ಕೋಸ್ಕರ ಮೊದಲು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸು. ಇಲ್ಲಿಂದ ಬೇಗನೆ ತೆರಳು. ವೇದ ಮತ್ತು ಇತರ ಸತ್ಸಿದ್ಧಾಂತಗಳ ತಾತ್ಪರ್ಯವನ್ನು ಸ್ಪಷ್ಟಪಡಿಸು. ಬ್ರಹ್ಮಸೂತ್ರಗಳಲ್ಲಿ ವೇದವ್ಯಾಸರು ನಿರ್ಣಯಿಸಿರುವ ನಮಗೆ ಸಮ್ಮತವಾದ ಸತ್ಸಿದ್ಧಾಂತದ ಪರವಾಗಿ ವ್ಯಾಖ್ಯಾನವನ್ನು ಮಾಡು.

**ವಿಗ್ರಹ—**

**ಆತ್ಮಜನತಾಂ—** ಜನಾನಾಂ ಸಮೂಹಃ ಜನತಾ, ಆತ್ಮನಃ ಜನತಾ ಆತ್ಮಜನತಾ, ತಾಂ ಆತ್ಮಜನತಾಂ ।

**ಸೂತ್ರಭಾಷ್ಯಂ—** ಸೂತ್ರಾಣಾಂ ಭಾಷ್ಯಂ ಸೂತ್ರಭಾಷ್ಯಂ, ತತ್ ಸೂತ್ರಭಾಷ್ಯಂ ।

**ಅವಿಲಂಬಿತಂ—** ನ ವಿದ್ಯತೇ ವಿಲಂಬಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಅವಿಲಂಬಿತಂ (ಕ್ರಿ. ವಿ.) ।

**ಸುಮತೇನ—** ಶೋಭನಂ ಚ ತತ್ ಮತಂ ಚ ಸುಮತಂ, ತೇನ ಸುಮತೇನ ।

**ಶ್ರುತಿಸ್ಮೃತೀಃ—** ಶ್ರುತಯಶ್ಚ ಸ್ಮೃತಯಶ್ಚ ಶ್ರುತಿಸ್ಮೃತಯಃ, ತಾಃ ಶ್ರುತಿಸ್ಮೃತೀಃ ।

**ಕ್ರಿಯಾಪದ—** ಕುರು- ಡುಕೃಞ್ ಕರಣೇ ಇತಿ ಕರಣಾರ್ಥಕಾತ್ ಕೃಧಾತೋಃ ಪರಸ್ಮೈಪದಿನಃ ಸಕರ್ಮಕಾತ್ ಕರ್ತರಿ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಏಕವಚನೇ ''ಕುರು'' ಇತಿ ರೂಪಮ್ ।

ಕರೋತು ಕುರುತಾತ್ ಕುರುತಾಂ-ಕುರ್ವಂತು, ಕುರು-ಕುರುತಾತ್ ಕುರುತಂ ಕುರುತ, ಕುರ್ವಾಣಿ ಕುರ್ವಾವ ಕುರ್ವಾಮ ॥

**ವ್ರಜೇಃ-** ವ್ರಜ ಗತೌ ಇತಿ ಗತ್ಯರ್ಥಕಾತ್ ವ್ರಜಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವಿಧಿಲಿಙ್ ಮಧ್ಯಮಪುರುಷೇ ಏಕವಚನೇ ''ವ್ರಜೇಃ'' ಇತಿ ರೂಪಮ್ ।

ವ್ರಜೇತ್ ವ್ರಜೇತಾಂ ವ್ರಜೇಯುಃ, ವ್ರಜೇಃ ವ್ರಜೇತಂ ವ್ರಜೇತ, ವ್ರಜೇಯಂ ವ್ರಜೇವ ವ್ರಜೇಮ ॥

**ಯೋಜಯ-** ಯುಜಿರ್ ಯೋಗೇ ಇತಿ ಯೋಗಾರ್ಥಕಾತ್ ಯುಜ್ ಧಾತೋಃ ಣಿಜಂತಾತ್ ಕರ್ತರಿ ಪರಸ್ಮೈಪದಿನಃ ಸಕರ್ಮಕಾತ್ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಏಕವಚನೇ ''ಯೋಜಯ'' ಇತಿ ರೂಪಮ್ ।

ಯೋಜಯತು ಯೋಜಯತಾತ್ ಯೋಜಯತಾಂ ಯೋಜಯಂತು, ಯೋಜಯ-ಯೋಜಯತಾತ್ ಯೋಜಯತಂ ಯೋಜಯತ, ಯೋಜಯಾನಿ ಯೋಜಯಾವ ಯೋಜಯಾಮ ॥

**ಪ್ರಯೋಗ—** ತ್ವಂ ಸೂತ್ರಭಾಷ್ಯಂ ಕುರು (ಕರ್ತರಿ) । ತ್ವಯಾ ಸೂತ್ರಭಾಷ್ಯಂ ಕ್ರಿಯತಾಂ (ಕರ್ಮಣಿ) ।

ತ್ವಂ ಅವಿಲಂಬಿತಂ ವ್ರಜೇಃ (ಕರ್ಮವನ್ನು ಹೇಳದಿರುವುದರಿಂದ ಅಕರ್ಮಕ) ತ್ವಯಾ ಅವಿಲಂಬಿತಂ ವ್ರಜ್ಯತಾಂ (ಭಾವೇ) ।

(ತ್ವಂ) ಶ್ರುತಿಸ್ಮೃತೀಃ ಸಮತೇನ ಯೋಜಯ (ಕರ್ತರಿ) । (ತ್ವಯಾ) ಶ್ರುತಿಸ್ಮೃತಯಃ ಸಮತೇನ ಯೋಜ್ಯಂತಾಂ (ಕರ್ಮಣಿ) ।

**ವಿಶೇಷಾಂಶ -** ಖಲೈಃ ಎಂಬಲ್ಲಿ 'ಕ್ರೂರೇ ನೀಚೇಽಧಮೇ ಖಲಃ' ಎಂದು ವಿಶ್ವಕೋಶ, ಕವೇ ಅಥವಾ ಕವೇಃ ಎಂಬಲ್ಲಿ 'ಸಂಖ್ಯಾವಾನ್ ಪಂಡಿತಃ ಕವಿಃ' ಎಂದು ಅಮರಕೋಶವಿದೆ.

★ ★ ★

**ಅವತಾರಿಕಾ—** ಮೇಲೆ ಕಂಡಂತೆ ಆಜ್ಞಪ್ತರಾದ ಶ್ರೀಮನ್ಮಧ್ವಾಚಾರ್ಯರು ಶ್ರೀಮನ್ನಾರಾಯಣನಲ್ಲಿ ಬಿನ್ನೈಸಿದ್ದನ್ನು ವಿವರಿಸುತ್ತಾರೆ.

**ಅಮಿತಾಂ ಮಿತಾಮಪಿ ಗಿರಂ ಜಗದ್ಗುರೋ-**
**ರಿತಿ ತಾಂ ನಿಶಮ್ಯ ವಿರಲೇತರಾಂತರಃ ।**
**ವದತಾಂ ವರಸ್ತಮವದತ್ತದಾ ತಯೋ-**
**ರ್ವಿರಹಾಕ್ಷಮಃ ಖಲು ಚರಾಚರೇಶಯೋಃ ॥ 47 ॥**

**ಪದಚ್ಛೇದ—** ಅಮಿತಾಂ, ಮಿತಾಂ, ಅಪಿ, ಗಿರಂ, ಜಗದ್ಗುರೋಃ, ಇತಿ, ತಾಂ, ನಿಶಮ್ಯ, ವಿರಲೇತರಾಂತರಃ, ವದತಾಂ, ವರಃ, ತಂ, ಅವದತ್, ತದಾ, ತಯೋಃ, ವಿರಹಾಕ್ಷಮಃ, ಖಲು, ಚರಾಚರೇಶಯೋಃ ।

**ಅನ್ವಯ—** ತದಾ ವದತಾಂ ವರಃ ವಿರಲೇತರಾಂತರಃ ಇತಿ ಮಿತಾಂ ಅಪಿ ಅಮಿತಾಂ ಜಗದ್ಗುರೋಃ ತಾಂ ಗಿರಂ ನಿಶಮ್ಯ ತಂ ಅವದತ್ (ಸಃ) ಚರಾಚರೇಶಯೋಃ ತಯೋಃ ವಿರಹಾಕ್ಷಮಃ ಖಲು ।

**ಅನ್ವಯಾರ್ಥ—**

**ತದಾ** = ಆಗ

**ವದತಾಂ** = ಮಾತಾಡುವವರಲ್ಲಿ

**ವರಃ** = ಶ್ರೇಷ್ಠರಾದ

**ವಿರಲೇತರಾಂತರಃ** = ಪೂರ್ಣಪ್ರಜ್ಞರು

**ಮಿತಾಂ ಅಪಿ** = (ಶಬ್ದಗಳ ದೃಷ್ಟಿಯಿಂದ) ಕಡಿಮೆಯಾಗಿದ್ದರೂ

**ಅಮಿತಾಂ** = ಬಹಳ ಅರ್ಥವುಳ್ಳದ್ದು ಆದುದರಿಂದ ಮಿತಿಯಿಲ್ಲದ

**ಜಗದ್ಗುರೋಃ** = ಜಗತ್ತಿಗೆ ತಂದೆಯಾದ ಆ ನಾರಾಯಣನ

**ತಾಂ ಗಿರಂ** = ಆ ಮಾತನ್ನು

**ನಿಶಮ್ಯ** = ಕೇಳಿ

**ತಂ** = ಆ ನಾರಾಯಣನನ್ನು ಕುರಿತು

**ಅವದತ್** = ಹೇಳಿದರು.

**(ಸಃ** = ಆ ಪೂರ್ಣಪ್ರಜ್ಞಾಚಾರ್ಯರು)

**ಚರಾಚರೇಶಯೋಃ** = ಸ್ಥಾವರ ಜಂಗಮಾತ್ಮಕ ಪ್ರಪಂಚಕ್ಕೆ ಒಡೆಯರಾದ

**ತಯೋಃ** = ಆ ವ್ಯಾಸ ನಾರಾಯಣರ

**ವಿರಹಾಕ್ಷಮಃ ಖಲು** = ನಿಯೋಗವನ್ನು ಸಹಿಸಲು ಅಸಮರ್ಥರಷ್ಟೆ.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞರು ವಾಗ್ಮಿಗಳಲ್ಲಿ ಶ್ರೇಷ್ಠರು. ಗುರುಗಳ ಸಮೀಪದಲ್ಲಿ ಹೇಗೆ ಮಾತಾಡಬೇಕೆಂದು ಬಲ್ಲವರು. ಅವರು, ಶಬ್ದಗಳು ಅಲ್ಪವಾದ್ದರಿಂದ ಮಿತವಾದರೂ, ಅರ್ಥವು ಹೆಚ್ಚಾಗಿರುವುದರಿಂದ ಅಮಿತವಾದ ಜಗತ್ತುಗಳಿಗೆ ಸ್ವಾಮಿಯಾದ ನಾರಾಯಣನ ಮಾತನ್ನು ಕೇಳಿ, ಅವನನ್ನು ಕುರಿತು ಮುಂದೆ ಹೇಳಿದ ರೀತಿಯಲ್ಲಿ ಹೇಳಿದರು. ಅವರು ಸ್ಥಾವರ ಜಂಗಮಾತ್ಮಕ ಪ್ರಪಂಚಕ್ಕೆ ಒಡೆಯರಾದ ಶ್ರೀವ್ಯಾಸನಾರಾಯಣರ ಅಗಲುವಿಕೆಯನ್ನು ಸಹಿಸಲಾರರು. (ಆದುದರಿಂದಲೇ ಅವರು ಮುಂದೆ ಹೇಳುವ ರೀತಿಯಲ್ಲಿ ಹೇಳಲು ಪ್ರಾರಂಭಿಸಿದ್ದಾರೆ). ಸರ್ವಥಾ ಹೋಗುವುದಿಲ್ಲ ಎಂಬ ಅಭಿಪ್ರಾಯದಿಂದ ಅಲ್ಲ.

**ವಿಗ್ರಹ—**

**ಅಮಿತಾಂ—** ನ ಮಿತಾ ಅಮಿತಾ, ತಾಂ ಅಮಿತಾಂ ।

**ಜಗದ್ಗುರೋಃ—** ಜಗತಾಂ ಗುರುಃ ಜಗದ್ಗುರುಃ, ತಸ್ಯ ಜಗದ್ಗುರೋಃ ।

**ವಿರಲೇತರಾಂತರಃ—** ವಿರಲಾತ್ ಇತರತ್ ವಿರಲೇತರತ್, ವಿರಲೇತರಾತ್ ಅಂತರಂ ಯಸ್ಯ ಸಃ ವಿರಲೇತ-ರಾಂತರಃ ।

**ವಿರಹಾಕ್ಷಮಃ—** ವಿರಹೇ ಅಕ್ಷಮಃ ವಿರಹಾಕ್ಷಮಃ ।

**ಚರಾಚರೇಶಯೋಃ—** ಚರಶ್ಚ ಅಚರಶ್ಚ ಚರಾಚರೌ, ಚರಾಚರಯೋಃ ಈಶೌ ಚರಾಚರೇಶೌ, ತಯೋಃ ಚರಾಚರೇಶಯೋಃ ।

**ಕ್ರಿಯಾಪದ—** **ಅವದತ್**- ವದ ವ್ಯಕ್ತಾಯಾಂ ವಾಚಿ, ಇತಿ ವ್ಯಕ್ತವಾಗರ್ಥಕಾತ್ ವದಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ 'ಅವದತ್' ಇತಿ ರೂಪಮ್ ।

ಅವದತ್ ಅವದತಾಂ ಅವದನ್, ಅವದಃ ಅವದತಂ ಅವದತ, ಅವದಂ ಅವದಾವ ಅವದಾಮ ॥

**ಪ್ರಯೋಗ—** ವಿರಲೇತರಾಂತರಃ ತಂ ಅವದತ್ (ಕರ್ತರಿ) । ವಿರಲೇತರಾಂತರೇಣ ಸಃ ಊದ್ಯತ (ಕರ್ಮಣಿ) ।

**ವಿಶೇಷಾಂಶ—** ಜಗದ್ಗುರೋಃ ಎಂಬಲ್ಲಿ 'ಗುರೂ ಗೀಷ್ಪತಿ ಪಿತ್ರಾದೌ' ಎಂದು ಅಮರ. ಗುರು ಎಂದರೆ ತಂದ ಎಂದರ್ಥ. ವಿರಹಾಕ್ಷಮಃ ಎಂಬಲ್ಲಿ 'ಕ್ಷಮಂ ಶಕ್ತೇ ಹಿತೇ ತ್ರಿಷು' ಎಂದು ಅಮರ. ಕ್ಷಮ = ಶಕ್ತ, ಸಮರ್ಥ, ಅಕ್ಷಮ = ಅಸಮರ್ಥ.

★ ★ ★

**ಅವತಾರಿಕಾ—** ಆಚಾರ್ಯರ ಮಾತಿನ ಪ್ರಕಾರವನ್ನೇ ತೋರಿಸುತ್ತಾರೆ.

**ಭವತೋರಿತಃ ಸತತಸೇವನಾಮೃತೇ**
**ಮಮ ಮಂಕ್ತುಮಸ್ತು ಭಗವನ್ನನುಗ್ರಹಃ ।**
**ನ ಲಭೇಯ ವಲ್ಲಭತಮೇದೃಶಂ ಸುಖಂ**
**ಜಗತಾಂ ತ್ರಯೇಽಪಿ ಜಗದೇಕಮಂಗಲಮ್ ॥ 48 ॥**

**ಪದಚ್ಛೇದ—** ಭವತೋಃ, ಇತಃ, ಸತತಸೇವನಾಮೃತೇ, ಮಮ, ಮಂಕ್ತುಂ, ಅಸ್ತು, ಭಗವನ್, ಅನುಗ್ರಹಃ, ನ, ಲಭೇಯ, ವಲ್ಲಭತಮ, ಈದೃಶಂ, ಸುಖಂ, ಜಗತಾಂ, ತ್ರಯೇ, ಅಪಿ, ಜಗದೇಕಮಂಗಲಂ ।

**ಅನ್ವಯ—** ಹೇ ಭಗವನ್, ಇತಃ ಭವತೋಃ ಸತತಸೇವನಾಮೃತೇ, ಮಮ ಮಂಕ್ತು ಅನುಗ್ರಹಃ ಅಸ್ತು, ಹೇ ವಲ್ಲಭತಮ! ಈದೃಶಂ ಸುಖಂ, ಜಗತಾಂ ತ್ರಯೇಽಪಿ ನ ಲಭೇಯ ।

**ಅನ್ವಯಾರ್ಥ—**

**ಹೇ ಭಗವನ್** = ಎಲೈ ಪೂರ್ಣವಾದ ಐಶ್ವರ್ಯಾದಿ ಷಡ್ಗುಣ ಉಳ್ಳ ನಾರಾಯಣನೇ,
**ಇತಃ** = ಇಲ್ಲಿ
**ಭವತೋಃ** = ನಿಮ್ಮಿಬ್ಬರ
**ಸತತ ಸೇವನಾಮೃತೇ** = ಎಡೆಬಿಡದ ಸೇವೆಯೆಂಬ ಅಮೃತದಲ್ಲಿ
**ಮಮ** = ನನಗೆ
**ಮಂಕ್ತುಂ** = ಮುಳುಗಲು (ಸ್ನಾನ ಮಾಡಲು)
**ಅನುಗ್ರಹಃ** = ಅನುಗ್ರಹವು
**ಅಸ್ತು** = ಆಗಲಿ
**ಹೇ ವಲ್ಲಭತಮ** = ಎಲೈ ಅತ್ಯಂತ ಪ್ರಿಯನಾದ ನಾರಾಯಣನೇ!
**ಜಗದೇಕಮಂಗಲಂ** = ಲೋಕದಲ್ಲಿ ಮುಖ್ಯಮಂಗಲರೂಪವಾದ
**ಈದೃಶಂ ಸುಖಂ** = ಇಂತಹ ಆನಂದವು
**ಜಗತಾಂ** = ಲೋಕಗಳ
**ತ್ರಯೇ ಅಪಿ** = ಮೂರರಲ್ಲಿಯೂ ಕೂಡ
**ನ ಲಭೇಯ** = ಹೊಂದಲಾರೆ.

**ತಾತ್ಪರ್ಯ—** ಎಲೈ, ಐಶ್ವರ್ಯಾದಿ ಸದ್ಗುಣಭರಿತನಾದ ನಾರಾಯಣನೇ ! ನಾನು ಇಲ್ಲೇ ಇದ್ದು ನಿಮ್ಮಿಬ್ಬರನ್ನು ಎಡೆಬಿಡದೆ ಸೇವಿಸಲು ಅವಕಾಶವನ್ನು ಮಾಡಿಕೊಟ್ಟು ಅನುಗ್ರಹಿಸಿರಿ. ನಿಮ್ಮ ಸೇವೆಯನ್ನು ಮಾಡುತ್ತಿದ್ದರೆ ನನಗೆ ಅಮೃತದಲ್ಲಿ ಮುಳುಗಿದಂತೆ, ಅಮೃತದಲ್ಲಿ ಸ್ನಾನ ಮಾಡಿದಂತೆ ಆನಂದ ಉಂಟಾಗುತ್ತದೆ. ಎಲ್ಲರಿಗೂ ಆನಂದಕರವಾದ ತಮ್ಮ ಈ ಸೇವೆಯ ಆನಂದವು ಮೂರು ಲೋಕಗಳಲ್ಲಿಯೂ ನನಗೆ ಬೇರೆ ಇನ್ನೆಲ್ಲಿಯೂ ದೊರಕಲಾರದು.

ವಿಗ್ರಹ—

**ಸತತಸೇವನಾಮೃತೇ—** ಸತತಂ ಸೇವನಂ ಸತತಸೇವನಂ, ಸತತಸೇವನಮೇವ ಅಮೃತಂ ಸತತ-ಸೇವನಾಮೃತಂ, ತಸ್ಮಿನ್ ಸತತಸೇವನಾಮೃತೇ ।

**ಹೇ ವಲ್ಲಭತಮ—** ಅತಿಶಯೇನ ವಲ್ಲಭಃ ವಲ್ಲಭತಮಃ, ತಸ್ಯ ಸಂಬುದ್ಧಿಃ ಹೇ ವಲ್ಲಭತಮ ।

**ಜಗದೇಕಮಂಗಲಂ—** ಏಕಂ ಚ ತತ್ ಮಂಗಲಂ ಚ ಏಕಮಂಗಲಂ, ಜಗತಾಂ ಏಕಮಂಗಲಂ ಜಗದೇಕಮಂಗಲಂ, ತತ್ ಜಗದೇಕಮಂಗಲಂ ।

**ಕ್ರಿಯಾಪದ— ಅಸ್ತು-** ಅಸ ಭುವಿ ಇತಿ ಸತ್ತಾರ್ಥಕಾತ್ ಅಸ್ ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಪ್ರಾರ್ಥನಾಯಾಂ ಲೋಟ್ ಪ್ರಥಮಪುರುಷೇ ಏಕವಚನೇ ಅಸ್ತು ಇತಿ ರೂಪಮ್ ।

ಅಸ್ತು ಸ್ತಾತ್ ಸ್ತಾಂ ಸಂತು, ಏಧಿ-ಸ್ತಾತ್, ಸ್ತಂ ಸ್ತ, ಅಸಾನಿ ಅಸಾವ ಅಸಾಮ ॥

**ಅಭೇಯ-** ಡುಲಭಷ್ ಪ್ರಾಪ್ತೌ ಇತಿ ಪ್ರಾಪ್ತ್ಯರ್ಥಕಾತ್ ಲಭ್‌ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ವಿಧಿ ಲಿಙ್ ಉತ್ತಮಪುರುಷೇ ಏಕವಚನೇ ''ಲಭೇಯ'' ಇತಿ ರೂಪಮ್ ।

ಲಭೇತ ಲಭೇಯಾತಾಂ ಲಭೇರನ್, ಲಭೇಥಾಃ ಲಭೇಯಾಥಾಂ ಲಭೇಧ್ವಂ, ಲಭೇಯ ಲಭೇವಹಿ ಲಭೇಮಹಿ

**ಪ್ರಯೋಗ—** ಹೇ! ಭಗವನ್ ಮಮ ಅನುಗ್ರಹಃ ಅಸ್ತು (ಕರ್ತರಿ) । ಹೇ! ಭಗವನ್ ಮಮ ಅನುಗ್ರಹೇಣ ಭೂಯತಾಂ (ಭಾವೇ) । ಹೇ ಭಗವನ್! ಅಹಂ ಜಗತಾಂ ತ್ರಯೇಽಪಿ ಈದೃಶಂ ಸುಖಂ ನ ಲಭೇಯ (ಕರ್ತರಿ) । ಹೇ ಭಗವನ್! ಜಗತಾಂ ತ್ರಯೇಽಪಿ (ಮಯಾ) ಈದೃಶಂ ಸುಖಂ ನ ಲಭ್ಯೇತ (ಕರ್ಮಣಿ) ।

★ ★ ★

ಅವತಾರಿಕಾ— ಕರಾಳ ಕಲಿಕಾಲದ ಪರಿಸ್ಥಿತಿಯನ್ನು ವಿಜ್ಞಾಪಿಸಿಕೊಳ್ಳುತ್ತಾರೆ

**ಕಲಿಕಾಲಕಾಲಿತಗುಣೇ ಧರಾತಲೇ**

**ಸುಜನೋ ನ ನೂನಮಧುನಾಽಸ್ತಿ ಯೋಗ್ಯಧೀಃ ।**

**ಪರತತ್ತ್ವವರ್ಣನಮಯೋಗ್ಯತಾವತೇ**

**ನನು ಹವ್ಯದಾನಮಿವ ನಿಂದ್ಯತೇ ಶುನೇ ॥ 49 ॥**

**ಪದಚ್ಛೇದ—** ಕಲಿಕಾಲಕಾಲಿತಗುಣೇ, ಧರಾತಲೇ, ಸುಜನಃ, ನ, ನೂನಂ, ಅಧುನಾ, ಅಸ್ತಿ, ಯೋಗ್ಯಧೀಃ, ಪರತತ್ತ್ವವರ್ಣನಂ, ಅಯೋಗ್ಯತಾವತೇ, ನನು, ಹವ್ಯದಾನಂ, ಇವ, ನಿಂದ್ಯತೇ, ಶುನೇ ।

**ಅನ್ವಯ—** ಅಧುನಾ, ಕಲಿಕಾಲಕಾಲಿತಗುಣೇ, ಧರಾತಲೇ ಯೋಗ್ಯಧೀಃ ಸುಜನಃ ನೂನಂ ನಾಸ್ತಿ, ಅಯೋಗ್ಯತಾವತೇ ಪರತತ್ತ್ವವರ್ಣನಂ, ಶುನೇ ಹವ್ಯದಾನಮಿವ ನಿಂದ್ಯತೇ ನನು ।

ಅನ್ವಯಾರ್ಥ—

**ಅಧುನಾ** = ಈಗ

**ಕಲಿಕಾಲಕಾಲಿತ ಗುಣೇ ಧರಾತಲೇ** = ಕಲಿ ಎಂಬ ಕಾಲದಿಂದ (ಕಲಿ ಸಮಯದ ಅಭಿಮಾನಿಯಾದ ಅಸುರ-ನಿಂದ) ನಾಶ ಮಾಡಲ್ಪಟ್ಟ ಭಕ್ತಿ, ವೈರಾಗ್ಯಾದಿ ಗುಣಗಳುಳ್ಳ ಭೂತಲದಲ್ಲಿ

**ಯೋಗ್ಯಧೀಃ** = ತತ್ತ್ವಜ್ಞಾನಕ್ಕೆ ಯೋಗ್ಯವಾದ ಅಂತಃಕರಣವುಳ್ಳ

**ಸುಜನಃ** = ಸಚ್ಚೇತನನು,

**ನೂನಂ** = ಪ್ರಾಯಃ

**ನಾಸ್ತಿ** = ಇಲ್ಲ

**ಅಯೋಗ್ಯತಾವತೇ** = ತತ್ತ್ವಜ್ಞಾನ ಯೋಗ್ಯತೆ ಇಲ್ಲದ ಅನಧಿಕಾರಿಗೆ

**ಪರತತ್ತ್ವವರ್ಣನಂ** = ಪರಬ್ರಹ್ಮ ತತ್ತ್ವೋಪದೇಶವು

**ಶುನೇ** = ನಾಯಿಗೆ

**ಹವ್ಯದಾನಂ ಇವ** = ದೇವಯೋಗ್ಯವಾದ ಅನ್ನದ ದಾನದಂತೆ

**ನಿಂದ್ಯತೇ ನನು** = ನಿಂದಿಸಲ್ಪಡುತ್ತದೆಯಷ್ಟೆ !

ತಾತ್ಪರ್ಯ— ಸ್ವಾಮಿಯೇ, ಈಗ ಭೂಲೋಕದಲ್ಲಿ ಕಲಿಯ (ಪ್ರಭಾವವು) ಸಾಮರ್ಥ್ಯವು ಹೆಚ್ಚಾಗಿದೆ. ಅದರಿಂದಾಗಿ ಭೂಲೋಕದಲ್ಲಿ ಜ್ಞಾನಭಕ್ತಿವೈರಾಗ್ಯಾದಿ ಗುಣಗಳುಳ್ಳ ಸಾತ್ತ್ವಿಕರಾದ ಯೋಗ್ಯಪುರುಷರು ಪ್ರಾಯಃ ಇಲ್ಲ. ಹೀಗೆ ತತ್ತ್ವಜ್ಞಾನೋಪದೇಶಕ್ಕೆ ಯೋಗ್ಯನಾದ ಮನುಷ್ಯನು ಇಲ್ಲದಿರುವ ಈ ಸಮಯದಲ್ಲಿ ನಾನು ಭೂಲೋಕಕ್ಕೆ ಹೋಗಿ ಏನು ಉಪಯೋಗ? ಯೋಗ್ಯತೆಯಿಲ್ಲದ ಮಾನವನಿಗೆ ತತ್ತ್ವಜ್ಞಾನೋಪದೇಶ ಮಾಡುವುದು ಸರ್ವಥಾ ಯೋಗ್ಯವಲ್ಲ. ಯೋಗ್ಯತೆಯಿಲ್ಲದ ತಾಮಸನಿಗೆ ತತ್ತ್ವೋಪದೇಶ ಮಾಡುವುದು ಯಜ್ಞದ ಹವಿಸ್ಸನ್ನು ನಾಯಿಗೆ ತಿನ್ನಲು ಕೊಟ್ಟಂತೆ ಅತ್ಯಂತ ನಿಂದಾಸ್ಪದವಾಗುತ್ತದೆ.

ವಿಗ್ರಹ—

**ಕಲಿಕಾಲಕಾಲಿತಗುಣೇ**— ಕಲೇಃ ಕಾಲಃ ಕಲಿಕಾಲಃ, ಕಲಿಕಾಲೇನ ಕಾಲಿತಾಃ ಕಲಿಕಾಲಕಾಲಿತಾಃ, ಕಲಿಕಾಲ-ಕಾಲಿತಾಃ ಗುಣಾಃ ಯಸ್ಮಿನ್ ತತ್ ಕಲಿಕಾಲಕಾಲಿತಗುಣಂ (ಧರಾತಲಂ), ತಸ್ಮಿನ್ ಕಲಿಕಾಲಕಾಲಿತ-ಗುಣೇ ।

**ಧರಾತಲೇ**— ಧರಾಯಾಃ ತಲಂ ಧರಾತಲಂ, ತಸ್ಮಿನ್ ಧರಾತಲೇ ।

**ಸುಜನಃ**— ಶೋಭನಶ್ಚಾಸೌ ಜನಶ್ಚ ಸುಜನಃ ।

**ಯೋಗ್ಯಧೀಃ**— ಯೋಗ್ಯಾ ಧೀಃ ಯಸ್ಯ ಸಃ ಯೋಗ್ಯಧೀಃ ।

**ಪರತತ್ತ್ವವರ್ಣನಂ**— ಪರಂ ಚ ತತ್ ತತ್ತ್ವಂ ಚ ಪರತತ್ತ್ವಂ, ಪರತತ್ತ್ವಸ್ಯ ವರ್ಣನಂ ಪರತತ್ತ್ವವರ್ಣನಂ ।

**ಅಯೋಗ್ಯತಾವತೇ**— ಯೋಗ್ಯಸ್ಯ ಭಾವಃ ಯೋಗ್ಯತಾ, ಯೋಗ್ಯತಾ ಅಸ್ಯ ಅಸ್ತೀತಿ ಯೋಗ್ಯತಾವಾನ್, ನ ಯೋಗ್ಯತಾವಾನ್ ಅಯೋಗ್ಯತಾವಾನ್, ತಸ್ಮೈ ।

**ಹವ್ಯದಾನಂ**—ಹವ್ಯಸ್ಯ ದಾನಂ ಹವ್ಯದಾನಂ ।

ಕ್ರಿಯಾಪದ— ಅಸ್ತಿ- ಅಸ ಭುವಿ ಇತಿ ಸತ್ತಾರ್ಥಕಾತ್ ಅಸ್ ಧಾತೋಃ ವರ್ತಮಾನೇ ಲಟ್ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಅಸ್ತೀತಿ ರೂಪಂ ।

ಅಸ್ತಿ ಸ್ತಃ ಸಂತಿ, ಅಸಿ ಸ್ಥಃ ಸ್ಥ, ಅಸ್ಮಿ ಸ್ವಃ ಸ್ಮಃ ॥

**ನಿಂದ್ಯತೇ-** ಣಿದಿ ಕುತ್ಸಾಯಾಂ ಇತಿ ಕುತ್ಸಾರ್ಥಕಾತ್ ನಿಂದ್‌ಧಾತೋಃ ಕರ್ಮಣಿ ಲಟ್ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ 'ನಿಂದ್ಯತೇ' ಇತಿ ರೂಪಮ್ ।

ನಿಂದ್ಯತೇ ನಿಂದ್ಯೇತೇ ನಿಂದ್ಯಂತೇ, ನಿಂದ್ಯಸೇ ನಿಂದ್ಯೇಥೇ ನಿಂದ್ಯಧ್ವೇ, ನಿಂದ್ಯೇ ನಿಂದ್ಯಾವಹೇ ನಿಂದ್ಯಾಮಹೇ ॥

**ಪ್ರಯೋಗ—** ಧರಾತಲೇ ಸುಜನಃ ನಾಸ್ತಿ (ಅಕರ್ಮಕ ಕರ್ತರಿ) ಧರಾತಲೇ ಸುಜನೇನ ನ ಭೂಯತೇ (ಭಾವೇ) (ಜನೈಃ) ಅಯೋಗ್ಯತಾವತೇ ಪರತತ್ತ್ವವರ್ಣನಂ ನಿಂದ್ಯತೇ (ಕರ್ಮಣಿ) (ಜನಾಃ) ಅಯೋಗ್ಯತಾವತೇ ಪರತತ್ತ್ವ ವರ್ಣನಂ ನಿಂದಂತಿ (ಕರ್ತರಿ) ।

★ ★ ★

**ಅವತಾರಿಕಾ—** ಆಗ ಶ್ರೀಮನ್ನಾರಾಯಣನು ಹೇಳಿದ ಸಮಾಧಾನವನ್ನು ವಿವರಿಸುತ್ತಾರೆ.

**ಇತಿ ತಂ ಬ್ರುವಾಣಮಯಮಬ್ರವೀದ್ವಿಭುಃ**
**ಭುವಿ ಸಂತಿ ಸೌಮ್ಯ ಪುರುಷಾ ಗುಣೋಚಿತಾಃ ।**
**ವಿಮಲಾನ್ ಮಣೀನಿವ ಗುಣೋಜ್ಝಿತಾನಿಮಾನ್**
**ದಯಯಾ ವಿಶೋಧಯ ವಿಶುದ್ಧಗೋಗಣೈಃ ॥ 50 ॥**

**ಪದಚ್ಛೇದ—** ಇತಿ, ತಂ, ಬ್ರುವಾಣಂ, ಅಯಂ, ಅಬ್ರವೀತ್, ವಿಭುಃ, ಭುವಿ, ಸಂತಿ, ಸೌಮ್ಯ, ಪುರುಷಾಃ, ಗುಣೋಚಿತಾಃ, ವಿಮಲಾನ್, ಮಣೀನ್, ಇವ ಗುಣೋಜ್ಝಿತಾನ್, ಇಮಾನ್, ದಯಯಾ, ವಿಶೋಧಯ, ವಿಶುದ್ಧ-ಗೋಗಣೈಃ ।

**ಅನ್ವಯ—** ವಿಭುಃ ಅಯಂ, ಇತಿ ಬ್ರುವಾಣಂ ತಂ ಅಬ್ರವೀತ್, ಸೌಮ್ಯ ! ಭುವಿ ಗುಣೋಚಿತಾಃ ಪುರುಷಾಃ ಸಂತಿ, ವಿಮಲಾನ್ ಗುಣೋಜ್ಝಿತಾನ್ ಇಮಾನ್, ಮಣೀನ್ ಇವ ದಯಯಾ ವಿಶುದ್ಧಗೋಗಣೈಃ ವಿಶೋಧಯ ।

**ಅನ್ವಯಾರ್ಥ—**

**ವಿಭುಃ** = ಸಮರ್ಥರಾದ (ವ್ಯಾಪ್ತರಾದ)
**ಅಯಂ** = ಈ ನಾರಾಯಣ ಮುನಿಯು
**ಇತಿ** = ಈ ರೀತಿಯಾಗಿ
**ಬ್ರುವಾಣಂ** = ಹೇಳುತ್ತಿರುವ
**ತಂ** = ಆ ಮಧ್ವರನ್ನು ಕುರಿತು
**ಅಬ್ರವೀತ್** = ಹೇಳಿದನು
**ಸೌಮ್ಯ!** = ಉತ್ತಮಗುಣ ಸಂಪನ್ನನಾದ ಮಧ್ವನೇ (ಸುಂದರನೇ!),
**ಭುವಿ** = ಭೂಲೋಕದಲ್ಲಿ,
**ಗುಣೋಚಿತಾಃ** = ಜ್ಞಾನಭಕ್ತ್ಯಾದಿ ಗುಣಗಳಿಗೆ ಯೋಗ್ಯರಾದ
**ಪುರುಷಾಃ** = ಮನುಷ್ಯರು
**ಸಂತಿ** = ಇದ್ದಾರೆ,
**ವಿಮಲಾನ್** = ಶುದ್ಧರಾದ (ಸ್ವಭಾವದಿಂದ ಕೊಳೆಯಿಲ್ಲದ)

**ಗುಣೋಜ್ಝಿತಾನ್** = (ಸಜ್ಜನರ ಸಹವಾಸವಿಲ್ಲದಿರುವುದರಿಂದ) ಜ್ಞಾನ, ಭಕ್ತಿ, ವೈರಾಗ್ಯಾದಿ ಗುಣಗಳಿಲ್ಲದಿರುವ (ದಾರವಿಲ್ಲದಿರುವ)

**ಇಮಾನ್** = ಈ ಜನರನ್ನು

**ಮಣೀನ್ ಇವ** = ರತ್ನಗಳನ್ನೆಂಬಂತೆ

**ದಯಯಾ** = ದಯೆಯಿಂದ

**ವಿಶುದ್ಧಗೋಗಣ್ಯೈಃ** = ಶುದ್ಧವಾದ ಮಾತುಗಳ ಸಮೂಹಗಳಿಂದ (ನಿರ್ಮಲವಾದ ನೀರಿನ ಸಮೂಹಗಳಿಂದ)

**ವಿಶೋಧಯ** = ಅಜ್ಞಾನಾದಿ ದೋಷವಿಲ್ಲದವರನ್ನಾಗಿ ಮಾಡು. (ಶೋಧಿಸು, ತೊಳೆ)

**ತಾತ್ಪರ್ಯ—** ಆಗ ಸರ್ವತ್ರ ವ್ಯಾಪ್ತನಾದ ಸಮರ್ಥನಾದ ನಾರಾಯಣ ಮುನಿಯು ಹೀಗೆ ಹೇಳುತ್ತಿರುವ ಶ್ರೀಮಧ್ವರನ್ನು ಕುರಿತು ಹೀಗೆಂದು ಹೇಳಿದನು. 'ಸಾಧು ಗುಣಸಂಪನ್ನನಾದ ಸುಂದರನಾದ ಮಧ್ವನೇ! ಲೋಕದಲ್ಲಿ ಈ ಕಲಿಕಾಲದಲ್ಲಿಯೂ ಜ್ಞಾನ, ಭಕ್ತಿ, ವೈರಾಗ್ಯಾದಿ ಗುಣಗಳಿಗೆ ಯೋಗ್ಯರಾದ ಸಾತ್ತ್ವಿಕ ಜನರಿದ್ದಾರೆ. ಅವರಿಗೆ ಯೋಗ್ಯರ ಸಹವಾಸವಿಲ್ಲ ಮತ್ತು ಸರಿಯಾಗಿ ಉಪದೇಶ ಮಾಡುವವರಿಲ್ಲ. ದುರ್ಜನ ಸಹವಾಸದೋಷದಿಂದ ಅವರು ಕೊಳೆ ತುಂಬಿ ಮಲಿನವಾದ ರತ್ನಗಳಂತಿದ್ದಾರೆ. ರತ್ನ ಪರೀಕ್ಷಕನು ಕೊಳೆಯಾದ ರತ್ನಗಳನ್ನು ನೀರಿನಿಂದ ತೊಳೆದು ಶೋಧಿಸಿ ಉಜ್ವಲ-ಗೊಳಿಸುವಂತೆ ನೀನು ಜ್ಞಾನಯೋಗ್ಯರನ್ನು ಹುಡುಕಿ ಶುದ್ಧವಾದ ಮಾತುಗಳಿಂದ ದಯೆಯಿಂದ ಅವರಿಗೆ ಸತ್‌ಜ್ಞಾನವನ್ನು ಉಪದೇಶಿಸಿ ಅವರ ದೋಷಗಳನ್ನು ಹೋಗಲಾಡಿಸಿ, ಅವರನ್ನು ಜ್ಞಾನಿಗಳನ್ನಾಗಿ ಮಾಡು.'

**ವಿಗ್ರಹ—**

**ಗುಣೋಚಿತಾಃ—** ಗುಣಾನಾಂ ಉಚಿತಾಃ ಗುಣೋಚಿತಾಃ ।

**ವಿಮಲಾನ್—** ವಿಗತಂ ಮಲಂ ಯೇಭ್ಯಃ ತೇ ವಿಮಲಾಃ, ತಾನ್ ವಿಮಲಾನ್ ।

**ಗುಣೋಜ್ಝಿತಾನ್—** ಗುಣೈಃ ಉಜ್ಝಿತಾಃ ಗುಣೋಜ್ಝಿತಾಃ, ತಾನ್ ಗುಣೋಜ್ಝಿತಾನ್ ।

**ಗೋಗಣೈಃ—** ಗವಾಂ ಗಣಾಃ ಗೋಗಣಾಃ, ವಿಶುದ್ಧಾಶ್ಚ ತೇ ಗೋಗಣಾಶ್ಚ ವಿಶುದ್ಧಗೋಗಣಾಃ, ತೈಃ ವಿಶುದ್ಧಗೋಗಣೈಃ ।

**ಕ್ರಿಯಾಪದ— ಅಬ್ರವೀತ್**- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅಬ್ರವೀತ್ ಇತಿ ರೂಪಮ್ ।

ಅಬ್ರವೀತ್ ಅಬ್ರೂತಾಂ ಅಬ್ರುವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರುವಂ ಅಬ್ರೂವ ಅಬ್ರೂಮ ॥

**ವಿಶೋಧಯ**- ವಿ ಇತ್ಯುಪಸರ್ಗಪೂರ್ವಕಾತ್ ಶುಧ ಶೌಚೇ ಇತಿ ಶೌಚಾರ್ಥಕಾತ್ ಶುಧಧಾತೋಃ ದೈವಾದಿಕಾತ್ ಣಿಜಂತಾತ್ ಕರ್ತರಿ ಪರಸ್ಮೈಪದಿನಃ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಏಕವಚನೇ 'ವಿಶೋಧಯ' ಇತಿ ರೂಪಮ್ ।

**ಪ್ರಯೋಗ—** ವಿಭುಃ ಅಯಂ ತಂ ಅಬ್ರವೀತ್ (ಕರ್ತರಿ) । ವಿಭುನಾ ಅನೇನ ಸಃ ಔಚ್ಯತ (ಕರ್ಮಣಿ) ।

ಭುವಿ ಗುಣೋಚಿತಾಃ ಪುರುಷಾಃ ಸಂತಿ (ಕರ್ಮಣಿ) । ಭುವಿ ಗುಣೋಚಿತೈಃ ಪುರುಷೈಃ ಭೂಯತೇ (ಭಾವೇ) ।

(ತ್ವಂ) ಇಮಾನ್ ಮಣೀನ್ ಇವ ವಿಶೋಧಯ (ಸಕರ್ಮಕ ಕರ್ತರಿ) । (ತ್ವಯಾ) ಇಮೇ ಮಣಯಃ ಇವ ವಿಶೋಧ್ಯಂತಾಂ (ಕರ್ಮಣಿ)

ಮಣಯಃ ಶುಧ್ಯಂತಿ (ಅಣಿಜಂತ) ತ್ವಂ ಮಣೀನ್ ವಿಶೋಧಯ (ಣಿಜಂತ)

★ ★ ★

**ಅವತಾರಿಕಾ—** ದುರ್ಮತಗಳ ನಿರಾಕರಣದಲ್ಲಿಯೂ, ಸನ್ಮತ ಸ್ಥಾಪನೆಯಲ್ಲಿಯೂ ತನ್ನ ಆಜ್ಞೆಯು ಬೆಂಬಲವಾಗಿರುವುದರಿಂದ ಅತ್ಯವಶ್ಯವಾಗಿ ಸಜ್ಜನರಿಗೆ ತತ್ತ್ವೋಪದೇಶವನ್ನು ಮಾಡಲೇಬೇಕೆಂದು ಶ್ರೀಮನ್ನಾರಾಯಣನು ನಿರ್ಬಂಧಿಸಿದನು ಎಂದು ತಿಳಿಸುತ್ತಾರೆ.

**ತವ ಕೀರ್ತಿರಾರ್ತಿಮತಿಮಾತ್ರಮಾನಯೇ-**
**ದಶುಭಾನ್ ಪ್ರಭಾಕರವಿಭೇವ ಕೌಶಿಕಾನ್ ।**
**ಕಮಲಾಕರಾನಿವ ಶುಭಾನ್ ಪ್ರಬೋಧಯೇ**
**ತ್ಪರಮಾಜ್ಞಯಾ ಮಮ ವಿಶೇಷತೋಽನಿಶಮ್ ॥ 51 ॥**

**ಪದಚ್ಛೇದ—** ತವ, ಕೀರ್ತಿಃ, ಆರ್ತಿಂ, ಅತಿಮಾತ್ರಂ, ಆನಯೇತ್, ಅಶುಭಾನ್, ಪ್ರಭಾಕರವಿಭಾ, ಇವ, ಕೌಶಿಕಾನ್, ಕಮಲಾಕರಾನ್, ಇವ, ಶುಭಾನ್, ಪ್ರಬೋಧಯೇತ್, ಪರಮಾಜ್ಞಯಾ, ಮಮ, ವಿಶೇಷತಃ, ಅನಿಶಂ ।

**ಅನ್ವಯ—** ತವ ಕೀರ್ತಿಃ ಮಮ ಪರಮಾಜ್ಞಯಾ ವಿಶೇಷತಃ, ಅನಿಶಂ ಪ್ರಭಾಕರವಿಭಾ ಕೌಶಿಕಾನ್ ಇವ, ಅಶುಭಾನ್ ಅತಿಮಾತ್ರಂ ಆರ್ತಿಂ ಆನಯೇತ್, ಶುಭಾನ್ ಕಮಲಾಕರಾನ್ ಇವ ಪ್ರಬೋಧಯೇತ್ ।

**ಅನ್ವಯಾರ್ಥ—**

**ತವ** = ನಿನ್ನ
**ಕೀರ್ತಿಃ** = ಯಶಸ್ಸು
**ಮಮ** = ನನ್ನ
**ಪರಮಾಜ್ಞಯಾ** = ಪರಮಶ್ರೇಷ್ಠವಾದ ಅಪ್ಪಣೆಯಿಂದ
**ವಿಶೇಷತಃ** = ಹೆಚ್ಚಾಗಿ
**ಅನಿಶಂ** = ಯಾವಾಗಲೂ
**ಪ್ರಭಾಕರವಿಭಾ** = ಸೂರ್ಯನ ಕಾಂತಿಯು
**ಕೌಶಿಕಾನ್ ಇವ** = ಗೂಬೆಗಳನ್ನು ಎಂಬಂತೆ
**ಅಶುಭಾನ್** = ಅಮಂಗಳ ಸ್ವರೂಪರಾದ (ತಮೋಯೋಗ್ಯರನ್ನು) ದುಷ್ಟರನ್ನು
**ಅತಿಮಾತ್ರಂ** = ಬಹಳವಾಗಿ
**ಆರ್ತಿಂ** = ವ್ಯಥೆಯನ್ನು
**ಆನಯೇತ್** = ಹೊಂದಿಸಲಿ (ಎಂದು ನನ್ನ ವಿಧಿಯು)
**ಶುಭಾನ್** = ಮಂಗಳಸ್ವರೂಪರಾದ (ಮುಕ್ತಿಯೋಗ್ಯರನ್ನು), ಸಾತ್ತ್ವಿಕರನ್ನು
**ಕಮಲಾಕರಾನ್ ಇವ** = ತಾವರೆ ಹೂವುಗಳ ಸಮೂಹಗಳನ್ನೆಂಬಂತೆ
**ಪ್ರಬೋಧಯೇತ್** = ಎಚ್ಚರಗೊಳಿಸಲಿ (ಎಂದು ನನ್ನ ಆಜ್ಞೆಯು) (ಅರಳಿಸಲಿ)

**ತಾತ್ಪರ್ಯ—** ಸೂರ್ಯನು ಉದಯಿಸಿದ ಕೂಡಲೇ ತನ್ನ ಕಾಂತಿಯಿಂದ ಕಮಲಗಳ ರಾಶಿಗಳನ್ನು ಅರಳಿಸುವನು, ಗೂಬೆಗಳನ್ನು ದುಃಖಿಗೊಳಿಸುವನು. (ಗೂಬೆಗಳು ಸೂರ್ಯಪ್ರಕಾಶದಲ್ಲಿ ಕುರುಡಾಗಿ ದುಃಖಿಸುತ್ತಾ ಮರೆಯಲ್ಲಿರುತ್ತವೆ). ವಿಧಿನಿಯಮವೇ ಹೀಗಿದೆ. ಎಲೈ ಮಧ್ವನೇ! ನಿನ್ನ ಕೀರ್ತಿಯ ಸಾಮರ್ಥ್ಯವೂ ಸ್ವತಃ ಹೀಗೆಯೇ ಸಜ್ಜನ ಸಮೂಹಕ್ಕೆ ಆನಂದವನ್ನೂ ದುರ್ಜನರಿಗೆ ದುಃಖವನ್ನೂ ಕೊಡತಕ್ಕದ್ದಾಗಿದೆ. ವಿಶೇಷವಾಗಿ ನನ್ನ ಆಜ್ಞೆಯಿಂದ ನಿನ್ನ ಕೀರ್ತಿಯು ದುಷ್ಟರನ್ನು

ಅತ್ಯಂತ ವ್ಯಥೆಗೊಳಿಸುತ್ತದೆ, ಸಜ್ಜನರಿಗೆ ತತ್ತ್ವಜ್ಞಾನವನ್ನು ಉಪದೇಶಿಸಿ ಅವರ ಅಂತಃಕರಣವನ್ನು ಅರಳಿಸಿ ಅವರನ್ನು ಜ್ಞಾನಿಗಳನ್ನಾಗಿ ಮಾಡುತ್ತದೆ. ಇದು ನನ್ನ ಆಜ್ಞೆ. ಆದುದರಿಂದ ನೀನು ತತ್ತ್ವಜ್ಞಾನೋಪದೇಶಕ್ಕಾಗಿ ಭೂಲೋಕಕ್ಕೆ ಹೊರಡು. ಯೋಗ್ಯರನ್ನು ಜ್ಞಾನಿಗಳನ್ನಾಗಿ ಮಾಡು, ಅಯೋಗ್ಯರು ವ್ಯಥೆ ಪಡಲಿ. ಎರಡೂ ನನ್ನ ಅಪ್ಪಣೆಯಿಂದ ನಡೆಯಲೇಬೇಕಾಗಿದೆ.

ವಿಗ್ರಹ—

**ಅಶುಭಾನ್**— ನ ಶುಭಾಃ ಅಶುಭಾಃ, ತಾನ್ ಅಶುಭಾನ್ ।

**ಪ್ರಭಾಕರವಿಭಾ**— ಕರೋತೀತಿ ಕರಃ, ಪ್ರಭಾಯಾಃ ಕರಃ ಪ್ರಭಾಕರಃ, ಪ್ರಭಾಕರಸ್ಯ ವಿಭಾ ಪ್ರಭಾಕರವಿಭಾ ।

**ಕಮಲಾಕರಾನ್**— ಕಮಲಾನಾಂ ಆಕರಾಃ ಕಮಲಾಕರಾಃ, ತಾನ್ ಕಮಲಾಕರಾನ್ ।

**ಪರಮಾಜ್ಞಯಾ**— ಪರಮಾ ಚ ಸಾ ಆಜ್ಞಾ ಚ ಪರಮಾಜ್ಞಾ, ತಯಾ ಪರಮಾಜ್ಞಯಾ ।

**ಕ್ರಿಯಾಪದ— ಆನಯೇತ್**- ಆಙ್ ಇತ್ಯುಪಸರ್ಗಪೂರ್ವಕಾತ್ ಣೀಞ್ ಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ನೀಧಾತೋಃ ದ್ವಿಕರ್ಮಕಾತ್ ಪರಸ್ಮೈಪದಿನಃ ವಿದಿಲಿಙ್ ಪ್ರಥಮಪುರುಷೇ ಏಕವಚನೇ ''ಆನಯೇತ್'' ಇತಿ ರೂಪಮ್ ।

ಆ-ನಯೇತ್ ನಯೇತಾಂ ನಯೇಯುಃ, ನಯೇಃ ನಯೇತಂ ನಯೇತ, ನಯೇಯಂ ನಯೇವ ನಯೇಮ ॥

**ಪ್ರಬೋಧಯತ್**- ಪ್ರ ಇತ್ಯುಪಸರ್ಗಪೂರ್ವಕಾತ್ ಬುಧ ಅವಗಮನೇ ಇತಿ ಭೌವಾದಿಕಾತ್ ಅವಗಮನಾರ್ಥಕಾತ್ ಬುಧಧಾತೋಃ ಪರಸ್ಮೈಪದಿನಃ (249) ಬುಧ ಅವಗಮೇ ಇತಿ ದೈವಾದಿಕಾತ್ ಅವಗಮಾರ್ಥಕಾತ್ ಬುಧಧಾತೋಃ ಆತ್ಮನೇಪದಿನೋ ವಾ (424) ಸಕರ್ಮಕಾತ್ ಕರ್ತರಿ ಣಿಜಂತಾತ್ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ''ಪ್ರಬೋಧಯೇತ್'' ಇತಿ ರೂಪಮ್ ।

| | | |
|---|---|---|
| ಪ್ರ-ಬೋಧಯೇತ್ | ಬೋಧಯೇತಾಂ | ಬೋಧಯೇಯುಃ, |
| ಬೋಧಯೇಃ | ಬೋಧಯೇತಂ | ಬೋಧಯೇತ, |
| ಬೋಧಯೇಯಂ | ಬೋಧಯೇವ | ಬೋಧಯೇಮ ॥ |

'ಬುಧ ಅವಗಮೇ' ಎಂಬ ಧಾತುವು ಅಣಿಜಂತದಲ್ಲಿ ಬುಧ್ಯತೇ ಬುಧ್ಯೇತೇ ಇತ್ಯಾದಿ ರೂಪವನ್ನು ಹೊಂದುತ್ತದೆ. ಣಿಜಂತಾವಸ್ಥೆಯಲ್ಲಿ 'ಬುಧ ಯುಧನಶಜನೇಙ್ ಪ್ರುದ್ರುಸ್ರುಭ್ಯೋ ಣೇಃ' ಎಂಬ ಸೂತ್ರದಿಂದ ಈ ಧಾತುವಿಗೆ ಪರಸ್ಮೈ-ಪದವೇ ಬರುತ್ತದೆ.

**ಪ್ರಯೋಗ**— ತವ ಕೀರ್ತಿಃ ಅಶುಭಾನ್ ಆರ್ತಿಂ ಆನಯೇತ್ (ದ್ವಿಕರ್ಮಕ ಕರ್ತರಿ ಪ್ರಯೋಗ) । ತವ ಕೀರ್ತ್ಯಾ ಅಶುಭಾನ್ ಆರ್ತಿಃ ಆನೀಯೇತ (ಕರ್ಮಣಿ) । ತವ ಕೀರ್ತಿಃ ಶುಭಾನ್ ಪ್ರಬೋಧಯೇತ್ (ಕರ್ತರಿ) । ತವ ಕೀರ್ತ್ಯಾ ಶುಭಾಃ ಪ್ರಬೋಧ್ಯೇರನ್ (ಕರ್ಮಣಿ) ।

★ ★ ★

**ಅವತಾರಿಕಾ**— ಲೋಕಗಳ ಹಿತಕ್ಕಾಗಿ ಮಧ್ವಾಚಾರ್ಯರು ನಾರಾಯಣಮುನಿಗಳ ಮಾತನ್ನು ಕೇಳಿದಕಿನ್ನುತ್ತಾರೆ.

**ಇತಿ ಸಾ ಮಹೀಧರಮುಖಾದ್ ವಿನಿಃಸೃತಾ**
**ಜಗತಾಂ ಸುಖಾಯ ವಿಶದಾ ಸರಸ್ವತೀ ।**
**ದ್ವಿಜರಾಜಗೋವಿಷಯತಾತಿಪೂರಿತಂ**
**ಪ್ರವಿವೇಶ ಮಧ್ವಪೃಥುಬುದ್ಧಿವಾರಿಧಿಮ್ ॥ 52 ॥**

**ಪದಚ್ಛೇದ—** ಇತಿ, ಸಾ, ಮಹೀಧರಮುಖಾತ್, ವಿನಿಸ್ಸೃತಾ, ಜಗತಾಂ, ಸುಖಾಯ, ವಿಶದಾ, ಸರಸ್ವತೀ, ದ್ವಿಜ-ರಾಜಗೋವಿಷಯತಾತಿಪೂರಿತಂ, ಪ್ರವಿವೇಶ, ಮಧ್ವಪೃಥುಬುದ್ಧಿ ವಾರಿಧಿಮ್ ॥

**ಅನ್ವಯ—** ಜಗತಾಂ ಸುಖಾಯ ಇತಿ ಮಹೀಧರಮುಖಾತ್ ವಿನಿಸ್ಸೃತಾ ವಿಶದಾ ಸರಸ್ವತೀ ದ್ವಿಜರಾಜ-ಗೋವಿಷಯತಾತಿ ಪೂರಿತಂ ಮಧ್ವಪೃಥುಬುದ್ಧಿವಾರಿಧಿಂ ಪ್ರವಿವೇಶ ॥

**ಅನ್ವಯಾರ್ಥ—**

**ಜಗತಾಂ ಸುಖಾಯ** = ಲೋಕಗಳ ಹಿತಕ್ಕಾಗಿ

**ಇತಿ** = ಈ ರೀತಿ

**ಮಹೀಧರ** = ಭೂಮಿಧಾರಕನಾದ ನಾರಾಯಣನ, ಪರ್ವತದ

**ಮುಖಾತ್** = ಬಾಯಿಂದ (ಗುಹೆಯಿಂದ)

**ವಿನಿಸ್ಸೃತಾ** =ಹೊರಟ

**ವಿಶದಾ** = ಸ್ವಚ್ಛವಾದ (ಮಂಗಳಕರವಾದ)

**ಸಾ ಸರಸ್ವತೀ** = ಆ ಮಾತು (ಆ ನದಿಯು)

**ದ್ವಿಜರಾಜ** = ಶ್ರೀ ವ್ಯಾಸರ, ಚಂದ್ರನ

**ಗೋ** = ಮಾತಿನ, ಕಿರಣಗಳ

**ವಿಷಯತಾ** = ಗೋಚರತೆಯಿಂದ

**ಅತಿಪೂರಿತಂ** = ಅತ್ಯಂತವಾಗಿ ತುಂಬಿದ

**ಮಧ್ವ**= ಶ್ರೀ ಮಧ್ವರ

**ಪೃಥು** = ವಿಶಾಲವಾದ

**ಬುದ್ಧಿವಾರಿಧಿಂ** = ಜ್ಞಾನಸಮುದ್ರವನ್ನು

**ಪ್ರವಿವೇಶ** = ಪ್ರವೇಶಿಸಿತು.

**ತಾತ್ಪರ್ಯ—** ಪರ್ವತದಿಂದ ಹುಟ್ಟಿದ ನಿರ್ಮಲವಾದ ನದಿಯು ಚಂದ್ರಕಿರಣಗಳ ಸಂಪರ್ಕದಿಂದ ಅಭಿವೃದ್ಧಿ ಹೊಂದಿ ಸಮುದ್ರವನ್ನು ಪ್ರವೇಶಿಸುತ್ತದೆ. ಅದರಂತೆ ಹಿಂದೆ ಹೇಳಿದ ಶ್ರೀನಾರಾಯಣಮುನಿಯ ಮುಖದಿಂದ ಹೊರಟ ಪರಿಶುದ್ಧವಾದ ವಚನವು ಶ್ರೀವೇದವ್ಯಾಸದೇವರ ಆಜ್ಞೆಯಿಂದ ಮೊದಲೇ ತುಂಬಿದ್ದ ಶ್ರೀಮಧ್ವಾಚಾರ್ಯರ ವಿಶಾಲವಾದ ಬುದ್ಧಿಯನ್ನು ಪ್ರವೇಶಿಸಿತು. ವ್ಯಾಸರ ಉಪದೇಶ ಮತ್ತು ನಾರಾಯಣಮುನಿಗಳ ಆದೇಶ (ಅಪ್ಪಣೆ) ವಚನಗಳಿಂದ ಸಜ್ಜನರಿಗೆ ಜ್ಞಾನಮಾರ್ಗವನ್ನು ತೋರಿಸಬೇಕೆಂಬ ಬುದ್ಧಿಯು ಶ್ರೀಮಧ್ವಾಚಾರ್ಯರಿಗೆ ಉಂಟಾಯಿತು ಎಂದು ಭಾವ (ಶ್ರೀ ವ್ಯಾಸರು ಮೊದಲೇ ಈ ವಿಷಯವನ್ನು ಆಚಾರ್ಯರಿಗೆ ಉಪದೇಶಿಸಿದ್ದರು).

ವಿಗ್ರಹ—

**ಮಹೀಧರಮುಖಾತ್—** ಮಹೀಂ ಧರತೀತಿ ಮಹೀಧರಃ, ಮಹೀಧರಸ್ಯ ಮುಖಂ ಮಹೀಧರಮುಖಂ, ತಸ್ಮಾತ್ ಮಹೀಧರಮುಖಾತ್ ।

**ದ್ವಿಜರಾಜಗೋವಿಷಯತಾತಿಪೂರಿತಂ—** ದ್ವಿಜಾನಾಂ ರಾಜಾ ದ್ವಿಜರಾಜಃ, ದ್ವಿಜರಾಜಸ್ಯ ಗಾವಃ ದ್ವಿಜರಾಜ-ಗಾವಃ, ತೇಷಾಂ ವಿಷಯಾಃ ದ್ವಿಜರಾಜಗೋವಿಷಯಾಃ, ತೇಷಾಂ ಭಾವಃ ದ್ವಿಜರಾಜಗೋವಿಷಯತಾ, ವಿಷಯತಯಾ ಪೂರಿತಃ ದ್ವಿಜರಾಜ ಗೋವಿಷಯತಾತಿಪೂರಿತಃ, ತಂ ದ್ವಿಜರಾಜಗೋವಿಷಯಾತಾತಿ-ಪೂರಿತಂ ।

**ಮಧ್ವಪೃಥುಬುದ್ಧಿವಾರಿಧಿಂ**— ಪೃಥ್ವೀ ಚ ಸಾ ಬುದ್ಧಿಶ್ಚ ಪೃಥುಬುದ್ಧಿಃ, ಮಧ್ವಸ್ಯ ಪೃಥುಬುದ್ಧಿಃ ಮಧ್ವ-ಪೃಥುಬುದ್ಧಿಃ, ಪೃಥುಬುದ್ಧಿರೇವ ವಾರಿಧಿಃ ಮಧ್ವಪೃಥುಬುದ್ಧಿವಾರಿಧಿಃ, ತಂ ಮಧ್ವಪೃಥುಬುದ್ಧಿ-ವಾರಿಧಿಂ ।

**ಕ್ರಿಯಾಪದ**— ಪ್ರ ಇತ್ಯುಪಸರ್ಗಪೂರ್ವಕಾತ್ ವಿಶ ಪ್ರವೇಶನೇ ಇತಿ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲಿಟ್ ಲಕಾರಸ್ಯ ಪ್ರಥಮಪುರುಷ ಏಕವಚನೇ ಪ್ರ-ವಿವೇಶ ಇತಿ ರೂಪಮ್ ।

| | | |
|---|---|---|
| ಪ್ರ-ವಿವೇಶ | ವಿವಿಶತುಃ | ವಿವಿಶುಃ |
| ವಿವಿಶಿಥ | ವಿವಿಶಥುಃ | ವಿವಿಶ |
| ವಿವೇಶ ವಿವಶ | ವಿವಿಶಿವ | ವಿವಿಶಿಮ ॥ |

★ ★ ★

**ಅವತಾರಿಕಾ**— ವ್ಯಾಸನಾರಾಯಣರ ಮಾತನ್ನು ಅಂಗೀಕರಿಸಿ ಅವರಿಬ್ಬರನ್ನು ನಮಸ್ಕರಿಸಿದರೆನ್ನುತ್ತಾರೆ.

**ಮತಮಿತ್ಯವೇತ್ಯ ಮಹಿತಂ ಮಹತೋ-**
**ರಭಿಧಾಯ ಬಾಢಮಿತಿ ಧೀರಮತಿಃ ।**
**ಅನಯೋರ್ನಿಯೋಗಮಧಿರೋಪಿತವಾನ್**
**ಸ್ವಶಿರಸ್ಯನನ್ಯಸುವಹಂ ಪ್ರಣಮನ್ ॥ 53 ॥**

**ಪದಚ್ಛೇದ**— ಮತಂ, ಇತಿ, ಅವೇತ್ಯ, ಮಹಿತಂ, ಮಹತೋಃ, ಅಭಿಧಾಯ, ಬಾಢಮ್, ಇತಿ, ಧೀರಮತಿಃ, ಅನಯೋಃ, ನಿಯೋಗಂ, ಅಧಿರೋಪಿತವಾನ್, ಸ್ವಶಿರಸಿ, ಅನನ್ಯಸುವಹಂ, ಪ್ರಣಮನ್ ।

**ಅನ್ವಯ**— ಧೀರಮತಿಃ, ಮಹತೋಃ ಮಹಿತಂ ಮತಂ ಇತಿ ಅವೇತ್ಯ ಪ್ರಣಮನ್ ಬಾಢಂ ಇತಿ ಅಭಿಧಾಯ ಅನನ್ಯ ಸುವಹಂ, ಅನಯೋಃ, ನಿಯೋಗಂ ಸ್ವಶಿರಸಿ ಅಧಿರೋಪಿತವಾನ್ ।

**ಅನ್ವಯಾರ್ಥ**—

**ಧೀರಮತಿಃ** = ದೃಢವಾದ ಬುದ್ಧಿಯುಳ್ಳ ಶ್ರೀ ಮಧ್ವಾಚಾರ್ಯರು
**ಮಹತೋಃ** = ಪೂಜ್ಯರಾದ ಶ್ರೀ ವ್ಯಾಸನಾರಾಯಣರ
**ಮಹಿತಂ ಮತಂ** = ಮಾನ್ಯವಾದ ಅಭಿಪ್ರಾಯವನ್ನು
**ಇತಿ ಅವೇತ್ಯ** = ಈ ರೀತಿ ತಿಳಿದು
**ಪ್ರಣಮನ್** = ನಮಸ್ಕಾರ ಮಾಡುವವರಾಗಿ
**ಬಾಢಂ ಇತಿ** = ಹಾಗೆಯೇ ಆಗಲೆಂದು
**ಅಭಿಧಾಯ** = ಹೇಳಿ
**ಅನನ್ಯಸುವಹಂ** = ಅವರ ಹೊರತು ಬೇರೊಬ್ಬರಿಂದ ನಿರ್ವಹಿಸಲು ಸಾಧ್ಯವಿಲ್ಲದ
**ಅನಯೋಃ** = ಈ ವ್ಯಾಸನಾರಾಯಣರ
**ನಿಯೋಗಂ** = ಅಪ್ಪಣೆಯನ್ನೂ
**ಸ್ವಶಿರಸಿ** = ತನ್ನ ತಲೆಯ ಮೇಲೆ
**ಅಧಿರೋಪಿತವಾನ್** = ಧರಿಸಿಕೊಂಡರು.

**ತಾತ್ಪರ್ಯ**— ತಾನು ಭರತಖಂಡಕ್ಕೆ ಹಿಂತಿರುಗಿ ಸಜ್ಜನರಿಗೆ ಜ್ಞಾನಮಾರ್ಗವನ್ನು ತೋರಿಸಬೇಕೆಂಬುದೇ ಮಹಾತ್ಮರಾದ ಶ್ರೀ ವ್ಯಾಸನಾರಾಯಣರಿಗೆ ಸಂಮತವಾದ ವಿಷಯವೆಂದು ಸ್ಥಿರಬುದ್ಧಿಯುಳ್ಳ ಶ್ರೀಮಧ್ವಾಚಾರ್ಯರು ತಿಳಿದರು. ಅವರಿಬ್ಬರನ್ನೂ ನಮಸ್ಕರಿಸಿದರು. 'ತಮ್ಮ ಅಪ್ಪಣೆಯೊಂತೆ ನಡೆಯುವೆನು' ಎಂದು ವಿಜ್ಞಾಪಿಸಿ ಇನ್ನೊಬ್ಬರಿಗೆ ನಿರ್ವಹಿಸಲು ಸಾಧ್ಯವಿಲ್ಲದ ಅವರ ಅಪ್ಪಣೆಯನ್ನು ಶಿರಸಾ ವಹಿಸಿದರು.

**ವಿಗ್ರಹ**—

**ಧೀರಮತಿಃ**— ಧೀರಾ ಮತಿಃ ಯಸ್ಮಿನ್ ಸಃ ಧೀರಮತಿಃ ।

**ಸ್ವಶಿರಸಿ**— ಸ್ವಸ್ಯಶಿರಃ ಸ್ವಶಿರಃ ತಸ್ಮಿನ್ ಸ್ವಶಿರಸಿ ।

**ಅನನ್ಯಸುವಹಂ**— ಅನ್ಯೇನ ಸುಖೇನ ವೋಢುಂ ಶಕ್ಯಂ ನ ಭವತೀತಿ ಅನನ್ಯಸುವಹಂ, ತತ್ ಅನನ್ಯ-ಸುವಹಮ್ ।

**ಪ್ರಣಮನ್**— ಪ್ರಮತೀತಿ ಪ್ರಣಮನ್ ।

**ಪ್ರಯೋಗ**— 'ಪ್ರಮಿತಾಕ್ಷರಾ ಸಜಸಸ್ಯೈಃ ಕಥಿತಾ' ಎಂಬ ಲಕ್ಷಣದಂತೆ ಇಲ್ಲಿ ಪ್ರಮಿತಾಕ್ಷರಾ ವೃತ್ತ.

★ ★ ★

**ಅವತಾರಿಕಾ**— ವೇದವ್ಯಾಸರು, ನಾರಾಯಣಮುನಿಗಳು ಹಾಗೂ ಆಚಾರ್ಯಮಧ್ವರು ಬದರಿಕಾಶ್ರಮದಲ್ಲಿ ಹೇಗೆ ಕಂಡರು ಎಂಬುದನ್ನು ವರ್ಣಿಸುತ್ತಾರೆ.

**ಆಮ್ನಾಯಾಸ್ತ್ರಯ ಇವ ತತ್ತ್ವಬೋಧಕಾಸ್ತೇ**
**ಪಾಪಘ್ನಾಸ್ತ್ರಯ ಇವ ಪಾವಕಾಃ ಪ್ರಜಾನಾಮ್ ।**
**ಲೋಕಾ ವಾ ಸಕಲಭೃತಸ್ತ್ರಯೋಽತ್ರ ರೇಜುಃ**
**ಸಾನಂದಾ ಮುನಿಸುತಧರ್ಮಸೂನುಮಧ್ವಾಃ ॥ 54 ॥**

**ಪದಚ್ಛೇದ**— ಆಮ್ನಾಯಾಃ, ತ್ರಯಃ, ಇವ, ತತ್ತ್ವಬೋಧಕಾಃ, ತೇ, ಪಾಪಘ್ನಾಃ, ತ್ರಯಃ, ಇವ, ಪಾವಕಾಃ, ಪ್ರಜಾನಾಂ, ಲೋಕಾಃ, ವಾ, ಸಕಲಭೃತಃ, ತ್ರಯಃ, ಅತ್ರ, ರೇಜುಃ, ಸಾನಂದಾಃ, ಮುನಿಸುತಧರ್ಮ-ಸೂನುಮಧ್ವಾಃ ।

**ಅನ್ವಯ**— ತ್ರಯಃ ಆಮ್ನಾಯಾಃ ಇವ ತತ್ತ್ವಬೋಧಕಾಃ, ತ್ರಯಃ ಪಾವಕಾಃ ಇವ ಪ್ರಜಾನಾಂ ಪಾಪಘ್ನಾಃ, ತ್ರಯಃ ಲೋಕಾಃ ವಾ ಸಕಲಭೃತಃ, ಸಾನಂದಾಃ, ತೇ ಮುನಿಸುತಧರ್ಮಸೂನುಮಧ್ವಾಃ ಅತ್ರ ರೇಜುಃ ।

**ಅನ್ವಯಾರ್ಥ**—

**ತ್ರಯಃ ಆಮ್ನಾಯಾಃ ಇವ** = ಮೂರಾದ ಋಕ್, ಯಜುಸ್, ಸಾಮ ಎಂಬ ವೇದಗಳಂತೆ

**ತತ್ತ್ವಬೋಧಕಾಃ** = ಜೀವರಿಗೆ ತತ್ತ್ವೋಪದೇಶಕರಾದ

**ತ್ರಯಃ ಪಾವಕಾಃ ಇವ** = ಮೂರಾದ ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯಎಂಬ ಅಗ್ನಿಗಳಂತೆ

**ಪ್ರಜಾನಾಂ ಪಾಪಘ್ನಾಃ** = ಜನರ ಪಾಪಪರಿಹಾರಕರಾದ

**ತ್ರಯಃ ಲೋಕಾಃ ವಾ** = ಮೂರಾದ ಭೂಲೋಕ, ಭುವರ್ಲೋಕ, ಸುವರ್ಲೋಕಗಳಂತೆ

**ಸಕಲಭೃತಃ** = ಎಲ್ಲವನ್ನೂ ಧರಿಸಿದ

**ಸಾನಂದಾಃ** = ಆನಂದಪೂರ್ಣರಾದ

**ತೇ ಮುನಿಸುತಧರ್ಮಸೂನುಮಧ್ವಾಃ** = ಆ ಪರಾಶರ ಮುನಿಪುತ್ರರಾದ ಶ್ರೀ ವ್ಯಾಸರು, ಯಮಧರ್ಮನ ಮಗನಾದ ಶ್ರೀನಾರಾಯಣನು, ಶ್ರೀಮಧ್ವಾಚಾರ್ಯರು

**ಅತ್ರ ರೇಜುಃ** = ಈ ಬದರಿಕಾಶ್ರಮದಲ್ಲಿ ವಿರಾಜಿಸಿದರು.

**ತಾತ್ಪರ್ಯ—** ಋಗ್ವೇದ, ಯಜುರ್ವೇದ, ಸಾಮವೇದಗಳೆಂಬ ಮೂರು ವೇದಗಳಂತೆ ತತ್ತ್ವಬೋಧಕರೂ, ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯ ಎಂಬ ಮೂರು ಅಗ್ನಿಗಳಂತೆ ದರ್ಶನಾದಿಗಳಿಂದ ಜೀವರ ಪಾಪವನ್ನು ಪರಿಹರಿಸ-ತಕ್ಕವರೂ, ಭೂಲೋಕ, ಭುವರ್ಲೋಕ, ಸುವರ್ಲೋಕಗಳಂತೆ ಸಕಲವನ್ನೂ ಪೋಷಿಸತಕ್ಕವರೂ ಆದ ಶ್ರೀ ವೇದವ್ಯಾಸ-ದೇವರು, ಶ್ರೀ ನಾರಾಯಣದೇವರು, ಶ್ರೀಮಧ್ವಾಚಾರ್ಯರು ಈ ಮೂವರು ಮಹಾತ್ಮರೂ ಕೂಡ ಶ್ರೀ ನಾರಾಯಣ-ದೇವರ ಮಹಾಬದರಿಕಾಶ್ರಮದಲ್ಲಿ ಆನಂದದಿಂದ ವಿರಾಜಮಾನರಾಗಿದ್ದರು.

**ವಿಗ್ರಹ—**

**ಆಮ್ನಾಯಾಃ—** ಆ ಸಮಂತಾತ್ ಮ್ನಾಯಂತೇತಿ ಆಮ್ನಾಯಾಃ ।

**ತತ್ತ್ವಭೋಧಕಾಃ—** ತತ್ತ್ವಾನ್ ಬೋಧಯಂತೀತಿ ತತ್ತ್ವಭೋಧಕಾಃ ।

**ಪಾಪಘ್ನಾಃ—** ಪಾಪಾನ್ ಘ್ನಂತೀತಿ ಪಾಪಘ್ನಾಃ ।

**ಸಕಲಭೃತಃ—** ಸಕಲಾನ್ ಭಿಭ್ರತೀತಿ ಸಕಲಭೃತಃ ।

**ಸಾನಂದಾಃ—** ಆನಂದೇನ ಸಹಿತಾಃ ಸಾನಂದಾಃ ।

**ಮುನಿಸುತಧರ್ಮಸೂನುಮಧ್ವಾಃ—** ಮುನೇಃ ಸುತಃ ಮುನಿಸುತಃ, ಧರ್ಮಸ್ಯ ಸೂನುಃ ಧರ್ಮಸೂನುಃ, ಮಧು ವಃ ಯಸ್ಮಿನ್ ಸಃ ಮಧ್ವಃ (ಪರಿತಿಜ್ಞಾನಮುಚ್ಯತೇ ವಚನಾತ್ ಇತಿ) ಮುನಿಸುತಶ್ಚ ಧರ್ಮಸೂನುಶ್ಚ ಮಧ್ವಶ್ಚ ಮುನಿಸುತಧರ್ಮಸೂನುಮಧ್ವಾಃ ।

**ಕ್ರಿಯಾಪದ—** ರಾಜೃ ದೀಪ್ತೌ ಇತಿ ಧಾತೋಃ ಅಕರ್ಮಕಾತ್ ಕರ್ತರಿ ಆತ್ಮನೇಪದಿನಃ ಲಿಟ್ ಲಕಾರಸ್ಯ ಪ್ರಥಮ-ಪುರುಷೇ ಬಹುವಚನೇ ರೇಜುಃ ಇತಿ ರೂಪಮ್ ।

| | | |
|---|---|---|
| ರರಾಜ | ರೇಜತುಃ | ರೇಜುಃ |
| ರೇಜಿಥ | ರೇಜಥುಃ | ರೇಜ |
| ರರಾಜ, ರರಜ | ರೇಜವ | ರೇಜಿಮ ॥ |

**ವೃತ್ತ—** 'ಮ್ನೌ ಜ್ರೌ ಗಸ್ತ್ರಿದಶಯತಿ ಪ್ರಹರ್ಷಿಣೀಯ' ಎಂಬ ಲಕ್ಷಣದಂತೆ ಮ, ನ, ಜ, ರ ಗಣಗಳು ಒಂದು ಗುರು, ಒಂದು ಪಾದಕ್ಕೆ 12 ಅಕ್ಷರಗಳ ಪ್ರಹರ್ಷಿಣೀ ವೃತ್ತವು.

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ಅಷ್ಟಮಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ನವಮಃ ಸರ್ಗಃ

### ಒಂಭತ್ತನೆಯ ಸರ್ಗದ ಕಥಾಸಾರ

ಅನಂತರ ಶ್ರೀಮಧ್ವಾಚಾರ್ಯರು ಶ್ರೀಮನ್ನಾರಾಯಣನ ಆಜ್ಞೆಯಂತೆ ಶ್ರೀ ವೇದವ್ಯಾಸರೊಡನೆ ಅವರ ಆಶ್ರಮಕ್ಕೆ ಮರಳಿ ಬಂದರು. ಸರ್ವಜ್ಞರಾದಾಗ್ಯೂ ಅಲ್ಲಿ ಅವರಿಂದ ಕೇಳಬೇಕಾದ ಎಲ್ಲವನ್ನೂ ಅತಿಶಯವಾಗಿ ಕೇಳಿ ತಿಳಿದುಕೊಂಡರು. ಅಲ್ಲಿಂದ ಶ್ರೀವ್ಯಾಸರನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ ಚಿಕ್ಕ ಬದರಿಗೆ ಬಂದು ಅಲ್ಲಿ ಅನಂತಮಠದಲ್ಲಿದ್ದ ತನ್ನ ಶಿಷ್ಯರಿಗೆ ದರ್ಶನ-ವನ್ನಿತ್ತು ಸಂತೋಷಪಡಿಸಿದರು. ಅಲ್ಲಿಂದ ಶ್ರೀಮದಾಚಾರ್ಯರು ಬೇಗನೆ ಹೊರಡಬೇಕೆಂದು ನಿಶ್ಚಯಿಸಿದಾಗ ಅಲ್ಲಿಯೇ ಸುತ್ತಮುತ್ತಲಿರುವ ಅಗ್ನಿಶರ್ಮ ಮುಂತಾದ ಐದಾರು ಮಂದಿ ಬ್ರಾಹ್ಮಣರು ಅವರಿಗೆ ಒಂದೇ ದಿನ ಒಟ್ಟಿಗೆ ಭಿಕ್ಷೆಯನ್ನು ತಂದೊಪ್ಪಿಸಿದರು. ಆಚಾರ್ಯರು ಅದೆಲ್ಲವನ್ನೂ ಏಕಕಾಲದಲ್ಲಿಯೇ ಸ್ವೀಕರಿಸಿ ತಾನು ಪ್ರಳಯಕಾಲದಲ್ಲಿ ಪ್ರಪಂಚವನ್ನೇ ನುಂಗುವ ಸಾಮರ್ಥ್ಯವುಳ್ಳ ವಾಯುವು ಎಂದು ಭಕ್ತರಿಗೆ ಸೂಚಿಸಿದರು. ಬದರಿಯಲ್ಲಿಯೇ ಆಚಾರ್ಯರು ಬ್ರಹ್ಮಸೂತ್ರಗಳ ಹಿಂದಿನ ಇಪ್ಪತ್ತೊಂದು ಭಾಷ್ಯಗಳನ್ನು ಖಂಡಿಸಿದರು. ಆ ಭಾಷ್ಯಗಳು :-

(1) ಭಾರತೀ ವಿಜಯ (2) ಸಚ್ಚಿದಾನಂದ (3) ಬ್ರಹ್ಮಘೋಷ (4) ಶತಾನಂದ (5) ಉದ್ವರ್ತ (6) ವಿಜಯ (7) ರುದ್ರಭಟ್ಟ (8) ವಾಮನ (9) ಯಾದವ ಪ್ರಕಾಶ (10) ರಾಮಾನುಜ (11) ಭರ್ತೃಪಂಚಕ (12) ದ್ರವಿಡ (13) ಬ್ರಹ್ಮದತ್ತ (14) ಭಾಸ್ಕರ (15) ಪಿಶಾಚ (16) ವೃತ್ತಿಕಾರ (17) ವಿಜಯಭಟ್ಟ (18) ವಿಷ್ಣುಕ್ರಾಂತ (19) ವಾದೀಂದ್ರ (20) ಮಾಧವದಾಸ (21) ಶಂಕರ ಎಂಬುವವರ ಭಾಷ್ಯಗಳನ್ನು ಖಂಡಿಸಿ, ಪರಮಪವಿತ್ರವಾದ ನಿರ್ದೋಷವಾದ ಭಾಷ್ಯವನ್ನು ರಚಿಸಿದರು. ಪರಮಪವಿತ್ರವಾದ ಆ ಭಾಷ್ಯವನ್ನು ಆಚಾರ್ಯರ ಪ್ರಿಯಶಿಷ್ಯರಾದ ಸತ್ಯತೀರ್ಥರು ಬರೆದರು.

ಬಳಿಕ ಶ್ರೀಮಧ್ವರು ಅಲ್ಲಿಂದ ಹೊರಟು ಗೋದಾವರೀ ತೀರಕ್ಕೆ ಬಂದರು. ಅಲ್ಲಿ ನಡೆಯುತ್ತಿದ್ದ ಒಂದು ದೊಡ್ಡ ಸಭೆಯಲ್ಲಿ ಅನೇಕ ಮಂದಿ ಪಂಡಿತರು ಅವರ ಪರೀಕ್ಷೆಗಾಗಿ ಕೆಲವು ವೇದ ವಾಕ್ಯಗಳನ್ನು ಪ್ರಸ್ತಾಪಿಸಿದರು. ಆಚಾರ್ಯರು ಆ ವೇದ ವಾಕ್ಯಗಳನ್ನು ಶುದ್ಧ ಸ್ವರದಿಂದ ಪಠಿಸಿ ಅವುಗಳ ಗಹನವಾದ ಅರ್ಥವನ್ನೂ ಹೇಳಿದರು. ಅಲ್ಲಿಯೇ ಭಾಟ್ಟ, ಪ್ರಾಭಾಕರ, ವೈಶೇಷಿಕ, ನೈಯಾಯಿಕ, ಬೌದ್ಧ, ಚಾರ್ವಾಕ ಸಿದ್ಧಾಂತಗಳನ್ನು ಖಂಡಿಸಿದರು. ಆ ಪಂಡಿತರೆಲ್ಲ ಆಚಾರ್ಯರನ್ನು ಸರ್ವಜ್ಞರೆಂದು ಹೊಗಳಿದರು. ಆ ಸಭೆಯಲ್ಲಿ ಅತಿ ಶ್ರೇಷ್ಠ ಪಂಡಿತರೆಂದು ಎಲ್ಲರಿಗೂ ಸಮ್ಮತರಾದ ಶೋಭನಭಟ್ಟರು ಆಚಾರ್ಯರನ್ನು ವಂದಿಸಿ ಅವರಿಂದ ಭಾಷ್ಯವನ್ನು ಶ್ರವಣ ಮಾಡಿದರು. ಈ ಶೋಭನಭಟ್ಟರೇ ಶ್ರೀಮದಾಚಾರ್ಯ-ರಿಂದ ಸಂನ್ಯಾಸವನ್ನು ತೆಗೆದುಕೊಂಡು ಶ್ರೀ ಪದ್ಮನಾಭತೀರ್ಥರೆಂಬ ಹೆಸರಿಂದ ಪ್ರಸಿದ್ಧರಾದರು. ಅವರು ವಾದಿಗಳನ್ನು ಆಚಾರ್ಯರ ಭಾಷ್ಯದ ಯುಕ್ತಿಗಳಿಂದ ಸೋಲಿಸಿ ಅವರನ್ನು ಕುರಿತು ಈ ರೀತಿ ಹೇಳುತ್ತಿದ್ದರು.

''ಸುಣ್ಣವನ್ನು ಸಿದ್ಧಗೊಳಿಸುವ ಒಬ್ಬ ಮನುಷ್ಯನಿಗೆ ಒಂದು ಅಮೂಲ್ಯವಾದ ಬಲಮುರಿ ಶಂಖವು ಸಿಕ್ಕಿತು. ಅವನು ಅದನ್ನು ಬೆಂಕಿಯಲ್ಲಿರಿಸಿ ಸುಟ್ಟು ಪುಡಿಮಾಡುವ ಪ್ರಯತ್ನ ಮಾಡಿದನು. ಆದರೆ ಅದು ಪುಡಿಯಾಗಲಿಲ್ಲ. ಆಗ ಅವನು ಈ ಶಂಖದಿಂದ ಸುಣ್ಣ ಮಾಡಲಾಗುವುದಿಲ್ಲ ಇದು ವ್ಯರ್ಥ ಎಂದು ಅದನ್ನು ದೂರಕ್ಕೆ ಎಸೆದನು. ಅದೃಷ್ಟವಿಲ್ಲದವರಿಗೆ ಹೀಗೆ ಅಮೂಲ್ಯ ವಸ್ತುವಿನ ಪ್ರಯೋಜನವು ಸಿಗುವುದಿಲ್ಲ. ಅನಂತರ ಸಂಪತ್ಪ್ರದವಾದ ಆ ಅಮೂಲ್ಯ ಶಂಖದಿಂದ ಆಗುವ ಪ್ರಯೋಜನವನ್ನು ಅರಿತ ಮತ್ತೊಬ್ಬನು ಆ ಶಂಖವನ್ನು ತೆಗೆದುಕೊಂಡು ಮಾರಿ ಅಪಾರವಾದ ಧನವನ್ನು ಗಳಿಸಿದನು. ಈ ಮಧ್ಯಮ ಮನುಷ್ಯನಿಗೆ ತತ್ಕಾಲದಲ್ಲಿ ಪ್ರಾಪ್ತವಾದ ಹಣವು ಮಾತ್ರ ಪ್ರಯೋಜನವಾಯಿತು. ಆ ಶಂಖವನ್ನು ಕೊಂಡು-ಕೊಂಡ ರಾಜನು ಅತಿಶಯವಾದ ಭಕ್ತಿಯಿಂದ ಅದನ್ನು ಪೂಜಿಸಿ ಅಮಿತವಾದ ಐಶ್ವರ್ಯವನ್ನು ಪಡೆದನು. ಹೀಗೆಯೆ ಶ್ರೀ ಮಧ್ವಾಚಾರ್ಯರು ರಚಿಸಿದ ಶಾಸ್ತ್ರವು ಅವರವರ ಯೋಗ್ಯತಾನುಸಾರವಾಗಿ ಫಲವನ್ನು ಕೊಡುತ್ತದೆ. ಈ ಶಾಸ್ತ್ರವು ಕಲ್ಪವೃಕ್ಷಕ್ಕೆ ಸಮಾನವಾಗಿದೆ. ಇದರ ಸಂಪೂರ್ಣ ಪ್ರಯೋಜನವನ್ನು ಚತುರ್ಮುಖನೊಬ್ಬನೇ ಪಡೆಯಲು ಸಮರ್ಥನು.'' ಗೋದಾವರೀ ತೀರದ ಸಂಚಾರಾನಂತರದಲ್ಲಿ ಆಚಾರ್ಯರು ಅಲ್ಲಿಂದ ಉಡುಪಿಗೆ ಹೋಗುತ್ತಾ ದಾರಿಯಲ್ಲಿ ಅನೇಕ ಸಜ್ಜನರಿಗೆ ತತ್ತ್ವಜ್ಞಾನೋಪದೇಶ ಮಾಡಿದರು. ಉಡುಪಿಗೆ ಬಂದು ಅನಂತೇಶ್ವರನನ್ನು ವಂದಿಸಿ, ಅಚ್ಯುತಪ್ರೇಕ್ಷಕರಿಗೂ ನಮಿಸಿ ಅವರಿಗೆ ಸಂತೋಷವನ್ನುಂಟು ಮಾಡಿದರು. ಆಚಾರ್ಯರು ಹಿಂದೆಯೇ ಕಳುಹಿಸಿದ್ದ ಬ್ರಹ್ಮಸೂತ್ರ ಭಾಷ್ಯವನ್ನು ವಿಮರ್ಶಿಸಿ ಆನಂದಪಟ್ಟಿದ್ದ ಜ್ಯೇಷ್ಠ ಯತಿಗಳು ಆಚಾರ್ಯರನ್ನು ಕಂಡು ಮತ್ತಷ್ಟು ಆನಂದಪಟ್ಟರು. ಅಚ್ಯುತಪ್ರೇಕ್ಷಕರಿಗೆ ಆಚಾರ್ಯರು ತಾನು ರಚಿಸಿರುವ ಬ್ರಹ್ಮಸೂತ್ರಭಾಷ್ಯದ ಗುಣಗಳನ್ನು ಬಣ್ಣಿಸಿದರು. ಅಚ್ಯುತ ಪ್ರೇಕ್ಷಕರು ಸಾತ್ವಿಕರಾದರೂ ಕಾಲಬಲದಿಂದ ದುರ್ಮತ ಸಂಸ್ಕಾರದಿಂದ ಈ ಸತ್‌ಸಿದ್ಧಾಂತದಲ್ಲಿ ಪ್ರೀತಿಯನ್ನು ತೋರಿಸಲಿಲ್ಲ. ಆಗ ಶ್ರೀ ಮಧ್ವಾಚಾರ್ಯರು ಅಚ್ಯುತಪ್ರೇಕ್ಷರ ಅಂತಃಕರಣದಲ್ಲಿ ಸೇರಿದ್ದ ಕಲಿಯನ್ನು ತಮ್ಮ ಸಾಮರ್ಥ್ಯದಿಂದ ಓಡಿಸಿ ಒಳ್ಳೆಯ ಯುಕ್ತಿಗಳಿಂದ ತಮ್ಮ ಭಾಷ್ಯದ ಅರ್ಥವನ್ನು ಬೋಧಿಸಿದರು. ಆಗ ಅಚ್ಯುತ ಪ್ರೇಕ್ಷಕರಿಗೆ ಆಚಾರ್ಯರ ಸಿದ್ಧಾಂತವೇ ಅತ್ಯುತ್ತಮವೆಂದು ಮನವರಿಕೆಯಾಯಿತು. ಅವರೂ ಸ್ವತಃ ಪರಿಶೀಲಿಸಿ ಹರಿಸರ್ವೋತ್ತಮತ್ವ ಸಿದ್ಧಾಂತವನ್ನು ನಿರ್ಣಯಿಸಿ ತಿಳಿದು ಆನಂದಿಸಿದರು. ಅವರೂ, ಜ್ಯೇಷ್ಠ ಯತಿಗಳೂ ಆಚಾರ್ಯರ ಸಿದ್ಧಾಂತವನ್ನು ಹಗಲಿರುಳು ಜನರಿಗೆ ಬೋಧಿಸ-ಲಾರಂಭಿಸಿದರು. ಆಚಾರ್ಯರು ತಮ್ಮ ಸುದರ್ಶನವನ್ನು (ಉತ್ತಮ ಸಿದ್ಧಾಂತವನ್ನು) ಸಜ್ಜನರಿಗೆ ಬೋಧಿಸಿ ಅವರಿಗೆ ಸುದರ್ಶನ ಮುದ್ರಾ ಧಾರಣೆಯನ್ನು ಮಾಡಿ ಉದ್ಧಾರ ಮಾಡಿದರು.

ಹೀಗಿರಲು ಒಂದು ದಿನ ಶ್ರೀಮಧ್ವಾಚಾರ್ಯರು ಸಜ್ಜನರ ಮೇಲಿನ ಕರುಣೆಯಿಂದ ಸಜ್ಜನರ ಸಿದ್ಧಿಮಾರ್ಗಕ್ಕೆ ಬರುವ ವಿಘ್ನನಿವಾರಣೆಗಾಗಿ, ಅವರ ಉದ್ಧಾರಕ್ಕಾಗಿ ಶ್ರೀಕೃಷ್ಣನನ್ನು ಉಡುಪಿಯಲ್ಲಿ ಪ್ರತಿಷ್ಠಿಸಲು ಆಲೋಚಿಸಿದರು. ಅವರ ಸಂಕಲ್ಪಾನುಸಾರ ಒದಗಿ ಬಂದ ಪ್ರತಿಮೆಯನ್ನು ಅವರು ಮೂರು ನಾಲ್ಕು ಮಂದಿ ಶಿಷ್ಯರಿಂದ ತೊಳೆಯಿಸಿ ಜಲಾಧಿವಾಸ ಮಾಡಿದರು. ಅನಂತರ ಮೂವತ್ತು ಮಂದಿ ಸಮರ್ಥರಾದ ಶಿಷ್ಯರನ್ನು ಆ ಪ್ರತಿಮೆಯನ್ನು ಎತ್ತಿ ತರುವಂತೆ ಹೇಳಿದರು. ಅವರಿಂದ ಸಾಧ್ಯವಾಗದಿರಲು ತಾವೊಬ್ಬರೇ ಅನಾಯಾಸವಾಗಿ ಮಗುವನ್ನು ಎತ್ತಿ ತರುವಂತೆ ಬಾಲಗೋಪಾಲ ಕೃಷ್ಣನನ್ನು ದೇವಾಲಯಕ್ಕೆ ತಂದು ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಮಾಡಿ ಪೂಜಿಸಿದರು. ಅಲ್ಲಿದ್ದ ಮರಡಿತ್ತಾಯನೆಂಬುವನು ತಾನೇ ಯಾಗಾದಿಗಳನ್ನು ಮಾಡಲು ಸಮರ್ಥನೆಂದು ಅಹಂಕಾರಗೊಂಡಿದ್ದನು. ಆಚಾರ್ಯರು ಅವನನ್ನು ಖಂಡಿಸಿ ತಮ್ಮ ಉಪಾಧ್ಯಾಯರ ಮಗನಾದ ವಾಸುದೇವನಿಂದ ಯಾಗ ಮಾಡಿಸಿದರು. ಅದರಲ್ಲಿ ಆಚಾರ್ಯರ (ಪೂರ್ವಾಶ್ರಮದ) ತಮ್ಮನೇ, ಹೋತೃ ಎಂಬ ಋತ್ವಿಜನ ಕಾರ್ಯವನ್ನು ಮಾಡಿದನು. ಹೀಗೆ ತಾವು ಯಾಗವನ್ನು ಮಾಡಿಸಿ ಮೋಕ್ಷಾರ್ಥಿಗಳು ಶಾಸ್ತ್ರದ ಶ್ರವಣಮನನ ನಿಧಿಧ್ಯಾಸನಗಳನ್ನು ಮಾಡುವಂತೆ ಸ್ವರ್ಗಾದಿ ಫಲಾಪೇಕ್ಷೆಯಿಲ್ಲದೆ ಶ್ರುತಿಸ್ಮೃತಿಗಳಲ್ಲಿ ಹೇಳಿದ ಯಾಗಾದಿ ಕರ್ಮಗಳನ್ನು ಮಾಡುವುದೂ ಮೋಕ್ಷ ಸಾಧನ, ಮೋಕ್ಷದಲ್ಲಿ ಆನಂದಾನುಭವದ ಅತಿಶಯಕ್ಕೆ ಸಾಧಕ, ಹರಿಪ್ರೀತಿಗೆ ಕಾರಣ ಎಂದು ತಿಳಿಸಿಕೊಟ್ಟರು. ಅನಂತರ ಹಿಂದಿನಂತೆಯೇ ವ್ಯಾಸರನ್ನು ಕಂಡು ತಾವು ಮಾಡಿದ ಸೇವೆಯನ್ನು ಅವರಿಗೆ ಸಮರ್ಪಿಸಿದರು. ನಾರಾಯಣರೂಪಿಯಾದ ಆ ವ್ಯಾಸರು ಶ್ರೀಮಧ್ವರಿಗೆ ಹಿಂದೆ ಆಂಜನೇಯ ರೂಪದಲ್ಲಿದ್ದಾಗ

ಅವರ ಸೇವೆಗೆ ಸಂತುಷ್ಟರಾಗಿ ಬ್ರಹ್ಮಲೋಕಾಧಿಪತ್ಯವನ್ನು ಕೊಟ್ಟಿದ್ದರು. ಈಗ ಅದಕ್ಕಿಂತ ಹೆಚ್ಚಾದ ಯಾವ ವಸ್ತುವೂ ಕೊಡಲು ಯೋಗ್ಯವಾದುದು ಇಲ್ಲವಾದುದರಿಂದ ಹಿಂದೆ ಕೊಟ್ಟಿರುವ ಬ್ರಹ್ಮ ಪದವಿ ಮತ್ತು ಲೋಕಾಧಿಪತ್ಯವನ್ನೇ ವೃದ್ಧಿಗೊಳಿಸಿದರು. ಹೀಗೆ ಆಚಾರ್ಯರು ಶ್ರೀವೇದವ್ಯಾಸರ ಪರಮಾನುಗ್ರಹಪಾತ್ರರಾಗಿ, ಅಲ್ಲಿ ಕೆಲವು ಸಮಯವಿದ್ದು ವ್ಯಾಸರ ಅಪ್ಪಣೆಯನ್ನು ಪಡೆದು ತಮ್ಮ ಶಿಷ್ಯ ಪರಿವಾರ ಸಮೇತರಾಗಿ ಉಡುಪಿಗೆ ಮರಳಿ ಬಂದು ರಜತಪೀಠಪುರಾಧೀಶರಾದ ಅನಂತಾಸನ ಕೃಷ್ಣರನ್ನು ವಂದಿಸಿದರು. ಅಲ್ಲಿರುವ ಅವರ ಭಕ್ತರೆಲ್ಲರೂ ಆಚಾರ್ಯರನ್ನು ಆನಂದದಿಂದ ಅಭಿನಂದಿಸಿದರು.

**ವಿಶೇಷ ಸಂಗತಿ—**

ಶ್ರೀಮದಾನಂದತೀರ್ಥ ಭಗವತ್ಪಾದರ ಸಾಕ್ಷಾತ್ ಶಿಷ್ಯರಾದ ಶ್ರೀ ಅಧೋಕ್ಷಜತೀರ್ಥರ ಸಂಪ್ರದಾಯಾನುಸಾರಿಗಳಾದ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವಮೂರ್ತಿತೀರ್ಥರ ಕರಕಮಲ ಸಂಜಾತರಾದ ಶ್ರೀ ವಿಶ್ವಪತಿತೀರ್ಥರು ಶ್ರೀ ಹರಿ-ವಾಯು ಸ್ತುತಿಗೆ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಅಲ್ಲಿ ಮೂವತ್ತೊಂಭತ್ತನೆಯ ಶ್ಲೋಕದಲ್ಲಿ ಕಂಡು ಬರುವ "ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ ಕೃತ್ವಾ ಭಾಷ್ಯಾಣಿ ಸಮ್ಯಕ್ ವ್ಯತನುತ ಚ ಭವಾನ್ ಭಾರತಾರ್ಥಪ್ರಕಾಶಮ್" ಎಂಬ ಭಾಗಕ್ಕೆ ವ್ಯಾಖ್ಯಾನವನ್ನು ಮಾಡುವಾಗ ಶ್ರೀಮಧ್ವರು ಸಂನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕಿಂತಲೂ ಮುಂಚಿತವಾಗಿ ವಟುಗಳು ಆಗಿರುವಾಗಲೇ ಏಳುವರ್ಷಕ್ಕಿಂತ ಸ್ವಲ್ಪ ಹೆಚ್ಚು ವಯಸ್ಸಿನವರಾಗಿದ್ದಾಗ ಬದರಿಕಾಶ್ರಮಕ್ಕೆ ಹೋಗಿ ಶ್ರೀವೇದ-ವ್ಯಾಸರಿಂದ ಸಕಲ ಶಾಸ್ತ್ರಗಳನ್ನೂ, ಸಕಲ ವೇದಗಳ ರಹಸ್ಯಗಳನ್ನೂ, ಸರ್ವ ವಿದ್ಯೆಗಳನ್ನೂ ಅರಿತು ಬಂದರೆಂಬುದು ಶ್ರೀವೆಂಕಟೇಶ ಮಹಾತ್ಮ್ಯೆಯಲ್ಲಿ ಪ್ರಸಿದ್ಧವೆಂದು ಹೇಳಿರುವರು. ಅವರ ವ್ಯಾಖ್ಯಾ ವಾಕ್ಯಗಳು ಈ ಕೆಳಗೆ ಕಂಡಂತಿವೆ.

ಪಾರಿವ್ರಾಜ್ಯಸ್ಯ ಸಂನ್ಯಾಸಾಶ್ರಮಸ್ಯ ಅಧಿರಾಜೋ ಅಧಿಪತಿಃ ಸನ್ ಪುನರಪಿ ಬದರೀಂ ಬದರೀಕಾಶ್ರಮಂ ಪ್ರಾಪ್ಯ ।
ಪುನರಪೀತ್ಯುಕ್ತ್ಯಾ ಸಂನ್ಯಾಸಾಶ್ರಮಗ್ರಹಣಾತ್ಪೂರ್ವಮಪಿ ಬದರಿಕಾಶ್ರಮಗಮನಂ ಸೂಚಿತಂ ।
ಏತಚ್ಚ ವೆಂಕಟೇಶಮಾಹಾತ್ಮ್ಯೇ ಪ್ರಸಿದ್ಧಂ ॥
ಸಪ್ತಸಂವತ್ಸರಾದೂರ್ಧ್ವಂ ಗತ್ವಾ ಬದರಿಕಾಶ್ರಮಂ । ಪ್ರಪೇದೇ ಸರ್ವಶಾಸ್ತ್ರಾಣಿ ವೇದಾಂಶ್ಚೈವಾವ್ಯಯಾನಪಿ ॥
ಇತ್ಥಂ ಹಿ ಸರ್ವವಿದ್ಯಾಶ್ಚ ವ್ಯಾಸದೇವಾನ್ಮಹಾತ್ಮನಃ । ಅವಾಪ್ತಸರ್ವಶಾಸ್ತ್ರೋಽಸೌ ವಟುಸ್ತದಿದಮಬ್ರವೀತ್ ॥

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ನವಮಃ ಸರ್ಗಃ

**ಅವತಾರಿಕಾ—** ಶ್ರೀವೇದವ್ಯಾಸರ ಮತ್ತು ಬದರೀ ನಾರಾಯಣದೇವರ ಅಪ್ಪಣೆಯನ್ನು ಪಡೆದು ಶ್ರೀಮದಾಚಾರ್ಯರು ಶ್ರೀವೇದವ್ಯಾಸರ ಸಂಗಡ ಬದರಿಕಾಶ್ರಮಕ್ಕೆ ಬಂದರೆನ್ನುತ್ತಾರೆ.

**ಚೋದಯಂತಮಥ ಗಂತುಮಾದರಾತ್**
**ತತ್ರ ಧರ್ಮಜಮಜಂ ಪ್ರಣಮ್ಯ ಸಃ ।**
**ಸೌಖ್ಯತೀರ್ಥಕವಿಲೋಕನಾಯಕೋ**
**ವೇದನಾಯಕಪುರಸ್ಸರೋ ಯಯೌ ॥ 1 ॥**

**ಪದಚ್ಛೇದ—** ಚೋದಯಂತಂ, ಅಥ, ಗಂತುಂ, ಆದರಾತ್, ತತ್ರ, ಧರ್ಮಜಂ, ಅಜಂ, ಪ್ರಣಮ್ಯ, ಸಃ, ಸೌಖ್ಯ-ತೀರ್ಥಕವಿಲೋಕನಾಯಕಃ, ವೇದನಾಯಕಪುರಸ್ಸರಃ, ಯಯೌ ।

**ಅನ್ವಯ—** ಅಥ, ತತ್ರ ಸೌಖ್ಯತೀರ್ಥಕವಿಲೋಕನಾಯಕಃ, ಸಃ, ಗಂತುಂ, ಚೋದಯಂತಂ, ಅಜಂ, ಧರ್ಮಜಂ, ಆದರಾತ್, ಪ್ರಣಮ್ಯ, ವೇದನಾಯಕಪುರಸ್ಸರಃ, ಯಯೌ ।

**ಅನ್ವಯಾರ್ಥ—**

**ಅಥ** = ಅನಂತರ,
**ತತ್ರ** = ಆ ನಾರಾಯಣಾಶ್ರಮದಲ್ಲಿ
**ಸೌಖ್ಯತೀರ್ಥಕವಿಲೋಕನಾಯಕಃ** = ಆನಂದತೀರ್ಥರೆಂಬ ಜ್ಞಾನಿಗಳಾದ ಸಜ್ಜನರಿಗೆ ಸ್ವಾಮಿಯಾದ,
**ಸಃ** = ಶ್ರೀ ಮಧ್ವಾಚಾರ್ಯರು,
**ಗಂತುಂ** = ಭೂಮಿಗೆ ಹೋಗುವುದಕ್ಕೆ,
**ಚೋದಯಂತಂ** = ಪ್ರೇರಿಸುತ್ತಿರುವ,
**ಅಜಂ** = ಉತ್ಪತ್ತಿ ರಹಿತನಾದ,
**ಧರ್ಮಜಂ** = ಯಮನೆಂಬ ಧರ್ಮಪ್ರಜೇಶ್ವರನ ಪುತ್ರನಾದ ನಾರಾಯಣ ಮುನಿಯನ್ನು,
**ಆದರಾತ್** = ಭಕ್ತಿಯಿಂದ,
**ಪ್ರಣಮ್ಯ** = ನಮಸ್ಕರಿಸಿ,

**ವೇದನಾಯಕಪುರಸ್ಸರಸನ್** = ವೇದವ್ಯಾಸರೇ ಮುಂದಾಳಾಗಿ ಉಳ್ಳವರಾಗಿ,

**ಯಯೌ** = ಹೋದರು.

**ತಾತ್ಪರ್ಯ**— ನಾರಾಯಣ ಮುನಿಗಳು ತನ್ನನ್ನು ಭೂಲೋಕಕ್ಕೆ ಹೋಗಬೇಕೆಂದು ಪ್ರೇರಿಸಿದಾಗ ಜ್ಞಾನಿವರ್ಯರ ನಾಯಕರಾದ ಶ್ರೀಮದಾನಂದತೀರ್ಥರು, ಉತ್ಪತ್ತಿರಹಿತನಾಗಿದ್ದರೂ ಯಮಧರ್ಮ ಪ್ರಜೇಶ್ವರನಿಂದ ಆವಿರ್ಭೂತರಾದ ನಾರಾಯಣ ಮುನಿಗಳನ್ನು ಭಕ್ತಿಯಿಂದ ನಮಸ್ಕರಿಸಿ, ವೇದವ್ಯಾಸರನ್ನು ಮುಂದಿಟ್ಟುಕೊಂಡು, ಅಲ್ಲಿಂದ ಅಂದರೆ ನಾರಾಯಣಾಶ್ರಮದಿಂದ ಶ್ರೀ ವೇದವ್ಯಾಸರ ಉತ್ತರ ಬದರಿಕಾಶ್ರಮಕ್ಕೆ ಹೊರಟರು.

**ವಿಗ್ರಹ**—

**ಧರ್ಮಜಂ**— ಧರ್ಮಾತ್ ಜಾಯತೇ ಇತಿ ಧರ್ಮಜಃ ತಂ ।

**ಅಜಂ**— ನ ಜಾಯತೇ ಇತಿ ಅಜಃ ತಂ ।

**ಸೌಖ್ಯತೀರ್ಥಕವಿಲೋಕನಾಯಕಃ**— ಸುಖಮೇವ ಸೌಖ್ಯಂ (ಸೌಖ್ಯಕರಂ) ತೀರ್ಥಂ ಯಸ್ಮಾತ್ ಸಃ ಸೌಖ್ಯ-ತೀರ್ಥಃ, ಕವೀನಾಂ ಲೋಕಾಃ ಕವಿಲೋಕಾಃ, (ಅಥವಾ ಕವಯಶ್ಚ ತೇ ಲೋಕಾಶ್ಚ ಕವಿಲೋಕಾಃ) ಕವಿಲೋಕಾನಾಂ ನಾಯಕಃ ಕವಿಲೋಕನಾಯಕಃ, ಸೌಖ್ಯತೀರ್ಥಶ್ಚಾಸೌ ಕವಿಲೋಕನಾಯಕಶ್ಚ ಸೌಖ್ಯತೀರ್ಥಕವಿಲೋಕನಾಯಕಃ ।

**ವೇದನಾಯಕಪುರಸ್ಸರಃ**— ನಯತೀತಿ ನಾಯಕಃ, ವೇದಾನಾಂ ನಾಯಕಃ ವೇದನಾಯಕಃ, ವೇದನಾಯಕಃ ಪುರಸ್ಸರಃ ಯಸ್ಯಸಃ ವೇದನಾಯಕಪುರಸ್ಸರಃ ।

**ಕ್ರಿಯಾಪದ**— **ಯಯೌ**- 8ನೆಯ ಸರ್ಗದ 32ನೆಯ ಶ್ಲೋಕದಲ್ಲಿ ರೂಪಗಳನ್ನು ತೋರಿಸಲಾಗಿದೆ.

**ಪ್ರಯೋಗ**— ಸೌಖ್ಯತೀರ್ಥಕವಿಲೋಕನಾಯಕಃ ಯಯೌ (ಕರ್ಮ ಹೇಳದಿರುವುದರಿಂದ ಅಕರ್ಮ ಕರ್ತರಿ ಪ್ರಯೋಗ) ಸೌಖ್ಯತೀರ್ಥಕವಿಲೋಕನಾಯಕೇನ ಯಯೇ (ಭಾವೇ ಪ್ರಯೋಗ) ।

**ವೃತ್ತ**— 'ರಾನ್ನರಾವಿಹ ರಥೋದ್ಧತಾ ಲಗೌ' ಎಂಬ ಲಕ್ಷಣದಿಂದ ಕೂಡಿದ ರಥೋದ್ಧತಾ ವೃತ್ತವು ಈ ಸರ್ಗದ 52ನೆಯ ಶ್ಲೋಕದವರೆಗೆ ಬಂದಿದೆ.

ಪ್ರಸ್ತಾರ— ಚೋದಯಂ, ತಮಥ, ಗಂತುಮಾ, ದರಾತ್

★ ★ ★

**ಅವತಾರಿಕಾ**— ವ್ಯಾಸಾಶ್ರಮಕ್ಕೆ ಬಂದು ಅಲ್ಲಿ ಶ್ರೀವೇದವ್ಯಾಸರಿಂದ ಸಕಲ ಶಾಸ್ತ್ರಗಳ ಮುಖ್ಯತತ್ತ್ವಗಳನ್ನು ಅತಿಶಯವಾಗಿ ಕೇಳಿ ತಿಳಿದರೆಂದು ಹೇಳುತ್ತಿದ್ದಾರೆ.

**ಆಶ್ರಮಾಂತರಮವಾಪ್ಯ ಕೃಷ್ಣತಃ**
**ಶ್ರಾವ್ಯಮೇಷ ಸಕಲಂ ಚ ಶುಶ್ರುವಾನ್ ।**
**ಚಿತ್ತವೃತ್ತಿಮನುವೃತ್ತಿಮಾನ್ ಗುರೋಃ**
**ಸಾಧ್ವವೇತ್ಯ ಗಮನೋನ್ಮುಖೋಽಭವತ್ ॥ 2 ॥**

**ಪದಚ್ಛೇದ**— ಆಶ್ರಮಾಂತರಂ, ಅವಾಪ್ಯ, ಕೃಷ್ಣತಃ, ಶ್ರಾವ್ಯಂ, ಏಷಃ, ಸಕಲಂ, ಚ, ಶುಶ್ರುವಾನ್, ಚಿತ್ತವೃತ್ತಿಂ, ಅನುವೃತ್ತಿಮಾನ್, ಅಭವತ್, ಗುರೋಃ, ಸಾಧು,ಅವೇತ್ಯ, ಗಮನೋನ್ಮುಖಃ ಅಭವತ್ ।

**ಅನ್ವಯ—** ಏಷಃ, ಆಶ್ರಮಾಂತರಂ, ಅವಾಪ್ಯ, ಗುರೋಃ, ಚಿತ್ತವೃತ್ತಿಂ, ಸಾಧು, ಅವೇತ್ಯ, ಅನುವೃತ್ತಿಮಾನ್(ಸನ್), ಕೃಷ್ಣತಃ, ಸಕಲಂ, ಚ, ಶ್ರಾವ್ಯಂ, ಶುಶ್ರುವಾನ್(ಸನ್), ಗಮನೋನ್ಮುಖಃ, ಅಭವತ್ ।

**ಅನ್ವಯಾರ್ಥ—**

**ಏಷಃ** = ಈ ಮಧ್ವಾಚಾರ್ಯರು,
**ಆಶ್ರಮಾಂತರಂ** = ಬೇರೊಂದು ಆಶ್ರಮವನ್ನು (ಶ್ರೀವೇದವ್ಯಾಸಾಶ್ರಮವನ್ನು)
**ಅವಾಪ್ಯ** = ಹೊಂದಿ,
**ಗುರೋಃ**= ಗುರುಗಳಾದ ಶ್ರೀ ವೇದವ್ಯಾಸರ,
**ಚಿತ್ತವೃತ್ತಿಂ** = ಮನೋವ್ಯಾಪಾರವನ್ನು (ಮನಸ್ಸಿನ ಒಲವನ್ನು),
**ಸಾಧು** = ಚೆನ್ನಾಗಿ,
**ಅವೇತ್ಯ**= ತಿಳಿದು,
**ಅನುವೃತ್ತಿಮಾನ್(ಸನ್)** = ಅನುಸರಿಸುವಿಕೆ ಉಳ್ಳವರಾಗಿ,
**ಕೃಷ್ಣತಃ** = ಶ್ರೀ ವೇದವ್ಯಾಸ ದೇವರಿಂದ,
**ಸಕಲಂ ಚ** = ಎಲ್ಲಾ
**ಶ್ರಾವ್ಯಂ** = ಕೇಳತಕ್ಕ ವಿಷಯವನ್ನು,
**ಶುಶ್ರುವಾನ್(ಸನ್)** = ಕೇಳಿದವರಾಗಿ,
**ಗಮನೋನ್ಮುಖಃ** = ದಕ್ಷಿಣ ಬದರಿಗೆ (ಚಿಕ್ಕ ಬದರಿಗೆ) ಹೋಗಲು ಅಭಿಮುಖರಾಗಿ,
**ಅಭವತ್** = ಆದರು.

**ತಾತ್ಪರ್ಯ—** ಈ ಶ್ರೀಮಧ್ವಾಚಾರ್ಯರು ನರನಾರಾಯಣಾಶ್ರಮದಿಂದ ಶ್ರೀವೇದವ್ಯಾಸಾಶ್ರಮಕ್ಕೆ ಹೋದರು. ಅಲ್ಲಿ ಕೆಲವು ದಿವಸ ವಾಸವಾಗಿದ್ದರು. ಆಗ ಶ್ರೀವೇದವ್ಯಾಸರ ಮನಸ್ಸಿನ ಒಲವನ್ನು ಚೆನ್ನಾಗಿ ತಿಳಿದು ಅವರ ಅನುಸರಣೆಯನ್ನು ಮಾಡಿ, ತಾವು ಕೇಳಬೇಕಾದ ಎಲ್ಲಾ ವಿಷಯಗಳನ್ನೂ ಅವರಿಂದ ಕೇಳಿ ತಿಳಿದರು. ಆನಂತರ ಅಲ್ಲಿಂದ ಮನುಷ್ಯರಿಗೆ ಗಮ್ಯವಾದ, ತಮ್ಮ ಶಿಷ್ಯರಿರುವ, ದಕ್ಷಿಣ ಬದರಿಯನ್ನು (ಚಿಕ್ಕ ಬದರಿ) ಕುರಿತು ಹೋಗಲು ಉದ್ಯುಕ್ತರಾದರು.

ವಿಗ್ರಹ—

**ಆಶ್ರಮಾಂತರಂ—** ಅನ್ಯಃ ಆಶ್ರಮಃ ಆಶ್ರಮಾಂತರಂ ।
**ಕೃಷ್ಣತ—** ಕೃಷ್ಣಾತ್ ಇತಿ ಕೃಷ್ಣತಃ, (ಪಂಚಮ್ಯಾಃ ತಸಿಃ) ।
**ಶ್ರಾವ್ಯಂ—** ಶ್ರೋತುಂ ಯೋಗ್ಯಂ ಶ್ರಾವ್ಯಂ ।
**ಚಿತ್ತವೃತ್ತಿಃ—** ಚಿತ್ತಸ್ಯ ವೃತ್ತಿಃ ಚಿತ್ತವೃತ್ತಿಃ ತಾಂ ।
**ಅನುವೃತ್ತಿಮಾನ್—** ಅನುವೃತ್ತಿಃ ಅಸ್ಯ ಅಸ್ತೀತಿ ಅನುವೃತ್ತಿಮಾನ್ ।
**ಗಮನೋನ್ಮುಖಃ—** ಉದ್ಗತಂ ಮುಖಂ ಯಸ್ಯಸಃ ಉನ್ಮುಖಃ, ಗಮನೇ ಉನ್ಮುಖಃ ಗಮನೋನ್ಮುಖಃ ।

**ಕ್ರಿಯಾಪದ— ಅಭವತ್** 1ನೆಯ ಸರ್ಗದ 19ನೆಯ ರಾಮಾರ್ಚನೇ ಎಂಬ ಶ್ಲೋಕದಲ್ಲಿ ಬಂದಿದೆ.

**ಪ್ರಯೋಗ—** ಏಷಃ ಗಮನೋನ್ಮುಖಃ ಅಭವತ್ (ಅಕರ್ಮಕ ಕರ್ತರಿ ಪ್ರಯೋಗ) ಏತೇನ ಗಮನೋನ್ಮುಖೇನ ಅಭೂಯತ (ಭಾವೇ) ।

**ವ್ಯಾಕರಣ ವಿಶೇಷ**— ಶುಶ್ರವಾನ್- ಶುಶ್ರುವಾನ್ ಶುಶ್ರುವಾಂಸೌ ಶುಶ್ರುವಾಂಸಃ, ಶುಶ್ರುವಾಂಸಂ ಶುಶ್ರುವಾಂಸೌ ಶುಶ್ರೂಷುಷಃ ಶುಶ್ರೂಷುಷಾ, ಶುಶ್ರುವದ್ಭ್ಯಾಂ, ಶುಶ್ರುವದ್ಭಿಃ ಇತ್ಯಾದಿ ರೂಪಗಳು, ಸಕಾರಾಂತ ಪುಲ್ಲಿಂಗ ಶುಶ್ರುವಸ್ ಶಬ್ದ ಭಾಷಾಯಾಂ ಸದವಸಶ್ರುವಃ (3-2-108) ಎಂಬ ಸೂತ್ರದಿಂದ ಲಿಟ್ ಅದಕ್ಕೆ ಕ್ವಸರಿ ಪ್ರತ್ಯಯ.

**ಕೋಶ**— ವ್ಯಾಸಾರ್ಜುನಾಗ್ನಿ ಹರಿಕೋಕಿಲಕಾಕಶೂದ್ರಶಾಮಿಸ್ರಯಕ್ಷಕಲಿ ನೀಲಗುಣೇಷು ಕೃಷ್ಣಃ ಎಂಬ ಭಾಸ್ಕರ ಕೋಶಾನುಸಾರವಾಗಿ, ಕೃಷ್ಣ ಎಂದರೆ ಇಲ್ಲಿ ವೇದವ್ಯಾಸರು ಎಂದು ಅರ್ಥ ।

★ ★ ★

ಅವತಾರಿಕಾ— ಶ್ರೀಮದಾಚಾರ್ಯರು ಪ್ರಯಾಣಕ್ಕೆ ಉದ್ಯುಕ್ತರಾಗಿ ಶ್ರೀವೇದವ್ಯಾಸರಿಗೆ ನಮಸ್ಕರಿಸಿ ಹೊರಟರೆನ್ನುತ್ತಾರೆ.

**ಮಂದಹಾಸಮೃದುಸುಂದರಾನನಂ**
**ವಂದನೀಯಮಭಿವಂದ್ಯ ಸತ್ಪತಿಮ್ ।**
**ಪ್ರಾಜ್ಞಮೌಲಿಮಣಿರಭ್ಯನುಜ್ಞಯಾ**
**ತಸ್ಯ ತಾವದಗಮನ್ಮಹಾಮತಿಃ ॥ 3 ॥**

**ಪದಚ್ಛೇದ**— ಮಂದಹಾಸಮೃದುಸುಂದರಾನನಂ, ವಂದನೀಯಂ, ಅಭಿವಂದ್ಯ, ಸತ್ಪತಿಂ, ಪ್ರಾಜ್ಞಮೌಲಿಮಣಿಃ, ಅಭ್ಯನುಜ್ಞಯಾ, ತಸ್ಯ, ತಾವತ್, ಅಗಮತ್, ಮಹಾಮತಿಃ ।

**ಅನ್ವಯ**— ಪ್ರಾಜ್ಞಮೌಲಿಮಣಿಃ, ಮಹಾಮತಿಃ, ಮಂದಹಾಸಮೃದುಸುಂದರಾನನಂ, ವಂದನೀಯಂ, ಸತ್ಪತಿಂ, ಅಭಿವಂದ್ಯ, ತಸ್ಯ, ಅಭ್ಯನುಜ್ಞಯಾ, ತಾವತ್, ಅಗಮತ್ ।

**ಅನ್ವಯಾರ್ಥ**—

**ಪ್ರಾಜ್ಞಮೌಲಿಮಣಿಃ** = ಜ್ಞಾನಿಗಳಿಗೆ ಶಿರೋಮಣಿಯಂತಿರುವ (ಜ್ಞಾನಿಶ್ರೇಷ್ಠರಾದ)
**ಮಹಾಮತಿಃ** = ಅತಿಶಯವಾದ ಬುದ್ಧಿಯುಳ್ಳ ಶ್ರೀ ಮಧ್ವಾಚಾರ್ಯರು,
**ಮಂದಹಾಸ ಮೃದು ಸುಂದರಾನನಂ** = ಮುಗುಳ್ನಗೆಯುಳ್ಳ, ಸೌಮ್ಯವಾದ, ಸುಂದರವಾದ ಮುಖವುಳ್ಳ,
**ವಂದನೀಯಂ** = ನಮಸ್ಕರಿಸಲು ಯೋಗ್ಯರಾದ,
**ಸತ್ಪತಿಂ** = ಸಜ್ಜನರಿಗೆ ಸ್ವಾಮಿಯಾದ ಶ್ರೀ ವೇದವ್ಯಾಸರನ್ನು,
**ಅಭಿವಂದ್ಯ** = ನಮಸ್ಕರಿಸಿ,
**ತಸ್ಯ** = ವೇದವ್ಯಾಸರ,
**ಅಭ್ಯನುಜ್ಞಯಾ ತಾವತ್** = ಒಪ್ಪಿಗೆಯಿಂದಲೇ,
**ಅಗಮತ್** = ಹೋದರು.

**ತಾತ್ಪರ್ಯ**— ಶ್ರೀವೇದವ್ಯಾಸರು ಮಂದಹಾಸದಿಂದ ಸೌಮ್ಯವೂ, ಸುಂದರವೂ ಆದ ಮುಖವುಳ್ಳವರು, ಎಲ್ಲರಿಗೂ ನಮಸ್ಕಾರಾರ್ಹರು, ಸಜ್ಜನರಿಗೆ ಒಡೆಯರು, ಜ್ಞಾನಿಶ್ರೇಷ್ಠರಾದ ಶ್ರೀಪೂರ್ಣಪ್ರಜ್ಞರು ಇಂತಹ ಶ್ರೀವೇದವ್ಯಾಸರನ್ನು ವಂದಿಸಿ ಅವರ ಅನುಮತಿಯಿಂದಲೇ ಅಲ್ಲಿಂದ ಹೊರಟರು.

ವಿಗ್ರಹ—

**ಮಂದಹಾಸಮೃದುಸುಂದರಾನನಂ**— ಮಂದಃ ಹಾಸಃ ಯಸ್ಮಿನ್ ತತ್ ಮಂದಹಾಸಂ, ಮೃದು ಚ ತತ್ ಸುಂದರಂ ಚ ಮೃದುಸುಂದರಂ, ಮೃದುಸುಂದರಂ ಚ ತತ್ ಆನನಂ ಚ ಮೃದುಸುಂದರಾನನಂ, ಮಂದಹಾಸಂ ಮೃದುಸುಂದರಾನನಂ ಯಸ್ಯಸಃ ಮಂದಹಾಸಮೃದುಸುಂದರಾನನಃ ತಂ ।

**ವಂದನೀಯಂ**— ವಂದಿತುಂ ಯೋಗ್ಯಃ, ವಂದನೀಯಃ, ತಂ ।

**ಸತ್ಪತಿಂ**— ಸತಾಂ ಪತಿಃ, ಸತ್ಪತಿಃ, ತಂ ।

**ಪ್ರಾಜ್ಞಮೌಲಿಮಣಿಃ**— ಮೌಲೇಃ ಮಣಿಃ ಮೌಲಿಮಣಿಃ, ಪ್ರಾಜ್ಞಾನಾಂ ಮೌಲಿಮಣಿಃ ಪ್ರಾಜ್ಞಮೌಲಿಮಣಿಃ ।

**ಮಹಾಮತಿಃ**— ಮಹತೀ ಮತಿಃ ಯಸ್ಯಸಃ ಮಹಾಮತಿಃ ।

**ಕ್ರಿಯಾಪದ**— **ಅಗಮತ್**- ಗಮ್ಲೃ ಗತೌ ಇತಿ ಗತ್ಯರ್ಥಕಾತ್ ಗಮ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಲಙ್ ಪ್ರಥಮಪುರುಷೇ ಏಕವಚನೇ ಅಗಮತ್ ಇತಿರೂಪಂ ।

ಅಗಮತ್ ಅಗಮತಾಂ ಅಗಮನ್, ಅಗಮಃ ಅಗಮತಂ ಅಗಮತ, ಅಗಮಂ ಅಗಮಾವ ಅಗಮಾಮ ।

**ಪ್ರಯೋಗ**— ಮಹಾಮತಿಃ ಅಗಮತ್ (ಕರ್ಮಾವಿವಕ್ಷಯಾ ಅಕರ್ಮಕ ಕರ್ತರಿ) ಮಹಾಮತಿನಾ ಅಗಾಮಿ (ಭಾವೇ) ।

**ಕೋಶ**— ಸನ್= ವಿದ್ವಾಂಸನು, ''ವಿದ್ವಾನ್ ವಿಪಶ್ಚಿದ್ ದೋಷಜ್ಞಃ ಸನ್ ಸುಧೀಃ ಕೋವಿದಃ ಬುಧಃ'' ಇತ್ಯಮರಃ, ತಾವತ್ = ಅವಧಾರಣಾರ್ಥಕ, ''ಯಾವತ್ತಾವಚ್ಚಸಾಕಲ್ಯೇಽವಧೌ ಮಾನೇಽವಧಾರಣೇ'' ಇತ್ಯಮರಃ ।

★ ★ ★

**ಅವತಾರಿಕಾ**— ಸೂಕ್ಷ್ಮವಾಗಿ ವಿಚಾರ ಮಾಡಿದರೆ ಜ್ಞಾನಿವರೇಣ್ಯರಾದ ಶ್ರೀಮದಾಚಾರ್ಯರು ತಮ್ಮ ಹೃದಯದಲ್ಲಿ ಶ್ರೀವೇದವ್ಯಾಸರನ್ನು ಒಂದರೆಕ್ಷಣ ಬಿಡದೆ ನೋಡುತ್ತಿರುವುದರಿಂದ ಅವರಿಗೆ ಗುರುಗಳಾದ ಶ್ರೀವೇದವ್ಯಾಸರ ಅಗಲುವಿಕೆಯ ದುಃಖವೇ ಇಲ್ಲವೆಂದು ಹೇಳುತ್ತಾರೆ.

**ತಸ್ಯ ವಲ್ಲಭತಮಾಽಽಸ ವಾಸಭೂ-**
**ರ್ಮಾನಸಾತ್ ಪೃಥುಲಮಾನಸಸ್ಯ ನೋ ।**
**ನಾತ್ಯಜತ್ ಕ್ಷಣಮಪಿ ಹ್ಯಸಾವಿದಂ**
**ನೈಷ ನಾಥವಿರಹೀ ತತೋಽಭವತ್ ॥ 4 ॥**

**ಪದಚ್ಛೇದ**— ತಸ್ಯ, ವಲ್ಲಭತಮಾ, ಆಸ, ವಾಸಭೂಃ, ಮಾನಸಾತ್, ಪೃಥುಲಮಾನಸಸ್ಯ, ನೋ, ನ, ಅತ್ಯಜತ್, ಕ್ಷಣಂ, ಅಪಿ, ಅಸೌ, ಇದಂ, ನ, ಏಷಃ, ನಾಥವಿರಹೀ, ತತಃ, ಅಭವತ್ ।

**ಅನ್ವಯ**— ತಸ್ಯ, ಪೃಥುಲಮಾನಸಸ್ಯ, ಮಾನಸಾತ್, ವಲ್ಲಭತಮಾ, ವಾಸಭೂಃ, ನೋ, ಆಸ, ಹಿ, ಅಸೌ, ಇದಂ, ಕ್ಷಣಂ, ಅಪಿ, ನ, ಅತ್ಯಜತ್, ತತಃ, ಏಷಃ, ನಾಥವಿರಹೀ, ನ, ಅಭವತ್ ।

**ಅನ್ವಯಾರ್ಥ**—

**ತಸ್ಯ** = ಆ ವ್ಯಾಸರಿಗೆ,

**ಪೃಥುಲಮಾನಸಸ್ಯ**= ಶ್ರೀಪೂರ್ಣಪ್ರಜ್ಞರ,

**ಮಾನಸಾತ್**= ಮನಸ್ಸಿಗಿಂತ (ಬೇರೆ)

**ವಲ್ಲಭತಮಾ** = ಅತ್ಯಂತ ಪ್ರಿಯವಾದ,

**ವಾಸಭೂಃ** = ವಾಸಸ್ಥಾನವು,

**ನೋ ಆಸ** = ಇರಲಿಲ್ಲ,

**ಹಿ** =ಯಾವ ಕಾರಣದಿಂದ,

**ಅಸೌ** = ಈ ವ್ಯಾಸರು,

**ಇದಂ** = ಈ ಮಧ್ವರ ಮನಸ್ಸನ್ನು,

**ಕ್ಷಣಂ ಅಪಿ** = ಸ್ವಲ್ಪ ಹೊತ್ತೂ ಕೂಡ,

**ನ ಅತ್ಯಜತ್** = ಬಿಡಲಿಲ್ಲವೋ,

**ತತಃ** = ಆ ಕಾರಣದಿಂದ,

**ಏಷಃ** = ಈ ಮಧ್ವರು,

**ನಾಥವಿರಹೀ** = ಸ್ವಾಮಿಯಾದ ವೇದವ್ಯಾಸರ ವಿಯೋಗವುಳ್ಳವರು,

**ನ ಅಭವತ್** = ಆಗಲಿಲ್ಲ.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಮನಸ್ಸಿಗಿಂತ ಹೆಚ್ಚು ಪ್ರಿಯವಾದ ವಾಸಸ್ಥಾನವು ಶ್ರೀ ವೇದವ್ಯಾಸದೇವರಿಗೆ ಬೇರೊಂದು ಇರಲಿಲ್ಲ. ಆದುದರಿಂದ ಶ್ರೀವೇದವ್ಯಾಸರು ಶ್ರೀಮಧ್ವಾಚಾರ್ಯರ ಮನಸ್ಸನ್ನು ಒಂದು ಕ್ಷಣ ಕಾಲವೂ ಬಿಡಲಿಲ್ಲ. ಹೀಗೆ ಶ್ರೀ ಪೂರ್ಣಪ್ರಜ್ಞರು ಶ್ರೀವೇದವ್ಯಾಸರ ಸನ್ನಿಧಾನ ಪಾತ್ರವಾದ ಉತ್ತರ ಬದರಿಯನ್ನು ಬಿಟ್ಟು ಬಂದರೂ ಸ್ವಾಮಿಯಾದ ಶ್ರೀವ್ಯಾಸರ ವಿಯೋಗವನ್ನು ಹೊಂದಲಿಲ್ಲ. ಶ್ರೀಮಧ್ವಾಚಾರ್ಯರು ತಮ್ಮ ಹೃದಯದಲ್ಲಿ ಶ್ರೀವೇದ-ವ್ಯಾಸರನ್ನು ಯಾವಾಗಲೂ ಚಿಂತಿಸುತ್ತಾ ಧ್ಯಾನಿಸುತ್ತಾ ದೊಡ್ಡ ಬದರಿಯಿಂದ ಹೊರಟರು ಎಂದು ಭಾವ.

**ವಿಗ್ರಹ—**

**ವಲ್ಲಭತಮಾ—** ಅತಿಶಯೇನ, ವಲ್ಲಭಾ ವಲ್ಲಭತಮಾ ।

**ವಾಸಭೂಃ—** ವಾಸಸ್ಯ ಭೂಃ ವಾಸಭೂಃ ।

**ಪೃಥುಲಮಾನಸಸ್ಯ—** ಪೃಥುಲಂ ಮಾನಸಂ ಯಸ್ಯಸಃ ಪೃಥುಲಮಾನಸಃ, ತಸ್ಯ ಪೃಥುಲಮಾನಸಸ್ಯ ।

**ನಾಥವಿರಹೀ—** ನಾಥಸ್ಯ ವಿರಹಃ ನಾಥವಿರಹಃ, ನಾಥವಿರಹಃ ಅಸ್ಯ ಅಸ್ತೀತಿ ನಾಥವಿರಹೀ ।

**ಧಾತುರೂಪ—** ಆಸ = ಇದ್ದಿತ್ತು ಇದು ತಿಙಂತದಂತೆ ಕಾಣುವ ಅವ್ಯಯ, ತಿಙ್ಂತ ಪ್ರತಿರೂಪಕಂ ಅವ್ಯಯಂ ।

**ಕ್ರಿಯಾಪದ— ಅತ್ಯಜತ್**- ತ್ಯಜಹಾನೌ ಇತಿ ಹಾನ್ಯರ್ಥಕಾತ್ ತ್ಯಜಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅತ್ಯಜತ್ ಇತಿರೂಪಂ । (ಅಭವತ್ ಹಿಂದೆ ಬಂದಿದೆ)

ಅತ್ಯಜತ್ ಅತ್ಯಜತಾಂ ಅತ್ಯಜನ್, ಅತ್ಯಜಃ ಅತ್ಯಜತಂ ಅತ್ಯಜತ, ಅತ್ಯಜಂ ಅತ್ಯಜಾವ ಅತ್ಯಜಾಮ ।

**ಪ್ರಯೋಗ—**

ತಸ್ಯ ವಲ್ಲಭತಮಾ ವಾಸಭೂಃ ನ ಆಸ (ಕರ್ತರಿ)

ತಸ್ಯ ವಲ್ಲಭತಮಯಾ ವಾಸಭುವಾ ಬಭೂವೇ (ಭಾವೇ) ।

ಅಸೌ ಇದಂ ನ ಅತ್ಯಜತ್ (ಕರ್ತರಿ ಪ್ರಯೋಗ )

ಅನೇನ ಇದಂ ಅತ್ಯಜತ್ (ಕರ್ಮಣಿ ಲಙ್) ।

ಏಷಃ ನಾಥವಿರಹೀ ನ ಅಭವತ್ (ಕರ್ತರಿ ಲಙ್)

ಏತೇನ ನಾಥವಿರಹಿಣಾ ನ ಬಭೂವೇ (ಭಾವೇ) ।

★ ★ ★

**ಅವತಾರಿಕಾ**— ಶ್ರೀಮದಾಚಾರ್ಯರು ಕ್ರೂರಪ್ರಾಣಿಗಳಿಗೆ ಅತಿಕ್ರೂರರಾಗಿಯೂ, ಸಾಧುಪ್ರಾಣಿಗಳಿಗೆ ಅತಿ-ಸಾಧುಗಳಾಗಿಯೂ ನಿರ್ಭಯರಾಗಿ ಕಡಿದಾದ ಬೆಟ್ಟದಿಂದ ಇಳಿದರೆನ್ನುತ್ತಾರೆ.

**ವೀರದೃಷ್ಟಿಕೃತಸಿಂಹವಿಭ್ರಮಃ**
**ಶಾಂತದೃಷ್ಟಿಕೃತಶಾಂತಸಮ್ಮದಃ ।**
**ತತ್ರ ತತ್ರ ಪಥಿ ಪಥ್ಯವಿಭ್ರಮಃ**
**ಪರ್ವತಾದವತತಾರ ಸರ್ವಧೀಃ ॥ 5 ॥**

**ಪದಚ್ಛೇದ**— ವೀರದೃಷ್ಟಿಕೃತಸಿಂಹವಿಭ್ರಮಃ, ಶಾಂತದೃಷ್ಟಿಕೃತಶಾಂತಸಮ್ಮದಃ, ತತ್ರ, ತತ್ರ, ಪಥಿ, ಪಥ್ಯವಿಭ್ರಮಃ, ಪರ್ವತಾತ್, ಅವತತಾರ, ಸರ್ವಧೀಃ ।

**ಅನ್ವಯ**— ವೀರದೃಷ್ಟಿಕೃತಸಿಂಹವಿಭ್ರಮಃ, ಶಾಂತದೃಷ್ಟಿಕೃತಶಾಂತಸಮ್ಮದಃ, ತತ್ರ, ತತ್ರ, ಪಥಿ, ಪಥ್ಯವಿಭ್ರಮಃ, ಸರ್ವಧೀಃ, ಪರ್ವತಾತ್, ಅವತತಾರ ।

**ಅನ್ವಯಾರ್ಥ**—

**ವೀರದೃಷ್ಟಿಕೃತಸಿಂಹವಿಭ್ರಮಃ** = ಕ್ರೂರಪ್ರಾಣಿಗಳ ಕಣ್ಣುಗಳಿಗೆ ಮಾಡಲ್ಪಟ್ಟ ಸಿಂಹದ ವಿಲಾಸವುಳ್ಳ

**ಶಾಂತದೃಷ್ಟಿಕೃತಶಾಂತಸಮ್ಮದಃ** = ಶಾಂತವಾದ ಕಣ್ಣುಗಳಿಂದ (ನೋಟದಿಂದ) ಮಾಡಲ್ಪಟ್ಟ ಸೌಮ್ಯ ಪ್ರಾಣಿಗಳಿಗೆ ಸಂತೋಷವುಳ್ಳ

**ತತ್ರ ತತ್ರ** = ಅಲ್ಲಲ್ಲಿ

**ಪಥಿ** = ದಾರಿಯಲ್ಲಿ

**ಪಥ್ಯ ವಿಭ್ರಮಃ** = ಉಚಿತವಾದ ವಿಲಾಸವುಳ್ಳ

**ಸರ್ವಧೀಃ** = ಶ್ರೀಪೂರ್ಣಪ್ರಜ್ಞರು

**ಪರ್ವತಾತ್**= ಹಿಮಾಲಯ ಪರ್ವತದಿಂದ

**ಅವತತಾರ** = ಇಳಿದರು.

**ತಾತ್ಪರ್ಯ**— ಆ ಶ್ರೀಮಧ್ವಾಚಾರ್ಯರು ಹಿಮಾಲಯದಿಂದ ಕೆಳಗಿಳಿದರು. ಆಗ ಅವರು ಹುಲಿ ಮೊದಲಾದ ಕ್ರೂರಪ್ರಾಣಿಗಳ ಕಣ್ಣುಗಳಿಗೆ ಸಿಂಹದಂತೆ ಗಂಭೀರವಾದ ನಡಿಗೆ ನೋಟ ಮುಂತಾದ ವಿಲಾಸವುಳ್ಳವರಾಗಿ ಕಾಣಿಸುತ್ತಿದ್ದರು. ಶಾಂತವಾದ ಜಿಂಕೆ ಮೊದಲಾದ ಪ್ರಾಣಿಗಳಿಗೆ ತಮ್ಮ ಸೌಮ್ಯ ದೃಷ್ಟಿಯಿಂದ ಆನಂದವನ್ನುಂಟು ಮಾಡುತ್ತಿದ್ದರು. ಹೀಗೆ ದಾರಿಯಲ್ಲಿ ಅವರು ಆಯಾ ಪ್ರಾಣಿಗಳಿಗೆ ತಕ್ಕ ವಿಲಾಸವುಳ್ಳವರಾಗಿದ್ದರು.

**ವಿಗ್ರಹ**—

**ವೀರದೃಷ್ಟಿಕೃತಸಿಂಹವಿಭ್ರಮಃ**— ಸಿಂಹಸ್ಯ ವಿಭ್ರಮಃ ಸಿಂಹವಿಭ್ರಮಃ, ವೀರಾಣಾಂ ದೃಷ್ಟಯಃ ವೀರ-ದೃಷ್ಟಯಃ, ವೀರದೃಷ್ಟೀನಾಂ ಕೃತಃ ಸಿಂಹವಿಭ್ರಮೋ ಯೇನ ಸಃ ವೀರದೃಷ್ಟಿಕೃತಸಿಂಹವಿಭ್ರಮಃ ।

**ಶಾಂತದೃಷ್ಟಿಕೃತಶಾಂತಸಮ್ಮದಃ**— ಶಾಂತಾ ಚ ಸಾ ದೃಷ್ಟಿಶ್ಚ ಶಾಂತದೃಷ್ಟಿಃ, ಶಾಂತಾನಾಂ ಸಮ್ಮದಃ ಶಾಂತ-ಸಮ್ಮದಃ, ಶಾಂತದೃಷ್ಟ್ಯಾ ಕೃತಃ ಶಾಂತಸಮ್ಮದಃ ಯೇನ ಸಃ ಶಾಂತದೃಷ್ಟಿಕೃತಶಾಂತಸಮ್ಮದಃ ।

**ಪಥ್ಯವಿಭ್ರಮಃ**— ಪಥಃ ಅನಪೇತಃ ಪಥ್ಯಃ 'ಧರ್ಮಪಥ್ಯರ್ಥನ್ಯಾಯಾದನಪೇತೇ' (4-4-92) ಎಂಬ ಸೂತ್ರದಿಂದ ಯತ್ ಪ್ರತ್ಯಯ । ಪಥ್ಯಃ ವಿಭ್ರಮಃ ಯಸ್ಯಸಃ ಪಥ್ಯವಿಭ್ರಮಃ ।

**ಸರ್ವಧೀಃ**— ಸರ್ವಾ(ಪೂರ್ಣಾ) ಧೀಃ ಯಸ್ಯ ಸಃ ಸರ್ವಧೀಃ ।

**ಕ್ರಿಯಾಪದ**— ಅವತತಾರ- ಅವಪೂರ್ವಕಾತ್ ತೄಪ್ಲವನ ತರಣಯೋಃ ಇತಿ ಪ್ಲವನ ತರಣಾರ್ಥಕಾತ್ ತೄಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಅವತತಾರ ಇತಿರೂಪಂ ।

ಅವ+ತತಾರ - ತೇರತುಃ ತೇರುಃ, ತೇರಿಥ ತೇರಥುಃ ತೇರ, ತತಾರ ತೇರಿವ ತೇರಿಮ ।

**ಪ್ರಯೋಗ**— ಸರ್ವಧೀಃ ಪರ್ವತಾತ್ ಅವತಾತರ (ಅಕರ್ಮಕ ಕರ್ತರಿ) ।

ಸರ್ವಧಿಯಾ ಪರ್ವತಾತ್ ಅವತೇರೇ (ಭಾವೇ) ।

★ ★ ★

**ಅವತಾರಿಕಾ**— ಶ್ರೀ ಮದಾಚಾರ್ಯರು ಮನುಷ್ಯ ಸಂಚಾರಕ್ಕೆ ಯೋಗ್ಯವಾದ ಚಿಕ್ಕ ಬದರಿಕಾಶ್ರಮದಲ್ಲಿರುವ ಅನಂತಮಠಕ್ಕೆ ಬಂದು ತಮ್ಮನ್ನೇ ಹಂಬಲಿಸುತ್ತಿರುವ ಶಿಷ್ಯರಿಗೆ ಆನಂದವನ್ನುಂಟು ಮಾಡಿದರೆನ್ನುತ್ತಾರೆ.

**ವಾನರೇಂದ್ರ ಇವ ತೀರ್ಣವಾರಿಧಿ-**
**ರ್ವಾಸುದೇವ ಇವ ರತ್ನರಾಜವಾನ್ ।**
**ಭೀಮಸೇನ ಇವ ಸೂನವರ್ಯಹೃ-**
**ನ್ನಿರ್ವೃತಿಂ ಸ್ವಜನಮಾನಿನಾಯ ಸಃ ॥ 6 ॥**

**ಪದಚ್ಛೇದ**— ವಾನರೇಂದ್ರಃ, ಇವ, ತೀರ್ಣವಾರಿಧಿಃ, ವಾಸುದೇವಃ, ಇವ, ರತ್ನರಾಜವಾನ್, ಭೀಮಸೇನಃ, ಇವ, ಸೂನವರ್ಯಹೃತ್, ನಿರ್ವೃತಿಂ, ಸ್ವಜನಂ, ಆನಿನಾಯ, ಸಃ ।

**ಅನ್ವಯ**— ವಾನರೇಂದ್ರಃ, ಇವ, ತೀರ್ಣವಾರಿಧಿಃ, ವಾಸುದೇವಃ, ಇವ, ರತ್ನರಾಜವಾನ್, ಭೀಮಸೇನಃ, ಇವ, ಸೂನವರ್ಯಹೃತ್, ನಿರ್ವೃತಿಂ, ಸ್ವಜನಂ, ಆನಿನಾಯ, ಸಃ ।

**ಅನ್ವಯಾರ್ಥ**—

ಸಃ = ಆ ಶ್ರೀ ಮಧ್ವಾಚಾರ್ಯರು,
ತೀರ್ಣವಾರಿಧಿಃ = (ಹಿಂದಿರುಗಿ) ದಾಟಿದ ಸಮುದ್ರವುಳ್ಳ,
ವಾನರೇಂದ್ರಃ ಇವ = ಹನುಮಂತನಂತೆಯೂ,
ರತ್ನರಾಜವಾನ್= ಸ್ಯಮಂತಕವೆಂಬ ಶ್ರೇಷ್ಠರತ್ನವುಳ್ಳ,
ವಾಸುದೇವಃ ಇವ = ಕೃಷ್ಣನಂತೆಯೂ,
ಸೂನವರ್ಯಹೃತ್ = ಶ್ರೇಷ್ಠವಾದ ಹೂವುಗಳನ್ನು ತಂದಿದ್ದ
ಭೀಮಸೇನಃ ಇವ = ಭೀಮಸೇನನಂತೆಯೂ,
ಸ್ವಜನಂ = ಬಂಧು ಜನರನ್ನು,
ನಿರ್ವೃತಿಂ = ಸಂತೋಷವನ್ನು,
ಆನಿನಾಯ = ಹೊಂದಿಸಿದರು.

**ತಾತ್ಪರ್ಯ**— ಹಿಂದೆ ಹನುಮಂತನು ಸೀತೆಯನ್ನು ಹುಡುಕುವುದಕ್ಕಾಗಿ ಸಮುದ್ರವನ್ನು ದಾಟಿ, ಲಂಕೆಗೆ ಹೋಗಿ ಸೀತೆಯನ್ನು ನೋಡಿ ಪುನಃ ಸಮುದ್ರವನ್ನು ದಾಟಿ ಮಹೇಂದ್ರ ಪರ್ವತದಲ್ಲಿ ತನ್ನನ್ನೇ ಎದುರು ನೋಡುತ್ತಿದ್ದ ಅಂಗದಾದಿ ಬಂಧುಗಳಿಗೆ ಸೀತೆಯ ಸಮಾಚಾರವನ್ನು ತಿಳಿಸಿ ಸಂತೋಷಪಡಿಸಿದ್ದಾರೆ. ಸತ್ರಾಜಿತನೆಂಬ ಯಾದವನು ಸೂರ್ಯನ ಅನುಗ್ರಹದಿಂದ ಪಡೆದಿದ್ದ ಸ್ಯಮಂತಕಮಣಿಯನ್ನು ಅವನ ತಮ್ಮನಾದ ಪ್ರಸೇನನು ಕೊರಳಲ್ಲಿ ಧರಿಸಿ ಬೇಟೆಗೆ ಹೋಗಿದ್ದಾಗ

ಸಿಂಹವು ಅವನನ್ನು ಕೊಂದು ಮಣಿಯನ್ನು ತೆಗೆದುಕೊಂಡು ಹೋಯಿತು. ದಾರಿಯಲ್ಲಿ ಜಾಂಬವಂತನು ಆ ಸಿಂಹವನ್ನು ಕೊಂದು ಮಣಿಯನ್ನು ತನ್ನ ಗುಹೆಯಲ್ಲಿ ಮಗುವಿಗೆ ಆಟಕ್ಕಾಗಿ ಕೊಟ್ಟನು. ಪ್ರಸೇನನು ಬೇಟೆಗೆ ಹೋದವನು ಹಿಂತಿರುಗಿ ಬಾರದಿದ್ದಾಗ ಎಲ್ಲರೂ ಶ್ರೀಕೃಷ್ಣನೇ ಮಣಿಯನ್ನು ಅಪಹರಿಸಿದನೆಂದು ಆಡಿಕೊಳ್ಳುತ್ತಿದ್ದಾಗ ಶ್ರೀಕೃಷ್ಣನು ಅರಣ್ಯಕ್ಕೆ ಹೋಗಿ ಮಣಿಯನ್ನು ಹುಡುಕುತ್ತಾ ಕೊನೆಗೆ ಜಾಂಬವಂತನ ಗುಹೆಯಲ್ಲಿ ಮಣಿಯನ್ನು ನೋಡಿ, ಜಾಂಬವಂತನನ್ನು ಸೋಲಿಸಿ ಸ್ಯಮಂತಕಮಣಿಯನ್ನು ತಂದು ವಸುದೇವನೇ ಮೊದಲಾದ ಯಾದವ ಬಂಧುಗಳನ್ನು ಆನಂದಗೊಳಿಸಿದನು. ಭೀಮಸೇನನು ಮಣಿಮಂತನೇ ಮೊದಲಾದ ದೈತ್ಯರನ್ನು ಗೆದ್ದು ಸೌಗಂಧಿಕವನದಿಂದ ಉತ್ತಮವಾದ ಹೂವುಗಳನ್ನು ತಂದು ಧರ್ಮರಾಜ-ದ್ರೌಪದಿ ಮುಂತಾದ ಬಂಧುಗಳನ್ನು ಸಂತೋಷಗೊಳಿಸಿದ್ದನು. ಹಾಗೆಯೇ ಶ್ರೀ ಪೂರ್ಣಪ್ರಜ್ಞರು ಅಮಾನುಷ ಪ್ರವೇಶವಾದ ಉತ್ತರ ಬದರಿಕಾಶ್ರಮದಿಂದ ಹಿಂತಿರುಗಿ ಬಂದು ಚಿಕ್ಕ ಬದರಿಯ ಅನಂತಮಠದಲ್ಲಿ ತಮ್ಮ ಅಗಲಿಕೆಯಿಂದ ದುಃಖಿತರಾದ ಶಿಷ್ಯರನ್ನು ಸಂತೋಷಗೊಳಿಸಿದರು.

ವಿಗ್ರಹ—

**ವಾನರೇಂದ್ರಃ**— ವಾನರಾಣಾಂ ಇಂದ್ರಃ ವಾನರೇಂದ್ರಃ ।

**ತೀರ್ಣವಾರಿಧಿಃ**— ತೀರ್ಣಃ ವಾರಿಧಿಃ, ಯೇನ ಸಃ ತೀರ್ಣವಾರಿಧಿಃ ।

**ರತ್ನರಾಜವಾನ್**— ರತ್ನಾನಾಂ ರಾಜಾ ರತ್ನರಾಜಃ, ರತ್ನರಾಜಃ ಅಸ್ಯ ಅಸ್ತೀತಿ ರತ್ನರಾಜವಾನ್ ।

**ಸೂನುವರ್ಯಹೃತ್**— ಸೂನೇಷು ವರ್ಯಾಣಿ ಸೂನವರ್ಯಾಣಿ, ಸೂನವರ್ಯಾಣಿ ಹರತೀತಿ ಸೂನವರ್ಯಹೃತ್ ।

**ಸ್ವಜನಂ**— ಸ್ವಸ್ಯ ಜನಃ ಸ್ವಜನಃ ತಂ ಸ್ವಜನಂ ।

**ಕ್ರಿಯಾಪದ**— ಆನಿನಾಯ - ಆಙ್ ಉಪಸರ್ಗಪೂರ್ವಕಾತ್ ಣೀಞ್ ಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ನೀಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಆನಿನಾಯ ಇತಿರೂಪಂ ।

ಆ+ನಿನಾಯ ನಿನ್ಯತುಃ ನಿನ್ಯುಃ, ನಿನಯಥ - ನಿನೇಥ ನಿನ್ಯಥುಃ ನಿನ್ಯ, ನಿನಾಯ-ನಿನಯ ನಿನ್ಯಿವ ನಿನ್ಯಿಮ ।

**ಪ್ರಯೋಗ**— ಸಃ ಸ್ವಜನಂ ನಿರ್ವೃತಿಂ ಆನಿನಾಯ (ದ್ವಿಕರ್ಮಕ ಕರ್ತರಿ) ।
ತೇನ ಸ್ವಜನಂ ನಿರ್ವೃತಿಃ ಆನಿನ್ಯೇ (ಕರ್ಮಣಿ) ।

★ ★ ★

**ಅವತಾರಿಕಾ**— ಅನಂತಮಠದಲ್ಲಿರುವಾಗ ಶ್ರೀಮದಾಚಾರ್ಯರು ತೋರಿಸಿದ ಅಮಾನುಷ ವ್ಯಾಪಾರವನ್ನು ವರ್ಣಿಸುತ್ತಾರೆ.

**ಅಗ್ನಿಶರ್ಮಮುಖಪಂಚಷೈರ್ದ್ವಿಜೈ-**
**ರನ್ನಮಾಹೃತಮಲಂ ಪೃಥಕ್ ಸಮಮ್ ।**
**ಕೃತ್ಸ್ನಮಾದದಯಮಿತ್ಯವಿಸ್ಮಯಃ**
**ಕೃತ್ಸ್ನಮತ್ತುಮಲಮೇಷ ಹಿ ಕ್ಷಯೇ ॥ 7 ॥**

**ಪದಚ್ಛೇದ**— ಅಗ್ನಿಶರ್ಮಮುಖಪಂಚಷೈಃ, ದ್ವಿಜೈಃ, ಅನ್ನಂ, ಆಹೃತಂ ಅಲಂ, ಪೃಥಕ್, ಸಮಂ, ಕೃತ್ಸ್ನಂ, ಆದತ್, ಅಯಂ, ಇತಿ, ಅವಿಸ್ಮಯಃ, ಕೃತ್ಸ್ನಂ, ಅತ್ತುಂ, ಅಲಂ, ಏಷಃ, ಹಿ, ಕ್ಷಯೇ ।

**ಅನ್ವಯ—** ಅಯಂ, ಅಗ್ನಿಶರ್ಮಮುಖಪಂಚಷೈಃ, ದ್ವಿಜೈಃ, ಸಮಂ, ಆಹೃತಂ, ಪೃಥಕ್, ಅಲಂ, ಕೃತ್ಸ್ನಂ, ಅನ್ನಂ, ಆದತ್, ಇತಿ, ಅವಿಸ್ಮಯಃ, ಏಷಃ, ಕ್ಷಯೇ, ಕೃತ್ಸ್ನಂ, ಅತ್ತುಂ, ಅಲಂ, ಹಿ ।

**ಅನ್ವಯಾರ್ಥ—**

**ಅಯಂ** = ಈ ಮಧ್ವಾಚಾರ್ಯರು,
**ಅಗ್ನಿಶರ್ಮಮುಖಪಂಚಷೈಃ** = ಅಗ್ನಿಶರ್ಮನೇ ಮೊದಲಾಗಿ ಉಳ್ಳ ಐದಾರು ಮಂದಿ,
**ದ್ವಿಜೈಃ** = ಬ್ರಾಹ್ಮಣರಿಂದ,
**ಸಮಂ** = ಒಟ್ಟಿಗೆ (ಒಂದೇಸಲ),
**ಆಹೃತಂ** = ತರಲ್ಪಟ್ಟ
**ಪೃಥಕ್** = ಪ್ರತ್ಯೇಕವಾಗಿ,
**ಅಲಂ** = ಸಾಕಾದ,
**ಕೃತ್ಸ್ನಂ** = ಎಲ್ಲಾ,
**ಅನ್ನಂ** = ಅನ್ನವನ್ನು
**ಆದತ್** = ತಿಂದರು,
**ಇತಿ** = ಹೀಗೆಂದು,
**ಅವಿಸ್ಮಯಃ** = ಆಶ್ಚರ್ಯವಿಲ್ಲ,
**ಏಷಃ** = ಇವರು,
**ಕ್ಷಯೇ** = ಪ್ರಳಯ ಕಾಲದಲ್ಲಿ
**ಕೃತ್ಸ್ನಂ** = ಎಲ್ಲಾ ಚರಾಚರ ಜಗತ್ತನ್ನು,
**ಅತ್ತುಂ** = ತಿನ್ನುವುದಕ್ಕೆ,
**ಅಲಂ ಹಿ** = ಸಮರ್ಥರಷ್ಟೇ

**ತಾತ್ಪರ್ಯ—** ಶ್ರೀ ಮಧ್ವಾಚಾರ್ಯರು ಅನಂತಮಠಕ್ಕೆ ಬಂದಮೇಲೆ ಅಲ್ಲಿ ಹೆಚ್ಚು ದಿನಗಳವರೆಗೆ ಉಳಿಯಲು ಇಷ್ಟ ಪಡಲಿಲ್ಲ. ಅವರು ಬೇಗನೆ ಅಲ್ಲಿಂದ ಹೊರಡಲು ನಿಶ್ಚಯಿಸಿದರು. ಅದು ಅಲ್ಲಿಯೇ ಸುತ್ತಮುತ್ತಲಲ್ಲಿ ಇರುವ ಬ್ರಾಹ್ಮಣರಿಗೆ ತಿಳಿಯಿತು. ಆಗ ಅಗ್ನಿಶರ್ಮ ಮೊದಲಾದ ಐದಾರು ಮಂದಿ ಬ್ರಾಹ್ಮಣರು ತಾವು ಎಲ್ಲರೂ ಆಚಾರ್ಯರಿಗೆ ಭಿಕ್ಷೆಯನ್ನು ಕೊಡಬೇಕೆಂದು ಬಯಸಿದರು. ಆಚಾರ್ಯರು ಬೇಗನೆ ಅಲ್ಲಿಂದ ಹೋಗಬೇಕಾದುದರಿಂದ ಅವರ ಭಿಕ್ಷೆಯೆಲ್ಲ ಒಂದೇ ದಿನವಾಗಲಿ ಎಂದರು. ಅದರಂತೆ ಆ ಬ್ರಾಹ್ಮಣರೆಲ್ಲರೂ ಒಬ್ಬೊಬ್ಬರೂ ಆಚಾರ್ಯರಿಗೂ ಅವರ ಪರಿವಾರದವರಿಗೂ ಸಾಕಾಗುವಷ್ಟು ಅನ್ನ, ಭಕ್ಷ್ಯ ಮೊದಲಾದವುಗಳನ್ನು ಅದೇ ದೇವಾಲಯಕ್ಕೆ ತಂದುಕೊಟ್ಟರು. ಆಚಾರ್ಯರು ಆ ಭಕ್ತರ ಸಂತೋಷಾರ್ಥವಾಗಿ ಆ ಭಿಕ್ಷಾನ್ನವನ್ನೆಲ್ಲಾ ಸ್ವಲ್ಪವೂ ಮಿಗದಂತೆ ತಾವೊಬ್ಬರೇ ಊಟ ಮಾಡಿದರು. ಪ್ರಳಯ ಕಾಲದಲ್ಲಿ ಸಮಗ್ರ ಪ್ರಪಂಚವನ್ನೇ ತಿನ್ನಲು ಸಮರ್ಥರಾದ ಮೂಲ ವಾಯುದೇವಾಂಶರಾದ ಅವರ ವಿಷಯದಲ್ಲಿ ಅದೇನೂ ಆಶ್ಚರ್ಯವಿಲ್ಲ.

**ವಿಶೇಷಾಂಶ—**

**ಶೀಘ್ರಂ ಜಗಮಿಷುಂ ಮಧ್ವಂ ಜ್ಞಾತ್ವಾ ಸರ್ವೇ ಸಮಾಶ್ರಯನ್ ।
ಅದ್ಯೈವಾಹಂ ಕರಿಷ್ಯಾಮೀತ್ಯೇತಚ್ಛ್ರುತ್ವಾ ದಯಾಪರಃ ॥
ಸರ್ವೇಷಾಮಪಿ ಭಕ್ತಾನಾಂ ಅನುಲ್ಲಂಘ್ಯಂ ಕ್ಷಣಂ ಸ್ಮರನ್ ।
ಗಮನಂ ತ್ವರಿತೋ ಮಧ್ವಃ ಸರ್ವೇಭ್ಯೋಽಪಿ ಕ್ಷಣಂ ದದೌ ॥**

**ತೇ ಚ ಪ್ರತ್ಯೇಕಮಾಜಹ್ರುರನ್ನಂ ಸೋಪಸ್ಕರಂ ಬಹು ।**
**ಯಥಾ ಸಪರಿವಾರಸ್ಯ ಪರ್ಯಾಪ್ತಂ ಸ್ಯಾದಯಂ ಪುನಃ ।**
**ತತ್ಸರ್ವಂ ಬಭುಜೇ ಮಧ್ವೋ ನೈತಚ್ಚಿತ್ರಂ ಸಮೀರಣೋ ॥**

ಈ ಪ್ರಾಚೀನ ಶ್ಲೋಕಗಳಿಂದ ಮೇಲಿನ ಶ್ಲೋಕದಲ್ಲಿ ಹೇಳಿದ ವಿಷಯವು ಇನ್ನೂ ವಿಸ್ತಾರವಾಗಿ ತಿಳಿದು ಬರುತ್ತದೆ.

ಆಚಾರ್ಯರು ಉತ್ತರ ಬದರಿಯಿಂದ ಬಂದು ಅನಂತಮಠದಲ್ಲಿರುವಾಗ ಬೇಗನೆ ಅಲ್ಲಿಂದ ಭಾರತ ಭೂಮಿಗೆ ಬರಬೇಕೆಂದು ನಿಶ್ಚಯಿಸಿದರು. ಆಗ ಅಲ್ಲಿದ್ದ ಬ್ರಾಹ್ಮಣರನೇಕರು ಆಚಾರ್ಯರು ತಮ್ಮಿಂದ ಭಿಕ್ಷಾ ಸ್ವೀಕಾರ ಮಾಡಿ ಹೋಗಬೇಕೆಂದು ಪ್ರಾರ್ಥಿಸಿದರು. ಪ್ರತಿಯೊಬ್ಬರೂ ನಾನು ಈ ದಿನವೇ ಆಚಾರ್ಯರಿಗೆ ಭಿಕ್ಷಾ ಪ್ರದಾನ ಮಾಡಬೇಕೆಂದು ತಮ್ಮ ಬಯಕೆಯನ್ನು ವ್ಯಕ್ತಪಡಿಸಿದರು. ದಯಾಳುಗಳಾದ ಆಚಾರ್ಯರು ಎಲ್ಲಾ ಭಕ್ತರ ಆಹ್ವಾನವನ್ನು ಮೀರಬಾರದೆಂದು ತಾವು ಅಲ್ಲಿಂದ ಬೇಗನೆ ಹೊರಡಬೇಕೆಂದು ಸ್ಮರಿಸುತ್ತಾ, ಎಲ್ಲರಿಗೂ ಒಂದೇ ದಿವಸ ಭಿಕ್ಷಾ ಪ್ರದಾನಕ್ಕೆ ಅವಕಾಶ ಮಾಡಿಕೊಟ್ಟರು. ಅವರೆಲ್ಲರೂ ಪ್ರತ್ಯೇಕವಾಗಿ ಇತರ ಭಕ್ಷ್ಯವ್ಯಂಜನಾದಿ ಸಹಿತವಾಗಿ ಆಚಾರ್ಯರಿಗೂ ಅವರ ಪರಿವಾರದ ಎಲ್ಲರಿಗೂ ಸಾಕಾಗುವಷ್ಟು ಅನ್ನವನ್ನು ತಂದರು. ಆಚಾರ್ಯರು ಆ ಎಲ್ಲಾ ಸೋಪಸ್ಕರವಾದ ಅನ್ನವನ್ನು ತಾವೊಬ್ಬರೇ ಭೋಜನ ಮಾಡಿದರು. ಮುಖ್ಯಪ್ರಾಣದೇವರ ವಿಷಯದಲ್ಲಿ ಇದೇನೂ ಆಶ್ಚರ್ಯವಲ್ಲ ಎಂದು ಈ ಪ್ರಮಾಣ ಶ್ಲೋಕಗಳ ಅರ್ಥ.

**ವಿಗ್ರಹ—**

**ಅಗ್ನಿಶರ್ಮಮುಖಪಂಚಷೈಃ—** ಪಂಚ ವಾ ಷಡ್ವಾ ಪಂಚಷಾಃ, ಅಗ್ನಿಶರ್ಮಾ ಮುಖಂ ಯೇಷಾಂ ತೇ ಅಗ್ನಿಶರ್ಮಮುಖಾಃ, ಅಗ್ನಿಶರ್ಮಮುಖಾಶ್ಚ ತೇ ಪಂಚಷಾಶ್ಚ, ಅಗ್ನಿಶರ್ಮಮುಖಪಂಚಷಾಃ ತೈಃ ।

**ಅವಿಸ್ಮಯಃ—** ವಿಸ್ಮಯಸ್ಯ ಅಭಾವಃ ಅವಿಸ್ಮಯಃ ।

**ಕ್ರಿಯಾಪದ—** **ಆದತ್**- ಅದ ಭಕ್ಷಣೇ ಇತಿ ಭಕ್ಷಣಾರ್ಥಕಾತ್ ಅದಧಾತೋಃ ಸಕರ್ಮಕಾತ್ ಕರ್ತರಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಆದತ್ ಇತಿರೂಪಂ ।

ಆದತ್ ಆತ್ತಾಂ ಆದನ್, ಆದಃ ಆತ್ತಂ ಆತ್ತ, ಆದಂ ಆದ್ವ ಆದ್ಮ ।

**ಪ್ರಯೋಗ—** ಅಯಂ ಕೃತ್ಸ್ನಂ ಅನ್ನಂ ಆದತ್ (ಸಕರ್ಮಕ ಕರ್ತರಿ) । ಅನೇನ ಕೃತ್ಸ್ನಂ ಅನ್ನಂ ಆದ್ಯತ (ಕರ್ಮಣಿ) ।

**ವ್ಯಾಕರಣವಿಶೇಷ—** ಪಂಚಷಃ ಎಂಬಲ್ಲಿ ಪಂಚ ವಾ ಷಡ್ ವಾ ಪಂಚಷಾಃ ಎಂದು ವಿಗ್ರಹ. ಸಂಖ್ಯಯಾ ಅವ್ಯಯಾಸನ್ನಾದೂರಾಧಿಕ ಸಂಖ್ಯಾಃ ಸಂಖ್ಯೇಯೇ (2-2-25) ಎಂಬ ಸೂತ್ರದಿಂದ ಬಹುವ್ರೀಹಿ ಸಮಾಸ. ಬಹುವ್ರೀಹೌ ಸಂಖ್ಯೇಯೇ ಡಜಬಹುಗಣಾತ್ (5-4-73) ಎಂಬ ಸೂತ್ರದಿಂದ 'ಡಚ್' ಪ್ರತ್ಯಯ ।

★ ★ ★

**ಅವತಾರಿಕಾ—** ಶ್ರೀ ಮದಾಚಾರ್ಯರು ಶ್ರೀ ವ್ಯಾಸರ ಅಪ್ಪಣೆಯಿಂದ ಬ್ರಹ್ಮಸೂತ್ರದ ಭಾಷ್ಯವನ್ನು ಮಾಡಿದರೆಂದು ಹೇಳುತ್ತಾ ಆ ಭಾಷ್ಯವನ್ನು ಶ್ರೀ ಮಧ್ವರೂಪಕ್ಕೆ ಹೋಲಿಸಿ 5 ಶ್ಲೋಕಗಳಿಂದ ವರ್ಣಿಸುತ್ತಾರೆ.

**ವ್ಯಾಸದೇವಹೃದಯಾತಿವಲ್ಲಭಂ**
**ವಾಸುದೇವಮಗಣಯ್ಯ(ಮಗಣೇಯ)ಸದ್ಗುಣಮ್।**
**ಸಾಧಯತ್ ಸಕಲದೋಷವರ್ಜಿತಂ**
**ಜ್ಞಾನಭಕ್ತಿದಮನಂತಸೌಖ್ಯದಮ್ ॥ 8 ॥**

**ಪದಚ್ಛೇದ—** ವ್ಯಾಸದೇವಹೃದಯಾತಿವಲ್ಲಭಂ, ವಾಸುದೇವಂ, ಅಗಣಯ್ಯಸದ್ಗುಣಂ, ಸಾಧಯತ್, ಸಕಲದೋಷವರ್ಜಿತಂ, ಜ್ಞಾನಭಕ್ತಿದಂ, ಅನಂತಸೌಖ್ಯದಂ ।

**ಅನ್ವಯ—** ವ್ಯಾಸದೇವಹೃದಯಾತಿವಲ್ಲಭಂ, ವಾಸುದೇವಂ, ಅಗಣಯ್ಯಸದ್ಗುಣಂ, ಸಕಲದೋಷವರ್ಜಿತಂ, ಸಾಧಯತ್, ಜ್ಞಾನಭಕ್ತಿದಂ, ಅನಂತಸೌಖ್ಯದಂ, ಅದ್ಭುತಂ, ಅನಂತಧೀಃ, ಆತ್ಮನಃ, ಅನ್ಯತ್ ರೂಪಮಿವ, ಸ್ಥಿತಂ ॥ (ಬ್ರಹ್ಮ ಸೂತ್ರಗಣಭಾಷ್ಯಂ ಅತನೋತ್) ।

**ಅನ್ವಯಾರ್ಥ—**

**ಅನಂತಧೀಃ** = ಶ್ರೀ ಪೂರ್ಣಪ್ರಜ್ಞಾಚಾರ್ಯರು,

**ವ್ಯಾಸದೇವಹೃದಯಾತಿವಲ್ಲಭಂ** = ಶ್ರೀ ವೇದವ್ಯಾಸ ದೇವರ ಮನಸ್ಸಿಗೆ ಅತ್ಯಂತ ಪ್ರೀತಿಪಾತ್ರವಾದ (ವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾದ )

**ವಾಸುದೇವಂ** = ಶ್ರೀಹರಿಯನ್ನು

**ಅಗಣಯ್ಯಸದ್ಗುಣಂ** = ಲೆಕ್ಕಿಸಲು ಅವಶ್ಯಕವಾದ ನಿರತಿಶಯಗುಣಗಳುಳ್ಳವನನ್ನಾಗಿಯೂ,

**ಸಕಲದೋಷವರ್ಜಿತಂ** = ದುಃಖ, ಅಜ್ಞಾನಾದಿ ಸಮಸ್ತದೋಷರಹಿತನನ್ನಾಗಿಯೂ,

**ಸಾಧಯತ್** = ಸಾಧಿಸುತ್ತಿರುವ,

**ಜ್ಞಾನಭಕ್ತಿದಂ** = ಪರಮಾತ್ಮ ತತ್ತ್ವಜ್ಞಾನ ಮತ್ತು ಶ್ರೀಹರಿ ಭಕ್ತಿಗಳನ್ನು ಕೊಡುವ,

**ಅನಂತಸೌಖ್ಯದಂ** = ನಾಶರಹಿತವಾದ ಮೋಕ್ಷಾನಂದವನ್ನು ಕೊಡುವ,

**ಅನಂತಧೀಃ** = ಶ್ರೀ ಪೂರ್ಣಪ್ರಜ್ಞರು

(**ಆತ್ಮನಃ ಅನ್ಯದ್ರೂಪಮಿವ ಸ್ಥಿತಂ** = ತಮ್ಮ ಮತ್ತೊಂದು ರೂಪದಂತಿರುವ,

**ಅದ್ಭುತಂ** = ಆಶ್ಚರ್ಯಕರವಾದ,

**ಬ್ರಹ್ಮಸೂತ್ರಗಣಭಾಷ್ಯಂ** = ಬ್ರಹ್ಮಸೂತ್ರ ಸಮೂಹದ ಭಾಷ್ಯವನ್ನು,

**ಅತನೋತ್** = ಮಾಡಿದರು)

**ತಾತ್ಪರ್ಯ—** (ಈ 8ನೇ ಶ್ಲೋಕದಿಂದ ಆರಂಭಿಸಿ 12ನೆಯ ಶ್ಲೋಕದವರೆಗೆ 5 ಶ್ಲೋಕಗಳಿಗೆ ಏಕಾನ್ವಯವಿದೆ. ಇದು ಅಂತ್ಯಕುಲಕ. 11ನೆಯ ಶ್ಲೋಕದವರೆಗೆ ಪ್ರತಿಶ್ಲೋಕದಲ್ಲಿಯೂ ಅನಂತಧೀಃ ಆತ್ಮನಃ ಅನ್ಯತ್ ರೂಪಮಿವ (ಸ್ಥಿತಂ) ಅದ್ಭುತಂ ಬ್ರಹ್ಮಸೂತ್ರಗಣಭಾಷ್ಯಂ ಅತನೋತ್ ಎಂದು ಸೇರಿಸಿಕೊಂಡು ಏಕಾನ್ವಯ ಮಾಡಿಕೊಳ್ಳಬೇಕು). ಅನಂತಮಠದಲ್ಲಿಯೇ ಶ್ರೀಪೂರ್ಣಪ್ರಜ್ಞಾಚಾರ್ಯರು ಬ್ರಹ್ಮಮೀಮಾಂಸಾಶಾಸ್ತ್ರದ ಸೂತ್ರಸಮೂಹಕ್ಕೆ (564 ಸೂತ್ರಗಳಿಗೆ) ಭಾಷ್ಯವನ್ನು ರಚಿಸಿದರು. ಆಶ್ಚರ್ಯಕರವಾದ ಆ ಭಾಷ್ಯವು ಆಚಾರ್ಯರ ಮತ್ತೊಂದು ರೂಪದಂತಿದೆ.

ಆಚಾರ್ಯರ ರೂಪದಂತೆ ಅದೂ ಕೂಡ ಶ್ರೀ ವೇದವ್ಯಾಸದೇವರ ಹೃದಯಕ್ಕೆ ಅತ್ಯಂತ ಪ್ರಿಯವಾಗಿದೆ. ಶ್ರೀವೇದವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾಗಿದೆ. ಶ್ರೀಮನ್ನಾರಾಯಣನು ಅಂತಹ ಅತಿಶಯರಹಿತವಾದ ಅಸಂಖ್ಯ ಗುಣಗಳುಳ್ಳವನು, ಸಮಸ್ತದೋಷರಹಿತನು ಎಂದು ಆಚಾರ್ಯರು ಸಾಧಿಸುತ್ತಿದ್ದಂತೆ ಈ ಭಾಷ್ಯವೂ ನಾರಾಯಣನು ಗುಣಪೂರ್ಣನೆಂದೂ, ದೋಷರಹಿತನೆಂದೂ ಸಾಧಿಸುತ್ತದೆ. ಆಚಾರ್ಯರು ತನ್ನ ಭಕ್ತರಿಗೆ ವಿಷ್ಣುವಿನ ತತ್ತ್ವಜ್ಞಾನವನ್ನೂ, ಭಕ್ತಿಯನ್ನೂ ಕೊಡುವಂತೆ ಈ ಭಾಷ್ಯವೂ ನಾರಾಯಣ ಮತ್ತು ಅರ್ಥಾನುಸಂಧಾನ ಮಾಡುವವರಿಗೆ ಜ್ಞಾನಭಕ್ತಿಗಳನ್ನು ಕೊಡುತ್ತದೆ. ಆಚಾರ್ಯರು ತನ್ನ ಭಕ್ತರಿಗೆ ಭಾಷ್ಯ ಶ್ರವಣಮನನಾದಿಗಳಿಂದ ಹರಿಯ ಅಪರೋಕ್ಷವನ್ನು ಕೊಟ್ಟು ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವನ್ನು ಕೊಡುವಂತೆ ಈ ಭಾಷ್ಯವೂ ಶ್ರವಣಾದಿಗಳಿಂದ ಮೋಕ್ಷಪ್ರದವಾಗಿದೆ. ಹೀಗೆ ತನ್ನದೇ ಆದ ಇನ್ನೊಂದು ರೂಪದಂತಿರುವ ಬ್ರಹ್ಮಸೂತ್ರ ಭಾಷ್ಯವನ್ನು ಶ್ರೀಮದಾನಂದತೀರ್ಥಭಗವತ್ಪಾದಾ-ಚಾರ್ಯರು ರಚಿಸಿದರು.

**ವಿಶೇಷಾಂಶ—** ಬ್ರಹ್ಮಸೂತ್ರಭಾಷ್ಯವು ಆಚಾರ್ಯರ ಮತ್ತೊಂದು ರೂಪದಂತೆ ಇದೆ ಎಂದು ಇಲ್ಲಿ ಉಭಯ ಸಾಧಾರಣ ವಿಶೇಷಣಗಳಿಂದ ಬಹಳ ಚೆನ್ನಾಗಿ ಸಮರ್ಥಿಸಿದ್ದಾರೆ. ಇದರಿಂದ ಮುಖ್ಯಪ್ರಾಣದೇವರ ಪ್ರತಿಮೆಯೂ ಹೇಗೋ

ಹಾಗೆ ಬ್ರಹ್ಮಸೂತ್ರಭಾಷ್ಯವೂ ಕೂಡ ಆಚಾರ್ಯರ ಮತ್ತೊಂದು ಪ್ರತಿಮೆ ಎಂದು ತಿಳಿದು ಬರುತ್ತದೆ. 'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ' ಎಂಬ ವಚನದಿಂದ ಮುಖ್ಯತಃ ಮೋಕ್ಷಪ್ರದನು ವಿಷ್ಣುವೇ ಆದರೂ ಪರಮಾತ್ಮನ ಅಪ್ಪಣೆಯಿಂದ ವಾಯುದೇವರೂ ಮೋಕ್ಷಪ್ರದರೆಂದು ಸಿದ್ಧಿಸುತ್ತದೆ.

ವಿಗ್ರಹ—

**ವ್ಯಾಸದೇವಹೃದಯಾತಿವಲ್ಲಭಂ—** ವ್ಯಾಸಃ ಇತಿ ದೇವಃ ವ್ಯಾಸದೇವಃ (ವ್ಯಾಸಶ್ಚಾಸೌ ದೇವಶ್ಚ ವ್ಯಾಸದೇವಃ) ವ್ಯಾಸದೇವಸ್ಯ ಹೃದಯಂ ವ್ಯಾಸದೇವಹೃದಯಂ, ಅತ್ಯಂತಂ ವಲ್ಲಭಂ ಅತಿವಲ್ಲಭಂ, ವ್ಯಾಸದೇವ-ಹೃದಯಸ್ಯ ಅತಿವಲ್ಲಭಂ ವ್ಯಾಸದೇವಹೃದಯಾತಿವಲ್ಲಭಂ, ತತ್ ।

**ಅಗಣಯ್ಯಸದ್ಗುಣಂ—** ಗಣಿತುಂ (ಗಣಯಿತುಂ) ಶಕ್ಯಾಃ ಗಣಯ್ಯಾಃ, ನ ಗಣಯ್ಯಾಃ ಅಗಣಯ್ಯಾಃ, ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಅಗಣಯ್ಯಾಃ ಸದ್ಗುಣಾಃ ಯಸ್ಯ ಸಃ ಅಗಣಯ್ಯಸದ್ಗುಣಃ, ತಂ ।

**ಸಕಲದೋಷವರ್ಜಿತಂ—** ಸಕಲಾಶ್ಚ ತೇ ದೋಷಾಶ್ಚ ಸಕಲದೋಷಾಃ, ಸಕಲದೋಷೈಃ ವರ್ಜಿತಃ, ತಂ ।

**ಜ್ಞಾನಭಕ್ತಿದಂ—** ಜ್ಞಾನಂ ಚ ಭಕ್ತಿಶ್ಚ ಜ್ಞಾನಭಕ್ತೀ, ತೇ ದದಾತೀತಿ ಜ್ಞಾನಭಕ್ತಿದಂ, ತತ್ ।

**ಅನಂತಸೌಖ್ಯದಂ—** ನ ವಿದ್ಯತೇ ಅಂತಃ ಯಸ್ಯ ತತ್ ಅನಂತಂ, ಸುಖಮೇವ ಸೌಖ್ಯಂ ಅನಂತಂ ಚ ತತ್ ಸೌಖ್ಯಂ ಚ ಅನಂತಸೌಖ್ಯಂ, ಅನಂತಸೌಖ್ಯಂ ದದಾತೀತಿ ಅನಂತಸೌಖ್ಯದಂ, ತತ್ ।

**ಕೋಶ—** 'ಆಕೂತಂ ಹೃದಯೇ ಚಿತ್ತೇ', 'ಗಣನೀಯೇ ತು ಗಣೇಯಂ ಸಂಖ್ಯಾತೇ ಗಣಿತಂ' ಇತಿ ಅಮರ ಕೋಶಃ।

★ ★ ★

**ಅವತಾರಿಕಾ—** ಪುನಃ ಆ ಭಾಷ್ಯದ ಮಹಿಮೆಯನ್ನು ವರ್ಣಿಸುತ್ತಾರೆ.

**ಉಕ್ತಮುಕ್ತಮಭಿಧೇಯಮುತ್ತಮಂ**
**ವೇದವಾಕ್ಯಮನುವಾದಯನ್ ಮುಹುಃ ।**
**ವ್ಯಂಜಯತ್ ಸ್ಮೃತಿವಚೋಭಿರಂಜಸಾ**
**ತಸ್ಯ ಚಾರ್ಥಮತಿಯುಕ್ತಯುಕ್ತಿಮತ್ ॥ 9 ॥**

**ಪದಚ್ಛೇದ—** ಉಕ್ತಂ, ಉಕ್ತಂ, ಅಭಿಧೇಯಂ, ಉತ್ತಮಂ, ವೇದವಾಕ್ಯಂ, ಅನುವಾದಯತ್, ಮುಹುಃ, ವ್ಯಂಜಯತ್, ಸ್ಮೃತಿವಚೋಭಿಃ, ಅಂಜಸಾ, ತಸ್ಯ, ಚ, ಅರ್ಥಂ, ಅತಿಯುಕ್ತಯುಕ್ತಿಮತ್ ।

**ಅನ್ವಯ—** ಉಕ್ತಂ, ಉಕ್ತಂ, ಅಭಿಧೇಯಂ, ಮುಹುಃ, ವೇದವಾಕ್ಯಂ, ಅನುವಾದಯತ್, ತಸ್ಯ, ಅರ್ಥಂ ಚ, ಸ್ಮೃತಿವಚೋಭಿಃ, ಅಂಜಸಾ, ವ್ಯಂಜಯತ್, ಅತಿಯುಕ್ತಯುಕ್ತಿಮತ್, ಉತ್ತಮಂ (ಅನಂಧೀಃ ಆತ್ಮನಃ ಅನ್ಯದ್‌ರೂಪಂ ಇವ ಸ್ಥಿತಂ ಅದ್ಭುತಂ ಬ್ರಹ್ಮಸೂತ್ರಗಣಭಾಷ್ಯಂ, ಅತನೋತ್) ।

**ಅನ್ವಯಾರ್ಥ—**

**ಉಕ್ತಂ ಉಕ್ತಂ ಅಭಿಧೇಯಂ** = ಹೇಳಲ್ಪಟ್ಟ ಪ್ರತಿಯೊಂದು ಅರ್ಥವನ್ನು ಉದ್ದೇಶಿಸಿ,

**ಮುಹುಃ** = ಬಾರಿಬಾರಿಗೂ,

**ವೇದವಾಕ್ಯಂ** = ವೇದವಚನವನ್ನು

**ಅನುವಾದಯತ್** = ಉದಾಹರಿಸುವ,

**ತಸ್ಯ** = ಆ ವಾಕ್ಯದ,

**ಅರ್ಥಂ ಚ** = ಅರ್ಥವನ್ನೂ,

**ಸ್ಮೃತಿವಚೋಭಿಃ** = ಸ್ಮೃತಿವಾಕ್ಯಗಳಿಂದ,

**ಅಂಜಸಾ** = ಚೆನ್ನಾಗಿ,

**ವ್ಯಂಜಯತ್** = ಸ್ಪಷ್ಟಪಡಿಸುವ,

**ಅತಿಯುಕ್ತಯುಕ್ತಿಮತ್** = ಅತ್ಯಂತ ಉಚಿತವಾದ ಯುಕ್ತಿಯುಳ್ಳ,

**ಉತ್ತಮಂ** = ಶ್ರೇಷ್ಠವಾದ (ತಮ್ಮ ಬೇರೊಂದು ರೂಪದಂತಿರುವ ಬ್ರಹ್ಮಸೂತ್ರಸಮೂಹದ ಭಾಷ್ಯವನ್ನು ಶ್ರೀಮದ್ ಆನಂದತೀರ್ಥರು ರಚಿಸಿದರು).

**ತಾತ್ಪರ್ಯ—** ಆಚಾರ್ಯರು ಪ್ರವಚನ ಮಾಡುತ್ತಿರುವಾಗ ತಾವು ಹೇಳಿದ ಪ್ರತಿಯೊಂದು ವಿಷಯದಲ್ಲಿಯೂ ಪ್ರಮಾಣವಾಗಿ ವೇದವಾಕ್ಯವನ್ನು ಉದಾಹರಿಸುತ್ತಿದ್ದರು. ಆ ವಾಕ್ಯದ ಅರ್ಥವನ್ನು ಸ್ಮೃತಿವಾಕ್ಯಗಳಿಂದ ಚೆನ್ನಾಗಿ ಸ್ಪಷ್ಟಪಡಿಸುತ್ತಿದ್ದರು. ಅತ್ಯಂತ ಉಚಿತವಾದ ಯುಕ್ತಿಗಳಿಂದ ತಾವು ಹೇಳಿದ ಅರ್ಥವನ್ನು ಸಮರ್ಥಿಸುತ್ತಿದ್ದರು. ಹೀಗೆ ಆಚಾರ್ಯರ ವ್ಯಕ್ತಿತ್ವವು ಅತ್ಯಂತ ಉತ್ತಮವಾಗಿತ್ತು.- ಆಚಾರ್ಯರ ಭಾಷ್ಯವೂ ಅವರ ಸ್ವರೂಪದಂತೆಯೇ ಇದೆ. ಅಲ್ಲಿ ಹೇಳಿದ ಪ್ರತಿಯೊಂದು ವಿಷಯದಲ್ಲಿಯೂ ವೇದವಾಕ್ಯದ ಉದಾಹರಣೆ ಇದೆ. ಆ ವೇದವಾಕ್ಯದ ಅರ್ಥವನ್ನು ಸ್ಪಷ್ಟವಾಗಿ ತಿಳಿಸುವ ಸ್ಮೃತಿವಾಕ್ಯಗಳಿವೆ. ಈ ಅರ್ಥಗಳನ್ನೆಲ್ಲಾ ಸಮರ್ಥಿಸುವ ಅತ್ಯಂತ ಉಚಿತವಾದ ಯುಕ್ತಿಗಳು ಈ ಭಾಷ್ಯದಲ್ಲಿವೆ. ಆದುದರಿಂದ ಉತ್ತಮವಾದ ಈ ಬ್ರಹ್ಮಸೂತ್ರಭಾಷ್ಯವು ಶ್ರೀಮದಾಚಾರ್ಯರ ಮತ್ತೊಂದು ರೂಪದಂತಿದೆ. ಇಂತಹ ಉತ್ತಮವಾದ ಶೃತಿಸ್ಮೃತಿಯುಕ್ತಿ ಪ್ರಮಾಣೋಪೇತವಾದ ಭಾಷ್ಯವನ್ನು ಆಚಾರ್ಯರು ರಚಿಸಿದರು.

**ವಿಗ್ರಹ—**

**ವೇದವಾಕ್ಯಂ—** ವೇದಾನಾಂ ವಾಕ್ಯಂ ವೇದವಾಕ್ಯಂ ತತ್ ।

**ಸ್ಮೃತಿವಚೋಭಿಃ—** ಸ್ಮೃತೀನಾಂ ವಚಾಂಸಿ ಸ್ಮೃತಿವಚಾಂಸಿ, ತೈಃ ।

**ಅತಿಯುಕ್ತಯುಕ್ತಿಮತ್—** ಅತ್ಯಂತಂ ಯುಕ್ತಾಃ ಅತಿಯುಕ್ತಾಃ, ಅತಿಯುಕ್ತಾಶ್ಚ ತಾಃ ಯುಕ್ತಯಶ್ಚ ಅತಿಯುಕ್ತಯುಕ್ತಯಃ, ಅತಿಯುಕ್ತಯುಕ್ತಯಃ ಅಸ್ಮಿನ್ ಸಂತೀತಿ ಅತಿಯುಕ್ತಯುಕ್ತಿಮತ್ ।

★ ★ ★

**ಅವತಾರಿಕಾ—** ಮತ್ತು ಭಾಷ್ಯದ ಅದ್ಭುತ ಮಹಿಮೆಯನ್ನು ವರ್ಣಿಸುತ್ತಾರೆ.

**ಬಾಲಸಂಘಮಪಿ ಬೋಧಯದ್ಭೃಶಂ**
**ದುರ್ನಿರೂಪವಚನಂ ಚ ಪಂಡಿತೈಃ ।**
**ಅಪ್ರಮೇಯಹೃದಯಂ ಪ್ರಸಾದವತ್**
**ಸೌಮ್ಯಕಾಂತಿ ಚ ವಿಪಕ್ಷಭೀಷಣಮ್ ॥ 10 ॥**

**ಪದಚ್ಛೇದ—** ಬಾಲಸಂಘಂ, ಅಪಿ, ಬೋಧಯತ್, ಭೃಶಂ, ದುರ್ನಿರೂಪವಚನಂ, ಚ, ಪಂಡಿತೈಃ, ಅಪ್ರಮೇಯಹೃದಯಂ, ಪ್ರಸಾದವತ್,ಸೌಮ್ಯಕಾಂತಿ, ಚ, ವಿಪಕ್ಷಭೀಷಣಂ ।

**ಅನ್ವಯ—** ಬಾಲಸಂಘಂ, ಅಪಿ, ಭೃಶಂ, ಬೋಧಯತ್, ಚ, ಪಂಡಿತೈಃ, ಚ, ದುರ್ನಿರೂಪವಚನಂ, ಅಪ್ರಮೇಯಹೃದಯಂ, ಪ್ರಸಾದವತ್, ಸೌಮ್ಯಕಾಂತಿ, ವಿಪಕ್ಷಭೀಷಣಂ ಚ, (ಅದ್ಭುತಂ ಆನಂಧೀಃ ಆತ್ಮನಃ ಅನ್ಯದ್-ರೂಪಂ ಇವ ಸ್ಥಿತಂ ಬ್ರಹ್ಮಸೂತ್ರಗಣಭಾಷ್ಯಂ ಅತನೋತ್) ।

**ಅನ್ವಯಾರ್ಥ—**

**ಬಾಲಸಂಘಂ ಅಪಿ** = ಮಂದಾಧಿಕಾರಿಗಳ ಸಮೂಹವನ್ನು ಕುರಿತು,

**ಭೃಶಂ** = ಚೆನ್ನಾಗಿ

**ಬೋಧಯತ್** = ಭಗವಂತನ ಸ್ವರೂಪವನ್ನು ತಿಳಿಸುವ,

**ಪಂಡಿತೈಃ ಚ** = ವಿದ್ವಾಂಸರಿಂದಲೂ,

**ದುರ್ನಿರೂಪವಚನಂ** = ತಿಳಿಯಲು ಅಶ್ಯಕವಾದ,

**ಹೃದಯಂ** = ಅಭಿಪ್ರಾಯವುಳ್ಳ,

**ಪ್ರಸಾದವತ್** = ಸರಳವಾದ ಶಬ್ದಗಳಿಂದ ಕೂಡಿದ,

**ಸೌಮ್ಯಕಾಂತಿ** = ಶಾಂತವಾದ ಕಾಂತಿಯುಳ್ಳ, (ಅಥವಾ ಸಜ್ಜನರಿಗೆ ಪ್ರಿಯವಾದ)

**ವಿಪಕ್ಷಭೀಷಣಂ ಚ** = ಪ್ರತಿವಾದಿಗಳಿಗೆ ಭಯಂಕರವೂ ಆದ (ಬ್ರಹ್ಮಮೀಮಾಂಸಾ ಶಾಸ್ತ್ರದ ಭಾಷ್ಯವನ್ನು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ರಚಿಸಿದರು.)

**ತಾತ್ಪರ್ಯ—** ಶ್ರೀ ಮಧ್ವಾಚಾರ್ಯರು ಮಂದಬುದ್ಧಿಯ ಅಧಿಕಾರಿಗಳಿಗೂ ಚೆನ್ನಾಗಿ ಅರ್ಥವಾಗುವಂತೆ ಮಾತನ್ನು ಆಡುತ್ತಿದ್ದರು. ಆದರೆ ಅವರ ಅರ್ಥ ವಿವರಣೆ ಮಾಡಲು ಪಂಡಿತರಿಗೂ ಸಾಧ್ಯವಾಗುತ್ತಿರಲಿಲ್ಲ. ಅವರ ಮಾತಿನ ಅಭಿಪ್ರಾಯವು ಇಷ್ಟೇ ಎಂದು ತಿಳಿಯಲು ಅಸಾಧ್ಯವಾಗಿತ್ತು. ಅವರ ಮುಖದಲ್ಲಿ ಪ್ರಸನ್ನತೆಯಿತ್ತು. ಅವರು ಎಲ್ಲ ಭಕ್ತರಿಗೂ ಅನುಗ್ರಹ ಮಾಡುತ್ತಿದ್ದರು. ಆದರೂ ಅವರು ಪ್ರತಿವಾದಿಗಳಿಗೆ ಭಯಂಕರವಾಗಿ ತೋರುತ್ತಿದ್ದರು. ಅವರ ಸ್ವರೂಪ-ದಂತೆಯೇ ಅವರ ಭಾಷ್ಯವೂ ಇರುತ್ತದೆ. ಅವರ ಭಾಷ್ಯವು ಮೂಢರಿಗೂ ಚೆನ್ನಾಗಿ ಭಗವಂತನ ಸ್ವರೂಪವನ್ನು ತಿಳಿಸುತ್ತದೆ. ಆದರೆ ಪಂಡಿತರಿಗೂ ಆ ಭಾಷ್ಯದಲ್ಲಿರುವ ವಾಕ್ಯಗಳ ಅರ್ಥವನ್ನು ನಿರ್ಣಯಿಸಿ ಹೇಳಲು ಸಾಧ್ಯವಾಗುತ್ತಿಲ್ಲ. ಅದರ ಸಮಗ್ರ ತಾತ್ಪರ್ಯಾರ್ಥವು ತಿಳಿಯಲು ಅಶಕ್ಯವಾಗಿದೆ. ಸರಳ ಶಬ್ದ, ಹಿತವಾದ ನಿರೂಪಣೆಗಳಿಂದ ಕೂಡಿದ್ದರೂ ಅತಿದೃಢ-ವಾದ ಯುಕ್ತಿಗಳಿಂದ ಕೂಡಿರುವುದರಿಂದ ಪ್ರತಿವಾದಿಗಳಿಗೆ ಭಯವನ್ನುಂಟು ಮಾಡುತ್ತಲಿದೆ. ಇಂತಹ ಆಶ್ಚರ್ಯಕರವಾದ ತಮ್ಮ ಇನ್ನೊಂದು ರೂಪದಂತಿರುವ ಶ್ರೀಮದ್‌ಬ್ರಹ್ಮಸೂತ್ರಭಾಷ್ಯವನ್ನು ಆಚಾರ್ಯರು ರಚಿಸಿದರು.

**ವಿಶೇಷಾಂಶ—**

ಬಾಲ ಎಂದರೆ ಸಾಮಾನ್ಯವಾಗಿ ಎಳೆಯ ಮಕ್ಕಳು. ತಾಯಿಯ ಎದೆ ಹಾಲನ್ನು ಕುಡಿಯುವವರು. ಆದರೆ ಇಲ್ಲಿ ಮಂದಬುದ್ಧಿಯವರು, ಅಧಮಾಧಿಕಾರಿಗಳು ಎಂದು ಅರ್ಥ.

**ವಿಗ್ರಹ—**

**ಬಾಲಸಂಘಂ—** ಬಾಲಾನಾಂ ಸಂಘಃ ಬಾಲಸಂಘಃ ತಂ ಬಾಲಸಂಘಂ ।

**ದುರ್ನಿರೂಪವಚನಂ—** ದುಃಖೇನ ನಿರೂಪಯಿತುಂ ಶಕ್ಯಾನಿ ದುರ್ನಿರೂಪಾಣಿ, ದುರ್ನಿರೂಪಾಣಿ ವಚನಾನಿ ಯಸ್ಮಿನ್ ತತ್ ।

**ಅಪ್ರಮೇಯಹೃದಯಂ—** ಪ್ರಮಾತುಂ ಯೋಗ್ಯಂ ಪ್ರಮೇಯಂ, ನ ಪ್ರಮೇಯಂ ಅಪ್ರಮೇಯಂ, ಅಪ್ರಮೇಯಂ ಹೃದಯಂ ಯಸ್ಯ ತತ್ ।

**ಪ್ರಸಾದವತ್—** ಪ್ರಸಾದಃ ಅಸ್ಯ ಅಸ್ತೀತಿ, ಪ್ರಸಾದವತ್ ।

**ಸೌಮ್ಯಕಾಂತಿ—** ಸೌಮ್ಯಾ ಕಾಂತಿಃ ಯಸ್ಯ ತತ್ ಸೌಮ್ಯಕಾಂತಿ, ಸೌಮ್ಯಾನಾಂ ಕಾಂತಿಃ ಇಚ್ಛಾ ಯಸ್ಮಿನ್, ತತ್ ಇತಿವಾ ।

**ವಿಪಕ್ಷಭೀಷಣಂ—** ವಿಪಕ್ಷಾಣಾಂ ಭೀಷಣಂ ವಿಪಕ್ಷಭೀಷಣಂ (ಇವಲ್ಲಾ ಭಾಷ್ಯಕ್ಕೆ ವಿಶೇಷಣಗಳು ದ್ವಿತೀಯಾ ವಿಭಕ್ತ್ಯಂತ ಪದಗಳು) ।

**ಕೋಶ—** 'ಗಣೌಘಸಂಘಸಂಘಾತವ್ರಾತವಾರ ಕುಲೋತ್ಕರಾಃ', ಹಲಾಯುಧ, 'ಪ್ರಸಾದಸ್ತು ಪ್ರಸನ್ನತಾ' ಅಮರ ।

★ ★ ★

**ಅವತಾರಿಕಾ—** ಪುನಃ ಭಾಷ್ಯದ ಅಸಾಧಾರಣ ಮಹಿಮೆಯನ್ನು ವರ್ಣಿಸುತ್ತಾರೆ.

**ಅಸ್ತದೂಷಣಮವಂಧ್ಯಭಾಷಣಂ**
**ಲಕ್ಷಿತಂ ಸಕಲಲಕ್ಷಣೈಃ ಸಮಮ್ ।**
**ಮಾನನೀಯಮಪಿ ನಾಕಿನಾಯಕೈ**
**ರೂಪಮನ್ಯದಿವ ಧನ್ಯಮಾತ್ಮನಃ ॥ 11 ॥**

**ಪದಚ್ಛೇದ—** ಅಸ್ತದೂಷಣಂ, ಅವಂಧ್ಯಭಾಷಣಂ, ಲಕ್ಷಿತಂ, ಸಕಲಲಕ್ಷಣೈಃ, ಸಮಂ, ಮಾನನೀಯಂ, ಅಪಿ, ನಾಕಿನಾಯಕೈಃ, ರೂಪಂ, ಅನ್ಯತ್, ಇವ, ಧನ್ಯಂ, ಆತ್ಮನಃ ।

**ಅನ್ವಯ—** ಅಸ್ತದೂಷಣಂ, ಅವಂಧ್ಯಭಾಷಣಂ, ಸಕಲಲಕ್ಷಣೈಃ, ಸಮಂ, ಲಕ್ಷಿತಂ, ನಾಕಿನಾಯಕೈಃ, ಅಪಿ, ಮಾನನೀಯಂ, ಧನ್ಯಂ, ಆತ್ಮನಃ, ಅನ್ಯದ್, ರೂಪಂ ಇವ, (ಸ್ಥಿತಂ) ಅನಂತಧೀಃ ಅದ್ಭುತಂ ಬ್ರಹ್ಮಸೂತ್ರಗಣಭಾಷ್ಯಂ, ಅತನೋತ್) ।

**ಅನ್ವಯಾರ್ಥ—**

**ಅಸ್ತದೂಷಣಂ** = ವ್ಯಾಕರಣ ಶಾಸ್ತ್ರ ವಿರುದ್ಧವಾದ, ಅಪಶಬ್ದಾದಿ ದೋಷಗಳಿಲ್ಲದ (ಆಚಾರ್ಯರ ಸ್ವರೂಪ-ಪಕ್ಷದಲ್ಲಿ ಕಾಮಾದಿದೋಷಗಳಿಲ್ಲದ),
**ಅವಂಧ್ಯಭಾಷ್ಯಣಂ** = ಸಫಲವಾದ ಮಾತುಗಳುಳ್ಳ, (ಸತ್ಯವಾದ ಮಾತುಗಳುಳ್ಳ)
**ಸಕಲಲಕ್ಷಣೈಃ ಸಮಂ** = ಭಾಷ್ಯದ ಎಲ್ಲಾ ಲಕ್ಷಣಗಳೊಡನೆ,
**ಲಕ್ಷಿತಂ** = ಲಕ್ಷಣವುಳ್ಳದ್ದಾಗಿ ವರ್ಣಿಸಲ್ಪಟ್ಟ,
**ನಾಕಿನಾಯಕೈಃ ಅಪಿ** = ದೇವಶ್ರೇಷ್ಠರಿಂದಲೂ,
**ಮಾನನೀಯಂ** = ಪೂಜ್ಯವಾದ,
**ಧನ್ಯಂ** = ಪುಣ್ಯಕರವಾದ,
**ಆತ್ಮನಃ** = ತಮ್ಮ,
**ಅನ್ಯತ್** = ಬೇರೊಂದು,
**ರೂಪಂ ಇವ** = (ಸ್ಥಿತಂ) ಆಕೃತಿಯಂತಿರುವ
(ಅದ್ಭುತವಾದ ಬ್ರಹ್ಮಸೂತ್ರ ಸಮೂಹದ ಭಾಷ್ಯವನ್ನು ಶ್ರೀಪೂರ್ಣಪ್ರಜ್ಞಾಚಾರ್ಯರು ರಚಿಸಿದರು).

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞರ ಸ್ವರೂಪವು ಕಾಮಾದಿದೋಷರಹಿತವಾದುದು. ಸತ್ಯವಾದ ಮಾತುವುಳ್ಳದ್ದು. ಮಹಾಪುರುಷರ ಮೂವತ್ತೆರಡು ಲಕ್ಷಣಗಳಿಂದ ಕೂಡಿರುವುದು. ದೇವೋತ್ತಮರಿಂದಲೂ ಪೂಜ್ಯವಾದುದು, ಪುಣ್ಯಕರ-ವಾದುದು ಅದರಂತೆ ಅವರು ಮಾಡಿರುವ ಭಾಷ್ಯವೂ ಕೂಡ ಅಪಶಬ್ದಾದಿ ದೋಷಗಳಿಲ್ಲದುದು. ಅಲ್ಲಿ ವ್ಯರ್ಥವಾದ

ಮಾತುಗಳಿಲ್ಲ. ಅದು ಭಾಷ್ಯದ ಎಲ್ಲಾ ಲಕ್ಷಣಗಳಿಂದಲೂ ಕೂಡಿದೆ. ದೇವೋತ್ತಮರಿಗೂ ಆಚಾರ್ಯರ ಭಾಷ್ಯವು ಮಾನ್ಯವಾಗಿದೆ, ಪುಣ್ಯಕರವಾಗಿದೆ. ಹೀಗೆ ತಮ್ಮ ಮತ್ತೊಂದು ಸ್ವರೂಪದಂತಿರುವ ಅತ್ಯಾಶ್ಚರ್ಯಕರವಾದ ಭಾಷ್ಯವನ್ನು ಆಚಾರ್ಯರು ರಚಿಸಿದರು.

ವಿಶೇಷಾಂಶ— 'ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಕಾರಿಭಿಃ । ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ' ಎಂದು ಭಾಷ್ಯದ ಲಕ್ಷಣ. ಸೂತ್ರದ ಪದಗಳನ್ನು ತೆಗೆದುಕೊಂಡು ಸೂತ್ರಾರ್ಥವನ್ನು ವರ್ಣಿಸುವ ಮತ್ತು ತಾವು ಸೂತ್ರಾರ್ಥವನ್ನು ವರ್ಣಿಸುವ ಸಂದರ್ಭದಲ್ಲಿ ಹೇಳಿದ ಪದಗಳ ಅರ್ಥವನ್ನೂ ವರ್ಣಿಸುವ ಗ್ರಂಥವೇ ಭಾಷ್ಯವೆಂದು ಭಾಷ್ಯಜ್ಞರು ಹೇಳುತ್ತಾರೆ. ಈ ಲಕ್ಷಣವು ಆಚಾರ್ಯರ ಭಾಷ್ಯದಲ್ಲಿದೆ.

ಉದಾಹರಣೆಗೆ- 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂಬ ಮೊದಲನೆಯ ಸೂತ್ರದ ಭಾಷ್ಯದಲ್ಲಿ ಆಚಾರ್ಯರು 'ಅಥಶಬ್ದೋ ಮಂಗಲಾರ್ಥೇ ಅಧಿಕಾರಾನಂತರ್ಯಾರ್ಥಶ್ಚ' ಎಂದು ಸೂತ್ರಾನುಕಾರಿ ಪದದಿಂದ ಸೂತ್ರದ ಅರ್ಥವನ್ನು ವರ್ಣಿಸಿ, 'ಅಧಿಕಾರಾನಂತರ್ಯಾರ್ಥಶ್ಚ' ಎಂಬ ತಾವು ಹೇಳಿದ ಪದದ ಅರ್ಥವನ್ನು 'ಅಧಿಕಾರಶ್ಶೋಕ್ತೋ ಭಾಗವತತಂತ್ರೇ' ಎಂದು ವಿವರಿಸುತ್ತಾರೆ. ಆದುದರಿಂದ ಆಚಾರ್ಯರ ಭಾಷ್ಯವು ಉತ್ತಮ ಭಾಷ್ಯಲಕ್ಷಣ ಸಂಪನ್ನವಾಗಿದೆ. ಆಚಾರ್ಯರ ಭಾಷ್ಯದಲ್ಲಿ ಇರುವ ಶಬ್ದಗಳು ಮಹಾವ್ಯಾಕರಣ ಸಮ್ಮತವಾದವುಗಳು. ಅವುಗಳಲ್ಲಿ ಅಪಶಬ್ದಗಳು ಇಲ್ಲವೇ ಇಲ್ಲ. ಅಲ್ಲಿರುವ ಶಬ್ದಗಳಲ್ಲಿ ಒಂದಾದರೂ ವ್ಯರ್ಥವಲ್ಲ. ಪ್ರತಿಯೊಂದು ಶಬ್ದಕ್ಕೂ ಸಾರ್ಥಕ್ಯವಿದೆ. ಶೇಷ, ಇಂದ್ರಾದಿ ದೇವತೆಗಳೂ ಕೂಡ ಈ ಭಾಷ್ಯವನ್ನು ಗೌರವಿಸಿ ವ್ಯಾಖ್ಯಾನ ಮಾಡುತ್ತಾರೆ. ಆಚಾರ್ಯರ ಸ್ವರೂಪದಲ್ಲಿಯೂ ಕೂಡ ಯಾವ ದೋಷಗಳೂ ಇಲ್ಲ. ಅವರು ಆಡಿದ ಮಾತು ಎಂದೂ ವ್ಯರ್ಥವಾಗುತ್ತಿರಲಿಲ್ಲ. ಮಹಾಪುರುಷರಿಗೆ ಶಾಸ್ತ್ರದಲ್ಲಿ 32 ಲಕ್ಷಣಗಳನ್ನು ಹೇಳಿರುತ್ತಾರೆ. ಅವೆಲ್ಲವೂ ಆಚಾರ್ಯರಲ್ಲಿವೆ. 'ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ, ಸಪ್ತ ಪಾದಶ್ಚತುರ್ಹಸ್ತಃ ದ್ವಾತ್ರಿಂಶಲ್ಲಕ್ಷಣೈರ್ಯುತಃ', 'ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ, ತಸ್ಮಾದ್ ಬ್ರಹ್ಮಾಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ' ಎಂಬುದಾಗಿ ಆಚಾರ್ಯರು ಗುರುಲಕ್ಷಣವನ್ನು ಪ್ರಮಾಣ ವಾಕ್ಯ ಗಳಿಂದ ತಿಳಿಸಿದ್ದಾರೆ. ಪಾದಾದಿ ಕೇಶಪರ್ಯಂತವಾಗಿ ಔನ್ನತ್ಯ ಗಣನೆಯಲ್ಲಿ 96 (ತೊಂಭತ್ತಾರು) ಅಂಗುಲ ಎತ್ತರವಾಗಿರ ಬೇಕು. ಹೊಟ್ಟೆಯ ಸುತ್ತಲೂ 48 (ನಲವತ್ತೆಂಟು) ಅಂಗುಲ ಸುತ್ತಳತೆ ಇರಬೇಕು. (ನಾಲ್ಕು ಅಡಿಗಳು) ಎತ್ತರಕ್ಕಿಂತ ಅರ್ಧ ಸುತ್ತಳತೆ ಇರಬೇಕು. ಮೊಳದ ಲೆಕ್ಕದಲ್ಲಿ ಅಳೆಯುವಾಗ ನಾಲ್ಕು ಮೊಳ ಎತ್ತರವಾಗಿರಬೇಕು. ಒಂದು ಮೊಳ ಎರಡು ಗೇಣು ಅಂದರೆ ಎರಡು ಅಡಿಗಳಾಗುತ್ತವೆ. ಮೂವತ್ತೆರಡು ಲಕ್ಷಣಗಳಿಂದ ಕೂಡಿರಬೇಕು.

ಮೂವತ್ತೆರಡು ಲಕ್ಷಣಗಳು ಹೀಗಿವೆ - ಭುಜ, ಕಣ್ಣು ಕೆನ್ನೆಯ ಮೇಲ್ಭಾಗ, ಮೊಣಕಾಲು, ಉಗುರುಗಳು ಉದ್ದ ವಾಗಿರಬೇಕು (5) ಚರ್ಮ (ತ್ವಚೆ), ಕೂದಲು, ಬೆರಳು, ಹಲ್ಲು, ಬೆರಳುಗಳ ಪರ್ವಭಾಗಗಳು (ಗಿಣ್ಣುಗಳು) ಸೂಕ್ಷ್ಮವಾಗಿರಬೇಕು (5) ಅಂಗೈಗಳು, ಎರಡು ಪಾದತಲಗಳು, ಎರಡು ಕಣ್ಣುಗಳ ಕೊನೆಭಾಗ, ತಾಲು (ಅಂಗಳು- ನಾಲಿಗೆಯ ಕೆಳಭಾಗ) ನಾಲಿಗೆ, ತುಟಿ, ಉಗುರುಗಳು ಈ ಏಳು ಕೆಂಪಾಗಿರಬೇಕು. (7) ಎದೆ, ಹೊಟ್ಟೆ , ಗುಂಗುರು ಕೂದಲುಗಳು, ಭುಜದ ತುದಿ (ಹೆಗಲು) ಕೈ, ಮುಖಗಳಲ್ಲಿ ಆರರಲ್ಲಿ ಔನ್ನತ್ಯ (ಎತ್ತರ)ವಿರಬೇಕು (6) ಹಣೆ, ಸೊಂಟ, ಎದೆಗಳಲ್ಲಿ ಮೂರರಲ್ಲಿ ವಿಶಾಲತೆ ಇರಬೇಕು (3) ಜಂಘಾ (ಮೊಣಕಾಲು) ಕತ್ತು ಮತ್ತು ಗುಹ್ಯ ಚಿಹ್ನ ಇವು ಮೂರು ಚಿಕ್ಕದಾಗಿರಬೇಕು (3) ಸ್ವರ, ಅಂತಃಕರಣ ಮತ್ತು ಹೊಕ್ಕಳುಗಳು ಗಂಭೀರ(ಆಳ)ವಾಗಿರಬೇಕು (3) 5+5+7+6+3+3+3= 32

'ಪಂಚದೀರ್ಘಃ ಪಂಚಸೂಕ್ಷ್ಮಃ ಸಪ್ತರಕ್ತಃ ಷಡುನ್ನತಃ ।
ತ್ರಿಪೃಥುಸ್ತ್ರಿಷು ಗಂಭೀರಃ ದ್ವಾತ್ರಿಂಶಲ್ಲಕ್ಷಣಂ ತ್ವಿತಿ' ।।

ಎಂಬುದಾಗಿ ಈ ಮೂವತ್ತೆರಡು ಲಕ್ಷಣಗಳ ಸಂಗ್ರಹ ಮಾಡಿದ್ದಾರೆ. ಆಚಾರ್ಯರಲ್ಲಿ ಈ ಲಕ್ಷಣಗಳೆಲ್ಲಾ ಇವೆ. ಮುಖ್ಯ ಗುರುಗಳಾದ ಬ್ರಹ್ಮದೇವರಲ್ಲಿಯೂ ಈ ಲಕ್ಷಣಗಳಿವೆ. ಆಚಾರ್ಯರಲ್ಲಿಯೂ ಈ ಲಕ್ಷಣಗಳಿವೆ. ಆದ್ದರಿಂದ ಆಚಾರ್ಯರೇ ವಾಯುದೇವರು ಮುಂದೆ ಬ್ರಹ್ಮಪದವಿಗೆ ಬರತಕ್ಕವರು.

ವಿಗ್ರಹ—

**ಅಸ್ತದೂಷಣಮವಂಧ್ಯಭಾಷಣಂ—** ಅಸ್ತಾನಿ (=ನಿರಸ್ತಾನಿ) ದೂಷಣಾನಿ, ಯಸ್ಮಾತ್ ತತ್ ಅಸ್ತದೂಷಣಂ, ತತ್ ।

**ಅವಂಧ್ಯಂ—** ನ ವಂಧ್ಯಂ ಅವಂಧ್ಯಂ, ಅವಂಧ್ಯಂ ಭಾಷಣಂ ಯಸ್ಮಿನ್ ತತ್ ಅವಂಧ್ಯಭಾಷಣಂ, ತತ್ ।

**ಸಕಲಲಕ್ಷಣೈಃ—** ಸಕಲಾನಿ ಚ ತಾನಿ ಲಕ್ಷಣಾನಿ ಚ ಸಕಲಲಕ್ಷಣಾನಿ, ತೈಃ ।

**ಮಾನನೀಯಂ—** ಮಾನಯಿತುಂ ಯೋಗ್ಯಂ ಮಾನನೀಯಂ, ತತ್ ।

**ನಾಕಿನಾಯಕೈಃ—** ನಾಕಃ ಏಷಾಂ ಅಸ್ತೀತಿ ನಾಕಿನಃ, ನಾಕಿನಾಂ ನಾಯಕಾಃ ನಾಕಿನಾಯಕಾಃ, ತೈಃ ।

**ಧನ್ಯಂ—** ಧನಂ ಅರ್ಹತೀತಿ ಧನ್ಯಂ, ತತ್ ।

★ ★ ★

**ಅವತಾರಿಕಾ—** ಮತ್ತು ಶ್ರೀಮದಾನಂದತೀರ್ಥರ ಭಾಷ್ಯವು ಅತ್ಯದ್ಭುತವಾದದ್ದು. ಹಿಂದಿನ ಇಪ್ಪತ್ತೊಂದು ಕುಭಾಷ್ಯಗಳನ್ನು ಖಂಡಿಸಿ ಶ್ರೀಬಾದರಾಯಣರಿಗೆ ಪರಮ ಸಮ್ಮತವಾದ ತತ್ತ್ವಾರ್ಥಗಳಿಂದ ಕೂಡಿದುದಾಗಿದೆ. ಭೂತ, ಭವಿಷ್ಯತ್, ವರ್ತಮಾನಕಾಲಗಳಲ್ಲಿನ ವಾದಿಗಳಿಂದ ಅದೂಷ್ಯವಾದುದೆಂದು ಅದರ ಅದ್ಭುತ ಮಹಿಮೆಯನ್ನು ವರ್ಣಿಸುತ್ತಾರೆ.

**ಏಕವಿಂಶತಿಕುಭಾಷ್ಯದೂಷಕಂ**
**ಬ್ರಹ್ಮಸೂತ್ರಗಣಭಾಷ್ಯಮದ್ಭುತಮ್ ।**
**ಅಪ್ಯದೂಷ್ಯಮತನೋದನಂತಧೀಃ**
**ಭೂತಭಾವಿಭವದಾತ್ಮಭಿಃ ಕ್ವಚಿತ್ ॥ 12 ॥**

**ಪದಚ್ಛೇದ—** ಏಕವಿಂಶತಿಕುಭಾಷ್ಯದೂಷಕಂ, ಬ್ರಹ್ಮಸೂತ್ರಗಣಭಾಷ್ಯಂ, ಅದ್ಭುತಂ, ಅಪಿ, ಅದೂಷ್ಯಂ ಅತನೋತ್, ಅನಂತಧೀಃ, ಭೂತಭಾವಿಭವದಾತ್ಮಭಿಃ, ಕ್ವಚಿತ್ ।

**ಅನ್ವಯ—** ಅನಂತಧೀಃ, ಏಕವಂಶತಿಕುಭಾಷ್ಯದೂಷಕಂ, ಭೂತಭಾವಿಭವದಾತ್ಮಭಿಃ, ಕ್ವಚಿತ್, ಅಪಿ, ಅದೂಷ್ಯಂ, ಅದ್ಭುತಂ, ಬ್ರಹ್ಮಸೂತ್ರಗಣಭಾಷ್ಯಂ, ಅತನೋತ್ ।

ಅನ್ವಯಾರ್ಥ—

**ಅನಂತಧೀಃ** = ಶ್ರೀ ಪೂರ್ಣಪ್ರಜ್ಞಾಚಾರ್ಯರು,

**ಏಕವಿಂಶತಿಕುಭಾಷ್ಯದೂಷಕಂ** = ಇಪ್ಪತ್ತೊಂದು ಭಾಷ್ಯಗಳನ್ನು ಖಂಡಿಸುವುದಾಗಿಯೂ,

**ಭೂತಭಾವಿಭವದಾತ್ಮಭಿಃ** = ಹಿಂದೆ ಆಗಿರುವ, ಮುಂದೆ ಬರಲಿರುವ, ಈಗ ಇರುವ, ಜೀವಾತ್ಮರಿಂದ,

**ಕ್ವಚಿತ್ ಅಪಿ** = ಭಾಷ್ಯದಲ್ಲಿ ಹೇಳಿರುವ ಯಾವ ಒಂದು ಪ್ರಮೇಯ ವಿಷಯದಲ್ಲಿಯೇ ಆಗಲಿ,

**ಅದೂಷ್ಯಂ** = ಖಂಡಿಸಲು ಅಶ್ಯಕವಾದುದಾಗಿಯೂ ಇರುವ,

**ಬ್ರಹ್ಮಸೂತ್ರಗಣಭಾಷ್ಯಂ** = ಬ್ರಹ್ಮಸೂತ್ರ ಸಮೂಹದ ಭಾಷ್ಯವನ್ನು,

**ಅತನೋತ್** = ಮಾಡಿದರು.

ತಾತ್ಪರ್ಯ— ಶ್ರೀ ಪೂರ್ಣಪ್ರಜ್ಞರು ತಮ್ಮ ಭಾಷ್ಯಕ್ಕಿಂತ ಹಿಂದೆ ಇದ್ದ ಇಪ್ಪತ್ತೊಂದು ಭಾಷ್ಯಗಳನ್ನು ತಮ್ಮ ಭಾಷ್ಯದಲ್ಲಿ ಖಂಡಿಸಿದ್ದಾರೆ. ಹಿಂದೆ ಬಂದಿರುವ, ಮುಂದೆ ಹುಟ್ಟಲಿರುವ ಈಗ ಇರುವ ಯಾವ ವಾದಿಗಳೂ ಅವರನ್ನು ಖಂಡಿಸಲು ವಾದದಲ್ಲಿ ಪರಾಜಯಗೊಳಿಸಲು ಸಾಧ್ಯವಿಲ್ಲ. ಅವರ ಸ್ವರೂಪವು ಆಶ್ಚರ್ಯಕರವಾದುದು. ಬ್ರಹ್ಮಸೂತ್ರಭಾಷ್ಯವು ಅವರ ಸ್ವರೂಪದಂತೆಯೇ ಇದೆ. ಆ ಬ್ರಹ್ಮಸೂತ್ರಭಾಷ್ಯವೂ ಇಪ್ಪತ್ತೊಂದು ಭಾಷ್ಯಗಳನ್ನು ಖಂಡಿಸುತ್ತದೆ. ಹಿಂದಿನ ಮುಂದಿನ ಇಂದಿನ ಯಾವ ಪಂಡಿತ ಪ್ರಕಾಂಡ ಜೀವಾತ್ಮರೂ ಆ ಭಾಷ್ಯದ ಯಾವ ಪ್ರಮೇಯವನ್ನು ಒಂದು ವಾಕ್ಯ ಪದ, ಅಕ್ಷರಗಳನ್ನೂ ಸಹ ಖಂಡಿಸಲಾರರು. ಹೀಗೆ ಅದ್ಭುತವಾದ, ತಮ್ಮ ರೂಪದಂತೆ ಇರತಕ್ಕ ಬ್ರಹ್ಮಸೂತ್ರಭಾಷ್ಯವನ್ನು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ರಚಿಸಿದರು (ಇಲ್ಲಿಗೆ ಕುಲಕ ಶ್ಲೋಕವು ಮುಗಿಯಿತು).

ವಿಶೇಷಾಂಶ—

'ಭಾರತೀವಿಜಯಶ್ಚೈವ ಸಚ್ಚಿದಾನಂದ ಏವ ಚ ।
ಬ್ರಹ್ಮಘೋಷಃ ಶತನಾಂದ ಉದ್ವರ್ತಶ್ಚೈವ ಪಂಚಮಃ ॥
ವಿಜಯೋ ರುದ್ರಭಟ್ಟಶ್ಚ ವಾಮನಾಖ್ಯಸ್ತಥಾಷ್ಟಮಃ ।
ಸ ಯಾದವಪ್ರಕಾಶಶ್ಚ ನವಮಸ್ತತ್ರ ಕೀರ್ತಿತಃ ॥
ರಾಮಾನುಜಸ್ತಥಾ ಭರ್ತೃಪ್ರಪಂಚೋ ದ್ರವಿಡಸ್ತಥಾ ।
ಬ್ರಹ್ಮದತ್ತೋ ಭಾಸ್ಕರಶ್ಚ ಪಿಶಾಚೋ ವೃತ್ತಿಕಾರಕಃ ॥
ತಥಾ ವಿಜಯಭಟ್ಟಶ್ಚ ವಿಷ್ಣುಕ್ರಾಂತಸ್ತಥೈವ ಚ ।
ವಾದೀಂದ್ರಸ್ತು ತತಃ ಪಶ್ಚಾತ್ತತೋ ಮಾಧವದಾಸಕಃ ॥
ತತಃ ಪಶ್ಚಾತ್ ಸಂಕರಶ್ಚೇತ್ಯೇಕವಿಂಶತಿವಾದಿಭಿಃ ।
ಪ್ರಣೀತಾನಿ ನಿರಾಚಕ್ರೇ ಕುಭಾಷ್ಯಾಣಿ ಮಹಾಮತಿಃ ॥

ಎಂಬ ಪ್ರಾಚೀನ ಪ್ರಮಾಣ ಶ್ಲೋಕದಲ್ಲಿ ಹೇಳಿದಂತೆ 1) ಭಾರತೀವಿಜಯ, 2) ಸಚ್ಚಿದಾನಂದ, 3) ಬ್ರಹ್ಮಘೋಷ, 4) ಶತಾನಂದ, 5) ಉದ್ವರ್ತ, 6) ವಿಜಯ, 7) ರುದ್ರಭಟ್ಟ, 8)ವಾಮನ, 9) ಯಾದವಪ್ರಕಾಶ, 10) ರಾಮನುಜ, 11) ಭರ್ತೃಪ್ರಪಂಚ, 12)ದ್ರವಿಡ, 13) ಬ್ರಹ್ಮದತ್ತ, 14) ಭಾಸ್ಕರ, 15) ಪಿಶಾಚ, 16) ವೃತ್ತಿಕಾರ, 17) ವಿಜಯಭಟ್ಟ, 18)ವಿಷ್ಣುಕ್ರಾಂತ, 19) ವಾದೀಂದ್ರ, 20) ಮಾಧವದಾಸ, 21) ಸಂಕರ, ಇವರೇ ಆಚಾರ್ಯರಿಗಿಂತ ಹಿಂದಿನ ಭಾಷ್ಯ ಕಾರರು. ಇವರೆಲ್ಲರ ಭಾಷ್ಯವನ್ನು ಆಚಾರ್ಯರು ''ನಾನ್ಯಥಾ ತದದೃಷ್ಟೇಃ'' ''ಸರ್ವಶಬ್ದಾವಾಚ್ಯಸ್ಯ ಲಕ್ಷಣಾಯುಕ್ತೇಃ'' ನಾವು ಹೇಳಿದ ಅರ್ಥಕ್ಕಿಂತ ಬೇರೆ ಅರ್ಥವನ್ನು ಹೇಳಬಾರದು. ಹ್ಯಾಗೆ ಅರ್ಥವು ಕಂಡಿಲ್ಲ ಎಂಬುದಾಗಿ ಹೇಳುವ ಸಂಕ್ಷಿಪ್ತ ಮಾತುಗಳಿಂದ ಇತರ ಭಾಷ್ಯಗಳನ್ನು ಖಂಡತುಂಡವಾಗಿ ಖಂಡಿಸಿದ್ದಾರೆ. ಈ ಅರ್ಥವನ್ನು ಶ್ರೀಮತ್ ಟೀಕಾಕೃತ್ಪಾದರು, ಶ್ರೀವ್ಯಾಸರಾಜರು ಮುಂತಾದ ಮಹಾನುಭಾವರು ಪೂರ್ವಪಕ್ಷವನ್ನು ಅನುವಾದ ಮಾಡಿ ಆಚಾರ್ಯರ ಮಾತಿನಿಂದ ಖಂಡನೆ ಹೇಗೆ ಆಗುತ್ತದೆ ಎಂದು ತೋರಿಸಿದ್ದಾರೆ. ಆಚಾರ್ಯರು ತಾವು ಆಯಾ ವಾದಿಗಳನ್ನು ಭೇಟಿಯಾದಾಗ ಮುಖತಃ ಅವರ ಭಾಷ್ಯಗಳನ್ನು ಖಂಡಿಸಿಯೇ ಇದ್ದಾರೆ.

ವಿಗ್ರಹ—

ಏಕವಿಂಶತಿಕುಭಾಷ್ಯದೂಷಕಂ— ಏಕಾಧಿಕಾ ವಿಂಶತಿಃ ಏಕವಿಂಶತಿಃ, (ಮಧ್ಯಮಪದಲೋಪಿಸಮಾಸ) ಕುತ್ಸಿತಾನಿ ಚ ತಾನಿ ಭಾಷ್ಯಣಿ ಚ ಕುಭಾಷ್ಯಾಣಿ, ಏಕವಿಂಶತಿಶ್ಚ ತಾನಿ ಕುಭಾಷ್ಯಣಿ ಚ, ಏಕವಿಂಶತಿ-ಕುಭಾಷ್ಯಾಣಿ, ದೂಷಯತೀತಿ ದೂಷಕಂ, ಏಕವಿಂಶತಿಕುಭಾಷ್ಯಾಣಾಂ ದೂಷಕಂ ಏಕವಿಂಶತಿ-ಕುಭಾಷ್ಯದೂಷಕಂ (ತತ್) ।

**ಬ್ರಹ್ಮಸೂತ್ರಗಣಭಾಷ್ಯಂ**— ಬ್ರಹ್ಮಣಃ ಸೂತ್ರಾಣಿ ಬ್ರಹ್ಮಸೂತ್ರಾಣಿ, ಬ್ರಹ್ಮಸೂತ್ರಾಣಾಂ ಗಣಃ ಬ್ರಹ್ಮಸೂತ್ರಗಣಃ, ಬ್ರಹ್ಮಸೂತ್ರಗಣಸ್ಯ ಭಾಷ್ಯಂ ಬ್ರಹ್ಮಸೂತ್ರಗಣಭಾಷ್ಯಂ, ತತ್ ।

**ಅದೂಷ್ಯಂ**— ದೂಷಯಿತುಂ ಶಕ್ಯಂ ದೂಷ್ಯಂ, ನ ದೂಷ್ಯಂ ಅದೂಷ್ಯಂ ತತ್ ।

**ಅನಂತಧೀಃ**— ಅನಂತಾ ಧೀಃ, ಯಸ್ಯ ಸಃ, ಅನಂತಧೀಃ ।

**ಭೂತಭಾವಿಭವದಾತ್ಮಭಿಃ**— ಭೂತಾಶ್ಚ ಭಾವಿನಶ್ಚ ಭವಂತಶ್ಚ ಭೂತಭಾವಿಭವಂತಃ (ಇತರೇತರಯೋಗ-ದ್ವಂದ್ವ) ಭೂತಭಾವಿಭವಂತಶ್ಚ ತೇ, ಆತ್ಮಾನಶ್ಚ ಭೂತಭಾವಿಭವದಾತ್ಮಾನಃ, (ಕರ್ಮಧಾರಯ) ತೈಃ ।

**ಕ್ರಿಯಾಪದ**— **ಅತನೋತ್**- ತನುವಿಸ್ತಾರೇ ಇತಿ ವಿಸ್ತಾರಾರ್ಥಕಾತ್ ತನ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನ ಭೂತೇಲಙ್ ಪ್ರಥಮಪುರುಷೇ ಏಕವಚನೇ ಅತನೋತ್ ಇತಿರೂಪಂ ।

ಅತನೋತ್ ಅತನುತಾಂ ಅತನ್ವನ್, ಅತನೋಃ ಅತನುತಂ ಅತನುತ, ಅತನವಂ ಅತನುವ - ಅತನ್ವ ಅತನುಮ - ಅತನ್ಮ ।

**ಪ್ರಯೋಗ**— ಅನಂತಧೀಃ ಅದ್ಭುತಂ ಬ್ರಹ್ಮಸೂತ್ರಗಣಭಾಷ್ಯಂ, ಅತನೋತ್ (ಕರ್ತರಿ)

ಅನಂತಧಿಯಾ ಅದ್ಭುತಂ ಬ್ರಹ್ಮಸೂತ್ರಗಣಭಾಷ್ಯಂ ಅತನ್ಯತ (ಅತಾಯತ ಎಂದೂ ಹೇಳಬಹುದು) (ಕರ್ಮಣಿ)

**ಕೋಶ**— 'ಆತ್ಮಾ' ಎಂಬ ಶಬ್ದಕ್ಕೆ ಜೀವ ಎಂದು ಅರ್ಥ. 'ಆತ್ಮಾ ಜೀವೇ ಧೃತೌ ದೇಹೇ' ಇತಿ ವಿಶ್ವಃ ।

★ ★ ★

**ಅವತಾರಿಕಾ**— ಪುನಃ ಶ್ರೀಮದಾಚಾರ್ಯರ ಭಾಷ್ಯದ ಅಸಾಧಾರಣ ಮಹಿಮೆಯನ್ನು ವರ್ಣಿಸುತ್ತಾರೆ.

**ಗಾಂಗಮಂಗಲತರಂಗಭಂಗದ**
**ಪ್ರಾಂತಸುಶ್ರೀಹರಿವೇಶ್ಮಕೃತ್ಸಮಃ ।**
**ಯದ್ಗತೈಕತಮವರ್ಣಲೇಖಕಃ**
**ಸತ್ಯತೀರ್ಥ ಇಹ ಭಾಷ್ಯಮಾಲಿಖತ್ ॥ 13 ॥**

**ಪದಚ್ಛೇದ**— ಗಾಂಗಮಂಗಲತರಂಗಭಂಗದಪ್ರಾಂತಸುಶ್ರೀಹರಿವೇಶ್ಮಕೃತ್ಸಮಃ, ಯದ್ಗತೈಕತಮವರ್ಣಲೇಖಕಃ, ಸತ್ಯತೀರ್ಥಃ, ಇಹ, ಭಾಷ್ಯಂ, ಆಲಿಖತ್ ।

**ಅನ್ವಯ**— ಇಹ, ಸತ್ಯತೀರ್ಥಃ, ಯದ್ಗತೈಕತಮವರ್ಣಲೇಖಕಃ, ಗಾಂಗಮಂಗಲತರಂಗಭಂಗದಪ್ರಾಂತಸು ಶ್ರೀಹರಿ-ವೇಶ್ಮಕೃತ್ಸಮಃ, (ತತ್) ಭಾಷ್ಯಂ, ಆಲಿಖತ್ ।

**ಅನ್ವಯಾರ್ಥ**—

**ಇಹ** = ಈ ಭಾಷ್ಯವನ್ನು ರಚಿಸುವ ಸಮಯದಲ್ಲಿ

**ಸತ್ಯತೀರ್ಥಃ** = ಸತ್ಯತೀರ್ಥಯತಿಗಳು

**ಯದ್ಗತೈಕತಮವರ್ಣಲೇಖಕಃ** = ಯಾವ ಭಾಷ್ಯದಲ್ಲಿರುವ ಯಾವುದಾದರೊಂದು ಅಕ್ಷರವನ್ನು ಬರೆಯುವವನು,

**ಗಾಂಗಮಂಗಲತರಂಗಭಂಗದಪ್ರಾಂತಸುಶ್ರೀಹರಿವೇಶ್ಮಕೃತ್ಸಮಃ**= ಗಂಗಾನದಿಯ ಪುಣ್ಯಕರವಾದ ಅಲೆಗಳಿಗೆ ತಡೆಯನ್ನುಂಟುಮಾಡುವ ದಡದಲ್ಲಿ ಒಳ್ಳೆಯ ಕಾಂತಿ ಮತ್ತು ಸಂಪತ್ತುಳ್ಳ ವಿಷ್ಣು ದೇವಾಲಯವನ್ನು ರಚಿಸಿದವನಿಗೆ ಸಮಾನನೋ (ತತ್=ಅಂತಹ)

**ಭಾಷ್ಯಂ** = ಸೂತ್ರಭಾಷ್ಯವನ್ನು
**ಆಲಿಖತ್** = ಬರೆದರು.

**ತಾತ್ಪರ್ಯ**— ಗಂಗೆಯ ಪರಮಮಂಗಳಕರಗಳಾದ ತರಂಗಗಳು ಯಾವ ದಡಕ್ಕೆ ಬಡಿದು ಮಾಯವಾಗುವುವೋ ಅಂತಹ ದಡದಲ್ಲಿಯೇ ಪರಮಸುಂದರವಾದ ಕಾಂತಿಪೂರ್ಣವಾದ ಸಕಲಸಂಪದ್ಭರಿತವಾದ ಹರಿಮಂದಿರವನ್ನು ನಿರ್ಮಿಸಿದವನಿಗೆ ಯಾವ ಪುಣ್ಯವು ಬರುವುದೋ ಅಂತಹ ಪುಣ್ಯವು ಶ್ರೀಪೂರ್ಣಪ್ರಜ್ಞರು ನಿರ್ಮಿಸಿದ ಭಾಷ್ಯದ ಒಂದು ಅಕ್ಷರವನ್ನು ಬರೆದವನಿಗೂ ಸಲ್ಲುವುದು. ಇಂತಹ ಪರಮಪವಿತ್ರವಾದ ಭಾಷ್ಯವನ್ನು ಪೂರ್ಣಪ್ರಜ್ಞರು ಹೇಳುತ್ತಿದ್ದಾಗ ಸತ್ಯತೀರ್ಥ ಯತಿಗಳು ಬರೆದರು.

**ವಿಗ್ರಹ**—

**ಗಾಂಗಮಂಗಲತರಂಗಭಂಗದಪ್ರಾಂತಸುಶ್ರಿಹರಿವೇಶ್ಮಕೃತ್ಸಮಃ**— ಗಂಗಾಯಾಃ ಇಮೇ ಗಾಂಗಾಃ ಮಂಗಲಾಶ್ಚ ತೇ ತರಂಗಾಶ್ಚ ಮಂಗಲತರಂಗಾಃ, ಗಾಂಗಾಶ್ಚ ತೇ, ಮಂಗಲತರಂಗಾಶ್ಚ ಗಾಂಗಮಂಗಲತರಂಗಾಃ, ಭಂಗಂ ದದಾತೀತಿ ಭಂಗದಃ, ಗಾಂಗಮಂಗಲತರಂಗಾಣಾಂ ಭಂಗದಃ ಗಾಂಗಮಂಗಲತರಂಗ-ಭಂಗದಃ, ಗಾಂಗಮಂಗಲತರಂಗಭಂಗದಶ್ಚಾಸೌ ಪ್ರಾಂತಶ್ಚ ಗಾಂಗಮಂಗಲತರಂಗಭಂಗದಪ್ರಾಂತಃ, ಶೋಭನಾ ಶ್ರೀಃ ಯಸ್ಯ ತತ್ ಸುಶ್ರಿ, ಹರೇಃ ವೇಶ್ಮ, ಸುಶ್ರಿ ಚ ತತ್ ಹರಿವೇಶ್ಮ ಚ ಸುಶ್ರಿಹರಿವೇಶ್ಮ, ಸುಶ್ರಿಹರಿವೇಶ್ಮ ಕರೋತೀತಿ ಸುಶ್ರಿಹರಿವೇಶ್ಮಕೃತ್, ಗಾಂಗಪ್ರಾಂತೇಸುಶ್ರಿ ಹರಿವೇಶ್ಮಕೃತ್, ಗಾಂಗ-ಮಂಗಲತರಂಗಭಂಗದಪ್ರಾಂತಸುಶ್ರಿಹರಿವೇಶ್ಮಕೃತ್, ತೇನ ಸಮಃ ಗಾಂಗಮಂಗಲತರಂಗಭಂಗ-ದಪ್ರಾಂತಸುಶ್ರಿಹರಿವೇಶ್ಮಕೃತ್ಸಮಃ ।

**ಯದ್ಗತ್ಯೈಕತಮವರ್ಣಲೇಖಕಃ**— ಯಸ್ಮಿನ್ ಗತಾಃ ಯದ್ಗತಾಃ, ಬಹುಷು ಏಕಃ ಏಕತಮಃ, ಯದ್ಗತೇಷು ಏಕತಮಃ ಯದ್ಗತೈಕತಮಃ, ಯದ್ಗತೈಕತಮಶ್ಚಾಸೌ ವರ್ಣಶ್ಚ ಯದ್ಗತೈಕತಮವರ್ಣಃ, ಲಿಖತಿ ಇತಿ ಲೇಖಕಃ, ಯದ್ಗತೈಕತಮವರ್ಣಸ್ಯ ಲೇಖಕಃ ಯದ್ಗತೈಕತಮವರ್ಣಲೇಖಕಃ ।

**ಕ್ರಿಯಾಪದ— ಆಲಿಖತ್**- ಆಙ್ ಉಪಸರ್ಗಪೂರ್ವಕಾತ್ ಲಿಖ ಅಕ್ಷರವಿನ್ಯಾಸೇ ಇತಿ ಅಕ್ಷರ ವಿನ್ಯಾಸಾರ್ಥಕಾತ್ ಲಿಖ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ 'ಆಲಿಖತ್' ಇತಿ ರೂಪಂ ।

ಆ+ಅಲಿಖತ್ ಅಲಿಖತಾಂ ಅಲಿಖನ್, ಅಲಿಖಃ ಅಲಿಖತಂ ಅಲಿಖತ, ಆಲಿಖಂ ಅಲಿಖಾವ ಆಲಿಖಾಮ ।

**ಪ್ರಯೋಗ**— ಸತ್ಯತೀರ್ಥಃ ಭಾಷ್ಯಂ ಆಲಿಖತ್(ಕರ್ತರಿ) ಸತ್ಯತೀರ್ಥೇನ ಭಾಷ್ಯಂ ಆಲಿಖ್ಯತ (ಕರ್ಮಣಿ)

**ವ್ಯಾಕರಣವಿಶೇಷ**— 'ಶೋಭನಾ ಶ್ರೀಃ ಯಸ್ಯ ತತ್' ಸುಶ್ರಿ ಎಂಬಲ್ಲಿ ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ (ಪಾ.ಸೂ. 1-2-47) ಎಂಬುದರಿಂದ ಹ್ರಸ್ವವು ಬಂದಿದೆ.

★ ★ ★

**ಅವತಾರಿಕಾ**— ಇಂತಹ ಅತ್ಯದ್ಭುತವಾದ ಸೂತ್ರಭಾಷ್ಯವನ್ನು ಮಾಡಿದ ಮೇಲೆ ಅದರ ಪ್ರಚಾರಕ್ಕಾಗಿ ಶ್ರೀವೇದವ್ಯಾಸ ನಾರಾಯಣರ ಆಜ್ಞೆಯಂತೆ ಅನಂತಮಠದಿಂದ ಹೊರಟು ಗೋದಾವರೀ ತೀರಕ್ಕೆ ಬಂದರೆನ್ನುತ್ತಾರೆ.

**ತತ್ರ ದೇವಮಭಿವಂದ್ಯ ಯಾತವಾನ್**
**ಸ್ವಾಮಿನೋ ವಚನಗೌರವಾದ್ ದ್ರುತಮ್ ।**
**ಸಾನುಗೋ ವಿವಿಧಭೂರತೀತ್ಯ ಗೋ-**
**ದಾವರೀತಟಮಗಾದಲೇಶಧೀಃ ॥ 14 ॥**

**ಪದಚ್ಛೇದ—** ತತ್ರ, ದೇವಂ, ಅಭಿವಂದ್ಯ, ಯಾತವಾನ್, ಸ್ವಾಮಿನಃ, ವಚನಗೌರವಾತ್, ದ್ರುತಂ, ಸಾನುಗಃ, ವಿವಿಧಭೂಃ, ಅತೀತ್ಯ, ಗೋದಾವರೀತಟಂ, ಅಗಾತ್, ಅಲೇಶಧೀಃ ।

**ಅನ್ವಯ—** ತತ್ರ, ದೇವಂ, ಅಭಿವಂದ್ಯ, ಸ್ವಾಮಿನಃ, ವಚನಗೌರವಾತ್, ದ್ರುತಂ, ಯಾತವಾನ್, ಅಲೇಶಧೀಃ, ಸಾನುಗಃ, ವಿವಿಧಭೂಃ, ಅತೀತ್ಯ, ಗೋದಾವರೀತಟಂ, ಅಗಾತ್ ।

**ಅನ್ವಯಾರ್ಥ—**

**ತತ್ರ**= ಆ ಅನಂತಮಠದಲ್ಲಿ,
**ದೇವಂ** = ಶ್ರೀಮನ್ನಾರಾಯಣನನ್ನು
**ಅಭಿವಂದ್ಯ** = ನಮಸ್ಕರಿಸಿ,
**ಸ್ವಾಮಿನಃ** = ಪ್ರಭುವಾದ ಶ್ರೀಮನ್ನಾರಾಯಣನ
**ವಚನಗೌರವತ್** = ಮಾತಿನಲ್ಲಿರುವ ಬಹುಮಾನದಿಂದ,
**ದ್ರುತಂ** = ಜಾಗ್ರತೆಗಾಗಿ,
**ಯಾತವಾನ್** = ಹೊರಟ
**ಅಲೇಶಧೀಃ** = ಶ್ರೀಪೂರ್ಣಪ್ರಜ್ಞರು,
**ಸಾನುಗಃ** = ಶಿಷ್ಯಪರಿವಾರ ಸಹಿತರಾಗಿ,
**ವಿವಿಧಭೂಃ** = ನಾನಾದೇಶಗಳನ್ನು,
**ಅತೀತ್ಯ** = ದಾಟಿ,
**ಗೋದಾವರೀತಟಂ** = ಗೋದಾವರೀ ನದಿಯ ದಡವನ್ನು ಕುರಿತು,
**ಅಗಾತ್** = ಹೋದರು.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞರು ತಮ್ಮ ಗುರುಗಳಾದ ಶ್ರೀವೇದವ್ಯಾಸರ ಮತ್ತು ಶ್ರೀಮನ್ನಾರಾಯಣದೇವರ ಮಾತಿನಲ್ಲಿ ವಿಶೇಷವಾದ ಗೌರವವುಳ್ಳವರು. ಅವರು 'ಅವಿಲಂಬಿತಂ ವ್ರಜೇಃ' ಬೇಗನೆ ಹೋಗು ಎಂದು ಹೇಳಿದ್ದರು. ಅದರಂತೆಯೇ ಆಚಾರ್ಯರು ಬದರಿಯಲ್ಲಿ ಅನಂತಮಠದಲ್ಲಿರುವ ಶ್ರೀಮನ್ನಾರಾಯಣನಿಗೆ ನಮಸ್ಕರಿಸಿ ಬಹಳ ಬೇಗನೆ ತಮ್ಮ ಶಿಷ್ಯಪರಿವಾರ ಸಮೇತವಾಗಿ ಅಲ್ಲಿಂದ ಹೊರಟರು. ದಾರಿಯಲ್ಲಿ ಅನೇಕಾನೇಕ ಭೂಪ್ರದೇಶಗಳನ್ನು ದಾಟುತ್ತಾ ಗೋದಾವರೀ ನದಿಯ ತೀರ ಪ್ರದೇಶಕ್ಕೆ ಬಂದರು.

ವಿಗ್ರಹ—

**ವಚನಗೌರವಾತ್—** ಗುರೋಃ ಭಾವಃ ಗೌರವಂ, ವಚನೇ ಗೌರವಂ ವಚನಗೌರವಂ ತಸ್ಮಾತ್ ।
**ವಿವಿಧಭೂಃ—** ವಿವಿಧಾಶ್ಚ ತಾಃ ಭುವಶ್ಚ ವಿವಿಧಭುವಃ ತಾಃ ।
**ಗೋದಾವರೀತಟಂ—** ಗೋದಾವರ್ಯಾಃ ತಟಂ ಗೋದಾವರೀತಟಂ ತತ್ ।
**ಅಲೇಶಧೀಃ—** ನ ವಿದ್ಯತೇ ಲೇಶಃ ಯಾಸ್ಯಾಂ ಸಾ ಅಲೇಶಾ, ಅಲೇಶಾ ಧೀಃ ಯಸ್ಯಸಃ ಅಲೇಶಧೀಃ ।

**ಕ್ರಿಯಾಪದ— ಅಗಾತ್-** ಇಣ್ ಗತೌ, ಇತಿ ಗತ್ಯರ್ಥಕಾತ್ ಇಣ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅಗಾತ್ ಇತಿರೂಪಂ ।

ಅಗಾತ್ ಅಗಾತಾಂ ಅಗುಃ, ಅಗಾಃ ಅಗಾತಂ ಅಗಾತ, ಅಗಾಂ ಅಗಾವ ಅಗಾಮ ।

**ಪ್ರಯೋಗ—** ಅಲೇಶಧೀಃ ಗೋದಾವರೀತಟಂ ಅಗಾತ್ (ಕರ್ತರಿ)
ಅಲೇಶಧಿಯಾ ಗೋದಾವರೀ ತಟಂ ಅಗಾಯಿ (ಕರ್ಮಣಿ)

**ವಿಶೇಷವಿಚಾರ**— ಅಗಾತ್ = ಇಣ್ ಗತೌ ಎಂಬ ಧಾತುವಿಗೆ ಲುಙ್ ಲಕಾರದಲ್ಲಿ 'ಇಣೋ ಗಾ ಲುಙಿ' (ಪಾ.ಸೂ. 2-4-45) ಎಂಬ ಸೂತ್ರದಿಂದ ಗಾ ಆದೇಶ. 'ವಿವಿಧಭೂ' ಇಲ್ಲಿ ಭೂಮಿವಾಚಕವಾದ ಭೂಶಬ್ದವನ್ನು ದ್ವಿತೀಯಾ ವಿಭಕ್ತಿ ಬಹುವಚನ 'ವಿವಿಧಭುವಃ' ಎಂದು ಪ್ರಯೋಗಿಸಬೇಕಾಗಿತ್ತು. 'ವಿವಿಧಭೂಃ' ಎಂದು ಪ್ರಯೋಗ ಮಾಡಿದ್ದು ತಪ್ಪು ಎಂದು ಆಶಂಕಿಸಕೂಡದು. (1) ಭೂಧಾತುವಿಗೆ ಔಣಾದಿಕ 'ಉ' ಪ್ರತ್ಯಯ ವಧೂಶಬ್ದದಂತೆ ಊಕಾರಾಂತವಾಗುತ್ತದೆ. ಭೂಂ ಭ್ವೌ ಭೂಃ ಎಂದು ದ್ವಿತೀಯಾ ಬಹುವಚನದಲ್ಲಿ ಭೂಃ ಎಂದು ರೂಪ. 'ಏರನೇಕಾಚೋ ಸಂಯೋಗಪೂರ್ವಸ್ಯ'(6-4-82) ಎಂಬ ಸೂತ್ರದಿಂದ ಈಕಾರಾಂತ ಧಾತೂತ್ಪನ್ನ ಶಬ್ದಗಳಿಗೆ ಯಣ್ ಬರುತ್ತದೆ. 'ಓಃ ಸುಪಿ'(6-4-82) ಎಂಬ ಸೂತ್ರದಿಂದ ಊಕಾರಾಂತ ಧಾತೂತ್ಪನ್ನ ಶಬ್ದಗಳಿಗೆ ಯಣ್(ವ್) ಬರುತ್ತದೆ. ಆದರೆ 'ನ ಭೂ ಸುಧೀಯೋಃ'(6-4-85) ಎಂಬ ಸೂತ್ರದಿಂದ 'ಭೂ ಮತ್ತು ಸುಧೀ' ಎಂಬ ಎರಡು ಶಬ್ದಗಳಿಗೆ ಆಯಣ್ ಬರುವುದಿಲ್ಲ. ಆದುದರಿಂದ ಇಲ್ಲಿರುವ ಈ ಭೂ ಶಬ್ದಕ್ಕೆ ಭ್ವೌ ಎಂಬ ರೂಪ ಹೇಗೆ ಬರುತ್ತದೆ? ಎಂದು ಶಂಕಿಸಕೂಡದು. ನ ಭೂ ಸುಧೀಯೋಃ ಎಂಬ ನಿಷೇಧವು ಏರನೇಕಾಚಃ ಮತ್ತು 'ಓಃ ಸುಪಿ' ಎಂಬ ಎರಡು ಸೂತ್ರಗಳಿಂದ ಬರುವ ಯಣ್‌ಗೆ ಮಾತ್ರವೇ 'ಇಕೋ ಯಣಚಿ' (6-4-77) ಎಂಬ ಸೂತ್ರದಿಂದ ಬರುವ ಯಣ್‌ಗೆ ನಿಷೇಧವಿಲ್ಲ. ಇಲ್ಲಿ 'ಇಕೋ ಯಣಚಿ' ಎಂಬ ಸೂತ್ರದಿಂದ ಯಣ್ ಬಂದಿದೆ. (1) ಅಥವಾ ಔಣಾದಿಕವಾದ ಕರ್ತರಿ ಡು ಪ್ರತ್ಯಯ ಮಾಡಿದಾಗ ಧಾತುವಿನ ಊಕಾರಕ್ಕೆ ಡಿತ್ವಾತ್ ಲೋಪ ಬಂದು 'ಭು' ಹ್ರಸ್ವ ಉಕಾರಾಂತ ಶಬ್ದವಾಗುತ್ತದೆ. ಪ್ರತ್ಯಯದ ಉಕಾರಕ್ಕೆ 'ಅಚಿಶ್ನು ಧಾತುಭ್ರುವಾಂ ಯ್ವೋರಿಯಙ್ ಉವಙಾ' ಎಂಬ 'ಉವಙ್' ಬರುವುದಿಲ್ಲ. ಧೇನೂಃ ಎಂಬಂತೆ ಭೂಃ ಎಂದಾಗುತ್ತದೆ. 3) ಅಥವಾ ಮಿತದ್ರ್ವಾದಿಭ್ಯಃ ಉಪಸಂಖ್ಯಾನಂ (ವಾ-2152) ಎಂಬ ವಾರ್ತಿಕದಿಂದ ಡುಪ್ರತ್ಯಯ ಹಿಂದಿನಂತೆಯೇ ರೂಪ. 4) ಅಥವಾ ವಿವಿಧಭೂಃ ಎಂಬುದು 'ಭೂಃ' ಎಂಬ ಅವ್ಯಯ ಎಂದಿಟ್ಟುಕೊಂಡರೆ ಯಾವ ತೊಂದರೆಯೂ ಇಲ್ಲ. 5) ಅಥವಾ ಮಹಾಕವಿಗಳ ಪ್ರಯೋಗದಲ್ಲಿ ಈ ರೀತಿ ವ್ಯಾಕರಣಾನುಪಪತ್ತಿಗಳನ್ನು ವಿಚಾರ ಮಾಡಬಾರದು. ಕಾಳಿದಾಸನು 'ತ್ರ್ಯಂಬಕಂ' ಎಂದು ಪ್ರಯೋಗ ಮಾಡಬೇಕಿದ್ದಾಗ 'ತ್ರಿಯಂಬಂಕಂ' ಎಂದು ಪ್ರಯೋಗ ಮಾಡಿದ್ದಾನೆ. ಒಟ್ಟಿನಲ್ಲಿ ಭೂಧಾತುವಿಗೆ ಉವಙ್ ಬಂದು 'ಭುವಂ ಭುವೌ ಭುವಃ' ಎಂದು ರೂಪವಾಗಬೇಕಿತ್ತು. ಮೇಲೆ ಹೇಳಿದ ಕ್ರಮದಿಂದ 'ಭೂಂ ಭ್ವೌ ಭೂಃ' ಎಂದು ರೂಪವಾಗುತ್ತದೆ ಎಂದು ಸಾರಾಂಶ. ಬೇರೆ ರೀತಿಗಳಿಂದಲೂ ಈ ಶಬ್ದವು ಸಾಧು ಎಂದು ಸಾಧಿಸಲಾಗಿದೆ.

★ ★ ★

**ಅವತಾರಿಕಾ**— ಆ ಗೋದಾವರೀ ತೀರದಲ್ಲಿ ಜರುಗಿದ ವಿದ್ವತ್ಸಭೆಯಲ್ಲಿ ಶ್ರೀಮದಾಚಾರ್ಯರ ವಿಜಯವನ್ನು ವರ್ಣಿಸುತ್ತಾರೆ.

**ಪ್ರಾಜ್ಞವಿತ್ತಮಯಮಾಪ್ನುಮಾಗತ್ಯೈಃ**
**ಪಂಡಿತೈರ್ದ್ವಿನವಶಾಖಿಭಿಃ ಶ್ರುತೀಃ ।**
**ಪ್ರಸ್ತುತಾ ಅಭಿದಧೌ ಪರೀಕ್ಷಕೈಃ**
**ಷಟ್ ಚ ತತ್ರ ಸಮಯಾನಖಂಡಯತ್ ॥ 15 ॥**

**ಪದಚ್ಛೇದ**— ಪ್ರಾಜ್ಞವಿತ್ತಂ, ಅಯಂ, ಆಪ್ನುಂ, ಆಗತ್ಯೈಃ, ಪಂಡಿತೈಃ, ದ್ವಿನವಶಾಖಿಭಿಃ, ಶ್ರುತೀಃ, ಪ್ರಸ್ತುತಾಃ, ಅಭಿದಧೌ, ಪರೀಕ್ಷಕೈಃ ಷಟ್, ಚ, ತತ್ರ, ಸಮಯಾನ್, ಅಖಂಡಯತ್ ।

**ಅನ್ವಯ**— ಅಯಂ, ತತ್ರ, ಪ್ರಾಜ್ಞವಿತ್ತಂ, ಆಪ್ನುಂ, ಆಗತ್ಯೈಃ, ದ್ವಿನವಶಾಖಿಭಿಃ, ಪರೀಕ್ಷಕೈಃ, ಪಂಡಿತೈಃ, ಪ್ರಸ್ತುತಾಃ, ಶ್ರುತೀಃ, ಅಭಿದಧೌ, ಷಟ್ ಸಮಯಾನ್, ಚ, ಅಖಂಡಯತ್ ।

**ಅನ್ವಯಾರ್ಥ**—

ಅಯಂ = ಈ ಮಧ್ವಾಚಾರ್ಯರು,

**ತತ್ರ** = ಆ ಗೋದಾವರೀ ತೀರದಲ್ಲಿ,
**ಪ್ರಾಜ್ಞವಿತ್ತಂ** = ಪಂಡಿತರು ಬುದ್ಧಿ ತಾರತಮ್ಯದಿಂದ ಹೊಂದಲು ಯೋಗ್ಯವಾದ ದ್ರವ್ಯವನ್ನು,
**ಆಪ್ತುಂ** = ಹೊಂದುವುದಕ್ಕೆ,
**ಆಗತೈಃ** = ಬಂದಿದ್ದ
**ದ್ವಿನವಶಾಖಿಭಿಃ** = ಹದಿನೆಂಟು ಶಾಖೆಗಳನ್ನು ಅರಿತ
**ಪರೀಕ್ಷಕೈಃ** = ಪರೀಕ್ಷೆಯನ್ನು ಮಾಡುವ
**ಪಂಡಿತೈಃ** = ವಿದ್ವಾಂಸರಿಂದ,
**ಪ್ರಸ್ತುತಾಃ** = ಪ್ರಸ್ತಾಪಿಸಲ್ಪಟ್ಟ
**ಶ್ರುತೀಃ** = ವೇದವಾಕ್ಯಗಳನ್ನು,
**ಅಭಿದಧೌ** = ಹೇಳಿದರು,
**ಷಟ್** = ಆರು,
**ಸಮಯಾನ್** = ಸಿದ್ಧಾಂತಗಳನ್ನು,
**ಅಖಂಡಯತ್** = ಖಂಡಿಸಿದರು.

**ತಾತ್ಪರ್ಯ—** ಆ ಗೋದಾವರೀ ತೀರದಲ್ಲಿ ಒಂದು ನಗರದಲ್ಲಿ ದೊಡ್ಡ ಪಂಡಿತ ಸಭೆಯು ಸೇರಿತ್ತು. ಅಲ್ಲಿ ತಮ್ಮ ತಮ್ಮ ಪಾಂಡಿತ್ಯವನ್ನು ತೋರಿಸಿ ಆ ಪಾಂಡಿತ್ಯದ ತಾರತಮ್ಯಾನುಸಾರವಾಗಿ ಪಂಡಿತರು ಹಣ ಮತ್ತಿತರ ವಸ್ತುರೂಪದಿಂದ ಬಹುಮಾನವನ್ನು ಪಡೆಯುತ್ತಿರುವುದು ರೂಢಿಯಾಗಿತ್ತು. ಆ ಸಭೆಯಲ್ಲಿ ಹದಿನೆಂಟು ವೇದಶಾಖೆಗಳನ್ನು ಬಲ್ಲ ಪರೀಕ್ಷಕರಾದ ಪಂಡಿತರು ಸೇರಿದ್ದರು. ಶ್ರೀಮಧ್ವಾಚಾರ್ಯರು ಅಲ್ಲಿಗೆ ಬಂದ ಕೂಡಲೇ ಆ ಪರೀಕ್ಷಕ ಪಂಡಿತರು ಆಚಾರ್ಯರನ್ನು ಪರೀಕ್ಷಿಸಲು ಕೆಲವು ಶ್ರುತಿವಾಕ್ಯಗಳನ್ನು ಪ್ರಸ್ತಾಪಿಸಿದರು. ಆಚಾರ್ಯರು ಬೇರೆ ಬೇರೆ ಶಾಖೆಗಳಲ್ಲಿದ್ದ ಆ ವೇದವಾಕ್ಯಗಳನ್ನೆಲ್ಲಾ ಪೂರ್ತಿಯಾಗಿ ಹೇಳಿದರು. ಮುಂದೆ ಅಲ್ಲಿ ಸೇರಿದ್ದ ಪಂಡಿತರು ತಮ್ಮ ತಮ್ಮ ದರ್ಶನಾನುಸಾರವಾಗಿ ಸಿದ್ಧಾಂತಗಳನ್ನು ಸ್ಥಾಪಿಸಿದಾಗ ಆಚಾರ್ಯರು ಅಲ್ಲಿ ಪ್ರಸ್ತುತವಾದ ಆರು ಸಿದ್ಧಾಂತಗಳನ್ನು ಖಂಡಿಸಿದರು.

**ವಿಶೇಷಾಂಶ—** ಭಾಟ್ಟ, ಪ್ರಾಭಾಕರ, ವೈಶೇಷಿಕ, ನೈಯಾಯಿಕ, ಬೌದ್ಧ, ಚಾರ್ವಾಕ ಇವೇ ಆರು ಸಿದ್ಧಾಂತಗಳು. ಅವನ್ನು ಆಚಾರ್ಯರು ಪೂರ್ವಪಕ್ಷಿಗಳ ಸಿದ್ಧಾಂತವನ್ನು ಅನುವಾದ ಮಾಡಿ ಖಂಡಿಸಿದರು.

ವಿಗ್ರಹ—

**ಪ್ರಾಜ್ಞವಿತ್ತಂ—** ಪ್ರಾಜ್ಞಾನಾಂ ವಿತ್ತಂ ಪ್ರಾಜ್ಞವಿತ್ತಂ, (ಅಥವಾ ಪ್ರಾಜ್ಞೈಃ ಲಭ್ಯಂ ವಿತ್ತಂ ಪ್ರಾಜ್ಞವಿತ್ತಂ ಮಧ್ಯಮ-ಪಲೋಪಿ ಸಮಾಸ)

**ದ್ವಿನವಶಾಖಿಭಿಃ—** ದ್ವಿಗುಣಿತಾಃ ನವ ದ್ವಿನವ, ದ್ವಿನವ ಚ ತಾಃ ಶಾಖಾಶ್ಚ ದ್ವಿನವಶಾಖಾಃ ತಾಃ ಏಷಾಂ ಸಂತೀತಿ ದ್ವಿನವಶಾಖಿನಃ, ತೈಃ ।

**ವಿಶೇಷಾಂಶ—** ದ್ವೇಚ (ದ್ವಿಗುಣಿತ) ತಾಃ ನವ ಚ ಎಂದು ವಿಗ್ರಹ ಮಾಡಿದರೂ ಹದಿನೆಂಟು ಎಂದು ಅರ್ಥವಾಗುತ್ತದೆ.

**ಕ್ರಿಯಾಪದ— ಅಭಿದಧೌ-** ಅಭಿಉಪಸರ್ಗ ಪೂರ್ವಕಾತ್ ಡುಧಾಞ್ ಧಾರಣಪೋಷಣಯೋಃ ಇತಿ ಧಾರಣ-ಪೋಷಣಾರ್ಥಕಾತ್ ಧಾಧಾತೋಃ, ಪರಸ್ಮೈಪದಿನಃ ಸಕರ್ಮಕಾತ್ ಕರ್ತರಿ, ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಅಭಿದಧೌ ಇತಿ ರೂಪಂ ।

ಅಭಿ+ದಧೌ, ದಧತುಃ ದಧುಃ, ದಧಿಥಃ ದಧಾಥ, ದಧಥುಃ ದಧ, ದಧೌ ದಧಿವ ದಧಿಮ ।

**ಅಖಂಡಯತ್-** ಖಡಿಭೇದನೇ ಇತಿ ಭೇದನಾರ್ಥಕಾತ್ ಖಂಡ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅಖಂಡಯತ್ ಇತಿ ರೂಪಂ ।

ಅಖಂಡಯತ್ ಅಖಂಡಯತಾ ಅಖಂಡಯನ್, ಅಖಂಡಯಃ ಅಖಂಡಯತಂ ಅಖಂಡಯತ,
ಅಖಂಡಯಂ ಅಖಂಡಯಾವ ಅಖಂಡಯಾಮ ।

**ಪ್ರಯೋಗ —** ಅಯಂ ಶ್ರುತೀಃ ಅಭಿದಧೌ (ಕರ್ತರಿ) ಅನೇನ ಶ್ರುತಯಃ ಅಭಿದಧಿರೇ (ಕರ್ಮಣಿ) । ಅಯಂ ಷಟ್ ಸಮಯಾನ್ ಅಖಂಡಯತ್ (ಕರ್ತಂ) ಅನೇನ ಷಟ್ ಸಮಯಾಃ ಅಖಂಡ್ಯಂತ (ಕರ್ಮಣಿ) ।

**ಕೋಶ—** 'ವಿತ್ತಂ ವಸ್ತು ವಸು ದ್ರವ್ಯಂ ಸ್ವಾರ್ಥಂ(ಸ್ವೋರ್ಥೋ)ರಾದ್ರವಿಣಂ ಧನಂ' ಇತಿ ಧನಂಜಯ ಕೋಶ । 'ಸಮಯಾಃ ಶಪಥಾಚಾರಕಾಲಸಿದ್ಧಾಂತಸಂವಿದಃ' ಅಮರಕೋಶ ।

★ ★ ★

**ಅವತಾರಿಕಾ—** ಶ್ರೀಮದಾಚಾರ್ಯರಿಂದ ವಾದದಲ್ಲಿ ಪರಾಜಿತರಾದ ವಾದಿಗಳು ಶ್ರೀಮದಾನಂದತೀರ್ಥ-ಭಗವತ್ಪಾದರನ್ನು ಸ್ತುತಿಸಿದರೆನ್ನುತ್ತಾರೆ.

**ತೇ ಪೃಥಕ್ ಪೃಥಗಮುಂ ಸ್ವಶಾಖಯಾ**
**ದರ್ಶನೇನ ಚ ಪರೀಕ್ಷ್ಯ ನಿರ್ಜಿತಾಃ ।**
**ಸರ್ವವಿತ್ ತ್ವಮಸಿ ಮುಖ್ಯತಃ ಕವೇ**
**ನಾಸ್ತಿ ತೇ ಸದೃಶ ಇತ್ಯಥಾಬ್ರುವನ್ ॥ 16 ॥**

**ಪದಚ್ಛೇದ—** ತೇ, ಪೃಥಕ್, ಪೃಥಕ್, ಅಮುಂ, ಸ್ವಶಾಖಯಾ, ದರ್ಶನೇನ, ಚ, ಪರೀಕ್ಷ್ಯ, ನಿರ್ಜಿತಾಃ, ಸರ್ವವಿತ್, ತ್ವಂ, ಅಸಿ, ಮುಖ್ಯತಃ, ಕವೇ, ನ ಅಸ್ತಿ, ತೇ, ಸದೃಶ, ಇತಿ, ಅಥ, ಅಬ್ರುವನ್.

**ಅನ್ವಯ—** ತೇ, ಅಮುಂ, ಪೃಥಕ್, ಪೃಥಕ್, ಸ್ವಶಾಖಯಾ, ದರ್ಶನೇನ, ಚ, ಪರೀಕ್ಷ್ಯ, ನಿರ್ಜಿತಾಃ,(ಸಂತಃ) ಅಥ, ಕವೇ, ತ್ವಂ, ಮುಖ್ಯತಃ, ಸರ್ವವಿತ್, ಅಸಿ, ತೇ, ಸದೃಶಃ, ನಾಸ್ತಿ, ಇತಿ, ಅಬ್ರುವನ್ ।

**ಅನ್ವಯಾರ್ಥ—**

ತೇ = ಆ ಪಂಡಿತರು,
**ಅಮುಂ** = ಈ ಶ್ರೀಮಧ್ವಾಚಾರ್ಯರನ್ನು,
**ಪೃಥಕ್ ಪೃಥಕ್** = ಪ್ರತ್ಯೇಕ ಪ್ರತ್ಯೇಕವಾಗಿ,
**ಸ್ವಶಾಖಯಾ** = ತಮ್ಮ ಶಾಖೆಯ ವೇದದಿಂದ,
**ದರ್ಶನೇನ ಚ** = ತಮ್ಮ ಸಿದ್ಧಾಂತದಿಂದಲೂ,
**ಪರೀಕ್ಷ್ಯ** = ಪರೀಕ್ಷಿಸಿ,
**ನಿರ್ಜಿತಾಃ (ಸಂತಃ)** = ಪರಾಜಿತರಾಗಿ,
**ಅಥ** = ಅನಂತರ (ಅವರು),
**ಕವೇ** = ಜ್ಞಾನಿಗಳಾದ ಮಧ್ವಾಚಾರ್ಯರೇ,
**ತ್ವಂ** = ನೀವು,
**ಮುಖ್ಯತಃ** = ಸರಿಯಾದ ಅರ್ಥದಲ್ಲಿ ಔಪಚಾರಿಕವಲ್ಲದೆ,

**ಸರ್ವವಿತ್** = ಸರ್ವಜ್ಞರಾಗಿ,

**ಅಸಿ** = ಆಗಿದ್ದೀರಿ,

**ತೇ** = ನಿಮಗೆ,

**ಸದೃಶಃ** = ಸಮಾನರು,

**ನಾಸ್ತಿ** = ಇಲ್ಲ

**ಇತಿ** = ಎಂದು,

**ಅಬ್ರುವನ್** = ಹೇಳಿದರು.

**ತಾತ್ಪರ್ಯ—** ಆ ಪಂಡಿತರು ಶ್ರೀಮಧ್ವಾಚಾರ್ಯರನ್ನು ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮ ತಮ್ಮ ಶಾಖೆಯ ವೇದ ಮಂತ್ರಗಳನ್ನು ಹೇಳಿರಿ ಎಂದು ಕೇಳಿದರು. ಆಚಾರ್ಯರು ಆ ವೇದಭಾಗಗಳನ್ನೆಲ್ಲಾ ಪೂರ್ಣವಾಗಿ ಹೇಳಿದರು. ತಮ್ಮ ಸಿದ್ಧಾಂತದ ವಿಷಯದಲ್ಲಿ ಬಲವಾದ ಪೂರ್ವಪಕ್ಷವನ್ನು ಮಾಡಿದರು. ಆಚಾರ್ಯರು ಅವರ ಸಿದ್ಧಾಂತವನ್ನು ಅತ್ಯಂತ ಬಲವತ್ತಾದ ಯುಕ್ತಿಗಳಿಂದ ಖಂಡಿಸಿದರು. ಆಗ ಆ ಪಂಡಿತರೆಲ್ಲರೂ ಸೋತರು. ಅನಂತರ ಅವರೆಲ್ಲರೂ 'ಜ್ಞಾನಿವರ್ಯ ರಾದ ಶ್ರೀ ಮಧ್ವಾಚಾರ್ಯರೇ ನೀವು ನಿಜವಾಗಿಯೂ ಸರ್ವಜ್ಞರಾಗಿದ್ದೀರಿ. ನಿಮಗೆ ಸಮಾನರು ಲೋಕದಲ್ಲಿ ಯಾರೂ ಇಲ್ಲ' ಎಂದು ಮುಕ್ತ ಕಂಠದಿಂದ ಹೊಗಳಿದರು.

**ವಿಗ್ರಹ—**

**ಸ್ವಶಾಖಾ—** ಸ್ವಸ್ಯ ಶಾಖಾ (ಸ್ವೇಷಾಂ ಶಾಖಾ ಇತಿ ವಾ) ಸ್ವಶಾಖಾ, ತಯಾ ।

**ಸರ್ವವಿತ್—** ಸರ್ವಂ ವೇತ್ತೀತಿ ಸರ್ವವಿತ್ ।

**ಕ್ರಿಯಾಪದ— ಅಸಿ-** ಅಸ ಭುವಿ ಇತಿ ಸತ್ತಾರ್ಥಕಾತ್ ಅಸಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ಕರ್ತರಿ ವರ್ತಮಾನೇ ಲಟ್ ಮಧ್ಯಮಪುರುಷೇ ಏಕವಚನೇ **ಅಸಿ** = ಇತಿರೂಪಂ । ಅಸ್ತಿ ಪ್ರಥಮಪುರುಷೇ ಏಕವಚನೇ ಅಸ್ತಿ ಇತಿರೂಪಂ ।

ಅಸ್ತಿ ಸ್ತಃ ಸಂತಿ, ಅಸಿ ಸ್ಥಃ, ಸ್ಥ ಅಸ್ಮಿ ಸ್ವಃ ಸ್ಮಃ ।

**ಅಬ್ರುವನ್-** ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಧಾತೋಃ ಪರಸ್ಮೈಪದಿನಃ ಅನದ್ಯತನ-ಭೂತೇ ಲಙ್ ಪ್ರಥಮಪುರುಷೇ ಬಹುವಚನೇ ಅಬ್ರುವನ್ ಇತಿರೂಪಂ ।

ಅಬ್ರವೀತ್ ಅಬ್ರೂತಾಂ ಅಬ್ರುವನ್, ಅಬ್ರವೀಃ, ಅಬ್ರೂತಂ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ ।

**ಪ್ರಯೋಗ—** ತ್ವಂ ಮುಖ್ಯತಃ ಸರ್ವವಿತ್ ಅಸಿ (ಅಕರ್ಮಕ ಕರ್ತರಿ) ತ್ವಯಾ ಮುಖ್ಯತಃ ಸರ್ವವಿದಾ ಭೂಯತೇ (ಭಾವೇ) । ತೇ ಸದೃಶಃ ನಾಸ್ತಿ (ಅಕರ್ಮಕ ಕರ್ತರಿ) ತೇ ಸದೃಶೇನ ನ ಭೂಯತೇ (ಭಾವೇ) ತೇ ಅಮುಂ ಅಬ್ರುವನ್ (ಸಕರ್ಮಕ ಕರ್ತರಿ) ತೈ ಅಸೌ ಔಚ್ಯತ (ಕರ್ಮಣಿ) ।

★ ★ ★

**ಅವತಾರಿಕಾ—** ಆ ಸಭೆಯಲ್ಲಿ ಆರು ಶಾಸ್ತ್ರ ಬಲ್ಲವರನ್ನೂ ಸೋಲಿಸಿದ ಮೇಲೆ ಅಲ್ಲಿನ ಸಭಿಕರಲ್ಲಿ ಅತಿಶ್ರೇಷ್ಠರೆನಿಸಿದ ಶೋಭನ ಭಟ್ಟರು ಆಚಾರ್ಯರ ಪಾಂಡಿತ್ಯಕ್ಕೆ ಮನಸೋತು ವಂದಿಸಿದರೆನ್ನುತ್ತಾರೆ.

**ಯಸ್ತ್ರಯೀಸಕಲಪಕ್ಷಶಿಕ್ಷಕಃ**

**ತತ್ರ ಸಂಸದಿ ವರಿಷ್ಠಸಮ್ಮತಃ ।**

**ಶೋಭನೋಪಪದಭಟ್ಟನಾಮಕಃ**

**ಪೂರ್ಣಸಂಖ್ಯಮನಮನ್ಮುಹುರ್ಮುದಾ ॥ 17 ॥**

**ಪದಚ್ಛೇದ—** ಯಃ, ತ್ರಯೀಸಕಲಪಕ್ಷಶಿಕ್ಷಕಃ, ತತ್ರ, ಸಂಸದಿ ವರಿಷ್ಠಸಮ್ಮತಃ, ಶೋಭನೋಪಪದಭಟ್ಟನಾಮಕಃ, ಪೂರ್ಣಸಂಖ್ಯಂ, ಅನಮತ್, ಮುಹುಃ ಮುದಾ ।

**ಅನ್ವಯ—** ತ್ರಯೀಸಕಲಪಕ್ಷಶಿಕ್ಷಕಃ, ತತ್ರ, ಸಂಸದಿ ವರಿಷ್ಠಸಮ್ಮತಃ, ಶೋಭನೋಪಪದಭಟ್ಟನಾಮಕಃ, (ಆಸೀತ್) ಸಃ, ಪೂರ್ಣಸಂಖ್ಯಂ, ಮುಹುಃ, ಮುದಾ, ಅನಮತ್ ।

**ಅನ್ವಯಾರ್ಥ—**

**ತ್ರಯೀ ಸಕಲ** = ಮೂರು ವೇದಗಳ ಸಕಲ ಎಲ್ಲಾ,

**ಪಕ್ಷ ಶಿಕ್ಷಕಃ** =ಸಿದ್ಧಾಂತಗಳ, ಉಪದೇಶಕವಾದ, (ನಿರ್ಣಯಕನಾದ)

**ತತ್ರ ಸಂಸದಿ** = ಆ ಸಭೆಯಲ್ಲಿ

**ವರಿಷ್ಠಸಮ್ಮತಃ** = ಶ್ರೇಷ್ಠನೆಂದು ತಿಳಿಯಲ್ಪಟ್ಟ (ಪೂರ್ಣಪ್ರಜ್ಞರಿಗೆ ಪ್ರಿಯವಾದ),

**ಯಃ** = ಯಾವ,

**ಶೋಭನೋಪಪದಭಟ್ಟನಾಮಕಃ** = ಶೋಭನ ಎಂಬ ಹಿಂದಿನಪದವುಳ್ಳ ಭಟ್ಟನೆಂಬ ಹೆಸರುಳ್ಳವನು,

**ಪೂರ್ಣಸಂಖ್ಯಂ** = ಶ್ರೀಪೂರ್ಣಪ್ರಜ್ಞರನ್ನು

**ಮುಹುಃ** = ಕೂಡಲೇ, (ಪುನಃ ಪುನಃ ಆದರದಿಂದ)

**ಮುದಾ** = ಸಂತೋಷದಿಂದ,

**ಅನಮತ್** = ನಮಸ್ಕರಿಸಿದನು.

**ತಾತ್ಪರ್ಯ—** ಆ ಸಭೆಯಲ್ಲಿ ಶೋಭನಭಟ್ಟರೆಂಬ ಪಂಡಿತರಿದ್ದರು. ಅವರು ಮೂರು ವೇದಗಳ ಎಲ್ಲಾ ಶಾಖೆಗಳು ಮತ್ತು ಸಿದ್ಧಾಂತಗಳಲ್ಲಿ ವಿಪ್ರತಿಪತ್ತಿ (ಸಂಶಯ)ಯುಂಟಾದಾಗ ಇದು ಹೀಗೆಯೇ ಸರಿ ಎಂದು ನಿರ್ಣಯ ಮಾಡುತ್ತಿದ್ದರು. ಆದ್ದರಿಂದಲೇ ಅವರನ್ನು ಆ ಸಭೆಯಲ್ಲಿ ಸೇರಿದ್ದ ಪಂಡಿತರಲ್ಲಿ ಶ್ರೇಷ್ಠರೆಂದು ಎಲ್ಲರೂ ಒಪ್ಪಿದ್ದರು. ಅವರೂ ಕೂಡ ಶ್ರೀಮಧ್ವಾಚಾರ್ಯರನ್ನು ವೇದಶಾಸ್ತ್ರಗಳಲ್ಲಿ ಪರೀಕ್ಷಿಸಿ ಪರಾಜಯ ಹೊಂದಿ ವಿಚಾರಪೂರ್ವಕವಾಗಿ ನಿರ್ಣಯ ಮಾಡಬಲ್ಲ ಸರ್ವಜ್ಞರು ಈ ಶ್ರೀಮಧ್ವಾಚಾರ್ಯರೇ ಸರಿ. ಇವರ ಶಿಷ್ಯನಾಗಿ ವಿಶೇಷಜ್ಞಾನವನ್ನು ಪಡೆಯುತ್ತೇನೆ ಎಂದು ನಿರ್ಧರಿಸಿ ತುಂಬಾ ಸಂತೋಷದಿಂದ ಶ್ರೀಪೂರ್ಣಪ್ರಜ್ಞರನ್ನು ಕೂಡಲೇ ನಮಸ್ಕರಿಸಿದರು, ಪುನಃ ಪುನಃ ಭಕ್ತಿಯಿಂದ ನಮಸ್ಕರಿಸಿದರು.

**ವಿಗ್ರಹ—**

**ತ್ರಯೀಸಕಲಪಕ್ಷಶಿಕ್ಷಕಃ—** ಸಕಲಾಶ್ಚತೇ ಪಕ್ಷಾಶ್ಚ ಸಕಲಪಕ್ಷಾಃ, ತ್ರಯ್ಯಾಃ, ಸಕಲಪಕ್ಷಾಃ ತ್ರಯೀಸಕಲಪಕ್ಷಾಃ, ತ್ರಯೀಸಕಲಪಕ್ಷಾಣಾಂ ಶಿಕ್ಷಕಃ, ತ್ರಯೀಸಕಲಪಕ್ಷಶಿಕ್ಷಕಃ ।

**ವರಿಷ್ಠಸಮ್ಮತಃ—** ವರಿಷ್ಠ ಇತಿ ಸಮ್ಮತಃ ವರಿಷ್ಠಸಮ್ಮತಃ ।

**ಶೋಭನೋಪಪದಭಟ್ಟನಾಮಕಃ—** ಶೋಭನ ಇತಿ ಉಪಪದಂ ಯಸ್ಯ ತತ್ ಶೋಭನೋಪಪದಂ ಭಟ್ಟ ಇತಿ ನಾಮ ಭಟ್ಟನಾಮ, ಶೋಭನೋಪಪದಂ ಭಟ್ಟನಾಮಕಂ ಯಸ್ಯಸಃ ಶೋಭನೋಪಪದಭಟ್ಟ-ನಾಮಕಃ ।

**ಪೂರ್ಣಸಂಖ್ಯಂ—** ಪೂರ್ಣಾ ಸಂಖ್ಯಾ ಯಸ್ಯ ಸಃ ಪೂರ್ಣಸಂಖ್ಯಃ ತಂ ।

**ಕೋಶ—** 'ಚರ್ಚಾ ಸಂಖ್ಯಾ ವಿಚಾರಣಾ' ಇತ್ಯಮರಃ ಸಂಖ್ಯಾ ಎಂದರೆ ವಿಚಾರ ಪ್ರಜ್ಞೆ ಎಂದು ಅರ್ಥ. 'ಶ್ರುತಿಃ ಸ್ತ್ರೀ ವೇದ ಆಮ್ನಾಯಃ ತ್ರಯೀ' 'ಸ್ತ್ರಿಯಾಂ ಋಕ್‌ಸಾಮಯಜುಷೀ ಇತಿ ವೇದಾ ಯಸ್ತ್ರಯೀ' ಇತ್ಯಮರಃ, ತ್ರಯೀಎಂದರೆ ವೇದ, ಋಗ್ವೇದ ಯಜುರ್ವೇದ ಸಾಮವೇದ ಎಂಬ ಮೂರು ವೇದಗಳು ಎಂದೂ ಅರ್ಥ ।

**ಕ್ರಿಯಾಪದ—** **ಅನಮತ್**- ಣಮು ಪ್ರಹ್ವತ್ವೇ ಶಬ್ದೇ ಚ, ಇತಿ ಪ್ರಹತ್ವಶಬ್ದಾರ್ಥಕಾತ್ ನಮ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅನಮತ್ ಇತಿ ರೂಪಂ ।

ಅನಮತ್, ಅನಮತಾಂ, ಅನಮನ್, ಅನಮಃ, ಅನಮತಂ ಅನಮತ, ಅನಮಂ, ಅನಮಾವ, ಅನಮಾಮ ।

**ಪ್ರಯೋಗ—** ಶೋಭನೋಪಪದಭಟ್ಟನಾಮಕಃ ಪೂರ್ಣಸಂಖ್ಯಂ ಅನಮತ್ (ಕರ್ತರಿ) ।
ಶೋಭನೋಪಪದಭಟ್ಟನಾಮಕೇನ ಪೂರ್ಣಸಂಖ್ಯಃ ಅನಮ್ಯತ (ಕರ್ಮಣಿ) ।

★ ★ ★

**ಅವತಾರಿಕಾ—** ಆ ಶೋಭನಭಟ್ಟರ ಪಾಂಡಿತ್ಯಾತಿಶಯವನ್ನು ವರ್ಣಿಸುತ್ತಾರೆ.

**ಯಸ್ತು ತಾರ್ಕಿಕಶಿಖಾಮಣಿಃ ಸುಧೀ-**
**ರ್ವರ್ತಮಾನಸಮಯಾನ್ನಿರಾಕರೋತ್ ।**
**ವೇದಭಾರತಪುರಾಣನಿಷ್ಠಿತೋ**
**ಭಾಷ್ಯಮೇತದಶೃಣೋತ್ ಸ ಮಧ್ವತಃ ॥ 18 ॥**

**ಪದಚ್ಛೇದ—** ಯಃ, ತು, ತಾರ್ಕಿಕಶಿಖಾಮಣಿಃ, ಸುಧೀ, ವರ್ತಮಾನಸಮಯಾನ್, ನಿರಾಕರೋತ್, ವೇದಭಾರತ-ಪುರಾಣನಿಷ್ಠಿತಃ, ಭಾಷ್ಯಂ ಏತತ್ ಅಶೃಣೋತ್, ಸಃ, ಮಧ್ವತಃ ।

**ಅನ್ವಯ—** ತಾರ್ಕಿಕಶಿಖಾಮಣಿಃ, ಸುಧೀಃ, ಯಃ, ತು, ವರ್ತಮಾನಸಮಯಾನ್, ನಿರಾಕರೋತ್, ವೇದಭಾರತ-ಪುರಾಣನಿಷ್ಠಿತಃ, ಏತತ್, ಭಾಷ್ಯಂ, ಮಧ್ವತಃ. ಅಶೃಣೋತ್ ।

**ಅನ್ವಯಾರ್ಥ—**

**ತಾರ್ಕಿಕಶಿಖಾಮಣಿಃ** = ಯುಕ್ತಿಗಳಿಂದ ವಿಚಾರ ಮಾಡಿ ನಿರ್ಣಯ ಮಾಡುವವರಲ್ಲಿ ಶ್ರೇಷ್ಠರಾದ,
**ಸುಧೀಃ** = ಸಾತ್ವಿಕ ಬುದ್ಧಿಯುಳ್ಳ ಪಂಡಿತರಾದ,
**ಯಃ ತು** = ಯಾವ ಶೋಭನಭಟ್ಟರು,
**ವರ್ತಮಾನಸಮಯಾನ್** = ಆ ಕಾಲದಲ್ಲಿದ್ದ ಭಾಟ್ಟಾದಿ ಸಿದ್ಧಾಂತಗಳನ್ನು,
**ನಿರಾಕರೋತ್** = ಖಂಡಿಸಿದ್ದರೋ,
**ವೇದಭಾರತಪುರಾಣನಿಷ್ಠಿತಃ**= ವೇದಗಳು, ಮಹಾಭಾರತ, ಹದಿನೆಂಟು ಪುರಾಣಗಳು ಇವುಗಳಲ್ಲಿ ಹೇಳಿರುವ ಆಚಾರಗಳಲ್ಲಿ ಆಸಕ್ತರಾದ,
**ಸಃ** = ಆ ಶೋಭನಭಟ್ಟರು,
**ಏತತ್‌ಭಾಷ್ಯಂ** = ಆಚಾರ್ಯ ಮಧ್ವರು ಮಾಡಿದ ಈ ಬ್ರಹ್ಮಸೂತ್ರಭಾಷ್ಯವನ್ನು,
**ಮಧ್ವತಃ** = ಶ್ರೀಪೂರ್ಣಪ್ರಜ್ಞರಿಂದಲೇ,
**ಅಶೃಣೋತ್** = ಕೇಳಿದರು.

**ತಾತ್ಪರ್ಯ—** ಶ್ರೀಶೋಭನಭಟ್ಟರು ಯುಕ್ತಿಪೂರ್ವಕವಾಗಿ ವಿಚಾರಮಾಡಿ ನಿರ್ಣಯಿಸುವವರಲ್ಲಿ ಶ್ರೇಷ್ಠರಾಗಿದ್ದರು. ಮತ್ತು ಸಾತ್ವಿಕ ಬುದ್ಧಿಯುಳ್ಳ ಉತ್ತಮ ಪಂಡಿರಾಗಿದ್ದರು. ಅವರು ಆ ಕಾಲದಲ್ಲಿದ್ದ ಭಾಟ್ಟ, ಪ್ರಾಭಾಕರ ಮುಂತಾದ ಎಲ್ಲಾ

ಸಿದ್ಧಾಂತಗಳನ್ನು ವಿಮರ್ಶಿಸಿ ಖಂಡಿಸಿದ್ದರು. ಹೀಗೆ ಆಚಾರ್ಯರ ಶಾಸ್ತ್ರಪ್ರಾದುರ್ಭಾವದ ಮೊದಲು ಇದ್ದ ಎಲ್ಲಾ ಮತ ಸಿದ್ಧಾಂತಗಳನ್ನು ಪಕ್ಷಪಾತವಿಲ್ಲದೆ ತಮ್ಮ ಬುದ್ಧಿಯಿಂದ ವಿಮರ್ಶಿಸಿ ಯುಕ್ತಿಯಿಂದ ಖಂಡಿಸಿ, ತಾವು ವೇದಗಳು ಮಹಾಭಾರತ ಮತ್ತು ಹದಿನೆಂಟು ಪುರಾಣಗಳನ್ನು ವಿಮರ್ಶಿಸಿ ಅಲ್ಲಿ ಹೇಳಿರುವ ಆಚಾರಗಳಲ್ಲಿ ಆಸಕ್ತರಾಗಿದ್ದರು. ಇಂತಹ ಶೋಭನ ಭಟ್ಟರು ಆಚಾರ್ಯರ ಶಿಷ್ಯರಾಗಿ ಅವರು ಮಾಡಿರುವ ಭಾಷ್ಯವನ್ನು ಅವರ ಮುಖದಿಂದಲೇ ಶ್ರವಣ ಮಾಡಿದರು.

ವಿಗ್ರಹ—

**ತಾರ್ಕಿಕಶಿಖಾಮಣಿಃ**— ತರ್ಕಂ ಅಧೀಯತೇ ವಿಂದಂತಿ ವಾ ತಾರ್ಕಿಕಾಃ, ತಾರ್ಕಿಕಾಣಾಂ ಶಿಖಾಮಣಿಃ ತಾರ್ಕಿಕಶಿಖಾಮಣಿಃ ।

**ಸುಧೀಃ**— ಶೋಭನಾ ಧೀಃ, ಯಸ್ಯ ಸಃ ಸುಧೀಃ ।

**ವರ್ತಮಾನಸಮಯಾನ್**— ವರ್ತಮಾನಾಶ್ಚ ತೇ ಸಮಯಾಶ್ಚ ವರ್ತಮಾನಸಮಯಾಃ, ತಾನ್ ।

**ವೇದಭಾರತಪುರಾಣನಿಷ್ಠಿತಃ**— ವೇದಾಶ್ಚ ಭಾರತಂ ಚ ಪುರಾಣಾನಿ ಚ ವೇದಭಾರತಪುರಾಣಾನಿ ನಿಷ್ಠಾ ಅಸ್ಯ ಸಂಜಾತಾ ಇತಿ ನಿಷ್ಠಿತಃ, ವೇದಭಾರತಪುರಾಣೇಷು ನಿಷ್ಠಿತಃ ವೇದಭಾರತಪುರಾಣನಿಷ್ಠಿತಃ ।

**ಮಧ್ವತಃ**— ಮಧ್ವಾತ್ ಇತಿ ಮಧ್ವತಃ ।

**ವಿಶೇಷವಿಚಾರ**— ತಾರ್ಕಿಕ ಎಂಬಲ್ಲಿ 'ತರ್ಕಂ ಅಧೀತೇ' ಅಥವಾ ವೇದ, ತರ್ಕ(ಯುಕ್ತಿ)ವನ್ನು ಅಧ್ಯಯನ ಮಾಡುತ್ತಾನೆ, ಅಥವಾ ತಿಳಿಯುತ್ತಾನೆ ಎಂಬ ಅರ್ಥದಲ್ಲಿ 'ಕ್ರತೂಕ್ಥಾದಿ ಸೂತ್ರಾಂತಾತ್ ಠಕ್' (4-3-60) ಎಂಬ ಸೂತ್ರದಿಂದ ಠಕ್ ಪ್ರತ್ಯಯ. ನಿಷ್ಠಿತಃ ಎಂಬಲ್ಲಿ 'ತದಸ್ಯ ಸಂಜಾತಂ ತಾರಕಾದಿಭ್ಯ ಇತಚ್' (5-2-36) ಎಂಬ ಸೂತ್ರದಿಂದ ಇತಚ್ ಪ್ರತ್ಯಯ. ಮಧ್ವತಃ ಎಂಬಲ್ಲಿ 'ಮಧ್ವಾತ್ ಇತಿ ಮಧ್ವತಃ' ಎಂದು ವಿಗ್ರಹ ಅಪಾದಾನೇ ಚಾಹೀಯ ರುಹೋಃ (5-4-45) ಎಂಬ ಸೂತ್ರದಿಂದ ತಸಿ ಪ್ರತ್ಯಯ.

**ಕ್ರಿಯಾಪದ**— **ನಿರಾಕರೋತ್**- ನಿರ್ ಆಙ್ ಇತಿ ಉಪಸರ್ಗದ್ವಯಪೂರ್ವಕಾತ್ ಡುಕೃಞಕರಣೇ ಇತಿ ಕರಣಾರ್ಥಕಾತ್ ಕೃಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ನಿರಾಕರೋತ್ ಇತಿರೂಪಂ ।

ನಿರಾಕರೋತ್, ನಿರ್+ಅಕರೋತ್ ಅಕುರುತಾಂ ಅಕುರ್ವನ್, ಅಕರೋಃ ಅಕುರುತಂ ಅಕುರುತ,
ಅಕರವಂ ಅಕುರ್ವ ಅಕುರ್ಮ ।

**ಅಶ್ರುಣೋತ್**- ಶ್ರುಶ್ರವಣೇ ಇತಿ ಶ್ರವಣಾರ್ಥಕಾತ್ ಶ್ರುಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನ್ಯದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ 'ಅಶ್ರುಣೋತ್' ಇತಿರೂಪಂ ।

ಅಶ್ರುಣೋತ್ ಅಶ್ರುಣುತಾಂ ಅಶ್ರುಣ್ವನ್, ಅಶ್ರುಣೋಃ ಅಶ್ರುತಂ ಅಶ್ರುಣುತ, ಅಶ್ರುಣವಂ
ಅಶ್ರುಣ್ವ-ಅಶ್ರುಣುವ, ಅಶ್ರುಣ್ಮ-ಅಶ್ರುಣುಮ ।

**ಪ್ರಯೋಗ**— ಯಃ ತಾರ್ಕಿಕಶಿಖಾಮಣಿಃ ಸುಧೀಃ ವರ್ತಮಾನಸಮಯಾನ್ ನಿರಾಕರೋತ್ (ಕರ್ತರಿ) ।
ಯೇನ ತಾರ್ಕಿಕಶಿಖಾಮಣಿನಾ ಸುಧಿಯಾ ವರ್ತಮಾನಸಮಯಾಃ ನಿರಾಕ್ರಿಯಂತ (ಕರ್ಮಣಿ) ।
ಸಃ ಏತದ್ ಭಾಷ್ಯಂ ಅಶ್ರುಣೋತ್ (ಕರ್ತರಿ) ತೇನ ಏತದ್ ಭಾಷ್ಯಂ ಅಶ್ರೂಯತ (ಕರ್ಮಣಿ) ।

★ ★ ★

**ಅವತಾರಿಕಾ—** ಆ ಶೋಭನಭಟ್ಟರಿಗೆ ಶ್ರೀಮನ್ಮಧ್ವಭಾಷ್ಯದಲ್ಲಿ ಉಂಟಾದ ಅತಿಶಯಿತವಾದ ಪ್ರೀತಿಯನ್ನು ವರ್ಣಿಸುತ್ತಾರೆ.

**ನಾಪರೇಷು ರತಿಮಾಯಯೌ ಕ್ವಚಿತ್**
**ಭಾಷ್ಯಮದ್ಭುತಮಿದಂ ಸ ಶುಶ್ರುವಾನ್ ।**
**ನಾರವಿಂದಮಕರಂದಮಾಪ್ತವಾನ್**
**ಅಚ್ಛಪಿಚ್ಛ ಇವ ವಾಂಛತೀತರತ್ ॥ 19 ॥**

**ಪದಚ್ಛೇದ—** ನ, ಅಪರೇಷು, ರತಿಂ, ಆಯಯೌ, ಕ್ವಚಿತ್ ಭಾಷ್ಯಂ, ಅದ್ಭುತಂ, ಇದಂ, ಸಃ, ಶುಶ್ರುವಾನ್, ನ, ಅರವಿಂದಮಕರಂದಂ, ಆಪ್ತವಾನ್ ಅಚ್ಛಪಿಚ್ಛಃ, ಇವ, ವಾಂಛತಿ, ಇತರತ್ ।

**ಅನ್ವಯ—** ಸಃ, ಅದ್ಭುತಂ, ಇದಂ, ಭಾಷ್ಯಂ, ಶುಶ್ರುವಾನ್, (ಸನ್) ಅರವಿಂದಮಕರಂದಂ, ಆಪ್ತವಾನ್, ಅಚ್ಛಪಿಚ್ಛಃ, ಇತರತ್, ನ, ವಾಂಛತಿ, ಇವ, ಅಪರೇಷು, ಕ್ವಚಿತ್, ರತಿಂ ನ, ಆಯಯೌ ।

**ಅನ್ವಯಾರ್ಥ—**

**ಸಃ** = ಆ ಶೋಭನ ಭಟ್ಟರು,
**ಅದ್ಭುತಂ** = ಆಶ್ಚರ್ಯಕರವಾದ,
**ಇದಂ ಭಾಷ್ಯಂ** = ಈ ಭಾಷ್ಯವನ್ನು,
**ಶುಶ್ರುವಾನ್(ಸನ್)** = ಕೇಳಿದವರಾಗಿ,
**ಅರವಿಂದಮಕರಂದಂ** = ತಾವರೆಹೂವಿನ ಮಕರಂದವನ್ನು,
**ಆಪ್ತವಾನ್** = ಹೊಂದಿದ,
**ಅಚ್ಛಪಿಚ್ಛಃ** = ಹಂಸವು (ಬಿಳಿರೆಕ್ಕೆಗಳುಳ್ಳ),
**ಇತರತ್** = ಬೇರೆ ಹೂವಿನ ಮಕರಂದವನ್ನು,
**ನ ವಾಂಛತಿ ಇವ** = ಅಪೇಕ್ಷಿಸದೆ ಇರುವಂತೆ,
**ಅಪರೇಷು** = ಬೇರೆ ಶಾಸ್ತ್ರಗಳಲ್ಲಿ,
**ಕ್ವಚಿತ್** = ಒಂದರಲ್ಲಿಯೂ,
**ರತಿಂ** = ಪ್ರೀತಿಯನ್ನು,
**ನ ಆಯಯೌ** = ಹೊಂದಲಿಲ್ಲ,

**ತಾತ್ಪರ್ಯ—** ತಾವರೆ ಹೂವಿನ ಮಕರಂದವನ್ನು ಸವಿದಿರುವ ಹಂಸವು ಇತರ ಹೂವುಗಳ ರಸವನ್ನು ಎಂದೂ ಬಯಸುವುದಿಲ್ಲ. ಮಧ್ವಭಾಷ್ಯಕ್ಕೆ ಸಮಾನವಾದ ಭಾಷ್ಯವು ಬೇರೊಂದು ಇಲ್ಲವಾದುದರಿಂದ, ಇತರ ಭಾಷ್ಯಗಳಲ್ಲಿರುವ ನೀರಸತ್ವ ನಿಸ್ಸಾರತೆಗಳನ್ನು ಮೊದಲೇ ತಿಳಿದಿದ್ದ ಶೋಭನಭಟ್ಟರು ಮಧ್ವಭಾಷ್ಯಕ್ಕಿಂತ ಬೇರೆಯಾದ ಯಾವ ಶಾಸ್ತ್ರವನ್ನೂ ಓದಲು ಬಯಸಲಿಲ್ಲ.

**ವಿಗ್ರಹ—**

**ಅರವಿಂದಮಕರಂದಂ—** ಅರವಿಂದಸ್ಯ ಮಕರಂದಃ ಅರವಿಂದಮಕರಂದಃ ತಂ ।
**ಅಚ್ಛಪಿಚ್ಛಃ—** ಅಚ್ಛೇ ಪಿಚ್ಛೇ ಯಸ್ಯ ಸಃ ಅಚ್ಛಪಿಚ್ಛಃ ।

**ಕೋಶ—** ಮಕರಂದಃ ಪುಷ್ಪರಸಃ, 'ಪಿಚ್ಛ ಬರ್ಹೇ ನಪುಂಸಕೇ' ಇತಿ ಅಮರಃ ।

**ಕ್ರಿಯಾಪದ— ಆಯಯೌ** - ಆ+ಯಯೌ ಯಯೌ ಯಯತುಃ ಯಯುಃ, ಇತ್ಯಾದಿ ಯಾಪ್ರಾಪಣೇ ಲಿಟ್, **ವಾಂಛತಿ** - ವಾಂಛತಿ ವಾಂಛತಃ, ವಾಂಛಂತಿ, ಇತ್ಯಾದಿ ವಾಂಛ ಇಚ್ಛಾಯಾಂ ಇತಿ ಇಚ್ಛಾರ್ಥಕಾತ್ ವಾಂಛ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ವಾಂಛತಿ ಇತಿರೂಪಂ ।

**ಪ್ರಯೋಗ—** ಸಃ ಅಪರೇಷು ಕ್ವಚಿತ್ ರತಿಂ ನ ಆಯಯೌ (ಕರ್ತರಿ) ।
ತೇನ ಅಪರೇಷು ಕ್ವಚಿತ್ ರತಿಃ ನ ಆಯಯೇ (ಕರ್ಮಣಿ) ।
ಅಚ್ಛಪಿಚ್ಛಃ ಇತರತ್ ನ ವಾಂಛತಿ ಇವ (ಕರ್ತರಿ) ।
ಅಚ್ಛಪಿಚ್ಛೇನ ಇತರತ್ ನ ವಾಂಛ್ಯತೇ ಇವ (ಕರ್ಮಣಿ) ।

★★★

**ಅವತಾರಿಕಾ—** ಶ್ರೀಶೋಭನಭಟ್ಟರು ಶ್ರೀಮನ್ಮಧ್ವಭಾಷ್ಯದ ಸಿದ್ಧಾಂತ ಯುಕ್ತಿಗಳಿಂದ ಸಕಲ ವಾದಿಗಳನ್ನು ಗೆದ್ದುದನ್ನು ವರ್ಣಿಸುತ್ತಾರೆ.

**ತತ್ರ ತತ್ರ ಸು(ಸ)ಸಭಾಸು ಭಾಸುರೋ**
**ನಂದಿತೀರ್ಥಸಮಯೋಕ್ತಯುಕ್ತಿಭಿಃ ।**
**ವಾದಿನೋ ವಿಶಕಲಯ್ಯ ತಾನ್ ಸಮಾ-**
**ಕ್ರಮ್ಯ ವಾಚಮುಚಿತಾಮುದಾಹರತ್ ॥ 20 ॥**

**ಪದಚ್ಛೇದ—** ತತ್ರ, ತತ್ರ, ಸುಸಭಾಸು (ಸಃ, ಸಭಾಸು) ಭಾಸುರಃ, ನಂದಿತೀರ್ಥಸಮಯೋಕ್ತಯುಕ್ತಿಭಿಃ, ವಾದಿನಃ, ವಿಶಕಲಯ್ಯ, ತಾನ್, ಸಮಾಕ್ರಮ್ಯ, ವಾಚಂ, ಉಚಿತಾಂ, ಉದಾಹರತ್ ।

**ಅನ್ವಯ—** ಭಾಸುರಃ, ಸಃ, ತತ್ರ, (ಸು) ಸಭಾಸು, ವಾದಿನಃ, ನಂದಿತೀರ್ಥಸಮಯೋಕ್ತಯುಕ್ತಿಭಿಃ, ವಿಶಕಲಯ್ಯ, ತಾನ್, ಸಮಾಕ್ರಮ್ಯ, ಉಚಿತಾಂ, ವಾಚಂ, ಉದಾಹರತ್ ।

**ಅನ್ವಯಾರ್ಥ—**

**ಭಾಸುರಃ** = ಪ್ರಕಾಶಮಾನರಾದ,
**ಸಃ** = ಆ ಶೋಭನಭಟ್ಟರು,
**ತತ್ರ ತತ್ರ** = ಆಯಾ,
**ಸಭಾಸು** = ಪಂಡಿತರ ಸಭೆಗಳಲ್ಲಿ (ವಿದ್ವಾಂಸರಿಂದ ತುಂಬಿದ ಉತ್ತಮ ಸಭೆಗಳಲ್ಲಿ)
**ವಾದಿನಃ** = ದುರ್ವಾದಿಗಳನ್ನು,
**ನಂದಿತೀರ್ಥ ಸಮಯೋಕ್ತಯುಕ್ತಿಭಿಃ** = ಆನಂದತೀರ್ಥರ, ಸಿದ್ಧಾಂತದಲ್ಲಿ (ಶಾಸ್ತ್ರದಲ್ಲಿ) ಹೇಳಲ್ಪಟ್ಟ ಯುಕ್ತಿಗಳಿಂದ,
**ವಿಶಕಲಯ್ಯ**= ಖಂಡಿಸಿ,
**ತಾನ್** = ಆ ವಾದಿಗಳನ್ನು,
**ಸಮಾಕ್ರಮ್ಯ** = ಲೆಕ್ಕಿಸದೆ,
**ಉಚಿತಾಂ** = ಯೋಗ್ಯವಾದ,

**ವಾಚಂ** = ಮಾತನ್ನು

**ಉದಾಹರತ್** = ದೃಷ್ಟಾಂತಪೂರ್ವಕವಾಗಿ ಹೇಳಿದರು.

**ತಾತ್ಪರ್ಯ**— ಪ್ರಕಾಂಡ ಪಾಂಡಿತ್ಯದಿಂದ ವಿರಾಜಮಾನರಾದ ಆ ಶೋಭನಭಟ್ಟರು ಅಲ್ಲಲ್ಲಿ ಸೇರಿದ ಉತ್ತಮ ಪಂಡಿತರಿಂದ ಕೂಡಿದ ಸಭೆಗಳಲ್ಲಿ ಕುಯುಕ್ತಿಗಳಿಂದ ವಾದಿಸುವವರನ್ನು ಆನಂದತೀರ್ಥ ಭಾಷ್ಯದಲ್ಲಿ ಹೇಳಿದ ಯುಕ್ತಿಗಳಿಂದ ಖಂಡಿಸುತ್ತಿದ್ದರು. ಇತರ ವಾದಿಗಳನ್ನು ಸೋಲಿಸಿ, ಅವರನ್ನು ಲೆಕ್ಕಿಸದೆ ಸಭೆಗಳಲ್ಲಿ ಆಡಲು ಯೋಗ್ಯವಾದ ಮಾತನ್ನು ದೃಷ್ಟಾಂತ ಪುರಸ್ಸರವಾಗಿ ಆಡುತ್ತಿದ್ದರು.

**ವಿಗ್ರಹ**—

**ಸುಸಭಾಸು**— ಶೋಭನಾಶ್ಚತಾಃ ಸಭಾಶ್ಚ ಸುಸಭಾಃ ತಾಸು ಸುಸಭಾಸು ।

**ನಂದಿತೀರ್ಥಸಮಯೋಕ್ತಯುಕ್ತಿಭಿಃ**— ನಂದಿತೀರ್ಥಸ್ಯ ಸಮಯಃ ನಂದಿತೀರ್ಥಸಮಯಃ, ನಂದಿತೀರ್ಥ-ಸಮಯೇ ಉಕ್ತಾಃ ನಂದಿತೀರ್ಥಸಮಯೋಕ್ತಾಃ, ತಾಶ್ಚತಾಃ ಯುಕ್ತಯಶ್ಚ ನಂದಿತೀರ್ಥಸಮಯೋಕ್ತ-ಯುಕ್ತಯಃ ತಾಭಿಃ ।

**ಕ್ರಿಯಾಪದ**— **ಉದಾಹರತ್** - ಉದ್ ಆಙ್,(ಆ) ಇತ್ಯುಪಸರ್ಗದ್ವಯ ಪೂರ್ವಕಾತ್ ಹೃಙ್ ಹರಣೇ ಇತಿ ಹರಣಾರ್ಥಕಾತ್ ಹೃಧಾತೋಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಉದಾಹರತ್ ಇತಿ ರೂಪಂ ।

ಉದ್+ಆ+ಅಹರತ್, ಅಹರತ್ ಅಹರತಾಂ ಅಹರನ್, ಅಹರಃ ಅಹರತಂ ಅಹರತ,

ಅಹರಂ ಅಹರಾವ ಅಹರಾಮ ।

**ಪ್ರಯೋಗ**— ಸಃ, ಉಚಿತಾಂ, ವಾಚಂ ಉದಾಹರತ್(ಕರ್ತರಿ) ।

ತೇನ, ಉಚಿತಾ, ವಾಕ್, ಉದಾಹ್ರಿಯತ (ಕರ್ಮಣಿ) ।

★ ★ ★

**ಅವತಾರಿಕಾ**— ಆ ಶೋಭನಭಟ್ಟರು (ಶ್ರೀಪದ್ಮನಾಭತೀರ್ಥರು) ಸಭೆಯಲ್ಲಿ ಏನು ಹೇಳಿದರೆಂದು ತಿಳಿಸುತ್ತಾ, ಮೊದಲು ಅವರು ತಾವು ಹೇಳಬೇಕಾದ ವಿಷಯದಲ್ಲಿ ದೃಷ್ಟಾಂತವನ್ನು ಹೇಳಿದರೆಂದು ತಿಳಿಸುತ್ತಿದ್ದಾರೆ.

**ಚೂರ್ಣಕೃದ್ ವಿವಿಧಶಂಖಚೂರ್ಣಕಃ**
**ಚೂರ್ಣನಾಯ ಬಹುಧಾಪ್ಯಶಕ್ನುವನ್ ।**
**ಅತ್ಯಜದ್ ವಿಫಲಧೀಃ ಪ್ರದಕ್ಷಿಣಾ-**
**ವರ್ತವಾರಿಜಮನರ್ಘ್ಯಮಪ್ಯಹೋ ॥ 21 ॥**

**ಪದಚ್ಛೇದ**—ಚೂರ್ಣಕೃತ್, ವಿವಿಧಶಂಖಚೂರ್ಣಕಃ, ಚೂರ್ಣನಾಯ, ಬಹುಧಾ, ಅಪಿ, ಅಶಕ್ನುವನ್, ಅತ್ಯಜತ್, ವಿಫಲಧೀಃ, ಪ್ರದಕ್ಷಿಣಾವರ್ತವಾರಿಜಂ, ಅನರ್ಘ್ಯಂ, ಅಪಿ, ಅಹೋ ।

**ಅನ್ವಯ**— ವಿವಿಧಶಂಖಚೂರ್ಣಕಃ, ಚೂರ್ಣಕೃತ್, ಬಹುಧಾ, ಅಪಿ, ಚೂರ್ಣನಾಯ, ಅಶಕ್ನುವನ್, ವಿಫಲಧೀಃ, ಅನರ್ಘ್ಯಮಪಿ, ಪ್ರದಕ್ಷಿಣಾವರ್ತವಾರಿಜಂ, ಅತ್ಯಜತ್, ಅಹೋ ।

**ಅನ್ವಯಾರ್ಥ**—

**ವಿವಿಧಶಂಖಚೂರ್ಣಕಃ** = ನಾನಾ ಪ್ರಕಾರವಾದ ಶಂಖದ ಆಕಾರದ ಚಿಪ್ಪುಗಳನ್ನು,

**ಚೂರ್ಣಕಃ** = ಪುಡಿ ಮಾಡುವವನಾದ,

**ಚೂರ್ಣಕೃತ್** = ಸುಣ್ಣವನ್ನು ತಯಾರಿಸುವವನು,

**ಬಹುಧಾ ಅಪಿ** = ಬಹಳ ವಿಧದಿಂದಲೂ, (ಪ್ರದಕ್ಷಿಣವರ್ತವಾರಿಜಸ್ಯ)

**ಚೂರ್ಣನಾಯ** = ಬಲಮುರಿ ಶಂಖವನ್ನು ಪುಡಿಮಾಡುವುದಕ್ಕೆ,

**ಅಶಕ್ನುವನ್ (ಸನ್)** = ಅಸಮರ್ಥನಾಗಿ,

**ವಿಫಲಧೀಃ** = ಪ್ರಯೋಜನವಿಲ್ಲವೆಂಬ ಬುದ್ಧಿಯುಳ್ಳವನಾಗಿ,

**ಅನರ್ಘ್ಯಂ ಅಪಿ** = ಅಮೂಲ್ಯವಾಗಿದ್ದಾಗೂ,

**ಪ್ರದಕ್ಷಿಣಾವರ್ತವಾರಿಜಂ** = ಬಲಮುರಿಯ ಶಂಖವನ್ನು,

**ಅತ್ಯಜತ್** = ಎಸೆದನು (ಬಿಟ್ಟುಬಿಟ್ಟನು),

**ಅಹೋ** = ಆಶ್ಚರ್ಯವು.

**ತಾತ್ಪರ್ಯ**— ಸಮುದ್ರ ದಡದಲ್ಲಿ ಸಿಗುವ ಶಂಖದ ಆಕಾರದ ವಿವಿಧ ಚಿಪ್ಪುಗಳನ್ನು ಸುಟ್ಟು ಪುಡಿಮಾಡಿ ವೀಳ್ಯದೆಲೆ ಯೊಡನೆ ತಿನ್ನುವ ಸುಣ್ಣವನ್ನು ತಯಾರಿಸುತ್ತಾರೆ. ಈ ಆಕಾರ ಬಣ್ಣಗಳ ಕಡೆಗೆ ಗಮನ ಕೊಡದೆ ಅವುಗಳನ್ನೆಲ್ಲಾ ರಾಶಿ ಮಾಡಿ ಸುಟ್ಟು ಸುಣ್ಣ ತಯಾರಿಸುತ್ತಾರೆ. ಒಂದು ಬಾರಿ ಒಬ್ಬ ಸುಣ್ಣ ಮಾಡುವವನಿಗೆ ಪೂಜಿಸಿದರೆ ಬಹಳ ಐಶ್ವರ್ಯವನ್ನೀಯುವ ಬಲಮುರಿ ಶಂಖವು ಸಿಕ್ಕಿತು. ಅದಕ್ಕೆ ಇಷ್ಟೇ ಬೆಲೆ ಎಂದು ನಿರ್ಧರಿಸಲು ಸಾಧ್ಯವಿಲ್ಲ. ಆದರೆ ಅದರ ಬೆಲೆ ತಿಳಿಯದ ಆ ಸುಣ್ಣಗಾರನು ಆ ಬಲಮುರಿ ಶಂಖವನ್ನು ಸುಣ್ಣದ ಗೂಡಿನಲ್ಲಿ (ಮೂಸೆ) ಇಟ್ಟು ಸುಟ್ಟನು. ಅದು ಸುಡಲಿಲ್ಲ, ಪುಡಿ ಯಾಗಲಿಲ್ಲ. ಸುತ್ತಿಗೆಯಿಂದ ಹೊಡೆದರೂ ಗಟ್ಟಿಯಾದ ಆ ಶಂಖವು ಪುಡಿಯಾಗಲಿಲ್ಲ. ಆಗ ಅವನು ಈ ಚಿಪ್ಪಿನಿಂದ ಏನೂ ಪ್ರಯೋಜನವಿಲ್ಲವೆಂದು ಅದನ್ನು ಎಸೆದುಬಿಟ್ಟನು. ಎಲ್ಲಾ ವಿಧದ ಐಶ್ವರ್ಯಗಳಿಗೂ ಕಾರಣವಾದ ಈ ಬಲಮುರಿ ಶಂಖವನ್ನು ಎಸೆದಿರುವ ಈ ಮೂರ್ಖನ ಬುದ್ಧಿಯು ಆಶ್ಚರ್ಯಕರವಾಗಿದೆ.

**ವಿಗ್ರಹ**—

**ಚೂರ್ಣಕೃತ್**— ಚೂರ್ಣಂ ಕರೋತಿ ಇತಿ ಚೂರ್ಣಕೃತ್ ।

**ವಿವಿಧಶಂಖಚೂರ್ಣಕಃ**— ವಿವಿಧಾಶ್ಚತೇ ಶಂಖಾಶ್ಚ ವಿವಿಧಶಂಖಾಃ, ವಿವಿಧಶಂಖಾನ್ ಚೂರ್ಣಯತೀತಿ ವಿವಿಧಶಂಖಚೂರ್ಣಕಃ ।

**ವಿಫಲಧೀಃ**— ವಿಗತಂ ಫಲಂ ಯಸ್ಯಾಃ ಸಾ ವಿಫಲಾ, ವಿಫಲಾ ಇತಿ ಧೀಃ ಯಸ್ಯಸಃ ವಿಫಲಧೀಃ ।

**ಪ್ರದಕ್ಷಿಣಾವರ್ತವಾರಿಜಂ**— ಪ್ರದಕ್ಷಿಣಾಃ ಆವರ್ತಾಃ ಯಸ್ಯಸಃ ಪ್ರದಕ್ಷಿಣಾವರ್ತಃ, ವಾರಿಣಃ ಜಾಯತೇ ಇತಿ ವಾರಿಜಃ, ಪ್ರದಕ್ಷಿಣಾವರ್ತಶ್ಚಾಸೌ ವಾರಿಜಶ್ಚ ಪ್ರದಕ್ಷಿಣಾವರ್ತವಾರಿಜಃ ।

**ಅನರ್ಘ್ಯಂ**— ಅರ್ಘಂ ಅರ್ಹತಿ ಇತಿ ಅರ್ಘ್ಯಃ, ನ ಅರ್ಘ್ಯಃ ಅನರ್ಘ್ಯಃ ತಂ ।

**ವ್ಯಾಕರಣವಿಶೇಷ**— ಅರ್ಘ್ಯಂ ಅರ್ಹತಿ ಎಂಬಲ್ಲಿ ತದರ್ಹತಿ ಎಂಬ ಅಧಿಕಾರದಲ್ಲಿರುವ (5-1-63) ದಂಡಾದಿಭ್ಯೋ ಯತ್ (5-1-66) ಎಂಬ ಸೂತ್ರದಿಂದ ಯತ್ ಪ್ರತ್ಯಯ ।

**ಕೋಶ**— 'ಅಬ್ಜೌ ಶಂಖಶಶಾಂಕೌ ಚ' ಎಂಬ ಅಮರಕೋಶದಲ್ಲಿ, ಅಬ್ಜ = ನೀರಿನಿಂದ ಹುಟ್ಟಿದ್ದು ಎಂಬ ಅರ್ಥದ ಅಬ್ಜ ಶಬ್ದಕ್ಕೆ ಶಂಖ ಮತ್ತು ಚಂದ್ರ ಎಂಬ ಎರಡು ಅರ್ಥವಿದೆ. ವಾರಿಜ ಶಬ್ದವೂ ಅಬ್ಜ ಸಮಾನಾರ್ಥಕವಾಗಿರುವುದರಿಂದ ವಾರಿಜ ಎಂದರೆ ಶಂಖ ಎಂದು ಅರ್ಥ.

**ಕ್ರಿಯಾಪದ—** **ಅತ್ಯಜತ್**- ತ್ಯಜಹಾನೌ ಇತಿ ಹಾನ್ಯರ್ಥಕಾತ್ ತ್ಯಜ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಅತ್ಯಜತ್ ಇತಿರೂಪಂ ।

ಅತ್ಯಜತ್ ಅತ್ಯಜತಾಂ ಅತ್ಯಜನ್, ಅತ್ಯಜಃ ಅತ್ಯಜತಂ ಅತ್ಯಜತ, ಅತ್ಯಜಂ ಅತ್ಯಜಾವ ಅತ್ಯಜಾಮ ।

**ಪ್ರಯೋಗ—** ಚೂರ್ಣಕೃತ್ ಪ್ರದಕ್ಷಿಣಾವರ್ತವಾರಿಜಂ ಅತ್ಯಜತ್ (ಕರ್ತರಿ) ।
ಚೂರ್ಣಕೃತ್ ಪ್ರದಕ್ಷಿಣಾವರ್ತವಾರಿಜಃ ಅತ್ಯಜ್ಯತ (ಕರ್ಮಣಿ) ।

★ ★ ★

**ಅವತಾರಿಕಾ—** ಹೀಗೆ ದೃಷ್ಟಾಂತವನ್ನು ಹೇಳಿ ದಾರ್ಷ್ಟಾಂತಿಕವನ್ನು (ಪ್ರಕೃತ ವಿಷಯವನ್ನು) ಹೇಳುತ್ತಾರೆ.

**ಅಪ್ರಮೇಯಮತಿಶಾಸ್ತ್ರಮೀದೃಶಂ**
**ಯಸ್ತ್ಯಜತ್ಯುಪನತಂ ಸುದುರ್ಲಭಮ್ ।**
**ತಸ್ಯ ತುಲ್ಯಮತಿರೇಷ ದುರ್ಜನೋ**
**ನಾಥವಾऽಸ್ಯ ಸದೃಶೋಽಸ್ತಿ ನೀಚಧೀಃ ॥ 22 ॥**

**ಪದಚ್ಛೇದ—** ಅಪ್ರಮೇಯಮತಿಶಾಸ್ತ್ರಂ, ಈದೃಶಂ, ಯಃ, ತ್ಯಜತಿ, ಉಪನತಂ, ಸುದುರ್ಲಭಂ, ತಸ್ಯ, ತುಲ್ಯಮತಿಃ, ಏಷಃ, ದುರ್ಜನಃ, ನ, ಅಥವಾ, ಅಸ್ಯ, ಸದೃಶಃ, ಅಸ್ತಿ, ನೀಚಧೀಃ ।

**ಅನ್ವಯ—** ಯಃ, ಉಪನತಂ, ಸುದುರ್ಲಭಂ, ಈದೃಶಂ, ಅಪ್ರಮೇಯಮತಿಶಾಸ್ತ್ರಂ, ತ್ಯಜತಿ, ಏಷಃ, ದುರ್ಜನಃ, ತಸ್ಯ, ತುಲ್ಯಮತಿಃ, ಅಥವಾ, ತಸ್ಯ, ಸದೃಶಃ, ನೀಚಧೀಃ, ನಾಸ್ತಿ ।

**ಅನ್ವಯಾರ್ಥ—**

**ಯಃ** = ಯಾವ ಮನುಷ್ಯನು,
**ಉಪನತಂ** = ಒದಗಿದ,
**ಸುದುರ್ಲಭಂ** = ಅತ್ಯಂತ ದುರ್ಲಭವಾದ,
**ಈದೃಶಂ** = ಹಿಂದೆ ಹೇಳಿದ ಬಲಮುರಿಶಂಖಕ್ಕೆ ಸಮಾನವಾದ,
**ಅಪ್ರಮೇಯಮತಿಶಾಸ್ತ್ರಂ** = ಅಪರಿಮಿತ ಜ್ಞಾನವುಳ್ಳ ಶ್ರೀ ಪೂರ್ಣಪ್ರಜ್ಞಾಚಾರ್ಯರ ಸಿದ್ಧಾಂತ ಗ್ರಂಥವನ್ನು,
**ತ್ಯಜತಿ** = ಬಿಡುತ್ತಾನೋ,
**ಏಷಃ ದುರ್ಜನಃ** = ಈ ದುಷ್ಟನು (ದುರ್ಜನನು),
**ತಸ್ಯ** = ಆ ಶಂಖವನ್ನು ತ್ಯಜಿಸಿದವನಿಗೆ,
**ತುಲ್ಯಮತಿಃ** = ಸಮಾನವಾದ ಬುದ್ಧಿಯುಳ್ಳವನು,
**ಅಥವಾ** = ಹಾಗಲ್ಲದ ಪಕ್ಷಕ್ಕೆ,
**ತಸ್ಯ** = ಆ ಮಧ್ವಶಾಸ್ತ್ರವನ್ನು ತ್ಯಜಿಸಿದವನಿಗೆ,
**ಸದೃಶಃ** = ಸಮಾನನಾದ,
**ನೀಚಧೀಃ** = ಕೆಟ್ಟ ಬುದ್ಧಿಯುಳ್ಳವನು,
**ನಾಸ್ತಿ** = ಇಲ್ಲ (ನಾಸ್ತಿ ವಾ = ಇಲ್ಲವೇ ಇಲ್ಲ ನಿಶ್ಚಯವು)

**ತಾತ್ಪರ್ಯ—** ಸರ್ವಜ್ಞಾಚಾರ್ಯರ ಶಾಸ್ತ್ರವು ಬಲಮುರಿ ಶಂಖದಂತೆ ಅತ್ಯಂತ ಅಮೂಲ್ಯವಾದುದು. ಪುಣ್ಯ ರಹಿತರಿಗೆ ಅತ್ಯಂತ ದುರ್ಲಭವಾದುದು. ಸಜ್ಜನರ ಸಹವಾಸದಿಂದ, ಪೂರ್ವಜನ್ಮಗಳ ಪುಣ್ಯದಿಂದ ಒದಗಿದ ಈ ಶಾಸ್ತ್ರವನ್ನು ನಿಷ್ಫಲವೆಂದು ತಿಳಿದು ಯಾವನು ಬಿಡುತ್ತಾನೋ, ಅವನು ಬಲಮುರಿ ಶಂಖವನ್ನು ನಿಷ್ಪ್ರಯೋಜಕವೆಂದು ಬಿಟ್ಟು ಬಿಟ್ಟವನಿಗೆ ಸಮಾನ ಬುದ್ಧಿಯುಳ್ಳವನು ಅಥವಾ ಇವನಿಗೆ ಸಮಾನವಾದ ನೀಚಬುದ್ಧಿಯುಳ್ಳವನು ಇಲ್ಲವೇ ಇಲ್ಲ. ಅಂದರೆ ಶ್ರೀಮನ್ಮಧ್ವ ಶಾಸ್ತ್ರವನ್ನು ತ್ಯಾಗಮಾಡಿದವನೂ ಮತ್ತು ಪೂರ್ವಪುಣ್ಯದಿಂದ ಆ ಶಾಸ್ತ್ರವನ್ನು ಅಭ್ಯಾಸ ಮಾಡಿ ಅದರ ಪರಮ ಪ್ರಯೋಜನ ವನ್ನು ಪಡೆಯುವ ಅವಕಾಶವಿದ್ದಾಗ್ಯೂ ಅದನ್ನು ಬಿಟ್ಟವನೂ ಅದರಲ್ಲಿ ಉದಾಸೀನನಾದವನೂ ಕೂಡ ಅತ್ಯಧಮನೆಂದು ನಿರ್ಗಲಿತಾಭಿಪ್ರಾಯ.

**ವಿಗ್ರಹ—**

**ಅಪ್ರಮೇಯಮತಿಶಾಸ್ತ್ರಂ—** ಪ್ರಮಾತುಂ ಯೋಗ್ಯಾ ಪ್ರಮೇಯಾ, ನ ಪ್ರಮೇಯಾ ಅಪ್ರಮೇಯಾ, ಅಪ್ರಮೇಯಾ ಮತಿಃ ಯಸ್ಯ ಸಃ ಅಪ್ರಮೇಯಮತಿಃ, ಅಪ್ರಮೇಯಮತೇಃ ಶಾಸ್ತ್ರಂ ಅಪ್ರಮೇಯ-ಮತಿಶಾಸ್ತ್ರಂ, ತತ್ ।

**ಸುದುರ್ಲಭಂ—** ದುಃಖೇನ ಲಬ್ಧುಂ ಶಕ್ಯಂ ದುರ್ಲಭಂ, ಅತಿಶಯೇನ ದುರ್ಲಭಂ ಸುದುರ್ಲಭಂ ।

**ತುಲ್ಯಮತಿಃ—** ತುಲ್ಯಾ ಮತಿಃ, ಯಸ್ಯಸಃ ತುಲ್ಯಮತಿಃ ।

**ದುರ್ಜನಃ—** ದುಷ್ಟಶ್ಚಾಸೌ ಜನಶ್ಚ ದುರ್ಜನಃ ।

**ನೀಚಧೀಃ—** ನೀಚಾ ಧೀಃ ಯಸ್ಯಸಃ ನೀಚಧೀಃ ।

**ಕೋಶ—** 'ವಾಽವ್ಯಯಂ ಸ್ಯಾತ್ ಸಮುಚ್ಚಯೇ ಉಪಮಾಯಾಂ ವಿಕಲ್ಪೇ ಚ ನಿಶ್ಚಯೇ ಚ ನಿಗದ್ಯತೇ' ಇತಿ ಏಕಾಕ್ಷರ ರತ್ನಮಾಲಾ, ಈ ಕೋಶದ ಪ್ರಕಾರ ಪ್ರಕೃತದಲ್ಲಿ ವಾ ಎಂಬುದಕ್ಕೆ ನಿಶ್ಚಯ ಎಂದು ಅರ್ಥ ।

**ವ್ಯಾಕರಣವಿಶೇಷ—** ತಸ್ಯ ತುಲ್ಯಮತಿಃ, ಅಸ್ಯ ಸದೃಶಃ ಎಂಬಲ್ಲಿ 'ತುಲ್ಯಾರ್ಥೈರತುಲೋಪಮಾಭ್ಯಾಂ ತೃತೀಯಾನ್ಯ-ತರಸ್ಯಾಂ' (2-3-72) ಎಂಬ ಸೂತ್ರದಿಂದ ಷಷ್ಠೀ ವಿಭಕ್ತಿ ಬಂದಿದೆ. ತೃತೀಯಾ ವಿಭಕ್ತಿಯೂ ಬರಬಹುದು.

**ಕ್ರಿಯಾಪದ—** ತ್ಯಜತಿ- ತ್ಯಜತಿ ತ್ಯಜತಃ ತ್ಯಜಂತಿ, ತ್ಯಜಹಾನೌ ಇತು ಹಾನ್ಯರ್ಥಕ ತ್ಯಜಧಾತೋಃ ಲಟ್ ಪ್ರಥಮ-ಪುರುಷೇ ಏಕವಚನೇ ।

**ಅಸ್ತಿ -** ಅಸ್ತಿ ಸ್ತಃ ಸಂತಿ ಇತ್ಯಾದಿ ಅಸಭುವಿ ಸತ್ತಾರ್ಥಕ ಅಸ್ ಧಾತೋಃ ಲಟ್ ಪ್ರಥಮಪುರುಷೇ ಏಕವಚನೇ ।

**ಪ್ರಯೋಗ—** ಯಃ ಈದೃಶಂ ಅಪ್ರಮೇಯಮತಿಶಾಸ್ತ್ರಂ ತ್ಯಜತಿ (ಕರ್ತರಿ) । ಯೇನ ಈದೃಶಂ ಅಪ್ರಮೇಯ-ಮತಿಶಾಸ್ತ್ರಂ ತ್ಯಜ್ಯತೇ (ಕರ್ಮಣಿ) । ಅಸ್ಯ ಸದೃಶಃ ನೀಚಧೀಃ ನಾಸ್ತಿ (ಕರ್ತರಿ) । ಅಸ್ಯ ಸದೃಶೇನ ನೀಚಧಿಯಾ ಭೂಯತೇ (ಭಾವೇ) ।

★ ★ ★

ಅವತಾರಿಕಾ— ಪುನಃ ಬಲಮುರಿ ಶಂಖದ ದೃಷ್ಟಾಂತವನ್ನೇ ಬೇರೊಂದು ಕ್ರಮದಿಂದ ವಿವರಿಸುತ್ತಾರೆ.

**ಕೋಽಪಿ ತಂ ಗುಣವಿಶೇಷವಿಚ್ಚ ವಿ-**
**ಕ್ರೀಯ ಭೂರಿಧನಮಾಪ ಪೂರುಷಃ ।**
**ನ ಹ್ಯನರ್ಘ್ಯಗುಣಮೂಲ್ಯಮಾಪ್ಯತೇ**
**ಭಾಗ್ಯದೈವಮಿಹ ಯೋಗ್ಯತಾನುಗಮ್ ॥ 23 ॥**

**ಪದಚ್ಛೇದ—** ಕಃ, ಅಪಿ, ಗುಣವಿಶೇಷವಿತ್, ಚ, ವಿಕ್ರೀಯ, ಭೂರಿಧನಂ, ಆಪ, ಪೂರುಷಃ, ನ, ಹಿ, ಅನರ್ಘ್ಯ-ಗುಣಮೂಲ್ಯಂ, ಆಪ್ಯತೇ, ಭಾಗ್ಯದೈವಂ, ಇಹ, ಯೋಗ್ಯತಾನುಗಂ ।

**ಅನ್ವಯ—** ಗುಣವಿಶೇಷವಿತ್, ಕೋऽಪಿ, ಪುರುಷಃ, ತಂ, ವಿಕ್ರೀಯ, ಭೂರಿಧನಂ, ಆಪ, ಚ, ಹಿ, ಅನರ್ಘ್ಯ-ಗುಣಮೂಲ್ಯಂ, ಆಪ್ಯತೇ, ಇಹ, ಭಾಗ್ಯದೈವಂ, ಯೋಗ್ಯತಾನುಗಂ ।

**ಅನ್ವಯಾರ್ಥ—**

**ಗುಣವಿಶೇಷವಿತ್** = ಬಲಮುರಿಶಂಖದ ಅಮೂಲ್ಯ ಗುಣವನ್ನು ತಿಳಿದ,
**ಕಃ ಅಪಿ ಪೂರುಷಃ** = ಯಾವನೋ ಒಬ್ಬ ಮನುಷ್ಯನು,
**ತಂ** = ಆ ಶಂಖವನ್ನು,
**ವಿಕ್ರೀಯ** = ಮಾರಿ,
**ಭೂರಿಧನಂ** = ಬಹಳ ಹಣವನ್ನು,
**ಆಪ ಚ** = ಹೊಂದಿಯೇ ಹೊಂದಿದನು.
**ಹಿ** = ಯಾವ ಕಾರಣದಿಂದ,
**ಅನರ್ಘ್ಯಗುಣ ಮೂಲ್ಯಂ** = ಅಮೂಲ್ಯವಾದ ಗುಣವುಳ್ಳ ವಸ್ತುವಿನ, ಬೆಲೆಯು,
**ನ ಆಪ್ಯತೇ** = ಹೊಂದಲ್ಪಡುವುದಿಲ್ಲ (ಆದುದರಿಂದ),
**ಇಹ** = ಈ ಲೋಕದಲ್ಲಿ,
**ಭಾಗ್ಯದೈವಂ** = ಅದೃಷ್ಟ ವಿಶೇಷಕ್ಕೆ ಪ್ರೇರಕವಾದ ದೇವತೆಯು,
**ಯೋಗ್ಯತಾನುಗಂ** = (ಆಯಾ ಮನುಷ್ಯನ) ಯೋಗ್ಯತೆಯನ್ನು ಅನುಸರಿಸಿ ಇರತಕ್ಕದ್ದು.

**ತಾತ್ಪರ್ಯ—** ಪ್ರಪಂಚದಲ್ಲಿ ಕೆಲವು ಅಮೂಲ್ಯ ವಸ್ತುಗಳಿವೆ. ಅವುಗಳಿಂದಾಗುವ ಪ್ರಯೋಜನವು ಅಮಿತ. ಆದರೆ ಆ ಅಪರಿಮಿತ ಪ್ರಯೋಜನವನ್ನು ಪಡೆಯಲು ಸರಿಯಾದ ಯೋಗ್ಯತೆ ಇರಬೇಕು. ಯೋಗ್ಯತೆ ಇಲ್ಲದವನಿಗೆ ಅಪರಿಮಿತ ಪ್ರಯೋಜನವುಳ್ಳ ವಸ್ತುವಿನಿಂದಲೂ ಅಪರಿಮಿತ ಪ್ರಯೋಜನವಾಗುವುದಿಲ್ಲ, ಸ್ವಲ್ಪವೇ ಪ್ರಯೋಜನವಾಗುತ್ತದೆ. ಅವನು ಅದನ್ನು ಬಹಳವೆಂದು ತಿಳಿದರೂ ಅವನಿಗಾಗುವ ಪ್ರಯೋಜನವು ಅತ್ಯಲ್ಪವೇ. ಇದರಂತೆ ಬಲಮುರಿ ಶಂಖದ ಉತ್ತಮ ಗುಣಗಳನ್ನು ತಿಳಿದ ಮನುಷ್ಯನೊಬ್ಬನು ಆ ಶಂಖವನ್ನು ಉತ್ತಮ ಬೆಲೆಗೆ ಮಾರಿ ಹೇರಳವಾಗಿ ಹಣ ಗಳಿಸಿದನು. ಆದರೆ ಬಲಮುರಿಶಂಖದ ಪ್ರಯೋಜನವು ಅಷ್ಟೇ ಅಲ್ಲ, ಅದು ಇದಕ್ಕಿಂತ ಎಷ್ಟೋ ಹೆಚ್ಚು ಪ್ರಯೋಜನವನ್ನು ಉಂಟುಮಾಡ ಬಲ್ಲದು. ಆದರೇನು ಆ ಶಂಖವನ್ನು ಪಡೆದೂ ಮಾರಿದವನ ಭಾಗ್ಯವೂ ಅಷ್ಟೇ ಅವನ ಅದೃಷ್ಟ ನಿಯಾಮಕ ಪರಮಾತ್ಮನು ಅವನ ಯೋಗ್ಯತಾನುಸಾರವಾಗಿ ಅವನಿಗೆ ಹೇರಳ ಹಣಕೊಡಿಸಿ ಅವನಿಂದ ಆ ಶಂಖವನ್ನು ಇನ್ನೊಬ್ಬನ ಕೈಗೆ ಸಿಗುವಂತೆ ಮಾಡಿದನು.

**ಅಲಂಕಾರ—** ಇಲ್ಲಿ 'ನ ಹ್ಯನರ್ಘ್ಯಗುಣಮೂಲ್ಯಮಾಪ್ಯತೇ' ಎಂಬ ವಾಕ್ಯದಿಂದ ಶಂಖವನ್ನು ಮಾರಿದವನಿಗೆ ಸಿಕ್ಕಿದ್ದು ಭೂರಿಧನ (ಹೆಚ್ಚಾದ ಹಣ) ಮಾತ್ರ. ಶಂಖದ ಸರಿಯಾದ ಬೆಲೆಯಲ್ಲ ಎಂಬುದನ್ನು ಸಮರ್ಥಸಿದ್ದರಿಂದ ಕಾವ್ಯ ಲಿಂಗಾಲಂಕಾರ. ಸಮರ್ಥನೀಯ 'ಸ್ಯಾರ್ಥ್ಯಸ್ಯ ಕಾವ್ಯಲಿಂಗಂ ಸಮರ್ಥನಂ' ಎಂದು ಅದರ ಲಕ್ಷಣ. 'ಭಾಗ್ಯದೈವಮಿಹ ಯೋಗ್ಯತಾನುಗಂ' ಎಂಬ ಸಾಮಾನ್ಯ ವಚನದಿಂದ ಬಲಮುರಿ ಶಂಖವನ್ನು ಮಾರಿದನು ತನ್ನ ವಸ್ತುವಿಗೆ ತಕ್ಕ ಬೆಲೆಯನ್ನು ಹೊಂದಲಿಲ್ಲ ಎಂಬ ವಿಶೇಷ ವಿಷಯವನ್ನೂ ಸಾಮಾನ್ಯ ವಿಷಯದಿಂದ ಸಮರ್ಥಿಸಿದ್ದಾರೆ. ಆದುದರಿಂದ ಇಲ್ಲಿ ಅರ್ಥಾಂತರನ್ಯಾಸ 'ಉಕ್ತಿರರ್ಥಾಂತರನ್ಯಾಸಃ ಸ್ಯಾತ್ ಸಾಮಾನ್ಯವಿಶೇಷಯೋಃ' ಎಂದು ಅದರ ಲಕ್ಷಣ.

ವಿಗ್ರಹ—

**ಗುಣವಿಶೇಷವಿತ್**— ಗುಣಾನಾಂ ವಿಶೇಷಃ ಗುಣವಿಶೇಷಃ, ಗುಣವಿಶೇಷಂ ವೇತ್ತಿ ಇತಿ ಗುಣವಿಶೇಷವಿತ್ ।

**ಭೂರಿಧನಂ**— ಭೂರಿ ಚ ತತ್ ಧನಂ ಚ ಭೂರಿಧನಂ ತತ್ ।

**ಅನರ್ಘ್ಯಗುಣಮೂಲ್ಯಂ**— ಅರ್ಘಂ ಅರ್ಹತಿ ಇತಿ ಅರ್ಘ್ಯಃ ಅನರ್ಘ್ಯಃ, ಅನರ್ಘ್ಯಶ್ಚಾಸೌ ಗುಣಶ್ಚ ಅನರ್ಘ್ಯಗುಣಃ ತಸ್ಯ ಮೂಲ್ಯಂ ।

**ಭಾಗ್ಯದೈವಂ**— ಭಾಗ್ಯಸ್ಯ ದೈವಂ ಭಾಗ್ಯದೈವಂ ।

**ಯೋಗ್ಯತಾನುಗಂ**— ಯೋಗ್ಯಸ್ಯ ಭಾವಃ ಯೋಗ್ಯತಾ, ಅನುಗಚ್ಛತೀತಿ ಅನುಗಂ, ಯೋಗ್ಯತಾಯಾಃ ಅನುಗಂ ಯೋಗ್ಯಾತಾನುಗಂ ।

ವ್ಯಾಕರಣ— ಅರ್ಘಂ ಅರ್ಹತಿ ಇತಿ ಅರ್ಘ್ಯಃ ಎಂಬಲ್ಲಿ 'ದಂಡಾದಿಭ್ಯೋ ಯತ್' (5-1-66) ಎಂಬುದರಿಂದ ಯತ್ ಪ್ರತ್ಯಯ ।

ಕ್ರಿಯಾಪದ— ಆಪ - ಆಪ ಆಪತುಃ ಆಪುಃ ಇತ್ಯಾದಿ ಆಪ್ಲೃ ವ್ಯಾಪ್ತೌ ಲಿಟ್ ।

ಆಪ್ಯತೇ - ಆಪ್ಯತೇ ಆಪ್ಯೇತೇ ಆಪ್ಯಂತೇ ಇತ್ಯಾದಿ ಆಪ್ ಧಾತು ಕರ್ಮಣಿ ಲಟ್ ।

ಪ್ರಯೋಗ— ಕೋಽಪಿ ಪೂರುಷಃ ಭೂರಿಧನಂ ಆಪ (ಕರ್ತರಿ) ।

ಕೇನಾಪಿ ಪೂರುಷೇಣ ಭೂರಿಧನಂ ಆಪೇ (ಕರ್ಮಣಿ) ।

(ಕೇನಾಪಿ) ಅನರ್ಘ್ಯಗುಣಮೂಲ್ಯಂ ನ ಆಪ್ಯತೇ (ಕರ್ಮಣಿ) ।

ಕೋಽಪಿ ಅನರ್ಘ್ಯಗುಣಮೂಲ್ಯಂ ನ ಆಪ್ನೋತಿ (ಕರ್ತರಿ) ।

★ ★ ★

ಅವತಾರಿಕಾ— ಹೀಗೆ ದೃಷ್ಟಾಂತವನ್ನು ಹೇಳಿ ದಾರ್ಷ್ಟಾಂತಿಕವನ್ನು (ಪ್ರಕೃತ ವಿಷಯವನ್ನು) ಸಮರ್ಥಿಸುತ್ತಾರೆ.

**ವ್ಯಕ್ತಮುನ್ನತಿಮಿತೋಽಪ್ಯಯಂ ಜನ-**
**ಸ್ತಸ್ಯ ಯನ್ನ ಲಭತೇಽಖಿಲಂ ಫಲಮ್ ।**
**ಸ್ತೋಕಮಾನಸತಯಾ ತತೋ ವ್ರಜೇತ್**
**ತಸ್ಯ ಹಂತ ಪುರುಷಸ್ಯ ತುಲ್ಯತಾಮ್ ॥ 24 ॥**

ಪದಚ್ಛೇದ— ವ್ಯಕ್ತಂ, ಉನ್ನತಿಂ, ಇತಃ, ಅಪಿ, ಅಯಂ, ಜನಃ, ತಸ್ಯ, ಯತ್, ನ, ಲಭತೇ, ಅಖಿಲಂ, ಫಲಂ, ಸ್ತೋಕಮಾನಸತಯಾ, ತತಃ, ವ್ರಜೇತ್, ತಸ್ಯ, ಹಂತ, ಪುರುಷಸ್ಯ, ತುಲ್ಯತಾಂ ।

ಅನ್ವಯ— ಅಯಂ, ಜನಃ, ವ್ಯಕ್ತಂ, ಉನ್ನತಿಂ, ಇತಃ, ಆಪಿ, ಸ್ತೋಕಮಾನಸತಯಾ, ತಸ್ಯ, ಯತ್, ಅಖಿಲಂ, ಫಲಂ, ನ, ಲಭತೇ, ತತಃ, ತಸ್ಯ, ಪುರುಷಸ್ಯ, ತುಲ್ಯತಾಂ, ವ್ರಜೇತ್, ಹಂತ ।

ಅನ್ವಯಾರ್ಥ—

**ಅಯಂ ಜನಃ** = ಈಗಿನ ಕಾಲದಲ್ಲಿರುವ ಸಾಮಾನ್ಯ ಮನುಷ್ಯನು,

**ವ್ಯಕ್ತಂ** = ಸ್ಪಷ್ಟವಾಗಿ,

**ಉನ್ನತಿಂ** = ತನಗೆ ಯೋಗ್ಯವಾದ ಜ್ಞಾನಭಕ್ತಿ ಮುಂತಾದ ಗುಣಗಳಿಂದ ಆಧಿಕ್ಯವನ್ನು

ಇತಃ ಅಪಿ = ಹೊಂದಿದರೂ ಕೂಡ,
ಸ್ತೋಕಮಾನಸತಯಾ = ಸ್ವಲ್ಪ ಬುದ್ಧಿಯುಳ್ಳವನಾದುದರಿಂದ,
ತಸ್ಯ = ಆ ಮಧ್ವಶಾಸ್ತ್ರದ,
ಯತ್ = ಯಾವ ಕಾರಣದಿಂದ,
ಅಖಿಲಂ ಫಲಂ = ಎಲ್ಲಾ (ಪೂರ್ತಿ)ಫಲವನ್ನು,
ನ ಲಭತೇ = ಹೊಂದುವುದಿಲ್ಲವೋ,
ತತಃ = ಆ ಕಾರಣದಿಂದ,
ತಸ್ಯ ಪುರುಷಸ್ಯ = ಶಂಖವನ್ನು ಮಾರಿದ ಆ ಮನುಷ್ಯನ,
ತುಲ್ಯತಾಂ = ಸಾಮ್ಯವನ್ನು,
ವ್ರಜೇತ್ = ಹೊಂದಿಯಾನು?
ಹಂತ = ಆಹಾ! (ಸಂತೋಷ).

ತಾತ್ಪರ್ಯ— ಜ್ಞಾನಭಕ್ತಿವೈರಾಗ್ಯಾದಿ ಗುಣಗಳಿಂದ ಕೂಡಿದ ಸಾತ್ವಿಕನಾದ, ಉತ್ತಮ ಚೇತನನೂ ಕೂಡ ಈಗಿನ ಈ ಕಲಿಗಾಲದಲ್ಲಿ ಶ್ರೀಪೂರ್ಣಪ್ರಜ್ಞರ ಶಾಸ್ತ್ರದ ಪೂರ್ಣ ಪ್ರಯೋಜನವನ್ನು ಹೊಂದದೇ ಇದ್ದರೆ ಬಲಮುರಿ ಶಂಖವನ್ನು ಕೊಂಡುಕೊಂಡರೂ, ತಾನು ಅದನ್ನು ಪೂಜಿಸಿದ ಮಾರಿ ಹೆಚ್ಚು ಹಣವನ್ನು ಪಡೆದವನಿಗೆ ಸಮಾನನಾಗುತ್ತಾನೆ. ಇದು ಬಹಳ ವಿಷಾದಕರವಾದುದು. ಅಥವಾ ಯೋಗ್ಯತಾನುಸಾರವಾಗಿ ಫಲವನ್ನು ಪಡೆದುದರಿಂದ ಇದು ಸಂತೋಷಕರವಾದ ವಿಚಾರ. ಮಧ್ವಶಾಸ್ತ್ರಾಭ್ಯಾಸ ಮಾಡಿದ ಅಧಿಕಾರಿಗಳಿಗೆ ಬಹಳವಾದ ಫಲವು ಸಿಗುತ್ತದೆ. ಆದರೂ ಅದರಿಂದ ಬರಬೇಕಾದ ಸಂಪೂರ್ಣ ಫಲವು ಸಿಗುವುದಿಲ್ಲ. ಸಂಪೂರ್ಣ ಫಲವು ಉತ್ತಮನಾದ ಅಧಿಕಾರಿಗೆ ಮಾತ್ರ ಸಿಗುತ್ತದೆ.

ವಿಗ್ರಹ—

ಸ್ತೋಕಮಾನಸತಯಾ— ಸ್ತೋಕಂ ಮಾನಸಂ ಯಸ್ಯ ಸಃ ಸ್ತೋಕಮಾನಸಃ, ತಸ್ಯ ಭಾವಃ ಸ್ತೋಕಮಾನಸತಾ, ತಯಾ ।

ತುಲ್ಯತಾಂ— ತುಲಯಾ ಸಮ್ಮಿತಂ ತುಲ್ಯಂ, ತುಲ್ಯಸ್ಯ ಭಾವಃ ತುಲ್ಯತಾ, ತಾಂ ।

ಕ್ರಿಯಾಪದ— ಲಭತೇ- ಡುಲಭಷ್ ಪ್ರಾಪ್ತೌ, ಇತಿ ಪ್ರಾಪ್ತ್ಯರ್ಥಕಾತ್ ಲಭ್‌ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ಲಭತೇ ಇತಿ ರೂಪಂ ।

ಲಭತೇ ಲಭೇತೇ ಲಭಂತೇ, ಲಭಸೇ ಲಭೇಥೇ ಲಭಧ್ವೇ, ಲಭೇ ಲಭಾವಹೇ ಲಭಾಮಹೇ ।

ವ್ರಜೇತ್- ವ್ರಜಗತೌ ಇತಿ ಗತ್ಯರ್ಥಕಾತ್ ವ್ರಜಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವಿಧೌಲಿಙ್ ಪ್ರಥಮಪುರುಷೇ ಏಕವಚನೇ ವ್ರಜೇತ್ ಇತಿರೂಪಂ ।

ವ್ರಜೇತ್ ವ್ರಜೇತಾಂ ವ್ರಜೇಯುಃ, ವ್ರಜೇಃ ವ್ರಜೇತಂ ವ್ರಜೇತ, ವ್ರಜೇಯಂ ವ್ರಜೇವ ವ್ರಜೇಮ ।

ಪ್ರಯೋಗ— ಅಯಂ ಜನಃ ಅಖಿಲಂ ಫಲಂ ನ ಲಭತೇ (ಕರ್ತರಿ) ।
ಅನೇನ ಜನೇನ ಅಖಿಲಂ ಫಲಂ ನ ಲಭ್ಯತೇ (ಕರ್ಮಣಿ) ।
(ಅಯಂಜನಃ) ತಸ್ಯ ತುಲ್ಯತಾಂ ವ್ರಜೇತ್ (ಕರ್ತರಿ) ।
ಅನೇನ ಜನೇನ ತಸ್ಯ ತುಲ್ಯತಾ ವ್ರಜೇತ (ಕರ್ಮಣಿ) ।

ಕೋಶ— 'ಸ್ತೋಕಾಲ್ಪಕ್ಷುಲ್ಲಕಾಃ ಶ್ಲಕ್ಷ್ಣಂ ಸೂಕ್ಷ್ಮಂ ದಭ್ರಂ ಕೃಶಂ ತನು' ಇತ್ಯಮರಃ ।

★ ★ ★

**ಅವತಾರಿಕಾ**— ಬಲಮುರಿ ಶಂಖದ ದೃಷ್ಟಾಂತವನ್ನೇ ಬೇರೆ ರೀತಿ ವಿವರಿಸಿದ್ದನ್ನು ಹೇಳುತ್ತಿದ್ದಾರೆ.

**ಕ್ರೀತವಾನ್ ನರಪತಿರ್ಮಹಾದರಂ**
**ಸಾದರಂ ಪುನರುದಾರಚೇಷ್ಟಿತಃ ।**
**ಅರ್ಚಯನ್ ಸತತಮಾಪ ಸಂಪದೋ**
**ಯಾ ನ ತಾ ವಚನಚಿತ್ತಗೋಚರಾಃ ॥ 25 ॥**

**ಪದಚ್ಛೇದ**— ಕ್ರೀತವಾನ್, ನರಪತಿಃ, ಮಹಾದರಂ, ಸಾದರಂ, ಪುನಃ, ಉದಾರಚೇಷ್ಟಿತಃ ಅರ್ಚಯನ್, ಸತತಂ, ಆಪ, ಸಂಪದಃ, ಯಾಃ, ನ, ತಾಃ, ವಚನಚಿತ್ತಗೋಚರಾಃ ।

**ಅನ್ವಯ**— ಮಹಾದರಂ, ಕ್ರೀತವಾನ್, ಉದಾರಚೇಷ್ಟಿತಃ, ನರಪತಿಃ, ಪುನಃ, ಸಾದರಂ, ಸತತಂ, ಅರ್ಚಯನ್, ಯಾಃ, ಸಂಪದಃ, ಆಪ, ತಾಃ, ವಚನಚಿತ್ತಗೋಚರಾಃ, ನ (ಭವಂತಿ) ।

**ಅನ್ವಯಾರ್ಥ**—

**ಮಹಾದರಂ** = ಹೆಚ್ಚು ಬೆಲೆ ಬಾಳುವ ಉತ್ತಮವಾದ ಬಲಮುರಿ ಶಂಖವನ್ನು,
**ಕ್ರೀತವಾನ್** = ಕೊಂಡುಕೊಂಡ
**ಉದಾರಚೇಷ್ಟಿತಃ** = ಉತ್ತಮವಾದ ಕಾರ್ಯಗಳುಳ್ಳ,
**ನರಪತಿಃ ಪುನಃ** = ದೊರೆಯಾದರೋ,
**ಸಾದರಂ** = ಭಕ್ತಿಪುರಸ್ಸರವಾಗಿ,
**ಸತತಂ** = ಯಾವಾಗಲೂ,
**ಅರ್ಚಯನ್** = ಪೂಜಿಸುತ್ತಾ
**ಯಾಃ ಸಂಪದಃ** = ಯಾವ ಐಶ್ವರ್ಯಗಳನ್ನು,
**ಆಪ** = ಹೊಂದಿದನೋ,
**ತಾಃ** = ಆ ಐಶ್ವರ್ಯಗಳು,
**ವಚನಚಿತ್ತಗೋಚರಾಃ ನ (ಭವಂತಿ)** = ಮಾತು ಮತ್ತು ಮನಸ್ಸುಗಳಿಗೆ ವಿಷಯಗಳಾಗಿ ಆಗುವುದಿಲ್ಲ.

**ತಾತ್ಪರ್ಯ**— ಆ ಬಲಮುರಿ ಶಂಖವನ್ನು ಭಗವಂತನಲ್ಲಿ ಭಕ್ತನಾದ, ಗುಣಶಾಲಿಯಾದ ಮತ್ತು ಉತ್ಕೃಷ್ಟ-ಕಾರ್ಯಗಳಲ್ಲಿಯೇ ಆಸಕ್ತನಾದ ಒಬ್ಬ ರಾಜನು ಕೊಂಡುಕೊಂಡನು ಮತ್ತು ಯಾವಾಗಲೂ ಆ ಶಂಖವನ್ನು ಬಹಳ ಭಕ್ತಿಯಿಂದ ಪ್ರೀತ್ಯಾದರಗಳಿಂದ ಪೂಜಿಸುತ್ತಿದ್ದನು. ಅದರಿಂದಾಗಿ ಅವನಿಗೆ ಅಪರಿಮಿತವಾದ ಸಂಪತ್ತುಂಟಾಯಿತು. ಅವನು ಪಡೆದ ಸಂಪತ್ತು ಎಷ್ಟೆಂದು ಎಣಿಸಲು ನಮ್ಮ ಮನಸ್ಸಿಗೆ ಸಾಮರ್ಥ್ಯವಿಲ್ಲ ಎಂದ ಮೇಲೆ ಮಾತಿನಿಂದ ಅದನ್ನು ವರ್ಣಿಸಲು ಸಾಧ್ಯವಿಲ್ಲವೆಂದು ಹೇಳಬೇಕಾಗಿಯೇ ಇಲ್ಲ.

**ವಿಗ್ರಹ**—

**ನರಪತಿಃ**— ನರಾಣಾಂ ಪತಿಃ ನರಪತಿಃ ।
**ಮಹಾದರಂ**— ಮಹಾನ್ ಚ ಅಸೌ ದರಶ್ಚ ಮಹಾದರಃ ತಂ ।
**ಸಾದರಂ**— ಆದರೇಣ ಸಹಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸಾದರಂ ।
**ಉದಾರಚೇಷ್ಟಿತಃ**— ಉದಾರಾಣಿ ಚೇಷ್ಟಿತಾನಿ ಯಸ್ಯಸಃ ಉದಾರಚೇಷ್ಟಿತಃ ।
**ವಚನಚಿತ್ತಗೋಚರಾಃ**— ವಚನಂ ಚ ಚಿತ್ತಂ ಚ ವಚನಚಿತ್ತೇ, ವಚನಚಿತ್ತಯೋಃ ಗೋಚರಾಃ ।

**ಕ್ರಿಯಾಪದ—** ಆಪ - ಆಪ್ಲ್ ವ್ಯಾಪ್ತೌ ಲಿಟ್ ।

**ಪ್ರಯೋಗ—** ನರಪತಿಃ ಸಂಪದಃ ಆಪ (ಕರ್ತರಿ) ।
ನರಪತಿನಾ ಸಂಪದಃ ಆಪಿರೇ (ಕರ್ಮಣಿ) ।

**ಕೋಶ—** 'ಉದಾರಚೇಷ್ಟಿತಃ' ಎಂಬಲ್ಲಿ 'ಉದಾರೋ ದಾತೃಮಹತೋಃ' ಎಂದು ಅಮರ ಕೋಶಾನುಸಾರ ಉದಾರ ಶಬ್ದಕ್ಕೆ ಮಹತ್ತಾದ ಎಂದು ಅರ್ಥ. ಸಾದರಂ = ಭಕ್ತಿಯಿಂದ ಸಹಿತವಾಗಿ ಎಂದು ಅರ್ಥ. ಇಲ್ಲಿ 'ಆದರೋ ಭಾಜನಂ ಭಕ್ತಿಃ' ಎಂದು ಕೋಶ.

★ ★ ★

**ಅವತಾರಿಕಾ—** ಮೇಲೆ ಹೇಳಿದ ದೃಷ್ಟಾಂತಕ್ಕೆ ಅನುಗುಣವಾದ ಪ್ರಕೃತ ವಿಷಯವನ್ನು ಹೇಳುತ್ತಾರೆ.

**ಶಾಸ್ತ್ರಕಲ್ಪಕತರೋರಮುಷ್ಯ ಕಃ**
**ಪ್ರಾಪ್ನುಯಾತ್ ಸಕಲಮಪ್ಯಹೋ ಫಲಮ್ ।**
**ಯಸ್ತಮುತ್ತಮಗುಣಂ ವಿಡಂಬಯೇತ್**
**ಇತ್ಯುದೀರ್ಯ ಸ ಜನಾನರಂಜಯತ್ ॥ 26 ॥**

**ಪದಚ್ಛೇದ—** ಶಾಸ್ತ್ರಕಲ್ಪಕತರೋಃ, ಅಮುಷ್ಯ, ಕಃ, ಪ್ರಾಪ್ನುಯಾತ್, ಸಕಲಂ, ಅಪಿ, ಅಹೋ, ಫಲಂ, ಯಃ, ತಂ, ಉತ್ತಮಗುಣಂ, ವಿಡಂಬಯೇತ್, ಇತಿ, ಉದೀರ್ಯ, ಸಃ, ಜನಾನ್, ಅರಂಜಯತ್ ।

**ಅನ್ವಯ—** ಅಮುಷ್ಯ, ಶಾಸ್ತ್ರಕಲ್ಪಕತರೋಃ, ಸಕಲಂ, ಫಲಂ, ಕಃ, ಪ್ರಾಪ್ನುಯಾತ್, ಅಹೋ, ಅಪಿ, ಯಃ, ಉತ್ತಮಗುಣಂ, ತಂ, ವಿಡಂಬಯೇತ್, (ಸಃ ಕಃ ಸಕಲಮಪಿ ಫಲಂ ಪ್ರಾಪ್ನುಯಾತ್) ಸಃ, ಇತಿ, ಉದೀರ್ಯ, ಜನಾನ್, ಅರಂಜಯತ್ ।

**ಅನ್ವಯಾರ್ಥ—**

**ಅಮುಷ್ಯ** = ಈ ಮಧ್ವರು ಮಾಡಿರುವ,
**ಶಾಸ್ತ್ರಕಲ್ಪಕತರೋಃ** = ಶಾಸ್ತ್ರವೆಂಬ ಕಲ್ಪವೃಕ್ಷದ, (ಕಲ್ಪವೃಕ್ಷದಂತಿರುವ ಶಾಸ್ತ್ರದ)
**ಸಕಲಂ** = ಎಲ್ಲಾ,
**ಫಲಂ** = ಜ್ಞಾನ (ಅಥವಾ ಮೋಕ್ಷವೆಂಬ) ಪ್ರಯೋಜನವನ್ನು
**ಕಃ** = ಯಾವನು,
**ಪ್ರಾಪ್ನುಯಾತ್** = ಹೊಂದಿಯಾನು?
**ಅಹೋ** = ಆಶ್ಚರ್ಯ!
**ಅಪಿ** = (ತಥಾಪಿ) ಹಾಗಿದ್ದರೂ ಕೂಡ,
**ಯಃ** = ಯಾವನು,
**ಉತ್ತಮಗುಣಂ** = ಶ್ರೇಷ್ಠವಾದ ಗುಣಗಳುಳ್ಳ,
**ತಂ** = ಆ ರಾಜನನ್ನು
**ವಿಡಂಬಯೇತ್** = ಅನುಸರಿಸಿಯಾನೋ, (ಸಃ ಕಃ = ಅಂತಹ ಬ್ರಹ್ಮದೇವರು)
**ಸಕಲಂ ಅಪಿ ಫಲಂ** = ಎಲ್ಲಾ ಪ್ರಯೋಜನವನ್ನೂ,

**ಪ್ರಾಪ್ನುಯಾತ್** = ಹೊಂದಿಯಾನು.

**ಸಃ** = ಆ ಶೋಭನಭಟ್ಟರು,

**ಇತಿ** = ಈ ರೀತಿ,

**ಉದೀರ್ಯ** = ಹೇಳಿ,

**ಜನಾನ್** = ಜನರನ್ನು

**ಅರಂಜಯತ್** = ಸಂತೋಷಗೊಳಿಸಿದರು.

ತಾತ್ಪರ್ಯ— ಶ್ರೀಪೂರ್ಣಪ್ರಜ್ಞರು ರಚಿಸಿರುವ ಶಾಸ್ತ್ರವು ಅಪೇಕ್ಷಿಸಿದ ಸಮಸ್ತ ಪುರುಷಾರ್ಥವನ್ನು ಕೊಡುವುದರಿಂದ ಕಲ್ಪವೃಕ್ಷಕ್ಕೆ ಸಮಾನವಾದುದು. (ವಸ್ತುತಃ ಕಲ್ಪವೃಕ್ಷಕ್ಕಿಂತಲೂ ಶ್ರೇಷ್ಠವಾದುದು) ಸಾತ್ವಿಕರಾದ ಅಧಿಕಾರಿಗಳಿಗೆ ಇಷ್ಟವಾದ ಮೋಕ್ಷಫಲವನ್ನೇ ಕೊಡುವುದು. ಆದರೆ ಅಂತಹ ಫಲವನ್ನು ಪಡೆಯಲು ಎಲ್ಲರಿಗೂ ಸಾಧ್ಯವಿಲ್ಲ. ಬಲಮುರಿ ಶಂಖವನ್ನು ಪೂಜಿಸಿ ಹೆಚ್ಚು ಪ್ರಯೋಜನವನ್ನು ಪಡೆದ ರಾಜನಂತೆ ಉತ್ತಮವಾದ ಗುಣಗಳುಳ್ಳ ಬ್ರಹ್ಮನು ಮಾತ್ರ ಶ್ರೀಮಧ್ವಶಾಸ್ತ್ರದ ಸಂಪೂರ್ಣ ಫಲವನ್ನು ಹೊಂದಲು ಯೋಗ್ಯನು (ಅಥವಾ) ಬಲಮುರಿ ಶಂಖವನ್ನು ಪೂಜಿಸಿ ರಾಜನು ಹೆಚ್ಚು ಐಶ್ವರ್ಯ ವನ್ನು ಪಡೆದಂತೆ ಮಧ್ವಶಾಸ್ತ್ರದ ಶ್ರವಣಮನನಾದಿಗಳನ್ನು ಮಾಡಿದ ಮನುಷ್ಯನು ಧನ್ಯನು. ಅವನು ರಾಜನಂತಾಗುವನು ಎಂದು ಹೇಳಿ ಶೋಭನಭಟ್ಟರು ಸಾತ್ವಿಕ ಜನರನ್ನು ಸಂತೋಷಪಡಿಸಿದರು.

ಹೀಗೆ ಸಜ್ಜನರ ಸಹವಾಸದಿಂದ ಪೂರ್ವ ಪುಣ್ಯದಿಂದ ಮಧ್ವಶಾಸ್ತ್ರದ ಶ್ರವಣಾದಿಗಳಿಗೆ ಅವಕಾಶ ಒದಗಿದರೂ 'ಇದರಿಂದ ಏನೂ ಪ್ರಯೋಜನವಿಲ್ಲ, ಇದು ಜೀವಿಕೆಗೋಸ್ಕರ ಕೆಲವು ಡಾಂಭಿಕರು ಮಾಡುವ ಪ್ರದರ್ಶನ. ನಾನೂ ಕೂಡ ದ್ರವ್ಯಾರ್ಜನೆಗೆ ಬೇರೆ ದಾರಿ ಇಲ್ಲದ್ದರಿಂದ ಇದರ ಪ್ರವಚನ ಮಾಡುತ್ತಿದ್ದೇನೆ. ಈ ಶಾಸ್ತ್ರವನ್ನು ಅನುಸರಿಸುತ್ತಿದ್ದೇನೆ. ಇದು ನಿಷ್ಪ್ರಯೋಜನ ಎಂದು ತಿಳಿಯುತ್ತಾ ಅಂತಃಕರಣದಲ್ಲಿ ಯಾರು ಮಧ್ವಶಾಸ್ತ್ರವನ್ನು ತ್ಯಜಿಸಿರುತ್ತಾನೋ ಅಥವಾ ಬಾಹ್ಯ ದಲ್ಲಿಯೂ ಮಧ್ವಶಾಸ್ತ್ರವನ್ನು ತ್ಯಜಿಸಿರುತ್ತಾನೋ ಅವನು ಅತ್ಯಂತ ನೀಚನು, ಅವನ ಜನ್ಮವು ವ್ಯರ್ಥ. ಇದು ಸಫಲವೆಂದು ತಿಳಿದು ಭಕ್ತಿಯಿಂದ ಇದರ ಪ್ರವಚನ ಮಾಡುತ್ತಿದ್ದರೂ ಇದರಿಂದ ಜೀವಿಕೆಯೂ ಆಗುತ್ತಿದೆ, ಸಂತೋಷ ಸಿಗುತ್ತಿದೆ ಎಂದು ಮಧ್ವಶಾಸ್ತ್ರವನ್ನು ಯಾವನೂ ತಿಳಿಯುತ್ತಾನೋ ಅವನಿಗೂ ಅವನ ಯೋಗ್ಯತಾನುಸಾರವಾಗಿ ಫಲವು ಸಿಗುತ್ತದೆ, ಯೋಗ್ಯತೆಯು ಚೆನ್ನಾಗಿದ್ದರೆ ಬಹಳ ಫಲವೂ ಸಿಗುತ್ತದೆ. ಜ್ಞಾನಪ್ರಾಪ್ತಿಯಾಗಿ ಮೋಕ್ಷ ಸಾಧನೆಯು ಆಗುತ್ತದೆ. ಅತ್ಯುತ್ತಮ ರಾದ ಕೆಲವರಿಗೆ ಸಂಪೂರ್ಣ ಫಲವುಂಟಾಗುತ್ತದೆ. ಬ್ರಹ್ಮದೇವರೂ ಈ ಶಾಸ್ತ್ರದ ಅಧ್ಯಯನ ಮನನಗಳನ್ನು ಮಾಡಿ ಪರಮಾತ್ಮನನ್ನು ಧ್ಯಾನಿಸಿ ಉತ್ತಮವಾದ ಅಪರೋಕ್ಷ ಜ್ಞಾನವನ್ನು ಪಡೆದು ಪರಮಾತ್ಮನ ಪ್ರಸಾದದಿಂದ ಸ್ವಸ್ವರೂಪಾನಂದದ ಪ್ರಾದುರ್ಭಾವ ರೂಪವಾದ ಮೋಕ್ಷವನ್ನು ಪಡೆಯುತ್ತಾರೆ. ಇತರ ಸಾತ್ವಿಕ ಭಕ್ತರೂ ಕೂಡ ಈ ಶಾಸ್ತ್ರದ ಸೇವೆಯಿಂದ ಸ್ವಯೋಗ್ಯತಾನುಸಾರ ಶ್ರವಣವನ್ನು ನಿರಂತರ ಮಾಡಬೇಕು. ಶಕ್ತನಾದವನು ಪ್ರವಚನ ಮಾಡಬೇಕು, ಅಶಕ್ತನಾದವನು ಶ್ರವಣವನ್ನಾದರೂ ಮಾಡಬೇಕು. ಅದರಲ್ಲಿಯೂ ವಿಶೇಷತಃ ಸಂನ್ಯಾಸಿಯಾದವನು ಸ್ವರೂಪೋದ್ಧಾರಕರಾದ ಆಚಾರ್ಯರ ಈ ಶಾಸ್ತ್ರವನ್ನು ಶ್ರವಣಾದಿಗಳನ್ನು ಮಾಡದಿದ್ದರೆ ಅವನಿಗಿಂತ ನೀಚನು ಮತ್ತಾರೂ ಇಲ್ಲ' ಎಂದು ಈ ಸಂದರ್ಭದ ಒಟ್ಟು ತಾತ್ಪರ್ಯ.

ವಿಗ್ರಹ—

**ಶಾಸ್ತ್ರಕಲ್ಪಕತರೋಃ**— ಕಲ್ಪ ಏವ ಕಲ್ಪಕಃ, ಅಥವಾ ಕಲ್ಪಯತಿ ಸಂಪಾದಯತಿ ಅಪೇಕ್ಷಿತಂ ಇತಿ ಕಲ್ಪಕಃ, ಕಲ್ಪಕಃ ಇತಿ ತರು ಕಲ್ಪಕತರುಃ, ಶಾಸ್ತ್ರಕಲ್ಪಕತರು ಇವ ಶಾಸ್ತ್ರ ಕಲ್ಪಕತರುಃ, ತಸ್ಯ ।

**ಉತ್ತಮಗುಣಂ**— ಉತ್ತಮಾಃ ಗುಣಾಃ ಯಸ್ಯಸಃ ಉತ್ತಮಗುಣಃ ತಂ ।

**ಕ್ರಿಯಾಪದ— ಪ್ರಾಪ್ನುಯಾತ್-** ಪ್ರ ಉಪಸರ್ಗಪೂರ್ವಕಾತ್ ಆಪಲ್ಯ ವ್ಯಾಪ್ತೌ, ಇತಿ ವ್ಯಾಪ್ತ್ಯರ್ಥಕಾತ್ ಆಪ್‌ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ಪ್ರಾಪ್ನುಯಾತ್ ಇತಿರೂಪಂ ।

ಪ್ರ+ಆಪ್ನುಯಾತ್ ಆಪ್ನುಯಾತಾಂ ಆಪ್ನುಯುಃ, ಆಪ್ನುಯಾಃ ಆಪ್ನುಯಾತಂ ಆಪ್ನುಯಾತ, ಆಪ್ನುಯಾಂ ಆಪ್ನುಯಾವ ಆಪ್ನುಯಾಮ ।

**ವಿಡಂಬಯೇತ್-** ವಿ+ಡಂಬಯೇತ್, 'ವಿ' ಉಪಸರ್ಗಪೂರ್ವಕಾತ್ ಡಬಿ ಅನುಕರಣೇ ಇತಿ ಅನು-ಕರಣಾರ್ಥಕಾತ್ 'ಡಂಬ್' ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ವಿಡಂಬಯೇತ್ ಇತಿ ರೂಪಂ । ಪ್ರಾಯೇಣಾಯಂ ವಿಪೂರ್ವಕ ಏವ ಪ್ರಯುಜ್ಯತೇ (ಹೆಚ್ಚಾಗಿ ಇದನ್ನು ವಿ ಉಪಸರ್ಗಪೂರ್ವಕ ವಾಗಿಯೇ ಪ್ರಯೋಗಿಸುತ್ತಾರೆ.)

ವಿ+ಡಂಬಯೇತ್ ಡಂಬಯೇತಾಂ ಡಂಬಯೇಯುಃ, ಡಂಬಯೇಃ ಡಂಬಯೇತಂ ಡಂಬಯೇತ, ಡಂಬಯೇಯಂ ಡಂಬಯೇವ ಡಂಬಯೇಮ ।

**ಅರಂಜಯತ್-** ರಂಜರಾಗೇ ರಾಗಾರ್ಥಕಾತ್ ರಂಜಧಾತೋಃ ಣಿಜಂತಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅರಂಜಯತ್ ಇತಿರೂಪಂ ।

ಅರಂಜಯತ್ ಅರಂಜಯತಾಂ ಅರಂಜಯನ್, ಅರಂಜಯಃ ಅರಂಜಯತಂ ಅರಂಜಯತ, ಅರಂಜಯಂ ಅರಂಜಯಾವ ಅರಂಜಯಾಮ ।

**ಪ್ರಯೋಗ—** ಕಃ ಸಕಲಂ ಫಲಂ ಪ್ರಾಪ್ನುಯಾತ್ (ಕರ್ತರಿ) ।
ಕೇನ ಸಕಲಂ ಫಲಂ ಪ್ರಾಪ್ಯೇತ (ಕರ್ಮಣಿ) ।
ಯಃ ತಂ ವಿಡಂಬಯೇತ್ (ಕರ್ತರಿ) ।
ಯೇನ ಸಃ ವಿಡಂಬ್ಯೇತ (ಕರ್ಮಣಿ) ।
ಸಃ ಜನಾನ್ ಅರಂಜಯತ್ (ಕರ್ತರಿ) ।
ತೇನ ಜನಾಃ ಅರಜ್ಯಂತ (ಕರ್ಮಣಿ) ।

**ಅಲಂಕಾರ—** ಇಲ್ಲಿ ಶಾಸ್ತ್ರಕಲ್ಪಕತರು ಎಂಬಲ್ಲಿ 'ವಾಚಕಲುಪ್ತೋಪಮಾ' ಅಲಂಕಾರ ।

**ವಿಶೇಷಾಂಶ—** ಈ ಶ್ಲೋಕದಲ್ಲಿರುವ ಕಃ ಎಂಬ ಶಬ್ದಕ್ಕೆ ಯಾವನು ಎಂದೂ, ಬ್ರಹ್ಮನು ಎಂದೂ ಅರ್ಥ. 'ಕಃ ಪ್ರಾಪ್ನುಯಾತ್? ಬ್ರಹ್ಮಾ ಚ' ಎಂದು ಸುಮಧ್ವವಿಜಯದ ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ ಸ್ವಯಂ ನಾರಾಯಣಪಂಡಿತಾ ಚಾರ್ಯರೇ ಈ ಎರಡು ಅರ್ಥಗಳನ್ನು ತಿಳಿಸಿದ್ದಾರೆ. 'ಮಾರುತೇ ವೇಧಸಿ ಬ್ರಧ್ನೇ ಪುಂಸಿಕಃ ಕಂ ಶಿರೋಂಬುನೋಃ' ಎಂದು ಅಮರದಲ್ಲಿ 'ಕಃ' ಎಂದರೆ ಬ್ರಹ್ಮ ಎಂದೂ ಅರ್ಥವಿದೆ ಎಂದು ಹೇಳಿದ್ದಾರೆ.

★ ★ ★

**ಅವತಾರಿಕಾ—** ಈ ರೀತಿ ಪಂಡಿತವರೇಣ್ಯರು ಮಾತ್ರವಲ್ಲದೆ ದೇವತೆಗಳೂ ಕೂಡ ಮಧ್ವಶಾಸ್ತ್ರ ನಿರ್ಮಾಣದಿಂದ ಸಂತೋಷಪಟ್ಟರೆಂದು ತಿಳಿಸುತ್ತಾರೆ.

**ನೇದೃಶೈಃ ಕವಿಭಿರೇವ ಕೇವಲಂ**
**ಹಂತ ಪೂಜ್ಯಚರಣೋಽಭ್ಯಪೂಜ್ಯತ ।**
**ಶರ್ವಶಕ್ರಗುರುಪೂರ್ವದೈವತೈ-**
**ರಪ್ಯಲಂ ಸುಸಮಯೋದ್ಗಮೋತ್ಸವೇ ॥ 27 ॥**

**ಪದಚ್ಛೇದ**— ನ ಈದೃಶೈಃ, ಕವಿಭಿಃ, ಏವ, ಕೇವಲಂ, ಹಂತ, ಪೂಜ್ಯಚರಣಃ, ಅಭ್ಯಪೂಜ್ಯತ, ಶರ್ವಶಕ್ರ-ಗುರುಪೂರ್ವದೈವತೈಃ, ಅಪಿ, ಅಲಂ, ಸುಸಮಯೋದ್ಗಮೋತ್ಸವೇ ।

**ಅನ್ವಯ**— ಪೂಜ್ಯಚರಣಃ, ಸುಸಮಯೋದ್ಗಮೋತ್ಸವೇ, ಕೇವಲಂ, ಈದೃಶೈಃ, ಕವಿಭಿರೇವ, ನ (ಅಭ್ಯಪೂಜ್ಯತ) (ಕಿಂತು) ಶರ್ವಶಕ್ರಗುರುಪೂರ್ವದೈವತೈರಪಿ, ಅಲಂ, ಅಭ್ಯಪೂಜ್ಯತ, ಹಂತ ।

**ಅನ್ವಯಾರ್ಥ**—

**ಪೂಜ್ಯಚರಣಃ** = ಪೂಜಿಸಲು ಯೋಗ್ಯವಾದ ಪಾದಗಳುಳ್ಳ (ಅಥವಾ ಆಚಾರವುಳ್ಳ, ಆಕೃತಿಯುಳ್ಳ, ಸ್ವರೂಪವುಳ್ಳ) ಈ ಮಧ್ವರು,

**ಸುಸಮಯೋದ್ಗಮೋತ್ಸವೇ** = ಒಳ್ಳೆಯ ಶಾಸ್ತ್ರದ ಪ್ರಕಟನೆಯ ಉತ್ಸವದ ಸಮಯದಲ್ಲಿ (ನಿರ್ಮಾಣವೆಂಬ ಉತ್ಸವ ಸಮಯದಲ್ಲಿ)

**ಕೇವಲಂ** = ಮುಖ್ಯವಾಗಿ

**ಈದೃಶೈಃ** = ಇಂತಹ

**ಕವಿಭಿಃ ಏವ** = ವಿದ್ವಾಂಸರಿಂದಲೇ, (ಶೋಭನಭಟ್ಟ ಸದೃಶರಾದ ವಿದ್ವಾಂಸರಿಂದಲೇ)

**ನ ಅಭ್ಯಪೂಜ್ಯತ** = ಪೂಜಿಸಲ್ಪಡಲಿಲ್ಲ,

**ಶರ್ವಶಕ್ರಗುರುಪೂರ್ವದೈವತೈಃ** = ಈಶ್ವರನು, ದೇವೇಂದ್ರ, ಬೃಹಸ್ಪತಿ, ಇವರೇ ಮೊದಲಾದ ದೇವತೆ-ಗಳಿಂದಲೂ ಅಭ್ಯ ಪೂಜ್ಯತ ಪೂಜಿಸಲ್ಪಟ್ಟರು

**ಹಂತ** = ಆಶ್ಚರ್ಯ (ಸಂತೋಷ)

**ತಾತ್ಪರ್ಯ**— ಶ್ರೀಮಧ್ವರು ಸಚ್ಛಾಸ್ತ್ರ ನಿರ್ಮಾಣ ಸಮಯವು, ಅದು ಜ್ಞಾನಿಗಳಿಗೆ ಅತಿಶ್ರೇಷ್ಠವಾದ ಉತ್ಸವ ಸಮಯದಂತೆ ತುಂಬಾ ಸಂತೋಷವನ್ನುಂಟುಮಾಡುತ್ತಿತ್ತು. ಆಗ ಶ್ರೀ ಶೋಭನಭಟ್ಟರಂತಹ ಜ್ಞಾನಿವರ್ಯರು ಮಾತ್ರವೇ ಆಚಾರ್ಯರನ್ನು ಪೂಜಿಸಿ ಗೌರವಿಸಿದರು ಎಂದಲ್ಲ, ಶಂಕರ, ಇಂದ್ರ, ಬೃಹಸ್ಪತಿ, ಮೊದಲಾದ ದೇವತೆಗಳೂ ಸಹ ಶಾಸ್ತ್ರಪ್ರಕಾಶ ಸಮಯದಲ್ಲಿ ಆಚಾರ್ಯರನ್ನು ಅತಿಶಯವಾಗಿ ಪೂಜಿಸಿದರು.

**ವಿಗ್ರಹ**—

**ಪೂಜ್ಯಚರಣಃ**— ಪೂಜ್ಯೌ ಚರಣೌ ಯಸ್ಯ ಸಃ ಪೂಜ್ಯಚರಣಃ, ಪೂಜ್ಯಂ ಚರಣಂ ಯಸ್ಯಸಃ ।

**ಶರ್ವಶಕ್ರಗುರುಪೂರ್ವದೈವತೈಃ**— ಶರ್ವಶ್ಚ ಶಕ್ರಶ್ಚ ಗುರುಶ್ಚ ಶರ್ವಶಕ್ರಗುರವಃ, ತೇ ಪೂರ್ವೇ ಯೇಷಾಂ ತಾನಿ ಶರ್ವಶಕ್ರಗುರುಪೂರ್ವಾಣಿ, ತಾನಿ ಚ ತಾನಿ ದೈವತಾನಿ ಚ ಶರ್ವಶಕ್ರಗುರುಪೂರ್ವದೈವತಾನಿ ತೈಃ ।

**ಸುಸಮಯೋದ್ಗಮೋತ್ಸವೇ**— ಶೋಭನಶ್ಚ ಅಸೌ ಸಮಯಶ್ಚ ಸುಸಮಯಃ, ಸುಸಮಯಸ್ಯ ಉದ್ಗಮಃ ಸುಸಮಯೋದ್ಗಮಃ, ಸುಸಮಯೋದ್ಗಮಶ್ಚಾಸೌ ಉತ್ಸವಶ್ಚ ಸುಸಮಯೋದ್ಗಮೋತ್ಸವಃ, ತಸ್ಮಿನ್ ।

**ಕ್ರಿಯಾಪದ— ಅಭ್ಯಪೂಜ್ಯತ** - ಅಭಿ ಉಪಸರ್ಗಪೂರ್ವಕಾತ್ ಪೂಜ ಪೂಜಾಯಾಂ ಇತಿ ಪೂಜಾರ್ಥಕಾತ್ ಪೂಜಧಾತೋಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅಭ್ಯಪೂಜ್ಯತ ಇತಿ ರೂಪಂ ।

ಅಭಿ+ಅಪೂಜ್ಯತ ಅಪೂಜ್ಯೇತಾಂ ಅಪೂಜ್ಯಂತ, ಅಪೂಜ್ಯಥಾಃ ಅಪೂಜ್ಯೇಥಾಂ ಅಪೂಜ್ಯಧ್ವಂ,
ಅಪೂಜ್ಯೇ ಅಪೂಜ್ಯಾವಹಿ ಅಪೂಜ್ಯಮಹಿ ।

**ಪ್ರಯೋಗ—** ಪೂಜ್ಯಚರಣಃ ಶರ್ವಶಕ್ರಗುರುಪೂರ್ವದೈವತೈರಪಿ ಅಭ್ಯಪೂಜ್ಯತ (ಕರ್ಮಣಿ) ।
ಪೂಜ್ಯಚರಣಂ (ಕರ್ಮ) ಶರ್ವಶಕ್ರಗುರುಪೂರ್ವದೈವತಾನಿ ಅಪಿ (ಕರ್ತೃ) ।
ಅಪೂಜಯನ್(ಕರ್ತರಿ) ।

**ವಿಶೇಷವಿಚಾರ—** 'ಪೂಜ್ಯಚರಣಃ' ಎಂಬ ಪದಕ್ಕೆ ಪೂಜಾರ್ಹವಾದ ಸ್ವರೂಪವುಳ್ಳವನು ಎಂದೂ ಅರ್ಥ. 'ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ' ಎಂದು ಆ ಅರ್ಥಕ್ಕೆ ಪ್ರಮಾಣವಿದೆ.

**ಕೋಶ—** 'ಈಶ್ವರಃ ಶರ್ವ ಈಶಾನಃ, ಬೃಹಸ್ಪತಿಃ ಸುರಾಚಾರ್ಯಃ, ವೃಂದಾರಕಾದ್ಯೆವತಾನಿ ಪುಂಸಿ ವಾ ದೇವತಾ ಸ್ತ್ರಿಯಾಂ' ಎಂದು ಅಮರಕೋಶವಿದೆ.

★ ★ ★

ಅವತಾರಿಕಾ— ಶ್ರೀಮದಾಚಾರ್ಯರು ದಿಗ್ವಿಜಯದಲ್ಲಿ ಅಲ್ಲಲ್ಲಿ ಸಜ್ಜನರಿಗೆ ತತ್ವಜ್ಞಾನವನ್ನು ಉಪದೇಶ ಮಾಡಿದರೆಂದು ತಿಳಿಸುತ್ತಾರೆ.

**ನಿಮ್ನಭೂರಿವ ಸತೀಃ ಪ್ರಜಾ ವ್ರಜನ್**
**ವಾರಿದರ್ತುರಶನೈರಪೂರಿ ಸಃ ।**
**ಪ್ರಾಜ್ಯತಾಪಹರದರ್ಶನಾಂಬುನಾ**
**ತುಂಗದೇಶಮಿವ ದುರ್ಜನಂ ತು ನೋ ॥ 28 ॥**

**ಪದಚ್ಛೇದ—** ನಿಮ್ನಭೂಃ, ಇವ, ಸತೀಃ, ಪ್ರಜಾಃ, ವ್ರಜನ್, ವಾರಿದರ್ತುಃ, ಅಶನೈಃ, ಅಪೂರಿ, ಸಃ, ಪ್ರಾಜ್ಯತಾ-ಪಹರದರ್ಶನಾಂಬುನಾ, ತುಂಗದೇಶಂ ಇವ, ದುರ್ಜನಂ, ತು, ನೋ ।

**ಅನ್ವಯ—** ವ್ರಜನ್, ಸಃ, ಪ್ರಾಜ್ಯತಾಪಹರದರ್ಶನಾಂಬುನಾ, ಸತೀಃ, ಪ್ರಜಾಃ, ಅಶನೈಃ, ವಾರಿದರ್ತುಃ, ನಿಮ್ನಭೂಃ, ಇವ, ಅಪೂರಿ, ದುರ್ಜನಂ, ತು, ತುಂಗದೇಶಂ, ಇವ, ನ, ಅಪೂರಿ ।

**ಅನ್ವಯಾರ್ಥ—**

**ವ್ರಜನ್** = ಹೋಗುತ್ತಿರುವ, (ಗೋದಾವರೀ ತೀರದಿಂದ ರಜತಪೀಠಕ್ಕೆ) (ಅಲ್ಲಲ್ಲಿ ಸಂಚರಿಸುತ್ತಿರುವ)
**ಸಃ** = ಆ ಶ್ರೀಮಧ್ವಾಚಾರ್ಯರು,
**ಪ್ರಾಜ್ಯತಾಪಹರದರ್ಶನಾಂಬುನಾ** = ಹೆಚ್ಚಾದ ಸಂಸಾರ ಕ್ಲೇಶವನ್ನು ಪರಿಹರಿಸುವ ಶಾಸ್ತ್ರವೆಂಬ ನೀರಿನಿಂದ,
**ಸತೀಃ** = ಸಜ್ಜನರಾದ,
**ಪ್ರಜಾಃ** = ಮನುಷ್ಯರನ್ನು,
**ಅಶನೈಃ** = ಬೇಗನೆ,
**ವಾರಿದರ್ತುಃ** = ಮಳೆಗಾಲವು,
**ನಿಮ್ನಭೂಃ** = ತಗ್ಗಾದ ಸ್ಥಳಗಳನ್ನು ಎಂಬಂತೆ,
**ಅಪೂರಿ** = ಪೂರ್ಣರನ್ನಾಗಿ ಮಾಡಿದರು, (ಅಪ್ಯಾಯನಗೊಳಿಸಿದರು)
**ದುರ್ಜನಂ ತು** = ದುಷ್ಟ ಜನರನ್ನಾದರೋ
**ತುಂಗದೇಶಂ ಇವ** = ಎತ್ತರವಾದ ಸ್ಥಳವನ್ನು ಎಂಬಂತೆ,
**ನೋ ಅಪೂರಿ** = (ಜ್ಞಾನದಿಂದ) ಪೂರ್ಣವನ್ನಾಗಿ ಮಾಡಲಿಲ್ಲ.

ತಾತ್ಪರ್ಯ— ಮಳೆಗಾಲವು ಮೋಡಗಳ ಮೂಲಕ ಮಳೆ ಸುರಿಸಿ ಬೇಸಿಗೆಯ ಬೇಗೆಯನ್ನು ಪರಿಹರಿಸಿ ಭೂಮಿಯ ತಗ್ಗಾದ ಸ್ಥಳಗಳನ್ನು ತುಂಬುತ್ತದೆ. ಎತ್ತರವಾದ ಸ್ಥಳವನ್ನು ತುಂಬುವುದಿಲ್ಲ. ಅದರಂತೆ ಶ್ರೀ ಮಧ್ವಾಚಾರ್ಯರು ಗೋದಾವರೀ ತೀರದಿಂದ ರಜತಪೀಠಪುರದ ಕಡೆಗೆ ಹೋಗುತ್ತಾ ಅಲ್ಲಲ್ಲಿ ಸಂಚರಿಸುತ್ತಾ ದಾರಿಯಲ್ಲಿ ತಮ್ಮ ಶಾಸ್ತ್ರವನ್ನು ಸಾತ್ವಿಕರಾದ ಸಜ್ಜನರಿಗೆ ಉಪದೇಶಿಸಿ ಅವರ ಸಾಂಸಾರಿಕ ತಾಪತ್ರಯವನ್ನು ಪರಿಹರಿಸುತ್ತಿದ್ದರು. ಅವರನ್ನು ಆನಂದಗೊಳಿಸುತ್ತಿದ್ದರು. ಸ್ವಭಾವತಃ ದುರ್ಜನರಾದವರಿಗೆ ಉಪದೇಶ ಮಾಡುತ್ತಿರಲಿಲ್ಲ.

ವಿಗ್ರಹ—

ನಿಮ್ನಭೂಃ— ನಿಮ್ನಶ್ಚ ತಾಃ ಭುವಶ್ಚ ನಿಮ್ನಭುವಃ, ತಾಃ ।

ವಾರಿದರ್ತುಃ— ವಾರಿ ದದತೀತಿ ವಾರಿದಾಃ, ವಾರಿದಾನಾಂ ಋತುಃ ವಾರಿದರ್ತುಃ ।

ಅಶನ್ಯೈಃ— ನ ಶನ್ಯೈಃ ಅಶನ್ಯೈಃ ।

ಪ್ರಾಜ್ಯತಾಪಹರದರ್ಶನಾಂಬುನಾ— ಪ್ರಾಜ್ಯಶ್ಚಾಸೌ ತಾಪಶ್ಚ ಪ್ರಾಜ್ಯತಾಪಃ ಹರತೀತಿ ಹರಂ, ಪ್ರಾಜ್ಯತಾಪಸ್ಯ ಹರಂ ಪ್ರಾಜ್ಯತಾಪಹರಂ, ಪ್ರಾಜ್ಯತಾಪಹರಂ ಚ ತತ್ ದರ್ಶನಂ ಚ ಪ್ರಾಜ್ಯತಾಪಹರದರ್ಶನಂ, ತದೇವ ಅಂಬು ತೇನ ।

ತುಂಗದೇಶ— ತುಂಗಶ್ಚಾಸೌ ದೇಶಶ್ಚ ತುಂಗದೇಶಃ ತಂ ।

ದುರ್ಜನಂ— ದುಷ್ಟಶ್ಚಾಸೌ ಜನಶ್ಚ ದುರ್ಜನಃ ತಂ ।

ಕ್ರಿಯಾಪದ— ಅಪೂರಿ- ಪೂರೀ ಆಪ್ಯಾಯನೇ, ಇತಿ ಆಪ್ಯಾಯನಾರ್ಥಕಾತ್, 'ಪೂರ್' ಧಾತೋಃ ದೈವಾದಿಕಾತ್ ಆತ್ಮನೇಪದಿನಃ ಸಕರ್ಮಕಾತ್ ಕರ್ತರಿ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ಅಪೂರಿ ಇತಿ ರೂಪಂ ।

ಅಪೂರಿ, ಅಪೂರಿಷ್ಟ ಅಪೂರಿಷಾತಾಂ ಅಪೂರಿಷತ, ಅಪೂರಿಷ್ಠಾಃ ಅಪೂರಿಷಾಥಾಂ ಅಪೂರಿಢ್ವಂ ಅಪೂರಿಷಿ ಅಪೂರಿಷ್ವಹಿ ಅಪೂರಿಷ್ಮಹಿ ।

ಪ್ರಯೋಗ— ಸಃ ಸತೀಃ ಪ್ರಜಾಃ ಅಪೂರಿ (ಕರ್ತರಿ) ।
ತೇನ ಸತೀಃ ಪ್ರಜಾಃ ಅಪೂರಿಷತ (ಕರ್ಮಣಿ) ।

ವ್ಯಾಕರಣವಿಶೇಷ— ಅಪೂರಿ ಎಂಬಲ್ಲಿ 'ದೀಪಜನಪೂರಿತಾಯಿಪ್ಯಾಯಿಭ್ಯೋಽನ್ಯತರಸ್ಯಾಂ (3-1-61) ಎಂಬ ಸೂತ್ರದಿಂದ ಲುಙ್ ಆದೇಶವಾದ 'ಚ್ಲಿ' ಚಿಣ್ ಆದೇಶ. 'ಚಿಣೋಃ ಲುಕ್' (6-4-104) ಎಂಬ ಸೂತ್ರದಿಂದ ಆತ್ಮನೇ ಪದದ 'ತ' ಪ್ರತ್ಯಯಕ್ಕೆ ಲುಕ್ ಬಂದಿದೆ ನಿಮ್ನಭೂಃ ಎಂಬಲ್ಲಿ ವ್ಯಾಕರಣ ವಿಚಾರವನ್ನು ತತ್ರ ದೇವಮಭಿವಂದ್ಯ (ಸರ್ಗ-9, ಶ್ಲೋಕ-14) ಎಂಬ ಶ್ಲೋಕದಲ್ಲಿ ಹೇಳಿದೆ.

ಕೋಶ— 'ಪ್ರಜಾ ಸ್ಯಾತ್ ಸಂತತೌ ಜನೇ, ಪ್ರಭೂತಂ ಪ್ರಚುರಂ ಪ್ರಾಜ್ಯಮದಭ್ರಂ ಬಹುಲಂ ಬಹು' ಎಂದು ಅಮರ, 'ದರ್ಶನಂ ದರ್ಪಣೇಧರ್ಮೋಪಲಬ್ಧ್ಯೋಃ ಬುದ್ಧಿಶಾಸ್ತ್ರಯೋಃ' ಎಂದು ಹೇಮಚಂದ್ರ ಕೋಶ ।

★ ★ ★

ಅವತಾರಿಕಾ— ಶ್ರೀಮದಾಚಾರ್ಯರು ಪುನಃ ರೂಪ್ಯಪೀಠಪುರಕ್ಕೆ (ಉಡುಪಿಗೆ) ಬಂದರೆನ್ನುತ್ತಾರೆ.

**ಕರ್ಮಭಿಃ ಸಕಲಲೋಕಕೌತುಕೈ-**
**ರ್ಮಾನಿತಃ ಪಥಿ ಜನೈಃ ಸಮಾಗತಃ ।**
**ಸನ್ನನಾಮ ಶಿವನಾಮಕೀರ್ತನಂ**
**ರಾಜತಾಸನಪುರೇ ವಿರಾಜಿತಮ್ ॥ 29 ॥**

**ಪದಚ್ಛೇದ**— ಕರ್ಮಭಿಃ, ಸಕಲಲೋಕಕೌತುಕೈಃ, ಮಾನಿತಃ, ಪಥಿ, ಜನ್ಯೈಃ, ಸಮಾಗತಃ, ಸನ್ನನಾಮ, ಶಿವನಾಮ-ಕೀರ್ತನಂ, ರಾಜತಾಸನಪುರೇ, ವಿರಾಜಿತಂ ।

**ಅನ್ವಯ**— ಪಥಿ, ಸಕಲಲೋಕಕೌತುಕೈಃ, ಕರ್ಮಭಿಃ, ಜನ್ಯೈಃ, ಮಾನಿತಃ, ಸಮಾಗತಃ, ರಾಜತಾಸನಪುರೇ, ವಿರಾಜಿತಂ, ಶಿವನಾಮಕೀರ್ತನಂ, ಸನ್ನನಾಮ ।

**ಅನ್ವಯಾರ್ಥ**—

**ಪಥಿ** = ದಾರಿಯಲ್ಲಿ,

**ಸಕಲಲೋಕಕೌತುಕೈಃ** = ಎಲ್ಲಾ ಜನರಿಗೆ ಕುತೂಹಲಕಾರವಾದ,

**ಕರ್ಮಭಿಃ** = ಕಾರ್ಯಗಳಿಂದ,

**ಜನ್ಯೈಃ** = ಜನರಿಂದ,

**ಮಾನಿತಃ** = ಸನ್ಮಾನಿತರಾದ,

**ಸಮಾಗತಃ** = (ಉಡುಪಿಗೆ) ಬಂದಿರುವವರಾದ,

**ಸಃ** = ಆ ಶ್ರೀ ಮಧ್ವಾಚಾರ್ಯರು,

**ರಾಜತಾಸನಪುರೇ** = ರಜತಪೀಠಪುರದಲ್ಲಿ,

**ವಿರಾಜಿತಂ** = ಪ್ರಕಾಶಮಾನನಾದ,

**ಶಿವನಾಮಕೀರ್ತನಂ** = ಶಿವನೆಂಬ ಹೆಸರಿನಿಂದ ಕರೆಯಿಸಿಕೊಳ್ಳುವ ಅನಂತೇಶ್ವರ ದೇವರನ್ನು

**ಸನ್ನನಾಮ** = ನಮಸ್ಕರಿಸಿದರು.

**ತಾತ್ಪರ್ಯ**— ಶ್ರೀ ಪೂರ್ಣಪ್ರಜ್ಞರು ಉಡುಪಿಗೆ ಬರುತ್ತಾ, ದಾರಿಯಲ್ಲಿ ಜನರಿಗೆ ಅತ್ಯಾಶ್ಚರ್ಯಕರವಾದ ಅನೇಕ ಅದ್ಭುತ ವ್ಯಾಪಾರಗಳನ್ನು ಮಾಡುತ್ತಿದ್ದರು. ಜನರು ಅವೆಲ್ಲವನ್ನು ನೋಡಿ ಆಚಾರ್ಯರನ್ನು ಗೌರವಿಸಿ ಪೂಜಿಸುತ್ತಿದ್ದರು. ಹೀಗೆ ಅವರು ಉಡುಪಿಗೆ ಬಂದು ಅಲ್ಲಿ ವಿರಾಜಿಸುತ್ತಿರುವ ಅನಂತೇಶ್ವರನೆಂಬ ಹೆಸರಿನಿಂದ ಕರೆಯಿಸಿಕೊಳ್ಳುತ್ತಿರುವ ಶ್ರೀಮದನಂತಪದ್ಮನಾಭಸ್ವಾಮಿಯನ್ನು ವಂದಿಸಿದರು.

**ವಿಗ್ರಹ**—

**ಸಕಲಲೋಕಕೌತುಕೈಃ**— ಸಕಲಾಶ್ಚ ತೇ ಲೋಕಾಶ್ಚ ಸಕಲಲೋಕಾಃ, ಸಕಲಲೋಕಾನಾಂ ಕೌತುಕಂ ಯೈಃ ತಾನಿ ಸಕಲಲೋಕಕೌತುಕಾನಿ, ತೈಃ, ಸಕಲಲೋಕಾನಾಂ ಕೌತುಕಾನಿ ಸಕಲಲೋಕಕೌತುಕಾನಿ ಇತಿ ವಾ ।

**ಶಿವನಾಮಕೀರ್ತನಂ**— ಕೀರ್ತ್ಯತೇ ಅನೇನೇತಿ ಕೀರ್ತನಂ(ವಾಚಕಂ) ಶಿವ ಇತಿ ನಾಮ, ಶಿವನಾಮ ಶಿವ-ನಾಮ ಕೀರ್ತನಂ (ವಾಚಕಂ) ಯಸ್ಯ ಸಃ ತಂ, ಶಿವನಾಮ್ನಾ ಕೀರ್ತನಂ (ಉಕ್ತಿಃ) ಯಸ್ಯ ಸಃ ತಂ, ಇತಿ ವಾ ।

**ರಾಜತಾಸನಪುರ**— ರಜತಸ್ಯೇದಂ ರಾಜತಂ, ರಾಜತಂ ಚ ತತ್ ಆಸನಂ ಚ ರಾಜತಾಸನಂ, ರಾಜತಾಸನಂ ಇತಿ ಪುರಂ ರಾಜತಾಸನಪುರಂ, ತಸ್ಮಿನ್ ।

**ಕ್ರಿಯಾಪದ**— ಸನ್ನನಾಮ- ಣಮು ಪ್ರಹ್ವತ್ವೇ ಶಬ್ದೇ ಚ ಇತ್ಯಸ್ಮಾದ್ ಧಾತೋಃ ಪ್ರಹ್ವತ್ವಶಬ್ದಾರ್ಥಕಾತ್ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಸನ್ನನಾಮ ಇತಿ ರೂಪಂ ।

ಸಮ್+ನನಾಮ ನೇಮತುಃ ನೇಮುಃ, ನೇಮಿಥ-ನನಂಥ ನೇಮಥುಃ ನೇಮ ನನಾಮ -ನನಮ ನೇಮಿವ, ನೇಮಿಮ ।

**ಪ್ರಯೋಗ**— ಸಃ ಶಿವನಾಮಕೀರ್ತನಂ ಸನ್ನನಾಮ (ಕರ್ತರಿ) ।
ತೇನ ಶಿವನಾಮಕೀರ್ತನಃ ಸನ್ನೇಮೇ (ಕರ್ಮಣಿ) ।

★ ★ ★

**ಅವತಾರಿಕಾ**— ತಮ್ಮನ್ನು ಅಗಲಿ ಹೋಗಿದ್ದ ಶ್ರೀಮಧ್ವರನ್ನು ಪುನಃ ಕಂಡಾಗ ಅಚ್ಯುತಪ್ರೇಕ್ಷರಿಗೆ ಆದ ಆನಂದವನ್ನು ವರ್ಣಿಸುತ್ತಾರೆ.

**ಅಚ್ಯುತಪ್ರಮತಿರಚ್ಯುತಪ್ರಿಯಂ**
**ತಂ ದಶಪ್ರಮತಿಮಾಗತಂ ತದಾ ।**
**ವಂದಮಾನಮವಲೋಕ್ಯ ಯಾಂ ಮುದಂ**
**ಪ್ರಾಪ್ತವಾಂಸ್ತದವಧಿರ್ನ ವಿದ್ಯತೇ ॥ 30 ॥**

**ಪದಚ್ಛೇದ**— ಅಚ್ಯುತಪ್ರಮತಿಃ, ಅಚ್ಯುತಪ್ರಿಯಂ, ತಂ, ದಶಪ್ರಮತಿಂ, ಆಗತಂ, ತದಾ, ವಂದಮಾನಂ, ಅವಲೋಕ್ಯ, ಯಾಂ, ಮುದಂ, ಪ್ರಾಪ್ತವಾನ್, ತದವಧಿಃ, ನ, ವಿದ್ಯತೇ ।

**ಅನ್ವಯ**— ಅಚ್ಯುತಪ್ರಮತಿಃ, ಅಚ್ಯುತಪ್ರಿಯಂ, ಆಗತಂ, ವಂದಮಾನಂ, ತಂ, ದಶಪ್ರಮತಿಂ, ಅವಲೋಕ್ಯ , ತದಾ, ಯಾಂ, ಮುದಂ, ಪ್ರಾಪ್ತವಾನ್, ತದವಧಿಃ, ನ, ವಿದ್ಯತೇ ।

**ಅನ್ವಯಾರ್ಥ**—

**ಅಚ್ಯುತಪ್ರಮತಿಃ** = ಪರಮಾತ್ಮ ವಿಷಯಕವಾದ ಜ್ಞಾನವುಳ್ಳ ಶ್ರೀಅಚ್ಯುತಪ್ರೇಕ್ಷಾಚಾರ್ಯರು,
**ಅಚ್ಯುತಪ್ರಿಯಂ** = ನಾರಾಯಣನ ಪ್ರೀತಿಗೆ ವಿಷಯರಾದ,
**ಆಗತಂ** = ತನ್ನ ಹತ್ತಿರಕ್ಕೆ ಬಂದಿರುವ
**ವಂದಮಾನಂ** = ನಮಸ್ಕಾರ ಮಾಡುತ್ತಿರುವ,
**ತಂ** = ಆ,
**ದಶ** = ಪೂರ್ಣನಾದ,
**ಪ್ರಮತಿಂ** = ಪ್ರಜ್ಞೆಯುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರನ್ನು,
**ಅವಲೋಕ್ಯ** = ನೋಡಿ,
**ತದಾ** = ಆಗ,
**ಯಾಂ** = ಯಾವ,
**ಮುದಂ** = ಸಂತೋಷವನ್ನು,
**ಪ್ರಾಪ್ತವಾನ್** = ಹೊಂದಿದರೋ,
**ತದವಧಿಃ** = ಆ ಸಂತೋಷಕ್ಕೆ ಎಲ್ಲೆಯು, (ಪರಿಮಾಣವು)
**ನ ವಿದ್ಯತೇ** = ಇಲ್ಲವು.

**ತಾತ್ಪರ್ಯ**— ಶ್ರೀಪೂರ್ಣಪ್ರಜ್ಞಾಚಾರ್ಯರು ರಜತಪೀಠಪುರಕ್ಕೆ ಬಂದು ತಮ್ಮ ಆಶ್ರಮ ಗುರುಗಳಾದ ಅಚ್ಯುತ ಪ್ರೇಕ್ಷಾಚಾರ್ಯರನ್ನು ನಮಸ್ಕರಿಸಿದರು. ಆಗ ಬಹುಕಾಲ ತಮ್ಮನ್ನು ಅಗಲಿದ್ದು ಅನಂತರ ಈಗ ಹತ್ತಿರಕ್ಕೆ ಬಂದು ನಮಸ್ಕರಿಸುತ್ತಿರುವ ಶಿಷ್ಯನನ್ನು ನೋಡಿ ಅಚ್ಯುತ ಪ್ರೇಕ್ಷಾಚಾರ್ಯರಿಗೆ ಎಷ್ಟು ಆನಂದವಾಯಿತೆಂದು ಹೇಳಲು ಸಾಧ್ಯವಿಲ್ಲ. ಆ ಆನಂದಕ್ಕೆ ಎಣೆಯೇ ಇರಲಿಲ್ಲ.

**ವಿಗ್ರಹ**—

**ಅಚ್ಯುತಪ್ರಮತಿಂ**— ಅಚ್ಯುತಸ್ಯ ಪ್ರಮತಿಃ ಯಸ್ಯ ಸಃ (ಅಚ್ಯುತಾ ಪ್ರಮತಿಃ ಯಸ್ಯಸಃ ಇತಿ ವಾ) ಅಚ್ಯುತ-ಪ್ರಮತಿಃ ।

**ಅಚ್ಯುತಪ್ರಿಯಃ—** ಅಚ್ಯುತಸ್ಯ ಪ್ರಿಯಃ ಅಚ್ಯುತಪ್ರಿಯಃ ತಂ ।

**ದಶಪ್ರಮತಿಂ—** ದಶಃ ಪೂರ್ಣಾಃ ಪ್ರಮತಯಃ ಯಸ್ಯ ಸಃ ದಶಪ್ರಮತಿಃ ತಂ ।

**ತದವಧಿಃ—** ತಸ್ಯಾಃ ಅವಧಿಃ ತದವಧಿಃ ।

**ಕ್ರಿಯಾಪದ— ವಿದ್ಯತೇ** - ವಿದ್ಯತೇ ವಿದ್ಯೇತೇ ವಿದ್ಯಂತೇ, ಇತ್ಯಾದಿ ವಿದಸತ್ತಾಯಾಂ ಇತಿ ಸತ್ತಾರ್ಥಕಾತ್ ವಿದ ಧಾತೋಃ ಅಕರ್ಮಕಾತ್ ಕರ್ತರಿ ಆತ್ಮನೇಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ವಿದ್ಯತೇ ಇತಿ ರೂಪಂ ।

**ಪ್ರಯೋಗ—** ತದವಧಿಃ ನ ವಿದ್ಯತೇ ಅಕರ್ಮಕ (ಕರ್ತರಿ) ।
ತದವಧಿನಾ ನ ವಿದ್ಯತೇ (ಭಾವೇ) ।

**ವಿಶೇಷವಿಚಾರ—** 'ದಶೇತಿ ಸರ್ವಮುದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣ-ಪ್ರಜ್ಞಸ್ತತಃ ಸ್ಮೃತಃ' ಎಂಬ ಪ್ರಮಾಣಾನುಸಾರವಾಗಿ ದಶ ಎಂದರೆ ಪೂರ್ಣವಾದ, ಪ್ರಮತಿ ಎಂದರೆ ಪ್ರಕೃಷ್ಟವಾದ ಜ್ಞಾನವೆಂದರೆ ಪ್ರಜ್ಞೆ ಉಳ್ಳವರು ಎಂದು ಅರ್ಥ. 'ದಶಪ್ರಮತಿಂ ಜನಯಂತಯೋಷಣಃ' ಎಂಬ ಶ್ರುತಿ ಪ್ರಸಿದ್ಧನಾಮವಿದು.

**ಕೋಶ—** 'ಅವಧಿಸ್ತ್ವವದಾನೇ ಸ್ಯಾತ್ ಸೀಮ್ನಿ ಕಾಲೇ ವನೇಽಪಿ ಚ' ಎಂದು ವಿಶ್ವಕೋಶಾನುಸಾರ. ಅವಧಿ ಶಬ್ದಕ್ಕೆ 'ಎಲ್ಲೆ, ಗಡು' ಎಂದು ಅರ್ಥ ।

★ ★ ★

**ಅವತಾರಿಕಾ—** ಜ್ಯೇಷ್ಠಯತಿಗಳಿಗೂ ಆಚಾರ್ಯರ ದರ್ಶನದಿಂದ ಸಂತೋಷವಾಯಿತೆಂದು ಹೇಳುತ್ತಾರೆ.

**ಪ್ರೀತಿಮಾರ್ಯಯತಿರುತ್ತಮಾಂ ಪುರಾ**
**ಪ್ರೇಷಿತಾಪ್ರತಿಮಭಾಷ್ಯದೃಗ್ ಯಯೌ ।**
**ಅಪ್ಯತೋಽತಿಶಯಿನೀಂ ಶುಚಿಸ್ಮಿತಂ**
**ತಂ ವಿಲೋಕ್ಯ ಸುಚಿರಾದ್ದಿದೃಕ್ಷಿತಮ್ ॥ 31 ॥**

**ಪದಚ್ಛೇದ—** ಪ್ರೀತಿಂ, ಆರ್ಯಯತಿಃ, ಉತ್ತಮಾಂ, ಪುರಾ, ಪ್ರೇಷಿತಾಪ್ರತಿಮಭಾಷ್ಯದೃಕ್, ಯಯೌ, ಅಪಿ, ಅತಃ, ಅತಿಶಯಿನೀಂ, ಶುಚಿಸ್ಮಿತಂ, ತಂ, ವಿಲೋಕ್ಯ, ಸುಚಿರಾತ್, ದಿದೃಕ್ಷಿತಂ ।

**ಅನ್ವಯ—** ಪುರಾ, ಪ್ರೇಷಿತಾಪ್ರತಿಮಭಾಷ್ಯದೃಕ್, ಆರ್ಯಯತಿಃ, ಉತ್ತಮಾಂ, ಪ್ರೀತಿಂ, ಯಯೌ, ಸುಚಿರಾತ್, ದಿದೃಕ್ಷಿತಂ ಶುಚಿಸ್ಮಿತಂ, ತಂ, ವಿಲೋಕ್ಯ, ಅತೋಽಪಿ, ಅತಿಶಯಿನೀಂ, ಪ್ರೀತಿಂ ।

ಅನ್ವಯಾರ್ಥ—

**ಪುರಾ** = ಶ್ರೀ ಮಧ್ವಾಚಾರ್ಯರು (ತಾನು) ರಜತಪೀಠಪುರಕ್ಕೆ ಬರುವ ಮೊದಲೇ,
**ಪ್ರೇಷಿತಾ** = ಕಳುಹಿಸಲ್ಪಟ್ಟ
**ಪ್ರತಿಮಭಾಷ್ಯದೃಕ್** = ಅಸದೃಶವಾದ ಬ್ರಹ್ಮಸೂತ್ರಭಾಷ್ಯವನ್ನು ನೋಡಿರುವ,
**ಆರ್ಯಯತಿಃ** = ಜ್ಯೇಷ್ಠಯತಿಯು,
**ಉತ್ತಮಾಂ ಪ್ರೀತಿಂ** = ಹೆಚ್ಚಾದ ಸಂತೋಷವನ್ನು,
**ಯಯೌ** = ಹೊಂದಿದ್ದರು,

**ಸುಚಿರಾತ್** = ಬಹಳ ಕಾಲದಿಂದ,
**ದಿದೃಕ್ಷಿತಂ** = ನೋಡಲು ಅಪೇಕ್ಷಿಸಿರುವ,
**ಶುಚಿಸ್ಮಿತಂ** = ಶುಭ್ರವಾದ ಮತ್ತು ಶುದ್ಧವಾದ ಮಂದಹಾಸವುಳ್ಳ,
**ತಂ** = ಶ್ರೀಮಧ್ವಾಚಾರ್ಯರನ್ನು,
**ವಿಲೋಕ್ಯ** = ನೋಡಿ,
**ಅತಃ ಅಪಿ** = ಹಿಂದೆ ಹೊಂದಿದ ಆನಂದಕ್ಕಿಂತಲೂ,
**ಅತಿಶಯಿನೀಂ** = ಹೆಚ್ಚಾದ,
**ಪ್ರೀತಿಂ** = ಪ್ರೀತಿಯನ್ನು,
**ಯಯೌ** = ಹೊಂದಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ತಾವು ಬದರಿಯ ಅನಂತಮಠದಲ್ಲಿ ಗುರುಗಳಾದ ಶ್ರೀವೇದವ್ಯಾಸರ ಅಪ್ಪಣೆಯಂತೆ ರಚಿಸಿದ್ದ ಭಾಷ್ಯವನ್ನು ಶಿಷ್ಯರ ಮೂಲಕ ಲಿಕುಚ ವಂಶದ ಜ್ಯೇಷ್ಠಯತಿಗಳಿಗೆ ಕಳುಹಿಸಿದ್ದರು. ಅವರು ಅದನ್ನು ನೋಡಿ ಬಹಳವಾಗಿ ಆನಂದಪಟ್ಟಿದ್ದರು. ಬಹುಕಾಲದಿಂದ ನೋಡಲು ಬಯಸಿದ್ದ ಶ್ರೀ ಮಧ್ವಾಚಾರ್ಯರನ್ನು ಅವರು ಈಗ ನೋಡಿದರು. ಶುದ್ಧವಾದ ಧವಳಮಂದಹಾಸಭರಿತರಾದ ಅವರನ್ನು ನೋಡಿದಾಗ ಆ ಜ್ಯೇಷ್ಠ ಯತಿಗಳಿಗೆ ಭಾಷ್ಯ ದರ್ಶನದಿಂದ ಉಂಟಾದ ಆನಂದಕ್ಕಿಂತಲೂ ಹೆಚ್ಚು ಆನಂದ ಉಂಟಾಯಿತು.

**ವಿಗ್ರಹ**—

**ಆರ್ಯಯತಿಃ**— ಆರ್ಯಶ್ಚಾಸೌ ಯತಿಶ್ಚ ಆರ್ಯಯತಿಃ ।
**ಪ್ರೇಷಿತಾಪ್ರತಿಮಭಾಷ್ಯದೃಗ್**— ನ ವಿದ್ಯತೇ ಪ್ರತಿಮಾ ಯಸ್ಯ ತತ್ ಅಪ್ರತಿಮಂ, ಅಪ್ರತಿಮಂ ಚ ತತ್ ಭಾಷ್ಯಂ ಚ ಅಪ್ರತಿಮಭಾಷ್ಯಂ, ಪ್ರೇಷಿತಂ ಚ ತತ್ ಅಪ್ರತಿಮಭಾಷ್ಯಂ ಚ ಪ್ರೇಷಿತಾಪ್ರತಿಮಭಾಷ್ಯಂ ಪ್ರೇಷಿತಾಪ್ರತಿಮಭಾಷ್ಯಂ ಪಶ್ಯತೀತಿ ಪ್ರೇಷಿತಾಪ್ರತಿಮಭಾಷ್ಯದೃಕ್ ।
**ಅತಿಶಯನೀಂ**— ಅತಿಶಯಃ ಅಸ್ಯಾಃ ಅಸ್ತೀತಿ ಅತಿಶಯನೀ, ತಾಂ ।
**ಶುಚಿಸ್ಮಿತಂ**— ಶುಚಿ ಸ್ಮಿತಂ ಯಸ್ಯ ಸಃ, ತಂ ।
**ದಿದೃಕ್ಷಿತಂ**— ದಷ್ಟುಂ ಇಷ್ಟಃ ದಿದೃಕ್ಷಿತಃ ತಂ ।

**ಕ್ರಿಯಾಪದ**— **ಯಯೌ** - ಯಯೌ ಯಯತುಃ ಯಯುಃ ಇತ್ಯಾದಿ ಯಾ ಪ್ರಾಪಣೇ ಲಿಟ್ ।

**ಪ್ರಯೋಗ**— ಆರ್ಯಯತಿಃ ಉತ್ತಮಾಂ ಮುದಂ ಯಯೌ (ಕರ್ತರಿ) ।
ಆರ್ಯಯತಿನಾ ಉತ್ತಮಾ ಮುತ್ ಯಯೇ (ಕರ್ಮಣಿ) ।

**ವಿಶೇಷಾಂಶ**— ಶ್ರೀಮಧ್ವಾಚಾರ್ಯರಿಗಿಂತ ಮೊದಲೇ ಅಚ್ಯುತಪ್ರೇಕ್ಷರಿಂದ ಸಂನ್ಯಾಸ ಹೊಂದಿದ ಲಿಕುಚ ವಂಶೋತ್ಪನ್ನರಾದ ಹಿರಿಯ ಯತಿಗಳೊಬ್ಬರಿದ್ದರು. ಅವರು ಶ್ರೀಮಧ್ವಾಚಾರ್ಯರ ವಿಷ್ಣುಸರ್ವೋತ್ತಮತ್ವ ಸಿದ್ಧಾಂತದಲ್ಲಿ ಮೊದಲೇ ಪ್ರೀತಿಯನ್ನು ಹೊಂದಿ ಆಚಾರ್ಯರಿಂದಲೇ ಅದನ್ನು ಕೇಳಿ ತಿಳಿದು, ಆ ಸಿದ್ಧಾಂತಕ್ಕೆ ಅನುಗುಣವಾಗಿ ಬ್ರಹ್ಮ-ಸೂತ್ರಾದಿಗಳಿಗೆ ಭಾಷ್ಯ ಬರೆಯಲು ಆಚಾರ್ಯರನ್ನು ಪ್ರೇರಿಸಿದ್ದರು. (ಸರ್ಗ-5 ಶ್ಲೋಕ 27-29)

★ ★ ★

ಅವತಾರಿಕಾ— ಆ ಜ್ಯೇಷ್ಠಯತಿಗಳಿಗೆ ಸೂತ್ರಭಾಷ್ಯದ ಮೇಲಿದ್ದ ಶ್ರದ್ಧೆಯನ್ನು ವರ್ಣಿಸುತ್ತಾರೆ.

**ಪೂರ್ಣದೃಷ್ಟಿಜಲಧೇರ್ಗೃಹೀತವಾನ್**
**ಭಾಷ್ಯಸಂಜ್ಞಮಮೃತಂ ಸುಖಾವಹಮ್ ।**
**ಚಿತ್ರಮೇಷ ಯತಿರಾಡ್ಘನಾಘನೋ**
**ಗ್ರಾಹಯಂಶ್ಚ ಮನುಜಾನ್ ಮುಮೋಚ ನೋ ॥ 32 ॥**

ಪದಚ್ಛೇದ— ಪೂರ್ಣದೃಷ್ಟಿಜಲಧೇಃ, ಗೃಹೀತವಾನ್, ಭಾಷ್ಯಸಂಜ್ಞಂ, ಅಮೃತಂ, ಸುಖಾವಹಂ, ಚಿತ್ರಂ, ಏಷಃ, ಯತಿರಾಡ್ ಘನಾಘನಃ, ಗ್ರಾಹಯನ್, ಚ, ಮನುಜಾನ್, ಮುಮೋಚ, ನೋ ।

ಅನ್ವಯ— ಪೂರ್ಣದೃಷ್ಟಿಜಲಧೇಃ, ಸುಖಾವಹಂ, ಭಾಷ್ಯಸಂಜ್ಞಂ, ಅಮೃತಂ, ಗೃಹೀತವಾನ್, ಏಷಃ, ಯತಿರಾಡ್ ಘನಾಘನಃ, ಮನುಜಾನ್, ಗ್ರಾಹಯನ್, ಚ, ಸ್ವಯಂ, ನೋ, ಮುಮೋಚ, ಚಿತ್ರಂ ।

ಅನ್ವಯಾರ್ಥ—

**ಪೂರ್ಣದೃಷ್ಟಿಜಲಧೇಃ** = ಶ್ರೀ ಪೂರ್ಣಬೋಧರೆಂಬ ಸಮುದ್ರದ ದೆಸೆಯಿಂದ,
**ಸುಖಾವಹಂ** = ಆನಂದಕರವಾದ,
**ಭಾಷ್ಯಸಂಜ್ಞಂ** = ಭಾಷ್ಯವೆಂಬ ಹೆಸರುಳ್ಳ,
**ಅಮೃತಂ** = ಅಮೃತವನ್ನು, (ಜಲವನ್ನು)
**ಗೃಹೀತವಾನ್** = ಸ್ವೀಕರಿಸಿದ,
**ಏಷಃ** = ಈ,
**ಯತಿರಾಡ್ ಘನಾಘನಃ** = ಯತಿಶ್ರೇಷ್ಠರೆಂಬ ಮಳೆ ಸುರಿಸುವ ಮೋಡವು,
**ಮನುಜಾನ್** = ಮನುಷ್ಯರಿಗೆ,
**ಗ್ರಾಹಯನ್ ಚ** = ಸ್ವೀಕಾರ ಮಾಡಿಸುತ್ತಿದ್ದರೂ,
**ಸ್ವಯಂ** = ಸ್ವತಃ,
**ನೋ ಮುಮೋಚ** = ಬಿಡಲಿಲ್ಲ,
**ಚಿತ್ರಂ** = ಆಶ್ಚರ್ಯವು.

ತಾತ್ಪರ್ಯ— ಮಳೆ ಸುರಿಸಲಿರುವ ಮೋಡವು ಸಮುದ್ರದಿಂದ ನೀರನ್ನು ಸಂಗ್ರಹಿಸಿ, ಬೇರೆ ಬೇರೆ ಪ್ರದೇಶಗಳಲ್ಲಿ ಮಳೆ ಸುರಿಸುತ್ತಾ ತಾನು ರಿಕ್ತವಾಗುತ್ತದೆ. ಆದರೆ ಈ ಯತಿಶ್ರೇಷ್ಠರೆಂಬ (ಜ್ಯೇಷ್ಠಯತಿಗಳೆಂಬ) ಮೋಡವು ಶ್ರೀಮಧ್ವಾ-ಚಾರ್ಯರೆಂಬ ಸಮುದ್ರದಿಂದ ಭಾಷ್ಯವೆಂಬ ಅದ್ಭುತ ಸಮಾನವಾದ ಜಲವನ್ನು ತಾವು ಶ್ರವಣಮಾಡುವ ಮೂಲಕ ಸ್ವೀಕರಿಸಿ, ಶಿಷ್ಯರಿಗೆ ಪ್ರವಚನದ ಮೂಲಕ ಆ ಭಾಷ್ಯಾಮೃತವನ್ನು ಹಂಚುತ್ತಿದ್ದರೂ ತಾನು ಆ ಭಾಷ್ಯಾಮೃತವನ್ನು ಬಿಡಲಿಲ್ಲ, ರಿಕ್ತನಾಗಲಿಲ್ಲ. ಭಾಷ್ಯಾಮೃತವು ಈ ಜ್ಯೇಷ್ಠಯತಿಗಳೆಂಬ ಮೋಡದಲ್ಲಿ ಮತ್ತಷ್ಟು ತುಂಬುತ್ತಲೇ ಹೆಚ್ಚುತ್ತಾ ಇತ್ತು. ಇದು ಅತ್ಯಂತ ವಿಚಿತ್ರವು (ಜ್ಯೇಷ್ಠಯತಿಗಳು ಆಚಾರ್ಯರ ಭಾಷ್ಯವನ್ನು ಶ್ರವಣ, ಮನನ ಮಾಡಿ ಇತರರಿಗೆ ಉಪದೇಶಿಸುತ್ತಾ ಆನಂದಿಸುತ್ತಿದ್ದರು).

ವಿಗ್ರಹ—

**ಪೂರ್ಣದೃಷ್ಟಿಜಲಧೇಃ**— ಪೂರ್ಣಾ ದೃಷ್ಟಿಃ ಯಸ್ಯ ಸಃ ಪೂರ್ಣದೃಷ್ಟಿಃ, ಪೂರ್ಣದೃಷ್ಟಿರೇವ ಜಲಧಿಃ ಪೂರ್ಣ-ದೃಷ್ಟಿಜಲಧಿಃ ತಸ್ಮಾತ್ ಪೂರ್ಣದೃಷ್ಟಿ ಜಲಧೇಃ ।

**ಭಾಷ್ಯಸಂಜ್ಞಂ**— ಭಾಷ್ಯಂ ಇತಿ ಸಂಜ್ಞಾ ಯಸ್ಯ ತತ್ ಭಾಷ್ಯಸಂಜ್ಞಂ ।

**ಸುಖಾವಹಂ**— ಆವಹತೀತಿ ಆವಹಂ, ಸುಖಸ್ಯ ಆವಹಂ ಸುಖಾವಹಂ ।

**ಯತಿರಾಡ್‌ಘನಾಘನಃ**— ಯತೀನಾಂ ರಾಟ್ ಯತಿರಾಟ್, ಯತಿರಾಟ್ ಏವ ಘನಾಘನಃ ಯತಿರಾಡ್-ಘನಾಘನಃ ।

**ಅಲಂಕಾರ**— ಇಲ್ಲಿ 'ಪೂರ್ಣದೃಷ್ಟಿರೇವ ಜಲಧಿಃ' ಇತ್ಯಾದಿ ರೀತಿಯಿಂದ ಆಚಾರ್ಯರನ್ನು ಸಮುದ್ರವೆಂದೂ ಭಾಷ್ಯವನ್ನು ಜಲಶ್ಲೇಷದಿಂದ ಅಮೃತವೆಂದೂ ಜ್ಯೇಷ್ಠಯತಿಗಳನ್ನು ಮೋಡವೆಂದೂ ಅಭೇದದಿಂದ ವರ್ಣಿಸಿರುವುದರಿಂದ ರೂಪಕಾಲಂಕಾರ ।

**ಕ್ರಿಯಾಪದ**— **ಮುಮೋಚ**- ಮುಚ್‌ಲೃ ಮೋಕ್ಷಣೇ ಇತಿ ಮೋಕ್ಷಣಾರ್ಥಕಾತ್ ಮುಚ್ ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಮುಮೋಚ ಇತಿ ರೂಪಂ ।

ಮುಮೋಚ ಮುಮುಚತುಃ ಮುಮುಚುಃ, ಮುಮೋಚಿಥ ಮುಮುಚಥುಃ ಮುಮುಚ,
ಮುಮೋಚ ಮುಮುಚಿವ ಮುಮುಚಿಮ ।

**ಪ್ರಯೋಗ**— ಯತಿರಾಡ್ ಘನಾಘನಃ ಅಮೃತಂ ನೋಮು ಮೋಚ (ಕರ್ತರಿ) ।
ಯತಿರಾಡ್ ಘನಾಘನೇನ ಅಮೃತಂ ನೋ ಮುಮುಚೇ (ಕರ್ಮಣಿ) ।

**ಕೋಶ**— ಪೂರ್ಣದೃಷ್ಟಿ ಎಂಬಲ್ಲಿ 'ದೃಷ್ಟಿರ್ಜ್ಞಾನೇಕ್ಷಿದರ್ಶನೇ' ಎಂಬ ಅಮರಕೋಶಾನುಸಾರವಾಗಿ ದೃಷ್ಟಿ ಎಂಬುದಕ್ಕೆ ಜ್ಞಾನ ಎಂದು ಅರ್ಥ. ಅಮೃತಪದಕ್ಕೆ 'ಪಯಃಕೀಲಾಲಮಮೃತಂ' ಎಂಬ ಕೋಶಾನುಸಾರ ನೀರು ಎಂದೂ ಅರ್ಥ. 'ಘನಾಘನಃ' ಎಂದರೆ ಮಳೆಗಾಲದ ಮೋಡ 'ವರ್ಷುಕಾಬ್ದೋ ಘನಾಘನಃ' ಎಂದು ಅಮರ. ಮನುಜಾನ್ ಎಂಬಲ್ಲಿ 'ಮನುಷ್ಯಾ ಮಾನುಷಾ ಮರ್ತ್ಯಾ ಮನುಜಾ ಮಾನವಾ ನರಾಃ' ಎಂಬ ಕೋಶಾನುಸಾರ ಮನುಜ ಶಬ್ದಕ್ಕೆ ಮನುಷ್ಯರು ಎಂದು ಅರ್ಥ.

★ ★ ★

**ಅವತಾರಿಕಾ**— ಶ್ರೀ ಮಧ್ವಾಚಾರ್ಯರು ಅಚ್ಯುತಪ್ರೇಕ್ಷರಿಗೆ ದ್ವೈತ ಭಾಷ್ಯದ ಗುಣಗಳನ್ನು ವರ್ಣಿಸಿದರೆನ್ನುತ್ತಾರೆ.

**ಸಾನುನೀತಿರಥ ನೀತಿಮಾನಯಂ**
**ಭಾಷ್ಯಸದ್ಗುಣಗಣಾನವರ್ಣಯತ್ ।**
**ಶೋಭನಾಯ ಗುರವೇ ಸ್ವಭಾವತಃ**
**ಕಾಲತಃ ಕುಮತಲೀನಬುದ್ಧಯೇ ॥ 33 ॥**

**ಪದಚ್ಛೇದ**— ಸಾನುನೀತಿಃ, ಅಥ, ನೀತಿಮಾನ್, ಅಯಂ, ಭಾಷ್ಯಸದ್ಗುಣಗಣಾನ್, ಅವರ್ಣಯತ್, ಶೋಭನಾಯ, ಗುರುವೇ, ಸ್ವಭಾವತಃ, ಕಾಲತಃ, ಕುಮತಲೀನಬುದ್ಧಯೇ ।

**ಅನ್ವಯ**— ಅಥ, ಸಾನುನೀತಿಃ, ನೀತಿಮಾನ್, ಅಯಂ, ಸ್ವಭಾವತಃ, ಶೋಭನಾಯ, ಕಾಲತಃ, ಕುಮತಲೀನ-ಬುದ್ಧಯೇ, ಗುರುವೇ, ಭಾಷ್ಯಸದ್ಗುಣಗಣಾನ್, ಅವರ್ಣಯತ್ ।

**ಅನ್ವಯಾರ್ಥ**—

ಅಥ = ತರುವಾಯ,

**ಸಾನುನೀತಿಃ** = ಸಾಂತ್ವನದಿಂದ ಸಹಿತರಾದ, (ಅನುವೃತ್ತಿ ಮತ್ತು ಸಮಾಧಾನದಿಂದ ಸಹಿತರಾದ)
**ನೀತಿಮಾನ್** = ಆಯಾ ಕಾಲಕ್ಕೆ ಉಚಿತವಾದ ನ್ಯಾಯಪ್ರಕಾರವುಳ್ಳ,
**ಅಯಂ** = ಈ ಮಧ್ವರು,
**ಸ್ವಭಾವತಃ** = ಸ್ವರೂಪದಿಂದ,
**ಶೋಭನಾಯ** = ಒಳ್ಳೆಯವರಾದ,(ಸಜ್ಜೀವರಾದ)
**ಕಾಲತಃ** = ಕಲಿಕಾಲ ಸಾಮರ್ಥ್ಯದಿಂದ,
**ಕುಮತಲೀನಬುದ್ಧಯೇ** = ದುಷ್ಟಮತದಿಂದ (ಮಾಯಾವಾದ ಸಿದ್ಧಾಂತದಿಂದ) ಅಡಗಿಹೋದ ಜ್ಞಾನವುಳ್ಳ,
**ಗುರುವೇ** = ಗುರುಗಳಾದ ಅಚ್ಯುತಪ್ರೇಕ್ಷರಿಗೆ,
**ಭಾಷ್ಯಸದ್ಗುಣಗಣಾನ್** = ಬ್ರಹ್ಮಸೂತ್ರಭಾಷ್ಯದಲ್ಲಿ ಇರುವ ಗುಣಸಮೂಹಗಳನ್ನು,
**ಅವರ್ಣಯತ್** = ಹೇಳಿದರು.

**ತಾತ್ಪರ್ಯ—** ಅಚ್ಯುತಪ್ರೇಕ್ಷರು ಸ್ವರೂಪತಃ ಮೋಕ್ಷಯೋಗ್ಯರಾದ ಸಾತ್ವಿಕಜೀವರು. ಆದರೂ ಕಲಿಕಾಲ ಪ್ರಭಾವ ದಿಂದ ಅವರ ಸದ್ಬುದ್ಧಿಯು ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಮಾಯಾವಾದ ಸಿದ್ಧಾಂತದಿಂದ ಮಲಿನವಾಗಿತ್ತು. ಅವರ ಅಂತಃಕರಣವು ಮಾಯಾವಾದದಲ್ಲಿ ದೃಢವಾಗಿ ನೆಲಸಿತ್ತು. ಹೀಗಿದ್ದರೂ ಸಮಾಧಾನಚಿತ್ತರಾದ ಶ್ರೀಮಧ್ವಾಚಾರ್ಯರು ಸಾಂತ್ವನದಿಂದ ಮತ್ತು ಸಾಮೋಪಾಯದಿಂದ, ಅನೇಕ ವಿಧವಾದ ನ್ಯಾಯಪ್ರಕಾರಗಳನ್ನು ಬಳಸಿಕೊಂಡು ತಾವು ರಚಿಸಿದ ಶ್ರೀಮದ್‌ಬ್ರಹ್ಮಸೂತ್ರಭಾಷ್ಯದ ಉತ್ತಮವಾದ ಗುಣಗಳನ್ನು ಒಂದಾನೊಂದು ದಿವಸ ತಾವೇ ಸ್ವತಃ ಹೇಳಲಾರಂಭಿಸಿದರು. (ಭಾಷ್ಯದಲ್ಲಿರುವ ಏಕವಿಂಶತಿ (21) ಭಾಷ್ಯದೂಷಕತ್ವಾದಿ ಗುಣಗಳನ್ನು ಹಿಂದೆಯೇ ಹೇಳಿದೆ)

**ವಿಗ್ರಹ—**

**ಸಾನುನೀತಿಃ—** ಅನುನೀತ್ಯಾ ಸಹ ವರ್ತತೇ ಇತಿ ಸಾನುನೀತಿಃ ।
**ನೀತಿಮಾನ್—** ನೀತಿಃ ಅಸ್ಯ ಅಸ್ತೀತಿ ನೀತಿಮಾನ್ ।
**ಭಾಷ್ಯಸದ್ಗುಣಗಣಾನ್—** ಸಂತಶ್ಚತೇ ಗುಣಾಶ್ಚ ಸದ್ಗುಣಾಃ, ಸದ್ಗುಣಾನಾಂ ಗಣಾಃ ಸದ್ಗುಣಗಣಾಃ, ಭಾಷ್ಯಸ್ಯ ಸದ್ಗುಣಗಣಾಃ ಭಾಷ್ಯಸದ್ಗುಣಗಣಾಃ ತಾನ್ ।
**ಕುಮತಲೀನಬುದ್ಧಯೇ—** ಕುತ್ಸಿತಂ ಚ ತತ್ ಮತಂ ಚ ಕುಮತಂ, ಕುಮತೇನ ಲೀನಾ ಕುಮತಲೀನಾ, ಕುಮತಲೀನಾ ಬುದ್ಧಿಃ ಯಸ್ಯಸಃ ಕಮತಲೀನಬುದ್ಧಿಃ ತಸ್ಮೈ ।

**ಕ್ರಿಯಾಪದ—** **ಅವರ್ಣಯತ್**- ವರ್ಣವರ್ಣವಿಸ್ತಾರಗುಣವಚನೇಷು ಇತಿ ವರ್ಣಕ್ರಿಯಾ (ಬಣ್ಣ ಹಚ್ಚುವುದು) ವಿಸ್ತಾರ, ಗುಣ ಇತಿ ವಚನಾರ್ಥಕಾತ್ ವರ್ಣಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಕರ್ತರಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅವರ್ಣಯತ್ ಇತಿ ರೂಪಂ ।

ಅವರ್ಣಯತ್ ಅವರ್ಣಯತಾಂ ಅವರ್ಣಯನ್, ಅವರ್ಣಯಃ ಅವರ್ಣಯತಂ ಅವರ್ಣಯತ,
ಅವರ್ಣಯಂ ಅವರ್ಣಯಾವ ಅವರ್ಣಯಾಮ ।

**ಪ್ರಯೋಗ—** ಅಯಂ ಭಾಷ್ಯಸದ್ಗುಣಗಣಾಃ ಅವರ್ಣಯತ್ (ಕರ್ತರಿ) ।
ಅನೇನ ಭಾಷ್ಯಸದ್ಗುಣಗಣಾಃ ಅವರ್ಣ್ಯಂತ (ಕರ್ಮಣಿ) ।

**ಕೋಶ—** 'ಸ್ವರೂಪಂ ಚ ಸ್ವಭಾವಶ್ಚ' ಇತ್ಯಮರಃ. 'ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ' (ಗೀತಾ ಅ.17) ಎಂಬ ಗೀತಾ ಪ್ರಮಾಣಾನುಸಾರವಾಗಿ, ಸತ್ ಎಂದರೆ ಇರುವಂತಹ ಎಂದು ಅರ್ಥ.

★ ★ ★

**ಅವತಾರಿಕಾ**— ಬಹಳ ಸಲ ತಿಳಿಸಿದರೂ ತಮ್ಮ ಗ್ರಂಥದಲ್ಲಿ ಗುರುಗಳಿಗೆ ಪ್ರೀತಿಯು ಹುಟ್ಟದೇ ಇರಲು ಕಾರಣವನ್ನು ಕಂಡು ಹಿಡಿದರೆನ್ನುತ್ತಾರೆ.

**ಉಕ್ತಿಭಿಸ್ತಮಸಕೃತ್ ಸುಯುಕ್ತಿಭಿ-**
**ರ್ಬೋಧಯನ್ ಬಹುಲಧೀಃ ಪ್ರಸಂಗತಃ ।**
**ಸ್ಥೇಯಸೋ ಭಿಷಗಿವಾಸ್ಯ ಹೃದ್ಗತಂ**
**ಮೂಲದೋಷಮರುಚೇರಚಿಂತಯತ್ ॥ 34 ॥**

**ಪದಚ್ಛೇದ**— ಉಕ್ತಿಭಿಃ, ತಂ, ಅಸಕೃತ್, ಸುಯುಕ್ತಿಭಿಃ, ಬೋಧಯನ್, ಬಹುಲಧೀಃ, ಪ್ರಸಂಗತಃ, ಸ್ಥೇಯಸಃ, ಭಿಷಕ್, ಇವ, ಅಸ್ಯ, ಹೃದ್ಗತಂ, ಮೂಲದೋಷಂ, ಅರುಚೇಃ, ಅಚಿಂತಯತ್ ।

**ಅನ್ವಯ**— ಬಹುಲಧೀಃ, ಪ್ರಸಂಗತಃ, ಸುಯುಕ್ತಿಭಿಃ, ಉಕ್ತಿಭಿಃ, ತಂ, ಅಸಕೃತ್, ಬೋಧಯನ್, ಸ್ಥೇಯಸಃ, ಅಸ್ಯ, ಹೃದ್ಗತಂ, ಅರುಚೇಃ, ಮೂಲದೋಷಂ, ಭಿಷಕ್, ಇವ, ಅಚಿಂತಯತ್ ।

**ಅನ್ವಯಾರ್ಥ**—

**ಬಹುಲಧೀಃ** = ಶ್ರೀ ಪೂರ್ಣಪ್ರಜ್ಞರು,
**ಪ್ರಸಂಗತಃ** = ಒಂದಾನೊಂದು ಸಂದರ್ಭದಲ್ಲಿ,
**ಸುಯುಕ್ತಿಭಿಃ** = ಒಳ್ಳೆಯ ಯುಕ್ತಿಗಳುಳ್ಳ,
**ಉಕ್ತಿಭಿಃ** = ಮಾತುಗಳಿಂದ,
ತಂ = ಆ ಗುರುಗಳನ್ನು,
**ಅಸಕೃತ್** = ಅನೇಕ ಬಾರಿ,
**ಬೋಧಯನ್** = ಬೋಧಿಸುತ್ತ,
**ಸ್ಥೇಯಸಃ** = ಮಾಯಾವಾದಿ ಶಾಸ್ತ್ರದಲ್ಲಿ ದೃಢಬುದ್ಧಿಯುಳ್ಳ,
ಅಸ್ಯ = ಈ ಅಚ್ಯುತಪ್ರೇಕ್ಷರ,
**ಹೃದ್ಗತಂ** = ಅಂತಃಕರಣದಲ್ಲಿ ನೆಲಸಿರುವ,
**ಅರುಚೇಃ** = ಅಸ್ವಾರಸ್ಯದ (ನಾಲಿಗೆ ರುಚಿಯ),
**ಮೂಲದೋಷಂ** = ಕಾರಣವಾದ ದೋಷವನ್ನು,
**ಭಿಷಕ್ ಇವ** = ವೈದ್ಯನಂತೆ,
**ಅಚಿಂತಯತ್** = ಆಲೋಚಿಸಿದರು.

**ತಾತ್ಪರ್ಯ**— ಆಚಾರ್ಯರು ಹೀಗೆ ಅನೇಕ ಬಾರಿ ಯುಕ್ತಿಯುಕ್ತವಾದ ಶಾಸ್ತ್ರ ವಚನಗಳಿಂದ, ತಮ್ಮ ಸಿದ್ಧಾಂತವನ್ನು ಗುರುಗಳಿಗೆ ಬೋಧಿಸಿದರು. ಆದರೂ ಅಚ್ಯುತಪ್ರೇಕ್ಷರ ಅಂತಃಕರಣವು ಬದಲಾಗಲಿಲ್ಲ. ಅವರ ಮನಸ್ಸು ಮಾಯಾವಾದಿ ಮತದಲ್ಲಿಯೇ ಸ್ಥಿರವಾಗಿ ನೆಟ್ಟಿತ್ತು. ಅವರು ಆಚಾರ್ಯರ ಮಾತುಗಳಲ್ಲಿ ಅಸ್ವಾರಸ್ಯವನ್ನು ಪ್ರಕಟಿಸಿದರು. ಒಂದಾನೊಂದು ದಿನ ಭಾಷ್ಯದ ರೀತಿಯಿಂದ ಆಯಾ ಸೂತ್ರಾರ್ಥವನ್ನು ವಿಚಾರ ಮಾಡುತ್ತಿರುವಾಗ ತಮ್ಮ ಗುರುಗಳಿಗೆ ಇರುವ ಅಸ್ವಾರಸ್ಯವನ್ನು ಆಚಾರ್ಯರು ಅರಿತರು. ರೋಗಿಯೊಬ್ಬನು ಬಂದು ತನಗೆ ಅನ್ನಾದಿಗಳಲ್ಲಿ ಅರುಚಿಯಿದೆ, ಎಷ್ಟು ಚೆನ್ನಾಗಿ ತಯಾರಿಸಿದ ಊಟವೂ ಸೇರುವುದಿಲ್ಲವೆಂದು ಹೇಳಿದರೆ ಉತ್ತಮವಾದ ಔಷಧವನ್ನು ಕೊಟ್ಟರೂ ಈತನ ಅರುಚಿಯು ಏಕೆ ಹೋಗಲಿಲ್ಲ? ಇವನ ನಾಲಿಗೆಯ ಅರುಚಿಯು ಮಾನಸಿಕ ವ್ಯಥೆಯಿಂದಲೇ ಅಥವಾ ಬೇರೆ ಇನ್ನಾವುದಾದರೊಂದು ರೋಗದಿಂದಲೇ ಎಂದು ವೈದ್ಯನು ಚೆನ್ನಾಗಿ ಆಲೋಚಿಸಿ, ಪರೀಕ್ಷಿಸಿ 'ಈ ರೋಗಿಯ ಅರುಚಿಗೆ ಮೂಲಕಾರಣವಿದು'

ಎಂದು ಅದನ್ನು ಕಂಡುಹಿಡಿಯುವಂತ ಆಚಾರ್ಯರು ಇಷ್ಟೊಂದು ಯುಕ್ತಿಯುಕ್ತವಾದ ವಚನಗಳಿಂದ ತತ್ತ್ವೋಪದೇಶ ಮಾಡಿದರೂ ನಮ್ಮ ಗುರುಗಳಿಗೆ ಇದರಲ್ಲಿ ಅಸ್ವಾರಸ್ಯ, ಮಾಯಾ ಅಥವಾ ಔಪಾಧಿಕವಾಗಿ ಕಾಲಬಲದಿಂದ, ದುರ್ಜನರ ಸಹವಾಸದಿಂದ ತತ್ಕಾಲದಲ್ಲಿ ಮಾತ್ರ ದುಷ್ಟವಾಗಿದೆಯೇ ಎಂದು ಆಲೋಚಿಸಿ ತಮ್ಮ ಗುರುಗಳಿಗೆ ಈ ಸಿದ್ಧಾಂತದಲ್ಲಿ ಅಸ್ವಾರಸ್ಯವುಂಟಾಗಲು ಮೂಲಕಾರಣವೇನೆಂದು ಆಲೋಚಿಸಿದರು ಮತ್ತು ಅದನ್ನು ಕಂಡು ಹಿಡಿದರು.

**ವಿಗ್ರಹ—**

**ಅಸಕೃತ್—** ನ ಸಕೃತ್ ಅಸಕೃತ್ ।

**ಸುಯುಕ್ತಿಭಿಃ—** ಸು = ಶೋಭನಾಃ ಯುಕ್ತಯಃ ಯಾಸು ತಾಃ, ಸುಯುಕ್ತಯಃ ತಾಭಿಃ ।

**ಬಹುಲಧೀಃ—** ಬಹುಲಾ ಧೀಃ ಯಸ್ಯ ಸಃ ಬಹುಲಧೀಃ ।

**ಸ್ಥೇಯಸಃ—** ಅತಿಶಯೇನ ಸ್ಥಿರಃ ಸ್ಥೇಯಾನ್ ತಸ್ಯ, 'ಪ್ರಿಯ ಸ್ಥಿರ' (6-4-151) ಇತ್ಯಾದಿ ಸೂತ್ರದಿಂದ ಸ್ಥಿರಶಬ್ದಕ್ಕೆ 'ಸ್ಥಾ' ಆದೇಶ ದ್ವಿವಚನವಿಭಜ್ಯೋಪಪದೇ ತರಬೀಯ ಸುನೌ (5-3-57) ಎಂಬ ಸೂತ್ರದಿಂದ ಈಯಸುನ್ ಪ್ರತ್ಯಯ ।

**ಹೃದ್ಗತಂ—** ಹೃದಿ ಗತಃ ಹೃದ್ಗತಃ ತಂ ।

**ಮೂಲದೋಷಃ—** ಮೂಲಂ ಚ ಅಸೌ ದೋಷಶ್ಚ ಮೂಲದೋಷಃ ತಂ ।

**ಅರುಚೇಃ—** ರುಚೇಃ ಅಭಾವಃ ಅರುಚಿಃ ತಸ್ಯಾಃ ।

**ಕ್ರಿಯಾಪದ— ಅಚಿಂತಯತ್**- ಚಿತಿಸ್ಮೃತ್ಯಾಂ ಇತಿ ಸ್ಮೃತ್ಯರ್ಥಕಾತ್ ಚೌರಾದಿಕಾತ್ ಚಿಂತ್‌ಧಾತೋಃ ಣಿಜಂತಾತ್ ಸಕರ್ಮಕಾತ್ ಪರಸ್ಮೈಪದಿನಃ ಕರ್ತರಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅಚಿಂತಯತ್ ಇತಿ ರೂಪಂ । ಅಚಿಂತಯತ್ ಅಚಿಂತಯಾತಾಂ ಅಚಿಂತಯನ್ ಇತ್ಯಾದಿ.

**ಪ್ರಯೋಗ—** ಬಹುಲಧೀಃ ಅರುಚೇಃ ಮೂಲದೋಷಂ ಅಚಿಂತಯತ್ (ಕರ್ತರಿ) ।
ಬಹುಲಧಿಯಾ ಅರುಚೇಃ ಮೂಲದೋಷ ಃ ಅಚಿಂತ್ಯತ (ಕರ್ಮಣಿ) ।

**ಅಲಂಕಾರ—** ಇಲ್ಲಿ 'ಭಿಷಕ್ ಇವ ಅರುಚೇಃ ಮೂಲದೋಷಃ ಅಚಿಂತಯತ್' ಎಂದು ಹೇಳಿದ್ದರಿಂದ ಪೂರ್ಣೋಪಮಾಲಂಕಾರವಿದೆ ।

**ವಿಶೇಷವಿಚಾರ—** ಸ್ಥೇಯಸಃ ಎಂಬುದು ಅರುಚೇಃ ಎಂಬುದಕ್ಕೆ ವಿಶೇಷಣವಲ್ಲ, ಹಾಗಿದ್ದರೆ ಅರುಚಿ ಎಂಬ ಸ್ತ್ರೀಲಿಂಗ ವಿಶೇಷ್ಯಕ್ಕೆ ಅನುಗುಣವಾಗಿ 'ಸ್ಥೇಯಸೀ' ಎಂದು ಸ್ತ್ರೀಲಿಂಗವಾಗಿ ಷಷ್ಠಿಯಲ್ಲಿ ಸ್ಥೇಯಸ್ಯಾಃ ಎಂದು ಇರಬೇಕಾಗುತ್ತಿತ್ತು. ಆದ್ದರಿಂದ ಸ್ಥೇಯಸಃ ಅಸ್ಯ (ಗುರೋಃ) ಎಂದು ಅಚ್ಯುತಪ್ರೇಕ್ಷರಿಗೆ ವಿಶೇಷಣವು.

**ಕೋಶ—** 'ಸ್ಥಾಸ್ನುಃ ಸ್ಥಿರತರಃ ಸ್ಥೇಯಾನ್ ಏಕರೂಪತಯಾ ತು ಯಃ'ಎಂದು ಅಮರಕೋಶ. 'ಸ್ಥೇಯಾನ್ ಸ್ಥಿರತರಃ' ಅತ್ಯಂತ ದೃಢವಾದುದು ಎಂದು ಅರ್ಥ.

★ ★ ★

ಅವತಾರಿಕಾ— ಆ ದೋಷವನ್ನು ಕಂಡುಹಿಡಿದು ಉಪಾಯದಿಂದ ಅದನ್ನು ಪರಿಹರಿಸಿದ್ದುದನ್ನು ವಿವರಿಸುತ್ತಾರೆ.

**ದಕ್ಷಪಕ್ಷವಿಹೃತೇನ ತಾಡಯನ್**
**ಭೀಷಯನ್ ಸಮಧಿಕಸ್ವರಶ್ರಿಯಾ ।**
**ಹಂಸರಾಟ್ ಕಲಿಮಲಂ ನಿರಾಕರೋ-**
**ದೇಕದೃಷ್ಟಿಮಿವ ಮಾನಸಾದ್ ಗುರೋಃ ॥ 35 ॥**

**ಪದಚ್ಛೇದ—** ದಕ್ಷಪಕ್ಷವಿಹೃತೇನ, ತಾಡಯನ್, ಭೀಷಯನ್, ಸಮಧಿಕಸ್ವರಶ್ರಿಯಾ, ಹಂಸರಾಟ್, ಕಲಿಮಲಂ, ನಿರಾಕರೋತ್, ಏಕದೃಷ್ಟಿಂ, ಇವ, ಮಾನಸಾತ್, ಗುರೋಃ ।

**ಅನ್ವಯ—** ಹಂಸರಾಟ್, ದಕ್ಷಪಕ್ಷವಿಹೃತೇನ, ತಾಡಯನ್, ಸಮಧಿಕಸ್ವರಶ್ರಿಯಾ, ಭೀಷಯನ್, ಗುರೋಃ, ಮಾನಸಾತ್, ಕಲಿಮಲಂ ಹಂಸರಾಟ್, ದಕ್ಷಪಕ್ಷವಿಹೃತೇನ, ತಾಡಯನ್, ಸಮಧಿಕಸ್ವರಶ್ರಿಯಾ, ಭೀಷಯನ್, ಗುರೋಃ, ಮಾನಸಾತ್, ಏಕದೃಷ್ಟಿಮಿವ ನಿರಾಕರೋತ್ ।

**ಅನ್ವಯಾರ್ಥ—**

**ಹಂಸರಾಟ್** = ಪರಮಹಂಸ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರು,

**ದಕ್ಷಪಕ್ಷವಿಹೃತೇನ** = ದೃಢವಾದ (ಮಂಗಳಕರವಾದ) ಸಿದ್ಧಾಂತದ ವಿಹಾರದಿಂದ, (ಯುಕ್ತಿಗಳ ಕಥನವೆಂಬ ಲೀಲೆಯಿಂದ)

**ತಾಡಯನ್** = ಅಚ್ಯುತಪ್ರೇಕ್ಷರ ಮಾತುಗಳನ್ನು ನಿರಾಕರಿಸುತ್ತಾ (ಖಂಡಿಸುತ್ತಾ)

**ಸಮಧಿಕಸ್ವರಶ್ರಿಯಾ** = ಬಹಳ ಹೆಚ್ಚಾದ ವ್ಯಾಖ್ಯಾನದ ಕಂಠಧ್ವನಿಯ ಸಮೃದ್ಧಿಯಿಂದ,

**ಭೀಷಯನ್** = ಅವರ ಪಕ್ಷದಲ್ಲಿ ಬಾಧಕವನ್ನು ತೋರಿಸುವ ಮೂಲಕ ಹೆದರಿಸುತ್ತಾ,

**ಗುರೋಃ** = ಗುರುಗಳಾದ ಅಚ್ಯುತಪ್ರೇಕ್ಷರ,

**ಮಾನಸಾತ್** = ಮನಸ್ಸಿನ ದೆಸೆಯಿಂದ,

**ಕಲಿಮಲಂ** = ಕಲ್ಯಾವೇಶದಿಂದ ಉಂಟಾಗಿರುವ ಬುದ್ಧಿದೋಷವನ್ನು,

**ಹಂಸರಾಟ್** = ಶ್ರೇಷ್ಠವಾದ ಹಂಸಪಕ್ಷಿಯು,

**ದಕ್ಷಪಕ್ಷವಿಹೃತೇನ** = ಸಮರ್ಥವಾದ ಎರಡು ರೆಕ್ಕೆಗಳ ವಿಹಾರದಿಂದ,

**ತಾಡಯನ್** = ಹೊಡೆಯುತ್ತಾ,

**ಸಮಧಿಕಸ್ವರಶ್ರಿಯಾ** = ಗಟ್ಟಿಯಾದ ಕೂಗಿನ ಸಮೃದ್ಧಿಯಿಂದ,

**ಭೀಷಯನ್** = ಹೆದರಿಸುತ್ತಾ,

**ಗುರೋಃ** = ದೊಡ್ಡದಾದ,

**ಮಾನಸಾತ್** = ಮಾನಸ ಸರೋವರದ ದೆಸೆಯಿಂದ,

**ಏಕದೃಷ್ಟಿಂ ಇವ** = ಕಾಗೆಯನ್ನೋಪಾದಿಯಲ್ಲಿ

**ನಿರಾಕರೋತ್** = ನಿರಾಕರಿಸಿದರು.

ತಾತ್ಪರ್ಯ— ಮಾನಸ ಸರೋವರದಲ್ಲಿ ಶ್ರೇಷ್ಠವಾದ ಹಂಸಗಳು ಮಾತ್ರ ವಾಸಿಸುತ್ತವೆ. ಯಾವುದೋ ಒಂದು ಧೈರ್ಯಶಾಲಿಯಾದ ಕಾಗೆಯು ಮಾನಸ ಸರೋವರವನ್ನು ಪ್ರವೇಶಿಸಿ ಇದು ನನ್ನ ಸ್ಥಳವೆಂದು ಅಹಂಕಾರಪಡುತ್ತಾ ಸಾಮಾನ್ಯ ಪಕ್ಷಿಗಳನ್ನೂ, ಸಾಧಾರಣ ಹಂಸಗಳನ್ನೂ ಬೆದರಿಸುತ್ತಾ ಅಲ್ಲಿ ವಾಸಿಸುತ್ತಿತ್ತು. ಆ ಸರೋವರ ನಿವಾಸಿಯಾದ ಶ್ರೇಷ್ಠವಾದ ರಾಜಹಂಸ ರಾಜನು ಅಲ್ಲಿಗೆ ಬಂದು ತನ್ನ ಶತ್ರುವಾದ ಕಾಗೆಯನ್ನು ನೋಡಿ ಸ್ವಲ್ಪವೂ ತಡಮಾಡದೆ ಬಲವಾದ ಸುಂದರ ರೆಕ್ಕೆಗಳಿಂದ ಆ ಕಾಗೆಯನ್ನು ಹೊಡೆಯಲಾರಂಭಿಸಿತು. ಹಾಗೆಯೇ ಆ ಕಾಗೆಗೆ ಆ ಸ್ಥಳವನ್ನು ಬಿಟ್ಟುಹೋಗು ಎಂದು ಸೂಚಿಸುತ್ತಾ ಭಯಂಕರವಾದ ಧ್ವನಿಯಿಂದ ಕೂಗಲಾರಂಭಿಸಿತು. ಆಗ ಅಷ್ಟೊಂದು ವಿಶಾಲವಾದ ಮಾನಸ ಸರೋವರದಲ್ಲಿಯೂ ನನಗೆ ಸ್ಥಳವಿಲ್ಲವೆಂದು ತಿಳಿದು ಬೇರೆ ಉಪಾಯ ಕಾಣದೆ ಒಕ್ಕಣ್ಣಿನ ಆ ನೀಚ ಕಾಗೆಯು ಆ

ಸರೋವರವನ್ನು ಬಿಟ್ಟುಹೋಯಿತು. ಅದರಂತೆ ಪರಮಹಂಸಶ್ರೇಷ್ಠರಾದ ಶ್ರೀಮಧ್ವಾಚಾರ್ಯರು ತಮ್ಮ ಪ್ರಬಲವಾದ ಮಂಗಳಕರವಾದ ಸಿದ್ಧಾಂತದ ಯುಕ್ತಿಗಳನ್ನು ಸ್ವಾರಸ್ಯವಾಗಿ ಹೇಳುತ್ತಾ ಅಚ್ಯುತಪ್ರೇಕ್ಷರ ಪಕ್ಷವನ್ನು ಪೂರ್ತಿಯಾಗಿ ಖಂಡಿಸಿದರು. ತಾವು ಹೀಗೆ ಸಿದ್ಧಾಂತದ ಸ್ವಾರಸ್ಯವನ್ನು ವರ್ಣಿಸುವಾಗ ಅಚ್ಯುತಪ್ರೇಕ್ಷರ ಧ್ವನಿಗಿಂತಲೂ ಎತ್ತರವಾದ ಮಧುರ ಗಂಭೀರ ಕಂಠಧ್ವನಿಯಿಂದ, ತಾವು ಹೇಳಿದ್ದನ್ನು ಒಪ್ಪದೆ, ವಿರುದ್ಧವಾಗಿ ಹೇಳಿದರೆ ಬರುವ ಬಾಧಕವನ್ನು ತಿಳಿಯ ಹೇಳಿ, ಅದರಿಂದ ಉಂಟಾಗುವ ಅನರ್ಥವನ್ನು ವಿವರಿಸಿ, ಅವರಿಗೆ ಈ ಸಿದ್ಧಾಂತವನ್ನು ಅನುಸರಿಸದೆ ಇದ್ದರೆ ಆಗುವ ನರಕಾದ್ಯನರ್ಥಗಳನ್ನು ತಿಳಿಸಿ ಭಯವನ್ನುಂಟು ಮಾಡಿದರು. ಹೀಗೆ ಅಚ್ಯುತಪ್ರೇಕ್ಷರ ಮನಸ್ಸಿನಲ್ಲಿ ನೆಲಸಿದ್ದ ಕಲ್ಯಾವೇಶವನ್ನು, ಮೂರ್ತಿಮತ್ತಾದ ಐಕ್ಯದೃಷ್ಟಿಯನ್ನೋ ಎಂಬಂತೆ ಓಡಿಸಿದರು. (ವಾಯುದೇವರ ಹುಂಕಾರದಿಂದ ಕಲಿಯು ಓಡಿ ಹೋಗುತ್ತಾನೆ ಎಂದು ಪ್ರಸಿದ್ಧಿಯಿದೆ) ಅದರಂತೆ ಆಚಾರ್ಯರ ಉಚ್ಚಕಂಠಧ್ವನಿಯ ಪ್ರವಚನದಿಂದ ಭೀತನಾದ ಕಲಿಯು ಅಚ್ಯುತಪ್ರೇಕ್ಷರ ಮನಸ್ಸನ್ನು ಬಿಟ್ಟು ಓಡಿ ಹೋದನು).

ವಿಗ್ರಹ—

**ದಕ್ಷಪಕ್ಷವಿಹೃತೇನ**— ದಕ್ಷಶ್ಚಾಸೌ ಪಕ್ಷಶ್ಚ ದಕ್ಷಪಕ್ಷಃ, ದಕ್ಷಪಕ್ಷಸ್ಯ ವಿಹೃತಂ ದಕ್ಷಪಕ್ಷವಿಹೃತಂ ತೇನ, ದಕ್ಷೌ ಚ ತೌ ಪಕ್ಷಾ ಚ ದಕ್ಷಪಕ್ಷೌ, ದಕ್ಷಪಕ್ಷಯೋಃ ವಿಹೃತಂ ದಕ್ಷಪಕ್ಷವಿಹೃತಂ ತೇನ ।

**ಸಮಧಿಕಸ್ವರಶ್ರಿಯಾ**— ಸಮ್ಯಕ್ ಅಧಿಕಃ ಸಮಧಿಕಃ, ಸಮಧಿಕಶ್ಚಾಸೌ ಸ್ವರಶ್ಚ ಸಮಧಿಕಸ್ವರಃ, ಸಮಧಿಕಸ್ವರಸ್ಯ ಶ್ರೀಃ, ತಯಾ ।

**ಹಂಸರಾಟ್**— ಹಂಸಾನಾಂ ರಾಟ್ ಹಂಸರಾಟ್ ।

**ಕಲಿಮಲಂ**— ಕಲೇಃ ಮಲಂ ಕಲಿಮಲಂ ।

**ಏಕದೃಷ್ಟಿಂ**— ಏಕಾ ದೃಷ್ಟಿಃ ಯಸ್ಯ ಸಃ ಏಕದೃಷ್ಟಿಃ ತಂ, ಏಕಾ ಚ ಸಾದೃಷ್ಟಿಶ್ಚ ಏಕದೃಷ್ಟಿಃ ತಾಂ ।

**ಕ್ರಿಯಾಪದ— ನಿರಾಕರೋತ್**- ಡುಕೃಞ ಕರಣೇ ಇತಿ ಕರಣಾರ್ಥಕಾತ್ ಕೃಧಾತೋಃ ನಿರ್ ಆ ಇತಿ ಉಪ-ಸರ್ಗದ್ವಯಪೂರ್ವಕಾತ್ ಪರಸ್ಮೈಪದಿನಃ ಸಕರ್ಮಕಾತ್ ಕರ್ತರಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ನಿರಾಕರೋತ್ ಇತಿರೂಪಂ ।

ನಿರ್+ಆ+ಅಕರೋತ್, ಅಕುರುತಾಂ ಅಕುರ್ವನ್ ಅಕರೋಃ ಅಕುರುತಂ ಅಕುರುತ, ಅಕುರವಂ ಅಕುರ್ವ ಅಕುರ್ಮ ।

**ಪ್ರಯೋಗ**— ಹಂಸರಾಟ್ ಏಕದೃಷ್ಟಿಮಿವ ಗುರೋಃ ಮಾನಸಾತ್ ಕಲಿಮಲಂ ನಿರಾಕರೋತ್ (ಕರ್ತರಿ) ।
ಹಂಸರಾಜಾ ಏಕದೃಷ್ಟಿರಿವ ಗುರೋಃ ಮಾನಸಾತ್ ಕಲಿಮಲಂ ನಿರಾಕ್ರಿಯತ (ಕರ್ಮಣಿ) ।

**ಅಲಂಕಾರ**— ಇಲ್ಲಿ ಮಾನಸವಾಸಿಯಾದ ಹಂಸರಾಜನು ಕಾಕನನ್ನು ಹೊಡೆದೋಡಿಸುವಂತೆ ಪರಮಹಂಸರಾಜರಾದ ಶ್ರೀಮದಾನಂದತೀರ್ಥರು ಕಲಿಯನ್ನು ಹೊಡೆದು ಓಡಿಸಿದರೆಂದು ವರ್ಣಿಸಿರುವುದರಿಂದ ಪೂರ್ಣೋಪಮಾಲಂಕಾರ ಅದು ಶ್ಲೇಷದಿಂದ ಅನುಪ್ರಾಣಿತವಾಗಿದೆ.

**ವಿಶೇಷಾಂಶ**— ಇಲ್ಲಿ ವಾಯುದೇವರು ಸಜ್ಜೀವರಿಗೆ ಮಾಡತಕ್ಕ ಪರಮೋಪಕಾರವು ಸೂಚಿತವಾಗಿದೆ. ಅನಾದಿಯಾಗಿ ಸಜ್ಜೀವರ ಮನಸ್ಸಿನಲ್ಲಿ ನೆಲೆಗೊಂಡು ಅವರಿಗೆ ಪರಮಾತ್ಮನ ತತ್ತ್ವಜ್ಞಾನ ಭಕ್ತಿವೈರಾಗ್ಯದಾರ್ಢ್ಯಗಳು ಬಾರದಂತೆ ತಡೆದು ನಾನಾ ವಿಧವಾದ ದುಃಖವನ್ನು ಕೊಡುವ ಕಲಿಯನ್ನು ವಾಯುದೇವರು ತಮ್ಮ ಹೂಂಕಾರದಿಂದ ಬೆದರಿಸಿ ಓಡಿಸುತ್ತಾರೆ ಎಂದು ಸೂಚಿಸಿದ್ದಾರೆ. ಆದುದರಿಂದ ಪ್ರತಿಯೊಬ್ಬರೂ ಭಾರತೀರಮಣಮುಖ್ಯಪ್ರಾಣಾವತಾರರಾದ ಆಚಾರ್ಯರನ್ನು ಕಲಿಮಲವನ್ನು ಕಳೆಯಿರೆಂದು ನಿರಂತರವೂ ಪ್ರಾರ್ಥಿಸಬೇಕು.

**ಕೋಶ**— ಹಂಸಾಸ್ತು ಶ್ವೇತಗರುತಃ ಚಕ್ರಾಂಗಾ ಮಾನಸೌಕಸಃ, ಗರುತ್ ಪಕ್ಷಚ್ಛ ದಾಃ ಪತ್ರಂಪತತ್ರಂ ಚ ಸ್ವಾಂತಂ ಹೃನ್ಮಾನಸಂ ಮನಃ, 'ಕಾಕೇ ತು ಕರಟಾರಿಷ್ಟ ಬಲಿಪುಷ್ಟ ಸಕೃತ್ ಪ್ರಜಾಃ ಚಿರಜೀವೀ ಚೈಕದೃಷ್ಟಿ' ಎಂದೂ ಅಮರಕೋಶವನ್ನು ತಿಳಿಯಬೇಕು. ಏಕದೃಷ್ಟಿ ಎಂದರೆ ಕಾಗೆ, ಮತ್ತು ಐಕ್ಯಜ್ಞಾನ ಎಂದೂ ಅರ್ಥವಾಗುತ್ತದೆ. 'ಏಕದೃಷ್ಟಿಮಿವ ರೂಪಿಣ-ಮೈಕ್ಯಜ್ಞಾನಮಿವ' ಎಂದು ಭಾವಪ್ರಕಾಶಿಕಾ, ಮಾನಸಾತ್ ಎಂಬಲ್ಲಿ ಮಾನಸ ಸರೋವರ ಮತ್ತು ಮನಸ್ಸು ಎಂದು ಎರಡು ಅರ್ಥಗಳು. 'ಮಾನಸಾತ್ ಮನಸಃ ಸರಃ ಶ್ರೇಷ್ಠಾಚ್ಚ' ಎಂದು ಭಾವಪ್ರಕಾಶಿಕಾ.

★ ★ ★

**ಅವತಾರಿಕಾ**— ಮುಂದೆ ಅಚ್ಯುತಪ್ರೇಕ್ಷರು ಹೇಗೆ ಶೋಭಿಸಿದರೆಂದು ಹೇಳುತ್ತಾರೆ.

**ನಿಷ್ಕಲಂಕಮಿವ ಚಂದ್ರಮಂಡಲಂ**
**ಪುಂಡರೀಕಮಿವ ಫುಲ್ಲತಾಂ ಗತಮ್ ।**
**ವಾರಿ ಶಾರದಮಿವ ಪ್ರಸಾದವತ್**
**ಚಿತ್ತಮಚ್ಯುತಮತೇರ್ಭೃಶಂ ಬಭೌ ॥ 36 ॥**

**ಪದಚ್ಛೇದ**— ನಿಷ್ಕಲಂಕಂ, ಇವ, ಚಂದ್ರಮಂಡಲಂ, ಪುಂಡರೀಕಂ, ಇವ, ಫುಲ್ಲತಾಂ, ಗತಂ, ವಾರಿ, ಶಾರದಂ ಇವ, ಪ್ರಸಾದವತ್, ಚಿತ್ತಂ, ಅಚ್ಯುತಮತೇಃ, ಭೃಶಂ, ಬಭೌ ।

**ಅನ್ವಯ**— ಅಚ್ಯುತಮತೇಃ ಚಿತ್ತಂ, ನಿಷ್ಕಲಂಕಂ, ಚಂದ್ರಮಂಡಲಂ, ಇವ, ಫುಲ್ಲತಾಂ, ಗತಂ, ಪುಂಡರೀಕಂ, ಇವ, ಪ್ರಸಾದವತ್, ಶಾರದಂ, ವಾರಿ, ಇವ, ಭೃಶಂ, ಬಭೌ ।

**ಅನ್ವಯಾರ್ಥ**—

**ಅಚ್ಯುತಮತೇಃ** = ಅಚ್ಯುತಪ್ರೇಕ್ಷಾಚಾರ್ಯರ,
**ಚಿತ್ತಂ** = ಮನಸ್ಸು,
ನಿಷ್ಕಲಂಕಂ = ಕಲಂಕವಿಲ್ಲದ,
**ಚಂದ್ರಮಂಡಲಂ ಇವ** = ಚಂದ್ರಮಂಡಲದಂತೆಯೂ,
ಫುಲ್ಲತಾಂ = ವಿಕಾಸವನ್ನು,
ಗತಂ = ಹೊಂದಿದ,
**ಪುಂಡರೀಕಂ ಇವ** = ಬಿಳಿತಾವರೆ ಹೂವಿನಂತೆಯೂ,
**ಪ್ರಸಾದವತ್** = ನಿರ್ಮಲತೆಯುಳ್ಳ,
**ಶಾರದಂ** = ಶರತ್ಕಾಲದ,
**ವಾರಿ ಇವ** = ನೀರಿನಂತೆಯೂ,
**ಭೃಶಂ** = ಚೆನ್ನಾಗಿ,
**ಬಭೌ** = ಶೋಭಿಸಿತು.

**ತಾತ್ಪರ್ಯ**— ಶ್ರೀ ಮಧ್ವಾಚಾರ್ಯರು ಅಚ್ಯುತಪ್ರೇಕ್ಷರ ಔಪಾಧಿಕವಾದ ಬುದ್ಧಿ ದೋಷವನ್ನು ಹೋಗಲಾಡಿಸಿದ ಮೇಲೆ ಅವರ ಮನಸ್ಸು ಕಳಂಕವಿಲ್ಲದ ಚಂದ್ರಮಂಡಲದಂತೆಯೂ, ಅರಳಿದ ಬಿಳಿ ತಾವರೆ ಹೂವಿನಂತೆಯೂ, ಶರತ್ಕಾಲದ ಸ್ವಚ್ಛವಾದ ನೀರಿನಂತೆಯೂ ಚೆನ್ನಾಗಿ ಶೋಭಿಸಿತು. ಅಚ್ಯುತಪ್ರೇಕ್ಷರು ಶುದ್ಧ ಬುದ್ಧಿಯುಳ್ಳವರಾದರು.

ವಿಗ್ರಹ—

ನಿಷ್ಕಲಂಕಂ— ನಿರ್ಗತಃ ಕಲಂಕಃ ಯಸ್ಮಾತ್ ತತ್ ನಿಷ್ಕಲಂಕಂ ।

ಚಂದ್ರಮಂಡಲಂ— ಚಂದ್ರಸ್ಯ ಮಂಡಲಂ ಚಂದ್ರಮಂಡಲಂ ।

ಶಾರದಂ— ಶರದಃ ಇದಂ ಶಾರದಂ ।

ಪ್ರಸಾದವತ್— ಪ್ರಸಾದಃ ಅಸ್ಯ ಅಸ್ತೀತಿ ಪ್ರಸಾದವತ್ ।

ಅಚ್ಯುತಮತೇಃ— ಅಚ್ಯುತೇ ಮತಿಃ ಯಸ್ಯ ಸಃ ಅಚ್ಯುತಮತಿಃ । ಅಚ್ಯುತಾ ಮತಿಃ ಯಸ್ಯಸಃ ಅಚ್ಯುತಮತಿಃ ತಸ್ಯ ।

ಕ್ರಿಯಾಪದ— ಬಭೌ- ಭಾದೀಪ್ತೌ ಇತಿ ದೀಪ್ತ್ಯರ್ಥಕಾತ್ ಭಾಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ ।

ಬಭೌ ಬಭತುಃ ಬಭುಃ, ಬಭಿಥ, ಬಭಾಥಃ, ಬಭಥುಃ, ಬಭೌ ಬಭಿವ ಬಭಿಮ ।

ಪ್ರಯೋಗ— ಅಚ್ಯುತ ಮತೇಃ ಚಿತ್ತಂ ಭೃಶಂ-ಬಭೌ (ಕರ್ತರಿ) ।

ಅಚ್ಯುತಮತೇಃ ಚಿತ್ತೇನ ಭೃಶಂ ಬಭೇ (ಭಾವೇ) ।

ಅಲಂಕಾರ— ಇಲ್ಲಿ ಮಾಲಾಕಾರವಾಗಿ ಮೂರು ಉಪಮಾಲಂಕಾರಗಳಿವೆ.

ಕೋಶ— 'ಕಲಂಕೋಽಕಾಪವಾದಯೋಃ', 'ಬಿಂಬೋಽಸ್ತ್ರೀ ಮಂಡಲಂ ತ್ರಿಷು', 'ಪುಂಡರೀಕಂ ಸಿತಾಂಭೋಜಂ', 'ಅತಿವೇಲಭೃಶಾತ್ಯರ್ಥಾತಿಮಾತ್ರೋದ್ಗಾಢ ನಿರ್ಭರಂ' ಎಂದು ಅಮರಕೋಶವಿದೆ.

★ ★ ★

ಅವತಾರಿಕಾ— ಅನಂತರ ಶ್ರೀ ಅಚ್ಯುತಪ್ರೇಕ್ಷಾಚಾರ್ಯರಿಗೆ ಆದ ಆನಂದವನ್ನು ವರ್ಣಿಸುತ್ತಾರೆ.

**ಆನನಂದ ಸ ಹಿ ಮಧ್ವಶಾಸ್ತ್ರಮಾ-**
**ಕರ್ಣಯನ್ ಕುಸಮಯಾಗ್ರಹೀ ಪುರಾ ।**
**ಮೋಹಪೀತಲವಣೋದಕೋ ಮುಹುಃ**
**ಪ್ರಾಕ್ ಪಿಪಾಸುರಮೃತಂ ಪಿಬನ್ನಿವ ॥ 37 ॥**

ಪದಚ್ಛೇದ— ಆನನಂದ, ಸಃ, ಹಿ, ಮಧ್ವಶಾಸ್ತ್ರಂ, ಆಕರ್ಣಯನ್, ಕುಸಮಯಾಗ್ರಹೀ, ಪುರಾ, ಮೋಹಪೀತಲ-ವಣೋದಕಃ, ಮುಹುಃ, ಪ್ರಾಕ್, ಪಿಪಾಸುಃ, ಅಮೃತಂ, ಪಿಬನ್, ಇವ ।

ಅನ್ವಯ— ಪುರಾ, ಕುಸಮಯಾಗ್ರಹೀ, ಮಧ್ವಶಾಸ್ತ್ರಮಾಕರ್ಣಯನ್, ಸಃ, ಪ್ರಾಕ್, ಮೋಹಪೀತಲವಣೋದಕಂ, ಅಮೃತಂ, ಪಿಬನ್, ಪಿಪಾಸುಃ, ಇವ, ಮುಹುಃ, ಆನನಂದ, ಹಿ ।

ಅನ್ವಯಾರ್ಥ—

ಪುರಾ = ಮೊದಲು

ಕುಸಮಯಾಗ್ರಹೀ = ದುಷ್ಟವಾದ ಮಾಯಾವಾದಿ ಸಿದ್ಧಾಂತದಲ್ಲಿ ಹಠವುಳ್ಳ

ಮಧ್ವಶಾಸ್ತ್ರಂ = ಶ್ರೀಪೂರ್ಣಪ್ರಜ್ಞರ ಸಿದ್ಧಾಂತ ಶಾಸ್ತ್ರವನ್ನು

ಆಕರ್ಣಯನ್ = ಕೇಳುತ್ತಿರುವ;

**ಸಃ** = ಆ ಅಚ್ಯುತಪ್ರೇಕ್ಷರು,

**ಪ್ರಾಕ್** = ಮೊದಲು,

**ಮೋಹಪೀತಲವಣೋದಕಃ** = ಭ್ರಾಂತಿಯಿಂದ, ಕುಡಿಯಲ್ಪಟ್ಟ ಉಪ್ಪು ನೀರುಳ್ಳ (ಇದಾನೀಂ = ಈಗ)

**ಅಮೃತಂ** = ಅಮೃತವನ್ನು (ಸಿಹಿಯಾದ ನೀರನ್ನು)

**ಪಿಬನ್** = ಕುಡಿಯುತ್ತಿರುವ,

**ಪಿಪಾಸುಃ ಇವ** = ಬಾಯಾರಿದವನಂತೆ,

**ಮುಹುಃ** = ಪುನಃ ಪುನಃ,

**ಆನನಂದ ಹಿ** = ಸಂತೋಷಪಟ್ಟರಷ್ಟೇ.

**ತಾತ್ಪರ್ಯ—** ಬಾಯಾರಿದ ಒಬ್ಬ ಮನುಷ್ಯನು ಮೊದಲು ಉಪ್ಪು ನೀರೆಂದು ತಿಳಿಯದೆ ಅದನ್ನು ಕುಡಿದು ಅದೇ ಚೆನ್ನಾಗಿದೆ ಎಂದು ನಿಶ್ಚಯಿಸಿಕೊಂಡಿದ್ದನು. ಅನಂತರ ಒಂದು ದಿನ ಸಿಹಿಯಾದ ನೀರನ್ನು ಕುಡಿದು ಆನಂದಪಟ್ಟನು. ಆಗ ಅವನಿಗೆ ತಾನು ಹಿಂದೆ ಕುಡಿದ ನೀರು ಉಪ್ಪು. ಅದು ಪಾನಮಾಡಲು ಯೋಗ್ಯವಲ್ಲವೆಂಬ ನಿರ್ಣಯವುಂಟಾಯಿತು. ಅದರಂತೆ ಶ್ರೀಅಚ್ಯುತಪ್ರೇಕ್ಷಾಚಾರ್ಯರು ತತ್ತ್ವವನ್ನು ತಿಳಿಯುವ ಸಲುವಾಗಿ ಮೊದಲು ತಮಗೆ ಆಗ ಲಭ್ಯವಾದ ಮಾಯಾವಾದಿ ಸಿದ್ಧಾಂತ ಗ್ರಂಥಗಳನ್ನು ಓದಿದರು. ಆಗ ಅವರಿಗೆ ಬೇರೊಂದು ಸಿದ್ಧಾಂತದ ಜ್ಞಾನವಿಲ್ಲದ್ದರಿಂದ ಇದೇ ಸರಿಯಾದ ಸಿದ್ಧಾಂತವೆಂಬ ಆಗ್ರಹವೂ ಉಂಟಾಯಿತು. ಈಗ ಪುಣ್ಯ ಪರಿಪಾಕದಿಂದ ಶ್ರೀಮಧ್ವರಂತಹ ಜಗದ್ಗುರುಗಳಾದ ಶಿಷ್ಯೋತ್ತಮರು ದೊರೆತು ಅವರಿಂದ ಶಾಸ್ತ್ರ ಶ್ರವಣ ಮಾಡುವ ಭಾಗ್ಯ ಒದಗಿತ್ತು. ಸಕಲ ಮಿಥ್ಯಾಜ್ಞಾನ ನಿವರ್ತಕವಾದ, ಅಂತಃಕರಣ ಪ್ರಸಾದವನ್ನುಂಟುಮಾಡಿ ಪರಮಾತ್ಮನ ದರ್ಶನವನ್ನುಂಟು ಮಾಡುವ ಈ ಸಿದ್ಧಾಂತದ ಅರಿವಾದ ಮೇಲೆ ಈ ಶಾಸ್ತ್ರಕ್ಕೆ ಸಮವಾದುದು ಯಾವುದೂ ಇಲ್ಲವೆಂಬ ಪರಿಜ್ಞಾನವುಂಟಾಗಿ ಅವರಿಗೆ ತುಂಬಾ ಆನಂದವುಂಟಾಯಿತು. ಅವರು ಮಧ್ವಶಾಸ್ತ್ರ ಶ್ರವಣ ಮಾಡುತ್ತಾ ಸಂತೋಷದಿಂದ ಇದ್ದರು.

**ವಿಗ್ರಹ—**

**ಮಧ್ವಶಾಸ್ತ್ರಂ—** ಮಧ್ವಸ್ಯ ಶಾಸ್ತ್ರಂ ಮಧ್ವಶಾಸ್ತ್ರಂ ತತ್ ।

**ಕುಸಮಯಾಗ್ರಹೀ—** ಕುತ್ಸಿತಶ್ಚಾಸೌ ಸಮಯಶ್ಚ ಕುಸಮಯಃ, ಆಗ್ರಹಃ ಅಸ್ಯ ಅಸ್ತೀತಿ ಆಗ್ರಹೀ, ಕುಸಮಯೇ ಆಗ್ರಹೀ ಕುಸಮಯಾಗ್ರಹೀ ।

**ಮೋಹಪೀತಲವಣೋದಕಃ—** ಲವಣಂ ಚ ತತ್ ಉದಕಂ ಚ ಲವಣೋದಕಂ, ಮೋಹೇನ ಪೀತಂ ಲವಣೋದಕಂ ಯೇನ ಸಃ ಮೋಹಪೀತಲವಣೋದಕಃ ।

**ಪಿಪಾಸುಃ—** ಪಾತುಂ ಇಚ್ಛುಃ ಪಿಪಾಸುಃ ।

**ಕ್ರಿಯಾಪದ—** **ಆನನಂದ-** ಟುನದಿ ಸಮೃದ್ಧೌ ಇತಿ ಸಮೃದ್ಧ್ಯರ್ಥಕಾತ್ ನಂದ್ ಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ಕರ್ತರಿ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಆನನಂದ ಇತಿ ರೂಪಂ ।

ಆ+ನನಂದ ನದಂದತುಃ ನನಂದುಃ, ನನಂದಿಥ ನನಂದಥುಃ ನನಂದ, ನನಂದ ನನಂದಿವ ನನಂದಿಮ

**ಪ್ರಯೋಗ—** ಸಃ ಆನನಂದ (ಕರ್ತರಿ) ತೇನ ಆನನಂದೇ (ಭಾವೇ) ।

**ಕೋಶ—** 'ಪಯಃ ಕೀಲಾಲಮಮೃತಂ ಜೀವನಂ ಭುವನಂ ವನಂ' ಅಮರ ।

★ ★ ★

ಅವತಾರಿಕಾ— ಅಚ್ಯುತಪ್ರೇಕ್ಷರೂ ಮತ್ತು ಜ್ಯೇಷ್ಠಯತಿಗಳೂ ಕೂಡ ಶ್ರೀಮಧ್ವಶಾಸ್ತ್ರವನ್ನು ಆದರದಿಂದ ಇತರರಿಗೆ ಉಪದೇಶ ಮಾಡಲುಪಕ್ರಮಿಸಿದರೆನ್ನುತ್ತಾರೆ.

**ವಿಸೃತಾಂತರವಿಯತ್ಪದೌ ಯತೀ**
**ಆಸ್ಯತಾಂ ಸುಸಮಯಪ್ರಕಾಶನಾತ್ ।**
**ತೌ ಯಥಾ ವಿಧುರವೀ ಅಹೋ ಅಹೋ-**
**ರಾತ್ರಮಪ್ಯುರುತಮೋ ನೃಮೋಹಕಮ್ ॥ 38 ॥**

ಪದಚ್ಛೇದ— ವಿಸೃತಾಂತರವಿಯತ್ಪದೌ, ಯತೀ, ಆಸ್ಯತಾಂ, ಸುಸಮಯಪ್ರಕಾಶನಾತ್, ತೌ, ಯಥಾ, ವಿಧುರವೀ, ಅಹೋ, ಅಹೋರಾತ್ರಂ, ಅಪಿ, ಉರುತಮಃ, ನೃಮೋಹಕಂ ।

ಅನ್ವಯ— ವಿಸೃತಾಂತರವಿಯತ್ಪದೌ, ತೌ, ಯತೀ, ಅಹೋರಾತ್ರಂ, ಅಪಿ, ಸುಸಮಯಪ್ರಕಾಶನಾತ್, ನೃಮೋಹಕಂ, ಉರುತಮಃ, ವಿಧುರವೀ, ಯಥಾ, ಆಸ್ಯತಾಂ, ಅಹೋ ।

ಅನ್ವಯಾರ್ಥ—

**ವಿಸೃತಾಂತರವಿಯತ್‌ಪದೌ** = ವಿಸ್ತಾರವಾದ ಜ್ಞಾನವುಳ್ಳ ಶ್ರೀಪೂರ್ಣಪ್ರಜ್ಞರೆಂಬ ಆಕಾಶವೇ ಆಶ್ರಯವಾಗುಳ್ಳ,
**ತೌ ಯತೀ** = ಸಂನ್ಯಾಸಿಗಳಾದ ಆ ಜ್ಯೇಷ್ಠಯತಿಗಳೂ ಮತ್ತು ಅಚ್ಯುತಪ್ರೇಕ್ಷರೂ,
**ಅಹೋರಾತ್ರಂ ಅಪಿ** = ಹಗಲು ರಾತ್ರಿಯಲ್ಲಿಯೂ,
**ಸುಸಮಯಪ್ರಕಾಶನಾತ್** = ಒಳ್ಳೆಯ ಸಿದ್ಧಾಂತದ (ಒಳ್ಳೆಯ ಕಾಲದ) ಪ್ರಕಟನೆಯಿಂದ,
**ನೃಮೋಹಕಂ** = ಜೀವರಿಗೆ ಭ್ರಾಂತಿಯನ್ನುಂಟುಮಾಡುವ,
**ಉರುತಮಃ** = ಹೆಚ್ಚಾದ ಅಜ್ಞಾನವನ್ನು, (ಕತ್ತಲೆಯನ್ನು)
**ವಿಧುರವೀ ಯಥಾ** = ಚಂದ್ರಸೂರ್ಯರಂತೆ,
**ಆಸ್ಯತಾಂ** = ನಿವಾರಿಸಿದರು.
**ಅಹೋ** = ಆಶ್ಚರ್ಯವು !

ತಾತ್ಪರ್ಯ— ಸೂರ್ಯಚಂದ್ರರು ಹಗಲುರಾತ್ರಿ ಆಕಾಶದಲ್ಲಿ ಒಳ್ಳೆಯ ಶರದೃತು ಸಮಯದಲ್ಲಿ ಉದಯಿಸಿ ಜನರಿಗೆ ವಸ್ತುಗಳು ಕಾಣಸದಂತೆ ಮಾಡುವ ಕತ್ತಲೆಯನ್ನು ನಿವಾರಿಸುತ್ತಾರೆ, ಆನಂದಪಡಿಸುತ್ತಾರೆ. ಅದರಂತೆ ಶ್ರೀಮಧ್ವರು ಹೇಳಿದ ದಾರಿಯಲ್ಲಿ ನಡೆಯುತ್ತಾ ಅವರನ್ನೇ ಆಶ್ರಯಿಸಿ ಮೊದಲೇ ಆಚಾರ್ಯರ ಸಿದ್ಧಾಂತದಲ್ಲಿ ಅತಿಶಯವಾದ ಪ್ರೀತಿಯಿಂದ ಅದನ್ನೇ ಅನುಸರಿಸಿದ್ದ ಜ್ಯೇಷ್ಠಯತಿಗಳೂ ಈಗ ಆಚಾರ್ಯರ ಸಿದ್ಧಾಂತದಲ್ಲಿ ಶ್ರದ್ಧೆಯನ್ನು ಹೊಂದಿದ ಅಚ್ಯುತಪ್ರೇಕ್ಷರೂ ಇವರಿಬ್ಬರೂ ಹಗಲುರಾತ್ರಿ ನಿರಂತರ ಶ್ರೀಮಧ್ವಶಾಸ್ತ್ರವನ್ನು ಪ್ರವಚನ ಮಾಡುತ್ತಾ ಇದ್ದರು. ಇದರಿಂದ ಇತರ ಅನೇಕ ಜೀವರ ಅಜ್ಞಾನವು ನೀಗಿತು. ಅವರೂ ತಮ್ಮ ಅಜ್ಞಾನವನ್ನು ಕಳೆದುಕೊಂಡರು. ಈ ಶ್ರೀಮಧ್ವಭಾಷ್ಯ ಮಹಾತ್ಮ್ಯವು ಆಶ್ಚರ್ಯಕರವಾಗಿದೆ. ಈ ಲಿಕುಚ ಕುಲೋತ್ಪನ್ನರಾದ ಜ್ಯೇಷ್ಠಯತಿ ಮತ್ತು ಅಚ್ಯುತಪ್ರೇಕ್ಷರು ಮಹಾಭಾಗ್ಯಶಾಲಿಗಳು.

ವಿಗ್ರಹ—

ವಿಸೃತಾಂತರವಿಯತ್‌ಪದೌ— ವಿಸೃತಂ ಆಂತರಂ ಯಸ್ಯ ಸಃ ವಿಸೃತಾಂತರಃ ವಿಸೃತಾಂತರಃ ಏವ ವಿಯತ್ ವಿಸೃತಾಂತರವಿಯತ್, ವಿಸೃತಾಂತರವಿಯತ್ ಪದಂ ಯಯೋಸ್ತೌ ವಿಸೃತಾಂತರವಿಯತ್ಪದೌ ।

**ಸುಸಮಯಪ್ರಕಾಶನಾತ್**— ಶೋಭನಶ್ಚಾಸೌ ಸಮಯಶ್ಚ ಸುಸಮಯಃ, ಸುಸಮಯಸ್ಯ (ಸುಸಮಯೇ) ಪ್ರಕಾಶನಂ, ತಸ್ಮಾತ್ ।

**ವಿಧುರವೀ**— ವಿಧುಶ್ಚ ರವಿಶ್ಚ ವಿಧುರವೀ ।

**ಅಹೋರಾತ್ರಂ**— ಅಹಶ್ಚ ರಾತ್ರಿಶ್ಚ ಅಹೋರಾತ್ರಃ ತಂ ।

**ಉರುತಮಃ**— ಉರುಚ ತತ್ ತಮಶ್ಚ ಉರುತಮಃ ।

**ನೃಮೋಹಕಂ**— ಮೋಹಯತೀತಿ ಮೋಹಕಂ ನೃಣಾಂ ಮೋಹಕಂ ನೃಮೋಹಕಂ ।

**ಕ್ರಿಯಾಪದ— ಆಸ್ಯತಾಂ** - ಆಸ್ಯತ್ ಆಸ್ಯತಾಂ ಆಸ್ಯನ್, ಆಸ್ಯಃ ಆಸ್ಯತಂ ಆಸ್ಯತ, ಆಸ್ಯಂ ಆಸ್ಯಾವ ಆಸ್ಯಾಮ । ಆಸು (ನಿರಸನೇ) ಕ್ಷೇಪಣೇ ಇತಿ ಕ್ಷೇಪಣಾರ್ಥಕಾತ್ ಅಸ್ ಧಾತೋಃ ದೈವಾದಿಕಾತ್ ಸಕರ್ಮಕಾತ್ ಪರಸ್ಮೈಪದಿನಃ ಕರ್ತರಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಆಸ್ಯತಾಂ ಇತಿರೂಪಂ ।

**ಪ್ರಯೋಗ**— ತೌ ಯತೀ ಉರುತಮಃ ಆಸ್ಯತಾಂ (ಕರ್ತರಿ) ।
ತಾಭ್ಯಾಂ ಯತಿಭ್ಯಾಂ ಉರುತಮಃ ಆಸ್ಯತ (ಕರ್ಮಣಿ) ।

**ವ್ಯಾಕರಣ ವಿಶೇಷ**— ಅಹೋರಾತ್ರ ಎಂಬಲ್ಲಿ 'ಅಹಃ ಸರ್ವೈಕದೇಶಸಂಖ್ಯಾತಪುಣ್ಯಾಚ್ಚ ರಾತ್ರೇಃ' (5-4-87) ಎಂಬ ಸೂತ್ರದಿಂದ ರಾತ್ರಿ ಶಬ್ದಕ್ಕೆ ಅಚ್ ಪ್ರತ್ಯಯ ಬಂದು ಅಕಾರಾಂತವಾಗಿದೆ. 'ಕಾಲಾಧ್ವನೋರತ್ಯಂತಸಂಯೋಗೇ' (2-3-5) ಎಂಬ ಸೂತ್ರದಿಂದ ದ್ವಿತೀಯಾ. ಹಗಲುರಾತ್ರಿಗಳಲ್ಲಿ ಎಡೆಬಿಡದೆ ಎಂದು ಅರ್ಥ. 'ಅಹೋರಾತ್ರಂ' ಎಂಬಲ್ಲಿ 'ಓತ್' (1-1-15) ಎಂಬ ಸೂತ್ರದಿಂದ ಓಕಾರಾಂತವಾದ ನಿಪಾತಾವ್ಯಯಕ್ಕೆ ಪ್ರಗೃಹ್ಯ ಸಂಜ್ಞೆ ಬಂದು 'ಪ್ಲುತಪ್ರಗೃಹ್ಯಾ ಅಚಿ ನಿತ್ಯಂ' (6-1-125) ಎಂಬ ಸೂತ್ರದಿಂದ ಪ್ರಕೃತಿ ಭಾವವು ಬಂದಿದೆ. ಆದುದರಿಂದ ಇಲ್ಲಿ ಸಂಧಿಯಾಗುವುದಿಲ್ಲ. ಯತೀ ಆಸ್ಯತಾಂ, ವಿಧುರವೀ ಅಹೋ ಎಂಬ ಎರಡು ಸ್ಥಳಗಳಲ್ಲಿ 'ಈದೂದೇದ್ ದ್ವಿವಚನಂ ಪ್ರಗೃಹ್ಯಂ' (1-1-11) ಎಂಬ ಸೂತ್ರದಿಂದ ಈ ಕೊನೆಯಲ್ಲಿರುವ ದ್ವಿವಚನಕ್ಕೆ ಪ್ರಗೃಹ್ಯ ಸಂಜ್ಞೆಯು ಬಂದು 'ಪ್ಲುತಪ್ರಗೃಹ್ಯಾ ಅಚಿ ನಿತ್ಯಂ' (6-1-125) ಎಂಬ ಸೂತ್ರದಿಂದ ಪ್ರಕೃತಿ ಭಾವವು ಬಂದಿದೆ. ಸಂಧಿಯಾಗುವುದಿಲ್ಲ.

ಸುಸಮಯಪ್ರಕಾಶನಾತ್ ಎಂಬ ಶಬ್ದಕ್ಕೆ 'ಸುಶಾಸ್ತ್ರವ್ಯಾಖ್ಯಾನಾತ್ ಸುಕಾಲೋದಯಾಚ್ಚ' ಎಂಬುದಾಗಿ ಭಾವಪ್ರಕಾಶಿಕೆ ಯಲ್ಲಿ ಕವಿಗಳೇ ವ್ಯಾಖ್ಯಾನ ಮಾಡಿರುವುದರಿಂದ ಒಳ್ಳೆಯ ಶಾಸ್ತ್ರದ ವ್ಯಾಖ್ಯಾನದಿಂದ ಮತ್ತು ಒಳ್ಳೆಯ ಸಮಯದಲ್ಲಿ ಉದಯವಾಗುವುದರಿಂದ ಎಂದು ಅರ್ಥಗಳು.

**ಕೋಶ**— 'ಸಮಯಾಃ ಶಪಥಾಚಾರ ಕಾಲಸಿದ್ಧಾಂತ ಸಂವಿದಃ, ಕಾಲೋದಿಷ್ಟೋಪ್ಯನೇ ಹಾಪಿ ಸಮಯೋಪಿ, ವಿಯದ್ವಿಷ್ಣು ಪದಂ ವಾತು' ಎಂದು ಅಮರಕೋಶವಿದೆ ।

**ಅಲಂಕಾರ**— ಇಲ್ಲಿ ಉಪಮಾಲಂಕಾರವಿದೆ. ಸೂರ್ಯನು ಹಗಲಿನಲ್ಲಿಯೂ, ಚಂದ್ರನು ರಾತ್ರಿಯಲ್ಲಿಯೂ ಕತ್ತಲೆಯನ್ನು ಕಳೆಯುತ್ತಾರೆ. ಈ ಇಬ್ಬರು ಯತಿಗಳೆಂಬ, ಸೂರ್ಯಚಂದ್ರರು ಈ ಆಕಾಶಕ್ಕಿಂತಲೂ ವಿಸ್ತಾರವಾದ ಶ್ರೀಮಧ್ವರೆಂಬ ಆಕಾಶವನ್ನು ಆಶ್ರಯಿಸಿ ಹಗಲುರಾತ್ರಿಗಳಲ್ಲಿ ಒಟ್ಟಿಗೆ ಅಂಧಕಾರವನ್ನು ಕಳೆಯುತ್ತಾರೆ ಎಂದು ಸೂಚಿತವಾಗಿ ರುವುದರಿಂದ ವ್ಯತಿರೇಕಾಲಂಕಾರವು ವ್ಯಂಗ್ಯವಾಗಿತೋರುತ್ತದೆ. 'ವ್ಯತಿರೇಕೋ ವಿಶೇಷಶ್ಚೇದುಪಮಾನೋಪಮೇಯೋಃ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ**— ಶ್ರೀ ಭಾರತೀರಮಣಮುಖ್ಯಪ್ರಾಣರು ಶ್ರೀಮಧ್ವರೂಪದಿಂದ ಭೂಮಿಯಲ್ಲಿ ಅವತರಿಸಿ ಮಾಡಿದ ಮಹೋಪಕಾರವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ.

**ಸಜ್ಜನಾನ್ ಸಹ ಮಹಾದರೇಣ ನೄನ್**
**ಪಾಪಿನಾಂ ಪ್ರಕೃತಿತೋಽಪ್ರಿಯಾಕೃತಿ ।**
**ದಾರುಣಾಘಗಣದಾರಣಂ ಸ್ಮ ಸ**
**ಗ್ರಾಹಯತ್ಯಪಿ ಸುದರ್ಶನದ್ವಯಮ್ ॥ 39 ॥**

**ಪದಚ್ಛೇದ**— ಸಜ್ಜನಾನ್, ಸಹ, ಮಹಾದರೇಣ, ನೄನ್, ಪಾಪಿನಾಂ, ಪ್ರಕೃತಿತಃ, ಅಪ್ರಿಯಾಕೃತಿ, ದಾರುಣಾಘಗಣದಾರಣಂ, ಸ್ಮ, ಸಃ, ಗ್ರಾಹಯತಿ, ಅಪಿ, ಸುದರ್ಶನದ್ವಯಂ ।

**ಅನ್ವಯ**— ಸಃ, ಸಜ್ಜನಾನ್, ನೄನ್, ಪಾಪಿನಾಂ, ಪ್ರಕೃತಿತಃ, ಅಪ್ರಿಯಾಕೃತಿ, ದಾರುಣಾಘಗಣದಾರಣಂ, ಸುದರ್ಶನದ್ವಯಂ, ಅಪಿ, ಮಹಾದರೇಣ, ಸಹ, ಗ್ರಾಹಯತಿ, ಸ್ಮ ।

**ಅನ್ವಯಾರ್ಥ**—

**ಸಃ** = ಆ ಮಧ್ವಾಚಾರ್ಯರು,
**ಸಜ್ಜನಾನ್** = ತತ್ವಜ್ಞಾನಯೋಗ್ಯರಾದ (ಸಾತ್ವಿಕರಾದ)
**ನೄನ್** = ಮನುಷ್ಯರನ್ನು ಮನುಷ್ಯರಿಗೆ,
**ಪಾಪಿನಾಂ** = ಪಾಪವುಳ್ಳವರಿಗೆ,
**ಪ್ರಕೃತಿತಃ** = ಸ್ವಭಾವದಿಂದ,
**ಅಪ್ರಿಯಾಕೃತಿ** = ಪ್ರೀತಿ ವಿಷಯವಲ್ಲದ ಸ್ವರೂಪವುಳ್ಳ,
**ದಾರುಣಾಘಗಣದಾರಣಂ** = ಭಯಂಕರವಾದ ಪಾಪಗಳ ಸಮೂಹದ ಪರಿಹಾರಕವಾದ,
**ಸುದರ್ಶನದ್ವಯಂ ಅಪಿ** = ಒಳ್ಳೆಯ ಶಾಸ್ತ್ರವೆಂಬ ಸುದರ್ಶನ ಮತ್ತು ಸುದರ್ಶನ ಚಕ್ರವೆಂಬ ಸುದರ್ಶನವನ್ನೂ,
**ಮಹಾದರೇಣ ಸಹ** = ಬಹಳ ಪ್ರೀತಿಯಿಂದ ಕೂಡಿಕೊಂಡು (ಪೂಜ್ಯವಾದ ಪಾಂಚಜನ್ಯವೆಂಬ ಮಹಾಶಂಖದಿಂದ ಸಹಿತವಾಗಿ)
**ಗ್ರಾಹಯತಿ ಸ್ಮ** = ಸ್ವೀಕಾರ ಮಾಡಿಸಿದರು (ಧಾರಣ ಮಾಡಿಸಿದರು).

**ತಾತ್ಪರ್ಯ**— ಶ್ರೀಮಧ್ವಶಾಸ್ತ್ರವು ಪಾಪಿಗಳಿಗೆ ಸ್ವಭಾವತಃ ಅಹಿತವಾಗಿ ತೋರುವುದು. ಭಯಂಕರವಾದ ಪಾಪಗಳ ಸಮೂಹವನ್ನು ನಿವಾರಿಸುವುದು. ಶ್ರೀಮಧ್ವರು ಅಂತಹ ಸರ್ವೋತ್ತಮವಾದ ಸುದರ್ಶನವನ್ನೂ (ಒಳ್ಳೆಯ ಶಾಸ್ತ್ರವನ್ನು) ತತ್ವಜ್ಞಾನ ಯೋಗ್ಯರಾದ ಸಾತ್ವಿಕ ಜನರಿಗೆ ಪರಮ ಪ್ರೀತಿಯಿಂದ ಉಪದೇಶಿಸಿದರು ಮತ್ತು ಧಾರಣ ಮಾಡಿಸಿದರು. ಶ್ರೀಮನ್ನಾರಾಯಣನ ಸುದರ್ಶನಚಕ್ರವೂ ಪಾಪಿಗಳಾದ ಅಸುರ ರಾಕ್ಷಸ ಮನುಷ್ಯಾಧಮರಿಗೆ ಸ್ವಭಾವತಃ ಅಪ್ರಿಯವಾದುದು. ಭಯಂಕರವಾದ ಪಾಪಸಮೂಹವುಳ್ಳ ರಾಕ್ಷಸರನ್ನು ಸೀಳಿ ನಾಶಪಡಿಸುತ್ತದೆ ಮತ್ತು ತನ್ನ ಚಿಹ್ನೆಯನ್ನು ಧರಿಸತಕ್ಕ ಭಕ್ತರ ಭಯಂಕರವಾದ ಪಾಪಗಳ ಸಮೂಹವನ್ನೇ ನಾಶ ಮಾಡುತ್ತದೆ. ಶ್ರೀಮಧ್ವರು ಇಂತಹ ಸುದರ್ಶನ ಚಕ್ರ ಚಿಹ್ನೆಯನ್ನು, ಅದರೊಡನೆ ಶ್ರೀಮಹಾವಿಷ್ಣುವಿನ ಕೈಯಲ್ಲಿರುವ ಪಾಂಚಜನ್ಯವೆಂಬ ಪೂಜ್ಯವಾದ ಮಹಾಶಂಖದ ಚಿಹ್ನೆಯನ್ನೂ ಭಕ್ತರ ಬಲಎಡತೋಳುಗಳಲ್ಲಿ ಧಾರಣೆ ಮಾಡಿಸುತ್ತಿದ್ದರು. (ಆಚಾರ್ಯರು ತತ್ವಜ್ಞಾನಯೋಗ್ಯರಾದ ಜನರಿಗೆ ಭುಜಗಳಲ್ಲಿ ತಪ್ತವಾದ (ಬೆಂಕಿಗಳಲ್ಲಿ ಕಾಯಿಸಿದ) ಚಕ್ರಶಂಖ ಚಿಹ್ನೆಯನ್ನು ಧಾರಣ ಮಾಡಿಸಿ ವಿಷ್ಣು ದೀಕ್ಷೆಯನ್ನು ಕೊಟ್ಟು ಅವರಿಗೆ

ಬಹಳ ಪ್ರೀತಿಯಿಂದ ತಮ್ಮ ಶಾಸ್ತ್ರವನ್ನು ಉಪದೇಶಿಸುತ್ತಿದ್ದರು ಎಂದು ಭಾವವು (ಇದರಿಂದ ತಪ್ತವಾದ ಶಂಖಚಕ್ರ ಧಾರಣ ರೂಪವಾದ ವಿಷ್ಣುದೀಕ್ಷೆ ಇಲ್ಲದವರಿಗೆ ಶ್ರೀಮದ್ವಶಾಸ್ತ್ರೋಪದೇಶ ಮಾಡಬಾರದು ಎಂದು ತಿಳಿಯುತ್ತದೆ).

**ವಿಗ್ರಹ—**

**ಸಜ್ಜನಾನ್—** ಸಂತಶ್ಚ ತೇ ಜನಾಶ್ಚ ಸಜ್ಜನಾಃ । (ವಿಶೇಷಣ ಪೂರ್ವಪದ ಕರ್ಮಧಾರಯ)

**ಮಹಾದರೇಣ—** ಮಹಾಂಶ್ಚ ಅಸೌ ಆದರಶ್ಚ ಮಹಾದರಃ ತೇನ ।

**ಪಾಪಿನಾಂ—** ಪಾಪಂ ಏಷಾಂ ಅಸ್ತೀತಿ ಪಾಪಿನಃ ತೇಷಾಂ ।

**ಅಪ್ರಿಯಾಕೃತಿ—** ನ ಪ್ರಿಯಾ ಅಪ್ರಿಯಾ, ಅಪ್ರಿಯಾ ಆಕೃತಿಃ ಯಸ್ಯ ತತ್ ।

**ದಾರುಣಾಘಗಣದಾರಣಂ—** ದಾರುಣಾನಿ ಚ ತಾನಿ ಅಘಾನಿ ಚ ದಾರುಣಾಘಾನಿ, ದಾರುಣಾಘಾನಾಂ ಗಣಃ ದಾರುಣಾಘಗಣಃ, ದಾರುಣಾಘಗಣಂ ದಾರಯತೀತಿ ದಾರುಣಾಘಗಣದಾರಣಃ, ತತ್ ।

**ಸುದರ್ಶನದ್ವಯಂ—** (ಸು) ಶೋಭನಂ, ದರ್ಶನಂ ಯಸ್ಮಾತ್ ತತ್, ಸುದರ್ಶನಂ (ಶಾಸ್ತ್ರಂ) ಅಥವಾ ದೃಶ್ಯತೇ ಅನೇನೇತಿ ದರ್ಶನಂ, ಶೋಭನಂ ಚ ತತ್ ದರ್ಶನಂ ಚ ಸುದರ್ಶನಂ, (ಶಾಸ್ತ್ರಂ) ಶೋಭನಂ ದರ್ಶನಂ ಯಸ್ಯ ತತ್ ಸುದರ್ಶನಂ ಇತಿ ವಾ, (ಸುದರ್ಶನಚಕ್ರಂ) ಸುಖೇನ ದೃಶ್ಯತೇ ಇತಿ ಸುದರ್ಶನಂ, (ಚಕ್ರಂ) ಸುದರ್ಶನಂ ಚ ಸುದರ್ಶನಂ ಚ ಸುದರ್ಶನೇ, ಸುದರ್ಶನಯೋಃ ದ್ವಯಂ, ಸುದರ್ಶನದ್ವಯಂ ತತ್ ।

**ಕ್ರಿಯಾಪದ— ಗ್ರಾಹಯತಿ-** ಗ್ರಹ ಉಪಾದಾನೇ ಇತಿ ಉಪಾದಾನಾರ್ಥಕಾತ್ ಗ್ರಹ್ ಧಾತೋಃ ಣಿಜಂತಾತ್ ಸಕರ್ಮಕಾತ್ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನಂ ।

ಗ್ರಾಹಯತಿ ಗ್ರಾಹಯತಃ ಗ್ರಾಹಯಂತಿ, ಗ್ರಾಹಯಸಿ ಗ್ರಾಹಯಥಃ ಗ್ರಾಹಯಥ,
ಗ್ರಾಹಯಾಮಿ ಗ್ರಾಹಯಾವಃ ಗ್ರಾಹಯಾಮಃ,

**ಪ್ರಯೋಗ—** ಸಜ್ಜನಾಃ ನರಃ (ತಸ್ಮಾತ್ ಶ್ರೀಮಧ್ವಾತ್) ಸುದರ್ಶನದ್ವಯಂ ಗೃಹ್ಣಂತಿ ಸ್ಮ (ಅಣಿಜಂತ) ಸಃ ಶ್ರೀಮಧ್ವಃ ಸಜ್ಜನಾನ್ ಸುದರ್ಶನದ್ವಯಂ ಗ್ರಾಹಯತಿ ಸ್ಮ (ಣಿಜಂತ) ತತ್ 'ಪ್ರಯೋಜಕೋ ಹೇತುಶ್ಚ' (1-4-55) ಕರ್ತೃವಿಗೆ ಪ್ರವರ್ತಕವಾದುದು ಹೇತು ಮತ್ತು ಕರ್ತೃ ಸಂಜ್ಞೆಯನ್ನು ಹೊಂದುತ್ತದೆ ಎಂಬ ಸೂತ್ರದಿಂದ ಸುದರ್ಶನದ್ವಯವನ್ನು ಗ್ರಹಿಸುವುದರಲ್ಲಿ ಕರ್ತೃಗಳಾದ ಜನರನ್ನು ಪ್ರವರ್ತಿಸುವ ಮಧ್ವರಿಗೆ ಹೇತುಸಂಜ್ಞೆಯು ಬರುತ್ತದೆ. 'ಹೇತುಮತಿ ಚ' (3-1-26) ಪ್ರಯೋಜನ ಪ್ರೇಷಣಾದಿ ವ್ಯಾಪಾರವು ಧಾತುವಿನಿಂದ ವಾಚ್ಯವಾಗುವಾಗ ಧಾತುವಿಗೆ ಣಿಚ್ ಬರುತ್ತದೆ ಎಂಬ ಸೂತ್ರದಿಂದ ಣಿಚ್ ಬಂದು ಗ್ರಾಹಯತಿ ಎಂದಾಗುತ್ತದೆ. ಆಗ ಪ್ರಯೋಜಕ ಕರ್ತೃವಿಗೆ ಪ್ರಥಮಾ ವಿಭಕ್ತಿಯು ಬರುತ್ತದೆ. ಇಲ್ಲಿ ಗ್ರಹಧಾತುವಿಗೆ ಬುದ್ಧಿ ಅಂದರೆ ಜ್ಞಾನಾರ್ಥಕತ್ವವಿರುವುದರಿಂದ 'ಗತಿಬುದ್ಧಿಪ್ರತ್ಯವಸಾನಾರ್ಥಶಬ್ದ-ಕರ್ಮಾಕರ್ಮಕಾಣಾಂ ಅಣಿಕರ್ತಾಸಣೌ' (1-4-52) ಎಂಬ ಸೂತ್ರದಿಂದ ಅಣ್ಯಂತಾವಸ್ಥೆಯಲ್ಲಿ ಕರ್ತೃಗಳಾದ ಜನರಿಗೆ (ನೃಶಬ್ದಕ್ಕೆ) ಣ್ಯಂತದಲ್ಲಿ ಕರ್ಮಸಂಜ್ಞೆಯು ಬಂದು ದ್ವಿತೀಯಾ ಬಂದಿದೆ. 'ವೇದಾರ್ಥಂ ಸ್ವಾನ್ ಆವೇದಯತ್' ಎಂಬಂತೆ.

ಸಃ ನ್ರೂನ್ ಸುದರ್ಶನದ್ವಯಂ ಗ್ರಾಹಯತಿಸ್ಮ ದ್ವಿಕರ್ಮಕ (ಕರ್ತರಿ) ।
ತೇನ ನರಃ ಸುದರ್ಶನದ್ವಯಂ ಗ್ರಾಹ್ಯಂತೇಸ್ಮ (ಕರ್ಮಣಿ) ।

**ವಿಶೇಷಾಂಶ—** ಶ್ರೀ ಭಾರತೀರಮಣಮುಖ್ಯಪ್ರಾಣರು ಪರಮಾತ್ಮನ ಅಪ್ಪಣೆಯಿಂದ ಭೂಲೋಕದಲ್ಲಿ ಅವತರಿಸಿ ಮಾಡಿದ ಪರಮೋಪಕಾರಗಳು ಮುಖ್ಯವಾಗಿ ಎರಡು (1) ಸಾತ್ವಿಕರಾದ ಭಕ್ತರಿಗೆ ವಿಷ್ಣುದೀಕ್ಷೆಯನ್ನು ಅನುಗ್ರಹಿಸಿದ್ದು (2) ಸಚ್ಛಾಸ್ತ್ರಗಳನ್ನು ರಚಿಸಿ ಅದನ್ನು ಉಪದೇಶಿಸಿದ್ದು. ಇಲ್ಲಿ ಸುದರ್ಶನದ್ವಯ ಎಂಬ ಶಬ್ದಕ್ಕೆ ಸುದರ್ಶನ ಚಕ್ರ, ಸುದರ್ಶನ ಅಂದರೆ ಉತ್ತಮ ದರ್ಶನ (ಶಾಸ್ತ್ರ) ಎಂದು ಎರಡು ಅರ್ಥಗಳು. ಶ್ರೀಮತ್ ಸುಮಧ್ವವಿಜಯ ಭಾವ-

ಪ್ರಕಾಶಿಕೆಯಲ್ಲಿ ಶ್ರೀನಾರಾಯಣ ಪಂಡಿತಾಚಾರ್ಯರೇ ಈ ಅರ್ಥವನ್ನು ಸ್ಪಷ್ಟಪಡಿಸಿರುತ್ತಾರೆ. 'ಸುದರ್ಶನಂ ಸಚ್ಛಾಸ್ತ್ರಂ ಚಕ್ರಂ ಚ' ಎಂದು.

**ವ್ಯಾಕರಣವಿಶೇಷ—** ದಾರುಣಾಘಗಣದಾರಣಂ ಎಂಬಲ್ಲಿ ದಾರಯತೀತಿ ದಾರಣಂ, 'ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ' (3-1-134) ಎಂಬ ಸೂತ್ರದಿಂದ ಕರ್ತರಿ 'ಲ್ಯು' ಪ್ರತ್ಯಯ ಸುದರ್ಶನ ಎಂಬ ಶಬ್ದಕ್ಕೆ 'ಭಾಷಾಯಾಂ ಶಾಸಿಯುಧಿ ದೃಶಿಧೃಷಿಮೃಷಿಭ್ಯೋ ಯಚ್ ವಾಚ್ಯಃ' (ವಾರ್ತಿಕ 2243) ಎಂಬ ವಾರ್ತಿಕದಿಂದ ಯಚ್, ಸುದರ್ಶನ ಶಬ್ದವು ಪುಲ್ಲಿಂಗದಲ್ಲಿಯೂ ಇದೆ. ಗ್ರಾಹಯತಿ ಸ್ಮ ಎಂಬಲ್ಲಿ 'ಲಿಟ್ ಸ್ಮೇ' (3-2-118) ಎಂಬ ಸೂತ್ರದಿಂದ ಅತೀತಾರ್ಥಕ 'ಸ್ಮ' ಶಬ್ದಯೋಗವಿದ್ದಾಗ ಭೂತಕಾಲಾರ್ಥದಲ್ಲಿ ಲಿಟ್‌ಗೆ ಅಪವಾದವಾಗಿ 'ಲಟ್' 'ಸ್ಮಾತೀತೆ' ಎಂದು ಕೋಶಾನುಸಾರ 'ಸ್ಮ' ಎಂದರೆ ಕಳೆದುಹೋದುದು.

★ ★ ★

**ಅವತಾರಿಕಾ—** ಮೋಕ್ಷ ಯೋಗ್ಯರಾದ ಜನರಿಗೆ ಕಲಿಪ್ರಭಾವದಿಂದ ಸಚ್ಛಾಸ್ತ್ರಾಭ್ಯಾಸದಲ್ಲಿ ವಿಶ್ವಾಸವು ಕಡಿಮೆಯಾಗ-ಬಾರದೆಂದು ಅವರ ಮೋಕ್ಷ ಸಿದ್ಧಿಗಾಗಿ ವಿಘ್ನ ಪರಿಹಾರಕ್ಕಾಗಿ ಉಡುಪಿಯಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠಿಸಿದರೆನ್ನುತ್ತಾರೆ.

**ನನ್ವನನ್ಯಶರಣಾತ್ಮನಾಂ ಸತಾಂ**
**ಸಿದ್ಧಿವಿಘ್ನಮುಖದೋಷಭೇಷಜಮ್ ।**
**ಐಚ್ಛದಚ್ಛಲದಯೋದಯಾದಯಂ**
**ರೂಪ್ಯಪೀಠಪುರಗಃ ಕದಾಚನ ॥ 40 ॥**

**ಪದಚ್ಛೇದ—** ನನು, ಅನನ್ಯಶರಣಾತ್ಮನಾಂ, ಸತಾಂ, ಸಿದ್ಧಿವಿಘ್ನಮುಖದೋಷಭೇಷಜಂ, ಐಚ್ಛತ್, ಅಚ್ಛಲದಯೋ-ದಯಾತ್, ಅಯಂ, ರೂಪ್ಯಪೀಠಪುರಗಃ, ಕದಾಚನ ।

**ಅನ್ವಯ—** ಅಯಂ, ಕದಾಚನ, ರೂಪ್ಯಪೀಠಪುರಗಃ, ಸನ್, ಅಚ್ಛಲದಯೋದಯಾತ್, ಅನನ್ಯಶರಣಾತ್ಮನಾಂ, ಸತಾಂ, ಸಿದ್ಧಿವಿಘ್ನಮುಖದೋಷಭೇಷಜಂ, ಐಚ್ಛತ್ ।

**ಅನ್ವಯಾರ್ಥ—**

**ಅಯಂ** = ಈ ಶ್ರೀಮಧ್ವಾಚಾರ್ಯರು,

**ಕದಾಚನ** = ಒಂದಾನೊಂದು ದಿನ,

**ರೂಪ್ಯಪೀಠಪುರಗಃ** = ಉಡುಪಿಯಲ್ಲಿದ್ದವರಾಗಿ,

**ಅಚ್ಛಲದಯೋದಯಾತ್** = ಕಪಟವಿಲ್ಲದ, ಕರುಣೆಯ, ಉಂಟಾಗುವಿಕೆಯಿಂದ,

**ಅನನ್ಯ ಶರಣಾತ್ಮನಾಂ** = ಬೇರೆ ರಕ್ಷಕರಿಲ್ಲದ, ಮನಸ್ಸುಳ್ಳ,

**ಸತಾಂ** = ಸಜ್ಜನರ (ಬೇರೆ ರಕ್ಷಕರಾದ ಜೀವರಿಲ್ಲದಿರುವ ಸಜ್ಜನರ)

**ಸಿದ್ಧಿ ವಿಘ್ನಮುಖದೋಷಭೇಷಜಂ** = ಮೋಕ್ಷಪ್ರಾಪ್ತಿಗೆ, ಅಡ್ಡಿಯೇ, ಮುಖ್ಯವಾಗಿ ಉಳ್ಳ (ಮೊದಲಾಗಿ ಉಳ್ಳ) ದೋಷಗಳಿಗೆ, ಔಷಧವನ್ನು,

**ಐಚ್ಛತ್** = ಅಪೇಕ್ಷಿಸಿದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಉಡುಪಿಯಲ್ಲಿದ್ದಾಗ ಒಂದಾನೊಂದು ದಿನ ಅವರಿಗೆ ಆಲೋಚನೆ ಯುಂಟಾಯಿತು. 'ತಮ್ಮನ್ನು ಹೊರತು ಬೇರೆ ರಕ್ಷಕರಾದ ಜೀವರೇ ಇಲ್ಲದಿರುವ, ಬೇರೆಲ್ಲರನ್ನು ಬಿಟ್ಟು ಮನಸ್ಸನ್ನಿಟ್ಟಿರುವ

ಸಜ್ಜನರನ್ನು ಉದ್ಧರಿಸಬೇಕೆಂದೂ' ಅವರು ತಮ್ಮಲ್ಲಿಯೇ ಆಲೋಚಿಸಿದರು. ಸಜ್ಜನರಲ್ಲಿ ಅವರಿಗೆ ನಿರ್ವ್ಯಾಜವಾದ ಸ್ವಾಭಾವಿಕ ವಾದ ಕರುಣೆಯುಂಟಾಯಿತು. ಮುಕ್ತಿಗೆ ಪ್ರತಿಬಂಧಕವಾದ, ಅವಿದ್ಯಾ, ಕಾಮ, ಕರ್ಮ ಇತರ ವಿಘ್ನಗಳಿಂದಾಗಿ ಸಾತ್ವಿಕ ಜೀವರೂ ಶಾಸ್ತ್ರವಿಮುಖರಾಗುತ್ತಿದ್ದಾರೆ. ಆಚಾರ್ಯರು ಅವರಲ್ಲಿ ದಯೆತೋರಿದರು. ಅವರ ಪ್ರತಿಬಂಧಕ ನಿವೃತ್ತಿಗಾಗಿ, ಅವರಿಗೆ ಮೋಕ್ಷ ಮಾರ್ಗದ ಪ್ರಾಪ್ತಿಗಾಗಿ, ಶ್ರೀಕೃಷ್ಣ ಪ್ರತಿಷ್ಠೆಯನ್ನು ಮಾಡಬೇಕು ಎಂದು ಆಚಾರ್ಯರು ಅಪೇಕ್ಷಿಸಿದರು. ಇದರಿಂದ ಸಾತ್ವಿಕರಾದ ಮುಕ್ತಿಯೋಗ್ಯಜೀವರು ಉಡುಪಿಯ ಶ್ರೀಕೃಷ್ಣನ ಪ್ರತಿಮೆಯನ್ನು ಭಕ್ತಿಪೂರ್ವಕವಾಗಿ ದರ್ಶನ ಮಾಡಬೇಕು. ಸಚ್ಛಾಸ್ತ್ರ ಶ್ರವಣದಿಂದ ವಿಘ್ನ ನಿವೃತ್ತಿಯಾಗಿ ಬೇಗನೇ ಮೋಕ್ಷ ಸಾಧನಗಳ ಪ್ರಾಪ್ತಿಯಾಗುತ್ತದೆ ಎಂದು ತಿಳಿದು ಬರುತ್ತದೆ.

ವಿಗ್ರಹ—

**ಅನನ್ಯಶರಣಾತ್ಮನಾಂ**— ಅನ್ಯಚ್ಚ ತತ್ ಶರಣಂ ಚ ಅನ್ಯಶರಣಂ, ನ ವಿದ್ಯತೇ ಅನ್ಯಶರಣಂ ಯಸ್ಯ ಸಃ ಅನನ್ಯಶರಣಃ, ಅನನ್ಯಶರಣಃ ಆತ್ಮಾ ಯೇಷಾಂ ತೇ ಅನನ್ಯಶರಣಾತ್ಮಾನಃ ತೇಷಾಂ ನ ವಿದ್ಯತೇ ಅನ್ಯಶರಣಂ ಯೇಷಾಂ ತೇ ಅನನ್ಯಶರಣಾಃ, ಅನನ್ಯಶರಣಾಃ, (ವಯಂ) ಇತಿ ಆತ್ಮಾ (ಮನಃ) ಯೇಷಾಂ ತೇ ಅನನ್ಯಶರಣಾತ್ಮಾನಃ, ತೇಷಾಂ ಇತಿ ವಾ ।

**ಸಿದ್ಧಿವಿಘ್ನಮುಖದೋಷಭೇಷಜಂ**— ಸಿದ್ಧೇಃ ವಿಘ್ನಃ ಸಿದ್ಧಿವಿಘ್ನಃ, ಸಿದ್ಧಿವಿಘ್ನಃ ಮುಖಂ ಯೇಷಾಂ ತೇ ಸಿದ್ಧಿವಿಘ್ನಮುಖಾಃ, ಸಿದ್ಧಿವಿಘ್ನಮುಖಾಶ್ಚ ತೇ ದೋಷಾಶ್ಚ ಸಿದ್ಧಿವಿಘ್ನಮುಖದೋಷಾಃ, ಸಿದ್ಧಿವಿಘ್ನ-ಮುಖದೋಷಾಣಾಂ ಭೇಷಜಂ ಸಿದ್ಧಿವಿಘ್ನಮುಖದೋಷಭೇಷಜಂ, ತತ್ ।

**ಅಚ್ಛಲದಯೋದಯಾದಯಂ**— ನ ವಿದ್ಯತೇ ಛಲಂ ಯಸ್ಯಾಃ ಸಾ ಅಚ್ಛಲಾ, ಅಚ್ಛಲಾ ಚ ಸಾ ದಯಾ ಚ ಅಚ್ಛಲದಯಾ, ಅಚ್ಛಲದಯಾಯಾಃ ಉದಯಃ ಅಚ್ಛಲದಯೋದಯಃ ತಸ್ಮಾತ್ ।

**ರೂಪ್ಯಪೀಠಪುರಗಃ**— ರೂಪ್ಯಪೀಠಪುರಂ ಗಚ್ಛತೀತಿ ರೂಪ್ಯಪೀಠಪುರಗಃ ।

**ಕ್ರಿಯಾಪದ**— ಐಚ್ಛತ್- ಇಷು ಇಚ್ಛಾಯಾಂ ಇತಿ ಇಚ್ಛಾರ್ಥಕಾತ್ ಇಷ್ ಧಾತೋಃ ತೌದಾದಿಕಾತ್ ಸಕರ್ಮಕಾತ್ ಕರ್ತರಿ, ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ 'ಐಚ್ಛತ್' ಇತಿರೂಪಂ ।

ಐಚ್ಛತ್ ಐಚ್ಛತಾಂ ಐಚ್ಛನ್, ಐಚ್ಛಃ ಐಚ್ಛತಂ ಐಚ್ಛತ, ಐಚ್ಛಂ ಐಚ್ಛಾವ ಐಚ್ಛಾಮ ।

**ಪ್ರಯೋಗ**— ಅಯಂ ಸತಾಂ ಸಿದ್ಧಿವಿಘ್ನಮುಖದೋಷಭೇಷಜಂ ಐಚ್ಛತ್ (ಕರ್ತರಿ) ।
ಅನೇನ ಸತಾಂ ಸಿದ್ಧಿಭೇಷಜಂ ಐಷ್ಯತ (ಕರ್ಮಣಿ) ।

**ಕೋಶ**— 'ಶರಣಂ ಗೃಹರಕ್ಷಿತ್ರೋಃ' 'ವಿಘ್ನೋಽಂತರಾಯಃ ಪ್ರತ್ಯೂಹಃ' 'ಭೇಷಜೌಷಧಭೈಷಜ್ಯಾನ್ಯಗ ದೋಜಾ-ಯುರಿತ್ಯಪಿ' ಇತ್ಯಮರಃ ।

★ ★ ★

**ಅವತಾರಿಕಾ**— ಈ ರೀತಿ ಆಲೋಚಿಸಿದ ತರುವಾಯ ಶ್ರೀಕೃಷ್ಣನ ಪ್ರತಿಮೆಯನ್ನು ತಂದುದನ್ನು ವರ್ಣಿಸುತ್ತಾರೆ.

**ಗೋಪಿಕಾಪ್ರಣಯಿನಃ ಶ್ರಿಯಃಪತೇ-**
**ರಾಕೃತಿಂ ದಶಮತಿಃ ಶಿಲಾಮಯೀಮ್ ।**
**ಶಿಷ್ಯಕೈಸ್ತ್ರಿಚತುರೈರ್ಜಲಾಶಯೇ**
**ಶೋಧಯನ್ನಿಹ ತತೋ ವ್ಯಗಾಹಯತ್ ॥ 41 ॥**

**ಪದಚ್ಛೇದ—** ಗೋಪಿಕಾಪ್ರಣಯಿನಃ, ಶ್ರಿಯಃಪತೇಃ, ಆಕೃತಿಂ, ದಶಮತಿಃ, ಶಿಲಾಮಯೀಂ, ಶಿಷ್ಯಕೈಃ, ತ್ರಿಚತುರೈಃ, ಜಲಾಶಯೇ, ಶೋಧಯನ್, ಇಹ, ತತಃ, ವ್ಯಗಾಹಯತ್ ।

**ಅನ್ವಯ—** ಗೋಪಿಕಾಪ್ರಣಯಿನಃ, ಶ್ರಿಯಃಪತೇಃ, ಆಕೃತಿಂ, ದಶಮತಿಃ, ಶಿಲಾಮಯೀಂ, ಶಿಷ್ಯಕೈಃ, ತ್ರಿಚತುರೈಃ, ಜಲಾಶಯೇ, ಶೋಧಯನ್, ಇಹ, ತತಃ, ವ್ಯಗಾಹಯತ್ ।

**ಅನ್ವಯಾರ್ಥ—**

**ದಶಮತಿಃ** = ಶ್ರೀ ಪೂರ್ಣಪ್ರಜ್ಞರು,

**ಗೋಪಿಕಾಪ್ರಣಯಿನಃ** = ಗೋಪಿಕಾಸ್ತ್ರೀಯರ ಪ್ರೀತಿಗೆ ಪಾತ್ರನಾದ

**ಶ್ರಿಯಃಪತೇಃ** = ಲಕ್ಷ್ಮಿಸ್ವರೂಪಳಾದ ರುಕ್ಮಿಣಿಯ ಪತಿಯಾದ ಶ್ರೀಕೃಷ್ಣನ,

**ಶಿಲಾಮಯೀಂ** = ಕಲ್ಲಿನಿಂದ ಮಾಡಿದ,

**ಆಕೃತಿಂ** = ಪ್ರತಿಮೆಯನ್ನು,

**ಜಲಾಶಯೇ** = ಕೆರೆಯಲ್ಲಿ,

**ತ್ರಿಚತುರೈಃ** = ಮೂರು ಅಥವಾ ನಾಲ್ಕು ಮಂದಿ,

**ಶಿಷ್ಯಕೈಃ** = ಶಿಷ್ಯರಿಂದ

**ಶೋಧಯನ್** = ತೊಳೆಯಿಸುತ್ತ,

**ತತಃ** = ಬಳಿಕ,

**ಇಹ** = ಈ ಕೆರೆಯಲ್ಲಿ,

**ವ್ಯಗಾಹಯತ್** = ಮುಳುಗಿಸಿಟ್ಟರು. (ಜಲಾಧಿವಾಸ ಮಾಡಿಸಿದರು)

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞರು ತಾವು ಸಂಕಲ್ಪಿಸಿದಂತೆ ಗೋಪಿಕಾಸ್ತ್ರೀಯರಿಗೆ ವಲ್ಲಭನಾದ ರುಕ್ಮಿಣೀ ಪತಿಯಾದ ಶ್ರೀಕೃಷ್ಣನ ಶಿಲಾಪ್ರತಿಮೆಯನ್ನು ಅಲ್ಲಿದ್ದ ಅನಂತ ಸರೋವರದಲ್ಲಿ (ಮಧ್ವ ಸರೋವರದಲ್ಲಿ) ಮೂರು ಅಥವಾ ನಾಲ್ಕು ಮಂದಿ ಶಿಷ್ಯರಿಂದ ತೊಳೆಯಿಸಿದರು. ಅನಂತರ ಅದೇ ಸರೋವರದಲ್ಲಿ ಪ್ರತಿಮೆಯನ್ನು ಜಲಾಧಿವಾಸ ಮಾಡಿಸಿದರು. ಆ ವಿಷಯದಲ್ಲಿ ಪ್ರಾಚೀನರು ಒಂದು ಕಥೆಯನ್ನು ಹೇಳುತ್ತಾರೆ. ''ತ್ರಿಕಾಲಜ್ಞಾನಿಗಳಾದ ಶ್ರೀಮಧ್ವಾಚಾರ್ಯರು ಶ್ರೀಕೃಷ್ಣ ಪ್ರತಿಮೆಯನ್ನು ಉಡುಪಿಯಲ್ಲಿ ಪ್ರತಿಷ್ಠಿಸಬೇಕೆಂದು ಸಂಕಲ್ಪಿಸಿದರು. ಹಾಗೆಯೇ ಅವರು ಒಂದುದಿನ ಪ್ರಾತಃಕಾಲ ಸಮೀಪದಲ್ಲಿರುವ ಪಶ್ಚಿಮ ಸಮುದ್ರದಲ್ಲಿ ಸ್ನಾನಮಾಡಿ ಸಮುದ್ರ ದಡದಲ್ಲಿ ಜಪ-ಧ್ಯಾನಾದಿಗಳನ್ನು ಮಾಡುತ್ತಾ ಕುಳಿತಿದ್ದರು. ಆಗ ದ್ವೀಪಾಂತರದಿಂದ ಒಂದು ಹಡಗು ಅಲ್ಲಿಗೆ ಬರುತ್ತಾ ಮಧ್ಯದಲ್ಲಿ ಸುಂಟರಗಾಳಿಗೆ ಸಿಕ್ಕಿ ತೊಂದರೆಯಿಂದಾಗಿ ದಡವನ್ನು ಸೇರಲಾರದೆ ಮುಂದಕ್ಕೆ ಹೋಗಲಾರದೆ ಅಲ್ಲಿಯೇ ನಿಂತಿತು. ಆಗ ಹಡಗಿನ ನಾವಿಕರೇ ಮೊದಲಾದವರು ಅಲ್ಲಿ ಕುಳಿತಿರುವ ಶ್ರೀಮಧ್ವಾಚಾರ್ಯರನ್ನು ಸಹಾಯ ಮಾಡಬೇಕೆಂದು ಪ್ರಾರ್ಥಿಸಿದರು. ಆಗ ಶ್ರೀಮಧ್ವಾಚಾರ್ಯರು ತಮ್ಮ ಕಾವಿಯ ವಸ್ತ್ರವನ್ನು ಬೀಸಿ ಅದರ ಗಾಳಿಯಿಂದ ಹಡಗನ್ನು ದಡಕ್ಕೆ ಬರುವಂತೆ ಮಾಡಿದರು. ಆಗ ಹಡಗಿನವರು ಬಹಳ ಸಂತೋಷಪಟ್ಟು 'ಯತಿಗಳೇ, ಈ ಹಡಗಿನಲ್ಲಿರುವ ವಸ್ತುಗಳಲ್ಲಿ ತಮಗೆ ಬೇಕಾದುದನ್ನು ತೆಗೆದುಕೊಳ್ಳಬಹುದು' ಎಂದರು. ಆಚಾರ್ಯರು ಹಡಗಿನಲ್ಲಿರುವ ಗೋಪೀ ಚಂದನದ ದೊಡ್ಡ ಉಂಡೆಯನ್ನು ತೆಗೆದುಕೊಂಡರು. ಅದನ್ನು ಉಡುಪಿಗೆ ತೆಗೆದುಕೊಂಡು ಬಂದು ಅದರೊಳಗಿರುವ ಶ್ರೀಕೃಷ್ಣನ ಪ್ರತಿಮೆಯನ್ನು ಅಲ್ಲಿರುವ ಸರೋವರದಲ್ಲಿ ಮೂರು ನಾಲ್ಕು ಮಂದಿ ಶಿಷ್ಯರಿಂದ ಉದ್ವರ್ತನ ಮಾಡಿಸಿ

(ತೊಳೆಯಿಸಿ) ಅನಂತರ ಅದನ್ನು ನೀರಿನೊಳಗೆ ಮುಳುಗಿಸಿಟ್ಟರು. ಇದೇ ಪ್ರತಿಮೆಯ ಜಲಾಧಿವಾಸವು. ಆಚಾರ್ಯರು ಪ್ರತಿಮೆಯನ್ನು ತೊಳೆಯಿಸಿದ ಸರೋವರವೇ ಶ್ರೀಮಧ್ವ ಸರೋವರವು''.

ವಿಗ್ರಹ—

**ಗೋಪಿಕಾಪ್ರಣಯಿನಃ—** ಪ್ರಣಯಃ ಅಸ್ಯ ಅಸ್ತೀತಿ ಪ್ರಣಯೀ, ಗೋಪಿಕಾನಾಂ ಪ್ರಣಯೀ ತಸ್ಯ ।

**ಶ್ರಿಯಃಪತೇಃ—** ಶ್ರಿಯಃ ಪತಿಃ, ಶ್ರಿಯಃ ಪತಿಃ ತಸ್ಯ (ಅಲುಕ್ ಸಮಾಸ) ।

**ದಶಮತಿಃ—** ದಶ (ಪೂರ್ಣಾ) ಮತಿಃ ಯಸ್ಯಸಃ ದಶಮತಿಃ ।

**ಶಿಷ್ಯಕೈಃ—** ಶಿಷ್ಯಾ ಏವ ಶಿಷ್ಯಕಾಃ ತೈಃ ।

**ತ್ರಿಚತುರೈಃ—** ತ್ರಯೋ ವಾ ಚತ್ವಾರೋ ವಾ ತ್ರಿಚತುರಾಃ ತೈಃ ।

**ಜಲಾಶಯೇ—** ಜಲಸ್ಯ ಆಶಯಃ ಜಲಾಶಯಃ ತಸ್ಮಿನ್ ।

**ಕ್ರಿಯಾಪದ— ವ್ಯಗಾಹಯತ್-** ವಿ ಇತ್ಯುಪಸರ್ಗಪೂರ್ವಕಾತ್ ಗಾಹೂ ವಿಲೋಡನೇ ಇತಿ ವಿಲೋಡನಾರ್ಥಕಾತ್ ಗಾಹ್ ಧಾತೋಃ ಣಿಜಂತಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮ ಪುರುಷೇ ಏಕವಚನೇ ವ್ಯಗಾಹಯತ್ ಇತಿರೂಪಂ ।

ವಿ+ಅಗಾಹಯತ್ ಅಗಾಹಯತಾಂ ಅಗಾಹಯನ್, ಅಗಾಹಯಃ ಅಗಾಹಯತಂ ಅಗಾಹಯತ,
ಅಗಾಹಯಂ ಅಗಾಹಯಾವ ಅಗಾಹಯಾಮ ।

**ಪ್ರಯೋಗ—** ಶಿಲಾಮಯಿಾ ಆಕೃತಿಃ ದಶಮತೇಃ (ದೆಸೆಯಿಂದ) ಜಲಾಶಯೇ ವ್ಯಗಾಹತ (ಅಣಿಜಂತ)
ದಶಮತಿಃ ಶಿಲಾಮಯಿಾಂ ಆಕೃತಿಂ ಜಲಾಶಯೇ ವ್ಯಗಾಹಯತ್ ಣಿಜಂತ್ (ಕರ್ತರಿ) ।
ದಶಮತಿನಾ ಶಿಲಾಮಯಿಾ ಆಕೃತಿಃ ಜಲಾಶಯೇ ವ್ಯಗಾಹ್ಯತ (ಕರ್ಮಣಿ) ।

**ವಿಶೇಷಾಂಶ—** 'ಗೋಪಿಕಾ ಪ್ರಣಯಿನಃ' ಎಂಬ ವಿಶೇಷಣದಿಂದ ಆ ಪ್ರತಿಮೆಯು ದ್ವಾರಕೆಯಲ್ಲಿ ಗೋಪೀ ಸರೋವರದಲ್ಲಿ ಇತ್ತೆಂದೂ ಗೋಪಿಕಾಸ್ತ್ರೀಯರಿಂದಲೂ ಪೂಜೆಗೊಳ್ಳುತ್ತಿತ್ತೆಂದೂ ಸೂಚಿತವಾಗುತ್ತದೆ. (ರುಕ್ಮಿಣೀದೇವಿಯ ಪೂಜೆಗಾಗಿ ಶ್ರೀಕೃಷ್ಣನು ವಿಶ್ವಕರ್ಮನಿಂದ ಮಾಡಿಸಿದ ಪ್ರತಿಮೆಯು ಕಾಲಾಂತರದಲ್ಲಿ ಗೋಪೀ ಸರೋವರದಲ್ಲಿ ಗೋಪಿ ಚಂದನಗಡ್ಡೆಯಲ್ಲಿ ಸೇರಿಕೊಂಡಿತ್ತು. ನಾವಿಕರು ಹಡಗಿನ ಭಾರಕ್ಕಾಗಿ ಗಡ್ಡೆಯನ್ನು ಹಡಗಿನಲ್ಲಿ ಹಾಕಿದ್ದರು).

**ವ್ಯಾಕರಣವಿಶೇಷ—** 'ಶ್ರಿಯಃ ಪತೇಃ' ಎಂಬಲ್ಲಿ ಶ್ರಿಯಃ ಪತಿಃ ಎಂದು ವಿಗ್ರಹ ಶ್ರಿಯಃ ಪತಿಃ ಎಂದೇ ಸಮಾಸ. ಇಲ್ಲಿ ಷಷ್ಠಿಗೆ ಅಲುಕ್ ಸಮಾಸ ಬಂದಿದೆ. ಇದು ಸಮಾಸವಾಗಿದ್ದುದರಿಂದಲೇ ಸಮಾಸದಲ್ಲಿ 'ಘಿ' ಸಂಜ್ಞೆಯು ಬಂದು ಷಷ್ಠೀ ವಿಭಕ್ತಿಯಲ್ಲಿ ಹರೇ ಎಂಬಂತೆ 'ಶ್ರಿಯಃಪತೇಃ' ಎಂದಾಗಿದೆ. ಸಮಾಸ ಬಾರದೆ ಇದ್ದರೆ 'ಶ್ರಿಯಃಪತ್ಯೇ' ಎಂದಾಗಬೇಕಿತ್ತು. ಅಥವಾ ಆರ್ಷ ಪ್ರಯೋಗವಾದುದರಿಂದ 'ಪತಿಃ ಸಮಾಸ ಏವ' ಎಂಬ ನಿಯಮ ಇಲ್ಲಿ ಬಾರದ್ದರಿಂದ ಸೀತಾಯಾಃ ಪತಯೇ ನಮಃ 'ಆಥೋ ಅಹಲ್ಯಾಂ ಪತಿನಾಭಿಶಪ್ತಾಂ' ಇತ್ಯಾದಿಗಳಂತೆ 'ಘಿ' ಸಂಜ್ಞೆ ಬಂದು ಹರೇಃ ಎಂಬಂತೆ ಶ್ರಿಯಃ ಪತೇಃ ಎಂದು ರೂಪವಾಗಿದೆ ಎಂದು ತಿಳಿಯಬೇಕು. ತ್ರಿಚತುರೈಃ ಎಂಬಲ್ಲಿ ಸಂಖ್ಯಯಾ ಅವ್ಯಯ. 'ಆಸನ್ನ ಅದೂರಾಧಿಕಸಂಖ್ಯಾ ಸಂಖ್ಯೇಯೇ' (2-2-25) ಎಂಬ ಸೂತ್ರದಿಂದ ಸಂಖ್ಯೋಭಯಪದ ಬಹುವ್ರೀಹಿ ಸಮಾಸ ಬಂದಿದೆ.

**ಕೋಶ—** 'ಜಲಾಶಯೋ ಜಲಾಧಾರಃ' ಎಂದು ಅಮರ ।

★ ★ ★

**ಅವತಾರಿಕಾ**— ಆ ಪ್ರತಿಮೆಯು ಮೊದಲೇ ಸಾಲಿಗ್ರಾಮ ಶಿಲಾಮಯವಾದುದು. ಶ್ರೀಕೃಷ್ಣಾಜ್ಞೆಯಿಂದ ವಿಶ್ವಕರ್ಮನಿಂದ ನಿರ್ಮಿತವಾದುದು. ಸ್ವಯಂವ್ಯಕ್ತ ಭಗವತ್ಸನ್ನಿಧಾನವುಳ್ಳದ್ದು. ಲಕ್ಷ್ಮಿರೂಪಳಾದ ಶ್ರೀರುಕ್ಮಿಣಿಯಾಕಾರ-ವುಳ್ಳದ್ದು. ಈಗಂತೂ ಶ್ರೀ ಮಧ್ವಾಚಾರ್ಯರ ಪವಿತ್ರವಾದ ಕರಸ್ಪರ್ಶದಿಂದ ಮತ್ತಷ್ಟು ಶ್ರೀಕೃಷ್ಣನ ಸನ್ನಿಧಾನವು ಹೆಚ್ಚಾಗಿ ಮೂವತ್ತು ಜನರಿಗೂ ಎತ್ತಲೂ ಅಸಾಧ್ಯವಾಯಿತೆಂದು ಹೇಳುತ್ತಾರೆ.

**ಸ್ಪರ್ಶನಾದ್ಭಗವತೋಽತಿಪಾವನಾತ್**
**ಸನ್ನಿಧಾನಪದತಾಂ ಗತಾಂ ಹರೇಃ ।**
**ತ್ರಿಂಶದುದ್ಯತನರೈಃ ಸುದುರ್ಧರಾಂ**
**ಲೀಲಯಾಽನಯದಿಮಾಮಸೌ ಮಠಮ್ ॥ 42 ॥**

**ಪದಚ್ಛೇದ**— ಸ್ಪರ್ಶನಾತ್, ಭಗವತಃ, ಅತಿಪಾವನಾತ್, ಸನ್ನಿಧಾನಪದತಾಂ, ಗತಾಂ, ಹರೇಃ, ತ್ರಿಂಶದುದ್ಯತನರೈಃ, ಸುದುರ್ಧರಾಂ, ಲೀಲಯಾ, ಅನಯತ್, ಇಮಾಂ, ಅಸೌ, ಮಠಂ ।

**ಅನ್ವಯ**— ಅಸೌ, ಅತಿಪಾವನಾತ್, (ಭಗವತಃ) ಸ್ಪರ್ಶನಾತ್, ಭಗವತಃ, ಹರೇಃ, ಸನ್ನಿಧಾನಪದತಾಂ, ಗತಾಂ, ತ್ರಿಂಶದುದ್ಯತನರೈಃ, ಸುದುರ್ಧರಾಂ, ಇಮಾಂ, ಲೀಲಯಾ, ಮಠಂ, ಅನಯತ್ ।

**ಅನ್ವಯಾರ್ಥ**—

**ಅಸೌ** = ಈ ಶ್ರೀ ಮಧ್ವಾಚಾರ್ಯರು,
**ಅತಿಪಾವನಾತ್**= ಅತ್ಯಂತ ಪವಿತ್ರವಾದ, (ಭಗವತಃ = ಷಡ್ಗುಣೈಶ್ವರ್ಯಸಂಪನ್ನನಾದ, ಮಹಾತ್ಮ್ಯಪೂರ್ಣನಾದ ತನ್ನ )
**ಸ್ಪರ್ಶನಾತ್** = ಮುಟ್ಟುವಿಕೆಯಿಂದ,
**ಭಗವತಃ** = ಷಡ್ಗುಣೈಶರ್ಯಸಂಪನ್ನನಾದ, (ಪೂಜ್ಯನಾದ)
**ಹರೇಃ** = ಶ್ರೀಕೃಷ್ಣನ,
**ಸನ್ನಿಧಾನಪದತಾಂ** = ಸಾನ್ನಿಧ್ಯದ ಇರುವಿಕೆಯನ್ನು (ವಿಷಯತ್ವವನ್ನು)
**ಗತಾಂ** = ಹೊಂದಿರುವ,
**ತ್ರಿಂಶದುದ್ಯತನರೈಃ** = ಮೂವತ್ತು ಮಂದಿ ಪ್ರತಿಮೆಯನ್ನು ಎತ್ತಲು ಪ್ರಯತ್ನಿಸಿದ ಮನುಷ್ಯರಿಂದ,
**ಸುದುರ್ಧರಾಂ** = ಯಾವ ರೀತಿಯಿಂದಲೂ ಎತ್ತಲು ಅಸಾಧ್ಯವಾದ,
**ಇಮಾಂ** = ಈ ಪ್ರತಿಮೆಯನ್ನು,
**ಲೀಲಯಾ** = ಅನಾಯಾಸದಿಂದ,
**ಮಠಂ** = ತಮ್ಮ ವಾಸಸ್ಥಾನಕ್ಕೆ,
**ಅನಯತ್** = ಒಯ್ದರು.

**ತಾತ್ಪರ್ಯ**— ಅನಂತರ ಷಡ್ಗುಣೈಶ್ವರ್ಯಸಂಪನ್ನರಾದ ಪೂಜ್ಯರಾದ ಶ್ರೀಮಧ್ವಾಚಾರ್ಯರು ಪ್ರತಿಮೆಯನ್ನು ಶ್ರೀಮಧ್ವ ಸರೋವರದಿಂದ ಮೇಲಕ್ಕೆ ತೆಗೆಸಿದರು. ತಮ್ಮ ಹಸ್ತದಿಂದ ಆ ಪ್ರತಿಮೆಯನ್ನು ಸ್ಪರ್ಶಿಸಿದರು. ಪ್ರತಿಮೆಯು ಮಹಾಮಾಹಾತ್ಮ್ಯ ಸಂಪನ್ನನಾದ ಪರಮಾತ್ಮನ ಸನ್ನಿಧಾನಕ್ಕೆ ಪಾತ್ರವಾಯಿತು. ಆಗ ಆ ಪ್ರತಿಮೆಯನ್ನು ಎತ್ತಲು

ಆಚಾರ್ಯರು ಮೂವತ್ತು ಮಂದಿ ಶಿಷ್ಯರಿಗೆ ಅಪ್ಪಣೆ ಮಾಡಿದರು. ಆದರೆ ಅವರಿಗೂ ಅದನ್ನು ಎತ್ತಲು ಸಾಧ್ಯವಾಗಲಿಲ್ಲ. ಆಗ ಆಚಾರ್ಯರು ತಾವೊಬ್ಬರೇ ಆ ಪ್ರತಿಮೆಯನ್ನು ತಮ್ಮ ಆವಾಸಸ್ಥಾನವಾದ ಮಠಕ್ಕೆ ಎತ್ತಿಕೊಂಡು ಹೋದರು.

ವಿಗ್ರಹ—

**ಭಗವತಃ**— ಭಗಃ ಅಸ್ಯ ಅಸ್ತೀತಿ ಭಗವಾನ್, ತಸ್ಯ ।

**ಅತಿಪಾವನಾತ್**— ಅತ್ಯಂತಂ ಪಾವನಂ ತಸ್ಮಾತ್ ।

**ಸನ್ನಿಧಾನಪದತಾಂ**— ಪದಸ್ಯ ಭಾವಃ ಪದತಾ, ಸನ್ನಿಧಾನಸ್ಯ ಪದತಾ ಸನ್ನಿಧಾನಪದತಾ, ತಾಂ ।

**ತ್ರಿಂಶದುದ್ಯತನರೈಃ**— ಉದ್ಯತಾಶ್ಚ ತೇ ನರಾಶ್ಚ, ಉದ್ಯತನರಾಃ, ತ್ರಿಂಶಚ್ಚ ತೇ ಉದ್ಯತನರಾಶ್ಚ ತ್ರಿಂಶದುದ್ಯತ-ನರಾಃ, ತೈಃ ।

**ಸುದುರ್ಧರಾಂ**— ಸುಷ್ಠು ದುಃಖೇನ ಉದ್ಧರ್ತುಂ ಶಕ್ಯಾ ಸುದುರ್ಧರಾ, ತಾಂ ।

**ಕ್ರಿಯಾಪದ— ಅನಯತ್**- ಣೀಞ ಪ್ರಾಪಣೇ, ಇತಿ ಪ್ರಾಪಣಾರ್ಥಕಾತ್ 'ನೀ' ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅನಯತ್ ಇತಿರೂಪಂ ।

ಅನಯತ್ ಅನಯಾತಾಂ ಅನಯನ್, ಅನಯಃ ಅನಯತಂ ಅನಯತ, ಅನಯಂ ಅನಯಾವ ಅನಯಾಮ ।

**ಪ್ರಯೋಗ**— ಅಸೌ, ಲೀಲಯಾ, ಇಮಾಂ, ಮಠಂ, ಅನಯತ್ (ದ್ವಿಕಮಕ ಕರ್ತರಿ) ಅಮುನಾ ಲೀಲಯಾ ಇಯಂ ಮಠಂ ಅನೀಯತ (ಕರ್ಮಣಿ) ।

**ಕೋಶ**— 'ಭಗಂ ಶ್ರೀಕಾಮಮಾಹಾತ್ಮ್ಯವೀರ್ಯಯತ್ನಾರ್ಕಕೀರ್ತಿಷು' ಇತ್ಯಮರಃ, 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ, ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ' ಎಂಬ ಪ್ರಮಾಣಾನುಸಾರವಾಗಿ ಭಗವಾನ್ ಎಂದರೆ ಷಡ್ಗುಣೈಶ್ವರ್ಯಸಂಪನ್ನ ಎಂದೂ ಅರ್ಥ. 'ಮಠಶ್ಛಾತ್ರಾದಿ ನಿಲಯಃ' ಇತ್ಯಮರಃ, ಭಗವಂತಃ ಎಂಬ ಪದವನ್ನು ಮಧ್ವಾಚಾರ್ಯರಿಗೂ(ಛಲಾರಿಯ) ಹರಿಗೂ(ವಿಶ್ವಪತಿ) ಅನ್ವಯಿಸಬಹುದು. ಆಗ ಅರ್ಥವು ವಿಶೇಷ ರೀತಿಯಿಂದ ಸಿಗುತ್ತದೆ. 'ಪ್ರತಿಮಾಯಾಂ ತು ಸಾನ್ನಿಧ್ಯಂ ಅರ್ಚಕಸ್ಯ ತಪೋಬಲಾತ್' ಎಂಬಂತೆ ಪೂಜಿಸುವವರ ತಪಸ್ಸು ಮುಂತಾದ್ದಕ್ಕೆ ಅನುಗುಣವಾಗಿ ಪ್ರತಿಮೆಯಲ್ಲಿ ಭಗವಂತನ ಸಾನ್ನಿಧ್ಯ ಉಂಟಾಗುತ್ತದೆ ಎಂದು ಶಾಸ್ತ್ರವಿರುವುದರಿಂದ ಆಚಾರ್ಯರ ದಿವ್ಯಕರ ಸ್ಪರ್ಶದಿಂದ ಪ್ರತಿಮೆಯಲ್ಲಿ ಸಾನ್ನಿಧ್ಯ ವಿಶೇಷವು ಉಂಟಾಗಿ ಮೂವತ್ತು ಮಂದಿ ಯುವಕರಿಂದಲೂ ಅದನ್ನು ಎತ್ತಲಾಗಲಿಲ್ಲ ಎಂಬ ಅಭಿಪ್ರಾಯವು ಸೂಚಿಸುತ್ತದೆ.

★ ★ ★

ಅವತಾರಿಕಾ— ಆಚಾರ್ಯರು ಮಾಡಿದ ಶ್ರೀಕೃಷ್ಣ ಪ್ರತಿಷ್ಠೆಯನ್ನು ವರ್ಣಿಸುತ್ತಾರೆ.

**ಮಂದಹಾಸಮೃದುಸುಂದರಾನನಂ**
**ನಂದನಂದನಮತೀಂದ್ರಿಯಾಕೃತಿಮ್ ।**
**ಸುಂದರಂ ಸ ಇಹ ಸನ್ಯಧಾಪಯದ್**
**ವಂದ್ಯಮಾಕೃತಿಶುಚಿಪ್ರತಿಷ್ಠಯಾ** **॥ 43 ॥**

**ಪದಚ್ಛೇದ**— ಮಂದಹಾಸಮೃದುಸುಂದರಾನನಂ, ನಂದನಂದನಂ, ಅತೀಂದ್ರಿಯಾಕೃತಿಂ, ಸುಂದರಂ, ಸಃ, ಇಹ, ಸನ್ಯಧಾಪಯತ್, ವಂದ್ಯಂ, ಆಕೃತಿಶುಚಿಪ್ರತಿಷ್ಠಯಾ ।

**ಅನ್ವಯ**— ಸಃ, ಮಂದಹಾಸಮೃದುಸುಂದರಾನನಂ, ಅತೀಂದ್ರಯಾಕೃತಿಂ, ಸುಂದರಂ, ವಂದ್ಯಂ, ನಂದನಂದನಂ , ಆಕೃತಿಶುಚಿಪ್ರತಿಷ್ಠಯಾ, ಇಹ, ಸನ್ಯಧಾಪಯತ್ ।

**ಅನ್ವಯಾರ್ಥ—**

**ಸಃ** = ಆ ಮಧ್ವಾಚಾರ್ಯರು,

**ಮಂದಹಾಸಮೃದುಸುಂದರಾನನಂ** = ಮುಗುಳ್ನಗೆಯಿಂದ (ಅಥವಾ ಮುಗುಳ್ನಗೆಯುಳ್ಳ) ಸೌಮ್ಯವಾದ ಮನಸ್ಸನ್ನು ಸೆಳೆಯುವ ಮುಖವುಳ್ಳ,

**ಅತೀಂದ್ರಿಯಾಕೃತಿಂ** = ಪ್ರಾಕೃತೇಂದ್ರಿಯಗಳಿಗೆ ಅಗೋಚರವಾದ ಆಕಾರವುಳ್ಳ,

**ಸುಂದರಂ** = ಸರ್ವಾಂಗ ಮನೋಹರನಾದ,

**ವಂದ್ಯಂ** = ಬ್ರಹ್ಮಾದಿಗಳಿಂದ ಸ್ತೋತ್ರಮಾಡಿಸಿಕೊಳ್ಳುವುದಕ್ಕೂ, ನಮಸ್ಕಾರ ಮಾಡಿಸಿಕೊಳ್ಳುವುದಕ್ಕೂ ಯೋಗ್ಯನಾದ

**ನಂದನಂದನಂ** = ನಂದಗೋಪನ ಮಗನಾದ ಶ್ರೀಕೃಷ್ಣನನ್ನು,

**ಆಕೃತಿಶುಚಿಪ್ರತಿಷ್ಠಯಾ** = ಪ್ರತಿಮೆಯ ಶುದ್ಧವಾದ ಪ್ರತಿಷ್ಠೆಯ ಕ್ರಮದಿಂದ,

**ಇಹ** = ಈ ಪ್ರತಿಮೆಯಲ್ಲಿ,

**ಸನ್ಯಧಾಪಯತ್** = ಸನ್ನಿಹಿತನನ್ನಾಗಿಸಿದರು.

**ತಾತ್ಪರ್ಯ—** ಮುಗುಳ್ನಗೆಯಿಂದ ಸೌಮ್ಯವಾದ ಸುಂದರಮುಖವುಳ್ಳವನು ಶ್ರೀಕೃಷ್ಣನು. ಅವನ ಸ್ವರೂಪವು ನಮ್ಮ ಪ್ರಾಕೃತೇಂದ್ರಿಯಗಳಿಗೆ ಅಗೋಚರವಾದುದು. ಅವನ ಮುಖದಲ್ಲಿ ಮಾತ್ರವೇ ಸುಂದರನಲ್ಲ, ಸರ್ವಾಂಗ ಸುಂದರನು, ಅವನು ಬ್ರಹ್ಮಾದಿಗಳ ಸ್ತೋತ್ರ ಮತ್ತು ನಮಸ್ಕಾರಗಳಿಗೆ ಪಾತ್ರನು, ಈತನು ನಂದನಂದನನು, ಆಚಾರ್ಯರ ಹಸ್ತದಿಂದ ಪ್ರತಿಷ್ಠಿತನಾಗಿ ಆ ಪ್ರತಿಮೆಯಲ್ಲಿ ಸನ್ನಿಧಾನವನ್ನಿಟ್ಟನು. ಪ್ರತಿಮೆಯು ಉತ್ತಮವಾದುದು ಸಾಂಗವಾಗಿ ಶುದ್ಧವಾಗಿ ಆಚಾರ್ಯರೇ ಪ್ರತಿಷ್ಠೆ ಮಾಡಿ ನಂದನಂದನನ ಆನಂದಪೂರ್ಣವಾದ ಪ್ರಪಂಚದ ಹೊರಗೂ ಒಳಗೂ ವ್ಯಾಪ್ತವಾದ ಅಪ್ರಾಕೃತ ರೂಪವನ್ನು ಈ ಪ್ರತಿಮೆಯಲ್ಲಿ ಸನ್ನಿಧಾನಗೊಳಿಸಿದರು.

**ವಿಗ್ರಹ—**

**ಮಂದಹಾಸಮೃದುಸುಂದರಾನನಂ—** ಮಂದಶ್ಚಾಸೌ ಹಾಸಶ್ಚ ಮಂದಹಾಸಃ, ಮಂದಹಾಸೇನ ಮೃದು ಮಂದಹಾಸಮೃದು ಅಥವಾ ಮಂದಃ ಹಾಸಃ ಯಸ್ಮಿನ್ ತತ್ ಮಂದಹಾಸಂ, ಮಂದಹಾಸಂ ಚ ತತ್ ಮೃದು ಚ ಮಂದಹಾಸಮೃದು, ಮಂದಹಾಸಮೃದು ಸುಂದರಂ ಆನನಂ ಯಸ್ಯ ಸಃ ಮಂದಹಾಸ-ಮೃದುಸುಂದರಾನನಃ ತಂ ।

**ನಂದನಂದನಂ—** ನಂದಯತೀತಿ ನಂದನಃ, ನಂದಸ್ಯ ನಂದನಃ, ನಂದನಂದನಃ ತಂ ।

**ಅತೀಂದ್ರಿಯಾಕೃತಿಂ—** ಇಂದ್ರಿಯಂ ಅತಿಕ್ರಾಂತಾ ಅತೀಂದ್ರಿಯಾ, ಅತೀಂದ್ರಿಯಾ ಆಕೃತಿಃ ಯಸ್ಯಸಃ ಅತೀಂದ್ರಿಯಾಕೃತಿಃ ತಂ ।

**ವಂದ್ಯಂ—** ವಂದಿತುಂ ಯೋಗ್ಯಃ ವಂದ್ಯಃ ತಂ ।

**ಆಕೃತಿಶುಚಿಪ್ರತಿಷ್ಠಯಾ—** ಶುಚಿಶ್ಚ ಸಾ ಪ್ರತಿಷ್ಠಾ ಚ ಶುಚಿಪ್ರತಿಷ್ಠಾ, ಆಕೃತೇಃ ಶುಚಿಪ್ರತಿಷ್ಠಾ ಆಕೃತಿ-ಶುಚಿಪ್ರತಿಷ್ಠಾ, ತಯಾ ।

**ಕ್ರಿಯಾಪದ—** ಸನ್ಯಧಾಪಯತ್- ಸಮ್ ನಿಇತ್ಯುಪಸರ್ಗದ್ವಯ ಪೂರ್ವಕಾತ್ ಡುಧಾಞ ಧಾರಣಪೋಷಣಯೋಃ ಇತ್ಯಸ್ಮಾತ್ ಧಾರಣಪೋಷಣಾರ್ಥಕಾತ್ ಧಾಧಾತೋಃ ಪ್ರೇರಣಾರ್ಥಕ ಣಿಜಂತಾತ್, ಸಕರ್ಮಕಾತ್ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಸನ್ಯಧಾಪಯತ್ ಇತಿರೂಪಂ ।

ಸಮ್+ನಿ+ಅಧಾಪಯತ್ ಅಧಾಪಯತಾಂ ಅಧಾಪಯನ್, ಅಧಾಪಯಃ ಅಧಾಪಯತಂ

ಅಧಾಪಯತ, ಅಧಾಪಯಂ ಅಧಾಪಯಾವ ಅಧಾಪಯಾಮ ।

**ಪ್ರಯೋಗ—** ಮಂದಹಾಸಮೃದುಸುಂದರಾನನಃ ಅತೀಂದ್ರಿಯಾಕೃತಿಃ ಸುಂದರಃ ನಂದನಂದನಃ ಇಹ ತಸ್ಯ ಆಕೃತಿ-ಶುಚಿಪ್ರತಿಷ್ಠಯಾ ಸನ್ನದಧಾತ್ (ಸನ್ನಿಧಾನವನ್ನಿಟ್ಟನು) (ಅಣಿಜಂತಾವಸ್ಥಾ) । ಸಃ ನಂದನಂದನಂ ಇಹ ಸನ್ನ್ಯಧಾಪಯತ್ (ಣಿಜಂತ ಕರ್ತರಿ) ತೇನ ನಂದನಂದನಃ ಇಹ ಸನ್ನ್ಯಧಾಪ್ಯತ (ಕರ್ಮಣಿ) ।

★ ★ ★

**ಅವತಾರಿಕಾ—** ಶ್ರೀಕೃಷ್ಣ ಪ್ರತಿಷ್ಠಾನಂತರದಲ್ಲಿ ಆಚಾರ್ಯರು ಮಾಡಿಸಿದ ಉತ್ತಮವಾದ ಯಾಗವನ್ನು ರಾಜಸೂಯ ಯಾಗಕ್ಕೆ ಸಮಾನವೆಂದು ವರ್ಣಿಸಲು ಉಪೋದ್ಘಾತವನ್ನು ಪ್ರಾರಂಭಿಸುತ್ತಾರೆ. (ಈ ಮುಂದಿನ ನಾಲ್ಕು ಶ್ಲೋಕಗಳು ಕಲಾಪವಾಗಿರುವುದರಿಂದ ಅವುಗಳನ್ನು ಒಟ್ಟಿಗೆ ಸೇರಿಸಿ ಅರ್ಥವನ್ನು ಹೇಳಬೇಕು) ಜರಾಸಂಧನ ದೃಷ್ಟಾಂತದಿಂದ ಈ ಯಜ್ಞ ಕಾರ್ಯದಲ್ಲಿ ವಿಘ್ನಕಾರಿಯಾಗಿದ್ದ ಯಾಜ್ಞಿಕನನ್ನು ಬಿಡಿಸಿ ಶ್ರೀಮದಾಚಾರ್ಯರು ತಮ್ಮ ಗುರುಗಳ ಮಗನಾದ ವಾಸು-ದೇವನೆಂಬ ಯಾಜ್ಞಿಕಶ್ರೇಷ್ಠನಿಂದ ಹೋಮವೇ ಮೊದಲಾದ ಕಾರ್ಯವನ್ನು ನಡೆಸಿದ ಚರಿತ್ರೆಯನ್ನು ಆರಂಭಿಸಿ ತಿಳಿಸುತ್ತಾರೆ.

**ಮಾನಿನೋಽಪಿ ಹಿ ವಶೀಚಕಾರ ಯೋ**
**ದೈವತಪ್ರತಿಭಯಾತ್ಮನಃ ಖಲಃ ।**
**ಯಾಯಜೂಕಗುಣಮಾತ್ಮನಃ ಸ್ಮರನ್**
**ಯೋ ಜರಾಘಟಿತಗೋತ್ರ ಉಚ್ಯತೇ ॥ 44 ॥**

ತಾತ್ಪರ್ಯ— ಅಂತಹ ಮರಡಿತಾಯನ್ನು ಆಚಾರ್ಯರು ನಿರಾಕರಿಸಿದರೆಂಬುದನ್ನು ತಿಳಿಸುತ್ತಾರೆ.

**ಆತ್ಮನಃ ಪ್ರಿಯತಮಕ್ರತೋರಮುಂ**
**ಪಾಪಪೂರುಷಮವೇಕ್ಷ್ಯ ಘಾತುಕಮ್ ।**
**ತಂ ನಿರಸ್ಯ ಜನಮಪ್ಯಥಾಹಿತಂ**
**ಸರ್ವಭೂಧರಸಮರ್ಥಪೂರ್ವಕಮ್ ॥ 45 ॥**

ತಾತ್ಪರ್ಯ— ಅಂತಹ ಬಲಿಷ್ಠ ಯಾಜ್ಞಿಕನನ್ನು ಬಹಿಷ್ಕರಿಸುವಷ್ಟು ನಿರಾಕರಿಸುವಷ್ಟು ಖಂಡಿಸುವಷ್ಟು ಶಕ್ತಿಯು ಆಚಾರ್ಯರಲ್ಲಿದೆಯೆಂದು ತಿಳಿಸುವುದಕ್ಕಾಗಿ ಅವರ ಶಕ್ತಿಯನ್ನು ವಿವರಿಸುತ್ತಾರೆ.

**ವಿಶ್ವವಿಸ್ಮಯಕರಃ ಸ್ವತೇಜಸಾ**
**ವಂದ್ಯಮಾನಚರಣಃ ಪುನರ್ಜನೈಃ ।**
**ಚಿತ್ರದಿಗ್ವಿಜಯಕೀರ್ತ್ಯಕೀರ್ತಿಮಾನ್**
**ಮೋದಯನ್ನನುದಿನಂ ನಿಜಾಃ ಪ್ರಜಾಃ ॥ 46 ॥**

ತಾತ್ಪರ್ಯ— ಜರಾಸಂಧನ ದೃಷ್ಟಾಂತದಿಂದ ಹೇಳಲು ಪ್ರಾರಂಭ ಮಾಡಿದ ಚರಿತ್ರೆಯನ್ನು ಮುಗಿಸುತ್ತಾರೆ.

**ವಾಸುದೇವದಯಿತೋ ಮಹಿಷ್ಠಧೀಃ**
**ವಾಸುದೇವಮಥ ಸಾಧ್ವಯಾಜಯತ್ ।**
**ಧರ್ಮಸೂನುಮಿವ ಧಾರ್ಮಿಕಂ ಪುರಾ**
**ಭೀಮಮೂರ್ತಿರಯಮೇವ ಭೂಸುರಮ್ ॥ 47 ॥**

**ಪದಚ್ಛೇದ—** ಮಾನಿನಃ, ಅಪಿ, ಹಿ, ವಶೀಚಕಾರ, ಯಃ, ದೈವತಪ್ರತಿಭಯಾ, ಆತ್ಮನಃ, ಖಲಃ, ಯಾಯಜೂಕಗುಣಂ, ಆತ್ಮನಃ, ಸ್ಮರನ್, ಯಃ ಜರಾಘಟಿತಗೋತ್ರಃ, ಉಚ್ಯತೇ । ಆತ್ಮನಃ, ಪ್ರಿಯತಮಕ್ರತೋಃ ಅಮುಂ, ಪಾಪಪೂರುಷಂ ಅವೇಕ್ಷ್ಯ, ಘಾತುಕಂ, ತಂ, ನಿರಸ್ಯ, ಜನಂ, ಅಪಿ, ಅಥ ಅಹಿತಂ, ಸರ್ವಭೂಧರಸಮರ್ಥಪೂರ್ವಕಂ । ವಿಶ್ವವಿಸ್ಮಯಕರಃ, ಸ್ವತೇಜಸಾ, ವಂದ್ಯಮಾನಚರಣಃ, ಪುನಃ, ಜನ್ಯೈಃ, ಚಿತ್ರದಿಗ್ವಿಜಯಕೀರ್ತ್ಯಕೀರ್ತಿಮಾನ್, ಮೋದಯನ್, ಅನುದಿನಂ, ನಿಜಾಃ ಪ್ರಜಾಃ । ವಾಸುದೇವದಯಿತಃ, ಮಹಿಷ್ಠಧೀಃ, ವಾಸುದೇವಂ, ಅಥ, ಸಾಧು, ಅಯಾಜಯತ್, ಧರ್ಮಸೂನುಂ, ಇವ, ಧಾರ್ಮಿಕಂ, ಪುರಾ, ಭೀಮಮೂರ್ತಿಃ, ಅಯಂ, ಏವ, ಭೂಸುರಂ ।

**ಅನ್ವಯ—** ಸ್ವತೇಜಸಾ, ವಿಶ್ವವಿಸ್ಮಯಕರಃ, ಜನ್ಯೈಃ, ಪುನಃ, ವಂದ್ಯಮಾನಚರಣಃ, ಚಿತ್ರದಿಗ್ವಿಜಯಕೀರ್ತ್ಯ-ಕೀರ್ತಿಮಾನ್, ನಿಜಾಃ, ಪ್ರಜಾಃ, ಅನುದಿನಂ, ಮೋದಯನ್, ವಾಸುದೇವದಯಿತಃ, ಮಹಿಷ್ಠಧೀಃ, ಯಃ, ಖಲಃ, ಆತ್ಮನಃ, ದೈವತಪ್ರತಿಭಯಾ, ಮಾನಿನಃ ಅಪಿ, ವಶೀಚಕಾರ(ಯಃ) ಆತ್ಮನಃ, ಯಾಯಜೂಕಗುಣಂ, ಸ್ಮರನ್(ಯಃ) ಜರಾ-ಘಟಿತಗೋತ್ರಃ ಉಚ್ಯತೇ ಅಮುಂ, ಪಾಪಪೂರುಷಂ, ಆತ್ಮನಃ, ಪ್ರಿಯತಮಕ್ರತೋಃ ಘಾತುಕಂ, ಅವೇತ್ಯ, ಅಥ, ಸರ್ವಭೂಧರಸಮರ್ಥಪೂರ್ವಕಂ ತಂ ಅಹಿತಂ, ಜನಂ, ಅಪಿ, ನಿರಸ್ಯ, ಅಥ, ಭೀಮಮೂರ್ತಿಃ, ಅಯಂ ಏವ, ಪುರಾ, ಧಾರ್ಮಿಕಂ, ಧರ್ಮಸೂನುಂ ಇವ, ವಾಸುದೇವಂ, ಧಾರ್ಮಿಕಂ, ಭೂಸುರಂ, ಸಾಧು, ಅಯಾಜಯತ್ ।

**ಅನ್ವಯಾರ್ಥ—**

**ಸ್ವತೇಜಸಾ** = ತನ್ನ ಶಕ್ತಿಯಿಂದ,
**ವಿಶ್ವವಿಸ್ಮಯಕರಃ** = ಸಮಸ್ತ ಪ್ರಪಂಚಕ್ಕೆ ಆಶ್ಚರ್ಯವನ್ನುಂಟುಮಾಡುವ,
**ಜನ್ಯೈಃ** = ಜನರಿಂದ,
**ಪುನಃ** = ಮತ್ತೂ ಮತ್ತೂ,
**ವಂದ್ಯಮಾನಚರಣಃ** = ನಮಸ್ಕಾರ ಮಾಡಲ್ಪಡುತ್ತಿರುವ ಪಾದಗಳುಳ್ಳ,
**ಚಿತ್ರದಿಗ್ವಿಜಯಕೀರ್ತ್ಯಕೀರ್ತಿಮಾನ್** = ಆಶ್ಚರ್ಯಕರವಾದ ಎಲ್ಲ ದಿಕ್ಕಿನಲ್ಲಿರುವ ವಾದಿಗಳನ್ನು ಜಯಿಸುವುದರಿಂದ ಹೊಗಳಲು ಯೋಗ್ಯವಾದ ಕೀರ್ತಿಯುಳ್ಳ,
**ನಿಜಾಃ** = ತನ್ನವರಾದ,
**ಪ್ರಜಾಃ** = ಭಕ್ತ ಜನರನ್ನು,
**ಮೋದಯನ್** = ಸಂತೋಷಪಡಿಸುತ್ತಿರುವ,
**ವಾಸುದೇವ** = ಶ್ರೀಕೃಷ್ಣನಿಗೆ,
**ದಯಿತಃ** = ಪ್ರಿಯರಾದ,
**ಮಹಿಷ್ಠಧೀಃ** = ಶ್ರೀಪೂರ್ಣಪ್ರಜ್ಞರು,
**ಯಃ** = ಯಾವ,
**ಖಲಃ** = ದುಷ್ಟನು,
**ಆತ್ಮನಃ** = ತನ್ನ,
**ದೈವತಪ್ರತಿಭಯಾ** = ದೇವತೆಯಿಂದ ಪಡೆದ ಅತಿಶಯ ಬುದ್ಧಿಯಿಂದ,
**ಮಾನಿನಃ ಅಪಿ** = ಪೂಜ್ಯರನ್ನೂ,
**ವಶೀಚಕಾರ** = ವಶಮಾಡಿಕೊಂಡಿದ್ದನೋ,

**ಯಾಯಜೂಕಗುಣಂ** = ಯಾಗಶೀಲರ ಗುಣವನ್ನು,

**ಆತ್ಮನಃ** = ತನಗೆ,

**ಸ್ಮರನ್**= ಜ್ಞಾಪಿಸುವವನಾಗಿ,

**ಜರಾಘಟಿತಗೋತ್ರಃ** = ಮರಡಿತ್ತಾಯ ಕುಲದವನೆಂದು,

**ಉಚ್ಯತೇ** = ಹೇಳಲ್ಪಡುತ್ತಾನೋ,

**ಅಮುಂ** = ಅಂತಹ,

**ಪಾಪಪೂರುಷಂ** = ಪಾಪಿಯಾದ ಬ್ರಾಹ್ಮಣನನ್ನು,

**ಆತ್ಮನಃ** = ತನಗೆ,

**ಪ್ರಿಯತಮಕ್ರತೋಃ** = ಅತ್ಯಂತ ಪ್ರೀತಿಪಾತ್ರನಾದ ಉಪಾಧ್ಯಾಯರ ಪುತ್ರನ ಯಜ್ಞದ,

**ಘಾತುಕಂ** = ನಾಶಕನನ್ನಾಗಿ,

**ಅವೇತ್ಯ**= ತಿಳಿದು,

**ತಂ** = ಅವನನ್ನು,

**ಅಥ** = ತರುವಾಯ,

**ಅಹಿತಂ ಜನಂ ಅಪಿ** = ತನಗೆ ವಿರೋಧಿಗಳಾದ ಅವನ ಪಕ್ಷದ ಜನರನ್ನು,

**ಸರ್ವಭೂಧರಸಮರ್ಥಪೂರ್ವಕಂ ನಿರಸ್ಯ** = ಎಲ್ಲಾ ಜನರೂ, ಬಾರಕೂರಿನ ರಾಜನೂ, ಮೂಡುಬಲ್ಲಾಳ, ಪಡುಬಲ್ಲಾಳರೂ, ಇವರ ಸಮಕ್ಷವಾಗಿ ನಿರುತ್ತರನನ್ನಾಗಿ ಮಾಡಿ,

**ಅಥ** = ಅನಂತರ,

**ಭೀಮಮೂರ್ತಿಃ** = ಭೀಮಸೇನವತಾರವುಳ್ಳ,

**ಅಯಂ ಏವ** = ಈ ಶ್ರೀಮಧ್ವಾಚಾರ್ಯರೇ,

**ಪುರಾ** = ಹಿಂದೆ,

**ಯಃ ಖಲಃ** = ಯಾವ ದುಷ್ಟನು,

**ಆತ್ಮನಃ** = ತನ್ನ,

**ಯಾಯಜೂಕಗುಣಂ** = ನರಮೇಧಯಾಗವನ್ನು ಮಾಡುವ ಯೋಗ್ಯತೆಯನ್ನು,

**ಸ್ಮರನ್** = ಜ್ಞಾಪಿಸಿಕೊಳ್ಳುತ್ತಾ,

**ದೈವತಪ್ರತಿಭಯಾ** = ರುದ್ರಾದಿ ದೇವತೆಗಳ ವರದಿಂದ ಲಭಿಸಿದ ಬುದ್ಧಿಯಿಂದ,

**ಮಾನಿನಃ** = ಪೂಜ್ಯನಾದ,

**ಯಃ** = ಯಾವನು,

**ಅಮುಂ ಪಾಪಪೂರುಷಂ** = ಈ ಪಾಪಿಯನ್ನು,

**ಆತ್ಮನಃ** = ತಮ್ಮ

**ಪ್ರಿಯತಮಕ್ರತೋಃ** = ಅತ್ಯಂತ ಇಷ್ಟನಾದ ಧರ್ಮರಾಜನ ರಾಜಸೂಯ ಯಾಗಕ್ಕೆ,

**ಘಾತುಕಂ** = ನಾಶಕನನ್ನಾಗಿ,

**ಅವೇತ್ಯ** = ತಿಳಿದು,

**ತಂ** = ಅವನನ್ನೂ,

**ಅಥ** = ಅನಂತರ,

**ಸರ್ವಭೂಧರಸಮರ್ಥಪೂರ್ವಕಂ** = ಎಲ್ಲಾ ರಾಜಶ್ರೇಷ್ಠರೇ ಮೊದಲಾಗಿ ಉಳ್ಳ,

**ಅಹಿತಂ ಜನಂ ಅಪಿ** = ಶತ್ರುಜನರನ್ನೂ,

**ನಿರಸ್ಯ** = ಕೊಂದು (ಜಯಸಿ),

**ಧರ್ಮಸೂನುಂ ಇವ** = ಧರ್ಮರಾಜನನ್ನೋಪಾದಿಯಲ್ಲಿ,

**ವಾಸುದೇವಂ** = ವಾಸುದೇವನೆಂಬ,

**ಧಾರ್ಮಿಕಂ** = ಧರ್ಮಾತ್ಮನಾದ,

**ಭೂಸುರಂ** = ಬ್ರಾಹ್ಮಣನನ್ನು, (ತನ್ನ ಪೂರ್ವಾಶ್ರಮಗುರುಗಳ ಪುತ್ರನನ್ನು)

**ಸಾಧು** = ಚೆನ್ನಾಗಿ,

**ಅಯಾಜತ್** = ಯಾಗ ಮಾಡುವವನ್ನಾಗಿ ಮಾಡಿದರು (ಗುರು ಪುತ್ರನಿಂದ ಯಾಗ ಮಾಡಿಸಿದರು).

**ತಾತ್ಪರ್ಯ**— ಶ್ರೀ ಮಧ್ವಾಚಾರ್ಯರು ತಮ್ಮ ಅದ್ಭುತವಾದ ಶಕ್ತಿ ಸಾಮರ್ಥ್ಯದಿಂದಲೂ ಮತ್ತು ತೇಜಸ್ಸಿನಿಂದಲೂ, ಸಕಲ ಪ್ರಪಂಚಕ್ಕೆ ಆಶ್ಚರ್ಯವನ್ನುಂಟುಮಾಡುತ್ತಿದ್ದರು. ಜನರು ಪರಮಭಕ್ತಿಯಿಂದ ಪುನಃ ಪುನಃ ಆಚಾರ್ಯರನ್ನು ವಂದಿಸುತ್ತಿದ್ದರು. ಆಚಾರ್ಯರ ಅದ್ಭುತವಾದ ಮತ್ತು ಶ್ಲಾಘನೀಯವಾದ ದಿಗ್ವಿಜಯದ ಕೀರ್ತಿಯು ಎಲ್ಲಾ ಕಡೆಯೂ ಹರಡಿತ್ತು. ಜನರು ಆಚಾರ್ಯರ ದಿಗ್ವಿಜಯದ ಕೀರ್ತಿಯನ್ನು ಹೊಗಳುತ್ತಿದ್ದರು. ಶ್ರೀಕೃಷ್ಣನಿಗೆ ಪ್ರಿಯರಾದ ಆಚಾರ್ಯರು ತಮ್ಮ ಭಕ್ತರನ್ನು ಯಾವಾಗಲೂ ಸಂತೋಷಗೊಳಿಸುತ್ತಿದ್ದರು.

ಹಿಂದೆ ದ್ವಾಪರಯುಗದಲ್ಲಿ ಜರಾಸಂಧನೆಂಬ ದುಷ್ಟ ರಾಜನಿದ್ದನು. ಅವನು ಈಶ್ವರನನ್ನು ನರಮೇಧಯಾಗದಿಂದ ಸಂತೋಷಗೊಳಿಸುವುದಕ್ಕಾಗಿ ಸಾವಿರಾರು ರಾಜರನ್ನು ಬಂಧನದಲ್ಲಿಟ್ಟಿದ್ದನು. ಯಾಗ ಮಾಡಿ ಶಂಕರನನ್ನು ಸಂತೋಷ ಗೊಳಿಸಲು ತಾನೇ ಸಮರ್ಥನು, ಯಾಗ ಮಾಡುವವರಲ್ಲಿ ತಾನೇ ಶ್ರೇಷ್ಠನು ಎಂದು ತಿಳಿದಿದ್ದನು. ರುದ್ರನ ವರದಿಂದ ಲಬ್ಧವಾದ ಶಸ್ತ್ರಾಸ್ತ್ರ ಸಾಮರ್ಥ್ಯ ಮತ್ತು ಬುದ್ಧಿಶಕ್ತಿಯಿಂದ ಪ್ರಬಲರಾದ ರಾಜರನ್ನೂ ವಶಪಡಿಸಿಕೊಂಡಿದ್ದನು. ಇವನು ಸಾತ್ವಿಕನಾದ ಧರ್ಮರಾಜನು ಮಾಡುವ ರಾಜಸೂಯ ಯಾಗವನ್ನು ನಾಶಪಡಿಸಲು ಪ್ರಯತ್ನಿಸುತ್ತಿದ್ದನು. ಇಂತಹ ದುಷ್ಟನನ್ನು ಶ್ರೀಮದಾನಂದತೀರ್ಥರೇ ಹಿಂದೆ ಭೀಮಸೇನನಾಗಿ ಅವತರಿಸಿಕೊಂದರು. ಆನಂತರ ಪ್ರಬಲರಾದ ಇತರ ರಾಜರನ್ನೂ ಮತ್ತಿತರ ಎಲ್ಲಾ ಶತ್ರುರಾಜರನ್ನು ಜಯಸಿ(ಕೊಂದು) ಧರ್ಮರಾಜನಿಂದ ತನಗೆ ಅತ್ಯಂತ ಪ್ರಿಯವಾದ ರಾಜಸೂಯ ಯಾಗವನ್ನು ಮಾಡಿಸಿದ್ದರು. ಅದರಂತೆ ಈಗಲೂ ಮರಡಿತ್ತಾಯ (ಜರಾ=ಮರಡಿ=ಮುಪ್ಪು ಇದರಿಂದ ಘಟಿತ=ಕೂಡಿದ, ಗೋತ್ರ=ವಂಶದ ಹೆಸರುಳ್ಳವನು) ಎಂಬ ಬ್ರಾಹ್ಮಣನಿದ್ದನು. ದುಷ್ಟನಾದ ಅವನು ತನ್ನ ದೇವತೋಪಾಸನೆ ಯಿಂದ ಪ್ರಾಪ್ತವಾದ ಪ್ರತಿಭಾಶಕ್ತಿಯಿಂದ ಅತ್ಯಂತ ಸಮರ್ಥರಾದ, ಪೂಜ್ಯರಾದ ಜ್ಞಾನಿಗಳನ್ನೂ ವಶಪಡಿಸಿಕೊಂಡಿದ್ದನು. ಯಾಗ ಮಾಡುವುದರಲ್ಲಿ ತಾನೇ ಸಮರ್ಥನೆಂದು ಭಾವಿಸಿದ್ದನು. ಆಚಾರ್ಯರ ಪೂರ್ವಾಶ್ರಮದ ವೇದೋಪಾಧ್ಯಾಯರ ಪುತ್ರನನ್ನು ಇವನು ಒಳ್ಳೆಯ ಕುಲದವನಲ್ಲ, ಯಾಗ ಮಾಡಲು ಅನರ್ಹನೆಂದು ತಿರಸ್ಕರಿಸಿ ಅವನಿಂದ ಯಾಗ ಮಾಡಿಸಲು ಅಡ್ಡಿಪಡಿಸುತ್ತಿದ್ದನು. ಅಲ್ಲಿ ಮಾಡಿಸಬೇಕಾದ ಅಧಿವಾಸ ಹೋಮದಲ್ಲಿ ತಾನೇ ಸಮರ್ಥನೆಂದು ಹೇಳುತ್ತಿದ್ದನು. ಇಂತಹ ಮರಡಿತ್ತಾಯ ಬ್ರಾಹ್ಮಣನನ್ನು ಆಚಾರ್ಯರು ಖಂಡಿಸಿದರು. ಬಾರಕೂರಿನ ರಾಜನೂ, ಉಡುಪಿಯ ಹತ್ತಿರದಲ್ಲಿಯೇ ಇರುವ ಸಭೆಯಲ್ಲಿ ಪರಾಜಿತನಾದ ಮರಡಿತ್ತಾಯ ಬ್ರಾಹ್ಮಣನನ್ನು ದೂರದಲ್ಲಿಟ್ಟು, ತಮ್ಮ ಪೂರ್ವಾಶ್ರಮದ ವೇದೋಪಾಧ್ಯಾಯರ ಪುತ್ರನಾದ ವಾಸುದೇವನೆಂಬ ಧಾರ್ಮಿಕನಾದ ಯೋಗ್ಯ ಬ್ರಾಹ್ಮಣನಿಂದ ರಾಜಸೂಯ ಯಾಗದಂತಿರುವ ಒಂದು ಉತ್ತಮವಾದ ಯಾಗವನ್ನು ಆಚಾರ್ಯರು ಮಾಡಿಸಿದರು.

ದೈವತಪ್ರತಿಭಯಾ = ದೈವತಲಬ್ಧಪ್ರಜ್ಞೆಯಾ ರುದ್ರಾಖ್ಯ ದೇವವರಜಪ್ರಜ್ಞಯಾ ಚ. ಮರಡಿತ್ತಾಯನು ರುದ್ರೋ-ಪಾಸನೆಯಿಂದ ವಿಶೇಷ ಪ್ರತಿಭೆಯನ್ನು ಪಡೆದಿದ್ದನು, ಜರಾಸಂಧನೂ ಈಶ್ವರನ ವರದಿಂದ ಪ್ರಜ್ಞೆಯನ್ನು ಪಡೆದಿದ್ದನು ಎಂದು ಅರ್ಥ. ಜರಾಘಟಿತಗೋತ್ರಃ ಜರಾಸಂಬದ್ಧ ಗೋತ್ರಃ ಮರಡಿತ್ತಾಯ ಇತಿ ಅಪಭ್ರಷ್ಟಭಾಷಾ ಜರಾಸಂಧಶ್ಚ = ಜರಾಘಟಿತ ಗೋತ್ರ ಎಂದರೆ ಜರಾ = ಮರಡಿ, ಮುಪ್ಪು ಅದಕ್ಕೆ ವಾಚಕವಾದ ಮರಡಿ ಶಬ್ದದಿಂದ ಕೂಡಿದ ವಂಶನಾಮ ಮರಡಿತ್ತಾಯ ಎಂಬುದು ಆ ವಂಶದವನು. ಜರಾಸಂಧನು ಹುಟ್ಟುವಾಗ ಪ್ರತ್ಯೇಕವಾದ ಎರಡು ಖಂಡಗಳಾಗಿ ಇಬ್ಬರು ತಾಯಂದಿರಿಂದ ಹುಟ್ಟಿದ್ದನು. ಆ ಎರಡು ಖಂಡಗಳನ್ನು ಜರಾ ಎಂಬ ರಾಕ್ಷಿಸಿಯು ಜೋಡಿಸಿದಾಗ ಜರಾಸಂಧನು ಬದುಕಿದನು. ಇದರಿಂದ ಅವನಿಗೆ ಜರಾಸಂಧ, ಜರೆಯೆಂಬ ರಾಕ್ಷಸಿಯಿಂದ ಕೂಡಿಸಲ್ಪಟ್ಟವನು ಎಂದು ಹೆಸರು.

ಪ್ರಿಯತಮಕ್ರತೋಃ ಎಂಬಲ್ಲಿ ಪ್ರಿಯತಮಃ = ಉಪಾಧ್ಯಾಯಸುತಃ ಯುಧಿಷ್ಠಿರಶ್ಚ ಎಂದು ಭಾವಪ್ರಕಾಶಿಕಾ. ಪ್ರಿಯತಮ ಎಂದರೆ ತನಗೆ ಪ್ರೀತಿಪಾತ್ರನಾದ ಉಪಾಧ್ಯಾಯರ ಪುತ್ರ ಮತ್ತು ಧರ್ಮರಾಜ ಎಂದು ಅರ್ಥ. ಭೂಧರಃ ರಾಜಾ = ಬಾರಕನ್ಯಾಪುರ(ಬಾರಕೂರು) ಎಂಬಲ್ಲಿದ್ದ ರಾಜ. ಸಮರ್ಥೌ ಪೂರ್ವಪಶ್ಚಿಮಪಕ್ಷಾಧಿಪೌ = ಸಮರ್ಥ ಎಂದರೆ ಮೂಡುಬಲ್ಲಾಳರು ಪಡುಬಲ್ಲಾಳರು ಎಂದು ಅರ್ಥ. ಭೂಧರಸಮರ್ಥಾಃ ರಾಜಶ್ರೇಷ್ಠಾಶ್ಚ (ಭೀಮಸೇನ ಪಕ್ಷದಲ್ಲಿ ಅರ್ಥ ಹೇಳುವಾಗ)'ಭೂಧರ ಸಮರ್ಥ' ಎಂದರೆ ರಾಜರಲ್ಲಿ ಶ್ರೇಷ್ಠರು, ಅವರೆಲ್ಲರ ಸಹಿತವಾಗಿ ಅಹಿತರನ್ನು ನಿರಾಸೆ ಮಾಡಿ ಎಂದು ಅರ್ಥ. ಹೀಗೆ ಭಾವಪ್ರಕಾಶಿಕಾ ವ್ಯಾಖ್ಯಾನಾನುಸಾರವಾಗಿ ಮೇಲೆ ಹೇಳಿದ ಅರ್ಥವನ್ನು ತಿಳಿದುಕೊಳ್ಳಬೇಕು.

ವಿಗ್ರಹ—

**ಮಾನಿನಃ—** ಮಾನಃ ಏಷಾಂ ಅಸ್ತೀತಿ ಮಾನಿನಃ (ಮಾನಿನ್ ಶಬ್ದಃ) ।

**ದೈವತಪ್ರತಿಭಯಾ—** ದೇವತಾಯಾಃ ಆಗತಾ ದೈವತಾ (ದೇವತಾಯಾಃ ಇಯಂ ದೈವತಾ, ದೈವತಾ ಚ ಸಾ ಪ್ರತಿಭಾ ಚ) ಸಾ ಚ ಸಾ ಪ್ರತಿಭಾ ಚ ದೈವತಪ್ರತಿಭಾ ತಯಾ ।

**ಯಾಯಜೂಕಗುಣಂ—** ಯಾಯಜೂಕಸ್ಯ ಗುಣಃ ಯಾಯಜೂಕಗುಣಃ, ತಂ ।

**ಜರಾಘಟಿತಗೋತ್ರಃ—** ಜರಯಾ ಘಟಿತಂ ಗೋತ್ರಂ ಯಸ್ಯ ಸಃ ಜರಾಘಟಿತಗೋತ್ರಃ ।

**ಪ್ರಿಯತಮಕ್ರತೋಃ—** ಅತಿಶಯೇನ ಪ್ರಿಯಃ ಪ್ರಿಯತಮಃ, ಪ್ರಿಯತಮಸ್ಯ ಕ್ರತುಃ ಪ್ರಿಯತಮಕ್ರತುಃ, ತಸ್ಯ ।

**ಪಾಪಪೂರುಷಃ—** ಪಾಪಂ ಅಸ್ಯಾಸ್ತೀತಿ ಪಾಪಃ, ಪಾಪಶ್ಚಾಸೌ ಪೂರುಷಶ್ಚ ಪಾಪಪೂರುಷಃ ತಂ ।

**ಅಹಿತಂ—** ನ ಹಿತಃ ಅಹಿತಃ ತಂ ।

**ಸರ್ವಭೂಧರಸಮರ್ಥಪೂರ್ವಕಂ—** ಸರ್ವೇ ಚ ಭೂಧರಶ್ಚ ಸಮರ್ಥೌ ಚ ಸರ್ವಭೂಧರಸಮರ್ಥಾಃ, ಸರ್ವಭೂಧರಸಮರ್ಥಾಃ ಪೂರ್ವೇ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸರ್ವಭೂಧರ ಸಮರ್ಥಪೂರ್ವಕಂ (ಕ್ರಿ.ವಿ.) ಧರಂತೀತಿ ಧರಾಃ, ಭುವಃ ಧರಾಃ ಭೂಧರಾಃ, ಭೂಧರೇಷು ಸಮರ್ಥಾಃ ಭೂಧರಸಮರ್ಥಾಃ, ಸರ್ವೇ ಚ ತೇ ಭೂಧರಸಮರ್ಥಾಶ್ಚ ಸರ್ವಭೂಧರಸಮರ್ಥಾಃ, ಸರ್ವಭೂಧರಾಃ ಸಮರ್ಥಾಃ ಪೂರ್ವೇ ಯಸ್ಯ ಸಃ ಸರ್ವಭೂಧರಸಮರ್ಥಪೂರ್ವಕಃ ತಂ ।

**ವಿಶ್ವವಿಸ್ಮಯಕರಃ—** ವಿಶ್ವಸ್ಯ ವಿಸ್ಮಯಃ ವಿಶ್ವವಿಸ್ಮಯಃ, ಕರೋತೀತಿ ಕರಃ, ವಿಶ್ವವಿಸ್ಮಯಸ್ಯ ಕರಃ ವಿಶ್ವ-ವಿಸ್ಮಯಕರಃ।

**ಸ್ವತೇಜಸಾ—** ಸ್ವಸ್ಯ ತೇಜಃ ಸ್ವತೇಜಃ, ತೇನ, ಸ್ವತೇಜಸಾ ।

**ವಂದ್ಯಮಾನಚರಣಃ—** ವಂದ್ಯಮಾನೌ ಚರಣೌ ಯಸ್ಯ ಸಃ ವಂದ್ಯಮಾನಚರಣಃ ।

**ಚಿತ್ರದಿಗ್ವಿಜಯಕೀರ್ತ್ಯರ್ಕಕೀರ್ತಿಮಾನ್—** ದಿಶಾಂ ವಿಜಯಃ ದಿಗ್ವಿಜಯಃ, ಚಿತ್ರಶ್ಚಾಸೌ ದಿಗ್ವಿಜಯಶ್ಚ ಚಿತ್ರ-ದಿಗ್ವಿಜಯಃ, ಚಿತ್ರದಿಗ್ವಿಜಯೇನ ಕೀರ್ತ್ಯಾ ಚಿತ್ರದಿಗ್ವಿಜಯಕೀರ್ತ್ಯಾ, ಚಿತ್ರದಿಗ್ವಿಜಯಕೀರ್ತ್ಯಾ ಚ ಸಾ

ಕೀರ್ತಿಶ್ಚ ಚಿತ್ರದಿಗ್ವಿಜಯಕೀರ್ತ್ಯರ್ಕಕೀರ್ತಿಃ, ಚಿತ್ರದಿಗ್ವಿಜಯಕೀರ್ತ್ಯರ್ಕಕೀರ್ತಿಃ ಅಸ್ಯ ಅಸ್ತೀತಿ ಚಿತ್ರದಿಗ್ವಿಜಯ-ಕೀರ್ತ್ಯರ್ಕಕೀರ್ತಿಮಾನ್ ।

**ವಾಸುದೇವದಯಿತಃ—** ವಾಸುದೇವಸ್ಯ ದಯಿತಃ, ವಾಸುದೇವದಯಿತಃ ।

**ಮಹಿಷ್ಠಧೀಃ—** ಅತಿಶಯೇನ ಮಹತೀ ಮಹಿಷ್ಠಾ, ಮಹಿಷ್ಠಾ ಧೀಃ ಯಸ್ಯಸಃ ಮಹಿಷ್ಠಧೀಃ ।

**ಧರ್ಮಸೂನುಂ—** ಧರ್ಮಸ್ಯ ಸೂನುಃ ಧರ್ಮಸೂನುಃ, ತಂ ।

**ಭೀಮಮೂರ್ತಿಃ—** ಭೀಮಸ್ಯ ಮೂರ್ತಿಃ ಯಸ್ಯ ಸಃ ಭೀಮಮೂರ್ತಿಃ ।

**ಭೂಸುರಂ—** ಭುವಃ ಸುರಃ ಭೂಸುರಃ ತಂ ।

**ವಶೀಚಕಾರ—** ಅವಶಂ ವಶಂ ಸಂಪದ್ಯಮಾನಂ ಚಕಾರ ವಶೀಚಕಾರ ।

**ಕ್ರಿಯಾಪದ— ವಶೀಚಕಾರ** - ವಶೀ ಇತ್ಯುಪಪದ ಸಹಿತಾತ್ ಡುಕೃಞಕರಣೇ ಇತಿಕರಣಾರ್ಥಕಾತ್ ಕೃಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ವಶೀಚಕಾರ ಇತಿರೂಪಂ ।

ವಶೀ-ಚಕಾರ ಚಕ್ರತುಃ ಚಕ್ರುಃ, ಚಕರಿಥ - ಚಕರ್ಥ ಚಕ್ರಥುಃ ಚಕ್ರ, ಚಕಾರ ಚಕರ ಚಕ್ರವ ಚಕೃಮ ।

**ಉಚ್ಯತೇ** - ಉಚ್ಯೇತೇ ಉಚ್ಯೇತೇ ಉಚ್ಯಂತೇ ಇತ್ಯಾದಿ ಬ್ರೂಞ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಧಾತೋಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ ಉಚ್ಯತೇ ಇತಿರೂಪಂ ।

**ಅಯಾಜಯತ್**- ಯಜದೇವ ಪೂಜಾಸಂಗತಿ ಕರಣದಾನೇಷು ಇತಿ ದೇವಪೂಜಾದ್ಯರ್ಥಕಾತ್ ಯಜಧಾತೋಃ ಸಕರ್ಮಕಾತ್ ಕರ್ತರಿ, ಪರಸ್ಮೈಪದಿನಃ ಣಿಜಂತಾತ್ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ 'ಅಯಾಜಯತ್' ಇತಿರೂಪಂ ।

ಅಯಾಜಯತ್ ಅಯಾಜಯಾತಾಂ ಅಯಾಜಯನ್, ಅಯಾಜಯಃ ಅಯಾಜಯತಂ ಅಯಾಜಯತ
ಅಯಾಜಯಂ ಅಯಾಜಯಾವ ಅಯಾಜಯಾಮ ।

**ಪ್ರಯೋಗ—** ಯಃ ಖಲಃ ಮಾನಿನಃ ಅಪಿ ವಶೀಚಕಾರ (ಕರ್ತರಿ) ।
ಯೇನ ಖಲೇನ ಮಾನಿನಃ ಅಪಿ ವಶೀಚಕ್ರಿರೇ (ಕರ್ಮಣಿ) ।
ಯಃ ಜರಾಘಟಿತ ಗೋತ್ರಃ ಉಚ್ಯತೇ (ಕರ್ಮಣಿ) ।
ಯಂ ಜರಾಘಟಿತಗೋತ್ರಂ ಬ್ರುವಂತಿ (ಕರ್ತರಿ) ।
ಮಹಿಷ್ಠಧೀಃ ವಾಸುದೇವಂ ಸಾಧು ಅಯಾಜಯತ್ (ಣಿಜಂತ ಕರ್ತರಿ) ।
ಮಹಿಷ್ಠಧಿಯಾ ವಾಸುದೇವಃ ಸಾಧು ಅಯಜತ್ (ಅಣಿಜಂತ ಕರ್ತರಿ) ।

**ಅಲಂಕಾರ—** ಇಲ್ಲಿ 'ಶ್ಲೇಷೋಜ್ಜೀವಿತವಾದ ಪ್ರಬಂಧೈಕ ದೇಶಗತ'ವಾದ ಪೂರ್ಣೋಪಮಾಲಂಕಾರವಿದೆ.

**ವ್ಯಾಕರಣವಿಶೇಷ—** ವಶೀಚಕಾರ - ಇಲ್ಲಿ ಕೃಭ್ವಸ್ತಿಯೋಗೇ ಸಂಪದ್ಯ ಕರ್ತರಿ ಚ್ವಿಃ (5-4-50) ಎಂಬ ಸೂತ್ರದಿಂದ ಅಭೂತತದ್ಭಾವದಲ್ಲಿ ('ಮೊದಲು ಹಾಗಿಲ್ಲದ್ದು ಅನಂತರ ಹಾಗಾಯಿತು' ಎಂಬ ಅರ್ಥದಲ್ಲಿ) ಚ್ವಿಪ್ರತ್ಯಯ 'ಅಸ್ಯ ಚ್ವೌ' (7-4-32) ಎಂಬ ಸೂತ್ರದಿಂದ ವಶ ಎಂಬಲ್ಲಿರುವ ಅಕಾರಕ್ಕೆ ಈತ್ವ - ಯಾಯಜೂಕಃ ಎಂಬಲ್ಲಿ 'ಯಜಜಪದಶಾಂ ಯಙಃ' (3-2-166) ಎಂಬ ಸೂತ್ರದಿಂದ ಯಙಂತವಾದ ಯಜಧಾತುವಿಗೆ ಊಕ ಪ್ರತ್ಯಯ - ಘಾತುಕ ಎಂಬಲ್ಲಿ ಲಷಪತಪದಸ್ಥಾ ಭೂ ವೃಷವಹನಕಮಗಮಶೃಭ್ಯುಉಕಞ್ (3-2-154) ಎಂಬ ಸೂತ್ರದಿಂದ ಹನ್ ಧಾತುವಿಗೆ 'ಉಕಞ್' ಪ್ರತ್ಯಯ.

**ಕೋಶ—** ಅಹಿತಂ ಎಂಬಲ್ಲಿ 'ದ್ವಿಟ್ ವಿಪಕ್ಷಾಹಿತಾಮಿತ್ರ' ಎಂದು ಅಮರ. ಖಲಃ ಎಂಬಲ್ಲಿ ಕ್ರೂರೇನೀಚೇಧ ಮೇಖಲಃ ಎಂದು ವಿಶ್ವಕೋಶ, ಯಾಯಜೂಕ ಎಂಬಲ್ಲಿ 'ಇಜ್ಯಾಶೀಲೋ ಯಾಯಜೂಕಃ' ಎಂದು ಅಮರ, ಘಾತುಕಃ 'ನೃಶಂಸೋ ಘಾತುಕಃ ಕ್ರೂರಃ' ಎಂದು ಅಮರ.

**ವಿಶೇಷಾಂಶ—** ದ್ವಾಪರಯುಗದಲ್ಲಿ ಶ್ರೀ ಭೀಮಸೇನದೇವರು ಧರ್ಮರಾಜನಿಂದ ಯಾಗ ಮಾಡಿಸಿದಂತೆ ಆಚಾರ್ಯರು ತಮ್ಮ ಗುರುಪುತ್ರನಿಂದ ಯಾಗ ಮಾಡಿಸಿದರು ಎಂದು ಪರಮ ತಾತ್ಪರ್ಯ.

★ ★ ★

**ಅವತಾರಿಕಾ—** ಆಚಾರ್ಯರು ಯಾಗ ಮಾಡಿಸಿದ ಕ್ರಮವನ್ನು ಹೇಳುತ್ತಾರೆ. ಈ ಯಾಗದಲ್ಲಿ ಶ್ರೀಮದಾಚಾರ್ಯರ ತಮ್ಮಂದಿರೇ ಹೋತ್ರ (ಮುಖ್ಯ ಪುರೋಹಿತರು)ಗಳಾಗಿದ್ದರೆನ್ನುತ್ತಾರೆ.

**ಯಾಜ್ಯಯಾ ಸಮುಚಿತಾನುವಾಕ್ಯಯಾ**
**ಸಪ್ರವರ್ಗ್ಯವಿಭವೈರಭಿಷ್ಟವೈಃ ।**
**ವಿಶ್ವವೇತ್ತುರನುಜೋಽತ್ರ(ಸ್ಯ)ಹೋತೃತಾಂ**
**ಪ್ರಾಪ್ಯ ದೈವತತತೀರತೋಷಯತ್ ॥ 48 ॥**

**ಪದಚ್ಛೇದ—** ಯಾಜ್ಯಯಾ, ಸಮುಚಿತಾನುವಾಕ್ಯಯಾ, ಸಪ್ರವರ್ಗ್ಯವಿಭವೈಃ, ಅಭಿಷ್ಟವೈಃ, ವಿಶ್ವವೇತ್ತುಃ, ಅನುಜಃ, ಅತ್ರ, ಹೋತೃತಾಂ, ಪ್ರಾಪ್ಯ, ದೈವತತತೀಃ, ಅತೋಷಯತ್ ।

**ಅನ್ವಯ—** ವಿಶ್ವವೇತ್ತುಃ, ಅನುಜಃ, ಅತ್ರ, ಹೋತೃತಾಂ, ಪ್ರಾಪ್ಯ, ಸಮುಚಿತಾನುವಾಕ್ಯಯಾ, ಯಾಜ್ಯಯಾ, ಸಪ್ರವರ್ಗ್ಯವಿಭವೈಃ, ಅಭಿಷ್ಟವೈಃ, ದೈವತತತೀಃ, ಅತೋಷಯತ್ ।

**ಅನ್ವಯಾರ್ಥ—**

**ವಿಶ್ವವೇತ್ತುಃ** = ಸಮಸ್ತವನ್ನೂ ತಿಳಿದ, (ಅಸ್ಯ) ಶ್ರೀಪೂರ್ಣಪ್ರಜ್ಞಾಚಾರ್ಯರ,

**ಅನುಜಃ** = ತಮ್ಮಂದಿರು,

**ಅತ್ರ** = ಈ ಯಾಗದಲ್ಲಿ

**ಹೋತೃತಾಂ** = ಹೋತೃ ಎಂಬ ಋಗ್ವೇದವನ್ನು ಬಲ್ಲ ಋತ್ವಿಜನ ಸ್ಥಾನವನ್ನು (ಋಗ್ವೇದ ಪೌರೋಹಿತ್ಯವನ್ನು) (ಹೋತೃನಾಮಕ ಋತ್ವಿಕ್ತ್ವವನ್ನು),

**ಪ್ರಾಪ್ಯ** = ಹೊಂದಿ,

**ಸಮುಚಿತಾನುವಾಕ್ಯಯಾ** = ಯೋಗ್ಯವಾದ ಅನುಪೂರ್ವಕವಾದ (ಅನುಸಂಜ್ಞಿಕವಾಕ್ ಉಳ್ಳ) ವಾಕ್ಯ ಎಂಬ ಋಕ್ಕುಳ್ಳ

**ಯಾಜ್ಯಯಾ** = (ಅಧ್ವರ್ಯುಪ್ರೇಷಣಾ ನಂತರದ ಪ್ರಣವಾಂತ ವಾದ ಋಕ್) ಪ್ರಣವಾಂತವಾದ ಯಾಜ್ಯಾ ಎಂಬ ಋಕ್ಕಿನಿಂದಲೂ,

**ಸಪ್ರವರ್ಗ್ಯವಿಭವೈಃ** = ವಷಟ್ಕಾರವು ಕೊನೆಯಲ್ಲಿ ಉಳ್ಳ ಯಾಜ್ಯಮಹಾವೀರಪ್ರಸ್ತೋತೃನಾಮಗಳಿಂದ ಕೂಡಿದ,

**ಅಭಿಷ್ಟವೈಃ** = ಪ್ರಣವಾಂತವಾದ ನಿರಂತರ ಪಠಿಸಲ್ಪಡುವ 'ಬ್ರಹ್ಮಜಜ್ಞಾನಂ' ಇತ್ಯಾದಿ ಋಕ್ಕುಗಳಿಂದಲೂ,

**ದೈವತತತೀಃ** = ದೇವತೆಗಳ ಸಮೂಹಗಳನ್ನು,

**ಅತೋಷಯತ್** = ಸಂತೋಷಪಡಿಸಿದರು,

**ತಾತ್ಪರ್ಯ—** ಈ ಯಾಗದಲ್ಲಿ ಶ್ರೀಪೂರ್ಣಪ್ರಜ್ಞರ ತಮ್ಮಂದಿರು ಋಗ್ವೇದವನ್ನು ಬಲ್ಲ ಹೋತೃ ಎಂಬ ಋತ್ವಿಜನ ಸ್ಥಾನವನ್ನು ವಹಿಸಿದರು. ಯಜ್ಞಗಳ ಎಲ್ಲಾ ಕಾರ್ಯಕಲಾಪಗಳನ್ನು ಬಲ್ಲ ಆಚಾರ್ಯರ ತಮ್ಮಂದಿರು ಎಲ್ಲಾ ಯಜ್ಞ ವಿಧಾನವನ್ನು ಆಚಾರ್ಯರ ಅನುಗ್ರಹದಿಂದ ಬಲ್ಲವರಾಗಿದ್ದರು. ಅವರು ಹೋಮಕ್ಕಿಂತ ಪೂರ್ವದಲ್ಲಿ ಪಠಿಸಬೇಕಾದ

'ಪುರೋನುವಾಕ್ಯಾ' ಎಂಬ ಮಂತ್ರಗಳಿಂದಲೂ, ವಷಟ್ ಕಾರಾಂತವಾದ ಯಾಜ್ಯ ಮಹಾವೀರ ಪ್ರಸ್ತೋತ್ರ ಸಾಮಗಳಿಂದ ಸಹಿತವಾದ ಬ್ರಹ್ಮಜಜ್ಞಾನಂ ಇತ್ಯಾದಿ ಋಕ್ಕುಗಳಿಂದಲೂ ದೇವತೆಗಳ ಗುಂಪನ್ನೂ ಸಂತೋಷಗೊಳಿಸಿದರು.

**ವಿಶೇಷಾಂಶ—** ಪೂರ್ವಭಾವಿನೀಋಕ್ ಅನುವಾಕ್ಯಾ - ಹೋಮಕ್ಕಿಂತ ಪೂರ್ವದಲ್ಲಿ ಹೇಳುವ ಋಕ್ ವಾಕ್ಯಾ - ಕೃಣುಷ್ವಪಾಜಃ.... ತಪಿಷ್ಠೈಃ ಎಂದು ಹೇಳಿ ಅನಂತರ ಹೇಳುವ ಓಂ ತವಭ್ರಮಾಸ.... ಮಂತ್ರವು ಅನುವಾಕ್ಯಾ ಎಂದು ಹೇಳಲ್ಪಡುತ್ತದೆ. ಯಜ ಎಂದು ಹೇಳಿದ ಮೇಲೆ ಈ ಮಂತ್ರವನ್ನು ಹೇಳಿರಿ ಎಂದು ಹೇಳಬೇಕು.

ಅಧ್ವರ್ಯುಪ್ರೈಷಾನಂತರಾ ಪ್ರಣವಾಂತಾ ಯಾಜ್ಯಾ - ಅನುಬ್ರೂಹಿ ಎಂದು ಅಧ್ವರ್ಯುವು ಪ್ರೈಷವ ಆನವನ್ನು (ಅನುಮತಿ ವಾಕ್ಯವನ್ನು) ಹೇಳಿದ ಮೇಲೆ ಹೇಳುವ ಓಂಕಾರವು ಕೊನೆಯಲ್ಲಿ ಉಳ್ಳ ಮಂತ್ರವು ಯಾಜ್ಯಾನುವಾಕ್ಯ.

ವಷಟ್ಕಾರಾಂತಾಃ ಯಾಜ್ಯ ಮಹಾವೀರ ಪ್ರಸ್ತೋತ್ರಸಾಮಾದಯಃ ಪ್ರವರ್ಗವಿಭವಾಃ । ವಷಟ್ಕಾರಾಂತವಾದ ಯಾಜ್ಯ ಮಹಾವೀರ ಪ್ರಸ್ತೋತ್ರ ಸಾಮಾದಿಗಳು ಪ್ರವರ್ಗ್ಯವೈಭವಗಳು.

ಅನವರತಂ ಉಚ್ಯಮಾನಾಃ ಪ್ರಣವಾಂತಾಃ ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾತ್ ಈ ಮಂತ್ರಗಳು ಅಭಿಷ್ಟವಾಃ = ನಿರಂತರವಾಗಿ ಹೇಳಲ್ಪಡುವ ಓಂಕಾರವು ಕೊನೆಯಲ್ಲಿ ಉಳ್ಳ ಬ್ರಹ್ಮಜಜ್ಞಾನಂ ಪ್ರಥಮಂ ಇತ್ಯಾದಿ ಋಕ್ಕುಗಳು ಅಭಿಷ್ಟವಗಳು. (ಭಾವಪ್ರಕಾಶಿಕಾ)

**ವಿಗ್ರಹ—**

**ಸಮುಚಿತಾನುವಾಕ್ಯಯಾ—** ಸಮುಚಿತಾ ಅನುವಾಕ್ಯಾ ಯಸ್ಯಾಃ ಸಾ ಸಮುಚಿತಾನುವಾಕ್ಯಾ ತಯಾ ।

**ಸಪ್ರವರ್ಗ್ಯವಿಭವೈಃ—** ಪ್ರವರ್ಗ್ಯಾಣಾಂ ವಿಭವಾಃ ಪ್ರವರ್ಗ್ಯವಿಭವಾಃ, ಪ್ರವರ್ಗ್ಯವಿಭವೈಃ ಸಹ ವರ್ತಂತೇ ಇತಿ ಸಪ್ರವರ್ಗ್ಯವಿಭವಾಃ, ತೈಃ ।

**ವಿಶ್ವವೇತ್ತುಃ—** ವಿಶ್ವಂ ವೇತ್ತೀತಿ ವಿಶ್ವವೇತ್ತಾ, ತಸ್ಯ ।

**ಹೋತೃತಾಂ—** ಹೋತುಃ ಭಾವಃ ಹೋತೃತಾ ತಾಂ ।

**ದೈವತತತೀಃ—** ದೈವತಾನಾಂ ತತಯಃ ದೈವತತತಯಃ ತಾಃ ।

**ಪ್ರಯೋಗ—** ವಿಶ್ವವೇತ್ತುಃ ದೈವತತತಯಃ ಅತುಷ್ಯನ್ (ಅಣಿಜಂತ) ।

ಅನುಜಃ ದೈವತತತೀಃ ಅತೋಷಯತ್ (ಣಿಜಂತ ಕರ್ತರಿ) ।

ವಿಶ್ವವೇತ್ತುಃ ಅನುಜೇನ ದೈವತತತಯಃ ಅತೋಷ್ಯಂತ (ಕರ್ಮಣಿ) ।

**ಕೋಶ—** ಅನುಜಃ ಎಂಬಲ್ಲಿ 'ಜಯನ್ಯಜ್ಯೇ ಸ್ಯುಃ ಕನಿಷ್ಠ ಯವೀಯೋಽವರಜಾನುಜಾಃ' ಎಂದು ಅಮರ. 'ದೈವತತತೀಃ' ಎಂಬಲ್ಲಿ 'ವೃಂದಾರಕಾ ದೈವತಾನಿ ಪುಂಸಿ ವಾ ದೇವತಾಸ್ತ್ರಿಯಾಂ' ಎಂದು ಅಮರ.

★ ★ ★

**ಅವತಾರಿಕಾ—** ಶ್ರೀಮದಾಚಾರ್ಯರ ತಮ್ಮಂದಿರು ಆ ಯಜ್ಞಭಾಗವನ್ನು ಬಯಸುವ ರಾಕ್ಷಸರನ್ನು ದೂರ ಮಾಡಿ ದೇವತೆಗಳಿಗೆ ಆ ಯಜ್ಞಭಾಗವು ಸೇರುವಂತೆ ಮಾಡಿದರೆನ್ನುತ್ತಾರೆ.

**ಸ ಪ್ರಯುಜ್ಯ ನಿಶಿತಾ ನಿಶಾತಧೀ-**
**ರ್ವೈಶ್ವದೇವವರಶಸ್ತ್ರ(ಶಾಸ್ತ್ರ)ಸಂತತೀಃ ।**
**ರಾಕ್ಷಸಾಸುರನಿರಾಸಕೃತ್ ಸುರಾನ್**
**ವೀರವರ್ಯ ಇವ ಭಾಗಮಾಪಯತ್ ॥ 49 ॥**

**ಪದಚ್ಛೇದ—** ಸಃ, ಪ್ರಯುಜ್ಯ, ನಿಶಿತಾಃ, ನಿಶಾತಧೀಃ, ವೈಶ್ವದೇವವರಶಸ್ತ್ರ(ಶಾಸ್ತ್ರ)ಸಂತತೀಃ, ರಾಕ್ಷಸಾಸುರ-ನಿರಾಸಕೃತ್, ಸುರಾನ್, ವೀರವರ್ಯಃ, ಇವ, ಭಾಗಂ, ಆಪಯತ್ ।

**ಅನ್ವಯ—** ನಿಶಾತಧೀಃ, ಸಃ ನಿಶಿತಾಃ, ವೈಶ್ವದೇವವರಶಸ್ತ್ರ (ಶಾಸ್ತ್ರ)ಸಂತತೀಃ, ಪ್ರಯುಜ್ಯ, ರಾಕ್ಷಸಾಸುರನಿರಾಸಕೃತ್, ಸುರಾನ್, ಭಾಗಂ, ವೀರವರ್ಯಃ, ಇವ, ಆಪಯತ್ ।

**ಅನ್ವಯಾರ್ಥ—**

**ನಿಶಾತಧೀಃ** = ತೀಕ್ಷ್ಣವಾದ ಬುದ್ಧಿಯುಳ್ಳ,

**ಸಃ** = ಆ ಮಧ್ವಾಚಾರ್ಯರ ತಮ್ಮಂದಿರ,

**ನಿಶಿತಾಃ** = ಸಾಮರ್ಥ್ಯದಿಂದ ಕೂಡಿದ,

**ವೈಶ್ವದೇವವರಶಸ್ತ್ರ(ಶಾಸ್ತ್ರ)ಸಂತತೀಃ** = ವಿಶ್ವೇದೇವ ಸಂಬಂಧವುಳ್ಳ, ಉತ್ತಮವಾದ ಶಸ್ತ್ರವೆಂಬ ಋಕ್ಕುಗಳ ಸಮೂಹಗಳನ್ನು

**ಪ್ರಯುಜ್ಯ** = ಪ್ರಯೋಗಿಸಿ,

**ರಾಕ್ಷಸಾಸುರನಿರಾಸಕೃತ್(ಸನ್)** = ರಾಕ್ಷಸರು, ಅಸುರರು ಇವರ ತಿರಸ್ಕಾರವನ್ನು ಮಾಡುವವರಾಗಿ,

**ಸುರಾನ್** = ದೇವತೆಗಳನ್ನು ಕುರಿತು,

**ಭಾಗಂ** = ಹವಿರ್ಭಾಗವನ್ನು,

**ವೀರವರ್ಯ ಇವ** = ಉತ್ತಮನಾದ ಶೂರನಂತೆ,

**ಆಪಯತ್** = ಹೊಂದಿಸಿದರು.

**ತಾತ್ಪರ್ಯ—** ನ್ಯಾಯಮಾರ್ಗದಲ್ಲಿರುವ ಶೂರಶ್ರೇಷ್ಠನೊಬ್ಬನು, ಹರಿತವಾದ ಶಸ್ತ್ರವನ್ನು ಉಪಯೋಗಿಸಿ, ಅನ್ಯಾಯದಿಂದ ಧನದ ಭಾಗವನ್ನು ಬಯಸುವ ಜನರನ್ನು ದೂರಮಾಡಿ, ಆ ಧನದ ಯಥೋಚಿತವಾದ ಭಾಗವನ್ನು ಅರ್ಹರಾದವರಿಗೆ ಮಾತ್ರ ಕೊಡಿಸುವಂತೆ, ಯಾಗದಲ್ಲಿ ಅತ್ಯಂತ ಕುಶಲರಾದ ಶ್ರೀಮಧ್ವಾಚಾರ್ಯರ ತಮ್ಮಂದಿರು ಅಗ್ನಿ, ಮಾರುತ, ಮರುತ್ವಂತ ಎಂಬ ವಿಶ್ವೇದೇವತೆಗಳ ಸಂಬಂಧವುಳ್ಳ ಸಮರ್ಥವಾದ ಮಂತ್ರಗಳನ್ನು ಹೇಳಿದರು. ಅದರಿಂದ ರಾಕ್ಷಸರು ಮತ್ತು ಅಸುರರು ಯಜ್ಞದಲ್ಲಿ ಭಾಗವನ್ನು ತೆಗೆದುಕೊಳ್ಳದಂತೆ ಮಾಡಿ ಆ ಭಾಗವು ಕೇವಲ ದೇವತೆಗಳಿಗೆ ಸಲ್ಲುವಂತೆ ಮಾಡಿದರು.

**ವಿಶೇಷಾಂಶ—** ಯಜ್ಞದಲ್ಲಿ ಋಗ್ವೇದೋಕ್ತವಾದ ಮಂತ್ರಗಳನ್ನು ಪಠಿಸುವ ಋತ್ವಿಜನಿಗೆ ಹೋತೃ ಎಂದು ಹೆಸರು. ಯಜ್ಞದಲ್ಲಿ ಅವನು ಪಠಿಸುವ ಋಚ್ ಮಂತ್ರಗಳಿಗೆ ಶಸ್ತ್ರ ಎಂದು ಹೆಸರು. ಈ ಯಜ್ಞದಲ್ಲಿ ಆಚಾರ್ಯರ ತಮ್ಮಂದಿರೇ ಹೋತೃವಿನ ಸ್ಥಾನವನ್ನು ಅಲಂಕರಿಸಿದ್ದರು. 'ವಿಶ್ವೇದೇವ, ಅಗ್ನಿ, ಮಾರುತ, ಮರುತ್ವತೀಯಶ್ರೇಷ್ಠಾ ವಿಶ್ವೇದೇವಸಂಬಂಧಿನೀಃ, ತತ್ತನ್ಮಂತ್ರಸಂಬಂಧೇನ ಅಸ್ತ್ರರೂಪಾಃ ಆಯುಧಸಂತತೀಶ್ಚ' ಎಂದು ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ ಹೇಳಿದಂತೆ, ಅಗ್ನಿ, ಮರುತ್, ಮರುತ್ವಂತ ಎಂಬ ವಿಶ್ವದೇವತೆಗಳಿಗೆ ಸಂಬಂಧಪಟ್ಟ ಋಚ್ ಮಂತ್ರಗಳನ್ನು ಪಠಿಸಿದಾಗ ರಾಕ್ಷಸ ಮತ್ತು ಅಸುರರು ಯಜ್ಞದಲ್ಲಿ ಹತ್ತಿರಕ್ಕೆ ಬಾರದಂತಾಯಿತು. ವೀರನು ಅಸ್ತ್ರ ಮಂತ್ರಗಳನ್ನು ಪಠಿಸಿ ಶಸ್ತ್ರ ಪ್ರಯೋಗವನ್ನು ಮಾಡಿ ದುರ್ಜನರನ್ನು ದೂರಮಾಡಿ ಸಜ್ಜನರಿಗೆ ಅವರ ಭಾಗವನ್ನು ಕೊಡಿಸುವಂತೆ, ಆಚಾರ್ಯರ ತಮ್ಮಂದಿರೂ ದುಷ್ಟ ರಾಕ್ಷಸಾದಿಗಳನ್ನು ದೂರ ಕಳುಹಿಸಿ ದೇವತೆಗಳಿಗೆ ಭಾಗ ಸಿಗುವಂತೆ ಮಾಡಿದರು.

**ವಿಗ್ರಹ—**

**ನಿಶಾತಧೀಃ—** ನಿಶಾತಾ ಧೀಃ ಯಸ್ಯಸಃ ನಿಶಾತಾಧೀಃ ।

**ವೈಶ್ವದೇವವರಶಸ್ತ್ರಸಂತತೀಃ—** ವಿಶ್ವೇ ಚ ತೇ ದೇವಾಶ್ಚ ವಿಶ್ವೇದೇವಾಃ, ವಿಶ್ವೇದೇವಾನಾಂ ಇಮಾನಿ ವೈಶ್ವ-ದೇವಾನಿ, ವರಾಣಿ ಚ ತಾನಿ ಶಸ್ತ್ರಾಣಿ ಚ ವರಶಸ್ತ್ರಾಣಿ, ವೈಶ್ವದೇವಾನಿ ಚ ತಾನಿ ವರಶಸ್ತ್ರಾಣಿ ಚ ವೈಶ್ವ-ದೇವವರಶಸ್ತ್ರಾಣಿ, ವೈಶ್ವದೇವವರಶಸ್ತ್ರಾಣಾಂ ಸಂತತಯಃ ವೈಶ್ವದೇವವರಶಸ್ತ್ರಸಂತತಯಃ ತಾಃ ವೈಶ್ವ-ದೇವವರಶಸ್ತ್ರಸಂತತೀಃ ।

**ರಾಕ್ಷಸಾಸುರನಿರಾಸಕೃತ್—** ರಾಕ್ಷಸಾಶ್ಚ ಅಸುರಾಶ್ಚ ರಾಕ್ಷಸಾಸುರಾಃ, ನಿರಾಸಂ ಕರೋತೀತಿ ನಿರಾಸಕೃತ್, ರಾಕ್ಷಸಾಸುರಾಣಾಂ ನಿರಾಸಕೃತ್, ರಾಕ್ಷಸಾಸುರನಿರಾಸಕೃತ್ ।

**ವೀರವರ್ಯಃ—** ವೀರೇಷು ವರ್ಯಃ ವೀರವರ್ಯಃ ।

**ಕ್ರಿಯಾಪದ— ಆಪಯತ್** - ಆಪ್‌ಲೃವ್ಯಾಪ್ತೌ ಇತಿ ವ್ಯಾಪ್ತ್ಯರ್ಥಕಾತ್ ಆಪ್‌ಧಾತೋಃ ಣಿಜಂತಾತ್ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಆಪಯತ್ ಇತಿರೂಪಂ ।

ಆಪಯತ್ ಆಪಯತಾಂ ಆಪಯನ್, ಆಪಯಃ ಆಪಯತಂ ಆಪಯತ, ಆಪಯಂ ಆಪಯಾವ ಆಪಯಾಮ ।

**ಪ್ರಯೋಗ—** ಸುರಾಃ ಭಾಗಂ ಆಪ್ನುವನ್ (ಅಣಿಜಂತ ಪ್ರಯೋಗ) ।

ಸುರಾನ್ ಭಾಗಂ ಆಪಯತ್ (ಣಿಜಂತ ದ್ವಿಕರ್ಮಕ ಕರ್ತರಿ ಪ್ರಯೋಗ) ।

ತೇನ ಸುರಾಃ ಭಾಗಂ ಆಪ್ಯಂತ, ಸುರಾನ್ ಭಾಗಃ ಆಪ್ಯತ ಇತಿ ವಾ (ದ್ವಿಕರ್ಮಕ ಕರ್ಮಣಿ ಪ್ರಯೋಗ) ।

**ವ್ಯಾಕರಣವಿಶೇಷ—** ಸಃ ವೀರವರ್ಯ ಇವ ಸುರಾನ್ ಭಾಗಂ ಆಪಯತ್ ಎಂಬಲ್ಲಿ ಗತಿಬುದ್ಧಿ ಪ್ರತ್ಯವಸಾನಾರ್ಥ ಶಬ್ದಕರ್ಮಾಕರ್ಮಕಾಣಾಮಪಿ ಕರ್ತಾ ಸ ಣೌ (1-4-52) ಎಂಬ ಸೂತ್ರದಿಂದ ಅಣಿಜಂತಾವಸ್ಥೆಯಲ್ಲಿ ಕರ್ತೃವಾದ ಸುರರಿಗೆ ಣಿಜಂತಾವಸ್ಥೆಯಲ್ಲಿ ಕರ್ಮಸಂಜ್ಞೆಯು ಬಂದು ದ್ವಿತೀಯಾ ವಿಭಕ್ತಿಯು ಬಂದಿದೆ.

**ಅಲಂಕಾರ—** ಇಲ್ಲಿ ಉಪಮಾಲಂಕಾರವಿದೆ. ಲಕ್ಷಣಾದಿಗಳನ್ನು ಹಿಂದೆಯೇ ಹೇಳಿದೆ.

**ಕೋಶ—** 'ಅಸುರಾ ದೈತ್ಯದೈತೇಯಾಃ ದನುಜೇಂದ್ರಾರಿದಾನವಾಃ' ಎಂದು ಅಮರ.

★ ★ ★

**ಅವತಾರಿಕಾ—** ಸಾಕ್ಷಾತ್ ಮುಖ್ಯಪ್ರಾಣದೇವರ ಅಂಶಭೂತರಾದ ಶ್ರೀಮಧ್ವಾಚಾರ್ಯರ ಸನ್ನಿಧಾನದಲ್ಲಿ ಆ ಯಾಗವನ್ನು ಮಾಡಿಸಿದ್ದರಿಂದ ಅಲ್ಲಿ ಉಂಟಾದ ವಿಶೇಷವನ್ನು ವರ್ಣಿಸುತ್ತಿದ್ದಾರೆ. ಅದನ್ನು ವರ್ಣಿಸಲು ಸಾಧ್ಯವಿಲ್ಲ-ವೆಂದೂ ಹೊಗಳುತ್ತಾರೆ.

**ವಾಯುನಾ ತ್ರಿರಪಿ ಪೂರ್ವಪಾಯಿನಾ**
**ಸರ್ವದೈವತಜಿತಾ ತರಸ್ವಿನಾ ।**
**ಯೋಽಪರೋಕ್ಷವಪುಷಾಽಪ್ಯಪೇಕ್ಷಿತಃ**
**ಕೋಽತ್ರ ವರ್ಣಯತಿ ತಂ ಮಹಾಕ್ರತುಮ್ ॥ 50 ॥**

**ಪದಚ್ಛೇದ—** ವಾಯುನಾ, ತ್ರಿಃ, ಅಪಿ, ಪೂರ್ವಪಾಯಿನಾ, ಸರ್ವದೈವತಜಿತಾ, ತರಸ್ವಿನಾ, ಯಃ, ಅಪರೋಕ್ಷವ-ಪುಷಾ, ಅಪಿ, ಅಪೇಕ್ಷಿತಃ, ಕಃ, ಅತ್ರ, ವರ್ಣಯತಿ, ತಂ ಮಹಾಕ್ರತುಂ ।

**ಅನ್ವಯ—** ತ್ರಿಃ, ಅಪಿ, ಪೂರ್ವಪಾಯಿನಾ, ಸರ್ವದೈವತಜಿತಾ, ತರಸ್ವಿನಾ, ವಾಯುನಾ, ಯಃ (ಮಹಾಕ್ರತುಃ) ಅಪರೋಕ್ಷವಪುಷಾ, ಅಪಿ, ಅಪೇಕ್ಷಿತಃ, ಅತ್ರ ತಂ, ಮಹಾಕ್ರತುಂ, ಕಃ, ವರ್ಣಯತಿ?

ಅನ್ವಯಾರ್ಥ—

ತ್ರಿಃ ಅಪಿ = ಮೂರು ಸಲವೂ,
ಪೂರ್ವಪಾಯಿನಾ = ಮೊದಲು ಸೋಮರಸವನ್ನು ಕುಡಿದಿದ್ದ
ಸರ್ವದೈವತಜಿತಾ = ಎಲ್ಲಾ ದೇವತೆಗಳನ್ನು ಜಯಿಸಿದ,
ತರಸ್ವಿನಾ = ವೇಗ ಮತ್ತು ಬಲವುಳ್ಳ,
ವಾಯುನಾ = ಮುಖ್ಯಪ್ರಾಣದೇವರಿಂದ,
ಯಃ = ಯಾವ ಮಹಾಯಾಗವು,
ಅಪರೋಕ್ಷವಪುಷಾ ಅಪಿ = ಪ್ರತ್ಯಕ್ಷವಾದ ಮಧ್ವರೂಪ ದೇಹವುಳ್ಳವರಿಂದಲೂ,
ಅಪೇಕ್ಷಿತಃ = ಚೆನ್ನಾಗಿ ಪೂರ್ತಿಯಾಗಬೇಕೆಂದು ಅಪೇಕ್ಷಿಸಲ್ಪಟ್ಟಿದೆಯೋ,
ಅತ್ರ = ಈ ಭೂಮಿಯಲ್ಲಿ
ತಂ = ಅಂತಹ
ಮಹಾಕ್ರತುಂ = ದೊಡ್ಡ ಯಜ್ಞವನ್ನು
ಕಃ = ಯಾವನು,
ವರ್ಣಯತಿ? = ವರ್ಣಿಸುತ್ತಾನೆ?

ತಾತ್ಪರ್ಯ— ಹಿಂದೆ ಯಾಗದ ಸಂದರ್ಭದಲ್ಲಿ ದೇವತೆಗಳು ನಾನು ಮೊದಲು ಸೋಮರಸವನ್ನು ಕುಡಿಯುವೆನು, ನಾನೇ ಮೊದಲು ಸೋಮರಸವನ್ನು ಕುಡಿಯುವೆನು ಎಂದು ಸ್ಪರ್ಧಿಸಿದರು. ಆಗ ಯಾರು ನಮ್ಮಲ್ಲಿ ಅತ್ಯಂತ ಬಲಶಾಲಿ ಮತ್ತು ವೇಗಶಾಲಿಯೋ ಅವನೇ ಮೊದಲು ಸೋಮರಸಪಾನ ಮಾಡಲಿ ಎಂದು ತಮ್ಮಲ್ಲಿ ಹೆಚ್ಚು ಬಲಶಾಲಿ ಮತ್ತು ವೇಗ ಶಾಲಿಯನ್ನು ಆರಿಸಲು ಯುದ್ಧ ಮಾಡಿದರು. ಆಗ ಶ್ರೀ ಮುಖ್ಯಪ್ರಾಣದೇವರು ಎಲ್ಲಾ ದೇವತೆಗಳನ್ನೂ ಸೋಲಿಸಿ ಮೂರು ಬಾರಿ ತಾವೇ ಸೋಮರಸವನ್ನು ಪಾನ ಮಾಡಿದರು. ವೇಗ, ಬಲಗಳಲ್ಲಿ ಅವರನ್ನು ಮೀರಿಸುವ ದೇವತೆಗಳೇ ಇಲ್ಲ. ಇಂತಹ ಮುಖ್ಯಪ್ರಾಣದೇವರೇ ಈಗ ಮಧ್ವರೂಪದಿಂದ ಅವತರಿಸಿ ಈ ಮಹಾಯಾಗವನ್ನು ನಡೆಯಿಸುತ್ತಾ ಅದು ಚೆನ್ನಾಗಿ ಆಗಬೇಕು. ಎಲ್ಲಾ ದೇವತೆಗಳಿಗೂ ಪರಮಾತ್ಮನಿಗೂ ತೃಪ್ತಿಕರವಾಗಬೇಕು ಎಂದು ಬಯಸುತ್ತಿದ್ದಾರೆ. ಅಂತಹ ಮಹಾ ಯಜ್ಞವು ಎಷ್ಟು ಉತ್ತಮವಾಗಿ ನಡೆಯಿತು ಎಂಬ ವಿಷಯವನ್ನು, ಆ ಯಾಗದ ವೈಭವವನ್ನು ಯಾರಿಗೆ ತಾನೇ ವರ್ಣಿಸಲು ಸಾಧ್ಯವಿದೆ.

ವಿಶೇಷಾಂಶ— (ಋಗ್ವೇದದ) ಐತಿರೇಯ ಬ್ರಾಹ್ಮಣದಲ್ಲಿ ಹೀಗೆ ಹೇಳಿದೆ. 'ದೇವಾ ವೈ ಸೋಮಸ್ಯ ರಾಜ್ಞೋಗ್ರವೇಗೇ'(ವೇಯೇ) ನ ಸಮಪಾದಯನ್ ಅಹಂ ಪ್ರಥಮಂ ಪಿಬೇಯಂ ಅಹಂ ಪ್ರಥಮಂ ಪಿಬೇಯಂ ಇತ್ಯೇವ ಅಕಾಮಯಂತ, ತೇ ಸಂಪಾದಯನ್, ತತೋಽಬ್ರುವನ್, ಹಂತಾ ಹಿ, ಮಯಾ, ಸಮಯೋ, ನ ಉಜ್ಜೇಷ್ಯತಿ ಸಃ ಪ್ರಥಮಃ, ಸೋಮಸ್ಯ ಪಾಸ್ಯತೀತಿ ತಥೇತಿ, ಆಜಿಂ, ಆಯುಃ ತೇಷಾಂ, ಆಜಿಂ, ಯಾತಾನಾಂ, ಅಭಿಸೃಷ್ಟಾನಾಂ, ವಾಯುಃ, ಮುಖಂ, ಪ್ರಥಮಃ, ಪ್ರತ್ಯಪದ್ಯತ, ಅಥ ಇಂದ್ರಃ, ಮಿತ್ರಾವರುಣೌ, ಅಥ ಅಶ್ವಿನೌ, ಸೋಽವೇದಿಂದ್ರಃ, ವಾಯುಂ, ಉದ್ವೇಜಯಂ, ಇತಿ ತಮನು। ಪರಾಪತತ್, ಸಹ ನಾವಥೋಜ್ಜೇಯಾವೇತಿ, ಸ ನೇತ್ಯಬ್ರವೀತ್, ಅಹಮೇವೋ-ಜ್ಜೇಷ್ಯಾಮೀತಿ, ತೃತೀಯಂ ಅಥ ಉಜ್ಜಾಯಾವೇತಿ ನೇತಿ ಹೈವ ಅಬ್ರವೀತ್ ಅಹಮೇವ ಉಜ್ಜೇಷ್ಯಾಮೀತಿ. ತುರೀಯಮಥ ಉಜ್ಜಾಯಾವೇತಿ, ತಥೇತಿ ತಂ ತುರೀಯೇತ್ಯಾರ್ಜತ, ತತ್ ತುರೀಯಭಾಗ್, ಇಂದ್ರೋಽಭವತ್, ತ್ರಿಭಾಗ್ ವಾಯುಃ, ಇತಿ ಐತರೇಯ ಬ್ರಾಹ್ಮಣೇ ಎಂದು ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ ಹೇಳಿದಂತೆ ವಾಯುದೇವರು ಪರಮಾತ್ಮ ಮತ್ತು ಲಕ್ಷ್ಮಿ ಅತಿರಿಕ್ತ ಸರ್ವದೇವೋತ್ತಮರು, ಸರ್ವಜೀವೋತ್ತಮರು.

**ಅಗ್ರಂ ಪಿಬಾ ಮಧೂನಾಂ ಸುತಂ ವಾಯೋ ದಿವಿಷ್ಟಿಷು ।**
**ತ್ವಂ ಹಿ ಪೂರ್ವಪಾ ಅಸಿಜ ದೇವಾ ದಿಧಿಷೇ ಪೂರ್ವಪೇಯಂ ॥**

ಇತ್ಯಾದಿ ಶ್ರುತಿಸಿದ್ಧಂ ತತ್ (ಭಾ.ಪ್ರ.) ವಾಯುದೇವರು ಮೊದಲು ಸೋಮಪಾನಾರ್ಹರು ಎಂಬ ವಿಷಯವು ವೇದಮಂತ್ರದಲ್ಲಿಯೂ ಪ್ರತಿಪಾದಿತವಾಗಿದೆ.

**ವಿಗ್ರಹ—**

**ಪೂರ್ವಪಾಯಿನಾ—** ಪೂರ್ವಂ ಪಾತುಂ ಶೀಲಂ ಅಸ್ಯೇತಿ ಪೂರ್ವಪಾಯಿ ತಸ್ಯ । (ಪಾಯಿನ್)

**ಸರ್ವದೈವತಜಿತಾ—** ಸರ್ವಾಣಿ ಚ ತಾನಿ, ದೈವತಾನಿ ಚ, ಸರ್ವದೈವತಾನಿ, ಸರ್ವದೈವತಾನಿ ಜಯತೀತಿ, ಸರ್ವದೈವತಜಿತ್ ತೇನ ।

**ತರಸ್ವಿನಾ—** ತರಃ ಅಸ್ಯ ಅಸ್ತೀತಿ, ತರಸ್ವೀ, ತೇನ । (ತರಸ್ವಿನ್‌ಶಬ್ದ)

**ಅಪರೋಕ್ಷವಪುಷಾ—** ನ ಪರೋಕ್ಷಂ ಅಪರೋಕ್ಷಂ, ಅಪರೋಕ್ಷಂ ವಪುಃ ಯಸ್ಯಸಃ ಅಪರೋಕ್ಷವಪುಃ, ತೇನ।

**ಮಹಾಕ್ರತುಂ—** ಮಹಾನ್ ಚ ಅಸೌ ಕ್ರತುಶ್ಚ ಮಹಾಕ್ರತುಃ ತಂ ।

**ಕ್ರಿಯಾಪದ— ವರ್ಣಯತಿ-** ವರ್ಣವರ್ಣಕ್ರಿಯಾ ವಿಸ್ತಾರಗುಣ ವಚನೇಷು ಇತಿ ವರ್ಣಕ್ರಿಯಾವಿಸ್ತಾರ ವಚನಾರ್ಥಕಾತ್ ವರ್ಣಧಾತೋಃ, ಸಕರ್ಮಕಾತ್, ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್, ಪ್ರಥಮಪುರುಷೇ ಏಕವಚನೇ ವರ್ಣಯತಿ ಇತಿರೂಪಂ ।

ವರ್ಣಯತಿ ವರ್ಣಯತಃ ವರ್ಣಯಂತಿ, ವರ್ಣಯಸಿ ವರ್ಣಯಥಃ ವರ್ಣಯಥ,
ವರ್ಣಯಾಮಿ ವರ್ಣಯಾವಃ ವರ್ಣಯಾಮಃ ।

**ಪ್ರಯೋಗ—** ತಂ ಮಹಾಕ್ರತುಂ ಕಃ ವರ್ಣಯತಿ? (ಕರ್ತರಿ)
ಸಃ ಮಹಾಕ್ರತುಃ ಕೇನ ವರ್ಣ್ಯತೇ (ಕರ್ಮಣಿ)

**ವ್ಯಾಕರಣವಿಶೇಷ—** ಪೂರ್ವಪಾಯಿಾ ಎಂಬಲ್ಲಿ ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ (3-2-78) ಎಂಬ ಸೂತ್ರದಿಂದ 'ತಾಚ್ಛೀಲ್ಯ' ಸ್ವಭಾವ ಎಂಬ ಅರ್ಥದಲ್ಲಿ 'ಣಿನಿ' ಪ್ರತ್ಯಯ. 'ತರಸ್ವಿನಾ' ಎಂಬಲ್ಲಿ ತರಸ್ ಶಬ್ದಕ್ಕೆ 'ಅಸ್ಮಾಯಾಮೇಧಾಸ್ರಜೋ ವಿನಿಃ' (5-2-121) ಎಂಬ ಸೂತ್ರದಿಂದ ವಿನಿಪ್ರತ್ಯಯ ।

**ಕೋಶ—** 'ತರಸೀಬಲರಂಹಸೀ' ಎಂದು ವೈಜಯಂತೀ ಕೋಶ. 'ತರಸ್ವೀ ತ್ವರಿತೋ ವೇಗೀ' ಎಂದು ಅಮರ ।

★ ★ ★

**ಅವತಾರಿಕಾ—** ಆಚಾರ್ಯರು ಈ ರೀತಿ ಯಾಗ ಮಾಡಿಸಿದ್ದರಿಂದ ಏನು ತಿಳಿದು ಬರುತ್ತದೆ ಎಂದು ಹೇಳುತ್ತಾರೆ ಮತ್ತು ಬ್ರಹ್ಮಜ್ಞಾನಾಪೇಕ್ಷಿಗಳಿಗೂ ಕೂಡ ಫಲಾಪೇಕ್ಷೆಯಿಲ್ಲದೆ ಮಾಡುವ ಯಜ್ಞಾದಿ ಸತ್ಕರ್ಮವು ಜ್ಞಾನಾದಿಗಳ ವೃದ್ಧಿಗೆ ಮತ್ತೊಂದು ಕಾರಣವೆಂದು ಅದನ್ನು ಶ್ರೀಮದಾಚಾರ್ಯರು ಮಾಡಿಸಿದರೆನ್ನುತ್ತಾರೆ.

**ಬ್ರಹ್ಮವೇದನನಿವಿಷ್ಟಚೇತಸಾಂ**
**ಕರ್ಮ ತತ್ರ ಕರಣಾಂತರಂ ಭವೇತ್ ।**
**ಜ್ಞಾಪಯನ್ನಿತಿ ಪರಾತ್ಮವೇದಕಃ**
**ಕರ್ಮ ಧರ್ಮಮಪಿ ಸ ಹ್ಯಚೀಕರತ್ ॥ 51 ॥**

**ಪದಚ್ಛೇದ—** ಬ್ರಹ್ಮವೇದನನಿವಿಷ್ಟಚೇತಸಾಂ, ಕರ್ಮ, ತತ್ರ, ಕರಣಾಂತರಂ, ಭವೇತ್, ಜ್ಞಾಪಯನ್, ಇತಿ, ಪರಾತ್ಮವೇದಕಃ, ಕರ್ಮ, ಧರ್ಮಂ, ಅಪಿ, ಸಃ, ಅಚೀಕರತ್ ।

**ಅನ್ವಯ—** ಬ್ರಹ್ಮವೇದನನಿವಿಷ್ಟಚೇತಸಾಂ, ತತ್ರ, ಕರ್ಮ, ಕರಣಾಂತರಂ, ಭವೇತ್, ಇತಿ, ಜ್ಞಾಪಯನ್, ಪರಾತ್ಮವೇದಕಃ, ಸಃ, ಕರ್ಮ, ಅಪಿ, ಧರ್ಮಂ, ಅಚೀಕರತ್, ಹಿ ।

**ಅನ್ವಯಾರ್ಥ—**

**ಬ್ರಹ್ಮವೇದನನಿವಿಷ್ಟಚೇತಸಾಂ** = ಬ್ರಹ್ಮಗುಣಪೂರ್ಣನಾದ ಶ್ರೀಮನ್ನಾರಾಯಣನನ್ನು ತಿಳಿಯುವುದರಲ್ಲಿ ಆಸಕ್ತರಾದ ಮನಸ್ಸುಳ್ಳವರಿಗೆ,

**ತತ್ರ** = ಆ ಬ್ರಹ್ಮಜ್ಞಾನದಲ್ಲಿ,

**ಕರ್ಮ** = ಯಜ್ಞಾದಿಕಾರ್ಯವು,

**ಕರಣಾಂತರಂ** = ಮತ್ತೊಂದು ಸಾಧನವು,

**ಭವೇತ್** = ಆದೀತು,

**ಇತಿ** = ಹೀಗೆಂದು,

**ಜ್ಞಾಪಯನ್** = ತಿಳಿಸುತ್ತ,

**ಪರಾತ್ಮವೇದಕಃ** = ಪರಮಾತ್ಮನನ್ನು ತಿಳಿಸಿಕೊಡುವ,

**ಸಃ** = ಆ ಶ್ರೀಮಧ್ವಾಚಾರ್ಯರು,

**ಕರ್ಮ ಅಪಿ** = ಭಗವಂತನ ವಿಷಯಕವಾದ ಯಜ್ಞಾದಿಗಳನ್ನು,

**ಧರ್ಮಂ** = ಮೋಕ್ಷಾರ್ಥಿಯ ಧರ್ಮವನ್ನಾಗಿ,

**ಅಚೀಕರತ್ ಹಿ** = ಮಾಡಿಸಿದರಷ್ಟೆ

**ತಾತ್ಪರ್ಯ—** ಸಮಸ್ತಕಲ್ಯಾಣಗುಣಪೂರ್ಣನಾದ ಶ್ರೀಮನ್ನಾರಾಯಣನನ್ನು ತಿಳಿಯಬಯಸುವ ಮೋಕ್ಷಾಪೇಕ್ಷಿಗಳು ಶಾಸ್ತ್ರ ಶ್ರವಣಾದಿಗಳನ್ನು ಮಾಡುವುದು ಪರಮಾತ್ಮನ ಜ್ಞಾನಕ್ಕೆ ಕಾರಣವಾಗುತ್ತದೆ. ಆಗ ಕರ್ಮಾನುಷ್ಠಾನ ಮಾಡುವುದು ಅವರ ಅಂತಃಕರಣ ಶುದ್ಧಿದ್ವಾರಾ ಜ್ಞಾನಕ್ಕೆ ಕಾರಣವಾಗುತ್ತದೆ. ಆದರೆ ಜ್ಞಾನಾರ್ಥಿಗಳು ಕರ್ಮಗಳಿಗೆ ಹೇಳಿರುವ ಸ್ವರ್ಗಾದಿ ಫಲವನ್ನು ಬಯಸದೆ ಶ್ರೀವಿಷ್ಣು ಪ್ರೇರಣೆಯಿಂದ ವಿಷ್ಣು ಪ್ರೀತ್ಯರ್ಥರಾಗಿ ಯಜ್ಞಾದಿಗಳನ್ನು ಮಾಡುತ್ತೇನೆ ಎಂದು ಸಂಕಲ್ಪಿಸಿ ಮಾಡುವ ಆ ಕರ್ಮಗಳು ಜ್ಞಾನಸಂಪಾದನೆಗೆ ಸಾಧನವಾಗುವುವು ಎಂಬುದನ್ನು ತಿಳಿಸಲು ಶ್ರೀ ಮಧ್ವಾಚಾರ್ಯರು ತಮ್ಮ ತಮ್ಮನಿಂದ ಯಾಗವನ್ನು ಮಾಡಿಸಿದರು. ಪ್ರವೃತ್ತಿಕರ್ಮವು ಅಂದರೆ ಫಲಾಪೇಕ್ಷೆಯಿಂದ ಮಾಡುವ ಕರ್ಮ ಮಾತ್ರವೇ ಬಂಧಕವು. ನಿಷ್ಕಾಮಕರ್ಮವು (ಫಲಾಪೇಕ್ಷೆ ಇಲ್ಲದಂತೆ ಕೇವಲ ಪರಮಾತ್ಮನ ತೃಪ್ತಿಗಾಗಿ ಮಾಡುವ ಕರ್ಮವು) ಬಂಧಕವಲ್ಲ. 'ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ । ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಂ' ಎಂಬ ಪ್ರಮಾಣಾನುಸಾರವಾಗಿ ನಿವೃತ್ತಕರ್ಮಾನುಷ್ಠಾನವು ಜ್ಞಾನದ್ವಾರಾ ಮೋಕ್ಷಕ್ಕೆ ಸಾಧನವಾಗುತ್ತದೆ.

**ವಿಗ್ರಹ—**

**ಬ್ರಹ್ಮವೇದನನಿವಿಷ್ಟಚೇತಸಾಂ—** ಬ್ರಹ್ಮಣಃ ವೇದನಂ ಬ್ರಹ್ಮವೇದನಂ, ಬ್ರಹ್ಮವೇದನೇ ನಿವಿಷ್ಟಂ ಚೇತಃ ಯೇಷಾಂ ತೇ ಬ್ರಹ್ಮವೇದನನಿವಿಷ್ಟಚೇತಸಃ ತೇಷಾಂ ।

**ಕರಣಾಂತರಂ—** ಅನ್ಯತ್ ಕರಣಂ ಕರಣಾಂತರಂ ।

**ಪರಾತ್ಮವೇದಕಃ—** ಪರಶ್ಚಾಸೌ ಆತ್ಮಾಚ ಪರಾತ್ಮಾ, ಪರಾತ್ಮಾನಂ ವೇದಯತೀತಿ ಪರಾತ್ಮವೇದಕಃ ।

**ಕ್ರಿಯಾಪದ—** **ಭವೇತ್-** ಭೂಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವಿಧೌ ಲಿಙ್ ಪ್ರಥಮಪುರುಷೇ ಏಕವಚನೇ ಭವೇತ್ ಇತಿರೂಪಂ ।

ಭವೇತ್ ಭವೇತಾಂ ಭವೇಯುಃ, ಭವೇಃ ಭವೇತಂ ಭವೇತ, ಭವೇಯಂ ಭವೇವ ಭವೇಮ ।

★ ★ ★

**ಯಾನಿ ಯಾನಿ ಚರಿತಾನಿ ಯಾನಿ ಯಾ-**
**ನೀರಿತಾನಿ ಚ ಮನೋಹರಾಣ್ಯಹೋ ।**
**ತಾನಿ ತಾನಿ ಚ ವಿತಾನಚೇತಸೋ**
**ವಿಶ್ವವಿಸ್ಮಯಕರಾಣಿ ಭಾಂತಿ ಹಿ ॥ 52 ॥**

**ಪದಚ್ಛೇದ—** ಯಾನಿ, ಯಾನಿ, ಚರಿತಾನಿ, ಯಾನಿ, ಯಾನಿ, ಈರಿತಾನಿ, ಚ ಮನೋಹರಾಣಿ, ಅಹೋ, ತಾನಿ, ತಾನಿ, ಚ, ವಿತಾನಚೇತಸಃ, ವಿಶ್ವವಿಸ್ಮಯಕರಾಣಿ, ಭಾಂತಿ, ಹಿ ।

**ಅನ್ವಯ—** ವಿತಾನಚೇತಸಃ, ಯಾನಿ, ಯಾನಿ, ಚರಿತಾನಿ, ಚ, ಯಾನಿ, ಯಾನಿ, ಮನೋಹರಾಣಿ, ಈರಿತಾನಿ, ತಾನಿ, ತಾನಿ, ಚ, ವಿಶ್ವವಿಸ್ಮಯಕರಾಣಿ, ಭಾಂತಿ, ಹಿ, ಅಹೋ ।

**ಅನ್ವಯಾರ್ಥ—**

**ವಿತಾನಚೇತಸಃ** = ವಿಸ್ತಾರವಾದ ಜ್ಞಾನವುಳ್ಳ ಶ್ರೀಪೂರ್ಣಪ್ರಜ್ಞರು,
**ಯಾನಿ ಯಾನಿ** = ಯಾವ ಯಾವ,
**ಚರಿತಾನಿ** = ಕಾರ್ಯಗಳಿವೆಯೋ,
**ಚ** = ಮತ್ತು,
**ಯಾನಿ ಯಾನಿ** = ಯಾವ ಯಾವ,
**ಮನೋಹರಾಣಿ** = ಮನಸ್ಸನ್ನು ಸೆಳೆಯುವ,
**ಈರಿತಾನಿ** = ಮಾತುಗಳಿವೆಯೋ,
**ತಾನಿ ತಾನಿ ಚ** = ಅವುಗಳೆಲ್ಲವೂ,
**ವಿಶ್ವವಿಸ್ಮಯಕರಾಣಿ** = ಪ್ರಪಂಚಕ್ಕೆ ಆಶ್ಚರ್ಯಕರವಾಗಿ,
**ಭಾಂತಿ ಹಿ** = ಪ್ರಕಾಶಿಸುತ್ತವೆಯಷ್ಟೆ
**ಅಹೋ** = ಆಶ್ಚರ್ಯ.

**ತಾತ್ಪರ್ಯ—** ಹೀಗೆ ಶ್ರೀಪೂರ್ಣಪ್ರಜ್ಞ ಭಗವತ್ಪಾದರ ಕಾರ್ಯಗಳೂ, ಮನಸ್ಸನ್ನು ಸೆಳೆಯುವ ಮೃದು ಮಧುರ ವಾದ ನುಡಿಗಳೂ ಪ್ರಪಂಚದ ಎಲ್ಲಾ ಜನರನ್ನೂ ಆಶ್ಚರ್ಯಗೊಳಿಸುತ್ತಿದ್ದವು. ಹೀಗೆ ಮಾತಿನಿಂದಲೂ ಕಾರ್ಯದಿಂದಲೂ ಜನರನ್ನು ಆನಂದಗೊಳಿಸುವುದು ಆಶ್ಚರ್ಯಕರವಾಗಿದೆ.

**ವಿಗ್ರಹ—**

**ಮನೋಹರಾಣಿ—** ಹರಂತೀತಿ ಹರಾಣಿ, ಮನಸಃ ಹರಾಣಿ ಮನೋಹರಾಣಿ ।
**ವೇತಾನಚೇತಸಃ—** ವಿತಾನಂ ಚೇತಃ ಯಸ್ಯಸಃ ವಿತಾನಚೇತಾಃ ತಸ್ಯ ।

**ವಿಶ್ವವಿಸ್ಮಯಕರಾಣಿ**— ಕುರ್ವಂತೀತಿ ಕರಾಣಿ, ವಿಸ್ಮಯಸ್ಯ ಕರಾಣಿ ವಿಸ್ಮಯಕರಾಣಿ, ವಿಶ್ವಸ್ಯ ವಿಸ್ಮಯಕರಾಣಿ ವಿಶ್ವವಿಸ್ಮಯಕರಾಣಿ ।

**ಕ್ರಿಯಾಪದ**— **ಭಾಂತಿ**- ಭಾದೀಪ್ತೌ ಇತಿ ದೀಪ್ತ್ಯರ್ಥಕಾತ್ ಭಾಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲಟ್ ಪ್ರಥಮಪುರುಷೇ ಬಹುವಚನೇ ಭಾಂತಿ ಇತಿರೂಪಂ ।

ಭಾತಿ ಭಾತಃ ಭಾಂತಿ, ಭಾಸಿ ಬಾಥಃ ಭಾಥ, ಭಾಮಿ ಭಾವಃ ಭಾಮಃ ।

**ಪ್ರಯೋಗ**— ವಿತಾನಚೇತಸಃ ಚರಿತಾನಿ ಈರಿತಾನಿ ಚ ವಿಶ್ವವಿಸ್ಮಯಕರಾಣಿ ಭಾಂತಿ (ಕರ್ತರಿ) ।
ವಿತಾನಚೇತಸಃ ಚರಿತ್ರೈಃ ಈರಿತ್ರೈಃ ಚ ವಿಶ್ವವಿಸ್ಮಯಕರೈಃ ಭಾಯತೇ (ಭಾವೇ) ।

★ ★ ★

**ಅವತಾರಿಕಾ**— ಹೀಗೆ ಶ್ರೀ ವ್ಯಾಸನಾರಾಯಣರ ಆಜ್ಞೆಯಂತೆ ಭಾಷ್ಯ ನಿರ್ಮಾಣಾದಿ ದೇವತಾ ಕಾರ್ಯವನ್ನು ಎಸಗಿದ ಮೇಲೆ ಆಚಾರ್ಯರು ಮರಳಿ ಬದರಿಗೆ ಹೋದರೆಂದು ಹೇಳುತ್ತಾರೆ.

**ಸರಸ್ವತೀರ್ವೃತ್ತಿಕರೀಃ ಶರೀರಿಣಾ-**
**ಮತೀತ್ಯ ಬಹ್ವೀಃ ಸಮತೀತಗೋತ್ರಕಃ ।**
**ಪುರೇವ ಕೃಷ್ಣಪ್ರಿಯಮಾಪದಾಶ್ರಮಂ**
**ಪೃಥುಪ್ರಬೋಧಃ ಪುನರುತ್ತಮಾಶ್ರಮಮ್ ॥ 53 ॥**

**ಪದಚ್ಛೇದ**— ಸರಸ್ವತೀಃ, ವೃತ್ತಿಕರೀಃ, ಶರೀರಿಣಾಂ, ಅತೀತ್ಯ, ಬಹ್ವೀಃ, ಸಮತೀತಗೋತ್ರಕಃ, ಪುರಾ, ಇವ, ಕೃಷ್ಣಪ್ರಿಯಂ, ಆಪತ್, ಅಶ್ರಮಂ, ಪೃಥುಪ್ರಬೋಧಃ, ಪುನಃ, ಉತ್ತಮಾಶ್ರಮಂ ।

**ಅನ್ವಯ**— ಪೃಥುಪ್ರಬೋಧಃ, ಶರೀರಿಣಾಂ, ವೃತ್ತಿಕರೀಃ, ಬಹ್ವೀಃ, ಸರಸ್ವತೀಃ, ಅತೀತ್ಯ, ಸಮತೀತಗೋತ್ರಕಃ, ಪುರಾ, ಇವ, ಕೃಷ್ಣಪ್ರಿಯಂ, ಉತ್ತಮಾಶ್ರಮಂ, ಅಶ್ರಮಂ, ಪುನಃ, ಆಪತ್ ।

**ಅನ್ವಯಾರ್ಥ**—

**ಪೃಥುಪ್ರಬೋಧಃ** = ಶ್ರೀಪೂರ್ಣಪ್ರಜ್ಞರು,

**ಶರೀರಿಣಾಂ** = ಮನುಷ್ಯರಿಗೆ,

**ವೃತ್ತಿಕರೀಃ** = ಜೀವನವನ್ನು ಕೊಡುವ,(ಸ್ವರ್ಗಾದಿಗಳನ್ನು ಕೊಡುವುದರಿಂದ ಪ್ರವೃತ್ತಿ ಧರ್ಮಕ್ಕೆ ಪ್ರೇರಕವಾದ)

**ಬಹ್ವೀಃ** = ಬಹಳವಾದ,

**ಸರಸ್ವತೀಃ** = ಗೋದಾವರೀ ಮೊದಲಾದ ನದಿಗಳನ್ನು, (ಆಪಾತದಿಂದ ಪ್ರವೃತ್ತಿ ಧರ್ಮಬೋಧಕವಾದ ಜ್ಯೋತಿಷ್ಟೋಮಾದಿ ಮಾತುಗಳನ್ನು)

**ಅತೀತ್ಯ** = ದಾಟಿ, (ಮೀರಿ, ಅವುಗಳಿಗೆ ಸರಿಯಾದ ಆಧ್ಯಾತ್ಮಿಕಾರ್ಥವನ್ನು ಹೇಳಿ)

**ಸಮತೀತಗೋತ್ರಕಃ** = ದಾಟದ, ಸಹ್ಯವಿಂಧ್ಯಾದಿ ಪರ್ವತಗಳುಳ್ಳವರಾಗಿ (ದಾಟಲ್ಪಟ್ಟ ವಿಶ್ವಾಮಿತ್ರಾದಿ ಗೋತ್ರಗಳ ಆಚಾರ ವಿಶೇಷ ಉಳ್ಳವರಾಗಿ)

**ಪುರಾ ಇವ** = ಹಿಂದಿನಂತೆ,

**ಕೃಷ್ಣಪ್ರಿಯಂ** = ಶ್ರೀವ್ಯಾಸರಿಗೆ ಪ್ರಿಯವಾದ (ಭಗವಂತನಿಗೆ ಪ್ರಿಯವಾದ)

**ಉತ್ತಮಾಶ್ರಮಂ** = ಶ್ರೇಷ್ಠವಾದ ಬದರಿಕಾಶ್ರಮವನ್ನು, (ಸಂನ್ಯಾಸಾಶ್ರಮವನ್ನು)

**ಅಶ್ರಮಂ** = ಆಯಾಸವಿಲ್ಲದೆ,

**ಪುನಃ** = ತಿರುಗಿ,

**ಆಪತ್** = ಹೊಂದಿದರು.

**ತಾತ್ಪರ್ಯ**— ಶ್ರೀ ಮಧ್ವಾಚಾರ್ಯರು ತಮ್ಮ ಅವತಾರದಲ್ಲಿ ಮಾಡಬೇಕಾಗಿದ್ದ ಕಾರ್ಯಗಳಲ್ಲಿ ಮುಖ್ಯವಾದ ಕಾರ್ಯವನ್ನು ಹೀಗೆ ಪೂರೈಸಿದರು. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವೇದವಾಕ್ಯಗಳು ಸ್ವರ್ಗ ಮೊದಲಾದ ಫಲಗಳ ಜ್ಞಾನವನ್ನುಂಟು ಮಾಡಿ ಜನರನ್ನು ಪ್ರೇರಿಸಿ, ಅವರಿಗೆ ಪ್ರವೃತ್ತಿ ಧರ್ಮವನ್ನು ಬೋಧಿಸುತ್ತಿದ್ದವು. ಆಚಾರ್ಯರು ವೇದದಲ್ಲಿ ಬರುವ ಅಂತಹ ವಿಪುಲವಾದ ವಾಕ್ಯಗಳಿಗೂ ಪರಮ ಮುಖ್ಯ ವೃತ್ತಿಯಿಂದ ಪರಮಾತ್ಮನನ್ನೇ ಪ್ರತಿಪಾದಿಸುತ್ತವೆ ಎಂದು ತಿಳಿಸಿ, ಅವುಗಳ ಪರಮತಾತ್ಪರ್ಯ ಜ್ಞಾನದಿಂದ ಮೋಕ್ಷರೂಪವಾದ ಶಾಶ್ವತವಾದ ಫಲವು ಸಿಗುತ್ತದೆ ಎಂಬ ವಿಷಯವನ್ನು ಭಕ್ತರಿಗೆ ಬೋಧಿಸಿದರು. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಎಂಬ ಮೂರು ಆಶ್ರಮಗಳಿಗೆ ಉಚಿತವಾದ ವಿಶ್ವಾಮಿತ್ರಾದಿ ಗೋತ್ರಗಳ ಆಚಾರವನ್ನು ತೊರೆದು ಪರಮಾತ್ಮನಿಗೆ ಅತ್ಯಂತ ಪ್ರಿಯವಾದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದರು. ಇದನ್ನೆಲ್ಲಾ ಮಾಡಿದ ಆಚಾರ್ಯರು ಈಗ ಪುನಃ ವೇದ ಸರಸ್ವತಿಯನ್ನು ದಾಟಿ ಅದಕ್ಕೆ ಸರಿಯಾದ ಅರ್ಥವನ್ನು ಮಾಡಿದಂತೆ ಜನರಿಗೆ ಸ್ನಾನ ಪಾನ ಕೃಷಿ ಕಾರ್ಯಾದಿಗಳಿಂದ ಜೀವನವನ್ನು ಕೊಡುವ ಗೋದಾವರೀ ಮುಂತಾದ ಮಹಾ ಸರಸ್ವತಿಗಳನ್ನು ನದಿಗಳನ್ನು ದಾಟಿದರು. ವಿಶ್ವಾಮಿತ್ರಾದಿ ಗೋತ್ರಗಳನ್ನು ದಾಟಿದಂತೆ ಸಹ್ಯಾದಿ ಗೋತ್ರಗಳನ್ನು ಪರ್ವತಗಳನ್ನು ದಾಟಿದರು. ಶ್ರೀ ವೇದವ್ಯಾಸರಿಗೆ ಭಗವಂತನಿಗೆ ಪ್ರಿಯನಾದ ಸಂನ್ಯಾಸಾಶ್ರಮವನ್ನು ಶ್ರಮವಿಲ್ಲದೆ ಅನುಸರಿಸಿದಂತೆ, ಆ ಪರಮಾತ್ಮನಿಗೆ ಪ್ರಿಯನಾದ ಬದರಿಕಾಶ್ರಮಕ್ಕೂ ಶ್ರಮವಿಲ್ಲದೆ ಹೋದರು.

ವಿಗ್ರಹ—

**ವೃತ್ತಿಕರೀಃ**— ವೃತ್ತಿಂ ಕುರ್ವಂತಿತಿ ವೃತ್ತಿಕರ್ಯಃ ತಾಃ ।

**ಶರೀರಿಣಾಂ**— ಶರೀರಂ ಏಷಾಂ ಅಸ್ತೀತಿ ಶರೀರಿಣಃ ತೇಷಾಂ ।

**ಸಮತೀತಗೋತ್ರಕಃ**— ಸಮತೀತಾಃ ಗೋತ್ರಾಃ (ಪರ್ವತಾಃ) ಯೇನ ಸಃ ಸಮತೀತಗೋತ್ರಕಃ (ಸಮತೀತಂ ಗೋತ್ರಂ ಯೇನ ಸಃ ಸಮತೀತಗೋತ್ರಕಃ) ।

**ಕೃಷ್ಣಪ್ರಿಯಂ**— ಕೃಷ್ಣಸ್ಯ ಪ್ರಿಯಃ ಕೃಷ್ಣ ಪ್ರಿಯಃ ತಂ ।

**ಅಶ್ರಮಂ**— ನ ವಿದ್ಯತೇ ಶ್ರಮಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಅಶ್ರಮಂ ।

**ಪೃಥುಪ್ರಬೋಧಃ**— ಪೃಥುಃ ಪ್ರಬೋಧಃ ಯಸ್ಯಸಃ ಪೃಥುಪ್ರಬೋಧಃ ।

**ಉತ್ತಮಾಶ್ರಮಂ**— ಉತ್ತಮಶ್ಚಾಸೌ ಆಶ್ರಮಶ್ಚ ಉತ್ತಮಾಶ್ರಮಃ ತಂ ।

**ಕ್ರಿಯಾಪದ**— **ಆಪತ್** - ಆಪತ್ ಆಪತಾಂ ಆಪನ್, ಆಪಃ ಆಪತಂ ಆಪತ, ಆಪಂ ಆಪಾವ ಆಪಾಮ । ಆಪ್‌ಲ್ಯ ಇತಿ ವ್ಯಾಪ್ತೌ ವ್ಯಾಪ್ತ್ಯರ್ಥಕಾತ್ ಆಪ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ಆಪತ್ ಇತಿರೂಪಂ ।

**ಪ್ರಯೋಗ**— ಪೃಥುಪ್ರಬೋಧಃ ಕೃಷ್ಣಪ್ರಿಯಂ ಉತ್ತಮಾಶ್ರಮಂ ಪುನಃ ಆಪತ್ (ಕರ್ತರಿ) ।
ಪೃಥುಪ್ರಬೋಧೇನ ಕೃಷ್ಣಪ್ರಿಯಃ ಉತ್ತಮಾಶ್ರಮಃ ಪುನಃ ಆಪಿ (ಕರ್ಮಣಿ) ಆಪ್ಯತ ।

**ಅಲಂಕಾರ**— ಇಲ್ಲಿ ಶ್ಲೇಷದಿಂದ ಉಜ್ಜೀವಿತವಾದ ಉಪಮಾಲಂಕಾವಿದೆ.

**ಕೋಶ**— ಸರಸ್ವತೀ, 'ಕೂಲಂಕಷಾ ನಿರ್ಝರಿಣೀ ರೋಧೋ ವಕ್ರಾ ಸರಸ್ವತೀಃ', 'ಬ್ರಾಹ್ಮೀ ತು ಭಾರತೀ ಭಾಷಾ ಗೀರ್ವಾಗ್ ವಾಣೀ ಸರಸ್ವತೀ' ಅಮರ, ಗೋತ್ರ 'ಅದ್ರಿಗೋತ್ರ ಗಿರಿಗ್ರಾವಾಚಲಶೈಲಶಿಲೋಚ್ಚಯಾಃ ಸಂತತಿರ್ಗೋತ್ರ ಜನನಕುಲಾನಿ' ಅಮರ ।

**ವೃತ್ತ—** ಈ ಪದ್ಯದಲ್ಲಿ ವಂಶಸ್ಥ ವೃತ್ತವಿದೆ. ಜತೌತು ವಂಶಸ್ಥಮುದೀರಿತಂ ಜರೌ ಎಂದು ಅದರ ಲಕ್ಷಣ.

**ಪ್ರಸ್ತಾರ—** ಸರಸ್ವ, ತೀವೃತ್ತಿ, ಕರೀಃ ಶ, ರೀರಿಣಾಂ

★ ★ ★

**ಅವತಾರಿಕಾ—** ಶ್ರೀವೇದವ್ಯಾಸರು ತಮ್ಮ ಅಪ್ಪಣೆಯಂತೆ ಜ್ಞಾನಕಾರ್ಯವನ್ನು ನಡೆಸಿ ಬಂದ ಶ್ರೀಮದಾಚಾರ್ಯರಿಗೆ ತಮ್ಮ ಸಹಭೋಗವನ್ನೇ ಕೊಟ್ಟರೆಂದು ವರ್ಣಿಸುತ್ತಾರೆ.

**ಸಹಭೋಗಮನನ್ಯಲಭ್ಯಮಸ್ಮೈ**
**ಹನುಮದ್ರೂಪವತೇ ದದೌ ಪುರಾ ಹಿ ।**
**ಅನವೇಕ್ಷ್ಯ ಪರಂ ಸ್ವಭೀಷ್ಟಕರ್ತ್ರೇ**
**ಪ್ರತಿದಾತುಂ ಹರಿರೈಧಯತ್ತಮೇವ ॥ 54 ॥**

**ಪದಚ್ಛೇದ—** ಸಹಭೋಗಂ, ಅನನ್ಯಲಭ್ಯಂ, ಅಸ್ಮೈ, ಹನುಮದ್ರೂಪವತೇ, ದದೌ, ಪುರಾ, ಹಿ, ಅನವೇಕ್ಷ್ಯ, ಪರಂ, ಸ್ವಭೀಷ್ಟಕರ್ತ್ರೇ, ಪ್ರತಿದಾತುಂ, ಹರಿಃ, ಐಧಯತ್, ತಂ, ಏವ ।

**ಅನ್ವಯ—** ಹರಿಃ, ಪುರಾ, ಹನುಮದ್ರೂಪವತೇ, ಅಸ್ಮೈ, ಅನನ್ಯಲಭ್ಯಂ, ಸಹಭೋಗಂ, ದದೌ ಹಿ, ಸ್ವಭೀಷ್ಟಕರ್ತ್ರೇ, ಪ್ರತಿದಾತುಂ, ಪರಂ, ಅನವೇಕ್ಷ್ಯ, ತಂ, ಏವ, ಐಧಯತ್ ।

**ಅನ್ವಯಾರ್ಥ—**

**ಹರಿಃ** = ಶ್ರೀ ವೇದವ್ಯಾಸದೇವರು,
**ಪುರಾ** = ಹಿಂದೆ (ರಾಮಾವತಾರದಲ್ಲಿ)
**ಹನುಮದ್ರೂಪವತೇ** = ಆಂಜನೇಯನ ರೂಪವುಳ್ಳ,
**ಅಸ್ಮೈ** = ಶ್ರೀ ಮಧ್ವಾಚಾರ್ಯರಿಗೆ,
**ಅನನ್ಯಲಭ್ಯಂ** = ಬೇರೆಯುವರಿಗೆ ಸಿಗಲಾರದ,
**ಸಹಭೋಗಂ** = ಸಹಭೋಗವೆಂಬ ಬ್ರಹ್ಮದೇವರಿಗೆ ಲಭ್ಯವಾದ ಬ್ರಹ್ಮಲೋಕಾಧಿಪತ್ಯವನ್ನು,
**ದದೌ ಹಿ** = ಕೊಟ್ಟಿದ್ದರಷ್ಟೆ,
**ಸ್ವಭೀಷ್ಟಕರ್ತ್ರೇ** = ತನಗೆ ಅತ್ಯಂತ ಇಷ್ಟವಾದ ಭಾಷ್ಯ ನಿರ್ಮಾಣಾದಿ ಕಾರ್ಯವನ್ನು ಮಾಡಿರುವ ಇವರಿಗೆ,
**ಪ್ರತಿಧಾತುಂ** = ಕೊಡುವುದಕ್ಕೆ,
**ಪರಂ** = ಸಹಭೋಗಕ್ಕಿಂತ ಉತ್ತಮವಾದ ಬೇರೆ ವಸ್ತುವನ್ನು,
**ಅನವೇಕ್ಷ್ಯ** = ನೋಡದೆ (ಇಲ್ಲವೆಂದು ತಿಳಿದು),
**ತಂ ಏವ** = ಹಿಂದೆ ಕೊಟ್ಟಿರುವ ಸಹಭೋಗವನ್ನೇ,
**ಐಧಯತ್** = ವೃದ್ಧಿಗೊಳಿಸಿದರು.

**ತಾತ್ಪರ್ಯ—** ಹಿಂದೆ ರಾಮಾವತಾರದಲ್ಲಿ ಶ್ರೀ ವೇದವ್ಯಾಸಾಭಿನ್ನನಾದ ನಾರಾಯಣಾಭಿನ್ನನಾದ ಶ್ರೀರಾಮಚಂದ್ರ ಸ್ವಾಮಿಯು ತನಗೆ ಇಷ್ಟವಾದ ಸೀತಾನ್ವೇಷಣಾದಿ ಕಾರ್ಯವನ್ನು ಮಾಡಿದ ಆಂಜನೇಯ ರೂಪದಲ್ಲಿ ಈ

ಶ್ರೀಮಧ್ವಾಚಾರ್ಯರಿಗೆ ಸಹಭೋಗವೆಂಬ ಮೋಕ್ಷವನ್ನೂ, ಬ್ರಹ್ಮಲೋಕಾಧಿಪತ್ಯವನ್ನು ಕೊಟ್ಟಿದ್ದರು. ಆಂಜನೇಯಾಭಿನ್ನರಾದ ಶ್ರೀಮಧ್ವಾಚಾರ್ಯರು ಪರಮಾತ್ಮನಿಗೆ ಅತ್ಯಂತ ಪ್ರಿಯವಾದ ಬ್ರಹ್ಮಸೂತ್ರಭಾಷ್ಯ ರಚನೆ ಮೊದಲಾದ ಕಾರ್ಯ ಮಾಡಿರುವುದನ್ನು ಮೆಚ್ಚಿ, ಅವರಿಗೆ ಹಿಂದಿನದಕ್ಕಿಂತ ಅಧಿಕವಾದದನ್ನು ಕೊಡಲು ಇಲ್ಲವೆಂದು ತಿಳಿದು ಆ ಸಹಭೋಗವನ್ನೇ ಅಧಿಕ ಗೊಳಿಸಿದರು.

**ವಿಶೇಷಾಂಶ—** ಭೋಗಾಶ್ಚ ಯೇ ಯಾನಿ ಚ ಕರ್ಮ ಜಾತಾನ್ಯನಾದ್ಯನಂತಾನಿ ಮಮೇಹ ಸಂತಿ ಮದಾಜ್ಞಯಾನ್ಯಖಿಲಾನಿ ಸಂತಿ ಧಾತುಃ ಪದೇ ತತ್ ಸಹಭೋಗನಾಮ ಏತಾದೃಶಂ ಮೇ ಸಹಭೋಜನಂ ತೇ ಮಯಾ ಪ್ರದತ್ತಂ ಹನುಮಾನ್ ಸದೈವ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಅಧ್ಯಾಯ-8 ಶ್ಲೋಕ-241-242 ಪೂರ್ವಾರ್ಧ.

ಶ್ರೀರಾಮಚಂದ್ರದೇವರು ಪಟ್ಟಾಭಿಷೇಕಾನಂತರದಲ್ಲಿ ಎಲ್ಲರಿಗೂ ಯೋಗ್ಯವಾದ ಬಹುಮಾನವನ್ನು ಕೊಟ್ಟು ಹನುಮಂತದೇವರಿಗೆ ಸಹಭೋಗವೆಂಬ ಬಹುಮಾನವನ್ನು ಕೊಟ್ಟರು ಎಂದು ಹೇಳುತ್ತಾರೆ.

''ಲೋಕದಲ್ಲಿರುವ ಪ್ರಾಣಿಗಳ ಅನಾದ್ಯನಂತ ಪುಣ್ಯಕರ್ಮಗಳ ಸಾರಭೂತವಾದ ಆನಂದದ ಅನುಭವವು ಬ್ರಹ್ಮ ದೇವರಿಗೂ ನನಗೂ ಇದೆ. ಈ ಹನುಮಂತನು ಬ್ರಹ್ಮ ಪದವಿಯನ್ನು ಹೊಂದಿದಾಗ ನಾನು ಬ್ರಹ್ಮಾಂತರ್ಯಾಮಿಯಾಗಿದ್ದು ಬ್ರಹ್ಮರೂಪಿಯಾದ ಹನುಮಂತನೊಡನೆ ನನ್ನ ಸ್ವರೂಪ ಸುಖವನ್ನು ಅನುಭವಿಸುತ್ತೇನೆ. ಬ್ರಹ್ಮ ಪದವಿಯನ್ನು ಹೊಂದಿದ ಈ ಹನುಮಂತನೂ ನನ್ನ ಆನಂದದ ಪ್ರತಿಬಿಂಬವಾದ ಸುಖವನ್ನು ಅನುಭವಿಸುತ್ತಾನೆ. ಇಂತಹ ಬ್ರಹ್ಮಲೋಕಾಧಿಪತ್ಯ ಮತ್ತು ಸುಖಾನುಭವರೂಪವಾದ ಸಹಭೋಗವನ್ನು ಎಲೈ ಹನುಮಂತನೇ ನಿನಗೆ ನಾನು ಕೊಟ್ಟಿರುತ್ತೇನೆ'' ಎಂದು ರಾಮದೇವರು ಹೇಳಿದ್ದಾರೆ. ಪ್ರಕೃತ ಅದಕ್ಕಿಂತ ಉತ್ತಮವಾದುದು ಇಲ್ಲದ್ದರಿಂದ ಶ್ರೀಮಧ್ವಾಚಾರ್ಯರ ಸೇವೆಯಿಂದ ಸಂತೋಷಪಟ್ಟ ವೇದವ್ಯಾಸರು ಅದನ್ನೇ ಅಧಿಕಗೊಳಿಸಿದರು ಎಂದು ಭಾವ.

**ವಿಗ್ರಹ—**

**ಅನನ್ಯಲಭ್ಯಂ—** ಲಬ್ಧುಂ ಯೋಗ್ಯಃ ಲಭ್ಯಃ, ಅನ್ಯೇನ ಲಭ್ಯಃ, ಅನ್ಯಲಭ್ಯಃ, ನ ಅನ್ಯಲಭ್ಯಃ, ಅನನ್ಯಲಭ್ಯಃ ತಂ ।

**ಹನುಮದ್ರೂಪವತೇ—** ಹನುಮತಃ ರೂಪಂ ಹನುಮದ್ರೂಪಂ, ಹನುಮದ್ರೂಪಂ ಅಸ್ಯ ಅಸ್ತೀತಿ ಹನುಮದ್ರೂಪವಾನ್ ತಸ್ಮೈ ಹನುಮದ್ರೂಪವತೇ ।

**ಅನವೇಕ್ಷ್ಯ—** ನ ಅವೇಕ್ಷ್ಯ ಅನವೇಕ್ಷ್ಯ ।

**ಸ್ವಭೀಷ್ಟಕರ್ತ್ರೇ—** ಶೋಭನಂ ಚ ತತ್ ಅಭೀಷ್ಟಂ ಚ ಸ್ವಭೀಷ್ಟಂ, ಸ್ವಭೀಷ್ಟಸ್ಯ ಕರ್ತಾ ಸ್ವಭೀಷ್ಟಕರ್ತಾ, ತಸ್ಮೈ ಸ್ವಭೀಷ್ಟಕರ್ತ್ರೇ ।

**ಕ್ರಿಯಾಪದ— ದದೌ-** ಡುದಾಞದಾನೇ ಇತಿ ದಾನಾರ್ಥಕಾತ್ ದಾಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ದದೌ ಇತಿರೂಪಂ ।

ದದೌ ದದತುಃ ದದುಃ, ದದಿಥ - ದದಾಥ ದದಥುಃ ದದ, ದದೌ ದದಿವ ದದಿಮ ।

**ಐಧಯತ್-** ಏಧವೃದ್ಧೌ ಇತಿ ವೃದ್ಧ್ಯರ್ಥಕಾತ್ ಏಧ್ ಧಾತೋಃ ಣಿಜಂತಾತ್ ಸಕರ್ಮಕಾತ್ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಐಧಯತ್ ಇತಿರೂಪಂ ।

ಐಧಯತ್ ಐಧಯತಾಂ ಐಧಯನ್, ಐಧಯಃ ಐಧಯತಂ ಐಧಯತ, ಐಧಯಂ ಐಧಯಾವ ಐಧಯಾಮ ।

**ಪ್ರಯೋಗ**— ಹರಿಃ ಅಸ್ಮೈ ಸಹಭೋಗಂ ದದೌ (ಕರ್ತರಿ) ।
ಹರಿಣಾ ಅಸ್ಮೈ ಸಹಭೋಗಃ ದದೇ (ಕರ್ಮಣಿ) ।
ಹರಿಃ ತಂ ಏವ ಐಧಯತ್ (ಕರ್ತರಿ) ।
ಹರಿಣಾ ಸಃ ಏವ ಐಧ್ಯತ (ಕರ್ಮಣಿ) ।

**ವೃತ್ತ**— ಈ ಶ್ಲೋಕದಲ್ಲಿ ಚಂದ್ರಿಕಾವೃತ್ತಾ. ''ವಿಷಮೇ ಸಸಜಾ ಗುರೂ ಯದಿ ಸುಃ ಸಭರಾಯಶ್ಚ ಯುಜೀಹ ಚಂದ್ರಿಕಾ ಸಾ'' ಅದರ ಲಕ್ಷಣ.

| | ಸ | ಸ | ಜ | ಗುಗು |
|---|---|---|---|---|
| **ಪ್ರಸ್ತಾರ**— | ಸಹಭೋ, | ಗಮನ, | ನ್ಯಲಭ್ಯ, | ಮಸ್ಮೈ |

ಹನುಮ, ದ್ರೂಪವ, ತೇದದೌ, ಪುರಾಹಿ, ಎರಡು ನಾಲ್ಕನೇ ಪಾದಗಳಲ್ಲಿ ಈ ಲಕ್ಷಣ. 'ಹಿ' ಎಂಬುದು ಪಾದದ ಕೊನೆಯಲ್ಲಿರುವುದರಿಂದ ಐಚ್ಛಿಕವಾಗಿ ಗುರುವಾಗುತ್ತದೆ.

★ ★ ★

**ಅವತಾರಿಕಾ**— ಆಚಾರ್ಯರು ಬದರಿಕಾಶ್ರಮದಲ್ಲಿ ವೇದವ್ಯಾಸರನ್ನು ನೋಡಿ ಅವರಿಗೆ ತಮ್ಮ ಸೇವೆಯನ್ನು ವಿಜ್ಞಾಪಿಸಿ, ಅವರಿಂದ ಅಪ್ಪಣೆಯನ್ನು ಪಡೆದು ಹಿಂತಿರುಗಿ ಉಡುಪಿಗೆ ಬಂದರೆಂದು ಹೇಳುತ್ತಾರೆ.

**ಪ್ರಣಮ್ಯ ಗುರುಮಾದರಾದಥ ನಿಯೋಗತೋ ಯೋಗ್ಯತಃ**
**ಸ ತಸ್ಯ ಜಗತಾಂ ಹಿತಂ ವಿದಧತೋ ಗತಃ ಸಾನುಗಃ ।**
**ಮಹಿಷ್ಠಹೃದಯೋ ಮಹಾಮಹಿಮಸಿಂಧುರಾನಂದತೋ**
**ನಿಜೈರಭಿಗತೋಽನಮದ್ರಜತಪೀಠವಾಸಂ ಹರಿಮ್ ॥ 55 ॥**

**ಪದಚ್ಛೇದ**— ಪ್ರಣಮ್ಯ, ಗುರುಂ, ಆದರಾತ್, ಅಥ, ನಿಯೋಗತಃ, ಯೋಗ್ಯತಃ, ಸಃ, ತಸ್ಯ, ಜಗತಾಂ, ಹಿತಂ, ವಿದಧತಃ, ಗತಃ, ಸಾನುಗಃ, ಮಹಿಷ್ಠಹೃದಯಃ, ಮಹಾಮಹಿಮಸಿಂಧುಃ, ಆನಂದತಃ, ನಿಜೈಃ, ಅಭಿಗತಃ, ಅನಮತ್, ರಜತಪೀಠವಾಸಂ, ಹರಿಂ ।

**ಅನ್ವಯ**— ಅಥ, ಮಹಿಷ್ಠಹೃದಯಃ, ಮಹಾಮಹಿಮಸಿಂಧುಃ, ಸಃ, ಗುರುಂ, ಆದರಾತ್, ಪ್ರಣಮ್ಯ, ಜಗತಾಂ ಹಿತಂ, ವಿದಧತಃ, ತಸ್ಯ, ಯೋಗ್ಯತಃ, ನಿಯೋಗತಃ, ಸಾನುಗಃ, ಗತಃ, ಆನಂದತಃ, ನಿಜೈಃ, ಅಭಿಗತಃ, ರಜತಪೀಠವಾಸಂ, ಹರಿಂ, ಅನಮತ್ ।

**ಅನ್ವಯಾರ್ಥ**—

**ಅಥ** = ತರುವಾಯ
**ಮಹಿಷ್ಠಹೃದಯಃ** = ಅತ್ಯಂತ ಮಹತ್ತಾದ (ಸರ್ವ ವಿಷಯಕವಾದ) ಹೃದಯವುಳ್ಳ (ಜ್ಞಾನವುಳ್ಳ)
**ಮಹಾಮಹಿಮಸಿಂಧುಃ** = ಹೆಚ್ಚಿನ ಮಹಿಮೆಯಿಂದ ಸಮುದ್ರದಂತಿರುವ,
**ಸಃ** = ಆ ಮಧ್ವಾಚಾರ್ಯರು,
**ಗುರುಂ** = ಗುರುಗಳಾದ ಶ್ರೀವ್ಯಾಸರನ್ನು
**ಆದರಾತ್** = ಭಕ್ತಿಯಿಂದ,

**ಪ್ರಣಮ್ಯ** = ನಮಸ್ಕರಿಸಿ,
**ಜಗತಾಂ** = ಲೋಕಗಳಿಗೆ,
**ಹಿತಂ** = ಹಿತವನ್ನು,
**ವಿದಧತಃ** = ಮಾಡುತ್ತಿರುವ,
**ತಸ್ಯ** = ಆ ವ್ಯಾಸರ,
**ಯೋಗ್ಯತಃ** = ಉಚಿತವಾದ,
**ನಿಯೋಗತಃ** = ಆಜ್ಞೆಯಿಂದ,
**ಸಾನುಗಃ** = ಅನುಯಾಯಿಗಳಿಂದ ಕೂಡಿದವರಾಗಿ,
**ಗತಃ** = ಹೊರಟವರಾಗಿ,
**ಆನಂದತಃ** = ಸಂತೋಷದಿಂದ,
**ನಿಜೈಃ** = ತಮ್ಮ ಭಕ್ತರಿಂದ,
**ಅಭಿಗತಃ** = ಎದುರುಗೊಳ್ಳಲ್ಪಟ್ಟವರಾಗಿ,
**ರಜತಪೀಠವಾಸಂ** = ಉಡುಪಿಯಲ್ಲಿ ವಾಸವಾಗಿರುವ,
**ಹರಿಂ** = ಶ್ರೀಕೃಷ್ಣನನ್ನು,
**ಅನಮತ್** = ನಮಸ್ಕಾರ ಮಾಡಿದರು.

**ತಾತ್ಪರ್ಯ**— ಸರ್ವಜ್ಞರಾದ ಮಹಾಮಹಿಮೋಪೇತರಾದ ಆಚಾರ್ಯರು ಬದರಿಕಾಶ್ರಮದಲ್ಲಿರುವ ತಮ್ಮ ಗುರುಗಳಾದ ಶ್ರೀ ವೇದವ್ಯಾಸರನ್ನು ವಂದಿಸಿದರು. ಪ್ರಪಂಚಕ್ಕೆ ಹಿತಕರರಾದ ಆ ವ್ಯಾಸರು ತಮ್ಮ ಸೇವೆಯನ್ನು ಅಭಿನಂದಿಸಿ ನೀನು ಪುನಃ ಭಾರತಭೂಮಿಗೆ ಹೋಗಿ ಸಚ್ಛಾಸ್ತ್ರೋಪದೇಶದಿಂದ ಸಜ್ಜನರನ್ನು ಉದ್ಧರಿಸು ಎಂದು ಅಪ್ಪಣೆ ಮಾಡಿದಾಗ ಆಚಾರ್ಯರು ಆಜ್ಞೆಯನ್ನು ಶಿರಸಾವಹಿಸಿ ಪರಿವಾರದೊಡನೆ ಉಡುಪಿಗೆ ಹೊರಟರು. ಉಡುಪಿಯಲ್ಲಿರುವ ಅವರ ಭಕ್ತರು ಅವರನ್ನು ಸಂತೋಷದಿಂದ ಎದುರುಗೊಂಡರು. ಅನಂತರ ಆಚಾರ್ಯರು ತಮ್ಮ ಭಕ್ತರನ್ನು ಅನುಗ್ರಹಿಸಿ, ತಾವು ಪ್ರತಿಷ್ಠಿಸಿದ ಶ್ರೀಕೃಷ್ಣನನ್ನು, ಶ್ರೀಮದನಂತಾಸನ ದೇವರನ್ನು ನಮಸ್ಕರಿಸಿದರು.

ವಿಗ್ರಹ—

**ಮಹಿಷ್ಠಹೃದಯಂ**— ಅತಿಶಯೇನ ಮಹತ್ ಮಹಿಷ್ಠಂ, ಮಹಿಷ್ಠಂ ಹೃದಯಂ ಯಸ್ಯ ಸಃ ಮಹಿಷ್ಠ-ಹೃದಯಃ ।

**ಮಹಾಮಹಿಮಸಿಂಧುಃ**— ಮಹಾನ್ ಚ ಅಸೌ ಮಹಿಮಾ ಚ ಮಹಾಮಹಿಮಾ, ಮಹಾಮಹಿಮ್ನಾ ಸಿಂಧುಃ ಮಹಾಮಹಿಮಸಿಂಧುಃ ।

**ಸಾನುಗಃ**— ಅನು ಗಚ್ಛಂತೀತಿ ಅನುಗಾಃ, ಅನುಗೈಃ ಸಹ ವರ್ತತೇ ಇತಿ ಸಾನುಗಃ ।

**ರಜತಪೀಠವಾಸಂ**— ರಜತಪೀಠೇ ವಾಸಃ ಯಸ್ಯಸಃ ರಜತಪೀಠವಾಸಃ ತಂ ।

**ಕ್ರಿಯಾಪದ— ಅನಮತ್**- ಣಮು ಪ್ರಹ್ವತ್ವೇ ಶಬ್ದೇ ಚ, ಇತಿ ಪ್ರಹ್ವತ್ವಶಬ್ದಾರ್ಥಕಾತ್ ನಮ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅನಮತ್ ಇತಿರೂಪಂ ।

ಅನಮತ್ ಅನಮತಾಂ ಅನಮನ್, ಅನಮಃ ಅನಮತಂ ಅನಮತ, ಅನಮಂ ಅನಮಾವ ಅನಮಾಮ ।

**ಪ್ರಯೋಗ**— ಸಃ ರಜತಪೀಠವಾಸಂ ಹರಿಂ ಅನಮತ್ (ಕರ್ತರಿ) ।
ತೇನ ರಜತಪೀಠವಾಸಃ ಹರಿಃ ಅನಮ್ಯತ (ಕರ್ಮಣಿ) ।

**ವೃತ್ತ—** ಈ ಶ್ಲೋಕದಲ್ಲಿ ಪೃಥ್ವೀ ವೃತ್ತ. 'ಜಸೌ ಜಸಯಲಾ ವಸುಗ್ರಹಯತಿಶ್ಚ ಪೃಥ್ವೀ ಗುರುಃ' ಎಂದು ಅದರ ಲಕ್ಷಣ.

ಜ ಸ ಜ ಸ ಯ ಲಗ

**ಪ್ರಸ್ತಾರ—** ಪ್ರಣಮ್ಯ, ಗುರುಮಾ, ದರಾದ, ಥನಿಯೋ, ಗತೋಯೋ ಗ್ಯತಃ

ವಸ್ತು ಎಂದರೆ ಎಂಟು, ಗ್ರಹ = ಒಂಭತ್ತು ಯತಿ ಎಂದರೆ ಪದ ವಿರಾಮ. ಇಲ್ಲಿ ಪ್ರಣಮ್ಯಗುರುಮಾದರಾತ್ ಎಂಬಲ್ಲಿ ಎಂಟಕ್ಕೆ ಯತಿ, ಅನಂತರ ಒಂಭತ್ತಕ್ಕೆ ಯೋಗ್ಯತಃ ಎಂಬಲ್ಲಿ ಯತಿ ಇದೆ.

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ನವಮಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ದಶಮಃ ಸರ್ಗಃ

### ಹತ್ತನೆಯ ಸರ್ಗದ ಕಥಾಸಾರ

ಒಂದೆಡೆ ಆಚಾರ್ಯರು ಪ್ರಯಾಣ ಮಾಡುತ್ತಿದ್ದಾಗ ಈಶ್ವರದೇವನೆಂಬ ರಾಜನು ದಾರಿಹೋಕರಿಂದ ಬಲಾತ್ಕಾರ-ವಾಗಿ ಕಾಲುವೆಗಾಗಿ ಭೂಮಿಯನ್ನು ಅಗೆಯಿಸುತ್ತಿದ್ದನು. ಅವನು ಆಚಾರ್ಯರ ಅಮಾನುಷಾಕೃತಿಯನ್ನು ನೋಡಿ ಇವರು ಈ ಕೆಲಸವನ್ನು ಬಹಳ ಚೆನ್ನಾಗಿ ಮಾಡುವರೆಂದು ತಿಳಿದು ನೀವೂ ನೆಲವನ್ನು ಅಗೆಯುವ ಕೆಲಸವನ್ನು ಮಾಡಿಯೇ ಇಲ್ಲಿಂದ ಮುಂದೆ ಹೋಗಬೇಕೆಂದು ಬಲಾತ್ಕರಿಸಿದನು. ಆಚಾರ್ಯರು ನಮಗೆ ಈ ಕೆಲಸವು ತಿಳಿಯದು ಒಂದು ಬಾರಿ ಆ ಕೆಲಸವನ್ನು ನೀನು ಮಾಡಿ ತೋರಿಸು ಎಂದರು. ಅದರಂತೆ ಅರಸನು ಅಗೆಯಲು ಆರಂಭಿಸಿ ಆಚಾರ್ಯರ ಮಹಿಮೆ-ಯಿಂದಾಗಿ ನಿಲ್ಲಿಸಲೇ ಇಲ್ಲ. ಆಚಾರ್ಯರು ಅವನ ಕಣ್ಣೆದುರಿನಲ್ಲಿಯೇ ನಗುತ್ತಾ ಶಿಷ್ಯರೊಡನೆ ಮುಂದಕ್ಕೆ ಹೋದರು.

ಆಚಾರ್ಯರು ಅಲ್ಲಿಂದ ಹಾಗೆಯೇ ಉತ್ತರದೇಶದಲ್ಲಿ ಸಂಚರಿಸುತ್ತಾ ಗಂಗಾನದಿಯ ದಡಕ್ಕೆ ಬಂದರು. ಅಲ್ಲಿ ದೋಣಿ ನಡೆಸುವವರು ಯಾರೂ ಇರಲಿಲ್ಲ. ನಾವಿಕರೆಲ್ಲರೂ ಶತ್ರು ಭಯದಿಂದ ದೋಣಿಗಳನ್ನು ಬಿಟ್ಟು ಹೋಗಿದ್ದರು. ಆಗ ಶ್ರೀಮಧ್ವರು ತಮ್ಮನ್ನು ಒಬ್ಬ ಶಿಷ್ಯನು ಹಿಡಿದುಕೊಳ್ಳುವಂತೆ ಹೇಳಿದರು. ಆ ಶಿಷ್ಯನನ್ನು ಇನ್ನೊಬ್ಬನು ಹಿಡಿದುಕೊಂಡನು. ಅವನನ್ನು ಇನ್ನೊಬ್ಬನು ಹಿಡಿದುಕೊಂಡನು. ಎಲ್ಲರೂ ಹಿಂದಿನವರು ಮುಂದಿನವರನ್ನು ಹಿಡಿದುಕೊಂಡ ಮೇಲೆ ಆಚಾರ್ಯರು ಎಲ್ಲರಿಗಿಂತ ಮುಂದುಗಡೆ ಈಜುತ್ತಾ ಎಲ್ಲರನ್ನೂ ತಾವೊಬ್ಬರೇ ಎಳೆದುಕೊಂಡು ಈಜಿ ಆಚೆಯಿಂದ ದಡವನ್ನು ಸೇರಿದರು. ಅವರು ದಡವನ್ನು ಸೇರುವುದಕ್ಕೆ ಮೊದಲೇ ರಾಜನ ಆಜ್ಞೆಯಿಂದ ರಾಜಭಟರು ಆಚಾರ್ಯರನ್ನೂ ಅವರ ಶಿಷ್ಯರನ್ನೂ ಮುಂದಕ್ಕೆ ಹೋಗದಂತೆ ತಡೆದರು. ಆಚಾರ್ಯರು ಸ್ವಲ್ಪವೂ ಹೆದರದೆ ಆ ಸೈನಿಕರನ್ನು ಕುರಿತು ಹೀಗೆಂದು ಹೇಳಿದರು.

''ಎಲೈ ದಡ್ಡರೇ! ಏಕೆ ನೀರಿಗೆ ಹಾರುತ್ತೀರಿ. ನಾವು ನಿಮ್ಮ ರಾಜನನ್ನೇ ನೋಡಲು ಹೋಗುತ್ತಿದ್ದೇವೆ. ಅಲ್ಪ ಸಂಖ್ಯೆಯ ನಮ್ಮಿಂದ ಬಹುಸಂಖ್ಯಾತರಾದ ನಿಮಗೆ ಭಯವಿಲ್ಲ'' ಎಂದು ಅವರ ಭಾಷೆಯಿಂದಲೇ ಉತ್ತರಕೊಟ್ಟು ಹಾವಾಡಿಗನು ಮಂತ್ರಬಲದಿಂದ ಹಾವುಗಳನ್ನು ತಡೆಯುವಂತೆ ಆ ರಾಜಭಟರನ್ನು ತಡೆದರು. ತಮ್ಮ ಶಿಷ್ಯರ ಭಯವನ್ನು ಪರಿಹರಿಸಿ ಎಲ್ಲರನ್ನು ಗಂಗಾನದಿಯ ಆಚೆಯ ದಡವನ್ನು ಸೇರಿಸಿದರು. ಸಾವಿರಾರು ತುರುಷ್ಕಭಟರು ಆ ದಡಕ್ಕೆ ಬಂದ ಕೂಡಲೇ ಆಚಾರ್ಯರನ್ನೂ ಅವರ ಶಿಷ್ಯರನ್ನೂ ಸುತ್ತುವರಿದರು. ಆದರೆ ಆಚಾರ್ಯರು ಯಾವ ಭಯವೂ ಇಲ್ಲದೆ ಅವರ ಮಧ್ಯದಲ್ಲಿ ನಗುತ್ತಾ ಶಿಷ್ಯಸಮೇತರಾಗಿ ಮುಂದೆ ಸಾಗಿದರು. ನಗರದ ಹತ್ತಿರ ಬಂದ ಕೂಡಲೇ ಅರಮನೆಯ ಮೇಲೆ ನಿಂತಿದ್ದ ತುರುಕ ರಾಜನು ಅವರನ್ನು ಕಂಡು ಇಂತೆಂದನು.

''ಹಸನ್ಮುಖವುಳ್ಳ ಮಹಾಪುರುಷರೇ! ಶತ್ರುರಾಜರ ಗೂಢಚಾರರು ಬರದಂತೆ ತಡೆಯಲು ನಾನು ನೇಮಿಸಿದ ಯಮಭಟರಂತಿರುವ ನನ್ನ ಸೈನಿಕರಿಂದ ಹಿಂಸೆಗೊಳಗಾಗದೆ, ನೀವು ಹೇಗೆ ಇಲ್ಲಿಗೆ ಬಂದಿರಿ? ನಾವೆಯಿಲ್ಲದೆ ಗಂಗಾ

ನದಿಯನ್ನು ಇವರೆಲ್ಲರಿಂದ ಕೂಡಿಕೊಂಡು ಹೇಗೆ ದಾಟಿದಿರಿ?'' ಇದೇ ಮೊದಲಾದ ಪ್ರಶ್ನೆಯನ್ನು ತನ್ನ ತುರುಕ ಭಾಷೆಯಿಂದಲೇ ಕೇಳಿದನು. ''ರಾಜ! ನಮ್ಮ ದೇವರು ಮೇಲೆ ಬೆಳಗುವ ಸೂರ್ಯನು, ಅವನಲ್ಲಿದ್ದು ಅವನು ಪ್ರಪಂಚ-ವನ್ನೆಲ್ಲಾ ನಡೆಸುತ್ತಿದ್ದಾನೆ. ಅವನ ಅನುಗ್ರಹ ಬಲದಿಂದ ನಾವು ಅತ್ಯಂತ ಅಸಾಧ್ಯವಾದ ಕಾರ್ಯಗಳನ್ನೂ ಮಾಡುತ್ತಿದ್ದೇವೆ. ಈಗ ನಾವು ಉತ್ತರ ದಿಕ್ಕಿಗೆ ಅಭಿಮುಖವಾಗಿ ಹೋಗುತ್ತಿದ್ದೇವೆ'' ಹೀಗೆ ಆಚಾರ್ಯರು ತುರುಕ ಭಾಷೆಯಿಂದಲೇ ಆಶ್ಚರ್ಯಕರವಾಗಿ ಉತ್ತರವನ್ನಿತ್ತರು.

ಆಚಾರ್ಯರ ಗಂಭೀರತೆ, ಧೈರ್ಯ, ಕಾಂತಿ, ದೇಶಕಾಲೋಚಿತವಾದ ಮಾತುಗಳು, ಇವನ್ನೆಲ್ಲಾ ನೋಡಿ ರಾಜನು ಕೂಡಲೇ ತನ್ನ ಅರ್ಧ ರಾಜ್ಯವನ್ನು ಅವರಿಗೆ ಸಮರ್ಪಿಸಿದನು. ಆಚಾರ್ಯರು ಆ ರಾಜ್ಯವು ತನಗೆ ಬೇಡವೆಂದು ಹೇಳಿ ಅಲ್ಲಿಂದ ಮುಂದಕ್ಕೆ ಹೋದರು. ಆಚಾರ್ಯರು ಅಲ್ಲಿಂದ ಮುಂದೆ ಶಿಷ್ಯರೊಡನೆ ಪ್ರಯಾಣ ಮಾಡುತ್ತಾ ಇದ್ದರು. ಒಂದು ಕಡೆ ಕೆಲವು ಮಂದಿ ಕಳ್ಳರು ಇವರಲ್ಲಿರುವ ಹಣವನ್ನು ಕಸಿದುಕೊಳ್ಳಲು ಎದುರಾಗಿ ಬಂದರು. ಆಚಾರ್ಯರು ತಮ್ಮವರನ್ನೆಲ್ಲಾ ಒಂದು ಕಡೆ ನಿಲ್ಲಿಸಿ, ಒಂದು ಬಟ್ಟೆಯನ್ನು ಮಡಿಸಿ ಗಂಟಿನಂತೆ ಮಾಡಿ, ಕಳ್ಳರಿಗೆ ಹಣದ ಗಂಟೆಂಬ ಭ್ರಾಂತಿಯನ್ನುಂಟು ಮಾಡಿದರು. ಆ ಕಳ್ಳರ ಮಧ್ಯದಲ್ಲಿ ತಾವು ಸಂಚರಿಸುತ್ತಿದ್ದರು. ಆ ಕಳ್ಳರು ಹಣದ ಗಂಟು ನನಗೆ ಬೇಕು ನನಗೆ ಬೇಕು ಎಂದು ಪರಸ್ಪರ ಜಗಳವಾಡುತ್ತಾ ಪರಸ್ಪರ ಒಬ್ಬರನ್ನೊಬ್ಬರು ಬಡಿದಾಡಿ ಸತ್ತರು. ಹಿಂದೆ ಅರ್ಜುನನು ಸಂಶಪ್ತಕರನ್ನು ಮೋಹಗೊಳಿಸಿ ಒಬ್ಬರು ಇನ್ನೊಬ್ಬರನ್ನು ಅರ್ಜುನನೆಂದು ತಿಳಿದುಕೊಳ್ಳುವಂತೆ ಮಾಡಿ ಪರಸ್ಪರ ಜಗಳವಾಡಿಸಿ ಸಾಯಿಸಿದಂತೆ ಆಚಾರ್ಯರು ಆ ಕಾರ್ಯವನ್ನು ಮಾಡಿದರು.

ಆಚಾರ್ಯರು ಮುಂದುವರೆದು ಶಿಷ್ಯರೊಡನೆ ಪ್ರಯಾಣ ಮಾಡುತ್ತಾ ಇದ್ದಾಗ ನೂರು ಮಂದಿ ವೀರರಾದ ಕಳ್ಳರು ಶಿಷ್ಯಸಮೇತರಾದ ಆಚಾರ್ಯರನ್ನು ಕೊಲ್ಲಲು ಬಂದರು. ಆಗ ಆಚಾರ್ಯರು ತಮ್ಮ ಶಿಷ್ಯರಲ್ಲಿ ದಕ್ಷರಾದ ಉಪೇಂದ್ರತೀರ್ಥರೆಂಬುವರನ್ನು ಕರೆದು, ಆ ಕಳ್ಳರ ಕೈಯಲ್ಲಿದ್ದ ಕೊಡಲಿಗಳನ್ನು ಕಿತ್ತುಕೊಳ್ಳುವಂತೆ ಹೇಳಿದರು. ಅವರು ಕೊಡಲಿ ಕಿತ್ತುಕೊಂಡ ಕೂಡಲೇ, ಅವರ ಕೊಡಲಿಯಿಂದಲೇ ಕಳ್ಳರನ್ನು ಹೊಡೆಯಲು ಹೇಳಿದರು. ಉಪೇಂದ್ರತೀರ್ಥರು ಒಬ್ಬ ಕಳ್ಳನನ್ನು ಹೊಡೆದ ಕೂಡಲೇ ಎಲ್ಲಾ ಕಳ್ಳರೂ ಓಡಿಹೋದರು.

ಆಚಾರ್ಯರು ಮುಂದೆ ಪ್ರಯಾಣ ಮಾಡುತ್ತಿದ್ದಾಗ ಕೆಲವು ಮಂದಿ ಕಳ್ಳರು ಶಿಷ್ಯಸಮೇತರಾದ ಆಚಾರ್ಯರನ್ನು ಹಿಡಿಯಲು ಬಂದರು. ಆದರೆ ಹತ್ತಿರಕ್ಕೆ ಬರುತ್ತಿದ್ದಂತೆ ಆಚಾರ್ಯರೂ ಅವರ ಶಿಷ್ಯರೂ ಕಳ್ಳರಿಗೆ ಅಚಲವಾದ ಬಂಡೆ ಕಲ್ಲುಗಳಂತೆ ಕಂಡರು. ಆಗ ಕಳ್ಳರು ಅವರನ್ನೆಲ್ಲಾ ಬಿಟ್ಟು ಹೊರಟುಹೋದರು. ಬದರಿಕಾಶ್ರಮದ ದಾರಿಯಲ್ಲಿ ಮುಂದೆ ಹೋಗುತ್ತಿದ್ದಾಗ ಅದೇ ಕಳ್ಳರು ಪುನಃ ದೂರದಲ್ಲಿಯೂ ಮನುಷ್ಯರಂತೆ ಕಾಣಿಸಿದ ಆಚಾರ್ಯರನ್ನು ಅವರ ಶಿಷ್ಯರನ್ನು ನೋಡಿ ಪರಮಾಶ್ಚರ್ಯಭರಿತರಾಗಿ ಹತ್ತಿರಕ್ಕೆ ಬಂದು ನಮಸ್ಕರಿಸಿ ತಮಗೆ ಆದ ಅನುಭವವನ್ನು ಹೇಳಿ, ಆಚಾರ್ಯರಿಂದ ಕ್ಷಮೆಯನ್ನು ಪ್ರಾರ್ಥಿಸಿದರು.

ಹಿಮಾಲಯವನ್ನು ಹತ್ತಿ ಆಚಾರ್ಯರು ಶಿಷ್ಯಸಮೇತರಾಗಿ ಹೋಗುತ್ತಿದ್ದರು. ಅವರ ಜತೆಗೆ ದೇವರ ಪೆಟ್ಟಿಗೆಯನ್ನು ಹಿಡಿದು ಸತ್ಯತೀರ್ಥರು ಮುಂದುಗಡೆ ಹೋಗುತ್ತಿದ್ದರು. ಭಾರೀ ದೈತ್ಯನೊಬ್ಬನು ಹುಲಿಯ ರೂಪದಿಂದ ಸತ್ಯತೀರ್ಥರನ್ನು ಕೊಲ್ಲಲು ಮೇಲಕ್ಕೆ ಹಾರಿದನು. ಆಚಾರ್ಯರು ತಮ್ಮ ಕೈಯಿಂದ ಸ್ವಲ್ಪ ಕೆಲಸವನ್ನು ಮಾಡಿ, ಅತ್ಯಲ್ಪ ಸ್ಪರ್ಶದಿಂದಲೇ ಕೂಡಲೇ ಆ ಹುಲಿಯನ್ನು ದೂರದಲ್ಲಿ ಬೀಳುವಂತೆ ಮಾಡಿದರು.

ಆಚಾರ್ಯರು ಬದರಿಕಾಶ್ರಮಕ್ಕೆ ಹೋಗಿ ತನ್ನ ಗುರುಗಳಾದ ಶ್ರೀವೇದವ್ಯಾಸರನ್ನೂ, ಶ್ರೀನಾರಾಯಣ ಮುನಿಗಳನ್ನೂ ಕಂಡು, ಅಲ್ಲಿ ಕೆಲವು ದಿನಗಳವರೆಗೆ ಇದ್ದು ಅವರಿಂದ ತತ್ತ್ವೋಪದೇಶವನ್ನು ಪಡೆದರು. ಅವರು ಗುರುಗಳ ಸನ್ನಿಧಾನವನ್ನು ಬಿಟ್ಟು ಹೋಗಲು ಬಯಸದೆ ಇದ್ದಾಗ ಶ್ರೀವೇದವ್ಯಾಸರು ಮರಳನ್ನು ತಮ್ಮ ಮುಷ್ಟಿಯಿಂದ ಶಿಲೆಯಾಗುವಂತೆ ಮಾಡಿ, ತಮ್ಮ ಸನ್ನಿಧಾನವುಳ್ಳ ಆ ಪ್ರತಿಮೆಗಳನ್ನು ಆಚಾರ್ಯರಿಗೆ ಕೊಟ್ಟು, ಈ ಪ್ರತಿಮೆಗಳಲ್ಲಿ ನಾವು ಯಾವಾಗಲೂ ಸನ್ನಿಹಿತ-ರಾಗಿರುತ್ತೇವೆ. ನಿನಗೆ ನಮ್ಮ ವಿರಹ ಭಯವಿಲ್ಲ. ಇವುಗಳನ್ನು ತೆಗೆದುಕೊಂಡು ಹೋಗು ಎಂದು ಹೇಳಿದರು.

ಬದರಿಕಾಶ್ರಮದಲ್ಲಿರುವಾಗ ಶ್ರೀವೇದವ್ಯಾಸರು ತಮ್ಮ ಶಿಷ್ಯೋತ್ತಮರಾದ ಆಚಾರ್ಯರಿಗೆ ಒಂದು ವಿಶೇಷವಾದ ಅಪ್ಪಣೆಯನ್ನು ಮಾಡಿದರು. ''ಭಗವಂತನ ಸ್ವರೂಪವನ್ನು ಚೆನ್ನಾಗಿ ತಿಳಿಸಲು ಪರಾಪರತತ್ತ್ವಗಳ ನಿರೂಪಣೆಯನ್ನು ಆಖ್ಯಾನ ಉಪಾಖ್ಯಾನಗಳ ಮೂಲಕ ವಿಸ್ತಾರವಾಗಿ ಮಾಡಿರುವ ಮಹಾಭಾರತ ಗ್ರಂಥದ ತಾತ್ಪರ್ಯವನ್ನು ನಿರ್ಣಯಿಸುವ ಉತ್ತಮವಾದ ಒಂದು ಗ್ರಂಥವನ್ನು ರಚಿಸಬೇಕಾಗಿದೆ. ಆ ಕಾರ್ಯವನ್ನು ನೀನೇ ಮಾಡಬೇಕು'' ಎಂಬ ತಮ್ಮ ಗುರುಗಳ ಅಪ್ಪಣೆಯನ್ನು ಆಚಾರ್ಯರು ಶಿರಸಾ ವಹಿಸಿದರು.

ಆಚಾರ್ಯರು ಬದರಿಕಾಶ್ರಮದಿಂದ ಮರಳಿ ಬರುತ್ತಿದ್ದಾಗ ಗಂಗೆಯ ಬಳಿಯಲ್ಲಿ ಸಾಯಂಕಾಲವಾಯಿತು. ಗಂಗೆಯನ್ನು ದಾಟಲು ದೋಣಿಗಳೂ ಇರಲಿಲ್ಲ. ಸೂರ್ಯನು ಮುಳುಗುತ್ತಿದ್ದನು. ಶಿಷ್ಯರೆಲ್ಲರೂ ಮುಂದೇನು ಮಾಡೋಣವೆಂದು ವ್ಯಥೆಯಿಂದ ಗಂಗಾನದಿಯ ದಡದಲ್ಲಿ ಕುಳಿತರು. ಆಚಾರ್ಯರು ತಾವು ಒಬ್ಬರೆ ಜಲಸ್ತಂಭನ ವಿದ್ಯೆಯಿಂದ ಬಟ್ಟೆ ಒದ್ದೆಯಾಗದಂತೆ ಗಂಗೆಯನ್ನು ದಾಟಿದರು. ರಾತ್ರಿಯಲ್ಲಿ ಗಂಗೆಯನ್ನು ದಾಟಲು ಹೋದ ಆಚಾರ್ಯರು ಏನಾದರೋ ಎಂದು ಶಿಷ್ಯರು ಈ ಕಡೆ ವ್ಯಥೆ ಪಡುತ್ತಾ ಕುಳಿತಿದ್ದರು. ಕತ್ತಲೆಯಲ್ಲಿ ಏನೂ ಕಾಣಿಸುತ್ತಿರಲಿಲ್ಲ. ಈ ಕಡೆ ಆಚಾರ್ಯರು ಗರುಡನು ಹಸುವಿನ ಹೆಜ್ಜೆಯನ್ನು ದಾಟುವಂತೆ ಅನಾಯಾಸವಾಗಿ ಗಂಗಾನದಿಯನ್ನು ದಾಟಿ ಮತ್ತೊಂದು ದಡಕ್ಕೆ ಬಂದು ಅಲ್ಲಿ ಸೇರಿದ್ದ ಒಂದು ದೊಡ್ಡ ಸಭೆಗೆ ಬಂದರು. ಅಲ್ಲಿ ಅನೇಕ ಬ್ರಾಹ್ಮಣರೊಂದಿಗೆ ಒಬ್ಬ ರಾಜನು ಇದ್ದನು. ಆಚಾರ್ಯರಂತಹ ಮಹಾನುಭಾವರನ್ನು ನೋಡಿ ಅವರೆಲ್ಲರೂ ಪರಮಾಶ್ಚರ್ಯವನ್ನು ಹೊಂದಿ ಆಚಾರ್ಯರಿಗೆ ನಮಸ್ಕಾರ ಮಾಡಿದರು. ಆಚಾರ್ಯರ ವಿಷಯವನ್ನು ತಿಳಿದ ಕೂಡಲೇ ರಾಜನು ತನ್ನ ನಾವಿಕರನ್ನು ಕಳುಹಿಸಿ ಆಚೆಯ ದಡದಲ್ಲಿದ್ದ ಆಚಾರ್ಯರ ಶಿಷ್ಯರನ್ನೆಲ್ಲಾ ಈ ದಡಕ್ಕೆ ತರಿಸಿದನು. ಶತ್ರುಗಳ ಭಯದಿಂದ ರಾಜಾಜ್ಞೆಯಿಲ್ಲದೆ ನಾವಿಕರು ಯಾರನ್ನೂ ಈ ಕಡೆ ದಾಟಿಸುತ್ತಿರಲಿಲ್ಲ. ಆದರೂ ಆಚಾರ್ಯರ ಪ್ರಭಾವದಿಂದ ಆ ಕಗ್ಗತ್ತಲೆಯಲ್ಲಿಯೂ ರಾಜನು ಆಚಾರ್ಯರ ಶಿಷ್ಯರನ್ನು ಈ ದಡಕ್ಕೆ ಕರೆತರಿಸಿದನು. ಆಚಾರ್ಯರು, ಎಲ್ಲೋ ಒಂದು ಮೂಲೆಯಲ್ಲಿ ಅಥವಾ ಕತ್ತಲೆಯಲ್ಲಿ ಕುಳಿತಿರಬಹುದೆಂದು ಆಲೋಚಿಸುತ್ತಿದ್ದ ಶಿಷ್ಯರು ಇಲ್ಲಿ ನೋಡಿದ ದೃಶ್ಯವೇ ಬೇರೆ. ಗಂಗಾನದಿಯ ದಡದಲ್ಲಿಯೇ ಜನರು ಸಾವಿರಗಟ್ಟಲೆ ತುಂಬಿದ್ದಾರೆ. ದೀಪಗಳು ಪ್ರಜ್ವಲಿಸುತ್ತಿವೆ. ಎತ್ತರವಾದ ಆಸನದಲ್ಲಿ ಆಚಾರ್ಯರು ಕುಳಿತಿದ್ದಾರೆ. ಅವರ ಸಮೀಪದಲ್ಲಿ ಅನೇಕ ಪಂಡಿತರು ಪ್ರಶ್ನೆಗಳನ್ನು ಕೇಳುತ್ತಿದ್ದಾರೆ. ಸತ್ಯಲೋಕದಲ್ಲಿ ಬ್ರಹ್ಮದೇವರು ಋಷಿಗಳಿಗೆ ವೇದದ ಅಭಿಪ್ರಾಯವನ್ನು ಹೇಳುವಂತೆ ಆಚಾರ್ಯರೂ ವೇದಗಳ ಅರ್ಥಗಳನ್ನು ಪಂಡಿತರಿಗೆ ತಿಳಿಸುತ್ತಿದ್ದಾರೆ. ಪಂಡಿತರು ಆಚಾರ್ಯರ ಗಂಭೀರ ಧ್ವನಿಯ ಉತ್ತರವನ್ನು ಕೇಳಿ ಆನಂದಪರವಶರಾಗಿದ್ದಾಗ ಆಚಾರ್ಯರನ್ನು ಯಾವಾಗ ನೋಡಿಯೇವು ಎಂದು ತವಕಿಸುತ್ತಿದ್ದ ಶಿಷ್ಯರಿಗೆ ಈ ಸನ್ನಿವೇಶದಲ್ಲಿ ಆಚಾರ್ಯರ ದರ್ಶನವಾದಾಗ ಆ ಶಿಷ್ಯರ ಆನಂದ ಆಶ್ಚರ್ಯಗಳಿಗೆ ಪಾರವೇ ಇರಲಿಲ್ಲ.

ಅಲ್ಲಿಂದ ಆಚಾರ್ಯರು ಹಸ್ತಿನಾವತಿಗೆ ಬಂದರು. ಅಲ್ಲಿ ಚಾತುರ್ಮಾಸ್ಯವ್ರತಾನುಷ್ಠಾನಕ್ಕಾಗಿ ಗಂಗೆಯಿಂದ ಸ್ವಲ್ಪ ದೂರದಲ್ಲಿರುವ ಒಂದು ಮಠದಲ್ಲಿ ತಂಗಿದರು. ಈ ಚಾತುರ್ಮಾಸ್ಯವ್ರತಾನುಷ್ಠಾನ ಸಮಯದಲ್ಲಿ ದೇವ ಪೂಜ್ಯಳಾದ ಗಂಗೆಗೆ ಆಚಾರ್ಯರನ್ನು ಸೇವಿಸಬೇಕೆಂದು ಆಸೆಯಾಯಿತು. ಒಂದು ದಿನ ಆಚಾರ್ಯರು ವಾಸ ಮಾಡುತ್ತಿದ್ದ ಮಠದ ಹತ್ತಿರದಲ್ಲಿರುವ ಮರದ ಒಂದು ಕೊಂಬೆಯನ್ನು ಸೀಳಿ ಗಂಗೆಯು ಪ್ರಕಟಳಾದಳು. ಮಹೇಶ್ವರಾದಿಗಳಿಂದ ಮಾನ್ಯಳಾದ ಮಹಾವಾಣಿಯು ಯಾವ ಆಚಾರ್ಯರನ್ನು ಸೇವಿಸುತ್ತಾಳೋ, ಅಂತಹ ಆಚಾರ್ಯರನ್ನು ಗಂಗೆಯು ಸೇವಿಸುವುದರಲ್ಲಿ ಆಶ್ಚರ್ಯವೇನು? ಬಂದಿರುವ ಗಂಗೆಯು ಸುಂದರ ಸ್ತ್ರೀ ರೂಪವನ್ನೇ ಧರಿಸಿ ಆಚಾರ್ಯರಿಂದ ಸ್ವಲ್ಪ ದೂರದಲ್ಲಿ ನಿಂತು ನಮಸ್ಕಾರ ಮಾಡಿದಳು. ಶಿಷ್ಯರೂ ಸಹ ಈ ದೃಶ್ಯವನ್ನು ನೋಡಿ ಆಶ್ಚರ್ಯಭರಿತರಾದರು. ಆಚಾರ್ಯರು ಸ್ವಲ್ಪ ದೂರದಲ್ಲಿರುವ ಗಂಗೆಗೆ ಪ್ರತಿದಿನ ಸ್ನಾನಕ್ಕಾಗಿ ಹೋಗುತ್ತಿರಲಿಲ್ಲವಾದ್ದರಿಂದ ಗಂಗೆಯೇ ತಾನಾಗಿ ಬಂದು ಆಚಾರ್ಯರನ್ನು ಸೇವಿಸಿದಳು. ಚಾತುರ್ಮಾಸ್ಯ ವ್ರತ ಸಮಾಪ್ತಿಯಾದ ಮೇಲೆ ಆಚಾರ್ಯರು ಕಾಶಿಗೆ ಬಂದು ಅಲ್ಲಿ ಕೆಲವು ಸಮಯದವರೆಗೆ ವಾಸವಾಗಿದ್ದರು. ಆಚಾರ್ಯರ ಜತೆಗಿದ್ದ ಅನೇಕ ಶಿಷ್ಯರಿಗೆ ಆಚಾರ್ಯರಿಗೆ ವಯಸ್ಸಾಗಿರುವುದರಿಂದ ತಮ್ಮಂತಹ ಶಾರೀರಿಕ

ಬಲವಿಲ್ಲ ಅವರಿಗಿಂತ ನಾವೇ ಬಲಿಷ್ಠರು ಎಂಬ ಅಹಂಕಾರವು ಆಟದ ಸಮಯದಲ್ಲಿ ಒಡಮೂಡಿತು. ಇದನ್ನು ತಿಳಿದ ಆಚಾರ್ಯರು ಹೀಗೆಂದರು. ''ಶಿಷ್ಯರೇ! ನಾವೇ ಬಲಶಾಲಿಗಳೆಂದು ನಿಮಗೆಲ್ಲಾ ಅಹಂಕಾರವಿದ್ದಂತಿದೆ. ಆದ್ದರಿಂದ ನೀವೆಲ್ಲಾ ನನ್ನ ಜತೆಗೆ ಮಲ್ಲಯುದ್ಧಕ್ಕಾಗಿ ಬನ್ನಿರಿ. ಈ ಜಟ್ಟಿ ಕಾಳಗದಲ್ಲಿ ನೀವು ನಿಮ್ಮ ಸಾಮರ್ಥ್ಯವನ್ನು ಪೂರ್ತಿಯಾಗಿ ಉಪಯೋಗಿಸಬೇಕು. ತನ್ನ ಶಕ್ತಿಯನ್ನು ಯಾರು ಪೂರ್ತಿಯಾಗಿ ಉಪಯೋಗಿಸುವುದಿಲ್ಲವೋ ಅವನು ನಮ್ಮ ಅಪ್ಪಣೆಯನ್ನು ಮೀರಿದ ಪಾಪಕ್ಕೆ ಭಾಗಿಯಾಗುತ್ತಾನೆ.'' ಆಚಾರ್ಯರು ಹೀಗೆಂದ ಕೂಡಲೇ ಹದಿನೈದು ಮಂದಿ ತರುಣ ಶಿಷ್ಯರು ಒಂದೇ ಸಲ ಆಚಾರ್ಯರ ಮೇಲೆ ಬಿದ್ದರು. ತಮ್ಮ ಮೇಲೆ ಕುಸ್ತಿ ಮಾಡುತ್ತಿರುವ ಆ ಹದಿನೈದು ಮಂದಿಯನ್ನು ಒಂದೇ ಸಲ ಆಚಾರ್ಯರು ನೆಲಕ್ಕೆ ಕೆಡವಿದರು. ''ನಿಮಗೆ ಸಾಮರ್ಥ್ಯವಿದ್ದರೆ, ಪುನಃ ಮೇಲಕ್ಕೆ ಏಳಿ ಕುಸ್ತಿ ಮಾಡಿರಿ,'' ಎಂದು ಗಟ್ಟಿಯಾಗಿ ಒಂದು ಸಲ ಹೇಳುತ್ತಾ ಪುನಃ ಮೆಲ್ಲನೆ ನಕ್ಕರು. ಆಗ ಶಿಷ್ಯರು ''ಆಚಾರ್ಯರೇ ನಮ್ಮ ಶರೀರದ ಮೇಲೆ ನಿಮ್ಮ ಅವಯವಗಳೂ, ಬೆರಳುಗಳೂ ಮೇರು ಪರ್ವತದಷ್ಟು ಭಾರವಾಗಿ ಕಾಣಸುತ್ತಿವೆ. ತಾವು ನಮ್ಮ ಮೇಲೆ ಇದೇ ರೀತಿ ಭಾರವನ್ನೆಲ್ಲಾ ಬಿಟ್ಟರೆ ನಾವು ಸತ್ತು ಹೋಗುತ್ತೇವೆ. ದಯಾಶಾಲಿಗಳಾದ ತಾವು ನಮ್ಮನ್ನು ಬಿಟ್ಟುಬಿಡಿ'' ಎಂದು ಕಿರುಚಿದರು. ಆಗ ಆಚಾರ್ಯರು ಶಿಷ್ಯರನ್ನು ಬಿಟ್ಟರು. ಶಂಕರ ದೇವೇಂದ್ರರಿಂದ ಸಹಿತವಾದ ಜಗತ್ತನ್ನು ತಮ್ಮ ಹುಬ್ಬಿನ ವಿಲಾಸ ಮಾತ್ರದಿಂದ ಪ್ರೇರಿಸುವ ಸಾಮರ್ಥ್ಯವುಳ್ಳ ಮುಖ್ಯಪ್ರಾಣ ದೇವರಿಗೆ ಈ ಕಾರ್ಯವು ವಾಸ್ತವವಾಗಿ ಅತ್ಯಂತ ಅಲ್ಪವಲ್ಲವೇ!

ಕಾಶಿಯಲ್ಲಿ 'ಅಮರೇಂದ್ರಪುರಿ' ಎಂಬ ಪಂಡಿತನು ವಾಸಿಸುತ್ತಿದ್ದನು. ಅವನು ಎಲ್ಲಾ ಸಿದ್ಧಾಂತಗಳನ್ನು ಯುಕ್ತಿಯಿಂದ ಖಂಡಿಸಿದ್ದನು. ಅವನು ಆಚಾರ್ಯರನ್ನು ಭೇಟಿಮಾಡಿ ಆಚಾರ್ಯರ ಸಿದ್ಧಾಂತ ತತ್ತ್ವವನ್ನು ತಿಳಿದನು. ಆಚಾರ್ಯರು ತಮ್ಮ ಸಿದ್ಧಾಂತವನ್ನೂ ಹೇಳುತ್ತಾ 'ಬ್ರಹ್ಮಜ್ಞಾನಿಯು ಮಾಡುವ ಕರ್ಮವು ಮೋಕ್ಷಕ್ಕೂ ಸಾಧನವಾಗುತ್ತದೆ' ಎಂದು ಹೇಳಿದರು. ಆಗ ಅಮರೇಂದ್ರಪುರಿಯು 'ಅದು ಹೇಗೆ? ಸಾಧಿಸಿರಿ' ಎಂದು ಕೇಳಿದನು. ಆಚಾರ್ಯರು ಜ್ಞಾನಸಹಿತವಾದ ಕರ್ಮವು ಮೋಕ್ಷಕ್ಕೆ ಸಹಾಯಕವೆಂಬ ವಿಷಯವನ್ನು ಚೆನ್ನಾಗಿ ಪ್ರತಿಪಾದನೆ ಮಾಡಿದರು. ಆದರೂ ಕಠಿನ ಬುದ್ಧಿಯ ಆ ಯತಿಯು 'ಜ್ಞಾನ ಎಂದರೇನು?' ಎಂದು ಪುನಃ ಪ್ರಶ್ನಿಸಿದನು. ಆಚಾರ್ಯರನ್ನು ಖಂಡಿಸಲು ಬೇರೆ ಯುಕ್ತಿಯು ಹೊಳೆಯದಿದ್ದಾಗ ಆ ಯತಿಯು ಈ ರೀತಿ ಪುನಃ ವ್ಯರ್ಥ ಪ್ರಶ್ನೆಯನ್ನು ಮಾಡಿದನು. ಆಚಾರ್ಯರು ''ನೀನು ಜ್ಞಾನವುಳ್ಳ-ವನಾದರೆ ನಿನಗೆ ಜ್ಞಾನ ಪದದ ಅರ್ಥ ತಿಳಿದಿದೆ. ಜ್ಞಾನವಿಲ್ಲದ ಮೂಢನಾಗಿದ್ದರೆ ಈ ಪ್ರಶ್ನೆಯನ್ನೇ ಮಾಡುತ್ತಿರಲಿಲ್ಲ'' ಎಂದು ಹೇಳಿ ಆ ಯತಿಯನ್ನು ಯುಕ್ತಿಯಿಂದ ಸೋಲಿಸಿದರು. ಹೀಗೆ ವೇದವ್ಯಾಸರ ಶಿಷ್ಯರಾದ ಆಚಾರ್ಯ ಮಧ್ವರು ತಾವು ಹೋದ ಸಭೆಗಳಲ್ಲೆಲ್ಲಾ ವೇದಾರ್ಥಗಳನ್ನು ವಿವರಿಸುತ್ತಾ ಜನರಲ್ಲಿರುವ ಅಜ್ಞಾನವನ್ನು ತೊಲಗಿಸುತ್ತಿದ್ದರು. ಸಕಲ ಸಿದ್ಧಾಂತ-ಗಳನ್ನೂ ಬಲ್ಲ ವಿದ್ವಾಂಸರು ಆಚಾರ್ಯರ ವ್ಯಾಖ್ಯಾನ ವೈಖರಿಯನ್ನು ನೋಡಿ ಆನಂದದಿಂದ ಕೈಮುಗಿಯುತ್ತಿದ್ದರು.

''ಶ್ರೀಮನ್ನಾರಾಯಣನು ಸಕಲ ಶಬ್ದವಾಚ್ಯನು, ಅವಾಚ್ಯನಲ್ಲ. ಅವನು ಜೀವರ ಹತ್ತಿರದಲ್ಲಿರುವವನೇ ಹೊರತು ಜೀವರಿಗೂ ಅವನಿಗೂ ಐಕ್ಯವಿಲ್ಲ. ಅವನಿಗೆ ವಾರ್ಧಕ್ಯ, ಮರಣ ಮುಂತಾದ ದುರವಸ್ಥೆಗಳಿಲ್ಲ. ಅವನು ನಿತ್ಯನು, ಜ್ಞಾನರೂಪನು ಅವನ ಅಸಾಧಾರಣವಾದ ಇಚ್ಛೆಯಿಂದ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳು ಆಗುತ್ತವೆ. ಇವುಗಳು ಮಾಯೆಯಿಂದ ಆಗುವುದಿಲ್ಲ. ಅವನು ಸರ್ವಸ್ವತಂತ್ರನು. ಸಮಸ್ತ ಜೀವರ ಹೃದಯ ಗುಹೆಯಲ್ಲಿ ನೆಲೆಸಿರುತ್ತಾನೆ. ಸಜ್ಜನರಲ್ಲಿ ಬಿಂಬರೂಪಿಯಾಗಿದ್ದು ತನ್ನ ಸಾಕ್ಷಾತ್ಕಾರದಿಂದ ಮೋಕ್ಷವನ್ನು ಕೊಡುತ್ತಾನೆ. ಮೋಕ್ಷಯೋಗ್ಯರಾದ ಜೀವರ ಎಲ್ಲಾ ದೋಷಗಳನ್ನು ಅವನು ದೂರೀಕರಿಸಿ ಅವರನ್ನು ಉದ್ಧಾರಮಾಡುವ ಪರಮ ದಯಾಲುವು. ದುಷ್ಟಜೀವರು ಮಾಡಿದ ದ್ವೇಷದ ಫಲವಾಗಿ ಅವರು ನರಕವನ್ನೇ ಪಡೆಯುತ್ತಾರೆ, ಎಲ್ಲ ದುಃಖವನ್ನು ಅನುಭವಿಸುತ್ತಾರೆ. ಈ ಕಾರ್ಯವನ್ನು ಪರಮಾತ್ಮನೇ ಮಾಡುತ್ತಾನೆ. ಆನಂದಾದಿ ಸಕಲಗುಣಪರಿಪೂರ್ಣನಾದ ಪರಮಾತ್ಮನು ತಾನು ಸತ್ತ್ವ ರಜಸ್ ತಮೋ ಗುಣದೂರನಾಗಿ ಸಮಸ್ತದೋಷದೂರನಾಗಿದ್ದಾನೆ. ಲಕ್ಷ್ಮೀಪತಿಯಾದ ನಾರಾಯಣನಿಗೆ ಸಮರೂ ಉತ್ತಮರೂ ಯಾರೂ ಇಲ್ಲ. ಇವನು ಸಮಸ್ತ ಪ್ರಪಂಚಕ್ಕಿಂತ ಅತ್ಯಂತ ವಿಲಕ್ಷಣ. ಇವೇ ಮೊದಲಾದ ವಿಷಯಗಳು ವೇದಾದಿ ಸಕಲ ಸಚ್ಛಾಸ್ತ್ರಗಳಿಂದ ತಿಳಿದು ಬರುತ್ತದೆ.''

ಇಂತಹ ಇನ್ನೂ ಅನೇಕಾನೇಕ ವಿಷಯಗಳನ್ನು ಶ್ರೀಮಧ್ವಾಚಾರ್ಯರು ವೇದ ವ್ಯಾಖ್ಯಾನವನ್ನು ಮಾಡುತ್ತಾ ವಿವರಿಸಿದರು. ಆಚಾರ್ಯರ ಇಂತಹ ಉತ್ತಮವಾದ ವ್ಯಾಖ್ಯಾನವನ್ನು ಅದ್ವೈತ ಶಾಸ್ತ್ರದ ಮಾಯೆಯಿಂದ ಖಂಡಿಸಲು ಸಾಧ್ಯವಿಲ್ಲ. ಈ ವ್ಯಾಖ್ಯಾನಕ್ಕೆ ಸರಿದೂಗುವ ವ್ಯಾಖ್ಯಾನವೇ ಇಲ್ಲ. ನ್ಯಾಯ ಸಮ್ಮತವಾದ ಈ ವ್ಯಾಖ್ಯಾನವನ್ನು ಬಿಟ್ಟು ಇತರ ಶಾಸ್ತ್ರಗಳ ವ್ಯಾಖ್ಯೆಯನ್ನು ಅನುಸರಿಸಿದರೆ ಅದರಲ್ಲೂ ಅದ್ವೈತ ಶಾಸ್ತ್ರವನ್ನು ಅನುಸರಿಸಿದವರು ಅತ್ಯಂತ ಅಸಹ್ಯವಾದ ದುಃಖಕರವಾದ ನಿತ್ಯನರಕದಲ್ಲಿ ಬೀಳುವರು. ಎಂಬ ವಿಷಯವೂ ಶಾಸ್ತ್ರ ಸಮ್ಮತವಾಗಿದೆ.

ಹೀಗೆ ಸ್ವಸಿದ್ಧಾಂತಸ್ಥಾಪನ ಮಾಡುತ್ತಾ, ಪರಸಿದ್ಧಾಂತ ಖಂಡನ ಮಾಡುತ್ತಾ ಆಚಾರ್ಯರು ಸಂಚರಿಸುತ್ತಿದ್ದರು. ಅವರು ಸಂಚಾರ ಮಾಡುತ್ತಾ ಹಿಂದೆ ಮಹಾಭಾರತ ಯುದ್ಧವು ನಡೆದ ಕುರುಕ್ಷೇತ್ರಕ್ಕೆ ಬಂದರು. ಅಲ್ಲಿ ಬಂದ ಆಚಾರ್ಯರು ಹಿಂದೆ ತಾವು ಯುದ್ಧ ಕಾಲದಲ್ಲಿ ಭೀಮಸೇನರಾಗಿದ್ದು ಆನೆಗಳ ಜತೆಗೆ ಯುದ್ಧ ಮಾಡಿದುದದನ್ನು ನೆನೆಸಿಕೊಂಡರು. ಅವರ ಜೊತೆಗಿದ್ದ ಸತ್ಯತೀರ್ಥಾದಿ ಮುನಿಗಳಿಗೆ ಆ ಕ್ಷೇತ್ರದ ಇತಿಹಾಸವನ್ನು ಹೇಳಿ, ಅಲ್ಲಿ ತಪಸ್ಸು ಮಾಡುತ್ತಿರುವ ಓರ್ವ ಡಾಂಬಿಕನನ್ನು ನೋಡಿ ಇವನು ಮುಂದೆ ಮಾರೀಚನಾಗುವನು ಎಂದರು. ಅಲ್ಲಿಯೇ ಸಮೀಪದಲ್ಲಿ ಭೂಮಿಯನ್ನು ಅಗೆಸಿ ತಮ್ಮ ಭೀಮಾವತಾರದ ಗದೆಯನ್ನು ತೋರಿಸಿದರು. ಆಚಾರ್ಯರ ತ್ರಿಕಾಲ ಜ್ಞಾನವನ್ನು ಕಂಡು ಶಿಷ್ಯರೆಲ್ಲರೂ ಪರಮಾನಂದಭರಿತರಾದರು.

ಶ್ರೀಮದಾಚಾರ್ಯರು ಒಂದಾನೊಂದು ದಿನ ತಮ್ಮ ಶಿಷ್ಯಪರಿವಾರ ಸಮೇತರಾಗಿ ಹೃಷೀಕೇಶತೀರ್ಥಕ್ಕೆ ಹೋದರು. ಅಲ್ಲಿ ಒಂದು ದಿನ ಮಹಾರುದ್ರ ದೇವರು ಶುಭ್ರವರ್ಣದ ಬ್ರಾಹ್ಮಣರೂಪವನ್ನು ತಾಳಿ ಎಲ್ಲರೂ ನೋಡುತ್ತಿರುವಾಗಲೇ ಹತ್ತಿರ ಬಂದು ಆಚಾರ್ಯರನ್ನು ನಮಸ್ಕರಿಸಿದರು. ''ಪೂಜ್ಯ ಪವಮಾನಾವತಾರರಾದ ಆಚಾರ್ಯರೇ ನಾಳೆ ದಿನ ನಾನು ತಮಗೆ ಭಿಕ್ಷಾ ಪ್ರದಾನ ಮಾಡುತ್ತೇನೆ. ಅದನ್ನು ಸ್ವೀಕರಿಸಿ ಅನುಗ್ರಹಿಸಬೇಕು'' ಎಂದು ಎಲ್ಲರ ಎದುರು ಆಚಾರ್ಯರನ್ನು ಭಿಕ್ಷೆಗೆ ಅಹ್ವಾನಿಸಿ ಹೊರಟುಹೋದರು. ಇದರಿಂದ ಎಲ್ಲರೂ ಆಶ್ಚರ್ಯಪಟ್ಟರು. ಅದೇ ಮಹಾದೇವರು ಇನ್ನೊಂದು ಶಿವಕ್ಷೇತ್ರದಲ್ಲಿ ತನ್ನ ಭಕ್ತನಾದ ಕ್ಷೇತ್ರಾಧಿಕಾರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ''ನಾಳೆ ನನ್ನ ಗುರುಗಳಾದ ಜಗದ್ಗುರುಗಳಾದ ಮಧ್ವಾಚಾರ್ಯರಿಗೆ ನಾನು ಭಿಕ್ಷೆ ನಡೆಸಬೇಕಾಗಿದೆ. ಅವರು ಹೃಷೀಕೇಶದಲ್ಲಿ ತಂಗಿದ್ದಾರೆ. ಅವರಿಗೆ ಭಿಕ್ಷೆಯನ್ನಿತ್ತು ಪೂಜಿಸು'' ಎಂದು ಪ್ರೇರಿಸಿದರು. ಆ ಭಕ್ತನು ಸಮಸ್ತ ಭಕ್ಷ್ಯಭೋಜ್ಯಗಳನ್ನು ಸಿದ್ಧಪಡಿಸಿ ಹೃಷೀಕೇಶಕ್ಕೆ ತಂದು ಆಚಾರ್ಯರಿಗೆ ಅರ್ಪಿಸಿ ಭೋಜನ ಮಾಡಿಸಿದನು. ಹೀಗೆ ಆಚಾರ್ಯರಿಗೆ ಶಂಕರನೂ ಕಿಂಕರನೆಂಬ ವಿಷಯವನ್ನು ಆ ಚಂದ್ರಚೂಡನು ತಾನೇ ಬಂದು ತೋರಿಸಿಕೊಟ್ಟನು. ಆಚಾರ್ಯರು ಉತ್ತರ ಭಾರತದ ಸಂಚಾರವನ್ನು ಮುಗಿಸಿ ದಕ್ಷಿಣದಲ್ಲಿರುವ 'ಇಷುಪಾತ'ವೆಂಬ ಕ್ಷೇತ್ರಕ್ಕೆ ಬಂದರು. ಅಲ್ಲಿಯ ಕ್ಷೇತ್ರಾಧಿಪತಿಯಾದ ಪರಶುರಾಮರೂಪಿಯಾದ ಲಕ್ಷ್ಮೀಪತಿಯನ್ನು ಧ್ಯಾನಿಸಿದರು. ಅಲ್ಲಿ ಅವರು ಒಂದು ದಿನ ಭೋಜನಾವಸಾನದಲ್ಲಿ ಒಂದು ಸಹಸ್ರ ರಾಜಬಾಳೆ-ಹಣ್ಣುಗಳನ್ನು ತಿಂದರು.

ಹೀಗೆ ಆಚಾರ್ಯರು ಸಂಚಾರ ಮಾಡುತ್ತಾ 'ಗೋವಾ' ಎಂಬ ಪ್ರಾಂತಕ್ಕೆ ಬಂದರು. ಅಲ್ಲಿ ಶಂಕರನೆಂಬ ಬ್ರಾಹ್ಮಣನು ಅವರಿಗೆ ದೊಡ್ಡದಾದ ನಾಲ್ಕುಸಾವಿರ ಮಾಗಿದ ಬಾಳೆಹಣ್ಣುಗಳನ್ನು ಸ್ವೀಕರಿಸಬೇಕು ಎಂದು ಪ್ರಾರ್ಥಿಸಿ ತಂದುಕೊಟ್ಟನು. ಆಚಾರ್ಯರು ಆ ಬಾಳೆಹಣ್ಣುಗಳನ್ನೆಲ್ಲಾ ತಿಂದು ಮೂವತ್ತು ಕೊಡಗಳಲ್ಲಿ ತುಂಬಿದ ಹಾಲನ್ನು ಕುಡಿದರು. ಇದರಿಂದ ಆಶ್ಚರ್ಯಪಟ್ಟ ಆ ದೇಶದ ದೊರೆಯು ಆಚಾರ್ಯರನ್ನು ತನ್ನ ದೇಶದ ರಕ್ಷಣೆಗಾಗಿ ಅಲ್ಲಿಯೇ ಇರಿಸಿಕೊಳ್ಳಬೇಕೆಂದು ನಿರ್ಧರಿಸಿ ಅವರನ್ನು ತನ್ನ ಸೈನಿಕರ ಕಾವಲಲ್ಲಿಟ್ಟು ತಡೆದನು. ಆದರೆ ರಾಜ ಮತ್ತು ಅವನ ಸೈನಿಕರು ಆಚಾರ್ಯರನ್ನು ಎಲ್ಲಿಗೂ ಹೋಗದಂತೆ ತಡೆದು ನಿಲ್ಲಿಸಿರುವಾಗಲೇ ಆಚಾರ್ಯರು ಅಲ್ಲಿಂದ ಯೋಗ ಸಾಮರ್ಥ್ಯದಿಂದ ಮಾಯವಾದರು. ಅಲ್ಲಿಂದ ಹೊರಟು ಬೇರೆ ಸ್ಥಳಕ್ಕೆ ಹೋದರು. ಆಚಾರ್ಯರು ಸಂಚಾರ ಮಾಡುತ್ತಾ ಬಜಿಪೆ (ಪಶುಪ) ಎಂಬ ಹಳ್ಳಿಗೆ ಹೋಗಿದ್ದರು. ಅಲ್ಲಿ ಆಚಾರ್ಯರು ಭಿಕ್ಷಾ ಸ್ವೀಕಾರ ಮಾಡಿ ಕುಳಿತಿರುವಾಗ ಅವರ ಮಹಾತ್ಮ್ಯೆಯನ್ನೂ ಬಲ್ಲ ಕೆಲವರು ಅಲ್ಲಿ ಹೂವು ಕಾಯಿ ಬಿಡದ ಕೆಲವು ಮರಗಳಲ್ಲಿ ತಾವು ಹೂವು ಕಾಯಿಗಳನ್ನುಂಟುಮಾಡಬೇಕೆಂದು ಪ್ರಾರ್ಥಿಸಿದಾಗ

ಆಚಾರ್ಯರು ದಿವ್ಯವಾದ ಸಂಗೀತವನ್ನು ಹಾಡಿ ವಸಂತಋತು ಅಲ್ಲದಿದ್ದರೂ ಅಲ್ಲಿದ್ದ ಮರಗಿಡಗಳಲ್ಲಿ ಹೂವು ಹಣ್ಣುಗಳನ್ನು ಉಂಟು ಮಾಡಿದರು.

ಶ್ರೀಮಧ್ವಾಚಾರ್ಯರು ಪರಮಾತ್ಮನ ಹೊರತು ಇನ್ನು ಯಾವ ವಸ್ತುವಿನ ಅಪೇಕ್ಷೆ ಇಲ್ಲದ ಗುಣಪೂರ್ಣರು. ದೇವಶತ್ರುಗಳನ್ನು ದ್ವೇಷಿಸುವವರು. ಚತುರ್ಮುಖ ಬ್ರಹ್ಮನಿಗೆ ಸಮಾನರಾದ ಋಜು ಯೋಗಿಪುಂಗವರು. ದುರ್ವಾದಿಗಳ ವಾದವನ್ನು ಖಂಡಿಸುವವರು. ಪೂರ್ಣಚಂದ್ರನಂತಹ ಕಾಂತಿಯುಳ್ಳವರು. ಪೂರ್ಣಜ್ಞಾನರು. ಭಕ್ತ ಜನರಿಗೆ ಜಯಪ್ರದ-ನಾದ, ಸೇವ್ಯನಾದ ಲಕ್ಷ್ಮೀಪತಿಯನ್ನು ಸರ್ವದಾ ತನ್ನ ಹೃದಯದ ಒಳಗೂ ಹೊರಗೂ ಕಂಡು ಧ್ಯಾನಿಸಿ ನಮಸ್ಕರಿಸುವವರು. ರೋಗರುಜಿನಗಳು ಹಸಿವು ಬಾಯಾರಿಕೆಗಳು ಅವರಿಗಿಲ್ಲ. ಶ್ರೀಹರಿಗೆ ಅತ್ಯಂತ ಪ್ರಿಯರಾದ ಅವರನ್ನು ಎಲ್ಲಾ ಭಕ್ತರೂ ಪರಮಾದರದಿಂದ ಪೂಜಿಸಿದರು.

''ತ್ರಿಭುವನಾಲಂಕಾರರಾದ ತ್ರಿಭುವನ ಗುರುಗಳಾದ ಶ್ರೀ ತತ್ತ್ವಜ್ಞಾಚಾರ್ಯರ ಚರಿತ್ರೆಯು ನಾನು ಹೇಳಿದಷ್ಟೇ ಅಲ್ಲ. ನಾನು ಹೇಳದಿರುವ ಅನೇಕ ಅದ್ಭುತಕಾರ್ಯಗಳೂ ಇವೆ. ಇವುಗಳನ್ನು, ತಿಳಿದವರಿಂದ ಕೇಳಿ ಹೇಳಿ ಧ್ಯಾನಿಸುವ ಭಕ್ತರಿಗೆ ಸಮಸ್ತ ಇಷ್ಟಾರ್ಥಗಳೂ ಲಭಿಸುವವು ಎಂದು ದೇವತೆಗಳೇ ಹೇಳುತ್ತಾರೆ''. ಈ ರೀತಿ ಪಂಡಿತನಾದ ಆಚಾರ್ಯರ ಶಿಷ್ಯನೊಬ್ಬನು ಅದ್ಭುತವಾದ ಆಚಾರ್ಯರ ಮಹಿಮೆಗಳಲ್ಲಿ ಕೆಲವನ್ನು ಶ್ರೋತೃಗಳ ಪ್ರಾರ್ಥನಾನುಸಾರ ಹೇಳಿದನು.

ನೀರು ತುಂಬಿದ ಮೋಡವು ಆಕಾಶದಲ್ಲಿ ಹರಡಿ ಮಿಂಚಿನಿಂದ ದಿಕ್ಕು ದಿಕ್ಕುಗಳನ್ನು ಪ್ರಕಾಶಗೊಳಿಸಿ ಮಳೆಯನ್ನು ಸುರಿಸುತ್ತದೆ. ಬಿಸಿಲಿನ ಬೇಗೆಯಿಂದ ಬಾಡಿದ ಮರಗಳನ್ನು ಮಳೆಯು ನೀರಿನಿಂದ ತಣಿಸುತ್ತದೆ. ಅವುಗಳಲ್ಲಿ ಚಿಗುರು ಹೂವು ಹಣ್ಣುಗಳು ಬಿಡುವಂತೆ ಮಾಡುತ್ತದೆ. ಹಾಗೆಯೇ ವಿಷ್ಣು ಪದದಲ್ಲಿ ನಿರತರಾದ, ವಿದ್ಯಾಪ್ರಕಾಶದಿಂದ ಕೂಡಿದ ಜ್ಞಾನಿವರೇಣ್ಯರಾದ ಶ್ರೀಮಧ್ವಾಚಾರ್ಯರು ಈ ರೀತಿಯ ಅನೇಕ ಅದ್ಭುತ ಮಹಿಮೆಗಳನ್ನು ತೋರಿದರು. ಇದರಿಂದ ಸಂಸಾರತಾಪದಿಂದ ತಪ್ತರಾದ ಸಜ್ಜನರಿಗೆ, ಒಳ್ಳೆಯ ಜ್ಞಾನ, ಒಳ್ಳೆಯ ಮನಸ್ಸು, ಗಾಢವಾದ ಆನಂದ, ವಿಪತ್ತುಗಳ ಪರಿಹಾರ ಎಲ್ಲವೂ ಉಂಟಾದುವು. ಹೀಗೆ ಲೋಕಾನುಗ್ರಹ ಮಾಡುತ್ತಾ ತ್ರೈಲೋಕ್ಯಾಚಾರ್ಯರು ವಿರಾಜಿಸಿದರು.



॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

# ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ದಶಮಃ ಸರ್ಗಃ

ಅವತಾರಿಕಾ— ಶ್ರೀಮಧ್ವಾಚಾರ್ಯರು ಪುನಃ ಪರಶುರಾಮ ಕ್ಷೇತ್ರಕ್ಕೆ ದಿಗ್ವಿಜಯ ಮಾಡಿದರೆನ್ನುತ್ತಾರೆ.

**ಸಪದಿ ಸಮಸ್ಕುರುತ ಭೃಶಂ ಮಾಧವಗುಣಸಾಧಕೋಽಥ ಮಧ್ವರವಿಃ ।**
**ಭೃಗುಕುಲತಿಲಕಸ್ಥಾನಂ ತಾಪಕರಃ ಪಾಪಪಾಂಥಾನಾಮ್ ॥ 1 ॥**

ಪದಚ್ಛೇದ— ಸಪದಿ, ಸಮಸ್ಕುರುತ, ಭೃಶಂ, ಮಾಧವಗುಣಸಾಧಕಃ ಅಥ, ಮಧ್ವರವಿಃ, ಭೃಗುಕುಲತಿಲಕಸ್ಥಾನಂ, ತಾಪಕರಃ ಪಾಪಪಾಂಥಾನಾಂ ।

ಅನ್ವಯ— ಅಥ, ಮಾಧವಗುಣಸಾಧಕಃ, ಪಾಪಪಾಂಥಾನಾಂ, ತಾಪಕರಃ, ಮಧ್ವರವಿಃ ಸಪದಿ ಭೃಗುಕುಲ-ತಿಲಕಸ್ಥಾನಂ, ಭೃಶಂ, ಸಮಸ್ಕುರುತ ।

ಅನ್ವಯಾರ್ಥ—

**ಅಥ** = ಉಡುಪಿಯಲ್ಲಿ ಶ್ರೀಕೃಷ್ಣನನ್ನು ನಮಸ್ಕರಿಸಿದ ತರುವಾಯ,

**ಮಾಧವಗುಣಸಾಧಕಃ** = ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ, ಜ್ಞಾನಾನಂದಾದಿಗುಣಗಳ, ಪ್ರತಿ-ಪಾದಕರಾದ,

(**ಮಾಧವಗುಣಸಾಧಕಃ** = ವಸಂತಋತುವಿನ, ಪುಷ್ಪಫಲ ಮಲಯಮಾರುತ ಮುಂತಾದ ಉತ್ಕೃಷ್ಟ ಧರ್ಮಗಳನ್ನು ಸಾಧಿಸಿಕೊಡುವ,)

**ಪಾಪಪಾಂಥಾನಾಂ** = ಪಾಪಪೂರ್ಣರಾದ ದುರ್ವಾದಿಗಳೆಂಬ ದಾರಿಗರಿಗೆ,

(**ಪಾಪ** = ಕ್ರೂರವಾದ ಗೂಬೆ ಮೊದಲಾದ ಪಕ್ಷಿಗಳಿಗೂ ಇತರ ಪ್ರಾಣಿಗಳಿಗೂ,

**ಪಾಂಥಾನಾಂ** = ದಾರಿಹೋಕರಿಗೂ,)

**ತಾಪಕರಃ** = ವಾದದಿಂದ ದುಃಖವನ್ನುಂಟು ಮಾಡುವ (ಬೇಗೆಯನ್ನುಂಟು ಮಾಡುವ)

**ಮಧ್ವರವಿಃ** = ಶ್ರೀಮಧ್ವಾಚಾರ್ಯರೆಂಬ ಸೂರ್ಯನು,

**ಸಪದಿ** = ಕೂಡಲೇ,

**ಭೃಗುಕುಲತಿಲಕ ಸ್ಥಾನಂ** = ಶ್ರೀಪರಶುರಾಮನಿಂದ ರಚಿತ ಸ್ಥಳವಾದ, ತೌಳವ ದೇಶವನ್ನು, (ಶುಕ್ರನ ಸ್ಥಾನವಾದ ವೃಷಭ ರಾಶಿಯನ್ನು)

**ಭೃಶಂ** = ಬಹಳವಾಗಿ (ಚೆನ್ನಾಗಿ)

**ಸಮಸ್ಕುರುತ** = ಅಲಂಕರಿಸಿದರು.

**ತಾತ್ಪರ್ಯ**— ಸೂರ್ಯನು ವಸಂತ ಋತುವಿನಲ್ಲಿ ಶುಕ್ರನ ಕ್ಷೇತ್ರವಾದ ವೃಷಭ ರಾಶಿಯನ್ನು ಪ್ರವೇಶಿಸುತ್ತಾನೆ. ಆಗ ವೈಶಾಖ ಮಾಸವು ಬರುತ್ತದೆ. ಸಂಪಿಗೆ ಮಲ್ಲಿಗೆ ಮೊದಲಾದ ಹೂವುಗಳು ಅರಳುತ್ತವೆ. ಕೋಗಿಲೆಗಳು ಇಂಪಾಗಿ ಕೂಗುತ್ತದೆ. ಹೀಗೆ ವಸಂತ ಮಾಧವನ ಮತ್ತು ವೈಶಾಖ ಮಾಧವನ ಗುಣಗಳನ್ನು ಸಾಧಿಸಿ ಕೊಡುವವನು ಸೂರ್ಯನು. ಇಂತಹ ಸೂರ್ಯನು ಗೂಬೆಗಳಿಗೂ ದಾರಿಹೋಕರಿಗೂ ಬೇಗೆಯನ್ನುಂಟು ಮಾಡುವನು.

ಹೀಗೆಯೇ ಸೂರ್ಯನು ಭಾರ್ಗವನ ಕ್ಷೇತ್ರವನ್ನು ವೃಷಭರಾಶಿಯನ್ನು ಅಲಂಕರಿಸುವಂತೆ ಶ್ರೀಮಧ್ವಾಚಾರ್ಯರೆಂಬ ಸೂರ್ಯರು ಶ್ರೀಪರಶುರಾಮರು ಸೃಷ್ಟಿಸಿದ ತೌಳವ ಮಂಡಲವನ್ನು ಅಲಂಕರಿಸಿದರು. ಅಲ್ಲಿ ಅವರು ಸೂರ್ಯನು ವಸಂತನ ಗುಣಗಳನ್ನು ಸಾಧಿಸುವಂತೆ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಜ್ಞಾನ ಆನಂದಾದಿ ಗುಣಗಳನ್ನು ಸಾಧಿಸಿದರು. ಸೂರ್ಯನು ಪಾಪಿ, ಗೂಬೆಗಳಿಗೆ, ದಾರಿಗರಿಗೆ ತಾಪ ಉಂಟುಮಾಡುವಂತೆ ದುರ್ವಾದಿಗಳ ವಾದಗಳನ್ನು ನಿರಾಕರಿಸಿ ಅವರಿಗೆ ವ್ಯಥೆಯನ್ನುಂಟು ಮಾಡಿದರು.

**ವಿಗ್ರಹ**—

**ಮಾಧವಗುಣಸಾಧಕಃ**— ಮಾಯಾಃ ಧವಃ ಮಾಧವಃ, ಮಾಧವಸ್ಯ ಗುಣಾಃ ಮಾಧವಗುಣಾಃ, ಸಾಧಯತೀತಿ ಸಾಧಕಃ, ಮಾಧವಗುಣಾನಾಂ ಸಾಧಕಃ ಮಾಧವಗುಣಸಾಧಕಃ ।

**ಮಧ್ವರವಿಃ**— ಮಧ್ವ ಏವ ರವಿಃ ಮಧ್ವರವಿಃ ।

**ಭೃಗುಕುಲತಿಲಕಸ್ಥಾನಂ**— ಭೃಗೂಣಾಂ ಕುಲಂ ಭೃಗುಕುಲಂ, ಭೃಗುಕುಲಸ್ಯ ತಿಲಕಃ ಭೃಗುಕುಲತಿಲಕಃ, ಭೃಗುಕುಲತಿಲಕಸ್ಯ ಸ್ಥಾನಂ ಭೃಗುಕುಲತಿಲಕಸ್ಥಾನಂ ತತ್ ।

**ತಾಪಕರಃ**— ಕರೋತೀತಿ ಕರಃ ತಾಪಸ್ಯ ಕರಃ ತಾಪಕರಃ ।

**ಪಾಪಪಾಂಥಾನಾಂ**— ಪಾಪಾ ಏವ ಪಾಂಥಾಃ ಪಾಪಪಾಂಥಾಃ, ಪಾಪಾಶ್ಚ ಪಾಂಥಾಶ್ಚ ಪಾಪಪಾಂಥಾಃ ತೇಷಾಂ ।

**ವ್ಯಾಕರಣವಿಶೇಷ**— ಸಮಸ್ಕುರುತ ಎಂಬಲ್ಲಿ ಸಂಪರಿಭ್ಯಾಂ ಕರೋತೌ ಭೂಷಣೇ (6.1.137) ಎಂಬ ಸೂತ್ರದಿಂದ ಭೂಷಣಾರ್ಥದಲ್ಲಿ ಸುಟ್. ಪಾಪಂ ಏಷಾಂ ಅಸ್ತೀತಿ ಪಾಪಾಃ ಎಂಬಲ್ಲಿ ಅರ್ಶ ಆದಿಭ್ಯೋ ಅಚ್ ಎಂಬ ಸೂತ್ರದಿಂದ ಅಚ್ ಪ್ರತ್ಯಯ ।

**ಪ್ರಯೋಗ**— ಮಧ್ವರವಿಃ ಭೃಗುಕುಲತಿಲಕಸ್ಥಾನಂ, ಸಮಸ್ಕುರುತ (ಕರ್ತರಿ)
ಮಧ್ವರವಿಣಾ ಭೃಗುಕುಲತಿಲಕಸ್ಥಾನಂ ಸಮಸ್ಕ್ರಿಯತ (ಕರ್ಮಣಿ)

**ಕೋಶ**— 'ದ್ರಾಕ್ ಮಂಕ್ಷು ಸಪದಿ ದ್ರುತಂ, 'ಇಂದಿರಾ ಲೋಕಮಾತಾ, ಮಾ'। 'ಧವಃ ಪ್ರಿಯಃ ಪತಿರ್ಭರ್ತಾ' 'ಅಧ್ವನೀನೋಽಧ್ವಗೋಽಧ್ವನ್ಯಃ ಪಾಂಥಃ ಪಥಿಕ' ಇತ್ಯಾದಿ, 'ವೈಶಾಖೇ ಮಾಧವೋ ರಾಧಃ' ಎಂದು ಅಮರ ।

**ವಿಶೇಷ ವಿಚಾರಗಳು**— 'ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ' ಎಂದು ವೇದದಲ್ಲಿ ಹೇಳಿದಂತೆ ಚೈತ್ರಾದಿಮಾಸೌ ಮಧುಮಾಧವೌ ದ್ವೌ ಎಂದು ಹಲಕೋಶದಲ್ಲಿ ಹೇಳಿದಂತೆ. ಚೈತ್ರ ವೈಶಾಖಗಳು ವಸಂತ ಋತುವು ಇಲ್ಲಿ ಮಾಧವ ಎಂದು ವಸಂತದ ಏಕದೇಶವನ್ನು ವೈಶಾಖವನ್ನು ಹೇಳಿದ್ದಾರೆ. ವಸಂತಋತುವಿನಲ್ಲಿ ವೈಶಾಖ ಮಾಸದಲ್ಲಿ ಸೂರ್ಯನು ಶುಕ್ರನ ಕ್ಷೇತ್ರವಾದ ವೃಷಭ ರಾಶಿಗೆ ಬರುತ್ತಾನೆ. ಆಗ ಬಕುಲ, ಸಂಪಿಗೆ, ಮಲ್ಲಿಗೆ ಹೂವುಗಳು ಅರಳುತ್ತವೆ. ಇವಕ್ಕೆಲ್ಲಾ ಸೂರ್ಯ ಪ್ರಕಾಶವೇ ಕಾರಣ. 'ಮಾಧವಃ ಶ್ರೀಕಾಂತೋ ವಸಂತೋತ್ತರಭಾಗಶ್ಚ' ಎಂದು ಭಾವಪ್ರಕಾಶಿಕಾ.

**ವೃತ್ತ**— ಯಸ್ಯಾಃ ಪ್ರಥಮೇ ಪಾದೇ ದ್ವಾದಶಮಾತ್ರಾಸ್ತಥಾ ತೃತೀಯೇಽಪಿ ।

ಅಷ್ಟಾದಶ ದ್ವಿತೀಯೇ ಚತುರ್ಥಕೇ ಪಂಚದಶ ಸಾರ್ಯಾ । ಎಂದು ಆರ್ಯಾ ವೃತ್ತದ ಲಕ್ಷಣ. 1ನೆಯ ಪಾದ 12 ಮಾತ್ರೆ. 3ನೆಯ ಪಾದ 12. 2ನೆಯ ಪಾದದಲ್ಲಿ 18, 4ನೆಯ ಪಾದದಲ್ಲಿ 15 ಮಾತ್ರೆಗಳು ಇರಬೇಕು.

**ಅಲಂಕಾರ—** ಈ ಶ್ಲೋಕದಲ್ಲಿ ರೂಪಕಾಲಂಕಾರವಿದೆ. ಅದು ಶ್ಲೇಷದಿಂದ ಉಜ್ಜೀವಿತವಾಗಿದೆ.

**ಕ್ರಿಯಾಪದ—** **ಸಮಸ್ಕುರುತ** ಸಮ್ ಉಪಸರ್ಗಪೂರ್ವಕಾತ್ ಡುಕೃಞಕರಣೇ ಇತಿ ಕರಣಾರ್ಥಕಾತ್, ಕೃಧಾತೋಃ ಆತ್ಮನೇಪದಿನಃ ಸಕರ್ಮಕಾತ್ ಕರ್ತರಿ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನಂ ।

ಸಮ್ ಅಸ್ಕುರುತ (ಅಕುರುತ) ಸಮಸ್ಕುರುತ ಸನುಸ್ಕುರ್ವಾತಾಂ ಸಮಸ್ಕುರ್ವತ, ಸಮಸ್ಕುರುಥಾಃ
ಸಮಸ್ಕುರ್ವಾಥಾಂ ಸಮಸ್ಕುರುಧ್ವಂ, ಸಮಸ್ಕುರ್ವಿ ಸಮಸ್ಕುರ್ವಹಿ ಸಮಸ್ಕುರ್ಮಹಿ ॥

★ ★ ★

**ಅವತಾರಿಕಾ—** ಆಚಾರ್ಯರ ಚರಿತ್ರೆಯನ್ನು ಶಿಷ್ಯನೊಬ್ಬನು ಕಾವ್ಯದ ರೀತಿಯಿಂದ ವರ್ಣಿಸಿ ಜನರಿಗೆ ಹೇಳಿದನೆನ್ನುತ್ತಾರೆ.

**ದಶಮತಿಶಿಷ್ಯಃ ಕಶ್ಚಿತ್ ಶುಭಜನತಾಯೈ ಕುತೂಹಲನತಾಯೈ ।**
**ವಿವಿಧಸುವೃತ್ತಂ ವಾಕ್ಯಂ ಕಾವ್ಯಮಿವೋಚೇ ಸನಾಯಕಸ್ತವಕಮ್ ॥ 2 ॥**

**ಪದಚ್ಛೇದ—** ದಶಮತಿಶಿಷ್ಯಃ, ಕಶ್ಚಿತ್, ಶುಭಜನತಾಯೈ, ಕುತೂಹಲನತಾಯೈ, ವಿವಿಧಸುವೃತ್ತಂ, ವಾಕ್ಯಂ, ಕಾವ್ಯಂ, ಇವ, ಊಚೇ, ಸನಾಯಕಸ್ತವಕಂ ।

**ಅನ್ವಯ—** ಕಶ್ಚಿತ್, ದಶಮತಿಶಿಷ್ಯಃ, ಕುತೂಹಲನತಾಯೈ, ಶುಭಜನತಾಯೈ, ವಿವಿಧಸುವೃತ್ತಂ, ಕಾವ್ಯಂ, ಇವ, ಸನಾಯಕಸ್ತವಕಂ, ವಾಕ್ಯಂ, ಊಚೇ ।

**ಅನ್ವಯಾರ್ಥ—**

**ಕಶ್ಚಿತ್** = ಒಬ್ಬಾನೊಬ್ಬ,
**ದಶಮತಿಶಿಷ್ಯಃ** = ಶ್ರೀಪೂರ್ಣಪ್ರಜ್ಞರ ಶಿಷ್ಯರು,
**ಕುತೂಹಲನತಾಯೈ** = ಕೌತುಕದಿಂದ ಕೂಡಿದ,
**ಶುಭಜನತಾಯೈ** = ಸಜ್ಜನರ ಸಮೂಹಕ್ಕೆ,
**ವಿವಿಧಸುವೃತ್ತಂ ಕಾವ್ಯಂ ಇವ** = ನಾನಾ ಬಗೆಯ, ಚರಿತ್ರೆಯುಳ್ಳ (ಛಂದಸ್ಸುಳ್ಳ), ಕಾವ್ಯದಂತೆ,
**ಸನಾಯಕಸ್ತವಕಂ** = ಶ್ರೀಮಧ್ವಾಚಾರ್ಯರ ಸ್ತುತಿಯಿಂದ ಸಹಿತವಾದ (ಕಥಾನಾಯಕನ ಸ್ತೋತ್ರದಿಂದ ಕೂಡಿದ),
**ವಾಕ್ಯಂ** = ಮಾತನ್ನು,
**ಊಚೇ** = ಹೇಳಿದನು.

**ತಾತ್ಪರ್ಯ—** ಒಂದಾನೊಂದು ದಿನ ಗೌಳವ ದೇಶದ ಕೆಲವು ಸಜ್ಜನರು, ಶ್ರೀಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಹೋಗಿ ಬಂದಿರುವ ಸಮಾಚಾರವನ್ನು ಕೇಳಿ ಅತ್ಯಾಶ್ಚರ್ಯಯುಕ್ತರಾಗಿ, ಆಚಾರ್ಯರ ಚರಿತ್ರೆಯನ್ನು ಮಾಹಾತ್ಮ್ಯವನ್ನು ವಿಸ್ತಾರವಾಗಿ ಕೇಳಬೇಕೆಂದು ಕುತೂಹಲಭರಿತರಾಗಿ, ಆಚಾರ್ಯರೊಡನೆ ಬದರಿಕಾಶ್ರಮಕ್ಕೆ ತೆರಳಿದ ಅವರ ಶಿಷ್ಯರನ್ನು ವಿಸ್ತಾರವಾಗಿ ಹೇಳಬೇಕೆಂದು ಕೇಳಿಕೊಂಡರು. ಆಚಾರ್ಯರ ಆ ಶಿಷ್ಯರು ಲೋಕದಲ್ಲಿ ಆರ್ಯಾಗೀತಿ ತೋಟಕ ಮುಂತಾದ ಅನೇಕ ಛಂದಸ್ಸುಗಳಿಂದ ಕೂಡಿದ ನಾಯಕನ ಪ್ರಶಂಸೆಯಿಂದ ಕೂಡಿದ ಕಾವ್ಯವನ್ನು ಹೇಳುವಂತೆ ಅನೇಕ ವಿಧವಾದ ಚರಿತ್ರೆಗಳನ್ನು ಪ್ರತಿಪಾದಿಸುವ ನಾಯಕರಾದ ಮಧ್ವಾಚಾರ್ಯರ ಸ್ತೋತ್ರದಿಂದ ಕೂಡಿರುವ ವಾಕ್ಯವನ್ನು ಹೇಳಿದರು. ಆಚಾರ್ಯರ ಮಾಹಾತ್ಮ್ಯವನ್ನು ಹೇಳುವ ಈ ಭಾಗವು ಒಂದು ಮಹಾಕಾವ್ಯದಂತಿತ್ತು. (ಇಲ್ಲಿ ಆಚಾರ್ಯರ ಚರಿತ್ರೆಯನ್ನು ಹೇಳುವ ಕವಿಗಳಾದ ನಾರಾಯಣ ಪಂಡಿತಾಚಾರ್ಯರೇ ಆ ಶಿಷ್ಯರು ಎಂಬ ಧ್ವನಿಯೂ ಬರುತ್ತದೆ.)

ವಿಗ್ರಹ—

**ಶುಭಜನತಾಯ್ಯೈ**— ಜನಾನಾಂ ಸಮೂಹಃ ಜನತಾ, ಶುಭಾ ಚ ಸಾ ಜನತಾ ಚ ಶುಭಜನತಾ, ತಸ್ಯೈ ಶುಭಜನತಾಯ್ಯೈ ।

**ಕುತೂಹಲನತಾಯ್ಯೈ**— ಕುತೂಹಲೇನ ನತಾ ಕುತೂಹಲನತಾ, ತಸ್ಯೈ ।

**ವಿವಿಧಸುವೃತ್ತಂ**— ಶೋಭನಾನಿ ಚ ತಾನಿ ವೃತ್ತಾನಿ ಚ ಸುವೃತ್ತಾನಿ, ವಿವಿಧಾನಿ ಸುವೃತ್ತಾನಿ ಯಸ್ಮಿನ್ ತತ್ ವಿವಿಧಸುವೃತ್ತಂ ।

**ಸನಾಯಕಸ್ತವಕಂ**— ನಾಯಕಸ್ಯ ಸ್ತವಃ ನಾಯಕಸ್ತವಃ, ನಾಯಕಸ್ತವೇನ ಸಹ ವರ್ತತ ಇತಿ ಸನಾಯಕಸ್ತವಕಂ । ಬಹುವ್ರೀಹಿಯಲ್ಲಿ ಕಪ್ರತ್ಯಯ ।

**ಪ್ರಯೋಗ**— ಕಶ್ಚಿತ್ ದಶಮತಿಶಿಷ್ಯಃ ಕಾವ್ಯಮಿವ ವಾಕ್ಯಂ ಊಚೇ (ಕರ್ತರಿ)
ಕೇನಚಿತ್ ದಶಮತಿಶಿಷ್ಯೇಣ ಕಾವ್ಯಮಿವ ವಾಕ್ಯಂ ಊಚೇ (ಕರ್ಮಣಿ)

**ಕೋಶ**— ವೃತ್ತಂ ಪದ್ಯೇ ಚರಿತ್ರೇ ಎಂದು ಅಮರ.

**ಅಲಂಕಾರ**— ಇಲ್ಲಿ ಶ್ಲೇಷಾನುಪ್ರಾಣಿತವಾದ ಉಪಮಾಲಂಕಾರವಿದೆ.

**ಕ್ರಿಯಾಪದ**— **ಊಚೇ**- ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ಧಾತೋಃ ಆತ್ಮನೇಪದಿನಃ ಸಕರ್ಮಕಾತ್ ಕರ್ತರಿ ಲಿಟ್।
ಊಚೇ ಊಚಾತೇ ಊಚಿರೇ, ಊಚಿಷೇ ಊಚಾಥೇ ಊಚಿಧ್ವೇ, ಊಚೇ ಊಚಿವಹೇ ಊಚಿಮಹೇ ॥

★ ★ ★

**ಅವತಾರಿಕಾ**— ಏನು ಹೇಳಿದರು ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾ ಆಚಾರ್ಯರ ಶಿಷ್ಯನು ತನ್ನ ಅಹಂಕಾರವನ್ನು ಪರಿಹರಿಸುತ್ತಾ ಹೇಳಿದ ಕ್ರಮವನ್ನು ವಿವರಿಸುತ್ತಾರೆ.

**ಭುವನಾದ್ಭುತಮಧ್ವಚೇಷ್ಟಿತಂ ನ ವದೇಮಾಪಿ ಸುರಾಯುಷಾ ವಯಮ್ ।**
**ಸಕಲಂ ಖಲು ಕಿಂತು ಕಿಂಚಿದಪ್ಯಥ ಶುಶ್ರೂಷುಜನಾಯ ವರ್ಣ್ಯತೇ ॥ 3 ॥**

**ಪದಚ್ಛೇದ**— ಭುವನಾದ್ಭುತಮಧ್ವಚೇಷ್ಟಿತಂ, ನ, ವದೇಮ, ಅಪಿ, ಸುರಾಯುಷಾ, ವಯಂ, ಸಕಲಂ, ಖಲು, ಕಿಂತು, ಕಿಂಚಿತ್, ಅಪಿ, ಅಥ, ಶುಶ್ರೂಷುಜನಾಯ, ವರ್ಣ್ಯತೇ ।

**ಅನ್ವಯ**— ವಯಂ, ಸುರಾಯುಷಾ, ಅಪಿ, ಭುವನಾದ್ಭುತಮಧ್ವಚೇಷ್ಟಿತಂ, ಸಕಲಂ, ನ, ವದೇಮ, ಖಲು, ಕಿಂತು, ಅಥ, ಅಪಿ, ಶುಶ್ರೂಷುಜನಾಯ, ಕಿಂಚಿತ್, ವರ್ಣ್ಯತೇ ।

**ಅನ್ವಯಾರ್ಥ**—

**ವಯಂ** = ನಾವೆಲ್ಲರೂ,

**ಸುರಾಯುಷಾ ಅಪಿ** = ದೇವತೆಗಳ ಆಯುಷ್ಯ ಕಾಲದಿಂದಲೂ,

**ಭುವನಾದ್ಭುತಮಧ್ವಚೇಷ್ಟಿತಂ** = ಲೋಕಗಳಲ್ಲಿ ಆಶ್ಚರ್ಯಕರವಾದ ಶ್ರೀಮಧ್ವಾಚಾರ್ಯರ ಚರಿತ್ರೆಯನ್ನು,

**ಸಕಲಂ** = ಸಂಪೂರ್ಣವಾಗಿ,

**ನ ವದೇಮ ಖಲು** = ಹೇಳಲಾರವಷ್ಟೆ,

**ಕಿಂತು** = ಆದರೆ,

**ಅಥಾಪಿ** = ಹಾಗಿದ್ದರೂ,

**ಶುಶ್ರೂಷುಜನಾಯ** = ಕೇಳುವ ಅಪೇಕ್ಷೆಯುಳ್ಳ ಜನರಿಗೆ,

**ಕಿಂಚಿತ್** = ಸ್ವಲ್ಪ ಭಾಗವು,
**ವರ್ಣ್ಯತೇ** = ಹೇಳಲ್ಪಡುತ್ತದೆ.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರ ಚರಿತ್ರೆಯು ಸಕಲ ಲೋಕಗಳಲ್ಲಿಯೂ ಆಶ್ಚರ್ಯಕರವಾದುದು. ದೇವತೆಗಳ ನೂರು ವರ್ಷ ಆಯಸ್ಸು (ಮನುಷ್ಯರ 36,000) ಪೂರ್ತಿಯಾಗಿ ನಾವೆಲ್ಲರೂ ಸೇರಿ ಹೇಳಿದರೂ ಅದನ್ನು ಪೂರ್ತಿಯಾಗಿ ಹೇಳಲಾರೆವು. ಆದರೂ ಕೇಳಬಯಸುವ ಜನರಿಗೆ ಸ್ವಲ್ಪವನ್ನಾದರೂ ಹೇಳುತ್ತೇನೆ ಎಂದು ಆಚಾರ್ಯರ ಶಿಷ್ಯನು ಶ್ರೋತೃ-ಗಳಾದ ಆಚಾರ್ಯರ ಭಕ್ತರಿಗೆ ಹೇಳುತ್ತಾನೆ.

**ವಿಗ್ರಹ**—

**ವಯಂ**— ಅಹಂ ಚ ಯೂಯಂ ಚ ವಯಂ ।

**ಭುವನಾದ್ಭುತಮಧ್ವಚೇಷ್ಟಿತಂ**— ಭುವನೇಷು ಅದ್ಭುತಂ ಭುವನಾದ್ಭುತಂ, ಮಧ್ವಸ್ಯಚೇಷ್ಟಿತಂ ಮಧ್ವ-ಚೇಷ್ಟಿತಂ, ಭುವನಾದ್ಭುತಂ ಚ ತತ್ ಮಧ್ವಚೇಷ್ಟಿತಂ ಚ ಭುವನಾದ್ಭುತಮಧ್ವಚೇಷ್ಟಿತಂ ।

**ಸುರಾಯುಷಾ**— ಸುರಾಣಾಂ ಆಯುಃ ಸುರಾಯುಃ, ತೇನ ಸುರಾಯುಷಾ ।

**ಶುಶ್ರೂಷುಜನಾಯ**— ಶ್ರೋತುಂ ಇಚ್ಛುಃ ಶುಶ್ರೂಷುಃ, ಶುಶ್ರೂಷುಶ್ಚಾಸೌ ಜನಶ್ಚ ಶುಶ್ರೂಷುಜನಃ, ತಸ್ಮೈ ಶುಶ್ರೂಷುಜನಾಯ ।

**ಪ್ರಯೋಗ**— ವಯಂ ಭುವನಾದ್ಭುತಮಧ್ವಚೇಷ್ಟಿತಂ ಸುರಾಯುಷಾಪಿ ನ ವದೇಮ. (ಕರ್ತರಿ)
ಅಸ್ಮಾಭಿಃ ಭುವನಾದ್ಭುತಮಧ್ವಚೇಷ್ಟಿತಂ ಸುರಾಯುಷಾಪಿ ನೋದ್ಯೇತ (ಕರ್ಮಣಿ)

**ಕೋಶ**— 'ಕಿಂಚಿದೀಷನ್ಮನಾಗಲ್ಪೇ' ಇತ್ಯಮರ ।

**ವಿಶೇಷ ವಿಚಾರಗಳು**— ಸಮಸ್ತ ಲೋಕಗಳಲ್ಲಿರುವ ಜೀವರುಗಳಿಗೆ ಶ್ವಾಸಪ್ರವರ್ತಕರಾದ ಶ್ರೀಮುಖ್ಯಪ್ರಾಣದೇವರ ಅವತಾರರಾದ ಶ್ರೀಮಧ್ವಾಚಾರ್ಯರ ಚರಿತ್ರೆಗಳು ಅಪರಿಮಿತವಾಗಿವೆ. ಆದ್ದರಿಂದ ಬಹುಕಾಲ ಹೇಳಿದರೂ ಎಲ್ಲವನ್ನೂ ಹೇಳಿ ಮುಗಿಸಲು ಸಾಧ್ಯವಿಲ್ಲ. ಆದರೂ ನಮಗೆ ತಿಳಿದ, ಅದ್ಭುತವೆಂದು ಕಂಡುಬಂದ ಸ್ವಲ್ಪವನ್ನು ಮಾತ್ರ ಹೇಳುತ್ತೇವೆ ಎಂದು ಅಭಿಪ್ರಾಯ ।

**ವೃತ್ತ**— 'ಅಯುಜೋರ್ಯದಿ ಸೌ ಜಗೌ ಲಗೌ ಸಮಯೋಃ ಸ್ಭೌ ರಲಗಾಶ್ಚ ಸುಂದರೀ' ಎಂಬ ಲಕ್ಷಣವುಳ್ಳ ಸುಂದರೀ ವೃತ್ತವು.

**ಕ್ರಿಯಾಪದ**— **ವದೇತ್**- ವದವ್ಯಕ್ತಾಯಾಂ, ವಾಚಿ ಇತಿ ವ್ಯಕ್ತವಾಗರ್ಥಕಾತ್ ವದ್‌ಧಾತೋಃ ಪರಸ್ಮೈಪದಿನಃ ಕರ್ತರಿ ಸಕರ್ಮಕಾತ್ ವಿಧಿಲಿಙ್ ಉತ್ತಮಪುರುಷೇ ಬಹುವಚನೇ ವದೇಮ ಇತಿರೂಪಂ ।

ವದೇತ್ ವದೇತಾಂ ವದೇಯುಃ ವದೇಃ ವದೇತಂ ವದೇತ, ವದೇಯಂ, ವದೇವ, ವದೇಮ ।

**ವರ್ಣ್ಯತೇ**- ವರ್ಣಕ್ರಿಯಾ ವಿಸ್ತಾರ ಗುಣವಚನೇಷು ಇತಿ ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ಕರ್ಮಣಿ ಲಟ್ ।

ವರ್ಣ್ಯತೇ ವರ್ಣ್ಯೇತೇ ವರ್ಣ್ಯಂತೇ, ವರ್ಣ್ಯಸೇ ವರ್ಣ್ಯೇಥೇ ವರ್ಣ್ಯಧ್ವೇ, ವರ್ಣ್ಯೇ ವರ್ಣ್ಯಾವಹೇ ವರ್ಣ್ಯಾಮಹೇ ।

★ ★ ★

**ಅವತಾರಿಕಾ**— ಈಗ ಶ್ರೀಮಧ್ವರ ಚರಿತ್ರೆಯನ್ನು ಯಥಾಮತಿಯಾಗಿ ಕ್ರಮೇಣ ಅನುವಾದ ಮಾಡುತ್ತಾರೆ.

**ಕ್ವಚಿದೀಶ್ವರದೇವಮೇಷ ಭೂಪಂ**
**ಖನನಂ ಪಾಂಥಜನೈರ್ವಿಧಾಪಯಂತಮ್ ।**
**ಸ್ವಮಪಿ ಪ್ರತಿಚೋದಯಂತಮೂಚೇ**
**ಕ್ರಿಯಯಾ ನೋ ಕುಶಲಾನ್ ಪ್ರಬೋಧಯೇತಿ ॥ 4 ॥**

**ಪದಚ್ಛೇದ**— ಕ್ವಚಿತ್, ಈಶ್ವರದೇವಂ, ಏಷಃ, ಭೂಪಂ, ಖನನಂ, ಪಾಂಥಜನ್ಯೈಃ, ವಿಧಾಪಯಂತಂ, ಸ್ವಂ, ಅಪಿ, ಪ್ರತಿಚೋದಯಂತಂ, ಊಚೇ, ಕ್ರಿಯಯಾ, ನಃ, ಅಕುಶಲಾನ್, ಪ್ರಬೋಧಯ, ಇತಿ ।

**ಅನ್ವಯ**— ಏಷಃ ಕ್ವಚಿತ್ ಪಾಂಥಜನ್ಯೈಃ ಖನನಂ ವಿಧಾಪಯಂತಂ ಸ್ವಂ ಅಪಿ ಪ್ರತಿಚೋದಯಂತಂ ಈಶ್ವರದೇವಂ ಭೂಪಂ (ತ್ವಂ) ಅಕುಶಲಾನ್ ನಃ ಕ್ರಿಯಯಾ ಪ್ರಬೋಧಯ ಇತಿ ಊಚೇ ।

**ಅನ್ವಯಾರ್ಥ**—

**ಏಷಃ** = ಈ ಮಧ್ವಾಚಾರ್ಯರು,
**ಕ್ವಚಿತ್** = ಒಂದು ಪ್ರದೇಶದಲ್ಲಿ,
**ಪಾಂಥಜನ್ಯೈಃ** = ದಾರಿಗರಿಂದ,
**ಖನನಂ** = ಅಗೆಯುವ ಕೆಲಸವನ್ನು,
**ವಿಧಾಪಯಂತಂ** = ಮಾಡಿಸುತ್ತಿರುವ,
**ಸ್ವಂ ಅಪಿ** = ತನ್ನನ್ನೂ,
**ಪ್ರತಿಚೋದಯಂತಂ** = ಪ್ರೇರಿಸುತ್ತಿರುವ,
**ಈಶ್ವರದೇವಂ ಭೂಪಂ** = ಈಶ್ವರದೇವನೆಂಬ ರಾಜನನ್ನು,
(ತ್ವಂ = ನೀನು)
**ಅಕುಶಲಾನ್** = ಈ ಕೆಲಸದಲ್ಲಿ ಚತುರರಲ್ಲದ,
**ನಃ** = ನಮ್ಮನ್ನು,
**ಕ್ರಿಯಯಾ** = ಕೆಲಸದಿಂದ (ಸ್ವತಃ ಮಾಡಿ ತೋರಿಸುವುದರ ಮೂಲಕ)
**ಪ್ರಬೋಧಯ** = ತಿಳಿಸು,
**ಇತಿ** = ಹೀಗೆಂದು
**ಊಚೇ** = ಹೇಳಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಶಿಷ್ಯಸಮೇತರಾಗಿ ಪ್ರಯಾಣ ಮಾಡುತ್ತಿದ್ದರು. ದಾರಿಯಲ್ಲಿ ಒಂದು ಪ್ರದೇಶದಲ್ಲಿ ಈಶ್ವರದೇವನೆಂಬ ರಾಜನ ರಾಜ್ಯವನ್ನು ಹಾದುಹೋಗುತ್ತಿರುವಾಗ ಆ ರಾಜನು ಆಚಾರ್ಯರನ್ನೂ ಅವರ ಶಿಷ್ಯರನ್ನೂ ತಡೆದನು. ಅವನು ದಾರಿಯಲ್ಲಿ ಬರುತ್ತಿರುವ ಜನರನ್ನು ಒಟ್ಟಿಗೆ ಹಿಡಿದು ಬಲಾತ್ಕಾರವಾಗಿ ಕೆರೆ ಮೊದಲಾದುದನ್ನು ಕಟ್ಟಿಸಲು ಕೆಲಸ ಮಾಡಿಸುತ್ತಿದ್ದನು. ಆಗ ಅವನು ತೋಡಿಸುತ್ತಿದ್ದ ಒಂದು ಕಾಲುವೆಯ ಕೆಲಸಕ್ಕಾಗಿ ದಾರಿಯಲ್ಲಿ ಹೋಗುವ ಜನರನ್ನು ಬಲಾತ್ಕರಿಸಿ ಕೆಲಸ ಮಾಡಿಸುತ್ತಿದ್ದನು. ಅವನು ಆಚಾರ್ಯರನ್ನು ತಡೆದು, 'ಇಲ್ಲಿ ಅಗೆಯುವ ಕೆಲಸವನ್ನೂ ಪೂರೈಸಿ ಮುಂದಕ್ಕೆ ಹೋಗಿ' ಎಂದನು. ಆಚಾರ್ಯರು 'ನಮಗೆ ಈ ಕೆಲಸವನ್ನು ಹೇಗೆ ಮಾಡಬೇಕೆಂಬುದು ತಿಳಿಯದು. ನಮಗೆ ಈ ಕೆಲಸದಲ್ಲಿ ಕುಶಲತೆ ಇಲ್ಲ. ನೀನೇ ಸಲಿಕೆ, ಗುದ್ದಲಿ ಹಿಡಿದು ಸ್ವಲ್ಪ ಅಗೆದು ನಮಗೆ ಅಗೆಯುವ ಕ್ರಮವನ್ನು ತೋರಿಸಿಕೊಡು' ಎಂದು ಹೇಳಿದರು.

**ವಿಗ್ರಹ**—

**ಪಾಂಥಜನ್ಯೈಃ**— ಪಾಂಥಾಶ್ಚ ತೇ ಜನಾಶ್ಚ ಪಾಂಥಜನಾಃ ತೈಃ ಪಾಂಥಜನ್ಯೈಃ ।

**ಅಕುಶಲಾನ್**— ನ ಕುಶಲಾಃ ಅಕುಶಲಾಃ ತಾನ್ ।

**ಸೂತ್ರ**— ಬುಧಯುಧನಶಜನೇಙ್ ಪ್ರುದ್ರುಸ್ರುಭ್ಯೋ ಣೇಃ 1-3-86 ।

**ಪ್ರಯೋಗ—** ಏಷಃ ಈಶ್ವರದೇವಂ ಭೂಪಂ ಊಚೇ (ಕರ್ತರಿ)
ಏತೇನ ಈಶ್ವರದೇವಃ ಭೂಪಃ ಊಚೇ (ಕರ್ಮಣಿ)
(ತ್ವಂ) ಅಕುಶಲಾನ್ ನಃ ಪ್ರಬೋಧಯ (ಕರ್ತರಿ)
(ತ್ವಯಾ) ಅಕುಶಲಾಃ ವಯಂ ಪ್ರಬೋಧ್ಯಾಮಹೇ (ಕರ್ಮಣಿ)

**ವೃತ್ತ—** 'ವಿಷಮೇ ಸಸಜಾ ಗುರೂ ಯದಿ ಸ್ಯುಃ ಸಭರಾ ಯಶ್ಚ ಯುಜೇಹ ಚಂದ್ರಿಕಾ ಸಾ' ಎಂಬ ಲಕ್ಷಣದಂತೆ ಚಂದ್ರಿಕಾವೃತ್ತ ।

**ಕ್ರಿಯಾಪದ— ಪ್ರಭೋದಯ-** ಪ್ರ ಇತಿ ಉಪಸರ್ಗ ಪೂರ್ವಕಾತ್ ಬುಧ ಅವಗಮೇ ಇತಿ ಧಾತೋಃ ಣಿಜಂತಾತ್ ಕರ್ತರಿ ಪರಸ್ಮೈಪದಿನಃ ಲೋಟ್ ಮಧ್ಯಮಪುರುಷೇ ಏಕವಚನೇ 'ಪ್ರಬೋಧಯ' ಇತಿ ರೂಪಂ ।

ಪ್ರಬೋಧಯತು-ಬೋಧಯತಾತ್ ಬೋಧಯತಾಂ ಬೋಧಯಂತು, ಬೋಧಯ-ಬೋಧಯತಾತ್
ಬೋಧಯತಂ ಬೋಧಯತ, ಬೋಧಯಾನಿ ಬೋಧಯಾವ ಬೋಧಯಾಮ ॥

**ಊಚೇ-** *(ಹಿಂದೆ ಬಂದಿದೆ).*

**ವ್ಯಾಕರಣವಿಶೇಷ—** ಪ್ರಬೋಧಯ ಬುಧ ಅವಗಮೇ ಎಂಬ ಧಾತುವಿಗೆ ಣಜಂತದಲ್ಲಿ ಪರಸ್ಮೈಪದ ಮಾತ್ರವೇ ಬರುತ್ತದೆ.

★ ★ ★

**ಅವತಾರಿಕಾ—** ಆ ರಾಜನು ಅಗೆಯಲಿಕ್ಕಾರಂಭ ಮಾಡಿ ಶ್ರೀಮದಾಚಾರ್ಯರ ಮಹಿಮೆಯಿಂದ ಆ ಕೆಲಸವನ್ನು ಬಿಡಲು ಅಸಮರ್ಥನಾದನೆನ್ನುತ್ತಾರೆ.

**ಪ್ರಕಾರಂ ಪ್ರಕಟೀಕರ್ತುಮಾರಭ್ಯ ವಿರರಾಮ ನೋ ।**
**ಮಹೀಯೋಮತಿಮಾಹಾತ್ಮ್ಯಾದ್ ವೈವಶ್ಯೇನ ಖನನ್ ಖಲಃ ॥ 5 ॥**

**ಪದಚ್ಛೇದ—** ಪ್ರಕಾರಂ, ಪ್ರಕಟೀಕರ್ತುಂ, ಆರಭ್ಯ, ವಿರರಾಮ, ನೋ, ಮಹೀಯೋಮತಿಮಾಹಾತ್ಮ್ಯಾತ್, ವೈವಶ್ಯೇನ, ಖನನ್, ಖಲಃ ।

**ಅನ್ವಯ—** ಖಲಃ ಪ್ರಕಾರಂ, ಪ್ರಕಟೀಕರ್ತುಂ, ಆರಭ್ಯ, ಮಹೀಯೋಮತಿಮಾಹಾತ್ಮ್ಯಾತ್, ವೈವಶ್ಯೇನ, ಖನನ್ (ಸನ್), ನೋ ವಿರರಾಮ ।

**ಅನ್ವಯಾರ್ಥ—**

**ಖಲಃ** = ನೀಚನಾದ (ಈಶ್ವರದೇವನು)
**ಪ್ರಕಾರಂ** = ಅಗೆಯುವ ರೀತಿಯನ್ನು,
**ಪ್ರಕಟೀಕರ್ತುಂ** = ಕೆಲಸಮಾಡಿ ತೋರಿಸಲು
**ಆರಭ್ಯ** = (ಅಗೆಯಲು) ಪ್ರಾರಂಭಿಸಿ,
**ಮಹೀಯೋಮತಿಮಾಹಾತ್ಮ್ಯಾತ್** = ಪೂರ್ಣಪ್ರಜ್ಞರ ಪ್ರಭಾವದಿಂದ,
**ವೈವಶ್ಯೇನ** = ಪರಾಧೀನತೆಯಿಂದ,
**ಖನನ್** = ಅಗೆಯುತ್ತಾ,
**ನೋ ವಿರರಾಮ** = ಸುಮ್ಮನಾಗಲಿಲ್ಲ,

**ತಾತ್ಪರ್ಯ**— ಮಣ್ಣನ್ನು ಅಗೆಯುವ ರೀತಿಯನ್ನು, ತೋರಿಸಿಕೊಡು ಎಂದು ಕೇಳಿದ ಕೂಡಲೇ ಆ ದುಷ್ಟ ಬುದ್ಧಿಯುಳ್ಳ ನೀಚನಾದ ಈಶ್ವರದೇವನು ಅಗೆಯುವ ಕ್ರಮವನ್ನು ತಿಳಿಸುವುದಕ್ಕಾಗಿ ತಾನೇ ಗುದ್ದಲಿ, ಪಿಕಾಸಿಗಳನ್ನು ಹಿಡಿದು, 'ನೋಡಿ ಆಚಾರ್ಯರೇ, ಹೀಗೆ ಅಗೆಯಬೇಕು' ಎಂದು ಹೇಳುತ್ತಾ ಅಗೆಯಲಾರಂಭಿಸಿದನು. ಆದರೆ ಅಗೆಯುವವರಿಗೂ ಪ್ರೇರಕರಾದ ಆಚಾರ್ಯರ ಮಹಿಮೆಯಿಂದ ಅವನು ಪರಾಧೀನನಂತಾಗಿ ಸಾಯಂಕಾಲದವರೆಗೂ ಅಗಿಯುವ ಕೆಲಸವನ್ನು ಬಿಡಲೇ ಇಲ್ಲ. (ಆಚಾರ್ಯರು ನಸುನಗುತ್ತಾ ಶಿಷ್ಯಸಮೇತರಾಗಿ ಅಲ್ಲಿಂದ ಮುಂದೆ ಸಾಗಿದರು).

**ವಿಗ್ರಹ**—

**ಮಹೀಯೋಮತಿಮಾಹಾತ್ಮ್ಯಾತ್**— ಮಹೀಯಸೀ ಮತಿಃ ಯಸ್ಯ ಸಃ ಮಹೀಯೋಮತಿಃ, ಮಹಾಂಶ್ಚ ಅಸೌ ಆತ್ಮಾ ಚ ಮಹಾತ್ಮಾ, ಮಹಾತ್ಮನಃ ಭಾವಃ ಮಾಹಾತ್ಮ್ಯಂ, ಮಹೀಯೋಮತೇಃ ಮಾಹಾತ್ಮ್ಯಂ ಮಹೀಯೋಮತಿಮಾಹಾತ್ಮ್ಯಂ, ತಸ್ಮಾತ್ ।

**ವೈವಶ್ಯಂ**— ವಿವಶಸ್ಯ ಭಾವಃ ವೈವಶ್ಯಂ ।

**ಕ್ರಿಯಾಪದ**— **ವಿರರಾಮ**- ವಿ ಇತ್ಯುಪಸರ್ಗ ಪೂರ್ವಕಾತ್ ರಮು ಕ್ರಿಡಾಯಾಂ ಇತಿ ಕ್ರೀಡಾರ್ಥಕಾತ್ ರಮ್ ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ ।

ವಿ+ರರಾಮ ವಿರೇಮತುಃ ವಿರೇಮುಃ, ವಿರೇಮಿಥ ವಿರೇಮಥುಃ ವಿರೇಮ, ವಿರರಾಮ-ವಿರರಮ, ವಿರೇಮಿವ ವಿರೇಮಿಮ ॥

**ವ್ಯಾಕರಣವಿಶೇಷ**— ವಿರರಾಮ ಎಂಬಲ್ಲಿ 'ವ್ಯಾಙ್ ಪರಿಭ್ಯೋ ರಮಃ' ಎಂಬ ಸೂತ್ರದಿಂದ (1-3-83) ವಿಉಪಸರ್ಗ ಬಂದಾಗ ರಮ್‌ಧಾತುವಿಗೆ ಪರಸ್ಮೈಪದ ಬಂದಿದೆ.

**ವೃತ್ತ**— 'ಪಥ್ಯಾವಕ್ತ್ರಂ' ಎಂಬ ವೃತ್ತ. 'ಯುಜಶ್ಚತುರ್ಥತೋಜೇನ ಪಥ್ಯಾವಕ್ತ್ರಂ ಪ್ರಕೀರ್ತಿತಂ' ಸಮಪಾದಗಳಲ್ಲಿ 5,6,7 ಅಕ್ಷರಗಳು ಸೇರಿ ಜಗಣವಾಗಿರಬೇಕು. ಇದು ಅನುಷ್ಟುಪ್ ವೃತ್ತದ ಪ್ರಭೇದ ।

★ ★ ★

**ಅವತಾರಿಕಾ**— ಅತಿ ಮಹತ್ತಾದ ಪ್ರಜ್ಞೆಯುಳ್ಳ ಆಚಾರ್ಯರ ಪ್ರಭಾವದಿಂದ ಈಶ್ವರದೇವನು ಅಗೆಯುವುದನ್ನು ಬಿಡಲಿಲ್ಲ ಎಂಬ ವಿಷಯವನ್ನೇ ಸ್ಪಷ್ಟಪಡಿಸುತ್ತಾರೆ.

**ನಾನೇನೇನಾನೇನಾನೇನೋನೂನೇನ ನನು ನುನ್ನಾಃ ।**
**ನಾನಾನಾ ನೋ ನೂನಂ ನಾನೇನಾನೂನನಾನುನ್ನಃ ॥ 6 ॥**

**ಪದಚ್ಛೇದ**— ನ, ಅನೇನೇನ, ಅನೇನ, ಅನೇನೋನೂನೇನ, ನನು, ನುನ್ನಾಃ, ನಾನಾನಾಃ, ನೋ, ನೂನಂ, ನಾನೇನಾನೂನನಾ, ಅನುನ್ನಃ ।

**ಅನ್ವಯ**— ಅನೇನೋನೂನೇನ, ಅನೇನೇನ, ಅನೇನ, ನಾನಾನಾಃ, ನೂನಂ ನ ನುನ್ನಾಃ, ನೋ ನನು, ನಾನೇನಾನೂನನಾ, ಅನುನ್ನಃ ।

**ಅನ್ವಯಾರ್ಥ**—

**ಅನೇನ ನೋನೂನೇನ** = ದೋಷವಿಲ್ಲದ, ಗುಣಾದಿಗಳಿಂದ, ನ್ಯೂನರಲ್ಲದ (ಜೀವೋತ್ತಮರಾದ)

**ಅನ ಇನೇನ** = ಪ್ರಾಣಿಗಳಿಗೆ ಒಡೆಯರಾದ,

**ಅನೇನ** = ಈ ಮಧ್ವರೂಪಿಯಾದ ಮುಖ್ಯಪ್ರಾಣರಿಂದ

**ನಾನಾನಾಃ ಆನಾಃ** = ಅನೇಕ ಬಗೆಯ ಪ್ರಾಣಗಳು,

**ನೂನಂ** = ಪ್ರಾಯಃ,

**ನ ನುನ್ನಾಃ** = ಪ್ರೇರಿಸಲ್ಪಡದೆ ಇದ್ದವುಗಳಾಗಿ,

**ನೋ ನನು** = ಇಲ್ಲವಷ್ಟೇ,

**ನಾನೇನಾನೂನನಾ** – ನಾನಾ ಇನ ಅನೂನ ನಾ = ಅನೇಕ ಮಂದಿ, ಬ್ರಹ್ಮಾದಿಗಳೇ ಮೊದಲಾದ ಈಶರಲ್ಲಿ ಪೂರ್ಣನಾದ, ಪುರುಷ ರೂಪಿಯಾದ ನಾರಾಯಣನು

**ಅನುನ್ನಃ** = ಪ್ರೇರಿಸಲ್ಪಟ್ಟವನಲ್ಲ.

**ತಾತ್ಪರ್ಯ**— ಈ ಮಧ್ವರೂಪಿಯಾದ ಮುಖ್ಯಪ್ರಾಣದೇವರು ದೋಷರಹಿತರು, ಗುಣಪೂರ್ಣರು, ಜೀವೋತ್ತ-ಮರು, ಪ್ರಾಣಗಳಿಗೆಲ್ಲಾ ಒಡೆಯರು. ಇವರೇ ಬಹಳ ಮಟ್ಟಿಗೆ ಅನೇಕ ಬಗೆಯ ಪ್ರಾಣಗಳನ್ನು ಆಯಾ ಕಾರ್ಯದಲ್ಲಿ ಪ್ರೇರಿಸುವರು. ಎಲ್ಲಾ ಚೇತನರು ಇವರಿಂದ ಪ್ರೇರಿತರು. ಆದರೆ ಬ್ರಹ್ಮಾದಿಗಳಿಗೆ ಒಡೆಯನಾಗಿ ಸಕಲಕಲ್ಯಾಣ-ಗುಣಪೂರ್ಣನಾದ ಶ್ರೀಮನ್ನಾರಾಯಣನು ಮಾತ್ರ ಇವರ ಪ್ರೇರಣೆಗೆ ಒಳಗಾಗಿರುವುದಿಲ್ಲ. ಹೀಗಿರುವುದರಿಂದಲೇ ಆ ಈಶ್ವರದೇವ ರಾಜನು ಇವರ ಪ್ರೇರಣೆಯಿಂದ ಅಗೆಯುವ ಕೆಲಸವನ್ನು ಬಿಡದೆಯೇ ಮಾಡುತ್ತಿದ್ದನು.

**ವಿಗ್ರಹ**—

**ಅನೇನೋಽನೂನೇನ**— ನ ವಿದ್ಯತೇ ಏನಃ ಯಸ್ಯಸಃ ಅನೇನಾಃ, ಊನಃ ನ ಭವತೀತಿ ಅನೂನಃ, ಅನೇನಾಶ್ಚಾಸೌ ಅನೂನಶ್ಚ ಅನೇನೋನೂನಃ ತೇನ ।

**ಅನೇನೇನ** — ಅನಾನಾಂ ಇನಃ ಅನೇನಃ, ತೇನ ಅನೇನೇನ ।

**ನಾನಾನಾಃ**— ನಾನಾ ಚ ತೇ ಆನಾಶ್ಚ (ಆನಶ್ಚ ವಾ) ಅನಸಂಬಧಿನಃ ಆನಾಃ, (ಅನಃ ಏಷಾಂ ಅಸ್ತೀತಿ ಅನಾಃ) ಮತ್ವರ್ಥೀಯವಾದ ಅರ್ಶ ಆದ್ಯಚ್ ಪ್ರತ್ಯಯ) ನಾನಾ ಚ ತೇ ಆನಾಶ್ಚ (ಅನಾಶ್ಚ) ನಾನಾನಾಃ ।

**ನಾನೇನಾನೂನನಾ**— ನ ಊನಃ ಅನೂನಃ, ಅನೂನಶ್ಚಾಸೌ ನಾ ಚ ಅನೂನನಾ, ನಾನೇನೇಷು ಅನೂನನಾ ನಾನೇನಾ ನೂನನಾ ॥

**ಕೋಶ**— 'ಭರ್ತೇಂದ್ರ ಇನ ಈಶಿತಾ' ಎಂದು ವಿಶ್ವ. 'ನೂನಂ ತರ್ಕೇಽರ್ಥನಿಶ್ಚಯೇ' ಇತ್ಯಮರಃ ।

**ವೃತ್ತ**— ಇದು ಏಕಾಕ್ಷರ ಶ್ಲೋಕ. ಉಪಗೀತಿ ವೃತ್ತ. 'ಆರ್ಯಾಪರಾರ್ಧತುಲ್ಯೇ ದಲದ್ವಯೇ ಪ್ರಾಹುರುಪಗೀತಿಂ'. ಆರ್ಯಾವೃತ್ತದ ಉತ್ತರಾರ್ಧ ಲಕ್ಷಣವು ಪೂರ್ವೋತ್ತರಾರ್ಧಗಳೆರಡರಲ್ಲಿಯೂ ಬಂದರೆ ಉಪಗೀತಿವೃತ್ತ.

★ ★ ★

**ಅವತಾರಿಕಾ**— ಪುನಃ ಆಚಾರ್ಯರ ಶಕ್ತಿಯನ್ನೇ ವರ್ಣಿಸುತ್ತಾರೆ.

**ಯಮಶೇಷಭವಪ್ರಭವಃ ಸ್ಮರತಾ**
**ಮಸುಖಾಬ್ಧಿರಪ್ಯೈತಿ ನ ಚಿತ್ರಮಿದಮ್ ।**
**ಮರುತೀದೃಶಿ ಭಾಂತಿ ಹಿ ಯತ್‌ಸ್ತವನೇ**
**ಯಮಶೇಷಭವಪ್ರಭವಃ ಸ್ಮ ರತಾಃ ॥ 7 ॥**

**ಪದಚ್ಛೇದ**— ಯಂ, ಅಶೇಷಭವಪ್ರಭವಃ, ಸ್ಮರತಾಂ, ಅಸುಖಾಬ್ಧಿಃ, ಅಪ್ಯೈತಿ, ನ, ಚಿತ್ರಂ, ಇದಂ, ಮರುತಿ, ಈದೃಶಿ, ಭಾಂತಿ, ಹಿ, ಯತ್‌ಸ್ತವನೇ, ಯಮಶೇಷಭವಪ್ರಭವಃ, ಸ್ಮರತಾಃ ।

**ಅನ್ವಯ—** ಯಂ, ಸ್ಮರತಾಂ, ಅಶೇಷಭವಪ್ರಭವಃ, ಅಸುಖಾಬ್ಧಿಃ, ಅಪ್ಯೈತಿ, (ಕಿಂಚ) ಯತ್‌ಸ್ತವನೇ ರತಾಃ, ಅಶೇಷಭವಪ್ರಭವಃ, ಭಾಂತಿ ಸ್ಮ, ಈದೃಶಿ, ಮರುತಿ, ಇದಂ, ಚಿತ್ರಂ, ನ ಹಿ ।

**ಅನ್ವಯಾರ್ಥ—**

**ಯಂ** = ಯಾವ ಮುಖ್ಯಪ್ರಾಣದೇವರನ್ನು,

**ಸ್ಮರತಾಂ** = ಸ್ಮರಿಸುವ ಸಜ್ಜನರ,

**ಅಶೇಷಭವಪ್ರಭವಃ** = ಎಲ್ಲಾ ಸಂಸಾರದ ದೆಸೆಯಿಂದ ಉತ್ಪನ್ನವಾದ,

**ಅಸುಖಾಬ್ಧಿಃ ಅಪ್ಯೈತಿ** = ದುಃಖವೆಂಬ ಸಮುದ್ರವು, ತೊಲಗುವುದೋ,

**ಯತ್‌ಸ್ತವನೇ ರತಾಃ** = ಯಾವ ಮುಖ್ಯಪ್ರಾಣರ ಸ್ತೋತ್ರದಲ್ಲಿ ಆಸಕ್ತರಾದ,

**ಯಮಶೇಷಭವಪ್ರಭವಃ** = ಯಮಧರ್ಮನು, ಆದಿಶೇಷನು, ಶಂಕರ ಇವರೆಂಬ ಪ್ರಭುಗಳು,

**ಭಾಂತಿ ಸ್ಮ** = ವಿರಾಜಿಸಿದರೋ,

**ಈದೃಶಿ** = ಇಂತಹ,

**ಮರುತಿ** = ಮುಖ್ಯ ವಾಯುದೇವರಲ್ಲಿ,

**ಇದಂ** = ಈಶ್ವರದೇವನ ಪರವಶತೆಯು

**ಚಿತ್ರಂ** = ಆಶ್ಚರ್ಯಕರವು,

**ನ ಹಿ** = ಅಲ್ಲವಷ್ಟೇ,

**ತಾತ್ಪರ್ಯ—** ಈ ಮುಖ್ಯಪ್ರಾಣದೇವರನ್ನು ಸ್ಮರಿಸುವ ಸಜ್ಜನರ ಸಮಸ್ತವಾದ ದುಃಖ ಸಮುದ್ರವು ಬತ್ತಿಹೋಗುತ್ತದೆ. ಯಮ, ಶೇಷ, ಶಂಕರ ಮುಂತಾದ ಮಹಾಸಾಮರ್ಥ್ಯಶಾಲಿಗಳಾದ ದೇವತೆಗಳೂ, ಈ ಮುಖ್ಯಪ್ರಾಣ ದೇವರನ್ನು ಸ್ತೋತ್ರ ಮಾಡುವುದರಲ್ಲಿ ಆಸಕ್ತರಾಗಿ ರಾರಾಜಿಸುತ್ತಿರುವರು. ಆದ್ದರಿಂದ ಸಾಮಾನ್ಯನಾದ ಈ ಈಶ್ವರದೇವನು ಅಗೆಯಲು ಪ್ರಾರಂಭಿಸಿ ಅದನ್ನು ಬಿಡದೆ ನಡೆಸುತ್ತಾ ಇದ್ದುದರಲ್ಲಿ ಆಶ್ಚರ್ಯವೇನೂ ಅಲ್ಲ.

**ವಿಗ್ರಹ—**

**ಅಶೇಷಭವ ಪ್ರಭವಃ—** ಪ್ರಭವತಿ ಅಸ್ಮಾದಿತಿ ಪ್ರಭವಃ, ಅಶೇಷಶ್ಚಾಸೌ ಭವಶ್ಚ ಅಶೇಷಭವಃ, ಅಶೇಷಭವಃ ಪ್ರಭವಃ ಯಸ್ಯಸಃ ಅಶೇಷಭವಪ್ರಭವಃ ಅಥವಾ ಪ್ರಭವತೀತಿ ಪ್ರಭವಃ, ಭವೇ ಪ್ರಭವಃ ಭವಪ್ರಭವಃ, ಅಶೇಷಶ್ಚಾಸೌ ಭವಪ್ರಭವಶ್ಚ ಅಶೇಷಭವಪ್ರಭವಃ ।

**ಅಸುಖಾಬ್ಧಿಃ—** ನ ಸುಖಂ ಅಸುಖಂ, ಅಸುಖಮೇವ ಅಬ್ಧಿಃ ಅಸುಖಾಬ್ಧಿಃ ।

**ಯಮಶೇಷಭವಪ್ರಭವಃ—** ಯಮಶ್ಚ ಶೇಷಶ್ಚ ಭವಶ್ಚ ಯಮಶೇಷಭವಾಃ, ಯಮಶೇಷಭವಾಶ್ಚ ತೇ ಪ್ರಭವಶ್ಚ ಯಮಶೇಷಭವಪ್ರಭವಃ ।

**ಯತ್‌ಸ್ತವನಃ—** ಯಸ್ಯ ಸ್ತವನಂ ಯತ್‌ಸ್ತವನಂ, ತಸ್ಮಿನ್ ಯತ್‌ಸ್ತವನೇ ।

**ಕ್ರಿಯಾಪದ— ಅಪ್ಯೈತಿ**- ಅಪ+'ಏತಿ ಇತಃ ಯಂತಿ' ಇತ್ಯಾದಿ ಇಣ್‌ಗತೌ ಲಟ್ ಭಾದೀಪ್ತೌ ಪರಸ್ಮೈಪದಿನಃ ಲಟ್ ।

**ಭಾಂತಿ**- ಭಾತಿ ಭಾತಃ ಭಾಂತಿ ಇತ್ಯಾದಿ ಭಾದೀಪ್ತೌ ಲಟ್ ।

ಏಷಿ ಇಥಃ ಇಥ, ಏಮಿ ಇವಃ ಇಮಃ ಭಾಸಿ ಭಾವಃ ಭಾತ, ಭಾಮಿ, ಭಾವಃ ಭಾಮಃ

**ಪ್ರಯೋಗ—** ಅಸುಖಾಬ್ಧಿಃ ಅಪ್ಯೈತಿ (ಕರ್ತರಿ)

ಅಸುಖಾಬ್ಧಿನಾ ಅಪೇಯತೇ (ಭಾವೇ)

ಯಮಶೇಷಭವಪ್ರಭವಃ ಯತ್‌ಸ್ತವನೇ ರತಾಃ ಭಾಂತಿ ಸ್ಮ (ಕರ್ತರಿ)
ಯಮಶೇಷಭವಪ್ರಭುಭಿಃ ಯತ್‌ಸ್ತವನೇ ರತ್ಯೈಃ ಭಾಯತೇ ಸ್ಮ (ಭಾವೇ)

**ಕೋಶ**— 'ಭವಃ ಸಂಸಾರಸಂಪ್ರಾಪ್ತಿಶ್ರೇಯಃ ಸಂಕರಜನ್ಮಸು' ಇತಿ ವಿಶ್ವ।

**ವೃತ್ತ**— ಇಹ ತೋಟಕವೃತ್ತಂ (ಪ್ರಮಿತಮ್) ''ಯದಿ ತೋಟಕಮಬ್ಧಿಸಕಾರಯುತಂ'' ಎಂಬ ಲಕ್ಷಣವುಳ್ಳ ತೋಟಕವೃತ್ತ।

★ ★ ★

**ಅವತಾರಿಕಾ**— ಈಶ್ವರದೇವನ ವಿಚಾರವನ್ನು ಮುಗಿಸಿ ಮತ್ತೊಂದು ಚರಿತ್ರೆಯನ್ನು ಆರಂಭಿಸುತ್ತಾರೆ.

**ಸಂಚರನ್ನಂಚನೀಯಃ ಕದಾಚಿದ್**
**ವಿಭುರ್ವಿಷ್ಣುಪದ್ಯಾಸ್ತಟಂ ವೈಷ್ಣವಾಗ್ರೇಸರಃ।**
**ಪ್ರಾಪದಾಪ್ತೈರ್ನಿಜೈರೇಷ ಶಿಷ್ಯೈ-**
**ರ್ವೃತಸ್ತ್ಯಕ್ತವಿಶ್ವಪ್ಲವಂ ಶಾತ್ರವಾತಂಕತಃ ॥ 8 ॥**

**ಪದಚ್ಛೇದ**— ಸಂಚರನ್, ಅಂಚನೀಯಃ, ಕದಾಚಿತ್, ವಿಭುಃ, ವಿಷ್ಣುಪದ್ಯಾಃ, ತಟಂ, ವೈಷ್ಣವಾಗ್ರೇಸರಃ ಪ್ರಾಪತ್, ಆಪ್ತೈಃ, ನಿಜೈಃ, ಏಷಃ, ಶಿಷ್ಯೈಃ, ವೃತಃ, ತ್ಯಕ್ತವಿಶ್ವಪ್ಲವಂ, ಶಾತ್ರವಾತಂಕತಃ।

**ಅನ್ವಯ**— ಸಂಚರನ್, ಅಂಚನೀಯಃ, ವೈಷ್ಣವಾಗ್ರೇಸರಃ, ವಿಭುಃ, ಆಪ್ತೈಃ ನಿಜೈಃ, ಶಿಷ್ಯೈಃ, ವೃತಃ, ಏಷಃ, ಕದಾಚಿತ್, ಶಾತ್ರವಾತಂಕತಃ, ತ್ಯಕ್ತವಿಶ್ವಪ್ಲವಂ, ವಿಷ್ಣುಪದ್ಯಾಃ, ತಟಂ, ಪ್ರಾಪತ್।

**ಅನ್ವಯಾರ್ಥ**—

**ಸಂಚರನ್** = (ಉತ್ತರ ದಿಕ್ಕಿಗೆ ಹೋಗುವ ದಾರಿಯಲ್ಲಿ) ಅಲ್ಲಲ್ಲಿ ಸಂಚರಿಸುತ್ತಿರುವ,
**ಅಂಚನೀಯಃ** = ಪೂಜ್ಯರಾದ,
**ವೈಷ್ಣವಾಗ್ರೇಸರಃ** = ವಿಷ್ಣುಭಕ್ತರಲ್ಲಿ ಶ್ರೇಷ್ಠರಾದ,
**ವಿಭುಃ** = ಎಲ್ಲಾ ವಿಷಯಗಳಲ್ಲಿ ಸಮರ್ಥರಾದ,
**ಆಪ್ತೈಃ** = ವಿಶ್ವಾಸಿಗಳಾದ (ಪ್ರಿಯರಾದ)
**ನಿಜೈಃ** = ತಮ್ಮವರಾದ,
**ಶಿಷ್ಯೈಃ** = ಶಿಷ್ಯರಿಂದ,
**ವೃತಃ** = ಸಹಿತರಾದ,
**ಏಷಃ** = ಈ ಶ್ರೀ ಮಧ್ವಾಚಾರ್ಯರು
**ಕದಾಚಿತ್** = ಒಂದಾನೊಂದು ದಿನ,
**ಶಾತ್ರವಾತಂಕತಃ, ಶಾತ್ರವ** = ಶತ್ರುಗಳ,
**ಆತಂಕತಃ** = ಹೆದರಿಕೆಯಿಂದ,
**ತ್ಯಕ್ತವಿಶ್ವಪ್ಲವಂ, ತ್ಯಕ್ತ** = ಬಿಡಲ್ಪಟ್ಟ (ಅಲ್ಲಿಂದ ತೆಗೆಯಲ್ಪಟ್ಟ)
**ವಿಶ್ವ** = ಎಲ್ಲಾ

**ಪ್ಲವಂ** = ದೋಣಿಗಳುಳ್ಳ (ತೆಪ್ಪಗಳುಳ್ಳ)

**ವಿಷ್ಣುಪದ್ಯಾಃ ತಟಂ** = ಗಂಗಾನದಿಯ, ದಡವನ್ನು ಕುರಿತು,

**ಪ್ರಾಪತ್** = ಸೇರಿದರು.

**ತಾತ್ಪರ್ಯ**— ಆಚಾರ್ಯರು ಬದರಿಕಾಶ್ರಮಕ್ಕೆ ಹೋಗುತ್ತಾ ದಾರಿಯಲ್ಲಿ ಉತ್ತರ ದೇಶದಲ್ಲಿ ಸಂಚರಿಸುತ್ತಾ ಹೋಗುತ್ತಿದ್ದರು. ಪರಮಪೂಜ್ಯರಾದ ವಿಷ್ಣುಭಕ್ತಾಗ್ರಣಿಗಳಾದ ಆಚಾರ್ಯರ ಜತೆಗೆ ಅವರ ಪ್ರೀತಿಪಾತ್ರರಾದ ಆಪ್ತ ಶಿಷ್ಯರೂ ಇದ್ದರು. ಹಾಗೆ ಸಂಚರಿಸುತ್ತಾ ಸರ್ವ ಸಮರ್ಥರಾದ ಆಚಾರ್ಯರು ಒಂದಾನೊಂದು ದಿನ ಗಂಗಾ ನದಿಯ ದಡಕ್ಕೆ ಬಂದರು. ಆಗ ಶತ್ರುಗಳು ನದಿಯನ್ನು ದಾಟಿ ಆ ಕಡೆಗೆ ಬಂದಾರು ಎಂಬ ಭಯದಿಂದ ನಾವಿಕರು ಗಂಗೆಯ ದಡದಲ್ಲಿದ್ದ ಎಲ್ಲಾ ದೋಣಿಗಳನ್ನೂ ತೆಗೆದುಬಿಟ್ಟಿದ್ದರು. ಅಲ್ಲಿ ದಾಟಿಸುವುದಕ್ಕೆ ಯಾವ ದೋಣಿಯೂ ಇರಲಿಲ್ಲ. ಯಾರನ್ನೂ ದಾಟಿಸುತ್ತಿರಲಿಲ್ಲ. ಯಾರೂ ಗಂಗೆಯನ್ನು ದಾಟಿ ಬಾರದಂತೆ ಅಲ್ಲಿಯ ತುರುಕರಾಜನ ಸೈನಿಕರು ಕಾವಲು ಕಾಯುತ್ತಿದ್ದರು. ಇಂತಹ ಗಂಗಾನದಿಯ ದಡಕ್ಕೆ ಆಚಾರ್ಯರು ಬಂದರು.

**ವಿಗ್ರಹ**—

**ಅಂಚನೀಯಃ**— ಅಂಚಯಿತುಂ ಯೋಗ್ಯಃ ಅಂಚನೀಯಃ ।

**ಅಗ್ರೇಸರಃ**— ಅಗ್ರೇ ಸರತೀತಿ ಅಗ್ರೇಸರಃ ।

**ವೈಷ್ಣವಾಗ್ರೇಸರಃ**— ವಿಷ್ಣೌ ಭಕ್ತಿಃ ಏಷಾಂ ಇತಿ (ವಿಷ್ಣೋರಿಮೇ) ವೈಷ್ಣವಾಃ, ವೈಷ್ಣವಾನಾಂ ಅಗ್ರೇಸರಃ ವೈಷ್ಣವಾಗ್ರೇಸರಃ ।

**ತ್ಯಕ್ತವಿಶ್ವಪ್ಲವಾಃ**— ವಿಶ್ವೇ ಚತೇ ಪ್ಲವಾಶ್ಚ ವಿಶ್ವಪ್ಲವಾಃ, ತ್ಯಕ್ತಾಃ ವಿಶ್ವಪ್ಲವಾಃ ಯಸ್ಮಿನ್ ತತ್ ತ್ಯಕ್ತವಿಶ್ವಪ್ಲವಂ ।

**ಶಾತ್ರವಾತಂಕತಃ**— ಶತ್ರವಃ ಏವ ಶಾತ್ರವಾಃ, ಶಾತ್ರವೇಭ್ಯಃ ಆತಂಕಃ ಶಾತ್ರವಾತಂಕಃ, ಶಾತ್ರವಾತಂಕಾತ್ ಇತಿ ಶಾತ್ರವಾತಂಕತಃ ।

**ಕ್ರಿಯಾಪದ**— **ಪ್ರಾಪತ್**- 'ಪ್ರ' ಪೂರ್ವಕಃ ಅಪ್‌ಲೃವ್ಯಾಪ್ತೌ ಇತಿ ಧಾತುಃ ವ್ಯಾಪ್ತ್ಯರ್ಥಕಃ ಸಕರ್ಮಕಃ ಪರಸ್ಮೈಪದೀ ಕರ್ತರಿ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ಪ್ರಾಪತ್ ಇತಿ ರೂಪಂ ।

ಪ್ರ+ಆಪತ್ ಆಪತಾಂ ಆಪನ್, ಆಪಃ ಆಪತಂ ಆಪತ, ಆಪಂ ಆಪಾವ ಆಪಾಮ ॥

**ವ್ಯಾಕರಣವಿಶೇಷ**— ವಿಷ್ಣೋಃ ಪದಂ ಸ್ಥಾನಂ ಯಸ್ಯಾಃ ಸಾ 'ವಿಷ್ಣುಪದೀಷಿದ್ ಗೌರಾದಿಭ್ಯಶ್ಚ' (4.1.41) ಷಿದ್ಭ್ಯೋ-ಗೌರಾದಿಭ್ಯಶ್ಚ ಜೀಷ್‌ಸ್ಯಾತ್ ಇತಿ ಜೀಷ್, ಅಗ್ರೇ ಸರತೀತಿ ಅಗ್ರೇಸರಃ ಪುರೋಽಗ್ರತೋಽಗ್ರೇಷುರ್ತೇಃ (3.2.18) ಇತಿ ಟಃ (4.3.95) ಸೂತ್ರೇ ಅಗ್ರೇ ಇತ್ಯೇದಂತ ತ್ವಮುಪಿ ನಿಪಾತ್ಯತೇ (ಅಗ್ರೇಸರ್) ವಿಷ್ಣೋಃ ಭಕ್ತಿಃ ಭಜನೀಯ ಏಷಾಂ ಇತಿ ವೈಷ್ಣವಾಃ, ಭಕ್ತಿಃ ಭಜ್ಯತೇ ಸೇವ್ಯತೇ ಇತಿ ಭಕ್ತಿಸೇವ್ಯಃ ।

**ಪ್ರಯೋಗ**— ಏಷಃ ವಿಷ್ಣುಪದ್ಯಾಃ ತಟಂ ಪ್ರಾಪತ್ (ಕರ್ತರಿ)
ಏತೇನ ವಿಷ್ಣುಪದ್ಯಾಸ್ತಟಂ ಪ್ರಾಪಿ (ಕರ್ಮಣಿ)

**ಕೋಶ**— ಗಂಗಾ ವಿಷ್ಣುಪದೀ ಜಹ್ನುತನಯಾ ಸುರನಿಮ್ನಗಾ । ಕೂಲಂ ರೋಧಶ್ಚ ತೀರಂ ಚ ಪ್ರತೀರಂ ಚ ತಟಂತ್ರಿಷು । ಪುರೋಗಾಗ್ರೇಸರಪ್ರಷ್ಠಾಗ್ರತಃಸರಪುರಸ್ಸರಾಃ ಛಾತ್ರಾಂತೇವಾಸಿನೌ ಶಿಷ್ಯೇ, ಉಡುಪಂತು ಪ್ಲವಃ ಕೋಲಃ ತೇಪ್ಪ ರುಕ್ ತಾಪಶಂಕಾಸು ಆತಂಕಃ ।

**ವೃತ್ತ**— ಸ್ರಗ್ವಿಣೀವೃತ್ತ- 'ಕೀರ್ತಿತೈಷಾ ಚತೂರೇಫಿಕಾ ಸ್ರಗ್ವಿಣೀ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಆ ಮಹಾನದಿಯನ್ನು ಶ್ರೀಮದಾಚಾರ್ಯರು ತಮ್ಮ ಮಹಿಮೆಯಿಂದಲೇ ತಮ್ಮವರನ್ನು ದಾಟಿಸಿದರೆನ್ನುತ್ತಾರೆ.

**ಇಮಾನ್ ಸ್ವಸ್ವಪೂರ್ವಾಶ್ರಯಾನಾತ್ಮವಾಕ್ಯಾತ್**
**ಸಲೀಲಂ ದಯಾಲುಃ ಸಃ ಮೂಲಾಶ್ರಯಾತ್ಮಾ ।**
**ನಿಷೇದ್ಧೄನನಾದೃತ್ಯ ಚಾನನ್ಯಲಂಘ್ಯಾಂ**
**ತದಾತ್ಯಾಯಯತ್ತಾಂ ನದೀಂ ಸಂಸೃತಿಂ ವಾ ॥ 9 ॥**

**ಪದಚ್ಛೇದ—** ಇಮಾನ್, ಸ್ವಸ್ವಪೂರ್ವಾಶ್ರಯಾನ್, ಆತ್ಮವಾಕ್ಯಾತ್, ಸಲೀಲಂ, ದಯಾಲುಃ ಸಃ, ಮೂಲಾ-ಶ್ರಯಾತ್ಮಾ, ನಿಷೇದ್ಧೄನ್, ಅನಾದೃತ್ಯ, ಚ, ಅನನ್ಯಲಂಘ್ಯಾಂ, ತದಾ, ಅತ್ಯಾಯಯತ್, ತಾಂ, ನದೀಂ ಸಂಸೃತಿಂ, ವಾ ।

**ಅನ್ವಯ—** ದಯಾಲುಃ, ಮೂಲಾಶ್ರಯಾತ್ಮಾ, ಸಃ ತದಾ ಆತ್ಮವಾಕ್ಯಾತ್ ಸ್ವಸ್ವಪೂರ್ವಾಶ್ರಯಾನ್, ಇಮಾನ್, ಚ ಅನನ್ಯಲಂಘ್ಯಾಂ ನದೀಂ ತಾಂ ನಿಷೇದ್ಧೄನ್ ಅನಾದೃತ್ಯ ಸಂಸೃತಿಂ ವಾ ಸಲೀಲಂ ಅತ್ಯಾಯಯತ್ ।

**ಅನ್ವಯಾರ್ಥ—**

**ದಯಾಲುಃ** = ಕೃಪಾಳುಗಳಾದ,
**ಮೂಲಾಶ್ರಯಾತ್ಮಾ** = ಮೊದಲಿನ ಆಶ್ರಯ ಸ್ವರೂಪರಾದ,
**ಸಃ ಚ** = ಆ ಶ್ರೀಮಧ್ವಾಚಾರ್ಯರಾದರೋ,
**ತದಾ** = ಆಗ,
**ಆತ್ಮವಾಕ್ಯಾತ್** = ತಮ್ಮ ಮಾತಿನಿಂದ,
**ಸ್ವಸ್ವಪೂರ್ವಾಶ್ರಯಾನ್** = ತಮತಮಗಿಂತ ಮೊದಲಾದವರು ಆಶ್ರಯವಾಗಿ ಉಳ್ಳ,
**ಇಮಾನ್** = ಈ ಶಿಷ್ಯರನ್ನು,
**ಅನನ್ಯಲಂಘ್ಯಾಂ** = ನಾವೆಯನ್ನು ಬಿಟ್ಟು ಬೇರೆಯಾವುದರಿಂದಲೂ ದಾಟಲು ಸಾಧ್ಯವಿಲ್ಲದ,
**ತಾಂ ನದೀಂ** = ಆ ಗಂಗಾನದಿಯನ್ನು,
**ನಿಷೇದ್ಧೄನ್** = ತಡೆಯುತ್ತಿರುವವರನ್ನು,
**ಅನಾದೃತ್ಯ** = ಲೆಕ್ಕಿಸದೆ
**ಸಂಸೃತಿಂ ವಾ** = ಸಂಸಾರವನ್ನೋಪಾದಿಯಲ್ಲಿ
**ಸಲೀಲಂ** = ಅನಾಯಾಸವಾಗಿ
**ಅತ್ಯಾಯಯತ್** = ದಾಟಿಸಿದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಸರ್ವಶಕ್ತಿ ಸಂಪನ್ನರು. ತಾವು ಒದ್ದೆಯಾಗದೆಯೇ ಒಬ್ಬರೇ ನದಿಯನ್ನು ದಾಟಲು ಸಮರ್ಥರು. ಆದರೂ ಪರಮ ದಯಾಳುಗಳಾದ ಅವರು ತಮ್ಮ ಶಿಷ್ಯರನ್ನು ದಾಟಿಸಬೇಕೆಂದು ಸಂಕಲ್ಪಿಸಿದರು. ಆಗ ನದಿಯನ್ನು ದಾಟಿಸಲು ನಾವೆಗಳಿರಲಿಲ್ಲ, ದಾಟಿಸುವ ನಾವಿಕರಿರಲಿಲ್ಲ, ನಾವೆಯಿಲ್ಲದೆ ಬೇರೆ ಯಾವುದರಿಂದಲೂ ಆ ಮಹಾನದಿಯನ್ನು ದಾಟಲು ಸಾಧ್ಯವಿರಲಿಲ್ಲ, ಆದರೂ ಆಚಾರ್ಯರು ಯಾರಿಂದಲೂ ದಾಟಲಾಗದ ನದಿಯನ್ನು ಈಜಿಕೊಂಡು ದಾಟಲು ಉದ್ಯುಕ್ತರಾದರು. ಆಗ ಅಲ್ಲಿದ್ದವರು ಹೀಗೆ ಈಜಿಕೊಂಡು ದಾಟಕೂಡದು ಸರ್ವಥಾ ನದೀ ಪ್ರವಾಹಕ್ಕೆ ಇಳಿಯಬಾರದೆಂದು ತಡೆದರು. ಆದರೂ ಆಚಾರ್ಯರು ಅವರನ್ನು ಲೆಕ್ಕಿಸಲಿಲ್ಲ, ಅವರು ಶಿಷ್ಯರನ್ನು ಕುರಿತು ಹೇಳಿದರು ''ನಾನು ಮುಂದುಗಡೆ ಈಜಿಕೊಂಡು ಹೋಗುತ್ತೇನೆ. ನನ್ನನ್ನು ಒಬ್ಬನು ಹಿಡಿದುಕೊಳ್ಳಲಿ. ಅವನನ್ನು ಮತ್ತೊಬ್ಬನು ಹಿಡಿದುಕೊಳ್ಳಲಿ ಹೀಗೆಯೇ ಕೊನೆಯವರೆಗೂ ಒಬ್ಬರನ್ನೊಬ್ಬರು ಹಿಡಿದುಕೊಳ್ಳಿರಿ'' ಎಂದು ಹೇಳಿದರು. ಆಗ

ಶಿಷ್ಯರೆಲ್ಲರೂ ತನ್ನ ಮುಂದಿನವರನ್ನು ಹಿಂದಿನವರು ಹಿಡಿದುಕೊಂಡು ನದೀ ಪ್ರವಾಹದಲ್ಲಿ ಈಜಲು ಪ್ರಾರಂಭಿಸಿದರು. ಎಲ್ಲರಿಗೂ ಮುಂದಾಳಾಗಿ ಆಚಾರ್ಯರು ಹೋಗುತ್ತಾ ಇದ್ದರು. ಹೀಗೆ ತಮ್ಮ ಶಿಷ್ಯರೆಲ್ಲರನ್ನೂ ಆಯಾಸವಿಲ್ಲದೆ ದಾಟಿಸಿದರು. ಆ ಸಂಸಾರವನ್ನು ದಾಟಲು ಕಾಮಕ್ರೋಧಾದಿಗಳು ಅಡ್ಡಿಪಡಿಸುತ್ತವೆ. ಅವುಗಳನ್ನು ಲೆಕ್ಕಿಸದೆ ಸ್ವರೂಪೋ-ದ್ಧಾರಕ ಗುರುಗಳಾದ ಶ್ರೀ ಮಧ್ವಾಚಾರ್ಯರನ್ನು ಶರಣುಹೊಂದಬೇಕು. ಅವರು ಎಲ್ಲರನ್ನೂ ಸಂಸಾರದಿಂದ ದಾಟಿಸಿ ಪರ ತೀರದಂತಿರುವ ಪರಮಾತ್ಮನನ್ನು ಸೇರಿಸುತ್ತಾರೆ. ಆದರೆ ಪರಮಾತ್ಮನಲ್ಲಿಯೂ ವಾಯುದೇವರಲ್ಲಿಯೂ ಯಥಾಯೋಗ್ಯ-ವಾದ ಭಕ್ತಿಯುಳ್ಳ ಈ ಭಕ್ತರು ತಮಗಿಂತ ಉತ್ತಮರಾದ ಇತರರಲ್ಲಿಯೂ ತಾರತಮ್ಯಾನುಸಾರ ಭಕ್ತಿ ಮಾಡಬೇಕು, ವಾಯುದೇವರನ್ನು ರುದ್ರಾದಿಗಳು ಅನುಸರಿಸುತ್ತಾರೆ. ಅವರನ್ನು ಇಂದ್ರಾದಿಗಳು ಅನುಸರಿಸುತ್ತಾರೆ. ಅವರನ್ನು ಇತರರು ಅನುಸರಿಸುತ್ತಾರೆ. ಇವರೆಲ್ಲರಿಗೂ ಸಮಸ್ತಮೋಕ್ಷಯೋಗ್ಯ ಭಕ್ತರಿಗೂ ವಾಯುದೇವರು ಮೂಲಾಶ್ರಯರು. ಅವರನ್ನು ಆಶ್ರಯಿಸಿದರೆ ಸಂಸಾರವನ್ನು ದಾಟುವಂತೆ, ಆಚಾರ್ಯರು ತತ್ಕಾಲದಲ್ಲಿ ಉತ್ತರದೇಶಕ್ಕೆ ಹೋಗುತ್ತಿರುವಾಗ ಶತ್ರು ಭಯದಿಂದ ದೋಣಿಯನ್ನೆಲ್ಲಾ ತೆಗೆದು ಯಾರನ್ನೂ ದಾಟಿಸದೇ ಇದ್ದ ಸಮಯದಲ್ಲಿಯೂ ಎಲ್ಲಾ ಶಿಷ್ಯರನ್ನೂ ನದಿಯನ್ನು ದಾಟಿಸಿ ತಾವೂ ದಾಟಿದರು.

ವಿಗ್ರಹ—

**ಸ್ವಸ್ವಪೂರ್ವಾಶ್ರಯಃ**— ಸ್ವಸ್ಮಾತ್ ಸ್ವಸ್ಮಾತ್ ಪೂರ್ವಃ ಆಶ್ರಯಃ ಯೇಷಾಂ ತೇ ಸ್ವಸ್ವಪೂರ್ವಾಶ್ರಯಾಃ ತಾನ್ ।

**ಆತ್ಮವಾಕ್ಯಂ**— ಆತ್ಮನಃ ವಾಕ್ಯಂ ।

**ಸಲೀಲಂ**— ಲೀಲಯಾ ಸಹಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸಲೀಲಂ ।

**ಆಶ್ರಯಾತ್ಮಾ**— ಆಶ್ರಯಃ ಆತ್ಮಾ ಯಸ್ಯ ಸಃ ಆಶ್ರಯಾತ್ಮಾ ।

**ಮೂಲಾಶ್ರಯಾತ್ಮಾ**— ಮೂಲಂ ಚಾಸೌ ಆಶ್ರಯಾತ್ಮಾ ಚ ಮೂಲಾಶ್ರಯಾತ್ಮಾ ।

**ನಿಷೇದ್ಧೃಃ**— ನಿಷೇಧಂತಿ ಇತಿ ನಿಷೇದ್ಧಾರಃ ತಾನ್ ।

**ಅನನ್ಯಲಂಘ್ಯಾಂ**— ಲಂಘಯಿಂತು ಯೋಗ್ಯಾ ಲಂಘ್ಯಾ, ಅನ್ಯೇನ ಲಂಘ್ಯಾ ಅನ್ಯಲಂಘ್ಯಾ, ಅನ್ಯಲಂಘ್ಯಾ ನ ಭವತೀತಿ ಅನನ್ಯಲಂಘ್ಯಾ ತಾಂ ।

**ಕ್ರಿಯಾಪದ**— **ಅತ್ಯಾಯಯತ್**- ಅತಿ ಇತ್ಯುಪಸರ್ಗಪೂರ್ವಕಾತ್ ಅಯಗತೌ ಇತಿ ಗತ್ಯರ್ಥಕಾತ್ ಅಯಧಾತೋಃ ಣಿಜಂತಾತ್ ಪರಸ್ಮೈಪದಿನಃ ಸಕರ್ಮಕಾತ್ ಕರ್ತರಿ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ 'ಅತ್ಯಾಯಯತ್' ಇತಿ ರೂಪಂ ।

ಅತಿ+ಆಯಯತ್ ಆಯಯತಾಂ ಆಯಯನ್, ಆಯಯಃ ಆಯಯತಂ ಆಯಯತ,
ಆಯಯಂ, ಆಯಯಾವ, ಆಯಯಾಮ ॥

**ವ್ಯಾಕರಣ**— ದಯಾಲುಃ ಸ್ಪೃಹಿಗಹಿ ಪತಿದಯಿ ನಿದ್ರಾತಂದ್ರಾಶ್ರದ್ಧಾಭ್ಯ ಆಲುಚ್ (3.2.158) ಎಂಬ ಸೂತ್ರದಿಂದ ಆಲುಚ್ ಪ್ರತ್ಯಯ.

**ಪ್ರಯೋಗ**— ಶಿಷ್ಯಾಃ ತೇನ ನದೀಂ ಅತ್ಯಾಯಂತ (ಅಣಿಜಂತ ಪ್ರಯೋಗ) ಸಃ ಶಿಷ್ಯಾನ್ ನದೀಂ ಅತ್ಯಾಯಯತ್ (ಣಿಜಂತ) ತೇನ ಶಿಷ್ಯಾಃ ನದೀಂ ಅತ್ಯಾಯ್ಯಂತ (ಕರ್ಮಣಿ)

**ಕೋಶ**— ''ಮೂಲಂ ಬುಧ್ನೋಽಂಘ್ರಿನಾಮಕಃ ಸ್ಯಾದ್ದಯಾಲುಃ ಕಾರುಣಿಕಃ । ಕೃಪಾಲುಃ ಸೂರತಃ ಸಮಾಃ ವಾವಿಕಲ್ಪೋಪಮಾನಯೋಃ'' ಎಂದು ಕೋಶ ।

**ವೃತ್ತ**— ಈ ಶ್ಲೋಕದಲ್ಲಿ ಭುಜಂಗ ಪ್ರಯಾತ ವೃತ್ತ. 'ಭುಜಂಗ ಪ್ರಯಾತಂ ಭವೇದ್ಯೈಶ್ಚತುರ್ಭಿಃ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ**— ಆಗ ನಡೆದ ರಾಜಭಟರ ಗದ್ದಲವನ್ನು (ವಿರೋಧವನ್ನು) ವರ್ಣಿಸುತ್ತಾರೆ.

**ವಾರಯತ ವಾರಯತ ವೈರಿಸುಹೃದೋಽಮೂನ್**
**ಮಾರಯತ ಮಾರಯತ ಪಾರಗಮನಾತ್ ಪ್ರಾಕ್ ।**
**ಆಪತತ ಆಲಪತ ಇತ್ಯವದದುಚ್ಚೈಃ**
**ಸ ತ್ವರಕರಾಜಪುರುಷಾನುಚಿತವಾಚಾ ॥ 10 ॥**

**ಪದಚ್ಛೇದ**— ವಾರಯತ, ವಾರಯತ, ವೈರಿಸುಹೃದಃ, ಅಮೂನ್, ಮಾರಯತ, ಮಾರಯತ, ಪಾರಗಮನಾತ್, ಪ್ರಾಕ್, ಆಪತತಃ, ಆಲಪತಃ, ಇತಿ ಅವದತ್, ಉಚ್ಚೈಃ ಸಃ, ತ್ವರಕರಾಜಪುರುಷಾನ್, ಉಚಿತವಾಚಾ ।

**ಅನ್ವಯ**— ವೈರಿಸುಹೃದಃ ಅಮೂನ್ ವಾರಯತ ವಾರಯತ, ಪಾರಗಮನಾತ್ ಪ್ರಾಕ್ ಮಾರಯತ, ಮಾರಯತ, ಇತಿ ಆಲಪತಃ, ಆಪತತಃ ತ್ವರಕರಾಜಪುರುಷಾನ್, ಸಃ, ಉಚಿತವಾಚಾ, ಉಚ್ಚೈಃ, ಅವದತ್ ।

**ಅನ್ವಯಾರ್ಥ**—

**ವೈರಿಸುಹೃದಃ** = ಶತ್ರುಗಳ ಸ್ನೇಹಿತರಾದ,
**ಅಮೂನ್** = ಹೀಗೆ ನದಿಯಲ್ಲಿ ಈಜಿಕೊಂಡು ಬರುತ್ತಿರುವ, ಇವರನ್ನು
**ವಾರಯತ ವಾರಯತ** = ತಡೆಯಿರಿ ತಡೆಯಿರಿ,
**ಪಾರಗಮನಾತ್** = ಈ ಕಡೆಯ ದಡವನ್ನು ಸೇರುವುದಕ್ಕಿಂತ,
**ಪ್ರಾಕ್** = ಮೊದಲು,
**ಮಾರಯತ** = ಕೊಲ್ಲಿರಿ,
**ಮಾರಯತ** = ಕೊಲ್ಲಿರಿ,
**ಇತಿ** = ಈ ರೀತಿ,
**ಆಲಪತಃ** = ಕೂಗಿಕೊಳ್ಳುತ್ತಿರುವ,
**ಆಪತತಃ** = ಮುನ್ನುಗ್ಗುತ್ತಿರುವ (ಎದುರಾಗಿ ನೀರಿಗೆ ಇಳಿಯುತ್ತಿರುವ)
**ತ್ವರಕರಾಜಪುರುಷಾನ್** = ತುರುಷ್ಕರಾಜನ ಭಟರನ್ನು ಕುರಿತು,
**ಸಃ** = ಶ್ರೀಮಧ್ವಾಚಾರ್ಯರು,
**ಉಚಿತವಾಚಾ** = ಅವರಿಗೆ ಯೋಗ್ಯವಾದ ತುರುಕಭಾಷೆಯಿಂದ,
**ಉಚ್ಚೈಃ** = ಗಟ್ಟಿಯಾಗಿ,
**ಅವದತ್** = ಹೇಳಿದರು.

**ತಾತ್ಪರ್ಯ**— ಹೀಗೆ ಶ್ರೀಮಧ್ವಾಚಾರ್ಯರು ಮುಂಭಾಗದಲ್ಲಿ ತಾವು ಈಜಿ ಬರುತ್ತಾ, ತಮ್ಮ ಹಿಂಭಾಗದಲ್ಲಿ ಒಬ್ಬರನ್ನೊಬ್ಬರು ಹಿಡಿದಿರುವ ಶಿಷ್ಯರನ್ನು ಎಳೆದುಕೊಂಡು ನದಿ ದಾಟುತ್ತಿದ್ದರು. ಆಗ ಆಚೆಯ ದಡದಲ್ಲಿರುವ ತುರುಷ್ಕ ರಾಜನ ಭಟರು ''ಯಾರೋ ಶತ್ರುಗಳ ಕಡೆಯವರು ಬರುತ್ತಿದ್ದಾರೆ. ಇವರನ್ನು ಬೇಗನೆ ತಡೆಯಿರಿ ತಡೆಯಿರಿ. ನಾವು ತಡೆದರೂ ನಿರ್ಭಯವಾಗಿ ಮುಂದೆ ಬರುತ್ತಿರುವ ಇವರನ್ನು ನಮ್ಮ ದಡಕ್ಕೆ ಸೇರುವ ಮೊದಲೇ ಕೊಲ್ಲಿರಿ ಕೊಲ್ಲಿರಿ'' ಎಂದು ಕೂಗಿ ಹೇಳುತ್ತಾ ಮುನ್ನುಗ್ಗಿ ಬಂದು ನದಿಗೆ ಇಳಿಯುತ್ತಿದ್ದರು. ಆಗ ಆಚಾರ್ಯರು ಆ ತುರುಕರಾಜನ ಭಟರನ್ನು ಕುರಿತು ಅವರಿಗೆ ತಿಳಿಯುವ ಅವರ ತುರುಕ ಭಾಷೆಯಿಂದಲೇ ಹೀಗೆ ಹೇಳಿದರು.

**ವಿಗ್ರಹ—**

**ವೈರಿಸುಹೃದಃ—** ವೈರಂ ಏಷಾಂ ಅಸ್ತೀತಿ ವೈರಿಣಃ ವೈರಿಣಾಂ ಸುಹೃದಃ ವೈರಿಸುಹೃದಃ, ತಾನ್ ।

**ಪಾರಗಮನಾತ್—** ಪಾರಸ್ಯ ಗಮನಂ ಪಾರಗಮನಂ ತಸ್ಮಾತ್ ।

**ತ್ವರಕರಾಜಪುರುಷಾನ್—** ತ್ವರಕಾಣಾಂ ರಾಜಾ ತ್ವರಕರಾಜಃ, ತ್ವರಕರಾಜಸ್ಯ ಪುರುಷಾಃ ತ್ವರಕರಾಜಪುರುಷಾಃ ತಾನ್ ।

**ಉಚಿತವಾಚಾ—** ಉಚಿತಾ ಚ ಸಾ ವಾಕ್ ಚ ಉಚಿತವಾಕ್, ತಯಾ ।

**ಕ್ರಿಯಾಪದ— ವಾರಯತ-** ವೃಞವರಣೇ, ಇತಿ ಸ್ವಾದಿಃ ವೃಞ್ ಆವರಣೇ ಇತಿ ಚುರಾದಿಃ ವರಣಾರ್ಥಕಾತ್ ವೃಧಾತೋಃ ಣಿಜಂತಾತ್ ಆವರಣಾರ್ಥಕಾತ್ ವೃಧಾತೋಃ ಚುರಾದೇಃ ಪರಸ್ಮೈಪದಿನಃ ಸಕರ್ಮಕಾತ್ ಕರ್ತರಿ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಬಹುವಚನೇ ವಾರಯತ ಇತಿ ರೂಪಂ ।

ವಾರಯತು ವಾ ಯತಾತ್ ವಾರಯತಾಂ ವಾರಯಂತು, ವಾರಯ – ವಾರಯತಾತ್, ವಾರಯತಂ
ವಾರಯತ, ವಾರಯಾಣಿ ವಾರಯಾವ ವಾರಯಾಮ ॥

**ಮಾರಯತ -** ಮೃಙ್ ಪ್ರಾಣತ್ಯಾಗೇ ಇತಿ ಪ್ರಾಣತ್ಯಾಗಾರ್ಥಕಾತ್ (ಮರಣಾರ್ಥಕಾತ್) ಮೃಧಾತೋಃ ಣಿಜಂತಾತ್ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಬಹುವಚನೇ 'ಮಾರಯತ' ಇತಿ ರೂಪಂ.

ಮಾರಯತು – ಮಾರಯತಾತ್ ಮಾರಯತಾಂ ಮಾರಯಂತು, ಮಾರಯ – ಮಾರಯತಾತ್,
ಮಾರಯಂತಂ ಮಾರಯತ, ಮಾರಯಾಣಿ ಮಾರಯಾವ ಮಾರಯಾಮ ।

**ಅವದತ್-** ವದ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ವದ್ ಧಾತೋಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅವದತ್ ಇತಿ ರೂಪಂ.

ಅವದತ್ ಅವದತಾಂ ಅವದನ್, ಅವದಃ ಅವದತಂ ಅವದತ, ಆವದಂ ಅವದಾವ ಅವದಾಮ ।

**ವ್ಯಾಕರಣವಿಶೇಷ—** ತ್ವರಕಾಣಾಂ ರಾಜಾ ತ್ವರಕರಾಜಃ 'ರಾಜಾಹಃ ಸಖಿಭ್ಯಷ್ಟಚ್' ಎಂಬ ಸೂತ್ರದಿಂದ ಟಚ್ ಪ್ರತ್ಯಯ, ತುರುಕ ತುರುಷ್ಕ ಎಂಬುದನ್ನು ತ್ವರಕ ಎಂದು ಸಂಸ್ಕೃತದಲ್ಲಿ ಹೇಳಿದ್ದಾರೆ. 'ತ್ವರಂತೇ ಇತಿ ತ್ವರಕಾಃ' 'ಇತ್ವರಾ ಸಂಭ್ರಮೇ' ಎಂಬ ಧಾತುವಿಗೆ ಣ್ವಲ್ ಪ್ರತ್ಯಯ ಅಕಾದೇಶ ಮಾಡಿದಾಗ ತ್ವರಕ ಎಂಬ ಶಬ್ದ ಸಿದ್ಧಿಯಾಗುತ್ತದೆ. ತ್ವರಕ = ಅವಸರ ಮಾಡುವವನು ಎಂದೂ ಅರ್ಥವನ್ನು ಹೇಳಬಹುದು.

**ಪ್ರಯೋಗ—** (ಯೂಯಂ) ವೈರಿಸುಹೃದಃ ಅಮೂನ್ ವಾರಯತ (ಕರ್ತರಿ)
ಯುಷ್ಮಾಭಿಃ ವೈರಿ ಸುಹೃದಃ ಅಮೀ ವಾರ್ಯಂತಾಂ (ಕರ್ಮಣಿ)

(ಯಾಯಂ) ಅಮೂನ್ ಮಾರಯತ (ಕರ್ತರಿ) (ಯುಷ್ಮಾಭಿಃ) ಅಮೀ ಮಾರ್ಯಂತಾಂ (ಕರ್ಮಣಿ) ಸಃ ತ್ವರಕರಾಜಪುರುಷಾನ್ ಅವದತ್ (ಕರ್ತರಿ) ತೇನ ತ್ವರಕರಾಜ ಪುರುಷಾಃ ಊದ್ಯಂತ (ಕರ್ಮಣಿ)

**ಕೋಶ—** ರಿಪೌ ವೈರಿ ಸಪತ್ನಾರಿ ದ್ವಿಷದ್ ದ್ವೇಷಣದುರ್ಹೃದಃ 'ಅಥ ಮಿತ್ರಂ ಸಖಾ ಸುಹೃತ್', ಇತ್ಯಮರಃ ।

**ವೃತ್ತ—** ಇಂದುವದನಾವೃತ್ತ ಇಂದುವದನಾ ಭಜಸನೈಃ ಸಗುರುಯುಗ್ಮೈಃ ಎಂಬ ಲಕ್ಷಣದಂತೆ ಇಂದುವದನಾ ವೃತ್ತ.

★ ★ ★

**ಅವತಾರಿಕಾ—** ಶ್ರೀಮದಾಚಾರ್ಯರು ಆ ತುರುಷ್ಕರಾಜನ ಭಟರನ್ನು ಕುರಿತು ಆಡಿದ ಮಾತನ್ನು ವಿವರಿಸುತ್ತಾರೆ:

**ನ ಜಡಾ ಜಲೇ ಪತತ ಸಾಹಸಾದಹೋ**
**ನ ಭಯಂ ಹಿ ವೋ ಬಹುತಯಾಽಬಹೋರ್ಜನಾತ್ ।**
**ಭವತಾಂ ಪತಿಂ ಕ್ಷಿತಿಪತಿಂ ದಿದೃಕ್ಷವಃ**
**ಪ್ರತಿಯಾಮ ಕೇನ ಕಲಹಂ ಚಿಕೀರ್ಷಥ ॥ 11 ॥**

**ಪದಚ್ಛೇದ—** ನ, ಜಡಾಃ, ಜಲೇ, ಪತತ, ಸಾಹಸಾತ್, ಅಹೋ, ನ, ಭಯಂ, ಹಿ, ವಃ, ಬಹುತಯಾ, ಅಬಹೋಃ, ಜನಾತ್, ಭವತಾಂ, ಪತಿಂ, ಕ್ಷಿತಿಪತಿಂ, ದಿದೃಕ್ಷವಃ ಪ್ರತಿಯಾಮ, ಕೇನ, ಕಲಹಂ, ಚಿಕೀರ್ಷಥ ।

**ಅನ್ವಯ—** ಹೇ, ಜಡಾಃ ಸಾಹಸಾತ್, ಜಲೇ, ನ, ಪತತ, ಅಹೋ, ವಃ, ಬಹುತಯಾ, ಅಬಹೋಃ, ಜನಾತ್, ಭಯಂ, ನಹಿ, ಭವತಾಂ, ಪತಿಂ, ಕ್ಷಿತಿಪತಿಂ, ದಿದೃಕ್ಷವಃ, ಪ್ರತಿಯಾಮ, ಕೇನ, ಕಲಹಂ, ಚಿಕೀರ್ಷಥ ।

**ಅನ್ವಯಾರ್ಥ—**

**ಹೇ ಜಡಾಃ** = ಎಲೈ ದಡ್ಡರೇ,
**ಸಾಹಸಾತ್** = ಬಲಾತ್ಕಾರದಿಂದ (ಆಲೋಚನೆ ಇಲ್ಲದೆ)
**ಜಲೇ** = ನೀರಿನಲ್ಲಿ,
**ನ ಪತತ** = ಇಳಿಯಬೇಡಿ, ಹಾರಬೇಡಿ (ಧುಮುಕಬೇಡಿ)
**ಅಹೋ** = ಆಶ್ಚರ್ಯವು,
**ವಃ** = ನಿಮ್ಮ
**ಬಹುತಯಾ** = ಹೆಚ್ಚು ಸಂಖ್ಯೆ ಇರುವುದರಿಂದ,
**ಅಬಹೋಃ** = ಅಲ್ಪ ಸಂಖ್ಯೆಯ,
**ಜನಾತ್** = ಜನರಿಂದ (ನಮ್ಮಿಂದ)
**ಭಯಂ** = ಹೆದರಿಕೆಯು
**ನಹಿ** = ಇಲ್ಲವಷ್ಟೆ,
**ಭವತಾಂ** = ನಿಮ್ಮ
**ಪತಿಂ** = ಒಡೆಯನಾದ,
**ಕ್ಷಿತಪತಿಂ** = ರಾಜನನ್ನು,
**ದಿದೃಕ್ಷವಃ** = ನೋಡುವ ಇಚ್ಛೆಯುಳ್ಳವರಾಗಿ,
**ಪ್ರತಿಯಾಮ** = ಹೋಗುವ ಇಚ್ಛೆಯುಳ್ಳವರಾಗಿದ್ದೇವ
**ಕೇನ** = ಯಾವ ಕಾರಣದಿಂದ,
**ಕಲಹಂ** = ಜಗಳವನ್ನು
**ಚಿಕೀರ್ಷಥ** = ಮಾಡಲು ಇಚ್ಛಿಸುತ್ತಿದ್ದೀರಿ.

**ತಾತ್ಪರ್ಯ—** ಎಲೈ ದಡ್ಡರೆ! ಹಿಂದುಮುಂದಿನ ಆಲೋಚನೆಯಿಲ್ಲದೆ ನೀರಿಗೆ (ಧುಮುಕಬೇಡಿ) ಇಳಿಯಬೇಡಿ. ಇದೇನಾಶ್ಚರ್ಯ. ನೀವು ಬಹಳ ಜನರಿದ್ದೀರಿ, ನಾವಾದರೋ ಅಲ್ಪಸಂಖ್ಯೆಯವರು, ನಮ್ಮಿಂದ ನಿಮಗೇನು ಹೆದರಿಕೆ, ನಾವು

ನಿಮ್ಮ ದೊರೆಯನ್ನು ನೋಡುವ ಇಚ್ಛೆಯಿಂದ ಆ ಕಡೆಗೇ ಹೋಗುವವರು. ನಮ್ಮೊಡನೆ ನೀವೇಕೆ ಜಗಳವಾಡಲು ಬಯಸುತ್ತೀರಿ?

**ವಿಗ್ರಹ—**

**ಬಹುತಯಾ—** ಬಹೂನಾಂ ಭಾವಃ ಬಹುತಾ, ತಯಾ ।

**ಅಬಹೋಃ—** ನ ಬಹುಃ ಅಬಹುಃ, ತಸ್ಮಾತ್ ।

**ಕ್ಷಿತಿಪತಿಂ—** ಕ್ಷಿತೇ ಪತಿಃ ಕ್ಷಿತಿಪತಿಃ, ತಂ ।

**ದಿದೃಕ್ಷವಃ—** ದ್ರಷ್ಟುಂ ಇಚ್ಛವಃ ದಿದೃಕ್ಷವಃ ।

**ಚಿಕೀರ್ಷಥ—** ಕರ್ತುಂ ಇಚ್ಛಥ ಚಿಕೀರ್ಷಥ ।

**ಕ್ರಿಯಾಪದ—** ಪತತ- ಪತ್ಲೃ ಗತೌ ಇತಿ ಗತ್ಯರ್ಥಕಾತ್ ಪತಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಬಹುವಚನೇ 'ಪತತ' ಇತಿ ರೂಪಂ ।

ಪತತು - ಪತತಾತ್ ಪತತಾಂ ಪತಂತು, ಪತ - ಪತತಾತ್ ಪತತಂ ಪತತ, ಪತಾನಿ ಪತಾನ ಪತಾಮ ॥

**ಪ್ರತಿಯಾಮ-** ಪ್ರತಿ+ಯಾಮ, ಪ್ರತಿ ಉಪಸರ್ಗಃ ಯಾ ಪ್ರಾಪಣೇ ಸಕರ್ಮಕಃ ಪರಸ್ಮೈಪದಿನ ಲೋಟ್ ಉತ್ತಮಪುರುಷೇ ಬಹುವಚನೇ ಪ್ರತಿಯಾಮ ಇತಿ ರೂಪಂ ।

ಪ್ರತಿಯಾತು-ಯಾತಾತ್ ಯಾತಾಂ ಯಾಂತು, ಯಾಹಿ-ಯಾತಾತ್, ಯಾತಂ ಯಾತ ಯಾನಿ ಯಾವ ಯಾಮ ॥

**ಚಿತೀರ್ಷಥ** = ಕರ್ತುಂ ಇಚ್ಛತಿ ಚಿಕೀರ್ಷತಿ ಸನ್ನಂತಾತ್ ಚಿಕೀರ್ಷಧಾತೋಃ ವರ್ತಮಾನೇ ಲಟ್ ಮಧ್ಯಮಪುರುಷೇ ಬಹುವಚನೇ ಚಿಕೀರ್ಷಥ ಇತಿ ರೂಪಂ ।

ಚಿಕೀರ್ಷತಿ ಚಿಕೀರ್ಷತಃ ಚಿಕೀರ್ಷಂತಿ, ಚಿಕೀರ್ಷಸಿ ಚಿಕೀರ್ಷಥಃ ಚಿಕೀರ್ಷಥ, ಚಿಕೀರ್ಷಾಮಿ ಚಿಕೀರ್ಷಾವಃ ಚಿಕೀರ್ಷಾಮಃ ॥

**ವ್ಯಾಕರಣವಿಶೇಷ—** 'ಚಿಕೀರ್ಷಥ' ಎಂಬಲ್ಲಿ 'ಧಾತೋಃಕರ್ಮಣಃ ಸಮಾನಕರ್ತೃಕಾದಿಚ್ಛಾಯಾಂ ವಾ' ಎಂಬ ಸೂತ್ರದಿಂದ ಸನ್ ಪ್ರತ್ಯಯ.

**ಪ್ರಯೋಗ—** ಹೇ ಜಡಾಃ (ಯೂಯಂ) ಜಲೇ ನ ಪತತ (ಕರ್ತರಿ)

ಹೇ ಜಡಾಃ (ಯುಷ್ಮಾಭಿಃ) ಜಲೇ ನ ಪತ್ಯತಾಂ (ಭಾವೇ)

(ವಯಂ) ಭವತಾಂ ಪತಿಂ ಕ್ಷಿತಪತಿಂ ದಿದೃಕ್ಷವಃ ಪ್ರತಿಯಾಮ (ಕರ್ತರಿ)

(ಅಸ್ಮಾಭಿಃ) ಭವತಾಂ ಪತಿಃ ಕ್ಷಿತಿಪತಿಃ ದಿದೃಕ್ಷುಭಿಃ ಪ್ರತಿಯಾಯತಾಂ (ಕರ್ಮಣಿ)

(ಯೂಯಂ) ಕೇನ ಕಲಹಂ ಚಿಕೀರ್ಷಥ (ಕರ್ತರಿ)

(ಯುಷ್ಮಾಭಿಃ) ಕೇನ ಕಲಹಃ ಚಿಕೀರ್ಷ್ಯತೇ? (ಕರ್ಮಣಿ)

**ಕೋಶ—** ''ಜಡೋಽಜ್ಞ ಏಡಮೂಕಸ್ತು ವಕ್ತುಂ ಶ್ರೋತುಮಶಿಕ್ಷಿತೇ, ಅಸ್ತ್ರಿಯಾಂ ಸಮರಾನೀಕರಣಾಃ ಕಲಹ-ವಿಗ್ರಹೌ'' ಇತ್ಯಮರಃ ।

**ವೃತ್ತ—** 'ಸಜಸಾ ಜಗೌ ಭವತಿ ಮಂಜುಭಾಷಿಣೀ' ಎಂಬ ಲಕ್ಷಣದಂತೆ ಮಂಜುಭಾಷಿಣೀ ವೃತ್ತ.

★ ★ ★

**ಅವತಾರಿಕಾ**— ಆಚಾರ್ಯರ ಚಮತ್ಕಾರವಾದ ಮಾತಿನ ಪ್ರಭಾವ ಮತ್ತು ಆಚಾರ್ಯರು ಮುಂದೆ ಮಾಡಿದ ಅದ್ಭುತ ಕಾರ್ಯವನ್ನು ಹೇಳುತ್ತಾರೆ.

**ವಚಸೇತ್ಯನೇನ ಸ ಪರಾನ್ ನ್ಯರುಣ-**
**ದ್ಭುಜಗಾನ್ನರೇಂದ್ರ ಇವ ಮಂತ್ರಬಲಾತ್ ।**
**ಉದತಾರಯತ್ ಪರಿಜನಂ ಮೃತಿಭೀ-**
**ಸರಿತಶ್ಚ ದೇವಸರಿತಶ್ಚ ಸಮಮ್ ॥ 12 ॥**

**ಪದಚ್ಛೇದ**— ವಚಸಾ, ಇತಿ, ಅನೇನ, ಸಃ, ಪರಾನ್, ನ್ಯರುಣತ್, ಭುಜಗಾನ್, ನರೇಂದ್ರಃ ಇವ, ಮಂತ್ರಬಲಾತ್, ಉದತಾರಯತ್, ಪರಿಜನಂ, ಮೃತಿಭೀಸರಿತಃ, ಚ, ದೇವಸರಿತಃ, ಚ, ಸಮಂ ।

**ಅನ್ವಯ**— ಸಃ, ಇತಿ, ಅನೇನ, ವಚಸಾ, ಪರಾನ್, ನರೇಂದ್ರಃ, ಮಂತ್ರಬಲಾತ್, ಭುಜಗಾನ್, ಇವ, ನ್ಯರುಣತ್, ಪರಿಜನಂ, ಮೃತಿಭೀಸರಿತಃ, ದೇವಸರಿತಃ, ಚ, ಸಮಂ ಉದತಾರಯತ್ ।

**ಅನ್ವಯಾರ್ಥ**—

**ಸಃ** = ಆ ಮಧ್ವಾಚಾರ್ಯರು,
**ಇತಿ** = ಈ ರೀತಿಯಾದ,
**ಅನೇನ** = ಈ ಮಾತಿನಿಂದ,
**ಪರಾನ್** = ಶತ್ರುಗಳಾದ ತುರುಷ್ಕರನ್ನು,
**ನರೇಂದ್ರಃ** = ವಿಷವೈದ್ಯನು,
**ಭುಜಗಾನ್ ಇವ** = ಹಾವುಗಳನ್ನು ಎಂಬಂತೆ,
**ನ್ಯರುಣತ್** = ತಡೆದರು,
**ಪರಿಜನಂ** = ತನ್ನ ಸೇವಕರನ್ನು
**ಮೃತಿಭೀಸರಿತಃ ಚ** = ಮರಣವು, ಹೆದರಿಕೆ ಇವುಗಳೆಂಬ (ಅಥವಾ ಸಾವಿನ ಭಯವೆಂಬ) ನದಿಯ ದೆಸೆಯಿಂದಲೂ,
**ದೇವಸರಿತಃ ಚ** = ಗಂಗಾನದಿಯ ದೆಸೆಯಿಂದಲೂ,
**ಸಮಂ** = ಒಟ್ಟಿಗೆ,
**ಉದತಾರಯತ್** = ದಾಟಿಸಿದರು.

**ತಾತ್ಪರ್ಯ**— ಹಾವಾಡಿಗನು (ವಿಷವೈದ್ಯನು) ಕಚ್ಚಲು ಮುಂದೆ ಬರುತ್ತಿರುವ ಸರ್ಪಗಳನ್ನು ಮಂತ್ರಬಲದಿಂದ ಮುಂದೆ ಸರಿಯದಂತೆ ತಡೆದು ನಿಲ್ಲಿಸುವನು. ಅದರಂತೆ ಶ್ರೀಮಧ್ವಾಚಾರ್ಯರೂ ಮಂತ್ರದಂತಿರುವ ತಮ್ಮ ಮಾತಿನಿಂದ ಶತ್ರುಗಳಾದ ತುರುಷ್ಕರನ್ನು ಮುಂದೆ ಬರದಂತೆ ತಡೆದರು. ಆಚಾರ್ಯರ ಮಾತನ್ನು ಕೇಳಿದ ಕೂಡಲೇ ಆ ಭಟರು ನಿಂತಲ್ಲಿಯೇ ನಿಂತುಬಿಟ್ಟರು. ಇದರಿಂದ ತಮ್ಮ ಸೇವಕರಿಗೆ ಮರಣ ಮತ್ತು ಹೆದರಿಕೆ ಎಂಬ ನದಿಯನ್ನು ದಾಟಿಸಿದರು. ಅರ್ಥಾತ್ ತಮ್ಮ ಸೇವಕರಿಗೆ ಮರಣ ಭಯವನ್ನು ತಪ್ಪಿಸಿದರು ಮತ್ತು ಗಂಗಾನದಿಯನ್ನು ಸುಲಭವಾಗಿ ದಾಟಿಸಿದರು.

**ವಿಗ್ರಹ**—

**ಭುಜಗಾನ್**— ಭುಜೈಃ ಗಚ್ಛಂತೀತಿ ಭುಜಗಾಃ, ತಾನ್ ಭುಜಗಾನ್ ।
**ಮಂತ್ರಬಲಾತ್**— ಮಂತ್ರಸ್ಯ ಬಲಂ ಮಂತ್ರಬಲಂ ತಸ್ಮಾತ್ ಮಂತ್ರಬಲಾತ್ ।

**ಮೃತಿಭೀಸರಿತಃ**— ಮೃತಿಶ್ಚ ಭೀಶ್ಚ ಮೃತಿಭೀ, (ಅಥವಾ) ಮೃತೇಃ ಭೀಃ ಮೃತಿಭೀಃ, ಮೃತಿಭೀಃ ಏವ ಸರಿತ್ ಮೃತಿಭೀಸರಿತ್, ತಸ್ಯಾಃ ಮೃತಿಭೀಸರಿತಃ ।

**ದೇವಸರಿತಃ**— ದೇವಾನಾಂ ಸರಿತ್ ದೇವಸರಿತ್, ತಸ್ಯಾಃ ದೇವಸರಿತಃ ।.

**ಕ್ರಿಯಾಪದ**— **ನ್ಯರುಣತ್**- ಇತ್ಯುಪಸರ್ಗ ಪೂರ್ವಕಾತ್ ರುಧಿರ್ (ರುಧ್) ಆವರಣೇ, ಇತಿ ಆವರಣಾರ್ಥಕಾತ್ ರುಧ್ ಧಾತೋಃ ಸಕರ್ಮಕಾತ್ ಕರ್ತರಿ, (ಉಭಯಪದಿನಃ) ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ನ್ಯರುಣತ್ ಇತಿ ರೂಪಂ ।

ನಿ+ಅರುಣತ್ (ದ್) ಅರುಂಧಾಂ ಅರುಂಧನ್, ಅರುಣಃ ಅರುಣತ್-ಅರುಣದ್ ಅರುಂಧಂ ಆರುಂಧ, ಅರುಣಧಂ ಅರುಂಧ್ವ ಅರುಂಧ್ಮ ।।

**ಉದತಾರಯತ್**- ಉತ್ ಇತ್ಯುಪಸರ್ಗಪೂರ್ವಕಾತ್ ತೃಪ್ಲವನತರಣಯೋಃ ಇತಿ ಪ್ಲವನತರಣಾರ್ಥಕಾತ್ ಧಾತೋಃ ಣಿಜಂತಾತ್ ಕರ್ತರಿ, ಪರಸ್ಮೈಪದಿನಃ, ಅನದ್ಯತನಭೂತೇ ಲಙ್, ಪ್ರಥಮಪುರುಷೈಕವಚನೇ ಉದತಾರಯತ್ ಇತಿ ರೂಪಂ ।

ಉದ್+ಅತಾರಯತ್ ಅತಾರಯತಾಂ ಅತಾರಯನ್, ಅತಾರಯಃ ಅತಾರಯತಂ ಅತಾರಯತ, ಅತಾರಯಂ ಅತಾರಯಾವ ಅತಾರಯಾಮ ।।

**ಕೋಶ**— 'ಪರೋಽರಿಃ ಪರಮಾತ್ಮಾ ಚ ಕೇವಲೇ ಪರಮವ್ಯಯಂ' ಇತಿ ಭಾಸ್ಕರಃ 'ನರೇಂದ್ರೋ ವಿಷವೈದ್ಯಕೃಶ್ಚ' ಇತ್ಯಭಿಧಾನಂ ।

**ಪ್ರಯೋಗ**— ಸಃ ಪರಾನ್ ನರೇಂದ್ರಃ ಭುಜಗಾನ್ ಇವ ನ್ಯರುಣತ್ (ಕರ್ತರಿ)
ತೇನ ಪರಾಃ ನರೇಂದ್ರೇಣ ಭುಜಗಾಃ ಇವ ನ್ಯರುಧ್ಯಂತ (ಕರ್ಮಣಿ)
ಸಃ ಪರಿಜನಂ ಉದತಾರಯತ್ (ಕರ್ತರಿ) ತೇನ ಪರಿಜನಃ ಉದತಾರ್ಯತ.

**ವೃತ್ತ**— ಇಲ್ಲಿ ಪ್ರಮಿತಾಕ್ಷರಾ ವೃತ್ತ. 'ಪ್ರಮಿತಾಕ್ಷರಾ ಸಜಸಸ್ಯೈರುದಿತಾ' ಎಂದು ಲಕ್ಷಣ. ಆಚಾರ್ಯರ ಮಾತೂ ಕೃಪ್ತವಾದುದು ಪ್ರಮಾಣ ಪ್ರಮಿತವಾದುದು ಎಂದು ಇದರಿಂದ ಸೂಚಿತವಾಗುತ್ತದೆ.

★ ★ ★

**ಅವತಾರಿಕಾ**— ಆ ಗಂಗಾನದಿಯನ್ನು ದಾಟಿದ ಮೇಲೆ ರಾಜಭಟರು ಇವರನ್ನು ಸುತ್ತುಗಟ್ಟಿ ಹೂರಟರೂ ಸಹ ಆಚಾರ್ಯರು ಹೆದರಲಿಲ್ಲವೆಂದು ತಿಳಿಸುತ್ತಾರೆ.

**ನಿರ್ವಿಕಾರಚರಿತೋಽಪಿ ಪರೀತಃ ಕ್ರೂರಕಿಂಕರಸಹಸ್ರತಯೇನ ।**
**ಸ ವ್ರಜನ್ನುದಲಸಜ್ಜಗದೀಶಃ ಸಿಂಹರಾಡಿವ ಸೃಗಾಲಸಮೂಹೇ ।। 13 ।।**

**ಪದಚ್ಛೇದ**— ನಿರ್ವಿಕಾರಚರಿತಃ ಅಪಿ, ಪರೀತಃ ಕ್ರೂರಕಿಂಕರಸಹಸ್ರತಯೇನ, ಸಃ, ವ್ರಜನ್, ಉದಲಸತ್, ಜಗದೀಶಃ ಸಿಂಹರಾಟ್, ಇವ, ಸೃಗಾಲಸಮೂಹೇ ।

**ಅನ್ವಯ**— ಜಗದೀಶಃ ಸಃ ಕ್ರೂರಕಿಂಕರಸಹಸ್ರತಯೇನ ಪರೀತಃ ಅಪಿ ನಿರ್ವಿಕಾರಚರಿತಃ ವ್ರಜನ್ ಸೃಗಾಲಸಮೂಹೇ ಸಿಂಹರಾಟ್ ಇವ ಉದಲಸತ್ ।

**ಅನ್ವಯಾರ್ಥ**—

**ಜಗದೀಶಃ** = ಪ್ರಪಂಚಕ್ಕೆ ಒಡೆಯರಾದ,
**ಸಃ** = ಆ ಮಧ್ವಾಚಾರ್ಯರು

**ಕ್ರೂರಕಿಂಕರಸಹಸ್ರತಯೇನ** = ಕಠಿಣರಾದ ತುರುಷ್ಕ ಸೈನಿಕರ ಸಾವಿರದ ಗುಂಪಿನಿಂದ

**ಪರೀತಃ ಅಪಿ** = ಸುತ್ತುವರಿಯಲ್ಪಟ್ಟಿದ್ದರೂ,

**ನಿರ್ವಿಕಾರಚರಿತಃ** = ವಿಕಾರವಿಲ್ಲದ (ಯಾವ ವ್ಯತ್ಯಾಸವೂ ಇಲ್ಲದ), ವ್ಯವಹಾರ (ನಡತೆ ಅಥವಾ ಕಾರ್ಯ) ವುಳ್ಳವರಾಗಿ,

**ವ್ರಜನ್** = ಹೋಗುತ್ತಾ,

**ಸೃಗಾಲಸಮೂಹೇ** = ನರಿಗಳ ಗುಂಪಿನಲ್ಲಿ

**ಸಿಂಹರಾಟ್ ಇವ** = ಶ್ರೇಷ್ಠವಾದ ಸಿಂಹದಂತೆ,

**ಉದಲಸತ್** = ಪ್ರಕಾಶಿಸಿದರು.

**ತಾತ್ಪರ್ಯ**— ಶ್ರೇಷ್ಠವಾದ ಸಿಂಹವು ಸಾವಿರಾರು ನರಿಗಳು ಸುತ್ತುವರಿದು ಹೆದರಿಸಿದರೂ, ತನ್ನ ಚರ್ಯೆ ಮುಖ ಭಾವಗಳಲ್ಲಿ ಯಾವ ವ್ಯತ್ಯಾಸವನ್ನು ಮಾಡಿಕೊಳ್ಳದೆ, ತನ್ನ ಕಾರ್ಯಕ್ಕಾಗಿ ಮುಂದೆ ಸಾಗುತ್ತಾ ಇರುತ್ತದೋ ಅದರಂತೆ ಪ್ರಪಂಚಕ್ಕೆ ಒಡೆಯರಾದ ಆ ಮಧ್ವಾಚಾರ್ಯರು ಸಾವಿರಾರು ತುರುಕಭಟರು ಸುತ್ತುವರಿದು ಬೆದರಿಸಿದರೂ ಅವರನ್ನು ಲೆಕ್ಕಿಸದೆ, ಭಯ, ನಡುಕ ಮುಂತಾದ ಯಾವ ವಿಕಾರವೂ ಇಲ್ಲದೆ ಮುಂದಕ್ಕೆ ಸಾಗುತ್ತಾ ವಿರಾಜಿಸಿದರು.

ವಿಗ್ರಹ—

**ನಿರ್ವಿಕಾರಚರಿತಃ**— ನಿಷ್ಕ್ರಾಂತಂ ವಿಕಾರಾತ್ ಇತಿ ನಿರ್ವಿಕಾರಂ, ನಿರ್ವಿಕಾರಂ ಚರಿತಂ ಯಸ್ಯ ಸಃ ನಿರ್ವಿಕಾರಚರಿತಃ ।

**ಕ್ರೂರಕಿಂಕರಸಹಸ್ರತಯೇನಃ**— ಕ್ರೂರಾಶ್ಚತೇ ಕಿಂಕರಾಶ್ಚ ಕ್ರೂರಕಿಂಕರಾಃ, ಸಹಸ್ರಂ ಅವಯವಾಃ ಅಸ್ಯ ಇತಿ ಸಹಸ್ರತಯಂ, ಕ್ರೂರಕಿಂಕರಾಣಾಂ ಸಹಸ್ರತಯಂ ಕ್ರೂರಕಿಂಕರಸಹಸ್ರತಯಂ, ತೇನ ಕ್ರೂರಕಿಂಕರ-ಸಹಸ್ರಯೇನ ।

**ಜಗದೀಶಃ**— ಜಗತಾಂ ಈಶಃ ಜಗದೀಶಃ ।

**ಸಿಂಹರಾಟ್**— ಸಿಂಹಾನಾಂ ರಾಟ್ ಸಿಂಹರಾಟ್ ।

**ಸೃಗಾಲಸಮೂಹೇ**— ಸೃಗಾಲಾನಾಂ ಸಮೂಹಃ ಸೃಗಾಲಸಮೂಹಃ, ತಸ್ಮಿನ್ ।

**ಕ್ರಿಯಾಪದ**— ಉತ ಇತ್ಯುಪಸರ್ಗ ಪೂರ್ವಕಾತ್ ಲಸಕಾಂತೌ (ವಿಕಾಸೇ) ಇತಿ ಕಾಂತ್ಯರ್ಥಕಃ ಲಸಧಾತೋಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ, ಉದಲಸತ್ ಇತಿ ರೂಪಂ ।

ಉತ್= ಅಲಸತ್, ಅಲಸತಾಂ, ಅಲಸನ್ ಇತ್ಯಾದಿ ॥

**ಪ್ರಯೋಗ**— ಸಃ ಜಗದೀಶಃ ಸೃಗಾಲಸಮೂಹೇ ಸಿಂಹರಾಡಿವ, ಉದಲಸತ್ (ಕರ್ತರಿ) ತೇನ, ಜಗದೀಶೇನ, ಸೃಗಾಲಸಮೂಹೇ, ಸಿಂಹರಾಜಾ ಇವ ಉದಲಸ್ಯತ (ಭಾವೆ)

**ಕೋಶ**— 'ನಿಯೋಜ್ಯ ಕಿಂಕರಪ್ರೈಷ್ಯಭುಜಿಷ್ಯಪರಿಚಾರಕಾಃ, ಸೃಗಾಲವಂಚಕ ಕ್ರೋಷ್ಟು ಫೇರು ಫೇರವ ಜಂಬುಕಾಃ' ಇತ್ಯಮರಃ ।

**ವೃತ್ತ**— ಇಲ್ಲಿ ಸ್ವಾಗತಾ ವೃತ್ತ = 'ಸ್ವಾಗತೇತಿ ರನಭಾದ್ಗುರುಯುಗ್ಮಂ' ಸ್ವಾಗತಾ ರನಭಗೈರ್ಗುರುಣಾಚ ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಅರಮನೆಯ ಉಪ್ಪರಿಗೆಯ ಅಂಚಿನಲ್ಲಿ ಆ ತುರುಷ್ಕರ ರಾಜನು ನಿಂತು ಆಚಾರ್ಯರನ್ನು ನೋಡಿದ್ದನ್ನು ವರ್ಣಿಸುತ್ತಾರೆ.

**ಅಪ್ರಕಂಪ್ಯವಪುಷಂ ಸುರಾಸುರೈಃ**
**ಸಿಂಹಸಂಹನನಮೇನಮುನ್ನತಮ್ ।**
**ಪ್ರಾಪ್ತಮಾತ್ಮನಗರಾಂತಿಕಂ ನೃಪಃ**
**ಪ್ರೇಕ್ಷ್ಯ ಸೌಧಶಿಖರೇ ಸ್ಥಿತೋಽಬ್ರವೀತ್ ॥ 14 ॥**

**ಪದಚ್ಛೇದ—** ಅಪ್ರಕಂಪ್ಯವಪುಷಂ, ಸುರಾಸುರೈಃ, ಸಿಂಹಸಂಹನನಂ, ಏನಂ, ಉನ್ನತಂ, ಪ್ರಾಪ್ತಂ, ಆತ್ಮನಗರಾಂತಿಕಂ, ನೃಪಃ, ಪ್ರೇಕ್ಷ್ಯ, ಸೌಧಶಿಖರೇ, ಸ್ಥಿತಃ, ಅಬ್ರವೀತ್ ।

**ಅನ್ವಯ—** ಸೌಧಶಿಖರೇ, ಸ್ಥಿತಃ, ನೃಪಃ, ಸುರಾಸುರೈಃ, ಅಪ್ರಕಂಪ್ಯವಪುಷಂ, ಸಿಂಹಸಂಹನನಂ, ಉನ್ನತಂ, ಆತ್ಮನಗರಾಂತಿಕಂ, ಪ್ರಾಪ್ತಂ, ಏನಂ, ಪ್ರೇಕ್ಷ್ಯ, ಅಬ್ರವೀತ್ ।

**ಅನ್ವಯಾರ್ಥ—**

**ಸೌಧಶಿಖರೇ** = ರಾಜಭವನದ ಮೇಲ್ಭಾಗದಲ್ಲಿ
**ಸ್ಥಿತಃ** = ನಿಂತಿದ್ದ
**ನೃಪಃ** = ತುರುಷ್ಕರಾಜನು,
**ಸುರಾಸುರೈಃ** = ದೇವತೆಗಳು ಮತ್ತು ದಾನವರಿಂದ
**ಅಪ್ರಕಂಪ್ಯ** = ನಡುಗಿಸಲಾಗದ
**ವಪುಷಂ** = ಶರೀರವುಳ್ಳ
**ಸಿಂಹಸಂಹನನಂ** = ಸುಂದರವಾದ ಆಕಾರವುಳ್ಳ,
**ಉನ್ನತಂ** = ಎತ್ತರವಾಗಿರುವ,
**ಆತ್ಮನಗರಾಂತಿಕಂ, ಪ್ರಾಪ್ತಂ** = ತನ್ನ ಪಟ್ಟಣದ ಹತ್ತಿರಕ್ಕೆ, ಬಂದ,
**ಏನಂ** = ಈ ಮಧ್ವಾಚಾರ್ಯರನ್ನು
**ಪ್ರೇಕ್ಷ್ಯ** = ನೋಡಿ,
**ಅಬ್ರವೀತ್** = ಹೇಳಿದನು.

**ತಾತ್ಪರ್ಯ—** ಈ ಮಧ್ವಾಚಾರ್ಯರು ದೇವದಾನವರಿಂದಲೂ ನಡುಗಿಸಲು ಅಲ್ಲಾಡಿಸಲು ಅಥವಾ ಹೆದರಿಸಲು ಸಾಧ್ಯವಾಗದ ಶರೀರವುಳ್ಳವರಾಗಿದ್ದರು. ಅವರು ಎತ್ತರವಾದ ಆಕಾರದವರು. ಇಂತಹವರು ತಮ್ಮ ಪಟ್ಟಣದ ಹತ್ತಿರ ಬರುತ್ತಿರುವುದನ್ನು ಅರಮನೆಯ ಮಹಡಿಯ ಮೇಲೆ ನಿಂತಿದ್ದ ರಾಜನು ನೋಡಿದನು ಮತ್ತು ಮಧ್ವಾಚಾರ್ಯರನ್ನು ಕುರಿತು ಇಂತೆಂದನು.

**ವಿಗ್ರಹ—**

**ಅಪ್ರಕಂಪ್ಯವಪುಶಂ—** ಕಂಪಯಿತುಂ ಶಕ್ಯಂ ಕಂಪ್ಯಂ, ಪ್ರಕರ್ಷೇಣ ಕಂಪ್ಯಂ ಪ್ರಕಂಪ್ಯಂ, ನ ಪ್ರಕಂಪ್ಯಂ ಅಪ್ರಕಂಪ್ಯಂ, ಅಪ್ರಕಂಪ್ಯಂ ವಪುಃ ಯಸ್ಯಸಃ ಅಪ್ರಕಂಪ್ಯವಪುಃ ತಂ ಅಪ್ರಕಂಪ್ಯವಪುಷಂ ।

**ಸುರಾಸುರಾಃ—** ಸುರಾಶ್ಚ ಅಸುರಾಶ್ಚ ಸುರಾಸುರಾಃ, ತೈಃ ಸುರಾಸುರೈಃ ।

**ಆತ್ಮನಗರಾಂತಿಕಂ**— ನಗರಸ್ಯ ಅಂತಿಕಃ ನಗರಾಂತಿಕಃ, ಆತ್ಮನಃ ನಗರಾಂತಿಕಃ ಆತ್ಮನಗರಾಂತಿಕಃ ತಂ ಆತ್ಮನಗರಾಂತಿಕಂ ।

**ಸೌಧಶಿಖರಂ**— ಸೌಧಸ್ಯ ಶಿಖರಂ ಸೌಧಶಿಖರಂ ತಸ್ಮಿನ್ ಸೌಧಶಿಖರೇ ।

**ಕ್ರಿಯಾಪದ**— **ಅಬ್ರವೀತ್**- ಬ್ರೂಞ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅಬ್ರವೀತ್ ಇತಿ ರೂಪಂ ।

ಅಬ್ರವೀತ್ ಅಬ್ರೂತಾಂ ಅಬ್ರುವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ ॥

**ಪ್ರಯೋಗ**— ಸೌಧಶಿಖರೇ ಸ್ಥಿತಃ ನೃಪಃ ಏನಂ ಪ್ರೇಕ್ಷ್ಯ ಅಬ್ರವೀತ್ । (ಕರ್ತರಿ) ಸೌಧಶಿಖರೇ ಸ್ಥಿತೇನ ನೃಪೇಣ ಏಷಃ ಪ್ರೇಕ್ಷ್ಯ ಊಚ್ಯತ ।

**ಕೋಶ**— 'ವರಾಂಗರೂಪೋಪೇತೋ ಯಃ ಸಿಂಹಸಂಹನನೋ ಹಿ ಸಃ । ಸೌಧೋಽಸ್ತ್ರೀ ರಾಜಸದನಂ ಉಪಕಾರ್ಯೋಪಕಾರಿಕಾ' ಇತ್ಯಮರಃ ।

**ವೃತ್ತ**— ರಥೋದ್ಧತಾ-ರಾನ್ನರಾವಿಹ ರಥೋದ್ಧತಾ ಲಗೌ ಎಂದು ಅದರ ಲಕ್ಷಣ ।

★ ★ ★

**ಅವತಾರಿಕಾ**— ರಾಜನು ಹೇಳಿದ ಮಾತನ್ನು ಮುಂದಿನ ಎರಡು ಶ್ಲೋಕಗಳಿಂದ ತಿಳಿಸುತ್ತಿದ್ದಾರೆ.

**ರಿಪುನೃಪಪ್ರಣಿಧಿಪ್ರತಿಶಂಕಯಾ**
**ಪಥಿಕಪಾಟನಕರ್ಮಣಿ ದೀಕ್ಷಿತೈಃ ।**
**ಸುಮುಖ ಮೇ ಪುರುಷೈಃ ಪರುಷೈಃ ಕಥಂ**
**ಯಮಭಟೈರಿವ ನಾಸಿ ವಿಹಿಂಸಿತಃ ॥ 15 ॥**

**ಪದಚ್ಛೇದ**— ರಿಪುನೃಪಪ್ರಣಿಧಿಪ್ರತಿಶಂಕಯಾ, ಪಥಿಕಪಾಟನಕರ್ಮಣಿ, ದೀಕ್ಷಿತೈಃ, ಸುಮುಖ, ಮೇ, ಪುರುಷೈಃ, ಪರುಷೈಃ, ಕಥಂ, ಯಮಭಟೈಃ, ಇವ, ನ, ಅಸಿ, ವಿಹಿಂಸಿತಃ ।

**ಅನ್ವಯ**— ಸುಮುಖ! ರಿಪುನೃಪಪ್ರಣಿಧಿಪ್ರತಿಶಂಕಯಾ, ಪಥಿಕಪಾಟನಕರ್ಮಣಿ, ದೀಕ್ಷಿತೈಃ, ಯಮಭಟೈಃ ಇವ, ಪರುಷೈಃ, ಮೇ, ಪುರುಷೈಃ, ಕಥಂ, ವಿಹಿಂಸಿತಃ, ನ, ಅಸಿ ।

**ಅನ್ವಯಾರ್ಥ**—

**ಸುಮುಖ** = ಪ್ರಸನ್ನವಾದ ಸುಂದರ ಮುಖವುಳ್ಳವನೇ,
**ರಿಪುನೃಪಪ್ರಣಿಧಿಪ್ರತಿಶಂಕಯಾ** = ಶತ್ರುರಾಜರ ಗೂಢಚಾರರೆಂಬ ಊಹೆಯಿಂದ,
**ಪಾಟನಕರ್ಮಣಿದೀಕ್ಷಿತೈಃ** = ಹಿಂಸೆಮಾಡುವ ಕೆಲಸದಲ್ಲಿ ಪಣತೊಟ್ಟಿರುವ (ಆಸಕ್ತರಾದ),
**ಪಥಿಕ** = ದಾರಿಗರನ್ನು,
**ಯಮಭಟೈಃ ಇವ** = ಯಮಕಿಂಕರರಂತಿರುವ
**ಪರುಷೈಃ** = ಕಠಿನರಾದ
**ಮೇ** = ನನ್ನ

**ಪುರುಷೈಃ** = ಭಟರಿಂದ

**ಕಥಂ** = ಹೇಗೆ

**ವಿಹಿಂಸಿತಃ** = ಹಿಂಸೆಗೊಳಿಸಲ್ಪಟ್ಟವನು (ಕೊಲ್ಲಲ್ಪಟ್ಟವನು)

**ನ ಅಸಿ** = ಆಗಲಿಲ್ಲ?

**ತಾತ್ಪರ್ಯ**— ಹಸನ್ಮುಖರೇ! ಶತ್ರುರಾಜರ ಗೂಢಚಾರರು ಬಂದಾರೆಂಬ ಭಯ ಸಂದೇಹಗಳಿಂದ ದಾರಿಹೋಕರನ್ನು ತಡೆಗಟ್ಟಲು ಮತ್ತು ಸಂದೇಹ ಬಂದರೆ ಅವರನ್ನು ಕೊಲ್ಲಲು ನಾನು ನನ್ನ ಭಟರನ್ನು ನೇಮಿಸಿದ್ದೇನೆ. ಅವರು ಯಮಕಿಂಕರರಂತೆ ಬಹಳ ಕಠಿನರು. ಅವರು ನಿಮ್ಮನ್ನು ಹಿಂಸಿಸಿ ಕೊಲ್ಲದೇ ಹೇಗೆ ಬಿಟ್ಟರು?

**ವಿಗ್ರಹ**—

**ರಿಪುನೃಪಪ್ರಣಿಧಿಪ್ರತಿಶಂಕಯಾ**— ರಿಪವಶ್ಚತೇ ನೃಪಾಶ್ಚ ರಿಪುನೃಪಾಃ, ರಿಪುನೃಪಾಣಾಂ ಪ್ರಣಿಧಯಃ ರಿಪುನೃಪಪ್ರಣಿಧಯಃ, ರಿಪುನೃಪಪ್ರಣಿಧಯಃ ಇತಿ ಪ್ರತಿಶಂಕಾ ರಿಪುನೃಪಪ್ರಣಿಧಿಪ್ರತಿಶಂಕಾ ತಯಾ ರಿಪುನೃಪಪ್ರಣಿಧಿಪ್ರತಿಶಂಕಯಾ ।

**ಪಥಿಕಪಾಟನಕರ್ಮಣಿ ದೀಕ್ಷಿತೈಃ**— ಪಥಿಕಾನಾಂ ಪಾಟನಂ ಪಥಿಕಪಾಟನಂ, ಪಥಿಕಪಾಟನಂ ಇತಿ ಕರ್ಮ ಪಥಿಕಪಾಟನಕರ್ಮ ತಸ್ಮಿನ್ ಪಥಿಕಪಾಟನಕರ್ಮಣಿ ।

**ಸುಮುಖ**— ಶೋಭನಂ ಮುಖಂ ಯಸ್ಯಸಃ ಸುಮುಖಃ ತಸ್ಯ ಸಂಬುದ್ಧಿಃ (ಹೇ) ಸುಮುಖ ।

**ಯಮಭಟೈಃ**— ಯಮಸ್ಯ ಭಟಾಃ ಯಮಭಟಾಃ ತೈಃ ಯಮಭಟೈಃ ।

**ಪ್ರಯೋಗ**— ತ್ವಂ ಕಥಂ ನ ವಿಹಿಂಸಿತಃ ಅಸಿ? (ಕರ್ತರಿ) ತ್ವಯಾ ಕಥಂ ನ ವಿಹಿಂಸಿತೇನ ಭೂಯತೇ (ಭಾವೇ)

**ಕೋಶ**— 'ಪ್ರಣಿಧಿ ಯಥಾರ್ಹವರ್ಣಃ ಪ್ರಣಿಧಿರಪಸರ್ಪಶ್ಚರಃ ಸ್ಪಸಃ ಇತ್ಯಮರಃ ।

**ವೃತ್ತ**— ಇಲ್ಲಿ ದ್ರುತವಿಲಂಬಿತವೃತ್ತ, 'ದ್ರುತವಿಲಂಬಿತಮಾಹ ನಭೌ ಭರೌ' ಎಂದು ಅದರ ಲಕ್ಷಣ ।

**ಕ್ರಿಯಾಪದ**— ಅಸಿ- ಅಸಭುವಿ ಇತಿ ಸತ್ತಾರ್ಥಕಾತ್ ಅಸ್ ದಾತೋಃ ಅಕರ್ಮಕಾತ್ ಕರ್ತರಿ, ಪರಸ್ಮೈಪದಿನಃ ಮಧ್ಯಮಪುರುಷೇ ಏಕವಚನೇ, ಅಸಿ ಇತಿ ರೂಪಂ ।

ಅಸ್ತಿ ಸ್ತಃ ಸಂತಿ, ಅಸಿ ಸ್ಥಃ ಸ್ಥ, ಅಸ್ಮಿ ಸ್ವಃ ಸ್ಮಃ ॥

★ ★ ★

**ಅಪ್ಲವದೇವನದೀತರಣಂ ತೇ**
**ಹಂತ ಕಥಂ ಚ ಚಿಕೀರ್ಷಸಿ ಕಿಂ ತ್ವಮ್ ।**
**ತಂ ನಿಗದಂತಮಿತಿ ಪ್ರಭೃತೀಹ**
**ಸ್ಮಾಹ ಮಹಾಪುರುಷೋತ್ತಮದಾಸಃ ॥ 16 ॥**

**ಪದಚ್ಛೇದ**— ಅಪ್ಲವದೇವನದೀತರಣಂ, ತೇ, ಹಂತ, ಕಥಂ, ಚ, ಚಿಕೀರ್ಷಸಿ, ಕಿಂ, ತ್ವಂ, ತಂ, ನಿಗದಂತಂ, ಇತಿ ಪ್ರಭೃತಿ, ಇಹ, ಸ್ಮ, ಆಹ, ಮಹಾಪುರುಷೋತ್ತಮದಾಸಃ ।

**ಅನ್ವಯ**— ಅಪ್ಲವದೇವನದೀತರಣಂ, ತೇ, ಹಂತ, ಕಥಂ, ತ್ವಂ, ಕಿಂ, ಚ, ಚಿಕೀರ್ಷಸಿ? ಮಹಾಪುರುಷೋತ್ತಮದಾಸಃ ಇತಿ ಪ್ರಭೃತಿ ನಿಗದಂತಂ, ತಂ, ಆಹ ಸ್ಮ ।

**ಅನ್ವಯಾರ್ಥ—**

**ಅಪ್ಲವ ದೇವನದೀ ತರಣಂ** = ತೆಪ್ಪ (ನಾವೆ)ವಿಲ್ಲದೆ, ಗಂಗೆಯ, ದಾಟುವಿಕೆಯು,
**ತೇ** = ನಿನಗೆ,
**ಕಥಂ** = ಹೇಗೆ?
**ಹಂತ** = ಆಶ್ಚರ್ಯವು!
**ತ್ವಂ** = ನೀನು
**ಕಿಂಚ** = ಮತ್ತೇನನ್ನು
**ಚಿಕೀರ್ಷಸಿ** = ಮಾಡಲು ಬಯಸುತ್ತೀಯೆ,
**ಮಹಾಪುರುಷೋತ್ತಮದಾಸಃ** = ಉತ್ತಮ ಹರಿದಾಸರಾದ ಶ್ರೀಮಧ್ವಾಚಾರ್ಯರು,
**ಇಹ** = ಇಲ್ಲಿ
**ಇತಿ ಪ್ರಭೃತಿ** = ಇದೇ ಮೊದಲಾದ ಮಾತನ್ನು
**ನಿಗದಂತಂ** = ಹೇಳುತ್ತಿರುವ,
**ತಂ** = ಆ ತುರುಷ್ಕ ರಾಜನನ್ನು ಕುರಿತು
**ಆಹ ಸ್ಮ** = ಹೇಳಿದರು.

**ತಾತ್ಪರ್ಯ—** ಎಲೈ ಧೀರರೇ! ಈ ಗಂಗಾನದಿಯಲ್ಲಿ ತೆಪ್ಪ ನಾವೆಗಳ ಸಂಚಾರವನ್ನು ನಾನು ನಿಷೇಧಿಸಿದ್ದೇನೆ. ಹಾಗಿದ್ದರೂ ನೀವು ತೆಪ್ಪ ಮುಂತಾದ ಯಾವ ಸಾಧನವೂ ಇಲ್ಲದೆ ನದಿಯನ್ನು ಹೇಗೆ ದಾಟಿ ಬಂದಿರಿ? ಇದು ಪರಮಾಶ್ಚರ್ಯ ಇಲ್ಲಿ ಇನ್ನು ಮುಂದೆ ನೀವು ಏನು ಮಾಡಲು ಅಪೇಕ್ಷಿಸುತ್ತೀರಿ? ರಾಜನು ಇದೇ ಮೊದಲಾದ ಪ್ರಶ್ನೆಗಳನ್ನು ಕೇಳಿದನು. ಆಗ ಉತ್ತಮ ವಿಷ್ಣುಭಕ್ತರಾದ ಶ್ರೀಮಧ್ವಾಚಾರ್ಯರು ಆ ರಾಜನನ್ನು ಕುರಿತು ಹೀಗೆಂದರು.

**ವಿಗ್ರಹ—**

**ಅಪ್ಲವದೇವನದೀತರಣಂ—** ನ ವಿದ್ಯತೇ ಪ್ಲವಃ ಯಸ್ಯಾಂ ಸಾ ಅಪ್ಲವಾ ದೇವಾನಾಂ ನದೀ ದೇವನದೀ, ಅಪ್ಲವಾ ಚ ಸಾ ದೇವನದೀ ಚ ಅಪ್ಲವದೇವನದೀ, ಅಪ್ಲವದೇವನದ್ಯಾಃ ತರಣಂ ಅಪ್ಲವದೇವನದೀತರಣಂ ।

**ಮಹಾಪುರುಷೋತ್ತಮದಾಸಃ—** ಪುರುಷೋತ್ತಮಸ್ಯ ದಾಸಃ ಪುರುಷೋತ್ತಮದಾಸಃ, ಮಹಾಂಶ್ಚ ಅಸೌ ಪುರುಷೋತ್ತಮದಾಸಶ್ಚ ಮಹಾಪುರುಷೋತ್ತಮದಾಸಃ ।

**ಚಿಕೀರ್ಷಸಿ—** ಕರ್ತುಂ ಇಚ್ಛಸಿ ಚಿಕೀರ್ಷಸಿ ।

**ಪ್ರಯೋಗ—** ತ್ವಂ ಚಿಕೀರ್ಷಸಿ (ಕರ್ತರಿ) ತ್ವಯಾ ಕಿಂ ಚಿಕೀರ್ಷ್ಯತೇ (ಕರ್ಮಣಿ)
ಮಹಾಪುರುಷೋತ್ತಮದಾಸಃ ತಂ ಆಹ ಸ್ಮ (ಕರ್ತರಿ)
ಮಹಾಪುರುಷೋತ್ತಮದಾಸೇನ ಸಃ ಉಚ್ಯತೇ ಸ್ಮ (ಕರ್ಮಣಿ)

**ಕೋಶ—** 'ಉಡುಪಂ ತು ಪ್ಲವಃ ಕೋಲಃ, ಗಂಗಾವಿಷ್ಣುಪದಿಜಹ್ನುತನಯಾ ಸುರನಿಮ್ನಗಾ', ಇತ್ಯಮರಃ ।

**ವೃತ್ತ—** ದೋಧಕವೃತ್ತಮಿದಂ 'ಭಭಭಾದ್ ಗೌ' ಎಂಬ ಲಕ್ಷಣದಂತೆ ಇಲ್ಲಿ ದೋಧಕವೃತ್ತ ।

**ಕ್ರಿಯಾಪದ—** ಚಿಕೀರ್ಷಸಿ- ಡುಕೃಞ್‌ಕರಣೇ, ಇತಿ ಕರಣಾರ್ಥಕಾತ್ ಕೃಧಾತೋಃ ಸನ್ನಂತಾತ್ (ಕರ್ತರಿ) ಪರಸ್ಮೈಪದಿನಃ ಮಧ್ಯಮಪುರುಷೇ ಏಕವಚನೇ ಚಿಕೀರ್ಷಸಿ ಇತಿ ರೂಪಂ ।

ಚಿಕೀರ್ಷತಿ ಚಿಕೀರ್ಷತಃ ಚಿಕೀರ್ಷಂತಿ, ಚಿಕೀರ್ಷಸಿ ಚಿಕೀರ್ಷಥಃ ಚಿಕೀರ್ಷಥ, ಚಿಕೀರ್ಷಾಮಿ
ಚಿಕೀರ್ಷಾವಃ ಚಿಕೀರ್ಷಾಮಃ ॥

**ಆಹ**- ಬ್ರೂಞ ವ್ಯಕ್ತಾಯಾಂ ಇತಿ ವಾಚಿ ವ್ಯಕ್ತವಾಗರ್ಥಕಾತ್ ಬ್ರೂಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್, ಪ್ರಥಮಪುರುಷೇ ಏಕವಚನೇ ಆಹ ಇತಿ ರೂಪಂ । 'ಸ್ಮ' ಎಂಬುದರ ಯೋಗವಿದ್ದಾಗ 'ಲಟ್ ಸ್ಮೇ' ಎಂಬ ಸೂತ್ರದಿಂದ ಭೂತಕಾಲದ ಅರ್ಥಬರುತ್ತದೆ. 'ಬ್ರುವಃ ಪಂಚಾನಾಂ ಆದಿತ ಆಹೋಬ್ರುವಃ' ಎಂಬ ಸೂತ್ರದಿಂದ ತಿ, ತಃ, ಅಂತಿ, ಸಿ, ಥ – ಈ ಐದು ಪ್ರತ್ಯಯಗಳಿಗೆ ಲಿಟ್ ನ ಣಲ್ (ಅ) ಅತುಸ್ ಉಸ್, ಅ, ಅಥುಸ್ ಎಂಬ ಐದು ಆದೇಶಗಳು ಪ್ರಕೃತಿಗೆ 'ಆಹ್' ಆದೇಶ.

ಆಹ ಆಹತುಃ ಆಹುಃ, ಆತ್ಥ ಆಹಥುಃ ಬ್ರೂಥ, ಬ್ರವೀಮಿ ಬ್ರೂವಃ ಬ್ರೂಮಃ ॥

★ ★ ★

**ಅವತಾರಿಕಾ**— ತುರುಕರಾಜನ ಪ್ರಶ್ನೆಗಳಿಗೆ ಆಚಾರ್ಯರು ಕೊಟ್ಟ ಉತ್ತರವನ್ನು ಹೇಳುತ್ತಾರೆ.

**ಯೋಽಸೌ ದೇವೋ ವಿಶ್ವದೀಪಃ ಪ್ರದೀಪ್ತಃ**
**ಕುರ್ಮಸ್ಸರ್ವಂ ತತ್ಪರಾನುಗ್ರಹೇಣ ।**
**ಯಾಮಸ್ತಾವತ್ತೂರ್ಣಮಾಶಾಮುದೀಚೀ-**
**ಮಿತ್ಯಾದ್ಯಂ ತದ್ಭಾಷಯಾ ಚಿತ್ರವಾಕ್ಯಮ್ ॥ 17 ॥**

**ಪದಚ್ಛೇದ**— ಯಃ, ಅಸೌ, ದೇವಃ, ವಿಶ್ವದೀಪಃ, ಪ್ರದೀಪ್ತಃ, ಕುರ್ಮಃ, ಸರ್ವಂ, ತತ್ಪರಾನುಗ್ರಹೇಣ, ಯಾಮಃ, ತಾವತ್, ತೂರ್ಣಂ, ಆಶಾಂ, ಉದೀಚೀಂ, ಇತ್ಯಾದ್ಯಂ, ತದ್ಭಾಷಯಾ, ಚಿತ್ರವಾಕ್ಯಂ ।

**ಅನ್ವಯ**— ವಿಶ್ವದೀಪಃ ಯಃ ಅಸೌ ಪ್ರದೀಪ್ತಃ ದೇವಃ ಸರ್ವಂ ತತ್ಪರಾನುಗ್ರಹೇಣ (ವಯಂ) ಕುರ್ಮಃ ತಾವತ್ ತೂರ್ಣಂ ಉದೀಚೀಂ ಆಶಾಂ ಯಾಮಃ, ಇತ್ಯಾದ್ಯಂ ಚಿತ್ರವಾಕ್ಯಂ ತದ್ಭಾಷಯಾ (ಮಹಾಪುರುಷೋತ್ತಮದಾಸಃ ಆಹಸ್ಮ)

**ಅನ್ವಯಾರ್ಥ**—

**ವಿಶ್ವದೀಪಃ** = ಜಗತ್ತನ್ನು ಪ್ರಕಾಶಗೊಳಿಸುವ
**ಯಃ** = ಯಾವ
**ಅಸೌ** = ಈ
**ಪ್ರದೀಪ್ತಃ** = ಪ್ರಕಾಶಮಾನನಾದ,
**ದೇವಃ** = ಸೂರ್ಯನಲ್ಲಿರುವ ನಾರಾಯಣನು ಇದ್ದಾನೋ,
**ಸರ್ವಂ** = ಎಲ್ಲವನ್ನೂ,
**ತತ್ಪರಾನುಗ್ರಹೇಣ** = ಅವನ ಉತ್ತಮವಾದ ಅನುಗ್ರಹದಿಂದ
**ವಯಂ** = ನಾವು,
**ಕುರ್ಮಃ** = ಮಾಡುತ್ತೇವೆ
**ತಾವತ್** = ಮೊದಲು
**ತೂರ್ಣಂ** = ಜಾಗ್ರತೆಯಾಗಿ
**ಉದೀಚೀಂ ಆಶಾಂ** = ಉತ್ತರ ದಿಕ್ಕನ್ನು ಕುರಿತು,
**ಯಾಮಃ** = ಹೋಗುತ್ತೇವೆ.
**ಇತ್ಯಾದ್ಯಂ** = ಇದೇ ಮೊದಲಾಗಿ ಉಳ್ಳ

**ಚಿತ್ರವಾಕ್ಯಂ** = ಆಶ್ಚರ್ಯಕರವಾದ ಮಾತನ್ನು

**ತದ್ಭಾಷಯಾ** = ಆ ತುರುಷ್ಕರ ಭಾಷೆಯಿಂದ,

**ಮಹಾಪುರುಷೋತ್ತಮದಾಸಃ ಆಹಸ್ಮ** = ಶ್ರೇಷ್ಠ ಹರಿಭಕ್ತರಾದ ಶ್ರೀಮಧ್ವಾಚಾರ್ಯರು ಹೇಳಿದರು.

**ತಾತ್ಪರ್ಯ**— ನಮ್ಮ ದೇವರು ಜಗತ್ತನ್ನೆಲ್ಲಾ ಬೆಳಗುವ ಪ್ರಕಾಶಮಾನವಾದ ಸೂರ್ಯನಲ್ಲಿರುವ ನಾರಾಯಣನು. ಯಾವಾಗಲೂ ಉತ್ಸಾಹಶಾಲಿಯಾಗಿದ್ದು ಆಟದಂತೆ ಎಲ್ಲಾ ಕೆಲಸಗಳನ್ನೂ ನಡೆಸುತ್ತಿರುವ ಅವನ ಪರಮಾನುಗ್ರಹದಿಂದ ನಾವು ಇಂತಹ ಎಲ್ಲಾ ಕೆಲಸಗಳನ್ನೂ ಅನಾಯಾಸವಾಗಿ ನಡೆಸುತ್ತಿದ್ದೇವೆ. ಈಗ ಸದ್ಯದಲ್ಲಿ ಉತ್ತರ ದಿಕ್ಕನ್ನು ಕುರಿತು ಬಹಳ ಬೇಗನೇ ಹೋಗುತ್ತಿದ್ದೇವೆ. ಇದೇ ಮೊದಲಾದ ವಿಷಯವನ್ನು ಆಚಾರ್ಯರು ಆ ತುರುಷ್ಕರ ಭಾಷೆಯಿಂದಲೇ ಹೇಳಿದರು. ಆಚಾರ್ಯರ ಮಾತು ಬಹಳ ಆಶ್ಚರ್ಯಕರವಾಗಿತ್ತು.

**ವಿಗ್ರಹ**—

**ವಿಶ್ವದೀಪಃ**— ದೀಪಯತೀತಿ ದೀಪಃ, ವಿಶ್ವಸ್ಯ ದೀಪಃ ವಿಶ್ವದೀಪಃ ।

**ತತ್ಪರಾನುಗ್ರಹೇಣ**— ಪರಶ್ಚಾಸೌ ಅನುಗ್ರಹಶ್ಚ ಪರಾನುಗ್ರಹಃ, ತಸ್ಯ ಪರಾನುಗ್ರಹಃ ತತ್ಪರಾನುಗ್ರಹಃ, ತೇನ ತತ್ಪಾರಾನುಗ್ರಹೇಣ ।

**ಇತ್ಯಾದ್ಯಂ**— ಇತಿ ಆದ್ಯಂ ಯಸ್ಯ ತತ್ ಇತ್ಯಾದ್ಯಂ ।

**ತದ್ಭಾಷಾತಯಾ**— ತಸ್ಯ ಭಾಷಾ ತದ್ಭಾಷಾ ತಯಾ ತದ್ಭಾಷಯಾ।

**ಕ್ರಿಯಾಪದ— ಕುರ್ಮಃ**- ಡುಕೃಞ್‌ಕರಣೇ ಇತಿ ಕರಣಾರ್ಥಕಾತ್ ಕೃಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಉತ್ತಮಪುರುಷೇ ಬಹುವಚನೇ ಕುರ್ಮಃ, ಇತಿ ರೂಪಂ ।

ಕರೋತಿ ಕುರುತಃ ಕುರ್ವಂತಿ, ಕರೋಷಿ ಕುರುಥಃ ಕುರುಥ, ಕರೋಮಿ ಕುರ್ವಃ ಕುರ್ಮಃ ॥

**ಕೋಶ**— 'ಸತ್ವರಂ ಚಪಲಂ ತೂರ್ಣಂ ಅವಿಲಂಬಿತಮಾಶು ಚ'. 'ಆಶಾ ತೃಷ್ಣಾ ಪಿಚಾಯತಾ' (ಆಶಾದಿಗ-ಭಿಲಾಷಯೋಃ) ಇತ್ಯಮರಃ 'ಆಶಾ ಕಕುಭಿ ತೃಷ್ಣಾಯಾಂ' ಇತಿ ಹೈಮಃ ।

**ಪ್ರಯೋಗ**— (ವಯಂ) ಸರ್ವಂ ತತ್ಪರಾನುಗ್ರಹೇಣ ಕುರ್ಮಃ (ಕರ್ತರಿ) (ಅಸ್ಮಾಭಿಃ) ಸರ್ವಂ ತತ್ಪರಾನುಗ್ರಹೇಣ ಕ್ರಿಯತೇ (ಕರ್ಮಣಿ) ವಯಂ ಉದೀಚೀಂ ಆಶಾಂ ಯಾಮಃ (ಕರ್ತರಿ) ಆತ್ಮಾಭಿಃ ಉದೀಚೀ ಆಶಾ ಯಾಯತೇ (ಕರ್ಮಣಿ)

**ವೃತ್ತ**— 'ಶಾಲಿನ್ಯುಕ್ತಾ ಮ್ಲೌ ತಗೌ ಗೋಽಬ್ಧಿಲೋಕೈಃ' ಎಂಬ ಲಕ್ಷಣದಂತೆ ಶಾಲಿನೀವೃತ್ತ ।

★ ★ ★

**ಅವತಾರಿಕಾ**— ಶ್ರೀಮದಾಚಾರ್ಯರ ಧೈರ್ಯ ಸ್ಥೈರ್ಯ, ಗಾಂಭೀರ್ಯ ಮೊದಲಾದ ಗುಣಗಳಿಗೆ ಚಕಿತನಾದ ಆ ತುರುಕರಾಜನು ಮೆಚ್ಚಿ ತನ್ನ ಅರ್ಧರಾಜ್ಯವನ್ನೇ ಶ್ರೀಮದಾಚಾರ್ಯರಿಗೆ ಕೊಟ್ಟನೆಂದು ತಿಳಿಸುತ್ತಾರೆ.

**ಗಾಂಭೀರ್ಯಂ ಧೃತಿಮುರುವೀರ್ಯಮಾರ್ಯಭಾವಂ**
**ತೇಜೋಽಗ್ರ್ಯಂ ಗಿರಮಪಿ ದೇಶಕಾಲಯುಕ್ತಾಮ್ ।**
**ರಾಜಾಽಸ್ಯ ಸ್ಫುಟಮುಪಲಭ್ಯ ವಿಸ್ಮಿತೋಽಸ್ಮೈ**
**ರಾಜ್ಯಾರ್ಧಂ ಸಪದಿ ಸಮರ್ಪಯಾಂಬಭೂವ ॥ 18 ॥**

**ಪದಚ್ಛೇದ**— ಗಾಂಭೀರ್ಯಂ ಧೃತಿಂ ಉರುವೀರ್ಯಂ ಆರ್ಯಭಾವಂ, ತೇಜಃ ಅಗ್ರ್ಯಂ, ಗಿರಂ, ಅಪಿ ದೇಶ-ಕಾಲಯುಕ್ತಾಂ ರಾಜಾ ಅಸ್ಯ ಸ್ಫುಟಂ ಉಪಲಭ್ಯ ವಿಸ್ಮಿತಃ ಅಸ್ಮೈ ರಾಜ್ಯಾರ್ಧಂ, ಸಪದಿ, ಸಮರ್ಪಯಾಂಬಭೂವ ।

**ಅನ್ವಯ**— ರಾಜಾ ಅಸ್ಯ ಗಾಂಭೀರ್ಯಂ ಧೃತಿಂ ಉರುವೀರ್ಯಂ, ಆರ್ಯಭಾವಂ, ಅಗ್ರ್ಯಂ ತೇಜಃ, ದೇಶ-ಕಾಲಯುಕ್ತಾಂ ಗಿರಂ ಅಪಿ ಸ್ಫುಟಂ ಉಪಲಭ್ಯ, ವಿಸ್ಮಿತಃ, ಸಪದಿ, ಅಸ್ಮೈ ರಾಜ್ಯಾರ್ಧಂ ಸಮರ್ಪಯಾಂಬಭೂವ ।

**ಅನ್ವಯಾರ್ಥ**—

**ರಾಜಾ** = ತುರುಷ್ಕರಾಜನು
**ಅಸ್ಯ** = ಈ ಮಧ್ವಾಚಾರ್ಯರ,
**ಗಾಂಭೀರ್ಯಂ** = ಗಂಭೀರತೆಯನ್ನು
**ಧೃತಿಂ** = ಧೈರ್ಯವನ್ನು
**ಉರುವೀರ್ಯಂ** = ಹೆಚ್ಚಾದ ಸಾಮರ್ಥ್ಯವನ್ನೂ,
**ಆರ್ಯಭಾವಂ** = ಪೂಜ್ಯತೆಯನ್ನು (ಪಾಂಡಿತ್ಯವನ್ನು)
**ಅಗ್ರ್ಯಂ** = ಶ್ರೇಷ್ಠವಾದ
**ತೇಜಃ** = ಬ್ರಹ್ಮವರ್ಚಸ್ಸನ್ನು, (ಕಾಂತಿಯನ್ನು)
**ದೇಶಕಾಲಯುಕ್ತಾಂ** = ದೇಶ ಮತ್ತು ಕಾಲಗಳಿಗೆ ಯೋಗ್ಯವಾದ,
**ಗಿರಂ ಅಪಿ** = ಮಾತನ್ನೂ,
**ಸ್ಫುಟಂ** = ಸ್ಪಷ್ಟವಾಗಿ
**ಉಪಲಭ್ಯ** = ತಿಳಿದು (ನೋಡಿ ಮತ್ತು ಕೇಳಿ)
**ವಿಸ್ಮಿತಃ ಸನ್** = ಆಶ್ಚರ್ಯಪಟ್ಟವನಾಗಿ
**ಸಪದಿ** = ಕೂಡಲೇ
**ಅಸ್ಮೈ** = ಈ ಶ್ರೀಮಧ್ವಾಚಾರ್ಯರಿಗೆ
**ರಾಜ್ಯಾರ್ಧಂ** = ತನ್ನ ರಾಜ್ಯದ ಅರ್ಧಭಾಗವನ್ನು,
**ಸಮರ್ಪಯಾಂಬಭೂವ** = ಸಮರ್ಪಿಸಿದನು.

**ತಾತ್ಪರ್ಯ**— ಆ ರಾಜನು ಶ್ರೀಮಧ್ವಾಚಾರ್ಯರ ಗಂಭೀರತೆ, ಧೈರ್ಯ, ವಿಪುಲವಾದ ಸಾಮರ್ಥ್ಯ, ಪಾಂಡಿತ್ಯ, ಪೂಜ್ಯತೆ, ಉತ್ತಮ ಕಾಂತಿ, ವರ್ಚಸ್ಸು, ದೇಶಕಾಲಗಳಿಗೆ ಉಚಿತವಾದ ಮಾತು ಇವುಗಳನ್ನೆಲ್ಲಾ ಚೆನ್ನಾಗಿ ತಿಳಿದುಕೊಂಡನು. ಇದನ್ನೆಲ್ಲಾ ನೋಡಿ ಕೇಳಿ ಅತ್ಯಂತ ಆಶ್ಚರ್ಯಪಟ್ಟನು. ಕೂಡಲೇ ತನ್ನ ಅರ್ಧ ರಾಜ್ಯವನ್ನು ಶ್ರೀಮಧ್ವಾಚಾರ್ಯರಿಗೆ ಸಮರ್ಪಿಸಿದನು.

**ವಿಗ್ರಹ**—

**ಗಾಂಭೀರ್ಯಂ**— ಗಂಭೀರಸ್ಯ ಭಾವಃ ಗಾಂಭೀರ್ಯಂ ।
**ಉರುವೀರ್ಯಂ**— ಉರು ಚ ತತ್ ವೀರ್ಯಂ ಚ ಉರುವೀರ್ಯಂ ತತ್ ಉರುವೀರ್ಯಂ ।
**ಆರ್ಯಭಾವಃ**— ಆರ್ಯಸ್ಯ ಭಾವಃ ಆರ್ಯಭಾವಃ ತಂ ಆರ್ಯಭಾವಂ ।
**ದೇಶಕಾಲಯುಕ್ತಾಂ**— ದೇಶಶ್ಚ ಕಾಲಶ್ಚ ದೇಶಕಾಲೌ, ದೇಶಕಾಲಯೋಃ ಯುಕ್ತಾ ದೇಶಕಾಲಯುಕ್ತಾ, ತಾಂ ದೇಶಕಾಲಯುಕ್ತಾಂ ।
**ರಾಜ್ಯಾರ್ಧಂ**— ರಾಜ್ಯಸ್ಯ ಅರ್ಧಂ ರಾಜ್ಯಾರ್ಧಂ ।

**ಕ್ರಿಯಾಪದ—** ಸಮರ್ಪಯಾಂ- ಎಂಬುದು 'ಕಾಸ್ ಪ್ರತ್ಯಯಾದಾಮಮಂತ್ರೇ ಲಿಟಿ' (3-1-35) ಎಂಬ ಸೂತ್ರದಿಂದ ಆಮ್ ಪ್ರತ್ಯಯಾಂತವಾದ ಅವ್ಯಯ ।

ಸಮರ್ಪಯಾಂ+ಬಭೂವ, ಬಭೂವತುಃ, ಬಭೂವುಃ ಇತ್ಯಾದಿ ಕ್ರಿಯಾಪದವನ್ನು ನಡೆಸಬೇಕು ॥

**ಕೋಶ—** 'ಗೀರ್ವಾಗ್ ವಾಣೀ ಸರಸ್ವತೀ, ಸದ್ಯಃ ಸಪದಿ ತತ್ಕ್ಷಣೇ, ಪುಂಸ್ಯರ್ಧೋऽರ್ಧಂ 'ಸಮೇऽಂಶಕೇ' ಇತ್ಯಮರಃ ।

**ಪ್ರಯೋಗ—** ರಾಜಾ ರಾಜ್ಯಾರ್ಧಂ ಸಪದಿ ಸಮರ್ಪಯಾಂಬಭೂವ (ಕರ್ತರಿ) ರಾಜ್ಞಾ ರಾಜ್ಯಾರ್ಧಂ ಸಪದಿ ಸಮರ್ಪಯಾಂಬಭೂವೇ (ಕರ್ಮಣಿ) ।

**ವೃತ್ತ—** 'ತ್ರ್ಯಾಶಾಭಿರ್ಮನಜಗರಾಃ ಪ್ರಹರ್ಷಿಣೀಯಂ' ಎಂಬ ಲಕ್ಷಣಾನುಸಾರವಾಗಿ ಇಲ್ಲಿ ಪ್ರಹರ್ಷಿಣೀವೃತ್ತ ।

★ ★ ★

**ಅವತಾರಿಕಾ—** ಯತಿಗಳು ತುರುಷ್ಕ ಭಾಷೆಯಿಂದ ಮಾತನಾಡಿದುದು ಯುಕ್ತವಲ್ಲವೆಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ.

**ದಂಡಾರ್ಹಬುದ್ಧಿವಿಷಯೋ ನೃಪಪೂರುಷಾಣಾಂ**
**ರಾಜ್ಯಾರ್ಹಬುದ್ಧಿವಿಷಯೋऽಭವದಿತ್ಥಮೇಷಃ ।**
**ನೀತಿಂ ಪ್ರಕಾಶಯಿತುಮೇವ ವಿಪತ್ಸು ಕಾರ್ಯಾಂ**
**ಗಂತುಂ ಪ್ರಭುಃ ಪ್ರಸಭತೋऽಪಿ ತಥಾ ವ್ಯಧಾತ್ ಸಃ ॥ 19 ॥**

**ಪದಚ್ಛೇದ—** ದಂಡಾರ್ಹಬುದ್ಧಿವಿಷಯಃ, ನೃಪಪೂರುಷಾಣಾಂ, ರಾಜ್ಯಾರ್ಹಬುದ್ಧಿವಿಷಯಃ ಅಭವತ್ ಇತ್ಥಂ, ಏಷಃ, ನೀತಿಂ, ಪ್ರಕಾಶಯಿತುಂ, ಏವ, ವಿಪತ್ಸು, ಕಾರ್ಯಾಂ, ಗಂತುಂ, ಪ್ರಭುಃ, ಪ್ರಸಭತಃ, ಅಪಿ, ತಥಾ, ವ್ಯಧಾತ್, ಸಃ ।

**ಅನ್ವಯ—** ನೃಪಪೂರುಷಾಣಾಂ ದಂಡಾರ್ಹಬುದ್ಧಿವಿಷಯಃ ಏಷಃ, ಇತ್ಥಂ (ನೃಪಸ್ಯ) ರಾಜ್ಯಾರ್ಹಬುದ್ಧಿವಿಷಯಃ ಅಭವತ್, ಪ್ರಸಭತಃ ಗಂತುಂ ಪ್ರಭುರಪಿ ಸಃ ವಿಪತ್ಸು, ಕಾರ್ಯಾಂ, ನೀತಿಂ, ಪ್ರಕಾಶಯಿತುಂ, ಏವ, ತಥಾ, ವ್ಯಧಾತ್ ।

**ಅನ್ವಯಾರ್ಥ—**

**ನೃಪಪೂರುಷಾಣಾಂ** = ರಾಜಭಟರಿಗೆ, ದಂಡಾರ್ಹ (ಇವನು) ಶಿಕ್ಷೆಗೆ ಯೋಗ್ಯನಾದವನು ಎಂಬ
**ಬುದ್ಧಿ** = ಜ್ಞಾನಕ್ಕೆ
**ವಿಷಯಃ** = ಆಸ್ಪದರಾದ,
**ಏಷಃ** = ಈ ಮಧ್ವಾಚಾರ್ಯರು,
**ಇತ್ಥಂ** = ಈ ರೀತಿ (ನೃಪಸ್ಯ = ರಾಜನಿಗೆ)
**ರಾಜ್ಯಾರ್ಹಬುದ್ಧಿವಿಷಯಃ** = ರಾಜ್ಯಕ್ಕೆ ಯೋಗ್ಯನು ಎಂಬ ಜ್ಞಾನಕ್ಕೆ ವಿಷಯರು,
**ಅಭವತ್** = ಆದರು,
**ಪ್ರಸಭತಃ** = ಬಲಾತ್ಕಾರದಿಂದ
**ಗಂತುಂ** = ಹೋಗುವುದಕ್ಕೆ
**ಪ್ರಭುಃ ಅಪಿ** = ಸಮರ್ಥರಾಗಿದ್ದರೂ

**ಸಃ** = ಆ ಮಧ್ವಾಚಾರ್ಯರು,

**ವಿಪತ್ಸು** = ಕಷ್ಟಕಾಲಗಳಲ್ಲಿ

**ಕಾರ್ಯಾಂ** = ಮಾಡಬೇಕಾಗಿರುವ (ಅನುಸರಿಸಲು ಯೋಗ್ಯವಾಗಿರುವ)

**ನೀತಿಂ** = ನ್ಯಾಯವನ್ನು

**ಪ್ರಕಾಶಯಿತುಂ ಏವ** = ಪ್ರಕಟಿಸುವುದಕ್ಕಾಗಿಯೇ

**ತಥಾ** = ಹಾಗೆ

**ವ್ಯಧಾತ್** = ಮಾಡಿದರು.

**ತಾತ್ಪರ್ಯ—** ಈ ಅಸಾಧಾರಣ ಪುರುಷನು ಶತ್ರುಗಳ ಕಡೆಯವನೇ ಇರಬೇಕು. ಇವನನ್ನು ಕೊಲ್ಲಬೇಕು, ಬಂಧಿಸಬೇಕು, ಶಿಕ್ಷಿಸಬೇಕು ಎಂದು ತುರುಕರಾಜಭಟರು ಆಲೋಚಿಸಿದ್ದರು. ಆದರೆ ತುರುಷ್ಕರಾಜನು 'ಇವರು ನನ್ನ ರಾಜ್ಯದ ಅರ್ಧಭಾಗಕ್ಕೆ ಅರ್ಹರು' ಎಂದು ತಿಳಿದು ಅವರಿಗೆ ರಾಜ್ಯದ ಅರ್ಧವನ್ನು ಸಮರ್ಪಿಸಿದನು. ಶ್ರೀಮಧ್ವಾಚಾರ್ಯರು ನಿಸ್ಪೃಹರು. ರಾಜನನ್ನು, ರಾಜಭಟರನ್ನೂ ತೃಣೀಕರಿಸಿ ಮುಂದಕ್ಕೆ ಹೋಗಲೂ ಸಮರ್ಥರು. ಹಾಗಿದ್ದರೂ ರಾಜನ ಹತ್ತಿರ ಯತಿಗಳಿಗೆ ನಿಷಿದ್ಧವಾದ ತುರುಕರ ಭಾಷೆಯಿಂದ ಏಕೆ ಮಾತಾಡಿದರು? ರಾಜನನ್ನು ಸಂತೋಷಗೊಳಿಸಿ ತಮ್ಮ ಪ್ರಾಣ ಉಳಿಸಿಕೊಳ್ಳಬೇಕೆಂದೇ? ಅಥವಾ ಯಾವುದಾದರೊಂದು ಬಹುಮಾನ ಪಡೆಯಬೇಕೆಂದೇ? ಅಲ್ಲ ಪ್ರಪಂಚದಲ್ಲಿ ಅಶಕ್ತ ಜನರು ಅನೇಕರಿರುತ್ತಾರೆ. ಅವರು ಆಪತ್ತು ಒದಗಿದಾಗ ಯಾವ ನೀತಿಯನ್ನು ಅನುಸರಿಸಬೇಕು ಎಂಬುದನ್ನು ತಿಳಿಸುವುದಕ್ಕಾಗಿಯೇ ತುರುಷ್ಕ ಭಾಷೆಯಿಂದ ಆ ರಾಜನೊಡನೆ ಮಾತನಾಡಿ ಅವನನ್ನು ಸಂತೋಷಗೊಳಿಸಿ ಇವರು ಅರ್ಧರಾಜ್ಯವನ್ನು ಪಡೆಯಲು ಅರ್ಹರು ಎಂಬ ಗೌರವಕ್ಕೆ ಪಾತ್ರರಾದರು. ರಾಜನು ರಾಜ್ಯವನ್ನು ಅರ್ಪಿಸಿದನು. ಆದರೆ ವಿರಕ್ತರಾದ ಆಚಾರ್ಯರು ರಾಜ್ಯವನ್ನು ಸ್ವೀಕರಿಸಲಿಲ್ಲ. ತಮ್ಮ ಸಂಕಲ್ಪದಂತೆ ಉತ್ತರಕ್ಕೆ ಬದರಿಯ ಕಡೆಗೆ ಪ್ರಯಾಣ ಬೆಳೆಸಿದರು.

**ವಿಗ್ರಹ—**

**ದಂಡಾರ್ಹಬುದ್ಧಿವಿಷಯಃ—** ದಂಡಸ್ಯ ಅರ್ಹಃ ದಂಡಾರ್ಹಃ, ದಂಡಾರ್ಹಃ ಇತಿ ಬುದ್ಧಿಃ ದಂಡಾರ್ಹಬುದ್ಧಿಃ, ದಂಡಾರ್ಹಬುದ್ಧೇಃ ವಿಷಯಃ ದಂಡಾರ್ಹಬುದ್ಧಿವಿಷಯಃ ।

**ನೃಪಪೂರುಷಾಃ—** ನೃಪಸ್ಯ ಪೂರುಷಾಃ ನೃಪಪೂರುಷಾಃ (ನೃಪಶ್ಚ ಪೂರುಷಾಶ್ಚ ನೃಪಪೂರುಷಾಃ) ತೇಷಾಂ ನೃಪಪೂರುಷಾಣಾಂ ।

**ರಾಜ್ಯಾರ್ಹಬುದ್ಧಿ ವಿಷಯಃ—** ರಾಜ್ಯಸ್ಯ ಅರ್ಹಃ ರಾಜ್ಯಾರ್ಹಃ, ರಾಜ್ಯಾರ್ಹ ಇತಿ ಬುದ್ಧಿಃ ರಾಜ್ಯಾರ್ಹಬುದ್ಧಿಃ, ರಾಜ್ಯಾರ್ಹಬುದ್ಧೇಃ ವಿಷಯಃ ರಾಜ್ಯಾರ್ಹಬುದ್ಧಿವಿಷಯಃ ।

**ಕ್ರಿಯಾಪದ—** **ವ್ಯಧಾತ್**- ವಿ ಉಪಸರ್ಗಪೂರ್ವಕಾತ್ ಡುಧಾಞ್ಧಾರಣ ಪೋಷಣಯೋಃ ಇತಿ ಧಾರಣ-ಪೋಷಣಾರ್ಥಕಾತ್ ಧಾಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತೇ ಲುಜ್. ಪ್ರಥಮಪುರುಷೇ ಏಕವಚನೇ ವ್ಯಧಾತ್ ಇತಿ ರೂಪಂ ।

ವಿ+ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ

**ಅಭವತ್**- ಅಭವತ್ ಅಭವತಾಂ ಅಭವನ್ ಇತ್ಯಾದಿ ಭೂಧಾತು ಲಙ್॥

**ಕೋಶ—** 'ಪ್ರಸಭಂತು ಬಲಾತ್ಕಾರೋ ಹಠೋऽಥ ಸ್ಖಲಿತಂ ಛಲಂ, ಸಂಪತ್ತಿಃ ಶ್ರೀಶ್ಚ ಲಕ್ಷ್ಮೀಶ್ಚ ವಿಪತ್ತ್ಯಾಂ ವಿಪದಾಪದೌ' ಇತ್ಯಮರಃ ।

**ಪ್ರಯೋಗ—** ನೃಪಪೂರುಷಾಣಾಂ ದಂಡಾರ್ಹಬುದ್ಧಿವಿಷಯಃ ಏಷಃ ಇತ್ಥಂ ರಾಜ್ಯಾರ್ಹಬುದ್ಧಿವಿಷಯಃ ಅಭವತ್ (ಕರ್ತರಿ) ನೃಪಪೂರುಷಾಣಾಂ ದಂಡಾರ್ಹಬುದ್ಧಿವಿಷಯೇಣ ಏತೇನ ಇತ್ಥಂ ರಾಜ್ಯಾರ್ಹಬುದ್ಧಿವಿಷಯೇಣ ಅಭೂಯತ (ಭಾವೇ) ಪ್ರಸಭಂ ಗಂತುಂ ಪ್ರಭುರಪಿ ಸಃ ಏವಂ ವ್ಯಧಾತ್ (ಕರ್ತರಿ)

**ವೃತ್ತ—** ಇಲ್ಲಿ ವಸಂತ ತಿಲಕಾ ವೃತ್ತ. ಉಕ್ತಾ ವಸಂತತಿಲಕಾ ತಭಜಾ ಜಗೌ ಗಃ ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಕೊಲ್ಲಬೇಕೆಂದು ಬಂದ ತುರುಷ್ಕರನ್ನು ನಾಶ ಮಾಡುವಷ್ಟು ಶಕ್ತಿಯುಳ್ಳವರಾಗಿದ್ದರೂ ತಮ್ಮ ಇಚ್ಛೆಯಿಂದಲೇ ಅವರನ್ನು ಬಿಟ್ಟರು ಎಂಬುದನ್ನು ತಿಳಿಸುವುದಕ್ಕೋಸ್ಕರ ಇನ್ನೊಂದು ಕಳ್ಳರ ಗುಂಪನ್ನು ಆಚಾರ್ಯರು ನಾಶ ಪಡಿಸಿದ ಚಮತ್ಕಾರವನ್ನು ವರ್ಣಿಸುತ್ತಾರೆ.

**ಕದಾಚಿಚ್ಚೋರಾಣಾಂ ನಿಕರಮವಲೋಕ್ಯಾಭಿಪತತಾಂ**
**ಅವಸ್ಥಾಪ್ಯ ಸ್ವೀಯಾನ್ ಕರಗಪಟಪಿಂಡಾರ್ಥಮತಿಕೃತ್ ।**
**ಚರನ್ನೇತೇಷ್ವೇತಾನಥ ಮಿಥ ಇಹಾಘಾತಯದಹೋ**
**ವಿಭುಃ ಸಮ್ಮೋಹ್ಯ ಪ್ರಾಗ್ ವಿಜಯ ಇವ ಸಂಶಪ್ತಕಗಣಾನ್ ॥ 20 ॥**

**ಪದಚ್ಛೇದ—** ಕದಾಚಿತ್, ಚೋರಾಣಾಂ, ನಿಕರಂ, ಅವಲೋಕ್ಯ, ಅಭಿಪತತಾಂ, ಅವಸ್ಥಾಪ್ಯ, ಸ್ವೀಯಾನ್, ಕರಗಪಟಪಿಂಡಾರ್ಥಮತಿಕೃತ್, ಚರನ್, ಏತೇಷು, ಏತಾನ್, ಅಥ, ಮಿಥಃ ಇಹ, ಅಘಾತಯತ್, ಅಹೋ, ವಿಭುಃ, ಸಮ್ಮೋಹ್ಯ, ಪ್ರಾಕ್, ವಿಜಯಃ, ಇವ, ಸಂಶಪ್ತಕಗಣಾನ್ ।

**ಅನ್ವಯ—** ವಿಭುಃ ಕದಾಚಿತ್ ಅಭಿಪತತಾಂ ಚೋರಾಣಾಂ ನಿಕರಂ ಅವಲೋಕ್ಯ, ಸ್ವೀಯಾನ್ ಅವಸ್ಥಾಪ್ಯ, ಕರಗಪಟಪಿಂಡಾರ್ಥಮತಿಕೃತ್, ಸನ್, ಏತೇಷು, ಚರನ್ ಅಥ ಏತಾನ್ ಸಮ್ಮೋಹ್ಯ, ಪ್ರಾಕ್ ವಿಜಯಃ ಸಂಶಪ್ತಕಗಣಾನ್, ಇವ, ಮಿಥಃ, ಅಘಾತಯತ್ ।

**ಅನ್ವಯಾರ್ಥ—**

**ವಿಭುಃ** = ಸಮರ್ಥರಾದ ಶ್ರೀಮಧ್ವಾಚಾರ್ಯರು
**ಕದಾಚಿತ್** = ಒಂದಾನೊಂದು ಸಲ,
**ಅಭಿಪತತಾಂ** = ಎದುರಾಗಿ ಬರುತ್ತಿರುವ,
**ಚೋರಾಣಾಂ** = ಕಳ್ಳರ,
**ನಿಕರಂ** = ಸಮೂಹವನ್ನು
**ಅವಲೋಕ್ಯ** = ನೋಡಿ
**ಸ್ವೀಯಾನ್** = ತನ್ನವರನ್ನು,
**ಅವಸ್ಥಾಪ್ಯ** = (ಒಂದು ಕಡೆ) ನಿಲ್ಲಿಸಿ,
**ಕರಗಪಟಪಿಂಡಾರ್ಥಮತಿಕೃತ್**, ಕರಗ = ಕೈಯಲ್ಲಿರುವ
**ಪಟಪಿಂಡ** = ಬಟ್ಟೆಯ ಗಂಟಿನಲ್ಲಿ,
**ಅರ್ಥಮತಿಕೃತ್ (ಸನ್)** = ಹಣವೆಂಬ ಬುದ್ಧಿಯನ್ನು ಉಂಟುಮಾಡಿದವರಾಗಿ,
**ಏತೇಷು** = ಈ ಕಳ್ಳರ ಮಧ್ಯದಲ್ಲಿ

**ಚರನ್ (ಸನ್)** = ಓಡಾಡುತ್ತಾ
**ಅಥ** = ಅನಂತರ
**ಏತಾನ್** = ಈ ಕಳ್ಳರನ್ನು
**ಸಮ್ಮೋಹ್ಯ** = ಮೋಹಗೊಳಿಸಿ (ಭ್ರಾಂತರನ್ನಾಗಿ ಮಾಡಿ)
**ಪ್ರಾಕ್** = ಹಿಂದೆ ಮಹಾಭಾರತಯುದ್ಧದಲ್ಲಿ
**ವಿಜಯಃ** = ಅರ್ಜುನನು,
**ಸಂಶಪ್ತಕಗಣಾನ್ ಇವ** = ಸಂಶಪ್ತಕರ ಗುಂಪುಗಳನ್ನೋಪಾದಿಯಲ್ಲಿ
**ಮಿಥಃ** = ಪರಸ್ಪರವಾಗಿ
**ಅಘಾತಯತ್** = ಕೊಲ್ಲಿಸಿದರು.

**ತಾತ್ಪರ್ಯ—** ಆಚಾರ್ಯರು ಶಿಷ್ಯರ ಸಮೇತವಾಗಿ ಬದರಿಗೆ ಹೋಗುತ್ತಿರುವಾಗ ದಾರಿಯಲ್ಲಿ ಒಂದಾನೊಂದು ದಿವಸ ಒಂದು ದೊಡ್ಡ ಕಳ್ಳರ ಗುಂಪು ತಮ್ಮ ಎದುರಾಗಿ ಮೇಲೆ ಬೀಳಲು ಬರುತ್ತಿರುವುದನ್ನು ನೋಡಿದರು. ಆಗ ಆಚಾರ್ಯರು ತಮ್ಮ ಶಿಷ್ಯರನ್ನೆಲ್ಲಾ ಒಂದು ಕಡೆ ನಿಲ್ಲಲು ಹೇಳಿದರು. ತಾವು ಕೈಯಲ್ಲಿದ್ದ ಬಟ್ಟೆಯನ್ನು ಗಂಟಿನಂತೆ ಮಾಡಿ ಹಿಡಿದುಕೊಂಡು ನಿಂತರು. ಆ ಕಳ್ಳರು ಆಚಾರ್ಯರ ಶಿಷ್ಯರ ಬಳಿಯಲ್ಲಿದ್ದ ಬೇರೆ ವಸ್ತುಗಳನ್ನು ದೋಚುವುದನ್ನು ಬಿಟ್ಟು ಆಚಾರ್ಯರ ಕೈಯಲ್ಲಿದ್ದ ಗಂಟಿನಲ್ಲಿಯೇ ಅಮೂಲ್ಯವಾದ ದ್ರವ್ಯ ಸಂಪತ್ತು ಬಂಗಾರ ಇದೆಯೆಂದು ತಿಳಿದು ಅದನ್ನು ಕಿತ್ತುಕೊಳ್ಳಲು ಬಂದರು. ಆಗ ಆಚಾರ್ಯರು ನಿಮ್ಮಲ್ಲಿ ಯಾರಾದರೊಬ್ಬರು ಈ ಹಣದ ಗಂಟನ್ನು ತೆಗೆದುಕೊಳ್ಳಿರೆಂದು ಸಂಕೇತ ಮಾಡಿದಾಗ ಆ ಕಳ್ಳರು ಈ ಗಂಟನ್ನು ನಾನು ತೆಗೆದುಕೊಳ್ಳಬೇಕು ನೀನಲ್ಲ ನಾನೆ ತೆಗೆದುಕೊಳ್ಳಬೇಕೆಂದು ಜಗಳ ಮಾಡಲಾರಂಭಿಸಿದರು. ಹಿಂದೆ ಮಹಾಭಾರತ ಯುದ್ಧಕಾಲದಲ್ಲಿ ಸಂಶಪ್ತಕರೆಂಬ ಯೋಧರು ಅರ್ಜುನನ ಜೊತೆಯಲ್ಲಿ ಯುದ್ಧ ಮಾಡುತ್ತಿದ್ದರು. ಅರ್ಜುನನು ಸಂಮೋಹನಾಸ್ತ್ರವನ್ನು ಪ್ರಯೋಗಿಸಿದಾಗ ತಮ್ಮಲ್ಲಿಯೇ, ಒಬ್ಬನು ಮತ್ತೊಬ್ಬನನ್ನು ಅರ್ಜುನನೆಂದು ತಿಳಿದು ಹೊಡೆಯಲಾರಂಭಿಸಿ ಪರಸ್ಪರ ಯುದ್ಧಮಾಡಿ ಸತ್ತು ಹೋದರೆಂದು ಮಹಾಭಾರತದಲ್ಲಿ ಉಲ್ಲೇಖವಿದೆ. ಇಲ್ಲಿಯೂ ಕೂಡ ಅದರಂತೆಯೇ ಕಳ್ಳರು ಬಟ್ಟೆಯ ಗಂಟಿನಲ್ಲಿ ಹಣವಿದೆಯೆಂದು ಭ್ರಾಂತಿಯನ್ನು ಹೊಂದಿ ತಮ್ಮತಮ್ಮಲ್ಲಿಯೇ ಜಗಳವಾಡಿ ಸತ್ತು ಹೋಗುವಂತೆ ಆಚಾರ್ಯರು ಮಾಡಿದರು. ಇದರಿಂದ ಆಚಾರ್ಯರ ಅಸಾಧಾರಣ ವಾದ ಬುದ್ಧಿ ಕೌಶಲವು ವ್ಯಕ್ತವಾಗುತ್ತದೆ. ತಾವೇ ಕೊಲ್ಲುವಷ್ಟು ಶಕ್ತಿಯಿದ್ದರೂ ಅವರವರೇ ಹೊಡೆದುಕೊಂಡು ಸಾಯುವಂತೆ ಮಾಡಿದರು. ಯತಿಧರ್ಮಕ್ಕೆ ವಿಹಿತವಾದ ಅಹಿಂಸಾವ್ರತವನ್ನು ಎಂತಹ ಸಂದರ್ಭದಲ್ಲೂ ಬಿಡಲಿಲ್ಲವೆಂದು ಸೂಚಿತವಾಗಿದೆ.

ವಿಗ್ರಹ—

**ಅಭಿಪತತಃ—** ಅಭಿಮುಖಂ ಪತಂತೀತಿ ಅಭಿಪತಂತಃ ತೇಷಾಂ ಅಭಿಪತತಾಂ ।

**ಕರಗಪಟಪಿಂಡಾರ್ಥಮತಿಕೃತಃ—** ಕರಂ ಗಚ್ಛತೀತಿ ಕರಗಃ, ಪಟಸ್ಯ ಪಿಂಡಃ ಪಟಪಿಂಡಃ, ಕರಗಶ್ಚಾಸೌ ಪಟಪಿಂಡಶ್ಚ ಕರಗಪಟಪಿಂಡಃ, ಕರಗಪಟಪಿಂಡೇ ಅರ್ಥಃ ಇತಿ ಮತಿಃ ಕರಗಪಟಪಿಂಡಾರ್ಥಮತಿಃ, ಕರಗಪಟಪಿಂಡಾರ್ಥಮತಿಂ ಕರೋತೀತಿ ಕರಗಪಟಪಿಂಡಾರ್ಥಮತಿಕೃತ್ ।

**ಸಂಶಪ್ತಕಗಣಾನ್—** ಸಂಶಪ್ತಕಾನಾಂ ಗಣಾಃ ಸಂಶಪ್ತಕಗಣಾಃ, ತಾನ್ ಸಂಶಪ್ತಕಗಣಾನ್ ।

**ಕ್ರಿಯಾಪದ— ಅಘಾತಯತ್**- ಹನ ಹಿಂಸಾಗತ್ಯೋಃ ಇತಿ ಹಿಂಸಾ ಗತ್ಯರ್ಥಕಾತ್ ಹನ್ ಧಾತೋಃ ಣಿಜಂತಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಙ್ ಪ್ರಥಮಪುರುಷೇ ಏಕವಚನೇ ಅಘಾತಯತ್ ಇತಿ ರೂಪಂ ।

ಅಘಾತಯತ್ ಅಘಾತಯತಾಂ ಅಘಾತಯನ್, ಅಘಾತಯಃ ಅಘಾತಯತಂ ಅಘಾತಯತ,
ಅಘಾತಯಂ ಅಘಾತಯಾವ ಅಘಾತಯಾಮ ॥

**ಕೋಶ—** ಅರ್ಜುನಃ ಫಲ್ಗುನಃ ಪಾರ್ಥಃ ಕಿರೀಟೀ ಶ್ವೇತವಾಹನಃ ।
ಭೀಭತ್ಸುಃ ವಿಜಯೋ ಜಿಷ್ಣುಃ ಸವ್ಯಸಾಚೀ ಧನಂಜಯಃ ॥

**ಪ್ರಯೋಗ—** ವಿಭುಃ ಸಂಶಪ್ತಕಗಣಾನ್ ಇವ ಏತಾನ್ ಅಘಾತಯತ್ (ಕರ್ತರಿ)
ವಿಭುನಾ ಸಂಶಪ್ತಕಗಣಾ ಇವ ಏತೇ ಅಘಾತ್ಯಂತ (ಕರ್ಮಣಿ)

**ವಿಶೇಷ ವಿಚಾರಗಳು—** ಕರತಲಗತಪಟಪಿಂಡಂ ಕನಕಮಿತಿ ವಿಚಿಂತ್ಯ ಹಂತುಕಾಮಾ ಮಧ್ವಂ, ಪರಸ್ಪರಂ ಜಘ್ನುಃ (ಕವಿಗಳಿಂದಲೇ ರಚಿತವಾದ ಭಾವಪ್ರಕಾಶಿಕಾ) ಕೈಯಲ್ಲಿದ್ದ ಬಟ್ಟೆಯ ಗಂಟನ್ನು ಬಂಗಾರವೆಂದು ತಿಳಿದು ಆಚಾರ್ಯರನ್ನು ಹೊಡೆಯಲು ಹೋಗಿ ತಾವೇ ಪರಸ್ಪರ ಹೊಡೆದಾಡುತ್ತಾ ಸತ್ತರು.

**ವೃತ್ತ—** ಈ ಪದ್ಯದಲ್ಲಿ ಶಿಖರಿಣೀ ವೃತ್ತವಿದೆ. 'ರಸೈ ರುದ್ರೈಶ್ಛಿನ್ನಾ ಯಮನಸಭಲಾಗಃ ಶಿಖರಿಣೀ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಮತ್ತೊಂದು ಕಳ್ಳರ ಗುಂಪನ್ನು ಓಡಿಸಿದ ಕಥೆಯನ್ನು ಹೇಳುತ್ತಾರೆ.

**ಅನ್ಯತ್ರ ಚ ಚೋರಾನ್ ಧನ್ಯಪ್ರವರೋಽಸೌ**
**ಶೂರಾನ್ ಶತಸಂಖ್ಯಾನ್ ಪ್ರಾಪ್ತಾನ್ ಸ್ವಜಿಘಾಂಸೂನ್ ।**
**ಏಕೇನ ತು ಶಿಷ್ಯೇಣಾಕೃಷ್ಟಕುಠಾರಾನ್**
**ನಿಸ್ತಾಡಿತಯೂಥ್ಯಾನದ್ರಾವಯತ ದ್ರಾಕ್ ॥ 21 ॥**

**ಪದಚ್ಛೇದ—** ಅನ್ಯತ್ರ, ಚ, ಚೋರಾನ್, ಧನ್ಯಪ್ರವರಃ ಅಸೌ, ಶೂರಾನ್, ಶತಸಂಖ್ಯಾನ್, ಪ್ರಾಪ್ತಾನ್, ಸ್ವಜಿಘಾಂಸೂನ್, ಏಕೇನ, ತು ಶಿಷ್ಯೇಣ, ಆಕೃಷ್ಟಕುಠಾರಾನ್, ನಿಸ್ತಾಡಿತಯೂಥ್ಯಾನ್, ಅದ್ರಾವಯತ ದ್ರಾಕ್ ।

**ಅನ್ವಯ—** ಧನ್ಯಪ್ರವರಃ, ಅಸೌ, ಅನ್ಯತ್ರ, ಚ, ಶತಸಂಖ್ಯಾನ್, ಶೂರಾನ್, ಸ್ವಜಿಘಾಂಸೂನ್, ಪ್ರಾಪ್ತಾನ್, ಏಕೇನ, ತು, ಶಿಷ್ಯೇಣ, ಆಕೃಷ್ಟಕುಠಾರಾನ್, ನಿಸ್ತಾಡಿತಯೂಥ್ಯಾನ್, ಚೋರಾನ್, ದ್ರಾಕ್, ಅದ್ರಾವಯತ ।

**ಅನ್ವಯಾರ್ಥ—**

ಧನ್ಯಪ್ರವರಃ = ಗುಣಶಾಲಿಗಳಲ್ಲಿ (ಪುಣ್ಯವಂತರಲ್ಲಿ) ಶ್ರೇಷ್ಠರಾದ,
ಅಸೌ = ಈ ಮಧ್ವಾಚಾರ್ಯರು
ಅನ್ಯತ್ರ ಚ = ಮತ್ತೊಂದು ಕಡೆಯಲ್ಲಿಯೂ
ಶತಸಂಖ್ಯಾನ್ = ನೂರು ಸಂಖ್ಯೆಯುಳ್ಳ
ಶೂರಾನ್ = ಪರಾಕ್ರಮಿಗಳಾದ
ಸ್ವಜಿಘಾಂಸೂನ್ = ತಮ್ಮನ್ನು ಕೊಲ್ಲುವ ಅಪೇಕ್ಷೆಯುಳ್ಳ
ಪ್ರಾಪ್ತಾನ್ = ಸಮೀಪಕ್ಕೆ ಬಂದಿರುವ, ಕಳ್ಳರನ್ನು
ಏಕೇನ ತು = ಒಬ್ಬನೇ ಆದವನಾದ,
ಶಿಷ್ಯೇಣ = ಶಿಷ್ಯನಿಂದ, (ಉಪೇಂದ್ರತೀರ್ಥರೆಂಬ ಶಿಷ್ಯರಿಂದ)
ಆಕೃಷ್ಟಕುಠಾರಾನ್ = ಕಸಿದುಕೊಳ್ಳಲ್ಪಟ್ಟ ಕೊಡಲಿಯುಳ್ಳ

ನಿಸ್ತಾಡಿತಯೂಥ್ಯಾನ್= ಕೊಡಲಿಯಿಂದಲೇ ಚೆನ್ನಾಗಿ ಹೊಡೆಯಲ್ಪಟ್ಟ ಗುಂಪಿನವರುಳ್ಳ,

ಚೋರಾನ್ = ಕಳ್ಳರನ್ನು

ದ್ರಾಕ್ = ಬೇಗನೇ,

ಅದ್ರಾವಯತ = ಓಡಿಸಿದರು.

ತಾತ್ಪರ್ಯ— ಆಚಾರ್ಯರು ಪ್ರಯಾಣ ಮಾಡುತ್ತಿದ್ದಾಗ ದಾರಿಯಲ್ಲಿ ಇನ್ನೊಂದು ಕಡೆ ವೀರರಾದ ನೂರು ಮಂದಿ ಕಳ್ಳರು ಆಚಾರ್ಯರನ್ನು ಅವರ ಶಿಷ್ಯರನ್ನೂ ಕೊಲ್ಲಲು ಬಂದರು. ಆಗ ಆಚಾರ್ಯರು ತಮ್ಮ ಶಿಷ್ಯರಾದ ಉಪೇಂದ್ರತೀರ್ಥರೆಂಬುವವರಿಗೆ 'ಕಳ್ಳರ ನಾಯಕನ ಕೈಯಲ್ಲಿದ್ದ ಕೊಡಲಿಯನ್ನು ಕಿತ್ತುಕೋ ಅದರಿಂದಲೇ ಅವನನ್ನು ಹೊಡಿ' ಎಂದು ಆಜ್ಞಾಪಿಸಿದರು. ಶ್ರೀಉಪೇಂದ್ರತೀರ್ಥರು ಧೈರ್ಯದಿಂದ ಮುನ್ನುಗ್ಗಿ ಕಳ್ಳರ ನಾಯಕನ ಕೈಯಿಂದ ಮತ್ತು ಇತರ ಕಳ್ಳರ ಕೈಯಿಂದ ಕೊಡಲಿಯನ್ನು ಕಿತ್ತುಕೊಂಡು ಅದರಿಂದಲೇ ಆ ಕಳ್ಳರ ಗುಂಪಿನ ನಾಯಕನನ್ನೂ, ಅವನ ಗುಂಪಿನ ಇತರ ಕಳ್ಳರನ್ನೂ ಹೊಡೆದು ಓಡಿಸಿದರು. ಈ ರೀತಿ ಆಚಾರ್ಯರು ತಮ್ಮ ಶಿಷ್ಯನೊಬ್ಬನ ಮೂಲಕವಾಗಿಯೂ ಅಸಾಧಾರಣವಾದ ಕಾರ್ಯವನ್ನು ಮಾಡಿಸಿದರು.

ವಿಗ್ರಹ—

ಧನ್ಯಪ್ರವರಃ— ಧನಂ ಲಬ್ಧಾ ಧನ್ಯಃ, ಧನ್ಯಾನಾಂ ಪ್ರವರಃ ಧನ್ಯಪ್ರವರಃ ।

ಶತಸಂಖ್ಯಾಃ— ಶತಂ ಸಂಖ್ಯಾ ಯೇಷಾಂ ತೇ ಶತಸಂಖ್ಯಾಃ ತಾನ್ ಶತಸಂಖ್ಯಾನ್ ।

ಸ್ವಜಿಘಾಂಸೂನ್— ಹಂತುಂ ಇಚ್ಛವಃ ಜಿಂಘಾಸವಃ, ಸ್ವೇಷಾಂ ಜಿಂಘಾಸವಃ ಸ್ವಜಿಂಘಾಸವಃ ತಾನ್ ಸ್ವಜಿಘಾಂಸೂನ್ ।

ಆಕೃಷ್ಟಕುಠಾರಾನ್— ಆಕೃಷ್ಟಃ ಕುಠಾರಃ ಯೇಭ್ಯಃ ತೇ ಆಕೃಷ್ಟಕುಠಾರಾಃ ತಾನ್ ಆಕೃಷ್ಟಕುಠಾರಾನ್ ।

ನಿಸ್ತಾಡಿತಃ— ನಿತರಾಂ ತಾಡಿತಃ ನಿಸ್ತಾಡಿತಃ ।

ಕ್ರಿಯಾಪದ— ಅದ್ರಾವಯತ- ದ್ರುಗತೌ ಇತಿ ಗತ್ಯರ್ಥಕಾತ್ ದ್ರುಧಾತೋಃ ಪ್ರೇರಣಾರ್ಥಕಾತ್ ಣಿಜಂತಾತ್ ಆತ್ಮನೇಪದಿನಃ ಕರ್ತರಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅದ್ರಾವಯತ ಇತಿ ರೂಪಂ । ಧನಂ ಲಬ್ಧಾ ಧನ್ಯಃ, 'ಧನಗಣಂ ಲಬ್ಧಾ' (4-4-84) ಎಂಬ ಸೂತ್ರದಿಂದ ಯತ್ ಪ್ರತ್ಯಯ ।

ಅದ್ರಾವಯತ ಅದ್ರಾವಯೇತಾಂ ಅದ್ರಾವಯಂತ, ಅದ್ರಾವಯಥಾಃ ಅದ್ರಾವಯೇಥಾಂ ಅದ್ರಾವಯಧ್ವಂ, ಅದ್ರಾವಯೇ ಅದ್ರಾವಯಾವಹಿ ಅದ್ರಾವಯಾಮಹಿ ॥

ತಾತ್ಪರ್ಯ— ಅನೇಕ ಕಳ್ಳರು ತಮ್ಮನ್ನು ದೋಚಲು ಮತ್ತು ಕೊಲ್ಲಲು ಬಂದಿರುವುದನ್ನು ನೋಡಿ ಆಚಾರ್ಯರು ಹೇಳಿದರು. 'ನನ್ನ ಶಿಷ್ಯರಲ್ಲಿ, ನಿರ್ಭಯನೂ ಚತುರನೂ ಆದವನು ಯಾರಿದ್ದಾನೆ? ಅವನು ಮುಂದೆ ಬರಲಿ' ಎಂದಾಗ ಕುಸ್ತಿ ವ್ಯಾಯಾಮದ ಅಭ್ಯಾಸವುಳ್ಳ ದೃಢಗಾತ್ರರೂ ಚತುರರೂ ಆದ ಉಪೇಂದ್ರತೀರ್ಥರು ಮುಂದೆ ಬಂದು, ಆಚಾರ್ಯರ ತೇಜಸ್ಸಿನಿಂದ ತುಂಬಿದವರಾಗಿ ಕ್ರೂರರಾದ ಕಳ್ಳರ ಗುಂಪಿನ ಕಡೆ ನುಗ್ಗಿದರು. (ಅವರನ್ನು ಸೋಲಿಸಿ ಓಡಿಸಿದರು) ಎಂದು ಈ ಶ್ಲೋಕದ ಅಭಿಪ್ರಾಯ. ಈ ಉಪೇಂದ್ರತೀರ್ಥರು ಪುತ್ತಿಗೆ ಮಠದ ಮೂಲ ಪುರುಷರು.

ವಿಶೇಷ— ''ದಸ್ಯೂನ್ ಅವಾಪ್ತಾನವಲೋಕ್ಯ ಸೋಽಬ್ರವೀತ್ ಕೋ ಮೇಽಸ್ತಿ ಶಿಷ್ಯೋ ವಿಭಯೋ ಜವೀತ್ಯಲಂ । ಅಭ್ಯಾಸವಾಂಸ್ತೂರ್ಣಮುಪೇಂದ್ರತೀರ್ಥಸ್ತತ್ತೇಜಸಾ ಕ್ರೂರಚಮೂಂ ಪ್ರಭೋಽಭ್ಯಯಾತ್'' ಎಂದು ಕವಿ ಶ್ರೀನಾರಾಯಣ ಪಂಡಿತಾಚಾರ್ಯರೇ ಈ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸಿದ್ದಾರೆ.

ವಿಗ್ರಹ—

ಧನ್ಯಪ್ರವರಃ— ಧನಂ ಲಬ್ಧಾ ಧನ್ಯಃ, ಧನ್ಯಾನಾಂ ಪ್ರವರಃ ಧನ್ಯ ಪ್ರವರಃ ।

ಶತಸಂಖ್ಯಾನ್— ಶತಂಸಂಖ್ಯಾ ಯೇಷಾಂ ತೇ ಶತಸಂಖ್ಯಾಃ ತಾನ್ ಶತಸಂಖ್ಯಾನ್ ।

ಸ್ವಜಿಂಘಾಸೂನ್— ಹಂತುಂ ಇಚ್ಛವಃ ಜಿಘಾಂಸವಃ ಸ್ವೇಷಾಂ ಜಿಘಾಂಸವಃ ಸ್ವಜಘಾಂಸವಃ ತಾನ್, ಸ್ವಜಿಘಾಂಸೂನ್ ।

ಆಕೃಷ್ಟಕುಠಾರಾನ್— ಆಕೃಷ್ಟಃ ಕುಠಾರಃ ಯೇಭ್ಯಃ ತೇ ಆಕೃಷ್ಟಕುಠಾರಾಃ, ತಾನ್ ಆಕೃಷ್ಟಕುಠಾರಾನ್ ।

ನಿಸ್ತಾಡಿತಯೂಥ್ಯಾನ್— ನಿತರಾಂ ತಾಡಿತಃ ನಿಸ್ತಾಡಿತಃ ಯೂಥೇ ಭವಃ ಯೂಥ್ಯಃ, ಸಿಸ್ತಾಡಿತಃ ಯೂಥ್ಯಃ ಯೇಷು ತೇ ನಿಸ್ತಾಡಿತಯೂಥ್ಯಃ ತಾನ್ ನಿಸ್ತಾಡಿತಯೂಥ್ಯಾನ್ ।

ಕೋಶ— ದ್ರಾಗ್ ಝುಟಿತ್ಯಂಜಸಾಹ್ನಾಯದ್ವಯೋಃ, 'ಕುಠಾರಃ ಸ್ವಧಿತಿಃ ಪರಶುಶ್ಚ ಪರಶ್ವಧಃ' ಇತ್ಯಮರಃ, ನಿರಪೇಕ್ಷ್ಯ ಗುಣ್ಯೈಃ ಪೂರ್ಣಃ ಧನ್ಯ ಇತ್ಯಭಿಧೀಯತೇ ಎಂದು ಅಭಿಧಾನ. ಯೂಥೇ ಸಾಧುಃ ಯೂಥ್ಯಃ, ''ತತ್ರ ಸಾಧುಃ'' 4-4-98 ಯತ್ ಪ್ರತ್ಯಯ.

ಪ್ರಯೋಗ— ಶತಸಂಖ್ಯಾ ಶೂರಾಃ ಚೋರಾಃ ಅದ್ರವನ್ (ಅಣಿಜಂತ ಪ್ರಯೋಗ)

ಏಕಃ ಶಿಷ್ಯಃ ಶತಸಂಖ್ಯಾನ್ ಚೋರಾನ್ ಅದ್ರಾವಯತ (ಏಕಪ್ರೇರಣಾರ್ಥಕ ಣಿಜಂತ)

ಧನ್ಯಪ್ರವರೇಣ ಅನೇನ ಏಕೇನ ಶಿಷ್ಯೇಣ ಶತಸಂಖ್ಯಾಃ ಶೂರಾಃ ಚೋರಾಃ ಅದ್ರಾವ್ಯಂತ (ಕರ್ಮಣಿ)

ವೃತ್ತ— ಇಲ್ಲಿ ಮಣಿಮಾಲಾವೃತ್ತ, 'ತ್ಯೌ ತ್ಯೌ ಮಣಿಮಾಲಾ ಛಿನ್ನಾ ಗುಹವಕ್ತ್ರೈಃ' ಎಂದು ಲಕ್ಷಣ.

★ ★ ★

ಅವತಾರಿಕಾ— ಇನ್ನೊಂದು ಕಳ್ಳರ ಗುಂಪಿಗೆ ಭ್ರಾಂತಿಯನ್ನು ಉಂಟುಮಾಡಿದ ಕಥೆಯನ್ನು ವಿವರಿಸುತ್ತಾರೆ.

**ಕ್ವಚಿಚ್ಛಿಲಾಚ್ಚಟಾಭ್ರಮಾದಮುಂ ಸಸಂಗಮತ್ಯಜನ್ ।**
**ಅವೇಕ್ಷ್ಯ ದಸ್ಯವಃ ಪುನಃ ಕುತೂಹಲಾತ್ತಮಾನಮನ್ ॥ 22 ॥**

ಪಾಠಾಂತರ— ಕ್ವಚಿಚ್ಛಿಲಾಚ್ಚದಾಭ್ರಮಾದಮುಂ ಛಲಾರೀಯ ಪಾಠ.

ಪದಚ್ಛೇದ— ಕ್ವಚಿತ್, (ಶಿಲಾಚ್ಚಟಾಭ್ರಮಾತ್, ಶಿಲಾಚ್ಚದಾಭ್ರಮಾತ್) ಅಮುಂ, ಸಸಂಘಂ, ಅತ್ಯಜನ್, ಅವೇಕ್ಷ್ಯ, ದಸ್ಯವಃ, ಪುನಃ, ಕುತೂಹಲಾತ್, ತಂ, ಆನಮನ್ ।

ಅನ್ವಯ— ಕ್ವಚಿತ್, ದಸ್ಯವಃ, ಸಸಂಘಂ, ಅಮುಂ, ಶಿಲಾಚ್ಚಟಾಭ್ರಮಾತ್ (ಶಿಲಾಚ್ಚದಾಭ್ರಮಾತ್) ಅತ್ಯಜನ್ ಪುನಃ ಅವೇಕ್ಷ್ಯ ಕುತೂಹಲಾತ್ ತಂ ಆನಮನ್ ।

ಅನ್ವಯಾರ್ಥ—

ಕ್ವಚಿತ್ = ಒಂದು ಸ್ಥಳದಲ್ಲಿ

ದಸ್ಯವಃ = ಕಳ್ಳರು

ಸಸಂಘಂ = ಶಿಷ್ಯಸಮೂಹದಿಂದ ಸಹಿತರಾದ,

ಅಮುಂ = ಈ ಮಧ್ವಾಚಾರ್ಯರನ್ನು,

ಶಿಲಾಚ್ಚಟಾ (ದಾ) ಭ್ರಮಾತ್ = ಬಂಡೆ ಕಲ್ಲುಗಳ ಸಮೂಹವೆಂಬ ಭ್ರಾಂತಿಯ ದೆಸೆಯಿಂದ,

ಅತ್ಯಜನ್ = ಬಿಟ್ಟರು. ಪುನಃ ತಿರುಗಿ (ಮತ್ತೊಮ್ಮೆ)

**ಅವೇಕ್ಷ್ಯ** = (ಶಿಷ್ಯ ಸಮೂಹ ಸಮೇತರಾಗಿ ಹೋಗುತ್ತಿರುವ ಈ ಮಧ್ವಾಚಾರ್ಯರನ್ನು) ನೋಡಿ,
**ಕುತೂಹಲಾತ್** = ಆಶ್ಚರ್ಯದ ದೆಸೆಯಿಂದ,
**ತಂ** = ಅವರನ್ನು,
**ಆನಮನ್** = ನಮಿಸಿದರು.

**ತಾತ್ಪರ್ಯ—** ಮತ್ತೊಂದು ಕಡೆ ಆಚಾರ್ಯರು ಹೋಗುತ್ತಿದ್ದಾಗ ಕೆಲವು ಮಂದಿ ಕಳ್ಳರು ಶಿಷ್ಯ ಸಮೂಹ ಸಹಿತರಾಗಿ ಹೋಗುತ್ತಿದ್ದ ಆಚಾರ್ಯರನ್ನು ಹೊಡೆದು ದೋಚಲು ಬರುತ್ತಿದ್ದರು. ಆಚಾರ್ಯರಿಗೆ ಈ ವಿಷಯ ತಿಳಿಯಿತು. ಆಚಾರ್ಯರು ಶಿಷ್ಯರನ್ನು ಕುರಿತು ''ನೀವು ಅಲ್ಲಾಡದೆ ಸ್ವಲ್ಪ ಹೊತ್ತು ನಿಂತುಕೊಳ್ಳಿ''ರೆಂದರು. ದೂರದಿಂದ ಬರುತ್ತಿರುವ ಕಳ್ಳರಿಗೆ ಆಚಾರ್ಯರೂ ಅವರ ಶಿಷ್ಯರೂ ಬಂಡೆಕಲ್ಲುಗಳ ರಾಶಿಯಂತೆ ಕಂಡರು. ಇವೆಲ್ಲಾ ಬಂಡೆಕಲ್ಲುಗಳೆಂದು ತಿಳಿದು ಕಳ್ಳರು ಆಚಾರ್ಯರನ್ನೂ ಅವರ ಶಿಷ್ಯರನ್ನೂ ಬಿಟ್ಟು ಮುಂದೆ ಹೋದರು. ಸ್ವಲ್ಪ ದೂರ ಹೋಗಿ ಹಿಂದಿರುಗಿ ನೋಡಿದಾಗ ಆ ಕಳ್ಳರಿಗೆ ಆಚಾರ್ಯರು ಶಿಷ್ಯಸಮೇತರಾಗಿ ಸುಖವಾಗಿ ಹೋಗುತ್ತಿರುವುದು ಕಂಡಿತು. ಈ ಅದ್ಭುತ ದೃಶ್ಯವನ್ನು ಕಂಡು ಕಳ್ಳರು ಬೆರಗಾಗಿ, ಆಚಾರ್ಯರ ಯೋಗಶಕ್ತಿಯನ್ನು ಹೊಗಳಿ ಅವರ ಹತ್ತಿರ ಬಂದು ನಮಸ್ಕಾರ ಮಾಡಿ, ಕ್ಷಮೆ ಕೇಳಿಕೊಂಡು ಹೋದರು.

**ವಿಗ್ರಹ—**

**ಶಿಲಾಚ್ಛಟಾಭ್ರಮಃ—** ಶಿಲಾನಾಂ ಛಟಾಃ (ಶಿಲಾನಾಂ ಛದಾಃ ಶಿಲಾಚ್ಛದಾಃ) । ಶಿಲಾಚ್ಛಟಾಃ ಇತಿ (ಶಿಲಾಚ್ಛದಾಃ ಇತಿ) ಭ್ರಮಃ ಶಿಲಾಚ್ಛಟಾಭ್ರಮಃ (ಶಿಲಾಚ್ಛದಾಭ್ರಮಃ) ತಸ್ಮಾತ್, ಶಿಲಾಚ್ಛಟಾಭ್ರಮಾತ್ ।

**ಸಸಂಘಂ—** ಸಂಘೇನ ಸಹ ವರ್ತತೇ ಇತಿ ಸಸಂಘಃ ತಂ ಸಸಂಘಂ

**ಕ್ರಿಯಾಪದ— ಅತ್ಯಜನ್-** ತ್ಯಜ ಹಾನೌ ಇತಿ ಹಾನ್ಯರ್ಥಕಾತ್ ತ್ಯಜಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಬಹುವಚನೇ ಅತ್ಯಜನ್ ಇತಿ ರೂಪಂ ।

ಅತ್ಯಜತ್ ಅತ್ಯಜತಾಂ ಅತ್ಯಜನ್, ಅತ್ಯಜಃ ಅತ್ಯಜತಂ ಅತ್ಯಜತ, ಅತ್ಯಜಂ ಅತ್ಯಜಾವ ಅತ್ಯಜಾಮ ॥

**ಆನಮನ್-** ಆಙ್ ಇತಿ ಉಪಸರ್ಗ ಪೂರ್ವಕಾತ್ ಣಮುಪ್ರಹ್ವತ್ವೇ ಶಬ್ದೇ ಚ, ಇತಿ ಪ್ರಹ್ವತ್ವಶಬ್ದಾರ್ಥಕಾತ್ 'ನಮ್' ಧಾತೋಃ ಸಕರ್ಮಕಾತ್ ಕರ್ತರಿ ಅನದ್ಯತನ ಭೂತೇ ಲಙ್, ಪ್ರಥಮಪುರುಷೇ ಬಹುವಚನೇ ಆನಮನ್ ಇತಿ ರೂಪಂ ।

ಆ+ಅನಮತ್ ಆನಮತಾಂ ಆನಮನ್, ಆನಮಃ ಆನಮತಂ ಆನಮತ, ಆನಮಂ ಆನವಾವ ಆನಮಾಮ॥

**ಕೋಶ—** ಛಟಾಶಬ್ದಕ್ಕೆ ಸಮೂಹ ಎಂದು ಅರ್ಥ. 'ಸಟಾಚ್ಛಟಾಭಿನ್ನಘನೇನ ಬಿಭ್ರತಾ' ಎಂಬ ಮಾಘಕಾವ್ಯ-ಪ್ರಯೋಗದಲ್ಲಿ ಛಟಾ ಶಬ್ದಕ್ಕೆ ಸಮೂಹಾರ್ಥದಲ್ಲಿ ಪ್ರಯೋಗವಿದೆ. ಶಿಲಾಚ್ಛದಾಭ್ರಮಾತ್ ಎಂಬ ಪಾಠದಲ್ಲಿಯೂ ಛದಾಶಬ್ದಕ್ಕೆ ಸಮೂಹ ಎಂದು ಅರ್ಥ. 'ಛದಾ ಸಮೂಹಪರಯೋಃ' ಎಂದು ವಿಶ್ವಕೋಶವಿದೆ.

**ಪ್ರಯೋಗ—** ದಸ್ಯವಃ ಅಮುಂ ಅತ್ಯಜನ್ (ಕರ್ತರಿ) ದಸ್ಯುಭಿಃ ಅಸೌ ಅತ್ಯಜ್ಯತ (ಕರ್ಮಣಿ)
ದಸ್ಯವಃ ಕುತೂಹಲಾತ್ ತಂ ಆನಮನ್ (ಕರ್ತರಿ) ದಸ್ಯುಭಿಃ ಕುತೂಹಲಾತ್ ಸಃ ಆನಮ್ಯತ (ಕರ್ಮಣಿ)

**ವೃತ್ತ—** ಇಲ್ಲಿ ಪ್ರಮಾಣಿಕಾ ವೃತ್ತವಿದೆ. 'ಪ್ರಮಾಣಿಕಾ ಜರೌ ಲಗೌ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಸತ್ಯತೀರ್ಥರನ್ನು ಕೊಲ್ಲಲು ಬಂದ ದೈತ್ಯನ ಪೀಡೆಯನ್ನು ಪರಿಹರಿಸಿದ ವೃತ್ತಾಂತವನ್ನು ವಿವರಿಸುತ್ತಾರೆ.

**ಸತ್ಯೋಚ್ಛೇದೇ ಸೇ(ಸ್ವೇ)ಚ್ಛಾಯಾತಂ ವ್ಯಾಘ್ರಾಕಾರಂ ದೈತ್ಯವ್ಯಾಘ್ರಮ್ ।**
**ಪ್ರಾಲೇಯಾದ್ರೇಃ ಪ್ರಾಂತೇ ಪ್ರಾಜ್ಞಃ ಪಾಣೇರ್ಲೀಲಾಲೇಶೇನಾಸ್ಯತ್ ॥ 23 ॥**

**ಪದಚ್ಛೇದ—** ಸತ್ಯೋಚ್ಛೇದೇ, ಸೇಚ್ಛಾಯಾತಂ, ವ್ಯಾಘ್ರಾಕಾರಂ, ದೈತ್ಯವ್ಯಾಘ್ರಂ, ಪ್ರಾಲೇಯಾದ್ರೇಃ, ಪ್ರಾಂತೇ, ಪ್ರಾಜ್ಞಃ, ಪಾಣೇಃ, ಲೀಲಾಲೇಶೇನ, ಆಸ್ಯತ್ ।

**ಅನ್ವಯ—** ಪ್ರಾಜ್ಞಃ ಪ್ರಾಲೇಯಾದ್ರೇಃ, ಪ್ರಾಂತೇ, ಸತ್ಯೋಚ್ಛೇದೇ, ಸೇಚ್ಛಾಯಾತಂ, ವ್ಯಾಘ್ರಾಕಾರಂ, ದೈತ್ಯವ್ಯಾಘ್ರಂ, ಪಾಣೇಃ, ಲೀಲಾಲೇಶೇನ, ಆಸ್ಯತ್ ।

**ಅನ್ವಯಾರ್ಥ—**

**ಪ್ರಾಜ್ಞಃ** = ಸರ್ವಜ್ಞರಾದ ಶ್ರೀಮಧ್ವಾಚಾರ್ಯರು,

**ಪ್ರಾಲೇಯಾದ್ರೇಃ** = ಹಿಮವತ್ಪರ್ವತದ,

**ಪ್ರಾಂತೇ** = ಸಮೀಪದಲ್ಲಿ,

**ಸತ್ಯೋಚ್ಛೇದೇ** = ಸತ್ಯತೀರ್ಥರನ್ನು ಕೊಲ್ಲುವುದಕ್ಕೋಸ್ಕರ,

**ಸೇಚ್ಛಾಯಾತಂ** = ಅಪೇಕ್ಷೆಯಿಂದ ಸಹಿತವಾಗಿ ಬಂದ, 'ಸ್ವೇಚ್ಛಾಯಾತಂ' ಎಂಬ ಪಾಠದಲ್ಲಿ ಸ್ವೇಚ್ಛೆಯಿಂದ ಬಂದ,

**ವ್ಯಾಘ್ರಾಕಾರಂ** = ಹುಲಿಯ ಆಕೃತಿಯುಳ್ಳ,

**ದೈತ್ಯವ್ಯಾಘ್ರಂ** = ದೈತ್ಯ ಶ್ರೇಷ್ಠನನ್ನು

**ಪಾಣೇಃ** = ಕೈಯ

**ಲೀಲಾಲೇಶೇನ** = ವಿಲಾಸದ ಅಲ್ಪಾಂಶದಿಂದ, (ಸ್ವಲ್ಪ ಹೊಡೆಯುವುದರಿಂದ)

**ಆಸ್ಯತ್** = ತಳ್ಳಿದರು (ನಿರಾಕರಿಸಿದರು).

**ತಾತ್ಪರ್ಯ—** ಒಮ್ಮೆ ಹಿಮಾಲಯದ ಸಮೀಪದಲ್ಲಿ ಶ್ರೀಮಧ್ವಾಚಾರ್ಯರು ಶಿಷ್ಯ ಸಮೇತರಾಗಿ ಹೋಗುತ್ತಿದ್ದರು. ಆಗ ಸತ್ಯತೀರ್ಥರು ದೇವರ ಪಟ್ಟಿಗೆಯನ್ನು ಹಿಡಿದುಕೊಂಡು ಮುಂದುಗಡೆ ಹೋಗುತ್ತಿದ್ದರು. ಆಗ ಒಬ್ಬ ದೈತ್ಯನು ಹುಲಿಯ ಆಕಾರವನ್ನು ಧರಿಸಿ ಶ್ರೀಮಧ್ವಾಚಾರ್ಯರನ್ನು ಆಕ್ರಮಿಸಬೇಕೆಂದು ಮುಂದೆ ಬಂದರೂ ಧೈರ್ಯಸಾಲದೆ, ಅವರ ಶಿಷ್ಯರಾದ ಸತ್ಯತೀರ್ಥರನ್ನು ಕೊಲ್ಲುವುದಕ್ಕೋಸ್ಕರ ಮುಂದೆ ಬಂದನು. ಆಚಾರ್ಯರು ತಮ್ಮ ಕೈಯಿಂದ ಸ್ವಲ್ಪ ಹೊಡೆದು ವಿಲಾಸ ಮಾತ್ರದಿಂದಲೇ ವ್ಯಾಘ್ರರೂಪಿಯಾದ ದೈತ್ಯನನ್ನು ದೂರಕ್ಕೆ ಎಸೆದರು.

**ವಿಗ್ರಹ—**

**ಸತ್ಯೋಚ್ಛೇದಃ—** ಸತ್ಯಸ್ಯ ಉಚ್ಛೇದಃ ಸತ್ಯೋಚ್ಛೇದಃ, ತಸ್ಮಿನ್ ಸತ್ಯೋಚ್ಛೇದೇ । ಇದು ತಾದರ್ಥ್ಯ ಸಪ್ತಮಿಯು. ಅಂದರೆ 'ಅಲ್ಲಿ' ಎಂಬ ಅರ್ಥ ಬರಬೇಕಾದಲ್ಲಿ 'ಅದಕ್ಕೋಸ್ಕರ' ಎಂಬ ಅರ್ಥ ಬರುತ್ತದೆ. 'ಚರ್ಮಣಿ ದ್ವೀಪಿನಂ ಹಂತಿ', ಚರ್ಮಕ್ಕೋಸ್ಕರ ಹುಲಿಯನ್ನು ಕೊಲ್ಲುತ್ತಾನೆ ಎಂದು ಮತ್ತೊಂದು ಉದಾಹರಣೆ. ಇಲ್ಲಿ ಸತ್ಯತೀರ್ಥರ ಉಚ್ಛೇದಕ್ಕೋಸ್ಕರ ಎಂದು ಅರ್ಥ.

**ಸೇಚ್ಛಾಯಾತಃ—** ಇಚ್ಛಯಾ ಸಹ ವರ್ತತೇ ಇತಿ ಸೇಚ್ಛಂ, ಸೇಚ್ಛಂ ಆನೂತಂ ಯಸ್ಯ ಸಃ ಸೇಚ್ಛಾಯಾತಃ, ತಂ ಸೇಚ್ಛಾಯಾತಂ ।

**ವ್ಯಾಘ್ರಾಕಾರಂ—** ವ್ಯಾಘ್ರಸ್ಯ ಆಕಾರ ಇವ ಆಕಾರಃ ಯಸ್ಯ ಸಃ ವ್ಯಾಘ್ರಾಕಾರಃ, ತಂ ವ್ಯಾಘ್ರಾಕಾರಂ ।

**ದೈತ್ಯವ್ಯಾಘ್ರಂ—** ದೈತ್ಯಃ ವ್ಯಾಘ್ರಃ ಇವ ದೈತ್ಯವ್ಯಾಘ್ರಃ ತಂ ದೈತ್ಯವ್ಯಾಘ್ರಂ ।

**ಪ್ರಾಲೇಯಾದ್ರೇಃ—** ಪ್ರಾಲೇಯಸ್ಯ ಅದ್ರಿಃ ಪಾಲೇಯಾದ್ರಿಃ ತಸ್ಯ ಪ್ರಾಲೇಯಾದ್ರೇಃ ।

**ಲೀಲಾಲೇಶೇನ—** ಲೀಲಾಯಾಃ ಲೇಶಃ ಲೀಲಾಲೇಶಃ ತೇನ ಲೀಲಾಲೇಶೇನ ।

**ಕ್ರಿಯಾಪದ—** ಆಸ್ಯತ್- ಅಸುನಿರಸನೇ (ಅಸುಕ್ಷೇಪಣ) ಇತ್ಯಸ್ಮಾದ್ ಧಾತೋಃ ನಿರಸನಾರ್ಥಕಾತ್ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ಆಸ್ಯತ್ ಇತಿರೂಪಂ ।

ಆಸ್ಯತ್ ಆಸ್ಯತಾಂ ಆಸ್ಯನ್, ಆಸ್ಯಃ ಆಸ್ಯತಂ ಆಸ್ಯತ, ಆಸ್ಯಂ ಆಸ್ಯಾವ ಆಸ್ಯಾಮ ॥

**ಕೋಶ—** 'ಶಾರ್ದೂಲದ್ವೀಪಿನೌ ವ್ಯಾಘ್ರೇ' ಇತ್ಯಮರಃ । ಲೀಲಾವಿಲಾಸಕ್ರಿಯಯೋಃ 'ಲವಲೇಶಕಣಾಣವಃ' ಇತ್ಯಪಿ ಅಮರಃ ।

**ವಿಶೇಷ ವಿಚಾರಗಳು—**

ಸ್ಯುರುತ್ತರಪದೇ ವ್ಯಾಘ್ರಪುಂಗವರ್ಷಭಕುಂಜರಾಃ । ಸಿಂಹಶಾರ್ದೂಲನಾಗಾದ್ಯಾಃ ಪುಂಸಿ ಶ್ರೇಷ್ಠಾರ್ಥಗೋಚರಾಃ ॥ ಎಂಬ ಅಮರಕೋಶಾನುಸಾರವಾಗಿ ವ್ಯಾಘ್ರ ಮುಂತಾದ ಪದಗಳು ಉತ್ತರಪದವಾಗಿ ಬಂದಾಗ ಶ್ರೇಷ್ಠ ಎಂಬ ಅರ್ಥವನ್ನು ಕೊಡುವುವು.

ರಾಮೋಽಯಂ ಪುರುಷವ್ಯಾಘ್ರಃ ಸಂವೃತಃ ಕಪಿಕಂಜರೈಃ । ಹನಿಷ್ಯತಿ ಬಲಾದ್ಯುದ್ಧೇ ರಾವಣಂ ರಾಕ್ಷಸರ್ಷಭಂ ॥ ಈ ಶ್ಲೋಕದಲ್ಲಿ ಪುರುಷವ್ಯಾಘ್ರಃ ಎಂದರೆ ಪುರುಷಶ್ರೇಷ್ಠ ಎಂದು ಅರ್ಥ. ಕಪಿಕುಂಜರಃ ಎಂದರೆ ಕಪಿಶ್ರೇಷ್ಠರು ಎಂದು ಅರ್ಥ. ರಾಕ್ಷಸರ್ಷಭ ಎಂದರೆ ರಾಕ್ಷಸಶ್ರೇಷ್ಠ ಎಂದು ಅರ್ಥ. ಪುರುಷಶ್ರೇಷ್ಠನಾದ ಈ ರಾಮನು ಕಪಿಶ್ರೇಷ್ಠರಿಂದ ಕೂಡಿದವನಾಗಿ ತನ್ನ ಬಲದಿಂದ ಯುದ್ಧದಲ್ಲಿ ರಾಕ್ಷಸ ಶ್ರೇಷ್ಠನಾದ ರಾವಣನನ್ನು ಕೊಲ್ಲುವನು ಎಂದು ಅಭಿಪ್ರಾಯ. ಹೀಗೆಯೇ ಸಿಂಹ ಪುಂಗವಾದಿ ಶಬ್ದಗಳೂ ಶ್ರೇಷ್ಠವಾಚಕಗಳೆಂದು ತಿಳಿಯಬೇಕು.

**ಪ್ರಯೋಗ—** ಪ್ರಾಜ್ಞಃ ದೈತ್ಯವ್ಯಾಘ್ರಂ ಪಾಣೇಃ ಲೀಲಾಲೇಶೇನ ಆಸ್ಯತ್ (ಕರ್ತರಿ)

ಪ್ರಾಜ್ಞೇನ ದೈತ್ಯವ್ಯಾಘ್ರಃ ಪಾಣೇಃ ಲೀಲಾಲೇಶೇನ ಆಸ್ಯತ (ಕರ್ಮಣಿ)

**ವೃತ್ತ—** ಈ ಪದ್ಯದಲ್ಲಿ ವಿದ್ಯುನ್ಮಾಲಾವೃತ್ತವಿದೆ. 'ಮೋಮೋಗೋಗೋ ವಿದ್ಯುನ್ಮಾಲಾ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಬದರಿಯ ದಾರಿಯಲ್ಲಿ ಉಂಟಾದ ಎಲ್ಲ ವಿಘ್ನಗಳನ್ನು ಪರಿಹರಿಸಿಕೊಂಡು ಚಿಕ್ಕ ಬದರಿಗೆ ಹೋಗಿ ಅಲ್ಲಿ ಶಿಷ್ಯರನ್ನು ಬಿಟ್ಟು ತಾವು ದೊಡ್ಡ ಬದರಿಗೆ ಹೋಗಿ ಅಲ್ಲಿ ಶ್ರೀವೇದವ್ಯಾಸರಿಂದ ಪಡೆದ ವ್ಯಾಸಪ್ರತಿಮೆ (ವ್ಯಾಸಮುಷ್ಟಿಗಳ) ವಿಚಾರವನ್ನು ತಿಳಿಸುತ್ತಾರೆ.

**ಪ್ರಾಪ ಸ ನಾರಾಯಣತಃ ಶುದ್ಧಶಿಲಾತ್ಮಪ್ರತಿಮಾಃ ।**
**ಯಾಸು ಸ ಪದ್ಮಾಸಹಿತಃ ದೋಷ್ಯಹಿತಃ ಸನ್ನಿಹಿತಃ ॥ 24 ॥**

**ಪದಚ್ಛೇದ—** ಪ್ರಾಪ, ಸಃ, ನಾರಾಯಣತಃ, ಶುದ್ಧಶಿಲಾತ್ಮಪ್ರತಿಮಾಃ, ಯಾಸು, ಸಃ, ಪದ್ಮಾಸಹಿತಃ, ದೋಷ್ಯಹಿತಃ, ಸನ್ನಿಹಿತಃ ।

**ಅನ್ವಯ—** ಯಾಸು, ದೋಷ್ಯಹಿತಃ, ಪದ್ಮಾಸಹಿತಃ, ಸಃ, ಸನ್ನಿಹಿತಃ, (ತಾಃ) ಶುದ್ಧಶಿಲಾತ್ಮಪ್ರತಿಮಾಃ, ಸಃ, ನಾರಾಯಣತಃ, ಪ್ರಾಪ ।

**ಅನ್ವಯಾರ್ಥ—**

**ಯಾಸು** = ಯಾವ ಪ್ರತಿಮೆಗಳಲ್ಲಿ

**ದೋಷ್ಯಹಿತಃ** = ಭಗವಂತನಲ್ಲಿ ದ್ವೇಷವೆಂಬ ದೋಷವುಳ್ಳವರಿಗೆ ಶತ್ರುವಾದ,

**ಪದ್ಮಾಸಹಿತಃ** = ಲಕ್ಷ್ಮೀಸಹಿತನಾದ,

**ಸಃ** = ಆ ನಾರಾಯಣನು,

**ಸನ್ನಿಹಿತಃ** = ಸನ್ನಿಧಾನವನ್ನು ಇಟ್ಟಿರುವನೋ,

**ತಾಃ** = ಅಂತಹ

**ಶುದ್ಧ ಶಿಲಾತ್ಮ ಪ್ರತಿಮಾಃ** = ಪವಿತ್ರವಾದ ಕಲ್ಲಿನ ರೂಪದ ವಿಗ್ರಹಗಳನ್ನು,

**ಸಃ** = ಆ ಮಧ್ವಾಚಾರ್ಯರು,

**ನಾರಾಯಣತಃ** = ಶ್ರೀಮನ್ನಾರಾಯಣನಿಂದ

**ಪ್ರಾಪ** = ಪಡೆದರು.

**ತಾತ್ಪರ್ಯ—** ಮಹಾಮಹಿಮ ಸಂಪನ್ನರಾದ ಶ್ರೀಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ಮನುಷ್ಯರಿಗೆ ಗಮ್ಯವಾದ ಬದರಿಕಾಶ್ರಮದಲ್ಲಿ (ಚಿಕ್ಕ ಬದರಿಯಲ್ಲಿ) ತನ್ನ ಶಿಷ್ಯರನ್ನು ಇರುವಂತೆ ಹೇಳಿ, ತಾವು ಮನುಷ್ಯರಿಗೆ ಅಗಮ್ಯವಾದ ಬದರಿಕಾಶ್ರಮಕ್ಕೆ ಹೋಗಿ (ದೊಡ್ಡ ಬದರಿಗೆ) ಅಲ್ಲಿ ಧರ್ಮಪುತ್ರರಾದ ನಾರಾಯಣಮುನಿಯಿಂದ ಮತ್ತು ವೇದವ್ಯಾಸರಿಂದ ಪವಿತ್ರವಾದ ಶಿಲಾತ್ಮಕವಾದ ಪ್ರತಿಮೆಗಳನ್ನು (ವ್ಯಾಸಮುಷ್ಟಿಗಳನ್ನೂ) ಪಡೆದರು. ಇವುಗಳಲ್ಲಿ ಲಕ್ಷ್ಮೀಸಹಿತನಾದ ಪರಮಾತ್ಮನ ನಿತ್ಯಸನ್ನಿಧಾನವಿದೆ. ವಿಷ್ಣು ವೈಷ್ಣವ ದ್ವೇಷವೆಂಬ ದೋಷವುಳ್ಳವರಿಗೆ ಪರಮಾತ್ಮನ ಪ್ರೀತಿಯು ದೊರಕುವುದಿಲ್ಲ. ಅಂತಹ ಯಾವ ದೋಷವೂ ಇಲ್ಲದೆ ಹರಿಭಕ್ತ ಶ್ರೇಷ್ಠರಾದ ಆಚಾರ್ಯರು ಮರಳಿನ ಸೂಕ್ಷ್ಮಕಣಗಳಿಂದ ರಚಿತವಾದ ಈ ಪ್ರತಿಮೆಗಳನ್ನು ಪಡೆದರು.

**ವಿಗ್ರಹ—**

**ನಾರಾಯಣತಃ—** ನಾರಾಯಣಾತ್ ಇತಿ ನಾರಾಯಣತಃ ।

**ಶುದ್ಧಶಿಲಾತ್ಮಪ್ರತಿಮಾಃ—** (ಪಂಚಮ್ಯಾಃ ತಸಿಃ) ಶುದ್ಧಾಶ್ಚ ತಾಃ ಶಿಲಾಶ್ಚ ಶುದ್ಧಶಿಲಾಃ, ಶುದ್ಧಶಿಲಾಃ ಆತ್ಮಾ ಯಾಸಾಂ ತಾಃ ಶುದ್ಧಶಿಲಾತ್ಮಾನಃ, ಶುದ್ಧಶಿಲಾತ್ಮಾನಶ್ಚ ತಾಃ ಪ್ರತಿಮಾಶ್ಚ ಶುದ್ಧಶಿಲಾತ್ಮಪ್ರತಿಮಾಃ, ತಾಃ ಶುದ್ಧಶಿಲಾಪ್ರತಿಮಾಃ (ದ್ವಿ.ಬ.) ।

**ಪದ್ಮಾಸಹಿತಃ—** ಪದ್ಮಯಾ ಸಹಿತಃ ಪದ್ಮಾಸಹಿತಃ ।

**ದೋಷಹಿತಃ—** ದೋಷಾಃ ಏಷು ಸಂತೀತಿ ದೋಷಿಣಃ, ದೋಷಿಣಾಂ ಅಹಿತಃ ದೋಷ್ಯಹಿತಃ ।

**ಕ್ರಿಯಾಪದ—** ಪ್ರಾಪ- ಪ್ರ+ಆಪ ಆಪತುಃ ಆಪುಃ ಇತ್ಯಾದಿ ಪ್ರ ಉಪಸರ್ಗ ಆಪ್‌ಲೃ ವ್ಯಾಪ್ತೌ ಲಿಟ್ ।

**ಪ್ರಯೋಗ—** ಸಃ ನಾರಾಯಣತಃ ಶುದ್ಧಶಿಲಾತ್ಮಪ್ರತಿಮಾಃ ಪ್ರಾಪ । (ಕರ್ತರಿ) ತೇನ ನಾರಾಯಣತಃ ಶುದ್ಧ-ಶಿಲಾತ್ಮಪ್ರತಿಮಾಃ ಪ್ರಾಪಿರೇ (ಕರ್ಮಣಿ)

**ವಿಶೇಷ ವಿಚಾರಗಳು—** ತೀರ್ಥಂ ಸ್ವಪಾರ್ಶ್ವಭೂಮಿಂ ಚ ಮೋಕ್ತುಂ ನೇಚ್ಛತಿ ಸನ್ಮತೌ । ತ್ವತ್‌ಸ್ನಾನಾಂಬುನಿ ಗಂಗಾ ಸ್ಯಾತ್ ಶಿಲಾಸ್ವಾಸ್ವಹಮಿತ್ಯದಾತ್ ॥ ಎಂದು ಭಾವ ಪ್ರಕಾಶಿಕೆಯಲ್ಲಿ ವ್ಯಾಸಮುಷ್ಟಿಯು ದೊರೆತ ಬಗ್ಗೆ ಐತಿಹ್ಯ ಪ್ರಮಾಣವನ್ನು ಹೇಳಿದ್ದಾರೆ.

ಶ್ರೀಮದಾನಂದತೀರ್ಥರು ಪವಿತ್ರವಾದ ಗಂಗಾತೀರ್ಥ ಮತ್ತು ಶ್ರೀವೇದವ್ಯಾಸರ ಸನ್ನಿಧಾನವನ್ನು ಬಿಟ್ಟು ಹೊರಡಲು ಇಷ್ಟಪಡದಿರುವಾಗ, ಪರಮಾತ್ಮನು ನೀನು ಸ್ನಾನಮಾಡುವ ಯಾವ ನೀರಿನಲ್ಲಿಯೇ ಆಗಲಿ ಗಂಗೆಯ ಸನ್ನಿಧಾನವಿರುತ್ತದೆ ಮತ್ತು ನಾನು ಕೊಡುವ ಈ ಶಿಲಾಪ್ರತಿಮೆಗಳಲ್ಲಿ ನನ್ನ ಸನ್ನಿಧಾನವಿರುತ್ತದೆ ಎಂದು ಹೇಳಿ ಮರಳಿನ ಮುಷ್ಟಿಯನ್ನು ಕೊಟ್ಟರು. ವೇದವ್ಯಾಸರು ಮರಳಿನ ಮುಷ್ಟಿಯನ್ನು ಕೊಟ್ಟಿದ್ದರಿಂದ ಅವಕ್ಕೆ 'ವ್ಯಾಸಮುಷ್ಟಿ'ಯೆಂದು ಹೆಸರು. ವ್ಯಾಸಮುಷ್ಟಿಗಳಲ್ಲಿ ಬೆರಳಿನ ಗುರುತು ಇರುವಂತೆ ಕಂಡುಬರುತ್ತದೆ. ಮುಷ್ಟಿಯಿಂದ ಮರಳನ್ನೇ ಚಪ್ಪಟೆಯಾಗಿ ಮಾಡಿಕೊಟ್ಟಂತೆ. ಆ ಪ್ರತಿಮೆಗಳು ಪ್ರಪಂಚದಲ್ಲಿ ಎಲ್ಲಿಯೂ ಕಾಣಸಿಗುವುದಿಲ್ಲ.

ಈ ಪ್ರತಿಮೆಗಳಲ್ಲಿ ಲಕ್ಷ್ಮೀನಾರಾಯಣರ ಸನ್ನಿಧಾನವಿರುವುದರಿಂದ ಇವುಗಳಿಗೆ 'ಲಕ್ಷ್ಮೀನಾರಾಯಣ ಪ್ರತಿಮಾ' ಎಂಬ ಹೆಸರೇ ಉಚಿತವಾಗಿದೆ. ಆದರೂ ವೇದವ್ಯಾಸರು ಕೊಟ್ಟಿದ್ದರಿಂದ ಅಥವಾ ಕೊಡಿಸಿದ್ದರಿಂದ 'ವೇದವ್ಯಾಸಪ್ರತಿಮಾ, ವ್ಯಾಸಮುಷ್ಟಿ ವ್ಯಾಸಶಾಲಿಗ್ರಾಮ' ಎಂದು ಪ್ರಸಿದ್ಧಿಯುಂಟಾಗಿದೆ. ಈ ವ್ಯಾಸಮುಷ್ಟಿಗಳು ಎಂಟು ಎಂದು ಒಂದು ಪ್ರಸಿದ್ಧಿಯಿದೆ. ಎಂಟಲ್ಲ, ಇನ್ನೂ ಹೆಚ್ಚು ಇಷ್ಟೇ ಎಂದು ನಿರ್ಧಾರವಿಲ್ಲ ಎಂದು ಇನ್ನೊಂದು ಪ್ರಸಿದ್ಧಿಯಿದೆ. ಶುದ್ಧಶಿಲಾತ್ಮಪ್ರತಿಮಾ ಎಂಬ ಪಾಠದಂತೆ ವಿಚಾರ ಮಾಡಿದಾಗ ವ್ಯಾಸಮುಷ್ಟಿಗಳು ಎಂಟೇ ಎಂದು ಹೇಳುವುದಕ್ಕೆ ಬರುವುದಿಲ್ಲ. ಕೆಲವು ಕಡೆ 'ಶುದ್ಧ ಶಿಲಾಷ್ಟ-ಪ್ರತಿಮಾ' ಎಂದು ಪಾಠವಿದೆ. ಆಗಲೂ ಎಂಟೇ ಪ್ರತಿಮೆಗಳು ಎಂದು ನಿರ್ಧಾರ ಮಾಡಬೇಕಾಗಿಲ್ಲ. ಎಂಟಕ್ಕಿಂತ ಹೆಚ್ಚಿದ್ದರೂ ಎಂಟು ಇದ್ದೇ ಇರುತ್ತದೆ. ಪ್ರಸಿದ್ಧವಾಗಿದ್ದ ಎಂಟನ್ನು ಇಟ್ಟುಕೊಂಡು 'ಅಷ್ಟಪ್ರತಿಮಾ' ಎಂದು ಹೇಳಿರಬಹುದು.

ವಾಯುಪುರಾಣದಲ್ಲಿ ಮಧ್ವಾವತಾರ ಘಟ್ಟದಲ್ಲಿ ವ್ಯಾಸಮುಷ್ಟಿಗಳ ಪ್ರಾಪ್ತಿಯ ವಿಷಯದಲ್ಲಿ ಹೀಗೆ ಹೇಳಿದೆ.

> ಇಷ್ಟ್ಯಾ ವ್ಯಾಸಾಶ್ರಮಂ ಗಚ್ಛನ್ ಮುಖ್ಯಪ್ರೇಷ್ಠೋ ಯತೋ ಮರುತ್ ।
> ಪ್ರಣಿಪತ್ಯ ಮಹಾನ್ ಮಧ್ವೋ ವ್ಯಾಸಂ ನಿಜಗುರುಂ ಪರಂ ॥
> ವಿಜ್ಞಾಪಯಾಮಾಸ ಭೂಮೌ ಸ್ವವ್ಯಾಪೃತಸುದುಷ್ಕರಂ ।
> ನಿಶಮ್ಯ ತಸ್ಯ ವಾಕ್ಯಾನಿ ವ್ಯಾಸಃ ಸರ್ವಾಂತರಾತ್ಮಕಃ ।
> ಸ್ವಾಧಿಷ್ಠಾನಾನ್ ಪಂಚ ವಾಷ್ಟ ವಾ ಗ್ರಾವಾಣಃ ಕೃಪಯಾ ದದೌ ॥

ಶ್ರೀವೇದವ್ಯಾಸರ ಇಚ್ಛೆಯಂತೆ ಅವರ ಆಶ್ರಮಕ್ಕೆ ಹೋದ ಶ್ರೀವೇದವ್ಯಾಸರ ಮುಖ್ಯದಾಸರಾದ ಶ್ರೀಭಾರತೀರಮಣ ಮುಖ್ಯಪ್ರಾಣಾವತಾರರಾದ ಶ್ರೀಮಧ್ವಾಚಾರ್ಯರು ಅಲ್ಲಿಂದ ಹೊರಡುವಾಗ ಮುಖ್ಯ ಗುರುಗಳಾದ ಸರ್ವೋತ್ತಮರಾದ ವೇದವ್ಯಾಸದೇವರನ್ನು ನಮಸ್ಕರಿಸಿ, ಭೂಮಿಯಲ್ಲಿ ದುರ್ಜನರೇ ಹೆಚ್ಚಾಗಿರುವುದರಿಂದ ವಿಷ್ಣುಸರ್ವೋತ್ತಮತ್ವ ಸಿದ್ಧಾಂತವನ್ನು ಪುನಃ ಸ್ಥಾಪಿಸುವುದು ಬಹಳ ಕಷ್ಟವೆಂದೂ, ಭೂಮಿಯಲ್ಲಿ ಯೋಗ್ಯರಾದ ಸಜ್ಜನರು ಇಲ್ಲವೆಂದೂ ತಿಳಿಸಿದಾಗ ಸರ್ವಚೇತನಾಚೇತನ ನಿಯಾಮಕರಾದ ಶ್ರೀವೇದವ್ಯಾಸರು ತನ್ನ ಕೃಪೆಯಿಂದ ತನ್ನ ಸನ್ನಿಧಾನವುಳ್ಳ ಐದು ಅಥವಾ ಎಂಟು ಶಿಲಾಪ್ರತಿಮೆಗಳನ್ನು ಕೊಟ್ಟು ನನ್ನ ಅನುಗ್ರಹದಿಂದ ಶ್ರೀವಿಷ್ಣುಸರ್ವೋತ್ತಮತ್ವದ ಸಿದ್ಧಾಂತವನ್ನು ನಿನಗೆ ಪುನಃ ಪ್ರತಿಷ್ಠಾಪಿಸಲು ಸಾಧ್ಯವಾಗುತ್ತದೆಯೆಂದೂ ಭೂಲೋಕದಲ್ಲಿ ಇರುವ ಕೆಲವೇ ಸಜ್ಜನರಿಗೆ ನೀನು ಅನುಗ್ರಹ ಮಾಡಿ ಅವರನ್ನು ಉದ್ಧರಿಸೆಂದೂ ಅಪ್ಪಣೆ ಮಾಡಿದರು ಇತ್ಯಾದಿಯಾಗಿ ವಾಯುಪುರಾಣದ ಮಧ್ವಾವತಾರ ಪ್ರಸಂಗದ ವಾಕ್ಯಗಳಿಂದ ತಿಳಿದುಬರುತ್ತದೆ. ಇಲ್ಲಿರುವ 'ಪಂಚವಾಷ್ಟೌ' ಎಂಬ ವಾಕ್ಯಕ್ಕೆ ಐದು ಮತ್ತು ಎಂಟು ಎಂಬ ಅರ್ಥವನ್ನೂ ಇಟ್ಟುಕೊಳ್ಳಲು ಬರುತ್ತದೆ. ಆಗ ಹದಿಮೂರು ಎಂದು ಅರ್ಥವಾಗುತ್ತದೆ ಶ್ರೀವೇದವ್ಯಾಸರು 13 ವ್ಯಾಸಮುಷ್ಟಿಗಳನ್ನೂ ಕೊಟ್ಟಿರಬಹುದು.

ನಾರಾಯಣ ಎಂದರೆ ವೇದವ್ಯಾಸರೇ ಎಂದೂ ಅರ್ಥವನ್ನು ಮಾಡಬೇಕು. ಆ ವೇದವ್ಯಾಸರೇ ಲಕ್ಷ್ಮೀಸಮೇತರಾಗಿ ತಾನು ಕೊಟ್ಟಿರುವ ವ್ಯಾಸಶಾಲಿಗ್ರಾಮದಲ್ಲಿ ಸನ್ನಿಹಿತರಾಗಿರುತ್ತಾರೆ ಎಂದು ಅರ್ಥ. ಆ ವೇದವ್ಯಾಸರೆಂದರೆ ಒಬ್ಬ ಋಷಿಗಳು ಭಗವಂತನ ಅವತಾರವಲ್ಲ ಎಂಬ ಭ್ರಾಂತಿಯನ್ನು ಪರಿಹರಿಸಲು 'ಪದ್ಮಾಸಹಿತಃ' ಎಂಬ ವಿಶೇಷಣವನ್ನು ಕೊಟ್ಟಿರುತ್ತಾರೆ. ಲಕ್ಷ್ಮೀವೇದವ್ಯಾಸರ ನಿತ್ಯಸನ್ನಿಧಾನವು ವ್ಯಾಸಮುಷ್ಟಿಗಳಲ್ಲಿದೆಯೆಂದು ಅಭಿಪ್ರಾಯ. ನಾರಾಯಣ ಮುನಿಗಳು ವ್ಯಾಸ-ಮುಷ್ಟಿಗಳನ್ನು ಕೊಟ್ಟರೆಂದು ಇಟ್ಟುಕೊಂಡರೂ ವ್ಯಾಸರೇ ಮರಳು ಮುಷ್ಟಿಯನ್ನು ಹಿಡಿದು ಗಟ್ಟಿ ಮಾಡಿ ನಾರಾಯಣ ಮುನಿಗಳ ಕೈಯಿಂದ ಕೊಡಿಸಿದ್ದರಿಂದ ವ್ಯಾಸರೇ ಕೊಟ್ಟಂತೆ ಆಗುತ್ತದೆ. ಆದುದರಿಂದ ಇಲ್ಲಿ ಯಾವ ವಿವಾದಕ್ಕೂ ಅವಕಾಶವಿಲ್ಲ.

ವೃತ್ತ— ಇಲ್ಲಿ ಮಾಣವಕವೃತ್ತ 'ಮಾಣವಕಂ ಭಾತ್ತಲಗಾಃ' ।

★ ★ ★

ಅವತಾರಿಕಾ— ಹೀಗೆ ವ್ಯಾಸಮುಷ್ಟಿಗಳನ್ನು ಕೊಟ್ಟ ನಂತರ ಶ್ರೀವೇದವ್ಯಾಸರು ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯ ಗ್ರಂಥವನ್ನು ರಚಿಸಲು ಅಪ್ಪಣೆ ಮಾಡಿದರೆಂದು ವರ್ಣಿಸುತ್ತಾರೆ.

**ಪಾರಾಶರ್ಯಃ ಪರತತ್ತ್ವಪ್ರಸಿದ್ಧ್ಯೈ**
**ತಾತ್ಪರ್ಯಾರ್ಥಂ ಪರಮಂ ಭಾರತಸ್ಯ ।**
**ವ್ಯಕ್ತಂ ವಕ್ತುಂ ನಿಯುನಕ್ತಿ ಸ್ಮ ಸಾಕ್ಷಾ-**
**ದೇನಂ ಧನ್ಯಂ ಭುವನೇ ಮನ್ಯಮಾನಃ ॥ 25 ॥**

ಪದಚ್ಛೇದ— ಪಾರಾಶರ್ಯಃ, ಪರತತ್ತ್ವಪ್ರಸಿದ್ಧ್ಯೈ, ತಾತ್ಪರ್ಯಾರ್ಥಂ, ಪರಮಂ, ಭಾರತಸ್ಯ, ವ್ಯಕ್ತಂ, ವಕ್ತುಂ, ನಿಯುನಕ್ತಿ, ಸ್ಮ, ಸಾಕ್ಷಾತ್, ಏನಂ, ಧನ್ಯಂ, ಭುವನೇ, ಮನ್ಯಮಾನಃ ।

ಅನ್ವಯ— ಪಾರಾಶರ್ಯಃ ಭುವನೇ ಏನಂ ಸಾಕ್ಷಾತ್ ಧನ್ಯಂ ಮನ್ಯಮಾನಃ (ಸನ್) ಪರತತ್ತ್ವಪ್ರಸಿದ್ಧ್ಯೈ ಭಾರತಸ್ಯ ಪರಮಂ ತಾತ್ಪರ್ಯಂ ವ್ಯಕ್ತಂ ವಕ್ತುಂ (ಏನಂ) ನಿಯುನಕ್ತಿ ಸ್ಮ ।

ಅನ್ವಯಾರ್ಥ—

ಪಾರಾಶರ್ಯಃ = ಪರಾಶರ ಮುನಿಗಳಿಂದ ಪ್ರಾದುರ್ಭವಿಸಿದ ಶ್ರೀವೇದವ್ಯಾಸರು,
ಭುವನೇ = ಲೋಕದಲ್ಲಿ
ಏನಂ = ಈ ಮಧ್ವಾಚಾರ್ಯರನ್ನು,
ಸಾಕ್ಷಾತ್ = ಮುಖ್ಯವಾಗಿ,
ಧನ್ಯಂ = ನಿರಪೇಕ್ಷಗುಣ ಪೂರ್ಣರನ್ನಾಗಿ,
ಮನ್ಯಮಾನಃ (ಸನ್) = ತಿಳಿಯುತ್ತಾ,
ಪರತತ್ತ್ವಪ್ರಸಿದ್ಧ್ಯೈ = ಭಗವಂತನ ಸ್ವರೂಪದ ಸರಿಯಾದ ತಿಳಿವಳಿಕೆಗೋಸ್ಕರ,
ಭಾರತಸ್ಯ = ಶ್ರೀಮನ್ಮಾಹಾಭಾರತದ
ಪರಮಂ ತಾತ್ಪರ್ಯಂ = ಮುಖ್ಯವಾದ ತಮಗೆ ಅಭಿಮತವಾದ ತಾತ್ಪರ್ಯಸಿದ್ಧವಾದ ರಹಸ್ಯಾರ್ಥವನ್ನು
ವ್ಯಕ್ತಂ = ಸ್ಪಷ್ಟವಾಗಿ
ವಕ್ತುಂ = ಹೇಳುವುದಕ್ಕೆ
ಏನಂ = ಈ ಮಧ್ವಾಚಾರ್ಯರನ್ನು
ನಿಯುನಕ್ತಿ ಸ್ಮ = ನಿಯಮಿಸಿದರು.

ತಾತ್ಪರ್ಯ— ಪರಾಶರರಿಂದ ಪ್ರಾದುರ್ಭೂತರಾದ ಶ್ರೀವೇದವ್ಯಾಸರು ಶ್ರೀಪೂರ್ಣಪ್ರಜ್ಞರನ್ನು ಪ್ರಪಂಚದಲ್ಲೆಲ್ಲ ಇತರ ಎಲ್ಲರಿಗಿಂತಲೂ ಸಮರ್ಥರು, ಸದ್ಗುಣಗಳಿಂದ ಕೂಡಿದ ಉತ್ತಮಾಧಿಕಾರಿಗಳು ಎಂದು ತಿಳಿದಿದ್ದರು. ಆದ್ದರಿಂದ ಭಗವಂತನ ಸ್ವರೂಪವನ್ನು ಜನರಿಗೆ ಚೆನ್ನಾಗಿ ತಿಳಿಸಲು ತಾವು ರಚಿಸಿದ ಶ್ರೀಮನ್ಮಾಹಾಭಾರತಕ್ಕೆ ತಾತ್ಪರ್ಯವನ್ನು ನಿರ್ಣಯಿಸುವ ಉತ್ತಮ ಗ್ರಂಥವನ್ನು ರಚಿಸಬೇಕೆಂದು ಶ್ರೀಮಧ್ವಾಚಾರ್ಯರನ್ನೇ ನೇಮಿಸಿದರು.

ವಿಗ್ರಹ—

ಪಾರಾಶರ್ಯಃ— ಪರಾಶರಸ್ಯ ಅಪತ್ಯಂ ಪುಮಾನ್ ಪಾರಾಶರ್ಯಃ ।
ಪರತತ್ತ್ವಂ— ಪರಸ್ಯ ತತ್ತ್ವಂ ಪರತತ್ತ್ವಂ । (ಪರಂಚ ತತ್ ತತ್ತ್ವಂಚ ಪರತತ್ತ್ವಂ ಇತಿ ವಾ)

**ಪರತತ್ತ್ವಪ್ರಸಿದ್ಧ್ಯೈ**— ಪರತತ್ತ್ವಸ್ಯ ಪ್ರಸಿದ್ಧಿಃ ಪರತತ್ತ್ವಪ್ರಸಿದ್ಧಿಃ ತಸ್ಯೈ ಪರತತ್ತ್ವಪ್ರಸಿದ್ಧ್ಯೈ ।

**ತಾತ್ಪರ್ಯಂ**— ತಾತ್ಪರ್ಯಾರ್ಥಂ ಚಾಸೌ ಅರ್ಥಶ್ಚ ತಾತ್ಪರ್ಯಃ ತಂ ।

**ಧನ್ಯಂ**— ಧನಂ ಲಬ್ಧಾ ಧನ್ಯಃ ತಂ ।

'ಧನಗಣಂ ಲಬ್ಧಾ' ಎಂಬ ಸೂತ್ರದಿಂದ ಯತ್ ಪ್ರತ್ಯಯ.

**ಕ್ರಿಯಾಪದ**— ನಿಯುನಕ್ತಿ ನಿ ಇತ್ಯುಪಸರ್ಗ ಪೂರ್ವಕಾತ್ 'ಯುಜಿರ್ ಯೋಗೇ' ಇತಿ ಯೋಗಾರ್ಥ-ಕಾತ್ ಯುಜ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ನಿಯುನಕ್ತಿ ಇತಿ ರೂಪಂ । ಲಟ್ ಸ್ಮೇ (3-2-118) ಎಂಬ ಸೂತ್ರದಿಂದ 'ಸ್ಮ'ಯೋಗವಿದ್ದಾಗ ಭೂತಕಾಲದ ಅರ್ಥ ಬಂದಿದೆ.

ನಿ=ಯುನಕ್ತಿ ಯುಂಕ್ತಃ ಯುಂಜಂತಿ, ಯುನಕ್ಷಿ ಯುಂಕ್ತಃ ಯುಂಕ್ಥ ಯುನಜ್ಮಿ ಯುಂಜ್ವಃ ಯುಂಜ್ಮಃ ॥

**ಕೋಶ**— 'ನಿರಪೇಕ್ಷಗುಣೈಃ ಪೂರ್ಣೋ ಧನ್ಯ ಇತ್ಯಭಿಧೀಯತೇ' ಇತ್ಯಭಿಧಾನಂ.

**ವಿಶೇಷ ವಿಚಾರಗಳು**— ಶ್ರೀವೇದವ್ಯಾಸರು ತಮ್ಮ ಸನ್ನಿಧಾನೋಪೇತವಾದ ವ್ಯಾಸಮುಷ್ಟಿಗಳನ್ನು ಕೊಟ್ಟ ಮೇಲೆ ಪರಮಾತ್ಮನ ನಿರ್ದಿಷ್ಟವಾದ ಸ್ವರೂಪವನ್ನು ಮುಕ್ತಿಯೋಗ್ಯರಿಗೆ ಚೆನ್ನಾಗಿ ತಿಳಿಸುವುದಕ್ಕಾಗಿ ಶಾಸ್ತ್ರಗಳಲ್ಲಿ ಸಾರಭೂತವಾದ ತಮ್ಮಿಂದ ರಚಿತವಾದ ಶ್ರೀಮನ್ಮಹಾಭಾರತದತಾತ್ಪರ್ಯ ನಿರ್ಣಾಯಕವಾದ ಗ್ರಂಥವನ್ನು ಬರೆಯಲು ಆಚಾರ್ಯರಿಗೇ ಅಪ್ಪಣೆಕೊಟ್ಟರು.

ಶ್ರೀಮಧ್ವಾಚಾರ್ಯರು ರಚಿಸಿರುವ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಅವರೇ ಹೇಳಿರುವ ಈ ಕೆಳಗಿನ ಶ್ಲೋಕಗಳಿಂದ ಶ್ರೀವೇದವ್ಯಾಸರ ಅಪ್ಪಣೆಯಿಂದಲೇ ಶ್ರೀಮಧ್ವಾಚಾರ್ಯರು ಆ ಗ್ರಂಥವನ್ನು ಬರೆದರೆಂದು ತಿಳಿದುಬರುತ್ತದೆ.

ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ ।
ಹರಿಣಾ ನಿರ್ಣಯಾನ್ ವಚ್ಮಿ ವಿಜಾನಂಸ್ತತ್ ಪ್ರಸಾದತಃ ॥

ಶಾಸ್ತ್ರಾಂತರಾಣಿ ಸಂಜಾನನ್ ವೇದಾಂಶ್ಚಾಸ್ಯ ಪ್ರಸಾದತಃ ।
ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ ॥

ಯಥಾ ಸ ಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ ।
ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇ ತದೀಕ್ಷಯಾ ॥ ಮ.ಭಾ.ತಾ.ನಿ. ಅಧ್ಯಾಯ

ಆನಂದತೀರ್ಥಾಖ್ಯಮುನಿಸ್ತು ಪೂರ್ಣಪ್ರಜ್ಞಾಭಿಧೋ ಗ್ರಂಥಮಿಮಂ ಚಕಾರ ।
ನಾರಾಯಣೇನಾಭಿಹಿತೋ ಬದರ್ಯಾಂ ತಸ್ಯೈವ ಶಿಷ್ಯೋ ಜಗದೇಕಭರ್ತುಃ ॥

ಮ.ಭಾ.ತಾ.ನಿ. ಅಧ್ಯಾಯ 32

**ಪ್ರಯೋಗ**— ಪಾರಾಶರ್ಯಃ ಏನಂ ನಿಯುನಕ್ತಿಸ್ಮ (ಕರ್ತರಿ) ಪಾರಾಶರ್ಯೇಣ ಏಷಃ ನಿಯುಜ್ಯತೇ ಸ್ಮ (ಕರ್ಮಣಿ)

**ವೃತ್ತ**— 'ವಾತೋರ್ಮೀಯಂ ಗದಿತಾ ಮ್ಭೌ ತಗೌ ಗಃ' ಎಂಬ ಲಕ್ಷಣದಂತೆ ವಾತೋರ್ಮಿವೃತ್ತ.



ಅವತಾರಿಕಾ— ಶ್ರೀವೇದವ್ಯಾಸರ ಅಪ್ಪಣೆ ಪಡೆದು ಪುನಃ ಗಂಗಾತೀರಕ್ಕೆ ಬಂದರೆಂಬುದನ್ನು ವಿವರಿಸುತ್ತಾರೆ.

**ತೀರ್ಥೇಷು ತೀರ್ಥೇಷು ಚ ಸೌಖ್ಯತೀರ್ಥಃ**
**ಕ್ಷೇತ್ರೇಷು ಚ ಕ್ಷೇತ್ರವಿದಾಂ ವರಿಷ್ಠಃ ।**
**ಗೋವಿಂದಮಾವಂದ್ಯ ಸಹಾನುಗೋಽಗಾದ್**
**ಗಂಗಾಂ ಪುನಸ್ತುಂಗತರಂಗಮಾಲಾಮ್ ॥ 26 ॥**

ಪದಚ್ಛೇದ— ತೀರ್ಥೇಷು, ತೀರ್ಥೇಷು, ಚ, ಸೌಖ್ಯತೀರ್ಥಃ, ಕ್ಷೇತ್ರೇಷು, ಕ್ಷೇತ್ರೇಷು ಚ, ಕ್ಷೇತ್ರವಿದಾಂ, ವರಿಷ್ಠಃ, ಗೋವಿಂದಂ, ಆವಂದ್ಯ, ಸಹಾನುಗಃ, ಅಗಾತ್, ಗಂಗಾಂ, ಪುನಃ, ತುಂಗತರಂಗಮಾಲಾಂ ।

ಅನ್ವಯ— ಕ್ಷೇತ್ರವಿದಾಂ ವರಿಷ್ಠಃ ಸೌಖ್ಯತೀರ್ಥಃ ತೀರ್ಥೇಷು ತೀರ್ಥೇಷು, ಚ, ಕ್ಷೇತ್ರೇಷು ಕ್ಷೇತ್ರೇಷು ಚ, ಗೋವಿಂದಂ, ಆವಂದ್ಯ, ಸಹಾನುಗಃ ಸನ್, ಪುನಃ, ತುಂಗತರಂಗಮಾಲಾಂ, ಗಂಗಾಂ, ಅಗಾತ್ ।

ಅನ್ವಯಾರ್ಥ—

ಕ್ಷೇತ್ರವಿದಾಂ = ಪುಣ್ಯಕ್ಷೇತ್ರಗಳನ್ನು ತಿಳಿದವರಲ್ಲಿ (ಜೀವರ ಮಧ್ಯದಲ್ಲಿ)
ವರಿಷ್ಠಃ = ಶ್ರೇಷ್ಠರಾದ
ಸೌಖ್ಯತೀರ್ಥಃ = ಆನಂದಕರವಾದ ಶಾಸ್ತ್ರಗಳನ್ನು ಮಾಡಿರುವ ಶ್ರೀಮಧ್ವಾಚಾರ್ಯರು
ತೀರ್ಥೇಷು = ಪವಿತ್ರವಾದ, ಮುನಿಗಳು ಸೇವಿಸಿದ ಜಲಾಶಯ ನದಿ ಮುಂತಾದವುಗಳಲ್ಲಿಯೂ,
ಚ = ಮತ್ತು
ಕ್ಷೇತ್ರೇಷು ಕ್ಷೇತ್ರೇಷು = ಪುಣ್ಯಕ್ಷೇತ್ರಗಳಲ್ಲಿಯೂ
ಗೋವಿಂದಂ = ವೇದ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು,
ಆವಂದ್ಯ = ಚೆನ್ನಾಗಿ ನಮಸ್ಕಾರ ಮಾಡಿ, (ಸ್ತುತಿಸಿ)
ಸಹಾನುಗಃ ಸನ್ = ಶಿಷ್ಯರಿಂದ ಸಹಿತರಾಗಿ,
ಪುನಃ = ಮರಳಿ,
ತುಂಗತರಂಗಮಾಲಾಂ = ಎತ್ತರವಾದ ಅಲೆಗಳ ಸಾಲುಳ್ಳ,
ಗಂಗಾಂ = ಗಂಗಾನದಿಯನ್ನು ಕುರಿತು,
ಅಗಾತ್ = ಹೋದರು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸರ ಅಪ್ಪಣೆಯನ್ನು ಸ್ವೀಕರಿಸಿ ಬದರಿಕಾಶ್ರಮದಿಂದ ಮರಳಿದರು. ಪುಣ್ಯಕ್ಷೇತ್ರಗಳ ರಹಸ್ಯವನ್ನು ಬಲ್ಲ ಜೀವಾತ್ಮರಲ್ಲಿ ಶ್ರೇಷ್ಠರಾದ ಆರು ಪವಿತ್ರ ತೀರ್ಥಗಳಲ್ಲಿ ಸ್ನಾನ ಮಾಡಿ ಕ್ಷೇತ್ರಗಳಲ್ಲಿ ನೆಲಸಿರುವ ಶ್ರೀಮನ್ನಾರಾಯಣನನ್ನು ನಮಿಸಿ ಸ್ತುತಿಸಿದರು. ಹೀಗೆ ಶಿಷ್ಯರೊಡನೆ ಬರುತ್ತಾ ದೊಡ್ಡ ದೊಡ್ಡ ಅಲೆಗಳುಳ್ಳ ಗಂಗಾನದಿಯ ಹತ್ತಿರ ಬಂದರು.

ವಿಗ್ರಹ—

ಸೌಖ್ಯತೀರ್ಥಂ— ಸುಖಮೇವ ಸೌಖ್ಯಂ, (ಸೌಖ್ಯಕರಂ) ಸೌಖ್ಯಂ ತೀರ್ಥಂ ಯಸ್ಮಾತ್ ಸಃ ಸೌಖ್ಯತೀರ್ಥಃ ।
ಕ್ಷೇತ್ರವಿದಾಂ— ಕ್ಷೇತ್ರಾಣಿ ವಿದಂತೀತಿ ಕ್ಷೇತ್ರವಿದಃ, ತೇಷಾಂ ಕ್ಷೇತ್ರವಿದಾಂ ।

**ಸಹಾನುಗಃ**— ಅನು ಗಚ್ಛಂತೀತಿ ಅನುಗಾಃ ,ಅನುಗೈಃ ಸಹ ವರ್ತತೇ ಇತಿ ಸಹಾನುಗಃ ।

**ತುಂಗಾತರಂಗಮಾಲಾಂ**— ತರಂಗಾಣಾಂ ಮಾಲಾಃ ತರಂಗಮಾಲಾಃ, ತುಂಗಾಃ ತರಂಗಮಾಲಾಃ ಯಸ್ಯಾಂ ಸಾ ತುಂಗತರಂಗಮಾಲಾ ತಾಂ ತುಂಗಾತರಂಗಮಾಲಾಂ ।

**ಕ್ರಿಯಾಪದ**— ಅಗಾತ್- ಇಣ್‌ಗತೌ ಇತಿ ಗತ್ಯರ್ಥಕಾತ್ ಇಣ್‌ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ಅಗಾತ್ ಇತಿರೂಪಂ ।

ಅಗಾತ್ ಅಗಾತಾಂ ಅಗುಃ, ಅಗಾಃ ಅಗಾತಂ ಅಗಾತ, ಅಗಾಂ ಅಗಾವ ಅಗಾಮ ॥

**ಕೋಶ**— 'ನಿಪಾನಾಗಮಯೋಸ್ತೀರ್ಥಮೃಷಿ ಜುಷ್ಟಜಲೇ ಗುರೌ' ಇತ್ಯಮರಃ । ತೀರ್ಥಂ ಮಂತ್ರಾದ್ಯುಪಾಧ್ಯಾಯ ಶಾಸ್ತ್ರೇಷ್ವಂಭಸಿ ಪಾವನೇ । ಪಾತ್ರಾಪಾಯಾವತಾರೇಷು' ಇತಿ ವೈಜಯಂತೀ, ''ಕ್ಷೇತ್ರಂ ಶರೀರೇ ಕೇದಾರೇ ಸಿದ್ಧಸ್ಥಾನ-ಕಲತ್ರಯೋಃ'' ಇತಿ ವಿಶ್ವಃ, ಭಂಗಸ್ತಿರಂಗ ಊರ್ಮಿರ್ವಾ ಇತ್ಯಮರಃ ।

**ಪ್ರಯೋಗ**— ಸೌಖ್ಯತೀರ್ಥಃ ಗಂಗಾಂ ಅಗಾತ್ (ಕರ್ತರಿ), ಸೌಖ್ಯತೀರ್ಥೇನ ಗಂಗಾ ಅಗಾಯಿ (ಕರ್ಮಣಿ)

**ವೃತ್ತ**— 'ಸ್ಯಾದಿಂದ್ರವಜ್ರಾ ಯದಿ ತೌ ಜಗೌ ಗಃ' ಎಂಬ ಲಕ್ಷಣದಂತೆ ಇಂದ್ರವಜ್ರಾವೃತ್ತ.

★ ★ ★

**ಅವತಾರಿಕಾ**— ಗಂಗಾನದಿಯನ್ನು ದಾಟಲಿಕ್ಕೆ ದೋಣಿ ಮೊದಲಾದವು ಇಲ್ಲದಿದ್ದಾಗ ಆಚಾರ್ಯರು ತಮ್ಮ ಯೋಗಶಕ್ತಿಯಿಂದ ನದಿಯನ್ನು ದಾಟಿದರೆನ್ನುತ್ತಾರೆ.

**ಪ್ಲವೈರಪೇತಾಮವಲೋಕ್ಯ ಸಿಂಧುಂ**
**ಸರೋಜಬಂಧುಂ ಚ ತದಾಽಽಪ್ತಸಿಂಧುಮ್ ।**
**ತಟೇ ನಿಷಣ್ಣಾನಧಿಕಂ ವಿಷಣ್ಣಾನ್**
**ನಿರೀಕ್ಷ್ಯ ಶಿಷ್ಯಾನತರತ್ ಸ ಏತಾಮ್ ॥ 27 ॥**

**ಪದಚ್ಛೇದ**— ಪ್ಲವೈಃ, ಅಪೇತಾಂ, ಅವಲೋಕ್ಯ, ಸಿಂಧುಂ, ಸರೋಜಬಂಧುಂ, ಚ, ತದಾ, ಆಪ್ತಸಿಂಧುಂ, ತಟೇ, ನಿಷಣ್ಣಾನ್, ಅಧಿಕಂ, ವಿಷಣ್ಣಾನ್, ನಿರೀಕ್ಷ್ಯ, ಶಿಷ್ಯಾನ್, ಅತರತ್, ಸಃ, ಏತಾಂ ।

**ಅನ್ವಯ**— ಸಃ, ತದಾ, ಪ್ಲವೈಃ ಅಪೇತಾಂ, ಸಿಂಧುಂ, ಚ ಆಪ್ತಸಿಂಧುಂ, ಸರೋಜಬಂಧುಂ, ಅವಲೋಕ್ಯ, ತಟೇ, ನಿಷಣ್ಣಾನ್, ಅಧಿಕಂ, ವಿಷಣ್ಣಾನ್, ಶಿಷ್ಯಾನ್, ನಿರೀಕ್ಷ್ಯ, ಏತಾಂ, ಅತರತ್ ।

**ಅನ್ವಯಾರ್ಥ**—

**ಸಃ** = ಆ ಮಧ್ವಾಚಾರ್ಯರು,

**ತದಾ** = ಆಗ,

**ಪ್ಲವೈಃ** = ನಾವೆಗಳಿಂದ,

**ಅಪೇತಾಂ** = ರಹಿತವಾದ

**ಸಿಂಧುಂ** = ಗಂಗಾನದಿಯನ್ನು,

**ಚ** = ಮತ್ತು,

**ಆಪ್ತಸಿಂಧುಂ** = ಸಮುದ್ರವನ್ನು ಸೇರಿದ,
**ಸರೋಜಬಂಧುಂ** = ಕಮಲಗಳ ಮಿತ್ರನಾದ ಸೂರ್ಯನನ್ನು
**ಅವಲೋಕ್ಯ** = ನೋಡಿ,
**ತಟೇ** = ದಡದಲ್ಲಿ
**ನಿಷಣ್ಣಾನ್** = ಕೂತಿರುವ,
**ಅಧಿಕಂ** = ಹೆಚ್ಚಾಗಿ,
**ವಿಷಣ್ಣಾನ್** = ವ್ಯಥೆಗೊಂಡಿರುವ,
**ಶಿಷ್ಯಾನ್** = ಶಿಷ್ಯರನ್ನು,
**ನಿರೀಕ್ಷ್ಯ** = ನೋಡಿ,
**ಏತಾಂ** = ಈ ಗಂಗೆಯನ್ನು,
**ಅತರತ್** = ದಾಟಿದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಶಿಷ್ಯಸಹಿತರಾಗಿ ಗಂಗೆಯ ದಡಕ್ಕೆ ಬರುವಾಗ ಗಂಗೆಯನ್ನು ದಾಟಲು ದೋಣಿಯಿರಲಿಲ್ಲ. ಸಾಯಂಕಾಲವಾಗುತ್ತಾ ಇತ್ತು. ಸೂರ್ಯನು ಮುಳುಗುತ್ತಿದ್ದನು. ಶಿಷ್ಯರು ಮುಂದೇನು ಮಾಡ-ಬೇಕೆಂದು ತಿಳಿಯದೆ ವಿಷಣ್ಣರಾಗಿ ದಡದಲ್ಲಿ ಕುಳಿತರು. ಶ್ರೀಮಧ್ವಾಚಾರ್ಯರು ತಮ್ಮ ಶಿಷ್ಯರನ್ನು ನೋಡಿದರು. ಗಂಗೆಯನ್ನು ನೋಡಿದರು. ತಾವು ಒಬ್ಬರೇ ಜಲಸ್ತಂಭನ ವಿದ್ಯೆಯಿಂದ ಬಟ್ಟೆ ಒದ್ದೆಯಾಗದಂತೆ ಗಂಗೆಯನ್ನು ದಾಟಿದರು.

**ವಿಗ್ರಹ—**

**ಸರೋಜಬಂಧುಂ—** ಸರೋಜಾನಾಂ ಬಂಧುಃ ಸರೋಜಬಂಧುಃ, ತಂ ಸರೋಜಬಂಧುಂ ।

**ಆಪ್ತಸಿಂಧುಂ—** ಆಪ್ತಃ ಸಿಂಧುಃ ಯೇನ ಸಃ ಆಪ್ತಸಿಂಧುಃ ತಂ ಆಪ್ತಸಿಂಧುಂ ।

**ಕ್ರಿಯಾಪದ— ಅತರತ್**- ತೄಪ್ಲವನ ತರಣಯೋಃ ಇತಿ ಪ್ಲವನತರಣಾರ್ಥಕಾತ್ ತೄಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೈಕವಚನೇ ಅತರತ್ ಇತಿ ರೂಪಂ ।

ಅತರತ್ ಅತರತಾಂ ಅತರನ್, ಅತರಃ ಅತರತಂ ಅತರತ, ಅತರಂ ಅತರಾವ ಅತರಾಮ ॥

**ಕೋಶ—** 'ಸಿಂಧುಃ ಸಮುದ್ರೇ ನದ್ಯಾಂ' ಚ ಇತಿ ವಿಶ್ವಃ । ದೇಶೇ ನದವಿಶೇಷೇಽಬ್ಧೌ ಸಿಂಧುರ್ನಾ ಸರಿತ್ಸ್ತ್ರಿಯಾಂ ಇತ್ಯಮರಃ ॥

**ವಿಶೇಷ ವಿಚಾರಗಳು—** ಶ್ರೀಮಧ್ವಾಚಾರ್ಯರು ಆಗ ಜಲಸ್ತಂಭನ ವಿದ್ಯೆಯಿಂದ ಬಟ್ಟೆ ಒದ್ದೆಯಾಗದಂತೆ ಗಂಗೆಯನ್ನು ದಾಟಿದರೆಂದು ಶ್ರೀಅಣುಮಧ್ವವಿಜಯದಿಂದ ತಿಳಿದುಬರುತ್ತದೆ.

'ದೈತ್ಯವ್ಯಾಘ್ರೋಪಘಾತೀ ಸುತರ್ತಾ ಲಘು ಸುರ ಪರಿತೋ ವಾರಿ ಸಸಂಸ್ತಂಭಯೋಗಾತ್' ॥

- ಶ್ಲೋ. 30, ಅಣುಮಧ್ವವಿಜಯ ॥

**ಪ್ರಯೋಗ—** ಸಃ ಏತಾಂ ಅತರತ್ (ಕರ್ತರಿ)
ತೇನ ಏಷಾ ಅತೀರ್ಯತ (ಕರ್ಮಣಿ)

**ವೃತ್ತ—** 'ಉಪೇಂದ್ರವಜ್ರಾ ಜತಜಾಸ್ತತೋ ಗೌ' ಎಂಬ ಲಕ್ಷಣದಂತೆ ಉಪೇಂದ್ರವಜ್ರಾವೃತ್ತ.

★ ★ ★

**ಅವತಾರಿಕಾ**— ಹನುಮಂತನೇ ಮೊದಲಾದ ಅವತಾರದಲ್ಲಿ ಸಮುದ್ರವನ್ನು ದಾಟಿದ ಆಚಾರ್ಯರ ಅದ್ಭುತ ಶಕ್ತಿಯನ್ನರಿಯದ ಶಿಷ್ಯರು ಹೆದರಿದುದನ್ನು ವಿವರಿಸುತ್ತಾರೆ.

**ನ ವಾನರೇಂದ್ರಸ್ಯ ವಿಲಂಘಿತಾಬ್ಧೇ-**
**ರ್ನ ವಾ ನರೇಂದ್ರಸ್ಯ ವಿಹರ್ತುರಸ್ಯಾಮ್ ।**
**ಇಮೇಽಸ್ಮರಂಸ್ತದ್ವಪುಷೋಽನ್ಯಥಾಸ್ಯ**
**ಶಕ್ತಸ್ಯ ಶಂಕ್ಯೇತ ವಿಪತ್ ಕಥಂ ತೈಃ ॥ 28 ॥**

**ಪದಚ್ಛೇದ**— ನ, ವಾನರೇಂದ್ರಸ್ಯ, ವಿಲಂಘಿತಾಬ್ಧೇಃ, ನ, ವಾ, ನರೇಂದ್ರಸ್ಯ, ವಿಹರ್ತುಃ, ಅಸ್ಯಾಂ, ಇಮೇ, ಅಸ್ಮರನ್, ತದ್ವಪುಷಃ, ಅನ್ಯಥಾ, ಅಸ್ಯ, ಶಕ್ತಸ್ಯ, ಶಂಕ್ಯೇತ, ವಿಪತ್, ಕಥಂ, ತೈಃ ।

**ಅನ್ವಯ**— ಇಮೇ, ವಿಲಂಘಿತಾಬ್ಧೇಃ, ವಾನರೇಂದ್ರಸ್ಯ, ನಾಸ್ಮರನ್, ಅಸ್ಯಾಂ, ವಿಹರ್ತುಃ ನರೇಂದ್ರಸ್ಯ, ವಾ ನಾಸ್ಮರನ್, ಅನ್ಯಥಾ, ತದ್ವಪುಷಃ, ಶಕ್ತಸ್ಯ, ಅಸ್ಯ, ವಿಪತ್, ತೈಃ, ಕಥಂ, ಶಂಕ್ಯೇತ ।

**ಅನ್ವಯಾರ್ಥ**—

**ಇಮೇ** = ಈ ಮಧ್ವಾಚಾರ್ಯರ ಶಿಷ್ಯರು,
**ವಿಲಂಘಿತಾಬ್ಧೇಃ** = ದಾಟಲ್ಪಟ್ಟ ಸಮುದ್ರವುಳ್ಳ
**ವಾನರೇಂದ್ರಸ್ಯ** = ಕಪಿಶ್ರೇಷ್ಠನಾದ ಹನುಮಂತನನ್ನು,
**ನ ಅಸ್ಮರನ್** = ಸ್ಮರಿಸಲಿಲ್ಲ,
**ಅಸ್ಯಾಂ** = ಈ ಗಂಗಾನದಿಯಲ್ಲಿ
**ವಿಹರ್ತುಃ** = ವಿಹಾರ ಮಾಡುತ್ತಿದ್ದ ,
**ನರೇಂದ್ರಸ್ಯ ವಾ** = ರಾಜನಾದ ಭೀಮಸೇನನನ್ನಾಗಲೀ,
**ನ ಅಸ್ಮರನ್** = ಸ್ಮರಿಸಲಿಲ್ಲ,
**ಅನ್ಯಥಾ** = ಹಾಗಿಲ್ಲದಿದ್ದರೆ ಅವರಿಬ್ಬರನ್ನು (ಸ್ಮರಿಸಿದ್ದರೆ)
**ತದ್ವಪುಷಃ** = ಹಿಂದೆ ಹನುಮಂತ ಮತ್ತು ಭೀಮಸೇನರ ಸ್ವರೂಪವನ್ನು ಹೊಂದಿದ್ದ
**ಶಕ್ತಸ್ಯ** = (ಗಂಗೆಯನ್ನೂ ಸಮುದ್ರವನ್ನೂ) ದಾಟಲು ಸಮರ್ಥರಾದ
**ಅಸ್ಯ** = ಈ ಶ್ರೀಮಧ್ವಾಚಾರ್ಯರಿಗೆ,
**ವಿಪತ್** = ಆಪತ್ತು,
**ತೈಃ** = ಆ ಮಧ್ವಾಚಾರ್ಯರ ಶಿಷ್ಯರಿಂದ,
**ಕಥಂ** = ಹೇಗೆ
**ಶಂಕ್ಯೇತ** = ಸಂದೇಹಿಸಲ್ಪಟ್ಟೀತು?

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ಕತ್ತಲೆಯಾಗುತ್ತಿರುವ ಆ ಸಮಯದಲ್ಲಿ ಗಂಗಾನದಿಯನ್ನು ದಾಟಲು ಮುಂದಾಗಿ ಕತ್ತಲೆಯಲ್ಲಿ ಶಿಷ್ಯರ ಕಣ್ಮರೆಯಾದರು. ಆಗ ಆ ಶಿಷ್ಯರು ನಮ್ಮ ಆಚಾರ್ಯರಿಗೆ ಏನು ವಿಪತ್ತು ಉಂಟಾಯಿತೋ ಎಂದು ಸಂದೇಹಿಸಿದರು. ಈ ಮಧ್ವಾಚಾರ್ಯರೇ ಹಿಂದೆ ಕೃತಯುಗದಲ್ಲಿ ಹನುಮಂತನಾಗಿ ಶ್ರೀರಾಮಚಂದ್ರನ ಅಪ್ಪಣೆ-

ಯಿಂದ ನೂರು ಯೋಜನ ವಿಸ್ತೀರ್ಣವಾದ ಸಮುದ್ರವನ್ನು ಗೋವಿನ ಹೆಜ್ಜೆಯಂತೆ ಸುಲಭವಾಗಿ ದಾಟಿದ್ದರು. ಈ ಮಧ್ವಾಚಾರ್ಯರೇ ದ್ವಾಪರಯುಗದಲ್ಲಿ ಭೀಮಸೇನನಾಗಿ ಗಂಗಾನದಿಯಲ್ಲಿ ಆಟವಾಡಿದ್ದರು. ಈ ವಿಷಯವನ್ನು ಅವರ ಶಿಷ್ಯರು ಕೇಳಿ ನೋಡಿ ತಿಳಿದಿದ್ದರೂ, ಈಗ ಅವರಿಗೆ ಈ ವಿಷಯಗಳು ಸ್ಮರಣೆಗೆ ಬರಲಿಲ್ಲ. ಹಾಗೆ ಸ್ಮರಣೆಗೆ ಬಂದಿದ್ದರೆ ಅವರು ಖಂಡಿತವಾಗಲೂ ಆಚಾರ್ಯರಿಗೆ ವಿಪತ್ತು ಬಂದೀತೆಂದು ಸಂದೇಹಿಸುತ್ತಿರಲಿಲ್ಲ. ಶ್ರೀಮುಖ್ಯಪ್ರಾಣರೇ ಹನುಮಂತ ಭೀಮ ಮಧ್ವ ಎಂಬ ಮೂರು ರೂಪಗಳಿಂದ ಪರಮಾತ್ಮನ ಸೇವೆಗಾಗಿ ಅವತರಿಸಿದ್ದರು ಎಂಬುದು ಶ್ರುತಿಪುರಾಣ ಮಹಾತ್ಮರ ಪ್ರತ್ಯಕ್ಷ ಅನುಮಾನ ಪ್ರಮಾಣಗಳಿಂದ ಸಿದ್ಧವಾಗಿದೆ.

**ವಿಗ್ರಹ—**

**ವಾನರೇಂದ್ರಸ್ಯ—** ವಾನರಾಣಾಂ ಇಂದ್ರಃ ವಾನರೇಂದ್ರಃ, ತಸ್ಯ ವಾನರೇಂದ್ರಸ್ಯ ।

**ವಿಲಂಘಿತಾಬ್ಧೇಃ—** ವಿಲಂಘಿತಃ ಅಬ್ಧಿಃ ಯೇನ ಸಃ ವಿಲಂಗಿತಾಬ್ಧಿಃ, ತಸ್ಯ ವಿಲಂಘಿತಾಬ್ಧೇಃ ।

**ನರೇಂದ್ರಸ್ಯ—** ನರಾಣಾಂ ಇಂದ್ರಃ ನರೇಂದ್ರಃ, ತಸ್ಯ ನರೇಂದ್ರಸ್ಯ ।

**ತದ್ವಪುಷ—** ತಯೋಃ ವಪುಃ ತದ್ವಪುಃ; ತಸ್ಯ (ಹನುಮಭೀಮರ ಶರೀರ ಸ್ವರೂಪರಾದವರು)

**ಕ್ರಿಯಾಪದ— ಅಸ್ಮರನ್-** ಸ್ಮೃಚಿಂತಾಯಾಂ ಇತಿ ಚಿಂತಾರ್ಥಕಾತ್ ಸ್ಮೃಧಾತೋಃ ಸಕರ್ಮಕಾತ್ ಅನಿಟ್ ಪರಸ್ಮೈಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಬಹುವಚನೇ ಅಸ್ಮರನ್ ಇತಿ ರೂಪಂ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

**ಶಂಕ್ಯೇತ-** ಶಕಿ ಶಂಕಾಯಾಂ ಶಂಕಾರ್ಥಕಾತ್ ಶಕ್ ಧಾತೋಃ ಸಕರ್ಮಕಾತ್ ಆತ್ಮನೇಪದಿನಃ ವಿಧಿಲಿಙ್ ಪ್ರಥಮ-ಪುರುಷೇ ಏಕವಚನೇ ಶಂಕ್ಯೇತ ಇತಿ ರೂಪಂ ।

ಶಂಕ್ಯೇತ ಶಂಕ್ಯೇಯಾತಾಂ ಶಂಕ್ಯೇರನ್, ಶಂಕ್ಯೇಥಾಃ ಶಂಕ್ಯೇಯಾಥಾಂ ಶಂಕ್ಯೇಧ್ವಂ, ಶಂಕ್ಯೇಯ ಶಂಕ್ಯೇವಹಿ ಸಂಕ್ಯೇಮಹಿ ॥

**ವ್ಯಾಕರಣವಿಶೇಷ—** 'ಇಮೇ ವಾನರೇಂದ್ರಸ್ಯ ನ ಅಸ್ಮರನ್ ಎಂಬಲ್ಲಿ ಅಧೀಗರ್ಥದಯೇಶಾಂ ಕರ್ಮಣಿ (2.3.52) ಎಂಬ ಸೂತ್ರದಿಂದ ಏಷಾಂ ಕರ್ಮಣಿ ಶೇಷೇ ಷಷ್ಠೀ ಸ್ಯಾತ್' ಕರ್ಮಕ್ಕೆ ಶೇಷತ್ವ (ಸಂಬಂಧ ಮಾತ್ರ ಸ್ವರೂಪತ್ವವನ್ನು) ವಿವಕ್ಷೆ ಮಾಡಿದಾಗ ಷಷ್ಠೀ ಬರುತ್ತದೆ. ಮಾತುಃ ಸ್ಮರತಿ (ತಾಯಿಯನ್ನು ಸ್ಮರಿಸುತ್ತಾನೆ) ಎಂಬುದು ಉದಾಹರಣ.

**ಪ್ರಯೋಗ—** ಇಮೇ ವಿಲಂಘಿತಾಬ್ಧೇಃ ವಾನರೇಂದ್ರಸ್ಯ ನ ಅಸ್ಮರನ್ (ಕರ್ತರಿ)
ಏಭಿಃ ವಿಲಂಘಿತಾಬ್ಧೇಃ ವಾನರೇಂದ್ರಸ್ಯ ನಾಸ್ಮರ್ಯತ (ಭಾವೇ)
ತೈಃ ಅಸ್ಯ ವಿಪತ್ ಕಥಂ ಶಂಕ್ಯೇತ (ಕರ್ಮಣಿ)
ತೇ ಅಸ್ಯ ವಿಪದಂ ಕಥಂ ಶಂಕೇರನ್ (ಕರ್ತರಿ)

**ವೃತ್ತ—** 'ಸ್ಯಾದಿಂದ್ರವಜ್ರಾ ಯದಿ ತೌ ಜಗೌ ಗಃ, ಉಪೇಂದ್ರವಜ್ರಾ ಜತ ಜಾಸ್ತತೋ ಗೌ, ಅನಂತರೋದೀರಿತ-ಲಕ್ಷ್ಮಭಾಜೌ ಪಾದೌ ಯದೀಯಾವುಪಜಾತಯಸ್ತಾಃ । ಇತ್ಥಂ ಕಿಲಾನ್ಯಾಸ್ವಪಿ ಮಿಶ್ರಿತಾಸು ವದಂತಿ ಜಾತಿಷ್ವಿದಮೇವಮ' ಎಂಬ ಲಕ್ಷಣವಚನದಂತೆ ಇಲ್ಲಿ ಉಪಜಾತಿ ವೃತ್ತ ನ ವಾನರೇಂದ್ರಸ್ಯ ವಿಲಂಘಿತಾಬ್ಧೇಃ ಇದು ಉಪೇಂದ್ರ ವಜ್ರಾ, 2, 3ನೇ ಪಾದಗಳೂ ಅದೇ ವೃತ್ತದಲ್ಲಿವೆ. 4ನೇ ಪಾದವು ಇಂದ್ರವಜ್ರಾವೃತ್ತದಲ್ಲಿದೆ.

★ ★ ★

**ಅವತಾರಿಕಾ—** ಕತ್ತಲೆಯು ಕವಿಯುತ್ತ ಬರಲು ಆಚಾರ್ಯರನ್ನು ಕಾಣದೇ ಶಿಷ್ಯರ ಮುಖವು ವ್ಯಸನದಿಂದ ಬಾಡಿತೆಂದು ಹೇಳುತ್ತಾರೆ.

**ಜಗತ್ಪ್ರದೀಪಾಯಿತಗೋಗಣಾಢ್ಯೇ**
**ದಿವಾಕರೇ ಮಧ್ವದಿವಾಕರೇ ಚ ।**
**ಅವ್ಯಕ್ತರೂಪೇ ಶ್ರಿಯಮತ್ಯಜನ್ ದ್ರಾಕ್**
**ಸಹಾಂಬುಜೈಸ್ತನ್ನಯನಾಂಬುಜಾನಿ ॥ 29 ॥**

**ಪದಚ್ಛೇದ—** ಜಗತ್ಪ್ರದೀಪಾಯಿತಗೋಗಣಾಢ್ಯೇ, ದಿವಾಕರೇ ಮಧ್ವದಿವಾಕರೇ ಚ ಅವ್ಯಕ್ತರೂಪೇ ಅವ್ಯಕ್ತರೂಪೇ, ಶ್ರಿಯಂ, ಅತ್ಯಜನ್, ದ್ರಾಕ್, ಸಹಾಂಬುಜೈಃ ತತ್, ನಯನಾಂಬುಜಾನಿ ।

**ಅನ್ವಯ—** ಜಗತ್ಪ್ರದೀಪಾಯಿಗೋಗಣಾಢ್ಯೇ, ದಿವಾಕರೇ, ಅವ್ಯಕ್ತರೂಪೇ(ಸತಿ) (ಜಗತ್ಪ್ರದೀಪಾಯಿತಗೋ-ಗಣಾಢ್ಯೇ) ಮಧ್ವದಿವಾಕರೇಚ, ಅವ್ಯಕ್ತರೂಪೇ ಸತಿ ತನ್ನಯನಾಂಬುಜಾನಿ ಅಂಬುಜೈಃ ಸಹ ದ್ರಾಕ್ ಶ್ರಿಯಂ ಅತ್ಯಜನ್ ।

**ಅನ್ವಯಾರ್ಥ—**

**ಜಗತ್ಪ್ರದೀಪಾಯಿತಗೋಗಣಾಢ್ಯೇ** = ಲೋಕಗಳಿಗೆ ದೀಪದಂತಿರುವ, ಕಿರಣ ರಾಶಿಯಿಂದ ಸಂಪನ್ನನಾದ
**ದಿವಾಕರೇ** = ಸೂರ್ಯನು,
**ಅವ್ಯಕ್ತರೂಪೇ ಸತಿ** = ಅಸ್ತಮಯ ಹೊಂದಿರಲಾಗಿ,
(**ಜಗತ್ಪ್ರದೀಪಾಯಿತಗೋಗಣಾಢ್ಯೇ** = ಜಗತ್ತಿಗೆ ದೀಪದಂತಿರುವ ವಾಕ್ಯ ಸಮೂಹದಿಂದ ಸಂಪನ್ನರಾದ)
**ಮಧ್ವದಿವಾಕರೇ ಚ** = ಮಧ್ವಾಚಾರ್ಯರೆಂಬ ಸೂರ್ಯನೂ ಕೂಡ,
**ಅವ್ಯಕ್ತರೂಪೇ (ಸತಿ)** = ಕಣ್ಮರೆಯಾಗಲಾಗಿ,
**ತನ್ನಯನಾಂಬುಜಾನಿ** = ಆ ಮಧ್ವಾಚಾರ್ಯರ ಶಿಷ್ಯರ ಕಮಲದಂತಿರುವ ಕಣ್ಣುಗಳು,
**ಅಂಬುಜೈಃ ಸಹ** = ಕಮಲಗಳೊಡನೆ
**ದ್ರಾಕ್** = ಬೇಗನೆ,
**ಶ್ರಿಯಂ** = ಕಾಂತಿಯನ್ನು
**ಅತ್ಯಜನ್** = ಬಿಟ್ಟವು

**ತಾತ್ಪರ್ಯ—** ಹಗಲು ಪ್ರಪಂಚಕ್ಕೆಲ್ಲಾ ಸೂರ್ಯನು ದೀಪದಂತೆ ಪ್ರಕಾಶವನ್ನು ಬೀರುತ್ತಾ ಇರುತ್ತಾನೆ. ಅವನು ಅಸ್ತಂಗತನಾದ ಕೂಡಲೇ ಕಮಲಗಳು ಮೊಗ್ಗಾಗುತ್ತವೆ. ಅವುಗಳ ಕಾಂತಿಯು ಕಡಿಮೆಯಾಗುತ್ತದೆ. ಶ್ರೀಮಧ್ವಾಚಾರ್ಯರೂ ಜಗತ್ತಿಗೆ ಪರಾಪರತತ್ತ್ವಜ್ಞಾನ ಪ್ರಕಾಶವನ್ನು ಬೀರುವ ದೀಪದಂತಿರುವ ಮಾತುಗಳೆಂಬ ಕಿರಣ ಸಮೂಹದಿಂದ ಸಂಪನ್ನ-ರಾಗಿ, ಸೂರ್ಯನಂತೆಯೇ ಇರುತ್ತಾರೆ. ಅವರು ತುಂಬು ಪ್ರವಾಹದ ಗಂಗೆಯಲ್ಲಿ ಇಳಿದು ದಾಟಲು ಉದ್ಯುಕ್ತರಾಗಿ ಶಿಷ್ಯರಿಗೆ ಕಣ್ಮರೆಯಾದರು. ಆಗ ಸೂರ್ಯನು ಮುಳುಗಿದಾಗ ತಾವರೆಗಳು ಕಾಂತಿ ವಿಹೀನವಾಗುವಂತೆ ಶಿಷ್ಯರು ಹೆದರಿದರು. ಅವರ ಮುಖವು ಕಳೆಗುಂದಿತು ಎಂದು ತಾತ್ಪರ್ಯ.

**ವಿಗ್ರಹ—**

**ಜಗತ್ಪ್ರದೀಪಾಯಿತಗೋಗಣಾಢ್ಯೇ—** ಪ್ರದೀಪವತ್ ಆಚರಿತಃ ಪ್ರದೀಪಾಯಿತಃ, ಜಗತಾಂ ಪ್ರದೀಪಾಯಿತಃ ಜಗತ್ಪ್ರದೀಪಾಯಿತಃ, ಗವಾಂ ಗಣಃ ಗೋಗಣಃ, ಜಗತ್ಪ್ರದೀಪಾಯಿತಶ್ಚಾಸೌ ಗೋಗಣಶ್ಚ ಜಗತ್ಪ್ರದೀಪಾ-

ಯಿತಗೋಗಣಃ, ಜಗತ್ಪ್ರದೀಪಾಯಿತಗೋಗಣೇನ ಆಢ್ಯಃ ಜಗತ್ಪ್ರದೀಪಾಯಿತಗೋಗಣಾಢ್ಯಃ, ತಸ್ಮಿನ್ ಜಗತ್ಪ್ರದೀಪಾಯಿತಗೋಗಣಾಢ್ಯೇ ।

**ಅವ್ಯಕ್ತರೂಪೇ—** ನ ವ್ಯಕ್ತಂ ಅವ್ಯಕ್ತಂ, ಅವ್ಯಕ್ತಂ ರೂಪಂ ಯಸ್ಯ ಸಃ ಅವ್ಯಕ್ತರೂಪಃ ತಸ್ಮಿನ್ ಅವ್ಯಕ್ತರೂಪೇ ।

**ನಯನಾಂಬುಜಾನಿ—** ನಯನಾನಿ ಅಂಬುಜಾನಿ ಇವ ನಯನಾಂಬುಜಾನಿ ।

**ಕ್ರಿಯಾಪದ— ಅತ್ಯಜನ್-** ತ್ಯಜಹಾನೌ ಇತಿ ಹಾನ್ಯರ್ಥಕಾತ್ ತ್ಯಜಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಅನದ್ಯತನಭೂತೇ ಲಙ್, ಪ್ರಥಮಪುರುಷೇ ಬಹುವಚನೇ, ಅತ್ಯಜನ್, ಇತಿ ರೂಪಂ ।

ಅತ್ಯಜತ್ ಅತ್ಯಜತಾಂ ಅತ್ಯಜನ್, ಅತ್ಯಜಃ ಅತ್ಯಜತಂ ಅತ್ಯಜತ, ಅತ್ಯಜಂ ಅತ್ಯಜಾವ ಅತ್ಯಜಾಮ ॥

**ಪ್ರಯೋಗ—** ತನ್ನಯನಾಂಬುಜಾನಿ ಶ್ರಿಯಂ ಅತ್ಯಜನ್ (ಕರ್ತರಿ)
ತನ್ನಯನಾಂಬುಜೈಃ ಶ್ರೀಃ ಅತ್ಯಜತ (ಕರ್ಮಣಿ)

★ ★ ★

**ಅವತಾರಿಕಾ—** ಈ ರೀತಿ ಅದ್ಭುತಶಕ್ತಿಸಂಪನ್ನರಾದ ಆಚಾರ್ಯರು ಅನಾಯಾಸವಾಗಿ ಗಂಗೆಯನ್ನು ಒದ್ದೆಯಾಗದಂತೆ ದಾಟಿ ಬಂದುದನ್ನು ನೋಡಿ ಆಚೆ ದಡದಲ್ಲಿದ್ದ ಬ್ರಾಹ್ಮಣರೂ ಅರಸನೂ ಬಹಳ ಆಶ್ಚರ್ಯಪಟ್ಟರೆನ್ನುತ್ತಾರೆ.

**ಪದಂ ಪಶೋರ್ವಾ ವಿನತಾತನೂಜ-**
**ಸ್ತೀರ್ತ್ವಾ ನದೀಂ ತಾವದದೀನಸತ್ತ್ವಃ ।**
**ಅನಾರ್ದ್ರವಾಸಾಸ್ಸಕುತೂಹಲಾರ್ದ್ರೈ-**
**ರ್ನೃದೇವಭೂದೇವಮುಖ್ಯೈರ್ವವಂದೇ ॥ 30 ॥**

**ಪದಚ್ಛೇದ—** ಪದಂ, ಪಶೋಃ, ವಾ ವಿನತಾತನೂಜಃ, ತೀರ್ತ್ವಾ ನದೀಂ, ತಾವತ್, ಅದೀನಸತ್ತ್ವಃ, ಅನಾರ್ದ್ರವಾಸಾಃ, ಸಃ, ಕುತೂಹಲಾರ್ದ್ರೈಃ, ನೃದೇವಭೂದೇವಮುಖ್ಯೈಃ, ವವಂದೇ ।

**ಅನ್ವಯ—** ಅದೀನಸತ್ತ್ವಃ, ಸಃ, ವಿನತಾತನೂಜಃ, ಪಶೋಃ, ಪದಂ, ವಾ, ತಾವತ್, ತೀರ್ತ್ವಾ, ಅನಾರ್ದ್ರವಾಸಾಃ, ಕುತೂಹಲಾರ್ದ್ರೈಃ ನೃದೇವಭೂದೇವಮುಖ್ಯೈಃ, ವವಂದೇ ।

**ಅನ್ವಯಾರ್ಥ—**

**ಅದೀನಸತ್ತ್ವಃ** = ಸಂಪೂರ್ಣವಾದ ಬಲವುಳ್ಳ,
**ಸಃ** = ಆ ಮಧ್ವಾಚಾರ್ಯರು,
**ನದೀಂ** = ಗಂಗಾನದಿಯನ್ನು,
**ವಿನತಾತನೂಜಃ** = ವಿನತೆಯ ಮಗನಾದ ಗರುಡನು,
**ಪಶೋಃ** = ಗೋವು ಮುಂತಾದ ಪ್ರಾಣಿಯ
**ಪದಂ ವಾ** = ಹೆಜ್ಜೆಯನ್ನೋಪಾದಿಯಲ್ಲಿ
**ತಾವತ್** = ಮೊದಲು (ಬೇಗನೇ)
**ತೀರ್ತ್ವಾ** = ದಾಟಿ,
**ಅನಾರ್ದ್ರವಾಸಾಃ** = ಒದ್ದೆಯಾಗದ ಬಟ್ಟೆಯುಳ್ಳವರಾಗಿ,
**ಕುತೂಹಲಾರ್ದ್ರೈಃ** = ಕೌತುಕದಿಂದ ತುಂಬಿದ

**ನೃದೇವಭೂದೇವ ಮುಖ್ಯೈಃ** = ರಾಜನು, ಬ್ರಾಹ್ಮಣರು, ಇವರೇ ಮೊದಲಾಗಿ ಉಳ್ಳವರಿಂದ,

**ವವಂದೇ** = ನಮಸ್ಕರಿಸಲ್ಪಟ್ಟರು.

**ತಾತ್ಪರ್ಯ**— ವೇಗವಾಗಿ ಹಾರುವ ಗರುಡನು ಹಸುವಿನ ಹೆಜ್ಜೆಯನ್ನು ಅನಾಯಾಸವಾಗಿ ದಾಟುವನು. ಅದರಂತೆ ಅತಿಶಯವಾದ ಬಲವುಳ್ಳ ಶ್ರೀಮಧ್ವಾಚಾರ್ಯರು ಆ ಗಂಗಾನದಿಯನ್ನು ಶಿಷ್ಯರಿಗಿಂತ ಮೊದಲು ಯಾವ ಆಯಾಸವೂ ಇಲ್ಲದೆ ಶೀಘ್ರವಾಗಿ ದಾಟಿ ಇನ್ನೊಂದು ದಡಕ್ಕೆ ಬಂದರು. ಆದರೆ ಅವರ ಬಟ್ಟೆಗಳು ಯಾವುದೂ ಒದ್ದೆಯಾಗಿರಲಿಲ್ಲ. ಅವರ ವಸ್ತ್ರಗಳೂ ಆರ್ದ್ರವಾಗದಿದ್ದರೂ ಆಚೆಯ ದಡದಲ್ಲಿದ್ದ ರಾಜನು ಮತ್ತು ಬ್ರಾಹ್ಮಣರು ಎಲ್ಲರೂ ಆಶ್ಚರ್ಯದಿಂದ ನಮಸ್ಕರಿಸಿದರು. ದೋಣಿಯಿಲ್ಲದೆ ನದಿಯನ್ನು ದಾಟುವುದು ಬಟ್ಟೆಗಳು ಸ್ವಲ್ಪವೂ ಒದ್ದೆಯಾಗದಿರುವುದು ಇದೆಲ್ಲವೂ ಅವರಿಗೆಲ್ಲರಿಗೂ ಪರಮಾಶ್ಚರ್ಯಕರವಾಗಿದ್ದಿತು.

**ವಿಗ್ರಹ**—

**ವಿನತಾತನೂಜಃ**— ತನ್ವಾ ಜಾಯತೇ ಇತಿ ತನೂಜಃ, ವಿನತಾಯಾಃ ತನೂಜಃ, ವಿನತಾತನೂಜಃ ।

**ಅದೀನಸತ್ತ್ವಃ**— ನ ದೀನಂ ಅದೀನಂ, ಅದೀನಂ ಸತ್ತ್ವಂ ಯಸ್ಯ ಸಃ ಅದೀನಸತ್ತ್ವಃ ।

**ಅನಾರ್ದ್ರವಾಸಾಃ**— ನ ಆರ್ದ್ರಂ ಅನಾರ್ದ್ರಂ, ಅನಾರ್ದ್ರಂ ವಾಸಃ ಯಸ್ಯ ಸಃ ಅನಾರ್ದ್ರವಾಸಾಃ ।

**ಕುತೂಹಲಾರ್ದ್ರೈಃ**— ಕುತೂಹಲೇನ ಆರ್ದ್ರಾಃ ಕುತೂಹಲಾರ್ದ್ರಾಃ, ತೈಃ ಕುತುಹಲಾರ್ದ್ರೈಃ ।

**ನೃದೇವಭೂದೇವಮುಖ್ಯೈಃ**— ನೃಣಾಂ ದೇವಃ ನೃದೇವಃ, ಭುವಃ ದೇವಾಃ ಭೂದೇವಾಃ, ನೃದೇವಶ್ಚ ಭೂದೇವಾಶ್ಚ ನೃದೇವಭೂದೇವಾಃ, ನೃದೇವಭೂದೇವಾಃ ಏವ ಮುಖಾನಿ ಯೇಷಾಂ ತೇ, ನೃದೇವಭೂದೇವಮುಖಾಃ ತೈಃ ।

**ಕ್ರಿಯಾಪದ**— **ವವಂದೇ**- ವದಿ ಅಭಿವಾದನ ಸ್ತುತ್ಯೋಃ ಇತಿ ಅಭಿವಾದನಸ್ತುತ್ಯರ್ಥಕಾತ್ ವದ್ ಧಾತೋಃ ಸಕರ್ಮಕಾತ್ ಆತ್ಮನೇಪದಿನಃ ಕರ್ಮಣಿ ಲಿಟ್ ಪ್ರಥಮಪುರುಷೇ ಏಕವಚನೇ ।

ವವಂದೇ ವವಂದಾತೇ ವವಂದಿರೇ, ವವಂದಿಷೇ ವವಂದಾಥೇ ವವಂದಿಧ್ವೇ, ವರಂದೇ ವವಂದಿವಹೇ ವವಂದಿಮಹೇ ॥

**ಕೋಶ**— 'ತಾರ್ಕ್ಷ್ಯೋ ವೈನತೇಯಃ ಖಗೇಶ್ವರಃ' । 'ವಸ್ತ್ರಮಾಚ್ಛಾದನಂ ವಾಸಃ'।

**ಪ್ರಯೋಗ**— ಸಃ ನೃದೇವಭೂದೇವಮುಖ್ಯೈಃ ವವಂದೇ (ಕರ್ಮಣಿ),

ತಂ ನೃದೇವಭೂದೇವಮುಖಾಃ ವವಂದಿರೇ (ಕರ್ತರಿ)

★ ★ ★

**ಅವತಾರಿಕಾ**— ಆಮೇಲೆ ಆಚಾರ್ಯರು ಶಿಷ್ಯರನ್ನು ತೆಪ್ಪದಿಂದ ದಾಟಿಸಿದರೆಂದು ಹೇಳುತ್ತಾರೆ.

**ಭೀತ್ಯೈರರಾತೇರತಿಮಾತ್ರಮತ್ರ**
**ನತಾರಕೈರಪ್ಯಥ ತಾರಕೈಃ ಸಃ ।**
**ಸ್ವತೇಜಸಾ ವಿಸ್ಮಿತಭೂಪನುನ್ನೈಃ**
**ಪ್ಲವೇನ ಶಿಷ್ಯಾನ್ ನಿರತಾರಯತ್ತಾಮ್ ॥ 31 ॥**

**ಪದಚ್ಛೇದ**— ಭೀತ್ಯೈಃ, ಅರಾತೇಃ, ಅತಿಮಾತ್ರಂ, ಅತ್ರ, ನ ತಾರಕೈಃ, ಅಪಿ, ಅಥ, ತಾರಕೈಃ, ಸಃ, ಸ್ವತೇಜಸಾ, ವಿಸ್ಮಿತಭೂಪನುನ್ನೈಃ, ಪ್ಲವೇನ, ಶಿಷ್ಯಾನ್, ನಿರತಾರಯತ್, ತಾಂ ।

**ಅನ್ವಯ**— ಅಥ, ಸಃ, ಅರಾತೇಃ ಅತಿಮಾತ್ರಂ, ಭೀತ್ಯೈಃ, ನತಾರಕೈಃ, ಅಪಿ, ಸ್ವತೇಜಸಾ, ವಿಸ್ಮಿತಭೂಪನುನ್ನೈಃ, ತಾರಕೈಃ, ಪ್ಲವೇನ, ಶಿಷ್ಯಾನ್, ತಾಂ, ನಿರತಾರಯತ್ ।

**ಅನ್ವಯಾರ್ಥ**—

**ಅಥ** = ರಾಜಾದಿಗಳು ನಮಸ್ಕಾರ ಮಾಡಿದ ತರುವಾಯ

**ಸಃ** = ಆ ಮಧ್ವಾಚಾರ್ಯರು

**ಅತ್ರ** = ಈ ಗಂಗೆಯ ದಡದಲ್ಲಿ

**ಅರಾತೇಃ** = ಶತ್ರುವಿನ ದೆಸೆಯಿಂದ,

**ಅತಿಮಾತ್ರಂ** = ಬಹಳವಾಗಿ

**ಭೀತ್ಯೈಃ** = ಹೆದರಿದ

**ನತಾರಕೈಃ ಅಪಿ** = ದಾಟಿಸುವವರಲ್ಲದೆ ಇದ್ದಾಗ್ಯೂ,

**ಸ್ವತೇಜಸಾ** = ತಮ್ಮ ಸಾಮರ್ಥ್ಯದಿಂದ,

**ವಿಸ್ಮಿತಭೂಪನುನ್ನೈಃ** = ಆಶ್ಚರ್ಯಗೊಂಡ ರಾಜನಿಂದ ಪ್ರೇರಿಸಲ್ಪಟ್ಟ,

**ತಾರಕೈಃ** = ನದಿಯನ್ನು ದಾಟಿಸುವ ಬೆಸ್ತರಿಂದ,

**ಪ್ಲವೇನ** = ನಾವೆಯಿಂದ

**ಶಿಷ್ಯಾನ್** = ಶಿಷ್ಯರನ್ನು,

**ತಾಂ** = ಆ ಗಂಗಾನದಿಯನ್ನು,

**ನಿರತಾರಯತ್** = ದಾಟಿಸಿದರು.

**ತಾತ್ಪರ್ಯ**— ಆ ಸಮಯದಲ್ಲಿ ನಾವಿಕರು ಶತ್ರುವಿನ ಭಯದಿಂದ ಬಹಳವಾಗಿ ಹೆದರಿ ಯಾರನ್ನೂ ಗಂಗಾನದಿಯ ಆಚೆಗೆ ದಾಟಿಸುತ್ತಿರಲಿಲ್ಲ. ನದಿಯನ್ನು ಆ ಕತ್ತಲೆಯ ಹೊತ್ತಿನಲ್ಲಿ ಈಜಿಕೊಂಡು ಬರುವುದಂತೂ ಎಂತಹವರಿಗೂ ಅಸಾಧ್ಯವಾಗಿತ್ತು. ಹೀಗಿದ್ದೂ ಆಚಾರ್ಯರು ನದಿಯನ್ನು ದಾಟಿ ಬಂದಿರುವುದೇ ಆಶ್ಚರ್ಯಕರವಾಗಿತ್ತು. ನದಿಯನ್ನು ದಾಟಿ ಬಂದಿದ್ದರೂ ಆಚಾರ್ಯರ ಬಟ್ಟೆಯು ಸ್ವಲ್ಪವೂ ಒದ್ದೆಯಾಗಿರಲಿಲ್ಲ. ಇದನ್ನು ನೋಡಿ ಅಲ್ಲಿಯ ರಾಜನು ಪರಮಾಶ್ಚರ್ಯ ಭರಿತನಾಗಿ ನಾವಿಕರಿಗೆ ಆಚಾರ್ಯರ ಶಿಷ್ಯರನ್ನು ದಾಟಿಸುವಂತೆ ಅಪ್ಪಣೆ ಮಾಡಿದನು. ಅವರು ಕೂಡಲೇ ಆಚಾರ್ಯರ ಶಿಷ್ಯರನ್ನೆಲ್ಲಾ ದೋಣಿಯ ಮೂಲಕ ದಾಟಿಸಿ ನದಿಯ ಈ ಕಡೆ ಕರೆದುಕೊಂಡು ಬಂದರು. ಹೀಗೆ ಆಚಾರ್ಯರ ಪ್ರಭಾವವೇ ಶಿಷ್ಯರನ್ನೆಲ್ಲಾ ನದಿಯನ್ನು ದಾಟಿಸುವಂತೆ ಮಾಡಿತು.

ವಿಗ್ರಹ—

ನತಾರಕೈಃ— ತಾರಕಾಃ ನ ಭವಂತೀತಿ ನತರಕಾಃ ತೈಃ ನತಾರಕೈಃ । ನಞರ್ಥಕ ತತ್ಪುರುಷ, ನೈಕಧಾ ಎಂಬಂತೆ ಇಲ್ಲಿನಞರ್ಥಕವಾದ ನಶಬ್ದ. ಈ ಶಬ್ದವು ನಞ ಅಲ್ಲ ಆದುದರಿಂದ 'ನಲೋಪೋನಞಃ' ಎಂಬ ಸೂತ್ರದಿಂದ ನಕಾರಕ್ಕೆ ಲೋಪಬರುವುದಿಲ್ಲ.

ಸ್ವತೇಜಸಾ— ಸ್ವಸ್ಯ ತೇಜಃ ಸ್ವತೇಜಃ ತೇನ ಸ್ವತೇಜಸಾ ।

ವಿಸ್ಮಿತಭೂಪನುನ್ನೈಃ— ವಿಸ್ಮಿತಶ್ಚಾಸೌ ಭೂಪಶ್ಚ ವಿಸ್ಮಿತಭೂಪಃ (ಕರ್ಮಧಾರಯ) ವಿಸ್ಮಿತಭೂಪೇನ ನುನ್ನಾಃ ವಿಸ್ಮಿತಭೂಪನುನ್ನಾಃ (ತೃತೀಯಾತತ್ಪುರುಷ ತೈಃ ವಿಸ್ಮಿತಭೂಪನುನ್ನೈಃ)

**ಕ್ರಿಯಾಪದ**— ನಿರತಾರಯತ್- ನಿರ್ ಇತಿ ಉಪಸರ್ಗಪೂರ್ವಕಾತ್ ತೄಪ್ಲವನ ತರಣಯೋಃ ಇತಿ ಪ್ಲವನ ತರಣಾರ್ಥಕಾತ್ ತೄ ಧಾತೋಃ ಣಿಜಂತಾತ್ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ನಿರತಾರಯತ್ ಇತಿ ರೂಪಂ ।

ನಿರ್+ಅತಾರಯತ್ ಅತಾರಯತಾಂ ಅತಾರಯನ್, ಅತಾರಯಃ ಅತಾರಯತಂ ಅತಾರಯತ,
ಅತಾರಯಂ ಅತಾರಯಾವ ಅತಾರಯಾಮ ॥

**ಕೋಶ—** ಭೀತ್ಯೈಃ ಅರಾತೇಃ ಎಂಬಲ್ಲಿ 'ಅಭಿಘಾತಿ ಪರಾರಾತಿ' ಎಂಬ ಕೋಶಾನುಸಾರವಾಗಿ 'ಅರಾತಿ' ಎಂದರೆ ಶತ್ರು ಎಂದು ಅರ್ಥ.

**ಪ್ರಯೋಗ—** ಸಃ ತಾರಕ್ಯೈಃ ಪ್ಲವೇನ ಶಿಷ್ಯಾನ್ ತಾಂ ನಿರತಾರಯತ್ । ದ್ವಿತೀಯ ಪ್ರೇರಣಾರ್ಥ ಣಿಜಂತ ಪ್ರಯೋಗ, ಶಿಷ್ಯಾಃ (ತೇನ ಮಧ್ವೇನ) ತಾರಕ್ಯೈಃ ಪ್ಲವೇನ ತಾಂ ನಿರತರನ್ (ಅಪ್ರೇರಣಾರ್ಥಕ ಪ್ರಯೋಗ), ತೇನ ತಾರಕ್ಯೈಃ ಪ್ಲವೇನ ಶಿಷ್ಯಾಃ ತಾಂ ನಿರತಾರ್ಯಂತ (ಕರ್ಮಣಿ)

ಇಲ್ಲಿ ಮೊದಲನೆಯ ಪ್ರಯೋಗದಲ್ಲಿ ತಾರಕ್ಯೈಃ ಕರ್ತರಿ ತೃತೀಯಾ, ಪ್ಲವೇನ ಕರಣೇ ತೃತೀಯಾ.

**ವೃತ್ತ—** ಇದು ಆದ್ಯಪಾದದಲ್ಲಿ ಇಂದ್ರವಜ್ರಾಸಹಿತ = ಉಪಜಾತಿ ವೃತ್ತ.

★ ★ ★

**ಅವತಾರಿಕಾ—** ಶ್ರೀಮಧ್ವರ ಶಿಷ್ಯರು ಈಚೆಯ ದಡದಲ್ಲಿ ದೀಪಗಳನ್ನೂ ಜನರ ಸಂದಣಿಯನ್ನು ಕಂಡರೆನ್ನುತ್ತಾರೆ.

**ವಿಶಂಕಟಂ ಸ್ವಸ್ತಟಿನೀತಟಂ ತೇ**
**ದೀಪಪ್ರದೀಪ್ತಂ ಜನತಾಭಿಪೂರ್ಣಮ್ ।**
**ಸಂಚೋದಯತ್ತಂಡಿತಮಂಡಲಾಢ್ಯಂ**
**ನಾಥಾವಲೋಕೋತ್ಕಹೃದೋಽಭ್ಯಪಶ್ಯನ್ ॥ 32 ॥**

**ಪದಚ್ಛೇದ—** ವಿಶಂಕಟಂ, ಸ್ವಸ್ತಟಿನೀತಟಂ, ತೇ, ದೀಪಪ್ರದೀಪ್ತಂ, ಜನತಾಭಿಪೂರ್ಣಂ, ಸಂಚೋದಯತ್ತಂಡಿತ-ಮಂಡಲಾಢ್ಯಂ, ನಾಥಾವಲೋಕೋತ್ಕಹೃದಃ, ಅಭ್ಯಪಶ್ಯನ್ ।

**ಅನ್ವಯ—** ನಾಥಾವಲೋಕೋತ್ಕಹೃದಃ, ತೇ, ವಿಶಂಕಟಂ, ದೀಪಪ್ರದೀಪ್ತಂ, ಜನತಾಭಿಪೂರ್ಣಂ, ಸಂಚೋ-ದಯತ್ತಂಡಿತಮಂಡಲಾಢ್ಯಂ, ಸ್ವಸ್ತಟನೀತಟಂ ಅಭ್ಯಪಶ್ಯನ್ ।

**ಅನ್ವಯಾರ್ಥ—**

**ನಾಥಾವಲೋಕೋತ್ಕಹೃದಃ** = ತಮ್ಮ ಸ್ವಾಮಿಯಾದ ಶ್ರೀಮಧ್ವರನ್ನು ನೋಡುವುದರಲ್ಲಿ ತವಕಗೊಂಡ ಮನಸ್ಸುಳ್ಳ

**ತೇ** = ಆ ಶಿಷ್ಯರು

**ವಿಶಂಕಟಂ** = ವಿಶಾಲವಾದ,

**ದೀಪಪ್ರದೀಪ್ತಂ** = ದೀಪಗಳಿಂದ ಪ್ರಕಾಶಿತವಾದ,

**ಜನತಾಭಿಪೂರ್ಣಂ** = ಜನರ ಸಮೂಹದಿಂದ ತುಂಬಿದ,

**ಸಂಚೋದಯತ್ತಂಡಿತಮಂಡಲಾಢ್ಯಂ** = ಸಂಶಯಾಸ್ಪದವಾಗಿ(ವಾದ) (ಅಥವಾ ವಿವಾದಗ್ರಸ್ತವಾದ) ವಿಷಯವನ್ನು ಕೇಳುತ್ತಿರುವ ವಿದ್ವಾಂಸರ ಸಮೂಹದಿಂದ ತುಂಬಿರುವ,

**ಸ್ವಸ್ತಟನೀ ತಟಂ** = ದೇವ ಗಂಗಾನದಿಯ, ದಡವನ್ನು,

**ಅಭ್ಯಪಶ್ಯನ್** = ನೋಡಿದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಶಿಷ್ಯರು ನಾವು ಯಾವಾಗ ನಮ್ಮ ಸ್ವಾಮಿಯಾದ ಆನಂದತೀರ್ಥ ಭಗವತ್ಪಾದರನ್ನು ನೋಡಿಯೇವು? ಎಂದು ಉತ್ಕಂಠಿತರಾಗಿದ್ದರು. ವ್ಯಾಕುಲರಾಗಿದ್ದರು. ಅವರು ಗಂಗಾನದಿಯ ಈಚೆಯ ದಡಕ್ಕೆ ಬಂದು ನೋಡಿದರು. ಅಲ್ಲಿ ವಿಶಾಲವಾದ ತೀರಪ್ರದೇಶದಲ್ಲಿ ದೀಪಗಳ ಪ್ರಕಾಶವು ಝುಗಮಗಿಸುತ್ತಿತ್ತು. ಅನೇಕ ಜನರು ತುಂಬಿದ್ದರು. ಅನೇಕ ಪಂಡಿತರು ವಿವಾದಾಸ್ಪದವಾದ ವೇದಾರ್ಥ ಅಥವಾ ಮತ್ತಿತರ ವಿಷಯಗಳನ್ನು ಕೇಳುತ್ತಿದ್ದರು. ಗಂಗೆಯ ಈ ಕಡೆ ಬಂದ ಆಚಾರ್ಯರ ಶಿಷ್ಯರು ಈ ಸನ್ನಿವೇಶವನ್ನು ಕಂಡರು.

**ವಿಗ್ರಹ— ವ್ಯಾಕರಣವಿಶೇಷ— ಕೋಶ—**

**ಸ್ವಸ್ತಟನೀತಟಂ—** ಸ್ವಃ ತಟನೀ ಸ್ವಸ್ತಟನೀ, ಸ್ವಸ್ತಟಿನ್ಯಾಃ ತಟಂ ಸ್ವಸ್ತಟಿನೀತಟಂ ದೇವಗಂಗಾ ಎಂದು ಅರ್ಥ, 'ಸ್ವರವ್ಯಯಂ ಸ್ವರ್ಗನಾಕ' ಎಂಬ ಕೋಶಾನುಸಾರವಾಗಿ 'ಸ್ವಃ' ಶಬ್ದವು ಅವ್ಯಯ ದೀಪಪ್ರದೀಪ್ತಂ ದೀಪ್ತೈಃ ಪ್ರದೀಪ್ತಂ ದೀಪಪ್ರದೀಪ್ತಂ ತತ್ (ತೃ.ತ)

**ಜನತಾಭಿಪೂರ್ಣಂ—** ಜನಾನಾಂ ಸಮೂಹಃ ಜನತಾ, 'ಗ್ರಾಮಜನಬಂಧುಸಹಾಯೇಭ್ಯಃ ತಲ್' ಎಂದು ಸಮೂಹಾರ್ಥದಲ್ಲಿ ತಲ್ ಪ್ರತ್ಯಯ, ಜನತಯಾ ಅಭಿಪೂರ್ಣಂ ಜನತಾಭಿಪೂರ್ಣಂ ತತ್ । (ತೃ.ತ)

**ಸಂಚೋದಯತ್ಪಂಡಿತಮಂಡಲಾಢ್ಯಂ—** ಪಂಡಿತಾನಾಂ ಮಂಡಲಂ ಪಂಡಿತಮಂಡಲಂ, ಸಂಚೋದಯಚ್ಚ ತತ್ ಪಂಡಿತಮಂಡಲಂ ಚ ಸಂಚೋದಯತ್ಪಂಡಿತಮಂಡಲಂ, ತತ್ ಸಂಚೋದಯತ್ಪಂಡಿತ ಮಂಡಲಂ ।

**ನಾಥಾವಲೋಕೋತ್ಕಹೃದಃ—** ನಾಥಸ್ಯ ಅವಲೋಕಃ ನಾಥಾವಲೋಕಃ, ನಾಥಾವಲೋಕೇ ಉತ್ಕಂ ನಾಥಾ-ವಲೋಕೋತ್ಕಂ, (ಉತ್ಕ ಎಂದರೆ ಉತ್ಕಂಠೆಯಿಂದ ಕೂಡಿದುದು ಎಂದು ಅರ್ಥ), ನಾಥಾವಲೋತ್ಕಂ ಹೃತ್ ಯೇಷಾಂ ತೇ ನಾಥಾವಲೋತ್ಕ ಹೃದಃ ॥

**ರಾಗೇ ತ್ವಲಬ್ಧ ವಿಷಯೇ ವೇದನಾ ಮಹತೀ ತು ಯಾ ।**
**ಸಂಶೋಷಣಂ ತು ಗಾತ್ರಾಣಾಂ ತಾಮುತ್ಕಂಠಾಂ ವಿದುರ್ಬುಧಾಃ ।**

ಎಂಬ ಅಭಿಧಾನಾನುಸಾರವಾಗಿ ಬಯಸಿದ ವಸ್ತುವು ಸಿಗದೆ ಇದ್ದಾಗ ಅತ್ಯಂತ ಹೆಚ್ಚಾದ ಮಾನಸಿಕ ವೇದನೆ ದೇಹದ ಅಂಗಗಳ ಶೋಷಣೆಯಿಂದ ಉಂಟಾಗುವ ಅವಸ್ಥೆಯೇ ಉತ್ಕಂಠೆ, ಸ್ವಸ್ತಟನೀ ಎಂಬಲ್ಲಿ 'ತಟನೀಹ್ರಾದಿನೀ ಧುನೀ' ಎಂಬ ಕೋಶಾನುಸಾರವಾಗಿ ತಟನೀ ಎಂದರೆ ನದಿ ಎಂದು ಅರ್ಥ.

**ಕ್ರಿಯಾಪದ— ಅಭ್ಯಪಶ್ಯನ್-** ಅಭಿ ಇತಿ ಉಪಸರ್ಗಪೂರ್ವಕಾತ್ ದೃಶಿರ್ ಪ್ರೇಕ್ಷಣೇ ಇತಿ ಪ್ರೇಕ್ಷಣಾರ್ಥಕಾತ್ ದೃಶ್ ಧಾತೋಃ ಪರಸ್ಮೈಪದಿನಃ ಸಕರ್ಮಕಾತ್ ಕರ್ತರಿ ಅನದ್ಯತನಭೂತೇ, ಲಙ್, ಪ್ರಥಮಪುರುಷೇ ಏಕವಚನೇ ಅಭಿಪಶ್ಯನ್ ಇತಿ ರೂಪಂ । ಈ ಧಾತುವಿಗೆ ಲಟ್ ಲೋಟ್ ಲಙ್, ವಿಧಿಲಿಙ್‌ಗಳಲ್ಲಿ ಪಶ್ಯ ಎಂಬ ಆದೇಶ ಬರುತ್ತದೆ. ಪಶ್ಯತಿ, ಪಶ್ಯತು, ಅಪಶ್ಯತ್, ಪಶ್ಯೇತ್।

ಅಭಿ+ಅಪಶ್ಯತ್ ಆಪಶ್ಯತಾಂ ಅಪಶ್ಯನ್, ಅಪಶ್ಯಃ ಅಪಶ್ಯತಂ ಅಪಶ್ಯತ, ಅಪಶ್ಯಂ ಅಪಶ್ಯಾವ ಅಪಶ್ಯಾಮ ॥

**ಕೋಶ—** 'ವಿಶಂಕಟಂ' ಸ್ವಸ್ತಟನೀತಟಂ ಎಂಬಲ್ಲಿ 'ವಿಶಂಕಟಂ ಪೃಥುಬೃಹತ್ ವಿಶಾಲಂ' ಎಂದು ಅಮರ.

**ಪ್ರಯೋಗ—** ತೇ ಸ್ವಸ್ತಟನೀ ತಟಂ ಅಭ್ಯಪಶ್ಯನ್ (ಕರ್ತರಿ), ತೈಃ ಸ್ವಸ್ತಟನೀ ತಟಂ ಅಭ್ಯದೃಶ್ಯತ (ಕರ್ಮಣಿ)

**ವೃತ್ತ—** ಆದ್ಯ ಪಾದ ಉಪೇಂದ್ರವಜ್ರಾವೃತ್ತ ಉಪಜಾತಿ ।

★ ★ ★

**ಅವತಾರಿಕಾ**— ಆ ಪಂಡಿತರ ಸಭೆಯಲ್ಲಿ ಶ್ರೀಮದಾಚಾರ್ಯರು ಹೇಗೆ ಕಂಗೊಳಿಸಿದರೆಂಬುದನ್ನು ವರ್ಣಿಸುತ್ತಾರೆ.

**ಆಮ್ನಾಯಮಾಮ್ನಾಯವಿದಾಂ ವಿದಗ್ಧಂ**
**ಸಭಾವಭೇದಂ ಪ್ರವದಂತಮತ್ರ ।**
**ದೈವ್ಯಾಂ ಸಭಾಯಾಮಿವ ಪದ್ಮಯೋನಿಂ**
**ಪೈಕ್ಷಂತ ಸಾಕ್ಷಾತ್ ಸುಖತೀರ್ಥಮೇತೇ ॥ 33 ॥**

**ಪದಚ್ಛೇದ**— ಆಮ್ನಾಯಂ, ಆಮ್ನಾಯವಿದಾಂ, ವಿದಗ್ಧಂ, ಸಭಾವಭೇದಂ, ಪ್ರವದಂತಂ, ಅತ್ರ, ದೈವ್ಯಾಂ, ಸಭಾಯಾಂ, ಇವ, ಪದ್ಮಯೋನಿಂ, ಪೈಕ್ಷಂತ ಸಾಕ್ಷಾತ್ ಸುಖತೀರ್ಥಂ ಏತೇ ॥

**ಅನ್ವಯಃ**— ಏತೇ, ಅತ್ರ ಆಮ್ನಾಯವಿದಾಂ (ಮಧ್ಯೇ) ವಿದಗ್ಧಂ, ಸಭಾವಭೇದಂ, ಆಮ್ನಾಯಂ ಪ್ರವದಂತಂ, ಸುಖತೀರ್ಥಂ, ದೈವ್ಯಾಂ, ಸಭಾಯಾಂ ಪದ್ಮಯೋನಿಮಿವ ಸಾಕ್ಷಾತ್ ಪೈಕ್ಷಂತ ॥

**ಅನ್ವಯಾರ್ಥ**—

**ಏತೇ** = ಈ ಶಿಷ್ಯರು,
**ಅತ್ರ** = ಈ ಗಂಗಾನದಿಯ ದಡದಲ್ಲಿ ನೆರೆದಿರುವ ಪಂಡಿತರ ಸಮೂಹದಲ್ಲಿ,
**ಆಮ್ನಾಯವಿದಾಂ ಮಧ್ಯೇ** = ವೇದವನ್ನು ಬಲ್ಲವರ ಮಧ್ಯದಲ್ಲಿ
**ವಿದಗ್ಧಂ** = ಚತುರರಾದ,
**ಸಭಾವಭೇದಂ** = ಅಭಿಪ್ರಾಯ ವಿಶೇಷ ಸಹಿತವಾಗಿ
**ಆಮ್ನಾಯಂ** = ವೇದವನ್ನು,
**ಪ್ರವದಂತಂ** = ಪ್ರವಚನ ಮಾಡುತ್ತಿರುವ
**ಸುಖತೀರ್ಥಂ** = ಆನಂದತೀರ್ಥರನ್ನು,
**ದೈವ್ಯಾಂ** = ದೇವತೆಗಳ ಸಂಬಂಧಿಯಾದ,
**ಸಭಾಯಾಂ** = ಸಭೆಯಲ್ಲಿ
**ಪದ್ಮಯೋನಿಂ ಇವ** = ಬ್ರಹ್ಮದೇವರನ್ನೋಪಾದಿಯಲ್ಲಿ,
**ಸಾಕ್ಷಾತ್** = ಪ್ರತ್ಯಕ್ಷವಾಗಿ,
**ಪೈಕ್ಷಂತ** = ಕಂಡರು.

**ತಾತ್ಪರ್ಯ**— ಗಂಗಾನದಿಯ ದಡದಲ್ಲಿ ಪ್ರಚಂಡ ವಿದ್ವಾಂಸರ ಸಭೆಯು ಸೇರಿತ್ತು. ಅಲ್ಲಿ ವೇದವೇದಾರ್ಥ ತತ್ವಜ್ಞರಲ್ಲಿ ಶ್ರೇಷ್ಠರಾದ ಶ್ರೀಪೂರ್ಣಪ್ರಜ್ಞರು ಮಧ್ಯದಲ್ಲಿ ಕುಳಿತಿದ್ದರು. ಅವರು ವೇದಾರ್ಥವನ್ನು ಬೇರೆ ಬೇರೆ ರೀತಿಯಿಂದ ವಿವರಿಸುತ್ತಾ, ವೇದಗಳ ಬೇರೆ ಬೇರೆ ಅಭಿಪ್ರಾಯಗಳನ್ನು ತಿಳಿಸುತ್ತಿದ್ದರು. ದೇವತೆಗಳ ಸಭೆಯಲ್ಲಿ ಬ್ರಹ್ಮದೇವರು ವೇದ-ಪ್ರವಚನವನ್ನು ಮಾಡುವಂತೆ ಆ ದೃಶ್ಯವು ಕಾಣಿಸುತ್ತಿತ್ತು. ಇಂತಹ ಸನ್ನಿವೇಶದಲ್ಲಿ ಆಚಾರ್ಯರ ಶಿಷ್ಯರು ಅವರನ್ನು ನೋಡಿದರು.

**ವಿಗ್ರಹ— ವ್ಯಾಕರಣವಿಶೇಷ— ಕೋಶ**—

**ಆಮ್ನಾಯವಿದಾಂ**— ಆಮ್ನಾಯಂ ವಿದಂತೀತಿ ಆಮ್ನಾಯವಿದಃ ತೇಷಾಂ ಆಮ್ನಾಯವಿದಾಂ 'ಶ್ರುತಿಃ ಸ್ತ್ರೀವೇದ ಆಮ್ನಾಯಃ' ಇತ್ಯಮರಃ ।

**ಸಭಾವಭೇಧಂ**— ಭಾವಾನಾಂ ಭೇದಃ ಭಾವಭೇದಃ, ಭಾವಭೇದೈಃ ಸಹಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸಭಾವಭೇದಂ (ಕ್ರಿ.ವಿ.) 'ಭಾವ ಸತ್ತಾಸ್ವಭಾವಾಭಿಪ್ರಾಯ ಚೇಷ್ಟಾತ್ಮಜನ್ಮಸು' ಇತ್ಯಮರಃ।

**ದೇವ್ಯಾಂ**— ದೇವಾನಾಂ ಇಯಂ ದೈವೀ, ತಸ್ಯಾಂ, ದೇವ್ಯಾಂ ।

**ಪದ್ಮಯೋನಿಃ**— ಪದ್ಮಂ ಯೋನಿಃ ಯಸ್ಯ ಸಃ ಪದ್ಮಯೋನಿಃ, ತಂ ''ಧಾತಾಬ್ಜಯೋನಿಃ'' ಇತ್ಯಮರ. ''ಸಾಕ್ಷಾತ್ ಪ್ರತ್ಯಕ್ಷತುಲ್ಯಯೋಃ'' ಇತಿ ಕೋಶಃ, ಸಾಕ್ಷಾತ್ ಪ್ರತ್ಯಕ್ಷವಾಗಿ ಎಂದು ಅರ್ಥ.

**ಕ್ರಿಯಾಪದ**— **ಪ್ರೈಕ್ಷಂತ**- 'ಪ್ರ' ಉಪಸರ್ಗ ಪೂರ್ವಕಾತ್ ಈಕ್ಷ ದರ್ಶನಾಂಕನಯೋಃ ಇತಿ ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ಅನದ್ಯತನಭೂತೇ ಲಜ್ ಪ್ರಥಮಪುರುಷೇ ಬಹುವಚನೇ 'ಪ್ರೈಕ್ಷಂತ' ಇತಿ ರೂಪಂ ।

ಪ್ರ-ಐಕ್ಷತ, ಐಕ್ಷೇತಾಂ ಐಕ್ಷಂತ, ಐಕ್ಷಥಾಃ ಐಕ್ಷೇಥಾಂ ಐಕ್ಷಧ್ವಂ, ಐಕ್ಷೇ ಐಕ್ಷಾವಹಿ ಐಕ್ಷಾಮಹಿ ॥

**ಪ್ರಯೋಗ**— ಏತೇ ಸುಖತೀರ್ಥಂ ದೈವ್ಯಾಂ ಸಭಾಯಾಂ ಪದ್ಮಯೋನಿಂ ಇವ ಸಾಕ್ಷಾತ್ ಪ್ರೈಕ್ಷಂತ (ಕರ್ತರಿ), ಏತೈಃ ಸುಖತೀರ್ಥಃ ದೈವ್ಯಾಂ ಸಭಾಯಾಂ ಪದ್ಮಯೋನಿಃ ಇವ ಸಾಕ್ಷಾತ್ ಪ್ರೈಕ್ಷತ (ಕರ್ಮಣಿ)

★ ★ ★

**ಅವತಾರಿಕಾ**— ಆಚಾರ್ಯರು ಹಸ್ತಿನಾವತಿಗೆ ಬಂದರೆಂದು ತಿಳಿಸುತ್ತಾರೆ.

**ಪ್ರಾಪ್ತಸ್ತತೋ ಹಸ್ತಿನರಾಜಧಾನೀಂ**
**ಮಾಸಾನುವಾಸೇಹ ಸ ವಾಸಯೋಗ್ಯಾನ್ ।**
**ಮಠಾಂತರೇಽನಂತಗುಣಾಂತರಃ ಸ-**
**ನ್ನೇಕಾಂತದೇಶೇ ಸರಿತೋಽಸಮಿಪೇ ॥ 34 ॥**

**ಪದಚ್ಛೇದ**— ಪ್ರಾಪ್ತಃ, ತತಃ, ಹಸ್ತಿನರಾಜಧಾನೀಂ, ಮಾಸಾನ್, ಉವಾಸ, ಇಹ, ಸಃ, ವಾಸಯೋಗ್ಯಾನ್, ಮಠಾಂತರೇ, ಅನಂತಗುಣಾಂತರಃ, ಸನ್, ಏಕಾಂತದೇಶೇ, ಸರಿತಃ, ಅಸಮೀಪೇ ।

**ಅನ್ವಯ**— ತತಃ, ಹಸ್ತಿನರಾಜಧಾನೀಂ, ಪ್ರಾಪ್ತಃ, ಸಃ, ಇಹ, ಸರಿತಃ, ಅಸಮೀಪೇ, ಏಕಾಂತದೇಶೇ, ಮಠಾಂತರೇ, ಅನಂತಗುಣಾಂತರಃ ಸನ್, ವಾಸಯೋಗ್ಯಾನ್, ಮಾಸಾನ್, ಉವಾಸ ।

**ಅನ್ವಯಾರ್ಥ**—

**ತತಃ** = ಅನಂತರ (ಗಂಗಾನದಿಯ ದಡದಿಂದ)

**ಹಸ್ತಿನರಾಜಧಾನೀಂ** = ಹಸ್ತಿನಾವತೀ ಎಂಬ ರಾಜಧಾನಿಯನ್ನು

**ಪ್ರಾಪ್ತಃ** = ಸೇರಿದ,

**ಸಃ** = ಆ ಮಧ್ವಾಚಾರ್ಯರು,

**ಇಹ** = ಇಲ್ಲಿ

**ಸರಿತಃ** = ಗಂಗೆಯ,

**ಅಸಮೀಪೇ** = ದೂರದಲ್ಲಿ

**ಏಕಾಂತದೇಶೇ** = ಜನರಿಲ್ಲದ ಸ್ಥಳದಲ್ಲಿ

**ಮಠಾಂತರೇ** = ಯಾವುದೋ ಒಂದು ಮಠದಲ್ಲಿ

**ಅನಂತಗುಣಾಂತರಃ ಸನ್** = ಶ್ರೀಮನ್ನಾರಾಯಣನ ಗುಣಗಳಲ್ಲಿ ಮನಸ್ಸು ಉಳ್ಳವರಾಗಿ,

**ವಾಸಯೋಗ್ಯಾನ್** = (ಯತಿಗಳಿಗೆ) ಒಂದೇ ಸ್ಥಳದಲ್ಲಿ ವಾಸಮಾಡಲು ಯೋಗ್ಯವಾದ,

**ಮಾಸಾನ್** = ನಾಲ್ಕು ತಿಂಗಳ ಕಾಲದಲ್ಲಿ,

**ಉವಾಸ** = ವಾಸ ಮಾಡಿದರು.

**ತಾತ್ಪರ್ಯ—** ಅಲ್ಲಿಂದ ಶ್ರೀಮಧ್ವಾಚಾರ್ಯರು ಹಸ್ತಿನಾಪುರಕ್ಕೆ ತೆರಳಿದರು. ಅಲ್ಲಿ ಗಂಗಾನದಿಯಿಂದ ಸ್ವಲ್ಪ ದೂರದಲ್ಲಿಯೇ ಇರುವ ಯಾವುದೋ ಒಂದು ಮಠದಲ್ಲಿ ಶ್ರೀಮನ್ನಾರಾಯಣನನ್ನು ಅಂತರಂಗದಲ್ಲಿ ಧ್ಯಾನಿಸುತ್ತಾ ಮಳೆಗಾಲದ ನಾಲ್ಕು ತಿಂಗಳು ಚಾತುರ್ಮಾಸ್ಯ ವ್ರತಾನುಷ್ಠಾನ ಮಾಡುತ್ತಾ ವಾಸಿಸಿದರು.

**ವಿಗ್ರಹ—**

**ಹಸ್ತಿನರಾಜಧಾನೀಂ—** ಹಸ್ತಿನಂ ಇತಿ ರಾಜಧಾನೀ ಹಸ್ತಿನರಾಜಧಾನೀ ತಾಂ ।

**ವಾಸಯೋಗ್ಯಾನ್—** ವಾಸಸ್ಯ ಯೋಗ್ಯಾಃ ವಾಸಯೋಗ್ಯಾಃ ತಾನ್ ।

**ಮಠಾಂತರಂ—** ಅನ್ಯಃ ಮಠಃ ಮಠಾಂತರಂ, ತಸ್ಮಿನ್ ಮಠಾಂತರೇ ।

**ಅನಂತಗುಣಾಂತರಃ—** ಅನಂತಸ್ಯ ಗುಣಾಃ ಅನಂತಗುಣಾಃ, ಅನಂತಗುಣೇಷು ಅಂತರಂ ಯಸ್ಯ ಸಃ ಅನಂತಗುಣಾಂತರಃ ।

**ಏಕಾಂತದೇಶೇ—** ಏಕಾಂತಶ್ಚಾಸೌ ದೇಶಶ್ಚ ಏಕಾಂತದೇಶಃ, ತಸ್ಮಿನ್ ಏಕಾಂತದೇಶೇ ।

**ಅಸಮೀಪ್ತೇ—** ನ ಸಮೀಪಃ ಅಸಮೀಪಃ ತಸ್ಮಿನ್ ।

**ಕ್ರಿಯಾಪದ—** ಶ್ರೀಉವಾಸ- ವಸ ನಿವಾಸೇ ಇತಿ ನಿರಾಸಾರ್ಥಕಾತ್ ವಸಧಾತೋಃ ಅಕರ್ಮಕಾತ್ ಕರ್ತರಿ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಉವಾಸ ಇತಿರೂಪಂ ।

ಉವಾಸ ಊಷತುಃ ಊಷುಃ, ಉವಸಿಥ ಉವಸ್ಥ ಊಷಥುಃ ಊಷ, ಉವಾಸ ಉವಸ ಊಷಿವ, ಊಷಿಮ ॥

**ಪ್ರಯೋಗ—** ಸಃ ಮಠಾಂತರೇ ವಾಸಯೋಗ್ಯಾನ್ ಮಾಸಾನ್ ಉವಾಸ (ಕರ್ತರಿ)
ತೇನ ಮಠಾಂತರೇ ವಾಸಯೋಗ್ಯಾನ್ ಮಾಸಾನ್ ಊಷೇ (ಭಾವೇ)

★ ★ ★

ಅವತಾರಿಕಾ— ಆಗ ಅಲ್ಲಿ ಸಾಕ್ಷಾತ್ ಮೂರ್ತಿಮತ್ತಾಗಿ ಗಂಗೆಯೇ ಆಚಾರ್ಯರ ಸೇವೆಗೆ ಬಂದಳೆನ್ನುತ್ತಾರೆ.

**ಭಿತ್ತ್ವಾ ಭುವಂ ದೇವನದೀ ಜಗಾಮ**
**ಶಾಖಾವಿಶೇಷೇಣ ನಿಷೇವಿತುಂ ತಮ್ ।**
**ವಾಣೀ ಚ ಯತ್ಪ್ರೇಷ್ಯತಯಾ ಕೃತಾರ್ಥಾ**
**ಶಿವಾದಿವಂದ್ಯಾ ನ ತದತ್ರ ಚಿತ್ರಮ್ ॥ 35 ॥**

**ಪದಚ್ಛೇದ—** ಭಿತ್ತ್ವಾ ಭುವಂ ದೇವನದೀ, ಜಗಾಮ, ಶಾಖಾವಿಶೇಷೇಣ, ನಿಷೇವಿತುಂ, ತಂ, ವಾಣೀ, ಚ, ಯತ್ ಪ್ರೇಷ್ಯತಯಾ, ಕೃತಾರ್ಥಾ, ಶಿವಾದಿವಂದ್ಯಾ, ನ, ತತ್, ಅತ್ರ, ಚಿತ್ರಂ ।

**ಅನ್ವಯ—** ದೇವನದೀತಂ, ನಿಷೇವಿತುಂ ಶಾಖಾವಿಶೇಷೇಣ, ಭುವಂ, ಭಿತ್ತ್ವಾ ಜಗಾಮ, ಶಿವಾದಿವಂದ್ಯಾ, ವಾಣೀ, ಚ, ಯತ್ಪ್ರೇಷ್ಯತಯಾ, ಕೃತಾರ್ಥಾ, ಅತ್ರ, ತತ್, ಚಿತ್ರಂ, ನ ।

**ಅನ್ವಯಾರ್ಥ—**

**ದೇವನದೀ** = ಗಂಗೆಯು,

**ತಂ** = ಆ ಶ್ರೀಮಧ್ವಾಚಾರ್ಯರನ್ನು

**ನಿಷೇವಿತುಂ** = ಸೇವಿಸುವುದಕ್ಕೆ

**ಶಾಖಾವಿಶೇಷೇಣ** = ಒಂದು ಕೊಂಬೆಯ ಮೂಲಕವಾಗಿ

**ಭುವಂ** = ಭೂಮಿಯನ್ನು,

**ಭಿತ್ತ್ವಾ** = ಭೇದಿಸಿ

**ಜಗಾಮ** = ಬಂದಳು.

**ಶಿವಾದಿವಂದ್ಯಾ** = ಶಂಕರ ಮೊದಲಾದವರಿಂದ ವಂದಿಸಲು ಯೋಗ್ಯಳಾದ,

**ವಾಣೀ ಚ** = ಸರಸ್ವತಿಯೂ

**ಯತ್ಪ್ರೇಷ್ಯತಯಾ** = ಯಾವ ಆಚಾರ್ಯರ ದಾಸಿಯ ಭಾವದಿಂದ,

**ಕೃತಾರ್ಥಾ** = ಧನ್ಯಳೋ,

**ಅತ್ರ** = ಈ ಮಧ್ವರಲ್ಲಿ

**ತತ್** = ಆ ಗಂಗೆಯು ಸೇವಿಸಿದಳೆಂದು

**ಚಿತ್ರಂ ನ** = ಆಶ್ಚರ್ಯಕರವಲ್ಲ.

**ತಾತ್ಪರ್ಯ—** ಗಂಗೆಯು ಶ್ರೀಮಧ್ವಾಚಾರ್ಯರನ್ನು, ಚಾತುರ್ಮಾಸ್ಯ ವ್ರತಾನುಷ್ಠಾನ ಕಾಲದಲ್ಲಿ ಸೇವಿಸಲು ಇಚ್ಛಿಸಿದಳು. ಆದರಿಂದ ಅವಳು ಆಚಾರ್ಯರು ವಾಸಿಸುತ್ತಿದ್ದ ಮಠದ ಹತ್ತಿರವಿರುವ ಒಂದು ಮರದ ಬುಡದ ಭೂಮಿಯನ್ನು ಸೀಳಿ ಆದರ ಕೊಂಬೆಯ ಮೂಲಕ ಬಂದು ಕಾಣಿಸಿಕೊಂಡಳು. ಕೊಂಬೆಯ ಮೂಲಕ ಗಂಗೆ ಸುರಿಯಿತು. ಶಂಕರ ಮೊದಲಾದ ದೇವತೆಗಳಿಂದಲೂ ಪೂಜಿತವಾದ ಹಾಗೆಯೇ ಗಂಗೆಗಿಂತಲೂ ಉತ್ತಮಳಾದ ಸರಸ್ವತಿಯೂ ಸಹ ಮಧ್ವಾಚಾರ್ಯರಿಗೆ ದಾಸಿಯಾಗಿ ಧನ್ಯಳಾಗಿರುವಾಗ ಗಂಗೆಯು ಈ ರೀತಿ ಸೇವಿಸುವುದು ಆಶ್ಚರ್ಯವಲ್ಲ.

ವಿಗ್ರಹ—

**ದೇವನದೀ—** ದೇವಾನಾಂ ನದೀ ದೇವನದೀ ।

**ಶಾಖಾವಿಶೇಷಃ—** ಶಾಖಾಯಾಃ ವಿಶೇಷಃ ಶಾಖಾವಿಶೇಷಃ, ತೇನ, ಶಾಖಾವಿಶೇಷೇನ ।

**ಪ್ರೇಷ್ಯತಯಾ—** ಪ್ರೇಷ್ಯಾಯಾಃ ಭಾವಃ ಪ್ರೇಷ್ಯತಾ, ಯಸ್ಯ ಪ್ರೇಷ್ಯತಾ ಯತ್ಪ್ರೇಷ್ಯತಾ ತಯಾ, ''ನಿಯೋಜ್ಯ-ಯತ್ಕೇಕಿಂಕರಪ್ರೇಷ್ಯ ಭುಜಿಷ್ಯ ಪರಿಚಾರಿಕಾ'' ಎಂಬ ಅಮರಕೋಶದಿಂದ ಪ್ರೇಷ್ಯ ಶಬ್ದಕ್ಕೆ ಸೇವಕ ಎಂದು ಅರ್ಥ.

**ಶಿವಾದಿವಂದ್ಯಾ—** ಶಿವಃ ಆದಿಃ ಯೇಷಾಂ ತೇ ಶಿವಾದಯಃ, ಶಿವಾದಿಭಿಃ ವಂದ್ಯಾ ಶಿವಾದಿವಂದ್ಯಾ ।

**ಕ್ರಿಯಾಪದ—** **ಜಗಾಮ-** ಗಮ್ ಲೃ ಗತೌ ಇತಿ ಗತ್ಯರ್ಥಕಾತ್ ಗಮ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ 'ಜಗಾಮ' ಇತಿ ರೂಪಂ ।

ಜಗಾಮ ಜಗ್ಮತುಃ ಜಗ್ಮುಃ, ಜಗಮಿಥ-ಜಗಂಥ ಜಗ್ಮಥುಃ ಜಗ್ಮ, ಜಗಾಮ-ಜಗಮ ಜಗ್ಮಿವ ಜಗ್ಮಿವ ॥

**ಪ್ರಯೋಗ—** ದೇವನದೀ ತಂ ನಿಷೇವಿತುಂ ಭುವಂ ಭಿತ್ವಾ ಜಗಾಮ । (ಕರ್ತರಿ) ದೇವನದ್ಯಾ ತಂ ನಿಷೇವಿತುಂ ಭುವಂ ಭಿತ್ವಾ ಜಗ್ಮೇ, (ಭಾವೇ) ಕರ್ಮವಿವಕ್ಷಾ ಮಾಡದೇ ಇರುವುದರಿಂದ ಇಲ್ಲಿ ಗಮ್ ಧಾತುವು ಅಕರ್ಮಕವಾಗಿದೆ. ಆದುದರಿಂದ ಇಲ್ಲಿ ಅದಕ್ಕೆ ಭಾವೇ ಪ್ರಯೋಗ ಬಂದಿದೆ.

ಧಾತೋರರ್ಥಾಂತರೇ ವೃತ್ತೇಃ ಧಾತ್ವರ್ಥೇನೋ ಪ್ರಸಂಗಹಾತ್ ।
ಪ್ರಸಿದ್ಧೇರವಿವಕ್ಷಾತಃ ಕರ್ಮಣೋಽಕರ್ಮಿಕಾ ಕ್ರಿಯಾ ॥ ಎಂದು ವಚನವಿದೆ.

ವೃತ್ತ— ಅಂತ್ಯಪಾದದಲ್ಲಿ ಉಪೇಂದ್ರವಜ್ರಾ ಉಪಜಾತಿ.

★ ★ ★

**ಅವತಾರಿಕಾ—** ಮೂರ್ತಿಮತ್ತಾಗಿ ಬಂದ ಗಂಗೆಯು ಭಕ್ತಿಪೂರ್ವಕವಾಗಿ ಶ್ರೀಮದಾಚಾರ್ಯರಿಗೆ ನಮಸ್ಕಾರ ಮಾಡಿದಳೆನ್ನುತ್ತಾರೆ.

**ಗುರುಪ್ರಬರ್ಹಸ್ಯ ಪದಾರವಿಂದಂ**
**ವಿದೂರತಃ ಸಾ ಪ್ರಣನಾಮ ಮೂರ್ತಾ ।**
**ಔದಾರ್ಯಸೌಂದರ್ಯತನುಂ ತನುಂ ತಾ-**
**ಮಾಲಕ್ಷ್ಯ ಶಿಷ್ಯೈರತಿವಿಸ್ಮಿತಂ ತೈಃ ॥ 36 ॥**

**ಪದಚ್ಛೇದ—** ಗುರುಪ್ರಬರ್ಹಸ್ಯ, ಪದಾರವಿಂದಂ, ವಿದೂರತಃ, ಸಾ, ಪ್ರಣನಾಮ, ಮೂರ್ತಾ, ಔದಾರ್ಯ-ಸೌಂದರ್ಯತನುಂ, ತನುಂ, ತಾಂ, ಆಲಕ್ಷ್ಯ, ಶಿಷ್ಯೈಃ, ಅತಿವಿಸ್ಮಿತಂ, ತೈಃ ।

**ಅನ್ವಯ—** ಮೂರ್ತಾ ಸಾ, ಗುರುಪ್ರಬರ್ಹಸ್ಯ, ಪದಾರವಿಂದಂ, ವಿದೂರತಃ, ಪ್ರಣನಾಮ, ಔದಾರ್ಯ-ಸೌಂದರ್ಯತನುಂ, ತಾಂ, ತನುಂ, ಆಲಕ್ಷ್ಯ, ತೈಃ, ಶಿಷ್ಯೈಃ, ಅತಿವಿಸ್ಮಿತಂ ।

**ಅನ್ವಯಾರ್ಥ—**

**ಮೂರ್ತಾ** = ಸಾಮಾನ್ಯ ಜನರ ದೃಷ್ಟಿಗೆ ಗೋಚರವಾದ ಸ್ತ್ರೀದೇಹವುಳ್ಳ,
**ಸಾ** = ಆ ಗಂಗಾದೇವಿಯು,
**ಗುರುಪ್ರಬರ್ಹಸ್ಯ** = ಗುರುಶ್ರೇಷ್ಠರಾದ ಶ್ರೀಮಧ್ವಾಚಾರ್ಯರ,
**ಪದಾರವಿಂದಂ** = ಪಾದ ಕಮಲವನ್ನು,
**ವಿದೂರತಃ** = ಸ್ವಲ್ಪ ದೂರದಿಂದ
**ಪ್ರಣನಾಮ** = ವಂದಿಸಿದಳು.
**ತೈಃ ಶಿಷ್ಯೈಃ** = ಆ ಶಿಷ್ಯರಿಂದ,
**ಔದಾರ್ಯಸೌಂದರ್ಯತನುಂ** = ಉದಾರತೆ, ಚೆಲುವು ಇವುಗಳೇ ಶರೀರವಾಗಿ ಉಳ್ಳ,
**ತಾಂ ತನುಂ** = ಆ ಶರೀರವನ್ನು,
**ಆಲಕ್ಷ್ಯ** = ನೋಡಿ
**ಅತಿವಿಸ್ಮಿತಂ** = ಅತ್ಯಂತ ಆಶ್ಚರ್ಯಗೊಳ್ಳೋಣವಾಯಿತು.

**ತಾತ್ಪರ್ಯ—** ಸಾಮಾನ್ಯ ಜನರ ದೃಷ್ಟಿಗೂ ಗೋಚರವಾಗುವಂತೆ ಸ್ತ್ರೀ ದೇಹವನ್ನು ಧರಿಸಿ ಬಂದ ಆ ಗಂಗೆಯು ಗುರುಶ್ರೇಷ್ಠರಾದ ಶ್ರೀಮಧ್ವಾಚಾರ್ಯರನ್ನು ಸ್ವಲ್ಪ ದೂರದಿಂದ ನಮಸ್ಕಾರ ಮಾಡಿದಳು. ಅವಳ ಶರೀರವು ಔದಾರ್ಯ ಮತ್ತು ಸೌಂದರ್ಯಗಳು ದೇಹ ಧರಿಸಿ ಬಂದಂತೆ ಇತ್ತು. ಅಂತಹ ಗಂಗೆಯ ಶರೀರವನ್ನು ನೋಡಿ ಎಲ್ಲರೂ ಆಶ್ಚರ್ಯ ಗೊಂಡರು.

**ವಿಗ್ರಹ— ಕೋಶ—**

**ಗುರುಪ್ರಬರ್ಹಸ್ಯ—** ಗುರೂಣಾಂ ಪ್ರಬರ್ಹಃ ಗುರುಪ್ರಬರ್ಹಃ ತಸ್ಯ, ಗುರುಪ್ರಬರ್ಹಸ್ಯ । ಪ್ರಬರ್ಹ ಎಂದರೆ ಮುಖ್ಯ ಶ್ರೇಷ್ಠ ಎಂದು ಅರ್ಥ. 'ಮುಖ್ಯವರ್ಯ ವರೇಣ್ಯಾಶ್ಚ ಪ್ರಬರ್ಹೋಽನುತ್ತಮೋತ್ತಮಃ' ಎಂದು ಅಮರ.

**ಪದಾರವಿಂದಂ—** ಪದಂ ಅರವಿಂದಂ ಇವ ಪದಾರವಿಂದಂ ।

**ಔದಾರ್ಯಸೌಂದರ್ಯತನುಂ—** ಉದಾರಾಯಾಃ ಭಾವಃ ಔದಾರ್ಯಂ, ಸುಂದರ್ಯಾಃ ಭಾವಃ ಸೌಂದರ್ಯಂ, ಔದಾರ್ಯಂ ಚ ಸೌಂದರ್ಯಂ ಚ ಔದಾರ್ಯಸೌಂದರ್ಯೇ, ಔದಾರ್ಯ ಸೌಂದರ್ಯೇ ಏವ ತನುಃ ಯಸ್ಯಾಃ ಸಾ ಔದಾರ್ಯಸೌಂದರ್ಯತನುಃ, ತಾಂ ಔದಾರ್ಯ ಸೌಂದರ್ಯತನುಂ ।

**ಕ್ರಿಯಾಪದ—** ಪ್ರಣನಾಮ- ಣಮು ಪ್ರಹ್ವತ್ವೇ ಶಬ್ದೇ ಚ ಇತಿ ಪ್ರಹ್ವತ್ವಶಬ್ದಾರ್ಥಕಾತ್ ನಮ್‌ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮ ಪುರುಷೇ ಏಕವಚನೇ ಪ್ರಣನಾಮ ಇತಿರೂಪಂ ।

ಪ್ರ+ನನಾಮ ನೇಮತುಃ ನೇಮುಃ, ನೇಮಿಥ-ನನಂಥ ನೇಮಥುಃ ನೇಮ, ನನಾಮ-ನನಮ ನೇಮಿವ ನೇಮಿಮ ॥

**ಪ್ರಯೋಗ—** ಮೂರ್ತಾ ಸಾ ಗುರುಪ್ರಬರ್ಹಸ್ಯ ಪದಾರವಿಂದಂ ಪ್ರಣನಾಮ (ಕರ್ತರಿ)
ಮೂರ್ತಯಾ ತಯಾ ಗುರುಪ್ರಬರ್ಹಸ್ಯ ಪದಾರವಿಂದಂ ಪ್ರಣೇಮೇ (ಕರ್ಮಣಿ)
ಶಿಷ್ಯೈಃ ತಾಂ ತನುಂ ಆಲಕ್ಷ್ಯ ಅತಿವಿಸ್ಮಿತಂ (ಭಾವೇ)
ಶಿಷ್ಯಾಃ ತಾಂ ತನುಂ ಆಲಕ್ಷ್ಯ ಅತಿವಿಸ್ಮಿತವಂತಃ (ಕರ್ತರಿ)

**ವೃತ್ತ—** ಪೂರ್ವಾರ್ಧ ಉಪೇಂದ್ರವಜ್ರಾ ಉಪಜಾತಿಃ.

★ ★ ★

**ಅವತಾರಿಕಾ—** ಆಚಾರ್ಯರು ಕಾಶಿಗೆ ಹೋದಾಗ ಅಲ್ಲಿ ತಮ್ಮ ಭೀಮಬಲವನ್ನು ತೋರಿಸಿದ ಕಥೆಯನ್ನು ಆರಂಭಿಸುತ್ತಾರೆ.

**ತೇನೋಪಯಾತೇನ ಕದಾಚನಾಥ**
**ವಾರಾಣಸೀಂ ಪಾಪನಿವಾರಣೇನ ।**
**ಅವಾದಿ ವಾಣೇ ಬಲಿನಃ ಸ್ವಶಿಷ್ಯಾನ್**
**ವಿಲೋಕ್ಯ ಲೀಲಾವಸರೇಽವಲಿಪ್ತಾನ್ ॥ 37 ॥**

**ಪದಚ್ಛೇದ—** ತೇನ, ಉಪಯಾತೇನ, ಕದಾಚನ, ಅಥ, ವಾರಾಣಸೀಂ ಪಾಪನಿವಾರಣೇನ, ಅವಾದಿ, ವಾಣೇ, ಬಲಿನಃ ಸ್ವಶಿಷ್ಯಾನ್, ವಿಲೋಕ್ಯ, ಲೀಲಾವಸರೇ, ಅವಲಿಪ್ತಾನ್ ।

**ಅನ್ವಯ—** ಅಥ, ಕದಾಚನ, ವಾರಾಣಸೀಂ, ಉಪಯಾತೇನ, ಪಾಪನಿವಾರಣೇನ, ತೇನ, ಲೀಲಾವಸರೇ, ಅವಲಿಪ್ತಾನ್, ಬಲಿನಃ, ಸ್ವಶಿಷ್ಯಾನ್, ಅವಲೋಕ್ಯ, ವಾಣೇ, ಅವಾದಿ ।

**ಅನ್ವಯಾರ್ಥ—**

ಅಥ = ಚಾತುರ್ಮಾಸ್ಯವ್ರತ ಸಮಾಪ್ತಿಯಾದ ಮೇಲೆ,
ಕದಾಚನ = ಒಂದಾನೊಂದು ದಿನ,
ವಾರಾಣಸೀಂ = ಕಾಶಿಯನ್ನು ಕುರಿತು,
ಉಪಯಾತೇನ = ಬಂದಿದ್ದ

ಪಾಪನಿವಾರಣೇನ = ಪಾಪ ಪರಿಹಾರಕರಾದ,
ತೇನ = ಆ ಮಧ್ವಾಚಾರ್ಯರಿಂದ,
ಲೀಲಾವಸರೇ = ವಿಹಾರದ (ಆಟದ) ಸಮಯದಲ್ಲಿ
ಅವಲಿಪ್ತಾನ್ = ಅಹಂಕಾರಗೊಂಡ,
ಬಲಿನಃ = ಬಲಿಷ್ಠರಾದ,
ಸ್ವಶಿಷ್ಯಾನ್ = ತಮ್ಮ ಶಿಷ್ಯರನ್ನು
ವಿಲೋಕ್ಯ = ನೋಡಿ,
ವಾಣೀ = ಮಾತು
ಅವಾದಿ = ಹೇಳಲ್ಪಟ್ಟಿತು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ತಮ್ಮ ದರ್ಶನ, ಸಂಭಾಷಣ, ಸೇವಾದಿಗಳಿಂದ ಸಮಸ್ತ ಪಾಪ ನಿವಾರಕರು. ಮಹಾಸಾಮರ್ಥ್ಯಶಾಲಿಗಳು ಅವರು ಚಾತುರ್ಮಾಸ್ಯ ಸಮಾಪ್ತವಾದ ಮೇಲೆ ಕಾಶಿಗೆ ಹೋದರು. ಅವರ ಜೊತೆಯಲ್ಲಿ ಅನೇಕ ಶಿಷ್ಯರಿದ್ದರು. ಅವರೆಲ್ಲರೂ ಬಲಶಾಲಿಗಳಾದ ಯುವಕರು. ಒಂದಾನೊಂದು ದಿನ ವಿಹಾರದ ಸಮಯದಲ್ಲಿ ವಿನೋದದಿಂದ ಬಲಾಬಲವಿಚಾರವನ್ನು ಮಾಡುತ್ತಾ ಇರುವಾಗ ಶಿಷ್ಯರು ತಾವು ಯುವಕರು ಮತ್ತು ಬಲಶಾಲಿಗಳು, ಆಚಾರ್ಯರಿಗಿಂತಲೂ ಹೆಚ್ಚು ಸಾಮರ್ಥ್ಯವಂತರೆಂದು ಅಹಂಕಾರವನ್ನು ತೋರಿಸಿದರು. ಅವರ ಅಹಂಕಾರಭಾವವನ್ನು ಕಂಡು ಆಚಾರ್ಯರು ಇಂತೆಂದರು.

ವಿಗ್ರಹ—

ಪಾಪನಿವಾರಣನೇನ— ಪಾಪಾನಾಂ ನಿವಾರಣಂ ಯೇನ ಸಃ ಪಾಪನಿವಾರಣಃ, ತೇನ ಪಾಪನಿವಾರಣೇನ
ಬಲಿನಃ— ಬಲಂ ಏಷಾಂ ಅಸ್ತೀತಿ ಬಲಿನಃ, ತಾನ್ ಬಲಿನಃ ।
ಸ್ವಶಿಷ್ಯಾನ್— ಸ್ವಸ್ಯ ಶಿಷ್ಯಾಃ ಸ್ವಶಿಷ್ಯಾಃ ತಾನ್, ಸ್ವಶಿಷ್ಯಾನ್ ।
ಲೀಲಾವಸರೇ— ಲೀಲಾಯಾಃ ಅವಸರಃ ಲೀಲಾವಸರಃ, ತಸ್ಮಿನ್ ಲೀಲಾವಸಾರೇ ।

ಕ್ರಿಯಾಪದ— ಅವಾದಿ- ವದವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ವದ್ ಧಾತೋಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ 'ಅವಾದಿ' ಇತಿರೂಪಂ ।

ಅವಾದಿ ಅವಾದಿಷಾತಾಂ ಅವಾದಿಷತ, ಅವಾದಿಷ್ಠಾಃ ಅವಾದಿಷಾಥಾಂ ಅವಾದಿಧ್ವಂ, ಅವಾದಿಷಿ ಅವಾದಿಷ್ವಹಿ ಅವಾದಿಷ್ಮಹಿ ॥

ಪ್ರಯೋಗ— ತೇನ ವಾಣೀ ಅವಾದಿ (ಕರ್ತರಿ), ಸಃ ವಾಣೀಂ ಅವಾದೀತ್ (ಲುಙ್)

★ ★ ★

ಅವತಾರಿಕಾ— ಕಾಶಿಗೆ ಹೋದಾಗ ಆಚಾರ್ಯರು ಬಲದ ವಿಷಯದಲ್ಲಿ ಅಹಂಭಾವದಿಂದ ಕೂಡಿದ ಶಿಷ್ಯರನ್ನು ಕುರಿತು ಆಡಿದ ಮಾತನ್ನು ವಿವರಿಸುತ್ತಾರೆ.

**ನಿಯುದ್ಧಸಿದ್ಧ್ಯೈ ಯುಗಪದ್ಧಿ ವೀರ-**
**ಮ್ಮನ್ಯಾ ಭವಂತೋಽಭಿಪತಂತು ಮಾಂ ದ್ರಾಕ್ ।**
**ಸಮಸ್ತಶಕ್ತಿಂ ನ ಯುನಕ್ತಿ ಯಃ ಸ್ವಾ-**
**ಮತ್ರಾಸ್ಮದಾಜ್ಞಾಂ ಸ ನಿರಾಕರೋತಿ ॥ 38 ॥**

**ಪದಚ್ಛೇದ**— ನಿಯುದ್ಧಸಿದ್ಧ್ಯೈ, ಯುಗಪತ್, ಹಿ, ವೀರಮ್ಮನ್ಯಾ, ಭವಂತಃ, ಅಭಿಪತಂತು, ಮಾಂ, ದ್ರಾಕ್, ಸಮಸ್ತಶಕ್ತಿಂ, ನ, ಯುನಕ್ತಿ, ಯಃ, ಸ್ವಾಂ, ಅತ್ರ, ಅಸ್ಮದಾಜ್ಞಾಂ, ಸಃ, ನಿರಾಕರೋತಿ ।

**ಅನ್ವಯ**— ಹೇ ವೀರಮ್ಮನ್ಯಾಃ, ಭವಂತಃ ಯುಗಪತ್ ನಿಯುದ್ಧಸಿದ್ಧ್ಯೈ, ದ್ರಾಕ್, ಮಾಂ, ಅಭಿಪತಂತು, ಯಃ, ಅತ್ರ ಸ್ವಾಂ, ಸಮಸ್ತಶಕ್ತಿಂ, ನ ಯುನಕ್ತಿ, ಸಃ, ಅಸ್ಮದಾಜ್ಞಾಂ, ನಿರಾಕರೋತಿಹಿ ।

**ಅನ್ವಯಾರ್ಥ**—

**ಹೇ ವೀರಮ್ಮನ್ಯಾಃ** = ಎಲೈ! ನಾವೇ ಸಮರ್ಥರೆಂದು ತಿಳಿದುಕೊಂಡಿರುವ ನಮ್ಮ ಶಿಷ್ಯರಾದ ತರುಣರೇ,
**ಭವಂತಃ** = ನೀವೆಲ್ಲರೂ,
**ಯುಗಪದ್** = ಒಂದೇ ಬಾರಿ (ಒಟ್ಟಿಗೆ)
**ನಿಯುದ್ಧಸಿದ್ಧ್ಯೈ** = ಮಲ್ಲಯುದ್ಧ (ಜಟ್ಟಿ ಕಾಳಗ) ನಡೆಸುವುದಕ್ಕಾಗಿ,
**ದ್ರಾಕ್** = ಕೂಡಲೇ (ಬೇಗನೇ)
**ಮಾಂ** = ನನ್ನನ್ನು ಕುರಿತು,
**ಅಭಿಪತಂತು** = ಏರಿ ಬನ್ನಿರಿ. (ಎದುರಿಸಿರಿ)
**ಯಃ** = ಯಾವನು
**ಅತ್ರ** = ಈ ಮಲ್ಲಯುದ್ಧದಲ್ಲಿ,
**ಸ್ವಾಂ** = ತನ್ನದಾದ
**ಸಮಸ್ತಶಕ್ತಿಂ** = ಸಂಪೂರ್ಣ ಸಾಮರ್ಥ್ಯವನ್ನು,
**ನ ಯುನಕ್ತಿ** = ವಿನಿಯೋಗಿಸುವುದಿಲ್ಲವೋ,
**ಸಃ** = ಅವನು
**ಅಸ್ಮದಾಜ್ಞಾಂ** = ನಮ್ಮ ಅಪ್ಪಣೆಯನ್ನು,
**ನಿರಾಕರೋತಿ ಹಿ** = ಮೀರುತ್ತಾನೆ. ನಿಶ್ಚಯ.

**ತಾತ್ಪರ್ಯ**— ನಮ್ಮ ಪ್ರೀತಿಯ ಶಿಷ್ಯರೇ! ನಾವೇ ಬಲಶಾಲಿಗಳು ನಮ್ಮಷ್ಟು ಬಲ ನಮ್ಮ ಆಚಾರ್ಯರಿಗೂ ಇಲ್ಲವೆಂದು ನೀವೆಲ್ಲರೂ ಅಹಂಕಾರ ಪಡುತ್ತಿದ್ದೀರಿ. ಆದುದರಿಂದ ಬಲಾಬಲ ನಿರ್ಣಯಕ್ಕಾಗಿ ಒಂದು ಪರೀಕ್ಷೆಯನ್ನು ಏರ್ಪಡಿಸೋಣ. ನೀವೆಲ್ಲರೂ ಸೇರಿ ನನ್ನೊಡನೆ ಜಟ್ಟಿ ಕಾಳಗಕ್ಕಾಗಿ ಸಿದ್ಧರಾಗಿ ಬನ್ನಿ. ಎಲ್ಲರೂ ಒಂದೇ ಬಾರಿ ನನ್ನೆದುರಾಗಿ ಬಂದು, ನನ್ನ ಜತೆಗೆ ಮಲ್ಲಯುದ್ಧ ಮಾಡಿರಿ. ಈ ಜಟ್ಟಿ ಕಾಳಗದಲ್ಲಿ ನೀವೆಲ್ಲರೂ ನಿಮ್ಮ ಎಲ್ಲಾ ಶಕ್ತಿಯನ್ನೂ ಉಪಯೋಗಿಸಬೇಕು. ಇದು ನನ್ನ ಅಪ್ಪಣೆ. ನನ್ನ ಮೇಲಿನ ದಾಕ್ಷಿಣ್ಯದಿಂದ ಯಾವನಾದರೊಬ್ಬನು ತನ್ನ ಶಕ್ತಿಯನ್ನು ಪೂರ್ತಿಯಾಗಿ ಉಪಯೋಗಿಸದಿದ್ದರೆ ಅವರು ನನ್ನ ಅಪ್ಪಣೆಯನ್ನು ಮೀರಿದ ಪಾಪಕ್ಕೆ ಗುರಿಯಾಗುತ್ತಾರೆ (ಎಂದು ಆಚಾರ್ಯರು ಶಪಥ ಪೂರ್ವಕವಾಗಿ ಶಿಷ್ಯರನ್ನು ಮಲ್ಲಯುದ್ಧಕ್ಕೆ ಕರೆದರು).

**ವಿಗ್ರಹ— ಕೋಶ**—

'ನಿಯುದ್ಧೇಽಥ ತುಮುಲಂ ರಣಸಂಕುಲೇ' ಎಂಬ ಕೋಶಾನುಸಾರವಾಗಿ ನಿಯುದ್ಧವೆಂದರೆ ಮಲ್ಲಯುದ್ಧ ಜಟ್ಟಿ ಕಾಳಗ ಎಂದು ಅರ್ಥ.

ನಿಯುದ್ಧಸಿದ್ಧ್ಯೈ— ನಿಯುದ್ಧಸ್ಯ ಸಿದ್ಧಿಃ ನಿಯುದ್ಧಸಿದ್ಧಿಃ ತಸ್ಯೈ ನಿಯುದ್ಧಸಿದ್ಧ್ಯೈ 'ತದಾ ತದಾನೀಂ ಯುಗಪದೇಕದಾ ಸರ್ವದಾ ಸದಾ' ಎಂಬ ಕೋಶಾನುಸಾರವಾಗಿ 'ಯುಗಪತ್' ಎಂದರೆ ಏಕಕಾಲದಲ್ಲಿ ಎಂದು ಅರ್ಥ.

**ವೀರಮ್ಮನ್ಯಾಃ**— ಆತ್ಮನಃ ವೀರಾನ್ ಮನ್ಯಂತೇ ಇತಿ ವೀರಮ್ಮನ್ಯಾಃ, 'ಆತ್ಮಮಾನೇ ಖಶ್ ಚ' (ಪಾ.ಸೂ. 3.2.83) ಎಂಬ ಸೂತ್ರದಿಂದ ಖಶ್ ಪ್ರತ್ಯಯ. 'ಅರುರ್ದ್ವಿಷದಜಂತಸ್ಯ ಮುಮ್' (ಪಾ.ಸೂ. 6.3.67) ಎಂಬ ಸೂತ್ರದಿಂದ ಪೂರ್ವಪದದ ಕೊನೆಗೆ ಮುಮ್ ಆಗಮ. ಇದು ಕೃದ್ವೃತ್ತಿ. ದ್ರಾಕ್ ಎಂಬುದಕ್ಕೆ 'ದ್ರಾಜ್ ಮಂಕ್ಷುಸಪದಿದ್ರುತೇ' ಎಂಬ ಕೋಶಾನುಸಾರವಾಗಿ ಕೂಡಲೇ ಎಂದು ಅರ್ಥ.

**ಸಮಸ್ತಶಕ್ತಿಂ**— ಸಮಸ್ತಾ ಚ ಸಾ ಶಕ್ತಿಶ್ಚ ಸಮಸ್ತಶಕ್ತಿಃ, ತಾಂ ಸಮಸ್ತಶಕ್ತಿಂ ।

**ಅಸ್ಮದಾಜ್ಞಾಂ**— ಅಸ್ಮಾಕಂ ಆಜ್ಞಾ ಅಸ್ಮದಾಜ್ಞಾ, ತಾಂ, ಅಸ್ಮದಾಜ್ಞಾಂ ।

**ಕ್ರಿಯಾಪದ— ಅಭಿಪತಂತು-** ಅಭಿ ಉಪಸರ್ಗ ಪೂರ್ವಕಾತ್ ಪತ್‌ಲೃಗತೌ ಇತಿ ಗತ್ಯರ್ಥಕಾತ್ ಪತ್ ಧಾತೋ ಅಕರ್ಮಕಾತ್ (ಸಕರ್ಮಕಾತ್) ಕರ್ತರಿ ಪರಸ್ಮೈಪದಿನಃ ಆಜ್ಞಾಯಾಂ ಲೋಟ್ ಪ್ರಥಮಪುರುಷೇ ಬಹುವಚನೇ ಅಭಿಪತಂತು ಇತಿ ರೂಪಂ ।

ಅಭಿ+ಪತತು-ಪತಾತತ್ ಪತತಾಂ ಪತಂತು, ಪತ-ಪತತಾತ್ ಪತತಂ ಪತತ ಪತಾನಿ, ಪತಾವ, ಪಣಮ ॥

**ಯುನಕ್ತಿ-** ಯುಜಿರ್ ಯೋಗೇ ಇತಿ ಯೋಗಾರ್ಥಕಾತ್ (ಸಂಬಂಧಾರ್ಥಕಾತ್) ಯುಜ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ 'ಯುನಕ್ತಿ' ಇತಿ ರೂಪಂ ।

ಯುನಕ್ತಿ ಯುಂಕ್ತಃ ಯುಂಜಂತಿ, ಯುನಕ್ಷಿ ಯುಂಕ್ಥಃ ಯುಂಕ್ಥ ಯುನಜ್ಮಿ ಯುಂಜ್ವಃ ಯುಂಜ್ಮಃ ॥

**ನಿರಾಕರೋತಿ-** ನಿರ್ ಆ ಇತ್ಯುಪಸರ್ಗದ್ವಯಪೂರ್ವಕಾತ್ ಡುಕೃಞ್‌ಕರಣೇ ಇತಿ ಕರಣಾರ್ಥಕಾತ್ ಕೃಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಪ್ರಥಮಪುರುಷೇ ಏಕವಚನೇ ನಿರಾಕರೋತಿ ಇತಿ ರೂಪಂ ।

ನಿರ್+ಆ=ಕರೋತಿ ಕುರುತಃ ಕುರ್ವಂತಿ, ಕರೋಷಿ ಕುರುಥಃ ಕುರುಥ, ಕರೋಮಿ ಕುರ್ವಃ ಕುರ್ಮಃ ॥

**ಪ್ರಯೋಗ**— ಭವಂತಃ ಮಾಂ ಅಭಿಪತಂತು (ಕರ್ತರಿ), ಭವದ್ಭಿಃ ಅಹಂ ಅಭಿಪತ್ಯೈ (ಭಾವೆ) ಯಃ ಅತ್ರ ಸ್ವಾಂ ಸಮಸ್ತಶಕ್ತಿಂ ನ ಯುನಕ್ತಿ ಸಃ ಅಸ್ಮದಾಜ್ಞಾಂ ನಿರಾಕರೋತಿ ಹಿ (ಕರ್ತರಿ), ಯೇನ ಅತ್ರ ಸ್ವಾ ಸಮಸ್ತಶಕ್ತಿಃ ನ ಯುಜ್ಯತೇ ತೇನ ಅಸ್ಮದಾಜ್ಞಾ ನಿರಾಕ್ರಿಯತೇ (ಕರ್ಮಣಿ)

**ವೃತ್ತ**— ಪ್ರಥಮ ತೃತೀಯಪಾದ ಉಪೇಂದ್ರವಜ್ರಾ ಉಪಜಾತಿ ।

★ ★ ★

**ಅವತಾರಿಕಾ**— ಆಚಾರ್ಯರ ಅಮಾನುಷ ಬಲವನ್ನು ವರ್ಣಿಸುತ್ತಾರೆ.

**ಇತೀರಯನ್ ಪಂಚದಶೈಷ ಯೂನಃ**
**ಪ್ರಾಪ್ತಾನ್ ಪ್ರಯುದ್ಧಾನ್ ಯುಗಪನ್ನಿಪಾತ್ಯ ।**
**ಉತ್ಥೀಯತಾಂ ಯಸ್ಯ ಸಮರ್ಥತಾ ಸ್ಯಾ-**
**ದಿತಿ ಬ್ರುವಾಣಃ (ಬ್ರುವಾಣೋಽಶನಕೈಃ) ಶನಕೈರ್ಜಹಾಸ ॥39॥**

**ಪದಚ್ಛೇದ**— ಇತಿ, ಈರಯನ್, ಪಂಚದಶ, ಏಷಃ, ಯೂನಃ, ಪ್ರಾಪ್ತಾನ್, ಪ್ರಯುದ್ಧಾನ್, ಯುಗಪತ್, ನಿಪಾತ್ಯ, ಉತ್ಥೀಯತಾಂ, ಯಸ್ಯ, ಸಮರ್ಥತಾ ಸ್ಯಾತ್, ಇತಿ, ಬ್ರುವಾಣಃ, ಶನಕೈಃ (ಅಶನಕೈಃ) ಜಹಾಸ ।

**ಅನ್ವಯ**— ಏಷಃ, ಇತಿ, ಈರಯನ್, ಯುಗಪತ್ ಪ್ರಾಪ್ತಾನ್, ಪ್ರಯುದ್ಧಾನ್ ಪಂಚದಶಯೂನಃ ಯುಗಪತ್, ನಿಪಾತ್ಯ ಯಸ್ಯ ಸಮರ್ಥತಾ ಸ್ಯಾತ್ ತೇನ ಉತ್ಥೀಯತಾಂ ಇತಿ ಬ್ರುವಾಣಃ ಶನಕೈಃ (ಅಶನಕೈಃ) ಜಹಾಸ.

ಅನ್ವಯಾರ್ಥ—

ಏಷಃ = ಈ ಶ್ರೀಮಧ್ವಾಚಾರ್ಯರು ಇತಿ ಈ ರೀತಿಯಾಗಿ ಈರಯನ್ (ಸನ್) ಹೇಳುತ್ತಾ,

ಯುಗಪತ್ = ಒಂದೇ ಸಲ,

ಪ್ರಾಪ್ತಾನ್ = ಬಂದ (ಮೇಲೇರಿದ)

ಪ್ರಯುದ್ಧಾನ್ = ಚೆನ್ನಾಗಿ ಮಲ್ಲಯುದ್ಧ ಮಾಡುವ,

ಪಂಚದಶ = ಹದಿನೈದು ಮಂದಿ,

ಯೂನಃ = ಯುವಕರಾದ ಶಿಷ್ಯರನ್ನು

ನಿಪಾತ್ಯ = ಕೆಳಗೆ ಕೆಡವಿ,

ಯಸ್ಯ = ಯಾವನಿಗೆ,

ಸಮರ್ಥತಾ = ಶಕ್ತಿಯು

ಸ್ಯಾತ್ = ಇದ್ದೀತೋ,

ತೇನ = ಅವನಿಂದ,

ಉತ್ಥೀಯಿತಾಂ = ಮೇಲಕ್ಕೇಳಲ್ಪಡಲಿ,

ಇತಿ = ಹೀಗೆಂದು,

ಬ್ರುವಾಣಃ = ಹೇಳುತ್ತಾ,

ಶನಕೈಃ (ಅಶನಕೈಃ) = ಮೆಲ್ಲನೆ, (ಗಟ್ಟಿಯಾಗಿ,)

ಜಹಾಸ = ನಕ್ಕರು.

ತಾತ್ಪರ್ಯ— ಆಚಾರ್ಯರು ಹೀಗೆ ಹೇಳಿದ ಕೂಡಲೇ ಹದಿನೈದು ಮಂದಿ ಶಿಷ್ಯರು ಒಂದೇ ಸಲ ಆಚಾರ್ಯರ ಮೇಲೆ ಬಿದ್ದು ಕುಸ್ತಿ ಮಾಡಿದರು. ಶ್ರೀಮಧ್ವಾಚಾರ್ಯರು ಕೂಡಲೇ ಅವರನ್ನೆಲ್ಲಾ ಒಟ್ಟಿಗೆ ನೆಲಕ್ಕೆ ಕೆಡವಿದರು. ನಿಮಗೆ ಸಾಮರ್ಥ್ಯವಿದ್ದರೆ ಮೇಲಕ್ಕೇಳಿ ಎಂದು ಹೇಳುತ್ತಾ ಒಂದು ಬಾರಿ ಮೆಲ್ಲನೆ ಮತ್ತೊಂದು ಬಾರಿ ಗಟ್ಟಿಯಾಗಿಯೂ ನಕ್ಕರು.

'ಪ್ರಯುದ್ಧಾನ್' ಎಂದು ಹೇಳಿದ್ದರಿಂದ ಸ್ವಲ್ಪವೇ ಕುಸ್ತಿಯಾಡಿದರೆ ಆಚಾರ್ಯರ ಆಜ್ಞೆಯನ್ನು ಉಲ್ಲಂಘಿಸಿದ ದೋಷ ಬರುವುದೆಂದು ಅವರು ಸರ್ವಶಕ್ತಿಯಿಂದ ಯುದ್ಧ ಮಾಡಿದರು ಎಂಬ ಅಭಿಪ್ರಾಯವು ತಿಳಿದು ಬರುತ್ತದೆ.

ವಿಗ್ರಹ—

ಪಂಚದಶ— ಪಂಚಾಧಿಕಾ ದಶ ಪಂಚದಶ ।

ಸಮರ್ಥತಾ— ಸಮರ್ಥಸ್ಯ ಭಾವಃ ಸಮರ್ಥತಾ ।

ಅಶನಕೈಃ— ನ ಶನಕೈಃ ಅಶನಕೈಃ ।

ಕ್ರಿಯಾಪದ— 'ಉತ್ಥೀಯತಾಂ' ಉದ್ ಇತ್ಯುಪಸರ್ಗಪೂರ್ವಕಾತ್ ಷ್ಠಾಗತಿನಿವೃತ್ತೌ ಇತಿ ಗತಿ ನಿವೃತ್ತ್ಯರ್ಥಕಃ ಸ್ಥಾಧಾತೋಃ ಅಕರ್ಮಕಾತ್ ಕರ್ತರಿ ಭಾವೇ ಆಜ್ಞಾಯಾಂ ಲೋಟ್ (ಇಲ್ಲಿ ಪ್ರಥಮಪುರುಷೇ ಏಕವಚನ ರೂಪ ಮಾತ್ರ. ಬೇರೆ ರೂಪಗಳಿಲ್ಲ)

ಜಹಾಸ ಜಹಸತುಃ ಜಹಸುಃ, ಜಹಸಿಥ ಜಹಸಥುಃ ಜಹಸ, ಜಹಾಸ-ಜಹಸ ಜಹಸಿವ ಜಹಸಿಮ ॥

ಜಹಾಸ- ಹಸೇ ಹಸನೇ ಇತಿ ಹಸನಾರ್ಥಕಾತ್ ಹಸಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಜಹಾಸ ಇತಿ ರೂಪಂ ।

ಸ್ಯಾತ್ ಸ್ಯಾತಾಂ ಸ್ಯುಃ, ಸ್ಯಾಃ ಸ್ಯಾತಂ ಸ್ಯಾತ, ಸ್ಯಾಂ ಸ್ಯಾವ ಸ್ಯಾಮ ॥

ಸ್ಯಾತ್- ಅಸಭುವಿ ಇತಿ ಸತ್ತಾರ್ಥಕಾತ್ ಅಸ್ ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ 'ಸ್ಯಾತ್' ಇತಿ ರೂಪಂ ।

**ವ್ಯಾಕರಣ ವಿಶೇಷ—** 'ಪ್ರಯುದ್ಧಾನ್' ಎಂಬಲ್ಲಿ 'ಆದಿಕರ್ಮಣಿ ಕ್ತಃ ಕರ್ತರಿ ಚ' (3-4-70) ಎಂಬ ಸೂತ್ರದಿಂದ ಕರ್ತರಿ ಕ್ತ ಪ್ರತ್ಯಯ (ಆದಿಕರ್ಮಣಿ ಯಃ ಸ್ಯಾತ್ ಸಃ ಕರ್ತರಿಸ್ಯಾತ್‌ಚಾದ್ಭಾವ ಕರ್ಮಣೋಃ ಪ್ರಸ್ವೇದಿತಃ ಚೈತ್ರಃ = ಚೈತ್ರನು ಬೆದರಿದನು.

**ಪ್ರಯೋಗ—** ಯಸ್ಯ ಸಮರ್ಥತಾ ಸ್ಯಾತ್ (ತೇನ) ಉತ್ಥೀಯತಾಂ (ಅಕರ್ಮಕರ್ತರಿ) ಯಸ್ಯ ಸಮರ್ಥತಯಾ ಭೂಯೇತ ಸಃ ಉತ್ತಿಷ್ಠತು (ಭಾವೇ ಅಕರ್ಮಕ ಕರ್ತರಿ)

**ವೃತ್ತ—** ಪ್ರಥಮತೃತೀಯಪಾದೌ ಉಪೇಂದ್ರ ವಜ್ರಾ ಉಪಜಾತಿ ।

★ ★ ★

**ಅವತಾರಿಕಾ—** ಆಗ ಶಿಷ್ಯರು ಹೇಳಿದ ಮಾತನ್ನು ಹೇಳುತ್ತಾರೆ.

**ಸೌಮೇರವಂ ಗೌರವಮಾವಹಂತಿ**
**ತವಾಂಗಮಂಗಾಂಗುಲಯಶ್ಚ ನೋಽಂಗೇ ।**
**ಪುರಾ ವಿನಶ್ಯಾಮ ಇತೋ ದಯಾಲೋ**
**ಸ್ವಾಮಿನ್ ವಿಮುಂಚೇತ್ಯವದಂಸ್ತದಾ ತೇ ॥ 40 ॥**

**ಪದಚ್ಛೇದ—** ಸೌಮೇರವಂ, ಗೌರವಂ, ಆವಹಂತಿ, ತವ, ಅಂಗಂ, ಅಂಗಾಂಗುಲಯಃ, ಚ, ನಃ, ಅಂಗೇ, ಪುರಾ, ವಿನಶ್ಯಾಮಃ, ಇತಃ, ದಯಾಲೋ ಸ್ವಾಮಿನ್, ವಿಮುಂಚ, ಇತಿ, ಅವದನ್, ತದಾ, ತೇ ।

**ಅನ್ವಯ—** ತದಾ ತೇ ಅಂಗ! ತವ, ಅಂಗಂ, ಅಂಗುಲಯಃ, ಚ, ನಃ, ಅಂಗೇ, ಸೌಮೇರವಂ, ಗೌರವಂ, ಆವಹಂತಿ, ಇತಃ, ವಿನಶ್ಯಾಮಃ, ಪುರಾ, ದಯಾಲೋ, ಸ್ವಾಮಿನ್, ವಿಮುಂಚ, ಇತಿ ಅವದನ್ ।

**ಅನ್ವಯಾರ್ಥ—**

ತದಾ = ಆಗ
ತೇ = ಆ ಶಿಷ್ಯರು
ಅಂಗ = ಪ್ರಿಯರಾದ ಆಚಾರ್ಯರೇ,
ತವ = ನಿಮ್ಮ
**ಅಂಗಂ** = ಅವಯವವು,
**ಅಂಗುಲಯಃ ಚ** = ಬೆರಳುಗಳೂ,
**ಸೌಮೇರವಂ** = ಮೇರುಪರ್ವತಕ್ಕೆ ಸಮಾನವಾದ,
**ಗೌರವಂ** = ಭಾರವನ್ನು,
**ಆವಹಂತಿ** = ಉಂಟು ಮಾಡುತ್ತವೆ,
**ಇತಃ** = ಇದರಿಂದ
**ವಯಂ** = ನಾವು
**ಪುರಾ ವಿನಶ್ಯಾಮಃ** = ನಿಜವಾಗಿಯೂ ಸಾಯುವೆವು.
**ದಯಾಲೋ** = ಕರುಣಾಶಾಲಿಗಳಾದ,

**ಸ್ವಾಮಿನ್** = ಪ್ರಭುಗಳಾದ ಆಚಾರ್ಯರೇ,

**ವಿಮುಂಚ** = ಬಿಡಿರಿ,

**ಇತಿ** = ಹೀಗೆಂದು

**ಅವದನ್** = ಹೇಳಿದರು.

**ತಾತ್ಪರ್ಯ—** ಆಚಾರ್ಯರು ಹೀಗೆ ಹೇಳಿ ನಕ್ಕಾಗ ಆ ಶಿಷ್ಯರು ಹೀಗೆಂದರು - ''ಆಚಾರ್ಯರೇ, ತಾವು ನಮ್ಮ ಶರೀರದ ಮೇಲೆ ನಿಮ್ಮ ಅವಯವಗಳನ್ನೂ, ಬೆರಳುಗಳನ್ನೂ, ಇಟ್ಟಿದ್ದೀರಿ. ಅವು ಒಂದೊಂದು ಸುಮೇರು ಪರ್ವತದಷ್ಟು ಭಾರವಾಗಿ ತೋರುತ್ತವೆ. ನಮಗೆ ತಮ್ಮ ಶರೀರಾವಯವ ಮತ್ತು ಬೆರಳುಗಳ ಸ್ಪರ್ಶವನ್ನು ಸಹಿಸಲು ಸಾಧ್ಯವಿಲ್ಲ, ಅಯ್ಯೋ ಸತ್ತೆವು. ನಾವು ನಿಜವಾಗಿಯೂ ಸತ್ತೇ ಹೋಗುವೆವು. ಸ್ವಾಮಿ ತಾವು ದಯಾಪೂರ್ಣರು. ದಯವಿಟ್ಟು ನಮ್ಮನ್ನು ಬಿಡಿ'' ಎಂದು ಗಟ್ಟಿಯಾಗಿ ಕಿರುಚಿಕೊಂಡರು.

**ವಿಗ್ರಹ—**

**ಸೌಮೇರವಂ—** ಸುಮೇರೋಃ ಇದಂ ಸೌಮೇರವಂ ।

**ಗೌರವಂ—** ಗುರೋಃ ಭಾವಃ ಗೌರವಂ ।

**ಕ್ರಿಯಾಪದ— ಆವಹಂತಿ-** ಆಙ್ ಪೂರ್ವಕಾತ್ ವಹಪ್ರಾಪಣೇ ಇತಿ ಪ್ರಾಪಣಾರ್ಥಕಾತ್ ವಹಧಾತೋಃ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ ಆವಹಂತಿ ಇತಿ ರೂಪಂ ।

ಆ+ವಹತಿ ವಹತಃ ವಹಂತಿ, ವಹಸಿ ವಹಥಃ ವಹಥ, ವಹಾಮಿ ವಹಾವಃ ವಹಾಮಃ॥

**ವಿನಶ್ಯಾಮಃ-** ವಿ ಉಪಸರ್ಗ ಪೂರ್ವಕಾತ್ ಣಶ ಅದರ್ಶನೇ ಇತಿ ನಶ್ ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಉತ್ತಮಪುರುಷೇ ಬಹುವಚನೇ ವಿನಶ್ಯಾಮಃ ಇತಿ ರೂಪಂ।

ವಿ+ನಶ್ಯತಿ ನಶ್ಯತಃ ನಶ್ಯಂತಿ, ನಶ್ಯಸಿ ನಶ್ಯಥಃ ನಶ್ಯಥ, ನಶ್ಯಾಮಿ ನಶ್ಯಾವಃ ನಶ್ಯಾಮಃ ॥

**ವಿಮುಂಚ-** ವಿ ಇತ್ಯುಪಸರ್ಗ ಪೂರ್ವಕಾತ್ ಮುಚ್ಳ್ಮೋಕ್ಷಣೇ ಇತಿ ಮೋಕ್ಷಣಾರ್ಥಕಾತ್ ಮುಚ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲೋಟ್ ಮಧ್ಯಮಪುರುಷೇ ಏಕವಚನೇ ವಿಮುಂಚ ಇತಿ ರೂಪಂ ।

ವಿ+ಮುಂಚತು-ಮುಂಚತಾತ್ ಮುಂಚತಾಂ ಮುಂಚಂತು, ಮುಂಚ-ಮುಂಚತಾತ್ ಮುಂಚತಂ ಮುಂಚತ, ಮುಂಚಾನಿ ಮುಂಚಾವ ಮುಂಚಾಮ ॥

**ಅವದನ್-** ವದವ್ಯಕ್ತಾಯಾಂ ವಾಚೀ ಇತಿ ವ್ಯಕ್ತವಾಗರ್ಥಕಾತ್ ವದಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈ-ಪದಿನಃ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಬಹುವಚನೇ ಅವದನ್ ಇತಿರೂಪಂ ॥

ಅವದತ್, ಅವದತಾಂ ಅವದನ್, ಅವದಃ ಅವದತಂ ಅವದತ, ಅವದಂ ಅವದಾವ ಅವದಾಮ ॥

**ವ್ಯಾಕರಣವಿಶೇಷ—** ಯಾವತ್ಪುರಾನಿಪಾತಯೋರ್ಲಟ್ (3.3.4) ಯಾವತ್ ಮತ್ತು ಪುರಾ ಎಂಬ ಪದಗಳನ್ನು ಉಪಯೋಗಿಸುವಾಗ ಭವಿಷ್ಯತ್ ಕಾಲದ ಲುಟ್ ಮತ್ತು ಲೃಟ್‌ಗಳಿಗೆ ಅಪವಾದವಾಗಿ ಲಟ್ ಬರುತ್ತದೆ. ಯಾವದ್ಭುಂಕ್ತೇ ಪುರಾಭುಂಕ್ತೇ = ನಿಶ್ಚಯವಾಗಿಯೂ ಊಟ ಮಾಡುವನು ಎಂದು ಅರ್ಥ. ಅದರಂತೆ ಇಲ್ಲಿಯೂ ಪುರಾ ವಿನಶ್ಯಾಮ = ಖಂಡಿತವಾಗಿಯೂ ಸತ್ತು ಹೋಗುವೆವು ಎಂದು ಅರ್ಥ.

**ಕೋಶ—** 'ಅಥ ಸಂಬೋಧನಾರ್ಥಕಾಃ ಸ್ಯುಃ ಪಾಟ್ ಪ್ಯಾಡಂಗ ಹೇ ಹೈ ಭೋಃ' ಎಂದು ಅಮರಕೋಶ, ಪ್ರಿಯಸ್ಯ ಸಂಬೋಧನೇಽಂಗ=ಪ್ರಿಯರನ್ನು ಸಂಬೋಧಿಸುವಾಗ 'ಅಂಗ' ಎಂದು ಹೇಳುತ್ತಾರೆ.

**'ಅಂಗೇ ಶರೀರೇ'-** 'ಅಂಗಮಾತ್ರಾಂತಿಕೋಪಾಯಪ್ರತೀಕೇಷ್ವಪ್ರಧಾನಕೇ' ವಿಶ್ವಕೋಶ.

**ಸೌಮೇರವಂ-** ಮೇರುಃ ಸುಮೇರುರ್ಹೇಮಾದ್ರಿ 'ರತ್ನಸಾನುಃ ಸುರಾಲಯಃ' ಅಮರ,

**ಪ್ರಯೋಗ**—ತವ ಅಂಗಂ ಅಂಗಾಂಗುಲಯಶ್ಚ ಸೌಮೇರವಂ ಗೌರವಂ ಆವಹಂತಿ (ಸಕರ್ಮಕಕರ್ತರಿ)
ತವ ಅಂಗೇನ ಅಂಗಾಂಗುಲಿಭಿಶ್ಚ ಸೌಮೇರವಂ ಗೌರವಂ ಓಹ್ಯತೇ (ಕರ್ಮಣಿ)
ವಯಂ ಪುರಾ ವಿನಶ್ಯಾಮಃ (ಅಕರ್ಮಕ ಕರ್ತರಿ)
ಅಸ್ಮಾಭಿಃ ಪುರಾ ವಿನಶ್ಯತೇ (ಭಾವೇ)
ಸ್ವಾಮಿನ್ (ತ್ವಂ) ಅಸ್ಮಾನ್ ವಿಮುಂಚ (ಸಕರ್ಮಕ ಕರ್ತರಿ)
ಸ್ವಾಮಿನ್ (ತ್ವಯಾ) ವಯಂ ವಿಮುಚ್ಯಾಮಹೈ (ಕರ್ಮಣಿ)
ತೇ ತಂ ಅವದನ್ (ಸಕರ್ಮಕ ಕರ್ತರಿ)
ತೈಃ ಸಃ ಊದ್ಯತ (ಕರ್ಮಣಿ)

**ವೃತ್ತ**— ಎರಡು ಮೂರನೇ ಪಾದಗಳಲ್ಲಿ ಉಪೇಂದ್ರವಜ್ರಾಸಹಿತವಾದ ಉಪಜಾತಿ ವೃತ್ತ.

★ ★ ★

**ಅವತಾರಿಕಾ**— ಆಗ ಆಚಾರ್ಯರು ಏನು ಮಾಡಿದರು ಮತ್ತು ಶಿಷ್ಯರ ಮನಸ್ಸಿನಲ್ಲಿ ಏನು ಭಾವನೆಗಳು ಮೂಡಿದವು ಎಂದು ಹೇಳುತ್ತಾರೆ.

**ತೇನಾಥ ಮುಕ್ತೈರತಿವಿಸ್ಮಯಸ್ತೈ-**
**ರವಾಪ್ಯನಾಲೋಚ್ಯ ಹಿ ತತ್ಸ್ವರೂಪಮ್ ।**
**ಯದ್ಭ್ರೂವಿಜೃಂಭೇಣ ಸಶರ್ವ(ಶಂಭು)ಶಕ್ರಂ**
**ಜಗತ್ ಸಮಸ್ತಂ ನಿಯತಂ ನಿಕಾಮಮ್ ॥ 41 ॥**

**ಪದಚ್ಛೇದ**— ತೇನ, ಅಥ, ಮುಕ್ತೈಃ ಅತಿವಿಸ್ಮಯಃ ತೈಃ, ಅವಾಪಿ, ಅನಾಲೋಚ್ಯ ಹಿ ತತ್‌ಸ್ವರೂಪಂ ಯದ್ಭ್ರೂ-ವಿಜೃಂಭೇಣ, ಸಶರ್ವಶಕ್ರಂ, ಜಗತ್, ಸಮಸ್ತಂ, ನಿಯತಂ, ನಿಕಾಮಂ ।

**ಅನ್ವಯ**— ಅಥ, ತೇನ, ಮುಕ್ತೈಃ ತೈಃ ತತ್‌ಸ್ವರೂಪಂ, ಅನಾಲೋಚ್ಯ, ಹಿ ಅತಿವಿಸ್ಮಯಃ ಅವಾಪಿ ಯದ್ಭ್ರೂ-ವಿಜೃಂಭೇಣ ಸಶರ್ವ (ಶಂಭು)ಶಕ್ರಂ ಸಮಸ್ತಂ ಜಗತ್ ನಿಕಾಮಂ ನಿಯತಂ ।

**ಅನ್ವಯಾರ್ಥ**—

**ಅಥ** = ಶಿಷ್ಯರು ಪ್ರಾರ್ಥನೆ ಮಾಡಿದ ನಂತರ,
**ತೇನ** = ಆ ಶ್ರೀಮಧ್ವಾಚಾರ್ಯರಿಂದ,
**ಮುಕ್ತೈಃ** = ಬಿಡಲ್ಪಟ್ಟ
**ತೈಃ** = ಆ ಶಿಷ್ಯರಿಂದ,
**ತತ್‌ಸ್ವರೂಪಂ** = ಆ ಮಧ್ವರ ಸ್ವರೂಪವನ್ನು
**ಅನಾಲೋಚ್ಯ ಹಿ** = ಆಲೋಚಿಸದೆಯೇ,
**ಅತಿವಿಸ್ಮಯಃ** = ಅತ್ಯಂತ ಆಶ್ಚರ್ಯವು
**ಅವಾಪಿ** = ಹೊಂದಲ್ಪಟ್ಟಿತು.
**ಯತ್‌ಭ್ರೂವಿಜೃಂಭೇಣ** = ಯಾವ ಮಧ್ವರ ಹುಬ್ಬುಗಳ ವಿಲಾಸದಿಂದ,
**ಸಶರ್ವ (ಶಂಭು) ಶಕ್ರಂ** = ಶಂಕರದೇವೇಂದ್ರರಿಂದ ಸಹಿತವಾದ,

**ಸಮಸ್ತಂ** = ಎಲ್ಲಾ

**ಜಗತ್** = ಪ್ರಪಂಚವು,

**ನಿಕಾಮಂ** = ಸ್ವೇಚ್ಛೆಯಿಂದ,

**ನಿಯತಂ** = ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರೇರಿಸಲ್ಪಟ್ಟಿದೆ.

**ತಾತ್ಪರ್ಯ**— ದಯಾಳುಗಳಾದ ಆಚಾರ್ಯರೇ, ಪ್ರಭುಗಳೇ! ನಮ್ಮನ್ನು ಪ್ರಾಣ ಸಹಿತ ಬಿಡಿರಿ. ನಿಮ್ಮ ಅಂಗಗಳನ್ನು ಮತ್ತು ಬೆರಳುಗಳನ್ನು ನಮ್ಮ ಮೇಲಿಂದ ತೆಗೆಯಿರಿ ಎಂದು ಶಿಷ್ಯರು ಪ್ರಾರ್ಥನೆ ಮಾಡಿದ ನಂತರ ಆಚಾರ್ಯರು ಕೂಡಲೇ ಅವರನ್ನೆಲ್ಲಾ ಬಿಟ್ಟು ಬಿಟ್ಟರು. ಶಿಷ್ಯರು ಶ್ರೀಮಧ್ವರ ಆ ಸಾಮರ್ಥ್ಯವನ್ನು ಸರಿಯಾಗಿ ತಿಳಿಯದೆ ಇರುವುದರಿಂದಲೇ ಅತ್ಯಂತವಾಗಿ ಆಶ್ಚರ್ಯಗೊಂಡರು. ಆ ಮಧ್ವರು ತಮ್ಮ ಹುಬ್ಬುಗಳ ವಿಲಾಸ ಮಾತ್ರದಿಂದಲೇ ರುದ್ರ, ಇಂದ್ರ ಮೊದಲಾದವರಿಂದ ಸಹಿತವಾದ ಸಮಸ್ತ ಪ್ರಪಂಚವನ್ನು ತನ್ನ ಇಚ್ಛೆ ಬಂದಂತೆ ಪರಮಾತ್ಮ ಮತ್ತು ಲಕ್ಷ್ಮಿಯರ ಅಧೀನತೆ-ಯಲ್ಲಿದ್ದು ಪ್ರೇರಿಸಲು ಸಮರ್ಥರು. ಆದರೆ ಈ ವಿಷಯವನ್ನು ತಿಳಿಯದೆ ಇದ್ದ ಪ್ರಯುಕ್ತವಾಗಿಯೇ ಅವರೆಲ್ಲರೂ ಇದು ಬಹಳ ದೊಡ್ಡ ಮಹಿಮೆಯೆಂದು ಆಶ್ಚರ್ಯಪಟ್ಟರು. ವಸ್ತುತಃ ಇದಕ್ಕಿಂತಲೂ ಹೆಚ್ಚಿನ ಅಮಿತ ಮಹಿಮೆಯು ಆಚಾರ್ಯರಲ್ಲಿದೆ ಎಂದು ಭಾವ.

**ವಿಗ್ರಹ**—

**ಅತಿವಿಸ್ಮಯಃ**— ಅತಿಶಯಿತಃ ವಿಸ್ಮಯಃ ಅತಿವಿಸ್ಮಯಃ ।

**ತತ್‌ಸ್ವರೂಪಂ**— ತಸ್ಯ ಸ್ವರೂಪಂ ತತ್ ಸ್ವರೂಪಂ ।

**ಯದ್‌ಭ್ರೂವಿಜೃಂಭೇಣ**— ಯಸ್ಯ ಭ್ರುವೌ ಯದ್‌ಭ್ರುವೌ, ಯದ್‌ಭ್ರುವೋಃ ವಿಜೃಂಭಃ ಯದ್ಭ್ರೂವಿಜೃಂಭಃ ತೇನ ಯದ್‌ಭ್ರೂ ವಿಜೃಂಭೇಣ ।

**ಸಶಂಭುಶಕ್ರಂ**— ಶಂಭುಶ್ಚ ಶಕ್ರಶ್ಚ ಶಂಭುಶಕ್ರೌ (ಅಥವಾ ಶರ್ವಶ್ಚ ಶಕ್ರಶ್ಚ) । ಶಂಭುಶಕ್ರಾಭ್ಯಾಂ ಸಹ ವರ್ತತೇ ಇತಿ ಸಶಂಭುಶಕ್ರಂ ।

**ಕ್ರಿಯಾಪದ**— ಅವಾಪಿ- ಅವ ಉಪಸರ್ಗಪೂರ್ವಕಾತ್ ಆಪ್ಲೃವ್ಯಾಪ್ತೌ ಇತಿ ವ್ಯಾಪ್ತ್ಯರ್ಥಕಃ ಆಪ್ ಧಾತುಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ಲುಙ್ ಪ್ರಥಮಪುರುಷೇ ಏಕವಚನೇ ಅವಾಪಿ ಇತಿ ರೂಪಂ ।

ಆಪಿ ಆಪ್ಸಾತಾಂ ಆಪ್ಸತ, ಆಪ್ಥಾಃ ಆಪ್ಸಾಥಾಂ ಆಬ್‌ಧ್ವಂ, ಆಪ್ಸಿ ಆಪ್ಸ್ವಹಿ ಆಪ್ಸ್ಮಹಿ ॥

**ಪ್ರಯೋಗ**— ತೈಃ ಅತಿವಿಸ್ಮಯಃ ಅವಾಪಿ (ಕರ್ಮಣಿ), ತೇ ಅತಿವಿಸ್ಮಯಂ ಅವಾಪನ್ (ಕರ್ತರಿ)

**ವೃತ್ತ**— ಎರಡು ನಾಲ್ಕನೆಯ ಪಾದಗಳಲ್ಲಿ ಉಪೇಂದ್ರವಜ್ರಾಸಹಿತವಾದ ಉಪಜಾತಿ ವೃತ್ತ.

★ ★ ★

**ಅವತಾರಿಕಾ**— ಈಗ ಆಚಾರ್ಯರ ಮತ್ತೊಂದು ಮಹಿಮೆಯನ್ನು ವರ್ಣಿಸುತ್ತಾರೆ. ಇಂದ್ರಪುರಿ ಎಂಬ ವಾದಿಯ ವೃತ್ತಾಂತವನ್ನು ವರ್ಣಿಸುತ್ತಾರೆ.

**ಸದಾಕ್ಷ್ಯಮಾಕ್ಷಿಪ್ತಸಮಸ್ತಪಕ್ಷಕೋ**
**ಯತಿಃ ಪ್ರಭುಂ ಕೋಽಪ್ಯಮರಾವತೀಪದಃ ।**
**ಜಿಗೀಷಯಾ ಜ್ಞಾನಸಹಾಯಕರ್ಮಣಃ**
**ಪ್ರಸಾಧ್ಯತಾಂ ಸಾಧನತೇತ್ಯುದಾಹರತ್ ॥ 42 ॥**

**ಪದಚ್ಛೇದ—** ಸದಾಕ್ಷ್ಯಂ, ಆಕ್ಷಿಪ್ತಸಮಸ್ತಪಕ್ಷಕಃ, ಯತಿಃ, ಪ್ರಭುಂ ಕಃ, ಅಪಿ, ಅಮರಾವತೀಪದಃ, ಜಿಗೀಷಯಾ, ಜ್ಞಾನಸಹಾಯಕರ್ಮಣಃ, ಪ್ರಸಾಧ್ಯತಾಂ, ಸಾಧನತಾ, ಇತಿ, ಉದಾಹರತ್ ।

**ಅನ್ವಯ—** ಸದಾಕ್ಷ್ಯಂ ಆಕ್ಷಿಪ್ತಸಮಸ್ತಪಕ್ಷಕಃ ಅಮರಾವತೀಪದಃ ಕಃ ಅಪಿ, ಯತಿಃ, ಜಿಗೀಷಯಾ, ಪ್ರಭುಂ, ಜ್ಞಾನ-ಸಹಾಯಕರ್ಮಣಃ, ಸಾಧನತಾ, ಪ್ರಸಾಧ್ಯತಾಂ, ಇತಿ, ಉದಾಹರತ್ ।

**ಅನ್ವಯಾರ್ಥ—**

**ಸದಾಕ್ಷ್ಯಂ** = ಕುಶಲತೆಯಿಂದ ಸಹಿತವಾಗಿ,

**ಆಕ್ಷಿಪ್ತಸಮಸ್ತಪಕ್ಷಕಃ** = ಖಂಡಿಸಲ್ಪಟ್ಟ ಎಲ್ಲಾ ವಾದಿಗಳ ಸಿದ್ಧಾಂತಗಳುಳ್ಳ,

**ಅಮರಾವತೀಪದಃ** = ಅಮರೇಂದ್ರಪುರೀ (ಇಂದ್ರಪುರೀ) ಎಂಬ ಹೆಸರುಳ್ಳ,

**ಕಃ ಅಪಿ ಯತಿಃ** = ಯಾವನೋ ಒಬ್ಬ ಸಂನ್ಯಾಸಿಯು,

**ಪ್ರಭುಂ** = ಶ್ರೀಮಧ್ವಾಚಾರ್ಯರನ್ನು

**ಜಿಗೀಷಯಾ** = ಜಯಿಸುವ ಇಚ್ಛೆಯಿಂದ,

**ಜ್ಞಾನಸಹಾಯಕರ್ಮಣಃ** = ಜ್ಞಾನವು ಸಹಾಯವಾಗಿ ಉಳ್ಳ ಕರ್ಮಕ್ಕೆ,

**ಸಾಧನತಾ** = ಪರಮಪುರುಷಾರ್ಥವಾದ ಮೋಕ್ಷವನ್ನು ಕುರಿತು ಅತಿಶಯಿತವಾದ ಕಾರಣತ್ವವು,

**ಪ್ರಸಾಧ್ಯತಾಂ** = ಸಮರ್ಥಿಸಲ್ಪಡಲಿ,

**ಇತಿ** = ಹೀಗೆಂದು,

**ಉದಾಹರತ್** = ಹೇಳಿದನು.

**ತಾತ್ಪರ್ಯ—** ಅಮರೇಂದ್ರಪುರೀ (ಅಥವಾ ಇಂದ್ರಪುರೀ) ಎಂಬ ಹೆಸರಿನ ಮಾಯಾವಾದಿ ಸಂನ್ಯಾಸಿ-ಯೊಬ್ಬನಿದ್ದನು. ಅವನು ಎಲ್ಲಾ ಸಿದ್ಧಾಂತಗಳನ್ನೂ ಬಹಳ ಕುಶಲತೆಯಿಂದ ಖಂಡಿಸಿದ್ದನು. ಇಂತಹವನು ಒಂದು ದಿನ ಆಚಾರ್ಯರನ್ನು ಭೇಟಿಯಾಗಿ ಅವರ ಜತೆಗೆ ವಾದ ಮಾಡಿ ಖಂಡಿಸಲು ಬಯಸಿ ಅವರ ಬಳಿಗೆ ಬಂದನು. ಆಚಾರ್ಯರಿಗೂ ಅಮರೇಂದ್ರಪುರಿಗೂ ವಾದವು ಪ್ರಾರಂಭವಾಯಿತು. ಆಚಾರ್ಯರು ಪ್ರತಿವಾದವನ್ನು ಮಂಡಿಸುತ್ತಾ ಪ್ರಸಂಗವಶಾತ್ ಹೀಗೆ ಹೇಳಿದರು! ''ಜ್ಞಾನಿಯು ಮಾಡಿದ ಕರ್ಮವೇ ಅಕ್ಷಯವಾದ ಮೋಕ್ಷವೆಂಬ ಪುರುಷಾರ್ಥಕ್ಕೆ ಸಾಧನವಾಗುತ್ತದೆ. ಅಜ್ಞಾನಿಯು ಮಾಡುವ ಕರ್ಮವು ಬಂಧಕವು. ಹೀಗೆ ಮೋಕ್ಷಕ್ಕೆ ಜ್ಞಾನ ಸಹಾಯವುಳ್ಳ ಕರ್ಮವೂ ಸಾಧನವಾಗುತ್ತದೆ'' ಎಂದರು. ಆಚಾರ್ಯರ ಈ ಮಾತನ್ನು ಕೇಳಿ ಅಮರೇಂದ್ರಪುರಿಯು 'ಜ್ಞಾನಸಹಾಯವುಳ್ಳ ಕರ್ಮಕ್ಕೆ ಮೋಕ್ಷಸಾಧನತ್ವವು ಹೇಗೆಂದು ಸಾಧಿಸಿ ತೋರಿಸಿರಿ' ಎಂದು ಹೇಳಿದನು.

**ವಿಗ್ರಹ—**

**ಸದಾಕ್ಷ್ಯಃ—** ದಕ್ಷಸ್ಯ ಭಾವಃ ದಾಕ್ಷ್ಯಂ, ದಾಕ್ಷ್ಯೇಣ ಸಹಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸದಾಕ್ಷ್ಯಃ ।

**ಆಕ್ಷಿಪ್ತಸಮಸ್ತಪಕ್ಷಕಃ—** ಸಮಸ್ತಾನಾಂ ಪಕ್ಷಾಃ ಸಮಸ್ತಪಕ್ಷಾಃ, (ಸಮಸ್ತಾಶ್ಚ ತೇ ಪಕ್ಷಾಶ್ಚ ಸಮಸ್ತಪಕ್ಷಾಃ) । ಆಕ್ಷಿಪ್ತಾಃ ಸಮಸ್ತಪಕ್ಷಾಃ ಯೇನ ಸಃ ಆಕ್ಷಿಪ್ತಸಮಸ್ತಪಕ್ಷಕಃ (ಬಹುವ್ರೀಹಿಯಲ್ಲಿ ಕ ಪ್ರತ್ಯಯ)

**ಅಮರಾವತೀಪದಃ—** ಅಮರಾವತೀ ಇತಿ ಪದಂ ಯಸ್ಯ ಸಃ ಅಮರಾವತೀಪದಃ ।

**ಜಿಗೀಷಾ—** ಜೇತುಂ ಇಚ್ಛಾ ಜಿಗೀಷಾ ತಯಾ ಜಿಗೀಷಯಾ ।

**ಜ್ಞಾನಸಹಾಯಕರ್ಮಣಃ—** ಜ್ಞಾನಂ ಸಹಾಯಃ ಯಸ್ಯ ತತ್ ಜ್ಞಾನಸಹಾಯಂ, ಜ್ಞಾನಸಹಾಯಂ ಚ ತತ್ ಕರ್ಮ ಚ ಜ್ಞಾನಸಹಾಯಕರ್ಮ, ತಸ್ಯ ಜ್ಞಾನಸಹಾಯಕರ್ಮಣಃ ।

**ಸಾಧನತಾ—** ಸಾಧನಸ್ಯ ಭಾವಃ ಸಾಧನತಾ ।

**ಕ್ರಿಯಾಪದ—** ಪ್ರಸಾಧ್ಯತಾಂ- (ರಾಧ) ಸಾಧ ಸಂಸಿದ್ಧೌ ಇತಿ ಸಂಸಿದ್ಧ್ಯರ್ಥಕಾತ್ ಪ್ರ ಉಪಸರ್ಗಪೂರ್ವಕಾತ್ ಸಾಧಧಾತೋಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ಆಜ್ಞಾಯಾಂ ಲೋಟ್ ಪ್ರಥಮಪುರುಷೇ ಏಕವಚನೇ 'ಪ್ರಸಾಧ್ಯತಾಂ' ಇತಿ ರೂಪಂ ।

ಪ್ರ+ಸಾಧ್ಯತಾಂ ಸಾಧ್ಯೇತಾಂ ಸಾಧ್ಯಂತಾಂ, ಸಾಧ್ಯಸ್ವ ಸಾಧ್ಯೇಥಾಂ ಸಾಧ್ಯಧ್ವಂ, ಸಾಧ್ಯೈ ಸಾಧ್ಯಾವಹೈ ಸಾಧ್ಯಾಮಹೈ ॥

**ಉದಾಹರತ್-** ಉದ್ ಆ (ಆಙ್) ಇತಿ ಉಪಸರ್ಗದ್ವಯಪೂರ್ವಕಾತ್ ಹೃಞ್‌ಹರಣೇ ಇತಿ ಹರಣಾರ್ಥಕಾತ್ ಹೃಧಾತೋಃ ಪರಸ್ಮೈಪದಿನಃ, ಸಕರ್ಮಕಾತ್ ಕರ್ತರಿ ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಏಕವಚನೇ ಉದಾಹರತ್ ಇತಿ ರೂಪಂ ।

ಉದ್+ಆ+ಅಹರತ್ ಅಹರತಾಂ ಅಹರನ್, ಅಹರಃ ಅಹರತಂ ಅಹರತ, ಅಹರಂ ಅಹರಾವ ಅಹರಾಮ

**ಪ್ರಯೋಗ—** ತ್ವಯಾ ಜ್ಞಾನಸಹಾಯಕರ್ಮಣಃ ಸಾಧನತಾ ಪ್ರಸಾಧ್ಯತಾಂ (ಕರ್ಮಣಿ)
ತ್ವಂ ಜ್ಞಾನಸಹಾಯಕರ್ಮಣಃ ಸಾಧನತಾಂ ಪ್ರಸಾಧಯ (ಕರ್ತರಿ)
ಕೋಪಿ ಯತಿಃ ಪ್ರಭುಂ ಉದಾಹರತ್ (ಕರ್ತರಿ)
ಕೇನಾಪಿ ಯತಿನಾ ಪ್ರಭುಃ ಉದಾಹ್ರಿಯತ (ಕರ್ಮಣಿ)

**ವೃತ್ತ—** ಇಲ್ಲಿ ವಂಶಸ್ಥ ವೃತ್ತ 'ವದಂತಿ ವಂಶಸ್ಥಮಿದಂ ಜತೌ ಜರೌ' (ವದಂತಿ ವಂಶಸ್ಥಮಿದಂ ಜತೌ ಜರೌ)

★ ★ ★

**ಅವತಾರಿಕಾ—** ಶ್ರೀಮದಾಚಾರ್ಯರು ಇಂದ್ರಪುರಿಯೆಂಬ ಸಂನ್ಯಾಸಿಯನ್ನು ವಾದದಲ್ಲಿ ಗೆದ್ದರೆಂದು ತಿಳಿಸುತ್ತಾರೆ.

**ಸಂಸಾಧಿತಾರ್ಥೇ ಭಗವತ್ಯಯುಕ್ತಿವಿತ್**
**ಪಪ್ರಚ್ಛ ಸ ಜ್ಞಾನಪದಾರ್ಥಮುಗ್ರಧೀಃ ।**
**ಜ್ಞಾತಃ ಸ ತೇ ಜ್ಞಾನ್ಯಸಿ ಚೇನ್ನ ಚೇನ್ನ ಸ**
**ಪ್ರಶ್ನೋ ಘಟೇತೇತಿ ನಿರಾಕೃತೈಷ ತಮ್ ॥ 43 ॥**

**ಪದಚ್ಛೇದ—** ಸಂಸಾಧಿತಾರ್ಥೇ, ಭಗವತಿ, ಅಯುಕ್ತಿವಿತ್, ಪಪ್ರಚ್ಛ ಸಃ, ಜ್ಞಾನಪದಾರ್ಥಂ, ಉಗ್ರಧೀಃ, ಜ್ಞಾತಃ, ಸಃ, ತೇ, ಜ್ಞಾನಿ, ಅಸಿ, ಚೇತ್, ನ, ಚೇತ್, ನ, ಸಃ, ಪ್ರಶ್ನಃ, ಘಟೇತ, ಇತಿ, ನಿರಾಕೃತ, ಏಷಃ, ತಂ ।

**ಅನ್ವಯ—** ಭಗವತಿ ಸಂಸಾಧಿತಾರ್ಥೇ ಸತಿ, ಅಯುಕ್ತಿವಿತ್ ಉಗ್ರಧೀಃ ಸಃ ಜ್ಞಾನಪದಾರ್ಥಂ ಪಪ್ರಚ್ಛ, ಏಷಃ, ತ್ವಂ ಜ್ಞಾನೀ ಅಸಿ ಚೇತ್ ಸಃ ತೇ ಜ್ಞಾತಃ, ನ ಚೇತ್ ಸಃ ಪ್ರಶ್ನಃ ನ ಘಟೇತ ಇತಿ ತಂ ನಿರಾಕೃತ ।

**ಅನ್ವಯಾರ್ಥ—**

**ಭಗವತಿ** = ಷಡ್ಗುಣೈಶ್ವರ್ಯ ಸಂಪನ್ನರಾದ ಶ್ರೀ ಮಧ್ವಾಚಾರ್ಯರು,
**ಸಂಸಾಧಿತಾರ್ಥೇ ಸತಿ** = ಚೆನ್ನಾಗಿ ಸಾಧಿಸಲ್ಪಟ್ಟ ವಿಷಯವುಳ್ಳವರು ಆಗಿರಲಾಗಿ, (ವಿಷಯವನ್ನು ಚೆನ್ನಾಗಿ ಸಮರ್ಥಿಸಿದಾಗ)
**ಅಯುಕ್ತಿವಿತ್** = ಖಂಡಿಸಲು ಯುಕ್ತಿಯನ್ನು ಅರಿಯದ,
**ಉಗ್ರಧೀಃ** = ಕ್ರೂರವಾದ ಬುದ್ಧಿಯುಳ್ಳ

ಸಃ = ಆ ಅಮರೇಂದ್ರ ಪುರಿಯು,
ಜ್ಞಾನಪದಾರ್ಥಂ = ಜ್ಞಾನವೆಂಬ ಪದದ ಅರ್ಥವನ್ನು,
ಪಪ್ರಚ್ಛ = ಕೇಳಿದನು.
ಏಷಃ = ಈ ಶ್ರೀಮಧ್ವಾಚಾರ್ಯರು,
ತ್ವಂ = ನೀನು,
ಜ್ಞಾನೀ = ಜ್ಞಾನವುಳ್ಳವನು,
ಅಪಿ ಚೇತ್ = ಆಗಿದ್ದರೆ,
ಸಃ = ಆ ಜ್ಞಾನಪದಾರ್ಥವು,
ತೇ = ನಿನಗೆ (ನಿನ್ನಿಂದ)
ಜ್ಞಾತಃ = ತಿಳಿಯಲ್ಪಟ್ಟಿದೆ,
ನ ಚೇತ್ = ಇಲ್ಲದಿದ್ದರೆ (ನೀನು ಜ್ಞಾನಿಯಲ್ಲದಿದ್ದರೆ ನಿನಗೆ ಜ್ಞಾನಪದಾರ್ಥವು ತಿಳಿದಿಲ್ಲವಾದರೆ)
ಸಃ ಪ್ರಶ್ನಃ = ಜ್ಞಾನವೆಂದರೆ ಏನು ಎಂಬ ಪ್ರಶ್ನೆಯು,
ನ ಘಟೇತ = ಕೂಡಲಾರದು,
ಇತಿ = ಹೀಗೆಂದು,
ತಂ = ಆ ಯತಿಯನ್ನು,
ನಿರಾಕೃತ = ಖಂಡಿಸಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ಜ್ಞಾನದಿಂದ ಸಹಿತವಾದ ಕರ್ಮವು ಮೋಕ್ಷಸಾಧಕವೆಂಬ ವಿಷಯ-ವನ್ನು ಚೆನ್ನಾಗಿ ಪ್ರತಿಪಾದನೆ ಮಾಡಿದರು. ಅವರ ಮಾತನ್ನು ಖಂಡಿಸಲು ಅಮರೇಂದ್ರಪುರಿಗೆ ಯುಕ್ತಿಯು ಹೊಳೆಯಲಿಲ್ಲ. ಆಗ ಕಠಿನ ಬುದ್ಧಿಯುಳ್ಳ ಆ ಸಂನ್ಯಾಸಿಯು ಜ್ಞಾನವೆಂಬ ಪದಕ್ಕೆ ಅರ್ಥವೇನು? ಎಂದು ಆಚಾರ್ಯರನ್ನು ಪ್ರಶ್ನಿಸಿದನು.

ಆಚಾರ್ಯರು ಹೇಳಿದರು ''ಜ್ಞಾನವೆಂದರೆ ಏನೆಂದು ಕೇಳುವ ನೀನು ಜ್ಞಾನವುಳ್ಳವನಾಗಿರುವೆಯೋ ಇಲ್ಲವೋ! ನೀನು ಜ್ಞಾನವುಳ್ಳವನೇ ಆದರೆ ಜ್ಞಾನ ಪದದ ಅರ್ಥವು ನಿನಗೆ ತಿಳಿದಿದೆ. ಹೀಗಿದ್ದರೂ ಜ್ಞಾನವೆಂದರೆ ಏನೆಂದು ಕೇಳುವ ನೀನು ಹುಚ್ಚನಿಗೆ ಸಮಾನನಾಗುತ್ತೀಯಾ. ನೀನು ಜ್ಞಾನವೆಂದರೆ ಏನೆಂದು ತಿಳಿಯದ ಮೂಢನಾಗಿದ್ದರೆ ಶಬ್ದ ಮತ್ತು ಅವುಗಳ ಅರ್ಥಗಳನ್ನು ತಿಳಿಯುವ ಸಾಮರ್ಥ್ಯವಿಲ್ಲದ ನೀನು ಜ್ಞಾನವೆಂದರೆ ಏನೆಂದು ಪ್ರಶ್ನೆ ಮಾಡಿರುವುದೇ ಸರಿ ಹೊಂದುವುದಿಲ್ಲ'' ಎಂದು ಆ ಅಮರೇಂದ್ರಪುರೀ ಎಂಬ ಯತಿಯನ್ನು ಆಚಾರ್ಯರು ಖಂಡಿಸಿದರು.

**ವಿಗ್ರಹ**—

**ಸಂಸಾಧಿತಾರ್ಥೇ**— ಸಮ್ಯಕ್ ಸಾಧಿತಃ ಸಂಸಾಧಿತಃ, ಸಂಸಾಧಿತಃ ಅರ್ಥಃ ಯೇನ ಸಃ ಸಂಸಾಧಿತಾರ್ಥಃ, ತಸ್ಮಿನ್ ಸಂಸಾಧಿತಾರ್ಥೇ ।

**ಭಗವತಿ**— ಭಗಂ ಅಸ್ಯ ಅಸ್ತೀತಿ ಭಗವಾನ್ ತಸ್ಮಿನ್ ಭಗವತಿ ।

**ಅಯುಕ್ತಿವಿತ್**— ಯುಕ್ತಿಂ ವೇತ್ತೀತಿ ಯುಕ್ತಿವಿತ್, ನ ಯುಕ್ತಿವಿತ್ ಅಯುಕ್ತಿವಿತ್ ।

**ಜ್ಞಾನಪದಾರ್ಥಂ**— ಜ್ಞಾನಂ ಇತಿ ಪದಂ ಜ್ಞಾನಪದಂ, ಜ್ಞಾನಪದಸ್ಯ ಅರ್ಥಃ ಜ್ಞಾನಪದಾರ್ಥಃ ತಂ ಜ್ಞಾನ-ಪದಾರ್ಥಂ ।

**ಉಗ್ರಧೀಃ—** ಉಗ್ರಾ ಧೀಃ ಯಸ್ಯ ಸಃ ಉಗ್ರಧೀಃ ।

**ಜ್ಞಾನೀ—** ಜ್ಞಾನಂ ಅಸ್ಯ ಅಸ್ತೀತಿ ಜ್ಞಾನೀ ।

**ಕ್ರಿಯಾಪದ— ಪಪ್ರಚ್ಛ-** ಪೃಚ್ಛ ಜ್ಞೀಪ್ಸಾಯಾಂ (ಜ್ಞೀಪ್ಸಾ ತಿಳಿಯುವ ಇಚ್ಛೆ) ಇತಿ ಜ್ಞೀಪ್ಸಾರ್ಥಕಾತ್ ಪೃಚ್ಛಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ 'ಪ್ರಪಚ್ಛ' ಇತಿ ರೂಪಂ ।

ಪಪ್ರಚ್ಛ ಪ್ರಪ್ರಚ್ಛತುಃ ಪಪ್ರಚ್ಛುಃ, ಪಪ್ರಚ್ಛಿಥ-ಪಪ್ರಷ್ಠ ಪಪ್ರಚ್ಛಥುಃ ಪಪ್ರಚ್ಛ, ಪಪ್ರಚ್ಛ ಪಪ್ರಚ್ಛಿವ ಪಪ್ರಚ್ಛಿಮ ॥

**ಘಟೇತ-** ಘಟಚೇಷ್ಟಾಯಾಂ ಇತಿ ಚೇಷ್ಟಾರ್ಥಕಾತ್ ಘಟಧಾತೋಃ ಆತ್ಮನೇಪದಿನಃ ಅಕರ್ಮಕಾತ್ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ಘಟೇತ ಇತಿ ರೂಪಂ ।

ಘಟೇತ ಘಟೇಯಾತಾಂ ಘಟೇರನ್, ಘಟೇಥಾಃ ಘಟೇಯಾಥಾಂ ಘಟೇಧ್ವಂ, ಘಟೇಯ ಘಟೇವಹಿ ಘಟೇಮಹಿ ॥

**ಅಸಿ-** ಅಸಭುವಿ ವರ್ತಮಾನೇ ಲಟ್ ಮಧ್ಯಮಪುರುಷೇ ಏಕವಚನೇ ಅಸಿ ಇತಿ ರೂಪಮ್ ।

ಅಸ್ತಿ ಸ್ತಃ ಸಂತಿ, ಅಸಿ ಸ್ಥಃ ಸ್ಥ ಅಸ್ಮಿ ಸ್ವಃ, ಸ್ಮಃ ॥

**ನಿರಾಕೃತ-** ನಿರ್ ಆ ಇತ್ಯುಪಸರ್ಗದ್ವಯಪೂರ್ವಕಾತ್ ಡುಕೃಞ್‌ಕರಣೇ ಇತಿ ಕರಣಾರ್ಥಕಾತ್ ಕೃಧಾತೋಃ ಕರ್ತರಿ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ನಿರಾಕೃತ ಇತಿ ರೂಪಂ ।

ನಿರ್+ಆ+ಅಕೃತ ಅಕೃಷಾತಾಂ ಅಕೃಷತ, ಅಕೃಥಾಃ ಅಕೃಷಾಥಾಂ ಅಕೃಢ್ವಂ, ಅಕೃಷಿ ಅಕೃಷ್ವಹಿ ಅಕೃಷ್ಮಹಿ ॥

**ಪ್ರಯೋಗ—** ಉಗ್ರಧಿಯಾ ತೇನ ಜ್ಞಾನಪದಾರ್ಥಃ ಪಪ್ರಚ್ಛೇ (ಕರ್ಮಣಿ)
ಉಗ್ರಧೀಃ ಸಃ ಜ್ಞಾನಪದಾರ್ಥಃ ಪಪ್ರಚ್ಛ (ಕರ್ತರಿ)
ತ್ವಂ ಜ್ಞಾನೀ ಅಸಿ (ಕರ್ತರಿ) ತ್ವಯಾ ಜ್ಞಾನಿನಾ ಭೂಯತೇ (ಕರ್ಮಣಿ)
ಸಃ ಪ್ರಶ್ನಃ ಘಟೇತ (ಅಕರ್ಮಕಕರ್ತರಿ) ತೇನ ಪ್ರಶ್ನೇನ ಘಟ್ಯೇತ (ಭಾವೇ)
ಏಷಃ ತಂ ನಿರಾಕೃತ (ಕರ್ತರಿ) ಏತೇನ ಸಃ ನಿರಾಕಾರಿ (ಕರ್ಮಣಿ)

★ ★ ★

**ಅವತಾರಿಕಾ—** ಇದೇ ರೀತಿಯಲ್ಲಿ ಶ್ರೀಮದಾಚಾರ್ಯರು ಅನೇಕ ಸಭೆಗಳಲ್ಲಿ ಜಯಶಾಲಿಗಳಾದರೆನ್ನುತ್ತಾರೆ.

**ವಿತತತಮತಮೋಽಂತಂ ಸಾಧಯಂತ್ಯಾ ನಿತಾಂತಂ**
**ಸದಸಿ ಸದಸಿ ರೇಜೇ ವ್ಯಾಖ್ಯಯಾ ವ್ಯಾಸಶಿಷ್ಯಃ ।**
**ಸಕಲಸಮಯಿಹಸ್ತಾಂಭೋಜಬಂಧಾಭಿನಂದೀ**
**ಶರದಿ ಶರದಿ ಚಂದ್ರಶ್ಚಂದ್ರಿಕಾಸಂಪದೇವ ॥ 44 ॥**

**ಪದಚ್ಛೇದ—** ವಿತತತಮತಮೋಽಂತಂ, ಸಾಧಯಂತ್ಯಾ, ನಿತಾಂತಂ, ಸದಸಿ, ಸದಸಿ, ರೇಜೇ, ವ್ಯಾಖ್ಯಯಾ, ವ್ಯಾಸಶಿಷ್ಯಃ ಸಕಲಸಮಯಿಹಸ್ತಾಂಭೋಜಬಂಧಾಭಿನಂದೀ, ಶರದಿ, ಶರದಿ, ಚಂದ್ರಃ, ಚಂದ್ರಿಕಾಸಂಪದಾ, ಇವ ।

**ಅನ್ವಯ—** ವ್ಯಾಸಶಿಷ್ಯಃ, ಸದಸಿ ಸದಸಿ ವಿತತತಮತಮೋಽಂತಂ, ನಿತಾಂತಂ ಸಾಧಯಂತ್ಯಾ ವ್ಯಾಖ್ಯಯಾ ಚಂದ್ರಃ ಶರದಿ ಶರದಿ (ವಿತತತಮತಮೋಽಂತಂ ಸಾಧಯಂತ್ಯಾ) ಚಂದ್ರಿಕಾಸಂಪದಾ ಇವ ಸಕಲಸಮಯಿಹಸ್ತಾಂಭೋಜ-ಬಂಧಾಭಿನಂದೀ ರೇಜೇ ।

**ಅನ್ವಯಾರ್ಥ—**

**ವ್ಯಾಸಶಿಷ್ಯಃ** = ವೇದವ್ಯಾಸರ ಶಿಷ್ಯರಾದ ಶ್ರೀಮಧ್ವಾಚಾರ್ಯರು,

**ಸದಸಿ ಸದಸಿ** = ಎಲ್ಲಾ ಸಭೆಯಲ್ಲಿಯೂ

**ವಿತತತಮತಮೋಽತಂ** = ಅತ್ಯಂತ ವಿಸ್ತೃತವಾದ ಅಜ್ಞಾನದ ನಾಶವನ್ನು

**ನಿತಾಂತಂ** = ಅತಿಶಯವಾಗಿ

**ಸಾಧಯಂತ್ಯಾ** = ಮಾಡುವ

**ವ್ಯಾಖ್ಯಯಾ** = ವೇದಾರ್ಥಗಳ ವಿವರಣೆಯಿಂದ (ಪ್ರವಚನದಿಂದ)

**ಚಂದ್ರಃ** = ಚಂದ್ರನು

**ಶರದಿ ಶರದಿ** = ಪ್ರತಿಯೊಂದು ಶರತ್ಕಾಲದಲ್ಲಿಯೂ

(**ವಿತತತಮತಮೋಽಂತಂ ಸಾಧಯಂತ್ಯಾ** = ಎಲ್ಲಾ ಕಡೆ ಹರಡಿರುವ ಕತ್ತಲೆಯ ನಾಶವನ್ನು ಸಾಧಿಸುವ)

**ಚಂದ್ರಿಕಾಸಂಪದಾ ಇವ** = ಬೆಳದಿಂಗಳಿನ ಸಮೃದ್ಧಿಯಿಂದಲೋಪಾದಿಯಲ್ಲಿ,

**ಸಕಲಸಮಯಿಹಸ್ತಾಂಭೋಜಬಂಧಾಭಿನಂದೀ (ಸನ್)** = ಎಲ್ಲಾ ಸಿದ್ಧಾಂತವನ್ನು ಅರಿತ ವಿದ್ವಾಂಸರ ಕೈಗಳೆಂಬ ಕಮಲಗಳ ಕಟ್ಟುವಿಕೆಯನ್ನು ಅಭಿನಂದಿಸುವವರಾಗಿ,

**ರೇಜೇ** = ವಿರಾಜಿಸಿದರು.

**ತಾತ್ಪರ್ಯ—** ಚಂದ್ರನು ಪ್ರತಿಯೊಂದು ಶರತ್ಕಾಲದಲ್ಲಿಯೂ ರಾತ್ರಿಯಲ್ಲಿ ಉದಯಿಸಿ ತನ್ನ ಬೆಳದಿಂಗಳಿನಿಂದ ಕತ್ತಲೆಯನ್ನು ನಾಶಮಾಡಿ, ಕಮಲಗಳನ್ನು ಮೊಗ್ಗನ್ನಾಗಿ ಮಾಡಿ, ತನ್ನ ಉದಯವಾದ ಕೂಡಲೇ ಅವುಗಳಿಂದ ಕೈಮುಗಿಸಿ ಕೊಂಡು ಅವುಗಳನ್ನು ಅಭಿನಂದಿಸುವಂತೆ ವಿರಾಜಿಸುತ್ತಾನೆ. ಹಾಗೆಯೇ ವೇದವ್ಯಾಸರ ಶಿಷ್ಯರಾದ ಶ್ರೀಮಧ್ವಾಚಾರ್ಯರು ಪ್ರತಿಯೊಂದು ಸಭೆಯಲ್ಲಿಯೂ ಪ್ರತಿವಾದಿಗಳನ್ನು ನಿರುತ್ತರರನ್ನಾಗಿ ಮಾಡಿ ಯೋಗ್ಯರಾದ ಸಾತ್ವಿಕ ಜನರ ಅಜ್ಞಾನವೆಂಬ ತಮಸ್ಸನ್ನು ನಾಶಮಾಡಿ, ಆಯಾಸಿದ್ಧಾಂತವನ್ನರಿತ ಎಲ್ಲಾ ವಿದ್ವಾಂಸರಿಂದ ಕೈಮುಗಿಸಿಕೊಂಡು ಅವರನ್ನು ಅಭಿನಂದಿಸುತ್ತಾ ವಿರಾಜಿಸಿದರು.

ವಿಗ್ರಹ—

**ವಿತತತಮತಮೋಽತಂ—** ಅತ್ಯಂತಂ ವಿತತಂ ವಿತತತಮಂ, ವಿತತತಮಂ ಚ ತತ್ ತಮಶ್ಚ ವಿತತತಮತಮಃ ವಿತತತಮಸಃ ಅಂತಃ ವಿತತತಮೋಽಂತಃ, ತಂ ವಿತತತಮೋಽಂತಂ ।

**ವ್ಯಾಸಶಿಷ್ಯಃ—** ವ್ಯಾಸಸ್ಯ ಶಿಷ್ಯಃ ವ್ಯಾಸಶಿಷ್ಯಃ ।

**ಸಕಲಸಮಯಿಹಸ್ತಾಂಭೋಜಬಂಧಾಭಿನಂದೀ—** ಸಕಲಾಶ್ಚ ತೇ ಸಮಯಿನಶ್ಚ ಸಕಲಸಮಯಿನಃ, ಹಸ್ತಾಃ ಅಂಭೋಜಾನೀವ ಹಸ್ತಾಂಭೋಜಾನಿ, ಸಕಲಸಮಯಿನಾಂ ಹಸ್ತಾಂಭೋಜಾನಿ ಸಕಲಸಮಯಿಶಸ್ತಾಂ-ಭೋಜಾನಿ, ಸಕಲಸಮಯಿ ಹಸ್ತಾಂಭೋಜಾನಾಂ ಬಂಧಃ ಸಕಲಸಮಯಿಹಸ್ತಾಂಭೋಜಬಂಧಃ, ಸಕಲಸಮಯಿಹಸ್ತಾಂಭೋಜಬಂಧಂ ಅಭಿನಂದತೀತಿ ಸಕಲಸಮಯಿಹಸ್ತಾಂಭೋಜಬಂಧಾಭಿನಂದೀ॥

**ಚಂದ್ರಿಕಾಸಂಪದಾ—** ಚಂದ್ರಿಕಾಯಾಃ ಸಂಪತ್ ಚಂದ್ರಿಕಾಸಂಪತ್ ತಯಾ ಚಂದ್ರಿಕಾಸಂಪದಾ । ಇಲ್ಲಿ ಉಪಮಾಲಂಕಾರವಿದೆ.

**ಕ್ರಿಯಾಪದ—** ರೇಜೇ- ರಾಜೃದೀಪ್ತೌ ಇತಿ ದೀಪ್ತ್ಯರ್ಥಕಾತ್ ರಾಜ್‌ಧಾತೋಃ ಅಕರ್ಮಕಾತ್ ಆತ್ಮನೇಪದಿನಃ ಕರ್ತರಿ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ 'ರೇಜೇ' ಇತಿ ರೂಪಂ ।

ರೇಜೇ ರೇಜಾತೇ ರೇಜಿರೇ, ರೇಜಿಷೇ ರೇಜಾಥೇ ರೇಜಿಧ್ವೇ, ರೇಜೇ ರೇಜಿವಹೇ ರೇಜಿಮಹೇ ॥

**ಪ್ರಯೋಗ—** ವ್ಯಾಸಶಿಷ್ಯಃ ವ್ಯಾಖ್ಯಯಾ ರೇಜೇ (ಅಕರ್ಮಕ ಕರ್ತರಿ)
ವ್ಯಾಸಶಿಷ್ಯೇಣ ವ್ಯಾಖ್ಯಯಾ ರೇಜೇ (ಭಾವೇ)

**ವೃತ್ತ—** ಇಲ್ಲಿ ಮಾಲಿನೀವೃತ್ತ 'ನನಮಯಯಯುತೇಯಂ ಮಾಲಿನೀಭೋಗಿಲೋಕೈಃ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಆಚಾರ್ಯರ ವ್ಯಾಖ್ಯಾನವು ಯಾವ ವಿಷಯವನ್ನು ಪ್ರಕಾಶಗೊಳಿಸುತ್ತಿದ್ದಿತೆಂಬುದನ್ನು ಮೂರು ಶ್ಲೋಕಗಳಲ್ಲಿ ವಿವರಿಸುತ್ತಾರೆ.

**ಜನನಂ ಸಮಯೇ ಸಮಯೇ ಜಗತಃ**
**ಪ್ರಥಿತೇ ಸಮಯೇ ಸಮಯೇದಮಿತೇ ।**
**ಸನಿರಾಸಮಯೇಽಸಮಯೇ ಸ್ಥಿತಿಯುಕ್**
**ಸ್ವವಭಾಸಮಯೇಽಸಮಯೇಷ್ಟಧಿಯಾ ॥ 45 ॥**

**ಪದಚ್ಛೇದ—** ಜನನಂ, ಸಮಯೇ, ಸಮಯೇ, ಜಗತಃ, ಪ್ರಥಿತೇ, ಸಮಯೇ, ಸಮಯಾ, ಇದಂ, ಇತೇ, ಸನಿರಾಸಂ, ಅಯೇ, ಅಸಮಯೇ, ಸ್ಥಿತಿಯುಕ್, ಸ್ವವಭಾಸಮಯೇ, ಅಸಮಯಾ ಇಷ್ಟಧಿಯಾ ।

**ಅನ್ವಯ—** ಸಮಯೇ ಪ್ರಥಿತೇ ಇದಂ ಸಮಯಾ ಇತೇ ಅಸಮಯೇ ಸ್ವವಭಾಸಮಯೇ ಅಯೇ ಅಸಮಯಾ ಇಷ್ಟಧಿಯಾ ಸಮಯೇ ಸಮಯೇ ಸನಿರಾಸಂ ಸ್ಥಿತಿಯುಕ್ ಜಗತಃ ಜನನಂ (ಭವತಿ) (ಸಾ (ವ್ಯಾಖ್ಯಾ) ಇತ್ಯಾದೀನ್ ಪರಮಾನ್ ಅರ್ಥಾನ್ ಪ್ರಕಾಶಯಾಮಾಸ ಎಂಬ 47ನೆಯ ಶ್ಲೋಕದ ಜತೆಗೆ ಅನ್ವಯ.)

**ಅನ್ವಯಾರ್ಥ—**

**ಸಮಯೇ** = ವೇದಾಂತ ಶಾಸ್ತ್ರದಲ್ಲಿ
**ಪ್ರಥಿತೇ** = ಸರ್ವಶಬ್ದವಾಚ್ಯನೆಂದು ಪ್ರಸಿದ್ಧನಾದ,
**ಇದಂ** = ಈ ಜೀವಸಮೂಹದ
**ಸಮಯಾ** = ಹತ್ತಿರದಲ್ಲಿ
**ಇತೇ** = ಇರುವ (ಪ್ರಾಪ್ತನಾದ)
**ಅಸಮಯೇ** = ಕಾಲ ಸಂಬಂಧವಾದ ವಿಕಾರವಿಲ್ಲದಿರುವ (ನಾಶವಿಲ್ಲದ)
**ಸ್ವವಭಾಸಮಯೇ ಅಯೇ** = ಶುದ್ಧವಾದ, ಜ್ಞಾನರೂಪವಾದ, ಭಾಗ್ಯರೂಪನಾದ ಪರಬ್ರಹ್ಮನಲ್ಲಿರುವ,
**ಅಸಮಯಾ** = ಅಸದೃಶವಾದ (ಎಣೆಯಿಲ್ಲದಿರುವ)
**ಇಷ್ಟಧಿಯಾ** = ಸ್ವೇಚ್ಛಾವಿಷಯಕವಾದ ಬುದ್ಧಿಯಿಂದ
**ಸಮಯೇ ಸಮಯೇ** = ಆಯಾಕಾಲದಲ್ಲಿ
**ಜಗತಃ** = ಪ್ರಪಂಚದ,
**ಸನಿರಾಸಂ** = ಸಂಹಾರದಿಂದ ಕೂಡಿದ,
**ಸ್ಥಿತಿಯುಕ್** = ಪಾಲನೆಯಿಂದ ಸಹಿತವಾದ
**ಜನನಂ** = ಸೃಷ್ಟಿಯು
(**ಭವತಿ** = ಆಗುತ್ತದೆ)

ತಾತ್ಪರ್ಯ— ಪರಬ್ರಹ್ಮನಾದ ನಾರಾಯಣನು ಸಕಲ ಶಬ್ದ ವಾಚ್ಯನೆಂದು ಪ್ರಸಿದ್ಧನಾಗಿದ್ದಾನೆ. ಅವನು ಇತರ ವಾದಿಗಳು ಹೇಳುವಂತೆ ಅವಾಚ್ಯವಲ್ಲ, ಅವನು ಅನಂತಾನಂತ ಜೀವರ ಅತ್ಯಂತ ಸಮೀಪದಲ್ಲಿ ಒಳಗೂ ಹೊರಗೂ ವ್ಯಾಪ್ತನಾಗಿರುತ್ತಾನೆಯೇ ಹೊರತು ಆ ಜೀವರಿಂದ ಅಭಿನ್ನನಾಗಿಲ್ಲ, ಅವನಿಗೂ ಭಿನ್ನ ಕರ್ಮರಾದ ಅನಂತ ಜೀವರಿಗೂ ಐಕ್ಯವಿಲ್ಲ, ಅವನಿಗೆ ಕಾಲಕೃತವಾದ ಮುಪ್ಪು, ಸಾವು ಮುಂತಾದ ವಿಕಾರಗಳಿಲ್ಲ, ಅವನಲ್ಲಿ ಯಾವ ಬದಲಾವಣೆಯೂ ಇಲ್ಲ, ಅವನು ನಿತ್ಯನು. ಸ್ವಚ್ಛ ಜ್ಞಾನಸ್ವರೂಪನು. ಅವನು ಅಶುದ್ಧನಾದ ಮಾಯಾಯುತವಾದ ಶಬಲ ಬ್ರಹ್ಮನಲ್ಲ, ಅವನು ಶುಭಸ್ವರೂಪನಾದ ಭಾಗ್ಯಸ್ವರೂಪನಾದ ನಾರಾಯಣನೆಂಬ ಪರಬ್ರಹ್ಮನು. ಅವನಲ್ಲಿ ಇತರರಲ್ಲಿ ಯಾರಲ್ಲಿಯೂ ಇಲ್ಲದಿರುವ ತನ್ನ ಇಚ್ಛಾ ವಿಷಯಕವಾದ ಬುದ್ಧಿಯಿದೆ. ಆ ಬುದ್ಧಿಯೇ ಇಚ್ಛಾರೂಪವು, ಇಚ್ಛೆಯೇ ಬುದ್ಧಿರೂಪವು ಇಂತಹ ಇಚ್ಛಾತ್ಮಕವಾದ ಬುದ್ಧಿಯನ್ನೇ ಮಾಯಾ ಎಂದು ಹೇಳುತ್ತಾರೆ. ಅದು ಅವನ ಅಧೀನವಾಗಿ ಅವನ ಸ್ವರೂಪವೇ ಆಗಿದೆ. ಅವನಿಗಿಂತ ಭಿನ್ನವಾದ ಮಾಯೆ ಎಂಬುದಿಲ್ಲ, ಇಂತಹ ತನ್ನ ಇಚ್ಛಾತ್ಮಕವಾದ ಮಾಯೆಯಿಂದ ಪರಮಾತ್ಮನು ಆಯಾ ಕಾಲದಲ್ಲಿ ಪ್ರಪಂಚದ ಸೃಷ್ಟಿ, ರಕ್ಷಣ ಮತ್ತು ಸಂಹಾರಗಳನ್ನು ಮಾಡುತ್ತಾನೆ. ಮಾಯಾವಾದಿಗಳು ಹೇಳುವಂತೆ ಮಾಯೆಯಿಂದ ಈ ಕಾರ್ಯಗಳಾಗುವುದಿಲ್ಲ (ಆಚಾರ್ಯರ ವ್ಯಾಖ್ಯೆಯು ಇವೇ ಮೊದಲಾದ ಶ್ರೇಷ್ಠವಾದ ವಿಷಯಗಳನ್ನು ಭಕ್ತರಿಗೆ ಪ್ರಕಾಶಗೊಳಿಸಿತು.)

ವಿಗ್ರಹ—

**ಸನಿರಾಸಂ**— ನಿರಾಸೇನ (ಪ್ರಲಯೇನ) ಸಹ ವರ್ತತೇ ಇತಿ ಸನಿರಾಸಂ ।

**ಅಸಮಯೇ**— ನ ವಿದ್ಯತೇ ಸಮಯಃ ಯಸ್ಯಸಃ ಅಸಮಯಃ ತಸ್ಮಿನ್ ಅಸಮಯೇ ।

**ಸ್ಥಿತಿಯುಕ್**— ಸ್ಥಿತ್ಯಾ ಯುಜ್ಯತೇ ಇತಿ ಸ್ಥಿತಿಯುಕ್ (ಸ್ಥಿತಿಯುಕ್, ಸ್ಥಿತಿಯುಜೀ ಸ್ಥಿತಿಯುಂಜಿ ಜಕಾರಾಂತ ನಪುಂಸಕಲಿಂಗ)

**ಸ್ವವಭಾಸಮಯೇ**— ಶೋಭನಶ್ಚಾಸೌ ಅವಭಾಸಶ್ಚ ಸ್ವವಭಾಸಃ, ಸ್ವವಭಾಸ ಏವ ಸ್ವವಭಾಸಮಯಃ ತಸ್ಮಿನ್, ಸ್ವವಭಾಸಮಯೇ ।

**ಅಸಮಯಾ**— ನ ವಿದ್ಯತೇ ಸಮಾ ಯಸ್ಯಾಃ ಸಾ ಅಸಮಾ, ತಯಾ ಅಸಮಯಾ ।

**ಇಷ್ಟಧಿಯಾ**— ಇಷ್ಟಸ್ಯ (ಇಚ್ಛಾಯಾಃ) ಧೀಃ ಇಷ್ಟಧೀಃ, ತಯಾ ಇಷ್ಟಧಿಯಾ ।

**ಕೋಶ**— ಸಮಯಃ ಶಾಸ್ತ್ರ 'ಸಮಯಾಃ ಶಪಥಾಚಾರ ಕಾಲಸಿದ್ಧಾಂತಸಂವಿದಃ' ಎಂದು ಅಮರ. ಅಯಃ ಶುಭಪ್ರಾಪಕ ವಿಧಿ. 'ಅಯಃ ಶುಭಾವಹೋ ವಿಧಿಃ' ಎಂದು ಅಮರ. ಇದಂ ಸಮಯಾ ಎಂಬಲ್ಲಿ ಇದಂ ಎಂಬುದು ದ್ವಿತೀಯಾವಿಭಕ್ತಿ. ಅಭಿತಃ ಪರಿತಃ ಸಮಯಾನಿಕಷಾ 'ಹಾಪ್ರತಿಯೋಗೇಽಪಿ' ಎಂಬ ವಚನದಿಂದ ಸಮಯಾ ಶಬ್ದದ ಯೋಗವಿದ್ದಾಗ ದ್ವಿತೀಯಾ ವಿಭಕ್ತಿ ಬಂದಿದೆ.

ವೃತ್ತ— ಈ ಪದ್ಯದಲ್ಲಿ ತೋಟಕ ವೃತ್ತ. 'ಇಹ ತೋಟಕಮಬ್ಧಿಸಕಾರಯುತಂ' ಎಂದು ಅದರ ಲಕ್ಷಣ.

★ ★ ★

ಅವತಾರಿಕಾ— ಶ್ರೀಮದಾಚಾರ್ಯರ ವ್ಯಾಖ್ಯಾನವನ್ನೇ ವಿವರಿಸುತ್ತಾರೆ.

**ವರ್ತಸ್ವಾಧ್ಯಧಿ ಸರ್ವಂ ದೀವ್ಯೇದಂ**
**ಸೋಽನಿಶಂ ಸ್ವತಂತ್ರೋ ವಿಷ್ಣುಃ ।**
**ಉಜ್ಜಾಸಯ ದುಷ್ಟಾನಾಂ ಸಂಸ್ಕುರು**
**ಸಾಧೂನ್ ಗುಣಾಭಿಪೂರ್ಣೋಽಪ್ಯಗುಣಃ ॥ 46 ॥**

**ಪದಚ್ಛೇದ—** ವರ್ತಸ್ವ, ಅಧಿ, ಅಧಿ, ಸರ್ವಂ, ದೀವ್ಯ, ಇದಂ, ಸಃ ಅನಿಶಂ, ಸ್ವತಂತ್ರಃ, ವಿಷ್ಣುಃ ಉಜ್ಜಾಸಯ, ದುಷ್ಟಾನಾಂ, ಸಂಸ್ಕುರು, ಸಾಧೂನ್, ಗುಣಾಭಿಪೂರ್ಣಃ, ಅಪಿ, ಅಗುಣಃ ।

**ಅನ್ವಯ—** ಸ್ವತಂತ್ರಃ ಸಃ ವಿಷ್ಣುಃ ಸರ್ವಂ ಅಧ್ಯಧಿ, ವರ್ತಸ್ವ ಇದಂ ಅನಿಶಂ, ದೀವ್ಯ ದುಷ್ಟಾನಾಂ ಉಜ್ಜಾಸಯ. ಸಾಧೂನ್ ಸಂಸ್ಕುರು, ಗುಣಾಭಿಪೂರ್ಣಃ ಅಪಿ ಅಗುಣಃ ।

**ಅನ್ವಯಾರ್ಥ—**

**ಸ್ವತಂತ್ರಃ** = ಸ್ವಾಧೀನನಾದ,
**ಸಃ** = ಆ ನಾರಾಯಣನು,
**ಸರ್ವಂ** = ಸಮಸ್ತ ಪ್ರಪಂಚದ ಪ್ರಾಣಿಗಳ
**ಅಧ್ಯಧಿ** = ಅತ್ಯಂತ ಹತ್ತಿರ (ಹೃದಯದಲ್ಲಿ)
**ವರ್ತಸ್ವ** = ಇದ್ದಾನೆ.
**ಇದಂ** = ಈ ಪ್ರಪಂಚದಿಂದ,
**ಅನಿಶಂ** = ಯಾವಾಗಲೂ,
**ದೀವ್ಯ** = ಆಟವಾಡುತ್ತಾನೆ.
**ದುಷ್ಟಾನಾಂ** = ಕೆಟ್ಟ ಅಸುರರನ್ನು,
**ಉಜ್ಜಾಸಯ** = ಕೊಲ್ಲುತ್ತಾನೆ. (ನರಕದಲ್ಲಿ ದುಃಖಪಡಿಸಿ ನರಳಿಸುತ್ತಾನೆ)
**ಸಾಧೂನ್** = ಮೋಕ್ಷಯೋಗ್ಯರಾದ ಸಜ್ಜನರನ್ನು,
**ಸಂಸ್ಕುರು** = ಸಂಸ್ಕರಿಸುತ್ತಾನೆ, ದೋಷವಿಲ್ಲದವರನ್ನಾಗಿ ಮಾಡುತ್ತಾನೆ.
**ಗುಣಾಭಿಪೂರ್ಣಃ ಅಪಿ ಅಗುಣಃ** = ಆನಂದಾದಿ ಗುಣಗಳಿಂದ ತುಂಬಿದ್ದರೂ ಗುಣವಿಲ್ಲದವನಾಗಿದ್ದಾನೆ. (ಪ್ರಾಕೃತವಾದ ಸತ್ತ್ವ ರಜ ತಮೋಗುಣಗಳಿಲ್ಲದವನು)

**ತಾತ್ಪರ್ಯ—** ಶ್ರೀಮನ್ನಾರಾಯಣನು ಸ್ವತಂತ್ರನು, ಅವನು ಪ್ರಪಂಚದ ಎಲ್ಲಾ ಚೇತನರಲ್ಲಿಯೂ, ಅಚೇತನ-ಗಳಲ್ಲಿಯೂ ಒಳಗೂ ಹೊರಗೂ ನೆಲೆಸಿದ್ದಾನೆ. ಅವುಗಳ ಹತ್ತಿರದಲ್ಲಿ ಅವುಗಳಿಗಿಂತ ಉತ್ತಮನಾಗಿದ್ದಾನೆಯೇ ಹೊರತು ಅಭಿನ್ನನಾಗಿಲ್ಲ, ಏಕೆಂದರೆ ಅವನು ನಿರಂತರವಾಗಿಯೂ ಪ್ರಪಂಚದ ಸೃಷ್ಟಿ ಮುಂತಾದ್ದನ್ನು ಮಾಡುತ್ತಾ ಆಟವಾಡುತ್ತಾ ಇರುತ್ತಾನೆ, ಆನಂದಪೂರ್ಣನಾಗಿರುತ್ತಾನೆ ಎಂದು ಶ್ರುತಿಗಳು ಹೇಳುತ್ತವೆ. ಅವನು ಈ ಚೇತನ ಪ್ರಪಂಚದಲ್ಲಿ ಮೋಕ್ಷ-ಯೋಗ್ಯರಾದ ಸಮಸ್ತಜೀವರನ್ನು ಶುದ್ಧರನ್ನಾಗಿ ಮಾಡಿ ಮುಕ್ತಿಯನ್ನು ಕೊಟ್ಟು ಸಲಹುತ್ತಾನೆ. ಅವನು ಶುದ್ಧಾನಂದಾದಿ ಸಮಸ್ತ ಕಲ್ಯಾಣ ಗುಣಪೂರ್ಣನಾಗಿದ್ದರೂ ಅಗುಣನು. ಅಂದರೆ ಪ್ರಾಕೃತವಾದ ಸತ್ತ್ವ ರಜಸ್ಸು ತಮಸ್ಸು ಎಂಬ ಬಂಧಕ-ಗಳಾದ ಗುಣಗಳಿಂದ ರಹಿತನಾಗಿರುವನು ಈ ರೀತಿ ಶ್ರೀಪತಿಯು ಸಮಸ್ತ ಪ್ರಪಂಚ ವಿಲಕ್ಷಣನಾಗಿ ಸರ್ವೋತ್ತಮನಾಗಿ ಇರುತ್ತಾನೆ.

**ವಿಗ್ರಹ—**

**ಗುಣಾಭಿಪೂರ್ಣಃ—** ಗುಣೈಃ ಅಭಿಪೂರ್ಣಃ ಗುಣಾಭಿಪೂರ್ಣಃ ।
**ಅಗುಣಃ—** ನ ವಿದ್ಯಂತೇ ಗುಣಾಃ (ಪ್ರಾಕೃತಗುಣಾ) ಯಸ್ಯಸಃ ಅಗುಣಃ ।

**ಕ್ರಿಯಾಪದ—** ವರ್ತಸ್ವ ದಿವ್ಯಃ, ಉಜ್ಜಾಸಯ, ಸಂಸ್ಕುರು ಎಂಬ ನಾಲ್ಕು ಕ್ರಿಯಾಪದಗಳೂ ಸಮುಚ್ಚಯಾರ್ಥದಲ್ಲಿ ವ್ಯತ್ಯಾಸ ಹೊಂದುವುದಿಲ್ಲ, ಎಲ್ಲಾ ಪುರುಷ ವಚನಗಳಲ್ಲಿ ಒಂದೇ ರೀತಿ ಇರುತ್ತವೆ. ವೃತುವರ್ತನೇ, ದಿವುಕ್ರೀಡಾವಿಜಿಗೀಷಾ ಇತ್ಯಾದಿ, ಜಸು ಹಿಂಸಾಯಾಂ, ಡುಕೃಞ ಕ್ಷರಣೇ ಇವು ಧಾತುಗಳು ।

**ವ್ಯಾಕರಣವಿಶೇಷ—** ಸ್ವತಂತ್ರಃ ಸಃ ಸರ್ವಂ ಅಧ್ಯಧಿ ವರ್ತಸ್ವ ಎಂಬಲ್ಲಿ 'ವರ್ತತೇ' ಇರುತ್ತಾನೆ ಎಂಬ ಅರ್ಥದಲ್ಲಿ ವರ್ತಸ್ವ ಎಂದು ಲೋಟ್ ಮಧ್ಯಮಪುರುಷ ಏಕವಚನವು ಬಂದಿದೆ. ಸಮುಚ್ಚಯೇ ದ್ಯೋತ್ಯೇ 'ಪ್ರಾಗುಕ್ತಂ ವಾ ಸ್ಯಾತ್' ಅನೇಕ ಕ್ರಿಯೆಗಳ ಸಮುಚ್ಚಯವು ತೋರುತ್ತಿರುವಾಗ ಹಿಂದೆ ಹೇಳಿದ ಲೋಟ್‌ಲಕಾರ ಮತ್ತು ಅದಕ್ಕೆ ಪರಸ್ಮೈಪದಕ್ಕೆ 'ಹಿ', ಆತ್ಮನೇ ಪದಕ್ಕೆ 'ಸ್ವ' ಎಂಬ ಆದೇಶಗಳು ವಿಕಲ್ಪದಿಂದ ಬರುತ್ತವೆ ಎಂದು ಸೂತ್ರಾರ್ಥ. ''ಕ್ರಿಯಾ-ಸಮಭಿವ್ಯಾಹಾರೇ ಲೋಟ್ ಲೋಟೋ ಹಿ ಸ್ವೌ ವಾ ಚ ತ ಧ್ವಮೋಃ (3.4.2)'' ಈ ಸೂತ್ರದಲ್ಲಿ ಪುನಃ ಪುನಃ ಅಥವಾ ಬಹಳವಾಗಿ ಎಂಬ ಅರ್ಥದಲ್ಲಿ ಲೋಟ್ ಮತ್ತು ಅದಕ್ಕೆ ಪರಸ್ಮೈಪದದಲ್ಲಿ 'ಹಿ', ಆತ್ಮನೇ ಪದದಲ್ಲಿ 'ಸ್ವ' ಎಂಬ ಆದೇಶವು ಬರುತ್ತದೆ. (ತ ಪರಸ್ಮೈಪದಿ ಲೋಟ್ ಮಧ್ಯಮಪುರುಷ ಬಹುವಚನ ಮತ್ತು 'ಧ್ವಂ' ಲೋಟ್ ಮಧ್ಯಮಪುರುಷ ಆತ್ಮನೇಪದಿಗಳಲ್ಲಿ ಹಿ ಸ್ವ ಆದೇಶಗಳು ವಿಕಲ್ಪದಿಂದ ಬರುತ್ತದೆ) ಎಂದು ಹಿಂದೆ ಹೇಳಿದ ವಿಷಯವು ಸಮುಚ್ಚಯದಲ್ಲಿ ವಿಕಲ್ಪದಿಂದ ಬರುತ್ತದೆ ಎಂದು ಹೇಳಿದ್ದರಿಂದ ಇಲ್ಲಿ 'ವರ್ತತೇ' ಇರುತ್ತಾನೆ ಎಂಬ ಅರ್ಥದಲ್ಲಿಯೇ ಲೋಟ್ ಮಧ್ಯಮ ಪುರುಷ ಅದಕ್ಕೆ ಸ್ವಆದೇಶ 'ಸರ್ವಂ ಅಧ್ಯಧಿ' ಎಂಬಲ್ಲಿ 'ಉಪರ್ಯಧ್ಯಧಸಃ ಸಾಮೀಪ್ಯೇ (8-1-7)' ಎಂಬ ಸೂತ್ರದಿಂದ ದ್ವಿವಚನ-ಹಾಗೆ ಪದಕ್ಕೆ ದ್ವಿರುಕ್ತಿ ಬಂದಾಗ **ಉಭಸರ್ವತಸೋಃ ಕಾರ್ಯಾಧಿಗು ಪರ್ಯಾದಿಷು ತ್ರಿಷು ದ್ವಿತೀಯಾ-ಮ್ರೇಡಿತಾಂತೇಷು ತತೋಽನ್ಯತ್ರಾಪಿ ದೃಶ್ಯತೇ ॥** (ಉಪಾನ್ವಧ್ಯಾಙ್‌ವಸಃ 1-4-48) ಎಂಬ ಸೂತ್ರದಲ್ಲಿರುವ ಶ್ಲೋಕ-ರೂಪವಾದ ವಾರ್ತಿಕ) ಈ ವಚನದಿಂದ ಸರ್ವಶಬ್ದಕ್ಕೆ ದ್ವಿತೀಯಾ ವಿಭಕ್ತಿ ''ಇದಂ ಅನಿಶಂ ದೀವ್ಯ'' ಎಂಬಲ್ಲಿಯೂ ''ದೀವ್ಯತಿ'' ವಿಹರಿಸುತ್ತಾನೆ ಎಂಬ ಅರ್ಥದಲ್ಲಿ ಹಿಂದಿನ ಸೂತ್ರದಿಂದಲೇ ಲೋಟ್ ಮತ್ತು ಅದಕ್ಕೆ ಹಿ ಆದೇಶ = ಅದಕ್ಕೆ ''ಅತೋ ಹೇಃ'' (6-4-105) ಎಂಬ ಸೂತ್ರದಿಂದ ಲುಕ್ ಈ ಜಗತ್ತಿನಿಂದ ಆಟವಾಡುತ್ತಾನೆ ಎಂದು ಹೇಳುವಾಗ ಅನೇನ ದೀವ್ಯ ಎಂದಾಗಬೇಕಿತ್ತು. ಆದರೆ **''ದಿವಃ ಕರ್ಮಚ (1.4.43) ದಿವಃ ಸಾಧಕತಮಂ ಕಾರಕಂ ಕರ್ಮಸಂಜ್ಞಂ ಸ್ಯಾತ್ ಚಾತ್‌ಕರಣಸಂಜ್ಞಂ''** ದಿವ್‌ಧಾತುವಿನ ಅರ್ಥಕ್ಕೆ ಸಾಧಕ ತಮವಾದ ಕಾರಕಕ್ಕೆ ಕರ್ಮಸಂಜ್ಞೆಯೂ ಕರಣಸಂಜ್ಞೆಯೂ ಬರುತ್ತದೆ) ಎಂಬ ಸೂತ್ರಾನುಸಾರವಾಗಿ ಕರಣಾರ್ಥದಲ್ಲಿ ಕರ್ಮಸಂಜ್ಞೆಯು ಬಂದಿದೆ.

ದುಷ್ಟಾನಾಂ ಉಜ್ಜಾಸಯ = ದುಷ್ಟರನ್ನು ಸಂಹರಿಸುತ್ತಾನೆ ಎಂಬ ಅರ್ಥದಲ್ಲಿ ಹಿಂದಿನಂತೆಯೇ **''ಸಮುಚ್ಚಯೇ ಸಾಮಾನ್ಯವಚನಸ್ಯ''** ಎಂಬ ಸೂತ್ರದಿಂದ ಲೋಟ್ ಮತ್ತು ಆದರೆ ಹೇಗೆ ಲುಕ್ ಬಂದಿರುತ್ತದೆ. 'ದುಷ್ಟಾನಾಂ' ಎಂಬಲ್ಲಿ 'ದುಷ್ಟಾನ್' ಎಂದು ಕರ್ಮಾರ್ಥದಲ್ಲಿ ''ಜಾಸಿ ನಿಪ್ರಹಣನ ನಾಟ ಕ್ರಾಥ ಪಿಷಾಂ ಹಿಂಸಾಯಾಂ (2.3.56)'' ಎಂಬ ಸೂತ್ರದಿಂದ ''ಹಿಂಸಾರ್ಥಾನಾಮೇಷಾಂ ಶೇಷೇ ಕರ್ಮಣಿ ಷಷ್ಠೀ ಸ್ಯಾತ್'' ಹಿಂಸಾರ್ಥಕವಾದ ಈ ಧಾತುಗಳ ಕರ್ಮತ್ವವನ್ನು ವಿವಕ್ಷೆ ಮಾಡದಿದ್ದಾಗ ಕರ್ಮಣಿ ಷಷ್ಠೀ ಬರುತ್ತದೆ, ಷಷ್ಠೀ ಬಂದಿದೆ. ಸಾಧೂನ್ ಸಂಸ್ಕುರು = ಸಜ್ಜನರನ್ನು ಸಂಸ್ಕರಿಸುತ್ತಾನೆ ಎಂಬಲ್ಲಿಯೂ ಹಿಂದಿನಂತೆಯೇ ಲೋಟ್ ಮತ್ತು ಆದರ 'ಹೇಗೆ' ಲುಕ್ ಬಂದಿದೆ. ಸಂಸ್ಕುರು ಎಂಬಲ್ಲಿ 'ಸಂ-ಪರ್ಯುಪೇಭ್ಯಃ ಕರೋತೌ ಭೂಷಣೇ (6-1-137)' ಎಂಬ ಸೂತ್ರದಿಂದ 'ಸುಟ್' ಆಗಮ ಬಂದಿದೆ.

**ಪ್ರಯೋಗ—** ಸ್ವತಂತ್ರಃ ಸಃ ವಿಷ್ಣುಃ ಸರ್ವಂ ಅಧ್ಯಧಿ ವರ್ತತೇ (ಕರ್ತರಿ)
ಸ್ವತಂತ್ರೇಣ ತೇನ ವಿಷ್ಣುನಾ ಸರ್ವಂ ಅಧ್ಯದಿ ವೃತ್ಯತೇ (ಭಾವೇ)
ಸಃ ವಿಷ್ಣುಃ ಇದಂ ವಿಶ್ವಂ ದೀವ್ಯತಿ (ಕರ್ತರಿ)
ತೇನ ವಿಷ್ಣುನಾ ಇದಂ ವಿಶ್ವಂ ದೀವ್ಯತೇ (ಕರ್ಮಣಿ)
ವಿಷ್ಣುಃ ದುಷ್ಟಾನಾಂ ಉಜ್ಜಾಸಯತಿ (ಕರ್ತರಿ)
ವಿಷ್ಣುನಾ ದುಷ್ಟಾನಾಂ ಉಜ್ಜಾಸತೇ (ಕರ್ಮಣಿ)
ವಿಷ್ಣುಃ ಸಾಧೂನ್ ಸಂಸ್ಕರೋತಿ (ಕರ್ತರಿ)
ವಿಷ್ಣುನಾ ಸಾಧವಃ ಸಂಸ್ಕ್ರಿಯಂತೇ (ಕರ್ಮಣಿ)

**ವೃತ್ತ—** ಇಲ್ಲಿ ಆರ್ಯಾಗೀತಿವೃತ್ತ ಆರ್ಯಾಪೂರ್ವಾರ್ಧಂ ಯದಿ ಗುರುಣೈಕೇನ ನಿಧನೇ ಯುಕ್ತಂ ।
ಇತರತ್ ತದ್ವನ್ನಿಖಿಲಂ ದಲಂ ಯದೀಯಮುದಿತೇಽಯಮಾರ್ಯಾಗೀತಿಃ ॥

ಈ ಲಕ್ಷಣದಂತೆ ಇದು ಆರ್ಯಾ ಗೀತಿವೃತ್ತ.

**ಅಲಂಕಾರ—** ಇಲ್ಲಿ ಗುಣಾಭಿಪೂರ್ಣೋಽಪ್ಯಗುಣಃ ಎಂಬಲ್ಲಿ ವಿರೋಧಾಭಾಸಾಲಂಕಾರವಿದೆ. 'ಆಭಾಸತ್ವೇ ವಿರೋಧಸ್ಯ ವಿರೋಧಾಭಾಸ ಇಷ್ಯತೇ' ಎಂದು ಅದರ ಲಕ್ಷಣ.

★ ★ ★

**ಅಸಮೋತ್ತಮೋ ಮತೋಽಸೌ**
**ಶ್ರಿಯಃಪತಿರ್ವಿಶ್ವತೋ ವಿಭಿನ್ನಾತ್ಮಾ ।**
**ಪರಮಾನ್ ಪ್ರಕಾಮಮರ್ಥಾನ್**
**ಪ್ರಕಾಶಯಾಮಾಸ ಸೇತ್ಯಾದೀನ್ ॥ 47 ॥**

**ಪದಚ್ಛೇದ—** ಅಸಮೋತ್ತಮಃ, ಮತಃ, ಅಸೌ, ಶ್ರಿಯಃ ಪತಿಃ, ವಿಶ್ವತಃ, ವಿಭಿನ್ನಾತ್ಮಾ, ಪರಮಾನ್, ಪ್ರಕಾಮಂ, ಅರ್ಥಾನ್, ಪ್ರಕಾಶಯಾಮಾಸ, ಸಾ, ಇತ್ಯಾದೀನ್ ।

**ಅನ್ವಯ—** ಸಾ, ಅಸೌ ಶ್ರಿಯಃ ಪತಿಃ ಅಸಮೋತ್ತಮಃ, ವಿಶ್ವತಃ ವಿಭಿನ್ನಾತ್ಮಾ ಮತಃ ಇತ್ಯಾದೀನ್ ಪರಮಾನ್ ಅರ್ಥಾನ್ ಪ್ರಕಾಮಂ ಪ್ರಕಾಶಯಾಮಾಸ ।

**ಅನ್ವಯಾರ್ಥ—**

**ಸಾ** = ಆಚಾರ್ಯರ ಆ ವ್ಯಾಖ್ಯಾನವು (ಪ್ರವಚನವು)
**ಅಸೌ** = ಇಂತಹ ಈ,
**ಶ್ರಿಯಃ** = ಲಕ್ಷ್ಮೀದೇವಿಯ
**ಪತಿಃ** = ಸ್ವಾಮಿಯಾದ ನಾರಾಯಣನು,
**ಅಸಮೋತ್ತಮಃ** = ಸಮರೂ ಅಧಿಕರೂ ಇಲ್ಲದವನು,
**ವಿಶ್ವತಃ** = ಪ್ರಪಂಚಕ್ಕಿಂತ,
**ವಿಭಿನ್ನಾತ್ಮಾ** = ಅತ್ಯಂತ ಬೇರೆಯಾದ, ಸ್ವರೂಪವುಳ್ಳವನು,
**ಇತಿ** = ಎಂದು
**ಮತಃ** = ತಿಳಿಯಲ್ಪಟ್ಟಿದ್ದಾನೆ.
**ಇತ್ಯಾದೀನ್** = ಇವೇ ಮೊದಲಾಗಿ ಉಳ್ಳ
**ಪರಮಾನ್** = ಉತ್ತಮವಾದ
**ಅರ್ಥಾನ್** = ವಿಷಯಗಳನ್ನು
**ಪ್ರಕಾಮಂ** = ಬಹಳವಾಗಿ
**ಪ್ರಕಾಶಯಾಮಾಸ** = ಪ್ರಕಟಿಸಿತು.

**ತಾತ್ಪರ್ಯ**— ಈ ಲಕ್ಷ್ಮೀಪತಿಯಾದ ನಾರಾಯಣನಿಗೆ ಸಮರೂ ಉತ್ತಮರೂ ಇಲ್ಲ, ಇವನು ಸಮಸ್ತ ಪ್ರಪಂಚಕ್ಕಿಂತ ಬೇರೆಯವನು ಎಂದು ಶ್ರುತಿಸ್ಮೃತಿ ಪುರಾಣಾದಿಗಳಿಂದ ತಿಳಿದು ಬರುತ್ತದೆ. ಇವೇ ಮೊದಲಾದ ವಿಷಯವನ್ನು ಆ ಮಧ್ವಾಚಾರ್ಯರು ವೇದಗಳನ್ನು ವ್ಯಾಖ್ಯಾನ ಮಾಡುವಾಗ ಚೆನ್ನಾಗಿ ವಿವರಿಸಿದರು.

**ವಿಗ್ರಹ**—

**ಅಸಮೋತ್ತಮಃ**— ನ ವಿದ್ಯೇತೇ ಸಮೋತ್ತಮೌ ಯಸ್ಯಸಃ ಅಸಮೋತ್ತಮಃ ।

**ವಿಭಿನ್ನಾತ್ಮಾ**— ವಿಭಿನ್ನಃ ಆತ್ಮಾ ಯಸ್ಯ ಸಃ ವಿಭಿನ್ನಾತ್ಮಾ ।

**ಕ್ರಿಯಾಪದ**— ಪ್ರಕಾಶಯಾಮಾಸ- ಕಾಶೃದೀಪ್ತೌ ಇತಿ ಪ್ರಉಪಸರ್ಗಪೂರ್ವಕಾತ್ ಣಿಜಂತಾತ್ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಪ್ರಕಾಶಯಾಮಾಸ ಇತಿ ರೂಪಂ ।

ಪ್ರ+ಕಾಶಯಾಮಾಸ ಕಾಶಯಾಮಾಸತುಃ ಕಾಶಯಾಮಾಸುಃ, ಕಾಶಯಾಮಾಸಿಥ ಕಾಶಯಾಮಾಸಥುಃ
ಕಾಶಯಾಮಾಸ, ಕಾಶಯಾಮಾಸ ಕಾಶಯಾಮಾಸಿವ ಕಾಶಯಾಮಾಸಿಮ ॥

**ಪ್ರಯೋಗ**— ಸಾ (ವ್ಯಾಖ್ಯಾ) ಪರಮಾನ್ ಅರ್ಥಾನ್ ಪ್ರಕಾಶಯಾಮಾಸ (ಕರ್ತರಿ)
ತಯಾ ವ್ಯಾಖ್ಯಯಾ ಪರಮಾಃ ಅರ್ಥಾಃ ಪ್ರಕಾಶಯಾಂಚಕ್ರಿರೇ (ಕರ್ಮಣಿ)

**ವೃತ್ತ**— ಉಭಯಾರ್ಧಯೋರ್ಜತಾರೌ ದ್ವಿತೀಯತುರ್ಯಗಮಧ್ಯಗೌ ಯಸ್ಯಾಃ । ಚಪಲೇತಿ ನಾಮ ತಸ್ಯಾಃ ಪ್ರಿಕೀರ್ತಿತಂ ನಾಗರಾಜೇನ ಎಂಬ ಲಕ್ಷಣಾನುಸಾರವಾಗಿ ಚಪಲಾರ್ಯಾ ವೃತ್ತ.

★ ★ ★

**ಸಮಾನಯಾ ಯಾಽನಮಾಽಸ ಮಾಯಯಾ ತತಯಾಽಯಮಾ ।**
**ನಯಾಸನಾ ನಾಸ ಯಾ ನ ಯಾತನಾಽಲಲನಾಽತಯಾ ॥ 48 ॥**

**ಪದಚ್ಛೇದ**— ಸಮಾನಯಾ, ಯಾ, ಅನಮಾ, ಆಸ, ಮಾಯಯಾ, ತತಯಾ, ಅಯಮಾ, ನಯಾಸನಾ, ನ, ಆಸ, ಯಾ ನ, ಯಾತನಾ, ಅಲಲನಾ, ಅತಯಾ (ತಯಾ)

**ಅನ್ವಯ**— ಯಾ ಸಮಾನಯಾ, ತತಯಾ, ಮಾಯಯಾ ಅನಮಾ ಆಸ, ಅಯಮಾ ಯಾ ನಯಾಸನಾ ನ ಆಸ (ಇತಿ) ನ ಅತಯಾ ಅಲಲನಾ ಯಾತನಾ (ಭವತಿ)

**ಅನ್ವಯಾರ್ಥ**—

**ಯಾ** = ಯಾವ ಮಧ್ವಾಚಾರ್ಯರ ವ್ಯಾಖ್ಯಾನವು,
**ಸಮಾನಯಾ** = ಪ್ರಮಾಣದಿಂದ (ಪ್ರಮಾಣಾಭಾಸದಿಂದ) ಸಹಿತವಾದ,
**ತತಯಾ** = ವ್ಯಾಪ್ತವಾದ,
**ಮಾಯಯಾ** = ಮಾಯೆಯಿಂದ,
**ಅನಮಾ** = ಖಂಡಿಸಲು ಅಶಕ್ಯವು,
**ಆಸ** = ಆಯಿತೋ,
**ಅಯಮಾ** = ಎಣೆಯಿಲ್ಲದ,
**ಯಾ** = ಯಾವ ವ್ಯಾಖ್ಯಾನವು,
**ನಯಾಸನಾ** = ನ್ಯಾಯದ ಆಶ್ರಯವುಳ್ಳದ್ದು

**ನ ಆಸ (ಇತಿ) ನ** = ಆಗಲಿಲ್ಲ ಅಂತ ಇಲ್ಲವೋ,
**ಅತಯಾ** = ಇದಕ್ಕೆ ವಿರುದ್ಧವಾದ ಮಾಯಾವಾದ ವ್ಯಾಖ್ಯಾನದಿಂದ,
**ಅಲಲನಾ** = ವಿಲಾಸವಿಲ್ಲದ (ಸುಖವಿಲ್ಲದ)
**ಯಾತನಾ ಭವತಿ** = ನರಕಪೀಡೆಯು ಆಗುತ್ತದೆ.

**ತಾತ್ಪರ್ಯ**— 'ಇಂದ್ರೋ ಮಾಯಾಭಿಃ ಪುರುರೂಪ ಈಯತೇ' ಪರಮೇಶ್ವರನು ತನ್ನ ಮಾಯೆಗಳಿಂದ ಅನೇಕ ಜೀವರೂಪವುಳ್ಳವನಾಗಿ ತಿಳಿಯಲ್ಪಡುತ್ತಾನೆ. ''ಮಾಯಾಮಾತ್ರಮಿದಂ ದ್ವೈತಂ ಅದ್ವೈತಂ ಪರಮಾರ್ಥತಃ'' ಈ ಭೇದ ಪ್ರಪಂಚವೆಲ್ಲವೂ ಕೇವಲ ಮಾಯಾಸ್ವರೂಪವಾದುದು, ಪರಮಾರ್ಥವಾಗಿ ಅದ್ವೈತವೊಂದೇ ಇರುತ್ತದೆ ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾದ ಮಾಯೆಯಿಂದ ಈ ಜಗತ್ತು ಇದ್ದಂತೆ ಕಾಣಿಸುತ್ತಿದೆ. ಪಾರಮಾರ್ಥಿಕವಾಗಿ ಜಗತ್ತೆಂಬುದು ಇಲ್ಲವೇ ಇಲ್ಲ ಎಂದು ಅದ್ವೈತಿಗಳ ವಾದವು. ಆದರೆ ಅದ್ವೈತಿಗಳು ಹೇಳುವ ಮಾಯೆಗೆ ಈ ವಾಕ್ಯಗಳು ಸಾಧಕವಾಗುವುದಿಲ್ಲ, ಅವೆಲ್ಲವೂ ಮಾನಾಭಾಸಗಳು. ಆ ವಾಕ್ಯಗಳಿಗೆ ಬೇರೆಯ ಅರ್ಥವೇ ಇದೆ. ಈ ಪ್ರಮಾಣಗಳಲ್ಲಿರುವ ಮಾಯಾಶಬ್ದಕ್ಕೆ ಪರಮಾತ್ಮನ ಪ್ರಜ್ಞೆ ಅಂದರೆ ಸ್ವರೂಪಭೂತವಾದ ಜ್ಞಾನ ಎಂದು ಅರ್ಥ. ''ಮಾಯೇತಿ ಭಗವತ್ ಪ್ರಜ್ಞಾ'' ಎಂಬ ಪ್ರಮಾಣಾನುಸಾರವಾಗಿ ಈ ಅರ್ಥವು ಯುಕ್ತವಾಗಿರುತ್ತದೆ. ಆದ್ದರಿಂದ ಅದ್ವೈತಿಗಳು ಹೇಳುವ ಅನಿರ್ವಚನೀಯವಾದ ಮಾಯೆಯು ವಂಧ್ಯಾಕುಮಾರಿಯಂತೆ 'ಬಂಜೆಯ ಮಗಳಂತೆ' ಅತ್ಯಂತ ಅಪ್ರಸಿದ್ಧವಾಯಿತು. ಅದ್ವೈತಿಗಳು ಪ್ರಮಾಣಾಭಾಸದಿಂದ ಮಾಯೆಯನ್ನು ಸಾಧಿಸಿ ಅದು ಸರ್ವತ್ರ ವ್ಯಾಪ್ತವಾಗಿದೆಯೆಂದೂ ಅದರಿಂದ ಪ್ರಪಂಚವು ಮಿಥ್ಯಾ ಎಂದು ಸಿದ್ಧಿಸುತ್ತದೆಯೆಂದೂ ಹೇಳುತ್ತಾರೆ. ಆದರೆ ಹಿಂದೆ ಹೇಳಿದಂತೆ ಆ ಮಾಯೆಯು ಪ್ರಮಾಣ ಸಿದ್ಧವಲ್ಲ ಮತ್ತು ಆ ಮಾಯೆಯಿಂದ ದ್ವೈತವಾದವನ್ನು (ಭೇದವಾದವನ್ನು) ಖಂಡಿಸಲು ಸಾಧ್ಯವಾಗುವುದಿಲ್ಲ.

'ಮಾಯಾವಾದಿಗಳು ದ್ವೈತಿಗಳ ಭೇದವನ್ನು ಹೀಗೆ ಖಂಡಿಸುತ್ತಾರೆ. ಪರಮಾತ್ಮನ ಆನಂದಾದಿಗುಣಗಳಿಗೂ ಪರಮಾತ್ಮನಿಗೂ ಭೇದವಿದೆಯೋ, ಅಭೇದವಿದೆಯೋ, ಭೇದಾಭೇದವಿದೆಯೋ? ಭೇದವಿದೆಯೆಂದಾದರೆ ಅನವಸ್ಥಾ. ಎರಡನೇ ಪಕ್ಷದಲ್ಲಿ ಗುಣಿ ಮತ್ತು ಗುಣಗಳಲ್ಲಿ ಒಂದು ಮಾತ್ರ ಉಳಿಯಲು ಸಾಧ್ಯ. ಆ ಭೇದಕ್ಕೂ ಗುಣಗುಣ್ಯಾದಿಗಳಿಗೂ ಭೇದಾಭೇದವಿದೆಯೆಂಬ ಮೂರನೆಯ ಪಕ್ಷದಲ್ಲಿ ಹಿಂದಿನ ಎರಡು ಪಕ್ಷಗಳಿಗೆ ಹೇಳಿದ ದೋಷವೂ ಬರುತ್ತದೆ ಮತ್ತು ಪರಸ್ಪರ ವಿರುದ್ಧವಾದ ಭೇದಾಭೇದವನ್ನು ಹೇಳಿದರೆ 'ಅಹಂ ಮೂಕಃ' ಎಂಬಂತೆ ಸ್ವವ್ಯಾಹತಿಯೂ ಬರುತ್ತದೆ ಎಂದೂ, ಮತ್ತೂ ಹಿಂದೆ ಹೇಳಿದ ''ಇಂದ್ರೋ ಮಾಯಾಭಿಃ'' ಎಂಬ ಶ್ರುತಿಗಳಿಂದಲೂ ಸಮಸ್ತಭೇದ ಪ್ರಪಂಚವೂ ಮಾಯಾಮಯ ವೆಂದೂ, ವಾಸ್ತವವಲ್ಲವೆಂದೂ ತಿಳಿದುಬರುತ್ತಿದೆ ಎಂದು ಸತ್ಯವಾದ ಭೇದವನ್ನು ಅಲ್ಲಗಳೆಯುವ ಪ್ರಪಂಚ ಮಿಥ್ಯಾತ್ವ-ವಾದಿಗಳು ಹೇಳುತ್ತಾರೆ. ಈ ಪ್ರಮಾಣಾಭಾಸದಿಂದ ಕೂಡಿದ ವ್ಯಾಪ್ತವಾದ ಮಾಯೆಯಿಂದ ಆಚಾರ್ಯರ ವ್ಯಾಖ್ಯೆಯನ್ನು ಬಗ್ಗಿಸಲು, ಸೋಲಿಸಲು ಖಂಡಿಸಲು ಆಗುವುದಿಲ್ಲ, ಗುಣ ಮತ್ತು ಗುಣಿ ಮುಂತಾದ ಪದಾರ್ಥಗಳು ವಾಸ್ತವವೆಂದೂ ಅವುಗಳಿಗೆ ಭೇದವೂ ಪಾರಮಾರ್ಥಿಕವೆಂದೂ ಒಪ್ಪಿದರೆ ಯಾವ ದೋಷವೂ ಬರುವುದಿಲ್ಲ, ಗುಣಗುಣ್ಯಾದಿಗಳಿಗೆ ಭೇದವಿದೆಯೇ ಅಭೇದವಿದೆಯೇ ಇತ್ಯಾದಿ ವಿಕಲ್ಪಗಳಿಗೂ ಅನವಸ್ಥಾದಿ ದೋಷಗಳಿಗೂ ಅವಕಾಶವಿಲ್ಲ. ಯಾವತ್ ದ್ರವ್ಯ ಭಾವಿಯಾದ ಗುಣಗಳಿಗೂ ಗುಣಿಗೂ ಅಭೇದವನ್ನೇ ನಾವು ಒಪ್ಪುತ್ತೇವೆ. ಆದರೆ ಆ ಪಕ್ಷದಲ್ಲಿ ಗುಣಿ-ಗುಣ ಎರಡರಲ್ಲಿ ಒಂದೇ ಉಳಿಯಬೇಕಾಗುತ್ತದೆ ಎಂಬ ಶಂಕೆ ಬಂದಿದೆ. ಅದಕ್ಕೂ ಅವಕಾಶವಿಲ್ಲ. ಇದು ಗುಣಿ ಗುಣವುಳ್ಳದ್ದು, ಇದು ಇದರ ಗುಣ, ಇದು ಅವಯವಿ ಇದು ಇದರ ಅವಯವ ಇತ್ಯಾದಿ ಭೇದ ವ್ಯವಹಾರವು ಭೇದಕ್ಕೆ ಪ್ರತಿನಿಧಿಯಾದ 'ವಿಶೇಷ' ಎಂಬ ಪದಾರ್ಥದಿಂದ ನಿರ್ವಾಹವಾಗುತ್ತದೆ. ಯಾವದ್ ದ್ರವ್ಯಭಾವಿ ಅಂದರೆ ವಸ್ತುವು ಇರುವವರೆಗೆ ಇರುವ ಗುಣಗಳಿಗೆ ಅತ್ಯಂತಾಭೇದವನ್ನು, ಅಯಾವದ್ ದ್ರವ್ಯಭಾವೀ (ವಸ್ತುವು ಇರುವಾಗಲೇ ನಾಶವಾಗುವ) ಗುಣಗಳಿಗೆ ಭೇದಾಭೇದವನ್ನು ಒಪ್ಪಿದರೆ ಯಾವ ದೋಷವೂ ಬರುವುದಿಲ್ಲ, ಒಟ್ಟಿನಲ್ಲಿ ಮಾಯಾವಾದಿಗಳಿಗೆ ಅಭಿಮತವಾದ ಸದಸದ್ ವಿಲಕ್ಷಣರೂಪವಾದ ಮಾಯೆಯು ಸಿದ್ಧಿಸುವುದಿಲ್ಲ.

ಆಚಾರ್ಯರ ವ್ಯಾಖ್ಯೆಯು ಅಸದೃಶವಾದುದು. ಅದು ಎಣೆಯಿಲ್ಲದ್ದು. ಅದರ ವ್ಯಾಖ್ಯಾನಕ್ಕೆ ಅಷ್ಟಾಂಗ ಯುಕ್ತಿಗಳು ಪ್ರಬಲವಾದ ಆಧಾರವಾಗಿವೆ. ''ವಿಷಯಸ್ತದ್ವಿಚಾರಶ್ಚ ಹೇತೂದಾಹೃತಿಸಂಶಯಾಃ ಪಕ್ಷೌ ಪ್ರಯೋಜನಂ ಚೈವ ನಯೋಽಷ್ಟಾಂಗಃ ಪ್ರಕೀರ್ತಿತಃ'' ಎಂಬ ಪ್ರಮಾಣದಂತೆ, (1) ವಿಷಯ (2) ವಿಷಯ ವಿಚಾರ (3) (ಕಾರಣ) ಹೇತು (4) ಉದಾಹರಣ (5) ಸಂಶಯ (6) (ಪೂರ್ವಪಕ್ಷ) ವಿಷಯವನ್ನು ಸಾಧಿಸಿಲಿಕ್ಕಿರುವ ಸ್ಥಳ, (7) ದೃಷ್ಟಾಂತದ ಸ್ಥಳ (ಉತ್ತರ ಪಕ್ಷ) (ಸಿದ್ಧಾಂತ) ಮತ್ತು (8) ಸಾಧಿಸಿದ್ದುದರ ಪ್ರಯೋಜನವೆಂದು ಅಷ್ಟಾಂಗಯುಕ್ತವಾದ ಯುಕ್ತಿಯನ್ನು ಆಶ್ರಯಿಸಿಯೇ ಆಚಾರ್ಯರ ವ್ಯಾಖ್ಯೆಯು ಪ್ರವೃತ್ತವಾಗಿದೆ. ಇಂತಹ ಆಚಾರ್ಯರ ವ್ಯಾಖ್ಯಾನಕ್ಕೆ ವಿರುದ್ಧವಾದ ಮಾಯಾವಾದ ವ್ಯಾಖ್ಯಾನವನ್ನು ಅವಲಂಬಿಸಿ ಅದರ ಶ್ರವಣಾದಿಗಳನ್ನು ಮಾಡಿದರೆ ಯಾವ ವಿಲಾಸ ಸುಖಗಳೂ ಇಲ್ಲದಂತಹ 'ಅಂಧಂತಮಸ್ಸು' ಎಂಬ ನಿತ್ಯನರಕಪ್ರಾಪ್ತಿಯಾಗಿ, ಅಲ್ಲಿ ಶಾಶ್ವತ ದುಃಖಭೋಗವೇ ಉಂಟಾಗುತ್ತದೆ. ಅಥವಾ = ತಯಾ = ಅಂಗೀಕರಿಸಲ್ಪಟ್ಟ ಮಾಯೆಯಿಂದ, ಅಲಲನಾ ಯಾತನಾ ಭವತಿ = ಸುಖರಹಿತವಾದ ತೀವ್ರವಾದ ನರಕಯಾತನೆಯುಂಟಾಗುತ್ತದೆ ಮಾಯಾವಾದಿಗಳ ಮಾಯೆಯನ್ನು ಅಂಗೀಕರಿಸಿದರೆ ಅಂಧಂತಮಸ್ಸಿನಲ್ಲಿ ಬಹು ದುಃಖ ಉಂಟಾಗುತ್ತದೆ ಎಂದು ಭಾವ.

'ಪ್ರಮಾಣಾಭಾಸಗಳಿಂದ ಕೂಡಿದ, ಆಪಾತತಃ ಬಲಿಷ್ಠವಾದಂತೆ ಕಂಡು ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವ ಅದ್ವೈತ ಶಾಸ್ತ್ರರೂಪವಾದ ಮಾಯೆಯಿಂದ ಶ್ರೀಮಧ್ವಾಚಾರ್ಯರ ವ್ಯಾಖ್ಯಾನವನ್ನು ಖಂಡಿಸಲು ಸಾಧ್ಯವಿಲ್ಲ ಶ್ರೀಮದಾಚಾರ್ಯರ ವ್ಯಾಖ್ಯಾನಕ್ಕೆ ಸರಿದೂಗುವ ವ್ಯಾಖ್ಯಾನವೇ ಇಲ್ಲ. ಇದು ನ್ಯಾಯದಿಂದ ಕೂಡಿದೆ. ಇದಕ್ಕೆ ವಿರುದ್ಧವಾದ ಅದ್ವೈತ ಶಾಸ್ತ್ರಾನುಸರಣೆಯಿಂದ ಅತ್ಯಂತ ದುಃಖಕರವಾದ ನಿತ್ಯ ನರಕಪೀಡೆಯುಂಟಾಗುತ್ತದೆ' ಎಂದು ಪರಮ ತಾತ್ಪರ್ಯವು.

ವಿಗ್ರಹ—

**ಸಮಾನಯಾ—** ಮಾನೈಃ ಸಹ ವರ್ತತೇ ಇತಿ ಸಮಾನಾ, ತಯಾ ಸಮಾನಯಾ ।

**ಅನಮಾ—** ನ ವಿದ್ಯತೇ ನಮಃ (ನಮನಂ=ಬಗ್ಗುವಿಕೆ)ಯಸ್ಯಾಃ ಸಾ ಅನಮಾ ।

**ಅಯಮಾ—** ನ ವಿದ್ಯತೇ ಯಮಂ(ಯಮಃ) ಯಸ್ಯಾಃ ಸಾ ಅಯಮಾ ।

**ನಯಾಸನಾ—** ನಯಃ ಆಸನಂ ಯಸ್ಯಾಃ ಸಾ ನಯಾಸನಾ ।

**ಅಲಲನಾ—** ನ ವಿದ್ಯತೇ ಲಲನಂ ಯಸ್ಯಾ ಸಾ ಅಲಲನಾ ।

**ಅತಯಾ—** ನ ಸಾ ಆಸಾ (ಅಸಾ.ಅತೇ.ಅಶಾ.ಇತಿ ರೂಪಾಣಿ) ತಯಾ ಅತಯಾ.

**ಅಯಮಾ—** ನ ವಿದ್ಯತೇ ಯಮಂ ಯಾಸ್ಯಾಃ ಸಾ ಅಯಮಾ ।

**ಕ್ರಿಯಾಪದ—** **ಅಸ-** ಇದು ತಿಙಂತ ಪ್ರತಿರೂಪಕ ಅವ್ಯಯವು, ತಿಙಂತದಂತೆ ಕಾಣುವ ವಾಸ್ತವವಾಗಿ ತಿಙಂತ-ವಲ್ಲದಿರುವ ರೂಪ.

**ಕೋಶ—** ಅಯಮಾ ಎಂಬಲ್ಲಿ 'ದ್ವಂದ್ವಂ ದ್ವಿತಯಂ ಯಮಂ ಯಮಲಂ' ಎಂದು ಹಲಕೋಶ. ಯಮೋ ದಂಡಧರೇ ಧ್ವಾಂಕ್ಷೇ ಸಮಯೇ ಯಜುಗ್ಮಜೇಽಪಿ ಚ ಎಂಬ ಕೋಶಾನುಸಾರವಾಗಿ 'ಯುಗ್ಮಜ' ಅಂದರೆ ಜೊತೆ ಸಹಿತವಾದುದು ಅದು ಇಲ್ಲದಿರುವುದು ಅಯಮ.

**ವೃತ್ತ—** 'ಯಸ್ಯಾಂ ಲಃ ಸಪ್ತಮೇ ಯುಗ್ಮೇ ಸಾ ಯುಗ್ಮಾ ವಿಪುಲಾ ಮತಾ' ಎಂಬ ಲಕ್ಷಣಾನುಸಾರವಾಗಿ ಇಲ್ಲಿ ಯುಗ್ಮವಿಪುಲಾ ವೃತ್ತವಿದೆ.

**ಅಲಂಕಾರ—** ಇಲ್ಲಿ 4 ಪಾದಗಳಲ್ಲಿ ಒಂದೊಂದನ್ನು ಹಿಂದಕ್ಕೆ ಓದಿದರೆ ಅದೇ ರೀತಿ ಆಗುತ್ತದೆ. ರಂಗ ನಗರಂ = ರಂಗನಗರಂ ಎಂಬಂತೆ ಸಮಾನಯಾಯಾನಮಾಸ = ಸಮಾನಯಾಯಾನಮಾಸ, ಇದು ಒಂದು ರೀತಿಯ ಯಮಕವೆಂಬ ಶಬ್ದಾಲಂಕಾರ ಸರ್ವತೋಭದ್ರ ಎಂದೂ ಇದನ್ನು ಹೇಳುತ್ತಾರೆ.

★ ★ ★

**ಅವತಾರಿಕಾ**— ಶ್ರೀಮದಾಚಾರ್ಯರು ಕುರುಕ್ಷೇತ್ರಕ್ಕೆ ಬಂದರೆನ್ನುತ್ತಾರೆ.

**ಪ್ರಾಜ್ಞೋ ರಾಜ್ಞಾಂ ತ್ರಿದಿವಪದವೀಂ ಕೌರವಂ ಕ್ಷೇತ್ರಮಾಪ್ತಃ**
**ಸಸ್ಮಾರಾಥ ಸ್ವವಿಹೃತಿಪತದ್ಧಸ್ತಿಯುದ್ಧೋತ್ಸವಾನಾಮ್ ।**
**ಸತ್ಯಾತ್ಮಾದ್ಯೈರಿಹ ಪರಿವೃತೋ ಭಾವಿಮಾರೀಚದೃಗ್ಭಿಃ**
**ವಿಸ್ಮೇರೈಃ ಸ್ವೈರ್ನಿಜನೃಪತನೂಹೇತಿದೃಷ್ಟ್ಯಾತಿತುಷ್ಟೈಃ ॥ 49 ॥**

**ಪದಚ್ಛೇದ**— ಪ್ರಾಜ್ಞಃ ರಾಜ್ಞಾಂ, ತ್ರಿದಿವಪದವೀಂ ಕೌರವಂ, ಕ್ಷೇತ್ರಂ, ಆಪ್ತಃ ಸಸ್ಮಾರ, ಅಥ, ಸ್ವವಿಹೃತಿ-ಪತದ್ಧಸ್ತಿಯುದ್ಧೋತ್ಸವಾನಾಂ, ಸತ್ಯಾತ್ಮಾದ್ಯೈಃ, ಇಹ, ಪರಿವೃತಃ, ಭಾವಿಮಾರೀಚದೃಗ್ಭಿಃ, ವಿಸ್ಮೇರೈಃ ಸ್ವೈಃ, ನಿಜನೃಪ-ತನೂಹೇತಿದೃಷ್ಟ್ಯಾ, ಅತಿತುಷ್ಟೈಃ ।

**ಅನ್ವಯ**— ಅಥ, ರಾಜ್ಞಾಂ ತ್ರಿದಿವಪದವೀಂ ಕೌರವಂ ಕ್ಷೇತ್ರಂ ಆಪ್ತಃ, ನಿಜನೃಪತನೂಹೇತಿದೃಷ್ಟ್ಯಾ, ಅತಿತುಷ್ಟೈಃ, ವಿಸ್ಮೇರೈಃ ಭಾವಿಮಾರೀಚದೃಗ್ಭಿಃ, ಸತ್ಯಾತ್ಮಾದ್ಯೈಃ ಪರಿವೃತಃ ಪ್ರಾಜ್ಞಃ, ಇಹ ಸ್ವವಿಹೃತಿಪತದ್ಧಸ್ತಿಯುದ್ಧೋತ್ಸವಾನಾಂ, ಸಸ್ಮಾರ ।

**ಅನ್ವಯಾರ್ಥ**—

**ಅಥ** = ಅನಂತರ,
**ರಾಜ್ಞಾಂ** = ಮಹಾಭಾರತ ಯುದ್ಧದಲ್ಲಿ ಪ್ರಾಣ ತೊರೆದ ಕ್ಷತ್ರಿಯ ರಾಜರ,
**ತ್ರಿದಿವಪದವೀಂ** = ದೇವಲೋಕದ ದಾರಿಯಾದ,
**ಕೌರವಂ ಕ್ಷೇತ್ರಂ** = ಕುರು ಎಂಬ ರಾಜನು ನಿರ್ಮಿಸಿದ ಕ್ಷೇತ್ರವನ್ನು (ಕುರುಕ್ಷೇತ್ರವನ್ನು)
**ಆಪ್ತಃ** = ಸೇರಿದ,
**ನಿಜನೃಪತನೂಹೇತಿದೃಷ್ಟ್ಯಾತಿತುಷ್ಟೈಃ** = ತಮ್ಮ 'ನೃಪತನೂ' ರಾಜನಾದ ಭೀಮಸೇನನ ಶರೀರದ ಆಯುಧವಾದ ಗದೆಯ ದರ್ಶನದಿಂದ ಬಹಳ ಸಂತೋಷಪಟ್ಟ
**ವಿಸ್ಮೇರೈಃ** = ಅತ್ಯಂತ ಆಶ್ಚರ್ಯಚಕಿತರಾದ,
**ಭಾವಿಮಾರೀಚದೃಗ್ಭಿಃ** = ಮುಂದೆ ಆಗಲಿರುವ ಮಾರೀಚನನ್ನು ನೋಡುತ್ತಲಿರುವ
**ಸತ್ಯಾತ್ಮಾದ್ಯೈಃ** = ಸತ್ಯತೀರ್ಥರೇ ಮೊದಲಾಗಿ ಉಳ್ಳ,
**ಸ್ವೈಃ** = ತಮ್ಮ ಶಿಷ್ಯರಿಂದ,
**ಪರಿವೃತಃ** = ಸುತ್ತುವರಿಯಲ್ಪಟ್ಟ,
**ಪ್ರಾಜ್ಞಃ** = ಜ್ಞಾನಿಗಳಾದ ಶ್ರೀಪೂರ್ಣಪ್ರಜ್ಞಾಚಾರ್ಯರು
**ಇಹ** = ಈ ಕುರುಕ್ಷೇತ್ರದಲ್ಲಿ
**ಸ್ವವಿಹೃತಿಪತತ್** = ತನ್ನ ಆಟದಿಂದ ಬಿದ್ದು ಹೋಗುತ್ತಿದ್ದ
**ಹಸ್ತಿಯುದ್ಧ** = ಆನೆಗಳೊಡನೆ ಯುದ್ಧವೆಂಬ,
**ಉತ್ಸವಾನಾಂ** = ಉತ್ಸವಗಳನ್ನು, (ಸಂತೋಷಕರವಾದ ವ್ಯಾಪಾರಗಳನ್ನು)
**ಸಸ್ಮಾರ** = ಸ್ಮರಿಸಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ಹೀಗೆ ಶಾಸ್ತ್ರವ್ಯಾಖ್ಯಾನ ಪ್ರವಚನ ಮಾಡುತ್ತಾ ಇದ್ದರು. ಇದೇ ಸಂದರ್ಭದಲ್ಲಿ ಸಂಚಾರ ಮಾಡುತ್ತಾ ಹಿಂದೆ ಮಹಾಭಾರತ ಯುದ್ಧದಲ್ಲಿ ಸಾವಿರಾರು ಮಂದಿ ಕ್ಷತ್ರಿಯರು ಯುದ್ಧ ಮಾಡಿ ಸ್ವರ್ಗವನ್ನು

ಪಡೆಯಲು ಕಾರಣವಾದ ಕುರುಕ್ಷೇತ್ರಕ್ಕೆ ಬಂದರು. ಅಲ್ಲಿ ತಾನು ಹಿಂದೆ ಮಹಾಭಾರತ ಯುದ್ಧದಲ್ಲಿ ಯುದ್ಧವೆಂಬ ಆಟವನ್ನು ಆಡುತ್ತಿದ್ದಾಗ ಆನೆಗಳು ತಮ್ಮ ಪರಾಕ್ರಮದ ಎದುರು ನಿಲ್ಲಲಾರದೆ ಬಿದ್ದು ಹೋಗುತ್ತಿದ್ದುದನ್ನು ನೆನೆಸಿದರು. ಆಗ ಅವರೊಡನೆ ಸತ್ಯತೀರ್ಥರೇ ಮೊದಲಾದ ಶಿಷ್ಯರೂ ಇದ್ದರು. ಅಲ್ಲಿ ತಪಸ್ಸು ಮಾಡುತ್ತಿದ್ದ ಒಬ್ಬನನ್ನು ನೋಡಿ ಆಚಾರ್ಯರ ಶಿಷ್ಯರು ಇವನು ಮಹಾಮಹಿಮನಿರಬೇಕೆಂದು ಹೇಳಲು ಆಚಾರ್ಯರು ಇವನು ಮಹಾ ಡಾಂಭಿಕನು ಮುಂದಿನ ಕಲ್ಪದಲ್ಲಿ ಇವನೇ ಮಾರೀಚನಾಗುವನು ಎಂದು ಹೇಳಿದರು. ಮತ್ತು ಯುದ್ಧ ನಡೆದ ಸ್ಥಳದಲ್ಲಿಯೇ ಒಂದು ಪ್ರದೇಶದಲ್ಲಿ ಭೂಮಿಯನ್ನು ಅಗೆಸಿ ತಮ್ಮ ಭೀಮಾವತಾರದ ಆಯುಧವಾದ ಗದೆಯನ್ನು ತೋರಿಸಿದರು. ಆಚಾರ್ಯರ ತ್ರಿಕಾಲ ಜ್ಞಾನ ಮತ್ತು ಮಹಾಮಹಿಮೆಗಳನ್ನು ನೋಡಿ ಶಿಷ್ಯರೆಲ್ಲರೂ ಸಂತೋಷ ಮತ್ತು ಆಶ್ಚರ್ಯಪಟ್ಟರು.

ವಿಗ್ರಹ—

**ತ್ರಿದಿವಪದವೀಂ**— ತ್ರಿದಿವಸ್ಯ ಪದವೀ ತ್ರಿದಿವಪದವೀ ತಾಂ ತ್ರಿದಿವಪದವೀಂ ।

**ಕೌರವಂ**— ಕುರೋಃ ಇದಂ ಕೌರವಂ ।

**ಸ್ವವಿಹೃತಿಪತದ್ಧಸ್ತಿಯುದ್ಧೋತ್ಸವಾನಾಂ**— ಸ್ವಸ್ಯ ವಿಹೃತಿಃ ಸ್ವವಿಹೃತಿಃ, ಸ್ವವಿಹೃತ್ಯಾ ಪತಂತಃ ಸ್ವವಿಹೃತಿಪತಂತಃ, ಸ್ವವಿಹೃತಿಪತಂತಶ್ಚ ತೇ ಹಸ್ತಿನಶ್ಚ ಸ್ವವಿಹೃತಿಪತದ್ಧಸ್ತಿನಃ, ಸ್ವವಿಹೃತಿಪತದ್ಧಸ್ತಿಭಿಃ ಯುದ್ಧಾನಿ ಸ್ವವಿಹೃತಿ ಪತದ್ಧಸ್ತಿಯುದ್ಧಾನಿ, ಸ್ವವಿಹೃತಿಪತದ್ಧಸ್ತಿಯುದ್ಧಾನ್ಯೇವ ಉತ್ಸವಾಃ ಸ್ವವಿಹೃತಿಪತದ್ಧಸ್ತಿಯುದ್ಧೋತ್ಸವಾಃ, ತೇಷಾಂ ಸ್ವವಿಹೃತಿಪತದ್ಧಸ್ತಿಯುದ್ಧೋತ್ಸವಾನಾಂ ।

**ಸತ್ಯಾತ್ಮಾದ್ಯೈಃ**— ಸತ್ಯಾತ್ಮಾ ಆದ್ಯಃ ಯೇಷಾಂ ತೇ ಸತ್ಯಾತ್ಮಾದ್ಯಾಃ ತೈಃ, ಸತ್ಯಾತ್ಮಾದ್ಯೈಃ ।

**ಭಾವಿಮಾರೀಚದೃಗ್ಭಿಃ**— ಭಾವೀ ಚಾಸೌ ಮಾರೀಚಶ್ಚ ಭಾವಿಮಾರೀಚಃ, ಭಾವಿಮಾರೀಚಂ ಪಶ್ಯಂತೀತಿ ಭಾವಿಮಾರೀಚದೃಕ್, ತೈಃ ಭಾವಿಮಾರೀಚದೃಗ್ಭಿಃ ।

**ನಿಜನೃಪತನೂಹೇತಿದೃಷ್ಟ್ಯಾ**— ನೃಪಸ್ಯ ತನೂಃ ನೃಪತನೂಃ, ನಿಜಾ ಚ ಸಾ ನೃಪತನೂಶ್ಚ ನಿಜನೃಪತನೂಃ, ನಿಜನೃಪತನ್ವಾಃ ಹೇತಿಃ ನಿಜನೃಪತನೂಹೇತಿಃ, ನಿಜನೃಪತನೂಹೇತೇಃ ದೃಷ್ಟಿಃ ನಿಜನೃಪತನೂಹೇತಿದೃಷ್ಟಿಃ, ತಯಾ ನಿಜನೃಪತನೂಹೇತಿದೃಷ್ಟ್ಯಾ ।

**ಅತಿತುಷ್ಟೈಃ** — ಅತ್ಯಂತಂ ತುಷ್ಟಾಃ ಅತಿತುಷ್ಟಾಃ ತೈಃ ಅತಿತುಷ್ಟೈಃ ।

ಕ್ರಿಯಾಪದ— **ಸಸ್ಮಾರ**- ಸ್ಮೃಚಿಂತಾಯಾಂ ಇತಿ ಚಿಂತಾರ್ಥಕಾತ್ ಸ್ಮೃಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಸಸ್ಮಾರ ಇತಿ ರೂಪಂ ।

ಸಸ್ಮಾರ ಸಸ್ಮರತುಃ ಸಸ್ಮರುಃ, ಸಸ್ಮರಿಥ-ಸಸ್ಮರ್ಥ ಸಸ್ಮರಥುಃ ಸಸ್ಮರ, ಸಸ್ಮಾರ-ಸಸ್ಮರ ಸಸ್ಮರಿವ ಸಸ್ಮರಿಮ ॥

ವ್ಯಾಕರಣವಿಶೇಷ— 'ಸ್ವವಿಹೃತಿಪತದ್ಧಸ್ತಿಯುದ್ಧೋತ್ಸವಾನಾಂ ಸಸ್ಮಾರ'-ಎಂಬಲ್ಲಿ ''ಅಧೀಗರ್ಥದಯೇಶಾಂ ಕರ್ಮಣಿ'' ಎಂಬ ಸೂತ್ರದಿಂದ ಕರ್ಮಕ್ಕೆ ಷಷ್ಠೀ ಬಂದಿದೆ.

**ಕೋಶ**— ತ್ರಿದಿವಪದವೀಂ ಎಂಬಲ್ಲಿ 'ಅಯನಂ ವರ್ತ್ಮ ಮಾರ್ಗಾಧ್ವಪಂಥಾನಃ ಪದವೀಸ್ಸೃತಿಃ' ಎಂಬ ಕೋಶಾನುಸಾರವಾಗಿ ಪದವೀ ಎಂದರೆ ಮಾರ್ಗ, ದಾರಿ ಎಂದು ಅರ್ಥ. ನಿಜನೃಪತನೂಹೇತಿದೃಷ್ಟ್ಯಾ ಎಂಬಲ್ಲಿ 'ಸ್ತ್ರಿಯಾಂ ಮೂರ್ತಿಸ್ತನುಸ್ತನೂಃ' ಎಂಬ ಕೋಶಾನುಸಾರವಾಗಿ 'ತನೂ' ಎಂದರೆ ದೇಹ ಎಂದು ಅರ್ಥ.

**ವಿಶೇಷ ವಿಚಾರಗಳು**— ಆಚಾರ್ಯರು ಕುರುಕ್ಷೇತ್ರಕ್ಕೆ ಬಂದು ನಾನು ಇಲ್ಲಿ ಕ್ಷತ್ರಿಯ ರಾಜನಾದ ಭೀಮಸೇನನಾಗಿದ್ದು ಯುದ್ಧ ಮಾಡಿದ್ದೆನು ಎಂದರು. ಆಗ ಸತ್ಯತೀರ್ಥರು ಹಾಗಿದ್ದರೆ ನೀವು ಇಲ್ಲಿ ಯುದ್ಧ ಮಾಡಿದ ಕುರುಹಿಗಾಗಿ ಒಂದು ಆಯುಧವನ್ನಾದರೂ ತೋರಿಸಿರಿ ಎಂದರು. ಆಚಾರ್ಯರು ತೋರಿಸಿದ ಸ್ಥಳದಲ್ಲಿ ಭೂಮಿಯನ್ನು ಅಗೆದಾಗ ಮಹಾಕೋಟಿಯಾದ ಭೀಮಸೇನನ ಗದೆಯು ಎಲ್ಲರ ದೃಷ್ಟಿಗೂ ಗೋಚರವಾಯಿತು. ಈ ವಿಷಯವು ಆಚಾರ್ಯರ ಶಿಷ್ಯಪರಂಪರೆಯಿಂದ ಬಂದಿರುವ ಶ್ಲೋಕದಿಂದ ತಿಳಿದು ಬರುತ್ತದೆ.

**(ಯೌಧೋತ್ರ)ಯೋಧೋಽತ್ರ ರಾಜಾಹಮಿತೀರಿತೋಗುರು ತವಾಯುಧಂ ಕ್ವೇತಿ ಜಗಾದ ಸತ್ಯವಾಕ್ ।**
**ಖಾತೇಽಮುನೋಕ್ತೇ ಕುತಲೇ ಮಹಾಗದಾಂ ದೃಷ್ಟ್ವಾಚ ವಾಚಂ ಶ್ರದ್ದಧುರ್ಗುರುಂ ಹಿ ತೇ ॥**

ಇಲ್ಲಿ ನಾನು ರಾಜನಾಗಿದ್ದು ಸೈನಿಕನಂತೆ ಯುದ್ಧ ಮಾಡಿದ್ದೇನೆಂದಾಗ ಸತ್ಯತೀರ್ಥರು ಹಾಗಾದರೆ ನಿಮ್ಮ ಆಯುಧವೆಲ್ಲಿ ಎಂದು ಕೇಳಿದರು. ಆಚಾರ್ಯರು ಹೇಳಿದ ಸ್ಥಳದಲ್ಲಿ ಭೂಮಿಯನ್ನು ಅಗೆದಾಗ ಅಲ್ಲಿ ಭೀಮಸೇನನ ಮಹಾಗದೆಯನ್ನು ನೋಡಿ, ಆಚಾರ್ಯರ ಮಾತಿನಲ್ಲಿ ಎಲ್ಲರೂ ವಿಶ್ವಾಸವಿಟ್ಟರು.

ಕುರುಕ್ಷೇತ್ರದಲ್ಲಿಯೇ ಇನ್ನೊಂದು ಸ್ಥಳದಲ್ಲಿ ಒಬ್ಬನು ತಪಸ್ಸು ಮಾಡುತ್ತಿದ್ದನು. ಆಚಾರ್ಯರ ಶಿಷ್ಯರು ಇವನು ಮಹಾ ಮಹಿಮನಿರಬೇಕೆಂದು ಹೇಳಲು ಅವರು ಇವನು ಯೋಗ್ಯನಾದ ಸಾತ್ತ್ವಿಕನಾದ ಅಧಿಕಾರಿಯಲ್ಲ, ಇವನು ಮುಂದೆ ಮಾರೀಚನಾಗಲಿರುವ ಅಸುರನು ಎಂದರು. ಶಿಷ್ಯರು ಅವನನ್ನು ಪರೀಕ್ಷಿಸಿ ಇವನು ಮಾರೀಚ ಪದವಿಗೆ ಬರತಕ್ಕವನೇ ಎಂದು ನಿರ್ಧರಿಸಿದರು. ಇಲ್ಲಿ ಪರಂಪರಾಗತವಾದ ಶ್ಲೋಕವು ಈ ರೀತಿ ಇದೆ.

**ತಪಸ್ವಿವತ್ ಸ್ಥಿತಂ ಡಾಂಭಂ ದೃಷ್ಟ್ವಾ ಮಾರೀಚಮಭ್ಯಧಾತ್ ।**
**ಮಧ್ವಃ ಪರೀಕ್ಷಯಾ ಚೈನಂ ತೇ ವಿಷ್ಣುದ್ವೇಷಿಣಂ ವಿದುಃ ॥**

''ತಪಸ್ವಿಯಂತೆ ಇದ್ದ ಡಾಂಭಿಕನೊಬ್ಬನನ್ನು ನೋಡಿ ಆಚಾರ್ಯರು ಇವನು ಮಾರೀಚನಾಗಲಿರುವನು ಎಂದರು ಆಚಾರ್ಯರ ಶಿಷ್ಯರು ಅವನನ್ನು ಪರೀಕ್ಷಿಸಿ ಅವನಿಗೆ ಇರತಕ್ಕ ವಿಷ್ಣುದ್ವೇಷದ ಪರಾಕಾಷ್ಠೆಯನ್ನು ನೋಡಿ ಇವನು ಆಚಾರ್ಯರು ಹೇಳಿದಂತೆ ಮಾರೀಚ ಪದವಿಗೆ ಯೋಗ್ಯನೇ ಸರಿ ಎಂದು ನಿರ್ಧರಿಸಿದರು''

**ಪ್ರಯೋಗ**— ಪ್ರಾಜ್ಞಃ ಸ್ವವಿಹೃತಿಪತದ್ದಸ್ತಿಯುದ್ಧೋತ್ಸವಾನಾಂ ಸಸ್ಮಾರ (ಸಕರ್ಮಕಕರ್ತರಿ) ಪ್ರಾಜ್ಞೇನ ಸ್ವವಿಹೃತಿ ಪತದ್ದಸ್ತಿಯುದ್ಧೋತ್ಸವಾನಾಂ ಸಸ್ಮರೇ (ಭಾವೇ)

**ವೃತ್ತ**— ಈ ಶ್ಲೋಕದಲ್ಲಿ ಮಂದಾಕ್ರಾಂತಾ ವೃತ್ತ.

'ಮಂದಾಕ್ರಾಂತಾ ಜಲಧಿಷಡಗೈರ್ಮ್ಭೌ ನತೌ ತಾದ್ ಗುರೂ ಚೇತ್' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ**— ಹೃಷೀಕೇಶ ಕ್ಷೇತ್ರಕ್ಕೆ ಶ್ರೀಮದಾಚಾರ್ಯರು ಹೋದಾಗ ರುದ್ರದೇವರು ಭೇಟಿಮಾಡಿದ ಸಂಗತಿಯನ್ನು ವರ್ಣಿಸುತ್ತಾರೆ.

**ವಿಪ್ರಾತ್ಮೇಶಃ ಕ್ಷಣಾರ್ಥಂ ಕೃತನತಿರಶಿತಿಶ್ರೀರ್ಹೃಷೀಕೇಶದೇಶೇ**
**ಸ್ವಷ್ಟಂ ದೃಷ್ಟೋಽಪ್ಯದೃಷ್ಟಃ ಸಪದಿ ವಿಹಿತವಾನ್ ವಿಸ್ಮಯಂ ದೇಹಭಾಜಾಮ್ ।**
**ಸ್ವಪ್ನೇ ಸ್ವಪ್ರೇರಿತಾನ್ಯಸ್ಥಲಗನಿಜನರೋಪಾಹೃತೈರ್ಭಕ್ಷ್ಯಭೋಜ್ಯೈಃ**
**ಪ್ರಾಜ್ಯೈಃ ಪ್ರಾಭೋಜಯತ್ ಸ್ವಂ ಗುರುಮಖಿಲಗುರುಂ**
**ವೇದಯನ್ ವೇದಬಂಧುಮ್ ॥ 50 ॥**

**ಪದಚ್ಛೇದ**— ವಿಪ್ರಾತ್ಮಾ, ಈಶಃ ಕ್ಷಣಾರ್ಥಂ, ಕೃತನತಿಃ, ಅಶಿತಿಶ್ರೀಃ ಹೃಷೀಕೇಶದೇಶೇ, ಸ್ವಷ್ಟಂ, ದೃಷ್ಟಃ ಅಪಿ, ಅದೃಷ್ಟಃ, ಸಪದಿ, ವಿಹಿತವಾನ್, ವಿಸ್ಮಯಂ, ದೇಹಭಾಜಾಂ, ಸ್ವಪ್ನೇ, ಸ್ವಪ್ರೇರಿತಾನ್ಯಸ್ಥಲಗನಿಜನರೋ-ಪಾಹೃತೈಃ, ಭಕ್ಷ್ಯಭೋಜ್ಯೈಃ, ಪ್ರಾಜ್ಯೈಃ ಪ್ರಾಭೋಜಯತ್, ಸ್ವಂ, ಗುರುಂ, ಅಖಿಲಗುರುಂ, ವೇದಯನ್, ವೇದಬಂಧುಂ ।

**ಅನ್ವಯ—** ಹೃಷೀಕೇಶದೇಶೇ ವಿಪ್ರಾತ್ಮಾ ಕ್ಷಣಾರ್ಥಂ ಕೃತನತಿಃ ಅಶಿತಿಶ್ರೀಃ ಈಶಃ ಸ್ಪಷ್ಟಂ ದೃಷ್ಟೋಽಪಿ ಸಪದಿ ಅದೃಷ್ಟಃ ಸನ್ ದೇಹಭಾಜಾಂ ವಿಸ್ಮಯಂ ವಿಹಿತವಾನ್ (ಸನ್) ಸ್ವಪ್ನೇ ಸ್ವಪ್ರೇರಿತಾನ್ಯಸ್ಥಲಗನಿಜನರೋಪಾಹೃತೈಃ ಪ್ರಾಜ್ಯೈಃ ಭಕ್ಷ್ಯಭೋಜ್ಯೈಃ, ಅಖಿಲಗುರುಂ, ವೇದಬಂಧುಂ, ಸ್ವಂ, ಗುರುಂ, ವೇದಯನ್, (ತಂ) ಪ್ರಾಭೋಜಯತ್ ।

**ಅನ್ವಯಾರ್ಥ—**

**ಹೃಷೀಕೇಶದೇಶೇ** = ಹೃಷೀಕೇಶವೆಂಬ ಕ್ಷೇತ್ರದಲ್ಲಿ,
**ವಿಪ್ರಾತ್ಮಾ** = ಬ್ರಾಹ್ಮಣನ ಸ್ವರೂಪವುಳ್ಳ
**ಕ್ಷಣಾರ್ಥಂ** = ಭಿಕ್ಷೆಯ ಆಹ್ವಾನಕ್ಕೋಸ್ಕರವಾಗಿ
**ಕೃತನತಿಃ** = ಮಾಡಲ್ಪಟ್ಟ ನಮಸ್ಕಾರವುಳ್ಳ,
**ಅಶಿತಿಶ್ರೀಃ** = ಬಿಳಿಯ ಕಾಂತಿಯುಳ್ಳ,
**ಈಶಃ** = ಶಂಕರನು,
**ಸ್ಪಷ್ಟಂ** = ಚೆನ್ನಾಗಿ,
**ದೃಷ್ಟಃ ಅಪಿ** = ನೋಡಲ್ಪಟ್ಟವನಾದರೂ,
**ಸಪದಿ** = ಕೂಡಲೇ,
**ಅದೃಷ್ಟಃ** = ಕಾಣಲ್ಪಡದವನಾಗಿ
**ದೇಹಭಾಜಾಂ** = ಎಲ್ಲಾ ಶರೀರಧಾರಿಗಳಿಗೂ,
**ವಿಸ್ಮಯಂ** = ಆಶ್ಚರ್ಯವನ್ನು,
**ವಿಹಿತವಾನ್ (ಸನ್)** = ಉಂಟು ಮಾಡಿದವನಾಗಿ,
**ಸ್ವಪ್ನೇ** = ಸ್ವಪ್ನದಲ್ಲಿ
**ಸ್ವ ಪ್ರೇರಿತಾನ್ಯಸ್ಥಲಗನಿಜನರೋಪಾಹೃತೈಃ—**
ಸ್ವ = ತನ್ನಿಂದ,
ಪ್ರೇರಿತ = ಪ್ರೇರಿಸಲ್ಪಟ್ಟ
ಅನ್ಯಸ್ಥಲಗ- ಮತ್ತೊಂದು ಶಿವಕ್ಷೇತ್ರದಲ್ಲಿರುವ,
ನಿಜನರ ಉಪಾಹೃತೈ = ಶಿವಕ್ಷೇತ್ರಾಧಿಕಾರಿಯಾದ ತನ್ನ ಭಕ್ತನಿಂದ, ತರಲ್ಪಟ್ಟ
**ಪ್ರಾಜ್ಯೈಃ** = ಹೆಚ್ಚಾದ,
**ಭಕ್ಷ್ಯಭೋಜ್ಯೈಃ** = ತಿಂಡಿಗಳು ಮತ್ತು ಭೋಜನ ಪದಾರ್ಥಗಳಿಂದ,
**ಅಖಿಲಗುರುಂ** = ಸಮಸ್ತ ಲೋಕಗಳಿಗೂ ಗುರುಗಳಾದ,
**ವೇದಬಂಧುಂ** = ವೇದಗಳ ಸರಿಯಾದ ಅರ್ಥವನ್ನು ವಿವರಿಸುವುದರಿಂದ ವೇದಗಳಿಗೆ ನಿಜಬಾಂಧವರಾದ (ವೇದರಕ್ಷಕರಾದ) ಶ್ರೀಮಧ್ವಾಚಾರ್ಯರನ್ನು,
**ಸ್ವಂ ಗುರುಂ** = ತನ್ನ ಗುರುವನ್ನಾಗಿಯೂ,
**ವೇದಯನ್** = ತಿಳಿಸುತ್ತಾ
**(ತಂ** = ಆ ಮಧ್ವಾಚಾರ್ಯರನ್ನು**)**
**ಪ್ರಾಭೋಜಯತ್** = ಊಟ ಮಾಡಿಸಿದನು.

**ತಾತ್ಪರ್ಯ—** ಒಂದಾನೊಂದು ಬಾರಿ ಶ್ರೀಮಧ್ವಾಚಾರ್ಯರು ಹೃಷೀಕೇಶ ಕ್ಷೇತ್ರಕ್ಕೆ ಹೋಗಿದ್ದರು. ಅಲ್ಲಿರುವಾಗ ಒಂದು ಅದ್ಭುತವಾದ ಘಟನೆಯು ನಡೆಯಿತು. ಒಂದು ದಿನ ಶ್ರೀಮಹಾದೇವನು ಶುಭ್ರವರ್ಣದ ಬ್ರಾಹ್ಮಣ ರೂಪವನ್ನು ತಾಳಿ ಎಲ್ಲಾ ಜನರೂ ನೋಡುತ್ತಿರುವಾಗಲೇ ಶ್ರೀಮಧ್ವಾಚಾರ್ಯರ ಹತ್ತಿರ ಬಂದು ನಮಸ್ಕಾರ ಮಾಡಿದನು. ಪರಮ ಪೂಜ್ಯ ತಂದೆಯೇ, ಜಗದ್ಗುರುವೇ, ನನ್ನ ಗುರುವೇ! ಪವಮಾನ! ನಾನು ನಾಳೆಯ ದಿನ ಭಿಕ್ಷೆಗಾಗಿ ತಮ್ಮನ್ನು ಆಹ್ವಾನ ಮಾಡಲು ಬಂದಿರುವೆನು. ದಯವಿಟ್ಟು ಅದನ್ನು ಸ್ವೀಕರಿಸಿ ಅನುಗ್ರಹಿಸಬೇಕು ಎಂದು ಪ್ರಾರ್ಥಿಸಿ ಎಲ್ಲರ ಎದುರಿನಲ್ಲಿಯೇ ಆಚಾರ್ಯರನ್ನು ಭಿಕ್ಷೆಗೆ ಕರೆದು ಎಲ್ಲರೂ ನೋಡುತ್ತಿದ್ದಂತೆಯೇ ಅದೃಶ್ಯನಾದನು. ಇದನ್ನು ನೋಡಿ ಎಲ್ಲರಿಗೂ ಪರಮಾಶ್ಚರ್ಯವಾಯಿತು. ಅನಂತರ ಆ ಶಂಕರನು ಇನ್ನೊಂದು ಶಿವ ಕ್ಷೇತ್ರದಲ್ಲಿದ್ದ ತನ್ನ ಭಕ್ತನಾದ ಕ್ಷೇತ್ರಾಧಿಕಾರಿಗೆ ಸ್ವಪ್ನದಲ್ಲಿ ತನ್ನ ನಿಜರೂಪದಿಂದ ಕಾಣಿಸಿಕೊಂಡು ಸಮಸ್ತ ಜೀವರಿಗೂ ಗುರುಗಳಾದ, ವೇದ ಬಂಧುಗಳಾದ ನನಗೆ ಅತಿಶಯವಾಗಿ ಗುರುಗಳಾದ ಶ್ರೀಮಧ್ವಾಚಾರ್ಯರು ಇಲ್ಲಿಯೇ ಹತ್ತಿರದಲ್ಲಿ ಹೃಷೀಕೇಶದಲ್ಲಿ ತಂಗಿದ್ದಾರೆ. ಅವರಿಗೆ ಸರಿಯಾದ ರೀತಿಯಲ್ಲಿ ಭಿಕ್ಷಾಪ್ರದಾನ ಮಾಡಿ ಪೂಜಿಸು ಎಂದು ಅಪ್ಪಣೆ ಮಾಡಿ ಪ್ರೇರಿಸಿದನು. ಆ ಭಕ್ತನು ಮಹೇಶನ ಆಜ್ಞೆಯಂತೆ ಎಲ್ಲಾ ವಿಧವಾದ ಉತ್ತಮವಾದ ಭಕ್ಷ್ಯಭೋಜ್ಯಗಳನ್ನು ಸಿದ್ಧಗೊಳಿಸಿ ಹೃಷೀಕೇಶಕ್ಷೇತ್ರಕ್ಕೆ ತಂದು ಆಚಾರ್ಯರಿಗೆ ಸಮರ್ಪಿಸಿ ಅವರಿಂದ ಭೋಜನ ಮಾಡಿಸಿದನು.

**ವಿಗ್ರಹ—**

**ವಿಪ್ರಾತ್ಮಾ—** ವಿಪ್ರಸ್ಯ ಆತ್ಮಾ ಯಸ್ಯಸಃ ವಿಪ್ರಾತ್ಮಾ ।

**ಕ್ಷಣಾರ್ಥಂ—** ಕ್ಷಣಾಯ ಇತಿ ಕ್ಷಣಾರ್ಥಂ ।

**ಕೃತಿನತಿಃ—** ಕೃತಾ ನತಿಃ ಯೇನ ಸಃ ಕೃತಿನತಿಃ ।

**ಅಶಿತಿಶ್ರೀಃ—** ನ ಶಿತಿಃ ಅಶಿತಿಃ, ಅಶಿತಿಃ ಶ್ರೀಃ ಯಸ್ಯ ಸಃ ಅಶಿತಿಶ್ರೀಃ ।

**ಹೃಷೀಕೇಶದೇಶಃ—** ಹೃಷೀಕೇಶಃ ಇತಿ ದೇಶಃ ಹೃಷೀಕೇಶದೇಶಃ ।

**ಅದೃಷ್ಟಃ—** ನ ದೃಷ್ಟಃ ಅದೃಷ್ಟಃ ।

**ದೇಹಭಾಜಾಂ—** ದೇಹಂ ಭಜಂತೀತಿ ದೇಹಭಾಜಃ, ತೇಷಾಂ ದೇಹಭಾಜಾಂ ।

**ಸ್ವಪ್ರೇರಿತಾನ್ಯಸ್ಥಲಗನಿಜನರೋಪಾಹೃತೈಃ—** ಸ್ವೇನ ಪ್ರೇರಿತಃ ಸ್ವಪ್ರೇರಿತಃ, ಅನ್ಯಚ್ಚ ತತ್ ಸ್ಥಲಂ ಚ ಅನ್ಯಸ್ಥಲಂ, ಅನ್ಯಸ್ಥಲಂ ಗಚ್ಛತೀತಿ ಅನ್ಯಸ್ಥಲಗಃ, ನಿಜಶ್ಚಾಸೌ ನರಶ್ಚ ನಿಜನರಃ, ಅನ್ಯಸ್ಥಲಗಶ್ಚಾಸೌ ನಿಜನರಶ್ಚ ಅನ್ಯಸ್ಥಲಗನಿಜನರಃ, ಸ್ವಪ್ರೇರಿತಶ್ಚಾಸೌ ಅನ್ಯಸ್ಥಲಗನಿಜನರಶ್ಚ ಸ್ವಪ್ರೇರಿತಾನ್ಯಸ್ಥಲಗನಿಜನರಃ, ಸ್ವಪ್ರೇರಿತಾ-ನ್ಯಸ್ಥಲಗನಿಜನರೇಣಉಪಾಹೃತಾನಿ ಸ್ವಪ್ರೇರಿತಾನ್ಯಸ್ಥಲಗನಿಜನರೋಪಹೃತಾನಿ, ತೈಃ ಸ್ವಪ್ರೇರಿತಾನ್ಯ-ಸ್ಥಲಗನಿಜನರೋಪಾಹೃತೈಃ ।

**ಭಕ್ಷ್ಯಭೋಜ್ಯೈಃ—** ಭಕ್ಷ್ಯಾಣಿ ಚ ಭೋಜ್ಯಾನಿ ಚ ಭಕ್ಷ್ಯಭೋಜ್ಯಾನಿ, ತೈಃ ಭಕ್ಷ್ಯಭೋಜ್ಯೈಃ ।

**ಅಖಿಲಗುರುಂ—** ಅಖಿಲಾನಾಂ ಗುರುಃ ಅಖಿಲಗುರುಃ, ತಂ ಅಖಿಲಗುರುಂ ।

**ವೇದಬಂಧುಂ—** ವೇದಾನಾಂ ಬಂಧುಃ ವೇದಬಂಧುಃ ತಂ ವೇದಬಂಧುಂ ।

**ಕ್ರಿಯಾಪದ—** ಪ್ರಾಭೋಜಯತ್- ಪ್ರಉಪಸರ್ಗ ಪೂರ್ವಕಾತ್ ಭುಜಪಾಲನಾಭ್ಯವಹಾರಯೋಃ, ಇತಿ ಪಾಲನ ಅಭ್ಯವಹಾರಾರ್ಥಕಾತ್ ಭುಜಧಾತೋಃ ಣಿಜಂತಾತ್ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ।

ಪ್ರ+ಅಭೋಜಯತ್ ಅಭೋಜಯತಾಂ ಅಭೋಜಯನ್, ಅಭೋಜಯಃ ಅಭೋಜಯತಂ
ಅಭೋಜಯತ, ಅಭೋಜಯಂ ಅಭೋಜಯಾವ ಅಭೋಜಯಾಮ ॥

ವ್ಯಾಕರಣವಿಶೇಷ—

**ತಾತೋಽಯಮಾಯಾತಿ ತಮರ್ಚಯೇತಿ ಸ್ಥಾನಾಧಿಕಾರೀ ಜಟಿನಂ ತ್ರಿಶೂಲಿನಮ್ ।**
**ಸ್ವಪ್ನೇ ಬ್ರುವಾಣಂ ತ್ರಿರವೇಕ್ಷ್ಯ ದೂರತಃ ಪ್ರಾಯಾಯಾದುದಂತಂ ಚ ಜಗಾದ ವಿಸ್ಮಿತಃ ॥**

ನನ್ನ ತಂದೆ ಈ ಸ್ಥಳಕ್ಕೆ ಬಂದಿದ್ದಾನೆ. ಅವನನ್ನು ಯಥಾ ಯೋಗ್ಯವಾಗಿ ಪೂಜಿಸು. ಈ ರೀತಿಯಾಗಿ ಶೈವ ದೇವಾಲಯಾಧಿಕಾರಿಗೆ ಜಟಾಧಾರಿಯಾಗಿಯೂ, ತ್ರಿಶೂಲಧಾರಿಯಾಗಿಯೂ ಈಶ್ವರನು ಸ್ವಪ್ನದಲ್ಲಿ ಬಂದು ಮೂರು ಬಾರಿ ಅದೇ ಮಾತನ್ನು ತಿಳಿಸಿದನು. ಅವನು ಪರಮಾಶ್ಚರ್ಯಭರಿತನಾಗಿ ಈಶ್ವರನ ಅಪ್ಪಣೆಯಂತೆ ದೂರದಿಂದ ಬಂದು ಭಕ್ಷ್ಯ-ಭೋಜ್ಯಾದಿಗಳನ್ನು ಆಚಾರ್ಯರಿಗೆ ಸಮರ್ಪಿಸಿ ಭಿಕ್ಷಾ ಪ್ರದಾನ ಮಾಡಿದನು ಮತ್ತು ಸ್ವಪ್ನ ವೃತ್ತಾಂತಾದಿಗಳನ್ನು ಹೇಳಿದನು. ಈ ಐತಿಹ್ಯದಿಂದ ಆಚಾರ್ಯರನ್ನು ಕರೆಯಲು ಬಂದವನೂ ಶಂಭುವೆಂದೂ, ಭಿಕ್ಷಾ ಮಾಡಿಸಿದವನೂ ಅವನೇ ಎಂದೂ ಆಚಾರ್ಯರು ರುದ್ರಾದಿ ಸಮಸ್ತ ದೇವತೆಗಳಿಗೂ ಮಾನ್ಯರೆಂದೂ, ತಿಳಿದು ಬರುತ್ತದೆ.

ಪ್ರಯೋಗ— ವಿಪ್ರಾತ್ಮಾ ಈಶಃ ಪ್ರಾಭೋಜಯತ್ (ಣಿಜಂತ)
ವಿಪ್ರಾತ್ಮನಾ ಈಶೇನ ಸಃ ಪ್ರಾಭುಂಕ್ತ (ಅಣಿಜಂತಾವಸ್ಥಾ)
ವಿಪ್ರಾತ್ಮನಾ ಈಶೇನ ಸಃ ಪ್ರಾಭೋಜ್ಯತ (ಕರ್ಮಣಿ)

ಕೋಶ— 'ಶಿತಿಧ ವಲಮೇಚಕೌ' ಎಂಬ ಅಮರಕೋಶಾನುಸಾರವಾಗಿ ಶಿತಿ ಕಪ್ಪು, ಅಶಿತಿ ಬಿಳಿ, 'ಸ್ವೋ ಜ್ಞಾತಾವಾತ್ಮನಿ ಸ್ವಂ ತ್ರಿಷ್ವಾತ್ಮೀಯೇ ಸ್ವೋಽಸ್ತ್ರಿಯಾಧನೇ' ಇತ್ಯಮರಃ ।

ವೃತ್ತ— ಸ್ರಗ್ಧರಾವೃತ್ತಂ 'ಮ್ರಭ್ನೈರ್ಯಾನಾಂ ತ್ರಯೇಣ ತ್ರಿಮುನಿಯತಿಯುತಾ ಸ್ರಗ್ಧರಾ ಕೀರ್ತಿತೇಯಂ' ಎಂದು ಅದರ ಲಕ್ಷಣ.

★ ★ ★

ಅವತಾರಿಕಾ— ಶ್ರೀಮದಾಚಾರ್ಯರು ಇಷುಪಾತಕ್ಷೇತ್ರಕ್ಕೆ ಬಂದಾಗ ತೋರಿಸಿದ ಅದ್ಭುತ ಮಹಿಮೆಯನ್ನು ವರ್ಣಿಸುತ್ತಾರೆ.

**ಅವಾಪ್ತವಾನ್ ಪುನರಿಷುಪಾತಮಸ್ಮರದ್**
**ರಮಾಪತಿಂ ಸ ಪರಶುರಾಮಮಾದರಾತ್ ।**
**ಸ ರಾಜಕೇಲ್ಯುರುಕದಲೀಸಹಸ್ರಕಂ**
**ತದಾಽಽದದತ್ತ್ಯವಸಿತಿ ದತ್ತಮುತ್ತಮಮ್**
**(ತದಾಭ್ಯವಹೃತಿದತ್ತಮುತ್ತಮಮ್) ॥ 51 ॥**

ಪದಚ್ಛೇದ— ಅವಾಪ್ತವಾನ್, ಪುನಃ, ಇಷುಪಾತಂ, ಅಸ್ಮರತ್, ರಮಾಪತಿಂ, ಸಃ, ಪರಶುರಾಮಂ, ಆದರಾತ್, ಸಃ, ರಾಜಕೇಲ್ಯುರುಕದಲೀಸಹಸ್ರಕಂ, ತದಾ, ಆದತ್, ಅತ್ಯವಸಿತಿದತ್ತಂ, ಉತ್ತಮಂ ತದಾ, ಅಭ್ಯವಹೃತಿದತ್ತಂ, ಉತ್ತಮಮ್ ।

ಅನ್ವಯ— ಸಃ ಪುನಃ ಇಷುಪಾತಂ ಅವಾಪ್ತವಾನ್ ರಮಾಪತಿಂ ಪರಶುರಾಮಂ ಆದರಾತ್ ಅಸ್ಮರತ್. ಸಃ ತದಾ ಅತ್ಯವಸಿತಿದತ್ತಂ (ಅಭ್ಯವಹೃತಿದತ್ತಂ) ಉತ್ತಮಂ ರಾಜಕೇಲ್ಯುರುಕದಲೀಸಹಸ್ರಕಂ ಆದತ್ ।

ಅನ್ವಯಾರ್ಥ—

**ಸಃ** = ಆ ಶ್ರೀಮಧ್ವಾಚಾರ್ಯರು,
**ಪುನಃ** = ತಿರುಗಿ (ಅನಂತರ),

**ಇಷುಪಾತಂ** = ಇಷುಪಾತ ಕ್ಷೇತ್ರವನ್ನು,

**ಅವಾಪ್ತವಾನ್ (ಸನ್)** = ಹೊಂದಿದವರಾಗಿ,

**ರಮಾಪತಿಂ** = ಲಕ್ಷ್ಮೀಪತಿಯಾದ,

**ಪರಶುರಾಮಂ** = ಆ ಕ್ಷೇತ್ರ ಸ್ವಾಮಿಯಾದ ಪರಶುರಾಮ ದೇವರನ್ನು,

**ಆದರಾತ್** = ಭಕ್ತಿಯಿಂದ,

**ಅಸ್ಮರತ್** = ಸ್ಮರಿಸಿದರು.

**ಸಃ** = ಅವರು,

**ತದಾ** = ಆ ಕ್ಷೇತ್ರದಲ್ಲಿರುವಾಗ,

**ಅತ್ಯವಸಿತಿ** = ಭೋಜನದ ಕೊನೆಯಲ್ಲಿ,

**(ಅಭ್ಯವಹೃತಿ** = ಭೋಜನಕ್ಕಾಗಿ)

**ದತ್ತಂ** = ಕೊಡಲ್ಪಟ್ಟ,

**ಉತ್ತಮಂ** = ಶ್ರೇಷ್ಠವಾದ, (ಅತ್ಯಂತ ರುಚಿಯಾದ)

**ರಾಜಕೇಲ್ಯರುಕದರೀ ಸಹಸ್ರಹ—**

> **ರಾಜಕೇಲಿ** = ರಾಜಬಾಳೆ ಎಂಬ
>
> **ಉರು** = ದೊಡ್ಡದಾದ,
>
> **ಕದಲೀ ಸಹಸ್ರಕಂ** = ಸಾವಿರ ಬಾಳೆಹಣ್ಣುಗಳನ್ನು (ಅಥವಾ)
>
> **ರಾಜ** = ಅಲ್ಲಿಯ ರಾಜನಿಂದ,
>
> **ಕೇಲಿ** = ವಿನೋದಕ್ಕಾಜಿಗಿ ಕೊಟ್ಟ ಉರುತದಲ್ಲೀ
>
> **ಸಹಸ್ರಕಂ** = ದೊಡ್ಡದಾದ ಸಾವಿರ ಬಾಳೆಹಣ್ಣುಗಳನ್ನು

**ಆದತ್** = ತಿಂದರು.

ತಾತ್ಪರ್ಯ— ಅಲ್ಲಿಂದ ಶ್ರೀಮಧ್ವಾಚಾರ್ಯರು ಇಷುಪಾತವೆಂಬ ಕ್ಷೇತ್ರಕ್ಕೆ ಹೋದರು. ಅಲ್ಲಿಯ ಕ್ಷೇತ್ರಾಧಿಪತಿಯಾದ ಪರಶುರಾಮರೂಪಿಯಾದ ಲಕ್ಷ್ಮೀಪತಿಯಾದ ಹರಿಯನ್ನು ಭಕ್ತಿಯಿಂದ ಧ್ಯಾನಿಸಿದರು. ಅಲ್ಲಿ ಅವರು ಒಂದು ದಿನ ಭೋಜನದ ಕೊನೆಯಲ್ಲಿ ಅಲ್ಲಿಯ ರಾಜನು ಇವರ ಬಹುಭೋಜನ ಶಕ್ತಿಯನ್ನು ಪರೀಕ್ಷಿಸಬೇಕೆಂದು ವಿನೋದಕ್ಕಾಗಿ ಭೋಜನದ ಅಂತಿಮಕಾಲದಲ್ಲಿ ತಂದುಕೊಟ್ಟ ದೊಡ್ಡದಾದ ಒಂದು ಸಾವಿರ ರಾಜಬಾಳೆಹಣ್ಣುಗಳನ್ನು ಅನಾಯಾಸವಾಗಿ ತಿಂದರು.

ವಿಗ್ರಹ—

**ರಮಾಪತಿಂ—** ರಮಾಯಾಃ ಪತಿಃ ರಮಾಪತಿಃ, ತಂ ರಮಾಪತಿಂ ।

**ರಾಜಕೇಲ್ಯುರುಕದಲೀಸಹಸ್ರಕಂ—** ಉರವಶ್ಚತಾಃ ಕದಲ್ಯಶ್ಚ ಉರುಕದಲ್ಯಃ, ಸಹಸ್ರಾಣಾಂ ಸಮೂಹಃ ಸಹಸ್ರಕಂ, ರಾಜಕೇಲ್ಯಃ ಇತಿ ಉರುಕದಲ್ಯಃ ರಾಜಕೇಲ್ಯುರುಕದಲ್ಯಃ, ರಾಜಕೇಲ್ಯುರುಕದಲೀನಾಂ ಸಹಸ್ರಕಂ ರಾಜಕೇಲ್ಯುರುಕದಲೀಸಹಸ್ರಕಂ । (ರಾಜ್ಞಾ ಕೇಲ್ಯಾಂ ದತ್ತಂ ಉರುಕದಲೀಸಹಸ್ರಕಂ ರಾಜ್ಯ-ಕೇಲ್ಯುರುಕದಲೀಸಹಸ್ರಕಂ)

**ಅತ್ತ್ಯವಸಿತಿದತ್ತಂ—** ಅತ್ತೇಃ ಅವಸಿತಿಃ ಅತ್ಯವಸಿತಿಃ, ಅತ್ಯವಸಿತೌ ದತ್ತಂ ಅತ್ಯವಸಿತಿದತ್ತಂ ।

ಕ್ರಿಯಾಪದ— ಆದತ್- ಅದಭಕ್ಷಣೇ ಇತಿ ಭಕ್ಷಣಾರ್ಥಕಾತ್ ಅದ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಆದತ್ ಇತಿ ರೂಪಂ ।

ಆದತ್ ಆತ್ತಾಂ ಆದನ್, ಆದಃ ಆತ್ತಂ ಆತ್ತ, ಆದಂ ಆದ್ವ ಆದ್ಮ ॥

ಅಸ್ಮರತ್- ಸ್ಮೃಚಿಂತಾಯಾಂ ಇತಿ ಚಿಂತಾರ್ಥಕಾತ್ ಸ್ಮೃಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅಸ್ಮರತ್ ಇತಿ ರೂಪಂ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

ಪ್ರಯೋಗ— ಸಃ ರಮಾಪತಿಂ ಪರಶುರಾಮಂ ಅಸ್ಮರತ್ (ಕರ್ತರಿ)
ತೇನ ರಮಾಪತಿಃ ಪರಶುರಾಮಃ ಅಸ್ಮರ್ಯತ (ಕರ್ಮಣಿ)
ಸಃ ರಾಜಕೇಲ್ಯುರುಕದಲೀಸಹಸ್ರಕಂ ಆದತ್ (ಕರ್ತರಿ)
ತೇನ ರಾಜಕೇಲ್ಯುರುಕದಲೀಸಹಸ್ರಕಂ ಆದ್ಯತ (ಕರ್ಮಣಿ)

ವೃತ್ತ— 'ಜಭೌ ಸಜೌ ಗಿತಿ ರುಚಿರಾ ಚತುರ್ಗ್ರಹೈಃ' ಎಂಬ ಲಕ್ಷಣದಂತೆ ರುಚಿರಾವೃತ್ತ.

★ ★ ★

ಅವತಾರಿಕಾ— ಶ್ರೀಮಧ್ವರು ಗೋವೆಗೆ ಬಂದಾಗ ತೋರಿಸಿದ ಮಹಿಮೆಯನ್ನು ವರ್ಣಿಸುತ್ತಾರೆ.

**ಸ ಶಂಕರಪದದ್ವಿಜೋಪಹೃತಮಾಪ್ಯ ಗೋವಾಖ್ಯಗಾಂ**
**ಗರಿಷ್ಠಕದಲೀಲಸದ್ದಶಶತೀಚತುಷ್ಕಂ ಚರನ್ ।**
**ಪಯಃ ಕಲಶಪಂಚಕತ್ರಿಕಯುಗಾಭಿಪೂರ್ಣಂ ಪಪಾ-**
**ವದೃಷ್ಟಗತಿರಪ್ಯಭೂನ್ನೃಪನೃಮಂಡಲ್ಯೈರುದ್ಯತೈಃ ॥ 52 ॥**

ಪದಚ್ಛೇದ— ಸಃ, ಶಂಕರಪದದ್ವಿಜೋಪಹೃತಂ, ಆಪ್ಯ, ಗೋವಾಖ್ಯಗಾಂ, ಗರಿಷ್ಠಕದಲೀಲಸದ್ದಶಶತೀಚತುಷ್ಕಂ, ಚರನ್, ಪಯಃ, ಕಲಶಪಂಚಕತ್ರಿಕಯುಗಾಭಿಪೂರ್ಣಂ, ಪಪೌ, ಅದೃಷ್ಟಗತಿಃ, ಅಪಿ, ಅಭೂತ್ ನೃಪನೃಮಂಡಲ್ಯೈಃ, ಉದ್ಯತೈಃ ।

ಅನ್ವಯ— ಸಃ ಗೋವಾಖ್ಯಗಾಂ ಆಪ್ಯ, ಶಂಕರಪದದ್ವಿಜೋಪಹೃತಂ ಗರಿಷ್ಠಕದಲೀಲಸದ್ದಶಶತೀ-ಚತುಷ್ಕಂ, ಚರನ್, ಕಲಶಪಂಚಕತ್ರಿಕಯುಗಾಭಿಪೂರ್ಣಂ ಪಯಃ ಪಪೌ, ಉದ್ಯತೈಃ ನೃಪನೃಮಂಡಲ್ಯೈಃ ಅದೃಷ್ಟಗತಿಃ ಅಪಿ ಅಭೂತ್ ।

ಅನ್ವಯಾರ್ಥ—

**ಸಃ** = ಆ ಮಧ್ವಾಚಾರ್ಯರು,
**ಗೋವಾಖ್ಯಗಾಂ** = ಗೋವೆಯೆಂಬ ಪ್ರದೇಶವನ್ನು,
**ಆಪ್ಯ** = ಸೇರಿ,
**ಶಂಕರಪದದ್ವಿಜೋಪಹೃತಂ** = ಶಂಕರನೆಂದು ಹೆಸರುಳ್ಳ ಬ್ರಾಹ್ಮಣನಿಂದ ಕೊಡಲ್ಪಟ್ಟ,
**ಗರಿಷ್ಠಕದಲೀಲಸತ್** = ದೊಡ್ಡದಾದ ಬಾಳೆಹಣ್ಣಿನ ರುಚಿಕರ ರಸದಿಂದ ಪ್ರಕಾಶಮಾನವಾದ,
**ದಶಶತೀಚತುಷ್ಕಂ** = ಸಾವಿರದ ನಾಲ್ಕನ್ನು,
**ಚರನ್** = ತಿನ್ನುವವರಾಗಿ,

**ಕಲಶಪಂಚಕತ್ರಿಕಯುಗಾಭಿಪೂರ್ಣಂ** = ಐದು ಕೊಡಗಳ, ಮೂರರ ಎರಡರಿಂದ (5 X 3 X 2=30 ಮೂವತ್ತು ಕೊಡಗಳಲ್ಲಿ) ತುಂಬಿದ,
**ಪಯಃ** = ಹಾಲನ್ನು,
**ಪಪೌ** = ಕುಡಿದರು.
**ಉದ್ಯತೈಃ** = ತಡೆಯಲು ಸಿದ್ಧರಾಗಿರುವ,
**ನೃಪನೃ ಮಂಡಲೈಃ** =ರಾಜಪುರುಷರ (ಭಟರ), ಸಮೂಹಗಳಿಂದ,
**ಅದೃಷ್ಟಗತಿಃ ಅಪಿ** = ನೋಡಲ್ಪಡದ ಗಮನವುಳ್ಳವರೂ,
**ಅಭೂತ್** = ಆದರು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ಅನಂತರ ಗೋವಾ ಪ್ರದೇಶಕ್ಕೆ ಹೋದರು. ಅಲ್ಲಿ ಶಂಕರನೆಂಬ ಬ್ರಾಹ್ಮಣನು ಅವರಿಗೆ ದೊಡ್ಡದಾಗಿ ರುಚಿಕರವಾಗಿರುವ ಮಾಗಿದ ಒಳ್ಳೆಯ ನಾಲ್ಕುಸಾವಿರ ಬಾಳೆಹಣ್ಣುಗಳನ್ನು ತಿನ್ನಲು ಕೊಟ್ಟನು. ಆಚಾರ್ಯರು ಅವುಗಳನ್ನೆಲ್ಲಾ ತಿಂದು ಮುಗಿಸಿ ಮೂವತ್ತು ಕೊಡಗಳಲ್ಲಿ ಪೂರ್ತಿ ತುಂಬಿದ ಹಾಲನ್ನು ಕುಡಿದರು. ಆಚಾರ್ಯರ ಅಮಾನುಷ ಸಾಮರ್ಥ್ಯವನ್ನು ನೋಡಿ ಆಶ್ಚರ್ಯಪಟ್ಟ ಆ ದೇಶದ ರಾಜನು ಶತ್ರುಗಳಿಂದ ತನ್ನ ದೇಶದ ರಕ್ಷಣೆಗಾಗಿ ಅವರನ್ನು ತನ್ನ ದೇಶದಲ್ಲಿಯೇ ಇರಿಸಿಕೊಳ್ಳಬೇಕೆಂದು ಅಭಿಪ್ರಾಯಪಟ್ಟನು. ಆಚಾರ್ಯರು ಒಪ್ಪದಿರಲು ರಾಜನು ಅವರನ್ನು ಎಲ್ಲಿಯೂ ಹೋಗದಂತೆ ತಡೆಯಲು ತನ್ನ ಸೇವಕರಿಗೆ ಆಜ್ಞೆ ಮಾಡಿದನು. ಅವರು ಹಾಗೆ ತಡೆಯಲು ಸಿದ್ಧರಾಗಿ ನಿಂತಿರಲು ಆಚಾರ್ಯರು ತಮ್ಮ ಪ್ರಭಾವದಿಂದ ಅವರು ಕಾಣದ ಹಾಗೆಯೇ ಅಲ್ಲಿಂದ ಹೊರಟುಹೋದರು.

ಪ್ರಮಾಣ—

**ದೇವೈಃ ಸಮಂ ರಹಸಿ ದೇವಗೃಹೇ ಪ್ರವೃತ್ತೋ ರಾಜ್ಞಾ ಕವಾಟವಿವೃತೌ ಪ್ರಸಭೋದಿತೋಽಸೌ ।**
**ಊಚೇಽಧುನಾ ವ್ರಜಸಿ ಚೇದಿಹ ನಶ್ಯಸೀತಿ ರಾಜಾಥ ವಿಸ್ಮಿತಮನಾ ವ್ಯವೃಣೋತ್ ಕವಾಟಮ್ ॥ 1 ॥**

**ರಕ್ತೇಕ್ಷಣಂ ಪುರುಷಸಿಂಹಮವೇಕ್ಷಮಾಣಃ ಸದ್ಯೋ ಭಯಾನ್ನಿಜಪುರೋಹಿತಮಾಹ್ವಯತ್ ಸಃ ।**
**ಕ್ಷಂತವ್ಯಮಿತ್ಯಸಕೃದಾನಮತಿ ದ್ವಿಜೇಽರ್ಥಿ ಷಣ್ಮಾಸಮಾಯುರದದಾನ್ನೃಪತೇರ್ದಯಾಲುಃ ॥ 2 ॥**

**ರಾಜ್ಞಾಽಸೌತೋಽತ್ರ ವಸತಾವಖಿಲಾಂಶ್ಚ ಶಿಷ್ಯಾನ್ ಪ್ರಸ್ಥಾಪ್ಯ ವಾಯುವದಗಾದಖಿಲೈರದೃಷ್ಟಃ ।**
**ಷಷ್ಠೇಽಥ ಮಾಸಿ ಪರಚಕ್ರಪರಾಕ್ರಮೇಣ ರಾಜಾ ಸರಾಜ್ಯನಗರೋ ವಿವಶೋ ನನಾಶ ॥ 3 ॥**

ತಾತ್ಪರ್ಯ— ಇವು ಮೂರು ಐತಿಹ್ಯದ ಶ್ಲೋಕಗಳು. ಆಚಾರ್ಯರು ನಾಲ್ಕು ಸಾವಿರ ಬಾಳೆಹಣ್ಣುಗಳನ್ನು ಸ್ವೀಕರಿಸಿ ಮೂವತ್ತು ಕೊಡ ಹಾಲನ್ನು ಕುಡಿದುದನ್ನು ಕಂಡವರಿಂದ ಕೇಳಿದ ಆ ದೇಶದ ರಾಜನು ಅಮಾನುಷ ಮಹಿಮೆಯಿಂದ ವಿಸ್ಮಿತನಾಗಿ ಆಚಾರ್ಯರನ್ನು ತನ್ನ ದೇಶದ ರಕ್ಷಣೆಗಾಗಿ ಅಲ್ಲಿಯೇ ಇರಬೇಕೆಂದು ಕೇಳಿಕೊಂಡನು. ಆಚಾರ್ಯರು ಒಪ್ಪಲಿಲ್ಲ. ರಾಜನು ಆಚಾರ್ಯರನ್ನು ನಿರ್ಬಂಧಿಸಿದನು. ಆಚಾರ್ಯರನ್ನು ಅಲ್ಲಿಯ ಒಂದು ದೇವಾಲಯದಲ್ಲಿ ದಿಗ್ಬಂಧನದಲ್ಲಿರಿಸಿದನು. ಆಚಾರ್ಯರು ದೇವಾಲಯದ ಗರ್ಭಗೃಹದಲ್ಲಿ ಬಾಗಿಲು ಹಾಕಿಕೊಂಡು ರಹಸ್ಯದಲ್ಲಿ ದೇವತೆಗಳ ಜತೆಗೆ ವ್ಯವಹರಿಸುತ್ತಿದ್ದರು. ಇದರಿಂದ ತನಗೆ ತೊಂದರೆಯುಂಟಾಗಬಹುದೆಂದು ರಾಜನು ಅಲ್ಲಿಗೆ ಬಂದು ಬಾಗಿಲು ತೆರೆಯಬೇಕೆಂದು ಬಲಾತ್ಕರಿಸಿದನು. ಆಚಾರ್ಯರು ರಾಜನೇ ನೀನು ಅನ್ಯಾಯಪ್ರವೃತ್ತನಾಗಿದ್ದೀ. ನೀನು ಇಲ್ಲಿಂದ ಹೋದ ಕೂಡಲೇ ಸತ್ತುಹೋಗುತ್ತೀ ಎಂದು ಶಪಿಸಿ, ಬಾಗಿಲು ತೆರೆದರು. ಕೆಂಪಾದ ಕಣ್ಣಿನಿಂದ ನೋಡುತ್ತಾ, ಸಿಂಹದಂತೆ ಭಯಂಕರ ಗಂಭೀರರಾಗಿ ಕಾಣಿಸುತ್ತಿದ್ದ ಆಚಾರ್ಯರನ್ನು ನೋಡಿ ರಾಜನು ಹೆದರಿ ಆಚಾರ್ಯರಲ್ಲಿ ಕ್ಷಮೆ ಕೇಳಿಕೊಳ್ಳಲು ತನ್ನ ಪುರೋಹಿತರನ್ನು ಕರಸಿದನು. ಪುರೋಹಿತನು ಬಂದು ರಾಜನ ಅಪರಾಧವನ್ನು ಕ್ಷಮಿಸಬೇಕು, ಎಂದು ಪ್ರಾರ್ಥಿಸುತ್ತಾ ಅನೇಕಾನೇಕ ಬಾರಿ ಆಚಾರ್ಯರ ಪಾದಗಳಿಗೆ ಎರಗಿ ಬೇಡಿ ಕೊಂಡಾಗ ಆಚಾರ್ಯರು ದಯೆಯಿಂದ ಆ ರಾಜನಿಗೆ ಆರು

ತಿಂಗಳು ಆಯಸ್ಸನ್ನು ಕೊಟ್ಟರು. ರಾಜನು ಆಚಾರ್ಯರರನ್ನು ಅಲ್ಲಿಯೇ ತಡೆದನು. ಆಚಾರ್ಯರು ರಾಜರ ವಸತಿ ಸ್ಥಳದಲ್ಲಿಯೇ ವಾಸಿಸುತ್ತಾ ಉಪಾಯದಿಂದ ಶಿಷ್ಯರನ್ನು ಅಲ್ಲಿಂದ ಕಳುಹಿಸಿದರು. ಆಚಾರ್ಯರ ಶಿಷ್ಯರು ಹೇಗೆ ಹೋದ ರೆಂದು ರಾಜಭಟರಿಗೆ ತಿಳಿಯಲಿಲ್ಲ. ಆಚಾರ್ಯರು ಒಬ್ಬರೇ ಅಲ್ಲಿ ಇದ್ದು ಶಿಷ್ಯರು ಹೊರಟುಹೋದ ಸ್ವಲ್ಪ ಸಮಯ-ದಲ್ಲಿಯೇ ಎಲ್ಲರೂ ಹತ್ತು ದಿಕ್ಕುಗಳಲ್ಲಿಯೂ ಕಾವಲಿದ್ದು ನೋಡುತ್ತಿರುವಾಗೆ ತಾವು ಅದೃಶ್ಯರಾದರು. ಮುಂದೆ ಆರನೆಯ ತಿಂಗಳಿನಲ್ಲಿ ಶತ್ರುಸೈನ್ಯದ ದಾಳಿಯಿಂದ ಆ ರಾಜನು ಅವನ ನಗರವೂ, ರಾಜ್ಯವೂ ನಾಶವಾದುವು ಎಂದು ಈ ಐತಿಹ್ಯ ಶ್ಲೋಕಗಳಿಂದ ತಿಳಿದು ಬರುತ್ತದೆ. ಈ ಘಟನೆಗಳನ್ನು ಶ್ರೀಮನ್ನಾರಾಯಣ ಪಂಡಿತಾಚಾರ್ಯರು ಬಹಳ ಸಂಕ್ಷೇಪವಾಗಿ ವರ್ಣಿಸಿ ಕಾವ್ಯವಿಸ್ತಾರವನ್ನು ತಪ್ಪಿಸಿದ್ದಾರೆ. ವಾಸ್ತವವಾಗಿ ಈ ಘಟನೆಗಳು ಒಂದು ಸರ್ಗದಲ್ಲಿ ಅನೇಕ ಶ್ಲೋಕಗಳಿಂದ ವರ್ಣಿಸ ಬೇಕಾದ ವಿಷಯವನ್ನು ಒಂದು ಶ್ಲೋಕಾರ್ಧದಲ್ಲಿಯೇ ಅತಿ ಸಂಕ್ಷಿಪ್ತವಾಗಿ ಮುಗಿಸಿದ್ದಾರೆ.

ವಿಗ್ರಹ—

**ಶಂಕರಪದದ್ವಿಜೋಪಹೃತಂ**— ಶಂಕರ ಇತಿಪದಂ ಯಸ್ಯ ಸಃ ಶಂಕರಪದಃ, ಶಂಕರಪದಶ್ಚಾಸೌ ದ್ವಿಜಶ್ಚ ಶಂಕರಪದದ್ವಿಜಃ, ಶಂಕರಪದದ್ವಿಜೇನ ಉಪಹೃತಂ ಶಂಕರಪದದ್ವಿಜೋಪಹೃತಂ, ತತ್ ಶಂಕರ-ಪದದ್ವಿಜೋಪಹೃತಂ ।

**ಗೋವಾಖ್ಯಗಾಂ**— ಗೋವಾ ಇತಿ ಆಖ್ಯಾ ಯಸ್ಯಾಃ ಸಾ ಗೋವಾಖ್ಯಾ, ಗೋವಾಖ್ಯಾ ಚ ಸಾ ಗೌಶ್ಚ ಗೋವಾಖ್ಯಗೌಃ, ತಾಂ ಗೋವಾಖ್ಯಗಾಂ ।

**ಗರಿಷ್ಠಕದಲೀಲಸದ್ದಶಶತೀಚತುಷ್ಕಂ**— ಅತಿಶಯೇನ ಗುರವಃ ಗರಿಷ್ಠಾಃ, ಗರಿಷ್ಠಾಶ್ಚ ತಾಃ ಕದಲ್ಯಶ್ಚ ಗರಿಷ್ಠಕದಲ್ಯಃ, ದಶಾನಾಂ ಶತಾನಾಂ ಸಮಾಹಾರಃ ದಶಶತೀ, ಲಸಂತೀ ಚ ಸಾ ದಶಶತೀ ಚ ಲಸದ್ದಶಶತೀ, ಚತುರ್ಣಾಂ ಸಮೂಹಃ ಚತುಷ್ಕಂ, ಲಸದ್ದಶಶತ್ಯಾಃ ಚತುಷ್ಕಂ ಲಸದ್ದಶಶತೀಚತುಷ್ಕಂ, ಗರಿಷ್ಠಕದಲೀನಾಂ ಲಸದ್ದಶಶತೀಚತುಷ್ಕಂ ಗರಿಷ್ಠಕದಲೀಲಸದ್ದಶಶತೀಚತುಷ್ಕಂ ।

**ಕಲಶಪಂಚಕತ್ರಿಕಯುಗಾಭಿಪೂರ್ಣಂ**— ಪಂಚಾನಾಂ ಸಮೂಹಃ ಪಂಚಕಂ, ತ್ರಯಾಣಾಂ ಸಮೂಹಃ ತ್ರಿಕಂ, ಪಂಚಕಸ್ಯ ತ್ರಿಕಂ ಪಂಚಕತ್ರಿಕಂ, ಪಂಚಕತ್ರಿಕಸ್ಯ ಯುಗಂ ಪಂಚಕತ್ರಿಕಯುಗಂ, ಕಲಶಾನಾಂ ಪಂಚಕತ್ರಿಕಯುಗಂ ಕಲಶಪಂಚಕತ್ರಿಕಯುಗಂ, ಕಲಶಪಂಚಕತ್ರಿಕಯುಗೇ ಅಭಿಪೂರ್ಣಂ ಕಲಶ-ಪಂಚಕತ್ರಿಕಯುಗಾಭಿಪೂರ್ಣಂ, ತತ್ ಕಲಶಪಂಚಕತ್ರಿಕಾಯುಗಾಭಿಪೂರ್ಣಂ ।

**ಅದೃಷ್ಟಗತಿಃ**— ನ ದೃಷ್ಟಾ ಅದೃಷ್ಟಾ ಅದೃಷ್ಟಾ ಗತಿಃ ಯಸ್ಯ ಸಃ ಅದೃಷ್ಟಗತಿಃ ।

**ನೃಪನೃಮಂಡಲ್ಯೈಃ**— ನೃಪಸ್ಯ ನರಃ ನೃಪನರಃ, ನೃಪನೃಣಾಂ ಮಂಡಲಾನಿ ನೃಪನೃಮಂಡಲಾನಿ, ತೈಃ ನೃಪನೃಮಂಡಲ್ಯೈಃ ।

**ಕ್ರಿಯಾಪದ**— **ಪಪೌ**- ಪಾಪಾನೇ ಲಿಟ್ ಪಪೌ ಪಪತುಃ ಪುಪುಃ, ಪಪಿಥ-ಪಪಾಥ ಪಪಥುಃ ಪಪ, ಪಪೌ ಪಪಿವ ಪಪಿಮ ।

**ಕೋಶ**— ಗೋವಾಖ್ಯಗಾಂ ಎಂಬಲ್ಲಿ 'ಭೂವಾಗ್‌ವಾರಿಷು ಗೌರ್ಮತಾ' ಎಂಬ ವಿಶ್ವಕೋಶಾನುಸಾರವಾಗಿ ಗೌಃ ಎಂದರೆ ಭೂಮಿ 'ಗಾಂ' ಭೂಪ್ರದೇಶವನ್ನು ಎಂದು ಅರ್ಥ. ಪಯಃ=ಹಾಲನ್ನು 'ದುಗ್ಧಂ ಕ್ಷೀರಂ ಪಯಸಮಂ' ಎಂಬ ಅಮರಕೋಶಾನುಸಾರ ಪಯಃ ಹಾಲು ಎಂದು ಅರ್ಥ.

**ಪ್ರಯೋಗ**— ಸಃ ಪಯಃ ಪಪೌ (ಕರ್ತರಿ)
ತೇನ ಪಯಃ ಪಪೇ (ಕರ್ಮಣಿ)
(ಆಚಾರ್ಯಃ) ನೃಪನೃಮಂಡಲ್ಯೈಃ ಅದೃಷ್ಟಗತಿಃ ಅಭೂತ್ (ಕರ್ತರಿ)
ಆಚಾರ್ಯೇಣ ನೃಪನೃಮಂಡಲ್ಯೈಃ ಅದೃಷ್ಟಗತಿನಾ ಅಭಾವಿ (ಭಾವೇ)

ವೃತ್ತ— ಈ ಶ್ಲೋಕದಲ್ಲಿ ಪೃಥ್ವೀ ವೃತ್ತ.

'ಜಸೌ ಜಸಯಲಾವಸುಗ್ರಹಯತಿಶ್ಚ ಪೃಥ್ವೀಗುರುಃ' ಎಂಬ ಲಕ್ಷಣಾನುಸಾರವಾಗಿ ಈ ಶ್ಲೋಕದಲ್ಲಿ ಪೃಥ್ವೀ ವೃತ್ತ.

★ ★ ★

**ಅವತಾರಿಕಾ**— ಆಚಾರ್ಯರ ಇನ್ನೊಂದು ಶ್ರೇಷ್ಠ ಮಹಿಮೆಯನ್ನು ವರ್ಣಿಸುತ್ತಾರೆ.

**ಅಯಮೇವ ಗೋವಿಷಯತೋಽಪಿ ಕುತ್ರಚಿತ್**
**ಸದಸಿ ಜನತಾರ್ಥಿತೋ ಜವಾತ್ ।**
**ಪುಷ್ಪಮುತ ಫಲಮಹೋ ವಿದಧೇ**
**ಜನಸುಪ್ತಿದಾನುಪಮಗಾನಸಂಪದಾ ॥ 53 ॥**

**ಪದಚ್ಛೇದ**— ಅಯಂ, ಏವ, ಗೋವಿಷಯತಃ, ಅಪಿ, ಕುತ್ರಚಿತ್, ಸದಸಿ, ಜನತಾರ್ಥಿತಃ, ಜವಾತ್, ಪುಷ್ಪಂ, ಉತ, ಫಲಂ, ಅಹೋ ವಿದಧೇ, ಜನಸುಪ್ತಿದಾನುಪಮಗಾನಸಂಪದಾ ।

**ಅನ್ವಯ**— ಅಯಂ, ಏವ, ಗೋವಿಷಯತಃ, ಅಪಿ, ಕುತ್ರಚಿತ್, ಸದಸಿ, ಜನತಾರ್ಥಿತಃ ಜನಸುಪ್ತಿದಾನು-ಪಮಗಾನಸಂಪದಾ, ಜವಾತ್, ಪುಷ್ಪಂ, ಉತ, ಫಲಂ, ವಿದಧೇ, ಅಹೋ ।

**ಅನ್ವಯಾರ್ಥ**—

**ಅಯಂ ಏವ** = ಆ ಮಧ್ವಾಚಾರ್ಯರೇ,
**ಗೋವಿಷಯತಃ ಅಪಿ** = ಪಶುಪೆ (ಬಜಪೆ) ಎಂಬ ಹಳ್ಳಿಯಲ್ಲಿ,
**ಕುತ್ರಚಿತ್** = ಯಾವುದೋ ಒಂದು,
**ಸದಸಿ** = ಸಭೆಯಲ್ಲಿ
**ಜನತಾರ್ಥಿತಃ(ಸನ್)** = ಜನರ ಸಮೂಹದಿಂದ ಪ್ರಾರ್ಥಿಸಲ್ಪಟ್ಟವರಾಗಿ,
**ಜನಸುಪ್ತಿದಾನುಪಮಗಾನಸಂಪದಾ** = ಜನರಿಗೆ ನಿದ್ದೆಯನ್ನುಂಟುಮಾಡುವ ಎಣೆಯಿಲ್ಲದ ಸಂಗೀತದ ಸಮೃದ್ಧಿಯಿಂದ,
**ಜವಾತ್** = ಶೀಘ್ರವಾಗಿ,
**ಪುಷ್ಪಂ** = ಹೂವನ್ನು,
**ಉತ** = ಮತ್ತು
**ಫಲಂ** = ಹಣ್ಣನ್ನು
**ವಿದಧೇ** = ಉಂಟುಮಾಡಿದರು.

**ತಾತ್ಪರ್ಯ**— ಪಶುಪೆ (ಇದು ಮಂಗಳೂರಿನ ಹತ್ತಿರ ಇರುವ ಬಜಪೆ ಆಗಿರಬಹುದೆಂದು ತೋರುತ್ತದೆ) ಎಂಬ ಹಳ್ಳಿಯಲ್ಲಿ ಆಚಾರ್ಯರು ತಂಗಿದ್ದರು. ಅಲ್ಲಿ ಭಿಕ್ಷಾ ಸ್ವೀಕಾರಾನಂತರದಲ್ಲಿ ಊರಿನ ಸಭ್ಯ ಗೃಹಸ್ಥರೆಲ್ಲರೂ ಆಚಾರ್ಯರ ಬಳಿಯಲ್ಲಿಯೇ ಬಂದು ಸಭೆ ಸೇರಿಸಿದರು. ನಮ್ಮಲ್ಲಿ ಸರಿಯಾದ ಮಳೆ ಇಲ್ಲದ್ದರಿಂದ ಅಡಿಕೆ ತೆಂಗು ಮುಂತಾದ ಗಿಡಗಳಲ್ಲಿ ಕಾಲಕ್ಕೆ ಸರಿಯಾಗಿ ಪುಷ್ಪಫಲಗಳು ಉಂಟಾಗುತ್ತಿಲ್ಲ. ಅದು ಉಂಟಾಗುವಂತೆ ಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಆಗ ಆಚಾರ್ಯರು ದಿವ್ಯವಾದ ಸಂಗೀತವನ್ನು ಹಾಡಿ ಜನರಿಗೆ ನಿದ್ದೆ ಬರುವಂತೆ ಮಾಡಿದರು. ಜನರು ಎಚ್ಚೆತ್ತು ನೋಡುವಾಗ ಆ ಮರಗಿಡಗಳೆಲ್ಲೆಲ್ಲಾ ಸಮೃದ್ಧವಾಗಿ ಹೂವು, ಹಣ್ಣು, ಕಾಯಿಗಳು ಕಾಣಿಸುತ್ತಿದ್ದುವು. (ಹೀಗೆ ಆಚಾರ್ಯರ ಪ್ರಭಾವವು ಅಸಾಧಾರಣವಾಗಿದೆ ಎಂದು ಭಾವವು.)

ವಿಗ್ರಹ—

**ಜನಸುಪ್ತಿದಾನುಪಮಗಾನಸಂಪದಾ—** ಜನಾನಾಂ ಸಮೂಹಃ ಜನತಾ, ಜನತಯಾ ಅರ್ಥಿತಃ ಜನತಾರ್ಥಿತಃ, ಸುಪ್ತಿಂ ದದಾತಿ ಇತಿ ಸುಪ್ತಿದಾ, ನ ವಿದ್ಯತೇ ಉಪಮಾ ಯಸ್ಯಾಃ ಸಾ ಅನುಪಮಾ, ಗಾನಸ್ಯ ಸಂಪತ್ ಗಾನಸಂಪತ್, ಅನುಪಮಾ ಚ ಸಾ ಗಾನಸಂಪಚ್ಚ ಅನುಪಮಗಾನಸಂಪತ್, ಜನಸುಪ್ತಿದಾ ಚ ಸಾ ಅನುಪಮಗಾನಸಂಪಚ್ಚ ಜನಸುಪ್ತಿದಾನುಪಮಗಾನಸಂಪತ್, ತಯಾ ಜನಸುಪ್ತಿದಾನುಪಮ-ಗಾನಸಂಪದಾ ॥

**ಕ್ರಿಯಾಪದ— ವಿದಧೇ-** ವಿ ಇತ್ಯುಪಸರ್ಗಪೂರ್ವಕಾತ್ ಡುಧಾಞ ಧಾರಣಪೋಷಣಯೋಃ ಇತಿ ಧಾರಣ-ಪೋಷಣಾರ್ಥಕಾತ್ ಧಾಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮ-ಪುರುಷೇ ಏಕವಚನೇ ವಿದಧೇ ಇತಿರೂಪಂ ।

ವಿ+ದಧೇ ದಧಾತೇ ದಧಿರೇ, ದಧೀಷೇ ದಧಾಥೇ ದಧಿಧ್ವೇ, ದಧೇ ದಧಿವಹೇ ದಧಿಮಹೇ ॥

**ಪ್ರಯೋಗ—** ಅಯಂ ಪುಷ್ಪಂ ಉತ ಫಲಂ ವಿದಧೇ (ಕರ್ತರಿ)
ಅನೇನ ಪುಷ್ಪಂ ಉತ ಫಲಂ ವ್ಯಧೀಯತ (ಕರ್ಮಣಿ)

**ವಿಶೇಷ ವಿಚಾರಗಳು—** 'ಗೋವಿಷಯಸ್ಯ' ಪಶುಪೇ ಇತಿ ಅಪಭ್ರಷ್ಟಭಾಷಾ ಗೋವಿಷಯಕ್ಕೆ ಪಶುಪೆ ಎಂದು ಅಪಭ್ರಷ್ಟಭಾಷೆಯಲ್ಲಿ (ತುಳುವಿನಲ್ಲಿ) ಹೆಸರು.

**ದಿವ್ಯಗೇಯ ವಿದಗ್ಧೋಽಸೌ ಸರ್ವಜ್ಞ ಇತಿ ಯಾಚಿತಃ ।**
**ವಿದ್ವದ್ಭಿರತ್ರ ಕೃತವಾನ್ ಗಾನಶಾಸ್ತ್ರಂ ಸುದುರ್ಲಭಂ ॥**

ಎಂದು ಐತಿಹ್ಯದ ಪ್ರಮಾಣ ಶ್ಲೋಕವೂ ಇದೆ. ಸರ್ವಜ್ಞರಾದ ಈ ಆಚಾರ್ಯರಿಗೆ ದಿವ್ಯಸಂಗೀತವು ಬರುತ್ತದೆ ಎಂದು ತಿಳಿದ ವಿದ್ವಾಂಸರು ಕೆಲವರು ಆಚಾರ್ಯರು ಗಾನ ಮಾಡಬೇಕೆಂದು ಪ್ರಾರ್ಥಿಸಿದರು. ಆಗ ಆಚಾರ್ಯರು ಅತ್ಯಂತ ದುರ್ಲಭವಾದ ಗಾನಶಾಸ್ತ್ರವನ್ನು ಮಾಡಿದರು (ಗ್ರಂಥವನ್ನು ರಚಿಸಿದರು) ಅಥವಾ ಹಾಡಿದರು. (ಸುಮಧ್ವವಿಜಯಭಾವ ಪ್ರಕಾಶಿಕಾ)

**ವೃತ್ತ—** ಈ ಶ್ಲೋಕದಲ್ಲಿ ಉದ್ಗತಾವೃತ್ತ. 'ಚರಮಯೋಃ ಸಜಸಜಗಾ ದ್ವಿತೀಯೇ ನಸಜಗಾಸ್ತೃತೀಯೇ ಭನಜಲಗಾಶ್ಚೇದುದ್ಗತಾ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಹೀಗೆ ಹೇಳಿದ ಮಹಾಮಹಿಮಶಾಲಿಗಳಾದ ಆಚಾರ್ಯರ ಮಹಾತ್ಮ್ಯೆಯನ್ನು ಚಕ್ರಬಂಧ ಶ್ಲೋಕದಿಂದ ವರ್ಣಿಸುತ್ತಾರೆ.

**ಧನ್ಯೋಽಮಹ್ಯತ ನಾಕಿನಾಮಹಿತಹೃದ್ಬಾಣಃ ಸಮೋಽಜಸ್ಯ ಯೋ**
**ಮಧ್ವೋ ಧ್ವಸ್ತದುರಾಗಮೋಽಗ್ರ್ಯಹಿಮಗುಶ್ರೀಃ ಕಾಮಮಾಯಾಮಿಹೃತ್ ।**
**ವಿಷ್ಣುಂ ವಿಶ್ವಜಯಪ್ರದಂ ಸ ಹಿ ನಮನ್ ಸೇವ್ಯಂ ಸುಸೌಖ್ಯಂ ಮುದಾ**
**ದಾಕ್ಷ್ಯಾಚ್ಛ್ರೀಧರಮಾಮಯಾದಿವಿರಹೀ ಯೋಗೀ ಸುಹೃತ್ ಸರ್ವದಾ ॥ 54 ॥**

**ಪದಚ್ಛೇದ—** ಧನ್ಯಃ, ಅಮಹ್ಯತ, ನಾಕಿನಾಂ, ಅಹಿತಹೃದ್‌ಬಾಣಃ ಸಮಃ ಅಜಸ್ಯ, ಯಃ, ಮಧ್ವಃ, ಧ್ವಸ್ತದುರಾಗಮಃ, ಅಗ್ರ್ಯಹಿಮಗುಶ್ರೀಃ, ಕಾಮಂ ಆಯಾಮಿಹೃತ್, ವಿಷ್ಣುಂ, ವಿಶ್ವಜಯಪ್ರದಂ, ಸಃ ಹಿ, ನಮನ್, ಸೇವ್ಯಂ, ಸುಸೌಖ್ಯಂ, ಮುದಾ, ದಾಕ್ಷ್ಯಾತ್, ಶ್ರೀಧರಂ, ಆಮಯಾದಿವಿರಹೀ, ಯೋಗೀ, ಸುಹೃತ್, ಸರ್ವದಾ ।

**ಅನ್ವಯ—** ಧನ್ಯಃ, ನಾಕಿನಾಂ ಅಹಿತಹೃದ್ಬಾಣಃ, ಅಜಸ್ಯ ಸಮಃ ಧ್ವಸ್ತದುರಾಗಮಃ, ಅಗ್ರ್ಯಹಿಮಗುಶ್ರೀಃ ವಿಶ್ವಜಯಪ್ರದಂ ಸೇವ್ಯಂ, ಸುಸೌಖ್ಯಂ, ಶ್ರೀಧರಂ ವಿಷ್ಣುಂ, ಮುದಾ, ದಾಕ್ಷ್ಯಾತ್, ನಮನ್, ಆಮಯಾದಿವಿರಹೀ, ಯೋಗೀ ಸರ್ವದಾ ಸುಹೃತ್, ಕಾಮಂ, ಆಯಾಮಿ(ಮ)ಹೃತ್ ಯಃ ಮಧ್ವಃ ಸಃ ಅಮಹ್ಯತ ಹಿ ।

**ಅನ್ವಯಾರ್ಥ—**

**ಧನ್ಯಃ** = ಅಪೇಕ್ಷೆ ಇಲ್ಲದ ಮತ್ತು ಗುಣಪೂರ್ಣರಾದ,

**ನಾಕಿನಾಂ** = ದೇವತೆಗಳ,

**ಅಹಿತಹೃದ್‌ಬಾಣಃ** = ಶತ್ರುಗಳಾದ ರಾಕ್ಷಸರ ಎದೆಗೆ ಬಾಣ ಸಮಾನರಾದ,

**ಅಜಸ್ಯ** = ಬ್ರಹ್ಮದೇವರಿಗೆ,

**ಸಮಃ** = ಸಮಾನರಾದ,

**ಧ್ವಸ್ತದುರಾಗಮಃ** = ಖಂಡಿಸಲ್ಪಟ್ಟ ದುಷ್ಟ ಸಿದ್ಧಾಂತವುಳ್ಳ,

**ಅಗ್ರ್ಯಹಿಮಗುಶ್ರೀಃ** = ಶ್ರೇಷ್ಠನಾದ ಚಂದ್ರನಂತೆ ಕಾಂತಿಯುಳ್ಳ,

**ವಿಶ್ವಜಯಪ್ರದಂ ಸೇವ್ಯಂ** = ಸಮಸ್ತರಿಗೂ ಜಯವನ್ನು ಕೊಡುವ, ಭಜಿಸಲು ಯೋಗ್ಯನಾದ,

**ಸುಸೌಖ್ಯಂ** = ಉತ್ತಮವಾದ ಆನಂದವುಳ್ಳ,

**ಶ್ರೀಧರಂ** = ಲಕ್ಷ್ಮೀಪತಿಯಾದ,

**ವಿಷ್ಣುಂ** = ಶ್ರೀಮನ್ನಾರಾಯಣನನ್ನು

**ಮುದಾ** = ಸಂತೋಷದಿಂದ,

**ದಾಕ್ಷ್ಯಾತ್** = (ಸಾಷ್ಟಾಂಗ ನಮಸ್ಕಾರದ) ಚತುರತೆಯಿಂದ,

**ನಮನ್** = (ಸಾಷ್ಟಾಂಗ) ನಮಸ್ಕರಿಸುತ್ತಾ ಇರುವ,

**ಆಮಯಾದಿವಿರಹೀ** = ರೋಗಾದ್ಯುಪದ್ರವಗಳಿಂದ ರಹಿತರಾದ,

**ಯೋಗೀ** = ಧ್ಯಾನನಿರತರಾದ,

**ಸರ್ವದಾ** = ಯಾವಾಗಲೂ

**ಸುಹೃತ್** = ವಿಷ್ಣುವಿಗೆ ಮಿತ್ರರಾದ

**ಕಾಮಂ** = ಅತಿಶಯವಾಗಿ (ಹೆಚ್ಚಾಗಿ)

**ಆಯಾಮಿ ಹೃತ್** =ವಿಶಾಲತೆಯುಳ್ಳ (ವಿಶಾಲವಾದ) ಮನಸ್ಸುಳ್ಳ

**ಯಃ** = ಯಾವ ಮಧ್ವಾಚಾರ್ಯರು ಇದ್ದಾರೋ,

**ಸಃ** = ಅವರು

**ಅಮಹ್ಯತ ಹಿ** = ಪೂಜಿಸಲ್ಪಟ್ಟರೆಂಬುದು ಪ್ರಸಿದ್ಧವಾಗಿದೆಯಷ್ಟೆ

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಯಾವ ಅಪೇಕ್ಷೆಯೂ ಇಲ್ಲದವರು. ಆದುದರಿಂದಲೇ ತಮಗೆ ಯೋಗ್ಯ-ವಾದ ಜ್ಞಾನಾದಿಗುಣಗಳಿಂದ ತುಂಬಿದವರು. ದೇವತೆಗಳ ಶತ್ರುಗಳಾದ ರಾಕ್ಷಸರನ್ನು ಬಾಣದಂತೆ ಖಂಡಿಸುವವರು. 'ಅವಿಶೇಷೋ ಬ್ರಹ್ಮವಾಯ್ವೋಃ' ಎಂಬ ಪ್ರಮಾಣದಂತೆ ಚತುರ್ಮುಖ ಬ್ರಹ್ಮನಿಗೆ ಸಮಾನರು. ದುರ್ವಾದಿಗಳ ದುಸ್ಸಿದ್ಧಾಂತಗಳನ್ನು ಖಂಡಿಸಿದವರು. ಪೂರ್ಣಚಂದ್ರನಂತೆ ಪ್ರಸನ್ನತೆಯಿಂದ ಕೂಡಿದವರು. ತಮಗೆ ಯೋಗ್ಯವಾದ

ಜ್ಞಾನವನ್ನು ಪೂರ್ಣವಾಗಿ ಪಡೆದವರು. ಇಂತಹ ಆಚಾರ್ಯರು, ತಮ್ಮ ಭಕ್ತರೆಲ್ಲರಿಗೂ ಜಯಪ್ರದನೂ, ಭಕ್ತರಿಂದ ಸೇವಿಸಿ ಕೊಳ್ಳಲು ಅರ್ಹನೂ, ಅತಿಶಯಿತವಾದ ಉತ್ತಮ ಆನಂದಪೂರ್ಣನೂ, ಲಕ್ಷ್ಮೀಪತಿಯೂ ಆದ ಶ್ರೀಮನ್ನಾರಾಯಣನನ್ನು ಬಹಳ ಕುಶಲತೆಯಿಂದ ಸಾಷ್ಟಾಂಗವಾಗಿ ಯಾವಾಗಲೂ ನಮಸ್ಕರಿಸುತ್ತಾರೆ. ಯಾವ ರೋಗಾದಿ ಉಪದ್ರವಗಳೂ ಇಲ್ಲದೆ ನಿರಂತರ ಹರಿಧ್ಯಾನದಲ್ಲಿಯೇ ಆಸಕ್ತರಾಗಿರುತ್ತಾರೆ. ಆದ್ದರಿಂದಲೇ ಹರಿಗೆ ಅತ್ಯಂತ ಪ್ರಿಯರಾಗಿರುತ್ತಾರೆ. ಅಂತಹ ಶ್ರೀಮಧ್ವಾಚಾರ್ಯರನ್ನು ಎಲ್ಲಾ ದೇಶಗಳಲ್ಲಿಯೂ ಸಾತ್ವಿಕರಾದ ಭಕ್ತರು ಪೂಜಿಸಿದರು.

**ವಿಗ್ರಹ—**

**ನಾಕಿನಃ—** ನಾಕಃ ಏಷಾಂ ಅಸ್ತೀತಿ ನಾಕಿನಃ (ಸ್ವರ್ಗವುಳ್ಳವರು, ದೇವತೆಗಳು)

**ಅಹಿತಹೃದ್ಬಾಣಃ—** ಅಹಿತಾನಾಂ ಹೃತ್ ಅಹಿತಹೃತ್, ಅಹಿತಹೃದಃ ಬಾಣಃ ಅಹಿತಹೃದ್ಬಾಣಃ ।

**ಧ್ವಸ್ತದುರಾಗಮಃ—** ಧ್ವಸ್ತಾಃ ದುರಾಗಮಾಃ ಯೇನ ಸಃ ಧ್ವಸ್ತದುರಾಗಮಃ ।

**ಅಗ್ರ್ಯಹಿಮಗುಶ್ರೀಃ—** ಹಿಮಾಃ ಗಾವಃ ಯಸ್ಯ ಸಃ ಹಿಮಗುಃ, ಅಗ್ರ್ಯಶ್ಚಾಸೌ ಹಿಮಗುಶ್ಚ ಅಗ್ರ್ಯಹಿಮಗುಃ, ಅಗ್ರ್ಯಹಿಮಗೋಃ ಶ್ರೀರಿವ ಶ್ರೀಃ ಯಸ್ಯ ಸಃ ಅಗ್ರ್ಯಹಿಮಗುಶ್ರೀಃ ।

**ಆಯಾಮಿಹೃತ್—** ಆಯಾಮಃ ಅಸ್ಯಾಸ್ತೀತಿ ಆಯಾಮಿ, ಆಯಾಮಿ ಹೃತ್ ಯಸ್ಯ ಸಃ ಆಯಾಮಿ-ಹೃತ್ ।

**ವಿಶ್ವಜಯಪ್ರದಂ—** ಜಯಂ ಪ್ರದದಾತೀತಿ ಜಯಪ್ರದಃ, ವಿಶ್ವೇಷಾಂ ಜಯಪ್ರದಃ ವಿಶ್ವಜಯಪ್ರದಃ ತಂ ವಿಶ್ವಜಯಪ್ರದಂ ।

**ಸೇವ್ಯಃ—** ಸೇವಿತು ಯೋಗ್ಯಃ ಸೇವ್ಯಃ ತಂ, ಸೇವ್ಯಂ ।

**ಸುಸೌಖ್ಯಂ—** ಸುಖಮೇವ ಸೌಖ್ಯಂ (ಸು) ಶೋಭನಂ ಸೌಖ್ಯಂ ಯಸ್ಯ ಸಃ ಸುಸೌಖ್ಯಃ, ತಂ ಸುಸೌಖ್ಯಂ ।

**ದಾಕ್ಷ್ಯಂ—** ದಕ್ಷಸ್ಯ ಭಾವಃ ದಾಕ್ಷ್ಯಂ, ತಸ್ಮಾತ್ ದಾಕ್ಷ್ಯಾತ್ ।

**ಶ್ರೀಧರಃ—** ಧರತೀತಿ ಧರಃ, ಶ್ರಿ ಯಂ ಧರಃ ಶ್ರೀಧರಃ, ತಂ ಶ್ರೀಧರಂ ।

**ಆಮಯಾದಿವಿರಹೀ—** ಆಮಯಃ ಆದಿಃ ಯಸ್ಯ ಸಃ ಆಮಯಾದಿಃ, ಆಮಯಾದೇಃ ವಿರಹಃ ಆಮಯಾದಿ ವಿರಹಃ, ಆಮಯಾದಿವಿರಹಃ ಅಸ್ಯ ಅಸ್ತೀತಿ ಆಮಯಾದಿವಿರಹೀ ।

**ಯೋಗೀ—** ಯೋಗಃ ಅಸ್ಯ ಅಸ್ತೀತಿ ಯೋಗೀ ।

**ಸುಹೃತ್—** (ಸು)ಶೋಭನಂ ಹೃತ್ ಯಸ್ಯ ಸಃ ಸುಹೃತ್ ।

**ಕ್ರಿಯಾಪದ— ಅಮಹ್ಯತ-** ಮಹಪೂಜಾಯಾಂ ಇತಿ ಪೂಜಾರ್ಥಕಾತ್ ಮಹಧಾತೋಃ ಸಕರ್ಮಕಾತ್ ಕರ್ಮಣಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ।

ಅಮಹ್ಯತ ಅಮಹ್ಯೇತಾಂ ಅಮಹ್ಯಂತ, ಅಮಹ್ಯಥಾಃ ಅಮಹ್ಯೇಥಾಂ ಅಮಹ್ಯಧ್ವಂ, ಅಮಹ್ಯೇ ಅಮಹ್ಯಾವಹಿ ಅಮಹ್ಯಾಮಹಿ ॥

**ಕೋಶ—** 'ನಿರಪೇಕ್ಷೋ ಗುಣ್ಯೈಃ ಪೂರ್ಷೋ ಧನ್ಯ ಇತ್ಯಭಿಧೀಯತೇ' ಇತಿ ಅಭಿಧಾನಂ, ನಾಕಿನಾಂ ಎಂಬಲ್ಲಿ 'ಸ್ವರವ್ಯಯಂ ಸ್ವರ್ಗನಾಕ' ಇತ್ಯಮರಃ, 'ಅಹಿತಹೃದ್ ಬಾಣಃ' ಎಂಬಲ್ಲಿ 'ದ್ವಿಡ್ ವಿಪಕ್ಷಾಹಿತಾಮಿತ್ರ' ಇತ್ಯಮರಃ, 'ಆಯಾಮಿ(ಮ) ಹೃತ್' ಎಂಬಲ್ಲಿ 'ದೈರ್ಘ್ಯಮಾಯಾಮ ಆರೋಹಃ (ಯಾಮಮಾರೋಹಃ) ಪರಿಣಾಹೋ ವಿಶಾಲತಾ' ಇತ್ಯಮರಃ, ಯೋಗೀ ಎಂಬಲ್ಲಿ 'ಯೋಗಃ ಸನ್ನಹನೋಪಾಯ ಧ್ಯಾನಸಂಗತಿಯುಕ್ತಿಷು' ಇತ್ಯಮರಃ ।

ಪ್ರಯೋಗ— ಸಃ (ಶ್ರೀಮಧ್ವಃ) (ಸರ್ವಜನೈಃ) ಅಮಹ್ಯತ (ಕರ್ಮಣಿ)
ತಂ (ಶ್ರೀಮಧ್ವಂ) ಸರ್ವಜನಾಃ ಅಮಹಯನ್ (ಕರ್ತರಿ)

ವೃತ್ತ— ಇಲ್ಲಿ 'ಶಾರ್ದೂಲವಿಕ್ರೀಡಿತವೃತ್ತ ಸೂರ್ಯಾಶ್ವೈಯ ದಿರ್ಮ ಸಜೌ ತ ತತಗಾಃಸ್ಸಗುರವಃ ಶಾರ್ದೂಲ-ವಿಕ್ರೀಡಿತಂ' ಎಂದು ಅದರ ಲಕ್ಷಣ.

★ ★ ★

ಅವತಾರಿಕಾ— ಶ್ರೀಮದಾಚಾರ್ಯರ ಅದ್ಭುತ ಮಹಿಮೆಗಳನ್ನು ಅವುಗಳನ್ನು ಹೇಳುವವರಿಗೆ ಆಗತಕ್ಕ ಫಲವನ್ನೂ ವರ್ಣಿಸಿ ಆಚಾರ್ಯರ ಶಿಷ್ಯರು ತಮ್ಮ ವರ್ಣನೆಯನ್ನು ಮುಗಿಸುತ್ತಿದ್ದಾರೆ

**ಇತಿ ಭುವನವಿಭೂಷಣಸ್ಯ ಭೂಯಾಂ-**
**ಸ್ಯವಿಗಣಿತಾನಿ ಕೃತಾಂತರಾಣಿ ಹಂತ ।**
**ಶ್ರವಣಮನನಕೀರ್ತನೈರಭೀಷ್ಟಂ**
**ಪ್ರತಿದದತೀತ್ಯಮರಾಃ ಪ್ರಕೀರ್ತಯಂತಿ ॥ 55 ॥**

ಪದಚ್ಛೇದ— ಇತಿ, ಭುವನವಿಭೂಷಣಸ್ಯ, ಭೂಯಾಂಸಿ, ಅವಿಗಣಿತಾನಿ, ಕೃತಾಂತರಾಣಿ, ಹಂತ, ಶ್ರವಣ-ಮನನಕೀರ್ತನೈಃ, ಅಭೀಷ್ಟಂ, ಪ್ರತಿದದತಿ, ಇತಿ, ಅಮರಾಃ, ಪ್ರಕೀರ್ತಯಂತಿ ।

ಅನ್ವಯ— ಭುವನವಿಭೂಷಣಸ್ಯ, ಇತಿ ಭೂಯಾಂಸಿ ಅವಿಗಣಿತಾನಿ ಕೃಂತಾತರಾಣಿ, ಶ್ರವಣಮನನಕೀರ್ತನೈಃ, ಅಭೀಷ್ಟಂ, ಪ್ರತಿದದತಿ, ಇತಿ, ಅಮರಾಃ, ಪ್ರಕೀರ್ತಯಂತಿ, ಹಂತ ।

ಅನ್ವಯಾರ್ಥ—

ಭುವನವಿಭೂಷಣಸ್ಯ = ಲೋಕಗಳಿಗೆ ಅಲಂಕಾರ ಸ್ವರೂಪರಾದ ಶ್ರೀಮಧ್ವಾಚಾರ್ಯರ,
ಇತಿ = ಈ ರೀತಿಯ,
ಭೂಯಾಂಸಿ = ಬಹಳವಾದ
ಅವಿಗಣಿತಾನಿ = ಎಣಿಸಲ್ಪಡದಿರುವ,
ಕೃತಾಂತರಾಣಿ = ಇತರ ಕಾರ್ಯಗಳು,
ಶ್ರವಣಮನನಕೀರ್ತನೈಃ = ಕೇಳುವುದು, ಧ್ಯಾನಿಸುವುದು, ಹೇಳುವುದು ಇವುಗಳಿಂದ,
ಅಭೀಷ್ಟಂ = ಇಷ್ಟಾರ್ಥವನ್ನು
ಪ್ರತಿದದತಿ = ಕೊಡುತ್ತವೆ,
ಇತಿ = ಹೀಗೆಂದು
ಅಮರಾಃ = ದೇವತೆಗಳು,
ಪ್ರಕೀರ್ತಯಂತಿ = ಹೇಳುತ್ತಾರೆ.
ಹಂತ = ಸಂತೋಷವು.

ತಾತ್ಪರ್ಯ— ಹೀಗೆ 'ಭುವನಾದ್ಭುತಮಧ್ವಚೇಷ್ಟಿತಂ' (ಸ.10 ಶ್ಲೋ.2) ಎಂಬ ಶ್ಲೋಕದಲ್ಲಿ ಅಥ 'ಶುಶ್ರೂಷು ಜನಾಯ ವರ್ಣ್ಯತೇ' ಆಚಾರ್ಯರ ಲೋಕ ವಿಸ್ಮಯಕರವಾದ ವ್ಯಾಪಾರಗಳನ್ನು ದೇವತೆಗಳ ಆಯಸ್ಸನ್ನು ಪಡೆದರೂ

ನಾವು ವರ್ಣಿಸಲಾರೆವಾದರೂ ಕೇಳುವ ಕುತೂಹಲವುಳ್ಳ ಭಕ್ತರಿಗೆ ಸ್ವಲ್ಪ ಮಟ್ಟಿಗೆ ವರ್ಣಿಸುತ್ತೇವೆ ಎಂದು ಶ್ರೀಮಧ್ವರ ಕಥೆಗಳನ್ನು ಹೇಳುತ್ತೇವೆ ಎಂದು ಪ್ರತಿಜ್ಞೆಮಾಡಿ 'ಕ್ವಚಿದೀಶ್ವರದೇವಮೇಶ ಭೂಪಂ' (ಸ.10 ಶ್ಲೋ.4) ಎಂಬಲ್ಲಿಂದ ಇದುವರೆಗೆ ಆಚಾರ್ಯರ ಚರಿತ್ರೆಗಳನ್ನು ವರ್ಣಿಸಿ ಶ್ರೋತೃಗಳಿಗೆ ಅವುಗಳಲ್ಲಿ ರುಚಿಯನ್ನು ಉಂಟುಮಾಡಿ ಈಗ ಆಚಾರ್ಯರ ಶಿಷ್ಯರು ಕಥಾಭಾಗದ ಉಪಸಂಹಾರ ಮಾಡುತ್ತಾರೆ. ಶ್ರೀಮಧ್ವಾಚಾರ್ಯರು ಸಕಲ ಲೋಕಗಳಿಗೂ ಅಲಂಕಾರಸ್ವರೂಪರಾದವರು. ನಾನು ಹೇಳಲು ಸಾಧ್ಯವಾಗದ ಅಸಂಖ್ಯವಾದ ಅದ್ಭುತ ಕಾರ್ಯಗಳನ್ನು ಅವರು ಮಾಡಿದ್ದಾರೆ. ಮಧ್ವರ ಆ ವ್ಯಾಪಾರಗಳನ್ನು, ಕೇಳುವ ಧ್ಯಾನಿಸುವ, ಇತರರಿಗೆ ಹೇಳುವ ಭಕ್ತರಿಗೆ ಅವರ ಇಷ್ಟಾರ್ಥಗಳು ಕೈಗೂಡುತ್ತವೆ ಎಂದು ದೇವತೆಗಳೇ ಹೇಳುತ್ತಾರೆ.

**ವಿಗ್ರಹ—**

**ಭುವನವಿಭೂಷಣಂ—** ಭುವನಾನಾಂ ವಿಭೂಷಣಂ ಭುವನವಿಭೂಷಣಂ, ತಸ್ಯ ಭುವನವಿಭೂಷಣಸ್ಯ ।

**ಅವಿಗಣಿತಾನಿ—** ನ ವಿಗಣಿತಾನಿ ಅವಿಗಣಿತಾನಿ ।

**ಕೃತಾಂತರಾಣಿ—** ಅನ್ಯಾನಿ ಕೃತಾನಿ ಕೃತಾಂತರಾಣಿ ।

**ಶ್ರವಣಮನನಕೀರ್ತನೈಃ—** ಶ್ರವಣಂ ಚ ಮನನಂ ಚ ಕೀರ್ತನಂ ಚ ಶ್ರವಣಮನನಕೀರ್ತನಾನಿ, ತೈಃ, ಶ್ರವಣಮನನಕೀರ್ತನೈಃ ।

**ಕ್ರಿಯಾಪದ— ಪ್ರತಿದದತಿ-** ಪ್ರತಿ ಇತಿ ಉಪಸರ್ಗಪೂರ್ವಕಾತ್ ಡುದಾಞ ದಾನೇ ಇತಿ ದಾನಾರ್ಥಕಾತ್ ದಾಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ ಪ್ರತಿದದತಿ ಇತಿ ರೂಪಂ ।

ಪ್ರತಿ+ದದಾತಿ ದತ್ತಃ ದದತಿ, ದದಾಸಿ ದತ್ಥಃ ದತ್ಥ ದದಾಮಿ ದದ್ವಃ ದದ್ಮಃ ॥

**ಪ್ರಕೀರ್ತಯಂತಿ-** ಪ್ರ ಇತ್ಯುಪಸರ್ಗಪೂರ್ವಕಾತ್ ಕೃತಸಂಶಬ್ದನೇ ಇತಿ ಸಂಶಬ್ದನಾರ್ಥಕಾತ್ ಕೃತಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ ಪ್ರಕೀರ್ತಯಂತಿ ಇತಿ ರೂಪಮ್ ।

ಪ್ರ+ಕೀರ್ತಯತಿ ಕೀರ್ತಯತಃ ಕೀರ್ತಯಂತಿ, ಕೀರ್ತಯಸಿ ಕೀರ್ತಯಥಃ ಕೀರ್ತಯಥ,
ಕೀರ್ತಯಾಮಿ ಕೀರ್ತಯಾವಃ ಕೀರ್ತಯಾಮಃ ।

**ಕೋಶ—** ಇತಿ=ಪ್ರಕಾರಾರ್ಥಕ, 'ಇತಿ ಹೇತುಪ್ರಕರಣಪ್ರಕಾಶಾ(ರಾ)ದಿ ಸಮಾಪ್ತಿಷು' ಎಂದು ಅಮರ.

**ಪ್ರಯೋಗ—** ಕೃತಾಂರಾಣಿತೇ ಅಭೀಷ್ಟಂ ಪ್ರತಿದದತಿ (ಕರ್ತರಿ)
ಕೃತಾಂತರೈಃ ಅಭೀಷ್ಟಂ ಪ್ರತಿದೀಯತೇ (ಕರ್ಮಣಿ)
ಅಮರಾಃ ಇತಿ ಪ್ರಕೀರ್ತಯಂತಿ (ಅಕರ್ಮಕ ಕರ್ತರಿ)
ಅಮರೈಃ ಇತಿ ಪ್ರಕೀರ್ತ್ಯತೇ (ಭಾವೇ)

**ವೃತ್ತ—** ಇಲ್ಲಿ ಪುಷ್ಪತಾಗ್ರಾ ವೃತ್ತ.

'ಅಯುಜಿನಯುಗ ರೇಫತೋ ಯಕಾರೋ ಯುಜಿ ಚ ನಜೌ ಜರಗಾಶ್ಚ ಪುಷ್ಪಿತಾಗ್ರಾ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ**— ಶ್ರೀಪೂರ್ಣಪ್ರಜ್ಞಾಚಾರ್ಯರ ಶಿಷ್ಯನು ತನ್ನ ಮಾತನ್ನು ಮುಗಿಸಿದನೆಂದು ಕವಿಗಳು ಉಪಸಂಹಾರ ಮಾಡುತ್ತಿದ್ದಾರೆ.

ಶ್ರೀನಾರಾಯಣಪಂಡಿತಾಚಾರ್ಯರು ಶ್ರೀಮದಾಚಾರ್ಯರ ಶಿಷ್ಯರು ಮಾಡಿದ ಲೋಕೋಪಕಾರವನ್ನು ಹೇಳಿ ಸರ್ಗವನ್ನು ಮುಗಿಸುತ್ತಿದ್ದಾರೆ.

**ಇತಿ ವಿವಿಧಗೋಧಾರಾವಾರ್ಯೈರ್ವಿಶಾರದವಾರಿದೋ**
**ಹರಿಪದರತೋ ವಿದ್ಯಾವಿದ್ಯುತ್ಪ್ರದೀಪಿತದಿಙ್ಮುಖಃ ।**
**ಭವಭಯಮಹಾಘರ್ಮೋತ್ತಪ್ತಂ ಸದಂಘ್ರಿಪಮಂಡಲಂ**
**ಸಫಲಸುಮನಃ ಸಾಂದ್ರಾನಂದಂ ವ್ಯಧಾದವಿಪಲ್ಲವಮ್ ॥ 56 ॥**

**ಪದಚ್ಛೇದ**— ಇತಿ, ವಿವಿಧಗೋಧಾರಾವಾರ್ಯೈಃ, ವಿಶಾರದವಾರಿದಃ, ಹರಿಪದರತಃ, ವಿದ್ಯಾವಿದ್ಯುತ್ಪ್ರದೀಪಿತ-ದಿಙ್ಮುಖಃ, ಭವಭಯಮಹಾಘರ್ಮೋತ್ತಪ್ತಂ, ಸದಂಘ್ರಿಪಮಂಡಲಂ, ಸಫಲಸುಮನಃ ಸಾಂದ್ರಾನಂದಂ, ವ್ಯಧಾತ್, ಅವಿಪಲ್ಲವಂ ।

**ಅನ್ವಯಾರ್ಥ**—

**ಹರಿಪದರತಃ** = ಶ್ರೀಮನ್ಮಹಾವಿಷ್ಣುವಿನ ಪಾದಗಳಲ್ಲಿ (ಆಕಾಶದಲ್ಲಿ) ಆಸಕ್ತನಾದ (ನೆಲೆಸಿರುವ, ಓಡಾಡುತ್ತಿರುವ)

**ವಿದ್ಯಾವಿದ್ಯುತ್ಪ್ರದೀಪಿತದಿಙ್ಮುಖಃ** = ವಿದ್ಯೆಯೆಂಬ ಮಿಂಚಿನಿಂದ ಬೆಳಗಿಸಲ್ಪಟ್ಟ ದಿಕ್ಕುಗಳ ಪ್ರದೇಶಗಳುಳ್ಳ,

**ವಿಶಾರದವಾರಿದಃ** = ಪಂಡಿತರಾದ ಶ್ರೀಮಧ್ವಾಚಾರ್ಯರೆಂಬ ಮೋಡವು,

**ಭವಭಯಮಹಾಘರ್ಮೋತ್ತಪ್ತಂ** = ಸಂಸಾರದ ಹೆದರಿಕೆಯೆಂಬ ಅತಿ ಹೆಚ್ಚಾದ ಬೇಗೆಯಿಂದ ಅತ್ಯುಷ್ಣದಿಂದ ವ್ಯಥೆಗೊಂಡಿರುವ,

**ಸದಂಘ್ರಿಪಮಂಡಲಂ** = ಸಜ್ಜನರೆಂಬ ವೃಕ್ಷಗಳ ಸಮೂಹವನ್ನು

**ಇತಿ** = ಈ ರೀತಿ,

**ವಿವಿಧಗೋಧಾರಾವಾರ್ಯೈಃ** = ನಾನಾ ರೀತಿಯ ಮಾತೆಂಬ ನೀರಿನ ಧಾರೆಗಳ ಸಮೂಹಗಳಿಂದ, (ಸಂತೋಷಗೊಳಿಸಿ)

**ಸಫಲಸುಮನಃಸಾಂದ್ರಾನಂದಂ** = ಜ್ಞಾನವಿಶೇಷ ಮತ್ತು ಒಳ್ಳೆಯ ಮನಸ್ಸು ಇವುಗಳೆಂಬ ಹಣ್ಣು ಹೂವುಗಳಿಂದ ಸಹಿತವಾದದ್ದನ್ನಾಗಿಯೂ, ಪೂರ್ಣಾನಂದವುಳ್ಳದ್ದನ್ನಾಗಿಯೂ,

**ಅವಿಪಲ್ಲವಂ** = ಆಪತ್ತಿನ ಲೇಶವೆಂಬ ಚಿಗುರೆಲೆಯ ಅಭಾವವಿಲ್ಲದ್ದನ್ನಾಗಿಯೂ,

**ವ್ಯಧಾತ್** = ಮಾಡಿತು.

**ತಾತ್ಪರ್ಯ**— ಮಳೆಗರೆಯುವ ತುಂಬಿದ ಮೋಡವು ಆಕಾಶದಲ್ಲಿ ಎಲ್ಲಾ ಕಡೆ ಹರಡಿ ಮಿಂಚಿನಿಂದ ಎಲ್ಲಾ ದಿಕ್ ಪ್ರದೇಶಗಳನ್ನು ಪ್ರಕಾಶಗೊಳಿಸುತ್ತದೆ. ಅದು ಬಿಸಿಲಿನ ಬೇಗೆಯಿಂದ ಬೆಂದುಹೋದ ಮರಗಳನ್ನು, ಮಳೆಯ ನೀರಿನಿಂದ ತಣಿಸಿ ಅವುಗಳೆಲ್ಲ ಚಿಗುರು ಹೂವು, ಹಣ್ಣುಗಳು ಬಿಡುವಂತೆ ಮಾಡುತ್ತದೆ. ಹಾಗೆಯೇ ವಿಷ್ಣುಪಾದಧ್ಯಾನಾಸಕ್ತರಾದ, ವಿದ್ಯೆಯಿಂದ ದಿಕ್ಕುಗಳನ್ನು ಪ್ರಕಾಶಗೊಳಿಸಿದ ವಿದ್ವಾಂಸರಾದ ಶ್ರೀಮಧ್ವಾಚಾರ್ಯರು ಈ ರೀತಿ ಹಿಂದೆ ಹೇಳಿದಂತೆ ಅನೇಕ ಅದ್ಭುತ ಮಾತುಗಳನ್ನಾಡಿದರು. ಅದರಿಂದ ಸಂಸಾರದಲ್ಲಿ ವ್ಯಥೆಗೊಂಡ ಸಜ್ಜನರಿಗೆ ಉತ್ತಮ ಜ್ಞಾನ, ಒಳ್ಳೆ ಮನಸ್ಸು ಗಾಢವಾದ ಆನಂದ, ಆಪದಭಾವ ಇವುಗಳು ಉಳ್ಳವರನ್ನಾಗಿ ಮಾಡಿದರು.

**ವಿಗ್ರಹ—**

**ವಿವಿಧಗೋಧಾರಾವಾರ್ಯೈಃ—** ಗವಾಂ ಧಾರಾಃ ಗೋಧಾರಾಃ, ಗೋಧಾರಾಣಾಂ ವಾರಾಃ ಗೋಧಾರಾವಾರಾಃ, ವಿವಿಧಾಶ್ಚ ತೇ ಗೋಧಾರಾವಾರಾಶ್ಚ ವಿವಿಧಗೋಧಾರಾವಾರಾಃ ತೈಃ ವಿವಿಧಗೋಧಾರಾವಾರ್ಯೈಃ । (ಅಥವಾ) ವಿವಿಧಾಶ್ಚ ತಾಃ ಗಾವಶ್ಚ ವಿವಿಧಗಾವಃ, ವಿವಿಧಗವಾಂ ಧಾರಾಃ ವಿವಿಧಗೋಧಾರಾಃ, ವಿವಿಧಗೋಧಾರಾಣಾಂ ವಾರಾಃ ವಿವಿಧಗೋಧಾರಾವಾರಾಃ ತೈಃ ವಿವಿಧಗೋಧಾರಾವಾರ್ಯೈಃ ।

**ವಿಶಾರದವಾರಿದಃ—** ವಿಶಾರದ ಏವ ವಾರಿದಃ ವಿಶಾರದವಾರಿದಃ,

**ಹರಿಪದರತಃ—** ಹರೇಃ ಪದೇ ಹರಿಪದೇ, ಹರಿಪದಯೋಃ ರತಃ ಹರಿಪದರತಃ (ಮೇಘಪಕ್ಷೇ ಹರೇಃ ಪದಂ ಹರಿಪದಂ ಹರಿಪದೇ ರತಃ, ಹರಿಪದರತಃ ।

**ವಿದ್ಯಾವಿದ್ಯುತ್ಪ್ರದೀಪಿತದಿಙ್ಮುಖಃ—** ವಿದ್ಯಾ ಏವ ವಿದ್ಯುತಃ ವಿದ್ಯಾವಿದ್ಯುತಃ, ದಿಶಾಂ ಮುಖಾನಿ ದಿಙ್ಮುಖಾನಿ, ವಿದ್ಯಾವಿದ್ಯುದ್ಭಿಃ ಪ್ರದೀಪಿತಾನಿ ದಿಙ್ಮುಖಾನಿ ಯೇನ ಸಃ ವಿದ್ಯಾವಿದ್ಯುತ್ಪ್ರದೀಪಿತದಿಙ್ಮುಖಃ ।

**ಭವಭಯಮಹಾಘರ್ಮೋತ್ತಪ್ತಂ—** ಭವಸ್ಯ ಭಯಂ ಭವಭಯಂ, ಮಹಾಂಶ್ಚಾಸೌ ಘರ್ಮಶ್ಚ ಮಹಾಘರ್ಮಃ, ಭವಭಯಮೇವ ಮಹಾಘರ್ಮಃ ಭವಭಯಮಹಾಘರ್ಮಃ, ಭವಭಯ-ಮಹಾಘರ್ಮೇಣ ಉತ್ತಪ್ತಂ ಭವಭಯಮಹಾಘರ್ಮೋತ್ತಪ್ತಂ, ತತ್ ಭವಭಯಮಹಾ-ಘರ್ಮೋತ್ತಪ್ತಂ ।

**ಸದಂಘ್ರಿಪಮಂಡಲಂ—** ಅಂಘ್ರಿಭಿಃ ಪಿಬಂತೀತಿ ಅಂಘ್ರಿಪಾಃ, ಸಂತಃ ಏವ ಅಂಘ್ರಿಪಾಃ ಸದಂಘ್ರಿಪಾಃ, ಸದಂಘ್ರಿಪಾಣಾಂ ಮಂಡಲಂ ಸದಂಘ್ರಿಪಮಂಡಲಂ, ತತ್ ಸದಂಘ್ರಿಮಂಡಲಂ ।

**ಸಫಲಸುಮನಃಸಾಂದ್ರಾನಂದಂ—** ಶೋಭನಂ ಚ ತತ್ ಮನಶ್ಚ ಸುಮನಃ, ಫಲಂ ಚ ಸುಮನಶ್ಚ ಫಲಸುಮನಸೀ, ಸುಮನಾಭ್ಯಾಂ ಸಹಿತಂ ಸಫಲಸುಮನಃ, (ಅಥವಾ) ಫಲೇನ ಸಹಿತಂ ಸಫಲಂ, ಸಫಲಂ ಸುಮನಃ ಯಸ್ಯ ತತ್ ಸಫಲಸುಮನಃ, ಸಾಂದ್ರಃ ಆನಂದಃ ಯಸ್ಯ ತತ್ ಸಾಂದ್ರಾನಂದಂ, ಸಫಲಸುಮನಶ್ಚ ತತ್ ಸಾಂದ್ರಾನಂದಂ ಚ ಸಫಲಸುಮನಃ ಸಾಂದ್ರಾನಂದಂ, ತತ್ ಸಫಲಸುಮನಃ ಸಾಂದ್ರಾನಂದಂ, (ವೃಕ್ಷಪಕ್ಷೇ - ಫಲಾನಿ ಚ ಸುಮನಸಶ್ಚ ಫಲಸುಮನಸಃ, ಫಲಸುಮನೋಭಿಃ ಸಹ ವರ್ತತೇ ಇತಿ ಸಫಲಸುಮನಃ) ।

**ಅವಿಪಲ್ಲವಂ—** ವಿಪದಃ ಲವಃ ವಿಪಲ್ಲವಃ, ನ ವಿದ್ಯತೇ ವಿಪಲ್ಲವಃ ಯಸ್ಯ ತತ್ ಅವಿಪಲ್ಲವಂ (ವೃಕ್ಷಪಕ್ಷೇ - ವಿಗತಾಃ ಪಲ್ಲವಾಃ ಯಸ್ಯ ತತ್ ವಿಪಲ್ಲವಂ, ನ ವಿಪಲ್ಲವಂ ಅವಿಪಲ್ಲವಂ) ।

**ಕ್ರಿಯಾಪದ—** **ವ್ಯಧಾತ್**- 'ವಿ' ಉಪಸರ್ಗಪೂರ್ವಕಾತ್ ಡುಧಾಞ ಧಾರಣಪೋಷಣಯೋಃ ಇತಿ ಧಾರಣ ಪೋಷಣಾರ್ಥಕಾತ್ ಧಾಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ ವ್ಯಧಾತ್ ರೂಪಂ ।

ವಿ+ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ ॥

**ಕೋಶ—** 'ಧಾರಾಧರೋಜಲಧರಃ ತಡಿತ್ವಾನ್ ವಾರಿದೋಂಬುಭೃತ್' 'ವೃಕ್ಷೋ ಮಹೀರುಹಃ ಶಾಖೀ ವಿಟಪೀ ಪಾದಪಸ್ತರುಃ' (ಪಾದಪಃ=ಅಂಘ್ರಿಪಃ) ಸ್ತೋಮೌಘನಿಕರವ್ರಾತವಾರಸಂಘಾತಸಂಚಯಾಃ । ''ಸ್ತ್ರಿಯಃ ಸುಮನಸಃ ಪುಷ್ಪಂ ಪ್ರಸೂನಂ ಕುಸುಮಂ ಸುಮಂ, ವಿಯದ್ವಿಷ್ಣುಪದಂ ವಾತು ಪುಂಸ್ಯಾಕಾಶವಿಹಾಯಸೀ'' (ವಿಷ್ಣು ಪದಂ=ಹರಿಪದಂ) ತಡಿತ್ ಸೌದಾಮನೀ ವಿದ್ಯುಚ್ಚಂಚಲಾ ಚಪಲಾ 'ಅಪಿ'- ಇತ್ಯಮರಃ, ''ಭವಃ ಸಂಸಾರ ಸಂಪ್ರಾಪ್ತಿ ಶ್ರೇಯಃಶಂಕರ ಜನ್ಮಸು ಘರ್ಮಃ ಸ್ಯಾದಾತಪೇ ಗ್ರೀಷ್ಮೇ ಉಷ್ಣಸ್ವೇದಾಂಭಸೋರಪಿ'' - ಇತಿ ವಿಶ್ವಃ ।

**ವಿಶೇಷವಿಚಾರಗಳು—** ಛಲಾರಿ ನರಸಿಂಹಾಚಾರ್ಯ ಶಿಷ್ಯ ಶೇಷಾಚಾರ್ಯವಿರಚಿತ ಮಂದೋಪಕಾರಿಣೀ ವ್ಯಾಖ್ಯಾನಾನುಸಾರ ಈ ಶ್ಲೋಕವು ದಶಮ ಸರ್ಗದ ಆರಂಭದಲ್ಲಿ ಹೇಳಿದಂತೆ ಆಚಾರ್ಯರ ಕಥೆಯನ್ನು ಹೇಳಿದ ಶಿಷ್ಯನ ಪರವಾಗಿ ವ್ಯಾಖ್ಯಾನಿಸಲ್ಪಟ್ಟಿದೆ.

''ಹೇಗೆ ಒಂದು ಮೋಡವು ಆಕಾಶದಲ್ಲಿದ್ದು ಮಿಂಚುಗಳಿಂದ ದಿಕ್ಕುಗಳನ್ನು ಪ್ರಕಾಶಗೊಳಿಸುತ್ತಾ ಬಿಸಿಲಿನ ಬೇಗೆಯಿಂದ ಬಾಡಿ ಕಮರಿಹೋದ ಮರಗಳ ಸಮೂಹವನ್ನು ನೀರಿನ ಧಾರೆಗಳಿಂದ ತಂಪುಗೊಳಿಸಿ ಚಿಗುರೆಲೆ ಹೂವು ಹಣ್ಣುಗಳಿಂದ ಕೂಡಿದ್ದನ್ನಾಗಿ ಮಾಡುತ್ತದೆಯೋ ಅದರಂತೆ ಈ ಶ್ರೀಪೂರ್ಣಪ್ರಜ್ಞಾಚಾರ್ಯರ ಶಿಷ್ಯನು ಹರಿಚರಣಾರವಿಂದವನ್ನು ಆಶ್ರಯಿಸಿ ತನ್ನ ವಿದ್ಯೆಯಿಂದ ಎಲ್ಲಾ ದಿಕ್ಕುಗಳನ್ನು ಶೋಭಿಸುತ್ತಾ ಸಂಸಾರಕ್ಲೇಶಸಂತಪ್ತರಾದ ಸಜ್ಜನರ ಸಮೂಹವನ್ನು ಶ್ರೀಮಧ್ವಾಚಾರ್ಯರ ಚರಿತ್ರವರ್ಣನೆಯಿಂದ ಸಂತೋಷಪಡಿಸಿ, ಮಂಗಳಕರವಾದ ಮನಸ್ಸಿನಿಂದ ಕೂಡಿದವರನ್ನಾಗಿಯೂ ಜ್ಞಾನಭಕ್ತ್ಯಾದಿಯುಕ್ತರನ್ನಾಗಿಯೂ, ಸಂಸಾರಕ್ಲೇಶಲೇಶವೂ ಇಲ್ಲದವರನ್ನಾಗಿಯೂ, ಪೂರ್ಣಾನಂದಯುಕ್ತರನ್ನಾಗಿಯೂ ಮಾಡಿದನು'' ಎಂದು ಅಭಿಪ್ರಾಯವು ಕಂಡುಬರುತ್ತದೆ.

ವಿಶ್ವಪತಿತೀರ್ಥರ ವ್ಯಾಖ್ಯಾನಾನುಸಾರವಾದ ಅಭಿಪ್ರಾಯವನ್ನು ಮೊದಲೇ ಕೊಡಲಾಗಿದೆ. ಶ್ರೀಮಧ್ವಾಚಾರ್ಯ-ರೆಂಬ ಮೋಡವು ತನ್ನ ಮಾತೆಂಬ ಜಲಧಾರೆಗಳಿಂದ ಸಜ್ಜನರೆಂಬ ವೃಕ್ಷಗಳ ಸಮೂಹಗಳನ್ನು ಸಂತೋಷಗೊಳಿಸಿತು ಎಂದು ಆ ವ್ಯಾಖ್ಯಾನುಸಾರಿಯಾದ ಅಭಿಪ್ರಾಯವು. ಈ ಶ್ಲೋಕದಲ್ಲಿರುವ ವಿಶೇಷಣಗಳನ್ನು ನೋಡಿದಾಗ ಆಚಾರ್ಯರ ಪರವಾದ ಅರ್ಥವನ್ನು ಹೇಳುವುದರಲ್ಲಿ ಹೆಚ್ಚು ಔಚಿತ್ಯವು ಕಾಣಿಸುತ್ತದೆ. ಆದರೆ ಆಚಾರ್ಯರ ಶಿಷ್ಯನು ಆಚಾರ್ಯರ ಚರಿತಾ-ನುವಾದವನ್ನು ಸಮಾಪ್ತಿ ಮಾಡಿದನು ಎಂಬ ಸೂಚನೆ ಈ ಪಕ್ಷದಲ್ಲಿ ಕಂಡುಬರುವುದಿಲ್ಲ, ಆ ವಿಷಯವನ್ನು ಮಾನಸಿಕವಾಗಿಯೇ ಇಟ್ಟುಕೊಳ್ಳಬೇಕಾಗುತ್ತದೆ.

**ಪ್ರಯೋಗ—** ವಿಶಾರದವಾರಿದಃ ಸದಂಘ್ರಿಪಮಂಡಲಂ ಅವಿಪಲ್ಲವಂ ವ್ಯಧಾತ್ (ಸಕರ್ಮಕ ಕರ್ತರಿ)
ವಿಶಾರದವಾರಿದೇನ ಸದಂಘ್ರಿಪಮಂಡಲಂ ಅವಿಪಲ್ಲವಂ ವ್ಯಧೀಯತ (ಕರ್ಮಣಿ)

**ವೃತ್ತ—** ಈ ಶ್ಲೋಕದಲ್ಲಿ 'ಹರಿಣೀವೃತ್ತಂ ನಸಮರಸಲಗೈಃ ಷಡ್‌ವೇದೈಃ ಹಯೈರ್ಹರಿಣೀಮತಾ' ।

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ದಶಮಃ ಸರ್ಗಃ ಸಮಾಪ್ತಃ ॥*

★ ★ ★

ಶ್ರೀಮತ್ಕವಿಕುಲತಿಲಕ-ಶ್ರೀತ್ರಿವಿಕ್ರಮಪಂಡಿತಾಚಾರ್ಯಸುತ-
ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತ

# ಶ್ರೀಸುಮಧ್ವವಿಜಯ



ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು, ಪಾಜಕಕ್ಷೇತ್ರ

**ತೃತೀಯ ಸಂಪುಟ – 11 ರಿಂದ 13 ಸರ್ಗಗಳು**

॥ ಶ್ರೀಃ ॥

# ಶ್ರೀಸುಮಧ್ವವಿಜಯ

## ಸಂಪುಟ - 3

## ಸರ್ಗ 11 ರಿಂದ 13


*ಅನುವಾದಕರು:*

ದಿ॥ ವಿದ್ವಾನ್ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯ

ದಿ॥ ಮಾಗಡಿ ರಂಗನಾಥಾಚಾರ್ಯ

ದಿ॥ ವಿದ್ವಾನ್ ಎಸ್. ವಿ. ಭೀಮಭಟ್ಟರು





*ಪ್ರಕಾಶಕರು:*

ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

# Śrī Sumadhva Vijaya

## Part - 3

Sargas : 11 to 13

*First Edition :* 2012 - 2000 Copies.

Price : Rs.

*Hon. Editors :*
**Śrī Rājā S. Rājagopālāchārya**
*Āpta Kāryadarśī, and*
**Śrī S. N. Suyamīndrāchārya**
*Additional Āpta Kāryadarśī*
Śrī Rāghavendra Swāmy Mutt
Mantrālayam, Dist. Kurnool, A.P.

*Edited By :*

**Vidwān Rājā S. Pavamānāchārya**

**Vidwān Kaḍapa Rāghavendrāchārya**

**Vidwān Dr. N. Vādirājāchārya**

**Vidwān Purāṇik Subrahmaṇyāchārya**

*Published By :*
**Śrī Gurusārvabhouma Sanskrit Vidyāpīṭha**
Jagadguru Śrīman Madhvācharya Mūla Mahāsamsthānam
Śrī Rāghavendra Swāmi Mutt, Mantralayam (A.P)

*Printed By :*
**Dhananjay Warkhedkar**
at : **Sudhā Mudraṇa**
Śankarpuram, Bangalore - 560 004.
☎ 6560 2836, 2672 5340, Mobile : 92430 74414

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥



ಸ್ವಸ್ತಿಶ್ರೀ ವಿಜಯಾಭ್ಯುದಯ ಗತ ಶಾಲಿವಾಹನ ಶಕ 1934 ನೇ
ಶ್ರೀನಂದನನಾಮ ಸಂವತ್ಸರ, ಶ್ರಾವಣ ಶುದ್ಧ ನವಮಿ, ದಿನಾಂಕ : 27-7-2012, ಶುಕ್ರವಾರ.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿವೇದವ್ಯಾಸದೇವರ
ದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ
ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ

## ಶ್ರೀ 108 ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

# ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ

## ಅನುಗ್ರಹ ಸಂದೇಶ

*''ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ॥''*

ಎಂಬ ವಚನದಂತೆ ಲೋಕದಲ್ಲಿ ಸರ್ವೋತ್ತಮನಾದ ಭಗವಂತನಿಗೆ ಸಮಾನನಾದ ದೇವರೇ ಇಲ್ಲ. ಹಾಗೂ ಜೀವೋತ್ತಮರಾದ ವಾಯ್ವವತಾರಿಗಳಾದ ಮಧ್ವರ ಸಮಾನರಾದ ಗುರುಗಳೇ ಇಲ್ಲ. ಇಂಥಹ ಲೋಕಪಾವನರಾದ ಆಚಾರ್ಯ ಮಧ್ವರ ಚರಿತ್ರೆ, ಮಹಿಮೆಯ ತಿಳಿವು ಅತ್ಯಂತ ಅವಶ್ಯವಾಗಿದೆ - ಎಂದು ''ಮುಕುಂದಭಕ್ತ್ಯೈ ಗುರುಭಕ್ತಿಜಾಯ್ಯೆ'' ಎಂಬ ಸುಮಧ್ವವಿಜಯದ ಮಾತು ಸಮರ್ಥಿಸುತ್ತದೆ. ಇಂಥಹ ಶ್ರೀಮದಾಚಾರ್ಯರ ಚರಿತ್ರೆಯನ್ನು ಮಹಿಮೆಯನ್ನು, ವರ್ಣಿಸುವ ಸುಮಧ್ವವಿಜಯವೆಂಬ ಮಹಾಕಾವ್ಯವು ಸುಂದರವಾದ ಅನೇಕ ಸುವೃತ್ತಗಳಿಂದ ಶಾಸ್ತ್ರವಿಷಯಗಳಿಂದ ಶೋಭಿತವಾಗಿದೆ. ಇದನ್ನು ಅರ್ಥಪುರಃಸರವಾಗಿ ಎಲ್ಲರಿಗೂ ಮುಟ್ಟಿಸುವ ಯೋಚನೆಯಿಂದ ನಮ್ಮ ಪರಮಗುರುಗಳಾದ ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರು ಶ್ರೀಮಠದ ಅಧಿಕೃತ ಮಾಸಪತ್ರಿಕೆಯಲ್ಲಿ ಧಾರಾವಾಹಿರೂಪದಲ್ಲಿ ಬರುವಂತೆ ಮಾಡಿದ್ದರು. ಇದನ್ನು ಯೋಗ್ಯ ರೀತಿಯಲ್ಲಿ ಅನುವಾದವನ್ನು ಶ್ರೇಷ್ಠ ವಿದ್ವಾಂಸರುಗಳಾದ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು, ಮಾಗಡಿ ರಂಗನಾಥಾಚಾರ್ಯರು ಹಾಗೂ ಎಸ್. ವಿ. ಭೀಮಭಟ್ಟರು ಮಾಡಿದ್ದರು. ಪ್ರಕೃತ ಇದನ್ನು ಒಂದು ಪುಸ್ತಕರೂಪದಲ್ಲಿ ಹೊರತರುವ ಆದೇಶವನ್ನು ಮಾಡಿದ್ದೆವು. ನಮ್ಮ ಆದೇಶದಂತೆ ವಿದ್ವಾಂಸರಾದ ರಾಜಾ ಎಸ್. ಪವಮಾನಾಚಾರ್ಯರು, ಕಡಪ ರಾಘವೇಂದ್ರಾ-ಚಾರ್ಯರು, ಎನ್. ವಾದಿರಾಜಾಚಾರ್ಯರು, ಪುರಾಣಿಕ ಸುಬ್ರಹ್ಮಣ್ಯಾಚಾರ್ಯರು ಮತ್ತು ನಮ್ಮ ವಿದ್ಯಾಪೀಠದ ಅನೇಕ ವಿದ್ವಾಂಸರ ಸಹಯೋಗದೊಂದಿಗೆ ಸಂಪಾದಿಸಿದ್ದಾರೆ. ಇವರೆಲ್ಲರಿಗೂ ಹಾಗೂ ಅಂದವಾಗಿ ಮುದ್ರಿಸಿದ 'ಸುಧಾ ಮುದ್ರಣ'ದ ಮಾಲೀಕರಾದ ಧನಂಜಯ ವರಖೇಡಕರ್ ಇವರಿಗೂ, ಇದನ್ನು ಕೊಂಡು ಅಧ್ಯಯನವನ್ನು ಮಾಡುವ ಪ್ರತಿಯೊಬ್ಬರಿಗೂ ಸಕಲಸನ್ಮಂಗಳವನ್ನುಂಟು ಮಾಡಲೆಂದು ಅಸ್ಮದ್ಗುರ್ವಂತರ್ಗತ ಶ್ರೀರಾಘವೇಂದ್ರತೀರ್ಥ-ಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಪ್ರಾಸ್ತಾವಿಕ

ವಿಜಯ ಪರಂಪರೆ ಆರಂಭವಾದದ್ದೇ ಶ್ರೀಮಧ್ವಾಚಾರ್ಯರಿಂದ.

ಹಾಗಾಗಿ ಅದು ಮಧ್ವವಿಜಯ.

ಅದು ಸಜ್ಜನರಿಗೆ - ಸಾಧುಸಂತರಿಗೆ ಸಂತಸ ಕೊಡುವ ವಿಜಯವಾದ್ದರಿಂದ ಸುಮಧ್ವವಿಜಯವೂ ಹೌದು.

ಹದಿನಾರು ಸರ್ಗಗಳೂ ಸ್ವರ್ಗದ ಒಂದೊಂದೇ ಮೆಟ್ಟಿಲು.

ನೀವು ಗಮನಿಸಿರುತ್ತೀರಿ.

ಯತಿಗಳು - ಪೀಠಾಧೀಶ್ವರರು 108 - 1008 ಇಂತಹ ಸಂಖ್ಯೆಗಳನ್ನು ತಮ್ಮ ಹೆಸರಿನ ಮೊದಲು ಹಾಕಿಕೊಳ್ಳುತ್ತಾರೆ. ಸುಮಧ್ವವಿಜಯದ ಒಟ್ಟು ಶ್ಲೋಕಗಳು 1008. ಹೀಗಾಗಿ ಅದನ್ನು ತಮ್ಮ ಹೆಸರಿನ ಮೊದಲು ಜೋಡಿಸಿಕೊಂಡರೆ ತಾವು ಅಂದುಕೊಳ್ಳುವ ಕಾರ್ಯಗಳು ಜಯಪ್ರದವಾಗುತ್ತವೆ ಎಂಬ ನಂಬಿಕೆಯಿಂದ ಹಾಕಿಕೊಳ್ಳುತ್ತಾರೆ ಎಂದೆನಿಸುತ್ತದೆ.

ಸುಮಧ್ವವಿಜಯಕ್ಕೆ ಉಪಲಬ್ಧವಿರುವ ವ್ಯಾಖ್ಯಾನಗಳು ನಾಲಕ್ಕು. ಶ್ರೀಮಧ್ವಾಚಾರ್ಯರ ಪ್ರಮುಖ ಶಿಷ್ಯರು ನಾಲ್ವರು. (ಪದ್ಮನಾಭ-ನರಹರಿ-ಮಾಧವ-ಅಕ್ಷೋಭ್ಯತೀರ್ಥರು).

ಶ್ರೀ ರಾಯರ ಸೋದರಳಿಯಂದಿರಾದ ಆನಂದತೀರ್ಥಾಚಾರ್ಯರ ಸುಮಧ್ವವಿಜಯ ಮೇಲಿನ ವ್ಯಾಖ್ಯಾನ 'ಪದಾರ್ಥದೀಪಿಕಾ' ಮಾತ್ರ ಇನ್ನೂವರೆಗೂ ಮುದ್ರಣಪ್ರಪಂಚ ಕಂಡಿಲ್ಲ. ಚೆನ್ನೈನ O.R.I ನಲ್ಲಿ ಸಂರಕ್ಷಿಸಲ್ಪಟ್ಟಿದೆ.

ಸುಮಧ್ವವಿಜಯ 50ಕ್ಕೂ ಹೆಚ್ಚು ವ್ಯಕ್ತಿಗಳನ್ನು ಉಲ್ಲೇಖಿಸುತ್ತದೆ. 56ಕ್ಕೂ ಮಿಗಿಲಾದ ಸ್ಥಳಗಳನ್ನು ಪರಿಚಯಿ-ಸುತ್ತದೆ.

ಆಚಾರ್ಯರ ಅವತಾರ ಮೂರು.

ಸುಮಧ್ವವಿಜಯವು ಒಂದರ್ಥದಲ್ಲಿ 'ತ್ರಿವೇಣೀ ಸಂಗಮ'. ಇಲ್ಲಿ ಸಂಸ್ಕೃತವಿದೆ. ಭಾಷಾತಜ್ಞರಿಗೆ ಆಸಕ್ತಿ ತರುವ ಮೂರು ಭಾಷೆಗಳ ಕೂಡುವಿಕೆ ಇಲ್ಲಿದೆ. ಕವಿ ನಾರಾಯಣಪಂಡಿತಾಚಾರ್ಯರು ಈ ಕಾವ್ಯದಲ್ಲಿ ಹೇಳಿದ್ದು, ಕೇಳಿದ - ಅಂದಿನ ಕಥನವಲ್ಲ, ತಾವು ನೇರವಾಗಿ ಕಂಡ ಸಮಕಾಲೀನ ಗಣ್ಯ ವ್ಯಕ್ತಿಗಳಲ್ಲಿ ರಾರಾಜಿಸಿದ ಒಬ್ಬ ನಾಯಕ(Hero)ನ ಚಿತ್ರಣ. ಹೀಗಾಗಿ ಐತಿಹಾಸಿಕ ಮಹತ್ವವಿದೆ. ಇದು ಮುಂದೆ 'ರಾಘವೇಂದ್ರವಿಜಯ'ಕ್ಕೆ ಪ್ರೇರಣೆಯಾಯಿತು.

ಸುಮಧ್ವವಿಜಯವನ್ನು ಮುಖೋದ್ಗತವಾಗಿ ಸ್ಪಷ್ಟವಾಗಿ - ಸುಂದರವಾಗಿ ಅನ್ನುವ ಸಾತ್ತ್ವಿಕರು ನಮಗೆ ಅಲ್ಲಲ್ಲಿ ಇಂದಿಗೂ ಕಾಣಸುತ್ತಾರೆ. ಪರಮಪೂಜ್ಯ 1008 ಶ್ರೀ ಸುವಿದ್ಯೇಂದ್ರತೀರ್ಥರು ಅಂತಹವರಲ್ಲಿ ಒಬ್ಬರು. ಅವರ ಅಸ್ಖಲಿತ ಸುಮಧ್ವವಿಜಯ ಪಾರಾಯಣ - ನಮಗೆ ಇವತ್ತಿಗೂ ರೋಮಾಂಚನ.

ಶ್ರೀಹರಿಯ ಬಗೆಗಿನ ಚಿಂತನೆಯನ್ನು - ಸಿದ್ಧಾಂತವನ್ನು ಪ್ರತಿಷ್ಠಾಪಿಸುವ ಸಂದರ್ಭದಲ್ಲಿ, ಆಚಾರ್ಯ ಮಧ್ವರು ಎದುರಿಸಿದ ವಿರೋಧಗಳು - ದೈಹಿಕ ಹೋರಾಟಗಳು ಅಸಂಖ್ಯಾತ. ಆದರೆ ಅದನ್ನು ಸುಲಲಿತವಾಗಿ ಮಂಡಿಸಿದ ರೀತಿ - ''ನ ಚ ಮಧ್ವಸಮೋ ಗುರುಃ'' ।

'ಸರ್ವಮೂಲ' ಅದೊಂದು ಮಹಾನ್ ಆಧ್ಯಾತ್ಮ ಆಗಸದ ಪ್ರಮುಖ ವೆಬ್‌ಸೈಟ್. ಆದರೆ ಅದನ್ನು ನೋಡಬೇಕಾದರೆ 'ಸುಮಧ್ವವಿಜಯ'ವೆಂಬ ಪಾಸ್‌ವರ್ಡ್ ಬೇಕೇಬೇಕು.

ಕವಿ ಡಾ. ಪ್ರದೀಪ್ ಕುಮಾರ್ ಹೆಬ್ರಿ ಬಹಳ ಸೊಗಸಾಗಿ ಕನ್ನಡದ 'ಮಧ್ವಾಚಾರ್ಯ'ರನ್ನು ಚಿತ್ರಿಸಿದ್ದಾರೆ.

ಕನ್ನಡದ ಧೀಮಂತ ಕರುನಾಡ ಹೇಮಂತ
ಕಡಲ ತೀರದ ಪರುಷ ಆಚಾರ್ಯ ಮಧ್ವ ।
ಕನ್ನಡಕೆ ಕೃಷ್ಣವನು ಕಾಯಕಕೆ ತತ್ತ್ವವನು
ತಂದು ಇರಿಸಿದೆ ನೀನು ಬದುಕು ಪೂರ್ಣತೆಗೆ ॥

## ಸುಮಧ್ವವಿಜಯ ಮತ್ತು ಕನ್ನಡ

ಮೂಲ ಸಂಸ್ಕೃತದಲ್ಲಿದ್ದ ಅದನ್ನು ಕನ್ನಡ ಭಾಷೆಯಲ್ಲಿ ತಂದವರು ಅನೇಕರು.

ಕೆ. ತಿಮ್ಮಣ್ಣಾಚಾರ್ 'ಶ್ರೀಸುಮಧ್ವವಿಜಯ ಮಹಾಕಾವ್ಯ - ಸಂದರ್ಶನ' (1961) ದಲ್ಲಿ ಇಡೀ ಕಾವ್ಯವನ್ನು ಸಿಂಹಾವಲೋಕನ ಮಾಡಿದ್ದಾರೆ. ವಿಮರ್ಶಕರ ಅಚ್ಚುಮೆಚ್ಚಿನ ಕೃತಿ - ಮಂಡ್ಯ ನಗರದ ಡಾ. ಪ್ರದೀಪ್‌ಕುಮಾರ್ ಹೆಬ್ಬಿಯವರು ಸುಮಾರು ನಾಲ್ಕು ಸಾವಿರ ಪದ್ಯಗಳನ್ನು ಮೀರಿದ ಕನ್ನಡದ ಸರಳ ಛಂದಸ್ಸಿನ ಬೃಹತ್ ಕಾವ್ಯ ರಚಿಸಿದ್ದಾರೆ. ಒಂದು ರೀತಿಯಲ್ಲಿ ಕನ್ನಡದ ಮಧ್ವವಿಜಯ.

ಬೆಂಗಳೂರು ಸಂಸ್ಕೃತ ಕಾಲೇಜಿನ ಕೆ. ನರಸಿಂಹಾಚಾರ್ಯರು ಇಡೀ 16 ಸರ್ಗವನ್ನು ಅನ್ವಯ-ಅರ್ಥ-ತಾತ್ಪರ್ಯಸಹಿತ 1967ರಲ್ಲಿ ಅನುವಾದಿಸಿದ್ದು ಓದುಗರಿಗೆ ಉಪಯುಕ್ತ ಕೃತಿಯಾಯಿತು. ಪಂಡಿತ ಶ್ರೀನಿವಾಸ. ಸು. ಮಠದ ಇವರು ಚಿಕ್ಕದಾದರೂ ಚೊಕ್ಕದಾದ 'ಶ್ರೀಸುಮಧ್ವವಿಜಯ ಮಹಾಕಾವ್ಯ ಚಿಂತನ-ಮಂಥನ' ವೆಂಬ ಕೃತಿಯ ಮೂಲಕ ಜನಸಾಮಾನ್ಯರಿಗೆ ಸರಳವಾಗಿ ಅರ್ಥವಾಗುವಂತೆ ಸಹಾಯ ಮಾಡಿದ್ದಾರೆ. (2007)

ಉಡುಪಿಯಿಂದ 1932ರಲ್ಲೇ ಬಂದ 'ಸುಖಬೋಧಿನೀ' ಎಂಬ ಕನ್ನಡ ಟೀಕಾ ಸಹಿತ ಸುಮಧ್ವ ವಿಜಯದ ರಚನೆಕಾರರು ಬಿ. ಶ್ರೀನಿವಾಸಭಟ್ಟರು. ಪಾವಂಜೆ ಗುರುರಾವ್ ಇವರಿಂದ ಪ್ರಕಾಶಿತ.

1977 ರಲ್ಲಿ ಜೆ. ಹೆಚ್. ಬಿ. ಆಚಾರ್ಯರವರು ಸುಮಧ್ವವಿಜಯ(ವಚನಕಾವ್ಯ)ವನ್ನು ಅನುವಾದಿಸಿ ಕನ್ನಡದ ಸೇವೆ ಸಲ್ಲಿಸಿದರು.

ಧಾರವಾಡ ನಗರದ ಶ್ರೀಮಾಧ್ವ ವಿದ್ಯಾಪೀಠದ ಪಂಡಿತ ತೆರಗುಂಡಿ ಶ್ರೀ ಗೋಪಾಲಕೃಷ್ಣಾಚಾರ್ಯರು 1967ರಲ್ಲಿ ಸಂಪೂರ್ಣ ಸುಮಧ್ವವಿಜಯವನ್ನು ಭಾವಾರ್ಥ, ಅನ್ವಯಾರ್ಥ ಮಾಡಿದ್ದರ ಜೊತೆಜೊತೆಯಾಗಿ ಅದ್ಭುತವಾಗಿ ಭಾಮಿನೀ ಷಟ್ಪದಿಯಲ್ಲಿ ಕನ್ನಡೀಕರಿಸಿ ಕನ್ನಡಿಗರು ಸವಿಯುವಂತೆ ಮಾಡಿದ್ದಾರೆ.

ಸೀತಾಪತಿ ಅಗ್ರಹಾರ ಬೆಂಗಳೂರಿನ ಶ್ರೀಹರಿಸರ್ವೋತ್ತಮ - ಶ್ರೀವಾಯುಜೀವೋತ್ತಮ ಪ್ರಕಾಶನದಿಂದ ಆದ್ಯಂತ ಶ್ಲೋಕ - ಪ್ರತಿ ಸರ್ಗದ ತಾತ್ಪರ್ಯದೊಡನೆ (16 ಸರ್ಗದ್ದು) ಮುದ್ರಿತವಾಗಿದೆ. ಇದೊಂದು ರೀತಿಯಲ್ಲಿ ಕಾವ್ಯದ ಕಥಾಸಾರ.

ಜನಪ್ರಿಯ ಮತ್ತೊಂದು ಕನ್ನಡ ಅನುವಾದವೆಂದರೆ ಅದು ಮಹಾಮಹೋಪಾಧ್ಯಾಯ, ಮಧ್ವರತ್ನಾಕರರೆಂಬ ಬಿರುದು ಗಳಿಸಿದವರೂ ಸಾತ್ತ್ವಿಕರು, ಶಾಂತರೂ ಆದ ದಿ॥ ಆಚಾರ್ಯ ಸಾಣೂರು ಭೀಮಭಟ್ಟರದ್ದು. ಈಗಾಗಲೆ ಜನಪ್ರಿಯ ನಾಲ್ಕು ಮುದ್ರಣಗಳಾಗಿವೆ. ಅದರಲ್ಲಿ ಕ್ರಮವಾಗಿ ಮೂಲ-ಅನ್ವಯ-ಅರ್ಥ-ವ್ಯಾಕರಣವಿಶೇಷ - ಅವತಾರಿಕೆಗಳಿದ್ದು ಅಧ್ಯಯನಶೀಲರಿಗೆ - ಆಸಕ್ತರಿಗೆ ಅತ್ಯಂತ ಉಪಯೋಗವಾಗುವಂತೆ 'ಸಿದ್ಧ ಅಡಿಗೆ'ಯನ್ನು ಮಾಡಿಕೊಟ್ಟಿದ್ದಾರೆ. (ಮೊದಲನೆ ಮುದ್ರಣ 1985).

ದಾಸಸಾಹಿತ್ಯರಂಗದ ಭೀಷ್ಮಾಚಾರ್ಯರಾದ ಲಿಂಗಸ್ಗೂರಿನ ಹನುಮಂತರಾವ್ ವೆಂಕಟರಾವ್ ಕುಲಕರ್ಣಿ-ಯವರು 1936ರಲ್ಲಿಯೇ ಅದ್ಭುತವಾಗಿ ಕನ್ನಡಕ್ಕೆ 'ಸುಮಧ್ವವಿಜಯ'ವನ್ನು ತಂದರು. ಪ್ರತಿಯೊಂದು ಶ್ಲೋಕಕ್ಕೂ ವಾರ್ಧಿಕ ಶೈಲಿಯಲ್ಲಿ ಕನ್ನಡಕ್ಕೆ ತರುವುದು ಸುಲಭದ ಕೆಲಸವಲ್ಲ.

ಇದನ್ನು ಗಮನಿಸಿ ಸುಮಧ್ವವಿಜಯದಲ್ಲಿನ ಹೀಗೊಂದು ಪ್ರಸಂಗ.

ಶ್ರೀ ಸರ್ವಜ್ಞರು ಶಂಖಪೂರಿತ ವಾರಿಯಿಂದ, ಶಾಲಿಗ್ರಾಮಶಿಲೆಗಳಿಗೆ ಅಭಿಷೇಕ ಮಾಡಿ ನಿರ್ಮಾಲ್ಯತೀರ್ಥ ಪ್ರಾಶನ ಮಾಡಿದ ಕ್ರಮವನ್ನು ನಾರಾಯಣಪಂಡಿತಾಚಾರ್ಯರು ಹೇಳಿದ್ದು ಹೀಗಷ್ಟೆ.

**ಅಭಿದಧತಿ ಮುನೀಂದ್ರಾ ದ್ವಾದಶಾಬ್ದೋಪವಾಸ-**<br>
**ಪ್ರತಿಮಫಲಮಲಂ ಯತ್ಸೇವನಂ ಭಕ್ತಿಯುಕ್ತಮ್ ।**<br>
**ಅಧಿಕಮಮರನದ್ಯಾದ್ಯಾಪ್ಲವಾದನ್ಯಮಾನ್ಯಾ-**<br>
**ದಪಿಬದಲವಬೋಧೋ ವಿಷ್ಣುಪಾದೋದಕಂ ತತ್ ॥** *(16ನೇ ಸರ್ಗ - 29 ಶ್ಲೋಕ)*

ಇದನ್ನು ಸುಂದರ ವಿಠಲಾಂಕಿತರಾದ ಶ್ರೀ ಗೋರೆಬಾಳ-ಹನುಮಂತರಾಯರು ಕನ್ನಡದ ಕನ್ನಡಿಯಲ್ಲಿ ತೋರಿಸಿದ್ದು ಹೀಗೆ—

**ವಾರ್ಧಿಕ ॥ ಮುನಿವರರು ಅತಿ ಭಕುತಿಯಿಂ ಯಾವ ಶ್ರೀವಿಷ್ಣು-**<br>
**ವಿನ ಸುಪಾದೋದಕಂ ಶಾಲಗ್ರಾಮದ ತೀರ್ಥ-**<br>
**ವನು ಪ್ರಾಶನಂ ಮಾಡೆ ವಿಧಿವತ್ತು ಹನ್ನೆರಡು ವರ್ಷ ಉಪವಾಸ ಗೈದ ॥**

**ಅನಶನಂ ವ್ರತಫಲಕೆ ಸರಿ ಧನ್ಯಮಾನ್ಯರಿಂ-**<br>
**ದನಿತೆ ಗಂಗಾದ್ಯೆಲ್ಲ ತೀರ್ಥ ಮಜ್ಜನದಧಿಕ ।**<br>
**ಘನಫಲವಿದೆಂದು ಪೇಳುವರಿಂಥ ಮಹಾ ಮಹಿಮೆಯಾ ತೀರ್ಥಪಾನ ಮಾಡ್ದರ್ ॥**

ಇಂತಹ ಕನ್ನಡ ಅನುವಾದ ಈಗೆಲ್ಲಿ ಸಾಧ್ಯ. ಇದ್ದರೂ ಓದುವವರು ಯಾರು ?

ಗದಗಿನ ಪ್ರಖ್ಯಾತ ಪ್ರಕಾಶನ ಶ್ರೀನಿವಾಸಾಚಾರ್ಯ ಹೊಂಬಾಳಿಯವರು 1982ರಲ್ಲಿ ಮತ್ತೊಮ್ಮೆ ಕೋಟೇಶ್ವರ ನರಸಿಂಹಾಚಾರ್ಯರ ಕನ್ನಡ ಅನುವಾದವನ್ನು ಪ್ರಕಟಿಸಿದರು.

ಮೂಲ ಸಂಸ್ಕೃತದಲ್ಲಿನ ಹಸ್ತಪ್ರತಿಯಲ್ಲೇ ಉಳಿದು ಹೋಗಿದ್ದ ಶ್ರೀಸುಮಧ್ವವಿಜಯದ ವ್ಯಾಖ್ಯಾನ 'ಶುಭಾ-ಭರಣಂ' ಶ್ರೀವಾರಿ ಅನಂತಾಚಾರ್ಯಸುತ ವಿದ್ವನ್ಮಣಿ ಬಾಲಶರ್ಮ ಅವರು ರಚಿಸಿದ್ದು ಅದನ್ನು ಬೆಳಕಿಗೆ ತಂದಿದ್ದೇ ಅಲ್ಲದೇ ಅನುವಾದ ಮಾಡಿದವರು ವಿದ್ವಾನ್ ಅಯಾಚಿತ ಧೀರೇಂದ್ರಾಚಾರ್ಯರು. 2007ರಲ್ಲಿ ಇದು ಪ್ರಕಟ-ಗೊಂಡಿದೆ. ಇದರ ವಿಶೇಷವೇನೆಂದರೆ ಬಾಲಶರ್ಮರು, ಶ್ರೀಸುಮಧ್ವವಿಜಯದ 1008 ಶ್ಲೋಕಗಳಿಂದ 108 ಶ್ಲೋಕಗಳನ್ನೇ ಆರಿಸಿ ಸಂಸ್ಕೃತದಲ್ಲಿ ವ್ಯಾಖ್ಯಾನ ಮಾಡಿರುವುದು. ಕನ್ನಡ ಅನುವಾದ ಕೂಡ ಅಷ್ಟೇ ವಿದ್ವತ್‌ಪೂರ್ಣವಾಗಿ ಬಂದಿದೆ.

'ಶ್ರೀರಾಘವೇಂದ್ರಾನುಗ್ರಹ' ಪ್ರಶಸ್ತಿ ವಿಜೇತ - ಬನ್ನಂಜೆ ಗೋವಿಂದಾಚಾರ್ಯರು ಶ್ರೀ ವೇದಾಂಗತೀರ್ಥರ ಟೀಕಾನುಸಾರಿಯಾದ ಶ್ರೀಮಧ್ವವಿಜಯವನ್ನು ಕನ್ನಡಕ್ಕೆ ತಂದು ಹೊಸ ಅನುಭವ ತಂದು ಕೊಟ್ಟಿದ್ದಾರೆ (2005).

## ಕೆಲವು ಆಂಗ್ಲ ಪ್ರಕಟನೆಗಳು

1. **Sumadhva Vijaya** — Edited with Translation and Notes by D. R. Vasudeva Rao., 1983. Srimadananda Tīrtha Publications, Vishakhapatnam.
2. **Sumadhva Vijaya** of Narayana Panditacharya — Rendered into English with text by Prof. G. V. Nadagauda. 1991.
3. **Sri Madhva Vijaya** — (A Gist in English) By 16 Eminent scholars. 1969. Devaranama Bhajana Sangam. Tamilnadu. (Introduction by Dr. B.N.K. Sharma)
4. **Sri Sumadhva Vijaya — Sarasangraha** Tamil and English. Dr. C.B.H. Rao. 1974. Srirangam.

## ಸಂಸ್ಕೃತದಲ್ಲಿರುವ 'ಸುಮಧ್ವವಿಜಯ' ಪ್ರಕಾಶನಗಳು

1. श्रीसुमध्वविजयः — श्रीविश्वपतितीर्थविरचित पदार्थदीपिकासमेता यम्. नारायणाचार्यः, 1951. Udupi (With B.N.K. introduction)

२. श्रीसुमध्वविजयः — छलारी शेषाचार्य व्याख्यानसमेता 1952. श्रीरामकृष्ण द्वैतवेदान्त पाठशाला

३. सुमध्वविजयः — श्रीनारायणपंडिताचार्य-श्रीविश्वपतितीर्थ-श्रीछलारी शेषाचार्य (इति व्याख्यानत्रयोपेता) Edited by A. B. Shyamachar and S. R. Pandurangi. 2000.

४. श्रीसुमध्वविजयः (छलारी व्याख्यानसमेता) — निर्णयसागर मुद्रणालय, मुंवई. 1943.

५. श्रीसुमध्वविजयः — वेदांगतीर्थकृतपदार्थदीपिकया, आचार्यगोविंदकृतया तत्त्वचन्द्रिकया च संवलितः. 2003. Udupi

६. "श्रीसुमध्वविजयसारसङ्ग्रहभूत श्रीशुभाभरणम्" — श्री पुरी अनंताचार्यतनुजेन श्री बालाशर्मणा रचितं व्याख्यानम् - अनु० विद्वान् अयाचित धीरेंद्राचार्य चिंतामणि - 2007

## ಸುಮಧ್ವ ವಿಜಯದ 'ಕನ್ನಡ ಪ್ರಕಟನೆ'ಗಳು

1. ಶ್ರೀಮದ್ವವಿಜಯ ಸಾರಸಂಗ್ರಹಃ - ಲಿಪಿ ಸಂಸ್ಕೃತ, ಭಾಷೆ ಕನ್ನಡ. ನಾಯಕಲ್ ತಿರುಮಲರಾವ್ ವಕೀಲ್ ಹೈಕೋರ್ಟ್, ಹೈದ್ರಾಬಾದ್ 1933.
2. ಶ್ರೀಮನ್ಮಧ್ವವಿಜಯ ಕಥಾಮೃತಂ - ಸಿ. ಎಮ್. ಪದ್ಮನಾಭಾಚಾರ್ಯ ವಿರಚಿತ - 1991, ಸಂ॥ ತಾಮ್ರಪರ್ಣಿ ಶ್ರೀನಿವಾಸಾಚಾರ್ಯ, ಬೆಂಗಳೂರು.
3. ಶ್ರೀಮನ್ಮಧ್ವಚರಿತಮಾನಸ - (ಶ್ರೀಸುಮಧ್ವವಿಜಯದ ಗದ್ಯಾನುವಾದ) ಮೈ. ಶೇ. - ಅನಂತಪದ್ಮನಾಭರಾವ್, ಬೆಂಗಳೂರು.
4. ಶ್ರೀಸುಮಧ್ವವಿಜಯ ಸಾರಸಂಗ್ರಹ - ಶ್ರೀವಿದ್ಯಾರತ್ನಾಕರತೀರ್ಥ ಶ್ರೀಪಾದಂಗಳವರಿಂದ ರಚಿತ - ಕನ್ನಡ ಅನುವಾದ ಶ್ರೀಗುರುವೇಂಕಟಾಚಾರ್ಯರು. ಬೆಂಗಳೂರು. 1992.
5. ಶ್ರೀಮತ್ಸುಮಧ್ವವಿಜಯವು - ಪ್ರತಿಸರ್ಗದ ಕನ್ನಡ ತಾತ್ಪರ್ಯ ಸಹಿತ. 1927. Udupi ಪಾವಂಜೆ ಗುರುರಾವ್ (ಪ್ರ).

## 'ಸುಮಧ್ವ ವಿಜಯ'ದ ವ್ಯಾಖ್ಯಾನಗಳು *(ಸಂಸ್ಕೃತದಲ್ಲಿದೆ)*

1. ನಾರಾಯಣಪಂಡಿತಾಚಾರ್ಯರು - ಭಾವಪ್ರಕಾಶಿಕಾ (ಭಾವದೀಪ)
2. ವೇದಾಂಗತೀರ್ಥರು - ಪದಾರ್ಥದೀಪಿಕಾ
3. ವಿಶ್ವಪತಿತೀರ್ಥರು - ಪದಾರ್ಥದೀಪಿಕಾ ಉದ್ಬೋಧಿಕಾ
4. ಛಲಾರಿ ನರಸಿಂಹಾಚಾರ್ಯರು - ಮಂದೋಪಕಾರಿಣೀ
5. ಛಲಾರಿ ಶೇಷಾಚಾರ್ಯರು - ಪ್ರಕಾಶಿಕಾ
6. ಆನಂದತೀರ್ಥಾಚಾರ್ಯರು - ಮಂದೋಪಕಾರಿಣೀ
7. ಮುದ್ಗಲ ಆನಂದತೀರ್ಥಾಚಾರ್ಯ
8. ಲಿಂಗೇರಿ ವ್ಯಾಸಾಚಾರ್ಯರು
9. ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು

(7–9) ಇವರೆಲ್ಲರೂ ವ್ಯಾಖ್ಯಾನ ರಚಿಸಿರುತ್ತಾರೆ.

## 'ಸುಮಧ್ವ ವಿಜಯ'ಕ್ಕೆ ಸಂಬಂಧಿಸಿದ ಕೃತಿಗಳು *(ಸಂಸ್ಕೃತದಲ್ಲಿವೆ)*

1. ಅಣುಮಧ್ವವಿಜಯ: (ಪ್ರಮೇಯನವಮಾಲಿಕಾ) - ಶ್ರೀನಾರಾಯಣಪಂಡಿತಾಚಾರ್ಯರು.
2. ಗೂಢಭಾವಪ್ರಕಾಶಿಕಾ - ಶ್ರೀರಾಘವೇಂದ್ರತೀರ್ಥರು
3. ವೇದಾಂಗತೀರ್ಥರು
4. ಸತ್ಯವ್ರತ ತೀರ್ಥರು
5. ರಘುವರ್ಯರು
6. ಛಲಾರೀ ಶ್ರೀನಿವಾಸಾಚಾರ್ಯರು

(3–6) ಇವರು ಕೂಡ ಅಣುಮಧ್ವವಿಜಯಕ್ಕೆ ವ್ಯಾಖ್ಯಾನ ರಚಿಸಿರುತ್ತಾರೆ.

7. ಭಗವಂತರಾಯರು - ಸುಮಧ್ವವಿಜಯ ವ್ಯಾಖ್ಯಾನ ಸಂಗ್ರಹ

8. ವಿದ್ಯಾರತ್ನಾಕರತೀರ್ಥರು – ಸುಮಧ್ವವಿಜಯಸಾರಸಂಗ್ರಹ

9. ಭಾಗವತ ಶ್ಯಾಮಾಚಾರ್ಯರು – ಶ್ರೀಮನ್ಮಧ್ವಕಥಾಸುದರ್ಪಣಂ

10. ಏರಿ ಬಾಳಾಚಾರ್ಯರು – ಶ್ರೀಮನ್ಮಧ್ವವಿಜಯ – ಶುಭಾಭರಣ

11. ಮಾದನೂರು ವಿಷ್ಣುತೀರ್ಥರು – ಸುಮಧ್ವವಿಜಯ – ಪ್ರಮೇಯಫಲಮಾಲಿಕಾ

12. ಬಿದರಳ್ಳಿ ಶ್ರೀನಿವಾಸಾಚಾರ್ಯರು – ಶ್ರೀಮದ್ವನಾಮಾವಲಿಃ

ಪ್ರಸ್ತುತ ಮಂತ್ರಾಲಯದ ಶ್ರೀಮಠದಿಂದ 'ಸುಮಧ್ವವಿಜಯ'ದ ಕನ್ನಡ ಅನುವಾದ ಹೊರಗೆ ಬರುತ್ತಿದೆ. ಇದು ಈ ಹಿಂದೆ ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯಲ್ಲಿ ಧಾರಾವಾಹಿಯಾಗಿ ಹರಿದು ವಿದ್ವಾಂಸರ – ವಿದ್ಯಾರ್ಥಿಗಳ ಮನಸೂರೆಗೊಂಡಿತ್ತು. ಇಷ್ಟೊಂದು ವಿಸ್ತೃತವಾಗಿ ಕನ್ನಡದಲ್ಲಿ ಇಂತಹ ಪುಸ್ತಕ ಹೊರಬಂದಿಲ್ಲವೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಏಕೆಂದರೆ ಇದು ಜನಸಾಮಾನ್ಯರಿಗೂ ಅಚ್ಚು-ಮೆಚ್ಚು. ವಿದ್ವಾಂಸನಿಗೂ ಬೆಲ್ಲದ ಅಚ್ಚು. ಓತ-ಪ್ರೋತವಾಗಿ ಸಾಗಿದ ಶಬ್ದಸಾಗರವದು. ಕನ್ನಡ ಭಾಷೆಯಲ್ಲಿ ಕನ್ನಡದ ನಾಯಕ ಮಧ್ವಾಚಾರ್ಯರ ಚಿತ್ರಣ ಕೊಟ್ಟ ಕಾವ್ಯವದು. ದಿವಂಗತ ಪಣಿಯಾಡಿ, ಪಂಚಾಂಗಂ ಶ್ರೀ ಲಕ್ಷ್ಮೀನಾರಾಯಣ ಉಪಾಧ್ಯಾಯರು (ಪಿ. ಪಿ. ಲಕ್ಷ್ಮೀ-ನಾರಾಯಣ ಉಪಾಧ್ಯಾಯ), ಶ್ರೀ ಮಾಗಡಿ ರಂಗನಾಥಾಚಾರ್ಯರು, ಮತ್ತು ಶ್ರೀ ಎಸ್. ವಿ. ಭೀಮಭಟ್ಟರು ಶ್ರದ್ಧಾ-ಭಕ್ತಿಯಿಂದ ಹೆಣೆದ ವೈಭವದ ಕೃತಿಯಿದು. 'ಶ್ರೀಗುರುಸಾರ್ವಭೌಮ' ಮಾಸಪತ್ರಿಕೆಯಲ್ಲಿ ಆಗಸ್ಟ್ 1978ರಲ್ಲಿ ಧಾರಾವಾಹಿಯಾಗಿ ಆರಂಭವಾಯಿತು. ಡಿಸೆಂಬರ್ 1986 ರಲ್ಲಿ ಪೂರ್ಣವಾಯಿತು.

ಆಶ್ಚರ್ಯವೆಂದರೆ ಅದೇ ತಿಂಗಳಲ್ಲಿ ಅಂದರೆ ದಿನಾಂಕ 11.8.1978ರಲ್ಲಿ ಭಾರತದ ಅಂದಿನ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿಯವರು ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರಿಗೆ 'ರಾಷ್ಟ್ರಪ್ರಶಸ್ತಿ'ಯನ್ನು ಕೊಟ್ಟು ಗೌರವಿಸಿದರು. ಅದಕ್ಕೆ ನಾನು ಮೊದಲು ಹೇಳಿದ್ದು 'ಸುಮಧ್ವವಿಜಯ'ದ ಆರಂಭ 'ವಿಜಯದ ಆರಂಭ'. ಸರಳ ಶೈಲಿ, ಗಂಭೀರ ಭಾಷೆ ವಿಶೇಷಾಂಶಗಳ ಖಜಾನೆ ಇಲ್ಲಿದೆ.

ಕರ್ನಾಟಕದ ಎಲ್ಲ ವಿದ್ಯಾಪೀಠಗಳಲ್ಲಿ ವಿಶೇಷವಾಗಿ ಸಂಸ್ಕೃತ ವೈಷ್ಣವ ವಿದ್ಯಾಪೀಠಗಳಲ್ಲಿ ಪಠ್ಯವಾಗಿ ಅಂಗೀ-ಕರಿಸಬೇಕಾದ – ಅಂಗೀಕರಿಸಬಹುದಾದ ಅನುವಾದ ಇದಾಗಿದೆ.

'ಪತ್ರಿಕೆ'ಯಿಂದ 'ಪುಸ್ತಕ'ಕ್ಕೆ ವಿದ್ವಾನ್ ಧನಂಜಯಾಚಾರ್ಯ ವರಖೇಡಕರ್ ಅಂದವಾಗಿ ರೂಪಾಂತರ ಮಾಡಿ ಕೊಟ್ಟಿದ್ದಾರೆ. ಮಸ್ತಕದಲ್ಲಿಟ್ಟುಕೊಳ್ಳಬಹುದಾದ 'ಅಂಬರಚುಂಬಿತ'ವಿದು. ಈ ಕೃಷಿ ನಿರಂತರವಾಗಿರಲಿ.

ಭಾಟ್ಟಸಂಗ್ರಹದ ಮರುಮುದ್ರಣ, ಗೀತೆಯ 15 ವ್ಯಾಖ್ಯಾನಗಳ ಪ್ರಕಾಶನ, ಶ್ರೀಮನ್ನ್ಯಾಯಸುಧೆಯ 16 ರಿಂದ 22ರ ಬೃಹತ್ ಸಂಪುಟಗಳು, ಶ್ರೀರಾಘವೇಂದ್ರವಿಜಯದ ವಿಸ್ತೃತ ವ್ಯಾಖ್ಯಾನಗಳು ಮುಂತಾದ ಗ್ರಂಥಗಳನ್ನು ಹೊರತಂದ ಕೀರ್ತಿ ಶ್ರೀ ಶ್ರೀಸುಶಮೀಂದ್ರತೀರ್ಥರ ವರಕುಮಾರಕರಾದ ಪರಮಪೂಜ್ಯ ಶ್ರೀ ಶ್ರೀ ಸುಯತೀಂದ್ರ-ತೀರ್ಥರಿಗೆ ಸಲ್ಲುತ್ತದೆ. ಭಕ್ತವೃಂದ ಈ 'ಯತಿಶಿರೋಮಣಿ'ಗಳಿಗೆ ಆಜನ್ಮ ಪರ್ಯಂತ ಋಣಿಯಾಗಿರುತ್ತದೆ. ವಿಷ್ಣುವಿನ ಹೃದಯವಾದ ವೈಷ್ಣವರು ಇದನ್ನು ಯಾವಾಗಲೂ ಧರಿಸಲಿ. ಇದರಿಂದ ಇಲ್ಲಿ ಮತ್ತು ಅಲ್ಲಿ ಎರಡರಲ್ಲೂ ಸುಖವುಂಟು.

*''ಮಧ್ವಸ್ಯ ಕೀರ್ತಿರ್ದಿನನಾಥದೀಪ್ತಿಮ್ ॥''*

ಸಜ್ಜನರ ಕಿಂಕರ

***ರಾಜಾ ಎಸ್. ರಾಜಗೋಪಾಲಾಚಾರ್ಯ***

*ಶ್ರೀಶ್ರೀಗಳವರ ಆಪ್ತಕಾರ್ಯದರ್ಶಿ*

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಮುನ್ನುಡಿ

ಕರಾಳ ಕಲಿಯುಗದ ಪ್ರಭಾವದಿಂದ ಸಜ್ಜನರು ಕಂಗೆಟ್ಟು ಧರ್ಮಮಾರ್ಗದಿಂದ ಚ್ಯುತರಾಗಲು ಸಜ್ಜನರ ಮೇಲಿನ ಕೃಪೆಯಿಂದ ಬ್ರಹ್ಮಾದಿದೇವತೆಗಳು ಭಗವಂತನನ್ನು ಜಗತ್ಕಲ್ಯಾಣಕ್ಕಾಗಿ ಪ್ರಾರ್ಥಿಸಿದರು. ಮೂರು ಯುಗಗಳಲ್ಲಿ ಮಾತ್ರ ಅವತಾರವುಳ್ಳ ಭಗವಂತನು ಬ್ರಹ್ಮನಿಗೆ ಭೂಲೋಕದಲ್ಲಿ ಅವತಾರವಿಲ್ಲದ್ದನ್ನು ಮನಗಂಡು ಜೀವೋತ್ತಮರಾದ ವಾಯುದೇವರಿಗೆ ಅವತರಿಸಲು ಸೂಚನೆಯನ್ನಿತ್ತರು.

ಭಗವದಾಜ್ಞೆಯನ್ನು ಶಿರಸಾವಹಿಸಿ ವಾಯುದೇವರು ಮಧ್ಯಗೇಹಭಟ್ಟದಂಪತಿಗಳಲ್ಲಿ ವಿಜಯದಶಮಿಯ ಶುಭದಿನದಂದು ಅವತರಿಸಿ ತಂದೆತಾಯಿಗಳಿಂದ ಇಡಲ್ಪಟ್ಟ ವಾಸುದೇವನೆಂಬನಾಮಕರಣದಿಂದ ಪ್ರಸಿದ್ಧರಾದರು. ಬಾಲ್ಯದಲ್ಲೇ ಅನನ್ಯಾದೃಶಮಹಿಮೆಗಳನ್ನು ತೋರಿಸುತ್ತಾ ನಾನು ಜ್ಞಾನಕ್ಕಾಗಿ ಅವತರಿಸಿದ ಅಸುದೇವ = ಪ್ರಾಣದೇವರು ಎಂಬುದನ್ನು ಅಭಿವ್ಯಕ್ತಗೊಳಿಸಿದರು.

ಕಾಲಕ್ಕೆ ಅನುಗುಣವಾಗಿ ವೇದೋಕ್ತ ಸಂಸ್ಕಾರಗಳಿಂದ ಸುಸಂಸ್ಕೃತರಾದ ಇವರು ಉಪನಯನವಾದ ಅನಂತರದಲ್ಲಿ ಅಚ್ಯುತಪ್ರೇಕ್ಷಾಚಾರ್ಯರಿಂದ ಪೂರ್ಣಬೋಧ ಎಂಬ ನಾಮದೊಂದಿಗೆ ತುರ್ಯಾಶ್ರಮವನ್ನು ಸ್ವೀಕರಿಸಿದರು. ಹಂಸ-ನಾಮಕ ಪರಮಾತ್ಮನ ದಿವ್ಯಪೀಠದಲ್ಲಿ ಇವರನ್ನು ಕೂಡಿಸಿ ಅಚ್ಯುತಪ್ರೇಕ್ಷರು **ಆನಂದತೀರ್ಥ**ರೆಂಬ ಅನ್ವರ್ಥನಾಮ-ವನ್ನಿತ್ತರು. ಭಗವಂತನ ಆದೇಶದಂತೆ ಸೂತ್ರಭಾಷ್ಯವನ್ನು ರಚಿಸಿ ಅವರನ್ನು ಸಂತೋಷಪಡಿಸಿದರು. ಸಮಸ್ತ ಭಾರತ-ದೇಶವನ್ನು ಸಂಚರಿಸಿ ಆ ಕಾಲದಲ್ಲಿದ್ದ ಇಪ್ಪತ್ತೊಂದು ದುರ್ಮತಗಳನ್ನು ಖಂಡಿಸಿ ಸಿದ್ಧಾಂತಸ್ಥಾಪನೆಯನ್ನು ಮಾಡಿದರು. ಉಪನಿಷತ್ಪ್ರಸ್ಥಾನ, ಸೂತ್ರಪ್ರಸ್ಥಾನ, ಗೀತಾಪ್ರಸ್ಥಾನ, ಪುರಾಣಪ್ರಸ್ಥಾನ ಹೀಗೆ ಹಲವು ವಿಷಯಗಳನ್ನಾಧರಿಸಿ ಮೂವತ್ತೇಳು ಗ್ರಂಥಗಳನ್ನು ರಚನೆ ಮಾಡಿದರು.

ತ್ರಿವಿಕ್ರಮಪಂಡಿತರನ್ನು, ಶೋಭನಭಟ್ಟರನ್ನು ವಾದದಲ್ಲಿ ಗೆದ್ದು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಹೀಗೆ ತಾವು ಸಂಚರಿಸಿದ ಕಾಲದಲ್ಲಿ ಅನೇಕ ಪವಾಡಗಳನ್ನು ತೋರಿಸುವುದರ ಮೂಲಕ ಸಜ್ಜನರನ್ನು ಉದ್ಧಾರಮಾಡಿದರು.

ತಮ್ಮ ಈ ತತ್ತ್ವಜ್ಞಾನದ ಸಂಪ್ರದಾಯದ ಪದ್ಧತಿಯು ಮುಂದುವರಿಯಲು ಪದ್ಮನಾಭತೀರ್ಥರನ್ನು ತಮ್ಮ ಪ್ರಥಮ ಸಂನ್ಯಾಸಿಶಿಷ್ಯರನ್ನಾಗಿ ಸ್ವೀಕರಿಸಿ ಒಂದು ಪೀಠವನ್ನು ಸ್ಥಾಪನೆ ಮಾಡಿದರು. ಉಡುಪಿಯ ಪ್ರಾಂತ್ಯಕ್ಕೆ ಎಂಟು ಜನರನ್ನು ಸಂನ್ಯಾಸಿಶಿಷ್ಯರನ್ನಾಗಿ ಸ್ವೀಕರಿಸಿ ತಾವೇ ಪ್ರತಿಷ್ಠಾಪಿಸಿದ ಶ್ರೀಕೃಷ್ಣನ ಆರಾಧನೆಗೆ, ತತ್ತ್ವಪ್ರಚಾರಕ್ಕಾಗಿ ಮೀಸಲಿಟ್ಟರು. ತಮ್ಮ ಅವತಾರಕಾರ್ಯಸಮಾಪ್ತಿಯಾಗುವ ಪ್ರಸಂಗವು ಒದಗಿಬಂದಾಗ ಉಡುಪಿಯ ಅನಂತೇಶ್ವರದೇವಸ್ಥಾನದಲ್ಲಿ ಶಿಷ್ಯರಿಗೆ ಐತರೇಯೋಪನಿಷತ್ತಿನ ಪಾಠವನ್ನು ಹೇಳುತ್ತಿರುವಾಗ ದೇವತೆಗಳು ಪುಷ್ಪವೃಷ್ಟಿಯನ್ನು ಗೈದರು. ಆ ಪುಷ್ಪದ ರಾಶಿಯಿಂದ ಆಚಾರ್ಯರು ಕಾಣದಿರುವಾಗ ಆ ಪುಷ್ಪಗಳನ್ನು ಸರಿಸಿ ನೋಡಲಾಗಿ ಅಲ್ಲಿ ಶ್ರೀಮದಾಚಾರ್ಯರು ಅದೃಶ್ಯರಾಗಿದ್ದರು.

ಅಂದು ಅದೃಶ್ಯರಾದ ಶ್ರೀಮದಾಚಾರ್ಯರು ಇಂದಿಗೂ ಕೂಡ ಉತ್ತರಬದರಿಕಾಶ್ರಮದಲ್ಲಿ ವೇದವ್ಯಾಸರ ಸನ್ನಿಧಾನದಲ್ಲಿ ಇರುವವರು. ಅದಕ್ಕಾಗಿ ''ಅದೃಶ್ಯೋ ರೂಪ್ಯಪೀಠೇಽಸ್ತಿ ದೃಶ್ಯೋಽಸ್ತಿ ಬದರೀತಟೇ'' ಎನ್ನುವ ಮಾತು ಪ್ರಚಲಿತವಾಗಿದೆ.

## ಶ್ರೀಮದಾಚಾರ್ಯರು ರಚಿಸಿದ ಗ್ರಂಥಗಳು
## (ಸರ್ವಮೂಲಗ್ರಂಥಗಳು)

*ಗೀತಾಪ್ರಸ್ಥಾನಗ್ರಂಥಗಳು:*

ಶ್ರೀಮದ್ಭಗವದ್ಗೀತಾಭಾಷ್ಯಮ್

ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯಃ

*ಸೂತ್ರಪ್ರಸ್ಥಾನಗ್ರಂಥಗಳು :*

ಶ್ರೀಮದ್ಬ್ರಹ್ಮಸೂತ್ರಭಾಷ್ಯಮ್

ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನಮ್

ಶ್ರೀಮದ್ಬ್ರಹ್ಮಸೂತ್ರಾಣುಭಾಷ್ಯಮ್

ನ್ಯಾಯವಿವರಣಮ್

*ಉಪನಿಷತ್ಪ್ರಸ್ಥಾನಗ್ರಂಥಗಳು :*

ಐತರೇಯೋಪನಿಷದ್ಭಾಷ್ಯಮ್

ಛಾಂದೋಗ್ಯೋಪನಿಷದ್ಭಾಷ್ಯಮ್

ಬೃಹದಾರಣ್ಯಕೋಪನಿಷದ್ಭಾಷಮ್

ಈಶಾವಾಸ್ಯೋಪನಿಷದ್ಭಾಷ್ಯಮ್

ತಲವಕಾರೋಪನಿಷದ್ಭಾಷ್ಯಮ್

ಷಟ್ಪ್ರಶ್ನೋಪನಿಷದ್ಭಾಷ್ಯಮ್

ಕಾಠಕೋಪನಿಷದ್ಭಾಷ್ಯಮ್

ಆಥರ್ವಣೋಪನಿಷದ್ಭಾಷ್ಯಮ್

ಮಾಂಡೂಕ್ಯೋಪನಿಷದ್ಭಾಷ್ಯಮ್

ತೈತ್ತಿರೀಯೋಪನಿಷದ್ಭಾಷ್ಯಮ್

*ಶ್ರುತಿಪ್ರಸ್ಥಾನಗ್ರಂಥ :*

ಋಗ್ಭಾಷ್ಯಮ್

*ಇತಿಹಾಸಪ್ರಸ್ಥಾನಗ್ರಂಥಗಳು :*

ಮಹಾಭಾರತತಾತ್ಪರ್ಯನಿರ್ಣಯಃ

ಯಮಕಭಾರತಮ್

*ಪುರಾಣಪ್ರಸ್ಥಾನಗ್ರಂಥ :*

ಭಾಗವತತಾತ್ಪರ್ಯನಿರ್ಣಯಃ

*ಪ್ರಕರಣಗ್ರಂಥಗಳು :*

ತತ್ತ್ವಸಂಖ್ಯಾನಮ್

ತತ್ತ್ವವಿವೇಕಃ

ತತ್ತ್ವೋದ್ಯೋತಃ

ವಿಷ್ಣುತತ್ತ್ವನಿರ್ಣಯಃ

ಪ್ರಮಾಣಲಕ್ಷಣಮ್

ಕಥಾಲಕ್ಷಣಮ್

ಉಪಾಧಿಖಂಡನಮ್

ಮಾಯಾವಾದಖಂಡನಮ್

ಪ್ರಪಂಚಮಿಥ್ಯಾತ್ವಾನುಮಾನಖಂಡನಮ್

ಕರ್ಮನಿರ್ಣಯಃ

*ಆಚಾರಗ್ರಂಥಗಳು :*

ತಂತ್ರಸಾರಸಂಗ್ರಹಃ

ಸದಾಚಾರಸ್ಮೃತಿಃ

ಜಯಂತೀನಿರ್ಣಯಃ

ಕೃಷ್ಣಾಮೃತಮಹಾರ್ಣವಃ

ಯತಿಪ್ರಣವಕಲ್ಪಃ

*ಸ್ತೋತ್ರಗ್ರಂಥಗಳು :*

ನಖಸ್ತುತಿಃ

ದ್ವಾದಶಸ್ತೋತ್ರಮ್

ಕಂದುಕಸ್ತುತಿಃ (ಪೂರ್ವಾಶ್ರಮದಲ್ಲಿ ರಚಿತವಾದದ್ದು)

## ಸುಮಧ್ವವಿಜಯದ ಬಗ್ಗೆ ಒಂದು ಮಾತು

ಹದಿನಾರು ಸರ್ಗಾತ್ಮಕವಾದ ಈ ಕೃತಿಯು ಮಹಾಕಾವ್ಯವೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಅಪೂರ್ವ ಛಂದಸ್ಸುಗಳಿಂದ ಅಲಂಕೃತವಾದ ಈ ಕಾವ್ಯವು ಶಾಸ್ತ್ರಗ್ರಂಥವೆಂದರೂ ತಪ್ಪಾಗಲಾರದು. ಶ್ರೀಮದಾಚಾರ್ಯರ ನೈಜ ಚರಿತ್ರೆಯನ್ನು ತಿಳಿಸಲು ಹೊರಟ ಈ ಕಾವ್ಯದಲ್ಲಿ ಎಲ್ಲಿಯೂ ಇಲ್ಲದ ಉತ್ಪ್ರೇಕ್ಷೆಗಳನ್ನು ವರ್ಣಿಸಿ ಕಾವ್ಯದ ಸೊಬಗನ್ನು ಹೆಚ್ಚಿಸಿಲ್ಲ ಎಂಬ ಮಾತನ್ನು ಸ್ವಯಂ ನಾರಾಯಣಪಂಡಿತಾಚಾರ್ಯರೇ ತಮ್ಮ ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಈ ಗ್ರಂಥವು ಇವತ್ತು ಸಂಸ್ಕೃತವಾಙ್ಮಯದಲ್ಲಿ ಕಂಡುಬರುವ ಎಲ್ಲ ವಿಜಯಕಾವ್ಯಗಳಿಗೆ ಮೂಲವೆಂದರೆ ತಪ್ಪಾಗಲಾರದು. ಜೀವೋತ್ತಮರಾದ ಇವರ ವಿಶಿಷ್ಟಲೀಲೆಗಳನ್ನು ಇದರಲ್ಲಿ ವರ್ಣಿಸಿರುವುದರಿಂದ ನಿತ್ಯ ಪಾರಾಯಣಕ್ಕೆ ಅತ್ಯಂತ ಸೂಕ್ತವಾದ ಗ್ರಂಥವಾಗಿದೆ.

ಸುಮಧ್ವವಿಜಯದ ಮೇಲೆ ಅನೇಕ ವ್ಯಾಖ್ಯಾನಗಳು ಹೊರಟಿವೆ. ಅವು ಈ ಕೆಳಗಿನಂತೆ ತಿಳಿಯಬಹುದು.

1) ಶ್ರೀ ನಾರಾಯಣ ಪಂಡಿತಾಚಾರ್ಯರ — ಭಾವಪ್ರಕಾಶಿಕಾ
2) ಶ್ರೀ ವೇದಾಂಗತೀರ್ಥರ — ಪದಾರ್ಥದೀಪಿಕಾ
3) ಶ್ರೀ ಸುಮತೀಂದ್ರತೀರ್ಥರ — ವ್ಯಾಖ್ಯಾನ
4) ಶ್ರೀ ವಿಶ್ವಪತಿತೀರ್ಥರ — ಪದಾರ್ಥದೀಪಿಕೋದ್ಬೋಧಿಕಾ
5) ಶ್ರೀ ಲಿಂಗೇರಿ ಶ್ರೀನಿವಾಸಾಚಾರ್ಯರ — ವ್ಯಾಖ್ಯಾನ
6) ಆನಂದತೀರ್ಥಾಚಾರ್ಯರ — ಪದಾರ್ಥಪ್ರಕಾಶಿಕಾ
7) ಛಲಾರಿ ಶೇಷಾಚಾರ್ಯರ — ಮಂದೋಪಕಾರಿಣೀ
8) ಗರುಡವಾಹನ ಲಕ್ಷ್ಮೀನಾರಾಯಣಾಚಾರ್ಯರು
(ಇವರು ರಾಯರ ಪೂರ್ವಾಶ್ರಮದ ಸಂತತಿ)

ಇದಲ್ಲದೇ ನಮ್ಮ ಶ್ರೀಮಠದ ಪೂರ್ವಿಕ ಗುರುಗಳಾದ ಶ್ರೀಸುಜನೇಂದ್ರತೀರ್ಥರು ಒಂದು ವ್ಯಾಖ್ಯಾನವನ್ನು ಬರೆದಿದ್ದಾರೆಂದು ತಿಳಿದು ಬರುತ್ತದೆ.

ಇತ್ತೀಚಿನ ದಿನಗಳಲ್ಲಿ ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರು ತತ್ವಚಂದ್ರಿಕಾ ಎಂಬ ವ್ಯಾಖ್ಯಾನವನ್ನು ರಚಿಸಿ ಪ್ರಕಾಶನಗೊಳಿಸಿದ್ದಾರೆ.

### ಗ್ರಂಥಕರ್ತೃಗಳ ಪರಿಚಯ

ಶ್ರೀಸುಮಧ್ವವಿಜಯವನ್ನು ಬರೆದ ನಾರಾಯಣಪಂಡಿತಾಚಾರ್ಯರು ಶ್ರೀಸುಬ್ರಹ್ಮಣ್ಯಪಂಡಿತರ ಮೊಮ್ಮಕ್ಕಳು, ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು ಎಂದು ತಿಳಿದು ಬರುತ್ತದೆ. ಆಶುಕವಿಗಳಾದ ಇವರು ಲಿಕುಚವಂಶದವ-ರೆಂದು ಆಂಗೀರಸ ಗೋತ್ರದಲ್ಲಿ ಜನಿಸಿದವರೆಂದು ತಿಳಿದುಬರುತ್ತದೆ. ಎಂಥ ಜಟಿಲವಾದ ಶಾಸ್ತ್ರಪ್ರಮೇಯಗಳನ್ನು ಸುಲಭವಾದ ಕಾವ್ಯಶೈಲಿಯಲ್ಲಿ ಬರೆಯುವುದರಲ್ಲಿ ಅಪ್ರತಿಮರು ಇವರು. ಶ್ರೀಮದಾಚಾರ್ಯರ ವೈಭವವನ್ನು ಕಣ್ಣಾರೆ ಕಂಡು ಪುಟಕ್ಕಿಳಿಸಿದ ಪೂತಾತ್ಮರು.

### ಇವರು ರಚಿಸಿದ ಗ್ರಂಥಗಳು

1) ಸುಮಧ್ವವಿಜಯಃ
2) ಭಾವದೀಪಃ (ಸುಮಧ್ವವಿಜಯಭಾವಪ್ರಕಾಶಿಕಾ)
3) ಅಣುಮಧ್ವವಿಜಯಃ (ಪ್ರಮೇಯನವಮಾಲಿಕಾ)
4) ಮಣಿಮಂಜರೀ
5) ನಯಚಂದ್ರಿಕಾ (ಅನುವ್ಯಾಖ್ಯಾನಟೀಕಾ)
6) ತತ್ತ್ವಮಂಜರೀ (ವಿಷ್ಣುತತ್ತ್ವನಿರ್ಣಯಟೀಕಾ)
7) ಯಮಕಭಾರತಟೀಕಾ
8) ಅಣುಭಾಷ್ಯಟೀಕಾ
9) ಕೃಷ್ಣಾಮೃತಮಹಾರ್ಣವಟೀಕಾ
10) ಮಿಥ್ಯಾತ್ವಾನುಮಾನಖಂಡನಟೀಕಾ (ಶ್ಲೋಕರೂಪ)

11) ಸಂಗ್ರಹರಾಮಾಯಣಮ್ (ನಿರ್ಣಯಾನುಸಾರಿಯಾಗಿ ರಾಮಾಯಣಕಥಾಸಂಗ್ರಹ)

12) ಶುಭೋದಯಮ್ (ಒಂದು ಆಧ್ಯಾತ್ಮಿಕ ಕಾವ್ಯ)

13) ಪಾರಿಜಾತಹರಣಮ್ (ಯಮಕಕಾವ್ಯ)

14) ಯೋಗದೀಪಿಕಾ (ಸದಾಚಾರವಿವರಣರೂಪ ಗ್ರಂಥ)

15) ಮಧ್ವಾಮೃತಮಹಾರ್ಣವಃ (ಶ್ರೀಮಧ್ವಮಾಹಾತ್ಮ್ಯಪ್ರತಿಪಾದಕ ಕೃತಿ)

16) ಅಂಶಾವತಾರ (ಅಕಾರಾದಿಯಾಗಿ ದೇವದೈತ್ಯರ ಅಂಶಾವೇಶಾವತಾರಗಳನ್ನು ನಿರೂಪಿಸುವ ಶ್ಲೋಕರೂಪ ಕೃತಿ)

17) ನರಸಿಂಹಸ್ತುತಿಃ

18) ರಾಮಗೀತ್ಯಷ್ಟಕಮ್

19) ದಾಶರಥ್ಯಷ್ಟಕಮ್

20) ಕೃಷ್ಣಮಾಲಾಸ್ತೋತ್ರಮ್ (ಮಹಾಭಾರತತಾತ್ಪರ್ಯನಿರ್ಣಯೋಕ್ತ-ಕೃಷ್ಣಕಥಾಸಂಗ್ರಹ)

21) ಮಹಾಲಕ್ಷ್ಮೀಸ್ತುತಿಃ

22) ಮಧ್ವಕವಚಮ್

23) ಅಣುವಾಯುಸ್ತುತಿಃ

24) ಶಿವಸ್ತುತಿಃ

25) ತಾರತಮ್ಯಸ್ತೋತ್ರಮ್

- ಇವುಗಳಲ್ಲಿನ ಕೆಲವು ಯಮಕಶ್ಲೋಕಗಳೂ, ಇನ್ನೂ ಕೆಲವು ಸ್ತೋತ್ರಗಳೂ ಸಹ ನಾರಾಯಣಪಂಡಿತರ ಹೆಸರಿನಲ್ಲಿ ಪ್ರಸಿದ್ಧವಾಗಿವೆ.

ಇಂತಹ ಮೇರುಕೃತಿಯನಿಸಿದ ಸುಮಧ್ವವಿಜಯದ ಅಧ್ಯಯನಶೀಲರಾದ ವಿದ್ಯಾರ್ಥಿಗಳಿಗೂ, ಜಿಜ್ಞಾಸುಗಳಿಗೂ ಅತ್ಯಂತ ಉಪಕಾರಕವಾದ ರೀತಿಯಲ್ಲಿ ಪದಚ್ಛೇದ ಅನ್ವಯಾನುಸಾರೇಣ ಅರ್ಥ, ತಾತ್ಪರ್ಯ, ವಿಗ್ರಹ, ವ್ಯಾಕರಣ, ಅಲಂಕಾರ, ಛಂದೋವಿಶೇಷಗಳನ್ನೊಳಗೊಂಡ ರೀತಿಯಲ್ಲಿ ಅನುವಾದಿಸಿ ಈ ಹಿಂದೆ ನಮ್ಮ ಶ್ರೀಮಠದ ಅಧಿಕೃತ ಮಾಸಪತ್ರಿಕೆಯಾದ ಗುರುಸಾರ್ವಭೌಮದಲ್ಲಿ ಧಾರಾವಾಹಿರೂಪದಿಂದ ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ ಶ್ರೀ 1008 ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು ಪ್ರಕಾಶನಗೊಳಿಸಿದ್ದರು. ಇದರ ಅನುವಾದವನ್ನು ಪ್ರಸಿದ್ಧ ವಿದ್ವಾಂಸರಾದ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು, ಮಾಗಡಿ ರಂಗನಾಥಾಚಾರ್ಯರು, ಹಾಗೂ ಎಸ್. ವಿ. ಭೀಮಭಟ್ಟರು, ಮಾಡಿದ್ದರು. ಪ್ರಕೃತ ಈ ಪ್ರಕಾಶನಕಾರ್ಯದಲ್ಲಿ ಮಾರ್ಗದರ್ಶನವನ್ನು ನೀಡಿದ, ಆಗಿನ ಶ್ರೀಗುರು-ಸಾರ್ವಭೌಮ ಪತ್ರಿಕೆಯ ಪ್ರಧಾನ ಸಂಪಾದಕರಾದ ಹಾಗು ನಮ್ಮ ವಿದ್ಯಾಗುರುಗಳಾದ ರಾಜಾ. ಎಸ್. ಗಿರಿಯಾ-ಚಾರ್ಯರ ನೇತೃತ್ವದಲ್ಲಿ ಈ ಅನುವಾದವು ಪ್ರಕಾಶನಗೊಂಡು ಎಲ್ಲರ ಕೈಸೇರಿತು. ಪ್ರಕೃತ ಪ್ರಸ್ತುತ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀ ಶ್ರೀ 1008 ಸುಯತೀಂದ್ರತೀರ್ಥ ಶ್ರೀಪಾದಂಗಳವರು ಮಾಸಪತ್ರಿಕೆಯಲ್ಲಿ ಪ್ರಕಟಗೊಂಡ ಶ್ರೀ ಸುಮಧ್ವವಿಜಯದ ಹದಿನಾರು ಸರ್ಗಾತ್ಮಕವಾದ ಈ ಕೃತಿಯನ್ನು ಸಂಪಾದಿಸಿ, ಪ್ರಕಾಶಿಸಲು ನಮಗೆ ಆದೇಶವನ್ನಿತ್ತಿದ್ದರು. ನಾವು ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದ ಅನೇಕ ವಿದ್ವಾಂಸರ ಸಹಕಾರದೊಂದಿಗೆ ಸಂಪಾದಿಸಿ, ಜಿಜ್ಞಾಸುಗಳ ಕೈಸೇರುವ ಪ್ರಯತ್ನವನ್ನು ಮಾಡಿದ್ದೇವೆ. ಈ ನಿಟ್ಟಿನಲ್ಲಿ ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳಾದ

ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರ ಹಾಗೂ ಹೆಚ್ಚುವರಿ ಆಪ್ತಕಾರ್ಯದರ್ಶಿಗಳಾದ ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರ ಸಹಕಾರವು ಅಭಿನಂದನೀಯವಾಗಿದೆ. ಇಂತಹ ಉತ್ತಮ ಕಾರ್ಯದಲ್ಲಿ ನಮ್ಮನ್ನು ತೊಡಗುವಂತೆ ಮಾಡಿದ ಪರಮಪೂಜ್ಯ ಶ್ರೀಪಾದಂಗಳವರಿಗೆ ನಮ್ಮ ಅನಂತ ಶಿ।।ಸಾ।। ನಮನಗಳು.

ಹಾಗೆಯೇ ನಮಗೆ ಉತ್ತಮ ಮಾರ್ಗದರ್ಶನವನ್ನು ನೀಡಿದ ನಮ್ಮ ಗುರುಗಳಾದ ಪಂಡಿತಕೇಸರೀ ರಾಜಾ ಎಸ್. ಗಿರಿಯಾಚಾರ್ಯರಿಗೆ ಅನಂತ ನಮನಗಳು. ಹಾಗೆಯೇ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರನ್ನು ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಅಭಿನಂದಿಸುತ್ತೇವೆ ಕರಡು ತಿದ್ದುವ ಕಾರ್ಯದಲ್ಲಿ ಸಹಕರಿಸಿದ ನಮ್ಮ ಶ್ರೀ ಗುರುಸಾರ್ವಭೌಮಸಂಸ್ಕೃತವಿದ್ಯಾಪೀಠದ ವಿದ್ವಾಂಸರಿಗೆ ಹೃತ್ಪೂರ್ವಕ ಧನ್ಯ-ವಾದಗಳು. ಸರಿಯಾದ ಸಮಯಕ್ಕೆ ಅಂದವಾಗಿ ಮುದ್ರಿಸಿದ ಶ್ರೀ ಸುಧಾ ಮುದ್ರಣದ ಮಾಲೀಕರಾದ ಶ್ರೀ ಧನಂಜಯ ವರಖೇಡಕರ್ ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

*ವಿದ್ವಾನ್ ರಾಜಾ ಎಸ್. ಪವಮಾನಾಚಾರ್ಯ*
*ವಿದ್ವಾನ್ ಕಡಪ ರಾಘವೇಂದ್ರಾಚಾರ್ಯ*
*ವಿದ್ವಾನ್ ಡಾ।। ಎನ್. ವಾದಿರಾಜಾಚಾರ್ಯ*
*ವಿದ್ವಾನ್ ಪುರಾಣಿಕ ಸುಬ್ರಹ್ಮಣ್ಯಾಚಾರ್ಯ*
ಸಂಪಾದಕರು.

॥ श्री वेदव्यास भगवान् ॥



॥ ಶ್ರೀ ವೇದವ್ಯಾಸ ಭಗವಾನ್ ॥

येन प्रादुरभावि भूमिवलये व्यस्तारि गोसन्ततिः
प्राबोधि श्रुतिपङ्कजं करुणया प्राकाशि तत्त्वं परम् ।
ध्वान्तं ध्वंसमनायि साधुनिकरश्चाकारि सन्मार्गग-
स्तेन व्यासदिवाकरेण सततं मा त्याजि मे मानसम् ॥

॥ श्री श्री १००८ श्री सुयतीन्द्रतीर्थाः ॥



॥ ಶ್ರೀ ಶ್ರೀ 1008 ಶ್ರೀ ಸುಯತೀಂದ್ರತೀರ್ಥಾಃ ॥

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

# ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಏಕಾದಶಃ ಸರ್ಗಃ

**ಅವತಾರಿಕಾ**— ಶ್ರೀಮಧ್ವಾಚಾರ್ಯರು ಸೂತ್ರಭಾಷ್ಯದ ಅರ್ಥವನ್ನು ಉಪದೇಶಿಸಿದಾಗ ಶೇಷದೇವರೇ ಬಂದು ಅದನ್ನು ಕೇಳಿದರೆನ್ನುತ್ತಾರೆ.

**ಪ್ರಚುರಾಂತರಪ್ರವಚನಂ ಫಣಿರಾಡುಪಶುಶ್ರುವಾನ್ ಸಸನಕಾದಿಮುನಿಃ ।**

**ಗಗನೇಽಲ್ಪದೃಷ್ಟವಪುರತ್ರ ಜನ್ಯೈಸ್ತ್ವರಿತಂ ನಿಲೀನರುಚಿರಾಪ ಪದಮ್ ॥ 1 ॥**

**ಪದಚ್ಛೇದ**— ಪ್ರಚುರಾಂತರಪ್ರವಚನಂ, ಫಣಿರಾಟ್, ಉಪಶುಶ್ರುವಾನ್, ಸಸನಕಾದಿಮುನಿಃ, ಗಗನೇ, ಅಲ್ಪ-ದೃಷ್ಟವಪುಃ, ಅತ್ರ, ಜನ್ಯೈಃ, ತ್ವರಿತಂ, ನಿಲೀನರುಚಿಃ, ಆಪ, ಪದಮ್ ।

**ಅನ್ವಯ**— ಅತ್ರ ಜನ್ಯೈಃ, ಗಗನೇ ಅಲ್ಪದೃಷ್ಟವಪುಃ, ಸಸನಕಾದಿಮುನಿಃ ಫಣಿರಾಟ್, ಪ್ರಚುರಾಂತರಪ್ರವಚನಂ, ಉಪಶುಶ್ರುವಾನ್ (ಸನ್), ತ್ವರಿತಂ ನಿಲೀನರುಚಿಃ (ಸನ್) ಪದಂ ಆಪ ।

**ಅನ್ವಯಾರ್ಥ**—

ಅತ್ರ = ಈ ರಜತಪೀಠಪುರದಲ್ಲಿ

ಜನ್ಯೈಃ = ಭೂಮಿಯಲ್ಲಿರುವ ಜನರಿಂದ

ಅಲ್ಪದೃಷ್ಟವಪುಃ = ಸ್ವಲ್ಪವಾಗಿ ನೋಡಲ್ಪಟ್ಟ ಶರೀರವುಳ್ಳ

ಸಸನಕಾದಿಮುನಿಃ = ಸನಕಾದಿಋಷಿಗಳಿಂದ ಸಹಿತರಾದ,

ಫಣಿರಾಟ್ = ಶೇಷದೇವರು

ಪ್ರಚುರಾಂತರಪ್ರವಚನಂ = ಪೂರ್ಣವಾದ ಜ್ಞಾನವುಳ್ಳ (ಶ್ರೀ ಮಧ್ವಾಚಾರ್ಯರ) ವ್ಯಾಖ್ಯಾನವನ್ನು

ಉಪಶುಶ್ರುವಾನ್(ಸನ್) = ಕೇಳಿದವರಾಗಿ

ತ್ವರಿತಂ = ಬೇಗನೆ

ನಿಲೀನರುಚಿಃ (ಸನ್) = ಮರೆಯಾದ ಕಾಂತಿಯುಳ್ಳವರಾಗಿ

ಪದಂ = ತಮ್ಮ ಸ್ಥಾನವನ್ನು

ಆಪ = ಹೊಂದಿದರು.

**ತಾತ್ಪರ್ಯ**— ಒಂದಾನೊಂದು ದಿನ ಶ್ರೀಪೂರ್ಣಪ್ರಜ್ಞರು ರಾತ್ರಿಯ ಸಮಯದಲ್ಲಿ ಶಿಷ್ಯರಿಗೆ ಬ್ರಹ್ಮಸೂತ್ರ ಭಾಷ್ಯದ ವಿಶೇಷವಾದ ರಹಸ್ಯಾರ್ಥಗಳ ವ್ಯಾಖ್ಯಾನ ಮಾಡುತ್ತಿದ್ದರು. ಆಗ ಮಹಾಶೇಷದೇವರು ಸನಕಾದಿ ಮುನಿಗಳಿಂದ ಸಹಿತರಾಗಿ

ಅಲ್ಲಿಗೆ ಬಂದು ಆಕಾಶದಲ್ಲಿಯೇ ನಿಂತು ಆಚಾರ್ಯರ ಪ್ರವಚನವನ್ನು ಕೇಳಿದರು. ಭೂಮಿಯಲ್ಲಿರುವ ಜನರಿಗೆ ಶೇಷ ದೇವರ ಶರೀರದ ಸ್ವಲ್ಪಭಾಗ ಮಾತ್ರ ತೇಜೋರೂಪದಿಂದ ಕಂಡಿತು. ಆದರೆ ಅಷ್ಟರಲ್ಲಿ ಅವರು ಶೀಘ್ರವಾಗಿ ಮರೆಯಾದರು. ಅವರ ಕಾಂತಿಯೂ ಮರೆಯಾಯಿತು. ಅಲ್ಲಿಂದ ಶೇಷದೇವರು ತಮ್ಮ ಸ್ಥಾನಕ್ಕೆ (ಲೋಕಕ್ಕೆ) ಹೊರಟು ಹೋದರು.

**ವಿಶೇಷಾಂಶ—** ಈ ವಿಷಯದಲ್ಲಿ ಒಂದು ಐತಿಹ್ಯವಿದೆ.

ವಿಚಂದ್ರಾಯಾಂ ಕ್ಷಪಾಯಾಂ ತು ಚಂದ್ರಿಕಾಭ್ರಮಿಣೋ ಜನಾಃ ।
ಶೇಷಸ್ಯ ತೇಜಸ್ಯಥ ತಂ ಯಾಂತಂ ಮಧ್ವೋ (ಹ್ಯ) ವ್ಯದರ್ಶಯತ್ ॥

ಒಂದು ರಾತ್ರಿ ಚಂದ್ರನಿಲ್ಲದ ಕತ್ತಲಿನಲ್ಲಿ ಬೆಳಕು ಕಂಡಿತು. ಜನರು ಇದು ಬೆಳದಿಂಗಳು ಎಂದು ಭ್ರಮಿಸಿದರು. ಆಚಾರ್ಯರ ಪ್ರವಚನವನ್ನು ಕೇಳಲು ಬಂದ ಶೇಷದೇವರ ಮೈಯ ಕಾಂತಿಯಲ್ಲಿ ಜನರಿಗೆ ಬೆಳದಿಂಗಳೆಂಬ ಭ್ರಾಂತಿ-ಯುಂಟಾಗಿತ್ತು. ಶ್ರೀಮಧ್ವರು ಇದು ಶೇಷದೇವರ ಕಾಂತಿಯೆಂದು ಜನರಿಗೆ ತಿಳಿಸಿ, ಅವರು ಹೋಗುತ್ತಿರುವುದನ್ನು ಜನರಿಗೆ ತೋರಿಸಿದರು ಎಂದು ಐತಿಹ್ಯ ವಚನದ ಅರ್ಥ.

**ವಿಗ್ರಹ—**

**ಪ್ರಚುರಾಂತರಪ್ರವಚನಂ—** ಪ್ರಚುರಂ ಆಂತರಂ ಯಸ್ಯ ಸಃ ಪ್ರಚುರಾಂತರಃ, ಪ್ರಚುರಾಂತರಸ್ಯ ಪ್ರವಚನಂ ಪ್ರಚುರಾಂತರಪ್ರವಚನಂ, ತತ್ ಪ್ರಚುರಾಂತರಪ್ರವಚನಂ ।

**ಫಣಿರಾಟ್—** ಫಣಾಃ ಏಷಾಂ ಸಂತೀತಿ ಫಣಿನಃ, ಫಣಿನಾಂ ರಾಟ್ ಫಣಿರಾಟ್ ।

**ಸಸನಕಾದಿಮುನಿಃ—** ಸನಕಃ ಆದಿಃ ಯೇಷಾಂ ತೇ ಸನಕಾದಯಃ, ಸನಕಾದಯಶ್ಚ ತೇ ಮುನಯಶ್ಚ ಸನಕಾದಿಮುನಯಃ, ಸನಕಾದಿಮುನಿಭಿಃ ಸಹವರ್ತತೇ ಇತಿ ಸಸನಕಾದಿಮುನಿಃ ।

**ಅಲ್ಪದೃಷ್ಟವಪುಃ—** ಅಲ್ಪಂ ದೃಷ್ಟಂ ವಪುಃ ಯಸ್ಯ ಸಃ ಅಲ್ಪದೃಷ್ಟವಪುಃ ।

**ನಿಲೀನರುಚಿಃ—** ನಿಲೀನಾ ರುಚಿಃ ಯಸ್ಯ ಸಃ ನಿಲೀನರುಚಿಃ ।

**ಕ್ರಿಯಾಪದ—** ಆಪ- ಆಪ ಆಪತುಃ ಆಪುಃ ಇತ್ಯಾದಿ ಆಪ್ಲೃ ವ್ಯಾಪ್ತೌ ಲಿಟ್ ಹಿಂದೆಯೇ ಬಂದಿದೆ.

**ಪ್ರಯೋಗ—** ಫಣಿರಾಟ್ ಪದಂ ಆಪ (ಕರ್ತರಿ) ।
ಫಣಿರಾಜಾಪದಂ ಆಪೇ (ಕರ್ಮಣಿ) ।

**ವೃತ್ತ—** ಈ ಸರ್ಗದಲ್ಲೆಲ್ಲಾ ಪ್ರಾಯಃ ಪ್ರಮಿತಾಕ್ಷರಾ ವೃತ್ತ. 'ಪ್ರಮಿತಾಕ್ಷರಾ ಸಜಸಸೈರ್ಗದಿತಾ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಶೇಷದೇವರು ಆಚಾರ್ಯರ ಪ್ರವಚನವನ್ನು ಕೇಳಿ ತಮ್ಮ ಲೋಕಕ್ಕೆ ಹೋದ ಮೇಲೆ ಸನಕಾದಿಗಳು ಮಾಡಿದ ಪ್ರಶ್ನೆಯನ್ನು ವಿವರಿಸುತ್ತಾರೆ.

**ಅತಿಚಿತ್ರಧಾಮ್ನಿ ನಿಜಧಾಮ್ನಿ ರತಂ**
**ಸಸಹಸ್ರಮಸ್ತಕಮನಂತಮಮುಮ್ ।**
**ಮುನಯೋಽಭಿವಾದ್ಯ ವಿನಯಾಭರಣಾಃ**
**ವರಮನ್ವಯುಂಜತ ತದರ್ಥಮಿಮಮ್ ॥ 2 ॥**

**ಪದಚ್ಛೇದ—** ಅತಿಚಿತ್ರಧಾಮ್ನಿ, ನಿಜಧಾಮ್ನಿ, ರತಂ, ಸಸಹಸ್ರಮಸ್ತಕಂ, ಅನಂತಂ, ಅಮುಂ, ಮುನಯಃ, ಅಭಿವಾದ್ಯ, ವಿನಯಾಭರಣಾಃ, ವರಂ, ಅನ್ವಯುಂಜತ, ತದರ್ಥಂ, ಇಮಂ ।

**ಅನ್ವಯ**— ವಿನಯಾಭರಣಾಃ ಮುನಯಃ, ಅತಿಚಿತ್ರಧಾಮ್ನಿ ನಿಜಧಾಮ್ನಿ ರತಂ, ಸಸಹಸ್ರಮಸ್ತಕಂ ಅಮುಂ ಅನಂತಂ ಅಭಿವಾದ್ಯ, ಇಮಂ ವರಂ ತದರ್ಥಂ ಅನ್ವಯುಂಜತ ।

**ಅನ್ವಯಾರ್ಥ**—

**ವಿನಯಾಭರಣಾಃ** = ವಿಧೇಯತೆಯೇ ಒಡವೆಯಾಗಿ ಉಳ್ಳ

**ಮುನಯಃ** = ಸನಕಾದಿ ಋಷಿಗಳು

**ಅತಿಚಿತ್ರಧಾಮ್ನಿ** = ಅತ್ಯಂತ ಆಶ್ಚರ್ಯಕರವಾದ ಕಾಂತಿಯುಳ್ಳ

**ನಿಜಧಾಮ್ನಿ** = ತನ್ನ ಮನೆಯಲ್ಲಿ

**ರತಂ** = ಇರುವ

**ಸಸಹಸ್ರಮಸ್ತಕಂ** = ಸಾವಿರ ತಲೆಗಳಿಂದ ಕೂಡಿರುವ

**ಅಮುಂ** = ಈ

**ಅನಂತಂ** = ಶೇಷದೇವರನ್ನು

**ಅಭಿವಾದ್ಯ** = ನಮಸ್ಕರಿಸಿ

**ಇಮಂ** = ಈ ಮುಂದೆ ಹೇಳುವ

**ವರಂ** = ಉತ್ತಮವಾದ

**ತದರ್ಥಂ** = ಆ ಮಧ್ವಶಾಸ್ತ್ರದ ಪ್ರಮೇಯವನ್ನು

**ಅನ್ವಯುಂಜತ** = ಪ್ರಶ್ನಿಸಿದರು.

**ತಾತ್ಪರ್ಯ**— ಶೇಷದೇವರು ಈ ಹಿಂದೆ ಹೇಳಿದಂತೆ ಶ್ರೀಮಧ್ವಶಾಸ್ತ್ರ ಪ್ರವಚನವನ್ನು ಕೇಳಿ, ಅದ್ಭುತವಾದ ಕಾಂತಿ-ಯುಳ್ಳ ತಮ್ಮ ಮನೆಗೆ ಹೋಗಿ ಕುಳಿತರು. ಸಾವಿರ ಶಿರಸ್ಸುಗಳುಳ್ಳ ಮಹಾನುಭಾವರಾದ ಆ ಶೇಷದೇವರ ಬಳಿಗೆ ಸನಕಾದಿ ಮುನಿಗಳು ಹೋಗಿ ಅವರಿಗೆ ವಿನಯದಿಂದ ನಮಸ್ಕಾರ ಮಾಡಿದರು, ಮತ್ತು ಶ್ರೀಮಧ್ವಶಾಸ್ತ್ರದ ವಿಷಯದಲ್ಲಿ ಅವಶ್ಯವಾಗಿ ಕೇಳಬೇಕಾಗಿರುವ ಪ್ರಮೇಯಗಳನ್ನು ಕೇಳಿದರು.

ವಿಗ್ರಹ—

**ಅತಿಚಿತ್ರಧಾಮ್ನಿ**— ಅತ್ಯಂತಂ ಚಿತ್ರಂ ಅತಿಚಿತ್ರಂ, ಅತಿಚಿತ್ರಂ ಧಾಮ ಯಸ್ಯ ತತ್ ಅತಿಚಿತ್ರಧಾಮ, ತಸ್ಮಿನ್ ಅತಿಚಿತ್ರಧಾಮ್ನಿ । (ನಿಜಧಾಮ ಎಂಬುದಕ್ಕೆ ಇದು ವಿಶೇಷಣ) 'ಧಾಮನೀ ಗೃಹತೇಜಸೀ' ಎಂಬ ಕೋಶದಂತೆ ಧಾಮಶಬ್ದಕ್ಕೆ ಇಲ್ಲಿ ತೇಜಸ್ಸು ಎಂದು ಅರ್ಥ. ನಿಜಂ ಚ ತತ್ ಧಾಮ ಚ ನಿಜಧಾಮ, ತಸ್ಮಿನ್ । ಇಲ್ಲಿ ಧಾಮಶಬ್ದಕ್ಕೆ ಹಿಂದಿನ ಕೋಶದಂತೆ ಮನೆ ಎಂದರ್ಥ.

**ಸಸಹಸ್ರಮಸ್ತಕಂ**— ಸಹಸ್ರಂ ಚ ತಾನಿ ಮಸ್ತಕಾನಿ ಚ ಸಹಸ್ರಮಸ್ತಕಾನಿ, ಸಹಸ್ರಮಸ್ತಕೈಃ ಸಹ ವರ್ತತೇ ಇತಿ ಸಸಹಸ್ರಮಸ್ತಕಃ, ತಂ ಸಸಹಸ್ರಮಸ್ತಕಂ । (ಇದು ಅನಂತಂ ಎಂಬುದಕ್ಕೆ ವಿಶೇಷಣ – ''ಉತ್ತಮಾಂಗಂ ಶಿರಃ ಶೀರ್ಷಂ ಮೂರ್ಧಾ ನಾ ಮಸ್ತಕೋಽಸ್ತ್ರಿಯಾಂ'' ಎಂಬ ಕೋಶಾನುಸಾರ ಮಸ್ತಕ ಎಂದರೆ ಶಿರಸ್ಸು, ''ಶೇಷೋನಂತೋ ವಾಸುಕಿಸ್ತು ಸರ್ಪರಾಜೋಽಥಗೋನಸೇ'' ಎಂಬ ಕೋಶಾನುಸಾರ ಅನಂತ ಎಂದರೆ ಶೇಷ.

**ವಿನಯಾಭರಣಾಃ**— ವಿನಯ ಏವ ಆಭರಣಂ ಯೇಷಾಂ ತೇ ವಿನಯಾಭರಣಾಃ ।

**ತದರ್ಥಂ**— ತಸ್ಯ ಅರ್ಥಃ ತದರ್ಥಃ, ತಂ ತದರ್ಥಂ ।

**ಕ್ರಿಯಾಪದ—** **ಅನ್ವಯುಂಜತ-** 'ಅನು'. ಉಪಸರ್ಗಪೂರ್ವಕಾತ್ ಯುಜಿರ್ ಯೋಗೇ ಇತಿ ಧಾತೋಃ ಆತ್ಮನೇಪದಿನಃ ಲಙ್ ಪ್ರಥಮಪುರುಷೇ ಬಹುವಚನೇ 'ಅನ್ವಯುಂಜತ' ಇತಿ ರೂಪಂ ।

ಅನು+ಅಯುಂಕ್ತ ಅಯುಂಜಾತಾಂ ಅಯುಂಜತ, ಅಯುಂಕ್ಥಾಃ ಅಯುಂಜಾಥಾಂ ಅಯುಂಗ್ಧ್ವಂ, ಅಯುಂಜಿ ಅಯುಂಜ್ವಹಿ ಅಯುಂಜ್ಮಹಿ ॥

**ಪ್ರಯೋಗ—** ವಿನಯಾಭರಣಾಃ ಮುನಯಃ ಇಮಂ ವರಂ ತದರ್ಥಂ ಅನ್ವಯುಂಜತ (ಕರ್ತರಿ) ।

ವಿನಯಾಭರಣೈಃ ಮುನಿಭಿಃ ಅಯಂ ವರಃ ತದರ್ಥಃ ಅನ್ವಯುಜ್ಯತ (ಕರ್ಮಣಿ)

★ ★ ★

**ಅವತಾರಿಕಾ—** ಋಷಿಗಳು ಮಾಡಿದ ಪ್ರಶ್ನೆಯನ್ನು ಅನುವಾದಿಸುತ್ತಾರೆ.

**ಭಗವತ್ತಮಸ್ಯ ವಿಪುಲಪ್ರಮತೇಃ**
**ಸಮಯಂ ಮನೋಹರತಮಂ ಜಗತಿ ।**
**ಮಹಿತಂ ಭವದ್ಭಿರಪಿ ಲೋಕಪತೇ**
**ಪಠತಾಂ ಮುಹುಃ ಫಲಮುದೇಷ್ಯತಿ ಕಿಮ್ ॥ 3 ॥**

**ಪದಚ್ಛೇದ—** ಭಗವತ್ತಮಸ್ಯ, ವಿಪುಲಪ್ರಮತೇಃ, ಸಮಯಂ, ಮನೋಹರತಮಂ, ಜಗತಿ, ಮಹಿತಂ, ಭವದ್ಭಿಃ, ಅಪಿ, ಲೋಕಪತೇ, ಪಠತಾಂ, ಮುಹುಃ, ಫಲಂ, ಉದೇಷ್ಯತಿ, ಕಿಂ ।

**ಅನ್ವಯ—** (ಹೇ) ಲೋಕಪತೇ, ಜಗತಿ, ಮನೋಹರತಮಂ, ಭವದ್ಭಿಃ, ಅಪಿ, ಮಹಿತಂ, ಭಗವತ್ತಮಸ್ಯ ವಿಪುಲ-ಪ್ರಮತೇಃ, ಸಮಯಂ, ಮುಹುಃ, ಪಠತಾಂ, ಕಿಂ, ಫಲಂ, ಉದೇಷ್ಯತಿ ?

**ಅನ್ವಯಾರ್ಥ—**

**ಹೇ ಲೋಕಪತೇ** = ನಾಗಲೋಕದ ಒಡೆಯರಾದ ಎಲೈ ಮಹಾಶೇಷದೇವರೇ,

**ಜಗತಿ** = ಪ್ರಪಂಚದಲ್ಲಿ

**ಮನೋಹರತಮಂ** = ಅತ್ಯಂತ ಮನೋಹರವಾದ

**ಭವದ್ಭಿಃ ಅಪಿ** = ನಿಮ್ಮಿಂದಲೂ

**ಮಹಿತಂ** = ಪೂಜಿಸಲ್ಪಟ್ಟ

**ಭಗವತ್ತಮಸ್ಯ** = ಅತ್ಯಂತ ಪೂಜ್ಯರಾದ (ಅತಿಶಯವಾದ ಸಮಗ್ರ ಐಶ್ವರ್ಯಾದಿ ಷಡ್‌ಗುಣಸಂಪನ್ನರಾದ)

**ವಿಪುಲಪ್ರಮತೇಃ** = ಶ್ರೀಪೂರ್ಣಪ್ರಜ್ಞರ

**ಸಮಯಂ** = ಶಾಸ್ತ್ರವನ್ನು

**ಮುಹುಃ** = ಮತ್ತೆ ಮತ್ತೆ ಅರ್ಥಜ್ಞಾನ ಪುರಸ್ಸರವಾಗಿ ಓದುವವರಿಗೆ

**ಕಿಂ** = ಯಾವ

**ಫಲಂ** = ಪ್ರಯೋಜನವು

**ಉದೇಷ್ಯತಿ** = ಉಂಟಾಗುವುದು ?

(**ಇತಿ ಅನ್ವಯುಂಜತ** = ಹೀಗೆಂದು ಕೇಳಿದರು ಎಂದು ಹಿಂದಿನ ಶ್ಲೋಕದ ಜೊತೆಗೆ ಅನ್ವಯಿಸಿ-ಕೊಳ್ಳಬೇಕು)

**ತಾತ್ಪರ್ಯ—** ಎಲೈ ನಾಗಲೋಕದೊಡೆಯರಾದ ಶೇಷದೇವರೆ! ಸಮಗ್ರವಾದ ಐಶ್ವರ್ಯ, ವೀರ್ಯ ಮುಂತಾದ ಷಡ್ಗುಣಗಳುಳ್ಳವರಲ್ಲಿಯೂ ಶ್ರೇಷ್ಠರಾದ, ಅತ್ಯಂತ ಪೂಜ್ಯರಾದ ಶ್ರೀಪೂರ್ಣಪ್ರಜ್ಞರ ಬ್ರಹ್ಮಸೂತ್ರ ಭಾಷ್ಯಾದಿ ಸಿದ್ಧಾಂತ ಗ್ರಂಥಗಳು ಪ್ರಪಂಚದಲ್ಲಿ ಅತ್ಯಂತ ಮನೋಹರಗಳು. ಜ್ಞಾನಿಗಳಾದ ಸಾತ್ತ್ವಿಕ ಜೀವರಿಗೆ ಅತ್ಯಂತ ಚಿತ್ತಾಕರ್ಷಕಗಳು, ಆನಂದಪ್ರದಗಳೂ ಆಗಿವೆ. ಲೋಕದಲ್ಲಿ ಜ್ಞಾನಿಶ್ರೇಷ್ಠರೆಂದು ಪರಿಗಣಿತರಾದ ನೀವೂ ಅದನ್ನು ಗೌರವಿಸಿದ್ದೀರಿ. ಇಂತಹ ಮಧ್ವಶಾಸ್ತ್ರದ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡು, ಮನನ ಮಾಡುತ್ತಾ ಓದುವ ಜನರಿಗೆ ಯಾವ ಪ್ರಯೋಜನವು ಲಭಿಸುವುದು ಹೇಳಿರಿ? ಎಂದು ಶ್ರೀಮಧ್ವಶಾಸ್ತ್ರದ ಪ್ರಮೇಯ, ಅದರ ಅಧ್ಯಯನದಿಂದ ಆಗುವ ಪ್ರಯೋಜನ ಮುಂತಾದ ವಿಷಯಗಳನ್ನು ಕುರಿತು ಸನಕಾದಿ ಋಷಿಗಳು ಶೇಷದೇವರನ್ನು ಕೇಳಿದರು.

ವಿಗ್ರಹ—

**ಭಗವತ್ತಮಸ್ಯ—** ಭಗಃ ಅಸ್ಯ ಅಸ್ತೀತಿ ಭಗವಾನ್, ಅತಿಶಯೇನ ಭಗವಾನ್ ಭಗವತ್ತಮಃ, ತಸ್ಯ ಭಗವತ್ತಮಸ್ಯ ।

**ವಿಪುಲಪ್ರಮತೇಃ—** ವಿಪುಲಾ ಪ್ರಮತಿಃ ಯಸ್ಯ ಸಃ ವಿಪುಲಪ್ರಮತಿಃ, ತಸ್ಯ ವಿಪುಲಪ್ರಮತೇಃ । 'ವಿಪುಲಃ ಪೃಥುಲೇಽಗಾಧೇ' ಎಂಬ ವಿಶ್ವಕೋಶಾನುಸಾರವಾಗಿ ವಿಪುಲ ಎಂದರೆ ವಿಶಾಲವಾದ ಅನೇಕ ವಿಷಯ-ಗಳನ್ನು ಒಳಗೊಂಡ ಎಂದು ಅರ್ಥ. 'ಸಮಯಂ' ಎಂದರೆ ಬ್ರಹ್ಮಸೂತ್ರ ಭಾಷ್ಯಾದಿ ಸಿದ್ಧಾಂತ ಗ್ರಂಥ-ವನ್ನು ಎಂದು ಅರ್ಥ. ''ಸಮಯಾಃ ಶಪಥಾಚಾರಕಾಲಸಿದ್ಧಾಂತಸಂವಿದಃ'' ಎಂದು ಅಮರಕೋಶ,

**ಮನೋಹರತಮಂ—** ಹರತೀತಿ ಹರಃ, ಮನಃ ಹರತೀತಿ ಮನೋಹರಃ, ಅತಿಶಯೇನ ಮನೋಹರಃ ಮನೋಹರತಮಃ, ತಂ ಮನೋಹರತಮಂ ।

**ಹೇ ಲೋಕಪತೇ—** ಲೋಕಾನಾಂ ಪತಿಃ ಲೋಕಪತಿಃ, ತಸ್ಯ ಸಂಬುದ್ಧಿಃ ಹೇ ಲೋಕಪತೇ ।

**ಕ್ರಿಯಾಪದ—** ಉದೇಷ್ಯತಿ- 'ಉದ್' ಉಪಸರ್ಗಪೂರ್ವಕಾತ್ ಇಣ್‌ಗತೌ ಇತಿ ಗತ್ಯರ್ಥಕಾತ್ ಇಣ್ ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲೃಟ್ ಪ್ರಥಮಪುರುಷೇ ಏಕವಚನೇ 'ಉದೇಷ್ಯತಿ' ಇತಿ ರೂಪಂ ।

ಉದ್+ ಏಷ್ಯತಿ ಏಷ್ಯತಃ ಏಷ್ಯಂತಿ, ಏಷ್ಯಸಿ ಏಷ್ಯಥಃ ಏಷ್ಯಥ, ಏಷ್ಯಾಮಿ ಏಷ್ಯಾವಃ ಏಷ್ಯಾಮಃ ॥

ವಿಶೇಷವಿಚಾರಗಳು—

ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।
ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥

ಎಂಬ ಪ್ರಮಾಣಾನುಸಾರವಾಗಿ ಸಮಗ್ರವಾದ ಐಶ್ವರ್ಯ (ಆಧಿಪತ್ಯ), ವೀರ್ಯ (ಪ್ರಾರಂಭ ಮಾಡಿದ ಕೆಲಸವನ್ನು ಕೊನೆ ಮುಟ್ಟಿಸುವ ಸಾಮರ್ಥ್ಯ), ಕೀರ್ತಿ, ಸಂಪತ್ತು, ಲೌಕಿಕಜ್ಞಾನ, ಪಾರಲೌಕಿಕ ವಿಜ್ಞಾನ ಇವು ಆರನ್ನು ಭಗ ಎಂದು ಹೇಳುತ್ತಾರೆ.

**ಪ್ರಯೋಗ—** ವಿಪುಲಪ್ರಮತೇಃ ಸಮಯಂ ಮುಹುಃ ಪಠತಾಂ ಕಿಂ ಫಲಂ ಉದೇಷ್ಯತಿ? (ಕರ್ತರಿ) ।
ವಿಪುಲಪ್ರಮತೇಃ ಸಮಯಂ ಮುಹುಃ ಪಠತಾಂ ಕೇನ ಫಲೇನ ಉದೇಷ್ಯತೇ? (ಭಾವೇ) ।

★ ★ ★

**ಅವತಾರಿಕಾ—** ಶಾಸ್ತ್ರ ಶ್ರವಣಾದಿಗಳ ಫಲವನ್ನೇಕೆ ಕೇಳುತ್ತೀರೆಂದರೆ ಹೇಳುತ್ತಾರೆ.

**ಅಧಿಕಾರಿಣಾಂ ಫಲಮಲಂ ವಿದುಷಾಂ**
**ಭವತಿ ಪ್ರವೃತ್ತಿರತಿವೀರ್ಯರತೀ ।**
**ಇತಿ ತತ್ಫಲಂ ಸಫಲಸಂಕಥನೋ**
**ಭಗವಾನ್ ಪ್ರಪಂಚಯತು ಭೂರಿದಯಃ ॥ 4 ॥**

**ಪದಚ್ಛೇದ—** ಅಧಿಕಾರಿಣಾಂ, ಫಲಂ, ಅಲಂ, ವಿದುಷಾಂ, ಭವತಿ, ಪ್ರವೃತ್ತಿಃ, ಅತಿವೀರ್ಯವತೀ, ಇತಿ, ತತ್ಫಲಂ, ಸಫಲಸಂಕಥನಃ, ಭಗವಾನ್, ಪ್ರಪಂಚಯತು, ಭೂರಿದಯಃ ।

**ಅನ್ವಯ—** ಫಲಂ ಅಲಂ ವಿದುಷಾಂ, ಅಧಿಕಾರಿಣಾಂ ಪ್ರವೃತ್ತಿಃ ಅತಿ ವೀರ್ಯವತೀ ಭವತಿ, ಇತಿ ಸಫಲಸಂಕಥನಃ ಭೂರಿದಯಃ ಭಗವಾನ್, ತತ್ಫಲಂ ಪ್ರಪಂಚಯತು ।

**ಅನ್ವಯಾರ್ಥ—**

**ಫಲಂ** = ಪ್ರಯೋಜನವನ್ನು

**ಅಲಂ** = ಚೆನ್ನಾಗಿ

**ವಿದುಷಾಂ** = ತಿಳಿದಿರುವ

**ಅಧಿಕಾರಿಣಾಂ** = ಯೋಗ್ಯತೆಯುಳ್ಳ ಚೇತನರ

**ಪ್ರವೃತ್ತಿಃ** = ಶಾಸ್ತ್ರವನ್ನು ಕೇಳುವುದು, ಮನನ ಮಾಡುವುದು ಮುಂತಾದ ವ್ಯಾಪಾರವು

**ಅತಿವೀರ್ಯವತೀ** = ಹೆಚ್ಚು ಸಾಮರ್ಥ್ಯವುಳ್ಳದ್ದು (ಹೆಚ್ಚು ಫಲವುಳ್ಳದ್ದು)

**ಭವತಿ** = ಆಗುತ್ತದೆ.

**ಇತಿ** = ಈ ಕಾರಣದಿಂದ

**ಸಫಲ ಸಂಕಥನಃ** = ಪ್ರಯೋಜನದಿಂದ ಸಹಿತವಾದ ಶಾಸ್ತ್ರದ ಹೇಳುವಿಕೆಯುಳ್ಳ

**ಭೂರಿದಯಃ** = ಹೆಚ್ಚಾದ ಕರುಣೆಯುಳ್ಳ

**ಭಗವಾನ್** = ಪೂಜ್ಯರಾದ ನೀವು

**ತತ್ಫಲಂ** = ಆ ಪ್ರಯೋಜನವನ್ನು

**ಪ್ರಪಂಚಯತು** = ವಿಸ್ತಾರವಾಗಿ ಹೇಳಿರಿ.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಶಾಸ್ತ್ರ ಗ್ರಂಥಗಳನ್ನು ಕೇಳುವ, ಹೇಳುವ, ಹಾಗೂ ಪಾರಾಯಣ ಮಾಡುವ ಯೋಗ್ಯತೆಯುಳ್ಳ ಅಧಿಕಾರಿಗಳು ಅದರ ಪ್ರಯೋಜನವನ್ನು ಚೆನ್ನಾಗಿ ತಿಳಿದು, ಶಾಸ್ತ್ರ ಶ್ರವಣಾದಿಗಳನ್ನು ಮಾಡಲು ತೊಡಗಿದರೆ ಅವರ ಶ್ರವಣಾದಿ ಪ್ರಯತ್ನವು ಹೆಚ್ಚು ಸಾಮರ್ಥ್ಯವುಳ್ಳದ್ದಾಗುತ್ತದೆ ಮತ್ತು ಅಂತಹ ಅಧಿಕಾರಿಗಳಿಗೆ ವಿಶೇಷವಾದ ಫಲವು ದೊರೆಯುತ್ತದೆ. ಜ್ಞಾನಪೂರ್ವಕವಾಗಿ ಮಾಡಿದ ಕಾರ್ಯಕ್ಕೆ ಹೆಚ್ಚು ಫಲವಿದೆಯೆಂದು ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಆದ್ದರಿಂದ ನೀವು ಹೇಳತಕ್ಕ ಮಧ್ವಶಾಸ್ತ್ರ ಮಹಿಮೆಯ ಜೊತೆಗೆ, ಪ್ರಮೇಯಗಳ ಜೊತೆಗೆ, ಅದರಿಂದ ಉಂಟಾಗುವ ಪ್ರಯೋಜನವನ್ನು ಹೇಳಬೇಕು. ನಮ್ಮಲ್ಲಿ ನಿಮ್ಮಿಂದ ಉಪದೇಶವನ್ನು ಹೊಂದುವುದಕ್ಕೆ ಬೇಕಾದ ಬೇರೆಯ ಯಾವ ಉತ್ತಮ ಗುಣವೂ ಇಲ್ಲ. ಆದ್ದರಿಂದ ಪೂಜ್ಯರಾದ ನೀವು ನಮ್ಮ ಮೇಲೆ ಕೃಪೆ ತೋರಿ ಮಧ್ವಶಾಸ್ತ್ರದ ಮಹಿಮೆಯನ್ನು ಚೆನ್ನಾಗಿ ವಿವರಿಸಿರಿ. ಈ ರೀತಿಯಾಗಿ ಸನಕಾದಿ ಋಷಿಗಳು ಶೇಷದೇವರನ್ನು ಕೇಳಿದರು.

**ವಿಗ್ರಹ—**

**ಅಧಿಕಾರಿಣಾಂ—** ಅಧಿಕಾರಃ ಏಷಾಂ ಅಸ್ತೀತಿ ಅಧಿಕಾರಿಣಃ, ತೇಷಾಂ ಅಧಿಕಾರಿಣಾಂ ।

**ಅತಿವೀರ್ಯವತೀ—** ಅತಿಶಯಿತಂ ವೀರ್ಯಂ ಅತಿವೀರ್ಯಂ, ಅತಿವೀರ್ಯಂ ಅಸ್ಯಾಃ ಅಸ್ತೀತಿ ಅತಿವೀರ್ಯವತೀ ।

**ತತ್ಫಲಂ—** ತಸ್ಯ ಫಲಂ ತತ್ಫಲಂ ।

**ಸಫಲಸಂಕಥನಃ—** ಫಲೇನ ಸಹ ವರ್ತತೇ ಇತಿ ಸಫಲಂ, ಸಫಲಂ ಸಂಕಥನಂ ಯಸ್ಯ ಸಃ ಸಫಲಸಂಕಥನಃ ।

**ಭೂರಿದಯಃ—** ಭೂರಿಃ ದಯಾ ಯಸ್ಯ ಸಃ ಭೂರಿದಯಃ ।

**ಕ್ರಿಯಾಪದ—** ಪ್ರಪಂಚಯತು- ಪಚಿವಿಸ್ತಾರೇ (ವಿಸ್ತಾರ ವಚನೇ) ಅಸ್ಮಾದ್ ಧಾತೋಃ ಣಿಜಂತಾತ್ ಪರಸ್ಮೈಪದಿನಃ ಆಜ್ಞಾಯಾಂ ಲೋಟ್ ಪ್ರಥಮಪುರುಷೇ ಏಕವಚನೇ 'ಪ್ರಪಂಚಯತು' ಇತಿ ರೂಪಂ ।

ಪ್ರ+ಪಂಚಯತು - ಪಂಚಯತಾತ್ ಪಂಚಯತಾಂ ಪಂಚಯಂತು, ಪಂಚಯ - ಪಂಚಯತಾತ್ ಪಂಚಯತಂ ಪಂಚಯತ, ಪಂಚಯಾನಿ ಪಂಚಯಾವ ಪಂಚಯಾಮ ।

ಭವತಿ- ಭೂಧಾತು ವರ್ತಮಾನಕಾಲ ಲಟ್ ।

**ಪ್ರಯೋಗ—** ಪ್ರವೃತ್ತಿಃ ಭವತಿ (ಕರ್ತರಿ) । ಪ್ರವೃತ್ತ್ಯಾ ಭೂಯತೇ (ಭಾವೇ) ।

ಭವಾನ್ ತತ್ಫಲಂ ಪ್ರಪಂಚಯತು (ಕರ್ತರಿ) । ಭವತಾ ತತ್ಫಲಂ ಪ್ರಪಂಚ್ಯತಾಂ (ಕರ್ಮಣಿ) ।

★ ★ ★

**ಅವತಾರಿಕಾ—** ಹೀಗೆ ಪ್ರಶ್ನೆ ಮಾಡಿದ ಸನಕಾದಿ ಮುನಿಗಳಿಗೆ ಶೇಷದೇವರು ಉತ್ತರವನ್ನು ಕೊಡಲು ಆರಂಭಿಸಿದರೆನ್ನುತ್ತಾರೆ.

**ಇತಿ ತೈರುದೀರಿತಮುದಾರಮತಿ-**
**ರ್ವಚನಂ ನಿಶಮ್ಯ ಸ ಜಗಾದ ಗಿರಮ್ ।**
**ಶ್ರುಣುತಾದರೇಣ ಮಹನೀಯತಮಂ**
**ಮಹನೀಯಪಾದಸಮಯಸ್ಯ ಫಲಮ್ ॥ 5 ॥**

**ಪದಚ್ಛೇದ—** ಇತಿ, ತೈಃ, ಉದೀರಿತಂ, ಉದಾರಮತಿಃ, ವಚನಂ, ನಿಶಮ್ಯ, ಸಃ, ಜಗಾದ, ಗಿರಂ, ಶ್ರುಣುತ, ಆದರೇಣ, ಮಹನೀಯತಮಂ, ಮಹನೀಯಪಾದಸಮಯಸ್ಯ, ಫಲಂ ।

**ಅನ್ವಯ—** ಉದಾರಮತಿಃ ಸಃ, ತೈಃ ಉದೀರಿತಂ ವಚನಂ ನಿಶಮ್ಯ, ಮಹನೀಯಪಾದಸಮಯಸ್ಯ ಮಹನೀಯ-ತಮಂ ಫಲಂ, ಆದರೇಣ ಶ್ರುಣುತ ಇತಿ ಗಿರಂ ಜಗಾದ ।

**ಅನ್ವಯಾರ್ಥ—**

**ಉದಾರಮತಿಃ** = ಉತ್ಕೃಷ್ಟ ಬುದ್ಧಿಯುಳ್ಳ
**ಸಃ** = ಆ ಶೇಷದೇವರು,
**ತೈಃ** = ಆ ಸನಕಾದಿ ಮುನಿಗಳಿಂದ
**ಉದೀರಿತಂ** = ಹೇಳಲ್ಪಟ್ಟ
**ವಚನಂ** = ಮಾತನ್ನು
**ನಿಶಮ್ಯ** = ಕೇಳಿ,
**ಮಹನೀಯಪಾದಸಮಯಸ್ಯ** = ಪೂಜ್ಯವಾದ ಸ್ವರೂಪವುಳ್ಳ ಶ್ರೀಮಧ್ವಾಚಾರ್ಯರ ಶಾಸ್ತ್ರದ,
**ಮಹನೀಯತಮಂ** = ಅತ್ಯಂತ ಪೂಜ್ಯವಾದ
**ಫಲಂ** = ಪ್ರಯೋಜನವನ್ನು
**ಆದರೇಣ** = ಭಕ್ತಿಯಿಂದ

ಶ್ರುಣುತ = ಕೇಳಿರಿ,

ಇತಿ = ಎಂದು

ಗಿರಂ = ಮಾತನ್ನು

ಜಗಾದ = ಹೇಳಿದರು.

**ತಾತ್ಪರ್ಯ—** ಆ ಶೇಷದೇವರು ಉತ್ಕೃಷ್ಟವಾದ ವಿಶಾಲವಾದ ಬುದ್ಧಿಯುಳ್ಳವರು. ಅವರು ಸನಕಾದಿ ಮುನಿಗಳ ಮಾತನ್ನು ಆಲಿಸಿದರು. 'ಪೂಜ್ಯ ಸ್ವರೂಪರಾದ ಶ್ರೀಮಧ್ವಾಚಾರ್ಯರ ಸಿದ್ಧಾಂತದ ಅತ್ಯಂತ ಪೂಜ್ಯವಾದ ಫಲವನ್ನು ಭಕ್ತಿಯಿಂದ ಕೇಳಿರಿ' ಎಂದು ಹೇಳಿ ಹೀಗೆ ಹೇಳಲಾರಂಭಿಸಿದರು.

**ವಿಗ್ರಹ—**

**ಉದಾರಮತಿಃ—** ಉದಾರಾ ಮತಿಃ ಯಸ್ಯ ಸಃ ಉದಾರಮತಿಃ ।

**ಮಹನೀಯತಮಂ—** ಮಹಯಿತುಂ ಯೋಗ್ಯಂ ಮಹನೀಯಂ, ಅತಿಶಯೇನ ಮಹನೀಯಂ ಮಹನೀಯತಮಂ, ತತ್ ಮಹನೀಯತಮಂ ।

**ಮಹನೀಯಪಾದಸಮಯಸ್ಯ—** ಮಹನೀಯಃ ಪಾದಃ ಯಸ್ಯ ಸಃ ಮಹನೀಯಪಾದಃ, ಮಹನೀಯಪಾದಸ್ಯ ಸಮಯಃ ಮಹನೀಯಪಾದಸಮಯಃ, ತಸ್ಯ ಮಹನೀಯಪಾದಸಮಯಸ್ಯ । 'ಪಾದ' ವೆಂದರೆ ಸ್ವರೂಪವೆಂದರ್ಥ. ''ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ'' ಎಂದು ಈ ವಿಷಯದಲ್ಲಿ ಕೋಶವು ಪ್ರಮಾಣ. 'ಆದರೋ ಭಜನಂ ಭಕ್ತಿಃ' ಎಂಬ ಕೋಶಾನುಸಾರವಾಗಿ 'ಆದರ' ಎಂದರೆ ಭಕ್ತಿ ಎಂದು ಅರ್ಥ.

**ಕ್ರಿಯಾಪದ—** ಜಗಾದ- ಗದವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕ ಗದಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ 'ಜಗಾದ' ಇತಿ ರೂಪಂ ।

ಜಗಾದ ಜಗದತುಃ ಜಗದುಃ, ಜಗದಿಥ ಜಗದಥುಃ ಜಗದ, ಜಗಾದ-ಜಗದ ಜಗದಿವ ಜಗದಿಮ ॥

**ಶ್ರುಣುತ-** ಶ್ರುಶ್ರವಣೇ ಇತಿ ಶ್ರವಣಾರ್ಥಕಾತ್ ಶ್ರುಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಬಹುವಚನೇ 'ಶ್ರುಣುತ' ಇತಿ ರೂಪಂ ।

ಶ್ರುಣೋತು-ಶ್ರುಣುತಾತ್ ಶ್ರುಣುತಾಂ ಶ್ರುಣ್ವಂತು, ಶ್ರುಣು-ಶ್ರುಣುತಾತ್ ಶ್ರುಣುತಂ ಶ್ರುಣುತ,
ಶ್ರುಣವಾನಿ ಶ್ರುಣವಾವ ಶ್ರುಣವಾಮ ॥

**ಪ್ರಯೋಗ—** ಸಃ ಗಿರಂ ಜಗಾದ (ಕರ್ತರಿ) । ತೇನ ಗೀಃ ಜಗದೇ (ಕರ್ಮಣಿ) ।
ಯೂಯಂ ಮಹನೀಯಪಾದಸಮಯಸ್ಯ ಫಲಂ ಶ್ರುಣುತ (ಕರ್ತರಿ) ।
ಯುಷ್ಮಾಭಿಃ ಮಹನೀಯಪಾದಸಮಯಸ್ಯ ಫಲಂ ಶ್ರೂಯತಾಂ (ಕರ್ಮಣಿ) ।

★ ★ ★

**ಅವತಾರಿಕಾ—** ಆ ಫಲವನ್ನೇ ತಿಳಿಸುತ್ತಾರೆ.

**ತ್ರಿದಿವಾದಿ ಲಭ್ಯಮಪಿ ನಾಸ್ಯ ಫಲಂ**
**ಕಥಿತಂ ಕೃಷೇರಿವ ಪಲಾಲಕುಲಮ್ ।**
**ಸ್ವಫಲಂ ತು ಮುಕ್ತಿಪದಮುಕ್ತಿಪದಂ**
**ಶುಕಶಾರದಾದಿಪರಮಾರ್ಥವಿದಾಮ್ ॥ 6 ॥**

**ಪದಚ್ಛೇದ—** ತ್ರಿದಿವಾದಿ, ಲಭ್ಯಂ, ಅಪಿ, ನ, ಅಸ್ಯ, ಫಲಂ, ಕಥಿತಂ, ಕೃಷೇಃ, ಇವ, ಪಲಾಲಕುಲಂ, ಸ್ವಫಲಂ, ತು, ಮುಕ್ತಿಪದಂ, ಉಕ್ತಿಪದಂ, ಶುಕಶಾರದಾದಿಪರಮಾರ್ಥವಿದಾಂ ।

**ಅನ್ವಯ—** ತ್ರಿದಿವಾದಿ ಲಭ್ಯಂ ಅಪಿ, ಕೃಷೇಃ ಪಲಾಲಕುಲಂ ಇವ, ಅಸ್ಯ ಫಲಂ ನ ಕಥಿತಂ, ಸ್ವಫಲಂ ತು, ಶುಕಶಾರದಾದಿಪರಮಾರ್ಥವಿದಾಂ ಉಕ್ತಿಪದಂ ಮುಕ್ತಿಪದಂ ।

**ಅನ್ವಯಾರ್ಥ—**

**ತ್ರಿದಿವಾದಿ** = ಸ್ವರ್ಗ ಮೊದಲಾದುದು
**ಲಭ್ಯಂ ಅಪಿ** = (ಮಧ್ವ ಶಾಸ್ತ್ರ ಶ್ರವಣಾದಿಗಳಿಂದ) ಸುಲಭವಾಗಿ ಸಿಗುವುದಾದರೂ
**ಕೃಷೇಃ** = ಬೇಸಾಯಕ್ಕೆ
**ಪಲಾಲಕುಲಂ ಇವ** = ಜಳ್ಳಿನಂತೆ
**ಅಸ್ಯ** = ಈ ಮಧ್ವಶಾಸ್ತ್ರಕ್ಕೆ
**ಫಲಂ** = (ಮುಖ್ಯ) ಫಲವಾಗಿ
**ನ ಕಥಿತಂ** = ಹೇಳಲ್ಪಟ್ಟಿಲ್ಲ.
**ಸ್ವಫಲಂ ತು** = ಇದರ ಮುಖ್ಯ ಫಲವಾದರೋ
**ಶುಕಶಾರದಾದಿಪರಮಾರ್ಥವಿದಾಂ** = ಶುಕಮುನಿಗಳೂ, ಸರಸ್ವತಿಯೂ ಮೊದಲಾಗಿವುಳ್ಳ ಸರ್ವೋತ್ತಮನಾದ ಭಗವಂತನೆಂಬ ವರತತ್ತ್ವವನ್ನು ತಿಳಿದಿರುವವರ
**ಉಕ್ತಿಪದಂ** = ಪ್ರಶಂಸೆಯ ಮಾತಿಗೆ ವಿಷಯವಾದ
**ಮುಕ್ತಿಪದಂ** = ಮೋಕ್ಷ ಸ್ಥಾನವು.

**ತಾತ್ಪರ್ಯ—** ಬೇಸಾಯ ಮಾಡಿದ ರೈತನಿಗೆ ಭತ್ತವೇ ಮುಖ್ಯ ಫಲ, ಜಳ್ಳು ತೆನೆ, ಭತ್ತದ ಹುಲ್ಲು ಮೊದಲಾದುದು ಮುಖ್ಯ ಫಲವಲ್ಲ. ಹಾಗೆಯೇ ಶ್ರೀಮಧ್ವಶಾಸ್ತ್ರ ಶ್ರವಣಾದಿಗಳಿಂದ ಸ್ವರ್ಗ ಮೊದಲಾದುದು ಸುಲಭವಾಗಿ ಸಿಗುವುದಾದರೂ, ಅದು ಈ ಮಧ್ವಶಾಸ್ತ್ರದ ಸೇವನೆಗೆ ಮುಖ್ಯ ಫಲವಲ್ಲ. ಶ್ರೀಶುಕಮುನಿಗಳು, ಶ್ರೀಸರಸ್ವತಿ ಮೊದಲಾದ ಮಹನೀಯರು ಮಧ್ವ ಶಾಸ್ತ್ರದ ಪರಮಮುಖ್ಯತತ್ವನಾದ, ಸರ್ವೋತ್ತಮನಾದ, ನಾರಾಯಣನನ್ನು ಅರಿತವರು. ಶ್ರೀಮಧ್ವಶಾಸ್ತ್ರ ಶ್ರವಣಾದಿಗಳನ್ನು ಮಾಡಿದವರಿಗೆ ಸಿಗತಕ್ಕ ಮುಖ್ಯ ಫಲವಾದ ಮೋಕ್ಷದ ಸ್ವರೂಪ ಸ್ಥಿತಿಯನ್ನು ಅರಿತವರು. ಅವರು ತಮ್ಮ ಮಾತುಗಳಿಂದ ಬಹಳವಾಗಿ ಹೊಗಳಿರತಕ್ಕ ಮುಕ್ತಿಸ್ಥಾನವಾದ ವೈಕುಂಠಲೋಕವೇ ಆ ಮಧ್ವಶಾಸ್ತ್ರ, ಶ್ರವಣಾದಿಗಳನ್ನು ಮಾಡಿರತಕ್ಕವರಿಗೆ ಸಿಗತಕ್ಕ ಮುಖ್ಯವಾದ ಫಲವು.

**ವಿಶೇಷಾಂಶ—**

ಭಾಗವತದಲ್ಲಿ ಶುಕಾಚಾರ್ಯರು ಮುಕ್ತಿಯನ್ನು ಈ ರೀತಿ ಪ್ರಶಂಸಿಸಿದ್ದಾರೆ.

"ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।
ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ" ॥

**ವಿಗ್ರಹ—**

**ತ್ರಿದಿವಾದಿ—** ತೃತೀಯಾ ದ್ಯೌಃ ತ್ರಿದಿವಃ, ತ್ರಿದಿವಃ ಆದಿಃ ಯಸ್ಯ ತತ್ ತ್ರಿದಿವಾದಿ । 'ಸ್ವರವ್ಯಯಂ ಸ್ವರ್ಗನಾಕ ತ್ರಿದಿವತ್ರಿದಶಾಲಯಾ' ಎಂದು ಅಮರ.
**ಲಭ್ಯಂ—** ಲಬ್ಧುಂ ಯೋಗ್ಯಂ ಲಭ್ಯಂ ।
**ಪಲಾಲಕುಲಂ—** ಪಲಾಲಸ್ಯ ಕುಲಂ ಪಲಾಲಕುಲಂ । 'ಪಲಾಲೋಽಸ್ತ್ರೀ ಸ ನಿಷ್ಫಲಃ' ಎಂದು ಅಮರಕೋಶ.

**ಸ್ವಫಲಂ**— ಸ್ವಸ್ಯ ಫಲಂ ಸ್ವಫಲಂ ।

**ಮುಕ್ತಿಪದಂ**— ಮುಕ್ತೇಃ ಪದಂ ಮುಕ್ತಿಪದಂ ।

**ಉಕ್ತಿಪದಂ**— ಉಕ್ತೇಃ ಪದಂ ಉಕ್ತಿಪದಂ ।

**ಶುಕಶಾರದಾದಿಪರಮಾರ್ಥವಿದಾಂ**— ಶುಕಶ್ಚ ಶಾರದಾ ಚ ಶುಕಶಾರದೇ, ತೇ ಆದೀ ಯೇಷಾಂ ತೇ ಶುಕಶಾರದಾದಯಃ, ಪರಮಶ್ಚಾಸೌ ಅರ್ಥಶ್ಚ ಪರಮಾರ್ಥಃ, ಪರಮಾರ್ಥಂ ವಿದಂತೀತಿ ಪರಮಾರ್ಥವಿದಃ, ಶುಕಶಾರದಾದಯಶ್ಚ ತೇ ಪರಮಾರ್ಥವಿದಶ್ಚ ಶುಕಶಾರದಾದಿಪರಮಾರ್ಥವಿದಃ ತೇಷಾಂ ।

★ ★ ★

**ಅವತಾರಿಕಾ**— ಮೋಕ್ಷವು ಲಭಿಸುವ ರೀತಿಯನ್ನು ವಿವರಿಸುತ್ತಾರೆ.

**ಪರಮಾಗಮಾರ್ಥವರಶಾಸ್ತ್ರಮಿದಂ**
**ಭಜತಾಮಮಾನವಕಲಾರಚಿತಮ್ ।**
**ವ್ರಜತಾಮಹೋ ಪರಮವೈಷ್ಣವತಾಂ**
**ರತಯೇ ಸ್ವಲೋಕಮಜಿತೋ ದಿಶತಿ ॥ 7 ॥**

**ಪದಚ್ಛೇದ**— ಪರಮಾಗಮಾರ್ಥವರಶಾಸ್ತ್ರಂ, ಇದಂ, ಭಜತಾಂ, ಅಮಾನವಕಲಾರಚಿತಂ, ವ್ರಜತಾಂ, ಅಹೋ, ಪರಮವೈಷ್ಣವತಾಂ, ರತಯೇ, ಸ್ವಲೋಕಂ, ಅಜಿತಃ, ದಿಶತಿ ।

**ಅನ್ವಯ**— ಅಜಿತಃ, ಅಮಾನವಕಲಾರಚಿತಂ ಇದಂ ಪರಮಾಗಮಾರ್ಥವರಶಾಸ್ತ್ರಂ, ಭಜತಾಂ, ಪರಮವೈಷ್ಣವತಾಂ ವ್ರಜತಾಂ ರತಯೇ, ಸ್ವಲೋಕಂ ದಿಶತಿ, ಅಹೋ ।

**ಅನ್ವಯಾರ್ಥ**—

**ಅಜಿತಃ** = ಶ್ರೀಮನ್ನಾರಾಯಣನು

**ಅಮಾನವಕಲಾರಚಿತಂ** = ಮನುಷ್ಯನಲ್ಲದ ಜೀವೋತ್ತಮನಾದ ಮುಖ್ಯಪ್ರಾಣನ ಅಂಶಸ್ವರೂಪರಾದ ಶ್ರೀಮಧ್ವಾಚಾರ್ಯರಿಂದ ಮಾಡಲ್ಪಟ್ಟ

**ಇದಂ** = ಈ

**ಪರಮಾಗಮಾರ್ಥವರಶಾಸ್ತ್ರಂ** = ಉತ್ತಮ ವೇದದ ಅರ್ಥಸ್ವರೂಪವಾದ ಉತ್ತಮ ಶಾಸ್ತ್ರವನ್ನು

**ಭಜತಾಂ** = ಶ್ರವಣಮನನಾದಿಗಳಿಂದ ಸೇವಿಸುವ,

**ಪರಮವೈಷ್ಣವತಾಂ** = ಮುಖ್ಯವಾದ ವಿಷ್ಣು ಭಕ್ತತ್ವವನ್ನು

**ವ್ರಜತಾಂ** = ಹೊಂದುವ ಸಜ್ಜನರ

**ರತಯೇ** = ಸುಖಕ್ಕಾಗಿ,

**ಸ್ವಲೋಕಂ** = ತನ್ನ ಲೋಕವಾದ ವೈಕುಂಠವನ್ನು

**ದಿಶತಿ** = ಕೊಡುತ್ತಾನೆ

**ಅಹೋ** = ಆಶ್ಚರ್ಯವು.

**ತಾತ್ಪರ್ಯ**— ಈ ಶ್ರೇಷ್ಠವಾದ ಶಾಸ್ತ್ರವನ್ನು ಜೀವೋತ್ತಮರಾದ ಶ್ರೀಮುಖ್ಯಪ್ರಾಣದೇವರ ಅಂಶ ಸ್ವರೂಪರಾದ ಶ್ರೀಮಧ್ವಾಚಾರ್ಯರು ರಚಿಸಿರುತ್ತಾರೆ. ಉತ್ತಮವಾದ ವೇದಾದಿ ಶಾಸ್ತ್ರಗಳ ಸಾರರೂಪವಾದ ಉತ್ತಮಾರ್ಥವನ್ನು

ಶ್ರೀಮಧ್ವಶಾಸ್ತ್ರವು ಒಳಗೊಂಡಿದೆ. ಈ ಶಾಸ್ತ್ರದ ಶ್ರವಣ, ಮನನ ಮತ್ತು ನಿಧಿಧ್ಯಾಸನೆಗಳನ್ನು ಮಾಡಬೇಕು. ಅನನ್ಯ ಭಕ್ತರಾದ ಮುಖ್ಯ ವೈಷ್ಣವರಾಗಬೇಕು. ಇಂತಹವರಿಗೆ ಸ್ವರೂಪಸುಖಾನುಭವಕ್ಕಾಗಿ ಶ್ರೀಮನ್ನಾರಾಯಣನು ತನ್ನ ಲೋಕವಾದ ವೈಕುಂಠಲೋಕವನ್ನು ಕೊಡುವನು. ಪರಮಾತ್ಮನ ಕೃಪೆಯು ಎಷ್ಟೊಂದು ಆಶ್ಚರ್ಯಕರವಾಗಿದೆ!

**ವಿಗ್ರಹ—**

**ಪರಮಾಗಮಾರ್ಥವರಶಾಸ್ತ್ರಂ—** ಪರಮಾಶ್ಚ ತೇ ಆಗಮಾಶ್ಚ ಪರಮಾಗಮಾಃ, ಪರಮಾಗಮಾನಾಂ ಅರ್ಥಃ ಯಸ್ಮಿನ್ ತತ್ ಪರಮಾಗಮಾರ್ಥಂ, ವರಂ ಚ ತತ್ ಶಾಸ್ತ್ರಂ ಚ ವರಶಾಸ್ತ್ರಂ, ಪರಮಾಗಮಾರ್ಥಂ ಚ ತತ್ ವರಶಾಸ್ತ್ರಂ ಚ ಪರಮಾಗಮಾರ್ಥವರಶಾಸ್ತ್ರಂ ।

**ಅಮಾನವಕಲಾರಚಿತಂ—** ನ ಮಾನವಃ ಅಮಾನವಃ, ಅಮಾನವಸ್ಯ ಕಲಾ ಅಮಾನವಕಲಾ, ಅಮಾನವ-ಕಲಯಾ ರಚಿತಂ ಅಮಾನವಕಲಾರಚಿತಂ ।

**ಪರಮವೈಷ್ಣವತಾ—** ವಿಷ್ಣೋಃ ಇಮೇ ವೈಷ್ಣವಾಃ, ಪರಮಾಶ್ಚ ತೇ ವೈಷ್ಣವಾಶ್ಚ ಪರಮವೈಷ್ಣವಾಃ, ಪರಮ-ವೈಷ್ಣವಾನಾಂ ಭಾವಃ ಪರಮವೈಷ್ಣವತಾ, ತಾಂ ಪರಮವೈಷ್ಣವತಾಂ ।

**ಸ್ವಲೋಕಂ—** ಸ್ವಸ್ಯ ಲೋಕಃ ಸ್ವಲೋಕಃ, ತಂ ಸ್ವಲೋಕಂ ।

**ಕ್ರಿಯಾಪದ— ದಿಶತಿ-** ದಿಶ ಅತಿಸರ್ಜನೇ, ಪರಸ್ಮೈಪದೀ, ಸಕರ್ಮಕಃ ಲಟ್ ಪ್ರಥಮಪುರುಷೇ ಏಕವಚನೇ ದಿಶತಿ ಇತಿ ರೂಪಂ ।

ದಿಶತಿ ದಿಶತಃ ದಿಶಂತಿ, ದಿಶಸಿ ದಿಶಥಃ ದಿಶಥ, ದಿಶಾಮಿ ದಿಶಾವಃ ದಿಶಾಮಃ ॥

**ಪ್ರಯೋಗ—** ಅಜಿತಃ ಸ್ವಲೋಕಂ ದಿಶತಿ (ಕರ್ತರಿ) ।
ಅಜಿತೇನ ಸ್ವಲೋಕಃ ದಿಶ್ಯತೇ (ಕರ್ಮಣಿ) ।

★ ★ ★

**ಅವತಾರಿಕಾ—** ಮಧ್ವಶಾಸ್ತ್ರ ಶ್ರವಣಾದಿಗಳಿಗೆ ವೈಕುಂಠ ಲೋಕಪ್ರಾಪ್ತಿಯೇ ಫಲವೆಂದು ಹೇಳಿದಿರಿ. ಆದರೆ ಆ ವೈಕುಂಠಲೋಕದಲ್ಲಿ ಏನು ಅತಿಶಯವಿದೆ? ಎಂದು ಪ್ರಶ್ನಿಸಿದರೆ ಶ್ರೀಶೇಷದೇವರು ವೈಕುಂಠಲೋಕದ ಅತಿಶಯವನ್ನು ವರ್ಣಿಸುತ್ತಾರೆ. (ವೈಕುಂಠವರ್ಣನೆ)

**ನನು ತತ್ರ ವಿಶ್ವವಿಭವೈಕಪದಂ**
**ಪರಿ(ಪ್ರತಿ)ಭಾತಿ ಪೂರ್ಣಪುರುಷಸ್ಯ ಪುರೀ ।**
**ಉಪಲಭ್ಯತೇ ಯದುಪಮಾನಪದಂ**
**ಪ್ರತಿಬಿಂಬಮೇವ ಮಣಿವಪ್ರಗತಮ್ ॥ 8 ॥**

**ಪದಚ್ಛೇದ—** ನನು, ತತ್ರ, ವಿಶ್ವವಿಭವೈಕಪದಂ, ಪರಿಭಾತಿ (ಪ್ರತಿಭಾತಿ) ಪೂರ್ಣಪುರುಷಸ್ಯ, ಪುರೀ, ಉಪಲಭ್ಯತೇ, ಯದುಪಮಾನಪದಂ, ಪ್ರತಿಬಿಂಬಂ, ಏವ, ಮಣಿವಪ್ರಗತಂ ।

**ಅನ್ವಯ—** ತತ್ರ, ವಿಶ್ವವಿಭವೈಕಪದಂ ಪೂರ್ಣಪುರುಷಸ್ಯ ಪುರೀ ಪರಿಭಾತಿ (ಪ್ರತಿಭಾತಿ) ನನು, ಮಣಿವಪ್ರಗತಂ ಪ್ರತಿಬಿಂಬಂ ಏವ, ಯದುಪಮಾನಪದಂ ಉಪಲಭ್ಯತೇ ।

**ಅನ್ವಯಾರ್ಥ—**

ತತ್ರ = ಆ ವೈಕುಂಠ ಲೋಕದಲ್ಲಿ

**ವಿಶ್ವವಿಭವೈಕಪದಂ** = ಎಲ್ಲಾ ಐಶ್ವರ್ಯಗಳಿಗೆ ಮುಖ್ಯ ಆಶ್ರಯವಾದ

**ಪೂರ್ಣಪುರುಷಸ್ಯ** = ಶ್ರೀಹರಿಯ

**ಪುರೀ** = ಪಟ್ಟಣವು

**ಪರಿಭಾತಿ(ಪ್ರತಿಭಾತಿ) ನನು** = ಪ್ರಕಾಶಿಸುತ್ತಾ ಇರುತ್ತದೆಯಷ್ಟೆ!

**ಮಣಿವಪ್ರಗತಂ** = ರತ್ನಮಯವಾದ ಪ್ರಾಕಾರದಲ್ಲಿ ಇರುವ

**ಪ್ರತಿಬಿಂಬಂ ಏವ** = ಪ್ರತಿಬಿಂಬವೇ,

**ಯತ್** = ಯಾವ ಪಟ್ಟಣದ

**ಉಪಮಾನಪದಂ** = ಉಪಮಾನದ ಸ್ಥಾನವಾಗಿ

**ಉಪಲಭ್ಯತೇ** = ಹೊಂದಲ್ಪಡುತ್ತದೆ.

**ತಾತ್ಪರ್ಯ—** ಸಕಲಗುಣ ಪೂರ್ಣನಾದ ಶ್ರೀಹರಿಯ ನಿತ್ಯಸನ್ನಿಧಾನ ಪಾತ್ರವಾದ ವೈಕುಂಠಲೋಕದಲ್ಲಿ ಸಮಸ್ತ ಐಶ್ವರ್ಯಗಳಿಂದಲೂ, ಶೋಭಾತಿಶಯಗಳಿಂದಲೂ ತುಂಬಿರುವ ಶ್ರೀಮನ್ನಾರಾಯಣನ ಪಟ್ಟಣವು ಪ್ರಕಾಶಮಾನವಾಗಿರುತ್ತದೆ. ಅದಕ್ಕೆ ಸರಿದೂಗುವ ಮತ್ತೊಂದು ಪಟ್ಟಣವು ಮತ್ತೆಲ್ಲಿಯೂ ಇಲ್ಲ. ಆದುದರಿಂದ ಕವಿಗಳು ವರ್ಣಿಸುವಾಗ ಆ ಪಟ್ಟಣದ ರತ್ನ ನಿರ್ಮಿತವಾದ ಕೋಟೆಯ ಗೋಡೆಯಲ್ಲಿ ಪ್ರತಿಬಿಂಬಿತವಾದ ಆ ಪಟ್ಟಣದ ಸ್ವರೂಪವನ್ನೇ ಆ ಪಟ್ಟಣಕ್ಕೆ ಹೋಲಿಕೆಯ ವಸ್ತುವನ್ನಾಗಿ (ಉಪಮಾನವನ್ನಾಗಿ) ಕೊಡಬೇಕಾಗಿದೆ. ಬೇರೊಂದು ವಸ್ತುವು ಆ ಪಟ್ಟಣಕ್ಕೆ ಉಪಮಾನವಾಗಲು ಸಾಧ್ಯವಿಲ್ಲ.

**ವಿಗ್ರಹ—**

**ವಿಶ್ವವಿಭವೈಕಪದಂ—** ವಿಶ್ವೇ ಚ ತೇ ವಿಭವಾಶ್ಚ ವಿಶ್ವವಿಭವಾಃ, ಏಕಂ ಚ ತತ್ ಪದಂ ಚ ಏಕಪದಂ, ವಿಶ್ವವಿಭವಾನಾಂ ಏಕಪದಂ ವಿಶ್ವವಿಭವೈಕಪದಂ । ಏಕಶಬ್ದಕ್ಕೆ ಇಲ್ಲಿ ಮುಖ್ಯ ಎಂದು ಅರ್ಥ. 'ಏಕೇ ಮುಖ್ಯಾನ್ಯಕೇವಲಾಃ' ಎಂದು ಅಮರ. ವಿಭವ ಶಬ್ದಕ್ಕೆ 'ಧನಂ ಹಿರಣ್ಯಂ ಚ ವಸು ವಿಭವಃ' ಎಂದು ಹಲಕೋಶ.

**ಪೂರ್ಣಪುರುಷಸ್ಯ—** ಪೂರ್ಣಶ್ಚಾಸೌ ಪುರುಷಶ್ಚ ಪೂರ್ಣಪುರುಷಃ, ತಸ್ಯ ಪೂರ್ಣಪುರುಷಸ್ಯ । ಪುರೀ ಶಬ್ದಕ್ಕೆ ಪಟ್ಟಣ ಎಂದು ಅರ್ಥ. 'ಪೂಃ ಸ್ತ್ರೀ ಪುರೀನಗರ್ಯೌ ವಾ' ಎಂದು ಅಮರಕೋಶ.

**ಯದುಪಮಾನಪದಂ—** ಉಪಮಾನಸ್ಯ ಪದಂ ಉಪಮಾನಪದಂ, ಯಸ್ಯಾಃ ಉಪಮಾನಪದಂ ಯದುಪಮಾನಪದಂ ।

**ಮಣಿವಪ್ರಗತಂ—** ಮಣಿಮಯಶ್ಚಾಸೌ ವಪ್ರಶ್ಚ ಮಣಿವಪ್ರಃ, ಮಣಿವಪ್ರೇ ಗತಂ ಮಣಿವಪ್ರಗತಂ । ವಪ್ರ ಎಂದರೆ ಪ್ರಾಕಾರ ।

**ಕ್ರಿಯಾಪದ— ಪ್ರತಿಭಾತಿ (ಪರಿಭಾತಿ)-** ಪರಿ+(ಪ್ರತಿ)ಭಾತಿ. ಭಾತಃ ಭಾಂತಿ ಇತ್ಯಾದಿ ಪರಿ(ಪ್ರತಿ) ಉಪಸರ್ಗಪೂರ್ವಕಾತ್ ಭಾದೀಪ್ತೌ ಇತಿ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ, ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ಪ್ರತಿಭಾತಿ (ಪರಿಭಾತಿ) ಇತಿ ರೂಪಂ ।

**ಉಪಲಭ್ಯತೇ-** ಉಪ ಇತ್ಯುಪಸರ್ಗಪೂರ್ವಕಾತ್ ಡುಲಭಷ್ ಪ್ರಾಪ್ತೌ, ಇತಿಪ್ರಾಪ್ತ್ಯರ್ಥಕ ಲಭ್ ಧಾತುಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ಲಟ್ ಪ್ರಥಮಪುರುಷೇ ಏಕವಚನೇ 'ಲಭ್ಯತೇ' ಇತಿ ರೂಪಂ ।

ಲಭ್ಯತೇ ಲಭ್ಯೇತೇ ಲಭ್ಯಂತೇ, ಲಭ್ಯಸೇ ಲಭ್ಯೇಥೇ ಲಭ್ಯಧ್ವೇ, ಲಭ್ಯೇ ಲಭ್ಯಾವಹೇ ಲಭ್ಯಾಮಹೇ ॥

ಪ್ರಯೋಗ— ಪೂರ್ಣಪುರುಷಸ್ಯ ಪುರೀ ಪರಿಭಾತಿ ನನು (ಕರ್ತರಿ) ।
ಪೂರ್ಣಪುರುಷಸ್ಯ ಪುರ್ಯಾ ಪರಿಭಾಯತೇ ನನು (ಭಾವೇ) ।
(ಕವಿಭಿಃ) ಪ್ರತಿಬಿಂಬಮೇವ ಯದುಪಮಾನಪದಂ ಉಪಲಭ್ಯತೇ (ಕರ್ಮಣಿ) ।
(ಕವಯಃ) ಪ್ರತಿಬಿಂಬಮೇವ ಯದುಮಾನಪದಂ ಉಪಲಭಂತೇ (ಕರ್ತರಿ) ।

★ ★ ★

ಅವತಾರಿಕಾ— ವೈಕುಂಠ ಲೋಕದ ಮನೆಗಳನ್ನು ವರ್ಣಿಸುತ್ತಾರೆ.

**ಸಿತಸೌಧಸಂತತಿರುಚಾ ಸ್ಫುರಿತಾ**
**ಪರಿತೋಽರುಣಾಶ್ಮಗೃಹಪಂಕ್ತಿರುಚಿಃ ।**
**ಇಹ ಮಚ್ಛರೀರವಲಯೇ ಲಸಿತಾ-**
**ಮನುಯಾತಿ ಮೂರ್ತಿಮಸುರಾಸುಹೃತಃ**
**(ಅಸುರಾಸುಹೃದಃ) ॥ 9 ॥**

ಪದಚ್ಛೇದ— ಸಿತಸೌಧಸಂತತಿರುಚಾ, ಸ್ಫುರಿತಾ, ಪರಿತಃ, ಅರುಣಾಶ್ಮಗೃಹಪಂಕ್ತಿರುಚಿಃ, ಇಹ, ಮಚ್ಛರೀರವಲಯೇ, ಲಸಿತಾಂ, ಅನುಯಾತಿ, ಮೂರ್ತಿಂ, ಅಸುರಾಸುಹೃತಃ ।

ಅನ್ವಯ— ಪರಿತಃ ಸಿತಸೌಧಸಂತತಿರುಚಾ ಸ್ಫುರಿತಾ, ಅರುಣಾಶ್ಮಗೃಹಪಂಕ್ತಿರುಚಿಃ, ಇಹ, ಮಚ್ಛರೀರವಲಯೇ, ಲಸಿತಾಂ, ಅಸುರಾಸುಹೃತಃ, ಮೂರ್ತಿಂ, ಅನುಯಾತಿ ।

ಅನ್ವಯಾರ್ಥ—

**ಪರಿತಃ, ಸಿತಸೌಧಸಂತತಿರುಚಾ** = ಸುತ್ತಲೂ ಬೆಳ್ಳಗಿರುವ ಸುಣ್ಣವನ್ನು ಹಚ್ಚಿರುವ ಪ್ರಾಕಾರಗಳು (ಮಹಡಿ ಮನೆಗಳ ಅಥವಾ ಸ್ಫಟಿಕ ಮಣಿಗಳಿಂದ ನಿರ್ಮಿತವಾದ ಮಹಡಿ ಮನೆಗಳ) ಸಮೂಹಗಳ ಕಾಂತಿಯಿಂದ

**ಸ್ಫುರಿತಾ** = ಪ್ರಕಾಶಗೊಂಡಿರುವ

**ಅರುಣಾಶ್ಮ ಗೃಹಪಂಕ್ತಿರುಚಿಃ** = ಪದ್ಮರಾಗಮಣಿಗಳ ಮನೆಗಳ ಸಾಲುಗಳ ಕಾಂತಿಯು,

**ಇಹ** = ಈ

**ಮಚ್ಛರೀರವಲಯೇ** = ನನ್ನ ಶರೀರದ ಸುತ್ತಿನಲ್ಲಿ (ಸುರುಳಿಯಲ್ಲಿ)

**ಲಸಿತಾಂ** = ಪ್ರಕಾಶಿಸುತ್ತಿರುವ,

**ಅಸುರಾಸುಹೃತಃ** = ದಾನವರ ಪ್ರಾಣಗಳನ್ನು ಅಪಹರಿಸುವ (ಅಸುರಾಸುಹೃದಃ = ದಾನವರ ಶತ್ರುವಾದ) ಶ್ರೀಮನ್ನಾರಾಯಣನ

**ಮೂರ್ತಿಂ** = ಶರೀರವನ್ನು

**ಅನುಯಾತಿ** = ಹೋಲುತ್ತದೆ.

ತಾತ್ಪರ್ಯ— ಆ ವೈಕುಂಠಲೋಕದಲ್ಲಿ ಪದ್ಮರಾಗ ಮಣಿಗಳಿಂದ ನಿರ್ಮಿಸಿದ ಮನೆಗಳ ಸಾಲುಗಳಿವೆ. ಅವುಗಳ ಸುತ್ತಲೂ ಸ್ಫಟಿಕಮಣಿಮಯವಾದ ಮಹಡಿಯ ಮನೆಗಳಿವೆ. (ಅಥವಾ ಸುಣ್ಣ ಬಳಿದ ಎತ್ತರವಾದ ಪ್ರಾಕಾರಗಳು, ಅಥವಾ ಮಹಡಿಯ ಮನೆಗಳಿವೆ). ಅವುಗಳ ಬಿಳಿಯ ಪ್ರಕಾಶವು ಪದ್ಮರಾಗಮಣಿಗಳ ಕಾಂತಿಯಿಂದ ಕೆಂಪಾದ ಮಹಡಿಗಳ ಮೇಲೆ

ಬದ್ಧಿರುತ್ತದೆ. ಇದು ನನ್ನ ಬಿಳಿಯಾದ ದೇಹದ ಸುರುಳಿಯ ಮೇಲೆ ಮಲಗಿರುವ, ಉದಯಿಸುತ್ತಿರುವ ಸೂರ್ಯನಂತೆ ಕೆಂಪಾದ ನಾರಾಯಣನ ಶರೀರವನ್ನು ಹೋಲುತ್ತದೆ. (ಬೆಳ್ಳಗಿರುವ ಶೇಷನ ಮೇಲೆ ಕೆಂಪಾಗಿರುವ ನಾರಾಯಣನು ಮಲಗಿದ್ದರೆ ಹೇಗೋ ಹಾಗೆ ಬಿಳಿಯ ಮಹಡಿಗಳ ಮಧ್ಯದಲ್ಲಿ ಕೆಂಪಾದ ಮಹಡಿಗಳು ಶೋಭಿಸುತ್ತವೆ ಎಂದು ತಾತ್ಪರ್ಯ).

**ವಿಗ್ರಹ—**

**ಸಿತಸೌಧಸಂತತಿರುಚಾ—** ಸಿತಾಶ್ಚ ತೇ ಸೌಧಾಶ್ಚ ಸಿತಸೌಧಾಃ, ಸಿತಸೌಧಾನಾಂ ಸಂತತಿಃ ಸಿತಸೌಧಸಂತತಿಃ, ಸಿತಸೌಧಸಂತತೇಃ ರುಕ್ ಸಿತಸೌಧಸಂತತಿರುಕ್ ತಯಾ ಸಿತಸೌಧಸಂತತಿರುಚಾ (ಸೌಧ ಎಂಬಲ್ಲಿರುವ ಸುಧಾ ಶಬ್ದಕ್ಕೆ ಸುಣ್ಣ ಎಂದರ್ಥ, 'ಸುಧಾ ಲೇಪೋಽಮೃತಂ, ಸ್ನುಹೀ' ಎಂದು ಅಮರ.)

**ಅರುಣಾಶ್ಮಗೃಹಪಂಕ್ತಿರುಚಃ—** ಅರುಣಾಶ್ಚ ತೇ ಅಶ್ಮಾನಶ್ಚ ಅರುಣಾಶ್ಮಾನಃ, ಅರುಣಾಶ್ಮನಾಂ ಗೃಹಾಣಿ ಅರುಣಾಶ್ಮಗೃಹಾಣಿ, ಅರುಣಾಶ್ಮಗೃಹಾಣಾಂ ಪಂಕ್ತಿಃ ಅರುಣಾಶ್ಮಗೃಹಪಂಕ್ತಿಃ, ಅರುಣಾಶ್ಮಗೃಹಪಂಕ್ತೇಃ ರುಕ್ ಅರುಣಾಶ್ಮಗೃಹಪಂಕ್ತಿರುಚಃ । ರುಕ್ ಮತ್ತು ರುಚಿ ಎಂದರೆ ಕಾಂತಿ, 'ಸ್ಯುಃ ಪ್ರಭಾರುಗ್ರುಚಿ-ಸ್ತ್ವಿಡ್ ಭಾ ಭಾಶ್ಚ ವಿದ್ಯುತಿದೀಪ್ತಯಃ' ಎಂದು ಅಮರ.

**ಮಚ್ಛರೀರವಲಯೇ—** ಮಮ ಶರೀರಂ ಮಚ್ಛರೀರಂ, ಮಚ್ಛರೀರಸ್ಯ ವಲಯಃ ಮಚ್ಛರೀರವಲಯಃ, ತಸ್ಮಿನ್ ಮಚ್ಛರೀರವಲಯೇ ।

**ಅಸುರಾಸುಹೃತಃ—** ಅಸುರಾಣಾಂ ಅಸವಃ ಅಸುರಾಸವಃ, ಅಸುರಾಸೂನ್ ಹರತೀತಿ ಅಸುರಾಸುಹೃತ್ (ತಕಾರಾಂತ), ತಸ್ಯ ಅಸುರಾಸುಹೃತಃ । ಅಸು ಎಂದರೆ ಪ್ರಾಣ, 'ಪುಂಸಿ ಭೂಮ್ನ್ಯಸವಃ ಪ್ರಾಣಾಃ', ಎಂದು ಅಮರ. (ಅಸುರಾಸುಹೃದಃ ಎಂಬ ಪಾಠದಲ್ಲಿ ನ ಸುಹೃತ್ ಅಸುಹೃತ್, ಅಸುರಾಣಾಂ ಅಸುಹೃತ್ ಅಸುರಾಸುಹೃತ್, (ದಕಾರಾಂತ) ತಸ್ಯ ಅಸುರಾಸುಹೃದಃ ।

**ಕ್ರಿಯಾಪದ—** ಅನುಯಾತಿ- ಅನು+ಯಾತಿ ಯಾತಃ ಯಾಂತಿ ಇತ್ಯಾದಿ ಯಾ ಪ್ರಾಣೇ ಲಟ್ ।।

**ಪ್ರಯೋಗ—** ಅರುಣಾಶ್ಮಗೃಹಪಂಕ್ತಿರುಚಃ ಅಸುರಾಸುಹೃತಃ ಮೂರ್ತಿಂ ಅನುಯಾತಿ (ಕರ್ತರಿ) ।
ಅರುಣಾಶ್ಮಗೃಹಪಂಕ್ತಿರುಚ್ಯಾ ಅಸುರಾಸುಹೃತಃ ಮೂರ್ತಿಃ ಅನುಯಾಯತೇ (ಕರ್ಮಣಿ) ।

★ ★ ★

**ಅವತಾರಿಕಾ—** ಆ ಮನೆಗಳ ಮಾಡುಗಳನ್ನು ವರ್ಣಿಸುತ್ತಾರೆ.

**ಶಬಲಾ ವಲೀಕಘಟಿತಸ್ಫಟಿಕದ್ಯುತಿಭಿರ್ಹರಿನ್ಮಣಿಮಯೀ ವಲಭೀ ।**
**ಪ್ರತಿಸದ್ಮ ಭಾತಿ ಯಮುನಾ ಮಿಲಿತಾ ಸಿತಸೌರಸೈಂಧವಪಯೋಭಿರಿವ ॥ 10 ॥**

**ಪದಚ್ಛೇದ—** ಶಬಲಾ, ವಲೀಕಘಟಿತಸ್ಫಟಿಕದ್ಯುತಿಭಿಃ, ಹರಿನ್ಮಣಿಮಯೀ, ವಲಭೀ, ಪ್ರತಿಸದ್ಮ, ಭಾತಿ, ಯಮುನಾಮಿಲಿತಾ, ಸಿತಸೌರಸೈಂಧವಪಯೋಭಿಃ, ಇವ ।

**ಅನ್ವಯ—** ವಲೀಕಘಟಿತಸ್ಫಟಿಕದ್ಯುತಿಭಿಃ ಶಬಲಾ, ಹರಿನ್ಮಣಿಮಯೀ ವಲಭೀ ಪ್ರತಿಸದ್ಮ, ಸಿತಸೌರಸೈಂಧವ-ಪಯೋಭಿಃ ಮಿಲಿತಾ ಯಮುನಾ ಇವ ಭಾತಿ ।

**ಅನ್ವಯಾರ್ಥ—**

**ವಲೀಕಘಟಿತಸ್ಫಟಿಕದ್ಯುತಿಭಿಃ** = ಮನೆಯ ಸೂರಿನಲ್ಲಿ (ಛಾವಣಿಯ ತುದಿಯಲ್ಲಿ) ಖಚಿತವಾಗಿ ಮಾಡಿರುವ (ಕಟ್ಟಿರುವ) (ಬಿಳಿಯದಾದ) ಸ್ಫಟಿಕಮಣಿಗಳ ಕಾಂತಿಗಳಿಂದ

**ಶಬಲಾ** = ಮಿಶ್ರವಾದ,

**ಹರಿನ್ಮಣಿಮಯೀ** = ಪಚ್ಚೆಮಣಿಯಿಂದ ರಚಿತವಾದ

**ವಲಭೀ** = (ಮನೆಯ ಮೇಲ್ಛಾವಣಿಯು) ಮನೆಯ ಹೊದ್ದಿಕೆಯು

**ಪ್ರತಿಸದ್ಮ** = ಪ್ರತಿಯೊಂದು ಮನೆಯಲ್ಲಿಯೂ

**ಸಿತಸೌರಸೈಂಧವಪಯೋಭಿಃ** = ಬೆಳ್ಳಗಿರುವ ಸುರಸಿಂಧುವಾದ (ದೇವನದಿ) ಗಂಗೆಯ ನೀರುಗಳಿಂದ

**ಮಿಲಿತಾ** = ಸೇರಿದ

**ಯಮುನಾ ಇವ** = ಯಮುನಾ ನದಿಯಂತೆ

**ಭಾತಿ** = ಪ್ರಕಾಶಿಸುತ್ತದೆ.

**ತಾತ್ಪರ್ಯ—** ಆ ವೈಕುಂಠಲೋಕದಲ್ಲಿ ಪ್ರತಿಯೊಂದು ಭವನದ ಮೇಲ್ಛಾವಣಿಯನ್ನು ಪಚ್ಚೆಮಣಿಯಿಂದ ನಿರ್ಮಿಸಿರುತ್ತಾರೆ. ಆ ಛಾವಣಿಗಳ ತುದಿಯ ಸೂರಿನಲ್ಲಿ ಸ್ಫಟಿಕ ಮಣಿಗಳನ್ನು ಜೋಡಿಸಿ ಮನೆಗಳನ್ನು ಅಲಂಕರಿಸಿರುತ್ತಾರೆ. ಛಾವಣಿಯ ಪಚ್ಚೆಮಣಿಯ ಕಾಂತಿಯೊಂದಿಗೆ ಸ್ಫಟಿಕ ಮಣಿಗಳ ಕಾಂತಿಯು ಸೇರಿದಾಗ ಬೆಳ್ಳಗಿರುವ ಗಂಗೆಯ ನೀರಿನ ಪ್ರವಾಹದಿಂದ ಕೂಡಿದ ಯಮುನಾ ನದಿಯ ಶೋಭೆಯಂತಹ ಶೋಭೆ ಉಂಟಾಗುತ್ತಿದೆ.

**ವಿಗ್ರಹ—**

**ವಲೀಕಘಟಿತಸ್ಫಟಿಕದ್ಯುತಿಭಿಃ—** ವಲೀಕೇ ಘಟಿತಾಃ ವಲೀಕಘಟಿತಾಃ, ವಲೀಕಘಟಿತಾಶ್ಚ ತೇ ಸ್ಫಟಿಕಾಶ್ಚ ವಲೀಕಘಟಿತಸ್ಫಟಿಕಾಃ, ವಲೀಕಘಟಿತಸ್ಫಟಿಕಾನಾಂ ದ್ಯುತಯಃ ವಲೀಕಘಟಿತಸ್ಫಟಿಕದ್ಯುತಯಃ, ತಾಭಿಃ ವಲೀಕಘಟಿತಸ್ಫಟಿಕದ್ಯುತಿಭಿಃ ।

**ಹರಿನ್ಮಣಿಮಯೀ—** ಹರಿನ್ಮಣಿಭಿಃ ಪ್ರಚುರಾ ಹರಿನ್ಮಣಿಮಯೀ ।

**ಪ್ರತಿಸದ್ಮ—** ಸದ್ಮ ಸದ್ಮ ಇತಿ ಪ್ರತಿಸದ್ಮ । (ಅವ್ಯಯೀಭಾವಸಮಾಸ)

**ಯಮುನಾಮಿಲಿತಾ—** ಯಮುನಯಾ ಮಿಲಿತಾ ಯಮುನಾಮಿಲಿತಾ ।

**ಸಿತಸೌರಸೈಂಧವಪಯೋಭಿಃ—** ಸುರಾಣಾಂ ಸಿಂಧುಃ ಸುರಸಿಂಧುಃ, ಸುರಸಿಂಧೋಃ ಇಮಾನಿ ಸೌರ-ಸೈಂಧವಾನಿ, ಸೌರಸೈಂಧವಾನಿ ಚ ತಾನಿ ಪಯಾಂಸಿ ಚ ಸೌರಸೈಂಧವಪಯಾಂಸಿ, ಸಿತಾನಿ ಚ ತಾನಿ ಸೌರ ಸೈಂಧವಪಯಾಂಸಿ ಚ ಸಿತಸೌರಸೈಂಧವಪಯಾಂಸಿ, ತೈಃ ಸಿತಸೌರಸೈಂಧವಪಯೋಭಿಃ ।

**ವ್ಯಾಕರಣ ವಿಶೇಷ—** ಸಿತಸೌರಸೈಂಧವಪಯೋಭಿಃ ಎಂಬಲ್ಲಿ, ಸುರಸಿಂಧೋಃ ಇಮಾನಿ ಸೌರಸೈಂಧವಾನಿ ಎಂಬಲ್ಲಿ 'ಹೃದ್ಭಗಸಿಂಧ್ವಂತೇ ಪೂರ್ವಪದಸ್ಯ ಚ' ಎಂಬ ಸೂತ್ರದಿಂದ ಸುರಸಿಂಧು ಎಂಬ ಪೂರ್ವ ಉತ್ತರ ಪದಗಳೆರಡಕ್ಕೂ ವೃದ್ಧಿ ಬಂದಿದೆ.

**ಕ್ರಿಯಾಪದ— ಭಾತಿ**- ಭಾತಿ ಭಾತಃ ಭಾಂತಿ ಇತ್ಯಾದಿ ಭಾದೀಪ್ತೌ ಲಟ್ ।

**ಕೋಶ—** 'ಆಚ್ಛಾದನಂ ಸ್ಯಾದ್ ವಲಭೀ ಗೃಹಾಣಾಂ ಗೋಪಾನಸೀ ದಾರು ಚ ವಕ್ರಸಂಸ್ಥಂ । ನೀಪ್ರಂ ವಲೀಕಂ ಪಟಲಾಂತಮಾಹುಃ ಕಪೋತಪಾಲೀಂ ಚ ವಿಟಂಕಸಂಜ್ಞಾಂ' ಎಂದು ಸ್ವತಃ ಕವಿಗಳೇ 'ಭಾವಪ್ರಕಾಶಿಕಾ' ಎಂಬ ತಮ್ಮ ವ್ಯಾಖ್ಯಾನದಲ್ಲಿ ಕೋಶವನ್ನು ಕೊಟ್ಟಿರುತ್ತಾರೆ.

'ವಲೀಕನೀಧ್ರೇ ಪಟಲ ಪ್ರಾಂತೇಽಥ ಪಟಲಂ ಛದಿಃ' ಇತ್ಯಮರಃ ।

'ಆಚ್ಛಾದನಂ ತು ವಲಭೀ ಗೃಹಾಣಾಂ' ಇತಿ ಹಲಾಯುಧಃ 'ಗೋಪಾನಸೀ ತು ವಲಭೀ ಛಾದನೇ ವಕ್ರದಾರುಣಿ' ಇತ್ಯಮರಃ ''ಸದ್ಮ ಗೃಹಂ ಗೇಹೋದವಸಿತಂ ವೇಶ್ಮ ಸದ್ಮ ನಿಕೇತನಂ'' ಇತ್ಯಮರಃ, ಸೌರಸೈಂಧವ ಎಂಬಲ್ಲಿ ಸಿಂಧು ನದಿ, ಸಿಂಧುರ್ನಾ ಸರಿತಿಸ್ತ್ರಿಯಾಂ ಎಂದು ಅಮರ ।

**ಪ್ರಯೋಗ—** ವಲಭೀ ಯಮುನೇವ ಭಾತಿ (ಕರ್ತರಿ) । ವಲಭ್ಯಾ ಯಮುನಯೇವ ಭಾಯತೇ (ಕರ್ಮಣಿ) ।

★ ★ ★

**ಅವತಾರಿಕಾ**— ಆ ಮನೆಗಳ ಮಹಡಿಯಲ್ಲಿಟ್ಟಿದ್ದ ಹಕ್ಕಿಗೊಂಬೆಗಳು ಜೀವವಿದ್ದ ಪಕ್ಕಿಗಳಂತೆಯೇ ತೋರುತ್ತಿದ್ದವೆನ್ನುತ್ತಾರೆ.

**ಯದಿ ನಾಭವಿಷ್ಯದಿಹ ವಿಭ್ರಮತಾನಿಯಮೋ ಜನಸ್ಯ ನಿಲಯಾವಲಿಷು ।**
**ವಿಕಟಾ ವಿಟಂಕಕೃತಪತ್ರಿತತಿಃ ಕೃತಕೇತ್ಯವೈಕ್ಷ್ಯತ ಕಥಂಚನ ನೋ ॥ 11 ॥**

**ಪದಚ್ಛೇದ**— ಯದಿ, ನ, ಅಭವಿಷ್ಯತ್, ಇಹ, ವಿಭ್ರಮತಾನಿಯಮಃ, ಜನಸ್ಯ, ನಿಲಯಾವಲಿಷು, ವಿಕಟಾ, ವಿಟಂಕಕೃತಪತ್ರಿತತಿಃ, ಕೃತಕಾ, ಇತಿ, ಅವೈಕ್ಷ್ಯತ, ಕಥಂಚನ, ನೋ ।

**ಅನ್ವಯ**— ಇಹ ಜನಸ್ಯ ವಿಭ್ರಮತಾನಿಯಮಃ ಅಭವಿಷ್ಯತ್ ಯದಿ, ನಿಲಯಾವಲಿಷು ವಿಕಟಾ ವಿಟಂಕಕೃತಪತ್ರಿತತಿಃ, ಕೃತಕಾ ಇತಿ ಕಥಂಚನ ನೋ ಅವೈಕ್ಷ್ಯತ ।

**ಅನ್ವಯಾರ್ಥ**—

**ಇಹ** = ಈ ವೈಕುಂಠಲೋಕದಲ್ಲಿರುವ

**ಜನಸ್ಯ** = ಮುಕ್ತಚೇತನರಿಗೆ

**ವಿಭ್ರಮತಾನಿಯಮಃ** = ಭ್ರಾಂತಿರಹಿತತೆ ಎಂಬ ನಿಯಮವು (ಭ್ರಾಂತಿ ಇಲ್ಲವೆಂಬ ನಿಯಮವು)

**ನ ಅಭವಿಷ್ಯತ್ ಯದಿ** = ಇಲ್ಲದಿದ್ದರೆ

**ನಿಲಯಾವಲಿಷು** = ಮನೆಗಳ ಸಾಲುಗಳಲ್ಲಿ (ಸಾಲಾಗಿರುವ ಮನೆಗಳಲ್ಲಿ)

**ವಿಕಟಾವಿಟಂಕಕೃತಪತ್ರಿತತಿಃ** = ಮನೋಹರವಾದ ಪಕ್ಷಿಗಳ ಗೂಡುಗಳಲ್ಲಿ ಮಾಡಲ್ಪಟ್ಟ (ರಚಿತವಾದ) ಪಕ್ಷಿಗಳ ಸಮೂಹವು

**ಕೃತಕಾ ಇತಿ** = ಕೃತ್ರಿಮವೆಂದು

**ಕಥಂಚನ** = ಯಾವ ರೀತಿಯಿಂದಲೂ

**ನೋ ಅವೈಕ್ಷ್ಯತ** = ನೋಡಲ್ಪಡುತ್ತಿರಲಿಲ್ಲ.

**ತಾತ್ಪರ್ಯ**— ವೈಕುಂಠಲೋಕದಲ್ಲಿ ಸಾಲುಸಾಲಾಗಿರುವ ಮನೆಗಳಲ್ಲಿ ಒಳ್ಳೆ ಚಿತ್ರಲೇಖಕರು, ಗೊಂಬೆಯನ್ನು ರಚಿಸುವವರು ಸುಂದರವಾದ ಅನೇಕ ಬಗೆಯ ಹಕ್ಕಿಗಳನ್ನು ರಚಿಸಿ ಅವುಗಳನ್ನು ಗೂಡುಗಳಲ್ಲಿ ಇಟ್ಟಿದ್ದಾರೆ. ಈ ವೈಕುಂಠಲೋಕಗಳಲ್ಲಿ ವಾಸಿಸುವ ಜನರಿಗೆ ಭ್ರಾಂತಿಯು ಸರ್ವಥಾ ಇಲ್ಲ, ಎಂಬ ನಿಯಮವಿದೆ. ಅವರಿಗೇನಾದರೂ ಸಂಸಾರಿಗಳಂತೆ ಭ್ರಾಂತಿಯುಂಟಾಗುವ ಸಂಭವ ಇದ್ದಿದ್ದರೆ ಅವರು ಕೃತ್ರಿಮವಾದ ಗೂಡುಗಳಲ್ಲಿರುವ ಸುಂದರವಾದ ನಿಜವಾಗಿದ್ದ ಪಕ್ಷಿಗಳಂತೆಯೇ ಕಾಣುವ ಈ ಕೃತ್ರಿಮಪಕ್ಷಿಗಳನ್ನು ನೋಡಿ ಇವು ನಿಜವಾದ ಪಕ್ಷಿಗಳೆಂದೇ ತಿಳಿದುಕೊಳ್ಳುತ್ತಿದ್ದರು. ಆದರೆ ಅದು ಮುಕ್ತ ವೈಕುಂಠಲೋಕವಾದುದರಿಂದ ಹಾಗಾಗುವ ಸಂಭವವಿಲ್ಲ. ಎಂದರೆ ಅಲ್ಲಿ ಅಷ್ಟು ಚೆನ್ನಾಗಿರುವ ಕುಶಲಕಲೆಗಳ ಸೊಗಸಾದ ಚಿತ್ರಗಳಿರುವುವು. ಇದರಿಂದ ವೈಕುಂಠ ಲೋಕದ ಅತಿಶಯವನ್ನು ಹೇಳಿದಂತಾಯಿತು.

**ವಿಗ್ರಹ**—

**ವಿಭ್ರಮತಾನಿಯಮಃ**— ವಿಗತಃ ಭ್ರಮಃ ಯೇಭ್ಯಃ ತೇ ವಿಭ್ರಮಾಃ, ವಿಭ್ರಮಾಣಾಂ ಭಾವಃ ವಿಭ್ರಮತಾ, ವಿಭ್ರಮತಾಯಾಃ ನಿಯಮಃ ವಿಭ್ರಮತಾನಿಯಮಃ ।

**ನಿಲಯಾವಲಿಷು**— ನಿಲಯಾನಾಂ ಆವಲಯಃ ನಿಲಯಾವಲಯಃ, ತಾಸು ನಿಲಯಾವಲಿಷು ।

**ವಿಟಂಕಕೃತಪತ್ರಿತತಿಃ**— ವಿಟಂಕೇಷು ಕೃತಾ ವಿಟಂಕಕೃತಾ, ಪತ್ರಿಣಾಂ ತತಿಃ ಪತ್ರಿತತಿಃ, ವಿಟಂಕಕೃತಾ ಚ ಸಾ ಪತ್ರಿತತಿಶ್ಚ ವಿಟಂಕಕೃತಪತ್ರಿತತಿಃ ।

**ಕ್ರಿಯಾಪದ—** **ಅಭವಿಷ್ಯತ್**- ಭೂಸತ್ತಾಯಾಂ ಪರಸ್ಮೈಪದಿನ ಲುಙ್ ಪ್ರಥಮಪುರುಷೇ ಏಕವಚನೇ ಅಭವಿಷ್ಯತ್ ಇತಿರೂಪಂ ।

ಅಭವಿಷ್ಯತ್ ಅಭವಿಷ್ಯತಾಂ ಅಭವಿಷ್ಯನ್, ಅಭವಿಷ್ಯಃ ಅಭವಿಷ್ಯತಂ ಅಭವಿಷ್ಯತ, ಅಭವಿಷ್ಯಂ ಅಭವಿಷ್ಯಾವ ಅಭವಿಷ್ಯಾಮ ॥

**ಅವೈಕ್ಷ್ಯತ**- ಅವ ಉಪಸರ್ಗಪೂರ್ವಕಾತ್ ಈಕ್ಷದರ್ಶನೇ ಇತ್ಯಸ್ಮಾದ್ಧಾತೋಃ ಸಕರ್ಮಕಾತ್ ಸೇಟ್ ಆತ್ಮನೇಪದಿನಃ ಕರ್ಮಣಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ ಅವೈಕ್ಷ್ಯತ ಇತಿರೂಪಂ ।

ಅವ+ಐಕ್ಷ್ಯತ, ಐಕ್ಷ್ಯೇತಾಂ ಐಕ್ಷ್ಯಂತ, ಐಕ್ಷ್ಯಥಾಃ ಐಕ್ಷ್ಯೇಥಾಂ ಐಕ್ಷ್ಯಧ್ವಂ, ಐಕ್ಷ್ಯೇ ಐಕ್ಷ್ಯಾವಹಿ ಐಕ್ಷ್ಯಾಮಹಿ ।

**ಕೋಶ—** 'ವಿಕಟಃ ಸುಂದರಃ ಪ್ರೋಕ್ತಃ' ಇತಿ ವಿಶ್ವಃ ।

**ಪ್ರಯೋಗ—** ಇಹ ಜನಸ್ಯ ವಿಭ್ರಮತಾನ್ನಿಯಮೇನ ನ ಅಭವಿಷ್ಯತ ವಿಕಟಾಂ ವಿಟಂಕಕೃತಪತ್ರಿತತಿಂ ಕೃತಕೇತಿ ಜನಾಃ ನಾವೈಕ್ಷಂತ ।

**ವಿಶೇಷ ವಿಚಾರ—** ಇಲ್ಲಿ ಅವೈಕ್ಷ್ಯತ ಎಂಬಲ್ಲಿ ಅವೈಕ್ಷಿಷ್ಯತ ಎಂಬ ಪಾಠವಿರಬೇಕೆಂದು ತೋರುತ್ತದೆ. ಏಕೆಂದರೆ ವಿಶ್ವ-ಪತಿತೀರ್ಥೀಯ ಮತ್ತು ಛಲಾರಿಯ ಎರಡು ವ್ಯಾಖ್ಯಾನಗಳಲ್ಲಿಯೂ ಅದು 'ಲೃಙ್' ಲಕಾರದ ರೂಪವೆಂದು ಬರೆಯುತ್ತಾರೆ. ಅವೈಕ್ಷ್ಯತ ಎಂಬುದು ಕರ್ಮಣಿ ಲಙ್‌ನ ರೂಪ. ಆದರೆ ಅವೈಕ್ಷ್ಯತ ಎಂಬ ಶಬ್ದವು ಶ್ಲೋಕದಲ್ಲಿ ಸರಿ ಹೊಂದುವುದಿಲ್ಲ. ಆದ್ದರಿಂದ ಇಲ್ಲಿ ಐಕ್ಷಿಷ್ಯತ ಎಂಬ ರೂಪವನ್ನು ಸೇರಿಸಿಕೊಂಡು 'ಕೃತಕೈಕ್ಷಿಷ್ಯತ ಹಿ ಕಥಂಚನನೋ' ಎಂದು ಪಾಠವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಈ ಪಾಠವು ಪ್ರಾಚೀನಪುಸ್ತಕಗಳಲ್ಲಿ ಇದ್ದರೂ ಇಬಹುದು. 'ಲಿಙ್ ನಿಮಿತ್ತೇ ಲೃಙ್ ಕ್ರಿಯಾತಿಪತ್ತೌ' (3-3-139) ಎಂಬ ಸೂತ್ರದಿಂದ ಇಲ್ಲಿ ಲೃಙ್ ಬಂದಿದೆ. ''ಹೀಗೆ ಆಗಿದ್ದರೆ ಹೀಗೆ ಆಗಬಹುದಿದ್ದು. ಹೀಗೆ ಆಗಲಿಲ್ಲ ಆದ್ದರಿಂದ ಹೀಗೂ ಆಗಲಿಲ್ಲ'' ಎಂಬ ಅರ್ಥದಲ್ಲಿ 'ಲೃಙ್' ಬರುತ್ತದೆ. ರಾವಣನು ರಾಮನನ್ನು ವಂದಿಸಿದ್ದರೆ ರಾಮನು ಅವನನ್ನು ರಕ್ಷಿಸುತ್ತಿದ್ದನು. 'ಯದಿ ರಾವಣಃ ರಾಮಂ ಅವಂದಿಷ್ಯತ, ತರ್ಹಿ ರಾಮಃ ತಂ ಅರಕ್ಷಿಷ್ಯತ್' ಎಂದು ಲೃಙ್‌ನ ಪ್ರಯೋಗದ ಕ್ರಮವಿದೆ. 'ಕೃತಕೇತ್ಯವ್ಯೆಷ್ಯತ ಕಥಂ ಚ ನನೋ' ಎಂದು ಒಂದು ಪಾಠವಿದೆ. ಈ ಪಕ್ಷದಲ್ಲಿ ಇಣ್‌ಗತೌ ಎಂಬ ಧಾತುವಿನ ಕರ್ಮಣಿ ಲೃಙ್ ರೂಪ. ಅವೈತಿ ತಿಳಿಯುತ್ತಾನೆ ಅವೈಷ್ಯತ್ = ತಿಳಿಯುತ್ತಿದ್ದರು, ಎಣಿಸುತ್ತಿದ್ದರು ಎಂದು ಅರ್ಥ.

★ ★ ★

ಅವತಾರಿಕಾ— ಆ ಮನೆಗಳ ಮೇಲ್ಕಟ್ಟುಗಳನ್ನು ವರ್ಣಿಸುತ್ತಾರೆ.

**ವಿವಿಧಸ್ತುಲೋಪಗತಚಿತ್ರಪಟೀಸುವಿತಾನಲಂಬಿಮಣಿದಾಮಗಣಃ ।**
**ಶರಣಾಂತರೇಷ್ವಧಿಕಪೂರಣತಃ ಪ್ರಚಕಾಸ್ತಿ ವಿಭ್ರಮ ಇವಾವಗಲನ್ ॥ 12 ॥**

ಪದಚ್ಛೇದ— ವಿವಿಧಃ, ತುಲೋಪಗತಚಿತ್ರಪಟೀಸುವಿತಾನಲಂಬಿಮಣಿದಾಮಗಣಃ, ಶರಣಾಂತರೇಷು, ಅಧಿಕ-ಪೂರಣತಃ, ಪ್ರಚಕಾಸ್ತಿ, ವಿಭ್ರಮಃ, ಇವ, ಅವಗಲನ್ ।

ಅನ್ವಯ— ವಿವಿಧಃ ತುಲೋಪಗತಚಿತ್ರಪಟೀಸುವಿತಾನಲಂಬಿಮಣಿದಾಮಗಣಃ ಶರಣಾಂತರೇಷು, ಅಧಿಕ-ಪೂರಣತಃ ಅವಗಲನ್ ವಿಭ್ರಮಃ ಇವ, ಪ್ರಚಕಾಸ್ತಿ ।

**ಅನ್ವಯಾರ್ಥ—**

**ವಿವಿಧಃ** = ನಾನಾ ಬಗೆಯ

**ತುಲೋಪಗತಚಿತ್ರಪಟೀಸುವಿತಾನಲಂಬಿಮಣಿದಾಮಗಣಃ—**

**ತುಲೋಪಗತ** = ತೊಲೆಗಳ, ಸಂಬದ್ಧವಾದ

**ಚಿತ್ರಪಟೀ** = ವಿಚಿತ್ರವಾದ ಬಟ್ಟೆಗಳ (ನಾನಾ ಚಿತ್ರಗಳಿರುವ)

**ಸುವಿತಾನ, ಲಂಬಿ, ಮಣಿದಾಮಗಣಃ** = ಸುಂದರವಾದ ಮೇಲ್ಕಟ್ಟಿಗಳಲ್ಲಿ ಜೋಲಾಡುವ, ರತ್ನಗಳ ಮಾಲೆಗಳ ಸಮೂಹವು,

**ಶರಣಾಂತರೇಷು** = ಮನೆಗಳ ಒಳ ಪ್ರದೇಶಗಳಲ್ಲಿ

**ಅಧಿಕಪೂರಣತಃ** = ಹೆಚ್ಚಾಗಿ ತುಂಬಿದ್ದರಿಂದ (ತುಂಬಿ ಹೆಚ್ಚಾದ್ದರಿಂದ)

**ಅವಗಲನ್** = ಸುರಿಯುತ್ತಿರುವ (ಸೂಸುತ್ತಿರುವ ಅಥವಾ ಉದುರುತ್ತಿರುವ)

**ವಿಭ್ರಮಃ ಇವ** = ಕಾಂತಿಯಂತೆ

**ಪ್ರಚಕಾಸ್ತಿ** = ಶೋಭಿಸುತ್ತಿದೆ.

**ತಾತ್ಪರ್ಯ—** ಆ ವೈಕುಂಠಲೋಕದ ಸುಂದರವಾದ ಮನೆಗಳ ತೊಲೆಗಳಲ್ಲಿ ನಾನಾ ಬಣ್ಣದ ಮತ್ತು ಚಿತ್ರಗಳಿಂದ ಶೋಭಿತವಾದ ಬಟ್ಟೆಗಳಿಂದ ಮೇಲ್ಗಟ್ಟನ್ನು ಕಟ್ಟಿರುತ್ತಾರೆ. ಆ ಮೇಲ್ಗಟ್ಟಿಗೆ ತಗಲಿಸಿ ಕೆಳಮುಖವಾಗಿ ರತ್ನಹಾರಗಳನ್ನು ಅಲ್ಲಲ್ಲಿ ತೂಗು ಹಾಕಿದ್ದಾರೆ. ಅವುಗಳನ್ನು ನೋಡಿದರೆ ಆ ಮನೆಗಳ ಕಾಂತಿಯು, ಅಲ್ಲಿರುವ ರತ್ನಗಳ ಕಾಂತಿಯ ಒಳಗೆ ತುಂಬಿ ಹಿಡಿಸದಿರುವುದರಿಂದ, ಉಕ್ಕಿ ಕೆಳಗೆ ಸುರಿಯುತ್ತಿದೆಯೋ ಎಂದು ತೋರುತ್ತಿದೆ. (ಉತ್ಪ್ರೇಕ್ಷೆ)

**ವಿಗ್ರಹ—**

**ತುಲೋಪಗತಚಿತ್ರಪಟೀಸುವಿತಾನಲಂಬಿಮಣಿದಾಮಗಣಃ—** ತುಲಾಸು ಉಪಗತಾ ತುಲೋಪಗತಾ, ಚಿತ್ರಾ ಚ ಸಾ ಪಟೀ ಚ ಚಿತ್ರಪಟೀ, (ಚಿತ್ರಯುಕ್ತಾ ಚ ಸಾ ಪಟೀ ಚ ಚಿತ್ರಪಟೀ), ತುಲೋಪಗತಾ ಚ ಸಾ ಚಿತ್ರಪಟೀ ಚ ತುಲೋಪಗತಚಿತ್ರಪಟೀ, ತುಲೋಪಗತಚಿತ್ರಪಟೀ ಚ ತತ್ ಸುವಿತಾನಂ ಚ ತುಲೋಪಗತಚಿತ್ರಪಟೀಸುವಿತಾನಂ, ಲಂಬತೇ ಇತಿ ಲಂಬೀ, ಮಣೀನಾಂ ದಾಮಾನಿ ಮಣಿ-ದಾಮಾನಿ, ಮಣಿದಾಮ್ನಾಂ ಗಣಃ ಮಣಿದಾಮಗಣಃ, ತುಲೋಪಗತಚಿತ್ರಪಟೀಸುವಿತಾನಲಂಬೀ ಚಾಸೌ ಮಣಿದಾಮಗಣಶ್ಚ ತುಲೋಪಗತಚಿತ್ರಪಟೀಸುಲತಾನಲಂಬಿಮಣಿದಾಮಗಣಃ ।

**ಶರಣಾಂತರೇಷು—** ಶರಣಾನಾಂ ಅಂತರಾಣಿ ಶರಣಾಂತರಾಣಿ ತೇಷು,

**ಅಧಿಕಪೂರಣತಃ—** ಅಧಿಕಂ ಪೂರಣಂ ಅಧಿಕಪೂರಣಂ, ತಸ್ಮಾತ್ ಅಧಿಕಪೂರಣತಃ (ಪಂಚಮ್ಯಾಃ ತಸಿಃ)

**ಕ್ರಿಯಾಪದ—** **ಪ್ರಚಕಾಸ್ತಿ-** ಪ್ರ ಉಪಸರ್ಗಪೂರ್ವಕ ಚಕಾಸೃದೀಪ್ತೌ ಇತಿ ಧಾತೋಃ ಅಕರ್ಮಕಃ ಸೇಟ್ ಪರಸ್ಮೈಪದೀ, ಲಟ್ । 3 ಲಿಟ್ ಚಕಾಸಾಂಚಕಾರ-ಬಭೂವ ಆಸ 3 ಲುಟ್ ಚಕಾಸಿತಾ 4 ಲೃಟ್ ಚಕಾಸಿಷ್ಯತಿ ಲೋಟ್ ಚಕಾಸ್ತು ಚಕಾಸ್ತಾತ್ ಚಕಾಸ್ತಾಂ ಚಕಾಸತು, ಚಕಾಧಿ ಚಕಾಸ್ತಾತ್, ಚಕಾಸ್ತಂ ಚಕಾಸ್ತ, ಚಕಾಸಾನಿ ಚಕಾಸಾವ ಚಕಾಸಾಮ । ಲಙ್ ಅಚಕಾತ್-ಅಚಕಾದ್ ಅಚಕಾಸ್ತಾಂ ಅಚಕಾಸುಃ, ಅಚಕಃ-ಅಚಕಾದ್, ಅಚಕಾಸ್ತಂ-ಅಚಕಾಸ್ತ, ಅಚಕಾಸಂ ಅಚಕಾಸ್ವ ಅಚಕಾಸ್ಮ । 7 ವಿಧಿಲಿಙ್ ಚಕಾಸ್ಯಾತ್ ಚಕಾಸ್ಯಾತಾಂ ಚಕಾಸ್ಯುಃ । ಆಶೀರ್ಲಿಙ್ ಚಕಾಸ್ಯಾತ್ ಚಕಾಸ್ಯಾಸ್ತಾಂ, ಲುಙ್ ಅಚಕಾಸೀತ್ ಅಚಕಾಸಿಷ್ಟಾಂ, 10 ಲೃಙ್ ಅಚಕಾಸಿಷ್ಯತ್ ।

ಪ್ರ+ ಚಕಾಸ್ತಿ ಚಕಾಸ್ತಃ ಚಕಾಸತಿ, ಚಕಾಸ್ಸಿ ಚಕಾಸ್ತಃ ಚಕಾಸ್ಥ, ಚಕಾಸ್ಮಿ ಚಕಾಸ್ವಃ ಚಕಾಸ್ಮಃ ॥

**ಪ್ರಯೋಗ—** ವಿವಿಧಃ ತುಲೋಪಗತಚಿತ್ರಪಟೀಸುವಿತಾನಲಂಬಿಮಣಿದಾಮಗಣಃ ಶರಣಾಂತರೇಷು ಅಧಿಕಪೂರಣತಃ ಅವಗಲನ್‌ವಿಭ್ರಮ ಇವ ಚಕಾಸ್ತಿ (ಕರ್ತರಿ) ।

ವಿವಿಧೇನ ತುಲೋಪಗತಮಣಿದಾಮಗಣೇನ ಶರಣಾಂತರೇಷು ಅಧಿಕಪೂರಣತಃ ಅವಗಲತಾ ವಿಭ್ರಮೇಣೇವ ಪ್ರಚಕಾಸ್ಯತೇ (ಕರ್ಮಣಿ) ।

**ಕೋಶ—** ತುಲಾ = ಮನೆಯ ಈ ಕಡೆ ಗೋಡೆಯಿಂದ ಆ ಕಡೆ ಗೋಡೆಯವರೆಗೆ ಅಡ್ಡಲಾಗಿ ಸ್ಥಾಪಿಸಿರುವ, (ಅಥವಾ ಕಂಬಗಳ ಮೇಲೆ ಚಾಚಿರುವ) ಮನೆಯ ಮೇಲ್ಛಾವಣಿಗೆ ಆಧಾರವಾದ ಶಿಲಾ, ಕಬ್ಬಿಣ ಅಥವಾ ಮರದ ಸ್ತಂಭ, ವಿತಾನಂ = ಮೇಲ್ಕಟ್ಟು, ಅಸ್ತ್ರೀ ವಿತಾನಮುಲ್ಲೋ ಚೋದೂಷ್ಯಾದ್ಯಂ ವಸ್ತ್ರವೇಶ್ಮನಿ ಎಂದು ಅಮರ. ಶರಣ = ಮನೆ 'ಶರಣಂ ಗೃಹರಕ್ಷಿತ್ರೋಃ' ಎಂದು ಅಮರ. ಅಂತರ = ಅವಕಾಶ ಪ್ರದೇಶ, ಅಂತರಮವಕಾಶಾವಧಿ ಪರಿಧಾನಾಂತರ್ಧಿಭೇದ ತಾದರ್ಥ್ಯೇ' ಇತಿ ಅಮರಃ । ವಿಭ್ರಮಃ = ಕಾಂತಿ ''ವಿಭ್ರಮಃ ಸಂಶಯೇ ಭ್ರಾಂತೌ ಶೋಭಾಯಾಂ ಚ'' ಎಂದು ವೈಜಯಂತಿ ಕೋಶ.

★ ★ ★

**ಅವತಾರಿಕಾ—** ನನು ತತ್ರ ವಿಶ್ವವಿಭವೈಕಪದಂ (ಸರ್ಗ 11 ಶ್ಲೋಕ 8) ಇತ್ಯಾದಿಯಾಗಿ ಇದುವರೆಗೆ ಹೇಳಿದುದೆಲ್ಲವೂ ವೈಕುಂಠದಲ್ಲಿ ಅಸಂಭಾವಿತವಲ್ಲ ಎಂದು ಹೇಳುತ್ತಾರೆ.

**ವಿಮಲಾಕೃತಿಃ ಪ್ರಕೃತಿರೇವ ಮಹಾಮಣಿಹೇಮಮಯ್ಯಖಿಲವಸ್ತುಮಯೀ ।**
**ಇಹ ಸಂಭವೇತ್ ಸಕಲಕಾಂತಿರಸಃ ಕಥಿತೋಽಧಿಕೋಕ್ತಿಭಿರತಃ ಕವಿಭಿಃ ॥ 13 ॥**

**ಪದಚ್ಛೇದ—** ವಿಮಲಾಕೃತಿಃ, ಪ್ರಕೃತಿಃ, ಏವ, ಮಹಾಮಣಿಹೇಮಮಯೀ, ಅಖಿಲವಸ್ತುಮಯೀ, ಇಹ, ಸಂಭವೇತ್, ಸಕಲಕಾಂತಿರಸಃ, ಕಥಿತಃ, ಅಧಿಕೋಕ್ತಿಭಿಃ, ಅತಃ ಕವಿಭಿಃ ।

**ಅನ್ವಯ—** ಇಹ, ವಿಮಲಾಕೃತಿಃ ಪ್ರಕೃತಿಃ ಏವ ಮಹಾಮಣಿಹೇಮಮಯೀ, ಅಖಿಲವಸ್ತುಮಯೀ ಅತಃ ಕವಿಭಿಃ ಅಧಿಕೋಕ್ತಿಭಿಃ ಕಥಿತಃ ಸಕಲಕಾಂತಿರಸಃ ಸಂಭವೇತ್ ।

**ಅನ್ವಯಾರ್ಥ—**

**ಇಹ** = ಈ ವೈಕುಂಠ ಲೋಕದಲ್ಲಿ
**ವಿಮಲಾಕೃತಿಃ** = ಶುದ್ಧವಾದ ಆಕಾರವುಳ್ಳ (ಸ್ವರೂಪವುಳ್ಳ)
**ಪ್ರಕೃತಿಃ ಏವ** = ಲಕ್ಷ್ಮೀದೇವಿಯೇ
**ಮಹಾಮಣಿಹೇಮಮಯೀ** = ಉತ್ತಮ ರತ್ನಗಳು, ಚಿನ್ನ ಇವುಗಳ ಸ್ವರೂಪವುಳ್ಳವಳಾಗಿ
**ಅಖಿಲವಸ್ತುಮಯೀ** = ಎಲ್ಲಾ ಪದಾರ್ಥಸ್ವರೂಪಳು.
**ಅತಃ** = ಈ ಕಾರಣದಿಂದ
**ಕವಿಭಿಃ** = ಕವಿಗಳಿಂದ
**ಅಧಿಕೋಕ್ತಿಭಿಃ** = ಅತಿಶಯೋಕ್ತಿಗಳಿಂದ
**ಕಥಿತಃ** = ಹೇಳಲ್ಪಟ್ಟ
**ಸಕಲಕಾಂತಿರಸಃ** = ಎಲ್ಲಾ ಶೋಭಾತಿಶಯವು
**ಸಂಭವೇತ್** = ಸರಿಯಾದೀತು.

**ತಾತ್ಪರ್ಯ—** ನಿರ್ದೋಷಕಾಂತಿ ಸ್ವರೂಪಳಾದ ಮಹಾಲಕ್ಷ್ಮಿಯ ಸ್ವರೂಪಾತ್ಮಕವೇ ವೈಕುಂಠವು. ಅಲ್ಲಿ ಸ್ವಭಾವ ಸುಂದರಳಾದ ಆ ಮಹಾಲಕ್ಷ್ಮೀದೇವಿಯೇ ರತ್ನ-ಚಿನ್ನ ಇವುಗಳಿಂದ ನಿರ್ಮಿತವಾದಂತಿರುವ ಸಮಸ್ತ ವಸ್ತುಸ್ವರೂಪ-

ಳಾಗಿರುವಳು. ಆದ್ದರಿಂದ ಕವಿಗಳು ತಾವು ವೈಕುಂಠವರ್ಣನಾತ್ಮಕ ಕಾವ್ಯ ಬರೆಯುವಾಗ ವೈಕುಂಠವು ಸಕಲ ಐಶ್ವರ್ಯಗಳ ಸ್ಥಾನವೆಂದು ವರ್ಣಿಸಿರುವುದು ಅತಿಶಯೋಕ್ತಿ, ಉತ್ಪ್ರೇಕ್ಷೆ ಎಂದು ಕಂಡರೂ ಆಪಾತತಃ (ಮೇಲ್ನೋಟಕ್ಕೆ) ನಮಗೆ ಅವಾಸ್ತವವೆಂದು ತೋರಿದರೂ ವಾಸ್ತವವಾಗಿಯೇ ಆ ರೀತಿ ಇದೆ. ಈ ಲೋಕವು ಸಕಲ ಕಾಂತಿಗಳಿಗೆ ಬೀಡಾಗಿರುವುದರಿಂದ ಕವಿಗಳ ಉಕ್ತಿಯು ಸರಿಯಾಗಿದೆ. ವೈಕುಂಠಲೋಕದಲ್ಲಿ ಎಲ್ಲಾ ವಿಧವಾದ ಶೋಭಾತಿಶಯವೂ ಕೂಡುತ್ತದೆ.

**ವಿಗ್ರಹ—**

**ವಿಮಲಾಕೃತಿಃ—** ವಿಮಲಾ ಆಕೃತಿಃ ಯಸ್ಯಾಃ ಸಾ ವಿಮಲಾಕೃತಿಃ ।

**ಮಹಾಮಣಿಹೇಮಮಯೀ—** ಮಣಯಶ್ಚ ಹೇಮ ಚ ಮಣಿಹೇಮಾನಿ, ಮಹಾಂತಿ ಚ ತಾನಿ ಮಣಿಹೇಮಾನಿ ಚ ಮಹಾಮಣಿಹೇಮಾನಿ, ಮಹಾಮಣಿಹೇಮ್ನೈವ (ಮಹಾಮಣಿಹೇಮಸ್ವರೂಪಾ) ಮಹಾಮಣಿಹೇಮಮಯೀ ।

**ಅಖಿಲವಸ್ತುಮಯೀ—** ಅಖಿಲಾನಿ ಚ ತಾನಿ ವಸ್ತೂನಿ ಚ ಅಖಿಲವಸ್ತೂನಿ, ಅಖಿಲವಸ್ತೂನಿ ಏವ (ಅಖಿಲವಸ್ತುಸ್ವರೂಪಾ) ಅಖಿಲವಸ್ತುಮಯೀ ।

**ಸಕಲಕಾಂತಿರಸಃ—** ಕಾಂತೀನಾಂ ರಸಃ ಕಾಂತಿರಸಃ । ಸಕಲಶ್ಚಾಸೌ ಕಾಂತಿರಸಶ್ಚ ಸಕಲಕಾಂತಿರಸಃ (ಅಥವಾ ಸಕಲಾನಾಂ ಕಾಂತಿರಸಃ ಸಕಲಕಾಂತಿರಸಃ) ।

**ಅಧಿಕೋಕ್ತಿಭಿಃ—** ಅಧಿಕಾಶ್ಚ ತಾಃ ಉಕ್ತಯಶ್ಚ ಅಧಿಕೋಕ್ತಯಃ, ತಾಭಿಃ ಅಧಿಕೋಕ್ತಿಭಿಃ ।

**ಕ್ರಿಯಾಪದ— ಸಂಭವೇತ್-** ಸಂ ಇತ್ಯುಪಸರ್ಗಪೂರ್ವಕಾತ್ ಭೂಸತ್ತಾಯಾಂ ಇತಿ ಸತ್ತಾರ್ಥಕಭೂಧಾತೋಃ ಅಕರ್ಮಕಃ ಸೇಟ್ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ 'ಸಂಭವೇತ್' ಇತಿ ರೂಪಂ ।

ಸಂ+ಭವೇತ್ ಭವೇತಾಂ ಭವೇಯುಃ, ಭವೇಃ ಭವೇತಂ ಭವೇತ, ಭವೇಯಂ ಭವೇವ ಭವೇಮ ॥

**ಕೋಶ—** ಹೇಮ = ಚಿನ್ನ, 'ಹಿರಣ್ಯಂ ಹೇಮಹಾಟಕಂ' ಇತ್ಯಮರಃ ।

**ಪ್ರಯೋಗ—** ಇಹ ಸಕಲಕಾಂತಿರಸಃ ಸಂಭವೇತ್ (ಕರ್ತರಿ) । ಇಹ ಸಕಲಕಾಂತಿರಸೇನ ಸಂಭೂಯೇತ (ಭಾವೇ) । ಭೂಧಾತುವಿನ ಭಾವರೂಪಗಳು ಭೂಯತೇ ಬಭೂವೇ ಭಾವಿತಾ (ಭವಿತಾ), ಭಾವಿಷ್ಯತೇ (ಭವಿಷ್ಯತೇ) ಭೂಯತಾಂ ಅಭೂಯತ ಭೂಯೇತ, ಭಾವಿಷೀಷ್ಟ (ಭವಿಷೀಷ್ಟ )ಅಭಾವಿ ಅಭಾವಿಷ್ಯತ (ಅಭವಿಷ್ಯತ) ।

★ ★ ★

**ಅವತಾರಿಕಾ—** ಮುಕ್ತರು ಎಷ್ಟು ಜನ ತುಂಬಿದರೂ ಆ ವೈಕುಂಠಲೋಕದಲ್ಲಿ ಜನಸಮ್ಮರ್ದವೇ ಇಲ್ಲವೆಂದು ವರ್ಣಿಸುತ್ತಾರೆ.

**ತದನಾದಿಕಾಲಮಿತಮುಕ್ತಿರತೇ**
**ರಗಣಯ್ಯ (ಅಗಣೇಯ) ಶಂಭುಮುಖಸಂಘತತೇಃ ।**
**ನಗರೈರ್ಮಹಾಪುರಮಸಂಹತಿಮ-**
**ಲ್ಲಸತಿ ಪ್ರಭೋರಯಮಹೋ ಮಹಿಮಾ ॥ 14 ॥**

**ಪದಚ್ಛೇದ—** ತತ್, ಅನಾದಿಕಾಲಂ, ಇತಮುಕ್ತಿರತೇಃ, ಅಗಣಯ್ಯ (ಅಗಣೇಯ), ಶಂಭುಮುಖಸಂಘತತೇಃ, ನಗರೈಃ, ಮಹಾಪುರಂ, ಅಸಂಹತಿಮತ್, ಲಸತಿ, ಪ್ರಭೋಃ, ಅಯಂ, ಅಹೋ ಮಹಿಮಾ ।

**ಅನ್ವಯ—** ಅನಾದಿಕಾಲಂ, ಇತಮುಕ್ತಿರತೇಃ ಅಗಣಯ್ಯ (ಅಗಣೇಯ), ಶಂಭುಮುಖಸಂಘತತೇಃ ನಗರೈಃ ಅಸಂಹತಿಮತ್ ತತ್ ಮಹಾಪುರಂ ಲಸತಿ, ಪ್ರಭೋಃ ಅಯಂ ಮಹಿಮಾ ಅಹೋ !

**ಅನ್ವಯಾರ್ಥ—**

**ಅನಾದಿಕಾಲಂ** = ಬಹಳ ಹಿಂದಿನ ಕಾಲದಿಂದ

**ಇತ ಮುಕ್ತಿ ರತೇಃ** = ಹೊಂದಲ್ಪಟ್ಟ ಮೋಕ್ಷದ, ಸುಖವುಳ್ಳ

**ಅಗಣಯ್ಯ (ಅಗಣೇಯ)** = ಎಣಿಕೆ ಇಲ್ಲದ

**ಶಂಭುಮುಖ ಸಂಘ ತತೇಃ** = ಬ್ರಹ್ಮದೇವರೇ ಮೊದಲಾದ ದೇವತೆಗಳ, ಗುಂಪಿನ, ಸಮೂಹದ

**ನಗರ್ಯೈಃ** = ಪಟ್ಟಣಗಳಿಂದ

**ಅಸಂಹತಿಮತ್** = ಇಕ್ಕಟ್ಟಿಲ್ಲದ

**ತತ್ ಮಹಾಪುರಂ** = ಆ ದೊಡ್ಡ ವೈಕುಂಠಲೋಕವು

**ಲಸತಿ** = ಪ್ರಕಾಶಿಸುತ್ತದೆ.

**ಪ್ರಭೋಃ** = ಶ್ರೀಮನ್ನಾರಾಯಣನ

**ಅಯಂ** = ಈ

**ಮಹಿಮಾ** = ಮಹಾತ್ಮೆಯು

**ಅಹೋ!** = ಆಶ್ಚರ್ಯವು

**ತಾತ್ಪರ್ಯ—** ಈ ವೈಕುಂಠಲೋಕದಲ್ಲಿ ಅನಾದಿ ಅನಂತಕಾಲದಿಂದ ಪ್ರತಿಕಲ್ಪದಲ್ಲಿಯೂ ಮುಕ್ತರಾದ ಅನಂತ ಸಂಖ್ಯೆಯ ಬ್ರಹ್ಮಶೇಷಗರುಡಾದಿ ಜೀವರು ಮೋಕ್ಷಸುಖಾನುಭವದಿಂದ ವಾಸಿಸುತ್ತಿದ್ದಾರೆ. ಅವರಿಗೆಲ್ಲಾ ಪ್ರತ್ಯೇಕವಾದ ಪಟ್ಟಣಗಳು ಸಾಕಷ್ಟಿವೆ. ಹೀಗೆ ವೈಕುಂಠಲೋಕವು ಅಂತಹ ಪಟ್ಟಣಗಳಿಂದ ತುಂಬಿದ್ದರೂ ಇಕ್ಕಟ್ಟಾಗಿಲ್ಲ. ವಿಶಾಲವಾಗಿ ಪ್ರಕಾಶಿಸುತ್ತಿದೆ. ಇದು ಶ್ರೀಮನ್ನಾರಾಯಣನ ಅದ್ಭುತವಾದ ಮಹಿಮೆಯಿಂದಲೇ ಆದುದು. ಆಹಾ ಇದೆಂತಹ ಆಶ್ಚರ್ಯ.

**ವಿಗ್ರಹ—**

**ಅನಾದಿಕಾಲಂ—** ನ ವಿದ್ಯತೇ ಆದಿಃ ಯಸ್ಯ ಸಃ ಅನಾದಿಃ, ಅನಾದಿಶ್ಚಾಸೌ ಕಾಲಶ್ಚ ಅನಾದಿಕಾಲಃ, ತಂ ಅನಾದಿ ಕಾಲಂ । (ಇಲ್ಲಿ 'ಕಾಲಾಧ್ವನೋರತ್ಯಂತಸಂಯೋಗೇ' ಎಂಬ ಸೂತ್ರದಿಂದ ದ್ವಿತೀಯಾ ಬಂದಿದೆ).

**ಇತಮುಕ್ತಿರತೇಃ—** ಮುಕ್ತೇಃ ರತಿಃ ಮುಕ್ತಿರತಿಃ, ಇತಾ ಮುಕ್ತಿರತಿಃ ಯಯಾ ಸಾ ಇತಮುಕ್ತಿರತಿಃ, ತಸ್ಯಾಃ ಇತ-ಮುಕ್ತಿರತೇಃ ।

**ಅಗಣಯ್ಯ ಶಂಭುಮುಖಸಂಘತತೇಃ—** ಗಣಯಿತುಂ ಶಕ್ಯಾ ಗಣಯ್ಯಾ, ನ ಗಣಯ್ಯಾ ಅಗಣಯ್ಯಾ (ಅಥವಾ ಗಣ ಯಿತುಂ ಶಕ್ಯಾ ಗಣೇಯಾ, ನ ಗಣೇಯಾ ಅಗಣೇಯಾ), ಶಂಭುಃ ಮುಖಂ ಯೇಷಾಂ ತೇ ಶಂಭುಮುಖಾಃ, ಶಂಭುಮುಖಾನಾಂ ಸಂಘಃ ಶಂಭುಮುಖಸಂಘಃ, ಅಗಣಯ್ಯಾ ಚ ಸಾ ಶಂಭು ಮುಖಸಂಘತತಿಶ್ಚ ಅಗಣಯ್ಯ ಶಂಭುಮುಖಸಂಘತಿತಿಃ, ತಸ್ಯ ತತಿಃ ಶಂಭುಮುಖ-ಸಂಘತತಿಃ, ತಸ್ಯಾಃ ಶಂಭುಮುಖಸಂಘತತೇಃ ।

**ಮಹಾಪುರಂ—** ಮಹಚ್ಚ ತತ್ ಪುರಂ ಚ ಮಹಾಪುರಂ ।

**ಅಸಂಹತಿಮತ್—** ನ ಸಂಹತಿಃ ಅಸಂಹತಿಃ, ಅಸಂಹತಿಃ ಅಸ್ಯ ಅಸ್ತೀತಿ ಅಸಂಹತಿಮತ್ ।

**ಕ್ರಿಯಾಪದ— ಲಸತಿ-** ಲಸಕಾಂತೌ ಇತಿಧಾತೋಃ ಲಟ್ ಪ್ರಥಮಪುರುಷೇ ಏಕವಚನೇ ಪರಸ್ಮೈಪದಿನಃ (1) ಲಸತಿ ಲಸತಃ ಲಸಂತಿ ಇತ್ಯಾದಿ, (2) ಲಿಟ್ ಲಲಾಸ ಲೇಸತುಃ ಲೇಸುಃ ಇತ್ಯಾದಿ, (3) ಲುಟ್ ಲಸಿತಾ, (4) ಲೃಟ್ ಲಸಿಷ್ಯತಿ, (5) ಲೋಟ್ ಲಸತು, (6) ಲಙ್ ಅಲಸತ್, (7) ವಿಧಿಲಿಙ್ ಲಸೇತ್, (8) ಆಶೀರ್ಲಿಙ್ ಲಸ್ಯಾತ್ ಲಸ್ಯಾಸ್ತಾಂ ಲಸ್ಯಾಸುಃ

ಇತ್ಯಾದಿ (9) ಲುಜ್ ಅಲಾಸೀತ್ ಅಲಾಸಿಷ್ಟಾಂ ಅಲಾಸಿಷುಃ, ಅಲಾಸೀಃ ಅಲಾಸಿಷ್ಟಂ ಅಲಾಸಿಷ್ಟ , ಅಲಾಸಿಷಂ ಅಲಾಸಿಷ್ವ ಅಲಾಸಿಷ್ಮ. ಪಕ್ಷೇ ಅಲಸೀತ್ ಅಲಸಿಷ್ಟಾಂ ಇತ್ಯಾದಿ (10) ಲೃಜ್ ಅಲಸಿಷ್ಯತ್ ।

**ಕೋಶ—** ಇಲ್ಲಿರುವ ಶಂಭುಶಬ್ದಕ್ಕೆ ಚತುರ್ಮುಖಬ್ರಹ್ಮ ಎಂದು ಅರ್ಥವನ್ನು ಇಟ್ಟುಕೊಳ್ಳಬೇಕು. 'ಶಂಭೂ ಬ್ರಹ್ಮ ತ್ರಿಲೋಚನೌ' ಎಂದು ಅಮರ. 'ಶಂಭುಃ ಧಾತೃಹರಾರ್ಹತ್ಸು' ಎಂದು ವೈಜಯಂತೀ ಕೋಶ.

**ಪ್ರಯೋಗ—** ಮಹಾಪುರಂ ಲಸತಿ (ಅಕರ್ಮಕ ಕರ್ತರಿ) । ಮಹಾಪುರೇಣ ಲಸ್ಯತೇ (ಭಾವೇ)

★ ★ ★

**ಅವತಾರಿಕಾ—** ಆ ಮನೆಗಳ ಮಧ್ಯದಲ್ಲಿರುವ ಅದ್ಭುತವಾದ ಶ್ರೀವಿಷ್ಣುವಿನ ಮನೆಯನ್ನು ವರ್ಣಿಸುತ್ತಾರೆ.

**ಭವನಂ ವಿಭಾತಿ ಭುವನೈಕಪತೇಃ ಭುವನತ್ರಯಾದ್ಭುತಗುಣಾತಿಶಯಿ ।**

**ವರಮಂದಿರಪ್ರಕರಮಧ್ಯಗತಂ ದ್ವಿಜಮಂಡಲಸ್ಥಶಶಿಮಂಡಲವತ್ ॥ 15 ॥**

**ಪದಚ್ಛೇದ—**(ಭುವನತ್ರಯಾದ್ಭುತಗಣಾತಿಶಯಿ ಇಲಾರಿಯ ಪಾಠ) ಭವನಂ, ವಿಭಾತಿ, ಭುವನೈಕಪತೇಃ ಭುವನ-ತ್ರಯಾದ್ಭುತಗುಣಾತಿಶಯಿ, ವರಮಂದಿರಪ್ರಕರಮಧ್ಯಗತಂ, ದ್ವಿಜಮಂಡಲಸ್ಥಶಿಶಿಮಂಡಲವತ್ ।

**ಅನ್ವಯ—** ಭುವನತ್ರಯಾದ್ಭುತಗು(ಗ)ಣಾತಿಶಯಿ, ವರಮಂದಿರಪ್ರಕರಮಧ್ಯಗತಂ, ಭುವನೈಕಪತೇಃ ಭವನಂ, ದ್ವಿಜಮಂಡಲಸ್ಥಶಿಮಂಡಲವತ್ ಭಾತಿ ।

**ಅನ್ವಯಾರ್ಥ—**

**ಭುವನತ್ರಯಾದ್ಭುತಗು(ಗ)ಣಾತಿಶಯಿ** = ಮೂರು ಲೋಕಗಳಲ್ಲಿ ಆಶ್ಚರ್ಯಕರವಾದ ಗುಣಗಳನ್ನು (ಆಶ್ಚರ್ಯದ ಸಮೂಹವನ್ನು), ಮೀರಿರುವ

**ವರಮಂದಿರಪ್ರಕರಮಧ್ಯಗತಂ** = ಉತ್ತಮವಾದ ಮನೆಗಳ ಸಮೂಹದ ಮಧ್ಯದಲ್ಲಿ ಇರುವ

**ಭುವನೈಕಪತೇಃ** = ಲೋಕಗಳಿಗೆ ಮುಖ್ಯ ಒಡೆಯನಾದ ನಾರಾಯಣನ

**ಭವನಂ** = ಮನೆಯು

**ದ್ವಿಜಮಂಡಲಸ್ಥ ಶಶಿಮಂಡಲವತ್** = ನಕ್ಷತ್ರಗಳ ಸಮೂಹದಲ್ಲಿರುವ, ಚಂದ್ರಮಂಡಲದಂತೆ

**ವಿಭಾತಿ** = ಪ್ರಕಾಶಿಸುತ್ತದೆ.

**ತಾತ್ಪರ್ಯ—** ಈ ವೈಕುಂಠಲೋಕದಲ್ಲಿ, ಸಮಸ್ತ ಪ್ರಪಂಚಗಳಿಗೂ ಮುಖ್ಯಸ್ವಾಮಿಯಾದ ಶ್ರೀಮನ್ನಾರಾಯಣನ ಮನೆಯು, ಉತ್ತಮವಾದ ಇತರ ಮನೆಗಳ ನಡುವೆ ಇದೆ. ಈ ಭವನವು ಮೂರು ಲೋಕದಲ್ಲಿರುವ ಸಮಸ್ತ ಉತ್ತಮ ಗುಣಗಳನ್ನು ಮೀರಿಸಿದ ಗುಣವುಳ್ಳದ್ದು. ಮೂರು ಲೋಕಗಳಲ್ಲಿರುವ ಆಶ್ಚರ್ಯಸಮೂಹಗಳನ್ನು ಮೀರಿಸತಕ್ಕಂತಹ ಅಲೌಕಿಕವಾದ ಆಶ್ಚರ್ಯಗಳಿಂದ ಕೂಡಿದೆ. ಇತರ ಮುಕ್ತರ ಭವನಗಳು ನಕ್ಷತ್ರಗಳಂತೆ ರಾಜಿಸುತ್ತಿದ್ದಾಗ, ಶ್ರೀಹರಿಯ ಈ ಭವನವು ನಕ್ಷತ್ರಮಂಡಲದ ನಡುವೆ ಇರುವ ಚಂದ್ರಮಂಡಲದಂತೆ ರಾರಾಜಿಸುತ್ತಿದೆ.

**ವಿಗ್ರಹ—**

**ಭುವನೈಕಪತೇಃ—** ಏಕಶ್ಚಾಸೌ ಪತಿಶ್ಚ ಏಕಪತಿಃ, ಭುವನಾನಾಂ ಏಕಪತಿಃ ಭುವನೈಕಪತಿಃ, ತಸ್ಯ ಭುವನೈಕ-ಪತೇಃ ।

**ಭುವನತ್ರಯಾದ್ಭುತಗು(ಗ)ಣಾತಿಶಯಿ—** ತ್ರಯಃ ಅವಯವಾಃ ಅಸ್ಯೇತಿ ತ್ರಯಂ, ಭುವನಾನಾಂ ತ್ರಯಂ ಭುವನತ್ರಯಂ, ಅದ್ಭುತಾಶ್ಚ ತೇ ಗುಣಾಶ್ಚ ಅದ್ಭುತಗುಣಾಃ, ಭುವನತ್ರಯಸ್ಯ ಅದ್ಭುತಗುಣಾಃ

ಭುವನತ್ರಯಾದ್ಭುತಗುಣಾಃ, ತಾನ್ ಅತಿಶಯಿತುಂ ಶೀಲಂ ಅಸ್ಯೇತಿ ಭುವನತ್ರಯಾದ್ಭುತ-ಗುಣಾತಿಶಯಿ ।

**ವರಮಂದಿರಪ್ರಕರಮಧ್ಯಗತಂ—** ವರಾಣಿ ಚ ತಾನಿ ಮಂದಿರಾಣಿ ಚ ವರಮಂದಿರಾಣಿ, ವರಮಂದಿರಾಣಾಂ ಪ್ರಕರಾಃ ವರಮಂದಿರಪ್ರಕರಾಃ, ಮಧ್ಯೇ ಗತಂ ಮಧ್ಯಗತಂ, ವರಮಂದಿರಪ್ರಕರಾಣಾಂ ಮಧ್ಯಗತಂ ವರಮಂದಿರಪ್ರಕರಮಧ್ಯಗತಂ ।

**ದ್ವಿಜಮಂಡಲಸ್ಥಶಶಿಮಂಡಲವತ್—** ದ್ವಿಜಾನಾಂ ಮಂಡಲಂ ದ್ವಿಜಮಂಡಲಂ, ದ್ವಿಜಮಂಡಲೇ ತಿಷ್ಠತೀತಿ ದ್ವಿಜಮಂಡಲಸ್ಥಂ, ಶಶಃ ಅಸ್ಯ ಅಸ್ತೀತಿ ಶಶೀ, ಶಶಿನಃ ಮಂಡಲಂ ಶಶಿಮಂಡಲಂ, ದ್ವಿಜಮಂಡಲಸ್ಥಂ ಚ ತತ್ ಶಶಿಮಂಡಲಂ ಚ ದ್ವಿಜಮಂಡಲಸ್ಥಶಶಿಮಂಡಲಂ, ತಾದೃಶದ್ವಿಜಮಂಡಲಂ ಇವ ದ್ವಿಜಮಂಡಲಸ್ಥ ಶಶಿಮಂಡಲವತ್ ।

**ಕ್ರಿಯಾಪದ—** ವಿಭಾತಿ- ವಿ+ಭಾತಿ ಭಾತಃ ಭಾಂತಿ ಇತ್ಯಾದಿ ಭಾದೀಪ್ತೌ ಲಟ್, (2) ಲಿಟ್ ಬಭೌ ಬಭತುಃ ಬಭುಃ ಬಭಿಥ ಬಭಾಥ ಇತ್ಯಾದಿ । (3) ಲುಟ್ ಭಾತಾ ಭಾತಾರೌ ಭಾತಾರಃ ಭಾತಾಸಿ ಇತ್ಯಾದಿ (4) ಲೃಟ್ ಭಾಸ್ಯತಿ, (5) ಲೋಟ್ ಭಾತು, (6) ಲಙ್ ಅಭಾತ್ ಅಭಾತಾಂ ಅಭು, ಅಭಾಃ ಅಭಾತಂ ಅಭಾತ, ಅಭಾಂ ಅಭಾವ ಅಭಾಮ, (7) ವಿಧಿಲಿಙ್ ಭಾಯಾತ್ ಭಾಯಾತಾಂ ಭಾಯುಃ (8) ಆಶೀರ್ಲಿಙ್ ಭಾಯಾತ್ ಭಾಯಾಸ್ತಾಂ ಭಾಯಾಸುಃ, (9) ಲುಙ್ ಅಭಾಸೀಸ್ ಅಭಾಸಿಷ್ಟಾಂ ಅಭಾಸಿಷುಃ, (10) ಲೃಙ್ ಅಭಾಸ್ಯತ್.

**ಕೋಶ—** ಅದ್ಭುತ = ಆಶ್ಚರ್ಯ, 'ವಿಸ್ಮಯೋಽದ್ಭುತಮಾಶ್ಚರ್ಯಂ ಚಿತ್ರಮಪ್ಯಥ ಭೈರವಂ', ಅಮರ ಪ್ರಕರ = ಸಮೂಹ, 'ಪೂಗೋ ವಿತಾನಂ ಪ್ರಕರಃ' ಅಮರ. ದ್ವಿಜಶಬ್ದಕ್ಕೆ ನಕ್ಷತ್ರ ಎಂಬ ಅರ್ಥವೂ ಇದೆ. 'ದ್ವಿಜರಾಜಃ ಶಶಿಧರಃ' ಎಂದು ಚಂದ್ರನನ್ನು ದ್ವಿಜರಾಜ ಎಂದು ಹೇಳುವುದರಿಂದ ದ್ವಿಜ ಎಂದರೆ ನಕ್ಷತ್ರಗಳು ಎಂದೂ ಅರ್ಥವಾಗುತ್ತದೆ.

**ಪ್ರಯೋಗ—** ಭುವನೈಕಪತೇಃ ಭವನಂ ಭಾತಿ (ಕರ್ತರಿ) । ಭುವನೈಕಪತೇಃ ಭವನೇನ ಭಾಯತೇ (ಭಾವೇ) ।

★ ★ ★

**ಅವತಾರಿಕಾ—** ಆ ಪರಮಾಶ್ಚರ್ಯಕರವಾದ ಮಹಾವಿಷ್ಣುವಿನ ಮನೆಯ ವೈಭವವನ್ನೇ ಪುನಃ ವರ್ಣಿಸುತ್ತಾರೆ.

**ಸ್ವಯಮಿಂದಿರೈವ ಪತಿಮಾನಕರೀ ಗೃಹಕರ್ಮ ಯತ್ರ ಕುರುತೇ ಸುತರಾಮ್ ।**
**ಅಪಿ ಕಿಂಕರೀದಶಶತೀಮಹಿತಾ ಶ್ರಿಯಮತ್ರ ವರ್ಣಯತಿ ವೇಶ್ಮನಿ ಕಃ ॥ 16 ॥**

**ಪದಚ್ಛೇದ—** ಸ್ವಯಂ, ಇಂದಿರಾ, ಏವ, ಪತಿಮಾನಕರೀ, ಗೃಹಕರ್ಮ, ಯತ್ರ, ಕುರುತೇ, ಸುತರಾಂ, ಅಪಿ, ಕಿಂಕರೀದಶಶತೀಮಹಿತಾ ಶ್ರಿಯಂ, ಅತ್ರ, ವರ್ಣಯತಿ, ವೇಶ್ಮನಿ, ಕಃ ।

**ಅನ್ವಯ—** ಯತ್ರ, ಪತಿಮಾನಕರೀ ಇಂದಿರಾ, ಕಿಂಕರೀದಶಶತೀಮಹಿತಾ ಅಪಿ, ಸ್ವಯಂ ಏವ ಸುತರಾಂ ಗೃಹಕರ್ಮ ಕುರುತೇ, ಅತ್ರ ವೇಶ್ಮನಿ ಶ್ರಿಯಂ ಕಃ ವರ್ಣಯತಿ ।

**ಅನ್ವಯಾರ್ಥ—**

**ಯತ್ರ** = ಯಾವ ಶ್ರೀಮನ್ನಾರಾಯಣನ ಮನೆಯಲ್ಲಿ

**ಪತಿಮಾನಕರೀ** = ಸ್ವಾಮಿಯಾದ ಶ್ರೀಮನ್ನಾರಾಯಣನಿಗೆ ಸನ್ಮಾನವನ್ನು ಮಾಡುವ

**ಇಂದಿರಾ** = ಲಕ್ಷ್ಮಿಯು,

**ಕಿಂಕರೀದಶಶತೀಮಹಿತಾ ಅಪಿ** = ಸಾವಿರ ದಾಸಿಯರಿಂದ ಪೂಜಿಸಲ್ಪಟ್ಟವಳಾದರೂ,

ಸ್ವಯಂ ಏವ = ತಾನಾಗಿಯೇ

ಸುತರಾಂ = ಅತಿಶಯವಾಗಿ

ಗೃಹಕರ್ಮ = ಮನೆಯ ಕೆಲಸವನ್ನು

ಕುರುತೇ = ಮಾಡುತ್ತಾಳೆ,

ಅತ್ರ ವೇಶ್ಮನಿ = ಇಂತಹ ಶ್ರೀಮನ್ನಾರಾಯಣನ ಮನೆಯಲ್ಲಿರುವ

ಶ್ರಿಯಂ = ಶೋಭೆಯನ್ನು (ಸಂಪತ್ತನ್ನು)

ಕಃ = ಯಾವನು

ವರ್ಣಯತಿ = ವರ್ಣಿಸುತ್ತಾನೆ?

ತಾತ್ಪರ್ಯ— ಮುಕ್ತಸ್ಥಾನವಾದ ವೈಕುಂಠದಲ್ಲಿ ಲಕ್ಷ್ಮೀದೇವಿಯನ್ನು ಸಾವಿರಾರು ಮಂದಿ ದಾಸಿಯರು ಸೇವಿಸುತ್ತಿರುವರು. ಆದರೆ ಶ್ರೀಮನ್ನಾರಾಯಣನ ಮನೆಯಲ್ಲಿ ಶ್ರೀಲಕ್ಷ್ಮೀದೇವಿಯೇ ತನ್ನ ಪತಿಯ ಸನ್ಮಾನಸೇವೆಯಲ್ಲಿ ಸ್ವತಃ ತೊಡಗಿರುತ್ತಾಳೆ. ತನ್ನ ಮನೆಯನ್ನು ಗುಡಿಸುವುದು ಸಾರಿಸುವುದು, ಅಲಂಕರಿಸುವುದು ಮುಂತಾದ ಕೆಲಸವನ್ನು ಸ್ವಂತವಾಗಿಯೇ ಮಾಡುತ್ತಾಳೆ. ಆದ್ದರಿಂದ ಇಂತಹ ಮನೆಯ ಶೋಭೆಯನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ. (ಸ್ತ್ರೀಯು ತನ್ನ ಪತಿಯ ಸೇವೆಯನ್ನು ತಾನೇ ಮಾಡಬೇಕು ಎಂದು ಇದರಿಂದ ತಿಳಿದುಬರುತ್ತದೆ).

ವಿಗ್ರಹ—

**ಪತಿಮಾನಕರೀ**— ಕರೋತೀತಿ ಕರೀ, ಪತ್ಯುಃ ಮಾನಃ ಪತಿಮಾನಃ, ಪತಿಮಾನಸ್ಯ ಕರೀ ಪತಿಮಾನಕರೀ ।

**ಗೃಹಕರ್ಮ**— ಗೃಹಸ್ಯ ಕರ್ಮ ಗೃಹಕರ್ಮ, ತತ್ ಗೃಹಕರ್ಮ ।

**ಕಿಂಕರೀದಶಶತೀಮಹಿತಾ**— ದಶಾನಾಂ ಶತಾನಾಂ ಸಮಾಹಾರಃ ದಶಶತೀ, (ಹತ್ತುನೂರರ ಸಮೂಹ) (ದ್ವಿಗುಸಮಾಸ), ಕಿಂಕರೀ ಚಾಸೌ ದಶಶತೀ ಚ ಕಂಕರೀದಶಶತೀ, ದಶಶತ್ಯಾ ಕಿಂಕರಿಮಹಿತಾ ಕಿಂಕರೀ ದಶಶತೀಮಹಿತಾ ।

**ಕ್ರಿಯಾಪದ— ಕುರುತೇ**- (1) ಡುಕೃಞ್ಕರಣೇ ಇತಿ ಕರಣಾರ್ಥಕಃ ಕೃಧಾತುಃ ಅನಿಟ್ ಸಕರ್ಮಕಃ ಆತ್ಮನೇಪದಿನಃ ಪ್ರಥಮಪುರುಷೇ ಏಕವಚನೇ ಕುರುತೇ ಇತಿ ರೂಪಂ ।

ಕುರುತೇ ಕುರ್ವಾತೇ ಕುರ್ವತೇ, ಕುರುಷೇ ಕುರ್ವಾಥೇ ಕುರುಧ್ವೇ, ಕುರ್ವೇ ಕುರ್ವಹೇ ಕುರ್ಮಹೇ ॥

(2) ಲಿಟ್ ಚಕ್ರೇ ಚಕ್ರಾತೇ ಚಕ್ರಿರೇ, ಚಕೃಷೇ ಚಕ್ರಾಥೇ ಚಕೃಢ್ವೇ, ಚಕ್ರೇ ಚಕೃವಹೇ ಚಕೃಮಹೇ, (3) ಲುಟ್ ಕರ್ತಾ ಕರ್ತಾಸೇ ಕರ್ತಾಹೇ, (4) ಲೃಟ್ ಕರಿಷ್ಯತೇ, (5) ಲೋಟ್ ಕುರುತಾಂ ಕುರ್ವಾತಾಂ ಕುರ್ವತಾಂ, ಕುರುಷ್ವ ಕುರ್ವಾಥಾಂ ಕುರುಧ್ವಂ, ಕರವೈ ಕರವಾವಹೈ ಕರವಾಮಹೈ, (6) ಲಙ್ ಅಕುರುತ ಅಕುರ್ವಾತಾಂ ಅಕುರ್ವತ, ಅಕುರುಥಾಃ ಅಕುರ್ವಾಥಾಂ ಅಕುರುಧ್ವಂ, ಅಕುರ್ವಿ ಅಕುರ್ವಹಿ ಅಕುರ್ಮಹಿ, (7) ವಿಧಿಲಿಙ್ ಕುರ್ವೀತ ಕುರ್ವೀಯಾತಾಂ ಕುರ್ವೀರನ್ ಕುರ್ವೀಥಾಃ, ಕುರ್ವೀಯ ಕುರ್ವೀವಹಿ ಕುರ್ವೀಮಹಿ, (8) ಆಶೀರ್ಲಿಙ್ ಕೃಷೀಷ್ಟ ಕೃಷೀಯಾಸ್ತಾಂ ಕೃಷೀರನ್, ಕೃಷೀಷ್ಠಾಃ ಕೃಷೀಯಾಸ್ಥಾಂ ಕೃಷೀಢ್ವಂ, ಕೃಷೀಯ ಕೃಷೀವಹಿ ಕೃಷೀಮಹಿ, (9) ಲುಙ್ ಅಕೃತ ಅಕೃಷಾತಾಂ ಅಕೃಷತ, ಅಕೃಥಾಃ ಅಕೃಷಾಥಾಂ ಅಕೃಢ್ವಂ, ಅಕೃಷಿ ಅಕೃಷ್ವಹಿ ಅಕೃಷ್ಮಹಿ, (10) ಲೃಙ್ ಅಕರಿಷ್ಯತ ಅಕರಿಷ್ಯೇತಾಂ ಇತ್ಯಾದಿ.

**ವರ್ಣಯತಿ** - (1) ವರ್ಣಯತಿ ವರ್ಣಯತಃ ಇತ್ಯಾದಿ ವರ್ಣವರ್ಣಕ್ರಿಯಾ ವಿಸ್ತಾರಗುಣವಚನೇಷು. ಸಕರ್ಮಕಃ ಸೇಟ್ ಉಭಯಪದೀ ಲಟ್, (2) ವರ್ಣಯಾಂಚಕಾರ, (3) ವರ್ಣಯಿತಾ, (4) ವರ್ಣಯಿಷ್ಯತಿ, (5) ವರ್ಣಯತು, (6) ಅವರ್ಣಯತ್, (7) ವರ್ಣಯೇತ್, (8) ವರ್ಣ್ಯಾತ್, (9) ಅವವರ್ಣಯತ್, (10) ಅವರ್ಣಯಿಷ್ಯತ್, ಅವರ್ಣಯಿಷ್ಯತಿ ।

ಪ್ರಯೋಗ—ದಶಶತೀಕಿಂಕರೀಮಹಿತಾ ಇಂದಿರಾ ಸ್ವಯಂ ಗೃಹಕರ್ಮ ಕುರುತೇ (ಕರ್ತರಿ) ।
ದಶಶತೀಕಿಂಕರೀಮಹಿತಯಾ ಇಂದಿರಯಾ ಸ್ವಯಂ ಗೃಹಕರ್ಮ ಕ್ರಿಯತೇ (ಕರ್ಮಣಿ) ।
ಅತ್ರ ವೇಶ್ಮನಿ ಶ್ರಿಯಂ ಕಃ ವರ್ಣಯತಿ (ಕರ್ತರಿ)। ಅತ್ರವೇಶ್ಮನಿ ಶ್ರೀಃ ಕೇನ ವರ್ಣ್ಯತೇ (ಕರ್ಮಣಿ)।

★ ★ ★

**ಅವತಾರಿಕಾ**— ಶ್ರೀ ಪರಮಾತ್ಮನ ಅದ್ಭುತ ವಿಲಾಸವನ್ನು ವರ್ಣಿಸುತ್ತಾರೆ.

**ಕಮಲಾಪತಿಃ ಕಮಲಯಾಽಮಲಯಾ**
**ಕಮನೀಯಯಾ ಕಮಲಲೋಚನಯಾ ।**
**ಅಮೃತಾಹಿರಾಜಮೃದುಭೋಗಗತಃ**
**ಸ್ವರತೋಽಪಿ ತತ್ರ ರಮತೇ ಪರಮಃ ॥ 17 ॥**

**ಪದಚ್ಛೇದ**— ಕಮಲಾಪತಿಃ, ಕಮಲಯಾ, ಅಮಲಯಾ, ಕಮನೀಯಯಾ, ಕಮಲಲೋಚನಯಾ, ಅಮೃತಾಹಿರಾಜಮೃದುಭೋಗಗತಃ, ಸ್ವರತಃ, ಅಪಿ, ತತ್ರ, ರಮತೇ, ಪರಮಃ ।

**ಅನ್ವಯ**— ಪರಮಃ ಕಮಲಾಪತಿಃ, ಸ್ವರತಃ ಅಪಿ, ತತ್ರ ಅಮೃತಾಹಿರಾಜಮೃದುಭೋಗಗತಃ, ಅಮಲಯಾ, ಕಮನೀಯಯಾ, ಕಮಲಲೋಚನಯಾ ಕಮಲಯಾ ರಮತೇ ।

**ಅನ್ವಯಾರ್ಥ**—

**ಪರಮಃ** = ಸರ್ವೋತ್ತಮನಾದ
**ಕಮಲಾಪತಿಃ** = ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು
**ಸ್ವರತಃ ಅಪಿ** = ತನ್ನಲ್ಲಿಯೇ ವಿಹರಿಸುವವನಾದರೂ
**ತತ್ರ** = ಹಿಂದೆ ಹೇಳಿದ ಸುಂದರಭವನದಲ್ಲಿ
**ಅಮೃತಾಹಿರಾಜಮೃದುಭೋಗಗತಃ** = ಮುಕ್ತನಾದ ಶೇಷನ ಕೋಮಲವಾದ ಶರೀರದ ಮೇಲೆ ಶಯನ-ಮಾಡಿದವನಾಗಿ,
**ಅಮಲಯಾ** = ನಿರ್ದೋಷಳಾದ,
**ಕಮನೀಯಾ** = ಸುಂದರಳಾದ
**ಕಮಲಲೋಚನಯಾ** = ತಾವರೆಯಂತಹ ಕಣ್ಣುಗಳುಳ್ಳ
**ಕಮಲಯಾ** = ಲಕ್ಷ್ಮೀದೇವಿಯೊಡನೆ
**ರಮತೇ** = ವಿಹರಿಸುತ್ತಾನೆ.

**ತಾತ್ಪರ್ಯ**— ಶ್ರೀಮನ್ನಾರಾಯಣನು ಸರ್ವೋತ್ತಮನು. ತನ್ನಲ್ಲಿಯೇ ತಾನು ಕ್ರೀಡಿಸುವವನು (ಸ್ವರಮಣನು). ಆದರೂ ಅವನು ಆ ಸುಂದರಭವನದಲ್ಲಿ ಮುಕ್ತನಾದ ಮಹಾಶೇಷನ ಕೋಮಲ ಶರೀರದ ಮೇಲೆ ಪವಡಿಸಿ ಸಮಸ್ತ ದೋಷರಹಿತಳಾದ, ಸೌಂದರ್ಯಾದಿ ಅನಂತಾಶೇಷಗುಣಗಳಿಂದ ವಿರಾಜಿಸುತ್ತಿರುವ ಲಕ್ಷ್ಮೀದೇವಿಯೊಡನೆ ವಿಹರಿಸುತ್ತಾನೆ. ಲಕ್ಷ್ಮೀದೇವಿಯನ್ನು ಅನುಗ್ರಹಿಸಿ ಅವಳಿಗೆ ಆನಂದಾತಿಶಯವನ್ನು ಪ್ರಕಟಗೊಳಿಸುತ್ತಾನೆಯೇ ಹೊರತು ಅವನಿಗೆ ಲಕ್ಷ್ಮೀ-ದೇವಿಯ ಭೋಗದಿಂದ ಆಗಬೇಕಾದುದು ಏನೂ ಇಲ್ಲ.

**ವಿಗ್ರಹ—**

**ಕಮಲಾಪತಿಃ—** ಕಮಲಾಯಾಃ ಪತಿಃ ಕಮಲಾಪತಿಃ ।

**ಅಮಲಯಾ—** ನ ವಿದ್ಯತೇ ಮಲಂ ಯಸ್ಯಾಃ ಸಾ ಅಮಲಾ, ತಯಾ ಅಮಲಯಾ ।

**ಕಮಲಲೋಚನಯಾ—** ಕಮಲೇ ಇವ ಲೋಚನೇ ಯಸ್ಯಾಃ ಸಾ ಕಮಲಲೋಚನಾ, ತಯಾ ಕಮಲ-ಲೋಚನಯಾ ।

**ಅಮೃತಾಹಿರಾಜಮೃದುಭೋಗಗತಃ—** ಅಹೀನಾಂ ರಾಜಾ ಅಹಿರಾಜಃ, ಅಮೃತಶ್ಚ ಅಸೌ ಅಹಿರಾಜಶ್ಚ ಅಮೃತಾಹಿರಾಜಃ, ಮೃದುಶ್ಚಾಸೌ ಭೋಗಶ್ಚ ಮೃದುಭೋಗಃ, ಅಮೃತಾಹಿರಾಜಸ್ಯ ಮೃದುಭೋಗಃ ಅಮೃತಾಹಿರಾಜಮೃದುಭೋಗಃ, ಅಮೃತಾಹಿರಾಜಮೃದುಭೋಗೇ ಗತಃ ಅಮೃತಾಹಿರಾಜಮೃದು-ಭೋಗಗತಃ ।

**ಸ್ವರತಃ—** ಸ್ವಸ್ಮಿನ್ ರತಃ ಸ್ವರತಃ ।

**ಕ್ರಿಯಾಪದ—** **ರಮತೇ-** (1) ರಮತೇ ರಮೇತೆ ಇತ್ಯಾದಿ ರಮು ಕ್ರೀಡಾಯಾಂ ಅಕರ್ಮಕಃ ಅನಿಟ್ ಆತ್ಮನೇಪದೀ, (2) ರೇಮೇ, (3) ರಂತಾ (ಸೇ.ಹೇ), (4) ರಂಸ್ಯತೇ, (5) ರಮತಾಂ, (6) ಅರಮತ, (7) ರಮೇತ, (8) ರಂಸೀಷ್ಟ, (9) ಅರಂಸ್ತ ಅರಂಸಾತಾಂ ಅರಂಸತ, (10) ಅರಂಸ್ಯತ. ಲಟ್, ಲಿಟ್, ಲುಟ್, ಲೋಟ್, ಲಙ್, ವಿಧಿಲಿಙ್, ಆಶೀರ್ಲಿಙ, ಲುಙ್, ಲೃಙ್ ದಶಲಕಾರಗಳ ಈ ಕ್ರಮದಲ್ಲಿ ಇಲ್ಲಿ ಧಾತುರೂಪಗಳನ್ನು ಕೊಡಲಾಗಿದೆ. ಹೀಗೆಯೇ ಮುಂದೆಯೂ ತಿಳಿಯಬೇಕು. ರಮ್‌ಧಾತುವಿಗೆ ಕರ್ಮಣಿ ಪ್ರಯೋಗವಿಲ್ಲ. ಭಾವೇ ಪ್ರಯೋಗ ಮಾತ್ರ ಇದೆ. (1) ರಮ್ಯತೇ, (5) ರಮ್ಯತಾಂ, (6) ಅರಮ್ಯತ, (7) ರಮ್ಯೇತ, (9) ಅರಾಮಿ ಇತ್ಯಾದಿ ರೂಪಗಳು ।

**ಕೋಶ—** ಕಮಲಾಪತಿಃ ಎಂಬಲ್ಲಿ ಕಮಲಾ = ಲಕ್ಷ್ಮಿಯು 'ಕಮಲಾಶ್ರೀಹರಿಪ್ರಿಯಾ' ಅಮರ, ಅಮೃತಾಹಿರಾಜ-ಮೃದುಭೋಗಗತಃ ಎಂಬಲ್ಲಿ ಅಹಿ = ಹಾವು, ಸರ್ಪ 'ಭುಜಂಗೋಽಹಿರ್ಭುಜಂಗಮಃ' ಅಮರ, ಭೋಗ = ಹಾವಿನ ಶರೀರ, 'ಭೋಗಃ ಸುಖೇ ಸ್ತ್ರ್ಯಾದಿಭೃತಾ ಅಹೇಶ್ಚ ಫಣಕಾಯಯೋಃ' ಅಮರ.

**ಪ್ರಯೋಗ—** ಪರಮಃ ಕಮಲಾಪತಿಃ ಕಮಲಯಾ ರಮತೇ (ಕರ್ತರಿ) ।
ಪರಮೇಣ ಕಮಲಾಪತಿನಾ ಕಮಲಯಾ ರಮ್ಯತೇ (ಭಾವೇ) ॥

★ ★ ★

**ಅವತಾರಿಕಾ—** ಶೇಷದೇವರು ಸನಕಾದಿಗಳಿಗೆ ಪರಮಾತ್ಮನ ಸ್ಮರಣೆಯ ರೀತಿಯನ್ನು ಉಪದೇಶಿಸುತ್ತಾರೆ.

**ತರುಣಪ್ರಭಾಕರಸಹಸ್ರರುಚಂ ಕನಕಾಂಬರಂ ಮಣಿಮಯಾಭರಣಮ್ ।**
**ಹಸಿತಾನನೇಂದುಮರವಿಂದದೃಶಂ ತಮರೀಂದ್ರಧಾರಿಣಮನುಸ್ಮರತ ॥ 18 ॥**

**ಪದಚ್ಛೇದ—** ತರುಣಪ್ರಭಾಕರಸಹಸ್ರರುಚಂ, ಕನಕಾಂಬರಂ, ಮಣಿಮಯಾಭರಣಂ, ಹಸಿತಾನನೇಂದುಂ, ಅರ-ವಿಂದದೃಶಂ, ಅರೀಂದ್ರಧಾರಿಣಂ, ಅನುಸ್ಮರತ ।

**ಅನ್ವಯ—** ತರುಣಪ್ರಭಾಕರಸಹಸ್ರರುಚಂ, ಕನಕಾಂಬರಂ, ಮಣಿಮಯಾಭರಣಂ, ಹಸಿತಾನನೇಂದುಂ, ಅರ-ವಿಂದದೃಶಂ, ಅರೀಂದ್ರಧಾರಿಣಂ ತಂ ಅನುಸ್ಮರತ ।

ಅನ್ವಯಾರ್ಥ—

ತರುಣಪ್ರಭಾಕರಸಹಸ್ರರುಚಂ = ಎಳೆಯ (ಆಗತಾನೇ ಉದಯಿಸಿದ) ಸಾವಿರ ಸೂರ್ಯರ ಕಾಂತಿಯಂತೆ ಕಾಂತಿಯುಳ್ಳ,

ಕನಕಾಂಬರಂ = ಬಂಗಾರದ ಬಣ್ಣದ ಬಟ್ಟೆಯುಳ್ಳ

ಮಣಿಮಯಾಭರಣಂ = ರತ್ನಖಚಿತವಾದ ಅಲಂಕಾರಗಳುಳ್ಳ, ನಗುವಿನಿಂದ ಕೂಡಿದ

ಹಸಿತಾನನೇಂದುಂ = ಚಂದ್ರನಂತಿರುವ ಮುಖವುಳ್ಳ,

ಅರವಿಂದದೃಶಂ = ಕಮಲದಂತಹ ಕಣ್ಣುಗಳುಳ್ಳ,

ಅರೀಂದ್ರಧಾರಿಣಂ = ಶ್ರೇಷ್ಠವಾದ ಸುದರ್ಶನ ಚಕ್ರವನ್ನು ಹಿಡಿದಿರುವ

ತಂ = ಆ ಶ್ರೀಮನ್ನಾರಾಯಣನನ್ನು

ಅನುಸ್ಮರತ = ಧ್ಯಾನಿಸಿರಿ (ನಿರಂತರವಾಗಿ ಕ್ರಮವಾಗಿ ಸ್ಮರಿಸಿರಿ).

ತಾತ್ಪರ್ಯ— ವೈಕುಂಠದಲ್ಲಿ ಶ್ರೀಮನ್ನಾರಾಯಣನು ಆಗತಾನೇ ಉದಯಿಸಿದ ಸಾವಿರಾರು ಸೂರ್ಯರ ಕಾಂತಿಯಂತಿರುವ ಕಾಂತಿಯಿಂದ ಕಂಗೊಳಿಸುತ್ತಾನೆ. ಬಂಗಾರದ ಬಣ್ಣದ ಪೀತಾಂಬರವನ್ನು ಧರಿಸಿರುತ್ತಾನೆ. ರತ್ನಖಚಿತವಾದ ಆಭರಣಗಳನ್ನು ಧರಿಸಿರುತ್ತಾನೆ. ಚಂದ್ರನಂತಿರುವ ಅವನ ಮುಖದಿಂದ ಮುಗುಳುನಗೆಯು ಹೊರಸೂಸುತ್ತಾ ಇರುತ್ತದೆ. ಅವನ ಕಣ್ಣುಗಳು ಕಮಲದಂತೆ ಸುಂದರವಾಗಿವೆ. ಅವನು ಶ್ರೇಷ್ಠವಾದ ಸುದರ್ಶನ ಚಕ್ರವನ್ನು ಧರಿಸಿದ್ದಾನೆ. ಇಂತಹ ಶ್ರೀಹರಿಯನ್ನು ಸ್ಮರಿಸಿರಿ, ಧ್ಯಾನಿಸಿರಿ.

ವಿಗ್ರಹ—

ತರುಣಪ್ರಭಾಕರಸಹಸ್ರರುಚಂ— ಕುರ್ವಂತೀತಿ ಕರಾಃ, ಪ್ರಭಾಯಾಃ ಕರಾಃ ಪ್ರಭಾಕರಾಃ, ತರುಣಾಶ್ಚ ತೇ ಪ್ರಭಾಕರಾಶ್ಚ ತರುಣಪ್ರಭಾಕರಾಃ, ತರುಣಪ್ರಭಾಕರಾಣಾಂ ಸಹಸ್ರಂ ತರುಣಪ್ರಭಾಕರಸಹಸ್ರಂ, ತರುಣಪ್ರಭಾಕರಸಹಸ್ರಸ್ಯ ರುಕ್ ಇವ ರುಕ್ ಯಸ್ಯ ಸಃ ತರುಣಪ್ರಭಾಕರಸಹಸ್ರರುಕ್, ತಂ ತರುಣ-ಪ್ರಭಾಕರಸಹಸ್ರರುಚಂ ।

ಕನಕಾಂಬರಂ— ಕನಕವತ್ ಅಂಬರಂ ಯಸ್ಯ ಸಃ ಕನಕಾಂಬರಃ, ತಂ ಕನಕಾಂಬರಂ ।

ಮಣಿಮಯಾಭರಣಂ— ಮಣಿಭಿಃ ಪ್ರಚುರಾಣಿ ಮಣಿಮಯಾನಿ, ಮಣಿಮಯಾನಿ ಆಭರಣಾನಿ ಯಸ್ಯ ಸಃ ಮಣಿಮಯಾಭರಣಃ, ತಂ ಮಣಿಮಯಾಭರಣಂ ।

ಹಸಿತಾನನೇಂದುಂ— ಆನನಂ ಇಂದುರಿವ ಆನನೇಂದುಃ, ಹಸಿತಃ ಆನನೇಂದುಃ ಯಸ್ಯ ಸಃ ಹಸಿತಾನ-ನೇಂದುಃ, ತಂ ಹಸಿತಾನನೇಂದುಂ ।

ಅರವಿಂದದೃಶಂ— ಅರವಿಂದಂ ಇವ ದೃಕ್ (ಅರವಿಂದೇ ಇವ ದೃಶೌ) ಯಸ್ಯ ಸಃ ಅರವಿಂದದೃಕ್, ತಂ ಅರವಿಂದದೃಶಂ ।

ಅರೀಂದ್ರಧಾರಿಣಂ— ಅರಾಣಿ ಅಸ್ಯ ಸಂತೀತಿ ಅರಿ (ಅರಿಣೀ ಅರೀಣಿ ನಕಾರಾಂತ ನಪುಂ), ಅರಿಣಾಂ ಇಂದ್ರಃ ಅರೀಂದ್ರಃ, ಅರೀಂದ್ರಂ ಧಾರಯತೀತಿ ಅರೀಂದ್ರಧಾರೀ, ತಂ ಅರೀಂದ್ರಧಾರಿಣಂ ।

ಕ್ರಿಯಾಪದ— ಅನುಸ್ಮರತ- ಅನು+ಸ್ಮರತು-ಸ್ಮರತಾತ್ ಸ್ಮರತಾಂ ಸ್ಮರಂತು, ಸ್ಮರ-ಸ್ಮರತಾತ್ ಸ್ಮರತಂ ಸ್ಮರತ, ಸ್ಮರಾಣಿ ಸ್ಮರಾವ ಸ್ಮರಾಮ, ಸ್ಮೃ ಚಿಂತಾಯಾಂ ಸಕರ್ಮಕಃ ಅನಿಟ್ ಪರಸ್ಮೈಪದೀ ಲೋಟ್.

(1) ಲಟ್ ಸ್ಮರತಿ, (2) ಲಿಟ್ ಸಸ್ಮಾರ ಸಸ್ಮರತು ಸಸ್ಮರುಃ, ಸಸ್ಮರ್ಥ ಸಸ್ಮರಥುಃ ಸಸ್ಮರ, ಸಸ್ಮಾರ ಸಸ್ಮರಿವ ಸಸ್ಮರಿಮ, (3) ಲುಟ್ ಸ್ಮರ್ತಾ, (4) ಲೃಟ್ ಸ್ಮರಿಷ್ಯತಿ, (6) ಲಙ್ ಅಸ್ಮರತ್, (7) ವಿಧಿಲಿಙ್ ಸ್ಮರೇತ್, (8) ಆಶೀರ್ಲಿಙ್

ಸ್ಮರ್ಯಾತ್ ಸ್ಮರ್ಯಾಸ್ತಾಂ, (9) ಲುಙ್ ಅಸ್ಮಾರ್ಷೀತ್ ಅಸ್ಮಾರ್ಷ್ಟಾಂ ಅಸ್ಮಾರ್ಷುಃ, ಅಸ್ಮಾರ್ಷೀಃ, ಅಸ್ಮಾರ್ಷ್ಟಂ ಅಸ್ಮಾರ್ಷ್ಟ ಅಸ್ಮಾರ್ಷಂ ಅಸ್ಮಾರ್ಷ್ವ ಅಸ್ಮಾರ್ಷ್ಮ, (10) ಲೃಙ್ ಅಸ್ಮರಿಷ್ಯತ್ ।

**ಕೋಶ—** ಅರಿಂದ್ರಧಾರಿಣಂ ಎಂಬಲ್ಲಿ, ಅರಿ = ಚಕ್ರ, ನಕಾರಾಂತ ನಪುಂಸಕಲಿಂಗ, 'ಅರಿಃ ಪುಮಾನ್ ಚಕ್ರವಾಕೇ ರಿಪೌ ಚಕ್ರೇ ತು ನ ದ್ವಯೋಃ' ಇತಿ ವಿಶ್ವಃ, ತರುಣಪ್ರಭಾಕರಸಹಸ್ರರುಚಂ ಎಂಬಲ್ಲಿ, ತರುಣ = ಹೊಸದಾದ, 'ತರುಣಃ ಸ್ಯಾನ್ನವೇ ಯೂನಿ' ಇತಿ ವಿಶ್ವಃ, ಕನಕಾಂಬರಂ ಎಂಬಲ್ಲಿ, ಅಂಬರಂ = ಬಟ್ಟೆ, 'ಅಂಬರಂ ವ್ಯೋಮ್ನಿ ವಾಸಸಿ' ಇತ್ಯಮರಃ ।

**ಪ್ರಯೋಗ—** ಯೂಯಂ ಅರೀಂದ್ರಧಾರಿಣಂ ತಂ ಅನುಸ್ಮರತ (ಕರ್ತರಿ) ।
ಯುಷ್ಮಾಭಿಃ ಅರೀಂದ್ರಧಾರೀ ಸಃ ಅನುಸ್ಮರ್ಯತಾಂ (ಕರ್ಮಣಿ) ।

★ ★ ★

**ಅವತಾರಿಕಾ—** ಶ್ರೀಹರಿಯ ಪರಮಾದ್ಭುತಗುಣಗಳನ್ನು ವರ್ಣಿಸಲು ಅಸಾಧ್ಯವೆನ್ನುತ್ತಾರೆ.

**ಗಣಯೇದ್ರಮಾಽಸ್ಯ ನ ಗುಣಾ-**
**ನಖಿಲಾಂಶ್ಚತುರಾನನಶ್ಚತುರವಾಗಪಿ ನೋ ।**
**ನ ವಯಂ ಸಹಸ್ರವದನಾ ಅಪಿ ತಾ-**
**ನಪರೋದಿತಾನತಿವದೇಮ ಪುನಃ ॥ 19 ॥**

**ಪದಚ್ಛೇದ—** ಗಣಯೇತ್, ರಮಾ, ಅಸ್ಯ, ನ, ಗುಣಾನ್, ಅಖಿಲಾನ್, ಚತುರಾನನಃ, ಚತುರವಾಕ್, ಅಪಿ, ನೋ, ನ, ವಯಂ, ಸಹಸ್ರವದನಾ, ಅಪಿ, ತಾನ್, ಅಪರೋದಿತಾನ್, ಅತಿವದೇಮ, ಪುನಃ ।

**ಅನ್ವಯ—** ರಮಾ ಅಸ್ಯ ಅಖಿಲಾನ್ ಗುಣಾನ್ ನ ಗಣಯೇತ್, ಚತುರವಾಕ್ ಚತುರಾನನಃ ಅಪಿ ನೋ (ಗಣಯೇತ್), ಸಹಸ್ರವದನಾಃ ವಯಂ ಅಪಿ ನ (ಗಣಯೇತ್), ಪುನಃ ಅಪರೋದಿತಾನ್ ಅತಿವದೇಮ ।

**ಅನ್ವಯಾರ್ಥ—**

**ರಮಾ** = ಲಕ್ಷ್ಮೀದೇವಿಯು
**ಅಸ್ಯ** = ಈ ಶ್ರೀಮನ್ನಾರಾಯಣನ
**ಅಖಿಲಾನ್** = ಸಮಸ್ತವಾದ
**ಗುಣಾನ್** = ಜ್ಞಾನ, ಆನಂದಾದಿಗುಣಗಳನ್ನು
**ನ ಗಣಯೇತ್** = ಎಣಿಸಲಾರಳು,
**ಚತುರವಾಕ್** = ಕುಶಲವಾದ ಮಾತುಳ್ಳ
**ಚತುರಾನನಃ ಅಪಿ** = ಬ್ರಹ್ಮನೂ ಕೂಡ
**ನೋ (ಗಣಯೇತ್)** = ಎಣಿಸಲಾರನು.
**ಸಹಸ್ರವದನಾಃ** = ಸಾವಿರ ಬಾಯಿಗಳುಳ್ಳ
**ವಯಂ ಅಪಿ** = ನಾವೂ ಸಹ
**ನ (ಗಣಯೇಮ)** = ಎಣಿಸಲಾರೆವು.
**ಪುನಃ** = ಆದರೂ

**ಅಪರೋದಿತಾನ್** = ಶುಕಾಚಾರ್ಯರೇ ಮೊದಲಾದವರಿಂದ ಭಾಗವತಾದಿ ಗ್ರಂಥಗಳಲ್ಲಿ ಹೇಳಲ್ಪಟ್ಟ

**ತಾನ್** = ಆ ಗುಣಗಳನ್ನು

**ಅತಿವದೇಮ** = ಹೆಚ್ಚಾಗಿ ಮಾಡಿ ಹೇಳಿಯೇವು.

**ತಾತ್ಪರ್ಯ—** ಈ ಶ್ರೀಮನ್ನಾರಾಯಣನು ಅಪರಿಮಿತ ಗುಣಪೂರ್ಣನು. ಅವನ ಗುಣಗಳನ್ನು ಪೂರ್ತಿಯಾಗಿ ಲಕ್ಷ್ಮೀದೇವಿಯೂ ಹೇಳಲಾರಳು. ಉತ್ತಮ ವಾಗ್ಮಿಯಾದ ನಾಲ್ಕು ಮುಖಗಳುಳ್ಳ ಬ್ರಹ್ಮನೂ ಹೇಳಲಾರನು. ನನಗೆ ಸಾವಿರ ಬಾಯಿಗಳಿವೆ. ಆದರೆ ನಾನೂ ಪರಮಾತ್ಮನ ಗುಣಗಳನ್ನು ಪೂರ್ತಿಯಾಗಿ ಹೇಳಲಾರೆ. ಆದರೆ ಶುಕಾಚಾರ್ಯರೇ ಮುಂತಾದವರು ಭಾಗವತಾದಿ ಗ್ರಂಥಗಳಲ್ಲಿ ಹೇಳಿರುವ ಗುಣಗಳನ್ನು ಹೆಚ್ಚಿಸಿ ಹೇಳಿಯೇವು. ಅವರು ಹೇಳದೇ ಇರುವ ಕೆಲವು ವಿಶೇಷಗಳನ್ನು ಹೇಳಬಲ್ಲೆವು. ಆದರೆ ಸಂಪೂರ್ಣ ಗುಣಗಳನ್ನು ಹೇಳಲಾರೆವು.

**ವಿಗ್ರಹ—**

**ಚತುರಾನನಃ—** ಚತ್ವಾರಿ ಆನನಾನಿ ಯಸ್ಯ ಸಃ ಚತುರಾನನಃ ।

**ಚತುರವಾಕ್—** ಚತುರಾ ವಾಕ್ ಯಸ್ಯ ಸಃ ಚತುರವಾಕ್ ।

**ಸಹಸ್ರವದನಾಃ—** ಸಹಸ್ರಂ ವದನಾನಿ ಯೇಷಾಂ ತೇ ಸಹಸ್ರವದನಾಃ ।

**ಅಪರೋದಿತಾನ್—** ಅಪರೈಃ ಉದಿತಾಃ ಅಪರೋದಿತಾಃ, ತಾನ್ ಅಪರೋದಿತಾನ್ ।

**ಕ್ರಿಯಾಪದ— ಗಣಯೇತ್**- ಗಣಸಂಖ್ಯಾನೇ ಚುರಾದಿಃ ಸಕರ್ಮಕಃ ಸೇಟ್ ಪರಸ್ಮೈಪದೀ ವಿಧಿಲಿಙ್ ಲಕಾರೇ ಪ್ರಥಮಪುರುಷೇ ಏಕವಚನೇ 'ಗಣಯೇತ್' ಇತಿ ರೂಪಂ ।

ಗಣಯೇತ್ ಗಣಯೇತಾಂ ಗಣಯೇಯುಃ, ಗಣಯೇಃ ಗಣಯೇತಂ ಗಣಯೇತ, ಗಣಯೇಯಂ ಗಣಯೇವ ಗಣಯೇಮ ॥

(1) ಲಟ್ ಗಣಯತಿ, (2) ಲಿಟ್ ಗಣಯಾಂಚಕಾರ ಗಣಯಾಮಾಸ ಗಣಯಾಂಬಭೂವ, (3) ಲುಟ್ ಗಣಯಿತಾ, (4) ಲೃಟ್ ಗಣಯಿಷ್ಯತಿ, (5) ಲೋಟ್ ಗಣಯತು, (6) ಲಙ್ ಅಗಣಯತ್, (8) ಆಶೀರ್ಲಿಙ್ ಗಣ್ಯಾತ್, (9) ಲುಙ್ ಅಜೀಗಣತ್ ಅಜೀಗಣತಾಂ ಅಜೀಗಣನ್ ಇತ್ಯಾದಿ, (10) ಲೃಙ್ ಅಗಣಯಿಷ್ಯತ್ ।

**ಅತಿವದೇಮ**- ಅತಿ ಇತ್ಯುಪಸರ್ಗಪೂರ್ವಕಾತ್ ವದವ್ಯಕ್ತಾಯಾಂ ವಾಚಿ ಇತಿ ಸಕರ್ಮಕ ಸೇಟ್ ಪರಸ್ಮೈಪದಿನಃ ವಿಧಿಲಿಙ್ ಉತ್ತಮಪುರುಷೇ ಏಕವಚನೇ 'ಅತಿವದೇಮ' ಇತಿ ರೂಪಂ ।

ವದೇತ್ ವದೇತಾಂ ವದೇಯುಃ, ವದೇಃ ವದೇತಂ ವದೇತ, ವದೇಯಂ ವದೇವ ವದೇಮ ।

(1) ಲಟ್ ವದತಿ, (3) ಲಿಟ್ ಉವಾದ ಊದತುಃ ಊದುಃ, ಉವದಿಥ ಉದಥುಃ ಊದ, ಉವಾದ ಉವದ ಊದಿವ ಊದಿಮ (3) ಲುಟ್ ವದಿತಾ, (4) ಲೃಟ್ ವದಿಷ್ಯತಿ, (5) ಲೋಟ್ ವದತು, (6) ಲಙ್ ಅವದತ್, (8) ಆಶೀರ್ಲಿಙ್ ಉದ್ಯಾತ್ ಉದ್ಯಾಸ್ತಾಂ ಉದ್ಯಾಸುಃ ಇತ್ಯಾದಿ, (9) ಲುಙ್ ಅವಾದೀತ್ ಅವಾದಿಷ್ಟಾಂ ಅವಾದಿಷುಃ, ಅವಾದೀಃ ಅವಾದಿಷ್ಟಂ ಅವಾದಿಷ್ಟ, ಅವಾದಿಷಂ ಅವಾದಿಷ್ವ ಅವಾದಿಷ್ಮ, (10) ಲೃಙ್ ಅವದಿಷ್ಯತ್.

**ಪ್ರಯೋಗ—** ರಮಾ ಅಸ್ಯ ಅಖಿಲಾನ್ ಗುಣಾನ್ ನ ಗಣಯೇತ್ (ಕರ್ತರಿ) ।

ರಮಯಾ ಅಸ್ಯ ಅಖಿಲಾಃ ಗುಣಾಃ ನ ಗಣ್ಯೇರನ್ (ಕರ್ಮಣಿ) ।

ಚತುರವಾಕ್ ಚತುರಾನನಃ ಅಪಿ ನೋ ಗಣಯೇತ್ (ಕರ್ತರಿ) ।

ಚತುರವಾಚಾ ಚತುರಾನನೇನಾಪಿ ನೋ (ಗುಣಾಃ) ಗಣ್ಯೇರನ್ ।

ಸಹಸ್ರವದನಾಃ ವಯಂ ಅಪಿ ನ ಗಣಯೇಮ (ಕರ್ತರಿ) ।

ಸಹಸ್ರವದನೈಃ ಅಸ್ಮಾಭಿಃ ಅಪಿ (ಗುಣಾಃ) ನ ಗಣ್ಯೇರನ್ (ಕರ್ಮಣಿ) ।
ಪುನಃ (ವಯಂ) ಅಪರೋದಿತಾನ್ ಗುಣಾನ್ ಅತಿವದೇಮ (ಕರ್ತರಿ) ।
ಪುನಃ ಅಸ್ಮಾಭಿಃ ಅಪರೋದಿತಾಃ ಗುಣಾಃ ಅತ್ಯುದ್ಯೇರನ್ (ಕರ್ಮಣಿ) ।

★ ★ ★

**ಅವತಾರಿಕಾ—** ಮುಕ್ತಬ್ರಹ್ಮಾದಿಗಳಿಗೂ ಆ ಶ್ರೀಹರಿಯು ದರ್ಶನ ಮಾತ್ರದಿಂದ ಆನಂದವನ್ನೀಯುವನು ಎನ್ನುತ್ತಾರೆ.

**ವಿಧಯೋ ವಿಹಂಗಪತಯೋಽಗಣಿತಾ**
**ರಮಣೀಯುತಾಶ್ಚ ಫಣಿಪೇಂದ್ರಮುಖಾಃ ।**
**ಪರಯೋಗಭೂರಿಸುಖಭೋಗಮಿತಾ**
**ಅವಲೋಕ್ಯ ತಂ ದಧತಿ ಮೋದರಸಮ್ ॥ 20 ॥**

**ಪದಚ್ಛೇದ—** ವಿಧಯಃ, ವಿಹಂಗಪತಯಃ, ಅಗಣಿತಾಃ, ರಮಣೀಯುತಾಃ, ಚ, ಫಣಿಪೇಂದ್ರಮುಖಾಃ, ಪರ-ಯೋಗಭೂರಿಸುಖಭೋಗಂ, ಇತಾಃ, ಅವಲೋಕ್ಯ, ತಂ, ದಧತಿ, ಮೋದರಸಂ ।

**ಅನ್ವಯ—** ಪರಯೋಗಭೂರಿಸುಖಭೋಗಂ ಇತಾಃ ಅಗಣಿತಾಃ ವಿಧಯಃ ವಿಹಂಗಪತಯಃ, ಫಣಿಪೇಂದ್ರ-ಮುಖಾಃ ಚ, ರಮಣೀಯುತಾಃ, ತಂ ಅವಲೋಕ್ಯ ಮೋದರಸಂ ದಧತಿ ।

**ಅನ್ವಯಾರ್ಥ—**

**ಪರ, ಯೋಗ, ಭೂರಿ, ಸುಖಭೋಗಮಿತಾಃ** = ಸರ್ವವಿಲಕ್ಷಣನಾದ ಪರಮಾತ್ಮನಲ್ಲಿ ಮನಸ್ಸನ್ನು ಇಡು-ವುದರಿಂದ, (ಧ್ಯಾನದಿಂದ) ಅತಿಶಯವಾದ, (ತನ್ನ ಯೋಗ್ಯತಾನುಸಾರವಾಗಿ ಪೂರ್ಣವಾದ) ಸುಖಾನುಭವವನ್ನು ಹೊಂದಿದ (ಅಥವಾ

**ಪರಯೋಗಭೂರಿಸುಖಭೋಗಂ ಇತಾಃ** = ಉತ್ತಮವಾದ ಭಕ್ತಿಯೆಂಬ ಉಪಾಯದಿಂದ ಮೋಕ್ಷದಲ್ಲಿ ಯೋಗ್ಯತಾನುಸಾರ ಪೂರ್ಣಾನಂದಾನುಭವವನ್ನು ಹೊಂದಿರುವ)

**ಅಗಣಿತಾಃ** = ಎಣಿಕೆಯಿಲ್ಲದ

**ವಿಧಯಃ** = ಬ್ರಹ್ಮರು,

**ವಿಹಂಗಪತಯಃ** = ಗರುಡರು (ಸ),

**ಫಣಿಪೇಂದ್ರಮುಖಾಃ ಚ** = ಸರ್ಪಗಳಿಗೆ ಅಧಿಪತಿಯಾದ ಶೇಷದೇವರುಗಳು, ಇಂದ್ರದೇವರುಗಳು ಇವರೇ ಪ್ರಧಾನರಾಗಿ ಉಳ್ಳವರೂ, ಇವರುಗಳಿಂದ ಕೂಡಿದ (ದೇವತೆಗಳು)

**ರಮಣೀಯುತಾಃ** = ತಮ್ಮ ಭಾರ್ಯೆಯರಿಂದ ಸಹಿತರಾಗಿ

**ತಂ** = ಆ ಭಗವಂತನನ್ನು

**ಅವಲೋಕ್ಯ** = ನೋಡಿ,

**ಮೋದರಸಂ** = ಆನಂದಸಾರವನ್ನು (ಭಗವಂತನ ದರ್ಶನದಿಂದ ವ್ಯಕ್ತವಾದ ಶ್ರೇಷ್ಠವಾದ ಸ್ವರೂಪಾ-ನಂದವನ್ನು)

**ದಧತಿ** = ಧರಿಸುತ್ತಾರೆ, ಹೊಂದುತ್ತಾರೆ, ಅನುಭವಿಸುತ್ತಾರೆ.

**ತಾತ್ಪರ್ಯ—** ಮುಕ್ತಸ್ಥಾನವಾದ ವೈಕುಂಠಲೋಕದಲ್ಲಿ ಅಸಂಖ್ಯಾತರಾದ ಚತುರ್ಮುಖ ಬ್ರಹ್ಮದೇವರುಗಳು ಇದ್ದಾರೆ. ಗರುಡದೇವರುಗಳು ಇದ್ದಾರೆ. ಶೇಷದೇವರುಗಳು, ಇಂದ್ರದೇವರುಗಳು, ಮುಂತಾದವರು ಇದ್ದಾರೆ. ಮುಕ್ತರಾದ ಈ ದೇವತೆಗಳೆಲ್ಲರೂ ಪರಮಾತ್ಮನಲ್ಲಿ ಉತ್ತಮವಾದ ಭಕ್ತಿಯನ್ನು ಮಾಡಿ, ಸರ್ವವಿಲಕ್ಷಣನಾದ ಅವನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ ಧ್ಯಾನಮಾಡಿ ತಮ್ಮ ಸ್ವರೂಪಯೋಗ್ಯತಾನುಸಾರಿಯಾದ ಪೂರ್ಣಾನಂದದಿಂದ ತುಂಬಿ, ಆ ಆನಂದವನ್ನು ಅನುಭವಿಸುತ್ತಾ ಇರುತ್ತಾರೆ. ಅವರು ತಮ್ಮ ಮುಕ್ತರಾದ ಪತ್ನಿಯರಿಂದ ಒಡಗೂಡಿ ಪರಮಾತ್ಮನನ್ನು ನೋಡುತ್ತಾ ಅವನ ದರ್ಶನದಿಂದ ಪ್ರಕಟವಾದ ಉತ್ತಮವಾದ ಸ್ವರೂಪಾನಂದವನ್ನು ಹೊಂದುತ್ತಾ ಇರುತ್ತಾರೆ.

**ವಿಗ್ರಹ—**

**ವಿಹಂಗಪತಯಃ—** ವಿಹಂಗಾನಾಂ ಪತಯಃ ವಿಹಂಗಪತಯಃ ।

**ಅಗಣಿತಾಃ—** ನ ಗಣಿತಾಃ ಅಗಣಿತಾಃ ।

**ರಮಣೀಯುತಾಃ—** ರಮಣೀಭಿಃ ಯುತಾಃ ರಮಣೀಯುತಾಃ ।

**ಫಣಿಪೇಂದ್ರಮುಖಾಃ—** ಫಣಿನಃ ಪಾಂತೀತಿ ಫಣಿಪಾಃ, ಫಣಿಪಾಶ್ಚ ಇಂದ್ರಾಶ್ಚ ಫಣಿಪೇಂದ್ರಾಃ, ಫಣಿಪೇಂದ್ರಾಃ ಮುಖಾನಿ ಯೇಷಾಂ ತೇ ಫಣಿಪೇಂದ್ರಮುಖಾಃ, (ಫಣಿಪೇಂದ್ರಮುಖ್ಯೈಃ ಸಹ ವರ್ತಂತೇ ಇತಿ ಸಫಣಿಪೇಂದ್ರಮುಖಾಃ) ।

**ಪರಯೋಗಭೂರಿಸುಖಭೋಗಂ—** ಪರೇ ಯೋಗಃ ಪರಯೋಗಃ, ಭೂರಿ ಚ ತತ್ ಸುಖಂ ಚ ಭೂರಿಸುಖಂ, ಭೂರಿಸುಖಸ್ಯ ಭೋಗಃ ಭೂರಿಸುಖಭೋಗಃ, ಪರಯೋಗೇನ ಭೂರಿಸುಖಭೋಗಃ ಪರಯೋಗಭೂರಿಸುಖಭೋಗಃ, ತಂ ಪರಯೋಗಭೂರಿಸುಖಭೋಗಂ । (ಅಥವಾ ಪರಶ್ಚಾಸೌ ಯೋಗಶ್ಚ ಎಂದೂ ವಿಗ್ರಹ ಮಾಡಬಹುದು)

**ಮೋದರಸಂ—** ಮೋದಸ್ಯ ರಸಃ ಮೋದರಸಃ, ತಂ ಮೋದರಸಂ ।

**ಕ್ರಿಯಾಪದ—** ದಧತಿ- ಧಾ ಧಾತು, ಡುಧಾಞ್ ಧಾರಣ ಪೋಷಣಯೋಃ ಇತಿ ಧಾತೋಃ ಪರಸ್ಮೈಪದಿನಃ ಸಕರ್ಮಕಾತ್ ಲಟ್ ಪ್ರಥಮಪುರುಷೇ ಬಹುವಚನೇ 'ದಧತಿ' ಇತಿ ರೂಪಂ ।

(1) **ಲಟ್**- ದಧಾತಿ ಧತ್ತಃ ದಧತಿ, ದಧಾಸಿ ಧತ್ಥಃ ದತ್ಥ, ದಧಾಮಿ ದಧ್ವಃ ದಧ್ಮಃ ।

(2) **ಲಿಟ್**- ದಧೌ ದಧತುಃ ದಧುಃ, ದಧಿಥ ದಧಾಥ ದಧಥುಃ ದಧ, ದಧೌ ದಧಿವ ದಧಿಮ ।

(3) **ಲುಟ್**- ಧಾತಾ ಧಾತಾರೌ ಧಾತಾರಃ, ಧಾತಾಸಿ ಧಾತಾಸ್ಥಃ ಧಾತಾಸ್ಥ, ಧಾತಾಸ್ಮಿ ಧಾತಾಸ್ವಃ ಧಾತಾಸ್ಮಃ।

(4) **ಲೃಟ್**- ಧಾಸ್ಯತಿ ಧಾಸ್ಯತಃ ಧಾಸ್ಯಂತಿ, ಧಾಸ್ಯಸಿ ಧಾಸ್ಯಥಃ ಧಾಸ್ಯಥಃ, ಧಾಸ್ಯಾಮಿ ಧಾಸ್ಯಾವಃ ಧಾಸ್ಯಾಮಃ ।

(5) **ಲೋಟ್**- ದಧಾತು ಧತ್ತಾತ್ ಧತ್ತಾಂ ದಧತು, ಧೇಹಿ ಧತ್ತಾತ್ ಧತ್ತಂಧತ್ತ, ದಧಾನಿ ದಧಾವ ದಧಾಮ ।

(6) **ಲಙ್**- ಅದಧಾತ್ ಅದಧಾತಾಂ ಅದಧುಃ, ಅದಧಾಃ ಅದಧಾತಂ ಅದಧಾತ, ಅದಧಾಂ ಅದಧಾವ ಅದಧಾಮ ।

(7) **ವಿಧಿಲಿಙ್**- ದಧ್ಯಾತ್ ದಧ್ಯಾತಾಂ ದಧ್ಯುಃ, ದಧ್ಯಾಃ ದಧ್ಯಾತಂ ದಧ್ಯಾತ, ದಧ್ಯಾಂ ದಧ್ಯಾವ ದಧ್ಯಾಮ ।

(8) **ಆಶೀರ್ಲಿಙ್**- ಧೇಯಾತ್ ಧೇಯಾಸ್ತಾಂ ಧೇಯಾಸುಃ, ಧೇಯಾಃ ಧೇಯಾಸ್ತಂ ಧೇಯಾಸ್ತ, ಧೇಯಾಸಂ ಧೇಯಾಸ್ವ ಧೇಯಾಸ್ಮ ।

(9) ಲುಙ್- ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ ।

(10) ಲೃಙ್- ಅಧಾಸ್ಯತ್ ಇತ್ಯಾದಿ.

**ಪ್ರಯೋಗ**— ವಿಧಯಃ ವಿಹಂಗಪತಯಃ ಮೋದರಸಂ ದಧತಿ (ಕರ್ತರಿ) ।

ವಿಧಿಭಿಃ ವಿಹಂಗಪತಿಭಿಃ ಮೋದರಸಃ ಧೀಯತೇ (ಕರ್ಮಣಿ) ।

★ ★ ★

**ಅವತಾರಿಕಾ**— ಸಾಯುಜ್ಯವೆಂಬ ಮೋಕ್ಷಸುಖವನ್ನು ವರ್ಣಿಸಿದ ನಂತರ, ಈಗ ಸಾರೂಪ್ಯ ಮೋಕ್ಷವನ್ನು ವರ್ಣಿಸುತ್ತಾರೆ.

**ಸಚತುರ್ಭುಜಾ ವನಜಪತ್ರದೃಶೋ**
**ವರವೇಷಿಣೋಽತ್ರ ಸಪಿಶಂಗಪಟಾಃ ।**
**ಅರುಣಪ್ರಭಾಶ್ಚ ತರುಣಾಭ್ರರುಚೋ**
**ವಿಚರಂತಿ ನಾಥರುಚಯಃ ಪುರುಷಾಃ ॥ 21 ॥**

**ಪದಚ್ಛೇದ**— ಸಚತುರ್ಭುಜಾಃ, ವನಜಪತ್ರದೃಶಃ, ವರವೇಷಿಣಃ, ಅತ್ರ, ಸಪಿಶಿಂಗಪಟಾಃ, ಅರುಣಪ್ರಭಾಃ, ಚ, ತರುಣಾಭ್ರರುಚಃ, ವಿಚರಂತಿ, ನಾಥರುಚಯಃ, ಪುರುಷಾಃ ।

**ಅನ್ವಯ**— ಅತ್ರ, ಸಚತುರ್ಭುಜಾಃ, ವನಜಪತ್ರದೃಶಃ, ವರವೇಷಿಣಃ, ಸಪಿಶಂಗಪಟಾಃ, ಅರುಣಪ್ರಭಾಃ ಚ ತರುಣಾಭ್ರರುಚಃ ನಾಥರುಚಯಃ ಪುರುಷಾಃ ವಿಚರಂತಿ ।

**ಅನ್ವಯಾರ್ಥ**—

**ಅತ್ರ** = ಈ ವೈಕುಂಠ ಲೋಕದಲ್ಲಿ
**ಸಚತುರ್ಭುಜಾಃ** = ನಾಲ್ಕು ತೋಳುಗಳಿಂದ ಕೂಡಿದ,
**ವನಜಪತ್ರದೃಶಃ** = ತಾವರೆದಳದಂತೆ ಕಣ್ಣುಗಳುಳ್ಳ,
**ವರವೇಷಿಣಃ** = ಉತ್ತಮವಾದ ಅಲಂಕಾರಗಳುಳ್ಳ,
**ಸಪಿಶಂಗಪಟಾಃ** = ಪೀತಾಂಬರಗಳಿಂದ ಕೂಡಿದ,
**ಅರುಣಪ್ರಭಾಃ** = ಕೆಂಪಾದ ಕಾಂತಿಯುಳ್ಳ
**ಚ** = ಮತ್ತು
**ತರುಣಾಭ್ರರುಚಃ** = ಎಳೆಯ (ಕಪ್ಪಾದ) ಮೋಡದಂತೆ ಕಾಂತಿಯುಳ್ಳ
**ಪುರುಷಾಃ** = ಮುಕ್ತ ಜೀವರು
**ವಿಚರಂತಿ** = ಸಂಚರಿಸುತ್ತಾರೆ.

**ತಾತ್ಪರ್ಯ**— ಇಂತಹ ಮುಕ್ತ ಸ್ಥಾನವಾದ ವೈಕುಂಠಲೋಕದಲ್ಲಿ ಸಾರೂಪ್ಯ ಮುಕ್ತಿಯನ್ನು ಪಡೆದವರು ಸುಖವಾಗಿ ಸಂಚರಿಸುತ್ತಿದ್ದಾರೆ. ಅವರಿಗೆ ನಾಲ್ಕು ತೋಳುಗಳು, ತಾವರೆಯ ದಳದಂತೆ ವಿಶಾಲವಾದ ಕಣ್ಣುಗಳು ಇವೆ. ಅವರೆಲ್ಲರೂ ಉತ್ತಮವಾದ ಸುವರ್ಣಾದ್ಯಾಭರಣಗಳಿಂದ ಅಲಂಕೃತರಾಗಿರುತ್ತಾರೆ. ಕೆಲವರು ಅರುಣ ವರ್ಣದವರು, ಇನ್ನು ಕೆಲವರು ನೀರು ತುಂಬಿದ ಕರಿ ಮೋಡದಂತೆ ಶೋಭಿಸುವವರು. ಹೀಗೆ ನಾಲ್ಕು ಭುಜಗಳು ಮುಂತಾದ ರೀತಿಯಿಂದ ಅವರು ಹರಿಯ ಸ್ವಲ್ಪ ಸಾಮ್ಯವನ್ನು ಹೊಂದಿ ವೈಕುಂಠದಲ್ಲಿ ಆನಂದವನ್ನು ಅನುಭವಿಸುತ್ತಿದ್ದಾರೆ.

ವಿಗ್ರಹ—

**ಸಚತುರ್ಭುಜಾಃ**— ಚತ್ವಾರಶ್ಚತೇ ಭುಜಾಶ್ಚ ಚತುರ್ಭುಜಾಃ, ಚತುರ್ಭುಜೈಃ ಸಹ ವರ್ತಂತೇ ಇತಿ ಸಚತುರ್ಭುಜಾಃ ।

**ವನಜಪತ್ರದೃಶಃ**— ವನೇ ಜಾಯತೇ ಇತಿ ವನಜಂ, ವನಜಸ್ಯ ಪತ್ರೇ ವನಜಪತ್ರೇ, ತೇ ಇವ ದೃಶೌ ಯೇಷಾಂ ತೇ ವನಜಪತ್ರದೃಶಃ ।

**ವರವೇಷಿಣಃ**— ವರಾಶ್ಚ ತೇ ವೇಷಾಶ್ಚ ವರವೇಷಾಃ, ವರವೇಷಾಃ ಏಷಾಂ ಸಂತೀತಿ ವರವೇಷಿಣಃ ।

**ಸಪಿಶಂಗಪಟಾಃ**— ಪಿಶಂಗಾಶ್ಚ ತೇ ಪಟಾಶ್ಚ ಪಿಶಂಗಪಟಾಃ, ಪಿಶಂಗಪಟೈಃ ಸಹ ವರ್ತಂತೇ ಇತಿ ಸಪಿಶಂಗಪಟಾಃ ।

**ಅರುಣಪ್ರಭಾಃ**— ಅರುಣಸ್ಯ ಪ್ರಭಾ ಇವ ಪ್ರಭಾ ಯೇಷಾಂ ತೇ ಅರುಣಪ್ರಭಾಃ ।

**ತರುಣಾಭ್ರರುಚಃ**— ತರುಣಾನಿ ಚ ತಾನಿ ಅಭ್ರಾಣಿ ಚ ತರುಣಾಭ್ರಾಣಿ, ತರುಣಾಭ್ರಾಣಾಂ ರುಚಿರಿವ ರುಚಿಃ ಯೇಷಾಂ ತೇ ತರುಣಾಭ್ರರುಚಃ ।

**ನಾಥರುಚಯಃ**— ನಾಥಸ್ಯ ರುಚಿರಿವ ರುಚಿಃ ಯೇಷಾಂ ತೇ ನಾಥರುಚಯಃ ।

**ಕ್ರಿಯಾಪದ**— ವಿಚರಂತಿ- ಚರಗತಿ ಭಕ್ಷಣಯೋಃ ಇತಿ ಸಕರ್ಮಕಾತ್ ಕರ್ತರಿ ಲಟ್ ಪ್ರಥಮಪುರುಷೇ ಬಹುವಚನೇ 'ವಿಚರಂತಿ' ಇತಿ ರೂಪಂ ।

(1) **ಲಟ್**- ಚರತಿ ಚರತಃ ಚರಂತಿ ಇತ್ಯಾದಿ.

(2) **ಲಿಟ್**- ಚಚಾರ ಚೇರತುಃ ಚೇರುಃ, ಚೇರಿಥ ಚೇರಥುಃ ಚೇರ, ಚಚಾರ-ಚಚರ ಚೇರಿವ ಚೇರಿಮ ।

(3) **ಲುಟ್**- ಚರಿತಾ ಚರಿತಾರೌ ಚರಿತಾರಃ ಇತ್ಯಾದಿ.

(4) **ಲೃಟ್**- ಚರಿಷ್ಯತಿ

(5) **ಲೋಟ್**- ಚರತು

(6) **ಲಙ್**- ಅಚರತ್

(7) **ವಿಧಿಲಿಙ್**- ಚರೇತ್

(8) **ಆಶೀರ್ಲಿಙ್**- ಚರ್ಯಾತ್ ಚರ್ಯಾಸ್ತಾಂ ಚರ್ಯಾಸುಃ ।

(9) **ಲುಙ್**- ಅಚಾರೀತ್

(10) **ಲೃಙ್**- ಅಚರಿಷ್ಯತ್

**ಕೋಶ**— ವನಜಪತ್ರದೃಶಃ ಎಂಬಲ್ಲಿ ವನಜ = ನೀರು, ಅದರಲ್ಲಿ ಹುಟ್ಟಿದ್ದು ಕಮಲ, 'ಜೀವನಂ ಭುವನಂ ವನಂ' ಇತ್ಯಮರಃ, ವರವೇಷಿಣಃ ಎಂಬಲ್ಲಿ ವೇಷ (ವೇಶ) = ಅಲಂಕಾರ 'ವೇಶೋ ನೇಪಥ್ಯಭೂಷಣೇ' ಎಂದು ಕೋಶ. ಅರುಣ ಪ್ರಭಾಃ ಎಂಬಲ್ಲಿ ಅರುಣ = ಕೆಂಪು, ಸೂರ್ಯನ ಸಾರಥಿ ಎಂದೂ ಅರ್ಥ 'ಅರುಣೋ ಭಾಸ್ಕರೇಽಪಿ ಸ್ಯಾತ್' ಎಂದು ಅಮರ. ತರುಣಾಭ್ರರುಚಃ ಎಂಬಲ್ಲಿ ತರುಣ = ಹೊಸದು, ಯುವಕ ಎಂದು ಎರಡು ಅರ್ಥಗಳು, 'ತರುಣಃ ಸ್ಯಾನ್ನವೇ ಯೂನಿ' ಎಂದು ವಿಶ್ವಕೋಶ. ಅಭ್ರ = ಮೋಡ, 'ಅಭ್ರಂ ಮೇಘೋ ವಾರಿವಾಹಃ' ಎಂದು ಅಮರ.

**ಪ್ರಯೋಗ**— ಅತ್ರ ಪುರುಷಾಃ ವಿಚರಂತಿ (ಕರ್ತರಿ) ।

ಅತ್ರ ಪುರುಷೈಃ ವಿಚರ್ಯತೇ (ಕರ್ಮಣಿ) ।

★ ★ ★

**ಅವತಾರಿಕಾ**— ಸಾಮೀಪ್ಯ ಮತ್ತು ಸಾಲೋಕ್ಯ ಮೋಕ್ಷಗಳನ್ನು ವರ್ಣಿಸುತ್ತಾರೆ.

**ಭಗವತ್ಸಮೀಪಮುಪಯಾತವತಾಂ**
**ಪ್ರಮದೋ ನ ಕೇವಲಮಲಬ್ಧತುಲಃ ।**
**ಅಪಿ ತಸ್ಯ ಲೋಕಮತಿಲೋಕಗುಣಂ**
**ಭಜತಾಂ ಸದುರ್ಲಭಮಭೂರಿಶುಭೈಃ ॥ 22 ॥**

**ಪದಚ್ಛೇದ**— ಭಗವತ್ಸಮೀಪಂ, ಉಪಯಾತವತಾಂ, ಪ್ರಮದಃ, ನ, ಕೇವಲಂ, ಅಲಬ್ಧತುಲಃ, ಅಪಿ, ತಸ್ಯ, ಲೋಕಂ, ಅತಿಲೋಕಗುಣಂ, ಭಜತಾಂ, ಸುದುರ್ಲಭಂ, ಅಭೂರಿ, ಶುಭೈಃ ।

**ಅನ್ವಯ**— ಕೇವಲಂ ಭಗವತ್‌ಸಮೀಪಂ ಉಪಯಾತವತಾಂ ಪ್ರಮದಃ ಅಲಬ್ಧತುಲಃ ನ, ಅಭೂರಿಶುಭೈಃ ಸುದುರ್ಲಭಂ, ಅತಿಲೋಕಗುಣಂ ತಸ್ಯ ಲೋಕಂ ಭಜತಾಂ, ಅಪಿ, ಅಲಬ್ಧತುಲಃ ।

**ಅನ್ವಯಾರ್ಥ**—

**ಕೇವಲಂ** = ಕೇವಲ
**ಭಗವತ್‌ಸಮೀಪಂ** = ಸಮಸ್ತೈಶ್ವರ್ಯಪೂರ್ಣನಾದ ಶ್ರೀಮನ್ನಾರಾಯಣನ ಸಾಮೀಪ್ಯವನ್ನು (ಹತ್ತಿರವನ್ನು)
**ಉಪಯಾತವತಾಂ** = ಹೊಂದಿದವರ
**ಪ್ರಮದಃ** = ಆನಂದವು
**ಅಲಬ್ಧತುಲಃ ನ** = ಹೊಂದಲ್ಪಡದ ಸಾಮ್ಯವುಳ್ಳದ್ದು (ಎಣೆಯಿಲ್ಲದ್ದ, ಅಸದೃಶವಾದುದು) ಎಂದು ಅಲ್ಲ.
**ಅಭೂರಿಶುಭೈಃ** = ಅಲ್ಪ ಪುಣ್ಯವುಳ್ಳವರಿಂದ (ಹೆಚ್ಚು ಪುಣ್ಯವಿಲ್ಲದವರಿಂದ)
**ಸುದುರ್ಲಭಂ** = ಸರ್ವಥಾ ಹೊಂದಲು ಸಾಧ್ಯವಿಲ್ಲದ,
**ಅತಿಲೋಕಗುಣಂ** = ಬ್ರಹ್ಮಾದಿ ಲೋಕಗಳ ಗುಣಗಳನ್ನು ಮೀರಿದ
**ತಸ್ಯ** = ಆ ನಾರಾಯಣನ
**ಲೋಕಂ** = ವೈಕುಂಠ ಲೋಕವನ್ನು
**ಭಜತಾಂ ಅಪಿ** = (ಪ್ರಮದಃ) ಹೊಂದಿದವರ ಆನಂದವೂ (ಸೇವಿಸುವವರ ಸಂತೋಷವೂ)
**ಅಲಬ್ಧತುಲಃ** = ಎಣೆಯಿಲ್ಲದ್ದು.

**ತಾತ್ಪರ್ಯ**— ಆ ವೈಕುಂಠಲೋಕವು ಅಲ್ಪ ಪುಣ್ಯ ಮಾಡಿದವರಿಂದ ಪಡೆಯಲು ಅಸಾಧ್ಯವಾದುದು. ಬ್ರಹ್ಮ-ಲೋಕಾದಿಗಳಿಗಿಂತ ಹೆಚ್ಚು ಗುಣವುಳ್ಳದ್ದು. ಆ ವೈಕುಂಠ ಲೋಕವನ್ನು ಸೇರಿ ಅಲ್ಲಿ ಒಂದು ಪ್ರದೇಶದಲ್ಲಿ ಭಗವಂತನ ಲೋಕದಲ್ಲಿ ವಾಸಿಸುವವರಿಗೆ ಉಂಟಾಗುವ ಆನಂದವೇ ಎಣೆಯಿಲ್ಲದುದು ಎಂದ ಮೇಲೆ ಆ ಲೋಕವನ್ನು ಸೇರಿ ಸಾಮೀಪ್ಯ ಮುಕ್ತಿಯಿಂದ ಭಗವಂತನ ಸಮೀಪವನ್ನು ಸೇರಿದವರ ಆನಂದಕ್ಕೆ ಪಾರವೇ ಇಲ್ಲ ಎಂದು ಏನು ಹೇಳಬೇಕಾಗಿದೆ? ಎಲ್ಲಾ ಮುಕ್ತರ ಆನಂದವೂ ಪರಿಪೂರ್ಣವೇ ಆಗಿರುತ್ತದೆ.

**ವಿಶೇಷಾಂಶ**— 'ಸಚತುರ್ಭುಜಾಃ' ಎಂಬ ಶ್ಲೋಕ ಮತ್ತು 'ಭಗವತ್ ಸಮೀಪಂ' ಎಂಬ ಈ ಶ್ಲೋಕದಲ್ಲಿಯೂ (ಸ.॥ ಶ್ಲೋ. 21,22) 'ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ' ಎಂಬ ಮೂರು ವಿಧವಾದ ಮೋಕ್ಷವನ್ನು ಹೊಂದಿದವರನ್ನು ವರ್ಣಿಸಿದ್ದಾರೆ. ಇವರೆಲ್ಲರ ಆನಂದವೂ ಅವರವರ ಸ್ವರೂಪಯೋಗ್ಯತಾನುಸಾರವಾಗಿ ಪೂರ್ಣವೇ ಆಗಿದೆ ಎಂದು ತಿಳಿಯಬೇಕು. ಒಂದು ಕಮಂಡಲು (ಜಲಪಾತ್ರೆ), ಒಂದು ಗಡಿಗೆ, ಒಂದು ಶರಾವ, (ಅಗಲವಾದ) ಒಂದು ಪಾತ್ರೆ,

ಒಂದು ಬಾವಿ, ಒಂದು ಕೆರೆ, ಒಂದು ನದಿ, ಒಂದು ಸಮುದ್ರ ಇವೆಲ್ಲವೂ ನೀರು ತುಂಬಿದಾಗ ಪೂರ್ಣವೆಂದು ವ್ಯವಹರಿಸುತ್ತಾರೆ. ಆಯಾ ಪಾತ್ರೆಯ ಯೋಗ್ಯತೆಗೆ ತಕ್ಕಂತೆ ಅದು ಪೂರ್ಣವೆಂದು ಅಲ್ಲಿ ಅಭಿಪ್ರಾಯ. ಇಲ್ಲಿಯೂ ಅದರಂತೆ ಎಲ್ಲಾ ಮುಕ್ತರೂ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಪೂರ್ಣರು ಎಂದು ಅಭಿಪ್ರಾಯ. ಸಾರೂಪ್ಯಾದಿ ಮುಕ್ತಿಯನ್ನು ಹೊಂದಿದವರ ಆನಂದವೇ ಪರಿಪೂರ್ಣವೆಂದ ಮೇಲೆ ಸಾಯುಜ್ಯಮುಕ್ತಿಯನ್ನು ಹೊಂದಿದವರ ಆನಂದವು ಪರಿಪೂರ್ಣವೆಂದು ಹೇಳಬೇಕಾಗಿಯೇ ಇಲ್ಲ.

**ವಿಗ್ರಹ—**

**ಭಗವತ್ಸಮೀಪಂ—** ಭಗಃ ಅಸ್ಯ ಅಸ್ತೀತಿ ಭಗವಾನ್, ಭಗವತಃ ಸಮೀಪಂ ಭಗವತ್ ಸಮೀಪಂ, ತತ್ ಭಗವತ್ಸಮೀಪಂ ।

**ಅಲಬ್ಧತುಲಃ—** ನ ಲಬ್ಧಾ ಅಲಬ್ಧಾ, ಅಲಬ್ಧಾ ತುಲಾ ಯಸ್ಯ ಸಃ ಅಲಬ್ಧತುಲಃ ।

**ಅತಿಲೋಕಗುಣಂ—** ಲೋಕಾನಾಂ ಗುಣಾಃ ಲೋಕಗುಣಾಃ, ಅತಿಕ್ರಾಂತಾಃ ಲೋಕಗುಣಾಃ ಯೇನ ಸಃ ಅತಿಲೋಕಗುಣಃ, ತಂ ಅತಿಲೋಕಗುಣಂ ।

**ಸುದುರ್ಲಭಂ—** ದುಃಖೇನ ಲಬ್ಧುಂ ಶಕ್ಯಃ ದುರ್ಲಭಃ, ಅತಿಶಯೇನ ದುರ್ಲಭಃ ಸುದುರ್ಲಭಃ, ತಂ ಸುದುರ್ಲಭಂ ।

**ಅಭೂರಿಶುಭೈಃ—** ನ ಭೂರಿ ಅಭೂರಿ, ಅಭೂರಿ ಶುಭಂ ಯೇಷಾಂ ತೇ ಅಭೂರಿಶುಭಾಃ, ತೈಃ ಅಭೂರಿಶುಭೈಃ- (ನ ವಿದ್ಯತೇ ಭೂರಿ ಶುಭಂ ಯೇಷಾಂ ತೇ ಅಭೂರಿಶುಭಾಃ, ತೈಃ ಅಭೂರಿಶುಭೈಃ)

**ಕೋಶ—** (ಪ್ರಮದಃ=ಆನಂದ) 'ಮುತ್ಪ್ರೀತಿಃ ಪ್ರಮದೋ ಹರ್ಷಃ ಪ್ರಮೋದಾಮೋದಸಂಮದಾಃ' ಇತ್ಯಮರಃ।

★ ★ ★

**ಅವತಾರಿಕಾ—** ಮೋಕ್ಷದಲ್ಲಿರುವವರಿಗೆ ಯಾವ ದುಃಖವೂ ಇಲ್ಲವೆಂದು ವರ್ಣಿಸುತ್ತಾರೆ.

**ನ ಭವಂತಿ ಯತ್ರ ಮೃತಿಜನ್ಮಜರಾ-**
**ಸ್ತ್ರಿವಿಧಂ ಭಯಂ ಕಿಮುತ ದುಃಖಗಣಃ ।**
**ಅಪರಂ ಚ ಕಿಂಚಿದಶುಭಂ ನ ಭವೇ-**
**ನ್ನ ಗುಣಾದಿ ತತ್ಪ್ರಭವಮೂಲಮಪಿ ॥ 23 ॥**

**ಪದಚ್ಛೇದ—** ನ, ಭವಂತಿ, ಯತ್ರ, ಮೃತಿಜನ್ಮಜರಾಃ, ತ್ರಿವಿಧಂ, ಭಯಂ, ಕಿಮುತ, ದುಃಖಗಣಃ, ಅಪರಂ, ಚ, ಕಿಂಚಿತ್, ಅಶುಭಂ, ನ, ಭವೇತ್, ನ, ಗುಣಾದಿ, ತತ್ಪ್ರಭವಮೂಲಂ ಅಪಿ ।

**ಅನ್ವಯ—** ಯತ್ರ ಮೃತಿಜನ್ಮಜರಾಃ ನ ಭವಂತಿ, ತ್ರಿವಿಧಂ ಭಯಂ ನ (ಭವತಿ), ದುಃಖಗಣಃ ನ (ಭವತಿ) ಇತಿ ಕಿಮುತ ? ಅಪರಂ ಕಿಂಚಿದ್ ಅಶುಭಂ ಚ ನ ಭವೇತ್, ತತ್ಪ್ರಭವಮೂಲಂ ಗುಣಾದಿ ಅಪಿ ನ (ಭವತಿ) ।

**ಅನ್ವಯಾರ್ಥ—**

ಯತ್ರ = ಯಾವ ವೈಕುಂಠ ಲೋಕದಲ್ಲಿ,
ಮೃತಿಜನ್ಮ ಜರಾ = ಸಾವು, ಹುಟ್ಟು, ಮುಪ್ಪು ಇವುಗಳು
ನ ಭವಂತಿ = ಉಂಟಾಗುವುದಿಲ್ಲ
ತ್ರಿವಿಧಂ = ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ

**ಭಯಂ** = ಹೆದರಿಕೆಯು

**ನ (ಭವತಿ)** = ಇಲ್ಲ

**ದುಃಖಗಣಃ** = ಬೇರೆ ದುಃಖಗಳ ಸಮೂಹವು

**ನ ಭವತಿ ಇತಿ** = ಉಂಟಾಗುವುದಿಲ್ಲವೆಂದು

**ಕಿಮುತ** = ಹೇಳತಕ್ಕದ್ದೇನಿದೆ ?

**ಅಪರಂ** = ಬೇರೆಯದಾದ

**ಕಿಂಚಿತ್** = ಯಾವುದಾದರೊಂದು

**ಅಶುಭಂ ಚ** = ಅಮಂಗಳವೂ

**ನ ಭವೇತ್** = ಇರಲು ಸಾಧ್ಯವಿಲ್ಲ

**ತತ್ಪ್ರಭವಮೂಲಂ** = ಮರಣಾದಿಗಳ ಉತ್ಪತ್ತಿಗೆ ಕಾರಣವಾದ

**ಗುಣಾದಿ ಅಪಿ** = ಸತ್ತ್ವ, ರಜಸ್ಸು, ತಮಸ್ಸು ಮೊದಲಾದುದೂ ಕೂಡ

**ನ (ಭವತಿ)** = ಇರುವುದಿಲ್ಲ (ಸತ್ತ್ವಾದಿ ಗುಣಗಳೇ ಕಾರಣವಾಗಿ ಉಳ್ಳ ದುರದೃಷ್ಟವಾಗಲೀ - ಯಾವುದೂ ಇರುವುದಿಲ್ಲ)

**ತಾತ್ಪರ್ಯ**— ಈ ವೈಕುಂಠಲೋಕದಲ್ಲಿರುವ ಮುಕ್ತರಿಗೆ ಹುಟ್ಟು, ಮುಪ್ಪು ಇರುವುದಿಲ್ಲ. ಸಾವುಗಳು ಇರುವುದಿಲ್ಲ. ದೇಹದಲ್ಲಿ ಉಂಟಾಗುವ ಆಧ್ಯಾತ್ಮಿಕ ತಾಪ (ರೋಗಾದಿಗಳು), ಹೊರಗಿನ ಪ್ರಾಣಿಗಳಿಂದ ಅಥವಾ ವಸ್ತುಗಳಿಂದ ಉಂಟಾಗುವ ಅಪಘಾತವೆಂಬ ಆಧಿಭೌತಿಕ ತಾಪ, ಮಳೆ, ಬಿಸಿಲು, ಸಿಡಿಲು ಮುಂತಾದ ದೇವತೆಗಳಿಂದ ಉಂಟಾಗುವ ಆಧಿದೈವಿಕತಾಪ ಎಂಬ ಮೂರು ವಿಧವಾದ ತಾಪಗಳ ಭಯವೂ ಇಲ್ಲ. ಇತರೇ ಯಾವ ದುಃಖಗಳೂ ಅಲ್ಲಿಲ್ಲ. ಹೊಟ್ಟೆಕಿಚ್ಚು ಮುಂತಾದ ದೋಷವೂ ಅಲ್ಲಿಲ್ಲ. ಹುಟ್ಟು, ಸಾವು ಮುಂತಾದವುಗಳಿಗೆ ಕಾರಣವಾದ ಸತ್ತ್ವ ರಜಸ್ ತಮೋಗುಣಗಳೂ ಅಲ್ಲಿಲ್ಲ. ಆದ್ದರಿಂದಲೇ ಮುಕ್ತರ ವೈಕುಂಠಲೋಕದಲ್ಲಿ ಯಾವ ಅನಿಷ್ಟವೂ ಇಲ್ಲ. (ಮರಣ ಮುಂತಾದುವುಗಳಿಗೆ ಕಾರಣವಿಲ್ಲದಿರುವುದರಿಂದ ಕಾರ್ಯವಾದ ಮರಣವೂ ಉಂಟಾಗುವುದಿಲ್ಲ. ಇಂತಹ ಲೋಕವನ್ನು ಹೊಂದಿದವರಿಗೆ ಪರಮಾತ್ಮನು ಆನಂದವನ್ನು ಹೊಂದುವುದಕ್ಕಾಗಿ ತನ್ನ ಲೋಕದಲ್ಲಿ ಅವಕಾಶವನ್ನು ಕೊಡುತ್ತಾ 'ರತಯೇ ಸ್ವಲೋಕಮಜಿತೋ ದಿಶತಿ' ಸರ್ಗ 11 ಶ್ಲೋಕ 7 ಎಂಬಲ್ಲಿಗೆ ಅನ್ವಯ. ಅಥವಾ ಎಲ್ಲಿ ಮರಣ, ಜನ್ಮ, ಮುಪ್ಪುಗಳಿರುವುದಿಲ್ಲವೋ ಅಲ್ಲಿ ಪರಮಾತ್ಮನ ಸ್ನೇಹಿತರಾದ ಮುಕ್ತರು ಸುಖವನ್ನು ಅನುಭವಿಸುತ್ತಾರೆ. 'ಅನಂತ ಸಖ್ಯೈಃ ಸುಖಂ ಅನುಭೂಯತೇ' ಎಂಬ ಸರ್ಗ 11 ಶ್ಲೋಕ 24ನೇ ಶ್ಲೋಕದ ಜತೆಗೆ ಅನ್ವಯ)

**ವಿಗ್ರಹ**—

**ಮೃತಿಜನ್ಮಜರಾಃ**— ಮೃತಿಶ್ಚ ಜನ್ಮ ಚ ಜರಾ ಚ ಮೃತಿಜನ್ಮಜರಾಃ ।

**ತ್ರಿವಿಧಂ**— ತಿಸ್ರಃ ವಿಧಾಃ ಯಸ್ಯ ತತ್ ತ್ರಿವಿಧಂ ।

**ದುಃಖಗಣಃ**— ದುಃಖಾನಾಂ ಗಣಃ ದುಃಖಗಣಃ ।

**ಅಶುಭಂ**— ನ ಶುಭಂ ಅಶುಭಂ ।

**ಗುಣಾದಿ**— ಗುಣಃ ಆದಿಃ ಯಸ್ಯ ತತ್ ಗುಣಾದಿ ।

**ತತ್ಪ್ರಭವಮೂಲಂ**— ತಸ್ಯ ಪ್ರಭವಃ ತತ್ಪ್ರಭವಃ, ತತ್ಪ್ರಭವಸ್ಯ ಮೂಲಂ ತತ್ಪ್ರಭವಮೂಲಂ ।

**ಕ್ರಿಯಾಪದ— ಭವಂತಿ, ಭವೇತ್** - ಕ್ರಮವಾಗಿ ಇವು ಭೂಧಾತು ಲಟ್, ಮತ್ತು ವಿಧಿಲಿಙ್ ರೂಪಗಳು ।

**ಪ್ರಯೋಗ—** ಯತ್ರ ಮೃತಿಜನ್ಮಜರಾಃ ನ ಭವಂತಿ (ಕರ್ತರಿ) ।
ಯತ್ರ ಮೃತಿಜನ್ಮಜರಾಭಿಃ ನ ಭೂಯತೇ (ಭಾವೇ) ।
ಅಪರಂ ಕಿಂಚಿದ್ ಅಶುಭಂ ನ ಭವೇತ್ (ಕರ್ತರಿ) ।
ಅಪರೇಣ ಕೇನಚನ ಅಶುಭೇನ ಚ ನ ಭೂಯೇತ (ಕರ್ಮಣಿ) ।

★ ★ ★

**ಅವತಾರಿಕಾ—** ತಾರತಮ್ಯದಿಂದ ಸ್ವರೂಪಾನಂದವನ್ನು ಅನುಭವಿಸಿದರೂ ಆ ಮುಕ್ತರಲ್ಲಿ ದ್ವೇಷಾದಿಗಳು ಹುಟ್ಟುವುದಿಲ್ಲವೆಂದು ವರ್ಣಿಸುತ್ತಾರೆ.

**ಅನುಭೂಯತೇ ಸುಖಮನಂತಸಖ್ಯೈಃ**
**ಸಕಲೈರಲಮ್ಮತಿಪದಂ ಸತತಮ್ ।**
**ಅಪಿ ತಾರತಮ್ಯಸಹಿತೈಃ ಸ್ವಗುರು-**
**ಪ್ರವಣೈಃ ಪರಸ್ಪರಮುರುಪ್ರಣಯೈಃ ॥ 24 ॥**

**ಪದಚ್ಛೇದ—** ಅನುಭೂಯತೇ, ಸುಖಂ, ಅನಂತಸಖ್ಯೈಃ, ಸಕಲೈಃ, ಅಲಂ, ಮತಿಪದಂ, ಸತತಂ, ಅಪಿ, ತಾರತಮ್ಯಸಹಿತೈಃ, ಸ್ವಗುರುಪ್ರವಣೈಃ, ಪರಸ್ಪರಂ, ಉರುಪ್ರಣಯೈಃ ।

**ಅನ್ವಯ—** ತಾರತಮ್ಯಸಹಿತೈಃ ಅಪಿ, ಪರಸ್ಪರಂ ಉರುಪ್ರಣಯೈಃ, ಸ್ವಗುರುಪ್ರವಣೈಃ, ಅನಂತಸಖ್ಯೈಃ ಸಕಲೈಃ, ಸತತಂ ಅಲಂ ಮತಿಪದಂ ಸುಖಂ ಅನುಭೂಯತೇ ।

**ಅನ್ವಯಾರ್ಥ—**

**ತಾರತಮ್ಯಸಹಿತೈಃ ಅಪಿ** = ತರತಮಭಾವ (ಪರಸ್ಪರ ಹೆಚ್ಚು ಕಡಿಮೆ)ದಿಂದ ಕೂಡಿದ್ದರೂ
**ಪರಸ್ಪರಂ** = ಒಬ್ಬರು ಇನ್ನೊಬ್ಬರಲ್ಲಿ (ಅನ್ಯೋನ್ಯವಾಗಿ)
**ಉರುಪ್ರಣಯೈಃ** = ಹೆಚ್ಚು ಸ್ನೇಹವುಳ್ಳ
**ಸ್ವಗುರುಪ್ರವಣೈಃ** = ತನಗಿಂತ ದೊಡ್ಡವರಲ್ಲಿ ಭಕ್ತಿಯುಳ್ಳ
**ಅನಂತಸಖ್ಯೈಃ** = ಶ್ರೀಮನ್ನಾರಾಯಣನ ಸ್ನೇಹಿತರಾದ
**ಸಕಲೈಃ** = ಎಲ್ಲಾ ಮುಕ್ತರಿಂದಲೂ
**ಸತತಂ** = ಯಾವಾಗಲೂ
**ಅಲಂ ಮತಿಪದಂ** = ಸಾಕು ಎಂಬ ಬುದ್ಧಿಗೆ ಗೋಚರವಾದ (ಅಥವಾ)
(**ಅಲಂ** = ಚೆನ್ನಾಗಿ
**ಮತಿಪದಂ** = ಬುದ್ಧಿಗೆ ವಿಷಯವಾದ)
**ಸುಖಂ** = ಸ್ವರೂಪಸೌಖ್ಯವು
**ಅನುಭೂಯತೇ** = ಅನುಭವಿಸಲ್ಪಡುತ್ತದೆ.

**ತಾತ್ಪರ್ಯ—** ಈ ವೈಕುಂಠಲೋಕದಲ್ಲಿ ಸಾರೂಪ್ಯ, ಸಾಮೀಪ್ಯ, ಸಾಲೋಕ್ಯ, ಸಾಯುಜ್ಯ ಎಂಬ ನಾಲ್ಕು ವಿಧ ಮೋಕ್ಷಗಳಲ್ಲಿ, ತಮ್ಮ ಯೋಗ್ಯತಾನುಸಾರ ಆಯಾ ಮೋಕ್ಷವನ್ನು ಪಡೆದವರು, ಒಬ್ಬರಿಗಿಂತ ಮತ್ತೊಬ್ಬರು ನೀಚ, ಉಚ್ಚ ಭಾವವನ್ನು ಹೊಂದಿ (ಹೆಚ್ಚು, ಕಡಿಮೆ ಎಂದು ಆಗ) ಸುಖವನ್ನು ಅನುಭವಿಸುತ್ತಾ ಇರುತ್ತಾರೆ. ಹೀಗೆ ತಾರತಮ್ಯವಿದ್ದರೂ,

ಮಾತ್ಸರ್ಯಾದಿಗಳಿಲ್ಲದೆ ಒಬ್ಬರು ಇನ್ನೊಬ್ಬರ ಜತೆಗೆ ಸ್ನೇಹದಿಂದ ಇರುತ್ತಾರೆ. ತಮಗಿಂತ ದೊಡ್ಡವರಲ್ಲಿ ವಿಧೇಯ-ರಾಗಿರುತ್ತಾರೆ. ಎಲ್ಲರೂ ಶ್ರೀಮನ್ನಾರಾಯಣನಿಗೆ ಸ್ನೇಹಿತರು. ಇವರೆಲ್ಲರೂ ತಮ್ಮ ಬುದ್ಧಿಗೆ ಗೋಚರವಾಗುವ ಸ್ವರೂಪಾ-ನಂದವನ್ನು ಚೆನ್ನಾಗಿ ಅನುಭವಿಸುತ್ತಾ ಇರುತ್ತಾರೆ. ಒಂದೊಂದು ಆನಂದದ ಅನುಭವವೂ ಪೂರ್ಣವಾದ 'ಸಾಕು' ಎಂದು ಕಾಣಿಸುವ ಉತ್ತಮವಾದ ಆನಂದದ ಅನುಭವವಾಗಿರುತ್ತದೆ. ಸಂಸಾರದಲ್ಲಿ ಎಲ್ಲಿಯೂ ಯಾವ ದೇಹದಲ್ಲಿಯೂ ಯಾವ ಸ್ಥಿತಿಯಲ್ಲಿಯೂ, ಎಷ್ಟು ಭೋಗಸಾಮಗ್ರಿಗಳಿದ್ದರೂ ಇಂತಹ ಆನಂದಾನುಭವವಾಗುವುದಿಲ್ಲ. ಇದೇ ಮೋಕ್ಷದ ವೈಶಿಷ್ಟ್ಯ, ವಿಶೇಷಾಂಶ, 'ಅನ್ಯೇಽಪಿ ಸ್ವಾತ್ಮನೋ ಮುಖ್ಯಾಃ ಕ್ರಮಾದ್ ಗುರವ ಈರಿತಾಃ' ಎಂಬ ಪ್ರಮಾಣಾನುಸಾರ ಸ್ವೋತ್ತಮರು ಗುರುಗಳು, ಅವರಲ್ಲಿ ಭಕ್ತಿ ಇರಬೇಕು.

ವಿಗ್ರಹ—

**ಅನಂತಸಖೈಃ—** ಅನಂತಸ್ಯ ಸಖಾಯಃ ಅನಂತಸಖಾಃ, ತೈಃ ಅನಂತಸಖೈಃ । 'ರಾಜಾಹಃ ಸಖಿಭ್ಯಃ ಟಚ್', ಎಂಬ ಸೂತ್ರದಿಂದ ಟಚ್ ಪ್ರತ್ಯಯ ಬಂದು ಅಕಾರಾಂತವಾಗಿದೆ.

**ಮತಿಪದಂ—** ಮತೇಃ ಪದಂ ಮತಿಪದಂ ।

**ತಾರತಮ್ಯಸಹಿತೈಃ—** ತರತಮಸ್ಯ ಭಾವಃ ತಾರತಮ್ಯಂ, ತಾರತಮ್ಯೇನ ಸಹಿತಾಃ ತಾರತಮ್ಯಸಹಿತಾಃ, ತೈಃ ತಾರತಮ್ಯಸಹಿತೈಃ ।

**ಸ್ವಗುರುಪ್ರವಣೈಃ—** ಸ್ವೇಷಾಂ ಗುರವಃ ಸ್ವಗುರವಃ, ಸ್ವಗುರುಷು ಪ್ರವಣಾಃ ಸ್ವಗುರುಪ್ರವಣಾಃ, ತೈಃ ಸ್ವಗುರುಪ್ರವಣೈಃ ।

**ಉರುಪ್ರಣಯಾಃ—** ಉರುಃ ಪ್ರಣಯಃ ಯೇಷಾಂ ತೇ ಉರುಪ್ರಣಯಾಃ, ತೈಃ ಉರುಪ್ರಣಯೈಃ ।

**ಕ್ರಿಯಾಪದ— ಅನುಭೂಯತೇ** - ಅನು ಇತ್ಯುಪಸರ್ಗಪೂರ್ವಕಾತ್ ಭೂಧಾತೋಃ ಸಕರ್ಮಕಾತ್ ಕರ್ಮಣಿ ಲಟ್ ಲಕಾರೇ ಪ್ರಥಮಪುರುಷೇ ಏಕವಚನೇ 'ಅನುಭೂಯತೇ' ಇತಿ ರೂಪಂ । (ಭೂಯತೇ ಭೂಯೇತೇ ಭೂಯಂತೇ ಇತ್ಯಾದಿ।।) 2 ಲಿಟ್ ಅನುಬಭೂವೇ, 3 ಲುಟ್ ಅನುಭಾವಿತಾ ಅನುಭವಿತಾ, 4 ಲೃಟ್ ಅನುಭಾವಿಷ್ಯತೇ ಅನುಭವಿಷ್ಯತೇ, 5 ಲೋಟ್ ಅನುಭೂಯತಾಂ, 6 ಲಙ್ ಅನ್ವಭೂಯತ, 7 ವಿಧಿಲಿಙ್ ಅನುಭೂಯೇತ, 8 ಆಶೀರ್ಲಿಙ್ ಅನುಭಾವಿ-ಷೀಷ್ಟ ಅನುಭವಿಷೀಷ್ಟ, 9 ಲುಙ್ ಅನ್ವಭಾವಿ ಅನ್ವಭಾವಿಷಾತಾಂ ಅನ್ವಭವಿಷಾತಾಂ, ಅನ್ವಭವಿಷತ, ಅನ್ವಭಾವಿಷ್ಠಾಃ, ಅನ್ವ-ಭಾವಿಷಾಥಾಂ, ಅನ್ವಭವಿಷಾಥಾಂ, ಅನ್ವಭಾವಿಷೀಢ್ವಂ, ಅನ್ವಭವಿಷೀಢ್ವಂ, ಅನ್ವಭಾವಿಷಿ, ಅನ್ವಭಾವಿಷ್ವಹಿ, ಅನ್ವಭವಿಷ್ವಹಿ, ಅನ್ವಭಾವಿಷ್ಮಹಿ ಅನ್ವಭವಿಷ್ಮಹಿ, 10 ಲೃಙ್ ಅನ್ವಭಾವಿಷ್ಯತ ಅನ್ವಭವಿಷ್ಯತ.

**ಪ್ರಯೋಗ—** ಅನಂತಸಖೈಃ ಅಲಂ ಮತಿಪದಂ ಸುಖಂ ಅನುಭೂಯತೇ (ಕರ್ಮಣಿ) ।
ಅನಂತಸಖಾಃ ಅಲಂ ಮತಿಪದಂ ಸುಖಂ ಅನುಭವಂತಿ (ಕರ್ತರಿ) ।

★ ★ ★

**ಅವತಾರಿಕಾ—** ಮುಕ್ತ ಪುರುಷರನ್ನು ವರ್ಣಿಸುತ್ತಾರೆ.

**ಅತಿಸುಂದರಾಃ ಸುರಭಯಃ ಪುರುಷಾಃ**
**ಹರಿಚಂದನೇನ ನವಚಂದ್ರರುಚಾ ।**
**ಚಲಚಾರುಚಾಮರಧರಾನುಚರಾ**
**ವಿಚರಂತಿ ನಿತ್ಯತರುಣಾ ಇಹ ತೇ ॥ 25 ॥**

**ಪದಚ್ಛೇದ—** ಅತಿಸುಂದರಾಃ, ಸುರಭಯಃ, ಪುರುಷಾಃ, ಹರಿಚಂದನೇನ, ನವಚಂದ್ರರುಚಾ, ಚಲಚಾರುಚಾಮರ ಧರಾನುಚರಾಃ, ವಿಚರಂತಿ, ನಿತ್ಯತರುಣಾಃ, ಇಹ, ತೇ ।

**ಅನ್ವಯ—** ಅತಿಸುಂದರಾಃ, ನವಚಂದ್ರರುಚಾ, ಹರಿಚಂದನೇನ, ಸುರಭಯಃ, ಚಲಚಾರುಚಾಮರಧರಾನುಚರಾಃ, ನಿತ್ಯತರುಣಾಃ ತೇ ಪುರುಷಾಃ ಇಹ ವಿಚರಂತಿ ।

**ಅನ್ವಯಾರ್ಥ—**

**ಅತಿಸುಂದರಾಃ** = ಅತ್ಯಂತ ಮನೋಹರರಾದ,

**ನವಚಂದ್ರರುಚಾ** = ನೂತನವಾದ (ಶುಕ್ಲಪಕ್ಷದ ಹುಣ್ಣಿಮೆಯಲ್ಲಿ ಉದಯಿಸಿದ) ಚಂದ್ರನ ಕಾಂತಿಯಂತಹ ಕಾಂತಿಯುಳ್ಳ,

**ಹರಿಚಂದನೇನ** = ಕೆಂಪಾದ ಸುವಾಸನೆಯಾದ ಅಗರುಚಂದನದಿಂದ

**ಸುರಭಯಃ** = ಪರಿಮಳಸಹಿತರಾದ,

**ಚಲ ಚಾರುಚಾಮರಧರಅನುಚರಾಃ** = ಬೀಸಲ್ಪಡುತ್ತಿರುವ, ಸುಂದರವಾದ ಚಾಮರಗಳನ್ನು ಹಿಡಿದಿರುವ ಸೇವಕರುಳ್ಳ,

**ನಿತ್ಯತರುಣಾಃ** = ನಿತ್ಯದಲ್ಲಿಯೂ ಯುವಕರಾದ

**ತೇ** = ಹಿಂದೆ ಹೇಳಿರುವ

**ಪುರುಷಾಃ** = ಮುಕ್ತಜೀವರು

**ಇಹ** = ಹಿಂದೆ ಹೇಳಲ್ಪಟ್ಟ ವೈಕುಂಠವೆಂಬ ಭಗವಂತನ ಲೋಕದಲ್ಲಿ

**ವಿಚರಂತಿ** = ಓಡಾಡುತ್ತಾರೆ.

**ತಾತ್ಪರ್ಯ—** ವೈಕುಂಠದಲ್ಲಿ ಮುಕ್ತಜನರು ತುಂಬಾ ಸುಂದರರಾಗಿರುತ್ತಾರೆ. ಅವರು ಹುಣ್ಣಿಮೆಯ ದಿನ ಉದಯಿಸುವ ಚಂದ್ರನಂತೆ ಕೆಂಪು ಬಿಳಿಬಣ್ಣದ ಸುವಾಸನೆಯಾದ ಅಗರುಚಂದನವನ್ನು ಲೇಪಿಸಿಕೊಂಡು ಯಾವಾಗಲೂ ಘಮಘಮಿಸುತ್ತಾ ಇರುತ್ತಾರೆ. ಅವರ ಹಿಂದೆ ಮುಂದೆ ಸುಂದರವಾದ ಬಿಳಿಯಾದ ಚಾಮರವನ್ನು ಬೀಸುತ್ತಾ ಸೇವಕರು ಸಂಚರಿಸುತ್ತಾ ಇರುತ್ತಾರೆ. ಅಂತಹ ಮುಕ್ತಜೀವರಿಗೆ ಮುಪ್ಪಿಲ್ಲ. ಅವರು ಯಾವಾಗಲೂ ತರುಣರಾಗಿರುತ್ತಾರೆ. ಇಂತಹ ಮುಕ್ತಜೀವರು ವೈಕುಂಠದಲ್ಲಿ ಅಸಂಖ್ಯಾಕರಾಗಿ ಓಡಾಡುತ್ತಿರುತ್ತಾರೆ.

**ವಿಗ್ರಹ—**

**ಅತಿಸುಂದರಾಃ—** ಅತ್ಯಂತಂ ಸುಂದರಾಃ ಅತಿಸುಂದರಾಃ ।

**ನವಚಂದ್ರರುಚಾ—** ನವಶ್ಚಾಸೌ ಚಂದ್ರಶ್ಚ ನವಚಂದ್ರಃ, ನವಚಂದ್ರಸ್ಯ ರುಗಿವ ರುಕ್ ಯಸ್ಯ ತತ್ ನವಚಂದ್ರ ರುಕ್ (ಹರಿಚಂದನಂ), ತೇನ ನವಚಂದ್ರರುಚಾ ।

**ಚಲಚಾರುಚಾಮರಧರಾನುಚರಾಃ—** ಚಾರೂಣಿ ಚ ತಾನಿ ಚಾಮರಾಣಿ ಚ ಚಾರುಚಾಮರಾಣಿ, ಚಲಾನಿ ಚ ತಾನಿ ಚಾರುಚಾಮರಾಣಿ ಚ ಚಲಚಾರುಚಾಮರಾಣಿ, ಧರಂತೀತಿ ಧರಾಃ, ಚಲಚಾರುಚಾಮರಾಣಾಂ ಧರಾಃ ಚಲಚಾರುಚಾಮರಧರಾಃ, ಚಲಚಾರುಚಾಮರಧರಾಃ ಅನುಚರಾ ಯೇಷಾಂ ತೇ ಚಲಚಾರು ಚಾಮರಧರಾನುಚರಾಃ ।

**ನಿತ್ಯತರುಣಾಃ—** ನಿತ್ಯಂ ತರುಣಾಃ ನಿತ್ಯತರುಣಾಃ ।

**ಕ್ರಿಯಾಪದ— ವಿಚಹತಿ**- ಸರ್ಗ 1। ಶ್ಲೋಕ 21 ರಲ್ಲಿ ಬಂದಿದೆ ।

**ಕೋಶ—** ನಿತ್ಯತರುಣಾಃ ಎಂಬಲ್ಲಿ ತರುಣ = ಯುವಕ, 'ವಯಸ್ಸ್ತರುಣೋ ಯುವಾ' ಎಂದು ಅಮರಕೋಶ.

**ಪ್ರಯೋಗ—** ನಿತ್ಯತರುಣಾಃ ಪುರುಷಾಃ ಇಹ ವಿಚರಂತಿ (ಕರ್ತರಿ) ।
ನಿತ್ಯತರುಣೈಃ ಪುರುಷೈಃ ಇಹ ವಿಚರ್ಯತೇ (ಭಾವೇ) ।

★ ★ ★

**ಅವತಾರಿಕಾ**— ಮೋಕ್ಷದಲ್ಲಿ ಸ್ತ್ರೀಭೋಗಸುಖವೂ ಇದೆಯೆನ್ನುತ್ತಾರೆ.

**ಸವಿಲಾಸಲಾಸ್ಯಪರಿತುಷ್ಟದೃಶೋ**
**ಮೃದುಗೀತವಾದ್ಯಮುದಿತಶ್ರವಣಾಃ ।**
**ಅನುರಂಜಯಂತಿ ನವಕಂಜದೃಶೋ**
**ರಮಣಾ ಅಮೀ ಸ್ವರಮಣೀಸ್ತರುಣೀಃ ॥ 26 ॥**

**ಪದಚ್ಛೇದ**— ಸವಿಲಾಸಲಾಸ್ಯಪರಿತುಷ್ಟದೃಶಃ, ಮೃದುಗೀತವಾದ್ಯಮುದಿತಶ್ರವಣಾಃ, ಅನುರಂಜಯಂತಿ, ನವ-ಕಂಜದೃಶಃ, ರಮಣಾಃ, ಅಮೀ, ಸ್ವರಮಣೀಃ, ತರುಣೀಃ ।

**ಅನ್ವಯ**— ಸವಿಲಾಸಲಾಸ್ಯಪರಿತುಷ್ಟದೃಶಃ, ಮೃದುಗೀತವಾದ್ಯಮುದಿತಶ್ರವಣಾಃ ಅಮೀ ರಮಣಾಃ, ನವಕಂಜ-ದೃಶಃ ತರುಣೀಃ ಸ್ವರಮಣೀಃ ಅನುರಂಜಯಂತಿ ।

**ಅನ್ವಯಾರ್ಥ**—

**ಸವಿಲಾಸಲಾಸ್ಯಪರಿತುಷ್ಟದೃಶಃ** = ಕಣ್ಣು, ಕಾಲು, ಕೈ ಮುಂತಾದವುಗಳ ಚಲನೆಯಿಂದ ಸಹಿತವಾದ, ಲಾಸ್ಯ ಮೃದು ನೃತ್ಯದಿಂದ ಸಂತೋಷಪಟ್ಟ ಕಣ್ಣುಗಳುಳ್ಳ

**ಮೃದು, ಗೀತ, ವಾದ್ಯ, ಮುದಿತಶ್ರವಣಾಃ** = ಕೋಮಲವಾದ, ಗಾನಗಳೂ, ಮೃದಂಗಾದಿ ವಾದ್ಯಗಳು, ಇವುಗಳಿಂದ ಸಂತೋಷಪಟ್ಟ ಶ್ರೋತ್ರೇಂದ್ರಿಯವುಳ್ಳ

**ಅಮೀ ರಮಣಾಃ** = ಈ ವೈಕುಂಠದಲ್ಲಿರುವ ಮುಕ್ತರಾದ ಪುರುಷಜೀವರು,

**ನವಕಂಜದೃಶಃ** = ಆಗ ತಾನೇ ಅರಳಿದ ಕಮಲದಂತಹ ಕಣ್ಣುಗಳುಳ್ಳ

**ತರುಣೀಃ** = ತಾರುಣ್ಯ ವಯಸ್ಸಿನಲ್ಲಿರುವ

**ಸ್ವರಮಣೀಃ** = ತಮ್ಮ ಪತ್ನಿಯರನ್ನು

**ಅನುರಂಜಯಂತಿ** = ತಮ್ಮಲ್ಲಿ ಅನುರಾಗ ಉಂಟಾಗುವಂತೆ ಮಾಡುತ್ತಾರೆ.

**ತಾತ್ಪರ್ಯ**— ವೈಕುಂಠದಲ್ಲಿ ಸುಂದರಿಯರಾದ ಮುಕ್ತಸ್ತ್ರೀ ಜೀವರು ಹಸ್ತಪಾದಾದಿಗಳನ್ನು ಕುಣಿಸುತ್ತಾ ನರ್ತನ ಮಾಡುತ್ತಾರೆ. ಅದನ್ನು ನೋಡಿ ಆಯಾ ಸುಂದರಿಯರ ಪತಿಗಳು ಕಣ್ಣಿನಿಂದ ತಮ್ಮ ಆನಂದವನ್ನು ಸೂಚಿಸುತ್ತಾರೆ. ಆ ಸ್ತ್ರೀಯರು ಕೋಮಲವಾದ ಧ್ವನಿಯಿಂದ ಹಾಡುತ್ತಾ, ಮೃದಂಗಾದಿಗಳನ್ನು ಬಾರಿಸುತ್ತಿದ್ದರೆ, ಮುಕ್ತ ಪುರುಷಜೀವರ ಕಿವಿಗಳಿಗೆ ಅತ್ಯಾನಂದ ಉಂಟಾಗುತ್ತದೆ. ಅರಳಿದ ಹೊಸದಾದ ಕಮಲದಂತಹ ಕಣ್ಣುಗಳುಳ್ಳ, ಎಳೆಯ ವಯಸ್ಸಿನ ಈ ತಮ್ಮ ತಮ್ಮ ಪತ್ನಿಯರನ್ನು ಅವರವರ ಪತಿಗಳು ಅವರ ಇಷ್ಟವನ್ನು ನಡೆಸಿಕೊಟ್ಟು ತಮ್ಮಲ್ಲಿ ಅನುರಾಗ ಉಂಟಾಗುವಂತೆ ಮಾಡುತ್ತಾರೆ, ಅವರನ್ನು ಸಂತೋಷಪಡಿಸುತ್ತಾರೆ.

**ವಿಗ್ರಹ**—

**ಸವಿಲಾಸಲಾಸ್ಯಪರಿತುಷ್ಟದೃಶಃ**— ವಿಲಾಸೇನ ಸಹಿತಂ ಸವಿಲಾಸಂ, ಸವಿಲಾಸಂ ಚ ತತ್ ಲಾಸ್ಯಂ ಚ ಸವಿಲಾಸ ಲಾಸ್ಯಂ, ಸವಿಲಾಸಲಾಸ್ಯೇನ ಪರಿತುಷ್ಟಾಃ ದೃಶಃ ಯೇಷಾಂ ತೇ ಸವಿಲಾಸಲಾಸ್ಯಪರಿತುಷ್ಟದೃಶಃ ।

**ಮೃದುಗೀತವಾದ್ಯಮುದಿತಶ್ರವಣಾಃ**— ಗೀತಾನಿ ಚ ವಾದ್ಯಾನಿ ಚ ಗೀತವಾದ್ಯಾನಿ, ಮೃದೂನಿ ಚ ತಾನಿ ಗೀತವಾದ್ಯಾನಿ ಚ ಮೃದುಗೀತವಾದ್ಯಾನಿ, ಮೃದುಗೀತವಾದ್ಯೈಃ ಮುದಿತಾನಿ ಶ್ರವಣಾನಿ ಯೇಷಾಂ ತೇ ಮೃದುಗೀತವಾದ್ಯಮುದಿತಶ್ರವಣಾಃ ।

**ನವಕಂಜದೃಶಃ**— ನವಂ ಚ ತತ್ ಕಂಜಂ ಚ ನವಕಂಜಂ, ನವಕಂಜವತ್ ದೃಶಃ ಯಾಸಾಂ ತಾಃ ನವಕಂಜದೃಶಃ ।

**ಸ್ವರಮಣೀಃ**— ಸ್ವೇಷಾಂ ರಮಣ್ಯಃ ಸ್ವರಮಣ್ಯಃ, ತಾಃ ಸ್ವರಮಣೀಃ ।

**ಕ್ರಿಯಾಪದ— ಅನು+ರಂಜಯಂತಿ**- ರಂಜಯತಿ ರಂಜಯತಃ, ರಂಜಯಂತಿ ಇತ್ಯಾದಿ 2 ಲಿಟ್ ರಂಜಯಾಂಚಕಾರ, ರಂಜಯಾಮಾ, ರಂಜಯಾಂ ಬಭೂವ, 3 ಲುಟ್ ರಂಜಯಿತಾ, 4 ಲೃಟ್ ರಂಜಯಿಷ್ಯತಿ, 5 ಲೋಟ್ ರಂಜಯತು, 6 ಲಙ್ ಅನ್ವರಂಜಯತ್, 7 ವಿಧಿಲಿಙ್ ರಂಜಯೇತ್, 8 ಆಶೀರ್ಲಿಙ್ ರಜ್ಯಾತ್, 9 ಲುಙ್ ಅರರಂಜತ್, 10 ಲೃಙ್ ಅರಂಜಯಿಷ್ಯತ್ ।

★ ★ ★

**ಅವತಾರಿಕಾ**— ಮುಕ್ತ ಪುರುಷರನ್ನು ವರ್ಣಿಸಿ ಮುಕ್ತ ಸ್ತ್ರೀಯರನ್ನು ವರ್ಣಿಸುತ್ತಾರೆ.

**ಪರಿಣಾಯಕಾನುಪವನಾಭಿಮುಖಾ-**
**ನನುನಿಸ್ಸರಂತಿ ಹರಿಣೀನಯನಾಃ ।**
**ವಿಮಲಾದ್ವಿಮಾನವಲಯಾಚ್ಛನಕೈಃ**
**ಶಶಿಮಂಡಲಾದಿವ ರುಚೋ ರುಚಿರಾಃ ॥ 27 ॥**

**ಪದಚ್ಛೇದ**— ಪರಿಣಾಯಕಾನ್, ಉಪವನಾಭಿಮುಖಾನ್, ಅನುನಿಸ್ಸರಂತಿ ಹರಿಣೀನಯನಾಃ, ವಿಮಲಾತ್, ವಿಮಾನವಲಯಾತ್, ಶನಕೈಃ ಶಶಿಮಂಡಲಾತ್, ಇವ, ರುಚಃ, ರುಚಿರಾಃ ।

**ಅನ್ವಯ**— ಹರಿಣೀನಯನಾಃ, ಉಪವನಾಭಿಮುಖಾನ್ ಪರಿಣಾಯಕಾನ್, ವಿಮಲಾತ್ ವಿಮಾನವಲಯಾತ್, ಶನಕೈಃ ಶಶಿಮಂಡಲಾತ್, ರುಚಿರಾಃ ರುಚಃ ಇವ, ಅನುನಿಸ್ಸರಂತಿ ।

**ಅನ್ವಯಾರ್ಥ**—

**ಹರಿಣೀನಯನಾಃ** = ಹೆಣ್ಣು ಜಿಂಕೆಗಳಂತೆ ವಿಶಾಲವಾದ ಕಣ್ಣುಗಳುಳ್ಳ ಸ್ತ್ರೀಯರು
**ಉಪವನಾಭಿಮುಖಾನ್** = ಉದ್ಯಾನದ ಕಡೆಗೆ ಹೋಗಲು ಉದ್ಯುಕ್ತರಾದ
**ಪರಿಣಾಯಕಾನ್** = ತಮ್ಮ ಗಂಡಂದಿರನ್ನು
**ವಿಮಲಾತ್** = ನಿರ್ಮಲವಾದ
**ವಿಮಾನವಲಯಾತ್** = ವಿಮಾನ ಮಂಡಲದ ದೆಸೆಯಿಂದ,
**ಶನಕೈಃ** = ಮೆಲ್ಲನೆ
**ಶಶಿಮಂಡಲಾತ್** = ಚಂದ್ರಬಿಂಬದ ದೆಸೆಯಿಂದ,
**ರುಚಿರಾಃ** = ಮನೋಹರವಾದ
**ರುಚಃ ಇವ** = ಕಾಂತಿಗಳಂತೆ
**ಅನುನಿಸ್ಸರಂತಿ** = ಅನುಸರಿಸಿ ಹೋಗುತ್ತಾರೆ.

**ತಾತ್ಪರ್ಯ**— ವೈಕುಂಠದಲ್ಲಿರುವ ಮುಕ್ತಜೀವರೆಂಬ ನಾಯಕರನ್ನು ಹಿಂದಿನ ಶ್ಲೋಕದಲ್ಲಿ ವರ್ಣಿಸಿ ಈಗ ನಾಯಿಕೆಯರನ್ನು ವರ್ಣಿಸುತ್ತಾರೆ. ವೈಕುಂಠಲೋಕದಲ್ಲಿ ಮುಕ್ತರಾದ ಸ್ತ್ರೀಯರು ಎಳೆಯ ಹೆಣ್ಣು ಜಿಂಕೆಗಳಂತೆ ವಿಶಾಲವಾದ ಕಣ್ಣುಗಳುಳ್ಳವರು. ಅವರು ಚಂದ್ರಮಂಡಲದಂತಿರುವ ನಿರ್ಮಲವಾದ ವಿಮಾನದಲ್ಲಿ ಕುಳಿತು ತಮ್ಮ ಪತಿಗಳ ಜತೆಗೆ

ಓಡಾಡುತ್ತಾರೆ. ವಿಮಾನವನ್ನು ನಿಲ್ಲಿಸಿ ಅವರ ಪತಿಗಳು ವಿಹಾರಕ್ಕಾಗಿ ಉದ್ಯಾನವನವನ್ನು ಪ್ರವೇಶಿಸಲು ಉದ್ಯುಕ್ತರಾದಾಗ, ಈ ಸುಂದರೀಮಣಿಯರು ಕೂಡ ತಮ್ಮ ಪತಿಗಳನ್ನು ಅನುಸರಿಸಿ ವಿಮಾನಗಳಿಂದ ಹೊರಗೆ ಬರುತ್ತಾರೆ. ಆ ದೃಶ್ಯವು ಚಂದ್ರಮಂಡಲದಿಂದ ಮನೋಹರವಾದ ಕಿರಣಗಳ ಕಾಂತಿಗಳು ಈಚೆಗೆ ಬರುವಂತೆ ಇರುತ್ತದೆ. ಎಂದರೆ ವಿಮಾನಗಳು ಚಂದ್ರನಂತೆಯೂ, ತರುಣಿಯರು ಚಂದ್ರನ ಕಿರಣಗಳ ಕಾಂತಿಗಳಂತೆಯೂ ಇರುತ್ತಾರೆ ಎಂದು ಅಭಿಪ್ರಾಯ.

**ವಿಗ್ರಹ—**

**ಪರಿಣಾಯಕಾನ್**— ಪರಿಣಯಂತಿ ಇತಿ ಪರಿಣಾಯಕಾಃ, ತಾನ್ ಪರಿಣಾಯಕಾನ್ ।

**ಉಪವನಾಭಿಮುಖಾನ್**— ಉಪವನಸ್ಯ ಅಭಿಮುಖಾಃ ಉಪವನಾಭಿಮುಖಾಃ, ತಾನ್ ಉಪವನಾಭಿಮುಖಾನ್ ।

**ಹರಿಣೀನಯನಾಃ**— ಹರಿಣೀನಾಂ ನಯನಾನಿ ಇವ ನಯನಾನಿ ಯಾಸಾಂ ತಾಃ ಹರಿಣೀನಯನಾಃ ।

**ವಿಮಾನವಲಯಾತ್**— ವಿಮಾನಾನಾಂ ವಲಯಂ ವಿಮಾನವಲಯಂ, ತಸ್ಮಾತ್ ವಿಮಾನವಲಯಾತ್ ।

**ಶಶಿಮಂಡಲಾತ್**— ಶಶಿನಃ ಮಂಡಲಂ ಶಶಿಮಂಡಲಂ, ತಸ್ಮಾತ್ ಶಶಿಮಂಡಲಾತ್ ।

**ಕ್ರಿಯಾಪದ**— ಅನುನಿಸ್ಸರಂತಿ- ಅನು+ನಿಸ್ ಇತ್ಯುಪಸರ್ಗದ್ವಯಪೂರ್ವಕಾತ್ ಸೃಗತೌ ಇತಿ ಗತ್ಯರ್ಥಕಃ ಸೃಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಅನಿಟ್ ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ 'ಅನುನಿಸ್ಸರಂತಿ' ಇತಿ ರೂಪಂ ।

**ಕೋಶ**— ಹರಿಣೀನಯನಾಃ ಎಂಬಲ್ಲಿ ಹರಿಣೀ ಎಂದರೆ ಜಿಂಕೆ. 'ಮೃಗೇ ಕುರಂಗವಾತಾಯು ಹರಿಣಾಜಿನಯೋ-ನಯಃ' ಎಂದು ಅಮರ.

**ಪ್ರಯೋಗ**— ಹರಿಣೀನಯನಾಃ ಪರಿಣಾಯಕಾನ್ ಅನುನಿಸ್ಸರಂತಿ (ಕರ್ತರಿ) ।
ಹರಿಣೀನಯನಾಭಿಃ ಪರಿಣಾಯಕಾನ್ ಅನುನಿಸ್ರಿಯತೇ (ಭಾವೇ) ।

★ ★ ★

**ಅವತಾರಿಕಾ**— ಗಂಡಂದಿರನ್ನು ಹಿಂಬಾಲಿಸುವ ತರುಣಿಯರನ್ನು ವರ್ಣಿಸುತ್ತಾರೆ.

**ಅರುಣಾಶ್ಮವರ್ಣತನವಸ್ತನವಃ**
**ಶುಭಹಾರಸನ್ನಿಭರುಚೋಽತ್ರ ಪರಾಃ ।**
**ಹರಿನೀಲನೀಲರುಚಯೋಽಪ್ಯಪರಾಃ**
**ಪ್ರಕಟೀಭವಂತಿ ವಿವಿಧಾಭರಣಾಃ ॥ 28 ॥**

**ಪದಚ್ಛೇದ**— ಅರುಣಾಶ್ಮವರ್ಣತನವಃ, ತನವಃ, ಶುಭಹಾರಸನ್ನಿಭರುಚಃ, ಅತ್ರ, ಪರಾಃ, ಹರಿನೀಲನೀಲ-ರುಚಯಃ, ಅಪಿ, ಅಪರಾಃ, ಪ್ರಕಟೀಭವಂತಿ, ವಿವಿಧಾಭರಣಾಃ ।

**ಅನ್ವಯ**— ಅತ್ರ ಅರುಣಾಶ್ಮವರ್ಣತನವಃ, ಪರಾಃ ಶುಭಹಾರಸನ್ನಿಭರುಚಃ, ಅಪರಾಃ ಹರಿನೀಲನೀಲರುಚಯಃ, ಅಪಿ ವಿವಿಧಾಭರಣಾಃ ತನವಃ ಪ್ರಕಟೀಭವಂತಿ ।

**ಅನ್ವಯಾರ್ಥ**—

**ಅತ್ರ** = ಈ ವೈಕುಂಠ ಲೋಕದಲ್ಲಿ (ಕೆಲವು ಸ್ತ್ರೀಯರು)

**ಅರುಣಾಶ್ಮವರ್ಣತನವಃ** = ಪದ್ಮರಾಗ ಮಣಿಯ ಬಣ್ಣವುಳ್ಳ ಶರೀರವುಳ್ಳವರು,

**ಪರಾಃ** = ಬೇರೆಯವರು

**ಶುಭಹಾರಸನ್ನಿಭರುಚಃ ಅಪರಾಃ** = ಮನೋಹರವಾದ ಮುತ್ತಿನ ಸರಕ್ಕೆ ಸಮಾನವಾದ ಕಾಂತಿಯುಳ್ಳವರು. ಇನ್ನು ಇತರರು

**ಹರಿನೀಲನೀಲರುಚಯಃ** = ಇಂದ್ರನೀಲ ಮಣಿಯಂತೆ ಕಪ್ಪಾದ ಕಾಂತಿಯುಳ್ಳವರು.

**ಅಪಿ** = ಮತ್ತು (ಎಲ್ಲರೂ)

**ವಿವಿಧಾಭರಣಾಃ** = ನಾನಾ ವಿಧವಾದ ಆಭರಣವುಳ್ಳವರು

**ತನವಃ** = ಇಂತಹ ಕೃಶಾಂಗಿಯರಾದ ಹೆಂಗಸರು

**ಪ್ರಕಟೀಭವಂತಿ** = (ವಿಮಾನಗಳಿಂದ ಹೊರಗೆ) ಆವಿರ್ಭವಿಸುತ್ತಾರೆ. (ಪ್ರಕಟರಾಗುತ್ತಾರೆ).

**ತಾತ್ಪರ್ಯ—** ಈ ವೈಕುಂಠಲೋಕದಲ್ಲಿ ಕೆಲವು ಸ್ತ್ರೀಯರು ಪದ್ಮರಾಗಮಣಿಯಂತೆ ಕೆಂಪಾದ ಶರೀರವುಳ್ಳವರಾಗಿದ್ದಾರೆ. ಇನ್ನು ಕೆಲವರು ಮನೋಹರವಾದ ಮುತ್ತಿನ ಸರದಂತೆ ಕಾಂತಿಯುಳ್ಳವರು. ಮತ್ತೆ ಕೆಲವರು ಇಂದ್ರನೀಲಮಣಿಯಂತೆ ಕಪ್ಪಾದ ಕಾಂತಿಯುಳ್ಳವರು, ಎಲ್ಲರೂ ನಾನಾ ವಿಧವಾದ ಆಭರಣವನ್ನು ಧರಿಸಿರುತ್ತಾರೆ. ಇಂತಹ ಕೃಶಾಂಗಿಯರಾದ ಸುಂದರಿಯರಾದ ತರುಣಿಯರು ವಿಮಾನಗಳಲ್ಲಿ ಸಂಚರಿಸುತ್ತಾ ವಿಮಾನಗಳು ಬಂದು ನಿಂತ ಕೂಡಲೇ, ಆ ವಿಮಾನಗಳಿಂದ ಪ್ರಕಟರಾಗುತ್ತಾರೆ. ವಿಮಾನಗಳಿಂದ ಹೊರಗೆ ಬರುತ್ತಾರೆ.

**ವಿಗ್ರಹ—**

**ಅರುಣಾಶ್ಮವರ್ಣತನವಃ—** ಅರುಣಾಶ್ಚ ತೇ ಅಶ್ಮಾನಶ್ಚ ಅರುಣಾಶ್ಮಾನಃ, ಅರುಣಾಶ್ಮನಾಂ ವರ್ಣಃ ಇವ ವರ್ಣಃ ಯಾಸಾಂ ತಾಃ ಅರುಣಾಶ್ಮವರ್ಣಾಃ, ಅರುಣಾಶ್ಮವರ್ಣಾಃ ತನವಃ ಯಾಸಾಂ ತಾಃ ಅರುಣಾಶ್ಮವರ್ಣತನವಃ ।

**ಶುಭಹಾರಸನ್ನಿಭರುಚಃ—** ಶುಭಶ್ಚಾಸೌ ಹಾರಶ್ಚ ಶುಭಹಾರಃ, ಶುಭಹಾರೇಣ ಸದೃಶೀ ಶುಭಹಾರಸನ್ನಿಭಾ, ಶುಭಹಾರಸನ್ನಿಭಾ ರುಕ್ ಯಾಸಾಂ ತಾಃ ಶುಭಹಾರಸನ್ನಿಭರುಚಃ ।

**ಹರಿನೀಲನೀಲರುಚಯಃ—** ಹರಿನೀಲವತ್ ನೀಲಾ ರುಚಿಃ ಯಾಸಾಂ ತಾಃ ಹರಿನೀಲನೀಲರುಚಯಃ ।

**ವಿವಿಧಾಭರಣಾಃ—** ವಿವಿಧಾನಿ ಆಭರಣಾನಿ ಯಾಸಾಂ ತಾಃ ವಿವಿಧಾಭರಣಾಃ ।

**ಪ್ರಕಟೀಭವಂತಿ—** ಅಪ್ರಕಟಾಃ ಪ್ರಕಟಾಃ ಸಂಪದ್ಯಮಾನಾಃ ಭವಂತಿ ಪ್ರಕಟೀಭವಂತಿ ।

**ಕ್ರಿಯಾಪದ—** **ಪ್ರಕಟೀಭವಂತಿ-** ಭೂಸತ್ತಾಯಾಂ ವರ್ತಮಾನೇ ಲಟ್ ಪ್ರಕಟೀಭವಂತಿ ಇದರ ಭಾವೇ ಪ್ರಯೋಗ - 1 ಭೂಯತೇ, 2 ಬಭೂವೇ, 3 ಭಾವಿತಾ (ಭವಿತಾ), 4 ಭಾವಿಷ್ಯತೇ (ಭವಿಷ್ಯತೇ), 5 ಭೂಯತಾಂ, 6 ಅಭೂಯತ, 7 ಭೂಯೇತ, 8 ಭಾವಿಷೀಷ್ಟ (ಭವಿಷೀಷ್ಟ), 9 ಅಭಾವಿ, 10 ಅಭಾವಿಷ್ಯತ (ಅಭವಿಷ್ಯತ) ।

**ಪ್ರಯೋಗ—** ವಿವಿಧಾಭರಣಾಃ ತನವಃ ಪ್ರಕಟೀಭವಂತಿ (ಕರ್ತರಿ) ।
ವಿವಿಧಾಭರಣಾಭಿಃ ತನುಭಿಃ ಪ್ರಕಟೀಭೂಯತೇ (ಭಾವೇ) ।

★ ★ ★

**ಅವತಾರಿಕಾ—** ಮತ್ತೂ ಆ ತರುಣಿಯರನ್ನು ವರ್ಣಿಸುತ್ತಾರೆ.

**ಸುಚಿರದ್ಯುತೀರ್ದಧತಿ ಸೂಕ್ಷ್ಮತರಂ**
**ಸ್ವಯಮಂಬರಂ ಚ ಖಲು ಬಿಭ್ರತಿ ಯಾಃ ।**
**ಶುಕನಿಸ್ಸ್ವನಾ ಧ್ರುವಮಿಮಾ ಅಪರಾಃ**
**ಸುಪಯೋಧರಾ ಜಲಧರಾವಲಯಃ ॥ 29 ॥**

**ಪದಚ್ಛೇದ—** ಸುಚಿರದ್ಯುತೀಃ, ದಧತಿ, ಸೂಕ್ಷ್ಮತರಂ, ಸ್ವಯಂ, ಅಂಬರಂ, ಚ, ಖಲು, ಬಿಭ್ರತಿ, ಯಾಃ, ಶುಕ-ನಿಸ್ಸ್ವನಾಃ, ಧ್ರುವಂ, ಇಮಾಃ, ಅಪರಾಃ, ಸುಪಯೋಧರಾಃ, ಜಲಧರಾವಲಯಃ, ಖಲು ।

**ಅನ್ವಯ—** ಯಾಃ ಸುಚಿರದ್ಯುತೀಃ ದಧತಿ, ಸ್ವಯಂ ಸೂಕ್ಷ್ಮತರಂ ಚ ಅಂಬರಂ ಬಿಭ್ರತಿ, ಶುಕನಿಸ್ಸ್ವನಾಃ, ಸು-ಪಯೋಧರಾಃ ಇಮಾಃ, ಧ್ರುವಂ ಅಪರಾಃ ಜಲಧರಾವಲಯಃ ।

**ಅನ್ವಯಾರ್ಥ—**

**ಯಾಃ** = ಯಾವ ತರುಣಿಯರು
**ಸುಚಿರದ್ಯುತೀಃ** = ಬಹಳ ಕಾಲವಿರುವ (ಅತ್ಯಂತ ಸ್ಥಿರವಾದ) ಕಾಂತಿಗಳನ್ನು
**ದಧತಿ** = ಧರಿಸಿರುತ್ತಾರೋ,
**ಸ್ವಯಂ** = ತಾವೇ
**ಸೂಕ್ಷ್ಮತರಂ** = ಅತ್ಯಂತ ತೆಳುವಾದ
**ಅಂಬರಂ ಚ** = ಬಟ್ಟೆಯನ್ನೂ
**ಬಿಭ್ರತಿ** = ಧರಿಸಿರುತ್ತಾರೋ,
**ಶುಕನಿಸ್ಸ್ವನಾಃ** = ಗಿಣಿಯ ಧ್ವನಿಯಂತೆ ಧ್ವನಿಯುಳ್ಳ,
**ಸುಪಯೋಧರಾಃ** = ಸುಂದರಸ್ತನಗಳುಳ್ಳ
**ಇಮಾಃ** = ಈ ತರುಣಿಯರು,
**ಧ್ರುವಂ** = ನಿಶ್ಚಯವಾಗಿಯೂ
**ಅಪರಾಃ** = ಬೇರೆ
**ಜಲಧರಾವಲಯಃ ಖಲು** = ಜಲಧರಗಳ ಅವಳಿಗಳಷ್ಟೆ! (ಮೋಡಗಳ ಸಾಲುಗಳಷ್ಟೆ)

**ತಾತ್ಪರ್ಯ—** ಇಲ್ಲಿ ವಾಸವಾಗಿರುವ ತರುಣಿಯರು (ಅವರೂಢಿಯಿಂದ ಜಲಧರಾವಳಿಯರು) ಶಾಶ್ವತವಾಗಿರುವ ಕಾಂತಿಯನ್ನು ಧರಿಸಿದ್ದಾರೆ. ತಾವೇ ಅತ್ಯಂತ ಸೂಕ್ಷ್ಮವಾದ ಅಂಬರ (ಬಟ್ಟೆ)ವನ್ನು ಧರಿಸಿದ್ದಾರೆ. ಅವರು ಗಿಣಿಯ ಧ್ವನಿಯಂತೆ ಇಂಪಾದ ಧ್ವನಿಯುಳ್ಳವರು. ಸುಂದರವಾದ ಪಯೋಧರ-ಹಾಲುಳ್ಳ ಸ್ತನಗಳುಳ್ಳವರು. ಜಲಧರಾವಳಿಗಳು (ಮೇಘಗಳ ಸಾಲುಗಳು) ಕ್ಷಣಿಕವಾದ ಕಾಂತಿಯುಳ್ಳ ಮಿಂಚುಗಳನ್ನು ಧರಿಸಿವೆ. ಅವುಗಳು ಅಂಬರವನ್ನೇ (ಆಕಾಶವನ್ನೇ) ಆಶ್ರಯಿಸಿವೆ. ತಾವು ಸ್ತ್ರೀಯರಂತೆ ತಾವೇ ಅಂಬರವನ್ನು (ಆಕಾಶವನ್ನು ಬಟ್ಟೆಯನ್ನು ಎಂದು ಧ್ವನಿ) ಧರಿಸಿಲ್ಲ. ಅವುಗಳ ಸದ್ದು ಈ ಸುಂದರಿಯರ ಕಂಠಧ್ವನಿಯಂತೆ ಇಂಪಲ್ಲ. ಅತ್ಯಂತ ಕಠೋರ. ಹದಿನಾರು ವರುಷದ ಸುಂದರ ಯುವತಿಯನ್ನು ಜಲ-ಧರಾವಳಿಯೆನ್ನುವರು. ಈ ಸುಂದರಿಯರು ಜಲಧರಾವಳಿ (ಮೇಘಗಳ ಸಾಲು ಎಂದೂ ಧ್ವನಿ) ಎಂದು ಪ್ರಸಿದ್ಧರಾಗಿದ್ದರೂ ಪ್ರಸಿದ್ಧವಾದ ಜಲಧರಾವಳಿಗಿಂದ ವಿಲಕ್ಷಣರಾದವರು. ಮೋಡಗಳ ಸಾಲುಗಳೆಂಬ ಜಲಧರಾವಳಿಗಳಲ್ಲಿ ಇಲ್ಲದಿರುವ ಅನೇಕ ವಿನೂತನ ವಿಲಕ್ಷಣ ಧರ್ಮಗಳು ಇಲ್ಲಿವೆ.

**ವಿಶೇಷಾಂಶ—** ಇಲ್ಲಿ ಈ ಗ್ರಂಥದ ಕರ್ತೃಗಳೇ ಆಗಿರುವ ಶ್ರೀಮನ್ನಾರಾಯಣ ಪಂಡಿತಾಚಾರ್ಯರು 'ಭಾವ-ಪ್ರಕಾಶಿಕಾ' ಎಂಬ ತಾವೇ ಮಾಡಿರುವ ವ್ಯಾಖ್ಯಾನದಲ್ಲಿ ಈ ರೀತಿ ಹೇಳಿರುತ್ತಾರೆ.

ಅನ್ಯಾಃ ಅಸುಚಿರದ್ಯುತೀಃ ವಿದ್ಯುತೋ ದಧತಿ = ಮೋಡಗಳ ಸಾಲುಗಳೆಂಬ ಜಲಧರಾವಳಿಗಳು ಕ್ಷಣಿಕ ಪ್ರಕಾಶವುಳ್ಳ ಮಿಂಚನ್ನು ಧರಿಸುತ್ತವೆ. ಅಂಬರಂ ಚ ಸ್ವಯಂ ನ ದಧತಿ = ಅಂಬರವನ್ನು (ಬಟ್ಟೆಯನ್ನು ಆಕಾಶವನ್ನು ಎಂದು ಧ್ವನಿ) ಸ್ವತಃ ಧರಿಸುವುದಿಲ್ಲ. ಕಿಂತು ಅಂಬರೇಣ ಧಾರ್ಯಂತೇ = ಪರಂ ತು ಅಂಬರದಿಂದ (ಆಕಾಶದಿಂದ) ಬಟ್ಟೆಯಿಂದ ಎಂದು ಧ್ವನಿ) ಧರಿಸಲ್ಪಡುತ್ತವೆ. ದುಂದುಭಿಸ್ವನಾಶ್ಚ = ಆಕಾಶದಲ್ಲಿರುವ ಜಲಧರಾವಳಿಗಳು ಈ ಜಲಧರಾವಳಿಗಳಂತೆ ಶುಕನಿಸ್ವನೆ-ಯರಲ್ಲ. ಭೇರಿಯಂತಹ ಕರ್ಕಶ ಧ್ವನಿವುಳ್ಳವುಗಳು. ವೈಕುಂಠದ ಜಲಧರಾವಳಿಗಳು ಸುಪಯೋಧರಾಃ ಸುಕುಚಾಃ = ಒಳ್ಳೆಯ ಪಯೋಧರ ಅಂದರೆ ಸ್ತನಗಳುಳ್ಳವರು, ಸುಜಲಧರಾಶ್ಚ = ಆಕಾಶದ ಜಲಧರಾಗಳಾದರೋ ಒಳ್ಳೆಯ ನೀರನ್ನು ಮಾತ್ರ ಹೊಂದಿರುತ್ತವೆ. ''ದ್ವ್ಯಷ್ಟವರ್ಷಾತು ಯಾ ಯೋಷಿತ್ ಶ್ಯಾಮಾ ಜಲಧರಾವಲಿಃ ಇತಿ'' 8+8=16 ಹದಿನಾರು ವಯಸ್ಸಿನ ಸ್ತ್ರೀಯು ಶ್ಯಾಮಾ, ಜಲಧರಾವಲಿ ಎಂಬ ಎರಡು ಹೆಸರುಗಳನ್ನು ಹೊಂದಿರುತ್ತಾಳೆ ಎಂದು ಕೋಶಪ್ರಮಾಣವಿದೆ. ಜಲಧರಾವಲಿತ್ವಂ ಚಾತ್ರ ಗುಣತಃ ನ ಕಾಲತಃ = ಇಲ್ಲಿ ವೈಕುಂಠದ ತರುಣಿಯರನ್ನು ಜಲಧರಾವಳಿ ಎಂದು ಹೇಳಿರುವುದು ಗುಣದಿಂದ, ಕಾಲ ಸಾಮ್ಯದಿಂದಲ್ಲ. ವೈಕುಂಠದ ಜಲಧರಾವಳಿಯರು ನಿರಂತರ ಇರುತ್ತಾರೆ. ಈ ಜಲಧರಾವಳಿಗಳು ಮಳೆಗಾಲದಲ್ಲಿ ಮಾತ್ರ ಇರುತ್ತವೆ. ಹೀಗೆ ಇಲ್ಲಿ ಆಕಾಶದಲ್ಲಿ ಪ್ರಸಿದ್ಧವಾದ ಜಲಧರಾವಳಿಗಿಂತ ವೈಕುಂಠ ಲೋಕದ ಜಲಧರಾವಳಿಗಳಿಗೆ ವಿಶೇಷವನ್ನು ಹೇಳಿದ್ದರಿಂದ ವ್ಯತಿರೇಕಾಲಂಕಾರ. 'ವ್ಯತಿರೇಕೋ ವಿಶೇಷಶ್ಚೇದುಪಮಾನೋ-ಪಮೇಯಯೋಃ' ಎಂದು ಆ ಅಲಂಕಾರದ ಲಕ್ಷಣ. ಧ್ರುವಂ = ಈ ವಿಷಯದಲ್ಲಿ ಸಂಶಯವಿಲ್ಲ. ಹೀಗೆ ನಾಮ-ಸಾಮ್ಯವಿದ್ದರೂ ಕೂಡ ಹಿಂದೆ ಹೇಳಿದ ರೀತಿಯಿಂದ ವಿರುದ್ಧ ಧರ್ಮವಿರುವುದರಿಂದ ಈ ವೈಕುಂಠದ ನಾರಿಯರು ಮೇಘಸಮೂಹಕ್ಕಿಂತ ವಿಲಕ್ಷಣೆಯರು ಎಂದು ಉತ್ಪ್ರೇಕ್ಷಿಸಿರುವುದರಿಂದ ಉತ್ಪ್ರೇಕ್ಷಾಲಂಕಾರ. 'ಅಂಬರಂ ವ್ಯೋಮ್ನಿ ವಾಸಸಿ' ಎಂಬ ಕೋಶಾನುಸಾರ ಅಂಬರ ಶಬ್ದಕ್ಕೆ ಆಕಾಶ ಮತ್ತು ಬಟ್ಟೆ ಎಂದು ಎರಡು ಅರ್ಥಗಳು. 'ನಾದನಿಸ್ವಾನ ನಿಸ್ವನಾಃ ವಕ್ಷೋಜೌ ಚ ಪಯೋಧರೌ' ಎಂದು ಕೋಶವಿದೆ.

**ಕ್ರಿಯಾಪದ— ದಧತಿ-** 1. ದಧಾತಿ ಧತ್ತಃ ದಧತಿ, ದಧಾಸಿ ಧತ್ಥಃ ಧತ್ಥ, ದಧಾಮಿ ದಧ್ವಃ ದಧ್ಮಃ 2. ದಧೌ ದಧತುಃ ದಧುಃ, ದಧಿಥ ದಧಾಥ ದಧಥುಃ ದಧ, ದಧೌ ದಧಿವ ದಧಿಮ 3. ಧಾತಾ ಧಾತಾರೌ ಧಾತಾರಃ ಧಾತಾಸಿ 4. ಧಾಸ್ಯತಿ 5. ದಧಾತು ಧತ್ತಾತ್ ಧತ್ತಾಂ ದಧತು, ಧೇಹಿ ಧತ್ತಾತ್ ಧತ್ತಂ ಧತ್ತ, ದಧಾನಿ ದಧಾವ ದಧಾಮ 6. ಅದಧಾತ್ ಅಧತ್ತಾಂ ಅದಧುಃ ಅದಧಾಃ ಅಧತ್ತಂ ಅಧತ್ತ, ಅಧಧಾಂ ಅಧಧ್ವ ಅಧಧ್ಮ 7. ದಧ್ಯಾತ್ ದಧ್ಯಾತಾಂ ದಧ್ಯುಃ ದಧ್ಯಾಃ, ದಧ್ಯಾತಂ ದಧ್ಯಾತ, ದಧ್ಯಾಂ ದಧ್ಯಾವ ದಧ್ಯಾಮ 8. ಧೇಯಾತ್ ಧೇಯಾಸ್ತಾಂ ಧೇಯಾಸುಃ 9. ಅಧಾತ್ ಅಧಾತಾಂ ಅಧುಃ ಅಧಾಃ ಅಧಾತಂ ಅಧಾತ ಅಧಾಂ ಅಧಾವ ಅಧಾಮ 10. ಅಧಾಸ್ಯತ್. ಕರ್ಮಣಿ 1 ಧೀಯತೇ 2 ದಧೇ 3 ಧಾಯಿತಾ, ಧಾತಾ 4 ಧಾಯಿಷ್ಯತೇ ಧಾಸ್ಯತೇ 5 ಧೀಯತಾಂ ಅಧೀಯತ ಧೀಯೇತ ಧಾಯಿಷೀಷ್ಟ, ಧಾಸೀಷ್ಟ 9 ಅಧಾಯಿ ಅಧಾಯಿಷಾತಾಂ (ಅಧಿಷಾತಾಂ) (ಢ್ವಂಧ್ವಂ) 10 ಅಧಾಯಿಷ್ಯತ. ಅಧಾಸ್ಯತ ಡುಧಾಞ ಧಾರಣಪೋಷಣಯೋಃ 'ದಧತಿ' ಲಟ್ ಪ್ರಥಮ ಪುರುಷ ಬಹುವಚನ.

**ಬಿಭ್ರತಿ-** 1 ಬಿಭರ್ತಿ ಬಿಭೃತಃ ಬಿಭ್ರತಿ, ಬಿಭರ್ಷಿ ಬಿಭೃಥಃ ಬಿಭೃಥ ಬಿಭರ್ಮಿ ಭಿಭೃವಃ ಭಿಭೃಮಃ 2 ಬಭಾರ ಬಭ್ರತುಃ ಬಭ್ರುಃ ಬಭರ್ಥ ಬಭ್ರಥುಃ ಬಭ್ರ, ಬಭಾರ-ಬಭರ ಬಭೃವ ಬಭೃಮ 3 ಭರ್ತಾ 4 ಭರಿಷ್ಯತಿ 5 ಬಿಭರ್ತು ಬಿಭೃತಾತ್, ಬಿಭೃತಾಂ ಬಿಭ್ರತು, ಬಿಭೃಹಿ-ಬಿಭೃತಾತ್ ಬಿಭೃತಂ ಬಿಭೃತ, ಬಿಭರಾಣಿ ಬಿಭರಾವ ಬಿಭರಾಮ 6 ಅಬಿಭಃ ಅಬಿಭೃತಾಂ ಅಬಿಭರುಃ ಅಬಿಭಃ ಅಭಬಿಭೃತಂ ಅಬಿಭೃತ, ಅಬಿಭರಂ ಅಬಿಭೃವ ಅಬಿಭೃಮ 7 ಬಿಭೃಯಾತ್ ಬಿಭೃಯಾತಾಂ ಬಿಭೃಯುಃ, 8 ಭ್ರಿಯಾತ್ ಭ್ರಿಯಾಸ್ತಾಂ ಭ್ರಿಯಾಸುಃ 9 ಅಭಾರ್ಷೀತ್ ಅಭಾರ್ಷ್ಟಾಂ ಅಭಾರ್ಷುಃ ಅಭಾರ್ಷೀಃ, ಅಭಾರ್ಷ್ಟಂ

ಅಭಾರ್ಷ್ವ, ಅಭಾರ್ಷಂ ಅಭಾರ್ಷ್ವ ಅಭಾರ್ಷ್ಮ 10 ಅಭರಿಷ್ಯತ್ ಕರ್ಮಣಿ. 1 ಭ್ರಿಯತೇ 2 ಬಭ್ರೇ 3 ಭಾರಿತಾ, ಭರ್ತಾ 4 ಭಾರಿಷ್ಯತೇ ಭರಿಷ್ಯತೇ 5 ಭ್ರಿಯತಾಂ 6 ಅಭ್ರಿಯತ 7 ಭ್ರಿಯೇತ 8 ಭಾರಿಷೀಷ್ಟ, ಭೃಷೀಷ್ಟ 9 ಅಭಾರಿ ಅಭಾರಿಷಾತಾಂ, ಅಭೃಷಾತಾಂ 10 ಅಭಾರಿಷ್ಯತ, ಅಭರಿಷ್ಯತ. ಡುಭೃಞ್ ಧಾರಣಪೋಷಣಯೋಃ ಸಕರ್ಮಕಃ ಅನಿಟ್ ಉಭಯಪದೀ, 'ಬಿಭ್ರತಿ' ಪರಸ್ಮೈಪದೀ ಲಟ್ ಪ್ರಥಮಪುರುಷೇ ಬಹುವಚನಂ ।

ಪ್ರಯೋಗ— ಯಾಃ (ನಾರ್ಯಃ) ಸುಚಿರದ್ಯುತೀಃ ದಧತಿ (ಕರ್ತರಿ) ।

ಯಾಭಿಃ (ನಾರೀಭಿ) ಸುಚಿರದ್ಯುತಯಃ ಧೀಯಂತೇ (ಕರ್ಮಣಿ) ।

ಯಾಃ ಸ್ವಯಂ ಅಂಬರಂ ಬಿಭ್ರತಿ (ಕರ್ತರಿ) ।

ಯಾಭಿಃ ಸ್ವಯಂ ಅಂಬರಂ ಭ್ರಿಯತೇ (ಕರ್ಮಣಿ) ।

★ ★ ★

**ಸಮತೀತವಿದ್ರುಮಭುವಾಂ ಸುದೃಶಾಂ ಪದಪಲ್ಲವಾಗ್ರ್ಯನಖರಕ್ತರುಚೀಃ ।**
**ಪರಭಾಗತಃ ಸ್ಫಟಿಕಕುಟ್ಟಿಮಭೂಃ ಪ್ರಕಟೀಕರೋತಿ ನ ಪುರಾ ಪ್ರಕಟಾಃ ॥ 30 ॥**

ಪದಚ್ಛೇದ— ಸಮತೀತವಿದ್ರುಮಭುವಾಂ, ಸುದೃಶಾಂ, ಪದಪಲ್ಲವಾಗ್ರ್ಯನಖರಕ್ತರುಚೀಃ, ಪರಭಾಗತಃ, ಸ್ಫಟಿಕ-ಕುಟ್ಟಿಮಭೂಃ, ಪ್ರಕಟೀಕರೋತಿ, ನ, ಪುರಾ, ಪ್ರಕಟಾಃ ।

ಅನ್ವಯ— ಸ್ಫಟಿಕಕುಟ್ಟಿಮಭೂಃ, ಸಮತೀತವಿದ್ರುಮಭುವಾಂ ಸುದೃಶಾಂ, ಪುರಾ ನ ಪ್ರಕಟಾಃ ಪದಪಲ್ಲವಾಗ್ರ್ಯ-ನಖರಕ್ತರುಚೀಃ, ಪರಭಾಗತಃ ಪ್ರಕಟೀಕರೋತಿ ।

ಅನ್ವಯಾರ್ಥ—

**ಸ್ಫಟಿಕಕುಟ್ಟಿಮಭೂಃ** = ಸ್ಫಟಿಕ ಮಣಿಯಿಂದ ರಚಿತವಾದ ನೆಲವು

**ಸಮಿತೀತ ವಿದ್ರುಮಭುವಾಂ** = ದಾಟಿದ, ಹವಳದ ನೆಲವುಳ್ಳ

**ಸುದೃಶಾಂ** = ಸುಂದರವಾದ ಕಣ್ಣುಗಳುಳ್ಳ ಸ್ತ್ರೀಯರು

**ಪುರಾ** = ಮೊದಲು

**ನ ಪ್ರಕಟಾಃ** = ಸ್ಪಷ್ಟವಾಗದಿರುವ

**ಪದಪಲ್ಲವಾಗ್ರ್ಯನಖರಕ್ತರುಚೀಃ** = ಚಿಗುರಿನಂತಿರುವ ಪಾದಗಳ ಶ್ರೇಷ್ಠವಾದ ಉಗುರುಗಳ ಕೆಂಪು ಕಾಂತಿಗಳನ್ನು,

**ಪರಭಾಗತಃ** = ಬೇರೆ ಬಣ್ಣದ ಸಂಬಂಧದಿಂದ

**ಪ್ರಕಟೀಕರೋತಿ** = ಸ್ಪಷ್ಟಪಡಿಸುತ್ತದೆ.

ತಾತ್ಪರ್ಯ— ಆ ವೈಕುಂಠಲೋಕದಲ್ಲಿ ಸ್ಫಟಿಕಮಣಿಯಿಂದ ಮಾಡಿದ ನೆಲವೂ ಹವಳದಿಂದ ರಚಿತವಾದ ಭೂಮಿಯೂ ಇವೆ. ಅಲ್ಲಿರುವ ಸುಂದರಿಯರು ಮೊದಲು ಕೆಂಪಾಗಿರುವ ಹವಳದ ಭೂಮಿಯ ಮೇಲೆ ಸಂಚರಿಸುತ್ತ ಬಂದರು. ಆಗ ಉಗುರುಗಳು ಮತ್ತು ಹವಳದ ನೆಲದ ಕಾಂತಿಗಳು ಸಮಾನವಾದುದರಿಂದ ಚಿಗುರಿನಂತೆ ಕೆಂಪಾಗಿರುವ ಉತ್ತಮವಾದ ಅವರ ಪಾದಗಳ ಉಗುರುಗಳ ಕಾಂತಿಯು ಸ್ಪಷ್ಟವಾಗಿ ಬೇರೆಯಾಗಿ ಕಾಣಿಸಲಿಲ್ಲ. ತರುವಾಯ ಅವರು ಬಿಳಿಯ ಬಣ್ಣದ ಸ್ಫಟಿಕದ ಭೂಮಿಯ ಮೇಲೆ ನಡೆಯುತ್ತಾ ಬಂದರು. ಆಗ ಕಾಲಿನ ಉಗುರುಗಳ ಕೆಂಪು ಬಣ್ಣ, ಸ್ಫಟಿಕದ ಶುಭ್ರ ವರ್ಣಗಳೆರಡೂ ಬೇರೆಯಾದುದರಿಂದ ಉಗುರುಗಳ ಕೆಂಪಾದ ಕಾಂತಿಯು ಸ್ಫುಟವಾಗಿ ಕಾಣಿಸಿತು.

ವಿಗ್ರಹ—

**ಸಮತೀತವಿದ್ರುಮಭುವಾಂ**— ವಿದ್ರುಮಾಣಾಂ ಭುವಃ ವಿದ್ರುಮಭುವಃ, ಸಮತೀತಾಃ ವಿದ್ರುಮಭುವಃ ಯಾಭಿಃ ತಾಃ ಸಮತೀತವಿದ್ರುಮಭುವಃ, ತಾಸಾಂ ಸಮತೀತವಿದ್ರುಮಭುವಾಂ ।

**ಸದೃಶಾಂ**— ಶೋಭನೇ ದೃಶೌ ಯಾಸಾಂ ತಾಃ ಸುದೃಶಃ, ತಾಸಾಂ (ಶೋಭನಾ ದೃಕ್ ದರ್ಶನಂ ಯಾಸಾಂ ತಾಃ ಸುದೃಶಃ, ತಾಸಾಂ ಸುದೃಶಾಂ) ।

**ಪದಪಲ್ಲವಾಗ್ರ್ಯನಖರಕ್ತರುಚೀಃ**— ಅಗ್ರಾ್ಯಶ್ಚ ತೇ ನಖಾಶ್ಚ ಅಗ್ರ್ಯನಖಾಃ, ಪದಪಲ್ಲವಾನಾಂ ಅಗ್ರ್ಯನಖಾಃ ಪದಪಲ್ಲವಾಗ್ರ್ಯನಖಾಃ, ರಕ್ತಾಶ್ಚ ತಾಃ ರುಚಯಶ್ಚ ರಕ್ತರುಚಯಃ, ಪದಪಲ್ಲವಾಗ್ರ್ಯನಖಾನಾಂ ರಕ್ತ-ರುಚಯಃ ಪದಪಲ್ಲವಾಗ್ರ್ಯನಖರಕ್ತರುಚಯಃ, ತಾಃ ಪದಪಲ್ಲವಾಗ್ರ್ಯನಖರಕ್ತರುಚೀಃ ।

**ಪರಭಾಗತಃ**— ಪರಸ್ಯ ಭಾಗಃ ಪರಭಾಗಃ, ತಸ್ಮಾತ್ ಪರಭಾಗತಃ ।

**ಸ್ಫಟಿಕಕುಟ್ಟಿಮಭೂಃ**— ಸ್ಫಟಿಕೇನ ಕುಟ್ಟಿಮಾ ಸ್ಫಟಿಕಕುಟ್ಟಿಮಾ, ಸ್ಫಟಿಕಕುಟ್ಟಿಮಾ ಚ ಸಾ ಭೂಶ್ಚ ಸ್ಫಟಿಕಕುಟ್ಟಿಮ-ಭೂಃ ।

**ಪ್ರಕಟೀಕರೋತಿ**— ಅಪ್ರಕಟಾಃ ಪ್ರಕಟಾಃ ಸಂಪದ್ಯಮಾನಾಃ ಕರೋತಿ ಪ್ರಕಟೀಕರೋತಿ ।

**ಕ್ರಿಯಾಪದ**— ಪ್ರಕಟೀಕರೋತಿ- ಡುಕೃಞ್ಕರಣೇ ಅನಿಟ್ ಉಭಯಪದೀ ಪ್ರಕೃತೇ ಪರಸ್ಮೈಪದಿ ಲಟ್ ಪ್ರಥಮಪುರುಷೇ ಏಕವಚನೇ 'ಪ್ರಕಟೀಕರೋತಿ' ಇತಿ ರೂಪಂ ।

1. ಕರೋತಿ ಕುರುತಃ ಕುರ್ವಂತಿ, ಕರೋಷಿ ಕುರುಥಃ ಕುರುಥ, ಕರೋಮಿ ಕುರ್ವಃ ಕುರ್ಮಃ, 2. ಚಕಾರ ಚಕ್ರತುಃ ಚಕ್ರುಃ ಚಕರ್ಥ ಚಕ್ರಥುಃ ಚಕ್ರ, ಚಕಾರ ಚಕರ ಚಕೃವ ಚಕೃಮ, 3. ಕರ್ತಾ, 4. ಕರಿಷ್ಯತಿ, 5. ಕರೋತು ಕುರುತಾತ್ ಕುರುತಾಂ ಕುರ್ವಂತು, ಕುರು-ಕುರುತಾತ್ ಕುರುತಂ ಕುರುತ, ಕರವಾಣಿ ಕರವಾವ ಕರವಾಮ, 6. ಅಕರೋತ್ ಅಕುರುತಾಂ ಅಕುರ್ವನ್, ಅಕರೋಃ ಅಕುರುತಂ ಅಕುರುತ, ಅಕರವಂ ಅಕುರ್ವ ಅಕುರ್ಮ, 7. ಕುರ್ಯಾತ್ ಕುರ್ಯಾತಾಂ ಕುರ್ಯುಃ ಕುರ್ಯಾಃ ಕುರ್ಯಾತಂ ಕುರ್ಯಾತ, ಕುರ್ಯಾಂ ಕುರ್ಯಾವ ಕುರ್ಯಾಮ, 8. ಕ್ರಿಯಾತ್ ಕ್ರಿಯಾಸ್ತಾಂ ಕ್ರಿಯಾಸುಃ, ಕ್ರಿಯಾಃ ಕ್ರಿಯಾಸ್ತಂ ಕ್ರಿಯಾಸ್ತ, ಕ್ರಿಯಾಸಂ ಕ್ರಿಯಾಸ್ವ ಕ್ರಿಯಾಸ್ಮ, 9. ಅಕಾರ್ಷೀತ್ ಅಕಾರ್ಷ್ಟಾಂ ಅಕಾರ್ಷುಃ ಅಕಾರ್ಷೀಃ ಅಕಾರ್ಷ್ಟಂ ಅಕಾರ್ಷ್ಟ, ಅಕಾರ್ಷಂ ಅಕಾರ್ಷ್ವ ಅಕಾರ್ಷ್ಮ, 10. ಅಕರಿಷ್ಯತ್, ಕರ್ಮಣಿ 1. ಕ್ರಿಯತೇ, 2. ಚಕ್ರೇ, 3. ಕರ್ತಾ, ಸೇ. ಹೇ. 4. ಕರಿಷ್ಯತೇ, 5. ಕ್ರಿಯತಾಂ, 6. ಅಕ್ರಿಯತ, 7. ಕ್ರಿಯೇತ 8. ಕಾರಿಷೀಷ್ಟ ಕೃಷೀಷ್ಟ, 9. ಅಕಾರಿ ಅಕಾರಿಷಾತಾಂ, ಅಕೃಷಾತಾಂ ಅಕರಿಷ್ಯತ.

**ಪ್ರಯೋಗ**— ಸ್ಫಟಿಕಕುಟ್ಟಿಮಭೂಃ ಪದಪಲ್ಲವಾಗ್ರ್ಯನಖರಕ್ತರುಚೀಃ ಪ್ರಕಟೀಕರೋತಿ (ಕರ್ತರಿ) ।
ಸ್ಫಟಿಕಕುಟ್ಟಿಮಭುವಾ ಪದಪಲ್ಲವಾಗ್ರ್ಯನಖರಕ್ತರುಚಯಃ ಪ್ರಕಟೀಕ್ರಿಯಂತೇ (ಕರ್ಮಣಿ) ।

**ಕೋಶ**— 'ಕುಟ್ಟಿಮೋಽಸ್ತ್ರೀ ನಿಬದ್ಧಾಃ ಭೂಃ, ಮುಕ್ತಾಥವಿದ್ರುಮಃ ಪುಂಸಿ ಪ್ರವಾಲಂ ಪುಂನಪುಂಸಕಂ, ಪಲ್ಲವೋಽಸ್ತ್ರೀ ಕಿಸಲಯಂ' ಇತ್ಯಮರಃ ।

**ವಿಶೇಷಾಂಶ**— 'ಪರಭಾಗೋ ಗುಣಾಂತರಸಂಬಂಧಾತ್ ಗುಣೋತ್ಕರ್ಷಃ । ಯಥಾ ಶ್ವೇತನಿಚಯೇ ಕೌಸುಂಭ-ತಂತು ಸಂತತ್ಯಾ' ಎಂದು ಭಾವಪ್ರಕಾಶಿಕಾ । ಪರಭಾಗವೆಂದರೆ ಬೇರೊಂದು ಗುಣದ ಸಂಬಂಧದಿಂದ ಮೊದಲು ಇದ್ದ ವಸ್ತುವಿನ ಗುಣೋತ್ಕರ್ಷ. ಬಿಳಿಯ ಸೀರೆಗೆ ಕುಸುಬೆಬಣ್ಣದ (ಕೆಂಪು ಮಿಶ್ರ ಸ್ವಲ್ಪ ಬಿಳಿ) ದಾರಗಳನ್ನು ಸೇರಿಸಿದರೆ ಉಂಟಾಗುವ ಶೋಭೆ ಪ್ರಕೃತ ಧವಲವರ್ಣದ ಸ್ಫಟಿಕಭೂಮಿಯಲ್ಲಿ ಕೆಂಪಾದ ಉಗುರುಗಳ ಕಾಂತಿಯ ಬಿಳಿಯ ರೇಶ್ಮೆಯ ಸೀರೆಗೆ ಕುಸುಬೆ ಬಣ್ಣದ ದಾರಗಳನ್ನು ನೇಯ್ದರೆ ಉಂಟಾಗುವ ಕಾಂತಿಯಂತಿತ್ತು ಎಂದು ಅಭಿಪ್ರಾಯ. ಇಲ್ಲಿ ಛಲಾರೀಯ ವ್ಯಾಖ್ಯಾನಕಾರರು ಸಂಸ್ಕೃತದಲ್ಲಿ ಈ ಶ್ಲೋಕದ ಭಾವವನ್ನು ಹೀಗೆ ತಿಳಿಸುತ್ತಾರೆ.

ಅಯಂ ಭಾವಃ— (1) ವೈಕುಂಠೇವಿದ್ರುಮಭೂಮಯಃ ಸಂತಿ, (2) ತತ್ರ ನಾರೀಣಾಂ ವಿದ್ರುಮಭೂಮಿಷು ಸಂಚಾರಕಾಲೇ, ಪದನಖಾನಾಂ ವಿದ್ರುಮಾಣಾಂ ಚ ರಕ್ತತ್ವೇನ ಸಮಕಾಂತಿತ್ವಾತ್ ನಖಕಾಂತಿಃ ವಿವಿಚ್ಯ ನ ಜ್ಞಾತಾ, (3) ವಿದ್ರುಮ ಭೂಮಿಂ ಪರಿತ್ಯಜ್ಯ ಸ್ಫಟಿಕಭೂಮಿಷು ಸಂಚಾರಕಾಲೇ ಪುನಃ, ನಖಕಾಂತಿಃ ಅತಿಸ್ಪಷ್ಟಾಽಭೂತ್ ಇತಿ ।

(1) ವೈಕುಂಠದಲ್ಲಿ ಹವಳದ ಭೂಮಿಗಳಿವೆ, (2) ಅಲ್ಲಿ ಹವಳದ ಭೂಮಿಗಳಲ್ಲಿ ಹೆಂಗಸರ ಸಂಚಾರಕಾಲದಲ್ಲಿ, ಪಾದದ ಉಗುರುಗಳ ಮತ್ತು ಹವಳಗಳ ಸಮಾನವಾದ ಕೆಂಪು ಬಣ್ಣದಿಂದಾಗಿ, ಎರಡಕ್ಕೂ ಸಮಾನವಾದ ಕಾಂತಿಯು ಉಂಟಾಗಿ ಉಗುರಿನ ಕಾಂತಿಯು ಪ್ರತ್ಯೇಕವಾಗಿ ತಿಳಿಯಲ್ಪಟ್ಟಿಲ್ಲ. (3) ಉಗುರುಗಳ ಕಾಂತಿಯು ಅತ್ಯಂತ ಸ್ಪಷ್ಟವಾಯಿತು ಎಂದು.

★ ★ ★

**ಹರಿಣೇದೃಶಾಂ ಸುವಸನಾನಿ ಬೃಹ-**
**ಸ್ತುನಿತಂಬಬಿಂಬರುಚಿರೋರುರುಚಾ ।**
**ಶಬಲದ್ಯುತೀನಿ ಮದನಸ್ಯ ಜಗ-**
**ಜ್ಜಯವೈಜಯಂತ್ಯ ಇತಿ ನಿಶ್ಚಿನುಮಃ ॥ 31 ॥**

**ಪದಚ್ಛೇದ—** ಹರಿಣೇದೃಶಾಂ, ಸುವಸನಾನಿ, ಬೃಹತ್ಸುನಿತಂಬಬಿಂಬರುಚಿರೋರುರುಚಾ, ಶಬಲದ್ಯುತೀನಿ, ಮದನಸ್ಯ, ಜಗಜ್ಜಯವೈಜಯಂತ್ಯಃ, ಇತಿ ನಿಶ್ಚಿನುಮಃ ।

**ಅನ್ವಯ—** ಬೃಹತ್ಸುನಿತಂಬಬಿಂಬರುಚಿರೋರುರುಚಾ ಶಬಲದ್ಯುತೀನಿ, ಹರಿಣೇದೃಶಾಂ ಸುವಸನಾನಿ, ಮದನಸ್ಯ ಜಗಜ್ಜಯವೈಜಯಂತ್ಯಃ ಇತಿ ನಿಶ್ಚಿನುಮಃ ।

**ಅನ್ವಯಾರ್ಥ—**

**ಬೃಹತ್ಸುನಿತಂಬಬಿಂಬರುಚಿರೋರುರುಚಾ** = ದೊಡ್ಡದಾದ ಒಳ್ಳೆಯ ಸೊಂಟದ ಕೆಳಭಾಗದ ಪ್ರದೇಶದಿಂದ ಮನೋಹರವಾದ ಹೆಚ್ಚಾದ ಕಾಂತಿಯಿಂದ

**ಶಬಲದ್ಯುತೀನಿ** = ಮಿಶ್ರವಾದ ಕಾಂತಿಗಳುಳ್ಳ

**ಹರಿಣೇದೃಶಾಂ** = ಜಿಂಕೆಯಂತೆ ಕಣ್ಣುಗಳುಳ್ಳ ಸುಂದರ ಯುವತಿಯರ

**ಸುವಸನಾನಿ** = ಒಳ್ಳೆಯ ಸೀರೆ, ಇತ್ಯಾದಿ ಬಟ್ಟೆಗಳನ್ನು

**ಮದನಸ್ಯ** = ಮನ್ಮಥನ

**ಜಗಜ್ಜಯವೈಜಯಂತ್ಯಃ ಇತಿ ನಿಶ್ಚಿನುಮಃ** = ಪ್ರಪಂಚದ ಕಾಮಿಪುರುಷರ ಸ್ತ್ರೀಯರ ಮೂಲಕವಾದ ಜಯಸೂಚಕವಾದ ಬಾವುಟಗಳೆಂದು, ನಿಶ್ಚಯಿಸುತ್ತೇವೆ.

**ತಾತ್ಪರ್ಯ—** ವೈಕುಂಠಲೋಕದಲ್ಲಿರುವ ಮುಕ್ತರಾದ ಸುಂದರಯುವತಿಯರು ಅಪ್ರಾಕೃತವಾದ ಸುಂದರ-ವಸ್ತ್ರಗಳನ್ನು ಉಟ್ಟಿರುವರು. ಅವರ ಆ ಸೀರೆಗಳು ಅವರ ಸುಂದರವಾದ ಕಟಿಯ (ಸೊಂಟದ) ಕೆಳಭಾಗದ ಅಧಿಕವಾದ ಕಾಂತಿಯಿಂದ ಮಿಶ್ರಿತವಾಗಿ ಶೋಭಿಸುತ್ತಿದೆ. ಕಾಮನು ಕಾಮಿಗಳನ್ನು ಜಯಿಸಿದ್ದರ ಸೂಚಕವಾದ ಪತಾಕೆಗಳೆಂದು ಆ ವಸ್ತ್ರಗಳನ್ನು ನಾವು (ಕವಿಗಳು) ನಿಶ್ಚಯಿಸುತ್ತೇವೆ. ಸುಂದರಿಯರ ನಿತಂಬದ ಬಟ್ಟೆಗಳನ್ನು ನೋಡಿದ ಕೂಡಲೇ ಕಾಮಿಗಳು ತಮ್ಮ ತಮ್ಮ ಕಾಮಿನಿಯರ ವಶವಾಗುವರು ಎಂದು ಅಭಿಪ್ರಾಯ.

**ವಿಗ್ರಹ—**

**ಹರಿಣೇದೃಶಾಂ—** ಹರಿಣೀನಾಂ ದೃಶಃ ಇವ ದೃಶಃ ಯಾಸಾಂ ತಾಃ ಹರಿಣೇದೃಶಃ, ತಾಸಾಂ ಹರಿಣೇದೃಶಾಂ ।

**ಸುವಸನಾನಿ—** ಶೋಭನಾನಿ ಚ ತಾನಿ ವಸನಾನಿ ಚ ಸುವಸನಾನಿ, ತಾನಿ ಸುವಸನಾನಿ ।

**ಬೃಹತ್ಸುನಿತಂಬಬಿಂಬರುಚಿರೋರುರುಚಾ—** ನಿತಂಬಯೋಃ ಬಿಂಬಂ ನಿತಂಬಬಿಂಬಂ, ಶೋಭನಂ ಚ ತತ್ ನಿತಂಬಬಿಂಬಂ ಚ ಸುನಿತಂಬಬಿಂಬಂ, ಬೃಹಚ್ಚ ತತ್ ಸುನಿತಂಬಬಿಂಬಂ ಚ ಬೃಹತ್ಸುನಿತಂಬ- ಬಿಂಬಂ, ಉರುಶ್ಚ ಸಾ ರುಕ್ ಚ ಉರುರುಕ್, ರುಚಿರಾ ಚ ಸಾ ಉರುರುಕ್ ಚ ರುಚಿರೋರುರುಕ್, ಬೃಹತ್ಸುನಿತಂಬಬಿಂಬಸ್ಯ ರುಚಿರೋರುರುಕ್ ಬೃಹತ್ಸುನಿತಂಬಬಿಂಬರುಚಿರೋರುರುಕ್, ತಯಾ ಬೃಹತ್ಸುನಿತಂಬಬಿಂಬರುಚಿರೋರುರುಚಾ ।

**ಶಬಲದ್ಯುತೀನಿ—** ಶಬಲಾ ದ್ಯುತಿಃ ಯೇಷಾಂ ತಾನಿ ಶಬಲದ್ಯುತೀನಿ ।

**ಜಗಜ್ಜಯವೈಜಯಂತ್ಯಃ—** ಜಗತಃ ಜಯಃ ಜಗಜ್ಜಯಃ, ಜಗಜ್ಜಯಸ್ಯ ವೈಜಯಂತ್ಯಃ ಜಗಜ್ಜಯ ವೈಜಯಂತ್ಯಃ ।

**ಕ್ರಿಯಾಪದ—** ನಿಶ್ಚಿನುಮಃ- ಚಿಞ್‌ಚಯನೇ, ಇತಿ ಚಯನಾರ್ಥಕಾತ್ ಚಿಞ್‌ಧಾತೋಃ ಉಭಯಪದಿನ ಪ್ರಕೃತೇ ಪರಸ್ಮೈಪದಿನಃ ಅನಿಟಃ ನಿಸ್ ಉಪಸರ್ಗಪೂರ್ವಕಾತ್ ವರ್ತಮಾನೇಲಟ್ ಉತ್ತಮಪುರುಷ ಬಹುವಚನೇ ನಿಶ್ಚಿನುಮಃ ಇತಿರೂಪಂ । 1. ಚಿನೋತಿ ಚಿನುತಃ ಚಿನ್ವಂತಿ, ಚಿನೋಷಿ ಚಿನುಥಃ ಚಿನುಥ, ಚಿನೋಮಿ ಚಿನುವಃ ಚಿನ್ವಃ, ಚಿನುಮಃ ಚಿನ್ಮಃ, 2. ಚಿಕಾಯ ಚಿಕ್ಯತುಃ ಚಿಕ್ಯುಃ ಚಿಕಯಿಥ ಚಿಕೇಥ ಚಿಕ್ಯಥುಃ ಚಿಕ್ಯ, ಚಿಕಾಯ ಚಿಕಯ, ಚಿಕ್ಯಿವ ಚಿಕ್ಯಿಮ ಅಥವಾ ಚಿಚಾಯ ಚಿಚ್ಯತುಃ ಚಿಚ್ಯುಃ, ಚಿಚಯಿಥ ಚಿಚೇಥ, ಚಿಚ್ಯಥು, ಚಿಚ್ಯ, ಚಿಚಾಯ ಚಿಚಯ ಚಿಚಯ ಚಿಚ್ಯಿವ ಚಿಚ್ಯಿಮ, 3. ಚೇತಾ, 4. ಚೇಷ್ಯತಿ, 5. ಚಿನೋತು ಚಿನುತಾತ್ ಚಿನುತಾಂ ಚಿನ್ವಂತು, ಚಿನು ಚಿನುತಾತ್ ಚಿನುತಂ ಚಿನುತ, ಚಿನವಾನಿ ಚಿನವಾವ, ಚಿನವಾಮ, 6. ಅಚಿನೋತ್ ಅಚಿನುತಾಂ ಅಚಿನ್ವನ್, ಅಚಿನೋಃ ಅಚಿನುತಂ ಅಚಿನುತ, ಅಚಿನವಂ ಅಚಿನುವ ಅಚಿನ್ವ, ಅಚಿನುಮ ಅಚಿನ್ಮ, 7. ಚಿನುಯಾತ್ ಚಿನುಯಾತಾಂ ಚಿನುಯುಃ, ಚಿನುಯಾಃ ಚಿನುಯಾತಂ ಚಿನುಯಾತ, ಚಿನುಯಾಂ ಚಿನುಯಾವ ಚಿನುಯಾಮ, 8. ಚೀಯಾತ್ ಚೀಯಾಸ್ತಾಂ ಚೀಯಾಸುಃ ಚೀಯಾಃ ಚೀಯಾಸ್ತಂ ಚೀಯಾಸ್ತ, ಚೀಯಾಸಂ ಚೀಯಾಸ್ವ ಚೀಯಾಸ್ಮ, 9. ಅಚೈಷೀತ್ ಅಚೈಷ್ಟಾಂ ಅಚೈಷುಃ ಅಚೈಷೀಃ ಅಚೈಷ್ಟಂ ಅಚೈಷಂ ಅಚೈಷ್ವ ಅಚೈಷ್ಮ, 10. ಅಚೇಷ್ಯತ್ ಅಚೇಷ್ಯತಾಂ ಅಚೇಷ್ಯನ್

**ಪ್ರಯೋಗ—** (ವಯಂ) ಹರಿಣೀದೃಶಾಂ ಸುವಸನಾನಿ ಮದನಸ್ಯ ಜಗಜ್ಜಯವೈಜಯಂತ್ಯಃ ಇತಿ ನಿಶ್ಚಿನುಮಃ (ಕರ್ತರಿ) । (ಅಸ್ಮಾಭಿಃ) ಹರಿಣೀದೃಶಾಂ ಸುವಸನಾನಿ ಮದನಸ್ಯ ಜಗಜ್ಜಯವೈಜಯಂತ್ಯಃ ಇತಿ ನಿಶ್ಚೀಯಂತೇ (ಕರ್ಮಣಿ)।

★ ★ ★

**ಅವತಾರಿಕಾ—** ಮೂವತ್ತೆರಡನೇ ಶ್ಲೋಕದಿಂದ ಮೂವತ್ತೈದನೇ ಶ್ಲೋಕದವರೆಗೆ ಕಲಾಪಕಕಾವ್ಯದಿಂದ ಸುಂದರಿಯರನ್ನು ವರ್ಣಿಸುತ್ತಾರೆ.

**ಕರಪಲ್ಲವೈಸ್ತರಲಿತೈರ್ಲಲಿತೈರಸಕೃತ್‌ಕ್ವಣತ್‌ಕನಕಕಂಕಣಕೈಃ ।**
**ನವರೋಮರಾಜಿವಲಿವಲ್ಗುಮೃದುಪ್ರತನೂದರೈರತಿಮನಾಕ್ತರಲೈಃ ॥ 32 ॥**

**ಪದಚ್ಛೇದ—** ಕರಪಲ್ಲವೈಃ, ತರಲಿತೈಃ, ಲಲಿತೈಃ, ಅಸಕೃತ್‌ಕ್ವಣತ್‌ಕನಕಕಂಕಣಕೈಃ, ನವರೋಮರಾಜಿವಲಿವಲ್ಗು-ಮೃದುಪ್ರತನೂದರೈಃ, ಅತಿಮನಾಕ್ತರಲೈಃ ।

**ಅನ್ವಯ—** ತರಲಿತೈಃ, ಲಲಿತೈಃ, ಅಸಕೃತ್ಕ್ವಣತ್ಕನಕಕಂಕಣಕೈಃ, ಕರಪಲ್ಲವೈಃ ಅತಿಮನಾಕ್ತರಲೈಃ ನವರೋಮರಾಜಿ-ವಲಿವಲ್ಗುಮೃದುಪ್ರತನೂದರೈಃ (ಉಪಲಕ್ಷಿತಾಸು ನಾರೀಷು ಪ್ರಗತಾಸು ತರುಣಾಃ ನಿವೃತ್ತಮುಖಾಃ ಪುರಾಭವಂತಿ) ।

**ಅನ್ವಯಾರ್ಥ—**

**ತರಲಿತೈಃ** = ಇತ್ತ ಅತ್ತ ಚಲಿಸುತ್ತಿರುವ,

**ಲಲಿತೈಃ** = ಮೃದುವಾದ,

**ಅಸಕೃತ್ಕ್ವಣತ್ಕನಕಕಂಕಣಕೈಃ** = ಆಗಾಗ್ಗೆ ಶಬ್ದ ಮಾಡುತ್ತಿರುವ ಚಿನ್ನದ ಬಳೆಗಳುಳ್ಳ,

**ಕರಪಲ್ಲವೈಃ (ಉಪಲಕ್ಷಿತಾಸು)** = ಚಿಗುರಿನಂತಿರುವ ಕೈಗಳುಳ್ಳ

**ಅತಿಮನಾಕ್ತರಲೈಃ** = ಬಹಳ ಸ್ವಲ್ಪ ಅಲುಗಾಡುತ್ತಿರುವ

**ನವರೋಮರಾಜ, ವಲಿವಲ್ಗುಮೃದುಪ್ರತನೂದರೈಃ** = ಹೊಸದಾದ ಕೂದಲುಗಳ ಸಾಲುಗಳು, ತ್ರಿವಳಿ ಇವುಗಳಿಂದ ಮನೋಹರವಾದ ಕೋಮಲವಾದ ಬಹಳ ಸಣ್ಣದಾದ ಹೊಟ್ಟೆಗಳಿಂದ (ಉಪಲಕ್ಷಿತಾಸು = ಕೂಡಿರುವ)

**ನಾರೀಷು** = ವೈಕುಂಠ ಲೋಕದ ರಮಣಿಯರು

**ಪ್ರಗತಾಸು** = ಹೋಗುತ್ತಿರಲು

**ತರುಣಾಃ** = ಯುವಕರು

**ನಿವೃತ್ತಮುಖಾಃ** = ತಿರುಗಿದ ಮುಖವುಳ್ಳವರು

**(ಪುರಾ ಭವಂತಿ** = ಆದರು).

**ತಾತ್ಪರ್ಯ—** ವೈಕುಂಠಲೋಕದಲ್ಲಿ ಮುಕ್ತರಾದ ಸುಂದರಾಂಗನೆಯರು ಹಾವಭಾವ ವಿಲಾಸಗಳಿಂದ ಕೈಗಳನ್ನು ಅಲ್ಲಾಡಿಸುತ್ತಾರೆ. ಆ ಕೈಗಳು ಅತ್ಯಂತ ಕೋಮಲವಾಗಿಯೂ ಬಹಳ ಸುಂದರವಾಗಿರುತ್ತವೆ. ಅವುಗಳನ್ನು ಇತ್ತ ಅತ್ತ ವಿಲಾಸ-ದಿಂದ ತಿರುಗಿಸುತ್ತಿರುವಾಗ, ಅವರು ಧರಿಸಿರುವ ದಿವ್ಯವಾದ ಬಂಗಾರದ ಬಳೆಗಳು ನಾನಾರೀತಿಯಿಂದ ಅನೇಕ ಬಾರಿ ಕಿಣಕಿಣಕಣಕಣ ಎಂದು ಸದ್ದು ಮಾಡುತ್ತವೆ. ಈ ನಾರಿಯರಿಗೆ ಅತ್ಯಂತ ಮೃದುವಾದ ಸಣ್ಣದಾದ ಹೊಟ್ಟೆಗಳಿವೆ. ಅವುಗಳಲ್ಲಿ ಹೊಸದಾದ ರೋಮಗಳ ಸಾಲುಗಳೂ, ಆ ಸಾಲುಗಳಲ್ಲಿ ಮೂರುವಳಿಗಳು (ತ್ರಿವಳಿ = ಮೂರು ನೆರಿಗೆಗಳು) ಇವೆ. ಇವುಗಳಿಂದ ಅತಿ ಮನೋಹರೆಯರಾದ ಹೆಂಗಸರು ಹಿಂಭಾಗದಲ್ಲಿ ಮೇಲ್ಗಡೆಯಿಂದ ನಡೆದುಕೊಂಡು ಬರುತ್ತಿರುವಾಗ ಮುಕ್ತರಾದ ದಿವ್ಯಚೇತನ ಪುರುಷರು ಹಿಂತಿರುಗಿ ನೋಡುತ್ತಾರೆ.

**ವಿಶೇಷಾಂಶ—** ದ್ವಾಭ್ಯಾಂ ಯುಗ್ಮಮಿತಿ ಪ್ರೋಕ್ತಂ ತ್ರಿಭಿಃ ಶ್ಲೋಕೈರ್ವಿಶೇಷಕಮ್ । ಕಾಲಾಪಕಂ ಚತುರ್ಭಿಃ ಸ್ಯಾತ್ ತದೂರ್ಧ್ವಂ ಕುಲಕಂ ಮತಮ್ ॥ ಎಂಬಂತೆ ಒಂದೇ ಕರ್ತೃಕ್ರಿಯಾಪದಗಳ ಸಂಬಂಧವುಳ್ಳ (ಏಕಾನ್ವಯವುಳ್ಳ) ನಾಲ್ಕು ಶ್ಲೋಕಗಳ ಸಮುದಾಯ ಅವು 32,33,34,35 ಶ್ಲೋಕಗಳಲ್ಲಿರುವ ಪ್ರಯುಕ್ತ ಇದಕ್ಕೆ ಕಲಾಪಕವೆಂದು ಹೆಸರು. ಅದಕ್ಕೂ ಹೆಚ್ಚಾದರೆ ಕುಲಕವೆಂದು ಹೆಸರು.

**ವಿಗ್ರಹ—**

**ಕರಪಲ್ಲವೈಃ—** ಕರಾಃ ಪಲ್ಲವಾಃ ಇವ ಕರಪಲ್ಲವಾಃ, ತೈಃ ಕರಪಲ್ಲವೈಃ ।

**ಅಸಕೃತ್ಕ್ವಣತ್ಕನಕಕಂಕಣಕೈಃ—** ಕನಕಸ್ಯ ಕಂಕಣಾನಿ ಕನಕಕಂಕಣಾನಿ, ಅಸಕೃತ್ ಕ್ವಣಂತಿ ಕನಕಕಂಕಣಾನಿ ಯೇಷಾಂ ತೇ ಅಸಕೃತ್ಕ್ವಣತ್ಕನಕಕಂಕಣಕಾಃ, ತೈಃ ಅಸಕೃತ್ಕ್ವಣತ್ಕನಕಕಂಕಣಕೈಃ ।

**ನವರೋಮರಾಜಿವಲಿವಲ್ಗುಮೃದುಪ್ರತನೂದರೈಃ—** ರೋಮ್ಣಾಂ ರಾಜಯಃ ರೋಮರಾಜಯಃ, ನವಾಶ್ಚ ತಾಃ ರೋಮರಾಜಯಶ್ಚ ನವರೋಮರಾಜಯಃ, ನವರೋಮರಾಜಯಶ್ಚ ವಲಯಶ್ಚ ನವರೋಮ-ರಾಜವಲಯಃ, ನವರೋಮರಾಜವಲಿಭಿಃ ವಲ್ಗೂನಿ ನವರೋಮರಾಜಿವಲಿವಲ್ಗೂನಿ, ಮೃದೂನಿ ಚ

ತಾನಿ ಪ್ರತನೂನಿ ಚ ಮೃದುಪ್ರತನೂನಿ, ಮೃದುಪ್ರತನೂನಿ ಚ ತಾನಿ ಉದರಾಣಿ ಚ ಮೃದುಪ್ರತ-ನೂದರಾಣಿ, ನವರೋಮರಾಜಿವಲಿವಲ್ಗೂನಿ ಚ ತಾನಿ ಮೃದುಪ್ರತನೂದರಾಣಿ, ಚ ನವರೋಮ-ರಾಜಿವಲಿವಲ್ಗುಮೃದುಪ್ರತನೂದರಾಣಿ, ತೈಃ ನವರೋಮರಾಜಿವಲಿವಲ್ಗುಮೃದುಪ್ರತನೂದರೈಃ । (ಉಪಲಕ್ಷಿತಾಸು) ಇಲ್ಲಿ 'ಇತ್ಥಂ ಭೂತಲಕ್ಷಣೇ' ಎಂಬ ಸೂತ್ರದಿಂದ ತೃತೀಯಾ ವಿಭಕ್ತಿಯು ಬಂದಿದೆ. 'ಜಟಾಭಿಃ ತಾಪಸಃ' ಎಂಬಂತೆ ಹೊಸದಾದ ರೋಮಗಳ ಸಾಲುಗಳಿಂದ ಮತ್ತು ತ್ರಿವಳಿಗಳಿಂದ ಸುಂದರವಾಗಿರುವಿಕೆ, ಮೃದುತ್ವ, ಸೂಕ್ಷ್ಮವಾಗಿ ತೆಳ್ಳಗಿರುವಿಕೆ (ಪ್ರತನುತ್ವ) ಇವು ಮೂರು ಹೊಟ್ಟೆಗಳಿಗೆ ವಿಶೇಷಣಗಳು. (ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ)

**ಕೋಶ—** ಕಂಕಣಂ ಕರಭೂಷಣಂ = ಬಳೆ, ಕಿಂಚಿದೀಷನ್ ಮನಾಗಲ್ಪೇ, ಅತಿಮನಾಕ್ = ಬಹಳ ಸ್ವಲ್ಪ ''ತನೂರುಹಂ ರೋಮಲೋಮ'' ।

★ ★ ★

**ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದುವಿಸರಚ್ಛವಿಭಿಃ ।**
**ವರಹಾರರಾಜಿಭಿರುತಾನುಪದಂ (ಪರಿ) ಪ್ರತಿಲೋಡಿತಾಭಿರಶನೈರುರಸಿ ॥ 33 ॥**

**ಪದಚ್ಛೇದ—** ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದುವಿಸರಚ್ಛವಿಭಿಃ, ವರಹಾರರಾಜಿಭಿಃ ಉತ, ಅನುಪದಂ, ಪ್ರತಿ (ಪರಿ)ಲೋಡಿತಾಭಿಃ, ಅಶನೈಃ, ಉರಸಿ ।

**ಅನ್ವಯ—** ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದುವಿಸರಚ್ಛವಿಭಿಃ, ಅನುಪದಂ ಉರಸಿ ಅಶನೈಃ ಪ್ರತಿ-(ಪರಿ)ಲೋಡಿತಾಭಿಃ ವರಹಾರರಾಜಿಭಿಃ, ಉತ (ಉಪಲಕ್ಷಿತಾಸು) ।

**ಅನ್ವಯಾರ್ಥ—**

**ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದುವಿಸರಚ್ಛವಿಭಿಃ** = ಕಲಶದಂತಿರುವ ಸ್ತನಗಳಲ್ಲಿ ಪೂರ್ತಿ-ಯಾಗಿ ತುಂಬಿದ ಶೋಭಾವಿಶೇಷವೆಂಬ ಉಳಿದ ಅಮೃತಜಲದ ಹನಿಗಳ ಸಮೂಹದ ಕಾಂತಿಯಂತೆ ಕಾಂತಿಗಳುಳ್ಳ

**ಅನುಪದಂ** = ಪ್ರತಿಹೆಜ್ಜೆಯಲ್ಲಿಯೂ

**ಉರಸಿ** = ಎದೆಯಲ್ಲಿ

**ಅಶನೈಃ** = ವೇಗವಾಗಿ

**ಪ್ರತಿಲೋಡಿತಾಭಿಃ** = ಚಲಿಸುತ್ತಿರುವ

**ವರಹಾರರಾಜಿಭಿಃ** = ಉತ್ತಮವಾದ ಸರಗಳ ಸಾಲುಗಳಿಂದಲೂ, (ಉಪಲಕ್ಷಿತಾಸು = ಕೂಡಿರುವ)

**(ತಾಸು ಪ್ರಗತಾಸು ತರುಣಾಃ ನಿವೃತ್ತಮುಖಾಃ ಪುರಾ ಭವಂತಿ** = ಆ ಸ್ತ್ರೀಯರು ಹಿಂದಿನಿಂದ ವೇಗವಾಗಿ ಬರುತ್ತಿರುವಾಗ ತರುಣರು ಹಿಂದಿರುಗುತ್ತಾರೆ).

**ತಾತ್ಪರ್ಯ—** ಆ ವೈಕುಂಠಲೋಕದಲ್ಲಿ ವಿಮಾನದಿಂದ ಇಳಿದು ತರುಣಿಯರು ಆದಷ್ಟು ವೇಗವಾಗಿ ಹಿಂದಿನಿಂದ ಬರುತ್ತಿರುವಾಗ ಅವರು ಧರಿಸಿರುವ ಹಾರಗಳು ಎದೆಯಲ್ಲಿ ಆ ಕಡ ಈ ಕಡೆ ವೇಗವಾಗಿ ಹೊರಳಾಡುತ್ತಾ, ಚಲಿಸುತ್ತವೆ. ಆ ಹಾರಗಳನ್ನು ನೋಡಿದರೆ ಆ ದಿವ್ಯಸುಂದರಿಯರ ಕುಂಭದಂತಿರುವ ಕುಚಗಳಲ್ಲಿ ಪೂರ್ತಿಯಾಗಿ ತುಂಬಿ ಸ್ಥಳವಿಲ್ಲದೆ ಹೊರಗೆ ಬಂದ ಅಮೃತಜಲದ ಹನಿಗಳ ಸಾಲುಗಳಂತೆ, ಆ ಹಾರಗಳು ಕಾಣಿಸುತ್ತವೆ. ಇಂತಹ ವಿಲಾಸಗಳಿಂದ ಕೂಡಿದ ತರುಣ-ಯರು ಹಿಂದಿನಿಂದ, ವೇಗದಿಂದ ಸಂಚರಿಸುತ್ತಾ ಬರುತ್ತಿರುವಾಗ ತರುಣರು ಹಿಂದಿರುಗಿ ಅವರನ್ನು ನೋಡುತ್ತಾರೆ.

ವಿಗ್ರಹ—

**ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದುವಿಸರಚ್ಛವಿಭಿಃ—** ಕುಚಾಃ ಕುಂಭಾಃ ಇವ ಕುಚಕುಂಭಾಃ (ಕುಚಾ ಏವ ಕುಂಭಾಃ ಕುಚಕುಂಭಾಃ), ಅತಿಶಯೇನ ಪೂರ್ಣಾಃ ಪೂರ್ಣತರಾಃ, ಕುಚಕುಂಭೇಷು ಪೂರ್ಣತರಾಃ ಕುಚಕುಂಭಪೂರ್ಣತರಾಃ, ಸುಧಾ ಇತಿ ರಸಾಃ ಸುಧಾರಸಾಃ, ಕಾಂತಯ ಏವ ಸುಧಾರಸಾಃ ಕಾಂತಿಸುಧಾರಸಾಃ, ಕುಚಕುಂಭಪೂರ್ಣತರಾಶ್ಚ ತೇ ಕಾಂತಿಸುಧಾರಸಾಶ್ಚ ಕುಚಕುಂಭಪೂರ್ಣತರಕಾಂತಿಸುಧಾರಸಾಃ, ಕುಚಕುಂಭಪೂರ್ಣತರಕಾಂತಿಸುಧಾರಸಾನಾಂ ಶೇಷಾಃ ಕುಚಕುಂಭಪೂರ್ಣತರಕಾಂತಿಸುಧಾರಸಶೇಷಾಃ, ಕುಚಕುಂಭಪೂರ್ಣತರಕಾಂತಿಸುಧಾರಸಶೇಷಾಣಾಂ ಬಿಂದವಃ ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದವಃ, ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದೂನಾಂ ವಿಸರಃ ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದುವಿಸರಃ, ತಸ್ಯ ಛವಿರಿವ ಛವಿಃ ಯಾಸಾಂ ತಾಃ ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದುವಿಸರಚ್ಛವಯಃ, ತಾಭಿಃ ಕುಚಕುಂಭಪೂರ್ಣತರಕಾಂತಿಸುಧಾರಸಶೇಷಬಿಂದುವಿಸರಚ್ಛವಿಭಿಃ ।

**ವರಹಾರರಾಜಿಭಿಃ—** ವರಾಶ್ಚ ತೇ ಹಾರಾಶ್ಚ ವರಹಾರಾಃ, ವರಹಾರಾಣಾಂ ರಾಜಯಃ ವರಹಾರರಾಜಯಃ, ತಾಭಿಃ ವರಹಾರರಾಜಿಭಿಃ ।

**ಅಶನ್ಯೈಃ—** ನ ಶನ್ಯೈಃ ಅಶನ್ಯೈಃ ।

**ಕೋಶ—** 'ಉರೋ ವತ್ಸಂ ಚ ವಕ್ಷಶ್ಚ, ಸ್ತೋಮೌಘನಿಕರ ವ್ರಾತಸಂದೋಹವಿಸರವ್ರಜಾಃ, ಪೀಯೂಷಮಮೃತಂ ಸುಧಾ, ತ್ವಿಡ್‌ಭಾಭಾಶ್ಛವಿದ್ಯುತಿದೀಪ್ತಯಃ', ಎಂದು ಅಮರ.

**ವಿಶೇಷಾಂಶ—** ಇಲ್ಲಿ ಛಲಾರೀಯ ವ್ಯಾಖ್ಯಾನದಲ್ಲಿ ಈ ರೀತಿ ತಾತ್ಪರ್ಯ ಬರೆದಿದ್ದಾರೆ. 'ಕುಚಾಖ್ಯ ಕುಂಭೇಷು ಕಾಂತ್ಯಾಖ್ಯಸುಧಾಮಯಜಲೇನ ಅತ್ಯಂತಂ ಪೂರಿತೇಷು ಸತ್ಸು, ಪುನಃ ಅವಶಿಷ್ಟಸ್ಯಾಪಿ ತತ್ರೈವ ನಿಕ್ಷಿಪ್ತಸ್ಯ ಅವಕಾಶಾಭಾವೇನ ಉದ್ರಿಚ್ಯ ಬಹಿರ್ನಿರ್ಗತಸ್ಯ ಕಾಂತಿಸುಧಾಜಲಸ್ಯ ಬಿಂದೂನಾಂ ಸಮೂಹವತ್ ಪ್ರಕಾಶಮಾನಾಭಿರಿತಿ ಭಾವಃ' (ತಾಸಾಂ ಹಾರಾಃ ಪ್ರಕಾಶಂತೇ, ಗಮನವೇಗವಶಾತ್ ತೇ ಹಾರಾಃ ಇತಸ್ತತಃ ವಕ್ಷಸಿ ಚಲಂತಿ, ಏತಾದೃಶಹಾರರಾಜಿಭಿಃ ಉಪಲಕ್ಷಿತಾಃ ಯುವತಯಃ ಯದಾ ವಿಮಾನಾದವತೀರ್ಯ ತರುಣಾನಾಂ ಪಶ್ಚಾದ್ಭಾಗೇ ಚಲಂತಿ, ತದಾ ತರುಣಾಃ ನಿವೃತ್ತಮುಖಾಃ ಭವಂತಿ ಪುರಾ ಇತಿ) ।

ವೈಕುಂಠಲೋಕದ ಸುಂದರಿಯರ ಕುಚಗಳೆಂಬ ಕುಂಭಗಳು ಕಾಂತಿಗಳೆಂಬ ಸುಧಾರೂಪವಾದ ಜಲಗಳಿಂದ ಪೂರ್ಣವಾಗಿ ತುಂಬಿದ ಮೇಲೆಯೂ, ಪುನಃ ಉಳಿದ ಕಾಂತಿಸುಧಾಜಲವನ್ನು ಅಲ್ಲಿಯೇ ಸುರಿದಾಗ ಅದು ತುಳುಕಿ ಹೊರಗೆ ಬಂದಿತು. ಆ ಕಾಂತಿಜಲದ ಬಿಂದುಗಳು ಸಾಲಾಗಿ ಇದ್ದಂತೆ ಆ ತರುಣಿಯರ ಹಾರಗಳು ಕಾಣಿಸುತ್ತಿದ್ದುವು. ನಡಿಗೆಯ ವೇಗದಿಂದ ಆ ಹಾರಗಳು ಅತ್ತಇತ್ತ ಚಲಿಸುತ್ತಾ ಇದ್ದವು. ಇಂತಹ ಸುಂದರಿಯರು ಹಿಂಭಾಗದಲ್ಲಿ ಬರುತ್ತಿದ್ದಾಗ ಮುಂದುಗಡೆಯಿಂದ ಹೋಗುತ್ತಿರುವ ಮುಕ್ತ ತರುಣರು ಹಿಂದಿರುಗಿ ನೋಡುತ್ತಾರೆ ಎಂದು ಭಾವ.

★ ★ ★

**ಅಪಿ ಲೀಲಯಾ ಕುವಲಯೋಲ್ಲಸಿತೈರಪರೈಃ ಕರೈಃ ಸಹಚರೀನಿಹಿತೈಃ ।**
**ವದನೈಶ್ಚ್ಯುಚಿಸ್ಮಿತಕಟಾಕ್ಷರಸೈಶ್ಚಲಕುಂಡಲೋಲ್ಲಸಿತಗಂಡಯುಗೈಃ ॥ 34 ॥**

**ಪದಚ್ಛೇದ—** ಅಪಿ, ಲೀಲಯಾ, ಕುವಲಯೋಲ್ಲಸಿತೈಃ, ಅಪರೈಃ, ಕರೈಃ, (ಉಪಲಕ್ಷಿತಾಸು) ಸಹಚರೀನಿಹಿತೈಃ, ವದನೈಃ, ಶುಚಿಸ್ಮಿತಕಟಾಕ್ಷರಸೈಃ, ಚಲಕುಂಡಲೋಲ್ಲಸಿತಗಂಡಯುಗೈಃ ।

**ಅನ್ವಯ**— ಲೀಲಯಾ ಕುವಲಯೋಲ್ಲಸಿತೈಃ ಕರೈಃ, ಸಹಚರೀನಿಹಿತೈಃ ಅಪರೈಃ, (ಕರೈಃ) ಶುಚಿಸ್ಮಿತಕಟಾಕ್ಷರಸೈಃ, ಚಲಕುಂಡಲೋಲ್ಲಸಿತಗಂಡಯುಗ್ಮೈಃ, ವದನೈಃ ಅಪಿ (ಉಪಲಕ್ಷಿತಾಸು) ।

**ಅನ್ವಯಾರ್ಥ**—

**ಲೀಲಯಾ** = ವಿಲಾಸದಿಂದ (ವಿನೋದದಿಂದ)

**ಕುವಲಯೋಲ್ಲಸಿತೈಃ** = ಕನ್ನೈದಿಲೆ ಹೂವಿನಿಂದ ಪ್ರಕಾಶಿಸುತ್ತಿರುವ

**ಕರೈಃ** = ಬಲಗೈಗಳಿಂದ

**ಸಹಚರೀನಿಹಿತೈಃ** = ಸಖಿಯರಲ್ಲಿ (ಗೆಳತಿಯರಲ್ಲಿ) ಇಡಲ್ಪಟ್ಟ

**ಅಪರೈಃ** = (ಕರೈಃ) = ಎಡಗೈಗಳಿಂದ (ಉಪಲಕ್ಷಿತಾಸು = ಕೂಡಿರುವ)

**ಶುಚಿಸ್ಮಿತ ಕಟಾಕ್ಷರಸೈಃ** =ನಿರ್ಮಲವಾದ ಮುಗುಳು ನಗೆ ಮತ್ತು ಶ್ರೇಷ್ಠವಾದ ಕಡೆಗಣ್ಣಿನ ನೋಟ ಇವುಗಳುಳ್ಳ

**ಚಲಕುಂಡಲೋಲ್ಲಸಿತಗಂಡಯುಗ್ಮೈಃ** = ಅಲ್ಲಾಡುತ್ತಿರುವ ಕಿವಿಯ ಆಭರಣಗಳಿಂದ ಪ್ರಕಾಶಗೊಂಡ ಎರಡು ಕೆನ್ನೆಗಳುಳ್ಳ

**ವದನೈಃ ಅಪಿ** = (ಉಪಲಕ್ಷಿತಾಸು) ಮುಖಗಳಿಂದಲೂ ಕೂಡಿರುವ

(**ತಾಸು ಪ್ರಗತಾಸು ತರುಣಾಃ ನಿವೃತ್ತಮುಖಾಃ ಭವಂತಿ ಪುರಾ** = ಇಂತಹ ಸ್ತ್ರೀಯರು ಹಿಂದಿನಿಂದ ಚಲಿಸುತ್ತಿ-ರಲಾಗಿ ತರುಣರು ಹಿಂದಿರುಗಿ ನೋಡುತ್ತಾರೆ)

**ತಾತ್ಪರ್ಯ**— ಅಲ್ಲಿರುವ ತರುಣಿಯರು ವಿಲಾಸದಿಂದ ಬಲಗೈಗಳಲ್ಲಿ ಕನ್ನೈದಿಲೆ ಹೂವುಗಳನ್ನು ಹಿಡಿದಿರುತ್ತಾರೆ. ಎಡಗೈಗಳನ್ನು ತಮ್ಮ ಗೆಳತಿಯರ ಹೆಗಲುಗಳ ಮೇಲೆ ಇಟ್ಟಿರುತ್ತಾರೆ. ಅವರ ಮುಖಗಳು ನಿರ್ಮಲವಾದ ಮುಗುಳುನಗೆ, ಉತ್ತಮವಾದ ಕಡೆಗಣ್ಣಿನ ನೋಟ ಇವುಗಳಿಂದ ಕೂಡಿರುವುವು. ಕಪೋಲಗಳು ಅಲ್ಲಾಡುವ ಓಲೆಗಳಿಂದ ವಿರಾಜಿಸುತ್ತಿರುವುವು. ಇಂತಹ ಯುವತಿಯರು ಹಿಂದೆ ಸಂಚರಿಸುತ್ತಾ ಬರುತ್ತಿರಲು ತರುಣರು ಹಿಂದಿರುಗಿ ನೋಡುವರು.

ವಿಗ್ರಹ—

**ಕುವಲಯೋಲ್ಲಸಿತೈಃ**— ಕುವಲಯೈಃ ಉಲ್ಲಸಿತಾಃ ಕುವಲಯೋಲ್ಲಸಿತಾಃ, ತೈಃ ಕುವಲಯೋಲ್ಲಸಿತೈಃ ।

**ಸಹಚರೀನಿಹಿತೈಃ**— ಸಹಚರೀಷು ನಿಹಿತಾಃ ಸಹಚರೀನಿಹಿತಾಃ, ತೈಃ ಸಹಚರೀನಿಹಿತೈಃ ।

**ಚಲಕುಂಡಲೋಲ್ಲಸಿತಗಂಡಯುಗ್ಮೈಃ**— ಚಲಕುಂಡಲೈಃ ಉಲ್ಲಸಿತಾನಿ ಚಲಕುಂಡಲೋಲ್ಲಸಿತಾನಿ, ಚಲ ಕುಂಡಲೋಲ್ಲಸಿತಾನಿ ಗಂಡಯುಗಾನಿ ಯೇಷಾಂ ತಾನಿ ಚಲಕುಂಡಲೋಲ್ಲಸಿತಗಂಡಯುಗಾನಿ, ತೈಃ ಚಲಕುಂಡಲೋಲ್ಲಸಿತಗಂಡಯುಗ್ಮೈಃ ।

**ಶುಚಿಸ್ಮಿತಕಟಾಕ್ಷರಸೈಃ**— ಶುಚೀನಿ ಚ ತಾನಿ ಸ್ಮಿತಾನಿ ಚ ಶುಚಿಸ್ಮಿತಾನಿ, ಕಟಾಕ್ಷಸ್ಯ ರಸಾಃ ಕಟಾಕ್ಷರಸಾಃ, ಶುಚಿಸ್ಮಿತಾನಿ ಕಟಾಕ್ಷರಸಾಶ್ಚ ಯೇಷು ತಾನಿ ಶುಚಿಸ್ಮಿತಕಟಾಕ್ಷರಸೈಃ । (ವದನಾನಿ)

**ಕೋಶ**— ಸ್ಯಾದುತ್ಪಲಂ ಕುವಲಯಂ, ಬಲಿಹಸ್ತಾಂಶವಃ ಕರಾಃ, ಯುಗಂ ಯುಗ್ಮೇ ಕೃತಾದಿಷು ಅಪಾಂಗ ನೇತ್ರ-ಯೋರಂತಃ । ಕಟಾಕ್ಷೋಪಾಂಗದರ್ಶನೇ ಇತ್ಯಮರಃ ॥

★ ★ ★

**ಪ್ರಗತಾಸು ತಾಸು ರಣಿತೈರಶನಾಮಣಿನೂಪುರೈರಿವ ಪುರಾ (ತದಾ) ಗದಿತಾಃ ।**
**ಅನುವೀಕ್ಷಿತುಂ ತನುವಿಲಾಸಮಿಮಂ ತರುಣಾ ಭವಂತ್ಯಥ ನಿವೃತ್ತಮುಖಾಃ ॥ 35 ॥**

**ಪದಚ್ಛೇದ—** ಪ್ರಗತಾಸು, ತಾಸು, ರಣಿತೈಃ, ರಶನಾಮಣಿನೂಪುರೈಃ, ಇವ, ಪುರಾ (ತದಾ) ಗದಿತಾಃ, ಅನು-ವೀಕ್ಷಿತುಂ, ತನುವಿಲಾಸಂ, ಇಮಂ ತರುಣಾಃ, ಭವಂತಿ, ಅಥ, ನಿವೃತ್ತಮುಖಾಃ ।

**ಅನ್ವಯ—** ಅಥ, ತಾಸು ಪ್ರಗತಾಸು, ರಣಿತೈಃ ರಶನಾಮಣಿನೂಪುರೈಃ, ಇಮಂ ತನುವಿಲಾಸಂ ಅನುವೀಕ್ಷಿತುಂ, ಗದಿತಾಃ ಇವ, ತರುಣಾಃ ನಿವೃತ್ತಮುಖಾಃ, ಪುರಾ (ತದಾ) ಭವಂತಿ ।

**ಅನ್ವಯಾರ್ಥ—**

**ಅಥ** = ವಿಮಾನದಿಂದ ಇಳಿದ ಮೇಲೆ
**ತಾಸು** = ಹಿಂದೆ ಹೇಳಿದಂತಿರುವ ಆ ಮುಕ್ತಸುಂದರಿಯರು
**ಪ್ರಗತಾಸು** = ಮುಂದಕ್ಕೆ ಹೋಗುತ್ತಿರಲು
**ರಣಿತೈಃ** = ಸದ್ದು ಮಾಡುತ್ತಿರುವ
**ರಶನಾಮಣಿನೂಪುರೈಃ** = ಡಾಬು ಮತ್ತು ರತ್ನಖಚಿತವಾದ ಕಾಲ್ಗೆಜ್ಜೆ ಇವುಗಳಿಂದ
**ಇಮಂ** = ಈ
**ತನುವಿಲಾಸಂ** = ದೇಹದ ವಿಲಾಸವನ್ನು
**ಅನುವೀಕ್ಷಿತುಂ** = ನೋಡುವುದಕ್ಕೆ
**ಗದಿತಾಃ ಇವ** = ಹೇಳಲ್ಪಟ್ಟವರಂತೆ,
**ತರುಣಾಃ** = ಮುಕ್ತರಾದ ತರುಣರು
**ನಿವೃತ್ತಮುಖಾಃ** = ಹಿಂದಿರುಗಿದ ಮುಖವುಳ್ಳವರು
**ಪುರಾಭವಂತಿ** = ಆದರು (ತದಾಭವಂತಿ - ಆಗುತ್ತಾರೆ).

**ತಾತ್ಪರ್ಯ—** ಅಂತಹ ಸುಂದರಿಯರು ವಿಮಾನಗಳಿಂದ ಇಳಿದು ಮುಂದಕ್ಕೆ ಹೊರಟರು. ಅವರು ಚಲಿಸುವಾಗ ಅವರ ಡಾಬುಗಳು ಮತ್ತು ಕಾಲ್ಗೆಜ್ಜೆಗಳು ಗಲ್ ಗಲ್ ಚಲ್ ಚಲ್ ಎಂದು ಸದ್ದು ಮಾಡುತ್ತಿದ್ದುವು. ಆ ಸದ್ದುಗಳು ಮುಂದೆ ಹೋಗುತ್ತಿರುವ ತರುಣರಿಗೆ ಹಿಂದಕ್ಕೆ ತಿರುಗಿ ಆ ಸ್ತ್ರೀಯರ ದೇಹದ ಈ ಹಾವಭಾವ ವಿಲಾಸಗಳನ್ನು ನೋಡಿರಿ ಎಂದು ಹೇಳುತ್ತಿವೆಯೋ ಎಂಬಂತೆ ತೋರುತ್ತಿತ್ತು. ಆದರಿಂದಾಗಿ ಆ ತರುಣರು ಹಿಂದಿರುಗಿ ನೋಡಿದರು. ಹೀಗೆ ವೈಕುಂಠ-ಲೋಕದ ಆ ಮುಕ್ತರಾದ ಸುಂದರತರುಣಿಯರ ನಡಿಗೆವಿಲಾಸಗಳು ಅಷ್ಟೊಂದು ಆಕರ್ಷಕವಾಗಿದ್ದವು.

**ವಿಗ್ರಹ—**

**ರಶನಾಮಣಿನೂಪುರೈಃ—** ರಶನಾಶ್ಚ ಮಣಿನೂಪುರಾಶ್ಚ ರಶನಾಮಣಿನೂಪುರಾಃ, ತೈಃ ರಶನಮಣಿನೂಪುರೈಃ ।
**ತನುವಿಲಾಸಂ—** ತನೂನಾಂ ವಿಲಾಸಃ ತನು ವಿಲಾಸಃ, ತಂ ತನುವಿಲಾಸಂ ।
**ನಿವೃತ್ತಮುಖಾಃ—** ನಿವೃತ್ತಾನಿ ಮುಖಾನಿ ಯೇಷಾಂ ತೇ ನಿವೃತ್ತಮುಖಾಃ ।

**ವ್ಯಾಕರಣವಿಶೇಷ—** 'ಪುರಾ ಭವಂತಿ' ಎಂಬಲ್ಲಿ 'ಯಾವತ್ ಪುರಾನಿಪಾತಯೋರ್ಲಟ್' (3.3.4) ಎಂಬ ಸೂತ್ರದಿಂದ **ಭೂತಾರ್ಥ**ದಲ್ಲಿ ಲಟ್ (ಭಲಾರಿಯಪಾಠದಂತೆ ತದಾ ಎಂಬ ಪದವಿದೆ) ಇಲ್ಲಿ ಕರಪಲ್ಲವೈಃ ಎಂಬ 32ನೇ ಶ್ಲೋಕದಿಂದ 35ರವರೆಗೆ ಏಕಾನ್ವಯ ಈ ರೀತಿಯ ಶ್ಲೋಕ ಸಮೂಹಕ್ಕೆ 'ಕಲಾಪಕ' ಎಂದು ಹೆಸರು)

★ ★ ★

**ಅನುಪಾಲಿತಾಃ ಸ್ವದಯಿತೈರ್ದಯಿತಾಃ ಕಥಮಪ್ಯುಪೇತ್ಯ ಕುಚಭಾರನತಾಃ ।**
**ಶನಕೈಃ ಪುನಸ್ತದವಲಂಬಬಲಾತ್ ಕಿಲ ತಾ ವಿಶಂತಿ ಪರಮೋಪವನಮ್ ॥ 36 ॥**

**ಪದಚ್ಛೇದ—** ಅನುಪಾಲಿತಾಃ, ಸ್ವದಯಿತೈಃ, ದಯಿತಾಃ, ಕಥಂ, ಅಪಿ, ಉಪೇತ್ಯ, ಕುಚಭಾರನತಾಃ, ಶನಕೈಃ, ಪುನಃ, ತದವಲಂಬಬಲಾತ್, ಕಿಲ, ತಾಃ, ವಿಶಂತಿ, ಪರಮೋಪವನಂ ।

**ಅನ್ವಯ—** ಸ್ವದಯಿತೈಃ ಅನುಪಾಲಿತಾಃ, ಕುಚಭಾರನತಾಃ ತಾಃ ದಯಿತಾಃ, ಕಥಂ ಅಪಿ ಉಪೇತ್ಯ, ಪುನಃ ತದವ-ಲಂಬಬಲಾತ್, ಶನಕೈಃ ಪರಮೋಪವನಂ ವಿಶಂತಿ ಕಿಲ ।

**ಅನ್ವಯಾರ್ಥ—**

**ಸ್ವದಯಿತೈಃ** = ತಮ್ಮ ಗಂಡಂದಿರಿಂದ
**ಅನುಪಾಲಿತಾಃ** = ನಿರೀಕ್ಷಿಸಲ್ಪಟ್ಟ
**ಕುಚಭಾರನತಾಃ** = ಸ್ತನಗಳ ಭಾರದಿಂದ ಬಗ್ಗಿದ
**ತಾಃ ದಯಿತಾಃ** = ಆ ಪ್ರಿಯಪತ್ನಿಯರು
**ಕಥಂ ಅಪಿ** = ಹೇಗೋ
**ಉಪೇತ್ಯ** = ಸಮೀಪಿಸಿ
**ಪುನಃ** = ಅನಂತರ
**ತದವಲಂಬಬಲಾತ್** = ಆ ತಮ್ಮ ತಮ್ಮ ಪತಿಗಳ ಆಶ್ರಯದ ಬಲದಿಂದ
**ಶನಕೈಃ** = ಮೆಲ್ಲನೆ
**ಪರಮಉಪವನಂ** = ಉತ್ತಮವಾದ ಉದ್ಯಾನವನವನ್ನು
**ವಿಶಂತಿ ಕಿಲ** = ಪ್ರವೇಶಿಸುತ್ತಾರಷ್ಟೆ !

**ತಾತ್ಪರ್ಯ—** ಅಲ್ಲಿರುವ ಆ ಮುಕ್ತಸುಂದರಿಯರೂ ಕೂಡ ತಮ್ಮ ಘನಸ್ತನಭಾರದಿಂದ ಬಾಗಿರುತ್ತಾರೆ. ಆದ್ದರಿಂದ ನಡೆಯಲು ಕಷ್ಟ ಪಡುತ್ತಿರುವಂತೆ ಕಾಣುತ್ತದೆ. ಅಂತಹ ಅವರೆಲ್ಲರೂ ವಿಮಾನಗಳಿಂದ ಇಳಿದು ತಮ್ಮ ಗಂಡಂದಿರನ್ನು ಹಿಂಬಾಲಿಸಲಾರದವರಂತೆ, ಅಶಕ್ತರಂತೆ ಹಿಂದೆ ಬೀಳುತ್ತಾರೆ. ಆಗ ಗಂಡಂದಿರು ಅವರು ಬರುವವರೆಗೆ ಕಾದಿದ್ದು, ತಮ್ಮ ಸಮೀಪಕ್ಕೆ ವಿಲಾಸದಿಂದ, ಒಯ್ಯಾರದಿಂದ ಕಷ್ಟಪಟ್ಟು ಬಂದಂತಿರುವ ಆ ಪತ್ನಿಯರಿಗೆ ಆಶ್ರಯ ಕೊಟ್ಟು, ಅವರನ್ನು ಆಧರಿಸಿ ಮೆಲ್ಲನೆ ಉದ್ಯಾನವನಕ್ಕೆ ಕರೆದುಕೊಂಡು ಹೋಗುತ್ತಾರೆ. ಹೀಗೆ ಆ ತರುಣಿಯರು ಬಹಳ ಪ್ರಯಾಸದಿಂದ ಉದ್ಯಾನವನ-ವನ್ನು ಸೇರುತ್ತಾರೆ. ವೈಕುಂಠದಲ್ಲಿ ಆಯಾಸ ಇತ್ಯಾದಿಗಳು ಇಲ್ಲದಿದ್ದರೂ ವಿನೋದದಿಂದ ವಿಡಂಬನೆ ಮಾಡುತ್ತಾ, ಮುಕ್ತರು ಆನಂದ ಪಡುತ್ತಾರೆ ಎಂದು ತಾತ್ಪರ್ಯವು.

**ವಿಗ್ರಹ—**

**ಸ್ವದಯಿತೈಃ—** ಸ್ವಾಸಾಂ ದಯಿತಾಃ ಸ್ವದಯಿತಾಃ, ತೈಃ ಸ್ವದಯಿತೈಃ ।
**ಕುಚಭಾರನತಾಃ—** ಕುಚಾನಾಂ ಭಾರಃ ಕುಚಭಾರಃ, ಕುಚಭಾರೇಣ ನತಾಃ ಕುಚಭಾರನತಾಃ ।
**ತದವಲಂಬಬಲಾತ್—** ತೇಷಾಂ ಅವಲಂಬಃ ತದವಲಂಬಃ, ತದವಲಂಬಸ್ಯ ಬಲಂ ತದವಲಂಬಬಲಂ, ತಸ್ಮಾತ್ ತದವಲಂಬಬಲಾತ್ ।
**ಪರಮೋಪವನಂ—** ಪರಮಂ ಚ ತತ್ ಉಪವನಂ ಚ ಪರಮೋಪವನಂ, ತತ್ ಪರಮೋಪವನಂ ।

**ಕ್ರಿಯಾಪದ—** **ವಿಶಂತಿ**- 1. ವಿಶತಿ ವಿಶತಃ ವಿಶಂತಿ ಇತ್ಯಾದಿ. ವಿಶಪ್ರವೇಶನೇ ಸಕರ್ಮಕಃ ಅನಿಟ್ ಪರಸ್ಮೈಪದೀ ವರ್ತಮಾನೇ ಲಟ್, 2. ವಿವೇಶ ವಿವಿಶತುಃ ವಿವಿಶುಃ ವಿವೇಶಿಥ ವಿವಿಶಥುಃ ವಿವಿಶ, ವಿವೇಶ ವಿವಿಶಿವ ವಿವಿಶಿಮ, 3. ವೇಷ್ಟಾ, 4. ವೇಕ್ಷ್ಯತಿ, 5. ವಿಶತು, 6. ಅವಿಶತ್, 7. ವಿಶೇತ್, 8. ವಿಶ್ಯಾತ್, 9. ಅವಿಕ್ಷತ್, 10. ಅವೇಕ್ಷ್ಯತ್. ಕರ್ಮಣಿ - 1. ವಿಶ್ಯತೇ, 2. ವಿಶ್ಯತಾಂ, 5. ಅವಿಶ್ಯತ, 7. ವಿಶ್ಯೇತ, 9. ಅವೇಶಿ - ಇತ್ಯಾದಿ ।

**ಪ್ರಯೋಗ—** ತಾಃ ಪರಮೋಪವನಂ ವಿಶಂತಿ (ಕರ್ತರಿ) ।
ತಾಭಿಃ ಪರಮೋಪವನಂ ವಿಶ್ಯತೇ (ಕರ್ಮಣಿ) ॥

★ ★ ★

**ಹಸಿತಪ್ರಸೂನನಿಕರೋರುಭರಪ್ರಣಮತ್ಸುವರ್ಣಮಣಿಸರ್ವತರೂನ್ ।**
**ಉಪಗೂಹಯನ್ನಮೃತಸಿಂಧುಸಖಃ ಪವನೋ ನ ಕಸ್ಯ ಸುಖಮೇಧಯತಿ ॥ 37 ॥**

**ಪದಚ್ಛೇದ—** ಹಸಿತಪ್ರಸೂನನಿಕರೋರುಭರಪ್ರಣಮತ್ಸುವರ್ಣಮಣಿಸರ್ವತರೂನ್, ಉಪಗೂಹಯನ್, ಅಮೃತ ಸಿಂಧುಸಖಃ, ಪವನಃ, ನ, ಕಸ್ಯ, ಸುಖಂ, ಏಧಯತಿ ।

**ಅನ್ವಯ—** ಹಸಿತಪ್ರಸೂನನಿಕರೋರುಭರಪ್ರಣಮತ್ಸುವರ್ಣಮಣಿಸರ್ವತರೂನ್ ಉಪಗೂಹಯನ್, ಅಮೃತ ಸಿಂಧುಸಖಃ ಪವನಃ ಕಸ್ಯ ಸುಖಂ ನ ಏಧಯತಿ?

**ಅನ್ವಯಾರ್ಥ—**

**ಹಸಿತಪ್ರಸೂನ, ನಿಕರೋರುಭರ, ಪ್ರಣಮತ್ಸುವರ್ಣ, ಮಣಿಸರ್ವತರೂನ್** = ಅರಳಿದ ಹೂವುಗಳ, ಸಮೂಹದ ಹೆಚ್ಚಾದ ಭಾರದಿಂದ, ಬಗ್ಗುತ್ತಿರುವ, ಚಿನ್ನವು, ರತ್ನವು ಇವುಗಳಿಂದ ರಚಿತವಾದ ಎಲ್ಲಾ ಮರಗಳನ್ನು

**ಉಪಗೂಹಯನ್** = ಆಲಿಂಗಿಸುತ್ತಿರುವ,

**ಅಮೃತಸಿಂಧುಸಖಃ** = ಅಮೃತ ಸಮುದ್ರಗಳಿಗೆ ಸ್ನೇಹಿತನಾದ

**ಪವನಃ** = ಗಾಳಿಯು

**ಕಸ್ಯ** = ಯಾರಿಗೆ

**ಸುಖಂ** = ಆನಂದವನ್ನು

**ನ ಏಧಯತಿ** = ಹೆಚ್ಚಿಸುವುದಿಲ್ಲ?

**ತಾತ್ಪರ್ಯ—** ಆ ವೈಕುಂಠಲೋಕದಲ್ಲಿ ಸುವರ್ಣ ಮತ್ತು ರತ್ನಗಳಿಂದಲೇ ನಿರ್ಮಿತವಾಗಿರುವ ಅಪ್ರಾಕೃತವಾದ ನಾನಾವಿಧ ವೃಕ್ಷಗಳಿವೆ. ಅವುಗಳು ಅರಳಿದ ಸುವಾಸನೆಯಾದ ಹೂವುಗಳ ಭಾರದಿಂದ ಬಾಗುತ್ತಾ ಇರುತ್ತವೆ. ವೈಕುಂಠ-ಲೋಕದಲ್ಲಿ ವಾಯುವು ಆ ಮರಗಳ ಮೇಲಿಂದಲೂ, ಅಲ್ಲಿರುವ ಅಮೃತ ಸಮುದ್ರಗಳ ಮೇಲಿಂದಲೂ ಬೀಸಿ ಮುಕ್ತರಾದ ತರುಣ ತರುಣಿಯರನ್ನು ಸ್ಪರ್ಶಿಸಿ ತನ್ನಲ್ಲಿರುವ ತಂಪು, ಸುವಾಸನೆ ಮತ್ತು ಮಾಂದ್ಯ ಎಂಬ ಗುಣಗಳಿಂದ ಮುಕ್ತರಿಗೆಲ್ಲರಿಗೂ ಆನಂದಾವಿರ್ಭಾವವನ್ನುಂಟು ಮಾಡುತ್ತದೆ.

**ವಿಶೇಷಾಂಶ—** ವೈಕುಂಠಲೋಕದಲ್ಲಿ ಅಮೃತ ಸಮುದ್ರಗಳಿವೆ ಎಂಬ ವಿಷಯದಲ್ಲಿ ಪ್ರಮಾಣ 'ಅರಶ್ಚ ಚ ವೈಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂಬ ಶ್ರುತಿ ಮತ್ತು 'ಅರಶ್ಚ ವೈಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ' ಎಂಬ ಸ್ಮೃತಿ 'ಅರ ಮತ್ತು ವೈಣ್ಯ' ಎಂಬ ಎರಡು ಅಮೃತ ಸಮುದ್ರಗಳು ಬ್ರಹ್ಮಲೋಕದಲ್ಲಿ (ವೈಕುಂಠಲೋಕ) ಇವೆ ಎಂದು ಇದರಿಂದ ತಿಳಿದುಬರುತ್ತದೆ.

ವಿಗ್ರಹ—

**ಹಸಿತಪ್ರಸೂನನಿಕರೋರುಭರಪ್ರಣಮತ್ಸುವರ್ಣಮಣಿಸರ್ವತರೂನ್**— ಪ್ರಸೂನಾನಾಂ ನಿಕರಾಃ ಪ್ರಸೂನ-ನಿಕರಾಃ, ಹಸಿತಾಶ್ಚ ತೇ ಪ್ರಸೂನನಿಕರಾಶ್ಚ ಹಸಿತಪ್ರಸೂನನಿಕರಾಃ, ಉರುಶ್ಚಾಸೌ ಭರಶ್ಚ ಉರುಭರಃ, ಹಸಿತಪ್ರಸೂನನಿಕರಾಣಾಂ ಉರುಭರಃ ಹಸಿತಪ್ರಸೂನನಿಕರೋರುಭರಃ, ಹಸಿತಪ್ರಸೂನನಿಕರೋ-ರುಭರೇಣ ಪ್ರಣಮಂತಃ, ಹಸಿತಪ್ರಸೂತನಿಕರೋರುಭರಿಪ್ರಣಮಂತ್ರಃ, ಸರ್ವೇ ಚ ತೇ ತರವಶ್ಚ ಸರ್ವತರವಃ, ಸುವರ್ಣಂಚ ಮಣಯಶ್ಚ ಸುವರ್ಣಮಣಯಃ, ಸುವರ್ಣಮಣೀನಾಂ ಸರ್ವತರವಃ ಸುವರ್ಣಮಣಿಸರ್ವತರವಃ, ಹಸಿತಪ್ರಸೂನನಿಕರೋರುಭರಪ್ರಣಮಂತಶ್ಚ ತೇ ಸುವರ್ಣಮಣಿ-ಸರ್ವತರವಶ್ಚ ಹಸಿತಪ್ರಸೂನನಿಕರೋರುಭರಪ್ರಣಮತ್ಸುವರ್ಣಮಣಿಸರ್ವತರವಃ, ತಾನ್ ಹಸಿತ-ಪ್ರಸೂನನಿಕರೋರುಭರಪ್ರಣಮತ್ಸುವರ್ಣಮಣಿಸರ್ವತರೂನ್ ।

**ಅಮೃತಸಿಂಧುಸಖಃ**— ಅಮೃತಸ್ಯ ಸಿಂಧೂ ಅಮೃತಸಿಂಧೂ, ಅಮೃತಸಿಂಧ್ವೋಃ ಸಖಾ ಅಮೃತಸಿಂಧುಸಖಃ, ಅಮೃತಸಿಂಧುಸಖಃ ಇಲ್ಲಿ ರಾಜಾಹಃ ಸಖಿಭ್ಯಃ ಟಚ್ ಎಂಬ ಸೂತ್ರದಿಂದ ಟಚ್ ಪ್ರತ್ಯಯ ಬಂದು ಸಖಿ ಶಬ್ದವು ಅಕಾರಾಂತವಾಗಿದೆ.

**ಕ್ರಿಯಾಪದ**— ಏಧಯತೀ- ಏಧವೃದ್ಧೌ ಇತಿ ವೃದ್ಧ್ಯರ್ಥಕಾತ್ ಏಧಧಾತೋಃ ಣಿಜಂತಾತ್ ಲಟ್ ಪರಸ್ಮೈಪದಂ ಪ್ರಥಮಪುರುಷೇ ಏಕವಚನೇ 'ಏಧಯತಿ' ಇತಿ ರೂಪಂ ।

ಏಧಯತಿ ಏಧಯತಃ ಏಧಯಂತಿ ಇತ್ಯಾದಿ ಏಧಯತೇ ಏಧವೃದ್ಧೌ ವೃದ್ಧ್ಯರ್ಥಕಾತ್ ಏಧಧಾತೋಃ ಣಿಜಂತಾತ್ ಲಟ್ ಪರಸ್ಮೈಪದಂ. ಲಿಟ್ ಏಧಯಾಂಚಕಾರ, ಏಧಯಾಂಬಭೂವ, ಏಧಯಾಮಾಸ, ಏಧಯಾಂಚಕ್ರೇ, 3. ಏಧವತಾ -ಸಿ-ಸೇಹೇ, 4. ಏಧಯಷ್ಯತಿ ತೇ, 5. ಏಧಯತು ತಾಂ, 6 ಐಧಯತ್-ತ, 7. ಏಧಯೇತ್-ತ, 8. ಏಧ್ಯಾತ್ ಏಧಯಿಷೀಷ್ಟ ಢ್ವಂ, ಧ್ವಂ, 9. ಐದಿಧತ್-ತ, 10. ಐಧಯಿಷ್ಯತ್-ತ. ಕರ್ಮಣಿ 1. ಏಧ್ಯತೇ, 2. ಏಧಯಾಂಚಕ್ರೆ ಬಭೂವೇ ಆಸೇ, 3. ಏಧಯಿತಾ.ಸೇ.ಹೇ. ಏಧಿತಾ.ಸೇ.ಹೇ., 4. ಏಧಯಿಷ್ಯತೇ ಏಧಿಷ್ಯತೇ, 5. ಏಧ್ಯತಾಂ, 6. ಐಧ್ಯತ, 8. ಏಧಯಿಷೀಷ್ಟ ಢ್ವಂ ಧ್ವಂ ಏಧಿಷೀಷ್ಟ (ಧ್ವಂ), 9. ಐಧಿ ಐಧಿಷಾತಾಂ (ಢ್ವಂ ಧ್ವಂ) ಐಧಯಿಷಾತಾಂ ಢ್ವಂ (ಢ್ವಂ ಧ್ವಂ) ಐಧಯಿಷಾತಾಂ (ಢ್ವಂ ಧ್ವಂ), 10. ಐಧಿಷ್ಯತ ಐಧಯಿಷ್ಯತ ।

**ಪ್ರಯೋಗ**— ಪವನಃ ಕಸ್ಯ ಸುಖಂ ನ ಏಧಯತಿ ? (ಕರ್ತರಿ)
ಪವನೇನ ಕಸ್ಯ ಸುಖಂ ನ ಏಧ್ಯತೇ ? (ಕರ್ಮಣಿ)

**ಕೋಶ**— 'ಭರೋಽತಿಶಯಭಾರಯೋಃ' ಎಂಬ ಕೋಶಾನುಸಾರ ಇಲ್ಲಿ ಭರಶಬ್ದಕ್ಕೆ ಭಾರ ಎಂದರ್ಥ.

★ ★ ★

**ಉಪಚಾರನಂದನಮಿದಂ ದ್ಯುವನಂ ನಿಯಮೇನ ನಂದಯತಿ ಯನ್ನ ಜನಮ್ ।**
**ಪರಮೇವ ನಂದನಮುಪೇಂದ್ರವನಂ ಸಕಲಂ ಸದಾ ಯದಭಿನಂದಯತಿ ॥ 38 ॥**

**ಪದಚ್ಛೇದ**— ಉಪಚಾರನಂದನಂ, ಇದಂ, ದ್ಯುವನಂ, ನಿಯಮೇನ, ನಂದಯತಿ, ಯತ್, ನ ಜನಂ, ಪರಂ, ಏವ, ನಂದನಂ, ಉಪೇಂದ್ರವನಂ, ಸಕಲಂ, ಸದಾ, ಯತ್, ಅಭಿನಂದಯತಿ ।

**ಅನ್ವಯ**— ಯತ್ ಇದಂ, ಜನಂ ನಿಯಮೇನ ನ ನಂದಯತಿ, (ತತ್) (ಇದಂ) ದ್ಯುವನಂ ಉಪಚಾರನಂದನಂ ಯತ್ ಸದಾ ಸಕಲಂ ಅಭಿನಂದಯತಿ (ತತ್) ಉಪೇಂದ್ರವನಂ ಪರಂ ಏವ ನಂದನಂ ।

**ಅನ್ವಯಾರ್ಥ—**

**ಯತ್** = ಯಾವ ಕಾರಣದಿಂದ
**ಇದಂ** = ಈ ದೇವಲೋಕದ ನಂದನವನವು
**ಜನಂ** = ಜನರನ್ನು
**ನಿಯಮೇನ** = ನಿಶ್ಚಯದಿಂದ (ನಿಯತವಾಗಿ)
**ನ ನಂದಯತಿ** = ಸಂತೋಷಗೊಳಿಸುವುದಿಲ್ಲವೋ (ತತ್ = ಆ ಕಾರಣದಿಂದ)
**ಇದಂ ದ್ಯುವನಂ** = ಈ ದೇವಲೋಕದ ನಂದನವನವು
**ಉಪಚಾರನಂದನಂ** = ಅಮುಖ್ಯವಾದ ನಂದನವನವು (ಮುಖ್ಯ ನಂದನವನವಲ್ಲ)
**ಯತ್** = ಯಾವ ವೈಕುಂಠಲೋಕದ ನಂದನವನವು
**ಸದಾ** = ಯಾವಾಗಲೂ
**ಸಕಲಂ** = ಎಲ್ಲರನ್ನೂ
**ಅಭಿನಂದಯತಿ** = ಸಂತೋಷಗೊಳಿಸುತ್ತದೆಯೋ (ತತ್-ಅಂತಹ)
**ಉಪೇಂದ್ರವನಂ** = ವಿಷ್ಣುವಿನ ಮುಕ್ತ ವೈಕುಂಠಲೋಕದ ವನವೇ
**ಪರಂ ಏವ** = ಮುಖ್ಯವಾಗಿಯೇ
**ನಂದನಂ** = ನಂದನವನವು.

**ತಾತ್ಪರ್ಯ—** ದೇವಲೋಕದ ನಂದನವನವು ಎಲ್ಲರಿಗೂ ಸಂತೋಷವನ್ನುಂಟು ಮಾಡಿಯೇ ಮಾಡುವುದು ಎಂಬ ನಿಯಮವಿಲ್ಲ. ಆದ್ದರಿಂದ ಅದು ಮುಖ್ಯವಾದ ನಂದನವನವಲ್ಲ. ಮುಕ್ತವೈಕುಂಠಲೋಕದಲ್ಲಿರುವ ವಿಷ್ಣುವಿನ ವನವು ಎಲ್ಲರಿಗೂ ಯಾವಾಗಲೂ ಆನಂದವನ್ನು ಉಂಟು ಮಾಡಿಯೇ ಮಾಡುತ್ತದೆ. ಆದ್ದರಿಂದ ಅದೇ ಮುಖ್ಯವಾದ ನಂದನ ವನವಾಗಿದೆ.

**ವಿಶೇಷಾಂಶ—** ಈ ಶ್ಲೋಕವು ಪ್ರಕ್ಷಿಪ್ತ. ಆದ್ದರಿಂದಲೇ ಪೂರ್ವ ಟೀಕಾಕಾರರು ವ್ಯಾಖ್ಯಾನ ಮಾಡಿಲ್ಲ ಎಂದು ಛಲಾರಿಯ ಟೀಕೆಯಲ್ಲಿ ಬರೆದಿದ್ದಾರೆ. ವಿಶ್ವಪತಿತೀರ್ಥೀಯ ಸಹಿತ ಸುಮಧ್ವವಿಜಯ ಪುಸ್ತಕದಲ್ಲಿ 'ಶ್ಲೋಕಸ್ಯ ಅಸ್ಯ ವ್ಯಾಖ್ಯಾ ಲಿಖಿತಪುಸ್ತಕೇ ನ ದೃಶ್ಯತೇ' = ಈ ಶ್ಲೋಕದ ವ್ಯಾಖ್ಯಾನವು ಕೈಬರಹದ ಪುಸ್ತಕದಲ್ಲಿ ಕಂಡು ಬರುವುದಿಲ್ಲ ಎಂದಷ್ಟೇ ಬರೆದು ಮುಂದೆ ವ್ಯಾಖ್ಯಾನವನ್ನು ಕೊಟ್ಟಿಲ್ಲ. ಛಲಾರೀಯದಲ್ಲಿ ಮಾಡಿರುವ ವ್ಯಾಖ್ಯಾನಾನುಸಾರವಾಗಿ ಇಲ್ಲಿ ಅರ್ಥವನ್ನು ಕೊಟ್ಟಿದೆ.

**ವಿಗ್ರಹ—**

**ದ್ಯುವನಂ—** ದಿವಃ ವನಂ ದ್ಯುವನಂ ।
**ಉಪಚಾರನಂದನಂ—** ಉಪಚಾರೇಣ ನಂದನಂ ಉಪಚಾರನಂದನಂ,
**ಉಪೇಂದ್ರವನಂ—** ಉಪೇಂದ್ರಸ್ಯ ವನಂ ಉಪೇಂದ್ರವನಂ ।

**ಕ್ರಿಯಾಪದ— ಅಭಿನಂದಯತಿ-** ಅಭಿ ಇತ್ಯುಪಸರ್ಗಪೂರ್ವಕಾತ್ ಟುನದಿ ಸಮೃದ್ಧೌ ಇತ್ಯಸ್ಮಾತ್ ಸಮೃದ್ಧ್ಯರ್ಥಕಾತ್ ನಂದಧಾತೋಃ ಣಿಜಂತಾತ್ ವರ್ತಮಾನೇ ಲಟ್, ಪ್ರಥಮಪುರುಷೇ ಬಹುವಚನೇ 'ಅಭಿನಂದಯತಿ' ಇತಿ ರೂಪಂ ।

2 ಲಿಟ್ ನಂದಯಾಂಚಕಾರ ಬಭೂವ ಆಸ, 3 ಲುಟ್ ನಂದಯಿತಾ, 4 ಲೃಟ್ ನಂದಯಿಷ್ಯತಿ, 5 ಲೋಟ್ ನಂದಯತು, 6 ಲಙ್ ಅನಂದಯತ್, 7 ವಿಧಿಲಿಙ್ ನಂದಯೇತ್, 8 ಆಶೀರ್ಲಿಙ್ ನಂದ್ಯಾತ್, 9 ಲುಙ್ ಅನನಂದತ್, 10 ಅನಂದಯಿಷ್ಯತ್. ಕರ್ಮಣಿ 1 ನಂದ್ಯತೇ, 2 ನಂದಯಾಂಚಕ್ರೇ, 3 ನಂದಯಿತಾ ನಂದಿತಾ, 4 ನಂದಯಿಷ್ಯತೇ ನಂದಿಷ್ಯತೇ, 5 ನಂದ್ಯತಾಂ, 6 ಅನಂದ್ಯತ, 7 ನಂದ್ಯೇತ, 8 ನಂದಯಿಷೀಷ್ಟ, 9 ಅನಂದಿ, ಅನಂದಯಿಷಾತಾಂ ಅನಂದಿಷಾತಾಂ ಢ್ವಂ, ಧ್ವಂ, 10 ಅನಂದಯಿಷ್ಯತ, ಅನಂದಿಷ್ಯತ ।

**ಕೋಶ**— ದ್ಯುವನಂ ಎಂಬಲ್ಲಿ ದಿವ್ ಎಂದರೆ ಸ್ವರ್ಗ, 'ಸುರೋಕೋ ದ್ಯೋ ದಿವೌ ದ್ವೇ' ಎಂದು ಅಮರ.

**ಪ್ರಯೋಗ**— ಇದಂ ದ್ಯುವನಂ ನಿಯಮೇನ ಜನಂ ನ ನಂದಯತಿ (ಕರ್ತರಿ) ।
ಅನೇನ ದ್ಯುವನೇನ ನಿಯಮೇನ ಜನಃ ನನಂದ್ಯತೇ (ಕರ್ಮಣಿ) ।
ಉಪೇಂದ್ರವನಂ ಸಕಲಂ ಅಭಿನಂದಯತಿ (ಕರ್ತರಿ) ।
ಉಪೇಂದ್ರವನೇನ ಸಕಲಃ ಅಭಿನಂದ್ಯತೇ (ಕರ್ಮಣಿ) ।

★ ★ ★

**ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದನವತ್ ।**
**ಸಹಿತಂ ಸಮಾದಿಪದತಾನನಗೈಃ ಪರಿಭೂಷಯಂತಿ ತದಹೋ ಋತವಃ ॥ 39 ॥**

**ಪದಚ್ಛೇದ**— ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದನವತ್, ಸಹಿತಂ, ಸಮಾದಿಪದತಾನನಗೈಃ, ಪರಿಭೂಷಯಂತಿ, ತತ್, ಅಹೋ, ಋತವಃ ।

**ಅನ್ವಯ**— ಋತವಃ, ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದನವತ್, ಸಮಾದಿಪದತಾನನಗೈಃ, ಸಹಿತಂ ತತ್, ಪರಿಭೂಷಯಂತಿ ಅಹೋ!

**ಅನ್ವಯಾರ್ಥ**—

**ಋತವಃ** = ವಸಂತಾದಿ ಋತುಗಳು

**ವರಪಾರಿಭದ್ರಕ, ಸುಕಲ್ಪತರುವ್ರಜ, ಪಾರಿಜಾತಹರಿಚಂದನವತ್** = ಉತ್ತಮವಾದ ಪಾರಿಭದ್ರಕವೆಂಬ ಮಂದಾರವೃಕ್ಷವು, ಒಳ್ಳೆಯ ಕಲ್ಪವೃಕ್ಷವು ಇವುಗಳ ಸಮೂಹವು, ಪಾರಿಜಾತ ವೃಕ್ಷವು ಹರಿಚಂದನ-ವೃಕ್ಷವು, ಇವುಗಳುಳ್ಳ

**ಸಮಾದಿಪದತಾನನಗೈಃ** = ('ಸಮ್') ಎಂಬ ಪದವು ಆದಿಯಾಗಿವುಳ್ಳ ಪದವುಳ್ಳ ತಾನವೃಕ್ಷಗಳಿಂದಲೂ (ಸಂತಾನ ಎಂಬ ವೃಕ್ಷಗಳಿಂದಲೂ)

**ಸಹಿತಂ** = ಕೂಡಿದ

**ತತ್** = ಆ ನಂದನವನವನ್ನು

**ಪರಿಭೂಷಯಂತಿ** = ಅಲಂಕರಿಸುತ್ತವೆ,

**ಅಹೋ** = ಆಶ್ಚರ್ಯವು.

**ತಾತ್ಪರ್ಯ**— ಆ ವೈಕುಂಠಲೋಕದಲ್ಲಿರುವ ಉದ್ಯಾನವನದಲ್ಲಿ ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನ ಎಂಬ ಐದು ಜಾತಿಯ ಉತ್ತಮವಾದ ಮರಗಳಿವೆ. ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರ ಎಂಬ ಆರು ಋತುಗಳೂ, ಆ ಮರಗಳಲ್ಲಿ ತಮ್ಮ ತಮ್ಮ ಸರದಿಗಳಲ್ಲಿ ನಿಯಮವಾಗಿ, ಅತ್ಯುತ್ತಮ ಪುಷ್ಪ ಫಲಾದಿಗಳು ಬಿಡುವಂತೆ ಮಾಡಿ, ಆ ವನವನ್ನು ಚೆನ್ನಾಗಿ ಪ್ರಕಾಶಗೊಳಿಸುತ್ತವೆ. ಹೀಗೆ ವೈಕುಂಠದ ವನವು ಎಲ್ಲಾ ಋತುಗಳಲ್ಲಿಯೂ ನಿಯಮದಿಂದ ಆಯಾ ಕಾಲಕ್ಕೆ ಯೋಗ್ಯವಾದ ಫಲಪುಷ್ಪಾದಿಗಳಿಂದ ಅಲಂಕೃತವಾಗಿದೆ ಎಂದು ಭಾವ.

**ವಿಗ್ರಹ**—

**ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದನವತ್**— ವರಾಶ್ಚ ತೇ ಪಾರಿಭದ್ರಕಾಶ್ಚ ವರಪಾರಿಭದ್ರಕಾಃ, ಶೋಭನಾಶ್ಚ ತೇ ಕಲ್ಪತರವಶ್ಚ ಸುಕಲ್ಪತರವಃ, ವರಪಾರಿಭದ್ರಕಾಶ್ಚ ಸುಕಲ್ಪತರವಶ್ಚ ವರಪಾರಿಭದ್ರಕಸುಕಲ್ಪತರವಃ, ತೇಷಾಂ ವ್ರಜಃ ವರಪಾರಿಭದ್ರಕಸುಕಲ್ಪತರುವ್ರಜಃ, ಪಾರಿಜಾತಾಶ್ಚ

ಹರಿಚಂದನಾಶ್ಚ ಪಾರಿಜಾತಹರಿಚಂದನಾಃ, ವರಪಾರಿಭದ್ರಕಸುಕಲ್ಪತರುವ್ರಜಶ್ಚ ಪಾರಿಜಾತಹರಿ-ಚಂದನಾಶ್ಚ ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದನಾಃ ಏತೇ ಅಸ್ಮಿನ್ ಸಂತೀತಿ ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದನವತ್ ।

**ಸಮಾದಿಪದತಾನನಗ್ಯೈಃ—** ಸಮ್ ಇತಿ ಪದಂ ಆದಿಪದಂ ಯೇಷಾಂ ತೇ ಸಮಾದಿಪದಾಃ, ತಾನಾ ಇತಿ ನಗಾಃ ತಾನನಗಾಃ, ಸಮಾದಿಪದಾಶ್ಚ ತೇ ತಾನನಗಾಶ್ಚ ಸಮಾದಿಪದತಾನನಗಾಃ, ತೈಃ ಸಮಾದಿಪದತಾನನಗ್ಯೈಃ। ಅಹೋ ಋತವಃ ಎಂಬಲ್ಲಿ 'ಓತ್' ಓದಂತೋ ನಿಪಾತಃ ಪ್ರಗೃಹ್ಯಃ ಸ್ಯಾತ್ ಎಂಬ ಸೂತ್ರದಿಂದ ಪ್ರಗೃಹ್ಯ ಸಂಜ್ಞೆಯು ಬಂದು ಪ್ರಕೃತಿ ಭಾವವು ಬಂದಿದೆ.

**ಕ್ರಿಯಾಪದ—** ಪರಿಭೂಷಯಂತಿ - ಪರಿ ಉಪಸರ್ಗಪೂರ್ವಕಾತ್ ಭೂಷ ಅಲಂಕರಣೇ ಇತ್ಯಸ್ಮಾದ್ ಧಾತೋಃ ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ 'ಪರಿಭೂಷಯಂತಿ' ಇತಿ ರೂಪಂ ।

2 ಭೂಷಯಾಂಚಕಾರ ಬಭೂವ.ಆಸ, 3 ಭೂಷಯಿತಾ, 4 ಭೂಷವಿಷ್ಯತಿ, 5 ಭೂಷಯತು, 6 ಅಭೂಷಯತ್, 7 ಭೂಷಯೇತ್, 8 ಭೂಷ್ಯಾತ್, 9 ಅಬೂಭುಷತ್, 10 ಅಭೂಷಯಿಷ್ಯತ್. ಕರ್ಮಣಿ 1 ಭೂಷ್ಯತೆ 2 ಭೂಷಯಾಂಚಕ್ರೇ, 3 ಭೂಷಯಿತಾ, 4 ಭೂಷಯಿಷ್ಯತೇ, 5 ಭೂಷ್ಯತಾಂ, 6 ಅಭೂಷ್ಯತ, 7 ಭೂಷ್ಯೇತ, 8 ಭೂಷಯಿಷೀಷ್ಟ, 9 ಅಭೂಷಿ, 10 ಅಭೂಷಯಿಷ್ಯತ ।

**ಪ್ರಯೋಗ—** ಋತವಃ ತದ್ವನಂ ಪರಿಭೂಷಯಂತಿ (ಕರ್ತರಿ) ।
ಋತುಭಿಃ ತದ್ವನಂ ಪರಿಭೂಷ್ಯತೇ (ಕರ್ಮಣಿ) ।

★ ★ ★

**ಅವತಾರಿಕಾ—** ವೈಕುಂಠಲೋಕದಲ್ಲಿ ಆ ವಿಲಾಸಿ ದಂಪತಿಗಳ ಭೋಗಕ್ಕೆ ಅನುಕೂಲವಾದ ವಸಂತಋತುವನ್ನು ವರ್ಣಿಸುತ್ತಾರೆ.

**ಸ್ಮಿತಮಾಧವೀಕುಸುಮರಮ್ಯತರೌ**
**ನವಚಂಪಕಾದಿಕುಸುಮೋಲ್ಲಸಿತೌ ।**
**ಮಧುಮಾಧವೌ ಮಧುಪಗೀರ್ಮಧುರೌ**
**ಮಧುಜಿತ್ಪ್ರಿಯಾನ್ ಪ್ರಮದಮಾನಯತಃ ॥ 40 ॥**

**ಪದಚ್ಛೇದ—** ಸ್ಮಿತಮಾಧವೀಕುಸುಮರಮ್ಯತರೌ, ನವಚಂಪಕಾದಿಕುಸುಮೋಲ್ಲಸಿತೌ, ಮಧುಮಾಧವೌ, ಮಧು-ಪಗೀರ್ಮಧುರೌ, ಮಧುಜಿತ್ಪ್ರಿಯಾನ್, ಪ್ರಮದಂ, ಆನಯತಃ ।

**ಅನ್ವಯ—** ಸ್ಮಿತಮಾಧವೀಕುಸುಮರಮ್ಯತರೌ, ನವಚಂಪಕಾದಿಕುಸುಮೋಲ್ಲಸಿತೌ, ಮಧುಪಗೀರ್ಮಧುರೌ, ಮಧುಜಿತ್ಪ್ರಿಯಾನ್, ಪ್ರಮದಂ, ಆನಯತಃ ।

**ಅನ್ವಯಾರ್ಥ—**

**ಸ್ಮಿತಮಾಧವೀಕುಸುಮರಮ್ಯತರೌ** = ಅರಳಿದ ಮಲ್ಲಿಗೆ ಹೂವುಗಳಿಂದ (Jasmine flowers) ಅತ್ಯಂತ ಮನೋಹರವಾದ,

**ನವಚಂಪಕಾದಿಕುಸುಮೋಲ್ಲಸಿತೌ** = ಹೊಸದಾದ ಸಂಪಿಗೆಯೇ ಮೊದಲಾಗಿವುಳ್ಳ ಹೂವುಗಳಿಂದ ಪ್ರಕಾಶ-ಮಾನವಾದ

**ಮಧುಪಗೀರ್ಮಧುರೌ** = ದುಂಬಿಗಳ ಸ್ವರಗಳಿಂದ ಮನೋಹರಗಳಾದ

**ಮಧುಮಾಧವೌ** = ಚೈತ್ರ ವೈಶಾಖಮಾಸಗಳು

**ಮಧುಜಿತ್** = ಶ್ರೀಮನ್ನಾರಾಯಣನಿಗೆ

**ಪ್ರಿಯಾನ್** = ಇಷ್ಟರಾದ ಭಕ್ತರನ್ನು

**ಪ್ರಮದಂ** = ಸಂತೋಷವನ್ನು

**ಆನಯತಃ** = ಹೊಂದಿಸುತ್ತವೆ.

**ತಾತ್ಪರ್ಯ**— ಆ ವೈಕುಂಠಲೋಕದಲ್ಲಿ ಚೈತ್ರ, ವೈಶಾಖ ಮಾಸಗಳಲ್ಲಿ ಮಾಧವೀ (ವಾಸಂತೀಬಳ್ಳಿ) ಲತೆಗಳು ಅರಳಿದ ಹೂವುಗಳಿಂದ ಕಂಗೊಳಿಸುತ್ತಾ ಇರುತ್ತವೆ. ಸಂಪಿಗೆ ಮೊದಲಾದ ಹೂವುಗಳೂ ಅರಳಿ ಸುವಾಸನೆಯನ್ನು ಬೀರುತ್ತಾ ಈ ವಸಂತನ ವಿಲಾಸವನ್ನು ಹೆಚ್ಚಿಸುತ್ತವೆ. ದುಂಬಿಗಳು ಹೂವುಗಳ ಮಕರಂದವನ್ನು ಹೀರಿ ಆನಂದದಿಂದ ಇಂಪಾಗಿ ಝೇಂಕರಿಸುತ್ತಾ ಇರುತ್ತವೆ. ಈ ರೀತಿ ಚೈತ್ರ, ವೈಶಾಖಮಾಸಗಳ ವಸಂತಋತುವು ವೈಕುಂಠದಲ್ಲಿ ವಾಸಿಸುವ ಶ್ರೀಮನ್ಮಹಾವಿಷ್ಣುವಿನ ಭಕ್ತರಿಗೆ ಸಂತೋಷವನ್ನುಂಟು ಮಾಡುತ್ತವೆ.

**ವಿಗ್ರಹ**—

**ಸ್ಮಿತಮಾಧವೀಕುಸುಮರಮ್ಯತರೌ**— ಮಾಧವೀನಾಂ ಕುಸುಮಾನಿ ಮಾಧವೀಕುಸುಮಾನಿ, ಸ್ಮಿತಾನಿ ಚ ತಾನಿ ಮಾಧವೀಕುಸುಮಾನಿ ಚ ಸ್ಮಿತಮಾಧವೀಕುಸುಮಾನಿ ಅತಿಶಯೇನ ರಮ್ಯೌ ರಮ್ಯತರೌ, ಸ್ಮಿತ-ಮಾಧವೀಕುಸುಮೈಃ ರಮ್ಯತರೌ ಸ್ಮಿತಮಾಧವೀಕುಸುಮರಮ್ಯತರೌ ।

**ನವಚಂಪಕಾದಿಕುಸುಮೋಲ್ಲಸಿತೌ**— ಚಂಪಕಂ ಆದಿ ಯೇಷಾಂ ತಾನಿ ಚಂಪಕಾದೀನಿ, ಚಂಪಕಾದೀನಿ ಚ ತಾನಿ ಕುಸುಮಾನಿ ಚ ಚಂಪಕಾದಿಕುಸುಮಾನಿ, ನವಾನಿ ಚ ತಾನಿ ಚಂಪಕಾದಿಕುಸುಮಾನಿ ಚ ನವ-ಚಂಪಕಾದಿಕುಸುಮಾನಿ, ನವಚಂಪಕಾದಿಕುಸುಮೈಃ ಉಲ್ಲಸಿತೌ ನವಚಂಪಕಾದಿಕುಸುಮೋಲ್ಲಸಿತೌ ।

**ಮಧುಮಾಧವೌ**— ಮಧುಶ್ಚ ಮಾಧವಶ್ಚ ಮಧುಮಾಧವೌ ।

**ಮಧುಪಗೀರ್ಮಧುರೌ**— ಮಧು ಪಿಬಂತೀತಿ ಮಧುಪಾಃ, ಮಧುಪಾನಾಂ ಗಿರಃ ಮಧುಪಗಿರಃ, ಮಧು-ಪಗೀರ್ಭಿಃ ಮಧುರೌ ಮಧುಪಗೀರ್ಮಧುರೌ ।

**ಮಧುಜಿತ್ಪ್ರಿಯಾನ್**— ಮಧುಂ ಜಯತೀತಿ ಮಧುಜಿತ್, ಮಧುಜಿತಃ ಪ್ರಿಯಾಃ ಮಧುಜಿತ್ಪ್ರಿಯಾಃ, ತಾನ್ ಮಧುಜಿತ್ಪ್ರಿಯಾನ್ ।

**ಕ್ರಿಯಾಪದ**— **ಆನಯತಃ**- ಆ ಇತ್ಯುಪಸರ್ಗಪೂರ್ವಕಾತ್ ಣೀಞ್ (ನೀ) ಪ್ರಾಪಣೇ ಇತಿ ಸಕರ್ಮಕಃ ಅನಿಟ್ ಉಭಯಪದೀ ಪ್ರಕೃತೇ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ದ್ವಿವಚನೇ 'ಆನಯತಃ' ಇತಿ ರೂಪಂ ।

2 ಲಿಟ್ ನಿನಾಯ ನಿನ್ಯತುಃ ನಿನ್ಯುಃ ನಿನಯಥ ನಿನೇಥ ನಿನ್ಯಥುಃ ನಿನ್ಯ, ನಿನಾಯ ನಿನಯ, ನಿನ್ಯಿವ ನಿನ್ಯಿಮ, 3 ಲುಟ್ ನೇತಾ ನೇತಾರೌ ನೇತಾರಃ, ನೇತಾಸಿ, 4 ಲೃಟ್ ನೇಷ್ಯತಿ, 5 ಲೋಟ್ ನಯತು, 6 ಲಙ್ ಅನಯತ್ ವಿಧಿಲಿಙ್ ನಯೇತ್, 7 ಆಶೀರ್ಲಿಙ್ ನೀಯಾತ್ ನೀಯಾಸ್ತಾಂ ನೀಯಾಸುಃ, 8 ಲುಙ್ ಅನೈಷೀತ್ ಅನೈಷ್ಟಾಂ ಅನೈಷುಃ ಅನೇಷೀಃ ಅನೈಷ್ಟಂ ಅನೈಷ್ಟ, ಅನೈಷಂ ಅನೈಷ್ವ ಅನೈಷ್ಮ, 10 ಲೃಙ್ ಅನೇಷ್ಯತ್. ಕರ್ಮಣಿ 1 ನೀಯತೇ, 2 ನಿನ್ಯೇ, 3 ನಾಯಿತಾ (ಸೇ.ಹೇ) ನೇತಾ (ಸೇ.ಹೇ), 4 ನಾಯಿಷ್ಯತೇ ನೇಷ್ಯತೇ, 5 ನೀಯತಾಂ, 6 ಅನೀಯತ, 7 ನೀಯೇತ, 8 ನಾಯಿಷೀಷ್ಟ (ಢ್ವಂ, ಧ್ವಂ) ನೇಷೀಷ್ಟ-ಢ್ವಂ, 9 ಅನಾಯಿ ಅನಾಯಿಷಾತಾಂ (ಢ್ವಂ, ಧ್ವಂ) ಅನೇಷಾತಾಂ ಢ್ವಂ, 10 ಅನಾಯಿಷ್ಯತ ಅನೇಷ್ಯತ ।

**ಕೋಶ—** 'ಸ್ಯಾಚ್ಚೈತ್ರೇ ಚೈತ್ರಿಕೋ ಮಧುಃ, ವೈಶಾಖೇ ಮಾಧವೋ ರಾಧಃ', ಇತ್ಯಮರಃ । 'ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ', ಇತಿ ಯಜುರ್ವೇದೇ । 'ಮುತ್‌ಪ್ರೀತಿಃ ಪ್ರಮದೋ ಹರ್ಷಃ', ಇತ್ಯಮರಃ । 'ಚೈತ್ರವಸಂತಮದು-ದ್ರುಮದೃತ್ಯವಿಶೇಷೇಷು ಪುಂಸಿ ಮಧುಶಬ್ದಃ, ಕ್ಲೀಬೇ ತ್ವಂಬುನಿದುಗ್ಧೇ ಮಕರಂದೇ ರೌದ್ರಮದ್ಯಯೋರಸ್ತ್ರೀ' ಇತಿ ನಾನಾರ್ಥರತ್ನಮಾಲಾ । 'ಮಧುರಂ ರಸವತ್ ಸ್ವಾದು ಪ್ರಿಯೇಷು' ಇತಿ ವಿಶ್ವಃ, 'ಮಧುರೋ ನಾ ರಸೇ ತದ್ವತ್ ಸುಂದರ-ಸ್ವಾದುಷು ತ್ರಿಷು, ಮಧುರಾತಶಪುಷ್ಪಾ ಚ' ಇತಿ ನಾನಾರ್ಥರತ್ನಮಾಲಾ ।

**ಪ್ರಯೋಗ—** ಮಧುಮಾಧವೌ ಮಧುಜಿತ್‌ಪ್ರಿಯಾನ್ ಪ್ರಮದಂ ಆನಯತಃ (ದ್ವಿಕರ್ಮಕ ಕರ್ತರಿ ಪ್ರಯೋಗಃ)
ಮಧುಮಾಧವಾಭ್ಯಾಂ ಮಧುಜಿತ್‌ಪ್ರಿಯಾಃ ಪ್ರಮದಂ ಆನೀಯಂತೇ (ಕರ್ಮಣಿ ಪ್ರಯೋಗ)

★ ★ ★

**ಅವತಾರಿಕಾ—** ಗ್ರೀಷ್ಮದ ಗುಣವನ್ನು ಹೇಳುತ್ತಾ ವಿಲಾಸಿಗಳ ಭೋಗವಿಲಾಸಗಳನ್ನು ವರ್ಣಿಸುತ್ತಾರೆ.

**ನವಮಲ್ಲಿಕಾಸ್ರಜಮಭೀಷ್ಟತಮಃ ಶುಚಿಸಂಭವಾಂ ಪ್ರಣಯಿನೀಶಿರಸಿ ।**
**ಕಲಯನ್ ಸ್ವಯಂ ನ ಕುಶಲೇತಿ ಕಿಲ ಪ್ರತಿಘಟ್ಟಯತ್ಯುರುಕುಚಾವುರಸಾ ॥ 41 ॥**

**ಪದಚ್ಛೇದ—** ನವಮಲ್ಲಿಕಾಸ್ರಜಂ, ಅಭೀಷ್ಟತಮಃ, ಶುಚಿಸಂಭವಾಂ, ಪ್ರಣಯಿನೀಶಿರಸಿ, ಕಲಯನ್, ಸ್ವಯಂ, ನ, ಕುಶಲಾ, ಇತಿ, ಕಿಲ ಪ್ರತಿಘಟ್ಟಯತಿ, ಉರುಕುಚೌ, ಉರಸಾ ।

**ಅನ್ವಯ—** ಅಭೀಷ್ಟತಮಃ, ಶುಚಿಸಂಭವಾಂ ನವಮಲ್ಲಿಕಾಸ್ರಜಂ ನ ಕುಶಲಾ ಇತಿ ಕಿಲ, ಸ್ವಯಂ ಪ್ರಣಯಿನೀಶಿರಸಿ ಕಲಯನ್, ಉರಸಾ ಉರುಕುಚೌ ಪ್ರತಿಘಟ್ಟಯತಿ ।

**ಅನ್ವಯಾರ್ಥ—**

**ಅಭೀಷ್ಟತಮಃ** = ಅತ್ಯಂತ ಪ್ರಿಯನಾದ ಪತಿಯು,
**ಶುಚಿಸಂಭವಾಂ** = ಜ್ಯೇಷ್ಠಮಾಸದಲ್ಲಿ (ಗ್ರೀಷ್ಮ ಋತುವಿನಲ್ಲಿ) ಹುಟ್ಟಿದ
**ನವಮಲ್ಲಿಕಾಸ್ರಜಂ** = ಹೊಸದಾದ ಮಲ್ಲಿಗೆ ಹೂವಿನ ಮಾಲೆಯನ್ನು
**(ತ್ವಂ) ನ ಕುಶಲಾ ಇತಿ ಕಿಲ** = ನೀನು ಸಮರ್ಥಳಲ್ಲವೆಂದೋ ಎಂಬಂತೆ
**ಸ್ವಯಂ** = ತಾನೇ
**ಪ್ರಣಯಿನೀ** = ಪ್ರೇಯಸಿಯ
**ಶಿರಸಿ** = ತಲೆಯಲ್ಲಿ
**ಕಲಯನ್(ಸನ್)** = ಮುಡಿಸುತ್ತಿರುವವನಾಗಿ
**ಉರಸಾ** = ತನ್ನ ಎದೆಯಿಂದ
**ಉರುಕುಚೌ** = ದೊಡ್ಡ ಸ್ತನಗಳನ್ನು
**ಪ್ರತಿಘಟ್ಟಯತಿ** = ಪ್ರತಿಘಟ್ಟಿಯಾಗಿ ಹೊಡೆಯುತ್ತಾನೆ (ಆಲಿಂಗಿಸುತ್ತಾನೆ)

**ತಾತ್ಪರ್ಯ—** ವೈಕುಂಠಲೋಕದಲ್ಲಿ ದಂಪತಿಗಳು ವಿಹರಿಸುತ್ತಿರುವಾಗ ಪ್ರಿಯೆಯು ಜ್ಯೇಷ್ಠ ಮಾಸದಲ್ಲಿ (ಗ್ರೀಷ್ಮ ಋತುವಿನಲ್ಲಿ) ಅರಳಿದ ಮಲ್ಲಿಗೆ ಹೂವಿನ ಮಾಲೆಯನ್ನು ತನ್ನ ತುರುಬಿನಲ್ಲಿ ಮುಡಿದುಕೊಳ್ಳಲು ಯತ್ನಿಸುತ್ತಾಳೆ. ಆಗ ಅತ್ಯಂತ ಪ್ರಿಯನಾದ ಅವಳ ಪತಿಯು ಪ್ರೇಯಸಿಯನ್ನು ಯಾವುದಾದರೊಂದು ನೆಪದಿಂದ ಎದೆಯಲ್ಲಿ ಗಾಢವಾಗಿ ಆಲಿಂಗಿಸಲು ಬಯಸಿ 'ಪ್ರಿಯೇ ನಿನಗೆ ಸರಿಯಾಗಿ ಹೂವು ಮುಡಿದುಕೊಳ್ಳಲು ತಿಳಿಯದು' ಎಂದು ಹೇಳುತ್ತಾ ಆ

ಮಾಲೆಯನ್ನು ತಾನು ತೆಗೆದುಕೊಂಡು ಪ್ರಿಯಳ ಎದುರಿನಲ್ಲಿ ನಿಂತು ಅವಳ ತಲೆಗಂಟಿನಲ್ಲಿ ಮುಡಿಸುವ ನೆಪದಿಂದ ತನ್ನ ಎದೆಯಿಂದ ಅವಳ ದೊಡ್ಡ ಸ್ತನಗಳನ್ನು ಘಟ್ಟಿಸಿ ಬಿಗಿಯಾಗಿ ಆಲಿಂಗಿಸುತ್ತಾನೆ.

**ವಿಗ್ರಹ—** ಛಲಾರಿಯ ವ್ಯಾಖ್ಯಾನದಲ್ಲಿ ಈ ಸಂದರ್ಭದ ಭಾವವನ್ನು ಸರಳ ಸಂಸ್ಕೃತದಲ್ಲಿ ಈ ರೀತಿ ಹೇಳಿದ್ದಾರೆ.

**ಅಯಂಭಾವಃ—** ಮಲ್ಲಿಕಾಕುಸುಮಮಾಲಾಂ, ಕಬರ್ಯಾಂ ಬಂಧುಂ ಉದ್ಯತಾಂ ರಮಣೀಂ ಪ್ರೇಕ್ಷ್ಯ ರಮಣಃ, ಹೇ ರಮಣೀ, ತ್ವಂ ಬಂಧುಂ ನ ವೇತ್ಸಿ, ಇತಿ ವದನ್ ಸನ್ ತಾಂ ಮಾಲಾಂ ಆದಾಯ, ತಸ್ಯಾಃ ಅಭಿಮುಖಂ ಸ್ಥಿತ್ವಾ, ಸ್ವತಃ ಕಬರ್ಯಾಂ ಸ್ವಹಸ್ತಾಭ್ಯಾಂ ಬಧ್ನನ್ ಬಂಧನವ್ಯಾಜೇನ ಸ್ವವಚಸಾ ತಸ್ಯಾಃ ಸ್ಥೂಲಕುಚೌ ಘಟ್ಟಯನ್ ಆಶ್ಲಿಷ್ಯತೀತಿ.

**ವಿಗ್ರಹ—**

**ನವಮಲ್ಲಿಕಾಸ್ರಜಂ—** ಮಲ್ಲಿಕಾನಾಂ ಸ್ರಕ್ ಮಲ್ಲಿಕಾಸ್ರಕ್, ನವಾ ಚ ಸಾ ಮಲ್ಲಿಕಾಸ್ರಕ್ ಚ ನವಮಲ್ಲಿಕಾಸ್ರಕ್, ತಾಂ ನವಮಲ್ಲಿಕಾಸ್ರಜಂ ।

**ಅಭೀಷ್ಟತಮಃ—** ಅತಿಶಯೇನ ಅಭೀಷ್ಟಃ ಅಭೀಷ್ಟತಮಃ ।

**ಶುಚಿಸಂಭವಾಂ—** ಶುಚೌ ಸಂಭವಃ ಯಸ್ಯಾಃ ಸಾ ಶುಚಿಸಂಭವಾ, ತಾಂ ಶುಚಿಸಂಭವಾಂ ।

**ಪ್ರಣಯಿನೀಶಿರಸಿ—** ಪ್ರಣಯಃ ಅಸ್ಯಾಃ ಅಸ್ತೀತಿ ಪ್ರಣಯಿನೀ, ಪ್ರಣಯಿನ್ಯಾಃ ಶಿರಃ ಪ್ರಣಯನೀಶಿರಃ, ತಸ್ಮಿನ್ ಪ್ರಣಯಿನೀಶಿರಸಿ ।

**ನ ಕುಶಲಾ—** ನ ಕುಶಲಾ ನಕುಶಲಾ, ಇದು ನಞ ಅರ್ಥವುಳ್ಳ 'ನ' ಶಬ್ದವಾದ್ದರಿಂದ ನಕಾರಕ್ಕೆ ಲೋಪ ಬರುವುದಿಲ್ಲ. 'ನೈಕಧಾ' ಇತ್ಯಾದಿಗಳಂತೆ ಎಂದು ತಿಳಿಯಬೇಕು.

**ಉರುಕಪಟ್ಟೈ—** ಉರೂ ಚ ತೌ ಕುಚೌ ಚ ಉರುಕುಚೌ ತೌ ।

**ಕ್ರಿಯಾಪದ—** ಪ್ರತಿಘಟ್ಟಯತಿ- ಘಟ್ಟಾ ಚಲನೇ ಇತಿ ಧಾತೋ ಅಕರ್ಮಕಾತ್ ಸೇಟ್ ಆತ್ಮನೇಪದಿನಃ ತಸ್ಮಾತ್ ಣಜಂತೇ ಪರಸ್ಮೈಪದೀ ಲಟ್ ಪ್ರತಿ ಉಪಸರ್ಗ ಅಥವಾ ಘಟ್ಟತಾಡನೇ ಣಿಜಂತಾತ್ ಪರಸ್ಮೈಪದಿ ಲಟ್ ಪ್ರಥಮಪುರುಷೇ ಏಕವಚನೇ 'ಪ್ರತಿಘಟ್ಟಯತಿ' ಇತಿ ರೂಪಂ ।

ಪ್ರತಿ+ಘಟ್ಟಯತಿ ಘಟ್ಟಯತಃ ಘಟ್ಟಯಂತಿ, ಘಟ್ಟಯಸಿ ಘಟ್ಟಯಥಃ ಘಟ್ಟಯಥ, ಘಟ್ಟಯಾಮಿ ಘಟ್ಟಯಾವಃ ಘಟ್ಟಯಾಮಃ ॥

**ಕೋಶ—** ಶುಚೀ = ಗ್ರೀಷ್ಮಋತು ಅಥವಾ ಜ್ಯೇಷ್ಠಮಾಸ 'ಶುಚಿಃ ಶುದ್ಧೇಽನುಪಹತೇ ಶೃಂಗಾರಾಷಾಢಯೋಃ ಸಿತೇ । ಗ್ರೀಷ್ಮೇ ಹುತವಹೇಽಪಿ ಸ್ಯಾತ್' ಇತಿ ವಿಶ್ವಃ 'ಜ್ಯೇಷ್ಠೇ ಶುಕ್ರಶುಚಿಸ್ತ್ವಯಂ' ಅಮರ । 'ಉರಸ್ತು ವಕ್ಷಸಿ ಶ್ರೇಷ್ಠೇ' ಇತಿ ನಾನಾರ್ಥರತ್ನಮಾಲಾ ।

**ಪ್ರಯೋಗ—** ಅಭೀಷ್ಟತಮಃ ಉರುಕುಚೌ ಪ್ರತಿಘಟ್ಟಯತಿ (ಕರ್ತರಿ) ।
ಅಭೀಷ್ಟತಮೇನ ಉರುಕುಚೌ ಪ್ರತಿಘಟ್ಯೇತೇ (ಕರ್ಮಣಿ) ।

★ ★ ★

**ಅವತಾರಿಕಾ—** ವರ್ಷ ಋತುವಿನ ಗುಣವನ್ನು ವರ್ಣಿಸುತ್ತಾರೆ.

**ಮಧುರಸ್ವರಾಸ್ತತಪತತ್ರತತಿಪ್ರಕಟಾಂತಪಂಕ್ತಿಧೃತನೇತ್ರರುಚಃ ।**
**ಶಿಖಿನೋಽನುಯಾಂತಿ ಹಿ ಸಹಸ್ರದೃಶಂ ಜಲದರ್ತುಲಕ್ಷ್ಮ ನಿಜನೃತ್ತಮಹೇ ॥ 42 ॥**

**ಪದಚ್ಛೇದ—** ಮಧುರಸ್ವರಾಃ, ತತಪತತ್ರತತಿಪ್ರಕಟಾಂತಪಂಕ್ತಿಧೃತನೇತ್ರರುಚಃ, ಶಿಖಿನಃ, ಅನುಯಾಂತಿ, ಹಿ, ಸಹಸ್ರದೃಶಂ, ಜಲದರ್ತುಲಕ್ಷ್ಮ ನಿಜನೃತ್ತಮಹೇ ।

**ಅನ್ವಯ—** ಮಧುರಸ್ವರಾಃ, ತತಪತತ್ರತತಿಪ್ರಕಟಾಂತಪಂಕ್ತಿಧೃತನೇತ್ರರುಚಃ, ಶಿಖಿನಃ, ಜಲದರ್ತುಲಕ್ಷ್ಮನಿಜನೃತ್ತಮಹೇ, ಸಹಸ್ರದೃಶಂ ಅನುಯಾಂತಿ ಹಿ ।

**ಅನ್ವಯಾರ್ಥ—**

**ಮಧುರಸ್ವರಾಃ** = ಇಂಪಾದ ಧ್ವನಿಯುಳ್ಳ

**ತತ, ಪತತ್ರ, ತತಿ, ಪ್ರಕಟಾಂತ, ಪಂಕ್ತಿ, ಧೃತನೇತ್ರರುಚಃ** = ಹರಡಿದ, ರೆಕ್ಕೆಗಳ, ಸಮೂಹಗಳಲ್ಲಿ, ಸ್ಪಷ್ಟವಾಗಿ ಕಾಣುವ, ಗರಿಗಳ ಕೊನೆಭಾಗಗಳಲ್ಲಿ ಕಾಣುವ ವರ್ತುಲಾಕಾರಗಳ, ಸಾಲುಗಳಲ್ಲಿ, ಧರಿಸಲ್ಪಟ್ಟ ಕಣ್ಣುಗಳ ಕಾಂತಿಗಳುಳ್ಳ

**ಶಿಖಿನಃ** = ನವಿಲುಗಳು

ಜಲದರ್ತು ಲಕ್ಷ್ಮ ನಿಜನೃತ್ತಮಹೇ= ಮಳೆಗಾಲದ, ಚಿಹ್ನೆಯಾದ, ತಮ್ಮ, ನರ್ತನವೆಂಬ ಉತ್ಸವದಲ್ಲಿ

ಸಹಸ್ರದೃಶಂ = ಇಂದ್ರನನ್ನು

ಅನುಯಾಂತಿ ಹಿ = ಅನುಕರಿಸುತ್ತವೆಯಷ್ಟೆ.

**ತಾತ್ಪರ್ಯ—** ಆ ವೈಕುಂಠಲೋಕದಲ್ಲಿ ಮಳೆಗಾಲದಲ್ಲಿ ನವಿಲುಗಳು, ಮೋಡಗಳನ್ನು ಕಂಡು ಇಂಪಾಗಿ ಕೂಗುತ್ತ ಸಂತೋಷದಿಂದ ಕುಣಿಯುತ್ತವೆ. ನವಿಲುಗಳ ಆ ಕುಣಿತವು ಮಳೆಗಾಲಕ್ಕೆ ಸೂಚಕವಾಗಿದೆ. ಹೀಗೆ ಮಳೆಗಾಲ ಬಂದಾಗ ಅವು ತಮ್ಮ ಗರಿಗಳನ್ನು ಬಿಡಿಸಿಕೊಂಡಿರುವುದರಿಂದ ಅವುಗಳ ಕೊನೆಯಲ್ಲಿ ಕಣ್ಣುಗಳಂತೆ ಗುಂಡಗಿರುವ ಆಕೃತಿಗಳು ಕಾಣಿಸುತ್ತದೆ. ಇದರಿಂದ ಆ ನವಿಲುಗಳು ಸಾವಿರ ಕಣ್ಣುಗಳುಳ್ಳ ದೇವೇಂದ್ರನಂತೆ ತೋರುತ್ತವೆ.

ವಿಗ್ರಹ—

**ಮಧುರಸ್ವರಾಃ—** ಮಧುರಃ ಸ್ವರಃ ಯೇಷಾಂ ತೇ ಮಧುರಸ್ವರಾಃ ।

**ತತಪತತ್ರತತಿಪ್ರಕಟಾಂತಪಂಕ್ತಿಧೃತನೇತ್ರರುಚಃ—** ತತಾನಿ ಚ ತಾನಿ ಪತತ್ರಾಣಿ ಚ ತತಪತತ್ರಾಣಿ, ತತಪತತ್ರಾಣಾಂ ತತಯಃ ತತಪತತ್ರತತಯಃ, ತತಪತತ್ರತತಿಷು ಪ್ರಕಟಾಃ ತತಪತತ್ರತತಿಪ್ರಕಟಾಃ, ಅಂತಾನಾಂ ಪಂಕ್ತಯಃ ಅಂತಪಂಕ್ತಯಃ, ತತಪತತ್ರತತಿಪ್ರಕಟಾಶ್ಚ ತಾಃ ಅಂತಪಂಕ್ತಯಶ್ಚ ತತಪತತ್ರತತಿಪ್ರಕಟಾಂತಪಂಕ್ತಯಃ, ಧೃತಾ ನೇತ್ರಾಣಾಂ ರುಕ್ ಯೈಃ ತೇ ಧೃತನೇತ್ರರುಚಃ, ತತಪತತ್ರತತಿಪ್ರಕಟಾಂತಪಂಕ್ತಿಷು ಧೃತನೇತ್ರರುಚಃ ತತಪತತ್ರತತಿಪ್ರಕಟಾಂತಪಂಕ್ತಿಧೃತನೇತ್ರರುಚಃ ।

**ಶಿಖಿನಃ—** ಶಿಖಾ ಏಷಾಂ ಅಸ್ತೀತಿ ಶಿಖಿನಃ ।

**ಸಹಸ್ರದೃಶಂ—** ಸಹಸ್ರಂ ದೃಶಃ ಯಸ್ಯ ಸಃ ಸಹಸ್ರದೃಕ್, ತಂ ಸಹಸ್ರದೃಶಂ ।

**ಜಲದರ್ತುಲಕ್ಷನಿಜನೃತ್ತಮಹೇ—** ಜಲಂ ದದಾತೀತಿ ಜಲದಃ, ಜಲದಸ್ಯಾಸೌ ಋತುಶ್ಚ ಜಲದರ್ತುಃ, ಜಲದರ್ತೋಃ ಲಕ್ಷ್ಮ ಜಲದರ್ತುಲಕ್ಷ್ಮ, ನಿಜಂ ಚ ತತ್ ನೃತ್ತಂ ನಿಜನೃತ್ತಂ, ಜಲದರ್ತುಲಕ್ಷ್ಮ ಚ ತತ್ ನಿಜನೃತ್ತಂ ಚ ಜಲದರ್ತುಲಕ್ಷ್ಮನಿಜನೃತ್ತಂ, ಜಲದರ್ತುಲಕ್ಷ್ಮನಿಜನೃತ್ತಂ ಇತಿ ಮಹಃ ಜಲದರ್ತುಲಕ್ಷ್ಮನಿಜನೃತ್ತಮಹಃ ತಸ್ಮಿನ್ ।

**ಕ್ರಿಯಾಪದ— ಅನುಯಾಂತಿ-** ಅನು ಉಪಸರ್ಗಪೂರ್ವಕಾತ್ ಸಕರ್ಮಕಾತ್ ಕರ್ತರಿ ಯಾಪ್ರಾಪಣೇ ಇತಿ ಧಾತೋಃ ಲಟ್ ಪ್ರಥಮಪುರುಷೇ ಬಹುವಚನೇ 'ಅನುಯಾಂತಿ' ಇತಿ ರೂಪಂ ।

1. **ಅನು+ಯಾತಿ ಯಾತಃ ಯಾಂತಿ, ಯಾಸಿ ಯಾಥಃ** ಯಾಥ, ಯಾಮಿ ಯಾವಃ ಯಾಮಃ । 2 **ಯಯೌ ಯಯತುಃ ಯಯುಃ, ಯಯಿಥ-ಯಯಾಥ ಯಯಥುಃ** ಯಯ, ಯಯೌ ಯಯಿವ ಯಯಿಮ, 3 ಯಾತಾ, 4 **ಯಾಸ್ಯತಿ**, 5 **ಯಾತು-ಯಾತಾತ್ ಯಾತಾಂ ಯಾಂತು**, ಯಾಹಿ-ಯಾತಾತ್ ಯಾತಂ ಯಾತ, ಯಾನಿ ಯಾವ

ಯಾಮ, 6 ಅಯಾತ್ ಅಯಾತಾಂ ಅಯುಃ ಅಯಾನ್, ಅಯಾಃ ಅಯಾತಂ ಅಯಾತ, ಅಯಾಂ ಅಯಾವ ಅಯಾಮ, 7 ಯಾಯಾತ್ ಯಾಯಾತಾಂ ಯಾಯುಃ, ಯಾಯಾಃ ಯಾಯಾತಂ ಯಾಯಾತ, ಯಾಯಾಂ ಯಾಯಾವ ಯಾಯಾಮ, 8 ಯಾಯಾತ್ ಯಾಯಾಸ್ತಾಂ ಯಾಯಾಸುಃ, ಯಾಯಾಃ ಯಾಯಾಸ್ತಂ ಯಾಯಾಸ್ತ ಯಾಯಾಸಂ ಯಾಯಾಸ್ವ ಯಾಯಾಸ್ಮ, 9 ಅಯಾಸೀತ್ ಅಯಾಸಿಷ್ಟಾಂ ಅಯಾಸಿಷುಃ, ಅಯಾಸೀಃ ಅಯಾಸಿಷ್ಟಂ ಅಯಾಸಿಷ್ಟ, ಅಯಾಸಿಷಂ ಅಯಾಸಿಷ್ವ ಅಯಾಸಿಷ್ಮ, 10 ಅಯಾಸ್ಯತ್ ।

ಭಾವೇ 1 ಯಾಯತೇ, 2 ಯಯೇ, 3 ಯಾಯಿತಾ, 4 ಯಾಯಿಷ್ಯತೇ ಯಾಸ್ಯತೇ, 5 ಯಾಯತಾಂ, 6 ಅಯಾಯತ, 7 ಯಾಯೇತ, 8 ಯಾಯಿಷೀಷ್ಟ, 9 ಅಯಾಯಿ, 10 ಅಯಾಯಿಷ್ಯತ, ಅಯಾಸ್ಯತ ।

ಕೃದಂತ ಯಾತವ್ಯಂ, ಯಾನೀಯಂ, ಯೇಯಃ ಯಾತಃ ಯಾತವಾನ್, ಯಾನ್, ಯಾತೀ, ಯಾಂತೀ, ಯಾಸ್ಯನ್ ಯಾಸ್ಯಂತೀ, ಯಾತುಂ, ಯಾತಂ, ಯಾನಂ, ಯಾತ್ವಾ, ಪ್ರಯಾಯ, ಯಾಯಂ, ಯಾಯಂ ಯಾತ್ವಾ ಯಾತ್ವಾ ।

**ಕೋಶ—** ಶಿಖಿನಃ = ನವಿಲುಗಳು, 'ಶಿಖಾವಲಃ ಶಿಖೀ ಕೇಕೀ' ಇತ್ಯಮರಃ । 'ಕೇಕೀ ಶಿಖೀ ಶಿಖಂಡೀ' ಇತಿ ಹಲಃ, ಲಕ್ಷ್ಮ = ಗುರುತು, ಚಿಹ್ನಂ ಲಕ್ಷ್ಮ ಚ ಲಕ್ಷಣಂ ಇತ್ಯಮರಃ ಮಹಃ = ಉತ್ಸವ, 'ಮಹ ಉದ್ಧವ ಉತ್ಸವಃ' ಇತ್ಯಮರಃ ಪತತ್ರ = ರೆಕ್ಕೆ, 'ಗರಿ ಗರುತ್ ಪಕ್ಷಚ್ಛದಾಃ ಪತ್ರಂ ಪತತ್ರಂ ಚ ತನೂರುಹಂ' ಇತ್ಯಮರಃ ।

**ವಿಶೇಷಾಂಶ—** ಇಲ್ಲಿ ಛಲಾರೀಯದಲ್ಲಿ ಈ ರೀತಿ ತಾತ್ಪರ್ಯವನ್ನು ವರ್ಣಿಸಿದ್ದಾರೆ. ವರ್ಷರ್ತೌ ಮೇಘಧ್ವನಿಂ ಶ್ರುತ್ವಾ ಮಯೂರಾಃ ಮಧುರಸ್ವರಂ ಕುರ್ವಂತಃ ಸಂತಃ ನೃತ್ಯಂತೀತಿ ಪ್ರಸಿದ್ಧಮ್ । ಮಯೂರನರ್ತನಂ ವರ್ಷರ್ತೋಃ ಲಕ್ಷಣಂ, ನರ್ತನಸಮಯೇ ಚ ತೇಷಾಂ ಬರ್ಹಾಣಿ ಆವಿರ್ಭವಂತಿ. ತದಗ್ರೇಷು ನಯನಸದೃಶಾನಿ ವರ್ತುಲಾನಿ ಪ್ರಕಟೀ ಭವಂತಿ, ತೈಸ್ತ್ವ ತೇ ಸಹಸ್ರನೇತ್ರಯುಕ್ತೇಂದ್ರಸದೃಶಾಃ ಪ್ರತೀಯಂತೇ ಇತಿ ।

**ಪ್ರಯೋಗ—** ಶಿಖಿನಃ ಸಹಸ್ರದೃಶಂ ಅನುಯಾಂತಿ (ಕರ್ತರಿ) ।
ಶಿಖಿಭಿಃ ಸಹಸ್ರದೃಕ್ ಅನುಯಾಯತೇ (ಕರ್ಮಣಿ) ।

★ ★ ★

ಅವತಾರಿಕಾ— ಶರದೃತುವಿನ ಗುಣವನ್ನು ವರ್ಣಿಸುತ್ತಾರೆ.

**ಶರದೋಲ್ಲಸತ್ಕುವಲಯೇಕ್ಷಣಯಾ ವಿಕಚಾರವಿಂದರುಚಿರಾನನಯಾ ।**
**ಪ್ರಿಯಯಾ ಚ ಶೋಭನಶುಕಸ್ವನಯಾ ರಮತೇ ಜನೋ ಮುಖರಹಂಸಕಯಾ ॥ 43 ॥**

**ಪದಚ್ಛೇದ—** ಶರದಾ, ಉಲ್ಲಸತ್ಕುವಲಯೇಕ್ಷಣಯಾ, ವಿಕಚಾರವಿಂದರುಚಿರಾನನಯಾ, ಪ್ರಿಯಯಾ, ಚ, ಶೋಭನಶುಕಸ್ವನಯಾ, ರಮತೇ, ಜನಃ ಮುಖರಹಂಸಕಯಾ ।

**ಅನ್ವಯ—** ಜನಃ ಉಲ್ಲಸತ್ಕುವಲಯೇಕ್ಷಣಯಾ ವಿಕಚಾರವಿಂದರುಚಿರಾನನಯಾ ಶೋಭನಶುಕಸ್ವನಯಾ, ಮುಖರಹಂಸಕಯಾ ಶರದಾ ಚ, ಪ್ರಿಯಯಾ ಚ ರಮತೇ ।

**ಅನ್ವಯಾರ್ಥ—**

**ಜನಃ** = ಮೋಕ್ಷವನ್ನು ಪಡೆದ ವೈಕುಂಠನಿವಾಸಿಯಾದ ಪುರುಷನು
**ಉಲ್ಲಸತ್ಕುವಲಯೇಕ್ಷಣಯಾ** = ಶೋಭಿಸುವ ಕನ್ನೈದಿಲೆ ಹೂವೆಂಬ ಕಣ್ಣುಗಳುಳ್ಳ
**ವಿಕಚಾರವಿಂದರುಚಿರಾನನಯಾ** = ಅರಳಿದ ಕಮಲವೆಂಬ ಮನೋಹರವಾದ ಮುಖವುಳ್ಳ
**ಶೋಭನ ಶುಕ ಸ್ವನಯಾ** = ಮನೋಹರವಾದ ಗಿಣಿಗಳ ಧ್ವನಿಯುಳ್ಳ

**ಮುಖರ ಹಂಸಕಯಾ** = ಶಬ್ದಮಾಡುವ ಹಂಸಗಳುಳ್ಳ
**ಶರದಾ** = ಶರದ್‌ಋತುವಿನಿಂದ
**ಚ** = ಮತ್ತು
**ಉಲ್ಲಸತ್‌ಕುವಲಯೇಕ್ಷಣಯಾ** =ಪ್ರಕಾಶಿಸುವ ಕನ್ನೈದಿಲೆ ಹೂವಿನಂತಿರುವ ಕಣ್ಣುಗಳುಳ್ಳ
**ವಿಕಯಾರವಿಂದರುಚಿರಾನನಯಾ** = ಅರಳಿದ ಕಮಲದಂತಿರುವ ಸುಂದರವಾದ ಮುಖವುಳ್ಳ
**ಶೋಭನ ಶುಕ ಸ್ವನಯಾ** = ಮನೋಹರವಾದ ಗಿಳಿಯ ಸ್ವರದಂತೆ ಸ್ವರವುಳ್ಳ
**ಮುಖರ ಹಂಸಕಯಾ** = ಧ್ವನಿ ಮಾಡುತ್ತಿರುವ ಕಾಲುಗೆಜ್ಜೆಯುಳ್ಳ
**ಪ್ರಿಯಯಾ (ಸಮಂ)** = ಹೆಂಡತಿಯೊಡನೆ
**ರಮತೇ** = ವಿಹರಿಸುತ್ತಾನೆ.

**ತಾತ್ಪರ್ಯ**— ಆ ವೈಕುಂಠಲೋಕದಲ್ಲಿ ಶರದೃತುವು ಕನ್ನೈದಿಲೆ ಹೂವುಗಳೆಂಬ ಕಣ್ಣುಗಳಿಂದ ಕೂಡಿಯೂ ಅರಳಿದ ತಾವರೆ ಹೂವುಗಳೆಂಬ ಮುಖದಿಂದ ಸಹಿತವಾಗಿಯೂ ಮನೋಹರವಾದ ಗಿಳಿಗಳ ಧ್ವನಿಯಿಂದ ಸಮೇತವಾಗಿಯೂ ತಾವರೆದಂಟುಗಳನ್ನು ತಿಂದು ಶಬ್ದ ಮಾಡುತ್ತಿರುವ ಹಂಸಗಳ ಗದ್ದಲವೆಂಬ ಕೋಲಾಹಲವುಳ್ಳದ್ದಾಗಿಯೂ ಇರುತ್ತದೆ. ಇಂತಹ ಶರತ್ಕಾಲದಲ್ಲಿ ಮುಕ್ತರಾದ ಜೀವರು ವೈಕುಂಠ ಲೋಕದಲ್ಲಿ ಶರಲ್ಲಕ್ಷ್ಮಿಯರಂತೆ ಇರುವ ತಮ್ಮ ಪ್ರಿಯತಮೆ-ಯರೊಡನೆ ವಿಹರಿಸುವರು. ಆ ತರುಣಿಯರ ಕಣ್ಣುಗಳು ವಿರಾಜಿಸುವ ನೈದಿಲೆ ಹೂವುಗಳಂತಿರುವುವು. ಮುಖವು ಅರಳಿದ ಕಮಲದಂತಿರುವುದು. ಧ್ವನಿಯು ಗಿಳಿಗಳ ಧ್ವನಿಯಂತೆ ಇಂಪಾಗಿ ಮನೋಹರವಾಗಿರುವುದು. ಅವರ ಕಾಲ್ಗೆಜ್ಜೆ-ಗಳು ಘಿಲ್ ಘಿಲ್ ಎಂದು ಹಂಸಧ್ವನಿಯಂತೆ ಧ್ವನಿಗೈಯುತ್ತಿರುವುವು. ಹೀಗೆ ಶರಲ್ಲಕ್ಷ್ಮಿಯ ಸಾದೃಶ್ಯ ಹೊಂದಿರುವ ಮುಕ್ತ ಸ್ತ್ರೀಜೀವರೊಂದಿಗೆ ಮುಕ್ತ ಪುರುಷಜೀವರು ವಿಹರಿಸುತ್ತಿರುವರು.

**ವಿಗ್ರಹ**—

**ಉಲ್ಲಸತ್ಕುವಲಯೇಕ್ಷಣಯಾ**— ಉಲ್ಲಸಂತಿ ಚ ತಾನಿ ಕುವಲಯಾನಿ ಚ ಉಲ್ಲಸತ್ಕುವಲಯಾನಿ, ಉಲ್ಲಸತ್ಕು-ವಲಯಾನ್ಯೇವ ಈಕ್ಷಣಾನಿ ಯಸ್ಯಾಃ ಸಾ, ತಯಾ ಉಲ್ಲಸತ್ಕುವಲಯೇಕ್ಷಣಯಾ ।

**ವಿಕಚಾರವಿಂದರುಚಿರಾನನಯಾ**— ವಿಕಚಾನಿ ಚ ತಾನಿ ಅರವಿಂದಾನಿ ಚ ವಿಕಚಾರವಿಂದಾನಿ, ವಿಕಚಾರ ವಿಂದಾನ್ಯೇವ ರುಚಿರಂ ಆನನಂ ಯಸ್ಯಾಃ ಸಾ, ತಯಾ ವಿಕಚಾರವಿಂದರುಚಿರಾನನಯಾ ।

**ಶೋಭನಶುಕಸ್ವನಯಾ**— ಶುಕಾನಾಂ ಸ್ವನಃ ಶುಕಸ್ವನಃ, ಶೋಭನಃ ಶುಕಸ್ವನಃ ಇವ ಸ್ವನಃ ಯಸ್ಯಾಂ ಸಾ ಶೋಭನಶುಕಸ್ವನಾ, ತಯಾ ಶೋಭನಶುಕಸ್ವನಯಾ ।

**ಮುಖರಹಂಸಕಯಾ**— ಮುಖರಾಃ ಹಂಸಾಃ ಯಸ್ಯಾಂ ಸಾ ಮುಖರಹಂಸಕಾ, ತಯಾ ಮುಖರಹಂಸ ಕಯಾ ।

**(ಪ್ರಿಯಾಪಕ್ಷೇ) ಉಲ್ಲಸತ್ಕುವಲಯೇಕ್ಷಣಯಾ**— ಉಲ್ಲಸಂತೀ ಚ ತೇ ಕುವಲಯೇ ಚ ಉಲ್ಲಸತ್ಕುವಲಯೇ, ಉಲ್ಲಸತ್ಕುವಲಯೇ ಇವ ಈಕ್ಷಣೇ ಯಸ್ಯಾಃ ಸಾ ಉಲ್ಲಸತ್ಕುವಲಯೇಕ್ಷಣಾ, ತಯಾ ಉಲ್ಲಸತ್ಕು-ವಲಯೇಕ್ಷಣಯಾ ।

**ವಿಕಚಾರವಿಂದರುಚಿರಾನನಯಾ**— ವಿಕಚಾರವಿಂದವತ್ ರುಚಿರಂ ಆನನಂ ಯಸ್ಯಾಃ ಸಾ ವಿಕಚಾರವಿಂದ ರುಚಿರಾನನಾ ತಯಾ ವಿಕಚಾರವಿಂದರುಚಿರಾನನಯಾ ।

**ಶೋಭನಶುಕಸ್ವನಯಾ**— ಶೋಭನಶುಕಸ್ವನವತ್ ಸ್ವನಃ ಯಸ್ಯಾಃ ಸಾ ಶೋಭನಶುಕಸ್ವನಾ ತಯಾ, ಶೋಭನ ಶುಕಸ್ವನಯಾ ।

**ಮುಖರಹಂಸಕಯಾ**— ಮುಖರಃ ಹಂಸಕಃ ಯಸ್ಯಾಃ ಸಾ ಮುಖರಹಂಸಕಾ, ತಯಾ ಮುಖರಹಂಸಕಯಾ।

**ಕ್ರಿಯಾಪದ—** 1 ರಮತೇ ರಮೇತೇ ರಮಂತೇ, ರಮಸೇ ರಮೇಥೇ ರಮಧ್ವೇ, ರಮೇ, ರಮಾವಹೇ ರಮಾಮಹೇ, 2 ರೇಮೇ ರೇಮಾತೇ ರೇಮಿರೇ ರೇಮಿಷೇ ರೇಮಾಥೇ ರೇಮಿಧ್ವೇ, ರೇಮೇ ರೇಮಿವಹೇ ರೇಮಿಮಹೇ, 3 ರಂತಾ (ಸೇ.ಹೇ), 4 ರಂಸ್ಯತೇ, 5 ರಮತಾಂ ರಮೇತಾಂ ರಮಂತಾಂ ರಮಂತಾಂ, ರಮಸ್ವ ರಮೇಥಾಂ ರಮಧ್ವಂ, ರಮ್ಯೆ ರಮಾವಹೈ ರಮಾಮಹೈ, 6 ಅರಮತ ಅರಮೇತಾಂ ಅರಮಂತ, ಅರಮಥಾಃ ಅರಮೇಥಾಂ ಅರಮಧ್ವಂ ಅರಮೇ ಅರಮಾವಹಿ ಅರಮಾವಹಿ, 7 ರಮೇತ ರಮೇಯಾತಾಂ ರಮೇರನ್, ರಮೇಥಾಃ ರಮೇಯಾಥಾಂ ರಮೇಧ್ವಂ, ರಮೇಯ ರಮೇವಹಿ, ರಮೇಮಹಿ, 8 ರಂಸೀಷ್ಟ ರಂಸೀಯಾಸ್ತಾಂ ರಂಸೀರನ್, ರಂಸೀಷ್ಠಾಃ ರಂಸೀಯಾಸ್ಥಾಂ ರಂಸೀಧ್ವಂ, ರಂಸೀಯ, ರಂಸೀವಹಿ ರಂಸೀಮಹಿ, 9 ಅರಂಸ್ತ ಅರಂಸಾತಾಂ ಅರಂಸತ, ಅರಂಸ್ಥಾಃ ಅರಂಸಾಥಾಂ ಅರಂಧ್ವಂ, ಅರಂಸಿ ಅರಂಸ್ವಹಿ ಅರಂಸ್ಮಹಿ. ಭಾವೇ 1 ರಮ್ಯತೇ, 5 ರಮ್ಯತಾಂ, 6 ಅರಮ್ಯತ, 7 ರಮ್ಯೇತ, 9 ಅರಾಮಿ ಶೇಷಂ ಪ್ರಾಗ್ವತ್ ।

**ಕೋಶ—** ಕುವಲಯ = ನೈದಿಲೆಹೂವು, 'ಸ್ಯಾದುತ್ಪಲಂ ಕುವಲಯಂ' ಅಮರ. ಶುಕ = ಗಿಳಿ, 'ಕೀರಶುಕೌ ಸಮೌ' ಅಮರ. ಹಂಸ = ಹಂಸಪಕ್ಷಿ 'ಹಂಸಾಸ್ತು ಶ್ವೇತಗರುತಃ', ಹಂಸಕಃ = ಕಾಲ್ಗೆಜ್ಜೆ, 'ಹಂಸಕಃ ಪಾದಕಟಕಃಮಂಜೀರೋ ನೂಪುರೋಽಸ್ತ್ರಿಯಾಂ' ಇತ್ಯಮರಃ ।

**ಪ್ರಯೋಗ—** ಜನಃ ಶರದಾಪ್ರಿಯಯಾ ಚ ರಮತೇ (ಅಕರ್ಮಕ ಕರ್ತರಿ) ।

ಜನೇನ ಶರದಾಪ್ರಿಯಯಾ ಚ ರಮ್ಯತೇ ।

★ ★ ★

**ಅವತಾರಿಕಾ—** ಹೇಮಂತ ಶಿಶಿರ ಋತುಗಳನ್ನು ವರ್ಣಿಸುತ್ತಾರೆ.

**ಅಭಿನಂದಯನ್ ಹಿಮಋತುಂ ಸುಸಖಾ ಸ್ಫಟಿಕಾಚಲಚ್ಛಲಹಿಮಾಧಿಕೃತಮ್ ।**
**ಫಲನೀಕುಲಂ ಕುಸುಮಞ್ಛಿಶಿರೋ ಹಸತೀವ ಫುಲ್ಲನವಕುಂದರುಚಾ ॥ 44 ॥**

**ಪದಚ್ಛೇದ—** ಅಭಿನಂದಯನ್, ಹಿಮಋತುಂ ಸುಸಖಾ, ಸ್ಫಟಿಕಾಚಲಚ್ಛಲಹಿಮಾಧಿಕೃತಂ, ಫಲಿನೀಕುಲಂ, ಕುಸುಮಯನ್, ಶಿಶಿರಃ ಹಸತಿ ಇವ ಫುಲ್ಲನವಕುಂದರುಚಾ ।

**ಅನ್ವಯ—** ಸ್ಫಟಿಕಾಚಲಚ್ಛಲಹಿಮಾಧಿಕೃತಂ ಹಿಮಋತುಂ ಅಭಿನಂದಯನ್, ಸುಸಖಾ ಫಲಿನೀಕುಲಂ ಕುಸುಮಯನ್ ಶಿಶಿರಃ ಫುಲ್ಲನವಕುಂದರುಚಾ ಹಸತಿ ಇವ ।

**ಅನ್ವಯಾರ್ಥ—**

**ಸ್ಫಟಿಕಾಚಲಚ್ಛಲ ಹಿಮಾಧಿಕೃತಂ** = ಸ್ಫಟಿಕದ ಬೆಟ್ಟವೆಂಬ ನೆಪದಂತಿರುವ ಹಿಮದಿಂದ ವ್ಯಾಪ್ತವಾದ, ಹೇಮಂತಋತುವನ್ನು

**ಅಭಿನಂದಯನ್** = ಸಂತೋಷಗೊಳಿಸುತ್ತಿರುವ

**ಸುಸಖಾ** = ಒಳ್ಳೆಯ ಸ್ನೇಹಿತನಾದ

**ಫಲಿನೀಕುಲಂ** = ಗಜ್ಜುಗದ ಗಿಡವನ್ನು (ಕಡೆಂಜಿಕಾಯಿ ಎಂದು ತುಳು ಭಾಷೆಯಲ್ಲಿ ಪ್ರಸಿದ್ಧವಾದ ಗಿಡ)

**ಕುಸುಮಯನ್** = ಹೂಬಿಡುವಂತೆ ಮಾಡುತ್ತಿರುವ

**ಶಿಶಿರಃ** = ಶಿಶಿರಋತುವು

**ಫುಲ್ಲನವಕುಂದರುಚಾ ಹಸತಿ ಇವ** = ಅರಳಿದ ಹೊಸದಾದ ಕುಂದಪುಷ್ಪದ ಕಾಂತಿಯಿಂದ, ನಗುತ್ತಿದೆಯೋ ಎಂಬಂತಿದೆ.

**ತಾತ್ಪರ್ಯ—** ಆ ವೈಕುಂಠಲೋಕದಲ್ಲಿ ಹೇಮಂತಋತುವಿನಲ್ಲಿ ಎಲ್ಲೆಡೆಯಲ್ಲಿಯೂ ಸ್ಫಟಿಕದ ಬೆಟ್ಟವೇ ಬಿದ್ದಿದೆಯೋ ಎಂಬಂತೆ ಹಿಮವು (ಮಂಜು) ಎಲ್ಲೆಡೆಯಲ್ಲಿಯೂ ವ್ಯಾಪ್ತವಾಗಿರುತ್ತದೆ. ಅನಂತರ ಹೇಮಂತಋತುವಿನ ಮಿತ್ರನಾದ ಶಿಶಿರಋತುವು ಬಂದು ಅದನ್ನು ಸಂತೋಷಗೊಳಿಸುತ್ತದೆ. ಹಿಮದ ಪರಾಕಾಷ್ಠೆಯುಂಟಾಗಿ ಗಜ್ಜುಗ ಎಂಬ ಪೊದೆಗಳು ಹೂವುಗಳನ್ನು ಬಿಟ್ಟು ನಳನಳಿಸುತ್ತವೆ. ಅರಳಿದ ಕುಂದಕುಸುಮಗಳಿಂದಲೂ ವಿರಾಜಿಸುತ್ತಾ ಹೇಮಂತಋತುವಿನೊಡನೆ ಶಿಶಿರಋತುವು ನಗುತ್ತದೆಯೋ ಎಂದು ತೋರುತ್ತದೆ. ಕುಂದಕುಸುಮಗಳು (ಒಂದು ಜಾತಿಯ ಮಲ್ಲಿಗೆ ಹೂವು) ಬೆಳ್ಳಗಿರುತ್ತವೆ. ನಗುವೂ ಬಿಳಿಯಾಗಿರುತ್ತದೆಂದು ಕವಿಸಮಯ ಪ್ರಸಿದ್ಧಿಯಿದೆ. ಆದ್ದರಿಂದ ಬಿಳಿಯ ಕುಂದಪುಷ್ಪಗಳು ಅರಳುವಾಗ ಹೇಮಂತಋತು ಸಹಿತವಾದ ಶಿಶಿರಋತುವು ನಗುತ್ತಿದೆಯೋ ಎಂದು ಕಾಣಿಸುತ್ತಿದೆ. (ಇದು ಉತ್ಪ್ರೇಕ್ಷೆ) ಈ ಶ್ಲೋಕದಿಂದ ಹೇಮಂತಶಿಶಿರ ಎಂಬ ಎರಡು ಋತುಗಳನ್ನೂ ವರ್ಣಿಸಿದಂತಾಯಿತು.

ವಿಗ್ರಹ—

**ಹಿಮಋತುಂ—** ಹಿಮಶ್ಚಾಸೌ ಋತುಶ್ಚ ಹಿಮಋತುಃ ತಂ ಹಿಮಋತುಂ । (ಹಿಮಸ್ಯ ಋತುಃ ಎಂದೂ ಆಗಬಹುದು)

**ವ್ಯಾಕರಣ ವಿಶೇಷ—** ಹಿಮಋತುಃ ಇಲ್ಲಿ 'ಆದ್ಗುಣಃ' ಎಂಬ ಸೂತ್ರದಿಂದ ಗುಣ ಬಂದು ಹಿಮರ್ತುಃ ಎಂದಾಗ ಬೇಕಿತ್ತು. ಆದರೆ 'ಋತ್ಯಕಃ' ಎಂಬ ಸೂತ್ರದಿಂದ ಪ್ರಗೃಹ್ಯ ಸಂಜ್ಞೆ (ವಿಕಲ್ಪವಾಗಿ) ಬಂದು ಪ್ರಕೃತಿಭಾವ ಬಂದಿದೆ. 'ಬ್ರಹ್ಮ ಋಷಿ' ಎಂಬಂತೆ, ಶೋಭನಶ್ಚಾಸೌ ಸಖಾ ಚ ಸುಸಖಾ, ಇಲ್ಲಿ 'ರಾಜಾಹಃ ಸಖಿಭ್ಯಃ ಟಚ್ ಎಂಬ ಸೂತ್ರದಿಂದ ಟಚ್ ಪ್ರತ್ಯಯ ಬರಬೇಕಾಗಿತ್ತು. ಆದರೂ 'ನಪೂಜನಾದಿ' 'ಪೂಜನ' ಅಂದರೆ ಅತಿಶಯ, ಎಂಬ ಅರ್ಥದಲ್ಲಿರುವ ಸು, ಅತಿ ಎಂಬ 3 ಉಪಸರ್ಗಗಳ ಮುಂದಿರುವ ರಾಜನ್, ಅಹನ್, ಸಖಿ ಶಬ್ದಗಳಿಗೆ ಟಚ್ ಬರುವುದಿಲ್ಲ ಎಂಬ ನಿಷೇಧವಿದೆ. ಆದುದರಿಂದ 'ಸುಸಖಾ' ಎಂದೆ ರೂಪವಾಗಿದೆ ।

**ಸ್ಫಟಿಕಾಚಲಚ್ಛಲಹಿಮಾಧಿಕೃತಂ—** ಸ್ಫಟಿಕಾತ್ಮಕಶ್ಚಾಸೌ ಅಚಲಶ್ಚ ಸ್ಫಟಿಕಾಚಲಃ (ಮಧ್ಯಮಪದಲೋಪಿ ಸಮಾಸ) । ಸ್ಫಟಿಕಾಚಲ ಇತಿ ಛಲಂ ಹಿಮಂ ಸ್ಫಟಿಕಾಚಲಚ್ಛಲಹಿಮಂ, ಸ್ಫಟಿಕಾಚಲಚ್ಛಲಹಿಮೇನ ಅಧಿಕೃತಃ ಸ್ಫಟಿಕಾ ಚಲಚ್ಛಲಹಿಮಾಧಿಕೃತಃ, ತಂ ಸ್ಫಟಿಕಾಚಲಚ್ಛಲಹಿಮಾಧಿಕೃತಂ ।

**ಫಲಿನೀಕುಲಂ—** ಫಲಿನೀನಾಂ ಕುಲಂ ಫಲಿನೀಕುಲಂ ।

**ಕುಸುಮಯನ್—** ಕುಸುಮಾನಿ ಕುರ್ವನ್ ಕುಸುಮಯನ್ । ತತ್ಕರೋತಿತದಾಚಷ್ಟೇ ಎಂದು ನಾಮಪದದ ಮೇಲೂ ಣಿಚ್ ಬಂದು ಧಾತುವಾಗುತ್ತದೆ. ಅದರ ಮೇಲೆ ಶತೃ ಪ್ರತ್ಯಯ ಬಂದಿದೆ.

**ಫುಲ್ಲನವಕುಂದರುಚಾ—** ಫುಲ್ಲಾನಿ ಚ ತಾನಿ ನವಾನಿ ಚ, ತಾನಿ ಕುಂದಾನಿ ಚ ಫುಲ್ಲನವಕುಂದಾನಿ, ಫುಲ್ಲನವ ಕುಂದಾನಾಂ ರುಕ್ ಫುಲ್ಲನವಕುಂದರುಕ್, ತಯಾ ಫುಲ್ಲನವಕುಂದರುಚಾ ।

**ಕ್ರಿಯಾಪದ— ಹಸತಿ-** ಹಸ ಹಸನೇ ಇತಿ ಅಕರ್ಮಕಃ ಸೇಟ್ ಲಟ್ ಪ್ರಥಮಪುರುಷೇ ಏಕವಚನೇ ಹಸತಿ ಇತಿ ರೂಪಂ ।

1 **ಹಸತಿ**, 2 **ಜಹಾಸ ಜಹಸತುಃ ಜಹಸುಃ ಜಹಸಿಥ**, 3 **ಹಸಿತಾ** ಸಿ, 4 ಹಸಿಷ್ಯತಿ, 5 ಹಸತು, 6 ಅಹಸತ್, 7 ಹಸೇತ್, 8 **ಹಸ್ಯಾತ್**, 9 **ಅಹಸೀತ್ ಅಹಸಿಷ್ಟಾಂ ಅಹಸಿಷುಃ, ಅಹಸೀಃ** ಅಹಸಿಷ್ಟಂ ಅಹಸಿಷ್ಟ, ಅಹಸಿಷಂ ಅಹಸಿಷ್ವ ಅಹಸಿಷ್ಮ । **ಹ್ಯ್ರಂಕ್ಷಣ ಜಾಗೃಣ ಶ್ವ್ಯೆದಿತಾಂ** ಎಂಬ ಸೂತ್ರದಿಂದ ಲುಙ್‌ನಲ್ಲಿ ಉಪಧಾವೃದ್ಧಿಗೆ ನಿಷೇಧ, 10 ಅಹಸಿಷ್ಯತ್. ಭಾವೇ 1 **ಹಸ್ಯತೇ**, 2 **ಜಹಸೇ**, 3 **ಹಸಿತಾ**, 4 **ಹಸಿಷ್ಯತೇ**, 5 **ಹಸ್ಯತಾಂ**, 6 ಅಹಸ್ಯತ, 7 ಹಸ್ಯೇತ, 8 ಹಸಿಷೀಷ್ಟ, 9 ಅಹಾಸಿ, 10 **ಅಹಸಿಷ್ಯತ. ಸನಿ ಜಹಸಿಷತಿ** ।

**ಕೋಶ**— ಅಚಲ = ಪರ್ವತ ಬೆಟ್ಟ. 'ಅಚಲಶೈಲಶಿಲೋಚ್ಚಯಾಃ', ಅಮರ. ಛಲ = ನೆಪ, 'ಛಲಂತು ಛಲಿತೇ ವ್ಯಾಜೇ' ವಿಶ್ವಕೋಶ. ಹಿಮ = ಮಂಜು 'ಅವಶ್ಯಾಯಸ್ತು ನೀಹಾರಸ್ತುಷಾರಸ್ತುಹಿನಂ ಹಿಮಂ' ಅಮರ । ಪ್ರಿಯಂಗು = ಗಜ್ಜುಗಾ ಎಂಬ ಔಷಧಿ ಕಾಯಿಬಿಡುವ ಪೊದೆ, 'ಪ್ರಿಯಂಗುಃ ಫಲಿನೀಶ್ಯಾಮಾ' ಹಲಕೋಶ.

**ಪ್ರಯೋಗ**— ಶಿಶಿರಃ ಪುಲ್ಲನವಕುಂದರುಚಾ ಹಸತೀವ (ಅಕರ್ಮಕಕರ್ತರಿ) ।
ಶಿಶಿರೇಣ ಪುಲ್ಲನವಕುಂದರುಚಾ ಹಸ್ಯತೇ ಇವ (ಭಾವೇ) ।

★ ★ ★

**ಅವತಾರಿಕಾ**— ಆ ವೈಕುಂಠಲೋಕದಲ್ಲಿ ಹಿಮಬಾಧೆಯಾಗಲಿ, ಬಿಸಿಲಿನ ತಾಪವಾಗಲಿ ಯಾವ ದೋಷಗಳೂ ಇಲ್ಲವೆಂದು ವರ್ಣಿಸುತ್ತಾರೆ.

**ಹಿಮಶೀತವರ್ಷಪರಿತಾಪಪುರ-**
**ಸ್ಸರದೋಷಮೂಲಮಿಹ ನರ್ತುಗಣಃ ।**
**ಪ್ರಿಯಮೇವ ಸಾಧಯತಿ ನಿತ್ಯಮಹೋ**
**ಸ ವಿಮುಕ್ತಿಮಾನಿತಿ ವಿಮುಕ್ತಿಮತಾಮ್ ॥ 45 ॥**

**ಪದಚ್ಛೇದ**— ಹಿಮಶೀತವರ್ಷಪರಿತಾಪಪುರಸ್ಸರದೋಷಮೂಲಂ, ಇಹ, ನ, ಋತುಗಣಃ, ಪ್ರಿಯಂ, ಏವ, ಸಾಧಯತಿ, ನಿತ್ಯಂ, ಅಹೋ, ಸಃ ವಿಮುಕ್ತಿಮಾನ್, ಇತಿ, ವಿಮುಕ್ತಿಮತಾಂ ।

**ಅನ್ವಯ**— ಇಹ ಋತುಗಣಃ ಹಿಮಶೀತವರ್ಷಪರಿತಾಪಪುರಸ್ಸರದೋಷಮೂಲಂ ನ, ವಿಮುಕ್ತಿಮತಾಂ ನಿತ್ಯಂ ಪ್ರಿಯಂ ಏವ ಸಾಧಯತಿ, ಇತಿ ಸಃ ವಿಮುಕ್ತಿಮಾನ್ ಅಹೋ ।

**ಅನ್ವಯಾರ್ಥ**—

**ಇಹ** = ಈ ವೈಕುಂಠಲೋಕದಲ್ಲಿ

**ಋತುಗಣಃ** = ವಸಂತ ಮೊದಲಾದ ಋತುಗಳ ಸಮೂಹವು

**ಹಿಮಶೀತವರ್ಷಪರಿತಾಪಪುರಸ್ಸರದೋಷಮೂಲಂ** = ಹಿಮವು, ಚಳಿಯು, ಮಳೆಯು, ಬೇಗೆಯು ಮೊದಲಾಗಿವುಳ್ಳ ದೋಷಗಳಿಗೆ ಕಾರಣವಾದುದು

**ನ** = ಅಲ್ಲ

**ವಿಮುಕ್ತಿಮತಾಂ** = ಮುಕ್ತಚೇತನರಿಗೆ

**ಸಃ** = ಆ ಋತುಸಮೂಹವು

**ವಿಮುಕ್ತಿಮಾನ್** = (ದೋಷವಿಲ್ಲದ್ದರಿಂದ) ಮೋಕ್ಷವುಳ್ಳದು.

**ಅಹೋ** = ಆಶ್ಚರ್ಯವು

**ತಾತ್ಪರ್ಯ**— ಭೂಮಿಯಲ್ಲಿ ಹೇಮಂತ ಋತುವಿನಲ್ಲಿ ಹಿಮ, ಗ್ರೀಷ್ಮ ಋತುವಿನಲ್ಲಿ ಬೇಗೆ ಇವೇ ಮೊದಲಾದ ದೋಷಗಳಿರುವುವು. ಆದರೆ ಆ ವೈಕುಂಠಲೋಕದಲ್ಲಿ ಋತುಗಳಲ್ಲಿ ಈ ದೋಷಗಳಿಲ್ಲ. ಅವು ಮುಕ್ತರಿಗೆ ಯಾವಾಗಲೂ ಸೌಖ್ಯವನ್ನೇ ಉಂಟು ಮಾಡುವುವು. ಹೀಗೆ ದೋಷವಿಲ್ಲದ್ದರಿಂದ ಆ ಋತುಗಳೂ ಮುಕ್ತಿಯನ್ನು ಪಡೆದಿರುವುವು. ಮುಕ್ತಿಯನ್ನು ಪಡೆದಿರುವ ಋತುಗಳ ಅಭಿಮಾನಿ ದೇವತೆಗಳೇ ವೈಕುಂಠದಲ್ಲಿ ಆಯಾ ಋತುಗಳ ಆನಂದಕರವಾದ ಕಾರ್ಯಗಳನ್ನು ಪ್ರಕಟಗೊಳಿಸುತ್ತಾ, ಮುಕ್ತರಾದ ಚೇತನರನ್ನು ಸಂತೋಷಪಡಿಸುತ್ತಾರೆ. ಹೀಗೆ ಆ ವೈಕುಂಠಲೋಕವು ಆಶ್ಚರ್ಯಕರವಾದುದು.

ವಿಗ್ರಹ—

**ಹಿಮಶೀತವರ್ಷಪರಿತಾಪಪುರಸ್ಸರದೋಷಮೂಲಂ—** ಹಿಮಂ ಚ, ಶೀತಂ ಚ, ವರ್ಷಂ ಚ, ಪರಿತಾಪಶ್ಚ ಹಿಮಶೀತವರ್ಷಪರಿತಾಪಾಃ, ತೇ ಏವ ಪುರಸ್ಸರಾಃ ದೋಷಾಃ ಯೇಷಾಂ ತೇ ಹಿಮಶೀತವರ್ಷ ಪರಿತಾಪಪುರಸ್ಸರದೋಷಾಃ, ಹಿಮಶೀತವರ್ಷಪರಿತಾಪಪುರಸ್ಸರದೋಷಾಣಾಂ ಮೂಲಂ ಹಿಮಶೀತ-ವರ್ಷಪರಿತಾಪಪುರಸ್ಸರದೋಷಮೂಲಂ ।

**ವಿಮುಕ್ತಿಮತಾಂ—** ವಿಮುಕ್ತಿಃ ಏಷಾಂ ಅಸ್ತೀತಿ ವಿಮುಕ್ತಿಮಂತಃ, ತೇಷಾಂ ವಿಮುಕ್ತಿಮತಾಂ ।

**ಋತುಗಣಃ—** ಋತೂನಾಂ ಗಣಃ ಋತುಗಣಃ ।

**ವಿಮುಕ್ತಿಮಾನ್—** ವಿಮುಕ್ತಿಃ ಅಸ್ಯ ಅಸ್ತೀತಿ ವಿಮುಕ್ತಮಾನ್ ।

**ಕ್ರಿಯಾಪದ—** ಸಾಧಯತಿ ಸಾಧಯತಃ ಸಾಧಯಂತಿ ಇತ್ಯಾದಿ ಸಾಧಸಂಸಿದ್ಧೌ ಇತಿ ಧಾತುಃ ಣಿಜಂತಾತ್ ಲಟ್ ।

**ಕೋಶ—** 'ತುಷಾರಸ್ತುಹಿನಂ ಹಿಮಂ' ಅಮರ.

**ಪ್ರಯೋಗ—** ಋತುಗಣಃ ಸುಖಮೇವ ಸಾಧಯತಿ (ಕರ್ತರಿ)

ಋತುಗಣೇನ ಸುಖಮೇವ ಸಾಧ್ಯತೇ (ಕರ್ಮಣಿ)

ಋತುಗಣಃ ಹಿಮಶೀತವರ್ಷಪರಿತಾಪಪುರಸ್ಸರದೋಷಮೂಲಂ ನ ಭವತಿ (ಕರ್ತರಿ)

ಋತುಗಣೇನ ಹಿಮಶೀತವರ್ಷಪರಿತಾಪಪುರಸ್ಸರದೋಷಮೂಲೇನ ನ ಭೂಯತೇ (ಕರ್ಮಣಿ)

★ ★ ★

**ಅವತಾರಿಕಾ—** ವೈಕುಂಠದಲ್ಲಿರುವ ಮುಕ್ತಿಸ್ವಭಾವವನ್ನು ವರ್ಣಿಸುತ್ತಾರೆ.

**ಅಮೃತಸ್ರಗುತ್ತಮಫಲಪ್ರಸವಾನ್ ಅಮೃತಾಯ ತತ್ರ ಜನತಾಽರ್ಪಯತಿ ।**
**ಉಪಭೋಕ್ತುಮಪ್ಯವಿಧಿಬಂಧವಶಾ ಪ್ರಕೃತಿಂ ಪ್ರಯಾತಿ ಸಕಲೋಽಪಿ ಸದಾ ॥ 46 ॥**

**ಪದಚ್ಛೇದ—** ಅಮೃತಸ್ರಗುತ್ತಮಫಲಪ್ರಸವಾನ್, ಅಮೃತಾಯ, ತತ್ರ, ಜನತಾ, ಅರ್ಪಯತಿ, ಉಪಭೋಕ್ತುಂ, ಅಪಿ, ಅವಿಧಿಬಂಧವಶಾ, ಪ್ರಕೃತಿಂ, ಪ್ರಯಾತಿ, ಸಕಲಃ ಅಪಿ ಸದಾ ।

**ಅನ್ವಯ—** ತತ್ರ ಜನತಾ ಅವಿಧಿಬಂಧವಶಾ ಅಪಿ, ಉಪಭೋಕ್ತುಂ ಅಮೃತಸ್ರಗುತ್ತಮಫಲಪ್ರಸವಾನ್ ಅಮೃತಾಯ ಅರ್ಪಯತಿ ಸಕಲಃ ಅಪಿ ಸದಾ ಪ್ರಕೃತಿಂ ಪ್ರಯಾತಿ ।

**ಅನ್ವಯಾರ್ಥ—**

**ತತ್ರ** = ಆ ವೈಕುಂಠಲೋಕದಲ್ಲಿ

**ಜನತಾ** = ಮುಕ್ತ ಚೇತನ ಸಮೂಹವು

**ಅವಿಧಿಬಂಧವಶಾ ಅಪಿ** = ವೇದ ಮತ್ತು ಸ್ಮೃತಿಗಳಲ್ಲಿ ವಿಹಿತವಾದ ನಿಯಮದ ಕಟ್ಟುಪಾಡಿಗೆ ಅಧೀನ-ವಲ್ಲದಿದ್ದರೂ

**ಉಪಭೋಕ್ತುಂ** = (ತಾವು) ಉಪಭೋಗಿಸಲು (ತಾವು ಅನುಭವಿಸುವುದಕ್ಕಿಂತ ಮೊದಲು)

**ಅಮೃತ ಸ್ರಗುತ್ತಮಫಲಪ್ರಸವಾನ್** = ವೈಕುಂಠಲೋಕದ ಮುಕ್ತರಿಗೆ ಲಭ್ಯವಾದ ಸ್ವರೂಪಸುಧ, ಹೂಮಾಲೆ ಉತ್ತಮವಾದ ಹಣ್ಣು, ಹೂವು, ಇವುಗಳನ್ನು

**ಅಮೃತಾಯ** = ನಿತ್ಯಮುಕ್ತನಾದ ಶ್ರೀಹರಿಗೆ
**ಅರ್ಪಯತಿ** = ಸಮರ್ಪಿಸುತ್ತದೆ.
**ಸಕಲಃ ಅಪಿ** = ಎಲ್ಲ ಜನರೂ
**ಸದಾ** = ಯಾವಾಗಲೂ
**ಪ್ರಕೃತಿಂ** = ಸ್ವಭಾವವನ್ನು
**ಪ್ರಯಾತಿ** = ಹೊಂದುತ್ತಾರೆ (ಅನುಸರಿಸುತ್ತಾರೆ).

**ತಾತ್ಪರ್ಯ—** ಆ ವೈಕುಂಠಲೋಕದಲ್ಲಿ ವಾಸವಾಗಿರುವ ಮುಕ್ತಚೇತನರು ವೇದ ಮತ್ತು ಸ್ಮೃತಿಗಳಲ್ಲಿ ಉಕ್ತವಾದ ನಿಯಮಗಳಿಗೆ ಅಧೀನರಲ್ಲ. ಆದರೂ ಅವರು ವೈಕುಂಠದಲ್ಲಿ ತಾವು ಉಪಭೋಗಿಸುವುದಕ್ಕಿಂತ ಮೊದಲು ಅಮೃತ, ಹೂವಿನ ಮಾಲೆ, ಉತ್ತಮವಾದ ಫಲ, ಹೂಗಳು ಇವೆಲ್ಲವನ್ನೂ ಮುಕ್ತರಾಗುವುದಕ್ಕಿಂತ ಮುಂಚೆ ಹರಿಗೆ ಸಮರ್ಪಿಸಿ ಉಪಯೋಗಿಸಿದಂತೆ ಆಗಲೂ, ಶ್ರೀಹರಿಗೆ ಸಮರ್ಪಿಸಿಯೇ ಉಪಯೋಗಿಸುತ್ತಾರೆ. ಲೋಕಪರಲೋಕಗಳಲ್ಲಿ ಎಲ್ಲೇ ಆಗಲಿ ಪ್ರತಿಯೊಬ್ಬ ಚೇತನನೂ ತನ್ನ ಸ್ವಭಾವವನ್ನು ಅನುಸರಿಸಿಯೇ ನಡೆಯುತ್ತಾನೆ. ಸಾತ್ವಿಕರು ಪರಮಾತ್ಮಗೆ ಅರ್ಪಿಸಿ ಅನಂತರ ತಾವು ಸ್ವೀಕರಿಸತಕ್ಕ ತಮ್ಮ ಸ್ವಭಾವವನ್ನು, ನಿಯಮವಿಲ್ಲದಿದ್ದರೂ ಬಿಡುವುದಿಲ್ಲ.

(ಇಲ್ಲಿ ಸಾಮಾನ್ಯದಿಂದ ವಿಶೇಷ ಸಮರ್ಥನ ರೂಪವಾದ ಅರ್ಥಾಂತರನ್ಯಾಸಾಲಂಕಾರ) 'ಉಕ್ತಿರರ್ಥಾಂತರನ್ಯಾಸಃ ಸ್ಯಾತ್ ಸಾಮಾನ್ಯ ವಿಶೇಷಯೋಃ' ಎಂದು ಅದರ ಲಕ್ಷಣ.

**ವಿಗ್ರಹ—**

**ಅಮೃತಸ್ರಗುತ್ತಮಫಲಪ್ರಸವಾನ್—** ಅಮೃತಂ ಚ ಸ್ರಜಶ್ಚ (ಸ್ರಕ್ ಚ) ಉತ್ತಮ ಫಲಾನಿ ಚ ಪ್ರಸವಾಶ್ಚ ಅಮೃತಸ್ರಗುತ್ತಮಫಲಪ್ರಸವಾಃ, ತಾನ್ ಅಮೃತಸ್ರಗುತ್ತಮಫಲಪ್ರಸವಾನ್ ।

**ಜನತಾ—** ಜನಾನಾಂ ಸಮೂಹಃ ಜನತಾ । (ಗ್ರಾಮಜನಬಂಧುಭ್ಯಃ ತಲ್ (4-2-43) ಎಂಬ ಸೂತ್ರದಿಂದ ಸಮೂಹಾರ್ಥದಲ್ಲಿ ತಲ್ ಪ್ರತ್ಯಯ.)

**ಅವಿಧಿಬಂಧವಶಾ—** (ವಿಧೇಃ ಬಂಧಃ ವಿಧಿಬಂಧಃ, ವಿಧಿನಾ ಬಂಧಃ ಇತಿ ವಾ, ವಿಧೇರೇವ ಬಂಧಃ ಇತಿ ವಾ), ವಿಧಿಬಂಧಸ್ಯ ವಶಾ ವಿಧಿಬಂಧವಶಾ, ವಿಧಿಬಂಧವಶಾ ನ ಭವತೀತಿ ಅವಿಧಿಬಂಧವಶಾ ।

**ಕ್ರಿಯಾಪದ— ಅರ್ಪಯತಿ-** ಋಗತೌ ಇತಿ ಧಾತೋಃ ಣಿಜಂತಾತ್ ಕರ್ತರಿ ಲಟ್ । ಅರ್ಪಯತಿ ಅರ್ಪಯತಃ ಅರ್ಪಯಂತಿ ಇತ್ಯಾದಿ । ಪ್ರ ಇತಿ ಉಪಸರ್ಗಪೂರ್ವಕಾತ್ ಯಾಪ್ರಾಪಣೇ ಇತಿ ಪ್ರಾಪಣಾರ್ಥಕ ಯಾ ಧಾತೋಃ ಕರ್ತರಿ ಲಟ್ ।

ಪ್ರಯಾತಿ ಪ್ರಯಾತಃ ಪ್ರಯಾಂತಿ, ಪ್ರಯಾಸಿ ಪ್ರಯಾಥಃ ಪ್ರಯಾಥ, ಪ್ರಯಾಮಿ ಪ್ರಯಾವಃ ಪ್ರಯಾಮಃ ।

**ಕೋಶ—** 'ಸ್ಯಾದಪತ್ಯೇ ಫಲೇ ಪುಷ್ಪೇ ಪ್ರಸವೋ ಗರ್ಭಮೋಚನೇ' ಅಮರ. 'ಪ್ರಸವಃ ಪುಷ್ಪಫಲಯೋಃ, ಅಪತ್ಯೇ ಗರ್ಭಮೋಚನೇ' ಹೇಮಚಂದ್ರ ।

**ಪ್ರಯೋಗ—** ಜನತಾ ಅಮೃತಸ್ರಗುತ್ತಮಫಲಪ್ರಸವಾನ್ ಅರ್ಪಯತಿ (ಕರ್ತರಿ) ।
ಜನತಯಾ ಅಮೃತಸ್ರಗುತ್ತಮಫಲಪ್ರಸವಾಃ ಅರ್ಪ್ಯಂತೇ (ಕರ್ಮಣಿ) ।
ಸಕಲ ಅಪಿ ಪ್ರಕೃತಿಂ ಪ್ರಯಾತಿ (ಕರ್ತರಿ) ।
ಸಕಲೇನ ಅಪಿ ಪ್ರಕೃತಿಃ ಪ್ರಯಾಯತೇ (ಕರ್ಮಣಿ) ।

★ ★ ★

**ಅವತಾರಿಕಾ—** ಮುಕ್ತ ಸ್ತ್ರೀಯರ ಚರ್ಯೆಯನ್ನು ವರ್ಣಿಸುತ್ತಾರೆ.

**ಪ್ರಮದಾತಿರೇಕಮುಪಯಾತವತಾ ಪ್ರಮದಾಗಣೇನ ಚರತೋಪವನೇ ।**
**ಉಪಗೀಯತೇ ಸ್ಮ ಮಧುರಂ ಮಧುಜಿಚ್ಚರಿತಂ ಸಕಾಂತತತಿನಾ ಸತತಮ್ ॥ 47 ॥**

**ಪದಚ್ಛೇದ—** ಪ್ರಮದಾತಿರೇಕಂ, ಉಪಯಾತವತಾ, ಪ್ರಮದಾಗಣೇನ ಚರತಾ ಉಪವನೇ, ಉಪಗೀಯತೇ, ಸ್ಮ, ಮಧುರಂ, ಮಧುಜಿಚ್ಚರಿತಂ, ಸಕಾಂತತತಿನಾ, ಸತತಮ್ ।

**ಅನ್ವಯ—** ಪ್ರಮದಾತಿರೇಕಂ ಉಪಯಾತವತಾ ಉಪವನೇ ಚರತಾ, ಸಕಾಂತತತಿನಾ, ಪ್ರಮದಾಗಣೇನ, ಸತತಂ, ಮಧುಜಿಚ್ಚರಿತಂ, ಮಧುರಂ, ಉಪಗೀಯತೇ ಸ್ಮ ।

**ಅನ್ವಯಾರ್ಥ—**

**ಪ್ರಮದಾತಿರೇಕಂ** = ಅತಿಶಯ ಸಂತೋಷವನ್ನು
**ಉಪಯಾತವತಾ** = ಹೊಂದಿದ್ದ
**ಉಪವನೇ** = ಉದ್ಯಾನವನದಲ್ಲಿ
**ಚರತಾ** = ಸಂಚರಿಸುತ್ತಿರುವ
**ಸಕಾಂತತತಿನಾ** = ಪ್ರಿಯರ ಸಮೂಹದಿಂದ ಕೂಡಿದ
**ಪ್ರಮದಾಗಣೇನ** = ಹೆಂಗಸರ ಸಮೂಹದಿಂದ
**ಸತತಂ** = ಯಾವಾಗಲೂ
**ಮಧುಜಿತ್** = ಶ್ರೀಮನ್ನಾರಾಯಣನ
**ಚರಿತಂ** = ಚರಿತ್ರೆಯು
**ಮಧುರಂ** = ಇಂಪಾಗಿ
**ಉಪಗೀಯತೇ ಸ್ಮ** = ಹಾಡಲ್ಪಡುತ್ತಾ ಇರುತ್ತದೆ.

**ತಾತ್ಪರ್ಯ—** ಆ ವೈಕುಂಠಲೋಕದ ಸ್ತ್ರೀಯರು ತಮ್ಮ ಪ್ರಿಯರೊಡನೆ ಬಹಳ ಸಂತೋಷದಿಂದ ಉದ್ಯಾನವನಗಳಲ್ಲಿ ವಿಹಾರ ಮಾಡುತ್ತಾ ಇರುತ್ತಾರೆ. ಆಗ ಅವರು ಪರಮಾತ್ಮನ ಅನುಗ್ರಹದಿಂದ ಉಂಟಾದ ಆನಂದೋದ್ರೇಕದಿಂದ ಶ್ರೀಮನ್ನಾರಾಯಣನ ಚರಿತ್ರೆಯನ್ನು ಇಂಪಾಗಿ ಹಾಡುತ್ತಾ ಇರುತ್ತಾರೆ.

**ವಿಗ್ರಹ—**

**ಪ್ರಮದಾತಿರೇಕಂ—** ಪ್ರಮದಸ್ಯ ಅತಿರೇಕಃ ಪ್ರಮದಾತಿರೇಕಃ, ತಂ ಪ್ರಮದಾತಿರೇಕಂ ।

**ಪ್ರಮದಾಗಣೇನ—** ಪ್ರಮದಾನಾಂ ಗಣಃ ಪ್ರಮದಾಗಣಃ, ತೇನ ಪ್ರಮದಾಗಣೇನ ।

**ಮಧುಜಿಚ್ಚರಿತಂ—** ಮಧುಂ ಜಯತೀತಿ ಮಧುಜಿತ್, ಮಧುಜಿತಃ ಚರಿತಂ ಮಧುಜಿಚ್ಚರಿತಂ, ತತ್ ಮಧುಜಿಚ್ಚರಿತಂ ।

**ಸಕಾಂತತತಿನಾ—** ಕಾಂತಾನಾಂ ತತಿಃ ಕಾಂತತತಿಃ, ಕಾಂತತತಿನಾ ಸಹ ವರ್ತತ ಇತಿ ಸಕಾಂತತತಿಃ, ತೇನ ಸಕಾಂತತತಿನಾ ।

**ಕ್ರಿಯಾಪದ— ಉಪಗೀಯತೇ-** ಉಪ ಇತ್ಯುಪಸರ್ಗಪೂರ್ವಕಾತ್ ಗೈ ಶಬ್ದೇ ಇತ್ಯಸ್ಮಾದ್ ಧಾತೋಃ ಕರ್ಮಣಿ ಲಟ್ ಆತ್ಮನೇಪದಿನಃ "ಉಪಗೀಯತೇ" ಇತಿ ರೂಪಂ ।

ಗೀಯತೇ ಗೀಯೇತೇ ಗೀಯಂತೇ, ಗೀಯಸೇ ಗೀಯೇಥೇ ಗೀಯಧ್ವೇ, ಗೀಯೇ ಗೀಯಾವಹೇ ಗೀಯಾಮಹೇ।

**ಕೋಶ—** 'ಆರಾಮಃ ಸ್ಯಾದುಪವನಂ' ಅಮರ ।

**ಪ್ರಯೋಗ—** ಪ್ರಮದಾಗಣೇನ ಮಧುಜಿಚ್ಚರಿತಂ ಉಪಗೀಯತೇಸ್ಮ (ಕರ್ಮಣಿ) ।
ಪ್ರಮದಾಗಣೇನ ಮಧುಜಿಚ್ಚರಿತಂ ಉಪಗಾಯತಿಸ್ಮ (ಕರ್ತರಿ) ।

★ ★ ★

**ಅವತಾರಿಕಾ—** ಮುಕ್ತರಾದ ಅಂಗನೆಯರ ವಿವಿಧ ವ್ಯಾಪಾರಗಳನ್ನು ವರ್ಣಿಸುತ್ತಾರೆ.

**ಲಲನಾ ಲಲಂತ್ಯಭಿವರಂ ಪ್ರವರಾ ಲಲಿತಾ ಲುನಂತಿ ಕುಸುಮಾನಿ ಪರಾಃ ।**
**ಇತರಾಃ ಸ್ರಜೋ ವಿರಚಯಂತಿ ಪತೀನ್ ಅನುರಂಜಯಂತಿ ನ ಹಿ ಕಾಶ್ಚನ ನೋ ॥ 48 ॥**

**ಪದಚ್ಛೇದ—** ಲಲನಾ, ಲಲಂತಿ, ಅಭಿವರಂ, ಪ್ರವರಾ, ಲಲಿತಾಃ, ಲುನಂತಿ, ಕುಸುಮಾನಿ, ಪರಾಃ, ಇತರಾಃ, ಸ್ರಜಃ, ವಿರಚಯಂತಿ, ಪತೀನ್, ಅನುರಂಜಯಂತಿ, ನ, ಹಿ, ಕಾಶ್ಚನ, ನೋ ।

**ಅನ್ವಯ—** ಪ್ರವರಾಃ ಲಲನಾಃ ಅಭಿವರಂ ಲಲಂತಿ, ಲಲಿತಾಃ ಪರಾಃ ಕುಸುಮಾನಿ ಲುನಂತಿ, ಇತರಾಃ ಸ್ರಜಃ ವಿರಚಯಂತಿ, ಕಾಶ್ಚನ ಪತೀನ್ ನ ಅನುರಂಜಯಂತಿ ಇತಿ ನೋ ।

**ಅನ್ವಯಾರ್ಥ—**

**ಪ್ರವರಾಃ** = ಉತ್ತಮರಾದ
**ಲಲನಾಃ** = ಯುವತಿಯರು
**ಅಭಿವರಂ** = ತಮ್ಮ ಪ್ರಿಯರ ಮುಂದೆ
**ಲಲಂತಿ** = ಕುಣಿಯುತ್ತಾರೆ
**ಲಲಿತಾಃ** = ಅತ್ಯಂತ ಕೋಮಲಾಂಗಿಯರಾದ
**ಪರಾಃ** = ಇತರ ಸ್ತ್ರೀಯರು
**ಕುಸುಮಾನಿ** = ಹೂವುಗಳನ್ನು
**ಲುನಂತಿ** = ಕೊಯ್ಯುತ್ತಾರೆ (ಬಿಡಿಸಿಕೊಳ್ಳುತ್ತಾರೆ)
**ಇತರಾಃ** = ಬೇರೆಯವರು
**ಸ್ರಜಃ** = ಮಾಲೆಗಳನ್ನು
**ವಿರಚಯಂತಿ** = ಕಟ್ಟುತ್ತಾರೆ
**ಕಾಶ್ಚನ** = ಯಾರೊಬ್ಬರೂ
**ಪತೀನ್** = ಗಂಡಂದಿರನ್ನು
**ನ ಅನುರಂಜಯಂತೀತಿ ನೋ** = ಸಂತೋಷಗೊಳಿಸುವುದಿಲ್ಲವೆಂದಿಲ್ಲ.

**ತಾತ್ಪರ್ಯ—** ಆ ವೈಕುಂಠಲೋಕದಲ್ಲಿರುವ ಸ್ತ್ರೀಯರೆಲ್ಲರೂ ಉತ್ತಮೋತ್ತಮರು. ಅವರಲ್ಲಿ ಕೆಲವರು ತಮ್ಮ ಗಂಡಂದಿರ ಮುಂದೆ ಹಾವಭಾವ ಭರಿತವಾದ ನರ್ತನವನ್ನು ಮಾಡುತ್ತಾರೆ. ಮತ್ತೆ ಕೆಲವು ಕೋಮಲಾಂಗಿಯರು ಹೂವುಗಳನ್ನು ಆಲಿಸಿಕೊಳ್ಳುತ್ತಾರೆ, ಇನ್ನು ಕೆಲವರು ಬಿಡಿಸಿದ ಹೂವುಗಳಿಂದ ಮಾಲೆಗಳನ್ನು ಪೋಣಿಸಿ ಕಟ್ಟುತ್ತಿರುತ್ತಾರೆ.

ಅಲ್ಲಿರುವ ಯಾವ ಉತ್ತಮಸ್ತ್ರೀಯರು ತಮ್ಮ ಗಂಡಂದಿರನ್ನು ಸಂತೋಷಗೊಳಿಸುವುದಿಲ್ಲವೆಂದಿಲ್ಲ. ಎಲ್ಲರೂ ತಮ್ಮ ತಮ್ಮ ನಿಯತಪತಿಗಳನ್ನು ಆನಂದಗೊಳಿಸುತ್ತಾರೆ. (ಸರ್ವದಾ ಆನಂದಾಭಿವ್ಯಕ್ತಿಯನ್ನು ಪಡೆಯುತ್ತಿರುವುದೇ ಮುಕ್ತರ ಲಕ್ಷಣವಾಗಿದೆ).

**ವಿಗ್ರಹ—**

**ಅಭಿವರಂ—** ವರಾನ್ ಅಭಿ ಅಭಿವರಂ । ಅವ್ಯಯೀಭಾವ ಸಮಾಸ. ಲಕ್ಷಣೇನಾಭಿಪ್ರತೀ ಅಭಿಮುಖ್ಯೇ (2-1-14) ಅಭಿಮುಖ್ಯದ್ಯೋತಕೌ ಅಭಿಪ್ರತೀ ಚಿಹ್ನವಾಚಿನಾ ಸಹ ಪ್ರಾಗ್ವತ್) ಎಂಬ ಸೂತ್ರದಿಂದ ಸಮಾಸ. ವರಂ, ಅಭಿ ಎಂದು ವಿಶ್ವಪತಿತೀರ್ಥೀಯ ವ್ಯಾಖ್ಯಾನದಲ್ಲಿ ಬೇರೆ ಪದವನ್ನೇ ಇಟ್ಟು-ಕೊಂಡಿದ್ದಾರೆ. ಆಗ 'ಅಭಿರಭಾಗೇ' (1-4-91) 'ಭಾಗವರ್ಜೇ ಲಕ್ಷಣೌ ದೌ ಅಭಿಃ ಉಕ್ತಸಂಜ್ಞಃ ಸ್ಯಾತ್' ಎಂಬ ಸೂತ್ರದಿಂದ ಕರ್ಮ ಪ್ರವಚನೀಯ ಸಂಜ್ಞೆಯು ಬಂದು 'ಕರ್ಮಪ್ರವಚನೀಯಯುಕ್ತೇ ದ್ವಿತೀಯಾ' (2-3-8) 'ಏತೇನ ಯೋಗೇ ದ್ವಿತೀಯಾ ಸ್ಯಾತ್' ಎಂದು ದ್ವಿತೀಯಾ ವಿಭಕ್ತಿ ಬಂದಿದೆ ಎಂದು ಇಟ್ಟುಕೊಳ್ಳಬೇಕು.

**ಕ್ರಿಯಾಪದ—** ಲಲಂತಿ- ಲಲ ಈಪ್ಸಾಯಾಂ (ನರ್ತನೇ) ಅಕರ್ಮಕ ಚುರಾದಿ ಧಾತು ಚುರಾದಿಗಳಿಗೆ ಣಿಚ್ ವಿಕಲ್ಪದಿಂದ ಬರುತ್ತದೆ ಎಂಬ ಪಕ್ಷದಲ್ಲಿ ಣಿಚ್ ಬಾರದೆ ಇದ್ದಾಗ ಪರಸ್ಮೈಪದಿನ ಧಾತು ಎಂದು ಇಟ್ಟುಕೊಳ್ಳಬೇಕು.

1 ಲಲತಿ ಲಲತಃ, ಲಲಂತಿ ಇತ್ಯಾದಿ, 2 ಲಲಾಲ ಲೇಲತುಃ ಲೇಲುಃ, 3 ಲಲಿತಾ, 4 ಲಲಿಷ್ಯತಿ, 5 ಲಲತು, 6 ಅಲಲತ್, 7 ಲಲೇತ್, 8 ಲಲ್ಯಾತ್, 9 ಅಲಾಲೀತ್, 10 ಅಲಲಿಷ್ಯತ್ ।

**ಲುನಂತಿ** - 1 ಲುನಾತಿ ಲುನೀತಃ ಲುನಂತಿ, ಲುನಾಸಿ ಲುನೀಥಃ ಲುನೀಥ, ಲುನಾಮಿ ಲುನೀವಃ ಲುನೀಮಃ, ಲೂಞ್ ಛೇದನೇ ಪರಸ್ಮೈಪದೀ ಸಕರ್ಮಕ ವರ್ತಮಾನೇ ಲಟ್ ಪ್ರಥಮಪುರುಷ ಬಹುವಚನ, 2 ಲುಲಾವ ಲುಲುವತುಃ ಲುಲುವುಃ, ಲುಲವಿಥ ಲುಲುವಥುಃ ಲುಲುವ, ಲುಲಾವ-ಲುಲವ ಲುಲುವಿವ ಲುಲುವಿಮ, 3 ಲವಿತಾ, 4 ಲವಿಷ್ಯತಿ, 5 ಲುನಾತು ಲುನೀತಾತ್ ಲುನೀತಾಂ ಲುನಂತು, ಲುನೀಹಿ-ಲುನೀತಾತ್ ಲುನೀತಂ ಲುನೀತ, ಲುನಾನಿ ಲುನಾವ ಲುನಾಮ, 6 ಅಲುನಾತ್ ಅಲುನೀತಾಂ ಅಲುನನ್, ಅಲುನಾಃ ಅಲುನೀತಂ ಅಲುನೀತ, ಅಲುನಾಂ ಅಲುನೀವ ಅಲುನೀಮ, 7 ಲುನೀಯಾತ್, 8 ಲೂಯಾತ್ ಲೂಯಾಸ್ತಾಂ, 9 ಅಲಾವೀತ್ ಅಲಾವಿಷ್ಟಾಂ ಅಲಾವಿಷುಃ, 10 ಅಲವಿಷ್ಯತ್ ।

**ವಿರಚಯಂತಿ-** ವಿ ಉಪಸರ್ಗಪೂರ್ವಕಾತ್ ರಚಪ್ರತಿಯತ್ನೇ ಚುರಾದಿ ಪರಸ್ಮೈಪದಿನಃ ಪ್ರಥಮಪುರುಷೇ ಬಹುವಚನೇ ''ವಿರಚಯಂತಿ'' ಇತಿ ರೂಪಂ ।

2 **ರಚಯಾಂಚಕಾರ.** ಬಭೂವ.ಆಸ, 3 ರಚಯಿತಾ, 4 ರಚಯಿಷ್ಯತಿ, 5 ರಚಯತು, 6 ಅರಚಯತ್, 7 ರಚಯೇತ್, 8 ರಂಚ್ಯಾತ್, 9 ಅರರಚತ್, 10 ಅರಂಚಯಿಷ್ಯಾತ್ ।

**ಅನುರಂಜಯಂತಿ-** ಅನು ಇತ್ಯುಪಸರ್ಗಪೂರ್ವಕಾತ್ ರಂಜರಾಗೇ ಇತಿ ಧಾತೋಃ ಣಿಜಂತಾತ್ ಲಟ್ ಪರಸ್ಮೈಪದಿನಃ ಪ್ರಥಮಪುರುಷೇ ಬಹುವಚನೇ ''ಅನುರಂಜಯಂತಿ'' ಇತಿ ರೂಪಂ ।

2 ರಂಜಯಾಂ ಚಕಾರ ಬಭೂವ - ಆಸ, 3 ರಂಜಯಿತಾಂ, 4 ರಂಜಯಿಷ್ಯತಿ, 5 ರಂಜಯತು, 6 ಅರಂಜಯತ್, 7 ರಂಜಯೇತ್, 8 ರಂಜ್ಯಾತ್, 9 ಅರರಂಜತ್, 10 ಅರಂಜಯಿಷ್ಯತ್ ।

**ಪ್ರಯೋಗ—** ಪ್ರವರಾಃ ಲಲನಾಃ ಅಭಿವರಂ ಲಲಂತಿ (ಅಕರ್ಮಕ ಕರ್ತರಿ) ।
ಪ್ರವರಾಭಿಃ ಲಲನಾಭಿಃ ಅಭಿವರಂ ಲಲ್ಯತೇ (ಭಾವೇ) ।
ಲಲಿತಾಃ ವರಾಃ ಕುಸುಮಾನಿ ಲುನಂತಿ (ಸಕರ್ಮಕ ಕರ್ತರಿ)

ಲಲಿತಾಭಿಃ ಪರಾಭಿಃ ಕುಸುಮಾನಿ ಲೂಯಂತೇ (ಕರ್ಮಣಿ) ।
ಇತರಾಃ ಸ್ರಜಃ ವಿರಚಯಂತಿ (ಸಕರ್ಮಕ ಕರ್ತರಿ) ।
ಇತರಾಭಿಃ ಸ್ರಜಃ ವಿರಚ್ಯಂತೇ (ಕರ್ಮಣಿ) ।
ಕಾಶ್ಚನ ಪತೀನ್ ನ ಅನುರಂಜಯಂತೀತಿ ನೋ (ಸಕರ್ಮಕ ಕರ್ತರಿ) ।
ಕಾಭಿಶ್ಚನ ಪತಯಃ ನ ಅನುರಂಜ್ಯಂತೇ ಇತಿ ನೋ (ಕರ್ಮಣಿ) ।

★ ★ ★

**ಅವತಾರಿಕಾ—** ಮುಕ್ತರಾದ ತರುಣ ತರುಣಿಯರ ಭೋಗವನ್ನು ವರ್ಣಿಸುತ್ತಾರೆ.

**ವನಲೀಲಯಾ ವಿವಿಧಯಾ ಮುದಿತಾಸ್ತರುಣಾ ಘನಸ್ತನನತಾಸ್ತರುಣೀಃ ।**
**ಸುಲತಾಲಯೇಷು ಪರಿರಭ್ಯ ರತಿಂ ವದನಾರವಿಂದಮಧುಪಾ ದಧತಿ ॥ 49 ॥**

**ಪದಚ್ಛೇದ—** ವನಲೀಲಯಾ, ವಿವಿಧಯಾ, ಮುದಿತಾಃ ತರುಣಾಃ, ಘನಸ್ತನನತಾಃ, ತರುಣೀಃ, ಸುಲತಾಲಯೇಷು, ಪರಿರಭ್ಯ, ರತಿಂ, ವದನಾರವಿಂದಮಧುಪಾಃ, ದಧತಿ ।

**ಅನ್ವಯ—** ವಿವಿಧಯಾ ವನಲೀಲಯಾ ಮುದಿತಾಃ ತರುಣಾಃ, ಸುಲತಾಲಯೇಷು ಘನಸ್ತನನತಾಃ ತರುಣೀಃ ಪರಿರಭ್ಯ, ವದನಾರವಿಂದಮಧುಪಾಃ ರತಿಂ ದಧಿತ ।

**ಅನ್ವಯಾರ್ಥ—**

**ವಿವಿಧಯಾ** = ಅನೇಕ ಪ್ರಕಾರವುಳ್ಳ
**ವನಲೀಲಯಾ** = ಉದ್ಯಾನವನಗಳಲ್ಲಿ ಮಾಡುವ ಆಟದಿಂದ
**ಮುದಿತಾಃ** = ಸಂತೋಷ ಪಟ್ಟಿರುವ
**ತರುಣಾಃ** = ಯುವಕರು
**ಸುಲತಾಲಯೇಷು** = ಚೆನ್ನಾಗಿರುವ ಬಳ್ಳಿ ಮನೆಗಳಲ್ಲಿ
**ಘನಸ್ತನನತಾಃ** = ಗಟ್ಟಿಯಾದ ಕುಚಗಳಿಂದ ಬಾಗಿರುವ
**ತರುಣೀ** = ಯುವತಿಯರನ್ನು
**ಪರಿರಭ್ಯ** = ಆಲಿಂಗಿಸಿ
**ವದನಾರವಿಂದಮಧುಪಾಃ** = ಮುಖವೆಂಬ ತಾವರೆ ಹೂವಿನ ಮಕರಂದವನ್ನು ಪಾನ ಮಾಡುವವರಾಗಿ (ದುಂಬಿಗಳಾಗಿ)
**ರತಿಂ** = ರತಿಕ್ರೀಡೆಯನ್ನು
**ದಧತಿ** = ಮಾಡುತ್ತಾರೆ.

**ತಾತ್ಪರ್ಯ—** ವೈಕುಂಠಲೋಕದಲ್ಲಿರುವ ಮುಕ್ತರಾದ ತರುಣರು, ತರುಣಿಯರೊಡನೆ ಅನೇಕ ರೀತಿಯ ಉದ್ಯಾನ ವನವಿಹಾರವನ್ನು ಮಾಡಿ ಸಂತೋಷಪಡುತ್ತಾರೆ. ಅನಂತರ ಅವರು ಸುಂದರವಾದ ಲತಾಗೃಹಗಳಿಗೆ ಹೋಗಿ ಉಬ್ಬಿದ ಎದೆಯುಳ್ಳ ಸ್ವಲ್ಪ ಬಗ್ಗಿರುವ ತರುಣಿಯರನ್ನು ಗಾಢವಾಗಿ ಆಲಿಂಗಿಸಿ ದುಂಬಿಗಳು ತಾವರೆಯ ಮಕರಂದವನ್ನು ಹೀರುವಂತೆ, ಸುರತಕ್ರೀಡೆಯಲ್ಲಿ ಆಸಕ್ತರಾಗುವರು.

**ವಿಗ್ರಹ—**

**ವನಲೀಲಯಾ—** ವನೇ ಲೀಲಾ ವನಲೀಲಾ, ತಯಾ ವನಲೀಲಯಾ ।

**ಘನಸ್ತನನತಾಃ—** ಘನೌ ಚ ತೌ ಸ್ತನೌ ಚ ಘನಸ್ತನೌ, ಘನಸ್ತನಾಭ್ಯಾಂ ನತಾಃ ಘನಸ್ತನನತಾಃ, ತಾಃ ಘನಸ್ತನ ನತಾಃ ।

**ಸುಲತಾಲಯೇಷು—** ಲತಾನಾಂ ಆಲಯಾಃ ಲತಾಲಯಾಃ, ಶೋಭನಾಶ್ಚ ತೇ ಲತಾಲಯಾಶ್ಚ ಸುಲತಾ ಲಯಾಃ, ತೇಷು ಸುಲತಾಲಯೇಷು ।

**ವದನಾರವಿಂದಮಧುಪಾಃ—** ವದನಮೇವ ಅರವಿಂದಂ ವದನಾರವಿಂದಂ, ವದನಾರವಿಂದಸ್ಯ ಮಧು ವದನಾರವಿಂದಮಧು, ವದನಾರವಿಂದಮಧು ಪಿಬಂತೀತಿ ವದನಾರವಿಂದಮಧುಪಾಃ, (ವದನಾರ ವಿಂದಸ್ಯ ಮಧುಪಾಃ) ।

**ಕ್ರಿಯಾಪದ— ದಧಿತಿ-** 1. ದಧಾತಿ ಧತ್ತಃ ದಧತಿ, ದಧಾಸಿ ಧತಃ ಧತ್ಥ, ದಧಾಮಿ ದಧ್ವಃ ದಧ್ಮಃ 2. ದಧೌ ದಧತುಃ ದಧುಃ, ದಧಿಥ ದಧಾಥ ದಧಥುಃ ದಧ, ದಧೌ ದಧಿವ ದಧಿಮ 3. ಧಾತಾಧಾತಾರೌ ಧಾತಾರಃ ಧಾತಾಸಿ 4. ಧಾಸ್ಯತಿ 5. ದಧಾತು ಧತ್ತಾತ್ ಧತ್ತಾಂ ದಧತು, ಧೇಹಿ ಧತ್ತಾತ್ ಧತ್ತಂ ಧತ್ತ, ದಧಾನಿ ದಧಾವ ದಧಾಮ 6. ಅದಧಾತ್ ಅಧತ್ತಾಂ ಅದಧುಃ ಅದಧಾಃ ಅಧತ್ತಂ ಅಧತ್ತ, ಅಧಧಾಂ ಅಧಧ್ವ ಅಧಧ್ಮ 7. ದಧ್ಯಾತ್ ದಧ್ಯಾತಾಂ ದಧ್ಯುಃ, ದಧ್ಯಾಃ ದಧ್ಯಾತಂ ದಧ್ಯಾತ, ದಧ್ಯಾಂ ದಧ್ಯಾವ ದಧ್ಯಾಮ 8. ಧೇಯಾತ್ ಧೇಯಾಸ್ತಾಂ ಧೇಯಾಸುಃ 9. ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ ಅಧಾಂ ಅಧಾವ ಅಧಾಮ 10. ಅಧಾಸ್ಯತ್. ಕರ್ಮಣಿ 1 ಧೀಯತೇ 2 ದಧೇ 3 ಧಾಯಿತಾ, ಧಾತಾ 4 ಧಾಯಿಷ್ಯತೇ ಧಾಸ್ಯತೇ 5 ಧೀಯತಾಂ ಅಧೀಯತ ಧೀಯೇತ ಧಾಯಿಷೀಷ್ಟ, ಧಾಸೀಷ್ಟ 9 ಅಧಾಯಿ ಅಧಾಯಿಷಾತಾಂ (ಅಧಿಷಾತಾಂ) (ಢ್ವಂಢ್ವಂ) 10 ಅಧಾಯಿಷ್ಯತ. ಅಧಾಸ್ಯತ ಡುಧಾಞ ಧಾರಣಪೋಷಣಯೋಃ 'ದಧತಿ' ಲಟ್ ಪ್ರಥಮ ಪುರುಷ ಬಹುವಚನ. 1 ಬಿಭರ್ತಿ ಬಿಭೃತಃ ಬಿಭ್ರತಿ, ಬಿಭರ್ಷಿ ಬಿಭೃಥಃ ಬಿಭೃಥ, ಬಿಭರ್ಮಿ ಬಿಭೃವಃ ಬಿಭ್ರಮಃ 2 ಬಭಾರ ಬಭ್ರತುಃ ಬಭ್ರುಃ, ಬಭರ್ಥ ಬಭ್ರಥುಃ ಬಭ್ರ, ಬಭಾರ-ಬಭರ ಬಭೃವ ಬಭೃಮ 3 ಭರ್ತಾ 4 ಭರಿಷ್ಯತಿ 5 ಬಿಭರ್ತು ಬಿಭೃತಾತ್, ಬಿಭೃತಾಂ ಬಿಭ್ರತು, ಬಿಭೃಹಿ-ಬಿಭೃತಾತ್ ಬಿಭೃತಂ ಬಿಭೃತ, ಬಿಭರಾಣಿ ಬಿಭರಾವ ಬಿಭರಾಮ 6 ಅಬಿಭಃ ಅಬಿಭೃತಾಂ ಅಭಿಭರುಃ, ಅಭಿಭಃ ಅಬಿಭೃತಂ ಅಭಿಭೃತ, ಅಬಿಭರಂ ಅಭಿಭೃವ ಅಬಿಭೃಮ 7 ಬಿಭೃಯಾತ್ ಬಿಭೃಯಾತಾಂ ಬಿಭೃಯುಃ, 8 ಭ್ರಿಯಾತ್ ಭ್ರಿಯಾಸ್ತಾಂ ಭ್ರಿಯಾಸುಃ 9 ಅಭಾರ್ಷೀತ್ ಅಭಾರ್ಷ್ಟಾಂ ಅಭಾರ್ಷುಃ, ಅಭಾರ್ಷೀಃ ಅಭಾರ್ಷ್ಟಂ ಅಭಾರ್ಷ್ಟ, ಅಭಾರ್ಷಂ ಅಭಾರ್ಷ್ವ ಅಭಾರ್ಷ್ಮ 10 ಅಭರಿಷ್ಯತ್ ಕರ್ಮಣಿ. 1 ಭ್ರಿಯತೇ 2 ಬಭ್ರೇ 3 ಭಾರಿತಾ, ಭರ್ತಾ 4 ಭಾರಿಷ್ಯತೇ ಭರಿಷ್ಯತೇ 5 ಭ್ರಿಯತಾಂ 6 ಅಭ್ರಿಯತ 7 ಭ್ರಿಯೇತ 8 ಭಾರಿಷೀಷ್ಟ, ಭೃಷೀಷ್ಟ 9 ಅಭಾರಿ ಅಭಾರಿಷಾತಾಂ, ಅಭೃಷಾತಾಂ 10 ಅಭಾರಿಷ್ಯತ ಅಭರಿಷ್ಯತ. ಡುಧಾಞ ಧಾರಣಪೋಷಣಯೋಃ ಸಕರ್ಮಕಃ ಅನಿಟ್ ಉಭಯಪದೀ, 'ಬಿಭ್ರತಿ' ಪರಸ್ಮೈಪದೀ ಲಟ್ ಪ್ರಥಮಪುರುಷ ಬಹುವಚನ ।

**ಕೋಶ—** 'ವಲ್ಲೀತು ವ್ರತತಿರ್ಲತಾ' - ಅಮರ (ಮಧು-ಜೇನು, ನೀರು, ಹಾಲು, ಮದ್ಯ, ಹೂವಿನ ರಸ) 'ಮಧು- ಕ್ಷೌದ್ರೇ ಜಲೇ ಕ್ಷೀರೇ ಮದ್ಯೇ ಪುಷ್ಪರಸೇಪಿ ಚ', ವಿಶ್ವ.

**ವಿಶೇಷಾಂಶ—** ತರುಣಾಃ ಸ್ತ್ರೀಭಿಃ ಸಹ ತತ್ರ ಸಂಚಾರೇಣ ನಾನಾವಿಧಕ್ರೀಡಾಂ ಕೃತ್ವಾ, ಲತಾಗೃಹೇಷು ಸ್ತನಭಾರನತಾಃ ತರುಣೀಃ ಆಲಿಂಗ್ಯ ಮುಖಚುಂಬನಂ ಕುರ್ವಂತಃ ಸಂತಃ ಸುರತಕ್ರೀಡಾಂ ಕುರ್ವಂತೀತಿ ಭಾವಃ ಎಂದು ಛಲಾರೀಯದಲ್ಲಿ ತಾತ್ಪರ್ಯವನ್ನು ಹೇಳುತ್ತಾರೆ.

**ಪ್ರಯೋಗ—** ತರುಣಾಃ ರತಿಂ ದಧತಿ (ಸಕರ್ಮಕ ಕರ್ತರಿ) ।
ತರುಣೈಃ ರತಿಃ ಧೀಯತೇ (ಕರ್ಮಣಿ) ।

★ ★ ★

**ಅವತಾರಿಕಾ**— ಮುಕ್ತರಾದ ಸ್ತ್ರೀಪುರುಷರ ಜಲಕ್ರೀಡೆಯನ್ನು ವರ್ಣಿಸುತ್ತಾರೆ.

**ರಸಿಕಾಃ ಸುಧಾಪ್ಸು ಸರಸೀಷು ತತೋ ರುತನೂಪುರಾನುಕೃತಸಾರಸಕಾಃ ।**
**ವಿಹರಂತಿ ಸಾಕಮವಗಾಹ್ಯ ಧವೈರ್ಜಲಮಡ್ಡುಕೋತ್ಸವಹಸದ್ವದನಾಃ ॥ 50 ॥**

**ಪದಚ್ಛೇದ**— ರಸಿಕಾಃ, ಸುಧಾಪ್ಸು, ಸರಸೀಷು, ತತಃ, ರುತನೂಪುರಾನುಸುಕೃತಸಾರಸಕಾಃ ವಿಹರಂತಿ, ಸಾಕಂ, ಅವ ಗಾಹ್ಯ, ಧವೈಃ, ಜಲಮಡ್ಡುಕೋತ್ಸವಹಸದ್ವದನಾಃ ।

**ಅನ್ವಯ**— ತತಃ ರುತನೂಪುರಾನುಕೃತಸಾರಸಕಾಃ ರಸಿಕಾಃ ಧವೈಃ ಸಾಕಂ ಸುಧಾಪ್ಸು ಸರಸೀಷು ಅವಗಾಹ್ಯ, ಜಲ-ಮಡ್ಡುಕೋತ್ಸವಹಸದ್ವದನಾಃ ವಿಹರಂತಿ ।

**ಅನ್ವಯಾರ್ಥ**—

**ತತಃ** = ಅನಂತರ

**ರುತನೂಪುರಾನುಕೃತಸಾರಸಕಾಃ** = ಶಬ್ದ ಮಾಡುತ್ತಿರುವ ಕಾಲ್ಗೆಜ್ಜೆಗಳಿಂದ ಹೋಲಿಕೆಯನ್ನು ಹೊಂದಿದ (ಅನುಸರಿಸಲ್ಪಟ್ಟ) ನೀರುಕೋಳಿಗಳುಳ್ಳ

**ರಸಿಕಾಃ** = ವಿಲಾಸಿನಿಯರಾದ ತರುಣಿಯರು

**ಧವೈಃ ಸಾಕಂ** = ಗಂಡಂದಿರಿಂದ ಕೂಡಿಕೊಂಡು

**ಸುಧಾಪ್ಸು** = ಅಮೃತಮಯವಾದ ನೀರುಳ್ಳ

**ಸರಸೀಷು** = ಸರೋವರಗಳಲ್ಲಿ

**ಅವಗಾಹ್ಯ** = ಇಳಿದು

**ಜಲಮಡ್ಡುಕೋತ್ಸವಹಸದ್ವದನಾಃ** = ನೀರೆಂಬ ಮದ್ದಲೆಯ ಕೈಗಳಿಂದ ನೀರನ್ನು ಹೊಡೆಯುವ ಬಾರಿಸುವ ಸಂತೋಷಕರವಾದ ವ್ಯಾಪಾರದಿಂದ ನಗುತ್ತಿರುವ ಮುಖವುಳ್ಳವರಾಗಿ

**ವಿಹರಂತಿ** = ವಿಹರಿಸುತ್ತಾರೆ.

**ತಾತ್ಪರ್ಯ**— ಉದ್ಯಾನಕ್ರೀಡೆ ಮುಗಿದ ತರುವಾಯ ನೀರುಕೋಳಿಗಳಂತೆ ಧ್ವನಿಗೈಯುತ್ತಿರುವ ಕಾಲ್ಗೆಜ್ಜೆಗಳನ್ನು ಧರಿಸಿದ ವಿಲಾಸಿನಿಯರಾದ ತರುಣಿಯರು, ಅಮೃತಮಯವಾದ ನೀರಿನ ಕೊಳಗಳಲ್ಲಿ ಇಳಿಯುತ್ತಾರೆ. ಅನಂತರ ಅಲ್ಲಿ ತಮ್ಮ ಗಂಡಂದಿರೊಡನೆ ಕೈಗಳಿಂದ ನೀರನ್ನು ಹೊಡೆದು ಮದ್ದಲೆಯಂತೆ ಶಬ್ದಮಾಡುತ್ತಾ, ಅದರಿಂದ ಸಂತೋಷಪಟ್ಟು ನಲಿಯುತ್ತಾ ವಿಹರಿಸುತ್ತಾರೆ.

**ವಿಗ್ರಹ**—

**ಸುಧಾಪ್ಸು**— ಸುಧಾತ್ಮಿಕಃ (ಸುಧಾಮಯ್ಯಃ), ಆಪಃ ಯಾಸು ತಾಃ ಸುಧಾಪಃ, ತಾಸು ಸುಧಾಪ್ಸು ।

ಇಲ್ಲಿ 'ಋಕ್ ಪೂರಬ್ಧೂಃ ಪಥಾಮಾನಕ್ಷೇ' ಎಂಬ ಸೂತ್ರದಿಂದ ಸಮಾಸಾಂತದ 'ಅ' ಪ್ರತ್ಯಯವು ಬಂದು 'ಸುಧಾಪಾಃ ಸರಸ್ಯಃ ಸುಧಾಪಾಸು ಸರಸೀಷು' ಎಂದು ಇರಬೇಕಿತ್ತು. ಆದರೆ 'ಸಮಾಸಾಂತೋ ವಿಧಿರನಿತ್ಯಃ' ಎಂಬ ವಚನದಿಂದ ಸಮಾಸಾಂತ ಪ್ರತ್ಯಯಗಳು ವೈಕಲ್ಪಿಕವಾದುದರಿಂದ 'ಅ' ಪ್ರತ್ಯಯವು ಬರಲಿಲ್ಲ ಎಂದು ತಿಳಿಯಬೇಕು.

**ರುತನೂಪುರಾನುಕೃತಸಾರಸಕಾಃ**— ರುತಾನಿ ಚ ತಾನಿ ನೂಪುರಾಣಿ ಚ ರುತನೂಪುರಾಣಿ, ರುತನೂಪುರೈಃ ಅನುಕೃತಾಃ ಸಾರಸಾಃ ಯಾಭಿಃ ತಾಃ ರುತನೂಪುರಾನುಕೃತಸಾರಸಕಾಃ ।

**ಜಲಮಡ್ಡುಕೋತ್ಸವಹಸದ್ವದನಾಃ**— ಜಲಮೇವ ಮಡ್ಡುಕಃ ಜಲಮಡ್ಡುಕಃ, ಛಲಾರಿಯದಂತೆ, ಜಲೇಷು ಮಡ್ಡುಕಃ ಜಲಮಡ್ಡುಕಃ, ಮಡ್ಡುಕವೆಂದರೆ ಕೈಯಿಂದ ನೀರನ್ನು ಹೊಡೆಯುವುದು ಎಂದು

ಬೇರೊಂದು ಅರ್ಥವಿದೆ. ಜಲಮಡ್ಡುಕಸ್ಯ ಉತ್ಸವಃ ಜಲಮಡ್ಡುಕೋತ್ಸವಃ । (ಛಲಾರಿಯ ಜಲಮಡ್ಡುಕಃ ಇತಿ ಉತ್ಸವಃ ಜಲಮಡ್ಡುಕೋತ್ಸವಃ । ಜಲಮಡ್ಡುಕೋತ್ಸವೇನ) ಹಸಂತಿ ವದನಾನಿ ಯಾಸಾಂ ತಾಃ ಜಲಮಡ್ಡುಕೋತ್ಸವಹಸದ್ವದನಾಃ ।

**ಕ್ರಿಯಾಪದ—** **ವಿಹರಂತಿ**- ಜಲ ವಿ ಉಪಸರ್ಗಪೂರ್ವಕಾತ್ ಹೃಞ ಹರಣೇ ಪರಸ್ಮೈಪದಿನಃ, ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ 'ವಿಹರಂತಿ' ಇತಿ ರೂಪಂ ।

ವಿ+ಹರತಿ ಹರತಃ ಹರಂತಿ, ಹರಸಿ ಹರಥಃ ಹರಥ, ಹರಾಮಿ ಹರಾವಃ ಹರಾಮಃ । ಜಹಾರ ಜಹುತುಃ ಜಹ್ರುಃ, ಜಹರ್ಥ ಜಹ್ರಥುಃ ಜಿಹ್ರ, ಜಹಾರ ಜಹರ ಜಹ್ರಿವ ಜಹ್ರಿಮ, 3 ಹರ್ತಾ, 4 ಹರಿಷ್ಯತಿ, 5 ಹರತು, 6 ಅಹರತ್, 7 ಹರೇತ್, 8 ಹ್ರಿಯಾತ್, 9 ಅಹಾರ್ಷೀತ್, ಅಹಾರ್ಷ್ಟಾಂ ಅಹಾರ್ಷುಃ, ಅಹಾರ್ಷೀಃ ಅಹಾರ್ಷ್ಟಂ ಅಹಾರ್ಷ್ಟ, ಅಹಾರ್ಷಂ ಅಹಾರ್ಷ್ವ ಅಹಾರ್ಷ್ಮ, 10 ಅಹರಿಷ್ಯತ್ ।

**ಕೋಶ—** 'ಮಂಜೀರೋ ನೂಪುರೋಽಸ್ತ್ರಿಯಾಂ' ಅಮರ, 'ಸಾರಸಾ ಜಲಕುಕ್ಕುಟಾಃ' ಅಭಿಧಾನ. 'ಧವಃ ಪ್ರಿಯಃ ಪತಿರ್ಭರ್ತಾ', 'ಸಾಕಂ ಸತ್ರಾ ಸಮಂ ಸಹ', 'ಕಾಸಾರಃ ಸರಸೀಸರಃ', 'ವಾದ್ಯಪ್ರಭೇದಾ ಡಮರುಮಡ್ಡು ಡಿಂಡಿಮಝುರ್ಝರಾಃ', ಎಂದೂ ಅಮರ. ಸಂಸ್ಕೃತ ತಾತ್ಪರ್ಯ – ಉಪವನಕ್ರೀಡಾನಂತರಂ ನಾರ್ಯಃ ಧ್ವನಿವಿಶೇಷಕಾರಿಭಿಃ ಸಾರಸಪಕ್ಷಿಭಿರಿವ ಪ್ರತೀಯಮಾನನೂಪುರಾಖ್ಯಪಾದಭೂಷಣೈಃ ಯುತಾಃ ಸತ್ಯಃ ಪತಿಭಿಃ ಸಹ ಸರೋವರಸಮೀಪಂ ಗತ್ವಾ ಅಮೃತಮಯೋದರೇಷು ಸರೋವರೇಷು ಪ್ರವಿಶ್ಯ ಹಸ್ತಾಭ್ಯಾಂ ಜಲತಾಡನಂ ಕೃತ್ವಾ ಹಸಂತ್ಯಃ ಸತ್ಯಃ ಕ್ರೀಡಂತಿ ಇತಿ ಭಾವಃ (ಛಲಾರೀಯ) ಇವರ ವ್ಯಾಖ್ಯಾನದಂತೆ ಮಡ್ಡುಕ ಶಬ್ದಕ್ಕೆ ಕೈಗಳಿಂದ ನೀರನ್ನು ಹೊಡೆಯುವುದು ಎಂದು ಅರ್ಥ.

**ಪ್ರಯೋಗ—** ರಸಿಕಾಃ ವಿಹರಂತಿ (ಕರ್ತರಿ) ।
ರಸಿಕಾಭಿಃ ವಿಹ್ರಿಯತೇ (ಕರ್ಮಣಿ) ।

* * *

**ಅವತಾರಿಕಾ—** ಮುಕ್ತರಾದ ಸ್ತ್ರೀಯರು ಜಲದಲ್ಲಿ ಕ್ರೀಡಿಸಿದ ಮೇಲೆ ಆಚರಿಸಿದ ಸುಗಂಧಲೇಪನವನ್ನು ವರ್ಣಿಸುತ್ತಾರೆ.

**ವಿವಿಧಾ ವಿಧಾಯ ವಿಹೃತೀಃ ಸಲಿಲೇ ವಿಕಟೇಷು ವಿದ್ರುಮತಟೇಷು ಗತಾಃ ।**
**ಸುರಭಿಂ ಸುವರ್ಣಮಥ ವರ್ಣಕಮಾದದತೇ ಸಖೀಕರಗತಂ ಮಹಿಲಾಃ ॥ 51 ॥**

**ಪದಚ್ಛೇದ—** ವಿವಿಧಾಃ, ವಿಧಾಯ, ವಿಹೃತೀಃ, ಸಲಿಲೇ, ವಿಕಟೇಷು ವಿದ್ರುಮತಟೇಷು, ಗತಾಃ, ಸುರಭಿಂ, ಸುವರ್ಣಂ, ಅಥ, ವರ್ಣಕಂ, ಆದದತೇ, ಸಖೀಕರಗತಂ, ಮಹಿಲಾಃ ।

**ಅನ್ವಯ—** ಮಹಿಲಾಃ ಸಲಿಲೇ ವಿವಿಧಾ ವಿಹೃತೀಃ ವಿಧಾಯ, ಅಥ ವಿಕಟೇಷು ವಿದ್ರುಮತಟೇಷು ಗತಾಃ ಸಖೀಕರಗತಂ ಸುರಭಿಂ ಸುವರ್ಣಂ ವರ್ಣಕಂ ಆದದತೇ ।

**ಅನ್ವಯಾರ್ಥ—**

**ಮಹಿಲಾಃ** = ಮುಕ್ತಚೇತನರಾದ ತರುಣಿಯರು
**ಸಲಿಲೇ** = ನೀರಿನಲ್ಲಿ
**ವಿವಿಧಾಃ** = ನಾನಾಪ್ರಕಾರವಾದ
**ವಿಹೃತೀಃ** = ವಿಹಾರಗಳನ್ನು

**ವಿಧಾಯ** = ಮಾಡಿ
**ಅಥ** = ಅನಂತರ
**ವಿಕಟೇಷು** = ವಿಶಾಲವಾದ
**ವಿದ್ರುಮತಟೇಷು** = ಹವಳದಿಂದ ಕೆತ್ತಿದ ದಡಗಳಲ್ಲಿ
**ಗತಾಃ** = ಇದ್ದವರಾಗಿ
**ಸಖೀಕರಗತಂ** = ಗೆಳತಿಯರ ಕೈಗಳಲ್ಲಿರುವ
**ಸುರಭಿಂ** = ಸುವಾಸನೆಯುಳ್ಳ
**ಸುವರ್ಣಂ** = ಒಳ್ಳೆಯ ಬಣ್ಣವುಳ್ಳ
**ವರ್ಣಕಂ** = ಲೇಪನದ್ರವ್ಯವನ್ನು
**ಆದದತೇ** = ತೆಗೆದುಕೊಳ್ಳುತ್ತಾರೆ.

**ತಾತ್ಪರ್ಯ—** ವೈಕುಂಠಲೋಕದಲ್ಲಿ ಮುಕ್ತರಾದ ತರುಣಿಯರು ಹೀಗೆ ಜಲದಲ್ಲಿ ಬಗೆಬಗೆಯ ವಿಹಾರಗಳನ್ನು ಮಾಡುತ್ತಾರೆ. ಅನಂತರ ನೀರಿನಿಂದ ಮೇಲಕ್ಕೆ ಬಂದು ಹವಳಕೆತ್ತಿದ ಸುಂದರವಾದ ದಡಗಳಲ್ಲಿ ಬಂದು ನಿಲ್ಲುತ್ತಾರೆ. ಅಲ್ಲಿ ಅವರ ಸಖಿಯರಾದ ಮುಕ್ತರಾದ ತರುಣಿಯರು ಕೈಗಳಲ್ಲಿ ಸುವಾಸನೆಯಿಂದ ಕೂಡಿದ, ಒಳ್ಳೆಯ ಬಣ್ಣದ ಸುಗಂಧಲೇಪನ ದ್ರವ್ಯಗಳನ್ನು ಹಿಡಿದುಕೊಂಡು ಕಾದಿರುತ್ತಾರೆ. ಅವರ ಕೈಗಳಿಂದ ಆ ಸುಗಂಧ ದ್ರವ್ಯಗಳನ್ನು ತೆಗೆದುಕೊಂಡು ಸ್ನಾನ ಮಾಡಿ ಬಂದ ಸ್ತ್ರೀಯರು ತಮ್ಮ ಮೈಗಳಿಗೆ ಆ ಗಂಧದ್ರವ್ಯವನ್ನು ಹಚ್ಚಿಕೊಳ್ಳುತ್ತಾರೆ.

ವಿಗ್ರಹ—

**ವಿದ್ರುಮತಟೇಷು—** ವಿದ್ರುಮಾಣಾಂ ತಟಾನಿ ವಿದ್ರುಮತಟಾನಿ, ತೇಷು ವಿದ್ರುಮತಟೇಷು ।
**ಸುವರ್ಣಕಂ—** ಶೋಭನಃ ವರ್ಣಃ ಯಸ್ಯ ಸಃ ಸುವರ್ಣಕಃ ।
**ಸಖೀಕರಗತಂ—** ಸಖೀನಾಂ ಕರಾಃ ಸಖೀಕರಾಃ, ಸಖೀಕರೇಷು ಗತಃ ಸಖೀಕರಗತಃ, ತಂ ಸಖೀಕರಗತಂ ।

**ಕ್ರಿಯಾಪದ— ಆದದತೇ** - ಆ+ದದತ್ತೇ ದತ್ತೇ ದದಾತೇ ದದತೇ, ದತ್ಸೇ ದದಾಥೇ ದದ್ಧ್ವೇ, ದದೇ ದದ್ವಹೇ ದದ್ಮಹೇ. ಆಙ್(ಆ) ಇತ್ಯುಪಸರ್ಗಪೂರ್ವಕಾತ್ ಡುದಾಞ್‌ದಾನೇ ಇತ್ಯಸ್ಮಾದ್‌ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇ-ಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಬಹುವಚನೇ 'ಆದದತೇ' ಇತಿ ರೂಪಂ ।

2 ಲಿಟ್ ದದೇ, ದದಾತೇ, ದದಿರೇ, 3 ಲುಟ್ ದಾತಾ ದಾತಾರೌ.ಸೇ, 4 ಲೃಟ್ ದಾಸ್ಯತೇ, 5 ಲೋಟ್ ದತ್ತಾಂ ದದಾತಾಂ ದದತಾಂ, ದತ್ಸ್ವ ದದಾಥಾಂ ದದ್ಧ್ವಂ, ದದೈ ದದಾವಹೈ ದದಾಮಹೈ, 6 ಲಙ್ ಅದತ್ತ ಅದದಾತಾಂ ಅದದತ, ಅದತ್ಥಾಃ ಅದದಾಥಾಂ ಅದದ್ಧ್ವಂ, ಅದದಿ ಅದದ್ವಹಿ ಅದದ್ಮಹಿ, 7 ವಿಧಿಲಿಙ್ ದದೀತ ದದೀಯಾತಾಂ ದದೀರನ್, 8 ದಾಸೀಷ್ಟ ದಾಸೀಯಾಸ್ತಾಂ ದಾಸೀರನ್, 9 ಅದಿತ ಅದಿಷಾತಾಂ ಅದಿಷತ, ಅದಿಥಾಃ ಅದಿಷಾಥಾಂ ಅದಿಢ್ವಂ ಅದಿಧ್ವಂ, ಅದಿಷಿ ಅದಿಷ್ವಹಿ ಅದಿಷ್ಮಹಿ, 10 ಲೃಙ್ ಅದಾಸ್ಯತ ।

**ಕೋಶ—** 'ಸುಂದರೀ ರಮಣೀ ರಾಮಾವನಿತಾ ಮಹಿಲಾ ತಥಾ' (ಅಮರ) ವಿಕಟೇಷು = ಸುಂದರವಾದ 'ವಿಕಟಃ ಸುಂದರೇ ಪ್ರೋಕ್ತಃ' (ಅಮರ) ವಿಕಟೇಷು = ಶ್ರೇಷ್ಠವಾದ ಅಥವಾ ವಿಶಾಲವಾದ 'ವಿಶಂಕಟಂ ವಿಶಾಲಂ ಸ್ಯಾತ್ ಕರಾಲಂ ವಿಕಟಂ ತಥಾ', (ಹಲ) ವಿದ್ರುಮ = ಹವಳ, (ಮುಕ್ತಾಥ) 'ವಿದ್ರುಮಃ ಪುಂಸಿ ಪ್ರವಾಲಂ ಪುಂನಪುಂಸಕಂ', (ಅಮರ) 'ಪ್ರವಾಲಂ ವಿದ್ರುಮೋಽಸ್ತ್ರಿಯಾಂ' ಎಂದು ಛಲಾರೀಯದಲ್ಲಿ ಅಮರಕೋಶವಾಕ್ಯವನ್ನು ಉದ್ಧರಿಸಿದ್ದಾರೆ. ಸುರಭಿ = ಸುವಾಸನೆಯಾದ, 'ಸುರಭಿಃ ಘ್ರಾಣತರ್ಪಣಃ' ಅಮರ. ಸುವರ್ಣಂ = ಒಳ್ಳೆಯ ಬಣ್ಣವುಳ್ಳ, 'ವರ್ಣೋ ದ್ವಿಜಾದೌ ಶುಕ್ಲಾದೌ, ಸ್ತುತೌ, ವರ್ಣಂ ತು ವಾಕ್ಷರೇ' (ಅಮರ) ವರ್ಣಕಃ (ಕಂ) = ಅಂಗರಾಗ, ಮುಖ ಮೈಗೆ ಹಚ್ಚಿಕೊಳ್ಳುವ

ಚೂರ್ಣ (ಪೌಡರ್) 'ವರ್ಣಕೋ, ವಿಲೇಪನೇ ಮಲಯಜೇನಟೇ ಚ' (ಹೇಮಚಂದ್ರ) 'ಗಾತ್ರಾನುಲೇಪನೀ ವರ್ತೀ ವರ್ಣಕಂ ಸ್ಯಾದ್ ವಿಲೇಪನಂ' (ವರ್ಣಕೋಽಸ್ತ್ರೀ ವಿಲೇಪನಂ) ಅಮರ.

ಪ್ರಯೋಗ— ಮಹಿಲಾಃ ವರ್ಣಕಂ ಆದದತೇ (ಕರ್ತರಿ) ।
ಮಹಿಲಾಭಿಃ ವರ್ಣಕಃ ಆದೀಯತೇ (ಕರ್ಮಣಿ) ।

★ ★ ★

ಅವತಾರಿಕಾ— ಆ ತರುಣಿಯರ ಅಲಂಕಾರ ರೀತಿಯನ್ನು ವರ್ಣಿಸುತ್ತಾರೆ.

**ಜಘನಾಂಶುಕೈರವಯವಾಭರಣೈಃ ಕುಚಕುಂಕುಮೈಶ್ಚ ಕಚಮಾಲ್ಯವರೈಃ ।**
**ನಯನಾಂಜನೈರಪಿ ಮಿಥೋಽಬ್ಜದೃಶಾಂ ಘಟಿತೈರಲಂಕೃತಿರಲಂ ಕ್ರಿಯತೇ ॥ 52 ॥**

ಪದಚ್ಛೇದ— ಜಘನಾಂಶುಕೈ, ಅವಯವಾಭರಣೈಃ ಕುಚಕುಂಕುಮೈಃ ಚ, ಕಚಮಾಲ್ಯವರೈಃ, ನಯನಾಂಜನೈಃ ಅಪಿ, ಮಿಥಃ, ಅಬ್ಜದೃಶಾಂ, ಘಟಿತೈಃ, ಅಲಂಕೃತಿಃ ಅಲಂ, ಕ್ರಿಯತೇ ।

ಅನ್ವಯ— ಮಿಥಃ, ಘಟಿತೈಃ, ಅಬ್ಜದೃಶಾಂ, ಜಘನಾಂಶುಕೈಃ, ಅವಯವಾಭರಣೈಃ, ಕುಚಕುಂಕುಮೈಃ, ಕಚಮಾಲ್ಯ ವರೈಃ, ಚ, ನಯನಾಂಜನೈಃ, ಅಪಿ, ಅಲಂ, ಅಲಂಕೃತಿಃ, ಕ್ರಿಯತೇ ।

ಅನ್ವಯಾರ್ಥ—

**ಮಿಥಃ** = ಅನ್ಯೋನ್ಯವಾಗಿ
**ಘಟಿತೈಃ** = ಹೊಂದಾಣಿಕೆಯಿರುವ (Matching)
**ಅಬ್ಜದೃಶಾಂ** = ಕಮಲದಂತಹ ಕಣ್ಣುಗಳುಳ್ಳ ಮುಕ್ತ ತರುಣಿಯರ
**ಜಘನಾಂಶುಕೈಃ** = ಸೊಂಟದ ಮುಂಭಾಗಗಳು ಮತ್ತು ವಸ್ತ್ರ ಇವುಗಳಿಂದ
**ಅವಯವಾಭರಣೈಃ** = ಕೈಕಾಲುಗಳು ಮತ್ತು ಒಡವೆಗಳು ಇವುಗಳಿಂದ
**ಕುಚಕುಂಕುಮೈಃ** = ಸ್ತನಗಳು ಮತ್ತು ಕುಂಕುಮಗಳು ಇವುಗಳಿಂದ
**ಕಚಮಾಲ್ಯವರೈಃ** = ತಲೆಯ ಮುಡಿ(ತುರುಬು)ಗಳು ಮತ್ತು ಶ್ರೇಷ್ಠವಾದ ಹೂವಿನ ಮಾಲೆಗಳು ಇವುಗಳಿಂದ
**ನಯನಾಂಜನೈಃಅಪಿ** = ಕಣ್ಣುಗಳು ಮತ್ತು ಕಾಡಿಗೆ (ಕಪ್ಪು) ಇವುಗಳಿಂದಲೂ,
**ಅಲಂ** = ಚೆನ್ನಾಗಿ
**ಅಲಂಕೃತಿಃ** = ಅಲಂಕಾರವು
**ಕ್ರಿಯತೇ** = ಮಾಡಲ್ಪಡುತ್ತದೆ.

**ತಾತ್ಪರ್ಯ**— ಅಲ್ಲಿರುವ ಸುಂದರಿಯರಾದ ಸ್ತ್ರೀಯರು ಧರಿಸಿರುವ ಉತ್ತಮವಾದ ಸೀರೆಗಳಿಂದ ಅವರ ಜಘನಗಳಿಗೂ (ಸೊಂಟದ ಮುಂಭಾಗಗಳಿಗೂ) ಜನಘನಗಳಿಂದ ಅವರು ಉಟ್ಟಿರುವ ಸೀರೆಗಳಿಗೂ, ಆಭರಣಗಳಿಂದ ಕಿವಿ ಕೈಕಾಲುಗಳಿಗೂ, ಕಿವಿ ಮುಂತಾದ ಅವಯವಗಳಿಂದ ಆಭರಣಗಳಿಗೂ, ಕುಂಕುಮದ ಗಂಧಗಳಿಂದ ಸ್ತನಗಳಿಗೂ, ಸ್ತನಗಳಿಂದ ಕುಂಕುಮ ಕೇಸರಿಯ ಗಂಧಗಳಿಗೂ, ಉತ್ತಮವಾದ ಹೂವಿನ ಮಾಲೆಗಳಿಂದ ತುರುಬುಗಳಿಗೂ, ತುರುಬುಗಳಿಂದ ಹೂವಿನ ಮಾಲೆಗಳಿಗೂ, ಕಾಡಿಗೆಯಿಂದ ಕಣ್ಣುಗಳಿಗೂ, ಕಣ್ಣುಗಳಿಂದ ಕಾಡಿಗೆಗೂ, ಪರಸ್ಪರವಾಗಿ ಅಲಂಕಾರವುಂಟಾಗುತ್ತದೆ. ಅಂದರೆ ಅಲ್ಲಿರುವ ಸ್ತ್ರೀಯರ ಜಘನಾದಿಗಳಿಗೂ ಬಟ್ಟೆ ಮುಂತಾದವುಗಳಿಗೂ ಬಹಳ ಚೆನ್ನಾಗಿರುವ ಜೋಡಿಯಿದೆ. ಅವು ಪರಸ್ಪರ ಚೆನ್ನಾಗಿ ಒಂದಕ್ಕೆ ಮತ್ತೊಂದು ಒಪ್ಪುತ್ತವೆ.

ಛಲಾರಿಯ = ಜಘನಾದ್ಯವಯವಸಂಬಂಧಾತ್ ವಸ್ತ್ರಾದೀನಾಂ ವಸ್ತ್ರಾಭರಣಾದಿಸಂಬಂಧಾತ್ ಜಘನಾದೀನಾಂ ಇತಿ ಪರಸ್ಪರಾಲಂಕಾರೋಽಭೂತ್ = ಜಘನ ಮುಂತಾದ ಅವಯವಗಳ ಸಂಬಂಧದಿಂದ ವಸ್ತ್ರಾದಿಗಳಿಗೂ, ವಸ್ತ್ರಾಭರಣಾದಿ ಸಂಬಂಧದಿಂದ ಜಘನಾದಿಗಳಿಗೂ ಪರಸ್ಪರ ಅಲಂಕಾರ ಉಂಟಾಯಿತು ಎಂದು ತಾತ್ಪರ್ಯ.

ವಿಗ್ರಹ—

**ಜಘನಾಂಶುಕೈಃ—** ಜಘನಾನಿ ಚ ಅಂಶುಕಾನಿ ಚ ಜಘನಾಂಶುಕಾನಿ, ತೈಃ ಜಘನಾಂಶುಕೈಃ ।

**ಅವಯವಾಭರಣೈಃ—** ಅವಯವಾಶ್ಚ ಆಭರಣಾನಿ ಚ ಅವಯವಾಭರಣಾನಿ, ತೈಃ ಅವಯವಾಭರಣೈಃ ।

**ಕುಚಕುಂಕುಮೈಃ—** ಕುಚಾಶ್ಚ ಕುಂಕುಮಾನಿ ಚ ಕುಚಕುಂಕುಮಾನಿ, ತೈಃ ಕುಚಕುಂಕುಮೈಃ ।

**ಕಚಮಾಲ್ಯವರೈಃ—** ಮಾಲ್ಯೇಷು ವರಾಣಿ ಮಾಲ್ಯವರಾಣಿ, ಕಚಾಶ್ಚ ಮಾಲ್ಯವರಾಣಿ ಚ ಕಚಮಾಲ್ಯವರಾಣಿ, ತೈಃ ಕಚಮಾಲ್ಯವರೈಃ ।

**ಅಬ್ಜದೃಶಾಂ—** ಅಬ್ಜಾನೀವ ದೃಶಃ ಯಾಸಾಂ ತಾಃ ಅಬ್ಜದೃಶಃ, ತಾಸಾಂ ಅಬ್ಜದೃಶಾಂ ।

**ಕ್ರಿಯಾಪದ—** ಅಲಂ+ಕ್ರಿಯತೇ 'ಅಲಂ' ಅವ್ಯಯ ಕೃಧಾತು । (ಸರ್ಗ 11, ಶ್ಲೋಕ 20 ನೋಡಿರಿ) ।

**ಕೋಶ—** ಜಘನಂ = ಕಟಿಪುರೋಭಾಗ 'ಪಶ್ಚಾನ್ನಿತಂಬಃ ಸ್ತ್ರೀಕಟ್ಯಾಃ ಕ್ಲೀಬೇತು ಜಘನಂ ಪುರಃ' ಅಮರ ।
ಅಂಶುಕಂ = ಬಟ್ಟೆ 'ವಸ್ತ್ರಮಾಚ್ಛಾದನಂ ವಾಸಶ್ಚೈಲಂ ವಸನಮಂಶುಕಂ' – ಅಮರ ।
ಮಾಲ್ಯಂ = ಮಾಲೆ, 'ಮಾಲ್ಯಂ ಮಾಲಾಸ್ರಜೌ ಮೂರ್ಧ್ನಿ' ಅಮರ ।

**ಪ್ರಯೋಗ—** ಜಘನಾಂಶುಕೈಃ ನಯನಾಂಜನೈಃ ಅಪಿ ಅಲಂಕೃತಿಃ ಅಲಂಕ್ರಿಯತೇ (ಕರ್ಮಣಿ) ।
ಜಘನಾಂಶುಕಾನಿ, ಅವಯವಾಭರಣಾನಿ ಕುಚಕುಂಕುಮಾನಿ ಕಚಮಾಲ್ಯವರಾಣಿ ನಯನಾಂಜನಾನಿ ಅಪಿ ಅಲಂಕೃತಿಂ ಅಲಂಕುರ್ವಂತಿ (ಕರ್ತರಿ) ।

★ ★ ★

**ತನುಮಧ್ಯಮಾ ನಿಜಗೃಹಾಣಿ ಗತಾಃ ಸಮಮಾತ್ಮನಾಮಸುಸಮೈರಸಮೈಃ ।**
**ಅಮೃತಂ ಪಿಬಂತ್ಯಸುಲಭಂ ಭವಿಭಿಶ್ಚಷಕೈರ್ಮಹಾರಜತರತ್ನಮಯೈಃ ॥ 53 ॥**

**ಪದಚ್ಛೇದ—** ತನುಮಧ್ಯಮಾ, ನಿಜಗೃಹಾಣಿ, ಗತಾಃ, ಸಮಂ, ಆತ್ಮನಾಂ, ಅಸುಸಮೈಃ, ಅಸಮೈ, ಅಮೃತಂ, ಪಿಬಂತಿ, ಅಸುಲಭಂ, ಭವಿಭಿಃ, ಚಷಕೈಃ, ಮಹಾರಜತರತ್ನಮಯೈಃ ।

**ಅನ್ವಯ—** ನಿಜಗೃಹಾಣಿ, ಗತಾಃ, ತನುಮಧ್ಯಮಾಃ, ಅಸಮೈಃ, ಆತ್ಮನಾಂ, ಅಸುಸಮೈಃ, ಸಮಂ, ಮಹಾರಜತ ರತ್ನಮಯೈಃ, ಚಷಕೈಃ, ಭವಿಭಿಃ, ಅಸುಲಭಂ, ಅಮೃತಂ, ಪಿಬಂತಿ ।

**ಅನ್ವಯಾರ್ಥ—**

**ನಿಜಗೃಹಾಣಿ** = ತಮ್ಮ ಮನೆಗಳನ್ನು ಕುರಿತು
**ಗತಾಃ** = ಹೋಗಿರುವ
**ತನುಮಧ್ಯಮಾಃ** = ಕೃಶವಾದ ಕಟೀ(ಸೊಂಟ) ಪ್ರದೇಶವುಳ್ಳ
**ಅಸಮೈಃ** = ತಮಗಿಂತ ಉತ್ತಮರಾದ
**ಆತ್ಮನಾಂ** = ತಮ್ಮ
**ಅಸುಸಮೈಃ** = ಪ್ರಾಣಗಳಿಗೆ ಸಮಾನರಾದ (ಪತಿಗಳಿಂದ)

**ಸಮಂ** = ಕೂಡಿಕೊಂಡು

**ಮಹಾರಜತರತ್ನಮಯ್ಯೈಃ** = ಚಿನ್ನವೂ, ಮಣಿಗಳೂ, ಇವುಗಳಿಂದ, ನಿರ್ಮಿತವಾದ ಮತ್ತು ಖಚಿತವಾದ

**ಚಷಕೈಃ** = ಪಾನಪಾತ್ರೆಗಳಿಂದ

**ಭವಿಭಿಃ** = ಸಂಸಾರಿಗಳಿಂದ

**ಅಸುಲಭಂ** = ಹೊಂದಲು ಅಸಾಧ್ಯವಾದ

**ಅಮೃತಂ** = ಅಮೃತವನ್ನು

**ಪಿಬಂತಿ** = ಕುಡಿಯುತ್ತಾರೆ.

**ತಾತ್ಪರ್ಯ**— ಜಲಕ್ರೀಡೆ ಮತ್ತು ಅಲಂಕಾರಗಳು ಆದ ಮೇಲೆ ವೈಕುಂಠಲೋಕದ ಮುಕ್ತತರುಣಿಯರು ತಮಗಿಂತ ಉತ್ತಮರೂ, ತಮ್ಮ ಪ್ರಾಣಗಳಿಗೆ ಸಮರೂ ಆದ ಗಂಡಂದಿರೊಡನೆ ಮನೆಗೆ ಹೋಗುತ್ತಾರೆ. ಅಲ್ಲಿ ರತ್ನಖಚಿತವಾದ ಚಿನ್ನದ ಪಾತ್ರೆಗಳಲ್ಲಿ ತುಂಬಿರುವ, ಸಂಸಾರಿಗಳಿಗೆ ಸರ್ವಥಾ ಸಿಗಲಾರದ ಅಮೃತವನ್ನು ಕುಡಿಯುತ್ತಾರೆ.

**ವಿಗ್ರಹ**—

**ತನುಮಧ್ಯಮಾಃ**— ತನು ಮಧ್ಯಮಂ ಯಾಸಾಂ ತಾಃ ತನುಮಧ್ಯಮಾಃ ।

**ನಿಜಗೃಹಾಣಿ**— ನಿಜಾನಿ ಚ ತಾನಿ ಗೃಹಾಣಿ ಚ ನಿಜಗೃಹಾಣಿ, ತಾನಿ ನಿಜಗೃಹಾಣಿ ।

**ಅಸುಸಮೈಃ**— ಅಸುಭಿಃ ಸಮಾಃ ಅಸುಸಮಾಃ, ತೈಃ ಅಸುಸಮೈಃ ।

**ಅಸಮೈಃ**— ನ ಸಮಾಃ ಅಸಮಾಃ, ತೈಃ ಅಸಮೈಃ ।

**ಅಸುಲಭಂ**— ಸುಖೇನ ಲಬ್ಧುಂ ಶಕ್ಯತೇ ಇತಿ ಸುಲಭಂ, ನ ಸುಲಭಂ ಅಸುಲಭಂ ।

**ಭವಿಭಿಃ**— ಭವಃ (ಸಂಸಾರಃ) ಏಷಾಂ ಅಸ್ತೀತಿ ಭವಿನಃ, ತೈಃ ಭವಿಭಿಃ ।

**ಮಹಾರಜತರತ್ನಮಯ್ಯೈಃ**— ಮಹಾರಜತಂ ಚ ರತ್ನಾನಿ ಚ ಮಹಾರಜತರತ್ನೈಃ ಪ್ರಚುರಾಃ ಮಹಾ-ರಜತರತ್ನಮಯಾಃ ತೈಃ ।

**ಕ್ರಿಯಾಪದ**— **ಪಿಬಂತಿ**- ಪಿಬತಿ, ಪಿಬತಃ, ಪಿಬಂತಿ ಇತ್ಯಾದಿ, ಪಾಪಾನೇ ಸಕರ್ಮಕ ಪರಸ್ಮೈಪದಿ ವರ್ತಮಾನೇ ಲಟ್ 2 ಲಿಟ್ ಪಪೌ ಪಪತುಃ ಪಪುಃ, ಪಪಿಥ-ಪಪಾಥ ಪಪಥುಃ ಪಪ, ಪಪೌ ಪಪಿವ ಪಿಪಿಮ, 3 ಲುಟ್ ಪಾತಾ, ಪಾತಾರೌ, ಪಾತಾಸಿ, 4 ಲೃಟ್ ಪಾಸ್ಯತಿ, 5 ಲೋಟ್ ಪಿಬತು, 6 ಲಙ್ ಅಪಿಬತ್, 7 ವಿಧಿಲಿಙ್ ಪಿಬೇತ್, 8 ಆಶೀರ್ಲಿಙ್ ಪೇಯಾತ್, ಪೇಯಾಸ್ತಾಂ, ಪೇಯಾಸುಃ, ಇತ್ಯಾದಿ, 9 ಲುಙ್ ಅಪಾತ್ ಅಪಾತಾಂ ಅಪುಃ, 10 ಲೃಙ್ ಅಪಾಸ್ಯತ್ ।

**ಕೋಶ**— ಕೃಶವಾದ ನಡುವುಳ್ಳವರು (ಸ್ತ್ರೀಯರು) ಮಧ್ಯಮಂ (ನಪುಂ) = ಸೊಂಟ, ನಡು, 'ಮಧ್ಯಮಂ ಚಾವಲಗ್ನಂ ಚ' ಅಮರ, 'ನಿಜಾನಿ ಚ ತಾನಿ ಗೃಹಾಣಿ ಚ ನಿಜಗೃಹಾಣಿ 'ಭವಃ ಸಂಸಾರ ಸಂಪ್ರಾಪ್ತೀ' ವಿಶ್ವ, 'ಅಸವಃ ಅಸು ಶಬ್ದನಿತ್ಯ ಬಹುವಚನಾಂತ (ಪುಲ್ಲಿಂಗ) 'ಪುಂಸಿ ಭೂಮ್ನ್ಯಸವಃ ಪ್ರಾಣಾಃ' ಅಮರ, 'ಚಷಕೋಽಸ್ತ್ರೀ ಪಾನಪಾತ್ರಂ' ಅಮರ, 'ಮಹಾರಜತರತ್ನೈಃ ಪ್ರಚುರಾಃ ರತ್ನಾತ್ಮಕಾ ಮಹಾರಜತರತ್ನಮಯಾಃ, ತೈಃ ಮಹಾರಜತರತ್ನಮಯ್ಯೈಃ' ಮಹಾ- ರಜತ = ಚಿನ್ನ, ''ಮಹಾರಜತಕಾಂಚನೇ'' ಅಮರ.

(ನಾನಾವಿಧ ಕ್ರೀಡಾನಂತರಂ ಗೃಹಂ ಉಪೇತ್ಯ ಪತಿಭಿಃ ಸಹ ಅಮೃತಂ ಪಿಬಂತಿ) ।

**ಪ್ರಯೋಗ**— ತನುಮಧ್ಯಮಾ ಅಮೃತಂ ಪಿಬಂತಿ (ಕರ್ತರಿ)

ತನುಮಧ್ಯಮಾಭಿಃ ಅಮೃತಂ ಪೀಯತೇ (ಕರ್ಮಣಿ)

★ ★ ★

**ಅವತಾರಿಕಾ**— ಮಹಾಕಾವ್ಯದ ಲಕ್ಷಣದಂತೆ ಭೋಗವನ್ನು ವರ್ಣಿಸುತ್ತಾರೆ.

**ಮೃದುಕಮ್ರಶಯ್ಯಮನುರಾಗವತಾಂ**
**ಮಣಿಮಂಚಮಂಚಿತದೃಶೋಽವಸರೇ ।**
**ಅಪಿ (ಪತಿ) ಚೋದಿತಾ ಅಧಿರುಹಂತಿ ಶನೈಃ**
**ವಿನಯೋ ಹಿ ಭೂಷಯತಿ ಸರ್ವರಸಮ್ ॥ 54 ॥**

**ಪದಚ್ಛೇದ**— ಮೃದುಕಮ್ರಶಯ್ಯಂ, ಅನುರಾಗವತಾಂ, ಮಣಿಮಂಚಂ, ಅಂಚಿತದೃಶಃ, ಅವಸರೇ, ಅಪಿ, ಚೋದಿತಾಃ (ಪತಿ ಚೋದಿತಾಃ) ಅಧಿರುಹಂತಿ, ಶನೈಃ ವಿನಯಃ ಹಿ, ಭೂಷಯತಿ, ಸರ್ವರಸಂ ।

**ಅನ್ವಯ**— ಅಂಚಿತದೃಶಃ, ಅನುರಾಗವತಾಂ ಮೃದುಕಮ್ರಶಯ್ಯಂ, ಮಣಿಮಂಚಂ, ಅವಸರೇ, ಅಪಿ (ಪತಿ) ಚೋದಿತಾಃ, ಶನೈಃ, ಅಧಿರುಹಂತಿ ಹಿ, ವಿನಯಃ ಸರ್ವರಸಂ, ಭೂಷಯತಿ ।

**ಅನ್ವಯಾರ್ಥ**—

**ಅಂಚಿತದೃಶಃ** = ಕಾಡಿಗೆಯಿಂದ ಅಲಂಕೃತವಾದ ಕಣ್ಣುಗಳುಳ್ಳ ಯುವತಿಯರು
**ಅನುರಾಗವತಾಂ** = ಪ್ರೇಮಪೂರ್ಣರಾದ ಪತಿಗಳ
**ಮೃದುಕಮ್ರಶಯ್ಯಂ** = ಮೃದುವಾದ ಮನೋಹರವಾದ ಹಾಸಿಗೆಯುಳ್ಳ
**ಮಣಿಮಂಚಂ** = ರತ್ನದ ಮಂಚವನ್ನು
**ಅವಸರೇ ಅಪಿ** = ಸಮಯವು ಒದಗಿದರೂ
**ಪತಿಚೋದಿತಾಃ** = (ಗಂಡಂದಿರಿಂದ) ಪ್ರೇರಿತರಾಗಿ
**ಶನೈಃ** = ಮೆಲ್ಲನೆ
**ಅಧಿರುಹಂತಿ** = ಹತ್ತುತ್ತಾರೆ.
**ಹಿ** = ಯಾವ ಕಾರಣದಿಂದ
**ವಿನಯಃ** = ವಿಧೇಯತೆಯು
**ಸರ್ವರಸಂ** = ಶೃಂಗಾರಾದಿ ಎಲ್ಲಾ ರಸಗಳನ್ನೂ
**ಭೂಷಯತಿ** = ಅಲಂಕರಿಸುತ್ತದೆ.

**ತಾತ್ಪರ್ಯ**— ಈ ವೈಕುಂಠಲೋಕದಲ್ಲಿ ಮುಕ್ತರಾದ ಪ್ರಿಯರಾದ ತರುಣಪತಿಗಳು ತಾವು ಮೃದುವಾದ ಮನೋಹರವಾದ, ಹಾಸಿಗೆಯುಳ್ಳ ಮಂಚದಲ್ಲಿ ಕುಳಿತಿರುತ್ತಾರೆ. ಮುಕ್ತರಾದ ತಮ್ಮ ತಮ್ಮ ಪ್ರೇಯಸಿಯರನ್ನು ರತಿ ವಿಹಾರಕ್ಕಾಗಿ ಕರೆಯುತ್ತಾರೆ. ಕಣ್ಣನ್ನು ಕಾಡಿಗೆಯಿಂದ ಅಲಂಕರಿಸಿಕೊಂಡು ಪರಮ ಸುಂದರಿಯರಾಗಿ ಕಾಣುತ್ತಿರುವ ಆ ಮುಕ್ತಸುಂದರಿಯರು ಅದು ಸುರತವಿಹಾರಕ್ಕೆ ಯುಕ್ತಕಾಲವಾಗಿದ್ದರೂ, ಮಂಚವನ್ನು, ತಮ್ಮ ಪತಿಗಳಿಂದ ಪ್ರೇರಿತರಾಗಿ ಮೆಲ್ಲನೆ ಹತ್ತುತ್ತಾರೆ. ಇದು ಯುಕ್ತವೇ ಸರಿ. ಏಕೆಂದರೆ ಶೃಂಗಾರಾದಿ ನವರಸಗಳಿಗೂ, ಪ್ರೇಮೋತ್ಸಾಹಗಳಿಗೂ ವಿನಯವು ಅಲಂಕಾರವಾಗಿರುತ್ತದೆ. ವಿನಯವಿಲ್ಲದಿದ್ದರೆ ರಸಭಾವಾನುರಾಗಗಳಿಗೆ ಶೋಭೆಯಿರುವುದಿಲ್ಲ. ಅವು ಗ್ರಾಮ್ಯವಾಗುತ್ತವೆ. ಆದುದರಿಂದ ಆ ಮುಕ್ತ ತರುಣಿಯರು ಹಾಗೆ ಮಾಡುವುದು ಯುಕ್ತವೇ ಸರಿ. (ಅರ್ಥಾಂತರನ್ಯಾಸಾಲಂಕಾರ)

**ವಿಗ್ರಹ—**

**ಮೃದುಕಮ್ರಶಯ್ಯಂ—** ಮೃದುಶ್ಚ ಸಾ ಕಮ್ರಾ ಚ ಮೃದುಕಮ್ರಾ, ಮೃದುಕಮ್ರಾ ಶಯ್ಯಾ ಯಸ್ಮಿನ್ ಸಃ ಮೃದುಕಮ್ರಶಯ್ಯಃ, ತಂ ಮೃದುಕಮ್ರಶಯ್ಯಂ ।

**ಅನುರಾಗವತಾಂ—** ಅನುರಾಗಃ ಏಷಾಂ ಅಸ್ತೀತಿ ಅನುರಾಗವಂತಃ ತೇಷಾಂ ಅನುರಾಗವತಾಂ ।

**ಮಣಿಮಂಚಂ—** ಮಣಿಮಯಶ್ಚಾಸೌ ಮಂಚಶ್ಚ ಮಣಿಮಂಚಃ, ತಂ ಮಣಿಮಂಚಂ ।

**ಅಂಚಿತದೃಶಃ—** ಅಂಚಿತಾಃ ದೃಶಃ ಯಾಸಾಂ ತಾಃ ಅಂಚಿತದೃಶಃ ।

**ಪತಿಚೋದಿತಾಃ—** ಪತಿಭಿಃ ಚೋದಿತಾಃ ಪತಿಚೋದಿತಾಃ ।

**ಸರ್ವರಸಂ—** ಸರ್ವಶ್ಚಾಸೌ ರಸಶ್ಚ ಸರ್ವರಸಃ, ತಂ ಸರ್ವರಸಂ ।

**ಕ್ರಿಯಾಪದ— ಅಧಿರುಹಂತಿ-** ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ ಎಂಬ ಧಾತುವಿಗೆ 'ಕಪ್ರಕರಣೇ ಮೂಲವಿಭುಜಾದಿಭ್ಯ ಉಪಸಂಖ್ಯಾನಂ' ಎಂಬ ವಾರ್ತಿಕದಿಂದ ಕಪ್ರತ್ಯಯ ಒಂದು ರುಹ ಎಂದಾಗುತ್ತದೆ, ರುಹಂ ಕರೋತಿ ಇತಿ ರುಹತಿ ಎಂದು ವಿಗ್ರಹ ಮಾಡಿಕೊಂಡು ಈ ಕ್ರಿಯಾಪದದ ನಿಷ್ಪತ್ತಿಯನ್ನು ಮಾಡಬೇಕು. ಇದು ಭ್ವಾದಿಗಣದಲ್ಲಿ ಸೇರಿದ್ದರಿಂದ 'ಶಪ್' ವಿಕರಣ ಪ್ರತ್ಯಯ ಬಂದರೆ 'ರೋಹತಿ ರೋಹತಃ ರೋಹಂತಿ' ಎಂದು ರೂಪವಾಗುತ್ತದೆ. ಆದ್ದರಿಂದ ಇಲ್ಲಿ ಮೇಲೆ ಹೇಳಿದಂತೆ ವ್ಯುತ್ಪತ್ತಿಯನ್ನು ಇಟ್ಟುಕೊಳ್ಳಬೇಕು. ಅಥವಾ ವಿಕರಣಪ್ರತ್ಯಯವನ್ನು ವ್ಯತ್ಯಾಸ ಮಾಡಿಕೊಂಡು ತುದಾದಿಗಣದ ಧಾತುವಿನಂತೆ 'ಶ' ವಿಕರಣಪ್ರತ್ಯಯ ಮಾಡಿಕೊಂಡರೆ 'ಸಾರ್ವಧಾತುಕಮಪಿತ್' ಎಂಬ ಸೂತ್ರದಿಂದ ಙತ್ವವಿರುವುದರಿಂದ ಕ್ಙಿತಿಚ ಎಂಬ ಸೂತ್ರದಿಂದ ಗುಣನಿಷೇಧ ಬಂದು ಅಧಿರುಹಂತಿ ಎಂಬ ರೂಪವಾಗುತ್ತದೆ. ಅಥವಾ 'ಅನುಯತ್ ಪೂರ್ವಾ ಅರುಹತ್ ಸನಾಜುವೋ ನಿನವ್ಯಸೀಷ್ವವರಾಸುಧಾವತೇ' (ಬಳಿತ್ಥಾಸೂಕ್ತ) ಇತ್ಯಾದಿ ವೈದಿಕ ಪ್ರಯೋಗಗಳಲ್ಲಿ 'ಅರುಹತ್' ಎಂಬ ರೂಪವಿರುವುದರಿಂದ ಇಲ್ಲಿಯೂ ಅದರಂತೆ ಛಾಂದಸವಾಗಿ ವಿಕರಣ ವ್ಯತ್ಯಾಸಮಾಡಿ ಅಧಿರುಹಂತಿ ಎಂದು ಪ್ರಯೋಗಿಸಿದ್ದಾರೆಂದು ತಿಳಿಯಬಹುದು ।

**ಭೂಷಯತಿ** - ಭೂಷಯತಿ ಭೂಷಯತಃ ಭೂಷಯಂತಿ ಇತ್ಯಾದಿ ಭೂಷಅಲಂಕಾರೇ ಲಟ್ 2 ಲಿಟ್ ಭೂಷಯಾಂಚಕಾರ, ಬಭೂವ-ಆಸ, 3 ಲುಟ್ ಭೂಷಯಿತಾ, 4 ಲೃಟ್ ಭೂಷಯಿಷ್ಯತಿ, 5 ಲೋಟ್ ಭೂಷಯತು, 6 ಲಙ್ ಅಭೂಷಯತ್, 7 ವಿಧಿಲಿಙ್ ಭೂಷಯೇತ್, 8 ಆಶೀರ್ಲಿಙ್ ಭೂಷ್ಯಾತ್ ಭೂಷ್ಯಾಸ್ತಾಂ ಭೂಷ್ಯಾಸುಃ, 8 ಲುಙ್ ಅಬೂಭುಷತ್ ಅಬೂಭುಷತಾಂ ಅಬೂಭುಷನ್ ಇತ್ಯಾದಿ 10 ಲೃಙ್ ಅಭೂಷಯಿಷ್ಯತ್ ।

**ಕೋಶ—** ಮೃದುಕಮ್ರಶಯ್ಯಂ ಎಂಬಲ್ಲಿ ಕಮ್ರ = ಮನೋಹರವಾದ, ''ಕಾಂತಂ ಚ ಕಮನಂ ಕಮ್ರಂ ಕಮನೀಯಂ ಮನೋರಮಂ'' ಇತಿ ಧನಂಜಯ, ಮಣಿಮಂಚಂ = ರತ್ನಮಯವಾದ ಮಂಚವನ್ನು 'ಶಯನಂ ಮಂಚ-ಪರ್ಯಂಕಪಲ್ಯಂಕಾ ಖಟ್ವಯಾ ಸಮಾ'' ಅಮರ. ರಸ = ಶೃಂಗಾರಾದಿರಸವು, ''ಶೃಂಗಾರಾದೌ ವಿಷೇ ವೀರ್ಯೇ ಗುಣೇ ರಾಗೇ ದ್ರವೇ ರಸಃ'' ಅಮರ.

**ಪ್ರಯೋಗ—** ಅಂಚಿತದೃಶಃ ಮಣಿಮಂಚಂ ಶನೈಃ ಅಧಿರುಹಂತಿ (ಕರ್ತರಿ)

ಅಂಚಿತದೃಗ್ಭಿಃ ಮಣಿಮಂಚಃ ಶನೈಃ ಅಧಿರುಹ್ಯತೇ (ಕರ್ಮಣಿ)

ವಿನಯಃ ಸರ್ವರಸಂ ಭೂಷಯತಿ (ಕರ್ತರಿ)

ವಿನಯೇನ ಸರ್ವರಸಃ ಭೂಷ್ಯತೇ (ಕರ್ಮಣಿ)

★ ★ ★

**ಅವತಾರಿಕಾ**— ಮುಕ್ತರ ಭೋಗವನ್ನು ವರ್ಣಿಸುತ್ತಾರೆ.

**ಅಭಿಕಾಂತಮುನ್ನಮಿತಕಾಂತಕುಚಾ**
**ಕಿಲ ಬಧ್ನತೀ ಸಕುಸುಮಾಂ ಕಬರೀಮ್ ।**
**ಸುಮುಖೀ ಸುಲಕ್ಷ್ಯಭುಜಮೂಲವಲಿಃ**
**ಪರಿರಭ್ಯತೇ ಪ್ರಣಯಿನಾಽತಿರಸಾತ್ ॥ 55 ॥**

**ಪದಚ್ಛೇದ**— ಅಭಿಕಾಂತಂ, ಉನ್ನಮಿತಕಾಂತಕುಚಾ, ಕಿಲ, ಬಧ್ನತೀ, ಸುಕುಸುಮಾಂ, ಕಬರೀಂ, ಸುಮುಖೀ, ಸು-ಲಕ್ಷ್ಯಭುಜಮೂಲವಲಿಃ, ಪರಿರಭ್ಯತೇ, ಪ್ರಣಯಿನಾ, ಅತಿರಸಾತ್ ।

**ಅನ್ವಯ**— ಅಭಿಕಾಂತಂ (ಸ್ಥಿತಾ) ಉನ್ನತಮಿತಕಾಂತಕುಚಾ, ಸಕುಸುಮಾಂ ಕಬರೀಂ ಬಧ್ನತೀ ಕಿಲ ಸುಲಕ್ಷ್ಯಭುಜ-ಮೂಲವಲಿಃ ಸುಮುಖೀ ಪ್ರಣಯಿನಾ ಅತಿರಸಾತ್ ಪರಿರಭ್ಯತೇ ।

**ಅನ್ವಯಾರ್ಥ**—

**ಅಭಿಕಾಂತಂ(ಸ್ಥಿತಾ)** = ಪತಿಯ ಎದುರಾಗಿ ನಿಂತಿರುವ

**ಉನ್ನಮಿತಕಾಂತಕುಚಾ** = ಮೇಲ್ಮುಖವಾಗಿ ಮಾಡಲ್ಪಟ್ಟ ಮನೋಹರವಾದ ಸ್ತನಗಳುಳ್ಳ

**ಸಕುಸುಮಾಂ** = ಹೂವಿನಿಂದ ಸಹಿತವಾದ

**ಕಬರೀಂ** = ಕೇಶಪಾಶವನ್ನು (ಜಡೆಯನ್ನು)

**ಬಧ್ನತೀ ಕಿಲ** = ಕಟ್ಟುತ್ತಿರುವವಳೋ ಎಂಬಂತಿರುವ

**ಸುಲಕ್ಷ್ಯ** = ಚೆನ್ನಾಗಿ ಕಾಣಿಸುವ

**ಭುಜಮೂಲವಲಿಃ** = ತೋಳುಗಳ ಬುಡದ (ಕಂಕುಳಿನ) ರೇಖೆಗಳುಳ್ಳ

**ಸುಮುಖೀ** = ಸುಂದರವಾದ ಮುಖವುಳ್ಳ (ಮುಕ್ತ) ತರುಣಿಯು

**ಪ್ರಣಯಿನಾ** = ಪ್ರೇಮಭರಿತನಾದ ಮುಕ್ತತರುಣ ಚೇತನನಿಂದ (ಪತಿಯಿಂದ)

**ಅತಿರಸಾತ್** = ಅತಿಶಯವಾದ ಪ್ರೇಮದಿಂದ

**ಪರಿರಭ್ಯತೇ** = ಆಲಿಂಗಿಸಲ್ಪಡುತ್ತಾಳೆ.

**ತಾತ್ಪರ್ಯ**— ಮುಕ್ತವೈಕುಂಠಲೋಕದಲ್ಲಿ ಮುಕ್ತರಾದ ತರುಣಪತಿ ಮತ್ತು ಪತ್ನಿಯರ ಆಲಿಂಗನಾದಿ ಅಂತರಂಗ ಶೃಂಗಾರವನ್ನು ವರ್ಣಿಸುತ್ತಾರೆ.

ಅಲ್ಲಿ ಮುಕ್ತಳಾದ ಪರಮಸುಂದರಿಯಾದ ಚಂದ್ರವದನೆಯು ತನ್ನ ಪತಿಯ ಎದುರು ನಿಂತು ತನ್ನೆರಡು ಸುಂದರ ಸ್ತನಗಳನ್ನು ಮೇಲ್ಮುಖವಾಗಿ ತೋರಿಸುತ್ತಾ, ಹಾಗೆಯೇ ಮುಡಿದಿರುವ ಹೂವಿನಿಂದ ಸಹಿತವಾದ, ಸ್ವಲ್ಪ ಸಡಿಲವಾದ ಜಡೆಯನ್ನು ಕಟ್ಟುತ್ತಿರುವವಳಂತೆ ನೆಪವನ್ನು ಮಾಡಿಕೊಂಡು ನಿಂತಿರುತ್ತಾಳೆ. ಆಗ ಮೇಲಕ್ಕೆತ್ತಿದ ಅವಳ ಭುಜಗಳ ಕಂಕುಳಿನ ರೇಖೆಗಳು ಚೆನ್ನಾಗಿ ಅವಳ ಪತಿಗೆ ಕಾಣಿಸುತ್ತಿರುತ್ತವೆ. ಆಗ ಎದುರಿಗೇ ನಿಂತು ನೋಡುತ್ತಿರುವ ಪ್ರೇಮಪೂರ್ಣನಾದ ಅವಳ ಪತಿಯು ಅತಿಶಯವಾದ ಪ್ರೀತಿಯಿಂದ ಅವಳನ್ನು ಅಪ್ಪಿಕೊಳ್ಳುತ್ತಾನೆ.

ವಿಗ್ರಹ—

**ಅಭಿಕಾಂತಂ**— ಕಾಂತಂ ಅಭಿ ಅಭಿಕಾಂತಂ । ಅವ್ಯಯೀಭಾವ ।

**ಉನ್ನಮಿತಕಾಂತಕುಚಾ**— ಉನ್ನಮಿತೌ ಕಾಂತೌ ಕುಚೌ ಯಸ್ಯಾಃ ಸಾ ಉನ್ನಮಿತಕಾಂತಕುಚಾ ।

**ಸಕುಸುಮಾಂ—** ಕುಸುಮೈಃ ಸಹ ವರ್ತತೇ ಇತಿ ಸಕುಸುಮಾ, ತಾಂ ಸಕುಸುಮಾಂ ।

**ಸುಮುಖೀ—** ಶೋಭನಂ ಮುಖಂ ಯಸ್ಯಾಃ ಸಾ ಸುಮುಖೀ, ಸ್ವಾಂಗಾಚ್ಚೋಪಸರ್ಜನಾದ ಸಂಯೋಗೋಪಧಾತ್ 4-1-54 ಎಂಬ ಸೂತ್ರದಿಂದ ಙೀಪ್ ಪ್ರತ್ಯಯ.

**ಸುಲಕ್ಷ್ಮಭುಜಮೂಲವಲಿಃ—** ಅತಿಶಯೇನ ಲಕ್ಷಾಃ ಸುಲಕ್ಷಾಃ, ಭುಜಯೋ ಮೂಲೇ ಭುಜಮೂಲೇ, ಭುಜಮೂಲಯೋಃ ವಲಯಃ ಭುಜಮೂಲವಲಯಃ, ಸುಲಕ್ಷಾಃ ಭುಜಮೂಲವಲಯಃ ಯಸ್ಯಾಃ ಸಾ ಸುಲಕ್ಷ್ಮಭುಜಮೂಲವಲಿಃ ।

**ಪ್ರಣಯಿನಾ—** ಪ್ರಣಯಃ ಅಸ್ಯ ಅಸ್ತೀತಿ ಪ್ರಣಯಿ, ತೇನ ಪ್ರಣಯಿನಾ ।

**ಅತಿರಸಾತ್—** ಅತ್ಯಂತಂ ರಸಃ ಅತಿರಸಃ, ತಸ್ಮಾತ್ ಅತಿರಸಾತ್ ।

**ಕ್ರಿಯಾಪದ—** ಪರಿರಭ್ಯತೇ- 1 ಲಟ್ ಪರಿ+ರಭ್ಯತೇ ರಭ್ಯೇತೇ ರಭ್ಯಂತೇ ಇತ್ಯಾದಿ ಪರಿ ಉಪಸರ್ಗಪೂರ್ವಕ; ರಭರಾಭಸ್ಯೇ, ರಾಭಸ್ಯಾರ್ಥಕ (ಆಲಿಂಗನಾರ್ಥಕ) ಪರಿರಭ್‌ಧಾತುಃ ಕರ್ಮಣಿ ವರ್ತಮಾನೇ ಲಟ್ ಪ್ರಥಮಪುರುಷ ಏಕವಚನೇ ಪರರಭ್ಯತೇ ಇತಿರೂಪಂ ।

2 ಲಿಟ್ ರೇಭೇ ರೇಭಾತೇ ರೇಭಿರೇ, ರೇಭಿದ್ವೇ, 3 ಲುಟ್ ರಬ್ಧಾ, ರಭ್ಧಾಸೇ, 4 ಲೃಟ್ ರಪ್ಸ್ಯತೇ, 5 ಲೋಟ್ ರಭ್ಯತಾಂ, 6 ಲಙ್ ಪರ್ಯರಭ್ಯತ, 7 ವಿಧಿಲಿಙ್ ಪರಿರಭ್ಯೇತ, 8 ಆಶೀರ್ಲಿಙ್ ರಪ್ಸೀಷ್ಟ, ಢ್ವಂ, 9 ಲುಙ್ ಪರ್ಯರಂಭಿ, 10 ಲೃಙ್ ಪರ್ಯರಪ್ಸ್ಯತ ।

**ಕೋಶ—** 'ಬಾಹುಮೂಲೇ ಉಭೇ ಕಕ್ಷೌ' ಅಮರ. 'ಅತಿರಸಃ' ಅತ್ಯಂತವಾದ ಅನುರಾಗ ''ರಸೋ ರಾಗೇ ವಿಷೇ ವೀರ್ಯೇ'' ವೈಜಯಂತೀ ಕೋಶ, 'ಪ್ರಸೂನಂ ಕುಸುಮಂ ಸುಮಂ' ಇತ್ಯಮರಃ ।

ಫಲಾರಿಯ 'ನಾರ್ಯಾಃ ಕಬರೀಬಂಧನೇ ತಾತ್ಪರ್ಯಂ ನಾಸ್ತಿ, ಕಿಂತು ಪುಷ್ಪಮಾಲಯಾ ಸಹ ಕಬರೀಬಂಧನವ್ಯಾಜೇನ ಪತ್ಯುಃ ಅಭಿಮುಖೇನ ಉನ್ನಮಿತಮನೋಹರಕುಚಪ್ರದರ್ಶನೇ ಕಕ್ಷಮೂಲರೇಖಾ ಪ್ರದರ್ಶನೇ ಚ ತಾತ್ಪರ್ಯಂ ಸೂಚಿತಂ ಭವತಿ ತತ್ ಪ್ರದರ್ಶನಸ್ಯ ಪತ್ಯುಃ ಕಾಮೋದ್ರೇಕ ಕಾರಣತ್ವಾತ್ ಅತ ಏವ ಅತಿರಾಗಾತ್ ಆಲಿಂಗನಂ ।

**ಪ್ರಯೋಗ—** ಸುಮುಖೀ ಪ್ರಣಯಿನಾ ಅತಿರಸಾತ್ ಪರಿರಭ್ಯತೇ (ಕರ್ಮಣಿ)
ಸುಮುಖೀಂ ಪ್ರಣಯೀ ಅತಿರಸಾತ್ ಪರಿರಭತೇ (ಕರ್ತರಿ)

★ ★ ★

**ಪೃಥುವೃತ್ತತುಂಗಕಠಿನೋರಸಿಜ-**
**ದ್ವಯವಾರಿತಾಯತನಿಜಾಂತರಯೋಃ ।**
**ಭುಜಯೋರ್ಯುಗೇನ ರಮಣೋ ರಮಣೀಂ**
**ಪರಿರಭ್ಯ ಕೋಽತ್ರ ಸುಖಯೇನ್ನ (ರಮಯೇನ್ನ) ಸುಖೀ ॥ 56 ॥**

**ಪದಚ್ಛೇದ—** ಪೃಥುವೃತ್ತತುಂಗಕಠಿನೋರಸಿಜದ್ವಯವಾರಿತಾಯತನಿಜಾಂತರಯೋಃ, ಭುಜಯೋಃ ಯುಗೇನ, ರಮಣಃ ರಮಣೀಂ, ಪರಿರಭ್ಯ, ಕಃ, ಅತ್ರ ಸುಖಯೇತ್, ನ, ಸುಖೀ ।

**ಅನ್ವಯ—** ಅತ್ರ ಕಃ ಸುಖೀ ರಮಣಃ ಪೃಥುವೃತ್ತತುಂಗಕಠಿನೋರಸಿಜದ್ವಯವಾರಿತಾಯತನಿಜಾಂತರಯೋಃ ಭುಜಯೋಃ ಯುಗೇನ ರಮಣೀಂ ಪರಿರಭ್ಯ ನ ಸುಖಯೇತ್?

ಅನ್ವಯಾರ್ಥ—

ಅತ್ರ = ಈ ಭಗವಂತನ ಮುಕ್ತವೈಕುಂಠಲೋಕದಲ್ಲಿ

ಕಃ = ಯಾವನು ತಾನೇ

ಸುಖೀ = ಆನಂದಪೂರ್ಣನಾದ

ರಮಣಃ = ಪತಿಯು

ಪೃಥು, ವೃತ್ತ, ತುಂಗ, ಕಠಿನೋರಸಿಜದ್ವಯ, ವಾರಿತಾಯತ, ನಿಜಾಂತರಯೋಃ = ದಪ್ಪವಾದ, ಗುಂಡಗಿರುವ, ಉನ್ನತವಾದ ಗಟ್ಟಿಯಾದ ಸ್ತನಗಳ ಎರಡರಿಂದ, (ಎರಡು ಸ್ತನಗಳಿಂದ) ತಡೆಯಲ್ಪಟ್ಟ (ತುಂಬಿದ) ತಮ್ಮ ಮಧ್ಯಭಾಗವುಳ್ಳ

ಭುಜಯೋಃ = ತೋಳುಗಳ

ಯುಗೇನ = ಜೋಡಿಯಿಂದ (ಎರಡರಿಂದ)

ರಮಣೀಂ = ಸುಂದರಿಯನ್ನು

ಪರಿರಭ್ಯ = ಅಪ್ಪಿಕೊಂಡು

ನ ಸುಖಯೇತ್ = ಆನಂದ ಪಡಿಸುವುದಿಲ್ಲ.

ತಾತ್ಪರ್ಯ— ಭಗವಂತನ ಈ ಮುಕ್ತವೈಕುಂಠಲೋಕದಲ್ಲಿ ಎಲ್ಲಾ ಪತಿಗಳೂ ತರುಣರಾಗಿರುತ್ತಾರೆ. ಅವರು ದಪ್ಪಗೆ, ಗುಂಡಗೆ ಮತ್ತು ಎತ್ತರವಾಗಿರುವ ಗಟ್ಟಿಯಾದ ತಮ್ಮ ರಮಣಿಯರ ಎರಡು ಸ್ತನಗಳನ್ನು ತಮ್ಮೆರಡು ತೋಳುಗಳಿಂದ ಬಿಗಿದು ಅಪ್ಪಿಕೊಳ್ಳುವಾಗ ಅವರ ಭುಜಗಳ ಮಧ್ಯಭಾಗವು ಪೂರ್ತಿಯಾಗಿ ತುಂಬಿಕೊಳ್ಳುತ್ತದೆ. ಹೀಗೆ ಅಪ್ಪಿಕೊಳ್ಳುತ್ತಾ ಪ್ರತಿಯೊಬ್ಬ ಪ್ರಿಯತಮನೂ, ತನ್ನ ಪ್ರಿಯತಮೆಯನ್ನು ಆನಂದಗೊಳಿಸುತ್ತಾನೆ. ಹೀಗೆ ರಮಣಿಯನ್ನು ಆನಂದಪಡಿಸದಿರುವ ಯಾವ ರಮಣನೂ ಅಲ್ಲಿರುವುದಿಲ್ಲ. (ವೈಕುಂಠದಲ್ಲಿ ಎಲ್ಲರೂ ಆನಂದಪೂರ್ಣರಾಗಿರುತ್ತಾರೆ).

ವಿಗ್ರಹ—

ಪೃಥುವೃತ್ತತುಂಗಕಠಿನೋರಸಿಜದ್ವಯವಾರಿತಾಯತನಿಜಾಂತರಯೋಃ— ಉರಸಿ ಜಾಯೇತೇ ಇತಿ ಉರಸಿಜೌ ಪೃಥು, ವೃತ್ತೌ, ತುಂಗೌ ಕಠಿನೌ ಚ ತೌ ಉರಸಿಜೌ ಚ ಪೃಥುವೃತ್ತತುಂಗಕಠಿನೋರಸಿಜೌ, ದ್ವೌ ಅವಯವೌ ಅಸ್ಯೇತಿ ದ್ವಯಂ, ಪೃಥುವೃತ್ತತುಂಗಕಠಿನೋರಸಿಜಯೋಃ ದ್ವಯಂ, ಪೃಥುದ್ವಯಂ, ದ್ವಯೇನ ವಾರಿತಂ ಅಂತರಂ ಯಯೋಃ ತೌ ಪೃಥು......। ವೃತ್ತತುಂಗಕಠಿನೋರಸಿಜದ್ವಯವಾರಿತಾಯತನಿಜಾಂತರೌ, ತಯೋಃ ಪೃಥುವೃತ್ತತುಂಗಕಠಿನೋರಸಿಜದ್ವಯವಾರಿತಾಯತನಿಜಾಂತರಯೋಃ ।

ರಮಣಃ— ರಮಯತೀತಿ ರಮಣಃ ।

ಕ್ರಿಯಾಪದ— ಸುಖಯೇತ್ - ಸುಖಯೇತ್ ಸುಖಯೇತಾಂ ಸುಖಯೇಯುಃ, ಸುಖಯೇಃ ಸುಖಯೇತಂ ಸುಖಯೇತ, ಸುಖಯೇಯಂ ಸುಖಯೇವ ಸುಖಯೇಮ ಸುಖತತ್ ಕ್ರಿಯಾಯಾಂ ಸಕರ್ಮಕಃ ಸೇಟ್, ಉಭಯಪದೀ ಅದಂತ, ಪ್ರಕೃತೇ ಪರಸ್ಮೈಪದಿನಃ ವಿಧೌಲಿಙ್ ಪ್ರಥಮಪುರುಷೇ ಏಕವಚನೇ 'ಸುಖಯೇತ್' ಇತಿ ರೂಪಂ ।

1 ಲಟ್ ಸುಖಯತಿ-ತೇ, 2 ಲಿಟ್ ಸುಖಯಾಂಚಕಾರ-ಚಕ್ರೇ, 3 ಲುಟ್ ಸುಖಯಿತಾ ಸಿ.ಸೇ, 4 ಲೃಟ್ ಸುಖಯಿಷ್ಯತಿ-ತೇ, 5 ಲೋಟ್ ಸುಖಯತು, ಸುಖಯತಾಂ, 6 ಲಙ್ ಅಸುಖಯತ್.ತ, 8 ಆಶೀರ್ಲಿಙ್ ಸುಖ್ಯಾತ್ ಸುಖ್ಯಾಸ್ತಾಂ, ಸುಖಯಿಷೀಷ್ಟ, 9 ಲುಙ್ ಅಸುಸುಖತ್ ಅಸುಸುಖತ, 10 ಲೃಙ್ ಅಸುಖಯಿಷ್ಯತ್ ಅಸುಖಯಿಷ್ಯತ ।

ಪ್ರಯೋಗ— ಕಃ ಸುಖೀರಮಣಃ ರಮಣೀಂ ಪರಿರಭ್ಯ ಸುಖಯೇತ್ ? (ಕರ್ತರಿ)
ಕೇನ ಸುಖಿನಾ ರಮಣೇನ ರಮಣೀ ಪರಿರಭ್ಯ ನ ಸುಖ್ಯೇತ (ಕರ್ಮಣಿ ಭಾವೇ)

ಛಲಾರಿಯದಲ್ಲಿ ಸುಖಯೇತ್ ಎಂಬಲ್ಲಿ ರಮಯೇತ್ ಎಂಬ ಪಾಠವಿದೆ. ಅರ್ಥವು ಸಮಾನ.

★ ★ ★

**ಸ್ಮಿತಫುಲ್ಲಮುಲ್ಲಸಿತ ಝಿ(ಚಿ)ಲ್ಲಿಲಸ-**
**ನ್ಮಣಿಕುಂಡಲಂ ಮೃದುಕಟಾಕ್ಷಪಟು ।**
**ನಿಭೃತೋ ನಿರೀಕ್ಷ್ಯ ಸುಚಿರಂ ಸುತನೋಃ**
**ಪ್ರತಿಚುಂಬತಿ ಪ್ರಿಯತಮೋ ವದನಮ್ ॥ 57 ॥**

ಪದಚ್ಛೇದ— ಸ್ಮಿತಫುಲ್ಲಂ, ಉಲ್ಲಸಿತಝಿಲ್ಲಿ (ಚಿಲ್ಲಿ)ಲಸನ್ಮಣಿಕುಂಡಲಂ ಮೃದುಕಟಾಕ್ಷಪಟು, ನಿಭೃತಃ ನಿರೀಕ್ಷ್ಯ, ಸುಚಿರಂ, ಸುತನೋಃ, ಪ್ರತಿಚುಂಬತಿ ಪ್ರಿಯತಮಃ, ವದನಂ ।

ಅನ್ವಯ— ಪ್ರಿಯತಮಃ ಸ್ಮಿತಫುಲ್ಲಂ, ಉಲ್ಲಸಿತಝಿಲ್ಲಿ (ಚಿಲ್ಲಿ) ಲಸನ್ಮಣಿಕುಂಡಲಂ, ಮೃದುಕಟಾಕ್ಷಪಟು ಸುತನೋಃ ವದನಂ ನಿಭೃತಃ (ಸನ್) ಸುಚಿರಂ ನಿರೀಕ್ಷ್ಯ ಪ್ರತಿಚುಂಬತಿ ಪ್ರಿಯತಮಃ, ವದನಂ ।

ಅನ್ವಯಾರ್ಥ—

**ಪ್ರಿಯತಮಃ** = ಅತ್ಯಂತ ಪ್ರೀತ್ಯಾಸ್ಪದನಾದ, ರಮಣನು
**ಸ್ಮಿತಫುಲ್ಲಂ** = ಮಂದಹಾಸದಿಂದ
**ಉಲ್ಲಸಿತಝಿಲ್ಲಿ (ಚಿಲ್ಲಿ)ಲಸತ್‌ಮಣಿಕುಂಡಲಂ** = ಅರಳಿದ ಕಪೋಲ ಪ್ರದೇಶವುಳ್ಳ ಪ್ರಕಾಶಮಾನವಾದ ರತ್ನಖಚಿತವಾದ ಓಲೆಗಳುಳ್ಳ
**ಮೃದುಕಟಾಕ್ಷ ಪಟು** =ಕೋಮಲವಾದ ಕಡೆಗಣ್ಣಿನ ನೋಟದಿಂದ ಚುರುಕಾದ (ಬೆಡಗು ಬಿನ್ನಾಣದಿಂದ ಕೂಡಿದ)
**ಸುತನೋಃ** = ಸುಂದರವಾದ ಶರೀರವುಳ್ಳ ಪ್ರಿಯತಮೆಯ
**ವದನಂ** = ಮುಖವನ್ನು
**ನಿಭೃತಃ (ಸನ್)** = ಏಕಾಗ್ರಚಿತ್ತನಾಗಿ
**ಸುಚಿರಂ** = ಬಹಳ ಸಮಯದವರೆಗೆ
**ನಿರೀಕ್ಷ್ಯ** = ನೋಡಿ
**ಪ್ರತಿಚುಂಬತಿ** = ಮುದ್ದಿಸುತ್ತಾನೆ.

ತಾತ್ಪರ್ಯ— ವೈಕುಂಠಲೋಕದಲ್ಲಿ ಮುಕ್ತರಮಣಿಯ ಮುಖವು ಅರಳಿರುತ್ತದೆ. ಕೆನ್ನೆಗಳು ಉಲ್ಲಾಸಗೊಂಡಿರುತ್ತವೆ. ರತ್ನಖಚಿತವಾದ ಓಲೆಗಳಿಂದ ಮುಖವು ಪ್ರಕಾಶಿಸುತ್ತಾ ಇರುತ್ತದೆ. ಆ ಮುಖವು ಕೋಮಲವಾದ ಕಡೆಗಣ್ಣಿನ ನೋಟಗಳಿಂದ ಅನೇಕ ವಿಧವಾದ ಬೆಡಗು ಬಿನ್ನಾಣಗಳಿಂದ ಶೋಭಿಸುತ್ತಿರುತ್ತದೆ. ಇಂತಹ ಪರಮಸುಂದರವದನದ ಸುಂದರಿಯನ್ನು ಸುಂದರನಾದ ಮುಕ್ತಪ್ರಿಯತಮನು ಬಹುಕಾಲ ಎವೆಯಿಕ್ಕದೆ ನೋಡಿ, ಅನಂತರ ಆ ಮುಖವನ್ನು ಮುದ್ದಿಸುತ್ತಾನೆ.

ವಿಗ್ರಹ—

**ಸ್ಮಿತಫುಲ್ಲಂ**— ಸ್ಮಿತೇನ ಫುಲ್ಲಂ ಸ್ಮಿತಫುಲ್ಲಂ ।

**ಉಲ್ಲಸನ್ಮಣಿಕುಂಡಲಂ**— ಮಣಿಮಯೇ ಚ ತೇ ಕುಂಡಲೇ ಚ ಮಣಿಕುಂಡಲೇ, ಉಲ್ಲಸತೀ ಮಣಿಕುಂಡಲೇ ಯಸ್ಯ ತತ್ ಉಲ್ಲಸನ್ಮಣಿಕುಂಡಲಂ, ತತ್ ಉಲ್ಲಸನ್ಮಣಿಕುಂಡಲಂ ।

**ಮೃದುಕಟಾಕ್ಷಪಟು**— ಮೃದುಶ್ಚಾಸೌ ಕಟಾಕ್ಷಶ್ಚ ಮೃದುಕಟಾಕ್ಷಃ, ಮೃದುಕಟಾಕ್ಷೇಣ ಪಟು ಮೃದುಕಟಾಕ್ಷ ಪಟು, ತತ್ ಮೃದುಕಟಾಕ್ಷಪಟು ।

**ಸುತನೋಃ**— ಶೋಭನಾ ತನುಃ ಯಸ್ಯಾಃ ಸಾ ತನುಃ ಸುತನುಃ, ತಸ್ಯಾಃ ಸುತನೋಃ ।

**ಕ್ರಿಯಾಪದ**— **ಪ್ರತಿಚುಂಬತಿ** - ಪ್ರತಿ+ಚುಂಬತಿ, ಚುಂಬತಃ, ಚುಂಬಂತಿ, ಚುಬಿ ವಕ್ತ್ರ ಸಂಯೋಗೇ, ಸಕರ್ಮಕಃ ಸೇಟ್ ಪರಸ್ಮೈಪದೀ ಲಟ್ ಪ್ರಥಮಪುರುಷೇ ಏಕವಚನಂ ।

2 ಲಿಟ್ ಚುಚುಂಬ, 3 ಲುಟ್ ಚುಂಬಿತಾ, 4 ಲೃಟ್ ಚುಂಬಿಷ್ಯತಿ, 5 ಲೋಟ್ ಚುಂಬತು, 6 ಲಙ್ ಅಚುಂಬತ್, 7 ವಿಧಿಲಿಙ್ ಚುಂಬೇತ್, 8 ಆಶೀರ್ಲಿಙ್ ಚುಂಬ್ಯಾತ್, 9 ಲುಙ್ ಅಚುಂಬೀತ್, 10 ಲೃಙ್ ಅಚುಂಬಿಷ್ಯತ್ ।

**ಕೋಶ**— ಕಟಾಕ್ಷ ಕಡೆಗಣ್ಣು ನೋಟ, ಅಪಾಂಗೋ ನೇತ್ರಯೋರಂತಃ ಕಟಾಕ್ಷೋಽಪಾಂಗದರ್ಶನೇ ಅಮರ.

**ವಿಶೇಷಾಂಶ**— 'ಉಲ್ಲಸಿತೌ ಪ್ರಕಾಶಮಾನೌ ಚಿಲ್ಲೀ ಕಪೋಲೌ ಯಸ್ಯ ತತ್' ಎಂದು ಛಲಾರೀಯದಲ್ಲಿ ಅರ್ಥ ಸಹಿತವಾಗಿ ವಿಗ್ರಹ ಬರೆದಿದ್ದಾರೆ. ಕೋಶ ಪ್ರಮಾಣವನ್ನು ಕೊಟ್ಟಿಲ್ಲ.

ವಿಶ್ವಪತಿತೀರ್ಥೀಯ ವ್ಯಾಖ್ಯಾನದಲ್ಲಿರುವಂತೆ ಶ್ಲೋಕದಲ್ಲಿ ಉಲ್ಲಸಿತಝಿಲ್ಲಿ ಎಂದು ಪಾಠವಿದೆ. ವ್ಯಾಖ್ಯಾನದಲ್ಲಿ ಉಲ್ಲಸಿತೌ ಚಿಲ್ಲಿನೌ ಅಸ್ಯ ಸ್ತಃ ಎಂದು ವಿಗ್ರಹವನ್ನು ತೋರಿಸಿ 'ಉಲ್ಲಸಿತಗಂಡಸ್ಥಲಯುಕ್ತಮಿತ್ಯರ್ಥಃ' ಎಂದು ಉಲ್ಲಾಸ-ಯುಕ್ತವಾದ ಗಂಡಸ್ಥಲದಿಂದ ಕೂಡಿದ ಎಂದು ಅರ್ಥ ಕೊಟ್ಟಿರುತ್ತಾರೆ. ಕೋಶ ಪ್ರಮಾಣವನ್ನು ಕೊಟ್ಟಿಲ್ಲ. ಚಿಲ್ಲ ಶಬ್ದಕ್ಕೆ ವೃಕ್ಷ ವಿಶೇಷ, ಕಣ್ಣು ಬೇನೆ, ಕಣ್ಣು ಬೇನೆ ಉಳ್ಳವನು, ಗಿಡುಗ ಎಂಬ ಅರ್ಥವನ್ನು ಕೊಟ್ಟಿದ್ದಾರೆ. ಕಪೋಲ ಎಂಬ ಅರ್ಥವು ಕಂಡು ಬರುತ್ತಿಲ್ಲ. ಪದ್ಮಪುರಾಣ ಪಾತಾಳಖಂಡ ಅಧ್ಯಾಯ 99, ಶ್ಲೋಕ 28ರಲ್ಲಿ 'ಉಜ್ವಲ ಚಿಲ್ಲಿಚಾಪಂ' ಎಂದು ಚಿಲ್ಲಿಶಬ್ದ ಪ್ರಯೋಗವಿದೆ. ಪುನಃ ಅದೇ ಅಧ್ಯಾಯದಲ್ಲಿ 'ತದತಿ ಲಲಿತಮಂದಚಿಲ್ಲಿಚಾಪಚ್ಯುತ ನಿಶಿತೇಕ್ಷಣ ಮಾರ ಬಾಣವೃಷ್ಟ್ಯಾ' ಎಂದೂ ಪ್ರಯೋಗವಿದೆ. ಇಲ್ಲಿ ಎರಡೂ ಕಡೆ ಚಿಲ್ಲಿ ಶಬ್ದಕ್ಕೆ ಕಪೋಲ ಎಂಬ ಅರ್ಥವನ್ನು ಹೇಳಬಹುದೆಂದು ತೋರುತ್ತದೆ.

**ಪ್ರಯೋಗ**— ಪ್ರಿಯತಮಃ ವದನಂ ಸುಚಿರಂ ನಿರೀಕ್ಷ್ಯ ಪ್ರತಿಚುಂಬತಿ (ಕರ್ತರಿ) ।
ಪ್ರಿಯತಮೇನ ವದನಂ ಸುಚಿರಂ ನಿರೀಕ್ಷ್ಯ ಪ್ರತಿಚುಂಬ್ಯತೇ (ಕರ್ಮಣಿ-ಭಾವೇ)

★ ★ ★

## ನತಮುನ್ನಮಯ್ಯ ಮುಖಚಂದ್ರಮಸಂ ಪರಿರಂಭಸಂಭೃತಮುದಾ ಸುದೃಶಃ ।
## ಉಪರಮ್ಯತೇ ನ ತರುಣೇನ ಚಿರಂ ಮಧುರಾಧರಾಮೃತರಸಂ ಪಿಬತಾ ॥ 58 ॥

**ಪದಚ್ಛೇದ**— ನತಂ, ಉನ್ನಮಯ್ಯ, ಮುಖಚಂದ್ರಮಸಂ, ಪರಿರಂಭಸಂಭೃತಮುದಾ, ಸುದೃಶಃ, ಉಪರಮ್ಯತೇ, ನ, ತರುಣೇನ, ಚಿರಂ, ಮಧುರಾಮೃತರಸಂ, ಪಿಬತಾ ।

**ಅನ್ವಯ**— ಸುದೃಶಃ ಪರಿರಂಭಸಂಭೃತಮುದಾ, ನತಂ ಮುಖಚಂದ್ರಮಸಂ ಉನ್ನಮಯ್ಯ ಮಧುರಾಧರಾಮೃತ ರಸಂ ಪಿಬತಾ ತರುಣೇನ ಚಿರಂ ನ ಉಪರಮ್ಯತೇ ।

**ಅನ್ವಯಾರ್ಥ**—

**ಸುದೃಶಃ** = ಸುಂದರನಯನೆಯಾದ ತರುಣಿಯ
**ಪರಿರಂಭಸಂಭೃತಮುದಾ** = ಆಲಿಂಗನದಿಂದ ತುಂಬಿದ ಸಂತೋಷವುಳ್ಳ
**ನತಂ** = ಬಗ್ಗಿದ

**ಮುಖಚಂದ್ರಮಸಂ** = ಮುಖವೆಂಬ ಚಂದ್ರನನ್ನು

**ಉನ್ನಮಯ್ಯ** = ಮೇಲಕ್ಕೆತ್ತಿ

**ಮಧುರಾಧರಾಮೃತರಸಂ** = ಅತ್ಯಂತ ಆನಂದಕರವಾದ ಕೆಳದುಟಿಯ ಅಮೃತರೂಪವಾದ ಸಾರವನ್ನು

**ಪಿಬತಾ** = ಕುಡಿಯುತ್ತಿರುವ

**ತರುಣೇನ** = ಯುವಕನಿಂದ

**ಚಿರಂ** = ಬಹಳ ಹೊತ್ತು

**ನ ಉಪರಮ್ಯತೇ** = ಸುಮ್ಮನಾಗೋಣವಾಗುವುದಿಲ್ಲ.

**ತಾತ್ಪರ್ಯ—** ಈ ವೈಕುಂಠಲೋಕದಲ್ಲಿ, ತರುಣನಾಗಿರುವ ಮುಕ್ತಪ್ರಿಯಚೇತನನು, ಪ್ರೇಯಸಿಯಾದ ಮುಕ್ತಳಾದ ತರುಣಿಯನ್ನು ಅಪ್ಪಿಕೊಂಡು ಅಮಿತಾನಂದಾಭಿವ್ಯಕ್ತಿಯಿಂದ ಕೂಡಿರುತ್ತಾನೆ. ನಾಚಿಕೆಯಿಂದ ತಗ್ಗಿಸಿಕೊಂಡಿರುವ ಅವಳ ಸುಂದರಮುಖಚಂದ್ರನನ್ನು ಮೇಲಕ್ಕೆತ್ತಿ ಬಹಳ ಹೊತ್ತು ಅಧರಚುಂಬನ ಮಾಡುತ್ತಾ ಇರುತ್ತಾನೆ. ಆ ಮುದ್ದಿಸುವಿಕೆಯನ್ನು ಬಹಳ ಹೊತ್ತು ಬಿಡುವುದೇ ಇಲ್ಲ.

**ವಿಗ್ರಹ—**

**ಮುಖಚಂದ್ರಮಸಂ—** ಮುಖಮೇವ ಚಂದ್ರಮಾಃ ಮುಖಚಂದ್ರಮಾಃ, ತಂ ಮುಖಚಂದ್ರಮಸಂ । (ಸಕಾರಾಂತಃ ಪುಲ್ಲಿಂಗಃ ಚಂದ್ರಮಸ್ ಶಬ್ದಃ-ಚಂದ್ರಮಾಃ ಚಂದ್ರಮಸೌ ಚಂದ್ರಮಸಃ, ಹೇ ಚಂದ್ರಮ, ಚಂದ್ರಮಸಂ.......) ।

**ಪರಿರಂಭಸಂಭೃತಮುದಾ—** ಪರಿರಂಭೇಣ ಸಂಭೃತಾ ಪರಿರಂಭಸಂಭೃತಾ, ಪರಿರಂಭಸಂಭೃತಾ ಮುತ್ ಯಸ್ಯ ಸಃ ಪರಿರಂಭಸಂಭೃತಮುತ್ ತೇನ ಪರಿರಂಭಸಂಭೃತಮುದಾ ।

**ಸುದೃಶಃ—** ಶೋಭನೇ ದೃಶೌ ಯಸ್ಯಾಃ ಸಾ ಸುದೃಕ್, ತಸ್ಯಾಃ ಸುದೃಶಃ । (ಶಕಾರಾಂತಃ ಸ್ತ್ರೀಲಿಂಗಃ ಸುದೃಶ್ ಶಬ್ದಃ - ಸುದೃಶಃ ಸುದೃಶೋಃ ಸುದೃಶಾಂ ---- ಷಷ್ಠೀ ಏಕವಚನಂ) ।

**ಮಧುರಾಧರಾಮೃತರಸಂ—** ಅಮೃತಮೇವ ರಸಃ ಅಮೃತರಸಃ, ಅಧರಸ್ಯ ಅಮೃತರಸಃ ಅಧರಾಮೃತರಸಃ, ಮಧುರಶ್ಚಾಸೌ ಅಧರಾಮೃತರಸಶ್ಚ ಮಧುರಾಧರಾಮೃತರಸಃ, ತಂ ಮಧುರಾಧರಾಮೃತರಸಂ ।

**ಕ್ರಿಯಾಪದ—** **ಉಪರಮ್ಯತೇ** - ಉಪ ಇತ್ಯುಪಸರ್ಗಪೂರ್ವಕಾತ್ ರಮುಕ್ರೀಡಾಯಾಂ ಇತ್ಯಸ್ಮಾದ್ ಧಾತೋಃ ಭಾವೇ ಲಟ್, ಇದಕ್ಕೆ ಇತರ ಪುರುಷ ವಚನಗಳ ರೂಪವಿಲ್ಲ. ಪ್ರಥಮಪುರುಷೇ ಏಕವಚನ ಮಾತ್ರ. ತರುಣೇನ ನ ಉಪರಮ್ಯತೇ, ತರುಣಾಭ್ಯಾಂ ನೋಪರಮ್ಯತೇ, ತ್ವಯಾ, ಯುಷ್ಮಾಭಿಃ ಮಯಾ, ಅಸ್ಮಾಭಿರ್ನೋಽಪರಮ್ಯತೇ ಎಂದೇ ಪ್ರಯೋಗ.

**ಕೋಶ—** ''ಪರಿರಂಭಃ ಪರಿಷ್ವಂಗಃ ಸಂಶ್ಲೇಷ ಉಪಗೂಹನಂ'' ಪರಿರಂಭ = ಅಪ್ಪಿಕೊಳ್ಳುವುದು, ''ಹಿಮಾಂಶುಃ ಚಂದ್ರಮಾಃ ಚಂದ್ರಃ'' ಚಂದ್ರಮಾಃ = ಚಂದ, ''ಓಷ್ಠಾಧರೌ ತು ರದನಚ್ಛದೌ ದಶನವಾಸಸೀ'', ಅಧರ = ಕೆಳದುಟಿ (ಅಮರ).

**ಪ್ರಯೋಗ—** ತರುಣೇನ ಚಿರಂ ನ ಉಪರಮ್ಯತೇ (ಭಾವೇ ಪ್ರಯೋಗ)
ತರುಣಃ ಚಿರಂ ನ ಉಪರಮತಿ (ಅಕರ್ಮಕ ಕರ್ತರಿ)

ರಮ್ ಧಾತುವು ಆತ್ಮನೇಪದಿ, ಆದರೆ ಉಪ ಉಪಸರ್ಗವಿರುವಾಗ 'ಉಪಾಚ್ಚ' ಎಂಬ ಸೂತ್ರದಿಂದ ಪರಸ್ಮೈಪದಿಯಾಗುತ್ತದೆ. ಆದರೆ ಅದು ಪ್ರೇರಣಾರ್ಥವನ್ನು ಅಂತರ್ಭವಿಸಿಕೊಂಡು ಸಕರ್ಮಕವಾಗುತ್ತದೆ. 'ದೇವದತ್ತಂ ಉಪರಮತಿ ಉಪರಮಯತಿ ಇತ್ಯರ್ಥ.' ದೇವದತ್ತನನ್ನು ಹಿಂತಿರುಗಿಸುತ್ತಾನೆ. ನಿವರ್ತಿಸುತ್ತಾನೆ ಎಂದು ಅರ್ಥ. ಈ ಧಾತುವು

ಅಕರ್ಮಕವಾಗಿದ್ದಾಗ ಉಪ ಉಪಸರ್ಗ ಬಂದಾಗ 'ವಿಭಾಷಾऽಕರ್ಮಕಾತ್' ಎಂಬ ಸೂತ್ರದಿಂದ ವಿಕಲ್ಪದಿಂದ ಪರಸ್ಮೈಪದ ಬರುತ್ತದೆ. ಪಾಠಾದುಪರಮತಿ. ಉಪರಮತೇ ವಾ ನಿವರ್ತತೇ ಇತ್ಯರ್ಥಃ । ಪಾಠದಿಂದ ನಿವೃತ್ತನಾಗುತ್ತಾನೆ. ಪಾಠ ನಿಲ್ಲಿಸುತ್ತಾನೆ ಎಂದು ಅರ್ಥ. ಪ್ರಕೃತ ಶ್ಲೋಕದಲ್ಲಿ ಭಾವೇ ಪ್ರಯೋಗ ಅಕರ್ಮಕವಾದ್ದರಿಂದ ಕರ್ತರಿಯಲ್ಲಿ ಉಪರಮತಿ, ಉಪರಮತೇ ಎಂದು ಎರಡರಲ್ಲಿ ಒಂದು ಪ್ರಯೋಗವನ್ನು ಮಾಡಬಹುದು.

★ ★ ★

**ಸುರತೋತ್ಸವೋತ್ಸುಕತಯಾ ತ್ವರಯನ್ ಕರಪಲ್ಲವಂ ನಿವಸನಗ್ರಹಣೇ ।**
**ಕರರುದ್ಧಮಾಯತದೃಶಃ ಸಹಸಾ ತ್ವರಯತ್ಯಥ ದ್ವಿಗುಣಮಿಷ್ಟತಮಃ ॥ 59 ॥**

**ಪದಚ್ಛೇದ—** ಸುರತೋತ್ಸವೋಕತಯಾ, ತ್ವರಯನ್, ಕರಪಲ್ಲವಂ ನಿವಸನಗ್ರಹಣೇ, ಕರರುದ್ಧಂ, ಆಯತದೃಶಃ, ಸಹಸಾ, ತ್ವರಯತಿ, ಅಥ, ದ್ವಿಗುಣಂ, ಇಷ್ಟತಮಃ ।

**ಅನ್ವಯ—** ಅಥ, ಇಷ್ಟತಮಃ ಸುರತೋಶ್ಸವೋತ್ಸುಕತಯಾ, ನಿವಸನಗ್ರಹಣೇ, ಕರಪಲ್ಲವಂ, ತ್ವರಯನ್, ಆಯತದೃಶಃ ಕರರುದ್ಧಂ (ಕರಪಲ್ಲವಂ) ಸಹಸಾ, ದ್ವಿಗುಣಂ, ತ್ವರಯತಿ ।

**ಅನ್ವಯಾರ್ಥ—**

**ಅಥ** = ತರುವಾಯ
**ಇಷ್ಟತಮಃ** = ಅತ್ಯಂತ ಪ್ರೀತಿವಿಷಯನಾದ ಮುಕ್ತತರುಣನು
**ಸುರತೋತ್ಸವೋತ್ಸುಕತಯಾ** = ರತಿವಿಹಾರದಲ್ಲಿ ಉತ್ಕಂಠೆಯಿಂದ ಕೂಡಿರುವುದರಿಂದ
**ನಿವಸನಗ್ರಹಣೇ** = ಬಟ್ಟೆಯನ್ನು ಬಿಡಿಸುವುದಕ್ಕಾಗಿ, ಬಟ್ಟೆಯನ್ನು ಹಿಡಿದುಕೊಳ್ಳುವುದಕ್ಕಾಗಿ
**ಕರಪಲ್ಲವಂ** = ಚಿಗುರಿನಂತಿರುವ ಕೈಯನ್ನು
**ತ್ವರಯನ್** = ವೇಗಗೊಳಿಸುತ್ತಾ
**ಆಯತದೃಶಃ** = ವಿಶಾಲವಾದ ಕಣ್ಣುಗಳುಳ್ಳ ಪ್ರಿಯೆಯ
**ಕರರುದ್ಧಂ** = (ಕರಪಲ್ಲವಂ) ಕೈಯಿಂದ ತಡೆಯಲ್ಪಟ್ಟ ತನ್ನ ಚಿಗುರೆಲೆಯಂತಹ ಕೈಯನ್ನು
**ಸಹಸಾ** = ಬಲದಿಂದ
**ದ್ವಿಗುಣ** = ಇಮ್ಮಡಿಯಾಗಿ
**ತ್ವರಯತಿ** = ವೇಗಗೊಳಿಸುತ್ತಾನೆ.

**ತಾತ್ಪರ್ಯ—** ಮುಕ್ತಚೇತನನಾದ ಪ್ರಿಯನು ಪ್ರೇಯಸಿಯ ಮುಖವನ್ನು ಚುಂಬಿಸಿದ ತರುವಾಯ ರತಿವಿಹಾರದಲ್ಲಿ ತುಂಬಾ ಉತ್ಕಂಠೆಯನ್ನು ತೋರುತ್ತಾ ವಿಶಾಲಾಕ್ಷಿಯಾದ ಪ್ರಿಯೆಯ ನಿತಂಬದಿಂದ ಬಟ್ಟೆಯನ್ನು ತನ್ನ ಕೈಯಿಂದ ಸರಿಸಲು ಉದ್ಯುಕ್ತನಾಗಿ ಅವಸರ ಮಾಡುವನು. ಆಗ ಆ ಪ್ರಿಯಳು ತನ್ನ ಕೈಯಿಂದ ಪ್ರಿಯನ ಕೈಯನ್ನು ತಡೆಯುವಳು. ಅಷ್ಟರಲ್ಲಿ ಅವನು ಅವಳ ಬಟ್ಟೆಯನ್ನು ಸರಿಸಲು ತನ್ನ ಕೈಯನ್ನು ಇಮ್ಮಡಿ ವೇಗದಿಂದ ಮುಂದುವರೆಸುವನು.

**ವಿಗ್ರಹ—**

**ಸುರತೋತ್ಸುಕತಯಾ—** ಸುರತಂ ಇತಿ ಉತ್ಸವಃ ಸುರತೋತ್ಸವಃ, ಉತ್ಸುಕಸ್ಯ ಭಾವಃ ಉತ್ಸುಕತಾ, ಸುರತೋತ್ಸವೇ ಉತ್ಸುಕತಾ ಸುರತೋತ್ಸವೋತ್ಸುಕತಾ, ತಯಾ ಸುರತೋತ್ಸುಕತಯಾ ।

**ಕರಪಲ್ಲವಂ—** ಕರಃ ಪಲ್ಲವಃ ಇವ ಕರಪಲ್ಲವಃ, ತಂ ಕರಪಲ್ಲವಂ ।

**ನಿವಸನಗ್ರಹಣೇ**— ನಿವಸನಸ್ಯ ಗ್ರಹಣಂ ನಿವಸನಗ್ರಹಣಂ, ತಸ್ಮಿನ್ ನಿವಸನಗ್ರಹಣೇ ।

**ಕರರುದ್ಧಂ**— ಕರಾಭ್ಯಾಂ ರುದ್ಧಃ ಕರರುದ್ಧಃ, ತಂ ಕರರುದ್ಧಂ ।

**ಆಯತದೃಶಃ**— ಆಯತೇ ದೃಶೌ ಯಸ್ಯಾಃ ಸಾ ಆಯತದೃಕ್, ತಸ್ಯಾಃ ಆಯತದೃಶಃ ।

**ದ್ವಿಗುಣಂ** - ದ್ವೌ ಗುಣೌ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ದ್ವಿಗುಣಂ ।

**ಇಷ್ಟತಮಃ**— ಅತಿಶಯೇನ ಇಷ್ಟಃ ಇಷ್ಟತಮಃ ।

**ಕ್ರಿಯಾಪದ— ತ್ವರಯತಿ** - 1 ತ್ವರಯತಿ ತ್ವರಯತಃ ತ್ವರಯಂತಿ ಇತ್ಯಾದಿ ಇತ್ವರಾ ಸಂಭ್ರಮೇ ಣಿಜಂತಾತ್ ಲಟ್, 2 ಲಿಟ್ ತ್ವರಯಾಂಚಕಾರ, ಬಭೂವ, ಆಸ, 3 ಲುಟ್ ತ್ವರಯಿತಾ, 4 ಲೃಟ್ ತ್ವರಯಿಷ್ಯತಿ, 5 ಲೋಟ್ ತ್ವರಯತು, 6 ಲಙ್ ಅತ್ವರಯತ್, 7 ವಿಧಿಲಿಙ್ ತ್ವರರಯೇತ್, 8 ಆಶೀರ್ಲಿಙ್ ತ್ವಯಾತ್, 9 ಲುಙ್ ಅತ್ವರತ್, 10 ಲೃಙ್ ಅತ್ವರಯಿಷ್ಯತ್ ।

**ಕೋಶ**— ಸಹಸಾ = ಬಲದಿಂದ, 'ಸಹೋ ಬಲೇ ಜ್ಯೋತಿಷಿ ಮಾರ್ಗಶೀರ್ಷೇ' ಇತಿ ವಿಶ್ವಃ (ಈ ಶ್ಲೋಕಕ್ಕೆ ವಿಶ್ವಪತಿ-ತೀರ್ಥೀಯ ವ್ಯಾಖ್ಯಾ ಇಲ್ಲ.)

**ಪ್ರಯೋಗ**— ಇಷ್ಟತಮಃ ದ್ವಿಗುಣಂ ತ್ವರಯತಿ (ಕರ್ತರಿ) ।
ಇಷ್ಟತಮೇನ ದ್ವಿಗುಣಂ ತ್ವರ್ಯತೇ (ಭಾವೇ) ।

★ ★ ★

**ರಭಸಾವಪಾತಿತಪೃಥೂರಸಿಜಃ ಪರಿರಭ್ಯ ತತ್ಕ್ಷಣವಿಯಾತತರಃ ।**
**ಮಣಿತಾದಿಸೌರತವಿತಾನಪಟೂ ರಮಯತ್ಯಮೂನ್ ಯುವತಿಸಂಘ ಉತ ॥ 60 ॥**

**ಪದಚ್ಛೇದ**— ರಭಸಾವಪಾತಿತಪೃಥೂರಸಿಜಃ, ಪರಿರಭ್ಯ, ತತ್ಕ್ಷಣವಿಯಾತತರಃ, ಮಣಿತಾದಿಸೌರತವಿತಾನ ಪಟುಃ, ರಮಯತಿ, ಅಮೂನ್, ಯುವತಿಸಂಘಃ ಉತ ।

**ಅನ್ವಯ**— ರಭಸಾವಪಾತಿತಪೃಥೂರಸಿಜಃ, ತತ್ಕ್ಷಣವಿಯಾತತತರಃ, ಮಣಿತಾದಿಸೌರತವಿತಾನಪಟುಃ ಯುವತಿ-ಸಂಘಃ, ಉತ ಅಮೂನ್ ಪರಿರಭ್ಯ ರಮಯತಿ ।

**ಅನ್ವಯಾರ್ಥ**—

**ರಭಸಾವಪಾತಿತಪೃಥೂರಸಿಜಃ** = ವೇಗದಿಂದ (ಸಂತೋಷದಿಂದ) ಕೆಳಮುಖವಾಗಿ ಬಗ್ಗಿಸಲ್ಪಟ್ಟ ದೊಡ್ಡ ಕುಚಗಳುಳ್ಳ

**ತತ್ಕ್ಷಣವಿಯಾತತರ** = ಆ ರತಿಕ್ರೀಡೆಯ ಸಮಯದಲ್ಲಿ ಅತ್ಯಂತ ದಿಟ್ಟವಾದ

**ಮಣಿತಾದಿಸೌರತವಿತಾನಪಟುಃ** = ರತಿಕ್ರೀಡೆಯ ಧ್ವನಿಯೇ ಮೊದಲಾಗಿ ಉಳ್ಳ ಸುರತ ವಿಹಾರದ ವಿಸ್ತಾರದಲ್ಲಿ ಚತುರವಾದ

**ಯುವತಿಸಂಘಃ ಉತ** = ತರುಣಿಯರ ಸಮೂಹವೂ

**ಅಮೂನ್** = ಈ ಪ್ರಿಯರನ್ನು

**ಪರಿರಭ್ಯ** = ಆಲಂಗಿಸಿ

**ರಮಯತಿ** = ಆನಂದಗೊಳಿಸುತ್ತದೆ.

**ತಾತ್ಪರ್ಯ**— ಇಲ್ಲಿ ಯುವತಿಯರೂ ಉಪರಿಸುರತ ಕ್ರೀಡೆಯಲ್ಲಿ ಆಸಕ್ತರಾಗುವರು. ಅವರು ವೇಗದಿಂದ (ಸಂತೋಷದಿಂದ) ತಮ್ಮ ದೊಡ್ಡ ಕುಚಗಳನ್ನು ಕೆಳಮುಖವಾಗಿ ಬಗ್ಗಿಸಿ ಅತ್ಯಂತ ದಿಟ್ಟರಾಗಿ ರತಿಕ್ರೀಡೆಯ ಧ್ವನಿಯನ್ನು

ಹೆಚ್ಚಿಸುತ್ತಾ ತಮ್ಮ ಪ್ರಿಯತಮರನ್ನು ಗಾಢವಾಗಿ ಆಲಿಂಗಿಸುವರು. ಈ ರೀತಿಯಾಗಿ ತಮ್ಮ ಪ್ರಿಯರು ವಿಹಾರಮಾಡಲು ಅನುಕೂಲಪಡಿಸುವರು.

**ವಿಗ್ರಹ—**

**ರಭಸಾವಪಾತಿತಪೃಥೂರಸಿಜಃ—** ರಭಸೇನ ಅವಪಾತಿತೌ ಪೃಥೂ ಉರಸಿಜೌ ಯಸ್ಯ ಸಃ ರಭಸಾವಪಾತಿತ-ಪೃಥೂರಸಿಜಃ ।

**ತತ್ಕ್ಷಣವಿಯಾತತರಃ—** ಸ ಚಾಸೌ ಕ್ಷಣಶ್ಚ ತತ್ಕ್ಷಣಃ, ಅತಿಶಯೇನ ವಿಯಾತಃ ವಿಯಾತತರಃ, ತತ್ಕ್ಷಣೇ ವಿಯಾತತರಃ ತತ್ಕ್ಷಣವಿಯಾತತರಃ ।

**ಮಣಿತಾದಿಸೌರತವಿತಾನಪಟುಃ—** ಮಣಿತಂ ಆದಿಃ ಯಸ್ಯ ಸಃ ಮಣಿತಾದಿಃ, ಸುರತಸ್ಯ ಅಯಂ ಸೌರತಃ, ಮಣಿತಾದಿಶ್ಚ ಅಸೌ ಸೌರತಶ್ಚ ಮಣಿತಾದಿಸೌರತಃ, ಮಣಿತಾದಿಸೌರತಸ್ಯ ವಿತಾನಃ ಮಣಿತಾದಿಸೌರತ ವಿತಾನಃ, ತಸ್ಮಿನ್ ಪಟುಃ ಮಣಿತಾದಿಸೌರತವಿತಾನಪಟುಃ ।

**ಯುವತಿಸಂಘಃ—** ಯುವತೀನಾಂ ಸಂಘಃ ಯುವತಿ ಸಂಘಃ ।

**ಕ್ರಿಯಾಪದ— ರಮಯತಿ-** 1 ಲಟ್ ರಮಯತಿ, 2 ರಮಯಾಂಚಕಾರ ಬಭೂವ ಆಸ, 3 ಲುಟ್ ರಮಯಿತಾ, 4 ಲೃಟ್ ರಮಯಿಷ್ಯತಿ, 5 ಲೋಟ್ ರಮಯತು, 6 ಲಙ್ ಅರಮಯತ್, 7 ವಿಧಿಲಿಙ್ ರಮಯೇತ್, 8 ಆಶೀರ್ಲಿಙ್ ರಮ್ಯಾತ್, 9 ಲುಙ್ ಅರೀರಮತ್, 10 ಲೃಙ್ ಅರಮಯಿಷ್ಯತ್, ರಮಕ್ರೀಡಾಯಾಂ ಣಿಜಂತಾತ್ ಲಟ್ ।

**ಕೋಶ—** ರಭಸ = ವೇಗ, ಸಂತೋಷ, ''ರಭಸೋ ವೇಗಹರ್ಷಯೋಃ'' ವಿಶ್ವ ಧೃಷ್ಟೇ ಧೃಷ್ಣುರ್ವಿಯಾತಶ್ಚ, ''ಮಣಿತಂ ರತಿಕೂಜಿತಂ'' ಅಮರ, ''ಕ್ರತುವಿಸ್ತಾರಯೋರಸ್ತ್ರೀ ವಿತಾನಂ ತ್ರಿಷು ತುಚ್ಛಕೇ'' ಅಮರ.

**ಪ್ರಯೋಗ—** ಅಮೂನ್ ಯುವತಿಸಂಘಃ ರಮಯತಿ (ಕರ್ತರಿ)
ಅಮೀ ಯುವತಿಸಂಘೇನ ರಮ್ಯಂತೇ (ಕರ್ಮಣಿ) ।

★ ★ ★

**ಅತಿಲೌಕಿಕಾನ್ ರಮಯತೋ ರಮಣಾನ್**
**ರಮಯಂತ್ಯಲೌಕಿಕಗುಣಾ ಲಲನಾಃ ।**
**ಅನುರೂಪರೂಪಮತಿಲೋಕಸುಖಂ**
**ತದಲೌಕಿಕಂ ನಿಧುವನಂ ಲಸತಿ ॥ 61 ॥**

**ಪದಚ್ಛೇದ—** ಅತಿಲೌಕಿಕಾನ್, ರಮಯತಃ, ರಮಣಾನ್, ರಮಯಂತಿ, ಅಲೌಕಿಕಗುಣಾಃ, ಲಲನಾಃ, ಅನುರೂಪ ರೂಪಂ, ಅತಿಲೋಕಸುಖಂ, ತತ್, ಅಲೌಕಿಕಂ, ನಿಧುವನಂ, ಲಸತಿ ।

**ಅನ್ವಯ—** ಅಲೌಕಿಕಗುಣಾಃ, ಲಲನಾಃ, ಅತಿಲೌಕಿಕಾನ್, ರಮಯತಃ ರಮಣಾನ್, ರಮಯಂತಿ, ಅನುರೂಪ ರೂಪಂ, ಅತಿಲೋಕಸುಖಂ ಅಲೌಕಿಕಂ ತತ್ ನಿಧುವನಂ ಲಸತಿ ।

**ಅನ್ವಯಾರ್ಥ—**

**ಅಲೌಕಿಕಗುಣಾಃ** = ಇತರ ಲೋಕಗಳಿಗಿಂತ ವಿಲಕ್ಷಣವಾದ ಗುಣಗಳುಳ್ಳ

**ಲಲನಾಃ** = ಯುವತಿಯರು

**ಅತಿಲೌಕಿಕಾನ್** = ಇತರ ಲೋಕದ ಪುರುಷರನ್ನು ಮೀರಿರುವ

**ರಮಯತಃ** = ಆನಂದಗೊಳಿಸುತ್ತಿರುವ

**ರಮಣಾನ್** = ಪತಿಗಳನ್ನು

**ರಮಯಂತಿ** = ಆನಂದ ಪಡಿಸುತ್ತಾರೆ.

**ಅನುರೂಪರೂಪಂ** = ಅನ್ಯೋನ್ಯವಾಗಿ ಅನುಗುಣವಾದ ರೂಪವುಳ್ಳ

**ಅತಿಲೋಕಸುಖಂ** = ಬೇರೆ ಲೋಕಗಳ ಸುಖವನ್ನು ಮೀರಿದ ಸುಖವುಳ್ಳ

**ಅಲೌಕಿಕಂ** = ಇತರ ಲೋಕವಿಲಕ್ಷಣವಾದ

**ತತ್ ನಿಧುವನಂ** = ಆ ರತಿವಿಹಾರವು

**ಲಸತಿ** = ಪ್ರಕಾಶಿಸುತ್ತದೆ.

**ತಾತ್ಪರ್ಯ—** ಆ ಮುಕ್ತವೈಕುಂಠಲೋಕದ ಅಂಗನೆಯರು ಇತರ ಲೋಕವಿಲಕ್ಷಣವಾದ ಅಪ್ರಾಕೃತಗುಣಗಳಿಂದ ಕೂಡಿರುತ್ತಾರೆ. ಅವರ ಜತೆಗೆ ವಿಹರಿಸುವ ಪತಿಗಳೂ ಇತರ ಲೋಕವಿಲಕ್ಷಣರು, ಅಪ್ರಾಕೃತರು. ಇಂತಹ ಅಪ್ರಾಕೃತರಾದ ತಮ್ಮ ಪತಿಗಳಿಗೆ ಅಪ್ರಾಕೃತ ಆನಂದವನ್ನುಂಟು ಮಾಡುತ್ತಾರೆ. ಅವರ ಸ್ವರೂಪಭೂತವಾದ ಆನಂದಾಭಿವ್ಯಕ್ತಿಗೆ ಕಾರಣ-ರಾಗುತ್ತಾರೆ. ಅವರ ಆ ರತಿಕ್ರೀಡೆಯೂ ಪರಸ್ಪರ ಹೊಂದಿಕೊಳ್ಳತಕ್ಕದ್ದು. ಪರಸ್ಪರ ಸ್ವರೂಪವೇ ಆಗಿರತಕ್ಕ ಆನಂದದ ಅಭಿವ್ಯಕ್ತಿಗೆ ಕಾರಣವಾದುದು. ಆದುದರಿಂದಲೇ ಅದು ಇತರ ಎಲ್ಲಾ ಲೋಕಗಳ ಆನಂದವನ್ನು ಮೀರಿಸಿರುತ್ತದೆ. ಇಂತಹ ಮುಕ್ತವೈಕುಂಠಲೋಕದ ಸುರತವಿಹಾರವು ಮುಕ್ತವೈಕುಂಠಲೋಕದಲ್ಲಿ ಪ್ರಕಾಶಮಾನವಾಗಿರುತ್ತದೆ.

**ವಿಗ್ರಹ—**

**ಅತಿಲೌಕಿಕಾನ್—** ಲೋಕೇ ಭವಾಃ ಲೌಕಿಕಾಃ, ಲೌಕಿಕಾನ್ ಅತಿಕ್ರಾಂತಾಃ ಅತಿಲೌಕಿಕಾಃ, ತಾನ್ ಅತಿಲೌಕಿಕಾನ್।

**ಅಲೌಕಿಕಗುಣಾಃ—** ಅಲೌಕಿಕಾಃ ಗುಣಾಃ ಯಾಸಾಂ ತಾಃ ಅಲೌಕಿಕಗುಣಾಃ, ತಾಃ ಅಲೌಕಿಕಗುಣಾಃ (ಪ್ರ.ವಿ)।

**ಅನುರೂಪರೂಪಂ—** ಅನುರೂಪಂ ರೂಪಂ ಯಸ್ಯ ತತ್ ಅನುರೂಪರೂಪಂ ।

**ಅತಿಲೋಕಸುಖಂ—** ಲೋಕಾನ್ ಅತಿಕ್ರಾಂತಂ ಅತಿಲೋಕಂ, ಅತಿಲೋಕಂ ಸುಖಂ ಯಸ್ಮಿನ್ ತತ್ ಅತಿ ಲೋಕಸುಖಂ ।

**ಅಲೌಕಿಕಂ—** ಲೋಕೇ ಭವಂ ಲೌಕಿಕಂ, ನ ಲೌಕಿಕಂ ಅಲೌಕಿಕಂ ।

**ಕ್ರಿಯಾಪದ— ಲಸತಿ-** ಲಸತಿ ಲಸತಃ ಇತ್ಯಾದಿ, ಲಸ ಶ್ಲೇಷಣಕ್ರೀಡನೋಃ, (ಲಸಕಾಂತೌ) ಅಕರ್ಮಕ ಸೇಟ್ ಪರಸ್ಮೈಪದಿನಃ ಲಟ್ 2 ಲಿಟ್ ಲಲಾಸ, 3 ಲುಟ್ ಲಸಿತಾ, 4 ಲೃಟ್ ಲಸಿಷ್ಯತಿ, 5 ಲೋಟ್ ಲಸತು, 6 ಲಙ್ ಅಲಸತ್, 7 ವಿಧಿಲಿಙ್ ಲಸೇತ್, 8 ಆಶೀರ್ಲಿಙ್ ಲಸ್ಯಾತ್, 9 ಲುಙ್ ಅಲಾಸೀತ್, ಅಲಸೀತ್, 10 ಲೃಙ್ ಅಲಸಿಷ್ಯತ್ । ರಮಯತಿ 60ನೇ ಶ್ಲೋಕದಲ್ಲಿ ಬಂದಿದೆ.

**ಕೋಶ—** ''ಮೈಥುನಂ ನಿಧುವನಂ ರತಂ'' ಅಮರ, ''ಸಂವೇಶನಂ ನಿಧುವನಂ ಸಂಪ್ರಯೋಗೋ ರಹೋ ರತಿಃ'' ಹಲಕೋಶ, ನಿಧುವನಂ = ರತಿವಿಹಾರ.

**ಪ್ರಯೋಗ—** ಅಲೌಕಿಕಗುಣಾಭಿಃ ಲಲನಾಭಿಃ, ಅತಿಲೌಕಿಕಾಃ ರಮಯಂತಃ ರಮಣಾಃ, ರಮ್ಯಂತೇ (ಕರ್ಮಣಿ) ।
ಅನುರೂಪರೂಪೇಣ ಅತಿಲೋಕಸುಖೇನ, ಅಲೌಕಿಕೇನ ತೇನ ನಿಧುವನೇನ ಲಸ್ಯತೇ (ಭಾವೇ) ।

★ ★ ★

ಅವತಾರಿಕಾ— ಅಲ್ಲಿಯ ಸುರತ ವಿಹಾರವು ಅಲೌಕಿಕವೆಂಬ ವಿಷಯವನ್ನು ಸ್ಪಷ್ಟಪಡಿಸುತ್ತಾರೆ.

**ನ ರತಿಃ ಶ್ರಮಾದಿಖಚಿತಾ ನಿಯಮಾದ್**
**ವಿರಹವ್ಯಥಾಽಪಿ ನ ವಧೂವರಯೋಃ ।**
**ಪ್ರತಿಕಾಮಿನೀಪ್ರಣಯತಃ ಕಲಹೋ**
**ನ ಸಮಸ್ತದೋಷರಹಿತೇ ಹಿ ಪದೇ ॥ 62 ॥**

ಪದಚ್ಛೇದ— ನ, ರತಿಃ, ಶ್ರಮಾದಿಖಚಿತಾ, ನಿಯಮಾತ್, ವಿರಹವ್ಯಥಾ, ಅಪಿ, ನ, ವಧೂವರಯೋಃ, ಪ್ರತಿ-ಕಾಮಿನೀಪ್ರಣಯತಃ, ಕಲಹಃ, ನ, ಸಮಸ್ತದೋಷರಹಿತೇ, ಹಿ, ಪದೇ ।

ಅನ್ವಯ— ಸಮಸ್ತದೋಷರಹಿತೇ ಪದೇ ರತಿಃ ಶ್ರಮಾದಿಖಚಿತಾ ನಿಯಮಾತ್ ನ, ವಧೂವರಯೋಃ ವಿರಹ-ವ್ಯಥಾ ಅಪಿ ನ, ಪ್ರತಿಕಾಮಿನಿಪ್ರಣಯತಃ ಕಲಹಃ ನ ಹಿ ।

ಅನ್ವಯಾರ್ಥ—

**ಸಮಸ್ತದೋಷರಹಿತೇ** = ಎಲ್ಲಾ ದೋಷಗಳಿಂದಲೂ ಮುಕ್ತವಾದ, (ಯಾವ ದೋಷಗಳೂ ಇಲ್ಲದಿರುವ)
**ಪದೇ** = ಮುಕ್ತವೈಕುಂಠಲೋಕದಲ್ಲಿ
**ರತಿಃ** = ಸುರತಕ್ರೀಡೆಯು
**ಶ್ರಮಾದಿಖಚಿತಾ** = ಆಯಾಸ, ಬೆವರು ಮುಂತಾದುವುಗಳಿಂದ ಸಂಬಂಧಿಸಿರುವುದು
**ನಿಯಮಾತ್** = ಸರ್ವರೀತಿಯಿಂದಲೂ (ಯಾವ ವಿಧದಿಂದಲೂ)
**ನ** = ಅಲ್ಲ
**ವಧೂವರಯೋಃ** = ದಂಪತಿಗಳಲ್ಲಿ
**ವಿರಹವ್ಯಥಾ ಅಪಿ ನ** = ಅಗಲಿಕೆಯ ಚಿಂತೆ, ದುಃಖಗಳೂ ಇಲ್ಲ.
**ಪ್ರತಿಕಾಮಿನೀಪ್ರಣಯತಃ** = ಸವತಿಯ ಅನುರಾಗದ ದೆಸೆಯಿಂದ
**ಕಲಹಃ ನ ಹಿ** = ಜಗಳವೂ ಇಲ್ಲ.

ತಾತ್ಪರ್ಯ— ಆ ವೈಕುಂಠಲೋಕದಲ್ಲಿ ಇತರ ಲೋಕಗಳಲ್ಲಿರುವಂತೆ ಮನುಷ್ಯ ಸ್ವಭಾವಸಿದ್ಧವಾದ ಯಾವ ದೋಷವೂ ಇಲ್ಲ. ಆದ್ದರಿಂದಲೇ ಅಲ್ಲಿಯ ಸುರತವಿಹಾರದಲ್ಲಿ ಆಯಾಸ, ಬೆವರು ದುರ್ವಾಸನೆ ಮುಂತಾದ ಯಾವ ದೋಷವೂ ಉಂಟಾಗುವುದಿಲ್ಲ. ಪತಿಯು (ಇನ್ನೊಬ್ಬಳಲ್ಲಿ (ತನ್ನ ಸವತಿಯಲ್ಲಿ) ಅನುರಾಗ ಹೊಂದಿದ್ದಾನೆ ಎಂಬ ಕಾರಣದಿಂದ ಪ್ರಣಯ ಕಲಹ, ಜಗಳ ಇತ್ಯಾದಿಗಳೂ ಇಲ್ಲ (ಅಲ್ಲಿ ಸವತಿಯರೇ ಇರುವುದಿಲ್ಲ). ಈ ಪ್ರಮೇಯವು ಶ್ರುತಿಗಳಿಂದ ಸಿದ್ಧವಾದುದು. ಇಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ.

ವಿಗ್ರಹ—

**ಶ್ರಮಾದಿಖಚಿತಾ**— ಶ್ರಮಃ ಆದಿ ಯಸ್ಯ ಸಃ ಶ್ರಮಾದಿಃ, ಶ್ರಮಾದಿನಾ ಖಚಿತಾ ಶ್ರಮಾದಿಖಚಿತಾ ।
**ವಿರಹವ್ಯಥಾ**— ವಿರಹೇಣ ವ್ಯಥಾ ವಿರಹವ್ಯಥಾ ।
**ವಧೂವರಯೋಃ**— ವಧೂಶ್ಚ ವರಶ್ಚ ವಧೂವರೌ, ತಯೋಃ ವಧೂವರಯೋಃ ।
**ಪ್ರತಿಕಾಮಿನೀಪ್ರಣಯತಃ**— ಪ್ರತಿಕಾಮಿನ್ಯಾಂ ಪ್ರಣಯಃ ಪ್ರತಿಕಾಮಿನೀಪ್ರಣಯಃ, ಪ್ರತಿಕಾಮಿನೀಪ್ರಣ-ಯಾತ್ ಇತಿ ಪ್ರತಿಕಾಮಿನೀಪ್ರಣಯತಃ । (ಪಂಚಮ್ಯಾಃ ತಸಿಃ) । ಪಂಚಮೀವಿಭಕ್ತಿಗೆ ತಸಿಪ್ರತ್ಯಯ ।

**ಸಮಸ್ತದೋಷರಹಿತೇ—** ಸಮಸ್ತಾಶ್ಚ ತೇ ದೋಷಾಶ್ಚ ಸಮಸ್ತದೋಷಾಃ, ಸಮಸ್ತದೋಷೈಃ ರಹಿತಂ ಸಮಸ್ತ-ದೋಷರಹಿತಂ, ತಸ್ಮಿನ್ ಸಮಸ್ತದೋಷರಹಿತೇ ।

**ಕೋಶ—** ಪದಂ = ಸ್ಥಾನ, "ಪದಂ ವ್ಯವಸಿತತ್ರಾಣಸ್ಥಾನಲಕ್ಷ್ಮಾಂಘ್ರಿವಸ್ತುಷು" ಅಮರ. ವಧೂ = ಹೆಂಡತಿ "ಕ್ಷೇತ್ರಂ ಕಲತ್ರಂ ಚ ವಧೂ" (ಅಮರ) ಕೋಶ.

**ಪ್ರಯೋಗ—** ಸಮಸ್ತದೋಷರಹಿತೇ ಪದೇ ರತ್ಯಾ ಶ್ರಮಾದಿಖಚಿತಯಾ ನ ಭೂಯತೇ, ವಧೂವರಯೋಃ ವಿರಹ ವ್ಯಥಯಾ ಅಪಿ ನ ಭೂಯತೇ, ಪ್ರತಿಕಾಮಿನೀಪ್ರಣಯತಃ ಕಲಹೇನ ಅಪಿ ನ ಭೂಯತೇ (ಭಾವೇ ಪ್ರಯೋಗಗಳು).

★ ★ ★

**ಅವತಾರಿಕಾ—** ರತಿಕ್ರೀಡೆಯಲ್ಲಿ ಯಾವ ದೋಷವೂ ಇಲ್ಲವೆಂಬುದು ಶ್ರುತ್ಯಾದಿಸಮ್ಮತ ಎಂಬ ವಿಷಯವನ್ನೇ ಹೇಳುತ್ತಾರೆ.

**ಸುಖಸಂವಿದಾತ್ಮಕತಯಾ ವಪುಷಾಂ**
**ಸುರಭಿತ್ವಮೇವ ಬಹಿರಂತರಪಿ ।**
**ಹರಿಧಾಮ್ನಿ ದಂಪತಿಗಣಸ್ಯ ತತೋ**
**ನನು ಮಾನ್ಯತೇऽಪಿ ಮುನಿಭಿಃ ಸುರತಮ್ ॥ 63 ॥**

**ಪದಚ್ಛೇದ—** ಸುಖಸಂವಿದಾತ್ಮಕತಯಾ, ವಪುಷಾಂ, ಸುರಭಿತ್ವಂ, ಏವ, ಬಹಿಃ, ಅಂತಃ, ಅಪಿ, ಹರಿಧಾಮ್ನಿ, ದಂಪತಿಗಣಸ್ಯ, ತತಃ, ನನು, ಮಾನ್ಯತೇ, ಅಪಿ, ಮುನಿಭಿಃ, ಸುರತಂ ।

**ಅನ್ವಯ—** ಹರಿಧಾಮ್ನಿ ದಂಪತಿಗಣಸ್ಯ ವಪುಷಾಂ ಸುಖಸಂವಿದಾತ್ಮಕತಯಾ, ಬಹಿಃ ಅಂತಃ ಅಪಿ ಸುರಭಿತ್ವಂ ಏವ, ತತಃ ನನು ಸುರತಂ ಮುನಿಭಿಃ ಅಪಿ ಮಾನ್ಯತೇ ನನು ।

**ಅನ್ವಯಾರ್ಥ—**

**ಹರಿಧಾಮ್ನಿ** = ಶ್ರೀವಿಷ್ಣುಲೋಕದಲ್ಲಿ (ವೈಕುಂಠದಲ್ಲಿ)
**ದಂಪತಿಗಣಸ್ಯ** = ಪತಿಪತ್ನಿಯರ ಸಮೂಹದ
**ವಪುಷಾಂ** = ಶರೀರಗಳಿಗೆ
**ಸುಖಸಂವಿದಾತ್ಮಕತಯಾ** = ಆನಂದವೂ, ಜ್ಞಾನವೂ ಇವುಗಳ ಸ್ವರೂಪವಾಗಿರುವುದರಿಂದ
**ಬಹಿಃ** = ಹೊರಗೂ
**ಅಂತಃ ಅಪಿ** = ಒಳಗೂ
**ಸುರಭಿತ್ವಂ ಏವ** = ಸುಗಂಧವೇ (ಭವತಿ = ಇರುತ್ತದೆ)
**ತತಃ ನನು** = ಆದ್ದರಿಂದಲೇ
**ಸುರತಂ** = ರತಿವಿಹಾರವು
**ಮುನಿಭಿಃ ಅಪಿ** = ಜ್ಞಾನಿಗಳಾದ ಬ್ರಹ್ಮಾದಿಗಳಿಂದಲೂ
**ಮಾನ್ಯತೇ ನನು** = ಬಹುಮಾನಿಸಲ್ಪಡುತ್ತದೆಯಷ್ಟೆ

**ತಾತ್ಪರ್ಯ—** ವೈಕುಂಠಲೋಕದಲ್ಲಿ ಮುಕ್ತರು ಮಾಡುವ ರತಿಕ್ರೀಡೆಯು ದೋಷರಹಿತವೆಂಬ ವಿಷಯವು ಶ್ರುತ್ಯಾದಿ ಪ್ರಸಿದ್ಧವೆಂದು ತಿಳಿಸುತ್ತಿದ್ದಾರೆ. ಇಲ್ಲಿ ವರ್ಣಿಸಿರುವ ವೈಕುಂಠಲೋಕವು ಕೇವಲ ಮುಕ್ತರಿಗೆ ಮಾತ್ರವೇ

ಹೋಗಲು ಸಾಧ್ಯವಾಗಿರುವ ಸ್ಥಳವು. ಅಲ್ಲಿ ದಂಪತಿಗಳು ಗುಂಪುಗುಂಪಾಗಿ, ಅಸಂಖ್ಯಾತರಾಗಿರುವರು. ಅವರೆಲ್ಲರ ಶರೀರಗಳೂ ಕೇವಲ ಜ್ಞಾನ ಮತ್ತು ಆನಂದ ಸ್ವರೂಪವಾದುವುಗಳು. ಅವರಿಗೆ ಶರೀರವೆಂದು ಕಾಣಿಸುವ ಭಾಗವೂ ಜ್ಞಾನ ಆನಂದಾತ್ಮಕವಾದುದು. ಕೇವಲ ಸುವಾಸನಾಭರಿತವಾದುದು. ಸರ್ವಥಾ ಪ್ರಕೃತಿ ಸಂಬಂಧವಿಲ್ಲದುದು. ಆದುದರಿಂದ ಅಲ್ಲಿರುವ ಮುಕ್ತ ದಂಪತಿಗಳ ರತಿವಿಹಾರವು ಬ್ರಹ್ಮಾದಿಗಳಿಂದಲೂ ಪ್ರಶಂಸನೀಯವಾಗಿದೆ. ಅವರೂ ಆ ರತಿವಿಹಾರವನ್ನು ಗೌರವಿಸುತ್ತಾರೆ.

**ವಿಗ್ರಹ—**

**ಸುಖಸಂವಿದಾತ್ಮಕತಯಾ—** ಸುಖಂ ಚ ಸಂವಿಚ್ಚ ಸುಖಸಂವಿದೌ, ತೇ ಆತ್ಮಾ ಯೇಷಾಂ ತಾನಿ ಸುಖ ಸಂವಿದಾತ್ಮಕಾನಿ, ಸುಖಸಂವಿದಾತ್ಮಕಾನಾಂ ಭಾವಃ ಸುಖಸಂವಿದಾತ್ಮಕತಾ ತಯಾ ಸುಖಸಂವಿದಾತ್ಮಕ ತಯಾ । ಫಲಾರಿಯ - ಸುಖಸಂವಿದೋಃ ಆತ್ಮಾ ಯೇಷಾಂ ತಾನಿ ।

**ಸುರಭಿತ್ವಂ—** ಸುರಭೇಃ ಭಾವಃ ಸುರಭಿತ್ವಂ ।

**ಹರಿಧಾಮ್ನಿ—** ಹರೇಃ ಧಾಮ ಹರಿಧಾಮ, ತಸ್ಮಿನ್ ಹರಿಧಾಮ್ನಿ ।

**ದಂಪತಿಗಣಸ್ಯ—** ಜಾಯಾಶ್ಚ ಪತಯಶ್ಚ ದಂಪತಯಃ, ದಂಪತೀನಾಂ ಗಣಃ ದಂಪತಿಗಣಃ ।

**ಕ್ರಿಯಾಪದ—** ಮಾನ್ಯತೇ - ಮಾನ್ಯತೇ ಮಾನ್ಯೇತೇ ಮಾನ್ಯಂತೇ ಇತ್ಯಾದಿ ಮಾನಪೂಜಾಯಾಂ ಇತ್ಯಸ್ಮಾದ್ ಧಾತೋಃ ಕರ್ಮಣಿ ಲಟ್ ಪ್ರಥಮಪುರುಷೇ ಏಕವಚನಂ ।

2 ಲಿಟ್ ಮಾನಯಾಂಚಕ್ರೇ, 3 ಲುಟ್ ಮಾನಯಿತಾ, 4 ಲೃಟ್ ಮಾನಯಿಷ್ಯತೇ, 5 ಲೋಟ್ ಮಾನ್ಯತಾಂ, 6 ಲಙ್ ಅಮಾನ್ಯತ, 7 ವಿಧಿಲಿಙ್ ಮಾನ್ಯೇತ, 8 ಆಶೀರ್ಲಿಙ್ ಮಾನಯಿಷೀಷ್ಟ, ಮಾನಿಷೀಷ್ಟ, 9 ಲುಙ್ ಅಮಾನಿ, ಅಮಾನಿಷಾ ತಾಂ ಅಮಾನಿಷತ, 10 ಅಮಾನಯಿಷ್ಯತ ।

**ಕೋಶ—** ಧಾಮ್ನಿ = ಲೋಕದಲ್ಲಿ ಸ್ಥಾನದಲ್ಲಿ, "ಧಾಮ ರಶ್ಮೌ ದೇಹೇ, ಗೃಹೇ ಸ್ಥಾನೇ ಜನ್ಮಪ್ರಭಾವಯೋಃ" ವಿಶ್ವಃ, ಸುರಭಿತ್ವಂ = ಸುವಾಸನೆ, "ಸುರಭಿಃ ಘ್ರಾಣತರ್ಪಣಃ" ಅಮರ. ಸಂವಿತ್ = ಜ್ಞಾನ, "ಪ್ರೇಕ್ಷೋಪಲಬ್ಧಿಶ್ಚಿತ್ ಸಂವಿತ್ ಪ್ರತಿಪದ್ಜ್ಞಪ್ತಿಚೇತನಾಃ" ಅಮರ.

**ಪ್ರಯೋಗ—** ಸುರತಂ ಮುನಿಭಿಃ ಅಪಿ ಮಾನ್ಯತೇ ನನು (ಕರ್ಮಣಿ) ।
ಸುರತಂ ಮುನಯಃ ಅಪಿ ಮಾನಯಂತಿ ನನು (ಕರ್ತರಿ) ।

★ ★ ★

**ಶ್ರುಣುತಾಪ್ಯಲೋಕವಿಷಯಂ ವಿಷಯಂ ಸಕಲಸ್ಯ ಮುಕ್ತನಿಕರಸ್ಯ ದೃಶಾಮ್ ।**
**ವಪುರಿಂದಿರಾಪತಿರಮಂದರಸಂ ನನು ಸುಂದರಂ ಪ್ರಕಟಯತ್ಯನಿಶಮ್ ॥ 64 ॥**

**ಪದಚ್ಛೇದ—** ಶ್ರುಣುತ, ಅಪಿ, ಅಲೋಕವಿಷಯಂ, ವಿಷಯಂ, ಸಕಲಸ್ಯ, ಮುಕ್ತನಿಕರಸ್ಯ, ದೃಶಾಂ, ವಪುಃ, ಇಂದಿರಾಪತಿಃ ಅಮಂದರಸಂ, ನನು, ಸುಂದರಂ, ಪ್ರಕಟಯತಿ, ಅನಿಶಂ ।

**ಅನ್ವಯ—** ಸಕಲಸ್ಯ ಮುಕ್ತನಿಕರಸ್ಯದೃಶಾಂ ಅಲೋಕವಿಷಯಂ ವಿಷಯಂ ಶ್ರುಣುತ, ಇಂದಿರಾಪತಿಃ ಅಮಂದರಸಂ ಸುಂದರಂ ವಪುಃ ಪ್ರಕಟಯತಿ ನನು ।

**ಅನ್ವಯಾರ್ಥ—**

**(ಹೇ ಮುನಯಃ** = ಎಲೈ ಸನಕಾದಿ ಮುನಿಗಳೇ)

**ಸಕಲಸ್ಯ** = ಎಲ್ಲಾ
**ಮುಕ್ತನಿಕರಸ್ಯ** = ಮುಕ್ತರ ಸಮೂಹದ
**ದೃಶಾಂ** = ಕಣ್ಣುಗಳಿಗೆ
**ಅಲೋಕವಿಷಯಂ** = ಇತರಲೋಕದ ಜನರ ಕಣ್ಣುಗಳಿಗೆ ಕಾಣದ
**ವಿಷಯಂ ಅಪಿ** = ಮುಕ್ತರಿಗೆ ಮಾತ್ರವೇ ಕಣ್ಣಿಗೆ ಬೀಳತಕ್ಕಂತಹುದನ್ನು
**ಶೃಣುತ** = ಕೇಳಿರಿ
**ಇಂದಿರಾಪತಿಃ** = ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು
**ಅಮಂದರಸಂ** = ಪರಿಪೂರ್ಣವಾದ ಬಲ ವೀರ್ಯಾದಿಸಮೂಹವುಳ್ಳ
**ವಪುಃ** = ಶರೀರವನ್ನು
**ಪ್ರಕಟಯತಿ ನನು** = ತೋರಿಸುತ್ತಲೇ ಇರುವನಷ್ಟೆ.

**ತಾತ್ಪರ್ಯ**— ಎಲೈ ಸನಕಾದಿ ಮುನಿಗಳೇ, ಮುಕ್ತಚೇತನರು ಮಾತ್ರವೇ ಪ್ರವೇಶಿಸಲು ಸಾಧ್ಯವಾದ ಆ ವೈಕುಂಠ ಲೋಕದಲ್ಲಿರುವ ಎಲ್ಲಾ ಮುಕ್ತರೂ ಒಂದು ಅದ್ಭುತವಾದ ವಸ್ತುವನ್ನು ಯಾವಾಗಲೂ ನೋಡುತ್ತಾ ಇರುತ್ತಾರೆ. ಆ ವಸ್ತುವನ್ನು ಇತರ ಲೋಕಗಳಲ್ಲಿ ವಾಸಿಸುವ ಜನರು ಯಾವಾಗಲೂ ಕಾಣಲಾರರು. ಆ ವಸ್ತು ಯಾವುದು ಎಂಬ ವಿಷಯವನ್ನು ಹೇಳುತ್ತೇನೆ ಕೇಳಿರಿ. ಅಲ್ಲಿ ಶ್ರೀಮನ್ಮಹಾವಿಷ್ಣುವು ತನ್ನ ಶೃಂಗಾರವೀರ್ಯ ಇತ್ಯಾದಿ ಸಕಲಸದ್ಗುಣಪೂರ್ಣವಾದ ಪರಮಸುಂದರವಾದ ಶರೀರವನ್ನು ಮುಕ್ತಚೇತನರಿಗೆ ಯಾವಾಗಲೂ ತೋರಿಸುತ್ತಲಿರುತ್ತಾನೆ. ಇದೇ ಮುಕ್ತಚೇತನರಿಗೆ ಯಾವಾಗಲೂ ಕಣ್ಣಿಗೆ ಬೀಳುತ್ತಿರುವ ದೃಶ್ಯವು. ಹೀಗೆ ಶ್ರೀಮನ್ನಾರಾಯಣನು ಮುಕ್ತಜನರಿಗೆ ಯಾವಾಗಲೂ ಕಣ್ಣಿಗೆ ಗೋಚರವಾಗುತ್ತಿರುವನು ಎಂಬುದೇ ಆ ಮುಕ್ತವೈಕುಂಠಲೋಕದ ವಿಶೇಷವು.

**ವಿಗ್ರಹ**—

**ಅಲೋಕವಿಷಯಂ**— ಲೋಕಾನಾಂ ವಿಷಯಃ ಲೋಕವಿಷಯಃ, ಲೋಕವಿಷಯಃ ನ ಭವತಿ ಇತಿ ಅಲೋಕ ವಿಷಯಃ, ತಂ ಅಲೋಕವಿಷಯಂ ।

**ಮುಕ್ತನಿರಸ್ಯ**— ಮುಕ್ತಾನಾಂ ನಿಕರಃ ಮುಕ್ತನಿಕರಃ, ತಸ್ಯ ಮುಕ್ತನಿಕರಸ್ಯ ।

**ಇಂದಿರಾಪತಿಃ**— ಇಂದಿರಾಯಾಃ ಪತಿಃ ಇಂದಿರಾಪತಿಃ ।

**ಅಮಂದರಸಂ**— ನ ಮಂದಃ ಅಮಂದಃ, ಅಮಂದಃ ರಸಃ ಯಸ್ಯ ಸಃ ಅಮಂದರಸಃ, ತಂ ಅಮಂದರಸಂ ।

**ಕ್ರಿಯಾಪದ**— **ಶ್ರುಣುತ**- ಶ್ರುಣೋತು-ಶ್ರುಣುತಾತ್ ಶ್ರುಣುತಾಂ ಶ್ರುಣ್ವಂತು, ಶ್ರುಣು-ಶ್ರುಣುತಾತ್, ಶ್ರುಣುತಂ ಶ್ರುಣುತ, ಶ್ರುಣವಾನಿ ಶ್ರುಣವಾವ ಶ್ರುಣವಾಮ ಶ್ರುಶ್ರವಣೇ-ಶ್ರವಣಾರ್ಥಕಾತ್ ಶ್ರುಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲೋಟ್ ಮಧ್ಯಮಪುರುಷ ಬಹುವಚನಂ (ಅನಿಟ್) 1 ಲಟ್ ಶ್ರುಣೋತಿ ಶ್ರುಣುತಃ ಶ್ರುಣ್ವಂತಿ, ಶ್ರುಣೋಷಿ ಶ್ರುಣುಥಃ ಶ್ರುಣುಥ, ಶ್ರುಣೋಮಿ ಶ್ರುಣುವಃ-ಶ್ರುಣ್ವಃ ಶ್ರುಣುಮಃ-ಶ್ರುಣ್ಮಃ, 2 ಲಿಟ್ ಶುಶ್ರಾವ ಶುಶ್ರುವತುಃ ಶುಶ್ರುವುಃ, ಶುಶ್ರೋಥ ಶುಶ್ರುವಥುಃ ಶುಶ್ರುವ, ಶುಶ್ರಾವ-ಶುಶ್ರವ, ಶುಶ್ರುವ ಶುಶ್ರುಮ, 3 ಲುಟ್ ಶ್ರೋತಾ ಶ್ರೋತಾರೌ ಶ್ರೋತಾರಃ, ಶ್ರೋತಾಸಿ, 4 ಲೃಟ್ ಶ್ರೋಷ್ಯತಿ, 5 ಲೋಟ್ ಶ್ರುಣೋತು, 6 ಲಙ್ ಅಶ್ರುಣೋತ್ ಅಶ್ರುಣುತಾಂ ಅಶ್ರುಣ್ವನ್, ಅಶ್ರುಣೋಃ, ಅಶ್ರುಣುತಂ ಅಶ್ರುಣುತ, ಅಶ್ರುಣವಂ ಅಶ್ರುಣುವ-ಅಶ್ರುಣ್ವ ಅಶ್ರುಣುಮ-ಅಶ್ರುಣ್ಮ, 7 ವಿಧಿ ಲಿಙ್ ಶ್ರುಣುಯಾತ್ ಶ್ರುಣುಯಾತಾಂ ಶ್ರುಣುಯುಃ, 8 ಆಶೀರ್ಲಿಙ್ ಶ್ರೂಯಾತ್ ಶ್ರೂಯಾಸ್ತಾಂ ಶ್ರೂಯಾಸುಃ, 9 ಲುಙ್ ಅಶ್ರೌಷೀತ್ ಅಶ್ರೌಷ್ಟಾಂ ಅಶ್ರೌಷುಃ, ಅಶ್ರೌಷೀಃ ಅಶ್ರೌಷ್ಟಂ ಅಶ್ರೌಷ್ಟ, ಅಶ್ರೌಷಂ ಅಶ್ರೌಷ್ವ ಅಶ್ರೌಷ್ಮ, 10 ಲೃಙ್

ಅಶ್ರೋಷ್ಯತ್ 'ಶ್ರುವಃ ಶೃಚ' ಎಂಬ ಸೂತ್ರದಿಂದ ಈ ಧಾತುವಿಗೆ ಲಟ್ ಲೋಟ್ ಲಙ್ ವಿಧಿಲಿಙ್ ಈ ನಾಲ್ಕು ಲಕಾರಗಳಲ್ಲಿ (ಇವುಗಳನ್ನು ಸಾರ್ವಧಾತುಕ ಲಕಾರವೆಂದು ಹೇಳುತ್ತಾರೆ) ಶೃ ಎಂಬ ಆದೇಶವೂ ಶ್ನು ಪ್ರತ್ಯಯವೂ ಬರುತ್ತದೆ. ಉಳಿದ ರೂಪಗಳಲ್ಲಿ ಶ್ರು ಎಂದು ಉಕಾರಾಂತವೇ ಇರುತ್ತದೆ. ಶೃಣುವಃ ಶೃಣ್ವಃ ಇತ್ಯಾದಿಗಳಲ್ಲಿ 'ಲೋಪಶ್ಚ ಅಸ್ಯ ಅನ್ಯತರಸ್ಯಾಂ ಮ್ವೋಃ' ಎಂಬ ಸೂತ್ರದಿಂದ ಉಕಾರಕ್ಕೆ ವಿಕಲ್ಪದಿಂದ ಲೋಪವಾಗುತ್ತದೆ. ಶೃಣು (ಲೋಟ್ ಮಧ್ಯಮಪುರುಷ ಏಕವಚನ) ಎಂಬಲ್ಲಿ 'ಉತಶ್ಚ ಪ್ರತ್ಯಯದಸಂಯೋಗಪೂರ್ವಾತ್' ಎಂಬ ಸೂತ್ರದಿಂದ 'ಹಿ' ಪ್ರತ್ಯಕ್ಕೆ ಲುಕ್ (ಲೋಪ ಬರುತ್ತದೆ) ।

**ಪ್ರ+ಕಟಯತಿ-** 1 ಲಟ್ ಕಟಯತಿ, 2 ಲಿಟ್ ಕಟಯಾಂಚಕಾರ, ಚಕ್ರೇ, 3ಲುಟ್ ಕಟಯಿತಾ ಸಿ-ಸೇ-ಹೇ, 4 ಕಟಯಿಷ್ಯತಿ.ತೇ, 5 ಲೋಟ್ ಕಟಯತು, 6 ಲಙ್ ಅಕಟಯತ್, 7 ವಿಧಿಲಿಙ್ ಕಟಯೇತ್, ಕಟಯೇತ, 8 ಆಶೀರ್ಲಿಙ್ ಕಟ್ಯಾತ್, ಕಟಯಿಷೀಷ್ಟ, ಢ್ವಂ, ಧ್ವಂ, 9 ಲುಙ್ ಅಚೀಕಟತ್-ತ, 10 ಲೃಙ್ ಅಕಟಯಿಷ್ಯತ್ ಅಕಟಯಿಷ್ಯತ ಪ್ರಉಪಸರ್ಗ ಕಟೇವರ್ಷಾವರಣಯೋಃ ಣಿಜಂತಾತ್ ಲಟ್ ಪ್ರಕಟಯತಿ 'ಘಟಾದಿತ್ವಾತ್ ಮಿತ್ವಂ ಹ್ರಸ್ವಃ' ಘಟಾದಿ ಎಂಬ ಗಣದಲ್ಲಿ ಸೇರಿದ್ದರಿಂದ ಣಿಚ್‌ನಲ್ಲಿ ಪಸ್ವ।

**ಕೋಶ—** "ವಿಷಯಃ ಸ್ಯಾದಿಂದ್ರಿಯಾರ್ಥೇ ದೇಶೇ ಜನಪದೇಽಪಿ ಚ" ಇತಿ ವಿಶ್ವಃ ಶೃಂಗಾರಾದೌ "ವಿಷೇ (ಬಲೇ) ವೀರ್ಯೇ ಗುಣೇ ರಾಗೇ ದ್ರವೇ ರಸಃ" - ಇತ್ಯಮರಃ ।

**ಪ್ರಯೋಗ—** ಯೂಯಂ ವಿಷಯಂ ಶೃಣುತ (ಕರ್ತರಿ) ।

ಯುಷ್ಮಾಭಿಃ ವಿಷಯಃ ಶ್ರೂಯತಾಂ (ಕರ್ಮಣಿ) ।

ಇಂದಿರಾಪತಿಃ ಸುಂದರಂ ವಪುಃ ಪ್ರಕಟಯತಿ ನನು (ಕರ್ತರಿ) ।

ಇಂದಿರಾಪತಿನಾ ಸುಂದರಂ ವಪುಃ ಪ್ರಕಟ್ಯತೇ ನನು (ಕರ್ಮಣಿ) ।

★ ★ ★

**ಮಣಿರಾಜಿರಾಜಿತಮಹಾಮುಕುಟಂ ಶಿಶಿಕಾಂತಕುಂತಲಸಹಸ್ರತಯಮ್ ।**
**ಅಲಿಕಾರ್ಧಚಂದ್ರವಿಲಸತ್ತಿಲಕಂ ಶ್ರವಣೋಲ್ಲಸನ್ಮಕರಕುಂಡಲಯುಕ್ ॥ 65 ॥**

**ಪದಚ್ಛೇದ—** ಮಣಿರಾಜಿರಾಜಿತಮಹಾಮುಕುಟಂ ಶಿಶಿಕಾಂತಕುಂತಲಸಹಸ್ರತಯಂ ಅಲಿಕಾರ್ಧಚಂದ್ರವಿಲಸ-ತ್ತಿಲಕಂ ಶ್ರವಣೋಲ್ಲಸನ್ಮಕರಕುಂಡಲಯುಕ್ ।

**ಅನ್ವಯ—** ಮಣಿರಾಜಿರಾಜಿತಮಹಾಮುಕುಟಂ, ಶಿಶಿಕಾಂತಕುಂತಲಹಸ್ರತಯಂ ಅಲಿಕಾರ್ಧಚಂದ್ರವಿಲಸತ್ತಿಲಕಂ ಶ್ರವಣೋಲ್ಲಸನ್ಮಕರಕುಂಡಲಯುಕ್ (ಸುಂದರಂ ವಪುಃ ಇಂದಿರಾಪತಿಃ ಪ್ರಕಟಯತಿ) ।

**ಅನ್ವಯಾರ್ಥ—**

**ಮಣಿರಾಜಿರಾಜಿತಮಹಾಮುಕುಟಂ** = ರತ್ನಗಳ ಸಾಲುಗಳಿಂದ ಪ್ರಕಾಶಮಾನವಾದ ದೊಡ್ಡ ಕಿರೀಟವುಳ್ಳ

**ಶಿತಿಕಾಂತಕುಂತಲಸಹಸ್ರತಯಂ** = ಕಪ್ಪಾದ ಮನೋಹರವಾದ ಅನೇಕ ಸಾವಿರ ಮುಂಗೂದಲುಗಳುಳ್ಳ

**ಅಲಿಕಾರ್ಧಚಂದ್ರವಿಲಸತ್ತಿಲಕಂ** = ಹಣೆಯೆಂಬ ಅರ್ಧಚಂದ್ರನಲ್ಲಿ ಮಿನುಗುತ್ತಿರುವ ಬೊಟ್ಟುಳ್ಳ

**ಶ್ರವಣೋಲ್ಲಸತ್‌ಮಕರಕುಂಡಲಯುಕ್** = ಕಿವಿಗಳಲ್ಲಿ ಹೊಳೆಯುತ್ತಿರುವ ಮೊಸಳೆಯ ಆಕಾರದ ಕರ್ಣಾ-ಭರಣಗಳಿಂದ ಕೂಡಿದ

**(ಸುಂದರಂ ವಪುಃ** = ಸುಂದರವಾದ ಶರೀರವನ್ನು

**ಇಂದಿರಾಪತಿಃ** = ಲಕ್ಷ್ಮೀಪತಿಯಾದ ನಾರಾಯಣನು

**ಪ್ರಕಟಯತಿ** = ಪ್ರಕಟಗೊಳಿಸುತ್ತಾನೆ).

**ನವಕಂಬುಕಂಠಮಹಿಮಾಂಶುಮಹೋಮಹಿಮೋಪಲೇಂದ್ರವರಹಾರಧರಮ್ ।**
**ರಮಣೀಯರತ್ನಗಣವಿದ್ಧಲಸದ್ವಲಯಾಂಗುಲೀಯಕವರಾಂಗದವತ್ ॥ 67 ॥**

**ಪದಚ್ಛೇದ—** ನವಕಂಬುಕಂಠಂ, ಅಹಿಮಾಂಶುಮಹೋಮಹಿಮೋಪಲೇಂದ್ರವರಹಾರಧರಂ, ರಮಣೀಯರತ್ನ-ಗಣವಿದ್ಧಲಸದ್ವಲಯಾಂಗುಲೀಯಕವರಾಂಗದವತ್ ।

**ಅನ್ವಯ—** ನವಕಂಬುಕಂಠಂ, ಅಹಿಮಾಂಶುಮಹೋಮಹಿಮೋಪಲೇಂದ್ರವರಹಾರಧರಂ, ರಮಣೀಯರತ್ನ-ಗಣವಿದ್ಧಲಸದ್ವಲಯಾಂಗುಲೀಯಕವರಾಂಗದವತ್ (ವಪುಃ ಇಂದಿರಾಪತಿಃ ಪ್ರಕಟಯತಿ) ।

**ಅನ್ವಯಾರ್ಥ—**

**ನವಕಂಬುಕಂಠಂ** = ಹೊಸದಾದ ಶಂಖದಂತೆ ಕುತ್ತಿಗೆಯುಳ್ಳ (ಕೊರಳುಳ್ಳ)

**ಅಹಿಮಾಂಶುಮಹೋಮಹಿಮೋಪಲೇಂದ್ರವರಹಾರಧರಂ-**

**ಅಹಿಮಾಂಶು, ಮಹಃ, ಮಹಿಮಾ, ಉಪಲೇಂದ್ರ, ವರಹಾರಧರಂ** = ಸೂರ್ಯನ, ಕಾಂತಿಯಂತೆ, ಕಾಂತಿಯುಳ್ಳ, ಶ್ರೇಷ್ಠವಾದ ಕೌಸ್ತುಭಮಣಿಯು, ಶ್ರೇಷ್ಠವಾದ ಮುತ್ತಿನಸರ ಇವುಗಳನ್ನು ಧರಿಸಿರುವ

**ರಮಣೀಯರತ್ನಗಣವಿದ್ಧಲಸದ್ವಲಯಾಂಗುಲೀಯಕವರಾಂಗದವತ್-**

**ರಮಣೀಯ, ರತ್ನಗಣ, ವಿದ್ಧಲಸತ್, ವಲಯ, ಅಂಗುಲೀಯಕ, ವರ,ಅಂಗದವತ್** = ಸುಂದರವಾದ, ರತ್ನಗಳ ಸಮೂಹದಿಂದ, ಖಚಿತವಾದ, ಪ್ರಕಾಶಮಾನವಾದ, ಬಳೆ, ಉಂಗುರ, ಉತ್ತಮವಾದ, ತೋಳ್ಬಳೆ (ಭುಜಾಭರಣ, ವಂಕಿಯುಳ್ಳ) (ಶರೀರವನ್ನು ಶ್ರೀಲಕ್ಷ್ಮೀನಾರಾಯಣನು ಮುಕ್ತರ ಕಣ್ಣಿಗೆ ಗೋಚರಿಸುವಂತೆ ಮಾಡುತ್ತಾನೆ.)

**ತಾತ್ಪರ್ಯ—** ಮುಕ್ತರ ಸ್ವರೂಪದೃಷ್ಟಿಗೆ ಗೋಚರವಾಗುವ ಆ ಶ್ರೀಮನ್ನಾರಾಯಣನ ಕಂಠವು ನೂತನವಾದ ಶಂಖದಂತೆ ಸುಂದರವಾಗಿರುವುದು (ಶಂಖದಂತೆ ಕಂಠದಲ್ಲಿ ಮೂರು ರೇಖೆಗಳಿರುತ್ತವೆ ಎಂದು ಅರ್ಥ). ಅವನು ಸೂರ್ಯನಂತೆ ಹೊಳೆಯುವ ಕೌಸ್ತುಭಮಣಿ, ಮತ್ತು ಉತ್ತಮವಾದ ಮುತ್ತಿನ ಸರವನ್ನು ಕಂಠದಲ್ಲಿ ಧರಿಸಿರುವನು. ಕೈಗಳಲ್ಲಿ ಸುಂದರ ರತ್ನಖಚಿತವಾದ ಥಳಥಳಿಸುವ ಬಳೆಗಳನ್ನು, ಬೆರಳುಗಳಲ್ಲಿ ರತ್ನಖಚಿತವಾದ ಉಂಗುರಗಳನ್ನು ತೋಳುಗಳಲ್ಲಿ ರತ್ನಖಚಿತವಾದ ತೋಳ್ಬಳೆಗಳನ್ನು ಧರಿಸಿರುವನು. ಇಂತಹ ಸುಂದರ ಸ್ವರೂಪವು ಮುಕ್ತ ಭಾಗ್ಯವಂತರಾದ ಚೇತನರ ಕಣ್ಣಿಗೆ ಬೀಳುತ್ತದೆ.

**ವಿಗ್ರಹ—**

**ನವಕಂಬುಕಂಠಂ—** ನವಶ್ಚಾಸೌ ಕಂಬುಶ್ಚ ನವಕಂಬುಃ, ನವಕಂಬುವತ್ ಕಂಠಃ ಯಸ್ಯ ತತ್ ನವಕಂಬು-ಕಂಠಂ ।

**ಅಹಿಮಾಂಶುಮಹೋಮಹಿಮೋಪಲೇಂದ್ರವರಹಾರಧರಂ—** ಹಿಮಾಃ ನ ಭವಂತೀತಿ ಅಹಿಮಾಃ, ಅಹಿಮಾಃ ಅಂಶವಃ ಯಸ್ಯ ಸಃ ಅಹಿಮಾಂಶುಃ, ಅಹಿಮಾಂಶೋಃ ಮಹಃ ಅಹಿಮಾಂಶುಮಹಃ, ಅಹಿಮಾಂಶು-ಮಹೋವತ್ ಮಹಿಮಾ ಯಸ್ಯ ಸಃ ಅಹಿಮಾಂಶುಮಹೋಮಹಿಮಾ, ಉಪಲಾನಾಂ ಇಂದ್ರಃ ಉಪಲೇಂದ್ರಃ, ಅಹಿಮಾಂಶುಮಹೋಮಹಿಮಾ ಚಾಸೌ ಉಪಲೇಂದ್ರಶ್ಚ ಅಹಿಮಾಂಶುಮಹೋ-ಮಹಿಮೋಪಲೇಂದ್ರಃ, ವರಶ್ಚಾಸೌ ಹಾರಶ್ಚ ವರಹಾರಃ, ಧರತೀತಿ ಧರಂ, ಅಹಿಮಾಂಶುಮಹೋ-ಮಹಿಮೋಪಲೇಂದ್ರಶ್ಚ ವರಹಾರಶ್ಚ ಅಹಿಮಾಂಶುಮಹೋಮಹಿಮೋಪಲೇಂದ್ರವರಹಾರೌ, ಧರಃ ಅಹಿಮಾಂಶುಮಹೋಮಹಿಮೋಪಲೇಂದ್ರವರಹಾರಧರಂ, ತತ್ ಅಹಿಮಾಂಶುಮಹೋಮಹಿ-ಮೋಪಲೇಂದ್ರವರಹಾರಧರಮ್ ।

**ರಮಣೀಯರತ್ನಗಣವಿದ್ಧಲಸದ್ವಲಯಾಂಗುಲೀಯಕವರಾಂಗದವತ್**— ರಮಣೀಯಾನಿ ಚ ತಾನಿ ರತ್ನಾನಿ ಚ ರಮಣೀಯರತ್ನಾನಿ, ರಮಣೀಯರತ್ನಾನಾಂ ಗಣಃ ರಮಣೀಯರತ್ನಗಣಃ, ರಮಣೀಯರತ್ನಗಣೇನ ವಿದ್ಧಾನಿ ರಮಣೀಯರತ್ನಗಣವಿದ್ಧಾನಿ, ಲಸಂತಿ ಚ ತಾನಿ ವಲಯಾನಿ ಚ ಲಸದ್ವಲಯಾನಿ, ವರಾಣಿ ಚ ತಾನಿ ಅಂಗದಾನಿ ಚ ವರಾಂಗದಾನಿ, ಲಸದ್ವಲಯಾನಿ ಚ ಅಂಗುಲೀಯಕಾನಿ ಚ ವರಾಂಗದಾನಿ ಚ ಲಸದ್ವಲಯಾಂಗುಲೀಯಕವರಾಂಗದಾನಿ, ರಮಣೀಯರತ್ನಗಣವಿದ್ಧಾನಿ ಚ ತಾನಿ ಲಸದ್ವಲಯಾಂ-ಗುಲೀಯಕವರಾಂಗದಾನಿ ಚ ರಮಣೀಯರತ್ನಗಣವಿದ್ಧಲಸದ್ವಲಯಾಂಗುಲೀಯಕವ ರಾಂಗದಾನಿ, ತಾನಿ ಅಸ್ಯ ಸಂತೀತಿ ರಮಣೀಯರತ್ನಗಣವಿದ್ಧಲಸದ್ವಲಯಾಂಗುಲೀಯಕವರಾಂಗದವತ್, ತತ್ ।

**ಕೋಶ**— ಕಂಬು = ಶಂಖ, ''ಕಂಬುರ್ನಾವಲಯೇ ಶಂಖಃ'' ('ಶಂಖಃ ಸ್ಯಾತ್ ಕಂಬುರಸ್ತ್ರಿಯೌ') ಅಮರಕಂಠ = ಕೊರಳು, ''ಕಂಠೋ ಗಲೋಽಥ ಗ್ರೀವಾಯಾಂ'' ಅಮರ. 'ಕಂಬುಗ್ರೀವಾ ತ್ರಿರೇಖಾ ಸಾ' ಎಂಬ ಅಮರಕೋಶಾನು-ಸಾರವಾಗಿ ಮೂರುರೇಖೆಯುಳ್ಳ ಕತ್ತನ್ನು ಕಂಬುಗ್ರೀವಾ ಎಂದು ಹೇಳುತ್ತಾರೆ. ಅಂಶು = ಕಿರಣ, ''ಕಿರಣೋಽಸ್ರಮಯೂ-ಖಾಂಶು'' ಅಮರ. ಮಹ = ಕಾಂತಿ, ''ಕಾಂತ್ಯುತ್ಸವೌ ತು ಮಹಸೀ'' ನಾನಾರ್ಥರತ್ನಮಾಲಾ ಹಾರ = ಮುತ್ತಿನ ಸರ, ''ಹಾರೋ ಮುಕ್ತಾವಲೀ'' ಅಮರ, ವಲಯ = ಬಳೆ, ''ಕಟಕಂ ವಲಯೋಽಸ್ತ್ರಿಯಾಂ'' ಅಮರ, ಅಂಗದ = ವಂಕಿ, ತೋಳ್ಬಳೆ, ''ಕೇಯೂರಮಂಗದಂ ತುಲ್ಯೇ'' ಅಮರ.

★ ★ ★

**ರವಿಚಕ್ರರುಕ್ಪ್ರಕರಚಕ್ರಕರಂ ವಿಧುಬಿಂಬಕಂಬು ಮಧುರಾಂಬುರುಹಮ್ ।**
**ಜ್ವಲನಜ್ವಲದ್ಗದಮುದಾರಧನುಃ ಪೃಥುವೃತ್ತಹಸ್ತಮತಿತಾಮ್ರತಲಮ್ ॥ 68 ॥**

**ಪದಚ್ಛೇದ**— ರವಿಚಕ್ರರುಕ್ಪ್ರಕರಚಕ್ರಕರಂ, ವಿಧುಬಿಂಬಕಂಬು, ಮಧುರಾಂಬುರುಹಂ, ಜ್ವಲನಜ್ವಲದ್ಗದಂ, ಉದಾರ-ಧನುಃ, ಪೃಥುವೃತ್ತಹಸ್ತಂ, ಅತಿತಾಮ್ರತಲಂ ।

**ಅನ್ವಯ**— ರವಿಚಕ್ರರುಕ್ಪ್ರಕರಚಕ್ರಕರಂ, ವಿಧುಬಿಂಬಕಂಬು, ಮಧುರಾಂಬುರುಹಂ, ಜ್ವಲನಜ್ವಲದ್ಗದಂ, ಉದಾರ-ಧನುಃ, ಪೃಥುವೃತ್ತಹಸ್ತಂ, ಅತಿತಾಮ್ರತಲಂ (ವಪುಃ ಇಂದಿರಾಪತಿಃ ಪ್ರಕಟಯತಿ) ।

**ಅನ್ವಯಾರ್ಥ**—

**ರವಿಚಕ್ರರುಕ್ಪ್ರಕರಚಕ್ರಕರಂ** = ಸೂರ್ಯರ ಸಮೂಹದಂತೆ ಕಾಂತಿಗಳ ಸಮೂಹವುಳ್ಳ ಸುದರ್ಶನ ಚಕ್ರವು ಕೈಯಲ್ಲಿ ಉಳ್ಳ

**ವಿಧುಬಿಂಬಕಂಬು** = ಚಂದ್ರಮಂಡಲದಂತಿರುವ ಪಾಂಚಜನ್ಯ ಎಂಬ ಶಂಖವುಳ್ಳ

**ಮಧುರಾಂಬುರುಹಂ** = ಸುಂದರವಾದ ಕಮಲವುಳ್ಳ

**ಜ್ವಲನಜ್ವಲದ್ಗದಮುದಾರಧನುಃ** = ಬೆಂಕಿಯಂತೆ ಪ್ರಕಾಶಿಸುವ ಕೌಮೋದಕೀ ಎಂಬ ಗದೆಯುಳ್ಳ ಉತ್ಕೃಷ್ಟವಾದ (ಮಹತ್ತಾದ) ಶಾರ್ಙ್ಗವೆಂಬ ಬಿಲ್ಲುಳ್ಳ

**ಪೃಥುವೃತ್ತಹಸ್ತಮತಿತಾಮ್ರತಲಂ** = ದೊಡ್ಡದಾದ (ಪುಷ್ಟವಾದ ಉದ್ದವಾದ) ಗುಂಡಗಿರುವ ಕೈಯುಳ್ಳ, ಅತ್ಯಂತ ಕೆಂಪಾದ ಅಂಗೈಯುಳ್ಳ (ಶರೀರವನ್ನು ಶ್ರೀರಮಣನು ಮುಕ್ತರಿಗೆ ತೋರಿಸುತ್ತಾನೆ).

**ತಾತ್ಪರ್ಯ**— ಶ್ರೀಹರಿಯು ಒಂದು ಕೈಯಲ್ಲಿ ಸೂರ್ಯರ ಸಮೂಹದಂತಹ ಕಾಂತಿಯುಳ್ಳ ಸುದರ್ಶನ ಚಕ್ರವನ್ನು ಹಿಡಿದಿದ್ದಾನೆ. ಇನ್ನೊಂದು ಕೈಯಲ್ಲಿ ಚಂದ್ರಮಂಡಲದಂತೆ ಬೆಳ್ಳಗಿರುವ ಪಾಂಚಜನ್ಯ ಶಂಖವನ್ನು ಹಿಡಿದುಕೊಂಡಿರುವನು. ಮತ್ತೊಂದು ಕೈಯಲ್ಲಿ ಸುಂದರವಾದ ಅರವಿಂದವನ್ನು ಧರಿಸಿರುವನು. ಇನ್ನೊಂದು ಕೈಯಲ್ಲಿ ಬೆಂಕಿಯಂತೆ ಉಜ್ವಲವಾದ

ಕೌಮೋದಕೀ ಗದೆಯನ್ನು ಹಿಡಿದಿರುವನು. ಉತ್ತಮವಾದ ಶಾರ್ಙ್ಗ ಬಿಲ್ಲನ್ನೂ ಧರಿಸಿರುವನು. ಅವನ ಕೈಗಳೆಲ್ಲವೂ, ಉದ್ದವಾಗಿಯೂ, ಪುಷ್ಟವಾಗಿಯೂ, ಗುಂಡಗೆಯೂ ಆಗಿವೆ. ಅವನ ಅಂಗೈಯು ಕೆಂಪಾಗಿದೆ. ಇಂತಹ ಆನಂದ ಜ್ಞಾನ-ರೂಪವಾದ ದೇಹವನ್ನು ಶ್ರೀಹರಿಯು ಮುಕ್ತರ ಕಣ್ಣಿಗೆ ಗೋಚರಿಸುವಂತೆ ಮಾಡುತ್ತಾನೆ. (ಇದರಿಂದ ಚಕ್ರಶಂಖಗದಾಪದ್ಮ-ಧಾರಿಯಾದ ಚತುರ್ಭುಜಧಾರಿಯಾದ ರೂಪವಿದು ಎಂದು ಸೂಚಿಸಿದ್ದಾರೆ.)

**ವಿಗ್ರಹ—**

**ರವಿಚಕ್ರರುಕ್‌ಪ್ರಕರಚಕ್ರಕರಂ—** ರವೀಣಾಂ ಚಕ್ರಂ ರವಿಚಕ್ರಂ, ರುಚಾಂ ಪ್ರಕರಃ ರುಕ್‌ಪ್ರಕರಃ, ರವಿಚಕ್ರವತ್ ರುಕ್‌ಪ್ರಕರಃ ಯಸ್ಯ ತತ್ ರವಿಚಕ್ರರುಕ್‌ಪ್ರಕರಂ, ರವಿಚಕ್ರರುಕ್‌ಪ್ರಕರಂ ಚ ತತ್ ಚಕ್ರಂ ಚ ರವಿಚಕ್ರ-ರುಕ್ಪ್ರಕರಚಕ್ರಂ, ತತ್ ಕರೇ ಯಸ್ಯ ತತ್ ರವಿಚಕ್ರರುಕ್ಪ್ರಕರಚಕ್ರಕರಂ । (ವಪುಃ, ತತ್)

**ವಿಧುಬಿಂಬಕಂಬು—** ವಿಧೋಃ ಬಿಂಬಂ ವಿಧುಬಿಂಬಂ, ವಿಧುಬಿಂಬವತ್ ಕಂಬುಃ ಯಸ್ಯ ತತ್ ವಿಧುಬಿಂಬ-ಕಂಬು । (ವಪುಃ, ತತ್)

**ಮಧುರಾಂಬುರುಹಂ—** ಮಧುರಂ ಅಂಬುರುಹಂ ಯಸ್ಯ ತತ್ ಮಧುರಾಂಬುರುಹಂ । (ವಪುಃ ತತ್)

**ಜ್ವಲನಜ್ವಲದ್ಗದಂ—** ಜ್ವಲನವತ್ ಜ್ವಲಂತೀ ಗದಾ ಯಸ್ಯ ತತ್ ಜ್ವಲನಜ್ವಲದ್ಗದಂ । (ವಪುಃ, ತತ್)

**ಉದಾರಧನುಃ—** ಉದಾರಂ ಧನುಃ ಯಸ್ಯ ತತ್ ಉದಾರಧನುಃ । (ವಪುಃ, ತತ್)

**ಪೃಥುವೃತ್ತಹಸ್ತಂ—** ಪೃಥವಃ ವೃತ್ತಾಃ ಹಸ್ತಾಃ ಯಸ್ಯ ತತ್ ಪೃಥುವೃತ್ತಹಸ್ತಂ । (ವಪುಃ, ತತ್)

**ಅತಿತಾಮ್ರತಲಂ—** ಅತಿತಾಮ್ರಾಣಿ ತಲಾನಿ ಯಸ್ಯ ತತ್ ಅತಿತಾಮ್ರತಲಂ । (ವಪುಃ ತತ್)

**ಕೋಶ—** ಚಕ್ರ = ಸಮೂಹ ಮತ್ತು ಸುದರ್ಶನ ಚಕ್ರ. ''ಚಕ್ರೋ ಗಣೇ ಚಕ್ರವಾಕೇ, ಚಕ್ರಂ ಸೈನ್ಯರಥಾಂಗಯೋಃ'' ಇತಿ ವಿಶ್ವಃ, ''ಶಂಖೋ ಲಕ್ಷ್ಮೀಪತೇಃ ಪಾಂಚಜನ್ಯಃ'', ''ಚಕ್ರಂ ಸುದರ್ಶನಂ'' ಅಮರ. ಪ್ರಕರ = ಸಮೂಹ ''ಪೂಗಃ ವಿತಾನಂ ಪ್ರಕರಃ'' ಅಮರ. ಜ್ವಲನಃ = ಅಗ್ನಿ, ''ಕೃಪೀಟಯೋನಿರ್ಜ್ವಲನೋ ಜಾತವೇದಾಸ್ತನೂನಪಾತ್'' ಅಮರ. ನಾರಾಯಣನ ಗದೆಗೆ ಕೌಮೋದಕೀ ಎಂದೂ ಖಡ್ಗಕ್ಕೆ ನಂದಕ ಎಂದೂ ಹೆಸರು. ''ಕೌಮೋದಕೀ ಗದಾ, ಖಡ್ಗಃ, ತಾಮ್ರಶುಲ್ಬೇಽರುಣೇಽನ್ಯವತ್'' - ವಿಶ್ವ. ತಾಮ್ರ - ಕೆಂಪಾದ ಮತ್ತು ತಾಮ್ರಲೋಹ, ಇಲ್ಲಿ ಕೆಂಪಾದ ಎಂದರ್ಥ.

★ ★ ★

**ವರಪೀವರಾಂ ಸಮಧಿರಾಜದುರೋಮಣಿಮಂಟಪಾಗ್ರ್ಯವಿಲಸತ್ಕಮಲಮ್ ।**
**ಸಜಗದ್ದ್ವಿಸಪ್ತಕತನೂದರಕಂ ಶುಭನಾಭಿಕಂಜಗತಕಾಲಿನುತಮ್ ॥ 69 ॥**

**ಪದಚ್ಛೇದ—** ವರಪೀವರಾಂಸಂ, ಅಧಿರಾಜದುರೋಮಣಿಮಂಟಪಾಗ್ರ್ಯವಿಲಸತ್ಕಮಲಂ, ಸಜಗದ್ದ್ವಿಸಪ್ತಕತನೂದ-ರಕಂ, ಶುಭನಾಭಿಕಂಜಗತಕಾಲಿನುತಂ ।

**ಅನ್ವಯ—** ವರಪೀವರಾಂಸಂ, ಅಧಿರಾಜದುರೋಮಣಿಮಂಟಪಾಗ್ರ್ಯವಿಲಸತ್ಕಮಲಂ, ಸಜಗದ್ದ್ವಿಸಪ್ತಕತನೂದ-ರಕಂ, ಶುಭನಾಭಿಕಂಜಗತಕಾಲಿನುತಂ ।

**ಅನ್ವಯಾರ್ಥ—**

**ವರಪೀವರಾಂಸಂ** = ಉತ್ತಮವಾದ ಪುಷ್ಟವಾದ ಹೆಗಲುಳ್ಳ

**ಅಧಿರಾಜತ್, ಉರಃ ಮಣಿಮಂಟಪಾಗ್ರ್ಯ, ವಿಲಸತ್, ಕಮಲಂ** = ಹೆಚ್ಚಾಗಿ ಪ್ರಕಾಶಿಸುವ ಎದೆಯೆಂಬ, ರತ್ನಖಚಿತವಾದ, ಶ್ರೇಷ್ಠವಾದ ಮಂಟಪದಲ್ಲಿ, ಪ್ರಕಾಶಿಸುವ, ಲಕ್ಷ್ಮೀ ದೇವಿಯುಳ್ಳ

**ಸಜಗದ್ದ್ವಿಸಪ್ತಕತನೂದರಕಂ** = ಹದಿನಾಲ್ಕು ಲೋಕಗಳಿಂದ ಸಹಿತವಾದ ಸಣ್ಣದಾದ ಹೊಟ್ಟೆಯುಳ್ಳ

**ಶುಭನಾಭಿಕಂಜಗತಕಾಲಿನುತಂ** = ಮಂಗಳಕರವಾದ ಹೊಕ್ಕಳಲ್ಲಿರುವ ಕಮಲದಲ್ಲಿರುವ ಬ್ರಹ್ಮದೇವರೆಂಬ ದುಂಬಿಯಿಂದ ಸ್ತೋತ್ರ ಮಾಡಲ್ಪಟ್ಟ (ಸುಂದರವಾದ ಶರೀರವನ್ನು ಮುಕ್ತರ ಸ್ವರೂಪಲೋಚನಕ್ಕೆ ಗೋಚರಿಸುವಂತೆ ಮಾಡುತ್ತಾನೆ.)

**ತಾತ್ಪರ್ಯ—** ಶ್ರೀಹರಿಯು ಉತ್ತಮವಾದ ಪುಷ್ಟವಾದ ಹೆಗಲುಗಳಿಂದ ಕೂಡಿದ್ದಾನೆ. ಅವನ ಅತ್ಯಂತ ಪ್ರಕಾಶ-ಮಾನವಾದ ಎದೆಯೆಂಬ ಶ್ರೇಷ್ಠವಾದ ರತ್ನಮಂಟಪದಲ್ಲಿ ಲಕ್ಷ್ಮೀದೇವಿಯು ವಿರಾಜಿಸುತ್ತಿದ್ದಾಳೆ. ಅವನ ಉದರವು ಬಹಳ ಸೂಕ್ಷ್ಮವಾದರೂ ಅಖಿಲಾಂಡಕೋಟಿ ಬ್ರಹ್ಮಾಂಡಗಳನ್ನು, ಹದಿನಾಲ್ಕು ಲೋಕಗಳನ್ನು ಒಳಗೊಂಡಿರುವುದು. ಅವನ ಮಂಗಳಕರವಾದ ಹೊಕ್ಕಳಿನಲ್ಲಿ ಅದ್ಭುತವಾದ ಕಮಲವು ಉದ್ಭವಿಸಿರುವುದು. ರಾರಾಜಿಸುತ್ತಿರುವ ಆ ಕಮಲದಲ್ಲಿ ಬ್ರಹ್ಮನು ದುಂಬಿಯಂತೆ ಅನಂತವೇದಗಳಿಂದ ಶ್ರೀಹರಿಯನ್ನು ಸ್ತೋತ್ರ ಮಾಡುತ್ತಿರುವವನು. ಇಂತಹ ದಿವ್ಯಸುಂದರಸ್ವರೂಪಾತ್ಮಕ ಶರೀರವನ್ನು ಶ್ರೀಹರಿಯು ವೈಕುಂಠಲೋಕದಲ್ಲಿ ತನ್ನ ಆತ್ಮ ಸಮಾನರಾದ ಮುಕ್ತ ಜೀವರಿಗೆ ತೋರಿಸುವನು. ಇದರಿಂದ ಶೇಷಶಯನನಾದ ಪದ್ಮನಾಭನ ರೂಪವನ್ನು ಸೂಚಿಸಿದ್ದಾರೆ.

**ವಿಗ್ರಹ—**

**ವರಪೀವರಾಂಸಂ—** ವರೌ ಪೀವರೌ ಅಂಸೌ ಯಸ್ಯ ತತ್ ವರಪೀವರಾಂಸಂ (ವಪುಃ, ತತ್) ।

**ಅಧಿರಾಜದುರೋಮಣಿಮಂಟಪಾಗ್ರ್ಯವಿಲಸತ್ಕಮಲಂ—** ಅದಿಕಂ ರಾಜತ್ ಅದಿರಾಜತ್, ಅಧಿರಾಜಚ್ಚ ತತ್ ಉರಶ್ಚ ಅಧಿರಾಜದುರಃ, ಮಂಟಪೇಷು ಅಗ್ರ್ಯಂ ಮಂಟಪಾಗ್ರ್ಯಂ, ಮಣಿವಿರಚಿತಂ ಚ (ಮಣಿಮಯಂ) ತತ್ ಮಂಟಪಾಗ್ರ್ಯಂ ಚ ಮಣಿಮಂಟಪಾಗ್ರ್ಯಂ, ಅಧಿರಾಜದುರ ಏವ ಮಣಿಮಂಟ-ಪಾಗ್ರ್ಯಂ ಅಧಿರಾಜದುರೋಮಣಿಮಂಟಪಾಗ್ರ್ಯಂ, ಅಧಿರಾಜದುರೋಮಣಿಮಂಟಪಾಗ್ರ್ಯೇ ವಿಲಸಂತಿ ಕಮಲಾ ಯಸ್ಯ ತತ್ ಅಧಿರಾಜದುರೋಮಣಿಮಂಟಪಾಗ್ರ್ಯವಿಲಸತ್ಕಮಲಂ (ವಪುಃ, ತತ್) ।

**ಸಜಗದ್ದ್ವಿಸಪ್ತಕತನೂದರಕಂ—** ಸಪ್ತಾನಾಂ ಸಮೂಹಃ ಸಪ್ತಕಂ, ದ್ವಿರಾವೃತ್ತಂ ಚ ತತ್ ಸಪ್ತಕಂ ಚ ದ್ವಿಸಪ್ತಕಂ, ಜಗತಾಂ ದ್ವಿಸಪ್ತಕಂ ಜಗದ್ದ್ವಿಸಪ್ತಕಂ, ಜಗದ್ದ್ವಿಸಪ್ತಕೇನ ಸಹಿತಂ ಸಜಗದ್ದ್ವಿಸಪ್ತಕಂ, ತನು ಚ ತತ್ ಉದರಂ ಚ ತನೂದರಂ, ಸಜಗದ್ದ್ವಿಸಪ್ತಕಂ ತನೂದರಂ ಯಸ್ಯ ತತ್ ಸಜಗದ್-ದ್ವಿಸಪ್ತಕತನೂದರಕಂ ।

**ಶುಭನಾಭಿಕಂಜಗತಕಾಲಿನುತಂ—** ನಾಭಿರೇವ ಕಂಜಂ ನಾಭಿಕಂಜಂ, ಶುಭಂ ಚ ತತ್ ನಾಭಿಕಂಜಂ ಚ ಶುಭನಾಭಿಕಂಜಂ, ಶುಭನಾಭಿಕಂಜೇ ಗತಃ ಶುಭನಾಭಿಕಂಜಗತಃ, ಶುಭನಾಭಿಕಂಜಗತಶ್ಚಾಸೌ ಕಶ್ಚ ಸುಭನಾಭಿಕಂಜಗತಕಃ, ಶುಭನಾಭಿಕಂಜಗತಕಃ ಏವ ಅಲಿಃ ಶುಭನಾಭಿಕಂಜಗತಕಾಲಿಃ, ತೇನ ಶುಭನಾಭಿಕಂಜಗತಕಾಲಿನುತಂ (ವಪುಃ, ತತ್) ।

**ಕೋಶ—** ಪೀವರ = ಪುಷ್ಟ "ಪೀನಪೀವ್ನೀ ತು ಸ್ಥೂಲಪೀವರೇ," (ಪೀನೇ ತು ಸ್ಥೂಲಪೀವರೌ) ಅಮರ. ಅಂಸ = ಹೆಗಲು, "ಸ್ಕಂಧೋ ಭುಜಶಿರೋಽಂಸೋಽಸ್ತ್ರೀ" ಅಮರ. ಉರಃ = ಎದೆ, "ಉರೋ ವತ್ಸಂ ಚ ವಕ್ಷಸ್ಚ" ಅಮರ. ಅಲಿ - ದುಂಬಿ, "ಷಟ್‌ಪದಭ್ರಮರಾಲಯಃ" ಅಮರ.

★ ★ ★

**ಅತಿಕಾಂತಕಾಂಚಿಪದಕಾಂತಿ(ಂಚಿ)ಮಿಲತ್ತಪನೀಯಭಂಗರುಚಿಪಿಂಗಪಟಮ್ ।**
**ವರಹಸ್ತಿಹಸ್ತಸದೃಶೋರುಯುಗಂ ಕ್ರಮವೃತ್ತಚಾರುತರಜಂಘಮುತ ॥ 70 ॥**

**ಪದಚ್ಛೇದ—** ಅತಿಕಾಂತಕಾಂಚಿಪದಕಾಂತಿಮಿಲತ್ತಪನೀಯಭಂಗರುಚಿಪಿಂಗಪಟಂ, ವರಹಸ್ತಿಹಸ್ತಸದೃಶೋರು-ಯುಗಂ, ಕ್ರಮವೃತ್ತಚಾರುತರಜಂಘಂ, ಉತ ।

**ಅನ್ವಯ—** ಅತಿಕಾಂತಕಾಂಚಿಪದಕಾಂತಿಮಿಲತ್ತಪನೀಯಭಂಗರುಚಿಪಿಂಗಪಟಂ, ವರಹಸ್ತಿಹಸ್ತಸದೃಶೋರು-ಯುಗಂ, ಕ್ರವೃತ್ತಚಾರುತರಜಂಘಂ, ಉತ । (ವಪುಃ ಇಂದಿರಾಪತಿಃ ಪ್ರಕಟಯತಿ)

**ಅನ್ವಯಾರ್ಥ—**

**ಅತಿಕಾಂತಕಾಂಚಿಪದಕಾಂತಿಮಿಲತ್‌ತಪನೀಯಭಂಗರುಚಿಪಿಂಗಪಟಂ** = ಅತ್ಯಂತ ಮನೋಹರವಾದ ಡಾಬಿನ ಸ್ಥಳವಾದ ಸೊಂಟದ ಪ್ರಭೆಯಿಂದ ಸೇರಿಕೊಂಡಿರುವ ಚಿನ್ನದ ತುಂಡಿನ ಕಾಂತಿಯಂತೆ ಕಾಂತಿಯುಳ್ಳ ಹಳದಿ ವಸ್ತ್ರವುಳ್ಳ

**ವರಹಸ್ತಿಹಸ್ತಸದೃಶೋರುಯುಗಂ** = ಉತ್ತಮವಾದ ಆನೆಯ ಸೊಂಡಿಲಿಗೆ ಸಮಾನವಾದ ಎರಡು ತೊಡೆಗಳುಳ್ಳ ಮತ್ತು

**ಕ್ರಮವೃತ್ತಚಾರುತರಜಂಘಂ** = ಕ್ರಮವೃತ್ತ ಕ್ರಮದಿಂದ ಗುಂಡಾದ

**ಚಾರುತರ** = ಅತ್ಯಂತ ಮನೋಹರವಾದ

**ಜಾಂಘಂ** = ಮೊಣಕಾಲುಗಳುಳ್ಳ (ಶರೀರವನ್ನು ಶ್ರೀಹರಿಯು ಮುಕ್ತಭಕ್ತರಿಗೆ ಗೋಚರಿಸುವಂತೆ ಮಾಡುತ್ತಾನೆ).

**ತಾತ್ಪರ್ಯ—** ಶ್ರೀಹರಿಯು ದಿವ್ಯವಾದ ಬಂಗಾರದ ತಗಡಿನಂತೆ ಹೊಳೆಯುವ ಪೀತಾಂಬರವನ್ನುಟ್ಟಿರುತ್ತಾನೆ. ಆ ಪೀತಾಂಬರದ ಮೇಲೆ ಧರಿಸಿರುವ ಅತ್ಯಂತ ಮನೋಹರವಾದ ಸೊಂಟದ ಡಾಬಿನ ಕಾಂತಿಯಿಂದ ಕೂಡಿ ಪೀತಾಂಬರವು ಮತ್ತೂ ಹೆಚ್ಚಿನ ಕಾಂತಿಯಿಂದ ಪ್ರಕಾಶಿಸುತ್ತಿರುವುದು. ಶ್ರೀಹರಿಯ ಎರಡು ತೊಡೆಗಳು ಶ್ರೇಷ್ಠವಾದ ಆನೆಯ ಸೊಂಡಿಲಿನಂತೆ ಇರುವುವು. ಕ್ರಮವಾಗಿ ಮೇಲಿನಿಂದ ಕೆಳಗೆ ಗುಂಡಗಾಗಿ ಸಣ್ಣಗಾಗುತ್ತಿರುವ ಎರಡು ಮೊಣಕಾಲುಗಳಿಂದ ಶ್ರೀಹರಿಯು ಅತಿಶಯ ಮನೋಹರನಾಗಿ ಶೋಭಿಸುತ್ತಿರುವನು. ಇಂತಹ ಸೌಂದರ್ಯಖನಿಯಾದ ರೂಪವನ್ನು ಮುಕ್ತ ವೈಕುಂಠಲೋಕದಲ್ಲಿ ಶ್ರೀಹರಿಯು ಭಕ್ತರಿಗೆ ತೋರಿಸುವನು.

**ವಿಗ್ರಹ—**

**ಅತಿಕಾಂತಕಾಂಚಿಪದಕಾಂತಿಮಿಲತ್ತಪನೀಯಭಂಗರುಚಿಪಿಂಗಪಟಂ—** ಕಾಂಚ್ಯಾಃ ಪದಂ ಕಾಂಚಿಪದಂ, ಅತಿಶಯೇನ ಕಾಂತಂ ಅತಿಕಾಂತಂ, ಅತಿಕಾಂತಂ ಚ ತತ್ ಕಾಂಚಿಪದಂ ಚ ಅತಿಕಾಂತಕಾಂಚಿಪದಂ, ಅತಿಕಾಂತಕಾಂಚಿಪದೇ (ವಿದ್ಯಮಾನಾ) ಕಾಂಚೀ (ಕಾಂತಿಃ) ಅತಿಕಾಂತಕಾಂಚಿಪದಕಾಂಚೀ (ಕಾಂತಿಃ) ಅತಿಕಾಂತಕಾಂತಿಪದಕಾಂಚ್ಯಾ ಮಿಲತ್, ಅತಿಕಾಂತಕಾಂಚಿಪದಮಿಲತ್, (ಅತಿಕಾಂತಕಾಂಚಿಪದ ಕಾಂತ್ಯಾಮಿಲನ್ ಅತಿಕಾಂತಮಿಲನ್), ತಪನೀಯಸ್ಯ ಭಂಗಃ ತಪನೀಯ ಭಂಗಃ, ಪಿಂಗಶ್ಚಾಸೌ ಪಟಶ್ಚ ಪಿಂಗಪಟಃ, ತಪನೀಯಭಂಗಸ್ಯ ರುಚಿರಿವ ರುಚಿಃ ಯಸ್ಯ ಸಃ ತಪನೀಯಭಂಗರುಚಿಃ, ತಪನೀಯ-ಭಂಗರುಚಿಃ ಪಿಂಗಪಟಃ ಯಸ್ಯ ತತ್ ತಪನೀಯಭಂಗರುಚಿಪಿಂಗಪಟಂ, (ಹೀಗೆ ಛಲಾರೀಯ ವ್ಯಾಖ್ಯಾನದಂತೆ, ಅತಿಕಾಂತಕಾಂಚಿಪದಕಾಂಚಿಮಿಲತ್ = ಅತ್ಯಂತ ಮನೋಹರವಾದ ಸೊಂಟದಲ್ಲಿ-ರುವ ಕಾಂಚಿಯಿಂದ ಕೂಡಿರುವ ಶರೀರ, ತಪನೀಯಭಂಗರುಚಿಪಿಂಗಪಟಂ = ಬಂಗಾರದ ತಗಡಿನ ಕಾಂತಿಯಂತೆ ಕಾಂತಿಯುಳ್ಳ, ಪೀತಾಂಬರವುಳ್ಳ ಶರೀರ, ಎಂದು ಎರಡು ವಿಶೇಷಣ ಮಾಡಿಕೊಳ್ಳ-ಬಹುದು) (ವಿಶ್ವಪತಿತೀರ್ಥೀಯ ವ್ಯಾಖ್ಯಾನದಂತೆ ತಪನೀಯಭಂಗರುಚಿಶ್ಚಾಸೌ ಪಿಂಗಪಟಶ್ಚ ತಪ-ನೀಯಭಂಗರುಚಿಪಿಂಗಪಟಃ ಅತಿಕಾಂತಕಾಂಚಿಪದಕಾಂತಿಮಿಲತ್ ತಪನೀಯಭಂಗರುಚಿಪಿಂಗಪಟಃ ಯಸ್ಯ ತತ್, ತಾದೃಶಂ ವಪುಃ - ಅತ್ಯಂತ ಸುಂದರವಾದ ಡಾಬಿನ ಸ್ಥಾನದ ಅರ್ಥಾತ್ ಅಲ್ಲಿರುವ ಡಾಬಿನ ಕಾಂತಿಯಿಂದ ಕೂಡಿರುವ ಚಿನ್ನದ ಖಂಡದಂತೆ ಕಾಂತಿಯುಳ್ಳ ಪೀತಾಂಬರದಿಂದ ಕೂಡಿರುವ ಎಂದು ಒಂದೇ ವಿಶೇಷಣವನ್ನಾಗಿ ಮಾಡಿಕೊಳ್ಳಬಹುದು).

**ವರಹಸ್ತಿಹಸ್ತಸದೃಶೋರುಯುಗಂ—** ವರಶ್ಚಾಸೌ ಹಸ್ತೀ ಚ ವರಹಸ್ತೀ ವರಹಸ್ತಿನಃ ಹಸ್ತಃ ವರಹಸ್ತಿಹಸ್ತಃ, ವರಹಸ್ತಿಹಸ್ತೇನ ಸದೃಶಂ ವರಹಸ್ತಿಹಸ್ತಸದೃಶಂ, ಊರ್ವೋಃ ಯುಗಂ ಊರುಯುಗಂ, ವರಹಸ್ತಿಹಸ್ತ-ಸದೃಶಂ ಊರುಯುಗಂ ಯಸ್ಯ ತತ್, (ತಾದೃಶಂ ವಪುಃ, ತತ್) ।

**ಕ್ರಮವೃತ್ತಚಾರುತರಜಂಘಂ—** ಅತಿಶಯೇನ ಚಾರುಣೀ ಚಾರುತರೇ, ಚಾರುತರೇ ಚ ತೇ ಜಂಘೇ ಚ ಚಾರುತರಜಂಘೇ, ಕ್ರಮೇಣ ವೃತ್ತೇ ಕ್ರಮವೃತ್ತೇ, ಕ್ರಮವೃತ್ತೇ ಚಾರುತರಜಂಘೇ ಯಸ್ಯ ತತ್ (ತಾದೃಶಂ ವಪುಃ, ತತ್) ।

**ಕೋಶ—** ತಪನೀಯಂ = ಬಂಗಾರ, ''ಹಿರಣ್ಯಂ ಹೇಮಹಾಟಕಂ, ತಪನೀಯಂ ಶಾತಕುಂಭಂ'' ಇತ್ಯಮರಃ ಹಸ್ತೀ = ಆನೆ, ''ದಂತೀ ದಂತಾವಲೋ ಹಸ್ತೀ'' ಅಮರ. ಊರು = ತೊಡೆ, ''ಸಕ್ಥಿ ಕ್ಲೀಬೇ ಪುಮಾನೂರುಃ'' ಅಮರ.

★ ★ ★

## ವರನೂಪುರಂ ಪರಮರುಕ್‌ಪ್ರಪದಂ ನವವಿದ್ರುಮದ್ಯುತಿನಖಾಂಗುಲಿಮತ್ ।
## ಅರಿವಾರಿಜಧ್ವಜಕಲಂಕಲಸತ್‌ಪದಪಾಂಸುಪಾವಿತಜಗತ್‌ತ್ರಿತಯಮ್ ॥ 71 ॥

**ಪದಚ್ಛೇದ—** ವರನೂಪುರಂ ಪರಮರುಕ್‌ಪ್ರಪದಂ ನವವಿದ್ರುಮದ್ಯುತಿನಖಾಂಗುಲಿ (ನಖಾಂವಲಿ)ಮತ್, ಅರಿ-ವಾರಿಜಧ್ವಜಕಲಂಕಲಸತ್‌ಪದಪಾಂಸುಪಾವಿತಜಗತ್‌ತ್ರಿತಯಂ (ವಪುಃ ಇಂದಿರಾಪತಿಃ ಪ್ರಕಟಯತಿ) ।

**ಅನ್ವಯ—** ವರನೂಪುರಂ ಪರಮರುಕ್‌ಪ್ರಪದಂ ನವವಿದ್ರುಮದ್ಯುತಿನಖಾಂಗುಲಿ (ನಖಾಂವಲಿ)ಮತ್, ಅರಿ-ವಾರಿಜಧ್ವಜಕಲಂಕಲಸತ್‌ಪದಪಾಂಸುಪಾವಿತಜಗತ್‌ತ್ರಿತಯಂ (ವಪುಃ ಇಂದಿರಾಪತಿಃ ಪ್ರಕಟಯತಿ) ।

**ಅನ್ವಯಾರ್ಥ—**

**ವರನೂಪುರಂ** = ಉತ್ತಮವಾದ ಕಾಲ್ಗೆಜ್ಜೆಯುಳ್ಳ

**ಪರಮರುಕ್‌ಪ್ರಪದಂ** = ಪರಮಶ್ರೇಷ್ಠವಾದ ಕಾಂತಿಯುಳ್ಳ ಪಾದದ ತುದಿಯುಳ್ಳ

**ನವವಿದ್ರುಮದ್ಯುತಿನಖಾಂಗುಲಿಮತ್**= ಹೊಸದಾದ ಹವಳದ ಕಾಂತಿಯಂತೆ ಕಾಂತಿಯುಳ್ಳ ಉಗುರುಗಳುಳ್ಳ ಬೆರಳುಗಳುಳ್ಳ

(**ನಖಾವಲಿಮತ್** = ಉಗುರುಗಳ ಸಾಲುಳ್ಳ)

**ಅರಿವಾರಿಜಧ್ವಜಕಲಂಕಲಸತ್‌ಪದಪಾಂಸುಪಾವಿತಜಗತ್‌ತ್ರಿತಯಂ** = ಚಕ್ರವು, ತಾವರೆಯು, (ಶಂಖವು) ಬಾವುಟವು ಇವುಗಳ ಚಿಹ್ನೆಯಿಂದ ಪ್ರಕಾಶಮಾನವಾದ ಕಾಲುಗಳ ಧೂಳಿಯಿಂದ ಶುದ್ಧಗೊಳಿಸಲ್ಪಟ್ಟ ಮೂರುಲೋಕಗಳುಳ್ಳ (ಶರೀರವನ್ನು ಲಕ್ಷ್ಮೀರಮಣನು ಪ್ರಕಟಗೊಳಿಸುತ್ತಾನೆ).

**ತಾತ್ಪರ್ಯ—** ಶ್ರೀಮನ್ಮಹಾವಿಷ್ಣುವು ಉತ್ತಮವಾದ ಕಾಲ್ಗೆಜ್ಜೆಗಳನ್ನು ಧರಿಸಿರುತ್ತಾನೆ. ಅವನ ಕಾಲುಗಳ ತುದಿಯು ಶ್ರೇಷ್ಠವಾದ ಕಾಂತಿಯಿಂದ ಶೋಭಿಸುತ್ತಿರುತ್ತದೆ. ಕಾಲಿನ ಬೆರಳುಗಳು ಹೊಸದಾದ ಹವಳದಂತಹ ಕಾಂತಿಯಿಂದ ಪ್ರಕಾಶಮಾನವಾಗಿವೆ. ಕಾಲುಗಳ ತಳಭಾಗದಲ್ಲಿ ಚಕ್ರ, ಶಂಖ, ಪದ್ಮ, ಧ್ವಜ ಚಿಹ್ನೆಗಳು ವಿರಾಜಿಸುತ್ತಾ ಇರುತ್ತವೆ. ಅಂತಹ ಶ್ರೇಷ್ಠವಾದ ಕಾಲುಗಳಿಂದ ಮೂರುಲೋಕದ ಭಕ್ತರಿರುವಲ್ಲಿ ಸಂಚಾರ ಮಾಡಿ ಪರಮಾತ್ಮನು ಆಪಾದಧೂಳಿಗಳಿಂದ ಭಕ್ತರನ್ನು ಪವಿತ್ರಗೊಳಿಸಿರುವನು. ಇಂತಹ ಸೌಂದರ್ಯ ಮತ್ತು ಸಲ್ಲಕ್ಷಣಗಳಿಂದ ಕೂಡಿದ ಶ್ರೇಷ್ಠವಾದ ದೇಹವನ್ನು ಶ್ರೀಹರಿಯು ಮುಕ್ತರ ಕಣ್ಣಿಗೆ ಗೋಚರಿಸುವಂತೆ ಮಾಡುತ್ತಾನೆ.

**ವಿಗ್ರಹ—**

**ವರನೂಪುರಂ—** ವರೇ ನೂಪುರೇ ಯಸ್ಯ ತತ್ ವರನೂಪುರಂ (ವಪುಃ ತತ್) ।

**ಪರಮರುಕ್‌ಪ್ರಪದಂ**— ಪರಮಾ ರುಕ್ ಯಯೋಸ್ತೇ ಪರಮರುಚೀ, ಪರಮರುಚೀ ಪ್ರಪದೇ ಯಸ್ಯ ತತ್ ಪರಮರುಕ್‌ಪ್ರಪದಂ (ತತ್ ವಪುಃ) ।

**ನವವಿದ್ರುಮದ್ಯುತಿನಖಾಂಗುಲಿಮತ್**— ನವಶ್ಚ ತೇ ವಿದ್ರುಮಾಶ್ಚ ನವವಿದ್ರುಮಾಃ, ನವವಿದ್ರುಮಾಣಾಂ ದ್ಯುತಿರಿವ ದ್ಯುತಿಃ ಯೇಷಾಂ ತೇ ನವವಿದ್ರುಮದ್ಯುತಯಃ, ನವವಿದ್ರುಮದ್ಯುತಯಃ ನಖಾಃ ಯಾಸಾಂ ತಾಃ ನವವಿದ್ರುಮದ್ಯುತಿನಖಾಃ, ನವವಿದ್ರುಮದ್ಯುತಿನಖಾಶ್ಚ ತಾಃ ಅಂಗುಲಯಶ್ಚ ನವವಿದ್ರುಮದ್ಯುತಿಖಾಂಗುಲಯಃ, ತಾಃ ಅಸ್ಯ ಸಂತೀತಿ ನವವಿದ್ರುಮದ್ಯುತಿನಖಾಂಗುಲಿಮತ್ (ವಪುಃ ತತ್) । (ನವವಿದ್ರುಮದ್ಯುತಿನಖಾನಾಂ ಆವಲಿಃ ನವವಿದ್ರುಮ-ದ್ಯುತಿನಖಾವಲಿಃ, ಸಾ ಅಸ್ಯ ಅಸ್ತೀತಿ ನವವಿದ್ರುಮದ್ಯುತಿನಖಾಂಗುಲಿಮತ್) ।

**ಅರಿವಾರಿಜಧ್ವಜಕಲಂಕಲಸತ್‌ಪದಪಾಂಸುಪಾವಿತಜಗತ್‌ತ್ರಿತಯಂ**— ಅರಿಶ್ಚ ವಾರಿಜಂ ಚ ಧ್ವಜಶ್ಚ ಅರಿ-ವಾರಿಜಧ್ವಜಾಃ, ಅರಿವಾರಿಜಧ್ವಜಾನಾಂ ಕಲಂಕಾಃ ಅರಿವಾರಿಜಧ್ವಜಕಲಂಕಾಃ, ಅರಿವಾರಿಜಧ್ವಜಕಲಂಕೈಃ ಲಸಂತೀ ಅರಿವಾರಿಜಧ್ವಜಕಲಂಕಲಸಂತೀ, ಅರಿವಾರಿಜಧ್ವಜಕಲಂಕಲಸಂತೀ ಚ ತೇ ಪದೇ ಚ ಅರಿವಾರಿಜಧ್ವಜಲಸತ್ಪದೇ, ಅರಿವಾರಿಜಧ್ವಜಲಸತ್ಪದಯೋಃ ಪಾಂಸವಃ ಅರಿವಾರಿಜಧ್ವಜಲಸತ್ಪದ-ಪಾಂಸವಃ, ತ್ರಯಃ ಅವಯವಾಃ ಅಸ್ಯೇತಿ ತ್ರಿತಯಂ, ಜಗತಾಂ ತ್ರಿತಯಂ ಜಗತ್ರಿತಯಂ, ಅರಿವಾರಿಜಧ್ವಜಲಸತ್ಪದಪಾಂಸುಭಿಃ ಪಾವಿತಂ ಜಗತ್ ತ್ರಿತಯಂ ಯೇನ ತತ್ ಅರಿ ತ್ರಿತಯಂ । (ವಪುಃ, ತತ್)

**ಕೋಶ**— ನೂಪುರ = ಕಾಲ್ಗೆಜ್ಜೆ, ''ಮಂಜೀರೋ ನೂಪುರೋಽಸ್ತ್ರಿಯಾಂ'' ಅಮರ, ಕಲಂಕ = ಗುರುತು, ಚಿಹ್ನೆ - ''ಕಲಂಕಾಂಕೌ ಲಾಂಛನಂ ಚ, ಕಲಂಕೋಽಂಕಾಪವಾದಯೋಃ'' ಅಮರ, ಪಾಂಸು = ಧೂಳು, ''ರೇಣುರ್ದ್ವಯೋಃ ಸ್ತ್ರಿಯಾಂ ಧೂಲಿಃ ಪಾಂಸುರ್ನಾ ನ ದ್ವಯೋರಜಃ'' ಅಮರ.

★ ★ ★

**ನಿಖಿಲಾಗಮಾವಗಮಿತೈರಮಿತೈಃ ಸುಖಸಂವಿದಾದಿಭಿರನಂತಗುಣೈಃ ।**
**ಪ್ರಪದಾದಿಕಾಂತಸಕಲಾವಯವಾಕೃತಿಭಿಃ ಸದೈಕ್ಯವದದೋಷಲವಮ್ ॥ 72 ॥**

**ಪದಚ್ಛೇದ**— ನಿಖಿಲಾಗಮಾವಗಮಿತೈಃ ಅಮಿತೈಃ ಸುಖಸಂವಿದಾದಿಭಿಃ ಅನಂತಗುಣೈಃ ಪ್ರಪದಾದಿಕಾಂತಸಕಲಾ-ವಯವಾಕೃತಿಭಿಃ, ಸದಾ, ಐಕ್ಯವತ್, ಅದೋಷಲವಮ್ (ವಪುಃ ಇಂದಿರಾಪತಿಃ ಪ್ರಕಟಯತಿ) ।

**ಅನ್ವಯ**— ನಿಖಿಲಾಗಮಾವಗಮಿತೈಃ ಅಮಿತೈಃ ಸುಖಸಂವಿದಾದಿಭಿಃ ಅನಂತಗುಣೈಃ ಪ್ರಪದಾದಿಕಾಂತಸಕಲಾ-ವಯವಾಕೃತಿಭಿಃ, ಸದಾ, ಐಕ್ಯವತ್, ಅದೋಷಲವಮ್ (ವಪುಃ ಇಂದಿರಾಪತಿಃ ಪ್ರಕಟಯತಿ) ।

**ಅನ್ವಯಾರ್ಥ**—

**ನಿಖಿಲಾಗಮಾವಗಮಿತೈಃ** = ಎಲ್ಲಾ ವೇದಗಳಿಂದ ತಿಳಿಸಲ್ಪಟ್ಟ

**ಅಮಿತೈಃ** = ಮಿತಿಯಿಲ್ಲದ

**ಸುಖ** = ಆನಂದವು

**ಸಂವಿತ್** = ಜ್ಞಾನವು, ಇವುಗಳೇ

**ಆದಿಭಿಃ** = ಮೊದಲಾಗಿ ಉಳ್ಳ

**ಅನಂತಗುಣೈಃ** = ಸಂಖ್ಯೆಯಿಲ್ಲದ ಗುಣಗಳಿಂದ

**ಪ್ರಪದಾದಿಕಾಂತಸಕಲಾವಯವಾಕೃತಿಭಿಃ** = ಕಾಲುಗಳ ತುದಿಯೇ ಮೊದಲಾಗಿ ಉಳ್ಳ ತಲೆಯು ಕೊನೆಯಾಗುಳ್ಳ ಎಲ್ಲಾ ಅಂಗಗಳು ಸ್ವರೂಪಗಳು ಇವುಗಳಿಂದ

**ಸದಾ** = ಯಾವಾಗಲೂ

**ಐಕ್ಯವತ್** = ಅಭೇದವುಳ್ಳ

**ಅದೋಷಲವಂ** = ದೋಷಲೇಶವಿಲ್ಲದ (ಶರೀರವನ್ನು ಶ್ರೀಹರಿಯು ವ್ಯಕ್ತಪಡಿಸುತ್ತಾನೆ).

**ತಾತ್ಪರ್ಯ—** ಶ್ರೀಮನ್ನಾರಾಯಣನ ಶರೀರವು ಅನಂತಾನಂತವೇದಪ್ರತಿಪಾದಿತವಾದ ಅನಂತಾನಂತವಾದ ಜ್ಞಾನಾನಂದಾದಿಗುಣರೂಪವೇ ಆಗಿರುತ್ತದೆ. ಶ್ರೀಹರಿಯಲ್ಲಿರುವ ಅನಂತಗುಣಗಳೂ ಶ್ರೀಹರಿಯೂ ಒಂದೇ ಆಗಿರುತ್ತಾರೆ. ಪರಮಾತ್ಮನ ಗುಣಗಳಿಗೂ ಅವನಿಗೂ ಯಾವ ಭೇದವೂ ಇಲ್ಲ. ಪರಮಾತ್ಮನ ಪಾದದ ತುದಿಯಿಂದ ಆರಂಭಿಸಿ ತಲೆಯ ತುದಿಯವರೆಗೂ (ನಖಾದಿಶಿಖಾಂತವೂ) ಇರುವ ಕೈಕಾಲು ಇತ್ಯಾದಿ ಸಕಲಾವಯವಗಳಿಗೂ ಶರೀರಕ್ಕೂ ಯಾವ ಭೇದವೂ ಇಲ್ಲ. ಪರಮಾತ್ಮನ ಒಂದೊಂದು ಅವಯವದಲ್ಲಿಯೂ ಎಲ್ಲಾ ಅವಯವಗಳ ಅಭೇದವಿದೆ, ಎಲ್ಲಾ ಅವಯವಗಳ ಶಕ್ತಿಯಿದೆ. ಪರಮಾತ್ಮನ ಈ ಅವಯವ ಅವಯವಿಗಳಲ್ಲಿ ಸ್ವಲ್ಪವೂ ದೋಷವಿಲ್ಲ. ಕೇವಲ ಅಪ್ರಾಕೃತವಾದ ಜ್ಞಾನಾನಂದಾತ್ಮಕವಾದುದು. ಇಂತಹ ದೇಹವನ್ನು ಶ್ರೀಹರಿಯು ಮುಕ್ತರ ಕಣ್ಣುಗಳಿಗೆ ಗೋಚರಿಸುವಂತೆ ಮಾಡುತ್ತಾನೆ.

**ವಿಗ್ರಹ—**

**ನಿಖಿಲಾಗಮಾವಗಮಿತೈಃ—** ನಿಖಿಲಾಶ್ಚ ತೇ ಆಗಮಾಶ್ಚ ನಿಖಿಲಾಗಮಾಃ, ನಿಖಿಲಾಗಮೈಃ ಅವಗಮಿತಾಃ ನಿಖಿಲಾಗಮಾವಗಮಿತಾಃ, ತೈಃ ನಿಖಿಲಾಗಮಾವಗಮಿತೈಃ ।

**ಸುಖಸಂವಿದಾದಿಭಿಃ—** ಸಂಖಂ ಚ ಸಂವಿಚ್ಚ ಸುಖಸಂವಿದೌ, ತೇ ಆದೀ ಯೇಷಾಂ ತೇ ಸುಖಸಂವಿದಾಯಃ, ತೈಃ ಸುಖಸಂವಿದಾದಿಭಿಃ ।

**ಅನಂತಗುಣ್ಯೈಃ—** ನ ವಿದ್ಯತೇ ಅಂತಃ ಯೇಷಾಂ ತೇ ಅನಂತಾಃ, ಅನಂತಾಶ್ಚ ತೇ ಗುಣಾಶ್ಚ ಅನಂತಗುಣಾಃ, ತೈಃ ಅನಂತಗುಣ್ಯೈಃ ।

**ಪ್ರಪದಾದಿಕಾಂತಸಕಲಾವಯವಾಕೃತಿಭಿಃ—** ಪ್ರಪದಂ ಆದಿ ಯೇಷಾಂ ತೇ ಪ್ರಪದಾದಯಃ, ಕಂ ಅಂತಃ ಯೇಷಾಂ ತೇ ಕಾಂತಾಃ, ಪ್ರಪದಾದಯಶ್ಚ ತೇ ಕಾಂತಾಶ್ಚ ಪ್ರಪದಾದಿಕಾಂತಾಃ, ಸಕಲಾಶ್ಚ ತೇ ಅವಯವಾಶ್ಚ ಸಕಲಾವಯವಾಃ, ಪ್ರಪದಾದಿಕಾಂತಾಶ್ಚ ತೇ ಸಕಲಾವಯವಾಶ್ಚ ಪ್ರಪದಾದಿಕಾಂತಸಕಲಾವಯವಾಃ, (ಪ್ರಪದಂ ಆದಿ ಯೇಷಾಂ ತೇ ಪ್ರಪದಾದಯಃ, ಪ್ರಪದಾದಯಃ ಕಾಂತಸಕಲಾವಯವಾಶ್ಚ ತೈಃ ಇತಿ ವಾ) ಪ್ರಪದಾದಿಕಾಂತಸಕಲಾಯವಾಶ್ಚ ಆಕೃತಯಶ್ಚ ಪ್ರಪದಾದಿಕಾಂತಸಕಲಾವಯವಾಕೃತಯಃ ತಾಭಿಃ ಪ್ರಪದಾದಿಕಾಂತಸಕಲಾವಯವಾಕೃತಿಭಿಃ ।

**ಐಕ್ಯವತ್—** ಏಕೇಷಾಂ ಭಾವಃ ಐಕ್ಯಂ, ಐಕ್ಯಂ ಅಸ್ಯ ಅಸ್ತೀತಿ ಐಕ್ಯವತ್ (ತತ್ = ಅದನ್ನು) ।

**ಅದೋಷಲವಮ್—** ದೋಷಾಣಾಂ ಲವಃ ದೋಷಲವಃ, ನ ವಿದ್ಯತೇ ದೋಷಲವಃ ಯಸ್ಯ ತತ್ ಅದೋಷಲವಂ (ತತ್) ।

**ಕೋಶ—** ಆಗಮ = ಶಾಸ್ತ್ರ, ''ಆಗಮಸ್ತ್ವಾಗತೇ ಶಾಸ್ತ್ರೇ'' (ಅಮರ), ಕ = ಶಿರಸ್ಸು, ''ಮಾರುತೇ ವೇಧಸಿ ಬ್ರಧ್ನೇ ಪುಂಸಿ ಕಃ ಕಂ ಶಿರೋಽಂಬುನೋಃ'' ಅಮರ. ಲವ = ಲೇಶ, ''ಲವಲೇಶಕಣಾಣವಃ'' ಅಮರ.

★ ★ ★

**ಅಧಿಕಾರಿಣಾಂ ಗುಣವಿಶೇಷವಶಾತ್ ದ್ವಿಪದಾದ್ಯನಂತಚರಣಾಂತತಯಾ ।**
**ಅತಿಭಾಸಿತಂ ಘನಗುಣಾಪಘನೈರಿತರೈಶ್ಚ ತತ್ತದುಚಿತೈ ರುಚಿರೈಃ ॥ 73 ॥**

**ಪದಚ್ಛೇದ—** ಅಧಿಕಾರಿಣಾಂ, ಗುಣವಿಶೇಷವಶಾತ್, ದ್ವಿಪದಾದ್ಯನಂತಚರಣಾಂತತಯಾ, ಅತಿಭಾಸಿತಂ, ಘನ-ಗುಣಾಪಘನೈಃ, ಇತರೈಃ, ಚ, ತತ್ತದುಚಿತೈಃ, ರುಚಿರೈಃ।

**ಅನ್ವಯ—** ಅಧಿಕಾರಿಣಾಂ, ಗುಣವಿಶೇಷವಶಾತ್, ದ್ವಿಪದಾದ್ಯನಂತಚರಣಾಂತತಯಾ ಚ ತತ್ತದುಚಿತೈಃ, ರುಚಿರೈಃ ಇತರೈಃ ಘನಗುಣಾಪಘನೈಃ ಅತಿಭಾಸಿತಂ (ಸುಂದರಂ ವಪುಃ ಪ್ರಕಟಯತಿ ನನು) ।

**ಅನ್ವಯಾರ್ಥ—**

**ಅಧಿಕಾರಿಣಾಂ** = ಭಗವಂತನ ಉಪಾಸನೆ ಮಾಡಲು ಅಧಿಕಾರವುಳ್ಳ ಚತುರ್ಮುಖ ಬ್ರಹ್ಮದೇವರು ಮೊದಲ್ಗೊಂಡು ಮನುಷ್ಯೋತ್ತಮರು ಕೊನೆಯಾಗುಳ್ಳ ಜೀವರುಗಳಿಗೆ,

**ಗುಣವಿಶೇಷವಶಾತ್** = ಜ್ಞಾನ, ಭಕ್ತಿ, ಮೊದಲಾದ ಗುಣಗಳ ತಾರತಮ್ಯದಿಂದ,

**ದ್ವಿಪದಾದ್ಯನಂತಚರಣಾಂತತಯಾ** = ಎರಡು ಕಾಲಿನ ರೂಪ ಮೊದಲಾಗಿ ಉಳ್ಳ ಅಸಂಖ್ಯ, ಕಾಲುಗಳೇ ಕೊನೆಯಾಗಿ ಉಳ್ಳತನದಿಂದ

**ಚ** = ಮತ್ತು,

**ತತ್ತದುಚಿತೈಃ** = ಆಯಾ ಜೀವಿಗಳಿಗೆ ಯೋಗ್ಯಗಳಾದ,

**ರುಚಿರೈಃ** = ಮನೋಹರವಾದ

**ಇತರೈಃ** = ಬೇರೆ

**ಘನಗುಣಾಪಘನೈಃ** = ಜ್ಞಾನ ಆನಂದಾದಿ ಅನಂತಗುಣ ಸ್ವರೂಪವಾದ ಅವಯವಗಳಿಂದಲೂ

**ಅತಿಭಾಸಿತಂ** = ಅತ್ಯಂತ ಪ್ರಕಾಶಗೊಳಿಸಲ್ಪಟ್ಟ (ಸುಂದರವಾದ ಶರೀರವನ್ನು ಶ್ರೀಹರಿಯು ಮುಕ್ತವೈಕುಂಠ-ಲೋಕದಲ್ಲಿ ಮುಕ್ತ ಚೇತನರಿಗೆ ಪ್ರಕಟಗೊಳಿಸುತಾನೆ).

**ತಾತ್ಪರ್ಯ—** ಪರಮಾತ್ಮನನ್ನು ಉಪಾಸನೆ ಮಾಡುವುದಕ್ಕೆ ಮನುಷ್ಯರನ್ನು ಮೊದಲ್ಗೊಂಡು ಚತುರ್ಮುಖ ಬ್ರಹ್ಮ ದೇವರ ಪರ್ಯಂತವಾದ ಅನಂತಾನಂತಜೀವರು ಅಧಿಕಾರಿಗಳಾಗಿರುತ್ತಾರೆ. ಅವರವರಲ್ಲಿರುವ ಜ್ಞಾನ, ಭಕ್ತಿ ಮುಂತಾದ ಗುಣಗಳು ಅವರವವ ಯೋಗ್ಯತಾನುಸಾರವಾಗಿ ಬೇರೆಬೇರೆಯಾಗಿರುತ್ತವೆ. ಆದುದರಿಂದ ಅವರಲ್ಲೆಲ್ಲಾ ತಾರತಮ್ಯ-ವಿರುತ್ತದೆ. ಇವರಲ್ಲಿ ಯಾರು ಎರಡು ಪಾದಗಳುಳ್ಳ ಭಗವಂತನ ರೂಪವನ್ನು ನೋಡಲು ಅಧಿಕಾರಿಗಳೋ ಅವರಿಗೆ ಅಂತಹ ರೂಪದ ಶರೀರವನ್ನೇ ಭಗವಂತನು ತೋರಿಸುವನು. ಹೀಗೆಯೇ ನಾಲ್ಕು, ಆರು ಇತ್ಯಾದಿಯಾದ ಪಾದಗಳು ಅವುಗಳಿಗೆ ತಕ್ಕಂತಹ ಇತರ ಅವಯವಗಳಿಂದ ಕೂಡಿದ ರೂಪಗಳನ್ನು ತೋರಿಸುವನು. ಅನಂತಪಾದಗಳುಳ್ಳ ರೂಪವನ್ನು ನೋಡುವ ಯೋಗ್ಯತೆಯುಳ್ಳ ಬ್ರಹ್ಮದೇವರು ಎಂಬ ಅಧಿಕಾರಿಗಳಿಗೆ ಅಂತಹ ರೂಪವನ್ನು ತೋರಿಸುವನು. ಈ ರೂಪಗಳೆಲ್ಲವೂ ಅತ್ಯಂತ ಮನೋಹರವಾಗಿರುತ್ತವೆ. ಆ ರೂಪಗಳೂ, ಅವುಗಳ ಕೈಕಾಲು ಮುಂತಾದ ಅವಯವಗಳೂ ಜ್ಞಾನ, ಆನಂದಾದಿ ಅನಂತ ಗುಣ ಸ್ವರೂಪಗಳೇ ಆಗಿರುತ್ತವೆ. ಇಂತಹ ಅತ್ಯಂತ ಪ್ರಕಾಶಮಾನವಾದ ಅಲೌಕಿಕಾದ್ಭುತ ರೂಪಗಳನ್ನು ಶ್ರೀಹರಿಯು ಮುಕ್ತ ವೈಕುಂಠಲೋಕದಲ್ಲಿ ಮುಕ್ತರಿಗೆ ಗೋಚರವಾಗುವಂತೆ ಮಾಡಿ ಅವರನ್ನು ಆನಂದ ಪಡಿಸುವನು.

**ಅಯಂ ಭಾವ—** ಯೇ ದ್ವಿಪಾದರೂಪದರ್ಶನಾಧಿಕಾರಿಣಃ ತಾನ್ ಪ್ರತಿ ದ್ವಿಪಾದತಯಾ, ತಥಾ ತದ್ರೂಪೋಚಿತೈಃ ಏಕಶೀರ್ಷದ್ವಿಹಸ್ತಾದ್ಯವಯವೈಶ್ಚ ಪ್ರತಿಭಾಸಿತಂ, ಏವಂ ಉತ್ತರೋತ್ತರಂ ಯೇ ಯೇ ಯಾವದ್ಯಾವತ್ಪಾದಯುಕ್ತರೂಪ

ದರ್ಶನಾಧಿಕಾರಿಣಃ ತಾನ್ ತಾನ್ ಪ್ರತಿ ತಾವತ್ತಾವತ್ ಪಾದೈಃ ತಾದೃಶರೂಪೋಚಿತಶಿರಃ ಪಾಣ್ಯಾದ್ಯವಯವೈಶ್ಚ ಪ್ರತಿಭಾಸಿತಂ, ಏವಂ ಅನಂತಚರಣರೂಪದರ್ಶನಾಧಿಕಾರಿಣಃ ಪ್ರತಿ ಅನಂತಚರಣೈಃ ಅನಂತಶಿರಃಪಾಣ್ಯಾದ್ಯವಯವೈಶ್ಚ ಪ್ರತೀಯಮಾನಂ (ರೂಪಂ ಪ್ರಕಟಯತಿ). ಇಲ್ಲಿಯ ಅಭಿಪ್ರಾಯ ಹೀಗಿದೆ-ಯಾರು ಎರಡು ಪಾದಗಳುಳ್ಳ ರೂಪವನ್ನು ನೋಡುವ ಅಧಿಕಾರ ವುಳ್ಳವರೋ, ಅವರಿಗೆ ಎರಡು ಪಾದಗಳುಳ್ಳ ರೂಪದಿಂದಲೂ, ಹಾಗೆಯೇ ಆಯಾ ರೂಪಕ್ಕೆ ಯೋಗ್ಯವಾದ ಒಂದು ತಲೆ, ಎರಡು ಕೈಗಳು ಮುಂತಾದ ಅವಯವಗಳಿಂದಲೂ ಪ್ರಕಟನಾಗುತ್ತಾನೆ. ಹೀಗೆಯೇ ಉತ್ತರೋತ್ತರದಲ್ಲಿ ಯಾರು ಯಾರು ಎಷ್ಟೆಷ್ಟು ಪಾದಗಳಿಂದ ಕೂಡಿದ ರೂಪಗಳನ್ನು ನೋಡುವ ಅಧಿಕಾರ-ವುಳ್ಳವರಾಗಿದ್ದಾರೋ ಅವರವರಿಗೆ ಅಷ್ಟಷ್ಟು ಪಾದಗಳಿಂದ ಕೂಡಿದ, ಆ ಪಾದಗಳುಳ್ಳ ರೂಪಗಳಿಗೆ ಯೋಗ್ಯವಾದ ತಲೆ ಕೈ ಮುಂತಾದ ಅವಯವಗಳಿಂದಲೂ ಕೂಡಿ ಪ್ರಕಟನಾಗುತ್ತಾನೆ. ಅನಂತಪಾದಗಳುಳ್ಳ ರೂಪವನ್ನು ನೋಡುವ ಅಧಿಕಾರವುಳ್ಳವರಿಗೆ ಅನಂತಶಿರಸ್ಸು, ಅನಂತ ಕೈಗಳು ಮುಂತಾದ ಅವಯವಗಳಿಂದ ಸಹಿತವಾದ ರೂಪವನ್ನು ಪ್ರಕಟಗೊಳಿಸುತ್ತಾನೆ.

**ವಿಗ್ರಹ—**

**ಅಧಿಕಾರಿಣಾಂ—** ಅಧಿಕಾರಃ ಏಷಾಂ ಅಸ್ತೀತಿ ಅಧಿಕಾರಿಣಃ, ತೇಷಾಂ ಅಧಿಕಾರಿಣಾಂ ।

**ಗುಣವಿಶೇಷವಶಾತ್—** ಗುಣೇಷು ವಿಶೇಷಃ ಗುಣವಿಶೇಷಃ, ಗುಣವಿಶೇಷಸ್ಯ ವಶಃ ಗುಣವಿಶೇಷವಶಃ, ತಸ್ಮಾತ್ ಗುಣವಿಶೇಷವಶಾತ್ ।

**ದ್ವಿಪದಾದ್ಯನಂತಚರಣಾಂತತಯಾ—** ದ್ವೇ ಪದೇ ಯಸ್ಯ ತತ್ ದ್ವಿಪದಂ, ದ್ವಿಪದಂ ಆದಿ ಯೇಷಾಂ ತಾನಿ ದ್ವಿಪದಾದೀನಿ, ಅನಂತಂ ಚ ತತ್ ಚರಣಂ ಚ ಅನಂತಚರಣಂ, ಅನಂತಚರಣಂ ಅಂತೇ ಯೇಷಾಂ ತಾನಿ ಅನಂತಚರಣಾಂತಾನಿ, ದ್ವಿಪದಾದೀನಿ ಅನಂತಚರಣಾಂತಾನಿ (ರೂಪಾಣಿ) ಯಸ್ಯ ತತ್ ದ್ವಿ-ಪದಾದ್ಯನಂತಚರಣಾಂತಂ (ವಪುಃ) (ತಸ್ಯ) ದ್ವಿಪದಾದ್ಯನಂತಚರಣಾಂತಸ್ಯ ಭಾವಃ ದ್ವಿಪದಾದ್ಯ-ನಂತಚರಣಾಂತತಾ, ತಯಾ ದ್ವಿಪದಾದ್ಯನಂತಚರಣಾಂತತಯಾ ।

**ಅತಿಭಾಸಿತಂ—** ಅತ್ಯಂತಂ ಭಾಸಿತಂ ಅತಿಭಾಸಿತಂ, ತತ್ ಅತಿಭಾಸಿತಂ ।

**ಘನಗುಣಾಪಘನೈಃ—** ಘನಾಶ್ಚ ತೇ ಗುಣಾಶ್ಚ ಘನಗುಣಾಃ, ಘನಗುಣಾ ಏವ ಅಪಘನಾಃ ಘನ-ಗುಣಾಪಘನಾಃ, ತೈಃ ಘನಗುಣಾಪಘನೈಃ ।

**ತತ್ತದುಚಿತೈಃ—** ತಾನಿ ಚ ತಾನಿ ಚ ತತ್ತಾನಿ, ತತ್ತೇಷಾಂ ಉಚಿತಾಃ ತತ್ತದುಚಿತಾಃ, ತೈಃ ತತ್ತದುಚಿತೈಃ ।

**ಕೋಶ—** ಅಪಘನ = ಅವಯವ, "ಅಂಗಂ ಪ್ರತೀಕೋಽವಯವೋಽಪಘನೋಽಥ ಕಲೇವರಂ" ಅಮರ ।

★ ★ ★

## ನವಭಾನುಭಾಃ ಕನಕಕಾಂತಿ ಪರಂ ವರಹಾರಹಾರಿ ಹರಿನೀಲಹರಿತ್ ।
## ಶಬಲಪ್ರಭಾದಿವಿವಿಧದ್ಯುತಿಮತ್ ಸುಖಬೋಧಸೌರಭಸುರೂಪಗುಣಮ್ ॥ 74 ॥

**ಪದಚ್ಛೇದ—** ನವಭಾನುಭಾಃ, ಕನಕಕಾಂತಿ, ಪರಂ, ವರಹಾರಹಾರಿ, ಹರಿನೀಲಹರಿತ್, ಶಬಲಪ್ರಭಾದಿವಿವಿಧ ದ್ಯುತಿಮತ್, ಸುಖಬೋಧಸೌರಭಸುರೂಪಗುಣಂ ।

**ಅನ್ವಯ—** ನವಭಾನುಭಾಃ, ಪರಂ ಕನಕಕಾಂತಿ, ವರಹಾರಹಾರಿ, ಹರಿನೀಲಹರಿತ್, ಶಬಲಪ್ರಭಾದಿವಿವಿಧದ್ಯುತಿ-ಮತ್, ಸುಖಬೋಧಸೌರಭಸುರೂಪಗುಣಂ (ವಪುಃ ಇಂದಿರಾಪತಿಃ ಅನಿಶಂ ಪ್ರಕಟಯತಿ ನನು).

**ಅನ್ವಯಾರ್ಥ—**

(ಏಕಂ ವಪುಃ = ಒಂದು ಶರೀರವು)

ನವಭಾನುಭಾಃ

ನವ = ಹೊಸದಾದ

ಭಾನು = ಸೂರ್ಯನ

ಭಾಃ = ಕಾಂತಿಯಂತೆ ಕಾಂತಿಯುಳ್ಳದ್ದು

ಪರಂ = ಮತ್ತೊಂದು ರೂಪವು (ಶರೀರವೂ)

ಕನಕಕಾಂತಿ = ಚಿನ್ನದಂತಹ ಕಾಂತಿಯುಳ್ಳದ್ದು (ಅಪರಂ ರೂಪಂ = ಮತ್ತೊಂದು ರೂಪವು)

ವರಹಾರಹಾರಿಹರಿನೀಲಹರಿತ್ = ಉತ್ತಮವಾದ ಮುತ್ತಿನ ಸರದಂತೆ ಮನೋಹರವಾದುದು (ಅಪರಂ ವಪುಃ = ಮತ್ತೊಂದು ಶರೀರವು) ಇಂದ್ರನೀಲಮಣಿಯಂತೆ ನೀಲವರ್ಣದಿಂದ ಕೂಡಿರುವುದು (ಅನ್ಯದ್ ರೂಪಂ = ಮತ್ತೊಂದು ರೂಪವು)

ಶಬಲಪ್ರಭಾದಿವಿವಿಧದ್ಯುತಿಮತ್ = ನಾನಾ ಬಣ್ಣದಿಂದ ಮಿಶ್ರವಾದ ಬಣ್ಣವೇ ಮೊದಲಾಗಿವುಳ್ಳ ನಾನಾ ರೀತಿಯ ಕಾಂತಿಯುಳ್ಳದ್ದು

ಸುಖಬೋಧಸೌರಭಸುರೂಪಗುಣಂ = ಆನಂದಜ್ಞಾನಾತ್ಮಕವಾದ ಸುವಾಸನೆಯ ಸ್ವರೂಪವಾದ ಒಳ್ಳೆಯ ಆಕೃತಿ ಗುಣಗಳು ಉಳ್ಳದ್ದು (ಇಂತಹ ಶರೀರವನ್ನು ಲಕ್ಷ್ಮೀಪತಿಯಾದ ನಾರಾಯಣನು ಯಾವಾಗಲೂ ಮುಕ್ತರಿಗೆ ಗೋಚರಿಸುವಂತೆ ಮಾಡುತ್ತಾನೆ) ಅಥವಾ ಇರಿತಹ ರೂಪವು ಮುಕ್ತರನ್ನು ಆನಂದ ಗೊಳಿಸುತ್ತದೆ ಎಂದು ಮುಂದಿನ ಶ್ಲೋಕದೊಡನೆ ಅನ್ವಯ). ಹಿಂದಿನ ಶ್ಲೋಕದೊಡನೆ ಏಕಾನ್ವಯ ಮಾಡಿದಾಗ ಆದಿಕುಲಕ. ಈ ಶ್ಲೋಕಕ್ಕೆ ಮುಂದಿನ ಶ್ಲೋಕದೊಡನೆ ಏಕಾನ್ವಯ ಮಾಡಿದಾಗ ಯುಗ್ಮವಾಗುತ್ತದೆ.

**ತಾತ್ಪರ್ಯ—** ವೈಕುಂಠಲೋಕದಲ್ಲಿ ಮುಕ್ತರ ದೃಷ್ಟಿಗೆ ಗೋಚರವಾಗುವ ಪರಮಾತ್ಮನ ರೂಪಗಳು ನಾನಾ ಬಗೆಯವುಗಳು. ಒಂದು ರೂಪವು ಆಗ ತಾನೇ ಉದಯಿಸುತ್ತಿರುವ ಸೂರ್ಯನ ಕಾಂತಿಯುಳ್ಳದ್ದು. ಮತ್ತೊಂದು ರೂಪವು ಚಿನ್ನದಂತೆ ಹೊಳೆಯುತ್ತದೆ. ಮಗದೊಂದು ರೂಪವು ಮುತ್ತಿನ ಹಾರದಂತೆ ಧವಲವರ್ಣದಿಂದ ಕೂಡಿರುತ್ತದೆ. ಮತ್ತೊಂದು ರೂಪವು ಇಂದ್ರನೀಲಮಣಿಯಂತೆ ನೀಲಬಣ್ಣವುಳ್ಳದ್ದು. ಮತ್ತೊಂದು ರೂಪವು ಮಿಶ್ರವಾದ ಬಣ್ಣವುಳ್ಳದ್ದು. ಇನ್ನೊಂದು ರೂಪವು ಆನಂದ, ಜ್ಞಾನ, ಪರಿಮಳಗಳಿಂದ ಕೂಡಿದ್ದು ಆಯಾ ಸ್ವರೂಪವೇ ಆಗಿದೆ, ಗುಣಸ್ವರೂಪವಾಗಿದೆ. ಗುಣಗಳು ಉಳ್ಳದ್ದೂ ಆಗಿದೆ, ಎಲ್ಲಾ ರೂಪಗಳೂ ಹೀಗೆಯೇ ಇವೆ. ಆದರೂ ಒಂದು ರೂಪದಲ್ಲಿ ಆನಂದಜ್ಞಾನಪರಿಮಳಗಳ ಆಕೃತಿಯನ್ನು ವಿಶೇಷವಾಗಿ ಪ್ರಕಟಿಸುವುದರಿಂದ ಹೀಗೆ ಹೇಳಿದೆ. ಇಂತಹ ಶರೀರವನ್ನು ಶ್ರೀಹರಿಯು ಮುಕ್ತರ ಕಣ್ಣಿಗೆ ಬೀಳುವಂತೆ ಮಾಡುವನು. (ಅಥವಾ ಇಂತಹ ಶರೀರವು ಮುಕ್ತರಿಗೆ ಆನಂದವನ್ನುಂಟು ಮಾಡುತ್ತದೆ.)

**ವಿಗ್ರಹ—**

**ನವಭಾನುಭಾಃ—** ನವಶ್ಚ ಅಸೌ ಭಾನುಶ್ಚ ನವಭಾನುಃ, ನವಭಾನೋಃ ಭಾಸಃ ಇವ ಭಾಸಃ ಯಸ್ಯ ತತ್ ನವಭಾನುಭಾಃ (ವಪುಃ) । ಭಾಃ ಭಾಸೀ ಭಾಂಸಿ ಸಕಾರಾಂತ ನಪುಂಸಕಲಿಂಗ

**ಕನಕಕಾಂತಿ—** ಕನಕವತ್ ಕಾಂತಿಃ ಯಸ್ಯ ತತ್ ಕನಕಕಾಂತಿ, (ತತ್ = ಅದನ್ನು ಹೀಗೆಯೇ ಎಲ್ಲಾ ವಿಶೇಷಣ-ಗಳೂ ದ್ವಿ. ಏಕವಚನ) ।

**ವರಹಾರಹಾರಿ**— ವರಶ್ಚಾಸೌ ಹಾರಶ್ಚ ವರಹಾರಃ, ಹರತೀತಿ ಹಾರಿ, ವರಹಾರವತ್ ಹಾರಿ ವರಹಾರಹಾರಿ, (ತತ್) ।

**ಹರಿನೀಲಹರಿತ್**— ಹರಿನೀಲವತ್ ಹರಿತ್ ಹರಿನೀಲಹರಿತ್ (ತತ್) ।

**ಶಬಲಪ್ರಭಾದಿವಿವಿಧದ್ಯುತಿಮತ್**— ಶಬಲಾ ಚ ಸಾ ಪ್ರಭಾ ಚ ಶಬಲಪ್ರಭಾ, ಶಬಲಪ್ರಭಾ ಆದಿಃ ಯಾಸಾಂ ತಾಃ ಶಬಲಪ್ರಭಾದಯಃ, ವಿವಿಧಾಶ್ಚ ತಾಃ ದ್ಯುತಯಶ್ಚ ವಿವಿಧದ್ಯುತಯಃ, ಶಬಲಪ್ರಭಾದಯಃ ವಿವಿಧದ್ಯುತಯಃ ಅಸ್ಯ ಸಂತೀತಿ ಶಬಲಪ್ರಭಾದಿವಿವಿಧದ್ಯುತಿಮತ್, (ತತ್) ।

**ಸುಖಬೋಧಸೌರಭಸುರೂಪಗುಣಂ**— ಸುಖಂ ಚ ಬೋಧಶ್ಚ ಸುಖಬೋಧೌ, ಸೌರಭಂ ಚ ಸುರೂಪಂ ಚ ಗುಣಾಶ್ಚ ಸೌರಭಸುರೂಪಗುಣಾಃ, ಸುಖಬೋಧೌ ಸೌರಭಸುರೂಪಗುಣಾಃ ಯಸ್ಯ ತತ್ ಸುಖ-ಬೋಧಸೌರಭಸುರೂಪಗುಣಂ । (ವಿಶ್ವಪತಿತೀರ್ಥೀಯ) ಸುಖಾನಿ ಚ ಬೋಧಾಶ್ಚ ಸುಖಬೋಧಾಃ, ಸುರಭಯಃ ಏವ ಸೌರಭಾಃ, ಸುಶೋಭನಂ ರೂಪಂ ಸ್ವರೂಪಂ ಯೇಷಾಂ ತೇ ಸುರೂಪಾಃ, ಸು-ರೂಪಾಶ್ಚ ತೇ ಗುಣಾಶ್ಚ ಸುರೂಪಗುಣಾಃ, ಸುಖಬೋಧಾ ಏವ ಸೌರಭಾಃ ಸುರೂಪಗುಣಾಃ, ಯಸ್ಯ ತತ್ (ತತ್) । (ಛಲಾರೀಯ) ಸುಖಬೋಧಾವೇವ ಸೌರಭಸುರೂಪಗುಣಾಶ್ಚ ಅಸ್ಯ । 'ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್‌ಪರಾಕ್ರಮಃ' ಇತಿ ಶ್ರುತೇಃ (ಭಾ. ಪ್ರ) ।

**ವಿಶೇಷಾಂಶ**— ಪರಮಾತ್ಮನಿಗೆ ಆನಂದ ಜ್ಞಾನಗಳೇ ದೇಹವು. ಆನಂದ ಜ್ಞಾನಗಳೇ ಸುವಾಸನಾತ್ಮಕವಾಗಿಯೂ ಒಳ್ಳೆಯ ಸೌಂದರ್ಯದ ಸ್ವರೂಪದಿಂದಲೂ ಇತರ ಗುಣಗಳ ರೂಪದಿಂದಲೂ ಮುಕ್ತರಿಗೆ ಯಾವಾಗಲೂ ಕಾಣಸಿಕೊಳ್ಳುತ್ತವೆ. ಇದೇ ಮೋಕ್ಷದಲ್ಲಿರುವ ವಿಶೇಷವು. ಇದು ವಿಶ್ವಪತಿತೀರ್ಥೀಯ ವ್ಯಾಖ್ಯಾನುಸಾರಿಯಾದ ಅಭಿಪ್ರಾಯ. ಆನಂದಜ್ಞಾನಗಳೇ ಪರಿಮಳಾತ್ಮಕವಾಗಿಯೂ ಒಳ್ಳೆಯ ಸ್ವರೂಪವುಳ್ಳ ಇತರ ಎಲ್ಲಾ ಗುಣಗಳೂ ಆಗಿ ಮುಕ್ತರಿಗೆ ಕಾಣಿಸುತ್ತವೆ ಎಂದು ಛಲಾರೀಯದಲ್ಲಿ ಹೇಳಿದಂತೆ ಪರಮಾತ್ಮನ ಗುಣಗಳಿಗೆ ಸುರೂಪ ಎಂಬುದು ವಿಶೇಷಣವು. ಉಳಿದಂತೆ ಅಭಿಪ್ರಾಯದಲ್ಲಿ ವ್ಯತ್ಯಾಸವಿಲ್ಲ. ಇಲ್ಲಿ ಪರಮಾತ್ಮನ ರೂಪಗಳಲ್ಲಿ ಅರುಣ, ಪೀತ, ನೀಲ, ಧವಲ, ಶಬಲ, ಕಪಿಲ, ಹಸಿರು (ಹರಿತ್) ಈ ಏಳು ವರ್ಣಗಳನ್ನು ಇಟ್ಟುಕೊಳ್ಳಬೇಕು. ಪರಮಾತ್ಮನ ರೂಪಗಳಿಗೆ ಒಂದೊಂದಕ್ಕೂ ಎಲ್ಲಾ ಬಣ್ಣಗಳಿದ್ದರೂ ಆಯಾ ಬಣ್ಣವನ್ನು ವಿಶೇಷತಃ ಪ್ರಕಟ ಪಡಿಸುತ್ತಾನೆ. ಹೀಗೆಯೇ ಜ್ಞಾನಾನಂದಾದಿಗಳು.

**ಕೋಶ**— ಭಾಃ = ಪ್ರಕಾಶವು, ''ಭಾಶ್ಚವಿದ್ಯುತಿದೀಪ್ತಯಃ'' ಅಮರ. ಪರಂ = ಮತ್ತೊಂದು, ''ಪರಂ ದೂರಾನ್ಯ ಪರಮಂ''. ಹಲಾಯುಧಕೋಶ. ''ಪರಂರೂಪಾನ್ಯಮುಖ್ಯೇಷು, ಪರೋಽರಿಪರಮಾತ್ಮನೋಃ'' ಅಭಿಧಾನ, ಹಾರಿ = ಮನೋಹರ, ''ಹೃದ್ಯಂ ಹಾರಿ ಮನೋಹರಂ ಚ ರುಚಿರಂ'' ಹಲಕೋಶ, ಶಬಲ = ಚಿತ್ರವರ್ಣ. ''ಚಿತ್ರಂ ಕಿರ್ಮೀರ-ಕಲ್ಮಾಷ ಶಬಲೈತಾಶ್ಚ ಕರ್ಬುರೇ'' ಅಮರ.

★ ★ ★

**ಆಶ್ಚರ್ಯರತ್ನೇಷ್ವಧಿಕಂ ಜಗತ್ತ್ರಯೇ-**
**ಽಪ್ಯಾಶ್ಚರ್ಯಮಾಶ್ಚರ್ಯಮಹೋ ಮುಹುರ್ಮುಹುಃ ।**
**ಸೌಂದರ್ಯಸಾರೈಕರಸಂ ರಮಾಪತೇ**
**ರೂಪಂ ಸಮಾ(ದಾ)ನಂದಯತೀಹ ಮೋಕ್ಷಿಣಃ ॥ 75 ॥**

**ಪದಚ್ಛೇದ**— ಆಶ್ಚರ್ಯರತ್ನೇಷು, ಅಧಿಕಂ, ಜಗತ್ತ್ರಯೇ, ಅಪಿ, ಆಶ್ಚರ್ಯಂ, ಆಶ್ಚರ್ಯಂ, ಅಹೋ (ಆಶ್ಚರ್ಯ ಮಹಃ) ಮುಹುಃ ಮುಹುಃ, ಸೌಂದರ್ಯಸಾರೈಕರಸಂ, ರಮಾಪತೇಃ, ರೂಪಂ, ಸಮಾನಂದಯತಿ, ಇಹ, ಮೋಕ್ಷಿಣಃ ।

**ಅನ್ವಯ**— ಜಗತ್ತ್ರಯೇ ಆಶ್ಚರ್ಯರತ್ನೇಷು ಅಪಿ ಅಧಿಕಂ ಆಶ್ಚರ್ಯಂ ಮುಹುಃ ಮುಹುಃ ಅಹೋ ಆಶ್ಚರ್ಯಂ ಸೌಂದರ್ಯಸಾರೈಕರಸಂ (ತತ್) ರಮಾಪತೇಃ ರೂಪಂ ಇಹ ಮೋಕ್ಷಿಣಃ ಸದಾ ಆನಂದಯತಿ (ಛಲಾರಿಯ) ।

**ಅನ್ವಯ**— ಜಗತ್ತ್ರಯೇ ಆಶ್ಚರ್ಯರತ್ನೇಷು ಅಧಿಕಂ ಆಶ್ಚರ್ಯಂ (ಆಶ್ಚರ್ಯಮಹಃ) ಮುಹುರ್ಮುಹುಃ ಅಪಿ ಆಶ್ಚರ್ಯಂ, ಸೌಂದರ್ಯಸಾರೈಕರಸಂ ರಮಾಪತೇಃ ರೂಪಂ ಇಹ ಮೋಕ್ಷಿಣಃ ಸಮಾನಂದಯತಿ. (ವಿಶ್ವಪತಿ-ತೀರ್ಥೀಯ) ।

**ಅನ್ವಯಾರ್ಥ**— (ಛಲಾರಿಯ)

**ಜಗತ್ತ್ರಯೇ** = ಮೂರು ಲೋಕಗಳಲ್ಲಿ

**ಆಶ್ಚರ್ಯರತ್ನೇಷು ಅಪಿ** = ಆಶ್ಚರ್ಯವನ್ನುಂಟು ಮಾಡುವ ಉತ್ತಮ ವಸ್ತುಗಳಲ್ಲಿಯೂ ಕೂಡ

**ಅಧಿಕಂ** = ಬಹಳ ಹೆಚ್ಚಾಗಿ

**ಆಶ್ಚರ್ಯಂ** = ವಿಸ್ಮಯವನ್ನುಂಟು ಮಾಡುವ

**ಮುಹುಃ ಮುಹುಃ** = ಮತ್ತು ಮತ್ತು (ನೋಡಿದರೂ ಕೂಡ)

**ಅಹೋ ಆಶ್ಚರ್ಯಂ** = ಅತ್ಯಂತ ಮಹಾಶ್ಚರ್ಯಕರವಾದ

**ಸೌಂದರ್ಯಸಾರೈಕರಸಂ** = ಸೌಂದರ್ಯದಿಂದ ಶ್ರೇಷ್ಠವಾದ ವಸ್ತುಗಳಲ್ಲಿಯೂ, ಮುಖ್ಯ ಸುಂದರ ಸ್ವರೂಪವಾದ (ಪರಮ ಸುಂದರವಾದ) (ತತ್ - ಹಿಂದೆ ಹೇಳಿದ ಗುಣಗಳಿಂದ ಕೂಡಿದ)

**ರಮಾಪತೇಃ** = ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ,

**ರೂಪಂ** = ಆಕೃತಿಯು

**ಇಹ** = ವೈಕುಂಠದಲ್ಲಿ

**ಮೋಕ್ಷಿಣಃ** = ಮುಕ್ತರನ್ನು

**ಸದಾನಂದಯತಿ** = ನಿರಂತರ ಸಂತೋಷಗೊಳಿಸುತ್ತದೆ.

**ಅನ್ವಯಾರ್ಥ**— (ವಿಶ್ವಪತಿತೀರ್ಥೀಯ)

**ಜಗತ್ತ್ರಯೇ** = ಮೂರು ಲೋಕಗಳಲ್ಲಿಯೂ ಅದ್ಭುತ ವಸ್ತುಗಳಲ್ಲಿ ಶ್ರೇಷ್ಠವಾದ **ಆಶ್ಚರ್ಯರತ್ನೇಷು ಅಪಿ** - ಅದ್ಭುತ ಶ್ರೇಷ್ಠ ವಸ್ತುಗಳ ಮಧ್ಯೇ, **ಅಧಿಕಂ** - ಅತ್ಯಂತ **ಆಶ್ಚರ್ಯಂ** ಅತ್ಯಂತ ಆಶ್ಚರ್ಯಕರವು (ಆಶ್ಚರ್ಯಮಹಃ = ಆಶ್ಚರ್ಯ ಕರವಾದ ತೇಜಸ್ಸುಳ್ಳ)

**ಮುಹುಃ ಮುಹುಃ ಅಪಿ ಆಶ್ಚರ್ಯಂ** = ಮತ್ತು ಮತ್ತು ನೋಡಿದರೂ ಆಶ್ಚರ್ಯಕರವಾದ

**ಸೌಂದರ್ಯಸಾರೈಕರಸಂ** = ಸೌಂದರ್ಯದಿಂದ ಶ್ರೇಷ್ಠವಾದ ವಸ್ತುಗಳಲ್ಲಿ ಪರಮಸುಂದರವಾದ

**ರಮಾಪತೇಃ ರೂಪಂ ಮೋಕ್ಷಿಣಃ ಸಮಾನಂದಯತಿ** = ಶ್ರೀಶನ ರೂಪವು ಮುಕ್ತರನ್ನು ಆನಂದಗೊಳಿಸುತ್ತದೆ.

**ಅಹೋ** = ಆಶ್ಚರ್ಯವು.

**ತಾತ್ಪರ್ಯ**— ಲಕ್ಷ್ಮೀರಮಣನಾದ ಶ್ರೀಹರಿಯ ರೂಪವು ಮೂರು ಲೋಕಗಳಲ್ಲಿರುವ ಅದ್ಭುತವಾದ ವಸ್ತುಗಳಲ್ಲಿ ಶ್ರೇಷ್ಠವಾದ, ಹೆಚ್ಚು ಆಶ್ಚರ್ಯಕರವಾದ ವಸ್ತುವಿಗಿಂತಲೂ ಹೆಚ್ಚು ಆಶ್ಚರ್ಯಕರವಾದುದು. ಮತ್ತೂ ಮತ್ತೂ ಎಷ್ಟು ನೋಡಿದರೂ ಮತ್ತೂ ಆಶ್ಚರ್ಯವನ್ನುಂಟು ಮಾಡುತ್ತದೆ. ಪ್ರತಿಕ್ಷಣದಲ್ಲಿಯೂ ಹೊಸದಾಗಿ ಕಾಣಿಸುತ್ತದೆ. ಸೌಂದರ್ಯ-ದಿಂದ ಶ್ರೇಷ್ಠವಾದ ವಸ್ತುಗಳಲ್ಲಿಯೂ ಮುಖ್ಯವಾಗಿ ಅತ್ಯಂತ ಸುಂದರವಾದುದು. ಅದ್ಭುತವಾದ ತೇಜಸ್ಸುಳ್ಳದ್ದು. ಇಂತಹ ರೂಪವು ಮುಕ್ತರನ್ನು ವೈಕುಂಠಲೋಕದಲ್ಲಿ ಆನಂದಗೊಳಿಸುತ್ತದೆ.

ವಿಗ್ರಹ—

**ಆಶ್ಚರ್ಯರತ್ನೇಷು**— ಆಶ್ಚರ್ಯೇಷು ರತ್ನಾನಿ ಆಶ್ಚರ್ಯರತ್ನಾನಿ, ತೇಷು ಆಶ್ಚರ್ಯರತ್ನೇಷು ।

**ಜಗತ್ರಯೇ**— ಜಗತಾಂ ತ್ರಯಂ ಜಗತ್‌ತ್ರಯಂ, ತಸ್ಮಿನ್ ಜಗತ್ರಯೇ ।

**ಸೌಂದರ್ಯಸಾರೈಕರಸಂ**— ಸುಂದರಸ್ಯ ಭಾವಃ ಸೌಂದರ್ಯಂ, ಸೌಂದರ್ಯೇಣ ಸಾರಾಃ ಸೌಂದರ್ಯ ಸಾರಾಃ, ಏಕಃ ರಸಃ ಯಸ್ಯ ತತ್ ಏಕರಸಂ, ಸೌಂದರ್ಯಸಾರೇಷು ಏಕರಸಂ ಸೌಂದರ್ಯ-ಸಾರೈಕರಸಂ ।

**ರಮಾಪತೇಃ**— ರಮಾಯಾಃ ಪತಿಃ ರಮಾಪತಿಃ, ತಸ್ಯ ರಮಾಪತೇಃ ।

**ಮೋಕ್ಷಿಣಃ**— ಮೋಕ್ಷಃ ಏಷಾಂ ಅಸ್ತೀತಿ ಮೋಕ್ಷಿಣಃ, ತಾನ್ ಮೋಕ್ಷಿಣಃ ।

**ಕ್ರಿಯಾಪದ**— ಸಮಾನಂದಯತಿ - ಸಮ್, ಆ, ನಂದಯತಿ, ಅಥವಾ ಆನಂದಯತಿ । ಲಟ್ ನಂದಯತಿ ನಂದಯತಃ ಇತ್ಯಾದಿ. ಟುನದಿ ಸಮೃದ್ಧೌ ಣಿಜಂತಾತ್ ಲಟ್, 2 ಲಿಟ್ ನಂದಯಾಂಚಕಾರ, ನಂದಯಾಮಾ, ಸ, ನಂದಯಾಂ ಬಭೂವ, 3 ಲುಟ್ ನಂದಯಿತಾ, 4 ಲೃಟ್ ನಂದಯಿಷ್ಯತಿ, 5 ಲೋಟ್ ನಂದಯತು, 6 ಲಙ್ ಅನಂದಯತ್, 7 ವಿಧಿಲಿಙ್ ನಂದಯೇತ್, 8 ಆಶೀರ್ಲಿಙ್ ನಂದ್ಯಾತ್ ನಂದ್ಯಾಸ್ತಾಂ, 9 ಲುಙ್ ಅನನಂದತ್, 10 ಲೃಙ್ ಅನಂದಯಿಷ್ಯತ್ ।

**ಕೋಶ**— ರತ್ನ = ಶ್ರೇಷ್ಠ ವಸ್ತು, ''ರತ್ನಂ ಸ್ವಜಾತಿಶ್ರೇಷ್ಠೇಽಪಿ'', ಅಮರ, ''ರತ್ನಂ ಶ್ರೇಷ್ಠೇ ಮಣಿಷ್ವಪಿ'' ವಿಶ್ವ.

**ಪ್ರಯೋಗ**— ರಮಾಪತೇಃ ರೂಪಂ ಮೋಕ್ಷಿಣಃ ಸಮಾನಂದಯತಿ (ಕರ್ತರಿ) ।

ರಮಾಪತೇಃ ರೂಪೇಣ ಮೋಕ್ಷಿಣಃ (ಪ್ರಥಮಾ) ಸಮಾನಂದ್ಯಂತೇ (ಕರ್ಮಣಿ) ।

**ವೃತ್ತ**— ಈ ಶ್ಲೋಕದಲ್ಲಿ ಇಂದ್ರವಂಶಾ ವೃತ್ತ. ಸ್ಯಾಂದಿದ್ರವಂಶಾ ತತಜೈರಸಂಯುತ್ಯೈಃ ಎಂದು ಲಕ್ಷಣ (ಸ್ಯಾಚ್ಚೇಂದ್ರ-ವಂಶಾ ಯದಿ ತೌ ಜರೌ ತದಾ ಎಂದು ಛಲಾರೀಯದಲ್ಲಿ ಲಕ್ಷಣ ಕೊಟ್ಟಿದ್ದಾರೆ) ತಗಣ ಎರಡು, ಜಗಣ ರಗಣಗಳಿದ್ದರೆ ಇಂದ್ರವಂಶಾವೃತ್ತ.

★ ★ ★

**ಇಜ್ಯತೇ ಯಜ್ಞಶೀಲೈಃ ಸ ಯಜ್ಞಃ ಪ್ರಾಜ್ಞಮಧ್ಯೇ ಪರಃ ಪ್ರೋಚ್ಯತೇಽನ್ಯೈಃ ।**
**ಗೀಯತೇ ಗೇಯಕೀರ್ತಿಃ ಸುಗೀತ್ಯೈಃ ವಿಧ್ಯಬದ್ಧೈಸ್ಸದಾಽಽನಂದಸಾಂದ್ರೈಃ ॥ 76 ॥**

**ಪದಚ್ಛೇದ**— ಇಜ್ಯತೇ, ಯಜ್ಞಶೀಲೈಃ, ಸಃ, ಯಜ್ಞಃ, ಪ್ರಾಜ್ಞಮಧ್ಯೇ, ಪರಃ, ಪ್ರೋಚ್ಯತೇ, ಅನ್ಯೈಃ, ಗೀಯತೇ, ಗೇಯಕೀರ್ತಿಃ, ಸುಗೀತ್ಯೈಃ, ವಿಧ್ಯಬದ್ಧೈಃ, ಸದಾ, ಆನಂದಸಾಂದ್ರೈಃ ।

**ಅನ್ವಯ**— ಯಜ್ಞಃ ಸಃ ವಿಧ್ಯಬದ್ಧೈಃ ಸದಾ ಆನಂದಸಾಂದ್ರೈಃ (ಸದಾನಂದಸಾಂದ್ರೈಃ) ಯಜ್ಞಶೀಲೈಃ ಇಜ್ಯತೇ, ಅನ್ಯೈಃ ಪ್ರಾಜ್ಞಮಧ್ಯೇ, ಪರಃ ಪ್ರೋಚ್ಯತೇ, ಗೇಯಕೀರ್ತಿಃ ಸುಗೀತ್ಯೈಃ ಗೀಯತೇ ।

**ಅನ್ವಯಾರ್ಥ**—

ಯಜ್ಞ = ಯಜ್ಞನಾಮಕನಾದ

ಸಃ = ಆ ವಿಷ್ಣುವು

ವಿಧ್ಯಬದ್ಧೈಃ = ಕರ್ಮಾನುಷ್ಠಾನದ ನಿಯಮರಹಿತರಾದ

ಸದಾ = ಯಾವಾಗಲೂ

ಆನಂದಸಾಂದ್ರೈಃ = ಆನಂದದಿಂದ ಪೂರ್ಣರಾದ (ಸದಾನಂದಸಾಂದ್ರೈಃ = ನಿರ್ದೋಷವಾದ ಆನಂದದಿಂದ ಪೂರ್ಣರಾದ)
ಯಜ್ಞಶೀಲೈಃ = ಯಜ್ಞಮಾಡುವ ಸ್ವಭಾವ ಉಳ್ಳವರಿಂದ
ಇಜ್ಯತೇ = ಯಾಗಗಳಿಂದ ಪೂಜಿಸಲ್ಪಡುತ್ತಾನೆ.
ಅನ್ಯೈಃ = ಹಿಂದೆ ಪ್ರವಚನ ಮಾಡುವ ಸ್ವಭಾವ ಉಳ್ಳವರಿಂದ
ಪ್ರಾಜ್ಞಮಧ್ಯೇ = ವಿದ್ವಾಂಸರ ಮಧ್ಯದಲ್ಲಿ
ಪರಃ = ಸರ್ವೋತ್ತಮನಾಗಿ
ಪ್ರೋಚ್ಯತೇ = ಹೇಳಲ್ಪಡುತ್ತಾನೆ.
ಗೇಯಕೀರ್ತಿಃ = ಹಾಡಲು ಯೋಗ್ಯವಾದ ಕೀರ್ತಿಯುಳ್ಳ ಆ ಶ್ರೀಹರಿಯು
ಸುಗೀತೈಃ = ಹಿಂದೆ ಒಳ್ಳೆಯ ಸಂಗೀತಾಭ್ಯಾಸವುಳ್ಳವರಿಂದ
ಗೀಯತೇ = ಸಂಗೀತದಿಂದ ಹೊಗಳಲ್ಪಡುತ್ತಾನೆ. (ಹಾಡಲ್ಪಡುತ್ತಾನೆ).

ತಾತ್ಪರ್ಯ— ಆ ವೈಕುಂಠಲೋಕದಲ್ಲಿರುವ ಮುಕ್ತರಿಗೆ ಶಾಸ್ತ್ರಗಳ ವಿಧಿನಿಷೇಧಗಳು ಸಂಬಂಧಿಸುವುದಿಲ್ಲ. ಅವರು ಯಾವಾಗಲೂ ಆನಂದಪೂರ್ಣರು. ಆದ್ದರಿಂದ ಅವರು ಅನಿಷ್ಟಪರಿಹಾರಕ್ಕೋಸ್ಕರವಾಗಲೀ, ಆನಂದಾತಿಶಯಕ್ಕಾಗಲೀ ಶ್ರೀಹರಿಯನ್ನು ಪೂಜಿಸಬೇಕಾಗಿಲ್ಲ. ಆದರೂ ಹಿಂದೆ ಸಂಸಾರಾವಸ್ಥೆಯಲ್ಲಿ ಯಜ್ಞಮಾಡುವ ಸ್ವಭಾವವುಳ್ಳವರು, ಮುಕ್ತರಾದಾಗಲೂ ಆನಂದೋದ್ರೇಕದಿಂದ ಯಜ್ಞಗಳನ್ನು ಮಾಡಿಯೇ ಶ್ರೀಹರಿಯನ್ನು ಪೂಜಿಸುತ್ತಾರೆ. ಹಿಂದೆ ಸಂಸಾರಾವಸ್ಥೆಯಲ್ಲಿ ಪ್ರವಚನಗಳಲ್ಲಿ ಆಸಕ್ತರಾದವರು ಮುಕ್ತರಾಗಿದ್ದಾಗ ಅನೇಕ ವಿದ್ವಾಂಸರ ನಡುವೆ ಶ್ರೀಹರಿಯನ್ನು ಸರ್ವೋತ್ತಮನೆಂದು ಸಮರ್ಥಿಸುತ್ತಾ ಹೊಗಳುತ್ತಾರೆ. ಹಿಂದೆ ಉತ್ತಮವಾದ ಸಂಗೀತದ ಮೂಲಕ ಪರಮಾತ್ಮನ ಗುಣಗಳನ್ನು ಹೊಗಳಿ ಸಂತೋಷಪಡಿಸುವ ಸ್ವಭಾವವುಳ್ಳ ಜೀವರು ಮುಕ್ತಿಯಲ್ಲಿಯೂ ಗಾನಮಾಡಲು ಯೋಗ್ಯವಾದ ಅಪಾರಕೀರ್ತಿಯುಳ್ಳ ಹರಿಯನ್ನು ಒಳ್ಳೆಯ ಸಂಗೀತಗಳಿಂದ ಹಾಡಿಕೊಂಡಾಡಿ ಸಂತೋಷಪಡುತ್ತಾರೆ. ಹೀಗೆ ಯಜ್ಞಗಳಿಂದ ಪೂಜಿಸುವವರು, ಯಾಜ್ಞಿಕಾಚಾರ್ಯರು, ಪ್ರವಚನಾಚಾರ್ಯರು, ಗಾಯಕಾಚಾರ್ಯರು ಎಲ್ಲರೂ ಮುಕ್ತರಾದಾಗ ತಮ್ಮ ಸ್ವಭಾವಕ್ಕನುಗುಣವಾಗಿ ಮುಕ್ತಿಯಲ್ಲಿ ಆನಂದೋದ್ರೇಕದಿಂದ ಹಿಂದಿನಂತೆಯೇ ಪೂಜೆ, ಪ್ರವಚನ, ಗಾನಗಳಿಂದ ಶ್ರೀಮನ್ಮಹಾವಿಷ್ಣುವಿನ ಆರಾಧನೆಯನ್ನು ಮಾಡುತ್ತಾ ಇರುತ್ತಾರೆ. ಕರ್ಮಪ್ರಚುರರಾದ ಕರ್ಮಯೋಗಿಗಳು ಜ್ಞಾನಪ್ರಚುರರಾದ ಜ್ಞಾನ ಯೋಗಿಗಳು, ಭಕ್ತಿಪ್ರಚುರರಾದ ಭಕ್ತಿಯೋಗಿಗಳು ಎಂಬ ಮೂರು ವಿಧ ಯೋಗಿಗಳೂ ಮುಕ್ತಿಯಲ್ಲಿರುತ್ತಾರೆ. ಅವರ ಸ್ವರೂಪವಾಗಿಯೇ ಕರ್ಮಜ್ಞಾನಭಕ್ತಿಗಳು ಆವಿರ್ಭವಿಸಿರುತ್ತವೆ. ಮುಕ್ತರು ಮಾಡುವ ಈ ಯಜ್ಞ ಪ್ರವಚನಗಾನಗಳು ಪ್ರತ್ಯವಾಯಪರಿಹಾರಕ್ಕಾಗಿಯೂ ಅಲ್ಲ. ಆನಂದಾತಿಶಯಕ್ಕಾಗಿಯೂ ಅಲ್ಲ. ಅವರು ವಿಧಿನಿಷೇಧವರ್ಜಿತರು ಮತ್ತು ಆನಂದಪೂರ್ಣರು. ಆದ್ದರಿಂದ ಮೇಲಿನ ಎರಡು ಪ್ರಯೋಜನಕ್ಕಾಗಿ ಯಜ್ಞಾದಿಗಳು ಬೇಕಿಲ್ಲವಾದರೂ ಹಿಂದಿನ ಸ್ವಭಾವದಿಂದ ಆಯಾ ಕಾರ್ಯವನ್ನು ಮಾಡುತ್ತಿರುತ್ತಾರೆ ಎಂದು ತಾತ್ಪರ್ಯ.

ವಿಗ್ರಹ—

ಯಜ್ಞಶೀಲೈಃ— ಯಜ್ಞಃ ಶೀಲಂ ಯೇಷಾಂ ತೇ ಯಜ್ಞಶೀಲಾಃ, ತೈಃ ಯಜ್ಞಶೀಲೈಃ । ಇಜ್ಯತೇ ಇತಿ ಯಜ್ಞಃ, ಯಾತಿ ಜಾನಾತಿ ಇತಿ ವಾ ಯಜ್ಞಃ = ಯಜ್ಞ ಎಂದರೆ ಪೂಜಿಸಲ್ಪಡುವವನು ಅಥವಾ ಯಾವಾಗಲೂ ಭಕ್ತರ ಬಳಿಗೆ ಹೋಗುವವನು ಮತ್ತು ಸರ್ವಜ್ಞ ಎಂದು ಅರ್ಥ. 'ಯಜ್ಞೋ ವಿಷ್ಣುಃ ದೇವತಾ' ಎಂಬ ಶ್ರುತಿಯು ವಿಷ್ಣುವಿಗೆ ಯಜ್ಞ ಎಂಬ ಹೆಸರಿದೆ ಎಂದು ಹೇಳುತ್ತದೆ.

ಪ್ರಾಜ್ಞಮಧ್ಯೇ— ಪ್ರಾಜ್ಞಾನಾಂ ಮಧ್ಯಂ ಪ್ರಾಜ್ಞಮಧ್ಯಂ, ತಸ್ಮಿನ್ ಪ್ರಾಜ್ಞಮಧ್ಯೇ ।

**ಗೇಯಕೀರ್ತಿಃ**— ಗಾತುಂ ಯೋಗ್ಯಾ ಗೇಯಾ, ಗೇಯಾ ಕೀರ್ತಿಃ ಯಸ್ಯ ಸಃ ಗೇಯಕೀರ್ತಿಃ ।

**ಸುಗೀತೈಃ**— ಸು ಶೋಭನಂ ಗೀತಂ ಯೇಷಾಂ ತೇ ಸುಗೀತಾಃ, ತೈಃ ಸುಗೀತೈಃ । (ಶೋಭನಾನಿ ಚ ತಾನಿ ಗೀತಾನಿ ಚ ಸುಗೀತಾನಿ, ತೈಃ ಸುಗೀತೈಃ )

**ವಿಧ್ಯಬದ್ಧೈಃ**— ನ ಬದ್ಧಾಃ ಅಬದ್ಧಾಃ, ವಿಧಿನಾ ಅಬದ್ಧಾಃ ವಿಧ್ಯಬದ್ಧಾಃ, ತೈಃ ವಿಧ್ಯಬದ್ಧೈಃ ।

**ಸದಾನಂದಸಾಂದ್ರೈಃ**— ಸಂಶ್ಚಾಸೌ ಆನಂದಶ್ಚ ಸದಾನಂದಃ, ಸದಾನಂದೇನ ಸಾಂದ್ರಾಃ ಸದಾನಂದಸಾಂದ್ರಾಃ, ತೈಃ ಸದಾನಂದಸಾಂದ್ರೈಃ । (ಸದಾ + ಆನಂದಸಾಂದ್ರೈಃ ಎಂದು ಪದವಿಭಾಗ ಮಾಡಿಕೊಂಡಾಗ, ಆನಂದೇನ ಸಾಂದ್ರಾಃ ತೈಃ ಇಷ್ಟೇ ವಿಗ್ರಹ ಇಟ್ಟುಕೊಳ್ಳಬೇಕು.)

**ಕ್ರಿಯಾಪದ**— ಇಜ್ಯತೇ, ಯಜ ದೇವಪೂಜಾಸಂಗತಿಕರಣದಾನೇಷು ಇತ್ಯಸ್ಮಾದ್ ಧಾತೋಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ಇಜ್ಯತೇ ಇತಿರೂಪಂ ।

ಇಜ್ಯತೇ ಇಜ್ಯೇತೇ ಇಜ್ಯಂತೇ, ಇಜ್ಯಸೇ ಇಜ್ಯೇಥೇ ಇಜ್ಯಧ್ವೇ ಇಜ್ಯೇ ಇಜ್ಯಾವಹೆ ಇಜ್ಯಾಮಹೇ, 2 ಲಿಟ್ ಈಜೇ ಈಜಾತೇ ಈಜಿರೇ ಈಜಿಷೇ ಈಜಾಥೇ ಈಜಿಧ್ವೇ, ಈಜೇ ಈಜಿವಹೇ ಈಜಿಮಹೇ, 3 ಲುಟ್ ಯಷ್ಟಾ ಯಷ್ಟಾರೌ ಯಷ್ಟಾರಃ, ಯಷ್ಟಾಸೇ ಯಷ್ಟಾಸಾಥೇ ಯಷ್ಟಾಧ್ವೇ, ಯಷ್ಟಾಹೇ ಯಷ್ಟಾಸ್ವಹೇ ಯಷ್ಟಾಸ್ಮಹೇ, 4 ಲೃಟ್ ಯಕ್ಷ್ಯತೇ ಯಕ್ಷ್ಯೇತೇ ಯಕ್ಷ್ಯಂತೇ ಇತ್ಯಾದಿ, 5 ಲೋಟ್ ಇಜ್ಯತಾಂ, 6 ಲಙ್ ಐಜ್ಯತ ಐಜ್ಯೇತಾಂ ಐಜ್ಯಂತ ಇತ್ಯಾದಿ, 7 ವಿಧಿಲಿಙ್ ಇಜ್ಯೇತ, 8 ಆಶೀರ್ಲಿಙ್ ಯಕ್ಷೀಷ್ಟ ಯಕ್ಷೀಯಾಸ್ತಾಂ ಯಕ್ಷೀರನ್, 9 ಲುಙ್ ಅಯಾಜಿ ಅಯಕ್ಷಾತಾಂ ಅಯಕ್ಷತ, ಅಯಿಷ್ಠಾಃ ಅಯಕ್ಷಾಥಾಂ ಅಯಢ್ವಂ, ಅಯಾಜಿಷಿ ಅಯಕ್ಷ್ವಹಿ, ಅಯಕ್ಷ್ಮಹಿ, 10 ಲೃಙ್ ಅಯಕ್ಷ್ಯತ ಅಯಕ್ಷ್ಯೇತಾಂ ಅಯಕ್ಷ್ಯಂತ ಇತ್ಯಾದಿ ।

**ಪ್ರಯೋಗ**— ಗೀಯತೇ, ಗೈ ಶಬ್ದೇ ಇತ್ಯತಃ ಕರ್ಮಣಿ ಲಟ್ ಆತ್ಮನೇಪ ದಿನಃ ವಿಧ್ಯಬದ್ಧಾಃ ಸದಾನಂದಸಾಂದ್ರಾಃ ಯಜ್ಞಶೀಲಾಃ ತಂ ಯಜ್ಞಂ ಯಜಂತೇ, ಅನ್ಯೇ ಪ್ರಾಜ್ಞಮಧ್ಯೇ ಪರಂ ಪ್ರಬ್ರುವತೇ, ಸುಗೀತಾಃ ಗೇಯಕೀರ್ತಿಂ ಗಾಯಂತಿ. ಹೀಗೆ ಕರ್ತರಿಯಲ್ಲಿ ಮೂರು ವಾಕ್ಯಗಳು.

**ಕೋಶ**— ಸುಗೀತೈಃ ಎಂಬಲ್ಲಿ ಗೀತಂ = ಹಾಡು, 'ಗೀತಂ ಗಾನಂ ಇಮೇ ಸಮೇ' ಅಮರ.

**ವೃತ್ತ**— ಇಜ್ಯತೇ, ಯಜ್ಞಶೀ, ಲೈಃ ಸಯ, ಜ್ಞಃ

**ವೃತ್ತ**— ಇಜ್ಯತೇ, ಯಜ್ಞಶೀ, ಲೈಃ ಸಯ, ಜ್ಞಃ
ರ ರ ರ ರ ಗು

★ ★ ★

ಅವತಾರಿಕಾ— ವೈಕುಂಠಲೋಕದ ವೈಭವವನ್ನು ವರ್ಣಿಸುತ್ತಾರೆ.

**ವೈಕುಂಠೇ ತೇ ಶ್ರೀವಿಶೇಷಾ ಜನಾನಾಮತ್ಯಾಶ್ಚರ್ಯಂ ಚಿತ್ರವಾಚಾಮಭೂಮಿಃ ।**
**ವೈಕುಂಠೇತೇ ಶ್ರೀವಿಶೇಷಾಜನಾನಾಮುಕ್ತಶ್ಲಾಘ್ಯೇ ಯುಕ್ತಮೇತಾದೃಶತ್ವಮ್ ॥ 77 ॥**

**ಪದಚ್ಛೇದ**— ವೈಕುಂಠೇ, ತೇ, ಶ್ರೀವಿಶೇಷಾಃ, ಜನಾನಾಂ, ಅತ್ಯಾಶ್ಚರ್ಯಂ, ಚಿತ್ರವಾಚಾಂ, ಅಭೂಮಿಃ ವೈಕುಂಠೇತೇ, ಶ್ರೀವಿಶೇಷಾಜನಾನಾಮುಕ್ತಶ್ಲಾಘ್ಯೇ ಯುಕ್ತಂ ಏತಾದೃಶತ್ವಂ ।

**ಅನ್ವಯ**— ವೈಕುಂಠೇ, ಜನಾನಾಂ ತೇ ಶ್ರೀ ವಿಶೇಷಾಃ ಅತ್ಯಾಶ್ಚರ್ಯಂ, ಚಿತ್ರವಾಚಾಂ, ಅಭೂಮಿಃ, ವೈಕುಂಠೇತೇ, ಶ್ರೀವಿಶೇಷಾಜನಾನಾಮುಕ್ತಶ್ಲಾಘ್ಯೇ ಯುಕ್ತಂ ಏತಾದೃಶತ್ವಂ ।

ಅನ್ವಯಾರ್ಥ—

ವೈಕುಂಠೇ = ವೈಕುಂಠಲೋಕದಲ್ಲಿ

ಜನಾನಾಂ = ಮುಕ್ತಚೇತನರ

ತೇ = ಅಂತಹ

ಶ್ರೀವಿಶೇಷಾಃ = ಕಾಂತಿ ವಿಶೇಷಗಳು (ಸಂಪದ್ವಿಶೇಷಗಳು)

ಅತ್ಯಾಶ್ಚರ್ಯಂ = ಅತ್ಯಂತ ಅದ್ಭುತವಾದುವುಗಳು

ಚಿತ್ತವಾಚಾಮಭೂಮಿಃ = ಮನಸ್ಸು ಮಾತು ಇವುಗಳಿಗೆ ಗೋಚರವಲ್ಲದುವುಗಳು

ವೈಕುಂಠೇತೇ = ಶ್ರೀಮನ್ನಾರಾಯಣನಿಂದ ಕೂಡಿದ,

ಶ್ರೀವಿಶೇಷಾಜಂನಾನಾಮುಕ್ತಶ್ಲಾಘ್ಯೇ = ಲಕ್ಷ್ಮೀದೇವಿಯು ಗರುಡದೇವರು, ಶೇಷ ದೇವರು, ಬ್ರಹ್ಮ ದೇವರು ಅನೇಕ ರೀತಿಯ ಮೋಕ್ಷ ಹೊಂದಿದ ಇಂದ್ರಾದಿ ಇತರ ಚೇತನರು ಇವರಿಂದ ಹೊಗಳಲು ಯೋಗ್ಯವಾದ,

ಏತಾದೃಶತ್ವಂ = ಈ ವೈಕುಂಠದಲ್ಲಿ ಹೀಗಿರುವಿಕೆಯು

ಯುಕ್ತಂ = ಉಚಿತವಾದುದು.

ತಾತ್ಪರ್ಯ— ವೈಕುಂಠಲೋಕದಲ್ಲಿರುವ ಮುಕ್ತಚೇತನರಿಗೆ ಹಿಂದೆ ಹೇಳಿದಂತಹ ಕಾಂತಿವಿಶೇಷಗಳು, ಸಂಪದ್ವಿಶೇಷಗಳು ಅತ್ಯಂತ ಆಶ್ಚರ್ಯಕರವಾಗಿರುತ್ತದೆ. ಅವುಗಳನ್ನು ಸಾಂಸಾರಿಕರಾದ ಪ್ರಕೃತಿಬದ್ಧರಾದ ಸಾಮಾನ್ಯಜನರು ಮನಸ್ಸಿನಿಂದ ಹೀಗೆಯೇ ಇದೆ ಎಂದು ಆಲೋಚಿಸಲೂ ಸಾಧ್ಯವಿಲ್ಲ. ಮಾತಿನಿಂದ ವರ್ಣಿಸಲು ಸಾಧ್ಯವಿಲ್ಲವೆಂದು ಹೇಳಬೇಕಾಗಿಯೇ ಇಲ್ಲ. ಈ ವೈಕುಂಠಲೋಕದಲ್ಲಿ ನಾರಾಯಣನು ಯಾವಾಗಲೂ ಸನ್ನಿಹಿತನಾಗಿರುವನು, ಮುಕ್ತರಿಗೆ ಗೋಚರನಾಗುತ್ತಿರುವನು. ಮುಕ್ತಿಯ ಈ ವೈಭವವನ್ನು ನಿತ್ಯ ಮುಕ್ತಳಾದ ಲಕ್ಷ್ಮೀದೇವಿಯು ಮುಕ್ತರಾದ ಗರುಡ, ಶೇಷ, ಬ್ರಹ್ಮ ಇನ್ನಿತರ ನಾನಾರೀತಿಯ ಇಂದ್ರಾದಿ ಮುಕ್ತರೂ, ಈ ಮುಕ್ತ ವ್ಯವಸ್ಥೆಯು ಅತ್ಯದ್ಭುತವೆಂದು ಹೊಗಳುತ್ತಾರೆ. ಹೀಗೆಯೇ ಎಲ್ಲರ ಹೊಗಳಿಕೆಗೆ ಪಾತ್ರವಾದ ವೈಕುಂಠಲೋಕವು ಹೀಗಿರುವುದು ಸರಿಯೇ ಆಗಿದೆ. ಅದರ ವರ್ಣನೆಯಲ್ಲಿ ಅತಿಶಯೋಕ್ತಿಯು ಎಳ್ಳಷ್ಟೂ ಇಲ್ಲ. ಅದರ ವರ್ಣನೆಯನ್ನು ಎಷ್ಟು ಮಾಡಿದರೂ ಅದು ಅಪೂರ್ಣೋಕ್ತಿಯೇ ಆಗಿ ಉಳಿಯುತ್ತದೆ.

ಭಾವಪ್ರಕಾಶಿಕಾ— ವೈಕುಂಠೇ ವರ್ತಮಾನಾನಾಂ ಜನಾನಾಂ ಶ್ರೀವಿಶೇಷಾಃ ಚಿತ್ತವಾಚಾಂ ಅಗೋಚರಾಃ = ವೈಕುಂಠದಲ್ಲಿರುವ ಮುಕ್ತರ ಸಂಪದ್ವಿಶೇಷಗಳು ಮನಸ್ಸು ಮಾತುಗಳಿಗೆ ಗೋಚರವಲ್ಲ, ವೈಕುಂಠೇ ತೇ = ವೈಕುಂಠೇನ ಪ್ರಾಪ್ತೇ = ವೈಕುಂಠೇತೇ ಎಂದರೆ ವೈಕುಂಠ ನಾಮಕನಾದ ಪರಮಾತ್ಮನಿಂದ ಹೊಂದಲ್ಪಟ್ಟಿದ್ದು, ಯಾವಾಗಲೂ ಅವನ ಸನ್ನಿಧಾನವುಳ್ಳದ್ದು ಎಂದು ಅರ್ಥ. ಲಕ್ಷ್ಮೀಗರುಡಾನಂತಬ್ರಹ್ಮಾದಿಭಿಃ ಶಕ್ರಾದಿ ನಾನಾವಿಶಿಷ್ಟಜನೈಶ್ಚ ಶ್ಲಾಘ್ಯೇ ತತ್ರ ಯುಕ್ತಂ ಏವಂ ವಿಧತ್ವಂ = ಲಕ್ಷ್ಮೀಗರುಡ ಅನಂತ ಬ್ರಹ್ಮಾದಿಗಳಿಂದಲೂ ಇಂದ್ರ ಮೊದಲಾದ ಬೇರೆ ಬೇರೆ ವಿಶಿಷ್ಟರಾದ ಮುಕ್ತರಿಂದಲೂ ಹೊಗಳಲ್ಪಡುವ ಆ ವೈಕುಂಠಲೋಕದಲ್ಲಿ ಈ ರೀತಿಯಾಗಿರುವಿಕೆಯು ಯುಕ್ತವಾಗಿದೆ ಎಂದು ಭಾವಪ್ರಕಾಶಿಕೆಯಲ್ಲಿ ಈ ಸಂದರ್ಭದ ತಾತ್ಪರ್ಯವನ್ನು ಹೇಳಿದ್ದಾರೆ.

ವಿಗ್ರಹ—

ಶ್ರೀವಿಶೇಷಾಃ— ಶ್ರಿಯಃ ವಿಶೇಷಾಃ ಶ್ರೀವಿಶೇಷಾಃ ।

ಚಿತ್ತವಾಚಾಂ— ಚಿತ್ತಾನಿ ಚ ವಾಚಶ್ಚ ಚಿತ್ತವಾಚಃ, ತಾಸಾಂ ಚಿತ್ತವಾಚಾಂ ।

ಅಭೂಮಿಃ— ಭೂಮಿ ನ ಭವತೀತಿ ಅಭೂಮಿಃ ।

**ವೈಕುಂಠೇತೇ**— ವೈಕುಂಠೇನ ಇತಃ ವೈಕುಂಠೇತಃ, ತಸ್ಮಿನ್ ವೈಕುಂಠೇತೇ ।

**ಶ್ರೀವಿಶೇಷಾಜನಾನಾಮುಕ್ತಶ್ಲಾಘ್ಯೇ**— ಶ್ರೀಶ್ಚ ವಿಶ್ಚ ಶೇಷಶ್ಚ ಅಜಶ್ಚ ನಾನಾಮುಕ್ತಾಶ್ಚ ಶ್ರೀವಿಶೇಷಾಜನಾನಾ ಮುಕ್ತಾಃ, ತೈಃ ಶ್ಲಾಘ್ಯಃ ಶ್ರೀವಿಶೇಷಾಜನಾನಾಮುಕ್ತಶ್ಲಾಘ್ಯಃ, ತಸ್ಮಿನ್ ಶ್ರೀವಿಶೇಷಾ-ಜನಾನಾಮುಕ್ತಶ್ಲಾಘ್ಯೇ ।

**ಏತಾದೃಶತ್ವಂ**— ಏಷ ಇವ ದೃಶ್ಯತೇ ಇತಿ ಏತಾದೃಶಃ, ಏತಾದೃಶಸ್ಯ ಭಾವಃ ಏತಾದೃಶತ್ವಂ (ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ)

**ಕೋಶ**— ಶ್ರೀ = ಶೋಭೆ, ಸಂಪತ್ತು, ''ಶ್ರೀರ್ವೇಷರಚನಾಶೋಭಾ'' ವಿಶ್ವಂ. ''ಸಂಪತ್ತಿಃ ಶ್ರೀಶ್ಚ ಲಕ್ಷ್ಮೀಶ್ಚ'' ಅಮರ. ಭೂಮಿಃ = ಸ್ಥಾನ, ಅಭೂಮಿಃ = ಸ್ಥಾನವಲ್ಲದ್ದು, ''ಭೂಮಿಃ ಕ್ಷಿತೌ ಸ್ಥಾನಮಾತ್ರೇ'' ಹಲಾಯುಧ. ವೈಕುಂಠ = ನಾರಾಯಣ, ''ವೈಕುಂಠೋ ವಿಷ್ಟರಶ್ರವಾಃ'' ಅಮರ. (ಅಭಿಧಾನ = ''ವೈಕುಂಠಾವಿಂದ್ರಕೇಶವೌ'') ವಿಃ = ಪಕ್ಷಿ, (ಗರುಡ) ''ವಿಃ ಪಕ್ಷಿಪರಮಾತ್ಮನೋಃ'' ವಿಶ್ವ ।

**ವೃತ್ತ**— ಈ ಶ್ಲೋಕ ಶಾಲಿನೀ ವೃತ್ತದಲ್ಲಿದೆ.

ವೈಕುಂಠೇತೇ, ಶೇಶ್ರೀವಿ, ಶೇಷಾಜ, ನಾನಾಂ,
ಮ ತ ತ ಗುಗು

ಶಾಲಿನ್ಯುಕ್ತಾ ಮಸ್ತೌಗೌಗೋಽಬ್ಧಿ ಲೋಕೈಃ ಎಂದು ಆ ವೃತ್ತದ ಛಲಾರಿಯ ವ್ಯಾಖ್ಯಾನದಲ್ಲಿ ಹೇಳಿದಂತೆ (ಮಸ್ತೌ ಗೌ ಚೇಚ್ಛಾಲಿನೀ ವೇದ ಲೋಕೈಃ ಎಂದೂ ಲಕ್ಷಣ).

★ ★ ★

**ಯಂ ಯಂ ಸುಖೀ ಕಾಮಯತೇಽರ್ಥಮತ್ರ**
**ಸಂಕಲ್ಪಮಾತ್ರಾತ್ ಸಕಲೋಽಪಿ ಸ ಸ್ಯಾತ್ ।**
**ಇತ್ಯೇವ ವೇದಾ ಅಪಿ ವೇದಯಂತಿ**
**ಮುಕ್ತಿಂ ತತಃ ಕೋ ವಿಭವಾತಿರೇಕಃ ॥ 78 ॥**

**ಪದಚ್ಛೇದ**— ಯಂ, ಯಂ, ಸುಖೀ, ಕಾಮಯತೇ, ಅರ್ಥಂ, ಅತ್ರ, ಸಂಕಲ್ಪಮಾತ್ರಾತ್, ಸಕಲಃ ಅಪಿ, ಸಃ, ಸ್ಯಾತ್, ಇತಿ, ಏವ, ವೇದಾಃ, ಅಪಿ, ವೇದಯಂತಿ, ಮುಕ್ತಿಂ, ತತಃ, ಕಃ, ವಿಭವಾತಿರೇಕಃ ॥

**ಅನ್ವಯ**— ಸುಖೀ, ಅತ್ರ, ಯಂ, ಯಂ, ಅರ್ಥಂ, ಕಾಮಯತೇ, (ಅಪಿ) ಸಃ (ಸಃ) ಸಕಲಃ, ಸಂಕಲ್ಪಮಾತ್ರಾತ್, ಸ್ಯಾತ್, ವೇದಾಃ, ಅಪಿ, ಇತಿ, ಏವ, ಮುಕ್ತಿಂ, ವೇದಯತಿ, ತತಃ, ವಿಭವಾತಿರೇಕಃ, ಕಃ ?

**ಅನ್ವಯಾರ್ಥ**—

**ಸುಖೀ** = ನಿರ್ದುಃಖವಾದ ಪರಮಾನಂದ ಸ್ವರೂಪವುಳ್ಳ ಮುಕ್ತನು,

**ಅತ್ರ** = ಈ ವೈಕುಂಠಲೋಕದಲ್ಲಿ

**ಯಂ ಯಂ ಅರ್ಥಂ** = ಯಾವ ಯಾವ ಇಷ್ಟವಿಷಯವನ್ನು

**ಕಾಮಯತೇ (ಅಪಿ)** = ಅಪೇಕ್ಷಿಸುತ್ತಾನೋ,

**ಸಃ (ಸಃ) ಸಕಲಃ** = ಅದೆಲ್ಲವೂ

**ಸಂಕಲ್ಪಮಾತ್ರಾತ್** = ಕೇವಲ ಮನಸ್ಸಿನಲ್ಲಿ ಆಲೋಚಿಸುವುದರಿಂದ

**ಸ್ಯಾತ್** = ಆಗಿಯೇ ಆಗುತ್ತದೆ,

**ವೇದಾಃ ಅಪಿ** = ವೇದಗಳೂ ಕೂಡ

**ಇತಿ ಏವ** = ಹೀಗೆಯೇ

**ವೇದಯಂತಿ** = ತಿಳಿಸುತ್ತವೆ.

**ತತಃ** = ಸಂಕಲ್ಪ ಮಾತ್ರದಿಂದ ಲಭ್ಯವಾದ ಎಲ್ಲಾ ವಿಷಯಗಳಿಂದ ಕೂಡಿದ ಮುಕ್ತಿಗಿಂತ

**ವಿಭವಾತಿರೇಕಃ** = ಐಶ್ವರ್ಯಾತಿಶಯವು

**ಕಃ** = ಯಾವುದು? (ಯಾವುದೂ ಇಲ್ಲ).

**ತಾತ್ಪರ್ಯ—** ಮೋಕ್ಷದಲ್ಲಿ ಎಲ್ಲಾ ಜೀವಾತ್ಮರೂ ನಿರ್ದುಃಖಪರಮಾನಂದಸ್ವರೂಪರಾಗಿರುತ್ತಾರೆ. ಅವರು ತಮ್ಮ ಸ್ವರೂಪವೇ ಆಗಿರತಕ್ಕ ಇಚ್ಛೆಯಿಂದ ಯಾವುದಾದರೊಂದು ವಿಷಯವನ್ನು ಅಪೇಕ್ಷಿಸಿದರೆ, ಅವರ ಸಂಕಲ್ಪದಿಂದಲೇ (ಆಲೋಚನೆಯಿಂದಲೇ) ಆ ವಸ್ತುವು ಲಭ್ಯವಾಗುತ್ತದೆ ಎಂದು ವೇದಗಳೂ ಮುಕ್ತಿಯ ಸ್ವರೂಪವನ್ನೂ, ಮಹತ್ವವನ್ನೂ ತಿಳಿಸುತ್ತವೆ. ಅಂತಹ ಮುಕ್ತಿಗಿಂತ ಹೆಚ್ಚಾದ ಐಶ್ವರ್ಯವು ಯಾವುದು? ವೈಭವ ಯಾವುದು? ಯಾವುದೂ ಇಲ್ಲ.

**ವಿಶೇಷಾಂಶ—** (ಭಾವಪ್ರಕಾಶಿಕಾ) ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ, ಸ ಯದಿ ಮಾತೃಲೋಕಕಾಮೋ ಭವತಿ, ಸಂಕಲ್ಪಾದೇವಾಸ್ಯ ಮಾತರಃ ಸಮುತ್ತಿಷ್ಠಂತಿ, ಸ ಯದಿ ಸ್ತ್ರೀಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಸ್ತ್ರಿಯಃ ಸಮುತ್ತಿಷ್ಠಂತಿ ಇತ್ಯಾದ್ಯುಕ್ತ್ವಾ ಯಂ ಯಮರ್ಥಮಭಿಕಾಮೋ ಭವತಿ ಸೋಽಸ್ಯ ಸಂಕಲ್ಪಾದೇವ ಭವತಿ, ಯಂ ಯಂ ಕಾಮಂ ಕಾಮಯತೇ ಸೋಽಸ್ಯ ಸಂಕಲ್ಪಾದೇವ ಸಮುತ್ತಿಷ್ಠತಿ ಇತ್ಯಾದಯೋ ವೇದಾಃ ॥

ಮುಕ್ತ ಚೇತನನು ಪಿತೃಗಳನ್ನು ನೋಡಬೇಕೆಂದು ಬಯಸಿದರೆ ಸಂಕಲ್ಪ ಮಾತ್ರದಿಂದ ಅವನು ಅಲ್ಲಿ ಪ್ರಾದುರ್ಭೂತರಾದ ಪಿತೃಗಳನ್ನು ನೋಡುವನು. ಹೀಗೆಯೇ ಅವನು ತಾಯಂದಿರನ್ನು ನೋಡಬೇಕೆಂದು ಬಯಸಿದರೆ ಸಂಕಲ್ಪ ಮಾತ್ರದಿಂದ ಅವನ ತಾಯಂದಿರು ಅವನ ಕಣ್ಣಿಗೆ ಬೀಳುತ್ತಾರೆ. ಅವನು ಪತ್ನಿಯರನ್ನು ನೋಡಬೇಕೆಂದು ಬಯಸಿದರೆ ಸಂಕಲ್ಪ ಮಾತ್ರದಿಂದ ಅವನ ಪತ್ನಿಯರು ಪ್ರಾದುರ್ಭೂತರಾಗಿ ಅಲ್ಲಿ ಕಾಣಸಿಕೊಳ್ಳುತ್ತಾರೆ, ಹೀಗೆ ಮುಕ್ತನು ಯಾವ ಯಾವ ವಿಷಯಾದಿಗಳನ್ನು ಬಯಸುತ್ತಾನೋ ಅದೆಲ್ಲವೂ ಅವನ ಸಂಕಲ್ಪದಿಂದಲೇ ಬಂದೊದಗುತ್ತವೆ ಇತ್ಯಾದಿ ವಿಷಯಗಳನ್ನು ವೇದಗಳು ತಿಳಿಸುತ್ತವೆ. ಆದ್ದರಿಂದ ಮುಕ್ತಿಯಲ್ಲಿಯೂ ಈ ವೈಭವ ವಿಶೇಷವೂ, ಶೋಭಾತಿಶಯವೂ ಅತಿಶಯೋಕ್ತಿಯಲ್ಲ.

**ವಿಗ್ರಹ—**

**ಸುಖೀ—** ಸಂಖಂ ಅಸ್ಯ ಅಸ್ತೀತಿ ಸುಖೀ ।

**ಸಂಕಲ್ಪಮಾತ್ರಂ—** ಕೇವಲಂ ಸಂಕಲ್ಪಃ ಸಂಕಲ್ಪಮಾತ್ರಂ, ತಸ್ಮಾತ್ ಸಂಕಲ್ಪಮಾತ್ರಂ ।

**ವಿಭವಾತಿರೇಕಃ—** ವಿಭವಸ್ಯ ಅತಿರೇಕಃ ವಿಭವಾತಿರೇಕಃ ।

**ಕ್ರಿಯಾಪದ— ಕಾಮಯತೇ** - ಕಮುಕಾಂತೌ 1 **ಲಟ್** ಕಾಮಯತೇ, 2 ಲಿಟ್ ಕಾಮಯಾಂಚಕ್ರೇ, ಕಾಮಯಾಂಬಭೂವ, ಕಾಮಯಾಮಾಸ ಚಕಮೇ ಚಕಮಾತೇ ಚಕಮಿರೇ, ಚಕಮಿಷೇ, ಚಕಮಾಥೇ ಚಕಮಿಧ್ವೇ, ಚಕಮೇ ಚಕಮಿವಹೇ ಚಕಮಿಮಹೇ, 3 **ಲುಟ್** ಕಾಮಯಿತಾ ಕಮಿತಾ ಕಾಮಯಿತಾಸೇ ಕಮಿತಾಸೇ. 4 ಲೃಟ್ ಕಾಮಯಿಷ್ಯತೇ ಕಮಿಷ್ಯತೇ, 5 **ಲೋಟ್** ಕಾಮಯತಾಂ ಕಾಮಯೇತಾಂ ಕಾಮಯಂತಾಂ, ಕಾಮಯಸ್ವ, 6 ಲಙ್ ಅಕಾಮಯತ, 7 ವಿಧಿಲಿಙ್ ಕಾಮಯೇತ ಕಾಮಯೇಯಾತಾಂ ಕಾಮಯೇರನ್, 8 ಆಶೀರ್ಲಿಙ್ ಕಾಮಯಿಷೀಷ್ಟ ಕಾಮಯಿಷೀಯಾಸ್ತಾಂ ಕಾಮಯಿಷೀರನ್, ಕಾಮಯಿಷೀಢ್ವಂ ಕಾಮಯಿಷೀಧ್ವಂ, ಪಕ್ಷೇ ಕಮಿಷೀಷ್ಟ ಕಮಿಷೀಯಾಸ್ತಾಂ ಕಮಿಷೀರನ್, ಕಮಿಷೀಢ್ವಂ,

9 ಲುಙ್ ಅಚೀಕಮತ ಅಚೀಕಮೇತಾಂ ಅಚೀಕಮಂತ, ಪಕ್ಷೇ ಅಚಕಮತ ಅಚಕಮೇತಾಂ ಅಚಕಮಂತ, 10 ಲೃಙ್ ಅಕಾಮಯಿಷ್ಯತ ಅಕಮಿಷ್ಯತ । ಕಮುಕಾಂತೌ ಭ್ವಾದಿಃ ಸಕರ್ಮಕಃ ಸೇಟ್ ಆತ್ಮನೇಪದಿ to desire ಕಾಮಯತೇ ಲಟ್ ಪ್ರಥಮಪುರುಷ ಏಕವಚನಂ ।

**ವೇದಯಂತಿ** - 1 ಲಟ್ ವೇದಯತಿ, 2 ಲಿಟ್ ವೇದಯಾಂಚಕಾರ ವೇದಯಾಂಬಭೂವ ವೇದಯಾಮಾಸ, 3 ಲುಟ್ ವೇದಯಿತಾ.ಸಿ ವೇದಯಿತಾಸ್ಮಿ, 4 ಲೃಟ್ ವೇದಯಿಷ್ಯತಿ, 5 ಲೋಟ್ ವೇದಯತು, 6 ಲಙ್ ಅವೇದಯತ್, 7 ವಿಧಿಲಿಙ್ ವೇದಯೇತ್, 8 ಆಶೀರ್ಲಿಙ್ ವೇದ್ಯಾತ್ ವೇದ್ಯಾಸ್ತಾಂ ವೇದ್ಯಾಸುಃ, 9 ಲುಙ್ ಅವೀವಿದತ್ ಅವೀವಿದತಾಂ ಅವೀವಿದನ್ ಇತ್ಯಾದಿ, 10 ಲೃಙ್ ಅವೇದಯಿಷ್ಯತ್ ವಿದಜ್ಞಾನೇ ಸಕರ್ಮಕ ಸೇಟ್ ಪರಸ್ಮೈಪದಿ ಣಿಜಂತ Causitive ಲಟ್ ಪ್ರಥಮಪುರುಷ ಬಹುವಚನ to inform. ಸ್ಯಾತ್ ಅಸಭುವಿ ಅಕ = ಪರಸ್ಮೈ ವಿಧಿಲಿಙ್ ।

**ಪ್ರಯೋಗ**— ಸುಖಿನಾ ಅತ್ರಯಃ ಯಃ ಅರ್ಥಃ ಕಾಮ್ಯತೇ, ತೇನ ತೇನ ಸಕಲೇನ ಸಂಕಲ್ಪಮಾತ್ರಾತ್ ಭೂಯೇತ, ವೇದ್ಯೈರಪಿ ಇತ್ಯೇವ ಮುಕ್ತಿಃ ವೇದ್ಯತೇ ತತಃ ವಿಭವಾತಿರೇಕೇಣ ತೇನ ಭೂಯತೇ ।

**ಫಲಾರಿಯ**— 'ಅನಾಯಾಸಲಭ್ಯದುಃಖಾಸಂಭಿನ್ನಸುಖಾನುಭವಸ್ಯೈವ ಪುರುಷಾರ್ಥತ್ವಾತ್ ವೈಕುಂಠೇ ತದತಿರಿಕ್ತಸ್ಯ ಅಭಾವಾತ್ ತಸ್ಯ ಚ ಸತ್ವಾತ್ ಇತಿ ಭಾವಃ' ಅನಾಯಾಸವಾಗಿ ಸಿಗುವ ದುಃಖಮಿಶ್ರತೆ ಇಲ್ಲದ ಸುಖವೇ ಮೋಕ್ಷವೆಂಬ ಪುರುಷಾರ್ಥವು. ವೈಕುಂಠದಲ್ಲಿ ಇಂತಹ ಪುರುಷಾರ್ಥವು ಇದೆ. ಆದುದರಿಂದ ಅದಕ್ಕಿಂತ ಉತ್ತಮವಾದ ವೈಭವವು ಇನ್ನಾವುದಿದೆ ?

★ ★ ★

ಅವತಾರಿಕಾ— ಶೇಷದೇವರು ಈಗ ವೈಕುಂಠ ವರ್ಣನೆಯನ್ನು ಸಮಾಪ್ತಿಗೊಳಿಸುತ್ತಿದ್ದಾರೆ.

**ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ**
**ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ ।**
**ಸುರಾದ್ಯಾ ನರಾಂತಾ ಮುಕುಂದಪ್ರಸಾದಾದ್**
**ಇಮಂ ಮೋಕ್ಷಮೇತೇ ಭಜಂತೇ ಸದೇತಿ ॥ 79 ॥**

**ಪದಚ್ಛೇದ**— ಮಹಾನಂದತೀರ್ಥಸ್ಯ, ಯೇ, ಭಾಷ್ಯಭಾವಂ, ಮನೋವಾಗ್ಭಿಃ, ಆವರ್ತಯಂತೇ, ಸ್ವಶಕ್ತ್ಯಾ, ಸುರಾದ್ಯಾಃ, ನರಾಂತಾಃ, ಮುಕುಂದಪ್ರಸಾದಾತ್, ಇಮಂ, ಮೋಕ್ಷಂ, ಏತೇ, ಭಜಂತೇ, ಸದಾ, ಇತಿ ।

**ಅನ್ವಯ**— ಸುರಾದ್ಯಾಃ, ನರಾಂತಾಃ, ಯೇ ಮಹಾನಂದತೀರ್ಥಸ್ಯ, ಭಾಷ್ಯಭಾವಂ, ಮನೋವಾಗ್ಭಿಃ, ಸ್ವಶಕ್ತ್ಯಾ ಆವರ್ತಯಂತೇ, ಏತೇ ಮುಕುಂದಪ್ರಸಾದಾತ್, ಇಮಂ, ಮೋಕ್ಷಂ ಸದಾ, ಭಜಂತೇ, ಇತಿ ।

**ಅನ್ವಯಾರ್ಥ**—

**ಸುರಾದ್ಯಾಃ** = ದೇವತೆಗಳೇ ಮೊದಲಾಗಿ ಉಳ್ಳ
**ನರಾಂತಾಃ** = ಮನುಷ್ಯೋತ್ತಮರೇ ಕೊನೆಯಾಗಿ ಉಳ್ಳ,
**ಯೇ** = ಯಾವ ಅಧಿಕಾರಿಗಳು
**ಮಹಾನಂದತೀರ್ಥಸ್ಯ** = ಜೀವೋತ್ತಮರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ
**ಭಾಷ್ಯಭಾವಂ** = ಶ್ರೀಮದ್ ಬ್ರಹ್ಮಸೂತ್ರಭಾಷ್ಯದ ಅರ್ಥವನ್ನು (ತಾತ್ಪರ್ಯವನ್ನು)
**ಮನೋವಾಗ್ಭಿಃ** = ಮನಸ್ಸು ಮತ್ತು ಮಾತುಗಳಿಂದ

**ಸ್ವಶಕ್ತ್ಯಾ** = ತಮ್ಮ ಸಾಮರ್ಥ್ಯವನ್ನು ಅನುಸರಿಸಿ (ಯೋಗ್ಯತಾನುಸಾರವಾಗಿ)

**ಆವರ್ತಯಂತೇ** = (ಆವರ್ತಿಸುತ್ತಾರೋ) ಶ್ರವಣ, ಮನನ, ಪ್ರವಚನರೂಪವಾದ ಆವೃತ್ತಿಯನ್ನು ಮಾಡುತ್ತಾರೋ (ಪುನಃ ಪುನಃ ವಿಮರ್ಶಿಸುತ್ತಾ ವಿಚಾರ ಮಾಡುತ್ತಾ ಇರುತ್ತಾರೋ)

**ಏತೇ** = ಇಂತಹ ಯೋಗ್ಯಚೇತನರು

**ಮುಕುಂದಪ್ರಸಾದಾತ್** = ಮೋಕ್ಷಪ್ರದನಾದ ವಾಸುದೇವನ ಅನುಗ್ರಹದ ದೆಸೆಯಿಂದ

**ಇಮಂ** = ಇದುವರೆಗೆ ಹೇಳಿದ (ನಿಮ್ಮ ಮನಸ್ಸಿನಲ್ಲಿ ವಿಷಯವಾಗಿರುವ)

**ಮೋಕ್ಷಂ** = ಮೋಕ್ಷವನ್ನು

**ಸದಾ** = ನಿರಂತರವಾಗಿ (ಪುನರಾವೃತ್ತಿ ಇಲ್ಲದೆ)

**ಭಜಂತೇ** = ಹೊಂದುತ್ತಾರೆ.

**ಇತಿ** = ಎಂದು (ಸಃ ಗಿರಂ ಜಗಾದ = ಆ ಶೇಷದೇವರು ಸನಕಾದಿ ಮುನಿಗಳನ್ನು ಕುರಿತು ಮಾತನಾಡಿದರು).

**ತಾತ್ಪರ್ಯ**— ಆಚಾರ್ಯರು ಒಂದು ದಿನ ರಾತ್ರಿ ಪ್ರವಚನ ಮಾಡುತ್ತಿದ್ದಾಗ ಚಂದ್ರನಿಲ್ಲದ ಕಗ್ಗತ್ತಲೆಯಲ್ಲಿ ಬೆಳದಿಂಗಳಿನಂತಹ ಬೆಳಕು ಕಾಣಿಸಿತು. ಆಗ ಶಿಷ್ಯರು ಅದು ಬೆಳದಿಂಗಳೆಂದು ಭ್ರಾಂತಿ ಹೊಂದಿದರು. ಶ್ರೀಮಧ್ವಾಚಾರ್ಯರು ಇದು ನಮ್ಮ ಪ್ರವಚನವನ್ನು ಕೇಳಲು ಬಂದು ಈಗ ಸನಕಾದಿಮುನಿಗಳ ಜೊತೆಗೆ ಹಿಂತಿರುಗಿ ಹೋಗುತ್ತಿರುವ ಶೇಷದೇವರ ಮೈಯ ಕಾಂತಿಯು ಎಂದು ಶಿಷ್ಯರಿಗೆ ತಿಳಿಸಿ ಅವರು ಹೋಗುತ್ತಿರುವುದನ್ನೂ ಜನರಿಗೆ ತೋರಿಸಿದರು. ಅನಂತರ ಶೇಷದೇವರು ತಮ್ಮ ಮನೆಗೆ ಹೋಗಿ ಸುಖಾಸೀನರಾಗಿರುವಾಗ ಸನಕಾದಿಮುನಿಗಳು ಅವರ ಬಳಿಗೆ ಹೋಗಿ ವಿನಯದಿಂದ ವಂದಿಸಿ, ನಾಗಲೋಕಪತಿಯಾದ ಶೇಷದೇವರೇ! ನೀವೂ ಗೌರವಿಸುವ ಶ್ರೀಪೂರ್ಣಪ್ರಜ್ಞರ ಬ್ರಹ್ಮಸೂತ್ರಭಾಷ್ಯ ಮೊದಲಾದ ಗ್ರಂಥಗಳನ್ನು ಓದಿ ತಿಳಿದು ಅಭಿಪ್ರಾಯವನ್ನು ಪುನಃ ಪುನಃ ಆವೃತ್ತಿ ಮಾಡುವ ಜನರಿಗೆ ಉಂಟಾಗುವ ಫಲವನ್ನು ವಿಸ್ತಾರವಾಗಿ ತಿಳಿಸಬೇಕು, ಎಂದು ಕೇಳಿದಾಗ ಶೇಷದೇವರು, ಮಹನೀಯಪಾದಸಮಯಸ್ಯ ಮಹನೀಯತಮಂ ಫಲಂ ಆದರೇಣ ಶೃಣುತ ಆನಂದತೀರ್ಥ ಭಗವತ್ಪಾದರ ಸಿದ್ಧಾಂತದ ಅತ್ಯಂತ ಮಹತ್ತಾದ ಪೂಜ್ಯವಾದ ಫಲವನ್ನು ಭಕ್ತಿಯಿಂದ ಕೇಳಿರಿ, ಹೇಳುತ್ತೇನೆ ಎಂದು ಆರಂಭಿಸಿ (ಸರ್ಗ 11, ಶ್ಲೋಕ 5) ಮಹಾನಂದತೀರ್ಥಸ್ಯ (ಸರ್ಗ 11, ಶ್ಲೋಕ 79) ಎಂಬಲ್ಲಿಯವರೆಗೆ (75 ಶ್ಲೋಕಗಳಿಂದ) ಹೇಳಿದರು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಸರ್ವಜೀವೋತ್ತಮರಾದ ಶ್ರೀಮುಖ್ಯಪ್ರಾಣದೇವರ ಅವತಾರರು. ಅವರು ರಚಿಸಿರುವ ಬ್ರಹ್ಮಸೂತ್ರಭಾಷ್ಯವು ಮೋಕ್ಷಕ್ಕೆ ಬೇಕಾಗಿರುವ ಎಲ್ಲಾ ತತ್ತ್ವಜ್ಞಾನದ ಸಾರವನ್ನು ಒಳಗೊಂಡಿದೆ. ದೇವತೆಗಳೇ ಮೊದಲಾಗಿ ಮನುಷ್ಯೋತ್ತಮರವರೆಗೆ ಇರುವ ಮೋಕ್ಷಯೋಗ್ಯರಾದ ಅಧಿಕಾರಿಗಳು ನಿರಂತರವಾಗಿ ಆ ಭಾಷ್ಯವನ್ನು ಕೇಳಬೇಕು, ಅಭಿಪ್ರಾಯವನ್ನು ಮನನ ಮಾಡುತ್ತಿರಬೇಕು. ಅದರ ಅರ್ಥವನ್ನು ಪರಮಾತ್ಮನ ಗುಣಗಳ ರೂಪದಲ್ಲಿ ಅನುಸಂಧಾನ ಮಾಡಿ ಅವರವರ ಶಕ್ತಿಯನ್ನು ಅನುಸರಿಸಿ ಧ್ಯಾನ ಮಾಡುತ್ತಿರಬೇಕು. ಮನಸ್ಸು ಮತ್ತು ಮಾತುಗಳು ಯಾವಾಗಲೂ ಇದೇ ಕಾರ್ಯವನ್ನು ಮಾಡುತ್ತಿರಬೇಕು. ಹೀಗೆ ಮಾಡುತ್ತಿರುವವರಿಗೆ ಶ್ರೀಮುಕುಂದನ ಪರಮಾನುಗ್ರಹವುಂಟಾಗಿ ನಾವು ಇದುವರೆಗೆ ಹೇಳಿದ ವೈಕುಂಠಲೋಕದ ಪ್ರಾಪ್ತಿಯಾಗುತ್ತದೆ. ಅಲ್ಲಿ ತನ್ನ ನಿರ್ದುಃಖಾನಂದ ಸ್ವರೂಪದ ಅನುಭವವುಂಟಾಗುತ್ತದೆ. ಅಲ್ಲಿಂದ ಎಂದೂ ಪುನಃ ಸಂಸಾರಕ್ಕೆ ಈ ಜನನ ಮರಣದ ಕಷ್ಟಕೋಟಲೆಗಳಿಗೆ ಹಿಂದಿರುಗಿ ಬರುವುದಿಲ್ಲ ಎಂದು ಶೇಷದೇವರು ಸನಕಾದಿಗಳಿಗೆ ಉಪದೇಶಿಸಿ ಉಪಸಂಹರಿಸಿದ್ದಾರೆ.

(ಶ್ರವಣಾಧಿಕಾರಿಗಳು ಗುರುಗಳ ಬಳಿಯಲ್ಲಿ ಶ್ರವಣವನ್ನು ಮಾತ್ರ ಮಾಡುತ್ತಿರಬೇಕು. ಯುಕ್ತಾಯುಕ್ತಚಿಂತನ ರೂಪವಾದ ಮನನಾಧಿಕಾರಿಗಳು ಪುನಃ ಪುನಃ ಮನನ ಮಾಡುತ್ತಿರಬೇಕು. ಯೋಗ್ಯ ಶಿಷ್ಯರಲ್ಲಿ ಉಪದೇಶರೂಪವಾದ ಪ್ರವಚನ ಮಾಡುವ ಶಕ್ತಿಯುಳ್ಳವರು ಅನೇಕ ಬಾರಿ ವ್ಯಾಖ್ಯಾನವನ್ನು ಮಾಡುತ್ತಿರಬೇಕು. ಯಥಾಶಕ್ತಿ ಧ್ಯಾನವನ್ನು ಮಾಡುತ್ತಿರಬೇಕು. ಹೀಗೆ ಅವರವರ ಯೋಗ್ಯತೆಯನ್ನು ಅನುಸರಿಸಿ ಮಾಡುವ ಶ್ರವಣ ಮನನ ನಿಧಿಧ್ಯಾಸನರೂಪವಾದ

ಬ್ರಹ್ಮಜಿಜ್ಞಾಸೆಯಿಂದ ಸುಪ್ರೀತನಾದ ಮೋಕ್ಷಪ್ರದನಾದ ಮುಕುಂದನು ಹಿಂದೆ ಹೇಳಿದ ವೈಕುಂಠಲೋಕವನ್ನಿತ್ತು, ಅಲ್ಲಿ ಸ್ವಸ್ವರೂಪಾನಂದಾವಿರ್ಭಾವರೂಪವಾದ ಉತ್ತಮಸ್ಥಿತಿಯಲ್ಲಿ ಯೋಗ್ಯರಾದ ಸಮಸ್ತ ಚೇತನರನ್ನೂ ಇಟ್ಟು ನಿರಂತರ ಅನುಗ್ರಹಿಸುತ್ತಿರುವನು.)

**ವಿಗ್ರಹ—**

**ಮಹಾನಂದತೀರ್ಥಸ್ಯ—** ಮಹಾನ್ ಚ ಅಸೌ ಆನಂದತೀರ್ಥಶ್ಚ ಮಹಾನಂದತೀರ್ಥಃ, ತಸ್ಯ ಮಹಾನಂದ ತೀರ್ಥಸ್ಯ ।

**ಭಾಷ್ಯಭಾವಂ—** ಭಾಷ್ಯಸ್ಯ ಭಾವಃ ಭಾಷ್ಯಭಾವಃ, ತಂ ಭಾಷ್ಯಭಾವಂ ।

**ಮನೋವಾಗ್ಭಿಃ—** ಮನಾಂಸಿ ಚ ವಾಚಶ್ಚ ಮನೋವಾಚಃ, ತಾಭಿಃ ಮನೋವಾಗ್ಭಿಃ ।

**ಸ್ವಶಕ್ತ್ಯಾ—** ಸ್ವಸ್ಯ ಶಕ್ತಿಃ ಸ್ವಶಕ್ತಿಃ, ತಯಾ ಸ್ವಶಕ್ತ್ಯಾ ।

**ಸುರಾದ್ಯಾಃ—** ಆದೌ ಭವಾಃ ಆದ್ಯಾಃ, ಸುರಾಃ ಆದ್ಯಾಃ ಯೇಷಾಂ ತೇ ಸುರಾದ್ಯಾಃ ।

**ನರಾಂತಾಃ—** ನರಾಃ ಅಂತಾಃ ಯೇಷಾಂ ತೇ ನರಾಂತಾಃ ।

**ಮುಕುಂದಪ್ರಸಾದಾತ್—** ಮುಕುಂದಸ್ಯ ಪ್ರಸಾದಃ ಮುಕುಂದಪ್ರಸಾದಃ, ತಸ್ಮಾತ್ ಮುಕುಂದಪ್ರಸಾದಾತ್ ।

**ಕ್ರಿಯಾಪದ— ಆವರ್ತಯಂತೇ-** ಆಙ್ ಇತ್ಯುಪಸರ್ಗಪೂರ್ವಕಾತ್ ವೃತು ವರ್ತನೇ ಇತಿ ಧಾತೋಃ ಣಿಜಂತಾತ್ ಆತ್ಮನೇಪದಿನಃ ಲಟ್ ಪ್ರಥಮಪುರುಷೇ ಬಹುವಚನೇ 'ಆವರ್ತಯಂತೇ' ಇತಿ ರೂಪಂ ।

ಭಜಂತೇ- ಭಜಸೇವಾಯಾಂ ಇತ್ಯತಃ ಆತ್ಮನೇಪದಿನಃ ಲಟ್ ಪ್ರಥಮಪುರುಷೇ ಬಹುವಚನೇ 'ಭಜಂತೇ' ಇತಿ ರೂಪಂ ।

**ಪ್ರಯೋಗ—** ಸುರಾದ್ಯೈಃ ನರಾಂತೈಃ ಯೈಃ ಮಹಾನಂದತೀರ್ಥಸ್ಯ ಭಾಷ್ಯಭಾವಃ ಮನೋವಾಗ್ಭಿಃ ಸ್ವಶಕ್ತ್ಯಾ ಆವರ್ತ್ಯತೇ, ಏತೈಃ ಮುಕುಂದಪ್ರಸಾದಾತ್ ಅಯಂ ಮೋಕ್ಷಃ ಸದಾ ಭಜ್ಯತೇ ।

**ಕೋಶ—** ಆದ್ಯಾಃ = ಮೊದಲು ಉಳ್ಳವರು, ''ಪುಂಸ್ಯಾದಿಃ ಪೂರ್ವಪೌರಸ್ತ್ಯ ಪ್ರಥಮಾದ್ಯಾ ಅಥಾ ಸ್ತ್ರಿಯಾಂ'', ಅಮರ, ನರಾಂತಾಃ, ಅಂತಃ = ಕೊನೆ, ''ಅಂತೋ ಜಘನ್ಯಂ ಚರಮಂ ಅಂತ್ಯಪಾಶ್ಚಾತ್ಯಪಶ್ಚಿಮಾಃ'' ಅಮರ, ಭಾವ = ಅಭಿಪ್ರಾಯ, ''ಭಾವೋಽಭಿಪ್ರಾಯ ಆಶಯಃ'', ಅಭಿಧಾನ.

***ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ***
***ಏಕಾದಶಃ ಸರ್ಗಃ ಸಮಾಪ್ತಃ ॥***

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ದ್ವಾದಶಃ ಸರ್ಗಃ

### ಹನ್ನೆರಡನೆಯ ಸರ್ಗದ ಕಥಾಸಾರ

ಶ್ರೀಮಧ್ವಾಚಾರ್ಯರು ರಜತಪೀಠಪುರದಲ್ಲಿ ತಮ್ಮ ಸಿದ್ಧಾಂತದ ಗ್ರಂಥಗಳನ್ನು ಪ್ರವಚನ ಮಾಡುತ್ತಿದ್ದರು. ಆಗ ಅದ್ವೈತಸಿದ್ಧಾಂತದ ಅನುಯಾಯಿಗಳು ತುಂಬಾ ಕ್ಷೋಭೆಗೊಂಡರು. ಅವರಲ್ಲಿ ಅನೇಕರು ಚೋಳದೇಶದ ಪದ್ಮತೀರ್ಥ ಮತ್ತು ಪುಂಡರೀಕಪುರಿ ಎಂಬುವರೊಡನೆ ಸೇರಿ ಶ್ರೀಮಧ್ವಾಚಾರ್ಯರನ್ನು ಸೋಲಿಸಲು ಮಂತ್ರಾಲೋಚನೆ ಮಾಡಿದರು. ಅವರ ಮಂತ್ರಾಲೋಚನೆಯ ಸಭೆಯು ಸೇರಿತು. ಆಗ ಅವರಲ್ಲಿ ಶಕುನಿಯಂತಿರುವ ಒಬ್ಬ ವಾಚಾಳಿಯು ಈ ರೀತಿ ಹೇಳಲಾರಂಭಿಸಿದನು. ''ಶ್ರೀಶಂಕರಾಚಾರ್ಯರ ಅದ್ವೈತ ಸಿದ್ಧಾಂತವು ಅನಾದಿಕಾಲದಿಂದ ಬಂದಿದೆ. ಅದು ಅತ್ಯುತ್ತಮ ಸಿದ್ಧಾಂತವಾಗಿದೆ. ಈ ಸಿದ್ಧಾಂತವನ್ನು ಹೊಂದಿಸಲು ಬರುವುದಿಲ್ಲ ಎಂಬ ವಿಷಯವೇ ಅದಕ್ಕೊಂದು ಭೂಷಣವಾಗಿದೆ. ವೇದಾದಿ ಪ್ರಮಾಣಗಳು ಭೇದವು ಇದೆಯೆಂದು ಬೋಧಿಸಿದರೂ, ಭೇದವು ವಾಸ್ತವಿಕವಾಗಿ ಇಲ್ಲ, ಅದು ಮಿಥ್ಯಾ ಎಂದು ಶಂಕರಾಚಾರ್ಯರ ದರ್ಶನವನ್ನು ತಿಳಿಯದೆ ಯಾವನು ಪ್ರತಿಪಾದಿಸಿಯಾನು ? ವ್ಯಾವಹಾರಿಕವಾಗಿ ಭೇದ ಪ್ರಪಂಚವು ಇದ್ದಂತೆ ಕಂಡರೂ ಪಾರಮಾರ್ಥಿಕ ದಶೆಯಲ್ಲಿ ಆ ಭೇದವು ಮಾಯವಾಗುತ್ತದೆ. ಈ ಸಿದ್ಧಾಂತವನ್ನು ಆಶ್ರಯಿಸಿ ಅನೇಕರು ನಿರ್ಗುಣ ಬ್ರಹ್ಮಭಾವರೂಪವಾದ ಮೋಕ್ಷವನ್ನು ಪಡೆದಿದ್ದಾರೆ. ಈ ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಎದುರಿಸಿ ಖಂಡಿಸಿ ತಡೆದು ಉತ್ತಮವಾದ ಅದ್ವೈತ ಸಿದ್ಧಾಂತವನ್ನು ನೀವೇ ರಕ್ಷಿಸಬೇಕು. ಈ ಮಧ್ವಾಚಾರ್ಯರನ್ನು ತಡೆಯುತ್ತೇನೆಂದು ಪೂಜ್ಯರಾದ ಪದ್ಮತೀರ್ಥರು ಪ್ರತಿಜ್ಞೆ ಮಾಡಿದರು. ಆದರೆ ಅವರ ಪ್ರತಿಜ್ಞೆಯು ಸಫಲವಾಗಲಿಲ್ಲ. ಇದು ನಮ್ಮ ದುರದೃಷ್ಟವೇ ಸರಿ. ಆದರೂ ಈ ಮಧ್ವಾಚಾರ್ಯರ ಸಿದ್ಧಾಂತವನ್ನು ವಿರೋಧಿಸಲು ಪದ್ಮತೀರ್ಥರೇ ಮೊದಲಾದವರು ಸಮರ್ಥರೆಂದೇ ನನ್ನ ಭಾವನೆ. ಆ ಮಧ್ವಾಚಾರ್ಯರೂ ಅವರ ಶಿಷ್ಯರೂ ಬ್ರಹ್ಮನಿಗೆ ಗುಣವೈಶಿಷ್ಟ್ಯವನ್ನು ಬೋಧಿಸುತ್ತ ಅದ್ವೈತ ಮತಾವಲಂಬಿಗಳನ್ನೆಲ್ಲಾ ತಮ್ಮ ಸಿದ್ಧಾಂತದ ಕಡೆಗೆ ಆಕರ್ಷಿಸುತ್ತಿದ್ದಾರೆ. ಇದರಿಂದಾಗಿ ನಮ್ಮ ಮಾಯಾವಾದವು ಮಾಯವಾಗಿ ಹೋಗಬಹುದು. ನಶಿಸಿ ಹೋಗಬಹುದು. ಈಗ ನಾವು ಉದಾಸೀನರಾಗಕೂಡದು''

ಆ ಮಾತನ್ನು ಕೇಳಿ ಕಷ್ಟ ಎಂಬ ಮಾಯಾವಾದಿಯು ಘಟ್ಟಿಯಾಗಿ ಹೇಳಲಾರಂಭಿಸಿದನು, ''ಆಹಾ! ಈ ಹೇಡಿಗಳು ಮಧ್ವಾಚಾರ್ಯರ ಬೆದರಿಕೆಯ ಮಾತುಗಳಿಂದ ನಡುಗುವರು. ಈ ಪದ್ಮತೀರ್ಥರೇ ಮೊದಲಾದ ಮಹಾ ಪಂಡಿತರು ನಮ್ಮ ಪಕ್ಷದಲ್ಲಿರುವಾಗ ನಮಗೇತಕೆ ಭಯ ? ಬ್ರಹ್ಮನು ಸಗುಣನೆಂಬ ವಾದವನ್ನು ನಮ್ಮವರು ಖಂಡಿಸಲಾಗದಿದ್ದರೆ ಮಾಟ ಮಂತ್ರಾದಿಗಳಿಂದ ಆ ಪಕ್ಷದವರನ್ನು ಗೆಲ್ಲಬಹುದು. ಬುದ್ಧಿಶಾಲಿಗಳಾದ ನಮ್ಮವರು ಆ ಮಧ್ವಾಚಾರ್ಯರಲ್ಲಿ ಮತ್ತು ಅವರ ಅನುಯಾಯಿಗಳಲ್ಲಿ ಇಲ್ಲಸಲ್ಲದ ದೋಷಗಳನ್ನೆತ್ತಿ ಪ್ರಚಾರ ಮಾಡಬೇಕು. ಹೀಗೆ ಬೇರೆ ಬೇರೆ ಉಪಾಯಗಳಿಂದ ಅವರನ್ನು ಖಂಡಿಸಿ ಮುಖಭಂಗ ಮಾಡಬೇಕು. ಪ್ರತಿ ಹಳ್ಳಿಗೆ ಹೋಗಿ ಆ ಸಿದ್ಧಾಂತ ಪ್ರತಿಪಾದಕರಾದ ಮಧ್ವಾಚಾರ್ಯರೂ ಅವರನ್ನು

ಯಾರೂ ಸಮ್ಮಾನಿಸದಂತೆ ಮಾಡಬೇಕು. ಅವರ ಗ್ರಂಥಗಳನ್ನು ಅಪಹರಿಸಬೇಕು. ಅವರಿಗೆ ಸಾಧ್ಯವಾದ ಇನ್ನಿತರ ತೊಂದರೆಗಳನ್ನು ಕೊಡಬೇಕು.''

ಹೀಗೆ ಮಂತ್ರಾಲೋಚನೆ ಮಾಡಿದ ಅವರು ತಮಗೆ ಯೋಗ್ಯವಾದ ಮಹಾನರಕಕ್ಕೆ ಭಾಗಿಗಳಾಗಲು ಆಚಾರ್ಯರಿಗೂ ಅವರ ಶಿಷ್ಯರಿಗೂ ತೊಂದರೆಯನ್ನು ಕೊಡಲು ಪ್ರಯತ್ನಿಸಿದರು. ಅವರು ಪುಂಡರೀಕಪುರಿ ಎಂಬುವನನ್ನು ವಾದಕ್ಕೆ ಅಣಿ ಮಾಡಿ ಉಡುಪಿಯಲ್ಲಿಯೇ ಶ್ರೀಮಧ್ವಾಚಾರ್ಯರನ್ನು ವಾದಕ್ಕೆ ಕರೆದರು. ಅಲ್ಪಬುದ್ಧಿಯುಳ್ಳ ಆ ಮಾಯಾವಾದಿಯು ತಮ್ಮವರ ಪ್ರೋತ್ಸಾಹದಿಂದ ಶ್ರೀಮಧ್ವರನ್ನು ವಾದಕ್ಕೆ ಕರೆದಾಗ ಇವನು ಅಲ್ಪನೆಂದು ಮಧ್ವಾಚಾರ್ಯರು ಉದಾಸೀನ ಮಾಡಲಿಲ್ಲ. ಅವರು ಮೊದಲು ವೇದವನ್ನು ಶಾಸ್ತ್ರೀಯ ಕ್ರಮದಿಂದ ಪ್ರವಚನ ಮಾಡಿದರು. ಆಗ ಅನೇಕ ಮಂದಿ ಬ್ರಾಹ್ಮಣರು ಆ ವೇದಪ್ರವಚನವನ್ನು ಕೇಳಲು ಬಂದು ಕುಳಿತರು. ಅವರ ಶಾಸ್ತ್ರೀಯವಾದ ವೇದಪ್ರವಚನವನ್ನು ದೇವತೆಗಳೂ ಕೇಳಿ ಸಂತೋಷಪಟ್ಟರು. ಚತುರ್ಮುಖ ಬ್ರಹ್ಮದೇವರಂತೆ ಅರ್ಥ ಸಹಿತವಾದ ವೇದ ಪ್ರವಚನ ಮಾಡುವುದನ್ನು ಕೇಳಿ ಕೆಲವರು ಬಹಳ ಸಂತೋಷಪಟ್ಟರು. ಮತ್ತೆ ಕೆಲವರು ಈಗ ವಾದದಲ್ಲಿ ಯಾರು ಗೆಲ್ಲುವರು ಎಂದು ತಿಳಿಯಲು ಪುಂಡರೀಕ ಪುರಿಯ ಹತ್ತಿರ ಬಂದು ನೀವೂ ಹಾಗೆಯೇ ವೇದಪ್ರವಚನವನ್ನು ಮಾಡಿರಿ ಎಂದು ಪ್ರಾರ್ಥಿಸಿದರು. ಪುಂಡರೀಕಪುರಿಯ ವೇದಪ್ರವಚನವನ್ನು ಪ್ರಾರಂಭಿಸಿ, ಆರಂಭದಲ್ಲಿಯೇ ಅಗ್ನಿ-ನಾರಯಿಂ ಎಂಬಲ್ಲಿ ಅಗ್ನಿ + ನಾರ ಎಂದು ತಪ್ಪಾಗಿ ಪದವನ್ನು ಬಿಡಿಸಿದನು. ಎಲ್ಲರೂ ಅವನನ್ನು ಅಪಹಾಸ್ಯ ಮಾಡಿ ಮಾಡಿ ನಕ್ಕರು. ಬೈದರು. ಪುಂಡರೀಕಪುರಿಯು ವಾದ ಮಾಡಲಾರದೆ ಸೋತುಹೋದನು.

ಶ್ರೀಮಧ್ವಾಚಾರ್ಯರು ಲಿಕುಚ ವಂಶದ ಶಂಕರಾಚಾರ್ಯನೆಂಬ ಬ್ರಾಹ್ಮಣನಲ್ಲಿ ತನ್ನ ಶಾಸ್ತ್ರಪುಸ್ತಕಗಳನ್ನು ಇಟ್ಟಿದ್ದರು. ಆ ಗ್ರಂಥಗಳನ್ನು ಪದ್ಮತೀರ್ಥರೆಂಬ ಮತ್ತೊಬ್ಬ ಮಾಯಾವಾದಿ ಸನ್ಯಾಸಿಯು ಅಪಹರಿಸಿದರು. ಶ್ರೀಮಧ್ವಾಚಾರ್ಯರು ಈ ವಾರ್ತೆಯನ್ನು ಕೇಳಿ ಜ್ಯೇಷ್ಠಯತಿಗಳೊಡನೆ ಕೂಡಲೇ ಪದ್ಮತೀರ್ಥರು ಇದ್ದಲ್ಲಿಗೆ ಹೋದರು. ಆಚಾರ್ಯರು ಪದ್ಮತೀರ್ಥರೊಡನೆ ವಾದಮಾಡಿ ಅವರನ್ನು ಸೋಲಿಸಿ, ಅಪಹಾಸ್ಯಮಾಡಿ ತಿರಸ್ಕರಿಸಿದರು. ಹಿಂದೆ ಸೋತುಹೋಗಿದ್ದ ಪುಂಡರೀಕಪುರಿಯು ಪದ್ಮತೀರ್ಥರಿಗೆ ಬೆಂಗಾವಲಾಗಿ ನಿಂತು ವಾದ ಮಾಡಲಾರಂಭಿಸಿದಾಗ ಆ ಪುಂಡರೀಕಪುರಿಯನ್ನೂ, ಪದ್ಮತೀರ್ಥರನ್ನೂ ಆಚಾರ್ಯರು ಪುನಃ ಖಂಡಿಸಿದರು.

ಆಚಾರ್ಯರ ಅಸಾಧಾರಣವಾದ ಈ ದಿಗ್ವಿಜಯವನ್ನು ಕಂಡು ಆಚಾರ್ಯರ ಶಿಷ್ಯರು ಮಾಯಾವಾದಿಗಳಿಗೆ ಎಚ್ಚರಿಕೆಯ ಮಾತನ್ನು ಹೇಳಿದರು.

''ಎಲೈ ಮಾಯಾವಾದಿಗಳೇ! ಶ್ರೀಮಧ್ವಾಚಾರ್ಯರು ಬ್ರಹ್ಮಸ್ವರೂಪವನ್ನು ಯುಕ್ತಿಯುಕ್ತವಾಗಿ ಚತುರವಾದ ಮಾತಿನಿಂದ ವಿವರಿಸುತ್ತಾ ಸೂರ್ಯನಂತೆ ವಿರಾಜಿಸುತ್ತಿದ್ದಾರೆ. ಕಳ್ಳರಿಗೆ ಕತ್ತಲು ಆಶ್ರಯವಾಗಿದ್ದಂತೆ ನಿಮಗೆ ಆಶ್ರಯವು ಮಾಯೆಯು. ಆ ಮಾಯಾರಜನಿಯು ಮಧ್ವಸೂರ್ಯನ ಪ್ರಖರ ತೇಜಸ್ಸಿನಿಂದ ಕರಗಿ ಮಾಯವಾಗಿ ಹೋಯಿತು. ಕತ್ತಲೆಯು ನಾಶವಾದ ಕೂಡಲೇ ಕಳ್ಳರು ಓಡಿಹೋಗುವಂತೆ, ಹಾವುಗಳು ಹಾವಾಡಿಗನ ಸುಳಿವು ತಿಳಿದು ಅಡಗಿ-ಕೊಳ್ಳುವಂತೆ, ನೀವೂ ಓಡಿಹೋಗಿರಿ. ಗುಟ್ಟಾದ ಸ್ಥಳಗಳಲ್ಲಿ ಅಡಗಿಕೊಳ್ಳಿರಿ. ಮಾಯಾವಾದಿಗಳೇ! ಬೇಗ ಓಡಿರಿ. ನಿಮ್ಮನ್ನು ಖಂಡಿಸಲು ಶ್ರೀಮಧ್ವಾಚಾರ್ಯರು ಇಲ್ಲಿಗೆ ಬಂದಿದ್ದಾರೆ''. ಆಚಾರ್ಯರ ಶಿಷ್ಯರ ಈ ಎಚ್ಚರಿಕೆಯ ಮಾತುಗಳನ್ನು ಅಲ್ಲಿದ್ದ ಸಜ್ಜನರೆಲ್ಲಾ ಅಭಿನಂದಿಸಿದರು.

ಶ್ರೀಮದಾನಂದತೀರ್ಥಭಗವತ್ಪಾದರು ತಾವು ತತ್ಕಾಲದಲ್ಲಿ ತಂಗಿದ್ದ ಕಾವು ಎಂಬ ಹಳ್ಳಿಯಿಂದ ಹೊರಟು ಕೂಡಿಪಾಡಿ ಎಂಬ ದೇವಾಲಯಕ್ಕೆ ಹೋಗಿ ಅಲ್ಲಿಯೇ ಚಾತುರ್ಮಾಸ್ಯ ವ್ರತವನ್ನು ಆಚರಿಸಲು ನಿರ್ಧರಿಸಿದರು.

★ ★ ★

|| ಶ್ರೀಃ ||

|| ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ||

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ದ್ವಾದಶಃ ಸರ್ಗಃ

**ಅವತಾರಿಕಾ**— ಶ್ರೀಮಧ್ವಾಚಾರ್ಯರು ತಮ್ಮ ಗ್ರಂಥವ್ಯಾಖ್ಯಾನದಿಂದ ವಿಜೃಂಭಿಸುತ್ತಿರಲು ಮಾಯಾವಾದಿಗಳಿಗಾದ ಕ್ಷೋಭೆಯ ವರ್ಣನೆ.

**ತತ್ರಾನಂತಸ್ವಾಂತವೇದಾಂತಿಸಿಂಹೇ**

**ಮುಖ್ಯವ್ಯಾಖ್ಯಾನಿಸ್ವನೇ ಜೃಂಭಮಾಣೇ ।**

**ಸದ್ಯೋಮಾದ್ಯದ್ವಾದಿದಂತೀಂದ್ರಭೀಮೇ**

**ಭೇಜೇ ಕ್ಷೋಭೋ ಮಾಯಿಗೋಮಾಯುಯೂಥ್ಯೈಃ || 1 ||**

**ಪದಚ್ಛೇದ**— ತತ್ರ, ಅನಂತಸ್ವಾಂತವೇದಾಂತಿಸಿಂಹೇ, ಮುಖ್ಯವ್ಯಾಖ್ಯಾನಿಸ್ವನೇ, ಜೃಂಭಮಾಣೇ, ಸದ್ಯಃ, ಮಾದ್ಯದ್ವಾದಿದಂತೀಂದ್ರಭೀಮೇ, ಭೇಜೇ, ಕ್ಷೋಭಃ, ಮಾಯಿಗೋಮಾಯುಯೂಥ್ಯೈಃ ।

**ಅನ್ವಯ**— ಮುಖ್ಯವ್ಯಾಖ್ಯಾನಿಸ್ವನೇ, ಸದ್ಯಃ, ಮಾದ್ಯದ್ವಾದಿದಂತೀಂದ್ರಭೀಮೇ ಅನಂತಸ್ವಾಂತವೇದಾಂತಿಸಿಂಹೇ ತತ್ರ ಜೃಂಭಮಾಣೇ ಸತಿ ಮಾಯಿಗೋಮಾಯುಯೂಥ್ಯೈಃ ಕ್ಷೋಭಃ ಭೇಜೇ ।

**ಅನ್ವಯಾರ್ಥ**—

ಮುಖ್ಯ = ಉತ್ತಮವಾದ

ವ್ಯಾಖ್ಯಾ = ಪ್ರವಚನವೆಂಬ

ನಿಸ್ವನೇ = ಗರ್ಜನ ಧ್ವನಿಯುಳ್ಳ

ಸದ್ಯಃ = ಕೂಡಲೇ

ಮಾದ್ಯದ್ = ಮದಿಸಿರುವ

ವಾದಿ = ವಾದ ಮಾಡುವ ಪಂಡಿತರೆಂಬ

ದಂತೀಂದ್ರ = ಶ್ರೇಷ್ಠವಾದ ಆನೆಗಳಿಗೆ

ಭೀಮೇ = ಭಯಂಕರರಾದ

ಅನಂತಸ್ವಾಂತ = ಶ್ರೀಮನ್ನಾರಾಯಣನ ವಿಷಯಕವಾದ ಮನಸ್ಸುಳ್ಳ

ವೇದಾಂತಿ = ವೇದಾಂತ ಶಾಸ್ತ್ರವನ್ನು ಅರಿತ ಪೂರ್ಣಪ್ರಜ್ಞರೆಂಬ

**ಸಿಂಹೇ** = ಸಿಂಹವು

**ತತ್ರ** = ಉಡುಪಿಯಲ್ಲಿ,

**ಜೃಂಭಮಾಣೇ (ಸತಿ)** = ಪ್ರಕಾಶಿಸುತ್ತಿರಲು

**ಮಾಯಿ** = ಮಾಯಾವಾದಿಗಳಾದ ಅದ್ವೈತಿಗಳೆಂಬ

**ಗೋಮಾಯು** = ನರಿಗಳ

**ಯೂಥೈಃ** = ಹಿಂಡುಗಳಿಂದ

**ಕ್ಷೋಭಃ** = ಚಪಲತೆಯು

**ಭೇಜೇ** = ಹೊಂದಲ್ಪಟ್ಟಿತು.

**ತಾತ್ಪರ್ಯ**— ಉಡುಪಿಯಲ್ಲಿ ಶ್ರೀಪೂರ್ಣಪ್ರಜ್ಞಾಚಾರ್ಯರು, ಶ್ರೀಮನ್ನಾರಾಯಣನನ್ನು ಧ್ಯಾನಿಸುತ್ತಾ, ವೇದಾಂತ ಶಾಸ್ತ್ರವನ್ನು ವ್ಯಾಖ್ಯಾನ ಮಾಡುತ್ತಾ ಸಿಂಹದಂತೆ ವಿರಾಜಿಸುತ್ತಿದ್ದರು. ಅವರು ಮದಿಸಿದ ಆನೆಯಂತಿರುವ ಪ್ರತಿವಾದಿಗಳಿಗೆ ಭಯಂಕರರಾಗಿದ್ದರು. ಆಗ ಅವರ ಪ್ರವಚನರೂಪವಾದ ಗರ್ಜನೆಯನ್ನು ಕೇಳಿ ನರಿಗಳಂತಿರುವ ಮಾಯಾವಾದಿಗಳು ಹೆದರಿ ಮನಸ್ಸಿನಲ್ಲಿ ಕಳವಳಗೊಂಡರು. ಅವರ ಪ್ರವಚನರೂಪವಾದ ಗರ್ಜನೆಯನ್ನು ಕೇಳಿ ನರಿಗಳಂತಿರುವ ಮಾಯಾ-ವಾದಿಗಳು ಹೆದರಿ ಮನಸ್ಸಿನಲ್ಲಿ ಕಳವಳಗೊಂಡರು. ಅವರ ಮನಸ್ಸು ಅಲ್ಲೋಲ ಕಲ್ಲೋಲವಾಯಿತು.

ವಿಗ್ರಹ—

**ಅನಂತಸ್ವಾಂತವೇದಾಂತಿಸಿಂಹೇ**— ಅನಂತೇ ಸ್ವಾಂತಂ ಯಸ್ಯ ಸಃ ಅನಂತಸ್ವಾಂತಃ, ವೇದಾಂತಃ ಅಸ್ಯ ಅಸ್ತೀತಿ ವೇದಾಂತೀ, ಅನಂತಸ್ವಾಂತಶ್ಚಾಸೌ ವೇದಾಂತೀ ಚ ಅನಂತಸ್ವಾಂತವೇದಾಂತೀ, ಅನಂತಸ್ವಾಂತ-ವೇದಾಂತೀ ಏವ ಸಿಂಹಃ ಅನಂತಸ್ವಾಂತವೇದಾಂತಿಸಿಂಹಃ, ತಸ್ಮಿನ್ ಅನಂತಸ್ವಾಂತವೇದಾಂತಿಸಿಂಹೇ ।

**ಮುಖ್ಯವ್ಯಾಖ್ಯಾನಿಸ್ವನೇ**— ಮುಖ್ಯಾ ಚ ಸಾ ವ್ಯಾಖ್ಯಾ ಚ ಮುಖ್ಯವ್ಯಾಖ್ಯಾ, ಮುಖ್ಯವ್ಯಾಖ್ಯಾ ಏವ ನಿಸ್ವನಃ ಯಸ್ಯ ಸಃ ಮುಖ್ಯವ್ಯಾಖ್ಯಾನಿಸ್ವನಃ, ತಸ್ಮಿನ್ ಮುಖ್ಯವ್ಯಾಖ್ಯಾನಿಸ್ವನೇ ।

**ಮಾದ್ಯದ್ವಾದಿದಂತೀಂದ್ರಭೀಮೇ**— ದಂತಿನಾಂ ಇಂದ್ರಾಃ ದಂತೀಂದ್ರಾಃ, ವಾದಃ ಏಷಾಂ ಅಸ್ತೀತಿ ವಾದಿನಃ, ಮಾದ್ಯಂತಶ್ಚ ತೇ ವಾದಿನಶ್ಚ ಮಾದ್ಯದ್ವಾದಿನಃ, ಮಾದ್ಯದ್ವಾದಿನಃ ಏವ ದಂತೀಂದ್ರಾಃ ಮಾದ್ಯದ್ವಾದಿ-ದಂತೀಂದ್ರಾಃ, ಮಾದ್ಯದ್ವಾದಿದಂತೀಂದ್ರಾಣಾಂ ಭೀಮಃ ಮಾದ್ಯದ್ವಾದಿದಂತೀಂದ್ರಭೀಮಃ, ತಸ್ಮಿನ್ ಮಾದ್ಯದ್ವಾದಿದಂತೀದ್ರಭೀಮೇ ।

**ಮಾಯಿಗೋಮಾಯುಯೂಥೈಃ**— ಮಾಯಾ ಏಷಾಂ ಅಸ್ತೀತಿ ಮಾಯಿನಃ, ಮಾಯಿನಃ ಏವ ಗೋಮಾಯವಃ ಮಾಯಿಗೋಮಾಯವಃ, ಮಾಯಿಗೋಮಾಯೂನಾಂ ಯೂಥಾನಿ ಮಾಯಿ-ಗೋಮಾಯುಯೂಥಾನಿ, ತೈಃ ಮಾಯಿಗೋಮಾಯುಯೂಥೈಃ ।

**ಕ್ರಿಯಾಪದ**— ಭಜನೇವಾಯಾಂ ಕರ್ಮಣಿ ಲಿಟ್ ಪ್ರಥಮಪುರುಷೇ ಏಕವಚನೇ 'ಭೇಜೇ' ಇತಿ ರೂಪಮ್ ।

ಭೇಜೇ ಭೇಜಾತೇ ಭೇಜಿರೇ, ಭೇಜಿಷೇ ಭೇಜಾಥೇ ಭೇಜಿಧ್ವೇ, ಭೇಜೇ ಭೇಜಿವಹೇ ಭೇಜಿಮಹೇ ॥

**ಕೋಶ**— ಜೃಂಭಣಂ ಜೃಂಭಿತೋತ್ಫುಲ್ಲವಿವೃದ್ಧೇಷು ವಿಚೇಷ್ಟಿತೇ ಇತ್ಯಭಿಧಾನಂ. ನಾದನಿಸ್ವಾನ ನಿಸ್ವನಾಃ, ದಂತೀ-ದಂತಾವಲೋ ಹಸ್ತೀ, ಘೋರಂ ಭೀಮಂ ಭಯಾನಕಂ, ಸ್ವಾಂತಂ ಹೃನ್ಮಾನಸಂ ಮನಃ ಇತಿ ಅಮರಃ ।

**ಪ್ರಯೋಗ**— ಮಾಯಿಗೋಮಾಯುಯೂಥಾನಿ ಕ್ಷೋಭಂ ಭೇಜಿರೇ ಅಥವಾ ಭೇಜುಃ ।

★ ★ ★

ಅವತಾರಿಕಾ— ಮನಸ್ಸಿನ ಕ್ಷೋಭೆಯಿಂದ ಮಾಯಾವಾದಿಗಳು ಏನು ಮಾಡಿದರೆಂಬುದನ್ನು ವಿವರಿಸುತ್ತಾರೆ.

**ಸಂಭೂಯಾಮೀ ಚೋಲಜದ್ವೀಪಿಪುರ್ಯೋಃ**
**ಪಾರ್ಶ್ವೇ ಪಾಪಾ ಮಂತ್ರಯಾಮಾಸುರುಗ್ರಾಃ ।**
**ಸಾಸೂಯಾ ಭೂಭೂಷಣೇ ವಾಯುದೇವೇ**
**ಮೂಢಾ ಯದ್ವದ್ಧಾರ್ತರಾಷ್ಟ್ರಾಂತಿಕೇ ಪ್ರಾಕ್ ॥ 2 ॥**

ಪದಚ್ಛೇದ— ಸಂಭೂಯ, ಅಮೀ, ಚೋಲಜದ್ವೀಪಿಪುರ್ಯೋಃ, ಪಾರ್ಶ್ವೇ, ಪಾಪಾಃ, ಮಂತ್ರಯಾಮಾಸುಃ, ಉಗ್ರಾಃ, ಸಾಸೂಯಾಃ, ಭೂಭೂಷಣೇ, ವಾಯುದೇವೇ, ಮೂಢಾಃ, ಯದ್ವತ್, ಧಾರ್ತರಾಷ್ಟ್ರಾಂತಿಕೇ, ಪ್ರಾಕ್ ।

ಅನ್ವಯ— ಪಾಪಾಃ ಉಗ್ರಾಃ ಅಮೀ, ಚೋಲಜದ್ವೀಪಿಪುರ್ಯೋಃ ಪಾರ್ಶ್ವೇ ಸಂಭೂಯ ಭೂಭೂಷಣೇ, ವಾಯುದೇವೇ, ಸಾಸೂಯಾಃ, ಪ್ರಾಕ್, ಮೂಢಾಃ, ಧಾರ್ತರಾಷ್ಟ್ರಾಂತಿಕೇ, ಯದ್ವತ್, ಮಂತ್ರಯಾಮಾಸುಃ ।

ಅನ್ವಯಾರ್ಥ—

**ಪಾಪಾಃ** = ಪಾಪಿಗಳಾದ
**ಉಗ್ರಾಃ** = ಕಠಿನರಾದ
**ಅಮೀ** = ಈ ಮಾಯಾವಾದಿಗಳು
**ಚೋಲಜ** = ಚೋಲ ದೇಶದಲ್ಲಿ ಹುಟ್ಟಿದ ಪದ್ಮತೀರ್ಥ,
**ದ್ವೀಪಿಪುರ್ಯೋಃ** = ಪುಂಡರೀಕಪುರಿ ಇವರೀರ್ವರ,
**ಪಾರ್ಶ್ವೇ** = ಬಳಿಯಲ್ಲಿ
**ಸಂಭೂಯ** = ಒಟ್ಟಿಗೆ ಸೇರಿ
**ಭೂಭೂಷಣೇ** = ಭೂಮಿಗೆ ಅಲಂಕಾರವಾಗಿರುವ
**ವಾಯುದೇವೇ** = ಶ್ರೀಮುಖ್ಯಪ್ರಾಣದೇವರ ಅವತಾರರಾದ ಶ್ರೀಮಧ್ವರಲ್ಲಿ
**ಸಾಸೂಯಾಃ (ಸಂತಃ)** = ಹೊಟ್ಟೆಕಿಚ್ಚಿನಿಂದ ಸಹಿತರಾಗಿ
**ಪ್ರಾಕ್** = ಹಿಂದೆ
**ಮೂಢಾಃ** = ದಡ್ಡರಾದ ದುಃಶಾಸನ ಮುಂತಾದ ರಾಜಪುತ್ರರು (ಮತ್ತು ಶಕುನಿ ಮುಂತಾದವರು)
**ಧಾರ್ತರಾಷ್ಟ್ರಾಂತಿಕೇ ಯದ್ವತ್** = ದುರ್ಯೋಧನನ ಹತ್ತಿರ ಆಲೋಚಿಸಿದಂತೆ,
**ಮಂತ್ರಯಾಮಾಸುಃ** = ಆಲೋಚನೆ ಮಾಡಿದರು.

ತಾತ್ಪರ್ಯ— ಆ ಮಾಯಾವಾದಿಗಳು ಪಾಪಿಗಳು ಕ್ರೂರರು. ಮತ್ತು ಅವರು ಭೂಮಿಗೆ ಅಲಂಕಾರವನ್ನುಂಟು ಮಾಡುವ ಶ್ರೀಮುಖ್ಯಪ್ರಾಣದೇವರ ಅವತಾರರಾದ ಶ್ರೀಮಧ್ವಾಚಾರ್ಯರಲ್ಲಿ ಅಸೂಯೆಪಟ್ಟರು. ಆದ್ದರಿಂದ ಅವರೆಲ್ಲರೂ ಚೋಲದೇಶದ ಪದ್ಮತೀರ್ಥ ಮತ್ತು ಪುಂಡರೀಕಪುರಿ ಎಂಬ ಸನ್ಯಾಸಿ ಇವರಿಬ್ಬರನ್ನೂ ಸಂಧಿಸಿ ಅವರನ್ನು ಒಂದೆಡೆ ಸೇರಿಸಿ ಅಲ್ಲಿಯೇ ಮಂತ್ರಾಲೋಚನೆ ನಡೆಸಿದರು. ಈ ಮಂತ್ರಾಲೋಚನೆಯು ಹಿಂದೆ ದ್ವಾಪರಯುಗದಲ್ಲಿ ಮೂಢರಾದ ದುಃಶಾಸನ ಮುಂತಾದ ರಾಜಕುಮಾರರು ವಾಯುದೇವರ ಅವತಾರರಾದ ಭೀಮಸೇನದೇವರಲ್ಲಿ ಅಸೂಯೆಗೊಂಡು ದುರ್ಯೋಧನನ ಹತ್ತಿರ ಹೋಗಿ ಮಂತ್ರಾಲೋಚನೆ ಮಾಡಿದಂತಾಯಿತು.

ವಿಗ್ರಹ—

**ಚೋಲಜದ್ವೀಪಿಪುರ್ಯೋಃ**— ಚೋಲೇಷು ಜಾಯತೇ ಇತಿ ಚೋಲಜಃ ।

**ಸಾಸೂಯಾಃ**— ಅಸೂಯಯಾ ಸಹ ವರ್ತಂತೇ ಇತಿ ಸಾಸೂಯಾಃ ।

**ಭೂಭೂಷಣೇ**— ಭುವಃ ಭೂಷಣಂ ಭೂಭೂಷಣಂ, ತಸ್ಮಿನ್ ಭೂಭೂಷಣೇ ।

**ವಾಯುದೇವೇ**— ವಾಯುಶ್ಚಾಸೌ ದೇವಶ್ಚ ವಾಯುದೇವಃ, ತಸ್ಮಿನ್ ವಾಯುದೇವೇ ।

**ಧಾರ್ತರಾಷ್ಟ್ರಾಂತಿಕೇ**— ಧೃತರಾಷ್ಟ್ರಸ್ಯ ಅಪತ್ಯಂ ಪುಮಾನ್ ಧಾರ್ತರಾಷ್ಟ್ರಃ, ಧಾರ್ತರಾಷ್ಟ್ರಸ್ಯ ಅಂತಿಕಂ ಧಾರ್ತರಾಷ್ಟ್ರಾಂತಿಕಂ, ತಸ್ಮಿನ್ ಧಾರ್ತರಾಷ್ಟ್ರಾಂತಿಕೇ ।

**ಪಾಪಾಃ**— ಪಾಪಂ ಏಷಾಂ ಅಸ್ತೀತಿ ಪಾಪಾಃ, ಅರ್ಶ ಆದಿಭ್ಯೋಽಚ್ ಇತಿ ಸೂತ್ರೇಣ ಅಚ್ (5-2-127) ಪುಂಡರೀಕಪುರಿ ಎಂದು ಒಬ್ಬ ಮಾಯವಾದಿ ಮುನಿಯ ಹೆಸರು. ಶ್ಲೋಕದಲ್ಲಿ ದ್ವೀಪಿಪುರಿ ಎಂದು ಹೇಳಿದ್ದಾರೆ. ವ್ಯಾಘ್ರೇಽಪಿ ಪುಂಡರೀಕೋನಾ ಎಂಬ ಅಮರದಲ್ಲಿಯೂ ವ್ಯಾಘ್ರೋ ದ್ವೀಪೀ ಪುಂಡರೀಕಸ್ತರಕ್ಷುಃ ಎಂದು ಹಲಾಯುಧಕೋಶದಲ್ಲಿಯೂ ದ್ವೀಪಿ ಶಬ್ದಕ್ಕೆ ಪುಂಡರೀಕ ಶಬ್ದವನ್ನು ಪರ್ಯಾಯವಾಗಿ ಹೇಳಿರುವುದರಿಂದ ದ್ವೀಪಿಪುರಿ ಎಂದರೆ ಪುಂಡರೀಕಪುರಿ ಎಂದಿಟ್ಟುಕೊಳ್ಳ-ಬೇಕು. ಅಸೂಯಾ ಎಂದರೆ ಗುಣಗಳಲ್ಲಿ ದೋಷಾರೋಪ. ಅಸೂಯಾ ತು ದೋಷಾರೋಪೋ ಗುಣೇಷ್ವಪಿ ಅಮರ. ಮೂಢ, ಮೂರ್ಖ, ಅಜ್ಞೇ ಮೂಢ ಯಥಾಜಾತಮೂರ್ಖವೈಧೇಯಬಾಲಿಶಾಃ ಅಮರ ।

**ಕ್ರಿಯಾಪದ**— ಮತ್ರಿಗುಪ್ತಭಾಷಣೇ ಸಕರ್ಮಕ ಪರಸ್ಮೈಪದಿ ಲಿಟ್ - ಅದಕ್ಕೆ ಅಮ್ ಪ್ರತ್ಯಯ । ಅಸ ಧಾತುವಿಗೆ ಅನುಪ್ರಯೋಗ ।

| | | |
|---|---|---|
| ಮಂತ್ರಯಾಮಾಸ | ಮಂತ್ರಯಾಮಾಸತುಃ | ಮಂತ್ರಯಾಮಾಸುಃ, |
| ಮಂತ್ರಯಾಮಾಸಿಥ | ಮಂತ್ರಯಾಮಾಸಥುಃ | ಮಂತ್ರಯಾಮಾಸ, |
| ಮಂತ್ರಯಾಮಾಸ | ಮಂತ್ರಯಾಮಾಸಿವ | ಮಂತ್ರಯಾಮಾಸಿಮ ॥ |

**ಪ್ರಯೋಗ**— ಪಾಪಾಃ ಅಮೀ ಮಂತ್ರಯಾಮಾಸುಃ (ಅಕರ್ಮಕ ಕರ್ತರಿ)

**ವಿಶೇಷಾಂಶ**— ಚೋಲಜಃ ಪದ್ಮತೀರ್ಥೋ ನಾಮ ಪಾಪೈಃ ಅಮೀಭಿಃ ಮಂತ್ರಯಾಮಾಸೇ ಚೋಲಜ-ದ್ವೀಪಿಪುರ್ಯೋಃ ಎಂಬಲ್ಲಿ ಚೋಲಜ ಎಂದರೆ ಪದ್ಮತೀರ್ಥ ಎಂಬುವನು.

**ಯೋ ಗುಪ್ತಪಟಲೋಕ್ತಾಯಾಂ ಭೈರವೀಚಕ್ರಸಂಗತೌ ।**
**ಸಾಂಕರ್ಯಾಂ ಪರವಿದ್ಯಾಯಾಂ ಮಹಾವಾಗ್ಮ್ಯಸತಾಂ ಗುರುಃ ॥**

ಈ ಪದ್ಮತೀರ್ಥ ಎಂಬುವನು ಗುಪ್ತಪಟಲ ಎಂಬ ಶಾಸ್ತ್ರಗ್ರಂಥದಲ್ಲಿ ಹೇಳಿರುವ ಭೈರವೀಚಕ್ರೋಪಾಸನ ಯಲ್ಲಿಯೂ, ಸಂಕರೋಕ್ತವಾದ ಪರವಿದ್ಯೆಯಲ್ಲಿಯೂ ಮಹಾವಾಗ್ಮಿಯಾಗಿದ್ದನು. ಅನೇಕ ದುರ್ಜನರಿಗೆ ಗುರುವಾಗಿ ದ್ದನು ದ್ವೀಪೀ = ಪುಂಡರೀಕಪುರೀ = ಚೋಲಜದ್ವೀಪಿಪುರ್ಯೋಃ ಎಂಬಲ್ಲಿ ದ್ವೀಪಿ ಎಂದರೆ ಪುಂಡರೀಕಪುರಿ ಎಂದು ಅರ್ಥ. (**ಭಾವಪ್ರಕಾಶಿಕಾ ವ್ಯಾಖ್ಯಾನ**)

★ ★ ★

ಅವತಾರಿಕಾ— ಶಕುನಿಯನ್ನು ಹೋಲಿಸಿ ದುರಾಲೋಚನೆ ಮಾಡಿ ಹೇಳಿದ್ದನ್ನು ವಿವರಿಸುತ್ತಾರೆ.

**ಸನ್ಮಾತ್ಸರ್ಯಂ ಬದ್ಧುಮೂಚೇಽಶುಭಾನಾಂ**
**ವಾಚಾಽಲೋಲಂ ಕೋಽಪಿ ಗಾಂ ಧಾರಕಸ್ಯ ।**
**ಮಧ್ಯೇ ತೇಷಾಂ ನೀಚನೀತ್ಯಾ ಸಮಾನೋ**
**ವಾಚಾಲೋಽಲಂ ಕೋಽಪಿ ಗಾಂಧಾರಕಸ್ಯ ॥ 3 ॥**

ಪದಚ್ಛೇದ— ಸನ್ಮಾತ್ಸರ್ಯಂ, ಬದ್ಧುಂ, ಊಚೇ, ಅಶುಭಾನಾಂ, ವಾಚಾ, ಅಲೋಲಂ, ಕೋಪಿ, ಗಾಂ, ಧಾರಕಸ್ಯ, ಮಧ್ಯೇ, ತೇಷಾಂ, ನೀಚನೀತ್ಯಾ, ಸಮಾನಃ ವಾಚಾಲಃ, ಅಲಂ, ಕಃ, ಅಪಿ, ಗಾಂಧಾರಕಸ್ಯ.

ಅನ್ವಯ— ತೇಷಾಂ ಮಧ್ಯೇ ಅಲಂ ವಾಚಾಲ,ಃ ನೀಚನೀತ್ಯಾ ಗಾಂಧಾರಕಸ್ಯ ಸಮಾನಃ ಕಃ ಅಪಿ, ಅಶುಭಾನಾಂ ಧಾರಕಸ್ಯ, ಕೋಪಿ, ಸನ್ಮಾತ್ಸರ್ಯಂ ಅಲೋಲಂ ವಾಚಾ, ಬಂಧುಂ (ಬದ್ಧುಂ) ಗಾಂ ಊಚೇ ।

ಅನ್ವಯಾರ್ಥ—

ತೇಷಾಂ = ಆ ಮಾಯಾವಾದಿಗಳ
ಮಧ್ಯೇ = ನಡುವೆ
ಅಲಂ = ಬಹಳವಾಗಿ,
ವಾಚಾಲಃ = ಬಹಳ ಮಾತನಾಡುವ,
ನೀಚನೀತ್ಯಾ = ಕೆಟ್ಟ ನೀತಿಯಿಂದ
ಗಾಂಧಾರಕಸ್ಯ = ಶಕುನಿಗೆ
ಸಮಾನಃ = ಸಮಾನನಾದ
ಕಃ ಅಪಿ = ಯಾವನೋ ಒಬ್ಬನು,
ಅಶುಭಾನಾಂ = ದುರ್ಜನರಿಗೆ (ಪಾಪಿಗಳಿಗೆ)
ಧಾರಕಸ್ಯ = ಆಶ್ರಯನಾದ ಪದ್ಮತೀರ್ಥನಿಗೆ
ಕೋಪಿ = ಸಿಟ್ಟಿನಿಂದ ಕೂಡಿದ
ಸನ್ಮಾತ್ಸರ್ಯಂ = ಸಜ್ಜನರಲ್ಲಿ ಹೊಟ್ಟೆಕಿಚ್ಚನ್ನು
ಅಲೋಲಂ = ಸ್ಥಿರವಾಗಿ
ವಾಚಾ = ತನ್ನ ಮಾತಿನಿಂದ
ಬಂಧುಂ (ಬದ್ಧುಂ) = ಉಂಟು ಮಾಡುವುದಕ್ಕೆ
ಗಾಂ = ಮಾತನ್ನು
ಊಚೇ = ಹೇಳಿದನು.

ತಾತ್ಪರ್ಯ— ಆ ಮಾಯಾವಾದಿಗಳಲ್ಲಿ ದುರ್ನೀತಿಯಲ್ಲಿ ಶಕುನಿಯಂತಿರುವ ಒಬ್ಬ ವಾಚಾಳನಾದ ದುರ್ಜನನಿದ್ದನು. ಅವನು ಮಾತನಾಡಲಾರಂಭಿಸಿದನು. ಅವನ ಮಾತು ದುಷ್ಟರಿಗೆ ಆಶ್ರಯನಾದ ಪದ್ಮತೀರ್ಥನಿಗೆ ಸಜ್ಜನರಲ್ಲಿ ಕೋಪ ಮತ್ತು ಹೊಟ್ಟೆಕಿಚ್ಚು ಸ್ಥಿರವಾಗಿ ನೆಲೆಸಲು ಅನುಕೂಲವಾಗಿತ್ತು.

ವಿಗ್ರಹ—

ಸನ್ಮಾತ್ಸರ್ಯಂ— ಮತ್ಸರ ಏವ ಮಾತ್ಸರ್ಯಂ, ಸತ್ಸು ಮಾತ್ಸರ್ಯಂ ಸನ್ಮಾತ್ಸರ್ಯಂ, ತತ್ ಸನ್ಮಾತ್ಸರ್ಯಂ ।

**ಅಶುಭಾಃ**— ನ ಶುಭಾಃ ಅಶುಭಾಃ, ತೇಷಾಂ ಅಶುಭಾನಾಂ ।

**ಅಲೋಲಂ**— ನ ಲೋಲಂ ಯಥಾ ಭವತಿ ತಥಾ ಅಲೋಲಂ ।

**ಕೋಪಿ**— ಕೋಪಃ ಅಸ್ಮಿನ್ ಅಸ್ತೀತಿ ಕೋಪಿ ।

**ಧಾರಕಸ್ಯ**— ಧಾರಯತಿ ಇತಿ ಧಾರಕಃ, ತಸ್ಯ ಧಾರಕಸ್ಯ ।

**ನೀಚನೀತ್ಯಾ**— ನೀಚಾ ಚ ಸಾ ನೀತಿಶ್ಚ ನೀಚನೀತಿಃ, ತಯಾ ನೀಚನೀತ್ಯಾ ।

**ವಾಚಾಲಃ**— ಕುತ್ಸಿತಂ ಬಹು ಭಾಷತೇ ಇತಿ ವಾಚಾಲಃ । ಆಲಜಾಟಚೌ ಬಹುಭಾಷಿಣಿ (4-2-125) (ಕುತ್ಸಿತ ಇತಿ ವಕ್ತವ್ಯಂ) ಈ ಸೂತ್ರದಿಂದ ಆಲಚ್ ಪ್ರತ್ಯಯಸ್ಯಾಜ್ಜಲ್ಪಾಕಸ್ತುವಾಚಾಲೋ ವಾಚಾಟೋ ಬಹುಗರ್ಹ್ಯವಾಕ್ ಅಮರ, ಅಲೋಲಂ = ಸ್ಥಿರವಾಗಿ, ಲೋಲಂ = ಚಂಚಲವಾದ, ಚಲಂ ಲೋಲಂ ಚಲಾಚಲಂ, ಅಮರ ಗೌಃ ಮಾತು ಭೂವಾಗ್‌ವಾರಿಷು ಗೌರ್ಮತಾ, ವಿಶ್ವ ।

**ಭಲಾರೀಯ**— ಮಿಲಿತೇಷು ಮಾಯಿಷು ಮಧ್ಯೇ ಕಶ್ಚನ ಪಾಪಿಷ್ಠಃ ಪದ್ಮತೀರ್ಥಸ್ಯ ಮಧ್ವಾಚಾರ್ಯೇ ಕೋಪಃ ಮಾತ್ಸರ್ಯಂ ಚ ಯಥಾ ಸ್ಯಾತ್ ತಥಾ ವಚನಂ ಉವಾಚ ಇತಿ ಭಾವಃ । ಅಲ್ಲಿ ಸೇರಿರುವ ಮಾಯಾವಾದಿಗಳ ಮಧ್ಯದಲ್ಲಿ ಯಾವನೋ ಒಬ್ಬ ಪಾಪಿಷ್ಠನು ಪದ್ಮತೀರ್ಥನಿಗೆ ಮಧ್ವಾಚಾರ್ಯರಲ್ಲಿ ಕೋಪ ಮತ್ತು ಹೊಟ್ಟೆಕಿಚ್ಚು ಉಂಟಾಗುವಂತಹ ಮಾತನ್ನು ಆಡಿದನು ಎಂದು ಭಾವ.

**ಕ್ರಿಯಾಪದ**— ಬ್ರೂಞ್‌ವ್ಯಕ್ತಾಯಾಂ ವಾಚಿ ಆತ್ಮನೇಪದಿ ಲಿಟ್‌ಬ್ರುವೋ ವಚಿಃ (204053) ಎಂಬ ಸೂತ್ರದಿಂದ ವಚ್ ಆದೇಶ ।

ಊಚೇ ಊಚಾತೇ ಊಚಿರೇ, ಊಚಿಷೇ ಊಚಾಥೇ ಊಚಿಧ್ವೇ, ಊಚೇ ಊಚಿವಹೇ ಊಚಿಮಹೇ ॥

**ಪ್ರಯೋಗ**— ಅಲಂ ವಾಚಾಲಃ ಗಾಂ ಊಚೇ (ಕರ್ತರಿ) । ಅಲಂ ವಾಚಾಲೇನ ಗೌಃ ಊಚೇ (ಕರ್ಮಣಿ) ।

**ವಿಶೇಷಾಂಶ**— ಅಶುಭಾನಾಂ ಧಾರಕಸ್ಯ ಚೋಲಜಸ್ಯ ಅಲೋಲಂ ಸ್ಥಿರಂ ಕೋಪಿ ಕೋಪವಿಶಿಷ್ಟಂ ಸಜ್ಜನೇಷು ಮಾತ್ಸರ್ಯಂ ಬಂಧುಂ ಗಾಂ ಊಚೇ, ಕೋಽಪಿ ಅಲಂ ವಾಚಾಲಃ ಶಕುನೇಃ ಸಮಾನಃ = ಪಾಪಿಗಳಿಗೆ ಆಶ್ರಯನಾದ ಪದ್ಮತೀರ್ಥನಿಗೆ ಸ್ಥಿರವಾಗಿ ಕೋಪಯುಕ್ತವಾದ, ಸಜ್ಜನವಿಷಯಕವಾದ ಹೊಟ್ಟೆಕಿಚ್ಚನ್ನು ದೃಢಪಡಿಸಲು ಮಾತನ್ನು ಹೇಳಿದನು. ಯಾವನೋ ಒಬ್ಬನು ಅತಿಶಯವಾಗಿ ವಾಚಾಲನು, ಶಕುನಿಗೆ ಸಮಾನನಾದವನು. (ಭಾವಪ್ರಕಾಶಿಕಾ).

★ ★ ★

**ಅವತಾರಿಕಾ**— ಆ ಮಾತನ್ನೇ ವಿವರಿಸುತ್ತಾರೆ.

**ಏಕಂ ತತ್ತ್ವಂ ವಷ್ಟಿ ಮಾಯಾಮಯೀಯಂ**
**ವಾಕ್ಯೈಃ ಪ್ರಾಚ್ಯೈರಪ್ಯವಾಚ್ಯಂ ವಿಧತ್ತೇ ।**
**ಪೂರ್ವಾಪೂರ್ವಾ ಹಂತ ದೌರ್ಘಟ್ಯಭೂಷಾ**
**ಚಿತ್ರಂ ಚಿತ್ರಂ ದರ್ಶನಾಚಾರ್ಯನೀತಿಃ ॥ 4 ॥**

**ಪದಚ್ಛೇದ**— ಏಕಂ, ತತ್ತ್ವಂ, ವಷ್ಟಿ, ಮಾಯಾಮಯೀ, ಇಯಂ, ವಾಕ್ಯೈಃ, ಪ್ರಾಚ್ಯೈಃ, ಅಪಿ, ಅವಾಚ್ಯಂ, ವಿಧತ್ತೇ, ಪೂರ್ವಾ, ಅಪೂರ್ವಾ, ಹಂತ, ದೌರ್ಘಟ್ಯಭೂಷಾ, ಚಿತ್ರಂ, ದರ್ಶನಾಚಾರ್ಯನೀತಿಃ ।

**ಅನ್ವಯ**— ಪೂರ್ವಾ, ಅಪೂರ್ವಾ, ದೌರ್ಘಟ್ಯಭೂಷಾ, ಮಾಯಾಮಯೀ ಇಯಂ ದರ್ಶನಾಚಾರ್ಯನೀತಿಃ ಚಿತ್ರಂ ಚಿತ್ರಂ ತತ್ತ್ವಂ ಏಕಂ ವಷ್ಟಿ । ಪ್ರಾಚ್ಯೈಃ ವಾಕ್ಯೈಃ ಅವಾಚ್ಯಂ ಅಪಿ ವಿಧತ್ತೇ । ಹಂತ ।

ಅನ್ವಯಾರ್ಥ—

ಪೂರ್ವಾ = ಪ್ರಾಚೀನವಾದ

ಅಪೂರ್ವಾ = ದುರ್ಲಭವಾದ (ಸುಲಭವಾಗಿ ತಿಳಿಯಲಾಗದ)

ದೌರ್ಘಟ್ಯಭೂಷಾ = ಹೊಂದಾಣಿಕೆಯಾಗದಿರುವುದೇ ಅಲಂಕಾರವಾಗಿ ಉಳ್ಳ

ಮಾಯಾಮಯೀ = ಮಾಯೆಯ ವಿಕಾರವಾಗಿ ಉಳ್ಳ (ಮಾಯಾವಿಲಾಸದಿಂದ ಇದ್ದಂತೆ ತೋರುವ)

ಇಯಂ = ಈ

ದರ್ಶನಾಚಾರ್ಯನೀತಿಃ = ಮಾಯಾವಾದ ಶಾಸ್ತ್ರವನ್ನು ರಚಿಸಿರುವ ಶಂಕರಾಚಾರ್ಯರ ಶಾಸ್ತ್ರವು,

ಚಿತ್ರಂ ಚಿತ್ರಂ = ಅತ್ಯಂತ ಆಶ್ಚರ್ಯಕರವಾಗಿ

ತತ್ತ್ವಂ = ಬ್ರಹ್ಮವೆಂಬ ವಸ್ತುವನ್ನು

ಏಕಂ = ಅದ್ವಿತೀಯವನ್ನಾಗಿಯೂ, ನಿರ್ವಿಶೇಷವನ್ನಾಗಿಯೂ

ವಷ್ಟಿ = ಇಚ್ಛಿಸುತ್ತದೆ (ಹೇಳುತ್ತದೆ).

ಪ್ರಾಚ್ಯೈಃ ವಾಕ್ಯೈಃ = ಪುರಾತನವಾದ ವೇದವಚನಗಳಿಂದ

ಅವಾಚ್ಯಂ ಅಪಿ = ಹೇಳಲು ಅಶಕ್ಯವನ್ನಾಗಿಯೂ

ವಿಧತ್ತೇ = ಮಾಡುತ್ತದೆ. (ಪ್ರತಿಪಾದಿಸುತ್ತದೆ)

ಹಂತ = ಅಹಹ.

ತಾತ್ಪರ್ಯ— ಶ್ರೀಶಂಕರಾಚಾರ್ಯರಿಂದ ರಚಿತವಾದ ಮಾಯಾಮೂಲಕವಾದ ಈ ನಮ್ಮ ಅದ್ವೈತ ದರ್ಶನವು ಅನಾದಿಕಾಲದಿಂದ ಬಂದುದು. ಸುಲಭವಾಗಿ ತಿಳಿಯಲು ಅಶಕ್ಯವಾದುದು. ಮೇಲಿಂದ ಮೇಲೆ ನೋಡುವಾಗ ಅಸಂಗತವಾಗಿ ಕಾಣುವುದು ಇದಕ್ಕೊಂದು ಅಲಂಕಾರವು. ವಾಸ್ತವಿಕವಾಗಿ ಎಷ್ಟು ಆಳವಾಗಿ ವಿಚಾರ ಮಾಡಿದರೂ ಪರಸ್ಪರ ಅಸಂಗತವಾಗಿದ್ದು ಹೊಂದಿಸಲು ಬರದಿರುವ ಈ ಶಾಸ್ತ್ರಕ್ಕೆ ದುರ್ಘಟತ್ವವು, ಅಸಾಂಗತ್ಯವು ದೊಡ್ಡ ಅಲಂಕಾರವೇ ಸರಿ. ಈ ಶಾಸ್ತ್ರವು ಪ್ರಪಂಚದಲ್ಲಿ ಬ್ರಹ್ಮ ಎಂಬ ವಸ್ತು ಒಂದೇ ಇದೆ, ಅದು ಸತ್ಯ ಮತ್ತು ಅದ್ವಿತೀಯ ಎಂಬುದಾಗಿ ಹೇಳುತ್ತದೆ. ಆ ಬ್ರಹ್ಮವನ್ನು ವೇದವಾಕ್ಯಗಳಿಗೆ ವರ್ಣಿಸಲು ಸಾಧ್ಯವಾಗುವುದಿಲ್ಲ ಎಂದು ಈ ಮಾಯಾವಾದ ಶಾಸ್ತ್ರವು ಬಹಳ ಆಶ್ಚರ್ಯ-ಕರವಾಗಿ ವರ್ಣಿಸುತ್ತದೆ. ಅಹಹ. ಇಂತಹ ಅಘಟಿತಘಟನಾ ಸಾಮರ್ಥ್ಯವು ಲೋಕದಲ್ಲಿ ಇನ್ನು ಯಾವ ಶಾಸ್ತ್ರಕ್ಕಾದರೂ ಇದೆಯೇ ! (ಇಲ್ಲ)

ವಿಗ್ರಹ—

ಮಾಯಾಮಯೀ— ಮಾಯಾಯಾಃ ವಿಕಾರಭೂತಾ ಮಾಯಾಮಯೀ ।

ಪ್ರಾಚ್ಯೈಃ— ಪ್ರಾಗ್ ಭವಾನಿ ಪ್ರಾಚ್ಯಾನಿ, ತೈಃ ಪ್ರಾಚ್ಯೈಃ ।

ಅವಾಚ್ಯಂ— ವಕ್ತುಂ ಯೋಗ್ಯಂ ವಾಚ್ಯಂ, ನ ವಾಚ್ಯಂ ಅವಾಚ್ಯಂ ।

ಅಪೂರ್ವಾ— ನ ಪೂರ್ವಾ ಅಪೂರ್ವಾ ।

ದೌರ್ಘಟ್ಯಭೂಷಾ— ದುಃಖೇನ ಘಟಯಿತುಂ ಯೋಗ್ಯಂ ದುರ್ಘಟಂ, ದುರ್ಘಟಸ್ಯ ಭಾವಃ ದೌರ್ಘಟ್ಯಂ । ದೌರ್ಘಟ್ಯಂ ಭೂಷಾ ಯಸ್ಯಾಃ ಸಾ ದೌರ್ಘಟ್ಯಭೂಷಾ ।

ದರ್ಶನಾಚಾರ್ಯನೀತಿಃ— ದರ್ಶನಸ್ಯ ಆಚಾರ್ಯಃ ದರ್ಶನಾಚಾರ್ಯಃ, ದರ್ಶನಾಚಾರ್ಯಸ್ಯ ನೀತಿಃ ದರ್ಶನಾಚಾರ್ಯನೀತಿಃ ।

**ಕ್ರಿಯಾಪದ—** ವಿ ಉಪಸರ್ಗ ಪೂರ್ವಕ ಡುಧಾಞ್ ಧಾರಣಪೋಷಣಯೋಃ ಧಾರಣಪೋಷಣಾರ್ಥಕ ಧಾಧಾತು ಉಭಯಪದೀ ಪ್ರಕೃತೇ ಆತ್ಮನೇಪದಿ ತೃತೀಯಗಣ ಸಕರ್ಮಕ ಅನಿಟ್ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ 'ವಿಧತ್ತೇ' ಇತಿ ರೂಪಮ್ ।

ಧತ್ತೇ ದಧಾತೇ ದಧತೇ, ಧತ್ಸೇ ದಧಾಥೇ ದದ್ಧ್ವೇ, ದಧೇ ದದ್ವಹೇ ದದ್ಮಹೇ ॥

ವಶೂಕಾಂತೌ ಕಾಂತಿಃ ಇಚ್ಛಾ, ಸಕರ್ಮಕಃ ಸೇಟ್ ಪರಸ್ಮೈಪದೀ ಲಟ್ ಪ್ರಥಮಪುರುಷೇ ಏಕವಚನೇ 'ವಷ್ಟಿ' ಇತಿ ರೂಪಮ್ ।

ವಷ್ಟಿ ಉಷ್ಟಃ ವಶಂತಿ, ವಕ್ಷಿ ಉಷ್ಠಃ ವಷ್ಠ, ವಶ್ಮಿ ಉಶ್ವಃ ವಶ್ಮಃ ॥

**ಪ್ರಯೋಗ—** ಮಾಯಾಮಯೀ ಇಯಂ ದರ್ಶನಾಚಾರ್ಯನೀತಿಃ ಏಕಂ ತತ್ತ್ವಂ ವಷ್ಟಿ (ಸಕರ್ಮಕ ಕರ್ತರಿ) ।

ಮಾಯಾಮಯ್ಯಾ ಅನಯಾ ದರ್ಶನಾಚಾರ್ಯನೀತ್ಯಾ ಏಕಂ ತತ್ವಂ ಉಶ್ಯತೇ (ಕರ್ಮಣಿ) ।

ಇಯಂ ಪ್ರಾಚ್ಯೈಃ ವಾಕ್ಯೈಃ ಅವಾಚ್ಯಂ ಅಪಿ ವಿಧತ್ತೇ (ಕರ್ತರಿ) ।

ಅನಯಾ ಪ್ರಾಚ್ಯೈಃ ವಾಕ್ಯೈಃ ಅವಾಚ್ಯಂ ಅಪಿ ವಿಧೀಯತೇ (ಕರ್ಮಣಿ) ।

**ವಿಶೇಷಾಂಶ—** ಬ್ರಹ್ಮವೆಂಬ ಅದ್ವಿತೀಯವಾದ ನಿರ್ವಿಶೇಷವಾದ ವಸ್ತುವು ಇದೆಯೆಂದು ಹೇಳಿ, ಪುನಃ ಅದು ''ಯತೋ ವಾಚೋ ನಿವರ್ತಂತೇ'' ಇತ್ಯಾದಿ ಶ್ರುತಿಯಿಂದ ಅವಾಚ್ಯವು, ಹೀಗೆಯೇ ಎಂದು ಹೇಳಲು ಸಾಧ್ಯವಿಲ್ಲ ಎಂದು ಈ ಮಾಯಾವಾದ ಶಾಸ್ತ್ರವು ಹೇಳುತ್ತದೆ. ಹಾಗೆಯೇ ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ವಾಕ್ಯದಿಂದ ಬ್ರಹ್ಮವನ್ನು ಇಂತಹ ಸ್ವರೂಪ ವಿಶಿಷ್ಟವಾಗಿ ಇದೆಯೆಂದು ಸಮರ್ಥಿಸಿ ಅದನ್ನು ಅವಾಚ್ಯವೆಂದು ಹೇಳುತ್ತದೆ. ಆದುದರಿಂದ ಈ ಪರಸ್ಪರ ವಿರೋಧವು 'ದುರ್ಘಟತ್ವವು' ಅಲಂಕಾರವೆಂದು ಸಮರ್ಥಿಸಲು ಬೇರೆ ಯಾವ ಶಾಸ್ತ್ರಕ್ಕೆ ಸಾಧ್ಯ ಎಂದು ಈ ಮಾಯಾವಾದಿಯ ಅಭಿಪ್ರಾಯವು.

★ ★ ★

**ಮರ್ತ್ಯಾಮರ್ತ್ಯಾಮರ್ತ್ಯವಿದ್ವಿಟ್‌ಪುರೋಗಂ**
**ವಿಶ್ವಂ ದೃಶ್ಯಂ ವಿಪ್ರಚಂಡಾಲಪೂರ್ವಮ್ ।**
**ಭೇದಾಪೇತಂ ಭೇದಿ ಮಾನೈಃ ಸಮಾನೈಃ**
**ಸಾಧೀಯಃ ಕಃ ಸಾಧಯೇತ್ ತಾಮಲಬ್ಧ್ವಾ ॥ 5 ॥**

**ಪದಚ್ಛೇದ—** ಮರ್ತ್ಯಾಮರ್ತ್ಯಾಮರ್ತ್ಯವಿದ್ವಿಟ್‌ಪುರೋಗಂ, ವಿಶ್ವಂ, ದೃಶ್ಯಂ, ವಿಪ್ರಚಂಡಾಲಪೂರ್ವಂ, ಭೇದಾಪೇತಂ, ಭೇದಿ, ಮಾನೈಃ, ಸಮಾನೈಃ, ಸಾಧೀಯಃ, ಕಃ, ಸಾಧಯೇತ್, ತಾಂ, ಅಲಬ್ಧ್ವಾ ।

**ಅನ್ವಯ—** ಸಮಾನೈಃ ಮಾನೈಃ ಭೇದಿ, ಮರ್ತ್ಯಾಮರ್ತ್ಯಾಮರ್ತ್ಯವಿದ್ವಿಟ್‌ಪುರೋಗಂ, ವಿಪ್ರಚಂಡಾಲಪೂರ್ವಂ, ದೃಶ್ಯಂ ವಿಶ್ವಂ ಭೇದಾಪೇತಂ ಕಃ ತಾಂ ಅಲಬ್ಧ್ವಾ ಸಾಧೀಯಃ ಸಾಧಯೇತ್ ?

**ಅನ್ವಯಾರ್ಥ—**

**ಸಮಾನೈಃ** = ಭೇದಪ್ರತಿಪಾದಕವಾದ ವೇದಾದಿ ಪ್ರಮಾಣಗಳಿಂದ ಸಹಿತವಾದ

**ಮಾನೈಃ** = ಪ್ರತ್ಯಕ್ಷಾದಿ ಪ್ರಮಾಣಗಳಿಂದ

**ಭೇದಿ** = ಭೇದಯುಕ್ತವೆಂದು ತಿಳಿಯಲ್ಪಡುವ

**ಮರ್ತ್ಯಾಮರ್ತ್ಯವಿದ್ವಿಟ್ ಪುರೋಗಂ** = ಮರ್ತ್ಯ = ಮನುಷ್ಯರು

**ಅಮರ್ತ್ಯ** = ದೇವತೆಗಳು

**ಅಮರ್ತ್ಯವಿಟ್** = ದೇವತೆಗಳ ಶತ್ರುಗಳಾದ ದೈತ್ಯರೇ

**ಪುರೋಗಂ** = ಮೊದಲಾಗಿ ಉಳ್ಳ

**ವಿಪ್ರ** = ಬ್ರಾಹ್ಮಣರು

**ಚಂಡಾಲಪೂರ್ವಂ** = ಚಂಡಾಲರೇ ಮೊದಲಾಗಿ ಉಳ್ಳ

**ದೃಶ್ಯಂ** = ಕಣ್ಣಿಗೆ ಕಾಣುವ (ಜ್ಞಾನಕ್ಕೆ ಗೋಚರವಾದ)

**ವಿಶ್ವಂ** = ಪ್ರಪಂಚವು

**ಭೇದಾಪೇತಂ (ಇತಿ)** = ಭೇದವಿಲ್ಲದ್ದು (ಎಂದು)

**ಕಃ** = ಯಾವನು

**ತಾಂ** = ಆ ಶಾಂಕರಶಾಸ್ತ್ರವನ್ನು

**ಅಲಬ್ಧ್ವಾ** = ಪಡೆಯದೇ (ತಿಳಿಯದೆ)

**ಸಾಧೀಯಃ** = ಬಹಳ ದೃಢವಾಗಿ

**ಸಾಧಯೇತ್** = ಸಾಧಿಸಿಯಾನು.

ತಾತ್ಪರ್ಯ— ಈ ಪ್ರಪಂಚದಲ್ಲಿ ಮನುಷ್ಯರು, ದೇವತೆಗಳು, ದೈತ್ಯರು, ಬ್ರಾಹ್ಮಣರು, ಅಂತ್ಯಜರು ಮೊದಲಾದ ಅನೇಕ ಜಾತಿಯ ಚೇತನರು ನೆಲೆಸಿರುವರು. ಈ ರೀತಿಯ ಈ ಚೇತನರಿಗೆ ಪರಸ್ಪರವಾಗಿ ಎಂದೂ ನಾಶವಾಗದಿರುವ ಭೇದವು ಇದೆಯೆಂದು ಪ್ರತ್ಯಕ್ಷವೂ, ಆಗಮವೂ, ಅನುಮಾನವೂ ದೃಢವಾಗಿ ತಿಳಿಸುತ್ತಿವೆ. ಆದರೂ ನಮ್ಮ ತಿಳುವಳಿಕೆಗೆ ಬರುವ ಪ್ರಪಂಚವೆಲ್ಲವೂ, ಭೇದವಿಲ್ಲದ್ದು ಬ್ರಹ್ಮ ಒಂದೇ ಸತ್ಯವು, ಜಗತ್ತು ಮಿಥ್ಯಾ (ಬ್ರಹ್ಮ ಸತ್ಯಂ ಜಗನ್ಮಿಥ್ಯಾ, ಜೀವೋ ಬ್ರಹ್ಮೈವ ನಾಪರಃ) ಎಂದೂ ಶಂಕರಾಚಾರ್ಯರ ದರ್ಶನವನ್ನು ಅರಿಯದೆ ಯಾವ ವಿದ್ವಾಂಸನು ದೃಢವಾಗಿ ಸಮರ್ಥಿಸಿಯಾನು ? ಯಾರಿಗೂ ಸಾಧ್ಯವಿಲ್ಲ.

ವಿಶೇಷಾಂಶ— ಜಗತ್‌ಪ್ರವಾಹಃ ಸತ್ಯೋऽಯಂ ಪಂಚಭೇದಸಮನ್ವಿತಃ, ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾಃ, ಪಂಚಭೇದಾ ಇಮೇ ಸತ್ಯಾಃ ಸರ್ವಾವಸ್ಥಾಸು ಸರ್ವಶಃ ಇತ್ಯಾದಿ ಪ್ರಮಾಣಗಳು ಭೇದವನ್ನು ಸತ್ಯವೆಂದು ಸಾಧಿಸುತ್ತವೆ. ಈ ಭೇದಗಳು ನಮ್ಮ ಪ್ರತ್ಯಕ್ಷಾನುಭವಕ್ಕೂ ಗೋಚರವಾಗುತ್ತಿವೆ. ಇವೆಲ್ಲವನ್ನೂ ಸುಳ್ಳೆಂದು ಸಾಧಿಸಲು ಶಂಕರಾಚಾರ್ಯರ ಶಾಸ್ತ್ರವೊಂದೇ ನಮಗೆ ಪ್ರಬಲವಾದ ಆಧಾರವು. ಅದನ್ನು ಬಿಟ್ಟು ಯಾರಿಗೂ ಈ ಪ್ರಪಂಚವನ್ನು ಸುಳ್ಳೆಂದು ಸಾಧಿಸಲು ಸಾಧ್ಯವಿಲ್ಲ.

ವಿಗ್ರಹ—

**ಮರ್ತ್ಯಾಮರ್ತ್ಯಾಮರ್ತ್ಯವಿದ್ವಿಟ್‌ಪುರೋಗಂ**— ನ ಮರ್ತ್ಯಾಃ ಅಮರ್ತ್ಯಾಃ, ಅಮರ್ತ್ಯಾನಾಂ ವಿದ್ವಿಷಃ ಅಮರ್ತ್ಯವಿದ್ವಿಷಃ, ಮರ್ತ್ಯಾಶ್ಚ ಅಮರ್ತ್ಯಾಶ್ಚ ಅಮರ್ತ್ಯವಿದ್ವಿಷಶ್ಚ ಮರ್ತ್ಯಾಮರ್ತ್ಯಾಮರ್ತ್ಯವಿದ್ವಿಷಃ, ಏತೇ ಪುರೋಗಾಃ ಯಸ್ಯ ತತ್ ಮರ್ತ್ಯಾಮರ್ತ್ಯಾಮರ್ತ್ಯವಿದ್ವಿಟ್‌ಪುರೋಗಂ ।

**ದೃಶ್ಯಂ**— ದ್ರಷ್ಟುಂ ಯೋಗ್ಯಂ ದೃಶ್ಯಂ ।

**ವಿಪ್ರಚಂಡಾಲಪೂರ್ವಂ**— ವಿಪ್ರಶ್ಚ ಚಂಡಾಲಾಶ್ಚ ವಿಪ್ರಚಂಡಾಲಾಃ, ವಿಪ್ರಚಂಡಾಲಾಃ ಪೂರ್ವೇ ಯಸ್ಯ ತತ್ ವಿಪ್ರಚಂಡಾಲಪೂರ್ವಂ ।

**ಭೇದಾಪೇತಂ**— ಭೇದೈಃ ಅಪೇತಂ ಭೇದಾಪೇತಂ ।

**ಭೇದಿ—** ಭೇದಃ ಅಸ್ಯ ಅಸ್ತೀತಿ ಭೇದಿ ।

**ಸಮಾನ್ಯೈಃ—** ಮಾನ್ಯೈಃ ಸಹ ವರ್ತತೇ ಇತಿ ಸಮಾನಂ, ತ್ಯೈಃ ಸಮಾನ್ಯೈಃ ।

ಅತಿಶಯೇನ ಬಾಢಃ ಸಾಧೀಯಃ ಬಹಳ ದೃಢವಾಗಿ (ಸಾಧೀಯಃ-ದ್ವಿವಚನ ವಿಭಜ್ಯೋಪಪದೇತರಬೀಯಸುನೌ (5-3-50) ಇತಿ ಈಯಸುನ್. ಅಂತಿಕಬಾಢಯೋರ್ನೇದಸಾಧೌ (5-3-63) ಇತಿ ಬಾಢಶಬ್ದಸ್ಯ ಸಾಧಾದೇಶಃ ಭಾ. ಪ್ರ. ಸಾಧೀಯಃ ಎಂಬುದು ಇಲ್ಲಿ ಕ್ರಿಯಾವಿಶೇಷಣ ಬಾಢಶಬ್ದಕ್ಕೆ ಸಾಧ ಆದೇಶ.

**ಕ್ರಿಯಾಪದ—** ರಾಧಸಾಧಸಂಸಿದ್ಧೌ ಣಿಜಂತಾತ್ ವಿಧಿಲಿಙ್ ಸರ್ಗ 11 ಶ್ಲೋಕ 45 ನೋಡಿರಿ ।

| | | |
|---|---|---|
| ಸಾಧಯೇತ್ | ಸಾಧಯೇತಾಂ | ಸಾಧಯೇಯುಃ |
| ಸಾಧಯೇಃ | ಸಾಧಯೇತಂ | ಸಾಧಯೇತ |
| ಸಾಧಯೇಯಂ | ಸಾಧಯೇವ | ಸಾಧಯೇಮ ॥ |

**ಪ್ರಯೋಗ—** ಕೇನ ತಾಂ ಅಲಬ್ಧ್ವಾ ಸಾಧ್ಯೇತ (ಕರ್ಮಣಿ) ।

★ ★ ★

**ಸತ್ಯಂ ಸತ್ಯಂ ವ್ಯಾವಹಾರ್ಯಂ ವಿಧತ್ತೇ**
**ಸರ್ವಂ ಮೋಹೇ ಸರ್ವನಿರ್ವಾಹಿಣೀ ಸಾ ।**
**ಜ್ಞಾನೇ ಜಾತೇ ದಗ್ಧವಸ್ತ್ರಪ್ರತೀತಂ**
**ಪಕ್ವೇ ತಸ್ಮಿಂಸ್ತಪ್ತಲೋಹಾಪ್ತವಾರ್ವತ್ ॥ 6 ॥**

**ಪದಚ್ಛೇದ—** ಸತ್ಯಂ, ಸತ್ಯಂ, ವ್ಯಾವಹಾರ್ಯಂ, ವಿಧತ್ತೇ, ಸರ್ವಂ, ಮೋಹೇ, ಸರ್ವನಿರ್ವಾಹಿಣೀ, ಸಾ, ಜ್ಞಾನೇ, ಜಾತೇ, ದಗ್ಧವಸ್ತ್ರಪ್ರತೀತಂ, ಪಕ್ವೇ, ತಸ್ಮಿನ್, ತಪ್ತಲೋಹಾಪ್ತವಾರ್ವತ್ ।

**ಅನ್ವಯ—** ಸರ್ವನಿರ್ವಾಹಿಣೀ ಸಾ ಮೋಹೇ ಸತ್ಯಂ ಸರ್ವಂ ವ್ಯಾವಹಾರ್ಯಂ ಸತ್ಯಂ ವಿಧತ್ತೇ, ಜ್ಞಾನೇ ಜಾತೇ ದಗ್ಧ ವಸ್ತ್ರಪ್ರತಿತಂ, ತಸ್ಮಿನ್ ಪಕ್ವೇ ತಪ್ತಲೋಹಾಪ್ತವಾರ್ವತ್ ।

**ಅನ್ವಯಾರ್ಥ—**

**ಸರ್ವನಿರ್ವಾಹಿಣೀ** = ಎಲ್ಲಾ ಪ್ರಮಾಣಗಳಿಗೂ ಪರಸ್ಪರ ವಿರೋಧವಿಲ್ಲದೆ ವಿಷಯಗಳನ್ನು ವ್ಯವಸ್ಥಾಪಿಸಿ ಸಮನ್ವಯಗೊಳಿಸುವ

**ಸಾ** = ಆ ಶಂಕರಾಚಾರ್ಯರ ಶಾಸ್ತ್ರವು

**ಮೋಹೇ** = ಅಜ್ಞಾನದ ಸ್ಥಿತಿಯಲ್ಲಿ

**ಸತ್ಯಂ** = ಪಾರಮಾರ್ಥಿಕ ಸತ್ಯವೆಂದು ತೋರುವ

**ಸರ್ವಂ** = ಎಲ್ಲವನ್ನೂ

**ವ್ಯಾವಹಾರ್ಯಂ** = ಕೇವಲ ವ್ಯವಹಾರ ದೆಶೆಯಲ್ಲಿರುವ

**ಸತ್ಯಂ** = ನಿಜವಸ್ತುವನ್ನಾಗಿ

**ವಿಧತ್ತೇ** = ವಿಧಾನ ಮಾಡುತ್ತದೆ. (ಹೇಳುತ್ತದೆ).

**ಜ್ಞಾನೇ ಜಾತೇ (ಸತಿ)** = ನೇಹ ನಾನಾಸ್ತಿ ಕಿಂಚನ ಇತ್ಯಾದಿ ಆಗಮಗಳಿಂದ ಶಾಬ್ದ ಬೋಧವೆಂಬ ಪರೋಕ್ಷಜ್ಞಾನ ಉಂಟಾದಾಗ,

ದಗ್ಧವಸ್ತ್ರಪ್ರತೀತಂ = ಸುಟ್ಟುಹೋದ ವಸ್ತ್ರದಂತೆ ತಿಳಿಯಲ್ಪಟ್ಟುದಾಗಿ (ಆಗುತ್ತದೆ)

ತಸ್ಮಿನ್ ಪಕ್ವೇ ಸತಿ = ಪ್ರಮಾಣದಿಂದ ಉಂಟಾದ ಜ್ಞಾನವು ದೃಢವಾದ ಅಪರೋಕ್ಷ ಸ್ವರೂಪವನ್ನು ಹೊಂದಲಾಗಿ

ತಪ್ತ = ಕಾದು ಬಿಸಿಯಾದ

ಲೋಹ = ಕಬ್ಬಿಣವನ್ನು

ಆಪ್ತ = ಹೊಂದಿದ

ವಾರ್ವತ್ = ನೀರಿನಂತೆ,

(ಭವತಿ = ಆಗುತ್ತದೆ)

ತಾತ್ಪರ್ಯ— ಸನ್ ಘಟಃ ಮಡಿಕೆಯು ಸತ್ಯವಾಗಿದೆ. ಸನ್ ಪಟಃ = ಬಟ್ಟೆಯು ಸತ್ಯವಾಗಿದೆ. ಇದೇ ಮೊದಲಾದ ಅಸಂಖ್ಯ ಪ್ರತ್ಯಕ್ಷಗಳು ನಮಗೆ ಪ್ರತಿದಿನವೂ ಬರುತ್ತವೆ. 'ಈ ಪ್ರಪಂಚವು ಪ್ರಯೋಜನವನ್ನುಂಟು ಮಾಡುವುದರಿಂದ ಸತ್ಯವಾಗಿದೆ. ಯಾವುದು ಸತ್ಯವಲ್ಲವೋ ಅದು ಪ್ರಯೋಜನವುಂಟು ಮಾಡುವುದಿಲ್ಲ. ಕಪ್ಪೆಚಿಪ್ಪಿನಲ್ಲಿ ಕಂಡ ಬೆಳ್ಳಿಯು ಸತ್ಯವಲ್ಲ. ಅದು ಪ್ರಯೋಜನ ಉಂಟು ಮಾಡುವುದಿಲ್ಲ. ಪ್ರಪಂಚವು ಪ್ರಯೋಜನವನ್ನು ಉಂಟುಮಾಡುವು-ದಿಲ್ಲವೆಂದಿಲ್ಲ. ಅಂದರೆ ಪ್ರಯೋಜನವನ್ನುಂಟುಮಾಡಿಯೇ ಮಾಡುತ್ತದೆ. ಆದ್ದರಿಂದ ಸತ್ಯವಲ್ಲವೆಂದು ಹೇಳಲು ಬರುವುದಿಲ್ಲ ಸತ್ಯವೇ ಆಗಿದೆ' ಇತ್ಯಾದಿ ಅನುಮಾನ ಪ್ರಮಾಣಗಳಿಂದಲೂ ಪ್ರಪಂಚವು ಸತ್ಯವೆಂದು ತಿಳಿದು ಬರುತ್ತದೆ. 'ವಿಶ್ವಂ ಸತ್ಯಂ ಮಘವಾನಾ ಎಲೈ ಐಶ್ವರ್ಯಯುಕ್ತವಾದ ರೂಪದ್ವಯದಿಂದ ಕೂಡಿದ ಪರಮಾತ್ಮನೇ ನೀನು ನಿರ್ಮಿಸಿದ ಪ್ರಪಂಚವೆಲ್ಲವೂ ಸತ್ಯ'. ಇತ್ಯಾದಿಯಾದ ಅಸಂಖ್ಯ ಆಗಮಗಳಿಂದಲೂ ಜಗತ್ತು ಸತ್ಯವೆಂದು ಕಂಡುಬರುತ್ತದೆ. ಹೀಗಿದ್ದರೂ ನಮ್ಮ ಶಂಕರಾಚಾರ್ಯರ ದರ್ಶನವು ಈ ಪ್ರಮಾಣಗಳ ವಿರೋಧವನ್ನು ಪರಿಹರಿಸಿ ಪ್ರಪಂಚವೆಲ್ಲವೂ ಮಿಥ್ಯಾ = ಸುಳ್ಳು ಎಂದು ಸಾಧಿಸುತ್ತದೆ. ವ್ಯಾವಹಾರಿಕ ಸತ್ತಾ (ಸ್ಥಿತಿ) ಪಾರಮಾರ್ಥಿಕ ಸತ್ತಾ ಎಂದು ವಸ್ತುಗಳ ಎರಡು ವಿಧವಾದ ಸ್ಥಿತಿಯನ್ನು ಒಪ್ಪಿಕೊಂಡು ನಮಗೆ ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳಿಂದ ತಿಳಿದು ಬರುವ ಪ್ರಪಂಚದ ಸತ್ಯತೆಯು ವ್ಯಾವಹಾರಿಕ ಅಂದರೆ ಅಜ್ಞಾನವಿರುವಾಗ ಸತ್ಯವಾಗಿ ತೋರುವ ಸ್ಥಿತಿಯು. ಸರಿಯಾದ ತಿಳುವಳಿಕೆಯಿಲ್ಲದಿರುವುದೇ ಇದಕ್ಕೆ ಕಾರಣ. 'ಎಲ್ಲರಿಗೂ ಇರುವ ನಾನು ಎಂಬ ಅನುಭವ, ನನ್ನ ಹೊರತು ಬೇರೆ ಯಾರೂ ಇಲ್ಲ, ಪ್ರಪಂಚವು ನಮ್ಮ ತಿಳುವಳಿಕೆಗೆ ಬರುವುದರಿಂದ ಸುಳ್ಳು, ಕಪ್ಪೆಚಿಪ್ಪು ನಮ್ಮ ತಿಳುವಳಿಕೆಗೆ ಬರುತ್ತದೆ. ನೇಹ ನಾನಾಸ್ತಿ ಕಿಂಚನ, ಈ ಪ್ರಪಂಚದಲ್ಲಿ ಯಾವ ಭೇದವೂ ಇಲ್ಲ ಇವೇ ಮೊದಲಾದ ಆಗಮಗಳೂ ಪ್ರಪಂಚವು ಸುಳ್ಳು ಎಂದು ಸಾರುತ್ತವೆ. ಆದರೆ ಇವುಗಳ, 'ಪಾರಮಾರ್ಥಿಕ ಸತ್ತಾ' ಅಂದರೆ ಪ್ರಪಂಚದ ನಿಜವಾದ ಸ್ವರೂಪವನ್ನು ಹೇಳುತ್ತವೆ. ಪ್ರಪಂಚವು ನಿಜವಾಗಿ ಇಲ್ಲ ಎಂದು ಹೇಳುತ್ತವೆ. ಆದ್ದರಿಂದ ಹಿಂದೆ ಹೇಳಿದ ಭೇದ ಪ್ರಮಾಣಗಳಿಗೂ (ಪ್ರಪಂಚವು ಸತ್ಯವೆಂದು ಪ್ರತಿಪಾದಿಸುವ ಪ್ರಮಾಣ-ಗಳಿಗೂ) ಮತ್ತು ಪ್ರಪಂಚವು ಮಿಥ್ಯಾ = ಸುಳ್ಳು ಎಂದು ಪ್ರತಿಪಾದಿಸುವ ಪ್ರಮಾಣಗಳಿಗೂ, ಪರಸ್ಪರ ವಿರೋಧವಿಲ್ಲ. ಜಗತ್ತು ಸತ್ಯ ಎಂದು ಹೇಳುವ ಪ್ರಮಾಣಗಳಿಗೂ ಜಗತ್ತು ಮಿಥ್ಯಾ ಎಂದು ಹೇಳುವ ಪ್ರಮಾಣಗಳಿಗೂ ವಿಷಯವೇ ಬೇರೆಯಾಗಿದೆ. ಪ್ರಪಂಚವು ವ್ಯವಹಾರಸಮಯದಲ್ಲಿ ಸಂಸಾರಾವಸ್ಥೆಯಲ್ಲಿ ಸತ್ಯವಾಗಿದೆ. ಪಾರಮಾರ್ಥಿಕವಾಗಿ ಮೋಕ್ಷ ದಶೆಯಲ್ಲಿ ಯಾವ ವಸ್ತುವೂ ಇರುವುದಿಲ್ಲ, ಯಾವ ಭೇದವೂ ಇರುವುದಿಲ್ಲ. ಬ್ರಹ್ಮವೊಂದೇ ಇರುತ್ತದೆ ಎಂದು ಹೇಳುವ ಈ ಎರಡು ಪ್ರಮಾಣಗಳಿಗೆ ವಿರೋಧವೆಲ್ಲಿಂದ ಬರಲು ಸಾಧ್ಯ ? ಹೀಗೆ ಎಲ್ಲಾ ಪ್ರಮಾಣಗಳಿಗೂ ಪರಸ್ಪರ ವಿರೋಧವಿಲ್ಲದೆ ಸಾಮರಸ್ಯವನ್ನು ಸಂಪಾದಿಸಿ, ಸಮನ್ವಯಗೊಳಿಸಿ ವ್ಯವಸ್ಥಾಪನೆ ಮಾಡತಕ್ಕದ್ದು ನಮ್ಮ ಶಂಕರಾಚಾರ್ಯರ ದರ್ಶನವು. ವಾಸ್ತವಿಕವಾಗಿ ಪ್ರಪಂಚವು ಹೇಗಿರುತ್ತದೆ ಎಂದರೆ 'ನೇಹ ನಾನಾಸ್ತಿ ಕಿಂಚನ' ಈ ಪ್ರಪಂಚದಲ್ಲಿ ಯಾವ ಭೇದವೂ ಇಲ್ಲ. ಇತ್ಯಾದಿ ಆಗಮಗಳಿಂದ ಪರೋಕ್ಷಜ್ಞಾನವಾಗುತ್ತದೆ. ಆಗ ಜಗತ್ತು ಸುಟ್ಟ ಬಟ್ಟೆಯಂತೆ ಕಾಣಿಸುತ್ತಿದೆ. ಬಟ್ಟೆ ಇಲ್ಲ, ಆದರೂ ಕಾಣಿಸುತ್ತಿದೆ ಎಂದು ಜ್ಞಾನ ಬರುತ್ತದೆ. ಆದರಂತೆ ಎಲ್ಲರಿಗೂ ಬರುವ ನಾನು ಎಂಬ ಏಕಾಕಾರವಾದ ಪ್ರತ್ಯಕ್ಷ ಅನುಮಾನ ಆಗಮಗಳಿಂದ ಬ್ರಹ್ಮಾತಿರಿಕ್ತ ಪ್ರಪಂಚವೆಲ್ಲವೂ ಸುಳ್ಳು ಎಂದು ಪರೋಕ್ಷ ಜ್ಞಾನವು ಬರುತ್ತಿದ್ದರೂ ಸಂಪೂರ್ಣವಾಗಿ ಆ

ವಿದ್ಯೆಯು = ಅಜ್ಞಾನವು ನಾಶವಾಗುವವರೆಗೆ, ಮಡಿಕೆ, ಬಟ್ಟೆ ಮನೆ ಮುಂತಾದ ಸಮಸ್ತ ಪ್ರಪಂಚವೂ 'ಸನ್' ಸತ್ಯ, ಇರತಕ್ಕಂತಹ ವಸ್ತು, ಕಪ್ಪೆಚಿಪ್ಪಿನಲ್ಲಿ ಕಾಣುವ ಬೆಳ್ಳಿಯಂತೆ ಸುಳ್ಳಲ್ಲ ಎಂಬ ತಿಳುವಳಿಕೆಯು ಬರುತ್ತಿರುತ್ತದೆ. ಇದು ಅನಿವಾರ್ಯವು. ಹಿಂದೆ ಹೇಳಿದ ಪ್ರಮಾಣಗಳಿಂದ ಉಂಟಾದ ಪ್ರಪಂಚವು ಮಿಥ್ಯಾ ಎಂಬ ಜ್ಞಾನವು ಚೆನ್ನಾಗಿ ದೃಢವಾದಾಗ, ಸರಿಯಾದ ಅಪರೋಕ್ಷ ಜ್ಞಾನವುಂಟಾದಾಗ, ಜೀವಬ್ರಹ್ಮರಿಗೆ ಭೇದವಿಲ್ಲ ಎಂದು ಪುನಃ ಪುನಃ ಅನುಸಂಧಾನ ಮಾಡಿದಾಗ ಈ ಪ್ರಪಂಚವು ಕಾದ ಕಬ್ಬಿಣದಲ್ಲಿ ಬಿದ್ದ ನೀರು ಇಂಗಿ ಹೋಗುವಂತೆ ಇಂಗಿಹೋಗುತ್ತದೆ. ಎಲ್ಲವೂ ಬ್ರಹ್ಮವೇ ಎಂದು ತೋರಿ ಭೇದಜ್ಞಾನವು ಮಾಯವಾಗಿ ಪ್ರಪಂಚವು ಇಲ್ಲವಾಗುತ್ತದೆ. ಇದೇ ಸರ್ವ ಮಿಥ್ಯಾತ್ವ ಜ್ಞಾನವು. ಇದೇ ಶಂಕರಾಚಾರ್ಯರ ಸಿದ್ಧಾಂತದ ಸಾರವು.

ವಿಗ್ರಹ—

ವ್ಯಾವಹಾರ್ಯಂ— ವ್ಯಾವಹಾರಯಿತುಂ ಯೋಗ್ಯಂ ವ್ಯಾವಹಾರ್ಯಂ ।

ಸರ್ವನಿರ್ವಾಹಿಣೀ— ನಿರ್ವಾಹಃ ಅಸ್ಯಾಃ ಅಸ್ತೀತಿ ನಿರ್ವಾಹಿಣೀ, ಸರ್ವಸ್ಯ ನಿರ್ವಾಹಿಣೀ ಸರ್ವನಿರ್ವಾಹಿಣೀ ।

ವಸ್ತ್ರಪ್ರತೀತಂ— ದಗ್ಧಂ ಚ ತತ್ ವಸ್ತ್ರಂ ಚ ದಗ್ಧವಸ್ತ್ರಂ, ದಗ್ಧವಸ್ತ್ರವತ್ ಪ್ರತೀತಂ ದಗ್ಧವಸ್ತ್ರಪ್ರತೀತಂ ।

ತಪ್ತಲೋಹಾಪ್ತವಾರ್ವತ್— ತಪ್ತಂ ಚ ತತ್ ಲೋಹಂ ಚ ತಪ್ತಲೋಹಂ, ತಪ್ತಲೋಹಂ ಆಪ್ತಂ ತಪ್ತಲೋಹಾಪ್ತಂ, ತಪ್ತಲೋಹಾಪ್ತಂ ಚ ತತ್ ವಾಶ್ಚ ತಪ್ತಲೋಹಾಪ್ತವಾಃ (ವಾಃ ವಾರೀ ವಾರಿ ರೇಫಾಂತ ನಪುಂಸಕಲಿಂಗ) ತಪ್ತಲೋಹಾಪ್ತವಾಃ ಇವ ತಪ್ತಲೋಹಾಪ್ತವಾರ್ವತ್ ।

ಕ್ರಿಯಾಪದ— ವಿಧತ್ತೇ ಇದೇ 12ನೆಯ ಸರ್ಗದ ನಾಲ್ಕನೆಯ ಶ್ಲೋಕದ ವ್ಯಾಖ್ಯಾನ ನೋಡಿರಿ.

ಪ್ರಯೋಗ— ಸರ್ವನಿರ್ವಾಹಿಣ್ಯಾ ತಯಾ ಮೋಹೇ ಸತ್ಯಂ ಸರ್ವಂ ವ್ಯಾವಹಾರ್ಯ ಸತ್ಯಂ ವಿಧೀಯತೇ (ಕರ್ಮಣಿ) ।

★ ★ ★

**ಜ್ಞಾನಿಶ್ರೇಷ್ಠಶ್ರೇಷ್ಠವಿಜ್ಞಾನಿವರ್ಗೇ**
**ನೈರ್ಗುಣ್ಯಸ್ಥೇ ಸಾಂಪ್ರತಂ ನಾಥಭೂತಾಃ ।**
**ಆಕ್ರಂದಂ ಮೇ ಹಂತ ಶೃಣ್ವಂತು ಸೋಽಯಂ**
**ಹಾಹಾ ಮಾಯಾವಾದ ಉತ್ಸಾದಮೇತಿ ॥ 7 ॥**

ಪದಚ್ಛೇದ— ಜ್ಞಾನಿಶ್ರೇಷ್ಠಶ್ರೇಷ್ಠವಿಜ್ಞಾನಿವರ್ಗೇ, ನೈರ್ಗುಣ್ಯಸ್ಥೇ, ಸಾಂಪ್ರತಂ, ನಾಥಭೂತಾಃ, ಆಕ್ರಂದಂ, ಮೇ, ಹಂತ, ಶೃಣ್ವಂತು, ಸಃ, ಅಯಂ, ಹಾ, ಹಾ, ಮಾಯಾವಾದಃ ಉತ್ಸಾದಂ, ಏತಿ ।

ಅನ್ವಯ— ಜ್ಞಾನಿಶ್ರೇಷ್ಠ ಶ್ರೇಷ್ಠ ವಿಜ್ಞಾನಿವರ್ಗೇ, ನೈರ್ಗುಣ್ಯಸ್ಥೇ (ಸತಿ) ಸಾಂಪ್ರತಂ ನಾಥಭೂತಾಃ (ಭವಂತಃ) ಮೇ ಆಕ್ರಂದಂ ಶೃಣ್ವಂತು । ಹಂತ! ಸಃ ಅಯಂ ಮಾಯಾವಾದಃ ಉತ್ಸಾದಂ ಏತಿ ।

ಅನ್ವಯಾರ್ಥ—

**ಜ್ಞಾನಿಶ್ರೇಷ್ಠ** = ಜ್ಞಾನಿಶ್ರೇಷ್ಠನೆಂಬುವನೇ

**ಶ್ರೇಷ್ಠ** = ಉತ್ತಮನಾಗಿ ಉಳ್ಳ

**ವಿಜ್ಞಾನಿವರ್ಗೇ** = ವಿದ್ವಾಂಸರ ಸಮೂಹವು

**ನೈರ್ಗುಣ್ಯಸ್ಥೇ ಸತಿ** = ನಿರ್ಗುಣ ಬ್ರಹ್ಮಭಾವರೂಪವಾದ ಮುಕ್ತಿಯನ್ನು ಹೊಂದಲಾಗಿ

ಸಾಂಪ್ರತಂ = ಪ್ರಕೃತಸಮಯದಲ್ಲಿ

ನಾಥಭೂತಾಃ (ಭವಂತಃ) = ರಕ್ಷಕರಾದ (ನೀವು)

ಮೇ = ನನ್ನ

ಆಕ್ರಂದಂ = ರೋದನವನ್ನು

ಶೃಣ್ವಂತು = ಕೇಳಿರಿ

ಹಂತ = ಅಯ್ಯೋ!

ಸಃ ಅಯಂ = ಅಂತಹ ಈ ಪ್ರಸಿದ್ಧವಾದ

ಮಾಯಾವಾದಃ = ಎಲ್ಲವೂ ಮಾಯಾಕಲ್ಪಿತವೆಂಬ ವಾದವು

ಉತ್ಪಾದಂ ಏತಿ = ಹಾಳಾಗುವುದು.

ಹಾ ಹಾ = ಕಷ್ಟ, ಕಷ್ಟ!

ತಾತ್ಪರ್ಯ— ಈ ಹಿಂದೆ ನಮ್ಮಲ್ಲಿ ಜ್ಞಾನಿಶ್ರೇಷ್ಠರೆಂಬ ದೊಡ್ಡ ಬ್ರಹ್ಮ ವಿಜ್ಞಾನಿಗಳಿದ್ದರು. ಅವರಂತೆಯೇ ಇರುವ ಇನ್ನೂ ಅನೇಕ ಬ್ರಹ್ಮವಿಜ್ಞಾನಿಗಳ ಸಮೂಹವೇ ನಮ್ಮಲ್ಲಿತ್ತು. ಅವರೆಲ್ಲರೂ ಕೂಡ ನಿರ್ಗುಣ ಬ್ರಹ್ಮನಲ್ಲಿ ಏಕೀಭಾವರೂಪವಾದ ಮೋಕ್ಷವನ್ನು ಪಡೆದರು. ಅವರು ಯಾರೂ ಇಲ್ಲದ ಈ ಕಾಲದಲ್ಲಿ ನಮಗೆ ನೀವೇ ರಕ್ಷಕರು, ನೀವೆಲ್ಲರೂ ನನ್ನ ಈ ಗೋಳನ್ನು, ರೋದನವನ್ನು ಕೇಳಿರಿ. ಅಯ್ಯೋ, ಕಷ್ಟ ಕಷ್ಟ! ಇಂತಹ ಪ್ರಸಿದ್ಧವಾದ ಮಾಯಾವಾದವು ನಾಶವಾಗುತ್ತಿದೆ.

ವಿಗ್ರಹ—

ಜ್ಞಾನಿಶ್ರೇಷ್ಠಶ್ರೇಷ್ಠವಿಜ್ಞಾನಿವರ್ಗೇ— ಜ್ಞಾನಿ ಶ್ರೇಷ್ಠಃ ಯಸ್ಮಿನ್ ಸಃ ಜ್ಞಾನಿಶ್ರೇಷ್ಠಶ್ರೇಷ್ಠಃ, ವಿಜ್ಞಾನಂ ಏಷಾಂ ಅಸ್ತೀತಿ ವಿಜ್ಞಾನಿನಃ, ವಿಜ್ಞಾನಿನಾಂ ವರ್ಗಃ, ವಿಜ್ಞಾನಿವರ್ಗಃ, ಜ್ಞಾನಿಶ್ರೇಷ್ಠಶ್ರೇಷ್ಠಶ್ಚಾಸೌ ವಿಜ್ಞಾನಿವರ್ಗಶ್ಚ ಜ್ಞಾನಿಶ್ರೇಷ್ಠಶ್ರೇಷ್ಠವಿಜ್ಞಾನಿವರ್ಗಃ, ತಸ್ಮಿನ್ ಜ್ಞಾನಿಶ್ರೇಷ್ಠಶ್ರೇಷ್ಠವಿಜ್ಞಾನಿವರ್ಗೇ ।
(ಛಲಾರೀಯದಂತೆ 'ಜ್ಞಾನಿಶ್ರೇಷ್ಠಶ್ರೇಷ್ಠ ಎಂಬಲ್ಲಿಯವರೆಗೆ ಹಿಂದಿನಂತೆಯೇ ವಿಗ್ರಹ, ವಿಜ್ಞಾನಿ ವರ್ಗ ಎಂಬಲ್ಲಿಯೂ ಹಿಂದಿನಂತೆಯೇ ವಿಗ್ರಹ, ಅನಂತರ ಜ್ಞಾನಿಶ್ರೇಷ್ಠ ಶ್ರೇಷ್ಠಶ್ಚ ವಿಜ್ಞಾನಿವರ್ಗಶ್ಚ ತಯೋಃ ಸಮಾಹಾರಃ ಜ್ಞಾನಿಶ್ರೇಷ್ಠಶ್ರೇಷ್ಠ ವಿಜ್ಞಾನಿವರ್ಗಂ, ತಸ್ಮಿನ್ ಜ್ಞಾನಿಶ್ರೇಷ್ಠಶ್ರೇಷ್ಠವಿಜ್ಞಾನಿವರ್ಗೇ)

ನೈರ್ಗುಣ್ಯಸ್ಥೇ— ನಿರ್ಗತಾಃ ಗುಣಾಃ ಯಸ್ಮಿನ್ ತತ್ ನಿರ್ಗುಣಂ (ನಿಷ್ಕ್ರಾಂತಂ ಗುಣೇಭ್ಯಃ ನಿರ್ಗುಣಂ), ನಿರ್ಗುಣಸ್ಯ ಭಾವಃ ನೈರ್ಗುಣ್ಯಂ । ನೈರ್ಗುಣ್ಯೇ ತಿಷ್ಠತೀತಿ ನೈರ್ಗುಣ್ಯಸ್ಥಃ ತಸ್ಮಿನ್ ನೈರ್ಗುಣ್ಯಸ್ಥೇ ।

ನಾಥಭೂತಾಃ— ನಾಥಾಃ ಇತಿ ಸಂಪದ್ಯಮಾನಾಃ ನಾಥಭೂತಾಃ ।

ಮಾಯಾವಾದಃ— ಮಾಯಾಕಲ್ಪಿತಂ (ಸರ್ವಂ) ಇತಿ ವಾದಃ ಮಾಯಾವಾದಃ ।

ಕ್ರಿಯಾಪದ— ಶ್ರುಶ್ರವಣೇ ಲೋಟ್ ಸರ್ಗ 11 ಶ್ಲೋಕ 64 ಶೃಣುತಾದರೇಣ ಎಂಬ ಶ್ಲೋಕ ವ್ಯಾಖ್ಯಾನದಲ್ಲಿ ಈ ಧಾತುವಿನ ಎಲ್ಲಾ ರೂಪಗಳನ್ನು ಕೊಡಲಾಗಿದೆ ।

ಶೃಣೋತು-ಶೃಣುತಾತ್ ಶೃಣುತಾಂ ಶೃಣ್ವಂತು, ಶೃಣು-ಶೃಣುತಾತ್ ಶೃಣುತಂ ಶೃಣುತ,
ಶೃಣವಾನಿ ಶ್ರುಣವಾವ ಶೃಣವಾಮ ಶ್ರುಶ್ರವಣೇ ॥

ಏತಿ ಇತಃ ಯಂತಿ, ಏಷಿ ಇಥಃ ಇಥ, ಏಮಿ ಇವಃ ಇಮಃ ॥

ಕೋಶ— ವರ್ಗ = ಸಮೂಹ, ವೃಂದಭೇದಾಃ ಸಮೂಹ್ವರ್ಗಃ ಸಂಘಸಾರ್ಥೌ ತು ಜಂತುಭಿಃ ಅಮರ ಸಾಂಪ್ರತಂ = ಅಧುನಾ, ಈಗ ಏತರ್ಹಿ ಸಂಪ್ರತೀದಾನೀಮಧುನಾ ಸಾಂಪ್ರತಂ ತಥಾ, ಅಮರ. ಹಾ = ಕಷ್ಟ, ವಿಷಾದ (ಸೂಚಕಾವ್ಯಯ) ಹಾ ವಿಷಾದಶ್ರುಮಾರ್ತಿಷು (ಹಾ ವಿಷಾದಶುಗರ್ತಿಷು) ಅಮರ ॥ 7 ॥

ಪ್ರಯೋಗ— (ಭವಂತಃ) ಮೇ ಆಕ್ರಂದಂ ಶೃಣ್ವಂತು (ಕರ್ತರಿ) ।
ಭವದ್ಭಿಃ ಮೇ ಆಕ್ರಂದಃ ಶ್ರೂಯತಾಂ (ಕರ್ಮಣಿ) ।
ಮಾಯಾವಾದಃ ಉತ್ಸಾದಂ ಏತಿ (ಕರ್ತರಿ) ।
ಮಾಯಾವಾದೇನ ಉತ್ಸಾದಃ ಈಯತೇ (ಕರ್ಮಣಿ) ।

★ ★ ★

ಅವತಾರಿಕಾ— ಮಾಯಾವಾದ ಶಾಸ್ತ್ರವು ನಾಶವಾಗುತ್ತಿರುವ ಬಗೆಯನ್ನು ವಿವರಿಸುತ್ತಾನೆ.

**ಭ್ರಷ್ಟಾ ಭಾಟ್ಟಾ ನ ಪ್ರಭಾಕೃತ್ಪ್ರಭಾಽಭೂತ್**
**ತ್ರಸ್ತಾ ಮಾಹಾಯಾನಿಕಾದ್ಯಾಶ್ಚ ಯತ್ರ ।**
**ದುರ್ಗಂ ಮಾಯಾವಾದಸತ್ರಂ ದಿಧಕ್ಷುಃ**
**ನೋಪೇಕ್ಷ್ಯಾ ನಸ್ತತ್ತ್ವವಾದಾಗ್ನಿಜಿಹ್ವಾ ॥ 8 ॥**

**ಪದಚ್ಛೇದ—** ಭ್ರಷ್ಟಾಃ, ಭಾಟ್ಟಾಃ, ನ, ಪ್ರಭಾಕೃತ್ಪ್ರಭಾ, ಅಭೂತ್, ತ್ರಸ್ತಾಃ, ಮಾಹಾಯಾನಿಕಾದ್ಯಾಃ, ಚ, ಯತ್ರ, ದುರ್ಗಂ, ಮಾಯಾವಾದಸತ್ರಂ, ದಿಧಕ್ಷುಃ, ನ, ಉಪೇಕ್ಷ್ಯಾ, ನಃ, ತತ್ತ್ವವಾದಾಗ್ನಿಜಿಹ್ವಾ ।

**ಅನ್ವಯ—** ಯತ್ರ ಭಾಟ್ಟಾಃ ಭ್ರಷ್ಟಾಃ, ಪ್ರಭಾಕೃತ್ಪ್ರಭಾ ನ ಅಭೂತ್, ತ್ರಸ್ತಾಃ, ಮಾಹಾಯಾನಿಕಾದ್ಯಾಃ ಚ, ಯತ್ರ, ದುರ್ಗಂ ಮಾಯಾವಾದಸತ್ರಂ, ದಿಧಕ್ಷುಃ, ನ ಉಪೇಕ್ಷ್ಯಾ, ನಃ ತತ್ತ್ವವಾದಾಗ್ನಿಜಿಹ್ವಾ ।

**ಅನ್ವಯಾರ್ಥ—**

**ಯತ್ರ** = ಯಾವ ಮಾಯಾವಾದವೆಂಬ ಕಾಡಿನಲ್ಲಿ ಭಾಟ್ಟಾ (ಕುಮಾರಿಲ) ಭಟ್ಟರ ಶಾಸ್ತ್ರದಲ್ಲಿ ನಿಪುಣರಾದ ಮೀಮಾಂಸಕರು (ಭಟ್ಟರ ಶಿಷ್ಯರು)
**ಭ್ರಷ್ಟಾ** = ನಿರುತ್ತರರಾದರು. (ದಾರಿ ತಪ್ಪಿದರು)
**ಪ್ರಭಾಕೃತ್ಪ್ರಭಾ** = ಪ್ರಭಾಕರನೆಂಬ ಮೀಮಾಂಸಕವಾದಿಯ ಸಾಮರ್ಥ್ಯವು (ಸೂರ್ಯನ ಪ್ರಕಾಶವು)
**ನ ಅಭೂತ್** = ಇರಲಿಲ್ಲ.
**ಮಾಹಾಯಾನಿಕಾದ್ಯಾಃ ಚ** = ಮಾಹಾಯಾನಪಂಥದ ಅನುಯಾಯಿಗಳಾದ ಬೌದ್ಧವಾದಿಗಳೂ (ದೊಡ್ಡ ವಾಹನವುಳ್ಳವರೂ)
**ತ್ರಸ್ತಾಃ** = ಹೆದರಿದರು
**ದುರ್ಗಂ** = ಪ್ರವೇಶಿಸಲಾಗದ, ತಿಳಿಯಲು ಸಾಧ್ಯವಿಲ್ಲದ
**ಮಾಯಾವಾದಸತ್ರಂ** = ಮಾಯಾವಾದವೆಂಬ ಕಾಡನ್ನು,
**ದಿಧಕ್ಷುಃ** = ಸುಡಲು ಬಯಸುವ
**ತತ್ತ್ವವಾದಾಗ್ನಿ ಜಿಹ್ವಾ** = ಎಲ್ಲವೂ ಸತ್ಯವೆಂದು ಬೋಧಿಸುವ ದ್ವೈತಶಾಸ್ತ್ರವೆಂಬ ಬೆಂಕಿಯ ಜ್ವಾಲೆಯು
**ನಃ** = ನಮಗೆ
**ಉಪೇಕ್ಷ್ಯಾ** = ಉಪೇಕ್ಷಿಸಲು ಯೋಗ್ಯವಾದುದು
**ನ ಭವತಿ** = ಆಗುವುದಿಲ್ಲ.

**ತಾತ್ಪರ್ಯ—** ಕಾಡು ದಾರಿಯ ಪರಿಚಯವಿಲ್ಲದ ಭಟ್ಟ (ಉಪಾಧ್ಯಾಯ)ರ ಶಿಷ್ಯರು ಛತ್ರಿಪುಸ್ತಕಾದಿಗಳನ್ನು ಹಿಡಿದುಕೊಂಡು, ಮಾರ್ಗಮಶಾತ್ ಕಾಡನ್ನು ಪ್ರವೇಶಿಸಿ ದಾರಿ ರಕ್ಷಕರಿಲ್ಲದೆ ತಪ್ಪಿ ಅಲೆಯುವರು. ಪ್ರಕೃತದಲ್ಲಿ ಈ ನಮ್ಮ

ಮಾಯಾವಾದ ಶಾಸ್ತ್ರವು ದುರ್ಗಮವಾದ ಕಾಡಿನಂತಿರುವುದು. ಇದನ್ನು ಖಂಡಿಸಲು ಪ್ರಯತ್ನಿಸಿದ ಮೀಮಾಂಸಕರು, ಭಟ್ಟರ ಶಿಷ್ಯರು ದಾರಿತಪ್ಪಿದಂತೆ ದಾರಿ ತಪ್ಪಿದರು. ಉತ್ತರ ಕೊಡಲು ಸಮರ್ಥರಾಗಲಿಲ್ಲ. ಪ್ರಭಾಕರನ (ಸೂರ್ಯನ) ಪ್ರಕಾಶವು ದಟ್ಟವಾದ ಕಾಡಿನಲ್ಲಿ ಬೀಳುವುದಿಲ್ಲ. ಅದರಂತೆ ಪ್ರಭಾಕರನ (ಮೀಮಾಂಸಕನ) ಸಾಮರ್ಥ್ಯವು ಮಾಯಾವಾದ ವಿಷಯದಲ್ಲಿ ಕುಂಠಿತವಾಯಿತು. ದೊಡ್ಡ ವಾಹನವುಳ್ಳವರು (ಮಹಾರಥಿಕರು) ಮರಗಳ ಗುಂಪು ಕಲ್ಲುಬಂಡೆಗಳಿಂದ ಕೂಡಿದ ದಟ್ಟವಾದ ಕಾಡಿನೊಳಗೆ ಪ್ರವೇಶಿಸಲು ಸರಿಯಾದ ದಾರಿಯಿಲ್ಲದೆ ಹೆದರುವಂತೆ, ಮಹಾಯಾನ ಮೊದಲಾದ ಬೌದ್ಧಪಂಥದವರೂ ಮಾಯಾವಾದವನ್ನು ಖಂಡಿಸಲಾರದೆ ಹೆದರಿದರು. ಹೀಗೆ ನಮ್ಮ ಮಾಯಾವಾದವೆಂಬ ವನವು ಕೆಲವರನ್ನು ದಾರಿ ತಪ್ಪಿಸಿತು. ಕೆಲವರ ಸಾಮರ್ಥ್ಯವು ಈ ಶಾಸ್ತ್ರದ ಮೇಲೆ ಬೀಳದಂತೆ ಮಾಡಿತು. ಕೆಲವರನ್ನು ಹೆದರಿಸಿತು. ಆದರೆ ಈಗ ಪ್ರಪಂಚವೆಲ್ಲವೂ ಸತ್ಯವೆಂದು ಸಾರುವ ದ್ವೈತಶಾಸ್ತ್ರವು ಅಗ್ನಿಜ್ವಾಲೆಯು ಕಾಡನ್ನು ಸುಡುವಂತೆ ಮಾಯಾವಾದ ಶಾಸ್ತ್ರವನ್ನು ಖಂಡಿಸಲು ಉದ್ಯುಕ್ತವಾಗಿದೆ. ಅಗ್ನಿಯು ಉರಿನಾಲಿಗೆಯನ್ನು ಹೇಗೆ ಉಪೇಕ್ಷಿಸಬಾರದೋ ಅದರಂತೆ ಈ ಮಾಯಾವಾದವನ್ನು ಖಂಡಿಸಲು ಪ್ರಯತ್ನಿಸುವವರನ್ನು ಉಪೇಕ್ಷಿಸಬಾರದು (ಶ್ಲೇಷ ಮೂಲಕವಾದ ಧ್ವನಿ).

ವಿಗ್ರಹ—

**ಪ್ರಭಾಕೃತ್‌ಪ್ರಭಾ**— ಪ್ರಭಾಂ ಕರೋತೀತಿ ಪ್ರಭಾಕೃತ್, ಪ್ರಭಾಕೃತಃ ಪ್ರಭಾ ಪ್ರಭಾಕೃತ್‌ಪ್ರಭಾ ।

**ಮಾಹಾಯಾನಿಕಾದ್ಯಾಃ**— ಮಹಾಯಾನಂ ಅಧೀಯತೇ ಇತಿ ಮಹಾಯಾನಿಕಾಃ, ಆದೌ ಭವಾಃ ಆದ್ಯಾಃ, ಮಹಾಯಾನಿಕಾಃ ಆದ್ಯಾಃ ಯೇಷಾಂ ತೇ ಮಾಹಾಯಾನಿಕಾದ್ಯಾಃ, ಮಹಾಂತಿ ಚ ತಾನಿ ಯಾನಾನಿ ಚ ಮಹಾಯಾನಾನಿ, ತಾನಿ ಪ್ರಯೋಜನಂ ಏಷಾಂ ಇತಿ ಮಾಹಾಯಾನಿಕಾಃ ।

**ದುರ್ಗಂ**— ದುಃಖೇನ ಗಂತುಂ ಶಕ್ಯಂ ದುರ್ಗಂ ।

**ಮಾಯಾವಾದಸತ್ರಂ**— ಮಾಯಾವಾದ ಏವ ಸತ್ರಂ ಮಾಯಾವಾದಸತ್ರಂ ।

**ದಿಧಕ್ಷುಃ**— ದಗ್ಧುಂ ಇಚ್ಛುಃ ದಿಧಕ್ಷುಃ ।

**ತತ್ತ್ವವಾದಾಗ್ನಿಜಿಹ್ವಾ**— ತತ್ತ್ವವಾದ ಏವ ಅಗ್ನಿಃ ತತ್ತ್ವವಾದಾಗ್ನಿಃ, ತತ್ತ್ವವಾದಾಗ್ನೇಃ ಜಿಹ್ವಾ ತತ್ತ್ವವಾದಾಗ್ನಿಜಿಹ್ವಾ ।

**ಉಪೇಕ್ಷ್ಯಾ**— ಉಪೇಕ್ಷಿತುಂ ಯೋಗ್ಯಾ ಉಪೇಕ್ಷ್ಯಾ ।

**ಕ್ರಿಯಾಪದ**— ಅಭೂತ್ (ಹಿಂದೆ ಬಂದಿದೆ) ।

**ಕೋಶ**— ಸತ್ರ = ಕಾಡು. ಸತ್ರಮಾಚ್ಛಾದನೇ ಯಜ್ಞೇ ಸದಾದಾನೇ ವನೇಽಪಿ ಚ ಅಮರ. ಯಾನ = ವಾಹನ, ಯಾನಂ ಗತೌ ವಾಹನೇ ಚ ವಿಶ್ವ ।

**ಪ್ರಯೋಗ**— ಪ್ರಭಾಕೃತ್ ಪ್ರಭಾ ನ ಅಭೂತ್ (ಕರ್ತರಿ) ಪ್ರಭಾಕೃತ್ ಪ್ರಭಯಾ ನ ಅಭಾವಿ (ಭಾವೇ)

★ ★ ★

**ಯಂ ಯಂ ಪ್ರಾಪದ್ಭೂರಿಚಿತ್ತಃ ಪ್ರದೇಶಂ**
**ತಸ್ಮಾತ್ತಸ್ಮಾದಾಗತೇರಂತರಾಯಃ ।**
**ಪ್ರತ್ಯಜ್ಞಾಯಿ ವ್ಯಕ್ತಮಾರ್ಯೇಣ ಸೋಽಪಿ**
**ಪ್ರಾಪ್ನೋತ್ ಪಾರ್ಶ್ವಂ ಹಾ ವಯಂ ಭಾಗ್ಯಹೀನಾಃ ॥ 9 ॥**

**ಪದಚ್ಛೇದ**— ಯಂ, ಯಂ, ಪ್ರಾಪತ್, ಭೂರಿಚಿತ್ತಃ, ಪ್ರದೇಶಂ, ತಸ್ಮಾತ್, ತಸ್ಮಾತ್, ಆಗತೇಃ, ಅಂತರಾಯಃ, ಪ್ರತ್ಯಜ್ಞಾಯಿ, ವ್ಯಕ್ತಂ, ಆರ್ಯೇಣ, ಸಃ, ಅಪಿ, ಪ್ರಾಪ್ನೋತ್, ಪಾರ್ಶ್ವಂ, ಹಾ, ವಯಂ, ಭಾಗ್ಯಹೀನಾಃ ।

**ಅನ್ವಯ—** ಭೂರಿಚಿತ್ತಃ ಯಂ ಯಂ ಪ್ರದೇಶಂ ಪ್ರಾಪತ್, ಆರ್ಯೇಣ ತಸ್ಮಾತ್ ತಸ್ಮಾತ್ (ಪ್ರದೇಶಾತ್) ಆಗತೇಃ ಅಂತರಾಯಃ ವ್ಯಕ್ತಂ ಪ್ರತ್ಯಜ್ಞಾಯಿ, ಸೋಽಪಿ ಪಾರ್ಶ್ವಂ ಪ್ರಾಪ್ನೋತ್, ಹಾ! ವಯಂ ಭಾಗ್ಯಹೀನಾಃ ।

**ಅನ್ವಯಾರ್ಥ—**

**ಭೂರಿಚಿತ್ತಃ** = ಶ್ರೀಪೂರ್ಣಪ್ರಜ್ಞಾಚಾರ್ಯರು
**ಯಂ ಯಂ ಪ್ರದೇಶಂ** = ಯಾವ ಯಾವ ಪ್ರದೇಶವನ್ನು ಕುರಿತು
**ಪ್ರಾಪತ್** = ತಲುಪಿದರೋ
**ಆರ್ಯೇಣ** = ಪೂಜ್ಯರಾದ ಪದ್ಮತೀರ್ಥರಿಂದ
**ತಸ್ಮಾತ್ ತಸ್ಮಾತ್ (ಪ್ರದೇಶಾತ್)** = ಆಯಾ ಪ್ರದೇಶದಿಂದ
**ಆಗತೇಃ** = (ಮುಂದೆ) ಬರುವುದಕ್ಕೆ
**ಅಂತರಾಯಃ** = ವಿಘ್ನವು
**ವ್ಯಕ್ತಂ** = ಸ್ಪಷ್ಟವಾಗಿ
**ಪ್ರತ್ಯಜ್ಞಾಯಿ** = ಪ್ರತಿಜ್ಞೆ ಮಾಡಲ್ಪಟ್ಟಿತು.
**ಸೋಽಪಿ** = ಆ ಮಧ್ವಾಚಾರ್ಯರೂ
**ಪಾರ್ಶ್ವಂ** = ನಮ್ಮ ಸಮೀಪಕ್ಕೆ
**ಪ್ರಾಪ್ನೋತ್** = ಪ್ರಾಪ್ತರಾದರು.
**ಹಾ** = ಅಯ್ಯೋಃ
**ವಯಂ** = ನಾವು
**ಭಾಗ್ಯಹೀನಾಃ** = ಅದೃಷ್ಟವಿಲ್ಲದವರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಹೋಗಿ ಹಿಂದಿರುಗಿ ಬರುತ್ತಿದ್ದಾರೆಂದೂ, ಬದರಿಯಲ್ಲಿಯೇ ಶ್ರೀಮದ್ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದರೆಂದೂ, ಅಲ್ಲಿಂದ ಗೋದಾವರೀ ನದಿಯ ದಡಕ್ಕೆ ಬಂದು ಅಲ್ಲಿ ಎಲ್ಲಾ ವಾದಿಗಳನ್ನು ಜಯಿಸಿದರೆಂದೂ ಅಲ್ಲಿಂದ ಗೋದಾವರಿಯನ್ನು ದಾಟಿ ರಜತಪೀಠಪುರಕ್ಕೆ ಬರುತ್ತಿದ್ದಾರೆಂಬ ವಾರ್ತೆಯನ್ನು ಕೇಳಿ ನಮ್ಮವರಾದ ಮಾಯಾವಾದಿಗಳೆಲ್ಲರೂ ಕ್ಷೋಭೆಗೊಂಡರು. ಭಯಗ್ರಸ್ತರಾದರು. ಆಗ ಈ ಪದ್ಮತೀರ್ಥರು ಆ ಮಧ್ವಾಚಾರ್ಯರು ಈಗ ಯಾವ ದೇಶದಲ್ಲಿದ್ದಾರೋ ಅಲ್ಲಿಂದ ಮುಂದಿನ ದೇಶಕ್ಕೆ ಬರದಂತೆ ನಾನು ತಡೆಯುತ್ತೇನೆ ಎಂದು ಪ್ರತಿಜ್ಞೆ ಮಾಡಿದರು. ಮತ್ತೂ ಮಧ್ವಾಚಾರ್ಯರು ಮುಂದೆ ಬಂದರೆಂದು ಕೇಳಿ, ಅಲ್ಲಿಂದ ಮುಂದೆ ಬರದಂತೆ ತಡೆಯುವೆನೆಂದು ಪ್ರತಿಜ್ಞೆ ಮಾಡಿದರು. ತಿರುಗಿ ತಿರುಗಿ ಹೀಗೆಯೇ ಆಯಾ ಪ್ರದೇಶದಿಂದ ಮುಂದೆ ಬಾರದಂತೆ ತಡೆಯುವೆನೆಂದು ಪ್ರತಿಜ್ಞೆ ಮಾಡಿದರು. ಆದರೂ ಆ ಮಧ್ವಾಚಾರ್ಯರು ನಮ್ಮ ಹತ್ತಿರಕ್ಕೆ ಬಂದರು. ಈ ಪೂಜ್ಯಪದ್ಮತೀರ್ಥರು ಏನು ಮಾಡಿಯಾರು? ಅವರದೇನೂ ತಪ್ಪಿಲ್ಲ. ಅವರಿಂದ ಏನು ಮಾಡಲೂ ಸಾಧ್ಯವಿಲ್ಲ. ಅಯ್ಯೋ, ನಾವೇ ಭಾಗ್ಯಹೀನರು. ನಮ್ಮ ದುರ್ದೈವದಿಂದ ಮಧ್ವಾಚಾರ್ಯರನ್ನು ತಡೆಯಲು ಯಾರಿಗೂ ಆಗುತ್ತಿಲ್ಲ.

**ವಿಗ್ರಹ—**

**ಭೂರಿಚಿತ್ತಃ—** ಭೂರಿ (ಪೂರ್ಣಂ) ಚಿತ್ತಂ ಯಸ್ಯ ಸಃ ಭೂರಿಚಿತ್ತಃ ।
**ಭಾಗ್ಯಹೀನಾಃ—** ಭಾಗ್ಯೇನ ಹೀನಾಃ ಭಾಗ್ಯಹೀನಾಃ ।

**ಕ್ರಿಯಾಪದ—** ಪ್ರ ಉಪಸರ್ಗ, ಆಪ್‌ಲೃವ್ಯಾಪ್ತೌ ಸಕರ್ಮಕ ಅನಿಟ್ ಪರಸ್ಮೈಪದಿ ಭೂತೇ ಲುಙ್ ಪ್ರಥಮಪುರುಷೇ ಏಕವಚನೇ 'ಪ್ರಾಪತ್' ಇತಿ ರೂಪಮ್ ।

ಪ್ರ+ ಆಪತ್ ಆಪತಾಂ ಆಪನ್, ಆಪಃ ಆಪತಂ ಆಪತ, ಆಪಂ ಆಪಾವ ಆಪಾಮ

ಜ್ಞಾ ಅವಬೋಧನೇ ಸಕರ್ಮಕಃ ಉಭಯಪದೀ, ಕರ್ಮಣಿ ಲುಙ್ ಆತ್ಮನೇಪದೀ ಪ್ರಥಮಪುರುಷೇ ಏಕವಚನೇ 'ಪ್ರತ್ಯಜ್ಞಾಯಿ' ಇತಿ ರೂಪಮ್ ।

ಪ್ರತಿ+ ಅಜ್ಞಾಯಿ ಅಜ್ಞಾಯಿಷಾತಾಂ ಅಜ್ಞಾಸಾತಾಂ, ಅಜ್ಞಾಯಿಷತ-ಅಜ್ಞಾಯಿಷ್ಠಾಃ ಅಜ್ಞಾಯಿಷಾಥಾಂ
ಅಜ್ಞಾಯಿಢ್ವಂ, ಅಜ್ಞಾಯಿಷಿ ಅಜ್ಞಾಯಿಷ್ವಹಿ ಅಜ್ಞಾಯಿಷ್ಮಹಿ ॥

**ಪ್ರಯೋಗ—** ಭೂರಿಚತ್ರೇನ ಯಃ ಯಃ ಪ್ರದೇಶಃ ಪ್ರಾಪಿ, ತಸ್ಮಾತ್ ತಸ್ಮಾತ್ ಪ್ರದೇಶಾತ್ ಆಗತೇಃ ಅಂತರಾಯಂ ಆರ್ಯಃ ವ್ಯಕ್ತಂ ಪ್ರತ್ಯಜ್ಞಾಸ್ತ (ಸಂಪ್ರತಿಭ್ಯಾಮನಾಧ್ಯಾನೇ ಇತ್ಯಾತ್ಮನೇಪದಂ) ತೇನಾಪಿ ಪಾರ್ಶ್ವಂ ಪ್ರಾಪ್ಯತ, ಹಾ ಅಸ್ಮಾಭಿಃ ಭಾಗ್ಯಹೀನೈಃ ಅಭಾವಿ (ಸಂಪೂರ್ಣ ಶ್ಲೋಕದ ಪ್ರಯೋಗ ಬದಲಾಯಿಸಿದೆ).

★ ★ ★

**ಅವತಾರಿಕಾ—** ಶ್ರೀಮಧ್ವಾಚಾರ್ಯರು ನಮ್ಮ ಸಮೀಪಕ್ಕೆ ಬಂದುದರಿಂದ ನಮಗಾಗಿರತಕ್ಕ ಕಷ್ಟವು ಏನೆಂಬುದನ್ನು ವಿವರಿಸಿ ಹೇಳುತ್ತೇನೆ.

**ಪ್ರಶ್ನಃ ಪೃಷ್ಟಃ ಖಂಡ್ಯತೇ ತೇನ ನೂನಂ**
**ಯುಕ್ತಾಂ ಯುಕ್ತಿಂ ವಕ್ತಿ ಚಾಸಾವಖಂಡ್ಯಾಮ್ ।**
**ವಾದಿವ್ರಾತಂ ಲಜ್ಜಯೇನ್ನೋ ವಿಶೇಷಾ-**
**ದಾಕ್ಷೇಪ್ತ್ರೇತಿ ಶ್ರೂಯತೇ ಕಿಂ ನು ಕುರ್ಮಃ ॥ 10 ॥**

**ಪದಚ್ಛೇದ—** ಪ್ರಶ್ನಃ, ಪೃಷ್ಟಃ, ಖಂಡ್ಯತೇ, ತೇನ, ನೂನಂ, ಯುಕ್ತಾಂ, ಯುಕ್ತಿಂ, ವಕ್ತಿ, ಚ, ಅಸೌ, ಅಖಂಡ್ಯಾಂ, ವಾದಿವ್ರಾತಂ, ಲಜ್ಜಯೇತ್, ನೋ, ವಿಶೇಷಾತ್, ಆಕ್ಷೇಪ್ತ್ರಾ, ಇತಿ, ಶ್ರೂಯತೇ, ಕಿಂ, ನು, ಕುರ್ಮಃ ।

**ಅನ್ವಯ—** ತೇನ, ಪೃಷ್ಟಃ, ಪ್ರಶ್ನಃ ಖಂಡ್ಯತೇ ನೂನಂ । ಚ ಅಸೌ ಅಖಂಡ್ಯಾಂ ಯುಕ್ತಾಂ ಯುಕ್ತಿಂ ವಕ್ತಿ ವಾದಿವ್ರಾತಂ ಲಜ್ಜಯೇತ್ ನಃ ವಿಶೇಷಾತ್ ಆಕ್ಷೇಪ್ತ್ರಾ ಇತಿ ಶ್ರೂಯತೇ ಕಿಂ ನು ಕುರ್ಮಃ ?

**ಅನ್ವಯಾರ್ಥ—**

**ತೇನ** = ಆ ಮಧ್ವಾಚಾರ್ಯರಿಂದ
**ಪೃಷ್ಟಃ** = ನಮ್ಮಿಂದ ಆಕ್ಷೇಪರೂಪವಾಗಿ ಕೇಳಲ್ಪಟ್ಟ
**ಪ್ರಶ್ನಃ** = ಪ್ರಶ್ನೆಯು
**ಖಂಡ್ಯತೇ** = ಖಂಡಿಸಲ್ಪಡುತ್ತದೆ
**ನೂನಂ** = ನಿಶ್ಚಯವು.
**ಅಸೌ** = ಈ ಶ್ರೀಮಧ್ವಾಚಾರ್ಯರು
**ಯುಕ್ತಾಂ** = ಹೊಂದಿಕೆಯಾಗುವ (ಸರಿಯಾದ)
**ಅಖಂಡ್ಯಾಂ** = ಖಂಡಿಸಲಾಗದ
**ಯುಕ್ತಿಂ** = ಯುಕ್ತಿಯನ್ನು

ವಕ್ತಿ ಚ = ಹೇಳಿಯೇ ತೀರುತ್ತಾರೆ. (ಆದ್ದರಿಂದಲೇ)

ವಾದಿವ್ರಾತಂ = ನಿರುತ್ತರರಾದ ವಾದಿಗಳ ಸಮೂಹವನ್ನು

ಲಜ್ಜಯೇತ್ = ನಾಚಿಕೆಗೊಳಿಸಿಯೇ ತೀರುತ್ತಾರೆ.

ನಃ = ನಮ್ಮನ್ನು

ವಿಶೇಷಾತ್ = ವಿಶೇಷವಾಗಿ

ಆಕ್ಷೇಪ್ತಾ = ನಿರಾಕರಿಸುವವರು ಆಗಿರುತ್ತಾರೆ,

ಇತಿ ಶ್ರೂಯತೇ = ಎಂದು ಕೇಳಲ್ಪಡುತ್ತದೆ,

ಕಿನ್ನು ಕುರ್ಮಃ = (ಇದಕ್ಕೆ ಪ್ರತೀಕಾರವಾಗಿ) ಏನನ್ನು ಮಾಡೋಣ ?

ತಾತ್ಪರ್ಯ— ಆ ಮಧ್ವಾಚಾರ್ಯರು ನಾವು ಕೇಳಿದ ಯಾವ ಆಕ್ಷೇಪ ಪ್ರಶ್ನೆಗಳೇ ಇರಲಿ, ಅವುಗಳನ್ನು ಅನಾಯಾಸವಾಗಿ ನಿರಾಕರಿಸುತ್ತಾರೆ, ಇದು ನಿಶ್ಚಯವಾದ ಮಾತು, ಅವರು ತಮ್ಮ ಪಕ್ಷದ ದ್ವೈತವೇದಾಂತದ ಸಮರ್ಥನೆಗೆ ಸರಿಯಾಗಿ ಹೊಂದುವ ಮತ್ತು ನಮ್ಮಿಂದ ಖಂಡಿಸಲಾಗದ ಯುಕ್ತಿಯನ್ನು ಹೇಳುತ್ತಾರೆ. ನಮ್ಮವರನ್ನು ಅದ್ವೈತಿಗಳನ್ನು ನಿರುತ್ತರರನ್ನಾಗಿ ಮಾಡಿ ಅಪಮಾನಗೊಳಿಸುತ್ತಾರೆ ಮತ್ತು ವಿಶೇಷವಾಗಿ ಆಕ್ಷೇಪಿಸುತ್ತಾರೆ. ಹೀಗೆ ವಿಷಯವನ್ನು ಕೇಳುತ್ತಿದ್ದೇವೆ. ಆದ್ದರಿಂದ ಈ ವಿಷಯಕ್ಕೆ ಹೇಗೆ ಪ್ರತೀಕಾರ ಮಾಡೋಣ ? ಹೇಳಿರಿ.

ವಿಗ್ರಹ—

ಅಖಂಡ್ಯಾಂ— ಖಂಡಯಿತುಂ ಯೋಗ್ಯಾ ಖಂಡ್ಯಾ, ನ ಖಂಡ್ಯಾ ಅಖಂಡ್ಯಾ, ತಾಂ ಅಖಂಡ್ಯಾಂ ।

ವಾದಿವ್ರಾತಂ— ವಾದಃ ಏಷಾಂ ಅಸ್ತೀತಿ ವಾದಿನಃ, ವಾದಿನಾಂ ವ್ರಾತಃ ವಾದಿವ್ರಾತಃ, ತಂ ವಾದಿವ್ರಾತಂ ।

ಕ್ರಿಯಾಪದ— ಖಡಿಭೇದನೇ ಸಕರ್ಮಕ ಸೇಟ್ ಉಭಯಪದೀ ಕರ್ಮಣಿ ಲಟ್ ಆತ್ಮನೇಪದೀ ಪ್ರಥಮಪುರುಷೇ ಏಕವಚನೇ 'ಖಂಡ್ಯತೇ' ಇತಿ ರೂಪಮ್ ।

ಖಂಡ್ಯತೇ ಖಂಡ್ಯೇತೇ ಖಂಡ್ಯಂತೇ, ಖಂಡ್ಯಸೇ ಖಂಡ್ಯೇಥೇ ಖಂಡ್ಯಧ್ವೇ, ಖಂಡ್ಯೇ ಖಂಡ್ಯಾವಹೇ ಖಂಡ್ಯಾಮಹೇ ॥

ವಕ್ತಿ – ವಚ ಪರಿಭಾಷಣೇ ಸಕರ್ಮಕಃ ಅನಿಟ್ ಪರಸ್ಮೈಪದಿ ಅಯಂ ಅಂತಿಪರಃ ನ ಪ್ರಯುಜ್ಯತೇ । ಇದಕ್ಕೆ ಲಟ್ ಪ್ರಥಮಪುರುಷೇ ಬಹುವಚನದಲ್ಲಿ ಪ್ರಯೋಗವಿಲ್ಲ. ಬಹುವಚನ ಪರಃ ಇತ್ಯನ್ಯೇ ಬಹುವಚನದಲ್ಲಿ ಪ್ರಯೋಗವಿಲ್ಲವೆಂದು ಮತ್ತೆ ಕೆಲವರು ಹೇಳುತ್ತಾರೆ. ಝಿಪರಃ ಇತ್ಯಪರೇ ಪ್ರಥಮಪುರುಷೇ ಬಹುವಚನದಲ್ಲಿಯೇ ಈ ಧಾತುವಿಗೆ ಪ್ರಯೋಗವಿಲ್ಲವೆಂದು ಮತ್ತೆ ಕೆಲವರ ಅಭಿಪ್ರಾಯ. ಈ ಪಕ್ಷದಲ್ಲಿ ಲಿಟ್ ಮುಂತಾದ ಲಕಾರಗಳಲ್ಲಿಯೂ ಪ್ರಥಮಾ ಬಹುವಚನವಿಲ್ಲ.

ವಕ್ತಿ ವಕ್ತಃ ವಕ್ಷಿ, ವಕ್ಥಃ ವಚ್ಮಿ ವಚ್ವಃ ॥

ಓಲಜ್ಜೀ ವ್ರೀಡಾಯಾಂ ಅಕರ್ಮಕಃ ಸೇಟ್ ಆತ್ಮನೇಪದೀ ಣಿಜಂತಾತ್ ವಿಧಿಲಿಙ್ ಪ್ರಥಮಪುರುಷೇ ಏಕವಚನೇ 'ಲಜ್ಜಯೇತ್' ಇತಿ ರೂಪಮ್ ।

ಲಜ್ಜಯೇತ್ ಲಜ್ಜಯೇತಾಂ ಲಜ್ಜಯೇಯುಃ, ಲಜ್ಜಯೇಃ ಲಜ್ಜಯೇತಂ ಲಜ್ಜಯೇತ, ಲಜ್ಜಯೇಯಂ ಲಜ್ಜಯೇವ ಲಜ್ಜಯೇಮ ॥

ಶ್ರುಶ್ರವಣೇ ಸಕರ್ಮಕಃ ಅನಿಟ್ ಕರ್ಮಣಿ ಲಟ್ ಪ್ರಥಮಪುರುಷೇ ಏಕವಚನೇ 'ಶ್ರೂಯತೇ' ಇತಿ ರೂಪಮ್ ।

ಶ್ರೂಯತೇ ಶ್ರೂಯೇತೇ ಶ್ರೂಯಂತೇ, ಶ್ರೂಯಸೇ ಶ್ರೂಯೇಥೇ, ಶ್ರೂಯಧ್ವೇ, ಶ್ರೂಯೇ ಶ್ರೂಯಾವಹೇ ಶ್ರೂಯಾಮಹೇ ॥

**ಕೋಶ—** ನೂನಂ ತರ್ಕೇಽವಧಾರಣೇ ಅಮರಕೋಶ, (ನೂನಂ ತರ್ಕೇ ವಿನಿಶ್ಚಯೇ) ನೂನಂ = ನಿಶ್ಚಯ ಪ್ರಶ್ನೋಽನುಯೋಗಃ ಪೃಚ್ಛಾ ಚ । ಸ್ತೋಮೌಘನಿಕರವ್ರಾತವಾರಸಂಘಾತಸಂಚಯಾಃ - ಇತ್ಯಮರಃ ।

**ಪ್ರಯೋಗ—** ತೇನ ಪೃಷ್ಟಃ (ಪ್ರಷ್ಟುಃ) ಪ್ರಶ್ನಃ ಖಂಡ್ಯತೇ ನೂನಂ, (ಕರ್ಮಣಿ) ।
ಸಃ ಪೃಷ್ಟಂ (ಪ್ರಷ್ಟುಃ) ಪ್ರಶ್ನಂ ಖಂಡಯತಿ ನೂನಂ (ಕರ್ತರಿ) ।
ಅಸೌ ಯುಕ್ತಾಂ ಅಖಂಡ್ಯಾಂ ಚ ಯುಕ್ತಿಂ ವಕ್ತಿ (ಕರ್ತರಿ) ।
ಅಮುನಾ ಯುಕ್ತಾ ಅಖಂಡ್ಯಾ ಚ ಯುಕ್ತಿಃ ಉಚ್ಯತೇ (ಕರ್ಮಣಿ)
(ಅಸೌ) ವಾದಿವ್ರಾತಂ, ಲಜ್ಜಯೇತ್, (ಕರ್ತರಿ) ।
ಅಮುನಾ ವಾದಿವ್ರಾತಂ ಲಜ್ಜ್ಯತೇ (ಕರ್ಮಣಿ) ।
(ಸಃ) ನಃ ವಿಶೇಷಾತ್ ಆಕ್ಷೇಪ್ತಾ ಇತಿ (ಅಸ್ಮಾಭಿಃ) ಶ್ರೂಯತೇ (ಕರ್ಮಣಿ) ।
ಸಃ ನಃ ವಿಶೇಷಾತ್ ಆಕ್ಷೇಪ್ತಾ ಇತಿ ಶೃಣುಮಃ (ಕರ್ತರಿ) ।

★ ★ ★

**ಅವತಾರಿಕಾ—** ಮತ್ತು ಶ್ರೀಮಧ್ವಾಚಾರ್ಯರಿಂದ ತಮಗಾಗಿರತಕ್ಕ ಕಷ್ಟವನ್ನು ವಿವರಿಸುತ್ತಾನೆ.

**ಪ್ರಾಚ್ಯಂ ಶಾಸ್ತ್ರಂ ಯತ್ ಸಪಾದಂ ತು ಲಕ್ಷಂ**
**ವಾಕ್ಯೇನೈಕೇನಾಕ್ಷಿಪದ್ಧರ್ಷತೀರ್ಥಃ ।**
**ಇತ್ಥಂ ಪಾಂಥೈರ್ವರ್ಣಿತಂ ಶೃಣ್ವತಃ ಪ್ರಾಕ್**
**ಯುಷ್ಮಾನ್ ಪ್ರಾಪದ್ದೂಯಮಾನಂ ಮನೋ ಮೇ ॥ 11 ॥**

**ಪದಚ್ಛೇದ—** ಪ್ರಾಚ್ಯಂ, ಶಾಸ್ತ್ರಂ, ಯತ್, ಸಪಾದಂ, ತು ಲಕ್ಷಂ, ವಾಕ್ಯೇನ, ಏಕೇನ, ಆಕ್ಷಿಪತ್, ಹರ್ಷತೀರ್ಥಃ, ಇತ್ಥಂ, ಪಾಂಥೈಃ, ವರ್ಣಿತಂ, ಶೃಣ್ವತಃ, ಪ್ರಾಕ್, ಯುಷ್ಮಾನ್, ಪ್ರಾಪತ್, ದೂಯಮಾನಂ, ಮನಃ, ಮೇ ।

**ಅನ್ವಯ—** ಹರ್ಷತೀರ್ಥಃ, ಪ್ರಾಚ್ಯಂ, ಸಪಾದಂ, ಲಕ್ಷಂ ಯತ್ ತು ಶಾಸ್ತ್ರಂ, ತತ್, ಏಕೇನ ವಾಕ್ಯೇನ ಅಕ್ಷಿಪತ್ ಇತ್ಥಂ ಪ್ರಾಕ್ ಪಾಂಥೈಃ ವರ್ಣಿತಂ ಶೃಣ್ವತಃ ಮೇ ಮನಃ ದೂಯಮಾನಂ (ಸತ್) ಯುಷ್ಮಾನ್ ಪ್ರಾಪತ್ ।

**ಅನ್ವಯಾರ್ಥ—**

**ಹರ್ಷತೀರ್ಥಃ** = ಮಧ್ವಾಚಾರ್ಯರು
**ಪ್ರಾಚ್ಯಂ** = ಪುರಾತನವಾದ
**ಸಪಾದಂ** = (ಲಕ್ಷದ) ನಾಲ್ಕನೆಯ ಒಂದಂಶದಿಂದ ಸಹಿತವಾದ (25,000 ದಿಂದ ಕೂಡಿದ)
**ಲಕ್ಷಂ** = ಒಂದು ಲಕ್ಷ ಸಂಖ್ಯೆಯುಳ್ಳ (ಒಂದೂ ಕಾಲುಲಕ್ಷ ಸಂಖ್ಯೆಯುಳ್ಳ)
**ಯತ್ ತು ಶಾಸ್ತ್ರಂ** = ಯಾವ ಮಾಯಾವಾದಿ ಶಾಸ್ತ್ರವಿದೆಯೋ,
**ತತ್** = ಅದನ್ನು
**ಏಕೇನ ವಾಕ್ಯೇನ** = ಒಂದು ವಾಕ್ಯದಿಂದ
**ಆಕ್ಷಿಪತ್** = ನಿರಾಕರಿಸಿದರು
**ಇತ್ಥಂ** = ಹೀಗೆ
**ಪ್ರಾಕ್** = ಹಿಂದೆ

ಪಾಂಥೈಃ = ದಾರಿಗರಿಂದ

ವರ್ಣಿತಂ = ವರ್ಣಿಸಲ್ಪಟ್ಟದ್ದನ್ನು

ಶೃಣ್ವತಃ = ಕೇಳುತ್ತಿದ್ದ

ಮೇ = ನನ್ನ

ಮನಃ = ಮನಸ್ಸು

ದೂಯಮಾನಂ (ಸತ್) = ಸಂತಾಪ ಹೊಂದಿದ್ದಾಗಿ

ಯುಷ್ಮಾನ್ = ನಿಮ್ಮನ್ನು

ಪ್ರಾಪತ್ = ಹೊಂದಿತು.

ತಾತ್ಪರ್ಯ— ಆನಂದಕರವಾದ ಶಾಸ್ತ್ರವುಳ್ಳ (ಶ್ರೀಮಧ್ವಾಚಾರ್ಯರು) ಪುರಾತನವಾದ ಒಂದೂಕಾಲು ಲಕ್ಷ ಗ್ರಂಥವುಳ್ಳ (ಗ್ರಂಥ = 32 ಅಕ್ಷರಗಳು) ನಮ್ಮ ಮಾಯಾವಾದ ಶಾಸ್ತ್ರವನ್ನು ಒಂದೇ ವಾಕ್ಯದಿಂದ ನಿರಾಕರಿಸಿದರು. ಎಂದು ಮಧ್ವಾಚಾರ್ಯರ ವಾದ ವೈಖರಿಯನ್ನು ಪ್ರತ್ಯಕ್ಷವಾಗಿ ಅನುಭವಿಸಿದ ಕೆಲವು ಮಂದಿ ಜನರು ಹೇಳಿದರು. ಆ ಮಾತನ್ನು ಕೇಳಿದಾಗ, ನನ್ನ ಮನಸ್ಸಿಗೆ ಬಹಳ ಸಂತಾಪ ಉಂಟಾಯಿತು. ಆಗ ಈ ಮಧ್ವಾಚಾರ್ಯರ ಶಾಸ್ತ್ರವನ್ನು ಆಕ್ಷೇಪಿಸಿ ನಮ್ಮ ಶಾಸ್ತ್ರವನ್ನು ರಕ್ಷಿಸಲು ಪದ್ಮತೀರ್ಥ ಮುಂತಾದ ನೀವೇ ಸಮರ್ಥರೆಂದು ನಮ್ಮ ಮನಸ್ಸು ನಿಮ್ಮನ್ನೇ ನೆನೆಸಿಕೊಂಡಿತು. ಆನಂದತೀರ್ಥರ ಮಾತನ್ನು ಖಂಡಿಸಲು ಪದ್ಮತೀರ್ಥರೇ ಮೊದಲಾದ ನೀವೇ ಸಮರ್ಥರೆಂದು ನಾನು ಆಲೋಚಿಸಿದೆನು.

ವಿಗ್ರಹ—

ಪ್ರಾಚ್ಯಂ— ಪ್ರಾಚಿ(ಕಾಲೇ) ಭವಂ ಪ್ರಾಚ್ಯಂ ।

ಸಪಾದಂ— ಪಾದೇನ ಸಹ ವರ್ತತೇ ಇತಿ ಸಪಾದಂ ।

ಹರ್ಷತೀರ್ಥಃ— ಹರ್ಷಃ (ಹರ್ಷಕರಂ) ತೀರ್ಥಂ ಯಸ್ಮಾತ್ ಸಃ ಹರ್ಷತೀರ್ಥಃ ।

ಕ್ರಿಯಾಪದ— ಕ್ಷಿಪ ಪ್ರೇರಣೇ ಸಕರ್ಮಕಃ ಅನಿಟ್ ಉಭಯಪದೀ ತುದಾದಿಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ 'ಆಕ್ಷಿಪತ್' ಇತಿ ರೂಪಮ್ । (ಆಕ್ಷಿಪತ್ ಆಕ್ಷಿಪತಾಂ ಆಕ್ಷಿಪನ್, ಆಕ್ಷಿಪಃ ಆಕ್ಷಿಪತಂ ಆಕ್ಷಿಪತ, ಆಕ್ಷಿಪಂ ಆಕ್ಷಿಪಾವ ಆಕ್ಷಿಪಾಮ ॥)

ಕೋಶ— ಪಾದ = 4ನೇ ಭಾಗ, ಪಾದಾ ರಶ್ಮ್ಯಂಘ್ರಿತುರ್ಯಾಂಶಾಃ, ಪಾಂಥಃ = ದಾರಿಹೋಕ, ಅಧ್ವನೀನೋಽಧ್ವಗೋಽಧ್ವನ್ಯಃ ಪಾಂಥಃ ಪಥಿಕ ಇತ್ಯಪಿ ಅಮರ.

ಫಲಾರ್ಥ— ಸಪಾದಲಕ್ಷಪರಿಮಿತಂ ಅಸ್ಮಚ್ಛಾಸ್ತ್ರಂ, ಆಕ್ಷಿಪಂತಂ ತಮಿಮಂ ಮಧ್ವಂ ಆಕ್ಷೇಪ್ತುಂ ಪದ್ಮತೀರ್ಥಾ ಏವ ಸಮರ್ಥಾಃ ಇತಿ ದೂರಸ್ಥಾನ್ ಯುಷ್ಮಾನ್ ಮೇ ಮನಃ ಆಗಮತ್ ಇತಿ ಭಾವಃ = ಒಂದು ಲಕ್ಷದ ಇಪ್ಪತ್ತ ಐದು ಸಾವಿರ ಗ್ರಂಥ ಪರಿಮಿತವಾದ ನಮ್ಮ ಶಾಸ್ತ್ರವನ್ನು ಆಕ್ಷೇಪಿಸಿ ನಿರಾಕರಿಸುತ್ತಿರುವ ಅಂತಹ ಈ ಮಧ್ವಾಚಾರ್ಯರನ್ನು ಆಕ್ಷೇಪಿಸಿ ಖಂಡಿಸಲು ಪದ್ಮತೀರ್ಥರೇ ಸಮರ್ಥರೆಂದು ದೂರದಲ್ಲಿರುವ ನಿಮ್ಮನ್ನು ನನ್ನ ಮನಸ್ಸು ನೆನೆಸಿತು ಎಂದು ಅಭಿಪ್ರಾಯ.

ಪ್ರಯೋಗ— ಹರ್ಷತೀರ್ಥೇನ ತು ಪ್ರಾಚ್ಯಂ ಸಪಾದಂ ಲಕ್ಷಂ ಯತ್ ಶಾಸ್ತ್ರಂ ತತ್ ಏಕೇನ ವಾಕ್ಯೇನ ಆಕ್ಷಿಪ್ಯತ (ಕರ್ಮಣಿ) ।

ಇತ್ಥಂ ಪ್ರಾಕ್ ಪಾಂಥೈಃ ವರ್ಣಿತಂ ಶೃಣ್ವತಃ ಮೇ ಮನಸಾ ದೂಯಮಾನೇನ ಯೂಯಂ ಆಪ್ಯ್ತಮ್ (ಕರ್ಮಣಿ ಅಪಿ ಆಪ್ಯಾತಾಂ ಆಪ್ಸತ ಆಪ್ಯ್ತಮ್) ।

★ ★ ★

**ಅವತಾರಿಕಾ**— ಮತ್ತು ಜನರ ವಾರ್ತೆಯನ್ನು ವಿವರಿಸುತ್ತಾನೆ.

**ವೇದವ್ಯಾಸೋ ನ್ವೇಷ ವೇದೋ ನು ಮೂರ್ತೋ**
**ದಿವ್ಯಾ ಮೂರ್ತಿರ್ಯಸ್ಯ ಸಾ ಸುಸ್ಮಿತಸ್ಯ ।**
**ತದ್ದ್ರಷ್ಟೄಣಾಂ ಚೇತಿ ವಾಣೀಕೃಪಾಣೀ**
**ನೂನಂ ಮಾಯಾಪಕ್ಷಮೂಲಂ ಛಿನತ್ತಿ ॥ 12 ॥**

**ಪದಚ್ಛೇದ**— ವೇದವ್ಯಾಸಃ, ನು, ಏಷಃ, ವೇದಃ, ನು, ಮೂರ್ತಃ, ದಿವ್ಯಾ, ಮೂರ್ತಿಃ, ಯಸ್ಯ, ಸಾ, ಸುಸ್ಮಿತಸ್ಯ, ತದ್ದ್ರಷ್ಟೄಣಾಂ, ಚ, ಇತಿ, ವಾಣೀಕೃಪಾಣೀ, ನೂನಂ, ಮಾಯಾಪಕ್ಷಮೂಲಂ, ಛಿನತ್ತಿ ।

**ಅನ್ವಯ**— ಸುಸ್ಮಿತಸ್ಯ ಯಸ್ಯ ಸಾ ಮೂರ್ತಿಃ ದಿವ್ಯಾ ಏಷಃ ವೇದವ್ಯಾಸಃ ನು ? ಮೂರ್ತಃ ವೇದಃ ನು ? ಇತಿ ತದ್ದ್ರಷ್ಟೄಣಾಂ ವಾಣೀಕೃಪಾಣೀ ಚ ನೂನಂ ಮಾಯಾಪಕ್ಷಮೂಲಂ ಛಿನತ್ತಿ ।

**ಅನ್ವಯಾರ್ಥ**—

**ಸುಸ್ಮಿತಸ್ಯ** = ಒಳ್ಳೆಯ ಮಂದಹಾಸವುಳ್ಳ
**ಯಸ್ಯ** = ಯಾವ ಮಧ್ವಾಚಾರ್ಯರ
**ಸಾ** = ಅಂತಹ
**ಮೂರ್ತಿಃ** = ಶರೀರವು
**ದಿವ್ಯಾ** = ಲೋಕವಿಲಕ್ಷಣವಾದುದು
**ಏಷಃ** = ಈ ಮಧ್ವಾಚಾರ್ಯರು
**ವೇದವ್ಯಾಸಃ ನು ?** = ಶ್ರೀವೇದವ್ಯಾಸರೋ ?
**ಮೂರ್ತಃ** = ದೇಹಧಾರಿಯಾದ
**ವೇದಃ ನು ?** = ವೇದವೋ,
**ಇತಿ** = ಹೀಗೆಂದು
**ತತ್** = ಆ ಮಧ್ವಾಚಾರ್ಯರನ್ನು
**ದ್ರಷ್ಟೄಣಾಂ** = ನೋಡುತ್ತಿರುವ ಜನರ
**ವಾಣೀಕೃಪಾಣೀ ಚ** = ಮಾತೆಂಬ ಕತ್ತಿಯೂ
**ನೂನಂ** = ನಿಶ್ಚಯವಾಗಿ
**ಮಾಯಾಪಕ್ಷಮೂಲಂ** = ಮಾಯಾವಾದಿ ಸಿದ್ಧಾಂತದ ಬುಡವನ್ನೇ
**ಛಿನತ್ತಿ** = ಕತ್ತರಿಸುತ್ತದೆ.

**ತಾತ್ಪರ್ಯ**— ಸುಂದರವಾದ ಮುಗುಳ್ನಗೆಯುಳ್ಳ ಮಧ್ವಾಚಾರ್ಯರನ್ನು ಜನರು ನೋಡಿ ಹೀಗೆ ಹೇಳುತ್ತಿದ್ದಾರೆ. "ಈ ಮಧ್ವಾಚಾರ್ಯರ ಶರೀರವು ಲೋಕವಿಲಕ್ಷಣವಾದುದು. ಈ ಮಧ್ವನು ಶ್ರೀವೇದವ್ಯಾಸನೋ ? ದೇಹವನ್ನು ಧರಿಸಿ ಬಂದಿರುವ ವೇದವೋ ? ಎಂದು ಮಾತನಾಡುತ್ತಿರುವರು. ಕತ್ತಿಯು ಮರದಬುಡವನ್ನು ಕತ್ತರಿಸುವಂತೆ ಈ ಜನರ ಮಾತು ಮಾಯಾವಾದಿ ಮತದ ಬುಡವನ್ನೇ ಕತ್ತರಿಸುವುದು. ಈ ಮಾತಿನಿಂದ ನಮ್ಮ ಮತದ ಬುಡಕತ್ತರಿಸಿ ಹೋಗುತ್ತದೆ. ಹೀಗೆ ಮಧ್ವರನ್ನು ಹೊಗಳುತ್ತಿರುವ ಜನರ ಮಾತನ್ನು ಕೇಳಿ ಮಾಯಾವಾದಿ ಮತವನ್ನು ಅವಲಂಬಿಸಿರುವ ಇತರ ಜನರು

ಮಧ್ವಮತವೇ ಉತ್ತಮವು. ಮಾಯಾವಾದಿ ಮತವು ಸರಿಯಾದುದಲ್ಲ ಎಂದು ದ್ವೈತ ಮತವನ್ನು ಆದರಿಸುವುದರಿಂದ ಮಾಯಾಮತವು ಪೂರ್ತಿ ನಾಶವಾಗುವುದು.

ಇಲ್ಲಿ ಛಲಾರೀಯದಲ್ಲಿ ಈ ರೀತಿ ತಾತ್ಪರ್ಯವನ್ನು ಹೇಳಿರುತ್ತಾರೆ. ಅಯಂ ಭಾವಃ = ಮಹಾಪಂಡಿತಂ ಲೋಕ-ವಿಲಕ್ಷಣಸುಂದರಾಕಾರವಂತಂ ಮಧ್ವಾಚಾರ್ಯಂ ದೃಷ್ಟ್ವಾ ಅಯಂ ಸಾಕ್ಷಾತ್ ವೇದವ್ಯಾಸೋ ವಾ ಶರೀರಧಾರೀ ವೇದೋ ವಾ ಇತಿ ಜನಾಃ ವದಂತಿ, ಏವಂ ತನ್ಮಾಹಾತ್ಮ್ಯಪ್ರಶಂಸಾಪರಯಾ ಜನವಾಚಾ ಅನ್ಯೇ ಜನಾಃ ಸರ್ವೇಽಪಿ ಅಸ್ಮಚ್ಛಾಸ್ತ್ರಂ ಅನಾದೃತ್ಯ ಮಧ್ವಶಾಸ್ತ್ರ ಏವ ಪ್ರವೀಣಾ ಭವೇಯುಃ. ತೇನ ಅಸ್ಮಚ್ಛಾಸ್ತ್ರಂ ಅಪ್ರಕಾಶಿತಂ ಭವೇತ್, ಖಡ್ಗೇನ ವೃಕ್ಷಮೂಲಚ್ಛೇದೇ ವೃಕ್ಷಸ್ಯ ಅಭಿವೃದ್ಧ್ಯಭಾವವತ್ ಇತಿ ಮೇ ಪ್ರತಿಭಾತೀತಿ. ಇಲ್ಲಿಯ ಅಭಿಪ್ರಾಯ ಹೀಗಿದೆ. ಮಹಾಪಂಡಿತರಾದ ಲೋಕವಿಲಕ್ಷಣ ಸುಂದರಾಕಾರವುಳ್ಳ ಮಧ್ವಾಚಾರ್ಯರನ್ನು ನೋಡಿ, ಇವರು ಸಾಕ್ಷಾತ್ ವೇದವ್ಯಾಸರೋ, ಶರೀರ-ಧಾರಿಯಾದ ವೇದವೋ ಎಂದು ಜನರು ಹೇಳುತ್ತಾರೆ, ಹೀಗೆ ಅವರ ಮಾಹಾತ್ಮ್ಯವನ್ನು ಪ್ರಶಂಸಿಸುವ ಅವರ ಮಾತಿನಿಂದ ಇತರ ಎಲ್ಲಾ ಜನರೂ ನಮ್ಮ ಶಾಸ್ತ್ರವನ್ನು ಅನಾದರಿಸಿ ಮಧ್ವಶಾಸ್ತ್ರದಲ್ಲಿಯೇ ಪ್ರವೀಣರಾದರು. ಆದರಿಂದ ನಮ್ಮ ಶಾಸ್ತ್ರವು ಅಪ್ರಕಾಶವಾಗುತ್ತದೆ. ಖಡ್ಗದಿಂದ ಮರದಿಂದ ಬುಡವನ್ನು ಕಡಿದಾಗ ಮರವು ಹೇಗೆ ಬೆಳೆಯುವುದಿಲ್ಲವೋ ಅದರಂತೆ ನಮ್ಮ ಶಾಸ್ತ್ರದ ಬೆಳವಣಿಗೆಯೂ ಕುಂಠಿತವಾಗುತ್ತದೆ ಎಂದು ನನಗೆ ತೋರುತ್ತದೆ ಎಂದು ಆ ಮಾಯಾವಾದಿಯು ಹೇಳಿದನು.

ವಿಗ್ರಹ—

ಸುಸ್ಮಿತಸ್ಯ— ಸು ಶೋಭನಂ ಸ್ಮಿತಂ ಯಸ್ಯ ಸಃ ಸುಸ್ಮಿತಃ, ತಸ್ಯ ಸುಸ್ಮಿತಸ್ಯ ।

ತದ್ದ್ರಷ್ಟ್ರೂಣಾಂ— ತಸ್ಯ ದ್ರಷ್ಟಾರಃ ತದ್ದ್ರಷ್ಟಾರಃ, ತೇಷಾಂ ತದ್ದ್ರಷ್ಟ್ರೂಣಾಂ ।

ವಾಣೀಕೃಪಾಣೀ— ವಾಣೀ ಏವ ಕೃಪಾಣೀ ವಾಣೀಕೃಪಾಣೀ ।

ಮಾಯಾಪಕ್ಷಮೂಲಂ— ಮಾಯಾಯಾಃ ಪಕ್ಷಃ ಮಾಯಾಪಕ್ಷಃ, ಮಾಯಾಪಕ್ಷಸ್ಯ ಮೂಲಂ ಮಾಯಾ-ಪಕ್ಷಮೂಲಂ ।

ಕ್ರಿಯಾಪದ— ಭಿದಿರ್, ದ್ವೈಧೀಕರಣೇ ಸಕರ್ಮಕಃ ಅನಿಟ್ ಉಭಯಪದೀ ।

ಭಿನತ್ತಿ ಭಿಂತಃ ಭಿಂದಂತಿ, ಭಿನತ್ಸಿ ಭಿಥಃ ಭಿಂಥ, ಭಿನದ್ಮಿ ಭಿಂದ್ವಃ ಭಿಂದ್ಮಃ ॥

ಕೋಶ— ನು ವಿಕಲ್ಪಾರ್ಥಕ, ಪ್ರಶ್ನಾರ್ಥಕ ಅವ್ಯಯ ನುಪೃಚ್ಛಾಯಾಂ ವಿಕಲ್ಪೇ ಚ ಅಮರ, ಪ್ರಶ್ನೇ ವಿಕಲ್ಪೇನುಸ್ವಿಚ್ಚ, ವೈಜಯಂತೀ ।

ಪ್ರಯೋಗ— ತದ್ದ್ರಷ್ಟ್ರೂಣಾಂ ವಾಣೀಕೃಪಾಣ್ಯಾ ಮಾಯಾಪಕ್ಷಮೂಲಂ ಭಿದ್ಯತೇ ।

★ ★ ★

ಅವತಾರಿಕಾ— ನಮ್ಮ ಪಕ್ಷದವರೂ ಕೂಡ ಮಧ್ವಭಾಷ್ಯವನ್ನು ಹೊಗಳುತ್ತಿದ್ದಾರೆ. ಇದನ್ನು ಸಹಿಸಲು ಕಷ್ಟವಾಗಿದೆ ಎನ್ನುತ್ತಾನೆ.

**ಅಕ್ಲಿಷ್ಟಂ ತತ್ಸೂತ್ರಭಾಷ್ಯಂ ಬಲೀಯೋ-**
**ಮಾನೋಪೇತಂ ಕಾ ಕ್ಷತಿರ್ನಸ್ತಥಾ ಚೇತ್ ।**
**ಅಸ್ಮಾಕಾಃ ಕೇಽಪ್ಯೇವಮುಕ್ತ್ವಾ ವಿಲಜ್ಜಾ**
**ಲಜ್ಜಾಸಿಂಧೌ ದುಸ್ಸಹೇಽಮಜ್ಜಯನ್ನಃ ॥ 13 ॥**

ಪದಚ್ಛೇದ— ಅಕ್ಲಿಷ್ಟಂ, ತತ್, ಸೂತ್ರಭಾಷ್ಯಂ, ಬಲೀಯೋಮಾನೋಪೇತಂ, ಕಾ ಕ್ಷತಿಃ, ನಃ, ತಥಾ ಚೇತ್, ಅಸ್ಮಾಕಾಃ, ಕೇ, ಅಪಿ, ಏವಂ, ಉಕ್ತ್ವಾ, ವಿಲಜ್ಜಾಃ, ಲಜ್ಜಾಸಿಂಧೌ, ದುಸ್ಸಹೇ, ಅಮಜ್ಜಯನ್, ನಃ ।

ಅನ್ವಯ— ತತ್, ಸೂತ್ರಭಾಷ್ಯಂ, ಅಕ್ಲಿಷ್ಟಂ, ಬಲೀಯೋಮಾನೋಪೇತಂ, (ಇತಿ ಕೇಚಿದ್ ವದಂತಿ), ತಥಾ ಚೇತ್ ನಃ ಕಾ ಕ್ಷತಿಃ ? ವಿಲಜ್ಜಾಃ ಅಸ್ಮಾಕಾಃ ಕೇऽಪಿ ಏವಂ ಉಕ್ತ್ವಾ ನಃ ದುಸ್ಸಹೇ ಲಜ್ಜಾಸಿಂಧೌ ಅಮಜ್ಜಯನ್ ।

ಅನ್ವಯಾರ್ಥ—

ತತ್ = ಆ ಮಧ್ವಾಚಾರ್ಯರಿಂದ ವಿರಚಿತವಾದ
ಸೂತ್ರಭಾಷ್ಯಂ = ಬ್ರಹ್ಮಸೂತ್ರಭಾಷ್ಯವು
ಅಕ್ಲಿಷ್ಟಂ = ಸರಳವಾದುದೂ
ಬಲೀಯೋಮಾನೋಪೇತಂ = ಪ್ರಬಲವಾದ ಪ್ರಮಾಣಗಳಿಂದ ಕೂಡಿದುದು (ಇತಿ ಕೇಚಿದ್ ವದಂತಿ = ಎಂದು ಕೆಲವರು ಹೇಳುತ್ತಾರೆ)
ತಥಾ ಚೇತ್ = ಹಾಗಾದರೆ
ನಃ = ನಮಗೆ
ಕಾ ಕ್ಷತಿಃ = ಏನು ಹಾನಿ ?
ವಿಲಜ್ಜಾಃ = ನಾಚಿಕೆ ಇಲ್ಲದ
ಅಸ್ಮಾಕಾಃ = ನಮ್ಮವರೇ ಆದ (ನಮ್ಮ ಗುಂಪಿನ)
ಕೇ ಅಪಿ = ಕೆಲವರು
ಏವಂ ಉಕ್ತ್ವಾ = ಹೀಗೆ ಹೇಳಿ
ನಃ = ನಮ್ಮನ್ನು
ದುಸ್ಸಹೇ = ಸಹಿಸಲು ಸಾಧ್ಯವಿಲ್ಲದ
ಲಜ್ಜಾಸಿಂಧೌ = ನಾಚಿಕೆಯೆಂಬ ಸಮುದ್ರದಲ್ಲಿ
ಅಮಜ್ಜಯನ್ = ಮುಳುಗಿಸಿದರು.

ತಾತ್ಪರ್ಯ— ಮಧ್ವಾಚಾರ್ಯರು ರಚಿಸಿದ ಬ್ರಹ್ಮಸೂತ್ರಭಾಷ್ಯವು ಸರಳವಾಗಿದೆ, ಸುಲಭವಾಗಿ ಅರ್ಥವಾಗುತ್ತದೆ. ಪ್ರಬಲವಾದ ಪ್ರಮಾಣಗಳಿಂದ ಮಧ್ವಾಚಾರ್ಯರು ತಮ್ಮ ಸಿದ್ಧಾಂತವನ್ನು ಸಮರ್ಥಿಸಿದ್ದಾರೆ ಎಂದು ಕೆಲವರು ಮಾತಾಡಿಕೊಳ್ಳುತ್ತಾರೆ. ''ಹಾಗಾದರೆ ಅದರಿಂದ ನಮಗೇನು ತೊಂದರೆ ? ಆ ಭಾಷ್ಯವು ಚೆನ್ನಾಗಿಯೇ ಇರಬಹುದು. ಇರಲಿ'' ಎಂದು ನಮ್ಮವರೇ ಆದ ಕೆಲವರು ನಾಚಿಕೆ ಇಲ್ಲದೆ ಹೇಳುತ್ತಿದ್ದಾರೆ. ಇದನ್ನು ಕೇಳಿದರೆ ನಮಗೆ ಸಹಿಸಲಾಗದಷ್ಟು ನಾಚಿಕೆಯಾಗುತ್ತಿದೆ. ನಮ್ಮ ಗುಂಪಿಗೇ ಸೇರಿದ ಕೆಲವರು ಮಧ್ವಭಾಷ್ಯ ಪ್ರಶಂಸೆ ಮಾಡಿರುವುದನ್ನು ಕೇಳಿದಾಗ ನಮಗೆ ತುಂಬಾ ಲಜ್ಜೆಯುಂಟಾಗುತ್ತಿದೆ. (ಅಸ್ಮದ್ಯೂಥ್ಯಾನಾಮೇವ ಕೇಷಾಂಚಿತ್ ಮಧ್ವಭಾಷ್ಯಪ್ರಶಂಸಾರೂಪಂ ವಾಕ್ಯಂ ಶ್ರುತ್ವಾ ವಯಂ ಅತಿತರಾಂ ಲಜ್ಜಿತಾ ವರ್ತಾಮಹೇ ಇತಿ ಭಾವಃ ಛಲಾರೀಯ ವಿಶ್ವಪತಿತೀರ್ಥೀಯ).

ವಿಗ್ರಹ—

ತತ್ಸೂತ್ರಭಾಷ್ಯಂ— ಸೂತ್ರಾಣಾಂ ಭಾಷ್ಯಂ ಸೂತ್ರಭಾಷ್ಯಂ, ತಸ್ಯ ಸೂತ್ರಭಾಷ್ಯಂ ತತ್ಸೂತ್ರಭಾಷ್ಯಂ ।
ಅಕ್ಲಿಷ್ಟಂ— ನ ಕ್ಲಿಷ್ಟಂ ಅಕ್ಲಿಷ್ಟಂ ।
ಬಲೀಯೋಮಾನೋಪೇತಂ— ಬಲೀಯಾಂಸಿ ಚ ತಾನಿ ಮಾನಾನಿ ಚ ಬಲೀಯೋಮಾನಾನಿ, ಬಲೀಯೋಮಾನೈ ಉಪೇತಂ ಬಲೀಯೋಮಾನೋಪೇತಂ ।
ಅಸ್ಮಾಕಾಃ— ಅಸ್ಮಾಕಂ ಇಮೇ ಅಸ್ಮಾಕಾಃ ।
ವಿಲಜ್ಜಾಃ— ವಿಗತಾ ಲಜ್ಜಾ ಯೇಭ್ಯಃ ತೇ ವಿಲಜ್ಜಾಃ।

**ಲಜ್ಜಾಸಿಂಧೌ**— ಲಜ್ಜಾ ಏವ ಸಿಂಧುಃ ಲಜ್ಜಾಸಿಂಧುಃ, ತಸ್ಮಿನ್ ಲಜ್ಜಾಸಿಂಧೌ ।

**ದುಸ್ಸಹೇ**— ದುಃಖೇನ ಸೋಢುಂ ಶಕ್ಯಃ ದುಸ್ಸಹಃ, ತಸ್ಮಿನ್ ದುಸ್ಸಹೇ ।

**ಕ್ರಿಯಾಪದ**— ಟುಮಸ್ಜೋಶುದ್ಧೌ (ಮಜ್ಜ) ಣಿಜಂತಾತ್ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಬಹುವಚನೇ 'ಅಮಜ್ಜಯತಾಂ' ಇತಿ ರೂಪಮ್ ।

ಅಮಜ್ಜಯತ್ ಅಮಜ್ಜಯತಾಂ ಅಮಜ್ಜಯನ್, ಅಮಜ್ಜಯಃ ಅಮಜ್ಜಯಾಮ ..... ॥

**ಕೋಶ**— ಏವಂ = ಇತ್ಥಂ, ಈ ರೀತಿಯಾಗಿ, ಇವೇತ್ಥಮರ್ಥಯೋರೇವಂ ಅಮರ, ಲಜ್ಜಾ = ನಾಚಿಕೆ, ಮಂದಾಕ್ಷಂ ಹ್ರೀಸ್ತ್ರಪಾಹೀಡಾಲಜ್ಜಾ ಸಾಪತ್ರಪಾನ್ಯತಃ, ಅಮರ ।

**ಪ್ರಯೋಗ**— ತತ್ಸೂತ್ರಭಾಷ್ಯೇಣ ಅಕ್ಲಿಷ್ಟೇವ ಬಲೀಯೋಮಾನೋಪೇತೇನ ಭೂಯತೇ, ತಥಾ ಚೇತ್ ನಃ ಕಯಾ ಕ್ಷತ್ಯಾ ಭೂಯತೇ ? ಅಸ್ಮಾಕ್ಯೈಃ ಕೈರಪಿ ಏವಂ ಉಕ್ತ್ವಾ ವಯಂ ದುಸ್ಸಹೇ ಲಜ್ಜಾಸಿಂಧೌ ಅಮಜ್ಜ್ಯಾಮಹಿ ।

* * *

**ಅವತಾರಿಕಾ**— ಈಗ ಮಾಯಾವಾದಿಗಳು ಮಾಡಬೇಕಾದ ಕರ್ತವ್ಯವನ್ನು ಸೂಚಿಸುತ್ತಿದ್ದಾನೆ.

**ತಸ್ಯ ವ್ಯಾಪ್ತೈಃ ಶಿಷ್ಯಜಾಲೈಸ್ತು ಗೌಣ್ಯೈಃ**
**ಸಂಸತ್ಸಿಂಧೌ ಶಂಖಚಕ್ರಾದಿಭೃದ್ಭಿಃ ।**
**ಮಾ ಗೃಹ್ಯೇರನ್ ವಿಶ್ವಸತ್ತ್ವಾಂತರಾಣಿ**
**ಕ್ಷೇಮಾಪ್ತ್ಯೈ ನಸ್ತತ್ರ ನೀತಿಂ ವಿಧತ್ತ ॥ 14 ॥**

**ಪದಚ್ಛೇದ**— ತಸ್ಯ, ವ್ಯಾಪ್ತೈಃ, ಶಿಷ್ಯಜಾಲೈಃ, ತು, ಗೌಣ್ಯೈಃ, ಸಂಸತ್ಸಿಂಧೌ, ಶಂಖಚಕ್ರಾದಿಭೃದ್ಭಿಃ, ಮಾ, ಗೃಹ್ಯೇರನ್, ವಿಶ್ವಸತ್ತ್ವಾಂತರಾಣಿ, ಕ್ಷೇಮಾಪ್ತ್ಯೈ, ನಃ, ತತ್ರ, ನೀತಿಂ, ವಿಧತ್ತ ।

**ಅನ್ವಯ**— ಗೌಣ್ಯೈಃ ವ್ಯಾಪ್ತೈಃ ಶಂಖಚಕ್ರಾದಿಭೃದ್ಭಿಃ, ತಸ್ಯ ಶಿಷ್ಯಜಾಲೈಃ ತು ಸಂಸತ್ಸಿಂಧೌ ವಿಶ್ವಸತ್ತ್ವಾಂತರಾಣಿ ಮಾ ಗೃಹ್ಯೇರನ್, ತತ್ರ ನಃ ಕ್ಷೇಮಾಪ್ತ್ಯೈ ನೀತಿಂ ವಿಧತ್ತ ।

**ಅನ್ವಯಾರ್ಥ**—

**ಗೌಣ್ಯೈಃ** = ಸವಿನುಡಿ ಮೊದಲಾದ ಗುಣಗಳುಳ್ಳ, (ದಾರಗಳಿಂದ ಮಾಡಿರುವ)
**ವ್ಯಾಪ್ತೈಃ** = ಎಲ್ಲ ದೇಶಗಳಲ್ಲಿ ವ್ಯಾಪಿಸಿರುವ
**ಶಂಖಚಕ್ರಾದಿಭೃದ್ಭಿಃ** = (ಬಾಹು ಮುಂತಾದ ಸ್ಥಳಗಳಲ್ಲಿ) ಶಂಖ ಚಕ್ರ ಮೊದಲಾದುವನ್ನು ಧರಿಸಿರುವ (ಬಲೆಯ ಮೂಲಕ ಶಂಖಸಮೂಹ ಮೊದಲಾದುವುಗಳನ್ನು ಹಿಡಿಯುವ)
ತಸ್ಯ = ಆ ಮಧ್ವಾಚಾರ್ಯರ
**ಶಿಷ್ಯಜಾಲೈಃ ತು** = ಶಿಷ್ಯರೆಂಬ ಬಲೆಗಳಿಂದ
**ಸಂಸತ್ಸಿಂಧೌ** = ಸಭೆಯೆಂಬ ಸಮುದ್ರದಲ್ಲಿ
**ವಿಶ್ವ** = ಎಲ್ಲ
**ಸತ್ತ್ವ** = ಪ್ರಾಣಿಗಳ (ಮನುಷ್ಯರ)
**ಅಂತರಾಣಿ** = ಮನಸ್ಸುಗಳು
**ಮಾ ಗೃಹ್ಯೇರನ್** = ವಶಮಾಡಿಕೊಳ್ಳಲ್ಪಡದಿರಲಿ

ತತ್ರ = ಆ ವಿಷಯದಲ್ಲಿ, ನಃ = ನಮ್ಮ
ಕ್ಷೇಮಾಪ್ತ್ಯೈ = ಕ್ಷೇಮದ ಪ್ರಾಪ್ತಿಗಾಗಿ
ನೀತಿಂ = ಉಪಾಯವನ್ನು
ವಿಧತ್ತ = ಮಾಡಿರಿ.

ವಿಶೇಷಾಂಶ— ಇಲ್ಲಿ ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ ಹೇಳಿರುವ ವಿಶೇಷಾಂಶಗಳು ಜಾಲಂ = ಸಮೂಹಃ, ಜಲಚರಬಂಧಕಂ ಚ ಜಾಲ ಎಂದರೆ ಸಮೂಹ ಮತ್ತು ಮೀನು ಮುಂತಾದ ಜಲಚರ ಪ್ರಾಣಿಗಳನ್ನು ಹಿಡಿಯುವ ಬಲೆ. ಗೌಣಾಃ ಮಾಧುರ್ಯವಾಗ್ಮಿತ್ವಾದಿಗುಣಸಂಬಂಧಿನಃ ತಂತುಕೃತಾಶ್ಚ = ಗೌಣ ಎಂದರೆ ಮಧುರತೆ, ಚತುರತೆ ಮುಂತಾದ ಗುಣಗಳ ಸಂಬಂಧ ಉಳ್ಳವರು, ಮತ್ತು ದಾರದಿಂದ ಮಾಡಿರುವ ಬಲೆ ಇತ್ಯಾದಿ. ಶಂಖಚಕ್ರಂ ಕಂಬೂನಾಂ ಮಂಡಲಂ ಚ = ಶಂಖಚಕ್ರ ಎಂದರೆ ಕಪ್ಪೆಚಿಪ್ಪು ಮುಂತಾದ ಶಂಖಾಕೃತಿಯ ವಸ್ತುಗಳ ರಾಶಿ (ಶಂಖ ಮತ್ತು ಚಕ್ರಗಳು)

ತಾತ್ಪರ್ಯ— ಸಮುದ್ರದಲ್ಲಿ ಮೀನು ಹಿಡಿಯುವ ಬೆಸ್ತರು (ಗುಣಗಳಿಂದ) ದಾರಗಳಿಂದ ಬಲೆಗಳನ್ನು ತಯಾರಿಸುತ್ತಾರೆ. ಅವುಗಳನ್ನು ನೀರಿನಲ್ಲಿ ಹರಡುತ್ತಾರೆ. ಆಗ ಕಪ್ಪೆಚಿಪ್ಪು ಮುಂತಾದುವುಗಳನ್ನೂ ಇತರ ಮೀನು ಮುಂತಾದ ನಾನಾ ಜಲಚರ ಪ್ರಾಣಿಗಳನ್ನೂ ಹಿಡಿಯುತ್ತಾರೆ. ಅದರಂತೆಯೇ ಪ್ರಕೃತದಲ್ಲಿ ಈ ಮಧ್ವಾಚಾರ್ಯರ ಶಿಷ್ಯರೂ ಮಾಧುರ್ಯ ಸೌಶೀಲ್ಯಾದಿ ಗುಣಗಳಿಂದ ಕೂಡಿರುತ್ತಾರೆ. ಎಲ್ಲಾ ದೇಶಗಳಲ್ಲಿಯೂ ಹರಡುತ್ತಾ ಇದ್ದಾರೆ. ಅವರು ತೋಳು, ಎದೆ, ಮುಂತಾದ ಸ್ಥಳಗಳಲ್ಲಿ ಪಾಂಚಜನ್ಯ ಶಂಖ ಸುದರ್ಶನಚಕ್ರ ಮುಂತಾದ ವಿಷ್ಣುಚಿಹ್ನೆಗಳನ್ನು ಧರಿಸುತ್ತಾರೆ. ಇಂತಹ ಮಧ್ವಾಚಾರ್ಯರ ಶಿಷ್ಯರು ಸಭೆಯೆಂಬ ಸಮುದ್ರದಲ್ಲಿ ಪ್ರವೇಶ ಮಾಡಿ ತಮ್ಮ ಒಳ್ಳೆಯ ಮಾತುಗಳಿಂದ, ಆ ಸಭೆಯಲ್ಲಿರುವ ಎಲ್ಲಾ ಜನರ ಮನಸ್ಸುಗಳನ್ನು ವಶಮಾಡಿಕೊಳ್ಳುವರು. ಅವರು ಜನರನ್ನು ಮರುಳುಗೊಳಿಸದಂತೆ, ನಮ್ಮ ಜನರನ್ನು ಮರುಳುಗೊಳಿಸದಂತೆ, ನಮ್ಮ ಜನರ ಸಂಖ್ಯೆಯು ಕಡಿಮೆಯಾಗದಂತೆ, ನಮಗೆ ಕ್ಷೇಮವುಂಟಾಗುವಂತೆ ಯಾವು-ದಾದರೊಂದು ಒಳ್ಳೆಯ ಉಪಾಯವನ್ನು ಆಲೋಚಿಸಿರಿ. (ರೂಪಕ ಮತ್ತು ಶ್ಲೇಷಾಲಂಕಾರ).

ವಿಗ್ರಹ—

ಶಿಷ್ಯಜಾಲೈಃ— ಶಿಷ್ಯಾಣಾಂ ಜಾಲಾನಿ ಶಿಷ್ಯಜಾಲಾನಿ । ಜಾಲಂ = ಸಮೂಹ, ಬಲೆ, ಜಾಲಂ ಸಮೂಹ ಆನಾಯಃ ಗವಾಕ್ಷಕ್ಷಾರಕಾವಪಿ ಅಮರ. ಜಾಲಂ ಸಮೂಹಃ ಜಲಚರಬಂಧಕಂ ಚ ಭಾವಪ್ರಕಾಶಿಕಾ ಗೌಣ = ಎಂದರೆ ಮಾಧುರ್ಯಾದಿ ಗುಣ ಸಂಬಂಧ ಉಳ್ಳವರು ಮತ್ತು ತಂತುಸಂಬಂಧ ಉಳ್ಳವುಗಳು (ಬಲೆಗಳು) ಗೌಣಾಃ (ವಿ) ಮಾಧುರ್ಯವಾಗ್ಮಿತ್ವಾದಿ ಗುಣಸಂಬಂಧಿನಃ (ಸಂಬಂಧೀನಿ) ತಂತು ಕೃತಾಶ್ಚ (ನಿಚ) ।

ಶಂಖಚಕ್ರಾದಿಭೃದ್ಭಿಃ— ಶಂಖಶ್ಚ ಚಕ್ರಂ ಚ ಶಂಖಚಕ್ರೇ, ತೇ ಆದೀ ಯೇಷಾಂ ತಾನಿ ಶಂಖಚಕ್ರಾದೀನಿ, ತಾನಿ ಬಿಭ್ರತೀತಿ ಶಂಖಚಕ್ರಾದಿಭೃಂತಿ, ತೈಃ ಶಂಖಚಕ್ರಾದಿಭೃದ್ಭಿಃ । ಶಂಖಚಕ್ರಂ ಶಂಖಾನಾಂ ಕಂಬೂನಾಂ ಚಕ್ರಂ ಮಂಡಲಂ ಚ ಭಾವಪ್ರಕಾಶಿಕಾ । ಶಂಖಾನಾಂ ಚಕ್ರಃ ಶಂಖಚಕ್ರಃ ಎಂದು ಛಲಾರೀಯ, ಚಕ್ರೋ ಗಣೇ ಚಕ್ರವಾಕೇ ಎಂದು ವಿಶ್ವ, ಅಂತರಮವಕಾಶಾವಧಿ ಪರಿಧಾನಾಂತರ್ಧಿಭೇದತಾದರ್ಥ್ಯೇ । ಛಿದ್ರಾತ್ಮೀಯವಿನಾ ಬಹಿರವಸರಮಧ್ಯೇಽಂತರಾತ್ಮನಿ ಚ ಎಂದು ಅಮರ. ಈ ಕೋಶಾನುಸಾರವಾಗಿ ಅಂತರಶಬ್ದಕ್ಕೆ ವಿಶೇಷ = ಪ್ರಭೇದಗಳು ಮತ್ತು ಮನಸ್ಸು ಎಂದೂ ಅರ್ಥ.

ವಿಶ್ವಸತ್ತ್ವಾಂತರಾಣಿ— ವಿಶ್ವಾನಿ ಚ ತಾನಿ ಸತ್ತ್ವಾನಿ ಚ ವಿಶ್ವಸತ್ತ್ವಾನಿ, ವಿಶ್ವಸತ್ತ್ವಾನಾಂ ಅಂತರಾಣಿ ವಿಶ್ವಸತ್ತ್ವಾಂತರಾಣಿ । ಸತ್ತ್ವಾನಾಂ ಅಂತರಾಣಿ ಸತ್ತ್ವಾಂತರಾಣಿ, ವಿಶ್ವಾನಿ ಚ ತಾನಿ ಸತ್ತ್ವಾಂತರಾಣಿ ವಿಶ್ವಸತ್ತ್ವಾಂತರಾಣಿ ।

ಕ್ಷೇಮಾಪ್ತ್ಯೈ— ಕ್ಷೇಮಸ್ಯ ಆಪ್ತಿಃ ಕ್ಷೇಮಾಪ್ತಿಃ, ತಸ್ಯೈ ಕ್ಷೇಮಾಪ್ತ್ಯೈ ।

ಕ್ರಿಯಾಪದ— ಗ್ರಹ ಉಪಾದಾನೇ, ಸಕರ್ಮಕಃ ಪರಸ್ಮೈಪದಿನಃ ಕರ್ಮಣಿ ವಿಧಿಲಿಜ್ ಪ್ರಥಮಪುರುಷೇ ಬಹುವಚನೇ 'ಗೃಹ್ಯೇರನ್' ಇತಿ ರೂಪಮ್ ।

ಗೃಹ್ಯೇತ ಗೃಹ್ಯೇಯಾತಾಂ ಗೃಹ್ಯೇರನ್, ಗೃಹ್ಯೇಥಾಃ ಗೃಹ್ಯೇಯಾಥಾಂ ಗೃಹ್ಯೇಧ್ವಂ, ಗೃಹ್ಯೇಯ ಗೃಹ್ಯೇವಹಿ ಗೃಹ್ಯೇಮಹಿ ॥

ಡುಧಾಞ್ (ಧಾ) ಧಾರಣಪೋಷಣಯೋಃ ಪರಸ್ಮೈಪದೀ ಆಜ್ಞಾಯಾಂ ಲೋಟ್‌ಮಧ್ಯಮಪುರುಷೇ ಬಹುವಚನೇ 'ವಿಧತ್ತ' ಇತಿ ರೂಪಮ್ ।

ದಧಾತು ಧತ್ತಾತ್ ಧತ್ತಾಂ ದಧತು, ಧೇಹಿ ಧತ್ತಾತ್ ಧತ್ತಂ ಧತ್ತ, ದಧಾನಿ ದಧಾವ ದಧಾಮ ॥

ಪ್ರಯೋಗ— ಮೂಲದಲ್ಲಿ ಮೊದಲು ಕರ್ಮಣಿಪ್ರಯೋಗ ವಿಧಿಲಿಜ್ ಲಕಾರದಲ್ಲಿದೆ, ಅದನ್ನು ಕರ್ತರಿ ಪ್ರಯೋಗಕ್ಕೆ ಹೀಗೆ ಬದಲಾಯಿಸಬೇಕು. ಗೌಣಾನಿ ವ್ಯಾಪ್ತಾನಿ ಶಂಖಚಕ್ರಾದಿಭೃಂತಿ ತಸ್ಯ ಶಿಷ್ಯಜಾಲಾನಿ ಸಂಸತ್ಸಿಂಧೌ ವಿಶ್ವಸತ್ತ್ವಾಂತರಾಣಿ ಮಾ ಗೃಹೀಯುಃ । ತತ್ರ (ಯೂಯಂ) ನಃ ಕ್ಷೇಮಾಪ್ತ್ಯೈ ನೀತಿಂ ವಿಧತ್ತ, (ಕರ್ತರಿ) ತತ್ರ ಯುಷ್ಮಾಭಿಃ ನಃ ಕ್ಷೇಮಾಪ್ತ್ಯೈ ನೀತಿಃ ವಿಧೀಯತಾಂ (ಕರ್ಮಣಿ) ।

★ ★ ★

ಅವತಾರಿಕಾ— ಆ ಮಧ್ವಶಿಷ್ಯರ ಜನವಶೀಕರಣಶಕ್ತಿಯನ್ನು ವಿವರಿಸುತ್ತಾನೆ

**ಗೌಣ್ಯೈಸ್ತರ್ಕೈರ್ಗೌಣವಾಕ್ಯಾಭಿಗುಪ್ತೈಃ**
**ಗೌಣೀಂ ಬುದ್ಧಿಂ ವರ್ಧಯಂತೇ ನೃಣಾಂ ತೇ ।**
**ಹಂಸಾನಾಂ ನೋ ವಾಗ್ವಿಘಾತಪ್ರವೀಣಾಃ**
**ಸಿಂಧುಂ ಭೂಯೋ ವಾರಿವರ್ಷೈರಿವಾಬ್ದಾಃ ॥ 15 ॥**

ಪದಚ್ಛೇದ— ಗೌಣ್ಯೈಃ, ತರ್ಕೈಃ, ಗೌಣವಾಕ್ಯಾಭಿಗುಪ್ತೈಃ, ಗೌಣೀಂ ಬುದ್ಧಿಂ, ವರ್ಧಯಂತೇ, ನೃಣಾಂ, ತೇ, ಹಂಸಾನಾಂ, ನಃ, ವಾಗ್ವಿಘಾತ ಪ್ರವೀಣಾಃ, ಸಿಂಧುಂ, ಭೂಯಃ, ವಾರಿವರ್ಷೈಃ, ಇವ, ಅಬ್ದಾಃ ।

ಅನ್ವಯ— ಹಂಸಾನಾಂ ನಃ ವಾಗ್ವಿಘಾತಪ್ರವೀಣಾಃ ತೇ ಗೌಣವಾಕ್ಯಾಭಿಗುಪ್ತೈಃ ಗೌಣ್ಯೈಃ ತರ್ಕೈಃ ಭೂಯಃ ವಾರಿವರ್ಷೈಃ ಅಬ್ದಾಃ ಸಿಂಧುಂ ಇವ ಗೌಣೀಂ ಬುದ್ಧಿಂ ವರ್ಧಯಂತೇ ।

ಅನ್ವಯಾರ್ಥ—

**ಹಂಸಾನಾಂ** = ಸನ್ಯಾಸಿಗಳಾದ
**ನಃ** = ನಮ್ಮ (ಹಂಸಗಳ)
**ವಾಗ್ವಿಘಾತ** = ಮಾತನ್ನು ತಡೆಯುವುದರಲ್ಲಿ (ಮನೋಹರವಾದ ಧ್ವನಿಯನ್ನು ಪ್ರತಿಬಂಧಿಸುವುದರಲ್ಲಿ)
**ಪ್ರವೀಣಾಃ** = ನಿಪುಣರಾದ
**ತೇ** = ಶ್ರೀಮಧ್ವಾಚಾರ್ಯರ ಆ ಶಿಷ್ಯರು
**ಗೌಣವಾಕ್ಯ** = ಗುಣವನ್ನು ಹೇಳುವ ಮಾತುಗಳಿಂದ
**ಅಭಿಗುಪ್ತೈಃ** = ಕಾಪಾಡಲ್ಪಟ್ಟ,
**ಗೌಣ್ಯೈಃ ತರ್ಕೈಃ** = ಬ್ರಹ್ಮನಿಗೆ ಗುಣಗಳನ್ನು ಹೇಳುವ ಅನುಮಾನಗಳಿಂದ
**ಭೂಯಃ** = ಬಹಳವಾಗಿ

**ವಾರಿವರ್ಷೈಃ** = ನೀರಿನ ಮಳೆ ಸುರಿಸುವಿಕೆಗಳಿಂದ
**ಅಬ್ದಾಃ** = ಮೋಡಗಳು
**ಸಿಂಧುಂ ಇವ** = ಸಮುದ್ರವನ್ನೋಪಾದಿಯಲ್ಲಿ
**ನೃಣಾಂ** = ಮನುಷ್ಯರಿಗೆ
**ಗೌಣೀಂ ಬುದ್ಧಿಂ** = ಪರಬ್ರಹ್ಮನು ಗುಣಪೂರ್ಣನು ಎಂಬ ಬುದ್ಧಿಯನ್ನು
**ವರ್ಧಯಂತೇ** = ಹೆಚ್ಚಿಸುತ್ತಾರೆ.

ತಾತ್ಪರ್ಯ— ಮಳೆಗಾಲದಲ್ಲಿ ಮೋಡಗಳು ಬಹಳವಾಗಿ ಮಳೆಯನ್ನು ಸುರಿಸುತ್ತವೆ. ಆ ಮಳೆಯ ನೀರಿನ ಪ್ರವಾಹದಿಂದ ನದಿಯೂ ಸಮುದ್ರವೂ ವೃದ್ಧಿ ಹೊಂದುತ್ತದೆ. ಹಂಸಗಳು ತಮ್ಮ ಮನೋಹರವಾದ ಧ್ವನಿಯಿಂದ ಕೂಗುವುದಿಲ್ಲ. ಮಳೆ ಬರುವ (ಭಾರತವರ್ಷವನ್ನು ಬಿಟ್ಟು) ಪ್ರದೇಶವನ್ನು ಬಿಟ್ಟು ಮಾನಸ ಸರೋವರದ ಕಡೆಗೆ ಹೋಗುತ್ತವೆ. ಅದರಂತೆ ಆ ಮಧ್ವಾಚಾರ್ಯರ ಶಿಷ್ಯರು ಹಂಸದಂತಿರುವ ಪರಮಹಂಸಾಶ್ರಮಿಗಳಾದ ನಮ್ಮ ಮಾತುಗಳನ್ನು ಖಂಡಿಸುತ್ತಾರೆ. ಬ್ರಹ್ಮನಿಗೆ ನಿರ್ಗುಣತ್ವ ಪ್ರತಿಪಾದಕವಾದ ಮಾತುಗಳನ್ನು ನಿರಾಕರಿಸುವುದರಲ್ಲಿ ಅವರು ಬಹಳ ಪ್ರವೀಣರಾಗಿರುತ್ತಾರೆ. ಅವರು ಪರಬ್ರಹ್ಮನಿಗೆ (ಬ್ರಹ್ಮಕ್ಕೆ) ಸಗುಣತ್ವ ಸಾಧಕವಾದ ಅನೇಕ ತರ್ಕಗಳನ್ನು ಪ್ರಯೋಗಿಸುತ್ತಾರೆ. ಬ್ರಹ್ಮವು ಸಗುಣವಾಗಿರಲೇಬೇಕು. ವಸ್ತುವಾಗಿರುವುದರಿಂದ ಘಟದಂತೆ ಬ್ರಹ್ಮ ಸಗುಣಂ ಭವಿತುಂ ಅರ್ಹತಿ ವಸ್ತುತ್ವಾತ್ ಘಟವತ್ ಇತ್ಯಾದಿ ಅನುಮಾನಗಳನ್ನು ಪ್ರಯೋಗಿಸುತ್ತಾರೆ. ಈ ಅನುಮಾನಗಳಿಗೆ ಬ್ರಹ್ಮಕ್ಕೆ ಗುಣಪ್ರತಿಪಾದಕವಾದ ಅನೇಕ ವೇದವಾಕ್ಯಗಳು ರಕ್ಷಕಗಳಾಗಿವೆ. 'ಮಯ್ಯನಂತಗುಣೇಽನಂತೇ' 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ' ಇತ್ಯಾದಿ ವಾಕ್ಯಗಳು ಭಗವಂತನಿಗೆ ಅನಂತಗುಣಗಳಿವೆ ಎಂದು ಪ್ರತಿಪಾದಿಸುತ್ತವೆ. ಈ ವಾಕ್ಯಗಳ ಸಹಾಯವುಳ್ಳ ಹಿಂದೆ ಹೇಳಿದ ಅನುಮಾನಗಳಿಂದ ಶ್ರೀಮಧ್ವಾಚಾರ್ಯರ ಶಿಷ್ಯರು ಬ್ರಹ್ಮನು ಸಗುಣ ಎಂಬ ಬುದ್ಧಿಯು ಜನರಿಗೆ ಪ್ರತಿದಿನವೂ ಹೆಚ್ಚಾಗುವಂತೆ ಮಾಡುತ್ತಾರೆ. ಮೋಡಗಳು ಮಳೆ ಸುರಿಸಿ ಸಮುದ್ರವನ್ನು ಅಭಿವೃದ್ಧಿಗೊಳಿಸುವಂತೆ ಅವರು ಜನರಿಗೆ ಬ್ರಹ್ಮವು ಸಗುಣ ಎಂಬ ಬುದ್ಧಿಯನ್ನೇ ಅಭಿವೃದ್ಧಿಗೊಳಿಸುತ್ತಾರೆ. ಮೋಡದ ಧ್ವನಿ ಕೇಳಿದಾಗ ಹಂಸಧ್ವನಿ ಕೇಳಿಸುವುದಿಲ್ಲ. ಹಂಸಗಳು ಬೇರೆ ಕಡೆಗೆ ಹೊರಟುಹೋಗುತ್ತವೆ. ಹಾಗೆಯೇ ಮಧ್ವಶಿಷ್ಯರ 'ಬ್ರಹ್ಮವು ಸಗುಣವಾಗಿದೇ ವಸ್ತುವಾಗಿರುವುದರಿಂದ ಇತ್ಯಾದಿಯಾದ ಬ್ರಹ್ಮಕ್ಕೆ ಸಗುಣತ್ವ ಬೋಧಕವಾದ ತರ್ಕಗಳ ಘೋಷದಿಂದ ಹಂಸರಾದ ನಾವು ಮೋಡಗಳ ಧ್ವನಿಯನ್ನು ಕೇಳಿ ಹಂಸಗಳು ದೂರಕ್ಕೆ ಓಡಿಹೋಗುವಂತೆ ದೂರಕ್ಕೆ ಓಡಿಹೋಗಬೇಕಾಗುತ್ತದೆ. ಅವರು ಹೇಳುವ ಅನುಮಾನಗಳಿಗೆ ದೋಷವನ್ನು ಹೇಳಲೂ ಸಾಧ್ಯವಾಗುವುದಿಲ್ಲ. ಮಯ್ಯನಂತಗುಣೇಽನಂತೇ, ಅಥ ಕಸ್ಮಾದುಚ್ಯತೇ ಇತ್ಯಾದಿ ಅನಂತಗುಣತ್ವವನ್ನು ಹೇಳುವ ಆಗಮಗಳಿಂದ ಈ ತರ್ಕಗಳು ಅನುಗೃಹೀತವಾಗಿವೆ. ಹೀಗೆ ಆಗಮ ಸಹಾಯವಿರುವ ಅನುಮಾನಗಳನ್ನು ದೂಷಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ನಾವು ಮಾತಾಡದೆ ಬಾಯಿ ಮುಚ್ಚಿಕೊಂಡು ಬೇರೆ ಕಡೆಗೆ ಹೋಗುವುದೇ ಉಳಿದಿರುವ ಮಾರ್ಗವು ಎಂದು ಅಭಿಪ್ರಾಯ.

ವಿಗ್ರಹ—

**ಗೌಣ್ಯೈಃ**— (ಪ್ರತಿಪಾದಕತಯಾ) ಗುಣಸ್ಯ ಇಮೇ ಗುಣಾಃ, ತೈಃ ಗುಣ್ಯೈಃ ।

**ಗೌಣವಾಕ್ಯಾಭಿಗುಪ್ತೈಃ**— (ಪ್ರತಿಪಾದಕತಯಾ) ಗುಣಸ್ಯ ಇಮಾನಿ ಗೌಣಾನಿ, ಗೌಣಾನಿ ಚ ತಾನಿ ವಾಕ್ಯಾನಿ ಚ ಗೌಣವಾಕ್ಯಾನಿ, ಗೌಣವಾಕ್ಯೈಃ ಅಭಿಗುಪ್ತಾಃ ಗೌಣವಾಕ್ಯಾಭಿಗುಪ್ತಾಃ, ತೈಃ ಗೌಣವಾಕ್ಯಾಭಿಗುಪ್ತೈಃ । (ವಿಷಯಿತಯಾ) ಇಯಂ ಗೌಣೀ ಗುಣವಿಷಯಿಕಾ = ಬ್ರಹ್ಮವು ಗುಣವುಳ್ಳದ್ದು ಎಂಬ,

**ವಾಗ್ವಿಘೂತಪ್ರವೀಣಾಃ**— ವಾಚಾಂ ವಿಘೂತಃ ವಾಗ್ವಿಘೂತಃ, ವಾಗ್ವಿಘೂತೇ ಪ್ರವೀಣಾಃ ವಾಗ್ವಿಘೂತ-ಪ್ರವೀಣಾಃ,

**ಭೂಯೋವಾರಿವರ್ಷೈಃ**— ಭೂಯಾಂಸಿ ಚ ತಾನಿ ವಾರೀಣಿ ಚ ಭೂಯೋವಾರೀಣಿ, ಭೂಯೋವಾರೀಣಾಂ ವರ್ಷಾಣಿ ಭೂಯೋವಾರಿವರ್ಷಾಣಿ, ತೈಃ ಭೂಯೋವಾರಿವರ್ಷೈಃ ।

**ಅಬ್ದಾಃ**— ಅಪಃ ದದತಿ ಇತಿ ಅಬ್ದಾಃ ।

**ಕ್ರಿಯಾಪದ**— ವೃಧು ವೃದ್ಧೌ ಣಿಜಂತಾತ್ ಲಟ್ ಪ್ರಥಮಪುರುಷೇ ಬಹುವಚನೇ 'ವರ್ಧಯಂತೇ' ಇತಿ ರೂಪಮ್ ।

ವರ್ಧಯತೇ ವರ್ಧಯೇತೇ ವರ್ಧಯಂತೇ,
ವರ್ಧಯಸೇ ವರ್ಧಯೇಥೇ ವರ್ಧಯಧ್ವೇ,
ವರ್ಧಯೇ ವರ್ಧಯಾವಹೇ ವರ್ಧಯಾಮಹೇ ॥

**ಕೋಶ**— ಪ್ರವೀಣೇ ನಿಪುಣೋಽಭಿಜ್ಞಃ, ಅಬ್ದೌ ಜೀಮೂತವತ್ಸರೌ.ಅಮರ.

**ಪ್ರಯೋಗ**— ತೇ ನೃಣಾಂ ಗೌಣೀಂ ಬುದ್ಧಿಂ ವರ್ಧಯಂತೇ ತೈಃ, ನೃಣಾಂ ಗೌಣೀ ಬುದ್ಧಿಃ ವರ್ಧ್ಯತೇ ।

★ ★ ★

**ಅವತಾರಿಕಾ**— ಆ ಮಾಯಾವಾದಿಯು ತನ್ನ ಭಾಷಣವನ್ನು ಮುಗಿಸುತ್ತಾನೆ.

**ಬಾಹುಲ್ಯೇನ ಹ್ಯೇತದುಕ್ತ್ವಾ ಖಲು ದ್ರಾ-**
**ಗೇತೇ ವಿಶ್ವಂ ವ್ಯಾಪ್ನುವಂತಿ ಪ್ರಕಾಮಮ್ ।**
**ಅಸ್ಮಿನ್ನಸ್ಮದ್ದರ್ಶನಾಪಾಯಕಾಲೇ**
**ಯದ್ವಲ್ಲೋಕಾಪಾಯಕಾಲೇ ಲಯಾಪಃ ॥ 16 ॥**

**ಪದಚ್ಛೇದ**— ಬಾಹುಲ್ಯೇನ, ಹಿ, ಏತತ್, ಉಕ್ತ್ವಾ, ಖಲು, ದ್ರಾಕ್, ಏತೇ, ವಿಶ್ವಂ, ವ್ಯಾಪ್ನುವಂತೀ, ಪ್ರಕಾಮಂ, ಅಸ್ಮಿನ್, ಅಸ್ಮದ್ದರ್ಶನಾಪಾಯಕಾಲೇ, ಯದ್ವತ್, ಲೋಕಾಪಾಯಕಾಲೇ, ಲಯಾಪಃ ।

**ಅನ್ವಯ**— ಏತತ್ ಬಾಹುಲ್ಯೇನ ಉಕ್ತ್ವಾ ಖಲು ಹಿ । ಅಸ್ಮಿನ್ ಅಸ್ಮದ್ದರ್ಶನಾಪಾಯಕಾಲೇ ಏತೇ ದ್ರಾಕ್ ಲೋಕಾಪಾಯಕಾಲೇ ಲಯಾಪಃ ಯದ್ವತ್ ಪ್ರಕಾಮಂ ವ್ಯಾಪ್ನುವಂತಿ ।

**ಅನ್ವಯಾರ್ಥ**—

**ಏತತ್** = ಈ ವಿಷಯವನ್ನು
**ಬಾಹುಲ್ಯೇನ** = ಹೆಚ್ಚಾಗಿ (ವಿಸ್ತಾರವಾಗಿ)
**ಉಕ್ತ್ವಾ ಖಲು ಹಿ** = ಹೇಳಬೇಕಾಗಿಯೇ ಇಲ್ಲ.
**ಅಸ್ಮಿನ್** = ಈ
**ಅಸ್ಮತ್** = ನಮ್ಮ
**ದರ್ಶನ** = ಅದ್ವೈತಸಿದ್ಧಾಂತದ
**ಅಪಾಯಕಾಲೇ** = ನಾಶದ ಸಮಯದಲ್ಲಿ
**ಏತೇ** = ಈ ಮಧ್ವಾಚಾರ್ಯರ ಶಿಷ್ಯರು
**ದ್ರಾಕ್** = ಬೇಗನೆ
**ವಿಶ್ವಂ** = ಪ್ರಪಂಚವನ್ನು
**ಲೋಕಾಪಾಯಕಾಲೇ** = ಪ್ರಪಂಚದ ನಾಶಸಮಯದಲ್ಲಿ (ಪ್ರಳಯ ಕಾಲದಲ್ಲಿ)

**ಲಯಾಪಃ ಯದ್ವತ್** = ಪ್ರಳಯದ ನೀರಿನಂತೆ

**ಪ್ರಕಾಮಂ** = ಸ್ವೇಚ್ಛೆಯಾಗಿ

**ವ್ಯಾಪ್ನುವಂತಿ** = ಹರಡುತ್ತಾರೆ (ವ್ಯಾಪಿಸುತ್ತಾರೆ)

**ತಾತ್ಪರ್ಯ**— ನಮ್ಮ ವಿಪಕ್ಷದವರ ಉತ್ಕರ್ಷವನ್ನು ತಿಳಿಸುವ ಈ ಮಾತನ್ನು ಹೆಚ್ಚಾಗಿ ವಿಸ್ತರಿಸಿ ಹೇಳಿದ್ದರಿಂದ ಏನೂ ಪ್ರಯೋಜನವಿಲ್ಲ. ಈಗ ನಮ್ಮ ಶಾಂಕರ ಸಿದ್ಧಾಂತಕ್ಕೆ ಅಪಾಯವು ಬಂದು ಒದಗುತ್ತಿದೆ. ಈ ಮಧ್ವಾಚಾರ್ಯರ ಶಿಷ್ಯರು ಪ್ರಲಯಕಾಲದಲ್ಲಿ ಜಲರಾಶಿಯು ಪ್ರಪಂಚವನ್ನೆಲ್ಲಾ ಆವರಿಸಿ ನಾಶಗೊಳಿಸುವಂತೆ ಸ್ವೇಚ್ಛೆಯಿಂದ ಪ್ರಪಂಚವನ್ನು ವ್ಯಾಪಿಸಿ ನಮ್ಮ ಸಿದ್ಧಾಂತಕ್ಕೆ ಅಪಾಯವನ್ನು ತಂದೊಡ್ಡುತ್ತಿದ್ದಾರೆ. ಈ ವಿಷಯಕ್ಕೆ ನಾವು ಪ್ರತೀಕಾರವನ್ನು ಆಲೋಚಿಸಬೇಕು.

**ವಿಗ್ರಹ**—

**ಬಾಹುಲ್ಯೇನ**— ಬಹುಲಸ್ಯ ಭಾವಃ ಬಾಹುಲ್ಯಂ, ತೇನ ಬಾಹುಲ್ಯೇನ ।

**ಅಸ್ಮದ್ದರ್ಶನಾಪಾಯಕಾಲೇ**— ಅಸ್ಮಾಕಂ ದರ್ಶನಂ ಅಸ್ಮದ್ದರ್ಶನಂ, ಅಸ್ಮದ್ದರ್ಶನಸ್ಯ ಅಪಾಯಃ ಅಸ್ಮದ್ದರ್ಶನಾ-ಪಾಯಃ, ಅಸ್ಮದ್ದರ್ಶನಾಪಾಯಸ್ಯ ಕಾಲಃ ಅಸ್ಮದ್ದರ್ಶನಾಪಾಯಕಾಲಃ, ತಸ್ಮಿನ್ ಅಸ್ಮದ್ದರ್ಶನಾಪಾಯಕಾಲೇ ।

**ಲಯಾಪಃ**— ಲಯಸ್ಯ ಆಪಃ ಲಯಾಪಃ, ಉಕ್ತ್ವಾ ಖಲು ಎಂಬಲ್ಲಿ ಖಲು ಎಂಬುದು ಪ್ರತಿಷೇಧಾರ್ಥಕವಾದ ಅವ್ಯಯ, ಅದರ ಯೋಗವಿದ್ದಾಗ ಅಲಂ ಖಲ್ವೋಃ ಪ್ರತಿಷೇಧಯೋಃ ಪ್ರಾಚಾಂ ಕ್ತ್ವಾ (3-4-18) ಎಂಬ ಸೂತ್ರದಿಂದ ಕ್ತ್ವಾ ಪ್ರತ್ಯಯ.

**ಕ್ರಿಯಾಪದ**— ಆಪ್‌ಲೃ ವ್ಯಾಪ್ತೌ ಪರಸ್ಮೈಪದಿ ಸಕರ್ಮಕ ಲಟ್ ಪ್ರಥಮಪುರುಷೇ ಬಹುವಚನೇ 'ವ್ಯಾಪ್ನುವಂತಿ' ಇತಿ ರೂಪಮ್ । ಈ ಧಾತುವಿನ ಲಿಟ್ ಮೊದಲಾದ ಲಕಾರಗಳ ರೂಪಗಳನ್ನು ಯಂ ಯಂ ಪ್ರಾಪದ್ ಭೂರಿಚಿತ್ರಃ ಪ್ರದೇಶಂ ಎಂಬ ಸರ್ಗ 12 ಶ್ಲೋಕ 9ರ ವ್ಯಾಖ್ಯಾನದಲ್ಲಿ ನೋಡಿರಿ.

ವಿ+ ಆಪ್ನೋತಿ ಆಪ್ನುತಃ ಆಪ್ನುವಂತಿ, ಆಪ್ನೋಷಿ ಆಪ್ನುಥಃ ಆಪ್ನುಥ, ಆಪ್ನೋಮಿ ಆಪ್ನುವಃ ಆಪ್ನುಮಃ ॥

**ಕೋಶ**— ನಿಷೇಧವಾಕ್ಯಾಲಂಕಾರ ಜಿಜ್ಞಾಸಾನುನಯೇ ಖಲು ಎಂಬ ಅಮರಕೋಶಾನುಸಾರ ಖಲು ಶಬ್ದವು ನಿಷೇಧಾರ್ಥಕವಾಗಿದೆ.

**ಪ್ರಯೋಗ**— ಏತೇ ವಿಶ್ವಂ ಪ್ರಕಾಮಂ ವ್ಯಾಪ್ನುವಂತಿ । ಏತೈಃ ವಿಶ್ವಂ ಪ್ರಕಾಮಂ ವ್ಯಾಪ್ಯತೇ ।

★ ★ ★

**ಅವತಾರಿಕಾ**— ಹೀಗೆ ಒಬ್ಬನ ಮಾತಿನ ಮೇಲೆ ಮತ್ತೊಬ್ಬನು ಅದನ್ನು ಹೀಯಾಳಿಸಲಿಕ್ಕೆ ಆರಂಭಿಸಿದನು ಎನ್ನುತ್ತಾರೆ.

**ಆಕರ್ಣ್ಯೇತ್ಥಂ ತಸ್ಯ ವಾಣೀಮಥಾನ್ಯೋ**
**ಮಾನೀ ತೇಷಾಂ ಮಾನಿನಾಂ ಚಿತ್ತವೇತ್ತಾ ।**
**ಸ್ವಾನಾಂ ಚೇತೋ ನಂದಯನ್ ಮಂದಚೇತಾ**
**ಧೃಷ್ಟಾಮುಚ್ಚೈರ್ವಾಚಮಾಚಷ್ಟ ಕಷ್ಟಃ ॥ 17 ॥**

**ಪದಚ್ಛೇದ**— ಆಕರ್ಣ್ಯ, ಇತ್ಥಂ, ತಸ್ಯ, ವಾಣೀಂ, ಅಥ, ಅನ್ಯಃ, ಮಾನೀ, ತೇಷಾಂ, ಮಾನಿನಾಂ, ಚಿತ್ತವೇತ್ತಾ, ಸ್ವಾನಾಂ, ಚೇತಃ, ನಂದಯನ್, ಮಂದಚೇತಾಃ, ಧೃಷ್ಟಾಂ, ಉಚ್ಚೈಃ, ವಾಚಂ, ಆಚಷ್ಟ, ಕಷ್ಟಃ ।

**ಅನ್ವಯ**— ಅಥ ಇತ್ಥಂ ತಸ್ಯ ವಾಣೀಂ ಆಕರ್ಣ್ಯ ಮಾನಿನಾಂ ತೇಷಾಂ ಚಿತ್ತವೇತ್ತಾ ಮಾನೀ ಮಂದಚೇತಾಃ ಅನ್ಯಃ ಕಷ್ಟಃ ಸ್ವಾನಾಂ ಚೇತಃ ನಂದಯನ್ ಧೃಷ್ಟಾಂ ವಾಚಂ ಉಚ್ಚೈಃ ಆಚಷ್ಟ।

ಅನ್ವಯಾರ್ಥ—

ಅಥ = ತರುವಾಯ
ಇತ್ಥಂ = ಈ ರೀತಿ
ತಸ್ಯ = ಅವನ
ವಾಣೀಂ = ಮಾತನ್ನು
ಆಕರ್ಣ್ಯ = ಕೇಳಿ
ಮಾನಿನಾಂ = ಅಹಂಕಾರಿಗಳಾದ
ತೇಷಾಂ = ಆ ಪದ್ಮತೀರ್ಥ ಮೊದಲಾದವರ
ಚಿತ್ತವೇತ್ತಾ = ಮನಸ್ಸನ್ನು ಅರಿತ
ಮಾನೀ = ಅಹಂಕಾರಿಯಾದ
ಮಂದಚೇತಾಃ = ಅಲ್ಪಬುದ್ಧಿಯುಳ್ಳ
ಅನ್ಯಃ = ಬೇರೆಯವನಾದ
ಕಷ್ಟಃ = ಕಷ್ಟ ಎಂಬ (ದುಷ್ಟನು)
ಸ್ವಾನಾಂ = ತಮ್ಮ ಗುಂಪಿನವರ
ಚೇತಃ = ಮನಸ್ಸನ್ನು
ನಂದಯನ್ = ಸಂತೋಷಗೊಳಿಸುತ್ತಾ
ಧೃಷ್ಟ್ಯಾ = ಉದ್ಧಟತನದಿಂದ ಕೂಡಿದ (ಧೈರ್ಯದಿಂದ) ಸಹಿತನಾದ
ವಾಚಂ = ಮಾತನ್ನು
ಉಚ್ಚೈಃ = ಗಟ್ಟಿಯಾಗಿ
ಆಚಷ್ಟ = ಹೇಳಿದನು.

ತಾತ್ಪರ್ಯ— ಮಂತ್ರಾಲೋಚನೆಗಾಗಿ ಸೇರಿದ್ದ ಆ ಮಾಯಾವಾದಿಗಳ ಗುಂಪಿನಲ್ಲಿ ಕಷ್ಟ ಎಂಬುವನೊಬ್ಬನಿದ್ದನು. (ಮತ್ತೊಬ್ಬ ದುಷ್ಟನಿದ್ದನು). ಅವನು ಅಹಂಕಾರಿಗಳಾದ ಪದ್ಮತೀರ್ಥ ಮುಂತಾದವರ ಅಭಿಪ್ರಾಯವನ್ನು ತಿಳಿದಿದ್ದನು. ಸ್ವತಹ ಅಹಂಕಾರಿಯೂ, ಅಲ್ಪ ಬುದ್ಧಿಯವನೂ ಆದ ಆ ಕಷ್ಟನು (ದುಷ್ಟನು) ಮೊದಲು ಮಾತಾಡಿದವನ ಆ ದೀನತಾ-ಪೂರ್ಣವಾದ ಮಾತನ್ನು ಕೇಳಿ, ತಾನು ತನ್ನವರ ಮನಸ್ಸನ್ನು ಸಂತೋಷಗೊಳಿಸುತ್ತಾ ಉದ್ಧಟತನದಿಂದ, ಧೈರ್ಯವಾಗಿ ಗಟ್ಟಿಯಾಗಿ ಈ ರೀತಿ ಹೇಳಿದನು.

ವಿಗ್ರಹ—

**ಮಾನೀ**— ಮಾನಃ ಅಸ್ಯ ಅಸ್ತೀತಿ ಮಾನೀ ।
**ಚಿತ್ತವೇತ್ತಾ**— ಚಿತ್ತಸ್ಯ ವೇತ್ತಾ ಚಿತ್ತವೇತ್ತಾ ।
**ಮಂದಚೇತಾಃ**— ಮಂದಂ ಚೇತಃ ಯಸ್ಯ ಸಃ ಮಂದಚೇತಾಃ ।

**ಕ್ರಿಯಾಪದ**— ಚಕ್ಷಿಙ್ ವ್ಯಕ್ತಾಯಾಂ ವಾಚಿ, ಆಙ್‌ಪೂರ್ವಕ ಲಙ್ ಆತ್ಮನೇಪದಿ ಪ್ರಥಮಪುರುಷೇ ಏಕವಚನೇ 'ಆಚಷ್ಟ' ಇತಿ ರೂಪಮ್ ।

ಆಚಷ್ಟ ಆಚಕ್ಷಾತಾಂ ಆಚಕ್ಷತ, ಆಚಷ್ಠಾಃ ಆಚಕ್ಷಾಥಾಂ ಆಚಢ್ವಂ, ಆಚಕ್ಷಿ ಆಚಕ್ಷ್ವಹಿ ಆಚಕ್ಷ್ಮಹಿ ॥

**ಕರ್ಮಣಿ ಪ್ರಯೋಗ—** ಅಥ ಇತ್ಥಂ ತಸ್ಯ ವಾಣೀಂ ಆಕರ್ಣ್ಯ ಮಾನಿನಾಂ ತೇಷಾಂ ಚಿತ್ತವೇತ್ತಾ ಮಾನಿನಾ ಮಂದ-ಚೇತಸಾ ಅನ್ಯೇನ ಕಷ್ಟೇನ ಸ್ವಾನಾಂ ಚೇತಃ ನಂದಯತಾ ಸತಾ ಧೃಷ್ಟಾ ವಾಕ್ ಉಚ್ಚೈಃ ಅಖ್ಯಾಯತ ಅಕ್ಯಾಯತ 'ಸ್ವಾನಾಂ' ಎಂಬಲ್ಲಿ ಸ್ವೋಜ್ಞಾತಾವಾತ್ಮನಿಸ್ವಂ ತ್ರಿಷ್ವಾತ್ಮೀಯೇ ಸ್ವೋऽಸ್ತ್ರಿಯಾಂಧನೇ ಎಂಬ ಅಮರ ಕೋಶಾನುಸಾರವಾಗಿ ಸ್ವಶಬ್ದಕ್ಕೆ ಜ್ಞಾತಿ ಎಂಬ ಅರ್ಥ ಇಟ್ಟುಕೊಳ್ಳಬೇಕು. ಆಗ ಸ್ವಮಜ್ಞಾತಿಧನಾಖ್ಯಾಯಾಂ (1-1-35) ಎಂಬ ಸೂತ್ರದಿಂದ ಜ್ಞಾತಿಧನಾನ್ಯ-ವಾಚಿಯಾದ ಸ್ವಶಬ್ದಕ್ಕೆ ಸರ್ವನಾಮ ಸಂಜ್ಞೆಯನ್ನು ಹೇಳಿದ್ದರಿಂದ ಜ್ಞಾತಿವಾಚಕವಾದ ಈ 'ಸ್ವ' ಶಬ್ದಕ್ಕೆ ಸರ್ವನಾಮ ಸಂಜ್ಞೆ ಇಲ್ಲದ್ದರಿಂದ ಸರ್ವನಾಮ ಕಾರ್ಯ ಬರುವುದಿಲ್ಲ. ರಾಮಾಣಾಂ ಎಂಬಂತೆ 'ಸ್ವಾನಾಂ' ಎಂದು ರೂಪವಾಗುತ್ತದೆ.

★ ★ ★

**ಅವತಾರಿಕಾ—** ಆತನ ಮಾತನ್ನೇ ವಿವರಿಸುತ್ತಾರೆ.

**ತೇಜಃ ಶಂಕಾಮಾತ್ರತೋ ಯದ್ವಿಲೀನಂ**
**ಧಿಗ್ಭೀರೂಣಾಂ ಮಾನಸಂ ಮಾನಹೀನಮ್ ।**
**ಏಕಾಂತೇನ ಪ್ರಾಪ್ತತೇಜೋವಿಲೀನಂ**
**ಸ್ಥೇಯೋ ಯಸ್ಮಾದ್ ಭಾತಿ ಹೈಯಂಗವೀನಮ್॥ 18 ॥**

**ಪದಚ್ಛೇದ—** ತೇಜಃ ಶಂಕಾಮಾತ್ರತಃ, ಯತ್, ವಿಲೀನಂ, ಧಿಕ್, ಭೀರೂಣಾಂ, ಮಾನಸಂ, ಮಾನಹೀನಂ, ಏಕಾಂತೇನ, ಪ್ರಾಪ್ತತೇಜೋವಿಲೀನಂ, ಸ್ಥೇಯಃ, ಯಸ್ಮಾತ್, ಭಾತಿ, ಹೈಯಂಗವೀನಂ ।

**ಅನ್ವಯ—** ಯತ್ (ಮಾನಸಂ) ತೇಜಃ ಶಂಕಾಮಾತ್ರತಃ ವಿಲೀನಂ ಭೀರೂಣಾಂ ಮಾನಹೀನಂ (ತತ್) ಮಾನಸಂ ಧಿಕ್ । ಯಸ್ಮಾತ್ ಏಕಾಂತೇನ ಪ್ರಾಪ್ತತೇಜೋವಿಲೀನಂ ಹೈಯಂಗವೀನಂ ಸ್ಥೇಯಃ ಭಾತಿ ।

**ಅನ್ವಯಾರ್ಥ—**

**ಯತ್** = ಯಾವ (ಮಾನಸಂ = ಮನಸ್ಸು)
**ತೇಜಃಶಂಕಾಮಾತ್ರತಃ** = ತೇಜಸ್ವಿಯಾದ (ಸಾಮರ್ಥ್ಯಶಾಲಿಯಾದ) ವಸ್ತುವು ಇದೆಯೆಂಬ ಸಂದೇಹದಿಂದಲೇ (ಪ್ರತಿವಾದಿಗೆ ಅತಿಶಯ ಸಾಮರ್ಥ್ಯವಿದೆಯೆಂಬ ಸಂದೇಹ ಮಾತ್ರದಿಂದಲೇ)
**ವಿಲೀನಂ** = ಕರಗಿ ಹೋಗುತ್ತದೆಯೋ (ಭಯಪಡುತ್ತದೆಯೋ)
**ಭೀರೂಣಾಂ** = ಹೇಡಿಗಳ (ಭಯಶಾಲಿಗಳ) (ತತ್)
**ಮಾನಸಂ ಧಿಕ್** = ಅಂತಹ ಮನಸ್ಸನ್ನು ಧಿಕ್ಕರಿಸಬೇಕು. (ಅಂತಹ ಮನಸ್ಸಿಗೆ ಧಿಕ್ಕಾರ)
**ಯಸ್ಮಾತ್** = ಯಾವ ಹೇಡಿಗಳ ಮನಸ್ಸಿಗಿಂತ
**ಏಕಾಂತೇನ** = ನಿಯಮದಿಂದ (ಸರಿಯಾಗಿ, ಅತಿಶಯವಾಗಿ)
**ಪ್ರಾಪ್ತ** = ಒದಗಿದ
**ತೇಜಃ** = ಬೆಂಕಿಯಿಂದ
**ವಿಲೀನಂ** = ಕರಗಿದ
**ಹೈಯಂಗವೀನಂ** = ಹೊಸ ತುಪ್ಪವು
**ಸ್ಥೇಯಃ** = ಹೆಚ್ಚು ಸ್ಥಿರವಾದುದೆಂದು
**ಭಾತಿ** = ತೋರುತ್ತದೆ.

ತಾತ್ಪರ್ಯ— ಧೈರ್ಯವಿಲ್ಲದ 'ಹೇಡಿಗಳು ಪ್ರತಿವಾದಿಗಳು ಅತ್ಯಂತ ಸಮರ್ಥರಾಗಿದ್ದಾರೆ. ನಾವು ಅವರನ್ನು ಜಯಿಸಲು ಸಾಧ್ಯವಾಗಲಾರದು. ಎಂಬ ಊಹೆಯಿಂದಲೂ ಕುಗ್ಗಿಹೋಗುವರು. ಸ್ವಲ್ಪವೂ ಸ್ವಾಭಿಮಾನವಿಲ್ಲದ ಅವರ ಮನಸ್ಸಿಗೆ ಧಿಕ್ಕಾರವಿರಲಿ. ಹೊಸದಾದ ತುಪ್ಪವು ಗಟ್ಟಿಯಾಗಿದ್ದಾಗ ಅಲ್ಲಿ ಎಲ್ಲಿಯೋ ಬೆಂಕಿಯಿದೆ ಎಂಬುದರಿಂದಲೇ ಕರಗುವುದಿಲ್ಲ. ಅದಕ್ಕೆ ಹತ್ತಿರದಲ್ಲಿ ಕೆಳಗಡೆ ಸರಿಯಾಗಿ ಬೆಂಕಿಯ ಸಂಬಂಧವಾಗುತ್ತಲೇ ಅದು ಕರಗುತ್ತದೆ. ಅದಕ್ಕೆ ಮೊದಲು ಅದು ಬೆಂಕಿಯಿದೆ ನೀನು ಕರಗಿಹೋಗುತ್ತೀಯೆ ಎಂದು ಎಷ್ಟು ಸಲ ಹೇಳಿದರೂ ಕರಗುವುದಿಲ್ಲ. ಆದ್ದರಿಂದ ಈ ಹೇಡಿಗಳ ಮನಸ್ಸಿಗಿಂತ ಆ ತುಪ್ಪವೇ ಉತ್ತಮವೆಂದು ನನಗೆ ತೋರುತ್ತಿದೆ ಎಂದು ಕಷ್ಟನು (ಮತ್ತೊಬ್ಬನಾದ ದುಷ್ಟನು) ಹೇಳಿದನು.

ಇಲ್ಲಿ ವಿಶ್ವಪತಿತೀರ್ಥೀಯ ಮತ್ತು ಛಲಾರೀಯದಲ್ಲಿ ಹೇಳಿದ ತಾತ್ಪರ್ಯವು ಇಂತಿದೆ. ''ಅಯಂ ಭಾವಃ ಹೈಯಂಗವೀನಮಪಿ ಸಮ್ಯಗ್ ಅಗ್ನ್ಯಾದಿತೇಜಃ ಸಂಬಂಧೇ ಸತ್ಯೇವ ವಿಲೀಯತೇ, ದ್ರವೀಭೂತಂ ಭವತಿ, ನ ತು ತೇಜಃ ಶಬ್ದಶ್ರವಣಮಾತ್ರೇಣ । ಭೀರೂಣಾಂ ಭವತಾಂ ಮನಸ್ತು ವಿಪಕ್ಷಶಬ್ದಶ್ರವಣಮಾತ್ರಾದ್ ಬಿಭೇತಿ । ತಸ್ಮಾತ್ ಹೈಯಂಗ-ವೀನಾದಪಿ ಭೀರೂಣಾಂ ಮಾನಸಂ ಅತಿಚಪಲಂ, ಅತೋ ಧಿಕ್, ಇತಿ = ಇಲ್ಲಿಯ ತಾತ್ಪರ್ಯ ಇಂತಿದೆ. ಹೊಸ ತುಪ್ಪವು ಆದರೂ ಚೆನ್ನಾಗಿ ಅಗ್ನಿ ಮುಂತಾದ ತೇಜಸ್ಸಿನ ಸಂಬಂಧ ಉಂಟಾದರೆ ಮಾತ್ರವೇ ಕರಗುತ್ತದೆ. ತೇಜಸ್ಸು ಅಂದರೆ ಅಗ್ನ್ಯಾದಿಯು ಇದೆ, ಸಮರ್ಥರಾದ ತೇಜಸ್ವಿಯಾದ ವಸ್ತು ಇದೆ, ಎಂಬ ಶಬ್ದವನ್ನು ಕೇಳುವ ಮಾತ್ರದಿಂದ ಹೆದರುವುದಿಲ್ಲ. ಆದ್ದರಿಂದ ಹೊಸತುಪ್ಪಕ್ಕಿಂತಲೂ ಹೇಡಿಗಳ ಮನಸ್ಸು ಚಪಲ, ಅಂಜುಬುರುಕವಾಗಿರುತ್ತದೆ. ಆದ್ದರಿಂದ ಅದಕ್ಕೆ ಧಿಕ್ಕಾರ''.

ವಿಗ್ರಹ—

**ತೇಜಃಶಂಕಾಮಾತ್ರತಃ—** ತೇಜಸಃ ಶಂಕಾ, ತೇಜಃಶಂಕಾ, ಕೇವಲಂ ತೇಜಃಶಂಕಾ ತೇಜಃಶಂಕಾಮಾತ್ರಂ, ತೇಜಃಶಂಕಾಮಾತ್ರಾತ್ ಇತಿ ತೇಜಃಶಂಕಾಮಾತ್ರತಃ ।

**ಮಾನಸಂ—** 'ಮಾನೇನ ಹೀನಂ ಮಾನಹೀನಂ ತತ್' ಮಾನಸಂ ಧಿಕ್ ಎಂಬಲ್ಲಿ ಮಾನಸಂ ಎಂಬುದು ದ್ವಿತೀಯಾ ವಿಭಕ್ತಿಯಲ್ಲಿದೆ. 'ಉಭಸರ್ವತಸೋಃ ಕಾರ್ಯಾಧಿಗುಪರ್ಯಾದಿಷು ತ್ರಿಷು ದ್ವಿತೀಯಾ-ಮ್ರೇಡಿತಾಂ ತೇಷು ತತೋಽನ್ಯತ್ರಾಪಿ ದೃಶ್ಯತೇ ಎಂಬ (ಶ್ಲೋಕ) ವಾರ್ತಿಕದಿಂದ 'ಧಿಕ್' ಶಬ್ದದ ಯೋಗವಿದ್ದಾಗ ದ್ವಿತೀಯಾ ವಿಭಕ್ತಿ ಬಂದಿದೆ.

**ಪ್ರಾಪ್ತತೇಜೋವಿಲೀನಂ—** ಪ್ರಾಪ್ತಂ ಚ ತತ್ ತೇಜಶ್ಚ ಪ್ರಾಪ್ತತೇಜಃ, ಪ್ರಾಪ್ತತೇಜಸಾ ವಿಲೀನಂ ಪ್ರಾಪ್ತ-ತೇಜೋವಿಲೀನಂ ।

**ಸ್ಥೇಯಃ ಎಂಬಲ್ಲಿ ಸ್ಥಿರ ಶಬ್ದಕ್ಕೆ ದ್ವಿವಚನವಿಭಜ್ಯೋಪಪದೇತರಬೀಯಸುನೌ (5-3-57) ಎಂಬ ಸೂತ್ರದಿಂದ ಈಯಸುನ್ ಪ್ರತ್ಯಯಃ ಪ್ರಿಯಸ್ಥಿರಸ್ಫಿರೋರುಬಹುಲಗುರುವೃದ್ಧತೃಪ್ರದೀರ್ಘವೃಂದಾರಕಾಣಾಂ ಪ್ರ-ಸ್ಥ-ಸ್ಫ-ವರ್ ಬಂಹಿ-ಗರ್, ವರ್ಷಿ, ತ್ರಪ್, ದ್ರಾಘಿ, ವೃಂದಾಃ (6-4-157) ಎಂಬ ಸೂತ್ರದಿಂದ ಸ್ಥ ಆದೇಶ ಇಲ್ಲಿ ನಪುಂಸಕಲಿಂಗ ಸಕಾರಾಂತ ಸ್ಥೇಯಃ ಸ್ಥೇಯಸೀ ಸ್ಥೇಯಾಂಸಿ ಇತ್ಯಾದಿ ರೂಪ. 'ಹೈಯಂಗವೀನಂ, ಎಂಬಲ್ಲಿ 'ಹೈಯಂಗವೀನಂ ಸಂಜ್ಞಾಯಾಂ' (5-2-23) ಎಂಬ ಸೂತ್ರದಿಂದ ಹ್ಯೋ ಗೋದೋಹ (ನಿನ್ನೆ ಕರೆದ ಹಾಲು) ಎಂಬ ಶಬ್ದಕ್ಕೆ ಹಿಯಂಗು ಎಂಬ ಆದೇಶ ಬರುತ್ತದೆ. ವಿಕಾರಾರ್ಥದಲ್ಲಿ ಖಞ್ ಪ್ರತ್ಯಯವೂ ಬರುತ್ತದೆ. ಇವೆರಡರ ನಿಪಾತ ಬರುತ್ತದೆ. ಇಲ್ಲಿ ದೋಹ್ಯವೆಂದರೆ ದುಹತೇ ಇತಿ ದೋಹಃ ಅಂದರೆ ಕ್ಷೀರಂ ಹಾಲು. ಹ್ಯೋ ಗೋದೋಹಸ್ಯ ವಿಕಾರಃ, ನಿನ್ನೆ ಕರೆದ ಹಾಲನ್ನು ಕಡೆದು ತೆಗೆದ ಬೆಣ್ಣೆ (ನವನೀತಂ) ಎಂದ ಅರ್ಥ. ಆ ಬೆಣ್ಣೆ ಕಾಸಿದ ತುಪ್ಪವನ್ನೂ ಹೈಯಂಗವೀನವೆಂದು ಹೇಳುತ್ತಾರೆ.**

**ಕ್ರಿಯಾಪದ—** ಭಾ ದೀಪ್ತೌ ಅಕರ್ಮಕ ಅನಿಟ್ ಪರಸ್ಮೈಪದೀ ಲಟ್ ಪ್ರಥಮಪುರುಷೇ ಏಕವಚನೇ 'ಭಾತಿ' ಇತಿ ರೂಪಮ್ ।

**ಕೋಶ—** ವಿಲೀನಂ ಎಂಬಲ್ಲಿ ಲೀದ್ರವೀಕರಣೇ ಎಂಬ ಧಾತುವಿಗೆ ಕ್ತಪ್ರತ್ಯಯ 'ತಕ್ಕೆ' ನ ಆದೇಶ. ಭೀರೂಣಾಂ ಎಂಬಲ್ಲಿ ಭೀರು = ಎಂದರೆ ಅಂಜುಬುರುಕ, ಹೇಡಿ. "ಅಧೀರೇ, ಕಾತರತ್ರಸ್ತೌ ಭೀರುಭೀರುಕಭೀಲುಕಾಃ" ಎಂದು ಅಮರ.

**ಪ್ರಯೋಗ—** ಹೈಯಂಗವೀನಂ ಸ್ಥೇಯಃ ಭಾತಿ (ಕರ್ತರಿ) ।
ಹೈಯಂಗವೀನೇನ ಸ್ಥೇಯಸಾ ಭಾಯತೇ (ಭಾವೇ) ।

★ ★ ★

**ಅವತಾರಿಕಾ—** ನಾವು ದ್ವೈತಿಗಳ ಭಯದಿಂದ ವಿಷಾದ ಪಡುವುದಕ್ಕೆ ಕಾರಣವಿಲ್ಲವೆಂದು ಹೇಳುತ್ತಾರೆ.

**ಯೇಷಾಂ ವಿದ್ಯಾ ಶಾಂಕರೀ ಶಂಕರೀ ನೋ**
**ದೇವಾದೀನಾಂ ಬಾಧ್ಯತಾಂ ಸಾಧಯಂತೀ ।**
**ಶೌಕ್ರೀವಾಲಂ ಲಜ್ಜಯೇದ್ದೇವಪೂಜ್ಯಂ**
**ತೇಷಾಮೇಷಾಂ ಸನ್ನಿಧೌ ಕೋ ವಿಷಾದಃ ॥ 19 ॥**

**ಪದಚ್ಛೇದ—** ಯೇಷಾಂ, ವಿದ್ಯಾ, ಶಾಂಕರೀ, ಶಂಕರೀ, ನಃ, ದೇವಾದೀನಾಂ, ಬಾಧ್ಯತಾಂ, ಸಾಧಯಂತೀ, ಶೌಕ್ರೀ, ಇವ, ಅಲಂ, ಲಜ್ಜಯೇತ್, ದೇವಪೂಜ್ಯಂ, ತೇಷಾಂ, ಏಷಾಂ, ಸನ್ನಿಧೌ, ಕಃ, ವಿಷಾದಃ ।

**ಅನ್ವಯ—** ಯೇಷಾಂ ನಃ ಶಂಕರೀ ದೇವಾದೀನಾಂ ಬಾಧ್ಯತಾಂ ಸಾಧಯಂತೀ ಶಾಂಕರೀ ವಿದ್ಯಾ ದೇವಪೂಜ್ಯಂ ಶೌಕ್ರೀ ಇವ ಲಜ್ಜಯೇತ್, ತೇಷಾಂ ಏಷಾಂ ಸನ್ನಿಧೌ ವಿಷಾದಃ ಕಃ ।

**ಅನ್ವಯಾರ್ಥ—**

ಯೇಷಾಂ = ಯಾವ ಪದ್ಮತೀರ್ಥಾದಿಗಳ (ಅವರಲ್ಲಿರುವ)
ನಃ = ನಮಗೆ
ಶಂಕರೀ = ಕ್ಷೇಮವನ್ನುಂಟು ಮಾಡುವ
ದೇವಾದೀನಾಂ = ದೇವತೆಗಳೇ ಮೊದಲಾದವರಿಗೆ
ಬಾಧ್ಯತಾಂ = ಬಾಧಕ ಜ್ಞಾನವಿಷಯತ್ವವನ್ನು (ಅನಿರ್ವಚನೀಯತ್ವವನ್ನು)
ಸಾಧಯಂತೀ = ಸಮರ್ಥಿಸುವ
ಶಾಂಕರೀ ವಿದ್ಯಾ = ಶಂಕರಾಚಾರ್ಯರಿಂದ ಉಪದಿಷ್ಟವಾದ ವಿದ್ಯೆಯು
ದೇವಪೂಜ್ಯಂ = ಬೃಹಸ್ಪತ್ಯಾಚಾರ್ಯರನ್ನು
ಶೌಕ್ರೀ ಇವ = ಶುಕ್ರಾಚಾರ್ಯರ ಮಾಟದ ವಿದ್ಯೆಯಂತೆ
ಲಜ್ಜಯೇತ್ = ನಾಚಿಕೆಗೊಳಿಸಿಯೇ ತೀರುತ್ತದೆಯೋ
ತೇಷಾಂ ಏಷಾಂ = ಅಂತಹ ಈ ಪದ್ಮತೀರ್ಥಾದಿಗಳ
ಸನ್ನಿಧೌ = ಸಮೀಪದಲ್ಲಿ
ವಿಷಾದಃ ಕಃ = ವ್ಯಸನವು ಯಾವುದು ? (ಯಾವ ವ್ಯಥೆಗೂ ಅವಕಾಶವಿಲ್ಲ).

**ತಾತ್ಪರ್ಯ—** ಈ ಶಂಕರಾಚಾರ್ಯರು ರಚಿಸಿರುವ ಶಾರೀರಿಕ ಭಾಷ್ಯ (ಬ್ರಹ್ಮಮೀಮಾಂಸಾಶಾಸ್ತ್ರ) ಮೊದಲಾದ ಅನೇಕ ಗ್ರಂಥಗಳಿವೆ. ಅವರ ಶಾಸ್ತ್ರವು ಪಶುಪಕ್ಷಿ ಮುಂತಾದವುಗಳು, ಮನುಷ್ಯರು, ಎಲ್ಲಾ ದೇವತೆಗಳು ಬ್ರಹ್ಮ, ವಿಷ್ಣು,

ಮಹೇಶ್ವರ ಮುಂತಾದವರೂ ಕೂಡ ಮಿಥ್ಯಾ ಅಂದರೆ ಬ್ರಹ್ಮಾಪರೋಕ್ಷಜ್ಞಾನವಾದ ಕೂಡಲೇ ಇವರೆಲ್ಲರೂ ಇವೆಲ್ಲವೂ ಸುಳ್ಳು ಎಂಬ ಜ್ಞಾನವುಂಟಾಗುತ್ತದೆ ಎಂದು ಸಮರ್ಥಿಸುತ್ತದೆ. ಜೀವಬ್ರಹ್ಮರ ಐಕ್ಯ ಒಂದೇ ಅಬಾಧ್ಯ, ಸತ್ಯ. ಉಳಿದ ಎಲ್ಲವೂ ಕಪ್ಪೆಚಿಪ್ಪಿನಲ್ಲಿ ಕಂಡ ಬೆಳ್ಳಿಯಂತೆ ಸುಳ್ಳು, ಬಾಧಿತವಾಗುತ್ತವೆ ಎಂದು ನಮ್ಮ ಆಚಾರ್ಯರ ಸಿದ್ಧಾಂತ. ಶುಕ್ರಾಚಾರ್ಯರ ಆಭಿಚಾರಿಕ ವಿದ್ಯೆಯು (ಮಾಟದ ವಿದ್ಯೆಯು) ಬೃಹಸ್ಪತ್ಯಾಚಾರ್ಯರ ಸಾತ್ವಿಕ ವಿದ್ಯೆಯನ್ನು ಸೋಲಿಸುತ್ತದೆ. ಬೃಹಸ್ಪತ್ಯಾಚಾರ್ಯರ ವಿದ್ಯೆಯಿಂದ ರಕ್ಷಿತರಾದ ದೇವತೆಗಳು ಮತ್ತು ಅವರ ಅನುಯಾಯಿಗಳಾದ ಗಂಧರ್ವರು ಯಕ್ಷರು ಮುಂತಾದವರನ್ನು ಶುಕ್ರಾಚಾರ್ಯರ ವಿದ್ಯೆಯು ಪೀಡಿಸಿ ಸೋಲಿಸುತ್ತದೆ. ಬೃಹಸ್ಪತ್ಯಾಚಾರ್ಯರ ವಿದ್ಯೆಯು ಆಗ ಏನನ್ನು ಮಾಡಲೂ ಸಮರ್ಥವಾಗುವುದಿಲ್ಲ. ಅದರಂತೆ ಈ ಶಂಕರ ವಿದ್ಯೆಯೂ ಕೂಡ ಬೃಹಸ್ಪತ್ಯಾಚಾರ್ಯರ ವಿದ್ಯೆಯನ್ನೂ ಸೋಲಿಸುತ್ತದೆ. ನನ್ನ ವಿದ್ಯೆಗಿಂತ ಈ ವಿದ್ಯೆಯೇ ಶ್ರೇಷ್ಠ ಎಂಬ ಜ್ಞಾನವನ್ನು ಬೃಹಸ್ಪತ್ಯಾಚಾರ್ಯರಿಗೂ ಉಂಟುಮಾಡಿಕೊಟ್ಟು ಅವರನ್ನು ನಾಚಿಕೆಗೊಳಿಸುತ್ತದೆ. ಇಂತಹ ವಿದ್ಯೆಯನ್ನು ಬಲ್ಲ ಪದ್ಮತೀರ್ಥಾದಿಗಳಿರುವಾಗ ನಮಗೇತಕೆ ಭಯ ?

**ವಿಶೇಷಾಂಶ—** 'ಬಾಧ್ಯತಾಂ ಬಾಧಜ್ಞಾನಗಮ್ಯತಾಂ ಬಾಧ್ಯತಾಂ ಚ' ಎಂದು ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದರಿಂದ 'ಅದ್ವೈತ ಜ್ಞಾನದಿಂದ ಈ ಪ್ರಪಂಚವೆಲ್ಲವೂ ಸುಳ್ಳು, ಎಂದೂ ಇರಲಿಲ್ಲ ಎಂಬ ಬಾಧಜ್ಞಾನವು ಬರುತ್ತದೆ. ಅದಕ್ಕೆ ಪ್ರಪಂಚವು ವಿಷಯವಾಗುತ್ತದೆ. ಇದೇ ಮಿಥ್ಯಾತ್ವ ಎಂಬ ಅಭಿಪ್ರಾಯವು ತಿಳಿದುಬರುತ್ತದೆ. ಶುಕ್ರಾಚಾರ್ಯರ ವಿದ್ಯೆಯಿಂದ ದೇವತೆಗಳು, ದೇವತೆಗಳ ಅನುಚರರಿಗೆ ಪೀಡೆಯುಂಟಾಗದಂತೆ ಮಾಡಲು ಬೃಹಸ್ಪತ್ಯಾ-ಚಾರ್ಯರು ಅಸಮರ್ಥರಾದ್ದರಿಂದ ದೇವತೆಗಳು ಪೀಡಿತರಾಗುತ್ತಾರೆ ಎಂದೂ ಅರ್ಥ.

**ವಿಗ್ರಹ—**

**ಶಾಂಕರೀ—** ಶಂಕರಸ್ಯ ಇಯಂ ಶಾಂಕರೀ ।

**ಶಂಕರೀ—** ಶಂ ಕರೋತಿ ಇತಿ ಶಂಕರೀ ।

**ದೇವಾದೀನಾಂ—** ದೇವಾಃ ಆದಯಃ ಯೇಷಾಂ ತೇ ದೇವಾದಯಃ, ತೇಷಾಂ ದೇವಾದೀನಾಂ ।

**ಬಾಧ್ಯತಾಂ—** ಬಾಧಿತುಂ ಯೋಗ್ಯಃ ಬಾಧ್ಯಃ, ಬಾಧ್ಯಸ್ಯ ಭಾವಃ ಬಾಧ್ಯತಾ, ತಾಂ ಬಾಧ್ಯತಾಂ ।

**ಶೌಕ್ರೀ—** ಶುಕ್ರಸ್ಯ ಇಯಂ ಶೌಕ್ರೀ ।

**ದೇವಪೂಜ್ಯಂ—** ದೇವೈಃ ಪೂಜ್ಯಃ ದೇವಪೂಜ್ಯಃ, ತಂ ದೇವಪೂಜ್ಯಂ ।

**ಕ್ರಿಯಾಪದ—** ಲಜ್ಜಯೇತ್ ಈ ಧಾತುವಿನ ರೂಪಗಳು ಇದೇ ಸರ್ಗದ 'ಪ್ರಶ್ನಃ ಪೃಷ್ಟಃ' ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ತೋರಿಸಲ್ಪಟ್ಟಿವೆ.

**ಪ್ರಯೋಗ—** ಯೇಷಾಂ ನಃ ಶಂಕರ್ಯಾ ದೇವಾದೀನಾಂ ಬಾಧ್ಯತಾಂ ಸಾಧಯಂತ್ಯಾ ಶಾಂಕರ್ಯಾ ವಿದ್ಯಯಾ ದೇವಪೂಜ್ಯಃ ಶೌಕ್ರ್ಯಾ ಇವ ಲಜ್ಜ್ಯತೇ ತೇಷಾಂ ಏಷಾಂ (ಪದ್ಮತೀರ್ಥಾದೀನಾಂ) ಸನ್ನಿಧೌ ವಿಷಾದೇನ ಕೇನ ಭೂಯತೇ ।

★ ★ ★

**ಅವತಾರಿಕಾ—** ಒಂದು ವೇಳೆ ಅದ್ವೈತವಾದದಿಂದ ಬ್ರಹ್ಮನ ಸಗುಣತ್ವ ಮತ್ತು ಜಗತ್ತಿನ ಸತ್ಯತ್ವವನ್ನು ನಿರಾಕರಿಸಲು ಆಗದಿದ್ದರೂ ಬೇರೆ ಉಪಾಯದಿಂದ ನಮ್ಮ ಕಾರ್ಯವನ್ನು ಸಾಧಿಸಬಹುದು ಎಂದು ಹೇಳುತ್ತಾರೆ.

**ಯದ್ಯದ್ವೈತಂ ಕರ್ಕಶೈರ್ಗೌಣತರ್ಕೈ-**
**ರುದ್ಧಂ ಸಾಧ್ಯಂ ನೈವ ಭಾತ್ಯಸ್ತು ತಾವತ್ ।**
**ಷಟ್ಕರ್ಮಜ್ಞೈರ್ದಿವ್ಯಮಂತ್ರೌಷಧಾಢ್ಯೈ-**
**ರೇತೈರ್ಗುಪ್ತಾನ್ನೋ ನ ಜೇತಾ ಹಿ ಕೋಽಪಿ ॥ 20 ॥**

ಪದಚ್ಛೇದ— ಯದಿ, ಅದ್ವೈತಂ, ಕರ್ಕಶೈಃ, ಗೌಣತರ್ಕೈಃ, ರುದ್ಧಂ, ಸಾಧ್ಯಂ, ನ ಏವ, ಭಾತಿ, ಅಸ್ತು, ತಾವತ್, ಷಟ್ಕರ್ಮಜ್ಞೈಃ, ದಿವ್ಯಮಂತ್ರೌಷಧಾಢ್ಯೈಃ, ಏತೈಃ ಗುಪ್ತಾನ್, ನಃ, ನ, ಜೇತಾ, ಹಿ, ಕಃ ಅಪಿ ।

ಅನ್ವಯ— ಕರ್ಕಶೈಃ ಗೌಣತರ್ಕೈಃ ರುದ್ಧಂ ಅದ್ವೈತಂ ಸಾಧ್ಯಂ ನ ಏವ ಭಾತಿ, ಅಸ್ತು ತಾವತ್ ಷಟ್ಕರ್ಮಜ್ಞೈಃ, ದಿವ್ಯಮಂತ್ರೌಷಧಾಢ್ಯೈಃ ಏತೈಃ ಗುಪ್ತಾನ್ ನಃ ಜೇತಾ ಕಃ ಅಪಿ ನ ಹಿ ।

ಅನ್ವಯಾರ್ಥ—

ಕರ್ಕಶೈಃ = ಕಠಿಣವಾದ (ನಿರಾಕರಿಸಲು ಸಾಧ್ಯವಿಲ್ಲದ)
ಗೌಣತರ್ಕೈಃ = ಪರಮಾತ್ಮನ ಸಗುಣತ್ವವನ್ನು ಸಾಧಿಸುವ ಅನುಮಾನಗಳಿಂದ
ರುದ್ಧಂ = ತಡೆಯಲ್ಪಟ್ಟ
ಅದ್ವೈತಂ = ಜೀವಬ್ರಹ್ಮೈಕ್ಯವು
ಸಾಧ್ಯಂ = ಸಾಧಿಸಲು ಶಕ್ಯವಾದುದು,
ನೈವ ಯದಿ ಭಾತಿ = ಅಲ್ಲವೇ ಅಲ್ಲವೆಂದು ತೋರುವುದಾದರೆ,
ಅಸ್ತು ತಾವತ್ = ಅದು ಹಾಗೆಯೇ ಇರಲಿ
ಷಟ್ಕರ್ಮಜ್ಞೈಃ = ಚಾಲನ (ಸ್ಥಳದಿಂದ ಕದಲಿಸುವಿಕೆ) ಮುಂತಾದ ಅಭಿಚಾರದ ಆರು ವಿಧವಾದ ಕಾರ್ಯಗಳನ್ನು ತಿಳಿದಿರುವ
ದಿವ್ಯಮಂತ್ರೌಷಧಾಢ್ಯೈಃ = ಪ್ರಭಾವಶಾಲಿಗಳಾದ ಮಂತ್ರ ಮತ್ತು ಔಷಧಗಳಿಂದ ಸಂಪನ್ನರಾದ
ಏತೈಃ = ಈ ಪದ್ಮತೀರ್ಥಾದಿಗಳಿಂದ
ಗುಪ್ತಾನ್ = ರಕ್ಷಿತರಾದ
ನಃ = ನಮ್ಮನ್ನು
ಜೇತಾ = ಜಯಿಸುವವನು
ಕಃ ಅಪಿ = ಯಾವನೂ
ನ ಹಿ (ಅಸ್ತಿ) = ಇಲ್ಲ.

ತಾತ್ಪರ್ಯ— ನಾವು ಜೀವಬ್ರಹ್ಮೈಕ್ಯವನ್ನು ಹೇಳಿದಾಗ ದ್ವೈತಿಗಳು ನಿರಾಕರಿಸಲು ಸಾಧ್ಯವಿಲ್ಲದ ಕಠಿನವಾದ ಅನುಮಾನಗಳನ್ನು ಪ್ರಯೋಗಿಸಿ ಬ್ರಹ್ಮವು ಸಗುಣ ಎಂದು ಸಮರ್ಥಿಸುತ್ತಾರೆ. 'ಬ್ರಹ್ಮ ಸಗುಣಂ ಭವಿತುಂ ಅರ್ಹತಿ ವಸ್ತುತ್ವಾತ್ ಘಟವತ್, ಬ್ರಹ್ಮವು ಗುಣಗಳಿಂದ ಪೂರ್ಣವಾಗಿರಲೇಬೇಕು. ವಸ್ತುವಾಗಿರುವುದರಿಂದ ಘಟದಂತೆ' ಇತ್ಯಾದಿ ಅನುಮಾನಗಳಿಂದ ಅವರು ಬ್ರಹ್ಮನಿಗೆ ಸಗುಣತ್ವವನ್ನು ಸಮರ್ಥಿಸಿದಾಗ ನಾವು ಹೇಳುವ ಜೀವ ಬ್ರಹ್ಮಾಭೇದರೂಪವಾದ ಅದ್ವೈತವು ತಡೆಯಲ್ಪಡುತ್ತದೆ. ಅನಂತಗುಣಪರಿಪೂರ್ಣನಾದ ಬ್ರಹ್ಮನಿಗೂ ಅಲ್ಪಗುಣನಾದ ಜೀವನಿಗೂ ಐಕ್ಯವು ಕೂಡುವುದಿಲ್ಲ ಎಂದು ಸಮರ್ಥಿಸಿದಾಗ ಅದ್ವೈತವು ಖಂಡಿತವಾಗುತ್ತದೆ. ಆದ್ದರಿಂದ ಅದ್ವೈತ ಸಿದ್ಧಾಂತವನ್ನು ಸಮರ್ಥಿಸಲು ಸಾಧ್ಯವಿಲ್ಲವೆಂದು ತೋರುತ್ತದೆ. ಆದರೆ ಅದು ಹಾಗೇ ಇರಲಿ. ನಾವು ಪ್ರಮಾಣಗಳಿಂದ ಅದ್ವೈತವನ್ನು ಸಾಧಿಸಲು ಆಗದಿದ್ದರೂ ತೊಂದರೆಯಿಲ್ಲ. ಚಾಲನ, ವಶೀಕರಣ, ಸ್ತಂಭನ, ವಿದ್ವೇಷಣ, ಉಚ್ಚಾಟನ, ಮಾರಣ, ಎಂಬ ಅಭಿಚಾರದ ಆರು ವಿಧವಾದ ಕರ್ಮಗಳನ್ನು ಈ ಪೂಜ್ಯರಾದ ಪದ್ಮತೀರ್ಥಾದಿಗಳು ಬಲ್ಲರು. ಇವರಿಗೆ ವೀರ್ಯವತ್ತಾದ ಮಂತ್ರಗಳೂ ದಿವ್ಯವಾದ ಔಷಧಗಳೂ ತಿಳಿದಿವೆ. ಇವುಗಳನ್ನುಪಯೋಗಿಸಿ ಇವರು ಶತ್ರುಗಳ ಮೇಲೆ ಚಾಲನಾದಿ ಅಭಿಚಾರಿಕ ಕೃತ್ಯಗಳನ್ನು ಮಾಡಿದಾಗ ಅವರೆಲ್ಲರೂ ಸೋಲುತ್ತಾರೆ. ಅವರಿಗೆ ಸ್ಥಾನಭ್ರಂಶ

ವಾಕ್‌ಸ್ತಂಭನ ಇತ್ಯಾದಿಗಳು ಉಂಟಾಗಿ ಅವರು ನಿರುತ್ತರರಾಗುತ್ತಾರೆ. ಆಗ ನಮಗೇ ಜಯ ಉಂಟಾಗುತ್ತದೆಯಲ್ಲವೇ ! ಇವರು ನಮ್ಮನ್ನು ಕಾಪಾಡುತ್ತಿರುವಾಗ ನಮ್ಮನ್ನು ಯಾವನೂ ಸೋಲಿಸಲಾರನು. ಆದುದರಿಂದ ಹೆದರಿಕೆಗೆ ಕಾರಣವಿಲ್ಲ.

**ವಿಶೇಷಾಂಶ—** ಚಾಲನ ವಶೀಕರಣ ಸ್ತಂಭನ ವಿದ್ವೇಷಣ ಉಚ್ಚಾಟನ ಮಾರಣಾನಿ ಷಟ್‌ಕರ್ಮಾಣಿ ಎಂದು ಭಾವಪ್ರಕಾಶಿಕಾ ಸ್ಥಾನದಿಂದ ಕದಲಿಸುವುದು, ಸ್ವಾಧೀನ ಮಾಡಿಕೊಳ್ಳುವುದು, ವಾಕ್‌ಸ್ತಂಭನಾದಿಗಳನ್ನು ಮಾಡುವುದು. ಎಲ್ಲರೂ ದ್ವೇಷಿಸುವಂತೆ ಮಾಡುವುದು, ಸ್ಥಳವನ್ನು ಬಿಟ್ಟು ಓಡಿಸುವುದು ಕೊಲ್ಲುವುದು ಅಥವಾ ಕೊಲ್ಲಿಸುವುದು. ಇವೇ ಅಭಿಚಾರದ ಆರು ಕರ್ಮಗಳು.

**ವಿಗ್ರಹ—**

**ಗೌಣತರ್ಕೈಃ—** ಗುಣಾನಾಂ ಇಮೇ ಗೌಣಾಃ, ಗೌಣಾಶ್ಚ ತೇ ತರ್ಕಾಶ್ಚ ಗೌಣತರ್ಕಾಃ, ತೈಃ ಗೌಣತರ್ಕೈಃ ।

**ಷಟ್‌ಕರ್ಮಜ್ಞೈಃ—** ಷಟ್ ಚ ತಾನಿ ಕರ್ಮಾಣಿ ಚ ಷಟ್‌ಕರ್ಮಾಣಿ, ಷಟ್‌ಕರ್ಮಾಣಿ ಜಾನಂತಿ ಇತಿ ಷಟ್‌ಕರ್ಮಜ್ಞಾಃ, ತೈಃ ಷಟ್‌ಕರ್ಮಜ್ಞೈಃ ।

**ದಿವ್ಯಮಂತ್ರೌಷಧಾಢ್ಯೈಃ—** ಮಂತ್ರಾಶ್ಚ ಔಷಧಾನಿ ಚ ಮಂತ್ರೌಷಧಾನಿ, ದಿವಿ ಭವಾನಿ ದಿವ್ಯಾನಿ ಚ ತಾನಿ ಮಂತ್ರೌಷಧಾನಿ ಚ ದಿವ್ಯಮಂತ್ರೌಷಧಾನಿ, ದಿವ್ಯಮಂತ್ರೌಷಧೈಃ ಆಢ್ಯಾಃ ದಿವ್ಯಮಂತ್ರೌಷಧಾಢ್ಯಾಃ, ತೈಃ ದಿವ್ಯಮಂತ್ರೌಷಧಾಢ್ಯೈಃ ।

**ಕ್ರಿಯಾಪದ—** ಅಸ್ತು ಅಸಭುವಿ ಅಕರ್ಮಕ ಪರಸ್ಮೈಪದಿ ಲೋಟ್ ಪ್ರಥಮಪುರುಷೇ ಏಕವಚನೇ 'ಅಸ್ತು' ಇತಿ ರೂಪಮ್ ।

ಅಸ್ತು ಸ್ತಾತ್ ಸ್ತಾಂ ಸಂತು, ಏಧಿ ಸ್ತಾತ್ ಸ್ತಂ ಸ್ತ, ಅಸಾನಿ ಅಸಾವ ಅಸಾಮ ॥

**ಪ್ರಯೋಗ—** ಕರ್ಕಶೈಃ ಗೌಣತರ್ಕೈಃ ರುದ್ಧೇನ ಅದ್ವೈತೇನ ಯದಿ ಸಾಧ್ಯೇನ ನೈವ ಭಾಯತೇ ತಥಾ ಭೂಯತಾಂ ತಾವತ್, ಷಟ್ ಕರ್ಮಜ್ಞೈಃ ದಿವ್ಯಮಂತ್ರೌಷಧಾಢ್ಯೈಃ ಏತೈಃ ಗುಪ್ತಾನ್ ನಃ ಜೇತ್ರಾ ಕೇನಾಪಿ ನ ಭೂಯತೇ ಹಿ ।

**ವಿಶೇಷಾಂಶ—** ಜೇತಾ ಎಂಬುದು ಜಿ ಅಭಿಭವೇ ಎಂಬ ಧಾತುವಿನ ಲುಟ್‌ರೂಪ ಎಂದು ಛಲಾರೀಯದಲ್ಲಿದೆ. ಆ ಪಕ್ಷದಲ್ಲಿ ಜೇತಾ ಜೇತಾರೌ ಜೇತಾರಃ, ಜೇತಾಸಿ ಜೇತಾಸ್ಥಃ ಜೇತಾಸ್ಥ, ಜೇತಾಸ್ಮಿ ಜೇತಾಸ್ವಃ ಜೇತಾಸ್ಮಃ ಎಂದು ರೂಪಗಳು.

★ ★ ★

**ಅವತಾರಿಕಾ—** ಹಾಗಾದರೆ ನಾವು ಈಗ ಸುಮ್ಮನೆ ಇರಬೇಕೆ? ಎಂದರೆ ಇಲ್ಲವೆಂದು ಹೇಳುತ್ತಾರೆ.

**ಯದ್ಯಪ್ಯೇವಂ ನ ಹ್ಯುಪೇಕ್ಷ್ಯೋ ವಿಪಕ್ಷಃ**
**ಕಿಂತು ಪ್ರಾಪ್ತೋ ನಾಧುನಾಕ್ರಂದಕಾಲಃ**
**ಅಪ್ಯದ್ವಂದ್ವಸ್ವಾತ್ಮಬೋಧಪ್ರತೀತ್ಯೈಃ**
**ಆಚಾರ್ಯೈರ್ಯಚ್ಛಂಕ್ಯತೇ ಶಂಕರಾದ್ಯೈಃ ॥ 21 ॥**

**ಪದಚ್ಛೇದ—** ಯದಿ, ಅಪಿ, ಏವಂ, ನ, ಹಿ, ಉಪೇಕ್ಷ್ಯಃ, ವಿಪಕ್ಷಃ, ಕಿಂ, ತು, ಪ್ರಾಪ್ತಃ, ನ, ಅಧುನಾ ಆಕ್ರಂದಕಾಲಃ, ಅಪಿ ಅದ್ವಂದ್ವಸ್ವಾತ್ಮಬೋಧಪ್ರತೀತ್ಯೈಃ, ಆಚಾರ್ಯೈಃ, ಯತ್, ಶಂಕ್ಯತೇ ಶಂಕರಾದ್ಯೈಃ ।

**ಅನ್ವಯ—** ಯದ್ಯಪಿ, ಏವಂ ವಿಪಕ್ಷಃ ಉಪೇಕ್ಷ್ಯಃ ನ ಹಿ । ಕಿಂತು ಅಧುನಾ ಆಕ್ರಂದಕಾಲಃ ನ ಪ್ರಾಪ್ತಃ ಅದ್ವಂದ್ವಸ್ವಾತ್ಮಬೋಧಪ್ರತೀತ್ಯೈಃ ಶಂಕರಾದ್ಯೈಃ, ಆಚಾರ್ಯೈಃ ಅಪಿ ಯತ್ ಶಂಕ್ಯತೇ ।

ಅನ್ವಯಾರ್ಥ—

ಯದಿ ಅಪಿ = ಹೀಗಿದ್ದರೂ (ವಿಚಾರ ಮಾಡಿದರೆ)

ಏವಂ = ಹೀಗೆ

ವಿಪಕ್ಷಃ = ಪರಸಿದ್ಧಾಂತವು

ಉಪೇಕ್ಷ್ಯಃ ನ ಹಿ = ಉಪೇಕ್ಷಿಸಲು (ಉದಾಸೀನ ಮಾಡಲು) ಯೋಗ್ಯವಾದುದು,

ಕಿಂತು = ಆದರೆ

ಅಧುನಾ = ಈಗ

ಆಕ್ರಂದಕಾಲಃ = 'ಹೋ ಹಾ' ಹಾಳಾಗಿಹೋಯಿತು ಎಂದು ಗೋಳಾಡುವ ಸಮಯವು,

ನ ಪ್ರಾಪ್ತಃ = ಒದಗಿಲ್ಲ.

ಅದ್ವಂದ್ವ = ಅಸದೃಶವಾದ

ಸ್ವಾತ್ಮಬೋಧ = ಜೀವಬ್ರಹ್ಮರು ಅಭಿನ್ನರು ಎಂಬ ಜ್ಞಾನದಲ್ಲಿ,

ಪ್ರತೀತ್ಯೈಃ = ಪ್ರಖ್ಯಾತರಾದ

ಶಂಕರಾದ್ಯೈಃ = ಶಂಕರರೇ ಮೊದಲಾದ

ಆಚಾರ್ಯೈಃ ಅಪಿ = ಸಿದ್ಧಾಂತ ಪ್ರವರ್ತಕರಾದ ಆದಿಗುರುಗಳಿಂದಲೂ

ಯತ್ = ಯಾವ ಸಿದ್ಧಾಂತದ ದೆಸೆಯಿಂದ

ಶಂಕ್ಯತೇ = ಸಂದೇಹ ಹೊಂದಲ್ಪಡುತ್ತದೆ (ಕಳವಳಗೊಳ್ಳಲ್ಪಡುತ್ತದೆ) ಅಥವಾ

ಅದ್ವಂದ್ವ = ದ್ವಿತೀಯ ರಹಿತವಾದ (ಸಮಸ್ತಭೇದಪ್ರಪಂಚವು ವಿಲೀನ ಹೊಂದಿ ಜಗತ್ ಸಂಬಂಧವಿಲ್ಲದಿರುವ)

ಸ್ವಾತ್ಮ = ಶುದ್ಧವಾದ ನಿರ್ಗುಣಾತ್ಮನ

ಬೋಧ = ಜ್ಞಾನದಿಂದ

ಪ್ರತೀತ್ಯೈಃ = ಪ್ರಸಿದ್ಧರಾದ ಎಂದು ಅರ್ಥ. ಉಳಿದ ಭಾಗದ ಅರ್ಥವನ್ನು ಹಿಂದಿನಂತೆಯೇ ಇಟ್ಟುಕೊಳ್ಳಬೇಕು. ಅಥವಾ

ಅದ್ವಂದ್ವಃ = ಅಸದೃಶರಾದ

ಸ್ವಾತ್ಮಬೋಧಃ = ಸ್ವತಂತ್ರನಾದ, ಸ್ವಾಮಿಯಾದ ಶ್ರೀಹರಿಯ ಜ್ಞಾನವುಳ್ಳ ಶ್ರೀಮಧ್ವಾಚಾರ್ಯರು

ಪ್ರತೀತ್ಯೈಃ = ಪ್ರಸಿದ್ಧರಾದ ಶಂಕರಾದ್ಯೈಃ

ಆಚಾರ್ಯೈಃ = ಶಂಕರಾಚಾರ್ಯರೇ ಮೊದಲಾದವರಿಂದ

ಯತ್ = ಯಾವ ಕಾರಣದಿಂದ

ಶಂಕ್ಯತೇ = ಜಯಿಸಲು ಸಾಧ್ಯವೇ ಇಲ್ಲವೇ ಎಂದು ಶಂಕಿಸಲ್ಪಡುತ್ತಾರೋ ಎಂದು ಅರ್ಥವು.

ಈ ಪಕ್ಷದಲ್ಲಿ ಅಪ್ಯದ್ವಂದ್ವಃ ಸ್ವಾತ್ಮಬೋಧಃ ಪ್ರತೀತ್ಯೈಃ ಎಂದು ಪದವನ್ನು ಇಟ್ಟುಕೊಳ್ಳಬೇಕು. ಪದಗಳನ್ನು ಹೇಳುವಾಗ 'ಅದ್ವಂದ್ವಃ ಸ್ವಾತ್ಮಬೋಧಃ ಪ್ರತೀತ್ಯೈಃ' ಎಂದು ವಿಸರ್ಗಗಳು ಸೇರಿದರೂ ವ್ಯತ್ಯಾಸವು ಗೊತ್ತಾಗುವುದಿಲ್ಲ. ಆದುದರಿಂದ ಇದು ಒಂದು ಉಚ್ಚಾರಣಶ್ಲೇಷವೆಂಬ ವಿಚಿತ್ರ ಶೈಲಿ.

ತಾತ್ಪರ್ಯ— ನಮ್ಮನ್ನು ಬಾಲನಾದಿ ಷಟ್ಕರ್ಮಜ್ಞರಾದ ಈ ಪದ್ಮತೀರ್ಥಾದಿಗಳು ಕಾಪಾಡುತ್ತಾರೆ. ಆದ್ದರಿಂದ ನಮ್ಮನ್ನು ಜಯಿಸಲು ಯಾರಿಗೂ ಸಾಧ್ಯವಿಲ್ಲ ಎಂದು ಹೇಳಿದರೂ ನಾವು ವಿರುದ್ಧ ಸಿದ್ಧಾಂತವನ್ನು ಉಪೇಕ್ಷಿಸಬಾರದು.

ಯಥಾಶಕ್ತಿಯಾಗಿ ನಾನಾ ಉಪಾಯಗಳಿಂದ ವಿಪಕ್ಷದವರನ್ನು ನಿರಾಕರಿಸುವ ಪ್ರಯತ್ನವನ್ನು ಮಾಡಬೇಕು. ಹಾಗಾದರೆ 'ಅಯ್ಯೋ ನಮ್ಮ ಗೋಳಾಟವನ್ನು ಕೇಳಿರಿ' ಎಂದು ಹೇಳಿದವನನ್ನು, 'ಹೀಗೆ ಶತ್ರುಗಳ ಹೆಸರನ್ನು ಕೇಳಿದ ಮಾತ್ರಕ್ಕೆ ಹೆದರುವವರಿಗಿಂತ ಬೆಂಕಿ ತಗಲಿದ ಮೇಲೆಯೇ ಕರಗುವ ಬೆಣ್ಣೆಯು ಎಷ್ಟೋ ಶ್ರೇಷ್ಠವಾದುದು' ಎಂದು ಏಕೆ ಆಕ್ಷೇಪಿಸಿದಿರಿ ಎಂದರೆ ಹೇಳುತ್ತೇವೆ. ''ಅತಿ ಸಮರ್ಥರಾದ ಪದ್ಮತೀರ್ಥಾದಿಗಳು ಇರುವಾಗ ನಾವು ಪ್ರತಿಪಕ್ಷಿಗಳನ್ನು ನೋಡಿದ ಮಾತ್ರಕ್ಕೆ ಅವರ ಹೆಸರನ್ನು ಕೇಳಿದ ಮಾತ್ರಕ್ಕೆ ಅಯ್ಯೋ! ಎಂದು ಗೋಳಾಡುವವರನ್ನು ಆಕ್ಷೇಪಿಸಿದೆವು. ಆದರೆ ವಿರುದ್ಧ ಸಿದ್ಧಾಂತಿಗಳನ್ನು ಉಪೇಕ್ಷಿಸಬಾರದು ಎಂದು ಈಗ ಹೇಳುತ್ತಿದ್ದೇವೆ. ಏಕೆಂದರೆ 'ಜೀವಬ್ರಹ್ಮರ ಐಕ್ಯಜ್ಞಾನವುಳ್ಳವರಲ್ಲಿ, ಅತ್ಯಂತ ಶ್ರೇಷ್ಠರು ಅವರಿಗೆ ಸಮಾನರೇ ಇಲ್ಲ' ಎಂದು ಪ್ರಸಿದ್ಧರಾದ ಶಂಕರಾಚಾರ್ಯರೇ ಮೊದಲಾದವರೂ ಕೂಡ ಈ ಭೇದವಾದಿಗಳನ್ನು ನಿರಾಕರಿಸಲು ಸಾಧ್ಯವಾಗುತ್ತದೆಯೇ ಇಲ್ಲವೇ ಎಂದು ಸಂದೇಹಿಸುತ್ತಾರೆ. ಆದುದರಿಂದ ಪ್ರಬಲವಾದ ವಿರುದ್ಧ ಪಕ್ಷವನ್ನು ಉಪೇಕ್ಷಿಸಬಾರದು. ನಮ್ಮಲ್ಲಿ ನಿರ್ಗುಣ ಬ್ರಹ್ಮ ಮತ್ತು ಸಗುಣಬ್ರಹ್ಮವೆಂದು ಬ್ರಹ್ಮವು ಎರಡು ವಿಧ. ಅವುಗಳಲ್ಲಿ ಎಲ್ಲಾ ಭೇದ ಪ್ರಪಂಚರಹಿತವಾದ ನಿರ್ವಿಶೇಷ ಬ್ರಹ್ಮವೇ ಶುದ್ಧವು, ಅದರ ಜ್ಞಾನವೇ ಮೋಕ್ಷಸಾಧನವು ಎಂದು ಸಿದ್ಧಾಂತವಿದೆ. ಶುದ್ಧ ಬ್ರಹ್ಮನ ಐಕ್ಯವು ತಮಗೆ ಇದೆ ಎಂಬ ದೃಢವಾದ ಜ್ಞಾನವುಳ್ಳವರೂ ಕೂಡ ಭೇದವಾದವನ್ನು ಖಂಡಿಸಲು ಸಾಧ್ಯವಿದೆಯೇ ಇಲ್ಲವೇ ಎಂದು ಸಂದೇಹಿಸುತ್ತಾರೆ. ಈ ಮಧ್ವಾಚಾರ್ಯರಾದರೋ ಸರ್ವತಂತ್ರಸ್ವತಂತ್ರನಾದ ಶ್ರೀಹರಿಯೇ ತನಗೆ ಸ್ವಾಮಿ ಎಂದು ದೃಢವಾದ ನಿಶ್ಚಯವುಳ್ಳವರು. ಅವರನ್ನು ಜಯಿಸುವುದು ನಮ್ಮವರಿಗೆ ಯಾರಿಗೂ ಸಾಧ್ಯವಿಲ್ಲವೆಂದೇ ನಮಗೆ ತೋರುತ್ತಿದೆ.

ವಿಗ್ರಹ—

**ಉಪೇಕ್ಷ್ಯಃ**— ಉಪೇಕ್ಷಿತುಂ ಯೋಗ್ಯಃ ಉಪೇಕ್ಷ್ಯಃ ।

**ಆಕ್ರಂದಕಾಲಃ**— ಆಕ್ರಂದಸ್ಯ ಕಾಲಃ ಆಕ್ರಂದಕಾಲಃ ।

**ಅದ್ವಂದ್ವಸ್ವಾತ್ಮಬೋಧಪ್ರತೀತೈಃ**— ನ ವಿದ್ಯತೇ ದ್ವಂದ್ವಂ ಯಸ್ಯ ಸಃ ಅದ್ವಂದ್ವಃ, ಸ್ವಶ್ಚಾಸೌ ಆತ್ಮಾ ಚ ಸ್ವಾತ್ಮಾ, ಸ್ವಾತ್ಮನಃ ಬೋಧಃ ಸ್ವಾತ್ಮಬೋಧಃ, ಅದ್ವಂದ್ವಶ್ಚಾಸೌ ಸ್ವಾತ್ಮಬೋಧಶ್ಚ ಅದ್ವಂದ್ವಸ್ವಾತ್ಮಬೋಧಃ, ಅದ್ವಂದ್ವ-ಸ್ವಾತ್ಮಬೋಧೇನ ಪ್ರತೀತಾಃ ಅದ್ವಂದ್ವಸ್ವಾತ್ಮಬೋಧಪ್ರತೀತಾಃ, ತೈಃ ಅದ್ವಂದ್ವಸ್ವಾತ್ಮಬೋಧಪ್ರತೀತೈಃ । ಅಥವಾ ಅದ್ವಂದ್ವಶ್ಚಾಸೌ ಸ್ವಾತ್ಮಾ ಚ ಅದ್ವಂದ್ವಸ್ವಾತ್ಮಾ, ಅದ್ವಂದ್ವಸ್ವಾತ್ಮನಃ ಬೋಧಃ ಅದ್ವಂದ್ವಸ್ವಾತ್ಮಬೋಧಃ, ಅದ್ವಂದ್ವಸ್ವಾತ್ಮಬೋಧೇನ ಪ್ರತೀತಾಃ ಅದ್ವಂದ್ವಸ್ವಾತ್ಮಬೋಧಪ್ರತೀತಾಃ, ತೈಃ ಅದ್ವಂದ್ವಸ್ವಾತ್ಮಬೋಧ ಪ್ರತೀತೈಃ । ಅಥವಾ ನ ವಿದ್ಯತೇ ದ್ವಂದ್ವಂ ಯಸ್ಯ ಸಃ ಅದ್ವಂದ್ವಃ, ಸ್ವಃ ಸ್ವತಂತ್ರಶ್ಚಾಸೌ ಆತ್ಮಾ ಶ್ರೀಹರಿಶ್ಚ ಸ್ವಾತ್ಮಾ, ಸ್ವಾತ್ಮನಃ ಬೋಧಃ ಯಸ್ಯ ಸಃ ಸ್ವಾತ್ಮಬೋಧಃ (ಈ ಪಕ್ಷದಲ್ಲಿ ಅದ್ವಂದ್ವಃ, ಸ್ವಾತ್ಮಬೋಧಃ, ಪ್ರತೀತೈಃ ಎಂದು ಮೂರು ಪದಗಳು) ।

**ಶಂಕರಾದ್ಯೈಃ**— ಆದೌ ಭವಃ ಆದ್ಯಃ, ಶಂಕರಃ ಆದ್ಯಃ ಯೇಷಾಂ ತೇ ಶಂಕರಾದ್ಯಾಃ, ತೈಃ ಶಂಕರಾದ್ಯೈಃ ।

**ಕ್ರಿಯಾಪದ**— ಶಕಿ ಶಂಕಾಯಾಂ ಆತ್ಮನೇಪದೀ ಕರ್ಮಣಿ ಲಟ್ ಪ್ರಥಮಪುರುಷೇ ಏಕವಚನೇ 'ಶಂಕ್ಯತೇ' ಇತಿ ರೂಪಮ್ ।

ಶಂಕ್ಯತೇ, ಶಂಕ್ಯೇತೇ ಶಂಕ್ಯಂತೇ ---- ಇತ್ಯಾದಿ

**ಪ್ರಯೋಗ**— ಶಂಕರಾದ್ಯೈಃ ಆಚಾರ್ಯೈಃ ಶಂಕ್ಯತೇ (ಕರ್ಮಣಿ) ।

ಶಂಕರಾದ್ಯಾಃ ಆಚಾರ್ಯಾಃ ಶಂಕಂತೇ (ಕರ್ತರಿ) ।

★ ★ ★

ಅವತಾರಿಕಾ— ವಿಪಕ್ಷದವರನ್ನು ಜಯಿಸುವ ಉಪಾಯವನ್ನು ಹೇಳುತ್ತಾನೆ.

**ಪಾರಂಪರ್ಯೇಣಾಗತಂ ತತ್ತ್ವಶಾಸ್ತ್ರಂ**
**ಹಂತೋತ್ಸನ್ನಂ ನೂತನೇನೇತ್ಯುದೀರ್ಯ ।**
**ತೇಷಾಂ ದೋಷಾ ವರ್ಣನೀಯಾ ವಿದಗ್ಧೈಃ**
**ಸಂತೋಽಸಂತೋವಾಽಪಿ ಮಧ್ಯಸ್ಥಲೋಕೇ ॥ 22 ॥**

ಪದಚ್ಛೇದ— ಪಾರಂಪರ್ಯೇಣ, ಆಗತಂ, ತತ್ತ್ವಶಾಸ್ತ್ರಂ, ಹಂತ, ಉತ್ಸನ್ನಂ, ನೂತನೇನ, ಇತಿ, ಉದೀರ್ಯ, ತೇಷಾಂ, ದೋಷಾಃ, ವರ್ಣನೀಯಾಃ, ವಿದಗ್ಧೈಃ ಸಂತಃ, ಅಸಂತಃ, ವಾ, ಅಪಿ, ಮಧ್ಯಸ್ಥಲೋಕೇ ।

ಅನ್ವಯ— ವಿದಗ್ಧೈಃ, ಮಧ್ಯಸ್ಥಲೋಕೇ, 'ನೂತನೇನ ಪಾರಂಪರ್ಯೇಣ ಆಗತಂ ತತ್ತ್ವಶಾಸ್ತ್ರಂ ಉತ್ಸನ್ನಂ, ಹಂತ, ಇತಿ, ಉದೀರ್ಯ, ತೇಷಾಂ ಸಂತಃ ಅಸಂತಃ ವಾ ಅಪಿ ದೋಷಾಃ ವರ್ಣನೀಯಾಃ ।

ಅನ್ವಯಾರ್ಥ—

ವಿದಗ್ಧೈಃ = ಕುಶಲರಾದ ನಮ್ಮವರಿಂದ

ಮಧ್ಯಸ್ಥಲೋಕೇ = ನಮ್ಮಲ್ಲಿಯೂ ಅವರಲ್ಲಿಯೂ ಸಮಾನರಾಗಿರುವ ಉದಾಸೀನ ಜನರಲ್ಲಿ

ನೂತನೇನ = ಹೊಸಬನಾದ ಒಬ್ಬನಿಂದ (ಶ್ರೀಮಧ್ವಾಚಾರ್ಯರಿಂದ)

ಪಾರಂಪರ್ಯೇಣ = ಅನಾದಿ ಪರಂಪರೆಯಿಂದ

ಆಗತಂ = ಬಂದಿರುವ

ತತ್ತ್ವಶಾಸ್ತ್ರಂ = ಶಾಂಕರ ವೇದಾಂತ ಶಾಸ್ತ್ರವು

ಉತ್ಸನ್ನಂ = ಹಾಳಾಯಿತು

ಹಂತ = ಅಯ್ಯೋ

ಇತಿ ಉದೀರ್ಯ = ಹೀಗೆ ಹೇಳಿ

ತೇಷಾಂ = ಆ ಮಧ್ವಾಚಾರ್ಯರು ಮತ್ತು ಅವರ ಶಿಷ್ಯಾದಿಗಳಿಗೆ

ಸಂತಃ = ಇರಬಹುದೆಂದು ಊಹಿಸಿರುವ

ಅಸಂತಃ ವಾ ಅಪಿ = ಸರ್ವಥಾ ಇಲ್ಲದೇ ಇರುವ

ದೋಷಾಃ = ದೋಷಗಳು

ವರ್ಣನೀಯಾಃ = ಹೇಳಲ್ಪಡತಕ್ಕದ್ದು.

ತಾತ್ಪರ್ಯ— ಅನಾದಿ ಪರಂಪರೆಯಿಂದ ನಮ್ಮ ಅದ್ವೈತವೆಂಬ ತತ್ತ್ವನಿರ್ಣಾಯಕವಾದ ಶಾಸ್ತ್ರವು ಎಲ್ಲರಲ್ಲಿಯೂ ಪ್ರಚಾರದಲ್ಲಿದೆ. ಎಲ್ಲರೂ ಅದರಲ್ಲಿ ಯಾವ ದೋಷವನ್ನೂ ಎಣಿಸದೆ ಅಂಗೀಕರಿಸುತ್ತಾ ಬಂದಿದ್ದಾರೆ. ಆದರೆ ಇತ್ತೀಚೆಗೆ ಹೊಸಬನೊಬ್ಬನು ಬಂದು ನಮ್ಮ ತತ್ತ್ವಶಾಸ್ತ್ರವನ್ನು ಖಂಡಿಸಿ ಹಾಳುಮಾಡುತ್ತಿದ್ದಾನೆ. ಅಯ್ಯೋ ನೀವು ಇದಕ್ಕೆ ಪ್ರತೀಕಾರ ಮಾಡಲು ಸಹಾಯ ಮಾಡಿರಿ ಎಂದು ಎರಡೂ ಸಿದ್ಧಾಂತಗಳಲ್ಲಿ ಪಕ್ಷಪಾತವಿಲ್ಲದೆ ಉದಾಸೀನರಾಗಿರುವವರಲ್ಲಿ ಪ್ರಚಾರ ಮಾಡಬೇಕು. ನಮ್ಮಲ್ಲಿ ಉಪಾಯಕುಶಲರಾದ ಕೆಲವರಿದ್ದಾರೆ. ಅವರು ಈ ಕೆಲಸವನ್ನು ಮಾಡಲು ಸಮರ್ಥರಾಗಿದ್ದಾರೆ. ಅಲ್ಲದೆ ಈ ಮಧ್ವಾಚಾರ್ಯರಲ್ಲಿಯೂ ಅವರ ಶಿಷ್ಯರಲ್ಲಿಯೂ ದೋಷಗಳು ಇರಲಿ, ಇಲ್ಲದಿರಲಿ ಏನಾದರೂ ದೋಷವನ್ನು

ಆರೋಪಿಸಿ ಬಹಿರಂಗವಾಗಿ ಪ್ರಚಾರ ಮಾಡಬೇಕು. ಹೀಗೆ ಮಾಡಿದರೆ ಮಧ್ಯಸ್ಥರಿಗೆ ಆ ಮಧ್ವಾಚಾರ್ಯರ ಸಿದ್ಧಾಂತದಲ್ಲಿ ಅನಾದರವುಂಟಾಗುತ್ತದೆ, ನಮ್ಮಲ್ಲಿ ಆದರ ಉಂಟಾಗುತ್ತದೆ.

ವಿಗ್ರಹ—

**ಪಾರಂಪರ್ಯೇಣ**— ಪರಂಪರಾ ಏವ ಪಾರಂಪರ್ಯಂ, ತೇನ ಪಾರಂಪರ್ಯೇಣ ।

**ತತ್ತ್ವಶಾಸ್ತ್ರಂ**— ತತ್ತ್ವಸ್ಯ ಶಾಸ್ತ್ರಂ ತತ್ತ್ವಶಾಸ್ತ್ರಂ ।

**ಮಧ್ಯಸ್ಥಲೋಕೇ**— ಮಧ್ಯಸ್ಥಶ್ಚಾಸೌ ಲೋಕಶ್ಚ ಮಧ್ಯಸ್ಥಲೋಕಃ, ತಸ್ಮಿನ್ ಮಧ್ಯಸ್ಥಲೋಕೇ ।

**ಕ್ರಿಯಾಪದ**— ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ, ಆದರೂ ಭವತಿ ಎಂದು ಅಧ್ಯಾಹಾರ ಮಾಡಿಕೊಂಡು ಭಾವೇ ಪ್ರಯೋಗ ಮಾಡಬಹುದು ಮತ್ತು ವರ್ಣನೀಯಾಃ ಎಂಬಲ್ಲಿರುವ ಕರ್ಮಣಿ ಅನೀಯರ್ ಪ್ರತ್ಯಯವನ್ನು ಕರ್ತರಿ ಪ್ರಯೋಗದಲ್ಲಿ ವಿಧಿಲಿಙ್ ಮಾಡಿಕೊಳ್ಳಬಹುದು. ಆಗ ಸಂಪೂರ್ಣ ಶ್ಲೋಕದ ಅನ್ವಯವು ಹೀಗೆ ಆಗುತ್ತದೆ.

**ಪ್ರಯೋಗ**— ವಿದಗ್ಧಾಃ ಮಧ್ಯಸ್ಥಲೋಕೇ 'ನೂತನೇನ (ನಿಮಿತ್ತೇನ) ಪಾರಂಪರ್ಯೇಣ ಆಗತೇನ ತತ್ತ್ವಶಾಸ್ತ್ರೇಣ ಉತ್ಪನ್ನೇನ ಭೂಯತೇ' (ಅಥವಾ ನೂತನಃ ಪಾರಂಪರ್ಯೇಣ ಆಗತಂ ತತ್ತ್ವಶಾಸ್ತ್ರಂ ಉತ್ಪಾದಯತಿ) ಹಂತ ಇತಿ ಉದೀರಯೇಯುಃ, ತೇಷಾಂ ಸತಃ ಅಸತೋ ವಾ ದೋಷಾನ್ ವರ್ಣಯೇಯುಃ ।

★ ★ ★

**ಅವತಾರಿಕಾ**— ಪುನಃ ತಾವು ಕೈಗೊಳ್ಳಬೇಕಾದ ಉಪಾಯವನ್ನು ಹೇಳುತ್ತಾನೆ.

**ಸ್ವಾಭಿಪ್ರಾಯೋ ಬ್ರಹ್ಮವತ್ ಸ್ಯಾದವಾಚ್ಯೋ**
**ಮಾಯಾಶಕ್ತ್ಯಾ ಸರ್ವನಿರ್ವಾಹಸಿದ್ಧಿಃ ।**
**ಇತ್ಥಂ ನೀತ್ಯಾ ಶಾಸ್ತ್ರನೀತ್ಯೇವ ಬಾಧ್ಯಃ**
**ಸರ್ವೋ ಲೋಕಃ ಸ್ವಾತ್ಮನೋ ಯಃ ಪರಃ ಸ್ಯಾತ್ ॥ 23 ॥**

**ಪದಚ್ಛೇದ**— ಸ್ವಾಭಿಪ್ರಾಯಃ, ಬ್ರಹ್ಮವತ್, ಸ್ಯಾತ್, ಅವಾಚ್ಯಃ, ಮಾಯಾಶಕ್ತ್ಯಾ, ಸರ್ವನಿರ್ವಾಹಸಿದ್ಧಿಃ, ಇತ್ಥಂ, ನೀತ್ಯಾ, ಶಾಸ್ತ್ರನೀತ್ಯಾ, ಇವ, ಬಾಧ್ಯಃ, ಸರ್ವಃ, ಲೋಕಃ, ಸ್ವಾತ್ಮನಃ, ಯಃ ಪರಃ, ಸ್ಯಾತ್ ।

**ಅನ್ವಯ**— ಸ್ವಾಭಿಪ್ರಾಯಃ ಬ್ರಹ್ಮವತ್ ಅವಾಚ್ಯಃ ಸ್ಯಾತ್, ಮಾಯಾಶಕ್ತ್ಯಾ ಸರ್ವನಿರ್ವಾಹಸಿದ್ಧಿಃ ಇತ್ಥಂ ಶಾಸ್ತ್ರನೀತ್ಯಾ ಇವ ನೀತ್ಯಾ ಸ್ವಾತ್ಮನಃ ಪರಃ ಯಃ (ಸಃ) ಸರ್ವಃ ಲೋಕಃ ಬಾಧ್ಯಃ ।

**ಅನ್ವಯಾರ್ಥ**—

**ಸ್ವಾಭಿಪ್ರಾಯಃ** = ನಮ್ಮ ಅಭಿಪ್ರಾಯವು
**ಬ್ರಹ್ಮವತ್** = ಪರಬ್ರಹ್ಮದಂತೆ
**ಅವಾಚ್ಯಃ** = ಹೇಳಲು ಅನರ್ಹವು
**ಸ್ಯಾತ್** = ಆದೀತು
**ಮಾಯಾಶಕ್ತ್ಯಾ** = ಕಪಟದ ಸಾಮರ್ಥ್ಯದಿಂದ
**ಸರ್ವ** = ಎಲ್ಲಾ ಕಾರ್ಯದ
**ನಿರ್ವಾಹ** = ಘಟನೆಯ

ಸಿದ್ಧಿಃ = ಕೈಗೂಡುವಿಕೆಯು
ಇತ್ಥಂ = ಈ ರೀತಿ
ಶಾಸ್ತ್ರನೀತ್ಯಾ ಇವ = ಶಾಸ್ತ್ರ ನೀತಿಯಿಂದಲೆಂಬಂತೆ
ನೀತ್ಯಾ = ಉಪಾಯದಿಂದ
ಸ್ವಾತ್ಮನಃ = ನಮಗೆ
ಪರಃ = ವಿರುದ್ಧನಾದವನು
ಯಾಃ = ಯಾವನೋ (ಸಃ = ಅಂತಹ)
ಸರ್ವಃ = ಎಲ್ಲಾ
ಲೋಕಃ = ಜನರು
ಬಾಧ್ಯಃ = ಖಂಡಿಸಲು ಯೋಗ್ಯರು
ಸ್ಯಾತ್ = ಆದಾರು.

ತಾತ್ಪರ್ಯ— ನಾವು ನಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಬಾರದು 'ನಮ್ಮನ್ನೇ ನಂಬಿರಿ, ನಮ್ಮ ಸಿದ್ಧಾಂತವನ್ನೇ ಅವಲಂಬಿಸಿರಿ, ಅವರ ಸಿದ್ಧಾಂತವನ್ನು ನಂಬಿ ಅವರನ್ನು ಸೇರಬೇಡಿರಿ ಎಂಬ ಅಭಿಪ್ರಾಯವು ನಮ್ಮಲ್ಲಿದ್ದರೂ, ನಮ್ಮ ಮತದಲ್ಲಿ ಬ್ರಹ್ಮವು ಹೇಗೆ ಅವಾಚ್ಯವೋ ಅಂದರೆ ಶಬ್ದದಿಂದ ಹೇಳಲು ಯೋಗ್ಯವಾಗುವುದಿಲ್ಲವೋ ಅದರಂತೆ ಆ ನಮ್ಮ ಅಭಿಪ್ರಾಯವನ್ನು ಬಾಯಿಬಿಟ್ಟು ಹೇಳಬಾರದು. ಹೇಗೆ ಮಾಯೆಯಿಂದ ನಮ್ಮ ಸಿದ್ಧಾಂತದ ನಿರ್ವಾಹವಾಗುತ್ತದೆಯೋ ಅದರಂತೆ ಕಪಟದ ಸಾಮರ್ಥ್ಯದಿಂದ ನಮ್ಮ ಪ್ರತಿವಾದಿಗಳು ಕೆಟ್ಟವರು, ಶಾಸ್ತ್ರನಾಶಕರು ಎಂದು ಪ್ರಸಿದ್ಧಪಡಿಸಿ ನಮ್ಮ ಉತ್ಕರ್ಷ ಮುಂತಾದ ಎಲ್ಲಾ ಕಾರ್ಯವನ್ನು ಸಾಧಿಸಬಹುದು. ಹೇಗೆ ಶಾಸ್ತ್ರದ ಯುಕ್ತಿಯಿಂದ ನಮಗೆ ವಿರುದ್ಧರಾದ ವಾದಿಗಳನ್ನು ಜಯಿಸುತ್ತೇವೆಯೋ ಹಾಗೆಯೇ ಈ ಉಪಾಯದಿಂದ ನಮಗೆ ಪ್ರತಿಕೂಲರಾದ ಆ ಭೇದವಾದಿಗಳನ್ನು ಅಡಗಿಸಿ, ಅವರ ಪ್ರಚಾರವನ್ನು ಕಡಿಮೆ ಮಾಡಿ ನಮ್ಮ ಮತದ ಉತ್ಕರ್ಷವನ್ನು ಸಾಧಿಸಬಹುದು.

ವಿಗ್ರಹ—

ಸ್ವಾಭಿಪ್ರಾಯಃ— ಸ್ವೇಷಾಂ ಅಭಿಪ್ರಾಯಃ ಸ್ವಾಭಿಪ್ರಾಯಃ ।
ಬ್ರಹ್ಮವತ್— ಬ್ರಹ್ಮಣಾ ತುಲ್ಯಂ ಬ್ರಹ್ಮವತ್ ।
ಅವಾಚ್ಯಃ— ವಕ್ತುಂ ಯೋಗ್ಯಃ ವಾಚ್ಯಃ, ನ ವಾಚ್ಯಃ ಅವಾಚ್ಯಃ ।
ಮಾಯಾಶಕ್ತಿಃ— ಮಾಯಾಯಾಃ ಶಕ್ತಿಃ ಮಾಯಾಶಕ್ತಿಃ, ತಯಾ ಮಾಯಾಶಕ್ತ್ಯಾ ।
ಸರ್ವನಿರ್ವಾಹಸಿದ್ಧಿಃ— ಸರ್ವಸ್ಯ ನಿರ್ವಾಹಃ ಸರ್ವನಿರ್ವಾಹಃ, ಸರ್ವನಿರ್ವಾಹಸ್ಯ ಸಿದ್ಧಿಃ ಸರ್ವ-ನಿರ್ವಾಹಸಿದ್ಧಿಃ ।
ಶಾಸ್ತ್ರನೀತ್ಯಾ— ಶಾಸ್ತ್ರಸ್ಯ ನೀತಿಃ ಶಾಸ್ತ್ರನೀತಿಃ, ತಯಾ ಶಾಸ್ತ್ರನೀತ್ಯಾ ।
ಬಾಧ್ಯಃ— ಬಾಧಿತುಂ ಯೋಗ್ಯಃ ಬಾಧ್ಯಃ ।
ಸ್ವಾತ್ಮನಃ— ಸ್ವಶ್ಚಾಸೌ ಆತ್ಮಾ ಚ ಸ್ವಾತ್ಮಾ । ತಸ್ಮಾತ್ ಸ್ವಾತ್ಮನಃ ।

ಕ್ರಿಯಾಪದ— ಸ್ಯಾತ್ ಸರ್ಗ 11 ಶ್ಲೋಕ 28ರಲ್ಲಿ ಈ ಕ್ರಿಯಾಪದದ ಎಲ್ಲಾ ರೂಪಗಳೂ ಬಂದಿವೆ.

ಪ್ರಯೋಗ— ಸ್ವಾಭಿಪ್ರಾಯೇಣ ಬ್ರಹ್ಮವತ್ ಅವಾಚ್ಯೇನ ಭೂಯೇತ, ಮಾಯಾಶಕ್ತ್ಯಾ ಸರ್ವನಿರ್ವಾಹಸಿದ್ಧ್ಯಾ (ಭೂಯತೇ), ಇತ್ಥಂ ಶಾಸ್ತ್ರನೀತ್ಯಾ ಇವ ನೀತ್ಯಾ ಸ್ವಾತ್ಮನಃ ಪರೇಣ ಯೇನ ಸರ್ವೇಣ ಲೋಕೇನ ಭೂಯತೇ (ತೇನ) ಬಾಧ್ಯೇನ ಭೂಯೇತ ।

★ ★ ★

ಅವತಾರಿಕಾ— ಮತ್ತು ಪರವಾದಿಗಳನ್ನು ಪರಾಭವಗೊಳಿಸುವ ಅದಕ್ಕೂ ಹೆಚ್ಚಿನ ಉಪಾಯವನ್ನು ಹೇಳುತ್ತಾನೆ.

**ಗ್ರಾಮೇ ಗ್ರಾಮೇ ವಾರ್ಯತಾಂ ಮಾನನೈಷಾಂ**
**ಪೂರ್ವಂ ಪೂರ್ವಂ ಸಾಮಪೂರ್ವೈರುಪಾಯೈಃ ।**
**ಸಂಪ್ರಾಪ್ತಾನಾಂ ಮಾನಭಂಗಾಯ ಕಾರ್ಯಂ**
**ಗ್ರಂಥಾಕರ್ಷಾದ್ಯುದ್ಯತೈರಸ್ಮದೀಯೈಃ ॥ 24 ॥**

ಪದಚ್ಛೇದ— ಗ್ರಾಮೇ, ಗ್ರಾಮೇ, ವಾರ್ಯತಾಂ, ಮಾನನಾ, ಏಷಾಂ, ಪೂರ್ವಂ, ಪೂರ್ವಂ, ಸಾಮಪೂರ್ವೈಃ, ಉಪಾಯೈಃ, ಸಂಪ್ರಾಪ್ತಾನಾಂ, ಮಾನಭಂಗಾಯ, ಕಾರ್ಯಂ, ಗ್ರಂಥಾಕರ್ಷಾದಿ, ಉದ್ಯತೈಃ, ಅಸ್ಮದೀಯೈಃ ।

ಅನ್ವಯ— ಗ್ರಾಮೇ ಗ್ರಾಮೇ ಏಷಾಂ ಮಾನನಾ ಸಾಮಪೂರ್ವೈಃ ಉಪಾಯೈಃ ಪೂರ್ವಂ ಪೂರ್ವಂ ವಾರ್ಯತಾಂ । ಸಂಪ್ರಾಪ್ತಾನಾಂ ಮಾನಭಂಗಾಯ ಉದ್ಯತೈಃ ಅಸ್ಮದೀಯೈಃ ಗ್ರಂಥಾಕರ್ಷಾದಿ ಕಾರ್ಯಂ ।

ಅನ್ವಯಾರ್ಥ—

**ಗ್ರಾಮೇ ಗ್ರಾಮೇ** = ಪ್ರತಿಹಳ್ಳಿಯಲ್ಲಿಯೂ
**ಏಷಾಂ** = ಈ ಭೇದವಾದಿಗಳ (ದ್ವೈತ ಶಾಸ್ತ್ರವಾದಿಗಳ)
**ಮಾನನಾ** = ಸಮ್ಮಾನವು
**ಸಾಮಪೂರ್ವೈಃ** = ಸಾಮ, ದಾನ (ಸಾಮೋಪಾಯ) ಮೊದಲಾಗಿ ಉಳ್ಳ
**ಉಪಾಯೈಃ** = ಯುಕ್ತಿಗಳಿಂದ
**ಪೂರ್ವಂ ಪೂರ್ವಂ** = ಮೊದಲು ಮೊದಲಿನಲ್ಲಿಯೇ (ಗ್ರಾಮ ಪ್ರವೇಶಕ್ಕಿಂತ ಮೊದಲೇ)
**ವಾರ್ಯತಾಂ** = ತಡೆಯಲ್ಪಡಲಿ.
**ಸಂಪ್ರಾಪ್ತಾನಾಂ** = ಗ್ರಾಮವನ್ನು ಪ್ರವೇಶಿಸಿದ ಅವರ,
**ಮಾನಭಂಗಾಯ** = ಅಭಿಮಾನ ಖಂಡನೆಗೋಸ್ಕರ (ಅವರಿಗೆ ಅವಮರ್ಯಾದೆ ಮಾಡುವುದಕ್ಕೋಸ್ಕರ)
**ಉದ್ಯತೈಃ** = ಉದ್ಯುಕ್ತರಾದ
**ಅಸ್ಮದೀಯೈಃ** = ನಮ್ಮವರಿಂದ
**ಗ್ರಂಥಾಕರ್ಷಾದಿ** = ಗ್ರಂಥಗಳನ್ನು ಕಿತ್ತುಕೊಳ್ಳುವುದೇ ಮೊದಲಾದುದು
**ಕಾರ್ಯಂ** = ಮಾಡಲ್ಪಡತಕ್ಕದ್ದು.

ತಾತ್ಪರ್ಯ— ನಮ್ಮವರು ಪ್ರತಿಹಳ್ಳಿಗೂ ಹೋಗಿ ಈ ಮಾಧ್ವರು ಹಳ್ಳಿಯನ್ನು ಪ್ರವೇಶಿಸುವುದಕ್ಕಿಂತ ಮೊದಲೇ ಹಳ್ಳಿಯವರನ್ನು ಸಾಮ ದಾನ ಭೇದ ದಂಡ ಎಂಬ ಉಪಾಯಗಳನ್ನು ಉಪಯೋಗಿಸಿ ವಶಪಡಿಸಿಕೊಳ್ಳಬೇಕು, ಹಾಗೂ ಜನರು ಇವರಿಗೆ ಸಮ್ಮಾನ ಮಾಡದಂತೆ ತಡೆಯಬೇಕು. ಅವರು ಹಳ್ಳಿಗೆ ಬಾರದಂತೆ ತಡೆಯಬೇಕು, ಬಂದರೂ ಯಾರೂ ಅವರಿಗೆ ನಮಸ್ಕಾರ ಮಾಡದಂತೆ ಮಾಡಬೇಕು. ಸನ್ಯಾಸಿಗಳಿಗೆ ಭಿಕ್ಷಾಪ್ರದಾನ ಮುಂತಾದ ಸತ್ಕಾರವಾಗದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಯಾವುದಾದರೊಂದು ಉಪಾಯದಿಂದ ನಮ್ಮ ವಿಪಕ್ಷ ಪಕ್ಷದವರು ಗ್ರಾಮವನ್ನು ಪ್ರವೇಶಿಸಿದರೆ ಅವರ ಮಾನಭಂಗಕ್ಕೋಸ್ಕರ ನಮ್ಮವರು ಸನ್ನದ್ಧರಾಗಿರಬೇಕು. ಅವರ ಶಾಸ್ತ್ರ ಪುಸ್ತಕಗಳನ್ನು ಕಿತ್ತುಕೊಂಡು ಅವರ ದಂಡವನ್ನು ತುಂಡರಿಸಿ, ಅವರಿಗೆ ಹೊಡೆತ ಬೀಳುವಂತೆ ಮಾಡಿ, ಅವರು ತಂಗಲು ಜಾಗ ಸಿಗದಂತೆ ಮಾಡಿ ಅವರನ್ನು ಅಲ್ಲಿಂದ ಓಡಿಸಲು ಪ್ರಯತ್ನಿಸಬೇಕು. ಇವೆಲ್ಲವೂ ನಮ್ಮ ವಿರುದ್ಧಸಿದ್ಧಾಂತವು ಪ್ರಚಾರವಾಗದಂತೆ ಮಾಡಬೇಕಾದ ಉಪಾಯಗಳು.

ವಿಗ್ರಹ—

**ಸಾಮಪೂರ್ವೈಃ**— ಸಾಮ ಪೂರ್ವಂ ಯೇಷಾಂ ತೇ ಸಾಮಪೂರ್ವಾಃ, ತೈಃ ಸಾಮಪೂರ್ವೈಃ ।

**ಮಾನಭಂಗಾಯ**— ಮಾನಸ್ಯ ಭಂಗಃ ಮಾನಭಂಗಃ, ತಸ್ಮೈ ಮಾನಭಂಗಾಯ ।

**ಗ್ರಂಥಾಕರ್ಷಾದಿ**— ಗ್ರಂಥಾನಾಂ ಆಕರ್ಷಃ ಗ್ರಂಥಾಕರ್ಷಃ, ಗ್ರಂಥಾಕರ್ಷಃ ಆದಿಃ ಯಸ್ಯ ತತ್ ಗ್ರಂಥಾಕರ್ಷಾದಿ, ತತ್ ಗ್ರಂಥಾಕರ್ಷಾದಿ ।

**ಅಸ್ಮದೀಯೈಃ**— ಅಸ್ಮಾಕಂ ಇಮೇ ಅಸ್ಮದೀಯಾಃ, ತೈಃ ಅಸ್ಮದೀಯೈಃ ।

**ಕ್ರಿಯಾಪದ**— ವೃಞ್ ಆವರಣೇ ಸಕರ್ಮಕಃ ಸೇಟ್ ಉಭಯಪದೀ ಅದೃಷೀಯಃ ಕರ್ಮಣಿ ಆತ್ಮನೇ ಪದೀ ಲೋಟ್ ಪ್ರಥಮಪುರುಷೇ ಏಕವಚನೇ 'ವಾರ್ಯತಾಂ' ಇತಿ ರೂಪಮ್ ।

| | | |
|---|---|---|
| ವಾರ್ಯತಾಂ | ವಾರ್ಯೇತಾಂ | ವಾರ್ಯಂತಾಂ, |
| ವಾರ್ಯಸ್ವ | ವಾರ್ಯೇಥಾಂ | ವಾರ್ಯಧ್ವಂ, |
| ವಾರ್ಯೈ | ವಾರ್ಯಾವಹೈ | ವಾರ್ಯಾಮಾಹೈ ॥ |

**ಪ್ರಯೋಗ**— ಗ್ರಾಮೇ ಗ್ರಾಮೇ ಏಷಾಂ ಮಾನನಾಂ ಸಾಮಪೂರ್ವೈಃ ಉಪಾಯೈಃ ಭವಂತಃ ವಾರಯಂತು, ಸಂಪ್ರಾಪ್ತಾನಾಂ ಮಾನಭಂಗಾಯ ಉದ್ಯತಾಃ ಅಸ್ಮದೀಯಾಃ ಗ್ರಂಥಾಕರ್ಷಾದಿ ಕುರ್ಯುಃ ।

★ ★ ★

**ಅವತಾರಿಕಾ**— ತಾಮಸರಾದ ಮಾಯಾವಾದಿಗಳು ತಾವು ಮಾಡಿದ ಮಂತ್ರಾಲೋಚನೆಯನ್ನು ಕಾರ್ಯರೂಪಕ್ಕೆ ಇಳಿಸಿದರು, ಮತ್ತು ಅವರು ಮಾಡಿದ ಕಾರ್ಯವು ಅವರ ಸ್ವರೂಪ ಯೋಗ್ಯತೆಗೆ ಉಚಿತವಾದುದು ಎಂದು ಹೇಳುತ್ತಾರೆ.

**ಇತ್ಯಾದ್ಯೇತೇ ಕಾರ್ಯಮಾಲೋಚ್ಯ ಕಾಲೇ**
**ಚಕ್ರುರ್ವಕ್ರಾಶ್ಚಕ್ರಿಭಕ್ತಪ್ರತೀಪಮ್ ।**
**ಯೋಗ್ಯಾ ಮಂಕ್ತುಂ ತೇಽನ್ಯಥಾ ಸ್ಯುಃ ಕಥಂ ವಾ**
**ದುಃಖೋಗ್ರಾಂಭಸ್ಯಂಧತಾಮಿಸ್ರಸಿಂಧೌ ॥ 25 ॥**

**ಪದಚ್ಛೇದ**— ಇತ್ಯಾದಿ, ಏತೇ, ಕಾರ್ಯಂ, ಆಲೋಚ್ಯ, ಕಾಲೇ, ಚಕ್ರುಃ, ವಕ್ರಾಃ, ಚಕ್ರಿಭಕ್ತಪ್ರತೀಪಂ, ಯೋಗ್ಯಾಃ, ಮಂಕ್ತುಂ, ತೇ, ಅನ್ಯಥಾ, ಸ್ಯುಃ, ಕಥಂ, ವಾ, ದುಃಖೋಗ್ರಾಂಭಸಿ, ಅಂಧತಾಮಿಸ್ರಸಿಂಧೌ ।

**ಅನ್ವಯ**— ವಕ್ರಾಃ ಏತೇ ಕಾಲೇ ಇತ್ಯಾದಿ ಕಾರ್ಯಂ ಆಲೋಚ್ಯ ಚಕ್ರಿಭಕ್ತಪ್ರತೀಪಂ ಚಕ್ರುಃ, ಅನ್ಯಥಾ ತೇ ದುಃಖೋಗ್ರಾಂಭಸಿ ಅಂಧತಾಮಿಸ್ರಸಿಂಧೌ ಮಂಕ್ತುಂ ಕಥಂ ವಾ ಯೋಗ್ಯಾಃ ಸ್ಯುಃ ।

**ಅನ್ವಯಾರ್ಥ**—

ವಕ್ರಾಃ = ಕುಟಿಲಬುದ್ಧಿಯುಳ್ಳ

ಏತೇ = ಈ ಮಾಯಾವಾದಿಗಳು

ಕಾಲೇ = ಶ್ರೀಮಧ್ವಾಚಾರ್ಯರು ತಮ್ಮ ಸಿದ್ಧಾಂತವನ್ನು ವಿವರಿಸಿ ಪ್ರಚಾರಮಾಡುವ ಸಮಯದಲ್ಲಿ

ಇತ್ಯಾದಿಕಾರ್ಯಂ = ಇದೇ ಮೊದಲಾದ ಕೆಲಸವನ್ನು

ಆಲೋಚ್ಯ = ವಿಚಾರ ಮಾಡಿ

ಚಕ್ರಿ = ಶ್ರೀಕೃಷ್ಣನ

ಭಕ್ತ = ಭಕ್ತರಾದ ಶ್ರೀಮಧ್ವಾಚಾರ್ಯರಿಗೆ

ಪ್ರತೀಪಂ = ವಿರೋಧವನ್ನು

**ಚಕ್ರು**ಃ = ಮಾಡಿದರು.

**ಅನ್ಯಥಾ** = ಹಾಗಿಲ್ಲದಿದ್ದರೆ (ಹರಿಭಕ್ತರಿಗೆ ವಿರೋಧವನ್ನು ಮಾಡದಿದ್ದರೆ)

**ತೇ** = ಅವರು

**ದುಃಖ** = ವ್ಯಥೆ (ಮನಸ್ಸಿನ ನಿರಂತರ ಕಷ್ಟ) ಎಂಬ

**ಉಗ್ರ** = ಕಠಿನವಾದ

**ಅಂಭಸಿ** = ನೀರುಳ್ಳ

**ಅಂಧತಾಮಿಸ್ರಸಿಂಧೌ** = ಅಂಧಂ ತಮಸ್ಸೆಂಬ ಸಮುದ್ರದಲ್ಲಿ

**ಮಂಕ್ತುಂ** = ಮುಳುಗುವುದಕ್ಕೆ

**ಕಥಂ** = ಹೇಗೆ

**ಯೋಗ್ಯಾಃ** = ಯೋಗ್ಯರು

**ಸ್ಯುಃ** = ಆದಾರು ?

**ತಾತ್ಪರ್ಯ**— ವಕ್ರಬುದ್ಧಿಯುಳ್ಳ ಈ ಮಾಯಾವಾದಿಗಳು ಮೇಲೆ ಹೇಳಿದ ರೀತಿಯಲ್ಲಿ ಮಂತ್ರಾಲೋಚನ ಮಾಡಿದರು.

(1) ಪರಂಪರೆಯಿಂದ ಬಂದಿರುವ ನಮ್ಮ ಶಾಸ್ತ್ರವನ್ನು ಹೊಸಬನೊಬ್ಬನು ಬಂದು ಹಾಳು ಮಾಡಿದ್ದಾನೆ ಎಂದು ಪ್ರಚಾರ ಮಾಡಬೇಕು.

(2) ನಮ್ಮ ಮತವನ್ನೇ ಅವಲಂಬಿಸಿರಿ, ಮಧ್ವಾಚಾರ್ಯರ ಸಿದ್ಧಾಂತವನ್ನು ಅನುಸರಿಸಬೇಡಿರಿ ಎಂಬ ನಮ್ಮ ಅಭಿಪ್ರಾಯವನ್ನು ನಮ್ಮ ಬ್ರಹ್ಮದಂತೆ ಅನಿರ್ವಚನೀಯವಾಗಿಯೇ ಇಟ್ಟಿರಬೇಕು. ಯಾರಿಗೂ ಹೇಳಬಾರದು.

(3) ಹಳ್ಳಿ ಹಳ್ಳಿಗಳಲ್ಲಿಯೂ ಮಧ್ವಾಚಾರ್ಯರ ಅನುಯಾಯಿಗಳಿಗೆ ಮರ್ಯಾದೆ ಸಿಗದಂತೆ ಮಾಡಬೇಕು. ಇವೇ ಮೊದಲಾದ ವಿಷಯಗಳನ್ನು ಮಂತ್ರಾಲೋಚನೆಯಿಂದ ನಿರ್ಧರಿಸಿದರು. ಪುನಃ ಅದನ್ನು ಪರ್ಯಾಲೋಚಿಸಿ ದೃಢಪಡಿಸಿದರು. ಅನಂತರ ಆ ಮಾಯಾವಾದಿಗಳು ಶ್ರೀಕೃಷ್ಣಭಕ್ತರಾದ ಶ್ರೀಮಧ್ವಾಚಾರ್ಯರಿಗೆ 'ಅವರಲ್ಲಿ ದೋಷವನ್ನು ಪ್ರಚಾರ ಮಾಡುವುದು, ಅವರಿಗೆ ಮರ್ಯಾದೆ ಸಿಗದಂತೆ ಮಾಡುವುದು' ಮೊದಲಾದ ರೀತಿಯಿಂದ ವಿರೋಧವನ್ನು ಮಾಡಿದರು. ಈ ರೀತಿ ಮಾಡುವುದು ಅವರ ಯೋಗ್ಯತೆಗೆ ಅನುಗುಣವಾಗಿಯೇ ಇದೆ. ದುಃಖವೆಂಬ ಭಯಂಕರವಾದ ನೀರುಳ್ಳ ಅಂಧತಾಮಿಸ್ರವೆಂಬ ಸಮುದ್ರದಲ್ಲಿ ಮುಳುಗಬೇಕಾದ ಅವರು ಹೀಗೆ ಮಾಡಿದುದು ಸರಿಯಾಗಿಯೇ ಇದೆ. ತಮೋಯೋಗ್ಯರು ತಮಸ್ಸಿನಲ್ಲಿ ಮುಳುಗಿ ಕಷ್ಟಪಡಬೇಕಾದುದು ಅನಿವಾರ್ಯವಷ್ಟೆ ? ತಮಸ್ಸಿನ ಪ್ರಾಪ್ತಿಯಾದರೋ ಶ್ರೀಹರಿ ಮತ್ತು ಮುಖ್ಯಪ್ರಾಣರ ದ್ವೇಷದಿಂದಲೇ ಆಗತಕ್ಕದ್ದು. 'ದ್ವೇಷಾದೃತೇ' ನ ಹಿ ಹರೌ ತಮಸಿ ಪ್ರವೇಶಃ ಪ್ರಾಣೇ ಚ' ಹರಿಮುಖ್ಯಪ್ರಾಣರಲ್ಲಿ ದ್ವೇಷಮಾಡದ ಹೊರತು ತಮಸ್ಸಿನಲ್ಲಿ ಪ್ರವೇಶವಾಗುವುದಿಲ್ಲ ಎಂದು ಪ್ರಮಾಣವಿರುವುದರಿಂದ ಅವರು ಆ ರೀತಿ ಮಾಡಿದುದು ಯುಕ್ತವೇ ಆಗಿದೆ ಎಂದು ಭಾವವು.

**ವಿಗ್ರಹ**—

**ಇತ್ಯಾದಿ**— ಇತಿ ಆದಿಃ ಯಸ್ಯ ತತ್ ಇತ್ಯಾದಿ ।

**ಚಕ್ರಿಭಕ್ತಪ್ರತೀಪಂ**— ಚಕ್ರಂ ಅಸ್ಯ ಅಸ್ತೀತಿ ಚಕ್ರೀ, ಚಕ್ರಿಣಃ ಭಕ್ತಃ ಚಕ್ರಿಭಕ್ತಃ, ಚಕ್ರಿಭಕ್ತಸ್ಯ ಪ್ರತೀಪಂ ಚಕ್ರಿಭಕ್ತಪ್ರತೀಪಂ, ತತ್ ಚಕ್ರಿಭಕ್ತಪ್ರತೀಪಂ ।

**ದುಃಖೋಗ್ರಾಂಭಸಿ**— ಉಗ್ರಂ ಚ ತತ್ ಅಂಭಶ್ಚ ಉಗ್ರಾಂಭಃ, ದುಃಖಮೇವ ಉಗ್ರಾಂಭಃ ಯಸ್ಮಿನ್ ಸಃ ದುಃಖೋಗ್ರಾಂಭಾಃ, ತಸ್ಮಿನ್ ದುಃಖೋಗ್ರಾಂಭಸಿ ।

**ಅಂಧತಾಮಿಸ್ರಸಿಂಧೌ**— ಅಂಧಂ ಚ ತತ್ ತಾಮಿಸ್ರಂ ಚ ಅಂಧತಾಮಿಸ್ರಂ, ಅಂಧತಾಮಿಸ್ರಮೇವ ಸಿಂಧುಃ ಅಂಧತಾಮಿಸ್ರಸಿಂಧುಃ, ತಸ್ಮಿನ್ ಅಂಧತಾಮಿಸ್ರಸಿಂಧೌ ।

**ಕ್ರಿಯಾಪದ**— ಡುಕೃಞ್‌ಕರಣೇ ಇತ್ಯಸ್ಮಾದ್ ಧಾತೋಃ ಪರಸ್ಮೈಪದಿನಃ ಲಿಟ್ ಪ್ರಥಮಪುರುಷೇ ಬಹುವಚನೇ 'ಚಕ್ರುಃ' ಇತಿ ರೂಪಮ್ ।

ಚಕಾರ ಚಕ್ರತುಃ ಚಕ್ರುಃ, ಚಕರ್ಥ ಚಕ್ರಥುಃ ಚಕ್ರ, ಚಕಾರ-ಚಕರ ಚಕೃವ ಚಕೃಮ

**ಪ್ರಯೋಗ**— ವಕ್ಯೈಃ ಏತೈಃ ಕಾಲೇ ಇತ್ಯಾದಿ ಕಾರ್ಯಂ ಆಲೋಚ್ಯ ಚಕ್ರಿಭಕ್ತಪ್ರತೀಪಂ ಚಕ್ರೇ, ಅನ್ಯಥಾ ತ್ಯೈಃ ದುಃಖೋಗ್ರಾಂಭಸಿ ಅಂಧತಾಮಿಸ್ರಸಿಂಧೌ ಮಂಕ್ತುಂ ಕಥಂ ವಾ ಯೋಗ್ಯೈಃ ಭೂಯೇತ ?

★ ★ ★

**ಅವತಾರಿಕಾ**— ಮುಂದೆ ಆ ಮಾಯಾವಾದಿಗಳು ಮಾಡಿದ ಕಾರ್ಯವನ್ನು ಹೇಳುತ್ತಾರೆ. ಆ ಮಾಯಾವಾದಿಗಳು ಪುಂಡರೀಕಪುರಿಯನ್ನು ಶ್ರೀಮದಾಚಾರ್ಯರನ್ನು ಜಯಿಸಲು ಮುಂದೆ ಮಾಡಿದರೆನ್ನುತ್ತಾರೆ.

**ವ್ರತ್ಯಾಕಾರಂ ವಾಸುದೇವದ್ವಿಷಂ ತಂ**
**ಪ್ರಾಜ್ಞಂಮನ್ಯಂ ಪುಂಡರೀಕಾಭಿಧಾನಮ್ ।**
**ವಾದವ್ಯಾಜಾಕ್ಷೇಪಕಾಮಾಃ ಕುಮಂತ್ರಾ-**
**ಚ್ಚಕ್ರುರ್ಯತ್ತಂ ರೂಪ್ಯಪೀಠಾಲಯೇಽಮೀ II 26 II**

**ಪದಚ್ಛೇದ**— ವ್ರತ್ಯಾಕಾರಂ, ವಾಸುದೇವದ್ವಿಷಂ, ತಂ, ಪ್ರಾಜ್ಞಂಮನ್ಯಂ, ಪುಂಡರೀಕಾಭಿಧಾನಂ, ವಾದ-ವ್ಯಾಜಾಕ್ಷೇಪಕಾಮಾಃ, (ವಾದವ್ಯಾಜಾತ್, ಕ್ಷೇಪಕಾಮಾಃ) ಕುಮಂತ್ರಾತ್ (ಕುಮಂತ್ರಾಃ) ಚಕ್ರುಃ, ಯತ್ತಂ, (ಯತ್ನಂ) ರೂಪ್ಯಪೀಠಾಲಯೇ ಅಮೀ ।

**ಅನ್ವಯ**— ರೂಪ್ಯಪೀಠಾಲಯೇ (ಮಿಲಿತಾಃ) (ತೇ) ಅಮೀ ಕುಮಂತ್ರಾತ್ (ಕುಮಂತ್ರಾಃ) ವಾದವ್ಯಾಜಾ-ಕ್ಷೇಪಕಾಮಾಃ (ವಾದವ್ಯಾಜಾತ್, ಕ್ಷೇಪಕಾಮಾಃ) ವ್ರತ್ಯಾಕಾರಂ, ವಾಸುದೇವದ್ವಿಷಂ, ಪ್ರಾಜ್ಞಂಮನ್ಯಂ, ತಂ, ಪುಂಡರೀಕಾಭಿಧಾನಂ, ಯತ್ತಂ (ಯತ್ನಂ) ಚಕ್ರುಃ ।

**ಅನ್ವಯಾರ್ಥ**—

**ರೂಪ್ಯಪೀಠಾಲಯೇ** = ರಜತಪೀಠಪುರದ ದೇವಾಲಯದಲ್ಲಿ

**ಮಿಲಿತಾಃ** = ಸೇರಿದ (ತೇ)

**ಅಮೀ** = ಹಿಂದೆ ಹೇಳಿದಂತಹ ವಕ್ರಬುದ್ಧಿಯುಳ್ಳ ಮಾಯಾವಾದಿಗಳು

**ಕುಮಂತ್ರಾತ್** = ಗುಟ್ಟಾದ ಮಂತ್ರಾಲೋಚನೆಯಿಂದ (ಕುಮಂತ್ರಾಃ ಸಂತಃ = ಗುಟ್ಟಾದ ಮಂತ್ರಾಲೋಚನೆ ಉಳ್ಳವರಾಗಿ)

**ವಾದ** = ವಾದಿ ಪ್ರತಿವಾದಿಗಳು ಮಾಡುವ ತತ್ತ್ವಜ್ಞಾನಕ್ಕಾಗಿ ಇರುವ ಚರ್ಚೆಯೆಂಬ

ವ್ಯಾಜ = ನೆಪದಿಂದ

ಆಕ್ಷೇಪಕಾಮಾಃ (ಸಂತಃ) = ನಿರಾಕರಿಸುವ ಇಚ್ಛೆ ಉಳ್ಳವರಾಗಿ (ವಾದವ್ಯಾಜಾತ್ = ವಾದದ ನೆಪದಿದಂದ, ಕ್ಷೇಪಕಾಮಾಃ = ಮಧ್ವಾಚಾರ್ಯರನ್ನು ನಿರಾಕರಿಸುವ ಇಚ್ಛೆಯುಳ್ಳವರಾಗಿ)

ವ್ರತ್ಯಾಕಾರಂ = ಸನ್ಯಾಸಿಯ ವೇಷ ಆಕಾರವುಳ್ಳ

ವಾಸುದೇವದ್ವಿಷಂ = ವಸುದೇವ ಪುತ್ರನಾದ ಶ್ರೀಕೃಷ್ಣನನ್ನು ದ್ವೇಷಿಸುವ

ಪ್ರಾಜ್ಞಂ ಮನ್ಯಂ = ತನ್ನನ್ನು ಪಂಡಿತನೆಂದು ತಿಳಿದುಕೊಂಡಿರುವ

ತಂ = ಆ ಪ್ರಸಿದ್ಧನಾದ

ಪುಂಡರೀಕಾಭಿಧಾನಂ = ಪುಂಡರೀಕಪುರಿ ಎಂಬ ಹೆಸರುಳ್ಳವನನ್ನು

ಯತ್ತಂ = ಸನ್ನದ್ಧನನ್ನಾಗಿ (ಯತ್ನಂ = ಪ್ರಯತ್ನವುಳ್ಳವನನ್ನಾಗಿ)

ಚಕ್ರುಃ = ಮಾಡಿದರು.

ತಾತ್ಪರ್ಯ— ದುರಾಲೋಚನೆಯುಳ್ಳ ಆ ಮಾಯಾವಾದಿಗಳು ದುಷ್ಟವಾದ ಮಂತ್ರಾಲೋಚನೆಯನ್ನು ಮಾಡಿ ಉಡುಪಿಯಲ್ಲಿರುವ ದೇವಾಲಯದಲ್ಲಿ ಸಭೆ ಸೇರಿದರು. ಅಲ್ಲಿ ನೀವೂ ನಾವೂ ಸೇರಿ ತತ್ತ್ವನಿರ್ಣಯಕ್ಕಾಗಿ ಚರ್ಚೆ ಮಾಡೋಣ ಎಂದು ಹೇಳಿ ವಾದಕ್ಕಾಗಿ ಶ್ರೀಮಧ್ವಾಚಾರ್ಯರನ್ನು ಕರೆದರು. ವಾದದ ಈ ನೆಪದಿಂದ ಮಧ್ವಾಚಾರ್ಯರನ್ನು ಕರೆದು ನಿಂದಿಸಬೇಕು. ಅವರನ್ನು ನಿರಾಕರಿಸಬೇಕು ಎಂಬುದೇ ಅವರ ಉದ್ದೇಶವಾಗಿತ್ತು. ಸನ್ನ್ಯಾಸಿ ವೇಷಧಾರಿಯಾಗಿ ತಾನು ಅತ್ಯಂತ ಬುದ್ಧಿವಂತನು ಎಂದು ತಿಳಿದಿರುವ ಹಾಗೂ ಪುಂಡರೀಕ ವಾಸುದೇವನಂತೆ ವಿಷ್ಣುದ್ವೇಷಿಯಾದ ಪುಂಡರೀಕಪುರಿ ಎಂಬುವನನ್ನು ಪ್ರೋತ್ಸಾಹಿಸಿ ಶ್ರೀಮಧ್ವಾಚಾರ್ಯರ ಜತೆಗೆ ವಾದ ಮಾಡಲು ಅವನನ್ನು ಅವರು ಸಜ್ಜುಗೊಳಿಸಿದರು. ಶ್ರೀಮಧ್ವಾಚಾರ್ಯರು ಮೊದಲು ವಾದವನ್ನು ಪ್ರಾರಂಭಿಸಬೇಕೆಂದೂ ಪುಂಡರೀಕಪುರಿಯು ಪ್ರತಿವಾದಿಯಾಗಿ ಅವರ ವಾದಕ್ಕೆ ಉತ್ತರ ಕೊಡಬೇಕೆಂದೂ ಅವರು ನಿರ್ಧರಿಸಿ ಶ್ರೀಮಧ್ವಾಚಾರ್ಯರನ್ನು ವಾದಕ್ಕಾಗಿ ಕರೆದರು.

ವಿಗ್ರಹ—

ವ್ರತ್ಯಾಕಾರಂ— ವ್ರತಂ ಅಸ್ಯ ಅಸ್ತೀತಿ ವ್ರತೀ, ವ್ರತಿನಃ ಆಕಾರಃ ಯಸ್ಯ ಸಃ ವ್ರತ್ಯಾಕಾರಃ, ತಂ ವ್ರತ್ಯಾಕಾರಂ ।

ವಾಸುದೇವದ್ವಿಷಂ— ವಾಸುದೇವಸ್ಯ ದ್ವಿಟ್ ವಾಸುದೇವದ್ವಿಟ್, ತಂ ವಾಸುದವದ್ವಿಷಂ ।

ಪ್ರಾಜ್ಞಂಮನ್ಯಂ— ಆತ್ಮಾನಂ ಪ್ರಾಜ್ಞಂ ಮನ್ಯತೇ ಇತಿ ಪ್ರಾಜ್ಞಂಮನ್ಯಃ, ತಂ ಪ್ರಾಜ್ಞಂಮನ್ಯಂ ।

ಪುಂಡರೀಕಾಭಿಧಾನಂ— ಪುಂಡರೀಕ ಇತಿ ಅಭಿಧಾನಂ ಯಸ್ಯ ಸಃ ಪುಂಡರೀಕಾಭಿದಾನಃ, ತಂ ಪುಂಡರೀಕಾಭಿಧಾನಂ ।

ವಾದವ್ಯಾಜಾಕ್ಷೇಪಕಾಮಾಃ— ವಾದ ಇತಿ ವ್ಯಾಜಃ ವಾದವ್ಯಾಜಃ, ವಾದವ್ಯಾಜೇನ ಆಕ್ಷೇಪಃ ವಾದ-ವ್ಯಾಜಾಕ್ಷೇಪಃ, ವಾದವ್ಯಾಜಾಕ್ಷೇಪೇ ಕಾಮಃ ಯೇಷಾಂ ತೇ ವಾದವ್ಯಾಜಾಕ್ಷೇಪಕಾಮಾಃ । (ವಾದ ಇತಿ ವ್ಯಾಜಃ ವಾದವ್ಯಾಜಃ, ವಾದವ್ಯಾಜಂ ನಿಮಿತ್ತೀಕೃತ್ಯ ವಾದವ್ಯಾಜಾತ್, ಕ್ಷೇಪೇ ಕಾಮಃ ಯೇಷಾಂ ತೇ ಕ್ಷೇಪಕಾಮಾಃ) ।

ಯತ್ನಂ— ಯತ್ನಃ ಏಷಾಂ ಅಸ್ತೀತಿ ಯತ್ನಃ, ತಂ ಯತ್ನಂ ।

ರೂಪ್ಯಪೀಠಾಲಯೇ— ರೂಪ್ಯಪೀಠಸ್ಯ ಆಲಯಃ ರೂಪ್ಯಪೀಠಾಲಯಃ, ತಸ್ಮಿನ್ ರೂಪ್ಯಪೀಠಾಲಯೇ ।

ಕ್ರಿಯಾಪದ— ಚಕ್ರುಃ ಇದೇ ಸರ್ಗದ 25ನೆಯ ಶ್ಲೋಕದಲ್ಲಿ ಈ ಧಾತುವಿನ ರೂಪಗಳನ್ನು ಬರೆಯಲಾಗಿದೆ. ।

ಕೋಶ— ವ್ಯಾಕರಣ ವಿಶೇಷ - ಕುಮಂತ್ರಾತ್ (ಕುಮಂತ್ರಾಃ) ಎಂಬಲ್ಲಿ 'ಪಾಪಕುತ್ಸೇಷದರ್ಥೇ ಕುಃ' ಎಂಬ ಅಮರದಿಂದ ಕು ಎಂಬುದಕ್ಕೆ ಕುತ್ಸಿತ ಹೀನವಾದುದು ಎಂದು ಅರ್ಥ. ವೇದ ಭೇದೇ ಗುಪ್ತವಾದೇ ಮಂತ್ರಃ ಎಂಬ

ಅಮರಕೋಶದಿಂದ ಮಂತ್ರವೆಂದರೆ ಇಲ್ಲಿ ರಹಸ್ಯವಾಗಿ ಮಾತನಾಡುವುದು ಎಂದು ಅರ್ಥ. ವಾದವ್ಯಾಜವೆಂಬಲ್ಲಿ ವ್ಯಾಜವೆಂದರೆ ನೆಪ, ಕಪಟ 'ಕಪಟೋಽಸ್ತ್ರೀ ವ್ಯಾಜದಂಭೋಪಧಯಶ್ಛದ್ಮಕೈತವೇ ಎಂದು ಅಮರಕೋಶ. ವ್ಯಾದವ್ಯಾಜಾತ್ ಎಂಬಲ್ಲಿ ವಾದವ್ಯಾಜಂ ನಿಮಿತ್ತೀಕೃತ್ಯ ವಾದವ್ಯಾಜಾತ್ ಎಂದು ವಿಗ್ರಹ. ಲ್ಯಬರ್ಥವು ಲೋಪ ಹೊಂದಿದಾಗ ಲ್ಯಬ್ ಲೋಪೇ ಕರ್ಮಣ್ಯಧಿಕರಣೇ ಚ ಎಂಬ ವಾರ್ತಿಕದಿಂದ ಪಂಚಮೀ, ಪ್ರಾಜ್ಞಂ ಮನ್ಯಂ ಎಂಬಲ್ಲಿ ಆತ್ಮಾನಂ ಪ್ರಾಜ್ಞಂ ಮನ್ಯತೇ ಎಂದು ವಿಗ್ರಹ. ಆತ್ಮಮಾನೇ ಖಶ್ ಎಂಬ ಸೂತ್ರದಿಂದ ಖಶ್ ಪ್ರತ್ಯಯ. ಮುಮಾಗಮ ।

ಪ್ರಯೋಗ— ರೂಪ್ಯಪೀಠಾಲಯೇ ಮಿಲಿತೈಃ ತೈಃ ಅಮೀಭಿಃ ಕುಮಂತ್ರಾತ್ ವಾದವ್ಯಾಜಾಕ್ಷೇಪಕಾಮ್ಯೈಃ ಸದ್ಭಿಃ ಪ್ರಾಜ್ಞಂಮನ್ಯೈಃ ವಿಪ್ರಾಕಾರಃ ವಾಸುದೇವದ್ವಿಟ್ ಸಃ ಪುಂಡರೀಕಾಭಿಧಾನಃ ಯತ್ತಃ ಚಕ್ರೇ (ಪ್ರಯತ್ನವುಳ್ಳವನಾಗಿ ಮಾಡಲ್ಪಟ್ಟನು) ಕರ್ಮಣಿ ।

★ ★ ★

ಅವತಾರಿಕಾ— ಆ ಪುಂಡರೀಕ ಪುರಿಯು ಶ್ರೀಮಧ್ವಾಚಾರ್ಯರನ್ನು ವಾದಕ್ಕೆ ಕರೆದ ರೀತಿಯನ್ನು ವರ್ಣಿಸುತ್ತಾರೆ.

**ಯದ್ವತ್ ಸಿಂಹಂ ಗ್ರಾಮಸಿಂಹೋಽಶುಚೀಚ್ಛೋ**
**ಹಂಸಂ ಕಾಕೋ ಯದ್ವದೇವೈಕದೃಷ್ಟಿಃ ।**
**ಯದ್ವನ್ಮಾಯೀ ಭೂರಿಮಾಯುಸ್ತರಕ್ಷುಂ**
**ತದ್ವದ್ ವಿದ್ವದ್ವರ್ಯಮಾಹ್ವಾಸ್ತ ಮೂಢಃ ॥ 27 ॥**

ಪದಚ್ಛೇದ— ಯದ್ವತ್, ಸಿಂಹಂ, ಗ್ರಾಮಸಿಂಹಃ, ಅಶುಚೀಚ್ಛಃ, ಹಂಸಂ, ಕಾಕಃ, ಯದ್ವತ್, ಏವ, ಏಕದೃಷ್ಟಿಃ, ಯದ್ವತ್, ಮಾಯೀ, ಭೂರಿಮಾಯುಃ, ತರಕ್ಷುಂ, ತದ್ವತ್, ವಿದ್ವದ್ವರ್ಯಂ, ಆಹ್ವಾಸ್ತ, ಮೂಢಃ (ಪಾ) ಅಶುಚೀ ಚ್ಛುಃ ।

ಅನ್ವಯ— ಮೂಢಃ, ಅಶುಚೀಚ್ಛಃ (ಚ್ಛುಃ) ಗ್ರಾಮಸಿಂಹಃ ಸಿಂಹಂ ಯದ್ವತ್, ಏಕದೃಷ್ಟಿಃ ಕಾಕಃ ಹಂಸಂ ಯದ್ವತ್ ಮಾಯೀ ಭೂರಿಮಾಯುಃ ತರಕ್ಷುಂ ಯದ್ವತ್, ತದ್ವತ್ ಏವ ವಿದ್ವದ್ವರ್ಯಂ ಆಹ್ವಾಸ್ತ ।

ಅನ್ವಯಾರ್ಥ—

*ಶ್ರೀಮಧ್ವಾಚಾರ್ಯರ ಮಹಿಮೆಯನ್ನು ತಿಳಿಯದ ದಡ್ಡನಾದ ಪುಂಡರೀಕಪುರಿಯು*

**ಅಶುಚೀಚ್ಛಃ** = ಅಪವಿತ್ರವಾದ ಎಂಜಲು ಅಮೇಧ್ಯಾದಿ ವಸ್ತುಗಳಲ್ಲಿ (ವೇದಾದಿ ಪ್ರಮಾಣ ವಿರುದ್ಧವಾದ ಜೀವಬ್ರಹ್ಮೈಕ್ಯದಲ್ಲಿ)

**ಇಚ್ಛಃ (ಇಚ್ಛುಃ)** = ಅಪೇಕ್ಷೆಯುಳ್ಳ

**ಗ್ರಾಮಸಿಂಹಃ** = ನಾಯಿಯು

**ಸಿಂಹಂ ಯದ್ವತ್** = ಸಿಂಹವನ್ನು ಹೇಗೋ

**ಏಕದೃಷ್ಟಿಃ** = ಒಂದು ಕಣ್ಣುಳ್ಳ, ಬ್ರಹ್ಮ ಒಂದೇ ಸತ್ಯವು ಉಳಿದುದೆಲ್ಲವೂ ಸುಳ್ಳು ಎಂಬ ಐಕ್ಯ ಜ್ಞಾನವುಳ್ಳ

**ಕಾಕಃ** = ಕಾಗೆಯು

**ಹಂಸಂ ಯದ್ವತ್** = ಹಂಸವನ್ನು ಹೇಗೋ

**ಮಾಯೀ** = ಕಪಟವುಳ್ಳ (ಸರ್ವ ಪ್ರಪಂಚಕ್ಕೂ ಉಪಾದಾನವಾಗಿದ್ದು ಬ್ರಹ್ಮವನ್ನೇ ಆಶ್ರಯಿಸಿರುವ ಅಪ್ರಾಮಾಣಿಕವಾದ ಮಾಯೆಯನ್ನು ಒಪ್ಪುವ)

**ಭೂರಿಮಾಯುಃ** = ನರಿಯು

**ತರಕ್ಷುಂ ಯದ್ವತ್** = ಚಿರತೆಯನ್ನು ಹೇಗೋ (ತರಕ್ಷುಃ = Hyena)

ತದ್ವತ್ ಏವ = ಹಾಗೆಯೇ

ವಿದ್ವದ್ವರ್ಯಂ = ವಿದ್ವಾಂಸರಲ್ಲಿ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರನ್ನು

ಆಹ್ವಾಸ್ತ = ವಾದಕ್ಕಾಗಿ ಕರೆದನು.

**ತಾತ್ಪರ್ಯ—** ನಾಯಿಯು ಎಂಜಲು, ಅಮೇಧ್ಯ ಮುಂತಾದ ಹೀನವಸ್ತುಗಳನ್ನು ಬಯಸುವಂತೆ, ಶ್ರೀಮಧ್ವಾಚಾರ್ಯರ ಮಹಿಮೆಯನ್ನು ತಿಳಿಯದ ದಡ್ಡನಾದ ಪುಂಡರೀಕಪುರಿಯು ವೇದಾದಿ ಪ್ರಮಾಣ ವಿರುದ್ಧವಾದ ತಾನೇ ಬ್ರಹ್ಮನೆಂಬ ಅಪವಿತ್ರವಾದ ಅನುಸಂಧಾನವುಳ್ಳವನಾಗಿದ್ದನು. ಒಂದೇ ಕಣ್ಣುಳ್ಳ ಕಾಗೆಯಂತೆ ಬ್ರಹ್ಮ ಒಂದೇ ಸತ್ಯವು ಮತ್ತೆಲ್ಲವೂ ಸುಳ್ಳು ಎಂಬ ತಿಳುವಳಿಕೆಯುಳ್ಳವನಾಗಿದ್ದನು. ನರಿಯು ಮಾಯೆ ಅಂದರೆ ಕಪಟವುಳ್ಳದ್ದು. ಈ ಪುಂಡರೀಕಪುರಿಯೂ ಕೂಡ, ಸಮಸ್ತ ಪ್ರಪಂಚಕ್ಕೂ ಉಪಾದಾನಕಾರಣವಾದ ಅಪ್ರಾಮಾಣಿಕವಾದ ಮಾಯೆಯು ಬ್ರಹ್ಮನನ್ನು ಆಶ್ರಯಿಸಿಕೊಂಡಿದೆ ಎಂದು ಒಪ್ಪಿರುವುದರಿಂದ ಮಾಯಿಯಾಗಿದ್ದಾನೆ. ಅಂತೆಯೇ ಇವನು ನಾಯಿಯು ಸಿಂಹವನ್ನು ಸ್ಪರ್ಧೆಗೆ ಕರೆಯುವಂತೆಯೂ ಕಾಗೆಯು ಹಂಸವನ್ನು ಸ್ಪರ್ಧೆಗೆ ಕರೆಯುವಂತೆಯೂ, ನರಿಯು ಚಿರತೆಯನ್ನು ಸ್ಪರ್ಧೆಗೆ ಕರೆಯುವಂತೆಯೂ ವಿದ್ವಾಂಸರಲ್ಲಿ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರನ್ನು ಸ್ಪರ್ಧೆಗೆ ಕರೆದನು.

**ವಿಗ್ರಹ—**

**ಗ್ರಾಮಸಿಂಹಃ—** ಗ್ರಾಮಸ್ಯ ಸಿಂಹಃ ಗ್ರಾಮಸಿಂಹಃ । ಇದು ನಾಯಿ ಎಂಬ ಅರ್ಥದಲ್ಲಿ ಶಕ್ತವಾದ ಪದವಲ್ಲ. ಊರಿನಲ್ಲಿ ಸಿಂಹದಂತೆ ಆರ್ಭಟಿಸುತ್ತದೆ ಎಂಬ ಲಾಕ್ಷಣಿಕಾರ್ಥದಲ್ಲಿ ಗ್ರಾಮಸಿಂಹ ಎಂದು ಪ್ರಯೋಗಿಸಲಾಗುತ್ತದೆ.

**ಅಶುಚೀಚ್ಛಃ—** ನ ಶುಚಿಃ ಅಶುಚಿಃ, ಅಶುಚೌ ಇಚ್ಛಾ ಯಸ್ಯ ಸಃ ಅಶುಚೀಚ್ಛಃ ।

**ಏಕದೃಷ್ಟಿಃ—** ಏಕಾ ದೃಷ್ಟಿಃ ಯಸ್ಯ ಸಃ ಏಕದೃಷ್ಟಿಃ ।

**ಮಾಯೀ—** ಮಾಯಾ ಅಸ್ಯ ಅಸ್ತೀತಿ ಮಾಯೀ ।

**ಭೂರಿಮಾಯುಃ—** ಮಾಯಾ ಅಸ್ಯ ಅಸ್ತೀತಿ ಭೂರಿಮಾಯಃ । ಭೂರಿಮಾಯು ಎಂಬ ಉಕಾರಾಂತ ಶಬ್ದವು ಕೋಶಗಳಲ್ಲಿ ಕಂಡಿಲ್ಲ. ಆದರೂ ಭೂರಿಃ ಮಾಯುಃ ಪಿತ್ತಂ ಯಸ್ಯ ಸಃ ಎಂದು ವಿಗ್ರಹ ಮಾಡಿಕೊಂಡು ಈ ಶಬ್ದವನ್ನು ಸಾಧಿಸಬೇಕು. (ಭೂರಿಮಾಯ ಎಂಬ ಪಾಠವಿದ್ದರೆ ಚೆನ್ನಾಗಿರುತ್ತದೆ).

**ತರಕ್ಷು—** ತರಕ್ಷು ಎಂದರೆ ಶಿವಂಗಿ ಎಂಬ ಅರ್ಥವನ್ನೇ ಕೋಶಗಳಲ್ಲಿ ಕೊಟ್ಟಿದ್ದಾರೆ. ಕತ್ತೆ ಕಿರುಬ ಎಂಬ ಅರ್ಥವೂ ಇದಕ್ಕಿದೆ. ಆದರೆ ವ್ಯಾಖ್ಯಾನಗಳಲ್ಲಿ ಹುಲಿ ಎಂಬ ಅರ್ಥವನ್ನು ಕೊಟ್ಟಿದ್ದಾರೆ. ಅದೂ ಲಾಕ್ಷಣಿಕಾರ್ಥ ಎಂದು ಇಟ್ಟುಕೊಳ್ಳಬೇಕು. ತರುಕ್ಷುವರಕೃತ್ತಿಮತ್ ಎಂದು ಶಿವಸ್ತುತಿಯಲ್ಲಿ ಪ್ರಯೋಗ-ವಿರುವುದರಿಂದ ತರಕ್ಷು ಎಂದರೆ ಹುಲಿ ಎಂಬ ಅರ್ಥವೂ ಇದೆ ಎಂದು ಊಹಿಸಬಹುದು. ವಿದ್ವತ್ಸು ವರ್ಯಃ ವಿದ್ವದ್ವರ್ಯಃ ತಂ ।

**ಕ್ರಿಯಾಪದ—** ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಭ್ವಾದಿಃ ಸಕರ್ಮಕಃ ಅಕರ್ಮಕಶ್ಚ ಅನಿಟ್ ಉಭಯಪದಿ to vie to call by nae to invoke ಆ+ ಆಹ್ವಾಸ್ತಲುಙ್ ಸ್ಪರ್ಧಾಯಾಮಾಙಃ (1-3-31) ಕೃಷ್ಣಶ್ಚಾಣೂರಮಾಹ್ವಯತೇ. ಸ್ಪರ್ಧಾಯಾಂ ಕಿಂ ? ಪುತ್ರಮಾಹ್ವಯತಿ ಈ ಸೂತ್ರದಿಂದ ಆತ್ಮನೇಪದಿ ಪ್ರಥಮಪುರುಷೇ ಏಕವಚನೇ 'ಆಹ್ವಾಸ್ತ' ಇತಿ ರೂಪಮ್ ।

ಆಹ್ವಾಸ್ತ ಆಹ್ವಾಸಾತಾಂ ಆಹ್ವಾಸತ, ಆಹ್ವಾಸ್ಥಾಃ ಆಹ್ವಾಸಾಥಾಂ ಆಹ್ವಾಧ್ವಂ, ಆಹ್ವಾಸಿ ಆಹ್ವಾಸ್ವಹಿ ಆಹ್ವಾಸ್ಮಹಿ ॥

**ಕೋಶ—** ಭೂರಿಮಾಯ = ನರಿ, ಸ್ತ್ರಿಯಾಂ ಶಿವಾ ಭೂರಿಮಾಯು ಗೋಮಾಯು ಮೃಗಧೂರ್ತಕಾಃ ಅಮರ. ತರಕ್ಷುಃ = ಹುಲಿ, ಶಾರ್ದೂಲದ್ವೀಪಿನೌ ವ್ಯಾಘ್ರೇ ತರಕ್ಷುಸ್ತು ಮೃಗಾದನಃ ಅಮರ.

ಪ್ರಯೋಗ— ಮೂಢೇನ ಅಶುಚೀಚ್ಚೇನ ಗ್ರಾಮಸಿಂಹೇನ ಸಿಂಹಃ ಯದ್ವತ್, ಏಕದೃಷ್ಟಿನಾ ಕಾಕೇನ ಹಂಸಃ ಯದ್ವತ್ ಮಾಯಿನಾ ಭೂರಿಮಾಯಿನಾ ತರಕ್ಷುಃ ಯದ್ವತ್, ತದ್ವತ್ ಏವ ವಿದ್ವದ್ ವರ್ಯಃ ತೇನ ಆಹ್ವಾಯಿ.

★ ★ ★

ಅವತಾರಿಕಾ— ಆಗ ಶ್ರೀಮಧ್ವಾಚಾರ್ಯರು ಅವನ ವಾದಾಹ್ವಾನವನ್ನು ಸ್ವೀಕರಿಸಿದ ಬಗೆಯನ್ನು ವರ್ಣಿಸುತ್ತಾರೆ.

**ಅಪ್ಯಲ್ಪೋಽಸೌ ನಹ್ಯುಪೇಕ್ಷಾಂಬಭೂವೇ**
**ಲೋಲಾತ್ಮೇವಾದಕ್ಷಪಕ್ಷಃ ಪತಂಗಃ ।**
**ಮಧ್ವೇನಾಹೋ ದುಸ್ತರೇಣ ಸ್ವಭಾವಾ-**
**ತ್ತೇಜೋರಾಜೀ(ಶೀ) ರಾಜಿತೇನಾಗ್ನಿನೇವ ॥ 28 ॥**

ಪದಚ್ಛೇದ— ಅಪಿ, ಅಲ್ಪಃ, ಅಸೌ, ನ, ಹಿ, ಉಪೇಕ್ಷಾಂಬಭೂವೇ, ಲೋಲಾತ್ಮಾ, ಇವ, ಅದಕ್ಷಪಕ್ಷಃ, ಪತಂಗಃ, ಮಧ್ವೇನ, ಅಹೋ, ದುಸ್ತರೇಣ, ಸ್ವಭಾವಾತ್, ತೇಜೋರಾಜೀರಾಜಿತೇನ, ಅಗ್ನಿನಾ, ಇವ ।

ಅನ್ವಯ— ಲೋಲಾತ್ಮಾ ಅದಕ್ಷಪಕ್ಷಃ ಪತಂಗಃ ಇವ ಅಲ್ಪಃ ಅಪಿ, ಅಸೌ, ಸ್ವಭಾವಾತ್ ದುಸ್ತರೇಣ ಮಧ್ವೇನ, ತೇಜೋರಾಜೀ (ರಾಶೀ) ರಾಜಿತೇನ ಅಗ್ನಿನಾ ಇವ ನ ಉಪೇಕ್ಷಾಂಬಭೂವೇ ಹಿ ಅಹೋ ।

ಅನ್ವಯಾರ್ಥ—

ಲೋಲ = ಚಂಚಲವಾದ
ಆತ್ಮಾ = ಮನಸ್ಸುಳ್ಳ
ಅದಕ್ಷಪಕ್ಷಃ = ಶಕ್ತಿ ಇಲ್ಲದ ರೆಕ್ಕೆಯುಳ್ಳ ತನ್ನ ಸಿದ್ಧಾಂತವನ್ನು ಸಮರ್ಥಿಸಲು ಮತ್ತು ಪರಸಿದ್ಧಾಂತವನ್ನು ಖಂಡಿಸಲು ಅಸಮರ್ಥವಾದ ಮತವುಳ್ಳ ,
ಪತಂಗಃ ಇವ = ದೀಪದ ಹುಳುವಿನಂತೆ
ಅಲ್ಪಃ ಅಪಿ = ಸಣ್ಣ ಮನುಷ್ಯನಾದರೂ
ಅಸೌ = ಈ ಪುಂಡರೀಕಪುರಿಯು
ಸ್ವಭಾವಾತ್ = ಮಂತ್ರ ಔಷಧಿಗಳಿಲ್ಲದೆ ಸ್ವರೂಪಸಾಮರ್ಥ್ಯದಿಂದಲೇ
ದುಸ್ತರೇಣ = ಆಕ್ರಮಿಸಲು ಅಶಕ್ಯವಾದ, ಜಯಿಸಲು ಅಶಕ್ಯರಾದ
ಮಧ್ವೇನ = ಶ್ರೀಮಧ್ವಾಚಾರ್ಯರಿಂದ
ತೇಜೋರಾಜೀ = (ರಾಶೀ) ಪ್ರಕಾಶದ ಸಮೂಹಗಳಿಂದ
ರಾಜಿತೇನ = ಪ್ರಕಾಶಗೊಳ್ಳುತ್ತಿರುವ
ಅಗ್ನಿನಾ ಇವ = ಬೆಂಕಿಯಿಂದಲೋ ಎಂಬಂತೆ
ನ ಉಪೇಕ್ಷಾಂಬಭೂವೇ ಹಿ = ಉದಾಸೀನ ಮಾಡಲ್ಪಡಲಿಲ್ಲ.
ಅಹೋ = ಆಶ್ಚರ್ಯ.

ತಾತ್ಪರ್ಯ— ದೀಪದ ಹುಳುವಿನ ಮನಸ್ಸು ಬಹಳ ಚಂಚಲ, ಅದರ ರೆಕ್ಕೆಗಳಲ್ಲಿ ಬಲವಿರುವುದಿಲ್ಲ. ಅದು ಬಹಳ ಸಣ್ಣ ಪ್ರಾಣಿ. ಆದರೂ ಅದು ಬೆಂಕಿಯ ಮೇಲೆ ಬೀಳಲು ಬಂದಾಗ ಸ್ವಭಾವದಿಂದಲೇ ಕಾಂತಿಪುಂಜಗಳಿಂದ ಕೂಡಿದ ಬೆಂಕಿಯು ಇದು ಸಣ್ಣ ಪ್ರಾಣಿ, ಇದು ಮೇಲೆ ಬಿದ್ದರೂ ನಾನೇಕೆ ಸುಡಲಿ ? ಎಂದು ಉಪೇಕ್ಷಿಸದೆ ಸುಟ್ಟು ಬೂದಿ

ಮಾಡುತ್ತದೆ, ಪುಂಡರೀಕಪುರಿಯು ಚಂಚಲ ಮನಸ್ಸಿನವನು. ತನ್ನ ಸಿದ್ಧಾಂತವನ್ನು ಸಮರ್ಥಿಸಲು ಸಾಕಷ್ಟು ಬಲವಿಲ್ಲದವನು ವಾಸ್ತವಿಕವಾಗಿ ಅವನ ಸಿದ್ಧಾಂತವೇ ದುರ್ಬಲವಾದುದು. ಇಂತಹ ಸಣ್ಣ ಮನುಷ್ಯನಾದರೂ ಅವನನ್ನು ಶ್ರೀಮಧ್ವಾಚಾರ್ಯರು ಉದಾಸೀನ ಮಾಡಲಿಲ್ಲ, ಅವರು ಮಂತ್ರ ಔಷಧಾದಿಗಳ ಸಹಾಯವನ್ನು ಪಡೆಯದೆಯೇ ಇರುವರು, ಸ್ವರೂಪಸಾಮರ್ಥ್ಯದಿಂದಲೇ ಸೋಲಿಸಲು ಶಕ್ಯರು. ಅಗ್ನಿಯಂತೆ ಪರಪಕ್ಷವನ್ನು ಸುಟ್ಟುಬಿಡುವ ಸ್ವಭಾವವುಳ್ಳವರು, ಆದ್ದರಿಂದ ಅವರ ಸ್ವಭಾವಕ್ಕನುಗುಣವಾಗಿ ಅವರು ಪುಂಡರೀಕಪುರಿಯ ಆಹ್ವಾನವನ್ನು ಸ್ವೀಕರಿಸಿ, ವಾದಕ್ಕಾಗಿ ಗೊತ್ತುಮಾಡಲಾದ ಸ್ಥಳಕ್ಕೆ ಹೋದರು.

ವಿಗ್ರಹ—

**ಲೋಲಾತ್ಮಾ**— ಲೋಲಃ ಆತ್ಮಾ ಯಸ್ಯ ಸಃ ಲೋಲಾತ್ಮಾ ।

**ಅದಕ್ಷಪಕ್ಷಃ**— ನ ದಕ್ಷಃ ಅದಕ್ಷಃ, ಅದಕ್ಷಃ ಪಕ್ಷಃ ಯಸ್ಯ ಸಃ ಅದಕ್ಷಪಕ್ಷಃ ।

**ದುಸ್ತರೇಣ**— ದುಃಖೇನ ಕರ್ತುಂ ಶಕ್ಯಂ ದುಸ್ತರಃ, ತೇನ ದುಸ್ತರೇಣ ।

**ತೇಜೋರಾಜೀರಾಜಿತೇನ**— ತೇಜಸಾಂ ರಾಜೀ (ರಾಶಿಃ) ತೇಜೋರಾಜೀ(ಶಿಃ), ತೇಜೋರಾಜ್ಯಾ ರಾಜಿತಃ ತೇಜೋರಾಜೀರಾಜಿತಃ, ತೇನ ತೇಜೋರಾಜೀರಾಜಿತೇನ ।

**ಕ್ರಿಯಾಪದ**— ಈಕ್ಷದರ್ಶನೇ ಸಕರ್ಮಕಃ ಸೇಟ್ ಆತ್ಮನೇಪದಿ ಕರ್ಮಣಿ ಲಿಟ್ ಪ್ರಥಮಪುರುಷೇ ಏಕವಚನೇ "ಉಪೇಕ್ಷಾಂಬಭೂವೇ" ಇತಿ ರೂಪಮ್ । (ಉಪ + ಈಕ್ಷಾಂಬಭೂವೇ ಈಕ್ಷಾಂಬಭೂವಾತೇ ಈಕ್ಷಾಂಬಭೂವಿರೇ ಇತ್ಯಾದಿ) ಈಕ್ಷಾಂಚಕ್ರೇ ಈಕ್ಷಾಮಾಸೇ ಎಂಬ ರೂಪಗಳೂ ಇವೆ.

**ಕೋಶ**— ಪತಂಗ = ದೀಪದ ಹುಳ, ಪತಂಗಃ ಶಲಭೇ ಸೂರ್ಯೇ, ವಿಶ್ವ, ಲೋಲ = ಚಂಚಲ, ಲೋಲಸ್ತು ಅಸತೃಷ್ಣಯೋಃ ವಿಶ್ವ, ಆತ್ಮಾ = ಸ್ವಭಾವ, ಆತ್ಮಾ ದೇಹ ಮನೋಬ್ರಹ್ಮಸ್ವಭಾವಧೃತಿಬುದ್ಧಿಷು ವಿಶ್ವ ।

**ಪ್ರಯೋಗ**— ಮಧ್ವೇನ ಅಲ್ಪಃ ಅಪಿ ಅಸೌ ನ ಉಪೇಕ್ಷಾಂಬಭೂವೇ (ಕರ್ತರಿ) । ಮಧ್ವಃ ಅಲ್ಪಂ ಅಪಿ ಅಮುಂ ನ ಉಪೇಕ್ಷಾಂಬಭೂವ (ಕರ್ಮಣಿ) ।

★ ★ ★

**ಅವತಾರಿಕಾ**— ರಜತಪೀಠಪುರದಲ್ಲಿ ಶ್ರೀಮದಾಚಾರ್ಯರು ಸಿದ್ಧಾಂತಸ್ಥಾಪನೆ, ಪ್ರತಿವಾದಿಜಯ ಮತ್ತು ವೇದವ್ಯಾಖ್ಯಾನವನ್ನು ಮಾಡಿದರು ಎಂದು ಹೇಳುತ್ತಾರೆ.

**ಮಾನ್ಯೈರ್ಮಾನ್ಯೈರ್ಭಾಸಮಾನೋಽಸಮಾನ್ಯೈ-**
**ರಾಕ್ಷಿಪ್ಯೈನಂ ಸ್ವಂ ಮತಂ ಸಾಧಯಿತ್ವಾ ।**
**ಪ್ರೀತ್ಯೈ ವಿಷ್ಣೋರುತ್ತಮಪ್ರೀತಿತೀರ್ಥೋ**
**ವೇದವ್ಯಾಖ್ಯಾಂ ವೇದವೇದೀ ಚಕಾರ ॥ 29 ॥**

**ಪದಚ್ಛೇದ**— ಮಾನ್ಯಃ, ಮಾನ್ಯೈಃ, ಭಾಸಮಾನಃ, ಅಸಮಾನ್ಯೈಃ, ಆಕ್ಷಿಪ್ಯ, ಏನಂ, ಸ್ವಂ ಮತಂ ಸಾಧಯಿತ್ವಾ ಪ್ರೀತ್ಯೈ, ವಿಷ್ಣೋಃ, ಉತ್ತಮಪ್ರೀತಿತೀರ್ಥ, ವೇದವ್ಯಾಖ್ಯಾಂ ವೇದವೇದೀ ಚಕಾರ ।

**ಅನ್ವಯ**— ಅಸಮಾನ್ಯೈಃ, ಮಾನ್ಯೈಃ ಮಾನ್ಯಃ ಭಾಸಮಾನಃ ವೇದವೇದೀ ಉತ್ತಮಪ್ರೀತಿತೀರ್ಥಃ, ಏನಂ ಆಕ್ಷಿಪ್ಯ ಸ್ವಂ ಮತಂ ಸಾಧಯಿತ್ವಾ ವಿಷ್ಣೋಃ ಪ್ರೀತ್ಯೈ ವೇದವ್ಯಾಖ್ಯಾಂ ಚಕಾರ ।

ಅನ್ವಯಾರ್ಥ—

ಅಸಮಾನ್ಯೈಃ = ಅಸದೃಶವಾದ (ಪ್ರಬಲವಾದ)
ಮಾನ್ಯೈಃ = ಪ್ರಮಾಣಗಳಿಂದ
ಭಾಸಮಾನಃ = ಶೋಭಿಸುತ್ತಿರುವ
ವೇದವೇದೀ = ವೇದಗಳನ್ನು ತಿಳಿದಿರುವ
ಉತ್ತಮ = ಶ್ರೇಷ್ಠರಾದ
ಪ್ರೀತಿತೀರ್ಥಃ = ಶ್ರೀಮತ್ ಆನಂದತೀರ್ಥರು
ಏನಂ = ಪ್ರತಿವಾದಿಯಾದ ಪುಂಡರೀಕಪುರಿಯನ್ನು
ಆಕ್ಷಿಪ್ಯ = ನಿರಾಕರಿಸಿ
ಸ್ವಂ ಮತಂ = ತನ್ನ ಸಿದ್ಧಾಂತವನ್ನು
ಸಾಧಯಿತ್ವಾ = ಸಾಧಿಸಿ
ವಿಷ್ಣೋಃ =ಶ್ರೀಹರಿಯ
ಪ್ರೀತ್ಯೈ = ಸಂತೋಷಕ್ಕೋಸ್ಕರ
ವೇದವ್ಯಾಖ್ಯಾಂ = ವೇದಗಳ ಪ್ರವಚನವನ್ನು
ಚಕಾರ = ಮಾಡಿದರು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ರಜತಪೀಠಪುರದಲ್ಲಿ ಪುಂಡರೀಕಪುರಿಯ ಎದುರು ತನ್ನ ಸಿದ್ಧಾಂತವನ್ನು ಸಮರ್ಥಿಸುತ್ತಾ ಪ್ರಬಲವಾದ ಎಲ್ಲರೂ ಒಪ್ಪಬೇಕಾಗಿರುವ ವೇದಾದಿಪ್ರಮಾಣಗಳನ್ನು ಉದಾಹರಿಸಿ ಆ ವಾದಿಯನ್ನು ಪರಾಯಜಯಗೊಳಿಸಿದರು. ಹೀಗೆ ಪ್ರತಿವಾದಿಸಿದ್ಧಾಂತವನ್ನು ಖಂಡಿಸಿ ತನ್ನ ಸಿದ್ಧಾಂತವನ್ನು ಸ್ಥಾಪಿಸಿದಾಗ ನಿರುತ್ತರನಾಗಿ ಆ ಪುಂಡರೀಕಪುರಿಯು ಅಲ್ಲಿಂದ ಹೊರಟುಹೋದರು. ಅನಂತರ ಶ್ರೀಮದಾನಂದತೀರ್ಥರು 'ಶ್ರೀಹರಿಯು ತನ್ನ ಗುಣಕಥನದಿಂದ ಸುಪ್ರೀತನಾಗಲಿ' ಎಂಬ ಅಭಿಪ್ರಾಯದಿಂದ, ವೇದಗಳ ಕೆಲವು ಮಂತ್ರಗಳನ್ನು ಸುಸ್ವರದಿಂದ ಪಠಿಸಿ ಅವುಗಳ ಅರ್ಥವನ್ನು ವಿವರಿಸುತ್ತಾ ಪ್ರವಚನ ಮಾಡಿದರು.

ವಿಗ್ರಹ—

ಮಾನ್ಯೈಃ— ಮಾನಯಿತುಂ ಯೋಗ್ಯಾನಿ ಮಾನ್ಯಾನಿ, ತೈಃ ಮಾನ್ಯೈಃ ।
ಅಸಮಾನ್ಯೈಃ— ನ ವಿದ್ಯತೇ ಸಮಾನಂ ಯೇಷಾಂ ತಾನಿ ಅಸಮಾನಾನಿ, ಅಸಮಾನ್ಯೈಃ ।
ಉತ್ತಮಪ್ರೀತಿತೀರ್ಥಃ— ಪ್ರೀತಿಃ (ಪ್ರೀತಿಕರಂ) ತೀರ್ಥಂ ಯಸ್ಮಾತ್ ಸಃ ಪ್ರೀತಿತೀರ್ಥಃ, ಉತ್ತಮಶ್ಚಾಸೌ ಪ್ರೀತಿತೀರ್ಥಶ್ಚ ಉತ್ತಮಪ್ರೀತಿತೀರ್ಥಃ ।
ವೇದವ್ಯಾಖ್ಯಾಂ— ವೇದಾನಾಂ ವ್ಯಾಖ್ಯಾ ವೇದವ್ಯಾಖ್ಯಾ, ತಾಂ ವೇದವ್ಯಾಖ್ಯಾಂ ।
ವೇದವೇದೀ— ವೇದಾನ್ ವೇತ್ತೀತಿ ವೇದವೇದೀ ।

ಕ್ರಿಯಾಪದ— ಚಕಾರ ಚಕ್ರತುಃ ಚಕ್ರುಃ ಡುಕೃಞ್‌ಕರಣೇ, ಈ ಕ್ರಿಯಾಪದ ಇದೇ ಸರ್ಗದ 25, 26 ಶ್ಲೋಕಗಳಲ್ಲಿ ಬಂದಿದೆ. ।

ಪ್ರಯೋಗ— ಉತ್ತಮಪ್ರೀತಿತೀರ್ಥಃ ವೇದವ್ಯಾಖ್ಯಾಂ ಚಕಾರ (ಕರ್ತರಿ) ।
ಉತ್ತಮಪ್ರೀತಿ ತೀರ್ಥೇನ ವೇದವ್ಯಾಖ್ಯಾ ಚಕ್ರೇ (ಕರ್ಮಣಿ) ।

★ ★ ★

ಅವತಾರಿಕಾ— ಶ್ರೀಮದಾನಂದತೀರ್ಥರ ವೇದಪಠನ ವೇದವ್ಯಾಖ್ಯಾನಗಳನ್ನು ಕೇಳಲು ಮಹಾವಿದ್ವಾಂಸರು ಬಂದರು ಎಂದು ಹೇಳುತ್ತಾರೆ.

**ಆಮ್ನಾಯಂ ಯೇ ಪೇಠುರಾಮ್ನಾಯಪೂರ್ವಂ**
**ಪ್ರಾಪ್ತಾ ವಿಪ್ರಾಸ್ತತ್ರ ಕೌತೂಹಲೇನ ।**
**ಪರ್ಯಾಸೀನಾಸ್ತಾವದಾಚಾರ್ಯವರ್ಯಂ**
**ಪ್ರೇಕ್ಷ್ಯಂ ಪ್ರೇಕ್ಷಾಂಚಕ್ರಿರೇಽನೇಕಸಂಖ್ಯಾಃ ॥ 30 ॥**

ಪದಚ್ಛೇದ— ಆಮ್ನಾಯಂ, ಯೇ, ಪೇಠುಃ, ಆಮ್ನಾಯಪೂರ್ವಂ, ಪ್ರಾಪ್ತಾಃ, ವಿಪ್ರಾಃ, ತತ್ರ, ಕೌತೂಹಲೇನ, ಪರ್ಯಾಸೀನಾಃ, ತಾವತ್, ಆಚಾರ್ಯವರ್ಯಂ, ಪ್ರೇಕ್ಷ್ಯಂ, ಪ್ರೇಕ್ಷಾಂಚಕ್ರಿರೇ, ಅನೇಕಸಂಖ್ಯಾಃ ।

ಅನ್ವಯ— ಯೇ ಆಮ್ನಾಯಪೂರ್ವಂ ಆಮ್ನಾಯಂ ಪೇಠುಃ, ತಾವತ್, ತತ್ರ ಕೌತೂಹಲೇನ ಪ್ರಾಪ್ತಾಃ ಅನೇಕಸಂಖ್ಯಾಃ ವಿಪ್ರಾಃ ಪರ್ಯಾಸೀನಾಃ ಪ್ರೇಕ್ಷ್ಯಂ, ಆಚಾರ್ಯವರ್ಯಂ ಪ್ರೇಕ್ಷಾಂಚಕ್ರಿರೇ ।

ಅನ್ವಯಾರ್ಥ—

ಯೇ = ಯಾವ ಬ್ರಾಹ್ಮಣರು
ಆಮ್ನಾಯಪೂರ್ವಂ = ಸ್ವರವರ್ಣಾದಿಗಳ ವ್ಯತ್ಯಾಸವಿಲ್ಲದೆ (ಸಂಪ್ರದಾಯಪೂರ್ವಕವಾಗಿ)
ಆಮ್ನಾಯಂ = ವೇದವನ್ನು
ಪೇಠುಃ = ಓದಿದ್ದರೋ
ತಾವತ್ = ಆಗ
ತತ್ರ = ಅಲ್ಲಿ
ಕೌತೂಹಲೇನ = ಕುತೂಹಲದಿಂದ
ಪ್ರಾಪ್ತಾಃ = ಬಂದಿದ್ದ
ಅನೇಕಸಂಖ್ಯಾಃ = ಬಹಳ ಸಂಖ್ಯೆಯುಳ್ಳ
ವಿಪ್ರಾಃ = ಆ ಬ್ರಾಹ್ಮಣರು
ಪರ್ಯಾಸೀನಾಃ = ಸುತ್ತಲೂ ಕುಳಿತವರಾಗಿ
ಪ್ರೇಕ್ಷ್ಯಂ = ನೋಡಲು ಯೋಗ್ಯರಾದ (ಸುಂದರರಾದ)
ಆಚಾರ್ಯವರ್ಯಂ = ಮಂತ್ರ ವ್ಯಾಖ್ಯಾನ ಮಾಡುವವರಲ್ಲಿ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರನ್ನು
ಪ್ರೇಕ್ಷಾಂಚಕ್ರಿರೇ = ನೋಡಿದರು.

ತಾತ್ಪರ್ಯ— ವೇದವನ್ನು ಸ್ವರವರ್ಣಗಳ ವ್ಯತ್ಯಾಸವಿಲ್ಲದೆ ನಿಯಮಪೂರ್ವಕವಾಗಿ ಕಂಠಪಾಠಮಾಡಿ ಸ್ವಾಧೀನ ಮಾಡಿಕೊಂಡಿದ್ದ ಅನೇಕ ಬ್ರಾಹ್ಮಣರು ಅಲ್ಲಿದ್ದರು. ಉಡುಪಿಯಲ್ಲಿ ಶ್ರೀಮಧ್ವಾಚಾರ್ಯರು ವೇದವನ್ನು ಪ್ರವಚನ ಮಾಡಲಿದ್ದಾರೆಂದು ಕೇಳಿ ಅನೇಕ ಮಂದಿ ಬ್ರಾಹ್ಮಣರು ಅಲ್ಲಿಗೆ ಬಂದರು ಮತ್ತು ಕುತೂಹಲದಿಂದ ಶ್ರೀಮಧ್ವಾಚಾರ್ಯರ ವೇದವ್ಯಾಖ್ಯಾನವನ್ನು ಕೇಳಲು ಆ ಸಭೆಯಲ್ಲಿ ಬಂದು ಕುಳಿತರು. ಅವರು ಸುತ್ತಲೂ ಕುಳಿತುಕೊಂಡು ಸುಂದರರಾದ ಶ್ರೀಮಧ್ವಾಚಾರ್ಯರನ್ನು ಬಹಳ ಸಂತೋಷದಿಂದ ನೋಡುತ್ತಾ ಇದ್ದರು. ಆಚಾರ್ಯರ ವೇದೋಚ್ಚಾರಣಾದಿ ವಿಷಯದಲ್ಲಿ ಜಾಗರೂಕರಾಗಿ ಅಲ್ಲಿ ಕುಳಿತು ನೋಡುತ್ತಿದ್ದರು ಎಂದು ತಾತ್ಪರ್ಯ.

ವಿಗ್ರಹ—

**ಆಮ್ನಾಯಪೂರ್ವಂ**— ಆಮ್ನಾಯಃ ಪೂರ್ವಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಆಮ್ನಾಯ ಪೂರ್ವಂ ।

**ಆಚಾರ್ಯವರ್ಯಂ**— ಆಚಾರ್ಯೇಷು ವರ್ಯಃ ಆಚಾರ್ಯವರ್ಯಃ, ತಂ ಆಚಾರ್ಯವರ್ಯಂ ।

**ಪ್ರೇಕ್ಷ್ಯಂ**— ಪ್ರೇಕ್ಷಿತುಂ ಯೋಗ್ಯಃ ಪ್ರೇಕ್ಷ್ಯಃ, ತಂ ಪ್ರೇಕ್ಷ್ಯಂ ।

**ಅನೇಕಸಂಖ್ಯಾಃ**— ಅನೇಕಾ ಸಂಖ್ಯಾ ಯೇಷಾಂ ತೇ ಅನೇಕಸಂಖ್ಯಾಃ ।

**ಕ್ರಿಯಾಪದ**— ಪಠ ವ್ಯಕ್ತಾಯಾಂ ವಾಚಿ ಸಕರ್ಮಕಃ ಸೇಟ್ ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಬಹುವಚನೇ 'ಪೇಠುಃ' ಇತಿ ರೂಪಮ್ ।

ಪೇಠುಃ ಪಪಾಠ ಪೇಠತುಃ ಪೇಠುಃ, ಪೇಠಿಥ ಪೇಠಥುಃ ಪೇಠ, ಪಪಾಠ-ಪಪಠ ಪೇಠಿವ ಪೇಠಿಮ ॥

**ಕೋಶ**— ಆಮ್ನಾಯಃ = ವೇದ, ಶ್ರುತಿಃ ಸ್ತ್ರೀ ವೇದ ಆಮ್ನಾಯಃ ಅಮರ, ಆಮ್ನಾಯ = ವಿಪರೀತ ಪಾಠ ವಿಲ್ಲದಿರುವುದು. ಒಂದೇ ರೀತಿಯ ಸ್ವರವರ್ಣಪದಾದಿಗಳಿಂದ ಕೂಡಿರುವುದು. (ಅಂತಹ ವೇದ) ಆಮ್ನಾಯೋಽನನ್ಯಥಾ ಪಾಠಾತ್- ಶ್ರೀಮದ್ ವಿಷ್ಣುತತ್ತ್ವನಿರ್ಣಯೋಕ್ತಬ್ರಹ್ಮತರ್ಕವಚನ, ಪರ್ಯಾಸೀನಾಃ ಎಂಬಲ್ಲಿ ಪರಿತಃ ಸುತ್ತಲೂ ಆಸೀನಾಃ ಕುಳಿತವರು = ಪರ್ಯಾಸೀನಾಃ, ಸಮಂತತಸ್ತು ಪರಿತಃ ಸರ್ವತೋ ವಿಷ್ವಗಿತ್ಯಪಿ ಅಮರ. ಆಚಾರ್ಯವರ್ಯ ಎಂಬಲ್ಲಿ ಆಚಾರ್ಯ = ಮಂತ್ರ ವ್ಯಾಖ್ಯಾನ ಮಾಡುವವರು. ಮಂತ್ರವ್ಯಾಖ್ಯಾಕೃದಾಚಾರ್ಯಃ ಅಮರ.

ಪ್ರಯೋಗ— ಯೈಃ ಆಮ್ನಾಯಪೂರ್ವಂ ಆಮ್ನಾಯಃ ಪೇಠೇ ತಾವತ್ ತತ್ರ ಕೌತೂಹಲೇನ ಪ್ರಾಪ್ತೈಃ ಅನೇಕಸಂಖ್ಯೈಃ ವಿಪ್ರೈಃ ಪರ್ಯಾಸೀನೈಃ ಪ್ರೇಕ್ಷ್ಯಃ ಆಚಾರ್ಯವರ್ಯಃ ಪ್ರೇಕ್ಷಾಂಚಕ್ರೇ (ಕರ್ಮಣಿ) ।

★ ★ ★

**ಅವತಾರಿಕಾ**— ಆಚಾರ್ಯರ ಮಂತ್ರೋಚ್ಚಾರಣದ ಅದ್ಭುತಶೈಲಿಯನ್ನು ವರ್ಣಿಸುತ್ತಾರೆ.

**ಉಕ್ತಾಂಗೇಭ್ಯಃ ಕಾದಿಕಾನ್ ವ್ಯಂಜಯಂತಂ**
**ತತ್ತನ್ಮಾತ್ರಾ ವ್ಯಂಜನಾದೌ ಪ್ರವೀಣಮ್ ।**
**ತಿಸ್ರೋಽವಸ್ಥಾಸ್ತದ್ಗುಣೈರ್ಭಾವಯಂತಂ**
**ದೇವಾ ದೃಷ್ಟ್ವಾ ಹ್ಯಸ್ಮರನ್ ದೇವದೇವಮ್ ॥ 31 ॥**

**ಪದಚ್ಛೇದ**— ಉಕ್ತಾಂಗೇಭ್ಯಃ, ಕಾದಿಕಾನ್, ವ್ಯಂಜಯಂತಂ, ತತ್ತನ್ಮಾತ್ರಾವ್ಯಂಜನಾದೌ, ಪ್ರವೀಣಂ, ತಿಸ್ರಃ, ಅವಸ್ಥಾಃ, ತದ್ಗುಣೈಃ, ಭಾವಯಂತಂ, ದೇವಾಃ ದೃಷ್ಟ್ವಾ ಹಿ ಅಸ್ಮರನ್ ದೇವದೇವಂ ।

**ಅನ್ವಯ**— ದೇವಾಃ ಉಕ್ತಾಂ ಗೇಭ್ಯಃ ಕಾದಿಕಾನ್ ವ್ಯಂಜಯಂತಂ, ತತ್ತನ್ಮಾತ್ರಾವ್ಯಂಜನಾದೌ ಪ್ರವೀಣಂ, ತಿಸ್ರಃ ಅವಸ್ಥಾಃ ತದ್ಗುಣೈಃ ಭಾವಯಂತಂ ದೃಷ್ಟ್ವಾ, ದೇವದೇವಂ ಅಸ್ಮರನ್ ಹಿ ।

**ಅನ್ವಯಾರ್ಥ**—

**ದೇವಾಃ** = ದೇವತೆಗಳು

**ಉಕ್ತಾಂಗೇಭ್ಯಃ** = ಅಕುಹವಿಸರ್ಜನೀಯಾನಾಂ ಕಂಠಃ ಇತ್ಯಾದಿಯಾಗಿ ಆಯಾ ಅಕ್ಷರಗಳ ಉಚ್ಚಾರಣೆಗೆ ಹೇಳಲ್ಪಟ್ಟ ಆಯಾ ಕಂಠಾದಿ ಅಂಗಗಳಿಂದ,

**ಕಾದಿಕಾನ್** = ಕಕಾರವೇ ಮೊದಲಾದ ವರ್ಣಗಳನ್ನು

ವ್ಯಂಜಯಂತಂ = ಪ್ರಕಟಗೊಳಿಸುತ್ತಾ ಉಚ್ಚರಿಸುತ್ತಿರುವ

ತತ್ತನ್ಮಾತ್ರಾ = ಆಯಾ ಹ್ರಸ್ವಾದಿಗಳಿಗೆ ಯೋಗ್ಯವಾದ ಏಕಮಾತ್ರಾದಿ ಉಚ್ಚಾರಣಕಾಲ ವಿಶೇಷದ

ವ್ಯಂಜನಾದೌ = ಪ್ರಕಟಗೊಳಿಸುವಿಕೆ ಮೊದಲಾದುದರಲ್ಲಿ

ಪ್ರವೀಣಂ = ಚತುರರಾದ

ತಿಸ್ರಃ ಅವಸ್ಥಾಃ = ಮೂರು ಸಂಖ್ಯೆಯುಳ್ಳ ಪರಾ ಪಶ್ಯಂತೀ ಮಧ್ಯಮಾ ವೈಖರೀ ಎಂಬ ದಶೆಗಳನ್ನು

ತದ್ಗುಣೈಃ = ಆಯಾ ಅವಸ್ಥೆಯ ಪ್ರತ್ಯೇಕ ಪ್ರತ್ಯೇಕವಾದ ದೇವತಾಧ್ಯಾನಾತ್ಮಕವಾದ ಗುಣಗಳಿಂದ

ಭಾವಯಂತಂ = ಉಂಟುಮಾಡುತ್ತಿರುವ ಶ್ರೀಮಧ್ವಾಚಾರ್ಯರನ್ನು

ದೃಷ್ಟ್ವಾ = ನೋಡಿ

ಉಕ್ತಾಂಗೇಭ್ಯಃ = ವೇದೋಕ್ತವಾದ ತಲೆ ಮೊದಲಾದ ಅವಯವಗಳಿಂದ

ಕಾದಿಕಾನ್ = ಬ್ರಹ್ಮ ಮೊದಲಾದ ದೇವತೆಗಳನ್ನು

ವ್ಯಂಜಯಂತಂ = ಸೃಷ್ಟಿಸುತ್ತಿರುವ

ತತ್ತನ್ಮಾತ್ರಾ = ಆಕಾಶಾದಿ ಪಂಚಭೂತಗಳ ಗುಣವಾದ ತನ್ಮಾತ್ರವೆಂಬ ಶಬ್ದಾದಿ ಭೂತಸೂಕ್ಷ್ಮಗಳ, ವ್ಯಂಜನಾದೌ ಪ್ರಕಟಗೊಳಿಸುವಿಕೆ ಎಂಬ ಸೃಷ್ಟ್ಯಾದಿಗಳಲ್ಲಿ

ಪ್ರವೀಣಂ = ಚತುರನಾದ

ತಿಸ್ರಃ ಅವಸ್ಥಾಃ = ಸೃಷ್ಟಿ, ಸ್ಥಿತಿ, ಸಂಹಾರಗಳೆಂಬ ಮೂರು ಅವಸ್ಥೆಗಳನ್ನು

ತದ್ಗುಣೈಃ = ಆಯಾ ಅವಸ್ಥೆಗಳಿಗೆ ಕಾರಣಗಳಾದ ಸತ್ತ್ವ ರಜಸ್ಸು ತಮಸ್ಸು ಎಂಬ ಮೂರು ಗುಣಗಳಿಂದ

ಭಾವಯಂತಂ = ಉಂಟುಮಾಡುವ

ದೇವದೇವಂ = ದೇವತೆಗಳಿಗೂ ದೇವತೆಯಾದ ಸರ್ವದೇವೋತ್ತಮನಾದ ಶ್ರೀಹರಿಯನ್ನು

ಅಸ್ಮರನ್ ಹಿ = ಸ್ಮರಿಸಿದರು. ಈ ವಿಷಯವು ನಿಜವಾದುದು.

ತಾತ್ಪರ್ಯ— ಶ್ರೀಮನ್ನಾರಾಯಣನು ನನ್ನ ತಲೆ (ಕ = ಶಿರಸ್ಸು, ತಲೆ) ಮೊದಲಾದವುಗಳಿಂದ ಬ್ರಹ್ಮಾದಿ ದೇವತೆಗಳನ್ನು ಸೃಷ್ಟಿಸುತ್ತಾನೆ. ಆಕಾಶಾದಿ ಪಂಚಮಹಾಭೂತಗಳನ್ನೂ ಸೃಷ್ಟಿಸುತ್ತಾನೆ. ಸತ್ತ್ವ, ರಜಸ್ಸು, ತಮಸ್ಸು ಎಂಬ ಗುಣಗಳಿಂದ ಪ್ರಪಂಚದ ಸೃಷ್ಟಿ, ಸ್ಥಿತಿ, ರಕ್ಷಣೆಗಳನ್ನು ಮಾಡುತ್ತಾನೆ. ಶ್ರೀಮಧ್ವಾಚಾರ್ಯರೂ ಶ್ರೀಮದನಂತಾಸನ ದೇವಾಲಯದಲ್ಲಿ ಗಂಭೀರ ಧ್ವನಿಯಿಂದ ವೇದೋಚ್ಚಾರಣೆ ಮಾಡುತ್ತಾ, ವೇದಾರ್ಥ ನಿರೂಪಣ ಮಾಡುತ್ತಿದ್ದಾಗ ಅವರನ್ನು ನೋಡುತ್ತಿದ್ದ ದೇವತೆಗಳಿಗೆ ವಿಶೇಷವಾದ ರೀತಿಯಿಂದ ಸರ್ವೋತ್ತಮನಾದ ಹರಿಯ ಸ್ಮರಣೆಯುಂಟಾಯಿತು. ಏಕೆಂದರೆ ಶ್ರೀಮಧ್ವಾಚಾರ್ಯರೂ ಶಿಕ್ಷಾದಿಶಾಸ್ತ್ರಗಳಲ್ಲಿ ಹೇಳಿದ ಆಯಾ ಕಂಠ ಮುಂತಾದ ಅಂಗಗಳಿಂದ 'ಕ' ಮುಂತಾದ ವರ್ಣಗಳನ್ನು ಉಚ್ಚರಿಸುತ್ತಿದ್ದರು. ಹ್ರಸ್ವ ದೀರ್ಘ ಪ್ಲುತ ಮುಂತಾದ ವರ್ಣಗಳ ಮೂರು ಅವಸ್ಥೆಗಳನ್ನು ದೇವತಾಧ್ಯಾನ-ಪೂರ್ವಕವಾಗಿ ವ್ಯಕ್ತಗೊಳಿಸುತ್ತಿದ್ದರು. ಆಚಾರ್ಯರು ಮಾಡುತ್ತಿರುವ ಈ ಕಾರ್ಯಗಳನ್ನು, ಶಾಸ್ತ್ರನಿಯಮವನ್ನು ಅನುಸರಿಸಿ ಮಾಡುವ ವೇದಪ್ರವಚನವನ್ನು ಕೇಳಿ, ಆಚಾರ್ಯರನ್ನು ನೋಡಿ, ಶ್ರೀಹರಿಯೂ ಇಂತಹವನೇ ಇದ್ದಾನೆ ಎಂದು ದೇವತೆಗಳು ದೇವದೇವೋತ್ತಮನಾದ ಹರಿಯನ್ನು ಸ್ಮರಿಸಿದರು.

**ವಿಶೇಷಾಂಶ— ಇಲ್ಲಿ ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ ಅನೇಕ ವಿಶೇಷ ವಿಚಾರಗಳನ್ನು ಶ್ರೀಮನ್ನಾರಾಯಣ ಪಂಡಿತಾಚಾರ್ಯರು ವಿಶದಗೊಳಿಸಿದ್ದಾರೆ. ಉಕ್ತಾಂಗೇಭ್ಯಃ ಕಾದಿಕಾನ್, ಬ್ರಹ್ಮಾ ಶಿರಸಿ, ಲಲಾಟೇ ರುದ್ರಃ ಇತ್ಯಾದ್ಯುಕ್ತಾಂಗೇಭ್ಯಃ ಬ್ರಹ್ಮಾದಿಕಾನ್ ವ್ಯಂಜಯಂತಂ = ಬ್ರಹ್ಮದೇವರು ಪರಮಾತ್ಮನ ವಿರಾಡ್ರೂಪದಲ್ಲಿ ಶಿರಸ್ಸಿನಲ್ಲಿದ್ದು ವ್ಯಕ್ತರಾಗುತ್ತಾರೆ. ಲಲಾಟೇ**

ರುದ್ರಃ ರುದ್ರದೇವರು ಪರಮಾತ್ಮನ ಹಣೆಯಲ್ಲಿದ್ದು ವ್ಯಕ್ತರಾಗುತ್ತಾರೆ. ಇತ್ಯಾದಿ ರೀತಿಯಿಂದ ಹೇಳಿದ ಆಯಾ ಅಂಗಗಳಿಂದ ಬ್ರಹ್ಮರುದ್ರಾದಿಗಳನ್ನು ಶ್ರೀಹರಿಯು ಪ್ರಕಟಗೊಳಿಸುತ್ತಾನೆ, ಸೃಷ್ಟಿ ಮಾಡುತ್ತಾನೆ.

ತತ್ತನ್ಮಾತ್ರಾವ್ಯಂಜನಾದೌ = ಕಾದೀನಾಂ ಉಚಿತ ಮಾತ್ರಾನುಕೂಲ್ಯೇನ ವ್ಯಂಜನೇ ಅಪರುಷವ್ಯಕ್ತತ್ವೇ ಚ (ಪ್ರವೀಣಂ) ಕ ಇತ್ಯಾದಿ ವರ್ಣಗಳಿಗೆ ಯೋಗ್ಯವಾದ ಅರ್ಧಮಾತ್ರಾ, (ವ್ಯಂಜನಗಳಿಗೆ ಮಾತ್ರೆ) ಒಂದು ಮಾತ್ರೆ, ಹ್ರಸ್ವಕ್ಕೆ ಇತ್ಯಾದಿ ಉಚ್ಚಾರಣೆಯ ಕಾಲಮಿತಿ ಎಂಬ ಮಾತ್ರೆಗಳಿಗೆ ಅನುಗುಣವಾಗಿ ಅಕ್ಷರಗಳನ್ನು ಪ್ರಕಟಗೊಳಿಸಿ ಉಚ್ಚರಿಸುವುದರಲ್ಲಿಯೂ, ಪೌರುಷವಿಲ್ಲದೆ ಮೃದುವಾಗಿ ಅಕ್ಷರಗಳನ್ನು ಪ್ರಕಟಗೊಳಿಸುವುದರಲ್ಲಿಯೂ ಚತುರರು ಆಚಾರ್ಯರು.

ಏಕಮಾತ್ರೋ ಭವೇದ್ ಹ್ರಸ್ವೋ ದ್ವಿಮಾತ್ರೋ ದೀರ್ಘ ಉಚ್ಯತೇ ।
ತ್ರಿಮಾತ್ರಸ್ತು ಪ್ಲುತೋ ಜ್ಞೇಯಃ ವ್ಯಂಜನಂ ತ್ವರ್ಧಮಾತ್ರಕಂ ॥
ಯಥಾ ವ್ಯಾಘ್ರೀ ಹರೇತ್ ಪೋತಂ ದಂಷ್ಟ್ರಾಭ್ಯಾಂ ನ ತು ಪೀಡಯೇತ್ ।
ಭೀತಾಪತನಭೇದಾಭ್ಯಾಂ ತದ್ವದ್ವರ್ಣಾನ್ ಪ್ರಯೋಜಯೇತ್ ॥

ಇತಿ ಚ - ಆದಿ ಶಬ್ದದಿಂದ, ಹ್ರಸ್ವವು ಒಂದು ಮಾತ್ರೆಯುಳ್ಳದ್ದು, ದೀರ್ಘಕ್ಕೆ ಎರಡು ಮಾತ್ರೆಗಳು. ಪ್ಲುತಕ್ಕೆ ಮೂರು ಮಾತ್ರೆಗಳು, ವ್ಯಂಜನವು ಅರ್ಧಮಾತ್ರೆ ಉಳ್ಳದ್ದು.

ತಾಯಿಹುಲಿಯು ತನ್ನ ಕೋರೆಹಲ್ಲುಗಳೆರಡರಿಂದ ಮರಿಯನ್ನು ಕಚ್ಚಿಕೊಂಡು ಅದನ್ನು ಬೇರೆ ಸ್ಥಳಕ್ಕೆ ಒಯ್ಯುತ್ತದೆ. ಹಾಗೆ ಕಚ್ಚಿ ಒಯ್ಯುವಾಗ ಮರಿಗಳಿಗೆ ನೋವು ಉಂಟಾಗುವುದಿಲ್ಲ. ಅವುಗಳಿಗೆ ನೋವು ಉಂಟಾದಂತೆಯೇ ಹುಲಿಯು ಮರಿಗಳನ್ನು ಕಚ್ಚಿಕೊಂಡು ಬೇರೆ ಬೇರೆ ಸ್ಥಳಗಳಿಗೆ ಒಯ್ಯುತ್ತದೆ. ಮಧ್ಯದಲ್ಲಿ ಮರಿಗಳು ಬಿದ್ದುಹೋಗದಂತೆ ತಾನು ಕಚ್ಚಿದ್ದರಿಂದ ಗಾಯವಾಗದಂತೆ, ಮರಿಗಳು ಬಿದ್ದುಹೋಗಿ ಗಾಯವಾಗದಂತೆ ಬಹಳ ಜಾಗರೂಕತೆ ವಹಿಸುತ್ತದೆ. ಇದರಂತೆ ವರ್ಣಗಳನ್ನು ಉಚ್ಚರಿಸಬೇಕು. ಅತ್ಯಂತ ಸಾಮ್ಯಸ್ಥಿತಿಯಿಂದ ಅಕ್ಷರಗಳ ಮೇಲೆ ಸ್ವಲ್ಪವೂ ಅನಾವಶ್ಯಕವಾದ ಭಾರ ಬೀಳದಂತೆ ಉಚ್ಚರಿಸಬೇಕು.

ಅಪರುಷವ್ಯಕ್ತತ್ವೇ ಶಬ್ದತನ್ಮಾತ್ರಾದಿಸೃಷ್ಟೌ ಭೂತಾದಿಸೃಷ್ಟೌ ಚ - ಅಕ್ಷರಗಳನ್ನು ಮೃದುವಾಗಿ ಪ್ರಕಟಗೊಳಿಸುವುದರಲ್ಲಿ ಪ್ರವೀಣರು ಆಚಾರ್ಯರು ಎಂದು ಆಚಾರ್ಯರ ಪಕ್ಷದಲ್ಲಿಯೂ, ಶಬ್ದತನ್ಮಾತ್ರಾದಿಸೃಷ್ಟಿಯಲ್ಲಿ ಮತ್ತು ಪಂಚಮಹಾಭೂತಗಳ ಸೃಷ್ಟಿಯಲ್ಲಿ ಚತುರನು ಪರಮಾತ್ಮನು ಎಂದು ಶ್ರೀಹರಿಯ ಪಕ್ಷದಲ್ಲಿ ಆದಿಶಬ್ದದಿಂದ ಇಟ್ಟುಕೊಳ್ಳಬೇಕು. ಕಿಂ ಬಹುನಾ, ತಿಸ್ರೋಽವಸ್ಥಾಃ ತದ್ಗುಣೈಃ ಪಶ್ಯಂತೀ ಮಧ್ಯಮಾ ವೈಖರೀ ಇತಿ ಶಬ್ದಸ್ಫೋರಣಸಮಯೇ ತಿಸ್ರೋಽವಸ್ಥಾಃ, ತತ್ತದ್ದೇವತಾಧ್ಯಾನಾತ್ಮಕೈಃ ಗುಣೈಃ - ಹೆಚ್ಚೇನು, ಪಶ್ಯಂತೀ ಮಧ್ಯಮಾ ವೈಖರೀ ಎಂಬ ಮೂರುವಿಧವಾದ ವಾಕ್ಕಿನ ಅವಸ್ಥೆಗಳನ್ನು ಆಯಾ ದೇವತೆಗಳ ಧ್ಯಾನವೆಂಬ ಗುಣಗಳಿಂದ ಆಚಾರ್ಯರು ಪ್ರಕಟಗೊಳಿಸುತ್ತಿದ್ದರು.

ತಾಂ ಪಶ್ಯಂತೀಂ ಪ್ರಥಮಮುದಿತಾಂ ಮಧ್ಯಮಾಂ ಬುದ್ಧಿಸಂಸ್ಥಾಂ
ವಾಚಂ ಚಕ್ರೇ ಕರಣವಿಶದಾಂ ವೈಖರೀಂ ಚ ಪ್ರಪದ್ಯೇ ಇತಿ ಚ ।

ಮೊಟ್ಟಮೊದಲು ಪ್ರಕಟವಾಗಿ ಗೊತ್ತಾಗುವ ಶಬ್ದವು ಪಶ್ಯಂತೀ ಎಂಬುದು. ಬುದ್ಧಿಯಲ್ಲಿರುವ ಶಬ್ದಗಳ ರೂಪವು ಮಧ್ಯಮಾ. ಆಯಾ ಉಚ್ಚಾರಣೆಯ ಸ್ಥಾನಗಳಲ್ಲಿ ಚೆನ್ನಾಗಿ ಪ್ರಕಟವಾಗುವ ವೈಖರೀ ಎಂಬ ಶಬ್ದವು ಮೂರನೆಯದು. ಇವನ್ನೆಲ್ಲಾ ನಾನು ಮರೆಹೊಂದುತ್ತೇನೆ ಎಂದು ಹೇಳಿದ ರೀತಿಯಿಂದ ಶಬ್ದಕ್ಕೆ ಪ್ರಕಟವಾಗುವ ಮೂರು ಸ್ಥೂಲ ಅವಸ್ಥೆಗಳು ಇವೆ.

ಪರಾ ಎಂಬ ಪ್ರಥಮಾವಸ್ಥೆಯಲ್ಲಿ ಶಬ್ದವು ಬಹಳ ಸೂಕ್ಷ್ಮವಾಗಿರುವುದರಿಂದ ತಿಳಿದುಬರುವುದಿಲ್ಲ ಎಂದೂ ಅಭಿಪ್ರಾಯ ತಿಳಿಯಬೇಕು. ಸೃಷ್ಟಿ ಸ್ಥಿತಿ ಸಂಹಾರಾವಸ್ಥಾಃ ತದ್ಗುಣೈಃ ಸತ್ತ್ವಾದಿಭಿಃ - ಸತ್ತ್ವ ರಜಸ್ಸು ಮತ್ತು ತಮಸ್ಸು ಎಂಬ

ಗುಣಗಳಿಂದ ಸೃಷ್ಟಿ, ಸ್ಥಿತಿ, ಸಂಹಾರ ಎಂಬ ಮೂರು ಅವಸ್ಥೆಗಳನ್ನು ಪರಮಾತ್ಮನು ಉಂಟುಮಾಡುತ್ತಾನೆ ಎಂದು ಪರಮಾತ್ಮ ಪರವಾಗಿ ಅರ್ಥವನ್ನು ಇಟ್ಟುಕೊಳ್ಳಬೇಕು ಎಂಬ ಭಾವಪ್ರಕಾಶಿಕಾ ವ್ಯಾಖ್ಯಾನದ ಮಾತುಗಳ ಅಭಿಪ್ರಾಯವು.

**ವಿಗ್ರಹ—**

**ಉಕ್ತಾಂಗೇಭ್ಯಃ—** ಉಕ್ತಾನಿ ಚ ತಾನಿ ಅಂಗಾನಿ ಚ ಉಕ್ತಾಂಗಾನಿ, ತೇಭ್ಯಃ ಉಕ್ತಾಂಗೇಭ್ಯಃ ।

**ಕಾದಿಕಾನ್—** ಕಃ ಆದಿಃ ಯೇಷಾಂ ವರ್ಣಾನಾಂ ತೇ ಕಾದಿಕಾಃ, ತಾನ್ ಕಾದಿಕಾನ್ ।

**ತತ್ತನ್ಮಾತ್ರಾವ್ಯಂಜನಾದೌ—** ತೇ ಚ ತೇ ಚ ತತ್ತೇ, ತತ್ತೇಷಾಂ ಮಾತ್ರಾಃ ತತ್ತನ್ಮಾತ್ರಾಃ, ತತ್ತನ್ಮಾತ್ರಾಣಾಂ ವ್ಯಂಜನಂ ತತ್ತನ್ಮಾತ್ರಾವ್ಯಂಜನಂ, ತತ್ತನ್ಮಾತ್ರಾವ್ಯಂಜನಂ ಆದಿ ಯಸ್ಯ ತತ್ ತತ್ತನ್ಮಾತ್ರಾವ್ಯಂಜನಾದಿ, ತಸ್ಮಿನ್ ತತ್ತನ್ಮಾತ್ರಾವ್ಯಂಜನಾದೌ ।

**ತತ್ತನ್ಮಾತ್ರಾವ್ಯಂಜನಾದೌ—** ತತ್ತೇಷಾಂ (ಪಂಚಭೂತಾನಾಂ) ಮಾತ್ರಾಣಿ (ಸೂಕ್ಷ್ಮಾಂಶಾಃ) ತತ್ತನ್ಮಾತ್ರಾಣಿ, ತತ್ತನ್ಮಾತ್ರಾಣಾಂ ಅವ್ಯಂಜನಂ ತತ್ತನ್ಮಾತ್ರಾವ್ಯಂಜನಂ ಇತ್ಯಾದಿಯಾಗಿ ಇನ್ನೊಂದು ವಿಗ್ರಹ ।

**ತದ್ಗುಣೈಃ—** ತೇಷಾಂ ಗುಣಾಃ ತದ್ಗುಣಾಃ, ತೈಃ ತದ್ಗುಣೈಃ ।

**ದೇವದೇವಂ—** ದೇವೇಷು ದೇವಃ ದೇವದೇವಃ, ತಂ ದೇವದೇವಂ ।

**ಕ್ರಿಯಾಪದ—** ಸ್ಮೃಚಿಂತಾಯಾಂ ಸಕರ್ಮಕ, ಅನಿಟ್ ಪರಸ್ಮೈಪದಿ, To remember, to recollect, to think upon ಅನದ್ಯತನ ಭೂತೇ ಲಙ್ ಪ್ರಥಮಪುರುಷೇ ಬಹುವಚನೇ 'ಅಸ್ಮರನ್' ಇತಿ ರೂಪಮ್ ।

ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ ॥

**ಕೋಶ—** ಉಕ್ತಾಂಗೇಭ್ಯಃ ಎಂಬಲ್ಲಿ ಅಂಗ ಎಂದರೆ ಅವಯವ, ಅಂಗಂ ಪ್ರತೀಕೋಽವಯವಃ ಎಂದು ಅಮರ. ಕಾದಿಕಾನ್ ಎಂಬಲ್ಲಿ ಕ ಎಂದರೆ ಬ್ರಹ್ಮದೇವರು ಎಂದೂ ಅರ್ಥ, ಮಾರುತೇ ವೇಧಸಿ ಬ್ರಧ್ನೇ ಪುಂಸಿ ಕಃ ಕಂ ಶಿರೋಽಂಬುನೋಃ ಎಂದು ಅಮರ, ಕಃ ಸ್ಯಾತ್ ಪಿತಾಮಹೇ ಬ್ರಧ್ನೇ ಮಾರುತೇ ಶಮನೇಽನಲೇ ಎಂದು ಏಕಾಕ್ಷರ ರತ್ನಮಾಲಾಕೋಶವಿದೆ. ಪರಮಾತ್ಮನು ಆಯಾ ಅಂಗಗಳಿಂದ ದೇವತೆಗಳನ್ನು ಪ್ರಕಟಗೊಳಿಸುತ್ತಾನೆ ಎಂಬ ವಿಷಯವು ಚಂದ್ರಮಾ ಮನಸೋ ಜಾತಃ ಚಕ್ಷೋಃ ಸೂರ್ಯೋ ಅಜಾಯತ, ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ, ಇತ್ಯಾದಿ ಪುರುಷ ಸೂಕ್ತದಲ್ಲಿಯೂ ಉಕ್ತವಾಗಿದೆ. 'ಉಕ್ತವಾದ ಅಂಗಗಳಿಂದ ಕಾದಿಗಳ (ಕಾದಿವರ್ಣಗಳ ಮತ್ತು ಬ್ರಹ್ಮಾದಿಗಳ) ಪ್ರಕಟನ, 3 ತತ್ತನ್ಮಾತ್ರಾ ವ್ಯಂಜನ = ಪ್ರಕಟನ (ಆಯಾ ವರ್ಣಗಳ ಮಾತ್ರೆಗಳು ಮತ್ತು ಪಂಚತನ್ಮಾತ್ರಗಳ) ವ್ಯಕ್ತಗೊಳಿಸುವಿಕೆ (3) ಮೂರು ಅವಸ್ಥೆಗಳನ್ನು (ಪಶ್ಯಂತೀ ಮಧ್ಯಮಾ ವೈಖರೀ ಎಂಬ ಮೂರು ಅವಸ್ಥೆಗಳು, ಸೃಷ್ಟಿ, ಸ್ಥಿತಿ ಸಂಹಾರಗಳೆಂಬ ಮೂರು ಅವಸ್ಥೆಗಳು) ಉಂಟು ಮಾಡುವಿಕೆ ಎಂಬ ಸಮಾನ ಧರ್ಮದಿಂದ ಶ್ರೀಮದಾಚಾರ್ಯರನ್ನು ನೋಡಿದಾಗ ಅಲ್ಲಿ ಸೇರಿರುವ ಪಂಡಿತ ಪ್ರಕಾಂಡರಿಗೆ ದೇವ ದೇವೋತ್ತಮನಾದ ಶ್ರೀಹರಿಯ ಸ್ಮರಣೆಯು ಬಂದಿತು ಎಂದು ಪರಮತಾತ್ಪರ್ಯ. ಇಲ್ಲಿ ಚಮತ್ಕಾರಕರವಾದ ಸ್ಮೃತಿಯನ್ನು ವರ್ಣಿಸಿದ್ದರಿಂದ ಸ್ಮೃತ್ಯಲಂಕಾರ. ಸ್ಮೃತಿಃ ಸ್ಮೃತೌ ಸ್ಮರಾಮ್ಯದ್ಯ ಧೈರ್ಯಂ ದೃಷ್ಟ್ವಾ ಜಯೀಂದ್ರ ತೇ. ಎಂದು ಅಲಂಕಾರ ಮಂಜರಿಯಲ್ಲಿ ಶ್ರೀಸುಧೀಂದ್ರತೀರ್ಥರು ಸ್ಮೃತ್ಯಲಂಕಾರ-ಲಕ್ಷಣೋದಾಹರಣಗಳನ್ನು ಹೇಳಿದ್ದಾರೆ.

**ಪ್ರಯೋಗ—** ದೇವ್ಯಃ ಉಕ್ತಾಂಗೇಭ್ಯಃ ಕಾದಿಕಾನ್ ವ್ಯಂಜಯಂತಂ ತತ್ತನ್ಮಾತ್ರಾವ್ಯಂಜನಾದೌ ಪ್ರವೀಣಾಂ ತಿಸ್ರಃ ಅವಸ್ಥಾಃ ತದ್ಗುಣೈಃ ಭಾವಯಂತಂ ದೃಷ್ಟ್ವಾ ದೇವದೇವಃ ಅಸ್ಮರ್ಯನ್ತ ಓ ।

★ ★ ★

**ಅವತಾರಿಕಾ—** ಈಗ ಶ್ರೀಮದಾನಂದತೀರ್ಥರು ವೇದಪ್ರವಚನ ಮಾಡುತ್ತಾ ಅವರ ಸ್ವಾಮಿಯಾದ ಶ್ರೀಗೋವಿಂದನ (ಶ್ರೀಕೃಷ್ಣನ) ಶೋಭೆಯುಳ್ಳವರಾದರು ಎಂದು ವರ್ಣಿಸುತ್ತಾರೆ.

**ಆದೌ ಹ್ರಸ್ವತ್ವೇನ ವತ್ಸಾನುವೃತ್ತ್ಯಾ**
**ಮಾತ್ರಾಪಾದೌ ವರ್ತಯನ್ ದೃಶ್ಯಮಾನಃ ।**
**ಕುರ್ವನ್ನನ್ಯಾಶ್ಚಾಗ್ರ್ಯರೂಪಾ ವಿವೃತ್ತೀಃ**
**ಗೋವಿಂದಶ್ರೀರಾಸ ಗೋವಿಂದಭಕ್ತಃ ॥ 32 ॥**

**ಪದಚ್ಛೇದ—** ಆದೌ, ಹ್ರಸ್ವತ್ವೇನ, ವತ್ಸಾನುವೃತ್ತ್ಯಾ, ಮಾತ್ರಾಪಾದೌ, (ಮಾತ್ರ+ಪಾದೌ) ವರ್ತಯನ್, ದೃಶ್ಯಮಾನಃ, ಕುರ್ವನ್, ಅನ್ಯಾಃ, ಚ, ಅಗ್ರ್ಯರೂಪಾಃ, ವಿವೃತ್ತೀಃ, ಗೋವಿಂದಶ್ರೀಃ, ಆಸ, ಗೋವಿಂದಭಕ್ತಃ ।

**ಅನ್ವಯ—** ಆದೌ ಹ್ರಸ್ವತ್ವೇನ ವತ್ಸಾನುವೃತ್ತ್ಯಾ ಮಾತ್ರಾಪಾದೌ ವರ್ತಯನ್ ದೃಶ್ಯಮಾನಃ (ಪಾದೌ ವರ್ತಯನ್ ಮಾತ್ರಾ ದೃಶ್ಯಮಾನಃ) ಅಗ್ರ್ಯರೂಪಾಃ ಅನ್ಯಾಃ ವಿವೃತ್ತೀಃ ಕುರ್ವನ್ ಗೋವಿಂದಭಕ್ತಃ ಗೋವಿಂದಶ್ರೀಃ ಆಸ ।

**ಅನ್ವಯಾರ್ಥ—**

**ಆದೌ** = ಮೊದಲು
**ಹ್ರಸ್ವತ್ವೇನ** = ಹ್ರಸ್ವವಾಗಿರುವಿಕೆಯಿಂದ
**ವತ್ಸಾನುವೃತ್ತ್ಯಾ** = ವತ್ಸಾನುವೃತ್ತಿ ಎಂಬ ಅಕ್ಷರೋಚ್ಚಾರಣ ಕಾಲ ಪರಿಮಾಣದ
**ಮಾತ್ರಾಪಾದೌ** = ಎರಡು ಅಂಶಗಳನ್ನು
**ವರ್ತಯನ್** = ಉಚ್ಚಾರಣೆಯಿಂದ ತೋರಿಸುತ್ತಾ
**ದೃಶ್ಯಮಾನಃ** = ದೇವತೆಗಳಿಂದ ನೋಡಲ್ಪಡುತ್ತಿರುವ
**ಅಗ್ರ್ಯರೂಪಾಃ** = ಶ್ರೇಷ್ಠವಾದ ಸ್ವರೂಪವುಳ್ಳ
**ಅನ್ಯಾಃ** = ಬೇರೆಯಾದ
**ವಿವೃತ್ತೀಶ್ಚ** = ಪಾಕವತೀ ಪಿಪೀಲಿಕಾ ಎಂಬ ವಿವೃತ್ತಿಗಳನ್ನೂ
**ಕುರ್ವನ್** = ಉಚ್ಚಾರಣೆಯಿಂದ ಪ್ರಕಟಗೊಳಿಸುತ್ತಿರುವ
**ಗೋವಿಂದಭಕ್ತಃ** = ಗೋಪಾಲಕೃಷ್ಣನ ಭಕ್ತರಾದ ಶ್ರೀಮಧ್ವಾಚಾರ್ಯರು
**ಆದೌ** = ಬಾಲ್ಯದಲ್ಲಿ
**ಹ್ರಸ್ವತ್ವೇನ** = ಚಿಕ್ಕವನಾಗಿರುವುದರಿಂದ
**ವತ್ಸ** = ಕರುಗಳ
**ಅನುವೃತ್ತ್ಯಾ** = ಅನುಸರಿಸಿ ಹೋಗುವಿಕೆಯಿಂದ
**ಪಾದೌ** = ಕಾಲುಗಳನ್ನು
**ವರ್ತಯನ್** = ನಡೆಸುತ್ತಿರುವ, (ಕಾಲುಗಳಿಂದ ಹೊಸದಾಗಿ ನಡೆಯುತ್ತಿರುವ)
**ಮಾತ್ರಾ** = ತಾಯಿಯಾದ ಯಶೋದಾದೇವಿಯಿಂದ
**ದೃಶ್ಯಮಾನಃ** = ನೋಡಲ್ಪಡುತ್ತಿರುವ
**ಅಗ್ರ್ಯರೂಪಾಃ** = ಶ್ರೇಷ್ಠ ಸೌಂದರ್ಯವುಳ್ಳ

ಅನ್ಯಾಃ = ಇತರ ಗೋಪಿಕಾಸ್ತ್ರೀಯರನ್ನು ,
ವಿವೃತ್ತೀಃ = ಬೇರೆ ವಸ್ತುಗಳಲ್ಲಿ ದರ್ಶನಾದಿ ವ್ಯಾಪಾರ ಮತ್ತು ಮನೋವೃತ್ತಿ ಇಲ್ಲದವರನ್ನಾಗಿ
ಕುರ್ವನ್ = ಮಾಡುತ್ತಿರುವ
ಗೋವಿಂದಶ್ರೀಃ = ಶ್ರೀಕೃಷ್ಣನ ಕಾಂತಿಯುಳ್ಳವರು
ಆಸ = ಆದರು.

ತಾತ್ಪರ್ಯ— ಶ್ರೀಕೃಷ್ಣನು ಬಾಲ್ಯದಲ್ಲಿ ಮೊದಲು ಚಿಕ್ಕವನಾಗಿರುವಾಗ ಹಸುಗಳ ಕರುಗಳನ್ನು ಮೇಯಿಸಲು ಹಿಂಬಾಲಿಸಿ ನಡೆಯುತ್ತಿದ್ದನು. ಅವನ ಆ ವತ್ಸಾನುವೃತ್ತಿಯನ್ನು (ಕರುಗಳ ಹಿಂಬಾಲಿಸುವಿಕೆಯನ್ನು) ಯಶೋದೆಯು ಸಂತೋಷದಿಂದ ನೋಡುತ್ತಿದ್ದಳು. ನನ್ನ ಮಗು ಈಗ ನಡೆಯುವ ಸಾಮರ್ಥ್ಯವನ್ನು ಪಡೆದಿದೆ. ಕರುಗಳನ್ನು ಮೇಯಿಸಲು ಹಿಂಬಾಲಿಸಿ ಹೋಗುತ್ತಿದೆ ಎಂದು ಯಶೋದೆಗೆ ಸಂತೋಷವಾಗುತ್ತಿತ್ತು. ಆ ಗೋವಿಂದನು ಸುಂದರಿಯರಾದ ಇತರ ಗೋಪಿಕಾಸ್ತ್ರೀಯರು ಬೇರೆ ಎಲ್ಲಾ ಕೆಲಸಗಳನ್ನು ಬಿಟ್ಟು ಅವನನ್ನೇ ನೋಡುತ್ತಾ ಅವನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗುವಂತೆ ಮಾಡುತ್ತಿದ್ದನು. ಹಾಗೆಯೇ ಶ್ರೀಮಧ್ವಾಚಾರ್ಯರು ಆದಿಯಲ್ಲಿ ಹ್ರಸ್ವವಾಗಿರುವ ವತ್ಸಾನುವೃತ್ತಿ, ಅಂತ್ಯದಲ್ಲಿ ಹ್ರಸ್ವ-ವಾಗಿರುವವ ವತ್ಸಾನುಸಾರಿಣೀ ವೃತ್ತಿ, ಆದ್ಯಂತ ಹ್ರಸ್ವವಾಗಿರುವ ಪಾಕವತೀವೃತ್ತಿ, ಮಧ್ಯದಲ್ಲಿ ದೀರ್ಘವಿರುವ ಪಿಪೀಲಿಕಾ ವೃತ್ತಿ ಎಂಬ ನಾಲ್ಕು ವಿವೃತ್ತಿಗಳಲ್ಲಿ (ಶಬ್ದಸ್ವರೂಪದ ಪ್ರಕಟನೆಗಳಲ್ಲಿ) ಮೊದಲು ಹ್ರಸ್ವವಾಗಿರುವ ವತ್ಸಾನುವೃತ್ತಿ ಎಂಬ ವಿವೃತ್ತಿಯಲ್ಲಿ, ನಾಲ್ಕು ಅಂಶಗಳಿರುವ ಹ್ರಸ್ವವರ್ಣದ ಒಂದು ಮಾತ್ರೆಯ ಎರಡು ಅಂಶಗಳನ್ನು ಉಚ್ಚಾರಣೆ ಮಾಡಿ ತೋರಿಸುತ್ತಿದ್ದರು. ಆಗ ದೇವತೆಗಳೂ ಅವರನ್ನು ನೋಡುತ್ತಿದ್ದರು. ಹಾಗೆಯೇ ಶ್ರೇಷ್ಠವಾದ ಪಾಕವತೀ ಪಿಪೀಲಿಕಾ ವೃತ್ತಿಗಳನ್ನು ಉಚ್ಚಾರಣೆ ಮಾಡಿ ತೋರಿಸುತ್ತಿದ್ದರು. ಹೀಗೆ ಹ್ರಸ್ವತ್ವದಿಂದ ವತ್ಸಾನುವೃತ್ತಿಯಿಂದ ಮಾತ್ರೆಯ ಎರಡು ಪಾದಗಳನ್ನು ಉಚ್ಚರಿಸುವುದು, (ಹ್ರಸ್ವತ್ವದಿಂದ) ವತ್ಸಾನುವೃತ್ತಿಯಿಂದ = ಕರುಗಳ ಹಿಂಬಾಲಿಸುವಿಕೆ ಮಾಡುವುದರಿಂದ ತಾಯಿಯಿಂದ ನೋಡಲ್ಪಡುವುದು) ಇನ್ನಿತರ ಶ್ರೇಷ್ಠವಾದ ವಿವೃತ್ತಿಗಳನ್ನು ತೋರಿಸುವುದು. (ಇತರ ಗೋಪಿಕೆಯರನ್ನು ಅನ್ಯವೃತ್ತಿ ಇಲ್ಲದಂತೆ ಮಾಡುವುದು) ಎಂಬ ಸಾಮ್ಯದಿಂದ ಗೋವಿಂದಕೃಷ್ಣನ ಭಕ್ತರಾದ ಶ್ರೀಮಧ್ವಾಚಾರ್ಯರು ಗೋವಿಂದನ ಕಾಂತಿಯುಳ್ಳವರಂತೆ ತೋರಿದರು.

ವಿಶೇಷಾಂಶ— ಶಬ್ದ ಸ್ವರೂಪ ವಿಶೇಷದ ಪ್ರಕಟನೆಯನ್ನು ವಿವೃತ್ತಿ ಎಂದು ಹೇಳುತ್ತಾರೆ. ಶಬ್ದೋಚ್ಚಾರಣೆಯಲ್ಲಿ ಅನೇಕ ವಿವೃತ್ತಿಗಳಿವೆ. ಆದಿಹ್ರಸ್ವವಾದ ವಿವೃತ್ತಿಯು ವತ್ಸಾನುವೃತ್ತಿ, ಅಂತ್ಯಹ್ರಸ್ವವಾದ ವಿವೃತ್ತಿಯು ವತ್ಸಾನುಸಾರಿಣೀ, ಆದ್ಯಂತಗಳಲ್ಲಿ ಹ್ರಸ್ವವಿರುವ ವಿವೃತಿಯು ಪಾಕವತೀ ಎಂಬ ವೃತ್ತಿಯು, ಮಧ್ಯದಲ್ಲಿ ದೀರ್ಘವಿರುವ ವೃತ್ತಿಯು ಪಿಪೀಲಿಕಾ, ಶಿಕ್ಷಾದಲ್ಲಿ ಈ ವಿಷಯವನ್ನು ಹೀಗೆ ಹೇಳಿದ್ದಾರೆ.

**ಆದಿಹ್ರಸ್ವಾ ವತ್ಸಾನುಸೃತಿರಂತ್ಯಾ ವತ್ಸಾನುಸಾರಿಣೀ ।**
**ಪಾಕವತ್ಯುಭಯಹ್ರಸ್ವಾ ದೀರ್ಘಮಧ್ಯಾ ಪಿಪೀಲಿಕಾ ।**
**ಅರ್ಧಮಾತ್ರಾ ವತ್ಸಾನುಸೃತಿಸ್ತಥಾ ವತ್ಸಾನುಸಾರಿಣೀ ।**
**ಪಾಕವತೀ ಪಾದೋನಾ ಪಾದಮಾತ್ರಾ ಪಿಪೀಲಿಕಾ ॥**

ಸ ಈಂ ಮಹೀಂ ಧುನಿಮೇತೋರರಮ್ಣಾತ್ ಸೋ ಅಸ್ನಾತೃನಪಾರಯತ್ ಸ್ವಸ್ತಿ । ತ ಉತ್ಸ್ನಾಯ ಧೃತವ್ರತಾ ಆದಿಸ್ತಾ. ಇತಿ ಏತಾಸಾಂ ನಿದರ್ಶನಂ. ಆದೌ ಹ್ರಸ್ವತ್ವೇನ ವತ್ಸಾನುಸೃತ್ಯಾಖ್ಯಾಯಾಂ ಕಾಲಸ್ಯ ಮಾತ್ರಾಪರಿಮಾಣಸ್ಯ ಚತುರಂಶಸ್ಯ ದ್ವಾವಂಶೌ ವರ್ತಯನ್ ದೃಶ್ಯಮಾನಃ, ಅನ್ಯಾಃ ಪಾಕವತ್ಯಾದ್ಯಾಶ್ಚ ವಿವೃತ್ತೀಃ ಅಗ್ರ್ಯರೂಪಾಃ ಕುರ್ವನ್, ನ ಚಾತ್ರಾನ್ಯಥಾಽನ್ವಯಾತ್ ಶ್ಲೇಷಸ್ಯ ನ್ಯಾಯಭಂಗಃ ಆಶಂಕನೀಯಃ ಅತ್ರಾಪೀನೇನ ಮೂಲೇ (ऽ) ವಿರಹಿತಪರಿಕರಃ ಇತ್ಯಾದಿವತ್ ಸಂಭವಾತ್

ಈ ಭಾವಪ್ರಕಾಶಿಕಾ ವಚನಗಳ ತಾತ್ಪರ್ಯ ಬರೆಯಲಾಗುತ್ತದೆ.

ಆದೌ ಅಂದರೆ ಬಾಲ್ಯದಲ್ಲಿ ಹ್ರಸ್ವತ್ವೇನ ಅಂದರೆ ಕುಳ್ಳಾಗಿರುವುದರಿಂದ ಪಾದೌ ವರ್ತಯನ್ = ಹೆಜ್ಜೆಗಳನ್ನು ಇಡುತ್ತಾ, (ನಡೆಯುತ್ತಾ) ಮಾತ್ರಾ ದೃಶ್ಯಮಾನಃ । ತಾಯಿಯಿಂದ ನೋಡಲ್ಪಡುತ್ತಿರುವ ಕೃಷ್ಣನಂತೆ) ಗೋವತ್ಸಾನಾಂ ಅನುವೃತ್ತ್ಯಾ = ಹಸುವಿನ ಕರುಗಳನ್ನು ಹಿಂಬಾಲಿಸುವುದರಿಂದ ತಾಯಿಯನ್ನು ಸಂತೋಷಪಡಿಸುವ ಕೃಷ್ಣನಂತೆ, ತನ್ನ ಲೀಲೆಯಿಂದ ಗೋವಿಂದನು ಇತರ ಗೋಪಿಯರನ್ನು ಬೇರೆ ಯಾವ ವ್ಯಾಪಾರವೂ ಇಲ್ಲದಂತೆ ಮಾಡುತ್ತಾ ಇರುತ್ತಿದ್ದನು.

ಆದಿಯಲ್ಲಿ ಹ್ರಸ್ವವುಳ್ಳದ್ದು ವತ್ಸಾನುಸೃತಿಯು. ಅಂತ್ಯದಲ್ಲಿ ಹ್ರಸ್ವವುಳ್ಳದ್ದು ವತ್ಸಾನುಸಾರಿಣೀ. ಎರಡೂ ಕಡೆ ಹ್ರಸ್ವವುಳ್ಳದ್ದು ಪಾಕವತೀ. ಮಧ್ಯದಲ್ಲಿ ದೀರ್ಘವುಳ್ಳದ್ದು ಪಿಪೀಲಿಕಾ.

ಅರ್ಧಮಾತ್ರೆ ಉಳ್ಳದ್ದು ವತ್ಸಾನುಸೃತಿಯು, ಹಾಗೆಯೇ ಪಾಕವತೀ ಪಾದೋನಾ, ಪಾದಮಾತ್ರಾ ಪಿಪೀಲಿಕಾ ಎಂದು ಶಿಕ್ಷಾದಲ್ಲಿ ಹೇಳಲಾಗಿದೆ.

ಸ ಈಂ ಮಹೀಂ ಇತ್ಯಾದಿ ಮಂತ್ರವು ಇದಕ್ಕೆ ಉದಾಹರಣೆ. ಆದಿಯಲ್ಲಿ ಹ್ರಸ್ವವಿರುವುದರಿಂದ ವತ್ಸಾನುಸೃತಿ ಎಂಬ ವಿವೃತ್ತಿಯಲ್ಲಿ ಕಾಲದ ಅಂದರೆ ಮಾತ್ರಾಪರಿಮಾಣದ ನಾಲ್ಕು ಅಂಶಗಳಲ್ಲಿ ಎರಡು ಅಂಶಗಳನ್ನು, ನಡೆಸುತ್ತಾ (ಉಚ್ಚರಿಸುತ್ತಾ) ನೋಡಲ್ಪಡುತ್ತಿರುವ, ಮತ್ತು ಇತರ ಪಾಕವತೀ ಮುಂತಾದ ಶ್ರೇಷ್ಠ ಸ್ವರೂಪದ ವಿವೃತ್ತಿಗಳನ್ನೂ ಮಾಡುತ್ತಾ (ಶ್ರೀಮಧ್ವಾಚಾರ್ಯರು ಗೋವಿಂದಕೃಷ್ಣನಂತೆ ಶೋಭಿಸಿದರು).

ಇಲ್ಲಿ ಒಂದು ಅರ್ಥದಲ್ಲಿ ಮಾತ್ರಾಪಾದೌ ಎಂಬಲ್ಲಿ ಮಾತ್ರೆಯ ಎರಡು ಪಾದಗಳನ್ನು ಎಂದು ಒಂದೇ ಪದ ಇಟ್ಟುಕೊಂಡಿದೆ. ಮತ್ತೊಂದು ಅರ್ಥದಲ್ಲಿ ಮಾತ್ರಾ = ತಾಯಿಯಿಂದ ಎಂದು ಎರಡು ಪದಗಳನ್ನಾಗಿ ಇಟ್ಟುಕೊಂಡಿದ್ದರಿಂದ ಶ್ಲೇಷನ್ಯಾಯಕ್ಕೆ ಭಂಗ ಬಂದಂತಾಯಿತು ಎಂದು ಶಂಕಿಸಬೇಕಾಗಿಲ್ಲ. ಅತ್ರಾಹೀನೇನ ಮೂಲೇ(ಽ)ವಿರಹಿತಪರಿಕರಃ ಎಂಬಲ್ಲಿ ಅತ್ರ = ಇಲ್ಲಿ ಅಹೀನೇನ = ಸರ್ಪಶ್ರೇಷ್ಠದಿಂದ, ಮೂಲೇ = ಬುಡದಲ್ಲಿ, ಅವಿರಹಿತ ಪರಿಕರಃ = ವಿಯೋಗ-ರಹಿತವಾದ ವಿಶೇಷಣವುಳ್ಳ (ವೃಕ್ಷ) ಎಂದೂ ಅತ್ರ = ಇಲ್ಲಿ, ಅಹೀನೇನ = ಹೀನನಲ್ಲದವನಿಂದ, ಮೂಲೇ ವಿರಹಿತ ಪರಿಕರಃ = ಮೂಲದಲ್ಲಿ ಸಾಧನದಿಂದ ಕೂಡಿದ ಎಂಬಲ್ಲಿರುವಂತೆ ಇಲ್ಲಿಯೂ ಕೂಡಬಹುದು.

ವಿಗ್ರಹ—

ಹ್ರಸ್ವತ್ವೇನ— ಹ್ರಸ್ವಸ್ಯ ಭಾವಃ ಹ್ರಸ್ವತ್ವಂ, ತೇನ ಹ್ರಸ್ವತ್ವೇನ ।

ವತ್ಸಾನುವೃತ್ತ್ಯಾ— ವತ್ಸಾನಾಂ ಅನುವೃತ್ತಿಃ ವತ್ಸಾನುವೃತ್ತಿಃ, ತಯಾ ವತ್ಸಾನುವೃತ್ತ್ಯಾ ।

ಮಾತ್ರಾಪಾದೌ— ಮಾತ್ರಾಯಾಃ ಪಾದೌ ಮಾತ್ರಾಪಾದೌ ।

ಅಗ್ರ್ಯರೂಪಾಃ— ಅಗ್ರ್ಯಂ ರೂಪಂ ಯಾಸಾಂ ತಾಃ ಅಗ್ರ್ಯರೂಪಾಃ ।

ಗೋವಿಂದಶ್ರೀಃ— ಗೋವಿಂದಸ್ಯ ಶ್ರೀಃ ಯಸ್ಯ ಸಃ ಗೋವಿಂದಶ್ರೀಃ ।

ಗೋವಿಂದಭಕ್ತಃ— ಗೋವಿಂದಸ್ಯ ಭಕ್ತಃ ಗೋವಿಂದಭಕ್ತಃ ।

ಕ್ರಿಯಾಪದ— ಆಸ ಇದು ತಿಙಂತ ಪ್ರತಿರೂಪಕ ಅವ್ಯಯ (ತಿಙಂತದಂತೆ ಕಾಣಿಸುತ್ತದೆ. ಆದರೆ ವಾಸ್ತವವಾಗಿ ತಿಙಂತವಲ್ಲ ಎಂದು ಅರ್ಥ) ಅಥವಾ ಅಸ ಗತಿದೀಪ್ತ್ಯಾದಾನೇಷು ಎಂಬ ಧಾತುವಿನ ಲಿಟ್‌ರೂಪ. ಧಾತೂನಾಂ ಅನೇಕಾರ್ಥತ್ವಾತ್' 'ಅನೇಕಾರ್ಥಾ ಹಿ ಧಾತವಃ' ಧಾತುಗಳಿಗೆ ಅನೇಕ ಅರ್ಥಗಳಿವೆ ಎಂಬ ನ್ಯಾಯದಿಂದ 'ಆಸ' ಅಂದರೆ ಆಗಿದ್ದನು ಎಂದು ಸತ್ತಾರ್ಥಕವಾದ ಭೂಧಾತುವಿನ ಬಭೂವ ಎಂಬುದರ ಅರ್ಥದಂತೆ ಅರ್ಥ ಇಟ್ಟುಕೊಳ್ಳಬೇಕು. ।

ಪ್ರಯೋಗ— ಗೋವಿಂದಭಕ್ತೇನ ಗೋವಿಂದಶ್ರಿಯಾ ಬಭೂವೇ (ಕರ್ಮಣಿ) ।

★ ★ ★

**ಅವತಾರಿಕಾ**— ಆಚಾರ್ಯರ ವೇದವಾಣಿಯನ್ನು ದ್ರೌಪದೀದೇವಿಯರಿಗೆ ಹೋಲಿಸಿ ವರ್ಣಿಸುತ್ತಿದ್ದಾರೆ.

**ಮಾಂಗಲ್ಯಾಂಗವ್ಯಕ್ತಭಾವಾ ತ್ರಿಲೋಕೀಂ**
**ರಂಗಾರೂಢಾ ವಿಸ್ಮಯಂ ಪ್ರಾಪಯಂತೀ ।**
**ಕೃಷ್ಣೇವಾನ್ಯಾ ಮಾನ್ಯವಿನ್ಯಾಸಪಾದಾ**
**ರೇಜೇ ಮಾಧ್ವೀ ಸುಸ್ವರಾ ವೇದವಾಣೀ ॥ 33 ॥**

**ಪದಚ್ಛೇದ**— ಮಾಂಗಲ್ಯಾಂಗವ್ಯಕ್ತಭಾವಾ, ತ್ರಿಲೋಕೀಂ, ರಂಗಾರೂಢಾ, ವಿಸ್ಮಯಂ, ಪ್ರಾಪಯಂತೀ, ಕೃಷ್ಣಾ, ಇವ, ಅನ್ಯಾ, ಮಾನ್ಯವಿನ್ಯಾಸಪಾದಾ, ರೇಜೇ, ಮಾಧ್ವೀ, ಸುಸ್ವರಾ, ವೇದವಾಣೀ ।

**ಅನ್ವಯ**— ಮಾಂಗಲ್ಯಾವ್ಯಕ್ತಭಾವಾ, ತ್ರಿಲೋಕೀಂ ವಿಸ್ಮಯಂ ಪ್ರಾಪಯಂತೀ, ರಂಗಾರೂಢಾ, ಮಾನ್ಯ-ವಿನ್ಯಾಸಪಾದಾ, ಸುಸ್ವರಾ, ಮಾಧ್ವೀ ವೇದವಾಣೀ, ಅನ್ಯಾ ಕೃಷ್ಣೇವ ರೇಜೇ ।

**ಅನ್ವಯಾರ್ಥ**—

**ಮಾಂಗಲ್ಯಾಂಗ** = ಶ್ರೇಯಸ್ಕರವಾದ ಶಿಕ್ಷಾದಿ ಅಂಗಗಳಿಂದ
**ವ್ಯಕ್ತ** = ಸ್ಪಷ್ಟವಾಗುವ
**ಭಾವಾ** = ಅಭಿಪ್ರಾಯವುಳ್ಳ
**ತ್ರಿಲೋಕೀಂ** = ಮೂರು ಲೋಕಗಳನ್ನು
**ವಿಸ್ಮಯಂ** = ಆಶ್ಚರ್ಯವನ್ನು
**ಪ್ರಾಪಯಂತೀ** = ಹೊಂದಿಸುವ
**ರಂಗ** = ವಿಶೇಷಸ್ವರಗಳಿಂದ
**ಆರೂಢಾ** = ಸಹಿತವಾದ
**ಮಾನ್ಯ** = ಗೌರವಿಸಲು ಯೋಗ್ಯವಾದ
**ವಿನ್ಯಾಸ** = ಸಮಾಪ್ತಿಯುಳ್ಳ
**ಪಾದಾ** = ಋಕ್ಕುಗಳ ಪಾದಗಳಿಂದ ಕೂಡಿರುವ
**ಸುಸ್ವರಾ** = ಮನೋಹರವಾದ ಉದಾತ್ತಾದಿಸ್ವರಗಳುಳ್ಳ
**ಮಾಧ್ವೀ** = ಶ್ರೀಮಧ್ವಾಚಾರ್ಯರಿಂದ ಉಚ್ಚರಿಸಲ್ಪಟ್ಟ
**ವೇದವಾಣೀ** = ವೇದಭಾರತಿಯು (ವೇದವಾಕ್ಕು)
**ಮಾಂಗಲ್ಯಾಂಗ** = ಸುಂದರವಾದ ಅವಯವಗಳಲ್ಲಿ
**ವ್ಯಕ್ತ** = ಸ್ಪಷ್ಟವಾದ
**ಭಾವಾ** = ವಿಲಾಸವುಳ್ಳ
**ತ್ರಿಲೋಕೀಂ ವಿಸ್ಮಯಂ ಪ್ರಾಪಯಂತೀ** = ಮೂರು ಲೋಕಗಳಲ್ಲಿರುವ ಜನರನ್ನೂ ಆಶ್ಚರ್ಯಗೊಳಿಸುವ
**ರಂಗಾರೂಢಾ** = ಸ್ವಯಂವರ ಮಂಟಪವನ್ನು ಪ್ರವೇಶಿಸಿದ
**ಮಾನ್ಯ** = ಗೌರವಿಸಲ್ಪಟ್ಟ
**ವಿನ್ಯಾಸ** = ಹೆಜ್ಜೆಯುಳ್ಳ

ಪಾದಾ = ಪಾದಗಳಿಂದ ಕೂಡಿರುವ
ಸುಸ್ವರಾ = ಇಂಪಾದ ಧ್ವನಿಯುಳ್ಳ
ಅನ್ಯಾ = ಬೇರೊಬ್ಬಳಾದ
ಕೃಷ್ಣಾ ಇವ = ದ್ರೌಪದೀದೇವಿಯಂತೆ
ರೇಜೇ = ಪ್ರಕಾಶಿಸಿತು.

ತಾತ್ಪರ್ಯ— ದ್ರೌಪದೀ ದೇವಿಯವರು ಸುಂದರವಾದ ತನ್ನ ಅಂಗಗಳಲ್ಲಿ ನಾನಾ ಬಗೆಯ ವಿಲಾಸಗಳಿಂದ ಕೂಡಿ-ರುತ್ತಾರೆ. ಅವರ ಸೌಂದರ್ಯವಿಲಾಸಾದಿಗಳಿಂದ ಮೂರು ಲೋಕಗಳೂ (ಅಲ್ಲಿದ್ದ ಜನರು) ಆಶ್ಚರ್ಯಚಕಿತವಾಗುತ್ತವೆ. ಅವರು ಸ್ವಯಂವರ ಮಂಟಪವನ್ನು ಮನೋಹರವಾದ ನಡಿಗೆಯಿಂದ ನಡೆದುಬಂದಿದ್ದರು. ಅವರ ಧ್ವನಿಯು ಗಿಣಿಯ ಧ್ವನಿಯಂತೆ ಇಂಪಾಗಿರುತ್ತಿತ್ತು. ಹಾಗೆಯೇ ಶ್ರೀಮಧ್ವಾಚಾರ್ಯರ ವೇದವಾಣಿಯೂ ಇತ್ತು. ಶ್ರೇಷ್ಠವಾದ ಶಿಕ್ಷಾದಿ ಷಡಂಗಗಳಿಂದ ಅವರು ವೇದಗಳ ಅಭಿಪ್ರಾಯವನ್ನು ಸ್ಪಷ್ಟಗೊಳಿಸುತ್ತಿದ್ದರು. ಅವರ ವೇದವಾಣಿಯನ್ನು ಕೇಳಿ ಮೂರು ಲೋಕದ ಪಂಡಿತರೂ ಬೆರಗುಗೊಳ್ಳುತ್ತಿದ್ದರು. ಏಕಮಾತ್ರೆ, ದ್ವಿಮಾತ್ರೆ ಇತ್ಯಾದಿ ರೀತಿಯಿಂದ ಅನು-ನಾಸಿಕರೂಪವಾದ ಸ್ವರವಿಶೇಷಗಳಿಂದ ರಂಗವೆಂಬ ಸ್ವರದಿಂದ ವೇದವನ್ನು ಅವರು ಸುಶ್ರಾವ್ಯವಾಗಿ ಉಚ್ಚರಿಸುತ್ತಿದ್ದರು. ಅವರು ಋಕ್ಕುಗಳನ್ನು ಉಚ್ಚರಿಸುವಾಗ ಯಾವ ಪಾದವನ್ನು ಯಾವ ಸ್ವರ ವರ್ಣಾಂತವಾಗಿ ಉಚ್ಚರಿಸಬೇಕೋ ಹಾಗೆಯೇ ಉಚ್ಚರಿಸುತ್ತಿದ್ದರು. ಅವರ ವೇದೋಚ್ಚಾರಣೆಯಲ್ಲಿ ಉದಾತ್ತ ಅನುದಾತ್ತಾದಿ ಸ್ವರಗಳು ಹಿತವಾಗಿ ಇಂಪಾಗಿ ಕೇಳಿ ಬರುತ್ತಿದ್ದವು. ಹೀಗೆ ಆಚಾರ್ಯರ ವೇದೋಚ್ಚಾರಣೆಯ ಭಾರತಿಯ ಭಾರತೀದೇವಿಯ ಅವತಾರರಾದ ಮತ್ತೊಬ್ಬ ದ್ರೌಪದೀ ದೇವಿಯರಂತೆ ರಾರಾಜಿಸಿತು.

ವಿಗ್ರಹ—

ಮಾಂಗಲ್ಯಾಂಗವ್ಯಕ್ತಭಾವಾ— ಮಂಗಲಾನಿ ಏವ ಮಾಂಗಲ್ಯಾನಿ, ಮಾಂಗಲ್ಯಾನಿ ಚ ತಾನಿ ಅಂಗಾನಿ ಚ ಮಾಂಗಲ್ಯಾಂಗಾನಿ, ಮಾಂಗಲ್ಯಾಂಗೈಃ ವ್ಯಕ್ತಃ ಭಾವಃ ಯಸ್ಯಾಃ ಸಾ ಮಾಂಗಲ್ಯಾಂಗವ್ಯಕ್ತಭಾವಾ ।

ತ್ರಿಲೋಕೀಂ— ತ್ರಯಾಣಾಂ ಲೋಕಾನಾಂ ಸಮಾಹಾರಃ ತ್ರಿಲೋಕೀ, ತಾಂ ತ್ರಿಲೋಕೀಂ ।

ರಂಗಾರೂಢಾ— ರಂಗೈಃ ಆರೂಢಾಃ ರಂಗಾರೂಢಾಃ । (ದ್ರೌಪದೀದೇವಿಯರ ಪಕ್ಷದಲ್ಲಿ ರಂಗಂ ಆರೂಢಾ) ।

ಮಾನ್ಯವಿನ್ಯಾಸಪಾದಾ— ಮಾನ್ಯಃ ವಿನ್ಯಾಸಃ ಯೇಷಾಂ ತೇ ಮಾನ್ಯವಿನ್ಯಾಸಾಃ, ಮಾನ್ಯವಿನ್ಯಾಸಾಃ ಪಾದಾಃ ಯಸ್ಯಾಃ ಸಾ ಮಾನ್ಯವಿನ್ಯಾಸಪಾದಾ । (ದ್ರೌಪದೀದೇವಿಯರ ಪಕ್ಷದಲ್ಲಿ ಮಾನ್ಯಃ ವಿನ್ಯಾಸಃ ಯಯೋಃ ತೌ ಮಾನ್ಯವಿನ್ಯಾಸೌ, ಮಾನ್ಯವಿನ್ಯಾಸೌ ಪಾದೌ ಯಸ್ಯಾಃ ಸಾ ಮಾನ್ಯವಿನ್ಯಾಸಪಾದಾ) ।

ಮಾಧ್ವೀ— ಮಧ್ವಸ್ಯ ಇಯಂ ಮಾಧ್ವೀ ।

ಸುಸ್ವರಾ— ಶೋಭನಃ ಸ್ವರಃ ಯಸ್ಯಾಃ ಸಾ ಸುಸ್ವರಾ ।

ವೇದವಾಣೀ— ವೇದರೂಪಾ ಚ ಸಾ ವಾಣೀ ಚ ವೇದವಾಣೀ । (ವೇದಸ್ಯ ವಾಣೀ ವೇದವಾಣೀ) ।

ಕ್ರಿಯಾಪದ— ರಾಜೃ (ರಾಜ್) ದೀಪ್ತೌ ಅಕ. ಸೇಟ್, ಉಭ ಆತ್ಮನೇಪದೀ ಪ್ರಥಮಪುರುಷೇ ಏಕವಚನೇ 'ರೇಜೇ' ಇತಿ ರೂಪಮ್ ।

ರೇಜೇ ರೇಜಾತೇ ರೇಜಿರೇ, ರೇಜಿಷೇ ರೇಜಾಥೇ ರೇಜಿಧ್ವೇ, ರೇಜೇ ರೇಜಿವಹೇ ರೇಜಿಮಹೇ ॥

ಕೋಶ— ವಿಸ್ಮಯಂ ಪ್ರಾಪಯಂತೀ ಎಂಬಲ್ಲಿ ವಿಸ್ಮಯ = ಆಶ್ಚರ್ಯ, ವಿಸ್ಮಯೋಽದ್ಭುತಮಾಶ್ಚರ್ಯಂ, ಅಮರ. ಕೃಷ್ಣಾ = ದ್ರೌಪದೀದೇವಿ, ಕೃಷ್ಣಾ ತು ದ್ರೌಪದೀ ನೀಲಾಹಾರಕ್ರೂರಾಸು ದೃಶ್ಯತೇ ವಿಶ್ವ ।

**ಪ್ರಯೋಗ—** ಮಾಧ್ವೀ ಸುಸ್ವರಾ ವೇದವಾಣೀ ರೇಜೇ (ಕರ್ತರಿ) । ಮಾಧ್ವ್ಯಾ ಸುಸ್ವರಯಾ ವೇದವಾಣ್ಯಾ ರೇಜೇ (ಭಾವೇ) ।

**ವಿಶೇಷಾಂಶ—** ಇಲ್ಲಿ ಭಾವಪ್ರಕಾಶಿಕಾ ವ್ಯಾಖ್ಯಾನದ ವಾಕ್ಯಗಳು. ಶ್ರೇಯಸ್ಕರೈಃ ಶಿಕ್ಷಾದ್ಯಂಗೈಃ ವ್ಯಕ್ತಾಭಿಪ್ರಾಯಾ, ಅವಯವೇಷು ಸ್ಪಷ್ಟವಿಲಾಸಾ ಚ = ಮಾಂಗಲ್ಯಾಂಗವ್ಯಕ್ತಭಾವಾ ಎಂದರೆ ಶ್ರೇಯಸ್ಕರವಾದ ಶಿಕ್ಷಾದಿ ಅಂಗಗಳಿಂದ ಸ್ಫುಟವಾಗುವ ಅಭಿಪ್ರಾಯವುಳ್ಳ ವೇದವಾಣಿಯು ಎಂದು ಅರ್ಥವು. ತನ್ನ ಅವಯವಗಳಲ್ಲಿ ಸ್ಪಷ್ಟವಾದ ವಿಲಾಸ-ವುಳ್ಳವುಗಳು ಎಂದು ದ್ರೌಪದೀ ದೇವಿಯರ ಪರವಾದ ಅಭಿಪ್ರಾಯವು.

ಅನುನಾಸಿಕತಯಾ ಕ್ರಿಯಮಾಣಾ ವರ್ಧಿತಮಾತ್ರಾಃ ಸ್ವರಾಃ ರಂಗಾಃ ತೈಃ ಆರೂಢಾ, ಸ್ವಯಂವರ ಪ್ರಾಂಗಣ-ಮಾರೂಢಾ ಚ = ರಂಗಾರೂಢಾ ಎಂಬಲ್ಲಿ ಅನುನಾಸಿಕ ರೂಪದಿಂದ ಉಚ್ಚರಿಸಲ್ಪಡುವ, ಮಾತ್ರಾ (ಉಚ್ಚಾರಣೆಯ ಕಾಲ) ವೃದ್ಧಿಯನ್ನು ಹೊಂದಿದ ಸ್ವರಗಳೇ ರಂಗಗಳು. ಅವುಗಳಿಂದ ಮೇಲಿನ ಮಟ್ಟಕ್ಕೆ ಏರಿದುದು ಎಂದು ವೇದವಾಣೀ ಪರವಾದ ಅರ್ಥ. ಸ್ವಯಂವರ ಮಂಟಪದ ಅಂಗಗಳನ್ನು ಹತ್ತಿದಂತಹ ಎಂದು ದ್ರೌಪದೀದೇವಿಯರ ಪರವಾದ ಅರ್ಥ. ಸ್ವರಾಃ ಉದಾತ್ತಾದಯಶ್ಚ ಸುಸ್ವರಾ ಎಂಬಲ್ಲಿ ವೇದವಾಣೀ ಪಕ್ಷದಲ್ಲಿ ಉದಾತ್ತಾದಿಸ್ವರಗಳಿಂದ ಕೂಡಿದುದು ಎಂದು ಅರ್ಥ. ಇಂಪಾದ ಧ್ವನಿಯಿಂದ ಕೂಡಿದವರು ಎಂದು ದ್ರೌಪದೀ ದೇವಿಯರ ಪರವಾದ ಅರ್ಥ.

★ ★ ★

**ಅವತಾರಿಕಾ—** ಆಚಾರ್ಯರ ವೇದೋಚ್ಚಾರಣೆಯು ಅಸದೃಶವಾಗಿತ್ತು ಎಂದು ವರ್ಣಿಸುತ್ತಾರೆ.

**ಗಾಂಭೀರ್ಯಾದ್ಯೈರ್ಯುಕ್ತಮೌದಾರ್ಯಕಾರ್ಯೈ-**
**ರ್ನಾನಾನಾದಶ್ಲಾಘ್ಯಮುಚ್ಚಾರಣಂ ತತ್ ।**
**ಶಿಕ್ಷಾಶಿಕ್ಷಾಲಕ್ಷಣಾನಾಂ ಹಿ ಲಕ್ಷ್ಯಂ**
**ಮಾನ್ಯಂ ಮನ್ಯೇ ಧನ್ಯಬುದ್ಧೇರತುಲ್ಯಮ್ ॥ 34 ॥**

**ಪದಚ್ಛೇದ—** ಗಾಂಭೀರ್ಯಾದ್ಯೈಃ ಯುಕ್ತಂ, ಔದಾರ್ಯಕಾರ್ಯೈಃ ನಾನಾನಾದಶ್ಲಾಘ್ಯಂ, ಉಚ್ಚಾರಣಂ, ತತ್, ಶಿಕ್ಷಾಶಿಕ್ಷಾಲಕ್ಷಣಾನಾಂ, ಹಿ ಲಕ್ಷ್ಯಂ, ಮಾನ್ಯಂ, ಮನ್ಯೇ, ಧನ್ಯಬುದ್ಧೇಃ ಅತುಲ್ಯಂ ।

**ಅನ್ವಯ—** ಔದಾರ್ಯಕಾರ್ಯೈಃ ಗಾಂಭೀರ್ಯಾದ್ಯೈಃ ಯುಕ್ತಂ, ನಾನಾನಾದಶ್ಲಾಘ್ಯಂ, ಶಿಕ್ಷಾಶಿಕ್ಷಾಲಕ್ಷಣಾನಾಂ ಲಕ್ಷ್ಯಂ, ಮಾನ್ಯಂ ಧನ್ಯಬುದ್ಧೇಃ ತತ್ ಉಚ್ಚಾರಣಂ (ಅಹಂ) ಅತುಲ್ಯಂ ಮನ್ಯೇ ಹಿ ।

**ಅನ್ವಯಾರ್ಥ—**

**ಔದಾರ್ಯಕಾರ್ಯೈಃ** = ತನ್ನ ಮಹಾಪುರುಷತನದಿಂದ ಉಂಟಾದ,

**ಗಾಂಭೀರ್ಯಾದ್ಯೈಃ** = ಬಹಳ ಮೇಲಿನ ಮಟ್ಟದಲ್ಲಿ ಉಚ್ಚರಿಸುವಿಕೆ ಮೊದಲಾಗಿ ಉಳ್ಳ ಗುಣಗಳಿಂದ

**ಯುಕ್ತಂ** = ಕೂಡಿರುವ

**ನಾನಾನಾದ** = ಅನೇಕ ಪ್ರಕಾರವಾದ ಧ್ವನಿಗಳಿಂದ

**ಶ್ಲಾಘ್ಯಂ** = ಹೊಗಳಲು ಯೋಗ್ಯವಾದ

**ಶಿಕ್ಷಾ** = ಶಿಕ್ಷಾ ಎಂಬ ವೇದಾಂಗ ಗ್ರಂಥಗಳಲ್ಲಿ ಹೇಳಿರುವ

**ಶಿಕ್ಷಾ** = ಉಚ್ಚಾರಣ ನಿಯಮಗಳ

**ಲಕ್ಷಣಾನಾಂ** = ಲಕ್ಷಣಗಳಿಗೆ

ಲಕ್ಷ್ಯಂ = ಉದಾಹರಣವಾಗಿರುವ

ಮಾನ್ಯಂ = ಗೌರವಾರ್ಹವಾದ

ಧನ್ಯಬುದ್ಧೇಃ = ಶ್ರೀಪೂರ್ಣಪ್ರಜ್ಞಾಚಾರ್ಯರ

ತತ್ ಉಚ್ಚಾರಣಂ = ಅಂತಹ ವೇದೋಚ್ಚಾರಣೆಯನ್ನು

ಅತುಲ್ಯಂ ಮನ್ಯೇ = ಎಣೆಯಿಲ್ಲದ್ದನ್ನಾಗಿ ತಿಳಿಯುತ್ತೇನೆ.

ತಾತ್ಪರ್ಯ— ಶ್ರೀಪೂರ್ಣಪ್ರಜ್ಞಾಚಾರ್ಯರು ಮಹಾಪುರುಷರು. ಅವರ ವ್ಯಕ್ತಿತ್ವಕ್ಕೆ ಅನುಗುಣವಾಗಿ ಅವರ ಶಬ್ದೋಚ್ಚಾರಣೆಯಲ್ಲಿ ಬಹಳ ಮೇಲ್ಮಟ್ಟದ ಗಹನತೆ ಮೊದಲಾದ ಗುಣಗಳು ಕಂಡುಬರುತ್ತಿದ್ದವು. ಮೊದಲು ಮಂದರಧ್ವನಿ ಅನಂತರ ಉಚ್ಚಧ್ವನಿ ಇತ್ಯಾದಿ ರೀತಿಯಿಂದ ಅವರ ಉಚ್ಚಾರಣೆಯಲ್ಲಿ ನಾನಾಬಗೆಯ ಧ್ವನಿಗಳು ಕಂಡು ಬರುತ್ತಿದ್ದವು. 'ಶಿಕ್ಷಾ' ಎಂಬ ವೇದಾಂಗಗ್ರಂಥದಲ್ಲಿ ವರ್ಣೋಚ್ಚಾರಣೆಯ ವಿಷಯದಲ್ಲಿ ಹೇಳಿರುವ ನಿಯಮಗಳನ್ನು ಅನುಸರಿಸಿ ಅವರು ವೇದೋಚ್ಚಾರಣೆ ಮಾಡುತ್ತಿದ್ದಾಗ, ಶಿಕ್ಷಾಗ್ರಂಥದಲ್ಲಿ ಹೇಳಿರುವ ವರ್ಣೋಚ್ಚಾರಣನಿಯಮಲಕ್ಷಣಗಳಿಗೆ ಇವರ ಉಚ್ಚಾರಣೆಯು ಶ್ರೇಷ್ಠವಾದ ಉದಾಹರಣೆಯಾಗಿದೆ ಎಂದು ಬಲ್ಲವರು ಗೌರವಿಸುತ್ತಿದ್ದರು. ಇಂತಹ ವೇದೋಚ್ಚಾರಣೆಗೆ ಸಮಾನವಾದುದು ಯಾವುದೂ ಇಲ್ಲವೆಂದೇ ನಾನು ತಿಳಿಯುತ್ತೇನೆ. 'ಶಿಕ್ಷಾ' ಗ್ರಂಥದಲ್ಲಿ ಹೀಗೆ ವೇದೋಚ್ಚಾರಣೆ ಮಾಡಬೇಕು ಎಂದು ಉಚ್ಚಾರಣೆಯ ಲಕ್ಷಣವನ್ನು ಹೇಳಿದ್ದಾರೆ. ಅದಕ್ಕೆ ಸರಿಯಾದ ಉದಾಹರಣೆಯೊಂದು ಬೇಕಾಗಿದೆಯಷ್ಟೆ. ಶ್ರೀಮಧ್ವಾಚಾರ್ಯರ ವೇದೋಚ್ಚಾರಣೆಯೇ ಅದಕ್ಕೆ ಮುಖ್ಯೋದಾಹರಣೆಯಾಗಿತ್ತು ಎಂದು ನಾನು ತಿಳಿಯುತ್ತೇನೆ ಎಂದು ಶ್ರೀನಾರಾಯಣಪಂಡಿತಾಚಾರ್ಯರು ಹೇಳುತ್ತಾರೆ.

ವಿಶೇಷಾಂಶ— ಇಲ್ಲಿ ಛಲಾರೀಯ ವ್ಯಾಖ್ಯಾನದ ವಾಕ್ಯಗಳು ''ಶಿಕ್ಷಾರೂಪವೇದಾಂಗೇ ಏವಂ ರೂಪಂ ಉಚ್ಚಾರಣಂ ಕುರ್ಯಾತ್ ಇತಿ ಉಚ್ಚಾರಣಲಕ್ಷಣಂ ವಿಹಿತಂ, ತಚ್ಚ ಯತ್ಕಿಂಚಿತ್ ಉದಾಹರಣವಿಷಯತ್ವೇನ ಜ್ಞೇಯಂ, ತತ್ರ ಶಿಕ್ಷೋಕ್ತೋಚ್ಚಾರಣಲಕ್ಷಣಸ್ಯ ಮಧ್ವಕೃತವೇದೋಚ್ಚಾರಣಮೇವ ಮುಖ್ಯೋದಾಹರಣಮಿತಿ ಭಾವಃ'' ।

ಶಿಕ್ಷಾ ಎಂಬ ವೇದಾಂಗಗಳಲ್ಲಿ ಹೀಗೆಯೇ ಉಚ್ಚರಿಸಬೇಕು. ಎಂದು ಉಚ್ಚಾರಣಲಕ್ಷಣವು ವಿಹಿತವಾಗಿದೆ. ಆ ಲಕ್ಷಣಕ್ಕೆ ಯಾವುದಾದರೊಂದು ಉದಾಹರಣೆಯಲ್ಲಿ ಸಮನ್ವಯ ಮಾಡಿದಾಗಲೇ ವಿಷಯವು ಚೆನ್ನಾಗಿ ತಿಳಿದುಬರುತ್ತದೆ. ಶಿಕ್ಷಾಗ್ರಂಥದಲ್ಲಿ ಹೇಳಿರುವ ಲಕ್ಷಣಕ್ಕೆ ಮುಖ್ಯ ಉದಾಹರಣವು ಆಚಾರ್ಯರ ವೇದೋಚ್ಚಾರಣೆಯೇ ಆಗಿತ್ತು ಎಂದು ಅಭಿಪ್ರಾಯವು.

ವಿಗ್ರಹ—

ಗಾಂಭೀರ್ಯಾದ್ಯೈಃ— ಗಂಭೀರಸ್ಯ ಭಾವಃ ಗಾಂಭೀರ್ಯಂ, ಆದೌ ಭವಂ ಆದ್ಯಂ, ಗಾಂಭೀರ್ಯಂ ಆದ್ಯಂ ಯೇಷಾಂ ತೇ ಗಾಂಭೀರ್ಯಾದ್ಯಾಃ (ಗುಣಾಃ) ತೈಃ, ಗಾಂಭೀರ್ಯಾದ್ಯೈಃ ।

ಔದಾರ್ಯಕಾರ್ಯೈಃ— ಉದಾರಸ್ಯ ಭಾವಃ ಔದಾರ್ಯಂ, ಔದಾರ್ಯಸ್ಯ ಕಾರ್ಯಾಃ ಔದಾರ್ಯ ಕಾರ್ಯಾಃ, ತೈಃ ಔದಾರ್ಯಕಾರ್ಯೈಃ ।

ನಾನಾನಾದಶ್ಲಾಘ್ಯಂ— ನಾನಾನಾದೈಃ ಶ್ಲಾಘ್ಯಂ ನಾನಾನಾದಶ್ಲಾಘ್ಯಂ, ।

ಶಿಕ್ಷಾಶಿಕ್ಷಾಲಕ್ಷಣಾನಾಂ— ಶಿಕ್ಷಾಯಾಃ ಶಿಕ್ಷಾ ಶಿಕ್ಷಾಶಿಕ್ಷಾ, ಶಿಕ್ಷಾಶಿಕ್ಷಾಯಾಃ ಲಕ್ಷಣಾನಿ ಶಿಕ್ಷಾಶಿಕ್ಷಾಲಕ್ಷಣಾನಿ, ತೇಷಾಂ ಶಿಕ್ಷಾಶಿಕ್ಷಾಲಕ್ಷಣಾನಾಂ ।

ಧನ್ಯಬುದ್ಧೇಃ— ಧನ್ಯಾ ಬುದ್ಧಿಃ ಯಸ್ಯ ಸಃ ಧನ್ಯಬುದ್ಧಿಃ, ತಸ್ಯ ಧನ್ಯಬುದ್ಧೇಃ ।

ಅತುಲ್ಯಂ— ನ ವಿದ್ಯತೇ ತುಲ್ಯಂ ಯಸ್ಯ ತತ್ ಅತುಲ್ಯಂ । ತತ್ ಅತುಲ್ಯಂ ।

**ಕ್ರಿಯಾಪದ—** ಮನಜ್ಞಾನೇ ದಿವಾದಿ ಸಕರ್ಮಕ ಅನಿಟ್ ಆತ್ಮನೇ ಪದಿ, ಲಟ್ ಉತ್ತಮಪುರುಷೇ ಏಕವಚನೇ 'ಮನ್ಯೇ' ಇತಿ ರೂಪಮ್ ।

ಮನ್ಯತೇ ಮನ್ಯೇತೇ ಮನ್ಯಂತೇ, ಮನ್ಯಸೇ ಮನ್ಯೇಥೇ ಮನ್ಯಧ್ವೇ, ಮನ್ಯೇ ಮನ್ಯಾವಹೇ ಮನ್ಯಾಮಹೇ ॥

**ಕೋಶ—** ಔದಾರ್ಯಕಾರ್ಯೈಃ ಎಂಬಲ್ಲಿರುವ ಉದಾರಶಬ್ದಕ್ಕೆ 'ಉದಾರೋದಾತ್ತಮಹತೋಃ' (ಅಮರ) ಎಂಬ ಕೋಶಾನುಸಾರವಾಗಿ 'ಮಹತ್' (ಮಹಾಪುರುಷ) ಎಂದು ಅರ್ಥ. ಶಿಕ್ಷಾಶಿಕ್ಷಾಲಕ್ಷಣಾನಾಂ ಲಕ್ಷ್ಯಂ ಎಂಬ ಪದಕ್ಕೆ ಭಾವಪ್ರಕಾಶಿಕೆಯಲ್ಲಿ ಶಿಕ್ಷಾಯಾಂ ಪ್ರತಿಪಾದ್ಯಮಾನೋಚ್ಚಾರಣಶಿಕ್ಷಯಾ ಪ್ರಕಟಿತಾನಾಂ ಲಕ್ಷಣಾನಾಂ ಲಕ್ಷ್ಯಂ ಎಂದು ವ್ಯಾಖ್ಯಾನಿಸಿದ್ದಾರೆ. ಶಿಕ್ಷಾ ಎಂಬ ವೇದಾಂಗ ಗ್ರಂಥದಲ್ಲಿ ಪ್ರತಿಪಾದಿಸಲ್ಪಡುವ ಉಚ್ಚಾರಣದ ನಿರ್ದೇಶದಿಂದ ಪ್ರಕಟಿತವಾದ ಲಕ್ಷಣಗಳಿಗೆ ಉದಾಹರಣೆಯಾಗಿರುವ ಎಂದು ಅರ್ಥ.

**ಪ್ರಯೋಗ—** (ಅಹಂ) ಧನ್ಯಬುದ್ಧೇಃ ತತ್ ಉಚ್ಚಾರಣಂ (ದ್ವಿತೀಯಾ) ಅತುಲ್ಯಂ ಮನ್ಯೇ ಹಿ (ಕರ್ತರಿ) ।

(ಮಯಾ) ಧನ್ಯಬುದ್ಧೇಃ ತತ್ ಉಚ್ಚಾರಣಂ (ಪ್ರಥಮಾ) ಅತುಲ್ಯಂ ಮನ್ಯತೇ ಹಿ (ಕರ್ಮಣಿ) ।

★ ★ ★

**ಅವತಾರಿಕಾ—** ಆಚಾರ್ಯರ ವೇದೋಚ್ಚಾರಣೆ ಮತ್ತು ವೇದವ್ಯಾಖ್ಯಾನವು ಶಿಕ್ಷಾದಿಷಡಂಗಗಳನ್ನು ಅನುಸರಿಸಿ ಇತ್ತು ಎಂದು ಹೇಳುತ್ತಾರೆ.

**ಕಾಲ್ಪೈಃ ಕ್ಲೃಪ್ತೀರ್ವ್ಯಂಜಯನ್ ಛಾಂದಸೀಶ್ಚ**
**ವ್ಯಕ್ತಂ ಶಾಬ್ದಂ ಶಾಸ್ತ್ರಮುದ್ಧಾವ್ಯ ಭೂಯಃ ।**
**ಸ ವ್ಯಾಚಖ್ಯಾವುಕ್ತನೈರುಕ್ತಮಾರ್ಗೋ**
**ಜ್ಯಾಯಾನ್ ಜ್ಯೋತಿರ್ವೇದಿನಾಂ ವೇದಮಿತ್ಥಮ್ ॥ 35 ॥**

**ಪದಚ್ಛೇದ—** ಕಾಲ್ಪೈಃ ಕ್ಲೃಪ್ತೀಃ ವ್ಯಂಜಯನ್, ಛಾಂದಸೀಃ, ಚ, ವ್ಯಕ್ತಂ, ಶಾಬ್ದಂ, ಶಾಸ್ತ್ರಂ, ಉದ್ಧಾವ್ಯ, ಭೂಯಃ, ಸಃ, ವ್ಯಾಚಖ್ಯೌ, ಉಕ್ತನೈರುಕ್ತಮಾರ್ಗಃ, ಜ್ಯಾಯಾನ್, ಜ್ಯೋತಿರ್ವೇದಿನಾಂ ವೇದಂ, ಇತ್ಥಂ ।

**ಅನ್ವಯ—** ಸಃ, ಕಾಲ್ಪೈಃ, ಛಾಂದಸೀಃ ಚ ಕ್ಲೃಪ್ತೀಃ, ವ್ಯಂಜಯನ್, ಶಾಬ್ದಂ ಶಾಸ್ತ್ರಂ ಭೂಯಃ ವ್ಯಕ್ತಂ ಉದ್ಧಾವ್ಯ, ಉಕ್ತನೈರುಕ್ತಮಾರ್ಗಃ ಜ್ಯೋತಿರ್ವೇದಿನಾಂ ಜ್ಯಾಯಾನ್ ಇತ್ಥಂ ವೇದಂ ವ್ಯಾಚಖ್ಯೌ ।

**ಅನ್ವಯಾರ್ಥ—**

**ಸಃ** = ಆ ಮಧ್ವಾಚಾರ್ಯರು
**ಕಾಲ್ಪೈಃ** = ಕಲ್ಪವೆಂಬ ವೇದಾಂಗ ಗ್ರಂಥದಲ್ಲಿ ಹೇಳಿರುವ
**ಛಾಂದಸೀಃ ಚ** = ಛಂದಶ್ಶಾಸ್ತ್ರದಲ್ಲಿಯೂ ಹೇಳಿರುವ
**ಕ್ಲೃಪ್ತೀಃ** = ವೇದದ ಅರ್ಥವನ್ನು ಹೇಳುವ ನಿಯಮಗಳನ್ನು
**ವ್ಯಂಜಯನ್** = ಪ್ರಕಟಗೊಳಿಸುತ್ತಾ
**ಶಾಬ್ದಂ ಶಾಸ್ತ್ರಂ** = ಶಬ್ದಗಳಿಗೆ ಸಂಬಂಧಿಸಿದ ವ್ಯಾಕರಣಶಾಸ್ತ್ರವನ್ನು
**ಭೂಯಃ** = ತಾತ್ತ್ವಿಕವಾಗಿ (ಸರಿಯಾಗಿ) ಬಹಳವಾಗಿ
**ವ್ಯಕ್ತಂ** = ಸ್ಪಷ್ಟವಾಗಿ

ಉದ್ಭಾವ್ಯ = ಪ್ರಕಟಗೊಳಿಸಿ

ಉಕ್ತ = ಹೇಳಲ್ಪಟ್ಟ

ನೈರುಕ್ತಮಾರ್ಗಃ = ನಿರುಕ್ತವೆಂಬ ವೇದಾಂಗದ ಸಂಪ್ರದಾಯವುಳ್ಳವರಾಗಿ

ಜ್ಯೋತಿರ್ವೇದಿನಾಂ = ಜ್ಯೋತಿಶ್ಶಾಸ್ತ್ರವನ್ನು ಬಲ್ಲವರಲ್ಲಿ

ಜ್ಯಾಯಾನ್ (ಸನ್) = ಶ್ರೇಷ್ಠರಾಗಿ

ಇತ್ಥಂ = ಈ ರೀತಿಯಾಗಿ

ವೇದಂ = ವೇದವನ್ನು

ವ್ಯಾಚಖ್ಯೌ = ಪ್ರವಚನ ಮಾಡಿದರು.

ತಾತ್ಪರ್ಯ— ವೇದಗಳಿಗೆ, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ, ಕಲ್ಪ ಎಂಬ ಆರು ಅಂಗಗಳಿವೆ. ಆಚಾರ್ಯರು ವೇದವ್ಯಾಖ್ಯಾನ ಮಾಡುವುದಕ್ಕೆ ಮೊದಲು ಶಿಕ್ಷಾ ಎಂಬ ವೇದಾಂಗವನ್ನು ಅನುಸರಿಸಿ ಮೊದಲು ವೇದಮಂತ್ರಗಳನ್ನು ಸುಸ್ವರವಾಗಿ ಪಠಿಸಿದರು ಎಂದು ಹಿಂದೆ ಹೇಳಲಾಗಿದೆ. ಈಗ ಅವರ ವೇದಪ್ರವಚನವು ಉಳಿದ ವೇದಾಂಗಗಳಿಗೂ ಅನುಗುಣವಾಗಿದೆ ಎಂದು ವರ್ಣಿಸುತ್ತಾರೆ.

ಆಚಾರ್ಯರು ಕಲ್ಪವೆಂದು ವೇದಾಂಗದಲ್ಲಿ ಹೇಳಿರುವ ವೇದಾರ್ಥ ವ್ಯಾಖ್ಯಾನದ ನಿಯಮಗಳನ್ನು ಬಹಳ ಚೆನ್ನಾಗಿ ಪ್ರಕಟಗೊಳಿಸಿ, ಛಂದಶ್ಶಾಸ್ತ್ರದ ನಿಯಮಗಳನ್ನೂ ಅನುಸರಿಸಿ ವೇದಾರ್ಥವನ್ನು ಪ್ರವಚನ ಮಾಡಿದರು. ವ್ಯಾಕರಣಶಾಸ್ತ್ರವನ್ನು ಸರಿಯಾಗಿ ಸ್ಪಷ್ಟವಾಗಿ ಪ್ರಮಾಣವಾಗಿ ಕೊಟ್ಟು ತಾವು ಹೇಳಿರುವ ಅರ್ಥವು ವ್ಯಾಕರಣ ಶಾಸ್ತ್ರಕ್ಕೆ ಅನುಗುಣವಾಗಿದೆ ಎಂದು ತೋರಿಸಿಕೊಟ್ಟರು. ನಿರುಕ್ತವೆಂಬ ವೇದಾಂಗದಲ್ಲಿ ಹೇಳಿರುವಂತೆ ವೈದಿಕ ಶಬ್ದಗಳ ನಿರ್ವಚನವನ್ನು ತೋರಿಸಿದರು. ಇಷ್ಟೇ ಅಲ್ಲ, ಜ್ಯೋತಿಶ್ಶಾಸ್ತ್ರವನ್ನು ಬಲ್ಲವರಲ್ಲಿ ಶ್ರೇಷ್ಠರಾದ ಆಚಾರ್ಯರು ವೇದಾಂಗವಾಗಿರುವ ಜ್ಯೋತಿಶ್ಶಾಸ್ತ್ರದ ಜ್ಞಾನವನ್ನು ಪ್ರಕಟಗೊಳಿಸುತ್ತಾ ವೇದಾರ್ಥವನ್ನು ಪ್ರವಚನ ಮಾಡಿದರು. ಈ ರೀತಿ ಆಚಾರ್ಯರ ವೇದವ್ಯಾಖ್ಯಾನವು ಶಿಕ್ಷಾದಿ ಷಡಂಗಗಳಿಗೆ ಅನುಸಾರವಾಗಿ ಇತ್ತು ಎಂದು ತಾತ್ಪರ್ಯ.

ವಿಗ್ರಹ—

ಕಾಲ್ಪೀಃ— ಕಲ್ಪಸ್ಯ ಇಮಾಃ ಕಾಲ್ಪ್ಯಃ, ತಾಃ ಕಾಲ್ಪೀಃ ।

ಛಾಂದಸೀಃ— ಛಂದಸಃ ಇಮಾಃ ಛಾಂದಸ್ಯಃ, ತಾಃ ಛಾಂದಸೀಃ ।

ಶಾಬ್ದಂ— ಶಬ್ದಾನಾಂ ಸಂಬಂಧೀ ಶಾಬ್ದಂ, ತತ್ ಶಾಬ್ದಂ ।

ಉಕ್ತನೈರುಕ್ತಮಾರ್ಗಃ— ನಿರುಕ್ತಸ್ಯ ಅಯಂ ನೈರುಕ್ತಃ, ನೈರುಕ್ತಶ್ಚಾಸೌ ಮಾರ್ಗಶ್ಚ ನೈರುಕ್ತಮಾರ್ಗಃ, ಉಕ್ತಃ ನೈರುಕ್ತಮಾರ್ಗಃ ಯೇನ ಸಃ ಉಕ್ತನೈರುಕ್ತಮಾರ್ಗಃ ।

ಜ್ಯೋತಿರ್ವೇದಿನಾಂ— ಜ್ಯೋತಿಃ ವಿದಂತಿ ಇತಿ ಜ್ಯೋತಿರ್ವೇದಿನಃ, ತೇಷಾಂ ಜ್ಯೋತಿರ್ವೇದಿನಾಂ ।

ಕ್ರಿಯಾಪದ— ಚಖ್ಯೌ ಚಖ್ಯತುಃ ಚಖ್ಯುಃ ಇತ್ಯಾದಿ ವಿ ಆಙ್ ಉಪಸರ್ಗದ್ವಯಪೂರ್ವಕ ಚಕ್ಷಿಙ್ ವ್ಯಕ್ತಾಯಾಂ ವಾಚಿ ಎಂಬ ಧಾತುವಿನ ಲಿಟ್ ಚಕ್ಷಿಙಃ ಖ್ಯಾಞ್ ಎಂಬ ಸೂತ್ರದಿಂದ ಖ್ಯಾಞ್ ಆದೇಶ. ಈ ಧಾತುವಿನ ಉಳಿದ ರೂಪಗಳನ್ನು ಇದೇ ಸರ್ಗದ ಆಕರ್ಣ್ಯೇತ್ಥಂ ಎಂಬ 17ನೆಯ ಶ್ಲೋಕದ ವ್ಯಾಖ್ಯಾನದಲ್ಲಿ ಕೊಡಲಾಗಿದೆ. ।

ಪ್ರಯೋಗ— ಸಃ ವೇದಂ ವ್ಯಾಚಖ್ಯೌ, (ಕರ್ತರಿ) । ತೇನ ವೇದಃ ವ್ಯಾಚಖ್ಯೇ (ಕರ್ಮಣಿ) ।

★ ★ ★

**ಅವತಾರಿಕಾ—** ಶ್ರೀಮದಾಚಾರ್ಯರ ವೇದೋಚ್ಚಾರಣ ಮತ್ತು ಪ್ರವಚನದ ವೈಖರಿಯನ್ನು ವರ್ಣಿಸಲು ನಮ್ಮಂತಹವರಿಂದ ಸಾಧ್ಯವಿಲ್ಲ ಎಂದು ಹೇಳುತ್ತಿದ್ದಾರೆ.

**ಶ್ರೌತೇ ವ್ಯಾಖ್ಯೋಚ್ಚಾರಣೇ ಚಾರುಣೀ ತೇ**
**ಮಾದೃಗ್ ದೇಹೀ ವರ್ಣಯೇದಸ್ಯಕೋ ನು ।**
**ವಾಗೀಶಾನ್ಯೈರ್ವಾಗ್ವಿಹಂಗೇಶಜೀವ್ಯೈ-**
**ರ್ಭೂರ್ಯಾಶ್ಚರ್ಯೈರ್ವರ್ಣಿತೇ ಯೇ ಪ್ರಣಮ್ಯ ॥ 36 ॥**

**ಪದಚ್ಛೇದ—** ಶ್ರೌತೇ, ವ್ಯಾಖ್ಯೋಚ್ಚಾರಣೇ, ಚಾರುಣೀ, ತೇ, ಮಾದೃಕ್, ದೇಹೀ, ವರ್ಣಯೇತ್, ಅಸ್ಯ, ಕಃ, ನು, ವಾಗೀಶಾನ್ಯೈಃ, ವಾಗ್‌ವಿಹಂಗೇಶಜೀವ್ಯೈಃ, ಭೂರ್ಯಾಶ್ಚರ್ಯೈಃ, ವರ್ಣಿತೇ, ಯೇ, ಪ್ರಣಮ್ಯ ।

**ಅನ್ವಯ—** ಅಸ್ಯ ಯೇ (ವ್ಯಾಖ್ಯೋಚ್ಚಾರಣೇ) ವಾಗೀಶಾನ್ಯೈಃ ಭೂರ್ಯಾಶ್ಚರ್ಯೈಃ, ವಾಗ್ವಿಹಂಗೇಶಜೀವ್ಯೈಃ ಪ್ರಣಮ್ಯ ವರ್ಣಿತೇ, ಮಾದೃಕ್ ಕಃ ದೇಹೀ ಚಾರುಣೀ ಶ್ರೌತೇ, ತೇ ವ್ಯಾಖ್ಯೋಚ್ಚಾರಣೇ ವರ್ಣಯೇತ್ ।

**ಅನ್ವಯಾರ್ಥ—**

**ಅಸ್ಯ** = ಈ ಶ್ರೀಮಧ್ವಾಚಾರ್ಯರ
**ಯೇ** = ಯಾವ ವೇದವ್ಯಾಖ್ಯಾನ ಮತ್ತು ಉಚ್ಚಾರಣೆಗಳು
**ವಾಗೀಶಾನ್ಯೈಃ** = ಮಾತುಗಳಿಗೆ ಒಡೆಯರಾದ
**ಭೂರ್ಯಾಶ್ಚರ್ಯೈಃ** = ಹೆಚ್ಚಾದ ಆಶ್ಚರ್ಯವುಳ್ಳ
**ವಾಗ್ ವಿಹಂಗೇಶಜೀವ್ಯೈಃ- ವಾಕ್** = ಸರಸ್ವತಿಯು
**ವಿಹಂಗೇಶ** = ಗರುಡನು
**ಜೀವ್ಯೈಃ** = ಬೃಹಸ್ಪತಿಯು ಇವರುಗಳಿಂದ
**ಪ್ರಣಮ್ಯ** = ನಮಸ್ಕಾರ ಮಾಡಿ
**ವರ್ಣಿತೇ** = ವರ್ಣಿಸಲ್ಪಟ್ಟಿವೆಯೋ
**ಮಾದೃಕ್** = ನನ್ನಂತಹ
**ಕಃ ದೇಹೀ** = ಯಾವ ಮನುಷ್ಯನು
**ಚಾರುಣೀ** = ಮನೋಹರವಾದ
**ಶ್ರೌತೇ** = ವೇದಸಂಬಂಧಿಯಾದ
**ತೇ** = ಅಂತಹ
**ವ್ಯಾಖ್ಯಾ** = ವೇದಪ್ರವಚನ
**ಉಚ್ಚಾರಣೇ** = ವೇದ, ಪಾರಾಯಣ ಇವುಗಳನ್ನು
**ವರ್ಣಯೇತ್ ನು** = ವರ್ಣಿಸಿಯಾನು ?

**ತಾತ್ಪರ್ಯ—** ಸರಸ್ವತೀ, ಗರುಡದೇವರು, ಬೃಹಸ್ಪತ್ಯಾಚಾರ್ಯರು ವೇದಾಭಿಮಾನಿಗಳು, ವೇದೋಚ್ಚಾರಣೆ ಮತ್ತು ವೇದ ಪ್ರವಚನ ಮಾಡುವ ಜೀವರಿಗೆ ಪ್ರೇರಕರು. ಇವರೂ ಕೂಡ ಶ್ರೀಮಧ್ವಾಚಾರ್ಯರ ವೇದೋಚ್ಚಾರಣೆ ಮತ್ತು

ವೇದಾರ್ಥ ಪ್ರವಚನಗಳನ್ನು ಕೇಳಿ ಆಶ್ಚರ್ಯಪಡುತ್ತಾರೆ. ನಮಸ್ಕರಿಸಿ ಆಚಾರ್ಯರ ವೇದೋಚ್ಚಾರಣ ಮತ್ತು ವೇದ ವ್ಯಾಖ್ಯಾನಗಳನ್ನು ಹೊಗಳುತ್ತಾರೆ. ಹೀಗಿರುವಾಗ ನನ್ನಂತಹ ಅಲ್ಪ ಮನುಷ್ಯನು ಶ್ರೀಮಧ್ವಾಚಾರ್ಯರ ವೇದವ್ಯಾಖ್ಯಾನ ಮತ್ತು ಪ್ರವಚನಗಳನ್ನು ಹೊಗಳಲು ಸಾಧ್ಯವೇ ? ಎಂದಿಗೂ ಸಾಧ್ಯವಿಲ್ಲ. ಸಮಸ್ತವಾಕ್ಕುಗಳಿಗೆ ಅಭಿಮಾನಿಗಳಾದ ಸರಸ್ವತ್ಯಾದಿಗಳೂ ಆಶ್ಚರ್ಯದಿಂದ ಹೊಗಳುವುದರಿಂದ ಅಂತಹ ವೇದವ್ಯಾಖ್ಯಾನ ಮತ್ತು ಉಚ್ಚಾರಣೆಗಳನ್ನು, ಹೊಗಳಲು ಅಲ್ಪ ಬುದ್ಧಿಯುಳ್ಳ ಮನುಷ್ಯಮಾತ್ರನಾದ ನನಗೆ ಸಾಧ್ಯವಿಲ್ಲ ಎಂದು ಭಾವ. (ಛಲಾರೀಯ- ವಾಗಭಿಮಾನಿಭಿಃ ಸರಸ್ವತ್ಯಾದಿಭಿಃ ಆಶ್ಚರ್ಯೇಣೈವ ಸ್ತೂಯಮಾನತ್ವಾತ್ ತಾದೃಶವ್ಯಾಖ್ಯೋಚ್ಚಾರಣಸ್ತುತೌ ಮನುಷ್ಯಃ ಅಹಂ ಅಲ್ಪಬುದ್ಧಿಃ ನ ಸಮರ್ಥಃ ಇತಿ ಭಾವಃ) ।

ವಿಗ್ರಹ—

ಶ್ರೌತೇ— ಶ್ರುತೇಃ ಇಮೇ ಶ್ರೌತೇ, ತೇ ಶ್ರೌತೇ ।

ವ್ಯಾಖ್ಯೋಚ್ಚಾರಣೇ— ವ್ಯಾಖ್ಯಾ ಚ ಉಚ್ಚಾರಣಂ ಚ ವ್ಯಾಖ್ಯೋಚ್ಚಾರಣೇ, ತೇ ವ್ಯಾಖ್ಯೋಚ್ಚಾರಣೇ ।

ದೇಹೀ— ದೇಹಃ ಅಸ್ಯ ಅಸ್ತೀತಿ ದೇಹೀ ।

ವಾಗೀಶಾನಾಃ— ವಾಚಾಂ ಈಶಾನಾಃ ವಾಗೀಶಾನಾಃ ।

ವಿಹಂಗೇಶಃ— ವಿಹಂಗಾನಾಂ ಈಶಃ ವಿಹಂಗೇಶಃ ।

ವಾಗ್ವಿಹಂಗೇಶಜೀವೈಃ— ವಾಕ್ ಚ ವಿಹಂಗೇಶಶ್ಚ ಜೀವಶ್ಚ ವಾಗ್ವಿಹಂಗೇಶಜೀವಾಃ, ತೈಃ ವಾಗ್ ವಿಹಂಗೇಶಜೀವೈಃ ।

ಭೂರ್ಯಾಶ್ಚರ್ಯೈಃ— ಭೂರಿ ಆಶ್ಚರ್ಯಂ ಯೇಷಾಂ ತೇ ಭೂರ್ಯಾಶ್ಚರ್ಯಾಃ, ತೈಃ ಭೂರ್ಯಾಶ್ಚರ್ಯೈಃ ।

ಕ್ರಿಯಾಪದ— ವರ್ಣವರ್ಣಕ್ರಿಯಾವಿಸ್ತಾರಗುಣವಚನೇಷು (ವರ್ಣಸ್ತುತೌ) ಸಕರ್ಮಕ ಸೇಟ್ ಉಭಯ ಪದೀ, ವಿಧಿಲಿಙ್ ಪ್ರಥಮಪುರುಷೇ ಏಕವಚನೇ 'ವರ್ಣಯೇತ್' ಇತಿ ರೂಪಮ್ ।

ಕೋಶ— ವಿಹಂಗೇಶ ಎಂಬಲ್ಲಿ ವಿಹಂಗ = ಪಕ್ಷಿ, ಖಗೇ ವಿಹಂಗವಿಹಂಗಮವಿಹಾಯಸಃ ಅಮರ. ಜೀವ = ಬೃಹಸ್ಪತ್ಯಾಚಾರ್ಯರು, ಜೀವ ಆಂಗಿರಸೋವಾಚಸ್ಪತಿಶ್ಚಿತ್ರಶಿಖಂಡಿಜಃ ಅಮರ.

ಪ್ರಯೋಗ— ಅಸ್ಯಯಾಭ್ಯಾಂ ವ್ಯಾಖ್ಯೋಚ್ಚಾರಣಾಭ್ಯಾಂ ವಾಗೀಶಾನ್ಯೈಃ ಭೂರ್ಯಾಶ್ಚರ್ಯೈಃ ವಾಗ್ವಿಹಂಗೇಶ ಜೀವೈಃ ಪ್ರಣಮ್ಯ ವರ್ಣತಾಭ್ಯಾಂ ಭೂಯತೇ (ಭಾವೇ) ಮಾದೃಶಾ ಕೇನ ದೇಹಿನಾ ಚಾರುಣೀ ಶ್ರೌತೇ ತೇ ವ್ಯಾಖ್ಯೋಚ್ಚಾರಣೇ ವರ್ಣ್ಯೇಯಾತಾಂ (ಕರ್ಮಣಿ) ।

★ ★ ★

ಅವತಾರಿಕಾ— ಆಚಾರ್ಯರ ವೇದವ್ಯಾಖ್ಯಾನ ಉಚ್ಚಾರಣೆಗಳನ್ನು ಕೇಳಿ ಅಲ್ಲಿರುವ ಪಂಡಿತರು ಮುಂದೇನು ಮಾಡಿದರು ಎಂಬುದನ್ನು ಹೇಳುತ್ತಾರೆ.

**ಛಂದಸ್ಸಾರ್ಥಂ ಸಾರ್ಥಮತ್ರಾಮುನೇತ್ಥಂ**
**ಪ್ರೋಕ್ತಂ ಶ್ರುತ್ವಾ ಬ್ರಾಹ್ಮಣಾ ಬ್ರಹ್ಮಣೇವ ।**
**ಸರ್ವೇ ಸೌಮ್ಯಾ ಜಿಷ್ಣುಜಿಜ್ಞಾಸಯಾಮೀ**
**ಪ್ರಾಪ್ಯ ಪ್ರೋಚುಶ್ಚಿತ್ರಕಾಯಾಭಿಧಾನಮ್ ॥ 37 ॥**

**ಪದಚ್ಛೇದ—** ಛಂದಸ್ಸಾರ್ಥಂ, ಸಾರ್ಥಂ, ಅತ್ರ, ಅಮುನಾ, ಇತ್ಥಂ, ಪ್ರೋಕ್ತಂ, ಶ್ರುತ್ವಾ, ಬ್ರಾಹ್ಮಣಾಃ, ಬ್ರಹ್ಮಣಾ, ಇವ, ಸರ್ವೇ, ಸೌಮ್ಯಾಃ, ಜಿಷ್ಣುಜಿಜ್ಞಾಸಯಾ, ಅಮೀ, ಪ್ರಾಪ್ಯ, ಪ್ರೋಚುಃ, ಚಿತ್ರಕಾಯಾಭಿಧಾನಂ ।

**ಅನ್ವಯ—** ಸೌಮ್ಯಾಃ ಅಮೀ ಸರ್ವೇ ಬ್ರಾಹ್ಮಣಾಃ, ಅತ್ರ ಬ್ರಹ್ಮಣಾ ಇವ ಅಮುನಾ ಇತ್ಥಂ ಸಾರ್ಥಂ ಪ್ರೋಕ್ತಂ ಛಂದಸ್ಸಾರ್ಥಂ ಶ್ರುತ್ವಾ, ಜಿಷ್ಣುಜಿಜ್ಞಾಸಯಾ ಚಿತ್ರಕಾಯಾಭಿಧಾನಂ ಪ್ರಾಪ್ಯ ಪ್ರೋಚುಃ ।

**ಅನ್ವಯಾರ್ಥ—**

**ಸೌಮ್ಯಾಃ** = ಪ್ರಸನ್ನರಾದ
**ಅಮೀ ಸರ್ವೇ ಬ್ರಾಹ್ಮಣಾಃ** = ಈ ಎಲ್ಲಾ ಬ್ರಾಹ್ಮಣರು
**ಅತ್ರ** = ಈ ವಿದ್ವಾಂಸರ ಸಭೆಯಲ್ಲಿ
**ಬ್ರಹ್ಮಣಾ ಇವ** = ಚತುರ್ಮುಖಬ್ರಹ್ಮನಂತೆ
**ಅಮುನಾ** = ಈ ಮಧ್ವಾಚಾರ್ಯರಿಂದ
**ಇತ್ಥಂ** = ಈ ರೀತಿಯಾಗಿ
**ಸಾರ್ಥಂ** = ಅರ್ಥಸಹಿತವಾಗಿ
**ಪ್ರೋಕ್ತಂ** = ಹೇಳಲ್ಪಟ್ಟ
**ಛಂದಸ್ಸಾರ್ಥಂ** = ವೇದಗಳ ಸಮೂಹವನ್ನು
**ಶ್ರುತ್ವಾ** = ಕೇಳಿ
**ಜಿಷ್ಣು** = ಜಯಿಸುವ ಸ್ವಭಾವವುಳ್ಳವರನ್ನು
**ಜಿಜ್ಞಾಸಯಾ** = ತಿಳಿಯುವ ಇಚ್ಛೆಯಿಂದ
**ಚಿತ್ರಕಾಯಾಭಿಧಾನಂ** = ಪುಂಡರೀಕನೆಂದು ಹೆಸರುಳ್ಳ ಪುಂಡರೀಕಪುರಿಯನ್ನು
**ಪ್ರಾಪ್ಯ** = ಹೊಂದಿ
**ಪ್ರೋಚುಃ** = ಹೇಳಿದರು.

**ತಾತ್ಪರ್ಯ—** ಎಲ್ಲಾ ವಿದ್ವಾಂಸರು ಸೇರಿದ ಆ ಸಭೆಯಲ್ಲಿ ಶ್ರೀಮಧ್ವಾಚಾರ್ಯರು ಸಾಕ್ಷಾತ್ ಚತುರ್ಮುಖ ಬ್ರಹ್ಮದೇವರಂತೆ, ಓಂದೆ ಹೇಳಿದ ರೀತಿಯಿಂದ ಅರ್ಥಸಹಿತವಾಗಿ ಅನೇಕ ವೇದಭಾಗಗಳ ಅರ್ಥವನ್ನೂ ಹೇಳಿದರು. ಆ ವೇದಸಮೂಹವನ್ನು ಸುಶ್ರಾವ್ಯವಾಗಿ ಉಚ್ಚರಿಸಿದರು. ಇದನ್ನೆಲ್ಲಾ ಕೇಳಿ ಅಲ್ಲಿದ್ದ ಬ್ರಾಹ್ಮಣರ ಮನಸ್ಸು ಮತ್ತು ಮುಖಗಳು ಪ್ರಸನ್ನವಾದವು. ಆದರೂ ಅವರು ಶ್ರೀಮಧ್ವಾಚಾರ್ಯರು ಮತ್ತು ಪುಂಡರೀಕಪುರಿ ಇವರಿಬ್ಬರಲ್ಲಿ ಯಾರು ಜಯಶೀಲರು. ಪರಸ್ಪರ ಸೇರಿ ವಾದ ಮಾಡಿದಾಗ ಯಾರು ಜಯಿಸುವರು, ಅಥವಾ ಇವರಿಬ್ಬರಲ್ಲಿ ಯಾರು ಚೆನ್ನಾಗಿ ವೇದ ಪಠನ ಮಾಡಿ ಅದರ ಅರ್ಥವನ್ನು ಚೆನ್ನಾಗಿ ಹೇಳುವರು ಎಂದು ತಿಳಿಯಲು ಅಪೇಕ್ಷಿಸಿದರು. ಆಗ ಪುಂಡರೀಕಪುರಿ ಎಂಬ ಸನ್ಯಾಸಿಯು ರಜತಪೀಠಪುರದಲ್ಲಿರಲಿಲ್ಲ. ಬೇರೆಲ್ಲಿಯೋ ಇದ್ದರು. ಈ ಬ್ರಾಹ್ಮಣರೆಲ್ಲಾ ಆ ಸನ್ಯಾಸಿಯ ಬಳಿಗೆ ಹೋಗಿ ಹೇಳಿದರು.

**ವಿಗ್ರಹ—**

**ಛಂದಸ್ಸಾರ್ಥಂ—** ಛಂದಸಾಂ ಸಾರ್ಥಃ ಛಂದಸ್ಸಾರ್ಥಃ, ತಂ ಛಂದಸ್ಸಾರ್ಥಂ ।
**ಸಾರ್ಥಂ—** ಅರ್ಥೇನ ಸಹಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸಾರ್ಥಂ । (ಕ್ರಿ. ವಿ) ।
**ಜಿಷ್ಣುಜಿಜ್ಞಾಸಯಾ—** ಜಿಷ್ಣೋಃ ಜಿಜ್ಞಾಸಾ ಜಿಷ್ಣುಜಿಜ್ಞಾಸಾ, ತಯಾ ಜಿಷ್ಣುಜಿಜ್ಞಾಸಯಾ ।

**ಚಿತ್ರಕಾಯಾಭಿಧಾನಂ**— ಚಿತ್ರಕಾಯ ಇತಿ ಅಭಿಧಾನಂ ಯಸ್ಯ ಸಃ ಚಿತ್ರಕಾಯಾಭಿಧಾನಃ, ತಂ ಚಿತ್ರಕಾಯಾಭಿಧಾನಂ ।

**ಕ್ರಿಯಾಪದ**— ವಚ ಪರಿಭಾಷಣೇ ದ್ವಿಕರ್ಮಕ ಅನಿಟ್ ಪರಸ್ಮೈಪದೀ ಲಿಟ್ ಪ್ರಥಮಪುರುಷೇ ಬಹುವಚನೇ 'ಪ್ರೋಚುಃ' ಇತಿ ರೂಪಮ್ ।

ಪ್ರ+ ಉವಾಚ ಊಚತುಃ ಊಚುಃ, ಉವಚಿಥ ಉವಕ್ಥ ಊಚಥುಃ-ಊಚ, ಉವಾಚ-ಉವಚ, ಊಚಿವ ಊಚಿಮ ॥

**ಕೋಶ ಮತ್ತು ವಿಶೇಷ ವಿಚಾರಗಳು**— ಛಂದಸ್ಸಾರ್ಥಂ ಎಂಬಲ್ಲಿ ಸಾರ್ಥ = ಸಮೂಹ, ಸಾರ್ಥೋ ವಣಿಕ್ ಸಮೂಹೇ ಸ್ಯಾದಪಿ ಸಂಧಾನಮಾತ್ರಕೇ ಎಂದು ವಿಶ್ವ. ಚಿತ್ರಕಾಯ = ಹುಲಿ ವ್ಯಾಘ್ರೋ ದ್ವೀಪೀ ಪುಂಡರೀಕಸ್ತರಕ್ಷುಃ ಶಾರ್ದೂಲಸ್ಸ್ಯಾಚ್ಚಿತ್ರಕಾಯೋ ಮೃಗಾರಿಃ ಎಂದು ಹಲಕೋಶ. ಇಲ್ಲಿ ಚಿತ್ರಕಾಯಾಭಿಧಾನಂ ಎಂಬಲ್ಲಿ ಚಿತ್ರಕಾಯ ಎಂದರೆ ಪುಂಡರೀಕ 'ವ್ಯಾಘ್ರೇಽಪಿ ಪುಂಡರೀಕೋನಾ' ಎಂಬ ಅಮರ ಕೋಶಾನುಸಾರ ಪುಂಡರೀಕ ಎಂದರೆ ಹುಲಿ. ಹುಲಿಯ ಮತ್ತೊಂದು ಪರ್ಯಾಯ ಪದ ಚಿತ್ರಕಾಯ, ಆದುದರಿಂದ ಪುಂಡರೀಕಪುರಿ ಎಂದು ಹೇಳುವ ಬದಲಾಗಿ ಚಿತ್ರಕಾಯಾಭಿಧಾನಂ ಎಂದು ಹೇಳಿದ್ದಾರೆ.

**ಪ್ರಯೋಗ**— ಸೌಮ್ಯೈಃ ಅಮೀಭಿಃ ಸರ್ವೈರಪಿ ಬ್ರಾಹ್ಮಣೈಃ ಅತ್ರ ಬ್ರಹ್ಮಣಾ ಇವ ಅಮುನಾ ಇತ್ಥಂ ಸಾರ್ಥಂ ಪ್ರೋಕ್ತಂ ಛಂದಸ್ಸಾರ್ಥಂ ಶ್ರುತ್ವಾ ಜಿಷ್ಣುಜಿಜ್ಞಾಸಯಾ ಚಿತ್ರಕಾಯಾಭಿಧಾನಂ ಪ್ರಾಪ್ಯ ಪ್ರೋಚೇ ।

★ ★ ★

ಅವತಾರಿಕಾ— ಆ ಬ್ರಾಹ್ಮಣರು ಪಂಡರೀಕಪುರಿಯ ಹತ್ತಿರ ಹೇಳಿದ ಮಾತನ್ನೇ ಹೇಳುತ್ತಿದ್ದಾರೆ.

**ಪ್ರಾಜ್ಞಪ್ರಜ್ಞಃ ಪ್ರಾಜ್ಯಯಾ ಪ್ರಜ್ಞಯಾಽಸೌ**
**ಹಂತಾವೋಚನ್ಮಂತ್ರವರ್ಣಾಭಿಧೇಯಮ್ ।**
**ತತ್ತತ್ತ್ಯರ್ಥೀ ಪ್ರಾರ್ಥ್ಯತೇ ವಕ್ತುಮೇತತ್**
**ಪ್ರಾಜ್ಞಾಸ್ಮಾಭಿಃ ಶ್ರೋತುಕಾಮೈರ್ಭವಾಂಶ್ಚ ॥ 38 ॥**

ಪದಚ್ಛೇದ— ಪ್ರಾಜ್ಞಪ್ರಜ್ಞಃ, ಪ್ರಾಜ್ಯಯಾ, ಪ್ರಜ್ಞಯಾ, ಅಸೌ, ಹಂತ, ಅವೋಚತ್, ಮಂತ್ರವರ್ಣಾಭಿಧೇಯಂ, ತತ್ತತ್ತ್ಯರ್ಥೀ, ಪ್ರಾರ್ಥ್ಯತೇ, ವಕ್ತುಂ, ಏತತ್, ಪ್ರಾಜ್ಞ, ಅಸ್ಮಾಭಿಃ, ಶ್ರೋತುಕಾಮೈಃ, ಭವಾನ್, ಚ ।

ಅನ್ವಯ— ಅಸೌ ಪ್ರಾಜ್ಞಪ್ರಜ್ಞಃ ಪ್ರಾಜ್ಯಯಾ ಪ್ರಜ್ಞಯಾ ಮಂತ್ರವರ್ಣಾಭಿಧೇಯಂ ಅವೋಚತ್ ಹಂತ! ಪ್ರಾಜ್ಞ! ತತ್ತತ್ತ್ಯರ್ಥೀ ಭವಾನ್ ಚ ಶ್ರೋತುಕಾಮೈಃ ಅಸ್ಮಾಭಿಃ ಏತತ್ ವಕ್ತುಂ ಪ್ರಾರ್ಥ್ಯತೇ ।

ಅನ್ವಯಾರ್ಥ—

**ಅಸೌ** = ಈ
**ಪ್ರಾಜ್ಯಪ್ರಜ್ಞಃ** = ಪೂರ್ಣಪ್ರಜ್ಞರು
**ಪ್ರಾಜ್ಯಯಾ** = ಪೂರ್ಣವಾದ
**ಪ್ರಜ್ಞಯಾ** = ಬುದ್ಧಿಯಿಂದ
**ಮಂತ್ರವರ್ಣಾಭಿಧೇಯಂ** = ವೇದದ ಅರ್ಥವನ್ನು
**ಅವೋಚತ್** = ಹೇಳಿದರು

ಹಂತ = ಸಂತೋಷವು

ಪ್ರಾಜ್ಞ = ವಿದ್ವಾಂಸರಾದ ಪುಂಡರೀಕ ಪುರಿಗಳೇ !

ತತ್ ಪ್ರತ್ಯರ್ಥೀ = ಆ ಮಧ್ವಾಚಾರ್ಯರಿಗೆ ಪ್ರತಿಸ್ಪರ್ಧಿಯಾದ

ಭವಾನ್ ಚ = ಪೂಜ್ಯರಾದ ನೀವೂ ಕೂಡ

ಶ್ರೋತುಕಾಮೈಃ = ಕೇಳುವ ಇಚ್ಛೆಯುಳ್ಳ

ಅಸ್ಮಾಭಿಃ = ನಮ್ಮಿಂದ

ಏತತ್ = ಈ ವೇದ ವ್ಯಾಖ್ಯಾನವನ್ನು

ವಕ್ತುಂ = ಹೇಳಲು

ಪ್ರಾರ್ಥ್ಯತೇ = ಪ್ರಾರ್ಥಿಸಲ್ಪಡುತ್ತಿದ್ದೀರಿ.

ತಾತ್ಪರ್ಯ— ಶ್ರೀಪೂರ್ಣಪ್ರಜ್ಞರು ತಮ್ಮ ಅಸಾಧಾರಣವಾದ ಪೂರ್ಣವಾದ ಪ್ರಜ್ಞಾಶಕ್ತಿಯಿಂದ ವೇದದ ಅರ್ಥವನ್ನು ಹೇಳಿದ್ದಾರೆ. ಅದು ಬಹಳ ಸಂತೋಷಕರವೂ ಆಗಿದೆ. ನೀವು ಬಹಳ ದೊಡ್ಡ ವಿದ್ವಾಂಸರಾಗಿದ್ದೀರಿ. ನೀವು ಮಾಡುವ ವೇದ ಪ್ರವಚನವನ್ನು ನಾವೆಲ್ಲರೂ ಕೇಳಬೇಕೆಂದಿದ್ದೇವೆ. ಆದುದರಿಂದ ನೀವು ದಯವಿಟ್ಟು ವೇದ ಪ್ರವಚನವನ್ನು ಮಾಡಬೇಕು. ಫಲಾರೀಯ- ಮಧ್ವಾಚಾರ್ಯವ್ಯಾಖ್ಯಾನಂ ಶ್ರುತಂ, ಭವತಾ ವೇದವ್ಯಾಖ್ಯಾನಂ ಕ್ರಿಯೇತ ಚೇತ್ ತತ್ ಶ್ರೋಷ್ಯಾಮಃ ಇತಿ ಭಾವಃ ॥ ಶ್ರೀಮಧ್ವಾಚಾರ್ಯರ ವೇದವ್ಯಾಖ್ಯಾನವನ್ನು ಕೇಳಿದ್ದಾಯಿತು. ಈಗ ನೀವು ವೇದ-ವ್ಯಾಖ್ಯಾನವನ್ನು ಮಾಡುವುದಾದರೆ ನಾವು ಕೇಳಬೇಕೆಂದಿದ್ದೇವೆ ಎಂದು ತಾತ್ಪರ್ಯ.

ವಿಗ್ರಹ—

ಪ್ರಾಜ್ಯಪ್ರಜ್ಞಃ— ಪ್ರಾಜ್ಯಾ ಪ್ರಜ್ಞಾ ಯಸ್ಯ ಸಃ ಪ್ರಾಜ್ಯಪ್ರಜ್ಞಃ ।

ಮಂತ್ರವರ್ಣಾಭಿಧೇಯಃ— ಮಂತ್ರವರ್ಣಸ್ಯ ಅಭಿಧೇಯಃ ಮಂತ್ರವರ್ಣಾಭಿಧೇಯಃ, ತಂ ಮಂತ್ರವರ್ಣಾಭಿಧೇಯಂ ।

ತತ್ಪ್ರತ್ಯರ್ಥೀ— ತಸ್ಯ ಪ್ರತ್ಯರ್ಥೀ ತತ್ಪ್ರತ್ಯರ್ಥೀ ।

ಶ್ರೋತುಕಾಮೈಃ— ಶ್ರೋತುಂ ಕಾಮಃ ಯೇಷಾಂ ತೇ ಶ್ರೋತುಕಾಮಾಃ, ತೈಃ ಶ್ರೋತುಕಾಮೈಃ ।

ಕ್ರಿಯಾಪದ— ಬ್ರೂಞ್ ವ್ಯಕ್ತಾಯಾಂ ವಾಚಿ ಸಕರ್ಮಕ ಸೇಟ್‌ವಚಿ ಆದೇಶ ಬಂದಾಗ ಅನಿಟ್ ಉಭಯಪದಿ ಪ್ರಥಮಪುರುಷೇ ಏಕವಚನೇ 'ಅವೋಚತ್' ಇತಿ ರೂಪಮ್ ।

ಅವೋಚತ್ ಅವೋಚತಾಂ ಅವೋಚನ್, ಅವೋಚಃ ಅವೋಚತಂ ಅವೋಚತ, ಅವೋಚಂ ಅವೋಚಾವ ಅವೋಚಾಮ ॥

ಅರ್ಥ ಉಪಯಜ್ಞಾಯಾಂ ಸಕರ್ಮಕ ಸೇಟ್ ಆತ್ಮನೇಪದೀ ಇಲ್ಲಿ ಕರ್ಮಣಿ ಲಟ್ ಆತ್ಮನೇಪದಿ ಪ್ರಥಮಪುರುಷೇ ಏಕವಚನೇ 'ಪ್ರಾರ್ಥ್ಯತೇ' ಇತಿ ರೂಪಮ್ ।

ಪ್ರ+ ಅರ್ಥ್ಯತೇ ಅರ್ಥ್ಯೇತೇ ಅರ್ಥ್ಯಂತೇ ಇತ್ಯಾದಿ

ಕೋಶ— ಪ್ರಾಜ್ಯಪ್ರಜ್ಞಃ ಎಂಬಲ್ಲಿ ಪ್ರಾಜ್ಯ ಎಂದರೆ ಪೂರ್ಣ ಎಂದು ಅರ್ಥ. ಪ್ರಭೂತಂ ಪ್ರಚುರಂ ಪ್ರಾಜ್ಯಂ ಅದಭ್ರಂ ಬಹುಲಂ ಬಹು ಎಂದು ಅಮರ.

ಪ್ರಯೋಗ— ಅಮುನಾ ಪ್ರಾಜ್ಯಪ್ರಜ್ಞೇನ ಪ್ರಾಜ್ಯಯಾ ಪ್ರಜ್ಞಯಾ ಮಂತ್ರವರ್ಣಾಭಿಧೇಯಃ ಅವೋಚಿ(ಕರ್ಮಣಿ) । ಪ್ರಾಜ್ಞ! ತತ್ಪ್ರತ್ಯರ್ಥಿನಂ ಭವಂತಂ ಚ ಶ್ರೋತುಕಾಮಾಃ ವಯಂ ಏತತ್ ವಕ್ತುಂ ಪ್ರಾರ್ಥಯಾಮಹೆ (ಕರ್ತರಿ) ।

★ ★ ★

**ಅವತಾರಿಕಾ**— ಹೀಗೆ ಬ್ರಾಹ್ಮಣರಿಂದ ಪ್ರಾರ್ಥಿತನಾದ ಪುಂಡರೀಕಪುರಿಯು ಏನು ಮಾಡಿದನು? ಅವನ ಅವಸ್ಥೆಯು ಏನಾಯಿತು? ಎಂದು ಹೇಳುತ್ತಾರೆ.

**ಇತ್ಯುಕ್ತಸ್ತೈರೇಷ ವಿಸ್ತಾರಿಬುದ್ಧೇಃ**
**ಸಾಮ್ಯಂ ಪ್ರಾಪ್ತುಂ ಸಂಪ್ರವೃತ್ತೋ ದುರಾತ್ಮಾ ।**
**ಹಾಸ್ಯೋಽತ್ರಾಭೂದ್ವಾಸುದೇವಪ್ರಭಾರ್ಥೀ**
**ಯದ್ವತ್ ಪೂರ್ವಂ ಪೌಂಡ್ರಕೋ ವಾಸುದೇವಃ ॥ 39 ॥**

ಪದಚ್ಛೇದ— ಇತಿ, ಉಕ್ತಃ, ತೈಃ, ಏಷಃ, ವಿಸ್ತಾರಿಬುದ್ಧೇಃ ಸಾಮ್ಯಂ, ಪ್ರಾಪ್ತುಂ ಸಂಪ್ರವೃತ್ತಃ ದುರಾತ್ಮಾ, ಹಾಸ್ಯಃ ಅತ್ರ ಅಭೂತ್, ವಾಸುದೇವಪ್ರಭಾರ್ಥೀ, ಯದ್ವತ್, ಪೂರ್ವಂ, ಪೌಂಡ್ರಕಃ, ವಾಸುದೇವಃ ।

ಅನ್ವಯ— ತೈಃ ಇತಿ ಉಕ್ತಃ ವಿಸ್ತಾರಿಬುದ್ಧೇಃ ಸಾಮ್ಯಂ ಪ್ರಾಪ್ತುಂ ಸಂಪ್ರವೃತ್ತಃ ದುರಾತ್ಮಾ ಏಷಃ ಅತ್ರ ಪೂರ್ವಂ ವಾಸುದೇವಪ್ರಭಾರ್ಥೀ ಪೌಂಡ್ರಕಃ ವಾಸುದೇವಃ ಯದ್ವತ್ ಹಾಸ್ಯಃ ಅಭೂತ್ ।

ಅನ್ವಯಾರ್ಥ—

**ತೈಃ** = ಆ ಬ್ರಾಹ್ಮಣರಿಂದ
**ಇತಿ** = ಈ ರೀತಿಯಾಗಿ
**ಉಕ್ತಃ** = ಹೇಳಲ್ಪಟ್ಟ
**ವಿಸ್ತಾರಿಬುದ್ಧೇಃ** = ವಿಸ್ತಾರವಾದ ಬುದ್ಧಿಯುಳ್ಳ ಶ್ರೀಮಧ್ವರ
**ಸಾಮ್ಯಂ** = ಹೋಲಿಕೆಯನ್ನು
**ಪ್ರಾಪ್ತುಂ** = ಹೊಂದುವುದಕ್ಕೆ
**ಸಂಪ್ರವೃತ್ತಃ** = ತೊಡಗಿದ
**ದುರಾತ್ಮಾ** = ದುಷ್ಟಬುದ್ಧಿಯುಳ್ಳ
**ಏಷಃ** = ಈ ಪುಂಡರೀಕ ಪುರಿಯು
**ಅತ್ರ** = ಈ ಸಭೆಯಲ್ಲಿ
**ಪೂರ್ವಂ** = ಹಿಂದೆ
**ವಾಸುದೇವಪ್ರಭಾರ್ಥೀ** = ಶ್ರೀಕೃಷ್ಣನ ಕಾಂತಿಯನ್ನು ಬಯಸುವ
**ಪೌಂಡ್ರಕಃ** = ಪುಂಡ್ರಕರಾಜನ ಮಗಳ ಮಗನಾದ
**ವಾಸುದೇವಃ ಯದ್ವತ್** = ವಾಸುದೇವನಂತೆ
**ಹಾಸ್ಯಃ ಅಭೂತ್** = ಉಪಹಾಸಕ್ಕೆ ಆಸ್ಪದನಾಗಿ ಆದನು.

ತಾತ್ಪರ್ಯ— .....ವಸುದೇವನು ಪುಂಡ್ರಕ ಎಂಬ ರಾಜನ ಮಗಳನ್ನು ಮದುವೆಯಾಗಿದ್ದನು. ಅವಳಲ್ಲಿ ಹುಟ್ಟಿದ ವಾಸುದೇವ ಎಂಬ ಮಗನು ತನ್ನ ಮಾತಾಮಹನ (ತಾಯಿಯ ತಂದೆಯ) ಕಡೆಗೇ ಸೇರಿದನು. (ಪುತ್ರಿಕಾಪುತ್ರ-ಧರ್ಮದಿಂದ) ತನ್ನ ಮಾತಾಮಹನ ಮಗನಂತೆಯೇ ಆದನು.

ಈ ನನ್ನ ಮಗಳಲ್ಲಿ ಹುಟ್ಟಿದ ಮಗನು ನನಗೆ ಮಗನಂತೆ ಇರಲಿ ಎಂದು ಸಂಕಲ್ಪ ಮಾಡಿ ಕನ್ಯಾದಾನ ಮಾಡಿ, ಆ ಮಗಳಲ್ಲಿ ಹುಟ್ಟಿದ ಮಗನನ್ನು ತನ್ನ ಮಗನಂತೆಯೇ ಸಾಕಿ ಸಲಹುವುದು ಪುತ್ರಿಕಾಧರ್ಮ. (ಈ ಪುತ್ರನು ತನ್ನ

ಮಾತಾಮಹನ ರಾಜ್ಯ, ಸಂಪತ್ತು ಇತ್ಯಾದಿಗಳಿಗೆ ಭಾಗಿಯಾಗುತ್ತಾನೆ. ಅವನಿಗೆ ಮಾಡಬೇಕಾದ ಉತ್ತರಕ್ರಿಯಾದಿಗಳನ್ನೂ ಮಾಡಲು ಅರ್ಹನಾಗುತ್ತಾನೆ, ಎಂಬ ನಿಯಮವೇ ಪುತ್ರಿಕಾಪುತ್ರಧರ್ಮ) ಈ ಪೌಂಡ್ರಕ ವಾಸುದೇವನು ಕೆಲವು ಮಂದಿ ಹೊಗಳುಭಟರಿಂದ ಪ್ರೇರಿತನಾಗಿ ಶ್ರೀಕೃಷ್ಣನಂತೆ ತಾನೂ ಗರುಡನನ್ನು ಮಾಡಿಸಿ ಅದರ ಮೇಲೆ ಕೂತು, ಶ್ರೀವತ್ಸಚಿಹ್ನೆಗಾಗಿ ಎಡಭಾಗದ ಎದೆಯನ್ನು ಸುಟ್ಟು ಮಚ್ಚೆಯನ್ನು ಮಾಡಿಕೊಂಡು ಕೃತ್ರಿಮವಾದ ಎರಡು ಭುಜಗಳನ್ನು ಹೆಚ್ಚಾಗಿ ಮಾಡಿಸಿ ಕಟ್ಟಿಕೊಂಡು ಕೃತ್ರಿಮವಾದ ಶಂಖಚಕ್ರಗದಾಪದ್ಮಾದಿಗಳನ್ನು ಮಾಡಿಸಿಕೊಂಡು ತಾನೂ ಶ್ರೀಕೃಷ್ಣನೇ ಆಗಬೇಕು. ಅವನ ಸಂಪೂರ್ಣಸಾಮ್ಯವನ್ನು ವೈಭವವನ್ನು ಪಡೆಯಬೇಕೆಂದು ಪ್ರಯತ್ನಪಟ್ಟನು. ಆದರೆ ಶ್ರೀಕೃಷ್ಣನ ಎದುರು ಯುದ್ಧಕ್ಕಾಗಿ ಬಂದಾಗ ಕೃತ್ರಿಮವಾದ ಈ ವೈಭವವನ್ನೆಲ್ಲಾ ಕಳೆದುಕೊಂಡು ಹಾಸ್ಯಾಸ್ಪದನಾಗಿದ್ದನು. ಅದರಂತೆ ಈಗ ಪುಂಡರೀಕಪುರಿಯು ಬ್ರಾಹ್ಮಣರು ಪ್ರಾರ್ಥನೆ ಮಾಡಿದಾಗ ತಾನೂ ಮಧ್ವಾಚಾರ್ಯರಂತೆ ವೇದವ್ಯಾಖ್ಯಾನ ಮಾಡಲು ಸಮರ್ಥನೆಂದು ತೋರಿಸಲು ಪ್ರಯತ್ನಿಸಿ ಹಾಸ್ಯಾಸ್ಪದನಾದನು.

ವಿಗ್ರಹ—

ವಿಸ್ತಾರಿಬುದ್ಧೇಃ— ವಿಸ್ತಾರಃ ಅಸ್ಯಾಃ ಅಸ್ತೀತಿ ವಿಸ್ತಾರಿಣೀ, ವಿಸ್ತಾರಿಣೀ ಬುದ್ಧಿಃ ಯಸ್ಯ ಸಃ ವಿಸ್ತಾರಿಬುದ್ಧಿಃ, ತಸ್ಯ ವಿಸ್ತಾರಿಬುದ್ಧೇಃ ।

ದುರಾತ್ಮಾ— ದುಷ್ಟಃ ಆತ್ಮಾ ಯಸ್ಯ ಸಃ ದುರಾತ್ಮಾ । ಆತ್ಮಾ = ಬುದ್ಧಿ, ಆತ್ಮಾದೇಹಮನೋಬ್ರಹ್ಮಸ್ವಭಾವ-ಧೃತಿಬುದ್ಧಿಷು ವಿಶ್ವ ।

ಸಾಮ್ಯಂ— ಸಮಸ್ಯ ಭಾವಃ ಸಾಮ್ಯಂ ।

ಹಾಸ್ಯಂ— ಹಸಿತುಂ ಯೋಗ್ಯಃ ಹಾಸ್ಯಃ, ತಂ ಹಾಸ್ಯಂ ।

ವಾಸುದೇವಪ್ರಭಾರ್ಥೀ— ವಾಸುದೇವಸ್ಯ ಪ್ರಭಾ ವಾಸುದೇವಪ್ರಭಾ, ವಾಸುದೇವಪ್ರಭಾಂ ಅರ್ಥಯತೇ ಇತಿ ವಾಸುದೇವಪ್ರಭಾರ್ಥೀ ।

ಪೌಂಡ್ರಕಃ— ಪುಂಡ್ರಕಸ್ಯ ಅಯಂ ಪೌಂಡ್ರಕಃ ।

ಪ್ರಯೋಗ— ತೈಃ ಇತಿ ಉಕ್ತೇನ ವಿಸ್ತಾರಿಬುದ್ಧೇಃ ಸಾಮ್ಯಂ ಪ್ರಾಪ್ತುಂ ಸಂಪ್ರವೃತ್ತೇನ ದುರಾತ್ಮನಾ ಏತೇನ ಅತ್ರ ಪೂರ್ವಂ ವಾಸುದೇವಪ್ರಭಾರ್ಥಿನಾ ಪೌಂಡ್ರಕೇಣ ವಾಸುದೇವೇನ ಯದ್ವತ್ ಹಾಸ್ಯೇನ ಅಭಾವಿ (ಭಾವೇ ಪ್ರಯೋಗ) ।

★ ★ ★

ಅವತಾರಿಕಾ— ಪುಂಡರೀಕಪುರಿಯು ಹಾಸ್ಯಾಸ್ಪದನಾದ ರೀತಿಯನ್ನು ವಿವರಿಸುತ್ತಾರೆ.

**ಆಜ್ಞಾದೇಶಾದುತ್ತರಂ ರಾದಿಶಬ್ದಂ**
**ಶ್ರುತ್ವಾ ನಾರೇತ್ಯುಕ್ತವಂತಂ ಪದಂ ತಮ್ ।**
**ವ್ಯಾಖ್ಯಾಲೌಲ್ಯಾದೈತರೇಯಾದಿಸೂಕ್ತೇ**
**ಪೃಥ್ವೀದೇವಾ ನಿಂದನೀಯಂ ನಿನಿಂದುಃ ॥ 40 ॥**

**ಪದಚ್ಛೇದ**— ಆಜ್ಞಾದೇಶಾತ್, ಉತ್ತರಂ, ರಾದಿಶಬ್ದಂ, ಶ್ರುತ್ವಾ, ನಾರೇತಿ, ಉಕ್ತವಂತಂ, ಪದಂ, ತಮ್, ವ್ಯಾಖ್ಯಾಲೌಲ್ಯಾತ್, ಐತರೇಯಾದಿಸೂಕ್ತೇ, ಪೃಥ್ವೀದೇವಾಃ, ನಿಂದನೀಯಂ, ನಿನಿಂದುಃ ।

**ಅನ್ವಯ**— ಪೃಥ್ವೀದೇವಾಃ ಐತರೇಯಾದಿಸೂಕ್ತೇ ಆಜ್ಞಾದೇಶಾತ್, ಉತ್ತರಂ ರಾದಿಶಬ್ದಂ ಶ್ರುತ್ವಾ, ವ್ಯಾಖ್ಯಾ-ಲೌಲ್ಯಾತ್ ನಾರೇತಿ ಪದಂ ಉಕ್ತವಂತಂ ನಿಂದನೀಯಂ ತಂ ನಿನಿಂದುಃ ।

ಅನ್ವಯಾರ್ಥ—

ಪೃಥ್ವೀದೇವಾಃ = ಬ್ರಾಹ್ಮಣರು

ಐತರೇಯಾದಿಸೂಕ್ತೇ = ಋಗ್ವೇದದ ಮೊದಲನೆಯ ಸೂಕ್ತದಲ್ಲಿರುವ 'ಅಗ್ನಿನಾ ರಯಿಮಶ್ನವತ್' ಇತ್ಯಾದಿ ಋಕ್ಕಿನಲ್ಲಿ

ಆಙಾದೇಶಾತ್ = 'ಆಙೋ ನಾಸ್ತ್ರಿಯಾಂ' ಎಂಬ ಪಾಣಿನಿ ಸೂತ್ರದಿಂದ ತೃತೀಯಾ ವಿಭಕ್ತಿಯ ಪ್ರಥಮೈಕ-ವಚನಕ್ಕೆ ಆದೇಶವಾಗಿ ಹೇಳಿರುವ 'ನಾ' ಕಾರಕ್ಕಿಂತ,

ಉತ್ತರಂ = ಮುಂದೆ ಇರುವ

ರಾದಿಶಬ್ದಂ = ರೇಫವು ಆದಿಯಾಗಿ ಉಳ್ಳ ರಯಿ ಶಬ್ದವನ್ನು

ಶ್ರುತ್ವಾ = ಕೇಳಿ

ವ್ಯಾಖ್ಯಾಲೌಲ್ಯಾತ್ = ವ್ಯಾಖ್ಯಾನ ಮಾಡುವ ಹೆಚ್ಚಿನ ಕುತೂಹಲದಿಂದ

ನಾರೇತಿಪದಂ = 'ನಾರ' ಎಂಬ ಶಬ್ದವನ್ನು..

ಉಕ್ತವಂತಂ = ಹೇಳಿರುವ

ನಿಂದನೀಯಂ = ತೆಗಳಲು ಯೋಗ್ಯನಾದ

ತಂ = ಆ ಪುಂಡರೀಕಪುರಿಯನ್ನು

ನಿನಿಂದುಃ = ನಿಂದಿಸಿದರು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ವೇದವ್ಯಾಖ್ಯಾನ ಮಾಡಿದ್ದನ್ನು ಕೇಳಿ ಪುಂಡರೀಕಪುರಿಯು, ಅತಿ ಉತ್ಸುಕತೆಯಿಂದ ತಾನೂ ವೇದಕ್ಕೆ ವ್ಯಾಖ್ಯಾನ ಮಾಡಲು ಪ್ರಾರಂಭ ಮಾಡಿದನು. ಅದರಂತೆ ಋಗ್ವೇದದ ಮೊದಲನೆ ಅಧ್ಯಾಯದ ಮೊದಲನೆ ಸೂಕ್ತವಾದ, 'ಅಗ್ನಿಮೀಳೇ' ಇತ್ಯಾದಿಯಾದ ಸೂಕ್ತದಲ್ಲಿರುವ 'ಅಗ್ನಿನಾರಯಿಮಶ್ನವತ್ ಪೋಷಮೇವ ದಿವೇ ದಿವೇ' ಎಂಬ ಋಕ್ಕನ್ನು ತೆಗೆದುಕೊಂಡು ಪದಬಿಡಿಸಲು ಆರಂಭಿಸಿದನು. ಆ ಋಕ್ಕಿನಲ್ಲಿ 'ಅಗ್ನಿನಾ' ಎಂಬಲ್ಲಿ ತೃತೀಯಾ ವಿಭಕ್ತಿಯ ಏಕವಚನ ಪ್ರತ್ಯಯವಾದ 'ಟಾ', 'ಆ' ಎಂಬುದಕ್ಕೆ ಪಾಣಿನಿಯು 'ಆಙೋ ನಾಸ್ತ್ರಿಯಾಂ' ಎಂಬ ಸೂತ್ರದಿಂದ ನಾ ಎಂಬುದನ್ನು ಆದೇಶವಾಗಿ ಹೇಳಿದ್ದಾನೆ. ಅಗ್ನಿ + ಆ ಎಂಬುದು 'ನಾ' ಆದೇಶ ಬಂದಾಗ 'ಅಗ್ನಿನಾ' ಎಂದು ಒಂದು ಪದವಾಗುತ್ತದೆ. ಆದ್ದರಿಂದ ಅಲ್ಲಿ ಅಗ್ನಿನಾ ರಯಿಂ ಎಂದು ಬಿಡಿಸಬೇಕಾಗಿತ್ತು. ಆದರೆ ಶ್ರೀಮಧ್ವಾಚಾರ್ಯರ ಪ್ರಭಾವದಿಂದ ವಾಗ್ದೇವಿಯು, ಪಂಡಿತನಾದ ಆ ಪುಂಡರೀಕಪುರಿಯಿಂದ 'ಅಗ್ನಿ', 'ನಾರ' ಎಂದು ಪದವಿಭಾಗ ಮಾಡುವಂತೆ ಪ್ರೇರಿಸಿದಳು. ಅದರಂತೆ ಅವನು ಪದವಿಭಾಗ ಮಾಡಿದಾಗ ಅಲ್ಲಿ ಸೇರಿದ್ದ ಪಂಡಿತರೆಲ್ಲರೂ ಪುಂಡರೀಕಪುರಿಯು ತಪ್ಪಾಗಿ ಪದಚ್ಛೇದ ಮಾಡಿದ್ದಾನೆಂದು ನಿಂದಿಸಿದರು.

ವಿಶೇಷಾಂಶ— ಇಲ್ಲಿ ಭಾವಪ್ರಕಾಶಿಕಾ ವ್ಯಾಖ್ಯೆಯ ವಿಶೇಷಾಂಶ. ಅಗ್ನಿನಾರಯಿಮಶ್ನವದಿತ್ಯತ್ರ ನಾ ಇತ್ಯಯಮಙಾದೇಶಃ । 'ಆಙೋ ನಾಸ್ತ್ರಿಯಾಮಿತಿ' ಸೂತ್ರಾತ್ । ತಾಂ ಸಂಹಿತಾಂ ಶ್ರುತ್ವಾ 'ಅಗ್ನಿ' ಇತಿ ಪದಂ ವಿಭಜ್ಯ, ನಾರೇತಿ ಪದಂ ಉಕ್ತವಂತಂ । ಅನಧೀತವಾನಿವ ಹಿ ಪುಂಡರೀಕಪೂರ್ಣನುಶಾಬ್ದಿಕಃ ಕಥಮಿದಂ ವದೇದಿತಿ । ಅತಿಶಂಕಿ ಮಾ ದಶಮತೇರ್ಹಿ ಕಿಂಕರೀ ಸಕಲಸ್ಯ ಚೋದಯತಿ ಶಾರದಾ ಗಿರಃ ॥ ಇದರ ಅಭಿಪ್ರಾಯ ಅಗ್ನಿನಾರಯಿಮಶ್ನವತ್ ಎಂಬಲ್ಲಿ 'ನಾ' ಎಂಬುದು 'ಆಙ್' ಎಂಬ ತೃತೀಯಾ ವಿಭಕ್ತಿ ಏಕವಚನ ಪ್ರತ್ಯಯಕ್ಕೆ ಆದೇಶವು. 'ಆಙೋ ನಾಸ್ತ್ರಿಯಾಂ' ಎಂಬ ಸೂತ್ರದಿಂದ ಪಾಣಿನಿಯು ಈ ವಿಷಯವನ್ನು ಹೇಳಿರುತ್ತಾನೆ. 'ಅಗ್ನಿನಾ ರಯಿಂ' ಎಂಬ ಸಂಹಿತಾ-ಪಾಠವನ್ನು ಕೇಳಿ 'ಅಗ್ನಿ' ಎಂದು ಪದವನ್ನು ವಿಭಾಗಿಸಿ 'ನಾರ' ಎಂದು ಪದವನ್ನು ಹೇಳಿದ ಆ ಪುಂಡರೀಕ ಪುರಿಯನ್ನು ಎಲ್ಲರೂ ನಿಂದಿಸಿದರು.

ಒಳ್ಳೆಯ ವೈಯಾಕರಣನಾದ ಪುಂಡರೀಕಪುರಿಯು ವ್ಯಾಕರಣಾಧ್ಯಯನ ಮಾಡದವರಂತೆ ಹೀಗೆ ಹೇಳಿಯಾನೇ ? ಎಂಬ ಸಂದೇಹಕ್ಕೆ ಅವಕಾಶವಿಲ್ಲ. ಅವನು ಹೀಗೆ ತಪ್ಪಾಗಿಯೇ ಪದಚ್ಛೇದವನ್ನು ಮಾಡಿದನು. ಏಕೆಂದರೆ ಶ್ರೀಪೂರ್ಣಪ್ರಜ್ಞರ ಕಿಂಕರಿಯಾದ ಭಾರತೀದೇವಿಯೇ ಎಲ್ಲರಿಗೂ ಮಾತನಾಡುವ ಪ್ರೇರಣೆಯನ್ನು ಕೊಡುತ್ತಾಳಷ್ಟೆ ! ಆದುದರಿಂದ ಆ ಭಾರತೀದೇವಿಯು ಪುಂಡರೀಕ ಪುರಿಯ ನಾಲಿಗೆಯಲ್ಲಿ ನಿಂತು ತಪ್ಪನ್ನು ನುಡಿಸಿದಳು ಎಂದೇ ತಿಳಿಯಬೇಕು.

**ವಿಗ್ರಹ—**

**ಅಜಾದೇಶಾತ್—** ಅಜಃ ಆದೇಶಃ ಅಜಾದೇಶಃ, ತಸ್ಮಾತ್ ಅಜಾದೇಶಾತ್ ।

**ರಾದಿಶಬ್ದಂ—** ರಃ ಆದಿಃ ಯಸ್ಯ ಸಃ ರಾದಿಃ, ರಾದಿಶ್ಚಾಸೌ ಶಬ್ದಶ್ಚ ರಾದಿಶಬ್ದಃ, ತಂ ರಾದಿಶಬ್ದಂ ।

**ವ್ಯಾಖ್ಯಾಲೌಲ್ಯಾತ್—** ಲೋಲಸ್ಯ ಭಾವಃ ಲೌಲ್ಯಂ, ವ್ಯಾಖ್ಯಾಯಾಂ ಲೌಲ್ಯಂ ವ್ಯಾಖ್ಯಾಲೌಲ್ಯಂ, ತಸ್ಮಾತ್ ವ್ಯಾಖ್ಯಾಲೌಲ್ಯಾತ್ ।

**ಐತರೇಯಾದಿಸೂಕ್ತೇ—** ಐತರೇಯಸ್ಯ ಆದಿ ಐತರೇಯಾದಿ, ಐತರೇಯಾದಿ ಚ ತತ್ ಸೂಕ್ತಂ ಚ ಐತರೇಯಾದಿಸೂಕ್ತಂ, ತಸ್ಮಿನ್ ಐತರೇಯಾದಿಸೂಕ್ತೇ ।

**ಪೃಥ್ವೀದೇವಾಃ—** ಪೃಥ್ವ್ಯಾಃ ದೇವಾಃ ಪೃಥ್ವೀದೇವಾಃ ।

**ನಿಂದನೀಯಂ—** ನಿಂದಿತುಂ ಯೋಗ್ಯಃ ನಿಂದನೀಯಃ, ತಂ ನಿಂದನೀಯಂ ।

**ಕ್ರಿಯಾಪದ—** ಣಿದಿ (ನಿಂದ್) ಕುತ್ಸಾಯಾಂ ಎಂಬ ಧಾತುವಿನ ಲಿಟ್ ಪ್ರಥಮಪುರುಷೇ ಬಹುವಚನೇ 'ನಿನಿಂದುಃ' ಇತಿ ರೂಪಮ್ ।

(ನಿನಿಂದ ನಿನಿಂದತುಃ ನಿನಿಂದುಃ, ನಿನಿಂದಿಥ ನಿನಿಂದಥುಃ ನಿನಿಂದ, ನಿನಿಂದ ನಿನಿಂದಿವ ನಿನಿಂದಿಮ ॥)

**ಕೋಶ—** ಪೃಥ್ವೀದೇವಾಃ = ಬ್ರಾಹ್ಮಣರು, ದ್ವಿಜಾತ್ಯಗ್ರಜನ್ಮಭೂದೇವವಾಡವಾಃ । ವಿಪ್ರಶ್ಚ ಬ್ರಾಹ್ಮಣೋಽಸೌ ಅಮರ. ಲೌಲ್ಯ = ಅತಿಯಾಸೆ, ಲೋಲ = ಅತಿಯಾಸೆಯುಳ್ಳವನು, ಲೋಲಶ್ಚ ಲಸತೃಷ್ಣಯೋಃ ಅಮರ.

★ ★ ★

**ಅವತಾರಿಕಾ—** ಪುಂಡರೀಕಪುರಿಯ ಮುಂದಿನ ಅವಸ್ಥೆಯೇನಾಯಿತೆಂದು ವಿವರಿಸುತ್ತಾರೆ.

**ಶಾರ್ದೂಲಾಖ್ಯಾಂ ಪ್ರಾಪ್ಯ ಸಂಭಾವಿತಃ ಪ್ರಾಕ್**
**ಲೋಕೇ ಧೂರ್ತೋ ಮಾಯಿಗೋಮಾಯುರೇಷಃ ।**
**ವಾದಿದ್ವೀಪಿಧ್ವಂಸಿನಂ ಮಧ್ವಸಿಂಹಂ**
**ಪ್ರಾಪ್ತೋ ಹೀತ್ಥಂ ಶಬ್ದಶೇಷೋ ಬಭೂವ ॥ 41 ॥**

**ಪದಚ್ಛೇದ—** ಶಾರ್ದೂಲಾಖ್ಯಾಂ ಪ್ರಾಪ್ಯ, ಸಂಭಾವಿತಃ, ಪ್ರಾಕ್, ಲೋಕೇ, ಧೂರ್ತಃ, ಮಾಯಿಗೋಮಾಯುಃ, ಏಷಃ, ವಾದಿದ್ವೀಪಿಧ್ವಂಸಿನಂ, ಮಧ್ವಸಿಂಹಂ, ಪ್ರಾಪ್ತಃ, ಹಿ, ಇತ್ಥಂ, ಶಬ್ದಶೇಷಃ, ಬಭೂವ ।

**ಅನ್ವಯ—** ಧೂರ್ತಃ ಏಷಃ ಮಾಯಿಗೋಮಾಯುಃ ಶಾರ್ದೂಲಾಖ್ಯಾಂ ಪ್ರಾಪ್ಯ ಪ್ರಾಕ್ ಲೋಕೇ ಸಂಭಾವಿತಃ, ವಾದಿದ್ವೀಪಿಧ್ವಂಸಿನಂ ಮಧ್ವಸಿಂಹಂ ಪ್ರಾಪ್ತಃ, ಇತ್ಥಂ ಶಬ್ದಶೇಷಃ ಬಭೂವ ಹಿ ।

**ಅನ್ವಯಾರ್ಥ—**

**ಧೂರ್ತಃ** = ಮೋಸಗಾರನಾದ

**ಏಷಃ ಮಾಯಿಗೋಮಾಯುಃ** = ಈ ಮಾಯಾವಾದಿಯಾದ ಪುಂಡರೀಕಪುರಿಯೆಂಬ ನರಿಯು

ಶಾರ್ದೂಲಾಖ್ಯಾಂ = ಹುಲಿ ಎಂಬ ಹೆಸರನ್ನು

ಪ್ರಾಪ್ಯ = ಹೊಂದಿ

ಪ್ರಾಕ್ = ಹಿಂದೆ

ಲೋಕೇ = ಪ್ರಪಂಚದಲ್ಲಿ

ಸಂಭಾವಿತಃ (ಸನ್) = ಗೌರವಿಸಲ್ಪಟ್ಟವನಾಗಿ

ವಾದಿ = ದುಷ್ಟಪ್ರತಿವಾದಿಗಳೆಂಬ

ದ್ವೀಪಿ = ಹುಲಿಗಳನ್ನು

ಧ್ವಂಸಿನಂ = ನಾಶಗೊಳಿಸುವ

ಮಧ್ವಸಿಂಹಂ = ಶ್ರೀಮಧ್ವಾಚಾರ್ಯರೆಂಬ ಸಿಂಹವನ್ನು

ಪ್ರಾಪ್ತಃ (ಸನ್) = ಹೊಂದಿದವನಾಗಿ

ಇತ್ಥಂ = ಹೀಗೆ

ಶಬ್ದಶೇಷಃ = ಪುಂಡರೀಕ ಎಂಬ ಶಬ್ದ ಮಾತ್ರ ಬಾಕಿ (ಉಳಿದ ಅಂಶ) ಉಳ್ಳವನಾಗಿ

ಬಭೂವ ಹಿ = ಆದನಷ್ಟೆ.

ತಾತ್ಪರ್ಯ— ಅಯಂ ಭಾವಃ ಯಥಾ ಕಶ್ಚಿತ್ ಶೃಗಾಲಃ ವ್ಯಾಘ್ರವೇಷಂ ಧೃತ್ವಾ ವ್ಯಾಘ್ರೋಽಹಂ ಇತ್ಯುಕ್ತ್ವಾ, ಲೋಕಂ ಭೀಷಯನ್ ಸನ್ ಕದಾಚಿತ್ ಸಿಂಹಂ ಪ್ರಾಪ್ಯ ತನ್ನಿನಾದಶ್ರವಣಮಾತ್ರೇಣ ಪಲಾಯಮಾನಃ 'ನಾಯಂ ವ್ಯಾಘ್ರಃ ಅಪಿ ತು ಶೃಗಾಲ ಏವ, ಇತಿ ನಿಶ್ಚಿತೋಽಪಿ, ನಾಮಮಾತ್ರೇಣ ಅಯಂ ಪುಂಡರೀಕಃ (ಶಾರ್ದೂಲಃ) ಇತ್ಯುಚ್ಯತೇ, ನ ತು ಪೂರ್ವವತ್ ಭಯವಿಷಯಃ, ಏವಂ ಅಯಂ ಪುಂಡರೀಕಪುರಿಃ ಇಯಂತಂ ಕಾಲಂ ಲೋಕೇ 'ಮಹಾಪ್ರಾಜ್ಞಃ ಅಯಂ' ಇತಿ ಪೂಜಿತೋಽಪಿ ತದಾ ಸರ್ವವಿದ್ವಚ್ಛ್ರೇಷ್ಠಂ ಸರ್ವದುರ್ವಾದಿಭಂಜನಂ ಶ್ರೀಮಧ್ವಾಚಾರ್ಯಂ ಪ್ರಾಪ್ಯ ಭಗ್ನದರ್ಪೋ ಭೂತ್ವಾ, ಪುಂಡರೀಕಃ ಇತಿ ನಾಮಮಾತ್ರೇಣ ಅವಶಿಷ್ಟಃ ಬಭೂವ, ನ ತು ಪೂರ್ವವತ್ ಪ್ರಾಜ್ಞಃ ಅಯಂ ಇತಿ ಪೂಜಾವಿಷಯಃ ಇತಿ ಭಾವಃ ।

ಯಾವುದೋ ಒಂದು ನರಿಯು ಹುಲಿಯ ವೇಷವನ್ನು ಧರಿಸಿ ''ನಾನು ಹುಲಿ'' ಎಂದು ಹೇಳುತ್ತಾ ಜನರನ್ನು ಹೆದರಿಸುತ್ತಿತ್ತು. ಒಂದಾನೊಂದು ದಿನ ಒಂದು ಸಿಂಹವು ಆ ನರಿಯ ಎದುರಿಗೆ ಬಂದು ಬಲವಾಗಿ ಗರ್ಜಿಸಿತು. ಅದರ ಗರ್ಜನೆಯನ್ನು ಕೇಳಿದ ಮಾತ್ರದಿಂದಲೇ ಆ ನರಿಯು ಓಡಿ ಹೋಗಿ ಒಂದು ಮೂಲೆಯನ್ನು ಸೇರಿಕೊಂಡಿತು. ಅನಂತರ ಆ ನರಿಯು ಎಲ್ಲಾದರೂ ಓಡಾಡುತ್ತಾ ಬಂದಾಗ ಅದು ಹುಲಿಯ ವೇಷವನ್ನು ಧರಿಸಿದ್ದರೂ ಇದು ಹುಲಿಯಲ್ಲ, ಹುಲಿಯ ವೇಷದ ನರಿ, ಇದು 'ದೊಡ್ಡ ಪುಂಡರೀಕ!' ಹುಲಿ ಎಂದು ಗೇಲಿ ಮಾಡುತ್ತಾ ಅದು ಹುಲಿಯಲ್ಲದಿದ್ದರೂ ನೋಡಿ ಅಲ್ಲಿದೆ ಹುಲಿ! ಪುಂಡರೀಕ ! ಎಂದು ಹೆಸರಿಗೆ ಮಾತ್ರ ಅದನ್ನು ಪುಂಡರೀಕ ಎಂದು ಕರೆಯುತ್ತಿದ್ದರು. ಆದರೆ ಅದನ್ನು ನೋಡಿ ಯಾರೂ ಸ್ವಲ್ಪವೂ ಭಯಪಡುತ್ತಿರಲಿಲ್ಲ. ಹೀಗೆಯೇ ಈ ಪುಂಡರೀಕಪುರಿಯು ಮಧ್ವಾಚಾರ್ಯರಿಗೆ ಭೇಟಿಯಾಗುವವರೆಗೆ ಮಹಾಪಂಡಿತರು ಇವರು ಎಂದು ಜನರಿಂದ ಗೌರವವನ್ನು ಪಡೆಯುತ್ತಿದ್ದನು. ಈಗ ಸರ್ವವಿದ್ವಾಂಸರಲ್ಲಿ ಶ್ರೇಷ್ಠರಾದ ಎಲ್ಲಾ ದುರ್ವಾದಿಗಳನ್ನೂ ಭಂಗಗೊಳಿಸುತ್ತಿರುವ ಶ್ರೀಮಧ್ವಾಚಾರ್ಯರ ಮುಂದೆ ಬಂದು ಪ್ರವಚನ ಮಾಡಲು ಹೊರಟು ಅಭಿಮಾನ ಭಂಗಹೊಂದಿ ಹುಲಿವೇಷವನ್ನು ಧರಿಸಿದ ನರಿಯಂತೆ ಈ ಮಾಯಾವಾದಿಯಾದ ಧೂರ್ತನಾದ ಪುಂಡರೀಕ ಪುರಿಯೆಂಬ ನರಿಯು ಮಧ್ವಸಿಂಹದ ಎದುರು 'ಪುಂಡರೀಕ' ಎಂಬ ಶಬ್ದಮಾತ್ರ ಉಳ್ಳವನಾದನು. ಇವರು ಪಂಡಿತ ಪುಂಡರೀಕರು, ಮಹಾಪ್ರಾಜ್ಞರು ಎಂದು ಹಿಂದೆ ಪಡೆಯುತ್ತಿದ್ದ ಗೌರವವನ್ನು ಮಾತ್ರ ಪೂರ್ತಿಯಾಗಿ ಕಳೆದುಕೊಂಡನು.

ವಿಗ್ರಹ—

**ಶಾರ್ದೂಲಾಖ್ಯಾಂ—** ಶಾರ್ದೂಲ ಇತಿ ಆಖ್ಯಾ ಶಾರ್ದೂಲಾಖ್ಯಾ, ತಾಂ ಶಾರ್ದೂಲಾಖ್ಯಾಂ ।

**ಮಾಯಿಗೋಮಾಯುಃ—** ಮಾಯೀ ಏವ ಗೋಮಾಯುಃ, ಮಾಯಿಗೋಮಾಯುಃ ।

**ವಾದಿದ್ವೀಪಿಧ್ವಂಸಿನಂ—** ವಾದಿನಃ ಏವ ದ್ವೀಪಿನಃ ವಾದಿದ್ವೀಪಿನಃ, ವಾದಿದ್ವೀಪಿನಃ ಧ್ವಂಸಯಿತುಂ ಶೀಲಂ ಅಸ್ಯೇತಿ ವಾದಿದ್ವೀಪಿಧ್ವಂಸೀ, ತಂ ವಾದಿದ್ವೀಪಿಧ್ವಂಸಿನಂ ।

**ಮಧ್ವಸಿಂಹಂ—** ಮಧ್ವಃ ಏವ ಸಿಂಹಃ ಮಧ್ವಸಿಂಹಃ, ತಂ ಮಧ್ವಸಿಂಹಂ ।

**ಶಬ್ದಶೇಷಃ—** ಶಬ್ದಃ ಶೇಷಃ ಯಸ್ಯ ಸಃ ಶಬ್ದಶೇಷಃ ।

ಕ್ರಿಯಾಪದ— ಬಭೂವ ಭೂಸತ್ತಾಯಾಂ ಲಿಟ್ ।

ಪ್ರಯೋಗ— ಶಾರ್ದೂಲಾಖ್ಯಾಂ ಪ್ರಾಪ್ಯ ಲೋಕೇ ಪ್ರಾಕ್ ಸಂಭಾವಿತೇನ ಏತೇನ ಧೂರ್ತೇನ ಮಾಯಿಗೋಮಾಯುನಾ, ವಾದಿದ್ವೀಪಿಧ್ವಂಸಿನಂ ಮಧ್ವಸಿಂಹಂ ಪ್ರಾಪ್ತೇನ ಶಬ್ದಶೇಷೇಣ ಬಭೂವೇ (ಭಾವೇ)

**ವಿಶೇಷಾಂಶ— 'ವ್ಯಾಘ್ರೇಽಪಿ ಪುಂಡರೀಕೋ ನಾ' ಎಂಬ ಅಮರಕೋಶದಂತೆ ಪುಂಡರೀಕ ಶಬ್ದಕ್ಕೆ 'ವ್ಯಾಘ್ರ' = ಹುಲಿ ಎಂಬ ಅರ್ಥವೂ ಇದೆ. ಆದುದರಿಂದ 'ಪುಂಡರೀಕ' ಎಂಬ ಹೆಸರನ್ನು ಪಡೆದಿದ್ದ ಪುಂಡರೀಕ ಪುರಿಯನ್ನು ಇಲ್ಲಿ ಶಾರ್ದೂಲಾಖ್ಯಾಂ ಪ್ರಾಪ್ಯ ಸಂಭಾವಿತಃ 'ಶಾರ್ದೂಲ' = ಹುಲಿ (ಪುಂಡರೀಕ) ಎಂಬ ಹೆಸರನ್ನು ಪಡೆದು ಗೌರವವನ್ನು ಹೊಂದಿದವನು ಎಂದು ಹೇಳಿದ್ದಾರೆ.**

★ ★ ★

ಅವತಾರಿಕಾ— ಪದ್ಮತೀರ್ಥನೆಂಬ ಮಾಯಾವಾದಿಯಿಂದ ತನ್ನ ಶಾಸ್ತ್ರಗ್ರಂಥಗಳು ಅಪಹರಿಸಲ್ಪಟ್ಟವು ಎಂಬ ವಾರ್ತೆಯನ್ನು ಆಚಾರ್ಯರು ಕೇಳಿದರು ಎಂದು ಹೇಳುತ್ತಾರೆ.

**ಕೃಷ್ಣಾಭೀಷ್ಟಾ ಶಾಸ್ತ್ರವಿಸ್ಪಷ್ಟಸಂಜ್ಞಾ**
**ಯಾ ಸ್ವೀಯಾ ಶ್ರೀಃ ಪಾಲಿತಾ ಸದ್ದ್ವಿಜೇನ ।**
**ಪದ್ಮಾಖ್ಯಾಸತ್ ಸೈಂಧವೇನಾಹೃತಾಂ ತಾಂ**
**ಶುಶ್ರಾವಾಗ್ರ್ಯಾನಂದತೀರ್ಥಾಖ್ಯಪಾರ್ಥಃ ॥ 42 ॥**

ಪದಚ್ಛೇದ— ಕೃಷ್ಣಾಭೀಷ್ಟಾ, ಶಾಸ್ತ್ರವಿಸ್ಪಷ್ಟಸಂಜ್ಞಾ, ಯಾ ಸ್ವೀಯಾ, ಶ್ರೀಃ ಪಾಲಿತಾ, ಸದ್ದ್ವಿಜೇನ, ಪದ್ಮಾಖ್ಯಾಸತ್ ಸೈಂಧವೇನ, ಆಹೃತಾಂ, ತಾಂ ಶುಶ್ರಾವ, ಅಗ್ರ್ಯಾನಂದತೀರ್ಥಾಖ್ಯಪಾರ್ಥಃ ।

ಅನ್ವಯ— ಅಗ್ರ್ಯಾನಂದತೀರ್ಥಾಖ್ಯಪಾರ್ಥಃ ಯಾ ಕೃಷ್ಣಾಭೀಷ್ಟಾ ಶಾಸ್ತ್ರವಿಸ್ಪಷ್ಟಸಂಜ್ಞಾ ಸದ್ದ್ವಿಜೇನ ಪಾಲಿತಾ ಸ್ವೀಯಾ ಶ್ರೀಃ ತಾಂ ಪದ್ಮಾಖ್ಯಾಸತ್ಸೈಂಧವೇನ ಆಹೃತಾಂ ಶುಶ್ರಾವ ।

ಅನ್ವಯಾರ್ಥ—

**ಅಗ್ರ್ಯ** = ಶ್ರೇಷ್ಠರಾದ

**ಆನಂದತೀರ್ಥಾಖ್ಯಪಾರ್ಥಃ** = ಶ್ರೀಮದಾನಂದತೀರ್ಥರೆಂಬ ಅರ್ಜುನನು

**ಯಾ** = ಯಾವ

**ಕೃಷ್ಣಾಭೀಷ್ಟಾ** = ಶ್ರೀವೇದವ್ಯಾಸದೇವರಿಗೆ ಪ್ರಿಯವಾದ

**ಶಾಸ್ತ್ರ** = ಶಾಸ್ತ್ರವೆಂದು

ವಿಸ್ಪಷ್ಟಸಂಜ್ಞಾ = ಪ್ರಸಿದ್ಧವಾದ ಹೆಸರುಳ್ಳ
ಸದ್ದ್ವಿಜೇನ = ಸಜ್ಜನನಾದ ಲಿಕುಚವಂಶದ ಶಂಕರಾರ್ಯನೆಂಬ ಬ್ರಾಹ್ಮಣನಿಂದ
ಪಾಲಿತಾ = ಕಾಪಾಡಲ್ಪಟ್ಟ
ಸ್ವೀಯಾ = ತನ್ನದಾದ
ಶ್ರೀಃ = ಶಾಸ್ತ್ರಪುಸ್ತಕವೆಂಬ ಸಮುದಾಯವು (ಇದ್ದಿತ್ತೋ)
ತಾಂ = ಆ ಶಾಸ್ತ್ರಶ್ರೀಯನ್ನು
ಪದ್ಮಾಕ್ಷ್ಯಿ = ಪದ್ಮತೀರ್ಥನೆಂಬ
ಅಸತ್ಸೈಂಧವೇನ = ದುರ್ಜನನಾದ ಜಯದ್ರಥನಿಂದ
ಆಹೃತಾಂ = ಅಪಹರಿಸಲ್ಪಟ್ಟದ್ದನ್ನಾಗಿ
ಶುಶ್ರಾವ = ಕೇಳಿದನು.

ತಾತ್ಪರ್ಯ— ಶ್ರೀಮದಾನಂದತೀರ್ಥರು ತನ್ನ ಶಾಸ್ತ್ರಪುಸ್ತಕಸಮುದಾಯವು ಲಿಕುಚವಂಶಜನಾದ ಶಂಕರಾರ್ಯನ ಕೈಯಿಂದ ಪದ್ಮತೀರ್ಥನೆಂಬುವನಿಂದ ಅಪಹರಿಸಲ್ಪಟ್ಟಿದೆ ಎಂದು ಕೇಳಿದರು. ಅರ್ಜುನನು ಜಯದ್ರಥನಿಂದ ದ್ರೌಪದಿಯು ಅಪಹರಿಸಲ್ಪಟ್ಟಳೆಂದು ಕೇಳಿದಂತೆ ಎಂದು ಭಾವವು. ದ್ರೌಪದಿಯೂ ಆಚಾರ್ಯರ ಶಾಸ್ತ್ರಪುಸ್ತಕ ಶ್ರೀಯಂತೆ ಕೃಷ್ಣಾಭೀಷ್ಟಳು = ಕೃಷ್ಣನಿಗೆ ಪ್ರೀತಿಪಾತ್ರಳು, ಸ್ವತಃ ಕೃಷ್ಣಾ ಎಂಬ ಹೆಸರುಳ್ಳವಳು ಮತ್ತು ಸಜ್ಜನರ ಭಕ್ತಿಗೆ ವಿಷಯಳು. ಮತ್ತು ಅವಳು ಶಾಸ್ತ್ರವಿಸ್ಪಷ್ಟಸಂಜ್ಞಾ = ಭಾರತ ಎಂಬ ಶಾಸ್ತ್ರದಲ್ಲಿ ಪ್ರಸಿದ್ಧವಾದ ಹೆಸರುಳ್ಳವಳು ಮತ್ತು, ಸದ್ದ್ವಿಜೇನ ಪಾಲಿತಾ = ಉತ್ತಮನಾದ ಧೌಮ್ಯರೆಂಬ ಬ್ರಾಹ್ಮಣನಿಂದ ಪಾಲಿತಳಾಗಿದ್ದಳು. ಪಾಂಡವರು ಬೇಟೆಗೆ ಹೋಗಿದ್ದಾಗ ಧೌಮ್ಯರು ದ್ರೌಪದಿಯನ್ನು ರಕ್ಷಿಸುತ್ತಿದ್ದರು. ಅವಳು 'ಸ್ವೀಯಾಶ್ರೀಃ = ತಮ್ಮವರ ಸಂಪದ್ರೂಪಳಾದ ಭಾರ್ಯೆಯಾಗಿದ್ದಳೂ. ಅವಳು ಸೈಂಧವನಿಂದ ಅಪಹೃತಳಾದಳೆಂದು ಅರ್ಜುನನು ಕೇಳಿದಂತೆ ತನ್ನ ಶಾಸ್ತ್ರಶ್ರೀಯು ಅಪಹೃತವಾಯಿತೆಂದು ಶ್ರೀಮದಾನಂದತೀರ್ಥರು ಕೇಳಿದರು.

ಭಾರತೀದೇವಿಯ ಅವತಾರಳೂ ಸರ್ವಶಾಸ್ತ್ರಾಭಿಮಾನಿನಿಯೂ ಆದ ದ್ರೌಪದೀದೇವಿಯು ಶ್ರೀಕೃಷ್ಣನ ಪ್ರೀತಿಗೆ ಪಾತ್ರಳು. ಕೃಷ್ಣಾ ಎಂಬ ಹೆಸರನ್ನು ಹೊಂದಿ ಎಲ್ಲಾ ಸಜ್ಜನರ ಭಕ್ತಿಗೌರವಗಳಿಗೆ ಪಾತ್ರಳಾಗಿದ್ದಳು. ಮಹಾಭಾರತವೆಂಬ ಗ್ರಂಥದಲ್ಲಿ ಅತ್ಯಂತ ಪ್ರಸಿದ್ಧಳೂ ಆಗಿದ್ದಳೂ. ಅವಳು ಅರ್ಜುನನ ಮತ್ತು ಎಲ್ಲಾ ಪಾಂಡವರ ಸಂಪತ್ತಿನಂತೆ ಇದ್ದಳು. ಪಾಂಡವರು ವನವಾಸದಲ್ಲಿರುವಾಗ ಒಂದಾನೊಂದು ದಿನ ಬೇಟೆಗಾಗಿ ಹೋಗುವಾಗ ತಮ್ಮ ಪುರೋಹಿತರಾದ ಧೌಮ್ಯರ ರಕ್ಷಣೆಯಲ್ಲಿ ದ್ರೌಪದಿಯನ್ನು ಬಿಟ್ಟು ಹೋಗಿದ್ದರು. ಆಗ ಸಿಂಧುದೇವತಾಧಿಪತಿಯೂ ದುರ್ಯೋಧನನ ತಂಗಿಯಾದ ದುಃಶಲೆಯ ಪತಿಯೂ ಆದ ಜಯದ್ರಥನು ಅವಳನ್ನು ಅಪಹರಿಸಿದನು. ಈ ವಿಷಯವನ್ನು ಅರ್ಜುನನು ಕೇಳಿದನು. ಅದರಂತೆಯೇ ಪ್ರಕೃತದಲ್ಲಿ ಶ್ರೀಮಧ್ವಾಚಾರ್ಯರು ಉಡುಪಿಯಲ್ಲಿರುವಾಗ, ''ಕೃಷ್ಣ'' ಕೃಷ್ಣದ್ವೈಪಾಯನ ಎಂಬ ಹೆಸರುಳ್ಳ ವೇದವ್ಯಾಸರಿಗೆ ಅತಿಪ್ರಿಯವಾದ, ಹೀಗೆ (ಕೃಷ್ಣಾಭೀಷ್ಟವಾದ) 'ಶಾಸ್ತ್ರ' ಎಂದು ಪ್ರಸಿದ್ಧವಾದ ಹೆಸರನ್ನು ಪಡೆದಿರುವ (ಶಾಸ್ತ್ರ ವಿಸ್ಪಷ್ಟಸಂಜ್ಞಾ) ಲಿಕುಚ ವಂಶದ ಶಂಕರಾರ್ಯನೆಂಬ ಸಜ್ಜನನಾದ ಬ್ರಾಹ್ಮಣನಲ್ಲಿ ರಕ್ಷಿಸುವುದಕ್ಕಾಗಿ ತಾನು ಇಟ್ಟಿರುವ (ಸದ್ದ್ವಿಜೇನ ಪಾಲಿತಾ) ಹಾಗೂ ತನ್ನ ಕೀರ್ತಿವಿಸ್ತಾರವನ್ನುಂಟುಮಾಡುವ ಶ್ರೇಷ್ಠ ಸಂಪತ್ತಿನಂತಿರುವ (ಸ್ವೀಯಾಶ್ರೀಃ) ಶಾಸ್ತ್ರಪುಸ್ತಕಗಳ ರಾಶಿಯನ್ನು ಪದ್ಮತೀರ್ಥನೆಂಬುವನು ಅಪಹರಿಸಿಕೊಂಡು ಹೋದನು ಎಂಬ ಸಮಾಚಾರವನ್ನು ಕೇಳಿದರು.

ವಿಶೇಷಾಂಶ— ಇಲ್ಲಿ ಭಾವಪ್ರಕಾಶಿಕಾ ವಚನಗಳು ಕೃಷ್ಣಾಭೀಷ್ಟಾ = ಕೃಷ್ಣಸ್ಯ ವ್ಯಾಸಸ್ಯ ಅಭೀಷ್ಟಾ, ಕೃಷ್ಣೇವಾಭೀಷ್ಟಾ ಚ = ಶ್ರೀವೇದವ್ಯಾಸರಿಗೆ ಪ್ರೀತಿವಿಷಯವಾದುದು ಶಾಸ್ತ್ರಸಂಪತ್ತು ಮತ್ತು ಪಾಂಡವರಿಗೆ ದ್ರೌಪದೀದೇವಿಯರಂತೆ

ಇಷ್ಟವಾದುದು ಶಾಸ್ತ್ರಸಂಪತ್ತು. ಶಾಸ್ತ್ರವಿಸ್ಪಷ್ಟಸಂಜ್ಞಾ = ಶಾಸ್ತ್ರಮಿತಿ ವಿಸ್ಪಷ್ಟಸಂಜ್ಞಾ ಅಸ್ಯಾಃ, ಶಾಸ್ತ್ರೇ ಅಂದರೆ ಭಾರತಾದಿಗಳಲ್ಲಿ ಸ್ಪಷ್ಟವಾದ 'ಶ್ರೀಃ' ಎಂಬ ಹೆಸರುಳ್ಳದ್ದು ವೇದ ಭಾರತಾದಿ ಶಾಸ್ತ್ರಸಂಪತ್ತು, ಶಾಸ್ತ್ರೇ ಅಂದರೆ ಭಾರತಾದಿಗಳಲ್ಲಿ ಸ್ಪಷ್ಟವಾದ 'ಶ್ರೀಃ' ಎಂಬ ಹೆಸರುಳ್ಳದ್ದು ವೇದ, ಭಾರತಾದಿ ಶಾಸ್ತ್ರಸಂಪತ್ತು, ಶಾಸ್ತ್ರೇ ಅಂದರೆ ಭಾರತಾದಿಗಳಲ್ಲಿ ಸ್ಪಷ್ಟವಾದ 'ಶ್ರೀಃ' ಎಂಬ ಹೆಸರುಳ್ಳವರು ಶ್ರೀದ್ರೌಪದೀದೇವಿಯರು, ಸದ್ದ್ವಿಜೇನ ಲಿಕುಚಶೇಖರೇಣ ಶಂಕರಾರ್ಯೇಣ ಧೌಮ್ಯೇನ ಚ = ಶ್ರೇಷ್ಠ ಬ್ರಾಹ್ಮಣನಿಂದ, ಅಂದರೆ ಪೆಜತಾಯಕುಲಶ್ರೇಷ್ಠರಾದ ಶಂಕರಾರ್ಯರಿಂದ ಮತ್ತು ದ್ರೌಪದೀಪಕ್ಷದಲ್ಲಿ ಧೌಮ್ಯದಿಂದ.

ವಿಗ್ರಹ—

ಕೃಷ್ಣಾಭೀಷ್ಟಾ— ಕೃಷ್ಣಸ್ಯ ಅಭೀಷ್ಟಾ ಕೃಷ್ಣಾಭೀಷ್ಟಾ ।

ಶಾಸ್ತ್ರವಿಸ್ಪಷ್ಟಸಂಜ್ಞಾ— ಶಾಸ್ತ್ರಂ ಇತಿ ವಿಸ್ಪಷ್ಟಾ ಸಂಜ್ಞಾ ಯಸ್ಯಾಃ ಸಾ ಶಾಸ್ತ್ರವಿಸ್ಪಷ್ಟಸಂಜ್ಞಾ । (ದ್ರೌಪದೀಪಕ್ಷದಲ್ಲಿ ಶಾಸ್ತ್ರೇ ವಿಸ್ಪಷ್ಟಾ ಸಂಜ್ಞಾ ಯಸ್ಯಾಃ ಸಾ ಶಾಸ್ತ್ರವಿಸ್ಪಷ್ಟಸಂಜ್ಞಾ)

ಸದ್ದ್ವಿಜೇನ— ಸನ್ ಚ ಅಸೌ ದ್ವಿಜಶ್ಚ ಸದ್ದ್ವಿಜಃ, ತೇನ ಸದ್ದ್ವಿಜೇನ ।

ಪದ್ಮಾಖ್ಯಾಸತ್‌ಸೈಂಧವೇನ— ಪದ್ಮ ಇತಿ ಆಖ್ಯಾ ಯಸ್ಯ ಸಃ ಪದ್ಮಾಖ್ಯಃ, ಅಸನ್ ಚಾಸೌ ಸೈಂಧವಶ್ಚ ಅಸತ್ಸೈಂಧವಃ, ಪದ್ಮಾಖ್ಯಶ್ಚಾಸೌ ಅಸತ್ ಸೈಂಧವಶ್ಚ ಪದ್ಮಾಖ್ಯಾಸತ್‌ಸೈಂಧವಃ, ತೇನ ಪದ್ಮಾಖ್ಯಾ-ಸತ್‌ಸೈಂಧವೇನ ।

ಅಗ್ರ್ಯಾನಂದತೀರ್ಥಾಖ್ಯಪಾರ್ಥಃ— ಆನಂದತೀರ್ಥ ಇತಿ ಆಖ್ಯಾ ಯಸ್ಯ ಸಃ ಆನಂದತೀರ್ಥಾಖ್ಯಃ, ಅಗ್ರ್ಯಶ್ಚಾಸೌ ಆನಂದತೀರ್ಥಾಖ್ಯಶ್ಚ ಅಗ್ರ್ಯಾನಂದತೀರ್ಥಾಖ್ಯಃ, ಅಗ್ರ್ಯಾನಂದತೀರ್ಥಾಖ್ಯಃ ಏವ ಪಾರ್ಥಃ ಅಗ್ರ್ಯಾನಂದತೀರ್ಥಾಖ್ಯಪಾರ್ಥಃ ।

ಸ್ವೀಯಾ— ಸ್ವಸ್ಯ ಇಯಂ ಸ್ವೀಯಾ ।

ಕ್ರಿಯಾಪದ— ಶ್ರುಶ್ರವಣೇ ಲಿಟ್ ಈ ಧಾತುವಿನ ಎಲ್ಲಾ ರೂಪಗಳನ್ನು ಶೃಣುತಾದರೇಣ ಎಂಬ 11 ಸರ್ಗದ 64ನೇ ಶ್ಲೋಕದ ವ್ಯಾಖ್ಯಾನದಲ್ಲಿ ಕೊಡಲಾಗಿದೆ. (ಶುಶ್ರಾವ ಶುಶ್ರುವತುಃ ಶುಶ್ರುವುಃ ---)

ಕೋಶ— ಸದ್‌ದ್ವಿಜೇನ ಎಂಬಲ್ಲಿ ಸನ್ ದೋಷರಹಿತ. ಪಂಡಿತ, ಸನ್ ಸುಧೀಃ ಕೋವಿದೋ ಬುಧಃ ಅಮರ. ಶ್ರೀಸಂಪತ್ತು, ಸಂಪತ್ತಿಃ ಶ್ರೀಶ್ಚ ಲಕ್ಷ್ಮೀಶ್ಚ ಅಮರ, ಕೃಷ್ಣಾಭೀಷ್ಟಾ ಎಂಬಲ್ಲಿ ಕೃಷ್ಣ = ವೇದವ್ಯಾಸರು ಮತ್ತು ಯಾದವ ಕೃಷ್ಣ, ವ್ಯಾಸಾರ್ಜುನಾಗ್ನಿ ಹರಿಕೋಕಿಲಕಾಕಶೂದ್ರತಾಮಿಸ್ರಪಕ್ಷಕಲಿನೀಲಗುಣೇಷು ಕೃಷ್ಣಃ ಯಾದವ.

ಪ್ರಯೋಗ— ಕೃಷ್ಣಾಭೀಷ್ಟಯಾ ಶಾಸ್ತ್ರವಿಸ್ಪಷ್ಟಸಂಜ್ಞಯಾ ಯಯಾ ಸದ್ದ್ವಿಜೇನ ಪಾಲಿತಯಾ ಶ್ರಿಯಾ ಬಭೂವೇ, ಪದ್ಮಾಖ್ಯಾಸತ್‌ಸೈಂಧವೇನ ಆಹೃತಾ ಸಾ ಅಗ್ರ್ಯಾನಂದತೀರ್ಥಾಖ್ಯಪಾರ್ಥೇನ ಶುಶ್ರುವೇ (ಕರ್ಮಣಿ) ।

★ ★ ★

ಅವತಾರಿಕಾ— ತನ್ನ ಪುಸ್ತಕಾವಲಿಯ ಅಪಹರಣ ಶ್ರವಣಾನಂತರದಲ್ಲಿ ಶ್ರೀಮಧ್ವಾಚಾರ್ಯರು ಏನು ಮಾಡಿದರೆಂದು ಹೇಳುತ್ತಾರೆ.

**ತೂರ್ಣಂ ತೀರ್ಣಾದಭ್ರಮಾರ್ಗೋಽಥ ಸಾರ್ಯಃ**
**ಸಂಪ್ರಾಪ್ತೋಽಸೌ ಗೋಗಣೈರ್ಭೀಷಯಿತ್ವಾ ।**
**ಸಂಯಮ್ಯಾಂತರ್ಯಂತ್ರಕಾಮೇನ ಹಾಸ್ಯಂ**
**ಸಂಪ್ರಾಪ್ತಶ್ರೀರ್ನಿರ್ಜಿತಂ ತಂ ಜಹಾಸ ॥ 43 ॥**

**ಪದಚ್ಛೇದ—** ತೂರ್ಣಂ, ತೀರ್ಣಾದಭ್ರಮಾರ್ಗಃ, ಅಥ, ಸಾರ್ಯಃ, ಸಂಪ್ರಾಪ್ತಃ, ಅಸೌ, ಗೋಗಣೈಃ, ಭೀಷಯಿತ್ವಾ, ಸಂಯಮ್ಯ, ಅಂತರ್ಯಂತೃಕಾಮೇನ, ಹಾಸ್ಯಂ, ಸಂಪ್ರಾಪ್ತಶ್ರೀಃ, ನಿರ್ಜಿತಂ ತಂ ಜಹಾಸ ।

**ಅನ್ವಯ—** ಅಥ ತೂರ್ಣಂ ತೀರ್ಣಾದಭ್ರಮಾರ್ಗಃ ಸಾರ್ಯಃ ಅಸೌ ತಂ ಸಂಪ್ರಾಪ್ತಃ, ಗೋಗಣೈಃ ಭೀಷಯಿತ್ವಾ ಸಂಯಮ್ಯ, ಸಂಪ್ರಾಪ್ತಶ್ರೀಃ ಅಂತರ್ಯಂತೃಕಾಮೇನ, ಹಾಸ್ಯಂ, ನಿರ್ಜಿತಂ ಜಹಾಸ.

**ಅನ್ವಯಾರ್ಥ—**

**ಅಥ** = ಅನಂತರ

**ತೂರ್ಣಂ** = ಬೇಗನೆ

**ತೀರ್ಣಾದಭ್ರಮಾರ್ಗಃ** = ದಾಟಲ್ಪಟ್ಟ ಬಹು ಯೋಜನ ದೂರದ ದಾರಿಯುಳ್ಳ

**ಸಾರ್ಯಃ** = ಜ್ಯೇಷ್ಠಃ ಯತಿಗಳಿಂದ ಸಹಿತರಾದ, ಅಣ್ಣನಾದ ಭೀಮಸೇನನಿಂದ ಸಹಿತನಾದ,

**ಅಸೌ** = ಈ ಮಧ್ವಾಚಾರ್ಯರು, ಅರ್ಜುನನು

**ತಂ** = ಆ ಪದ್ಮತೀರ್ಥನನ್ನು, ಜಯದ್ರಥನನ್ನು

**ಸಂಪ್ರಾಪ್ತಃ** = ಹೊಂದಿದವರಾಗಿ

**ಗೋಗಣೈಃ** = ಮಾತುಗಳ ಸಮೂಹಗಳಿಂದ, ಬಾಣಗಳ ಸಮುದಾಯಗಳಿಂದ

**ಭೀಷಯಿತ್ವಾ** = ಹೆದರಿಸಿ,

**ಸಂಯಮ್ಯ** = ಉತ್ತರವಿಲ್ಲದವನನ್ನಾಗಿಸಿ, ಹಗ್ಗಗಳಿಂದ ಕಟ್ಟಿ

**ಸಂಪ್ರಾಪ್ತಶ್ರೀಃ** = ಹೊಂದಲ್ಪಟ್ಟ ಜಯಸಂಪತ್ತುಳ್ಳವರಾಗಿ, ಹೊಂದಲ್ಪಟ್ಟ ದ್ರೌಪದಿಯುಳ್ಳವನಾಗಿ

**ಅಂತರ್ಯಂತೃಕಾಮೇನ** = ಅಂತರ್ಯಾಮಿಯಾದ ಭಗವಂತನ ಅಪೇಕ್ಷೆಯಿಂದ, ಅಂತಃಕರಣದಲ್ಲಿ ಪ್ರೇರಕನಾದ ಮನ್ಮಥನಿಂದ,

**ಹಾಸ್ಯಂ** = ಅಪಹಾಸಕ್ಕೆ ಗುರಿಯಾದ

**ನಿರ್ಜಿತಂ** = ಸೋಲಿಸಲ್ಪಟ್ಟ ಪದ್ಮತೀರ್ಥನನ್ನು, ಸೈಂಧವನನ್ನು

**ಜಹಾಸ** = ಹಾಸ್ಯಮಾಡಿದರು.

**ವಿಶೇಷಾಂಶ—** ಭಾವಪ್ರಕಾಶಿಕಾ ವಚನಗಳು, ಸಾರ್ಯಃ = ಸಶ್ರೇಷ್ಠಃ, ತನಗಿಂತ ದೊಡ್ಡ ಯತಿಗಳಿಂದ ಕೂಡಿರುವ, ಅಣ್ಣನಾದ ಭೀಮಸೇನನಿಂದ ಕೂಡಿರುವ, ಗೋಗಣೈಃ ವಾಗ್ಗಣೈಃ ಶರಗಣೈಶ್ಚ = ಗೋಗಣೈಃ ಎಂದರೆ ಮಾತುಗಳ ಸಮೂಹಗಳಿಂದ, ಮತ್ತು ಬಾಣಗಳ ಸಮೂಹಗಳಿಂದ, ಸಂಯಮ್ಯ ನಿರುಧ್ಯ, ಬದ್ಧ್ವಾ ಚ = ಸಂಯಮ್ಯ ಎಂದರೆ ತಡೆದು ಮತ್ತು ಕಟ್ಟಿ ಎಂದು ಅರ್ಥ. ಅಂತರ್ಯಂತೃಕಾಮೇನ = ಅಂತರ್ಯಾಮಿಣಃ ವಾಂಛಯಾ ಅಂತಃಪ್ರೇರಕೇಣ ಮನ್ಮಥೇನ ಚ = ಅಂತರ್ಯಾಮಿಯ ಅಪೇಕ್ಷೆಯಿಂದ, ಮತ್ತು ಅಂತಃಪ್ರೇರಕನಾದ ಮನ್ಮಥನಿಂದ, ಶ್ರೀಃ = ಜಯಶ್ರೀಃ ಪಾಂಚಾಲೀ ಚ = ಶ್ರೀಃ ಎಂದರೆ ಜಯ, ಸಂಪತ್ತು, ಮತ್ತು ದ್ರೌಪದೀ ದೇವಿಯರು.

**ತಾತ್ಪರ್ಯ—** ಪಾಂಡವರು ಆಶ್ರಮದಲ್ಲಿ ಇಲ್ಲದಿರುವಾಗ ಧೌಮ್ಯರು ದ್ರೌಪದಿಯನ್ನು ಕಾಪಾಡುತ್ತಾ ಅಲ್ಲಿಯೇ ಇದ್ದರು. ಆಗ ಸೈಂಧವನು ಅಲ್ಲಿಗೆ ಬಂದು ದ್ರೌಪದಿಯನ್ನು ಅಪಹರಿಸಿದನು. ಬೇಟೆಯಿಂದ ಹಿಂತಿರುಗಿ ಬಂದಕೂಡಲೇ ಆ ಸಮಾಚಾರವನ್ನು ಕೇಳಿ ಅರ್ಜುನನು ಅಣ್ಣನಾದ ಭೀಮಸೇನನೊಡನೆ ಜಯದ್ರಥನ ಬೆನ್ನಟ್ಟುತ್ತಾ ಬಹಳ ದೂರ ವೇಗವಾಗಿ ಹೋದನು. ಅಲ್ಲಿ ದ್ರೌಪದಿಯನ್ನು ಅಪಹರಿಸಿದ ಸೈಂಧವನನ್ನು ಹಿಡಿದು ಬಾಣಗಳಿಂದ ಹೆದರಿಸಿದನು. ಅವನನ್ನು ಹಗ್ಗಗಳಿಂದ ಕಟ್ಟಿದನು. ಹೀಗೆ ಮನ್ಮಥವಶನಾಗಿ ಜಯದ್ರಥನು ಕೆಟ್ಟ ಕೆಲಸವನ್ನು ಮಾಡಿ ಹಾಸ್ಯಾಸ್ಪದನಾದನು. ಸೋತುಹೋದನು. ಅವನನ್ನು ಅರ್ಜುನನು ಅಪಹಾಸ ಮಾಡಿದನು. ಹಾಗೆಯೇ ಈಗ ತನ್ನ ಪುಸ್ತಕಗಳ ಅಪಹಾರ-

ವಾಯಿತು ಎಂದು ಕೇಳಿದ ಕೂಡಲೇ ಶ್ರೀಮಧ್ವಾಚಾರ್ಯರು ಜ್ಯೇಷ್ಠಯತಿಗಳೊಡನೆ ಬೇಗನೆ ಅನೇಕ ಯೋಜನ ದೂರದ ಮಾರ್ಗವನ್ನು ದಾಟಿ ಆ ಪದ್ಮತೀರ್ಥನ ಹತ್ತಿರಕ್ಕೆ ಹೋದರು. ಅಲ್ಲಿ ಅವನನ್ನು ತಡೆದರು. ವಾದದಲ್ಲಿ ಅವನನ್ನು ಹೆದರಿಸಿ ನಿರುತ್ತರನನ್ನಾಗಿ ಮಾಡಿದರು. ತಾನು ಜಯಸಂಪತ್ತನ್ನು ಪಡೆದರು. ತಾನು ಅಭೇದವಾದಿಯಾಗದ್ದರೂ ಪದ್ಮತೀರ್ಥನು ಅಂತರ್ಯಾಮಿಗೆ ಎಲ್ಲವೂ ತಿಳಿದಿದೆ ಎಂದು ಹೇಳುವ ಮೂಲಕ ಅಂತಃಪ್ರೇರಕನಾದ ಭಗವಂತನ ಇಚ್ಛೆಯಿಂದ ಸೋತುಹೋದನು. ಎಲ್ಲರಿಗೂ ಹಾಸ್ಯಾಸ್ಪದನಾದನು. ಅವನನ್ನು ಶ್ರೀಮಧ್ವಾಚಾರ್ಯರೂ ಅಪಹಾಸ ಮಾಡಿ ನಕ್ಕರು.

ವಿಗ್ರಹ—

**ತೀರ್ಣಾದಭ್ರಮಾರ್ಗಃ—** ದಭ್ರಃ ನ ಭವತೀತಿ ಅದಭ್ರಃ, ಅದಭ್ರಶ್ಚಾಸೌ ಮಾರ್ಗಶ್ಚ ಅದಭ್ರಮಾರ್ಗಃ, ತೀರ್ಣಃ ಅದಭ್ರಮಾರ್ಗಃ ಯೇನ ಸಃ ತೀರ್ಣಾದಭ್ರಮಾರ್ಗಃ ।

**ಸಾರ್ಯಃ—** ಆರ್ಯೇಣ ಸಹ ವರ್ತತೇ ಇತಿ ಸಾರ್ಯಃ ।

**ಗೋಗಣ್ಯೈಃ—** ಗವಾಂ ಗಣಾಃ ಗೋಗಣಾಃ, ತೈಃ ಗೋಗಣ್ಯೈಃ ।

**ಅಂತರ್ಯಂತೃಕಾಮೇನ—** ಅಂತರ್ಯಂತುಃ ಕಾಮಃ ಅಂತರ್ಯಂತೃಕಾಮಃ, ಅಂತರ್ಯಂತರಿ ಕಾಮಃ ಅಂತರ್ಯಂತೃಕಾಮಃ, ಇತಿ ವಾ ಅಂತರ್ಯಂತೃಕಾಮೇನ । (ಅಂತರ್ಯಂತಾ ಚಾಸೌ ಕಾಮಶ್ಚ ಅಂತರ್ಯಂತೃ ಕಾಮಃ ತೇನ) ।

**ಸಂಪ್ರಾಪ್ತಶ್ರೀಃ—** ಸಂಪ್ರಾಪ್ತಾ ಶ್ರೀಃ ಯೇನ ಸಃ ಸಂಪ್ರಾಪ್ತಶ್ರೀಃ ।

**ಕ್ರಿಯಾಪದ—** ಹಸೇ ಹಸನೇ ಅಕರ್ಮಕ ಸೇಟ್ ಪರಸ್ಮೈಪದೀ ಭೂತಾನದ್ಯತನ ಪರೋಕ್ಷೇ ಲಿಟ್, ಪ್ರಥಮಪುರುಷೇ ಏಕವಚನೇ 'ಜಹಾಸ' ಇತಿ ರೂಪಮ್ ।

ಜಹಾಸ ಜಹಸತುಃ ಜಹಸುಃ, ಜಹಸಿಥ ಜಹಸಥುಃ ಜಹಸ, ಜಹಾಸ-ಜಹಸ ಜಹಸಿವ ಜಹಸಿಮ ॥

**ಕೋಶ—** ತೂರ್ಣಂ = ಆಶು, ಬೇಗನೆ, ಸತ್ವರಂ ಚಪಲಂ ತೂರ್ಣಮವಿಲಂಬಿತಮಾಶು ಚ = ಅಮರ. ಅದಭ್ರ ಎಂಬಲ್ಲಿ ದಭ್ರ = ಅಲ್ಪ, ಅದಭ್ರ = ಬಹಳ, ಸ್ವಲ್ಪಂ ದಭ್ರಂ ಕೃಶಂತನು, ಅದಭ್ರ = ಬಹಳ, ಸ್ವಲ್ಪಂ ದಭ್ರಂ ಕೃಶಂತನು. ಅದಭ್ರಂ ಬಹುಲಂ ಬಹು. ಅಮರ. ಗೋಗಣ್ಯೈಃ ಎಂಬಲ್ಲಿ 'ಗೋ' ಎಂದರೆ ಮಾತು ಬಾಣ ಎಂದು ಎರಡು ಅರ್ಥಗಳು. 'ಗೌರ್ಬಾಣೇ ವೃಷಭೇ ಚಂದ್ರೇ, ವಾಗ್ಭೂದಿಗ್ ಧೇನುಷು ಸ್ತ್ರಿಯಾಂ । ದ್ವಯೋಸ್ತುರಶ್ಮಿದೃಗ್‌ಬಾಣಸ್ವರ್ಗವಜ್ರಾಂಬು-ಲೋಮಸು - ರತ್ನಮಾಲಾ.

**ಪ್ರಯೋಗ—** ಅಥ ತೂರ್ಣಂ ತೀರ್ಣಾದಭ್ರಮಾರ್ಗೇಣ ಸಾರ್ಯೇಣ ಅಮುನಾ, ತಂ ಸಂಪ್ರಾಪ್ತೇನ (ಸಃ) ಜಹಸೇ (ಭಾವೇ ಪ್ರಯೋಗ) ।

★ ★ ★

**ಅವತಾರಿಕಾ—** ಶ್ರೀಮಧ್ವಾಚಾರ್ಯರು ಅಲ್ಪನಾದ ಪದ್ಮತೀರ್ಥಯತಿಯನ್ನು ಉಪೇಕ್ಷಿಸದ ಕಾರಣವನ್ನು ಹೇಳುತ್ತಾರೆ.

**ದುಷ್ಟಾತ್ಮಾऽಸೌ ಭದ್ರಮೇಕಾಕಿನಂ ಯಃ**
**ಕ್ಷೇಪ್ತುಂ ಹೇತುಃ ಸೌಖ್ಯದಾಖ್ಯಂ ಬಭೂವ ।**
**ಹರ್ಯಂಶೋऽಯಂ ತಂ ನ ಚಕ್ಷಾಮ ಭೂಯ-**
**ಸ್ತೋಕೇ ಸನ್ನೇ ಸೂಕರಂ ಕೇಸರೀವ ॥ 44 ॥**

**ಪದಚ್ಛೇದ—** ದುಷ್ಟಾತ್ಮಾ, ಅಸೌ, ಭದ್ರಂ (ದುಷ್ಟಾತ್ಮಾ, ಸೌಭದ್ರಂ) ಏಕಾಕಿನಂ, ಯಃ, ಕ್ಷೇಪ್ತುಂ ಹೇತುಃ, ಸೌಖ್ಯದಾಖ್ಯಂ, ಬಭೂವ, ಹರ್ಯಂಶಃ, ಅಯಂ, ತಂ, ನ, ಚಕ್ಷಾಮ, ಭೂಯಃ, ತೋಕೇ, ಸನ್ನೇ, ಸೂಕರಂ, ಕೇಸರೀ, ಇವ ।

**ಅನ್ವಯ—** ದುಷ್ಟಾತ್ಮಾ ಯಃ ಅಸೌ, ಭದ್ರಂ ಏಕಾಕಿನಂ ಸೌಖ್ಯದಾಖ್ಯಂ (ಏಕಾಕಿನಂ ಸೌಖ್ಯದಾಖ್ಯಂ ಸೌಭದ್ರಂ) ಕ್ಷೇಪ್ತುಂ ಹೇತುಃ ಬಭೂವ, ತಂ ಹರ್ಯಂಶಃ ಅಯಂ ತೋಕೇ ಸನ್ನೇ ಕೇಸರೀ ಸೂಕರಂ ಇವ ಭೂಯಃ ನ ಚಕ್ಷಾಮ ।

**ಅನ್ವಯಾರ್ಥ—**

**ದುಷ್ಟಾತ್ಮಾ** = ಕೆಟ್ಟಬುದ್ಧಿಯುಳ್ಳ
**ಯಃ ಅಸೌ** = ಯಾವ ಈ ಪದ್ಮತೀರ್ಥನು
**ಭದ್ರಂ** = ಮನೋವಾಕ್ ಕಾಯಕರ್ಮಗಳಿಂದ ಮಂಗಳಕರನಾದ
**ಏಕಾಕಿನಂ** = ಒಬ್ಬಂಟಿಗನಾದ
**ಸೌಖ್ಯದಾಖ್ಯಂ** = ಸೌಖ್ಯವನ್ನು (ಶಂ) ಕೊಡುವವನು (ಕರ) ಎಂಬ ಹೆಸರುಳ್ಳ, ಶಂಕರಾರ್ಯನೆಂದು ಹೆಸರುಳ್ಳ ಬ್ರಾಹ್ಮಣನನ್ನು, (ಇನ್ನೊಂದು ಅರ್ಥದಲ್ಲಿ
**ಏಕಾಕಿನಂ** = ಸಹಾಯಕರಿಲ್ಲದ
**ಸೌಖ್ಯದಾಖ್ಯಂ** = ಪಾಂಡವರಿಗೆ ಆನಂದವನ್ನುಂಟುಮಾಡುವ ಅಭಿಮನ್ಯು ಎಂಬ ಹೆಸರುಳ್ಳ,
**ಸೌಭದ್ರಂ** = ಸುಭದ್ರೆಯ ಮಗನನ್ನು)
**ಕ್ಷೇಪ್ತುಂ** = ನಿರಾಕರಿಸಲು, ಕೊಲ್ಲಲು
**ಹೇತುಃ ಬಭೂವ** = ಕಾರಣನಾದನೋ
**ತಂ** = ಆ ಪದ್ಮತೀರ್ಥನನ್ನು ಸಿಂಧುದೇಶಾಧಿಪತಿಯಾದ ಜಯದ್ರಥನನ್ನು
**ಹರ್ಯಂಶಃ** = ವಾಯುವಿನ ಅವತಾರರಾದ, ಇಂದ್ರಾಂಶದಿಂದ ಅವತರಿಸಿದ
**ಅಯಂ** = ಈ ಮಧ್ವಾಚಾರ್ಯರು, ಅರ್ಜುನನು
**ತೋಕೇ** = ಮರಿಯು
**ಸನ್ನೇ** = ಸಾಯಲು
**ಕೇಸರೀ** = ಸಿಂಹವು
**ಸೂಕರಂ ಇವ** = ಹಂದಿಯನ್ನೋಪಾದಿಯಲ್ಲಿ
**ಭೂಯಃ** = ಮತ್ತೆ, ಸಾಯುವತನಕ
**ನ ಚಕ್ಷಾಮ** = ಕ್ಷಮಿಸಲಿಲ್ಲ.

**ತಾತ್ಪರ್ಯ—** ಹಿಂದೆ ಕೌರವ ಪಾಂಡವರ ಯುದ್ಧ ಕಾಲದಲ್ಲಿ ಒಂದು ದಿನ ದ್ರೋಣಾಚಾರ್ಯರು ಪದ್ಮವ್ಯೂಹವನ್ನು ನಿರ್ಮಿಸಿದರು. ಆ ವ್ಯೂಹದ ಬಾಗಿಲಿನಲ್ಲಿ ನಿಂತಿದ್ದ ಜಯದ್ರಥನು ಪಾಂಡವರು ವ್ಯೂಹದೊಳಗೆ ಹೋಗದಂತೆ ತಡೆದನು. ಧರ್ಮರಾಜಾದಿಗಳಾದ ಎಲ್ಲಾ ಪಾಂಡವರಿಗೂ ಆನಂದಕರವಾದ ಅಭಿಮನ್ಯು ಎಂಬ ಹೆಸರುಳ್ಳ ಆ ಸುಭದ್ರಾಕುಮಾರನು ಪದ್ಮವ್ಯೂಹದಲ್ಲಿ ಒಬ್ಬಂಟಿಗನಾಗಿ ಯುದ್ಧಮಾಡುತ್ತಾ ದ್ರೋಣಕರ್ಣಾದಿ ಅನೇಕ ಮಹಾರಥರಿಂದ ಹತನಾದನು. ಹೀಗೆ ಸೌಭದ್ರನಾದ ಅಭಿಮನ್ಯುವಿನ ಮರಣಕ್ಕೆ ಪಾಂಡವರನ್ನು ಒಳಗೆ ಹೋಗದಂತೆ ತಡೆದುದರಿಂದ ಜಯದ್ರಥನು ಕಾರಣನಾಗಿದ್ದನು. ಅವನು ಅರ್ಜುನನ ಹೊರತು ಉಳಿದ ಪಾಂಡವರನ್ನು ಒಂದು ದಿನ ತಡೆಯುವ ಸಾಮರ್ಥ್ಯವನ್ನು ಈಶ್ವರನಿಂದ ವರವನ್ನಾಗಿ ಪಡೆದಿದ್ದನು. ಹೀಗೆ ಪುತ್ರನ ಮರಣಕ್ಕೆ ಕಾರಣನಾದ ಆ ಜಯದ್ರಥನನ್ನು ಈ ಪುತ್ರ

ಮರಣವಾರ್ತೆಯನ್ನು ಕೇಳಿದ ಇಂದ್ರಾಂಶನಾದ ಅರ್ಜುನನು, ಕುಪಿತನಾಗಿ, ಸಾಯುವವರೆಗೂ ಅವನನ್ನು ಕ್ಷಮಿಸಲಿಲ್ಲ. ಅವನನ್ನು ಕೊಲ್ಲುವೆನೆಂದು ಪ್ರತಿಜ್ಞೆಮಾಡಿ ಶ್ರೀಕೃಷ್ಣಾನುಗ್ರಹದಿಂದ ಕೊಂದನು. ಮನೋವಾಕ್‌ಕಾಯ ಎಂಬ ತ್ರಿಕರಣಗಳಲ್ಲಿ ಶುದ್ಧನಾದ ಮಂಗಳಸ್ವರೂಪನಾದ ಶಂಕರಾರ್ಯ ಎಂಬ ಬ್ರಾಹ್ಮಣನಲ್ಲಿ ಆಚಾರ್ಯರು ತಮ್ಮ ಗ್ರಂಥಗಳನ್ನೆಲ್ಲಾ ಇಟ್ಟಿದ್ದರು. ಬೇರೆ ಸಹಾಯಕರಿಲ್ಲದ ಒಬ್ಬಂಟಿಗನಾದ ಆ ಶಂಕರಾರ್ಯನನ್ನು ಬೆದರಿಸಿ ದುಷ್ಟಸ್ವಭಾವದ ಪದ್ಮತೀರ್ಥನು ಗ್ರಂಥಗಳನ್ನು ಅಪಹರಿಸಿ ಅವನಿಗೆ ತಿರಸ್ಕಾರವನ್ನೂ ಅವಮಾನವನ್ನೂ ಉಂಟುಮಾಡಿದನು. ಅನಂತರ ಈ ವಾರ್ತೆಯನ್ನು ತಿಳಿದ ಶ್ರೀಮುಖ್ಯಪ್ರಾಣನ ಅವತಾರರಾದ ಶ್ರೀಮಧ್ವಾಚಾರ್ಯರು ಮತ್ತೆ ಆ ಪದ್ಮತೀರ್ಥನನ್ನು ಕ್ಷಮಿಸಲೇ ಇಲ್ಲ. ಅವನನ್ನು ಎದುರಿಸಿ ವಾದದಲ್ಲಿ ಖಂಡಿಸಿದರು. ಸಿಂಹವು ಹತ್ತಿರದಲ್ಲಿ ಇಲ್ಲದಿರುವಾಗ, ಅದನ್ನು ಮೋಸಗೊಳಿಸಿ ಸಿಂಹದ ಗುಹೆಗೆ ನುಗ್ಗಿ ಕಾಡುಹಂದಿಯೊಂದು ಸಿಂಹದ ಏಕಾಕಿಯಾದ ಮರಿಯನ್ನು ಕೊಂದರೆ ಈ ಸಮಾಚಾರ ತಿಳಿದಾಗ ಸಿಟ್ಟಾದ ಆ ಸಿಂಹವು ಆ ಕಾಡುಹಂದಿಯನ್ನು ಎದುರಿಸಿ ಅದನ್ನು ಕೊಲ್ಲುತ್ತದೆ. ಸರ್ವಥಾ ಕ್ಷಮಿಸುವುದಿಲ್ಲ. ಆಚಾರ್ಯರು ಪದ್ಮತೀರ್ಥನನ್ನು ಎದುರಿಸಿ ಖಂಡಿಸಿದುದು ಅದರಂತೆ ಆಯಿತು ಎಂದು ಅಭಿಪ್ರಾಯ.

**ವಿಶೇಷಾಂಶ— ಇಲ್ಲಿ ಭಾವಪ್ರಕಾಶಿಕಾವಚನಗಳು - ಯೋಽಸೌ ಪುರಾ ಭದ್ರಂ ಸಜ್ಜನಂ ಕ್ಷೇಪ್ತುಂ ಹೇತುಃ ಸೌಭದ್ರಂ ಚ, ಸೌಖ್ಯದಾಖ್ಯಂ ಶಂಕರಾರ್ಯನಾಮಾನಂ ಶ್ರವಣೇನ ಸ್ವಸುಖಕರನಾಮಾನಂ ಚ = ಯಾವ ಈ ಪದ್ಮತೀರ್ಥನು ಹಿಂದೆ (ಮಹಾಭಾರತ ಯುದ್ಧಕಾಲದಲ್ಲಿ ಸೈಂಧವನು) ಮಂಗಳಕರನಾದ ಸಜ್ಜನನಾದ ಶಂಕರಾರ್ಯನನ್ನು ಅವಮಾನಿಸಲು ಅಭಿಮನ್ಯುವನ್ನು (ಕೊಲ್ಲಲು) ಕಾರಣನಾಗಿದ್ದನೋ, ದುಷ್ಟಾತ್ಮಾ ಸೌಭದ್ರಂ, ಎಂಬಲ್ಲಿ ದುಷ್ಟಾತ್ಮಾ ಅಸೌ, ಭದ್ರಂ, ಎಂದೂ, ದುಷ್ಟಾತ್ಮಾ ಸೌಭದ್ರಂ ಎಂದೂ ಪದಚ್ಛೇದ, ಸೌಖ್ಯದಾಖ್ಯಂ ಎಂದರೆ ಆನಂದಕರ = ಶಂಕರ ಎಂಬ ಹೆಸರುಳ್ಳ ಬ್ರಾಹ್ಮಣನನ್ನು, ಕೇಳುವುದರಿಂದ ತಮಗೆ ಆನಂದಕರವಾದ ಅಭಿಮನ್ಯು ಎಂಬ ಹೆಸರುಳ್ಳವನನ್ನು ಎಂದೂ ಅರ್ಥ.**

**ವಿಗ್ರಹ—**

**ದುಷ್ಟಾತ್ಮಾ—** ದುಷ್ಟಃ ಆತ್ಮಾ (ಬುದ್ಧಿಃ) ಯಸ್ಯ ಸಃ ದುಷ್ಟಾತ್ಮಾ ।

**ಸೌಖ್ಯದಾಖ್ಯಃ—** ಸುಖಮೇವ ಸೌಖ್ಯಂ, ಸೌಖ್ಯಂ ದದಾತೀತಿ ಸೌಖ್ಯದಾ, ಸೌಖ್ಯದಾ ಆಖ್ಯಾ ಯಸ್ಯ ಸಃ ಸೌಖ್ಯದಾಖ್ಯಃ, ತಂ ಸೌಖ್ಯದಾಖ್ಯಂ ।

**ಹರ್ಯಂಶಃ—** ಹರೇಃ ಅಂಶಃ ಹರ್ಯಂಶಃ ।

**ಕೇಸರೀ—** ಕೇಸರಾಃ ಅಸ್ಯ ಸಂತೀತಿ ಕೇಸರೀ ।

**ಕ್ರಿಯಾಪದ—** ಬಭೂವ ಭೂ ಧಾತು ಲಿಟ್ ।

ಚಕ್ಷಾಮ ಚಕ್ಷಮತುಃ ಚಕ್ಷಮುಃ, ಚಕ್ಷಮಿಥ-ಚಕ್ಷಂಥ ಚಕ್ಷಮಥುಃ ಚಕ್ಷಮ, ಚಕ್ಷಾಮ-ಚಕ್ಷಮ ಚಕ್ಷಮಿವ ಚಕ್ಷಮಿಮ ॥

**ಕೋಶ—** ತೋಕಂ = ಮಗು, ಅಪತ್ಯಂ ತೋಕಂ ತಯೋಃ ಸಮೇ ಅಮರ 'ತುಕ್ ತೋಕಸ್ತನಯಶ್ಚ ನಂದನ, ಇತಿಪ್ರಾಜ್ಞೈರಪತ್ಯಂ ಸ್ಮೃತಂ ಎಂಬ ವಚನವೂ ಇದೆ. ಸೂಕರ = ಕಾಡುಹಂದಿ, 'ವರಾಹಃ ಸೂಕರೋ ಘೃಷ್ಟಿಃ ಅಮರ. ಹರ್ಯಂಶಃ ಎಂಬಲ್ಲಿ 'ಹರಿ, ವಾಯು ಇಂದ್ರ, ಚಂದ್ರೇ ಸೂರ್ಯೇ ಯಮೇ ವಿಷ್ಣೌ ವಾಸವೇ ದುರ್ದುರೇ ಹಯೇ । ಮೃಗೇಂದ್ರೇ ವಾನರೇ ವಾಯೌ ದಶಸ್ವಪಿ ಹರಿಃ ಸ್ಮೃತಃ' । ಧನಂಜಯಕೋಶಃ (ಹರಿಶಬ್ದಕ್ಕೆ 10 ಅರ್ಥಗಳು) 'ಯಮಾ-ನಿಲೇಂದ್ರಚಂದ್ರಾರ್ಕವಿಷ್ಣುಸಿಂಹಾಂಶುವಾಜಿಷು । ಶುಕಾಹಿಕಪಿಭೇಕೇಷು ಹರಿರ್ನಾಕಪಿಲೇ ತ್ರಿಷು' ॥ ಅಮರ. (ಹರಿ ಶಬ್ದಕ್ಕೆ 14 ಅರ್ಥಗಳು)

**ಪ್ರಯೋಗ—** ದುಷ್ಟಾತ್ಮನಾ ಯೇನ ಅಮುನಾ, ಭದ್ರಂ ಏಕಾಕಿನಂ ಸೌಖ್ಯದಾಖ್ಯಂ (ಸೌಭದ್ರಂ) ಕ್ಷೇಪ್ತುಂ ಹೇತುನಾ ಬಭೂವೇ (ಭಾವೇ) ಸಃ ಹರ್ಯಂಶೇನ ಅನೇನ ತೋಕೇ ಸನ್ನೇ ಕೇಸರಿಣಾ ಸೂಕರಃ ಇವ ಭೂಯಃ ನ ಚಕ್ಷಮೇ (ಕರ್ಮಣಿ)।

★ ★ ★

ಅವತಾರಿಕಾ— ಶ್ರೀಮಧ್ವಾಚಾರ್ಯರು ವಾದಿಗಳನ್ನು ಜಯಿಸಿದ ರೀತಿಯನ್ನು ಮತ್ತೂ ಅರ್ಜುನನ ಹೋಲಿಕೆಯಿಂದ ವಿವರಿಸುತ್ತಾರೆ.

**ತಸ್ಯ ತ್ರಾಸಾತ್ ಪೃಷ್ಠತಸ್ತಿಷ್ಠತೋಽಭೂತ್**
**ಕ್ಷೇಮಾಪೇಕ್ಷೀ ಯೋ ಜನಃ ಪ್ರಾಗ್ ಜಿತೋಽಪಿ ।**
**ಮಧ್ಯೇಽನ್ಯೇಷಾಂ ಗೋತತೀಸ್ತತ್ಪ್ರಯುಕ್ತಾಃ**
**ಸೋಽದ್ಯಜ್ಜಿಷ್ಣುಃ ಪಂಚಷೈರ್ಗೋವಿಶೇಷೈಃ ॥ 45 ॥**

ಪದಚ್ಛೇದ— ತಸ್ಯ, ತ್ರಾಸಾತ್, ಪೃಷ್ಠತಃ, ತಿಷ್ಠತಃ, ಅಭೂತ್, ಕ್ಷೇಮಾಪೇಕ್ಷೀ, ಯಃ, ಜನಃ, ಪ್ರಾಕ್, ಜಿತಃ, ಅಪಿ, ಮಧ್ಯೇ, ಅನ್ಯೇಷಾಂ, ಗೋತತೀಃ, ತತ್ಪ್ರಯುಕ್ತಾಃ, ಸಃ, ಅದ್ಯತ್, ಜಿಷ್ಣುಃ, ಪಂಚಷೈಃ, ಗೋವಿಶೇಷೈಃ ।

ಅನ್ವಯ— ಜಿಷ್ಣುಃ ಸಃ, ಪ್ರಾಗ್‌ಜಿತಃ ಅಪಿ ಯಃ ಜನಃ ತ್ರಾಸಾತ್ ಪೃಷ್ಠತಃ ತಿಷ್ಠತಃ ತಸ್ಯ ಕ್ಷೇಮಾಪೇಕ್ಷೀ ಅಭೂತ್, ಅನ್ಯೇಷಾಂ ಮಧ್ಯೇ ತತ್ಪ್ರಯುಕ್ತಾಃ ಗೋತತೀಃ ಪಂಚಷೈಃ ಗೋವಿಶೇಷೈಃ ಅದ್ಯತ್ ।

ಅನ್ವಯಾರ್ಥ—

**ಜಿಷ್ಣುಃ ಸಃ** = ಜಯಶೀಲರಾದ ಆ ಶ್ರೀಮಧ್ವಾಚಾರ್ಯರು, ಅರ್ಜುನನು,
**ಪ್ರಾಕ್ ಜಿತಃ ಅಪಿ, ಯಃ ಜನಃ** = ಹಿಂದೆ ಸೋಲಿಸಲ್ಪಟ್ಟಿದ್ದರೂ, ಯಾವ ಪುಂಡರೀಕಪುರಿ ಎಂಬುವನು. ಅಶ್ವತ್ಥಾಮಾದಿಗಳು
**ತ್ರಾಸಾತ್** = ಶ್ರೀಮಧ್ವಾಚಾರ್ಯರ ಭಯದಿಂದ, ಅರ್ಜುನನ ಭಯದಿಂದ
**ಪೃಷ್ಠತಃ** = ಹಿಂಭಾಗದಲ್ಲಿ
**ತಿಷ್ಠತಃ** = ನಿಂತಿರುವ
**ತಸ್ಯ** = ಆ ಪದ್ಮತೀರ್ಥನ, ಸೈಂಧವನ
**ಕ್ಷೇಮಾಪೇಕ್ಷೀ** = ಕೀರ್ತಿಯ ರಕ್ಷಣೆಯೆಂಬ (ಲಬ್ಧಪರಿಪಾಲನ ರೂಪವಾದ) ಕ್ಷೇಮವನ್ನು ಅಪೇಕ್ಷಿಸುವವನು, ಸೈಂಧವನ ಮರಣವಾಗಬಾರದೆಂದು ಅಪೇಕ್ಷಿಸುವವರು.
**ಅಭೂತ್** = ಆದನೋ, ಆದರೋ
**ಅನ್ಯೇಷಾಂ** = ಇತರ ಮಧ್ವಶಿಷ್ಯರ, ಪಾಂಡವರ,
**ಮಧ್ಯೇ** = ನಡುವಿನಲ್ಲಿ
**ತತ್ಪ್ರಯುಕ್ತಾಃ** = ಆ ಪುಂಡರೀಕಪುರಿಯು ಹೇಳಿದ, ಆ ಅಶ್ವತ್ಥಾಮಾದಿಗಳು ಪ್ರಯೋಗಿಸಿದ
**ಗೋತತೀಃ** = ಮಾತುಗಳ ಸಮೂಹಗಳನ್ನು, ಬಾಣಗಳ ಸಮೂಹಗಳನ್ನು
**ಪಂಚಷೈಃ** = ಐದು, ಆರು
**ಗೋವಿಶೇಷೈಃ** = ವಿಶೇಷವಾದ ಬಾಣಗಳಿಂದ
**ಅದ್ಯತ್** = ಖಂಡಿಸಿದರು. ಖಂಡಿಸಿದನು.

ತಾತ್ಪರ್ಯ— ಅಭಿಮನ್ಯುವು ಹತನಾದುದನ್ನು ಕೇಳಿ ಅರ್ಜುನನು ಅವನ ಮರಣಕ್ಕೆ ಕಾರಣನಾದ ಸೈಂಧವನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿ ದ್ರೋಣಾಚಾರ್ಯರು ರಚಿಸಿದ ವ್ಯೂಹವನ್ನು ಭೇದಿಸಿ ಸೈಂಧವನನ್ನು ಕೊಲ್ಲಲು ಮುಂದುವರಿದನು. ಸೈಂಧವನು ಅರ್ಜುನನ ಭಯದಿಂದ ಅಶ್ವತ್ಥಾಮಾದಿಗಳ ಹಿಂದೆ ಅಡಗಿ ನಿಂತಿದ್ದನು. ಅವರು

ಈಗ ಹೇಗಾದರೂ ಸೈಂಧವನನ್ನು ಅರ್ಜುನನಿಂದ ಸಾಯದಂತೆ ಕಾಪಾಡಬೇಕೆಂದು ಅಪೇಕ್ಷಿಸಿ ಅರ್ಜುನನನ್ನು ಹಿಂದಕ್ಕೆ ಅಟ್ಟಲು ಬಾಣಪ್ರಯೋಗ ಮಾಡಿದರು. ಉಳಿದ ಪಾಂಡವರೂ ಅಲ್ಲಿಗೆ ಬಂದರು. ಅವರ ಮಧ್ಯದಲ್ಲಿಯೂ ಅಶ್ವತ್ಥಾಮಾದಿಗಳು ಅರ್ಜುನನಿಗೆ ಬಾಣ ಪ್ರಯೋಗ ಮಾಡಿದರು. ಆಗ ಅರ್ಜುನನು ಐದಾರು ವಿಶೇಷ ಬಾಣಗಳಿಂದ ಅವರ ಬಾಣಗಳನ್ನು ತುಂಡರಿಸಿದನು. ಹಾಗೆಯೇ ಪ್ರಕೃತದಲ್ಲಿಯೂ ಹಿಂದೆ ಶ್ರೀಮಧ್ವಾಚಾರ್ಯರಿಂದ ಸೋತಿದ್ದರೂ ಸಹ, ಪುಂಡರೀಕಪುರಿಯು ಪದ್ಮತೀರ್ಥನನ್ನು ತನ್ನ ಹಿಂದೆ ನಿಲ್ಲಿಸಿಕೊಂಡನು. ಅವನ ಕೀರ್ತಿಯನ್ನು ರಕ್ಷಿಸಬೇಕೆಂದು ಅಪೇಕ್ಷಿಸಿದನು. ತಾನೇ ಮುಂದೆ ನಿಂತು ಶ್ರೀಮಧ್ವಾಚಾರ್ಯರ ಶಿಷ್ಯರೂ ಇರುವ ಸಂದರ್ಭದಲ್ಲಿ ಅವರ ನಡುವೆ ತನ್ನ ಸಿದ್ಧಾಂತವನ್ನು ಪ್ರತಿಪಾದಿಸುತ್ತಾ ಉಪನ್ಯಾಸ ಮಾಡಿದನು. ಆಗ ಶ್ರೀಮಧ್ವಾಚಾರ್ಯರು ಹಿಂದೆ ಅರ್ಜುನನು ಅಶ್ವತ್ಥಾಮಾದಿಗಳು ಪ್ರಯೋಗಿಸಿದ ಬಾಣಗಳನ್ನು ತಮ್ಮ ಐದಾರು ವಿಶೇಷ ಬಾಣಗಳಿಂದ ಖಂಡಿಸಿದಂತೆ ಪುಂಡರೀಕಪುರಿಯ ಮಾತುಗಳನ್ನು ತನ್ನ ವಿಶೇಷವಾದ ಐದಾರು ಮಾತುಗಳಿಂದಲೇ ಖಂಡಿಸಿದರು. ಅವನ ಉಪನ್ಯಾಸದಲ್ಲಿರುವ ಅಪಶಬ್ದಗಳು, ಅಪಸಿದ್ಧಾಂತ, ಮುಂತಾದ ದೋಷಗಳನ್ನು ತೋರಿಸಿ ಅವನನ್ನು ಪರಾಜಯಗೊಳಿಸಿದರು.

ವಿಗ್ರಹ—

**ಕ್ಷೇಮಾಪೇಕ್ಷೀ**— ಕ್ಷೇಮಂ ಅಪೇಕ್ಷತೇ ಇತಿ ಕ್ಷೇಮಾಪೇಕ್ಷೀ ।

**ಗೋತತೀಃ**— ಗವಾಂ ತತಯಃ ಗೋತತಯಃ, ತಾಃ ಗೋತತೀಃ ।

**ತತ್ಪ್ರಯುಕ್ತಾಃ**— ತೇನ ಪ್ರಯುಕ್ತಾಃ ತತ್ಪ್ರಯುಕ್ತಾಃ, ತಾಃ ತತ್ಪ್ರಯುಕ್ತಾಃ । (ತೈಃ ಅಶ್ವತ್ಥಾಮಾದಿಭಿಃ ಪ್ರಯುಕ್ತಾಃ ತತ್ ಪ್ರಯುಕ್ತಾಃ ।)

**ಪಂಚಷೈಃ**— ಪಂಚ ವಾ ಷಡ್ ವಾ ಪಂಚಷಾಃ, ತೈಃ ಪಂಚಷೈಃ ।

**ಗೋವಿಶೇಷೈಃ**— ಗವಾಂ ವಿಶೇಷಾಃ ಗೋವಿಶೇಷಾಃ, ತೈಃ ಗೋವಿಶೇಷೈಃ ।

**ವಿಶೇಷಾಂಶ**— ಭಾವಪ್ರಕಾಶಿಕಾ - ಯೋಜನಃ, ಪುಂಡರೀಕಪುರೀ, ದ್ರೌಣ್ಯಾದಿಷ್ಟ = ಯೋ ಜನಃ ಎಂಬ ಮೂಲದ ಪದಗಳಿಗೆ ಪಂಡರೀಕಪುರಿ ಮತ್ತು ಅಶ್ವತ್ಥಾಮಾದಿಗಳು ಎಂದು ಅರ್ಥ. ಗೋತತೀಃ ಪಂಚಷೈಃ ಗೋವಿಶೇಷೈಃ ಅದ್ಯತ್ ಎಂದು ಅನ್ವಯ. ಮಾತಿನ ಸಮೂಹಗಳನ್ನು ಮತ್ತು ವಿಶೇಷವಾದ ಮಾತುಗಳಿಂದ, ಅರ್ಜುನನ ಪಕ್ಷದಲ್ಲಿ ವಿಶೇಷವಾದ ಐದಾರು ಬಾಣಗಳಿಂದ ಖಂಡಿಸಿದರು ಎಂದು ಅರ್ಥ. ತೇನ ಕೃತಸ್ಯ ಉಪನ್ಯಾಸಸ್ಯ ಅಪಶಬ್ದ, ಅರ್ಥಾದಿದೋಷ ಪ್ರಕಟಕೈಃ ಪಂಚಷೈಃ ವಾಕ್ಯೈಃ ತಮ್ ಅಖಂಡಯತ್ = ಆ ಪುಂಡರೀಕಪುರಿಯು ಮಾಡಿದ ಉಪನ್ಯಾಸದಲ್ಲಿರುವ ಅಪಶಬ್ದಗಳು ಅರ್ಥದೋಷ ಮುಂತಾದವುಗಳನ್ನು ಪ್ರಕಟಗೊಳಿಸುವ ಐದಾರು ಮಾತುಗಳಿಂದ ಆ ಪುಂಡರೀಕಪುರಿಯನ್ನು ಖಂಡಿಸಿದರು ಎಂದು ತಾತ್ಪರ್ಯ. ಪುನಃ ಸ್ವಯಂ ಉಪನ್ಯಾಸಂ ಕೃತ್ವಾ ತಂ ಉಪನ್ಯಾಸಂ ಅಖಂಡಯಂತಂ ಸಸಹಾಯಂ ತಮಪಿ ಅನುಕ್ತಿನಾಮಕನಿಗ್ರಹಸ್ಥಾನಂ ಪ್ರಾಪ್ತಂ ಚಕಾರ = ತಿರುಗಿ ತಾನೂ ಉಪನ್ಯಾಸವನ್ನು ಮಾಡಿ, ಆ ಉಪನ್ಯಾಸವನ್ನು ಖಂಡಿಸದೇ ಇರುವ ಸಹಾಯಕರಿಂದ ಕೂಡಿದ ಆ ಪುಂಡರೀಕಪುರಿಯನ್ನು ಅನುಕ್ತಿ ಎಂಬ ನಿಗ್ರಹ ಸ್ಥಾನವನ್ನು ಹೊಂದಿದವನನ್ನಾಗಿ ಮಾಡಿದರು.

**ಕ್ರಿಯಾಪದ**— **ಅಭೂತ್**, ಭೂ ಧಾತುವಿನ ಲುಙ್ ರೂಪ. ದೋ ಅವಖಂಡನೇ ಸಕರ್ಮಕ ಅನಿಟ್ ಪರಸ್ಮೈಪದ.

ಅದ್ಯತ್ ಅದ್ಯತಾಂ ಅದ್ಯನ್, ಅದ್ಯಃ ಅದ್ಯತಂ ಅದ್ಯತ, ಅದ್ಯಂ ಅದ್ಯಾವ ಅದ್ಯಾಮ ॥

**ಪ್ರಯೋಗ**— ಪ್ರಾಕ್ ಜಿತೇನ ಅಪಿ ಯೇನ ಜನೇನ ತ್ರಾಸಾತ್ ಪೃಷ್ಠತಃ ಕಿಪ್ತತಃ ತಸ್ಯ ಕ್ಷೇಮಾಪೇಕ್ಷಿಣಾ ಅಭಾವಿ. ಅನ್ಯೇಷಾಂ ಮಧ್ಯೇ ತತ್ಪ್ರಯುಕ್ತಾಃ ಗೋತತಯಃ ಜಿಷ್ಣುನಾ ತೇನ ಪಂಚಷೈಃ ಗೋವಿಶೇಷೈಃ ಅದೀಯಂತ (ಕರ್ಮಣಿ) ತ್ರಾಸ = ಭಯ. 'ದರತ್ರಾಸೌಭೀತಿರ್ಭೀಃ ಸಾಧ್ವಸಂ ಭಯಂ' ಅಮರ.

★ ★ ★

ಅವತಾರಿಕಾ— ಶ್ರೀಮಧ್ವಾಚಾರ್ಯರು ಪದ್ಮತೀರ್ಥನನ್ನು ಜಯಿಸಿದ ರೀತಿಯನ್ನು ಹೇಳುತ್ತಾರೆ.

**ವಿಷ್ಣೋರ್ಭೂಯಃ ಶೋಭಯದ್ಭಿಃ ಪದಾಂತಂ**
**ಪಾರಂಪರ್ಯೇಣೇರ್ಯಮಾಣೈರವಾರ್ಯೈಃ ।**
**ಗೋವ್ರಾತೈಸ್ತಂ ದಾರಯಿತ್ವಾ ನ್ಯಗೃಹ್ಣಾತ್**
**ಕಂಜಾಖ್ಯಾನಂ ಸಿಂಧುಪಂ ಮಧ್ವಪಾರ್ಥಃ ॥ 46 ॥**

ಪದಚ್ಛೇದ— ವಿಷ್ಣೋಃ, ಭೂಯಃ, ಶೋಭಯದ್ಭಿಃ, ಪದಾಂತಂ, ಪಾರಂಪರ್ಯೇಣ, ಈರ್ಯಮಾಣೈಃ, ಅವಾರ್ಯೈಃ, ಗೋವ್ರಾತೈಃ, ತಂ, ದಾರಯಿತ್ವಾ, ನ್ಯಗೃಹ್ಣಾತ್, ಕಂಜಾಖ್ಯಾನಂ, ಸಿಂಧುಪಂ, ಮಧ್ವಪಾರ್ಥಃ ।

ಅನ್ವಯ— ಮಧ್ವಪಾರ್ಥಃ, ಭೂಯಃ, ವಿಷ್ಣೋಃ, ಪದಾಂತಂ, ಶೋಭಯದ್ಭಿಃ, ಪಾರಂಪರ್ಯೇಣ, ಈರ್ಯಮಾಣೈಃ, ಅವಾರ್ಯೈಃ, ಗೋವ್ರಾತೈಃ, ಕಂಜಾಖ್ಯಾನಂ ತಂ ಸಿಂಧುಪಂ ದಾರಯಿತ್ವಾ ನ್ಯಗೃಹ್ಣಾತ್ ।

ಅನ್ವಯಾರ್ಥ—

**ಮಧ್ವಾಪಾರ್ಥಃ** = ಶ್ರೀಮಧ್ವಾಚಾರ್ಯರೆಂಬ ಅರ್ಜುನನು,
**ಭೂಯಃ** = ಬಹಳವಾಗಿ, ಮತ್ತೂ ಮತ್ತೂ
**ವಿಷ್ಣೋಃ** = ಶ್ರೀಮನ್ನಾರಾಯಣನ
**ಪದಾಂತಂ** = ಸ್ವರೂಪನಿರ್ಣಯವನ್ನು
**ಶೋಭಯದ್ಭಿಃ** = ಪ್ರಕಾಶಗೊಳಿಸುತ್ತಿರುವ, ಆಕಾಶವನ್ನು ಪ್ರಕಾಶಗೊಳಿಸುತ್ತಿರುವ
**ಪಾರಂಪರ್ಯೇಣ** = ಎಡೆಬಿಡದೆ ಇರುವಿಕೆಯಿಂದ
**ಈರ್ಯಮಾಣೈಃ** = ಹೇಳಲ್ಪಡುವ, ಪ್ರಯೋಗಿಸಲ್ಪಡುವ
**ಅವಾರ್ಯೈಃ** = ಖಂಡಿಸಲಾಗದ, ತಡೆಯಲು ಆಗದ
**ಗೋವ್ರಾತೈಃ** = ಮಾತುಗಳ ಸಮೂಹಗಳಿಂದ, ಬಾಣಗಳ ಸಮೂಹಗಳಿಂದ
**ಕಂಜಾಖ್ಯಾನಂ** = ಪದ್ಮತೀರ್ಥನೆಂದು ಹೆಸರುಳ್ಳ
**ತಂ** = ಆ
**ಸಿಂಧುಪಂ** = ಸಿಂಧುದೇಶಾಧಿಪತಿಯಾದ ಜಯದ್ರಥನನ್ನು,
**ದಾರಯಿತ್ವಾ** = ಖಂಡಿಸಿ, ಸೀಳಿ
**ನ್ಯಗೃಹ್ಣಾತ್** = ನಿಗ್ರಹಿಸಿದರು. (ಪರಾಜಯಗೊಳಿಸಿದರು. ಮಾತಾಡದಂತೆ ಮಾಡಿದರು). ಕೊಂದನು.

ತಾತ್ಪರ್ಯ— ಸೈಂಧವನು ಅಭಿಮನ್ಯುವಿನ ಮರಣಕ್ಕೆ ಕಾರಣನಾಗಿದ್ದನು. ಅರ್ಜುನನು ತನ್ನ ಮಗನ ಮರಣಕ್ಕೆ ಕಾರಣನಾದ ಅವನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿ, ಆಕಾಶವನ್ನೆಲ್ಲಾ ಪ್ರಕಾಶಗೊಳಿಸುವ ತಡೆಯಲಾಗದ ಬಾಣಗಳನ್ನು ಪ್ರಯೋಗಿಸಿ ಸೈಂಧವನನ್ನು ಸೀಳಿ ಕೊಂದನು. ಅದರಂತೆ ಶ್ರೀಮಧ್ವಾಚಾರ್ಯರು ಎಡೆಬಿಡದೆ ವಾಕ್ಯಗಳನ್ನು ಪ್ರಯೋಗಿಸುತ್ತಾ ಉಪನ್ಯಾಸವನ್ನು ಮಾಡಿದರು. ಅವರ ಉಪನ್ಯಾಸದಿಂದ ಶ್ರೀಮನ್ನಾರಾಯಣನ ಸ್ವರೂಪನಿರ್ಣಯವುಂಟಾಯಿತು. ವೇದಾಂತಶಾಸ್ತ್ರದ ಉತ್ತಮರೀತಿಯ ಪರಿಷ್ಕಾರವು ಸಿದ್ಧವಾಯಿತು. ಆಚಾರ್ಯರ ವಾಕ್ಯಗಳನ್ನು ಪ್ರತಿವಾದಿಗಳಿಗೆ ಖಂಡಿಸಲೂ ಸಾಧ್ಯವಾಗುತ್ತಿರಲಿಲ್ಲ. ಅಂತಹ ಉಪನ್ಯಾಸವನ್ನು ಮಾಡಿ ಆಚಾರ್ಯರು ಪದ್ಮತೀರ್ಥನನ್ನು ಖಂಡಿಸಿ ನಿರುತ್ತರನನ್ನಾಗಿ ಮಾಡಿದರು.

**ವಿಶೇಷಾಂಶ—** ಕೃಷ್ಣಾಭೀಷ್ಟಾ (ಶ್ಲೋ 42) ಎಂಬಲ್ಲಿಂದ ಇದುವರೆಗೆ ಹೇಳಿದ ವಿಷಯವನ್ನು ನಾರಾಯಣ-ಪಂಡಿತಾಚಾರ್ಯರು ಭಾವಪ್ರಕಾಶಿಕೆಯಲ್ಲಿ ಈ ರೀತಿ ಹೇಳಿದ್ದಾರೆ. ಅತ್ರ ಚಾಯಂ ಪ್ರಣೀತಃ ಆಚಾರ್ಯ ಪ್ರಿಯತಮ್ಯಃ ಶ್ಲೋಕಃ = ಇಲ್ಲಿ ಆಚಾರ್ಯರ ಪ್ರೀತಿಪಾತ್ರರಾದ ಶಿಷ್ಯರಿಂದ ರಚಿತವಾದ ಶ್ಲೋಕವು.

**ಆನಂದತೀರ್ಥಪಾರ್ಥಸ್ಯಭಯಾದಾಸ್ತೇ ಸ ಪೃಷ್ಠತಃ ।**
**ಪುರತಃ ಸ್ಥಾಪಯಿತ್ವಾನ್ಯಾನ್ ಪದ್ಮತೀರ್ಥಜಯದ್ರಥಃ ॥ ಇತಿ ॥**

ಪದ್ಮತೀರ್ಥನೆಂಬ ಜಯದ್ರಥನು ಆನಂದತೀರ್ಥನೆಂಬ ಅರ್ಜುನನ ಭಯದಿಂದ ಮುಂದುಗಡೆ ಇತರರನ್ನು ಇಟ್ಟು ತಾನು ಹಿಂದೆಯೇ ನಿಂತಿದ್ದನು. ಜಯದ್ರಥನೂ ಹಿಂದೆ ಅರ್ಜುನನ ಭಯದಿಂದ ಅಶ್ವತ್ಥಾಮಾದಿಗಳನ್ನು ಮುಂದೆ ಇಟ್ಟು ತಾನು ಹಿಂದೆ ಅಡಗಿ ನಿಂತಿದ್ದನು, ಅದರಂತೆ

**ವಿಷ್ಣುಮಂಗಲದೇಶಾಂತೇ ಹೃತಾಂ ಕವಲಿಕಾಂ ನಿಜಾಂ ।**
**ಶ್ರುತ್ವಾ ರಜತಪೀಠಸ್ಥಃ ಏಕವಾಟಂ ಯಯೌ ಗುರುಃ ॥**

**ತತ್ರಸ್ಥಂ ಚೋಲಡಂ ದೃಷ್ಟ್ವಾ ಸ್ವಶಿಷ್ಯೈಸ್ತಂ ರುರೋಧ ಸಃ ।**
**ತ್ವಚ್ಛಾಸ್ತ್ರಂ ಸಾಧಯಸಿ ಚೇತ್ ಪ್ರಾಶ್ನಿಕಾನಾಹ್ವಯೇತ್ಯಸೌ ।**
**ಮಧ್ವಸ್ತೇನೋದಿತಃ ಪ್ರೋಚೇಽತ್ರಾಹ್ವಯೇಚ್ಛಸಿ ಚೇದಿತಿ ।**
**ಕೃತಕೃತ್ಯೋಽಸ್ಮಿ ಮೇ ಶಾಸ್ತ್ರಂ ವ್ಯಾಪ್ತಮಿತ್ಯುದಿತೇಽಮುನಾ ।**
**ಪ್ರೋಚೇ ಮಧ್ವೋ ಮಮ ವ್ಯಾಪ್ತಂ ತ್ರೈಲೋಕ್ಯೇ ಶಾಸ್ತ್ರಮಿತ್ಯಮುಮ್ ।**
**ಅಂತರ್ಯಾಮಿ ಹಂತ ವೇದ ತವೇದಂ ಶಾಕ್ಯಭಾಷಿತಂ ॥**

**ಇತಿ ಬ್ರುವಾಣಾಂ ತಂ ಪ್ರೋತೇ ಮಧ್ವಃ ಸ್ಮಿತಮುಖಾಂಬುಜಃ ।**
**ಅಂತರ್ಯಾಮೀ ನಿಯಮ್ಯಶ್ಚ ತ್ವಯೈವಾಂಗೀಕೃತಾಮಿತಿ ।**
**ಮಿಲಿತೇಷ್ವಥ ಸಭ್ಯೇಷು ಪ್ರಾಶ್ನಿಕೇಷ್ವಭವತ್ ಕಥಾ ।**
**ತತ್ರ ಮಾಧ್ವ ಉಪನ್ಯಾಸೋ ಗ್ರಂಥೋ ವಾದಾಹ್ವಯೋಽಭವತ್ ॥**

ಈ ಮೇಲಿನ ಶ್ಲೋಕಗಳೂ ಆಚಾರ್ಯರ ಶಿಷ್ಯರಿಂದಲೇ ರಚಿತವಾಗಿರುತ್ತವೆ. ಅವುಗಳ ಅಭಿಪ್ರಾಯವು ಹೀಗಿದೆ.

ಆಚಾರ್ಯರು ರಜತಪೀಠಪುರದಲ್ಲಿರುವಾಗ ವಿಷ್ಣುಮಂಗಲ ಪ್ರದೇಶದಲ್ಲಿ ತಾವು ಶಂಕರಾರ್ಯರಲ್ಲಿ ಇಟ್ಟಿರುವ ಗ್ರಂಥಸಮುದಾಯವು ಅಪಹೃತವಾಯಿತು ಎಂಬ ಸಮಾಚಾರವನ್ನು ಕೇಳಿ ಉಡುಪಿಯಿಂದ ಬಹಳ ಬೇಗನೆ ಏಕವಾಟ-ವೆಂಬ ಗ್ರಾಮಕ್ಕೆ ಹೋದರು.

ಆಚಾರ್ಯರ ಗ್ರಂಥವನ್ನು ಅಪಹರಿಸಿದ್ದ ಪದ್ಮತೀರ್ಥನು ಅಲ್ಲಿದ್ದನು. ಆಚಾರ್ಯರು ಅವನನ್ನು ನೋಡಿ ತಮ್ಮ ಶಿಷ್ಯರ ಮೂಲಕ ಹೇಳಿಸಿ, ಅವನನ್ನು ಮುಂದಕ್ಕೆ ಹೋಗದಂತೆ ತಡೆದರು.

ಆಗ ಪದ್ಮತೀರ್ಥನು ಆಚಾರ್ಯರನ್ನು ಕುರಿತು ನೀವು ನಿಮ್ಮ ಶಾಸ್ತ್ರವನ್ನು ಸಾಧಿಸಲು ಬಯಸುವಿರಾದರೆ ಪ್ರಾಶ್ನಿಕರು (ಸದಸ್ಯರು) ಸಭಾಧ್ಯಕ್ಷ ಮುಂತಾದವರನ್ನು ಕರೆದು ವಾದರಂಗವನ್ನು ಏರ್ಪಡಿಸಿರಿ ಎಂದು ಹೇಳಿದನು.

ಆಗ ಆಚಾರ್ಯರು, ನಮಗೆ ವಾದ ಮಾಡಲು ಪ್ರಾಶ್ನಿಕರೇ ಮೊದಲಾದವರು ಬೇಕಾಗಿಲ್ಲ, ನಿನಗೆ ಬೇಕಾಗಿದ್ದರೆ ನೀನೇ ಕರೆಯಬಹುದು ಎಂದರು. ಆಗ ಆ ಪದ್ಮತೀರ್ಥನು ನಾನು ಕೃತಕೃತ್ಯನಾಗಿದ್ದೇನೆ. ನನ್ನ ಶಾಸ್ತ್ರವು ಈ ಲೋಕದಲ್ಲಿ ಎಲ್ಲಾ ಕಡೆ ವ್ಯಾಪ್ತವಾಗಿದೆ. ನನ್ನ ಶಾಸ್ತ್ರವು ಎಲ್ಲರಿಂದಲೂ ಅಂಗೀಕೃತವಾದುದರಿಂದ ನಾನು ಅದನ್ನು ಸಾಧಿಸಲು ವಾದಸಭೆಯನ್ನು ಕರೆಯಬೇಕಾಗಿಲ್ಲ. ಹೊಸದಾದ ನಿಮ್ಮ ಸಿದ್ಧಾಂತವನ್ನು ಸ್ಥಾಪಿಸಲು ನೀವೇ ಸದಸ್ಯಸಭಾಪತಿಗಳನ್ನೂ ಏರ್ಪಡಿಸಿ ವಾದಸಭೆಯನ್ನು ಕರೆದು ನಮ್ಮನ್ನು ಸೋಲಿಸಿ, ಬೇಕಾದರೆ ಸಿದ್ಧಾಂತ ಸ್ಥಾಪನೆ ಮಾಡಿರಿ ಎಂದನು. ಆಗ ಆಚಾರ್ಯರು ನಿನ್ನ ಶಾಸ್ತ್ರವು ಈ ಲೋಕದಲ್ಲೆಲ್ಲಾ ವ್ಯಾಪ್ತವಾಗಿದ್ದರೆ ನನ್ನ ಶಾಸ್ತ್ರವು ಮೂರು ಲೋಕಗಳಲ್ಲಿಯೂ ವ್ಯಾಪ್ತವಾಗಿದೆ ಎಂದರು.

ಆಗ ಪದ್ಮತೀರ್ಥನು - ಅಹಹ! ನಿಮ್ಮ ಮಾತು ವಕ್ರ ಮತ್ತು ಪೊಳ್ಳು, ನಿಮ್ಮ ಮಾತು ಸುಳ್ಳೆಂದು ಅಂತರ್ಯಾಮಿಯಾದ ಪರಮಾತ್ಮನೇ ತಿಳಿದಿರುವನು ಎಂದನು.

ಆಚಾರ್ಯರು - ಅಹಹ! ನನ್ನ ಮಾತು ಸತ್ಯ ಎಂದು ನಿನ್ನ ಮಾತಿನಿಂದಲೇ ಸಿದ್ಧವಾಯಿತು. ನನ್ನ ಶಾಸ್ತ್ರಸಿದ್ಧಾಂತವು ತ್ರೈಲೋಕ್ಯದಲ್ಲಿ ವ್ಯಾಪಿಸಿದೆ ಎಂದು ನಾನು ಪ್ರತ್ಯೇಕವಾಗಿ ಸಾಧಿಸಬೇಕಾಗಿಯೇ ಇಲ್ಲ. ಏಕೆಂದರೆ ಅಭೇದವಾದಿಯಾಗಿದ್ದು ನಿಯಮ್ಯನಾದ ಜೀವ ಮತ್ತು ನಿಯಾಮಕನಾದ ಪರಮಾತ್ಮ ಇವರೀರ್ವರನ್ನೂ ಅವರಲ್ಲಿ ಸತ್ಯವಾದ ಭೇದವನ್ನೂ ಒಪ್ಪದಿರುವ ನೀನು ಆಡಿದೆ. 'ತ್ರೈಲೋಕ್ಯದಲ್ಲಿ ನನ್ನ ಮತವು ವ್ಯಾಪ್ತವಾಗಿದೆ' ಎಂಬ ಮಾತು ಸುಳ್ಳೆಂದು ನಿಮ್ಮ ಅಂತರ್ಯಾಮಿಯೇ ತಿಳಿದಿರುವನು' ಎಂದು ನನ್ನನ್ನು ಕುರಿತು ಹೇಳಿದೆ. ಇದರಿಂದ ನೀನು ಅಂತರ್ಯಾಮಿಯಾದ (ಜೀವ ನಿಯಾಮಕನಾದ) ಪರಮಾತ್ಮನನ್ನು ಅವನಿಂದ ನಿಯಮ್ಯನಾದ, ಅವನಿಗೆ ಅಧೀನನಾದ ಜೀವನನ್ನೂ, ಅವರಿಬ್ಬರಿಗೆ ಸತ್ಯವಾದ ಭೇದವನ್ನೂ ಒಪ್ಪಿಕೊಂಡಂತಾಯಿತು. ನನ್ನ ಅಂತರ್ಯಾಮಿಗೂ ನನಗೂ ಸತ್ಯಭೇದವಿಲ್ಲದಿದ್ದರೆ ಅಂತ-ರ್ಯಾಮಿಯು ನಿನ್ನ ಸುಳ್ಳು ಮಾತನ್ನು ತಿಳಿದಿದ್ದಾನೆ ಎಂಬ ಮಾತು ಕೂಡುವುದಿಲ್ಲವಷ್ಟೆ ! ಹೀಗೆ ಭೇದವನ್ನು ಹೇಳುವವರಿಗೆ ವಿರೋಧಿಯಾದ ನಿನ್ನಲ್ಲಿಯೇ ನನ್ನ ಮತವು ವ್ಯಾಪ್ತವಾಗಿದ್ದ ಮೇಲೆ ಇತರ ಸ್ಥಳಗಳಲ್ಲಿಯೂ ಸರ್ವಲೋಕಗಳಲ್ಲಿಯೂ ನಿಯಾಮಕನಾದ ಪರಮಾತ್ಮನಿಗೂ ಅವನಿಂದ ನಿಯಮ್ಯರಾದ ಜೀವರಿಗೂ ಪಾರಮಾರ್ಥಿಕ ಭೇದವು ಇದ್ದೇ ಇದೆಯೆಂದು ಸಿದ್ಧವಾಗುವುದರಿಂದ ನನ್ನ ಮತವು ತ್ರೈಲೋಕ್ಯದಲ್ಲಿ ವ್ಯಾಪ್ತವಾಗಿದೆಯೆಂಬ ನನ್ನ ಮಾತು ಪೂರ್ತಿಸತ್ಯವಾಗಿದೆ ಎಂದು ಹೇಳಿದರು.

ಅನಂತರ ಸಭ್ಯರು ಪ್ರಾಶ್ನಿಕರು ಸೇರಿದರು. ಪರಸ್ಪರವಾದ ಚರ್ಚೆಯು ಪ್ರಾರಂಭವಾಯಿತು. ಆಗ ಆಚಾರ್ಯರು ಉಪನ್ಯಾಸ ರೂಪವಾಗಿ ಹೇಳಿದ ವಾದ ಎಂಬ ಗ್ರಂಥವನ್ನು ಶಿಷ್ಯರು ಬರೆದುಕೊಂಡರು. ಇದೇ ತತ್ತ್ವೋದ್ಯೋತ ಎಂಬ ಪ್ರಕರಣ ಗ್ರಂಥವು ಈ ಗ್ರಂಥದ ಆರಂಭದ ವಾಕ್ಯವೇ, ಈ ಗ್ರಂಥವು ಪದ್ಮತೀರ್ಥಾದಿಗಳನ್ನು ಖಂಡಿಸಲು ಹೊರಟಿದೆ ಎಂದು ಸೂಚಿಸುತ್ತದೆ.

ವಿಗ್ರಹ—

ಪದಾಂತಂ— ಪದಸ್ಯ ಅಂತಃ ಯಸ್ಮಾತ್ ತತ್ ಪದಾಂತಂ (ವೇದವೇದಾಂತಾದಿಶಾಸ್ತ್ರಂ) ।

ಪಾರಂಪರ್ಯೇಣ— ಪರಂಪರೈವ ಪಾರಂಪರ್ಯಂ, ತೇನ ಪಾರಂಪರ್ಯೇಣ ।

ಅವಾರ್ಯೈಃ— ವಾರಯಿತುಂ ಶಕ್ಯಾಃ ವಾರ್ಯಾಃ, ನ ವಾರ್ಯಾಃ ಅವಾರ್ಯಾಃ, ತೈಃ ಅವಾರ್ಯೈಃ ।

ಗೋವ್ರಾತಾಃ— ಗವಾಂ ವ್ರಾತಾಃ ಗೋವ್ರಾತಾಃ ।

ಕಂಜಾಖ್ಯಾನಂ— ಕಂಜ ಇತಿ ಆಖ್ಯಾನಂ ಯಸ್ಯ ಸಃ ಕಂಜಾಖ್ಯಾನಃ, ತಂ ಕಂಜಾಖ್ಯಾನಂ ।

ಸಿಂಧುಪಂ— ಸಿಂಧೂನ್ ಪಾತಿ ಇತಿ ಸಿಂಧುಪಃ, ತಂ ಸಿಂಧುಪಂ ।

ಮಧ್ವಪಾರ್ಥಃ— ಮಧ್ವ ಏವ ಪಾರ್ಥಃ ಮಧ್ವಪಾರ್ಥಃ ।

ಕ್ರಿಯಾಪದ— ನ್ಯಗೃಹ್ಣಾತ್- ನಿ ಉಪಸರ್ಗ ಗ್ರಹ ಉಪಾದಾನೇ ಸಕರ್ಮಕ ಸೇಟ್ ಉಭಯ. ಪ್ರಕೃತೇ ಪರಸ್ಮೈ. ಅನದ್ಯತನಭೂತೇ ಲಙ್ ।

ನಿ + ಅಗೃಹ್ಣಾತ್ ಅಗೃಹ್ಣೀತಾಂ ಅಗೃಹ್ಣನ್, ಅಗೃಹ್ಣಾಃ ಅಗೃಹ್ಣೀತಂ ಅಗೃಹ್ಣೀತ, ಅಗೃಹ್ಣಾಂ ಅಗೃಹ್ಣೀವ ಅಗೃಹ್ಣೀಮ ॥

ಕೋಶ— ಗೋವ್ರಾತೈಃ ಎಂಬಲ್ಲಿ ವ್ರಾತ ಎಂದರೆ ಸಮೂಹ, 'ಸ್ತೋಮೌಘನಿಕರವ್ರಾತವಾರಸಂಘಾತ ಸಂಚಯಾಃ'। ಅಮರ. ಪದಾಂತಂ ಎಂಬಲ್ಲಿ ಅಂತ = ನಿರ್ಣಯ, 'ಅಂತಃಪ್ರಾಂತೇಽಂತಿಕೇ ನಾಶೇ ಸ್ವರೂಪೈಕಾಂತವಿನಿರ್ಣಯೇ' ಎಂದು ವಿಶ್ವ. ಸಿಂಧುಪಂ ಎಂಬಲ್ಲಿ ಸಿಂಧು = ಸಿಂಧುದೇಶ, 'ದೇಶೇ ನದವಿಶೇಷೇಽಬ್ಧೌ ಸಿಂಧುರ್ನಾ ಸರಿತಿಸ್ತ್ರಿಯಾಂ'- ಅಮರ.

ಪ್ರಯೋಗ— ಮಧ್ವಪಾರ್ಥೇನ ಭೂಯಃ ವಿಷ್ಣೋಃ ಪದಾಂತಂ ಶೋಭಯದ್ಭಿಃ ಪಾರಂಪರ್ಯೇಣ ಈರ್ಯಮಾಣೈಃ ಅವಾರ್ಯೈಃ ಗೋವ್ರಾತೈಃ ಕಂಜಾಖ್ಯಾನಃ ಸಃ ಸಿಂಧುಪಃ ದಾರಯಿತ್ವಾ ನ್ಯಗೃಹ್ಯತ ।

★ ★ ★

**ಅವತಾರಿಕಾ—** ಹೀಗೆ ಪದ್ಮತೀರ್ಥಾದಿಗಳು ಸೋತು ಓಡಿಹೋದಾಗ ಅಲ್ಲಿದ್ದ ಸಜ್ಜನರು ಮಾಯಾವಾದಿಗಳನ್ನು ಕುರಿತು ಹೀಗೆ ಹೇಳಿದರು ಎಂದು ಹೇಳುತ್ತಾರೆ.

**ಆಸ್ತಾಮಾಸ್ತಾಮೇಷ ವೋ ವಿಶ್ವಮೋಷೋ**
**ರೇ ರೇ ಮಾಯಾವಾದಿ ಚೋರಾ ದ್ರವೇತ ।**
**ದ್ರಷ್ಟಾ ದ್ರಷ್ಟಾ ನಿಗ್ರಹೀತಾ ಧ್ರುವಂ ವಃ**
**ಪ್ರಾಪ್ತಃ ಕಾಲೋ ದ್ರಾಗ್ಗುಹಾಂತಂ ಪ್ರವೇಷ್ಟುಮ್ ॥ 47 ॥**

ಪದಚ್ಛೇದ— ಆಸ್ತಾಂ, ಆಸ್ತಾಂ, ಏಷಃ, ವಃ, ವಿಶ್ವಮೋಷಃ, ರೇ, ರೇ, ಮಾಯಾವಾದಿಚೋರಾಃ, ದ್ರವೇಶ, ದ್ರಷ್ಟಾ, ದ್ರಷ್ಟಾ, ನಿಗ್ರಹೀತಾ, ಧ್ರುವಂ, ವಃ, ಪ್ರಾಪ್ತಃ, ಕಾಲಃ, ದ್ರಾಕ್, ಗುಹಾಂತಂ, ಪ್ರವೇಷ್ಟುಂ ।

ಅನ್ವಯ— ರೇ ರೇ ಮಾಯಾವಾದಿಚೋರಾಃ ವಃ ಏಷಃ ವಿಶ್ವಮೋಷಃ ಆಸ್ತಾಂ, ಆಸ್ತಾಂ, (ಯೂಯಂ) ದ್ರವೇಶ, ದ್ರಷ್ಟಾದ್ರಷ್ಟಾವಃ ಧ್ರುವಂ ನಿಗ್ರಹೀತಾ, ದ್ರಾಕ್ ಗುಹಾಂತಂ ಪ್ರವೇಷ್ಟುಂ ಕಾಲಃ ಪ್ರಾಪ್ತಃ ।

ಅನ್ವಯಾರ್ಥ—

**ರೇ ರೇ** = ಎಲೈ ಎಲೈ,
**ಮಾಯಾವಾದಿಚೋರಾಃ** = ಪ್ರಪಂಚವು ಮಾಯೆಯಿಂದ ಕಲ್ಪಿತವೆಂದು ಹೇಳುವ ಮಾಯಾವಾದಿಗಳೆಂಬ ಕಳ್ಳರೇ
**ವಃ** = ನಿಮ್ಮ (ನೀವು ಮಾಡುವ)
**ಏಷಃ ವಿಶ್ವಮೋಷಃ** = ಈ ಭೇದ ಮೊದಲಾದ ಎಲ್ಲಾ ಪ್ರಪಂಚದ ಕಳ್ಳತನವು
**ಆಸ್ತಾಂ ಆಸ್ತಾಂ** = ಇರಲಿ, ಇರಲಿ
**(ಯೂಯಂ** = ನೀವು)
**ದ್ರವೇತ** = ಓಡಬೇಕಾಗಿಯೇ ಇದೆ.
**ದ್ರಷ್ಟಾದ್ರಷ್ಟಾ** = ಪ್ರಪಂಚವನ್ನು ನೋಡುತ್ತಿರುವ ಪ್ರತಿಯೊಬ್ಬ ಮನುಷ್ಯನೂ
**ವಃ** = ನಿಮ್ಮನ್ನು
**ಧ್ರುವಂ** = ನಿಶ್ಚಯವಾಗಿ
**ನಿಗ್ರಹೀತಾ** = ಉತ್ತರವಿಲ್ಲದವರನ್ನಾಗಿ ಮಾಡುವನು.
**ದ್ರಾಕ್** = ಜಾಗ್ರತೆಯಾಗಿ (ಬೇಗನೆ)
**ಗುಹಾಂತಂ** = ಗುಹೆಯೊಳಗೆ
**ಪ್ರವೇಷ್ಟುಂ** = ಪ್ರವೇಶಿಸುವುದಕ್ಕೆ
**ಕಾಲಃ** = ಸಮಯವು
**ಪ್ರಾಪ್ತಃ** = ಒದಗಿದೆ.

**ತಾತ್ಪರ್ಯ—** ಎಲೈ ಮಾಯಾವಾದಿಗಳೇ ! ನೀವು ಪ್ರಪಂಚವು ಮಾಯೆಯಿಂದ ಕಲ್ಪಿತವು, ಸುಳ್ಳು ಎಂದು ಹೇಳುತ್ತೀರಿ. ಆದುದರಿಂದ ಕಣ್ಣಿಗೆ ಕಾಣಿಸುವ ಈ ಪ್ರಪಂಚವನ್ನು ಇಲ್ಲವೆಂದು ಹೇಳುವ ನೀವು ಇನ್ನೊಬ್ಬರ ವಸ್ತುವನ್ನು ಅಪಹರಿಸಿ, ಅಪಹರಿಸಿದ ವಸ್ತು ಸಮೇತವಾಗಿ ಸಿಕ್ಕಿದ ಕಳ್ಳನು, 'ನಾನು ಇತರರ ಸ್ವತ್ತನ್ನು ಅಪಹರಿಸಿಲ್ಲ, ಆ ವಸ್ತುವು ನನ್ನಲ್ಲಿಲ್ಲ.

ಇಲ್ಲಿ ಇದೆಯೆಂದು ನಿಮಗೆ ತೋರುತ್ತಿರುವುದು ಸುಳ್ಳು, ಭ್ರಾಂತಿ' ಎಂದು ಹೇಳುವ ಕಳ್ಳನಂತಿದ್ದೀರಿ ಮತ್ತು ಜೀವಬ್ರಹ್ಮರಿಗೆ ಭೇದವಿಲ್ಲ. ಎಲ್ಲಾ ಪ್ರಪಂಚವು ಅಸತ್ಯ ಎಂದು ಹೇಳುತ್ತ ಈ ಪ್ರಪಂಚದ ಕಳ್ಳತನ ಮಾಡುತ್ತಿರುವ ನೀವು ಆ ಕಳ್ಳತನವನ್ನು ನಿಲ್ಲಿಸಿರಿ. ನೀವು ಓಡಿಹೋಗಬೇಕಾದ ಕಾಲ ಬಂದಿದೆ. ಆದುದರಿಂದ ಬೇಗನೆ ಓಡಿರಿ. ನಿಮ್ಮನ್ನು ನೋಡುತ್ತಿರುವ, ನಿಮ್ಮ ಮಾತುಗಳನ್ನು ಕೇಳಿ ನಿಮ್ಮ ಅಭಿಪ್ರಾಯವನ್ನು ತಿಳಿದ ಪ್ರತಿಯೊಬ್ಬ ಮನುಷ್ಯನೂ ನಿಮ್ಮನ್ನು ಹೀಗೆ ಕೇಳುವನು 'ನೀವು ಹೇಳುವ ಮಾತು ಸತ್ಯವೋ, ಸುಳ್ಳೋ ? ಮಾತು ಸತ್ಯವಾದರೆ ಬ್ರಹ್ಮಾತಿರಿಕ್ತಪ್ರಪಂಚವೆಲ್ಲವೂ ಮಿಥ್ಯಾ ಎಂಬ ನಿಮ್ಮ ಸಿದ್ಧಾಂತಕ್ಕೆ ವಿರೋಧವು ಬರುತ್ತದೆ. ನಿಮ್ಮ ಮಾತು ಸುಳ್ಳಾದರೆ, ನೀವು ಹೇಳುತ್ತಿರುವ ಮಾತು ಪ್ರಮಾಣಪ್ರಮಿತವಾಗಿ ನಮ್ಮ ಮತ್ತು ನಿಮ್ಮ ಅಂತಃಕರಣಕ್ಕೆ ಸಾಕ್ಷಿಗೆ ವಿಷಯವಾಗಿರುವುದರಿಂದ ಅದನ್ನು ಸುಳ್ಳೆಂದು ಹೇಳುವುದು ಪ್ರಮಾಣ ವಿರುದ್ಧವಾಗುತ್ತದೆ. ಮತ್ತು ಸುಳ್ಳಾದ ಮಾತಿನಿಂದ ಏನನ್ನೂ ಸಾಧಿಸಲು ಬರುವುದಿಲ್ಲವಾದುದರಿಂದ ನಿಮ್ಮ ಮಾತು ವ್ಯರ್ಥವಾಗುತ್ತದೆ ಎಂದು ವಾದಿಸಿ ನಿಮ್ಮನ್ನು ನಿರುತ್ತರರನ್ನಾಗಿ ಮಾಡುವನು. ಆದುದರಿಂದ ಕಳ್ಳರು ಕದ್ದವಸ್ತು ಸಹಿತವಾಗಿ ಸಿಕ್ಕಿಬೀಳುವ ಸಂದರ್ಭ ಬಂದಾಗ ಕಳ್ಳತನ ಮುಚ್ಚಿಕೊಳ್ಳಲು ಹೇಗಾದರೂ ಅವಕಾಶವೇ ಇಲ್ಲದಿರುವಾಗ ಕಳ್ಳತನ ಮುಚ್ಚಿಕೊಳ್ಳಲು ಗುಹೆಯ ಒಳಭಾಗವನ್ನು ಹೊಕ್ಕು ಅಡಗಿಕೊಳ್ಳುವಂತೆ ನಿಮಗೂ ಗುಹಾಪ್ರವೇಶ ಮಾಡುವ ಕಾಲ ಬಂದಿದೆ. ಆದುದರಿಂದ ಈ ವಾದರಂಗಕ್ಕೆ ಪ್ರವೇಶ ಮಾಡುವುದನ್ನು ಬಿಟ್ಟು ಅಡಗಿಕೊಳ್ಳಿರಿ.

**ವಿಶೇಷಾಂಶ—** (ಭಾವಪ್ರಕಾಶಿಕಾ) ಪುನರಪಿ ಸಭ್ಯೈರಭಿಹಿತಾವಸರಾತ್ ಪೂರ್ವಂ ತೇಷು ತ್ರಸ್ತೇಷು ವಿದ್ರುತೇಷು ವಾದಾವಸಾನಪದ್ಯಾನಾಂ ಮಧ್ವಮಹಾಜಯಮಹಾಮಹಕುತೂಹಲಿಭಿಃ ಸದ್ಭಿರ್ನಿಗದಿತಾನಾಂ ಅಯಂ ಅಭಿಸಂಧಿಃ ಪ್ರಪಂಚ್ಯತೇ. ''ದ್ರವತ ದ್ರವತಾಶುಮಾಯಿನಃ ಪ್ರ (ನಿ) ವಿಶಧ್ವಮತಂದ್ರಿತಾ ಗುಹಾಃ । ಕಮಲಾರಮಣಾಂಬರಾಶ್ರಯಃ ಸಮುದೇತ್ಯಖಿಲಜ್ಞಭಾಸ್ಕರಃ''॥ ಇತಿ (ಅನೇನ = ಪದ್ಯೇನ) ತ್ವದುಕ್ತಂ ಸತ್ಯಂ ಮಿಥ್ಯಾವೇತ್ಯಾದ್ಯುಕ್ತ್ವಾ ದ್ರಷ್ಟಾ ದ್ರಷ್ಟಾವೋ ನಿಗ್ರಹೀತಾ ।

ಸಭ್ಯರು ವಾದಕ್ಕೆ ನಿಗದಿ ಪಡಿಸಿದ ಸಮಯಕ್ಕಿಂತ ಮೊದಲೇ ಆ ಮಾಯಾವಾದಿಗಳು ಹೆದರಿ ಓಡಿಹೋದಾಗ, ಶ್ರೀಮಧ್ವಾಚಾರ್ಯರ ಮಹಾಜಯದ ದೊಡ್ಡಮಹೋತ್ಸವ ಸಮಯದಲ್ಲಿ ಸಂತೋಷಪಟ್ಟು ಕುತೂಹಲದಿಂದ ಅಲ್ಲಿದ್ದ ಕೆಲವು ಮಂದಿ ಸಜ್ಜನರು ಕೆಲವು ಪದ್ಯಗಳನ್ನು ರಚಿಸಿ ಹೇಳಿದರು. ಆ ಪದ್ಯಗಳ ಅಭಿಪ್ರಾಯವು ಇಲ್ಲಿ ವಿಸ್ತರಿಸಲ್ಪಡುತ್ತದೆ. ಅವುಗಳಲ್ಲಿ ದ್ರವತ ದ್ರವತಾಶುಮಾಯಿನಃ ಎಂಬ ಪದ್ಯದ ಅಭಿಪ್ರಾಯವು ಆಸ್ತಾಮಾಸ್ತಾಂ ಎಂಬ ಪದ್ಯದಿಂದ ವಿಸ್ತರಿಸಲ್ಪಡುತ್ತದೆ.

ದ್ರಷ್ಟಾ ದ್ರಷ್ಟಾವೋ ನಿಗ್ರಹೀತಾ ಎಂದರೆ ನಿಮ್ಮನ್ನು ಭೇಟಿಯಾದ ಪಂಡಿತನು ಪ್ರತಿಯೊಬ್ಬನೂ ನೀನು ಹೇಳಿದ ಮಾತು ಸತ್ಯವೇ ಮಿಥ್ಯೆಯೇ ಇತ್ಯಾದಿ ವಿಕಲ್ಪವನ್ನು ಮಾಡಿ ನಿಮ್ಮನ್ನು ನಿಗ್ರಹಿಸುವನು ಎಂದು ಅರ್ಥ.

ವಿಗ್ರಹ—

**ವಿಶ್ವಮೋಷಃ—** ವಿಶ್ವಸ್ಯ ಮೋಷಃ ವಿಶ್ವಮೋಷಃ ।

**ಮಾಯಾವಾದಿಚೋರಾಃ—** ಮಾಯಾಕಲ್ಪಿತಂ ಜಗತ್ ಇತಿ ವಾದಿನಃ ಮಾಯಾವಾದಿನಃ । ಮಾಯಾವಾದಿನಃ ಏವ ಚೋರಾಃ ಮಾಯಾವಾದಿಚೋರಾಃ ।

**ಗುಹಾಂತಂ—** ಗುಹಾನಾಂ ಅಂತಃ ಗುಹಾಂತಃ, ತಂ ಗುಹಾಂತಂ ।

**ಕ್ರಿಯಾಪದ— ಆಸ್ತಾಂ-** ಆಸ ಉಪವೇಶನೇ ಆತ್ಮನೇ ಸೇಟ್ ಅಕರ್ಮಕ ಲೋಟ್ ಪ್ರಥಮಪುರುಷೇ ಏಕವಚನೇ 'ಆಸ್ತಾಂ' ಇತಿ ರೂಪಮ್ ।

ಆಸ್ತಾಂ ಆಸಾತಾಂ ಆಸತಾಂ, ಆಸ್ಸ್ವ ಆಸಾಥಾಂ ಆಧ್ವಮ್, ಆಸೈ ಆಸಾವಹೈ ಆಸಾಮಹೈ ॥

**ಕೋಶ**— ರೇ ರೇ ಎಂಬಲ್ಲಿ ರೇ ಎಂಬುದು ಹೀನ ಸಂಬೋಧನಾರ್ಥಕ ಶಬ್ದ, 'ಹೀನಸಂಬೋಧನೇ ತು ರೇ'- ಅಮರ. ಸಂಭ್ರಮದಲ್ಲಿ ದ್ವಿರುಕ್ತಿ. ಧ್ರುವಂ ನಿಶ್ಚಯ - 'ಧ್ರುವಂ ತು ನಿಶ್ಚಯೇ ತರ್ಕೇ'-ವಿಶ್ವಕೋಶ. ಈ ಶ್ಲೋಕಗಳಿಗೆಲ್ಲಾ ಈ ಸರ್ಗದ ಕೊನೆಯಲ್ಲಿರುವ 'ಇತಿ ನಿಗದತಿ ಮಾಯಾವಾದಿವಿದ್ವೇಷವೇನೇ' ಎಂಬ 54ನೆಯ ಶ್ಲೋಕದೊಡನೆ ಅನ್ವಯವನ್ನಿಟ್ಟುಕೊಳ್ಳಬೇಕು.

**ಪ್ರಯೋಗ**— ಏತೇನ ಭವತಾಂ ವಿಶ್ವಮೋಷೇಣ ಅಸ್ಯತಾಂ (ಭಾವೇ) ರೇ ರೇ ಮಾಯಾವಾದಿ ಚೋರಾಃ ಯುಷ್ಮಾಭಿಃ ದ್ರೂಯೇತ (ಭಾವೇ) ದ್ರಷ್ಟ್ರಾ ಯೂಯಂ ಧ್ರುವಂ ನಿಗ್ರಹೀತಾದ್ವೇ (ಕರ್ಮಣಿ) ದ್ರಾಕ್ ಗುಹಾಂತಂ ಪ್ರವೇಷ್ಟುಂ ಕಾಲೇನ (ಭೂಯತೇ) (ಭಾವೇ) ।

★ ★ ★

**ಅವತಾರಿಕಾ**— ಇದೇ ನಿಮಗೆಲ್ಲಾ ಗುಹೆಯನ್ನು ಪ್ರವೇಶಿಸಲು ತಕ್ಕ ಸಮಯ ಎಂದು ಹೇಳುತ್ತಾರೆ.

**ತೇಜೋ ವಿದ್ವಚ್ಚಕ್ರಚಂದ್ರಸ್ಯ ಲೀನಂ**
**ವಿಧ್ವಸ್ತಾಽಲಂ ವಾದಿನಕ್ಷತ್ರಲಕ್ಷ್ಮೀಃ ।**
**ವಿಶ್ವವ್ಯಾಪ್ತಂ ಯತ್ತು ತದ್ದೀಪ್ತಿಮೂಲಂ**
**ಯುಷ್ಮತ್ಪ್ರೇಷ್ಠಂ ತನ್ನಿರಸ್ತಂ ತಮಶ್ಚ ॥ 48 ॥**

**ಪದಚ್ಛೇದ**— ತೇಜಃ, ವಿದ್ವಚ್ಚಕ್ರಚಂದ್ರಸ್ಯ, ಲೀನಂ, ವಿಧ್ವಸ್ತಾ, ಅಲಂ, ವಾದಿನಕ್ಷತ್ರಲಕ್ಷ್ಮೀಃ, ವಿಶ್ವವ್ಯಾಪ್ತಂ ಯತ್, ತು, ದೀಪ್ತಿಮೂಲಂ, ಯುಷ್ಮತ್ ಪ್ರೇಷ್ಠಂ, ತತ್, ನಿರಸ್ತಂ, ತಮಃ, ಚ ।

**ಅನ್ವಯ**— ವಿದ್ವಚ್ಚಕ್ರಚಂದ್ರಸ್ಯ ತೇಜಃ ಲೀನಂ, ವಾದಿನಕ್ಷತ್ರಲಕ್ಷ್ಮೀಃ ಅಲಂ ವಿಧ್ವಸ್ತಾ, ವಿಶ್ವವ್ಯಾಪ್ತಂ ತದ್ದೀಪ್ತಿಮೂಲಂ, ಯುಷ್ಮತ್ ಪ್ರೇಷ್ಠಂ ಯತ್ ತು ತಮಃ ತತ್ ಚ ನಿರಸ್ತಂ ।

**ಅನ್ವಯಾರ್ಥ**—

**ವಿದ್ವತ್ಚಕ್ರಚಂದ್ರಸ್ಯ** = ವಿದ್ವಾಂಸರ ಸಮೂಹವೆಂಬ ಚಂದ್ರನ
**ತೇಜ** = ಬೆಳಕು (ಸಕ್ತಿಯು)
**ಲೀನಂ** = ಅಡಗಿತು.
**ವಾದಿ** = ಕುವಾದಿಗಳೆಂಬ
**ನಕ್ಷತ್ರ ಲಕ್ಷ್ಮೀಃ** = ತಾರೆಗಳ ಜಯ, ಸಂಪತ್ತು, ಶೋಭೆಯು
**ಅಲಂ** = ಚೆನ್ನಾಗಿ
**ವಿಧ್ವಸ್ತಾ** = ಹಾಳಾಯಿತು
**ವಿಶ್ವವ್ಯಾಪ್ತಂ** = ಪ್ರಪಂಚದಲ್ಲಿ ವ್ಯಾಪಿಸಿರುವ
**ತತ್** = ಆ ವಿದ್ವತ್ ಸಮೂಹವೆಂಬ ಚಂದ್ರನ ಮತ್ತು ವಾದಿನಕ್ಷತ್ರಗಳ
**ದೀಪ್ತಿಮೂಲಂ** = ಕಾಂತಿಗಳಿಗೆ ಕಾರಣರಾದ
**ಯುಷ್ಮತ್** = ನಿಮಗೆ
**ಪ್ರೇಷ್ಠಂ** = ಅತಿಪ್ರಿಯವಾದ
**ಯತ್** = ಯಾವ

ತಮಃ ತು = ಕತ್ತಲೆಯಿದೆಯೋ, ಅಜ್ಞಾನವಿದೆಯೋ

ತತ್ = ಅದೂ

ನಿರಸ್ತಂ = ನಿರಾಕರಿಸಲ್ಪಟ್ಟಿದೆ.

ತಾತ್ಪರ್ಯ— ಎಲೈ ಮಾಯಾವಾದಿಗಳೆಂಬ ಕಳ್ಳರೇ, ನಿಮ್ಮವರಾದ ದುಷ್ಟವಿದ್ವಾಂಸರ ಸಾಮರ್ಥ್ಯವು (ಶ್ರೀಮಧ್ವಸೂರ್ಯನ ಉದಯದಿಂದಾಗಿ) ಚಂದ್ರನ ಬೆಳಕು ಅಡಗಿದಂತೆ ಅಡಗಿಹೋಗಿದೆ. ವಾದಿಗಳಿಗೆ ಇದುವರೆಗೆ ಲಭ್ಯವಾದ ಜಯಸಂಪತ್ತು ಸೂರ್ಯೋದಯವಾದ ಮೇಲೆ ನಕ್ಷತ್ರಗಳ ಕಾಂತಿಯು ಮಂಕಾಗುವಂತೆ ಮಂಕಾಗಿದೆ, ಹಾಳಾಗಿದೆ. ಇದುವರೆಗೂ ಅಜ್ಞಾನವೆಂಬ ಕತ್ತಲೆಯ ಪ್ರಭಾವದಿಂದ ದುಷ್ಟವಿದ್ವಾಂಸರು ಮತ್ತು ಕುವಾದಿಗಳು ಲೋಕದಲ್ಲೆಲ್ಲಾ ವ್ಯಾಪಿಸಿಕೊಂಡಿದ್ದರು.

ನಿಮ್ಮೆಲ್ಲರ ಸಾಮರ್ಥ್ಯಕ್ಕೆ ಕಾರಣವಾದ ಆ ಅವಿದ್ಯಾ ಎಂಬ ಅಜ್ಞಾನವು ಬಹಳ ಪ್ರಿಯವಾಗಿತ್ತು. ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಭೇದಾದಿಪ್ರಪಂಚಚೋರರಾದ ನಿಮಗೆ ಅದು ಅತಿಪ್ರಿಯವಾಗಿತ್ತು. ಎಲೈ ಮಾಯಾವಾದಿಗಳೆಂಬ ಕಳ್ಳರೇ ! ವಿಶ್ವವ್ಯಾಪಕವಾದ ಆ ಅಜ್ಞಾನವೆಂಬ ತಮಸ್ಸು ಸೂರ್ಯೋದಯದಿಂದಾಗಿ ಪೂರ್ತಿ ನಾಶವಾಯಿತು. ಆದ್ದರಿಂದ ಇಲ್ಲಿ ನಿಲ್ಲದೆ ಓಡಿರಿ. (ಮಾಯಾಶಕ್ತ್ಯಾಸರ್ವನಿರ್ವಾಹಸಿದ್ಧಿಃ ಎಂದು ಹೇಳಿದ ರೀತಿಯಿಂದ ಆ ಅವಿದ್ಯೆಯು ಮಾಯಾವಾದಿಗಳ ಸಿದ್ಧಾಂತದ ಎಲ್ಲಾ ವಿಷಯವನ್ನೂ ನಿರ್ವಹಿಸುತ್ತದೆ. ಚಂದ್ರನ ಪ್ರಕಾಶಕ್ಕೂ, ನಕ್ಷತ್ರಗಳ ತೇಜಸ್ಸಿಗೂ ಕತ್ತಲೆಯೇ ಆಶ್ರಯವು. ಕತ್ತಲೆಯು ಕಳ್ಳರಿಗೆ ಅತಿ ಪ್ರಿಯ. ಕತ್ತಲೆಯಲ್ಲಿಯೇ ಕಳ್ಳರು ಸಂಚರಿಸುತ್ತಾರೆ. ಕತ್ತಲೆಯು (ಅಜ್ಞಾನವು) ನಾಶವಾದ ಮೇಲೆ ಕಳ್ಳರ ಸಂಚಾರಕ್ಕೆ ಅವಕಾಶವಿಲ್ಲ. ಹೀಗೆ ಯಾವನಾದರೊಬ್ಬನು ಕಳ್ಳರನ್ನು ಕುರಿತು ಹೇಳುವಂತೆ ಎಲೈ ಮಾಯಾವಾದಿ ಚೋರರೇ ನೀವು ಓಡಿರಿ ಎಂದು ಆಚಾರ್ಯರ ಭಕ್ತರು ಮತ್ತು ಶಿಷ್ಯರು ಮಾಯಾವಾದಿಗಳನ್ನು ಕುರಿತು ಹೇಳಿದರು ಎಂದು ಭಾವ.)

ಛಲಾರೀಯ— ಯಥಾ ಚಂದ್ರದೀಪ್ತೇಃ ನಕ್ಷತ್ರದೀಪ್ತೇಶ್ಚ ಕಾರಣಂ ಧ್ವಾಂತಂ ಚೋರಾಣಾಂ ಅತಿಪ್ರಿಯಂ, ತಮಸಿ ಹಿ ಚೋರಾಃ ಚೋರಯಂತಿ, ತಾದೃಶೇ ಧ್ವಾಂತೇ ನಷ್ಟೇ ಸತಿ ಯಥಾ ಕಶ್ಚಿತ್ ಪುರುಷಃ ಚೋರಾನ್ ಪ್ರತಿವದೇತ್ ಹೇ ಚೋರಾಃ ಅಂಧಕಾರೋ ನಷ್ಟಃ. ಜನಾಃ ಯುಷ್ಮಾನ್ ಪಶ್ಯೇಯುಃ, ಹನ್ಯುಸ್ತ ತತಃ ಆಶು ದ್ರವತ ಇತಿ, ತದ್ವತ್ ಹೇ ಮಾಯಾವಾದಿನಃ ಭವದೀಯವಿದುಷಾಂ ವಿದ್ಯಾಮದಃ ನಾಶಿತಃ, ವಾದಿನಾಂ ಜಯಶೋಭಾ ಚ ನಷ್ಟಾ ಯತ್ ಅಜ್ಞಾನಂ ಅವಲಂಬ್ಯ ಇಯಂತಂ ಕಾಲಂ ವಿದುಷಾಂ ಪ್ರವೃತ್ತಿಃ, ಅಜ್ಞಾನಸ್ಯ ಸರ್ವನಿರ್ವಾಹಹೇತುತ್ವಾಂಗೀಕಾರಾತ್, ಭವತಾಂ ಅತಿಪ್ರಿಯಂ ತಚ್ಚ ಅಜ್ಞಾನಂ ನಾಶಿತಂ । ಅತಃ ನಿರಾಶ್ರಯತ್ವಾತ್ ಗುಹಾಂ ಪ್ರವೇಷ್ಟುಂ ಪಲಾಯಧ್ವಂ ಇತಿ ಸಜ್ಜನಾಃ ಅಬ್ರುವನ್ - ಇತಿ ಭಾವಃ ।

ಚಂದ್ರ ಪ್ರಕಾಶಕ್ಕೂ ನಕ್ಷತ್ರಗಳ ಪ್ರಕಾಶಕ್ಕೂ ಕಾರಣವಾದ ಕತ್ತಲೆಯು ಕಳ್ಳರಿಗೆ ಅತಿಪ್ರಿಯವಾಗಿದೆ, ಕತ್ತಲೆಯಲ್ಲಿಯೇ ಕಳ್ಳರು ಕಳ್ಳತನ ಮಾಡುತ್ತಾರಷ್ಟೆ. ಅಂತಹ ಕತ್ತಲೆಯು ನಾಶವಾದಾಗ ಯಾವನಾದರೊಬ್ಬ ಮನುಷ್ಯನು ಕಳ್ಳರನ್ನು ಕುರಿತು ಹೀಗೆ ಹೇಳಬಹುದು. ಎಲೈ ಕಳ್ಳರೇ ! ಕತ್ತಲೆಯು ನಾಶವಾಯಿತು. ಜನರು ನಿಮ್ಮನ್ನು ನೋಡಿಯಾರು. ಮತ್ತು ಕೊಂದೂಬಿಟ್ಟಾರು. ಆದ್ದರಿಂದ ಬೇಗನೇ ಓಡಿರಿ'' ಎಂದು, ಅದರಂತೆ 'ಎಲೈ ಮಾಯಾವಾದಿಗಳೇ ! ನಿಮ್ಮ ವಿದ್ವಾಂಸರ ವಿದ್ಯಾಮದವು ನಾಶವಾಯಿತು. ಕುವಾದಿಗಳ ಜಯದ ಕಾಂತಿಯು ಹಾಳಾಯಿತು. ಯಾವ ಅಜ್ಞಾನವನ್ನು ಅವಲಂಬಿಸಿ ಇದುವರೆಗೂ ನಿಮ್ಮ ವಿದ್ವಾಂಸರು ಪ್ರವರ್ತಿಸುತ್ತಿದ್ದಾರೋ, ಸಿದ್ಧಾಂತ ಸ್ಥಾಪನೆ ಮಾಡುತ್ತಿದ್ದರೋ, ಯಾವ ಅಜ್ಞಾನವು ನಿಮ್ಮ ಸಿದ್ಧಾಂತದ ಎಲ್ಲಾ ವಿಷಯದ ನಿರ್ವಾಹಕ್ಕೂ ಕಾರಣವಾಗಿತ್ತೋ, ನಿಮಗೆ ಆಶ್ರಯವಾಗಿದ್ದ ಅತಿಪ್ರಿಯವಾದ ಅಜ್ಞಾನವೂ ನಾಶವಾಯಿತು. ಆದುದರಿಂದ ನಿರಾಶ್ರಯರಾದ ನೀವು ಗುಹಾಪ್ರವೇಶ ಮಾಡಲು ಓಡಿರಿ' ಎಂದು ಸಜ್ಜನರು ಹೇಳಿದರು ಎಂದು ಭಾವ.

ವಿಗ್ರಹ—

ವಿದ್ವಚ್ಚಕ್ರಚಂದ್ರಸ್ಯ— ವಿದುಷಾಂ ಚಕ್ರಂ ವಿದ್ವಚ್ಚಕ್ರಂ, ವಿದ್ವಚ್ಚಕ್ರಮೇವ ಚಂದ್ರಃ ವಿದ್ವಚ್ಚಕ್ರಚಂದ್ರಃ, ತಸ್ಯ ವಿದ್ವಚ್ಚಕ್ರಚಂದ್ರಸ್ಯ । ವಿದುಷಾಂ ಚಕ್ರಃ ಎಂದು ಪುಲ್ಲಿಂಗ ಚಕ್ರಶಬ್ದದ ಜೊತೆಗೂ ವಿಗ್ರಹ ಮಾಡ ಬಹುದು. 'ಚಕ್ರೋ ಗಣೇ ಚಕ್ರವಾಕೇ' ವಿಶ್ವ, ಇಲ್ಲಿ ಪುಲ್ಲಿಂಗ ಚಕ್ರಶಬ್ದ, ಚಕ್ರಃ ಕೋಕೇ ಪ್ರಮಾನ್ ಕ್ಲೀಬೇವ್ರಜೇ ಸೈನ್ಯರಥಾಂಗಯೋಃ । ರಾಷ್ಟ್ರೇ ದಂಭಾಂತರೇ ಕುಂಭಕಾರೋಪಕರಣಾಸ್ತ್ರಯೋಃ' ಮೇದಿನೀ ।

ವಾದಿನಕ್ಷತ್ರಲಕ್ಷ್ಮೀಃ— ವಾದಿನಃ ಏವ ನಕ್ಷತ್ರಾಣಿ ವಾದಿನಕ್ಷತ್ರಾಣಿ, ತೇಷಾಂ ಲಕ್ಷ್ಮೀಃ ವಾದಿನಕ್ಷತ್ರಲಕ್ಷ್ಮೀಃ ।

ವಿಶ್ವವ್ಯಾಪ್ತಂ— ವಿಶ್ವೇ ವ್ಯಾಪ್ತಂ ವಿಶ್ವವ್ಯಾಪ್ತಂ, ವಿಶ್ವಸ್ಮಿನ್ (ಲೋಕೇ) ವ್ಯಾಪ್ತಂ ವಿಶ್ವವ್ಯಾಪ್ತಂ ಇತಿ ವಾ ।

ತದ್ದೀಪ್ತಿಮೂಲಂ— ತಸ್ಯ ದೀಪ್ತೀ ತದ್ದೀಪ್ತೀ, ತದ್ದೀಪ್ತ್ಯೋಃ ಮೂಲಂ ತದ್ದೀಪ್ತಿಮೂಲಂ ।

ಯುಷ್ಮತ್ಪ್ರೇಷ್ಠಂ— ಅತಿಶಯೇನ ಪ್ರಿಯಂ ಪ್ರೇಷ್ಠಂ, ಯುಷ್ಮಾಕಂ ಪ್ರೇಷ್ಠಂ ಯುಷ್ಮತ್ಪ್ರೇಷ್ಠಂ ।

★ ★ ★

ಅವತಾರಿಕಾ— ವಿದ್ವಾಂಸರ ಸಮೂಹವೆಂಬ ಚಂದ್ರನ, ಮತ್ತು ವಾದಿಗಳೆಂಬ ನಕ್ಷತ್ರಗಳ ತೇಜೋಭಂಗವು ಹೇಗೆ ಉಂಟಾಯಿತು ? ತಮಸ್ಸು ಹೇಗೆ ನಶಿಸಿತು ? ಎಂದರೆ ಹೇಳುತ್ತಾರೆ.

**ಪೂರ್ವಾಶಾಮಾಪೂರ್ಯ ವಿಶ್ವಪ್ರಕಾಶೀ**
**ಗೋಸಂದೋಹೈಃ ಸಪ್ತವಿದ್ಯಾಖ್ಯವಾಹಃ ।**
**ಯುಷ್ಮಾಭಿಃ ಕಿಂ ನೈಕ್ಷಿ ದೇದೀಪ್ಯತೇಽಸೌ**
**ದೇವಃ ಸಾಕ್ಷಾತ್ ಸರ್ವವಿತ್ ಸರ್ವದೀಪಃ ॥ 49 ॥**

ಪದಚ್ಛೇದ— ಪೂರ್ವಾಶಾಂ ಆಪೂರ್ಯ ವಿಶ್ವಪ್ರಕಾಶೀ, ಗೋಸಂದೋಹೈಃ, ಸಪ್ತವಿದ್ಯಾಖ್ಯವಾಹಃ, ಯುಷ್ಮಾಭಿಃ, ಕಿಂ, ನ, ಐಕ್ಷಿ, ದೇದೀಪ್ಯತೇ, ಅಸೌ, ದೇವಃ, ಸಾಕ್ಷಾತ್, ಸರ್ವವಿತ್, ಸರ್ವದೀಪಃ ।

ಅನ್ವಯ— ಸಪ್ತವಿದ್ಯಾಖ್ಯವಾಹಃ ವಿಶ್ವಪ್ರಕಾಶೀ ದೇವಃ ಸರ್ವವಿತ್ಸರ್ವದೀಪಃ ಗೋಸಂದೋಹೈಃ ಪೂರ್ವಾಶಾಂ ಆಪೂರ್ಯ ಸಾಕ್ಷಾತ್ ದೇದೀಪ್ಯತೇ, ಯುಷ್ಮಾಭಿಃ ಅಸೌ ನ ಐಕ್ಷಿ, ದೇದೀಪ್ಯತೇ, ಅಸೌ, ದೇವಃ, ಸಾಕ್ಷಾತ್, ಸರ್ವವಿತ್, ಸರ್ವದೀಪಃ ।

ಅನ್ವಯಾರ್ಥ—

**ಸಪ್ತ ವಿದ್ಯಾಖ್ಯ ವಾಹಃ** = ಏಳು ವಿದ್ಯೆಗಳೆಂಬ ಕುದುರೆಗಳುಳ್ಳ

**ವಿಶ್ವಪ್ರಕಾಶೀ** = ಪ್ರಪಂಚವನ್ನು ಪ್ರಕಾಶಗೊಳಿಸುವ ಅಥವಾ ಬ್ರಹ್ಮಸ್ವರೂಪವನ್ನು ಉಪದೇಶದಿಂದ ಪ್ರಕಾಶಗೊಳಿಸುವ,

**ದೇವಃ** = ಕ್ರೀಡಾದಿಗುಣಗಳುಳ್ಳ

**ಸರ್ವವಿತ್** = ಎಲ್ಲವನ್ನೂ ತಿಳಿದಿರುವ ಶ್ರೀಪೂರ್ಣಪ್ರಜ್ಞರೆಂಬ

**ಸರ್ವದೀಪಃ** = ಎಲ್ಲ ವಸ್ತುಗಳನ್ನೂ ಪ್ರಕಾಶಗೊಳಿಸುವ ದೀಪದಂತಿರುವ ಸೂರ್ಯನು

**ಗೋಸಂದೋಹೈಃ** = ಮಾತುಗಳ ಸಮೂಹಗಳಿಂದ, ಕಿರಣಗಳ ಸಮೂಹಗಳಿಂದ

**ಪೂರ್ವಾಶಾಂ** = ಪೂರ್ವ ದಿಕ್ಕನ್ನು, ಹಿಂದಿನವರಾದ ಬ್ರಹ್ಮಾದಿಗಳ ಅಭಿಲಾಷೆಯನ್ನು (ಅಭಿಪ್ರಾಯವನ್ನು)

ಆಪೂರ್ಯ = ತುಂಬಿ, ಪೂರ್ಣಗೊಳಿಸಿ

ಸಾಕ್ಷಾತ್ = ಪ್ರತ್ಯಕ್ಷವಾಗಿ

ದೇದೀಪ್ಯತೇ = ಅತಿಶಯವಾಗಿ ಪ್ರಕಾಶಿಸುತ್ತಿದ್ದಾನೆ.

ಯುಷ್ಮಾಭಿಃ = ನಿಮ್ಮಿಂದ

ಅಸೌ = ಈ ಮಧ್ವನೆಂಬ ಸೂರ್ಯನು

ನೈಕ್ಷಿ ಕಿಂ = ನೋಡಲ್ಪಡಲಿಲ್ಲವೇನು ?

ತಾತ್ಪರ್ಯ— ಸಕಲ ಪ್ರಪಂಚಕ್ಕೆ ದೀಪದಂತಿರುವ ಸೂರ್ಯನು ಏಳು ಕುದುರೆಗಳನ್ನು ಕಟ್ಟಿದ ರಥವುಳ್ಳವನಾಗಿ ತನ್ನ ಕಿರಣಗಳಿಂದ ಪೂರ್ವ ದಿಕ್ಕನ್ನು ತುಂಬಿ ಪ್ರಕಾಶಿಸುತ್ತಾ ಪ್ರತ್ಯೇಕವಾಗಿ ಉದಯಿಸುತ್ತಾನೆ. ಹಾಗೆಯೇ ಶ್ರೀಮಧ್ವಾಚಾರ್ಯರು ಋಕ್, ಯಜುಸ್, ಸಾಮ ಮತ್ತು ಅಥರ್ವ ಎಂಬ ನಾಲ್ಕು ವೇದಗಳು, ಮೂಲ ರಾಮಾಯಣ, ಭಾರತ, ಪಂಚರಾತ್ರ ಎಂಬ ಮೂರು ಶಾಸ್ತ್ರಗಳು, ಒಟ್ಟು ಏಳು ವಿದ್ಯೆಗಳಲ್ಲಿ ಹೇಳಿದಂತೆ ಸಾತ್ವಿಕರಾದ ಜನರಿಗೆ ಬ್ರಹ್ಮಸ್ವರೂಪವನ್ನು ಬೋಧಿಸುತ್ತಿದ್ದಾರೆ. ತಮ್ಮ ವಾಕ್ ಚಾತುರ್ಯದಿಂದ ತಮ್ಮ ಹಿಂದಿನ ಬ್ರಹ್ಮಾದಿಗಳ ಅಭಿಲಾಷೆಗಳನ್ನು ಅಭಿಪ್ರಾಯವನ್ನೂ ಪೂರ್ತಿಗೊಳಿಸಿ ಪ್ರತ್ಯಕ್ಷವಾಗಿ ವಿರಾಜಿಸುತ್ತಿದ್ದಾರೆ. ಮಾಯಾವಾದಿಗಳೆಂಬ ಕಳ್ಳರೇ ! ನೀವು ಈ ಸರ್ವಜ್ಞಮಧ್ವರೆಂಬ ಸೂರ್ಯರನ್ನು ಇನ್ನೂ ನೋಡಲಿಲ್ಲವೇ ! ಬೇಗನೆ ಓಡಿರಿ.

ವಿಶೇಷಾಂಶ— ಭಾವಪ್ರಕಾಶಿಕಾ- ಪೂರ್ವೇಷಾಂ ಬ್ರಹ್ಮಾದೀನಾಂ ಆಶಾಂ ಚ = ಪೂರ್ವಾಶಾಂ ಎಂಬಲ್ಲಿ ತಮಗಿಂತ ಹಿರಿಯರಾದ ಬ್ರಹ್ಮಾದಿಗಳ ಆಶೆಯನ್ನು ಎಂದು ಅರ್ಥ.

ವಿಗ್ರಹ—

ಸರ್ವವಿತ್ಸರ್ವದೀಪಃ— ಸರ್ವಂ ವೇತ್ತಿ ಇತಿ ಸರ್ವವಿತ್, ಸರ್ವಂ ದೀಪಯತಿ ಇತಿ ಸರ್ವದೀಪಃ, ಸರ್ವವಿತ್ ಏವ ಸರ್ವದೀಪಃ ಸರ್ವವಿತ್ಸರ್ವದೀಪಃ ।

ಗೋಸಂದೋಹೈಃ— ಗವಾಂ ಸಂದೋಹಾಃ ಗೋಸಂದೋಹಾಃ, ತೈಃ ಗೋಸಂದೋಹೈಃ ।

ಪೂರ್ವಾಶಾಂ— ಪೂರ್ವಾ ಚ ಸಾ ಆಶಾ ಚ ಪೂರ್ವಾಶಾ, ತಾಂ ಪೂರ್ವಾಶಾಂ । ಪೂರ್ವೇಷಾಂ ಆಶಾ ಪೂರ್ವಾಶಾ, ತಾಂ ಪೂರ್ವಾಶಾಂ ।

ಸಪ್ತವಿದ್ಯಾಖ್ಯವಾಹಃ— ಸಪ್ತ ಚ ತಾಃ ವಿದ್ಯಾಶ್ಚ ಸಪ್ತವಿದ್ಯಾಃ, ಸಪ್ತವಿದ್ಯಾಃ ಇತಿ ಆಖ್ಯಾ ಯೇಷಾಂ ತೇ ಸಪ್ತವಿದ್ಯಾಖ್ಯಾಃ, ಸಪ್ತವಿದ್ಯಾಖ್ಯಾ ಏವ ವಾಹಾಃ ಯಸ್ಯ ಸಃ ಸಪ್ತವಿದ್ಯಾಖ್ಯವಾಹಃ ।

ವಿಶ್ವಪ್ರಕಾಶೀ— ವಿಶ್ವಸ್ಮಿನ್ ಪ್ರಕಾಶತೇ ಇತಿ ವಿಶ್ವಪ್ರಕಾಶೀ, ಪ್ರಕಾಶಯತಿ ಇತಿ ಪ್ರಕಾಶೀ, ವಿಶ್ವಸ್ಯ ಪ್ರಕಾಶೀ ವಿಶ್ವಪ್ರಕಾಶೀ ।

ಕ್ರಿಯಾಪದ— ದೇದೀಪ್ಯತೇ- ದೀಪೀ ದೀಪ್ತೌ ಅಕರ್ಮಕ, ಭೃಶಾರ್ಥದಲ್ಲಿ ಯಙ್ ಆತ್ಮನೇಪದಿ ಲಟ್ ಪ್ರಥಮಪುರುಷೇ ಏಕವಚನೇ 'ದೇದೀಪ್ಯತೇ' ಇತಿ ರೂಪಮ್ ।

ದೇದೀಪ್ಯತೇ ದೇದೀಪ್ಯೇತೇ ದೇದೀಪ್ಯಂತೇ, ದೇದೀಪ್ಯಸೇ ದೇದೀಪ್ಯೇಥೇ ದೇದೀಪ್ಯಧ್ವೇ, ದೇದೀಪ್ಯೇ ದೇದೀಪ್ಯಾವಹೇ ದೇದೀಪ್ಯಾಮಹೇ ॥

ಕೋಶ— ಸಾಕ್ಷಾತ್ = ಪ್ರತ್ಯಕ್ಷವಾಗಿ, 'ಸಾಕ್ಷಾತ್ ಪ್ರತ್ಯಕ್ಷತುಲ್ಯಯೋಃ' -ಅಮರ. ಗೋಸಂದೋಹೈಃ ಎಂಬಲ್ಲಿ ಸಂದೋಹ = ಸಮೂಹ, 'ಸಂದೋಹವಿಸರವ್ರಜಾಃ' -ಅಮರ, ಪೂರ್ವಾಶಾಂ ಎಂಬಲ್ಲಿ ಆಶಾ = ದಿಕ್ಕು, ಆಸೆ, 'ಆಶಾದಿಗಭಿಲಾಷಯೋಃ' -ಅಮರ, ಸಪ್ತವಿದ್ಯಾಖ್ಯವಾಹಃ, ಎಂಬಲ್ಲಿ ವಾಹ = ಕುದುರೆ, 'ವಾಜಿವಾಹಾರ್ವಗಂಧರ್ವ-

ಹಯಸಂಧ್ಯೆವ ಸಪ್ತಯಃ' -ಅಮರ, ಗೋಸಂದೋಹೈಃ ಎಂಬಲ್ಲಿ ಗೋ = ಮಾತು, ಕಿರಣ, 'ಸ್ವರ್ಗ ಇಷು ಪಶು ವಾಕ್ ವಜ್ರ ದೀಜ್ ನೇತ್ರ ಘೃಣಿ ಭೂ ಜಲೇ ಲಕ್ಷ್ಯದೃಷ್ಟ್ಯಾ ಸ್ತ್ರಿಯಾಂ ಪುಂಸಿ ಗೌಃ' -ಅಮರ, 'ಗೌಸ್ಸ್ವರ್ಗೇ ವೃಷಭೇ ರಶ್ಮೌ' -ವಿಶ್ವ.

**ಪ್ರಯೋಗ—** ಸಪ್ತವಿದ್ಯಾಖ್ಯವಾಹೇನ ವಿಶ್ವಪ್ರಕಾಶಿನಾ ದೇವೇನ ಸರ್ವವಿತ್ಸರ್ವದೀಪೇನ ಗೋಸಂದೋಹೈಃ ಪೂರ್ವಾಶಾಂ ಆಪೂರ್ಯ ಸಾಕ್ಷಾತ್ ದೇದೀಪ್ಯತೇ (ಭಾವೇ) ಯೂಯಂ ಅಮುಂ ನ ಪಶ್ಯತ ಕಿಂ ? (ಕರ್ತರಿ).

ಛಲಾರೀಯದಲ್ಲಿ ಹೇಳಿರುವ ಸಂಸ್ಕೃತ ಭಾಷಾತಾತ್ಪರ್ಯ ಸಂಗ್ರಹ- ಯದಾ ಸಪ್ತಾಶ್ವಃ ಸರ್ವತ್ರ ಪ್ರಕಾಶಮಾನಃ ದೇವಃ ಸೂರ್ಯಃ ಪ್ರಾಚೀಂ ದಿಶಂ ಕಿರಣಸಮೂಹೈಃ ಅಪೂರ್ಯ ದೇದೀಪ್ಯತೇ ತದಾ ಹೇ ಬಾಲಿಶಾಃ ಚೋರಾಃ ! ಯೂಯಂ ಶೀಘ್ರಂ ಪಲಾಯಧ್ವಂ ಇತಿ ಯಥಾ ಕಶ್ಚಿತ್ ಚೋರಾನ್ ಪ್ರತಿವದೇತ್ ತಥಾ ಸಜ್ಜನಃ ಕಶ್ಚಿತ್ ಶ್ರೀಮಧ್ವಭಕ್ತಃ 'ಅಯಂ ದೇವಃ ಮಧ್ವಸೂರ್ಯಃ ಪೂರ್ವೇಷಾಂ ಬ್ರಹ್ಮಾದೀನಾಂ ಅಭಿಲಾಷಂ ಸಂಪೂರ್ಯ ಪರಾಪರತತ್ತ್ವಪ್ರಕಾಶಕಃ ಸನ್ ಋಗಾದಿ ಸಪ್ತವಿದ್ಯಾಭಿಃ ಸ್ವಕೀಯವಾಕ್ ಸಮೂಹೈಃ ಸಜ್ಜನಾನ್ ಅನುಗೃಹ್ಣನ್ ವಿರಾಜತೇ, ಯೂಯಂ ಅಮುಂ ನೈಕ್ಷಧ್ವಂ ಕಿಂ ? ಶೀಘ್ರಂ ಪಶ್ಯತ, ಪಲಾಯಧ್ವಂ ಚ ಇತಿ, ಇತ್ಯವದತ್ ಇತಿ ।

★ ★ ★

**ಅವತಾರಿಕಾ—** ಇಂತಹ ಶ್ರೀಮಧ್ವಸೂರ್ಯನನ್ನು ಮುಚ್ಚಿಬಿಡಲು ಮರೆಮಾಡಲು ಯಾರಿಗೂ ಸಾಧ್ಯವಿಲ್ಲ ಎಂದು ಹೇಳುತ್ತಾರೆ.

**ಸರ್ವಾಧಾರಂ ಬ್ರಹ್ಮಸಂಜ್ಞಂ ವಿಹಾಯೋ**
**ರಮ್ಯಾಕಾರಂ ಶಾರದೇಂದೀವರಾಭಮ್ ।**
**ಸನ್ನಿರ್ಣೀತಂ ಗುಣ್ಯಲಂ ಶಬ್ದಭೇದೈಃ**
**ಮಧ್ವಾದಿತ್ಯಂ ಸಂಶ್ರಿತಂ ಕೋಽಪಿಧತ್ತೇ ॥ 50 ॥**

**ಪದಚ್ಛೇದ—** ಸರ್ವಾಧಾರಂ, ಬ್ರಹ್ಮಸಂಜ್ಞಂ, ವಿಹಾಯಃ, ರಮ್ಯಾಕಾರಂ, ಶಾರದೇಂದೀವರಾಭಂ, ಸತ್, ನಿರ್ಣೀತಂ, ಗುಣಿ, ಅಲಂ, ಶಬ್ದಭೇದೈಃ ಮಧ್ವಾದಿತ್ಯಂ, ಸಂಶ್ರಿತಂ, ಕಃ, ಅಪಿಧತ್ತೇ ।

**ಅನ್ವಯ—** ಸರ್ವಾಧಾರಂ, ಶಾರದೇಂದೀವರಾಭಂ ರಮ್ಯಾಕಾರಂ, ಅಲಂ ಗುಣಿ, ನಿರ್ಣೀತಂ ಸತ್ ಬ್ರಹ್ಮಸಂಜ್ಞಂ ವಿಹಾಯ ಸಂಶ್ರಿತಂ ಮಧ್ವಾದಿತ್ಯಂ ಕಃ ಅಪಿಧತ್ತೇ ?

**ಅನ್ವಯಾರ್ಥ—**

**ಸರ್ವಾಧಾರಂ** = ಎಲ್ಲದಕ್ಕೂ ಆಶ್ರಯವಾದ
**ಶಾರದ ಇಂದೀವರಾಭಂ** = ಶರತ್ಕಾಲದ ಕನ್ನೈದಿಲೆಯಂತೆ ಕಾಂತಿಯುಳ್ಳ
**ರಮ್ಯ ಆಕಾರಂ** = ಮನೋಹರವಾದ ಆಕೃತಿಯುಳ್ಳ
**ಶಬ್ದಭೇದೈಃ** = ವರ್ಣಾತ್ಮಕಶಬ್ದವಿಶೇಷಗಳಿಂದ (ವೇದಗಳಿಂದ) (ಬೇರೆ ಬೇರೆ ಶಬ್ದಗಳಿಂದ)
**ಅಲಂ** = ಚೆನ್ನಾಗಿ
**ಗುಣಿ** = ಗುಣಪೂರ್ಣನು, ಗುಣವುಳ್ಳದ್ದು ಎಂದು
**ನಿರ್ಣೀತಂ** = ನಿಶ್ಚಯಿಸಲ್ಪಟ್ಟ
**ಸತ್** = ದೋಷವಿಲ್ಲದ

ಬ್ರಹ್ಮಸಂಜ್ಞಂ = ಬ್ರಹ್ಮ ಎಂದು ಹೆಸರುಳ್ಳ

ವಿಹಾಯಃ = ಆಕಾಶವನ್ನು

ಸಂಶ್ರಿತಂ = ಆಶ್ರಯಿಸಿದ

ಮಧ್ವಾದಿತ್ಯಂ = ಮಧ್ವ ಎಂಬ ಹೆಸರುಳ್ಳ ಸೂರ್ಯನನ್ನು

ಕಃ = ಯಾವನು ತಾನೇ ?

ಅಪಿಧತ್ತೇ = ಮುಚ್ಚಿಯಾನು ? (ಖಂಡಿಸಿಯಾನು).

ತಾತ್ಪರ್ಯ— ಆಕಾಶವು ಎಲ್ಲಾ ಪ್ರಾಣಿಗಳಿಗೂ ಸಂಚಾರಕ್ಕೆ ಆಶ್ರಯವಾಗಿದೆ. 'ಆಕಾಶೇ ನೀಲಿಮೋದೇತಿ' ಎಂಬ ಶ್ರುತ್ಯನುಸಾರವಾಗಿ ಭೂತಾಕಾಶವು ಶರತ್ಕಾಲದ ಕಪ್ಪಾದ ನೈದಿಲೆ ಬಣ್ಣದಿಂದ ಸಹಿತವಾಗಿದೆ. ಅದರ ಆಕಾರವು ಸುಂದರವಾಗಿದೆ, ಧ್ವನ್ಯಾತ್ಮಕವಾದ ನಾನಾವಿಧ ಶಬ್ದವು ಅದರ ಗುಣವೆಂದು ನಿರ್ಣೀತವಾಗಿದೆ. ಆ ಭೂತಾಕಾಶವು ಯಾವ ಮಾಲಿನ್ಯ ಸಂಪರ್ಕವನ್ನೂ ಹೊಂದದೆ ನಿರ್ದೋಷವಾಗಿದೆ. ಅಂತಹ ಆಕಾಶವನ್ನು ಆಶ್ರಯಿಸಿದ ಸೂರ್ಯನನ್ನು ಯಾರಾದರೂ ಮುಚ್ಚಬಲ್ಲರೋ ? ಎಂದೂ ಇಲ್ಲ. ಅದರಂತೆ ಶ್ರೀಮನ್ನಾರಾಯಣನು ಸಮಸ್ತ ಪ್ರಪಂಚಕ್ಕೂ ಆಶ್ರಯನು. ಮನೋಹರವಾದ ಆಕಾರವುಳ್ಳವನು. ಶರತ್ಕಾಲದ ಕನ್ನೈದಿಲೆಯಂತೆ ಬಣ್ಣವುಳ್ಳವನು, ನಿರ್ದೋಷನು. ಅನಂತವಾದ ಅನೇಕ ಶಾಖಾಭೇದವುಳ್ಳ ಶಬ್ದರಾಶಿರೂಪವಾದ ವೇದಗಳಿಂದ ಜ್ಞಾನ, ಆನಂದ ಮುಂತಾದ ಅನಂತಗುಣಗಳುಳ್ಳವನೆಂದು ನಿಶ್ಚಯಿಸಲ್ಪಟ್ಟವನು, ನಿರ್ದೋಷನು. ಇಂತಹ ಪರಬ್ರಹ್ಮನಾದ ಶ್ರೀಮನ್ನಾರಾಯಣನೆಂಬ ಆಕಾಶವನ್ನು ಶ್ರೀಮಧ್ವರು ಆಶ್ರಯಿಸಿದ್ದಾರೆ. ಅವರನ್ನು ಖಂಡಿಸಲು ಯಾರಿಗೆ ತಾನೇ ಸಾಧ್ಯ ?

ವಿಗ್ರಹ—

ಸರ್ವಾಧಾರಃ— ಸರ್ವೇಷಾಂ ಆಧಾರಃ ಸರ್ವಾಧಾರಃ, 'ತತ್ (ವಿಹಾಯಃ)' , (ವಿಹಾಯಃ) ಬ್ರಹ್ಮ ಇತಿ ಸಂಜ್ಞಾ ಯಸ್ಯ ತತ್ ಬ್ರಹ್ಮಸಂಜ್ಞಂ। ವಿಹಾಯಃ ವಿಹಾಯಸೀ ವಿಹಾಯಾಂಸಿ, ವಿಹಾಯಸಾ ವಿಹಾಯೋಭ್ಯಾಂ ಇತ್ಯಾದಿ. ಸಕಾರಾಂತ ನಪುಂಸಕಲಿಂಗ ವಿಹಾಯಸ್ ಶಬ್ದ.

ರಮ್ಯಾಕಾರಂ— ರಮ್ಯಃ ಆಕಾರಃ ಯಸ್ಯ ತತ್ ರಮ್ಯಾಕಾರಂ, ತತ್ ರಮ್ಯಾಕಾರಂ ।

ಶಾರದೇಂದೀವರಾಭಂ— ಶರದಿ ಭವಂ ಶಾರದಂ, ಶಾರದಂ ಚ ತತ್ ಇಂದೀವರಂ ಚ ಶಾರದೇಂದೀವರಂ, ಶಾರದೇಂದೀವರಸ್ಯ ಆಭಾ ಇವ ಆಭಾ ಯಸ್ಯ ತತ್ ಶಾರದೇಂದೀವರಾಭಂ, ತತ್ ಶಾರದೇಂದೀವರಾಭಂ ।

ಗುಣಿ— ಗುಣಾಃ ಅಸ್ಯ ಸಂತೀತಿ ಗುಣೀ ।

ಶಬ್ದಭೇದೈಃ— ಶಬ್ದಾನಾಂ ಭೇದಾಃ ಶಬ್ದಭೇದಾಃ, ತೈಃ ಶಬ್ದಭೇದೈಃ ।

ಮಧ್ವಾದಿತ್ಯಂ— ಮಧ್ವ ಏವ ಆದಿತ್ಯಃ ಮಧ್ವಾದಿತ್ಯಃ, ತಂ ಮಧ್ವಾದಿತ್ಯಂ ।

ಕ್ರಿಯಾಪದ— ಅಪಿಧತ್ತೇ- ಡು ಧಾಞ್ ಧಾರಣಪೋಷಣಯೋಃ ಧಾತು. ಆತ್ಮನೇಪದಿ ಲಟ್, ಅಪಿ ಉಪಸರ್ಗ. ಈ ಧಾತುವಿನ ಎಲ್ಲಾ ರೂಪಗಳನ್ನು ಇದೇ ಸರ್ಗದ 4ನೆಯ 'ಏಕಂ ತತ್ತ್ವಂ ವಷ್ಟಿ' ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ಕೊಟ್ಟಿದೆ. ಇಲ್ಲಿ 'ಪಿಧತ್ತೇ' ಎಂಬ ಪಾಠವು ಸಾಧುವಲ್ಲ. 'ವಷ್ಟಿ ಭಾಗುರಿರಲ್ಲೋಪಂ ಅವಾಪ್ಯೋ-ರುಪಸರ್ಗಯೋಃ' ಎಂಬ ವಚನಾನುಸಾರವಾಗಿ ಆ ರೂಪವು ಸಾಧುವಾದರೂ ಇಲ್ಲಿ ಕಃ + ಪಿಧತ್ತೇ ಎಂದಿರುವಾಗ ವಿಸರ್ಗಕ್ಕೆ ಉಪಧ್ಮಾನೀಯ ಬರಬೇಕಾಗುತ್ತದೆ, ಅಥವಾ ವಿಸರ್ಗವೇ ಉಳಿಯಬೇಕಾಗುತ್ತದೆ. ಕಃ ಎಂಬುದು ಕೋ ಎಂದಾಗುವುದಿಲ್ಲ.

**ಕೋಶ—** ವಿಹಾಯಃ = ಆಕಾಶ, 'ವಿಯದ್ ವಿಷ್ಣುಪದಂ ವಾ, ತು ಪುಂಸ್ಯಾಕಾಶವಿಹಾಯಸೀ' –ಅಮರ. ಮಧ್ವಾದಿತ್ಯಂ ಎಂಬಲ್ಲಿ ಆದಿತ್ಯಃ = ಸೂರ್ಯ, 'ಸೂರಸಾರ್ಯರ್ಮಾದಿತ್ಯದ್ವಾದಶಾತ್ಮದಿವಾಕರಾಃ' –ಅಮರ.

**ಪ್ರಯೋಗ—** ಸರ್ವಾಧಾರಂ ಶಾರದೇಂದೀವರಾಭಂ ರಮ್ಯಾಕಾರಂ ಶಬ್ದಭೇದ್ಯೈಃ ಅಲಂ ಗುಣಿ ನಿರ್ಣೀತಂ ಸತ್ ಬ್ರಹ್ಮಸಂಜ್ಞಂ ವಿಹಾಯಃ ಸಂಶ್ರಿತಃ ಮಧ್ವಾದಿತ್ಯಃ ಕೇನ ಅಪಿಧೀಯತೇ ?

ಇಲ್ಲಿ ವಿಶ್ವಪತಿತೀರ್ಥೀಯದಲ್ಲಿ ಹೇಳಿರುವ ಸಂಸ್ಕೃತಭಾಷಾಮಯವಾದ ತಾತ್ಪರ್ಯ- ಯಥಾ ಸರ್ವಪ್ರಾಣಿನಾಂ ಆಶ್ರಯಂ ನೀಲವರ್ಣಂ ಸುಂದರಂ ಶಬ್ದವಿಶೇಷೈಃ ಧ್ವನ್ಯಾತ್ಮಕೈಃ ಗುಣವತ್ ಇತಿ ನಿರ್ಣೀತಂ ಭೂತಾಕಾಶಂ ಆಶ್ರಿತಂ ಸೂರ್ಯಂ ನ ಕಶ್ಚಿತ್ ಆಚ್ಛಾದಯಿತುಂ ಕ್ಷಮಃ ತದ್ವತ್ ಸರ್ವಜಗತಾಂ ಆಶ್ರಯಂ ಪರಮಸುಂದರಂ ಶಾರದೇಂದೀ-ವರವನ್ನೀಲವರ್ಣಂ ಜ್ಞಾನಾನಂದಾದ್ಯನಂತಗುಣಪೂರ್ಣತಯಾ ಸರ್ವೈಃ ವೇದೈಃ ತದರ್ಥನಿರ್ಣಾಯಕ ಬ್ರಹ್ಮಮೀಮಾಂಸಾ ಸೂತ್ರೈಶ್ಚ ನಿಶ್ಚಿತಂ ನಿರ್ದೋಷಂ ಪರಮಮಹದ್ ಬ್ರಹ್ಮೇತಿ ಪ್ರಥಿತಂ ಶ್ರೀಹರಿಂ ಸಂಶ್ರಿತಂ ಮಧ್ವಸೂರ್ಯಂ ಕೋ ವಾ ಆಚ್ಛಾದಯಿತುಂ ಖಂಡಯಿತುಂ ವಾ ಶಕ್ನುಯಾತ್ ಇತಿ ।

ಇಲ್ಲಿ ಭಾವಪ್ರಕಾಶಿಕಾ ವ್ಯಾಖ್ಯಾನದ ವಿಶೇಷಾಂಶ— ಶಬ್ದಭೇದ್ಯೈರ್ಗುಣಿಸನ್ನಿರ್ಣಿತಂ = ವೇದ್ಯೈಃ ಜ್ಞಾನಾದಿ ಗುಣವನ್ನಿಶ್ಚಿತಂ, ಧ್ವನಿಭಿಃ ಗುಣವಚ್ಚ = ಶಬ್ದಭೇದ್ಯೈಃ ಗುಣಿ ಸನ್ನಿರ್ಣೀತಂ ಎಂಬ ಪದಗಳಿಗೆ ಪರಮಾತ್ಮನ ಪಕ್ಷದಲ್ಲಿ ವೇದಗಳಿಂದ ಜ್ಞಾನಾದಿಗುಣವುಳ್ಳದ್ದೆಂದು ಜ್ಞಾನಿಗಳಿಂದ ನಿರ್ಣಯಿಸಲ್ಪಟ್ಟದ್ದು, ಬ್ರಹ್ಮ ಎಂದೂ, ಆಕಾಶದ ಪಕ್ಷದಲ್ಲಿ ಧ್ವನಿ ಎಂಬ ಶಬ್ದಪ್ರಭೇದದಿಂದ ಕೂಡಿದ್ದರಿಂದ ಗುಣವುಳ್ಳದ್ದು ಎಂಬ ಹೆಸರನ್ನು ಹೊಂದಿರುವ ಭೂತಾಕಾಶ ಎಂದೂ ಎರಡು ಅರ್ಥಗಳು.

★ ★ ★

**ಆನಂದತೀರ್ಥಪುಂಸಿಂಹೋ ಮಾಯವಾದಿದಿತೇಃ ಸುತಾನ್ ।**
**ವಿದಾರ್ಯ ಯುಕ್ತಿನಖರೈರಪ್ರತೀಪೋ ವಿರಾಜತೇ ॥ 1 ॥**

**ನೃಹರಿಃ ಸಕಲಜ್ಞನಾಮಕಃ ಸಮುಪೈತಿ ಹಿ ಮಾಯಿದಾನವಾನ್ ।**
**ಪ್ರಪಲಾಯನಮತ್ರ ತತ್ಕ್ಷಮಂ ತ್ವರಯಾ ವೋ ವಸತಿರ್ಗುಹಾಸು ಚ ॥ 2 ॥**

ಎಂದು ಆಚಾರ್ಯರ ಶಿಷ್ಯರು ಪುಂಡರೀಕಪುರಿ ಮತ್ತು ಪದ್ಮತೀರ್ಥರನ್ನು ಆಚಾರ್ಯರು ಜಯಿಸಿದಾಗ ಎರಡು ಶ್ಲೋಕಗಳನ್ನು ಹೇಳಿದ್ದರು. ಆ ಶ್ಲೋಕಗಳ ಅರ್ಥವನ್ನೇ ಈ ಪದ್ಯಗಳಿಂದ ವಿವರಿಸುತ್ತಿದ್ದಾರೆ.

ಆನಂದತೀರ್ಥರೆಂಬ ನರಸಿಂಹನು ಮಾಯಾವಾದಿಗಳೆಂಬ ದಾನವರ ಬಳಿಗೆ ಅವರನ್ನು ನಾಶಮಾಡಲು ಬರುತ್ತಿದ್ದಾನೆ. ಆದುದರಿಂದ ಎಲೈ ಮಾಯಾವಾದಿಗಳೆಂಬ ಅಸುರರೇ ! ನೀವು ಇಲ್ಲಿಂದ ಓಡಿಹೋಗುವುದೇ ಉಚಿತ ವಾಗಿದೆ ಮತ್ತು ಎಲ್ಲಾದರೂ ಗುಹೆಗಳಲ್ಲಿ ಅಡಗಿಕೊಂಡು ಬದುಕಿರಿ. (2) ಎಂದು ಆ ಎರಡು ಪದ್ಯಗಳ ತಾತ್ಪರ್ಯ. ಈ ಅಭಿಪ್ರಾಯವನ್ನೇ ಈಗ ನಾರಾಯಣ ಪಂಡಿತಾಚಾರ್ಯರು ಕೆಳಗಿನ ಶ್ಲೋಕದಲ್ಲಿ ವಿವರಿಸುತ್ತಿದ್ದಾರೆ.

**ವಿಧಾವತ ವಿಧಾವತ ತ್ವರಿತಮತ್ರಿವಾದಾಸುರಾ**
**ಅದಭ್ರಧಿಷಣಾಭಿಧೋ ನರಹರಿರ್ಹಿ ಜಾಜ್ವಲ್ಯತೇ ।**
**ಸಯುಕ್ತಿನಖರೈಃ ಖರೈರ್ಮುಖರಮೂರ್ಖದುಃಖಾಂಕುರೈ-**
**ರ್ವಿದಾರಯತಿ ದಾರುಣಪ್ರವಚನಪ್ರಣಾದೋಽಪ್ರಿಯಾನ್ ॥ 51 ॥**

**ಪದಚ್ಛೇದ—** ವಿಧಾವತ, ವಿಧಾವತ, ತ್ವರಿತಂ, ಅತ್ರಿವಾದಾಸುರಾಃ, ಅದಭ್ರಧಿಷಣಾಭಿಧಃ, ನರಹರಿಃ, ಹಿ, ಜಾಜ್ವಲ್ಯತೇ, ಸಃ ಯುಕ್ತಿನಖರೈಃ ಖರೈಃ, ಮುಖರಮೂರ್ಖದುಃಖಾಂಕುರೈಃ, ವಿದಾರಯತಿ, ದಾರುಣಪ್ರವಚನ-ಪ್ರಣಾದಃ, ಅಪ್ರಿಯಾನ್ ।

**ಅನ್ವಯ—** ಹೇ ಅತ್ರಿ ವಾದಾಸುರಾಃ ! ಹಿ ಅದಭ್ರಧಿಷಣಾಭಿಧಃ ನರಹರಿಃ ಜಾಜ್ವಲ್ಯತೇ, ಸಃ ಮುಖರಮೂರ್ಖ-ದುಃಖಾಂಕುರೈಃ ಖರೈಃ ಯುಕ್ತಿನಖರೈಃ ದಾರುಣಪ್ರವಚನಪ್ರಣಾದಃ (ಸನ್) ಅಪ್ರಿಯಾನ್ ವಿದಾರಯತಿ (ತಸ್ಮಾತ್) ತ್ವರಿತಂ ವಿಧಾವತ ವಿಧಾವತ ।

**ಅನ್ವಯಾರ್ಥ—**

**ಹೇ ಅತ್ರಿವಾದಾಸುರಾಃ** = ಎಲೈ ಜೀವ ಜಗತ್ ಈಶ್ವರನನ್ನು ಹೇಳುವ ವೇದವಚನಗಳನ್ನು ಅತತ್ತ್ವಾ-ವೇದಕವೆಂದು ಹೇಳುವುದರಿಂದ 'ಅತ್ರಿವಾದರು' ಜೀವಜಗತ್ತು ಈಶ್ವರ ವಿಷಯಕವಾದ ಪಾರ-ಮಾರ್ಥಿಕತ್ವವನ್ನು ಒಪ್ಪದಿರುವವರು ಎಂಬ ಮಾಯಾವಾದಿದೈತ್ಯರೇ !

**ಹಿ** = ಯಾವ ಕಾರಣದಿಂದ

**ಅದಭ್ರಧಿಷಣ ಅಭಿಧಃ** = ಶ್ರೀಪೂರ್ಣಪ್ರಜ್ಞರೆಂಬ ಹೆಸರುಳ್ಳ

**ನರಹರಿಃ** = ನರಸಿಂಹನು

**ಜಾಜ್ವಲ್ಯತೇ** = ಅತಿಶಯವಾಗಿ ಪ್ರಕಾಶಿಸುತ್ತಿದ್ದಾನೆ.

**ಸಃ** = ಪೂರ್ಣಪ್ರಜ್ಞರೆಂಬ ನರಸಿಂಹನು

**ಮುಖರ ಮೂರ್ಖ ದುಃಖ ಅಂಕುರೈಃ** = ವಾಚಾಲರಾದ ಅವಿವೇಕಿಗಳಾದ ಕುವಾದಿಗಳ ದುಃಖಗಳ ಉತ್ಪತ್ತಿಗೆ ಕಾರಣವಾದ

**ಖರೈಃ** = ಹರಿತವಾದ

**ಯುಕ್ತಿ ನಖರೈಃ** = ಯುಕ್ತಿಗಳೆಂಬ ಉಗುರುಗಳಿಂದ

**ದಾರುಣ ಪ್ರವಚನ ಪ್ರಣಾದಃ** = ಕಠಿಣನಾದ ವ್ಯಾಖ್ಯಾನವೆಂಬ ಸಿಂಹನಾದವುಳ್ಳವನಾಗಿ

**ಅಪ್ರಿಯಾನ್** = ತನಗೆ ಪ್ರೀತಿವಿಷಯರಲ್ಲದವರನ್ನು (ಶತ್ರುಗಳನ್ನು)

**ವಿದಾರಯತಿ** = ಸೀಳುತ್ತಾನೆ. (ಆದುದರಿಂದ)

**ತ್ವರಿತಂ** = ಬೇಗನೆ

**ವಿಧಾವತ, ವಿಧಾವತ** = ಓಡಿರಿ, ಓಡಿರಿ.

ತಾತ್ಪರ್ಯ— ಜೀವ, ಈಶ್ವರ, ಜಗತ್ ಈ ಮೂರನ್ನೂ ವೇದಗಳು ಪಾರಮಾರ್ಥಿಕವಾಗಿ ತಿಳಿಸುತ್ತವೆ. ಆದರೆ ಆ ವೇದವಾಕ್ಯಗಳು ತತ್ತ್ವಾರ್ಥವನ್ನು ಬೋಧಿಸುವುದಿಲ್ಲ. ಸುಳ್ಳಾದ ಅರ್ಥವನ್ನೇ ಬೋಧಿಸುತ್ತವೆ ಎಂದು ಹೇಳುವ 'ಅತ್ರಿ ವಾದರು, ಹಿಂದೆ ಹೇಳಿದ ಪಾರಮಾರ್ಥಿಕವಾದ ಮೂರರ ವಚನ ಅಂದರೆ ಪ್ರತಿಪಾದನವನ್ನು ಒಪ್ಪದಿರುವ ಮಾಯಾವಾದಿ ದೈತ್ಯರೇ ! ಈಗ ಇಲ್ಲಿ ಶ್ರೀಪೂರ್ಣಪ್ರಜ್ಞರೆಂಬ ನರಸಿಂಹನು ವಿರಾಜಿಸುತ್ತಿದ್ದಾನೆ, ಪ್ರಜ್ವಲಿಸುತ್ತಿದ್ದಾನೆ. ಈ ಪೂರ್ಣಪ್ರಜ್ಞ ನರಸಿಂಹನಲ್ಲಿ ಯುಕ್ತಿಗಳೆಂಬ ಹರಿತವಾದ ಉಗುರುಗಳಿವೆ. ಇವುಗಳು ಶಾಸ್ತ್ರವಿರುದ್ಧವಾಗಿ ಹರಟುತ್ತಿರುವ ಅವಿವೇಕಿಗಳಾದ ಕುವಾದಿಗಳಿಗೆ ದುಃಖವನ್ನುಂಟುಮಾಡುತ್ತವೆ. ಈ ಮಧ್ವನರಸಿಂಹನು ವ್ಯಾಖ್ಯಾನವೆಂಬ ಭೀಷಣ ಗರ್ಜನೆಯನ್ನು ಮಾಡುತ್ತಾ ತನ್ನ ಉಗುರುಗಳಿಂದ ಶತ್ರುಗಳಾದ ಕುವಾದಿಗಳಾದ ಈ ನಿಮ್ಮನ್ನು ಸೀಳಿಬಿಡುತ್ತಾನೆ. ಆದುದರಿಂದ ಬೇಗನೆ ಓಡಿರಿ, ಓಡಿರಿ. ನರಸಿಂಹನು ಗರ್ಜನೆ ಮಾಡುತ್ತಾ ತನ್ನ ಹರಿತವಾದ ಉಗುರುಗಳಿಂದ ಶತ್ರುಗಳಾದ ದೈತ್ಯರನ್ನು ಸೀಳುವಂತೆ ಶ್ರೀಪೂರ್ಣಪ್ರಜ್ಞಾಚಾರ್ಯರೂ ತನ್ನ ಪ್ರವಚನದ ಗರ್ಜನೆಯಿಂದ ದುರ್ವಾದಿಗಳನ್ನು ಖಂಡಿಸುತ್ತಾರೆ.

ವಿಶೇಷಾಂಶ— ಇಲ್ಲಿ ಭಾವಪ್ರಕಾಶಿಕಾ ವಚನಗಳು – ಆನಂದತೀರ್ಥಪುಂಸಿಂಹಃ ಮಾಯಾವಾದಿದಿತೇಃ ಸುತಾನ್ । ವಿದಾರ್ಯ ಯುಕ್ತಿನಖರೈರಪ್ರತೀಪೋ ವಿರಾಜತೇ ॥ ನೃಹರಿಃ ಸಕಲಜ್ಞನಾಮಕಃ ಸಮುಪೈತಿ ಹಿ ಮಾಯಿದಾನವಾನ್ । ಪ್ರಪಲಾಯನಮತ್ರ ತತ್ಕ್ಷಮಂ ತ್ವರಯಾ ವೋ ವಸತಿರ್ಗುಹಾಸು ಚ ॥ ಇತ್ಯನಯೋಃ ವಿಧಾವತೇತಿ ॥

ಆನಂದತೀರ್ಥಪುಂಸಿಂಹಃ, ನೃಹರಿಃ ಸಕಲಜ್ಞನಾಮಕ, ಎಂಬ ಎರಡು ಪದ್ಯಗಳ ಅಭಿಪ್ರಾಯವನ್ನೇ ವಿಧಾವತ ವಿಧಾವತ ಎಂಬ ಪದ್ಯದಿಂದ ಹೇಳಿರುತ್ತಾರೆ. ಮಾಯಾವಾದಿದಿತೇಃ ಸುತಾನ್ ಇತ್ಯತ್ರ ಷಷ್ಠ್ಯಾ ಆಕ್ರೋಶೇ ಇತ್ಯಲುಗ್ ಭವತಿ । ಇಲ್ಲಿ ಷಷ್ಠ್ಯಾ ಆಕ್ರೋಶೇ ಎಂಬ ಸೂತ್ರದಿಂದ ಅಲುಕ್ ಬರುತ್ತದೆ. ದಾಸ್ಯಾಃ ಪುತ್ರಃ ಇತ್ಯಾದಿವತ್ = ದಾಸಿಯ (ತೊತ್ತಿನ) ಮಗನು ಎಂಬಂತೆ ನ ತು ಇದಂ ದೈತ್ಯತ್ವಂ ತೇಷಾಂ, ಆಕ್ರೋಶಾಭಿಪ್ರಾಯತ್ವಾತ್ ಇತಿ = ಇಲ್ಲಿ ಹೇಳಿರುವ ದೈತ್ಯತ್ವವು ಅವರಿಗೆ ವಾಸ್ತವವಾಗಿ ಇದೆಯೆಂದು ಅರ್ಥವಲ್ಲ. ಇಲ್ಲಿ ನಿಂದೆ ಮಾಡುವ ಅಭಿಪ್ರಾಯದಿಂದ ದೈತ್ಯರೆಂದು ಹೇಳಿದ್ದಾರೆ ಎಂದೇ ಇಟ್ಟುಕೊಳ್ಳಬೇಕು. ಸತ್ಯಮೇವ ದಿತಿಪುತ್ರತ್ವಂ ಮಾಭೂದೇಷಾಂ ಮಾನುಷತ್ವೇನ ಜಾತಾನಾಂ ಮಾಯಿನಾಂ. ಯತ್ ಅಸುರತ್ವಂ ಅಂಧತಮಸ್ಯೈಕಯೋಗ್ಯತ್ವಲಕ್ಷಣಂ ತದಸ್ತಿ ಅತಿತರಾಂ ಇತಿ = ಮನುಷ್ಯರಾಗಿ ಹುಟ್ಟಿರುವ ಈ ಮಾಯಾವಾದಿಗಳಿಗೆ ದಿತಿಪುತ್ರತ್ವವು ವಾಸ್ತವವಾಗಿ ಇಲ್ಲದಿದ್ದರೂ ಅಂಧತಮಸಪ್ರಾಪ್ತಿಗೆ ಯೋಗ್ಯವಾದ ಹರಿಗುಣ ದ್ವೇಷವೆಂಬ ಅಸುರತ್ವವು ಇವರಿಗೆ ಯಥೇಚ್ಛವಾಗಿ ಇರುವುದರಿಂದ ಇವರನ್ನು ಅಸುರರೆಂದು ಹೇಳಿರುವುದು ಸರಿಯಾಗಿಯೇ ಇದೆ. ಅತ್ರಿವಾದಾಃ = ಜೀವೇಶ್ವರಜಡಾನಾಂ ತ್ರಯಾಣಾಂ ವಾದೇನ ವಚನೇನ ನಿಯಮೇನ ರಹಿತಾಃ ತತ್ತ್ವತಃ ತದ್ವಚನಾನಾಂ ಚ ಅತತ್ತ್ವಾವೇದಕತ್ವಾಂಗೀಕಾರೇಣ.

ಅತ್ರಿವಾದಾಃ ಎಂದರೆ ಮಾಯಾವಾದಿಗಳು. ಏಕೆಂದರೆ ಜೀವ ಈಶ್ವರ ಜಡರೆಂಬ ಮೂರು ತತ್ತ್ವಗಳನ್ನು ಪ್ರತಿಪಾದಿಸುವ ವೇದಗಳನ್ನು ಅವರು ಖಂಡಿತವಾಗಿಯೂ ಒಪ್ಪುವುದಿಲ್ಲ. ಆ ವಚನಗಳೆಲ್ಲವೂ ಅತತ್ತ್ವಾವೇದಕವೆಂದು ಅಂಗೀಕರಿಸುವ ಮಾಯಾವಾದಿಗಳು 'ಅತ್ರಿವಾದರು' ಎನ್ನಿಸಿಕೊಳ್ಳುತ್ತಾರೆ.

ಪದ್ಮತೀರ್ಥಾದಿಗಳ ಜೊತೆಗೆ ಆಚಾರ್ಯರ ವಾದ ಪ್ರಾರಂಭವಾಗಿತ್ತು. ಆದರೆ ವಾದವು ನಡೆಯುತ್ತಾ ಮಾಯಾವಾದಿಗಳು ಸೋಲುವ ಪರಿಸ್ಥಿತಿ ಬಂತು. ಆಗ ಅವರು ಎದ್ದು ಗದ್ದಲ ಮಾಡುತ್ತಾ ಹೊರಡಲಾರಂಭಿಸಿದರು. ಸಭ್ಯರು ಈಗ ನೀವು ಗದ್ದಲ ಮಾಡಬಾರದು, ಹೋಗಬಾರದು ವಾದವನ್ನು ಪೂರ್ತಿ ಮುಗಿಸಿ ಜಯ-ಪರಾಜಯ ನಿರ್ಣಯವಾದ ಮೇಲೆ ಹೊರಡಬೇಕೆಂದು ವಿನಂತಿಸಿಕೊಂಡರೂ ಮಾಯಾವಾದಿಗಳು ಕೇಳಲಿಲ್ಲ. ತಮಗೆ ಪರಾಜಯ ಉಂಟಾಗುತ್ತದೆಂದು ಹೆದರಿ ಚೋಲಜರಾದ ಪದ್ಮತೀರ್ಥಾದಿಗಳು ಅಲ್ಲಿಂದ ಗದ್ದಲ ಮಾಡುತ್ತಾ ಪಲಾಯನ ಮಾಡಿದರು. ಹೀಗೆ ವಾದವು ಸಮಾಪ್ತವಾಯಿತು. ಶ್ರೀಮಧ್ವಾಚಾರ್ಯರ ವಿಜಯದ ಮಹಾಮಹೋತ್ಸವದಿಂದ ಆನಂದಪಟ್ಟ ಸಜ್ಜನರು ಕೆಲವು ಶ್ಲೋಕಗಳನ್ನು ಆಗಲೇ ರಚಿಸಿ ಹೇಳಿದರು. ಆ ಶ್ಲೋಕಗಳನ್ನು ಅದೇ ಸಂದರ್ಭದಲ್ಲಿ ಆಚಾರ್ಯರು ರಚಿಸಿದ್ದ ವಾದ (ತತ್ತ್ವೋದ್ಯೋತ) ಎಂಬ ಪ್ರಕರಣದ ಕೊನೆಯಲ್ಲಿ ಆಚಾರ್ಯರ ಅನುಮತಿಯಿಂದ ಸೇರಿಸಿದರು. ಆ ಪದ್ಯಗಳು ಒಟ್ಟು ಏಳು ಇವೆ. ಅವುಗಳಲ್ಲಿ

(1) ಆನಂದತೀರ್ಥಪುಂಸಿಂಹಃ

(2) ನೃಹರಿಃ ಸಕಲಜ್ಞನಾಮಕಃ, ಎಂಬ ಎರಡು ಪದ್ಯಗಳ ವಿವರಣರೂಪವಾದ ಪದ್ಯವೇ ವಿಧಾವತ ವಿಧಾವತ ಎಂಬ 51ನೆಯ ಶ್ಲೋಕವು.

(3) ಪಲಾಯಧ್ವಂ ಪಲಾಯಧ್ವಂ ತ್ವರಯಾ ಮಾಯಿದಾನವಾಃ । ಸರ್ವಜ್ಞ ಹರಿರಾಯಾತಿ ತರ್ಕಾಗಮ-ದರಾರಿಭೃತ್ ಎಂಬ ಶ್ಲೋಕದ ಅಭಿಪ್ರಾಯ ವಿವರಣ ಎಂಬುದರ ವ್ಯಾಖ್ಯಾ... ರೂಪವಾದುದು ಆಸ್ತಾಂ ಆಸ್ತಾಂ ಎಂಬ 47ನೆಯ ಪದ್ಯವು.

(4) ಪಲಾಯಧ್ವಂ ಪಲಾಯಧ್ವಂ ತ್ವರಯಾ ಮಾಯಿದಾನವಾಃ । ಸರ್ವಜ್ಞಹರಿರಾಯಾತಿ ತರ್ಕಾಗಮ-ದರಾರಿಭೃತ್ ॥ ಎಂಬ ಪದ್ಯದ ವಿವರಣವೇ ವೇದವ್ರಾತ ಸುದರ್ಶನಃ ಎಂಬ 53ನೆಯ ಪದ್ಯವು.

(5) ಜಯತ್ಯಾನಂದತೀರ್ಥೇಷ್ಟದೇವತಾ ನರಕೇಸರೀ । ವಿಪಾಟಿತಾಜ್ಞಾನತಮಃ ಕಪಾಟಾತ್ಯುರುಹುಂಕೃತಃ ॥ ತನ್ನ ಅತಿಶಯವಾದ ಹುಂಕಾರಗರ್ಜನೆಯಿಂದಲೇ ಅಜ್ಞಾನವೆಂಬ ಕತ್ತಲೆಯ ಬಾಗಿಲನ್ನು ಒಡೆದು ಸೀಳಿದ, ಶ್ರೀಮದಾನಂದತೀರ್ಥರಿಗೆ ಇಷ್ಟದೇವತೆಯಾದ ಶ್ರೀನರಸಿಂಹನು ವಿಜಯಶಾಲಿಯಾಗಿದ್ದಾನೆ.

(6) ಜಯತ್ಯಮಿತಪೌರುಷಃ ಸ್ವಜನತೇಷ್ಟಚಿಂತಾಮಣಿಸ್ತ್ವಜೇಶಮುಖವಂದಿತೋ ಗುಣಗಣಾರ್ಣವಃ ಶ್ರೀಪತಿಃ॥- ಎಣೆಯಿಲ್ಲದ ಪರಾಕ್ರಮವುಳ್ಳ, ತನ್ನ ಭಕ್ತರಾದ ಜನರಿಗೆ ಇಷ್ಟಾರ್ಥವನ್ನು ಸಲ್ಲಿಸುವ ಚಿಂತಾ ಮಣಿಯಂತಿರುವ, ಬ್ರಹ್ಮರುದ್ರಾದಿದೇವತೆಗಳಿಂದ ವಂದಿತನಾದ ಗುಣಸಮೂಹಗಳೆಂಬ ಜಲಗಳಿಂದ ಪೂರ್ಣವಾದ ಸಮುದ್ರದಂತಿರುವ ಲಕ್ಷ್ಮೀಪತಿಯಾದ ನಾರಾಯಣನು ಸರ್ವೋತ್ಕೃಷ್ಟನಾಗಿದ್ದಾನೆ.

(7) ಸರ್ವಜ್ಞಸನ್ಮುನೀಂದ್ರೋಚ್ಚಸನ್ಮನಃಪಂಕಜಾಲಯಃ । ಅಜಿತೋ ಜಯತೀಶಾನೋ ರಮಾಬಾಹು-ಲತಾಶ್ರಯಃ ॥

ಶ್ರೀಸರ್ವಜ್ಞಾಚಾರ್ಯರೆಂಬ ನಿರ್ದೋಷರಾದ ಮುನಿಶ್ರೇಷ್ಠರ ನಿರ್ದೋಷವಾದ ಮನಸ್ಸೆಂಬ ಕಮಲದಲ್ಲಿ ಸನ್ನಿಹಿತನಾಗಿರುವ, ಸರ್ವಸ್ವಾಮಿಯಾದ, ಎಂದೂ ಸೋಲನ್ನೇ ಅರಿಯದ, ರಮೆಯ ಬಾಹುಲತೆಗಳಿಗೆ ಆಶ್ರಯನಾದ ಶ್ರೀಹರಿಯು ಸರ್ವೋತ್ಕೃಷ್ಟನಾಗಿದ್ದಾನೆ. ಈ ಮೂರು ಪದ್ಯಗಳ ಅಭಿಪ್ರಾಯವೂ ಮುಂದಿನ ಶ್ಲೋಕಗಳಲ್ಲಿ ಅಲ್ಲಲ್ಲಿ ಅಡಕವಾಗಿದೆ. ಪ್ರಕೃತ ಈ ಶ್ಲೋಕದಲ್ಲಿ ಬರುವ 'ಅತ್ರಿವಾದರು' ಜೀವ ಈಶ್ವರ ಜಡ ಎಂಬ ಪಾರಮಾರ್ಥಿಕವಾದ ಮೂರು ತತ್ತ್ವವನ್ನು ಒಪ್ಪದವರು ಮಾಯಾವಾದಿಗಳು ಎಂಬ ಅಭಿಪ್ರಾಯವು ಪದ್ಮತೀರ್ಥಾದಿಗಳ ಜೊತೆಗೆ ವಾದಮಾಡುವ ಸಂದರ್ಭದಲ್ಲಿಯೇ ಆಚಾರ್ಯರು ರಚಿಸಿದ ತತ್ತ್ವೋದ್ಯೋತದ ಮಂಗಳಪದ್ಯದಿಂದಲೇ ಸೂಚಿತವಾಗುತ್ತದೆ. ಸರ್ವತ್ರಾ-ಖಿಲಸಚ್ಛಕ್ತಿಃ ಸ್ವತಂತ್ರೋऽಶೇಷದರ್ಶನಃ । ನಿತ್ಯಾಪಾದ್ಯಶಚಿಚ್ಚೇತ್ಯಯಂತೇಷ್ಟೋ ನೋ ರಮಾಪತಿಃ ॥ ಎಂಬ ತತ್ತ್ವೋ-ದ್ಯೋತದ ಮಂಗಳ ಪದ್ಯದಲ್ಲಿ ಚಿತ್ = ಚೇತನಜೀವ, ಚೇತ್ಯ = ಪ್ರೇರಿತವಾದ ಜಡ ಇವುಗಳ ನಿಯಾಮಕನಾದ ಪರಮಾತ್ಮ ಈ ಮೂರನ್ನೂ ಪಾರಮಾರ್ಥಿಕವಾಗಿ ಒಪ್ಪುವ ದ್ವೈತಿಗಳು 'ತ್ರಿವಾದರು' ಎಂದಾಗುತ್ತಾರೆ. ಇದಕ್ಕೆ ವಿರುದ್ಧವಾಗಿರುವವರು ಅದ್ವೈತಿಗಳು, 'ಅತ್ರಿವಾದರು' ಎಂದು ಸೂಚಿತವಾಗುತ್ತದೆ.

ವಿಗ್ರಹ—

ಹೇ ಅತ್ರಿವಾದಾಸುರಾಃ !— ತ್ರಯಾಣಾಂ ವಾದಃ ತ್ರಿವಾದಃ, ನ ವಿದ್ಯತೇ ತ್ರಿವಾದಃ ಯೇಷಾಂ ತೇ ಅತ್ರಿವಾದಾಃ, ಅತ್ರಿವಾದಾಶ್ಚ ತೇ ಅಸುರಾಶ್ಚ ಅತ್ರಿವಾದಾಸುರಾಃ, ತೇಷಾಂ ಸಂಬುದ್ಧಿಃ ಹೇ ಅತ್ರಿವಾದಾಸುರಾಃ !

ಅದಭ್ರಧಿಷಣಾಭಿಧಃ— ನ ದಭ್ರಾ ಅದಭ್ರಾ, ಅದಭ್ರಾ ಧಿಷಣಾ ಯಸ್ಯ ಸಃ ಅದಭ್ರಧಿಷಣಃ, ಅದಭ್ರಧಿಷಣಃ ಇತಿ ಅಭಿಧಾ ಯಸ್ಯ ಸಃ ಅದಭ್ರಧಿಷಣಾಭಿಧಃ ।

ನರಹರಿಃ— ನರಶ್ಚಾಸೌ ಹರಿಶ್ಚ ನರಹರಿಃ ।

ಯುಕ್ತಿನಖರಾಃ— ಯುಕ್ತಯಃ ಏವ ನಖರಾಃ ಯುಕ್ತಿನಖರಾಃ ।

ಮುಖರಮೂರ್ಖದುಃಖಾಂಕುರೈಃ— ಮುಖರಾಶ್ಚ ತೇ ಮೂರ್ಖಾಶ್ಚ ಮುಖರಮೂರ್ಖಾಃ, ಮುಖರ-ಮೂರ್ಖಾಣಾಂ ದುಃಖಾನಿ ಮುಖರಮೂರ್ಖದುಃಖಾನಿ, ಮುಖರಮೂರ್ಖದುಃಖಾನಾಂ ಅಂಕುರಾಃ ಯೇಭ್ಯಃ ತೇ ಮುಖರಮೂರ್ಖದುಃಖಾಂಕುರಾಃ, ತೈಃ ಮುಖರಮೂರ್ಖದುಃಖಾಂಕುರೈಃ ।

ದಾರುಣಪ್ರವಚನಪ್ರಣಾದಃ— ದಾರುಣಂ ಚ ತತ್ ಪ್ರವಚನಂ ಚ ದಾರುಣಪ್ರವಚನಂ, ದಾರುಣ-ಪ್ರವಚನಮೇವ ಪ್ರಣಾದಃ ಯಸ್ಯ ಸಃ ದಾರುಣಪ್ರವಚನಪ್ರಣಾದಃ ।

ಅಪ್ರಿಯಾನ್— ನ ಪ್ರಿಯಾಃ ಅಪ್ರಿಯಾಃ, ತಾನ್ ಅಪ್ರಿಯಾನ್ ।

**ಕ್ರಿಯಾಪದ—** ವಿಧಾವತ್- ವಿ ಇತ್ಯುಪಸರ್ಗಪೂರ್ವಕಾತ್ ಧಾವ್ ಗತಿಶುದ್ಧ್ಯೋಃ ಪರಸ್ಮೈಪದಿನಃ ಲೋಟ್ ಮಧ್ಯಮಪುರುಷೇ ಬಹುವಚನೇ 'ವಿಧಾವತ' ಇತಿ ರೂಪಮ್ ।

ವಿ+ ಧಾವತು ಧಾವತಾತ್, ಧಾವತಾಂ ಧಾವಂತು, ಧಾವ-ಧಾವತಾತ್ ಧಾವತಂ ಧಾವತ, ಧಾವಾನಿ ಧಾವಾವ ಧಾವಾಮ ॥

ಜಾಜ್ವಲ್ಯತೇ- ಜ್ವಲದೀಪ್ತೌ ಧಾತುವಿನ ಯಙಂತರೂಪ ಲಟ್, ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇ ಯಙ್ (3-1-22) ಎಂಬ ಸೂತ್ರದಿಂದ ಯಙ್.

ಜಾಜ್ವಲ್ಯತೇ ಜಾಜ್ವಲ್ಯೇತೇ ಜಾಜ್ವಲ್ಯಂತೇ, ಜಾಜ್ವಲ್ಯಸೇ ಜಾಜ್ವಲ್ಯೇಥೇ ಜಾಜ್ವಲ್ಯಧ್ವೇ, ಜಾಜ್ವಲ್ಯೇ ಜಾಜ್ವಲ್ಯಾವಹೇ ಜಾಜ್ವಲ್ಯಾಮಹೇ ॥

ವಿದಾರಯತಿ- ಣಿಜಂತಾತ್ ಲಟ್, ಪ್ರಥಮಪುರುಷೇ ಏಕವಚನೇ 'ವಿದಾರಯತಿ' ಇತಿ ರೂಪಮ್ ।

ವಿ + ದಾರಯತಿ ದಾರಯತಃ ದಾರಯಂತಿ.... ಇತ್ಯಾದಿ

**ಪ್ರಯೋಗ—** ಹೇ ಅತ್ರಿವಾದಾಸುರಾಃ ಅದಭ್ರಧಿಷಣಾಭಿಧೇನ ನರಹರಿಣಾ ಜಾಜ್ವಲ್ಯತೇ (ಭಾವೇ) । ತೇನ, ಮುಖರಮೂರ್ಖದುಃಖಾಂಕುರೈಃ ಖರೈಃ ಯುಕ್ತಿನಖರೈಃ ದಾರುಣಪ್ರವಚನಪ್ರಣಾದೇನ ಸತಾ ಅಪ್ರಿಯಾಃ ವಿದಾರ್ಯಂತೇ (ಕರ್ಮಣಿ) ತಸ್ಮಾತ್ ತ್ವರಿತಂ ಯುಷ್ಮಾಭಿಃ ವಿಧಾವ್ಯತಾಂ ವಿಧಾವ್ಯತಾಂ (ಭಾವೇ) ।

**ವೃತ್ತ—** ಈ ಶ್ಲೋಕದಲ್ಲಿ ಪೃಥ್ವೀವೃತ್ತ. ಜಸೌ ಜಸಯಲಾವಸುಗ್ರಹಯತಿಶ್ಚ ಪೃಥ್ವೀಗುರುಃ ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಶ್ರೀಮಧ್ವಾಚಾರ್ಯರನ್ನು ವಿಲಕ್ಷಣರಾದ ಪಕ್ಷಿರಾಜ ಗರುಡನಿಗಿಂತಲೂ ಉತ್ಕೃಷ್ಟರೆಂದು ವರ್ಣಿಸುತ್ತಾ ಮಾಯಾವಾದಿ ಸರ್ಪಗಳನ್ನು ಪಲಾಯನ ಮಾಡಿದರೆಂದು ಹೇಳುತ್ತಾರೆ.

**ಧತ್ತೇ ರೂಪಾಣ್ಯನಂತಾನ್ಯಪಿ ಭುವನಪತೇರ್ಯೋ ಹೃದಾಪ್ಯೇಕಪಕ್ಷೋ**
**ದಕ್ಷಃ ಸದ್ಭ್ಯೋಽಖಿಲೇಭ್ಯೋಽಪ್ಯಮೃತಮಿಹ ದದೌ ಕೇವಲಂ ಯೋ ನ ಮಾತ್ರೇ ॥**
**ಪಕ್ಷಿಶ್ರೇಷ್ಠೋಽಪರಸ್ಸನ್ನಮಿತಮತಿಪದೋಽಸಂಪದೇ ಸ್ಯಾದಯಂ ವೋ**
**ಮಾ ದರ್ಪಂ ಮಾಯಿಸರ್ಪಾ ಭಜತ ಭಜತ ತಾಸ್ತಾ ಗುಹಾ ದ್ರಾಗ್ದ್ವಿಜಿಹ್ವಾಃ ॥ 52 ॥**

**ಪದಚ್ಛೇದ—** ಧತ್ತೇ, ರೂಪಾಣಿ, ಅನಂತಾನಿ, ಅಪಿ, ಭುವನಪತೇಃ, ಯಃ, ಹೃದಾ, ಅಪಿ, ಏಕಪಕ್ಷಃ, ದಕ್ಷಃ, ಸದ್ಭ್ಯಃ, ಅಖಿಲೇಭ್ಯಃ, ಅಪಿ, ಅಮೃತಂ, ಇಹ, ದದೌ, ಕೇವಲಂ, ಯಃ, ನ, ಮಾತ್ರೇ, ಪಕ್ಷಿಶ್ರೇಷ್ಠಃ, ಅಪರಃ, ಸನ್, ಅಮಿತಮತಿಪದಃ, ಅಸಂಪದೇ, ಸ್ಯಾತ್, ಅಯಂ, ವಃ, ಮಾ, ದರ್ಪಂ, ಮಾಯಿಸರ್ಪಾಃ, ಭಜತ, ಭಜತ, ತಾಃ, ತಾಃ, ಗುಹಾಃ, ದ್ರಾಕ್, ದ್ವಿಜಿಹ್ವಾಃ ॥

**ಅನ್ವಯ—** ದ್ವಿಜಿಹ್ವಾಃ ಹೇ ಮಾಯಿಸರ್ಪಾಃ ಯಃ ಭುವನಪತೇಃ ಅನಂತಾನಿ ಅಪಿ ರೂಪಾಣಿ ಹೃದಾ ಅಪಿ ಧತ್ತೇ, ಏಕಪಕ್ಷಃ ದಕ್ಷಃ ಯಃ ಮಾತ್ರೇ ಕೇವಲಂ ಅಮೃತಂ ನ ದದೌ, ಅಖಿಲೇಭ್ಯಃ ಸದ್ಭ್ಯಃ ಅಪಿ ಅಮೃತಂ ದದೌ, ಅಮಿತಮತಿಪದಃ ಅಯಂ ಅಪರಃ ಪಕ್ಷಿಶ್ರೇಷ್ಠಃ ಸನ್, ವಃ ಅಸಂಪದೇ ಸ್ಯಾತ್, ದರ್ಪಂ ಮಾ ಭಜತ. ದ್ರಾಕ್ ತಾಃ ತಾಃ ಗುಹಾಃ ಭಜತ ।

**ಅನ್ವಯಾರ್ಥ—**

**ದ್ವಿಜಿಹ್ವಾಃ** = ಎರಡು ನಾಲಿಗೆಯುಳ್ಳ

**ಹೇ ಮಾಯಿಸರ್ಪಾಃ** = ಎಲೈ ಮಾಯಾವಾದಿಗಳೆಂಬ ಸರ್ಪಗಳೇ !

**ಯಃ** = ಯಾರು
**ಭುವನಪತೇಃ** = ಲೋಕಗಳಿಗೆ ಒಡೆಯನಾದ ನಾರಾಯಣನ
**ಅನಂತಾನಿ ಅಪಿ ರೂಪಾಣಿ** = ಮಿತಿ (ಸಂಖ್ಯೆ) ಇಲ್ಲದ ರೂಪಗಳನ್ನು
**ಹೃದಾ ಅಪಿ** = ಹೃದಯದಿಂದಲೂ (ಮನಸ್ಸಿನಿಂದಲೂ)
**ಧತ್ತೇ** = ಧರಿಸಿದ್ದಾರೋ
**ಏಕಪಕ್ಷಃ** = ಪ್ರಧಾನಸಿದ್ಧಾಂತವುಳ್ಳ
**ದಕ್ಷಃ** = ಚತುರರಾದ
**ಯಃ** = ಯಾವ ಮಧ್ವರು
**ಇಹ** = ಈ ಲೋಕದಲ್ಲಿ
**ಮಾತ್ರೇ ಕೇವಲಂ** = ತಾಯಿಗೆ ಮಾತ್ರ
**ಅಮೃತಂ** = ಮೋಕ್ಷವನ್ನು
**ದದೌ** = ಕೊಟ್ಟರೋ
**ಅಮಿತಮತಿಪದಃ** = ಪೂರ್ಣಪ್ರಜ್ಞ ಎಂಬ ಹೆಸರುಳ್ಳ
**ಅಯಂ** = ಇವರು
**ಅಪರಃ** = ಬೇರೆಯವರಾದ
**ಪಕ್ಷಿಶ್ರೇಷ್ಠಃ ಸನ್** = ಗರುಡರಾಗಿ, ಸಿದ್ಧಾಂತವಾದಿಗಳಲ್ಲಿ ಶ್ರೇಷ್ಠರಾಗಿ
**ವಃ** = ನಿಮಗೆ
**ಅಸಂಪದೇ** = ಅನಿಷ್ಟಕ್ಕಾಗಿ
**ಸ್ಯಾತ್** = ಆದಾರು
**ದರ್ಪಂ** = ಅಹಂಕಾರವನ್ನು
**ಮಾ ಭಜತ** = ಹೊಂದಬೇಡಿ
**ದ್ರಾಕ್** = ಬೇಗನೆ
**ತಾಃ ತಾಃ ಗುಹಾಃ** = ಆಯಾ ಗುಹೆಗಳನ್ನು
**ಭಜತ** = ಸೇರಿರಿ. (ಸೇವಿಸಿರಿ).

ತಾತ್ಪರ್ಯ— ಎಲೈ ಮಾಯಾವಾದಿಗಳೇ ಸುಳ್ಳು ಹೇಳುವುದರಿಂದ ನೀವು ಎರಡು ನಾಲಿಗೆಯುಳ್ಳ ಸರ್ಪಗಳಂತೆ ಇದ್ದೀರಿ. ಸರ್ಪಗಳಂತಿರುವ ನೀವು ಗರ್ವವನ್ನು ಬಿಟ್ಟು ವಿನೀತರಾಗಿ ಇರಿ. ಏಕೆಂದರೆ ಶ್ರೀಪೂರ್ಣಪ್ರಜ್ಞಾಚಾರ್ಯರೆಂಬ ಮತ್ತೊಬ್ಬ ಪಕ್ಷಿಶ್ರೇಷ್ಠನು, ಅಂದರೆ ಗರುಡನು ನಿಮಗೆ ಅನಿಷ್ಟವನ್ನು, ಅನೈಶ್ವರ್ಯವನ್ನು ಉಂಟು ಮಾಡಿಯಾನು. ಗರುಡನು ಪಕ್ಷ ಅಂದರೆ ರೆಕ್ಕೆ ಉಳ್ಳ ಹಕ್ಕಿಗಳಲ್ಲಿ ಶ್ರೇಷ್ಠನಾದುದರಿಂದ ಪಕ್ಷಿಶ್ರೇಷ್ಠ ಎನ್ನಿಸಿಕೊಂಡಿದ್ದಾನೆ. ಈ ಶ್ರೀ ಪೂರ್ಣ-ಪ್ರಜ್ಞಾಚಾರ್ಯರಾದರೋ ಪಕ್ಷ ಅಂದರೆ ಸಿದ್ಧಾಂತ, ಅದು ಉಳ್ಳವರು ಪಕ್ಷಿಗಳು ಸಿದ್ಧಾಂತವಾದಿಗಳು, ಅವರಲ್ಲಿ ಶ್ರೇಷ್ಠರಾಗಿದ್ದಾರೆ. ಹೀಗೆ ಪ್ರಸಿದ್ಧಗರುಡನಿಗಿಂತ ವಿಲಕ್ಷಣರಾಗಿದ್ದಾರೆ. ಪಕ್ಷಿಶ್ರೇಷ್ಠ ಎಂಬ ಶಬ್ದವು ಸಮಾನವಾದರೂ ಅರ್ಥವು ಬೇರೆಯಾಗಿರುವುದರಿಂದ ಇವರು ಪ್ರಸಿದ್ಧನಾದ ಗರುಡನಿಗಿಂತ ವಿಲಕ್ಷಣರಾಗಿದ್ದಾರೆ. ಇನ್ನೂ ಅನೇಕ ಪ್ರಕಾರಗಳಿಂದ ಇವರು ಗರುಡನಿಗಿಂತ ವಿಲಕ್ಷಣರಾಗಿದ್ದಾರೆ. ಗರುಡನು ಶ್ರೀಮನ್ನಾರಾಯಣನನ್ನು ತನ್ನ ಹೆಗಲಿನಿಂದ ಮಾತ್ರ ಹೊತ್ತಿರುತ್ತಾನೆ. ಅದರಲ್ಲಿಯೂ ಪರಮಾತ್ಮನ ಒಂದು ರೂಪವನ್ನು ಮಾತ್ರ ಹೊತ್ತಿರುತ್ತಾನೆ. ಈ ಮಧ್ವಾಚಾರ್ಯರಾದರೋ ಪಕ್ಷಿಶ್ರೇಷ್ಠ ಎಂಬ ಗರುಡನ ಹೆಸರುಳ್ಳವರಾದರೂ ಅವನಂತೆ ಹೆಗಲಿನಲ್ಲಿ ಮಾತ್ರ ಪರಮಾತ್ಮನನ್ನು ಧರಿಸಿಲ್ಲ, ಹೃದಯದಲ್ಲಿಯೂ

ಪರಮಾತ್ಮನನ್ನು ಧರಿಸಿರುತ್ತಾರೆ. ಸದಾ ಪರಮಾತ್ಮನ ಚಿಂತನೆಯಲ್ಲಿ ಆಸಕ್ತರಾಗಿರುತ್ತಾರೆ, ಅಷ್ಟೇ ಅಲ್ಲ, ಅನಂತರೂಪಗಳನ್ನು ಹೃದಯದಲ್ಲಿ ಧರಿಸಿದ್ದಾರೆ. ಇದೂ ಒಂದು ಗರುಡನಿಗಿಂತ ವೈಲಕ್ಷಣ್ಯವು. ಈ ಪೂರ್ಣಪ್ರಜ್ಞರು ಏಕಪಕ್ಷರು, ಗರುಡನು ದ್ವಿಪಕ್ಷನು, ಇದೂ ಒಂದು ವೈಲಕ್ಷಣ್ಯವು. ಅಂದರೆ ಶ್ರೀಮಧ್ವಾಚಾರ್ಯರು ಮುಖ್ಯವಾದ ಹರಿಸರ್ವೋತ್ತಮತ್ವ ಸಿದ್ಧಾಂತ-ವುಳ್ಳವರು, ಗರುಡನು ಬರೀ ದ್ವಿಪಕ್ಷನು. ಗರುಡನು ದಕ್ಷನಲ್ಲ. ದಕ್ಷ ಪ್ರಜಾಪತಿಯ ಮಗಳ ಮಗನು, ದೌಹಿತ್ರನು. ದಕ್ಷನ ಮಗಳಾದ ವಿನತಾದೇವಿಯ ಮಗನು, ಶ್ರೀಮಧ್ವಾಚಾರ್ಯರಾದರೋ ಸ್ವಯಂ ದಕ್ಷರು ಅಂದರೆ ಸಮರ್ಥರು. ಇದೂ ಒಂದು ವೈಲಕ್ಷಣ್ಯವು. ಇಷ್ಟೇ ಅಲ್ಲ, ಈ ಮಧ್ವರು ಅಧಿಕಾರಿವರ್ಗದಲ್ಲಿ ತಾಯಿಗೆ ಮಾತ್ರವೇ ಅಮೃತ, ಎಂದರೆ ಮೋಕ್ಷವನ್ನು ಕೊಟ್ಟಿರುವವರಲ್ಲಿ, ಎಲ್ಲಾ ಸಜ್ಜನರಿಗೂ ಅಮೃತವನ್ನು ಕೊಟ್ಟಿದ್ದಾರೆ. ಗರುಡನಾದರೋ ತನ್ನ ತಾಯಿಯಾದ ವಿನತೆಯನ್ನು ಕದ್ರೂ ಎಂಬ ತನ್ನ ಮಲತಾಯಿಯ ದಾಸ್ಯದಿಂದ ಬಿಡಿಸುವುದಕ್ಕಾಗಿ ದೇವಲೋಕದಿಂದ ತನ್ನ ತಾಯಿಗೆ ಮಾತ್ರ ಅಮೃತವನ್ನು ತಂದು ಕೊಟ್ಟಿದ್ದಾನೆ, ಸಜ್ಜನರೆಲ್ಲರಿಗೂ ಅಮೃತವನ್ನು ಕೊಟ್ಟಿರುವ ವಿಲಕ್ಷಣರಾದ ಮಧ್ವರೆಂಬ ಪಕ್ಷಿಶ್ರೇಷ್ಠರು ನಿಮಗೆ ಅನಿಷ್ಟವನ್ನುಂಟುಮಾಡಿಯಾರು. ಆದ್ದರಿಂದ ಅಹಂಕಾರ ಪಡಬೇಡಿರಿ. ನೀವೆಲ್ಲರೂ ಓಡಿಹೋಗಿ ಅಡಗಿಕೊಳ್ಳಿರಿ. ಗರುಡನು ಹಾರಿಕೊಂಡು ಬರುತ್ತಿರುವಾಗ ಯಾವನಾದರೊಬ್ಬ ಪುರುಷನು ಅಲ್ಲೇ ಓಡಾಡುತ್ತಿರುವ ಹಾವುಗಳನ್ನು ಕುರಿತು 'ನೀವೆಲ್ಲರೂ ಅಡಗಿಕೊಳ್ಳಿರಿ' ಎಂದು ಹೇಗೆ ಹೇಳುತ್ತಾನೋ ಅದರಂತೆ ಪದ್ಮತೀರ್ಥಾದಿಗಳನ್ನು ಕುರಿತು ಸಜ್ಜನ ಸಮುದಾಯವು ಹೇಳುತ್ತಿತ್ತು ಎಂದು ಭಾವ.

ವಿಗ್ರಹ—

**ಅನಂತಾನಿ—** ನ ವಿದ್ಯತೇ ಅಂತಃ ಯೇಷಾಂ ತಾನಿ ಅನಂತಾನಿ, ತಾನಿ ಅನಂತಾನಿ ।

**ಭುವನಪತೇಃ—** ಭುವನಾನಾಂ ಪತಿಃ ಭುವನಪತಿಃ, ತಸ್ಯ ಭುವನಪತ್ಯೋಃ ।

**ಏಕಪಕ್ಷಃ—** ಏಕಃ ಪಕ್ಷಃ ಯಸ್ಯ ಸಃ ಏಕಪಕ್ಷಃ।

**ಪಕ್ಷಿಣಃ—** ಪಕ್ಷಃ (ಪಕ್ಷೌ ವಾ) ಏಷಾಂ ಅಸ್ತಿ ಇತಿ (ಸ್ತಃ ಇತಿ ವಾ) ಪಕ್ಷಿಣಃ ।

**ಪಕ್ಷಿಶ್ರೇಷ್ಠಃ—** ಪಕ್ಷಿಷು ಶ್ರೇಷ್ಠಃ ಪಕ್ಷಿಶ್ರೇಷ್ಠಃ, ।

**ಅಮಿತಮತಿಪದಃ—** ಅಮಿತಾ (ಪೂರ್ಣಾ) ಮತಿಃ (ಪ್ರಜ್ಞಾ) ಯಸ್ಯ ಸಃ ಅಮಿತಮತಿಃ, ಅಮತಿಮಿತಿಃ ಪದಂ ಯಸ್ಯ ಸೌಃ ಅಮಿತಮತಿಪದಃ ।

**ಅಸಂಪದೇ—** (ಪೂರ್ಣಪ್ರಜ್ಞನಾಮಕಃ) ನ ಸಂಪತ್ ಅಸಂಪತ್, ತಸ್ಯೈ ಅಸಂಪದೇ ।

**ಮಾಯಿನಃ—** ಮಾಯಾ ಏಷಾಂ ಅಸ್ತೀತಿ ಮಾಯಿನಃ ।

**ಹೇ ಮಾಯಿಸರ್ಪಾಃ—** ಮಾಯಿನಃ ಏವ ಸರ್ಪಾಃ ಮಾಯಿಸರ್ಪಾಃ, ತೇಷಾಂ ಸಂಬುದ್ಧಿಃ ಹೇ ಮಾಯಿಸರ್ಪಾಃ !

**ದ್ವಿಜಿಹ್ವಾಃ—** ದ್ವೇ ಜಿಹ್ವೇ ಯೇಷಾಂ ತೇ ದ್ವಿಜಿಹ್ವಾಃ, ತೇಷಾಂ ಸಂಬುದ್ಧಿಃ ಹೇ ದ್ವಿಜಿಹ್ವಾಃ !

**ಕೋಶ—** ದ್ವಿಜಿಹ್ವಾಃ ಎಂಬಲ್ಲಿ ಜಿಹ್ವಾ - ನಾಲಿಗೆ, 'ರಸಜ್ಞಾ ರಸನಾ ಜಿಹ್ವಾ'-ಅಮರ. 'ಲೇಲಿಹಾನೋ ದ್ವಿರಸ ನೋ ಗೋಕರ್ಣಃ ಕಂಚುಕೀ ತಥಾ' -ಅಮರ. ಏಕಪಕ್ಷಃ ಎಂಬಲ್ಲಿ ಏಕ = ಮುಖ್ಯ, 'ಏಕೇ ಮುಖ್ಯಾನ್ಯಕೇವಲಾಃ' -ಅಮರ. ಅಮೃತಂ - ದೇವಲೋಕದ ಅಮೃತ ಮತ್ತು ಮೋಕ್ಷ, 'ಪೀಯೂಷಮಮೃತಂ ಸುಧಾ, ಶ್ರೇಯೋನಿಃಶ್ರೇಯಸಾಮೃತಂ ಮೋಕ್ಷೋಽಪವರ್ಗಃ' ಎಂದು ಉಭಯತ್ರ ಅಮರ. ಗುಹಾಃ = ಗುಹೆಗಳು, 'ದರೀತು ಕಂದರೋ ವಾಸ್ತ್ರೀ ದೇವಖಾತಬಿಲೇ ಗುಹಾ' -ಅಮರ.

**ಕೋಶ— ಧತ್ತೇ-** ಡುಧಾಞ್ ಧಾರಣಪೋಷಣಯೋಃ ಉಭಯಪದೀ, ಪ್ರಕೃತೇ ಆತ್ಮನೇಪದೀ, ವರ್ತಮಾನೇ ಲಟ್ ಪ್ರಥಮಪುರುಷ ಏಕವಚನೇ 'ಧತ್ತೇ' ಇತಿ ರೂಪಮ್ ।

ಧತ್ತೇ ದಧಾತೇ ದಧತೇ, ಧತ್ಸೇ ದಧಾಥೇ ಧದ್ಧ್ವೇ, ದಧೇ ದಧ್ವಹೇ ದಧ್ಮಹೇ ॥

ಸ್ಯಾತ್- ಅಸಭುವಿ ಅಕರ್ಮಕಃ ಪರಸ್ಮೈಪದೀ ವಿಧಿಲಿಙ್ ಪ್ರಥಮಪುರುಷೇ ಏಕವಚನೇ 'ಸ್ಯಾತ್' ಇತಿ ರೂಪಮ್ ।

ಸ್ಯಾತ್ ಸ್ಯಾತಾಂ ಸ್ಯುಃ, ಸ್ಯಾಃ ಸ್ಯಾತಂ ಸ್ಯಾತ, ಸ್ಯಾಂ ಸ್ಯಾವ ಸ್ಯಾಮ ॥

ಭಜತ- ಭಜ ಸೇವಾಯಾಂ ಸಕರ್ಮಕಃ ಪರಸ್ಮೈಪದೀ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಬಹುವಚನೇ 'ಭಜತ' ಇತಿ ರೂಪಮ್ ।

ಭಜತು-ಭಜತಾತ್ ಭಜತಾಂ ಭಜಂತು, ಭಜ-ಭಜತಾತ್ ಭಜತಂ ಭಜತ, ಭಜಾನಿ ಭಜಾವ ಭಜಾಮ ॥

ಭಾವಪ್ರಕಾಶಿಕಾ ವಚನಗಳು— ಸಃ ಏಕರೂಪಂ ಅಪಿ ಅಂಸೇನೈವ ಧತ್ತೇ, = ಗರುಡನು ಪರಮಾತ್ಮನ ಒಂದೇ ರೂಪವನ್ನು, ಅದನ್ನೂ ಹೆಗಲಿನಿಂದಲೇ ಧರಿಸುತ್ತಾನೆ, ಮಧ್ವರಂತೆ ಹೃದಯದಿಂದ ಅಲ್ಲ. ದ್ವಿಪಕ್ಷೋಽಪಿ = ಗರುಡನು ದ್ವಿಪಕ್ಷನು, ಆಚಾರ್ಯರಾದರೋ ಏಕಪಕ್ಷರು, ಮುಖ್ಯವಾದ ಹರಿಸರ್ವೋತ್ತಮತ್ವ ಸಿದ್ಧಾಂತ ಉಳ್ಳವರು. ಅಮೃತಂ ಮೋಕ್ಷಮಪಿ ಸರ್ವೇಭ್ಯಃ = ಗರುಡನು ಅಮೃತವನ್ನು ಕೊಟ್ಟಂತೆ ಆಚಾರ್ಯರೂ ಅಮೃತವನ್ನು ಕೊಟ್ಟಿದ್ದಾರೆ. ಗರುಡನು ತಾಯಿಗೆ ಮಾತ್ರ ಅಮೃತವನ್ನು ಕೊಟ್ಟಿದ್ದಾನೆ, ಆಚಾರ್ಯರು ಎಲ್ಲರಿಗೂ ಅಮೃತವನ್ನು ಕೊಟ್ಟಿದ್ದಾರೆ.

ಪ್ರಯೋಗ— ಹೇ ದ್ವಿಜಿಹ್ವಾಃ ಮಾಯಿಸರ್ಪಾಃ ! ಯೇನ ಭುವನಪತೇಃ ಅನಂತಾನ್ಯಪಿ ರೂಪಾಣಿ ಹೃದಾ ಅಪಿ ಧಿಯಂತೇ, ಏಕಪಕ್ಷೇಣ ದಕ್ಷೇಣ ಯೇನ ಇಹ ಮಾತ್ರೇ ಕೇವಲಂ ಅಮೃತಂ ನ ದದೇ, ಅಖಿಲೇಭ್ಯಃ ಸದ್ಭ್ಯಃ ಅಪಿ ಅಮೃತಂ ದದೇ, ಅಮಿತಮತಿಪದೇನ ಅನೇನ ಅಪರೇಣ ಪಕ್ಷಿಶ್ರೇಷ್ಠೇನ ಸತಾ ವಃ ಅಸಂಪದೇ ಭೂಯೇತ, (ಯುಷ್ಮಾಭಿಃ) ದರ್ಪಃ ಮಾ ಭಜ್ಯತಾಂ, ದ್ರಾಕ್ ತಾಃ ತಾಃ ಗುಹಾಃ ಭಜ್ಯಂತಾಂ ।

ವೃತ್ತ— ಈ ಪದ್ಯವು ಸ್ರಗ್ಧರಾವೃತ್ತದಲ್ಲಿದೆ.

ಲಕ್ಷಣ— ಮ್ರಭ್ನೈರ್ಯಾನಾಂ ತ್ರಯೇಣ ತ್ರಿಮುನಿಯತಿಯುತಾ ಸ್ರಗ್ಧರಾ ಕೀರ್ತಿತೇಯಂ, ಮ, ರ, ಭ, ನ, ಯ, ಯ, ಯ = 3 + 7 = 21 ಅಕ್ಷರಗಳು. ಮೂರು ಏಳು ಅಕ್ಷರಗಳಲ್ಲಿ ಯತಿ.

★ ★ ★

ಅವತಾರಿಕಾ— ಪಲಾಯಧ್ವಂ ಪಲಾಯಧ್ವಂ ತ್ವರಯಾ ಮಾಯಿದಾನವಾಃ । ಸರ್ವಜ್ಞಹರಿರಾಯಾತಿ ತರ್ಕಾಗಮದರಾರಿಭೃತ್ ॥ ಇತ್ಯಸ್ಯ ವೇದವ್ರಾತೇತ್ಯಾದಿನಾ = ಎಲೈ ಮಾಯಾವಾದಿ ದಾನವರೇ ! ಬೇಗನೇ ಓಡಿರಿ, ಓಡಿರಿ, ತರ್ಕ ಎಂಬ ಶಂಖ, ವೇದವೆಂಬ ಚಕ್ರವನ್ನು ಹಿಡಿದಿರುವ ಶ್ರೀ ಸರ್ವಜ್ಞಾಚಾರ್ಯರೆಂಬ ನಾರಾಯಣನು ಬರುತ್ತಿದ್ದಾನೆ ಎಂದು ಆಚಾರ್ಯರ ಶಿಷ್ಯರು ಹೇಳಿರುವ ಶ್ಲೋಕದ ಅಭಿಪ್ರಾಯವನ್ನು ವೇದವ್ರಾತಸುದರ್ಶನಃ ಎಂಬ ಶ್ಲೋಕದಿಂದ ಹೇಳುತ್ತಿದ್ದಾರೆ.

**ವೇದವ್ರಾತಸುದರ್ಶನಃ ಪರಿಲಸತ್ತರ್ಕಾಖ್ಯಶಂಖಧ್ವನಿಃ**
**ವಿಭ್ರಾಜಿಷ್ಣುಪುರಾಣಸಂಹತಿಗದಃ ಶ್ಲೋಕೌಘಶಾಂಗಾನ್ವಿತಃ ।**
**ಸತ್ಸೂತ್ರೇಷ್ವಿತಿಹಾಸನಂದಕಚಣೋ ಮಧ್ವಾಖ್ಯನಾರಾಯಣಃ**
**ಪ್ರಾಪ್ತೋ ವೋ ನಿಜಪ್ಯಕ್ಷಯಾ ದ್ರವತ ಹೇ ಮಾಯಾವಿದೇವದ್ವಿಷಃ ॥ 53 ॥**

ಪದಚ್ಛೇದ— ವೇದವ್ರಾತಸುದರ್ಶನಃ, ಪರಿಲಸತ್ತರ್ಕಾಖ್ಯಶಂಖಧ್ವನಿಃ, ವಿಭ್ರಾಜಿಷ್ಣುಪುರಾಣಸಂಹತಿಗದಃ, ಶ್ಲೋಕೌಘಶಾಂಗಾನ್ವಿತಃ, ಸತ್‌ಸೂತ್ರಷ್ವಿತಿಹಾಸನಂದಕಚಣಃ, ಮಧ್ವಾಖ್ಯನಾರಾಯಣಃ, ಪ್ರಾಪ್ತಃ, ವಃ, ನಿಜಪ್ಯಕ್ಷಯಾ, ದ್ರವತ, ಹೇ ಮಾಯಾವಿದೇವದ್ವಿಷಃ ।

ಅನ್ವಯ— ವೇದವ್ರಾತಸುದರ್ಶನಃ, ಪರಿಲಸತ್ತರ್ಕಾಖ್ಯಶಂಖಧ್ವನಿಃ ವಿಭ್ರಾಜಿಷ್ಣುಪುರಾಣಸಂಹತಿಗದಃ ಶ್ಲೋಕೌಘಶಾಂಗಾನ್ವಿತಃ, ಸತ್‌ಸೂತ್ರೇಷ್ವಿತಿಹಾಸನಂದಕಚಣಃ, ಮಧ್ವಾಖ್ಯನಾರಾಯಣಃ, ಹೇ ಮಾಯಾವಿದೇವದ್ವಿಷಃ ! ವಃ ನಿಜಪ್ಯಕ್ಷಯಾ ಪ್ರಾಪ್ತಃ, ದ್ರವತ, ಹೇ ಮಾಯಾವಿ ದೇವವದ್ವಿಷಃ ।

ಅನ್ವಯಾರ್ಥ—

ವೇದವ್ರಾತ ಸುದರ್ಶನಃ = ವೇದಗಳ ಸಮೂಹವೆಂಬ ಸುದರ್ಶನ ಚಕ್ರವುಳ್ಳ

ಪರಿಲಸತ್ = ಪ್ರಕಾಶಿಸುವ,

ತರ್ಕಾಖ್ಯ ಶಂಖಧ್ವನಿಃ = ಬ್ರಹ್ಮತರ್ಕವೆಂದು ಹೆಸರುಳ್ಳ ಪಾಂಚಜನ್ಯವೆಂಬ ಶಂಖದ ಧ್ವನಿಯುಳ್ಳ

ವಿಭ್ರಾಜಿಷ್ಣು = ಅತಿಶಯವಾಗಿ ಪ್ರಕಾಶಿಸುವ

ಪುರಾಣಸಂಹತಿ ಗದಃ = ಪುರಾಣಗಳ ಸಮೂಹವೆಂಬ ಕೌಮೋದಕಿಯೆಂಬ ಗದೆಯುಳ್ಳ

ಶ್ಲೋಕೌಘ ಶಾರ್ಙ್ಗ ಅನ್ವಿತಃ = ಶ್ಲೋಕಗಳ ಸಮೂಹರೂಪವಾದ ಪಂಚರಾತ್ರವೆಂಬ ಬಿಲ್ಲಿನಿಂದ ಕೂಡಿರುವ

ಸತ್ ಸೂತ್ರ ಇಷು ಇತಿಹಾಸ ನಂದಕ ಚಣಃ = ಉತ್ತಮವಾದ ಬ್ರಹ್ಮಸೂತ್ರಗಳೆಂಬ ಬಾಣಗಳು, ಭಾರತ ಮೂಲರಾಮಾಯಣಗಳೆಂಬ ನಂದಕವೆಂಬ ಖಡ್ಗ, ಇವುಗಳಿಂದ ಪ್ರಸಿದ್ಧರಾದ

ಮಧ್ವಾಖ್ಯನಾರಾಯಣಃ = ಶ್ರೀಮಧ್ವಾಚಾರ್ಯರೆಂಬ ನಾರಾಯಣನು

ಹೇ ಮಾಯಾವಿದೇವದ್ವಿಷಃ = ಎಲೈ ಮಾಯಾವಾದಿಗಳೆಂಬ ದೈತ್ಯರೇ !

ವಃ = ನಿಮ್ಮನ್ನು

ನಿಜಿಘೃಕ್ಷಯಾ = ನಿಗ್ರಹಿಸುವ ಇಚ್ಛೆಯಿಂದ

ಪ್ರಾಪ್ತಃ = ಬಂದಿದ್ದಾನೆ

ದ್ರವತ = ಓಡಿರಿ.

ತಾತ್ಪರ್ಯ— ಶ್ರೀಮನ್ನಾರಾಯಣನು ಪಾಂಚಜನ್ಯವೆಂಬ ಶಂಖವನ್ನು ಊದಿ ತನ್ನ ಶತ್ರುಗಳಾದ ದೈತ್ಯರ ಎದೆಯನ್ನು ನಡುಗಿಸುತ್ತಾನೆ. ಸುದರ್ಶನವೆಂಬ ಚಕ್ರ, ಕೌಮೋದಕೀ ಎಂಬ ಗದೆ, ಶಾಂರ್ಙ್ಗ ಎಂಬ ಬಿಲ್ಲು, ಬಾಣಗಳು, ನಂದಕವೆಂಬ ಖಡ್ಗ ಇವುಗಳನ್ನು ಧರಿಸಿದ್ದಾನೆ. ಇವುಗಳಿಂದ ದೇವಶತ್ರುಗಳಾದ ದೈತ್ಯರನ್ನು ಕೊಲ್ಲುವನು. ಶ್ರೀಮನ್ನಾರಾಯಣನ ಏಕಾಂತ-ಭಕ್ತರಾದ ಶ್ರೀಮಧ್ವಾಚಾರ್ಯರೂ ಅವನ ಸಮಾನರೂಪವನ್ನು ಹೊಂದಿದ್ದಾರೆ. ಅವರು ಪ್ರಮಾಣಾದಿ ನಿರ್ಣಾಯಕವಾದ ವೇದಾನುಸಾರಿಯಾಗಿ ಶೋಭಿಸುವ ಬ್ರಹ್ಮತರ್ಕವೆಂಬ ಶಂಖವನ್ನು ಊದಿ ಪ್ರತಿವಾದಿಗಳಿಗೆ ಭಯವನ್ನುಂಟುಮಾಡುತ್ತಾರೆ. ವೇದಗಳ ಸಮೂಹವೆಂಬ ಸುದರ್ಶನ ಚಕ್ರವನ್ನು ಪ್ರತಿವಾದಿಗಳ ಮೇಲೆ ಪ್ರಯೋಗಿಸುತ್ತಾರೆ. ಅವರಲ್ಲಿ ವಿಶೇಷವಾಗಿ ಶೋಭಿಸುವ ಪುರಾಣಗಳ ಸಮೂಹವೆಂಬ ಗದೆಯಿದೆ. ಶ್ಲೋಕ ಸಮೂಹ ರೂಪವಾದ ಪಂಚರಾತ್ರ ಎಂಬ ಹೆಸರುಳ್ಳ ಶಾಂರ್ಙ್ಗವೆಂಬ ಬಿಲ್ಲಿದೆ. ನಿರ್ದೋಷವಾದ ಬ್ರಹ್ಮಸೂತ್ರಗಳೆಂಬ ಬಾಣಗಳಿವೆ, ಇತಿಹಾಸೋತ್ತಮವಾದ ಮಹಾಭಾರತವೆಂಬ ನಂದಕ ಎಂಬ ಹೆಸರುಳ್ಳ ಖಡ್ಗವೂ ಇದೆ. ಬ್ರಹ್ಮ ಸೂತ್ರವೆಂಬ ಬಾಣಗಳು ಮತ್ತು ಮಹಾಭಾರತ ಮತ್ತು ಮೂಲ-ರಾಮಾಯಣವೆಂಬ ನಂದಕಗಳನ್ನು ಪ್ರಯೋಗಿಸುವುದರಲ್ಲಿ ಈ ಮಧ್ವಾಚಾರ್ಯರು ಕುಶಲರಾಗಿದ್ದಾರೆ. ಹೀಗೆ ಶತ್ರುನಿಗ್ರಹಕ್ಕೆ ಬೇಕಾಗಿರುವ ಶ್ರೀಹರಿಯ ಪರಿಕರಗಳಿಂದ ಶೋಭಿಸುತ್ತಿರುವ ಶ್ರೀಮಧ್ವಾಚಾರ್ಯರೆಂಬ ನಾರಾಯಣನು ಬಂದಿದ್ದಾನೆ. ಎಲೈ ಮಾಯಾವಾದಿಗಳೆಂಬ ದೈತ್ಯರೇ ! ಶ್ರೀಮನ್ಮಹಾವಿಷ್ಣುವು ದೈತ್ಯರನ್ನು ನಿಗ್ರಹಿಸುವಂತೆ ನಾರಾಯಣ-ನಂತೆಯೇ ಇರುವ ಶ್ರೀಮನ್ಮಧ್ವಾಚಾರ್ಯರು ಮಾಯಾವಾದಿಗಳೆಂಬ ದೈತ್ಯರಾದ ನಿಮ್ಮನ್ನು ನಿಗ್ರಹಿಸುವ ಇಚ್ಛೆಯಿಂದ ಬಂದಿದ್ದಾನೆ. ನೀವು ಬದುಕಬೇಕೆಂಬ ಆಸೆಯಿದ್ದರೆ ಓಡಿರಿ ಎಂದು ಸಜ್ಜನರು ಹೇಳಿದರು ಎಂದು ತಾತ್ಪರ್ಯವು.

ವಿಶೇಷಾಂಶ— ಪಂಚರಾತ್ರವು ಶ್ಲೋಕರೂಪವಾಗಿಯೂ, ಗದ್ಯರೂಪವಾಗಿಯೂ ಇದೆ. ಛಂದೋಬದ್ಧವಾಗಿ ಪರಿಮಿತಾಕ್ಷರಗಳುಳ್ಳ ಪಂಚರಾತ್ರಕ್ಕೆ ಶ್ಲೋಕ ಎಂದು ಹೆಸರು. ಅಕ್ಷರಸಂಖ್ಯಾನಿಯಮವಿಲ್ಲದಿರುವ ಗದ್ಯರೂಪವಾದ ಪಂಚರಾತ್ರಭಾಗಕ್ಕೆ ವಿದ್ಯಾ ಎಂದು ಹೆಸರು. ಅಮಿತಾಕ್ಷರಂ ಪಂಚರಾತ್ರಂ ವಿದ್ಯೇತ್ಯಾಹುರ್ಮನೀಷಿಣಃ ! ಮಿತಾಕ್ಷರಂ ಶ್ಲೋಕವಾಚ್ಯಂ ತೂಭಯಂ ವೇದ ಉಚ್ಯತೇ ।. ಎಂಬ ಬ್ರಾಹ್ಮಪುರಾಣ ವಚನವು ಈ ವಿಷಯದಲ್ಲಿ ಪ್ರಮಾಣವಾಗಿದೆ.

ವಿಗ್ರಹ—

ವೇದವ್ರಾತಸುದರ್ಶನಃ— ವೇದಾನಾಂ ವ್ರಾತಃ ವೇದವ್ರಾತಃ, ವೇದವ್ರಾತ ಏವ ಸುದರ್ಶನಂ ಯಸ್ಯ ಸಃ ವೇದವ್ರಾತಸುದರ್ಶನಃ ।

ಪರಿಲಸತ್ತರ್ಕಾಖ್ಯಶಂಖಧ್ವನಿಃ— ಪರಿಲಸನ್ ಚ ಅಸೌ ತರ್ಕಶ್ಚ ಪರಿಲಸತ್ತರ್ಕಃ ಪರಿಲಸತ್ತರ್ಕಃ ಇತಿ ಆಖ್ಯಾ ಯಸ್ಯ ಸಃ ಪರಿಲಸತ್ತರ್ಕಾಖ್ಯಃ, ಪರಿಲಸತ್ತರ್ಕಾಖ್ಯಶ್ಚಾಸೌ ಶಂಖಶ್ಚ ಪರಿಲಸತ್ತರ್ಕಾಖ್ಯಶಂಖಃ, ಪರಿಲಸತ್ತರ್ಕಾಖ್ಯಶಂಖಸ್ಯ ಧ್ವನಿಃ ಯಸ್ಯ ಸಃ ಪರಿಲಸತ್ತರ್ಕಾಖ್ಯಶಂಖಧ್ವನಿಃ ।

ವಿಭ್ರಾಜಿಷ್ಣುಪುರಾಣಸಂಹತಿಗದಃ— ಪುರಾಣಾನಾಂ ಸಂಹತಿಃ ಪುರಾಣಸಂಹತಿಃ, ವಿಭ್ರಾಜಿಷ್ಣುಶ್ಚಾಸೌ ಪುರಾಣಸಂಹತಿಶ್ಚ ವಿಭ್ರಾಜಿಷ್ಣುಪುರಾಣಸಂಹತಿಃ, ವಿಭ್ರಾಜಿಷ್ಣುಪುರಾಣಸಂಹತಿರೇವ ಗದಾ ಯಸ್ಯ ಸಃ ವಿಭ್ರಾಜಿಷ್ಣುಪುರಾಣಸಂಹತಿಗದಃ ।

ಶ್ಲೋಕೌಘಶಾರ್ಙ್ಗಾನ್ವಿತಃ— ಶ್ಲೋಕಾನಾಂ ಓಘಃ ಯಸ್ಮಿನ್ (ಪಂಚರಾತ್ರಾಖ್ಯಗ್ರಂಥೇ) ಸಃ ಶ್ಲೋಕೌಘಃ, ಶ್ಲೋಕೌಘ ಏವ ಶಾರ್ಙ್ಗಂ ಶ್ಲೋಕೌಘಶಾರ್ಙ್ಗಂ, ಶ್ಲೋಕೌಘಶಾರ್ಙ್ಗೇಣ ಅನ್ವಿತಃ ಶ್ಲೋಕೌಘಶಾರ್ಙ್ಗಾನ್ವಿತಃ ।

ಸತ್ಸೂತ್ರೇಷ್ವಿತಿಹಾಸನಂದಕಚಣಃ— ಸಂತಿ ಚ ತಾನಿ ಸೂತ್ರಾಣಿ ಚ ಸತ್ಸೂತ್ರಾಣಿ, ಸತ್ಸೂತ್ರಾಣ್ಯೇವ ಇಷವಃ ಸತ್ಸೂತ್ರೇಷವಃ, ಇತಿಹಾಸ ಏವ ನಂದಕಃ ಇತಿಹಾಸನಂದಕಃ, ಸತ್ಸೂತ್ರಾಣಿ ಚ ಇತಿಹಾಸನಂದಕಶ್ಚ ಸತ್ಸೂತ್ರೇಷ್ವಿತಿಹಾಸನಂದಕಾಃ, ಸತ್ಸೂತ್ರೇಷ್ವಿತಿಹಾಸನಂದಕೈಃ ವಿತ್ತಃ ಸತ್ಸೂತ್ರೇಷ್ವಿತಿಹಾಸನಂದಕಚಣಃ । ಚುಂಚುಪ್ ಚಣಪೌ ಎಂಬ ಸೂತ್ರದಿಂದ ಚಣಪ್ ಪ್ರತ್ಯಯ.

ಮಾಯಾವಿದೇವದ್ವಿಷಃ— ಮಾಯಾ ಏಷಾಂ ಅಸ್ತೀತಿ ಮಾಯಾವಿನಃ, ದೇವಾನಾಂ ದ್ವಿಷಃ ದೇವದ್ವಿಷಃ, ಮಾಯಾವಿನಃ ಏವ ದೇವದ್ವಿಷಃ ಮಾಯಾವಿದೇವದ್ವಿಷಃ ।

ನಿಜಿಘೃಕ್ಷಯಾ— ನಿಗ್ರಹೀತುಂ ಇಚ್ಛಾ ನಿಜಿಘೃಕ್ಷಾ ತಯಾ ನಿಜಿಘೃಕ್ಷಯಾ।

ಕ್ರಿಯಾಪದ— ದ್ರವತ- ದ್ರುಗತೌ ಎಂಬ ಧಾತು. ಪರಸ್ಮೈಪದಿ ಅಕರ್ಮಕ ಆಜ್ಞಾಯಾಂ ಲೋಟ್ ಮಧ್ಯಮಪುರುಷೇ ಬಹುವಚನೇ 'ದ್ರವತ' ಇತಿ ರೂಪಮ್ ।

ದ್ರವತು ದ್ರವತಾತ್ ದ್ರವತಾಂ ದ್ರವಂತು, ದ್ರವ ದ್ರವತಾತ್ ದ್ರವತಂ ದ್ರವತಂ, ದ್ರವಾಣಿ ದ್ರವಾವ ದ್ರವಾಮ ॥

ಕೋಶ— ವೇದವ್ರಾತಸುದರ್ಶನಃ ಎಂಬಲ್ಲಿ ವ್ರಾತಃ = ಸಮೂಹ, 'ಸ್ತೋಮೌಘನಿಕರವ್ರಾತವಾರಸಂಘಾತಸಂಚಯಾಃ'-ಅಮರ, 'ಸ್ತ್ರಿಯಾಂ ತು ಸಂಹತಿರ್ವೃಂದಂ ನಿಕುರುಂಬಂ ಕದಂಬಕಂ' -ಅಮರ. ಶ್ಲೋಕೌಘಶಾಂರ್ಙ್ಗಾನ್ವಿತಃ ಎಂಬಲ್ಲಿ ಶ್ಲೋಕ = ಪದ್ಯ, 'ಪದ್ಯೇ ಯಶಸಿ ಚ ಶ್ಲೋಕಃ' -ಅಮರ. ಸತ್ಸೂತ್ರೇಷ್ವಿತಿಹಾಸನಂದಕಚಣಃ ಎಂಬಲ್ಲಿ ಸತ್ = ನಿರ್ದೋಷ ಉತ್ತಮ, ಸತ್ ಶಬ್ದ ಉತ್ತಮಂ ಬ್ರೂಯಾತ್ ಪ್ರಮಾಣ. ಅಲ್ಲಿಯೇ ಇಷು = ಬಾಣ. 'ಕಲಂಬ ಮಾರ್ಗಣಶರಾಃ ಪತ್ರೀರೋಪ ಇಷುರ್ದ್ವಯೋಃ' -ಅಮರ. ನಾರಾಯಣನ ಶಂಖಕ್ಕೆ ಪಾಂಚಜನ್ಯಃ ಎಂದು ಹೆಸರು. 'ಶಂಖೋ ಲಕ್ಷ್ಮೀಪತೇಃ ಪಾಂಚಜನ್ಯಃ' -ಅಮರ. ನಂದಕ = ಶ್ರೀಹರಿಯ ಖಡ್ಗ, 'ಖಡ್ಗೋಽಸ್ಯ ನಂದಕಃ' -ಹಲ. ಮಾಯಾವಿದೇವದ್ವಿಷಃ ಎಂಬಲ್ಲಿ ದೇವದ್ವಿಷಃ = ದೇವತೆಗಳ ಶತ್ರುಗಳಾದ ಅಸುರರು, 'ಪೂರ್ವದೇವಾಃ ಸುರದ್ವಿಷಃ'-ಅಮರ.

ಪ್ರಯೋಗ— ಹೇ ಮಾಯಾವಿದೇವದ್ವಿಷಃ ಯುಷ್ಮಾಭಿಃ ದ್ರೂಯತಾಂ (ಭಾವೇ)

ವೃತ್ತ— ಈ ಪದ್ಯದಲ್ಲಿ ಶಾರ್ದೂಲವಿಕ್ರೀಡಿತ ವೃತ್ತ. ಲಕ್ಷಣ- ಸೂರ್ಯಾಶ್ವೈರ್ಮಸಜಾಸ್ತತಾಃ ಸಗುರವಃ ಶಾರ್ದೂಲ ವಿಕ್ರೀಡಿತಂ ।

★ ★ ★

ಅವತಾರಿಕಾ— ಈ ರೀತಿ ವಾದಿದಿಗ್ವಿಜಯ ಮಾಡಿದ ಮೇಲೆ ಆಚಾರ್ಯರು ಏನು ಮಾಡಿದರೆಂದು ಹೇಳುತ್ತಾರೆ.

**ಇತಿ ನಿಗದತಿ ಮಾಯಾವಾದಿವಿದ್ವೇಷವೇಷೇ**
**ಶುಭಜನನಿಕರೇ ಸ್ವಾರಾಮತೋಽಸ್ಮಾತ್ ಪ್ರಯಾತಃ ।**
**ನ್ಯವಸದಮರಧಿಷ್ಣ್ಯೇ ಪ್ರಾಗ್ರವಾಟಾಭಿಧಾನೇ**
**ಗುರುಮತಿರಭಿನಂದನ್ ದೇವಮಾನಂದಮೂರ್ತಿಮ್ ॥ 54 ॥**

ಪದಚ್ಛೇದ— ಇತಿ, ನಿಗದತಿ, ಮಾಯಾವಾದಿವಿದ್ವೇಷವೇಷೇ, ಶುಭಜನನಿಕರೇ, ಸ್ವಾರಾಮತಃ, ಅಸ್ಮಾತ್, ಪ್ರಯಾತಃ, ನ್ಯವಸತ್, ಅಮರಧಿಷ್ಣ್ಯೇ, ಪ್ರಾಗ್ರ್ಯವಾಟಾಭಿಧಾನೇ, ಗುರುಮತಿಃ, ಅಭಿನಂದನ್, ದೇವಂ, ಆನಂದಮೂರ್ತಿಂ ।

ಅನ್ವಯ— ಮಾಯಾವಾದಿವಿದ್ವೇಷವೇಷೇ, ಶುಭಜನನಿಕರೇ ಇತಿ ನಿಗದತಿ ಸತಿ, ಅಸ್ಮಾತ್ ಸ್ವಾರಾಮತಃ ಪ್ರಯಾತಃ ಗುರುಮತಿಃ ಪ್ರಾಗ್ರ್ಯವಾಟಾಭಿಧಾನೇ ಅಮರಧಿಷ್ಣ್ಯೇ, ಆನಂದಮೂರ್ತಿಂ ದೇವಂ ಅಭಿನಂದನ್ ನ್ಯವಸತ್ ।

ಅನ್ವಯಾರ್ಥ—

**ಮಾಯಾವಾದಿ ವಿದ್ವೇಷ ವೇಷೇ** = ಪ್ರಪಂಚವು ಮಾಯಕಲ್ಪಿತ ಎಂದು ಹೇಳುವವರಲ್ಲಿ ಶತ್ರುತ್ವವೆಂಬ ಅಲಂಕಾರವುಳ್ಳ
**ಶುಭಜನನಿಕರೇ** = ಸಜ್ಜನರ ಸಮೂಹವು
**ಇತಿ ನಿಗದತಿ (ಸತಿ)** = ಈ ರೀತಿ ಹೇಳುತ್ತಿರಲು
**ಅಸ್ಮಾತ್ ಸ್ವಾರಾಮತಃ** = ಈ ಕಾವು ಎಂಬ ಗ್ರಾಮ (ಮಠ)ದಿಂದ
**ಪ್ರಯಾತಃ** = ಹೊರಟ
**ಗುರುಮತಿಃ** = ಶ್ರೀಪೂರ್ಣಪ್ರಜ್ಞರು
**ಪ್ರಾಗ್ಯವಾಟ ಅಭಿಧಾನೇ** = ಕೊಡಿಪಾಡಿಯೆಂದು ಹೆಸರುಳ್ಳ
**ಅಮರಧಿಷ್ಣ್ಯೇ** = ದೇವಾಲಯದಲ್ಲಿ
**ಆನಂದಮೂರ್ತಿಂ** = ಆನಂದವೇ ದೇಹವಾಗಿ ಉಳ್ಳ
**ದೇವಂ** = ಜನಾರ್ದನಸ್ವಾಮಿಯನ್ನು
**ಅಭಿನಂದನ್** = ನೋಡಿ ಸಂತೋಷಪಡುತ್ತಾ
**ನ್ಯವಸತ್** = ವಾಸ ಮಾಡಿದರು.

ತಾತ್ಪರ್ಯ— ಸಜ್ಜನರೂ ಹರಿಭಕ್ತರೂ ಆದ ಸಾತ್ತ್ವಿಕ ಚೇತನರಿಗೆ ಮಾಯಾವಾದಿಗಳಲ್ಲಿ ತಿರಸ್ಕಾರ ಬುದ್ಧಿಯು ಅಂದರೆ ಹಗೆತನವು ಅಲಂಕಾರವೇ ಆಗಿದೆ. ಆದುದರಿಂದ ಹಿಂದೆ ಹೇಳಿದಂತೆ 'ಆಸ್ತಾಮಾಸ್ತಾಂ ಏಷ ವೋ ವಿಶ್ವಮೋಷಃ' ಇತ್ಯಾದಿಯಾಗಿ ಸಜ್ಜನರು ಹೇಳುತ್ತಿದ್ದರು. ಆಗ ಶ್ರೀಮಧ್ವಾಚಾರ್ಯರು ತನಗೂ ಪದ್ಮತೀರ್ಥಾದಿಗಳಿಗೂ ವಾದವು ನಡೆದ 'ಕಾವು' ಎಂಬ ಹಳ್ಳಿಯಿಂದ ಹೊರಟರು. ಅಲ್ಲೀದ ಕೊಡಿಪಾಡಿ ಎಂಬ ದೇವಾಲಯಕ್ಕೆ ಬಂದು ಅಲ್ಲಿಂದ ಆನಂದ-ದೇಹನಾದ ಶ್ರೀಜನಾರ್ದನಸ್ವಾಮಿ ಎಂಬ ದೇವರನ್ನು ನೋಡಿ ಆನಂದಪಡುತ್ತಾ ಆ ದೇವರ ಸ್ತೋತ್ರ ಮಾಡುತ್ತಾ, ಅಲ್ಲಿಯೇ ಚಾತುರ್ಮಾಸ್ಯ ವ್ರತವನ್ನು ಕೈಗೊಂಡು ವಾಸಮಾಡಿದರು.

ವಿಗ್ರಹ—

**ಮಾಯಾವಾದಿವಿದ್ವೇಷವೇಷಃ—** ಮಾಯಾವಾದಿಷು ವಿದ್ವೇಷಃ ಏವ ವೇಷಃ ಯಸ್ಯ ಸಃ ಮಾಯಾವಾದಿ-ವಿದ್ವೇಷವೇಷಃ, ತಸ್ಮಿನ್ ಮಾಯಾವಾದಿವಿದ್ವೇಷವೇಷೇ ।

**ಶುಭಜನನಿಕರೇ—** ಶುಭಾಶ್ಚ ತೇ ಜನಾಶ್ಚ ಶುಭಜನಾಃ, ಶುಭಜನಾನಾಂ ನಿಕರಃ ಶುಭಜನನಿಕರಃ, ತಸ್ಮಿನ್ ಶುಭಜನನಿಕರೇ ।

**ಸ್ವಾರಾಮತಃ—** ಸು ಶೋಭನಶ್ಚಾಸೌ ಆರಾಮಶ್ಚ ಸ್ವಾರಾಮಃ, ಸ್ವಾರಾಮಾತ್ ಇತಿ ಸ್ವಾರಾಮತಃ, ಅಮರಾಣಾಂ ಧಿಷ್ಣ್ಯಂ ಅಮರಧಿಷ್ಣ್ಯಂ ತಸ್ಮಿನ್ ।

**ಪ್ರಾಗ್ಯವಾಟಾಭಿಧಾನೇ—** ಪ್ರಾಗ್ರ್ಯಂ ಚ ತತ್ ವಾಟಂ ಚ ಪ್ರಾಗ್ರ್ಯವಾಟಂ, ಪ್ರಾಗ್ರ್ಯವಾಟಂ ಇತಿ ಅಭಿಧಾನಂ ಯಸ್ಯ ತಸ್ಮಿನ್ ।

**ಕ್ರಿಯಾಪದ—** ನ್ಯವಸತ್- ವಸನಿವಾಸೇ ಅಕರ್ಮಕ ಅನಿಟ್ ಪರಸ್ಮೈಪದಿ ಅನದ್ಯತನಭೂತೇ ಲಙ್ ನಿ ಉಪಸರ್ಗ ಪ್ರಥಮಪುರುಷೇ ಏಕವಚನೇ 'ಅವಸತ್ ಇತಿ ರೂಪಮ್ ।

ನಿ + ಅವಸತ್ ಅವಸತಾಂ ಅವಸನ್, ಅವಸಃ ಅವಸತಂ ಅವಸತ, ಅವಸಂ ಅವಸಾವ ಅವಸಾಮ ॥

**ಕೋಶ—** ಸ್ವಾರಾಮತಃ ಎಂಬಲ್ಲಿ ಆರಾಮ ಎಂದರೆ ತೋಟ 'ಆರಾಮಃ ಸ್ಯಾದುಪವನಂ' -ಅಮರ. ಅಮರಧಿಷ್ಣ್ಯೇ ಎಂಬಲ್ಲಿ ಧಿಷ್ಣ್ಯಂ = ಆಲಯ ಮನೆ, 'ಧಿಷ್ಣ್ಯಮೋಕೋ ನಿವಸನಂ ಸ್ಥಾನಾವಸಥವಾಸ್ತು ಚ' -ಅಮರ.

**ಪ್ರಯೋಗ—** ಅಸ್ಮಾತ್ ಸ್ವಾರಾಮತಃ ಪ್ರಯಾತೇನ ಗುರುಮತಿನಾ ಪ್ರಾಗ್ಯವಾಟಾಭಿಧಾನೇ ಅಮರಧಿಷ್ಣ್ಯೇ ಆನಂದಮೂರ್ತಿಂ ದೇವಂ ಅಭಿನಂದತಾ ಔಷ್ಯತ (ಭಾವೇ) ।

**ಭಾವಪ್ರಕಾಶಿಕಾ ವ್ಯಾಖ್ಯಾ ವಿಶೇಷಾಂಶ—** ಸ್ವಾರಾಮಸ್ಯ ಕಾವು ಇತ್ಯಪಭ್ರಷ್ಟಭಾಷಾ। ಪ್ರಾಗ್ರ್ಯವಾಟಸ್ಯ ಕೊಡಿಪಾಡಿ ಇತಿ। ಸ್ವಾರಾಮತಃ ಎಂಬಲ್ಲಿ ಸ್ವಾರಾಮ ಎಂದರೆ ಕಾವು ಎಂದು ದೇಶಭಾಷೆಯಲ್ಲಿ ಪ್ರಸಿದ್ಧವಾದ ಸ್ಥಳ. ಪ್ರಾಗ್ಯವಾಟಾಭಿಧಾನೇ ಎಂಬಲ್ಲಿ ಪ್ರಾಗ್ರ್ಯವಾಟ ಎಂದರೆ ದೇಶಭಾಷೆಯಲ್ಲಿ ಕೊಡಿಪಾಡಿ ಎಂದು ಪ್ರಸಿದ್ಧವಾದ ಸ್ಥಳ.

**ವೃತ್ತ—** ಈ ಶ್ಲೋಕದಲ್ಲಿ ಮಾಲಿನೀ ವೃತ್ತ. 'ನನಮಯಯ ಯುತೇಯಂ ಮಾಲಿನೀಭೋಗಿಲೋಕೈಃ' ಎಂದು ಅದರ ಲಕ್ಷಣ.

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ದ್ವಾದಶಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ತ್ರಯೋದಶಃ ಸರ್ಗಃ

### ಹದಿಮೂರನೆಯ ಸರ್ಗದ ಕಥಾಸಾರ

ಶ್ರೀಮನ್ಮಾಧ್ವಾಚಾರ್ಯರು ಕೊಡಪಾಡಿ (ಪ್ರಾಗ್ವವಾಟ) ಗ್ರಾಮದ ದೇವಾಲಯದಲ್ಲಿ ಚಾತುರ್ಮಾಸ್ಯ ವ್ರತವನ್ನು ಸಮಾಪ್ತಿಗೊಳಿಸಿದರು. ಅನಂತರ ತಮ್ಮ ಶಿಷ್ಯರ ಆಹ್ವಾನದಂತೆ ಸಹ್ಯಾದ್ರಿಗೆ (ಪಶ್ಚಿಮಘಟ್ಟದ) ಮೇಲ್ಭಾಗದ ಪ್ರದೇಶಕ್ಕೆ ಬಂದಿದ್ದರು. ಅಲ್ಲಿಗೆ ತೌಳವದೇಶದ ಒಂದು ಭಾಗಕ್ಕೆ ರಾಜನಾದ ಜಯಸಿಂಹನು ಶ್ರೀಮಧ್ವಾಚಾರ್ಯರು ತನ್ನ ರಾಜ್ಯಕ್ಕೆ ಬರಬೇಕೆಂದು ಪ್ರಾರ್ಥಿಸಿ ತನ್ನ ದೂತನ ಮೂಲಕ ಹೇಳಿಕಳುಹಿಸಿದನು. ಅದರಂತೆ ಶ್ರೀಮಧ್ವಾಚಾರ್ಯರು ಸಹ್ಯಾದ್ರಿಯ ಮೇಲ್ಭಾಗದ ದೇಶದಿಂದ ಪಶ್ಚಿಮದಿಕ್ಕಿಗೆ ತೆರಳಿದರು. ಅಲ್ಲಿ ಅವರನ್ನು ಅನೇಕ ಮಂದಿ ಸಜ್ಜನರು ಎದುರುಗೊಂಡು ಪೂಜಿಸಿದರು. ಅವರ ಜೊತೆಯಲ್ಲಿದ್ದ ಸಜ್ಜನ ಸಮೂಹವು ಬರಬರುತ್ತಾ ಗಂಗಾಪ್ರವಾಹದಂತೆ ಅಧಿಕವಾಗುತ್ತಾ ಬಂತು. ಅವರು ಪಾವನವಾದ ಗಂಗಾಪ್ರವಾಹದಂತೆ ಅನೇಕ ಸಜ್ಜನರನ್ನು ತಮ್ಮ ಭಕ್ತರನ್ನಾಗಿ, ಶಿಷ್ಯರನ್ನಾಗಿ ಮಾಡಿಕೊಂಡು, 'ಕಬೆ ನಾಡು' ಎಂದು ಪ್ರಸಿದ್ಧವಾದ ಜಯಸಿಂಹನ ರಾಜ್ಯವನ್ನು ಪ್ರವೇಶಿಸಿ ಅಲ್ಲಿ 'ಮದನೇಶ್ವರ' ಎಂಬ ದೇವಾಲಯವನ್ನು ಪ್ರವೇಶಿಸಿದರು. ಅಲ್ಲಿ ಒಂದು ರಾತ್ರಿಯನ್ನು ಕಳೆದು, ಬೆಳಿಗ್ಗೆ ಬೇಗನೇ ಎದ್ದು ಪ್ರಾತರಾಹ್ನಿಕಗಳನ್ನು ಪೂರೈಸಿ ಮುಂದಿನ ಪ್ರಯಾಣಕ್ಕೆ ಸಿದ್ಧರಾದರು. ಶಿಷ್ಯರು ತಾವೂ ಕೂಡಲೇ ಪ್ರಾತರಾಹ್ನಿಕಗಳನ್ನು ಪೂರೈಸಿ, ಅಲ್ಲಿ ಹರಡಿದ್ದ ಕಾವಿಬಟ್ಟೆ, ದಂಡ ಕಮಂಡಲು, ಪುಸ್ತಕ ಮುಂತಾದವುಗಳನ್ನು ಎತ್ತಿ ಗಂಟುಕಟ್ಟಿದರು. ಶ್ರೀಮಧ್ವಾಚಾರ್ಯರು ಗೋಪಿಚಂದನದಿಂದ ದ್ವಾದಶ ನಾಮಗಳನ್ನು ಮತ್ತು ಆ ನಾಮಗಳಿಗೆ ಸರಿಯಾಗಿ ಶಂಖಚಕ್ರಾದಿ ಮುದ್ರೆಗಳನ್ನು ಧರಿಸಿದ್ದರು. ಇವೆಲ್ಲಾ ಸರಿಯಾಗಿ ಇವೆ ಎಂದು ತಿಳಿದು ಒಬ್ಬ ಶಿಷ್ಯನು ಆಚಾರ್ಯರ ಕಂಠಕ್ಕೆ ಒಂದು ತುಳಸೀಮಾಲೆಯನ್ನು ಹಾಕಿದನು.

ಒಬ್ಬ ಸಂನ್ಯಾಸಿ ಶಿಷ್ಯರು ಪರಿಶುದ್ಧರಾಗಿ ಬಂದು ಆಚಾರ್ಯರ ದೇವರ ಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡರು. ಇನ್ನೂ ಕೆಲವು ಶಿಷ್ಯರು ಆಚಾರ್ಯರ ಜಲಪಾತ್ರ, ಪುಸ್ತಕಗಳು ಮೊದಲಾದ ವಸ್ತುಗಳನ್ನು ಗಂಟುಕಟ್ಟಿ ತಾವೇ ಹೊತ್ತುಕೊಂಡರು. ಯಾವ ಶಿಷ್ಯನು ಸೋಮಾರಿಯಾಗಿ ಉಳಿಯಲಿಲ್ಲ. ಹೀಗೆ ಎಲ್ಲರೂ ಸಂಭ್ರಮದಿಂದ ಹೊರಡಲು ಸಿದ್ಧರಾದಾಗ ಮದನೇಶ್ವರ ದೇವಾಲಯದ ದೊಡ್ಡ ಘಂಟೆಯನ್ನು ಯಾವನೋ ಒಬ್ಬ ಭಕ್ತನು ಸ್ವಾಭಾವಿಕವಾಗಿಯೇ ಬಾರಿಸಿದನು. ಶ್ರೀಪೂರ್ಣಪ್ರಜ್ಞರು ಈ ಘಂಟಾನಾದದ ನೆಪದಿಂದ ಶ್ರೀಮದನೇಶ್ವರನು ತಾವು ಹೊರಡಲು ಮುಹೂರ್ತವನ್ನು ಸೂಚಿಸಿ ಅನುಮೋದಿಸುತ್ತಿದ್ದಾನೆಂದು ಭಾವಿಸಿ ಅಲ್ಲಿಂದ ಮುಂದಕ್ಕೆ ಪ್ರಯಾಣ ಮಾಡಿದರು.

ದಾರಿಯಲ್ಲಿ ಆಚಾರ್ಯರ ತಲೆಯ ಮೇಲೆ ಒಬ್ಬ ಶಿಷ್ಯನು ಛತ್ರಿಯನ್ನು ಎತ್ತರಿಸಿ ಹಿಡಿದು ಅವರ ಹಿಂಭಾಗದಲ್ಲಿ ಬರುತ್ತಿದ್ದನು. ದಾರಿಯಲ್ಲಿ ಭಕ್ತಿಯಿಂದ ಆಚಾರ್ಯರನ್ನು ಸೇವಿಸುವುದಕ್ಕಾಗಿ ದಕ್ಷನಾದ ಶಿಷ್ಯನೊಬ್ಬನು ಆಚಾರ್ಯರನ್ನು ತನ್ನ ಹೆಗಲ ಮೇಲೇರಿಸಿ ಹೊತ್ತುಕೊಂಡು ನಡೆದನು. ಅವರ ಹಿಂದೆ ಸಂನ್ಯಾಸಿಗಳು, ಗೃಹಸ್ಥರು, ಬ್ರಹ್ಮಚಾರಿಗಳು ಗುಂಪು

ಗುಂಪಾಗಿ ಬರುತ್ತಿದ್ದರು. ಶ್ರೀಮಧ್ವಾಚಾರ್ಯರ ಶಿಷ್ಯರು ದಾರಿಯಲ್ಲಿ ನಡೆಯುತ್ತಾ ಇರುವಾಗ ಆಗಾಗ್ಗೆ ಆಚಾರ್ಯರನ್ನು ನೋಡುತ್ತಿದ್ದರು. ಆಗ ಅವರಿಗೆ ದಾರಿ ನಡೆದ ಆಯಾಸವೆಲ್ಲವೂ ಪರಿಹಾರವಾಗುತ್ತಿತ್ತು. ಹೀಗೆ ಶ್ರೀ ಮಧ್ವಾಚಾರ್ಯರು ಪ್ರಯಾಣ ಮಾಡುತ್ತಾ ಬರುತ್ತಿರುವಾಗ ಶ್ರೀ ಮದನೇಶ್ವರ ದೇವಾಲಯದ ಸಮೀಪದ ಪ್ರದೇಶದಲ್ಲಿ ಜಯಸಿಂಹ ರಾಜನು ಆಚಾರ್ಯರನ್ನು ಎದುರುಗೊಂಡನು. ರಾಜನು ಮೊದಲೇ ತಾನು ವಾಹನದಿಂದ ಇಳಿದು ಸೈನಿಕರನ್ನು ದೂರದಲ್ಲಿಯೇ ನಿಲ್ಲಿಸಿ ಕೆಲವುಮಂದಿ ಬ್ರಾಹ್ಮಣರೊಡನೆ ಬಂದು ತ್ರಿಲೋಕಪೂಜ್ಯರಾದ ಆಚಾರ್ಯರ ಕಾಲುಗಳಿಗೆ ಎರಗಿದನು. ಜಯಸಿಂಹ ರಾಜನನ್ನು ನೋಡಲು ಅಲ್ಲಿಯೇ ಪಕ್ಕದ ಎರಡು ಗ್ರಾಮಗಳ ಜನರು ಸೇರಿದ್ದರು. ಅವರು ರಾಜನೇ ಆದರ ಗೌರವಗಳಿಂದ ಸ್ವಾಗತಿಸಿ ನಮಸ್ಕರಿಸುತ್ತಿರುವ ಆಚಾರ್ಯರನ್ನು ಬಹಳ ಕುತೂಹಲದಿಂದ ಮತ್ತೂ ಮತ್ತೂ ನೋಡುತ್ತಾ ಆನಂದಪಟ್ಟರು.

ಶ್ರೀಮಧ್ವಾಚಾರ್ಯರು ಬರುತ್ತಿರುವ ದೃಶ್ಯವು ಅದ್ಭುತವಾಗಿತ್ತು. ಅವರ ಕೆಲವು ಶಿಷ್ಯರು ಆಚಾರ್ಯರೇ ರಚಿಸಿದ ಹರಿಸ್ತೋತ್ರವನ್ನು ಹೇಳುತ್ತ ಅಕ್ಷಮಾಲೆ, ಶಂಖಚಕ್ರಾದಿ ಚಿಹ್ನೆಗಳಿಂದ ಅಲಂಕೃತರಾಗಿ ಕುಣಿಯುತ್ತಿದ್ದರು. ಜಯಸಿಂಹ ರಾಜನು ಕೈಮುಗಿದು ಜನರ ಗುಂಪುಗದ್ದಲವನ್ನು ಸಹಿಸಿಕೊಂಡಿದ್ದು ಆಚಾರ್ಯರ ಸೇವಕತ್ವವನ್ನು ವಹಿಸಿ ಹಿಂಬಾಲಿಸಿ ಬರುತ್ತಿದ್ದನು. ಆಚಾರ್ಯರ ತೇಜಸ್ಸನ್ನು ನೋಡಿ ಇವರು ಹೀಗೆಯೇ ಎಂದೂ ನಿರ್ಣಯಿಸಲೂ ಆಗುತ್ತಿರಲಿಲ್ಲ. ಭೂಮಿಗೆ ಇಳಿದ ಮತ್ತೊಬ್ಬ ಸೂರ್ಯನೋ ಎಂಬಂತೆ ಆಚಾರ್ಯರು ತೋರುತ್ತಿದ್ದರು. ಆಚಾರ್ಯರು ವೇಗವಾಗಿ ನಡೆಯುತ್ತಿದ್ದರೂ ಜೊತೆಗೆ ಬರುವ ಜನರಿಗೆ ಆಯಾಸವು ಗೊತ್ತಾಗದುದರಿಂದ ಅವರು ಮೆಲ್ಲನೆ ನಡೆಯುತ್ತಾರೆಂದೇ ತೋರುತ್ತಿತ್ತು. ಅವರು ಕೆಂಪಾದ ಪಾದಗಳಿಂದ ತರುಣಸಿಂಹದಂತೆ ನಡೆಯುತ್ತಾ ಬರುತ್ತಿದ್ದರೆ ಅವರು ಕಾಲಿಟ್ಟ ಸ್ಥಳವು ಪವಿತ್ರವಾಗುತ್ತಿತ್ತು. ಅವರ ಉಗುರುಗಳು ಪದ್ಮರಾಗಮಣಿಯ ಕೆಂಪು ಬಣ್ಣವನ್ನೂ ನಾಚಿಸುತ್ತಿದ್ದವು. ಪಾದದ ತುದಿಯು ಆಮೆಯಂತಿದ್ದಿತು. ಕಾಲಿನ ಗಿಣ್ಣುಗಳು (ಗಂಟುಗಳು) ಹೊರಗೆ ಕಾಣಿಸದೆ ಒಳಕ್ಕೆ ಸೇರಿದಂತೆ ಇದ್ದವು, ಅವರ ಮೊಣಕಾಲುಗಳು ದೇವತೆಗಳಿಂದ ಸೇವಿಸಲ್ಪಟ್ಟವುಗಳೆಂದೇ ಎಲ್ಲರಿಗೂ ತೋರುತ್ತಿತ್ತು, ತೊಡೆಗಳು ಆನೆಯ ಸೊಂಡಿಲಿನಂತೆ ಮೇಲಿನಂತೆ ಕೆಳಗೆ ಮೊದಲು ದಪ್ಪವಾಗಿ ಕ್ರಮವಾಗಿ ದಪ್ಪ ಕಡಿಮೆಯಾಗಿ ಸುಂದರವಾಗಿದ್ದವು. ಅವರು ತಮ್ಮ ಸೊಂಟದ ಹಿಂಭಾಗ ಮುಂಭಾಗಗಳು ಮುಚ್ಚುವಂತೆ ಕಾಲಿನ ಹಿಮ್ಮಡಿಯವರೆಗೆ ಪಟ್ಟೆ ವಸ್ತ್ರವನ್ನು ಧರಿಸಿದ್ದರು. ಅವರ ಸಣ್ಣ ಹೊಟ್ಟೆ, ತ್ರಿರೇಖಾಲಂಕೃತವಾದ ಕತ್ತು, ಹೆಕಗಳು ಪರಮ ಸುಂದರವಾಗಿದ್ದವು. ಅವರು ನುಣುಪಾದ ಉಣ್ಣೆಯ ಶಾಲನ್ನು ಹೊದ್ದಿದ್ದರು. ವಿಶಾಲವಾದ ಎದೆ, ಉಬ್ಬಿದ ಹೆಗಲುಗಳು, ಗುಂಡಗೆ, ಉದ್ದವಾದ ದಪ್ಪವಾದ ತೋಳುಗಳು, ಎಂತಹವರಿಗೂ ಆಶ್ಚರ್ಯವನ್ನುಂಟು ಮಾಡುತ್ತಿದ್ದವು. ಅವರ ಕೆಂಪಾದ ಅಂಗೈಯಲ್ಲಿ ಧ್ವಜಚಕ್ರ ಮುಂತಾದ ರೇಖೆಗಳು ಸ್ಪಷ್ಟವಾಗಿ ಕಾಣಿಸುತ್ತಿದ್ದವು.

ಶ್ರೀಮಧ್ವಾಚಾರ್ಯರ ಮುಖವು ಕಳಂಕರಹಿತನಾದ ಚಂದ್ರನಂತೆ ಇತ್ತು. ಹಲ್ಲುಗಳು ಮಲ್ಲಿಗೆ ಮೊಗ್ಗುಗಳಂತೆ ಇದ್ದವು. ಅವರು ಮುಗುಳ್ನಗೆಯಿಂದ ನಮಸ್ಕಾರ ಮಾಡುತ್ತಿರುವ ಜನರನ್ನು ಅಭಿನಂದಿಸುತ್ತಿರುವಾಗ ಆಶೀರ್ವದಿಸುತ್ತಿರುವಾಗ ಅವರ ಕಣ್ಣುಗಳೂ ಅರಳಿ ಸುಂದರವಾಗಿ ಕಾಣಿಸುತ್ತಿದ್ದವು. ಜನರು ಅವರನ್ನು ನೋಡಿ ಸಂತೋಷಪಡುತ್ತಿದ್ದರು. ಸುಂದರವಾದ ಕಿವಿಗಳಲ್ಲಿ ತುಳಸೀಮಂಜರಿಯನ್ನಿಟ್ಟುಕೊಂಡಿದ್ದ ಅವರ ಕೆನ್ನೆಗಳೆರಡೂ ಅತ್ಯಂತ ಶೋಭಾಯಮಾನವಾಗಿದ್ದವು. ಅವರ ಹುಬ್ಬುಗಳೆರಡೂ ಸಂಜ್ಞೆಯಿಂದಲೇ ಮೂರು ಲೋಕಗಳ ಉತ್ಪತ್ತಿ ಲಯಗಳನ್ನು ಮಾಡುವ ಸಾಮರ್ಥ್ಯವುಳ್ಳವುಗಳೆಂದು ತೋರುತ್ತಿತ್ತು. ಅವರ ತಲೆಯೂ ಸುಂದರವಾಗಿತ್ತು. ಇಂತಹ ಶ್ರೀಮಧ್ವಾಚಾರ್ಯರನ್ನು ಜನರು ನೋಡಿದರು.

ಸಾಮುದ್ರಿಕ ಲಕ್ಷಣಗಳನ್ನು ಅರಿತ ಪಂಡಿತರು, ಶ್ರೀ ಮಧ್ವಾಚಾರ್ಯರ ಅಂಗಗಳನ್ನು ಅಳೆದು ನೋಡಿ ಪ್ರತಿಮಾ ಲಕ್ಷಣ ಶಾಸ್ತ್ರದಲ್ಲಿ ಹೇಳಿದಂತೆಯೇ ಇವರ ಅಂಗಗಳಿರುವುದರಿಂದ ಇನ್ನು ಮುಂದೆ ಪ್ರತಿಮೆಗಳನ್ನು ತಯಾರಿಸಲು ನಮಗೆ ಶ್ರೀಮಧ್ವಾಚಾರ್ಯರು ಉತ್ತಮವಾದ ಮಾದರಿ ಎಂದು ನಿರ್ಣಯಿಸಿದರು. ಎಲ್ಲಾ ಅವತಾರಗಳಲ್ಲಿಯೂ ಶ್ರೀಮಧ್ವಾಚಾರ್ಯರು ಸಲ್ಲಕ್ಷಣ ಸಂಪನ್ನರೇ ಆದುದರಿಂದ ಅವರನ್ನು ಈಗ ಮಾತ್ರ ಸಲ್ಲಕ್ಷಣವಂತರೆಂದು ಹೇಳುವುದರಲ್ಲಿ ಏನೂ ವಿಶೇಷವಿಲ್ಲ. ಸಾವಿರಾರು ಜನರು ಶ್ರೀ ಮಧ್ವಾಚಾರ್ಯರನ್ನು ನೋಡಬೇಕೆಂದು ಸೇರಿರುವಾಗ ಕೆಲವರು ನೂಕುನುಗ್ಗಲಿನ ಭಯದಿಂದ ದೂರ ನಿಂತಿದ್ದರು. ಆಗ ಶ್ರೀ ಮಧ್ವಾಚಾರ್ಯರು ತಮ್ಮ ಯೋಗಸಾಮರ್ಥ್ಯದಿಂದ ಎತ್ತರವಾಗಿ

ಬೆಳೆದು ಎದೆಯಿಂದ ಎಲ್ಲರಿಗೂ ಕಾಣಿಸಿಕೊಂಡರು. ಹೀಗೆ ಸಂತೋಷದಿಂದ ಕೈಮುಗಿದುಕೊಂಡು ವಿಧೇಯರಾಗಿ ಹಿಂಬಾಲಿಸುತ್ತಿರುವ ಜನರಿಂದ ಪರಿವೃತರಾಗಿ ಆಚಾರ್ಯರು ವಿಷ್ಣುಮಂಗಲ ದೇವಾಲಯವನ್ನು ಪ್ರವೇಶಿಸಿದರು. ಶ್ರೀ ಮದನೇಶ್ವರ ದೇವಾಲಯದಿಂದ ಸಮೀಪ ಪ್ರದೇಶದವರೆಗೂ ರಾಜನೂ ಜೊತೆಗೆ ಬಂದಿದ್ದನು.

ಅನೇಕ ಮಂದಿ ಕೈ ಕೆಳಗಿನ ರಾಜರಿಂದ ಪರಿವೃತನಾದ ಜಯಸಿಂಹರಾಜನೊಡನೆ ಆಚಾರ್ಯರು ಸಭೆಯಲ್ಲಿ ಬಂದು ಕುಳಿತರು. ಅಲ್ಲಿ ಶ್ರೀಮಧ್ವಾಚಾರ್ಯರು ಶ್ರೀಮದ್ಭಾಗವತದ ಕಥೆಯ ಪ್ರವಚನ ಮಾಡಿದರು. ಆಗ ಒಳ್ಳೆಯ ಕಂಠದಿಂದ ಕೂಡಿದ ಶ್ರೀಹೃಷೀಕೇಶತೀರ್ಥರೆಂಬುವರು ಶ್ಲೋಕಗಳನ್ನು ಓದುತ್ತಿದ್ದರು. ಶ್ರೀಮಧ್ವಾಚಾರ್ಯರ ನಡಿಗೆ, ಕುಳಿತುಕೊಂಡಿ-ರುವುದು. ಪುರಾಣ ಪ್ರವಚನ ಮೊದಲಾದ ಕಾರ್ಯಗಳನ್ನು ಸ್ಮರಿಸಿದರೂ ಭಕ್ತರಿಗೆ ಸಂಸಾರ ದುಃಖವು ನಶಿಸಿ ಹೋಗಿ ಮೋಕ್ಷ ಪ್ರಾಪ್ತಿಯಾಗುತ್ತದೆ.

ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರ ವೃತ್ತಾಂತ = ಲಿಕುಚ ವಂಶದಲ್ಲಿ ಅಂಗಿರಸ ಗೋತ್ರದ ಸುಬ್ರಹ್ಮಣ್ಯ ಪಂಡಿತರೆಂಬ ಕವಿಗಳು ಇದ್ದರು. ಅವರು ಎಲ್ಲಾ ವಾದಿಗಳಿಗೂ ವಂದನೀಯರಾಗಿದ್ದರು. ಈ ಸುಬ್ರಹ್ಮಣ್ಯ ಪಂಡಿತರಿಗೆ ಅನುಕೂಲಳಾದ ಹೆಂಡತಿಯಿದ್ದಳು. ಅವಳು ಶ್ರೀಕೃಷ್ಣ ಭಕ್ತಳು. ಅನೇಕ ಮಕ್ಕಳು ಜನಿಸಿದರೂ ಜನ್ಮಾಂತರದ ದುರದೃಷ್ಟದಿಂದ ಅವರೆಲ್ಲಾ ಸತ್ತುಹೋಗಿದ್ದರು. ಆದರೂ ತಮ್ಮ ಕುಲವನ್ನು ಉದ್ಧಾರ ಮಾಡುವ ಒಬ್ಬನಾದರೂ ಮಗನು ಬೇಕೆಂಬ ಆಶೆಯು ಅವಳಲ್ಲಿ ಬಹಳ ಹೆಚ್ಚಾಗಿ ಇತ್ತು. ಅವಳು ದೀರ್ಘಾಯುಷ್ಮಂತನಾದ ಪುತ್ರನನ್ನು ಪಡೆಯಬೇಕೆಂದು ಶಂಕರ ಮತ್ತು ನಾರಾಯಣ ದೇವರನ್ನು ಸೇವಿಸಿದಳು. ದೈವಾನುಗ್ರಹದಿಂದ ಆ ತಾಯಿಯು ಒಂದು ಮಗುವನ್ನು ಪ್ರಸವಿಸಿದಳು. ಸುಬ್ರಹ್ಮಣ್ಯ ಪಂಡಿತರು ತಮ್ಮ ಸುಂದರನಾದ ಮಗನಿಗೆ ಉಚಿತವಾದ ತ್ರಿವಿಕ್ರಮ ಎಂಬ ಹೆಸರನ್ನಿಟ್ಟರು. ತ್ರಿವಿಕ್ರಮನು ತೊದಲು ನುಡಿಯುತ್ತಿರುವಾಗಲೇ ಸಂಸ್ಕೃತ ಭಾಷೆಯಲ್ಲಿ ನಿರ್ದೋಷವಾಗಿ ಶ್ಲೋಕಗಳನ್ನು ರಚಿಸಿ ಹೇಳುತ್ತಿದ್ದನು. ಆ ತ್ರಿವಿಕ್ರಮನು ಬಾಲ್ಯದಲ್ಲಿಯೇ ಉಷಾಹರಣವೆಂಬ ಶೃಂಗಾರರಸಭರಿತವಾದ ಕಾವ್ಯವನ್ನು ರಚಿಸಿದನು. ತ್ರಿವಿಕ್ರಮ ಪಂಡಿತಾಚಾರ್ಯರು ಶಾಸ್ತ್ರಾಭ್ಯಾಸವನ್ನು ಮಾಡಿದರು. ಯುವಕರಾದರೂ ಆಗಿನ ಕಾಲದಲ್ಲಿ ಪ್ರಸಿದ್ಧರಾದ ಭಾನುಪಂಡಿತ ಮುಂತಾದವರೂ ತ್ರಿವಿಕ್ರಮರ ಪಾಂಡಿತ್ಯಕ್ಕೆ ತಲೆಬಾಗಿದರು. ತ್ರಿವಿಕ್ರಮರಿಗೆ ಒಂದು ಲಕ್ಷದ ಇಪ್ಪತ್ತೈದು ಗ್ರಂಥಸಂಖ್ಯೆಯುಳ್ಳ (ಗ್ರಂಥ = ಮೂವತ್ತೆರಡು ಅಕ್ಷರಗಳು) ಅದ್ವೈತ ಶಾಸ್ತ್ರವು ಮುಖೋದ್ಗತವಾಗಿತ್ತು. ಪರರ ಅಭಿಪ್ರಾಯವನ್ನು ಖಂಡಿಸಿ ತನ್ನ ಪಕ್ಷವನ್ನು ಸಾಧಿಸುವುದರಲ್ಲಿ ತ್ರಿವಿಕ್ರಮರು ಬಹಳ ಬುದ್ಧಿವಂತರಾಗಿದ್ದರು. ಇಂತಹ ಮಗನನ್ನು ಕುರಿತು ತಂದೆಯಾದ ಸುಬ್ರಹ್ಮಣ್ಯ ಪಂಡಿತರು ಒಂದು ದಿನ ಏಕಾಂತದಲ್ಲಿ ಹೇಳಿದರು.

ಮಗು ನಾನು ಚೆನ್ನಾಗಿ ವಿಚಾರ ಮಾಡಿ ನಿಶ್ಚಯಿಸಿದ ಒಂದು ಮಾತನ್ನು ಹೇಳುತ್ತೇನೆ ಕೇಳು. ಬ್ರಹ್ಮನು ನಿರ್ಗುಣನು ಎಂದು ಉಪಾಸನೆ ಮಾಡುವ ಪದ್ಧತಿಯು ಈಗ ಪ್ರಚಲಿತವಾಗಿದೆ. ಆದರೆ ಹಾಗೆ ಮಾಡಿದರೆ ಜ್ಞಾನ ಆನಂದಾದಿ ಎಲ್ಲಾ ಗುಣಗಳಿಲ್ಲದ ಮೋಕ್ಷವೇ ಲಭಿಸೀತು. ಅದು ಯಾರೂ ಬಯಸುವ ಮೋಕ್ಷವಲ್ಲ. ಕತ್ತಲೆಯಂತೆ ದುಃಖಕರವಾದ ಸ್ಥಿತಿಯು, ಆದುದರಿಂದ ನೀನು ಜ್ಞಾನಾನಂದಾದಿ ಗುಣಗಳಿಂದ ಕೂಡಿದ ಸ್ವಸ್ವರೂಪದ ಪ್ರಾಪ್ತಿ ಎಂಬ ಮೋಕ್ಷಕ್ಕಾಗಿ ಅಂತಹ ಅನಂತ ಗುಣಗಳಿಂದ ಕೂಡಿದ ವಸುದೇವ ಸುತನಾದ ಶ್ರೀಕೃಷ್ಣನನ್ನೇ ಭಜಿಸು.

ತಂದೆಯ ಮಾತನ್ನು ಕೇಳಿದ ಮೇಲೆ ತ್ರಿವಿಕ್ರಮ ಪಂಡಿತಾಚಾರ್ಯರಿಗೆ ಸಗುಣೋಪಾಸನೆಯು ಮೋಕ್ಷಸಾಧನವೇ ಅಥವಾ ನಿರ್ಗುಣೋಪಾಸನೆಯು ಮೋಕ್ಷ ಸಾಧನವೇ ಎಂಬ ಸಂಶಯ ಉಂಟಾಯಿತು. ಆದುದರಿಂದ ವೇದಶಾಸ್ತ್ರವನ್ನು ತಾನೇ ವಿಮರ್ಶೆ ಮಾಡಿ ಉಪಾಸನಾ ಮಾರ್ಗವನ್ನು ನಿಶ್ಚಯಿಸಬೇಕೆಂದು ಆಲೋಚಿಸಿ ಮೊದಲು ಮಾಯಾವಾದಿ ಪಂಡಿತ ರಿಂದ ನಿರ್ಗುಣೋಪಾಸನೆಯ ಕ್ರಮವನ್ನು ಕೇಳಿದರು. ಅನೇಕರಿಂದ ಆ ಪ್ರಕಾರವನ್ನು ಕೇಳಿ ಒಂದು ದಿನ ತಮ್ಮ ಮನಸ್ಸಿನಲ್ಲಿ ಹೀಗೆ ಆಲೋಚಿಸಲು ಆರಂಭಿಸಿದರು.

ಪರಬ್ರಹ್ಮ ತತ್ತ್ವವನ್ನು ನಿಶ್ಚಯಿಸಲು ಸರ್ವಜ್ಞರಾದ ಶ್ರೀವೇದವ್ಯಾಸರು ರಚಿಸಿರುವ ನಾಲ್ಕು ಅಧ್ಯಾಯಗಳುಳ್ಳ ಬ್ರಹ್ಮಮೀಮಾಂಸಾ ಶಾಸ್ತ್ರವೇ ಮುಖ್ಯವಾದ ಪ್ರಮಾಣವು. ಅದಕ್ಕೆ ಭಾರತೀವಿಜಯ ಮುಂತಾದ ಇಪ್ಪತ್ತೊಂದು ಮಂದಿ

ವಿದ್ವಾಂಸರು ತಮ್ಮ ಬುದ್ಧಿಗೆ ತೋರಿದಂತೆ ಭಾಷ್ಯವನ್ನು ರಚಿಸಿದ್ದಾರೆ. ಈ ಇಪ್ಪತ್ತೊಂದು ಭಾಷ್ಯಗಳು ಪರಸ್ಪರ ವಿರುದ್ಧವಾಗಿವೆ. ಇವುಗಳಲ್ಲಿ ಯಾವುದೇ ಒಂದು ಭಾಷ್ಯವನ್ನು ಪ್ರಮಾಣವೆಂದು ಹೇಳಲು ಸಾಧ್ಯವಿಲ್ಲ. ನಾನು ಪಕ್ಷಪಾತವನ್ನೂ, ಆಗ್ರಹವನ್ನೂ ಬಿಟ್ಟು ವಿಚಾರ ಮಾಡಿದರೂ ಈ ಭಾಷ್ಯಗಳಲ್ಲಿ ಪರಸ್ಪರ ಹೊಂದಾಣಿಕೆಯಾಗುವ ಒಂದು ಭಾಗವೂ ಸಿಗುವುದಿಲ್ಲ. ಆದರೂ ನಮ್ಮ ವಂಶಪರಂಪರೆಯಿಂದ ಬಂದಿರುವ ಶಂಕರಭಾಷ್ಯವನ್ನು ನಾನು ಪ್ರೀತಿ ಆದರಗಳಿಂದ ಓದಿದೆನು. ಈಗಲೂ ಓದುತ್ತಿದ್ದೇನೆ. ಇದರಿಂದ ನನಗೆ ಒಂದು ನಿಶ್ಚಿತವಾದ ನೆಲೆಯು ಸಿಕ್ಕಿಲ್ಲ. ಉಪನಿಷತ್ತುಗಳು ಭಗವಂತನ ಉಪಾಸನೆಯ ಕ್ರಮವನ್ನು ಹೇಳಿವೆ. ಆದರೆ ಅಲ್ಪಜ್ಞರಿಗೆ ಅದು ಸರಿಯಾಗಿ ತಿಳಿಯುವುದಿಲ್ಲ. ಆದರೂ ಉಪನಿಷತ್ತಿನಲ್ಲಿ ಹೇಳಿರುವ ಉಪಾಸನೆಯ ಮಾರ್ಗವನ್ನು ಬಿಟ್ಟು ಯಾರೂ ಮೋಕ್ಷವನ್ನು ಪಡೆಯಲು ಸಾಧ್ಯವಿಲ್ಲ. ಆದ್ದರಿಂದ ಈಗ ನಾನು ಮಹಾಭಾರತ ಪಂಚರಾತ್ರ ಬ್ರಹ್ಮಸೂತ್ರ ಮೊದಲಾದ ಗ್ರಂಥಗಳಲ್ಲಿ ಹೇಳಿದ ಉಪಾಸನೆಯನ್ನು ವಿಚಾರ ಮಾಡುತ್ತೇನೆ. ಭಗವಂತನೆಂದರೆ ಸರ್ವತ್ರ ವ್ಯಾಪ್ತನು, ನಿರ್ದೋಷ ಜ್ಞಾನಸ್ವರೂಪನು, ತನಗೆ ಸಮ ಮತ್ತು ಅಧಿಕರು ಇಲ್ಲದವನು ಎಂದು ಉಪಾಸನೆ ಮಾಡಬೇಕೆಂದು ಅನೇಕ ಗ್ರಂಥಗಳಲ್ಲಿ ಅನೇಕ ಬಾರಿ ಹೇಳಿದ್ದಾರೆ. ಇದರಿಂದ ಉಪಾಸನೆಗೆ ವಿಷಯನಾದ ಆ ಪರಮಾತ್ಮನಿಗೆ ಜ್ಞಾನಾನಂದರೂಪವಾದ ಕೈಕಾಲು ಮುಂತಾದ ಅವಯವಗಳಿವೆ ಎಂದು ಸ್ಪಷ್ಟವಾಗುತ್ತದೆ. ಆದರೆ ಶಂಕರಭಾಷ್ಯದಲ್ಲಿ ಹೇಳಿದಂತೆ ಅವನು ಅವಯವಗಳುಳ್ಳವನಲ್ಲವೆಂದು ಹೇಳಿದರೆ ಈ ಬ್ರಹ್ಮನು ಪ್ರಕಾಶಸ್ವರೂಪನೂ ಎಂಬುದು ಸಿದ್ಧಿಸದೆ ಹೋದೀತು. ಏಕೆಂದರೆ ಪ್ರಕಾಶ ಎಂಬುದು ಒಂದು ಅವಯವವುಳ್ಳ ಪದಾರ್ಥವಲ್ಲವೇ! ಹೀಗೆ ಶಂಕರಭಾಷ್ಯದ ಮಥಿತಾರ್ಥದ ಪ್ರಕಾರ ಬ್ರಹ್ಮನು ತೇಜೋರೂಪನಲ್ಲವೆಂದರೇ ಬ್ರಹ್ಮವೆಂದರೆ ಮಹಾತಮಸ್ಸು ಕಗ್ಗತ್ತಲು ಎಂದಾದೀತು. ಇದನ್ನು ಯಾರಾದರೂ ವಿವೇಕಿಗಳು ಉಪಾಸನೆ ಮಾಡಿಯಾರೇ! ಹಾಗೆ ಉಪಾಸನೆ ಮಾಡಿದರೆ ಕತ್ತಲೆಯೇ ಅವರಿಗೆ ಸಿಕ್ಕಿತ್ತು. ಆದ್ದರಿಂದ ಶಂಕರಭಾಷ್ಯದಲ್ಲಿ ಹೇಳಿದ ಉಪಾಸನಾ ಕ್ರಮವು ನಮಗೆ ಸಂತೋಷವನ್ನುಂಟು ಮಾಡುವುದಿಲ್ಲ. ಹಾಗಾದರೆ ನಾನೀಗ ಏನು ಮಾಡಲಿ! ಮನ್ವಾದಿ ಸ್ಮೃತಿಗಳಲ್ಲಿ ಹೇಳಿದ ರೀತಿಯಿಂದ ನನ್ನ ವರ್ಣ ಆಶ್ರಮಕ್ಕೆ ಅನುಗುಣವಾದ ಆಚಾರವನ್ನು ಅನುಸರಿಸಿ ನಡೆಯುತ್ತಾ ವೇದ ಪುರಾಣ ಮಹಾಭಾರತ ಗ್ರಂಥಗಳನ್ನು ಸ್ವಂತವಾಗಿ ವಿಮರ್ಶಿಸಿ ನನಗೆ ತೋರಿದಂತೆ ಶ್ರೀಮನ್ನಾರಾಯಣನನ್ನು ಭಜಿಸುತ್ತೇನೆ. ಈ ಗ್ರಂಥಗಳ ತಾತ್ಪರ್ಯ ವಿಮರ್ಶೆ ಮಾಡಿದಾಗ ಶ್ರೀಮನ್ನಾರಾಯಣನು ಗುಣಪೂರ್ಣನು ಎಂದೇ ನನ್ನ ಮನಸ್ಸಿಗೆ ತೋರುತ್ತದೆ. ಆದುದರಿಂದ ನಾನು ಶ್ರೀಹರಿಯನ್ನು ಸಮಸ್ತಗುಣಪರಿಪೂರ್ಣ ದೋಷದೂರ ಎಂದೇ ಭಜಿಸುತ್ತೇನೆ.

ತ್ರಿವಿಕ್ರಮಪಂಡಿತರು ಹೀಗೆ ಆಲೋಚಿಸಿ ತಮ್ಮ ಕಾರ್ಯವನ್ನು ಮುಂದುವರಿಸಿದರು. ಆಗ ಅವರು ಪ್ರಪಂಚದಲ್ಲೆಲ್ಲಾ ಹರಡಿರುವ ಶ್ರೀಪೂರ್ಣಪ್ರಜ್ಞಾಚಾರ್ಯರ ಧವಳ ಕೀರ್ತಿಯನ್ನು ಕೇಳಿದರು. ಕೆಲವರು ಮಾಯಾವಾದಿಗಳಾದ ಪಂಡಿತರು ತ್ರಿವಿಕ್ರಮರ ಬಳಿಗೆ ಬಂದು ಹೀಗೆ ಹೇಳಲಾರಂಭಿಸಿದರು "ತ್ರಿವಿಕ್ರಮಪಂಡಿತರೇ! ಇತ್ತೀಚಿಗೆ ಈ ಪ್ರಪಂಚದಲ್ಲಿ ಒಬ್ಬ ವಿದ್ವಾಂಸನು ಹುಟ್ಟಿದ್ದಾನೆ. ಅವನು ಬಹಳ ವಾಕ್ ಚತುರ. ಪರಂಪರೆಯಿಂದ ಬಂದಿರುವ ನಮ್ಮ ಅದ್ವೈತ ಮತವನ್ನು ಅವನು ಖಂಡಿಸುತ್ತಿದ್ದಾನೆ. ಯುಕ್ತಿಶೂರರಾದ ನೀವೇ ಅವನನ್ನು ಖಂಡಿಸಬೇಕಾಗಿದೆ. ಇನ್ನು ಯಾರಿಗೂ ಆ ಸಾಮರ್ಥ್ಯವಿಲ್ಲ".

ಈ ಮಾತುಗಳನ್ನು ಕೇಳಿ ತ್ರಿವಿಕ್ರಮಪಂಡಿತರು ಚಕಿತರಾಗಿ ಸಂಶಯಗೊಂಡರು. ಆ ಪಂಡಿತರು ಮತ್ತೂ ಹೇಳಲಾರಂಭಿಸಿದರು "ತ್ರಿವಿಕ್ರಮಪಂಡಿತರೇ! ನೀವು ವೇದಗಳನ್ನೆಲ್ಲಾ ವಿಚಾರ ಮಾಡಿದ್ದೀರಿ. ಎಲ್ಲಾ ಸಿದ್ಧಾಂತಗಳನ್ನು ಮಥಿಸಿ ನಿರ್ಧಾರವನ್ನು ಹೊಂದಿದ್ದೀರಿ. ಕಾವ್ಯಗಳನ್ನು ಚೆನ್ನಾಗಿ ಪರಿಶೀಲಿಸಿದ್ದೀರಿ. ನಿಮ್ಮನ್ನು ಸೋಲಿಸುವ ಪಂಡಿತನು ಈ ಪ್ರಪಂಚದಲ್ಲಿ ಹುಟ್ಟಿಯೇ ಇಲ್ಲ. ಈಗ ದೈವವಶಾತ್ ನಿಮಗೆ ಒಬ್ಬ ಪ್ರತಿವಾದಿಯು ಸಿದ್ಧವಾಗಿದ್ದಾನೆ. ಅವನನ್ನು ಜಯಿಸಿ ಧವಳ ಕೀರ್ತಿಯನ್ನು ಪಡೆಯಿರಿ. ನಮ್ಮವರ ಹೆದರಿಕೆಯನ್ನು ದೂರಮಾಡಿ ಆನಂದಗೊಳಿಸಿರಿ"

ತಮ್ಮವರ ಈ ಪ್ರಾರ್ಥನೆಯನ್ನು ಕೇಳಿ ತ್ರಿವಿಕ್ರಮಪಂಡಿತರು ತಮಗೆದುರಾದ ಶ್ರೀಮಧ್ವಾಚಾರ್ಯರ ಶಿಷ್ಯರನ್ನು ಖಂಡಿಸಿ ನಿರುತ್ತರನ್ನಾಗಿ ಮಾಡಿದರು. ಆದರೆ ಅವರು ರಾತ್ರಿಯಹೊತ್ತು ಗುಟ್ಟಾಗಿ ತನ್ನ ತಮ್ಮಂದಿರಾದ ಶಂಕರಾಚಾರ್ಯರಲ್ಲಿ

ಶ್ರೀಮಧ್ವಾಚಾರ್ಯರು ಇಟ್ಟಿದ್ದ ಗ್ರಂಥಗಳನ್ನು ಪರಿಶೀಲಿಸಿ ತಾನು ಕೊಟ್ಟಿರುವ ಉತ್ತರ ಅಸಂಗತವಾಗಿದೆ. ಆಚಾರ್ಯರ ಸಿದ್ಧಾಂತದಲ್ಲಿ ಯಾವ ಅಸಾಂಗತ್ಯ, ಹುಳುಕು ಅಥವಾ ಇನ್ನಾವ ದೋಷವೂ ಇಲ್ಲ ಎಂದು ತಿಳಿದು ಆಶ್ಚರ್ಯಪಟ್ಟರು.

ಹೀಗೆ ಕೆಲವು ಕಾಲ ಕಳೆಯಿತು. ಅನಂತರ ಜಯಸಿಂಹ ರಾಜನು ಕರೆಸಿದಾಗ ವಿಷ್ಣುಮಂಗಲ ದೇವಾಲಯದಲ್ಲಿ ತ್ರಿವಿಕ್ರಮಪಂಡಿತಾಚಾರ್ಯರು ಆಚಾರ್ಯರನ್ನು ನೋಡಿದರು. ಅವರ ಜೊತೆಗೆ ಒಂದು ದಿನ ಭಿನ್ನಾಭಿಪ್ರಾಯವಿರುವ ಪ್ರಮೇಯಗಳನ್ನು ಚರ್ಚಿಸಿದರು. ಆಚಾರ್ಯರ ಉತ್ತರವನ್ನು ಕೇಳಿ ದ್ವೈತಶಾಸ್ತ್ರವು ಅತ್ಯುತ್ತಮವಾದುದೆಂದು ಮೆಚ್ಚಿ ಕೊಂಡರು. ಆದರೆ ವಿಮರ್ಶೆ ಮಾಡಿ ಕೆಲಸ ಮಾಡುವ ಬುದ್ಧಿವಂತರಾದ ಶ್ರೀಮತ್ ತ್ರಿವಿಕ್ರಪಂಡಿತಾಚಾರ್ಯರು ಶ್ರೀ ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಕೂಡಲೇ ಒಪ್ಪಿಕೊಳ್ಳಲಿಲ್ಲ.

ಶ್ರೀವಿಷ್ಣುಮಂಗಲ ದೇವಾಲಯದಲ್ಲಿ ಆಚಾರ್ಯರು ಜಯಸಿಂಹ ರಾಜನ ಪ್ರಾರ್ಥನೆಯಂತೆ ಬಂದು ವಾಸ ಮಾಡುತ್ತಿದ್ದಾಗ ತ್ರಿವಿಕ್ರಮಪಂಡಿತಾಚಾರ್ಯರು ಆಚಾರ್ಯರ ಬಳಿಗೆ ಹೋಗಿ ನಮಸ್ಕಾರ ಮಾಡಿದರು. ಅವರಿಂದ ದ್ವೈತ ಸಿದ್ಧಾಂತ ತತ್ತ್ವಗಳನ್ನು ತಿಳಿಯಬೇಕೆಂದು ನಿರ್ಧರಿಸಿದರು.

★ ★ ★

|| ಶ್ರೀಃ ||

|| ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ||

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ತ್ರಯೋದಶಃ ಸರ್ಗಃ

**ಅವತಾರಿಕಾ—** ಆಚಾರ್ಯರು ಚಾತುರ್ಮಾಸ್ಯ ವ್ರತವನ್ನು ಪೂರೈಸಿ ಸಹ್ಯಾದ್ರಿಯ ಆಚೆಗಿರುವ ಶಿಷ್ಯರ ಅನುಗ್ರಹಕ್ಕಾಗಿ ಘಟ್ಟದ ಮೇಲೆ ಬಂದಿದ್ದಾಗ ಜಯಸಿಂಹರಾಜನು ಕಳುಹಿಸಿದ ದೂತನು ಬಂದನೆಂದು ಹೇಳುತ್ತಾರೆ.

**ಪೃಥುದರ್ಶನಮುತ್ಥಿತಂ ಕೃತಾರ್ಥಂ**
**ಪೃಥಿವೀಭೃತ್ಪ್ರಣತಿಂ ಗೃಹೀತವಂತಮ್ ।**
**ನಿಜಶಿಷ್ಯಮುದೇಽಥ ಸಹ್ಯಮಾಪ್ತಂ**
**ಪುರುಷಃ ಕಶ್ಚಿದುಪಾಯಯೌ ಕದಾಚಿತ್ || 1 ||**

**ಪದಚ್ಛೇದ—** ಪೃಥುದರ್ಶನಂ, ಉತ್ಥಿತಂ, ಕೃತಾರ್ಥಂ, ಪೃಥಿವೀಭೃತ್ಪ್ರಣತಿಂ, ಗೃಹೀತವಂತಂ, ನಿಜಶಿಷ್ಯಮುದೇ, ಅಥ, ಸಹ್ಯಂ, ಆಪ್ತಂ, ಪುರುಷಃ, ಕಶ್ಚಿತ್, ಉಪಾಯಯೌ, ಕದಾಚಿತ್ ।

**ಅನ್ವಯ—** ಉತ್ಥಿತಂ, ಕೃತಾರ್ಥಂ, ಪೃಥಿವೀಭೃತ್ಪ್ರಣತಿಂ, ಗೃಹೀತವಂತಂ, ಅಥ ನಿಜಶಿಷ್ಯಮುದೇ, ಸಹ್ಯಂ, ಆಪ್ತಂ, ಪೃಥುದರ್ಶನಂ, ಕದಾಚಿತ್, ಕಶ್ಚಿತ್, ಪುರುಷಃ, ಉಪಾಯಯೌ ।

**ಅನ್ವಯಾರ್ಥ—**

**ಉತ್ಥಿತಂ** = ಚಾತುರ್ಮಾಸ್ಯ ವ್ರತವನ್ನು ಪೂರೈಸಿದ,
**ಕೃತಾರ್ಥಂ** = ತಮ್ಮ ಪುಸ್ತಕಗಳೆಲ್ಲ ಸಿಕ್ಕಿರುವುದರಿಂದ ಧನ್ಯರಾದ,
**ಪೃಥಿವೀಭೃತ್ಪ್ರಣತಿಂ** = ರಾಜನಾದ ಜಯಸಿಂಹನ ನಮಸ್ಕಾರವನ್ನು,
**ಗೃಹೀತವಂತಂ** = ಸ್ವೀಕರಿಸಿದ,
**ಅಥ** = ಅನಂತರ,
**ನಿಜಶಿಷ್ಯ**= ತನ್ನ ಶಿಷ್ಯರ,
**ಮುದೇ** = ಸಂತೋಷಕ್ಕಾಗಿ,
**ಸಹ್ಯಂ** = ಸಹ್ಯ ಪರ್ವತವನ್ನು,
**ಆಪ್ತಂ** = ಹೊಂದಿದ,
**ಪೃಥುದರ್ಶನಂ** = ಶ್ರೀಪೂರ್ಣಪ್ರಜ್ಞರನ್ನು,

ಕದಾಚಿತ್= ಒಂದಾನೊಂದು ದಿನ,

ಕಶ್ಚಿತ್ = ಒಬ್ಬ

ಪುರುಷಃ = ಮನುಷ್ಯನು,

ಉಪಾಯಯೌ = ಸಮೀಪಿಸಿದನು.

ತಾತ್ಪರ್ಯ—ಶ್ರೀಮಧ್ವಾಚಾರ್ಯರ 'ಕೊಡಪಾಡಿ' ಗ್ರಾಮದ ದೇವಸ್ಥಾನದಲ್ಲಿ(ಪ್ರಾಗ್ರ್ಯವಾಟದಲ್ಲಿ) ಚಾತುರ್ಮಾಸ್ಯ ವ್ರತವನ್ನು ಮುಗಿಸಿದರು. ಅಷ್ಟರಲ್ಲಿ ಹುಣ್ಣಿಮೆಯ ಮಧ್ಯರಾತ್ರಿಯಲ್ಲಿಯೇ ಚೋಲರಾಜನಾದ ಪದ್ಮತೀರ್ಥನು ತಾನು ಕದ್ದಿರುವ ಪುಸ್ತಕವನ್ನು ಬಿಟ್ಟು ಕಾವುಮಠಕ್ಕೆ ಓಡಿಹೋಗಿದ್ದನು. ಆಗ ಶ್ರೀ ಮಧ್ವಾಚಾರ್ಯರಿಗೆ ಮಾಡಿದ ಅಪಚಾರದಿಂದ ಹೆದರಿದ ಗ್ರಾಮದ ಜನರು ಪದ್ಮತೀರ್ಥನು ಅಪಹರಿಸಿದ ಪುಸ್ತಕಗಳನ್ನು ಆಚಾರ್ಯರಿಗೆ ಒಪ್ಪಿಸಿದರು. ಆಚಾರ್ಯರು ತಾವು ಮಾಡಬೇಕಾದ ಕಾರ್ಯವನ್ನು ಮಾಡಿ ಕೃತಕೃತ್ಯರಾದರೂ ಅಲ್ಲಿಯ ರಾಜನ ಹತ್ತಿರ ಪದ್ಮತೀರ್ಥನು ಮಾಡಿದ ಅನ್ಯಾಯವನ್ನು ತಿಳಿಸಿ ಅನಂತರ ತಾನು ಆ ಪುಸ್ತಕಗಳನ್ನು ತೆಗೆದುಕೊಳ್ಳಬೇಕೆಂದು ನಿರ್ಧರಿಸಿ ಆಗ ತಾನು ಪುಸ್ತಕಗಳನ್ನು ತೆಗೆದುಕೊಳ್ಳದೆ ಅಲ್ಲಿಯ ಒಬ್ಬ ಮಧ್ಯಸ್ಥನ ಕೈಯಲ್ಲಿ ಕೊಟ್ಟರು. ರಾಜನಾದ ಜಯಸಿಂಹನು ಆಚಾರ್ಯರಿಗೆ ವಂದನೆಗಳನ್ನು ಅರ್ಪಿಸಿದಾಗ ಆಚಾರ್ಯರು ಅವನ ನಮಸ್ಕಾರಗಳನ್ನು ಸ್ವೀಕರಿಸಿದರು. ಅನಂತರ ಆಗಲೇ ಅಲ್ಲಿಗೆ ಹೋಗದೆ ಸಹ್ಯ ಪರ್ವತದ ಮೇಲ್ಭಾಗದಲ್ಲಿ ಪಶ್ಚಿಮ ಘಟ್ಟದ ಪೂರ್ವಭಾಗದಲ್ಲಿ ಇರುವ ತಮ್ಮ ಶಿಷ್ಯರು ಆಚಾರ್ಯರನ್ನು ಆಹ್ವಾನಿಸಿದಾಗ ಆಚಾರ್ಯರು ಅವರ ಸಂತೋಷಕ್ಕಾಗಿ ಸಹ್ಯಗಿರಿಯ ಮಾರ್ಗವಾಗಿ ಸಂಚಾರಕ್ಕೆ ಹೊರಟು ಶಿಷ್ಯರನ್ನು ಅನುಗ್ರಹಿಸುತ್ತಿದ್ದರು. ಅಲ್ಲಿ ಒಂದು ಕಡೆ ಅವರು ತಂಗಿದ್ದಾಗ ಜಯಸಿಂಹರಾಜನ ಕಡೆಯ ಒಬ್ಬ ಮನುಷ್ಯನು ಆಚಾರ್ಯರ ಬಳಿಗೆ ಬಂದನು.

ವಿಗ್ರಹ—

ಪೃಥುದರ್ಶನಂ— ಪೃಥು ಮಹತ್‌ದರ್ಶನಂ ಜ್ಞಾನಂ ಯಸ್ಯ ಸಃ ಪೃಥುದರ್ಶನಃ ತಂ ।

ಕೃತಾರ್ಥಂ— ಕೃತಃ ಅರ್ಥಃ ಯೇನ ಸಃ ಕೃತಾರ್ಥಃ ತಂ ಕೃತಾರ್ಥಂ ।

ಪೃಥಿವೀಭೃತ್‌ಪ್ರಣತಿಂ— ಪೃಥಿವೀಂ ಬಿಭರ್ತಿ ಇತಿ ಪೃಥಿವೀಭೃತಂ, ಪೃಥಿವೀಭೃತಃ ಪ್ರಣತಿಃ ಪೃಥಿವೀಭೃತ್ ಪ್ರಣತಿಃ ತಾಂ ಪೃಥಿವೀಭೃತ್‌ಪ್ರಣತಿಂ ।

ನಿಜಶಿಷ್ಯಮುದೇ— ನಿಜಾಶ್ಚ ತೇ ಶಿಷ್ಯಾಶ್ಚ ನಿಜಶಿಷ್ಯಾಃ ನಿಜಶಿಷ್ಯಾಣಾಂ ಮುತ್ ನಿಜಶಿಷ್ಯಮುತ್ ತಸ್ಯೈ ನಿಜಶಿಷ್ಯಮುದೇ ।

ಕ್ರಿಯಾಪದ— ಉಪಾಯಯೌ- ಉಪ+ಆ+ಯಯೌ ಯಯತುಃ ಯಯುಃ, ಯಯಿಥ-ಯಯಾಥ ಯಯಥುಃ ಯಯ, ಯಯೌ ಯಯಿವ ಯಯಿಮ । ಯಾ ಪ್ರಾಪಣೇ ಇತಿ ಧಾತೋಃ ಉಪ ಆಙ್ ಎರಡು ಉಪಸರ್ಗಗಳು, ಪರಸ್ಮೈಪದಿನಃ ಸಕರ್ಮಕ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ಈ ಧಾತುವಿನ ಉಳಿದ ರೂಪಗಳು 11ನೇ ಸರ್ಗದ 42ನೇ ಶ್ಲೋಕ ಮಧುರಸ್ವರಾಃ ಎಂಬಲ್ಲಿ ಬಂದಿದೆ.

ಪ್ರಯೋಗ— ಕೇನಚಿತ್ ಪುರುಷೇಣ ಕೃತಾರ್ಥಃ ಪೃಥಿವೀಭೃತ್‌ಪ್ರಣತಿಂ ಗೃಹೀತವಾನ್ ಅಥ ನಿಜಶಿಷ್ಯಮುದೇ ಸಹ್ಯ ಆಪ್ತಃ ಪೃಥುದರ್ಶನಃ ಉಪಾಯೇ (ಕರ್ಮಣಿ) ।

ವೃತ್ತ— 'ವಿಷಮೇ ಸಸಜಾ ಗುರುಂ ಯದಿ ಸ್ಯುಃ ಸಭರಾ ಯಶ್ಚ ಯುಜೀಹ ಚಂದ್ರಿಕಾ ಸಾ' ಎಂಬ ಲಕ್ಷಣದಂತೆ ಈ ಸರ್ಗದ 67ನೆಯ ಪದ್ಯಪೂರ್ತಿ ಚಂದ್ರಿಕಾ ವೃತ್ತ, 3ನೇ ಪಾದಗಳಲ್ಲಿ ಸ, ಸ, ಜ ಗಣಗಳು ಮತ್ತು ಎರಡು ಗುರುಗಳು 1, 4ನೇ ಪಾದಗಳಲ್ಲಿ ಭ,ರ,ಯ ಗಣಗಳು ಈ ಲಕ್ಷಣವಿದ್ದರೆ ಚಂದ್ರಿಕಾ ವೃತ್ತ.

ವಿಶೇಷಾಂಶ (ಭಾವಪ್ರಕಾಶಿಕಾ)— ಉತ್ಸಾಯ ಪೌರ್ಣಮಾಸ್ಯಂ ಸ್ವಾರಾಮಮಿತೋ ನಿಶೀಥ ಏವ ಗತಂ । ಶ್ರುತ್ವಾ ಚೋಲಂ ತ್ರಾಸಾದ್ ಗ್ರಾಮ್ಯೈಸ್ತಹ ದತ್ತಮಗ್ರಹೀದ್ಗ್ರಂಥಂ ॥ ಪೃಥಿವೀಭೃತ್ ಜಯಸಿಂಹಃ । ಹುಣ್ಣಿಮೆಯ ದಿನವೇ

ಎದ್ದು ಕೇಳಿ ಆ ಹಳ್ಳಿಯ ಜನರು ಹೆದರಿ ಒಪ್ಪಿಸಿದ್ದ ಗ್ರಂಥಗಳನ್ನು ಆಚಾರ್ಯರು (ಮಧ್ಯಸ್ಥನಲ್ಲಿ ಇಡುವುದಕ್ಕಾಗಿ) ಸ್ವೀಕರಿಸಿದರು. ಈ ಶ್ಲೋಕದಲ್ಲಿರುವ ಪೃಥಿವೀಭೃತ್ ಎಂಬ ಪದಕ್ಕೆ ಜಯಸಿಂಹರಾಜ ಎಂದು ಅರ್ಥ.

★ ★ ★

**ಅವತಾರಿಕಾ—** ಆ ರಾಜಪುರುಷನು ತಂದ ರಾಜಸಂದೇಶವನ್ನು ವಿವರಿಸುತ್ತಾರೆ.

**ಭಗವಾನಿಹ ನಃ ಸ್ವಕಿಂಕರಾಣಾ-**
**ಮಚಿರೇಣಾವ್ರಜತಾದನುಗ್ರಹಾರ್ಥಮ್ ।**
**ಇತಿ ಕಾರ್ಯಚಿಕೀರ್ಷಯಾಽರ್ಥಯತ್ ತ್ವಾಂ**
**ನೃಪ ಇತ್ಯಭ್ಯಧಿತೈಷ ತಂ ಪ್ರಣಮ್ಯ ॥ 2 ॥**

**ಪದಚ್ಛೇದ—** ಭಗವಾನ್, ಇಹ ನಃ, ಸ್ವಕಿಂಕರಾಣಾಂ, ಅಚಿರೇಣ, ಆವ್ರಜತಾತ್, ಅನುಗ್ರಹಾರ್ಥಂ, ಇತಿ, ಕಾರ್ಯಚಿಕೀರ್ಷಯಾ, ಅರ್ಥಯತ್, ತ್ವಾಂ, ನೃಪಃ, ಇತಿ, ಅಭ್ಯಧಿತ, ಏಷಃ, ತಂ, ಪ್ರಣಮ್ಯ ।

**ಅನ್ವಯ—** ಏಷಃ, ತಂ, ಪ್ರಣಮ್ಯ, ಭಗವಾನ್, ಸ್ವಕಿಂಕರಾಣಾಂ, ನಃ, ಅನುಗ್ರಹಾರ್ಥಂ, ಅಚಿರೇಣ, ಆವ್ರಜತಾತ್, ಇತಿ, ನೃಪಃ, ಕಾರ್ಯಚಿಕೀರ್ಷಯಾ, ತ್ವಾಂ, ಅರ್ಥಯತ್, ಇತಿ, ಅಭ್ಯಧಿತ ।

**ಅನ್ವಯಾರ್ಥ—**

**ಏಷಃ** = ಈ ಮನುಷ್ಯನು,
**ತಂ** = ಆ ಮಧ್ವಾಚಾರ್ಯರನ್ನು,
**ಪ್ರಣಮ್ಯ** = ನಮಸ್ಕರಿಸಿ,
**ಭಗವಾನ್** = ಪೂಜ್ಯರಾದ ನೀವು,
**ಸ್ವಕಿಂಕರಾಣಾಂ** = ನಿಮ್ಮ ಸೇವಕರಾದ,
**ನಃ ಇಹ** = ಈ ನಮ್ಮ ದೇಶಕ್ಕೆ,
**ಆವ್ರಜತಾತ್** = ಬರಬೇಕು,
**ಇತಿ** = ಹೀಗೆಂದು,
**ನೃಪಃ** = ಜಯಸಿಂಹರಾಜನು,
**ಕಾರ್ಯಚಿಕೀರ್ಷಯಾ** = ಕರ್ತವ್ಯವನ್ನು ಮಾಡುವ ಇಚ್ಛೆಯಿಂದ,
**ತ್ವಾಂ** = ನಿಮ್ಮನ್ನು,
**ಅರ್ಥಯತ್** = ಪ್ರಾರ್ಥಿಸಿದ್ದಾರೆ.
**ಇತಿ** = ಹೀಗೆಂದು,
**ಅಭ್ಯಧಿತ** = ಹೇಳಿದನು.

**ತಾತ್ಪರ್ಯ—** ಜಯಸಿಂಹರಾಜನು ಕಳುಹಿಸಿದ ದೂತನು ಶ್ರೀಮಧ್ವಾಚಾರ್ಯರು ಇದ್ದಲ್ಲಿಗೆ ಬಂದು ಅವರನ್ನು ವಂದಿಸಿದನು. ಪೂಜ್ಯರೇ ತಾವು ತಮ್ಮ ಸೇವಕರಾದ ನಮ್ಮನ್ನು ಅನುಗ್ರಹಿಸುವುದಕ್ಕಾಗಿಯೂ, ಪದ್ಮತೀರ್ಥನು ಕದ್ದಿರುವ ಪುಸ್ತಕಗಳನ್ನು ಮಧ್ಯಸ್ಥರ ಕೈಯಿಂದ ತಮಗೆ ಕೊಡಿಸಿ ತಮ್ಮಲ್ಲಿ ಕ್ಷಮೆ ಬೇಡುವುದಕ್ಕಾಗಿಯೂ ಬೇಗನೆ ನಮ್ಮ

ದೇಶಕ್ಕೆ ಬರಬೇಕು ಎಂದು ನಮ್ಮ ಜಯಸಿಂಹರಾಜನು ಪ್ರಾರ್ಥಿಸಿದ್ದಾನೆ ಎಂದು ಆ ದೂತನು ಶ್ರೀ ಮಧ್ವಾಚಾರ್ಯರಿಗೆ ರಾಜನ ಸಂದೇಶವನ್ನು ವಿಜ್ಞಾಪಿಸಿದನು.

ವಿಗ್ರಹ—

ಸ್ವಕಿಂಕರಾಣಾಂ— ಭಗಃ ಅಸ್ಯ ಅಸ್ತೀತಿ ಭಗವಾನ್ ಸ್ವಸ್ಯ ಕಿಂಕರಾಃ ಸ್ವಕಿಂಕರಾಃ ತೇಷಾಂ ಸ್ವಕಿಂಕರಾಣಾಂ ।

ಅಚಿರೇಣ— ನ ಚಿರೇಣ ಅಚಿರೇಣ ।

ಅನುಗ್ರಹಾರ್ಥಂ— ಅನುಗ್ರಹಾಯ ಇತಿ ಅನುಗ್ರಹಾರ್ಥಂ ।

ಕಾರ್ಯಚಿಕೀರ್ಷಯಾ— ಕರ್ತುಂ ಇಚ್ಛಾ ಚಿಕೀರ್ಷಾ, ಕಾರ್ಯಸ್ಯ ಚಿಕೀರ್ಷಾ ಕಾರ್ಯಚಿಕೀರ್ಷಾ ತಯಾ ಕಾರ್ಯಚಿಕೀರ್ಷಯಾ ।

ಕ್ರಿಯಾಪದ— ಅಭ್ಯಧಿತ- ಅಭಿ + ಅಧಿತ ಅಧಿಷಾತಾಂ ಅಧಿಷತ, ಅಧಿಥಾಃ ಅಧಿಷಾಥಾಂ ಅಧಿಢ್ವಂ, ಅಧಿಷಿ ಅಧಿಷ್ವಹಿ ಅಧಿಷ್ಮಹಿ । ಡುಧಾಞ್ ಧಾರಣಪೋಷಣಯೋಃ ಆತ್ಮನೇಪದಿನಃ ಲುಙ್ ಅಭಿ ಉಪಸರ್ಗ ಪ್ರಥಮಪುರುಷೇ ಏಕವಚನೇ ಅಭ್ಯಧಿತ ಇತಿ ರೂಪಂ ।

ಆರ್ಥಯತ್ ಆರ್ಥಯತಾಂ ಆರ್ಥಯನ್, ಆರ್ಥಯಃ ಆರ್ಥಯತಂ ಆರ್ಥಯತ, ಆರ್ಥಯಂ ಆರ್ಥಯಾವ ಆರ್ಥಯಾಮ ।

ಅರ್ಥ- ಉಪಯಾಞ್ಚಾಯಾಂ ಸಕರ್ಮಕಃ ಸೇಟ್ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನೇ. ಈ ಧಾತುವು ಚುರಾದಿಯಲ್ಲಿ ಅದಂತ, ಆಗರ್ವೀಯ ಆತ್ಮನೇಪದಿನಃ, ಆದರೂ ನಿವೃತ್ತ ಪ್ರೇಷಣಾದ್ ಧಾತೋಃ ಪ್ರಾಕೃತೇಽ ಅರ್ಥೇ ಣಿಜಿಷ್ಯತೇ ಎಂಬ ವಚನದಿಂದ ಅರ್ಥಾನುಕೂಲ ವ್ಯಾಪಾರ ಎಂಬ ಧಾತ್ವರ್ಥದಲ್ಲಿ ವ್ಯಾಪಾರಾಂಶವನ್ನು ಬಿಟ್ಟಾಗ ಅರ್ಥನಾ = ಬೇಡುವುದು ಎಂದಿಷ್ಟೇ ಅರ್ಥವು ಬರುತ್ತದೆ. ಅನಂತರ ಣಿಚ್ ಪ್ರತ್ಯಯ ಮಾಡಿದಾಗ ಶುದ್ಧವಾದ ಎಂಬ ಅರ್ಥ ಧಾತುವಿನ 'ಬೇಡುವುದು' ಎಂಬ ಅರ್ಥವೇ ಬರುತ್ತದೆ. 1 ಲಟ್ ಅರ್ಥಯತಿ 2 ಲಿಟ್ ಅರ್ಥಯಾಂಚಕಾರ 3 ಲುಟ್ ಅರ್ಥಯಿತಾ ಸಿ-ಸ್ಮಿ 4 ಲೃಟ್ ಅರ್ಥಯಿಷ್ಯತಿ 5 ಲೋಟ್ ಅರ್ಥಯತು 6 ಲಙ್ ಆರ್ಥಯತ 7 ವಿಧಿಲಿಙ್ ಅರ್ಥಯೇತ್ 8 ಆಶೀರ್ಲಿಙ್ ಅರ್ಥ್ಯಾತ್ ಲುಙ್ ಆರ್ಥಯರ್ಥಯತ್ ಆರ್ಥ ಯರ್ಥಯತಾಂ ಆರ್ಥಯನ್ 10 ಲೃಙ್ ಆರ್ಥಯಿಷ್ಯತ್.

ಆವ್ರಜತಾತ್ = ವ್ರಜತು-ವ್ರಜತಾತ್ ವ್ರಜತಾಂ ವ್ರಜಂತು, ವ್ರಜ ವ್ರಜತಾತ್ ವ್ರಜತಂ ವ್ರಜತ, ವ್ರಜಾನಿ ವ್ರಜಾವ ವ್ರಜಾಮ । ವ್ರಜಗತೌ ಪ್ರಾರ್ಥನಾಯಾಂ ಲೋಟ್ ಆಙ್ ಉಪಸರ್ಗ ಪ್ರಥಮಪುರುಷೇ ಏಕವಚನ । 1 ಲಟ್ ವ್ರಜತಿ 2 ಲಿಟ್ ವವ್ರಾಜ ವವ್ರಜತುಃ ವವ್ರಜುಃ ವವ್ರಜಿಥ 3 ಲುಟ್ ವ್ರಜಿತಾ 4 ಲೃಟ್ ವ್ರಜಿಷ್ಯತಿ 5 ಲೋಟ್ ವ್ರಜತು 6 ಲಙ್ ಅವ್ರಾಜತ 7 ವಿಧಿಲಿಙ್ ವ್ರಜೇತ್ 8 ಆಶೀರ್ಲಿಙ್ ವ್ರಜ್ಯಾತ್ ವ್ರಜ್ಯಾಸ್ತಾಂ ವ್ರಜ್ಯಾಸುಃ 9 ಲುಙ್ ಅವ್ರಾಜೀತ್ ಅವ್ರಾಜಿಷ್ಟಾಂ ಅವ್ರಾಜಿಷುಃ, ಅವ್ರಾಜೀಃ ಅವ್ರಾಜಿಷ್ಟಂ ಅವ್ರಾಜಿಷ್ಟ, ಅವ್ರಾಜಿಷಂ ಅವ್ರಾಜಿಷ್ವ ಅವ್ರಾಜಿಷ್ಮ 10 ಲೃಙ್ ಅವ್ರಜಿಷ್ಯತ್ ॥

ಪ್ರಯೋಗ— ಏತೇನ ತಂ ಪ್ರಣಮ್ಯ ಭಗವತಾ ಸ್ವಕಿಂಕರಾಣಾಂ ನಃ ಅನುಗ್ರಹಾರ್ಥಂ ಅಚಿರೇಣ ಇಹ ಆವ್ರಜ್ಯತಾಂ (ಭಾವೇ ಲೋಟ್) ।

ಇತಿ ನೃಪೇಣ ಕಾರ್ಯಚಿಕೀರ್ಷಯಾ ತ್ವಂ ಆರ್ಥ್ಯರ್ಥಾಃ (ಕರ್ಮಣಿ ಲಙ)

ಇತಿ ಅಭ್ಯಧಾಯಿ (ಕರ್ಮಣಿ) ।

★ ★ ★

ಅವತಾರಿಕಾ— ಮುಂದೆ ಆಚಾರ್ಯರು ಏನು ಮಾಡಿದರೆಂದು ಹೇಳುತ್ತಾರೆ.

**ಅಥ ಮಾಘವತೀಮಪಾಸ್ಯ ಕಾಷ್ಠಾಂ**
**ವ್ರಜತಾ ಪ್ರೈಧಿತತೇಜಸಾ ಪ್ರತೀಚೀಮ್ ।**
**ಪರಿಶೋಧಯತಾ ಸ್ವಪಾದಸಂಗಾತ್**
**ಪೃಥಿವೀಂ ಪ್ರಾಜ್ಞದಿವಾಕರೇಣ ರೇಜೇ ॥ 3 ॥**

ಪದಚ್ಛೇದ— ಅಥ, ಮಾಘವತೀಂ, ಅಪಾಸ್ಯ, ಕಾಷ್ಠಾಂ, ವ್ರಜತಾ, ಪ್ರೈಧಿತತೇಜಸಾ, ಪ್ರತೀಚೀಂ, ಪರಿಶೋಧ-ಯತಾ, ಸ್ವಪಾದಸಂಗಾತ್, ಪೃಥಿವೀಂ, ಪ್ರಾಜ್ಞದಿವಾಕರೇಣ, ರೇಜೇ ।

ಅನ್ವಯ— ಅಥ, ಮಾಘವತೀಂ, ಕಾಷ್ಠಾಂ, ಅಪಾಸ್ಯ, ಪ್ರತೀಚೀಂ, ವ್ರಜತಾ, ಸ್ವಪಾದಸಂಗಾತ್, ಪೃಥಿವೀಂ, ಪರಿಶೋಧಯತಾ, ಪ್ರೈಧಿತತೇಜಸಾ, ಪ್ರಾಜ್ಞದಿವಾಕರೇಣ, ರೇಜೇ ।

ಅನ್ವಯಾರ್ಥ—

ಅಥ = ರಾಜದೂತನ ವಿಜ್ಞಾಪನಾ ನಂತರ,
ಮಾಘವತೀಂ = ಇಂದ್ರನಿಗೆ ಸಂಬಂಧಪಟ್ಟಿರುವ,
ಕಾಷ್ಠಾಂ = ದಿಕ್ಕನ್ನು,
ಅಪಾಸ್ಯ = ಬಿಟ್ಟು,
ಪ್ರತೀಚೀಂ = ಪಶ್ಚಿಮ ದಿಕ್ಕನ್ನು ಕುರಿತು,
ವ್ರಜತಾ = ಹೋಗುತ್ತಿರುವ,
ಸ್ವಪಾದಸಂಗಾತ್ = ತಮ್ಮ ಕಾಲುಗಳ ಸಂಪರ್ಕದಿಂದ, ತನ್ನ ಕಿರಣಗಳ ಸಂಪರ್ಕದಿಂದ,
ಪೃಥಿವೀಂ = ಭೂಮಿಯನ್ನು,
ಪರಿಶೋಧಯತಾ = ಪವಿತ್ರಗೊಳಿಸುವ,
ಪ್ರೈಧಿತತೇಜಸಾ = ಅತಿಶಯವಾಗಿ ಹೆಚ್ಚಿದ ತೇಜಸ್ಸುಳ್ಳ (ಕಾಂತಿಯುಳ್ಳ),
ಪ್ರಾಜ್ಞದಿವಾಕರೇಣ = ಶ್ರೀಪೂರ್ಣಪ್ರಜ್ಞರೆಂಬ ಸೂರ್ಯನಿಂದ,
ರೇಜೇ = ಪ್ರಕಾಶಿಸೋಣವಾಯಿತು.

ತಾತ್ಪರ್ಯ— ಸೂರ್ಯನು ಪೂರ್ವದಿಕ್ಕಿನಿಂದ ಪಶ್ಚಿಮದ ಕಡೆ ಹೋಗುತ್ತಾ, ತನ್ನ ಅಧಿಕವಾದ ತೇಜಸ್ಸಿನಿಂದ ರಾಜಿಸುತ್ತಾನ ಮತ್ತು ಭೂಮಿಯನ್ನು ತನ್ನ ಕಿರಣಗಳಿಂದ ಪವಿತ್ರಗೊಳಿಸುತ್ತಾನೆ ಹಾಗೂ ಭೂಮಿಯಲ್ಲಿ ವಿಶೇಷವಾದ ಪ್ರಕಾಶವನ್ನುಂಟು ಮಾಡುತ್ತಾನೆ. ಶ್ರೀ ಮಧ್ವಾಚಾರ್ಯರು ಆ ರಾಜದೂತನು ವಿಜ್ಞಾಪಿಸಿದ ಅನಂತರ ಪೂರ್ವ ದಿಕ್ಕಿನಿಂದ ಪಶ್ಚಿಮ ದಿಕ್ಕಿನ ಕಡೆಗೆ ಹೊರಟರು. ಆಗ ಅವರ ತೇಜಸ್ಸು ಮತ್ತಷ್ಟು ಹೆಚ್ಚಾಗಿತ್ತು. ಅವರು ಸಂಚಾರ ಮಾಡುತ್ತಾ ಬರುತ್ತಿದ್ದರು. ತಮ್ಮ ಪವಿತ್ರವಾದ ಪಾದಗಳ ಸಂಬಂಧದಿಂದ ಭೂಮಿಯನ್ನು ಪವಿತ್ರಗೊಳಿಸಿ ಪ್ರಕಾಶಿಸುತ್ತಿದ್ದರು. ಹೀಗೆ ಸೂರ್ಯನು ಮಾಡುವಂತೆಯೇ ಮಧ್ವಸೂರ್ಯರೂ ಅಸಾಧಾರಣವಾದ ಕಾರ್ಯವನ್ನು ಮಾಡುತ್ತಿದ್ದರು.

ವಿಗ್ರಹ—

**ಮಾಘವತೀಂ**— ಮಘವತಃ ಇಯಂ ಮಾಘವತೀ, ತಾಂ ಮಾಘವತೀಂ, ಮಘವಾನ ಇಂದ್ರ, ಇಂದ್ರೋ ಮರುತ್ವಾನ್ ಮಘವಾ, ಅಮರ ।

ಪ್ರೈಧಿತತೇಜಸಾ— ಪ್ರಕರ್ಷೇಣ ಏಧಿತಂ ಪ್ರೈದಿತಂ ಪ್ರೈಧಿತಂ ತೇಜಃ ಯಸ್ಯ ಸಃ ಪ್ರೈಧಿತತೇಜಾಃ,ತೇನ ಪ್ರೈಧಿತ ತೇಜಸಾ ।

ಸ್ವಪಾದಸಂಗಾತ್— ಸ್ವಸ್ಯ ಪಾದೌ ಸ್ವಪಾದೌ,ಸ್ವಪಾದಯೋಃ ಸಂಗಃ ಸ್ವಪಾದಸಂಗಃ ತಸ್ಮಾತ್ ಸ್ವಪಾದಸಂಗಾತ್ । ಸೂರ್ಯನ ಪಕ್ಷದಲ್ಲಿ ಸ್ವಸ್ಯ ಪಾದಾಃ ಸ್ವಪಾದಾಃ ಸ್ವಪಾದಾನಾಂ ಸಂಗಃ ಸ್ವಪಾದಸಂಗಃ ತಸ್ಮಾತ್ ಸ್ವಪಾದಸಂಗಾತ್ ।

ಪ್ರಾಜ್ಞದಿವಾಕರೇಣ— ಪ್ರಾಜ್ಞಃ (ಶ್ರೀಮಧ್ವಾಚಾರ್ಯಃ)ಏವ ದಿವಾಕರಃ ಪ್ರಾಜ್ಞದಿವಾಕರಃ, ತೇನ ಪ್ರಾಜ್ಞ ದಿವಾಕರೇಣ ।

ಕ್ರಿಯಾಪದ— ರೇಜೇ = ಶುಶುಭೇ, ರಾಜೃ ದೀಪ್ತೌ ಎಂಬ ಧಾತುವಿಗೆ ಭಾವೇ ಲಿಟ್ ಲಕಾರ ಆತ್ಮನೇಪದ । ಭಾವ ಎಂದರೆ ಧಾತ್ವರ್ಥ. ಇಲ್ಲಿ ರಾಜನ = ಪ್ರಕಾಶಿಸುವಿಕೆ. ಅದನ್ನು ಮಾತ್ರ ಹೇಳುವಾಗ ಪ್ರಥಮಪುರುಷ ಏಕವಚನ ಮಾತ್ರ ಬರುತ್ತದೆ. ದ್ವಿವಚನ ಬಹುವಚನಗಳೂ ಇತರ ಪುರುಷಗಳೂ ಬರುವುದಿಲ್ಲ. ಭಾವವು = ಧಾತ್ವರ್ಥವು ಎಲ್ಲಾ ಪುರುಷ ವಚನಗಳಲ್ಲಿ, ಒಂದೇ ಆದುದರಿಂದ ಹೀಗೆ ಒಂದೇ ರೂಪವಾಗುತ್ತದೆ ಎಂದು ತಿಳಿಯಬೇಕು.

ಪ್ರಯೋಗ— ಅಥ ಮಾಘವತೀಂ ಕಾಷ್ಠಾಂ ಅಪಾಸ್ಯ ಪ್ರತೀಚೀಂ ವ್ರಜನ್, ಸ್ವಪಾದಸಂಗಾತ್ ಪೃಥಿವೀಂ ಪರಿಶೋಧಯನ್, ಪ್ರೈಧಿತತೇಜಾಃ ಪ್ರಾಜ್ಞದಿವಾಕರಃ ರೇಜೇ (ರರಾಜ) (ಕರ್ತರಿ) ।

ವಿಶೇಷಾಂಶ— ಇಲ್ಲಿ ವಿಶ್ವಪತಿತೀರ್ಥೀಯ ವ್ಯಾಖ್ಯಾನದಲ್ಲಿ ಹೇಳಿರುವ ಸಂಸ್ಕೃತ ಭಾಷಾಮಯ ತಾತ್ಪರ್ಯ 'ಐಂದ್ರಿಂ ಆಶಾಂ ಹಿತ್ವಾ ಪ್ರತೀಚೀಂ ದಿಶಂ ವ್ರಜನ್ ಸ್ವಕಿರಣಸಂಗಾತ್ ಸರ್ವಂ ಪಾವಯನ್ ದಿವಾಕರಃ ಯಥಾ ಪ್ರಕಾಶತೇ ತದ್ವತ್ ಉಕ್ತಲಕ್ಷಣಕೋಽಯಂ ಶ್ರೀಮಧ್ವಾಚಾರ್ಯಃ ರರಾಜ' ಇತಿ ಭಾವಃ । ಪೂರ್ವ ದಿಕ್ಕನ್ನು ಬಿಟ್ಟು ಪಶ್ಚಿಮದಿಕ್ಕಿಗೆ ಹೋಗುತ್ತಿರುವ ತನ್ನ ಕಿರಣ ಸಂಪರ್ಕದಿಂದ ಎಲ್ಲವನ್ನು ಪವಿತ್ರಗೊಳಿಸುತ್ತಿರುವ ಸೂರ್ಯನು ಹೇಗೆ ಪ್ರಕಾಶಿಸುತ್ತಾನೋ ಅದರಂತೆ ಸೂರ್ಯನಂತಹ ಲಕ್ಷಣಗಳುಳ್ಳ ಅಂದರೆ ಪೂರ್ವದಿಕ್ಕಿನಿಂದ ಪಶ್ಚಿಮ ದಿಕ್ಕಿಗೆ ಹೋಗುತ್ತಿರುವ ತನ್ನ ಪಾದ-ಸಂಗದಿಂದ ಎಲ್ಲವನ್ನೂ ಪವಿತ್ರಗೊಳಿಸುವ ಶ್ರೀ ಮಧ್ವಾಚಾರ್ಯರೂ ಶೋಭಿಸಿದರು ಎಂದು ಭಾವ. ಇಲ್ಲಿ ಪಾದ ಶಬ್ದಕ್ಕೆ 'ಪಾದಾ ರಶ್ಮಿ ಅಂಘ್ರಿತುರ್ಯಾಂಶಾಃ' ಎಂದು ಅಮರಕೋಶಾನುಸಾರವಾಗಿ ಪಾದ = ಕಿರಣ, ಕಾಲು ಎಂಬ ಎರಡು ಅರ್ಥಗಳನ್ನು ಹೇಳಿರುವುದನ್ನು ಗಮನಿಸಬೇಕು.

★ ★ ★

ಅವತಾರಿಕಾ— ಆಚಾರ್ಯರ ಪ್ರಯಾಣದ ರೀತಿಯನ್ನು ವರ್ಣಿಸುತ್ತಾರೆ (ಈ ನಾಲ್ಕನೆಯ ಪದ್ಯದಿಂದ ಎಂಟನೇ ಪದ್ಯ ಪೂರ್ತಿ ಅಂತ್ಯ ಕುಲಕವು. ಎಂಟನೆಯ ಶ್ಲೋಕದ ಕ್ರಿಯಾಪದದ ಜೊತೆಗೆ ಅನ್ವಯಿಸಿ ಅರ್ಥವನ್ನು ಹೇಳಬೇಕು) ದುಷ್ಟರಲ್ಲಿ ಹೋಗದೆ ಸಜ್ಜನರಿಗೆ ಮಾತ್ರ ಅನುಗ್ರಹಿಸುತ್ತಾ ಆಚಾರ್ಯರು ಬಂದರೆಂಬುದನ್ನು ಗಂಗೆಯ ದೃಷ್ಟಾಂತದಿಂದ ವರ್ಣಿಸುತ್ತಾರೆ.

**ಅಶುಭಾನಪಹಾಯ ಮಾಯಿಜುಷ್ಟಾನ್**
**ಅಧಮಾದ್ರೀನಿವ ಗೋತ್ರನಿಮ್ನಗೌಘ್ಯೈಃ ।**
**ಸುಜನೈಸ್ತರಸಾಽಭಿಗಮ್ಯಮಾನಃ**
**ಪರಮಸ್ನೇಹತಯಾ ಕ್ರಮಪ್ರಸನ್ನೈಃ ॥ 4 ॥**

ಪದಚ್ಛೇದ— ಅಶುಭಾನ್, ಅಪಹಾಯ ಮಾಯಿಜುಷ್ಟಾನ್ ಅಧಮಾದ್ರೀನ್ ಇವ, ಗೋತ್ರನಿಮ್ನ ಗೌಘ್ಯೈಃ, ಸುಜನೈಃ ತರಸಾ, ಅಭಿಗಮ್ಯಮಾನಃ, ಪರಮಸ್ನೇಹತಯಾ, ಕ್ರಮಪ್ರಸನ್ನೈಃ ।

**ಅನ್ವಯ—** ಅಯಂ ಪರಮಾನಂದಸುತೀರ್ಥಸೂರಿರಾಜಃ ಮಾಯಿಜುಷ್ಟಾನ್ ಅಶುಭಾನ್ ಅಧಮಾದ್ರೀನ್ ಇವ ಅಪಹಾಯ ಪರಮಸ್ನೇಹತಯಾ ಕ್ರಮಪ್ರಸನ್ನೈಃ ಗೋತ್ರನಿಮ್ನಗೌಘೈಃ ಇವ ಸುಜನೈಃ ತರಸಾ ಅಭಿಗಮ್ಯಮಾನಃ (ಸುರಸಿಂಧೋಃ ಸಂತತ ಪ್ರವಾಹಃ ಇವ ವಿಬಭೌ) ।

**ಅನ್ವಯಾರ್ಥ—**

**ಅಯಂ** = ಈ,
**ಪರಮಾನಂದಸುತೀರ್ಥಸೂರಿರಾಜಃ** = ಉತ್ತಮವಾದ ಆನಂದವನ್ನು ಕೊಡುವ ಶ್ರೇಷ್ಠಶಾಸ್ತ್ರವನ್ನು ರಚಿಸಿದ ಶ್ರೀಮಧ್ವಾಚಾರ್ಯರೆಂಬ ಪಂಡಿತಸಾರ್ವಭೌಮರು,
**ಮಾಯಿಜುಷ್ಟಾನ್** = ಮಾಯಾವಾದಿಗಳಿಂದ ಸೇವಿಸಲ್ಪಟ್ಟ (ವಶಗೊಳಿಸಲ್ಪಟ್ಟ) (ಕಳ್ಳರಿಂದ ಅಥವಾ ಮೋಸಗಾರರಿಂದ ಸೇವಿಸಲ್ಪಟ್ಟ),
**ಅಶುಭಾನ್** = ಅಮಂಗಳಕರವಾದ,
**ಅಧಮಾದ್ರೀನ್ ಇವ** = ಸಣ್ಣ ಬೆಟ್ಟಗಳನ್ನೆಂಬಂತೆ,
**ಅಶುಭಾನ್** = ದುಷ್ಟರನ್ನು,
**ಅಪಹಾಯ** = ಬಿಟ್ಟು,
**ಪರಮಸ್ನೇಹತಯಾ** = ಉತ್ತಮಸ್ನೇಹದಿಂದ,
**ಕ್ರಮಾತ್ ಪ್ರಸನ್ನೈಃ** = ಕ್ರಮವಾಗಿ ತಿಳಿಯಾದ,
**ಗೋತ್ರನಿಮ್ನಗೌಘೈಃ ಇವ** = ಪರ್ವತಗಳಲ್ಲಿ ಹುಟ್ಟಿದ ನದಿಗಳ ಸಮೂಹಗಳಿಂದ ಎಂಬಂತೆ,
**ಸುಜನೈಃ** = ಸಾತ್ವಿಕ ಜನರಿಂದ,
**ತರಸಾ** = ವೇಗದಿಂದ,
**ಅಭಿಗಮ್ಯಮಾನಃ** = ಎದುರುಗೊಳ್ಳಲ್ಪಡುವರಾಗಿ,
**(ಸುರಸಿಂಧೋಃ** = ಗಂಗೆಯ,
**ಸಂತತ ಪ್ರವಾಹಃ ಇವ** = ನಿರಂತರವಾದ ನೀರಿನ ಪ್ರವಾಹದಂತೆ,
**ವಿಬಭೌ** = ಪ್ರಕಾಶಿಸಿದರು).

**ತಾತ್ಪರ್ಯ—** ಗಂಗೆಯ ಪ್ರವಾಹವು ಕಳ್ಳರು ಮತ್ತು ಮೋಸಗಾರರು ವಾಸಿಸುವ ಸಣ್ಣಪುಟ್ಟ ಬೆಟ್ಟಗಳನ್ನು ತ್ಯಜಿಸುತ್ತದೆ. ಆ ಮಾರ್ಗದಲ್ಲಿ ಹರಿಯುವುದಿಲ್ಲ. ದೊಡ್ಡ ದೊಡ್ಡ ಪರ್ವತಗಳಲ್ಲಿ ಹುಟ್ಟಿರುವ ನದಿಗಳ ಸಮೂಹಗಳು ಮುಂದೆ ಮುಂದೆ ಹೋದಂತೆ ಗಂಗೆಯನ್ನು ಸೇರಿಕೊಳ್ಳುತ್ತವೆ. ಆ ನದಿಗಳು ಮೊದಮೊದಲು ಸ್ವಲ್ಪ ಕೆಸರು ನೀರುಗಳಿಂದ ಕೂಡಿದ್ದರೂ ಒಳ್ಳೆಯ ದ್ರವದಿಂದ ಕೂಡಿದ ಉತ್ತಮ ನೀರುಳ್ಳವುಗಳಾದುದರಿಂದ ಕ್ರಮವಾಗಿ ತಿಳಿಯಾಗಿ ಗಂಗೆಯನ್ನು ಸೇರಿಕೊಳ್ಳುತ್ತವೆ. ಹೀಗೆ ಗಂಗೆಯ ಪ್ರವಾಹವು ಹೆಚ್ಚಾಗುತ್ತಾ ಬಂದು ನಿರಂತರವಾಗಿ ಹರಿಯುತ್ತಾ ಮುಂದುವರಿದು ಪ್ರಕಾಶಿಸುತ್ತದೆ. ಅದರಂತೆ ಶ್ರೀ ಮಧ್ವಾಚಾರ್ಯರೂ ಮಾಯಾವಾದಿಗಳು ತಮ್ಮ ಉಪದೇಶದಿಂದ ಸ್ವಾಧೀನಮಾಡಿ-ಕೊಂಡಿರುವ ದುರ್ಜನರನ್ನು ಬಿಟ್ಟು ಬಿಟ್ಟರು. ಅವರು ಇರುವ ದಾರಿಯಲ್ಲಿ ಬರಲೇ ಇಲ್ಲ. ಸ್ವಾಭಾವಿಕವಾಗಿ ಉತ್ತಮ ಸ್ನೇಹವುಳ್ಳ ಸಜ್ಜನರು ಆಚಾರ್ಯರನ್ನು ನೋಡಿ ಅವರ ಪಾದಸ್ಪರ್ಶ ಮಾಡಿ ನಮಸ್ಕರಿಸಿ ಮಾತಾಡಿ ಮನಸ್ಸಿನಲ್ಲಿ ಪ್ರಸನ್ನತೆಯನ್ನು ಹೊಂದಿ ಆಚಾರ್ಯರನ್ನು ಅನುಸರಿಸಿ ಬಂದರು. ಅಂತಹವರಿಂದ ಹಿಂಬಾಲಿಸಲ್ಪಡುತ್ತಾ ಆಚಾರ್ಯರು ದೇವಗಂಗಾನದಿಯ ಪ್ರವಾಹದಂತೆ ಕ್ರಮೇಣ ದೊಡ್ಡ ಸಮೂಹದಿಂದ ಕೂಡಿದವರಾಗಿ ಪರಮಪವಿತ್ರರಾಗಿ ಪ್ರಯಾಣ ಮಾಡುತ್ತಾ ವಿರಾಜಿಸಿದರು.

ತಾತ್ಪರ್ಯ— ಪರಮಸ್ನೇಹತಯಾ ಪರಮಪ್ರಣಯತ್ವಾತ್ ಸ್ನೇಹವತ್ತ್ವಾಚ್ಚ. ಪರಮಸ್ನೇಹತಯಾ ಎಂದರೆ ಆಚಾರ್ಯರಲ್ಲಿ ವಿಶೇಷವಾದ ಭಕ್ತಿ ಇರುವುದರಿಂದಲೂ ಮತ್ತು ಜಲದಲ್ಲಿ ಸ್ನೇಹ ಎಂಬ ಗುಣ ಇರುವುದರಿಂದಲೂ ಪ್ರಸನ್ನತೆಯನ್ನು ಹೊಂದಿದ ಸಜ್ಜನರು ಮತ್ತು ಜಲಪ್ರವಾಹ ಎಂದು ಅರ್ಥ. ನದಿಗಳಲ್ಲಿ ಉತ್ತಮವಾದ ದ್ರವ ದ್ರವ್ಯ ಸ್ವಭಾವವಿರುವುದರಿಂದ ನದಿಗಳು ಬೇಸಿಗೆಯ ಕೃಶತ್ವವನ್ನು ಬಿಟ್ಟು ಮಳೆಗಾಲದಲ್ಲಿ ತುಂಬಿ ಹರಿಯುತ್ತಾ ಇರುತ್ತವೆ. ಆ ಕಾಲದಲ್ಲಿ ನೀರು ಸ್ವಲ್ಪ ಕಲುಷಿತವಾದರೂ ಕ್ರಮವಾಗಿ ಶರತ್ಕಾಲದಲ್ಲಿ ನಿರ್ಮಲವಾಗುತ್ತದೆ. ಸ್ವಾಭಾವಿಕವಾದ ದ್ರವತ್ವವು ಇರುವುದು ನೀರಿನಲ್ಲಿಯೇ. ''ಆಪಃಸಾಂಸದ್ಧಿಕಾ ದ್ರವಾಃ'' ಎಂಬ ಪ್ರಮಾಣದಿಂದ ಇದು ಸಿದ್ಧವಾಗುತ್ತದೆ. ಅದರಂತೆ ಸ್ವಭಾವದಿಂದ ನಿರ್ದೋಷರಾದ ಸಜ್ಜನರು ಕ್ರಮದಿಂದ ಆಚಾರ್ಯರ ವಿಷಯದಲ್ಲಿ ಪ್ರಸನ್ನರಾಗಿ ಭಕ್ತಿಯನ್ನು ಮಾಡಿದರು ಎಂದು ಅಭಿಪ್ರಾಯ.

ವಿಗ್ರಹ—

ಅಶುಭಾಃ— ನ ಶುಭಾಃ ಅಶುಭಾಃ ತಾನ್ ಅಶುಭಾನ್ ।

ಮಾಯಿಜುಷ್ಟಾಃ— ಮಾಯಾ ಏಷಾಂ ಅಸ್ತೀತಿ ಮಾಯಿನಃ, ಮಾಯಿಭಿಃ ಜುಷ್ಟಾಃ ಮಾಯಿಜುಷ್ಟಾಃ ತಾನ್ ಮಾಯಿಜುಷ್ಟಾನ್ ।

ಅಧಮಾದ್ರೀನ್— ಅಧಮಾಶ್ಚ ತೇ ಅದ್ರಯಶ್ಚ ಅಧಮಾದ್ರಯಃ ತಾನ್ ಅಧಮಾದ್ರೀನ್ ।

ಗೋತ್ರನಿಮ್ನಗೋಘೈಃ— ನಿಮ್ನಂ ಗಚ್ಛಂತೀತಿ ನಿಮ್ನಗಾಃ ಗೋತ್ರಾಣಾಂ ನಿಮ್ನಗಾಃ ಗೋತ್ರನಿಮ್ನಗಾಃ ಗೋತ್ರ ನಿಮ್ನಗಾನಾಂ ಓಘಾಃ ಗೋತ್ರನಿಮ್ನಗೋಘಾಃ ತೈಃ ।

ಸುಜನಾಃ— ಶೋಭನಾಶ್ಚ ತೇ ಜನಾಶ್ಚ ಸುಜನಾಃ ತೈಃ ಸುಜನೈಃ।

ಪರಮಸ್ನೇಹತಯಾ— ಪರಮಃ ಸ್ನೇಹಃ ಯೇಷಾಂ ತೇ ಪರಮಸ್ನೇಹಾಃ ಪರಮಸ್ನೇಹಾನಾಂ ಭಾವಃ ಪರಮಸ್ನೇಹತಾ ತಯಾ ಪರಮಸ್ನೇಹತಯಾ ।

ಕ್ರಮಪ್ರಸನ್ನಾಃ— ಕ್ರಮೇಣ ಪ್ರಸನ್ನಾಃ ಕ್ರಮಪ್ರಸನ್ನಾಃ ತೈಃ ಕ್ರಮಪ್ರಸನ್ನೈಃ ।

ಕೋಶ— ಗೋತ್ರನಿಮ್ನಗೌಘೈಃ ಎಂಬಲ್ಲಿ ಗೋತ್ರ = ಪರ್ವತ, ಅದ್ರಿಗೋತ್ರಗಿರಿಗ್ರಾವಾ..ಚಲಶೈಲಶಿಲೋಚ್ಚಯಾಃ ಅಮರ. ನಿಮ್ನಗಾ ನದಿ, ''ಸ್ರೋತಸ್ವತೀ ದ್ವೀಪವತಿ ಸ್ರವಂತೀ ನಿಮ್ನಗಾಪಗಾ'' ಅಮರ. ತರಸಾ ಎಂಬಲ್ಲಿ ತರಃ = ವೇಗ, ರಂಹಸ್ತರಸೀ ತು ರಯಃ ಸ್ಯದಃ । ಜವಃ-ಅಮರ, ರಂಹೋ ವೇಗಸ್ತರೋ ಲಘುಃ-ವಿಶ್ವ।

★ ★ ★

ಅವತಾರಿಕಾ— ಮತ್ತೂ ಆಚಾರ್ಯರನ್ನು ವರ್ಣಿಸುತ್ತಾರೆ.

**ಸುಮನಃಫಲಶೋಭಿನೋಽತ್ರ ಪುಂಸೋ**
**ನಮಯನ್ ಗೋಭಿರನೋಕಹಾನಿವೋಚ್ಚಾನ್ ।**
**ಅಪಿ ಭಂಗಮುಪಾನಯನ್ನನಮ್ರಾನ್**
**ದೃಢಭಾವಾದ(ನ)ಪರಾನವಾರ್ಯವೀರ್ಯಃ ॥ 5 ॥**

ಪದಚ್ಛೇದ— ಸುಮನಃಫಲಶೋಭಿನಃ, ಅತ್ರ, ಪುಂಸಃ, ನಮಯನ್, ಗೋಭಿಃ, ಅನೋಕಹಾನ್, ಇವ, ಉಚ್ಚಾನ್। ಅಪಿ, ಭಂಗಂ, ಉಪಾನಯನ್, ಅನಮ್ರಾನ್, ದೃಢಭಾವಾತ್, ಅಪರಾನ್, ಅವಾರ್ಯವೀರ್ಯಃ ।

**ಅನ್ವಯ—** ಅಯಂ, ಅತ್ರ, ಉಚ್ಚಾನ್, ಸುಮನಃಫಲಶೋಭಿನಃ, ಪುಂಸಃ, ಅನೋಕಹಾನ್, ಇವ, ಗೋಭಿಃ, ನಮಯನ್, ದೃಢಭಾವಾನ್, ಅಪರಾನ್, ಭಂಗಂ, ಅಪಿ, ಉಪಾನಯನ್, ಅಪಾರ್ಯವೀರ್ಯಃ, ಸನ್, ವಿಬಭೌ, ಅನಮ್ರಾನ್ ।

**ಅನ್ವಯಾರ್ಥ—**

**ಅಯಂ** = ಈ ಮಧ್ವಾಚಾರ್ಯರು,
**ಅತ್ರ** = ಈ ಲೋಕದಲ್ಲಿ,
**ಉಚ್ಚಾನ್** = ಉತ್ತಮರಾದ, ಎತ್ತರವಾಗಿರುವ,
**ಸುಮನಃಫಲಶೋಭಿನಃ** = ಒಳ್ಳೆಯ ಮನಸ್ಸಿನ (ಹೂವುಗಳಿಂದ) ಪ್ರಯೋಜನವಾಗಿರುವ ಜ್ಞಾನ, ಭಕ್ತಿ, ವೈರಾಗ್ಯಗಳಿಂದ (ಹಣ್ಣುಗಳಿಂದ) ಪ್ರಕಾಶಿಸುವ,
**ಪುಂಸಃ** = ಸಜ್ಜನರನ್ನು,
**ಅನೋಕಹಾನ್ ಇವ** = ಮರಗಳನ್ನು ಎಂಬಂತೆ,
**ಗೋಭಿಃ** = ಮಾತುಗಳಿಂದ, ನೀರುಗಳಿಂದ,
**ನಮಯನ್** = ವಿಧೇಯರನ್ನಾಗಿ ಮಾಡುತ್ತಾ ಬಗ್ಗಿಸುತ್ತಾ,
**ದೃಢಭಾವಾನ್** = ಸ್ಥಿರವಾದ ಸ್ವಭಾವವುಳ್ಳ,
**ಅನಮ್ರಾನ್** = ಅವಿಧೇಯರಾದ, ಬಾಗದಿರುವ,
**ಅಪರಾನ್** = ಇತರರನ್ನು, ಬೇರೆ ಕೆಲವು ಮರಗಳನ್ನು,
**ಭಂಗಂ ಅಪಿ** = ಪರಾಜಯವನ್ನೂ, ತುಂಡಾಗುವಿಕೆಯನ್ನು,
**ಉಪಾನಯನ್** =ಹೊಂದಿಸುತ್ತಾ,
**ಅಪಾರ್ಯವೀರ್ಯಃ ಸನ್** = ತಡೆಯಲಾಗದ ಸಾಮರ್ಥ್ಯವುಳ್ಳವರಾಗಿ,
**ವಿಬಭೌ** = ಪ್ರಕಾಶಿಸಿದರು.

**ತಾತ್ಪರ್ಯ—** ಗಂಗಾಪ್ರವಾಹವು ವೇಗವಾಗಿ ಹೋಗುತ್ತಾ ದಾರಿಯಲ್ಲಿ ತನಗೆ ಎದುರಾದ ಹೂವುಹಣ್ಣು-ಗಳಿಂದ ಶೋಭಿಸುವ ಎತ್ತರವಾದ ಮರಗಳನ್ನು ಬಗ್ಗಿಸುತ್ತದೆ. ಚೆನ್ನಾಗಿ ಬೆಳೆದು ಭೂಮಿಯೊಳಗೆ ಬೇರುಬಿಟ್ಟಿರುವ ಬಗ್ಗದಿರುವ ಗಟ್ಟಿಯಾದ ಮರಗಳನ್ನು ನೀರಿನಿಂದ ಆ ಮರಗಳ ಬುಡದ ಮಣ್ಣನ್ನು ಕೊಚ್ಚಿ ಕೊರೆದು ಬೇರುಗಳನ್ನು ಸಡಿಲಿಸಿ ಅವುಗಳನ್ನು ಭೂಮಿಗೆ ಕೆಡವಿ ತುಂಡರಿಸುತ್ತದೆ. ಇಂತಹಾ ಗಂಗಾ ಪ್ರವಾಹದಂತೆ ಶ್ರೀಮಧ್ವಾಚಾರ್ಯರು ಇದ್ದರು. ಅವರು ಜ್ಞಾನ, ಭಕ್ತಿ, ವೈರಾಗ್ಯವುಳ್ಳ ಸಾತ್ವಿಕರಾದ ಮುಕ್ತಿಯೋಗ್ಯಜೀವರಿಗೆ ತನ್ನ ಮಧುರ ಗಂಭೀರ ಮಾತುಗಳಿಂದ ಒಳ್ಳೆಯ ಉಪದೇಶವನ್ನು ಕೊಟ್ಟು ತಮ್ಮ ಪಾದಕ್ಕೆ ಎರಗುವಂತೆ ಮಾಡಿದರು. ತಮ್ಮ ಶಿಷ್ಯರನ್ನಾಗಿಯೂ ಭಕ್ತರನ್ನಾಗಿಯೂ ಮಾಡಿಕೊಂಡರು. ದೃಢವಾದ ಆಗ್ರಹದಿಂದ ಕೂಡಿದ್ದು ಆಚಾರ್ಯರ ಹಿತನುಡಿಯಿಂದಲೂ, ಮನಸ್ಸು ಕರಗಿ ಕಾಲಿಗೆ ಬಿದ್ದು ಶಿಷ್ಯರಾಗದಿರುವವರನ್ನು ತಮ್ಮ ಅಸ್ಖಲಿತವಾದ ಗಂಭೀರವಾದ ಶಾಸ್ತ್ರವಾಣಿಯಿಂದ ಸೋಲಿಸಿದರು. ಅವರ ಸಾಮರ್ಥ್ಯಕ್ಕೆ ಎಣೆಯೇ ಇರಲಿಲ್ಲ. ಆಚಾರ್ಯರು ಪ್ರಯಾಣ ಮಾಡುತ್ತಿರುವಾಗ ಗಂಗಾ ಪ್ರವಾಹದಂತೆ ಹೀಗೆ ವಿರಾಜಿಸಿದರು.

**ವಿಗ್ರಹ—**

**ಸುಮನಃಫಲಶೋಭಿನಃ—** ಶೋಭನಂ ಚ ತತ್ ಮನಶ್ಚ ಸುಮನಃ. ಸುಮನಸಃ ಫಲಾನಿ ಸುಮನಃಫಲಾನಿ. ಶೋಭಂತೇ ತಾಚ್ಛೀಲ್ಯೇನೇತಿ ಶೋಭಿನಃ. ಸುಮನಃಫಲೈಃ ಶೋಭಿನಃ ಸುಮನಃಫಲಶೋಭಿನಃ ತಾನ್

(ಪುಂಸಃ) ಸುಮನಾಂಸಿ ಚ ಫಲಾನಿ ಚ ಸುಮನಃಫಲಾನಿ ಸುಮನಃಫಲೈಃ ಶೋಭಿನಃ ಸುಮನಃ ಫಲಶೋಭಿನಃ ತಾನ್ ।

**ಅನಮ್ರಾನ್**— ನ ನಮ್ರಾಃ ಅನಮ್ರಾಃ ತಾನ್ ।

**ದೃಢಭಾವಾನ್**— ದೃಢಃ ಭಾವಃ ಯೇಷಾಂ ತೇ ದೃಢಭಾವಾಃ (ದೃಢಸ್ಯ ಭಾವಃ ದೃಢಭಾವಃ ತಸ್ಮಾತ್) ।

**ಅವಾರ್ಯವೀರ್ಯಃ**— ವಾರಯಿತುಂ ಶಕ್ಯಂ ವಾರ್ಯಂ, ನ ವಾರ್ಯಂ ಅವಾರ್ಯಂ, ಅವಾರ್ಯಂ ವೀರ್ಯಂ ಯಸ್ಯ ಸಃ ಅವಾರ್ಯ ವೀರ್ಯಃ ।

**ಕೋಶ**— ಗೋಭಿಃ ಎಂಬಲ್ಲಿ ಗೋ ಎಂದರೆ ಮಾತು ಮತ್ತು ನೀರು, 'ಭೂ ವಾಗ್ ವಾರಿಷು ಗೌರ್ಮತಾ' ವಿಶ್ವ ಸುಮನಸ್-ಒಳ್ಳೆಯ ಮನಸ್ಸು ಮತ್ತು ಹೂವು 'ಮಾಲಾಯಾಂ ಪಂಡಿತೇ ಪುಷ್ಪೇ ದೇವೇ ಸುಮನಸೋ ಭಿದಾ' ವಿಶ್ವ ಅನೋಕಹಾನ್-ಮರಗಳನ್ನು 'ಅನೋಕಹಃ ಕುಟಸಾಲಃ ಪಲಾಶೀದ್ರುದ್ರುಮಾಗಮಾಃ' ಅಮರ, ದೃಢ ಭವಾನ್ ಎಂಬಲ್ಲಿ ಭಾವಾ'ಸ್ವಭಾವ ಭಾವಃ ಸತ್ತಾಸ್ವಭಾವಾಭಿಪ್ರಾಯಚೇಷ್ಟಾತ್ಮಜನ್ಮಸು' ಅಮರ. ಭಂಗ-ಸೋಲು 'ಭಂಗಃ ಖಡ್ಗೇ ಪರಾಜಯೇ' ರತ್ನಮಾಲಾ.

★ ★ ★

**ಅವತಾರಿಕಾ**— ಶ್ರೀ ಮಧ್ವಾಚಾರ್ಯರು ಹೋಗುತ್ತಿರುವಾಗ ಹೇಗಿದ್ದರೆಂದು ಪುನಃ ವರ್ಣಿಸುತ್ತಾರೆ.

**ಗಮನೋತ್ಸವವಿಸ್ಮಿತೈರ್ನಿಷೇವ್ಯೋ**
**ವಿವಿಧೈರ್ಜಾನಪದೈರ್ಜನೈರಜಸ್ರಮ್ ।**
**ಪರಿಸತ್ವರಕೀರ್ತಿರಾರ್ತಿಮುಕ್ತೈ**
**ಪುರುಷೈರ್ದೂರಭುವಶ್ಚ (ಭವೈಶ್ಚ) ಗಮ್ಯಮಾನಃ ॥ 6 ॥**

**ಪದಚ್ಛೇದ**— ಗಮನೋತ್ಸವವಿಸ್ಮಿತೈಃ, ನಿಷೇವ್ಯಃ, ವಿವಿಧೈಃ ಜಾನಪದೈಃ ಜನೈಃ ಅಜಸ್ರಂ ಪರಿಸತ್ವರತಕೀರ್ತಿಃ ಆರ್ತಿಮುಕ್ತೈಃ, ಪುರುಷೈಃ ದೂರಭುವಃ ಚ (ದೂರಭವೈಃ ಚ) ಗಮ್ಯಮಾನಃ ।

**ಅನ್ವಯ**— ಅಯಂ ಪರಮಾನಂದತೀರ್ಥಸೂರಿರಾಜಃ, ಗಮನೋತ್ಸವವಿಸ್ಮಿತೈ ವಿವಿಧೈಃ ಜಾನಪದೈಃ ಜನೈಃ ಅಜಸ್ರಂ ನಿಷೇವ್ಯಃ (ಸನ್) ಪರಿಸತ್ವರಕೀರ್ತಿಃ (ಸನ್) ಆರ್ತಿಮುಕ್ತೈಃ, ಪುರುಷೈಃ ದೂರಭುವಃ, ಚ ಗಮ್ಯಮಾನಃ ಇವ ವಿಬಭೌ (ಸನ್) (ದೂರಭವೈಶ್ಚ ಪುರುಷೈಃ ಗಮ್ಯಮಾನಃ ಸನ್) ಸುರಸಿಂಧೋಃ, ಸಂತತಪ್ರವಾಹಃ ಇವ ವಿಬಭೌ ।

**ಅನ್ವಯಾರ್ಥ**—

**ಅಯಂ (ಪರಮಾನಂದತೀರ್ಥಸೂರಿರಾಜಃ)** = ಆನಂದಪ್ರದವಾದ ಮನೋಹರವಾದ ಶಾಸ್ತ್ರವುಳ್ಳ ಪಂಡಿತ-ವರೇಣ್ಯರಾದ ಶ್ರೀ ಮಧ್ವಾಚಾರ್ಯರು,

**ಗಮನೋತ್ಸವವಿಸ್ಮಿತೈಃ** = ಆಚಾರ್ಯರ ಸಂಚಾರವೆಂಬ ಉತ್ಸವದಿಂದ ಆಶ್ಚರ್ಯಪಟ್ಟ,

**ವಿವಿಧೈಃ** = ನಾನಾ ಪ್ರಕಾರವಾದ,

**ಜಾನಪದೈಃ ಜನೈಃ** = ಗ್ರಾಮಗಳ ಜನರಿಂದ,

**ಅಜಸ್ರಂ** = ಯಾವಾಗಲೂ,

**ನಿಷೇವ್ಯಃ ಸನ್** = ಸೇವಿಸಲ್ಪಡುತ್ತಿರುವವರಾಗಿ,

**ಪರಿಸತ್ವರಕೀರ್ತಿಃ(ಸನ್)** = ಹರಡುವ ಸ್ವಭಾವದಿಂದ ಕೂಡಿದ ಕೀರ್ತಿವುಳ್ಳವರಾಗಿ,

**ಆರ್ತಿಮುಕ್ತ್ಯೈ** = ಸಾಂಸಾರಿಕ ದುಃಖದ ಪರಿಹಾರಕ್ಕೋಸ್ಕರ,

**ಪುರುಷೈಃ** = ಜನರಿಂದ,

**ದೂರಭುವಃ ಚ** = ದೂರದ ಪ್ರದೇಶದ ದೆಸೆಯಿಂದಲೂ,

**ಗಮ್ಯಮಾನಃ ಸನ್** = ಹೊಂದಲ್ಪಡುತ್ತಿರುವವರಾಗಿ,

**ಸುರಸಿಂಧೋಃ** = ದೇವಗಂಗೆಯ,

**ಸಂತತಪ್ರವಾಹಃ ಇವ ವಿಬಭೌ** = ನಿರಂತರವಾದ ಪ್ರವಾಹದಂತೆ ಶೋಭಿಸಿದರು.

**(ದೂರಭವೈಃ ಪುರುಷೈಃ ಚ ಗಮ್ಯಮಾನಃ ಸನ್ ವಿಬಭೌ** = ದೂರದೇಶದಿಂದ ಬಂದಿರುವ ಜನರಿಂದಲೂ ಹಿಂಬಾಲಿಸಲ್ಪಡುವವರಾಗಿ ಶೋಭಿಸಿದರು)

ತಾತ್ಪರ್ಯ— ಶ್ರೀ ಗಂಗಾನದಿಯ ಪ್ರವಾಹವು ಹರಿಯುತ್ತಿರುವಾಗ ಎರಡೂ ದಡದಲ್ಲಿರುವ ನಾನಾದೇಶದ ಜನರು ಆಶ್ಚರ್ಯದಿಂದ ಗಂಗೆಯ ಈ ಸಮುದ್ರ ಪ್ರಯಾಣದ ಉತ್ಸವವನ್ನು ನೋಡುತ್ತಾರೆ. ಪ್ರತಿದಿನವೂ ಸ್ನಾನ ಪಾನಾದಿಗಳಿಂದ ಗಂಗೆಯನ್ನು ಸೇವಿಸುತ್ತಾರೆ. ಗಂಗಾಪ್ರವಾಹದ ಈ ಕೀರ್ತಿಯು ಎಲ್ಲ ಕಡೆ ಹರಡಿರುತ್ತದೆ. ಎಲ್ಲ ದುಃಖಗಳ ಪರಿಹಾರಕ್ಕಾಗಿ ದೂರದೇಶದಲ್ಲಿರುವ ಜನರೂ ಕೂಡಾ ಬಂದು ಗಂಗೆಯನ್ನು ನೋಡಲು ಸೇರುತ್ತಾರೆ. ಶ್ರೀ ಮಧ್ವಾಚಾರ್ಯರೂ ಕೂಡಾ ನಾನಾ ಶಿಷ್ಯರೊಡನೆ ಆಯಾ ದೇಶಕ್ಕೆ ಹೋದಾಗ ನಾನಾ ರೀತಿಯ ಜನರು ಆಶ್ಚರ್ಯಪಟ್ಟು ಆಚಾರ್ಯರ ಸಂಚಾರದ ಈ ಉತ್ಸವವನ್ನು ನೋಡುತ್ತಾರೆ ಮತ್ತು ಸೇವಿಸುತ್ತಾರೆ. ದಾರಿಯಲ್ಲಿ ಬೇರೆ ಬೇರೆ ಪ್ರದೇಶದ ಜನರು ಬಂದು ತಮ್ಮ ಅನಿಷ್ಟಗಳ ಪರಿಹಾರಕ್ಕಾಗಿ ಆಚಾರ್ಯರನ್ನು ಎದುರುಗೊಂಡು ನಮಸ್ಕಾರಾದಿಗಳನ್ನು ಮಾಡಿ ಸೇವಿಸುತ್ತಾರೆ. ಅವರ ಕೀರ್ತಿಯೂ ಎಲ್ಲ ಕಡೆ ಹರಡಿರುತ್ತದೆ. ಈ ರೀತಿ ಆಚಾರ್ಯರ ಪ್ರಯಾಣವು ಗಂಗಾನದಿಯ ಪ್ರವಾಹದಂತೆ ಶೋಭಾಯಮಾನವಾಗಿತ್ತು.

ವಿಗ್ರಹ—

**ಗಮನೋತ್ಸವವಿಸ್ಮಿತೈಃ**— ಗಮನಂ ಇತಿ ಉತ್ಸವಃ ಗಮನೋತ್ಸವಃ ಗಮನೋತ್ಸವೇ ವಿಸ್ಮಿತಾಃ ಗಮನೋತ್ಸವ ವಿಸ್ಮಿತಾಃ ತೈಃ ಗಮನೋತ್ಸವವಿಸ್ಮಿತೈಃ ।

**ಜಾನಪದೈಃ**— ಜನಪದಸ್ಯ ಇಮೇ ಜಾನಪದಾಃ ತೈಃ।

**ಪರಿಸತ್ವರಕೀರ್ತಿಃ**— ಪರಿಸರ್ತುಂ ಶೀಲಂ ಅಸ್ಯಾಃ ಇತಿ ಪರಿಸತ್ವರೀ, ಪರಿಸತ್ವರೀ ಕೀರ್ತಿಃ ಯಸ್ಯಸಃ ಪರಿಸತ್ವರಕೀರ್ತಿಃ ।

**ಆರ್ತಿಮುಕ್ತ್ಯೈ**— ಆರ್ತೇಃ ಮುಕ್ತಿಃ ಆರ್ತಿಮುಕ್ತಿಃ ತಸ್ಯೈ ।

**ದೂರಭುವಃ**— ದೂರಾ ಚ ಸಾ ಭೂಶ್ಚ ದೂರಭೂಃ ತಸ್ಯಾಃ (ದೂರೇ ಭವಾಃ ದೂರಭವಾಃ ತೈಃ)

**ಕೋಶ**— ಜಾನಪದ ಎಂಬಲ್ಲಿ ಜನಪದ-ದೇಶ, 'ನಿವೃಜ್ಜನಪದೋ ದೇಶವಿಷಯೌ' ಅಮರ. ಅಜಸ್ರಂ-ನಿತ್ಯ ದಲ್ಲಿಯೂ, 'ನಿತ್ಯಾನವರತಾಜಸ್ರಂ' ಅಮರ.

★ ★ ★

**ಅವತಾರಿಕಾ**— ಮತ್ತೂ ಪ್ರಯಾಣ ಮಾಡುತ್ತಿರುವ ಆಚಾರ್ಯರನ್ನು ಗಂಗಾಪ್ರವಾಹದೊಡನೆ ಹೋಲಿಸಿ ವರ್ಣಿಸುತ್ತಾರೆ.

**ಅಮರೈರಮರಾನುಗೈರ್ಮುನೀಂದ್ರೈ-**
**ರಪರೇಕ್ಷಾವಿಷಯೈಶ್ಚ ಸೇವ್ಯಮಾನಃ ।**
**ಹರಿಪಾದಸರೋಜಸಂಗಸಾರೋ**
**ಭುವನೇ ಪಾವನಪಾವನೋ ನಿಕಾಮಮ್ ॥ 7 ॥**

ಪದಚ್ಛೇದ— ಅಮರ್ತ್ಯೈಃ ಅಮರಾನುಗೈಃ ಮುನೀಂದ್ರೈಃ ಅಪರೇಕ್ಷಾವಿಷಯ್ಯೈಃ ಚ ಸೇವ್ಯಮಾನಃ ಹರಿಪಾದಸರೋಜ-ಸಂಗಸಾರಃ, ಭುವನೇ, ಪಾವನಪಾವನಃ, ನಿಕಾಮಂ ।

ಅನ್ವಯ— (ಅಯಂ ಪರಮಾನಂದತೀರ್ಥಸೂರಿರಾಜಃ) ಅಪರೇಕ್ಷಾವಿಷಯ್ಯೈಃ, ಅಮರ್ತ್ಯೈಃ, ಅಮರಾನುಗೈಃ, ಮುನೀಂ (ದ್ರೈಶ್ಚ), ಸೇವ್ಯಮಾನಃ (ಸನ್), ನಿಕಾಮಂ, ಹರಿಪಾದಸರೋಜಸಂಗಸಾರಃ (ಸನ್), ಭುವನೇ, ಪಾವನಪಾವನಃ (ಸನ್) ಸುರಸಿಂಧೋಃ, ಸಂತತಪ್ರವಾಹಃ, ಇವ ವಿಬಭೌ ।

ಅನ್ವಯಾರ್ಥ—

**(ಅಯಂ ಪರಮಾನಂದತೀರ್ಥಸೂರಿರಾಜಃ)** = ಈ ಆನಂದಕರವಾದ ಶಾಸ್ತ್ರವುಳ್ಳ ಪಂಡಿತರಾಜರಾದ ಶ್ರೀ ಮಧ್ವಾಚಾರ್ಯರು,

**ಅಪರೇಕ್ಷಾವಿಷಯ್ಯೈಃ** = ಮನುಷ್ಯಾದಿಗಳ ಕಣ್ಣಿಗೆ ಗೋಚರವಾಗದಿರುವ,

**ಅಮರ್ತ್ಯೈಃ** = ದೇವತೆಗಳಿಂದಲೂ,

**ಅಮರಾನುಗೈಃ** = ದೇವತೆಗಳ ಅನುಚರರಾದ ಗಂಧರ್ವಾದಿಗಳಿಂದಲೂ,

**ಮುನೀಂದ್ರೈಶ್ಚ** = ಯೋಗಿಶ್ರೇಷ್ಠರಿಂದಲೂ,

**ಸೇವ್ಯಮಾನಃ (ಸನ್)**= ಸೇವಿಸಲ್ಪಡುವವರಾಗಿ,

**ನಿಕಾಮಂ** = ಅತಿಶಯವಾಗಿ,

**ಹರಿಪಾದಸರೋಜಸಂಗಸಾರಃ (ಸನ್)**= ಶ್ರೀಮನ್ನಾರಾಯಣನ ಪಾದವೆಂಬ ಕಮಲದಲ್ಲಿರುವ ಆಸಕ್ತಿಯಿಂದ ಉತ್ತಮರಾಗಿ,

**ಭುವನೇ** = ಲೋಕದಲ್ಲಿ

**ಪಾವನಪಾವನಃ (ಸನ್)** = ಪವಿತ್ರಕ್ಕಿಂತಲೂ ಪವಿತ್ರರಾಗಿ,

**ಸುರಸಿಂಧೋಃ ಸಂತತಪ್ರವಾಹಃ ಇವ ವಿಬಭೌ** = ಗಂಗೆಯ ನಿರಂತರ ಪ್ರವಾಹದಂತೆ ಶೋಭಿಸಿದರು.

ತಾತ್ಪರ್ಯ— ದೇವಗಂಗೆಯ ಪ್ರವಾಹವು ಹರಿಹೋಗುತ್ತಿರುವಾಗ ದೇವತೆಗಳೂ ಅವರ ಅನುಚರರಾದ ಸಿದ್ಧ ಗಂಧರ್ವಾದಿಗಳೂ ಹಾಗು ಮುನಿಗಳೂ ಇತರರ ಕಣ್ಣಿಗೆ ಬೀಳದೆ ಗಂಗೆಯನ್ನು ಸೇವಿಸುತ್ತಾರೆ. ತ್ರಿವಿಕ್ರಮರೂಪಿಯಾದ ಪರಮಾತ್ಮನ ಪಾದಕಮಲದ ಪ್ರಕ್ಷಾಲನ ಸಮಯದಲ್ಲಿ ಹುಟ್ಟಿದ್ದರಿಂದ ಗಂಗಾ ಪ್ರವಾಹವು ಅತಿ ಶ್ರೇಷ್ಠವಾಗಿಯೂ ಪವಿತ್ರ ವಸ್ತುಗಳಲ್ಲಿ ಪವಿತ್ರವಾಗಿಯೂ ಶೋಭಿಸುತ್ತದೆ. ಶ್ರೀಮಧ್ವಾಚಾರ್ಯರು ಸಹ್ಯ ಪರ್ವತವನ್ನು ದಾಟಿ ಜಯಸಿಂಹನ ರಾಜ್ಯಕ್ಕಾಗಿ ಬರುತ್ತಿರುವಾಗ ದೇವತೆಗಳೂ ಅವರ ಸೇವಕರಾದ ಗಂಧರ್ವಾದಿಗಳೂ ಇತರರ ಕಣ್ಣಿಗೆ ಬೀಳದ ಆಚಾರ್ಯರನ್ನು ಸೇವಿಸುತ್ತಾರೆ. ಋಷಿಶ್ರೇಷ್ಠರೂ ಸೇವಿಸುತ್ತಾರೆ. ಶ್ರೀಹರಿಯ ಪಾದಕಮಲದಲ್ಲಿಯೇ ಆಸಕ್ತಿಯುಳ್ಳವರಾದುದರಿಂದ ಶ್ರೀಮಧ್ವಾಚಾರ್ಯರು ಜೀವರಲ್ಲಿ ಉತ್ತಮರಾಗಿದ್ದಾರೆ. ಹೀಗೆ ದೇವಗಂಗಾ ನದಿಯ ಪ್ರವಾಹದಂತೆ ಶ್ರೀಮಧ್ವಾಚಾರ್ಯರು ಪ್ರಯಾಣ ಮಾಡುತ್ತಿರುವಾಗ ಶೋಭಿಸಿದರು.

ವಿಗ್ರಹ—

**ಅಮರಾನುಗೈಃ**— ಅಮರಾಣಾಂ ಅನುಗಾಃ ಅಮರಾನುಗಾಃ ತೈಃ ।

**ಮುನೀಂದ್ರೈಃ**— ಮುನೀನಾಂ ಇಂದ್ರಾಃ ಮುನೀಂದ್ರಾಃ ತೈಃ ।

**ಅಪರೇಕ್ಷಾವಿಷಯ್ಯೈಃ**— ಅಪರೇಕ್ಷಾಂ ಈಕ್ಷಾ ಅಪರೇಕ್ಷಾ ಅಪರೇಕ್ಷಾಯಾಃ ಅವಿಷಯಾಃ ಅಪರೇಕ್ಷಾ ವಿಷಯಾಃ ತೈಃ ।

**ಹರಿಪಾದಸರೋಜಸಂಗಸಾರಃ—** ಹರೇಃ ಪಾದಃ ಹರಿಪಾದಃ, ಸರಸಃ ಜಾಯತೇ ಇತಿ ಸರೋಜಂ ಹರಿಪಾದಃ ಏವ ಸರೋಜಂ ಹರಿಪಾದಸರೋಜಂ ಹರಿಪಾದಸರೋಜೇ ಸಂಗಃ ಹರಿಪಾದಸರೋಜಸಂಗಃ ಹರಿ ಪಾದಸರೋಜಸಂಗೇನ ಸಾರಃ ಹರಿಪಾದಸರೋಜಸಂಗಸಾರಃ ।

**ಪಾವನಪಾವನಃ—** ಪಾವನಾತ್ ಪಾವನಃ ।

**ವಿಶೇಷಾಂಶ—** ಅಪರೋಕ್ಷೇ ವಿಷಯೈಃ ಎಂಬಲ್ಲಿ ಅಪರೋಕ್ಷಾವಿಷಯೈಃ ಎಂದು ಛಲಾರೀಯ ಪಾಠಾಂತರ. ಪ್ರತ್ಯಕ್ಷಕ್ಕೆ ವಿಷಯವಲ್ಲದವರು ಎಂದು ಹಿಂದಿನಂತೆಯೇ ಅರ್ಥ.

**ಕೋಶ—** ನಿಕಾಮಂ - ಅತಿಶಯವಾಗಿ, 'ಕಾಮಂ ಪ್ರಕಾಮಂ ಪರ್ಯಾಪ್ತಂ ನಿಕಾಮೇಷ್ಟಂ ಯಥೇಪ್ಸಿತಂ' ಅಮರ. ಹರಿಪಾದಸರೋಜಸಂಗಸಾರಃ ಎಂಬಲ್ಲಿ ಸಾರ - ಉತ್ತಮ, 'ಸಾರೋ ಬಲೇ ಸ್ಥಿರಾಂಶೇ ಚ ನ್ಯಯೇ ಕ್ಲೀಬಂ ವರೇ ತ್ರಿಷು'. ಅಮರ.

★ ★ ★

**ಅವತಾರಿಕಾ—** ಮತ್ತೂ ಶ್ರೀಮಧ್ವಾಚಾರ್ಯರನ್ನು ವರ್ಣಿಸುತ್ತಾರೆ.

**ಅಯಮಪ್ರತಿವಾರಣಃ ಪ್ರಯಾಣೇ**
**ಪರಮಾನಂದಸುತೀರ್ಥಸೂರಿರಾಜಃ ।**
**ವಿಬಭಾವತಿವೇಲಮಚ್ಛರೂಪಃ**
**ಸುರಸಿಂಧೋರಿವ ಸಂತತಪ್ರವಾಹಃ ॥ 8 ॥**

**ಪದಚ್ಛೇದ—** ಅಯಂ ಅಪ್ರತಿಮವಾರಣಃ ಪ್ರಯಾಣೇ ಪರಮಾನಂದಸುತೀರ್ಥಸೂರಿರಾಜಃ, ವಿಬಭೌ,ಅತಿವೇಲಂ ಅಚ್ಛರೂಪಃ ಸುರಸಿಂಧೋಃ, ಇವ ಸಂತತಪ್ರವಾಹಃ ।

**ಅನ್ವಯ—** ಅಚ್ಛರೂಪಃ ಅಪ್ರತಿವಾರಣಃ ಅಯಂ ಪರಮಾನಂದಸುತೀರ್ಥಸೂರಿರಾಜಃ, ಪ್ರಯಾಣೇ ಸುರ ಸಿಂಧೋಃ, ಸಂತತಪ್ರವಾಹಃ ಇವ ಅತಿವೇಲಂ ವಿಬಭೌ ।

**ಅನ್ವಯಾರ್ಥ—**

**ಅಚ್ಛರೂಪಃ** = ದೋಷವಿಲ್ಲದ ಸ್ವರೂಪವುಳ್ಳ, ಬೆಳ್ಳಗಿರುವ ಸ್ವರೂಪವುಳ್ಳ,
**ಅಪ್ರತಿವಾರಣಃ** = ತಡೆಯುವವರಿಲ್ಲದ,
**ಅಯಂ** = ಈ,
**ಪರಮಾನಂದಸುತೀರ್ಥಸೂರಿರಾಜಃ** = ಶ್ರೀಮದಾನಂದತೀರ್ಥರೆಂಬ ಪಂಡಿತೋತ್ತಮರು,
**ಪ್ರಯಾಣೇ** = ಪ್ರಯಾಣ ಕಾಲದಲ್ಲಿ,
**ಸುರಸಿಂಧೋಃ** = ಗಂಗೆಯ,
**ಸಂತತಪ್ರವಾಹಃ ಇವ** = ಎಡಬಿಡದ ಪ್ರವಾಹದಂತೆ,
**ಅತಿವೇಲಂ** = ಬಹಳವಾಗಿ,
**ವಿಬಭೌ** = ವಿರಾಜಿಸಿದರು,

**ತಾತ್ಪರ್ಯ—** ಗಂಗಾಪ್ರವಾಹವು ಬೆಳ್ಳಗಿರುತ್ತದೆ. ಅದಕ್ಕೆ ಎಲ್ಲಿಯೂ ತಡೆಯಿರುವುದಿಲ್ಲ. ಶ್ರೀಮದಾನಂದತೀರ್ಥ ರೆಂಬ ಪಂಡಿತೋತ್ತಮರು ನಿರ್ದೋಷರು, ಎದುರಾಳಿ ಇಲ್ಲದವರು. ಇವರು ಪ್ರಯಾಣ ಕಾಲದಲ್ಲಿ ತನ್ನಂತೆಯೇ ಇರುವ ನಿರಂತರವಾಗಿ ಹರಿಯುವ ಗಂಗೆಯ ಪ್ರವಾಹದಂತೆ ಅತಿಶಯವಾಗಿ ವಿರಾಜಿಸಿದರು.

ವಿಗ್ರಹ—

**ಅಪ್ರತಿವಾರಣಃ**— ನ ವಿದ್ಯತೇ ಪ್ರತಿವಾರಣಃ ಯಸ್ಯಸಃ ಅಪ್ರತಿವಾರಣಃ ।

**ಅಚ್ಛರೂಪಃ**— ಅಚ್ಛಂ ರೂಪಂ ಯಸ್ಯಸಃ ಅಚ್ಛರೂಪಃ ।

**ಸುರಸಿಂಧೋಃ**— ಸುರಾಣಾಂ ಸಿಂಧುಃ ಸುರಸಿಂಧುಃ ತಸ್ಯಾಃ ಸುರಸಿಂಧೋಃ ।

**ಸಂತತಪ್ರವಾಹಃ**— ಸಂತತಶ್ಚಾಸೌ ಪ್ರವಾಹಶ್ಚ ಸಂತತಪ್ರವಾಹಃ ।

**ಕೋಶ**— **ಸಿಂಧುಃ**- ನದೀ, 'ದೇಶೇ ನದವಿಶೇಷೇಽಬ್ಧೌ ಸಿಂಧುರ್ನಾ ಸರತಿಸ್ತ್ರಿಯಾಂ' ಅಮರ, ಅತಿವೇಲಂ - ಅತ್ಯಂತವಾಗಿ, 'ಅತಿವೇಲಭೃಶಾತ್ಯರ್ಥಾತಿಮಾತ್ರೋದ್ಗಾಢನಿರ್ಭರಂ' ಅಮರ.

**ಕ್ರಿಯಾಪದ**— ವಿ = ಬಭೌ ಬಭತುಃ ಬಭುಃ, ಬಭಿಥ ಬಭಾಥ ಬಭಥುಃ ಬಭ, ಬಭೌ ಬಭಿವ ಬಭಿಮ । ಭಾ ದೀಪ್ತೌ, ವಿ.ಪು. ಉಪಸರ್ಗ ಅಕರ್ಮಕ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ. ಈ ಧಾತುವಿನ ಉಳಿದ ರೂಪಗಳು 12ನೇ ಸರ್ಗದ 18ನೆಯ ಶ್ಲೋಕದ ವ್ಯಾಖ್ಯಾನದಲ್ಲಿ ಬಂದಿದೆ.

**ಪ್ರಯೋಗ**— 4ನೆಯ ಶ್ಲೋಕದಿಂದ 8ನೆಯ ಶ್ಲೋಕಗಳಿಗೆ ಏಕಾನ್ವಯ, ಕುಲಕ 4ನೆಯ ಶ್ಲೋಕದಿಂದ 8ನೆ ಶ್ಲೋಕದವರೆಗೂ ಒಟ್ಟಿಗೆ ಪ್ರಯೋಗ ಬದಲಾಯಿಸಿಕೊಳ್ಳಬೇಕು. ಮಾಯಿಜುಷ್ವಾನ್ ತರಸಾ ಅಭಿಗಮ್ಯಮಾನೇನ ನಯತಾ, ಉಪಾನಯತಾ ಅವಾರ್ಯವೀರ್ಯೇಣ ವಿಶ್ವೈಃ ನಿಷೇವ್ಯೇಣ, ಪರಿಸತ್ವರಕೀರ್ತಿನಾ.....ಗಮ್ಯಮಾನೇನ (6) ಅಪರೇಕ್ಷಾವಿಷಯ್ಯೈಃ ಸೇವ್ಯಮಾನೇನ ಸತಾ. ನಿಕಾಮಂ ಹರಿಪಾದಸರೋಜಸಂಗಸಾರೇಣ ಭುವನೇ ಪಾವನಪಾವನೇನ ಸಹಾಃ, (7) ಅಚ್ಛರೂಪೇಣ ಅಪ್ರತಿವಾರಣೇನ ಅನೇನ ಪರಮಾನಂದಸುತೀರ್ಥಸೂರಿರಾಜೇನ ಪ್ರಯಾಣೇ ಸುರಸಿಂಧೋಃ ಸಂತತಪ್ರವಾಹೇಣೇವ ಅತಿವೇಲಂ ವಿಬಭೇ (ಭಾವೇ) ।

★ ★ ★

ಅವತಾರಿಕಾ— ಆಚಾರ್ಯರು ತಮ್ಮ ಉದ್ದಿಷ್ಟವಾದ ಸ್ಥಳಕ್ಕೆ ಹೋಗಿ ತಲುಪಿದರೆಂದು ಹೇಳುತ್ತಾರೆ.

**ಸಮಯೇನ ಗತೋಽಮಹೀಯಸಾಽಸೌ**
**ವಿಷಯಂ ಸ್ತಂಭಪದೋಪಸರ್ಜನಾಖ್ಯಮ್ ।**
**ಮದನಾಧಿಪತೇಃ ಸುಧಾಮ ಧಾಮ**
**ಪ್ರವಿವೇಶಾಖಿಲಲೋಕವಂದನೀಯಮ್ ॥ 9 ॥**

ಪದಚ್ಛೇದ— ಸಮಯೇನ, ಗತಃ, ಅಮಹೀಯಸಾ ಅಸೌ, ವಿಷಯಂ, ಸ್ತಂಭಪದೋಪಸರ್ಜನಾಖ್ಯಂ, ಮದನಾಧಿಪತೇಃ, ಸುಧಾಮ, ಧಾಮ, ಪ್ರವಿವೇಶ, ಅಖಿಲಲೋಕವಂದನೀಯಂ ।

ಅನ್ವಯ— ಅಸೌ, ಅಮಹೀಯಸಾ, ಸಮಯೇನ, ಸ್ತಂಭಪದೋಪಸರ್ಜನಾಖ್ಯಂ, ವಿಷಯಂ, ಗತಃ, ಸುಧಾಮ, ಮದನಾಧಿಪತೇಃ, ಅಖಿಲಲೋಕವಂದನೀಯಂ, ಧಾಮ, ಪ್ರವಿವೇಶ ।

ಅನ್ವಯಾರ್ಥ—

ಅಸೌ = ಈ ಶ್ರೀಮಧ್ವಾಚಾರ್ಯರು,

ಅಮಹೀಯಸಾ = ಅತಿ ಸ್ವಲ್ಪವಾದ,

ಸಮಯೇನ = ಕಾಲದಿಂದ,

ಸ್ತಂಭಪದಉಪಸರ್ಜನಾಖ್ಯಂ = ಕಬೆ ಎಂಬ ಪದವು ವಿಶೇಷಣವಾಗಿ ಹೆಸರುಳ್ಳ,

ವಿಶಯಂ = ನಾಡನ್ನು ಕುರಿತು, (ಕಬೆನಾಡನ್ನು ಕುರಿತು)

ಗತಃ ಸನ್ = ಹೋದವರಾಗಿ,

ಸುಧಾಮ = ಒಳ್ಳೆಯ ಕಾಂತಿಯುಳ್ಳ,

ಮದನಾಧಿಪತೇಃ = ಮದನೇಶ್ವರ ಎಂಬ ರುದ್ರದೇವರ,

ಅಖಿಲಲೋಕವಂದನೀಯಂ = ಎಲ್ಲಾ ಜನರಿಂದ ನಮಸ್ಕರಿಸಲು ಯೋಗ್ಯವಾದ,

ಧಾಮ = ಸ್ಥಾನವನ್ನು (ಮದನೇಶ್ವರ ದೇವಾಲಯವನ್ನು),

ಪ್ರವಿವೇಶ = ಹೊಕ್ಕರು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ಸ್ವಲ್ಪ ಸಮಯದಲ್ಲಿಯೇ ಕಬೆನಾಡು ಎಂದು ಪ್ರಸಿದ್ಧವಾದ ಜಯಸಿಂಹ ರಾಜನ ರಾಜ್ಯವನ್ನು ಪ್ರವೇಶಿಸಿದರು. ಅಲ್ಲಿ ಪ್ರಕಾಶಮಾನವಾದ ಒಂದು ದೇವಾಲಯವಿತ್ತು. ಎಲ್ಲ ಭಕ್ತರಿಂದಲೂ ವಂದನೀಯನಾದ ಮದನೇಶ್ವರ ಎಂಬ ಹೆಸರಿನ ಈಶ್ವರನು ಅಲ್ಲಿ ಸನ್ನಿಹಿತನಾಗಿದ್ದನು. ಆಚಾರ್ಯರು ಆ ದೇವಾಲಯವನ್ನು ಪ್ರವೇಶಿಸಿದರು.

ವಿಗ್ರಹ—

ಅಮಹೀಯಸಾ— ಅತಿಶಯೇನ ಮಹಾನ್ ಮಹೀಯಾನ್, ನ ಮಹೀಯಾನ್ ಅಮಹೀಯಾನ್ ತೇನ ಅಮಹೀಯಸಾ ।

ಸ್ತಂಭಪದೋಪಸರ್ಜನಾಖ್ಯಂ— ಸ್ತಂಭ ಇತಿ ಪದಂ ಉಪಸರ್ಜನಂ ಯಸ್ಯಾ ಸಾ ಸ್ತಂಭಪದೋಪಸರ್ಜನಾ. ಸ್ತಂಭಪದೋಪಸರ್ಜನಾ ಆಖ್ಯಾ ಯಸ್ಯ ಸಃ ಸ್ತಂಭಪದೋಪಸರ್ಜನಾಖ್ಯಃ, ತಂ ಸ್ತಂಭಪದೋಪ ಸರ್ಜನಾಖ್ಯಂ।

ಸುಧಾಮ— ಶೋಭನಂ ಧಾಮ ಯಸ್ಯ ತತ್ ಸುಧಾಮ ।

ಅಖಿಲಲೋಕವಂದನೀಯಂ— ಅಖಿಲಾಶ್ಚ ತೇ ಲೋಕಾಶ್ಚ ಅಖಿಲಲೋಕಾಃ ಅಖಿಲಲೋಕೈಃ ವಂದನೀಯಂ ಅಖಿಲಲೋಕವಂದನೀಯಂ ।

ಕ್ರಿಯಾಪದ— ಪ್ರವಿವೇಶ - ಪ್ರ = ವಿವೇಶ ವಿವಿಶತುಃ ವಿವಿಶುಃ, ವಿವಿಶಥ ವಿವಿಶಥುಃ ವಿವಿಶ, ವಿವೇಶ ವಿವಿಶಿವ ವಿವಿಶಿಮ । ವಿಶಪ್ರವೇಶನೇ ಸಕರ್ಮಕ ಪ್ರತ್ಯುಪಸರ್ಗ ಪರಸ್ಮೈಪದಿನಃ ಭೂತ ಅನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ ।1ನೆಯ ಸರ್ಗದ 36ನೆಯ ಶ್ಲೋಕದಲ್ಲಿ ಅನುಪಾಲಿತಾ...ಶಾ ವಿಶಂತಿ ಪರೋಪವನಂ ಎಂಬಲ್ಲಿ ಈ ಧಾತುವಿನ ಎಲ್ಲಾ ರೂಪಗಳನ್ನು ಕೊಡಲಾಗಿದೆ.

ಕೋಶ— ಸಮಯಃ = ಕಾಲ, 'ಕಾಲೋ ದಿಷ್ಟೋಽಪ್ಯನೇಹಾಪಿ ಸಮಯೋಽಪ್ಯಥ ಪಕ್ಷತಿಃ' ಅಮರ. ವಿಷಯಂ = ದೇಶವನ್ನು, 'ವಿಷಯಃ ಸ್ಯಾದಿಂದ್ರಿಯಾರ್ಥೇ ದೇಶೇ ಜನಪದೇಽಪಿ' ಚ ವಿಶ್ವ. ಧಾಮ = ಮನೆ, ತೇಜಸ್ಸು 'ಧಾಮ ಧಿಷ್ಣ್ಯೇ ಚ ತೇಜಸಿ' ವಿಶ್ವ. ಲೋಕ = ಜನ, 'ಲೋಕಸ್ತು ಭುವನೇ ಜನೇ' ಅಮರ.

ಪ್ರಯೋಗ— ಅಮುನಾ ಅಮಹೀಯಸಾ ಸಮಯೇನ ಸ್ತಂಭಪದೋಪಸರ್ಜನಾಖ್ಯಂ ವಿಷಯಂ ಗತೇನ ಸತಾ ಸುಧಾಮ ಮದನಾಧಿಪತೇಃ ಅಖಿಲಲೋಕವಂದನೀಯಂ ಧಾಮ ಪ್ರವಿವೇಶ (ಕರ್ಮಣಿ) ।

★ ★ ★

**ಅವತಾರಿಕಾ**— ಒಂದು ರಾತ್ರಿ ಅಲ್ಲಿ ವಾಸವಾಗಿದ್ದು ಅನಂತರ ಆಚಾರ್ಯರು ಅಲ್ಲಿಂದ ಮುಂದಕ್ಕೆ ಹೊರಡಲು ಉದ್ಯುಕ್ತರಾದರು ಎಂದು ಹೇಳುತ್ತಾರೆ.

**ಕ್ಷಣದಾಮಿಹ ತಾವದೂಷಿವಾಂಸಂ**
**ವಿಹಿತಾಹರ್ಮುಖಯೋಗ್ಯಯೋಗಮೇನಮ್ ।**
**ಗಮನೋದ್ಯಮಲಕ್ಷಣೈರ್ವ್ಯಜಾನನ್**
**ಗಮನಾಯೋದ್ಯತಮಾಶು ಶಿಷ್ಯಸಂಘಾಃ ॥ 10 ॥**

**ಪದಚ್ಛೇದ**— ಕ್ಷಣದಾಂ ಇಹ ತಾವತ್ ಊಷಿವಾಂಸಂ, ವಿಹಿತಾಹರ್ಮುಖಯೋಗ್ಯಯೋಗಂ ಏನಂ, ಗಮನೋದ್ಯಮಲಕ್ಷಣೈಃ, ವ್ಯಜಾನನ್, ಗಮನಾಯ ಉದ್ಯತಂ ಆಶು, ಶಿಷ್ಯಸಂಘಾಃ ।

**ಅನ್ವಯ**— ಇಹ ಕ್ಷಣದಾಂ ತಾವತ್ ಊಷಿವಾಂಸಂ ವಿಹಿತಾರ್ಮುಖಯೋಗ್ಯಯೋಗಂ ಏನಂ ಶಿಷ್ಯಸಂಘಾಃ ಗಮನೋದ್ಯಮ ಲಕ್ಷಣೈಃ ಆಶು ಗಮನಾಯ ಉದ್ಯತಂ ವ್ಯಜಾನನ್ ।

**ಅನ್ವಯಾರ್ಥ**—

**ಇಹ** = ಈ ಮದನೇಶ್ವರ ದೇವಾಲಯದಲ್ಲಿ,
**ಕ್ಷಣದಾಂ ತಾವತ್** = ರಾತ್ರಿಯಲ್ಲಿ ಮಾತ್ರವೇ,
**ಊಷಿವಾಂಸಂ** = ವಾಸ ಮಾಡಿದ,
**ವಿಹಿತಾಹರ್ಮುಖಯೋಗ್ಯಯೋಗಂ** = ಮಾಡಲ್ಪಟ್ಟ ಪ್ರಾತಃಕಾಲಕ್ಕೆ ಉಚಿತವಾದ ಕಾರ್ಯವುಳ್ಳ,
**ಏನಂ** = ಶ್ರೀ ಮಧ್ವಾಚಾರ್ಯರನ್ನು,
**ಶಿಷ್ಯಸಂಘಾಃ** = ಶಿಷ್ಯರ ಸಮೂಹಗಳು,
**ಗಮನೋದ್ಯಮ** = ಪ್ರಯಾಣದ ಪ್ರಯತ್ನದ,
**ಲಕ್ಷಣೈಃ** = ಚಿಹ್ನೆಗಳಿಂದ,
**ಆಶು** = ಬೇಗನೆ,
**ಗಮನಾಯ** = ಪ್ರಯಾಣಕ್ಕೆ,
**ಉದ್ಯತಂ** = ಸಿದ್ಧರಾದವರಾಗಿ,
**ವ್ಯಜಾನನ್** = ತಿಳಿದರು.

**ತಾತ್ಪರ್ಯ**— ಶ್ರೀ ಮಧ್ವಾಚಾರ್ಯರು ಆ ಮದನೇಶ್ವರ ದೇವಾಲಯದಲ್ಲಿ ಒಂದು ರಾತ್ರಿ ಕಳೆದರು. ಬೆಳಿಗ್ಗೆ ಬೇಗನೆ ಎದ್ದು ಪ್ರಾತಃಕಾಲ ಆಹ್ನಿಕವನ್ನು ಪೂರೈಸಿದರು. ಅವರ ಪ್ರಯಾಣದ ಪ್ರಯತ್ನದ ಚಿಹ್ನೆಗಳಿಂದ ಶಿಷ್ಯರು ಶ್ರೀ ಮಧ್ವಾಚಾರ್ಯ ರು ಪ್ರಯಾಣಕ್ಕೆ ಸಿದ್ಧರಾಗುತ್ತಿದ್ದಾರೆಂದು ತಿಳಿದರು.

**ವಿಗ್ರಹ**—

**ವಿಹಿತಾಹರ್ಮುಖಯೋಗ್ಯಯೋಗಂ**— ಅಹ್ನಃ ಮುಖಂ ಅಹರ್ಮುಖಂ, ಅಹರ್ಮುಖಸ್ಯ ಯೋಗ್ಯಃ ಅಹರ್ಮುಖಯೋಗ್ಯಃ, ಅಹರ್ಮುಖಯೋಗ್ಯಶ್ಚಾಸೌ ಯೋಗಶ್ಚ ಅಹರ್ಮುಖಯೋಗ್ಯಯೋಗಃ, ವಿಹಿತಃ ಅಹರ್ಮುಖಯೋಗ್ಯಯೋಗಃ ಯೇನ ಸಃ ವಿಹಿತಾಹರ್ಮುಖಯೋಗ್ಯಯೋಗಃ, ತಂ ವಿಹಿತಾ ಹರ್ಮುಖಯೋಗ್ಯಯೋಗಂ ।

**ಗಮನೋದ್ಯಮಲಕ್ಷಣೈಃ—** ಗಮನಸ್ಯ ಉದ್ಯಮಃ ಗಮನೋದ್ಯಮಃ ಗಮನೋದ್ಯಮಸ್ಯ ಲಕ್ಷಣಾನಿ ಗಮನೋದ್ಯಮಲಕ್ಷಣಾನಿ ತೈಃ ಗಮನೋದ್ಯಮಲಕ್ಷಣೈಃ ।

**ಶಿಷ್ಯಸಂಘಾಃ—** ಶಿಷ್ಯಾಣಾಂ ಸಂಘಾಃ ಶಿಷ್ಯಸಂಘಾಃ ।

**ವ್ಯಾಕರಣವಿಶೇಷ—** ಕ್ಷಣದಾಂ ಊಷಿವಾಂಸಂ ಎಂಬಲ್ಲಿ 'ಕಾಲಾಧ್ವನೋರತ್ಯಂತಸಂಯೋಗೇ' ಎಂಬ ಸೂತ್ರದಿಂದ ಅತ್ಯಂತ ಸಂಯೋಗದಲ್ಲಿ ದ್ವಿತೀಯಾ, ಊಷಿವಾಂ ಎಂಬಲ್ಲಿ ವಸಧಾತುವಿಗೆ ಕ್ವಸು ಪ್ರತ್ಯಯ. ಊಷಿವಸ ಶಬ್ದ ಊಷಿವಾನ್ ಊಷಿವಾಂಸೌ ಊಷಿವಾಂಸಃ, ಹೇ ಊಷಿವನ್ ಹೇ ಊಷಿವಾಂಸೌ ಹೇ ಊಷಿವಾಂಸಃ, ಊಷಿವಾಂಸಂ ಊಷಿವಾಂಸೌ ಊಷುಷಃ, ಊಷುಷಾ ಊಷಿವದ್ಭ್ಯಾಂ ಊಷಿವದ್ಭಿಃ-ಊಷಿವತ್ಸು ।

**ಕೋಶ—** ಅಹರ್ಮುಖಃ = ಉಷಃಕಾಲ, 'ಪ್ರತ್ಯೂಷೋಽಹರ್ಮುಖಂ ಕಲ್ಯಂ ಉಷಃ ಪ್ರತ್ಯುಷಸೀ ಅಪಿ' ಅಮರ. ಕ್ಷಣದಾ = ರಾತ್ರಿ, 'ನಿಶಾ ನಿಶೀಥಿನೀ ರಾತ್ರಿಸ್ತ್ರಿಯಾಮಾ ಕ್ಷಣದಾ ಕ್ಷಪಾ' ಅಮರ. ತಾವತ್ = ಅವಾಧಾರಣ, ಅದು ಮಾತ್ರಾ, 'ಯಾವತ್ ತಾವಚ್ಚ ಸಾಕಲ್ಯೇಽವಧೌ ಮಾನೇಽವಧಾರಣೇ' ಅಮರ. ಸಂಘಃ = ಸಮೂಹಗಳು, 'ಗಣೌಘಸಂಘಸಂಘಾತವ್ರಾತವಾರಕುಲೋತ್ಕರಾಃ' ಹಲಾಯುಧ.

**ಕ್ರಿಯಾಪದ—** ವಿಜಾನನ್ - ವಿ = ಅಜಾನನ್ ಅಜಾನಾತ್ ಅಜಾನತಾಂ ಅಜಾನನ್, ಅಜಾನಾಃ ಅಜನೀತಂ ಅಜಾನೀತ, ಅಜಾನಾಂ ಅಜಾನೀವ ಅಜಾನೀಮ । ಜ್ಞಾ ಅವಭೋಧನೇ ಸಕರ್ಮಕ ಪರಸ್ಮೈಪದಿ ಅನದ್ಯತನಭೂತೇ ಲಜ ವಿ ಉಪಸರ್ಗ ಪ್ರಥಮಪುರುಷೇ ಬಹುವಚನಂ । 1 ಜಾನಾತಿ ಜಾನೀತಃ ಜಾನಂತಿ, ಜಾನಾಸಿ ಜಾನೀಥಃ ಜಾನೀಥ, ಜಾನಾಮಿ ಜಾನೀವಃ ಜಾನೀಮಃ । 2 ಲಿಟ್ ಜಜ್ಞೌ ಜಜ್ಞತುಃ ಜಜ್ಞುಃ, ಜಜ್ಞಾಥ ಜಜ್ಞಿಥ ಜಜ್ಞಥುಃ ಜಜ್ಞ, ಜಜ್ಞೌ ಜಜ್ಞಿವ ಜಜ್ಞಿಮ । 3ಲುಟ್ ಜ್ಞಾತಾಸಿ 4 ಲೃಟ್ ಜ್ಞಾಸ್ಯತಿ 5 ಲೋಟ್ ಜಾನಾತು ಜಾನೀತಾತ್ ಜನೀತಾಂ ಜಾನಂತು, ಜನೀಹ ಜಾನೀತಾತ್ ಜಾನೀತಂ ಜಾನೀತ, ಜಾನಾನಿ ಜಾನಾವ ಜಾನಾಮ । 7 ಜಾನೀಯಾತ್ ಜಾನೀಯಾತಾಂ ಜಾನೀಯುಃ, ಜಾನೀಯಾಃ ಜಾನೀಯಾತಂ, ಜಾನಿಯಾತ ಜಾನೀಯಾಂ ಜಾನೀಯಾವ ಜಾನೀಯಾಮ । 8 ಆಶೀರ್ಲಿಙ ಜ್ಞಾಯಾತ್ ಜ್ಞಾಯಸ್ತಾಂ ಜ್ಞಾಯಾಸುಃ, ಜ್ಞಾಯಾಃ ಜ್ಞಾಯಾಸ್ತಂ ಜ್ಞಾಯಾಸ್ತ, ಜ್ಞಾಯಾಸಂ ಜ್ಞಾಯಾಸ್ವ ಜ್ಞಾಯಾಸ್ಮ । 9 ಲುಙ ಅಜ್ಞಾಸೀತ್ ಅಜ್ಞಾಸಿಷ್ಟಾಂ ಅಜ್ಞಾಸಿಷುಃ, ಅಜ್ಞಾಸೀಃ ಅಜ್ಞಾಸಿಷ್ಟಂ ಅಜ್ಞಾಸಿಷ್ಟ, ಅಜ್ಞಾಸಿಷಂ ಅಜ್ಞಾಸಿಷ್ವ ಅಜ್ಞಾಸಿಷ್ಮ । 10 ಲೃಙ ಅಜ್ಞಾಸ್ಯತ್ ।

**ಪ್ರಯೋಗ—** ಇಹ ಕ್ಷಣದಾಂ ತಾವತ್ ಊಷಿವಾನ್ ವಿಹಿತಾಹರ್ಮುಖಯೋಗ್ಯಯೋಗಃ ಏಷಃ ಶಿಷ್ಯಸಂಘೈಃ ಗಮನೋದ್ಯಮಲಕ್ಷಣೈಃ ಆಶು ಗಮನಾಯ ಉದ್ಯತಃ ವ್ಯಜ್ಞಾಯತ (ಕರ್ಮಣಿ) ।

* * *

**ಅವತಾರಿಕಾ—** ಶ್ರೀಮಧ್ವಾಚಾರ್ಯರ ಶಿಷ್ಯರ ಪ್ರಯಾಣ ಸನ್ನಾಹವನ್ನು ವರ್ಣಿಸುತ್ತಾರೆ.

**ಪುರತೋ ವಿಸೃತಾಃ ಸಮಾಧಿಶುದ್ಧ್ಯೈ**
**ಯತಯಸ್ತತ್ರ ಪಟೀಃ ಕಷಾಯವೇಷಾಃ ।**
**ಸಹಸೋದಹರನ್ ಸ್ವಯೋಗ್ಯಮುದ್ರಾ-**
**ಯುತದಂಡಾದಿಕಧಾರಣೋದ್ಯಮೇನ ॥ 11 ॥**

**ಪದಚ್ಛೇದ—** ಪುರತಃ, ವಿಸೃತಾಃ, ಸಮಾಧಿಶುದ್ಧ್ಯೈ, ಯತಯಃ, ತತ್ರ, ಪಟೀಃ, ಕಷಾಯವೇಷಾಃ, ಸಹಸಾ, ಉದಹರನ್, ಸ್ವಯೋಗ್ಯಮುದ್ರಾಯುತದಂಡಾದಿಕಧಾರಣೋದ್ಯಮೇನ ।

**ಅನ್ವಯ—** ಯತಯಃ, ತತ್ರ, ಸಮಾಧಿಶುದ್ಧ್ಯೈ, ಪುರತಃ, ವಿಸ್ತೃತಾಃ, ಕಷಾಯವೇಷಾಃ, ಪಟೀಃ, ಸ್ವಯೋಗ್ಯ ಮುದ್ರಾಯುತದಂಡಾದಿಕಧಾರಿಣೋದ್ಯಮೇನ ಸಹಸಾ, ಉದಹರನ್ ।

**ಅನ್ವಯಾರ್ಥ—**

**ಯತಯಃ** = ಶ್ರೀಮಧ್ವಾಚಾರ್ಯರ ಶಿಷ್ಯರಾದ ಸಂನ್ಯಾಸಿಗಳು,

**ತತ್ರ** = ಆ ದೇವಾಲಯದಲ್ಲಿ

**ಸಮಾಧಿಶುದ್ಧ್ಯೈ** = ಭಗವಂತನ ಧ್ಯಾನದ ಪವಿತ್ರತೆಗಾಗಿ, (ಸರಿಯಾಗಿ ಭಗವಂತನ ಧ್ಯಾನಸಿದ್ಧಿಗಾಗಿ)

**ಪುರತಃ** = ಮುಂದೆ,

**ವಿಸ್ತೃತಾಃ** = ಪರದೆಯಾಗಿ ಹಾಕಿದ,

**ಕಷಾಯವೇಷಾಃ** = ಕಾವಿಯ ಬಣ್ಣದ,

**ಪಟೀಃ** = ಬಟ್ಟೆಗಳನ್ನು,

**ಸ್ವ ಯೋಗ್ಯಮುದ್ರಾಯುತದಂಡಾಧಿಕಧಾರಣೋದ್ಯಮೇನ(ಸಹ)** = ತಮಗೆ ಉಚಿತವಾದ ಸುರಭಿ (ಹಸು), ಕೊಡಲಿ ಮೊದಲಾದ ಚಿಹ್ನೆಗಳಿಂದ ಕೂಡಿದ ದಂಡಪುಸ್ತಕ ಮೊದಲಾದವುಗಳ ತೆಗೆದುಕೊಂಡು ಧರಿಸಿಕೊಳ್ಳುವ ಪ್ರಯತ್ನದಿಂದ ಕೂಡಿ,

**ಸಹಸಾ** = ಕೂಡಲೇ,

**ಉದಹರನ್** = ತೆಗೆದರು. (ಕಾವಿಶಾಟಿಗಳನ್ನು ಎತ್ತಿಕೊಂಡರು)

**ತಾತ್ಪರ್ಯ—** ಶ್ರೀಮದನೇಶ್ವರ ದೇವಾಲಯದಲ್ಲಿ ಆಚಾರ್ಯರ ಜೊತೆಯಲ್ಲಿಯೇ ಇದ್ದ ಅನೇಕ ಯತಿಗಳು ತಾವು ಮಾಡುವ ಭಗವಂತನ ಧ್ಯಾನದಲ್ಲಿ ಚಿತ್ತವಿಕ್ಷೇಪವಾಗದಿರಲಿ ಎಂದು ಕಾವಿಯ ಬಟ್ಟೆಗಳನ್ನು ಸುತ್ತಲೂ ಕಟ್ಟಿಕೊಂಡಿದ್ದರು. ಶ್ರೀಮಧ್ವಾಚಾರ್ಯರು ಅಲ್ಲಿಂದ ಹೊರಡುತ್ತಾರೆಂದು ತಿಳಿದ ಕೂಡಲೇ ಅವರೆಲ್ಲರೂ ಆ ಕಾವಿಯ ಬಟ್ಟೆಗಳನ್ನು ತೆಗೆದುಕೊಂಡರು. ತಮ್ಮ ತಮ್ಮ ಗುರುತಿನ, ದಂಡ ಪುಸ್ತಕ ಮುಂತಾದವುಗಳನ್ನು ತೆಗೆದುಕೊಂಡು ಹೊರಡಲು ಸನ್ನದ್ಧರಾದರು.

**ವಿಗ್ರಹ—**

**ಸಮಾಧಿಶುದ್ಧ್ಯೈ—** ಸಮಾಧೇಃ ಶುದ್ಧಿಃ ಸಮಾಧಿಶುದ್ಧಿಃ ತಸ್ಯೈ ಸಮಾಧಿಶುದ್ಧ್ಯೈ ।

**ಕಷಾಯವೇಷಾಃ—** ಕಷಾಯಃ ವೇಷಃ ಯಾಸಾಂ ತಾಃ ಕಷಾಯವೇಷಾಃ ತಾಃ ।

**ಸ್ವಯೋಗ್ಯಮುದ್ರಾಯುತದಂಡಾದಿಕಧಾರಣೋದ್ಯಮೇನ—** ಸ್ವೇಷಾಂ ಯೋಗ್ಯಾಃ ಸ್ವಯೋಗ್ಯಾಃ ಸ್ವಯೋಗ್ಯಾಶ್ಚ ತಾಃ ಮುದ್ರಾಶ್ಚ ಸ್ವಯೋಗ್ಯಮುದ್ರಾಃ ಸ್ವಯೋಗ್ಯಮುದ್ರಾಭಿಃ ಯುತಾಃ ಸ್ವಯೋಗ್ಯ-ಮುದ್ರಾಯುತಾಃ ಸ್ವಯೋಗ್ಯಮುದ್ರಾಯುತಾಶ್ಚ ತೇ ದಂಡಾಶ್ಚ ಸ್ವಯೋಗ್ಯಮುದ್ರಾಯುತದಂಡಾಃ, ಸ್ವಯೋಗ್ಯಮುದ್ರಾ ಯುತದಂಡಾಃ ಆದಯಃ ಯೇಷಾಂತೇ ಸ್ವಯೋಗ್ಯಮುದ್ರಾಯುತದಂಡಾಧಿಕಾಃ, ಸ್ವಯೋಗ್ಯಮುದ್ರಾ ಯುತದಂಡಾಧಿಕಾನಾಂ ಧಾರಣಂ ಸ್ವಯೋಗ್ಯಮುದ್ರಾಯುತದಂಡಾಧಿಕ-ಧಾರಣಂ ಸ್ವ ಯೋಗ್ಯಮುದ್ರಾಯುತದಂಡಾಧಿಕಧಾರಣಸ್ಯ ಉದ್ಯಮಃ ಸ್ವಯೋಗ್ಯಮುದ್ರಾಯುತ-ದಂಡಧಾರಣೋದ್ಯಮಃ, ತೇನ ।

**ಪ್ರಯೋಗ—** ಯತಿಭಿಃ ತತ್ರ ಸಮಾಧಿಶುದ್ಧ್ಯೈ, ಪುರತಃ ವಿಸ್ತೃತಾಃ ಕಷಾಯವೇಷಾಃ ಪಟ್ಯಃ ಸ್ವಯೋಗ್ಯಮುದ್ರಾ ಯುತದಂಡಾದಿಕಧಾರಣೋದ್ಯಮೇನ ಸಹಸಾ ಉದಹ್ರಿಯಂತ (ಕರ್ಮಣಿ) ।

**ವಿಶೇಷಾಂಶ—** ಸಂನ್ಯಾಸಿಗಳ ದಂಡಗಳಲ್ಲಿ ಅವರವರಿಗೆ ಯೋಗ್ಯವಾದ ಸುರಭಿ, ಕೊಡಲಿಯ ಗುರುತುಗಳಿದ್ದವು. ಅವುಗಳಿಂದ ಅವರವರಿಗೆ ತಮ್ಮ ತಮ್ಮ ದಂಡ, ಕೊಡಲಿಯ ಗುರುತು ಮುಂತಾದವುಗಳನ್ನು ಬೇರೆಬೇರೆಯಾಗಿ ಗುರುತಿಸಲು ಸಾಧ್ಯವಾಗುತ್ತಿದ್ದವು.

**ಕ್ರಿಯಾಪದ—** ಉದಹರನ್ - ಉದ್=ಅಹರನ್, ಅಹರತ್ ಅಹರತಾಂ ಅಹರನ್, ಅಹರಃ ಅಹರತಂ ಅಹರತ, ಅಹರಂ ಅಹರಾವ ಅಹರಾಮ । ಉದ್ ಉಪಸರ್ಗಪೂರ್ವಕ ಹೃಞ್ ಹರಣೇ ಉಭಯಪದಿ,ಪ್ರಕೃತೇ ಪರಸ್ಮೈಪದಿ, ಅನದ್ಯತನಭೂತೇ ಲಙ ಪ್ರಥಮಪುರುಷೇ ಬಹುವಚನಂ. 11ನೇಯ ಸರ್ಗದ 50ನೇಯ ಶ್ಲೋಕದಲ್ಲಿ ಈ ಧಾತುವಿನ ಉಳಿದ ರೂಪಗಳನ್ನು ಕೊಡಲಾಗಿದೆ.

**ಕೋಶ—** ಸಮಾಧಿ = ಭಗವಂತನ ಧ್ಯಾನ, 'ಸಮಾಧಿರ್ನಿಯಮೇ ಧ್ಯಾನೇ' ಅಭಿಧಾನ. ಪುರತಃ = ಮುಂಭಾಗ ದಲ್ಲಿ, 'ಸ್ಯಾತ ಪುರಃ ಪುರತೋ ಗ್ರತಃ' ಅಮರ. ಕಷಾಯ ವೇಷಾಃ ಎಂಬಲ್ಲಿ 'ಕಷಾಯ = ಕೆಂಪು (ಕಾವಿಯ ಬಣ್ಣ) 'ನಿರ್ಯಾಸೇ ಚ ಕಷಾಯೋ ಥ ಲೋಹಿತಃ' ವಿಶ್ವ.

★ ★ ★

**ಅವತಾರಿಕಾ—** ಶ್ರೀಮಧ್ವಾಚಾರ್ಯರ ಕಂಠಕ್ಕೆ ಒಬ್ಬ ಯತಿಯು ತುಳಸೀಮಾಲೆಯನ್ನು ಅರ್ಪಿಸಿದರು ಎಂದು ಹೇಳುತ್ತಾರೆ.

**ಅವಧಾರ್ಯ ವಿಶೇಷಕಾರಿಶಂಖ-**
**ಪ್ರಕಟಾಂಕಾನ್ ಸುಧಿಯಾ ಗತಾರ್ದ್ರಭಾವಾನ್ ।**
**ಲಸಿತಾ ತುಲಸೀಸ್ರಗಸ್ಯ ಕಂಠೇ**
**ಹರಿನಿರ್ಮಾಲ್ಯತಯೋಚಿತಾ ನ್ಯಧಾಯಿ ॥ 12 ॥**

**ಪದಚ್ಛೇದ—** ಅವಧಾರ್ಯ ವಿಶೇಷಕಾರಿಶಂಖಪ್ರಕಟಾಂಕಾನ್, ಸುಧಿಯಾ ಗತಾರ್ದಭಾವಾನ್, ಅವಧಾರ್ಯ ಲಸಿತಾ ತುಲಸೀಸ್ರಕ್, ಅಸ್ಯ ಕಂಠೇ ಹರಿನಿರ್ಮಾಲ್ಯತಯಾ ಉಚಿತಾ, ನ್ಯಧಾಯಿ ।

**ಅನ್ವಯ—** ಸುಧಿಯಾ, ಅಸ್ಯ, ವಿಶೇಷಕಾರಿಶಂಖಪ್ರಕಟಾಂಕಾನ್, ಗತಾರ್ದಭಾವಾನ್, ಅವಧಾರ್ಯ, ಲಸಿತಾ, ಹರಿನಿರ್ಮಾಲ್ಯತಯಾ, ಉಚಿತಾ ತುಲಸೀಸ್ರಕ್, ಕಂಠೇ, ನ್ಯಧಾಯಿ ।

**ಅನ್ವಯಾರ್ಥ—**

**ಸುಧಿಯಾ** = ಬುದ್ಧಿಶಾಲಿಯಾದ ಆಚಾರ್ಯರ ಶಿಷ್ಯನಾದ ಒಬ್ಬ ಯತಿಯಿಂದ,

**ಅಸ್ಯ** = ಈ ಮಧ್ವಾಚಾರ್ಯರ,

**ವಿಶೇಷಕಾರಿಶಂಖಪ್ರಕಟಾಂಕಾನ್** = ನಾಮಗಳು, (ಗೋಪಿಚಂದನದಿಂದ ಹಚ್ಚಿಕೊಂಡಿರುವ ದೀಪಾಕಾರ, ಪದ್ಮಾಕಾರ, ವಂಶಪತ್ರಾಕಾರದ ತಿಲಕಗಳು) ಸುದರ್ಶನ ಮುದ್ರೆಯು ಪಾಂಚಜನ್ಯ ಶಂಖದ ಮುದ್ರೆಯು ಇವುಗಳ ಸ್ಪಷ್ಟವಾದ ಚಿಹ್ನೆಗಳನ್ನು

**ಗತಾರ್ದಭಾವಾನ್** = ಹೊರಟುಹೋದ ಒದ್ದೆಯತನವುಳ್ಳವುಗಳನ್ನಾಗಿ,

**ಅವಧಾರ್ಯ** = ನಿಶ್ಚಯಿಸಿ,

**ಲಸಿತಾ** = ಮನೋಹರವಾದ,

**ಹರಿನಿರ್ಮಾಲ್ಯತಯಾ** = ಶ್ರೀಮನ್ನಾರಾಯಣನ ನಿರ್ಮಾಲ್ಯವಾದ್ದರಿಂದ,

ಉಚಿತಾ = (ಧರಿಸಲು)ಯೋಗ್ಯವಾದ,

ತುಲಸೀಸ್ರಕ್ = ತುಲಸಿಯ ಮಾಲೆಯು, (ಹಾರವು)

ಕಂಠೇ = ಕಂಠದಲ್ಲಿ,

ನ್ಯಧಾಯಿ = ಇಡಲ್ಪಟ್ಟಿತು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ಗೋಪಿಚಂದನದಿಂದ ಹೊಟ್ಟೆ, ಎದೆ, ಭುಜ, ಕಂಠ ಮುಂತಾದ ಸ್ಥಳಗಳಲ್ಲಿ ದೀಪಾಕಾರ, ಕಮಲಾಕಾರ, ವಂಶಪತ್ರಕಾರ ಮುಂತಾದ ರೀತಿಗಳಿಂದ ಶಾಸ್ತ್ರೋಕ್ತವಾಗಿ ತಿಲಕಗಳನ್ನು ಹನ್ನೆರಡು (ಪುಂಡ್ರ ಗಳನ್ನು) ಧರಿಸಿದ್ದರು. ಅವುಗಳ ಮೇಲೆ ಸುದರ್ಶನ ಚಕ್ರ ಮುದ್ರೆ, ಪಾಂಚಜನ್ಯ ಶಂಖ ಮುದ್ರೆಗಳನ್ನು ಧರಿಸಿದ್ದರು. ಆಚಾರ್ಯರು ಪ್ರಯಾಣಕ್ಕೆ ಸನ್ನದ್ಧರಾದಾಗ ಒಬ್ಬ ಯತಿಯು ಬಂದು ನಾಮಗಳು ಹಸಿಯಾಗಿರುವಾಗ ತುಳಸಿಮಾಲೆ ಯನ್ನು ಹಾಕಿದರೆ ನಾಮಗಳು ಅಳಿಸಿಹೋಗಿಯಾವು ಎಂದು ಆಲೋಚಿಸಿ ಅವುಗಳು ಒಣಗಿರುವುದನ್ನು ತಿಳಿದು ಈಗ ಮಾಲೆಯನ್ನು ಅರ್ಪಿಸಿದರೆ ನಾಮಗಳು ಅಳಿಸಿಹೋಗುವುದಿಲ್ಲವೆಂದು ತಿಳಿದು ತುಳಸೀಕಾಷ್ಠ ನಿರ್ಮಿತವಾದ ಮಾಲೆಯನ್ನು ಅರ್ಪಿಸಿದನು. ಆಚಾರ್ಯರ ತಿಲಕಗಳು ಮತ್ತು ಮುದ್ರೆಗಳು ಒಣಗಿದೆಯೆಂದು ನಿರ್ಧರಿಸಿ ಮನೋಹರವಾದ ಮತ್ತು ಪ್ರಸಾದರೂಪವಾದ ಹಸೀತುಲಸಿಯ ಮಾಲೆಯನ್ನು ಆಚಾರ್ಯರ ಕಂಠಕ್ಕೆ ಅರ್ಪಿಸಿದನು ಎಂದೂ ಹೇಳುತ್ತಾರೆ.

ವಿಗ್ರಹ—

ವಿಶೇಷಕಾರಿಶಂಖಪ್ರಕಟಾಂಕಾನ್— ವಿಶೇಷಕಾಶ್ಚ ಅರಿಶ್ಚ ಶಂಖಶ್ಚ ವಿಶೇಷಕಾರಿಶಂಖಾಃ, ಪ್ರಕಟಾಶ್ಚ ತೇ ಅಂಕಾಶ್ಚ ಪ್ರಕಟಾಂಕಾಃ, ವಿಶೇಷಕಾರಿಶಂಖಾನಾಂ ಪ್ರಕಟಾಂಕಾಃ ವಿಶೇಷಕಾರಿಶಂಖಪ್ರಕಟಾಂಕಾಃ ತಾನ್।

ಸುಧಿಯಾ— ಶೋಭನಾಃ ಧೀಃ ಯಸ್ಯ ಸಃ ಸುಧೀಃ ತೇನ, (ಈಕಾರಾಂತ ಪುಲ್ಲಿಂಗ ಸುಧೀಶಬ್ದ ಸುಧೀಃ ಸುಧಿಯೌ ಸುಧಿಯಃ, ಹೇ ಸುಧೀಃ ಹೇ ಸುಧಿಯೌ ಹೇ ಸುಧಿಯಃ, ಸುಧಿಯಂ ಸುಧಿಯೌ ಸುಧಿಯಃ, ಸುಧಿಯಾ ಸುಧೀಭ್ಯಾಂ ಸುಧೀಭಿಃ ।

ಗತಾರ್ದಭಾವಾನ್— ಆರ್ದ್ರಾಣಾಂ ಭಾವಃ ಆರ್ದಭಾವಃ ಗತಃ ಆರ್ದಭಾವಃ ಯೇಷಾಂ ತೇ ಗತಾರ್ದ ಭಾವಾಃ ತಾನ್ ।

ತುಲಸೀಸ್ರಕ್— ತುಲಸ್ಯಾಃ ಸ್ರಕ್ ।

ಹರಿನಿರ್ಮಾಲ್ಯತಯಾ— ಹರೇಃ ನಿರ್ಮಾಲ್ಯಂ ಹರಿನಿರ್ಮಾಲ್ಯಂ, ಹರಿನಿರ್ಮಾಲ್ಯಸ್ಯ ಭಾವಃ ಹರಿ-ನಿರ್ಮಾಲ್ಯತಾ ತಯಾ ।

ಕ್ರಿಯಾಪದ— ನ್ಯಧಾಯಿ+ಅಧಾಯಿ ಅಧಾಯಿಷಾತಾಂ ಅಧಾಯಿಷತ, ಅಧಾಯಿಷ್ಠಾಃ ಅಧಾಯಿಷಾಥಾಂ ಅಧಾಯಿಢ್ವಂ, ಧ್ವಂ, ಅಧಾಯಿಷಿ ಅಧಾಯಿಷ್ವಹಿ ಅಧಾಯಿಷ್ಮಹಿ । ನಿ ಉಪಸರ್ಗಪೂರ್ವಕಃ ಡುಧಾಞ ಧಾರಣ ಪೋಷಣಯೋಃ ಧಾರಣ ಪೋಷಣಾರ್ಥಕಃ ಧಾಧಾತುಃ ಭೂತೇ ಕರ್ಮಣಿ ಲುಙ ಪ್ರಥಮಪುರುಷೇ ಏಕವಚನಂ । 1 ಲಟ್ ನಿ+ಧಿಯೇತೇ ಧೀಯೇತೇ 2 ಲಿಟ್ ದಧೇ 3 ಲುಟ್ ಧಾತಾ 4 ಲೃಟ್ ದಾಸ್ಯತೇ 5 ಲೋಟ್ ಧೀಯತಾಂ 6 ಲಙ್ ಅಧೀಯತ 7 ವಿಧಿಲಿಙ ಧೀಯೇತ ಧೀಯೇಯಾತಾಂ ಧೀಯೇರನ್ 8 ಆಶೀರ್ಲಿಙ ಧಾಸೀಷ್ಟ 9 ಲುಙ ಅಧಾಯಿ 10 ಲೃಙ ಅಧಾಸ್ಯತ ।

ಪ್ರಯೋಗ— ಸುಧೀಃ ಅಸ್ಯ ವಿಶೇಷಕಾರಿಶಂಖಪ್ರಕಟಾಂಕಾನ್ ಗತಾರ್ದ್ರಭಾವಾನ್ ಅವಧಾರ್ಯ ಲಸಿತಾಂ ಹರಿನಿರ್ಮಾಲ್ಯತಯಾ ಉಚಿತಾಂ ತುಲಸೀಸ್ರಜಂ ಕಂಠೇ ನ್ಯಧಾತ್(ಕರ್ತರಿ) ।

ಕೋಶ— ವಿಶೇಷಕಾಃ (ವಿಶೇಷಕಾಣಿ) ತಿಲಕಗಳು (ಊರ್ಧ್ವಪುಂಡ್ರ ನಾಮಗಳು) 'ತಮಾಲಪತ್ರತಿಲಕ ಚಿತ್ರಕಾಣಿ' ವಿಶೇಷಕಂ (ವಿಶೇಷಕಾಃ) 'ದ್ವಿತೀಯಂ ಚ ತುರೀಯಂ ಚ ನ ಸ್ತ್ರಿಯಾಂ' ಅಮರ. ತಿಲಕ ಮತ್ತು ವಿಶೇಷಕ ಶಬ್ದಗಳು

ಸ್ತ್ರೀಲಿಂಗದಲ್ಲಿಲ್ಲ. ಅರ್ಥಾತ್ ನಪುಂಸಕ ಲಿಂಗಗಳಲ್ಲಿ ಇದೆ. 'ತಿಲಕಂ, ತಮಾಲಪತ್ರಂ, ಚಿತ್ರಕ, ಮುತ್ತಂ, ವಿಶೇಷಕಃ ಪುಂಡ್ರಂ' ಹಲಕೋಶ. ಈ ಕೋಶದಂತೆ ವಿಶೇಷಕ ಶಬ್ದವು ಪುಲ್ಲಿಂಗ. ಅರಿ = ಚಕ್ರ 'ಅರಿಃ ಪುಮಾಂಶ್ಚಕ್ರವಾಕೇ ರಿಪೌ ಚಕ್ರೇ ತು ನದ್ವಯೋಃ' ಅಭಿಧಾನ. ಅಂಕ = ಚಿಹ್ನೆ, 'ಉತ್ಸಂಗ ಚಿಹ್ನಯೋ ರಂಕಃ' ಅಮರ. ಸ್ರಕ್ = ಮಾಲೆ, 'ಮಾಲ್ಯಂ ಮಾಲಾಸ್ರಜೌ' ಅಮರ. ಕಂಠ = ಕುತ್ತಿಗೆ, 'ಕಂಠೋ ಗಲೋಽಥಗ್ರಿವಾಯಾಂ' ಅಮರ.

★ ★ ★

**ಅವತಾರಿಕಾ—** ಆಚಾರ್ಯರ ದೇವರಪೆಟ್ಟಿಗೆಯನ್ನು ಒಬ್ಬ ಶಿಷ್ಯನು ನಿಯಮಪೂರ್ವಕವಾಗಿ ಎತ್ತಿಕೊಂಡನು ಎಂದು ಹೇಳುತ್ತಾರೆ.

**ಯತಧೀರ್ಗುರುಚಕ್ರಿಮೂರ್ತಿಪೂರ್ಣಂ**
**ಯತನಿಃಶ್ವಾಸವಚಾ ವಿಶೋಧ್ಯ ಪಾಣೀ ।**
**ಗುಣಕುಂಡಲಮಂಡಿತಂ ವಿಮಾನಂ**
**ಗುಣಬದ್ಧಂ ಕವಚಾವೃತಂ ಬಭಾರ ॥ 13 ॥**

**ಪದಚ್ಛೇದ—** ಯತಧೀಃ ಗುರುಚಕ್ರಿಮೂರ್ತಿಪೂರ್ಣಂ, ಯತನಿಃಶ್ವಾಸವಚಾಃ, ವಿಶೋಧ್ಯ, ಪಾಣೀ, ಗುಣಕುಂಡಲ ಮಂಡಿತಂ, ವಿಮಾನಂ, ಗುಣಬದ್ಧಂ, ಕವಚಾವೃತಂ, ಬಭಾರ ।

**ಅನ್ವಯ—** ಯತನಿಃಶ್ವಾಸವಚಾಃ, ಯತಧೀಃ ಪಾಣೀ ವಿಶೋಧ್ಯ ಗುರುಚಕ್ರಿಮೂರ್ತಿಪೂರ್ಣಂ, ಗುಣಕುಂಡಲ ಮಂಡಿತಂ, ಗುಣಬದ್ಧಂ, ಕವಚಾವೃತಂ, ವಿಮಾನಂ, ಬಭಾರ ।

**ಅನ್ವಯಾರ್ಥ—**

**ಯತ** = ನಿಯಮಿತವಾಗಿ ಮಾಡಲ್ಪಟ್ಟ (ತಡೆಯಲ್ಪಟ್ಟ),
**ನಿಃಶ್ವಾಸವಚಾಃ** = ಉಸಿರು ಮತ್ತು ಮಾತುಗಳುಳ್ಳ,
**ಯತಧೀಃ** = ಮನಸನ್ನು ನಿಗ್ರಹಿಸಿದ (ಇಂದ್ರಿಯ ವೃತ್ತಿಗಳನ್ನು ನಿಗ್ರಹಿಸಿದ) ಸಂನ್ಯಾಸಿಯು,
**ಪಾಣೀ** = ಎರಡು ಕೈಗಳನ್ನು,
**ವಿಶೋಧ್ಯ** = ತೊಳೆದುಕೊಂಡು,
**ಗುರುಚಕ್ರಿಮೂರ್ತಿಪೂರ್ಣಂ** = ಗುರುಗಳಾದ ಶ್ರೀ ಮಧ್ವಾಚಾರ್ಯರ ಚಕ್ರಗಳುಳ್ಳ ಪ್ರತಿಮೆಗಳು ಇವುಗಳಿಂದ ತುಂಬಿದ,
**ಗುಣಕುಂಡಲಮಂಡಿತಂ** = ದಾರಗಳಿಂದ ಮಾಡಿದ ಕುಂಡಲಾಕಾರಗಳಿಂದ (ಸುತ್ತುಗಳಿಂದ) ಅಲಂಕೃತವಾದ,
**ಗುಣಬದ್ಧಂ** = ಹಗ್ಗಗಳಿಂದ ಕಟ್ಟಿದ,
**ಕವಚಾವೃತಂ** = ಆವರಣ ವಸ್ತ್ರದಿಂದ (ಆವರಣ ಕೃಷ್ಣಾಜಿನದಿಂದ) ಸುತ್ತಲ್ಪಟ್ಟ,
**ವಿಮಾನಂ** = ಪೆಟ್ಟಿಗೆಯನ್ನು,
**ಬಭಾರ** = ಹೊತ್ತುಕೊಂಡನು.

**ತಾತ್ಪರ್ಯ—** ದೇವರಪೆಟ್ಟಿಗೆಯನ್ನು ಎತ್ತಿಕೊಳ್ಳುವವರು ಬಹಳ ನಿಯಮದಿಂದ ಇರಬೇಕು. ಹೆಚ್ಚಾಗಿ ಮಾತನಾಡದೆ ಮೌನದಿಂದಲೇ ಇರಬೇಕು. ಎರಡು ಕೈಗಳನ್ನು ತೊಳೆದುಕೊಳ್ಳಬೇಕು. ಅವರ ಉಸಿರು ಪೆಟ್ಟಿಗೆಗೆ ತಗಲಬಾರದು ಇಂತಹ

ನಿಯಮಗಳನ್ನೆಲ್ಲಾ ಪಾಲಿಸಿದ ಒಬ್ಬ ಸಂನ್ಯಾಸಿ ಶಿಷ್ಯನು ಆಚಾರ್ಯರ ದೇವರ ಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡನು. ಆ ಪೆಟ್ಟಿಗೆ ಒಳಗಡೆ ಆಚಾರ್ಯರು ಪೂಜಿಸುವ ಚಕ್ರ ಚಿಹ್ನಾಂಕಿತವಾದ ಸಾಲಿಗ್ರಾಮಗಳು ಮತ್ತು ಪ್ರತಿಮೆಗಳಿದ್ದವು. ಹೊರಗಡೆ ಆ ಪೆಟ್ಟಿಗೆಯನ್ನು ಎರಡೂ ಕಡೆ ಕುಂಡಲಗಳು ಬರುವಂತೆ ಹಗ್ಗದಿಂದ ಕಟ್ಟಲಾಗಿತ್ತು. ಅದಕ್ಕೆ ಹೊರಗಡೆ ಆವರಣವಾದ ವಸ್ತ್ರ (ಕೃಷ್ಣಾಜಿನಗಳು) ಇದ್ದವು. ಹೀಗೆ ಅಲಂಕೃತವಾದ ಗೋಪುರಾಕಾರವಾದ (ವಿಮಾನ-ದಂತಿರುವ) ದೇವರಪೆಟ್ಟಿಗೆಯು ಶಿಷ್ಯನ ಶಿರಸ್ಸಿನಲ್ಲಿ ಶೋಭಿಸುತ್ತಾ ಇತ್ತು. (ಶಿಷ್ಯನಾದ ಯತಿಯು ದೇವರ ಪೆಟ್ಟಿಗೆಯನ್ನು ಎತ್ತಿಕೊಂಡನು)

ವಿಗ್ರಹ—

**ಯತಧೀಃಗುರುಚಕ್ರಿಮೂರ್ತಿಪೂರ್ಣಂ**— ಚಕ್ರಾಣಿ ಯತಾ ಧೀಃ ಯಸ್ಯ ಸಃ ಯತ ಧೀಃ ಆಸಾಂ ಸಂತೀತಿ ಚಕ್ರಿಣ್ಯಃ, ಚಕ್ರಿಣ್ಯಶ್ಚತಾಃ ಮೂರ್ತಯಶ್ಚ ಚಕ್ರಿಮೂರ್ತಯಃ, ಗುರೂಣಾಂ ಚಕ್ರಿಮೂರ್ತಯಃ ಗುರು ಚಕ್ರಿಮೂರ್ತಯಃ, ಗುರುಚಕ್ರಿಮೂರ್ತಿಭಿಃ ಪೂರ್ಣಂ ಗುರುಚಕ್ರಿಮೂರ್ತಿಪೂರ್ಣಂ ತತ್, (ಚಕ್ರಾಣಿ) ಏಷಾಂ ಸಂತೀತಿ ಚಕ್ರಿಣಃ ಶಾಲಿಗ್ರಾಮಾಃ ಚಕ್ರಿಣಶ್ಚ ಮೂರ್ತಯಶ್ಚ ಚಕ್ರಿಮೂರ್ತಯಃ ಗುರೂಣಾಂ ಚಕ್ರಿಮೂರ್ತಯಃ ಗುರುಚಕ್ರಿಮೂರ್ತಯಃ ತಾಭಿಃ ಪೂರ್ಣಂ ।

**ಯತನಿಃಶ್ವಾಸವಚಾ**— ನಿಃಶ್ವಾಸಶ್ಚ ವಚಶ್ಚ ನಿಶ್ವಾಸವಚಸೀ ಯತೇಃ ನಿಃಶ್ವಾಸವಚಸೀ ಯಸ್ಯ ಸಃ ಯತನಿಃಶ್ವಾಸ ವಚಾಃ ।

**ಗುಣಕುಂಡಲಮಂಡಿತಂ**— ಗುಣೈಃ ಕೃತಂ ಕುಂಡಲಂ ಗುಣಕುಂಡಲಂ ಗುಣಕುಂಡಲೇನ ಮಂಡಿತಂ ಗುಣಕುಂಡಲಮಂಡಿತಂ ।

**ಗುಣಬದ್ಧಂ**— ಗುಣೈಃ ಬದ್ಧಂ ।

**ಕವಾಚಾವೃತಂ**— ಕವಚೇನ ಆವೃತಂ ಕವಚಾವೃತಂ ।

**ಕ್ರಿಯಾಪದ**— ಬಭಾರ - ಬಭಾರ ಬಭ್ರತುಃ ಬಭ್ರುಃ, ಬಭರ್ಥ ಬಭ್ರತುಃ ಬಭ್ರ, ಬಭಾರ-ಬಭರ ಬಭೃವ ಬಭೃಮ । ಡುಭೃಞ ಧಾರಣ ಪೋಷಣಯೋಃ ಪರಸ್ಮೈಪದೀ ಭೂತಾನದ್ಯತನಪರೋಕ್ಷೇ ಲಿಟ್ । ಲಟ್ ಬಿಭರ್ತಿ ಬಿಭೃತಃ ಬಿಭ್ರತಿ, ಬಿಭರ್ಷಿ ಬಿಭೃಥಃ ಬಿಭೃಥ, ಬಿಭರ್ಮಿ ಬಿಭೃವಃ ಬಿಭೃಮಃ । 3 ಲುಟ್ ಭರ್ತಾ 4 ಲೃಟ್ ಭರಿಷ್ಯತಿ 5 ಲೋಟ್ ಬಿಭರ್ತು ಬಿಭೃತಾತ್ ಬಿಭೃತಾಂ ಬಿಭ್ರತು, ಬಿಭೃಹಿ ಬಿಭೃತಾತ್ ಬಿಭೃತಂ ಬಿಭೃತ, ಬಿಭರಾಣಿ ಬಿಭರಾವ ಬಿಭರಾಮ । 6 ಅಬಿಭಃ ಅಬಿಭೃತಾಂ ಅಬಿಭರುಃ, ಅಬಿಭಃ ಅಬಿಭೃತಂ ಅಬಿಭೃತ, ಅಬಿಭರಂ ಅಬಿಭೃವ ಅಬಿಭೃಮ । 7 ವಿಧಿ ಲಿಙ ಬಿಭೃಯಾತ್ ಬಿಭೃಯಾತಾಂ ಬಿಭೃಯುಃ, ಬಿಭೃಯಾಃ ಬಿಭೃಯಾತಂ ಬಿಭೃಯಾತ, ಬಿಭೃಯಾಂ ಬಿಭೃಯಾವ ಬಿಭೃಯಾಮ । 8 ಆಶೀರ್ಲಿಙ ಭ್ರಿಯಾತ್ ಭ್ರಿಯಾಸ್ತಾಂ ಭ್ರಿಯಾಸುಃ, ಭ್ರಿಯಾಃ ಭ್ರಿಯಾಸ್ತಂ ಭ್ರಿಯಾಸ್ತ, ಭ್ರಿಯಾಸಂ ಭ್ರಿಯಾಸ್ವ ಭ್ರಿಯಾಸ್ಮ । 9 ಲುಙ ಅಭಾರ್ಷಿತ್ ಅಭಾರ್ಷ್ಟಾಂ ಅಭಾರ್ಷುಃ, ಅಭಾರ್ಷೀಃ ಅಭಾರ್ಷ್ಟಂ, ಅಭಾರ್ಷ್ಟ ಅಭಾರ್ಷಂ ಅಭಾರ್ಷ್ವ ಅಭಾರ್ಷ್ಮ । 10 ಲುಙ ಅಭರಿಷ್ಯತ್ ।

**ಪ್ರಯೋಗ**— ಯತನಿಃಶ್ವಾಸವಚಾ ಯತಧಿಯಾ ಪಾಣೀ ವಿಶೋಧ್ಯ ಗುರುಚಕ್ರಿಮೂರ್ತಿಪೂರ್ಣಂ ಗುಣಕುಂಡಲ ಮಂಡಿತಂ ಗುಣಬದ್ಧಂ ಕವಚಾವೃತಂ ವಿಮಾನಂ ಬಭ್ರೇ(ಕರ್ಮಣಿ) ।

**ಕೋಶ**— ಯತಧೀಃ ಎಂಬಲ್ಲಿ ಯತಾಃ ಧಿಯಃ ಇಂದ್ರಯವೃತ್ತಯಃ ಯೇನ ಸಃ ಎಂದು ವಿಗ್ರಹ ಮಾಡಿದಾಗ ಇಂದ್ರಿಯ ವ್ಯಾಪಾರಗಳನ್ನು ನಿಗ್ರಹಿಸಿದವನು ಎಂದು ಅರ್ಥ. ಯೇನಿರ್ಜಿತೇಂದ್ರಿಯಗ್ರಾಮಾಯತಿನೋ ಯತಯಶ್ಚತೇ ಅಮರ ಕೋಶಾನುಸಾರವಾಗಿ ಯತಿ ಎಂದು ಅರ್ಥ.

★ ★ ★

ಅವತಾರಿಕಾ— ಆಚಾರ್ಯರ ತರುಣ ಶಿಷ್ಯರು ಪ್ರಯಾಣಕಾಲದಲ್ಲಿ ಮಾಡಿದ ಕಾರ್ಯವನ್ನು ಅರ್ಥಾಂತರ-ನ್ಯಾಸದಿಂದ ವರ್ಣಿಸುತ್ತಾರೆ.

**ಸಕಮಂಡಲುಮಂಡಲಾವಲಂಬಂ**
**ಸ್ವಯಮೇವಾಲಘುಪುಸ್ತಕಾದಿಭಾರಮ್ ।**
**ಯುವಶಿಷ್ಯಗಣೋ ದಧೇ ನ ಯತ್ನಾ-**
**ನ್ನ ಹಿ ದಾಕ್ಷ್ಯಸ್ಯ ಸಮೋ ಗುಣೋಽಪರೋಽಸ್ತಿ ॥ 14 ॥**

ಪದಚ್ಛೇದ— ಸಕಮಂಡಲುಮಂಡಲಾವಲಂಬಂ, ಸ್ವಯಂ, ಏವ ಅಲಘುಪುಸ್ತಕಾದಿಭಾರಂ, ಯುವಶಿಷ್ಯಗಣಃ, ದಧೇ, ನಯತ್ನಾತ್, ನ ಹಿ ದಾಕ್ಷ್ಯಸ್ಯ, ಸಮಃ ಗುಣಃ ಅಪರಃ, ನ ಅಸ್ತಿ ಹಿ ।

ಅನ್ವಯ— ಯುವಶಿಷ್ಯಗಣಃ, ಸಕಮಂಡಲುಮಂಡಲಾವಲಂಬಂ, ಅಲಘುಪುಸ್ತಕಾದಿಭಾರಂ, ಸ್ವಯಂ, ಏವ ನ ಯತ್ನಾತ್, ದಧೇ, ದಾಕ್ಷ್ಯಸ್ಯ, ಸಮಃ ಅಪರಃ ಗುಣಃ, ನ ಅಸ್ತಿ ಹಿ ।

ಅನ್ವಯಾರ್ಥ—

ಯುವಶಿಷ್ಯಗಣಃ = ತರುಣರಾದ ಶಿಷ್ಯರ ಸಮೂಹವು,
ಸಕಮಂಡಲುಮಂಡಲಾವಲಂಬಂ = ಕಮಂಡಲು ಎಂಬ ಜಲಪಾತ್ರೆಗಳ ಸಮೂಹದ ಅವಲಂಬನವುಳ್ಳ (ಜಲಪಾತ್ರೆಗಳ ಸಮೂಹವನ್ನು ನೇತುಹಾಕಿರುವ),
ಅಲಘು = ದೊಡ್ಡದಾದ,
ಪುಸ್ತಕಾದಿಭಾರಂ = ಪುಸ್ತಕ ಮುಂತಾದವುಗಳ ಹೊರೆಯನ್ನು,
ಸ್ವಯಂ ಏವ = ತಾವಾಗಿಯೇ, (ಇನ್ನೊಬ್ಬರ ಅಪೇಕ್ಷೆ ಇಲ್ಲದೆ)
ನ ಯತ್ನಾತ್ = ವಿಶೇಷ ಪ್ರಯತ್ನವಿಲ್ಲದೆಯೇ ಅನಾಯಾಸವಾಗಿ,
ದಧೇ = ಹೊತ್ತುಕೊಂಡರು.
ದಾಕ್ಷ್ಯಸ್ಯ = ಸಮಯಾನುಕೂಲವಾದ ಚುರುಕುತನಕ್ಕೆ ಸಮಯವರಿತು ತೋರಿಸುವ ಸಾಮರ್ಥ್ಯಕ್ಕೆ,
ಸಮಃ = ಸರಿಯಾದ,
ಅಪರಃ = ಬೇರೊಂದು,
ಗುಣಃ = ಗುಣವು,
ನ ಅಸ್ತಿ ಹಿ = ಇಲ್ಲವಷ್ಟೆ.

ತಾತ್ಪರ್ಯ— ಆಚಾರ್ಯರ ಶಿಷ್ಯರಲ್ಲಿ ಅನೇಕ ತರುಣರಿದ್ದರು ಅವರು ಆಚಾರ್ಯರ ಮತ್ತಿತರರ ಜಲಪಾತ್ರೆಗಳೊಡನೆ ಪುಸ್ತಕ ಮುಂತಾದ ವಸ್ತುಗಳ ಭಾರವನ್ನು ತಾವೇ ಹೊತ್ತುಕೊಂಡರು. ಸಮಯಕ್ಕೆ ಅನುಸಾರವಾಗಿ ಕೆಲಸದಲ್ಲಿ ಚುರುಕುತನ ತೋರಿಸುವುದಕ್ಕೆ ಸಮಾನವಾದ ಗುಣ ಮತ್ತೊಂದಿಲ್ಲ. ಕಾರ್ಯದಲ್ಲಿ ಆಯಾ ಸಮಯಕ್ಕೆ ತಕ್ಕಂತೆ ಸಾಮರ್ಥ್ಯದಿಂದ ಕೆಲಸ ಮಾಡುವುದು ಒಂದು ವಿಶಿಷ್ಟವಾದ ಗುಣ. ಅದು ಇರುವುದರಿಂದಲೇ ಆಚಾರ್ಯರ ಶಿಷ್ಯರು ಜಲಪಾತ್ರೆಗಳ ಸಹಿತವಾಗಿ ಪುಸ್ತಕ ಮುಂತಾದ ವಸ್ತುಗಳ ಮೂಟೆಗಳನ್ನು ಹೊರಲು ಸಮರ್ಥರಾದರು.

ವಿಗ್ರಹ—

**ಯುವಶಿಷ್ಯಗಣಃ**— ಯುವನಾಶ್ಚ ತೇ ಶಿಷ್ಯಾಶ್ಚ ಯುವಶಿಷ್ಯಾಃ, ಯುವಶಿಷ್ಯಾಣಾಂ ಗಣಃ ಯುವಶಿಷ್ಯಗಣಃ ।

**ಸಕಮಂಡಲಾವಲಂಬಂ**— ಕಮಂಡಲೂನಾಂ ಮಂಡಲಂ ಕಮಂಡಲುಮಂಡಲಂ ಕಮಂಡಲುಮಂಡಲಸ್ಯ ಅವಲಂಬಃ ಕಮಂಡಲುಮಂಡಲಾವಲಂಬಃ ತೇನ ಸಹವರ್ತತೇ ಇತಿ ಸಕಮಂಡಲಾವಲಂಬಃ ತಂ ।

**ಅಲಘುಪುಸ್ತಕಾದಿಭಾರಂ**— ಪುಸ್ತಕಂ ಆದಿ ಯಸ್ಯ ಸಃ ಪುಸ್ತಕಾದಿಃ, ಪುಸ್ತಕಾದಿಶ್ಚಾಸೌ ಭಾರಶ್ಚ ಪುಸ್ತಕಾದಿಭಾರಃ, ಲಘುಃ ನ ಭವತೀತಿ ಅಲಘುಃ, ಅಲಘುಶ್ಚಾಸೌ ಪುಸ್ತಕಾದಿಭಾರಶ್ಚ ಅಲಘುಪುಸ್ತಕಾದಿಭಾರಃ ತಂ ।

**ದಾಕ್ಷ್ಯಸ್ಯ**— ದಕ್ಷ್ಯಸ್ಯ ಭಾವಃ ದಾಕ್ಷ್ಯಂ ತಸ್ಯ ।

**ನ ಯತ್ನಾತ್**— ಯತ್ನಸ್ಯ ಅಭಾವಃ ನಯತ್ನಃ ತಸ್ಮಾತ್ ।

**ಕ್ರಿಯಾಪದ**— ದಧೇ - ದಧೇ ದಧಾತೇ ದಧಿರೇ, ದಧಿಷೇ ದಧಾಥೇ ದಧಿಧ್ವೇ, ದಧೇ ದಧಿವಹೇ ದಧಿಮಹೇ । ಡುಧಾಞ ಧಾರಣಪೋಷಣಯೋಃ ಭೂತಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ । ಅಸ್ತಿ ಸ್ತಃ, ಸಂತಿ, ಇತ್ಯಾದಿ ಅಸ ಭುವಿ ಲಟ್ ।

**ಪ್ರಯೋಗ**— ಯುವಶಿಷ್ಯಗಣೇನ ಸಕಮಂಡಲುಮಂಡಲಾವಲಂಬಃ ಅಲಘುಪುಸ್ತಕಾದಿಭಾರಃ ಸ್ವಯಂ ಏವ ನ ಯತ್ನಾತ್ ದಧೇ (ಕರ್ಮಣಿ) ದಾಕ್ಷ್ಯಸ್ಯ ಸಮೇನ ಅಪರೇಣಗುಣೇನ ನ ಭೂಯತೇ ಹಿ ।

**ಕೋಶ**— ಕಮಂಡಲು = ಉದಕಪಾತ್ರಂ, 'ಅಸ್ತೀ ಕಮಂಡಲುಃ ಕುಂಡೀ' ಅಮರ. ಮಂಡಲಂ = ಸಮೂಹ 'ಸ್ಯಾನ್ಮಂಡಲಂ ದ್ವಾದಶರಾಜಕೇ ಚ ದೇಶೇ ಚ ಬಿಲ್ವೇ ಚ ಕದಂಬಕೇ ಚ' ವಿಶ್ವ. ದಕ್ಷ = ಚತುರ, ದಾಕ್ಷ್ಯ = ಚತುರತೇ, 'ದಕ್ಷೇ ತು ಚತುರಪೇಶಲಪಟವಃ ಸೂತ್ಥಾನ ಉಷ್ಣಶ್ಚ' ಅಮರ. ಇಲ್ಲಿ ಅರ್ಥಾಂತರನ್ಯಾಸಾಲಂಕಾರ 'ಉಕ್ತಿರರ್ಥಾಂತರನ್ಯಾಸಃ ಸ್ಯಾತ್ ಸಾಮಾನ್ಯ ವಿಶೇಷಯೋಃ ಹನೂಮಾನಬ್ಧಿಮತರತ್ ದುಷ್ಕರಂ ಕಿಂ ಮಹಾತ್ಮನಾಂ' ಇವು ಈ ಅಲಂಕಾರದ ಲಕ್ಷಣ ಮತ್ತು ಲಕ್ಷ್ಯಗಳು.

★ ★ ★

**ಅವತಾರಿಕಾ**— ಆಚಾರ್ಯರ ಪ್ರಯಾಣಸಮಯದಲ್ಲಿ ನಡೆದ ಹಾಸ್ಯರಸಸೂಚಕವಾದ ಒಂದು ಚಿಕ್ಕ ಘಟನೆಯನ್ನು ಹೇಳುತ್ತಾರೆ.

**ಅತಿಸಂಭ್ರಮತಃ ಪರಿಭ್ರಮಂತಂ**
**ಭರದಾಮಾನವಲೋಕಿನಂ ಚಿರಾಯ ।**
**ಅನುಯೋಗಪರಂ ಮುಹುಃ ಪ್ರಮತ್ತಂ**
**ಜಹಸುರ್ನೂತನಶಿಷ್ಯಮತ್ರ ಕೇಚಿತ್ ॥ 15 ॥**

**ಪದಚ್ಛೇದ**— ಅತಿಸಂಭ್ರಮತಃ, ಪರಿಭ್ರಮಂತಂ, ಭರದಾಮಾನವಲೋಕಿನಂ, ಚಿರಾಯ, ಅನುಯೋಗಪರಂ, ಮುಹುಃ, ಪ್ರಮತ್ತಂ, ಜಹಸುಃ, ನೂತನಶಿಷ್ಯಂ ಅತ್ರ, ಕೇಚಿತ್ ।

**ಅನ್ವಯ**— ಅತ್ರ, ಕೇಚಿತ್, ಚಿರಾಯ, ಭರದಾಮಾನವಲೋಕಿನಂ, ಅತಿಸಂಭ್ರಮತಃ, ಪರಿಭ್ರಮಂತಂ, ಮುಹುಃ, ಅನುಯೋಗಪರಂ, ಪ್ರಮತ್ತಂ, ನೂತನಶಿಷ್ಯಂ, ಜಹಸುಃ ।

**ಅನ್ವಯಾರ್ಥ**—

**ಅತ್ರ** = ಈ ಪ್ರಯಾಣ ಸಮಯದಲ್ಲಿ
**ಕೇಚಿತ್** = ಕೆಲವು ಮಂದಿ ಶಿಷ್ಯರು,
**ಚಿರಾಯ** = ಬಹಳ ಹೊತ್ತಿನವರೆಗೆ,
**ಭರದಾಮಾನವಲೋಕಿನಂ** = ಹೊರೆಯ (ಗಂಟುಮೂಟೆಯನ್ನು ಕಟ್ಟುವ) ಹಗ್ಗವನ್ನು ನೋಡದೇ ಇರುವ,

**ಅತಿಸಂಭ್ರಮತಃ** = ಬಹಳ ಗಾಬರಿಯಿಂದ (ಅವಸರದಿಂದ),

**ಪರಿಭ್ರಮಂತಂ** = ಅಲ್ಲಿ ಇಲ್ಲಿ ಸುತ್ತುತ್ತಿರುವ,

**ಮುಹುಃ** = ಬಾರಿಬಾರಿಗೂ,

**ಅನುಯೋಗಪರಂ** = ಪ್ರಶ್ನೆ ಮಾಡುವುದರಲ್ಲಿ (ನೀವು ನೋಡಿದ್ದಿರಾ ನೀವು ನೋಡಿದ್ದಿರಾ ಎಂದು ಕೇಳುವುದರಲ್ಲಿ) ಆಸಕ್ತನಾದ,

**ಪ್ರಮತ್ತಂ** = ಹಗ್ಗವನ್ನು ಇಟ್ಟಿರುವ ಸ್ಥಳದ ಸ್ಮರಣೆ ಇಲ್ಲದಿರುವ,

**ನೂತನಶಿಷ್ಯಂ** = ಹೊಸಬನಾದ ಶಿಷ್ಯನನ್ನು,

**ಜಹಸುಃ** = ಪರಿಹಾಸ ಮಾಡಿದರು.

**ತಾತ್ಪರ್ಯ—** ಆಚಾರ್ಯರ ಪ್ರಯಾಣಕ್ಕೆ ಸನ್ನದ್ಧರಾಗುತ್ತಿದ್ದ ಕಾಲದಲ್ಲಿ ಒಂದು ಚಿಕ್ಕ ಘಟನೆಯು ನಡೆಯಿತು. ಆಚಾರ್ಯರ ಶಿಷ್ಯರಲ್ಲಿ ಹೊಸಬನೊಬ್ಬನು ತಾನೆ ಗಂಟನ್ನು ಕಟ್ಟುವ ಹಗ್ಗವನ್ನು ಇಟ್ಟಿದ್ದ ಸ್ಥಳವನ್ನು ಮರೆತುಬಿಟ್ಟನು. ಹೊರಡುವ ಸಮಯವು ಮೀರುತ್ತದೆಂದು ಗಾಬರಿಯಿಂದಲೂ, ಸಡಗರದಿಂದಲೂ ಆ ಹಗ್ಗವನ್ನು ಇಲ್ಲಿ ಅಲ್ಲಿ ಹುಡುಕುತ್ತಾ ಎಲ್ಲರನ್ನೂ ನೀವು ಕಂಡಿದ್ದೀರಾ ಹೊರೆಯ ಹಗ್ಗವನ್ನು ನೀವು ನೋಡಿದ್ದಿರಾ? ಎಂದು ಕೇಳುತ್ತಾ ಅಲ್ಲಲ್ಲಿ ಸುತ್ತುತ್ತಿದ್ದನು. ಅವನ ಮರೆಗುಳಿತನವನ್ನು ಕಂಡು ಶಿಷ್ಯರಲ್ಲಿ ಕೆಲವರು 'ಎಲೋ ಆ ದಾರ ನಿನ್ನ ಹೆಗಲ ಮೇಲೆಯೇ ಇದೆಯಲ್ಲೋ' ಎಂದು ಪರಿಹಾಸಮಾಡಿ ನಕ್ಕರು.

**ವಿಗ್ರಹ—**

**ಅತಿಸಂಭ್ರಮತಃ—** ಅತಿಶಯಿತಃ ಸಂಭ್ರಮಃ ಅತಿಸಂಭ್ರಮಃ ಅತಿಸಂಭ್ರಮಾತ್ ಇತಿ ಅತಿಸಂಭ್ರಮತಃ ।

**ಭರದಾಮಾನವಲೋಕಿನಂ—** ಭರಸ್ಯ ದಾಮ ಭರದಾಮ ಅವಲೋಕತೇ ಇತಿ ಅವಲೋಕೀ, ನ ಅವಲೋಕೀ ಅನವಲೋಕೀ, ಭರದಾಮ್ನಃ ಅನವಲೋಕೀ ಭರದಾಮಾನವಲೋಕೀ ತಂ ।

**ಅನುಯೋಗಪರಂ—** ಅನುಯೋಗೇ ಪರಃ ಅನುಯೋಗಪರಃ ತಂ ।

**ನೂತನಶಿಷ್ಯಂ—** ನೂತನಶ್ಚಾಸೌ ಶಿಷ್ಯಶ್ಚ ನೂತನಶಿಷ್ಯಃ ತಂ ।

**ಕ್ರಿಯಾಪದ— ಜಹಸುಃ** - ಜಹಾಸ ಜಹಸತುಃ ಜಹಸುಃ, ಜಹಸಿಥ ಜಹಸಥುಃ ಜಹಸ, ಜಹಾಸ-ಜಹಸ ಜಹಸಿವ ಜಹಸಿಮ । ಹಸೇ ಹಸನೇ ಇತಿ ಹಸನಾರ್ಥಕಃ ಅಕರ್ಮಕ ಸೇಟ ಹಸ್‌ಧಾತುಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಬಹುವಚನಂ । 1 ಲಟ್ ಹಸತಿ 3 ಲುಟ್ ಹಸಿತಾ 4 ಲೃಟ್ ಹಸಿಷ್ಯತಿ 5 ಲೋಟ್ ಹಸತು 6ಲಜ ಅಹಸತ್ 7 ವಿಧಿಲಿಜ ಹಸೇತ್ 8 ಆಶೀರ್ಲಿಜ್ ಹಸ್ಯಾತ್ ಹಸ್ಯಾಸ್ತಾಂ ಹಸ್ಯಾಸುಃ । 9 ಲುಜ ಅಹಸೀತ ಅಹಸಿಷ್ಟಾಂ ಅಹಸಿಷುಃ । (ಹಸೇ ಎಂಬ ಧಾತುವಿನಲ್ಲಿ ಏಕಾರವು ಇತ್ ಲೋಪವಾಗುವ ಅಕ್ಷರವಾದುದರಿಂದ ಹ್ಮ್ಯಂತಕ್ಷಣಶ್ವಸಜಾಗೃಣಿ ಶ್ವೇದಿತಾಂ ಎಂಬ ಸೂತ್ರದಿಂದ ಉಪಧೆಗೆ ಕೊನೆಯ ಅಕ್ಷರದ ಹಿಂದಿನ ಅಕ್ಷರಕ್ಕೆ ಹ ಎಂಬಲ್ಲಿರುವ ಆಕಾರಕ್ಕೆ ವೃದ್ಧಿ ಇಲ್ಲ) ಲೃಜ ಅಹಸಿಷ್ಯತ್ ।

**ಪ್ರಯೋಗ—** ಅತ್ರ ಕೈಶ್ಚಿತ್ ಚಿರಾಯ ಭರದಾಮಾನವಲೋಕೀ ಅತಿಸಂಭ್ರಮತಃ ಪರಿಭ್ರಮನ್ ಮುಹುಃ ಅನುಯೋಗಪರಃ ಪ್ರಮತ್ತಃ ನೂತನಶಿಷ್ಯಃಜಹಸೇ (ಭಾವೇ) ।

**ಕೋಶ—** ಚಿರಾಯ = ಬಹುಕಾಲಂ ಬಹಳ ಹೊತ್ತಿನವರೆಗೆ, 'ಚಿರಾಯ ಚಿರರಾತ್ರಾಯ ಚಿರಸ್ಯಾದ್ಯಶ್ಚಿರಾರ್ಥಕಾಃ' ಅಮರ, ಭರ = ಅತಿಶಯ ಹೊರೆ, ಇಲ್ಲಿ ಹೊರೆ ಎಂದು ಅರ್ಥ, 'ಭರೋಽತಿಶಯಭಾರಯೋಃ' ಅಮರ, ಸಂಭ್ರಮಃ = 'ಸಾಧ್ವಸಂ ಉದ್ವೇಗಃ ಸಂಭ್ರಮಃ ಸಾಧ್ವಸೇ ಅಪಿ ಸ್ಯಾತ್' ವಿಶ್ವ, ಅನುಯೋಗಃ = ಪ್ರಶ್ನ 'ಪ್ರಶ್ನೋಽನುಯೋಗಃ ಪೃಚ್ಛಾ ಚ' ಅಮರ ।

★ ★ ★

**ಅವತಾರಿಕಾ—** ಆಚಾರ್ಯರ ಪ್ರಯಾಣಕಾಲದಲ್ಲಿ ಆದ ಒಂದು ಶಕುನವನ್ನು ಸೂಚಿಸುತ್ತಾ ಆಚಾರ್ಯರು ಮದನೇಶ್ವರ ದೇವಾಲದಿಂದ ಮುಂದಕ್ಕೆ ಪ್ರಯಾಣ ಹೊರಟರೆಂದು ತಿಳಿಸುತ್ತಾರೆ.

**ಅಥ ತತ್ಕ್ಷಣಘಟ್ಟಿತೋರುಘಂಟಾ-**
**ಘನನಾದವ್ಯಪದೇಶತಃ ಪರೇಣ ।**
**ಅಮಿತಪ್ರಮತಿಃ ಪ್ರಚೋದಿತೋಽಸಾ-**
**ವಿತಿ ನಿರ್ಯತ್ಸು ನಿಜೇಷು ನಿರ್ಜಗಾಮ ॥ 16 ॥**

**ಪದಚ್ಛೇದ—** ಅಥ, ತತ್ಕ್ಷಣಘಟ್ಟಿತೋರುಘಂಟಾಘನನಾದವ್ಯಪದೇಶತಃ, ಪರೇಣ, ಅಮಿತಪ್ರಮತಿಃ, ಪ್ರಚೋದಿತಃ, ಅಸೌ, ಇತಿ, ನಿರ್ಯತ್ಸು, ನಿಜೇಷು, ನಿರ್ಜಗಾಮ ।

**ಅನ್ವಯ—** ಅಥ, ಅಸೌ, ಅಮಿತಪ್ರಮತಿಃ, ನಿಜೇಷು, ಇತಿ, ನಿರ್ಯತ್ಸು, ತತ್ಕ್ಷಣಘಟ್ಟಿತೋರುಘಂಟಾಘನನಾದವ್ಯಪದೇಶತಃ, ಪರೇಣ, ಪ್ರಚೋದಿತಃ, ನಿರ್ಜಗಾಮ ।

**ಅನ್ವಯಾರ್ಥ—**

**ಅಥ** = ಅನಂತರ,

**ಅಸೌ** = ಈ,

**ಅಮಿತಪ್ರಮತಿಃ** = ಪೂರ್ಣಪ್ರಜ್ಞಾಚಾರ್ಯರು,

**ನಿಜೇಷು** = ತನ್ನವರು (ಶಿಷ್ಯರು),

**ಇತಿ** = ಈ ರೀತಿ,

**ನಿರ್ಯತ್ಸು** = ಹೊರಡುತ್ತಿರಲು,

**ತತ್ಕ್ಷಣಘಟ್ಟಿತಉರುಘಂಟಾಘನನಾದವ್ಯಪದೇಶತಃ** = ಆ ಸಮಯದಲ್ಲಿ ಹೊಡೆಯಲ್ಪಟ್ಟ ದೊಡ್ಡದಾದ ಘಂಟೆಯ ಗಂಭೀರವಾದ (ಗಟ್ಟಿಯಾದ) ಧ್ವನಿಯ ನೆಪದಿಂದ

**ಪರೇಣ** = ತನಗಿಂತ ಬೇರೆಯಾದ ಮದನೇಶ್ವರನಿಂದ (ಮದನೇಶ್ವರಾಂತರ್ಗತ ಸರ್ವೋತ್ತಮನಾದ ಶ್ರೀಹರಿಯಿಂದ),

**ಪ್ರಚೋದಿತಃ (ಸನ್)** = ಪ್ರೇರಿಸಲ್ಪಟ್ಟವರಾಗಿ,

**ನಿರ್ಜಗಾಮ** = ಹೊರಟರು.

**ತಾತ್ಪರ್ಯ—** ಹೀಗೆ ಆಚಾರ್ಯರ ಶಿಷ್ಯರು ಸಡಗರ ಸಂತೋಷ ಅವಸರಗಳಿಂದ ಹೊರಡುತ್ತಿದ್ದರು. ಆಗ ಒಂದು ಘಟನೆ ನಡೆಯಿತು. ಆ ಮದನೇಶ್ವರ ದೇವಾಲಯದಲ್ಲಿ ದೇವರ ಎದುರು ದೊಡ್ಡ ಘಂಟೆಯೊಂದನ್ನು ತೂಗುಹಾಕಿದ್ದರು. ದೇವಾಲಯಕ್ಕೆ ಬರುವ ಭಕ್ತರು ಸ್ವಾಭಾವಿಕವಾಗಿ ದೇವರ ಘಂಟೆಯನ್ನು ಹೊಡೆದು ಕೈಮುಗಿದು ನಮಸ್ಕರಿಸುವುದು ಪದ್ಧತಿಯಾಗಿತ್ತು. ಆಚಾರ್ಯರು ಹೊರಡುವ ಸಮಯಕ್ಕೆ ಸರಿಯಾಗಿ ಯಾವನೋ ಒಬ್ಬ ಭಕ್ತನು ಬಂದು ದೇವಸ್ಥಾನದ ಆ ದೊಡ್ಡ ಘಂಟೆಯನ್ನು ಗಟ್ಟಿಯಾಗಿ ಬಾರಿಸಿದನು. ಆಗ ಪೂರ್ಣಪ್ರಜ್ಞರು ಈ ಘಂಟಾನಾದದ ನೆಪದಿಂದ ಮದನೇಶ್ವರನು (ಅವನಲ್ಲಿರುವ ಮದನಪಿತನಾದ ಶ್ರೀಹರಿಯು) ಇದು ಪ್ರಯಾಣಕ್ಕೆ ಸುಮುಹೂರ್ತವೆಂದು ಪ್ರೇರಿಸುತ್ತಿದ್ದಾರೆ, ಅನುಮೋದಿಸುತ್ತಿದ್ದಾರೆ ಎಂದು ತಿಳಿಯುತ್ತಾ ಆ ಘಂಟಾಧ್ವನಿಯನ್ನೇ ನಿಮಿತ್ತವಾಗಿ ಇಟ್ಟುಕೊಂಡು ಅಲ್ಲಿಂದ ಮುಂದೆ ಪ್ರಯಾಣ ಮಾಡಿದರು.

**ವಿಗ್ರಹ—**

**ತತ್ಕ್ಷಣಘಟ್ಟಿತೋರುಘಂಟಾಘನನಾದವ್ಯಪದೇಶತಃ—** ಸಚಾಸೌ ಕ್ಷಣಶ್ಚ ತತ್ಕ್ಷಣಃ ತತ್ಕ್ಷಣೇ ಘಟ್ಟಿತಾ, ತತ್ಕ್ಷಣಘಟ್ಟಿತಾ, ಉರುಶ್ಚ ಸಾ ಘಂಟಾ ಚ ಉರುಘಂಟಾ ತತ್ಕ್ಷಣಘಟ್ಟಿತಾ ಚ ಸಾ ಉರುಘಂಟಾ ಚ ತತ್ಕ್ಷಣಘಟ್ಟಿತೋರುಘಂಟಾ, ಘನಶ್ಚಾಸೌ ನಾದಶ್ಚ ಘನನಾದಃ, ತತ್ಕ್ಷಣಘಟ್ಟಿತೋರುಘಂಟಾಯಾಃ ಘನನಾದಃ ತತ್ಕ್ಷಣಘಟ್ಟಿತೋರುಘಂಟಾಘನನಾದಃ ತತ್ಕ್ಷಣಘಟ್ಟಿತೋರುಘಂಟಾಘನನಾದ, ಏವ ವ್ಯಪದೇಶಃ ತತ್ಕ್ಷಣಘಟ್ಟಿತೋರುಘಂಟಾಘನನಾದವ್ಯಪದೇಶಃ ತಸ್ಮಾತ್ ತತ್ಕ್ಷಣಘಟ್ಟಿತೋರುಘಂಟಾ ಘನನಾದವ್ಯಪದೇಶತಃ ।

**ಅಮಿತಪ್ರಮತಿಃ—** ಅಮಿತಾ ಪ್ರಮತಿಃ ಯಸ್ಯ ಸಃ ।

**ಕ್ರಿಯಾಪದ—** ನಿರ್ಜಗಾಮ - ನಿರ್+ಜಗಾಮ ಜಗ್ಮತುಃ ಜಗ್ಮುಃ, ಜಗಮಿಥ-ಜಗಂಥ ಜಗ್ಮತುಃ ಜಗ್ಮ, ಜಗಾಮ ಜಗಮ ಜಗ್ಮಿವ ಜಗ್ಮಿಮ । ಗಮ್-ಲೃಗತೌ ಗತ್ಯರ್ಥಕಃ ಗಮ್ ಧಾತುಃ ಸಕರ್ಮಕಃ ಅನಿಟ್ ಪರಸ್ಮೈಪದೀ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ನಿರ್ಜಗಾಮ ಇತಿ ರೂಪಂ 1 ಲಟ್ ಗಚ್ಛತಿ 3 ಲುಟ್ ಗಂತಾ 4 ಲೃಟ್ ಗಮಿಷ್ಯತಿ 5 ಲೋಟ್ ಗಚ್ಛತು 6 ಲಙ ಅಗಚ್ಛತ್ 7 ವಿಧಿಲಿಙ ಗಚ್ಛೇತ್ 8 ಲುಙ ಅಗಮತ್ 8 ಆಶೀಃ ಗಮ್ಯಾತ್ 9 ಲೃಙ ಅಗಮಿಷ್ಯತ್ ।

**ಕೋಶ—** ಪರೇಣ ಎಂಬಲ್ಲಿ 'ಪರಃ ಪರಮಾತ್ಮಪರೋಽರಿಪರಮಾತ್ಮನೋಃ' ಅಮರ ।

**ಪ್ರಯೋಗ—** ಅಥ ಅಮುನಾ ಅಮಿತಪ್ರಮತಿನಾ ನಿಜೇಷು ನಿರ್ಯತ್ಸು ತತ್ಕ್ಷಣಘಟ್ಟಿತೋರುಘಂಟಾಘನನಾದ ವ್ಯಪದೇಶತಃ ಪರೇಣ ಪ್ರಚೋದಿತೇನ ಸ ತಾ ನಿರ್ಜಗ್ಮೇ (ಭಾವೇ) ।

★ ★ ★

**ಅವತಾರಿಕಾ—** ಶ್ರೀಮಧ್ವಾಚಾರ್ಯರು ಪ್ರಯಾಣಕಾಲದಲ್ಲಿ ಅವರಿಗೆ ಮಾಡಿದ ಛತ್ರಧಾರಣೆಯನ್ನು ವರ್ಣಿಸುತ್ತಾರೆ.

**ಧೃತಮಾತಪವಾರಣಂ ವರೇಣ್ಯಂ**
**ವ್ರತಿರಾಜಂ ತಮುಪರ್ಯುಪರ್ಯುದಾರಮ್ ।**
**ಉದಯನ್ಮಹಿರೋಪರಿಷ್ಠಪೂರ್ಣ-**
**ದ್ವಿಜರಾಜಶ್ರಿಯಮಾಯಯಾವಭೂತಾಮ್ ॥ 17 ॥**

**ಪದಚ್ಛೇದ—** ಧೃತಂ, ಆತಪವಾರಣಂ, ವರೇಣ್ಯಂ, ವ್ರತಿರಾಜಂ, ತಂ, ಉಪರಿ, ಉಪರಿ, ಉದಾರಂ, ಉದಯನ್ಮಹಿ ರೋಪರಿಷ್ಠಪೂರ್ಣದ್ವಿಜರಾಜಶ್ರಿಯಂ, ಆಯಯೌ, ಅಭೂತಾಂ ।

**ಅನ್ವಯ—** ವರೇಣ್ಯಂ, ವ್ರತಿರಾಜಂ, ತಂ, ಉಪರಿ, ಉಪರಿಧೃತಂ, ಉದಾರಂ, ಆತಪವಾರಣಂ, ಅಭೂತಾಂ, ಉದಯನ್ಮಹಿರೋಪರಿಷ್ಠಪೂರ್ಣದ್ವಿಜರಾಜಶ್ರಿಯಂ, ಆಯಯೌ ।

**ಅನ್ವಯಾರ್ಥ—**

**ವರೇಣ್ಯಂ** = ಶ್ರೇಷ್ಠರಾದ,
**ವ್ರತಿರಾಜಂ** = ಸಂನ್ಯಾಸಿ ಶ್ರೇಷ್ಠರಾದ,
**ತಂ** = ಆ ಮಧ್ವಾಚಾರ್ಯರ,

**ಉಪರಿ ಉಪರಿಧೃತಂ** = ಮೇಲ್ಭಾಗದಲ್ಲಿ ಸಮೀಪದಲ್ಲಿ ಹಿಡಿಯಲ್ಪಟ್ಟ

**ಉದಾರಂ** = ಉತ್ಕೃಷ್ಟವಾದ,

**ಆತಪವಾರಣಂ** = ಕೊಡೆಯು,

**ಅಭೂತಾಂ** = ಹಿಂದೆ ಉಂಟಾಗದಿರುವ,

**ಉದಯನ್ಮಿಹಿರೋಪರಿಷ್ಠಪೂರ್ಣದ್ವಿಜರಾಜಶ್ರಿಯಂ** = ಉದಯಿಸುತ್ತಿರುವ ಸೂರ್ಯನ ಮೇಲ್ಭಾಗದಲ್ಲಿರುವ ಷೋಡಶಕಲಾಪರಿಪೂರ್ಣನಾದ (ಹುಣ್ಣಿಮೆಯ) ಚಂದ್ರನ ಕಾಂತಿಯನ್ನು

**ಆಯಯೌ** = ಹೊಂದಿತು.

**ತಾತ್ಪರ್ಯ**— ಸಂನ್ಯಾಸಿ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರ ತಲೆಯ ಮೇಲೆ ಸಮೀಪದಲ್ಲಿ ಶ್ರೇಷ್ಠವಾದ ಒಂದು ಛತ್ರಿಯನ್ನು ಒಬ್ಬ ಶಿಷ್ಯನು ಹಿಡಿದಿದ್ದನು. ಉದಯಿಸುತ್ತಿರುವ ಸೂರ್ಯನಂತೆ ಇರುವ ಆಚಾರ್ಯರ ತಲೆಯ ಮೇಲೆ ಪೂರ್ಣಚಂದ್ರನಂತೆ ಬೆಳ್ಳಗಿರುವ ಛತ್ರಿಯನ್ನು ಹಿಡಿದಿದ್ದಾಗ ಉದಯಿಸುತ್ತಿರುವ ಸೂರ್ಯನ ಮೇಲ್ಭಾಗದಲ್ಲಿ ಚಂದ್ರನು ಪ್ರಕಾಶಿಸುತ್ತಿದ್ದಿದ್ದರೆ ಯಾವ ಶೋಭೆ ಉಂಟಾಗಬಹುದೋ ಅಂತಹ ಶೋಭೆಯುಂಟಾಯಿತು. ಇದು ಅಭೂತೋಪಮಾಲಂಕಾರ ಉಭೌ ಯದಿ ವ್ಯೋಮ್ನಿ ಪೃಥಕ್ ಪ್ರವಾಹಾಕಾಶಗಂಗಾಪಯಸಃ ಪತೇಶಾಂ । ತೇ ನೋಪಮೀಯೇತ ತಮಾಲ ನೀಲ ಮಾಮುಕ್ತಮುಕ್ತಲತಮಸ್ಯವಕ್ಷಃ ॥ ಮಾಘ ತೃತೀಯ ಸರ್ಗ (ಶ್ರೀಕೃಷ್ಣನ ವರ್ಣನೆ) ಆಕಾಶ ಗಂಗೆಯ ಪ್ರವಾಹವು ಇಬ್ಭಾಗವಾಗಿ ನೀಲವಾದ ಆಕಾಶದಲ್ಲಿ ಹರಿಯುತ್ತಿದ್ದಿದ್ದರೆ ನೀಲವಾದ ಎದೆಯ ಮೇಲೆ ಮುತ್ತಿನ ಸರವನ್ನು ಹಾಕಿಕೊಂಡಿರುವ ಶ್ರೀಕೃಷ್ಣನ ಎದೆಗೆ ಅದನ್ನು ಉಪಮಾನವಾಗಿ ಕೊಡಬಹುದಾಗಿತ್ತು. ಇಲ್ಲಿ ಅಭೂತೋಪಮಾಲಂಕಾರ.

**ವಿಗ್ರಹ ಮತ್ತು ಕೋಶ**—

**ಆತಪವಾರಣಂ**— ಆತಪಂ ವಾರಯತೀತಿ ಆತಪವಾರಣಂ ಆತಪ = ಬಿಸಿಲು, 'ಪ್ರಕಾಶೋದ್ಯೋತ ಆತಪಃ' ಅಮರ. 'ಆತಪಾತ್‌ತ್ರಾಯತೇ ಇತಿ ಆತಪತ್ರಂ' ಸೂರ್ಯನ ಬಿಸಿಲಿನಿಂದ ಕಾಪಾಡುತ್ತದೆ ಎಂಬ ವ್ಯುತ್ಪತ್ತಿಯಿಂದ ಆತಪತ್ರ ಶಬ್ದದಿಂದ ಬರುವ ಅರ್ಥವನ್ನು ಆತಪವಾರಣಂ ಎಂಬ ಪದದಿಂದ ಹೇಳಿದ್ದಾರೆ.

**ವ್ರತಿರಾಜಂ**— ವ್ರತೀನಾಂ ರಾಜಃ ವ್ರತಿರಾಜಃ ತಂ । ಉಪರಿ ಉಪರಿ ಎಂಬಲ್ಲಿ 'ಉಪರ್ಯಧ್ಯದಸಃ ಸಾಮೀಪ್ಯೇ' ಎಂಬ ಸೂತ್ರದಿಂದ ದ್ವಿರುಕ್ತಿ ಉಭಸರ್ವತಸೋಃ ಕಾರ್ಯಾಧಿಗುಪರ್ಯಾದಿಷು ತ್ರಿಷು । ದ್ವಿತೀಯಾಮ್ರೇಡಿತಾಂತೇಷು ತತೋನ್ಯತ್ರಾಪಿ ದೃಶ್ಯತೇ ॥ ಎಂಬ ಶ್ಲೋಕವಾರ್ತಿಕದಿಂದ ದ್ವಿತೀಯಾ ವಿಭಕ್ತಿ ।

**ಉದಯನ್ಮಿಹಿರೋಪರಿಷ್ಠಪೂರ್ಣದ್ವಿಜರಾಜಶ್ರೀಯಂ** = ಉದಯನ್‌ಚ ಅಸೌ ಮಿಹಿರಶ್ಚ ಉದಯನ್ಮಿಹಿರಃ, ಉದಯನ್ಮಿಹಿರಸ್ಯ ಉಪರಿ ತಿಷ್ಠತೀತಿ ಉದಯನ್ಮಿಹಿರೋಪರಿಷ್ಠಃ, ದ್ವಿಜಾನಾಂ ರಾಜಾ ದ್ವಿಜರಾಜಃ, ಉದಯನ್ಮಿಹಿರೋಪರಿಷ್ಠಶ್ಚಾಸೌ ಪೂರ್ಣದ್ವಿಜರಾಜಶ್ಚ. ಉದಯನ್ಮಿಹಿರೋಪರಿಷ್ಠಪೂರ್ಣದ್ವಿಜರಾಜಃ, ತಸ್ಯ ಶ್ರೀಃ ತಾಂ । ಮಿಹಿರಃ = ಸೂರ್ಯಃ 'ಮಿಹಿರಾರುಣಪೂಷಣಃ' ಅಮರ. ದ್ವಿಜರಾಜಃ = ಚಂದ್ರ 'ದ್ವಿಜರಾಜಃ ಶಶಿಧರಃ' ಅಮರ. ಶ್ರೀ = ಶೋಭಾ 'ಶ್ರೀರ್ವೇಷರಚನಾ ಶೋಭಾ' ಕೋಶ ।

**ವಿಶೇಷಾಂಶ**— ಇಲ್ಲಿ ಛಲಾರಿಯಲ್ಲಿ ಉಕ್ತವಾದ ಅಯಂ ಭಾವಃ ಮಧ್ವಾಚಾರ್ಯಸ್ಯ ಸುವರ್ಣ ಪ್ರಭಾತ್ವಾತ್ ಉದ್ಯದಾತ್ಯಸಾಮ್ಯಂ ಮಧ್ವೋಪರಿ ಧೃತಛತ್ರಸ್ಯ ಶುಭ್ರತ್ವಾತ್ ಪೂರ್ಣಮಾಚಂದ್ರಸಾಮ್ಯಂ ಯದಿ ಉದ್ಯದಾದಿತ್ಯಸ್ಯ ಲೋಹಿತಮಂಡಲೋಪರಿಷ್ಟಾತ್ ಸಂಪೂರ್ಣಧವಲಂ ವರ್ತುಲಂ ಚಂದ್ರಮಂಡಲಂ ಭವೇತ್ ತರ್ಹಿ ಸುವರ್ಣವರ್ಣ ಮಧ್ವಾಚಾರ್ಯಮಸ್ತಕೋಪರಿ ಧೃತಸ್ಯ ಧವಲವರ್ತುಲಛತ್ರಸ್ಯ ಉಪಮಾ ಸಂಭವೇತ್ । ನಚ ಇಷ್ಟಾಪತ್ತಿಃ ಲೋಹಿತೋದಿತಸೂರ್ಯೋಪರಿ ಶ್ವೇತಪೂರ್ಣಚಂದ್ರಮಂಡಲಸ್ಯ ಕದಾಪಿ ಅಭೂತತ್ವಾತ್ ಅತ ಏವ ಅಭೂತೋಪಮಾ ಇಯಮಿತಿ ॥

ತಾತ್ಪರ್ಯ—ಶ್ರೀಮಧ್ವಾಚಾರ್ಯರು ಸುವರ್ಣವರ್ಣದವರು ಅವರಿಗೆ ಉದಯಿಸುತ್ತಿರುವ ಸೂರ್ಯನ ಹೋಲಿಕೆಯಿದೆ. ಆಚಾರ್ಯರ ತಲೆಯ ಮೇಲೆ ಹಿಡಿದ ಶ್ವೇತಚ್ಛತ್ರವು ಶುಭ್ರವಾದುದರಿಂದ ಹುಣ್ಣಿಮೆಯ ಚಂದ್ರನನ್ನು ಹೋಲುತ್ತದೆ. ಒಂದು ವೇಳೆ ಉದಯಿಸುತ್ತಿರುವ ಸೂರ್ಯನ ಕೆಂಪಾದ ಮಂಡಲದ ಮೇಲ್ಭಾಗದಲ್ಲಿ ಸಂಪೂರ್ಣ ಬೆಳ್ಳಗಾದ ಗುಂಡಗಾದ ಚಂದ್ರಮಂಡಲವಿರುವುದಾದರೆ ಬಂಗಾರದ ಬಣ್ಣದ ಆಚಾರ್ಯರ ತಲೆಯ ಮೇಲೆ ಹಿಡಿದಿರುವ ಬೆಳ್ಳಗೆ ಗುಂಡಗೆ ಇರುವ ಛತ್ರದ ಹೋಲಿಕೆಯನ್ನು ಕೊಡಲು ಸಾಧ್ಯವಾಗುತ್ತಿತ್ತು. ಹೋಲಿಕೆಯನ್ನು ಏಕೆ ಕೊಡಬಾರದು? ಕೊಡಿರಿ. ನಮಗೆ ಅದು ಇಷ್ಟ ಎನ್ನಲು ಸಾಧ್ಯವಿಲ್ಲ. ಕೆಂಪಾಗಿ ಉದಯಿಸುತ್ತಿರುವ ಸೂರ್ಯನ ಮೇಲ್ಭಾಗದಲ್ಲಿ ಬೆಳ್ಳಗಿರುವ ಪೂರ್ಣಚಂದ್ರನ ಮಂಡಲವು ಎಂದೂ ಇರಲಿಲ್ಲ ಇರುವುದೂ ಇಲ್ಲ. ಆದುದರಿಂದಲೇ ಇದು ಅಭೂತೋಪಮಾ ಎಂದು ಪ್ರಸಿದ್ಧವಾಗಿದೆ.

ಕ್ರಿಯಾಪದ— ಆ+ಯಯೌ ಯಯತುಃ ಯಯುಃ । ಇತ್ಯಾದಿ ಯಾಪ್ರಾಪಣೇ ಲಿಟ್ ।

ಪ್ರಯೋಗ— ವರೇಣ್ಯಂ ವ್ರತಿರಾಜಂ ತಂ ಉಪರಿ ಉಪರಿ ಧೃತೇನ ಉದಾರೇಣ ಆತಪವಾರಣೇನ ಅಭೂತಾ ಉತಯನ್ನಿಹಿರೋಪರಿಷ್ಟಪೂರ್ಣದ್ವಿಜರಾಜಶ್ರೀಃ ಆಯಯೇ (ಕರ್ಮಣಿ) ।

★ ★ ★

ಅವತಾರಿಕಾ— ಶ್ರೀಮಧ್ವಾಚಾರ್ಯರ ಒಬ್ಬ ಭಕ್ತನು ಅವರನ್ನು ತನ್ನ ಹೆಗಲ ಮೇಲೇರಿಸಿ ಕರೆದುಕೊಂಡು ಹೋಗುತ್ತಿದ್ದನು ಎಂಬ ವಿಷಯವನ್ನು ವರ್ಣಿಸುತ್ತಾರೆ.

**ಭುವನತ್ರಯಧಾರಿಣಂ ಮುಕುಂದಂ**
**ದಧದಂತಃ ಸ ದಧೇ ಗುರುಃ ಸ್ವಯಂ ಚ ।**
**ಅಪಿ ಕೇನಚಿದಿತ್ಯದೋ ನ ಚಿತ್ರಂ**
**ನನು ಸ ಪ್ರಾಣಪತಿರ್ಬಭಾರ ತಂ ಚ ॥ 18 ॥**

ಪದಚ್ಛೇದ— ಭುವನತ್ರಯಭಾರಿಣಂ (ಧಾರಿಣಂ) ಮುಕುಂದಂ, ಅಂತಃ, ಸಃ, ದಧತ್ ಅಂತಃ, ಸಃ, ದಧೇ, ಗುರುಃ, ಸ್ವಯಂ, ಚ, ಅಪಿ, ಕೇನಚಿತ್, ಇತಿ ಅದಃ, ನ, ಚಿತ್ರಂ, ನನು, ಸಃ, ಪ್ರಾಣಪತಿಃ, ಬಭಾರ, ತಂ, ಚ ।

ಅನ್ವಯ— ಭುವನತ್ರಯಭಾರಿಣಂ (ಧಾರಿಣಂ) ಮುಕುಂದಂ, ಅಂತಃ, ದಧತ್, ಸಃ, ಗುರುಃ, ಸ್ವಯಂ, ಚ, ಕೇನಚಿತ್, ಅಪಿ, ದಧೇ, ಇತಿ, ಅದಃ, ಚಿತ್ರಂ, ನ (ಭವತಿ), ಸಃ, ಪ್ರಾಣಪತಿಃ, ತಂ, ಚ, ಬಭಾರ, ನನು ।

ಅನ್ವಯಾರ್ಥ—

**ಭುವನತ್ರಯಧಾರಿಣಂ ಮುಕುಂದಂ** = ಮೂರು ಲೋಕಗಳನ್ನು ಧರಿಸಿರುವ (ಉದರದಲ್ಲಿ ಹೊತ್ತಿರುವ) ಶ್ರೀನಾರಾಯಣನನ್ನು,
**ಅಂತಃ** = ತನ್ನ ಹೃದಯದಲ್ಲಿ,
**ದಧತ್** = ಧರಿಸಿರುವ,
**ಸಃ** = ಆ,
**ಗುರುಃ** = ಗುರುಗಳಾದ ಶ್ರೀಮಧ್ವಾಚಾರ್ಯರು,
**ಸ್ವಯಂ ಚ** = ತಾನೂ,
**ಕೇನಚಿತ್ ಅಪಿ** = ಯಾವನೋ ಒಬ್ಬ ಮನುಷ್ಯನಿಂದಲೂ,

**ದಧೇ** = ಹೊರಲ್ಪಟ್ಟರು,

**ಇತಿ ಅದಃ** = ಹೀಗೆಂದು ಈ ವಿಷಯವು,

**ಚಿತ್ರಂ ನ(ಭವತಿ)** = ಆಶ್ಚರ್ಯಕರವಾಗಿಲ್ಲ,

**ಸಃ** = ಆ,

**ಪ್ರಾಣಪತಿಃ** = ಇಂದ್ರಿಯಗಳಿಗೆ ಸ್ವಾಮಿಯಾದ ಮುಖ್ಯಪ್ರಾಣನು,

**ತಂ ಚ** = ತನ್ನನ್ನು ಧರಿಸಿರುವ ಆ ಪುರುಷನನ್ನು,

**ಬಭಾರ ನನು** = ಹೊತ್ತುಕೊಂಡಿರುವನಷ್ಟೆ,

**ತಾತ್ಪರ್ಯ—** ಶ್ರೀ ಮಧ್ವಾಚಾರ್ಯರು ಪ್ರಯಾಣ ಮಾಡುವ ಕಾಲದಲ್ಲಿ ಒಬ್ಬಾನೊಬ್ಬ ಪುರುಷನು ಅವರನ್ನು ತನ್ನ ಹೆಗಲಿನ ಮೇಲೆ ಕೂಡಿಸಿಕೊಂಡು ಮುಂದಕ್ಕೆ ಸಾಗಿದನು. ಮೂರು ಲೋಕಗಳನ್ನು ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡಿರುವ ಶ್ರೀ ಮುಕುಂದನನ್ನು ಹೃದಯದಲ್ಲಿ ಧರಿಸಿರುವ ಶ್ರೀಮಧ್ವಾಚಾರ್ಯರನ್ನು ಒಬ್ಬ ಸಾಧಾರಣ ಮನುಷ್ಯನು ಹೆಗಲಿನಲ್ಲಿ ಧರಿಸಿ ಮುಂದಕ್ಕೆ ಸಾಗಿದುದು ಆಶ್ಚರ್ಯಕರವಲ್ಲವೆ! ಅಲ್ಲ, ಈ ವಿಷಯ ಆಶ್ಚರ್ಯಕರವಲ್ಲ. ಶ್ರೀಮುಖ್ಯಪ್ರಾಣದೇವರು ಎಲ್ಲಾ ಇಂದ್ರಿಯಗಳಿಗೆ ಒಡೆಯರು. ಅಂತಹ ಶ್ರೀಮುಖ್ಯಪ್ರಾಣನ ಸ್ವರೂಪಾಂಶಾವತಾರರೇ ಶ್ರೀಮಧ್ವಾಚಾರ್ಯರು. ಅವರು ಎಲ್ಲರಲ್ಲಿಯೂ ಅಂತರ್ಯಾಮಿಯಾಗಿರುತ್ತಾರೆ. ತನ್ನನ್ನು ಹೊತ್ತುಕೊಂಡಿರುವ ಆ ಮನುಷ್ಯನಲ್ಲಿಯೂ ಅಂತರ್ಯಾಮಿ ಯಾಗಿದ್ದು ಅವನನ್ನೂ, ತಮ್ಮನ್ನೂ ತಾವೇ ಧರಿಸಿರುವ ಅವರನ್ನು ಒಬ್ಬ ಮನುಷ್ಯನು ಹೊತ್ತುಕೊಂಡು ನಡೆದುದು ಏನು ಆಶ್ಚರ್ಯ! ಏಕೆಂದರೆ ಹೊರುವವನೂ ತಾನೇ ಹೊರಲ್ಪಡುವವನೂ ತಾನೆ ಆಗಿರುವಾಗ ಈ ಕಾರ್ಯದಲ್ಲಿ ಆಶ್ಚರ್ಯವೇನಿಲ್ಲ. ಇದನ್ನೆಲ್ಲಾ ತಿಳಿಯದವರಿಗೆ ಆಶ್ಚರ್ಯವಾಗಬಹುದು. ಇಲ್ಲಿ ಕಾವ್ಯಲಿಂಗಾಲಂಕಾರ. ಸಮರ್ಥನೀಯಸ್ಯಾರ್ಥಸ್ಯ ಕಾವ್ಯಲಿಂಗಸಮರ್ಥನಂ ॥ ಜಿತೋಽಸ್ಮಂದಕಂದರ್ಪಮಚ್ಚಿತ್ತೇಽಸ್ತಿ ತ್ರಿಲೋಚನ ॥ ಎಂದು ಲಕ್ಷಣೋದಾಹರಣೆಗಳು.

**ಛಲಾರಿಯಾ—** ಹರಿಃ ಜಗತ್‌ತ್ರಯಂ ಬಿಭರ್ತಿ = ಶ್ರೀಹರಿಯು ಮೂರುಲೋಕಗಳನ್ನು ಧರಿಸುತ್ತಾನೆ. ತಾದೃಶಂ ವಿಶ್ವಂಭರಂ ಮಧ್ವಃ ಹೃದಯೇ ಸರ್ವದಾ ಸ್ಮರತಿ = ಅಂತಹ ವಿಶ್ವಂಭರನಾದ ದೇವರನ್ನು ಶ್ರೀಮಧ್ವರು ಯಾವಾಗಲೂ ಹೃದಯದಲ್ಲಿ ನೆನೆಸುತ್ತಾ ಇರುತ್ತಾರೆ.ಇತಿ ಹೇತೋಃ ಭಗವದ್ಧಾರಕಃ = ಈ ಕಾರಣದಿಂದ ಶ್ರೀಮಧ್ವರು ಭಗವಂತನನ್ನು ಧರಿಸುವವರು ಆಗುತ್ತಾರೆ. ತಂ ಚ ವಾಹಕಃ ಪುರುಷಃ ಅಲ್ಪಬಲಃ ಧತ್ತೇ ಇತ್ಯೇತತ್ ವಿಚಿತ್ರತಯಾ ಪ್ರತೀಯತೇ = ಅಂತಹವರನ್ನು ಹೊರುವ ಪುರುಷನು ಅಲ್ಪಬಲವುಳ್ಳವನಾಗಿದ್ದರೂ ಧರಿಸುತ್ತಾನೆ ಎಂಬುದು ವಿಚಿತ್ರವಾಗಿ ತೋರುತ್ತದೆ. ದುರ್ಬಲಸ್ಯ ಬಹುಲಬಲಧಾರಣಾಯೋಗಾತ್ = ದುರ್ಬಲನು ಬಹಳ ಬಲವುಳ್ಳವನನ್ನು ಧರಿಸುವುದು ಕೂಡುವುದಿಲ್ಲ. ತಥಾಪಿ ಇದಂ ನ ಚಿತ್ರಂ = ಹಾಗಿದ್ದರೂ ಕೂಡಾ ಇದು ಆಶ್ಚರ್ಯಕರವಲ್ಲ. ಪ್ರಾಣಪತಿಃ ಮಧ್ವಃ ಅಂತರ್ಯಾಮಿರೂಪೇಣ ಸ್ವವಾಹಕಮಪಿ ಬಿಭರ್ತಿ ಇತಿ ಹೇತೋಃ ಇತಿ ಭಾವಃ = ಸರ್ವೇಂದ್ರಿಯ ಸ್ವಾಮಿಯಾದ ಶ್ರೀಮಧ್ವರು ಅಂತರ್ಯಾಮಿ ರೂಪದಿಂದ(ತನ್ನನ್ನು ಹೊರುವವ)ನನ್ನು ತಾನೂ ಹೊರುತ್ತಾರೆ. ಈ ಕಾರಣದಿಂದ ಇದು ಆಶ್ಚರ್ಯವಲ್ಲ ಎಂದು ಅಭಿಪ್ರಾಯ.

**ವಿಗ್ರಹ—**

**ಭುವನತ್ರಯಧಾರಿಣಂ—** ಭುವನಾನಾಂ ತ್ರಯಂ ಭುವನತ್ರಯಂ, ಭುವನತ್ರಯಂ ಬಿಭರ್ತಿ ಇತಿ । ಭುವನಾನಾಂ ತ್ರಯಂ ಭುವನತ್ರಯಂ ಧಾರಯತೀತಿ ಭುವನತ್ರಯಧಾರಿ ತಂ । ಭುವನತ್ರಯ ಭಾರಿ, ತಂ ।

**ಪ್ರಾಣಪತಿಃ—** ಪ್ರಾಣಾನಾಂ ಪತಿಃ ।

**ಕ್ರಿಯಾಪದ—** ದಧತ್ - ದಧೇ ದಧಾತೇ ದಧಿರೇ, ದಧಿಷೇ ದಧಾಥೇ ದಧಿಧ್ವೇ, ದಧೇ ದಧಿವಹೇ ದಧಿಮಹೇ, ಡುಧಾಞ ಧಾರಣಪೋಷಣಯೋಃ ಇತಿ ಧಾತೋಃ ಆತ್ಮನೇಪದಿನಃ ಲಿಟ್ । ಬಭಾರ ಬಭ್ರತುಃ ಬಭ್ರುಃ, ಬಭರ್ಥ ಬಭ್ರತುಃ ಬಭ್ರ, ಬಭಾರ ಬಭರ ಬಭ್ರಿವ ಬಭ್ರಿಮ । ಭೃಞ ಭರಣೇ ಪರಸ್ಮೈಪದಿ ಲಿಟ್ ।

**ಕೋಶ—** ಅಂತಃ - ಒಳಗೆ ಹೃದಯದಲ್ಲಿ, 'ಅಂತರ್ಮಧ್ಯೇ ತಥಾ ಪ್ರಾಂತೇ' ವಿಶ್ವ ।

**ಪ್ರಯೋಗ—** ಭುವನತ್ರಯಧಾರಿಣಂ ಮುಕುಂದಂ ಅಂತಃ ದಧತಂ ಸ್ವಯಂ ಚ ತಂ ಗುರುಂ ಕಶ್ಚಿದಪಿ ದಧೇ ಅಮುನಾ ಚಿತ್ರೇಣ ಭೂಯತೇ ಯತಃ ತೇನ ಪ್ರಾಣಪತಿನಾ ಸಃ ಸ್ವಧಾರಕಃ ಪುರುಷಃ ಅಪಿ ಬಭ್ರೇ ನನು ।

★ ★ ★

ಅವತಾರಿಕಾ— ಶ್ರೀಮಧ್ವಾಚಾರ್ಯರನ್ನು ಸಂನ್ಯಾಸಿಗಳೇ ಮುಂತಾದವರು ಹಿಂಬಾಲಿಸಿದರು ಎಂದು ಹೇಳುತ್ತಾರೆ.

**ಯತಯೋ ಗೃಹಿಣೋಽಥ ವರ್ಣಮುಖ್ಯಾಃ**
**ಶ್ರುತಿಗಾಸ್ತ್ಯಕ್ತನಿಷಿದ್ಧಕಾಮ್ಯಭಾವಾಃ ।**
**ಇಹ ಮೂರ್ತಿಧರಾ ಇವ ಸ್ವಧರ್ಮಾಃ**
**ಶತಸಂಖ್ಯಾಃ ಶತಸಂಖ್ಯಮನ್ವಗಚ್ಛನ್ ॥ 19 ॥**

**ಪದಚ್ಛೇದ—** ಯತಯಃ, ಗೃಹಿಣಃ ಅಥ, ವರ್ಣಮುಖ್ಯಾಃ, ಶ್ರುತಿಗಾಃ ತ್ಯಕ್ತನಿಷಿದ್ಧಕಾಮ್ಯಭಾವಾಃ, ಇಹ, ಮೂರ್ತಿ ಧರಾಃ, ಇವ, ಸ್ವಧರ್ಮಾಃ, ಶತಸಂಖ್ಯಾಃ ಶತಸಂಖ್ಯಂ, ಅನ್ವಗಚ್ಛನ್ ।

**ಅನ್ವಯ—** ಶ್ರುತಿಗಾಃ, ತ್ಯಕ್ತನಿಷಿದ್ಧಕಾಮ್ಯಭಾವಾಃ, ಶತಸಂಖ್ಯಾಃ, ಯತಯಃ, ಗೃಹಿಣಃ ಅಥ, ವರ್ಣಮುಖ್ಯಾಃ, ಮೂರ್ತಿಧರಾಃ, ಸ್ವಧರ್ಮಾಃ, ಇವ, ಇಹ, ಶತಸಂಖ್ಯಂ, ಅನ್ವಗಚ್ಛನ್ ।

**ಅನ್ವಯಾರ್ಥ—**

**ಶ್ರುತಿಗಾಃ ತ್ಯಕ್ತನಿಷಿದ್ಧಕಾಮ್ಯಭಾವಾಃ** = ವೇದಪಾಠದಲ್ಲಿ ಆಸಕ್ತರಾಗಿರುವ, ವೇದೋಕ್ತವಾದ, ಬಿಡಲ್ಪಟ್ಟ, ನಿಷೇಧಿಸಲ್ಪಟ್ಟ ಕಾಮ್ಯಕರ್ಮ ವಿಷಯಕವಾದ ಮನಸ್ಸುಳ್ಳ ಶ್ರುತಿಯಲ್ಲಿ ನಿಷೇಧ ಮಾಡಿರುವ ಕಾಮ್ಯ ಕರ್ಮಗಳಲ್ಲಿ ಮನಸ್ಸನ್ನು ಇಡದಿರುವ ಶ್ರುತಿಯಲ್ಲಿ ನಿಷಿದ್ಧವಾದ ಕಾಮ್ಯಕರ್ಮವಿಷಯಕವಲ್ಲದ,

**ಶತಸಂಖ್ಯಾಃ** = ನೂರಾರು ಸಂಖ್ಯೆಯುಳ್ಳ,

**ಯತಯಃ** = ಸಂನ್ಯಾಸಿಗಳು,

**ಗೃಹಿಣಃ** = ಗೃಹಸ್ಥರು,

**ಅಥ** = ಅನಂತರ,

**ವರ್ಣಮುಖ್ಯಾಃ** = ಶ್ರೇಷ್ಠರಾದ ಬ್ರಹ್ಮಚಾರಿಗಳೂ,

**ಮೂರ್ತಿಧರಾಃ** = ದೇಹವನ್ನು ಧರಿಸಿರುವ,

**ಸ್ವಧರ್ಮಾಃ ಇವ** = ತಮ್ಮ ತಮ್ಮಗೆ ವಿಹಿತವಾದ ವರ್ಣಾಶ್ರಮ ಧರ್ಮಗಳಂತೆ (ಪುಣ್ಯಗಳಂತೆ),

**ಇಹ** = ಈ ಪ್ರಯಾಣಕಾಲದಲ್ಲಿ

**ಶತಸಂಖ್ಯಂ** = ಶ್ರೀಪೂರ್ಣಪ್ರಜ್ಞರನ್ನು,

**ಅನ್ವಗಚ್ಛನ್** = ಹಿಂಬಾಲಿಸಿದರು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ಪ್ರಯಾಣ ಮಾಡುತ್ತಿರುವಾಗ ನೂರಾರು ಮಂದಿ ಸಂನ್ಯಾಸಿಗಳೂ, ಗೃಹಸ್ಥರು, ಶ್ರೇಷ್ಠರಾದ ಬ್ರಹ್ಮಚಾರಿಗಳೂ ಅವರನ್ನು ಹಿಂಬಾಲಿಸುತ್ತಿದ್ದರು. ಅವರೆಲ್ಲರೂ ವೇದಾಧ್ಯಯನ ಮಾಡಿ ವೇದೋಕ್ತ ವಾದ ಆಚಾರದಲ್ಲಿ ಆಸಕ್ತರಾಗಿದ್ದರು. ವೇದದಲ್ಲಿ ನಿಷೇಧ ಮಾಡಿರುವ ಕಾಮ್ಯಕರ್ಮಗಳನ್ನು ಬಿಟ್ಟಿದ್ದರು. ನಿಷಿದ್ಧವಾದ ಕರ್ಮಗಳನ್ನು ಮಾಡುತ್ತಿರಲಿಲ್ಲ. ಆದುದರಿಂದ ಅವರೆಲ್ಲರೂ ವೇದಪ್ರತಿಪಾದ್ಯವಾಗಿರುವ ನಿಷಿದ್ಧವಾದ ಕಾಮ್ಯಕರ್ಮಗಳನ್ನು ಬಿಟ್ಟು ಕೇವಲ ಮೋಕ್ಷಕ್ಕೆ ಸಾಧಕವಾದ ನಿವೃತ್ತಿ ಧರ್ಮಗಳು ಶರೀರವನ್ನು ಧರಿಸಿ ಬಂದಂತೆ ಇದ್ದರು.

ವಿಶೇಷಾಂಶ— ತಸ್ಮಾನ್ನೇಷ್ಟಿಯಾಜಕಃ (ಯಾಯಜೂಕಃ) ಸ್ಯಾತ್ ಎಂದು ಶ್ರುತಿಯಲ್ಲಿ ಕಾಮ್ಯಕರ್ಮಗಳನ್ನು ನಿಷೇಧಿಸಿರುವುದರಿಂದ ಮೋಕ್ಷಾಪೇಕ್ಷಿಗಳಾದ ಎಲ್ಲರೂ ನಿವೃತ್ತ ಧರ್ಮವನ್ನೇ ಅನುಷ್ಠಾನ ಮಾಡಬೇಕು. ಇಂತಹ ಧರ್ಮಗಳು ವೇದಪ್ರತಿಪಾದ್ಯವಾಗಿದ್ದು (ಶ್ರುತಿಗ) ನಿವೃತ್ತ ಕರ್ಮ ವಿಷಯಕವಾಗಿರುತ್ತವೆ. ಶ್ರೀಮಧ್ವಾಚಾರ್ಯರನ್ನು ಹಿಂಬಾಲಿಸಿ ಬರುತ್ತಿರುವವರೂ ವೇದೋಕ್ತ ಧರ್ಮಾಚರಣೆಯಲ್ಲಿ ಆಸಕ್ತರಾಗಿರುವುದರಿಂದ 'ಶ್ರುತಿಗ' ಅಂದರೆ ವೇದಸಂಬಂಧವುಳ್ಳವರೂ ನಿವೃತ್ತ ಧರ್ಮಾನುಷ್ಠಾನವನ್ನೇ ಮಾಡುತ್ತಿದುದ್ದರಿಂದ ನಿಷಿದ್ಧವಾದ ಮತ್ತು ಕಾಮ್ಯವಾದಕರ್ಮಗಳನ್ನು ಬಿಟ್ಟವರು. ನಿಷಿದ್ಧವಾದ ಕಾಮ್ಯಕರ್ಮಗಳನ್ನು ಬಿಟ್ಟವರೂ ಆದುದರಿಂದ ಶರೀರವನ್ನು ಧರಿಸಿ ಬಂದಿರುವ ಅವರವರ ಧರ್ಮಗಳೋ ಎಂಬಂತೆ ಶೋಭಿಸುತ್ತಿದ್ದರು ಎಂದು ಉತ್ಪ್ರೇಕ್ಷಿಸಿದ್ದಾರೆ.

ಭಾವಪ್ರಕಾಶಿಕಾ— ನಿಷಿದ್ಧಕಾಮ್ಯಭಾವಾಃ ನಿಷಿದ್ಧಕಾಮ್ಯಕರ್ಮಣೋರಭಿಪ್ರಾಯಃ ನಿಷಿದ್ಧತ್ವಂ ಕಾಮ್ಯತ್ವಂ ಚ ಮತ್ತು ಕಾಮ್ಯಕರ್ಮಗಳ ನಿಷಿದ್ಧತ್ವ ಮತ್ತು ಕಾಮ್ಯತ್ವಗಳನ್ನು ಬಿಟ್ಟು ಕೇವಲ ನಿವೃತ್ತಕರ್ಮರೂಪದಿಂದ ಆಚರಿಸುವವರು.

ವಿಗ್ರಹ—

ವರ್ಣಮುಖ್ಯಾಃ— ವರ್ಣನಾಂ ಮುಖ್ಯಾಃ ।

ಶ್ರುತಿಗಾಃ— ಶ್ರುತಿಂ ಗಚ್ಛಂತಿ ಇತಿ ಶ್ರುತಿಗಾಃ ।

ತ್ಯಕ್ತನಿಷಿದ್ಧಕಾಮ್ಯಭಾವಾಃ— ಕಾಮ್ಯೇ ಭಾವಃ(ಕಾಮ್ಯ ಕರ್ಮ ವಿಷಯಕಂ) ಮನಃ ಕಾಮ್ಯಕರ್ಮದಲ್ಲಿ ಇರುವ ಮನಸ್ಸು ನಿಷಿದ್ಧಶ್ಚಾಸೌ ಕಾಮ್ಯಭಾವಶ್ಚ ನಿಷಿದ್ಧಕಾಮ್ಯಭಾವಾಃ, ತ್ಯಕ್ತಾ ನಿಷಿದ್ಧಕಾಮ್ಯಭಾವಾಃ ಯೈಃ ತೇ ತ್ಯಕ್ತನಿಷಿದ್ಧಕಾಮ್ಯಭಾವಾಃ । ಅಥವಾ ಕಾಮ್ಯಶ್ಚತ್ಯಕ್ತ ಭಾವಾಶ್ಚ ಕಾಮ್ಯಭಾವಾಃ ನಿಷಿದ್ಧಾಶ್ಚ ತೇ ಕಾಮ್ಯಭಾವಾಶ್ಚ ನಿಷಿದ್ಧಕಾಮ್ಯಭಾವಾಃ ತ್ಯಕ್ತಾಃ ನಿಷಿದ್ಧಕಾಮ್ಯಭಾವಾಃ ಯೈಃ ತೇ ನಿಷಿದ್ಧಕಾಮ್ಯಭಾವಾಃ । ಇಲ್ಲಿ ಭಾವಶಬ್ದಕ್ಕೆ ಕರ್ಮ ಎಂದು ಅರ್ಥ ಇದು ಛಲಾರಿಯ ವ್ಯಾಖ್ಯಾನ. ಅಥವಾ ನಿಷಿದ್ಧಾಶ್ಚ ಕಾಮ್ಯಾಶ್ಚ ನಿಷಿದ್ಧಕಾಮ್ಯಾಃ ನಿಷಿದ್ಧಾಶ್ಚಕಾಮ್ಯಾಶ್ಚ ತೇ ಭಾವಾಶ್ಚ ನಿಷಿದ್ಧಕಾಮ್ಯಾಭಾವಾಃ ತ್ಯಕ್ತಾಃ ನಿಷಿದ್ಧಕಾಮ್ಯಭಾವಾಃ ಯೈಃ ತೇ ತ್ಯಕ್ತ ನಿಷಿದ್ಧಕಾಮ್ಯಭಾವಾಃ ಇದು ಛಲಾರಿಯ ವ್ಯಾಖ್ಯಾನ. ಇಲ್ಲಿ ಭಾವ ಶಬ್ದಕ್ಕೆ ಕರ್ಮ ಎಂದು ಅರ್ಥ. ಅಥವಾ ನಿಷಿದ್ಧಾಶ್ಚ ಕಾಮ್ಯಾಶ್ಚ, ನಿಷಿದ್ಧಕಾಮ್ಯಾಃ, ನಿಷಿದ್ಧಕಾಮ್ಯಾಶ್ಚತೆ, ಭಾವಾಶ್ಚ ನಿಷಿದ್ಧ-ಕಾಮ್ಯಭಾವಾಃ ತ್ಯಕ್ತಾಃ, ನಿಷಿದ್ಧಕಾಮ್ಯಾಭಾವಾಃ ಯೈಃ ತೇ ತ್ಯಕ್ತ ನಿಷಿದ್ಧಕಾಮ್ಯಾಭಾವಾಃ. ಈ ಮೂರು ವಿಧ ವಿಗ್ರಹಗಳಿಗೆ ತಕ್ಕಂತೆ ಅರ್ಥವನ್ನು ಅನ್ವಯಾರ್ಥದಲ್ಲಿ ಹೇಳಿದೆ. ಧರ್ಮಕ್ಕೆ ಈ ಪದವು ವಿಶೇಷಣವಾದಾಗ ಈ ರೀತಿ ವಿಗ್ರಹಮಾಡಬೇಕು. ತ್ಯಕ್ತಃ ನಿಷಿದ್ಧಃ ಕಾಮ್ಯಃ ಭಾವಃ (ವಿಷಯಃ) ಯೇಷಾಂ ತೇ ತ್ಯಕ್ತನಿಷಿದ್ಧಕಾಮ್ಯಭಾವಾಃ ।

ಮೂರ್ತಿಧರಾಃ— ಧರಂತಿ ಇತಿ ಧರಾಃ ಮೂರ್ತೇಃ ಧರಾಃ ಮೂರ್ತಿಧರಾಃ,

ಸ್ವಧರ್ಮಾಃ— ಸ್ವೇಷಾಂ ಧರ್ಮಾಃ ಸ್ವಧರ್ಮಾಃ ।

ಶತಸಂಖ್ಯಂ— ಶತಂ ಸಂಖ್ಯಾಃ ಯೇಷಾಂ ತೇ ಶತಸಂಖ್ಯಾಃ - ನೂರಾರು ಸಂಖ್ಯೆಯುಳ್ಳವರು, ಶತಂ ಸಂಖ್ಯಾ ಜ್ಞಾನಂ ಯಸ್ಯಸಃ ಶತಸಂಖ್ಯಿಃ ತಂ ।

**ಕೋಶ—** 'ವರ್ಣಮುಖ್ಯಾಃ' ಎಂಬಲ್ಲಿ ವರ್ಣಿನ ಎಂದರೆ ಬ್ರಹ್ಮಚಾರಿಗಳು, 'ವರ್ಣಿನಃ ಬ್ರಹ್ಮಚಾರಿಣಃ' ಅಮರ, 'ಬ್ರಹ್ಮಚಾರಿ ಭವೇದ್ವರ್ಣೀ' ಹಲಕೋಶ. 'ಶತಸಂಖ್ಯಂ' ಎಂಬಲ್ಲಿ ಸಂಖ್ಯಾ ಎಂದರೆ ಜ್ಞಾನ ಚರ್ಚಾ ಸಂಖ್ಯಾ ವಿಚಾರಣಾ, 'ಸಂಖ್ಯಾವಾನ್ ಪಂಡಿತಃ ಕವಿಃ' ಎಂದು ಅಮರ, 'ಸ್ವೇಷಾಂ ಧರ್ಮಾಃ ಸ್ವಧರ್ಮಾಃ' ಎಂಬಲ್ಲಿ ಧರ್ಮ ಎಂದರೆ ಪುಣ್ಯ ಕರ್ಮಗಳು ಅಥವಾ ಪುಣ್ಯಗಳು 'ಧರ್ಮಾಃ ಪುಣ್ಯಯಯ ನ್ಯಾಯಸ್ವಭಾವಾಚಾರಸೋಮಪಾಃ' ಅಮರ, 'ಭಾವಃಸತ್ತಾ ಸ್ವಭಾವಾಭಿಪ್ರಾಯಚೇಷ್ಟಾತ್ಮ ಜನ್ಮಸು' ಅಮರ ।

**ಕ್ರಿಯಾಪದ—** ಅನ್ವಗಚ್ಛನ್ - ಅನು+ಅಗಚ್ಛನ್, ಅಗಚ್ಛತ್ ಅಗಚ್ಛತಾಂ ಅಗಚ್ಛನ್, ಅಗಚ್ಛಃ ಅಗಚ್ಛತಂ ಅಗಚ್ಛತ, ಅಗಚ್ಛಂ ಅಗಚ್ಛಾವ ಅಗಚ್ಛಾಮ । ಅನು ಉಪಸರ್ಗಪೂರ್ವಕಾತ್ಕರ್ಥಕಃ ಗಮ್ಲೃಗತೌ ಇತಿ ಧಾತುಃ ಪರಸ್ಮೈಪದೀ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಬಹುವಚನೇ ಅನ್ವಗಚ್ಛನ್ ಇತಿ ರೂಪಂ ।

**ಪ್ರಯೋಗ—** ಶ್ರುತಿಗೈಃ ತ್ಯಕ್ತನಿಷಿದ್ಧಕಾಮ್ಯಭಾವೈಃ ಶತಸಂಖ್ಯೈಃ ಯತಿಭಿಃ ಗೃಹಿಭಿಃ ಅಥ ವರ್ಣಮೂರ್ತಿಧರ್ರೈಃ ಸ್ವಧರ್ಮೈಃ ಇವ ಇಹ ಶತಸಂಖ್ಯಃ ಅನ್ವಗಮ್ಯತ (ಕರ್ಮಣಿ) ।

★ ★ ★

**ಅವತಾರಿಕಾ—** ಆಚಾರ್ಯರ ಜೊತೆಗೆ ಪ್ರಯಾಣ ಮಾಡುತ್ತಿದ್ದ ಜನರಿಗೆ ಏಕೆ ಸ್ವಲ್ಪವೂ ಆಯಾಸವಾಗಲಿಲ್ಲ ಎಂಬುದನ್ನು ಸಮರ್ಥಿಸುತ್ತಾರೆ.

**ಪರಿವಾರಜನಾ ನ ಮಾರ್ಗದುಃಖಂ**
**ಪ್ರಯಯುಃ ಪೂರುಷರತ್ನಮೀಕ್ಷಮಾಣಾಃ ।**
**ಇತಿ ನಾದ್ಭುತಮಸ್ಯ ಹಿ ಪ್ರಯಾಂತಿ**
**ಸ್ಮೃತಿಮಾತ್ರಾದ್ಭವಿನೋ ಭವಾಪವರ್ಗಮ್ ॥ 20 ॥**

**ಪದಚ್ಛೇದ—** ಪರಿವಾರಜನಾಃ, ನ, ಮಾರ್ಗದುಃಖಂ, ಪ್ರಯಯುಃ, ಪೂರುಷರತ್ನಂ, ಈಕ್ಷಮಾಣಾಃ, ಇತಿ ನ ಅದ್ಭುತಂ, ಅಸ್ಯ, ಹಿ, ಪ್ರಯಾಂತಿ, ಸ್ಮೃತಿಮಾತ್ರಾತ್, ಭವಿನಃ, ಭವಾಪವರ್ಗಂ ।

**ಅನ್ವಯ—** ಪೂರುಷರತ್ನಂ, ಈಕ್ಷಮಾಣಾಃ, ಪರಿವಾರಜನಾಃ, ಮಾರ್ಗದುಃಖಂ, ನ ಪ್ರಯಯುಃ, ಇತಿ, ನ ಅದ್ಭುತಂ, ಭವಿನಃ, ಅಸ್ಯ, ಸ್ಮೃತಿಮಾತ್ರಾತ್, ಭವಾಪವರ್ಗಂ, ಪ್ರಯಾಂತಿ, ಹಿ ।

**ಅನ್ವಯಾರ್ಥ—**

**ಪೂರುಷರತ್ನಂ** = ಪುರುಷ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರನ್ನು,
**ಈಕ್ಷಮಾಣಾಃ** = ನೋಡುತ್ತಿರುವ,
**ಪರಿವಾರಜನಾಃ** = ಅವರ ಸೇವಕರಾದ ಜನರು(ಶಿಷ್ಯರು),
**ಮಾರ್ಗದುಃಖಂ** = ದಾರಿಯಲ್ಲಿ ನಡೆದುದರಿಂದ ಆದ ಆಯಾಸವನ್ನು,
**ನ ಪ್ರಯಯುಃ** = ಹೊಂದಲಿಲ್ಲ
**ಇತಿ** = ಹೀಗೆಂಬುದು,
**ಅದ್ಭುತಂ** = ಆಶ್ಚರ್ಯವು,
**ನ** = ಅಲ್ಲ,
**ಭವಿನಃ** = ಸಂಸಾರಿಗಳು,
**ಅಸ್ಯ** = ಈ ಮಧ್ವಾಚಾರ್ಯರ,

ಸ್ಮೃತಿಮಾತ್ರಾತ್ = ಸ್ಮರಣೆಯಿಂದಲೇ,
ಭವ = ಸಂಸಾರದ ದೆಸೆಯಿಂದ,
ಅಪವರ್ಗಂ = ಬಿಡುಗಡೆಯನ್ನು (ಮೋಕ್ಷವನ್ನು),
ಪ್ರಯಾಂತಿ ಹಿ = ಹೊಂದುತ್ತಾರಷ್ಟೆ.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಜೊತೆಗೆ ಅವರ ಅನೇಕ ಶಿಷ್ಯರು ಅವರನ್ನು ನೋಡುತ್ತಾ ದಾರಿಯಲ್ಲಿ ನಡೆಯುತ್ತಿದ್ದರು. ಆದುದರಿಂದ ಅವರಿಗೆ ದಾರಿಯಲ್ಲಿ ನಡೆದ ಆಯಾಸವು ಆಗಲಿಲ್ಲ. ಅವರಿಗೆ ದಾರಿಯಲ್ಲಿ ನಡೆದಾಗ ಸ್ವಲ್ಪ ಆಯಾಸ ದುಃಖವುಂಟಾದರೂ ಅದೆಲ್ಲವೂ ಮರತೇ ಹೋಯಿತು. ಆದರೆ ಇದು ಆಶ್ಚರ್ಯಕರವಲ್ಲ. ಏಕೆಂದರೆ ಶ್ರೀಮಧ್ವಾಚಾರ್ಯರನ್ನು ಸ್ಮರಣೆ ಮಾಡಿದ ಮಾತ್ರದಿಂದಲೇ ಸಂಸಾರಿಗಳಿಗೆ ಸಂಸಾರದಿಂದ ಬಿಡುಗಡೆಯುಂಟಾಗುತ್ತದೆ. ಅವರು ಮೋಕ್ಷಕ್ಕೆ ಹೋಗುತ್ತಾರೆ. ಹಾಗಿರುವಾಗ ಅವರನ್ನು ನೋಡುತ್ತಾ ದಾರಿ ನಡೆಯುವವರಿಗೆ ದುಃಖವಾಗಲಿಲ್ಲಾ ಎಂಬುದು ಆಶ್ಚರ್ಯಕರವಲ್ಲವಷ್ಟೇ.

**ವಿಶೇಷಾಂಶ—** 'ಯಸ್ಯ ಸ್ಮರಣಮಾತ್ರೇಣ ಸರ್ವದುಃಖರೂಪಸಂಸಾರನಾಶೋ ಭವತಿ ತದ್ದರ್ಶನೇ ಸತಿ ತದೇಕದೇಶಮಾರ್ಗದುಃಖಪರಿಹಾರಃ ಭವತೀತಿ ನಾಶ್ಚರ್ಯಂ. ಸ್ಮರಣಾಪೇಕ್ಷಯಾ ದರ್ಶನಸ್ಯ ಅಧಿಕಸಾಧನತ್ವಾತ್' ಇತಿ ಭಾವಃ । (ಭಲಾರಿಯ) ಶ್ರೀಮಧ್ವಾಚಾರ್ಯರ ಸ್ಮರಣಮಾತ್ರದಿಂದ ಸಮಸ್ತ ದುಃಖಗಳ ಸಮುದಾಯ ರೂಪವಾದ (ಅಶೇಷ ದುಃಖರೂಪವಾದ) ಸಂಸಾರದ ನಾಶವಾಗುತ್ತದೆ. ಅವರನ್ನು ಸ್ಮರಿಸುವವರು ಮುಕ್ತರಾಗುತ್ತಾರೆ. ಅವರನ್ನೇ ಸಾಕ್ಷಾತ್ತಾಗಿ ನೋಡುತ್ತಿರುವವರಿಗೆ ಸಂಸಾರದ ಅನೇಕ ದುಃಖಗಳಲ್ಲಿ ಒಂದು ಚಿಕ್ಕ ಅಂಶವಾದ ದುಃಖವು ಪರಿಹಾರವಾಗುತ್ತದೆ ಎಂಬುದು ಆಶ್ಚರ್ಯಕರವಲ್ಲವಷ್ಟೆ! ಏಕೆಂದರೆ ಸ್ಮರಣೆಗಿಂತ ದರ್ಶನವು ಹೆಚ್ಚಿನ ಸಾಧನವಷ್ಟೆ! ಸ್ಮರಣೆಯಿಂದಲೇ ಎಲ್ಲಾ ದುಃಖಗಳ ನಿವೃತ್ತಿಯಾಗುತ್ತಿರುವಾಗ ದರ್ಶನದಿಂದ ಮಾರ್ಗಾಯಾಸದುಃಖ ಪರಿಹಾರವಾಗುವುದು ಆಶ್ಚರ್ಯವಲ್ಲವಷ್ಟೆ ಇಲ್ಲಿ ಕಾವ್ಯಲಿಂಗಾಲಂಕಾರ.

**ವಿಗ್ರಹ—**

**ಪರಿವಾರಜನಾಃ—** ಪರಿವಾರಾಶ್ಚ ತೇ ಜನಾಶ್ಚ ಪರಿವಾರಜನಾಃ ।

**ಮಾರ್ಗದುಃಖಂ—** ಮಾರ್ಗಗಮನಜನ್ಯಂ ದುಃಖಂ ಮಾರ್ಗದುಃಖಂ, ಮಧ್ಯಮ(ಪದ)ಲೋಪಿ, ಕರ್ಮಧಾರಯ ಅಥವಾ ಮಾರ್ಗಾತ್ ಮಾರ್ಗೇಣ ವಾ ದುಃಖಂ ಮಾರ್ಗದುಃಖಂ ತತ್ ।

**ಪೂರುಷರತ್ನಂ—** ಪೂರುಷೇಷು ರತ್ನಂ, (ತತ್) ಇಲ್ಲಿ ರತ್ನ ಎಂದರೆ ಶ್ರೇಷ್ಠವಾದುದು ಎಂದು ಅರ್ಥ. 'ರತ್ನಂ ಶ್ರೇಷ್ಠೇ ಮಣಾವಪಿ' ವಿಶ್ವ. 'ರತ್ನಂ ಸ್ವಜಾತಿಶ್ರೇಷ್ಠೇಽಪಿ' ಅಮರ ।

**ಸ್ಮೃತಿಮಾತ್ರಾತ್—** ಸ್ಮೃತಿರೇವ ಸ್ಮೃತಿಮಾತ್ರಂ ತಸ್ಮಾತ್ ।

**ಭವಾಪವರ್ಗಃ—** 'ಭವಃ ಏಷಾಂ ಅಸ್ತೀತಿ ಭವಿನಃ' ಇಲ್ಲಿ ಭವ ಎಂದರೆ ಸಂಸಾರ, ಭವಸ್ಸಂಸಾರ. 'ಸಂಪ್ರಾಪ್ತಿಶ್ರೇಯಶ್ಶಂಕರಜನ್ಮಸು' ವಿಶ್ವ । ಭವಾತ್ ಅಪವರ್ಗಃ ಭವಾಪವರ್ಗಃ ತಂ । ಅಪವರ್ಗ ಮೋಕ್ಷ 'ಮೋಕ್ಷೋಽಪವರ್ಗಃ' ಅಮರ ।

**ಕ್ರಿಯಾಪದ—** **ಪ್ರಯಯುಃ**- ಪ್ರ+ಯಯುಃ ಯಯೌ ಯಯತುಃ ಯಯುಃ, ಯಯಿಥ ಯಯಾಥ ಯಯಥುಃ ಯಯ, ಯಯೌ ಯಯಿವ ಯಯಿಮ । ಯಾ ಪ್ರಾಪಣೇ ಲಿಟ್ ಪ್ರ+ಯಾಂತಿ, ಯಾತಿ ಯಾತಃ ಯಾಂತಿ, ಯಾಸಿ ಯಾಥಃ ಯಾಥ, ಯಾಮಿ ಯಾವಃ ಯಾಮಃ । ಯಾಪ್ರಾಪಣೇ ಲಟ್.

**ಪ್ರಯೋಗ—** ಪೂರುಷರತ್ನಮೀಕ್ಷಮಾಣೈಃ ಪರಿವಾರಜನೈಃ ಮಾರ್ಗದುಃಖಂ ಪ್ರಯಯೇ ಇತಿ ಅದ್ಭುತೇನ ಘೂಯತೇ ಭವಿಭಿಃ ಅಸ್ಯ ಸ್ಮೃತಿಮಾತ್ರಾತ್ ಭವಾಪವರ್ಗಃ ಪ್ರಯಯಾತೇ ಹಿ (ಕರ್ಮಣಿ) ।

★ ★ ★

**ಅವತಾರಿಕಾ—** ಜಯಸಿಂಹರಾಜನು ಆಚಾರ್ಯರನ್ನು ಒಂದು ಪ್ರದೇಶದಲ್ಲಿ ಎದುರುಗೊಂಡನೆಂದು ಹೇಳುತ್ತಾರೆ.

**ಮದನೇಶ್ವರವಲ್ಲಭಪ್ರದೇಶೇ**
**ಪ್ರಭುಮಾಯಾಂತಮಥಾಭ್ಯಪದ್ಯತ ದ್ರಾಕ್ ।**
**ಜಯಸಿಂಹ ಇಮಂ ನೃಸಿಂಹವರ್ಯಃ**
**ಶುಭಧೀಃ ಸ್ತಂಭವಿಶಿಷ್ಟಸಿಂಹನಾಮಾ ॥ 21 ॥**

**ಪದಚ್ಛೇದ—** ಮದನೇಶ್ವರವಲ್ಲಭಪ್ರದೇಶೇ, ಪ್ರಭುಂ, ಆಯಾಂತಂ, ಅಥ, ಅಭ್ಯಪದ್ಯತ, ದ್ರಾಕ್, ಜಯಸಿಂಹಃ, ಇಮಂ, ನೃಸಿಂಹವರ್ಯಃ, ಶುಭಧೀಃ, ಸ್ತಂಭವಿಶಿಷ್ಟಸಿಂಹನಾಮಾ ।

**ಅನ್ವಯ—** ಅಥ, ಶುಭಧೀಃ, ಸ್ತಂಭವಿಶಿಷ್ಟಸಿಂಹನಾಮಾ, ನೃಸಿಂಹವರ್ಯಃ, ಜಯಸಿಂಹಃ, ಮದನೇಶ್ವರವಲ್ಲಭ ಪ್ರದೇಶೇ, ಆಯಾಂತಂ, ಪ್ರಭುಂ, ಇಮಂ, ದ್ರಾಕ್, ಅಭ್ಯಪದ್ಯತ ।

**ಅನ್ವಯಾರ್ಥ—**

**ಅಥ** = ಅನಂತರ,
**ಶುಭಧೀಃ** = ಮಂಗಳಕರವಾದ ಮನಸ್ಸುಳ್ಳ,
**ಸ್ತಂಭವಿಶಿಷ್ಟಸಿಂಹನಾಮಾ** = ಕಬೆಸಿಂಹನೆಂದು ಹೆಸರುಳ್ಳ,
**ನೃಸಿಂಹವರ್ಯಃ** = ರಾಜಶ್ರೇಷ್ಠನಾದ,
**ಜಯಸಿಂಹಃ** = ಜಯಸಿಂಹರಾಜನು,
**ಮದನೇಶ್ವರವಲ್ಲಭಪ್ರದೇಶೇ** = ಮದನೇಶ್ವರನೆಂಬ ದೇವರಿಗೆ ಇಷ್ಟವಾದ ಸ್ಥಳದಲ್ಲಿ,
**ಆಯಾಂತಂ** = ಬರುತ್ತಿರುವ,
**ಪ್ರಭುಂ** = ಸ್ವಾಮಿಯಾದ,
**ಇಮಂ** = ಈ ಮಧ್ವಾಚಾರ್ಯರನ್ನು,
**ದ್ರಾಕ್** = ಜಾಗ್ರತೆಯಾಗಿ,
**ಅಭ್ಯಪದ್ಯತ** = ಎದುರುಗೊಂಡನು.

**ತಾತ್ಪರ್ಯ—** ಹೀಗೆ ಶ್ರೀಮಧ್ವಾಚಾರ್ಯರು ಪ್ರಯಾಣ ಮಾಡುತ್ತಾ ಬರುತ್ತಿದ್ದರು. 'ಕಬೆನಾಡು' ಎಂಬ ಪ್ರದೇಶಕ್ಕೆ ರಾಜನಾದುದರಿಂದ 'ಕಬೆಸಿಂಹರಾಜ' ಎಂಬುದಾಗಿ ಪ್ರಖ್ಯಾತನಾದ, ಸಜ್ಜನನಾದ ಜಯಸಿಂಹನೆಂಬ ರಾಜಶ್ರೇಷ್ಠನು ಮದನೇಶ್ವರನೆಂಬ ಹೆಸರಿನ ಈಶ್ವರನಿಗೆ ಪ್ರಿಯವಾದ ಒಂದು ಸ್ಥಳದಲ್ಲಿ ಸ್ವಾಮಿಯಾದ ಶ್ರೀಮಧ್ವಾಚಾರ್ಯರನ್ನು ಎದುರುಗೊಂಡನು.

**ವಿಗ್ರಹ—**

**ಮದನೇಶ್ವರವಲ್ಲಭಪ್ರದೇಶೇ—** ಮದನಸ್ಯ ಈಶ್ವರಃ ಮದನೇಶ್ವರಃ, ವಲ್ಲಭಶ್ಚಾಸೌ ಪ್ರದೇಶಶ್ಚ ವಲ್ಲಭಪ್ರದೇಶಃ, ಮದನೇಶ್ವರಸ್ಯ ವಲ್ಲಭಪ್ರದೇಶಃ ಮದನೇಶ್ವರವಲ್ಲಭಪ್ರದೇಶಃ ತಸ್ಮಿನ್ ।

**ನೃಸಿಂಹವರ್ಯಃ—** ನೃಣಾಂ ಸಿಂಹಾಃ ನೃಸಿಂಹಾಃ ನೃಸಿಂಹೇಷು ವರ್ಯಃ ನೃಸಿಂಹವರ್ಯಃ ।

**ಶುಭಧೀಃ—** ಶುಭಾ ಧೀಃ ಯಸ್ಯ ಸಃ ಶುಭಧೀಃ ।

**ಸ್ತಂಭವಿಶಿಷ್ಟಸಿಂಹನಾಮಾ—** ಸ್ತಂಭೇನ, ಸ್ತಂಭಪದೇನ, ವಿಶಿಷ್ಟಂ, ಸಿಂಹ ಇತಿ ನಾಮ, ಯಸ್ಯ ಸಃ ಸ್ತಂಭ ವಿಶಿಷ್ಟಸಿಂಹನಾಮಾ ।

**ಕ್ರಿಯಾಪದ—** **ಅಭ್ಯಪದ್ಯತ** - ಅಭಿ+ಅಪದ್ಯತ ಅಪದ್ಯೇತಾಂ ಅಪದ್ಯಂತ, ಅಪದ್ಯಥಾಃ ಅಪದ್ಯೇಥಾಂ ಅಪದ್ಯಧ್ವಂ, ಅಪದ್ಯೇ ಅಪದ್ಯಾವಹಿ ಅಪದ್ಯಾಮಹಿ । ಅಭಿ ಉಪಸರ್ಗ ಪೂರ್ವಕ ಪದಗತೌ ಇತಾ ಗತ್ಯರ್ಥಕಪದ ಧಾತು ಅನಿಟ್ ಆತ್ಮನೇಪದಿನಃ ಅನದ್ಯತನಭೂತೇ ಲಙ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಅಥ ಶುಭಧಿಯಾ ಸ್ತಂಭವಿಶಿಷ್ಟಸಿಂಹನಾಮ್ನಾ ನೃಸಿಂಹವರ್ಯೇಣ ಜಯಸಿಂಹೇನ ಮದನೇಶ್ವರ ವಲ್ಲಭಪ್ರದೇಶೇ ಆಯನ್ ಪ್ರಭುಃ ಅಯಂ ದ್ರಾಕ್ ಅಭ್ಯಪದ್ಯತ್ (ಜಯಸಿಂಹನಿಂದ ಮಧ್ವಾಚಾರ್ಯರು) ಎದುರು-ಗೊಳ್ಳಲ್ಪಟ್ಟರು.

★ ★ ★

**ಅವತಾರಿಕಾ—** ಜಯಸಿಂಹ ರಾಜನು ಆಚಾರ್ಯರ ಬಳಿಗೆ ಬಂದ ಕ್ರಮವನ್ನು ವಿವರಿಸುತ್ತಾರೆ.

**ಅವತೀರ್ಯ ಪುರೈವ ವಾಹನಾತ್ ಸ್ವಾ-**
**ದಪಿ ಮಾರ್ಗಾದಪಸಾರ್ಯ ಸೈನಿಕಾನ್ ಸಃ ।**
**ಸಹ ಕೈಶ್ಚನ ಭೂಸುರೈರವಾಪ್ತ-**
**ಸ್ತ್ರಿಜಗತ್ಪೂಜ್ಯಪದಾಂತಿಕೇ ನನಾಮ ॥ 22 ॥**

**ಪದಚ್ಛೇದ—** ಅವತೀರ್ಯ, ಪುರಾ, ಏವ, ವಾಹನಾತ್, ಸ್ವಾತ್, ಅಪಿ, ಮಾರ್ಗಾತ್, ಅಪಸಾರ್ಯ, ಸೈನಿಕಾನ್, ಸಃ, ಸಹ, ಕೈಶ್ಚನ, ಭೂಸುರೈಃ, ಅವಾಪ್ತಃ, ತ್ರಿಜಗತ್ಪೂಜ್ಯಪದಾಂತಿಕೇ, ನನಾಮ ।

**ಅನ್ವಯ—** ಪುರಾ, ಏವ, ಸ್ವಾತ್, ವಾಹನಾತ್, ಅವತೀರ್ಯ, ಸೈನಿಕಾನ್, ಅಪಿ, ಮಾರ್ಗಾತ್, ಅಪಸಾರ್ಯ, ಕೈಶ್ಚನ, ಭೂಸುರೈಃ, ಸಹ, ಅವಾಪ್ತಃ, ಸಃ, ತ್ರಿಜಗತ್ಪೂಜ್ಯಪದಾಂತಿಕೇ, ನನಾಮ ।

**ಅನ್ವಯಾರ್ಥ—**

**ಪುರಾ ಏವ** = ಮೊದಲೇ,
**ಸ್ವಾತ್** = ತನ್ನದಾದ,
**ವಾಹನಾತ್** = ವಾಹನದಿಂದ,
**ಅವತೀರ್ಯ** = ಇಳಿದು,
**ಸೈನಿಕಾನ್ ಅಪಿ** = ರಕ್ಷಕ ಭಟರನ್ನು,
**ಮಾರ್ಗಾತ್** = ದಾರಿಯಿಂದ,
**ಅಪಸಾರ್ಯ** = ದೂರಸರಿಸಿ,
**ಕೈಶ್ಚನ** = ಕೆಲವು ಮಂದಿ,
**ಭೂಸುರೈಃ ಸಹ** = ಬ್ರಾಹ್ಮಣರೊಡನೆ,
**ಅವಾಪ್ತಃ** = (ಆಚಾರ್ಯರನ್ನು) ಹೊಂದಿದ (ಸಮೀಪಿಸಿದ),
**ಸಃ** = ಆ ರಾಜನು,
**ತ್ರಿಜಗತ್ಪೂಜ್ಯಪದಾಂತಿಕೇನನಾಮ** = ಮೂರು ಲೋಕಗಳಲ್ಲಿ ಗೌರವಾರ್ಹರಾದ ಶ್ರೀಮಧ್ವಾಚಾರ್ಯರ ಪಾದಗಳ ಸಮೀಪದಲ್ಲಿ ವಂದಿಸಿದನು.

**ತಾತ್ಪರ್ಯ**— ಆ ಜಯಸಿಂಹರಾಜನು ಆಚಾರ್ಯರು ಬರುವ ಮೊದಲೇ ತನ್ನ ವಾಹನವಾದ ಆನೆಯಿಂದ ಇಳಿದನು. ಸೈನಿಕರನ್ನು ದಾರಿಯಿಂದ ದೂರದಲ್ಲಿರಿಸಿದನು. ಕೆಲವು ಮಂದಿ ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಮೂರು ಲೋಕಗಳಲ್ಲಿಯೂ ಪೂಜ್ಯರಾದ ಆಚಾರ್ಯರ ಬಳಿಗೆ ಬಂದನು. ಅವರ ಪಾದಗಳ ಬಳಿಯಲ್ಲಿ ಬಾಗಿ ನಮಸ್ಕರಿಸಿದನು. ಮಹಾತ್ಮರ ದರ್ಶನಕ್ಕೆ ಹೋಗುವಾಗ ಆಡಂಬರಗಳನ್ನು ಬಿಟ್ಟು ಭಕ್ತಿಯಿಂದ ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಹೋಗುವುದು ವಿನಯಸಂಪನ್ನರಾದ ಕ್ಷತ್ರಿಯ ರಾಜರ ಸಂಪ್ರದಾಯ. ಅದರಂತೆಯೇ ಜಯಸಿಂಹರಾಜನು ಬಂದನು ಎಂದು ಭಾವವು.

**ವಿಗ್ರಹ**—

**ಭೂಸುರೈಃ**— ಭುವಃ ಸುರಃ ಭೂಸುರಃ, ತೈಃ ।

**ತ್ರಿಜಗತ್‌ಪೂಜ್ಯಪದಾಂತಿಕೇ**— ತ್ರೀಣಿ ಚ ತಾನಿ ಜಗಂತಿ ಚ ತ್ರಿಜಗಂತಿ, ತ್ರಿಜಗತ್ಸು ಪೂಜ್ಯಃ ತ್ರಿಜಗತಪೂಜ್ಯಃ, ತ್ರಿಜಗತ್ಪೂಜ್ಯಸ್ಯತ್‌ಪದೇ ತ್ರಿಜಗತ್‌ಪೂಜ್ಯಪದೇ, ತಯೋಃ ಅಂತಿಕಃ ತ್ರಿಜಗತಪೂಜ್ಯಪದಾಂತಿಕಃ, ತಸ್ಮಿನ್।

**ಕ್ರಿಯಾಪದ**— ನನಾಮ ನೇಮತುಃ ನೇಮುಃ, ನೇಮಿಥ-ನನಂಥ ನೇಮಥುಃ ನೇಮ, ನನಾಮ-ನನಮ ನೇಮಿವ ನೇಮಿಮ । ಣಮು ಪ್ರಹ್ವತ್ವೇ ಶಬ್ದೇ ಚ ಸಕ ಅನಿಟ್ ಪರಸ್ಮೈಭೂತ ಅನದ್ಯತನ ಪರೋಕ್ಷೇ ಲಿಟ್ ।

**ಕೋಶ**— ಸ್ವಾತ್ ಸ್ವಃ = ತನ್ನದು, 'ಆತ್ಮೀಯೇ ಸ್ವೋಸ್ತ್ರಿಯಾಂಧನೇ' ಅಮರ, ಸೈನಿಕಾಃ = ಸೈನ್ಯ, ಯೋಧರು, 'ಸೇನಾಯಾಂ ಸಮವೇತಾ ಯೇ ಸೈನ್ಯಾಸ್ತೇ ಸೈನಿಕಾಶ್ಚ ತೇ' ಅಮರ, ಪದ = ಕಾಲು, 'ಪದಂ ವ್ಯಾಜಾಂಘ್ರಿತದ್ವೇಧ' ಭಾಸ್ಕರ ಕೋಶ, ಅಂತಿಕ = ಸಮೀಪ, 'ಉಪಕಂಠಾಂತಿಕಾಭ್ಯರ್ಣಾಗ್ರಾ' ಅಮರ.

**ಪ್ರಯೋಗ**— ಕೈಶ್ಚನ ಭೂಸುರೈಃ ಸಹ ಅವಾಪ್ತೇನ ತೇನ ತ್ರಿಜಗತ್‌ಪೂಜ್ಯಪದಾಂತಿಕೇ ನೇಮೇ (ಕರ್ಮಣಿ)। ರಾಜನಿಂದ ಆಚಾರ್ಯರ ಪಾದದ ಬಳಿ ನಮಸ್ಕರಿಸಲ್ಪಟ್ಟಿತು.

★ ★ ★

**ಅವತಾರಿಕಾ**— ಆಚಾರ್ಯರು ಜಯಸಿಂಹರಾಜನೊಡನೆ ವಿಷ್ಣುಮಂಗಲಕ್ಕೆ ಬಂದರೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

**ಪೃಥಿವೀಪತಿನಾನುಗಮ್ಯಮಾನೋ**
**ವಿನಯಾದ್ಭಕ್ತಿರಸಾರ್ದ್ರಮಾನಸೇನ ।**
**ಅಚಿರೇಣ ಸ ವಿಷ್ಣುಮಂಗಲಸ್ಯ**
**ಪ್ರಯಯಾವಾಯತನೋತ್ತಮಸ್ಯಪಾರ್ಶ್ವಮ್ ॥ 23 ॥**

**ಪದಚ್ಛೇದ**— ಪೃಥಿವೀಪತಿನಾ, ಅನುಗಮ್ಯಮಾನಃ, ವಿನಯಾತ್, ಭಕ್ತಿರಸಾರ್ದ್ರಮಾನಸೇನ, ಅಚಿರೇಣ, ಸಃ, ವಿಷ್ಣುಮಂಗಲಸ್ಯ, ಪ್ರಯಯೌ, ಆಯತನೋತ್ತಮಸ್ಯ, ಪಾರ್ಶ್ವಂ ।

**ಅನ್ವಯ**— ಭಕ್ತಿರಸಾರ್ದ್ರಮಾನಸೇನ, ಪೃಥಿವೀಪತಿನಾ, ವಿನಯಾತ್, ಅನುಗಮ್ಯಮಾನಃ, ಸಃ, ಅಚಿರೇಣ, ವಿಷ್ಣು ಮಂಗಲಸ್ಯ, ಆಯತನೋತ್ತಮಸ್ಯ, ಪಾರ್ಶ್ವಂ, ಪ್ರಯಯೌ ।

**ಅನ್ವಯಾರ್ಥ**—

**ಭಕ್ತಿರಸಆರ್ದ್ರಮಾನಸೇನ** = ಭಕ್ತಿಯೆಂಬ ರಸಜಲದಿಂದ ತೋಯ್ದುಹೋದ (ಒದ್ದೆಯಾದ) ಮನಸ್ಸುಳ್ಳ,

**ಪೃಥಿವೀಪತಿನಾ** = ಜಯಸಿಂಹರಾಜನಿಂದ,

**ವಿನಯಾತ್** = ವಿಧೇಯತೆಯಿಂದ,

**ಅನುಗಮ್ಯಮಾನಃ** = ಹಿಂಬಾಲಿಸಲ್ಪಟ್ಟ

**ಸಃ** = ಆ ಶ್ರೀಮಧ್ವಾಚಾರ್ಯರು,

**ಅಚಿರೇಣ** = ಬಹಳ ಬೇಗನೆ,

**ವಿಷ್ಣುಮಂಗಲಸ್ಯ** = ವಿಷ್ಣುಮಂಗಲವೆಂಬ,

**ಆತನೋತ್ತಮಸ್ಯ** = ಶ್ರೇಷ್ಠವಾದ ದೇವಾಲಯದ,

**ಪಾರ್ಶ್ವಂ** = ಪಕ್ಕಕ್ಕೆ (ಸಮೀಪಕ್ಕೆ),

**ಪ್ರಯಯೌ** = ಹೋದರು.

**ತಾತ್ಪರ್ಯ**— ಆಚಾರ್ಯರನ್ನು ನೋಡಿದ ಮೇಲೆ ಜಯಸಿಂಹರಾಜನ ಅಂತಃಕರಣವು ಭಕ್ತಿರಸದಿಂದ ತೋಯ್ದು ಹೋಯಿತು. ಅವನು ವಿನಯದಿಂದ ಆಚಾರ್ಯರನ್ನು ಹಿಂಬಾಲಿಸಿಕೊಂಡು ಬರುತ್ತಿದ್ದನು. ಆಚಾರ್ಯರು ಅವನೊಡನೆ ವಿಷ್ಣುಮಂಗಲವೆಂಬ ಒಂದು ಉತ್ತಮವಾದ ದೇವಾಲಯದ ಬಳಿಗೆ ಬಂದರು.

**ವಿಗ್ರಹ**—

**ಪೃಥಿವೀಪತಿನಾ**— ಪೃಥಿವ್ಯಾಃ ಪತಿಃ ಪೃಥಿವೀಪತಿಃ ತೇನ ।

**ಭಕ್ತಿರಸಾರ್ದ್ರಮಾನಸೇನ**— ಭಕ್ತಿರಿತಿ ರಸಃ ಭಕ್ತಿರಸಃ, ಭಕ್ತಿರಸೇನ ಆರ್ದ್ರಂ ಭಕ್ತಿರಸಾರ್ದ್ರಂ, ಭಕ್ತಿರಸಾರ್ದ್ರಂ ಮಾನಸಂ ಯಸ್ಯ ಸಃ ಭಕ್ತಿರಸಾರ್ದ್ರಮಾನಸಃ, ತೇನ ।

**ಆಯತನೋತ್ತಮಸ್ಯ**— ಆಯತನೇಷು ಉತ್ತಮಂ ಆಯತನೋತ್ತಮಂ ತಸ್ಯ।

**ಕ್ರಿಯಾಪದ**— **ಪ್ರಯಯೌ**-ಪ್ರ+ಯಯೌ ಯಯತುಃ ಯಯುಃ, ಯಯಿಥ ಯಯಾಥ ಯಯಥುಃ ಯಯ, ಯಯೌ ಯಯಿವ ಯಯಿಮ । ಪ್ರ ಉಪಸರ್ಗಪೂರ್ವಕ ಯಾ ಪ್ರಾಪಣೇ ಪ್ರಾಪಣಾರ್ಥಕ ಯಾಧಾತು ಸಕ ಅನಿ ಪರ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ ।

**ಕೋಶ**— ರಸ = ನೀರು, 'ಶೃಂಗಾರಾದೌ ವಿಷೇ ವೀರ್ಯೇ ಗುಣೇ ರಾಗೇ ದ್ರವೇ ರಸಃ' ಅಮರ, ಅನುಗಮ್ಯ ಮಾನಃ ಎಂಬಲ್ಲಿ ಅನು = ಹಿಂಭಾಗದಲ್ಲಿ, 'ಪಶ್ಚಾತ್ ಸಾದೃಶ್ಯಯೋರನು' ಅಮರ ।

**ಪ್ರಯೋಗ**—ಅನುಗಮ್ಯಮಾನೇನ ತೇನ ಅಚಿರೇಣ ವಿಷ್ಣುಮಂಗಲಸ್ಯ ಆಯತನೋತ್ತಮಸ್ಯ ಪಾರ್ಶ್ವಂ ಪ್ರಯಯೇ, ವಿಷ್ಣುಮಂಗಲವೆಂಬ ಶ್ರೇಷ್ಠವಾದ ದೇವಾಲಯದ ಸಮೀಪಕ್ಕೆ ಹೋಗಲ್ಪಟ್ಟಿತ್ತು (ಕರ್ಮಣಿ) ।

★ ★ ★

**ಅವತಾರಿಕಾ**— ಈ ಶ್ಲೋಕವನ್ನಾರಂಭಿಸಿ ಮುಂದೆ ಹನ್ನೆರಡು ಶ್ಲೋಕಗಳಿಂದ ಆಚಾರ್ಯರನ್ನು ವರ್ಣಿಸುತ್ತಾರೆ. ಮೊದಲು ಅಲ್ಲಿ ಸೇರಿದ ಜನರೆಲ್ಲರೂ ಆಚಾರ್ಯರನ್ನು ನೋಡಿ ಆಶ್ಚರ್ಯಪಟ್ಟಿರುತ್ತಾರೆ.

**ನರದೇವದಿದೃಕ್ಷಯಾ ಸಮೇತಾ**
**ಉಭಯಗ್ರಾಮಜನಾಃ ಜನಾಃ ಪರೇ ಚ ।**
**ಉಪಯಾಂತಮನಂತಮಾನಸಂ ತಂ**
**ಮುಹುರೈಕ್ಷಂತ ಕುತೂಹಲಾಬ್ಧಿಮಗ್ನಾಃ ॥ 24 ॥**

**ಪದಚ್ಛೇದ—** ನರದೇವದಿದೃಕ್ಷಯಾ, ಸಮೇತಾಃ, ಉಭಯಗ್ರಾಮಜನಾಃ, ಜನಾಃ, ಪರೇ, ಚ, ಉಪಯಾಂತಂ, ಅನಂತಮಾನಸಂ, ತಂ, ಮುಹುಃ, ಐಕ್ಷಂತ, ಕುತೂಹಲಾಬ್ಧಿಮಗ್ನಾಃ ।

**ಅನ್ವಯ—** ನರದೇವದಿದೃಕ್ಷಯಾ, ಸಮೇತಾಃ, ಉಭಯಗ್ರಾಮಜನಾಃ, ಪರೇ, ಚ, ಜನಾಃ, ಉಪಯಾಂತಂ, ತಂ, ಅನಂತಮಾನಸಂ, ಕುತೂಹಲಾಬ್ಧಿಮಗ್ನಾಃ, ಮುಹುಃ, ಐಕ್ಷಂತ ।

**ಅನ್ವಯಾರ್ಥ—**

**ನರದೇವದಿದೃಕ್ಷಯಾ** = ಜಯಸಿಂಹರಾಜನನ್ನು ನೋಡುವ ಇಚ್ಛೆಯಿಂದ,

**ಸಮೇತಾಃ** = ಒಟ್ಟಿಗೆ ಸೇರಿದ್ದ

**ಉಭಯಗ್ರಾಮಜನಾಃ** = ವಾಟ(ಪಾಡಿ) ಸಮುದಾಯ (ಕುಡೆ) ಎಂಬ ಎರಡು ಗ್ರಾಮಗಳ ಜನರು,

**ಪರೇ ಚ ಜನಾಃ** = ಬೇರೆ ಜನರೂ,

**ಉಪಯಾಂತಂ** = ಸಮೀಪಿಸುತ್ತಿರುವ,

**ತಂ** = ಅಂತಹ,

**ಅನಂತಮಾನಸಂ** = ಶ್ರೀ ಪೂರ್ಣಪ್ರಜ್ಞರನ್ನು,

**ಕುತೂಹಲಾಬ್ಧಿ** = ಕೌತುಕವೆಂಬ ಸಮುದ್ರದಲ್ಲಿ,

**ಮಗ್ನಾಃ** = ಮುಳುಗಿದವರಾಗಿ,

**ಮುಹುಃ** = ಬಾರಿ ಬಾರಿಗೂ,

**ಐಕ್ಷಂತ** = ನೋಡಿದರು.

**ತಾತ್ಪರ್ಯ—** ವಿಷ್ಣುಮಂಗಲ ದೇವಾಲಯದ ಸಮೀಪದಲ್ಲಿ ಪಾಡಿ, ಕುಡೆ (ವಾಟ, ಸಮುದಾಯ) ಎಂಬ ಎರಡು ಗ್ರಾಮಗಳಿವೆ. ಆ ಎರಡು ಗ್ರಾಮಗಳ ಜನರೂ ಹಾಗೂ ಬೇರೆ ಜನರೂ ಕೂಡ ಶ್ರೀಮಧ್ವಾಚಾರ್ಯರನ್ನು ನೋಡಿ ಕುತೂಹಲ ಸಮುದ್ರದಲ್ಲಿಯೇ ಮುಳುಗಿದರು. ಅವರು ಪುನಃ ಪುನಃ ಆದರದಿಂದ ಆಚಾರ್ಯರನ್ನು ನೋಡಿದರು. ರಾಜನ ದರ್ಶನಕ್ಕಾಗಿ ಬಂದ ಜನರಿಗೆ ದಿವ್ಯಪುರುಷರಾದ ಆಚಾರ್ಯರ ದರ್ಶನವು ಬಹಳ ಕೌತುಕ-ವನ್ನುಂಟುಮಾಡಿತು. ಅವರಿಗೆ ಆಚಾರ್ಯರನ್ನು ನೋಡಿದಷ್ಟೂ ಸಾಕಾಗಲಿಲ್ಲ. ಇಲ್ಲಿಂದ ಕಾವ್ಯನಾಯಕರಾದ ಶ್ರೀಮಧ್ವಾಚಾರ್ಯರೆಂಬ ಯತಿರಾಜರನ್ನು ಪಾದದಿಂದ ಆರಂಭಿಸಿ ಶಿರಸ್ಸಿನವರೆಗೆ ವರ್ಣಿಸಲು ಪ್ರಾರಂಭಿಸುತ್ತಿದ್ದಾರೆ ಹನ್ನೆರಡು ಶ್ಲೋಕಗಳು ಕುಲಕ. ಇಲ್ಲಿ ಆದಿಯಲ್ಲಿ ಕ್ರಿಯಾಪದವಿರುವುದರಿಂದ ಆದಿಕುಲಕ.

**ವಿಗ್ರಹ—**

**ನರದೇವದಿದೃಕ್ಷಯಾ—** ದ್ರಷ್ಟುಂ ಇಚ್ಛಾ ದಿದೃಕ್ಷಾ, ನರದೇವಸ್ಯ ದಿದೃಕ್ಷಾ ನರದೇವದಿದೃಕ್ಷಾ ತಯಾ ।

**ಉಭಯಗ್ರಾಮಜನಾಃ—** ಉಭಯಶ್ಚ ಅಸೌ ಗ್ರಾಮಶ್ಚ ಉಭಯಗ್ರಾಮಃ, ಉಭಯಗ್ರಾಮಸ್ಯ ಜನಾಃ ಉಭಯಗ್ರಾಮಜನಾಃ ।

**ಅನಂತಮಾನಸಂ—** ಅನಂತಾ (ಅನಂತೇ) ಮಾನಸಂ ಯಸ್ಯ ಸಃ ಅನಂತಮಾನಸಃ ತಂ ।

**ಕುತೂಹಲಾಬ್ಧಿಮಗ್ನಾಃ—** ಕುತೂಹಲಮೇವ ಅಬ್ಧಿಃ (ಕುತೂಹಲಸ್ಯ ಅಬ್ಧಿಃ) ತಸ್ಮಿನ್ ಮಗ್ನಾಃ ಕುತೂಹಲಾಬ್ಧಿ ಮಗ್ನಾಃ ।

**ಕ್ರಿಯಾಪದ— ಐಕ್ಷಂತ** - ಐಕ್ಷತ ಐಕ್ಷೇತಾಂ ಐಕ್ಷಂತ, ಐಕ್ಷಥಾಃ ಐಕ್ಷೇಥಾಂ ಐಕ್ಷಧ್ವಂ, ಐಕ್ಷೇ ಐಕ್ಷಾವಹಿ ಐಕ್ಷಾಮಹಿ । ಈಕ್ಷ ದರ್ಶನೇ ಇತಿ ದರ್ಶನಾರ್ಥಕ ಈಕ್ಷಧಾತು ಆತ್ಮನೇಪದಿನಃ ಸಕ ಸೇಟ್ ಅನದ್ಯತನ ಭೂತೇಲಙ್ ।

ಕೋಶ— ಪರೇ = ಇತರರು, 'ಇತರಾನ್ಯಪರಮ ಮುಖ್ಯೇಷು' ಅಭಿಧಾನ ।

ಪ್ರಯೋಗ— ನರದೇವದಿದೃಕ್ಷಯಾ ಸಮೇತೈಃ ಉಭಯಗ್ರಾಮಜನೈಃ ಪರೈಶ್ಚ ಜನೈಃ ಉಪಯಾನ್ ಸಃ ಅನಂತ ಸಮಾನಸಃ ಕುತೂಹಲಾಬ್ಧಿಮಗ್ನೈಃ ಮುಹುಃ ಐಕ್ಷ್ಯತ (ಕರ್ಮಣಿ) ।

★ ★ ★

ಅವತಾರಿಕಾ— ಆಚಾರ್ಯರ ಮುಂದೆ ಅವರ ಶಿಷ್ಯರು ಆಚಾರ್ಯರಿಂದ ರಚಿತವಾದ ಸ್ತೋತ್ರಪದ್ಯಗಳನ್ನು ಹಾಡುತ್ತಾ, ಕುಣಿಯುತ್ತಾ ಬರುತ್ತಿದ್ದರು ಎಂದು ಹೇಳುತ್ತಾರೆ.

**ಪುರತೋ ಮಧುರಸ್ವರೈರ್ವದದ್ಭಿಃ**
**ಸ್ವಕೃತಾಃ ಕರ್ಣಸುಖಾ ಮುಕುಂದಗಾಥಾಃ ।**
**ಧೃತಪಂಕಜಬೀಜಚಕ್ರಚಿಹ್ನೈಃ**
**ಕೃತನೃತ್ಯೈಶ್ಚತುರೈರ್ನಿಷೇವ್ಯಮಾಣಮ್ ॥ 25 ॥**

ಪದಚ್ಛೇದ— ಪುರತಃ, ಮಧುರಸ್ವರೈಃ, ವದದ್ಭಿಃ, ಸ್ವಕೃತಾಃ, ಕರ್ಣಸುಖಾಃ, ಮುಕುಂದಗಾಥಾಃ, ಧೃತಪಂಕಜಬೀಜ ಚಕ್ರಚಿಹ್ನೈಃ, ಕೃತನೃತ್ಯೈಃ, ಚತುರೈಃ, ನಿಷೇವ್ಯಮಾಣಂ ।

ಅನ್ವಯ— ಪುರತಃ, ಸ್ವಕೃತಃ, ಕರ್ಣಸುಖಾಃ, ಮುಕುಂದಗಾಥಾಃ, ಮಧುರಸ್ವರೈಃ, ವದದ್ಭಿಃ, ಧೃತಪಂಕಜಬೀಜ ಚಕ್ರಚಿಹ್ನೈಃ, ಕೃತನೃತ್ಯೈಃ, ಚತುರೈಃ, ನಿಷೇವ್ಯಮಾಣಂ (ತಂ, ಅನಂತಮಾನಸಂ, ಉಭಯಗ್ರಾಮಜನಾಃ, ಪರೇ, ಚ, ಐಕ್ಷಂತ) ॥

ಅನ್ವಯಾರ್ಥ—

ಪುರತಃ = ಮುಂಭಾಗದಲ್ಲಿ,
ಸ್ವಕೃತಃ = ತಮ್ಮಿಂದ ಮಾಡಲ್ಪಟ್ಟ,
ಕರ್ಣಸುಖಾಃ = ಕಿವಿಗೆ ಇಂಪಾದ,
ಮುಕುಂದಗಾಥಾಃ = ಶ್ರೀ ವಿಷ್ಣುವಿನ ಗುಣಗಳನ್ನು ವರ್ಣಿಸುವ ಪ್ರಬಂಧಗಳನ್ನು,
ಮಧುರಸ್ವರೈಃ = ಇಂಪಾದ ಧ್ವನಿಗಳಿಂದ,
ವದದ್ಭಿಃ = ಹೇಳುತ್ತಿರುವ,
ಧೃತಪಂಕಜಬೀಜಚಕ್ರಚಿಹ್ನೈಃ = ಧರಿಸಿದ ಕಮಲಾಕ್ಷಮಣಿಮಾಲೆ, ಸುದರ್ಶನ ಚಕ್ರ ಇವುಗಳ ಗುರುತುಗಳುಳ್ಳ,
ಕೃತನೃತ್ಯೈಃ = ಮಾಡಲ್ಪಟ್ಟ ನರ್ತನವುಳ್ಳ,
ಚತುರೈಃ = ಜಾಣರಾದ ಜನರಿಂದ,
ನಿಷೇವ್ಯಮಾಣಂ = ಸೇವಿಸಲ್ಪಡುತ್ತಿರುವ ಆ ಮಧ್ವಾಚಾರ್ಯರನ್ನು ಎರಡು ಗ್ರಾಮದ ಜನರೂ, ಇತರರೂ ಕಂಡರು ಅಥವಾ ಮಧುರಸ್ವರೈಃ = ಇಂಪಾದ ಸ್ವರವುಳ್ಳ ಕರ್ಣಸುಖಾಃ ಎಂಬಲ್ಲಿ ವಿಶ್ವಪತಿತೀರ್ಥೀಯ ವ್ಯಾಖ್ಯಾನದಲ್ಲಿ ಕರ್ಣಸುಧಾಃ ಎಂಬ ಪಾಠವಿದೆ. ಕಿವಿಗಳಿಗೆ ಅಮೃತಪ್ರಾಯವಾದ ಎಂದು ಅದರ ಅರ್ಥ.

ತಾತ್ಪರ್ಯ— ಪ್ರಯಾಣಮಾಡುತ್ತಿರುವ ಶ್ರೀಮಧ್ವಾಚಾರ್ಯರನ್ನು ವರ್ಣಿಸುತ್ತಾರೆ. ಶ್ರೀಮಧ್ವಾಚಾರ್ಯರು ಪರಮಾತ್ಮನ ಸ್ತೋತ್ರರೂಪವಾದ ಪದ್ಯಗಳನ್ನು ರಚಿಸಿದ್ದರು. ಅವರ ಶಿಷ್ಯರು ಆಚಾರ್ಯರ ಸಮಕ್ಷಮದಲ್ಲಿ ಕಿವಿಗಿಂಪಾದ

ಸ್ವರದಿಂದ ಆ ಸ್ತೋತ್ರಪದ್ಯಗಳನ್ನು ಹಾಡುತ್ತಾ, ಕುಣಿಯುತ್ತಾ ಹೋಗುತ್ತಿದ್ದರು. ಚಕ್ರ, ಶಂಖ ಮುದ್ರೆಗಳನ್ನು ಹಚ್ಚಿಕೊಂಡು ಕಮಲಾಕ್ಷ (ತಾವರೆ ಬೀಜ) ಮಣಿಯ ಸರವನ್ನು ಧರಿಸಿ ನರ್ತನ, ಗಾನಗಳಲ್ಲಿ ಕುಶಲರಾದ ಅವರು ಶ್ರೀಪೂರ್ಣಪ್ರಜ್ಞರನ್ನು ಹೀಗೆ ಸೇವಿಸುತ್ತಿದ್ದರು. ದ್ವಾದಶಸ್ತೋತ್ರ ಮೊದಲಾದ ಸಂಕೀರ್ತನೆಗೆ ಯೋಗ್ಯವಾದ, ಆಚಾರ್ಯರು ಮಾಡಿದ ವಿಷ್ಣುಸ್ತೋತ್ರ ವನ್ನು ಹೇಳುತ್ತಾ ಶಿಷ್ಯರು ತಾಳ ಹಾಕಿ ಕುಣಿದು ಸಂಕೀರ್ತನ ಮಾಡುತ್ತಿರುವಾಗ ಆಚಾರ್ಯರು ಮುಂದೆ ಪ್ರಯಾಣ ಮಾಡಿದರು ಎಂದು ಭಾವ. ಛಲಾರಿಯದಂತೆ ಶಿಷ್ಯರು ತಾವೇ ಮಾಡಿದ ಸ್ತೋತ್ರಗಳನ್ನು ಹಾಡುತ್ತಿದ್ದರು.

**ವಿಗ್ರಹ—**

**ಮಧುರಸ್ವರೈಃ—** ಮಧುರಾಶ್ಚತೇ ಸ್ವರಾಶ್ಚ ಮಧುರಸ್ವರಾಃ ತೈಃ (ಅಥವಾ ಮಧುರಾಃ ಸ್ವರಾಃ ಯೇಷಾಂ ತೇ ಮಧುರಸ್ವರಾಃ ತೈಃ) ।

**ಸ್ವಕೃತೈಃ—** ಸ್ವೇನ ಕೃತಾಃ ಸ್ವಕೃತಾಃ (ಛಲಾರಿಯದಂತೆ ಸ್ವೈಃ ಕೃತಾಃ ಸ್ವಕೃತಾಃ- ತಮ್ಮಿಂದ ಅಂದರೆ ಹಾಡುವ ಶಿಷ್ಯರಿಂದಲೇ ಮಾಡಲ್ಪಟ್ಟ) ।

**ಕರ್ಣಸುಖಾಃ—** ಕರ್ಣಯೋಃ ಸುಖಾಃ ತೈಃ ಕರ್ಣಸುಖಾಃ ತಾಃ ।

**ಮುಕುಂದಗಾಥಾಃ—** ಮುಕುಂದಸ್ಯ ಗಾಥಾ ಮುಕುಂದಗಾಥಾ ತಾಃ ।

**ಪಂಕಜಬೀಜಚಕ್ರಚಿಹ್ನೈಃ—** ಪಂಕಜಾನಾಂ ಬೀಜಾನಿ ಪಂಕಜಬೀಜಾನಿ, ಚಕ್ರಸ್ಯ ಚಿಹ್ನಾನಿ ಚಕ್ರಚಿಹ್ನಾನಿ, ಪಂಕಜಬೀಜಾನಿ ಚ ಚಕ್ರಚಿಹ್ನಾನಿ ಚ ಪಂಕಜಬೀಜಚಕ್ರಚಿಹ್ನಾನಿ ಧೃತಾನಿ ಪಂಕಜಬೀಜಚಕ್ರಚಿಹ್ನಾನಿ ಯೈಃ ತೇ ಧೃತಪಂಕಜಬೀಜಚಕ್ರಚಿಹ್ನಾಃ, ತೈಃ ।

**ಕೃತನೃತ್ಯೈಃ—** ಕೃತಂ ನೃತ್ಯಂ, ಯೈಃ ತೇ ಕೃತನೃತ್ಯಾಃ, ತೈಃ ।

**ಕೋಶ—** ಮಧುರಂ = ರುಚಿಕರವಾದ, 'ಮಧುರಂ ರಸವತ್ ಸ್ವಾದು ಪ್ರಿಯೇಷು' ವಿಶ್ವ ನೃತ್ಯ = 'ತಾಂಡವಂ ನಟನಂ ನಾಟ್ಯಂ ಲಾಸ್ಯಂ ನೃತ್ಯಂ ಚ ನರ್ತನೇ' ಅಮರ ।

★ ★ ★

**ಅವತಾರಿಕಾ—** ರಾಜನು ಆಚಾರ್ಯರನ್ನು ಸೇವಿಸುತ್ತಿದ್ದ ರೀತಿಯನ್ನು ತಿಳಿಸುತ್ತಾರೆ.

**ಕಲಿತಾಂಜಲಿನಾ ಸ್ಫುಟಾನುಯಾತಂ**
**ಜನಸಂಬಾಧಸಹೇನ ಭೂಮಿಭರ್ತ್ರಾ ।**
**ಕರುಣಾವಿಷಯಂ ಚಿಕೀರ್ಷುಣಾ ಸ್ವಂ**
**ವ್ರಜತಾ ಕಿಂಕರತಾಮಕೈತವೇನ ॥ 26 ॥**

**ಪದಚ್ಛೇದ—** ಕಲಿತಾಂಜಲಿನಾ, ಸ್ಫುಟಾನುಯಾತಂ, ಜನಸಂಬಾಧಸಹೇನ, ಭೂಮಿಭರ್ತ್ರಾ, ಕರುಣಾವಿಷಯಂ, ಚಿಕೀರ್ಷುಣಾ, ಸ್ವಂ, ವ್ರಜತಾ, ಕಿಂಕರತಾಂ, ಅಕೈತವೇನ ।

**ಅನ್ವಯ—** ಕಲಿತಾಂಜಲಿನಾ, ಜನಸಂಬಾಧಸಹೇನ, ಸ್ವಂ, ಕರುಣಾವಿಷಯಂ, ಚಿಕೀರ್ಷುಣಾ, ಅಕೈತವೇನ, ಕಿಂಕರತಾಂ, ವ್ರಜತಾ, ಭೂಮಿಭರ್ತ್ರಾ, ಸ್ಫುಟಾನುಯಾತಂ (ತಂ ಅನಂತ ಮಾನಸಂ ಐಕ್ಷಂತ) ।

**ಅನ್ವಯಾರ್ಥ—**

**ಕಲಿತಾಂಜಲಿನಾ** = ಅಂಜಲಿಬದ್ಧನಾದ (ಆ ಜನರು),

**ಜನಸಂಬಾಧಸಹೇನ** = ಜನರ ಇಕ್ಕಟ್ಟನ್ನು (ನೂಕಾಟವನ್ನೂ) ಸಹಿಸುತ್ತಿರುವ,

**ಸ್ವಂ** = ತನ್ನನ್ನು,

**ಕರುಣಾವಿಷಯಂ** = ಶ್ರೀಮಧ್ವರ ದಯೆಗೆ ವಿಷಯನನ್ನಾಗಿ,

**ಚಿಕೀರ್ಷುಣಾ** = ಮಾಡಲಿಚ್ಛೆಯುಳ್ಳ,

**ಅಕೈತವೇನ** = ಕಪಟವಿಲ್ಲದೆ,

**ಕಿಂಕರತಾಂ ವ್ರಜತಾ** = ಸೇವಕತ್ವವನ್ನು ಹೊಂದುತ್ತಿರುವ,

**ಭೂಮಿಭರ್ತ್ರಾ** = ಜಯಸಿಂಹರಾಜನಿಂದ,

**ಸ್ಫುಟಾನುಯಾತಂ** = ಸ್ಪಷ್ಟವಾಗಿ ಹಿಂಬಾಲಿಸಲ್ಪಟ್ಟ ಆ ಮಧ್ವಾಚಾರ್ಯರನ್ನು ಕಂಡರು.

**ತಾತ್ಪರ್ಯ—** ಮತ್ತು ಆಚಾರ್ಯರನ್ನು ವರ್ಣಿಸುತ್ತಾರೆ. ಆಚಾರ್ಯರನ್ನು ನೋಡುವುದಕ್ಕಾಗಿ ಜನರು ಕಿಕ್ಕಿರಿದು ನೆರೆದಿದ್ದರು. ಜಯಸಿಂಹರಾಜನು ಆ ಗುಂಪಿನ ನೂಕಾಟ, ತಿಕ್ಕಾಟ, ಇಕ್ಕಟ್ಟುಗಳನ್ನು ಸಹಿಸಿಕೊಂಡು ಕೈಮುಗಿದುಕೊಂಡು ಹಿಂಭಾಗದಲ್ಲಿ ಬರುತ್ತಿದ್ದನು. ಅವನು ಯಾವ ಕಪಟಜಂಭಗಳಿಲ್ಲದೇ ಆಚಾರ್ಯರ ಸೇವಕನು ತಾನು ಎಂದು ಎಲ್ಲಾ ಜನರ ಸಮಕ್ಷಮದಲ್ಲಿ ನಡೆದು ಆಚರಿಸಿ ತೋರಿಸುತ್ತಿದ್ದನು. ಇಂತಹ ರಾಜನಿಂದ ಕಾಲು ನಡಿಗೆಯಿಂದಲೇ ಅನುಸರಿಸಲ್ಪಟ್ಟು ಆಚಾರ್ಯರು ಪ್ರಯಾಣ ಮಾಡುತ್ತಿದ್ದರು.

**ವಿಗ್ರಹ—**

**ಕಲಿತಾಂಜಲಿನಾ—** ಕಲಿತಃ ಅಂಜಲಿಃ ಯೇನ ಸಃ ಕಲಿತಾಂಜಲಿಃ, ತೇನ ಕಲಿತಾಂಜಲಿನಾ ।

**ಸ್ಫುಟಾನುಯಾತಂ—** ಸ್ಫುಟಂ ಅನುಯಾತಃ ಸ್ಫುಟಾನುಯಾತಃ ತಂ ಸ್ಫುಟಾನುಯಾತಂ ।

**ಜನಸಂಬಾಧಸಹೇನಃ—** ಜನಾನಾಂ ಸಂಬಾಧಃ ಜನಸಂಬಾಧಃ, ಜನಸಂಬಾಧಂ ಸಹತೇ ಇತಿ ಜನಸಂಬಾಧ ಸಹಃ ತೇನ ಜನಸಂಬಾದಸಹೇನ ।

**ಭೂಮಿಭರ್ತಾ—** ಭೂಮೇಃ ಭರ್ತಾ ಭೂಮಿಭರ್ತಾ ತೇನ ಭೂಮಿಭರ್ತ್ರಾ ।

**ಕರುಣಾವಿಷಯಂ—** ಕರುಣಾಯಾಃ ವಿಷಯಃ ಕರುಣಾವಿಷಯಃ ತಂ ಕರುಣಾವಿಷಯಂ ।

**ಚಿಕೀರ್ಷುಣಾ—** ಕರ್ತುಂ ಇಚ್ಛುಃ ಚಿಕಿರ್ಷುಃ ತೇನ ಚಿಕೀರ್ಷುಣಾ ।

**ಕೋಶ—** ಕಲಿತಾಂಜಲಿನಾ ಎಂಬಲ್ಲಿ ಅಂಜಲಿ = ಬೊಗಸೆ, ಎರಡೂ ಕೈಗಳನ್ನು ಸೇರಿಸುವುದು 'ಅಂಜಲಿಸ್ತು ಪುಮಾನ್ ಹಸ್ತಸಂಪುಟಃ' ವಿಶ್ವ, ಜನಸಂಬಾಧಸಹೇನ ಎಂಬಲ್ಲಿ ಸಂಬಾಧಃ = ಇಕ್ಕಟ್ಟು, 'ಸಂಕಟಂ ನಾತು ಸಂಬಾಧಃ' ಅಮರ, ಅಕೈತವೇನ = (ಕ್ರಿ.ವಿ) ಕೈತವ = ಕಪಟ, 'ಕಪ ಟೋಸ್ತ್ರೀವ್ಯಾಜದಂಭೋಪಧಯಶ್ಛದ್ಮಕೈತವೇ' ಅಮರ, ಭೂಮಿಭರ್ತ್ರಾ ಎಂಬಲ್ಲಿ ಭರ್ತ್ರಾ = ಸ್ವಾಮಿ, 'ಭರ್ತ್ರೇಂದ್ರ ಇನ ಈಶಿತಾ' ಧನಂಜಯ ।

★ ★ ★

**ಅವತಾರಿಕಾ—** ಆಚಾರ್ಯರು ದಿವ್ಯಭವ್ಯತೇಜಪುಂಜರಾಗಿದ್ದರು ಎಂದು ವರ್ಣಿಸುತ್ತಿದ್ದಾರೆ.

> **ಇದಮಿಮತ್ಥಮಿತೀಕ್ಷಣೈರ್ನರಾಣಾ-**
> **ಮಪರಿಚ್ಛೇದ್ಯಮಹಿಷ್ಠಧಾಮರೂಪಮ್ ।**
> **ಅಧಿಕಂ ಧರಣೀಮಲಂಚಿಕೀರ್ಷುಂ**
> **ಸ್ಫುಟಮುದ್ಯಂತಮಿವ ದ್ಯುನಾಥಮನ್ಯಮ್ ॥ 27 ॥**

**ಪದಚ್ಛೇದ—** ಇದಂ, ಇತ್ಥಂ, ಇತಿ, ಈಕ್ಷಣೈಃ, ನರಾಣಾಂ, ಅಪರಿಚ್ಛೇದ್ಯಮಹಿಷ್ಠಧಾಮರೂಪಂ, ಅಧಿಕಂ, ಧರಣೀಂ, ಅಲಂಚಿಕೀರ್ಷುಂ, ಸ್ಫುಟಂ, ಉದ್ಯಂತಂ, ಇವ, ದ್ಯುನಾಥಂ, ಅನ್ಯಂ, (ತಂ ಅನಂತಂ ಮಾನಸಂ ಐಕ್ಷಂತ) ।

**ಅನ್ವಯ—** ನರಾಣಾಂ, ಈಕ್ಷಣೈಃ, ಇದಂ, ಇತ್ಥಂ, ಇತಿ, ಅಪರಿಚ್ಛೇದ್ಯ, ಮಹಿಷ್ಠಧಾಮರೂಪಂ, ಧರಣೀಂ,ಅಧಿಕಂ, ಅಲಂಚಿಕೀರ್ಷುಂ, ಸ್ಫುಟಂ, ಉದ್ಯಂತಂ, ಅನ್ಯಂ, ದ್ಯುನಾಥಂ, ಇವ ।

**ಅನ್ವಯಾರ್ಥ—**

**ನರಾಣಾಂ** = ಮನುಷ್ಯರ (ಆ ಜನರ),
**ಈಕ್ಷಣೈಃ** = ಕಣ್ಣುಗಳಿಂದ,
**ಇದಂ** = ಇದು,
**ಇತ್ಥಂ ಇತಿ** = ಈ ರೀತಿಯಾದುದು ಎಂದು,
**ಅಪರಿಚ್ಛೇದ್ಯ** = ನಿರ್ಣಯಿಸಲು ಶಕ್ಯವಿಲ್ಲದ,
**ಮಹಿಷ್ಠಧಾಮರೂಪಂ** = ಅತ್ಯಂತ ಹೆಚ್ಚಾದ ತೇಜಸ್ಸುಳ್ಳ ಆಕೃತಿಯುಳ್ಳ,
**ಧರಣೀಂ** = ಭೂಮಿಯನ್ನು,
**ಅಧಿಕಂ** = ಬಹಳವಾಗಿ,
**ಅಲಂಚಿಕೀರ್ಷುಂ** = ಅಲಂಕಾರ ಮಾಡಲು ಇಚ್ಛೆಯುಳ್ಳ,
**ಸ್ಫುಟಂ** = ಸ್ಪಷ್ಟವಾಗಿ,
**ಉದ್ಯಂತಂ** = ಉದಯಿಸುತ್ತಿರುವ,
**ಅನ್ಯಂ ದ್ಯುನಾಥಂ ಇವ** = ಬೇರೊಬ್ಬ ಸೂರ್ಯನಂತಿರುವ,
**ಐಕ್ಷಂತ** = ಅಂತಹ ಶ್ರೀಮಧ್ವಾಚಾರ್ಯರನ್ನು ನೋಡಿದರು.

**ತಾತ್ಪರ್ಯ—** 'ಯಥಾ ಭುವಂ ಅಲಂಕರ್ತುಕಾಮಃ ಉದಯಂ ಪ್ರಾಪ್ನುವನ್ ಸೂರ್ಯಃ ಅತಿಬಹುಲತೇಜಃಪುಂಜತ್ವೇನ ಚಕ್ಷುಷೀ ವಿವೃತ್ಯ ಅವಿಚ್ಛೇದೇನ ದ್ರಷ್ಟುಮಶಕ್ಯತ್ವೇನ ಪುನಃ ಪುನರ್ವೀಕ್ಷಣೇ ಅಭಿನವತ್ವೇನ ದೃಶ್ಯಮಾನಸ್ಸನ್ ಏತಾದೃಶಾಕಾರ ಏವೇತಿ ನಿರ್ಧಾರಯಿತುಂ ಅಶಕ್ಯಃ ತದ್ವತ್ ಭೂಮಿಮಲಂಕರ್ತುಮೇವ ಪ್ರಾದುರ್ಭೂತಃ ಮಹಾತೇಜೋರಾಶಿತ್ವೇನ ಚಕ್ಷುಷಾ ಸಮ್ಯಕ್ ಈ ದೃಶಾಕಾರ ಏವೇತಿ ಪರಿಚ್ಛೇತ್ತುಮಶಕ್ಯಃ ಇತಿ ಭಾವಃ ಅನೇನ ಅತಿತೇಜಃಪುಂಜತ್ವಂ ಉಕ್ತಂ ಭವತಿ' । (ಭಲಾರಿಯ) ಭೂಮಿಯನ್ನು ಅಲಂಕರಿಸಲೋಸುಗ ಉದಯವನ್ನು ಹೊಂದುತ್ತಿರುವ ಸೂರ್ಯನು ಬಹಳ ಹೆಚ್ಚಾದ ತೇಜಃಪುಂಜರೂಪನಾದುದರಿಂದ ಎರಡೂ ಕಣ್ಣುಗಳನ್ನು ತೆರೆದು ನಿರಂತರವಾಗಿ ನೋಡಲು ಸಾಧ್ಯವಾಗದಿರುವುದರಿಂದ ಮತ್ತೂ ಮತ್ತೂ ನೋಡುವಾಗ ಹೊಸದಾಗಿ ಕಾಣಿಸುತ್ತಾ ಹೀಗೆಯೇ ಇದ್ದಾನೆಂದು ನಿರ್ಧರಿಸಲು ಸಾಧ್ಯವಾಗುವುದಿಲ್ಲ. ಅದರಂತೆಯೇ ಆಚಾರ್ಯರೂ ಬಹುತೇಜಸ್ಸ್ವರೂಪರು. ಭೂಮಿಗೆ ಅತ್ಯಂತ ಅಲಂಕಾರಸ್ವರೂಪರಾದವರು. ಆದುದರಿಂದ ಉದಯಿಸುತ್ತಿರುವ ಮತ್ತೊಬ್ಬ ಸೂರ್ಯನಂತೆ ತೋರುತ್ತಾ ಮತ್ತೂ ಮತ್ತೂ ನೋಡುವಾಗ ಹೊಸಬರಂತೆ ಕಾಣಿಸುತ್ತಾ ಇವರು ಹೀಗೆಯೇ ಇದ್ದಾರೆಂದು ನಿರ್ಣಯಿಸಲು ಅಸಾಧ್ಯವಾದ ಬಹಳ ದೊಡ್ಡ ತೇಜಸ್ಸಿನ ರಾಶಿಯಂತೆ ಕಂಗೊಳಿಸುತ್ತಿದ್ದರು.

**ವಿಗ್ರಹ—**

**ಅಪರಿಚ್ಛೇದ್ಯಮಹಿಷ್ಠಧಾಮರೂಪಂ—**ಪರಿಚ್ಛೇತ್ತುಂ ಅಶಕ್ಯಂ ಅಪರಿಚ್ಛೇದ್ಯಂ ಅತಿಶಯೇನ ಮಹತಃ ಮಹಿಷ್ಠಂ । ಅಪರಿಚ್ಛೇದ್ಯಂ ಮಹಿಷ್ಠಧಾಮ ತಾದೃಶಂ ರೂಪಂ ಯಸ್ಯ ಸಃ । ಅಪರಿಚ್ಛೇದ್ಯಮಹಿಷ್ಠಧಾಮರೂಪಃ ತಂ । ಭಲಾರೀಯದಂತೆ ಅಪರಿಚ್ಛೇದ್ಯಂ ಮಹಿಷ್ಠಂ ಧಾಮ ಯಸ್ಯತತ್ ಅಪರಿಚ್ಛೇದ್ಯಮಹಿಷ್ಠಧಾಮ ತಾದೃಶಂ ರೂಪಂ ಯಸ್ಯ ಸಃ ತಂ ಹೀಗೆಯೇ ಎಂದು ನಿರ್ಧರಿಸಲು ಸಾಧ್ಯವಾಗದ ಬಹಳ ಹೆಚ್ಚಾದ ತೇಜಸ್ಸೇ ಸ್ವರೂಪವಾಗಿಉಳ್ಳ ಎಂದು ಅರ್ಥ ।

**ಅಲಂಚಿಕೀರ್ಷುಃ—** ಅಲಂಕರ್ತುಂ ಇಚ್ಛುಃ ಅಲಂಚಿಕೀರ್ಷುಃ ತಂ ।

**ದ್ಯುನಾಥಂ**— ದಿವಃ ನಾಥಃ ದ್ಯುನಾಥಃ ತಂ । ದಿವ ಉತ್ (6-1-131) ದಿವೋಽಂತಾದೇಶಃ ಉಕಾರಃ ಸ್ಯಾತ ಪದಂತೇ ಎಂಬ ಸೂತ್ರದಿಂದ ದಿವ್ ಶಬ್ದದ ವಕಾರಕ್ಕೆ ಉಕಾರ ದಿ+ಉ=ದ್ಯುನಾಥಃ ಎಂದಾಗಿದೆ.

**ಕೋಶ**— ಈಕ್ಷಣೈಃ = ಕಣ್ಣುಗಳಿಂದ, ಈಕ್ಷಣಂ = ಕಣ್ಣು 'ಈಕ್ಷಣಂ ಚಕ್ಷುರಕ್ಷಿಣೀ' ಅಮರ ।

★ ★ ★

**ಅವತಾರಿಕಾ**— ಆಚಾರ್ಯರ ಹೆಜ್ಜೆ ಇಡುವ ಕ್ರಮವನ್ನು ವರ್ಣಿಸುತ್ತಾ ಆಚಾರ್ಯರ ಪ್ರಯಾಣದ ಕ್ರಮವನ್ನು ಮತ್ತೂ ವರ್ಣಿಸುತ್ತಾರೆ. ಹಾಗೂ ಇಲ್ಲಿಂದ ಮುಂದೆ ಆಚಾರ್ಯರ ಪಾದಾದಿ ಕೇಶಪರ್ಯಂತವಾಗಿ ವರ್ಣಿಸಲು ಆರಂಭಿಸುತ್ತಾರೆ.

**ಅಶನೈಃ ಶನಕೈರಿವಾವ್ರಜಂತಂ**
**ಯುವಸಿಂಹಪ್ರವರಪ್ರಗಲ್ಭಯಾನಮ್ ।**
**ಅತಿಪಾಟಲಪಾದಪಲ್ಲವಾಭ್ಯಾ-**
**ಮವನೀಂ ಪಾವನತಾಮಲಂ ನಯಂತಮ್ ॥ 28 ॥**

**ಪದಚ್ಛೇದ**— ಅಶನೈಃ, ಶನಕೈಃ, ಇವ, ಆವ್ರಜಂತಂ, ಯುವಸಿಂಹಪ್ರವರಪ್ರಗಲ್ಭಯಾನಂ, ಅತಿಪಾಟಲಪಾದಪಲ್ಲವಾಭ್ಯಾಂ, ಅವನೀಂ, ಪಾವನತಾಂ, ಅಲಂ, ನಯಂತಂ ।

**ಅನ್ವಯ**— ಅಶನೈಃ, ಶನಕೈಃ, ಇವ, ಆವ್ರಜಂತಂ, ಯುವಸಿಂಹಪ್ರವರಪ್ರಗಲ್ಭಯಾನಂ, ಅತಿಪಾಟಲಪಾದಪಲ್ಲವಾಭ್ಯಾಂ, ಅವನೀಂ, ಅಲಂ, ಪಾವನತಾಂ, ನಯಂತಂ, (ತಂ ಅನಂತಮಾನಸಂ ಐಕ್ಷಂತ) ।

**ಅನ್ವಯಾರ್ಥ**—

**ಅಶನೈಃ** = ವೇಗನೆ (ಜನರು),
**ಶನಕೈಃ ಇವ** = ಮೆಲ್ಲಗೆಯೋ ಎಂಬಂತೆ,
**ಆವ್ರಜಂತಂ** = ಬರುತ್ತಿರುವ,
**ಯುವಸಿಂಹಪ್ರವರಪ್ರಗಲ್ಭಯಾನಂ** = ಎಳೆವಯಸ್ಸಿನ ಶ್ರೇಷ್ಠವಾದ ಸಿಂಹದಂತೆ ಪ್ರೌಢವಾದ (ಶ್ರೇಷ್ಠವಾದ) ನಡಿಗೆಯುಳ್ಳ,
**ಅತಿಪಾಟಲಪಾದಪಲ್ಲವಾಭ್ಯಾಂ** = ಅತ್ಯಂತ ಕೆಂಪಾದ ಚಿಗುರಿನಂತಿರುವ ಕಾಲುಗಳಿಂದ,
**ಅವನೀಂ** = ಭೂಮಿಯನ್ನು,
**ಅಲಂ** = ಚೆನ್ನಾಗಿ,
**ಪಾವನತಾಂ** = ಪವಿತ್ರತೆಯನ್ನು
**ನಯಂತಂ** = ಹೊಂದಿಸುತ್ತಿರುವ (ಶ್ರೀಮಧ್ವಾಚಾರ್ಯರನ್ನು ಕಂಡರು).

**ತಾತ್ಪರ್ಯ**— ಆಚಾರ್ಯರು ಶೀಘ್ರವಾಗಿಯೇ ನಡೆಯುತ್ತಿದ್ದರು. ಆದರೆ ಅವರು ಮೆಲ್ಲಗೆ ನಡೆಯುತ್ತಾರೋ ಎಂಬಂತೆ ಕಾಣುತ್ತಿತ್ತು. ಆಚಾರ್ಯರ ಜೊತೆಗೆ ನಡೆಯುತ್ತಿರುವ ಜನರಿಗೆ ಅವರ ಮಹಿಮೆಯಿಂದ ಮಾರ್ಗಾಯಾಸವು ಕಾಣದ ಅವರಿಗೆ ತಿಳಿಯದಂತೆ ಆಚಾರ್ಯರಿಗೆ ಸಮಾನವಾದ ವೇಗವಾದ ನಡಿಗೆಯು ತನ್ನಷ್ಟಕ್ಕೇ ಉಂಟಾಗುತ್ತಿತ್ತು. ಆಚಾರ್ಯರು ತರುಣಸಿಂಹದಂತೆ ಶ್ರೇಷ್ಠವಾದ ನಡಿಗೆಯುಳ್ಳವರಾಗಿದ್ದರು. ಅವರ ಪಾದಗಳು ಚಿಗುರಿನಂತೆ ಕೆಂಪಾಗಿದ್ದವು. ಅಂತಹ ಪಾದಗಳಿಂದ ನಡೆದು ಬರುತ್ತಾ ಅವರು ಭೂಮಿಯನ್ನು ಅತ್ಯಂತವಾಗಿ ಪವಿತ್ರೀಕರಿಸುತ್ತಿದ್ದರು.

ಇದರಿಂದ ಪಾದಗಳಲ್ಲಿ ಕೆಂಪುಬಣ್ಣ ಮತ್ತು ಪವಿತ್ರವನ್ನಾಗಿ ಮಾಡುವ ಸಾಮರ್ಥ್ಯ ಎಂಬ ಗುಣಗಳನ್ನು ವರ್ಣಿಸಿ-ದಂತಾಯಿತು.

**ವಿಗ್ರಹ—**

**ಅಶನ್ಯೈಃ—** ನ ಶನ್ಯೈಃ ಅಶನ್ಯೈಃ ।

**ಯುವಸಿಂಹಪ್ರವರಪ್ರಗಲ್ಭಯಾನಃ—** ಸಿಂಹೇಷು ಪ್ರವರಃ ಸಿಂಹಪ್ರವರಃ ಯುವಾ ಚಾಸೌ ಸಿಂಹಪ್ರವರಶ್ಚ ಯುವಸಿಂಹಪ್ರವರಃ ತದ್ವತ್ ಪ್ರಗಲ್ಭಂ ಯಾನಂ ಯಸ್ಯಸಃ ಯುವಸಿಂಹಪ್ರವರಪ್ರಗಲ್ಭಯಾನಃ ತಂ ।

**ಅತಿಪಾಟಲಪಾದಪಲ್ಲವಾಭ್ಯಾಂ—** ಅತ್ಯಂತಂ ಪಾಟಲೌ ಅತಿಪಾಟಲೌ ಪಾದಾವೇವ ಪಲ್ಲವೌ ಪಾದಪಲ್ಲವೌ ಅತಿಪಾಟಲೌ ಚ ತೌ ಪಾದಪಲ್ಲವೌ ಚ ಅತಿಪಾಟಲಪಾದಪಲ್ಲವೌ ತಾಭ್ಯಾಂ ।

**ಕೋಶ—** ಯುವಸಿಂಹ ಎಂಬಲ್ಲಿ ಯುವನ್(ಯುವಾ) = ತರುಣ, 'ವಯಸ್ಥ ಸ್ತರುಣೋ ಯುವಾ' ಅಮರ, ಯಾನಂ = ನಡಿಗೆ, 'ಯಾನಂ ಗತೌ ವಾಹನೇ ಚ' ವಿಶ್ವ ಅತಿಪಾಟಲ ಎಂಬಲ್ಲಿ ಪಾಟಲ = ಬಿಳಿಕೆಂಪು, 'ಶ್ವೇತರಕ್ತಸ್ತು ಪಾಟಲಃ' ಅಮರ ।

★ ★ ★

**ಅವತಾರಿಕಾ—** ಆಚಾರ್ಯರ ಪಾದದ ಉಗುರುಗಳು, ಪಾದದ ತುದಿ, ಕಾಲಿನ ಗಿಣ್ಣು ಮೊಣಕಾಲು ಮತ್ತು ತೊಡೆಗಳನ್ನು ವರ್ಣಿಸುತ್ತಾರೆ.

**ನಖನಿರ್ಜಿತಪದ್ಮರಾಗರಾಗಂ**
**ವರಕೂರ್ಮಪ್ರಪದಂ ನಿಗೂಢಗುಲ್ಫಮ್ ।**
**ಸುರವರ್ಯಕರಾಗ್ರಸೇವ್ಯಜಂಘಂ**
**ದ್ವಿರದೋದಾರಕರೋಪಮೋರುಯುಗ್ಮಮ್ ॥ 29 ॥**

**ಪದಚ್ಛೇದ—** ನಖನಿರ್ಜಿತಪದ್ಮರಾಗರಾಗಂ, ವರಕೂರ್ಮಪ್ರಪದಂ, ನಿಗೂಢಗುಲ್ಫಂ, ಸುರವರ್ಯಕರಾಗ್ರಸೇವ್ಯ ಜಂಘಂ, ದ್ವಿರದೋದಾರಕರೋಪಮೋರುಯುಗ್ಮಂ ।

**ಅನ್ವಯ—** ನಖನಿರ್ಜಿತಪದ್ಮರಾಗರಾಗಂ, ವರಕೂರ್ಮಪ್ರಪದಂ, ನಿಗೂಢಗುಲ್ಫಂ, ಸುರವರ್ಯಕರಾಗ್ರಸೇವ್ಯ ಜಂಘಂ, ದ್ವಿರದೋದಾರಕರೋಪಮೋರುಯುಗ್ಮಂ (ತಂ ಅನಂತ ಮಾನಸಂ ಐಕ್ಷಂತ) ।

**ಅನ್ವಯಾರ್ಥ—**

**ನಖನಿರ್ಜಿತಪದ್ಮರಾಗರಾಗಂ** = (ಆ ಜನರು)ಉಗುರುಗಳಿಂದ ಸೋಲಿಸಲ್ಪಟ್ಟ ಪದ್ಮರಾಗಮಣಿಯ ಕೆಂಪು ಬಣ್ಣವುಳ್ಳ,

**ವರಕೂರ್ಮಪ್ರಪದಂ** = ಉತ್ತಮವಾದ ಆಮೆಯಂತೆ ಕಾಲಿನ ತುದಿಯುಳ್ಳ,

**ನಿಗೂಢಗುಲ್ಫಂ** = ಅಡಗಿಕೊಂಡಿರುವ (ಕಾಣಸದಿರುವ) ಕಾಲಿನ ಗಂಟುಳ್ಳ,

**ಸುರವರ್ಯಕರಾಗ್ರಸೇವ್ಯಜಂಘಂ** = ದೇವಶ್ರೇಷ್ಠರಾದ ರುದ್ರಾದಿಗಳ ಕೈಗಳ ತುದಿಗಳಿಂದ ಸೇವಿಸಲು ಯೋಗ್ಯವಾದ ಮೊಣಕಾಲುಗಳುಳ್ಳ,

**ದ್ವಿರದಉದಾರಕರಉಪಮಊರುಯುಗ್ಮಂ** = ಆನೆಯ ದೊಡ್ಡದಾದ ಸೊಂಡಿಲಕ್ಕೆ ಸದೃಶವಾದ ಎರಡು ತೊಡೆಗಳುಳ್ಳ (ಆ ಶ್ರೀಮಧ್ವಾಚಾರ್ಯರನ್ನು ನೋಡಿದರು),

ತಾತ್ಪರ್ಯ— ಆಚಾರ್ಯರು ತಮ್ಮ ಕಾಲುಗುರುಗಳ ಕಾಂತಿಯಿಂದ ಪದ್ಮರಾಗವೆಂಬ ರತ್ನವನ್ನು ಜಯಿಸಿದ್ದಾರೆ. ಅರ್ಥಾತ್ ಆಚಾರ್ಯರ ಪಾದದ ಉಗುರುಗಳು ಪದ್ಮರಾಗ ಮಣಿಗಳಿಗಿಂತಲೂ ಕೆಂಪಾಗಿದ್ದವು. ಆಚಾರ್ಯರ ಪಾದದ ತುದಿಗಳು ಶ್ರೇಷ್ಠವಾದ ಆಮೆಯ ಬೆನ್ನಿನಂತ್ತಿದ್ದವು. ಅವರ ಪಾದದ ಗಂಟುಗಳೆರಡೂ ಹೊರಗೆ ಕಾಣಿಸುತ್ತಿರಲಿಲ್ಲ. ಒಳಗೆ ಅಡಗಿಕೊಂಡಿದ್ದವು. ಶ್ರೇಷ್ಠರಾದ ದೇವತೆಗಳೂ ತಮ್ಮ ಕೈಗಳಿಂದ ಶ್ರೀಮಧ್ವಾಚಾರ್ಯರ ಮೊಣಕಾಲನ್ನು ಸೇವಿಸುತ್ತಿದ್ದರು. ಆನೆಯ ದಪ್ಪವಾದ ಶ್ರೇಷ್ಠವಾದ ಸೊಂಡಿಲಿನಂತೆ ಅವರ ಎರಡೂ ತೊಡೆಗಳೂ ಸುಂದರವಾಗಿದ್ದವು. ಇಂತಹ ಶ್ರೀಮಧ್ವಾಚಾರ್ಯರನ್ನು ಆ ಎರಡೂ ಹಳ್ಳಿಯ ಜನರು, ಮತ್ತಿತರ ಜನರೂ ನೋಡಿದರು.

ವಿಗ್ರಹ—

ನಖನಿರ್ಜಿತಪದ್ಮರಾಗರಾಗಂ— ಪದ್ಮರಾಗಾಣಾಂ ರಾಗಃ ಪದ್ಮರಾಗರಾಗಃ, ನಖೈಃ ನಿರ್ಜಿತಃ ನಖನಿರ್ಜಿತಃ, ನಖನಿರ್ಜಿತಃ ಪದ್ಮರಾಗರಾಗಃ ಯೇನ ಸಃ ನಖನಿರ್ಜಿತಪದ್ಮರಾಗರಾಗಃ ತಂ ।

ವರಕೂರ್ಮಪ್ರಪದಂ— ವರಶ್ಚಾಸೌ ಕೂರ್ಮಶ್ಚ ವರಕೂರ್ಮಃ ವರಕೂರ್ಮವತ್ ಪ್ರಪದೇ ಯಸ್ಯ ಸಃ ವರ ಕೂರ್ಮಪ್ರಪದಃ ತಂ ।

ನಿಗೂಢಗುಲ್ಫಂ— ನಿಗೂಢೌ ಗುಲ್ಫೌ ಯಸ್ಯ ಸಃ ನಿಗೂಢಗುಲ್ಫಃ ತಂ ।

ಸುರವರ್ಯಕರಾಗ್ರಸೇವ್ಯಜಂಘಂ— ಸುರೇಷು ವರ್ಯಾಃ ಸುರವರ್ಯಾಃ, ಕರಾಣಾಂ ಅಗ್ರಾಣಿ ಕರಾಗ್ರಾಣಿ, ಸುರವರ್ಯಾಣಾಂ ಕರಾಗ್ರಾಣಿ ಸುರವರ್ಯಕರಾಗ್ರಾಣಿ, ಸುರವರ್ಯಕರಾಗ್ರೈಃ ಸೇವ್ಯೇ ಜಂಘೇ ಯಸ್ಯ ಸಃ ಸುರವರ್ಯಕರಾಗ್ರಸೇವ್ಯಜಂಘಃ ತಂ ।

ದ್ವಿರದೋದಾರಕರೋಪಮೋರುಯುಗ್ಮಂ— ಉದಾರಶ್ಚಾಸೌ ಕರಶ್ಚ ಉದಾರಕರಃ ದ್ವೌ ರದೌ ಯಸ್ಯಸಃ ದ್ವಿರದಃ, ದ್ವಿರದಸ್ಯ ಉದಾರಕರಃ ದ್ವಿರದೋದಾರಕರಃ, ದ್ವಿರದೋದಾರಕರಃ ಉಪಮಾ ಯಯೋಸ್ತೌ ದ್ವಿರದೋದರಕರೋಪಮೌ, ದ್ವಿರದೋದಾರಕರೋಪಮೌ ಚ ತೌ ಊರೂ ಚ ದ್ವಿರದೋದಾರಕರೋಪಮೋರೂ, ದ್ವಿರದೋದಾರಕರೋಪಮೋರ್ವೋಃ ಯುಗ್ಮಂ ಯಸ್ಯಸಃ ದ್ವಿರದೋದಾರಕರೋಪಮೋರುಯುಗ್ಮಃ ತಂ ।

ಕೋಶ— ಪದ್ಮರಾಗ = ಕೆಂಪಾದ, 'ರತ್ನಂ ಶೋಣರತ್ನಂ ಲೋಹಿತತಃ ಪದ್ಮರಾಗಃ' ಅಮರ, ರಾಗ = ಕೆಂಪು ಬಣ್ಣ 'ರಾಗೋಽನುರಕ್ತೌ ಮಾತ್ಸರ್ಯೇ ಕ್ಲೇಶಾದೌ ಲೋಹಿತಾದಿಷು' ಇತಿ ವಿಶ್ವ, ಕೂರ್ಮಃ = ಆಮೆ, 'ಕೂರ್ಮೇ ಕಮಠಕಚ್ಛಪೌ' ಅಮರ, ಪ್ರಪದ = ಕಾಲಿನ ತುದಿ, 'ಪಾದಾಗ್ರಂ ಪ್ರಪದಂ' ಅಮರ, ಗುಲ್ಫಂ = ಕಾಲಿನ ಗಿಣ್ಣು (ಗಂಟು) 'ತದ್ಗ್ರಂಥೀ-ಘುಟಕೇ ಗುಲ್ಫೌ' ಅಮರ, ಜಂಘಾ = ಮೊಣಕಾಲು (ಮಂಡಿಯಿಂದ ಕೆಳಗಿನ ಕಾಲುಗಂಟಿನ ಮೇಲಿನ ಭಾಗ), 'ಜಂಘಾತು ಪ್ರಸೃತಾ ಜಾನು' ಅಮರ, ದ್ವಿರದ = ಆನೆ, 'ದ್ವಿರದೋಽನೇಕಪೋ ದ್ವಿಪಃ' ಅಮರ, ಕರ = ಸೊಂಡಿಲು, 'ಕರೋ ವರ್ಷೋಽಪಲೇ ಪಾಣೌ ಶುಂಡಾಯಾಂ' ಅಭಿಧಾನ, ಊರು = ತೊಡೆ, 'ಸಕ್ಥಿ ಕ್ಲೀಬೇ ಪುಮಾನೂರುಃ' ಅಮರ ।

★ ★ ★

ಅವತಾರಿಕಾ— ಆಚಾರ್ಯರ ವಸ್ತ್ರ, ಹೊಟ್ಟೆ, ಕುತ್ತಿಗೆ, ಹಣೆಗಳನ್ನು ವರ್ಣಿಸುತ್ತಾರೆ.

**ಶುಭಶುದ್ಧನಿತಂಬಬಿಂಬರಾಜ-**
**ನ್ನವಕೌಶೇಯವಿಶೇಷಬಾಹ್ಯವಸ್ತ್ರಮ್ ।**
**ತನುಕುಕ್ಷಿಗಲಾಲಿಕೇಷು ರೇಖಾ-**
**ತ್ರಿತಯೇನ ಪ್ರಕಟೇನ ಶೋಭಮಾನಮ್ ॥ 30 ॥**

**ಪದಚ್ಛೇದ—** ಶುಭಶುದ್ಧನಿತಂಬಬಿಂಬರಾಜನ್ನವಕೌಶೇಯವಿಶೇಷಬಾಹ್ಯವಸ್ತ್ರಂ, ತನುಕುಕ್ಷಿಗಲಾಲಿಕೇಷು, ರೇಖಾತ್ರಿತಯೇನ, ಪ್ರಕಟೇನ, ಶೋಭಮಾನಂ ।

**ಅನ್ವಯ—** (ಉಭಯಗ್ರಾಮಜನಾಃ ಪರೇ ಚ ಜನಾಃ) ಶುಭಶುದ್ಧನಿತಂಬಬಿಂಬರಾಜನ್ನವಕೌಶೇಯವಿಶೇಷ ಬಾಹ್ಯವಸ್ತ್ರಂ, ತನುಕುಕ್ಷಿಗಲಾಲಿಕೇಷು, ರೇಖಾತ್ರಿತಯೇನ, ಪ್ರಕಟೇನ, ಶೋಭಮಾನಂ (ತಂ ಅನಂತ ಮಾನಸಂ ಐಕ್ಷಂತ)

**ಅನ್ವಯಾರ್ಥ—**

**ಶುಭಶುದ್ಧನಿತಂಬಬಿಂಬರಾಜತ್‌ನವಕೌಶೇಯವಿಶೇಷಬಾಹ್ಯವಸ್ತ್ರಂ** = (ಎರಡೂ ಗ್ರಾಮದ ಜನರೂ, ಇತರ ಜನರು) ಮಂಗಳಕರವಾದ ನಿರ್ಮಲವಾದ ಕಟಿಪುರೋಭಾಗದಲ್ಲಿ (ಸೊಂಟದ ಮುಂಭಾಗದ ಪ್ರದೇಶದಲ್ಲಿ) ಶೋಭಿಸುತ್ತಿರುವ ಹೊಸದಾದ ರೇಷ್ಮೆಯ ಉತ್ತಮವಾದ ಉಡುವ ಬಟ್ಟೆಯುಳ್ಳ,

**ತನುಕುಕ್ಷಿಗಲಾಲಿಕೇಷು** = ಸೂಕ್ಷ್ಮವಾದ ಹೊಟ್ಟೆಯು, ಕಂಠವು, ಹಣೆಯು ಇವುಗಳಲ್ಲಿ,

**ಪ್ರಕಟೇನ** = ಸ್ಪಷ್ಟವಾಗಿ ಕಾಣಸುತ್ತಿರುವ,

**ರೇಖಾತ್ರಿತಯೇನ** = ಮೂರೂ ರೇಖೆಗಳಿಂದ,

**ಶೋಭಮಾನಂ** = ಶೋಭಿಸುತ್ತಿರುವ ಶ್ರೀಮಧ್ವಾಚಾರ್ಯರನ್ನು ನೋಡಿದರು.

**ತಾತ್ಪರ್ಯ—**(ಯತಿಗಳು ಸೊಂಟಕ್ಕೆ ಕಟಿಸೂತ್ರವನ್ನು ಕಟ್ಟಿಕೊಂಡು ಹಿಂದೆ ಮುಂದೆ ಗುಹ್ಯ ಪ್ರದೇಶವನ್ನು ಮುಚ್ಚುವ ಕೌಪೀನವನ್ನು ಕಟ್ಟಿಕೊಳ್ಳುತ್ತಾರೆ. ಅದರ ಮೇಲೆ ಸೊಂಟದ ಮುಂಭಾಗ ಮತ್ತು ಹಿಂಭಾಗಗಳನ್ನು ಮುಚ್ಚುವ ವಸ್ತ್ರವನ್ನು ಉಟ್ಟುಕೊಳ್ಳುತ್ತಾರೆ) ಶ್ರೀಮಧ್ವಾಚಾರ್ಯರು ಪ್ರಕಾಶಮಾನವಾದ ನಿರ್ಮಲವಾದ ಸೊಂಟದಲ್ಲಿ ಕಂಗೊಳಿಸುತ್ತಿರುವ ರೇಷ್ಮೆಯ ಪೀತಾಂಬರವನ್ನುಟ್ಟಿದ್ದರು. ಅವರ ಕೃಶವಾದ ಹೊಟ್ಟೆಯಲ್ಲಿ, ಕುತ್ತಿಗೆಯಲ್ಲಿ ಮತ್ತು ಹಣೆಯಲ್ಲಿ ಮೂರು ರೇಖೆಗಳು ಶೋಭಿಸುತ್ತಿದ್ದವು. ಇಂತಹ ಶ್ರೀಮಧ್ವಾಚಾರ್ಯರನ್ನು ಜನರು ನೋಡಿದರು. (ಹೊಟ್ಟೆ, ಕಂಠ, ಹಣೆಗಳಲ್ಲಿ ಮೂರು ರೇಖೆಗಳಿರುವುದು ಮಹಾಪುರುಷರ ಲಕ್ಷಣ).

**ವಿಗ್ರಹ—**

**ಶುಭಶುದ್ಧನಿತಂಬಬಿಂಬರಾಜತ್‌ನವಕೌಶೇಯವಿಶೇಷಬಾಹ್ಯವಸ್ತ್ರಂ—** ನಿತಂಬಸ್ಯ ಬಿಂಬಂ ನಿತಂಬಬಿಂಬಂ, ಶುಭಂ ಚ ತತ್ ಶುದ್ಧಂ ಚ, ತತ್ ಶುಭಶುದ್ಧನಿತಂಬಬಿಂಬಂ, ಚ, ತಸ್ಮಿನ್ ರಾಜತ್ ಶುಭಶುದ್ಧನಿತಂಬ ರಾಜತ್, ಕೌಶೇಯಸ್ಯ ವಿಶೇಷಃ ಕೌಶೇಯವಿಶೇಷಃ, ಬಾಹ್ಯಂ ಚ ತತ್ ವಸ್ತ್ರಂ ಚ, ಬಾಹ್ಯವಸ್ತ್ರಂ ಕೌಶೇಯವಿಶೇಷಶ್ಚ ತತ್ ಬಾಹ್ಯವಸ್ತ್ರಂ ಚ, ಕೌಶೇಯವಿಶೇಷಬಾಹ್ಯವಸ್ತ್ರಂ, ನವಂ ಚ ತತ್ ಕೌಶೇಯ ವಿಶೇಷಬಾಹ್ಯವಸ್ತ್ರಂ ಚ ನವಕೌಶೇಯವಿಶೇಷಬಾಹ್ಯವಸ್ತ್ರಂ, ಶುಭಶುದ್ಧನಿತಂಬಬಿಂಬರಾಜತ್ ನವ ಕೌಶೇಯ ವಿಶೇಷಬಾಹ್ಯವಸ್ತ್ರಂ ಯಸ್ಯ ಸಃ ಶುಭಶುದ್ಧನಿತಂಬಬಿಂಬರಾಜತ್‌ನವಕೌಶೇಯವಿಶೇಷ ಬಾಹ್ಯವಸ್ತ್ರಃ ತಂ ।

**ತನುಕುಕ್ಷಿಗಲಅಲಿಕೇಷು—** ತನುಶ್ಚಾಸೌ ಕುಕ್ಷಿಶ್ಚ ತನುಕುಕ್ಷಿಃ, ತನುಕುಕ್ಷಿಶ್ಚ ಗಲಶ್ಚ ಅಲಿಕಂ ಚ ತನುಕುಕ್ಷಿಗಲಾಲಿಕಾನಿ ತೇಷು ।

**ರೇಖಾತ್ರಿತಯೇನ—** ತ್ರಯಃ ಅವಯವಾಃ ಅಸ್ಯೇತಿ ತ್ರಿತಯಂ ರೇಖಾಣಾಂ ತ್ರಿತಯಂ ರೇಖಾತ್ರಿತಯಂ ತೇನ ।

**ಕೋಶ—** ಕೌಶೇಯ = ರೇಷ್ಮೆಯ ವಸ್ತ್ರ, 'ಕೌಶೇಯಂ ಕ್ರಿಮಿಕೋಶೋತ್ಥಂ', ತನು = ಕೃಶವಾದ, 'ತನುಃ ಕಾಯೇ ಕೃಶೇಽಲ್ಪೇಪಿ' ವಿಶ್ವ ಕುಕ್ಷಿ = ಹೊಟ್ಟೆ 'ಪಿಚಂಡ ಕುಕ್ಷೀ, ಜಠರೋದರಂ' ಅಮರ, ಅಲಿಕಂ = ಹಣೆ, 'ಲಲಾಟಮಲಿಕಂ ಗೋಧಿಃ' ಅಮರ ।

★ ★ ★

ಅವತಾರಿಕಾ— ಸುಂದರವಾದ ಒಂದು ಶಾಲನ್ನು ಹೊದ್ದ ಆಚಾರ್ಯರು ಹೇಗೆ ಕಾಣಸುತ್ತಿದ್ದರೆಂದು ವರ್ಣಿಸುತ್ತಾರೆ.

**ಮೃದುಸೂಕ್ಷ್ಮಘನಾರುಣಾವಿಕಾಚ್ಛ -**
**ಪ್ರಕಟಪ್ರಾವರಣೇನ ಭಾಸಮಾನಮ್ ।**
**ಅತಿನೂತನತಿಗ್ಮಭಾನುಭಾಸಾಂ**
**ನಿಕರೇಣೇವ ಸುವರ್ಣಸಾನುಮಂತಮ್ ॥ 31 ॥**

ಪದಚ್ಛೇದ— ಮೃದುಸೂಕ್ಷ್ಮಘನಾರುಣಾವಿಕಾಚ್ಛಪ್ರಕಟಪ್ರಾವರಣೇನ, ಭಾಸಮಾನಂ, ಅತಿನೂತನತಿಗ್ಮಭಾನುಭಾಸಾಂ, ನಿಕರೇಣ, ಇವ, ಸುವರ್ಣಸಾನುಮಂತಮ್ ।

ಅನ್ವಯ— (ಜನಾಃ) ಮೃದುಸೂಕ್ಷ್ಮಘನಾರುಣಾವಿಕಾಚ್ಛಪ್ರಕಟಪ್ರಾವರಣೇನ, ಅತಿನೂತನತಿಗ್ಮಭಾನುಭಾಸಾಂ, ನಿಕರೇಣ, ಸುವರ್ಣಸಾನುಮಂತಂ, ಇವ, ಭಾಸಮಾನಂ (ತಂ ಅನಂತಮಾನಸಂ ಐಕ್ಷಂತ) ।

ಅನ್ವಯಾರ್ಥ—

ಮೃದುಸೂಕ್ಷ್ಮಘನಾರುಣಾವಿಕಅಚ್ಛಪ್ರಕಟಪ್ರಾವರಣೇನ = ಮೃದುವಾದ, ಸಣ್ಣದಾರದಿಂದ ಹೆಣೆದ, ಒತ್ತಾದ ಕೆಂಪಾದ, ಕುರಿಯ ರೋಮದಿಂದ ತಯಾರಿಸಿದ (ಉಣ್ಣೆಯ), ನಿರ್ಮಲವಾದ, ಪ್ರಕಾಶಿಸುವ, ಶಾಲಿನಿಂದ (ಚಳಿಗಾಳಿಗಳಿಂದ ರಕ್ಷಿಸುವ ಹೊದ್ದಿಕೆಯಿಂದ),

ಅತಿನೂತನತಿಗ್ಮಭಾನುಭಾಸಾಂ = ಅತ್ಯಂತ ಹೊಸಬನಾದ (ಆಗ ತಾನೇ ಉದಯಿಸುತ್ತಿರುವ) ಸೂರ್ಯನ ಕಾಂತಿಗಳ,

ನಿಕರೇಣ = ಸಮೂಹದಿಂದ,

ಸುವರ್ಣಸಾನುಮಂತಂ ಇವ = ಸುವರ್ಣಪರ್ವತವಾದ ಮೇರುವಿನಂತೆ,

ಭಾಸಮಾನಂ = ಪ್ರಕಾಶಿಸುವ (ಶ್ರೀಮಧ್ವಾಚಾರ್ಯರನ್ನು ಜನರು ನೋಡಿದರು).

ತಾತ್ಪರ್ಯ— ಆಚಾರ್ಯರು ಕುರಿಯ ತುಪ್ಪಟದಿಂದ ರಚಿತವಾದ ಒಂದು ಒಳ್ಳೆಯ ಕೆಂಪಾದ ಶಾಲನ್ನು ಹೊದ್ದಿದ್ದರು. ಅದು ಕೋಮಲವಾಗಿತ್ತು. ಸೂಕ್ಷ್ಮವಾದ ದಾರದಿಂದ ಒತ್ತೊತ್ತಾಗಿ ನೇಯ್ದ ಆ ಶಾಲು, ಸ್ವಚ್ಛವಾಗಿ ಆಚಾರ್ಯರ ಮೈಮೇಲೆ ಎದ್ದು ಕಾಣಸುತ್ತಿತ್ತು. ಆಗ ಚಿನ್ನದ ಮೇರು ಪರ್ವತದಲ್ಲಿ ಆಗ ತಾನೇ ಉದಯಿಸುತ್ತಿರುವ ಸೂರ್ಯನ ಕಿರಣಗಳ ರಾಶಿಯು ಬಿದ್ದರೆ ಎಂತಹ ಕಾಂತಿಯು ಕಾಣಸುತ್ತದೆಯೋ ಅಂತಹ ಕಾಂತಿಯು ಆಚಾರ್ಯರಲ್ಲಿ ಕಾಣಿಸಿತು. ಸುವರ್ಣ ವರ್ಣರಾದ ಆಚಾರ್ಯರು ಮೇರುವಿನಂತೆಯೋ, ಅವರ ಹೊದ್ದ ಕೆಂಪಾದ ಶಾಲು ಉದಯಿಸುವ ಸೂರ್ಯನ ಕಿರಣಗಳ ರಾಶಿಯಂತೆಯೂ ಕಾಣಸುತ್ತಿತ್ತು ಎಂದು ಭಾವ.

ವಿಗ್ರಹ ಮತ್ತು ಕೋಶ—

ಮೃದುಸೂಕ್ಷ್ಮಘನಾರುಣಾವಿಕಾಚ್ಛಪ್ರಕಟಪ್ರಾವರಣೇನ— ಮೃದು ಚ ತತ್ ಸೂಕ್ಷ್ಮಂ ಚ ತತ್ ಘನಂ ಚ ತತ್ ಅರುಣಂ ಚ ತತ್ ಆವಿಕಂ ಚ ತತ್ ಅಚ್ಛಂ ತತ್ ಪ್ರಕಟಂ ಚ ತತ್ ಪ್ರಾವರಣಂ ಚ ತತ್ ಮೃದು ಸೂಕ್ಷ್ಮಘನಾರುಣಾವಿಕಾಚ್ಛಪ್ರಕಟಪ್ರಾವರಣಂ ತೇನ, ಪ್ರಾವರಣಂ = ಹೊದ್ದಿಕೆ ವಸ್ತ್ರ, 'ನಿಶಾರಃ ಸ್ಯಾತ್ ಪ್ರಾವರಣೇ ಹಿಮಾನಿಲನಿವಾರಣೇ' ಅಮರ ।

ಅತಿನೂತನತಿಗ್ಮಭಾನುಭಾಸಾಂ— ತಿಗ್ಮಾಃ ಭಾನವಃ ಯಸ್ಯ ಸಃ ತಿಗ್ಮಭಾನುಃ, 'ಭಾನುಃ ಕಿರಣ ಸೂರ್ಯಯೋಃ' ವಿಶ್ವ ಅತಿನೂತನಶ್ಚಾಸೌ ತಿಗ್ಮಭಾನುಶ್ಚ ಅತಿನೂತನತಿಗ್ಮಭಾನುಃ ಅತಿನೂತನತಿಗ್ಮಭಾನೋಃ ಭಾಸಃ ಅತಿನೂತನತಿಗ್ಮಭಾನುಭಾಸಃ ತಾಸಾಂ ಭಾಃ (ಭಾಸ್) = ಕಾಂತಿ 'ಭಾಶ್ಛವಿದ್ಯುತಿ ದೀಪ್ತಯಃ' ಅ

ಮರ. ಆವಯೋಮೇಷಶ್ಚೈಲಾರ್ಕಾಃ ಅವಿ = ಕುರಿ. 'ಅವೇಃ ಕಃ (5-4-28) ಸ್ವಾರ್ಥೇ ಕಪ್ರತ್ಯಯ ಅವಿರೇವ ಅವಿಕಃ ಅವಿಕಸ್ಯ ಇದಂ' ಆವಿಕಂ = ಕುರಿಗೆ ಸಂಬಂಧಪಟ್ಟಿರುವುದು.

**ಸುವರ್ಣಸಾನುಮಂತಂ**— ಸುವರ್ಣಾನಾಂ ಸಾನವಃ ಸುವರ್ಣಸಾನವಃ ಸುವರ್ಣಸಾನವಃ ಅಸ್ಯ ಸಂತೀತಿ ಸುವರ್ಣಸಾನುಮಾನ್ ತಂ । (ಸುವರ್ಣಾಃ ಸುವರ್ಣಾತ್ಮಕಃ ಸಾನವಃ ಅಸ್ಯ ಸಂತೀತಿ ಎಂಬ ವಿಗ್ರಹವು ಛಲಾರಿಯದಲ್ಲಿ ಕಂಡುಬರುತ್ತದೆ).

**ವಿಶೇಷಾಂಶ**— ಯಥಾ ಸೌವರ್ಣಮೇರುಪರ್ವತಃ ಉದ್ಯದಾದಿತ್ಯಕಾಂತ್ಯಾ ಶೋಭತೇ ತದ್ವತ್ ಪರಿಹಿತ ಪೀತಾಂಬರಃ ಸುವರ್ಣವರ್ಣಃ ಅಯಂ ಮಧ್ವಾಚಾರ್ಯಃ ರಕ್ತವರ್ಣೇನ ಪ್ರಾವೃತೇನ ಊರ್ಣವಸ್ತ್ರೇಣ ವ್ಯರಾಜತ ಇತಿ ಭಾವಃ (ಛಲಾರಿಯ) ಚಿನ್ನದ ಮೇರುಪರ್ವತವು ಉದಯಿಸುತ್ತಿರುವ ಸೂರ್ಯನ ಕಾಂತಿಯಿಂದ ಹೇಗೆ ಶೋಭಿಸುತ್ತಿದೆಯೋ ಅದರಂತೆ ಪೀತಾಂಬರವನ್ನುಟ್ಟ ಚಿನ್ನದ ಬಣ್ಣದ ಆಚಾರ್ಯರು ಕೆಂಪಾದ ಉಣ್ಣೆಯ ಶಾಲನ್ನು ಹೊದ್ದು ವಿರಾಜಿಸಿದರು ಎಂದು ಭಾವ.

★ ★ ★

**ಅವತಾರಿಕಾ**— ಆಚಾರ್ಯರ ವಕ್ಷಸ್ಥಳ, ಹೆಗಲು, ತೋಳುಗಳು, ಅಂಗೈಗಳನ್ನು ವರ್ಣಿಸುತ್ತಾರೆ.

**ಪೃಥುವಕ್ಷಸಮುನ್ನತಾಂಸಭಿತ್ತಿಂ**
**ಗುರುವೃತ್ತಾಯತಹೃದ್ಯಬಾಹುದಂಡಮ್ ।**
**ಪರಮಾರುಣಪಾಣಿಪಲ್ಲವಾಂತಃ-**
**ಸ್ಫುರಿತೋರ್ಧ್ವಧ್ವಜಲಾಂಛನಾದಿಮಂತಮ್ ॥ 32 ॥**

**ಪದಚ್ಛೇದ**— ಪೃಥುವಕ್ಷಸಂ ಉನ್ನತಾಂಸಭಿತ್ತಿಂ, ಗುರುವೃತ್ತಾಯತಹೃದ್ಯಬಾಹುದಂಡಂ, ಪರಮಾರುಣಪಾಣಿ-ಪಲ್ಲವಾಂತಃ ಸ್ಫುರಿತೋರ್ಧ್ವಧ್ವಜಲಾಂಛನಾದಿಮಂತಂ (ತಂ ಅನಂತ ಮಾನಸಂ ಐಕ್ಷಂತ) ।

**ಅನ್ವಯ**— ಪೃಥುವಕ್ಷಸಂ ಉನ್ನತಾಂಸಭಿತ್ತಿಂ, ಗುರುವೃತ್ತಾಯತಹೃದ್ಯಬಾಹುದಂಡಂ, ಪರಮಾರುಣಪಾಣಿ-ಪಲ್ಲವಾಂತಃಸ್ಫುರಿತೋರ್ಧ್ವಧ್ವಜಲಾಂಛನಾದಿಮಂತಂ (ತಂ ಅನಂತ ಮಾನಸಂ ಐಕ್ಷಂತ) ।

**ಅನ್ವಯಾರ್ಥ**—

**ಪೃಥುವಕ್ಷಸಂ** = ವಿಶಾಲವಾದ ಎದೆಯುಳ್ಳ,

**ಉನ್ನತಾಂಸಭಿತ್ತಿಂ** = ಎತ್ತರವಾದ ಗೋಡೆಯಂತಿರುವ ಹೆಗಲುಳ್ಳ,

**ಗುರುವೃತ್ತಆಯತಹೃದ್ಯಬಾಹುದಂಡಂ** = ದಪ್ಪವಾದ ಗುಂಡಗಿರುವ ಉದ್ದವಾದ ಮನೋಹರವಾದ ದಂಡ-ದಂತಿರುವ ದೀರ್ಘವಾದ ತೋಳುಗಳುಳ್ಳ,

**ಪರಮಾರುಣಪಾಣಿಪಲ್ಲವಅಂತಸ್ಫುರಿತಊರ್ಧ್ವಧ್ವಜಲಾಂಛನಆದಿಮಂತಂ** = ಅತ್ಯಂತ ಕೆಂಪಾದ ಚಿಗುರಿ-ನಂತಿರುವ ಕೈಯ ಒಳಭಾಗದಲ್ಲಿ ಪ್ರಕಾಶಗೊಂಡಿರುವ ಮೇಲ್ಮುಖವಾದ ಧ್ವಜದ ಚಿಹ್ನೆಯೇ ಮೊದಲಾದ ಚಿಹ್ನೆಯುಳ್ಳ (ಶ್ರೀಮಧ್ವಾಚಾರ್ಯರನ್ನು ಕಂಡರು).

**ತಾತ್ಪರ್ಯ**— ಸಾಮುದ್ರಿಕಾ ಶಾಸ್ತ್ರದಲ್ಲಿ ಹೇಳಿರುವ ಮಹಾಪುರುಷ ಲಕ್ಷಣಗಳು ಆಚಾರ್ಯರಲ್ಲಿದ್ದವೆಂದು ತಿಳಿಸುತ್ತಾ ಆಚಾರ್ಯರ ಎದೆ ಮುಂತಾದ ಅವಯವಗಳನ್ನು ವರ್ಣಿಸುತ್ತಾರೆ. ಆಚಾರ್ಯರ ಎದೆಯು ಬಹಳ ಅಗಲವಾಗಿತ್ತು. ಹೆಗಲುಗಳು ಗೋಡೆಯಂತೆ ಎತ್ತರವಾಗಿದ್ದವು. ಎರಡು ತೋಳುಗಳೂ ದೊಡ್ಡದಾಗಿ, ದುಂಡಾಗಿ, ಉದ್ದವಾಗಿ, ಅಂದವಾಗಿ

ಶೋಭಿಸುತ್ತಿದ್ದವು. ಅವರ ಅಂಗೈ ಚಿಗುರಿನಂತೆ ಕೆಂಪಾಗಿತ್ತು. ಅದರಲ್ಲಿ ಮೇಲ್ಮುಖವಾದ ಧ್ವಜರೇಖೆಯೇ ಮುಂತಾದ ಮಹಾಪುರುಷತ್ವ ಸೂಚಕವಾದ ಚಿಹ್ನೆಗಳು ಕಂಗೊಳಿಸುತ್ತಿದ್ದವು.

ವಿಗ್ರಹ—

**ಪೃಥುವಕ್ಷಸಂ—** ಪೃಥು ವಕ್ಷಃ ಯಸ್ಯ ಸಃ ಪೃಥುವಕ್ಷಾಃ ತಂ ।

**ಉನ್ನತಾಂಸಭಿತ್ತಿಂ—** (ಅಂಸಾವೇವ ಭಿತ್ತಿ) ಅಂಸೌ ಭಿತ್ತಿ ಇವ ಅಂಸಭಿತ್ತೀ, ಉನ್ನತೇ ಅಂಸಭಿತ್ತೀ ಯಸ್ಯ ಸಃ ಉನ್ನತಾಂಸಭಿತ್ತಿಃ ತಂ । ಅಂಸ = ಹೆಗಲು, 'ಸ್ಕಂಧೋ ಭುಜಶಿರೋಽಂಸೋಽಸ್ತ್ರೀ । ಭಿತ್ತಿ = ಗೋಡೆ, 'ಭಿತ್ತಿಃ ಸ್ತ್ರೀಕುಡ್ಯಮೇಡೂಕಂ' ಅಮರ.

**ಗುರುವೃತ್ತಾಯುತಹೃದ್ಯಬಾಹುದಂಡಂ—** ಬಾಹೂ ದಂಡಾವಿವ ಬಾಹುದಂಡೌ, ಗುರೂ ವೃತ್ತೌ ಆಯತೌ ಹೃದ್ಯೌ ಬಾಹುದಂಡೌ ಯಸ್ಯ ಸಃ ಗುರುವೃತ್ತಾಯುದಹೃದ್ಯಬಾಹುದಂಡಃ ತಂ ।

**ಪರಮಾರುಣಪಾಣಿಪಲ್ಲವಾಂತಃಸ್ಫುರಿತೋರ್ಧ್ವಧ್ವಜಲಾಂಛನಾದಿಮಾನ್—** ಪರಮಂ ಅರುಣೌ ಚ ತೌ ಪಾಣಿ ಪಲ್ಲವೌ ಚ ಪರಮಾರುಣಪಾಣಿಪಲ್ಲವೌ, ಪರಮಾರುಣಪಾಣಿಪಲ್ಲವಯೋಃ ಅಂತಃ ಸ್ಫುರಿತಾನಿ ಪರಮಾರುಣಪಾಣಿಪಲ್ಲವಾಂತಃಸ್ಫುರಿತಾನಿ, ಧ್ವಜಂ ಇತಿ ಲಾಂಛನಂ ಧ್ವಜಲಾಂಛನಂ, ಊರ್ಧ್ವಂ ಚ ತತ್ ಧ್ವಜಲಾಂಛನಂ ಚ ಊರ್ಧ್ವಧ್ವಜಲಾಂಛನಂ, ಊರ್ಧ್ವಧ್ವಜಲಾಂಛನಂ ಆದಿಃ ಯೇಷಾಂ ತಾನಿ ಊರ್ಧ್ವಧ್ವಜಲಾಂಛನಾದೀನಿ, ಪರಮಾರುಣಪಾಣಿಪಲ್ಲವಾಂತಃಸ್ಫುರಿತಾನಿ ಚ ತಾನಿ ಊರ್ಧ್ವಧ್ವಜಲಾಂಛನಾದೀನಿ ಚ ಪರಮಾರುಣಪಾಣಿಪಲ್ಲವಾಂತಃಸ್ಫುರಿತಾನಿ ಚ ತಾನಿ ಊರ್ಧ್ವದೀನಿ ತಾನಿ ಅಸ್ಯ ಸಂತೀತಿ ಪರಮಾರುಣಪಾಣಿಪಲ್ಲವಾಂತಃಸ್ಫುರಿತೋರ್ಧ್ವಧ್ವಜಲಾಂಛನಾದಿಮಾನ್, ತಂ ।

★ ★ ★

ಅವತಾರಿಕಾ— ಆಚಾರ್ಯರ ಮುಖವನ್ನು ವರ್ಣಿಸುತ್ತಾರೆ.

**ಪರಿಪೂರ್ಣಶಶಾಂಕಬಿಂಬಶಂಕಾ-**
**ವಿಷಯಂ ಪ್ರಾಕ್ ಸಹಸಾಽವಲೋಕನೇನ ।**
**ಅಕಲಂಕತಯಾ ಪರಂ ವಿವಿಕ್ತಂ**
**ವದನಂ ಬಿಭ್ರತಮಚ್ಛವಿಭ್ರಮಾಬ್ಧಿಮ್ ॥ 33 ॥**

ಪದಚ್ಛೇದ— ಪರಿಪೂರ್ಣಶಶಾಂಕಬಿಂಬಶಂಕಾವಿಷಯಂ, ಪ್ರಾಕ್, ಸಹಸಾ ಅವಲೋಕನೇನ, ಅಕಲಂಕತಯಾ, ಪರಂ, ವಿವಿಕ್ತಂ, ವದನಂ, ಬಿಭ್ರತಂ ಅಚ್ಛವಿಭ್ರಮಾಬ್ಧಿಂ ।

ಅನ್ವಯ— (ಜನಾಃ) ಪ್ರಾಕ್, ಸಹಸಾ ಅವಲೋಕನೇನ, ಪರಿಪೂರ್ಣಶಶಾಂಕಬಿಂಬಶಂಕಾವಿಷಯಂ, ಪರಂ, ಅಕಲಂಕತಯಾ, ವಿವಿಕ್ತಂ, ಅಚ್ಛವಿಭ್ರಮಾಬ್ಧಿಂ, ವದನಂ, ಬಿಭ್ರತಂ (ಅನಂತ ಮಾನಸಂ ಐಕ್ಷಂತ) ।

ಅನ್ವಯಾರ್ಥ—

**ಪ್ರಾಕ್** = ಮೊದಲು,

**ಸಹಸಾ** = ಕೂಡಲೇ,

**ಅವಲೋಕನೇನ** = ನೋಡುವುದರಿಂದ,

**ಪರಿಪೂರ್ಣಶಶಾಂಕಬಿಂಬಶಂಕಾವಿಷಯಂಪರಂಅಕಲಂಕತಯಾ** = ತುಂಬಿದ ಹುಣ್ಣಿಮೆ ಚಂದ್ರನ ಮಂಡಲದ ಸಂದೇಹಕ್ಕೆ ಆಸ್ಪದವಾದ, ಅನಂತರ, ಕಲಂಕವಿಲ್ಲದಿರುವುದರಿಂದ,

**ವಿವಿಕ್ತಂ** = ಚಂದ್ರನಿಗಿಂತ ಬೇರೆಯಾಗಿ ಕಾಣುವ,

**ಅಚ್ಛವಿಭ್ರಮ** = ನಿರ್ಮಲವಾದ ವಿಲಾಸೆಗಳಿಗೆ (ಕಾಂತಿಗಳಿಗೆ),

**ಅಬ್ಧಿಂ** = ಸಮುದ್ರವಾದ,

**ವದನಂ** = ಮುಖವನ್ನು,

**ಬಿಭ್ರತಂ** = ಧರಿಸಿರುವ (ಹೊಂದಿರುವ) (ಶ್ರೀಮಧ್ವರನ್ನು ಜನರು ಕಂಡರು).

ತಾತ್ಪರ್ಯ— ಮತ್ತೂ ಆಚಾರ್ಯರನ್ನು ವರ್ಣಿಸುತ್ತಾರೆ. ಆಚಾರ್ಯರ ಮುಖವನ್ನು ಮೊದಲು ಕೂಡಲೇ ನೋಡಿದಾಗ ಇದು ಹುಣ್ಣಿಮೆಯ ಪೂರ್ಣಚಂದ್ರನೇ ಇರಬಹುದೆ ಎಂಬ ಸಂಶಯ, ಅಥವಾ ಮತ್ತೆ ಕೆಲವರಿಗೆ ಇದು ಪೂರ್ಣಮೆಯ ಚಂದ್ರನೆ ಸರಿ ಎಂಬ ಭ್ರಾಂತಿಯಾದರೂ ಹುಟ್ಟುತ್ತದೆ. ಆದರೆ ಅನಂತರ ಸರಿಯಾಗಿ ವಿಚಾರ ಮಾಡಿದಾಗ, ಸ್ಪಷ್ಟವಾಗಿ ನೋಡಿದಾಗ ಇಲ್ಲಿ ಯಾವ ಕಳಂಕವೂ ಇಲ್ಲವಾದುದರಿಂದ ಇದು ಚಂದ್ರನಲ್ಲ ಆಚಾರ್ಯರ ಮುಖ ಎಂದು ಗೊತ್ತಾಗುತ್ತದೆ. ಇಂತಹ ಚಂದ್ರನಿಗಿಂತಲೂ ಸುಂದರವಾದ, ನಿರ್ಮಲವಾದ ಅನೇಕ ವಿಲಾಸಗಳಿಂದಲೂ ಕೂಡಿರುವ ಕಾಂತಿ ಸಮುದ್ರವಾದ ಮುಖವುಳ್ಳ ಆಚಾರ್ಯರನ್ನು ಜನರು ಕಂಡರು.

ವಿಶೇಷಾಂಶ— (ಛಲಾರಿಯ)ಸಹಸಾ ಶ್ರೀಮಧ್ವಾಚಾರ್ಯಮುಖಂ ಪಶ್ಯತಾಂ ಪುಂಸಾಂ ಕಾಂತ್ಯಾಧಿಕ್ಯೋಪ ಲಂಭಾತ್ ಇದಂ ಚಂದ್ರಮಂಡಲಮಿತಿ ಪ್ರತೀತಿಃ ಜಾಯತೇ ಪಶ್ಚಾತ್ ವಿವೇಕಪೂರ್ವಂ ದರ್ಶನೇ ಸತಿ ತತ್ರಕಲಂಕಮ ಪಶ್ಯತಾಂ ಇದಂ ಆಚಾರ್ಯಾಣಾಂ ವದನಂ ನ ತು ಚಂದ್ರಬಿಂಬ ಇತಿ ಬುದ್ಧಿರಭೂತ್ ಅವಿವೇಕದಶಾಯಾಂ ಚಂದ್ರ ಮಂಡಲತ್ವಶಂಕಾವಿಷಯಂ ವಿವೇಕದಶಾಯಾಂತು ಚಂದ್ರಮಂಡಲಾದನ್ಯದಿತಿ ಬುದ್ಧಿವಿಷಯಂ ವದನಂ ಬಿಭರ್ತೀತಿ ಚಂದ್ರ ಬಿಂಬಾಪೇಕ್ಷಯಾ ಅತಿಸುಂದರವದನೋಪೇತಂ ಆಚಾರ್ಯಂ ಜನಾಃ ಐಕ್ಷಂತ ಇತಿ ಭಾವಃ ।

ಮೊಟ್ಟ ಮೊದಲು ವಿಚಾರ ಮಾಡದೇ ಇದ್ದಾಗ ಶ್ರೀಮಧ್ವಾಚಾರ್ಯರ ಮುಖವನ್ನು ನೋಡುತ್ತಿರುವ ಮಾನವರಿಗೆ, ಆಚಾರ್ಯರ ಮುಖದಲ್ಲಿ ಹೆಚ್ಚು ಕಾಂತಿಯು ಕಾಣಸುವುದರಿಂದ ಇದು ಆಚಾರ್ಯರ ಮುಖ ಚಂದ್ರಮಂಡಲವಲ್ಲ ಎಂದು ನಿಶ್ಚಯವುಂಟಾಯಿತು. ಆಚಾರ್ಯರ ಮುಖದ ವೈಶಿಷ್ಟ್ಯವು ತಿಳಿಯದೆ ಇದ್ದಾಗ ಇದು ಚಂದ್ರಮಂಡಲವೆಂಬ ಸಂದೇಹವುಂಟಾಯಿತು. ವಿವೇಚಿಸಿ ನೋಡಿದಾಗ ಇದು ಚಂದ್ರಮಂಡಲವಲ್ಲ ಎಂಬ ನಿಶ್ಚಯವುಂಟಾಯಿತು. ಹೀಗೆ ಜನರ ನಾನಾ ವಿಧವಾದ ಆಲೋಚನೆಗಳಿಗೆ ವಿಷಯವಾದ ಸುಂದರ ಮುಖವುಳ್ಳ ಆಚಾರ್ಯರನ್ನು ಜನರು ನೋಡಿದರು ಎಂದು ಭಾವ.

ವಿಗ್ರಹ—

**ಪರಿಪೂರ್ಣಶಶಾಂಕಬಿಂಬಶಂಕಾವಿಷಯಂ**— ಶಶಃ ಅಂಕಃ ಯಸ್ಯ ಸಃ ಶಶಾಂಕಃ, ಶಶಾಂಕಸ್ಯ ಬಿಂಬಂ ಶಶಾಂಕ ಬಿಂಬಂ, ಪರಿಪೂರ್ಣಂ ಚ ತತ್ ಶಶಾಂಕಬಿಂಬಂ ಚ ಪರಿಪೂರ್ಣಶಶಾಂಕಬಿಂಬಂ, ಪರಿಪೂರ್ಣ ಶಶಾಂಕಬಿಂಬಂ ಇತಿ ಶಂಕಾ ಪರಿಪೂರ್ಣಶಶಾಂಕಬಿಂಬಶಂಕಾ, ಪರಿಪೂರ್ಣಶಶಾಂಕಬಿಂಬಶಂಕಾಯಾಃ ವಿಷಯಃ ಪರಿಪೂರ್ಣಶಶಾಂಕಬಿಂಬಶಂಕಾವಿಷಯಃ ತತ್ ।

**ಅಕಲಂಕತಯಾ**— ನ ವಿದ್ಯತೇ ಕಲಂಕಃ ಯಸ್ಯ ತತ್ ಅಕಲಂಕಂ ಅಕಲಂಕಸ್ಯ ಭಾವಃ ಅಕಲಂಕತಾ ತಯಾ ।

**ಅಚ್ಛವಿಭ್ರಮಾಬ್ಧಿಃ**— ಅಚ್ಛಶ್ಚಾಸೌ ವಿಭ್ರಮಶ್ಚ ಅಚ್ಛವಿಭ್ರಮಃ, ಅಚ್ಛವಿಭ್ರಮಸ್ಯ ಅಬ್ಧಿಃ ಅಚ್ಛವಿಭ್ರಮಾಬ್ಧಿಃ ತಂ ।

ಕೋಶ— ಸಹಸಾ = ವಿಚಾರ ಮಾಡದೆ ಇದ್ದಾಗ, 'ಅತರ್ಕಿತೇತು ಸಹಸಾ' ಅಮರ, ಕಲಂಕ = ಮಚ್ಚೆ, 'ದೋಷ ಕಲಂಕೋಽಂಕಾಪವಾದಯೋಃ' ಅಮರ, ವಿಭ್ರಮಃ = ಕಾಂತಿ, 'ವಿಭ್ರಮಃ ಸಂಶಯೇ ಭ್ರಾಂತೌ ಶೋಭಾಯಾಂ ಚ' ವೈಜಯಂತಿ ।

★ ★ ★

ಅವತಾರಿಕಾ— ಆಚಾರ್ಯರ ಹಲ್ಲುಗಳು, ತುಟಿ ಮತ್ತು ನೋಟಗಳನ್ನು ವರ್ಣಿಸುತ್ತಾರೆ.

**ಅತಿಸುಂದರಮಂದಹಾಸರಾಜ-**
**ನ್ನವಕುಂದಾಭರದಂ ಶುಭಾರುಣೋಷ್ಠಮ್ ।**
**ಕಮಲಾಯತಲೋಚನಾವಲೋಕೈ-**
**ರಪಿ ಲೋಕಾನ್ ಸಕಲಾನ್ ಪ್ರಹರ್ಷಯಂತಮ್ ॥ 34 ॥**

ಪದಚ್ಛೇದ— ಅತಿಸುಂದರಮಂದಹಾಸರಾಜನ್ನವಕುಂದಾಭರದಂ, ಶುಭಾರುಣೋಷ್ಠಂ, ಕಮಲಾಯತಲೋಚನಾವಲೋಕೈಃ, ಅಪಿ, ಲೋಕಾನ್, ಸಕಲಾನ್, ಪ್ರಹರ್ಷಯಂತಮ್ ।

ಅನ್ವಯ— ಅತಿಸುಂದರಮಂದಹಾಸರಾಜನ್ನವಕುಂದಾಭರದಂ, ಶುಭಾರುಣೋಷ್ಠಂ, ಕಮಲಾಯತಲೋಚನಾವಲೋಕೈಃ, ಸಕಲಾನ್, ಲೋಕಾನ್, ಅಪಿ, ಪ್ರಹರ್ಷಯತಂ (ತಂ ಅನಂತಮಾನಸಂ ಜನಾಃ ಐಕ್ಷಂತ) ।

ಅನ್ವಯಾರ್ಥ—

**ಅತಿಸುಂದರಮಂದಹಾಸರಾಜತ್‌ನವಕುಂದಾಭರದಂ, ಶುಭಅರುಣಓಷ್ಠಂ** = ಅತ್ಯಂತ ಮನೋಹರವಾದ ಮುಗುಳ್ನಗೆಯಿಂದ ಪ್ರಕಾಶಿಸುವ ಹೊಸದಾದ ಮಲ್ಲಿಗೆ ಮೊಗ್ಗಿನ ಕಾಂತಿಯಂತೆ ಕಾಂತಿಯುಳ್ಳ ಹಲ್ಲುಗಳುಳ್ಳ ತಾವರೆ ಹೂವಿನಂತೆ ವಿಶಾಲವಾದ ತುಟಿಯುಳ್ಳ

**ಕಮಲಆಯತಲೋಚನಅವಲೋಕೈಃ** = ತಾವರೆ ಹೂವಿನಂತೆ ವಿಶಾಲವಾದ ಕಣ್ಣುಗಳ ನೋಟಗಳಿಂದ,

**ಸಕಲಾನ್** = ಎಲ್ಲಾ

**ಲೋಕಾನ್ ಅಪಿ** = ಜನರನ್ನು,

**ಪ್ರಹರ್ಷಯಂತಂ** = ಸಂತೋಷಗೊಳಿಸುತ್ತಿರುವ (ಆಚಾರ್ಯರನ್ನು ಜನರು ನೋಡಿದರು).

ತಾತ್ಪರ್ಯ— ಆಚಾರ್ಯರ ಹಲ್ಲುಗಳು ಮಾಗಿ ಮಲ್ಲಿಗೆ ಮೊಗ್ಗಿನಂತೆ, ಮರಜಾಜಿಹೂವಿನ ಮೊಗ್ಗಿನಂತೆ ಚಿಕ್ಕದಾಗಿ ಬಿಳಿದಾಗಿ ಸುಂದರವಾಗಿದ್ದವು. ಅವರು ಮುಗುಳ್ನಗುವಾಗ ಅವರ ಹಲ್ಲುಗಳು ಸ್ವಲ್ಪ ಪ್ರಕಾಶಿಸುತ್ತಿದ್ದವು. ಅವರ ತುಟಿಗಳು ಪರಮಮಂಗಳಕರವಾಗಿಯೂ ಕೆಂಪಾಗಿಯೂ ಇದ್ದವು. ಅವರ ಎರಡು ಕಣ್ಣುಗಳೂ, ತಾವರೆ ಹೂವಿನಂತೆ ವಿಶಾಲವಾಗಿ ಸುಂದರವಾಗಿ ಕೆಂಪಗೆ ಇದ್ದವು. ಅವರ ಅಂತಹ ಕಣ್ಣುಗಳ ನೋಟಗಳಿಂದ ಎಲ್ಲಾ ಜನರನ್ನೂ ಸಂತೋಷಗೊಳಿಸುತ್ತಿದ್ದರು. ಇಂತಹ ಆಚಾರ್ಯರನ್ನು ಜನರು ನೋಡಿದರು.

ವಿಗ್ರಹ—

**ಅತಿಸುಂದರಮಂದಹಾಸರಾಜನ್ನವಕುಂದಾಭರದಂ**— ಮಂದಶ್ಚಾಸೌ ಹಾಸಶ್ಚ ಮಂದಹಾಸಃ, ಅತಿಸುಂದರಶ್ಚಾಸೌ ಮಂದಹಾಸಶ್ಚ ಅತಿಸುಂದರಮಂದಹಾಸಃ, ಅತಿಸುಂದರಮಂದಹಾಸೇನ ರಾಜಂತಃ ಅತಿಸುಂದರಮಂದಹಾಸರಾಜಂತಃ, ನವಾನಿ ಚ ತಾನಿ ಕುಂದಾನಿಚ ನವಕುಂದಾನಿ, ನವಕುಂದನಾಂ ಆಭಾ ಇವ ಆಭಾ ಯೇಷಾಂ ತೇ ನವಕುಂದಾಭಾಃ, ನವಕುಂದಭಾಶ್ಚ ತೇ ರದಾಶ್ಚ ನವಕುಂದಾಭರದಾಃ,

ಅತಿಸುಂದರಮಂದಹಾಸರಾಜಂತಃ ನವಕುಂದಾಭರದಾಃ ಯಸ್ಯ ಸಃ ಅತಿಸುಂದರಮಂದಹಾಸ ರಾಜನ್ನವಕುಂದಭರದಃ ತಂ ।

**ಶುಭಾರುಣೋಷ್ಠಂ—** ಶುಭೌ ಅರುಣೌ ಓಷ್ಠೌ ಯಸ್ಯ ಸಃ ಶುಭಾರುಣೋಷ್ಠಃ ತಂ ।

**ಕಮಲಾಯತಲೋಚನಾವಲೋಕೈಃ—** ಕಮಲವತ್ ಆಯತೇ ಕಮಲಾಯತೇ, ಕಮಲಾಯತೇ ಚ ತೇ ಲೋಚನೇ ಚ ಕಮಲಾಯತಲೋಚನೇ, ಕಮಲಾಯತಲೋಚನಯೋಃ ಅವಲೋಕಾಃ ಕಮಲಾ-ಯತಲೋಚನಾವಲೋಕಾಃ ತೈಃ ।

**ಕೋಶ—** ರದ = ಹಲ್ಲು, 'ರದನಾ ದಶನಾ ದಂಷ್ಟಾ ರದಾಃ' ಅಮರ, ಓಷ್ಠ = ತುಟಿ, 'ಓಷ್ಠಾಧರೌ ತು ರದನಚ್ಛದೌ ದಶನವಾಸಸಿ' ಅಮರ, ಅವಲೋಕ = ದರ್ಶನ, 'ಅಲೋಕನದರ್ಶನಾಲೋಕನೇಕ್ಷಣಂ' ಅಮರ ।

★ ★ ★

**ಅವತಾರಿಕಾ—** ಶ್ರೀಮದಾಚಾರ್ಯರ ಸುಂದರವಾದ ಕಪೋಲಗಳು ಹಾಗೂ ಹುಬ್ಬುಶಿರಗಳನ್ನು ವರ್ಣಿಸುತ್ತಾರೆ.

**ಅತಿಭಾಸುರಕರ್ಣಭಾಸಿತಶ್ರೀ-**
**ತುಲಸೀಗುಚ್ಛಮತುಚ್ಛಕಾಂತಿಗಂಡಮ್ ।**
**ಭುವನತ್ರಯಭೂತ್ಯಭೂತಿದಾನೇ**
**ಚತುರಭ್ರೂವರವಿಭ್ರಮಂ ಸುಮೌಲಿಮ್ ॥ 35 ॥**

**ಪದಚ್ಛೇದ—**ಅತಿಭಾಸುರಕರ್ಣಭಾಸಿತಶ್ರೀತುಲಸೀಗುಚ್ಛಂ ಅತುಚ್ಛಕಾಂತಿಗಂಡಂ, ಭುವನತ್ರಯಭೂತ್ಯಭೂತಿ-ದಾನೇ, ಚತುರಭ್ರೂವರವಿಭ್ರಮಂ, ಸುಮೌಲಿಂ, (ಜನಾಃ ತಂ ಅನಂತ ಮಾನಸಂ ಐಕ್ಷಂತ) ।

**ಅನ್ವಯ—** ಅತಿಭಾಸುರಕರ್ಣಭಾಸಿತಶ್ರೀತುಲಸೀಗುಚ್ಛಂ ಅತುಚ್ಛಕಾಂತಿಗಂಡಂ, ಭುವನತ್ರಯಭೂತ್ಯಭೂತಿದಾನೇ, ಚತುರಭ್ರೂವರವಿಭ್ರಮಂ, ಸುಮೌಲಿಂ, (ಜನಾಃ ತಂ ಅನಂತ ಮಾನಸಂ ಐಕ್ಷಂತ) ।

**ಅನ್ವಯಾರ್ಥ—**

**ಅತಿಭಾಸುರಕರ್ಣಭಾಸಿತಶ್ರೀತುಲಸೀಗುಚ್ಛಂಅತುಚ್ಛಕಾಂತಿಗಂಡಂ** = ಸೌಂದರ್ಯದಿಂದ ಅತ್ಯಂತ ಪ್ರಕಾಶ-ಮಾನವಾದ, ಕಿವಿಗಳಲ್ಲಿ ಪ್ರಕಾಶಮಾನವಾದ ಕಾಂತಿಯುಕ್ತವಾದ ತುಲಸಿಯ ಗೊಂಚಲುಳ್ಳ ಸಂಪೂರ್ಣ ಶೋಭೆಯಿಂದ ಕೂಡಿದ ಕಪೋಲಗಳುಳ್ಳ,

**ಭುವನತ್ರಯಭೂತಿಅಭೂತಿದಾನೆ** = ಮೂರು ಲೋಕಗಳ ಉತ್ಪತ್ತಿ, ಲಯ ಇವುಗಳನ್ನು ಕೊಡುವುದರಲ್ಲಿ,

**ಚತುರ** = ಸಮರ್ಥವಾದ,

**ಭ್ರೂವರ** = ಶ್ರೇಷ್ಠವಾದ ಹುಬ್ಬುಗಳ,

**ವಿಭ್ರಮಂ** = ವಿಲಾಸವುಳ್ಳ,

**ಸುಮೌಲಿಂ** = ಒಳ್ಳೆಯ ಶಿರಸ್ಸುಳ್ಳ (ಶ್ರೀಮಧ್ವಾಚಾರ್ಯರನ್ನು ಜನರು ನೋಡಿದರು).

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಅತ್ಯಂತ ಸುಂದರವಾಗಿ ಪ್ರಕಾಶಿಸುತ್ತಿರುವ ಕಿವಿಗಳಲ್ಲಿ ಪ್ರಕಾಶಮಾನವಾದ ತುಲಸೀಮಂಜರಿಯನ್ನು ಇಟ್ಟುಕೊಂಡಿದ್ದರು. ಅವರ ಕಪೋಲಗಳು ಪೂರ್ಣವಾದ ಕಾಂತಿಯಿಂದ ರಾಜಿಸುತ್ತಿದ್ದವು. ಅವರು ತಮ್ಮ ಶ್ರೇಷ್ಠವಾದ ಹುಬ್ಬುಗಳ ವಿಲಾಸದಿಂದಲೇ ಮೂರು ಲೋಕಗಳ ಉತ್ಪತ್ತಿ, ಲಯಗಳನ್ನು ಮಾಡಲು ಸಮರ್ಥ-ರಾಗಿದ್ದರು. ಅವರ ತಲೆಯು ಸುಂದರವಾಗಿದ್ದಿತು. ಇಂತಹ ಶ್ರೀಮಧ್ವಾಚಾರ್ಯರನ್ನು ಜನರು ಕಂಡರು.

ವಿಗ್ರಹ—

ಶ್ರೀತುಲಸೀಗುಚ್ಛ ಅತಿಭಾಸುರಕರ್ಣಭಾಸಿತ ಮತುಚ್ಛಕಾಂತಿಗಂಡಂ— ಶ್ರೀಯುಕ್ತಾ ಚ ಸಾ ತುಲಸೀ ಚ ಶ್ರೀತುಲಸೀ, ಶ್ರೀತುಲಸ್ಯಾಃ ಗುಚ್ಛಃ ಶ್ರೀತುಲಸೀಗುಚ್ಛಃ, ಅತಿಭಾಸುರಕರ್ಣಯೋಃ ಭಾಸಿತಃ ಶ್ರೀತುಲಸೀಗುಚ್ಛಃ ಯಸ್ಯಸಃ, ತಂ ಅತಿಭಾಸುರ ಕರ್ಣಭಾಸಿತಃಶ್ರೀತುಲಸೀಗುಚ್ಛಂ, ತುಚ್ಛಾ ನ ಭವತೀತಿ ಅತುಚ್ಛಾ ಅತುಚ್ಛಾ ಕಾಂತಿಃ, ಯಯೋಃ ತೌ ಅತುಚ್ಛಕಾಂತೀ, ಅತುಚ್ಛಕಾಂತೀ ಗಂಡೌ ಯಸ್ಯ ಸಃ, ತಂ ।

ಭುವನತ್ರಯಭೂತ್ಯಭೂತಿದಾನೇ— ತ್ರಯಃ ಅವಯವಾಃ ಅಸ್ಯೇತಿ ತ್ರಯಂ ಭುವನಾನಾಂ ತ್ರಯಂ ಭುವನತ್ರಯಂ, ನ ಭೂತಿಃ ಅಭೂತಿಃ ಭೂತಿಶ್ಚ ಅಭೂತಿಶ್ಚ ಭೂತ್ಯಭೂತೀ, ತಯೋಃ ದಾನಂ ಭೂತ್ಯಭೂತಿದಾನಂ, ಭುವನತ್ರಯಸ್ಯ ಭೂತ್ಯಭೂತಿದಾನಂ ಭುವನತ್ರಯಭೂತ್ಯಭೂತಿದಾನಂ ತಸ್ಮಿನ್ ಭ್ರೂಷು ವರೇ ಭ್ರೂವರೇ ಭ್ರೂವರಯೋಃ ವಿಭ್ರಮಃ ಭ್ರೂವರವಿಭ್ರಮಃ, ಚತುರಃ ಭ್ರೂವರವಿಭ್ರಮಃ ಯಸ್ಯಸಃ ಚತುರಭ್ರೂವರವಿಭ್ರಮಃ ತಂ । ಅಥವಾ ವರಶ್ಚಾಸೌ ವಿಭ್ರಮಶ್ಚ ವರವಿಭ್ರಮಃ ಭ್ರೂವೋಃ ವರವಿಭ್ರಮಃ ಭ್ರೂವರವಿಭ್ರಮಃ, ಚತುರಃ ಭ್ರೂವರವಿಭ್ರಮಃ ಯಸ್ಯಸಃ ಚತುರಭ್ರೂವರವಿಭ್ರಮಃ ।

ಸುಮೌಲಿಃ— ಶೋಭನಃ ಮೌಲಿಃ ಯಸ್ಯ ಸಃ ಸುಮೌಲಿಃ ತಂ, ಇಲ್ಲಿಗೆ ನರದೇವಾದಿದಿದೃಕ್ಷಯಾ ಎಂಬ 24ನೇ ಶ್ಲೋಕದಿಂದ 35ನೇ ಶ್ಲೋಕದವರೆಗೆ 12 ಶ್ಲೋಕಗಳ ಆದಿಕುಲಕವು ಸಮಾಪ್ತವಾಯಿತು.

ಕೋಶ— ಗುಚ್ಛ = ಗೊಂಚಲು, 'ಸ್ಯಾದ್ಗುಚ್ಛಕಸ್ತುಸ್ತಬಕಃ' ಅಮರ, 'ಸ್ತಬಕೋಗುಚ್ಛಕೋ ಗುಚ್ಛೋ ಗುಲಿಚ್ಛಃ ಪರಿಕೀರ್ತಿತಃ' ಹಲ, ಗಂಡ = ಕಪೋಲ (ಕೆನ್ನೆ), 'ಅಧಸ್ತಾಚ್ಚಿಬುಕಂ ಗಂಡೌ ಕಪೋಲೌ' ಅಮರ, ಭೂತಿ = ಐಶ್ವರ್ಯ, 'ವಿಭೂತಿರ್ಭೂತಿರೈಶ್ವರ್ಯಂ' ಅಮರ, ಭ್ರೂ = ಹುಬ್ಬು, 'ಊರ್ಧ್ವೇ ದೃಗ್ಭ್ಯಾಂ ಭ್ರುವೌ ಸ್ತ್ರಿಯಾಂ' ಅಮರ ।

ವಿಶೇಷಾಂಶ— ಭುವನತ್ರಯ = ಮೂರು ಲೋಕಗಳಲ್ಲಿರುವ ಸಜ್ಜನ, ದುರ್ಜನರಿಗೆ, ಭೂತಿ = ಐಶ್ವರ್ಯವು ಅಭೂತಿ = ದುಃಖಾದ್ಯನಿಷ್ಟವು ಇವುಗಳನ್ನು ಕೊಡುವುದರಲ್ಲಿ ಸಮರ್ಥವಾದ ಶ್ರೇಷ್ಠವಾದ ಹುಬ್ಬುಗಳ ವಿಲಾಸವುಳ್ಳವರು ಎಂದು ಛಲಾರಿಯದಲ್ಲಿ ಇನ್ನೊಂದು ವಿಶೇಷಾರ್ಥವನ್ನು ಹೇಳಿದ್ದಾರೆ.

★ ★ ★

ಅವತಾರಿಕಾ— ಆಚಾರ್ಯರ ದೇಹಲಕ್ಷಣವು ಸಾಮುದ್ರಿಕ ಶಾಸ್ತ್ರ ಮತ್ತು ದೇವತಾ ಪ್ರತಿಮೆಯನ್ನು ನಿರ್ಮಿಸುವ ಶಿಲ್ಪಶಾಸ್ತ್ರದಲ್ಲಿ ಹೇಳಿರುವ ಎಲ್ಲಾ ಶುಭಲಕ್ಷಣಗಳಿಗೆ ಒಂದು ಉತ್ತಮೋತ್ತಮವಾದ ಮಾದರಿಯಾಗಿತ್ತು ಎಂದು ಹೇಳುತ್ತಾರೆ.

**ಸಕಲಾವಯವಾನ್ ಸ್ಫುಟಂ ವಿಮಾನಾಃ**
**ಪ್ರತಿಮಾಲಕ್ಷಣದರ್ಶನಾಯ ಲಕ್ಷ್ಯಮ್ ।**
**ಚತುರಾ ವಿದಧುರ್ಯದೀಯಗಾತ್ರಂ**
**ಸ ಸುಲಕ್ಷ್ಮೇತ್ಯಧುನಾ ನಿಗದ್ಯತೇ ನೋ ॥ 36 ॥**

ಪದಚ್ಛೇದ— ಸಕಲಾವಯವಾನ್, ಸ್ಫುಟಂ, ವಿಮಾನಾಃ, ಪ್ರತಿಮಾಲಕ್ಷಣದರ್ಶನಾಯ, ಲಕ್ಷ್ಯಂ, ಚತುರಾಃ, ವಿದಧುಃ, ಯದೀಯಗಾತ್ರಂ, ಸಃ, ಸುಲಕ್ಷ್ಮಾ , ಇತಿ, ಅಧುನಾ, ನಿಗದ್ಯತೇ, ನೋ ।

ಅನ್ವಯ— ಚತುರಾಃ, ಸಕಲಾವಯವಾನ್, ಸ್ಫುಟಂ, ವಿಮಾನಾಃ ಯದೀಯಗಾತ್ರಂ, ಪ್ರತಿಮಾಲಕ್ಷಣದರ್ಶನಾಯ, ಲಕ್ಷ್ಯಂ, ವಿದಧುಃ, ಅಧುನಾ ಸುಲಕ್ಷ್ಮಾ ಇತಿ ನೋ, ನಿಗದ್ಯತೇ ।

ಅನ್ವಯಾರ್ಥ—

ಚತುರಾಃ = ಪುರುಷ ದೇಹಲಕ್ಷಣವನ್ನು ತಿಳಿಯುವುದರಲ್ಲಿ ಕುಶಲರಾದವರು,

ಸಕಲ = ಕೈ, ಕಾಲು ಮುಂತಾದ ಎಲ್ಲಾ,

ಅವಯವಾನ್ ಸ್ಫುಟಂವಿಮಾನಾಃಯದೀಯಗಾತ್ರಂ = ಅಂಗಗಳನ್ನು ಸ್ಪಷ್ಟವಾಗಿ ಅಳೆಯುವವರಾಗಿ ಯಾವ ಶ್ರೀಮಧ್ವಾಚಾರ್ಯರ ಶರೀರವನ್ನು,

ಪ್ರತಿಮಾಲಕ್ಷಣದರ್ಶನಾಯ = ದೇವತಾ ಪ್ರತಿಮೆಗಳ ಲಕ್ಷಣಗಳನ್ನು ತಿಳಿದುಕೊಳ್ಳುವುದಕೋಸ್ಕರ,

ಲಕ್ಷ್ಯಂ = ಉದಾಹರಣೆಯನ್ನಾಗಿ,

ವಿದಧುಃ = ಮಾಡಿದರು,

ಸಃ = ಅವರು,

ಅಧುನಾ = ಈ ಜನ್ಮದಲ್ಲಿ ಮಾತ್ರವೇ,

ಸುಲಕ್ಷ್ಮಾ = ಒಳ್ಳೆಯ ಲಕ್ಷಣವುಳ್ಳವರು,

ಇತಿ = ಹೀಗೆಂದು (ಮಯಾ= ನನ್ನಿಂದ),

ನೋ ನಿಗದ್ಯತೇ = ಹೇಳಲ್ಪಡುವುದಿಲ್ಲ.

ತಾತ್ಪರ್ಯ— ದೇವತಾ ಅಥವಾ ಮಹಾಪುರುಷರ ಪ್ರತಿಮೆಗೆ ಸಾಮುದ್ರಿಕ ಶಾಸ್ತ್ರಗಳಲ್ಲಿ ಹಾಗೂ ಶಿಲ್ಪಶಾಸ್ತ್ರಗಳಲ್ಲಿ ಯಾವ ಸಲ್ಲಕ್ಷಣಗಳನ್ನು ಹೇಳಿದ್ದಾರೋ ಅವೆಲ್ಲವನ್ನೂ ತಿಳಿದ ಬುದ್ಧಿವಂತರಾದ ಪಂಡಿತರು ಆಚಾರ್ಯರ ದೇಹವನ್ನು ನೋಡಿ ಚಕಿತರಾದರು. ಅವರು ಆಚಾರ್ಯರ ದೇಹದಲ್ಲಿ ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿರುವ ಎಲ್ಲಾ ದೇವತಾ, ಮಹಾಪುರುಷರ ಲಕ್ಷಣಗಳನ್ನು ಕಂಡರು. ಹಾಗೂ ಶಿಲ್ಪಶಾಸ್ತ್ರದಲ್ಲಿ ಹೇಳಿರುವ ಸ್ಪಷ್ಟವಾದ ಉದ್ದ, ಅಗಲ, ಸುತ್ತಳತೆ ಮುಂತಾದ ರೀತಿಯಿಂದ ಅಳೆದು ನೋಡಿದರು. ಆಚಾರ್ಯರ ಪ್ರತಿಯೊಂದು ಕೈಕಾಲು ಬೆರಳು ಮುಂತಾದ ಪ್ರತ್ಯಂಗವೂ ಶಾಸ್ತ್ರೋಕ್ತವಾದ ಲಕ್ಷಣ ಮತ್ತು ಪರಿಮಾಣಗಳಿಂದ ಕೂಡಿತ್ತು. ಹೀಗೆ ಲಕ್ಷಣ ಶಾಸ್ತ್ರದ ಸಂವಾದವನ್ನು (ಸಮ್ಮತಿಯನ್ನು) ನೋಡಿ ಆಗ ಪ್ರತಿಮಾಶಿಲ್ಪ ಪಂಡಿತರು ಇನ್ನು ಮುಂದೆ ನಾವು ಶಿಲಾದಿ ಪ್ರತಿಮೆಗಳನ್ನು ತಯಾರಿಸುವಾಗ ಅವುಗಳ ಅಂಗೋಪಾಂಗಗಳು ಇವೇ ಲಕ್ಷಣಗಳಿಂದಲೂ ಮತ್ತು ಅಳತೆಗಳಿಂದಲೂ ಕೂಡಿರಬೇಕೆಂದು ನಿಶ್ಚಯಿಸಿದರು. ಮತ್ತೂ ಪ್ರತಿಮೆಯನ್ನು ತಯಾರಿಸಲು ಆಚಾರ್ಯರ ದೇಹವೇ ಮಾದರಿಯೆಂದೂ ನಿಶ್ಚಯಿಸಿದರು. ಇಂತಹ ಶ್ರೀಮಧ್ವಾಚಾರ್ಯರು ಈ ಅವತಾರದಲ್ಲಿ ಮಾತ್ರವೇ ವಿಶೇಷವಾಗಿ ಒಳ್ಳೆಯ ಲಕ್ಷಣವುಳ್ಳವರಾಗಿದ್ದರು ಎಂದು ಗ್ರಂಥಕಾರನಾದ ನಾನು (ಶ್ರೀನಾರಾಯಣಪಂಡಿತಾಚಾರ್ಯರು) ಹೇಳುವುದಿಲ್ಲ. ಯಾವಾಗಲೂ ಎಲ್ಲಾ ಅವತಾರಗಳಲ್ಲಿಯೂ ಅವರು ಒಳ್ಳೆಯ ಲಕ್ಷಣವುಳ್ಳವರೆಂದೇ ನಾನು ಹೇಳುತ್ತೇನೆ ಹಾಗೆಯೇ ತಿಳಿದಿದ್ದೇನೆ ಎಂದು ಗ್ರಂಥಕಾರರಾದ ಶ್ರೀನಾರಾಯಣ ಪಂಡಿತಾಚಾರ್ಯರು ಹೇಳಿದ್ದಾರೆ. ಇದರಿಂದ ಶ್ರೀ ಆಚಾರ್ಯರ ದೇಹ ಲಕ್ಷಣಗಳು ಸ್ವಾಭಾವಿಕ ಮತ್ತು ಶ್ರುತ್ಯಾದಿ ಸಮ್ಮತ ಎಂದು ತಿಳಿದುಬರುತ್ತದೆ.

ವಿಗ್ರಹ—

ಸಕಲಾವಯವಾನ್— ಸಕಲಾಶ್ಚ ತೇ ಅವಯವಾಶ್ಚ ಸಕಲಾವಯವಾಃ ತಾನ್ ।

ಪ್ರತಿಮಾಲಕ್ಷಣದರ್ಶನಾಯ— ಪ್ರತಿಮಾನಾಂ ಲಕ್ಷಣಾನಿ ಪ್ರತಿಮಾಣಕ್ಷಣಾನಿ ಪ್ರತಿಮಾಲಕ್ಷಣಾನಾಂ ದರ್ಶನಂ ಪ್ರತಿಮಾಲಕ್ಷಣದರ್ಶನಂ ತಸ್ಮೈ ।

ಯದೀಯಗಾತ್ರಂ— ಯಸ್ಯ ಇದಂ ಯದೀಯಂ ಯದೀಯಂ ಚ ತತ್ ಗಾತ್ರಂ ಚ ಯದೀಯಗಾತ್ರಂ ।

ಸುಲಕ್ಷ್ಮಾ— ಶೋಭನಾನಿ ಲಕ್ಷ್ಮಾಣಿ ಯಸ್ಯಸಃ ಸುಲಕ್ಷ್ಮಾ ।

ಕೋಶ— ಅವಯವ = ಅಂಗ, 'ಅಂಗಂ ಪ್ರತೀಕೋಽವಯವಃ' ಅಮರ ।

ಕ್ರಿಯಾಪದ— ವಿ+ದಧುಃ - ದಧೌ ದಧತುಃ ದಧುಃ, ದಧಿಥ ದಧಾಥ ದಧಥುಃ ದಧ, ದಧೌ ದಧಿವ ದಧಿಮ । ವಿ ಉಪಸರ್ಗಪೂರ್ವಕ ಧಾರಣಪೋಷಣಾರ್ಥಕ ಡುಧಾಞ ಧಾತು ಅನಿಟ್ ಪರಸ್ಮೈಪದಿ ಕರ್ತರಿ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ । ನಿ+ಗದ್ಯತೇ ಗದ್ಯೇತೇ ಗದ್ಯಂತೇ ಇತ್ಯಾದಿ ನಿ ಉಪಸರ್ಗಪೂರ್ವಕ ವ್ಯಕ್ತವಾಗರ್ಥಕ ಗದವ್ಯಕ್ತಾಯಾಂ ವಾಚಿ ಗದಧಾತು ಸೇಟ್ ಪರಸ್ಮೈಪದಿ ಕರ್ಮಣಿ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನಂ ।

ಪ್ರಯೋಗ— ಚತುರ್ಭಿಃ ಸಕಲಾವಯವಾನ್ ಸ್ಫುಟಂ ವಿಮಾನ್ಯೈಃ ಯದೀಯಂ ಗಾತ್ರಂ ಪ್ರತಿಮಾಲಕ್ಷಣದರ್ಶನಾಯ ಲಕ್ಷ್ಯಂ ವಿದಧೇ ತಂ (ಶ್ರೀಮಧ್ವಾಚಾರ್ಯಂ) ಅಧುನಾ (ಅಸ್ಮಿನ್ ಅವತಾರ ಏವ) ಸುಲಕ್ಷ್ಮಾ (ಶೋಭನಲಕ್ಷಣೋಪೇತಃ) ಇತಿ ನೋ ನಿಗದಾಮಿ, ಸರ್ವಾವತಾರೇಷ್ವಪಿ ಸಃ ಶೋಭನಲಕ್ಷಣೋಪೇತ ಏವ ।

★ ★ ★

ಅವತಾರಿಕಾ— ಶ್ರೀಮಧ್ವಾಚಾರ್ಯರು ಅಣಿಮಾದಿ ಅಷ್ಟಸಿದ್ಧಿವುಳ್ಳವರೆಂದು ಸೂಚಿಸುತ್ತಾ ಅವರನ್ನು ವರ್ಣಿಸುತ್ತಾರೆ.

**ಅತಿಲೋಲದೃಶಾಂ ಸಮೀಕ್ಷಿತುಂ ಸ್ವಂ**
**ಜನಸಂಬಾಧಭಯೇನ ದೂರಭಾಜಾಮ್ ।**
**ಸಮದರ್ಶಯದೂರ್ಧ್ವಮೋರಸೋಽಸೌ**
**ದಯಯೈವೋರುಜನೌಘಮಧ್ಯಗೋಽಪಿ ॥ 37 ॥**

ಪದಚ್ಛೇದ— ಅತಿಲೋಲದೃಶಾಂ, ಸಮೀಕ್ಷಿತುಂ, ಸ್ವಂ ಜನಸಂಬಾಧಭಯೇನ, ದೂರಭಾಜಾಂ, ಸಮದರ್ಶಯತ್, ಊರ್ಧ್ವಂ, ಉರಸಃ, ಅಸೌ, ದಯಯಾ, ಏವ, ಉರುಜನೌಘಮಧ್ಯಗಃ, ಅಪಿ ।

ಅನ್ವಯ— ಅಸೌ, ಉರುಜನೌಘಮಧ್ಯಗಃ, ಅಪಿ, ಸ್ವಂ, ಸಮೀಕ್ಷಿತುಂ, ಅತಿಲೋಲದೃಶಾಂ, ಜನಸಂಬಾಧ ಭಯೇನ, ದೂರಭಾಜಾಂ, ದಯಯಾ, ಏವ, ಆಉರಸಃ, ಊರ್ಧ್ವಂ, ಸಮದರ್ಶಯತ್ ।

ಅನ್ವಯಾರ್ಥ—

ಅಸೌ = ಈ ಶ್ರೀ ಮಧ್ವಾಚಾರ್ಯರು,
ಉರುಜನಓಘಮಧ್ಯಗಃಅಪಿ = ಬಹಳ ಜನರ ಸಮೂಹದ ನಡುವೆ ಇದ್ದವರಾದಗ್ಯೂ,
ಸ್ವಂ = ತನ್ನನ್ನು,
ಸಮೀಕ್ಷಿತುಂ = (ಚೆನ್ನಾಗಿ) ನೋಡುವುದಕ್ಕೆ,
ಅತಿಲೋಲದೃಶಾಂ = ಬಹಳ ಆಸಕ್ತವಾದ (ಚಂಚಲವಾದ) ಕಣ್ಣುಗಳುಳ್ಳ,
ಜನಸಂಬಾಧಭಯೇನ = ಜನರ ನೂಕಾಟದ ಹೆದರಿಕೆಯಿಂದ,
ದೂರಭಾಜಾಂ = ದೂರದಲ್ಲಿರುವ ಜನರಿಗೆ,
ದಯಯಾ ಏವ = ಕರುಣೆಯಿಂದಲೇ,
ಆಉರಸಃ = ಎದೆಯಿಂದ ಆರಂಭಿಸಿ,
ಊರ್ಧ್ವಂ = ಮೇಲ್ಭಾಗವನ್ನು,
ಸಮದರ್ಶಯತ್ = ತೋರಿಸಿದರು.

ತಾತ್ಪರ್ಯ— ಶ್ರೀಮಧ್ವಾಚಾರ್ಯರನ್ನು ನೋಡಲು ಸಾವಿರಾರು ಜನರು ನೆರೆದಿದ್ದರು. ಆಚಾರ್ಯರು ಅನೇಕ ಜನರ ಮಧ್ಯದಲ್ಲಿದ್ದರು. ದೂರದಲ್ಲಿದ್ದವರಿಗೆ ಅವರು ಕಾಣುತ್ತಿರಲಿಲ್ಲ. ಅವರನ್ನು ನೋಡಲು ಕುತೂಹಲವುಳ್ಳ ಕೆಲವರು ಜನರ ನೂಕುನುಗ್ಗಲಿನ ಭಯದಿಂದ ದೂರ ನಿಂತಿದ್ದರು, ಅತ್ತಿತ್ತ ಕಣ್ಣು ತಿರುಗಿಸುತ್ತಾ ಶ್ರೀಮಧ್ವಾಚಾರ್ಯ-ರನ್ನು ನೋಡಬೇಕೆಂದು ಆಸೆಪಡುತ್ತಿದ್ದರು. ಇದನ್ನು ನೋಡಿ ಶ್ರೀಮಧ್ವಾಚಾರ್ಯರು ತಾನು ಮೊದಲಿಗಿಂತಲೂ ತನ್ನ ದೇಹವನ್ನೇ ಎತ್ತರವಾಗಿ ಮಾಡಿಕೊಂಡು ಎದೆಯಿಂದ ಮೇಲ್ಭಾಗವನ್ನು ದೂರದಲ್ಲಿರುವವರ ಕಣ್ಣಿಗೂ ಬೀಳುವಂತೆ ತೋರಿಸಿದರು. ಇದರಿಂದ ಆಚಾರ್ಯರಿಗೆ ತನ್ನಿಷ್ಟದಂತೆ ಚಿಕ್ಕದಾಗುವುದು (ಅಣಿಮಾ), ದೊಡ್ಡದಾಗುವುದು (ಮಹಿಮಾ), ಭಾರವಾಗುವುದು (ಗರಿಮಾ), ಹಗುರವಾಗುವುದು (ಲಘಿಮಾ), ಎಷ್ಟು ದೂರದಲ್ಲಿರುವ ವಸ್ತುವನ್ನಾದರೂ ಪಡೆಯುವುದು (ಪ್ರಾಪ್ತಿ), ಇಷ್ಟ ಬಂದ ರೂಪವನ್ನು ಧರಿಸುವುದು (ಪ್ರಾಕಾಮ್ಯಂ) ಎಲ್ಲರನ್ನು ತನ್ನ ಅಧೀನರನ್ನಾಗಿ ಮಾಡಿಕೊಳ್ಳುವುದು ಎಂಬ ಅಷ್ಟೈಶ್ವರ್ಯಗಳೂ (ಅಷ್ಟಸಿದ್ಧಿಗಳೂ) ವಶವಾಗಿದ್ದವು ಎಂದು ಸೂಚಿತವಾಗುತ್ತದೆ.

ವಿಗ್ರಹ—

**ಅತಿಲೋಲದೃಶಾಂ**— ಅತಿಲೋಲಾಃ ದೃಶಃ ಯೇಷಾಂತೇ ಅತಿಲೋಲದೃಶಾಂ, ತೇಷಾಂ ।

**ಜನಸಂಬಾಧಭಯೇನ**— ಜನಾನಾಂ ಸಂಬಾಧಃ ಜನಸಂಭಾಧಃ, ಜನಸಂಬಾಧಾತ್ ಭಯಂ ಜನಸಂಬಾಧ ಭಯಂ ತೇನ ।

**ದೂರಭಾಜಾಂ**— ದೂರಂ ಭಜಂತೀತಿ ದೂರಭಾಜಃ ತೇಷಾಂ ।

**ಉರುಜನೌಘಮಧ್ಯಗಃ**— ಉರವಶ್ಚತೇ ಜನಾಶ್ಚ ಉರುಜನಾಃ, ಉರುಜನಾನಾಂ ಓಘಃ ಉರುಜನೌಘಃ, ಉರುಜನೌಘೇ ಮಧ್ಯಂ ಗಚ್ಛತೀತಿ ಉರುಜನೌಘಮಧ್ಯಗಃ ।

**ಕೋಶ**— ಓಘ = ಸಮೂಹ, 'ಓಘಃ ಪ್ರವಾಹೋ ನಿವಹಃ' ವಿಶ್ವ, 'ಓಘೋ ವೃಂದೇಽಂಭಸಾಂ ರಯೇ' ಅಮರ, ಲೋಲ = ಸತೃಷ್ಣ (ಆಸೆಯಿಂದ ಕೂಡಿದವನು) = 'ಲೋಲಶ್ಚಂಚಲ ಸತೃಷ್ಣಯೋಃ' ಭಾಸ್ಕರ, ದಯಾ = ಕೃಪಾ, 'ಕೃಪಾ ದಯಾನುಕಂಪಾ ಸ್ಯಾತ್' ಅಮರ, ಉರಃ = ಎದೆ, 'ಉರೋ ವತಸಂ ಚ ವಕ್ಷಶ್ಚ' ಅಮರ ।

**ವ್ಯಾಕರಣವಿಶೇಷ**— ಆ ಉರಸಃ ಎಂಬಲ್ಲಿ 'ಆಙ ಮರ್ಯಾದಾವಚನೇ' (1-4-89) 'ಆಙ ಮರ್ಯಾದಾಯಾ ಮುಕ್ತಸಂಜ್ಞಃ ಸ್ಯಾತ್' ಎಂಬ ಸೂತ್ರದಿಂದ ಕರ್ಮಪ್ರವಚನೀಯ ಸಂಜ್ಞೆ. ಇಲ್ಲಿ ವಚನಗ್ರಹಣ ಮಾಡಿದ್ದರಿಂದ ಅಭಿವಿಧಿ ಯಲ್ಲಿಯೂ ಕರ್ಮಪ್ರವಚನೀಯ ಸಂಜ್ಞೆಯಿದೆ. 'ಪಂಚಮ್ಯಪಾಙ ಪರಿಭಿಃ' (2-3-10) 'ಏತ್ಯೆಃ ಕರ್ಮಪ್ರವಚನೀಯ್ಯೆಃ ಯೋಗೇ ಪಂಚಮೀಸ್ಯಾತ್' ಎಂಬ ಸೂತ್ರದಿಂದ ಪಂಚಮೀ, ತೇನ ವಿನಾ ಇತಿ ಮರ್ಯಾದಾ, ಅದನ್ನು ಹೊರತು ಎಂದು ಹೇಳುವಾಗ ಮರ್ಯಾದಾ ಅರ್ಥ. ತೇನ ಸಹೇತ್ಯಭಿವಿಧಿಃ । ಅದೂ ಸೇರಿ ಎಂದು ಹೇಳುವಾಗ ಅಭಿವಿಧಿ. ಇಲ್ಲಿ ಆ ಉರಸಃ ಎಂಬಲ್ಲಿ ಎದೆಯನ್ನು ಸೇರಿಸಿ ಎದೆಯಿಂದ ಮೇಲ್ಭಾಗವನ್ನು ತೋರಿಸಿದರು ಎಂಬ ಅರ್ಥವು ವಿವಕ್ಷಿತವಾದುದರಿಂದ ಅಭಿವಿಧ್ಯರ್ಥಕವಾದ ಆಙ ಎಂದು ತಿಳಿಯಬೇಕು.

**ಕ್ರಿಯಾಪದ**— **ಸಮದರ್ಶಯತ್** - ಸಮ್+ಅದರ್ಶಯತ್ ಅದರ್ಶಯತಾಂ ಅದರ್ಶಯನ್ ಇತ್ಯಾದಿ ದೃಶಿರ್ ಪ್ರೇಕ್ಷಣೇ ಪ್ರೇಕ್ಷಣಾರ್ಥಕ ದೃಶ್ ಧಾತು ಣಿಜಂತ ಪರಸ್ಮೈಪದಿ ಅನದ್ಯತನಭೂತೇ ಲಙ.

**ಪ್ರಯೋಗ**— ಅಮುನಾ ಉರುಜನೌಘಮಧ್ಯಗೇನಾಪಿ ಸ್ವಂ ಸಮೀಕ್ಷಿತುಂ ಅತಿಲೋಲದೃಶಾಂ ಜನಸಂಬಾಧ ಭಯೇನ ದೂರಭಾಜಾಂ ದಯಯಾ ಏವ ಆ ಉರಸಃ ಊರ್ಧ್ವಂ ಸಮದರ್ಶ್ಯಂತ (ಕರ್ಮಣಿ) ।

★ ★ ★

**ಅವತಾರಿಕಾ—** ಆಚಾರ್ಯರು ವಿಷ್ಣುಮಂಗಲವೆಂಬ ಶ್ರೀಕೃಷ್ಣನ ದೇವಾಲಯವನ್ನು ಪ್ರವೇಶಿಸಿದರೆಂದು ಹೇಳುತ್ತಾರೆ.

**ಸವಿಕಾಸದೃಶಾಂ ಕೃತಾಂಜಲೀನಾಂ**
**ಜನತಾನಾಂ ಪರಮಾದರಾನ್ನತಾನಾಮ್ ।**
**ವಲಯೇನ ವೃತಃ ಪ್ರಿಯಂ ಮುರಾರೇಃ**
**ಪ್ರವಿವೇಶಾಯತನಂ ಪ್ರಬರ್ಹಬೋಧಃ ॥ 38 ॥**

**ಪದಚ್ಛೇದ—** ಸವಿಕಾಸದೃಶಾಂ, ಕೃತಾಂಜಲೀನಾಂ, ಜನತಾನಾಂ, ಪರಮಾದರಾತ್, ನತಾನಾಂ, ವಲಯೇನ, ವೃತಃ, ಪ್ರಿಯಂ, ಮುರಾರೇಃ, ಪ್ರವಿವೇಶ, ಆಯತನಂ, ಪ್ರಬರ್ಹಬೋಧಃ ।

**ಅನ್ವಯ—** ಸವಿಕಾಸದೃಶಾಂ, ಕೃತಾಂಜಲೀನಾಂ, ಪರಮಾದರಾತ್, ನತಾನಾಂ, ಜನತಾನಾಂ, ವಲಯೇನ, ವೃತಃ, ಪ್ರಬರ್ಹಬೋಧಃ, ಮುರಾರೇಃ, ಪ್ರಿಯಂ, ಆಯತನಂ, ಪ್ರವಿವೇಶ ।

**ಅನ್ವಯಾರ್ಥ—**

**ಸವಿಕಾಸದೃಶಾಂ** = ಅರಳಿದ ಕಣ್ಣುಗಳುಳ್ಳ,
**ಕೃತಾಂಜಲಿನಾಂ** = ಕೈಮುಗಿದುಕೊಂಡಿರುವ,
**ಪರಮಾದರಾತ್** = ಅತಿಶಯವಾದ ಭಕ್ತಿಯಿಂದ,
**ನತಾನಾಂ** = ಬಾಗಿದ (ನಮ್ರರಾದ),
**ಜನಾನಾಂ** = ಜನರ ಸಮೂಹಗಳ,
**ವಲಯೇನ** = ಗುಂಪಿನಿಂದ (ಮಂಡಲಾಕಾರವಾದ ಜನಸಮೂಹದಿಂದ),
**ವೃತಃ** = ಸುತ್ತುವರಿಯಲ್ಪಟ್ಟ
**ಪ್ರಬರ್ಹಬೋಧಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,
**ಮುರಾರೇಃ** = ಶ್ರೀಮನ್ನಾರಾಯಣನಿಗೆ,
**ಪ್ರಿಯಂ** = ಇಷ್ಟವಾದ,
**ಆಯತನಂ** = ದೇವಾಲಯವನ್ನು,
**ಪ್ರವಿವೇಶ** = ಹೊಕ್ಕರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಮುಖಕಮಲವನ್ನು ನೋಡಿದ ಜನರ ಕಣ್ಣುಗಳು ಸಂತೋಷ ಮತ್ತು ಆಶ್ಚರ್ಯದಿಂದ ಅರಳಿದ್ದವು ಮತ್ತು ಪ್ರಸನ್ನವಾಗಿದ್ದವು. ಅವರ ಸುತ್ತಮುತ್ತಲಿರುವ ಜನರೆಲ್ಲರೂ ಕೈಮುಗಿದುಕೊಂಡು ಬರುತ್ತಿದ್ದರು. ಆಚಾರ್ಯರಲ್ಲಿ ಅತಿಶಯವಾದ ಭಕ್ತಿಯಿಂದ ಕೆಲವರು ಸ್ವಲ್ಪ ಬಾಗಿ ಕೈಮುಗಿದುಕೊಂಡು ಬರುತ್ತಿದ್ದರು. ಇಂತಹ ಜನಸಮೂಹಗಳು ಮಂಡಲಾಕಾರವಾಗಿ ಆಚಾರ್ಯರ ಸುತ್ತಲೂ ಬರುತ್ತಿರುವಾಗ ಆಚಾರ್ಯರು ವಿಷ್ಣುಮಂಗಲವೆಂಬ ಶ್ರೀಕೃಷ್ಣನ ದೇವಾಲಯವನ್ನು ಹೊಕ್ಕರು.

**ವಿಗ್ರಹ—**

**ಸವಿಕಾಸದೃಶಾಂ—** ವಿಕಾಸೇನ ಸಹವರ್ತಂತೇ ಇತಿ ಸವಿಕಾಸಾಃ, ಸ ವಿಕಾಸಾಃ ದೃಶಃ ಯಾಸಾಂತಾಃ ಸವಿಕಾಸ ದೃಶಃ, ತಾಸಾಂ ।

ಕೃತಾಂಜಲೀನಾಂ— ಕೃತಾಃ, ಅಂಜಲಯಃ, ಯಾಭಿಸ್ತಾಃ ಕೃತಾಂಜಲಯಃ ತಾಸಾಂ ।

ಜನತಾನಾಂ— ಜನಾನಾಂ ಸಮೂಹಃ ಜನತಾ ತಾಸಾಂ ।

ಪರಮಾದರಾತ್— ಪರಮಶ್ಚಾಸೌ ಆದರಶ್ಚ ಪರಮಾದರಃ ತಸ್ಮಾತ್ ।

ಮುರಾರೇಃ— ಮುರಸ್ಯ ಅರಿಃ ಮುರಾರಿಃ ತಸ್ಯ ।

ಪ್ರಬರ್ಹಬೋಧಃ— ಪ್ರಬರ್ಹಃ ಬೋಧಃ ಯಸ್ಯಸಃ ।

**ಕೋಶ**— 'ಜನತಾ' ಎಂಬಲ್ಲಿ 'ಗ್ರಾಮಜನ ಬಂಧುಭ್ಯಸ್ತಲ್' (4-2-43) ಎಂದು ತಲ್ ಪ್ರತ್ಯಯಃ ಪ್ರಬರ್ಹಃ = ಶ್ರೇಷ್ಠ 'ಮುಖ್ಯವರ್ಯವರೇಣ್ಯಾಶ್ಚ ಪ್ರಬರ್ಹೋಽನವರಾರ್ಧ್ಯವತ್' ಅಮರ ।

**ಕ್ರಿಯಾಪದ**— ಪ್ರ+ವಿವೇಶ - ವಿವಿಶತುಃ ವಿವಿಶುಃ, ವಿವೇಶಿಥ ವಿವಿಶಥುಃ ವಿವಿಶ, ವಿವೇಶ ವಿವಿಶಿವ ವಿವಿಶಿಮ । ಪ್ರ ಉಪಸರ್ಗ ವಿಶ ಪ್ರವೇಶನೇ ಪ್ರವೇಶನಾರ್ಥಕವಿಶಧಾತುಃ ಅನಿಟ್ ಪರಸ್ಮೈಪದಿನಃ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ**— ಸವಿಕಾಸವಲಯೇನ ವ್ರತೇನ ಪ್ರಬರ್ಹಬೋಧೇನ ಮುರಾರೇಃ ಪ್ರಿಯಂ ಆಯತನಂ ಪ್ರವಿವಿಶೇ (ಕರ್ಮಣಿ) ।

★ ★ ★

**ಅವತಾರಿಕಾ**— ಆಗ ಜಯಸಿಂಹರಾಜನು ಮಾತ್ರವಲ್ಲ ಬೇರೆ ಅನೇಕ ರಾಜರು ಕೂಡಾ ಆಚಾರ್ಯರ ಸೇವೆಗೆ ನೆರೆದಿದ್ದರು ಎಂದು ಹೇಳುತ್ತಾರೆ.

**ವಿವಿಧಪ್ರಭುಮಧ್ಯಸನ್ನಿಷಣ್ಣೋ**
**ನರದೇವೇನ ಸಮಂ ಸ ಗೂಢದೇವಃ ।**
**ವಿಬಭಾವುಡುರಾಡಿವೋಡುಮಧ್ಯೇ**
**ಸಹ ಮಹ್ಯಾಸ್ತನಯೇನ ಪೂರ್ಣಬಿಂಬಃ ॥ 39 ॥**

**ಪದಚ್ಛೇದ**— ವಿವಿಧಪ್ರಭುಮಧ್ಯಸನ್ನಿಷಣ್ಣಃ, ನರದೇವೇನ, ಸಮಂ, ಸಃ, ಗೂಢದೇವಃ, ಉಡುಮಧ್ಯೇ, ವಿಬಭೌ, ಉಡುರಾಟ್, ಇವ, ಸಹ, ಮಹ್ಯಾಃ, ತನಯೇನ, ಪೂರ್ಣಬಿಂಬಃ ।

**ಅನ್ವಯ**— ನರದೇವೇನ, ಸಮಂ, ವಿವಿಧಪ್ರಭುಸನ್ನಿಷಣ್ಣಃ, ಗೂಢದೇವಃ, ಸಃ, ಉಡುಮಧ್ಯೇ, ಮಹ್ಯಾಃ, ತನಯೇನ, ಸಹ, ಪೂರ್ಣಬಿಂಬಃ, ಉಡುರಾಟ್, ಇವ, ವಿಬಭೌ ।

**ಅನ್ವಯಾರ್ಥ**—

**ನರದೇವೇನ ಸಮಂ** = ಜಯಸಿಂಹರಾಜನೊಡನೆ,

**ವಿವಿಧಪ್ರಭುಮಧ್ಯೇಸನ್ನಿಷಣ್ಣಃ** = ನಾನಾದೇಶದ ರಾಜರ ನಡುವೆ ಕುಳಿತಿರುವ,

**ಗೂಢದೇವಃ** = ಮನುಷ್ಯರೂಪದಿಂದ ರಹಸ್ಯವಾಗಿರುವ,

**ಸಃ** = ಶ್ರೀಮಧ್ವಾಚಾರ್ಯರು,

**ಉಡುಮಧ್ಯೇ** = ನಕ್ಷತ್ರಗಳ ನಡುವೆ,

**ಮಹ್ಯಾಃ** = ಭೂಮಿಯ,

**ತನಯೇನ** = ಮಗನಾದ ಅಂಗಾರಕನಿಂದ,

**ಸಹ** = ಕೂಡಿಕೊಂಡು,

**ಪೂರ್ಣಬಿಂಬಃ** = ಪೂರ್ತಿಯಾದ ಮಂಡಲವುಳ್ಳ,

**ಉಡುರಾಟ್ ಇವ** = ನಕ್ಷತ್ರಗಳ ರಾಜನಾದ ಚಂದ್ರನಂತೆ,

**ವಿಬಭೌ** = ಪ್ರಕಾಶಿಸಿದರು.

**ತಾತ್ಪರ್ಯ—** ಚಂದ್ರನು ನಕ್ಷತ್ರಗಳ ರಾಜನು. ಹುಣ್ಣಿಮೆಯ ದಿನ ಹದಿನಾರು ಕಲೆಗಳಿಂದ ಪರಿಪೂರ್ಣನಾದ ಚಂದ್ರನು ನಕ್ಷತ್ರಗಳ ನಡುವೆ ಭೂಮಿಪುತ್ರನಾದ ಅಂಗಾರಕನೊಡನೆ ಹೇಗೆ ಪ್ರಕಾಶಿಸುತ್ತಾನೋ ಅದರಂತೆಯೇ ಮುಖ್ಯ ಪ್ರಾಣದೇವರ ಅವತಾರರಾದ ಶ್ರೀಮಧ್ವಾಚಾರ್ಯರು ತಮ್ಮ ದೇವತ್ವವನ್ನು ಪ್ರಕಾಶಗೊಳಿಸದೆ ಮನುಷ್ಯರಂತೆ ಕಾಣಿಸುತ್ತಾ, ಅಂಗಾರಕ ಗ್ರಹದಂತಿರುವ ಜಯಸಿಂಹರಾಜನೊಡನೆಯೂ ನಕ್ಷತ್ರಗಳಂತಿರುವ ಅನೇಕ ದೇಶದ ರಾಜರ ಒಡನೆಯೂ ಮಧ್ಯದಲ್ಲಿ ಕುಳಿತು ಚಂದ್ರನಂತೆ ವಿರಾಜಿಸಿದರು (ಉಪಮಾಲಂಕಾರ).

**ವಿಗ್ರಹ—**

**ವಿವಿಧಪ್ರಭುಮಧ್ಯಸನ್ನಿಷಣ್ಣಃ—** ವಿವಿಧಾಶ್ಚತೇ ಪ್ರಭವಶ್ಚ ವಿವಿಧಪ್ರಭವಃ, ವಿವಿಧಪ್ರಭೂಣಾಂ ಮಧ್ಯಂ ವಿವಿಧ ಪ್ರಭುಮಧ್ಯಂ, ವಿವಿಧಪ್ರಭುಮಧ್ಯೇ ಸನ್ನಿಷಣ್ಣಃ ವಿವಿಧಪ್ರಭುಮಧ್ಯಸನ್ನಿಷಣ್ಣಃ ।

**ನರದೇವಃ—** ನರಾಣಾಂ ದೇವಃ ನರದೇವಃ ।

**ಗೂಢದೇವಃ—** ಗೂಢಶ್ಚಾಸೌ ದೇವಶ್ಚ ಗೂಢದೇವಃ ।

**ಉಡುರಾಟ್—** ಉಡೂನಾಂ ರಾಟ್ ಉಡುರಾಟ್ ।

**ಉಡುಮಧ್ಯೇ—** ಉಡುನಾಂ ಮಧ್ಯಂ ಉಡುಮಧ್ಯಂ ತಸ್ಮಿನ್ ।

**ಪೂರ್ಣಬಿಂಬಃ—** ಪೂರ್ಣಃ ಬಿಂಬಃ ಯಸ್ಯ ಸಃ ಪೂರ್ಣಬಿಂಬಃ ।

**ಕೋಶ—** ನರದೇವಸಮಂ ಎಂಬಲ್ಲಿ ಸಮಂ = ಕೂಡಿಕೊಂಡು, ಜೊತೆಗೆ, 'ಸಾಕಂ ಸತ್ರಾಸಮಂ ಸಹಃ' ಅಮರ, ನರದೇವಃ ಎಂಬಲ್ಲಿ ದೇವ = ರಾಜ, ಗೂಢದೇವಃ ಎಂಬಲ್ಲಿ ದೇವಃ = ದೇವತೇ 'ದೇವೋರಾಜ್ಞಿ ಸುರೇಂಬುಧೇ' ನಾನಾರ್ಥ ರತ್ನಮಾಲಾ, ಪ್ರಭು = ಒಡೆಯ, 'ಪ್ರಭುಃ ಪರಿವೃಢೋಽಧಿಪಃ' ಅಮರ, ಉಡು = ನಕ್ಷತ್ರ, 'ನಕ್ಷತ್ರಮೃಕ್ಷಂ ಭಂ ತಾರಾ ತಾರಕಾಪ್ಯುಡುವಾ ಸ್ತ್ರಿಯಾಂ' ಅಮರ, ಮಹ್ಯಾಃ ತನಯಃ = ಭೂಮಿಯ ಮಗ, ಅಂಗಾರಕ, 'ಕುಜೋ ಭೌಮೋ ಲೋಹಿತಾಂಗೋ ಮಹೀಸುತಃ' ಅಮರ ।

**ಕ್ರಿಯಾಪದ—** ವಿಬಭೌ - ವಿ+ಬಭೌ ಬಭತುಃ ಬಭುಃ, ಬಭಿಥ ಬಭಾಥ ಬಭಥುಃ ಬಭ, ಬಭೌ ಬಭಿವ ಬಭಿಮ । ಭಾದೀಪ್ತೌ ದೀಪ್ತಿ ಅರ್ಥಕ ಭಾಧಾತು ಅಕರ್ಮಕ ಅನಿಟ್ ಪರಸ್ಮೈಪದಿ ವಿಉಪಸರ್ಗ ಭೂತಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ನರದೇವೇನ, ಸಮಂ, ವಿವಿಧಪ್ರಭುಸನ್ನಿಷಣ್ಣೇನ, ಗೂಢದೇವೇನ, ತೇನ, ಉಡುಮಧ್ಯೇ, ಮಹ್ಯಾಃ, ತನಯೇನ, ಸಹ, ಪೂರ್ಣಬಿಂಬೇನ, ಉಡುರಾಜಾ, ಇವ, ವಿಬಭೇ (ಭಾವೇ) ।

★ ★ ★

ಅವತಾರಿಕಾ— ಆ ಸಭೆಯಲ್ಲಿ ಶ್ರೀಮಧ್ವಾಚಾರ್ಯರು ಶ್ರೀಮದ್ಭಾಗವತದ ಶ್ರೀಕೃಷ್ಣ ಚರಿತ್ರೆಯ ಉಪನ್ಯಾಸ ಮಾಡಿದರೆಂದು ತಿಳಿಸುತ್ತಾರೆ.

**ಅವದತ್ಸ ಕಥಾಂ ರಥಾಂಗಪಾಣೇ-**
**ರ್ಭಗವಾನ್ ಭಾಗವತೇ ಭವಾಪಹಂತ್ರೀಮ್ ।**
**ಅನುರೂಪಗುಣಸ್ವರಾದಿಭಾಜಾ**
**ನಿಜಶಿಷ್ಯಪ್ರವರೇಣ ವಾಚ್ಯಮಾನೇ ॥ 40 ॥**

ಪದಚ್ಛೇದ— ಅವದತ್, ಸಃ, ಕಥಾಂ, ರಥಾಂಗಪಾಣೇಃ, ಭಗವಾನ್, ಭಾಗವತೇ, ಭವಾಪಹಂತ್ರೀಂ, ಅನುರೂಪ ಗುಣಸ್ವರಾದಿಭಾಜಾ, ನಿಜಶಿಷ್ಯಪ್ರವರೇಣ, ವಾಚ್ಯಮಾನೇ ।

ಅನ್ವಯ— ಭಗವಾನ್, ಸಃ, ಅನುರೂಪಗುಣಸ್ವರಾದಿಭಾಜಾ, ನಿಜಶಿಷ್ಯಪ್ರವರೇಣ, ಭಾಗವತೇ, ವಾಚ್ಯಮಾನೇ, ರಥಾಂಗಪಾಣೇಃ, ಭವಾಪಹಂತ್ರೀಂ, ಕಥಾಂ, ಅವದತ್ ।

ಅನ್ವಯಾರ್ಥ—

ಭಗವಾನ್ = ಪೂಜ್ಯರಾದ (ಷಡ್ಗುಣೈಶ್ವರ್ಯ ಸಂಪನ್ನರಾದ),

ಸಃ = ಆ ಮಧ್ವರು,

ಅನುರೂಪಗುಣಸ್ವರಾದಿಭಾಜಾ = ಪುರಾಣ ಹೇಳತಕ್ಕ ಶ್ರೀಮಧ್ವಾಚಾರ್ಯರ ಗಾಂಭೀರ್ಯ ಶ್ರಾವ್ಯತ್ವಾದಿ ಗುಣಗಳಿಗೆ ಅನುಗುಣವಾದ ಗಾಂಭೀರ್ಯ ಶ್ರಾವ್ಯತ್ವಾದಿ ಗುಣಗಳುಳ್ಳ ಸ್ವರ ಆಕೃತಿ ಮುಂತಾದವು-ಗಳನ್ನು ಹೊಂದಿರುವ,

ನಿಜಶಿಷ್ಯಪ್ರವರೇಣ = ತನ್ನ ಶಿಷ್ಯರಲ್ಲಿ ಶ್ರೇಷ್ಠರಾದ ಹೃಷೀಕೇಶತೀರ್ಥರಿಂದ,

ಭಾಗವತೇ = ಶ್ರೀಮದ್ಭಾಗವತ ಪುರಾಣವು,

ವಾಚ್ಯಮಾನೇ(ಸತಿ) = ಓದಲ್ಪಡುತ್ತಿರಲು,

ರಥಾಂಗಪಾಣೇಃ = ಚಕ್ರಧಾರಿಯಾದ ಶ್ರೀಹರಿಯ,

ಭವಾಪಹಂತ್ರೀಂ = ಸಂಸಾರನಾಶಕವಾದ,

ಕಥಾಂ = ಕಥೆಯನ್ನು,

ಅವದತ್ = ಹೇಳಿದರು.

ತಾತ್ಪರ್ಯ— ಶ್ರೀವಿಷ್ಣುಮಂಗಲ ದೇವಾಲಯದಲ್ಲಿ ಜ್ಞಾನ ವೈರಾಗ್ಯ ಮೊದಲಾದ ಷಡ್ಗುಣೈಶ್ವರ್ಯ ಸಂಪನ್ನರಾದ ಆಚಾರ್ಯರು ಭಾಗವತದ ದಶಮಸ್ಕಂದದಲ್ಲಿ ಶ್ರೀಕೃಷ್ಣನ ಮಹಿಮೆಯನ್ನು ಹೇಳುವ ಭಾಗವತ ಪ್ರವಚನ ಮಾಡಿದರು. ಆಗ ಅವರ ಶಿಷ್ಯರಲ್ಲಿ ಶ್ರೇಷ್ಠರಾದ ಶ್ರೀಹೃಷೀಕೇಶತೀರ್ಥರು ಭಾಗವತವನ್ನು ಓದಿದರು. ಆಚಾರ್ಯರ ಕಂಠಸ್ವರಕ್ಕೆ ಅನು ಗುಣವಾದ ಶ್ರಾವ್ಯತೆ ಗಾಂಭೀರ್ಯ ಇವುಗಳು ಶ್ರೀಹೃಷೀಕೇಶತೀರ್ಥರ ಸ್ವರದಲ್ಲಿ ಇದ್ದವು. ಜನರಿಗೆ ಆ ಸ್ವರವು ಬಹಳ ಇಂಪಾಗಿ ಕೇಳಿಸುತ್ತಿತ್ತು. ಒಳ್ಳೆಯ ವಾಚನಶಕ್ತಿ ಗಾಂಭೀರ್ಯ ಇವೂ ಆಚಾರ್ಯರ ಆಕೃತಿಯಂತಹ ಆಕೃತಿಯು ಅವರಲ್ಲಿದ್ದವು. ಇಂತಹ ತನ್ನ ಶಿಷ್ಯರು ಸಂಗೀತಸ್ವರದಿಂದ ಶ್ಲೋಕಗಳನ್ನು ಓದಿದಾಗ ಆಚಾರ್ಯರು ಸಂಸಾರವನ್ನು ನೀಗಿಸುವ ಭಾಗವತದ ಶ್ರೀಕೃಷ್ಣನ ಕಥೆಯನ್ನು ಅನುವಾದ ಮಾಡಿದರು.

ವಿಗ್ರಹ—

**ರಥಾಂಗಪಾಣೇಃ**— ರಥಾಂಗಂ ಪಾಣೌ ಯಸ್ಯಸಃ ರಥಾಂಗಪಾಣಿಃ ತಸ್ಯ ।

**ಭಗವಾನ್**— ಭಗಃ ಅಸ್ಯ ಅಸ್ತೀತಿ ಭಗವಾನ್ ।

**ಭವಾಪಹಂತ್ರೀಂ**— ಭವಂ ಅಪಹಂತೀತಿ ಭವಾಪಹಂತ್ರೀ ತಾಂ ।

**ಅನುರೂಪಗುಣಸ್ವರಾದಿಭಾಜಾ**— ಅನುರೂಪಾಃ ಗುಣಾಃ ಯೇಷಾಂ ತೇ ಅನುರೂಪಗುಣಾಃ, ಸ್ವರಾಃ ಆದಯಃ ಯೇಷಾಂ ತೇ ಸ್ವರಾದಯಃ, ಅನುರೂಪಗುಣಾಶ್ಚ ತೇ ಸ್ವರಾದಯಶ್ಚ ಅನುರೂಪಗುಣ ಸ್ವರಾದಯಃ, ಅನುರೂಪಗುಣಸ್ವರಾದೀನ್ ಭಜತೀತಿ ಅನುರೂಪಸ್ವರಾದಿಭಾಕ್ ತೇನ ।

**ನಿಜಶಿಷ್ಯಪ್ರವರೇಣ**— ನಿಜಾಶ್ಚ ತೇ ಶಿಷ್ಯಾಶ್ಚ ನಿಜಶಿಷ್ಯಾಃ ನಿಜಶಿಷ್ಯೇಷು ಪ್ರವರಃ ನಿಜಶಿಷ್ಯಪ್ರವರಃ ತೇನ । (ಇಲ್ಲಿ ಶ್ರೀಮಧ್ವಾಚಾರ್ಯರ ಸ್ವರಕ್ಕೆ ಅನುಕೂಲವಾದ ಶ್ರಾವ್ಯತ್ವ ಆಕೃತಿ ಮುಂತಾದವುಗಳಿಂದ ಕೂಡಿದವರು ಹೃಷೀಕೇಶತೀರ್ಥರು ಎಂಬ ಅಭಿಪ್ರಾಯವನ್ನು ಶ್ರೀವಿಶ್ವಪತಿತೀರ್ಥೀಯ ವ್ಯಾಖ್ಯಾನದಲ್ಲಿ ಸೂಚಿಸಿದ್ದಾರೆ. ಕೇಳುವ ಎಲ್ಲಾ ಜನರಿಗೆ ಶ್ರಾವ್ಯವಾದ ಸ್ವರ ಮತ್ತು ವಾಚನಶಕ್ತಿ, ಗಾಂಭೀರ್ಯ ಮುಂತಾದ ಗುಣಗಳು ಶ್ರೀಹೃಷೀಕೇಶತೀರ್ಥರಲ್ಲಿದ್ದವು ಎಂದು ಛಲಾರಿಯ ವ್ಯಾಖ್ಯಾನದಲ್ಲಿ ಸೂಚಿತವಾದ ಅಭಿಪ್ರಾಯ).

**ವಿಶೇಷ**— ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರೀಯಃ । ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ' ಎಂಬ ಪ್ರಮಾಣದಂತೆ ಸಮಗ್ರ ಐಶ್ವರ್ಯ ಹೆಚ್ಚು ಶಕ್ತಿಯಿಂದ ಕೂಡಿದ ಪರಾಕ್ರಮ, ಕೀರ್ತಿ, ಸಂಪತ್ತು, ಜ್ಞಾನ ಮತ್ತು ವಿಜ್ಞಾನ ಈ ಆರರ ಸಮುದಾಯಕ್ಕೆ ಭಗ ಎಂದು ಹೆಸರು. ಆಚಾರ್ಯರ ಅಷ್ಟಮಠದ ಶಿಷ್ಯರಲ್ಲಿ ಹೃಷೀಕೇಶ ತೀರ್ಥರಿಗೆ = ಅಷ್ಟೋತ್ಕೃಷ್ಟ (ಎಂಟು ಶಿಷ್ಯರಲ್ಲಿ ಉತ್ತಮರು) ಎಂಬ ಬಿರುದಿತ್ತು ಎಂದು ತಿಳಿದವರು ಹೇಳುತ್ತಾರೆ.

**ಕೋಶ**— ಭವ = ಸಂಸಾರ 'ಭವಸ್ಸತ್ತಾರದುರ್ಗರ್ಭಪ್ರಾಪ್ತಿ ಸಂಸಾರಜನ್ಮಸು' ನಾನಾರ್ಥರತ್ನಮಾಲಾ ।

**ಕ್ರಿಯಾಪದ**— ಅವದತ್ ಅವದತಾಂ ಅವದನ್, ಇತ್ಯಾದಿ ವದ ವ್ಯಕ್ತಾಯಾಂವಾಚಿ ಸಕರ್ಮಕ ಸೇಟ್ ಪರಸ್ಮೈಪದಿ ಭೂತಾನದ್ಯತನಾರ್ಥದಲ್ಲಿ ಲಙ್ ಲಕಾರ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ**— ಭಗವತಾ ತೇನ ಅನುರೂಪಗುಣಸ್ವರಾದಿಭಾಜಾ ನಿಜಶಿಷ್ಯಪ್ರವರೇಣ ಭಾಗವತೇ ವಾಚ್ಯಮಾನೇ ಸತಿ ರಥಾಂಗಪಾಣೇಃ ಭವಾಪಹಂತ್ರೀ ಕಥಾ ಔದ್ಯತ (ಕರ್ಮಣಿ) ।

★ ★ ★

ಅವತಾರಿಕಾ— ಆಚಾರ್ಯರ ಭಾಗವತಾರ್ಥೋಪನ್ಯಾಸದ ಚಮತ್ಕಾರ ವಿಶೇಷವನ್ನು ವರ್ಣಿಸುತ್ತಾರೆ.

**ಕಥನಂ ತದುದಾರಧೈರ್ಯಸಾರಂ**
**ಮಧುರಂ ಪುಷ್ಕಲಭಾವವತ್ ಪ್ರಸನ್ನಮ್ ।**
**ವಿದುಷೋಽವಿದುಷೋಽತ್ರ ಶೃಣ್ವತೋಽಲಂ**
**ವ್ಯಥಿತಾನಂದರಸಾಂಬುಧೌ ನಿಮಗ್ನಾನ್ ॥ 41 ॥**

**ಪದಚ್ಛೇದ**— ಕಥನಂ, ತತ್, ಉದಾರಧೈರ್ಯಸಾರಂ, ಮಧುರಂ, ಪುಷ್ಕಲಭಾವವತ್, ಪ್ರಸನ್ನಂ, ವಿದುಷಃ, ಅವಿದುಷಃ, ಅಪಿ, ಶೃಣ್ವತಃ, ಅಲಂ, ವ್ಯಥಿತ, ಆನಂದರಸಾಂಬುಧೌ, ನಿಮಗ್ನಾನ್ ।

ಅನ್ವಯು— ಉದಾರಧೈರ್ಯಸಾರಂ, ಮಧುರಂ, ಪುಷ್ಕಲಭಾವವತ್, ಪ್ರಸನ್ನಂ, ತತ್, ಕಥನಂ, ಅಲಂ, ಶೃಣ್ವತಃ, ವಿದುಷಃ, ಅವಿದುಷಃ, ಅಪಿ, ಆನಂದರಸಾಂಬುಧೌ, ನಿಮಗ್ನಾನ್, ವ್ಯಧಿತ ।

ಅನ್ವಯಾರ್ಥ—

ಉದಾರ = ಉತ್ಕೃಷ್ಟವಾದ,
ಧೈರ್ಯ = ಸ್ಥೈರ್ಯದ (ವೈಧುಷ್ಯದ),
ಸಾರಂ = ಶ್ರೇಷ್ಠತೆವುಳ್ಳ (ಅಥವಾ ಉತ್ಕೃಷ್ಟವಾದ ಧೈರ್ಯದಿಂದ ಶ್ರೇಷ್ಠವಾದ),
ಮಧುರಂ = ಇಂಪಾದ,
ಪುಷ್ಕಲಭಾವವತ್ = ಪೂರ್ಣವಾದ ಅಭಿಪ್ರಾಯವುಳ್ಳ,
ಪ್ರಸನ್ನಂ = ಶಬ್ದ ಮತ್ತು ಅರ್ಥಗಳಿಂದ ಸುಲಭವಾದ (ಕಠಿನವಲ್ಲದ),
ತತ್ ಕಥನಂ = ಆ ಪುರಾಣ ಪ್ರವಚನವು (ಅತ್ರ= ಈ ಸಭೆಯಲ್ಲಿ),
ಅಲಂ = ಭಕ್ತಿಯಿಂದ (ಚೆನ್ನಾಗಿ),
ಶೃಣ್ವತಃ = ಕೇಳುತ್ತಿರುವ,
ವಿದುಷಃ = ವಿದ್ವಾಂಸರನ್ನು,
ಅವಿದುಷಃ ಅಪಿ = ವಿದ್ವಾಂಸರಲ್ಲದ ಸಾಧಾರಣ ಜನರನ್ನೂ,
ಆನಂದರಸಅಂಬುಧೌ = ಸಂತೋಷವೆಂಬ ರಸವುಳ್ಳ ಸಮುದ್ರದಲ್ಲಿ,
ನಿಮಗ್ನಾನ್ = ಮುಳುಗಿದವರನ್ನಾಗಿ,
ವ್ಯಧಿತ = ಮಾಡಿತು.

ತಾತ್ಪರ್ಯ— ಆಚಾರ್ಯರ ಪುರಾಣಾರ್ಥಗಳ ಉಪನ್ಯಾಸವು ಅಂತಹ ಮಹಾಸಭೆಯಲ್ಲಿಯೂ ಸಭಾಕಂಪಾದಿ ದೋಷಗಳಿಲ್ಲದೆ ಉತ್ತಮವಾದ ಧೈರ್ಯದಿಂದ ಶ್ರೇಷ್ಠವಾಗಿ ಶೋಭಿಸುತ್ತಿತ್ತು. ಕೇಳುವವರ ಕಿವಿಗೆ ಅಮೃತಸೇವನ ಮಾಡಿದಂತೆ ಬಹಳ ಇಂಪಾಗಿತ್ತು. ಪೂರ್ಣವಾದ ಅಭಿಪ್ರಾಯದಿಂದ ಕೂಡಿತ್ತು. ಶಬ್ದಗಳಲ್ಲಿಯೂ ಅರ್ಥಗಳಲ್ಲಿಯೂ ಕಠಿಣತೆ ಇಲ್ಲದೆ ಬಹಳ ಸುಲಭವಾಗಿತ್ತು. ಇಂತಹ ಭಾಗವತಪುರಾಣೋಪನ್ಯಾಸವು ಆ ಸಭೆಯಲ್ಲಿ ಕೇಳತಕ್ಕ ಪಂಡಿತರನ್ನು ಪಂಡಿತ ರಲ್ಲದವರನ್ನು ಆನಂದಸಮುದ್ರಮಗ್ನರನ್ನಾಗಿ ಮಾಡಿತು. ಲೋಕದಲ್ಲಿ ಕೆಲವರ ಪುರಾಣ ಪ್ರವಚನವು ಪಂಡಿತರಿಗೆ ಮಾತ್ರವೇ ತಿಳಿಯುತ್ತದೆ. ಕೆಲವರ ಪುರಾಣಪ್ರವಚನವು ಪಾಮರರಿಗೆ ಮಾತ್ರ ರಂಜಕವಾಗಿರುತ್ತದೆ. ಅವರ ಮಾತು ಧೈರ್ಯ ಸೂಚಕವಾಗಿರುವುದಿಲ್ಲ, ಕಠಿನವಾದ ಶಬ್ದಪ್ರಯೋಗ ಕಠಿನವಾದ ತಿಳಿಯದ ಅರ್ಥಗಳು ಇರುತ್ತವೆ. ಅರ್ಥಕಾಲುಭಾಗ-ದಷ್ಟು ಅಥವಾ ಇನ್ನೂ ಸ್ವಲ್ಪವೆ ತಾತ್ಪರ್ಯ ಅಭಿಪ್ರಾಯಗಳನ್ನು ಕೆಲವರು ಹೇಳುತ್ತಾರೆ. ಆಚಾರ್ಯರ ಪುರಾಣೋ-ಪನ್ಯಾಸದಲ್ಲಿ ಇಂತಹ ಯಾವ ದೋಷವೂ ಇಲ್ಲದೆ ಅದು ಪಂಡಿತಪಾಮರರಿಬ್ಬರಿಗೂ ಸಂತೋಷವನ್ನುಂಟುಮಾಡುತ್ತಿತ್ತು ಎಂದು ಭಾವ.

ವಿಗ್ರಹ—

**ಉದಾರಧೈರ್ಯಸಾರಂ**— ಧೀರಸ್ಯ ಭಾವಃ ಧೈರ್ಯಂ ಉದಾರಂ ಚ ತತ್ ಧೈರ್ಯಂ ಚ ಉದಾರಧೈರ್ಯಂ, ಉದಾರಧೈರ್ಯಸ್ಯ ಸಾರಃ ಯಸ್ಮಿನ್ ತತ್ ಉದಾರಧೈರ್ಯಸಾರಂ (ಅಥವಾ ಉದಾರಧೈರ್ಯೇಣ ಸಾರಂ)

**ಪುಷ್ಕಲಭಾವವತ್**— ಪುಷ್ಕಲಶ್ಚಾಸೌ ಭಾವಶ್ಚ ಪುಷ್ಕಲಭಾವಃ, ಪುಷ್ಕಲಭಾವಃ ಅಸ್ಯ ಅಸ್ತೀತಿ ಪುಷ್ಕಲಭಾವವತ್ ।

**ಅವಿದುಷಃ**— ನ ವಿದ್ವಾಂಸಃ ಅವಿದ್ವಾಂಸಃ ತಾನ್ ಅವಿದುಷಃ ।

**ಆನಂದರಸಾಂಬುಧೌ**— ಆನಂದ ಏವ ರಸಃ ಆನಂದರಸಃ ತಸ್ಯ ಅಂಬುಧಿಃ ಆನಂದರಸಾಂಬುಧಿಃ ತಸ್ಮಿನ್ ಆನಂದರಸಾಂಬುಧೌ (ಅಥವಾ ಆನಂದ ಏವ ರಸಃ ಯಸ್ಮಿನ ಸಃ ಆನಂದರಸಃ ಆನಂದರಸಶ್ಚಾಸೌ ಅಂಬುಧಿಶ್ಚ ಆನಂದರಸಾಂಬುಧಿಃ)

**ಕೋಶ**— ಸಾರ = ಶ್ರೇಷ್ಠ 'ಸಾರೋ ಬಲೇ ಸ್ಥಿರಾಂಶೇಽರ್ಥೇ ನ್ಯಾಯ್ಯೆ ಕ್ಲಿಬಂ ವರೇ ತ್ರಿಷು, ಕ್ಲೀಬಮಂಬುನಿ' ನಾನಾರ್ಥರತ್ನಮಾಲಾ, ರಸ = ಜಲ, ಶೃಂಗಾರಮುಖ್ಯಮಧುರಾದಿ = ಸುವರ್ಣರೇತೋ ನಿರ್ಯಾಸ ರಾಗ ಗರಳದ್ರವ ಪಾರದೇಷು ಆಸ್ವಾದನ ಧ್ವನಿ ಸುಧಾಂಬು (ಸುಧಾ = ಅಂಬು) 'ರಸಾಖ್ಯಾಧಾತುಷ್ವಿಷ್ಟೋ ರಸ' ನಾನಾರ್ಥರತ್ನಮಾಲಾ ।

**ಕ್ರಿಯಾಪದ**— ವ್ಯಧಿತ- ವಿ+ಅಧಿತ, ಅಧಿಷಾತಾಂ ಅಧಿಷತ, ಅಧಿಥಾಃ ಅಧಿಷಾಥಾಮ್ ಅಧಿಢ್ವಂ, ಅಧಿಢ್ವಮ್, ಅಧಿಹಿ ಅಧಿಷ್ವಹಿ ಅಧಿಷ್ಮಹಿ । ಧಾರಣಪೋಷಣಾರ್ಥಧಾಧಾತು ಡುಧಾದಾಞ್ ಧಾರಣಪೋಷಣಯೋಃ ಆತ್ಮನೇಪದಿ ಅನಿಟ್ ಸಕರ್ಮಕ ಭೂತೇ ಲುಙ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ**— ಉದಾರಧೈರ್ಯಸಾರೇಣ, ಮಧುರೇಣ, ಪುಷ್ಕಲಭಾವವತಾ, ಪ್ರಸನ್ನೇನ, ತೇನ, ಕಥನೇನ (ಅತ್ರ) ಅಲಂ, ಶೃಣ್ವಂತಃ ವಿದ್ವಾಂಸಃ, ಅವಿದ್ವಾಂಸಃ, ಅಪಿ, ಆನಂದರಸಾಂಬುಧೌ ನಿಮಗ್ನಾಃ ವ್ಯಧಾಯಿಷತ (ಕರ್ಮಣಿ) ।

★ ★ ★

**ಅವತಾರಿಕಾ**— ಹೀಗೆ ಆಚಾರ್ಯರ ಚರಿತ್ರೆಗಳು ಬಹಳವಾಗಿವೆ. ಆದರೆ ನನ್ನಂತವನಿಗೆ ಅವುಗಳನ್ನು ವರ್ಣಿಸಲು ಮತ್ತು ವಿವರಿಸಲು ಸಾಧ್ಯವಿಲ್ಲ ಎಂದು ಹೇಳಿ ಪ್ರಕೃತ ಬೇರೆ ಕಥೆಯನ್ನು ವರ್ಣಿಸಬೇಕಾಗಿರುವುದರಿಂದ ಈ ಕಥೆಯನ್ನು ನಿಲ್ಲಿಸುತ್ತಾರೆ.

**ಗಮನಾಸನಸಂಕಥಾದಿಲೀಲಾಃ**
**ಸ್ಮೃತಿಮಾತ್ರೇಣ ಭವಾಪವರ್ಗದಾತ್ರೀಃ ।**
**ಕಥಮಪ್ಯಮರಾಃ ಪ್ರಪಂಚಯೇಯುಃ**
**ನನು ಮಧ್ವಸ್ಯ ನ ಮಾದೃಶೋಽಲ್ಪಬೋಧಾಃ ॥ 42 ॥**

**ಪದಚ್ಛೇದ**— ಗಮನಾಸನಸಂಕಥಾದಿಲೀಲಾಃ, ಸ್ಮೃತಿಮಾತ್ರೇಣ ಭವಾಪವರ್ಗದಾತ್ರೀಃ, ಕಥಮ್, ಅಪಿ, ಅಮರಾಃ, ಪ್ರಪಂಚಯೇಯುಃ, ನನು, ಮಧ್ವಸ್ಯ, ನ, ಮಾದೃಶಃ, ಅಲ್ಪಬೋಧಾಃ ।

**ಅನ್ವಯ**— ಸ್ಮೃತಿಮಾತ್ರೇಣ, ಭವಾಪವರ್ಗದಾತ್ರೀಃ, ಮಧ್ವಸ್ಯ ಗಮನಾಸನಸಂಕಥಾದಿಲೀಲಾಃ, ಅಮರಾಃ, ಕಥಂ, ಅಪಿ, ಪ್ರಪಂಚಯೇಯುಃ, ಮಾದೃಶಾಃ ಅಲ್ಪಬೋಧಾಃ, ನ ನನು ।

**ಅನ್ವಯಾರ್ಥ**—

**ಸ್ಮೃತಿಮಾತ್ರೇಣ** = ಸ್ಮರಣಮಾತ್ರದಿಂದಲೇ,

**ಭವಅಪವರ್ಗದಾತ್ರೀಃ** = ಸಂಸಾರದಿಂದ ಮೋಕ್ಷವನ್ನು ಕೊಡುವ,

**ಮಧ್ವಸ್ಯ** = ಶ್ರೀಮಧ್ವಾಚಾರ್ಯರ,

**ಗಮನಆಸನ ಸಂಕಥಾಆದಿಲೀಲಾಃ** = ನಡಿಗೆ, ಕುಳಿತುಕೊಳ್ಳುವುದು, ಪ್ರವಚನ, ಇವೇ ಮೊದಲಾಗಿ ಉಳ್ಳ ವಿಲಾಸದ ಕಾರ್ಯಗಳನ್ನು (ಅನಾಯಾಸವಾದ ಮನೋಹರ ಕ್ರಿಯೆಗಳನ್ನು),

**ಅಮರಾಃ** = ದೇವತೆಗಳು,

**ಕಥಂ ಅಪಿ** = ಹೇಗಾದರೂ,

**ಪ್ರಪಂಚಯೇಯುಃ** = ವಿಸ್ತರಿಸಿಯಾರು (ವರ್ಣಿಸಿಯಾರು),
**ಮಾದೃಶಃ** = ನನ್ನಂತಹ,
**ಅಲ್ಪಬೋಧಾಃ** = ಸ್ವಲ್ಪ ತಿಳುವಳಿಕೆ ಉಳ್ಳವರು,
**ನ ನನು** = ವರ್ಣಿಸಲಾರರಷ್ಟೆ

ತಾತ್ಪರ್ಯ— ಶ್ರೀಮಧ್ವಾಚಾರ್ಯರು ನಡೆದುಹೋಗುವುದು, ಕುಳಿತುಕೊಳ್ಳುವುದು, ಭಾಗವತಪುರಾಣಪ್ರವಚನ ಮುಂತಾದ ಉಪದೇಶ ಕಾರ್ಯವನ್ನು ಮಾಡುವುದು ಇವೆಲ್ಲಾ ಜೀವೋತ್ತಮ ಮುಖ್ಯಪ್ರಾಣಾವತಾರರಾದ ಅವರ ಲೀಲೆಗಳು. ಜೀವರು ಈ ಲೀಲೆಗಳನ್ನು ಭಕ್ತಿಯಿಂದ ಸ್ಮರಿಸಿದ ಮಾತ್ರದಿಂದಲೇ ಸಂಸಾರದಿಂದ ಬಿಡುಗಡೆ ಹೊಂದುತ್ತಾರೆ. ಇಂತಹ ಲೀಲೆಗಳನ್ನು ಭಾರತೀದೇವಿ, ರುದ್ರ ಇಂದ್ರಾದಿ ದೇವತೆಗಳು, ಈ ದೇವತೆಗಳ ಅನುಗ್ರಹವನ್ನು ಪಡೆದಿರುವ ಇತರ ದೇವತೆಗಳು ಮಾತ್ರ ವಿಸ್ತರಿಸಿ ವರ್ಣಿಸಿಯಾರು. ನನ್ನಂತಹ ಸ್ವಲ್ಪ ಜ್ಞಾನವುಳ್ಳವನು ಅವನ್ನೆಲ್ಲಾ ವರ್ಣಿಸಲು ಸಮರ್ಥನಲ್ಲ.

ವಿಗ್ರಹ—

**ಗಮನಾಸನಸಂಕಥಾದಿಲೀಲಾಃ**— ಗಮನಂ ಚ ಆಸನಂ ಚ ಸಂಕಥಾ ಚ ಗಮನಾಸನಸಂಕಥಾಃ, ತಾಃ, ಆದಯಃ ಯಾಸಾಂ ತಾಃ, ಗಮನಾಸನಸಂಕಥಾದಯಃ, ತಾಶ್ಚ ತಾಃ ಲೀಲಾಶ್ಚ ಗಮನಾಸನಸಂಕಥಾದಿ ಲೀಲಾಃ ತಾಃ,

**ಸ್ಮೃತಿಮಾತ್ರೇಣ**— ಕೇವಲಂ ಸ್ಮೃತಿಃ ಸ್ಮೃತಿಮಾತ್ರಂ ತೇನ ಸ್ಮೃತಿಮಾತ್ರೇಣ ।

**ಭವಾಪವರ್ಗದಾತ್ರ್ಯಃ**— ಭವಾತ್ ಅಪವರ್ಗಃ ಭವಾಪವರ್ಗಃ, ದದತೀತಿ ದಾತ್ರ್ಯಃ ಭವಾಪವರ್ಗಸ್ಯ ದಾತ್ರ್ಯಃ ಭವಾಪವರ್ಗದಾತ್ರ್ಯಃ ।

**ಮಾದೃಶಃ**— ಅಹಮಿವ ದೃಶ್ಯಂತೇ ಇತಿ ಮಾದೃಶಃ, ಪ್ರಥಮಾಬಹುವಚನಾಂತ, ಮಾದೃಕ್, ಮಾದೃಶೌ, ಮಾದೃಶಃ, ಶಕಾರಾಂತಪುಲ್ಲಿಂಗ ।

**ಅಲ್ಪಬೋಧಾಃ**— ಅಲ್ಪಃ ಬೋಧಃ ಯೇಷಾಂ ತೇ ಅಲ್ಪಬೋಧಾಃ ।

**ಕೋಶ**— ಲೀಲಾ = ವಿಲಾಸ, 'ಲೀಲಾ ವಿಲಾಸಕ್ರಿಯಯೋಃ' ವಿಶ್ವ ।

**ಕ್ರಿಯಾಪದ**— **ಪ್ರಪಂಚಯೇಯುಃ** - ಪ್ರ+ಪಂಚಯೇತ್, ಪಂಚಯೇತಾಂ, ಪಂಚಯೇಯುಃ, ಪಂಚಯೇಃ ಪಂಚಯೇತಂ, ಪಂಚಯೇತ, ಪಂಚಯೇಯಂ, ಪಂಚಯೇವ, ಪಂಚಯೇಮ । ಪಚಿ ವಿಸ್ತಾರವಚನೇ ಪಂಚ್ ಧಾತು ಚುರಾದಿ ಣಿಜಂತ ವಿಧಿಲಿಜ್ ।

**ಪ್ರಯೋಗ**— ಸ್ಮೃತಿಮಾತ್ರೇಣ, ಭವಾಪವರ್ಗದಾತ್ರ್ಯಃ, ಮಧ್ವಸ್ಯ, ಗಮನಾಸನಸಂಕಥಾದಿಲೀಲಾಃ, ಅಮರ್ತ್ಯೈಃ, ಕಥಮಪಿ, ಪ್ರಪಂಚೇರನ್, ಮಾದೃಗ್ಭಿಃ, ಅಲ್ಪಬೋಧೈಃ, ನ ಪ್ರಪಂಚ್ಯೇರನ್, ನನು ।

★ ★ ★

ಅವತಾರಿಕಾ— ಮುಂದೆ ಶ್ರೀಮಧ್ವಾಚಾರ್ಯರಿಗೂ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರಿಗೂ ನಡೆದ ಸಮಾಗಮ ಮತ್ತು ವಾದ ಇವನ್ನು ವರ್ಣಿಸಲು ಅವರ ಜನ್ಮದಾರಭ್ಯ ಕಥೆಯನ್ನು ವರ್ಣಿಸಲು ಪ್ರಾರಂಭಿಸುತ್ತಾರೆ.

**ಸುತಪಃಕವಿತಾದಿಸದ್ಗುಣಾನಾಂ**
**ಲಿಕುಚಾನಾಂ ಕುಲಜೋಂಗಿರೋಽನ್ವಯಾನಾಮ್ ।**
**ಅಭವದ್ಗುಹನಾಮಕೋ ವಿಪಶ್ಚಿತ್**
**ಕವಿವರ್ಯೋಽಖಿಲವಾದಿವಂದನೀಯಃ ॥ 43 ॥**

**ಪದಚ್ಛೇದ—** ಸುತಪಃಕವಿತಾದಿಸದ್ಗುಣಾನಾಂ, ಲಿಕುಚಾನಾಂ, ಕುಲಜಃ, ಅಂಗಿರೋಽನ್ವಯಾನಾಂ, ಅಭವತ್, ಗುಹನಾಮಕಃ ವಿಪಶ್ಚಿತ್, ಕವಿವರ್ಯಃ, ಅಖಿಲವಾದಿವಂದನೀಯಃ ।

**ಅನ್ವಯ—** ಸುತಪಃಕವಿತಾದಿಸದ್ಗುಣಾನಾಂ, ಅಂಗಿರೋಽನ್ವಯಾನಾಂ, ಲಿಕುಚಾನಾಂ, ಕುಲಜಃ, ಕವಿವರ್ಯಃ, ಅಖಿಲವಾದಿವಂದನೀಯಃ, ಗುಹನಾಮಕಃ, ವಿಪಶ್ಚಿತ್, ಅಭವತ್ ।

**ಅನ್ವಯಾರ್ಥ—**

**ಸುತಪಃ** = ಒಳ್ಳೆಯ ತಪಸ್ಸು,

**ಕವಿತಆದಿಸದ್ಗುಣಾನಾಂ** = ರಸಭರಿತವಾದ ಪದ್ಯರಚನ, ಮೊದಲಾಗಿ ಉಳ್ಳ, ಒಳ್ಳೆಯ ಗುಣಗಳುಳ್ಳ,

**ಅಂಗಿರೋಽನ್ವಯಾನಾಂ** = ಅಂಗಿರಸಗೋತ್ರವುಳ್ಳ,

**ಲಿಕುಚಾನಾಂ** = ಲಿಕುಚ (ಪೆಜತ್ತಾಯ) ಎಂಬ ಕುಲದಲ್ಲಿ ಜನಿಸಿದ ಬ್ರಾಹ್ಮಣರ,

**ಕುಲಜಃ** = ವಂಶದಲ್ಲಿ ಹುಟ್ಟಿದ,

**ಕವಿವರ್ಯಃ** = ಕವಿಶ್ರೇಷ್ಠರಾದ,

**ಅಖಿಲವಾದಿವಂದನೀಯಃ** = ಎಲ್ಲಾ ವಾದ ಮಾಡುವವರಿಂದ ನಮಸ್ಕರಿಸಲು ಯೋಗ್ಯರಾದ,

**ಗುಪನಾಮಕಃ** = ಸುಬ್ರಹ್ಮಣ್ಯನೆಂಬ ಹೆಸರುಳ್ಳ,

**ವಿಪಶ್ಚಿತ್** = ವಿದ್ವಾಂಸರು,

**ಅಭವತ್** = ಇದ್ದರು.

**ತಾತ್ಪರ್ಯ—** ಒಳ್ಳೆಯ ತಪಸ್ಸು, ಗದ್ಯಪದ್ಯಾತ್ಮಕವಾದ ಕವಿತಾನಿರ್ಮಾಣ ಶಕ್ತಿ, ಪಾಂಡಿತ್ಯ ಸದಾಚಾರ ಭಕ್ತಿ ಜ್ಞಾನಾದಿಗಳು ಇವುಗಳುಳ್ಳ ಅಂಗಿರಸ ಋಷಿಗಳ ಗೋತ್ರದವರಾದ ಲಿಕುಚ (ಪೆಜತ್ತಾಯ) ವಂಶದವರಾದ ಶ್ರೋತ್ರಿಯ ಬ್ರಾಹ್ಮಣರ ವಂಶದಲ್ಲಿ ಸುಬ್ರಹ್ಮಣ್ಯ ಪಂಡಿತರೆಂಬವರು ಇದ್ದರು. ಅವರು ಒಳ್ಳೆಯ ಕವಿಶ್ರೇಷ್ಠರೂ ಎಲ್ಲಾ ವಾದಿಗಳಿಂದ ನಮಸ್ಕಾರಾರ್ಹರೂ ಆಗಿದ್ದರು. (ಇಲ್ಲಿ ಸುಬ್ರಹ್ಮಣ್ಯನು ಸ್ಕಂದಾವತಾರನಾದ್ದರಿಂದ 'ಪಾರ್ವತಿನಂದನಃ ಸ್ಕಂದಃ ಸೇನಾನೀರಗ್ನಿ ಭೂರ್ಗುಹಃ' ಎಂಬ ಅಮರ ಪ್ರಕಾರ ಸ್ಕಂದವಾಚಕ ಗುಹಶಬ್ದದಿಂದ ಸುಬ್ರಹ್ಮಣ್ಯ ಪಂಡಿತರನ್ನು ಹೇಳಿದ್ದಾರೆ. (ಇದರಿಂದ ನಾರಾಯಣಪಂಡಿತಾಚಾರ್ಯರ ವಂಶಕ್ಕೆ ಮೊದಲಿನಿಂದಲೂ ಕವಿಕುಲತಿಲಕ ಮತ್ತು ಪಂಡಿತ ಎಂಬ ಬಿರುದುಗಳು ಇದ್ದುವೆಂದು ತಿಳಿದುಬರುತ್ತದೆ).

ವಿಗ್ರಹ—

**ಸುತಪಃಕವಿತಾದಿಸದ್ಗುಣಾಃ—** ಶೋಭನಂ ಚ ತತ್ ತಪಶ್ಚ ಸುತಪಃ, ಸುತಪಶ್ಚ ಕವಿತಾ ಚ ಸುತಪಃಕವಿತೇ ಸುತಪಃಕವಿತೇ ಆದೀ ಯೇಷಾಂತೇ ಸುತಪಃಕವಿತಾದಯಃ, ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ, ಸುತಪಃ ಕವಿತಾದಯಃ ಸದ್ಗುಣಾಃ ಯೇಷಾಂ ತೇ ಸುತಪಃಕವಿತಾದಿಸದ್ಗುಣಾಃ ತೇಷಾಂ ।

**ಕುಲಜಃ—** ಕುಲೇ ಜಾಯತೇ ಇತಿ ಕುಲಜಃ ।

**ಅಂಗಿರೋಽನ್ವಯಃ—** ಅಂಗಿರಸಃ ಅನ್ವಯಃ ಯೇಷಾಂ ತೇ ಅಂಗಿರೋಽನ್ವಯಾಃ ತೇಷಾಂ ।

**ಗುಹನಾಮಕಃ—** ಗುಹ ಇತಿ ನಾಮ ಯಸ್ಯ ಸಃ ಗುಹನಾಮಕಃ ।

**ಕವಿವರ್ಯಃ—** ಕವೀನಾಂ ವರ್ಯಃ ಕವಿವರ್ಯಃ ।

**ಅಖಿಲವಾದಿವಂದನೀಯಃ—** ಅಖಿಲಾಶ್ಚ ತೇ ವಾದಿನಶ್ಚ ಅಖಿಲವಾದಿನಃ, ಅಖಿಲವಾದಿಭಿಃ ವಂದನೀಯಃ ಅಖಿಲವಾದಿವಂದನೀಯಃ ।

ಕೋಶ— ಅನ್ವಯಃ = ಗೋತ್ರ, 'ಸಂತತಿರ್ಗೋತ್ರಜನನಕುಲಾನ್ಯಭಿಜನಾನ್ವಯೌ'ಅಮರ, ವಿಪಶ್ಚಿತ್ = ಪಂಡಿತನು, 'ವಿದ್ವಾನ್ ವಿಪಶ್ಚಿದ್ದೋಷಜ್ಞಃ' ಅಮರ, ಕವಿ = ಪಂಡಿತ, 'ಸಂಖ್ಯಾವಾನ್ ಪಂಡಿತಃ ಕವಿಃ' ಅಮರ ।

ಕ್ರಿಯಾಪದ— ಅಭವತ್ - ಭೂಧಾತು ಲಙ್ ಪ್ರಥಮಪುರುಷೇ ಏಕವಚನಂ ।

ಪ್ರಯೋಗ— ಸುತಪಃಕವಿತಾದಿಸದ್ಗುಣಾನಾಂ ಅಂಗಿರೋಽನ್ವಯಾನಾಂ ಲಿಕುಚಾನಾಂ ಕುಲಜೇನ ಕವಿವರ್ಯೇಣ ಅಖಿಲವಾದಿವಂದನೀಯೇನ ಗುಹನಾಮಕೇನ ವಿಪಶ್ಚಿತಾ ಅಭೂಯತ ।

★ ★ ★

ಅವತಾರಿಕಾ— ಹೀಗೇ ಸುಬ್ರಹ್ಮಣ್ಯ ಪಂಡಿತರನ್ನು ವರ್ಣಿಸಿ ಅವರ ಪತ್ನಿಯನ್ನು ವರ್ಣಿಸುತ್ತಾರೆ.

**ದಯಿತಾಽಸ್ಯ ಸತೀ ಗುಣಾನುರೂಪಾ**
**ವಿಧಿವೀರ್ಯೇಣ ಮುಹುರ್ಮೃತಪ್ರಜಾಽಪಿ ।**
**ಅಭಜದ್ಭುವನಪ್ರಭೂ ಹರೀಶೌ**
**ಸುತಕಾಮಾ ವಸುದೇವಸೂನುಭಕ್ತಾ ॥ 44 ॥**

ಪದಚ್ಛೇದ— ದಯಿತಾ, ಅಸ್ಯ, ಸತೀ, ಗುಣಾನುರೂಪಾ, ವಿಧಿವೀರ್ಯೇಣ, ಮುಹುಃ, ಮೃತಪ್ರಜಾ, ಅಪಿ, ಅಭಜತ್, ಭುವನಪ್ರಭೂ, ಹರೀಶೌ, ಸುತಕಾಮಾ, ವಸುದೇವಸೂನುಭಕ್ತಾ ।

ಅನ್ವಯ— ಸತೀ, ಗುಣಾನುರೂಪಾ, ವಸುದೇವಸೂನುಭಕ್ತಾ, ಅಸ್ಯ, ದಯಿತಾ, ವಿಧಿವೀರ್ಯೇಣ, ಮುಹುಃ, ಮೃತಪ್ರಜಾ, ಅಪಿ, ಸುತಕಾಮಾ, ಭುವನಪ್ರಭೂ, ಹರೀಶೌ, ಅಭಜತ್ ।

ಅನ್ವಯಾರ್ಥ—

ಸತೀ = ಪತಿವ್ರತೆಯಾದ,
ಗುಣಾನುರೂಪಾ = ಗಂಡನ ಗುಣಗಳಿಗೆ ಅನುಕೂಲಳಾದ,
ವಸುದೇವಸೂನುಭಕ್ತಾ = ಶ್ರೀಕೃಷ್ಣನ ಭಕ್ತಳಾದ,
ಅಸ್ಯ = ಈ ಸುಬ್ರಹ್ಮಣ್ಯ ಪಂಡಿತರ,
ದಯಿತಾ = ಹೆಂಡತಿಯು,
ವಿಧೀವೀರ್ಯೇಣ = ಅದೃಷ್ಟದ ಸಾಮರ್ಥ್ಯದಿಂದ,
ಮುಹುಃ = ಅನೇಕಬಾರಿ,
ಮೃತಪ್ರಜಾ ಅಪಿ = ಸತ್ತ ಮಕ್ಕಳು ಉಳ್ಳವಳಾದರೂ,
ಸುತಕಾಮಾ = ಮಕ್ಕಳ ಬಯಕೆಯುಳ್ಳವಳಾಗಿ,
ಭುವನಪ್ರಭೂ = ಸಮಸ್ತಲೋಕಗಳ ಒಡೆಯರಾದ,
ಹರೀಶೌ = ಹರಿಹರರನ್ನು,
ಅಭಜತ್ = ಸೇವಿಸಿದಳು.

ತಾತ್ಪರ್ಯ— ಈ ಸುಬ್ರಹ್ಮಣ್ಯಪಂಡಿತರ ಪತ್ನಿಯು ಪತಿವ್ರತೆಯೂ, ಪತಿಯ ಗುಣಗಳಿಗೆ ಅನುಕೂಲವಾದ ಗುಣವುಳ್ಳವಳೂ ಆಗಿದ್ದಳು. ಅವಳಲ್ಲಿ ಹುಟ್ಟಿದ ಮಕ್ಕಳು ದುರದೃಷ್ಟದಿಂದಾಗಿ ಸತ್ತುಹೋಗುತ್ತಿದ್ದರು. ಅವಳು ತನಗೆ ದೀರ್ಘಾ

ಯುಷ್ಮಂತನೂ, ಜ್ಞಾನಿಯೂ ಆದ ಮಗನು ಹುಟ್ಟಬೇಕೆಂದು ಬಯಸಿ ಶ್ರೀಕೃಷ್ಣನಲ್ಲಿ ದೃಢವಾದ, ವಿಶೇಷವಾದ ಭಕ್ತಿಯನ್ನು ಮಾಡಿದಳು. ಸಮಸ್ತ ಲೋಕಗಳಿಗೂ ಅಧೀಶ್ವರರಾದ ಹರಿಹರರನ್ನು ಸೇವಿಸಿದಳು.

ವಿಗ್ರಹ—

**ಗುಣಾನುರೂಪಾ**— ಗುಣಾನಾಂ ಅನುರೂಪಾ ಗುಣಾನುರೂಪಾ ।

**ವಿಧೀವೀರ್ಯೇಣ**— ವಿಧೇಃ ವೀರ್ಯಂ ವಿಧಿವೀರ್ಯಂ ತೇನ ।

**ಮೃತಪ್ರಜಾ**— ಮೃತಾ ಪ್ರಜಾ ಯಸ್ಯಾ ಸಾ ಮೃತಪ್ರಜಾ ।

**ಭುವನಪ್ರಭೂ**— ಭುವನಸ್ಯ ಪ್ರಭೂ ಭುವನಪ್ರಭೂ ।

**ಹರೀಶೌ**— ಹರಿಶ್ಚ ಈಶಶ್ಚ ಹರೀಶೌ ।

**ಸುತಕಾಮಾ**— ಸುತೇ ಕಾಮಃ ಯಸ್ಯಾಃ ಸಾ ಸುತಕಾಮಾ ।

**ವಸುದೇವಸೂನುಭಕ್ತಾ**— ವಸುದೇವಸ್ಯ ಸೂನುಃ ವಸುದೇವಸೂನುಃ, ವಸುದೇವಸೂನೋಃ ಭಕ್ತಾ ವಸುದೇವಸೂನುಭಕ್ತಾ ।

**ಕ್ರಿಯಾಪದ**— **ಅಭಜತ್** - ಅಭಜತ್ ಅಭಜತಾಂ ಅಭಜನ್, ಅಭಜಃ ಅಭಜತಂ ಅಭಜತ, ಅಭಜಂ ಅಭಜಾವ ಅಭಜಾಮ । ಭಜಸೇವಾಯಾಂ ಅನಿಟ್ ಪರಸ್ಮೈಪದಿ ಲಙ ಪ್ರಥಮಪುರುಷ ಏಕವಚನ ।

**ಕೋಶ**— ಸತೀ=ಪತಿವ್ರತಾ, 'ಸತೀ ಸಾಧ್ವೀಪತಿವ್ರತಾ' ಅಮರ, ಪ್ರಜಾ = ಸಂತಾನ, 'ಪ್ರಜಾಸಂತಾನಲೋಕಯೋಃ' ವಿಶ್ವ, ಈಶ = ಶಂಭು, 'ಶಂಭುರೀಶಃ ಪಶುಪತಿಃ' ಅಮರ ।

**ಪ್ರಯೋಗ**— ಸತ್ಯಾ ಗುಣಾನುರೂಪಯಾ ವಸುದೇವಸೂನುಭಕ್ತಯಾ ಅಸ್ಯ ದಯಿತಯಾ ವಿಧಿವೀರ್ಯೇಣ ಮುಹುಃ ಮೃತಪ್ರಜಯಾ ಅಪಿ ಸುತಕಾಮಯಾ ಭುವನಪ್ರಭೂ ಹರೀಶೌ ಅಭಜ್ಯೇತಾಂ (ಕರ್ಮಣಿ) ।

★ ★ ★

**ಅವತಾರಿಕಾ**— ದೇವತಾನುಗ್ರಹದಿಂದ ಶ್ರೀ ಸುಬ್ರಹ್ಮಣ್ಯಪಂಡಿತರ ಪತ್ನಿಯು ಯೋಗ್ಯನಾದ ಪುತ್ರನನ್ನು ಪಡೆದಳು ಎಂದು ಹೇಳುತ್ತಾರೆ.

**ಪರಮೇಶ್ವರಯೋಃ ಪ್ರಸಾದಯೋಗಾತ್**
**ಸುತರತ್ನಂ ತದಸೂತ ಸೂರಿಪತ್ನೀ ।**
**ಪರಿಷತ್ಸದಪತ್ತನೇಷು ನಾರ್ಘೋ**
**ವಿವಿದೇ ಯಸ್ಯ ಸಮಃ ಪರೀಕ್ಷಕಾಗ್ರ್ಯೈಃ ॥ 45 ॥**

**ಪದಚ್ಛೇದ**— ಪರಮೇಶ್ವರಯೋಃ, ಪ್ರಸಾದಯೋಗಾತ್, ಸುತರತ್ನಂ, ತತ್, ಅಸೂತ, ಸೂರಿಪತ್ನೀ, ಪರಿಷತ್ಸದ-ಪತ್ತನೇಷು, ನ, ಅರ್ಘಃ, ನ, ವಿವಿದೇ, ಯಸ್ಯ, ಸಮಃ, ಪರೀಕ್ಷಕಾಗ್ರ್ಯೈಃ ।

**ಅನ್ವಯ**— ಸೂರಿಪತ್ನೀ, ಪರಮೇಶ್ವರಯೋಃ, ಪ್ರಸಾದಯೋಗಾತ್, ಯಸ್ಯ, ಪರೀಕ್ಷಕಾಗ್ರ್ಯೈಃ, ಪರಿಷತ್ಸದಪತ್ತ-ನೇಷು, ಸಮಃ, ಅರ್ಘಃ, ನ, ವಿವಿದೇ, ತತ್, ಸುತರತ್ನಂ, ಅಸೂತ ।

**ಅನ್ವಯಾರ್ಥ**—

**ಸೂರಿಪತ್ನೀ** = ಶ್ರೀ ಸುಬ್ರಹ್ಮಣ್ಯಪಂಡಿತರ ಪತ್ನಿಯು,

**ಪರಮೇಶ್ವರಯೋಃ** = ಸರ್ವೋತ್ತಮನಾದ ಶ್ರೀಹರಿ ಮತ್ತು ಹರ ಇವರಿಬ್ಬರ,

ಪ್ರಸಾದಯೋಗಾತ್ = ಅನುಗ್ರಹದ ಸಂಬಂಧದಿಂದ,
ಯಸ್ಯ = ಯಾವ ಮಗನಿಗೆ,
ಪರಿಷತ್ = ವಿದ್ವಾಂಸರ ಸಭೆಗಳೆಂಬ,
ಪದಪತ್ತನೇಷು = ಸ್ಥಾನರೂಪವಾದ ಪಟ್ಟಣಗಳಲ್ಲಿ,
ಪರೀಕ್ಷಕಾಗ್ರ್ಯೈಃ = ರತ್ನಪರೀಕ್ಷೆ ಮಾಡುವವರಲ್ಲಿ ಶ್ರೇಷ್ಠರಾದವರಿಂದ,
ಸಮಃ = ಯೋಗ್ಯವಾದ,
ಅರ್ಘಃ = ಬೆಲೆಯು,
ನ ವಿವಿದೇ = ತಿಳಿಯಲ್ಪಡಲಿಲ್ಲವೋ,
ತತ್ = ಅಂತಹ,
ಸುತರತ್ನಂ = ಶ್ರೇಷ್ಠನಾದ ಪುತ್ರನನ್ನು,
ಅಸೂತ= ಪ್ರಸವಿಸಿದಳು.

ತಾತ್ಪರ್ಯ—ಶ್ರೀ ಸುಬ್ರಹ್ಮಣ್ಯಪಂಡಿತರ ಪತ್ನಿಯ ಸೇವೆಯಿಂದ ಸರ್ವೋತ್ತಮನಾದ ಹರಿಯೂ, ಪರಮೇಶ್ವರನೂ ಇವರಿಬ್ಬರೂ ಪ್ರಸನ್ನರಾದರು. ಅವರಿಬ್ಬರ ಅನುಗ್ರಹದಿಂದ ಅವಳು ಒಬ್ಬ ಒಳ್ಳೆಯ ಮಗನನ್ನು ಪ್ರಸವಿಸಿದಳು. ಪಟ್ಟಣಗಳಲ್ಲಿ ರತ್ನ ಪರೀಕ್ಷೆ ಮಾಡುವವರು ಶ್ರೇಷ್ಠವಾದ ರತ್ನದ ಬೆಲೆಯನ್ನರಿಯದೆ ಇದ್ದಾಗ ಇದೊಂದು ಅಮೂಲ್ಯರತ್ನ ಎಂದಷ್ಟೇ ಹೇಳಲು ಸಾಧ್ಯ ಎನ್ನುತ್ತಾರೆ. ಅದರಂತೆ ಮುಂದೆ ವಿದ್ವಾಂಸರ ಸಭೆಗಳಲ್ಲಿ ಪಂಡಿತರ ಯೋಗ್ಯತೆಯನ್ನು ಪರೀಕ್ಷಿಸುವವರೂ ಕೂಡ ಈ ಬಾಲಕನ ಯೋಗ್ಯತೆಯನ್ನು ನಿರ್ಧರಿಸಲಾರದೆ ಈ ಬಾಲಕನ ಬುದ್ಧಿ ವಿದ್ವತ್ತೆ ಮುಂತಾದ ಗುಣಗಳು ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ, ಇವನು ಅಮೂಲ್ಯ ಗುಣಶಾಲಿ ಎಂದೇ ಹೇಳಿದರು. ಅಂತಹ ಉತ್ತಮನಾದ ಪುತ್ರನನ್ನು ಶ್ರೀಸುಬ್ರಹ್ಮಣ್ಯ ಪಂಡಿತರ ಪತ್ನಿಯು ಪ್ರಸವಿಸಿದಳು.

ವಿಗ್ರಹ—

ಪರಮೇಶ್ವರಯೋಃ— ಪರಮಶ್ಚ ಈಶ್ವರಶ್ಚ ಪರಮೇಶ್ವರೌ ತಯೋಃ ।
ಪ್ರಸಾದಯೋಗಾತ್— ಪ್ರಸಾದಸ್ಯ ಯೋಗಃ ಪ್ರಸಾದಯೋಗಃ ತಸ್ಮಾತ್ ।
ಸುತರತ್ನಂ — ಸುತ ಏವ ರತ್ನಂ ಸುತರತ್ನಂ ತತ್ ।
ಸೂರಿಪತ್ನೀ— ಸೂರೇಃ ಪತ್ನೀ ಸೂರಿಪತ್ನೀ ।
ಪರಿಷತ್ಪದಪತ್ತನೇಷು— ಪರಿಷದಃ ಏವ ಪದಾನಿ (ಚಿನಿವಾರ ಕಟ್ಟೆ-ರತ್ನ ಪರೀಕ್ಷೆಯ ಸ್ಥಾನ) ಪರಿಷತ್‌ಪದಾನಿ, ಪರಿಷತ್ ಪದಾನ್ಯೇವ ಪತ್ತನಾನಿ ಪರಿಷತ್ ಪದಪತ್ತನಾನಿ ತೇಷು ।
ಪರೀಕ್ಷಕಾಗ್ರ್ಯೈಃ— ಅಗ್ರೇ ಭವಾಃ ಅಗ್ರ್ಯಾಃ, ಪರೀಕ್ಷಕೇಷು ಅಗ್ರ್ಯಾಃ ಪರೀಕ್ಷಕಾಗ್ರ್ಯಾಃ ತೈಃ ।

ವಿಶೇಷಾಂಶ— (ಛಲಾರಿಯ) ಯಥಾ ಅನರ್ಘಸ್ಯ ಕಸ್ಯಚಿದ್ರತ್ನಸ್ಯ ಮೌಲ್ಯಪರಿಜ್ಞಾನಾಯ ಪತ್ತನೇಷು ನೀತಸ್ಯ ಸತಃ ರತ್ನಮೂಲ್ಯಪರೀಕ್ಷಕೈಃ ವಿದಗ್ಧೈಃ ಪುರುಷೈಃ ತದ್ಯೋಗ್ಯಾರ್ಘೋ ನ ಜ್ಞಾಯತೇ ಕಿಂತು ಅರ್ಘಹೀನತ್ವಾತ್ ಅಮೂಲ್ಯಮ್ ಇತ್ಯೇವ ಉಚ್ಯತೇ ತಥಾ ತತ್ಸು ತಸ್ಯ ವಿದ್ವತ್ಸಾಂ ಆರೂಢಸ್ಯ ಸತಃ ವಿದ್ವತ್ಸಭಾಸು ಪ್ರವಿಷ್ಟಸ್ಯ ತಸ್ಯ ಸರ್ವವಿದ್ಯಾವೈದಗ್ಧ್ಯಾದಿ ಗುಣಜಾತಂ ಪಶ್ಯದ್ಭಿಃ ವಿದ್ವಜ್ಜನೈಃ ತಸ್ಯ ಗುಣಾನಾಮಿಯತ್ತಾ ನಾವಧಾರಿತಾ ಇತಿ ಭಾವಃ ।

ಕ್ರಿಯಾಪದ— ಅಸೂತ-ಅಸೂತ ಅಸೂವಾತಾಂ ಅಸುವತ, ಅಸೂಥಾಃ ಅಸುವಾಥಾಂ ಅಸೂಧ್ವಂ, ಅಸುವಿ ಅಸೂವಹಿ ಅಸೂಮಹಿ । ಷೂಙ ಪ್ರಾಣಿಗರ್ಭವಿಮೋಚನೇ(ಪ್ರಸವೇ) ಪ್ರಾಣಿಗರ್ಭವಿಮೋಚನಾ(ಪ್ರಸವ)ರ್ಥಕ ಸೂ

ಧಾತು ಸಕರ್ಮಕ ವೇಟ ಆತ್ಮನೇಪದಿ ಅನದ್ಯತನಭೂತೇ ಲಙ ಪ್ರಥಮಪುರುಷೇ ಏಕವಚನಂ । **ವಿವಿದೇ-** ವಿವಿದೇ ವಿವಿದಾತೇ ವಿವಿದಿರೇ, ವಿವಿದಿಷೇ ವಿವಿದಾಥೇ ವಿವಿದಿಧ್ವೇ, ವಿವಿದೇ ವಿವಿದಾವಹೇ ವಿವಿದಾಮಹೇ । ವಿದಜ್ಞಾನೇ ಜ್ಞಾನಾರ್ಥಕ ವಿದಧಾತು ಕರ್ಮಣಿ ಲಿಟ್ ಆತ್ಮನೇಪದಿ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಸೂರಿಪತ್ನ್ಯಾ ಪರಮೇಶ್ವರಯೋಃ ಪ್ರಸಾದಯೋಗಾತ್ ಯಸ್ಯ ಪರಿಷತ್‌ಪದಪತ್ತನೇಷು ಪರೀಕ್ಷ ಕಾಗ್ರ್ಯಾಃ ಸಮಂ ಅರ್ಘಂ ನ ವಿವಿದುಃ ತತ್ ಸುತರತ್ನಂ ಅಸೂಯತ ।

**ಕೋಶ—** ಸೂರೀ = ಪಂಡಿತ, 'ಧೀಮಾನ್ ಸೂರಿಃ ಕೃತೀ ಕೃಷ್ಟಿ' ಅಮರ, ಪರಿಷತ್ = ಸಭೆ, 'ಸಮಜ್ಯಾ ಪರಿಷತ್ ಗೋಷ್ಠಿ ಸಭಾ ಸಮಿತಿ ಸಂಸದಃ' ಅಮರ, ಪತ್ತನ = ಪಟ್ಟಣ, 'ಪೂಃ ಸ್ತ್ರೀ ಪುರೀ ನಗರ್ಯೌ ವಾ ಪತ್ತನಂ ಪುಟಭೇದನಂ' ಅಮರ, ಅರ್ಘ = ಬೆಲೆ, 'ಮೂಲ್ಯೇ ಪೂಜಾವಿಧಾವರ್ಘಃ' ಅಮರ ।

★ ★ ★

**ಅವತಾರಿಕಾ—** ಆ ಬಾಲಕನ ಹೆಸರನ್ನು ವಿವರಿಸುತ್ತಾರೆ.

> **ವದನೇಂದುಮವೇಕ್ಷ್ಯ ನಂದನಸ್ಯ**
> **ಸ್ವಕುಲೋತ್ತಾರಣದಕ್ಷಲಕ್ಷಣಸ್ಯ ।**
> **ಕೃತಕೃತ್ಯತಯಾ ಕ್ರಿಯಾಃ ಪ್ರಕುರ್ವನ್**
> **ಕವಿರಾಖ್ಯಾದುಚಿತಾಂ ತ್ರಿವಿಕ್ರಮಾಖ್ಯಾಮ್ ॥ 46 ॥**

**ಪದಚ್ಛೇದ—** ವದನೇಂದುಂ, ಅವೇಕ್ಷ್ಯ, ನಂದನಸ್ಯ, ಸ್ವಕುಲೋತ್ತಾರಣದಕ್ಷಲಕ್ಷಣಸ್ಯ, ಕೃತಕೃತ್ಯತಯಾ, ಕ್ರಿಯಾಃ, ಪ್ರಕುರ್ವನ್, ಕವಿಃ, ಆಖ್ಯಾತ್, ಉಚಿತಾಂ, ತ್ರಿವಿಕ್ರಮಾಖ್ಯಾಮ್ ।

**ಅನ್ವಯ—** ಕವಿಃ, ಸ್ವಕುಲೋತ್ತಾರಣದಕ್ಷಲಕ್ಷಣಸ್ಯ, ನಂದನಸ್ಯ, ವದನೇಂದುಂ, ಅವೇಕ್ಷ್ಯ, ಕೃತಕೃತ್ಯತಯಾಃ, ಕ್ರಿಯಾಃ, ಪ್ರಕುರ್ವನ್ (ಸನ್), ಉಚಿತಾಂ, ತ್ರಿವಿಕ್ರಮಾಖ್ಯಾಂ, ಆಖ್ಯಾತ್ ।

**ಅನ್ವಯಾರ್ಥ—**

**ಕವಿಃ** = ಸುಬ್ರಹ್ಮಣ್ಯ ಪಂಡಿತರು,
**ಸ್ವಕುಲಉತ್ತಾರಣದಕ್ಷಲಕ್ಷಣಸ್ಯ** = ತಮ್ಮ ಲಿಕುಚ ವಂಶವನ್ನು ಎಲ್ಲಾ ಪಾಪಗಳ ಸಮುದಾಯವೆಂಬ ಸಮುದ್ರ- ದಿಂದ ಮೇಲೆತ್ತಿ ದಾಟಿಸುವುದರಲ್ಲಿ ಸಮರ್ಥವಾದ ಲಕ್ಷಣಗಳುಳ್ಳ,
**ನಂದನಸ್ಯ** = ಮಗನ,
**ವದನೇಂದುಂ** = ಚಂದ್ರನಂತಿರುವ ಮುಖವನ್ನು,
**ಅವೇಕ್ಷ್ಯ** = ನೋಡಿ,
**ಕೃತಕೃತ್ಯತಯಾ** = ಮಾಡಬೇಕಾದ ಕಾರ್ಯವನ್ನು ಮಾಡಿದುದರಿಂದ (ಧನ್ಯತೆಯನ್ನು ಪಡೆದುದರಿಂದ),
**ಕ್ರಿಯಾಃ** = ಜಾತಕರ್ಮಾದಿ ಸಂಸ್ಕಾರಗಳನ್ನು,
**ಪ್ರಕುರ್ವನ್(ಸನ್)** = ಮಾಡುತ್ತಾ,
**ಉಚಿತಾಂ** = ಯೋಗ್ಯವಾದ,
**ತ್ರಿವಿಕ್ರಮಾಖ್ಯಾಂ** = ತ್ರಿವಿಕ್ರಮ ಎಂಬ ಹೆಸರನ್ನು,
**ಆಖ್ಯಾತ್** = ಹೇಳಿದರು.

**ತಾತ್ಪರ್ಯ**— ಆಗ ಸುಬ್ರಹ್ಮಣ್ಯ ಪಂಡಿತರು ತನ್ನ ಮಗನ ಚಂದ್ರನಂತಿರುವ ಮುಖವನ್ನು ನೋಡಿದರು. ಇವನಲ್ಲಿ ನಮ್ಮ ವಂಶವನ್ನು ಎಲ್ಲಾ ಪಾಪಸಮುದ್ರದಿಂದ ಮೇಲೆತ್ತಿ ದಾಟಿಸಲು ಬೇಕಾದ ಉತ್ತಮ ಲಕ್ಷಣಗಳಿವೆ ಎಂದು ಅರಿತರು. ಸತ್‌ಪುತ್ರನನ್ನು ಪಡೆದು ವಂಶೋದ್ಧಾರ ಮಾಡಬೇಕೆಂಬ ತಮ್ಮ ಬಯಕೆಯು ಈಡೇರಿದುದನ್ನು ತಿಳಿದು ಸಂತೋಷಪಟ್ಟರು. ಮಗನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ನೆರವೇರಿಸಿ ಮುಂದೆ ಅವನು ವೇದ, ಕವಿತೆ, ವೇದಾಂತಗಳಲ್ಲಿ ಪಂಡಿತನಾಗುವ ನೆಂದರಿತು 'ತ್ರಿವಿಕ್ರಮ' ಎಂಬ ಹೆಸರನ್ನಿಟ್ಟರು.

**ವಿಗ್ರಹ**—

**ವದನೇಂದುಂ**— ವದನಂ ಇಂದುರಿವ ವದನೇಂದುಃ ತಂ (ವದನಮೇವ ಇಂದುಃ ವದನೇಂದುಃ ತಂ) ।

**ಸ್ವಕುಲೋತ್ತಾರಣದಕ್ಷಲಕ್ಷಣಸ್ಯ**— ಸ್ವಸ್ಯ ಕುಲಂ ಸ್ವಕುಲಂ, ಸ್ವಕುಲಸ್ಯ ಉತ್ತಾರಣಂ ಸ್ವಕುಲೋತ್ತಾರಣಂ, ಸ್ವಕುಲೋತ್ತಾರಣೇ ದಕ್ಷಾಣಿ ಸ್ವಕುಲೋತ್ತಾರಣದಕ್ಷಾಣಿ, ಸ್ವಕುಲೋತ್ತಾರಣದಕ್ಷಾಣಿ ಲಕ್ಷಣಾನಿ ಯಸ್ಯಸಃ ಸ್ವಕುಲೋತ್ತರಣದಕ್ಷಲಕ್ಷಣಃ ತಸ್ಯ ।

**ಕೃತಕೃತ್ಯತಯಾ**— ಕೃತಂ ಕೃತ್ಯಂ ಯೇನ ಸಃ ಕೃತಕೃತ್ಯಃ, ತಸ್ಯ ಭಾವಃ ಕೃತಕೃತ್ಯತಾ, ತಯಾ ।

**ತ್ರಿವಿಕ್ರಮಾಖ್ಯಾಂ**— ತ್ರಿಷು (ವೇದೇವೇದಾಂತಕವಿತಾಯಾಂ ಚ) ವಿಕ್ರಮಃ ಯಸ್ಯ ಸಃ ತ್ರಿವಿಕ್ರಮಃ, ತ್ರಿವಿಕ್ರಮ ಇತಿ ಆಖ್ಯಾ ತ್ರಿವಿಕ್ರಮಾಖ್ಯಾ, ತಾಂ ।

**ಕೋಶಾ**— ದಕ್ಷ = ಸಮರ್ಥ, 'ದಕ್ಷೇತು ಚತುರಪೇಶಲಪಟವಃ ಸೂತ್ಥಾನ ಉಷ್ಣಶ್ಚ' ಅಮರ ।

**ಕ್ರಿಯಾಪದ**— ಆಖ್ಯಾತ್ - ಅಖ್ಯಾತ್ ಅಖ್ಯಾತಾಂ ಅಖ್ಯುಃ ಅಖ್ಯಾನ್, ಅಖ್ಯಾಃ ಅಖ್ಯಾತಂ ಅಖ್ಯಾತ, ಅಖ್ಯಾಂ ಅಖ್ಯಾವ ಅಖ್ಯಾಮ । ಆಜ ಪೂರ್ವಕ ಖ್ಯಾಪ್ರಕಥನೇ ಇತಿ ಧಾತುಃ ಲಜ ಅದಾದಿ ಸಕ ಅನಿಟ್ ಪರಸ್ಮೈಪದಿ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ**— ಕವಿನಾ ಸ್ವಕುಲೋತ್ತಾರಣದಕ್ಷಲಕ್ಷಣಸ್ಯ ನಂದನಸ್ಯ ವದನೇಂದುಂ ಅವೇಕ್ಷ್ಯ ಕೃತಕೃತ್ಯತಯಾ ಕ್ರಿಯಾಃ ಪ್ರಕುರ್ವತಾ ಉಚಿತಾ ತ್ರಿವಿಕ್ರಮಾಖ್ಯಾ ಆಖ್ಯಾಯತ್(ಕರ್ಮಣಿ) ।

★ ★ ★

**ಅವತಾರಿಕಾ**— ಶ್ರೀ ತ್ರಿವಿಕ್ರಮರ ಬಾಲ್ಯದ ಪ್ರತಿಭಾತಿಶಯವನ್ನು ವರ್ಣಿಸುತ್ತಾರೆ.

**ಕಲಭಾಷಣ ಏವ ಸೂರಿಪೋತಃ**
**ಕವಿರಾಸೀದನವದ್ಯಪದ್ಯವಾದೀ ।**
**ಅವಭಾತಿ ನನು ಪ್ರಭಾಪ್ರಭಾವೀ**
**ಭಗವಾನ್ ಬಾಲತರೋಽಪಿ ತಿಗ್ಮಭಾನುಃ ॥ 47 ॥**

**ಪದಚ್ಛೇದ**— ಕಲಭಾಷಣಃ, ಏವ, ಸೂರಿಪೋತಃ, ಕವಿಃ, ಆಸೀತ್, ಅನವದ್ಯಪದ್ಯವಾದೀ, ಅವಭಾತಿ, ನನು, ಪ್ರಭಾಪ್ರಭಾವೀ, ಭಗವಾನ್, ಬಾಲತರಃ, ಅಪಿ, ತಿಗ್ಮಭಾನುಃ ।

**ಅನ್ವಯ**— ಸೂರಿಪೋತಃ, ಕಲಭಾಷಣಃ, ಏವ, ಅನವದ್ಯಪದ್ಯವಾದೀ, ಕವಿ, ಆಸೀತ್, ಭಗವಾನ್, ತಿಗ್ಮಭಾನುಃ, ಬಾಲತರಃ, ಅಪಿ, ಪ್ರಭಾಪ್ರಭಾವೀ, ಅವಭಾತಿ, ನನು ।

ಅನ್ವಯಾರ್ಥ—

ಸೂರಿಪೋತಃ = ಸುಬ್ರಹ್ಮಣ್ಯಪಂಡಿತರ ಮಗನಾದ ತ್ರಿವಿಕ್ರಮನು,

ಕಲಭಾಷಣಃ ಏವ = ತೊದಲುಳ್ಳ (ಅಸ್ಪಷ್ಟವಾದ) ಮಾತುಗಾರನಾಗಿರುವಾಗಲೇ,

ಅನವದ್ಯಪದವಾದೀ = ದೋಷವಿಲ್ಲದ ಶ್ಲೋಕಗಳನ್ನು ಹೇಳುವ,

ಕವಿಃ = ಕವಿಯು,

ಆಸೀತ್ = ಆಗಿದ್ದನು,

ಭಗವಾನ್ = ಪೂಜ್ಯನಾದ,

ತಿಗ್ಮಭಾನುಃ = ಸೂರ್ಯನು (ತೀಕ್ಷ್ಣವಾದ ಕಿರಣಗಳುಳ್ಳವನು),

ಬಾಲತರಃ ಅಪಿ = ಆಗಲೇ ಉದಯಿಸಿ ಎಳೆಯವನಾದರೂ,

ಪ್ರಭಾಪ್ರಭವೀ = ಕಾಂತಿಯ ಸಾಮರ್ಥ್ಯವುಳ್ಳವನಾಗಿ,

ಅವಭಾತಿ ನನು = ತೋರುತ್ತಾನಷ್ಟೆ

ತಾತ್ಪರ್ಯ— ಶ್ರೀಸುಬ್ರಹ್ಮಣ್ಯ ಪಂಡಿತರ ಮಗನಾದ ಆ ತ್ರಿವಿಕ್ರಮನು ತೊದಲು ಮಾತುಗಳನ್ನು ಆಡುತ್ತಿರುವಾಗಲೇ ಶಬ್ದಾರ್ಥ ದೋಷಗಳಿಲ್ಲದ ಒಳ್ಳೆಯ ಶ್ಲೋಕಗಳನ್ನು ತಾನೇ ನಿರ್ಮಾಣ ಮಾಡಿ ಹೇಳುತ್ತಿದ್ದನು. ಹೀಗೆ ಕವಿತೆಯು ಅತ್ಯಂತ ಬಾಲ್ಯದಲ್ಲಿಯೇ ತ್ರಿವಿಕ್ರಮನ ಬಾಯಿಯಿಂದ ಹೊರಬರುತ್ತಿತ್ತು. ಇದು ಯುಕ್ತ. ಸೂರ್ಯನು ಉದಯಿಸಿ ಎಳೆಯವ-ನಾಗಿದ್ದರೂ, ಆಗತಾನೆ ಉದಯಿಸುತ್ತಿದ್ದರೂ ಅವನ ಕಾಂತಿ ಸಾಮರ್ಥ್ಯಗಳು ಎಲ್ಲರ ಅನುಭವಕ್ಕೆ ಬರುತ್ತವೆ. (ಸೂರ್ಯನು ಉದಯಿಸುತ್ತಿರುವಾಗಲೇ ಪ್ರಭೆಯನ್ನು ಸುತ್ತಲೂ ಬೀರುವಂತೆ ಬಾಲಕನು ಕವಿತಾದಿ ರಚನೆಯಲ್ಲಿರುವ ತನ್ನ ಬುದ್ಧಿಶಕ್ತಿ-ಯನ್ನು ಪ್ರಕಟಿಸುತ್ತಿದ್ದನು ಎಂದು ಅಭಿಪ್ರಾಯ) ಪ್ರತಿವಸ್ತೂಪಮಾಲಂಕಾರ.

ವಿಗ್ರಹ—

ಕಲಭಾಷಣಃ— ಕಲಂ ಭಾಷಣಂ ಯಸ್ಯಸಃ ಕಲಭಾಷಣಃ ।

ಸೂರಿಪೋತಃ— ಸೂರೇಃ ಪೋತಃ ಸೂರಿಪೋತಃ ।

ಅನವದ್ಯಪದ್ಯವಾದೀ— ನ ವಿದ್ಯತೇ ಅವದ್ಯಂ ಯೇಷು ತಾನಿ ಅನವದ್ಯಾನಿ, ಅನವದ್ಯಾನಿ ಚ ತಾನಿ ಪದ್ಯಾನಿ ಚ ಅನವದ್ಯಪದ್ಯಾನಿ, ಅನವದ್ಯಪದ್ಯಾನಿ ವದತೀತಿ ಅನವದ್ಯಪದ್ಯವಾದೀ ।

ಪ್ರಭಾಪ್ರಭಾವೀ— ಪ್ರಭಾಯಾಃ ಪ್ರಭಾವಃ ಪ್ರಭಾಪ್ರಭಾವಃ, ಸಃ ಅಸ್ಯ ಅಸ್ತೀತಿ ಪ್ರಭಾಪ್ರಭಾವೀ ।

ಭಗವಾನ್— ಭಗಃ ಅಸ್ಯ ಅಸ್ತೀತಿ ಭಗವಾನ್ ।

ಬಾಲತರಃ— ಅತಿಶಯೇನ ಬಾಲಃ ಬಾಲತರಃ ।

ತಿಗ್ಮಭಾನುಃ— ತಿಗ್ಮಾಃ ಭಾನವಃ ಯಸ್ಯ ಸಃ ತಿಗ್ಮಭಾನುಃ ।

ಕ್ರಿಯಾಪದ— ಆಸೀತ್ - ಆಸೀತ್ ಆಸ್ತಾಂ ಆಸನ್, ಆಸೀಃ ಆಸ್ತಂ ಆಸ್ತ, ಆಸಂ ಆಸ್ವ ಆಸ್ಮ । ಅಸಭುವಿ ಅಕರ್ಮಕ ಪರಸ್ಮೈಪದೀ ಅನದ್ಯತನಭೂತೇ ಲಙ. ಅವಭಾತಿ - ಅವ+ಭಾತಿ ಭಾತಃ ಭಾಂತಿ, ಭಾಸಿ ಭಾಥಃ ಭಾಥ, ಭಾಮಿ ಭಾವಃ ಭಾಮಃ । ಭಾದೀಪ್ತೌ ಅವ ಉಪಸರ್ಗ ಅಕರ್ಮಕ ಲಟ್ ।

ಪ್ರಯೋಗ— ಸೂರಿಪೋತೇನ ಕಲಭಾಷಣೇನೈವ ಅನವದ್ಯಪದ್ಯವಾದಿನಾ ಅಭೂಯತ (ಭಾವೇ) ಭಗವತಾ ತಿಗ್ಮಭಾನುನಾ ಬಾಲತರೇಣಾಪಿ ಪ್ರಭಾಪ್ರಭಾವಿಣಾ ಅವಭಾಯತೇ ನನು ।

★ ★ ★

**ಅವತಾರಿಕಾ—** ಈ ತ್ರಿವಿಕ್ರಮಪಂಡಿತರು ಬಾಲ್ಯದಲ್ಲಿಯೇ ವೇದವೇದಾಂಗಾದಿಗಳನ್ನು ಕಲಿತು ಉಷಾಹರಣ ಮಹಾಕಾವ್ಯವನ್ನು ರಚಿಸಿದರೆಂದು ಹೇಳುತ್ತಾರೆ.

**ಸಕಲಾಂಗಯುತಾವಭಾವಶಾಖಃ**
**ಸಮಯೇ ಪ್ರಾಪ್ತ ಉದಾರಪಕ್ಷಿಸೇವ್ಯಃ ।**
**ಸ ಸಸರ್ಜ ಸದಧ್ವಗೋಪಕೃತ್ಯೈ**
**ಲಿಕುಚಃ ಕಾವ್ಯಫಲಂ ರಸಾಭಿರಾಮಮ್ ॥ 48 ॥**

**ಪದಚ್ಛೇದ—** ಸಕಲಾಂಗಯುತಾವಭಾವಶಾಖಃ, ಸಮಯೇ, ಪ್ರಾಪ್ತೇ, ಉದಾರಪಕ್ಷಿಸೇವ್ಯಃ, ಸಃ, ಸಸರ್ಜ, ಸದಧ್ವಗೋಪಕೃತ್ಯೈ, ಲಿಕುಚಃ, ಕಾವ್ಯಫಲಂ, ರಸಾಭಿರಾಮಮ್ ।

**ಅನ್ವಯ—** ಸಕಲಾಂಗಯುತಾವಭಾವಶಾಖಃ, ಸಮಯೇ, ಪ್ರಾಪ್ತೇ, ಉದಾರಪಕ್ಷಿಸೇವ್ಯಃ, ಸಃ, ಲಿಕುಚಃ, ಸದಧ್ವ ಗೋಪಕೃತ್ಯೈ, ರಸಾಭಿರಾಮಂ, ಕಾವ್ಯಫಲಂ, ಸಸರ್ಜ ।

**ಅನ್ವಯಾರ್ಥ—**

**ಸಕಲಅಂಗಯುತಃಅವಭಾವಶಾಖಃ** = ಎಲ್ಲ ವೇದಾಂಗಗಳಿಂದ, ಚಿಗುರು ಒಳಗಿನ ಚಿಕ್ಕಗೊಂಬೆಗಳು ಮೊದಲಾದ ಭಾಗಗಳಿಂದ ಕೂಡಿದ ತಿಳಿಯಲ್ಪಟ್ಟ ಪ್ರಕಾಶಗೊಂಡ ಋಗಾದಿ ಶಾಖೆಗಳುಳ್ಳ, ಕೊಂಬೆಗಳುಳ್ಳ,

**ಸಮಯೇ** = ಶಾಸ್ತ್ರವು ಸರಿಯಾದ ಕಾಲವು,

**ಪ್ರಾಪ್ತೇ** = ತಿಳಿಯಲ್ಪಡಲು, ಒದಗಲು,

**ಉದಾರಪಕ್ಷಿಸೇವ್ಯಃ** = ಉತ್ತಮರಾದ, ಶ್ರೇಷ್ಠರಾದ ಬೇರೆ ಬೇರೆ ವಿಧವಾದ ಶಾಸ್ತ್ರಜ್ಞಾನಿಗಳಿಂದ ಹಕ್ಕಿಗಳಿಂದ ಸೇವಿಸಲು ಯೋಗ್ಯರಾದ ಹಣ್ಣುಗಳೆಂಬ ಆಹಾರರೂಪದಿಂದ, ಸ್ವೀಕರಿಸಲು ಯೋಗ್ಯವಾದ,

**ಸಃ ಲಿಕುಚಃ** = ಆಲಿಕುಚ (ಪೆಜತ್ತಾಯ) ವಂಶದಲ್ಲಿ ಹುಟ್ಟಿದ ತ್ರಿವಿಕ್ರಮರು. ಹೆಬ್ಬಲಸು ಹಣ್ಣುಗಳಿಂದ ತುಂಬಿದ ಮರವು,

**ಸತ್‌ಅಧ್ವಗಉಪಕೃತ್ಯೈ** = ಸಜ್ಜನರೆಂಬ, ಒಳ್ಳೆಯ ದಾರಿಹೋಕರ ಉಪಕಾರಕ್ಕಾಗಿ,

**ರಸಅಭಿರಾಮಂ** = ಶೃಂಗಾರಾದಿ ರಸಗಳಿಂದ, ಸಿಹಿ ಹುಳಿ ಇತ್ಯಾದಿ ರಸಗಳಿಂದ ಮನೋಹರವಾದ,

**ಕಾವ್ಯಫಲಂ** = ಹಣ್ಣಿನಂತಿರುವ ಉಷಾಹರಣ ಮಹಾಕಾವ್ಯವನ್ನು, ಉತ್ತಮ ಕಾವ್ಯದಂತಿರುವ ಹಣ್ಣನ್ನು,

**ಸಸರ್ಜ** = ರಚಿಸಿದರು. ಉತ್ಪತ್ತಿ ಮಾಡಿತು (ಒದಗಿಸಿತು).

**ತಾತ್ಪರ್ಯ—** ಕವಿಕುಲತಿಲಕ ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯರು ಶಿಕ್ಷಾದಿಷಡಂಗಸಹಿತವಾದ ಋಗಾದಿ ವೇದಶಾಖೆಗಳ ಅಧ್ಯಯನ ಮಾಡಿದರು. ನ್ಯಾಯಮೀಮಾಂಸಾವ್ಯಾಕರಣವೇದಾಂತಾದಿ ಶಾಸ್ತ್ರಗಳನ್ನು ಓದಿ ತಿಳಿದರು. ಆಗ ಆಯಾ ಶಾಸ್ತ್ರಗಳನ್ನು ಬಲ್ಲ ಬೇರೆ ಬೇರೆ ಸಿದ್ಧಾಂತಿಗಳೂ ಬಂದು ಶ್ರೀಮತ್‌ತ್ರಿವಿಕ್ರಮಪಂಡಿತರನ್ನು, ಶಾಸ್ತ್ರಗಳ ವಿಶೇಷ ವಿಷಯಗಳನ್ನು, ರಹಸ್ಯಗಳನ್ನು ತಿಳಿಯಲು ಸೇವಿಸಲು ಆರಂಭಿಸಿದರು. ಹೀಗೆ ವಿದ್ಯಾಪ್ರೌಢಿಮೆಯನ್ನು ಪಡೆದು ಪಂಡಿತ ಸೇವ್ಯರಾದ ತ್ರಿವಿಕ್ರಮರು ತಾನು ಸರಸ ಸಹೃದಯ ಕವಿಯಾದುದರಿಂದ ಕಾವ್ಯ ಮಾರ್ಗದಲ್ಲಿ ಪರಿಶ್ರಮವುಳ್ಳ ಸಜ್ಜನರ ಉಪಕಾರಕ್ಕಾಗಿ ಶೃಂಗಾರಾದಿರಸಭರಿತವಾದ, ಮಾಧುರ್ಯಾದಿ ರಸಭರಿತವಾದ ಒಳ್ಳೆಯ ಹೆಬ್ಬಲಸಿನ ಹಣ್ಣಿನಂತಿರುವ ಉಷಾಹರಣವೆಂಬ ಮಹಾಕಾವ್ಯವನ್ನು ರಚಿಸಿದರು. ಒಂದು ಹೆಬ್ಬಲಸಿನ ಮರವು ಚಿಗುರು ಎಲೆ, ಚಿಕ್ಕಗೊಂಬೆಗಳೂ,

ಹೂವು, ಹೀಚು ಇವುಗಳಿಂದ ಮಧ್ಯದಲ್ಲಿ ದೊಡ್ಡ ದೊಡ್ಡ ಕೊಂಬೆಗಳಿಂದ ಅಲಂಕೃತವಾಗಿ ಎದ್ದು ಕಾಣಿಸುತ್ತದೆ. ಹಣ್ಣುಗಳು ಇಲ್ಲದಿರುವಾಗ ಹೆಚ್ಚಾಗಿ ಪಕ್ಷಿಗಳು ಬಂದು ಆ ಮರದಲ್ಲಿ ಕುಳಿತುಕೊಳ್ಳದಿದ್ದರೂ ಹಣ್ಣು ಬಿಡುವ ಸಮಯ ಬಂದಾಗ ಪಕ್ಷಿಜಾತಿಯಲ್ಲಿ ಶ್ರೇಷ್ಠವಾದ ಗಿಳಿ, ಪಾರಿವಾಳ ಮುಂತಾದ ಪಕ್ಷಿಗಳು ಆಗ್ಗಾಗ್ಗೆ ಅಲ್ಲಿಗೆ ಬಂದು ಈ ಮರದಲ್ಲಿರುವ ಕಾಯಿಗಳು ಯಾವಾಗ ಹಣ್ಣಾದವು ಎಂದು ನಿರೀಕ್ಷಿಸುತ್ತಾ ಇರುತ್ತಿವೆ. ಮರದಲ್ಲಿ ಹಣ್ಣು ಬಿಟ್ಟ ಕೂಡಲೆ ಎಲ್ಲಾ ಜಾತಿಯ ಶ್ರೇಷ್ಠಪಕ್ಷಿಗಳೂ ಚಿಲಿಪಿಲಿ ಗುಟ್ಟುತ್ತಾ ಮರದ ಶಾಖೋಪಶಾಖೆಗಳಲ್ಲಿ ಓಡಾಡುತ್ತ ಇರುತ್ತವೆ. ಒಳ್ಳೆಯ ದಾರಿಗಳು ಅಂತಹ ಮರದ ಕೆಳಗಡೆ ನೆರಳಿನಲ್ಲಿ ಕುಳಿತು ವಿಶ್ರಮಿಸಿ ತಮ್ಮ ಕೈಗೆಟಕುವ ಹಣ್ಣುಗಳನ್ನು ತೆಗೆದುಕೊಂಡು ತಿನ್ನುತ್ತಾರೆ ಮತ್ತು ಸಂತೋಷಪಟ್ಟು ಅವರನ್ನು ಹರಸುತ್ತಾರೆ. ಹೆಬ್ಬಲಸಿನ ಹಣ್ಣುಗಳ ಮಾಧುರ್ಯ, ಸ್ವಲ್ಪ ಹುಳಿ, ಸ್ವಲ್ಪ ಒಗರು, ಸ್ವಲ್ಪ ಉಪ್ಪು, ಇತ್ಯಾದಿ ಷಡ್ರಸಗಳಿಂದ ಕೂಡಿರುತ್ತವೆ. ಇಂತಹ ಹಣ್ಣುಗಳನ್ನು ಉತ್ಪಾದಿಸಿ ಆ ಮರ ಸಜ್ಜನರೆಂಬ ದಾರಿಹೋಕರ ಪ್ರಶಂಸೆಗೆ ಪಾತ್ರವಾಗಿ ಧನ್ಯವಾಗುತ್ತದೆ. ಕವಿಕುಲತಿಲಕ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು ಲಿಕುಚ (ಪೆಜತ್ತಾಯ) ವಂಶೋದ್ಭವ-ರಾದುದರಿಂದ ಲಿಕುಚವೃಕ್ಷದಂತೆ ಇದ್ದಾರೆಂದು ಶ್ಲೇಷದಿಂದ ವರ್ಣಿಸಿದ್ದಾರೆ. (ಶ್ಲೇಷಾಲಂಕಾರ)

ವಿಗ್ರಹ—

**ಸಕಲಾಂಗಯುತಾವಭಾವಶಾಖಃ**— ಸಕಲಾನಿ ಚ ತಾನಿ ಅಂಗಾನಿ ಚ ಸಕಲಾಂಗಾನಿ, ಸಕಲಾಂಗೈಃ ಯುತಾಃ ಸಕಲಾಂಗಯುತಾಃ, ಸಕಲಾಂಗಯುತಾಃ ಅವಭಾತಾಃ ಶಾಖಾಃ ಯೇನ ಸಃ ಸಕಲಾಂಗಯುತಾವ ಭಾತಶಾಖಃ (ಸಕಲಾಂಗಯುತಾಃ ಅವಭಾತಾಃ ಶಾಖಾಃ ಯಸ್ಯ ಸಃ) ।

**ಉದಾರಪಕ್ಷಿಸೇವ್ಯಃ**— ಪಕ್ಷಃ ಏಷಾಂ ಸಂತೀತಿ ಪಕ್ಷಿಣಃ (ಪಕ್ಷೌ ಏಷಾಂ ಸಂತೀತಿ ಪಕ್ಷಿಣಃ) ಉದಾರಾಶ್ಚ ತೇ ಪಕ್ಷಿಣಶ್ಚ ಉದಾರಪಕ್ಷಿಣಃ ಉದಾರಪಕ್ಷಿಭಿಃ ಸೇವ್ಯಃ ।

**ಸದಧ್ವಗೋಪಕೃತ್ಯೈ**— ಅಧ್ವಾನಂ ಗಚ್ಛಂತೀತಿ ಅಧ್ವಗಾಃ ಸಂತ ಏವ ಅಧ್ವಗಾಃ ಸದಧ್ವಗಾಃ (ಸಂತಶ್ಚ ತೇ ಅಧ್ವಗಾಶ್ಚ = ಉದಾರ ಪಕ್ಷಿ ಸೇವ್ಯಃ ಸಂಸಾರಮಾರ್ಗದಲ್ಲಿ ಪ್ರಯಾಣ ಮಾಡುವ ಒಳ್ಳೆಯ ಸಜ್ಜನರು) ಸದಧ್ವಗಾನಾಂ ಉಪಕೃತಿಃ ಸದಧ್ವಗೋಪಕೃತಿಃ ತಸ್ಯೈ ।

**ಕಾವ್ಯಫಲಂ**— ಕಾವ್ಯಮೇವ ಫಲಂ ಕಾವ್ಯಫಲಂ, ಕಾವ್ಯಮಿವ ಫಲಂ ಕಾವ್ಯಫಲಂ ತತ್ ।

**ರಸಾಭಿರಾಮಂ**— ರಸೈಃ ಅಭಿರಾಮಂ ರಸಾಭಿರಾಮಂ ತತ್ ।

**ಕೋಶ**— 'ಶಿಕ್ಷಾ ವ್ಯಾಕರಣಂ ಛಂದೋ ನಿರುಕ್ತಂ ಜ್ಯೋತಿಷಂ ತಥಾ । ಕಲ್ಪಶ್ಚೇತಿ ಷಡಂಗಾನಿ ವೇದಸ್ಯಾಹುರ್ಮನೀಷಿಣಃ' ॥ ಇವೇ ವೇದದ ಷಡಂಗಗಳು ಮೂಲ(ಬೇರು) ಎಲೆ, ಮೊಳಕೆ, ಫಲ, ಕಾಂಡ, ಹಬ್ಬಿರುವ ಗಿಡಬಳ್ಳಿ, ಹೂವು, ತೊಗಟೆ, ಕೊಂಬೆಗಳು, ಹೀಚುಗಳು ಇವು ವೃಕ್ಷಾಂಗಗಳು. ಸಮಯ = ಸಿದ್ಧಾಂತ ಯುಕ್ತವಾದ ಕಾಲ, 'ಸಮಯಾಃ ಶಪಥಾಚಾರಕಾಲಸಿದ್ಧಾಂತ ಸಂವಿದಃ' ಅಮರ, ರಸ = ಶೃಂಗಾರಾದಿರಸ, ಮಾಧುರ್ಯಾದಿರಸ, 'ಶೃಂಗಾರಾದೌ ವಿಷೇ ವೀರ್ಯೇ ಗುಣೇ ರಾಗೇ ದ್ರವೇ ರಸಃ' ಅಮರ, 'ಶೃಂಗಾರ ಹಾಸ್ಯ ಕರುಣ ವೀರರೌದ್ರಭಯಾನಕಾಃ ಭೀಭತ್ಸಾದ್ಭುತಶಾಂತಾಖ್ಯಾಃ ನವಕಾವ್ಯೇ ರಸಾಃ ಸ್ಮೃತಾಃ' ॥ (ಕಾವ್ಯಪ್ರಕಾಶ)

**ಕ್ರಿಯಾಪದ**— ಸಸರ್ಜ - ಸಸರ್ಜ ಸಸೃಜತುಃ ಸಸೃಜುಃ, ಸಸರ್ಜಥ ಸಸ್ರಷ್ಠ ಸಸೃಥುಃ ಸಸೃಜ, ಸಸರ್ಜ ಸಸೃಜಿವ ಸಸೃಜಿಮ । ಸೃಜವಿಸರ್ಗೇ (ಸೃಷ್ಟಿಸುವುದು) ಸಕರ್ಮಕ ಅನಿಟ್ ಪರಸ್ಮೈಪದೀಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮ ಪುರುಷೇ ಏಕವಚನಂ ।

**ಪ್ರಯೋಗ**— ಸಕಲಾಂಗಯುತಾವಭಾತಶಾಖೇನ ಸಮಯೇ ಪ್ರಾಪ್ತೇ ಉದಾರಪಕ್ಷಿಸೇವ್ಯೇನ ತೇನ ಲಿಕುಚೇನ ಸದಧ್ವಗೋಪಕೃತ್ಯೈ ರಸಾಭಿರಾಮಂ ಕಾವ್ಯಫಲಂ ಸಸೃಜೇ (ಕರ್ಮಣಿ) ।

★ ★ ★

**ಅವತಾರಿಕಾ—** ತ್ರಿವಿಕ್ರಮಪಂಡಿತಾಚಾರ್ಯರ ಅದ್ವೈತ ವೇದಾಂತ ವಿದ್ಯಾಭ್ಯಾಸವನ್ನು ವಿವರಿಸುತ್ತಾರೆ.

**ಪ್ರತಿಭಾವಿತಮಾತ್ಮನಾ ಯಥಾರ್ಥಂ**
**ಪೃಥುಮಾಯಾಸಮಯಸ್ಯ ದುರ್ಘಟತ್ವಮ್ ।**
**ಸ್ವಗುರೌ ಪರಿಹರ್ತುಮಕ್ಷಮೇಽಪಿ**
**ಶ್ರುತವಾಂಸ್ತಂ ಸ ವಯಸ್ಯಬೋಧಿತೋಽಲಮ್ ॥ 49 ॥**

**ಪದಚ್ಛೇದ—** ಪ್ರತಿಭಾವಿತಂ(ಪ್ರತಿಪಾದಿತಂ), ಆತ್ಮನಾ, ಯಥಾರ್ಥಂ, ಪೃಥುಮಾಯಾಸಮಯಸ್ಯ, ದುರ್ಘಟತ್ವಂ, ಸ್ವಗುರೌ, ಪರಿಹರ್ತುಂ, ಅಕ್ಷಮೇ, ಅಪಿ, ಶ್ರುತವಾನ್, ತಂ (ತತ್), (ಶ್ರುತವಾಂಸ್ತಂ = ಸಂಧಿ) ಸ್ವವಯಸ್ಯಬೋಧಿತಃ (ಸಃ ವಯಸ್ಯಬೋಧಿತಃ = ಸವಯಸ್ಯಬೋಧಿತಃ) ಅಲಮ್ ।

**ಅನ್ವಯ—** ಆತ್ಮನಾ, ಪ್ರತಿಭಾವಿತಂ(ಪ್ರತಿಪಾದಿತಂ), ಯಥಾರ್ಥಂ, ಪೃಥುಮಾಯಾಸಮಯಸ್ಯ, ದುರ್ಘಟತ್ವಂ, ಪರಿಹರ್ತುಂ, ಸ್ವಗುರೌ, ಅಕ್ಷಮೇ, ಅಪಿ, ಸಃ, ಅಲಂವಯಸ್ಯಬೋಧಿತಃ, ತಂ, ಶ್ರುತವಾನ್ ।

**ಅನ್ವಯಾರ್ಥ—**

**ಆತ್ಮನಾ** = ತನ್ನಿಂದ,
**ಪ್ರತಿಭಾವಿತಂ** = ಆರೋಪಿಸಲ್ಪಟ್ಟ (ಪ್ರತಿಪಾದಿತಂ = ಹೇಳಲ್ಪಟ್ಟ),
**ಯಥಾರ್ಥಂ** = ನಿಜವಾಗಿಯೂ ಇರುವ,
**ಪೃಥು** = ದೊಡ್ಡದಾದ,
**ಮಾಯಾಸಮಯಸ್ಯ** = ಮಾಯಾವಾದಿ ಮತದ,
**ದುರ್ಘಟತ್ವಂ** = ಕೂಡದಿರುವಿಕೆಯನ್ನು,
**ಪರಿಹರ್ತುಂ** = ನಿವಾರಿಸುವುದಕ್ಕೆ,
**ಸ್ವಗುರೌ** = ತನ್ನ ಗುರುಗಳು,
**ಅಕ್ಷಮೇ ಅಪಿ** = ಅಸಮರ್ಥರಾಗಿದ್ದರೂ,
**ಸಃ** = ಆ ತ್ರಿವಿಕ್ರಮಪಂಡಿತಾಚಾರ್ಯರು,
**ಅಲಂ** = ಚೆನ್ನಾಗಿ,
**ಸ್ವ** = ತನ್ನ,
**ವಯಸ್ಯ** = ಸ್ನೇಹಿತರಿಂದ,
**ಬೋಧಿತಃ** = ಉಪದೇಶ ಮಾಡಲ್ಪಟ್ಟವರಾಗಿ,
**ತಂ** = ಆ ಮಾಯಾ(ಸಮಯ)ಶಾಸ್ತ್ರವನ್ನು,
**ಶ್ರುತವಾನ್** = ಕೇಳಿದರು.

**ತಾತ್ಪರ್ಯ—** ಅನಂತರ ತ್ರಿವಿಕ್ರಮಪಂಡಿತರು ತಮ್ಮ ಕುಲಕ್ರಮಾಗತವಾದ ಅದ್ವೈತ ವೇದಾಂತಶಾಸ್ತ್ರವನ್ನು ಕೇಳಲಾರಂಭಿಸಿದರು. ಆಗ ಅವರಿಗೆ ಆ ಶಾಸ್ತ್ರದಲ್ಲಿ ಅನೇಕ ಪೂರ್ವಾಪರ ವಿರೋಧಗಳು, ಅಸಾಂಗತ್ಯಗಳು ತೋರಿದವು. ಅವೆಲ್ಲವೂ ಮಾಯಾವಾದ ಶಾಸ್ತ್ರದಲ್ಲಿ ಯಥಾರ್ಥವಾಗಿಯೇ ಇರತಕ್ಕವುಗಳೇ ಆಗಿದ್ದವು. (ಆ ಶಾಸ್ತ್ರದಲ್ಲಿ ಅವಿದ್ಯೆಯು ದುರ್ಘಟವೇ ಎಂದು ಒಪ್ಪಲಾಗಿದೆ) ಆದರೆ ತ್ರಿವಿಕ್ರಮರ ಗುರುಗಳು ಮೇಲುನೋಟಕ್ಕೂ ಆ ದೋಷಗಳನ್ನು ಪರಿಹರಿಸಲು ಸಮರ್ಥ-

ರಾಗಲಿಲ್ಲ. ಆಗ ತ್ರಿವಿಕ್ರಮರಿಗೆ ಅದ್ವೈತ ವೇದಾಂತಶಾಸ್ತ್ರದಲ್ಲಿ ಅರುಚಿ ಉಂಟಾಯಿತು. ಆದರೂ ಅವರ ಸ್ನೇಹಿತರು ಬಹುಕಾಲದಿಂದ ಬಂದ ಶಾಸ್ತ್ರದಲ್ಲಿ ದೋಷಗಳನ್ನು ಆರೋಪಿಸಬಾರದು ಎಂದು ತಿಳುವಳಿಕೆ ಹೇಳಿದಾಗ ತ್ರಿವಿಕ್ರಮರ ಮನಸ್ಸಿನಲ್ಲಿ ಆದರವಿಲ್ಲದಿದ್ದರೂ ಆ ಮಯಾವಾದಿ ಶಾಸ್ತ್ರವನ್ನು ಕೇಳಿದರು. (ತಮ್ಮ ಕುಲಕ್ರಮಾಗತವಾದ ಅದ್ವೈತವನ್ನು ತ್ರಿವಿಕ್ರಮ ಕವಿಯು ಕಲಿಯುವಾಗ ಅದ್ವೈತ ಶಾಸ್ತ್ರದಲ್ಲಿ ಗ್ರಂಥಗಳಲ್ಲಿ ಬಲವಾದ ದೋಷಗಳಿವೆ ಎಂದು ಆಕ್ಷೇಪಿಸಿದರು. ಗುರುಗಳು ಅವುಗಳನ್ನು ಪರಿಹರಿಸದೆ ಸುಮ್ಮನಿರಲು ಅದ್ವೈತ ಸಿದ್ಧಾಂತವನ್ನು ಕಲಿಯುವುದರಲ್ಲಿ ಬೇಸರಪಟ್ಟರೂ ಸಹಪಾಠಿಗಳ ನಿರ್ಬಂಧದಿಂದ ಪುನಃ ಕೇಳಿದರು ಎಂದು ಭಾವ).

ವಿಗ್ರಹ—

**ಪೃಥುಮಾಯಾಸಮಯಸ್ಯ—** ಮಾಯಾಕಲ್ಪಿತಂ ಸರ್ವಂ ಇತಿ ಸಮಯಃ ಮಾಯಾಸಮಯಃ, ಪೃಥುಶ್ಚಾಸೌ ಮಾಯಾಸಮಯಶ್ಚ ಪೃಥುಮಾಯಾಸಮಯಃ ತಸ್ಯ ।

**ದುರ್ಘಟತ್ವಂ—** ದುಃಖೇನ ಘಟಯಿತುಂ ಶಕ್ಯಃ ದುರ್ಘಟಃ, ತಸ್ಯ ಭಾವಃ ದುರ್ಘಟತ್ವಂ ।

**ಸ್ವಗುರೌ—** ಸ್ವಸ್ಯ ಗುರುಃ ಸ್ವಗುರುಃ ತಸ್ಮಿನ್ ಸ್ವಗುರೌ ।

**ಅಕ್ಷಮಃ—** ನ ಕ್ಷಮಃ ಅಕ್ಷಮಃ ತಸ್ಮಿನ್ ।

**ವಯಸ್ಯಬೋಧಿತಃ—** ವಯಸ್ಯೈಃ ಬೋಧಿತಃ ವಯಸ್ಯಬೋಧಿತಃ ।

**ಕೋಶ—** ಕ್ಷಮಃ = ಸಮರ್ಥ, 'ಕ್ಷಮಂ ಶಕ್ತೇ ಹಿತೇ ತ್ರಿಷು' ಅಮರ, ವಯಸ್ಯ = ಸ್ನೇಹಿತ, 'ವಯಸ್ಯಃ ಸ್ನಿಗ್ಧಃ ಸವಯಾಃ' ಅಮರ ।

★ ★ ★

**ಅವತಾರಿಕಾ—** ತ್ರಿವಿಕ್ರಮಪಂಡಿತರ ಎದುರು ಭಾನುಪಂಡಿತ ಮುಂತಾದವರು ಸೋತುಹೋದರು ಎಂದು ಹೇಳುತ್ತಾರೆ.

**ಭಗವತ್ಯುದಿತೇ ಸಗೋವಿಲಾಸೇ**
**ವಟುಭಾವಂ ತ್ಯಜತಿ ತ್ರಿವಿಕ್ರಮಾಖ್ಯೇ ।**
**ಅಪಿ ಭಾನುಪುರಸ್ಸರಾಸ್ಸಮಸ್ತಾಃ**
**ಪ್ರಯಯುಃ ಕೀಟಮಣಿಪ್ರಭತ್ವಮಾಶು ॥ 50 ॥**

**ಪದಚ್ಛೇದ—** ಭಗವತಿ, ಉದಿತೇ, ಸಗೋವಿಲಾಸೇ, ವಟುಭಾವಂ, ತ್ಯಜತಿ, ತ್ರಿವಿಕ್ರಮಾಖ್ಯೇ, ಅಪಿ, ಭಾನು ಪುರಸ್ಸರಾಃ, ಸಮಸ್ತಾಃ, ಪ್ರಯಯುಃ, ಕೀಟಮಣಿಪ್ರಭತ್ವಂ, ಆಶು ।

**ಅನ್ವಯ—** ಸಗೋವಿಲಾಸೇ, ತ್ರಿವಿಕ್ರಮಾಖ್ಯೇ, ಭಗವತಿ, ಉದಿತೇ, (ಸತಿ)ವಟುಭಾವಂ, ತ್ಯಜತಿ, (ಸತಿ)ಭಾನು ಪುರಸ್ಸರಾಃ, ಸಮಸ್ತಾಃ, ಅಪಿ, ಕೀಟಮಣಿಪ್ರಭತ್ವಂ, ಆಶು, ಪ್ರಯಯುಃ ।

**ಅನ್ವಯಾರ್ಥ—**

**ಸಗೋವಿಲಾಸೇ** = ಮಾತಿನ ಚಮತ್ಕಾರದಿಂದ ಸಹಿತರಾದ ತೇಜಸ್ಸಿನ ಸಮೂಹದಿಂದ ಕೂಡಿದ,

**ತ್ರಿವಿಕ್ರಮಾಖ್ಯೇ** = ತ್ರಿವಿಕ್ರಮಪಂಡಿತಾಚಾರ್ಯರೆಂಬ,

**ಭಗವತಿ** = ನಾರಾಯಣನು,

**ಉದಿತೇ ಸತಿ** = ವೇದಶಾಸ್ತ್ರ ನೈಪುಣ್ಯವೆಂಬ ಉದಯವನ್ನು ಹೊಂದುತ್ತಿರಲು,

**ವಟುಭಾವಂ** = ಬಾಲ್ಯಾವಸ್ಥೆಯನ್ನು,

**ತ್ಯಜತಿ ಸತಿ** = ಬಿಡುತ್ತಿರಲು,

**ಭಾನುಪುರಸ್ಸರಾಃ** = ಭಾನುಪಂಡಿತರೆ (ಸೂರ್ಯನೇ) ಮೊದಲಾದ,

**ಸಮಸ್ತಾಃ ಅಪಿ** = ಎಲ್ಲರೂ,

**ಕೀಟಮಣಿಪ್ರಭತ್ವಂ** = ಮಿಂಚಿನ ಹುಳುವಿನ ಕಾಂತಿಯನ್ನು,

**ಆಶು** = ಬೇಗನೆ,

**ಪ್ರಯಯುಃ** = ಹೊಂದಿದರು.

**ತಾತ್ಪರ್ಯ—** ಮಾತಿನಲ್ಲಿ ಚತುರರಾದ ತೇಜಸ್ವಿಗಳಾದ ತ್ರಿವಿಕ್ರಮಪಂಡಿತಾಚಾರ್ಯರೆಂಬ ನಾರಾಯಣನು ವೇದ ಶಾಸ್ತ್ರಗಳಲ್ಲಿ ನೈಪುಣ್ಯವೆಂಬ ಉದಯವನ್ನು ಹೊಂದಿ ಬ್ರಹ್ಮಚರ್ಯಾವಸ್ಥೆಯನ್ನು ಬಿಟ್ಟು ಯುವಕನಾದನು. ಪ್ರಾಭಾಕರ ಮತದ ಭಾನುಪಂಡಿತನೇ ಮೊದಲಾದ ಪ್ರತಿವಾದಿ ಪಂಡಿತರು ಕಳೆಗುಂದಿದರು. ತೇಜಸ್ವಿಯಾಗಿಯೂ ಮಾತಿನ ಚಮತ್ಕಾರ ದಿಂದ ಎಲ್ಲರನ್ನೂ ಬೆರಗುಗೊಳಿಸುವವನೂ ಆದ ವಾಮನನು ವಟುರೂಪವನ್ನು ಬಿಟ್ಟು ತ್ರಿವಿಕ್ರಮರೂಪವನ್ನು ಸ್ವೀಕರಿಸಿ ಎಲ್ಲಾ ಲೋಕಗಳನ್ನು ಎರಡು ಹೆಜ್ಜೆಯಿಂದ ಅಳೆದು ಪ್ರಪಂಚವನ್ನು ವ್ಯಾಪಿಸಿ ದೊಡ್ಡ ರೂಪವನ್ನು ಸ್ವೀಕರಿಸಿ ನಿಂತಾಗ ಭಾನು (ಸೂರ್ಯ) ಮುಂತಾದ ತೇಜೋದೇವತೆಗಳು ಪರಮಾತ್ಮನ ವ್ಯಾಪ್ತ ದೇಹದ ಯಾವುದೋ ಭಾಗದಲ್ಲಿ ಮಿಂಚುಹುಳ ದಂತೆ ಪ್ರಕಾಶಿಸುತ್ತಿದ್ದ ತ್ರಿವಿಕ್ರಮರ ಉದಯವೂ ಇದರಂತೆ ಆಯಿತು.

**ಅಥವಾ—** ಮಹಾವಾಗ್ಮಿಗಳಾದ ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯರು ಬ್ರಹ್ಮಚರ್ಯದ ಅವಸ್ಥೆಯನ್ನು, ಬಾಲ್ಯಾವಸ್ಥೆಯನ್ನು ಬಿಟ್ಟು ಯೌವನ ಹೊಂದಿದರು. ವೇದಶಾಸ್ತ್ರಾದಿಗಳ ವಿಶೇಷ ಜ್ಞಾನವನ್ನು ಸಂಪಾದಿಸಿ, ಅವುಗಳ ಆಧಾರದಿಂದ ಶ್ರೀಮನ್ನಾರಾಯಣನನ್ನು ಚೆನ್ನಾಗಿ ವರ್ಣಿಸಿದಾಗ ಪ್ರಾಭಾಕರ ಮತದ ವಿದ್ವಾಂಸರಾದ ಭಾನು ಮೊದಲಾದ ಪಂಡಿತರು ಕಳೆಗುಂದಿದರು. ಅದು ತೇಜಸ್ವಿಯಾದ ಮತ್ತು ವಾಗ್ಮಿಯಾದ ವಾಮನನು ಕ್ರಮವಾಗಿ ತ್ರಿವಿಕ್ರಮರೂಪದಿಂದ ಪ್ರಪಂಚವನ್ನು ವ್ಯಾಪಿಸಿದಾಗ ಸೂರ್ಯ ಮೊದಲಾದ ದೇವತೆಗಳು ಮಿಂಚಿನ ಹುಳುವಿನಂತೆ ಆದಂತಾಯಿತು. (ಶ್ಲೇಷ ಮೂಲಕವಾದ ಅರ್ಥಾಂತರ ಧ್ವನಿ).

★ ★ ★

**ಅವತಾರಿಕಾ—** ಇಂತಹ ತ್ರಿವಿಕ್ರಮ ಪಂಡಿತರಿಗೆ ಅವರ ತಂದೆಯು ಉಪದೇಶಿಸಿದರೆಂದು ಹೇಳುತ್ತಾರೆ.

**ಅತಿದಕ್ಷಮತಿಂ ಸಪಾದಲಕ್ಷೇ**
**ಸಮಯೇ ಮಾಯಿಜನಸ್ಯ ಯುಕ್ತಿಶೂರಮ್ ।**
**ಮಹಿತಂ ಹಿ ಮಹೀತಲೇ ಮಹಿಮ್ನಾ**
**ಜನಕೋ ನಂದನಮಬ್ರವೀದುಪಾಂಶು ॥ 51 ॥**

**ಪದಚ್ಛೇದ—** ಅತಿದಕ್ಷಮತಿಂ, ಸಪಾದಲಕ್ಷೇ, ಮಾಯಿಜನಸ್ಯ, ಯುಕ್ತಿಶೂರಂ, ಮಹಿತಂ, ಹಿ, ಮಹೀತಲೇ, ಮಹಿಮ್ನಾ ಜನಕಃ, ನಂದನಂ, ಅಬ್ರವೀತ್, ಉಪಾಂಶು ।

**ಅನ್ವಯ—** ಜನಕಃ, ಸಪಾದಲಕ್ಷೇ, ಸಮಯೇ, ಮಾಯಿಜನಸ್ಯ, ಸಮಯೇ, ಅತಿದಕ್ಷಮತಿಂ, ಯುಕ್ತಿಶೂರಂ, ಮಹಿಮ್ನಾ, ಮಹೀತಲೇ, ಮಹಿತಂ, ನಂದನಂ, ಉಪಾಂಶು, ಅಬ್ರವೀತ್, ಹಿ ।

**ಅನ್ವಯಾರ್ಥ—**

**ಜನಕಃ** = ತಂದೆಯಾದ ಸುಬ್ರಹ್ಮಣ್ಯಪಂಡಿತರು,
**ಸಪಾದಲಕ್ಷೇ** = ಒಂದು ಲಕ್ಷದ ಇಪ್ಪತ್ತೈದುಸಾವಿರ ಸಂಖ್ಯೆಯುಳ್ಳ
**ಮಾಯಿಜನಸ್ಯ** = ಮಾಯಾವಾದಿಗಳ,
**ಸಮಯೇ** = ಶಾಸ್ತ್ರದಲ್ಲಿ
**ಅತಿದಕ್ಷಮತಿಂ** = ಅತ್ಯಂತ ಕುಶಲವಾದ ಬುದ್ಧಿಯುಳ್ಳ
**ಯುಕ್ತಿ** = ಯುಕ್ತಿಯಿಂದ ಖಂಡಿಸುವುದರಲ್ಲಿ
**ಶೂರಂ** = ಚತುರರಾದ,
**ಮಹಿಮ್ನಾ** = ಮಾಹಾತ್ಮ್ಯೆಯಿಂದ,
**ಮಹೀತಲೇ** = ಭೂಮಿಯಲ್ಲಿ
**ಮಹಿತಂ** = ಎಲ್ಲರಿಂದಲೂ ಸನ್ಮಾನಿತನಾದ,
**ನಂದನಂ** = ಮಗನನ್ನು ಕುರಿತು,
**ಉಪಾಂಶು** = ಗುಟ್ಟಿನಲ್ಲಿ
**ಅಬ್ರವೀತ್ ಹಿ** = ಹೇಳಿದರು (ಇದು ಪ್ರಸಿದ್ಧವು).

**ತಾತ್ಪರ್ಯ—** ಮಾಯಾವಾದದಲ್ಲಿ ಮೂಲಗ್ರಂಥವು ಒಂದು ಲಕ್ಷ ಇಪ್ಪತ್ತೈದು ಸಾವಿರ ಗ್ರಂಥ ಸಂಖ್ಯೆಯಿಂದ ಕೂಡಿದೆ. (ಗ್ರಂಥ = 32 ಅಕ್ಷರಗಳು) ಶ್ರೀಮತ್ ತ್ರಿವಿಕ್ರಮಪಂಡಿತರು ಅಷ್ಟು ಗ್ರಂಥವನ್ನು ಅಭ್ಯಸಿಸಿ ಕಂಠಪಾಠ ಮಾಡಿ ಅದರ ಅರ್ಥವನ್ನು ಚೆನ್ನಾಗಿ ತಿಳಿದು ತಮ್ಮ ಮನಸ್ಸಿನಲ್ಲಿ ಇರಿಸಿಕೊಂಡಿದ್ದರು. ಅದ್ವೈತ ಸಿದ್ಧಾಂತಕ್ಕೆ ವಿರುದ್ಧವಾಗಿ ಮಾತಾಡುವವರನ್ನು ಯುಕ್ತಿಯಿಂದ ಬಹಳ ಬೇಗನೆ ಖಂಡಿಸಿ ನಿರುತ್ತರರನ್ನಾಗಿ ಮಾಡುತ್ತಿದ್ದರು. ಭೂಮಿಯಲ್ಲಿ ಎಲ್ಲಾ ಕಡೆ ಅವರ ಕೀರ್ತಿ ಹರಡಿತ್ತು. ಎಲ್ಲಾ ಕಡೆ ಅವರಿಗೆ ಗೌರವ ದೊರಕಿತ್ತು. ಇಂತಹ ಮಗನಿಗೆ ಕೆಲವು ರಹಸ್ಯ ವಿಷಯಗಳನ್ನು ಹೇಳಬೇಕೆಂದು ತ್ರಿವಿಕ್ರಮರ ತಂದೆಯಾದ ಸುಬ್ರಹ್ಮಣ್ಯಪಂಡಿತರು ಒಂದು ದಿನ ಮಗನನ್ನು ಕರೆದು ಗುಟ್ಟಾಗಿ ಈ ರೀತಿ ಹೇಳಿದರು.

ವಿಗ್ರಹ—

**ಅತಿದಕ್ಷಮತಿಂ—** ಅತಿಶಯೇನ ದಕ್ಷಾ ಅತಿಕದಕ್ಷಾ ಅತಿದಕ್ಷಾ ಮತಿಃ ಯಸ್ಯಸಃ ಅತಿದಕ್ಷಮತಿಃ ತಂ ।
**ಸಪಾದಲಕ್ಷೇ—** ಪಾದೇನ ಸಹ ವರ್ತತೇ ಇತಿ ಸಪಾದಂ ಸಪಾದಂ ಲಕ್ಷಂ ಯಸ್ಮಿನ್ ಸಃ ಸಪಾದಲಕ್ಷಃ ತಸ್ಮಿನ್ ।
**ಮಯಿಜನಸ್ಯ—** ಮಾಯಾ ಅಸ್ಯ ಅಸ್ತೀತಿ ಮಾಯೀ, ಮಾಯೀ ಚಾಸೌ ಜನಶ್ಚ ಮಾಯಿಜನಃ ತಸ್ಯ ।
**ಯುಕ್ತಿಶೂರಂ—** ಯುಕ್ತ್ಯಾಂ ಶೂರಃ ಯುಕ್ತಿಶೂರಃ ತಂ ।

**ಕೋಶ—** ಉಪಾಂಶು = ಗುಟ್ಟಾಗಿ, 'ರಹಸ್ಯೋಪಾಂಶು ಚಾಲಿಂಗೇ' ಅಮರ ।

**ಕ್ರಿಯಾಪದ— ಅಬ್ರವೀತ್** - ಅಬ್ರವೀತ್ ಅಬ್ರೂತಾಂ ಅಬ್ರುವನ್, ಅಬ್ರವೀಃ ಅಬ್ರೂತಂ ಅಬ್ರೂತ, ಅಬ್ರುವಂ ಅಬ್ರೂವ ಅಬ್ರೂಮ । ಬ್ರೂಞ್ ವ್ಯಕ್ತಾಯಾಂ ವಾಚಿ ಸಕರ್ಮಕ ಪರಸ್ಮೈಪದಿ ಅನದ್ಯತನಭೂತೇ ಲಙ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಜನಕೇನ ಸಪಾದಲಕ್ಷೇ ಮಯಿಜನಸ್ಯ ಸಮಯೇ ಅತಿದಕ್ಷಮತಿಃ ಯುಕ್ತಿಶೂರಃ ಮಹಿಮ್ನಾ ಮಹೀತಲೇ ಮಹಿತಃ ಉಪಾಂಶು ಊಚ್ಯತ ಹಿ ।

★ ★ ★

**ಅವತಾರಿಕಾ—** ಸುಬ್ರಹ್ಮಣ್ಯ ಪಂಡಿತರು ರಹಸ್ಯವಾದ ವಿಷಯವನ್ನು ತಿಳಿಸುತ್ತಾರೆ.

**ಶೃಣು ವಾಚಮಿಮಾಂ ವಿಚಾರಿತಾರ್ಥಾಂ**
**ನ ಕಲೌ ನಿರ್ಗುಣಭಾವನಾ ಸುಖಾಯ ।**
**ಇತಿ ಗೌಣವಿಮುಕ್ತಯೇ ಗುಣಾಢ್ಯಂ**
**ಸ್ಮರ ದೇವಂ ವಸುದೇವಸೂನುಮೇವ ॥ 52 ॥**

**ಪದಚ್ಛೇದ—** ಶೃಣು, ವಾಚಂ, ಇಮಾಂ, ವಿಚಾರಿತಾರ್ಥಾಂ, ನ, ಕಲೌ, ನಿರ್ಗುಣಭಾವನಾ, ಸುಖಾಯ, ಇತಿ, ಗೌಣವಿಮುಕ್ತಯೇ, ಗುಣಾಢ್ಯಂ, ಸ್ಮರ, ದೇವಂ, ವಸುದೇವಸೂನುಂ, ಏವ ।

**ಅನ್ವಯ—** ವಿಚಾರಿತಾರ್ಥಾಂ, ಇಮಾಂ, ವಾಚಂ, ಶೃಣು, ಕಲೌ, ನಿರ್ಗುಣಭಾವನಾ, ಸುಖಾಯ, ನ, ಇತಿ, ಗೌಣವಿಮುಕ್ತಯೇ, ಗುಣಾಢ್ಯಂ, ವಸುದೇವಸೂನುಂ, ದೇವಂ, ಏವ, ಸ್ಮರ ।

**ಅನ್ವಯಾರ್ಥ—**

**ವಿಚಾರಿತಾರ್ಥಾಂ** = ವಿಮರ್ಶಿಸಿ ನಿಶ್ಚಯಿಸಲ್ಪಟ್ಟ ಅರ್ಥವುಳ್ಳ,
**ಇಮಾಂ ವಾಚಂ** = ಈ ಮಾತನ್ನು,
**ಶೃಣು** = ಕೇಳು,
**ಕಲೌ** = ಕಲಿಯುಗದಲ್ಲಿ
**ನಿರ್ಗುಣಭಾವನಾ** = ಪರಬ್ರಹ್ಮನು ನಿರ್ಗುಣನೆಂದು ಧ್ಯಾನಿಸುವುದು,
**ಸುಖಾಯ** = ಆನಂದರೂಪವಾದ ಮೋಕ್ಷಕ್ಕಾಗಿ,
**ನ(ಭವತಿ)** = ಆಗುವುದಿಲ್ಲ
**ಇತಿ** = ಈ ಕಾರಣದಿಂದ,
**ಗುಣವಿಮುಕ್ತಯೇ** = ಜ್ಞಾನ, ಆನಂದ ಮುಂತಾದ ಗುಣಸ್ವರೂಪನಾಗಿ ಜೀವನು ಇರುವ ಮೋಕ್ಷಾವಸ್ಥೆಗಾಗಿ,
**ಗುಣಾಢ್ಯಂ** = ಸಕಲಕಲ್ಯಾಣಗುಣಸಂಪನ್ನನಾದ,
**ವಸುದೇವಸೂನುಂ ಏವ** = (ವಸುದೇವಸೂನು) ವಸುದೇವಪುತ್ರನಾದ,
**ದೇವಂ ಏವ** = ಶ್ರೀಕೃಷ್ಣನನ್ನೇ,
**ಸ್ಮರ** = ಸ್ಮರಿಸು.

**ತಾತ್ಪರ್ಯ—** ಮಗೂ! ತ್ರಿವಿಕ್ರಮ! ಚೆನ್ನಾಗಿ ವಿಚಾರಮಾಡಿ ನಿಶ್ಚಯಿಸಿದ ನನ್ನ ಈ ಮಾತನ್ನು ಕೇಳು. ಕಲಿಯುಗದಲ್ಲಿ ಬ್ರಹ್ಮನು ನಿರ್ಗುಣನೆಂದು ಉಪಾಸನೆ ಮಾಡಿದರೆ 'ಅವನಲ್ಲಿ ಯಾವ ಗುಣವೂ ಇಲ್ಲವೆಂದು ಧ್ಯಾನಿಸಿದರೆ' ಅಂತಹ ಜ್ಞಾನಾನಂದಾದಿಗುಣರಹಿತವಾದ ಮೋಕ್ಷವೇ ಲಭಿಸುತ್ತದೆ. ಅದು ಯಾರಿಗೂ ಅಪೇಕ್ಷಿತವಲ್ಲ. ಆದುದರಿಂದ ಕಲ್ಯಾಣಗುಣಪರಿಪೂರ್ಣನಾದ ವಾಸುದೇವನನ್ನು ಭಜಿಸು.

**ವಿಗ್ರಹ—**

**ವಿಚಾರಿತಾರ್ಥಾಂ—** ವಿಚಾರಿತಃ ಅರ್ಥಃ ಯಸ್ಯಾಃ ಸಾ ವಿಚಾರಿತಾರ್ಥಾ ತಾಂ ।

**ನಿರ್ಗುಣಭಾವನಾ—** ನಿರ್ಗತಾಃ ಗುಣಾಃ ಯಸ್ಮಾತ್ ಸಃ ನಿರ್ಗುಣಃ, ನಿರ್ಗುಣ ಇತಿ ಭಾವನಾ ನಿರ್ಗುಣ ಭಾವನಾ ।

**ಗೌಣವಿಮುಕ್ತಯೇ—** ಗುಣಾನಾಂ ಇಯಂ ಗೌಣೀ, ಗೌಣೀ ಚ ಸಾ ವಿಮುಕ್ತಿಶ್ಚ ಗೌಣವಿಮುಕ್ತಿಃ ತಸ್ಯೈ ।

**ಗುಣಾಢ್ಯಂ—** ಗುಣೈಃ ಆಢ್ಯಃ ಗುಣಾಢ್ಯಃ ತಂ ।

**ವಸುದೇವಸೂನುಂ—** ವಸುದೇವಸ್ಯ ಸೂನುಃ ವಸುದೇವಸೂನುಃ ತಂ ।

**ಕ್ರಿಯಾಪದ—** ಶೃಣು- ಶೃಣೋತು ಶೃಣುತಾತ್, ಶೃಣುತಾಂ ಶೃಣ್ವಂತು, ಶೃಣು ಶೃಣುತಾತ್ ಶೃಣುತಂ ಶೃಣುತ, ಶೃಣವಾನಿ ಶೃಣವಾವ ಶೃಣವಾಮ । ಶ್ರು ಶ್ರವಣೇ ಸಕ ಅನಿ ಪರ ಆಜ್ಞಾರ್ಥ ಲೋಟ್ ಮಧ್ಯಮ ಪುರುಷೇ ಏಕವಚನಂ ।

ಸ್ಮರ- ಸ್ಮರ ಸ್ಮರತು ಸ್ಮರತಾತ್ ಸ್ಮರತಾಂ ಸ್ಮರಂತು, ಸ್ಮರ ಸ್ಮರತಾತ್ ಸ್ಮರತಂ ಸ್ಮರತ, ಸ್ಮರಾನಿ ಸ್ಮರಾವ ಸ್ಮರಾಮ ಸ್ಮೃಚಿಂತಾಯಾಂ ಸಕ ಅನಿ ಪರೋಕ್ಷಾಜ್ಞಾರ್ಥಲೋಟ್ ಮಧ್ಯಮಪುರುಷೇ ಏಕವಚನಂ ।

**ಪ್ರಯೋಗ—** ವಿಚಾರಿತಾರ್ಥಾ ಇಯಂ ವಾಕ್(ತ್ವಯಾ) ಶ್ರೂಯತಾಮ್। ಕಲೌ ನಿರ್ಗುಣಭಾವನಯಾ ಸುಖಾಯ ನ ಭೂಯತೇ ಇತಿ ಗೌಣವಿಮುಕ್ತಯೇ ಗುಣಾಢ್ಯಂ ವಾಸುದೇವಃ ಏವ ದೇವಃ (ವಸುದೇವಸೂನುಃ ಏವ ದೇವಃ) ತ್ವಯಾ ಸ್ಮರ್ಯತಾಮ್ ।

**ವಿಶೇಷಾಂಶ—** ಭಲಾರಿಯದಲ್ಲಿ ಹೀಗೆ ಹೇಳಿದೆ - ಯದಿ ಜ್ಞಾನಾನಂದಾದಿಸರ್ವಗುಣರಹಿತಂ ಪರಬ್ರಹ್ಮ ಉಪಾಸ್ಯೇತ ತರ್ಹಿ ತತ್ಫಲಮೋಕ್ಷೋಽಪಿ ಜ್ಞಾನಾನಂದಾದಿರಹಿತ ಏವ ಸ್ಯಾತ್ । ತಂ ಯಥಾಯಥೋಪಾಸತೇ ತದೇವ ಭವತೀತಿ ಶ್ರುತೇಃ = ಒಂದು ವೇಳೆ ಜ್ಞಾನ ಆನಂದ ಮುಂತಾದ ಎಲ್ಲ ಗುಣಗಳು ಇಲ್ಲದಿರುವ ಪರಬ್ರಹ್ಮನನ್ನು ಉಪಾಸಿಸುವುದಾದರೆ ಅದರ ಫಲವಾದ ಮೋಕ್ಷವೂ ಕೂಡ ಜ್ಞಾನಾನಂದಾದಿ ರಹಿತವೇ ಆಗುವುದು. ಪರಮಾತ್ಮನನ್ನು ಯಾರು ಹೇಗೆ ಹೇಗೆ ಉಪಾಸಿಸುತ್ತಾರೋ ಅವರು ಅದೇ(ಅದರಂತೆಯೇ) ಆಗುತ್ತಾರೆ ಎಂಬ ಶ್ರುತಿಯು ಇದೇ ಅರ್ಥವನ್ನು ಹೇಳುತ್ತದೆ. ನ ತು ಜ್ಞಾನಾನಂದಾದ್ಯಭಾವಃ ಸುಖಾಯ ಭವತಿ ಮಗ್ನಸ್ಯಪಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್ ಇತಿ ವಚನಾತ್ = ಆದರೆ ಜ್ಞಾನಾನಂದಾದಿಗಳ ಅಭಾವವು ಸುಖಕಾರಣವಾಗುವುದಿಲ್ಲ. ಹೆಚ್ಚಾದ ಅಜ್ಞಾನದಲ್ಲಿ ಮಗ್ನನಾದವನಿಗೆ, ಅಂದರೆ ಜ್ಞಾನವಿಲ್ಲದ ಸ್ಥಿತಿಯಲ್ಲಿರುವವನಿಗೆ ಆ ಸ್ಥಿತಿಯು ಅತಿ ಹೆಚ್ಚಾದ ದುಃಖಕ್ಕೆ ಕಾರಣವಾಗುವುದಿಲ್ಲವೇ? ಎಂಬ ವಚನದಿಂದ ಜ್ಞಾನಾದಿಗಳ ಅಭಾವವು ಅತಿದುಃಖ ಕಾರಣವೆಂದು ತಿಳಿದುಬರುತ್ತದೆ. ತಸ್ಮಾತ್ ನಿರ್ಗುಣೋಪಾಸನಾ ನ ಸುಖಾಯ ಭವತಿ = ಆದ್ದರಿಂದ ನಿರ್ಗುಣೋಪಾಸನೆಯು ಸುಖಕ್ಕೆ ಕಾರಣವಾಗುವುದಿಲ್ಲ. ಯದಿ ಜ್ಞಾನಾನಂದಾದಿಗುಣವಿಶಿಷ್ಟಂ ಪರಬ್ರಹ್ಮ ಉಪಾಸಿತಂ ಸ್ಯಾತ್ ತದಾ ತದುಪಾಸನಾಫಲಮೋಕ್ಷೇಽಪಿ ಜ್ಞಾನಾನಂದಾದಿಗುಣವಿಶಿಷ್ಟ ಏವ ಸ್ಯಾತ್ = ಒಂದು ವೇಳೆ ಜ್ಞಾನ ಆನಂದ ಮುಂತಾದ ಗುಣಗಳಿಂದ ಕೂಡಿದ ಪರಬ್ರಹ್ಮನ ಉಪಾಸನೆಯನ್ನೇ ಮಾಡಿದ್ದಾದರೆ ಆಗ ಆ ಉಪಾಸನೆಯ ಫಲವಾದ ಮೋಕ್ಷವೂ ಕೂಡ ಜ್ಞಾನ ಆನಂದ ಮುಂತಾದ ಆಯಾ ಜೀವನ ಸ್ವರೂಪಕ್ಕೆ ಅನುಗುಣವಾದ ಗುಣಗಳಿಂದ ಸಹಿತವಾಗಿಯೇ ಇರುತ್ತದೆ. ಏವಂವಿಧೋ ಮೋಕ್ಷಃ ಪುರುಷಾರ್ಥಾಯ ಭವತಿ = ಇಂತಹ ಮೋಕ್ಷವು ಪುರುಷಾರ್ಥಪ್ರದವಾಗಿರುತ್ತದೆ. ತಸ್ಮಾತ್ ಏವಂವಿಧಗೌಣಮೋಕ್ಷಾಯ ಭಗವಂತಂ ವಾಸುದೇವಂ ನಿರ್ದೋಷಂ ಜ್ಞಾನಾನಂದಾದ್ಯನಂತ ಗುಣವಿಶಿಷ್ಟಮೇವ ಉಪಾಸ್ವ ಇತಿ ಭಾವಃ = ಆದ್ದರಿಂದ ಇಂತಹ ಅವರವರ ಸ್ವರೂಪಾತ್ಮಕ ಗುಣಗಳ ಅನುಭವವೆಂಬ ಮೋಕ್ಷಕ್ಕಾಗಿ ಷಡ್ಗುಣೈಶ್ವರ್ಯ ಸಂಪೂರ್ಣನಾದ ಶ್ರೀವಾಸುದೇವನನ್ನು ದೋಷರಹಿತನೆಂದೂ ಜ್ಞಾನ ಆನಂದ ಮುಂತಾದ ಅನಂತ ಕಲ್ಯಾಣಗುಣ ವಿಶಿಷ್ಟನನ್ನಾಗಿಯೂ ಉಪಾಸಿಸು ಎಂದು ಅಭಿಪ್ರಾಯ.

★ ★ ★

**ಅವತಾರಿಕಾ**— ತಮ್ಮ ತಂದೆಯ ಉಪದೇಶವನ್ನು ಕೇಳಿದ ಮೇಲೆ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು ಏನು ಮಾಡಿದರು? ಎಂದು ಹೇಳುತ್ತಾರೆ.

**ಇತಿ ತಾತವಚೋ ನಿಶಮ್ಯ ಕಿಂಚಿತ್**
**ತರಲಾತ್ಮಾಽಪಿ ವಿಚಾರ್ಯ ಶಾಸ್ತ್ರಸಾರಮ್ ।**
**ಪರಮೇವ ಸ ಪಾರಮಾರುರುಕ್ಷು-**
**ರ್ವಿಗುಣೋಪಾಸ್ತಿಮುಪಾಶೃಣೋತ್ ಪರೇಭ್ಯಃ ॥ 53 ॥**

**ಪದಚ್ಛೇದ**— ಇತಿ, ತಾತವಚಃ, ನಿಶಮ್ಯ, ಕಿಂಚಿತ್, ತರಲಾತ್ಮಾ, ಅಪಿ, ವಿಚಾರ್ಯ, ಶಾಸ್ತ್ರಸಾರಂ, ಪರಂ, ಏವ, ಸಃ, ಪಾರಂ, ಆರುರುಕ್ಷುಃ, ವಿಗುಣೋಪಾಸ್ತಿಂ, ಉಪಾಶೃಣೋತ್, ಪರೇಭ್ಯಃ ।

**ಅನ್ವಯ**— ಇತಿ, ತಾತವಚಃ, ನಿಶಮ್ಯಾಽಪಿ, ಕಿಂಚಿತ್, ತರಲಾತ್ಮಾ, ಸಃ, ಶಾಸ್ತ್ರಸಾರಂ, ವಿಚಾರ್ಯ, ಪರಂ, ಪಾರಂ, ಆರುರುಕ್ಷುಃ, ಸನ್, ಪರೇಭ್ಯಃ, ವಿಗುಣೋಪಾಸ್ತಿಂ, ಉಪಾಶೃಣೋತ್ ।

**ಅನ್ವಯಾರ್ಥ**—

**ಇತಿ** = ಹೀಗೆ,
**ತಾತವಚಃ** = ತಂದೆಯಾದ ಸುಬ್ರಹ್ಮಣ್ಯಪಂಡಿತರ,
**ವಚಃ** = ಮಾತನ್ನೂ,
**ನಿಶಮ್ಯಾಪಿ** = ಕೇಳಿಯೂ ಕೂಡ,
**ಕಿಂಚಿತ್** = ಸ್ವಲ್ಪ
**ತರಲಾತ್ಮಾ** = ಚಂಚಲವಾದ ಮನಸ್ಸುಳ್ಳ
**ಸಃ** = ಆ ತ್ರಿವಿಕ್ರಮಪಂಡಿತಾಚಾರ್ಯರು,
**ಶಾಸ್ತ್ರಸಾರಂ** = ವೇದಾಂತಶಾಸ್ತ್ರದ ರಹಸ್ಯವನ್ನೇ,
**ವಿಚಾರ್ಯ** = ಪರ್ಯಾಲೋಚಿಸಿ,
**ಪರಂ ಪಾರಂ** = ಸಂಸಾರಸಮುದ್ರ ಆಚೆಯ ದಡವನ್ನು (ಮೋಕ್ಷವನ್ನು),
**ಆರುರುಕ್ಷುಃ ಸನ್** = ಹತ್ತುವ ಇಚ್ಛೆ ಉಳ್ಳವನಾಗಿ(ಹೊಂದಲು ಬಯಸಿ),
**ಪರೇಭ್ಯಃ** = ತನ್ನ ತಂದೆಯ ಹೊರತಾದ ಮಾಯಾವಾದಿಗಳಿಂದ,
**ವಿಗುಣೋಪಾಸ್ತಿಂ** = ನಿರ್ಗುಣ ಬ್ರಹ್ಮ ವಿಷಯಕವಾದ ಉಪಾಸನೆಯ ಪ್ರಕಾರವನ್ನು,
**ಉಪಾಶೃಣೋತ್** = ಕೇಳಿದರು.

**ತಾತ್ಪರ್ಯ**— ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯರು ತಂದೆಯಾದ ಶ್ರೀ ಸುಬ್ರಹ್ಮಣ್ಯ ಪಂಡಿತಾಚಾರ್ಯರು ಹೇಳಿದ ಮಾತನ್ನು ಕೇಳಿದರು. ಆಗ ನಿರ್ಗುಣೋಪಾಸನವು ಮೋಕ್ಷಸಾಧನವೇ? ಅಥವಾ ಸಗುಣೋಪಾಸನವು ಮೋಕ್ಷ ಸಾಧನವೇ? ಎಂದು ಅವರ ಮನಸ್ಸು ಸ್ವಲ್ಪ ಚಂಚಲವಾಯಿತು. ಡೋಲಾಯಮಾನವಾಯಿತು. ಆದರೂ ಅವರು ಶಾಸ್ತ್ರ ರಹಸ್ಯವನ್ನು ಇನ್ನೂ ಚೆನ್ನಾಗಿ ಪರ್ಯಾಲೋಚಿಸಿ ಸಂಸಾರಸಾಗರವನ್ನು ದಾಟಬೇಕು. ಮೋಕ್ಷವನ್ನು ಪಡೆಯಬೇಕೆಂದು ನಿಶ್ಚಯಿಸಿ ಅದ್ವೈತ ಶಾಸ್ತ್ರದ ರಹಸ್ಯವನ್ನು ಬಲ್ಲವರೆಂದು ಪ್ರಖ್ಯಾತರಾದ ಅನೇಕ ಅದ್ವೈತ ಪಂಡಿತರನ್ನು ಪ್ರಶ್ನಿಸಿ ನಿರ್ಗುಣೋಪಾಸನೆಯ ಪ್ರಕಾರವನ್ನು ಚೆನ್ನಾಗಿ ಕೇಳಿ ತಿಳಿದರು. ತಂದೆಯ ನಿರ್ಗುಣೋಪಾಸನೆಯು ಮೋಕ್ಷ ಸಾಧನವಲ್ಲ ಸಗುಣೋಪಾಸನೆಯೇ ಮೋಕ್ಷ ಸಾಧನವೆಂದು ಹೇಳಿದರೂ ಕೂಡ ತ್ರಿವಿಕ್ರಮಾಚಾರ್ಯರಿಗೆ ನಿರ್ಗುಣೋಪಾಸನೆಯಲ್ಲಿ ಪೂರ್ತಿ

ವೈಮುಖ್ಯ ಉಂಟಾಗಲಿಲ್ಲ. ಮನಸ್ಸು ಸ್ವಲ್ಪ ಚಂಚಲವಾಯಿತು. ಹೇಗೇ ಆಗಲಿ ಮುಮುಕ್ಷುವಿಗೆ ಯಾವ ಉಪಾಸನೆಯು ಬೇಕು? ನಿರ್ಗುಣೋಪಾಸನೆಯು ವೇದಾದಿ ಸಮ್ಮತವೇ ಅಥವಾ ಸಗುಣೋಪಾಸನೆಯು ವೇದಾದಿಪ್ರಮಾಣ ಸಮ್ಮತವೇ? ಎಂಬುದಾಗಿ ಎಲ್ಲ ಶಾಸ್ತ್ರಗಳ ತಾತ್ಪರ್ಯವನ್ನು ಸರಿಯಾಗಿ ವಿಚಾರಿಸಿ, ನಿರ್ಧರಿಸಿ ಶಾಸ್ತ್ರದಲ್ಲಿ ಯಾವ ಉಪಾಸನೆಯು ವೇದಾದಿ ಸರ್ವ ಪ್ರಮಾಣಗಳಿಗೂ ಅನುಗುಣವಾದುದೆಂದೂ, ಮೋಕ್ಷವೆಂಬ ಪುರುಷಾರ್ಥಕ್ಕೆ ಸಾಧನವೆಂದೂ ತಿಳಿದು ಬರುತ್ತದೆಯೊ ಅಂತಹ ಉಪಾಸನೆಯನ್ನೇ ಮಾಡುವೆನು ಎಂದು ನಿಶ್ಚಯಿಸಿ ಮೊದಲು ಪಂಡಿತರಿಂದ ನಿರ್ಗುಣೋ ಪಾಸನೆಯ ಪ್ರಕಾರಗಳನ್ನೆಲ್ಲಾ ತಿಳಿಯಬೇಕೆಂದು ಬಯಸಿ ಮಾಯಾವಾದಿಗಳಿಂದ ನಿರ್ಗುಣೋಪಾಸನೆಯನ್ನು ಕೇಳಿದರು ಎಂದು ಅಭಿಪ್ರಾಯ.

**ವಿಗ್ರಹ—**

**ತಾತವಚಃ—** ತಾತಸ್ಯ ವಚಃ ತಾತವಚಃ ತತ್ ।

**ತರಲಾತ್ಮಾ—** ತರಲಃ ಆತ್ಮಾ ಯಸ್ಯಸಃ ತರಲಾತ್ಮಾ ।

**ಶಾಸ್ತ್ರಸಾರಂ—** ಶಾಸ್ತ್ರಸ್ಯ ಸಾರಃ ಶಾಸ್ತ್ರಸಾರಃ ತಂ ।

**ವಿಗುಣೋಪಾಸ್ತಿಂ—** ವಿಗತಾಃ ಗುಣಾಃ ಯಸ್ಯ ತತ್ ವಿಗುಣಂ (ಬ್ರಹ್ಮ) ವಿಗುಣಸ್ಯ ಉಪಾಸ್ತಿಃ ವಿಗುಣೋ ಪಾಸ್ತಿಃ ತಾಂ ।

**ಕೋಶ—** ತಾತ = ತಂದೆ, 'ತಾತಸ್ತು ಜನಕಃ ಪಿತಾ' ಅಮರ, ಕಿಂಚಿತ್ = ಸ್ವಲ್ಪ, 'ಕಿಂಚಿದೀಷನ್ಮನಾಗಲ್ಪೇ' ಅಮರ, ತರಲ = ಚಂಚಲ, 'ಚಂಚಲಂ ತರಲಂಚೈವ' ಅಮರ ।

**ಕ್ರಿಯಾಪದ—** **ಉಪಾಶ್ರುಣೋತ್** - ಉಪ+ಅಶ್ರುಣೋತ ಅಶ್ರುಣುತಾಂ ಅಶ್ರುಣ್ವನ್, ಅಶ್ರುಣೋಃ ಅಶ್ರುಣುತಂ ಅಶ್ರುಣುತ, ಅಶ್ರುಣವಂ ಅಶ್ರುಣುವ ಅಶ್ರುಣ್ವ ಅಶ್ರುಣುಮ ಅಶ್ರುಣ್ಮ । ಉಪ ಉಪಸರ್ಗಪೂರ್ವಕ ಶ್ರುಶ್ರವಣೇ ಸಕರ್ಮಕ ಅನಿಟ್ ಪರಸ್ಮೈಪದಿ ಅನದ್ಯತನಭೂತೇ ಲಙ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಇತಿ ತಾತವಚಃ ನಿಶಮ್ಯಾಪಿ ಕಿಂಚಿತ್ ತರಲಾತ್ಮನಾ ತೇನ ಶಾಸ್ತ್ರಸಾರಂ ವಿಚಾರ್ಯ ಪರಂ ಪಾರಂ ಆರುರುಕ್ಷುಣಾ ಸುತಾ ಪರೇಭ್ಯಃ ವಿಗುಣೋಪಾಸ್ತಿಃ ಉಪಾಶ್ರೂಯತ ।

★ ★ ★

**ಅವತಾರಿಕಾ—** ಹೀಗೆ ಸಂಪೂರ್ಣ ಅದ್ವೈತ ಶಾಸ್ತ್ರವನ್ನು ಕಲಿತು, ಪಂಡಿತರೊಡನೆ ಕಲಿತು ಚರ್ಚಿಸಿ ಅನಂತರ ತ್ರಿವಿಕ್ರಮ ಪಂಡಿತರು ಏನು ವಿಚಾರ ಮಾಡಿದರೆಂದು ತಿಳಿಸುತ್ತಾರೆ.

**ನಿಜಧರ್ಮರತೋ ಗೃಹಿಪ್ರಬರ್ಹಃ**
**ಕಲಿಕಾಲಾಕುಲಿತಾಂತರೋಽಪಿ ಹಂತ ।**
**ನಿತರಾಂ ನಿಶಿತಾತ್ಮನಾ ನಿಸರ್ಗಾತ್**
**ಸ್ಫುಟಮಾಲೋಚಯದಿತ್ಯಸೌ ಕದಾಚಿತ್ ॥ 54 ॥**

**ಪದಚ್ಛೇದ—** ನಿಜಧರ್ಮರತಃ, ಗೃಹಿಪ್ರಬರ್ಹಃ, ಕಲಿಕಾಲಾಕುಲಿತಾಂತರಃ, ಅಪಿ, ಹಂತ, ನಿತರಾಂ, ನಿಶಿತಾತ್ಮನಾ, ನಿಸರ್ಗಾತ್, ಸ್ಫುಟಂ, ಆಲೋಚಯತ್, ಇತಿ, ಅಸೌ, ಕದಾಚಿತ್ ।

**ಅನ್ವಯ—** ನಿಜಧರ್ಮರತಃ, ಗೃಹಿಪ್ರಬರ್ಹಃ, ಅಸೌ, ಕಲಿಕಾಲಾಕುಲಿತಾಂತರಃ, ಅಪಿ, ನಿಸರ್ಗಾತ್, ನಿತರಾಂ, ನಿಶಿತಾತ್ಮನಾ, ಸ್ಫುಟಂ, ಇತಿ, ಆಲೋಚಯತ್, ಹಂತ ।

**ಅನ್ವಯಾರ್ಥ—**

**ನಿಜಧರ್ಮರತಃ** = ತನ್ನ ವರ್ಣಾಶ್ರಮೋಚಿತವಾದ ಧರ್ಮದಲ್ಲಿ ನಿಷ್ಠೆಯುಳ್ಳ,

**ಗೃಹಿಪ್ರಬರ್ಹಃ** = ಗೃಹಸ್ಥಾಶ್ರಮಿಗಳಲ್ಲಿ ಶ್ರೇಷ್ಠರಾದ,

**ಅಸೌ** = ಈ ತ್ರಿವಿಕ್ರಮಪಂಡಿತಾಚಾರ್ಯರು,

**ಕಲಿಕಾಲಾಕುಲಿತಾಂತರಃ ಅಪಿ** = ಕಲಿಕಾಲದಿಂದ (ಕಲಿಯ ಸಾಮರ್ಥ್ಯದಿಂದ) ವ್ಯಾಕುಲವಾದ ಅಂತಃಕರಣವುಳ್ಳವರಾಗಿದ್ದರೂ,

**ನಿಸರ್ಗಾತ್** = ಸ್ವಭಾವದಿಂದ,

**ನಿತರಾಂ** = ಅತಿಶಯವಾಗಿ,

**ನಿಶಿತಾತ್ಮನಾ** = ಹರಿತವಾದ (ಸೂಕ್ಷ್ಮವನ್ನು ತಿಳಿಯಬಲ್ಲ) ಮನಸ್ಸಿನಿಂದ,

**ಸ್ಫುಟಂ** = ಚೆನ್ನಾಗಿ,

**ಇತಿ** = ಮುಂದೆ ಹೇಳುವ ರೀತಿಯಿಂದ,

**ಆಲೋಚಯತ್** = ವಿಚಾರ ಮಾಡಿದರು,

**ಹಂತ** = ಸಂತೋಷವು.

**ತಾತ್ಪರ್ಯ—** ಅನಂತರ ತ್ರಿವಿಕ್ರಮಪಂಡಿತಾಚಾರ್ಯರು ಗೃಹಸ್ಥಾಶ್ರಮಿಗೆ ಉಚಿತವಾದ ವರ್ಣಾಶ್ರಮಧರ್ಮಗಳನ್ನು ಅನುಷ್ಠಾನ ಮಾಡುತ್ತಾ, ಒಳ್ಳೆಯ ಗೃಹಸ್ಥಾಶ್ರಮಿಗಳಾಗಿ ಬಾಳುತ್ತಿದ್ದರು. ಕಲಿಯುಗದ ಸಾಮರ್ಥ್ಯದಿಂದ ಅವರ ಮನಸ್ಸು ವ್ಯಾಕುಲಿತವಾಗಿತ್ತು. ಸ್ವತಃ ನಿರ್ಧಾರ ಮಾಡಲು ಯಾರಿಗೂ ಈ ಕಲಿಯುಗದಲ್ಲಿ ಸಾಧ್ಯವಿಲ್ಲ. ಆದರೂ ಯುಕ್ತಾಯುಕ್ತ ವಿಚಾರಗಳಲ್ಲಿ ಚತುರರಾದ ಸೂಕ್ಷ್ಮವಾದ ಬುದ್ಧಿಯುಳ್ಳ ಅವರು ತಮ್ಮ ಮನಸ್ಸಿನಿಂದಲೇ ಚೆನ್ನಾಗಿ ಮುಂದೆ ಹೇಳುವ ರೀತಿಯಿಂದ ವಿಚಾರ ಮಾಡಿದರು. ಹೀಗೆ ಇತರರಿಂದ ನಿರ್ಗುಣೋಪಾಸನೆಯನ್ನು ಕೇಳಿದರೂ ಕೂಡ ಅವರ ಮನಸ್ಸಿಗೆ ಸಂತೋಷವಾಗಲಿಲ್ಲ. ಆದ್ದರಿಂದ ತಾವೇ ಮುಂದೆ ಹೇಳುವ ರೀತಿಯಿಂದ ವಿಚಾರ ಮಾಡಲಾರಂಭಿಸಿದರು.

ವಿಗ್ರಹ—

ನಿಜಧರ್ಮರತಃ— ನಿಜಶ್ಚಾಸೌ ಧರ್ಮಶ್ಚ ನಿಜಧರ್ಮಃ ನಿಜಧರ್ಮೇ ರತಃ ನಿಜಧರ್ಮರತಃ ।

ಗೃಹಿಪ್ರಬರ್ಹಃ— ಗೃಹಿಷು ಪ್ರಬರ್ಹಃ ಗೃಹಿಪ್ರಬರ್ಹಃ ।

**ಕಲಿಕಾಲಾಕುಲಿತಾಂತರಃ—** ಕಲೇಃ ಕಾಲಃ ಕಲಿಕಾಲಃ ಕಲಿಕಾಲೇನ ಆಕುಲಿತಂ ಅಂತರಂ ಯಸ್ಯಸಃ ಕಲಿಕಾಲಾಕುಲಿತಾಂತರ ।

**ನಿಶ್ಚಿತಾತ್ಮನಾ—** ನಿಶ್ಚಿತಶ್ಚಾಸೌ ಆತ್ಮಾ ಚ ನಿಶ್ಚಿತಾತ್ಮಾ ತೇನ ।

**ಕೋಶ—** ನಿಸರ್ಗ = ಸ್ವಭಾವ, 'ಸ್ವರೂಪಂ ಚ ಸ್ವಭಾವಶ್ಚ ನಿಸರ್ಗಶ್ಚ' ಅಮರ, ಹಂತ = ಇಲ್ಲಿ ಸಂತೋಷ ಸೂಚಕ ಅವ್ಯಯ, 'ಹಂತ ಹರ್ಷೇಽನುಕಂಪಾಯಾಂ ವಾಕ್ಯಾರಂಭವಿಷಾದಯೋಃ' ಅಮರ ।

**ಕ್ರಿಯಾಪದ— ಆಲೋಚಯತ್**- ಆ+ಆಲೋಚಯತ್ ಆಲೋಚಯತಾಂ ಆಲೋಚಯನ್, ಇತ್ಯಾದಿ ಲೋಚೃ ದರ್ಶನೇ ಆಜ ಉಪಸರ್ಗಪೂರ್ವಕ ಲೋಚೃ ದರ್ಶನೇ ಪರಸ್ಮೈ ಸೇಟ್ ಣಿಜಂತ ಸಕರ್ಮಕ ಅನದ್ಯತನಭೂತೇ ಲಜ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ನಿಜಧರ್ಮರತೇನ ಗೃಹಿಪ್ರಬರ್ಹೇಣ ಅಮುನಾ ಕಲಿಕಾಲಾಕುಲಿತಾಂತರೇಣ ಅಪಿ ನಿಸರ್ಗಾತ್ ನಿಶಿತಾತ್ಮನಾ ಸ್ಫುಟಂ ಇತಿ ಆಲೋಚ್ಯತ ।

★ ★ ★

**ಅವತಾರಿಕಾ—** ತ್ರಿವಿಕ್ರಮಪಂಡಿತಾಚಾರ್ಯರ ಆಲೋಚನೆಯನ್ನೇ ವಿವರಿಸುತ್ತಾರೆ.

**ರಚಿತಂ ನನು ಸೂತ್ರಮತ್ರ ಮಾನಂ**
**ವಿದುಷಾ ಸತ್ಯವತೀಸುತೇನ ಸಾಕ್ಷಾತ್ ।**
**ಅಪರಸ್ಪರಸಂಗತಾನಿ ಭಾಷ್ಯಾ-**
**ಣ್ಯಪಿ ಸರ್ವಾಣಿ ನ ಮಾನತಾಂ ವ್ರಜೇಯುಃ ॥ 55 ॥**

**ಪದಚ್ಛೇದ—** ರಚಿತಂ, ನನು, ಸೂತ್ರಂ, ಅತ್ರ, ಮಾನಂ, ವಿದುಷಾ, ಸತ್ಯವತೀಸುತೇನ, ಸಾಕ್ಷಾತ್, ಅಪರಸ್ಪರಸಂಗತಾನಿ, ಭಾಷ್ಯಾಣಿ, ಅಪಿ, ಸರ್ವಾಣಿ, ನ, ಮಾನತಾಂ, ವ್ರಜೇಯುಃ ।

**ಅನ್ವಯ—** ಅತ್ರ, ವಿದುಷಾ, ಸತ್ಯವತೀಸುತೇನ, ರಚಿತಂ, ಸೂತ್ರಂ, ಸಾಕ್ಷಾತ್, ಮಾನಂ, ನನು, ಅಪರಸ್ಪರಸಂಗತಾನಿ, ಸರ್ವಾಣಿ, ಭಾಷ್ಯಾಣಿ, ಅಪಿ (ಅಥ), ಮಾನತಾಂ, ನ, ವ್ರಜೇಯುಃ ।

**ಅನ್ವಯಾರ್ಥ—**

**ಅತ್ರ** = ಈ ಬ್ರಹ್ಮತತ್ತ್ವವನ್ನು ನಿರ್ಣಯಿಸುವ ವಿಷಯದಲ್ಲಿ
**ವಿದುಷಾ** = ಸರ್ವಜ್ಞರಾದ,
**ಸತ್ಯವತೀಸುತೇನ** = ಸತ್ಯವತೀ ದೇವಿಯ ಮಕ್ಕಳಾದ ಶ್ರೀವೇದವ್ಯಾಸರಿಂದ,
**ರಚಿತಂ** = ನಿರ್ಮಿಸಲ್ಪಟ್ಟ
**ಸೂತ್ರಂ** = ಬ್ರಹ್ಮಸೂತ್ರವೂ,
**ಸಾಕ್ಷಾತ್** = ಮುಖ್ಯವಾಗಿ,
**ಮಾನಂ ನನು** = ಪ್ರಮಾಣವಷ್ಟೇ,
**ಅಪರಸ್ಪರಸಂಗತಾನಿ** = ಒಂದಕ್ಕೊಂದು ಅನುಕೂಲವಾಗಿಲ್ಲದ (ಪರಸ್ಪರ ವಿರುದ್ಧಾರ್ಥಗಳನ್ನು ಹೇಳುವ),
**ಸರ್ವಾಣಿ** = ಎಲ್ಲ ಇಪ್ಪತ್ತೊಂದು,
**ಭಾಷ್ಯಾಣಿ ಅಪಿ** = ಭಾಷ್ಯಗಳು ಕೂಡ,
**ಅಥ** = ಸಂಪೂರ್ಣವಾಗಿ,
**ಮಾನತಾಂ** = ಪ್ರಮಾಣತ್ವವನ್ನು,
**ನ ವ್ರಜೇಯುಃ** = ಹೊಂದಲಾರವು.

**ತಾತ್ಪರ್ಯ—** ಈ ಬ್ರಹ್ಮತತ್ತ್ವವನ್ನು ನಿರ್ಣಯಿಸುವ ವಿಷಯಧಲ್ಲಿ ಸತ್ಯವತೀದೇವಿಯ ಮಕ್ಕಳಾಗಿ ಅವತರಿಸಿದ ಸರ್ವಜ್ಞರಾದ ಶ್ರೀವೇದವ್ಯಾಸರು ರಚಿಸಿರುವ ನಾಲ್ಕು ಅಧ್ಯಾಯಗಳುಳ್ಳ ಬ್ರಹ್ಮಸೂತ್ರಗಳೇ ಮುಖ್ಯ ಪ್ರಮಾಣವಾಗಿರುವುವು. ಈ ಬ್ರಹ್ಮಮಿಮಾಂಸಾಶಾಸ್ತ್ರಕ್ಕೆ ಭಾರತೀವಿಜಯ ಸಚ್ಚಿದಾನಂದ ಬ್ರಹ್ಮಘೋಷ ಮುಂತಾದ ವಿದ್ವಾಂಸರು ಭಾಷ್ಯಗಳನ್ನು ರಚಿಸಿದ್ದಾರೆ. ಆ ಭಾಷ್ಯಗಳು ಒಟ್ಟು ಇಪ್ಪತ್ತೊಂದು (21). ಆದರೆ ಅವು ಒಂದು ಮತ್ತೊಂದಕ್ಕೆ ಅನುಕೂಲವಾಗಿಲ್ಲ. ಆ ಭಾಷ್ಯಗಳಲ್ಲಿ ಒಂದಕ್ಕೂ ಮತ್ತೊಂದಕ್ಕೂ ಯಾವ ಸಂಬಂಧವೂ ಇಲ್ಲ. ಅವು ಒಂದು ಇನ್ನೊಂದಕ್ಕೆ ವಿರುದ್ಧವಾದ ವಿಷಯವನ್ನು ಹೇಳಿರುವುದುಂಟು. ಆದ್ದರಿಂದ ಆ ಇಪ್ಪತ್ತೊಂದು ಭಾಷ್ಯಗಳಲ್ಲಿ ಯಾವುದೂ ಪ್ರಮಾಣವಾಗಲಾರದು. ॥ ಅಯಮತ್ರಾಭಿಪ್ರಾಯಃ = ಇಲ್ಲಿಯ ಅಭಿಪ್ರಾಯವು ಹೀಗಿದೆ. ಬ್ರಹ್ಮಸ್ವರೂಪನಿರ್ಣಯೇ ತಾವತ್ ಬ್ರಹ್ಮಸೂತ್ರಮೇವ ಮುಖ್ಯಂ ಪ್ರಮಾಣಂ = ಬ್ರಹ್ಮಸ್ವರೂಪ ನಿರ್ಣಯ ಮಾಡುವ ವಿಷಯದಲ್ಲಿ ಬ್ರಹ್ಮಸೂತ್ರವೇ ಮುಖ್ಯ ಪ್ರಮಾಣವು. ಸರ್ವ

ಶ್ರುತ್ಯಾದಿ ವಿರೋಧಪರಿಹಾರಮುಖೇನ ಸರ್ವಜ್ಞೇನ ಭಗವತಾ ರಚಿತತ್ವಾತ್ = ಸರ್ವಜ್ಞರಾದ ಷಡ್ಗುಣೈಶ್ವರ್ಯಸಂಪನ್ನರಾದ ಶ್ರೀವೇದವ್ಯಾಸರು ಈ ಸೂತ್ರಗಳಲ್ಲಿ ಎಲ್ಲಾ ಶ್ರುತಿಸ್ಮೃತಿಗಳ ಪರಸ್ಪರ ವಿರೋಧವನ್ನು ಪರಿಹರಿಸಿ ಬ್ರಹ್ಮಸ್ವರೂಪವನ್ನು ನಿರ್ಣಯ ಮಾಡಿರುತ್ತಾರೆ. ಏವಂಚ ಸತಿ ಪ್ರಮಾಣತಮಬ್ರಹ್ಮಸೂತ್ರಸ್ಯ ತನ್ಮೂಲಭಾಷ್ಯಾಣಾಂಚ ಪರಸ್ಪರವಿರೋಧೇ ಸತಿ ಸೂತ್ರಭಾಷ್ಯಾಣಾಮೇವ ಅಪ್ರಾಮಾಣ್ಯಂ ನ್ಯಾಯ್ಯಂ = ಹೀಗಿರಲಾಗಿ ಅತ್ಯಂತ ಪ್ರಬಲ ಪ್ರಮಾಣವಾದ ಬ್ರಹ್ಮಸೂತ್ರಕ್ಕೂ, ಆ ಬ್ರಹ್ಮಸೂತ್ರಮೂಲಕವಾದ ಭಾಷ್ಯಗಳಿಗೂ ಪರಸ್ಪರ ವಿರೋಧವು ಕಂಡುಬಂದಾಗ ಸೂತ್ರ ವಿರುದ್ಧವಾದ ಭಾಷ್ಯಗಳಿಗೆ ಅಪ್ರಾಮಾಣ್ಯ ಹೇಳುವುದೇ ನ್ಯಾಯಪ್ರಾಪ್ತವಾಗಿದೆ. ಭಾಷ್ಯೇಷು ಸರ್ವೇಷು ಅಪಿ ವಿಚಾರ್ಯಮಾಣೇಷು ಸತ್ಸು ತಾನಿ ಸೂತ್ರವಿರುದ್ಧಾನಿ ನ ಪುರುಷಾರ್ಥಸಾಧನಾನೀತಿ ಜ್ಞಾಯತೇ = ಎಲ್ಲಾ ಭಾಷ್ಯಗಳನ್ನು ವಿಚಾರಮಾಡಲಾಗಿ ಆ ಭಾಷ್ಯಗಳು ಸೂತ್ರಗಳ ಸಿದ್ಧಾಂತಕ್ಕೆ ವಿರುದ್ಧವಾಗಿ ಕಂಡುಬರುವುದರಿಂದ ಪುರುಷಾರ್ಥ ಸಾಧನಗಳಾಗುವುದಿಲ್ಲ. ಪರಸ್ಪರಂ ಸಮಬಲಭಾಷ್ಯಾಂತರವಿರುದ್ಧಾನಿ ತಾನೀತಿ ನೈಕಮಪಿ ಭಾಷ್ಯಂಪ್ರಮಾಣಂ = ಅವೆಲ್ಲವೂ ಪರಸ್ಪರ ಅಸಂಗತವಾಗಿವೆ. ಒಂದು ಮತ್ತೊಂದರ ಜೊತೆಗೆ ಹೊಂದುಕೊಳ್ಳುವುದಿಲ್ಲ. ಒಂದು ಭಾಷ್ಯವು ಅದಕ್ಕೆ ಸಮಾನವಾದ ಬಲವುಳ್ಳ ಮತ್ತೊಂದು ಭಾಷ್ಯಕ್ಕೆ ವಿರುದ್ಧವಾಗಿರುತ್ತದೆ. ಆದುದರಿಂದ ಆ ಭಾಷ್ಯಗಳಲ್ಲಿ ಯಾವುದೂ ಪ್ರಮಾಣವಲ್ಲ. ಆಪ್ತತಮಪ್ರಣೀತಂ ಸೂತ್ರಮೇವ ಪ್ರಮಾಣ ಮಿತಿಭಾವಃ = ಅತ್ಯಂತ ಆಪ್ತರಾದ ಶ್ರೀವೇದವ್ಯಾಸರಿಂದ ರಚಿತವಾದ ಬ್ರಹ್ಮಮಿಮಾಂಸಾಶಾಸ್ತ್ರದ ಸೂತ್ರಮಾತ್ರವೇ ಪ್ರಮಾಣವು ಎಂದು ಭಾವ (ವಿಶ್ವಪತಿತೀರ್ಥೀಯ).

ವಿಗ್ರಹ—

ಸತ್ಯವತೀಸುತೇನ— ಸತ್ಯವತ್ಯಾಃ ಸುತಃ ಸತ್ಯವತೀಸುತಃ ತೇನ ।

ಅಪರಸ್ಪರಸಂಗತಾನಿ— ಪರಃ ಪರೇಣೇತಿ ಪರಸ್ಪರಂ, ಪರಸ್ಪರಂ ಸಂಗತಾನಿ ಪರಸ್ಪರಸಂಗತಾನಿ ನ ಪರಸ್ಪರಸಂಗತಾನಿ ಅಪರಸ್ಪರಸಂಗತಾನಿ ।

ಕ್ರಿಯಾಪದ— ವ್ರಜೇಯುಃ - ವ್ರಜೇತ್ ವ್ರಜೇತಾಂ ವ್ರಜೇಯುಃ ಇತ್ಯಾದಿ. ವ್ರಜ ಗತೌ ಸೇಟ್ ಪರಸ್ಮೈಪದ ಸಕರ್ಮಕ ವಿಧೌಲಿಙ ಪ್ರಥಮಪುರುಷೇ ಬಹುವಚನಂ ।

ಪ್ರಯೋಗ— ಅತ್ರ ವಿದುಷಾ ಸತ್ಯವತೀಸುತೇನ ರಚಿತೇನ ಸೂತ್ರೇಣ ಸಾಕ್ಷಾತ್ ಮಾನೇನ ಭೂಯತೇ ನನು ಅಪರಸ್ಪರಸಂಗತೈಃ ಸರ್ವೈಃ ಭಾಷ್ಯೈಃ ಅಪಿ ಮಾನತಾ ನ ವ್ರಜ್ಯೇತ ।

★ ★ ★

ಅವತಾರಿಕಾ— ಮತ್ತೂ ತ್ರಿವಿಕ್ರಮ ಪಂಡಿತಾಚಾರ್ಯರು ವಿಚಾರ ಮಾಡಿದುದನ್ನೇ ವರ್ಣಿಸುತ್ತಾರೆ.

**ಯದಿ ತೇಷು ನಿರಾಗ್ರಹಾಂತರಾಃ ಸ್ಮಃ**
**ಸುಘಟಂ ನೋಪಲಭಾಮಹೇ ಹಿ ಕಿಂಚಿತ್ ।**
**ನ ತಥಾಪಿ ಪರಂ ಪರೋಪಯಾತಂ**
**ನ ಪಠಾಮಃ ಪ್ರಣಯೇನ ಸಾಂಕರೀಯಮ್ ॥ 56 ॥**

ಪದಚ್ಛೇದ— ಯದಿ, ತೇಷು, ನಿರಾಗ್ರಹಾಂತರಾಃ, ಸ್ಮಃ, ಸುಘಟಂ, ನ, ಉಪಾಲಭಾಮಹೇ, ಹಿ, ಕಿಂಚಿತ್, ನ, ತಥಾ, ಅಪಿ, ಪರಂಪರೋಪಯಾತಂ, ನ, ಪಠಾಮಃ, ಪ್ರಣಯೇನ, ಸಾಂಕರೀಯಂ ।

ಅನ್ವಯ— ತೇಷು, ನಿರಾಗ್ರಹಾಂತರಾಃ, ಸ್ಮಃ, ಯದಿ, ಸುಘಟಂ, ನ, ಉಪಾಲಭಾಮಹೇ, ಹಿ, ತಥಾ, ಅಪಿ, ಪರಂಪರೋಪಯಾತಂ, ಸಾಂಕರೀಯಂ, ನ, ಪಠಾಮಃ, ಇತಿ, ನ ।

**ಅನ್ವಯಾರ್ಥ—**

**ತೇಷು** = ಆ ಭಾಷ್ಯಗಳಲ್ಲಿ

**ನಿರಾಗ್ರಹಅಂತರಾಃ** = ಹಠವಿಲ್ಲದ ಮನಸ್ಸುಳ್ಳವರು,

**ಸ್ಮಃ ಯದಿ** = ಆಗಿರುವುದಾದರೆ,

**ಸುಘಟಂ** = ಸರಿಯಾಗಿ ಹೊಂದುವ ಅರ್ಥವುಳ್ಳ,

**ಕಿಂಚಿತ್** = ಒಂದು ಭಾಷ್ಯವನ್ನೂ,

**ನ ಉಪಾಲಭಾಮಹೇ ಹಿ** = ಹೊಂದುವುದುದಿಲ್ಲವಷ್ಟೆ

**ತಥಾ ಅಪಿ** = ಹಾಗಿದ್ದರೂ,

**ಪರಂಪರೋಪಯಾತಂ** = ವಂಶಕ್ರಮದಿಂದ ಬಂದಿರುವ,

**ಸಾಂಕರೀಯಂ** = ಶಂಕರಭಾಷ್ಯವನ್ನು,

**ಪ್ರಣಯೇನ** = ಪ್ರೀತಿಯಿಂದ,

**ನ ಪಠಾಮಃ ಇತಿ ನ** = ಓದುವುದಿಲ್ಲವೆಂದಿಲ್ಲ,

**ತಾತ್ಪರ್ಯ—** ಪರಸ್ಪರ ವಿರುದ್ಧವಾದ ಆ ಭಾಷ್ಯಗಳಲ್ಲಿ ಆಗ್ರಹವನ್ನು ಬಿಟ್ಟು ಸೂತ್ರಗಳಿಗೆ ಅವಿರುದ್ಧವಾದ ಯಾವುದಾದರೊಂದು ಭಾಷ್ಯವನ್ನು ಸ್ವೀಕರಿಸೋಣವೆಂದರೆ ಅದೂ ಸಾಧ್ಯವಾಗುತ್ತಿಲ್ಲ. ಏಕೆಂದರೆ ಎಲ್ಲಾ ಭಾಷ್ಯಗಳೂ ಸೂತ್ರ ವಿರುದ್ಧವೇ ಆಗಿವೆ. ನಾವು ಪಕ್ಷಪಾತ, ಹಠ, ಎಲ್ಲಾ ಅಂತಃಕರಣ ದೋಷಗಳನ್ನು ಬಿಟ್ಟು ವಿಚಾರ ಮಾಡಿದ್ದೇವೆ. ಸೂತ್ರಗಳಿಗೆ ಹೊಂದುವ ಒಂದು ಭಾಷ್ಯವೂ ಅವುಗಳಲ್ಲಿ ಸಿಕ್ಕುವುದಿಲ್ಲ. ಆದರೂ ವಂಶಪರಂಪರೆಯಿಂದ ಓದಿಕೊಂಡು ಬಂದಿರುವ ಶಂಕರಭಾಷ್ಯವನ್ನು ಪ್ರೀತಿಯಿಂದ ಓದುತ್ತಿದ್ದೇವೆ. ನಮ್ಮ ಹಿರಿಯರು ಅದನ್ನು ಆದರಿಸಿದ್ದರಿಂದ ಸೂತ್ರ ವಿರುದ್ಧವಾದರೂ ಈ ಶಂಕರಭಾಷ್ಯದಲ್ಲಿ ನಮಗೆ ಒಂದು ವಿಶೇಷವಾದ ಪ್ರೀತಿಯು ಸ್ವಾಭಾವಿಕವಾಗಿ ಉಂಟಾಗಿದೆ. ಇದನ್ನು ಪಕ್ಷಪಾತವೆಂದು ಹೇಳಲು ಸಾಧ್ಯವಿಲ್ಲ. ಹಿರಿಯರು ಆದರಿಸಿದ್ದೇ ನಾವು ಇತರ ಭಾಷ್ಯಗಳನ್ನು ಬಿಟ್ಟು ಶಂಕರಭಾಷ್ಯವನ್ನು ಓದಲು ಕಾರಣ.

**ವಿಗ್ರಹ—**

**ನಿರಾಗ್ರಹಾಂತರಾಃ—** ನಿರ್ಗತಃ ಆಗ್ರಹಃ ಯಸ್ಮಾತ್ ತತ್ ನಿರಾಗ್ರಹಂ, ನಿರಾಗ್ರಹಂ ಅಂತರಂ ಯೇಷಾಂತೇ ನಿರಾಗ್ರಹಾಂತರಾಃ ।

**ಸುಘಟಂ—** ಸುಖೇನ ಘಟಯಿತುಂ ಶಕ್ಯಂ ಸುಘಟಂ ತತ್ ।

**ಪರಂಪರೋಪಯಾತಂ—** ಪರಂಪರಯಾ ಉಪಯಾತಂ ಪರಂಪರೋಪಯಾತಂ ।

**ಸಾಂಕರೀಯಂ—** ಸಂಕರಸ್ಯ ಇದಂ ಸಾಂಕರೀಯಂ ।

**ಕ್ರಿಯಾಪದ— ಸ್ಮಃ** - ಸ್ಮಃ ಅಸ್ತಿ ಸ್ತಃ ಸಂತಿ, ಅಸಿಸ್ತಃ ಸ್ಥ ಅಸ್ಮಿ ಸ್ವಃ ಸ್ಮಃ, ಅಸಭುವಿ ಉತ್ತಮ, ಬಹು । **ಉಪಲಭಾಮಹೇ** - ಲಭತೇ ಲಭೇತೇ ಲಭಂತೇ, ಲಭಸೇ ಲಭೇತೇ ಲಭಧ್ವೇ ಲಭೇ ಲಭಾವಹೇ ಲಭಾಮಹೇ । ಉಪ ಉಪಸರ್ಗ ಡು ಲಭಷ್ ಪ್ರಾಪ್ತೌ ಆತ್ಮನೇಪದಿ ಉತ್ತಮಪುರುಷೇ ಬಹುವಚನಂ ।

**ಪಠಾಮಃ** - ಪಠತಿ ಪಠತಃ ಪಠಂತಿ, ಪಠಸಿ ಪಠಥಃ ಪಠಥ, ಪಠಾಮಿ ಪಠಾವಃ ಪಠಾಮಃ, ಪಠ ವ್ಯಕ್ತಾಯಾಂ ವಾಚಿ ಪರಸ್ಮೈಪದಿ ಸೇಟ್ ಸಕ ಉತ್ತಮಪುರುಷೇ ಬಹುವಚನಂ ।

**ಪ್ರಯೋಗ—** ನಿರಾಗ್ರಹಾಂತರೈಃ ಅಸ್ಮಾಭಿಃ ಭೂಯತೇ ಯದಿ ಸುಘಟಂ ಕಿಂಚಿತ್ ನೋಪಲಭ್ಯತೇ ಹಿ ತಥಾ ಅಪಿ ಪರಂಪರೋಪಯಾತಂ ಸಾಂಕರೀಯಂ ನ ಪಠ್ಯತೇ ಇತಿ ನ ।

★ ★ ★

**ಅವತಾರಿಕಾ—** ವಿರುದ್ಧಗಳಾದ ಭಾಷ್ಯಗಳನ್ನೆಲ್ಲಾ ಬಿಟ್ಟು ಸ್ವತಂತ್ರವಾಗಿ ಉಪನಿಷತ್ತುಗಳ ಅರ್ಥವನ್ನು ವಿಚಾರಿಸಿ ತತ್ವ ನಿಶ್ಚಯವನ್ನು ಮಾಡಿಕೊಳ್ಳಬಹುದಷ್ಟೇ ಎಂದೇ ಹೇಳುತ್ತಾರೆ.

**ಘಟನೋಪನಿಷತ್ಸು ನಾಲ್ಪಬುದ್ಧೇಃ**
**ಸುಘಟೇತ್ಯಭ್ಯುಪಗಮ್ಯ ಚಿಂತಯಾಮಃ ।**
**ನ ವಿಮುಕ್ತಿಮುಪೈತಿ ಕೋಽಪಿ ಮುಕ್ತ್ವಾ**
**ಸಮಯೋಕ್ತಾಮಿಹ ಯಾಮಿಮಾಮುಪಾಸ್ತಿಮ್ ॥ 57 ॥**

**ಪದಚ್ಛೇದ—** ಘಟನಾ, ಉಪನಿಷತ್ಸು, ನ, ಅಲ್ಪಬುದ್ಧೇಃ, ಸುಘಟಾ, ಇತಿ, ಅಭ್ಯುಪಗಮ್ಯ, ಚಿಂತಯಾಮಃ, ನ, ವಿಮುಕ್ತಿಂ, ಉಪೈತಿ, ಕಃ, ಮುಕ್ತ್ವಾ ಸಮಯೋಕ್ತಾಂ, ಇಹ, ಯಾಂ, ಇಮಾಂ, ಉಪಾಸ್ತಿಂ ।

**ಅನ್ವಯ—** ಅಲ್ಪಬುದ್ಧೇಃ, ಉಪನಿಷತ್ಸು, ಘಟನಾ, ಸುಘಟನಾ, (ಭವತಿ)ಇತಿ, ಅಭ್ಯುಪಗಮ್ಯ, ಇಹ, ಯಾಂ, ಉಪಾಸ್ತಿಂ, ಮುಕ್ತ್ವಾ, ಕಃ, ಅಪಿ, ವಿಮುಕ್ತಿಂ, ನೋಪೈತಿ, ತಾಂ, ಉಪಾಸ್ತಿಂ, ಚಿಂತಯಾಮಃ ।

**ಅನ್ವಯಾರ್ಥ—**

**ಅಲ್ಪಬುದ್ಧೇಃ** = ಅಲ್ಪವಿಷಯಕವಾದ ಜ್ಞಾನವುಳ್ಳ ನನಗೆ,
**ಉಪನಿಷತ್ಸು** = ಉಪನಿಷತ್ತುಗಳಲ್ಲಿ
**ಘಟನಾ** = ಸಂಬಂಧವು,
**ಸುಘಟನಾ ನ ಭವತಿ** = ಸುಖವಾಗಿ ಸೇರುವುದಿಲ್ಲ
**ಇತಿ** = ಹೀಗೆಂದು,
**ಅಭ್ಯುಪಗಮ್ಯ** = ಒಪ್ಪಿಕೊಂಡು,
**ಇಹ** = ಈ ಉಪನಿಷತ್ತುಗಳಲ್ಲಿ ಹೇಳಿರುವ,
**ಯಾಂ** = ಯಾವ,
**ಉಪಾಸ್ತಿಂ** = ಉಪಾಸನೆಯನ್ನು,
**ಮುಕ್ತ್ವಾ** = ಬಿಟ್ಟು
**ಕಃ ಅಪಿ** = ಯಾವನೂ ಕೂಡ,
**ವಿಮುಕ್ತಿಂ** = ವಿಮೋಕ್ಷವನ್ನು,
**ನ ಉಪೈತಿ** = ಹೊಂದುವುದಿಲ್ಲವೋ,
**ಸಮಯೋಕ್ತಾಂ** = ಸಮಸ್ತಶಾಸ್ತ್ರಗಳಲ್ಲಿ ಹೇಳಲ್ಪಟ್ಟ,
**ಇಮಾಂ** = ಈ ಉಪಾಸನೆಯನ್ನು,
**ಚಿಂತಯಾಮಃ** = ವಿಚಾರಮಾಡೋಣ.

**ತಾತ್ಪರ್ಯ—** ಉಪನಿಷತ್ತುಗಳಲ್ಲಿ ಭಗವಂತನ ಉಪಾಸನೆಯ ಕ್ರಮವನ್ನು ಹೇಳಿದ್ದಾರೆ. ಆದರೆ ಅದು ಅಲ್ಪಮತಿಗಳಿಗೆ ಸುಲಭವಾಗಿ ತಿಳಿಯುವುದಿಲ್ಲ. ಈ ಉಪಾಸನೆಯನ್ನು ಬಿಟ್ಟು ಯಾವನೂ ಮೋಕ್ಷವನ್ನು ಪಡೆಯಲಾರನು. ಆದ್ದರಿಂದ ಅಲ್ಪಬುದ್ಧಿಯುಳ್ಳ ನಾವು ಭಾರತ ಪಂಚರಾತ್ರ ಬ್ರಹ್ಮಸೂತ್ರ ಮೊದಲಾದ ಸಚ್ಛಾಸ್ತ್ರ ಗ್ರಂಥಗಳಲ್ಲಿ ಹೇಳಿರುವ ಉಪಾಸನೆಯನ್ನು ವಿಚಾರ ಮಾಡೋಣ.

**ವಿಶ್ವಪತಿತೀರ್ಥೀಯ—** ಅಯಮತ್ರ ಅಭಿಪ್ರಾಯಃ ಅಲ್ಪಬುದ್ಧೇಃ ಉಪನಿಷದ್ವಿಚಾರಃ ದುರ್ಘಟಃ = ಅಲ್ಪವಿಷಯಕವಾದ ಬುದ್ಧಿಯುಳ್ಳವನಿಗೆ ಉಪನಿಷತ್ತುಗಳ ವಿಚಾರ ಮಾಡುವುದು ಬಹಳ ಕಷ್ಟಸಾಧ್ಯವಾದುದು, ಇತ್ಯಭ್ಯುಪೇತ್ಯ ವಯಂ ಅಲ್ಪಬುದ್ಧಯಃ ಸಂತಃ ಸಾಕ್ಷಾದುಪನಿಷದ್ವಿಚಾರಂ ಪರಿತ್ಯಜ್ಯ, ಭಾರತ ಪಂಚರಾತ್ರ ಬ್ರಹ್ಮಸೂತ್ರಾದಿ ಸಕಲಸಚ್ಛಾಸ್ತ್ರೇಷು ಯಾ ಭಗವದುಪಾಸನಾ ಮೋಕ್ಷಸಾಧನತ್ವೇನ ಉಚ್ಯತೇ ಯಯಾ ಚ ವಿನಾ ನ ಮೋಕ್ಷಶಾಸ್ತ್ರಂ ಉಪಾಸ್ತಿಮೇವ ವಿಚಾರಯಾಮಃ ಇತಿ = ಹೀಗೆ ಒಪ್ಪಿಕೊಂಡು ನಾವು ಅಲ್ಪಬುದ್ಧಿಯವರು ಎಂದು ಆಗಿ, ಸಾಕ್ಷಾತ್ ಆಗಿ ಉಪನಿಷತ್ತುಗಳ ವಿಚಾರವನ್ನು ಬಿಟ್ಟು ಭಾರತ ಪಂಚರಾತ್ರ ಬ್ರಹ್ಮಸೂತ್ರಾದಿ ಸಕಲ ಸಚ್ಛಾಸ್ತ್ರಗಳಲ್ಲಿ ಭಗವಂತನ ಉಪಾಸನೆಯು ಮೋಕ್ಷಸಾಧನವೆಂದು ಹೇಳಲ್ಪಟ್ಟಿದೆಯೋ ಆ ಉಪಾಸನೆಯನ್ನೇ ಚೆನ್ನಾಗಿ ವಿಚಾರ ಮಾಡೋಣ (ವಿಸ್ತಾರವಾದ ತಾತ್ಪರ್ಯ).

**ವಿಗ್ರಹ—**

**ಅಲ್ಪಬುದ್ಧೇಃ—** ಅಲ್ಪಾ ಬುದ್ಧಿಃ ಯಸ್ಯಸಃ ಅಲ್ಪಬುದ್ಧಿಃ ತಸ್ಯ ।

**ಸುಘಟಾ—** ಸುಖೇನ ಘಟಯಿತುಂ ಶಕ್ಯಾ ಸುಘಟಾ ।

**ಸಮಯೋಕ್ತಾಂ—** ಸಮಯೇಷು ಉಕ್ತಾ ಸಮಯೋಕ್ತಾ ತಾಂ ।

**ಕೋಶ—** 'ಶಾಸ್ತ್ರ ಸಿದ್ಧಾಂತ ಸಮಯಾಃ ಶಪಥಾಚಾರ ಕಾಲಸಿದ್ಧಾಂತಸಂವಿದಃ' ಅಮರ ।

**ಕ್ರಿಯಾಪದ— ಚಿಂತಯಾಮಃ-** ಚಿಂತಯತಿ ಚಿಂತಯತಃ ಚಿಂತಯಂತಿ, ಚಿಂತಯಸಿ ಚಿಂತಯಥಃ ಚಿಂತಯಥ, ಚಿಂತಯಾಮಿ ಚಿಂತಯಾವಃ ಚಿಂತಯಾಮಃ । ಚಿತಿಸ್ಮೃತ್ಯಾಂ ಸಕರ್ಮಕ ಪರಸ್ಮೈಪದಿ ಸೇಟ್ ಲಟ್ ಉತ್ತಮಪುರುಷೇ ಬಹುವಚನ । **ಉಪೈತಿ-** ಉಪ+ಏತಿ ಇತಃ ಯಂತಿ ಇಣ್ ಗತೌ ಅನಿಟ್ ಸಕ ಪರಸ್ಮೈಪದಿ ಲಟ್ ಪ್ರಥಮಪುರುಷೇ ಏಕವಚನಂ।

**ಪ್ರಯೋಗ—** ಅಲ್ಪಬುದ್ಧೇಃ ಉಪನಿಷತ್ಸು ಘಟನಯಾ ಸುಘಟಯಾನ ಭೂಯತೇ ಇತಿ ಅಭ್ಯುಪಗಮ್ಯ ಇಹ ಯಾಂ ಉಪಾಸ್ತಿಂ ಮುಕ್ತ್ವಾ ಕೇನಾಪಿ ವಿಮುಕ್ತಿಃ ನ ಉಪೇಯತೇ ಇಯಂ ಉಪಾಸ್ತಿಃ(ಅಸ್ಮಾಭಿಃ) ಚಿಂತ್ಯತೇ ।

★ ★ ★

**ಅವತಾರಿಕಾ—** ತ್ರಿವಿಕ್ರಮ ಪಂಡಿತಾಚಾರ್ಯರ ವಿಚಾರ ಪ್ರಕಾರವನ್ನೇ ಮೂರು ಶ್ಲೋಕಗಳಿಂದ ವಿವರಿಸುತ್ತಾರೆ.

**ವಿತತಃ ಸುಖಸಚ್ಚಿದದ್ವಯಾತ್ಮಾ**
**ಸಮುಪಾಸ್ಯೋ ವಿಹಿತೋ ಹಿತತ್ತ್ವವಿದ್ಭಿಃ ।**
**ಸ ಚ ನಾವಯವೀ ನಿರೂಪ್ಯತೇ ಚೇ-**
**ದ್ದ್ಯುತಿಮಾತ್ರಂ ಚ ನ ಹೀತ್ಯದೋ ರಹಸ್ಯಮ್ ॥ 58 ॥**

**ಪದಚ್ಛೇದ—** ವಿತತಃ, ಸುಖಸಚ್ಚಿತ್, ಅದ್ವಯಾತ್ಮಾ, ಸಮುಪಾಸ್ಯಃ, ವಿಹಿತಃ, ಹಿ, ತತ್ತ್ವವಿದ್ಭಿಃ, ಸಃ, ಚ, ನ, ಅವಯವೀ, ನಿರೂಪ್ಯತೇ, ಚೇತ್, ದ್ಯುತಿಮಾತ್ರಂ, ನ, ಹಿ, ಇತಿ, ಅದಃ, ರಹಸ್ಯಂ ।

**ಅನ್ವಯ—** ತತ್ತ್ವವಿದ್ಭಿಃ, ವಿತತಃ, ಸುಖಸಚ್ಚಿತ್, ಅದ್ವಯಾತ್ಮಾ, ಸಮುಪಾಸ್ಯಃ, ವಿಹಿತಃ, ಹಿ, ಸಃ, ಚ, ಅವಯವೀ, ನ, ನಿರೂಪ್ಯತೇ, ಚೇತ್, ದ್ಯುತಿಮಾತ್ರಂ, ನ, ಹಿ, ಇತಿ, ಚ, ಅದಃ, ರಹಸ್ಯಂ ।

**ಅನ್ವಯಾರ್ಥ—**

**ತತ್ತ್ವವಿದ್ಭಿಃ** = ಭಗವಂತನ ತತ್ತ್ವವನ್ನು ನಿಶ್ಚಯವಾಗಿ ತಿಳಿದಿರುವವರಿಂದ (ಭಗವಂತನಾದ ಶ್ರೀಹರಿಯು).

**ವಿತತಃ** = ಎಲ್ಲಾ ಪ್ರದೇಶಗಳಲ್ಲಿ ವ್ಯಾಪಿಸಿರುವವನಾಗಿಯೂ,

**ಸುಖಸಚ್ಚಿತ್** = ಆನಂದರೂಪನು ನಿರ್ದೋಷಜ್ಞಾನರೂಪನೂ,

**ಅದ್ವಯಾತ್ಮಾ** = ತನಗೆ ಸಮಾನರೂ ತನಗಿಂತ ಅಧಿಕರೂ ಇಲ್ಲದವರಾಗಿಯೂ,

**ಸಮುಪಾಸ್ಯಃ** = ಉಪಾಸನೆ ಮಾಡಲು ಯೋಗ್ಯನಾಗಿ,

**ವಿಹಿತಃ ಹಿ** = ವೇದ ಪುರಾಣಾದಿಗಳಿಂದ ವಿಧಿಸಲ್ಪಟ್ಟಿರುವನಷ್ಟೆ,

**ಸ ಚ** = ಹೀಗೆ ಉಪಾಸನೆಗೆ ವಿಷಯವಾಗಿ(ಯೋಗ್ಯನಾಗಿ) ಹೇಳಲ್ಪಟ್ಟ ಭಗವಂತನು,

**ಅವಯವೀ** = ಜ್ಞಾನಾನಂದಾದಿ ಸ್ವರೂಪವಾದ ಕೈಕಾಲು ಮುಂತಾದ ಸುಂದರವಾದ ಎಲ್ಲಾ ಅವಯವ ಉಳ್ಳವನೆಂದು,

**ನ ನಿರೂಪ್ಯತೇ ಚೇತ್** = ಪ್ರತಿಪಾದಿಸಲ್ಪಡದಿದ್ದರೆ,

**ದ್ಯುತಿಮಾತ್ರಂ** = ಕೇವಲ ತೇಜೋರೂಪನೆಂಬುದು,

**ನಹಿ** = ಸಂಭವಿಸುವುದಿಲ್ಲ,

**ಇತಿ ಚ** = ಹೀಗೆಂದೂ,

**ಅದಃ** = ಇದು,

**ರಹಸ್ಯಂ** = ಮಾಯಾವಾದಿ ಶಾಸ್ತ್ರದ ಗುಟ್ಟು (ಆದೀತು).

**ತಾತ್ಪರ್ಯ—** ಭಗವಂತನ ತತ್ತ್ವವನ್ನು ಚೆನ್ನಾಗಿ ಮಥನ ಮಾಡಿ ತಿಳಿದು, ಭಗವಂತನನ್ನು ಅಂತರ್ದೃಷ್ಟಿಯಿಂದ ಕಂಡವರು ಶ್ರುತಿ ಪುರಾಣಸ್ಮೃತಿಗಳಲ್ಲಿ ಭಗವಂತನ ಸ್ವರೂಪವನ್ನು ಹೀಗೆ ವರ್ಣಿಸಿರುತ್ತಾರೆ. ಭಗವಂತನಾದ ಶ್ರೀಹರಿಯು ಎಲ್ಲಾ ದೇಶಕಾಲಗಳಲ್ಲಿ ವ್ಯಾಪ್ತನು. ನಿರವಧಿಕಾನಂದರೂಪನು ನಿರ್ದೋಷವಾದ ಜ್ಞಾನರೂಪನು ಅವನಿಗೆ ಸಮರೂ ಯಾರೂ ಇಲ್ಲ. ಅವನಿಗಿಂತ ಅಧಿಕರೂ ಯಾರೂ ಇಲ್ಲ, ಪರಮಾತ್ಮನನ್ನು ಈ ಸ್ವರೂಪವುಳ್ಳವನೆಂದು ಉಪಾಸನೆ ಮಾಡಿರಿ ಎಂದು ಸಕಲ ವೇದ ಪುರಾಣಸ್ಮೃತಿ ಇತಿಹಾಸಗಳು ಹೇಳುತ್ತವೆ. ಅವರ ಉಪದೇಶವು ಉಪಾಸನೆಯನ್ನು ಹೀಗೆಯೆ ಮಾಡಬೇಕೆಂದು ಜ್ಞಾನಿಗಳು ವೇದಾದಿವಾಕ್ಯಗಳನ್ನು ಉದಾಹರಿಸಿ ನಿಯಮವನ್ನೇ ಮಾಡಿದ್ದಾರೆ ಇದರಿಂದ ಅವನಿಗೆ ಜ್ಞಾನ ಆನಂದ ಮುಂತಾದ ಗುಣಸ್ವರೂಪವಾದ ಕೈಕಾಲು ಮುಂತಾದ ಸುಂದರ ಅವಯವಗಳಿವೆ ಎಂದು ಸ್ಪಷ್ಟವಾಗುತ್ತದೆ. ಪರಮಾತ್ಮನು ನಿರ್ಗುಣ ನಿರವಯವ ನಿರಾಕಾರ ನಿರ್ವಿಶೇಷ ಎಂದು ಶಂಕರ ಭಾಷ್ಯದಲ್ಲಿ ಹೇಳಿದಂತೆ ಹೇಳಿದರೆ ಅವನಿಗೆ ಯಾವ ಸ್ವರೂಪವೂ ಇಲ್ಲವೆಂದಂತೆ ಆಗುತ್ತದೆ. ಆಗ ಬ್ರಹ್ಮವು ಸ್ವಪ್ರಕಾಶಸ್ವರೂಪ = ಉತ್ಕೃಷ್ಟ ತೇಜಸ್ವರೂಪ ಜ್ಞಾನಾತ್ಮಕ ಪ್ರಕಾಶಸ್ವರೂಪನೆಂಬ ಶಂಕರಭಾಷ್ಯದ ಫಲಿತಾರ್ಥವೂ ಕೂಡುವುದಿಲ್ಲ. ಏಕೆಂದರೆ ಸ್ವಪ್ರಕಾಶಸ್ವರೂಪತ್ವ ಎಂಬುದೂ ಒಂದು ವಿಶೇಷವಷ್ಟೇ ಮತ್ತು ಅದು ಬ್ರಹ್ಮಧರ್ಮವಾದ ಒಂದು ಗುಣವಷ್ಟೇ. ಇದರಿಂದ ಕೂಡಿದ ಬ್ರಹ್ಮನು ಸಾವಯವನಾದನಷ್ಟೇ ಬ್ರಹ್ಮನಿಗೆ ಸುಖಜ್ಞಾನ ಸ್ವರೂಪವೂ ಅಪ್ರಾಕೃತವೂ ತನ್ನಿಂದ ಭೇದವಿಲ್ಲದ್ದೂ ಆದ ವ್ಯಾಪ್ತದೇಹವಿದೆಯೆಂದು ಶಾಸ್ತ್ರದಲ್ಲಿದೆ ಅದ್ವೈತದಂತೆ ಪರಮಾತ್ಮನು ನಿರಾಕಾರ ನಿರವಯವ ಎಂದರೆ ಪ್ರಕಾಶಾಕಾರ ಎಂಬ ಮಾತು ವಿರುದ್ಧವಾಗುತ್ತದೆ ಆಕಾರವೇ ಇಲ್ಲದಿದ್ದ ಮೇಲೆ ಪ್ರಕಾಶಾಕಾರ ಎಲ್ಲಿಂದ ಬರಲು ಸಾಧ್ಯ? ಒಟ್ಟಿನಲ್ಲಿ ಬ್ರಹ್ಮಸ್ವರೂಪವೇ ಅದ್ವೈತ ಶಾಸ್ತ್ರದ ಪ್ರಕಾರ ಸಿದ್ಧಿಸದೆ ಹೋಗುತ್ತದೆ ಎಂದು ತಾತ್ಪರ್ಯ.

**ವಿಗ್ರಹ—**

**ಸುಖಸಚ್ಚಿತ್—** ಸತೀ ಚ ಸಾ ಚಿಚ್ಚ ಸಚ್ಚಿತ್, ಸುಖಶ್ಚಾಸೌ ಸಚ್ಚಿಚ್ಚ ಸುಖಸಚ್ಚಿತ್ ।

**ಅದ್ವಯಾತ್ಮಾ—** ನ ವಿದ್ಯತೇ ದ್ವಯಂ ಯಸ್ಯ ಸಃ ಅದ್ವಯಃ ಅದ್ವಯಃ ಆತ್ಮಾ ಯಸ್ಯಸಃ ಅದ್ವಯಾತ್ಮಾ ।

**ಸಮುಪಾಸ್ಯಃ—** ಸಮುಪಾಸಿತುಂ ಯೋಗ್ಯಃ ಸಮುಪಾಸ್ಯಃ ।

**ತತ್ತ್ವವಿದ್ಭಿಃ—** ತತ್ತ್ವಂ ವಿದಂತೀತಿ ತತ್ತ್ವವಿದಃ ತೈಃ ತತ್ತ್ವವಿದ್ಭಿಃ ।

**ಅವಯವೀ—** ಅವಯವಾಃ ಅಸ್ಯಸಂತೀತಿ ಅವಯವೀ ।

**ದ್ಯುತಿಮಾತ್ರಂ—** ದ್ಯುತಿರೇವ ದ್ಯುತಿಮಾತ್ರಂ ।

**ಕ್ರಿಯಾಪದ—** ನಿರೂಪ್ಯತೇ - ನಿ+ರೂಪ್ಯತೇ ರೂಪ್ಯೇತೇ ರೂಪ್ಯಂತೇ, ರೂಪ = ರೂಪಕ್ರಿಯಾಯಾಂ ಕರ್ಮಣಿ ಲಟ್ ಆತ್ಮನೇಪದ ನಿ ಉಪಸರ್ಗ ।

**ಪ್ರಯೋಗ—** ತತ್ತ್ವವಿದಃ ವಿತತಂ ಸುಖಸಚ್ಚಿತ್ತಂ ಅದ್ವಯಾತ್ಮಾನಂ ಸಮುಪಾಸ್ಯಂ ವ್ಯಧುಃ ಹಿ । ತಂ ಚ (ವಯಂ) ಅವಯವಿನಂ ನ ನಿರೂಪಯಾಮಃ ಚೇತ್ (ಬ್ರಹ್ಮಣಾ) ದ್ಯುತಿಮಾತ್ರೇಣ ನ ಭೂಯತೇ ಇತಿ ಚ ಅಮುನಾ (ಮಾಯಾವಾದಿ ಶಾಸ್ತ್ರರಹಸ್ಯೇನ) ಭೂಯತೇ ।

★ ★ ★

**ಅವತಾರಿಕಾ—** ಪ್ರಕಾಶಾದಿ ಯಾವ ಆಕಾರವೂ ಇಲ್ಲದಿರುವ ಬ್ರಹ್ಮನೇ ಉಪಾಸ್ಯವಾಗಲಿ ನಮಗೇನು ತೊಂದರೆ ಎಂದರೆ ಹೇಳುತ್ತಾರೆ.

**ಯದಿ ಚೇದೃಗುಪಾಸ್ಯತೇಽಸ್ಯ ರೂಪಂ**
**ತಿಮಿರತ್ವೇನ ವಿಭಾತಿ ಪಾರಿಶೇಷ್ಯಾತ್ ।**
**ಫಲಮಪ್ಯಥ ಮುಕ್ತಿರೀದೃಶೀ ಸ್ಯಾ-**
**ದಿತಿ ನೋ ನೈವ ಧಿನೋತ್ಯುಪಾಸ್ತಿರೇಷಾ ॥ 59 ॥**

**ಪದಚ್ಛೇದ—** ಯದಿ, ಚ, ಈದೃಕ್, ಉಪಾಸ್ಯತೇ, ಅಸ್ಯ, ರೂಪಂ, ತಿಮಿರತ್ವೇನ, ವಿಭಾತಿ, ಪಾರಿಶೇಷ್ಯಾತ್, ಫಲಂ, ಅಪಿ, ಅಥ, ಮುಕ್ತಿಃ, ಈದೃಶೀ, ಸ್ಯಾತ್, ಇತಿ, ನಃ, ನ, ಏವ, ಧಿನೋತಿ, ಉಪಾಸ್ತಿಃ, ಏಷಾ ।

**ಅನ್ವಯ—** ಅಸ್ಯ, ರೂಪಂ, ಯದಿ, ಈದೃಕ್, ಉಪಾಸ್ಯತೇ, ಚೇತ್, ಪಾರಿಶೇಷ್ಯಾತ್, ತಿಮಿರತ್ವೇನ, ವಿಭಾತಿ, ಅಥ, ಫಲಂ, ಮುಕ್ತಿಃ, ಅಪಿ, ಈದೃಶಿ, ಸ್ಯಾತ್, ಇತಿ, ಏಷಾ, ಉಪಾಸ್ತಿಃ, ನಃ, ನೈವ, ಧಿನೋತಿ ।

**ಅನ್ವಯಾರ್ಥ—**

**ಅಸ್ಯ** = ಈ ಪರಬ್ರಹ್ಮನ,
**ರೂಪಂ** = ಸ್ವರೂಪವು,
**ಯದಿ** = ಒಂದು ವೇಳೆ,
**ಈದೃಕ್** = ತೇಜೋರೂಪವಲ್ಲವೆಂದು,
**ಉಪಾಸ್ಯತೇ ಚೇತ್** = ಉಪಾಸನೆ ಮಾಡಲ್ಪಡುವುದಾದರೆ,
**ಪಾರಿಶೇಷ್ಯಾತ್** = ಪರಿಶೇಷನ್ಯಾಯದಿಂದ,
**ತಿಮಿರತ್ವೇನ** = ಕತ್ತಲೆಯ ರೂಪದಿಂದ,
**ವಿಭಾತಿ** = ಪ್ರಕಾಶಿಸುತ್ತದೆ,
**ಅಥ** = ಅನಂತರ,
**ಫಲಂ** = ಉಪಾಸನೆಯ ಫಲವಾದ,
**ಮುಕ್ತಿಃ ಅಪಿ** = ಮೋಕ್ಷವೂ ಕೂಡ,
**ಈದೃಶೀ** = ಕೇವಲ ತಮಸ್ಸು ಇತ್ಯಾದಿ ದುಃಖಸ್ವರೂಪವುಳ್ಳದ್ದೇ,
**ಸ್ಯಾತ್** = ಆದೀತು,
**ಇತಿ** = ಈ ಕಾರಣದಿಂದ,
**ಏಷಾ** = ಈ,

**ಉಪಾಸ್ತಿಃ** = ಉಪಾಸನೆಯು,

**ನಃ** = ನಮ್ಮನ್ನು,

**ನೈವ ಧಿನೋತಿ** = ಸಂತೋಷಪಡಿಸುವುದೇ ಇಲ್ಲ (ಈ ಉಪಾಸನೆಯು ನಮ್ಮ ಮನಸ್ಸಿಗೆ ಹಿಡಿಸುವುದಿಲ್ಲ).

**ತಾತ್ಪರ್ಯ**— ಹಿಂದೆ ಫಲಿತವಾದಂತೆ ಈ ಪರಬ್ರಹ್ಮನನ್ನು ಅಪ್ರಕಾಶನು ಎಂದು ಉಪಾಸನೆ ಮಾಡಿದರೆ (ಪ್ರಕಾಶವಲ್ಲದಿರುವುದು ಅಂಧಕಾರವಷ್ಟೆ ಆದ್ದರಿಂದ ಬ್ರಹ್ಮನು) ಅಂಧಕಾರ ಅಂದರೆ ಕತ್ತಲು ಎಂಬ ಸ್ವರೂಪವುಳ್ಳವನೆಂದೇ ಆಗುವುದು. (ಪುಸ್ತಕ 'ಪ್ರತಿಷೇಧೇ ಪರಿಶಿಷ್ಯಮಾಣೇ ಬುದ್ಧಿಃ ಪರಿಶೇಷಃ', ದೇವದತ್ತ, ಯಜ್ಞದತ್ತ ಎಂಬ ಇಬ್ಬರಲ್ಲಿ ಇವನು ದೇವದತ್ತನಲ್ಲ ಎಂದರೆ ಯಜ್ಞದತ್ತನೆಂದು ತಿಳಿದು ಬರುತ್ತದೆ. ಅದರಂತೆ ಜ್ಞಾನ ಆನಂದ ಸ್ವರೂಪನೂ ತೇಜಸ್ಸ್ವರೂಪನೂ ಬ್ರಹ್ಮನಲ್ಲವೆಂದರೆ ಅದಕ್ಕೆ ವಿರುದ್ಧವಾದ ಅಜ್ಞಾನ ಅನಾನಂದ (ದುಃಖ)ಸ್ವರೂಪವನ್ನು ಪ್ರಕಾಶಾಕಾರ ಸ್ವರೂಪವಲ್ಲವೆಂದರೆ ತಮಸ್ಸ್ವರೂಪವನ್ನು ಹೇಳಬೇಕಾಗುತ್ತದೆ) ಹೀಗೆ ಬ್ರಹ್ಮನಿಗೆ ಜ್ಞಾನ, ಆನಂದಪ್ರಕಾಶಸ್ವರೂಪತ್ವವು ಸಿದ್ಧಿಸದೇ ಹೋದೀತು. ಆಗ ಅಜ್ಞಾನ, ಅನಾನಂದ, ಅಪ್ರಕಾಶಸ್ವರೂಪನಾ ಬ್ರಹ್ಮನನ್ನು ಉಪಾಸನೆ ಮಾಡಿದವನಿಗೂ ತಮಸ್ಸು ಎಂಬ ಮೋಕ್ಷವೇ ಫಲರೂಪವಾಗಿ ದೊರಕೀತು. ತಮಸ್ಸಿಗಾಗಿ ಯಾವ ಉಪಾಸಕನೂ ಪ್ರಯತ್ನಿಸಲಾರನು. ಆದುದರಿಂದ ಭಗವಂತನು ನಿರ್ಗುಣನು ನಿರಾಕಾರನು ಎಂಬ ಉಪಾಸನೆಯು ನಮ್ಮನ್ನು ಸಂತೋಷಪಡಿಸುವುದಿಲ್ಲ, ನಮ್ಮ ಮನಸ್ಸಿಗೆ ಈ ಉಪಾಸನೆಯು ಸಂತೋಷಕರವಾಗಿಲ್ಲ ಎಂದು ಭಾವ.

**ವಿಗ್ರಹ**—

**ತಿಮಿರತ್ವೇನ**— ತಿಮಿರಸ್ಯ ಭಾವಃ ತಿಮಿರತ್ವಂ ತೇನ ।

**ಪಾರಿಶೇಷ್ಯಾತ್**— ಪರಿಶೇಷಸ್ಯ ಭಾವಃ ಪಾರಿಶೇಷ್ಯಂ ತಸ್ಮಾತ್ ।

**ಕ್ರಿಯಾಪದ**— **ಉಪಾಸ್ಯತೇ** - ಉಪ+ಆಸ್ಯತೇ ಆಸ್ಯೇತೇ ಆಸ್ಯಂತೇ, ಇತ್ಯಾದಿ ಉಪ ಉಪಸರ್ಗ ಪೂರ್ವಕ ಆಸ ಉಪವೇಶನೇ ಕರ್ಮಣಿ ಲಟ್ । **ವಿಭಾತಿ** - ವಿ+ಭಾತಿ ಭಾತಃ ಭಾಂತಿ, ಭಾದೀಪ್ತೌ ಲಟ್ ವಿ ಉಪಸರ್ಗ ಧಿನೋತಿ । ಧಿನೋತಿ ಧಿನುತಃ ಧಿನ್ವಂತಿ ಧಿನೋಷಿ ಧಿನುಥಃ ಧಿನುಥ, ಧಿನೋಮಿ ಧಿನುವಃ ಧಿನ್ವಃ, ಧಿನುಮಃ ಧಿನ್ಮಃ, ಧಿನ್ವಂತಿ ಧಿವಿ ಪ್ರೀಣನೇ ಲಟ್ ಧಿನುಪುಷ್ಟೌ ।

**ಪ್ರಯೋಗ**— (ವಯಂ) ಆಸ್ಯರೂಪಂ ಯದಿ ಈದೃಕ್ ಉಪಾಸ್ಮಹೇ ಚೇತ್ ಪಾರಿಶೇಷ್ಯಾತ್(ತೇನ ರೂಪೇಣ) ತಿಮಿರತ್ವೇನ ವಿಭಾಯತೆ । ಅಥ ಫಲೇನ ಮುಕ್ತ್ಯಾ ಅಪಿ ಈದೃಶ್ಯಾ ಭೂಯತೇ ಇತಿ ಏತಯಾ ಉಪಾಸ್ತ್ಯಾ ವಯಂ ನ ಧಿವ್ಯಾಮಹೇ (ಈ ಉಪಾಸನೆಯಿಂದ ನಾವು ಸಂತೋಷಗೊಳಿಸಲ್ಪಡುವುದಿಲ್ಲ) ।

★ ★ ★

**ಅವತಾರಿಕಾ**— ಹಾಗಾದರೆ ಶಂಕರಭಾಷ್ಯದಲ್ಲಿ ಹೇಳಿದ ರೀತಿಯ ಉಪಾಸನೆಯನ್ನು ಮಾಡದಿದ್ದರೆ ನೀವು ಮತ್ತೆ ಹೇಗೆ ಉಪಾಸನೆ ಮಾಡುತ್ತೀರಿ ಎಂದರೆ ಹೇಳುತ್ತಾರೆ.

**ಅಥ ವೇದಪುರಾಣಭಾರತಾನಿ(ದಿ)**
**ಸ್ವಯಮಾಲೋಚ್ಯ ಯಥಾವಬೋಧಮತ್ರ ।**
**ಗುಣವಂತಮುಪಾಸ್ಮಹೇ ಮುಕುಂದಂ**
**ಸ್ಮೃತಿಧರ್ಮಾನ್ ಭೃಶಮಾಚರಂತ ಏವ ॥ 60 ॥**

**ಪದಚ್ಛೇದ**— ಅಥ, ವೇದಪುರಾಣಭಾರತಾನಿ, ಸ್ವಯಂ, ಆಲೋಚ್ಯ, ಯಥಾವಬೋಧಂ, ಅತ್ರ, ಗುಣವಂತಂ, ಉಪಾಸ್ಮಹೇ, ಮುಕುಂದಂ, ಸ್ಮೃತಿಧರ್ಮಾನ್, ಭೃಶಂ, ಆಚರಂತಃ, ಏವ ।

**ಅನ್ವಯ—** ಅಥ, ಸ್ವಯಂ, ಸ್ಮೃತಿಧರ್ಮಾನ್, ಭೃಶಂ, ಆಚರಂತಃ, ಏವ, ವೇದಪುರಾಣಭಾರತಾನಿ, ಆಲೋಚ್ಯ, ಅತ್ರ, ಯಥಾವಬೋಧಂ, ಮುಕುಂದಂ, ಗುಣವಂತಂ, ಉಪಾಸ್ಮಹೇ ।

**ಅನ್ವಯಾರ್ಥ—**

**ಅಥ** = ಶಂಕರಭಾಷ್ಯವನ್ನು ತ್ಯಜಿಸಿದ ತರುವಾಯ,

**ಸ್ವಯಂ** = ಸ್ವಂತವಾಗಿಯೇ,

**ಸ್ಮೃತಿಧರ್ಮಾನ್** = ಮನ್ವಾದಿಸ್ಮೃತ್ಯುಕ್ತ ಧರ್ಮಗಳನ್ನು,

**ಭೃಶಂ** = ಚೆನ್ನಾಗಿ,

**ಆಚರಂತಃ ಏವ** = ಆಚರಿಸುತ್ತಿರುವವರಾಗಿಯೇ,

**ವೇದಪುರಾಣಭಾರತಾನಿ** = ಋಗಾದಿ ವೇದಗಳು, ಭಾಗವತಾದಿ ಪುರಾಣಗಳು, ಭಾರತ ಮೊದಲಾದವು ಇವುಗಳನ್ನು,

**ಆಲೋಚ್ಯ** = ವಿಚಾರಮಾಡಿ,

**ಅತ್ರ** = ಈ ವೇದಗಳಲ್ಲಿ,

**ಯಥಾವಬೋಧಂ** = ನಮ್ಮ ತಿಳುವಳಿಕೆಗೆ ಅನುಸಾರವಾಗಿ,

**ಮುಕುಂದಂ** = ಮೋಕ್ಷಪ್ರದನಾದ ವಾಸುದೇವನನ್ನು,

**ಗುಣವಂತಂ** = ಗುಣವುಳ್ಳವನನ್ನಾಗಿ,

**ಉಪಾಸ್ಮಹೇ** = ಉಪಾಸನೆ ಮಾಡುವೆವು.

**ತಾತ್ಪರ್ಯ—** ಶಂಕರಭಾಷ್ಯಾದಿ ಅದ್ವೈತ ಗ್ರಂಥಗಳಲ್ಲಿ ಹೇಳಿದ ನಿರ್ಗುಣ(ನಿರಾಕಾರ) ನಿರವಯವ ನಿರ್ವಿಶೇಷ ಎಂಬ ಉಪಾಸನೆಯು ನಮಗೆ ಇಷ್ಟವಾಗುವುದಿಲ್ಲ. ಆದುದರಿಂದ ವೇದಪುರಾಣ ಭಾರತ ಪಂಚರಾತ್ರ ಮುಂತಾದ ಗ್ರಂಥಗಳನ್ನು ನಾವೇ ಸ್ವಂತ ವಿಚಾರ ಮಾಡುತ್ತೇವೆ. ಸ್ಮೃತಿಗಳಲ್ಲಿ ಹೇಳಿರುವ ಧರ್ಮ ಕರ್ಮಗಳನ್ನು ಚೆನ್ನಾಗಿ ಆಚರಿಸಿ ಅಂತರಂಗ ಶುದ್ಧಿಯನ್ನು ಪಡೆಯುತ್ತೇವೆ. ಹಿಂದೆ ಹೇಳಿದ ಗ್ರಂಥಗಳನ್ನು ನಮ್ಮ ಬುದ್ಧಿಗೆ ಅನುಸಾರವಾಗಿ ಆಲೋಚಿಸಿ ಅಪ್ರಾಕೃತಜ್ಞಾನಾನಂದಾದಿಗಳ ಆವಿರ್ಭಾವರೂಪವಾದ ಮೋಕ್ಷವನ್ನು ಕೊಡುವ ಪರಮಾತ್ಮನೂ ಅಪ್ರಾಕೃತವಾದ ಜ್ಞಾನಾನಂದಾದಿ ಅನಂತ ಕಲ್ಯಾಣಗುಣಪರಿಪೂರ್ಣನೆಂದೇ ಉಪಾಸನೆ ಮಾಡುತ್ತೇವೆ. ನಿರಂತರ ಸೇವಿಸುತ್ತೇವೆ. (ಪಂಡಿತಶ್ರೇಷ್ಠರಾದ ತ್ರಿವಿಕ್ರಮಪಂಡಿತಾಚಾರ್ಯರು ಹೀಗೆ ನಿಷ್ಪಕ್ಷಪಾತವಾಗಿ ವಿಚಾರಮಾಡಿ ಪರಮಾತ್ಮನು ಗುಣಪರಿಪೂರ್ಣನು ಎಂದು ಉಪಾಸನೆ ಮಾಡಿದರೆ ಮಾತ್ರವೇ ಮೋಕ್ಷಪ್ರಾಪ್ತಿಯಾಗುತ್ತದೆ ಎಂದು ನಿರ್ಣಯಿಸಿದರು. ಇದರಿಂದ ದ್ವೈತಶಾಸ್ತ್ರವು ನಿರ್ದೋಷವಾದುದು ಎಂದು ಸೂಚಿತವಾಯಿತು)

**ವಿಗ್ರಹ—**

**ವೇದಪುರಾಣಭಾರತಾನಿ—** ವೇದಾಶ್ಚ ಪುರಾಣಾನಿ ಚ ಭಾರತಂ ಚ ವೇದಪುರಾಣಭಾರತಾನಿ ತಾನಿ (ವೇದ-ಪುರಾಣಭಾರತಾನಿ ಆದೀನಿ ಯಸ್ಯ ಪಂಚರಾತ್ರಾದೇಃ ತತ್ ವೇದಪುರಾಣಭಾರತಾದಿ) ।

**ಯಥಾವಬೋಧಂ—** ಅವಬೋಧಂ ಅನತಿಕ್ರಮ್ಯ ಯಥಾವಬೋಧಂ ।

**ಗುಣವಂತಂ—** ಗುಣಾಃ ಅಸ್ಯ ಸಂತೀತಿ ಗುಣವಾನ್ ತಂ ।

**ಸ್ಮೃತಿಧರ್ಮಾನ್—** ಸ್ಮೃತೇಃ ಧರ್ಮಾಃ ಸ್ಮೃತಿಧರ್ಮಾಃ ತಾನ್ ।

**ಕ್ರಿಯಾಪದ—** **ಉಪಾಸ್ಮಹೇ** - ಉಪ+ಆಸ್ಮಹೇ, ಆಸೇ ಆಸ್ವಹೇ ಆಸ್ಮಹೇ, ಉಪ ಉಪಸರ್ಗ ಆಸ ಉಪವೇಶನೇ ಲಟ್ ಉತ್ತಮಪುರುಷೇ ಬಹುವಚನ ।

**ಪ್ರಯೋಗ—** ಅಥ (ಅಸ್ಮಾಭಿಃ) ಸ್ವಯಂ ಸ್ಮೃತಿಧರ್ಮಾನ್ ಭೃಶಂ ಆಚರದ್ಭಿಃ ಏವ ವೇದಪುರಾಣಭಾರತಾನಿ(ದಿ) ಆಲೋಚ್ಯ ಅತ್ರ ಯಥಾವಬೋಧಂ ಮುಕುಂದಃ ಗುಣವಾನ್ ಉಪಾಸ್ಯತೇ ।

★ ★ ★

**ಅವತಾರಿಕಾ—** ಹೀಗೆ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರಿಗೆ ಅದ್ವೈತದಲ್ಲಿ ಅಶ್ರದ್ಧೆ ಹುಟ್ಟಿದಾಗ ಶ್ರೀಮಧ್ವಾಚಾರ್ಯರ ಕೀರ್ತಿಯು ಅವರ ಕಿವಿಗೆ ಬಿದ್ದಿತು ಎಂದು ಹೇಳುತ್ತಾರೆ.

**ಅವಧಾರ್ಯ ಯದೇತಿ ಕಾರ್ಯಮಾರ್ಯಃ**
**ಸ ವಿವೇಕಾದುಪಚಕ್ರಮೇ ವಿಧಾತುಮ್ ।**
**ಪರಿಪೂರ್ಣಮತೇರ್ಜಗತ್ಸು ಕೀರ್ತಿಂ**
**ಪರಿಪೂರ್ಣಾಮಶೃಣೋತ್ ತದಾ ವಿಶುದ್ಧಾಮ್ ॥ 61 ॥**

**ಪದಚ್ಛೇದ—** ಅವಧಾರ್ಯ, ಯದಾ, ಇತಿ, ಕಾರ್ಯಂ, ಆರ್ಯಃ, ಸಃ, ವಿವೇಕಾತ್, ಉಪಸಚಕ್ರಮೇ, ವಿಧಾತುಂ, ಪರಿಪೂರ್ಣಮತೇಃ, ಜಗತ್ಸು ಕೀರ್ತಿಂ, ಪರಿಪೂರ್ಣಾಂ, ಅಶೃಣೋತ್, ತದಾ, ವಿಶುದ್ಧಾಂ ।

**ಅನ್ವಯ—** ಸಃ, ಆರ್ಯಃ, ಕಾರ್ಯಂ, ವಿವೇಕಾತ್, ಇತಿ, ಅವಧಾರ್ಯ (ವೇದಾದಿ ವಿಚಾರಂ), ವಿಧಾತುಂ, ಯದಾ, ಉಪಚಕ್ರಮೇ, ತದಾ, ಜಗತ್ಸು, ಪರಿಪೂರ್ಣಾಂ, ಪರಿಪೂರ್ಣಮತೇಃ, ಕೀರ್ತಿಂ, ಅಶೃಣೋತ್ ।

**ಅನ್ವಯಾರ್ಥ—**

**ಸಃ ಆರ್ಯಃ** = ಆ ಪೂಜ್ಯರಾದ ತ್ರಿವಿಕ್ರಮ ಪಂಡಿತಾಚಾರ್ಯರು,
**ಕಾರ್ಯಂ** = ತನ್ನ ಕರ್ತವ್ಯವನ್ನು,
**ವಿವೇಕಾತ್** = ವಿಚಾರದಿಂದ,
**ಇತಿ** = ಈ ರೀತಿಯಾಗಿ,
**ಅವಧಾರ್ಯ** = ನಿಶ್ಚಯಿಸಿ,
**ವಿಧಾತುಂ** = ವೇದಾದಿ ವಿಚಾರವನ್ನು ಮಾಡುವುದಕ್ಕೆ,
**ಯದಾ** = ಯಾವಾಗ,
**ಉಪಚಕ್ರಮೇ** = ಪ್ರಾರಂಭಿಸಿದರೋ,
**ತದಾ** = ಆಗ,
**ಜಗತ್ಸು** = ಲೋಕಗಳಲ್ಲಿ
**ಪರಿಪೂರ್ಣಾಂ** = ತುಂಬಿರುವ,
**ವಿಶುದ್ಧಾಂ** = ನಿರ್ಮಲವಾದ,
**ಪರಿಪೂರ್ಣಮತೇಃ** = ಶ್ರೀಪೂರ್ಣಪ್ರಜ್ಞರ,
**ಕೀರ್ತಿಂ** = ಕೀರ್ತಿಯನ್ನು,
**ಅಶೃಣೋತ್** = ಕೇಳಿದರು.

ವಿಗ್ರಹ—

**ಪರಿಪೂರ್ಣಮತೇಃ**— ಪರಿಪೂರ್ಣಾ ಮತಿಃ ಯಸ್ಯ ಸಃ ಪರಿಪೂರ್ಣಮತಿಃ ತಸ್ಯ ।

**ಕ್ರಿಯಾಪದ**— ಉಪಚಕ್ರಮೇ- ಉಪ+ಚಕ್ರಮೇ ಚಕ್ರಮಾತೇ ಚಕ್ರಮಿರೇ, ಚಕ್ರಮಿಷೇ ಚಕ್ರಮಾಥೇ ಚಕ್ರಮಿಧ್ವೇ, ಚಕ್ರಮೇ ಚಕ್ರಮಿವಹೇ ಚಕ್ರಮಿಮಹೇ । ಕ್ರಮು ಪಾದವಿಕ್ಷೇಪ ಉಪ ಉಪಸರ್ಗ ಲಿಟ್ 'ಪ್ರೋಪಾಭ್ಯಾಂ ಸಮರ್ಥಾಭ್ಯಾಂ' (1-3-42) ಈ ಸೂತ್ರದಿಂದ ಪ್ರಾರಂಭಾರ್ಥದಲ್ಲಿ ಆತ್ಮನೇಪದ. ಅಶ್ರುಣೋತ್ ಅಶ್ರುಣುತಾಂ ಅಶ್ರುಣ್ವನ್, ಅಶ್ರುಣೋಃ ಅಶ್ರುಣುತಂ ಅಶ್ರುಣುತ, ಅಶ್ರುಣವಂ ಅಶ್ರುಣುವ ಅಶ್ರುಣ್ವ, ಅಶ್ರುಣುಮ । ಅಶ್ರುಣ್ಮ, ಶ್ರು ಶ್ರವಣೇ ಅನದ್ಯತನಭೂತೇ ಲಙ್ ।

**ಪ್ರಯೋಗ**— ಆರ್ಯೇಣ ತೇನ ವಿವೇಕಾತ್ ಇತಿ ಅವಧಾರ್ಯ ಯದಾ ಕಾರ್ಯಂ ವಿಧಾತುಂ ಉಪಚಕ್ರಮೇ ತದಾ ಜಗತ್ಸು ಪರಿಪೂರ್ಣಾ ವಿಶುದ್ಧಾ ಪರಿಪೂರ್ಣಮತೇಃ ಕೀರ್ತಿಃ ಅಶ್ರೂಯತ ।

★ ★ ★

**ಅವತಾರಿಕಾ**— ಆಚಾರ್ಯರ ಕೀರ್ತಿಯನ್ನು ಕೇಳಿ ತ್ರಿವಿಕ್ರಮರು ಕಾರ್ಯ ಪ್ರವೃತ್ತರಾಗುವುದಕ್ಕೆ ಮೊದಲೇ ಮಾಯಾವಾದಿಗಳು ಅವರನ್ನು ಶ್ರೀಮಧ್ವಾಚಾರ್ಯರಲ್ಲಿ ವಾದಿಸುವುದಕ್ಕಾಗಿ ಪ್ರೋತ್ಸಾಹಿಸಿದರು ಎಂದು ಹೇಳುತ್ತಿದ್ದಾರೆ.

**ವಿಹಿನಸ್ತಿ ಹಿ ನೋ ಜನೋಽತಿವಾಗ್ಮೀ**
**ಸಮಯಂ ಕೋಽಪಿ ಪರಂಪರೋಪಯಾತಮ್ ।**
**ಕ್ಷಿಪ ತಂ ತ್ವಮುದಾರಯುಕ್ತಿಶೂರೋ**
**ನ ಪರೇ ತತ್ರ ಸಮರ್ಥತಾಂ ವ್ರಜೇಯುಃ ॥ 62 ॥**

**ಪದಚ್ಛೇದ**— ವಿಹಿನಸ್ತಿ, ಹಿ, ನಃ, ಜನಃ, ಅತಿವಾಗ್ಮೀ, ಸಮಯಂ, ಕಃ, ಅಪಿ, ಪರಂಪರೋಪಯಾತಂ, ಕ್ಷಿಪ, ತಂ, ತ್ವಂ, ಉದಾರಯುಕ್ತಿಶೂರಃ, ನ, ಪರೇ, ತತ್ರ, ಸಮರ್ಥತಾಂ, ವ್ರಜೇಯುಃ ।

**ಅನ್ವಯ**— ಅತಿವಾಗ್ಮೀ, ಕೋಽಪಿ, ಜನಃ, ಪರಂಪರೋಪಯಾತಂ, ನಃ, ಸಮಯಂ, ವಿಹಿನಸ್ತಿ, ಹಿ, ಉದಾರ ಯುಕ್ತಿಶೂರಃ, ತ್ವಂ, ತಂ, ಕ್ಷಿಪ, ಪರೇ, ತತ್ರ, ಸಮರ್ಥತಾಂ, ನ, ವ್ರಜೇಯುಃ ।

**ಅನ್ವಯಾರ್ಥ**—

**ಅತಿವಾಗ್ಮೀ** = ಉಪನ್ಯಾಸಕುಶಲನಾದ,
**ಕೋಽಪಿ ಜನಃ** = ಯಾವನೋ ಒಬ್ಬ ಮನುಷ್ಯನು (ಶ್ರೀಮಧ್ವಾಚಾರ್ಯರು),
**ಪರಂಪರೋಪಯಾತಂ** = ಕುಲಪರಂಪರೆಯಿಂದ ಬಂದಿರುವ,
**ನಃ ಸಮಯಂ** = ನಮ್ಮ ಅದ್ವೈತ ಸಿದ್ಧಾಂತವನ್ನು,
**ವಿಹಿನಸ್ತಿ ಹಿ** = ನಿರಾಕರಿಸುತ್ತಾನೆ ಎಂಬುದು ಪ್ರಸಿದ್ಧವಷ್ಟೆ (ಆದ್ದರಿಂದ),
**ಉದಾರ** = ಶ್ರೇಷ್ಠವಾದ,
**ಯುಕ್ತಿಶೂರಃ** = ಯುಕ್ತಿಗಳನ್ನು ಪ್ರಯೋಗಿಸುವುದರಲ್ಲಿ ವೀರನಾದ,
**ತ್ವಂ** = ನೀನು,
**ತಂ** = ಆ ವಾದಿಯನ್ನು,
**ಕ್ಷಿಪ** = ನಿರಾಕರಿಸು,

**ಪರೇ** = ನಿನ್ನನ್ನು ಬಿಟ್ಟು ಇತರರು,

**ತತ್ರ** = ಆ ವಿಷಯದಲ್ಲಿ

**ಸಮರ್ಥತಾಂ** = ಸಾಮರ್ಥ್ಯವನ್ನು,

**ನ ವ್ರಜೇಯುಃ** = ಹೊಂದಲಾರರು.

**ತಾತ್ಪರ್ಯ**— ಎಲೈ! ತ್ರಿವಿಕ್ರಮಪಂಡಿತರೇ ಉಪನ್ಯಾಸ ಮಾಡುವುದರಲ್ಲಿ ಅತ್ಯಂತ ಕುಶಲನಾದ ಮಧ್ವಾಚಾರ್ಯನೆಂಬ ಯಾವನೋ ಒಬ್ಬ ಮನುಷ್ಯನು ಇತ್ತೀಚೆಗೆ ತುಂಬಾ ಕೋಲಾಹಲವನ್ನು ಎಬ್ಬಿಸುತ್ತಿದ್ದಾನೆ. ಅವನು ವಂಶಪರಂಪರೆಯಿಂದ ಬಂದಿರುವ ನಮ್ಮ ಅದ್ವೈತ ಸಿದ್ಧಾಂತವನ್ನು ಎಲ್ಲರ ಎದುರು ಖಂಡಿಸುತ್ತಿದ್ದಾನೆ. ಇದು ಬಹಳ ಪ್ರಸಿದ್ಧವಾಗಿದೆ. ಉತ್ತಮ ಯುಕ್ತಿಗಳನ್ನು ಪ್ರಯೋಗಿಸಿ ವಾದಿಗಳನ್ನು ಗೆಲ್ಲುವ ವಿಷಯದಲ್ಲಿ ವೀರರಾದ ನೀವು ಆ ವಾದಿಯನ್ನು ಜಯಿಸಿರಿ. ಎಲೈ! ತ್ರಿವಿಕ್ರಮರೇ ನಿಮ್ಮನ್ನು ಬಿಟ್ಟು ಉಳಿದ ಯಾರೂ ಕೂಡ ಆ ವಾದಿಯನ್ನು ಜಯಿಸುವ ಸಾಮರ್ಥ್ಯವನ್ನು ಪಡೆದಿಲ್ಲ ಎಂದು ನಾವು ನಿಶ್ಚಯಿಸಿರುವೆವು. (ಹೀಗೆ ಮಾಯಾವಾದಿಗಳು ಬೇಡಿಕೊಳ್ಳಲು ತ್ರಿವಿಕ್ರಮ ಪಂಡಿತಾಚಾರ್ಯರು ಮನಸ್ಸಿನಲ್ಲಿ ಸಂದೇಹಗೊಂಡರು)

**ವಿಗ್ರಹ**—

**ಅತಿವಾಗ್ಮೀ**— ಪ್ರಶಸ್ತಾ ವಾಕ್ ಅಸ್ಯ ಅಸ್ತೀತಿ ವಾಗ್ಮೀ, 'ವಾಚೋ ಗ್ಮಿನಿಃ' (5-6-124) ಗ್ಮಿನಿ ಪ್ರತ್ಯಯ. ಅತ್ಯಂತ ವಾಗ್ಮೀ ಅತಿವಾಗ್ಮೀ ।

**ಪರಂಪರೋಪಯಾತಂ**— ಪರಂಪರಯಾ ಉಪಯಾತಃ ಪರಂಪರೋಪಯಾತಃ ತಂ ।

**ಉದಾರಯುಕ್ತಿಶೂರಃ**— ಉದಾರಶ್ಚ ತಾಃ ಯುಕ್ತಯಶ್ಚ ಉದಾರಯುಕ್ತಯಃ ಉದಾರಯುಕ್ತಿಷು ಶೂರಃ ಉದಾರಯುಕ್ತಿಶೂರಃ ।

**ಸಮರ್ಥತಾಂ**— ಸಮರ್ಥಸ್ಯ ಭಾವಃ ಸಮರ್ಥತಾ ತಾಂ ।

**ಕೋಶ**— 'ವಾಚೋ ಯುಕ್ತಿ ಪಟುರ್ವಾಗ್ಮೀ ಸಮಯಾಃ ಶಪಥಾಚಾರಕಾಲ ಸಿದ್ಧಾಂತಸಂವಿದಃ' ಅಮರ ।

**ಕ್ರಿಯಾಪದ**— ವಿಹಿನಸ್ತಿ- ವಿಹಿನಸ್ತಿ ಹಿಂಸ್ತಃ ಹಿಂಸಂತಿ, ಹಿನಸ್ಸಿ ಹಿಂಸ್ಥಃ ಹಿಂಸ್ಥ, ಹಿನಸ್ಮಿ ಹಿಂಸ್ವಃ ಹಿಂಸ್ಮಃ ಹಿಸಿ ಹಿಂಸಾಯಾಂ ಲಟ್ ಪ್ರಥಮಪುರುಷ ಏಕವಚನಂ ।

**ಪ್ರಯೋಗ**— ಅತಿವಾಗ್ಮಿನಾ ಕೇನಾಪಿ ಜನೇನ ಪರಂಪರೋಪಯಾತಃ ನಃ ಸಮಯಃ ವಿಹಿಂಸ್ಯತೇ ಹಿ । ಉದಾರಯುಕ್ತಿಶೂರೇಣ ತ್ವಯಾ ಸಃ ಕ್ಷಿಪ್ಯತಾಂ ಪರೈಃ ತತ್ರ ಸಮರ್ಥತಾ ನ ವ್ರಜ್ಯೇತ ।

★ ★ ★

**ಅವತಾರಿಕಾ**— ಮಾಯಾವಾದಿಗಳು ಶ್ರೀತ್ರಿವಿಕ್ರಮಪಂಡಿತರನ್ನು ಪ್ರೋತ್ಸಾಹಿಸಿದರು ಎಂದು ಹೇಳುತ್ತಾರೆ.

**ತವ ವೇದನದೀರ್ವಿಗಾಹ್ಯ ಭೂಯಃ**
**ಸಮಯಾಂಬೋಧಿಷು ಕುರ್ವತೋ ವಿಹಾರಮ್ ।**
**ನವಕಾವ್ಯರಸಪ್ರಿಯಸ್ಯ ವಾದಿ-**
**ದ್ವಿರದೇಂದ್ರ ಪ್ರತಿವಾರಣೋ ನ ಜಜ್ಞೇ** ॥ 63 ॥

**ಪದಚ್ಛೇದ**— ತವ, ವೇದನದೀಃ, ವಿಗಾಹ್ಯ, ಭೂಯಃ, ಸಮಯಾಂಬೋಧಿಷು, ಕುರ್ವತಃ, ವಿಹಾರಂ, ನವಕಾವ್ಯರಸಪ್ರಿಯಸ್ಯ, ವಾದಿದ್ವಿರದೇಂದ್ರ! ಪ್ರತಿವಾರಣಃ, ನ, ಜಜ್ಞೇ ।

**ಅನ್ವಯ—** ಹೇ ವಾದಿದ್ವಿರದೇಂದ್ರ! ವೇದನದೀಃ, ವಿಗಾಹ್ಯ, ಭೂಯಃ, ಸಮಯಾಂಬೋಧಿಷು, ವಿಹಾರಂ, ಕುರ್ವತಃ, ನವಕಾವ್ಯರಸಪ್ರಿಯಸ್ಯ, ತವ, ಪ್ರತಿವಾರಣಾಂ, ನ, ಜಜ್ಞೇ ।

**ಅನ್ವಯಾರ್ಥ—**

**ಹೇ ವಾದಿದ್ವಿರದೇಂದ್ರ!** = ಎಲೈ! ಎಲ್ಲಾ ವಾದಿಗಳೆಂಬ ಆನೆಗಳಿಗೆ ರಾಜರಾದ ತ್ರಿವಿಕ್ರಮಪಂಡಿತಾಚಾರ್ಯರೇ!

**ವೇದನಿದೀಃ** = ವೇದಗಳೆಂಬ ನದಿಗಳನ್ನು,

**ವಿಗಾಹ್ಯ** = ಪ್ರವೇಶಿಸಿ,

**ಭೂಯಃ** = ತಿರುಗಿ,

**ಸಮಯಾಂಬೋಧಿಷು** = ಶಾಸ್ತ್ರಗಳೆಂಬ ಸಮುದ್ರಗಳಲ್ಲಿ,

**ವಿಹಾರಂ ಕುರ್ವತಃ** = ಆಟವಾಡುತ್ತಿರುವ,

**ನವಕಾವ್ಯರಸಪ್ರಿಯಸ್ಯ** = ನೂತನವಾದ ಕಾವ್ಯಗಳ ಶೃಂಗಾರಾದಿ ರಸಗಳಲ್ಲಿ ಪ್ರೀತಿಯುಳ್ಳ,

**ತವ** = ನಿಮಗೆ,

**ಪ್ರತಿವಾರಣಃ** = ಪ್ರತಿವಾದಿ ಎಂಬ ಆನೆಯು,

**ನ ಜಜ್ಞೇ** = ಹುಟ್ಟಲಿಲ್ಲ.

**ತಾತ್ಪರ್ಯ—** ಎಲೈ, ತ್ರಿವಿಕ್ರಮಪಂಡಿತಾಚಾರ್ಯರೇ! ಒಂದು ಶ್ರೇಷ್ಠವಾದ ಮದ್ದಾನೆಯು ಹೊಳೆಗಳಲ್ಲಿ ಈಜಾಡಿ ಕೊನೆಗೆ ಸಮುದ್ರದಲ್ಲಿ ಆಟವಾಡುತ್ತಾ ಇರುತ್ತದೆ. ಅದನ್ನು ಸೋಲಿಸಲು ಸಮರ್ಥವಾದ ಶತ್ರುಗಳಾದ ಆನೆಗಳೇ ಇರುವುದಿಲ್ಲ. ಅದರಂತೆ ವೇದಗಳನ್ನೆಲ್ಲಾ ಬಹಳವಾಗಿ ಆಲೋಚನೆ ಮಾಡಿದ್ದೀರಿ. ಅನೇಕ ಸಿದ್ಧಾಂತಗಳನ್ನು ಮಥನ ಮಾಡಿ ತಿಳಿದುಕೊಂಡಿದ್ದೀರಿ. ಹಲವು ಹೊಸ ಕಾವ್ಯಗಳಲ್ಲಿಯೂ ಪರಿಶ್ರಮ ಪಡೆದು ಶೃಂಗಾರಾದಿ ರಸಗಳ ಪರಿಪಕ್ವವಾದ ಶಾಸ್ತ್ರೀಯ ಅನುಭವವನ್ನು ಪಡೆದಿದ್ದೀರಿ. ಹೀಗೆ ವೇದ ಶಾಸ್ತ್ರ ಮತ್ತು ಕಾವ್ಯಗಳ ಪರಿಶ್ರಮವುಳ್ಳ ನೀವು, ನಿಮ್ಮನ್ನು ಸೋಲಿಸುವ ಪ್ರತಿವಾದಿಯು ಪ್ರಪಂಚದಲ್ಲಿ ಹುಟ್ಟಿಲ್ಲ (ಎಂದು ತ್ರಿವಿಕ್ರಮರನ್ನು ಮಾಯಾವಾದಿಗಳು ಹೊಗಳಿದರು).

**ವಿಗ್ರಹ—**

**ವಾದಿದ್ವಿರದೇಂದ್ರ—** ದ್ವೌ ರದೌ ಯೇಷಾಂತೇ ದ್ವಿರದಾಃ ವಾದಿನಃ ಏವ ದ್ವಿರದಾಃ ವಾದಿದ್ವಿರದಾಃ ವಾದಿದ್ವಿರದಾನಾಂ ಇಂದ್ರಃ ವಾದಿದ್ವಿರದೇಂದ್ರಃ ತಸ್ಯ ಸಂಬುದ್ಧಿಃ ಹೇ ವಾದಿದ್ವಿರದೇಂದ್ರ !

**ವೇದನದೀಃ—** ವೇದಾ ಏವ ನದ್ಯಃ ವೇದನದ್ಯಃ ತಾಃ ।

**ಸಮಯಾಂಭೋದಿಷು—** ಸಮಯಾಃ ಏವ ಅಂಭೋದಯಃ ಸಮಯಾಂಭೋದಯಃ ತೇಷು ।

**ನವಕಾವ್ಯರಸಪ್ರಿಯಸ್ಯ—** ನವಾನಿ ಚ ತಾನಿ ಕಾವ್ಯಾನಿ ಚ ನವಕಾವ್ಯಾನಿ, ನವಕಾವ್ಯಾನಾಂ ರಸಾಃ ನವಕಾವ್ಯ ರಸಾಃ ನವಕಾವ್ಯರಸೇಷು ಪ್ರಿಯಃ ನವಕಾವ್ಯರಸಪ್ರಿಯಃ ತಸ್ಯ ।

**ಕೋಶ—** ಸಮಯ = ಸಿದ್ಧಾಂತ, 'ಸಮಯಾಃ ಶಪಥಚಾರಕಾಲಸಿದ್ಧಾಂತಸಂವಿದಃ', 'ದ್ವಿರದೋಽನೇಕಪೋ ದ್ವಿಪಃ ಕುಂಜರೋ ವಾರಣಃ ಕರೀ' ಅಮರ ।

**ಕ್ರಿಯಾಪದ—** ಜಜ್ಞೇ - ಜಜ್ಞೇ ಜಜ್ಞಾತೇ ಜಜ್ಞಿರೇ ಇತ್ಯಾದಿ ಜನೀಪ್ರಾದುರ್ಭಾವೇ ಲಿಟ್ ।

**ಪ್ರಯೋಗ—** ತವ ಪ್ರತಿವಾರಣೇ ನ ಜಜ್ಞೇ (ಭಾವೇ ಪ್ರಯೋಗ) ।

★ ★ ★

**ಅವತಾರಿಕಾ—** ಮಾಯಾವಾದಿ ಪಂಡಿತರು ತಮ್ಮ ಮಾತನ್ನು ಉಪಸಂಹರಿಸುತ್ತಾರೆ.

**ಉಪಯಾಹಿ ಯಶಃ ಶಶಾಂಕಗೌರಂ**
**ನಿಜಯೂಥಸ್ಯ ಭಯಂ ನಿರಾಕುರು ತ್ವಮ್ ।**
**ಅಧುನಾ ವಿಧಿನೋಪಪಾದಿತಂ ತ್ವಂ**
**ಪ್ರತಿವಾದಿಪ್ರತಿವಾರಣಂ ನಿವಾರ್ಯ ॥ 64 ॥**

**ಪದಚ್ಛೇದ—** ಉಪಯಾಹಿ, ಯಶಃ, ಶಶಾಂಕಗೌರಂ, ನಿಜಯೂಥಸ್ಯ, ಭಯಂ, ನಿರಾಕುರು, ತ್ವಂ, ಅಧುನಾ, ವಿಧಿನಾ, ಉಪಪಾದಿತಂ, ತ್ವಂ, ಪ್ರತಿವಾದಿಪ್ರತಿವಾರಣಂ, ನಿವಾರ್ಯ ।

**ಅನ್ವಯ—** ಅಧುನಾ(ತ್ವಂ), ವಿಧಿನಾ, ಉಪಪಾದಿತಂ, ಪ್ರತಿವಾದಿಪ್ರತಿವಾರಣಂ, ನಿವಾರ್ಯ, ಶಶಾಂಕಗೌರಂ, ಯಶಃ, ನಿಜಯೂಥಸ್ಯ, ಭಯಂ, ನಿರಾಕುರು ।

**ಅನ್ವಯಾರ್ಥ—**

**ಅಧುನಾ** = ಈಗ,
**ತ್ವಂ** = ನೀವು,
**ವಿಧಿನಾ** = ದೈವದಿಂದ,
**ಉಪಪಾದಿತಂ** = ಒದಗಿಸಲ್ಪಟ್ಟ,
**ತಂ** = ಆ,
**ಪ್ರತಿವಾದಿಪ್ರತಿವಾರಣಂ** = ಪ್ರತಿವಾದಿಯೆಂಬ ಶತ್ರುವಾದ ಆನೆಯನ್ನು,
**ನಿವಾರ್ಯ** = ನಿರಾಕರಿಸಿ,
**ಶಶಾಂಕಗೌರಂ** = ಚಂದ್ರನಂತೆ ಬೆಳ್ಳಗಿರುವ,
**ಯಶಃ** = ಕೀರ್ತಿಯನ್ನು,
**ಉಪಯಾಹಿ** = ಹೊಂದಿರಿ,
**ನಿಜಯೂಥಸ್ಯ** = ತನ್ನವರ ಸಮೂಹದ,
**ಭಯಂ** = ಹೆದರಿಕೆಯನ್ನು,
**ನಿರಾಕುರು** = ಹೋಗಲಾಡಿಸಿರಿ.

**ತಾತ್ಪರ್ಯ—** ಎಲೈ ತ್ರಿವಿಕ್ರಮಪಂಡಿರೇ! ಈಗ ದೇವಯೋಗದಿಂದ ನಿಮಗೆ ಒಳ್ಳೆಯ ಪ್ರತಿವಾದಿಯು ಒದಗಿದ್ದಾನೆ. ಮಧ್ವಾಚಾರ್ಯರೇ ನಿಮಗೆ ಪ್ರತಿವಾದಿಯಾದ ಮದ್ದಾನೆಯು, ಅವರನ್ನು ಖಂಡಿಸಿ ನೀವು ಚಂದ್ರನ ಪ್ರಕಾಶದಂತೆ ಶುಭ್ರವಾದ ಕೀರ್ತಿಯನ್ನು ಹೊಂದಿರಿ. ಅದ್ವೈತಮತವು ನಿಮ್ಮದು, ಅದ್ವೈತ ಜನಸಮುದಾಯವು ನಮ್ಮದು. ಮದ್ದಾನೆಯು ಪ್ರತಿಭಟಿಸುವ ಎದುರಾಳಿಯಾದ ಆನೆಯನ್ನು ಸೋಲಿಸಿ ತನ್ನ ಹಿಂಡಿನ ಆನೆಗಳ ಭಯವನ್ನು ಹೋಗಲಾಡಿಸುವಂತೆ ನೀವೂ ಕೂಡ ಮಧ್ವಾಚಾರ್ಯರನ್ನು ನಿರಾಕರಿಸಿ ಸ್ವಕೀಯರ ಭಯವನ್ನು ಪರಿಹರಿಸಿ ಎಂದು ಮಾಯಾವಾದಿಗಳು ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರನ್ನು ಪ್ರೋತ್ಸಾಹಿಸಿದರು.

**ವಿಗ್ರಹ—**

**ಶಶಾಂಕಗೌರಂ—** ಶಶಾಂಕವತ್ ಗೌರಂ ಶಶಾಂಕಗೌರಂ ತತ್ ।

**ನಿಜಯೂಥಸ್ಯ—** ನಿಜಂ ಚ ತತ್ ಯೂಥಂ ಚ ನಿಜಯೂಥಂ ತಸ್ಯ ।

**ಪ್ರತಿವಾದಿಪ್ರತಿವಾರಣಂ—** ಪ್ರತಿವಾದೀ ಏವ ಪ್ರತಿವಾರಣಃ ಪ್ರತಿವಾದಿಪ್ರತಿವಾರಣಃ ತಂ ।

**ಕೋಶ—** ಯೂಥ= ಹಿಂಡು, 'ಸಜಾತೀಯೈ ಕುಲಂ ಯೂಥಂ ದೈವಂ ದಿಷ್ಟಂ ಭಾಗದೇಯಂ ಭಾಗ್ಯಂ ಸ್ತ್ರೀ ನಿಯತಿರ್ವಿಧಿಃ' 'ಅವದಾತಃ ಸಿತೋ ಗೌರೋ ವಲಕ್ಷೋ ಧವಲೋಽರ್ಜುನಃ' 'ಯಶಃ ಕೀರ್ತಿಃ ಸಮಜ್ಞಾ ಚ' ಅಮರ ।

**ಕ್ರಿಯಾಪದ—** **ಉಪಯಾಹಿ** - ಉಪ+ಯಾಹಿ, ಯಾತು-ಯಾತಾತ್ ಯಾತಾಂ ಯಾಂತು, ಯಾಹಿ-ಯಾತಾತ್ ಯಾತಂ ಯಾತ, ಯಾನಿ ಯಾವ ಯಾಮ । ಉಪ ಉಪಸರ್ಗ ಯಾ ಪ್ರಾಪಣೇ ಪರಸ್ಮೈ ಸಕ ಲೋಟ್ ಮಧ್ಯಮಪುರುಷೇ ಏಕವಚನ । ನಿರಾಕುರು - ನಿರ್+ಆ+ಕುರು-ಕರೋತು ಕುರುತಾತ್ ಕುರುತಾಂ ಕುರ್ವಂತು, ಕುರು-ಕುರುತಾತ್ ಕುರುತಂ ಕುರುತ, ಕರವಾಣಿ ಕರವಾವ ಕರವಾಮ. ಡು ಕೃಞ ಕರಣೇ ಪರಸ್ಮೈ ಸಕ ಲೋಟ್ ಮಧ್ಯಮಪುರುಷೇ ಏಕವಚನ । ನಿರ್ ಆ ಎಂದು ಎರಡು ಉಪಸರ್ಗಗಳು ।

**ಪ್ರಯೋಗ—** ಅಧುನಾ ತ್ವಯಾ ವಿಧಿನಾ ಉಪಪಾದಿತಂ ತಂ ಪ್ರತಿವಾದಿಪ್ರತಿವಾರಣಂ ನಿವಾರ್ಯ ಶಶಾಂಕಗೌರಂ ಯಶಃ ಉಪಯಾಯತಾಂ ನಿಜಯೂಥಸ್ಯ ಭಯಂ ನಿರಾಕ್ರಿಯತಾಂ ।

★ ★ ★

**ಅವತಾರಿಕಾ—** ಆಗ ತ್ರಿವಿಕ್ರಮಪಂಡಿತರು ಏನು ಮಾಡಿದರು ಎಂದು ಹೇಳುತ್ತಾರೆ.

**ಇತಿ ಮಾಯಿಜನೇನ ತತ್ರ ತತ್ರ**
**ಸ್ವಜನತ್ವೇನ ಸ ತಾವದರ್ಥ್ಯಮಾನಃ ।**
**ಅನುಕೂಲವಚಾ ಮಹಿಷ್ಠಮಾನಃ**
**ಮನಸಾ ಸಂಶಯಮಾಪ ಸಂಶಯಚ್ಛಿತ್ ॥ 65 ॥**

**ಪದಚ್ಛೇದ—** ಇತಿ, ಮಾಯಿಜನೇನ, ತತ್ರ, ತತ್ರ, ಸ್ವಜನತ್ವೇನ, ಸಃ, ತಾವತ್, ಅರ್ಥ್ಯಮಾನಃ, ಅನುಕೂಲವಚಾಃ, ಮಹಿಷ್ಠಮಾನಃ, ಮನಸಾ, ಸಂಶಯಂ, ಆಪ, ಸಂಶಯಚ್ಛಿತ್ ।

**ಅನ್ವಯ—** ಮಾಯಿಜನೇನ, ತತ್ರ, ತತ್ರ, ಸ್ವಜನತ್ವೇನ, ಇತಿ, ಅರ್ಥ್ಯಮಾನಃ, ಅನುಕೂಲವಚಾಃ, ಮಹಿಷ್ಠಮಾನಃ, ಸಂಶಯಚ್ಛಿತ್, ಸಃ, ತಾವತ್, ಮನಸಾ, ಸಂಶಯಂ, ಆಪ ।

**ಅನ್ವಯಾರ್ಥ—**

**ಮಯಿಜನೇನ** = ಮಾಯಾವಾದಿಗಳಿಂದ,

**ತತ್ರ ತತ್ರ** = ಅಲ್ಲಲ್ಲಿ

**ಸ್ವಜನತ್ವೇನ** = ತಮ್ಮವರಾದುದರಿಂದ,

**ಇತಿ** = ಈ ರೀತಿ,

**ಅರ್ಥ್ಯಮಾನಃ** = ಪ್ರಾರ್ಥಿಸಲ್ಪಡುತ್ತಿರುವ,

**ಅನುಕೂಲವಚಾಃ** = (ತನ್ನವರಿಗೆ) ಸಂತೋಷಕರವಾದ ಮಾತುಳ್ಳ,

**ಮಹಿಷ್ಠಮಾನಃ** = ಬಹಳ ಹೆಚ್ಚಾದ ಅಭಿಮಾನ ಉಳ್ಳ, ಬಹಳ ಸಮರ್ಥವಾದ ಪ್ರಮಾಣಗಳುಳ್ಳ,

**ಸಂಶಯಚ್ಛಿತ್** = (ಇತರ)ಸಂಶಯವನ್ನು ಪರಿಹರಿಸತಕ್ಕ,

**ಸಃ ತಾವತ್** = ಆ ತ್ರಿವಿಕ್ರಮಪಂಡಿತಾಚಾರ್ಯರಾದರೂ,

**ಮನಸಾ** = ಮನಸ್ಸಿನಿಂದ,

**ಸಂಶಯಂ ಆಪ** = ಸಂಶಯವನ್ನು ಹೊಂದಿದರು.

**ತಾತ್ಪರ್ಯ—** ಈ ರೀತಿ ಮಾಯಾವಾದಿ ಜನರು ಅಲ್ಲಲ್ಲಿ ತಮ್ಮ ಮತದವನು ಎಂಬ ಅಭಿಮಾನದಿಂದ ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯರನ್ನು ಕುರಿತು ನೀವು ಮಧ್ವಾಚಾರ್ಯರನ್ನು ಸೋಲಿಸಿ ನಮ್ಮ ಮತದ ಗೌರವವನ್ನು ಉಳಿಸಿರಿ ಎಂದು ಬೇಡಿಕೊಳ್ಳುತ್ತಿದ್ದರು. ತ್ರಿವಿಕ್ರಮರು ಸ್ವತಃ ಪರಂಪರಾಗತವಾದ ತಮ್ಮ ಸಿದ್ಧಾಂತದಲ್ಲಿ ಬಹಳ ಅಭಿಮಾನವುಳ್ಳವರು. ಅವರು, ತಮ್ಮವರು ಕೇಳಿಕೊಂಡಾಗ ಅವರ ಮನಸ್ಸಿಗೆ (ನಾನು ಒಂದೇ ಉತ್ತರದಿಂದ ಮಧ್ವಾಚಾರ್ಯರನ್ನು ಸೋಲಿಸುತ್ತೇನೆ ಎಂದರು) ಸಂತೋಷವಾಗುವ ಮಾತುಗಳನ್ನೇ ಆಡಿದರು. ಅದ್ವೈತ ಸಾಧಕವಾದ ಬಲವಾದ ಪ್ರಮಾಣಗಳೂ ಅವರಲ್ಲಿದ್ದವು. ಎಲ್ಲರಿಗೂ ಬಂದಿರುವ ಸಂಶಯಗಳನ್ನು ಅವರು ಪರಿಹರಿಸುತ್ತಿದ್ದರು. ಆದರೆ ತಮ್ಮವರು ತನ್ನನ್ನು ಶ್ರೀಮಧ್ವಾಚಾರ್ಯರನ್ನು ವಾದಿಸಿ ಸೋಲಿಸಿರಿ ಎಂದು ಕೇಳಿಕೊಂಡಾಗ ಒಪ್ಪಿಕೊಂಡರೂ ಮನಸ್ಸಿನಲ್ಲಿ ತನಗೆ ಶ್ರೀಮಧ್ವಾಚಾರ್ಯರನ್ನು ಸೋಲಿಸಲು ಸಾಧ್ಯವೋ ಎಂದು ಸಂಶಯಪಟ್ಟರು.

**ವಿಗ್ರಹ—**

**ಮಾಯಿಜನೇನ—** ಮಾಯಾ ಅಸ್ಯ ಅಸ್ತೀತಿ ಮಾಯೀ, ಮಾಯೀ ಚಾಸೌ ಜನಶ್ಚ ಮಾಯೀಜನಃ, ತೇನ ಮಾಯಿಜನೇನ ।

**ಸ್ವಜನತ್ವೇನ—** ಸ್ವಸ್ಯ ಜನಃ ಸ್ವಜನಃ ತಸ್ಯ ಭಾವಃ ಸ್ವಜನತ್ವಂ ತೇನ ।

**ಅನುಕೂಲವಚಾಃ—** ಅನುಕೂಲಂ ವಚಃ ಯಸ್ಯಸಃ ಅನುಕೂಲವಚಾಃ ।

**ಮಹಿಷ್ಠಮಾನಃ—** ಮಹಿಷ್ಠಃ ಮಾನಃ ಯಸ್ಯಸಃ (ಮಹಿಷ್ಠಾನಿ ಮಾನಾನಿ ಯಸ್ಯಸಃ) ಮಹಿಷ್ಠಮಾನಃ ।

**ಸಂಶಯಚ್ಛಿತ್—** ಸಂಶಯಂ ಛಿನತ್ತೀತಿ ಸಂಶಯಚ್ಛಿತ್ ।

**ಕ್ರಿಯಾಪದ—** ಆಪ ಆಪತುಃ ಆಪುಃ ಇತ್ಯಾದಿ ಆಪ್ ಲೃ ವ್ಯಾಪ್ತೌ (ಆಪ್) ಧಾತು ಲಿಟ್ ।

**ಪ್ರಯೋಗ—** ಮಾಯಿಜನೇನ ತತ್ರ ತತ್ರ ಸ್ವಜನತ್ವೇನ ಇತಿ ಅರ್ಥ್ಯಮಾನೇನ ಅನುಕೂಲವಚಸಾ ಮಹಿಷ್ಠಮಾನೇನ ಸಂಶಯಚ್ಛಿದಾ ತೇನ ತಾವತ್ ಮನಸಾ ಸಂಶಯಃ ಆಪೇ ।

★ ★ ★

**ಅವತಾರಿಕಾ—** ಅನಂತರ ಶ್ರೀತ್ರಿವಿಕ್ರಮರು ಅಲ್ಲಲ್ಲಿ ಸಿಕ್ಕಿದ ಶ್ರೀಮಧ್ವಾಚಾರ್ಯರ ಶಿಷ್ಯರನ್ನು ಜಯಿಸಲಾರಂಭಿಸಿದರು ಎಂದು ಹೇಳುತ್ತಾರೆ.

**ಶಿತಮಧ್ವವಚಃಸೃಣಿಪ್ರಯೋಕ್ತೃನ್**
**ಪುರುಷಾನೇಷ ವಿಷಾದಯನ್ ಕವೀಭಃ ।**
**ವಿವಿಧೋತ್ತರಧೂಲಿಪಾತನೇನ**
**ಪ್ರತಿಫೇನಾಧಿಕಮಂಧಯಾಂಚಕಾರ ॥ 66 ॥**

**ಪದಚ್ಛೇದ—** ಶಿತಮಧ್ವವಚಃಸೃಣಿಪ್ರಯೋಕ್ತೃನ್, ಪುರುಷಾನ್, ಏಷಃ, ವಿಷಾದಯನ್, ಕವೀಭಃ, ವಿವಿಧೋತ್ತರ ಧೂಲಿಪಾತನೇನ, ಪ್ರತಿಫೇನ, ಅಧಿಕಂ, ಅಂಧಯಾಂಚಕಾರ ।

**ಅನ್ವಯ—** ಶಿತಮಧ್ವವಚಃಸ್ಸೃಣಿಪ್ರಯೋಕ್ತೃನ್, ಪುರುಷಾನ್, ವಿಷಾದಯನ್, ಏಷಃ, ಕವೀಭಃ, ಪ್ರತಿಫೇನ, ವಿವಿಧೋತ್ತರಧೂಲಿಪಾತನೇನ, ಅಧಿಕಂ, ಅಂಧಯಾಂಚಕಾರ ।

ಅನ್ವಯಾರ್ಥ—

**ಶಿತಮಧ್ವವಚಸೃಣಿಪ್ರಯೋಕ್ತೃನ್** = ಹರಿತವಾದ ಶ್ರೀಮಧ್ವಾಚಾರ್ಯರ ಮಾತೆಂಬ ಅಂಕುಶವನ್ನು ಪ್ರಯೋಗಿಸುವ,

**ಪುರುಷಾನ್** = ಮನುಷ್ಯರನ್ನು,

**ವಿಷಾದಯನ್** = ವ್ಯಥೆಗೊಳಿಸುತ್ತಿರುವ,

**ಏಷಃ** = ಈ,

**ಕವೀಭಃ** = ತ್ರಿವಿಕ್ರಮಪಂಡಿತಾಚಾರ್ಯರೆಂಬ ಆನೆಯು,

**ಪ್ರತಿಘೇನ** = ಕೋಪದಿಂದ, ಪ್ರತಿಬಂಧ್ಯುತ್ತರದಿಂದ,

**ವಿವಿಧ** = ನಾನಾ ಪ್ರಕಾರವಾದ,

**ಉತ್ತರ** = ಪ್ರತ್ಯುತ್ತರವೆಂಬ,

**ಧೂಲಿಪಾತನೇನ** = ಧೂಳನ್ನು ಎರಚುವುದರಿಂದ,

**ಅಧಿಕಂ** = ಹೆಚ್ಚಾಗಿ,

**ಅಂಧಯಾಂಚಕಾರ** = ಕುರುಡಾಗಿ ಮಾಡಿತು.

**ತಾತ್ಪರ್ಯ**— ಮದಭರಿತವಾದ ಆನೆಯ ಕಿವಿಗೆ ಅಂಕುಶ ಹಾಕಿ ತಿವಿದು ಪಳಗಿಸಲು ಬಯಸುವ ಧೈರ್ಯಶಾಲಿಗಳಾದ ಗಂಡಸರನ್ನು ಮಾವಟಿಗರನ್ನು ಬೆದರಿಸಿ ಹಿಂಜರಿಯುವಂತೆ ಮಾಡುತ್ತದೆ. ಅವರನ್ನು ವಿಷಾದಗೊಳಿಸುತ್ತದೆ. ಸಿಟ್ಟಿನಿಂದ ಅರಚುತ್ತಾ ಘೀಳಿಡುತ್ತಾ ಅವರ ಕಣ್ಣುಗಳಿಗೆ ಧೂಳೆರಚಿ ಅವರನ್ನು ಕುರುಡನ್ನಾಗಿ ಮಾಡಿ ಏನೂ ಮಾಡಲೂ ತೋಚದಂತೆ ಮಾಡುತ್ತದೆ. ಆನೆಯಂತಿರುವವರು ಕವಿಶ್ರೇಷ್ಠರಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರು ಅಂಕುಶದಂತಿರುವ ಶ್ರೀಮಧ್ವಾಚಾರ್ಯರ ಮಾತನ್ನು ಪ್ರಮಾಣವಾಗಿರಿಸಿಕೊಂಡು ವಾದ ಮಾಡುತ್ತ ಆ ಮಾತುಗಳನ್ನು ಆನೆಯ ಕಿವಿಗೆ ಅಂಕುಶ ದಿಂದ ಚುಚ್ಚುವಂತೆ ಅವರ ಎದುರು ಮಧ್ವರ ಶಿಷ್ಯರು ಹೇಳಿದಾಗ ತ್ರಿವಿಕ್ರಮರು ಉತ್ತರ ಕೊಡಲು ಅಸಮರ್ಥರಾದರೂ ಸಿಟ್ಟುಗೊಂಡು ಏನಾದರೊಂದು ಎದುರುತ್ತರವನ್ನು ಕೊಟ್ಟು ಆನೆಯ ಕಣ್ಣಿಗೆ ಧೂಳೆರಚುವಂತೆ ಪ್ರತಿಬಂಧೀ ಉತ್ತರಗಳನ್ನು ಕೊಟ್ಟು ಶ್ರೀಮಧ್ವಾಚಾರ್ಯರ ಶಿಷ್ಯರನ್ನು ಕರ್ತವ್ಯ ಮೂಢರನ್ನಾಗಿಯೂ ಮುಂದೆ ಮಾತನಾಡದಂತೆಯೂ ಮಾಡುತ್ತಿದ್ದರು. ಪ್ರತಿಘಃ = ಬಂದೀ. (ಪ್ರತ್ಯುತ್ತರ ಹೊಳೆಯದಿದ್ದಾಗ ಕೋಪದಿಂದ ಕೊಡುವ ಯದ್ವಾತದ್ವಾರೂಪದ ಅಸಂಬದ್ಧ ಉತ್ತರ)

ವಿಗ್ರಹ—

**ಶಿತಮಧ್ವವಚಸೃಣಿಪ್ರಯೋಕ್ತೃನ್**— ಮಧ್ವಸ್ಯ ವಚಾಂಸಿ ಮಧ್ವವಚಾಂಸಿ, ಶಿತಾನಿ ಚ ತಾನಿ ಮಧ್ವವಚಾಂಸಿ ಚ ಶಿತಮಧ್ವವಚಾಂಸಿ, ಶಿತಮಧ್ವವಚಾಂಸಿ ಏವ ಸೃಣಯಃ ಶಿತಮಧ್ವವಚಃ ಸೃಣಯಃ, ಪ್ರಯುಂಜತೇ ಇತಿ ಪ್ರಯೋಕ್ತಾರಃ, ಶಿತಮಧ್ವವಚಃಸೃಣೀನಾಂ ಪ್ರಯೋಕ್ತಾರಃ ಶಿತಮಧ್ವವಚಃಸೃಣಿಪ್ರಯೋಕ್ತಾರಃ ತಾನ್ ।

**ಕವೀಭಃ**— ಕವಿರೇವ ಇಭಃ ಕವೀಭಃ ।

**ವಿವಿಧೋತ್ತರಧೂಲಿಪಾತನೇನ**— ವಿವಿಧಾನಿ ಚ ತಾನಿ ಉತ್ತರಾಣಿ ಚ ವಿವಿಧೋತ್ತರಾಣಿ, ವಿವಿಧೋತ್ತರಾಣ್ಯೇವ ಧೂಲಯಃ ವಿವಿಧೋತ್ತರಧೂಲಯಃ, ವಿವಿಧೋತ್ತರಧೂಲೀನಾಂ ಪಾತನಂ ವಿವಿಧೋತ್ತರ ಧೂಲಿಪಾತನಂ ತೇನ ।

**ಕೋಶ—** ಇಭಃ = ಆನೆ, 'ಇಭಃ ಸ್ತಂಭೇರಮಃ ಪದ್ಮೀ', ಸೃಣಿ = ಅಂಕುಶ, 'ಅಂಕುಶೋಽಸ್ತ್ರೀ ಸೃಣಿಃ ಸ್ತ್ರಿಯಾಂ', ಪ್ರತಿಘಃ = ಸಿಟ್ಟು, 'ಕೋಪ ಕ್ರೋಧಾಮರ್ಷರೋಷಪ್ರತಿಘ ರುಟ್ ಕ್ರುಧೌ ಸ್ತ್ರಿಯಾಂ' 'ಪ್ರತಿಘಃ ಪ್ರತಿಘೌತೇಽಸ್ತ್ರೇ', ಧೂಲಿ = ಧೂಳು, 'ರೇಣುರ್ದ್ವಯೋಃ ಸ್ತ್ರಿಯಾಂ ಧೂಲಿಃ ಪಾಂಸುರ್ನಾ ನ ದ್ವಯೋ ರಜಃ' ಅಮರ ।

**ವಿಶೇಷಾಂಶ—** ಛಲಾರಿಯ, ಶ್ರೀಮಧ್ವಾಚಾರ್ಯಕೀರ್ತಿಶ್ರವಣಾನಂತರಂ ತಸ್ಮಿನ್ ದೇಶೇ ತತ್ರ ತತ್ರ ದೃಷ್ಟೈಃ ಶ್ರೀಮಧ್ವಾಚಾರ್ಯ ಸಮೀಪೇ ಮಧ್ವಶಾಸ್ತ್ರಂ ಸಮ್ಯಗಧೀತವದ್ಭಿಃ ಮಧ್ವಾಚಾರ್ಯ ಶಿಷ್ಯಭೂತೈಃ ಪುರುಷೈಃ ಪ್ರಸಂಗೇ ಸತಿ ಯಥಾ ಮತ್ತಗಜಃ ಕುಂಭಸ್ಥಲೇ ಅಂಕುಶಪ್ರಯೋಕ್ತಾರಂ ಅಂಬಷ್ಠಂ ಕ್ಲೇಶಯನ್ ಕೋಪೇನ ತದುಪರಿ ನಾನಾವಿಧಧೂಲಿಂ ಪ್ರಕ್ಷಿಪ್ಯ ಅಂಧೀಕರೋತಿ ತದ್ವತ್ ತ್ರಿವಿಕ್ರಮಾಚಾರ್ಯಃ ಮಧ್ವಶಾಸ್ತ್ರೋಕ್ತದೃಢಯುಕ್ತೀಃ ಪ್ರಯುಂಜಾನಾನ್ ಮಧ್ವಶಿಷ್ಯ ಭೂತಾನಾನ್ ವಿಷಾದಯನ್ ಸಮಯೇ ಪ್ರತ್ಯುತ್ತರಾಪರಿಸ್ಫೂರ್ತೌ ಸತ್ಯಾಂ, ಕೋಪೇನ ಯಾದೃಶತಾದೃಶ ಪ್ರತ್ಯುತ್ತರೈಃ ನಿರುತ್ತರಾನ್ ಅಕರೋತ್ ಇತಿ ಭಾವಃ ಶ್ರೀಮಧ್ವಾಚಾರ್ಯರ ಕೀರ್ತಿಯನ್ನು ಕೇಳಿದ ನಂತರ ಆ ದೇಶದಲ್ಲಿ ಅಲ್ಲಲ್ಲಿ ಭೇಟಿಯಾದ ಶ್ರೀಮಧ್ವಾಚಾರ್ಯರ ಬಳಿಯಲ್ಲಿ ಶ್ರೀಮದ್ವಶಾಸ್ತ್ರವನ್ನು ಚೆನ್ನಾಗಿ ಓದಿರುವ ಶ್ರೀಮಧ್ವಾಚಾರ್ಯರ ಶಿಷ್ಯರಾದ ಜನರೊಡನೆ ವಾದ ಮಾಡುವ ಸಂದರ್ಭದಲ್ಲಿ ಮದ್ದಾನೆಯು ಕುಂಭಸ್ಥಳದಲ್ಲಿ ಅಂಕುಶವನ್ನು ಪ್ರಯೋಗಿಸುವ ಮಾವಟಿಗನನ್ನು ಕ್ಲೇಶಗೊಳಿಸುತ್ತಾ ಕೋಪದಿಂದ ಅವನ ಮೇಲೆ ನಾನಾರೀತಿಯಲ್ಲಿ ಧೂಳಿಯನ್ನು ಎರಚಿ ಕುರುಡಾಗಿಸುವಂತೆ ತ್ರಿವಿಕ್ರಮಾಚಾರ್ಯರು ಮಧ್ವಶಾಸ್ತ್ರೋಕ್ತವಾದ ದೃಢವಾದ ಯುಕ್ತಿಗಳನ್ನು ಪ್ರಯೋಗಿಸುವ ಮಧ್ವಶಿಷ್ಯರಾದ ಜನರನ್ನು ವಿಷಾದಗೊಳಿಸುತ್ತಾ ವಾದ ಸಂದರ್ಭದಲ್ಲಿ ಪ್ರತ್ಯುತ್ತರ ಹೊಳೆಯದೆ ಇದ್ದಾಗ ಕೋಪದಿಂದ ಅಡ್ಡಾದಿಡ್ಡಿಯಾದ ಪ್ರತ್ಯುತ್ತರಗಳನ್ನು ಕೊಟ್ಟು ಅವರನ್ನು ನಿರುತ್ತರನ್ನಾಗಿ ಮಾಡಿದರು ಎಂದು ಅಭಿಪ್ರಾಯ.

**ಕ್ರಿಯಾಪದ—** **ಅಂಧಯಾಂಚಕಾರ** - ಅಂಧಂ ಕರೋತಿ ಅಂಧಯತಿ 'ತತ್ಕರೋತಿ ತದಾಚಷ್ಟೇ' ಎಂದು ಣಿಚ್ ಈ ಧಾತುವಿನ ಲಿಟ್ 'ಅಂಧಯಾಂಚಕಾರ ಅಂಧಯಾಂಚಕ್ರತುಃ ಅಂಧಯಾಂಚಕ್ರುಃ' ಇತ್ಯಾದಿ ರೂಪಗಳು ।

**ಪ್ರಯೋಗ—** ಶಿತಮಧ್ವವಚಃಸೃಣಿ ಪ್ರಯೋಕ್ತೃನ್ ಪುರುಷಾನ್ ವಿಷಾದಯತಾ ಏತೇನ ಕವೀಭೇನ ಪ್ರತಿಘೇನ ವಿವಿಧೋತ್ತರಧೂಲಿಪಾತನೇನ ತೇ ಅಂಧಯಾಂಚಕ್ರಿರೇ ।

★ ★ ★

**ಅವತಾರಿಕಾ—** ಹೀಗೆ ಶ್ರೀಮಧ್ವಾಚಾರ್ಯರ ಶಿಷ್ಯರನ್ನು ನಿರುತ್ತರರನ್ನಾಗಿ ಮಾಡಿ ಗೆದ್ದರೂ ತ್ರಿವಿಕ್ರಮ-ಪಂಡಿತರು ರಹಸ್ಯದಲ್ಲಿ ಶ್ರೀಮಧ್ವಾಚಾರ್ಯರ ಗ್ರಂಥಗಳ ಸಾರವನ್ನು, ಸ್ವಾರಸ್ಯವನ್ನು ಕಂಡು ಆಶ್ಚರ್ಯಪಟ್ಟರು ಎಂದು ಹೇಳುತ್ತಾರೆ.

**ಕ್ಷಣದಾಸು ವಿಚಕ್ಷಣಃ ಸಃ ವೀಕ್ಷ್ಯ**
**ಪ್ರಚುರಪ್ರಜ್ಞಮನೋಜ್ಞಶಾಸ್ತ್ರಸಾರಮ್ ।**
**ಅಪರಾವಿದಿತಃ ಪ್ರಸಾದಗರ್ಭಂ**
**ವಿದಧೇ ವಿಸ್ಮಯಮಾಂತರಂ ಮಹಾಂತಮ್ ॥ 67 ॥**

**ಪದಚ್ಛೇದ—** ಕ್ಷಣದಾಸು, ವಿಚಕ್ಷಣಃ, ಸಃ, ವೀಕ್ಷ್ಯ, ಪ್ರಚುರಪ್ರಜ್ಞಮನೋಜ್ಞಶಾಸ್ತ್ರಸಾರಂ, ಅಪರಾವಿದಿತಃ, ಪ್ರಸಾದಗರ್ಭಂ, ವಿದಧೇ, ವಿಸ್ಮಯಂ, ಆಂತರಂ, ಮಹಾಂತಂ ।

**ಅನ್ವಯ—** ವಿಚಕ್ಷಣಃ, ಸಃ, ಕ್ಷಣದಾಸು, ಅಪರಾವಿದಿತಃ, ಪ್ರಸಾದಗರ್ಭಂ, ಪ್ರಚುರಪ್ರಜ್ಞಮನೋಜ್ಞಶಾಸ್ತ್ರಸಾರಂ, ವೀಕ್ಷ್ಯ, ಆಂತರಂ, ಮಹಾಂತಂ, ಪ್ರಸಾದಗರ್ಭಂ, ವಿಸ್ಮಯಂ, ವಿದಧೇ ।

**ಅನ್ವಯಾರ್ಥ—**

**ವಿಚಕ್ಷಣಃ** = ಕುಶಲರಾದ,

**ಸಃ** = ಆ ತ್ರಿವಿಕ್ರಮ ಪಂಡಿತಾಚಾರ್ಯರು,

**ಕ್ಷಣದಾಸು** = ರಾತ್ರಿಗಳಲ್ಲಿ

**ಅಪರಾವಿದಿತಃ** = ಬೇರೆಯವರಿಗೆ ತಿಳಿಯದವರಾಗಿ,

**ಪ್ರಸಾದಗರ್ಭಂ** = ತಿಳಿಯಾದ ಅಭಿಪ್ರಾಯದಿಂದ ತುಂಬಿದ,

**ಪ್ರಚುರಪ್ರಜ್ಞಮನೋಜ್ಞಶಾಸ್ತ್ರಸಾರಂ** = ಶ್ರೀಪೂರ್ಣಪ್ರಜ್ಞರ ಮನೋಹರವಾದ ಶಾಸ್ತ್ರದ ಮುಖ್ಯ ತಾತ್ಪರ್ಯಾರ್ಥವನ್ನು (ಶಾಸ್ತ್ರಗ್ರಂಥವನ್ನು),

**ವೀಕ್ಷ್ಯ** = ನೋಡಿ,

**ಆಂತರಂ** = ಮನಸ್ಸಿನೊಳಗೆ ಇರುವ,

**ಮಹಾಂತಂ** = ಬಹಳವಾದ,

**ವಿಸ್ಮಯಂ** = ಆಶ್ಚರ್ಯವನ್ನು,

**ವಿದಧೇ** = ಮಾಡಿದರು (ಅನುಭವಿಸಿದರು).

**ತಾತ್ಪರ್ಯ—** ಹೀಗೆ ಮಧ್ವಾಚಾರ್ಯರ ಶಿಷ್ಯರನ್ನು ಸೋಲಿಸಿದರೂ ವಿವೇಕಿಗಳೂ, ಚತುರರೂ ಆದ ತ್ರಿವಿಕ್ರಮ ಪಂಡಿತಾಚಾರ್ಯರು ರಾತ್ರಿ ಸಮಯದಲ್ಲಿ ತಮ್ಮ ತಮ್ಮನಾದ ಶಂಕರಾಚಾರ್ಯನ ಮನೆಯಲ್ಲಿ ಶ್ರೀಮಧ್ವಾಚಾರ್ಯರು ಇಟ್ಟಿದ್ದ ಅವರ ಶಾಸ್ತ್ರದ ಗ್ರಂಥಗಳನ್ನು ಯಾರಿಗೂ ತಿಳಿಯದ ಹಾಗೆ ನೋಡುತ್ತಿದ್ದರು. ಶ್ರೀಮಧ್ವಾಚಾರ್ಯರ ಗ್ರಂಥಗಳ ಸಾರವನ್ನು ತಿಳಿದಾಗ ತ್ರಿವಿಕ್ರಮರಿಗೆ ಬಹಳ ಆಶ್ಚರ್ಯವಾಯಿತು. ಶ್ರೀಮಧ್ವಶಾಸ್ತ್ರದಲ್ಲಿ ಅವರಿಗೆ ಯಾವ ಅಸಾಂಗತ್ಯವು ಕಂಡು ಬರಲಿಲ್ಲ. ಆ ಶಾಸ್ತ್ರದ ಸಾರವು ತಿಳಿಯಾದ ಅಭಿಪ್ರಾಯದಿಂದ ಕೂಡಿತ್ತು. ಅದು ಮನಸ್ಸಿಗೆ ಮೆಚ್ಚುಗೆಯಾಗುವಂತೆ ಮತ್ತು ಬಹಳ ಮನೋಹರವಾಗಿತ್ತು. ಅವರು ತಮಗೆ ಆದ ಆನಂದವನ್ನು ಅಂತರಂಗದಲ್ಲಿಯೇ ಬಚ್ಚಿಟ್ಟುಕೊಂಡರು. ಯಾರಿಗೂ ತೋರಿಗೊಡಲಿಲ್ಲ. (ತ್ರಿವಿಕ್ರಮರ ತಮ್ಮಂದಿರಾದ ಶ್ರೀಶಂಕರಾಚಾರ್ಯರು ಮೊದಲೇ ಶ್ರೀಮಧ್ವಾಚಾರ್ಯರ ಶಿಷ್ಯರಾಗಿದ್ದು, ಅವರ ಗ್ರಂಥಗಳನ್ನು ಕಾಪಾಡುತ್ತಿದ್ದರು. ತ್ರಿವಿಕ್ರಮರಿಗೆ ಇದು ಬಹಳ ಅನುಕೂಲವಾಯಿತು).

**ವಿಗ್ರಹ—**

**ಪ್ರಚುರಪ್ರಜ್ಞಮನೋಜ್ಞಶಾಸ್ತ್ರಸಾರಂ—** ಪ್ರಚುರಾ ಪ್ರಜ್ಞಾ ಯಸ್ಯ ಸಃ ಪ್ರಚುರಪ್ರಜ್ಞಃ, ಶಾಸ್ತ್ರೇಷು ಸಾರಂ ಶಾಸ್ತ್ರಸಾರಂ, ಮನೋಜ್ಞಂ ಚ ತತ್ ಶಾಸ್ತ್ರಸಾರಂ ಚ ಮನೋಜ್ಞಶಾಸ್ತ್ರಸಾರಂ, ಪ್ರಚುರಪ್ರಜ್ಞಸ್ಯಮನೋಜ್ಞ ಶಾಸ್ತ್ರಸಾರಂ ಪ್ರಚುರಪ್ರಜ್ಞಮನೋಜ್ಞಶಾಸ್ತ್ರಸಾರಂ ತತ್ ।

**ಅಪರಾವಿದಿತಃ—** ಅಪರೈಃ ಅವಿದಿತಃ ಅಪರಾವಿದಿತಃ ।

**ಪ್ರಸಾದಗರ್ಭಂ—** ಪ್ರಸಾದಃ ಗರ್ಭೇ ಯಸ್ಯ ತತ್ ಪ್ರಸಾದಗರ್ಭಂ ತತ್ ।

**ಆಂತರಂ—** ಅಂತರೇ ಭವಂ ಆಂತರಂ ತತ್ ।

**ಕೋಶ—** ಕ್ಷಣದಾ = ರಾತ್ರಿ, 'ತ್ರಿಯಾಮಾ ಕ್ಷಣದಾ ಕ್ಷಪಾ', ಗರ್ಭ = ಹೊಟ್ಟೆ ಒಳಭಾಗದ, 'ಗರ್ಭೋಽರ್ಭಕೇ ನಾಟ್ಯಸಂಧೌ ಕುಕ್ಷೌ ಪವನಸಂಕಟೇ', ಶಾಸ್ತ್ರ = ಗ್ರಂಥ, 'ನಿದೇಶಗ್ರಂಥಯೋಃ ಶಾಸ್ತ್ರಂ' ಅಮರ ।

**ಕ್ರಿಯಾಪದ—** ವಿದಧೇ - ವಿ+ದಧೇ ದಧಾತೇ ದಧಿರೇ, ದಧಿಷೇ ದಧಾಥೇ ದಧಿಧ್ವೇ, ದಧೇ ದಧಿವಹೇ ದಧಿಮಹೇ । ಧಾ ಧಾತು ಆತ್ಮನೇ ಪದಿ ಲಿಟ್ ಪ್ರಥಮಪುರುಷೇ ಏಕವಚನಂ ।

**ಭಲಾರಿಯ ವಿಶೇಷಾಂಶ—** ಅಯಂ ಭಾವಃ- ತ್ರಿವಿಕ್ರಮಪಂಡಿತಾರ್ಯಸ್ಯ ಅನುಜಃ ಶಂಕರಾಚಾರ್ಯ ನಾಮಕಃ ಕಶ್ಚಿದಭೂತ್ । ಸ ಚ ಮಧ್ವಾಚಾರ್ಯಶಿಷ್ಯೋ ಭೂತ್ವಾ ತಚ್ಛಾಸ್ತ್ರಂ ಅಧೀತ್ಯ ಮಧ್ವಸ್ಯ ಪರಮಾಪ್ತೋ ಭೂತ್ವಾ ಮಧ್ವಾಚಾರ್ಯ ಶಾಸ್ತ್ರಪುಸ್ತಕಜಾತಂ ಮಧ್ವಾಚಾರ್ಯಾನುಜ್ಞಯೈವ ಸ್ವಾಧೀನಂ ಕೃತ್ವಾ ಸ್ವಮಂದಿರೇ ನಿಹಿತವಾನ್, ತತಃ ತ್ರಿವಿಕ್ರಮಾಚಾರ್ಯಃ ಸ್ವಾನುಜಗೃಹೇ ವಿದ್ಯಮಾನಂ ಮಧ್ವಾಚಾರ್ಯಪುಸ್ತಕಜಾತಂ ಜ್ಞಾತ್ವಾ ರಾತ್ರಿಷ್ವೇವ ಅನ್ಯೈರವಿಜ್ಞಾತಸ್ಸನ್ ಗಂಭೀರಾಭಿಪ್ರಾಯ ಗರ್ಭಿತಂ ಮಧ್ವಶಾಸ್ತ್ರಂ ದೃಷ್ಟ್ವಾ ವಾಚಯನ್ ಆಲೋಚ್ಯ ಮನೋಹರಂ ತದಭಿಪ್ರಾಯಂ ಜ್ಞಾತ್ವಾ ಸ್ವಮನಸ್ಯೇವ ಅತ್ಯಾಶ್ಚರ್ಯಂ ಅನುಭೂತವಾನ್ ಇತಿ ॥

ಇಲ್ಲಿಯ ಅಭಿಪ್ರಾಯ ಹೀಗಿದೆ - ತ್ರಿವಿಕ್ರಮಪಂಡಿತಾಚಾರ್ಯರಿಗೆ ಶಂಕರಾಚಾರ್ಯ ಎಂಬ ತಮ್ಮ ಇದ್ದರು. ಅವರು ಶ್ರೀಮಧ್ವಾಚಾರ್ಯರ ಶಿಷ್ಯರಾಗಿ ಅವರ ಶಾಸ್ತ್ರವನ್ನು ಅಧ್ಯಯನ ಮಾಡಿ ಶ್ರೀಮಧ್ವಾಚಾರ್ಯರ ಪರಮಾಪ್ತರಾಗಿ ಶ್ರೀಮಧ್ವಾಚಾರ್ಯರ ಶಾಸ್ತ್ರ ಪುಸ್ತಕ ಸಮೂಹವನ್ನು ಅವರ ಅಪ್ಪಣೆಯಿಂದಲೇ ತಮ್ಮ ಅಧೀನವನ್ನಾಗಿ ಮಾಡಿಕೊಂಡು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡಿದ್ದರು. ಅನಂತರ ತ್ರಿವಿಕ್ರಮಪಂಡಿತಾಚಾರ್ಯರು ತಮ್ಮ ತಮ್ಮನ ಮನೆಯಲ್ಲಿರುವ ಪುಸ್ತಕ ಸಮೂಹವನ್ನು ರಾತ್ರಿಯಲ್ಲಿ ಇತರರಿಗೆ ತಿಳಿಯದ ಹಾಗೆ ಓದಿ, ನೋಡಿ ಗಂಭೀರಾಭಿಪ್ರಾಯವುಳ್ಳ ಆ ಶಾಸ್ತ್ರದ ಸಾರವನ್ನು ಆಲೋಚಿಸಿ ತಿಳಿದು ತಮ್ಮ ಮನಸ್ಸಿನಲ್ಲಿಯೇ ತುಂಬಾ ಆಶ್ಚರ್ಯಪಟ್ಟರು.

**ಪ್ರಯೋಗ—** ವಿಚಕ್ಷಣೇನ ತೇನ ಕ್ಷಣದಾಸು ಅಪರಾವಿದಿತೇನ ಪ್ರಸಾದಗರ್ಭಂ ಪ್ರಚುರಪ್ರಜ್ಞಶಾಸ್ತ್ರಸಾರಂ ವೀಕ್ಷ್ಯ ಆಂತರಃ ಮಹಾನ್ ವಿಸ್ಮಯಃ ವಿದಧೇ ।

★ ★ ★

**ಅವತಾರಿಕಾ—** ಇಷ್ಟೆಲ್ಲಾ ವಿಚಾರ ಮಾಡಿದರೂ ತ್ರಿವಿಕ್ರಮಪಂಡಿತಾಚಾರ್ಯರು ಆ ಕೂಡಲೇ ಶ್ರೀಮಧ್ವಾಚಾರ್ಯರ ಶಿಷ್ಯರಾಗದಿರಲು ಕಾರಣವೇನು ಎಂದರೆ ಹೇಳುತ್ತಾರೆ.

**ವಿದಿತವಾನ್ ವ್ಯವಹೃತ್ಯ ಸುದರ್ಶನಂ**
**ಬಹುಲಬೋಧಮವೇಕ್ಷ್ಯ ಸ ನಿಶ್ಚಯಾತ್ ।**
**ಅಪಿ ನ ತಸ್ಯ ಮತಂ ಸಹಸಾಽಽದದೇ**
**ನನು ವಿಮೃಶ್ಯ ಕೃತೀ ಕುರುತೇಽಖಿಲಮ್ ॥ 68 ॥**

**ಪದಚ್ಛೇದ—** ವಿದಿತವಾನ್, ವ್ಯವಹೃತ್ಯ, ಸುದರ್ಶನಂ, ಬಹುಲಬೋಧಂ, ಅವೇಕ್ಷ್ಯ, ಸಃ, ನಿಶ್ಚಯಾತ್, ಅಪಿ, ನ, ತಸ್ಯ, ಮತಂ, ಸಹಸಾ, ಆದದೇ, ನನು, ವಿಮೃಶ್ಯ, ಕೃತೀ, ಕುರುತೇ, ಅಖಿಲಂ ।

**ಅನ್ವಯ—** ಸಃ, ಬಹುಲಬೋಧಂ, ಅವೇಕ್ಷ್ಯ, ವ್ಯವಹೃತ್ಯ, ಸುದರ್ಶನಂ, ನಿಶ್ಚಯಾತ್, ವಿದಿತವಾನ್, ಅಪಿ, ತಸ್ಯ, ಮತಂ, ಸಹಸಾ, ನ, ಆದದೇ, ಕೃತೀ, ಅಖಿಲಂ, ವಿಮೃಶ್ಯ, ಕುರುತೇ, ನನು ।

**ಅನ್ವಯಾರ್ಥ—**

**ಸಃ** = ಆ ತ್ರಿವಿಕ್ರಮಪಂಡಿತಾಚಾರ್ಯರು,
**ಬಹುಲಬೋಧಂ** = ಶ್ರೀಪೂರ್ಣಪ್ರಜ್ಞಾಚಾರ್ಯರನ್ನು,
**ಅವೇಕ್ಷ್ಯ** = ನೋಡಿ,
**ವ್ಯವಹೃತ್ಯ** = ವಿರುದ್ಧವಾದ ಅಭಿಪ್ರಾಯವುಳ್ಳ ಪ್ರಮೇಯಗಳ ವಿಷಯದಲ್ಲಿ ವಿಚಾರ ಮಾಡಿ,
**ಸುದರ್ಶನಂ(ಸತ್)** = ಒಳ್ಳೆಯ ಶಾಸ್ತ್ರವನ್ನಾಗಿ,
**ನಿಶ್ಚಯಾತ್** = ನಿರ್ಧಾರದಿಂದ,

**ವಿದಿತವಾನ್ ಅಪಿ** = ತಿಳಿದವರಾದರು,
**ತಸ್ಯ** = ಶ್ರೀಪೂರ್ಣಪ್ರಜ್ಞರ,
**ಮತಂ** = ಸಿದ್ಧಾಂತವನ್ನು,
**ಸಹಸಾ** = ಕೂಡಲೇ,
**ನಾದದೇ** = ಸ್ವೀಕರಿಸಲಿಲ್ಲ,
**ಕೃತೀ** = ಬುದ್ಧಿವಂತರು,
**ಅಖಿಲಂ** = ಎಲ್ಲಾ ಕಾರ್ಯವನ್ನು,
**ವಿಮೃಶ್ಯ** = ಚೆನ್ನಾಗಿ ವಿಚಾರ ಮಾಡಿಯೇ,
**ಕುರುತೇ ನನು** = ಮಾಡುತ್ತಾರಷ್ಟೇ.

**ತಾತ್ಪರ್ಯ—** ಇಲ್ಲಿ ಛಲಾರಿಯ ವ್ಯಾಖ್ಯಾನದಲ್ಲಿ ಬರೆದಿರುವ ಸಂಸ್ಕೃತ ಭಾಷಾಮಯವಾದ ತಾತ್ಪರ್ಯ.

**ಅಯಂಭಾವಃ—** ತ್ರಿವಿಕ್ರಮಾಚಾರ್ಯಃ ಪುಸ್ತಕದರ್ಶನಾನಂತರಂ ಕದಾಚಿತ್ ಯದೃಚ್ಛಯಾ ಶ್ರೀಮಧ್ವಾಚಾರ್ಯಂ ದೃಷ್ಟ್ವಾ ತದಾ ವಿಪ್ರತಿಪನ್ನಪ್ರಮೇಯವಿಷಯೇಷು ವ್ಯವಹಾರಂ ಕೃತ್ವಾ ಮನಸಿ ಏತದ್ದರ್ಶನಮೇವ ಸುದರ್ಶನಂ ಅತ್ರ ಸಂಶಯೋ ನಾಸ್ತೀ ಇತಿ ಸಮ್ಯಕ್ ಜ್ಞಾತವಾನ್ । ಏವಂ ತತ್ರ ತತ್ರ ಮಧ್ವಶಿಷ್ಯಭೂತೈಃ ಜನೈಃ ಸಹ ಪ್ರಸಂಗತಃ ರಾತ್ರಿಷು ಪುಸ್ತಕದರ್ಶನತೋಽಪಿ ಶ್ರೀಮಧ್ವಾಚಾರ್ಯಂ ದೃಷ್ಟ್ವಾ ತೇನ ಸಹ ಪ್ರಮೇಯವಿಶೇಷವ್ಯವಹಾರತೋಽಪಿ ಶ್ರೀಮಧ್ವಶಾಸ್ತ್ರಸ್ಯ ನಿರ್ದೋಷದರ್ಶನತ್ವಂ ಜ್ಞಾತ್ವಾಪಿ ಪುನರಪಿ ವಿಚಾರಣೀಯಂ ಇತಿ ಬುದ್ಧ್ಯಾ ಝಟಿತಿ ಶ್ರೀಮಧ್ವಮತಂ ನ ಜಗ್ರಾಹ ಇತಿ ॥

ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು ಶ್ರೀಮಧ್ವರ ಶಾಸ್ತ್ರಗಳನ್ನು ನೋಡಿದ ಮೇಲೆ ಒಂದಾನೊಂದು ಬಾರಿ ಆಕಸ್ಮಾತ್ತಾಗಿ ಶ್ರೀಮಧ್ವಾಚಾರ್ಯರನ್ನು ನೋಡಿದರು. ಆಗ ತಮಗೆ ಸಂದೇಹವಿರುವ ಪ್ರಮೇಯ ವಿಷಯಗಳಲ್ಲಿ ಅವರೊಡನೆ ವಿಚಾರ ವಿಮರ್ಶೆ ಮಾಡಿದರು. ಆಗ ಅವರಿಗೆ ಶ್ರೀಮಧ್ವಾಚಾರ್ಯರ ದರ್ಶನವೇ ಅತ್ಯುತ್ತಮವಾದ ದರ್ಶನವು, ಇದರಲ್ಲಿ ಸಂಶಯವಿಲ್ಲ ಎಂದು ದೃಢವಾದ ತಿಳುವಳಿಕೆಯುಂಟಾಯಿತು. ಹೀಗೆ ಅಲ್ಲಲ್ಲಿ ಶ್ರೀಮಧ್ವಾಚಾರ್ಯರ ಶಿಷ್ಯರಾದ ಪಂಡಿತರೊಡನೆ ವಾದ ಮಾಡಿ ಚರ್ಚಿಸಿ ಅನೇಕ ರಾತ್ರಿಗಳಲ್ಲಿ ರಹಸ್ಯವಾಗಿ ಆಚಾರ್ಯರ ಗ್ರಂಥಗಳನ್ನು ನೋಡಿ ಮತ್ತು ಶ್ರೀಮಧ್ವಾಚಾರ್ಯರನ್ನು ನೋಡಿ ಅವರೊಡನೆ ವಿಶೇಷವಾದ ಪ್ರಮೇಯಗಳ ಸಂದೇಹವನ್ನು ಚರ್ಚಿಸಿ ವಿಚಾರ ಮಾಡಿ ಶ್ರೀಮಧ್ವಶಾಸ್ತ್ರವು ನಿರ್ದೋಷವಾದ ದರ್ಶನವೆಂದು ತಿಳಿದರೂ, ಇನ್ನೂ ವಿಚಾರಮಾಡಿ ನಿರ್ಧರಿಸಬೇಕು ಎಂದು ತಿಳಿದು ಶ್ರೀತ್ರಿವಿಕ್ರಮಪಂಡಿತಾಚಾರ್ಯರು ಶ್ರೀಮಧ್ವಾಚಾರ್ಯರ ಮತವನ್ನು ಕೂಡಲೇ ಸ್ವೀಕರಿಸಲಿಲ್ಲ. ಬುದ್ಧಿವಂತರು ಯಾವ ಕಾರ್ಯವನ್ನೇ ಆಗಲಿ, ಚೆನ್ನಾಗಿ ವಿಮರ್ಶಿಸದೆ ಮಾಡುವುದಿಲ್ಲ, ಕೂಡಲೇ ನಿರ್ಧಾರವನ್ನೂ ಕೈಗೊಳ್ಳುವುದೂ ಒಳ್ಳೆಯದಲ್ಲ. ಆದ್ದರಿಂದಲೇ ಅವರು ಮನಸ್ಸಿನಲ್ಲಿ ಶ್ರೀಮಧ್ವ ಸಿದ್ಧಾಂತವನ್ನು ಮೆಚ್ಚಿಕೊಂಡರೂ, ಅದ್ವೈತ ಮತವನ್ನು ಬಿಟ್ಟು ಆ ಕೂಡಲೇ ಆಚಾರ್ಯರ ಶಿಷ್ಯರಾಗಲಿಲ್ಲ.(ಇಲ್ಲಿ ಅರ್ಥಾಂತರನ್ಯಾಸಾಲಂಕಾರ) ಇಲ್ಲಿ ದ್ರುತವಿಲಂಬಿತ ವೃತ್ತ. 'ದ್ರುತ ವಿಲಂಬಿತಮಾಹ ನಭೌ ಭರೌ' ಎಂದು ಅದರ ಲಕ್ಷಣ.

**ವಿಗ್ರಹ—**

**ಬಹುಲಬೋಧಃ—** ಬಹುಲಃ ಬೋಧಃ ಯಸ್ಯಸಃ ಬಹುಲಬೋಧಃ ।

**ಕೋಶ—** ಕೃತಿ = ನಿಪುಣ, 'ಕೃತೀ ಕುಶಲ ಇತ್ಯಪಿ' ಅಮರ ।

**ಕ್ರಿಯಾಪದ— ಆದಧೇ**-ಆ+ದದೇ ದದಾತೇ ದದಿರೇ, ದದಿಷೇ ದದಾಥೇ ದದಿಧ್ವೇ, ದದೇ ದದಿವಹೇ ದದಿಮಹೇ। ಡುದಾಞ ದಾನೇ (ದಾ)ಧಾತು ಆತ್ಮನೇಪದಿ ಪರೋಕ್ಷೇ ಲಿಟ್ ಆಜ ಉಪಸರ್ಗ ಪ್ರಥಮಪುರುಷೇ ಏಕವಚನಂ । **ಕುರುತೇ** - ಕುರುತೇ ಕುರ್ವಾತೇ ಕುರ್ವತೇ, ಕುರುಷೇ ಕುರ್ವಾಥೇ ಕುರುಧ್ವೇ, ಕುರ್ವೇ ಕುರ್ವಹೇ ಕುರ್ಮಹೇ । ಡುಕೃಞ ಕರಣೇ ಕೃಧಾತು ಆತ್ಮನೇ ಪದಿ ಲಟ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ತೇನ ಬಹುಲಬೋಧಂ ಅವೇಕ್ಷ್ಯ ವ್ಯವಹೃತ್ಯ (ತತ್) ಸುದರ್ಶನಂ ಸತ್ ನಿಶ್ಚಯಾತ್ ವಿದಿತವತಾ ಅಪಿ ತಸ್ಯ ಮತಂ ಸಹಸಾ ನ ಆದದೇ, ಕೃತಿನಾ ಅಖಿಲಂ ವಿಮೃಶ್ಯ ಕ್ರಿಯತೇ ನನು ।

★ ★ ★

**ಅವತಾರಿಕಾ—** ಅನಂತರ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು ಶ್ರೀಮಧ್ವಾಚಾರ್ಯರನ್ನು ಶ್ರೀವಿಷ್ಣುಮಂಗಲದಲ್ಲಿ ಸಂದರ್ಶಿಸಿ ನಮಸ್ಕರಿಸಿದರು ಎಂದು ಹೇಳುತ್ತಾ ಈ ಹದಿಮೂರನೆಯ ಸರ್ಗವನ್ನು ಮುಗಿಸುತ್ತಾರೆ.

**ತಂ ವಿಷ್ಣುಮಂಗಲಗತಂ ಬಹುಲಪ್ರಬೋಧಂ**
**ಪ್ರಾಪ್ಯಾಭ್ಯವಂದತ ತದಾಽಯುಗವಿಕ್ರಮಾರ್ಯಃ ।**
**ಆನಂದದಂ ಸ ಚತುರಾನನಹಾಸಲಕ್ಷ್ಮ್ಯಾ**
**ತತ್ತ್ವಂ ಪ್ರವೇತ್ತುಮಮರೇಂದ್ರ ಇವಾಬ್ಜಯೋನಿಮ್ ॥ 69 ॥**

**ಪದಚ್ಛೇದ—** ತಂ, ವಿಷ್ಣುಮಂಗಲಗತಂ, ಬಹುಲಪ್ರಬೋಧಂ, ಪ್ರಾಪ್ಯ, ಅಭ್ಯವಂದತ, ತದಾ ಅಯುಗ ವಿಕ್ರಮಾರ್ಯಃ, ಆನಂದದಂ, ಸಃ, ಚತುರಾನನಹಾಸಲಕ್ಷ್ಮ್ಯಾ, ತತ್ತ್ವಂ, ಪ್ರವೇತ್ತುಂ, ಅಮರೇಂದ್ರಃ, ಇವ ಅಬ್ಜಯೋನಿಂ ।

**ಅನ್ವಯ—** ಸಃ, ಅಯುಗವಿಕ್ರಮಾರ್ಯಃ, ತದಾ, ವಿಷ್ಣುಮಂಗಲಗತಂ, ಚತುರಾನನಹಾಸಲಕ್ಷ್ಮ್ಯಾ, ಆನಂದದಂ, ತಂ, ಬಹುಲಪ್ರಬೋಧಂ, ಪ್ರಾಪ್ಯ, ಅಮರೇಂದ್ರಃ, ತತ್ತ್ವಂ, ಪ್ರವೇತ್ತುಂ, ಅಬ್ಜಯೋನಿಂ, ಇವ, ಅಭ್ಯವಂದತ ।

**ಅನ್ವಯಾರ್ಥ—**

**ಸಃ** = ಆ,
**ಅಯುಗವಿಕ್ರಮಾರ್ಯಃ** = ತ್ರಿವಿಕ್ರಮಪಂಡಿತಾಚಾರ್ಯರು,
**ತದಾ** = ಆಗ ಜಯಸಿಂಹ ರಾಜನ ಪ್ರಾರ್ಥನೆಯಿಂದ,
**ವಿಷ್ಣುಮಂಗಲಗತಂ** = ವಿಷ್ಣುಮಂಗಲದೇವಾಲಯದಲ್ಲಿರುವ,
**ಚತುರಾನನಹಾಸಲಕ್ಷ್ಮ್ಯಾ** = ಸುಂದರವಾದ ಮುಖದ ಮಂದಹಾಸದ ಶೋಭೆಯಿಂದ,
**ಆನಂದದಂ** = ಸಂತೋಷವನ್ನುಂಟುಮಾಡುವ,
**ತಂ** = ಆ,
**ಬಹುಲಪ್ರಬೋಧಂ** = ಶ್ರೀಪೂರ್ಣಪ್ರಜ್ಞಾಚಾರ್ಯರನ್ನು,
**ಅಮರೇಂದ್ರಃ** = ಇಂದ್ರನು,
**ತತ್ತ್ವಂ ಪ್ರವೇತ್ತುಂ** = ವಿಷ್ಣುಸ್ವರೂಪವನ್ನು ಚೆನ್ನಾಗಿ ತಿಳಿಯಲು,
**ಚತುರಾನನಹಾಸಲಕ್ಷ್ಮ್ಯಾ** = ನಾಲ್ಕುಮುಖಗಳ ಮಂದಹಾಸದ ಶೋಭೆಯಿಂದ,
**ಆನಂದದಂ** = ಸಂತೋಷವನ್ನುಂಟು ಮಾಡುವ,
**ಅಬ್ಜಯೋನಿಂ ಇವ** = ಚತುರ್ಮುಖ ಬ್ರಹ್ಮನನ್ನು ಎಂಬಂತೆ,
**ಅಭ್ಯವಂದತ** = ವಂದಿಸಿದರು.

**ತಾತ್ಪರ್ಯ—** ಜಯಸಿಂಹರಾಜನು ಆಚಾರ್ಯರಲ್ಲಿ ಕ್ಷಮೆ ಕೇಳಿ ಅಪಹೃತವಾದ ಅವರ ಗ್ರಂಥಗಳನ್ನು ಅವರಿಗೆ ಪುನಃ ಒಪ್ಪಿಸಲು ಕರೆಸಿದಾಗ ಶ್ರೀಪೂರ್ಣಪ್ರಜ್ಞಾಚಾರ್ಯರು ಸಹ್ಯಾದ್ರಿಯ ಮೇಲಿನ ಭಾಗದಿಂದ ಕೆಳಕ್ಕಿಳಿದು ಜಯಸಿಂಹ ರಾಜನ ರಾಜ್ಯಕ್ಕೆ ಬಂದು ವಿಷ್ಣುಮಂಗಲ ದೇವಾಲಯದಲ್ಲಿ ತಂಗಿದ್ದರು. ನಾಲ್ಕುಮುಖಗಳಿಂದಲೂ ಮಂದಹಾಸವನ್ನು

ಸೂಚಿಸುತ್ತಾ ಆನಂದವನ್ನುಂಟು ಮಾಡುವ ಚತುರ್ಮುಖ ಬ್ರಹ್ಮದೇವರ ಬಳಿಗೆ ತತ್ತ್ವವನ್ನು ಚೆನ್ನಾಗಿ ತಿಳಿಯಲು ದೇವೇಂದ್ರನು ಬಂದು ನಮಸ್ಕರಿಸುತ್ತಾನೆ. ಅದರಂತೆ ಸುಂದರವಾದ ಮುಖದ ಮಂದಹಾಸದಿಂದ ನೋಡುವವರಿಗೆ ಸಂತೋಷವನ್ನುಂಟುಮಾಡುವ ಶ್ರೀಮಧ್ವಾಚಾರ್ಯರಿಂದ ತತ್ತ್ವವನ್ನು ಸರಿಯಾಗಿ ತಿಳಿಯಲು ಬಂದ ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯರು ಅವರನ್ನು ನಮಸ್ಕರಿಸಿದರು. ಇದೇ ಮಧ್ವತ್ರಿವಿಕ್ರಮ ಸಮಾಗಮ ಇಲ್ಲಿಗೆ ಶ್ರೀಸುಮಧ್ವವಿಜಯ ಮಹಾಕಾವ್ಯದಲ್ಲಿ ಹದಿಮೂರನೆಯ ಸರ್ಗವು ಸಮಾಪ್ತವಾಯಿತು.

**ವಿಗ್ರಹ—**

**ವಿಷ್ಣುಮಂಗಲಗತಂ**— ವಿಷ್ಣುಮಂಗಲೇ ಗತಃ ವಿಷ್ಣುಮಂಗಲಗತಃ ತಂ ।

**ಬಹುಲಪ್ರಬೋಧಂ**— ಬಹುಲಃ ಪ್ರಬೋಧಃ ಯಸ್ಯ ಸಃ ಬಹುಲಪ್ರಬೋಧಃ ತಂ ।

**ಅಯುಗವಿಕ್ರಮಾರ್ಯಃ**— ಯುಗ = ಸಮಸಂಖ್ಯೆ ಜೋಡಿಸಂಖ್ಯೆ 2-4-6 ಇತ್ಯಾದಿ ಅಯುಗ = ಬೆಸ ಸಂಖ್ಯೆ 1-3-5 ಇತ್ಯಾದಿ. ಅಯುಗ = ಇಲ್ಲಿ ಮೂರು. ತ್ರಿ ಅಯುಗವಿಕ್ರಮ = ತ್ರಿವಿಕ್ರಮ ಅಯುಗ ವಿಕ್ರಮಃ ಇತಿ ಆರ್ಯಃ ಅಯುಗವಿಕ್ರಮಾರ್ಯಃ ।

**ಆನಂದದಂ**— ಆನಂದಂ ದದಾತಿ ಇತಿ ಆನಂದದಃ ತಂ ।

**ಚತುರಾನನಂ**— ಚತುರಂ ಚ ತತ್ ಆನನಂ ಚ ಚತುರಾನನಂ ।

**ಚತುರಾನನಹಾಸಲಕ್ಷ್ಮ್ಯಾ**— ಹಾಸಸ್ಯ ಲಕ್ಷ್ಮೀಃ ಹಾಸಲಕ್ಷ್ಮೀಃ ಚತುರಾನನಸ್ಯ ಹಾಸಲಕ್ಷ್ಮೀಃ ಚತುರಾನನಹಾಸ ಲಕ್ಷ್ಮೀಃ ತಯಾ । ಚತ್ವಾರಿ ಚ ತಾನಿ ಆನನಾನಿ ಚ ಚತುರಾನನಾನಿ ಚತುರಾನನಾನಾಂ ಹಾಸಲಕ್ಷ್ಮೀಃ ತಯಾ ಭಾವಪ್ರಕಾಶಿಕೆಯಲ್ಲಿ ಚತುರಾನನಹಾಸಲಕ್ಷ್ಮ್ಯಾ ಎಂಬಲ್ಲಿ ಚತ್ವಾರಿ ಆನನಾನಿ ಎಂದು ಬ್ರಹ್ಮಪರವಾದ ಅರ್ಥವನ್ನು ಹೇಳುವಾಗ ವಿಗ್ರಹ ಇಟ್ಟುಕೊಳ್ಳಬೇಕು ಎಂದು ಹೇಳಿದ್ದಾರೆ.

**ಅಮರೇಂದ್ರಃ**— ಅಮರಾಣಾಂ ಇಂದ್ರಃ ಅಮರೇಂದ್ರಃ ।

**ಅಬ್ಜಯೋನಿಃ**— ಅಬ್ಜಂ ಯೋನಿಃ ಯಸ್ಯಸಃ ಅಬ್ಜಯೋನಿಃ ತಂ ಅಬ್ಜಯೋನಿಂ ಬ್ರಹ್ಮನನ್ನು ಧಾತಾಬ್ಜಯೋನಿ ದ್ರುಹಿಣೋ ವಿರಿಂಚಿಃ ಕಮಲಾಸನಃ ಅಮರ ।

**ಕ್ರಿಯಾಪದ**— ಅಭ್ಯವಂದತ - ಅಭಿ+ಅವಂದತ ಅವಂದೇತಾಂ ಅವಂದಂತ, ಅವಂದಥಾಃ ಅವಂದೇಥಾಂ ಅವಂದಧ್ವಂ, ಅವಂದೇ ಅವಂದಾವಹಿ ಅವಂದಾಮಹಿ । ವದಿ ಅಭಿವಾದನಸ್ತುತ್ಯೋಃ ಇತಿ ಅಭಿವಾದನ ಸ್ತುತ್ಯರ್ಥಕ ವಂದ ಧಾತು ಆತ್ಮನೇಪದಿ, ಅನದ್ಯತನಭೂತೇ ಲಙ, ಸಕರ್ಮಕ ಪ್ರಥಮಪುರುಷೇ ಏಕವಚನಂ ಅಭಿ ಉಪಸರ್ಗ ।

**ಪ್ರಯೋಗ**— ತೇನ ಅಯುಗವಿಕ್ರಮಾರ್ಯೇಣ ತಂ ವಿಷ್ಣುಮಂಗಲಗತಂ ಚತುರಾನನಹಾಸಲಕ್ಷ್ಮ್ಯಾ ಆನಂದದಂ ಬಹುಲಪ್ರಬೋಧಂ ಪ್ರಾಪ್ಯ ಅಮರೇಂದ್ರೇಣ ತತ್ತ್ವಂ ಪ್ರವೇತ್ತುಂ ಅಬ್ಜಯೋನಿರಿವ (ಬಹುಲ ಪ್ರಬೋಧಃ) ಅಭ್ಯವಂದ್ಯತ ।

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ತ್ರಯೋದಶಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

# ಶ್ರೀಸುಮಧ್ವವಿಜಯ

## ಸಂಪುಟ - 4

## ಸರ್ಗ 14 ರಿಂದ 16


*ಅನುವಾದಕರು:*

ದಿ॥ ವಿದ್ವಾನ್ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯ

ದಿ॥ ಮಾಗಡಿ ರಂಗನಾಥಾಚಾರ್ಯ

ದಿ॥ ವಿದ್ವಾನ್ ಎಸ್. ವಿ. ಭೀಮಭಟ್ಟರು





*ಪ್ರಕಾಶಕರು:*

ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

# Śrī Sumadhva Vijaya
## Part - 4

Sargas : 14 to 16

*First Edition :* 2012 - 2000 Copies.

Price : Rs.

*Hon. Editors :*
**Śrī Rājā S. Rājagopālāchārya**
*Āpta Kāryadarśī, and*
**Śrī S. N. Suyamīndrāchārya**
*Additional Āpta Kāryadarśī*
Śrī Rāghavendra Swāmy Mutt
Mantrālayam, Dist. Kurnool, A.P.

*Edited By :*
**Vidwān Rājā S. Pavamānāchārya**
**Vidwān Kaḍapa Rāghavendrāchārya**
**Vidwān Dr. N. Vādirājāchārya**
**Vidwān Purāṇik Subrahmaṇyāchārya**

*Published By :*
**Śrī Gurusārvabhouma Sanskrit Vidyāpīṭha**
Jagadguru Śrīman Madhvācharya Mūla Mahāsamsthānam
Śrī Rāghavendra Swāmi Mutt, Mantralayam (A.P)

*Printed By :*
**Dhananjay Warkhedkar**
**at : Sudhā Mudraṇa**
Śankarpuram, Bangalore - 560 004.
☎ 6560 2836, 2672 5340, Mobile : 92430 74414

|| ಶ್ರೀಮನ್ಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||



ಸ್ವಸ್ತಿಶ್ರೀ ವಿಜಯಾಭ್ಯುದಯ ಗತ ಶಾಲಿವಾಹನ ಶಕ 1934 ನೇ
ಶ್ರೀನಂದನನಾಮ ಸಂವತ್ಸರ, ಶ್ರಾವಣ ಶುದ್ಧನವಮಿ, ದಿನಾಂಕ : 27-7-2012, ಶುಕ್ರವಾರ.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿವೇದವ್ಯಾಸದೇವರ
ದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ
**ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ**

## ಶ್ರೀ 108 ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

# ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ

## ಅನುಗ್ರಹ ಸಂದೇಶ

*''ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ||''*

ಎಂಬ ವಚನದಂತೆ ಲೋಕದಲ್ಲಿ ಸರ್ವೋತ್ತಮನಾದ ಭಗವಂತನಿಗೆ ಸಮಾನನಾದ ದೇವರೇ ಇಲ್ಲ. ಹಾಗೂ ಜೀವೋತ್ತಮರಾದ ವಾಯ್ವವತಾರಿಗಳಾದ ಮಧ್ವರ ಸಮಾನರಾದ ಗುರುಗಳೇ ಇಲ್ಲ. ಇಂಥಹ ಲೋಕಪಾವನರಾದ ಆಚಾರ್ಯ ಮಧ್ವರ ಚರಿತ್ರೆ, ಮಹಿಮೆಯ ತಿಳಿವು ಅತ್ಯಂತ ಅವಶ್ಯವಾಗಿದೆ - ಎಂದು ''ಮುಕುಂದಭಕ್ತ್ಯೈ ಗುರುಭಕ್ತಿಜಾಯ್ಯೆ'' ಎಂಬ ಸುಮಧ್ವವಿಜಯದ ಮಾತು ಸಮರ್ಥಿಸುತ್ತದೆ. ಇಂಥಹ ಶ್ರೀಮದಾಚಾರ್ಯರ ಚರಿತ್ರೆಯನ್ನು ಮಹಿಮೆಯನ್ನು, ವರ್ಣಿಸುವ ಸುಮಧ್ವವಿಜಯವೆಂಬ ಮಹಾಕಾವ್ಯವು ಸುಂದರವಾದ ಅನೇಕ ಸುವೃತ್ತಗಳಿಂದ ಶಾಸ್ತ್ರವಿಷಯಗಳಿಂದ ಶೋಭಿತವಾಗಿದೆ. ಇದನ್ನು ಅರ್ಥಪುರಃಸರವಾಗಿ ಎಲ್ಲರಿಗೂ ಮುಟ್ಟಿಸುವ ಯೋಚನೆಯಿಂದ ನಮ್ಮ ಪರಮಗುರುಗಳಾದ ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರು ಶ್ರೀಮಠದ ಅಧಿಕೃತ ಮಾಸಪತ್ರಿಕೆಯಲ್ಲಿ ಧಾರಾವಾಹಿರೂಪದಲ್ಲಿ ಬರುವಂತೆ ಮಾಡಿದ್ದರು. ಇದನ್ನು ಯೋಗ್ಯ ರೀತಿಯಲ್ಲಿ ಅನುವಾದವನ್ನು ಶ್ರೇಷ್ಠ ವಿದ್ವಾಂಸರುಗಳಾದ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು, ಮಾಗಡಿ ರಂಗನಾಥಾಚಾರ್ಯರು ಹಾಗೂ ಎಸ್. ವಿ. ಭೀಮಭಟ್ಟರು ಮಾಡಿದ್ದರು. ಪ್ರಕೃತ ಇದನ್ನು ಒಂದು ಪುಸ್ತಕರೂಪದಲ್ಲಿ ಹೊರತರುವ ಆದೇಶವನ್ನು ಮಾಡಿದ್ದೆವು. ನಮ್ಮ ಆದೇಶದಂತೆ ವಿದ್ವಾಂಸರಾದ ರಾಜಾ ಎಸ್. ಪವಮಾನಾಚಾರ್ಯರು, ಕಡಪ ರಾಘವೇಂದ್ರಾ-ಚಾರ್ಯರು, ಎನ್. ವಾದಿರಾಜಾಚಾರ್ಯರು, ಪುರಾಣಿಕ ಸುಬ್ರಹ್ಮಣ್ಯಾಚಾರ್ಯರು ಮತ್ತು ನಮ್ಮ ವಿದ್ಯಾಪೀಠದ ಅನೇಕ ವಿದ್ವಾಂಸರ ಸಹಯೋಗದೊಂದಿಗೆ ಸಂಪಾದಿಸಿದ್ದಾರೆ. ಇವರೆಲ್ಲರಿಗೂ ಹಾಗೂ ಅಂದವಾಗಿ ಮುದ್ರಿಸಿದ 'ಸುಧಾ ಮುದ್ರಣ'ದ ಮಾಲೀಕರಾದ ಧನಂಜಯ ವರಖೇಡಕರ್ ಇವರಿಗೂ, ಇದನ್ನು ಕೊಂಡು ಅಧ್ಯಯನವನ್ನು ಮಾಡುವ ಪ್ರತಿಯೊಬ್ಬರಿಗೂ ಸಕಲಸನ್ಮಂಗಳವನ್ನುಂಟು ಮಾಡಲೆಂದು ಅಸ್ಮದ್ಗುರ್ವಂತರ್ಗತ ಶ್ರೀರಾಘವೇಂದ್ರತೀರ್ಥ-ಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಪ್ರಾಸ್ತಾವಿಕ

ವಿಜಯ ಪರಂಪರೆ ಆರಂಭವಾದದ್ದೇ ಶ್ರೀಮಧ್ವಾಚಾರ್ಯರಿಂದ.

ಹಾಗಾಗಿ ಅದು ಮಧ್ವವಿಜಯ.

ಅದು ಸಜ್ಜನರಿಗೆ - ಸಾಧುಸಂತರಿಗೆ ಸಂತಸ ಕೊಡುವ ವಿಜಯವಾದ್ದರಿಂದ ಸುಮಧ್ವವಿಜಯವೂ ಹೌದು.

ಹದಿನಾರು ಸರ್ಗಗಳೂ ಸ್ವರ್ಗದ ಒಂದೊಂದೇ ಮೆಟ್ಟಿಲು.

ನೀವು ಗಮನಿಸಿರುತ್ತೀರಿ.

ಯತಿಗಳು - ಪೀಠಾಧೀಶ್ವರರು 108 - 1008 ಇಂತಹ ಸಂಖ್ಯೆಗಳನ್ನು ತಮ್ಮ ಹೆಸರಿನ ಮೊದಲು ಹಾಕಿಕೊಳ್ಳುತ್ತಾರೆ. ಸುಮಧ್ವವಿಜಯದ ಒಟ್ಟು ಶ್ಲೋಕಗಳು 1008. ಹೀಗಾಗಿ ಅದನ್ನು ತಮ್ಮ ಹೆಸರಿನ ಮೊದಲು ಜೋಡಿಸಿಕೊಂಡರೆ ತಾವು ಅಂದುಕೊಳ್ಳುವ ಕಾರ್ಯಗಳು ಜಯಪ್ರದವಾಗುತ್ತವೆ ಎಂಬ ನಂಬಿಕೆಯಿಂದ ಹಾಕಿಕೊಳ್ಳುತ್ತಾರೆ ಎಂದೆನಿಸುತ್ತದೆ.

ಸುಮಧ್ವವಿಜಯಕ್ಕೆ ಉಪಲಬ್ಧವಿರುವ ವ್ಯಾಖ್ಯಾನಗಳು ನಾಲಕ್ಕು. ಶ್ರೀಮಧ್ವಾಚಾರ್ಯರ ಪ್ರಮುಖ ಶಿಷ್ಯರು ನಾಲ್ವರು. (ಪದ್ಮನಾಭ-ನರಹರಿ-ಮಾಧವ-ಅಕ್ಷೋಭ್ಯತೀರ್ಥರು).

ಶ್ರೀ ರಾಯರ ಸೋದರಳಿಯಂದಿರಾದ ಆನಂದತೀರ್ಥಾಚಾರ್ಯರ ಸುಮಧ್ವವಿಜಯ ಮೇಲಿನ ವ್ಯಾಖ್ಯಾನ 'ಪದಾರ್ಥದೀಪಿಕಾ' ಮಾತ್ರ ಇನ್ನೂವರೆಗೂ ಮುದ್ರಣಪ್ರಪಂಚ ಕಂಡಿಲ್ಲ. ಚೆನ್ನೈನ O.R.I ನಲ್ಲಿ ಸಂರಕ್ಷಿಸಲ್ಪಟ್ಟಿದೆ.

ಸುಮಧ್ವವಿಜಯ 50ಕ್ಕೂ ಹೆಚ್ಚು ವ್ಯಕ್ತಿಗಳನ್ನು ಉಲ್ಲೇಖಿಸುತ್ತದೆ. 56ಕ್ಕೂ ಮಿಗಿಲಾದ ಸ್ಥಳಗಳನ್ನು ಪರಿಚಯಿ-ಸುತ್ತದೆ.

ಆಚಾರ್ಯರ ಅವತಾರ ಮೂರು.

ಸುಮಧ್ವವಿಜಯವು ಒಂದರ್ಥದಲ್ಲಿ 'ತ್ರಿವೇಣೀ ಸಂಗಮ'. ಇಲ್ಲಿ ಸಂಸ್ಕೃತವಿದೆ. ಭಾಷಾತಜ್ಞರಿಗೆ ಆಸಕ್ತಿ ತರುವ ಮೂರು ಭಾಷೆಗಳ ಕೂಡುವಿಕೆ ಇಲ್ಲಿದೆ. ಕವಿ ನಾರಾಯಣಪಂಡಿತಾಚಾರ್ಯರು ಈ ಕಾವ್ಯದಲ್ಲಿ ಹೇಳಿದ್ದು, ಕೇಳಿದ - ಅಂದಿನ ಕಥನವಲ್ಲ, ತಾವು ನೇರವಾಗಿ ಕಂಡ ಸಮಕಾಲೀನ ಗಣ್ಯ ವ್ಯಕ್ತಿಗಳಲ್ಲಿ ರಾರಾಜಿಸಿದ ಒಬ್ಬ ನಾಯಕ(Hero)ನ ಚಿತ್ರಣ. ಹೀಗಾಗಿ ಐತಿಹಾಸಿಕ ಮಹತ್ವವಿದೆ. ಇದು ಮುಂದೆ 'ರಾಘವೇಂದ್ರವಿಜಯ'ಕ್ಕೆ ಪ್ರೇರಣೆಯಾಯಿತು.

ಸುಮಧ್ವವಿಜಯವನ್ನು ಮುಖೋದ್ಗತವಾಗಿ ಸ್ವಚ್ಛವಾಗಿ - ಸುಂದರವಾಗಿ ಅನ್ನುವ ಸಾತ್ತ್ವಿಕರು ನಮಗೆ ಅಲ್ಲಲ್ಲಿ ಇಂದಿಗೂ ಕಾಣಸುತ್ತಾರೆ. ಪರಮಪೂಜ್ಯ 1008 ಶ್ರೀ ಸುವಿದ್ಯೇಂದ್ರತೀರ್ಥರು ಅಂತಹವರಲ್ಲಿ ಒಬ್ಬರು. ಅವರ ಅಸ್ಖಲಿತ ಸುಮಧ್ವವಿಜಯ ಪಾರಾಯಣ - ನಮಗೆ ಇವತ್ತಿಗೂ ರೋಮಾಂಚನ.

ಶ್ರೀಹರಿಯ ಬಗೆಗಿನ ಚಿಂತನೆಯನ್ನು - ಸಿದ್ಧಾಂತವನ್ನು ಪ್ರತಿಷ್ಠಾಪಿಸುವ ಸಂದರ್ಭದಲ್ಲಿ, ಆಚಾರ್ಯ ಮಧ್ವರು ಎದುರಿಸಿದ ವಿರೋಧಗಳು - ದೈಹಿಕ ಹೋರಾಟಗಳು ಅಸಂಖ್ಯಾತ. ಆದರೆ ಅದನ್ನು ಸುಲಲಿತವಾಗಿ ಮಂಡಿಸಿದ ರೀತಿ - ''ನ ಚ ಮಧ್ವಸಮೋ ಗುರುಃ'' ।

'ಸರ್ವಮೂಲ' ಅದೊಂದು ಮಹಾನ್ ಆಧ್ಯಾತ್ಮ ಆಗಸದ ಪ್ರಮುಖ ವೆಬ್‌ಸೈಟ್. ಆದರೆ ಅದನ್ನು ನೋಡಬೇಕಾದರೆ 'ಸುಮಧ್ವವಿಜಯ'ವೆಂಬ ಪಾಸ್‌ವರ್ಡ್ ಬೇಕೇಬೇಕು.

ಕವಿ ಡಾ. ಪ್ರದೀಪ್ ಕುಮಾರ್ ಹೆಬ್ರಿ ಬಹಳ ಸೊಗಸಾಗಿ ಕನ್ನಡದ 'ಮಧ್ವಾಚಾರ್ಯ'ರನ್ನು ಚಿತ್ರಿಸಿದ್ದಾರೆ.

ಕನ್ನಡದ ಧೀಮಂತ ಕರುನಾಡ ಹೇಮಂತ
ಕಡಲ ತೀರದ ಪರುಷ ಆಚಾರ್ಯ ಮಧ್ವ ।
ಕನ್ನಡಕೆ ಕೃಷ್ಣನನು ಕಾಯಕಕೆ ತತ್ತ್ವವನು
ತಂದು ಇರಿಸಿದೆ ನೀನು ಬದುಕು ಪೂರ್ಣತೆಗೆ ॥

## ಸುಮಧ್ವ ವಿಜಯ ಮತ್ತು ಕನ್ನಡ

ಮೂಲ ಸಂಸ್ಕೃತದಲ್ಲಿದ್ದ ಆದನ್ನು ಕನ್ನಡ ಭಾಷೆಯಲ್ಲಿ ತಂದವರು ಅನೇಕರು.

ಕೆ. ತಿಮ್ಮಣ್ಣಾಚಾರ್ 'ಶ್ರೀಸುಮಧ್ವವಿಜಯ ಮಹಾಕಾವ್ಯ - ಸಂದರ್ಶನ' (1961) ದಲ್ಲಿ ಇಡೀ ಕಾವ್ಯವನ್ನು ಸಿಂಹಾವಲೋಕನ ಮಾಡಿದ್ದಾರೆ. ವಿಮರ್ಶಕರ ಅಚ್ಚುಮೆಚ್ಚಿನ ಕೃತಿ - ಮಂಡ್ಯ ನಗರದ ಡಾ. ಪ್ರದೀಪ್‌ಕುಮಾರ್ ಹೆಬ್ಬಿಯವರು ಸುಮಾರು ನಾಲ್ಕು ಸಾವಿರ ಪದ್ಯಗಳನ್ನು ಮೀರಿದ ಕನ್ನಡದ ಸರಳ ಛಂದಸ್ಸಿನ ಬೃಹತ್ ಕಾವ್ಯ ರಚಿಸಿದ್ದಾರೆ. ಒಂದು ರೀತಿಯಲ್ಲಿ ಕನ್ನಡದ ಮಧ್ವವಿಜಯ.

ಬೆಂಗಳೂರು ಸಂಸ್ಕೃತ ಕಾಲೇಜಿನ ಕೆ. ನರಸಿಂಹಾಚಾರ್ಯರು ಇಡೀ 16 ಸರ್ಗವನ್ನು ಅನ್ವಯ-ಅರ್ಥ-ತಾತ್ಪರ್ಯಸಹಿತ 1967ರಲ್ಲಿ ಅನುವಾದಿಸಿದ್ದು ಓದುಗರಿಗೆ ಉಪಯುಕ್ತ ಕೃತಿಯಾಯಿತು. ಪಂಡಿತ ಶ್ರೀನಿವಾಸ. ಸು. ಮಠದ ಇವರು ಚಿಕ್ಕದಾದರೂ ಚೊಕ್ಕದಾದ 'ಶ್ರೀಸುಮಧ್ವವಿಜಯ ಮಹಾಕಾವ್ಯ ಚಿಂತನ-ಮಂಥನ' ವೆಂಬ ಕೃತಿಯ ಮೂಲಕ ಜನಸಾಮಾನ್ಯರಿಗೆ ಸರಳವಾಗಿ ಅರ್ಥವಾಗುವಂತೆ ಸಹಾಯ ಮಾಡಿದ್ದಾರೆ. (2007)

ಉಡುಪಿಯಿಂದ 1932ರಲ್ಲೇ ಬಂದ 'ಸುಖಬೋಧಿನೀ' ಎಂಬ ಕನ್ನಡ ಟೀಕಾ ಸಹಿತ ಸುಮಧ್ವ ವಿಜಯದ ರಚನೆಕಾರರು ಬಿ. ಶ್ರೀನಿವಾಸಭಟ್ಟರು. ಪಾವಂಜೆ ಗುರುರಾವ್ ಇವರಿಂದ ಪ್ರಕಾಶಿತ.

1977 ರಲ್ಲಿ ಜೆ. ಹೆಚ್. ಬಿ. ಆಚಾರ್ಯರವರು ಸುಮಧ್ವವಿಜಯ(ವಚನಕಾವ್ಯ)ವನ್ನು ಅನುವಾದಿಸಿ ಕನ್ನಡದ ಸೇವೆ ಸಲ್ಲಿಸಿದರು.

ಧಾರವಾಡ ನಗರದ ಶ್ರೀಮಾಧ್ವ ವಿದ್ಯಾಪೀಠದ ಪಂಡಿತ ತೆರಗುಂಡಿ ಶ್ರೀ ಗೋಪಾಲಕೃಷ್ಣಾಚಾರ್ಯರು 1967ರಲ್ಲಿ ಸಂಪೂರ್ಣ ಸುಮಧ್ವವಿಜಯವನ್ನು ಭಾವಾರ್ಥ, ಅನ್ವಯಾರ್ಥ ಮಾಡಿದ್ದರ ಜೊತೆಜೊತೆಯಾಗಿ ಅದ್ಭುತವಾಗಿ ಭಾಮಿನೀ ಷಟ್ಪದಿಯಲ್ಲಿ ಕನ್ನಡೀಕರಿಸಿ ಕನ್ನಡಿಗರು ಸವಿಯುವಂತೆ ಮಾಡಿದ್ದಾರೆ.

ಸೀತಾಪತಿ ಅಗ್ರಹಾರ ಬೆಂಗಳೂರಿನ ಶ್ರೀಹರಿಸರ್ವೋತ್ತಮ - ಶ್ರೀವಾಯುಜೀವೋತ್ತಮ ಪ್ರಕಾಶನದಿಂದ ಆದ್ಯಂತ ಶ್ಲೋಕ - ಪ್ರತಿ ಸರ್ಗದ ತಾತ್ಪರ್ಯದೊಡನೆ (16 ಸರ್ಗದ್ದು) ಮುದ್ರಿತವಾಗಿದೆ. ಇದೊಂದು ರೀತಿಯಲ್ಲಿ ಕಾವ್ಯದ ಕಥಾಸಾರ.

ಜನಪ್ರಿಯ ಮತ್ತೊಂದು ಕನ್ನಡ ಅನುವಾದವೆಂದರೆ ಅದು ಮಹಾಮಹೋಪಾಧ್ಯಾಯ, ಮಧ್ವರತ್ನಾಕರರೆಂಬ ಬಿರುದು ಗಳಿಸಿದವರೂ ಸಾತ್ತ್ವಿಕರು, ಶಾಂತರೂ ಆದ ದಿ॥ ಆಚಾರ್ಯ ಸಾಣೂರು ಭೀಮಭಟ್ಟರದ್ದು. ಈಗಾಗಲೆ ಜನಪ್ರಿಯ ನಾಲ್ಕು ಮುದ್ರಣಗಳಾಗಿವೆ. ಅದರಲ್ಲಿ ಕ್ರಮವಾಗಿ ಮೂಲ-ಅನ್ವಯ-ಅರ್ಥ-ವ್ಯಾಕರಣವಿಶೇಷ - ಅವತಾರಿಕೆಗಳಿದ್ದು ಅಧ್ಯಯನಶೀಲರಿಗೆ - ಆಸಕ್ತರಿಗೆ ಅತ್ಯಂತ ಉಪಯೋಗವಾಗುವಂತೆ 'ಸಿದ್ಧ ಅಡಿಗೆ'ಯನ್ನು ಮಾಡಿಕೊಟ್ಟಿದ್ದಾರೆ. (ಮೊದಲನೆ ಮುದ್ರಣ 1985).

ದಾಸಸಾಹಿತ್ಯರಂಗದ ಭೀಷ್ಮಾಚಾರ್ಯರಾದ ಲಿಂಗಸ್ಗೂರಿನ ಹನುಮಂತರಾವ್ ವೆಂಕಟರಾವ್ ಕುಲಕರ್ಣಿಯವರು 1936ರಲ್ಲಿಯೇ ಅದ್ಭುತವಾಗಿ ಕನ್ನಡಕ್ಕೆ 'ಸುಮಧ್ವವಿಜಯ'ವನ್ನು ತಂದರು. ಪ್ರತಿಯೊಂದು ಶ್ಲೋಕಕ್ಕೂ ವಾರ್ಧಿಕ ಶೈಲಿಯಲ್ಲಿ ಕನ್ನಡಕ್ಕೆ ತರುವುದು ಸುಲಭದ ಕೆಲಸವಲ್ಲ.

ಇದನ್ನು ಗಮನಿಸಿ ಸುಮಧ್ವವಿಜಯದಲ್ಲಿನ ಹೀಗೊಂದು ಪ್ರಸಂಗ.

ಶ್ರೀ ಸರ್ವಜ್ಞರು ಶಂಖಪೂರಿತ ವಾರಿಯಿಂದ, ಶಾಲಿಗ್ರಾಮಶಿಲೆಗಳಿಗೆ ಅಭಿಷೇಕ ಮಾಡಿ ನಿರ್ಮಾಲ್ಯತೀರ್ಥ ಪ್ರಾಶನ ಮಾಡಿದ ಕ್ರಮವನ್ನು ನಾರಾಯಣಪಂಡಿತಾಚಾರ್ಯರು ಹೇಳಿದ್ದು ಹೀಗಷ್ಟೆ.

**ಅಭಿದಧತಿ ಮುನೀಂದ್ರಾ ದ್ವಾದಶಾಬ್ದೋಪವಾಸ-**
**ಪ್ರತಿಮಫಲಮಲಂ ಯತ್ಸೇವನಂ ಭಕ್ತಿಯುಕ್ತಮ್ ।**
**ಅಧಿಕಮಮರನದ್ಯಾದ್ಯಾಪ್ಲವಾದನ್ಯಮಾನ್ಯಾ-**
**ದಪಿಬದಲವಬೋಧೋ ವಿಷ್ಣುಪಾದೋದಕಂ ತತ್ ।।** *(16ನೇ ಸರ್ಗ - 29 ಶ್ಲೋಕ)*

ಇದನ್ನು ಸುಂದರ ವಿಠಲಾಂಕಿತರಾದ ಶ್ರೀ ಗೋರೆಬಾಳ-ಹನುಮಂತರಾಯರು ಕನ್ನಡದ ಕನ್ನಡಿಯಲ್ಲಿ ತೋರಿಸಿದ್ದು ಹೀಗೆ—

**ವಾರ್ಧಿಕ ।। ಮುನಿವರರು ಅತಿ ಭಕುತಿಯಿಂ ಯಾವ ಶ್ರೀವಿಷ್ಣು-**
**ವಿನ ಸುಪಾದೋದಕಂ ಶಾಲಗ್ರಾಮದ ತೀರ್ಥ-**
**ವನು ಪ್ರಾಶನಂ ಮಾಡೆ ವಿಧಿವತ್ತು ಹನ್ನೆರಡು ವರ್ಷ ಉಪವಾಸ ಗೈದ ।।**

**ಅನಶನಂ ವ್ರತಫಲಕೆ ಸರಿ ಧನ್ಯಮಾನ್ಯರಿಂ-**
**ದನಿತೆ ಗಂಗಾದ್ಯೆಲ್ಲ ತೀರ್ಥ ಮಜ್ಜನದಧಿಕ ।**
**ಘನಫಲವಿದೆಂದು ಪೇಳುವರಿಂಥ ಮಹಾ ಮಹಿಮೆಯಾ ತೀರ್ಥಪಾನ ಮಾಡ್ದರ್ ।।**

ಇಂತಹ ಕನ್ನಡ ಅನುವಾದ ಈಗೆಲ್ಲಿ ಸಾಧ್ಯ. ಇದ್ದರೂ ಓದುವವರು ಯಾರು ?

ಗದಗಿನ ಪ್ರಖ್ಯಾತ ಪ್ರಕಾಶನ ಶ್ರೀನಿವಾಸಾಚಾರ್ಯ ಹೊಂಬಾಳಿಯವರು 1982ರಲ್ಲಿ ಮತ್ತೊಮ್ಮೆ ಕೋಟೇಶ್ವರ ನರಸಿಂಹಾಚಾರ್ಯರ ಕನ್ನಡ ಅನುವಾದವನ್ನು ಪ್ರಕಟಿಸಿದರು.

ಮೂಲ ಸಂಸ್ಕೃತದಲ್ಲಿನ ಹಸ್ತಪ್ರತಿಯಲ್ಲೇ ಉಳಿದು ಹೋಗಿದ್ದ ಶ್ರೀಸುಮಧ್ವವಿಜಯದ ವ್ಯಾಖ್ಯಾನ 'ಶುಭಾಭರಣಂ' ಶ್ರೀವಾರಿ ಅನಂತಾಚಾರ್ಯಸುತ ವಿದ್ವನ್ಮಣಿ ಬಾಲಶರ್ಮ ಅವರು ರಚಿಸಿದ್ದು ಅದನ್ನು ಬೆಳಕಿಗೆ ತಂದಿದ್ದೇ ಅಲ್ಲದೇ ಅನುವಾದ ಮಾಡಿದವರು ವಿದ್ವಾನ್ ಅಯಾಚಿತ ಧೀರೇಂದ್ರಾಚಾರ್ಯರು. 2007ರಲ್ಲಿ ಇದು ಪ್ರಕಟಗೊಂಡಿದೆ. ಇದರ ವಿಶೇಷವೇನೆಂದರೆ ಬಾಲಶರ್ಮರು, ಶ್ರೀಸುಮಧ್ವವಿಜಯದ 1008 ಶ್ಲೋಕಗಳಿಂದ 108 ಶ್ಲೋಕಗಳನ್ನೇ ಆರಿಸಿ ಸಂಸ್ಕೃತದಲ್ಲಿ ವ್ಯಾಖ್ಯಾನ ಮಾಡಿರುವುದು. ಕನ್ನಡ ಅನುವಾದ ಕೂಡ ಅಷ್ಟೇ ವಿದ್ವತ್‌ಪೂರ್ಣವಾಗಿ ಬಂದಿದೆ.

'ಶ್ರೀರಾಘವೇಂದ್ರಾನುಗ್ರಹ' ಪ್ರಶಸ್ತಿ ವಿಜೇತ - ಬನ್ನಂಜೆ ಗೋವಿಂದಾಚಾರ್ಯರು ಶ್ರೀ ವೇದಾಂಗತೀರ್ಥರ ಟೀಕಾನುಸಾರಿಯಾದ ಶ್ರೀಮಧ್ವವಿಜಯವನ್ನು ಕನ್ನಡಕ್ಕೆ ತಂದು ಹೊಸ ಅನುಭವ ತಂದು ಕೊಟ್ಟಿದ್ದಾರೆ (2005).

### ಕೆಲವು ಆಂಗ್ಲ ಪ್ರಕಟನೆಗಳು

1. **Sumadhva Vijaya** — Edited with Translation and Notes by D. R. Vasudeva Rao., 1983. Srimadananda Tīrtha Publications, Vishakhapatnam.
2. **Sumadhva Vijaya** of Narayana Panditacharya — Rendered into English with text by Prof. G. V. Nadagauda. 1991.
3. **Sri Madhva Vijaya** — (A Gist in English) By 16 Eminent scholars. 1969. Devaranama Bhajana Sangam. Tamilnadu. (Introduction by Dr. B.N.K. Sharma)
4. **Sri Sumadhva Vijaya — Sarasangraha** Tamil and English. Dr. C.B.H. Rao. 1974. Srirangam.

### ಸಂಸ್ಕೃತದಲ್ಲಿರುವ 'ಸುಮಧ್ವವಿಜಯ' ಪ್ರಕಾಶನಗಳು

1. श्रीसुमध्वविजयः — श्रीविश्वपतितीर्थविरचित पदार्थदीपिकासमेता यम्. नारायणाचार्यः, 1951. Udupi (With B.N.K. introduction)

२. श्रीसुमध्वविजयः — छलारी शेषाचार्य व्याख्यानसमेता 1952. श्रीरामकृष्ण द्वैतवेदान्त पाठशाला

३. सुमध्वविजयः — श्रीनारायणपंडिताचार्य-श्रीविश्वपतितीर्थ-श्रीछलारी शेषाचार्य (इति व्याख्यानत्रयोपेता) Edited by A. B. Shyamachar and S. R. Pandurangi. 2000.

४. श्रीसुमध्वविजयः (छलारी व्याख्यानसमेता) — निर्णयसागर मुद्रणालय, मुंबई. 1943.

५. श्रीसुमध्वविजयः — वेदांगतीर्थकृतपदार्थदीपिकया, आचार्यगोविंदकृतया तत्त्वचन्द्रिकया च संवलितः. 2003. Udupi

६. "श्रीसुमध्वविजयसारसङ्ग्रहभूत श्रीशुभाभरणम्" — श्री पुरी अनंताचार्यतनुजेन श्री बालाशर्मणा रचितं व्याख्यानम् - अनु० विद्वान् अयाचित धीरेंद्राचार्य चिंतामणि - 2007

## *ಸುಮಧ್ವ ವಿಜಯದ 'ಕನ್ನಡ ಪ್ರಕಟನೆ'ಗಳು*

1. ಶ್ರೀಮಧ್ವವಿಜಯ ಸಾರಸಂಗ್ರಹಃ - ಲಿಪಿ ಸಂಸ್ಕೃತ, ಭಾಷೆ ಕನ್ನಡ. ನಾಯಕಲ್ ತಿರುಮಲರಾವ್ ವಕೀಲ್ ಹೈಕೋರ್ಟ್, ಹೈದ್ರಾಬಾದ್ 1933.
2. ಶ್ರೀಮನ್ಮಧ್ವವಿಜಯ ಕಥಾಮೃತಂ - ಸಿ. ಎಮ್. ಪದ್ಮನಾಭಾಚಾರ್ಯ ವಿರಚಿತ - 1991, ಸಂ॥ ತಾಮ್ರಪರ್ಣಿ ಶ್ರೀನಿವಾಸಾಚಾರ್ಯ, ಬೆಂಗಳೂರು.
3. ಶ್ರೀಮನ್ಮಧ್ವಚರಿತಮಾನಸ - (ಶ್ರೀಸುಮಧ್ವವಿಜಯದ ಗದ್ಯಾನುವಾದ) ಮೈ. ಶೇ. - ಅನಂತಪದ್ಮನಾಭರಾವ್, ಬೆಂಗಳೂರು.
4. ಶ್ರೀಸುಮಧ್ವವಿಜಯ ಸಾರಸಂಗ್ರಹ - ಶ್ರೀವಿದ್ಯಾರತ್ನಾಕರತೀರ್ಥ ಶ್ರೀಪಾದಂಗಳವರಿಂದ ರಚಿತ - ಕನ್ನಡ ಅನುವಾದ ಶ್ರೀಗುರುವೇಂಕಟಾಚಾರ್ಯರು. ಬೆಂಗಳೂರು. 1992.
5. ಶ್ರೀಮತ್ಸುಮಧ್ವವಿಜಯವು - ಪ್ರತಿಸರ್ಗದ ಕನ್ನಡ ತಾತ್ಪರ್ಯ ಸಹಿತ. 1927. Udupi ಪಾವಂಜೆ ಗುರುರಾವ್ (ಪ್ರ).

## *'ಸುಮಧ್ವ ವಿಜಯ'ದ ವ್ಯಾಖ್ಯಾನಗಳು (ಸಂಸ್ಕೃತದಲ್ಲಿದೆ)*

1. ನಾರಾಯಣಪಂಡಿತಾಚಾರ್ಯರು - ಭಾವಪ್ರಕಾಶಿಕಾ (ಭಾವದೀಪ)
2. ವೇದಾಂಗತೀರ್ಥರು - ಪದಾರ್ಥದೀಪಿಕಾ
3. ವಿಶ್ವಪತಿತೀರ್ಥರು - ಪದಾರ್ಥದೀಪಿಕಾ ಉದ್ಬೋಧಿಕಾ
4. ಛಲಾರಿ ನರಸಿಂಹಾಚಾರ್ಯರು - ಮಂದೋಪಕಾರಿಣೀ
5. ಛಲಾರಿ ಶೇಷಾಚಾರ್ಯರು - ಪ್ರಕಾಶಿಕಾ
6. ಆನಂದತೀರ್ಥಾಚಾರ್ಯರು - ಮಂದೋಪಕಾರಿಣೀ
7. ಮುದ್ಗಲ ಆನಂದತೀರ್ಥಾಚಾರ್ಯ
8. ಲಿಂಗೇರಿ ವ್ಯಾಸಾಚಾರ್ಯರು
9. ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು

(7–9) ಇವರೆಲ್ಲರೂ ವ್ಯಾಖ್ಯಾನ ರಚಿಸಿರುತ್ತಾರೆ.

## *'ಸುಮಧ್ವ ವಿಜಯ'ಕ್ಕೆ ಸಂಬಂಧಿಸಿದ ಕೃತಿಗಳು (ಸಂಸ್ಕೃತದಲ್ಲಿವೆ)*

1. ಅಣುಮಧ್ವವಿಜಯ: (ಪ್ರಮೇಯನವಮಾಲಿಕಾ) - ಶ್ರೀನಾರಾಯಣಪಂಡಿತಾಚಾರ್ಯರು.
2. ಗೂಢಭಾವಪ್ರಕಾಶಿಕಾ - ಶ್ರೀರಾಘವೇಂದ್ರತೀರ್ಥರು
3. ವೇದಾಂಗತೀರ್ಥರು
4. ಸತ್ಯವ್ರತ ತೀರ್ಥರು
5. ರಘುವರ್ಯರು
6. ಛಲಾರೀ ಶ್ರೀನಿವಾಸಾಚಾರ್ಯರು

(3–6) ಇವರು ಕೂಡ ಅಣುಮಧ್ವವಿಜಯಕ್ಕೆ ವ್ಯಾಖ್ಯಾನ ರಚಿಸಿರುತ್ತಾರೆ.

7. ಭಗವಂತರಾಯರು - ಸುಮಧ್ವವಿಜಯ ವ್ಯಾಖ್ಯಾನ ಸಂಗ್ರಹ

8. ವಿದ್ಯಾರತ್ನಾಕರತೀರ್ಥರು – ಸುಮಧ್ವವಿಜಯಸಾರಸಂಗ್ರಹ
9. ಭಾಗವತ ಶ್ಯಾಮಾಚಾರ್ಯರು – ಶ್ರೀಮನ್ಮಧ್ವಕಥಾಸುದರ್ಪಣಂ
10. ಏರಿ ಬಾಳಾಚಾರ್ಯರು – ಶ್ರೀಮನ್ಮಧ್ವವಿಜಯ – ಶುಭಾಭರಣ
11. ಮಾದನೂರು ವಿಷ್ಣುತೀರ್ಥರು – ಸುಮಧ್ವವಿಜಯ – ಪ್ರಮೇಯಫಲಮಾಲಿಕಾ
12. ಬಿದರಳ್ಳಿ ಶ್ರೀನಿವಾಸಾಚಾರ್ಯರು – ಶ್ರೀಮಧ್ವನಾಮಾವಲಿಃ

ಪ್ರಸ್ತುತ ಮಂತ್ರಾಲಯದ ಶ್ರೀಮಠದಿಂದ 'ಸುಮಧ್ವವಿಜಯ'ದ ಕನ್ನಡ ಅನುವಾದ ಹೊರಗೆ ಬರುತ್ತಿದೆ. ಇದು ಈ ಹಿಂದೆ ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯಲ್ಲಿ ಧಾರಾವಾಹಿಯಾಗಿ ಹರಿದು ವಿದ್ವಾಂಸರ – ವಿದ್ಯಾರ್ಥಿಗಳ ಮನಸೂರೆಗೊಂಡಿತ್ತು. ಇಷ್ಟೊಂದು ವಿಸ್ತೃತವಾಗಿ ಕನ್ನಡದಲ್ಲಿ ಇಂತಹ ಪುಸ್ತಕ ಹೊರಬಂದಿಲ್ಲವೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಏಕೆಂದರೆ ಇದು ಜನಸಾಮಾನ್ಯರಿಗೂ ಅಚ್ಚು-ಮೆಚ್ಚು. ವಿದ್ವಾಂಸನಿಗೂ ಬೆಲ್ಲದ ಅಚ್ಚು. ಓತ-ಪ್ರೇತವಾಗಿ ಸಾಗಿದ ಶಬ್ದಸಾಗರವದು. ಕನ್ನಡ ಭಾಷೆಯಲ್ಲಿ ಕನ್ನಡದ ನಾಯಕ ಮಧ್ವಾಚಾರ್ಯರ ಚಿತ್ರಣ ಕೊಟ್ಟ ಕಾವ್ಯವದು. ದಿವಂಗತ ಪಣಿಯಾಡಿ, ಪಂಚಾಂಗಂ ಶ್ರೀ ಲಕ್ಷ್ಮೀನಾರಾಯಣ ಉಪಾಧ್ಯಾಯರು (ಪಿ. ಪಿ. ಲಕ್ಷ್ಮೀ-ನಾರಾಯಣ ಉಪಾಧ್ಯಾಯ), ಶ್ರೀ ಮಾಗಡಿ ರಂಗನಾಥಾಚಾರ್ಯರು, ಮತ್ತು ಶ್ರೀ ಎಸ್. ವಿ. ಭೀಮಭಟ್ಟರು ಶ್ರದ್ಧಾ-ಭಕ್ತಿಯಿಂದ ಹೆಣೆದ ವೈಭವದ ಕೃತಿಯಿದು. 'ಶ್ರೀಗುರುಸಾರ್ವಭೌಮ' ಮಾಸಪತ್ರಿಕೆಯಲ್ಲಿ ಆಗಸ್ಟ್ 1978ರಲ್ಲಿ ಧಾರಾವಾಹಿಯಾಗಿ ಆರಂಭವಾಯಿತು. ಡಿಸೆಂಬರ್ 1986 ರಲ್ಲಿ ಪೂರ್ಣವಾಯಿತು.

ಆಶ್ಚರ್ಯವೆಂದರೆ ಅದೇ ತಿಂಗಳಲ್ಲಿ ಅಂದರೆ ದಿನಾಂಕ 11.8.1978ರಲ್ಲಿ ಭಾರತದ ಅಂದಿನ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿಯವರು ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರಿಗೆ 'ರಾಷ್ಟ್ರಪ್ರಶಸ್ತಿ'ಯನ್ನು ಕೊಟ್ಟು ಗೌರವಿಸಿದರು. ಅದಕ್ಕೆ ನಾನು ಮೊದಲು ಹೇಳಿದ್ದು 'ಸುಮಧ್ವವಿಜಯ'ದ ಆರಂಭ 'ವಿಜಯದ ಆರಂಭ'. ಸರಳ ಶೈಲಿ, ಗಂಭೀರ ಭಾಷೆ ವಿಶೇಷಾಂಶಗಳ ಖಜಾನೆ ಇಲ್ಲಿದೆ.

ಕರ್ನಾಟಕದ ಎಲ್ಲ ವಿದ್ಯಾಪೀಠಗಳಲ್ಲಿ ವಿಶೇಷವಾಗಿ ಸಂಸ್ಕೃತ ವೈಷ್ಣವ ವಿದ್ಯಾಪೀಠಗಳಲ್ಲಿ ಪಠ್ಯವಾಗಿ ಅಂಗೀ-ಕರಿಸಬೇಕಾದ – ಅಂಗೀಕರಿಸಬಹುದಾದ ಅನುವಾದ ಇದಾಗಿದೆ.

'ಪತ್ರಿಕೆ'ಯಿಂದ 'ಪುಸ್ತಕ'ಕ್ಕೆ ವಿದ್ವಾನ್ ಧನಂಜಯಾಚಾರ್ಯ ವರಖೇಡಕರ್ ಅಂದವಾಗಿ ರೂಪಾಂತರ ಮಾಡಿ ಕೊಟ್ಟಿದ್ದಾರೆ. ಮಸ್ತಕದಲ್ಲಿಟ್ಟುಕೊಳ್ಳಬಹುದಾದ 'ಅಂಬರಚುಂಬಿತ'ವಿದು. ಈ ಕೃಷಿ ನಿರಂತರವಾಗಿರಲಿ.

ಭಾಟ್ಟಸಂಗ್ರಹದ ಮರುಮುದ್ರಣ, ಗೀತೆಯ 15 ವ್ಯಾಖ್ಯಾನಗಳ ಪ್ರಕಾಶನ, ಶ್ರೀಮನ್ನ್ಯಾಯಸುಧೆಯ 16 ರಿಂದ 22ರ ಬೃಹತ್ ಸಂಪುಟಗಳು, ಶ್ರೀರಾಘವೇಂದ್ರವಿಜಯದ ವಿಸ್ತೃತ ವ್ಯಾಖ್ಯಾನಗಳು ಮುಂತಾದ ಗ್ರಂಥಗಳನ್ನು ಹೊರತಂದ ಕೀರ್ತಿ ಶ್ರೀ ಶ್ರೀಸುಶಮೀಂದ್ರತೀರ್ಥರ ವರಕುಮಾರಕರಾದ ಪರಮಪೂಜ್ಯ ಶ್ರೀ ಶ್ರೀ ಸುಯತೀಂದ್ರ-ತೀರ್ಥರಿಗೆ ಸಲ್ಲುತ್ತದೆ. ಭಕ್ತವೃಂದ ಈ 'ಯತಿಶಿರೋಮಣಿ'ಗಳಿಗೆ ಆಜನ್ಮ ಪರ್ಯಂತ ಋಣಿಯಾಗಿರುತ್ತದೆ. ವಿಷ್ಣುವಿನ ಹೃದಯವಾದ ವೈಷ್ಣವರು ಇದನ್ನು ಯಾವಾಗಲೂ ಧರಿಸಲಿ. ಇದರಿಂದ ಇಲ್ಲಿ ಮತ್ತು ಅಲ್ಲಿ ಎರಡರಲ್ಲೂ ಸುಖವುಂಟು.

*''ಮಧ್ವಸ್ಯ ಕೀರ್ತಿರ್ದಿನನಾಥದೀಪ್ತಿಮ್ ॥''*

ಸಜ್ಜನರ ಕಿಂಕರ

***ರಾಜಾ ಎಸ್. ರಾಜಗೋಪಾಲಾಚಾರ್ಯ***

*ಶ್ರೀಶ್ರೀಗಳವರ ಆಪ್ತಕಾರ್ಯದರ್ಶಿ*

**ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ**

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಮುನ್ನುಡಿ

ಕರಾಳ ಕಲಿಯುಗದ ಪ್ರಭಾವದಿಂದ ಸಜ್ಜನರು ಕಂಗೆಟ್ಟು ಧರ್ಮಮಾರ್ಗದಿಂದ ಚ್ಯುತರಾಗಲು ಸಜ್ಜನರ ಮೇಲಿನ ಕೃಪೆಯಿಂದ ಬ್ರಹ್ಮಾದಿದೇವತೆಗಳು ಭಗವಂತನನ್ನು ಜಗತ್ಕಲ್ಯಾಣಕ್ಕಾಗಿ ಪ್ರಾರ್ಥಿಸಿದರು. ಮೂರು ಯುಗಗಳಲ್ಲಿ ಮಾತ್ರ ಅವತಾರವುಳ್ಳ ಭಗವಂತನು ಬ್ರಹ್ಮನಿಗೆ ಭೂಲೋಕದಲ್ಲಿ ಅವತಾರವಿಲ್ಲದ್ದನ್ನು ಮನಗಂಡು ಜೀವೋತ್ತಮರಾದ ವಾಯುದೇವರಿಗೆ ಅವತರಿಸಲು ಸೂಚನೆಯನ್ನಿತ್ತರು.

ಭಗವದಾಜ್ಞೆಯನ್ನು ಶಿರಸಾವಹಿಸಿ ವಾಯುದೇವರು ಮಧ್ಯಗೇಹಭಟ್ಟದಂಪತಿಗಳಲ್ಲಿ ವಿಜಯದಶಮಿಯ ಶುಭದಿನದಂದು ಅವತರಿಸಿ ತಂದೆತಾಯಿಗಳಿಂದ ಇಡಲ್ಪಟ್ಟ ವಾಸುದೇವನೆಂಬನಾಮಕರಣದಿಂದ ಪ್ರಸಿದ್ಧರಾದರು. ಬಾಲ್ಯದಲ್ಲೇ ಅನನ್ಯಾದೃಶಮಹಿಮೆಗಳನ್ನು ತೋರಿಸುತ್ತಾ ನಾನು ಜ್ಞಾನಕ್ಕಾಗಿ ಅವತರಿಸಿದ ಅಸುದೇವ = ಪ್ರಾಣದೇವರು ಎಂಬುದನ್ನು ಅಭಿವ್ಯಕ್ತಗೊಳಿಸಿದರು.

ಕಾಲಕ್ಕೆ ಅನುಗುಣವಾಗಿ ವೇದೋಕ್ತ ಸಂಸ್ಕಾರಗಳಿಂದ ಸುಸಂಸ್ಕೃತರಾದ ಇವರು ಉಪನಯನವಾದ ಅನಂತರದಲ್ಲಿ ಅಚ್ಯುತಪ್ರೇಕ್ಷಾಚಾರ್ಯರಿಂದ ಪೂರ್ಣಬೋಧ ಎಂಬ ನಾಮದೊಂದಿಗೆ ತುರ್ಯಾಶ್ರಮವನ್ನು ಸ್ವೀಕರಿಸಿದರು. ಹಂಸ-ನಾಮಕ ಪರಮಾತ್ಮನ ದಿವ್ಯಪೀಠದಲ್ಲಿ ಇವರನ್ನು ಕೂಡಿಸಿ ಅಚ್ಯುತಪ್ರೇಕ್ಷರು ಆನಂದತೀರ್ಥರೆಂಬ ಅನ್ವರ್ಥನಾಮ-ವನ್ನಿತ್ತರು. ಭಗವಂತನ ಆದೇಶದಂತೆ ಸೂತ್ರಭಾಷ್ಯವನ್ನು ರಚಿಸಿ ಅವರನ್ನು ಸಂತೋಷಪಡಿಸಿದರು. ಸಮಸ್ತ ಭಾರತ-ದೇಶವನ್ನು ಸಂಚರಿಸಿ ಆ ಕಾಲದಲ್ಲಿದ್ದ ಇಪ್ಪತ್ತೊಂದು ದುರ್ಮತಗಳನ್ನು ಖಂಡಿಸಿ ಸಿದ್ಧಾಂತಸ್ಥಾಪನೆಯನ್ನು ಮಾಡಿದರು. ಉಪನಿಷತ್ಪ್ರಸ್ಥಾನ, ಸೂತ್ರಪ್ರಸ್ಥಾನ, ಗೀತಾಪ್ರಸ್ಥಾನ, ಪುರಾಣಪ್ರಸ್ಥಾನ ಹೀಗೆ ಹಲವು ವಿಷಯಗಳನ್ನಾಧರಿಸಿ ಮೂವತ್ತೇಳು ಗ್ರಂಥಗಳನ್ನು ರಚನೆ ಮಾಡಿದರು.

ತ್ರಿವಿಕ್ರಮಪಂಡಿತರನ್ನು, ಶೋಭನಭಟ್ಟರನ್ನು ವಾದದಲ್ಲಿ ಗೆದ್ದು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಹೀಗೆ ತಾವು ಸಂಚರಿಸಿದ ಕಾಲದಲ್ಲಿ ಅನೇಕ ಪವಾಡಗಳನ್ನು ತೋರಿಸುವುದರ ಮೂಲಕ ಸಜ್ಜನರನ್ನು ಉದ್ಧಾರಮಾಡಿದರು.

ತಮ್ಮ ಈ ತತ್ತ್ವಜ್ಞಾನದ ಸಂಪ್ರದಾಯದ ಪದ್ಧತಿಯು ಮುಂದುವರಿಯಲು ಪದ್ಮನಾಭತೀರ್ಥರನ್ನು ತಮ್ಮ ಪ್ರಥಮ ಸಂನ್ಯಾಸಿಶಿಷ್ಯರನ್ನಾಗಿ ಸ್ವೀಕರಿಸಿ ಒಂದು ಪೀಠವನ್ನು ಸ್ಥಾಪನೆ ಮಾಡಿದರು. ಉಡುಪಿಯ ಪ್ರಾಂತ್ಯಕ್ಕೆ ಎಂಟು ಜನರನ್ನು ಸಂನ್ಯಾಸಿಶಿಷ್ಯರನ್ನಾಗಿ ಸ್ವೀಕರಿಸಿ ತಾವೇ ಪ್ರತಿಷ್ಠಾಪಿಸಿದ ಶ್ರೀಕೃಷ್ಣನ ಆರಾಧನೆಗೆ, ತತ್ತ್ವಪ್ರಚಾರಕ್ಕಾಗಿ ಮೀಸಲಿಟ್ಟರು. ತಮ್ಮ ಅವತಾರಕಾರ್ಯಸಮಾಪ್ತಿಯಾಗುವ ಪ್ರಸಂಗವು ಒದಗಿಬಂದಾಗ ಉಡುಪಿಯ ಅನಂತೇಶ್ವರದೇವಸ್ಥಾನದಲ್ಲಿ ಶಿಷ್ಯರಿಗೆ ಐತರೇಯೋಪನಿಷತ್ತಿನ ಪಾಠವನ್ನು ಹೇಳುತ್ತಿರುವಾಗ ದೇವತೆಗಳು ಪುಷ್ಪವೃಷ್ಟಿಯನ್ನು ಗೈದರು. ಆ ಪುಷ್ಪದ ರಾಶಿಯಿಂದ ಆಚಾರ್ಯರು ಕಾಣದಿರುವಾಗ ಆ ಪುಷ್ಪಗಳನ್ನು ಸರಿಸಿ ನೋಡಲಾಗಿ ಅಲ್ಲಿ ಶ್ರೀಮದಾಚಾರ್ಯರು ಅದೃಶ್ಯರಾಗಿದ್ದರು.

ಅಂದು ಅದೃಶ್ಯರಾದ ಶ್ರೀಮದಾಚಾರ್ಯರು ಇಂದಿಗೂ ಕೂಡ ಉತ್ತರಬದರಿಕಾಶ್ರಮದಲ್ಲಿ ವೇದವ್ಯಾಸರ ಸನ್ನಿಧಾನದಲ್ಲಿ ಇರುವರು. ಅದಕ್ಕಾಗಿ ''ಅದೃಶ್ಯೋ ರೂಪ್ಯಪೀಠೇಽಸ್ತಿ ದೃಶ್ಯೋಽಸ್ತಿ ಬದರೀತಟೇ'' ಎನ್ನುವ ಮಾತು ಪ್ರಚಲಿತವಾಗಿದೆ.

## ಶ್ರೀಮದಾಚಾರ್ಯರು ರಚಿಸಿದ ಗ್ರಂಥಗಳು
## (ಸರ್ವಮೂಲಗ್ರಂಥಗಳು)

*ಗೀತಾಪ್ರಸ್ಥಾನಗ್ರಂಥಗಳು:*

ಶ್ರೀಮದ್ಭಗವದ್ಗೀತಾಭಾಷ್ಯಮ್

ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯಃ

*ಸೂತ್ರಪ್ರಸ್ಥಾನಗ್ರಂಥಗಳು :*

ಶ್ರೀಮದ್ಬ್ರಹ್ಮಸೂತ್ರಭಾಷ್ಯಮ್

ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನಮ್

ಶ್ರೀಮದ್ಬ್ರಹ್ಮಸೂತ್ರಾಣುಭಾಷ್ಯಮ್

ನ್ಯಾಯವಿವರಣಮ್

*ಉಪನಿಷತ್ಪ್ರಸ್ಥಾನಗ್ರಂಥಗಳು :*

ಐತರೇಯೋಪನಿಷದ್ಭಾಷ್ಯಮ್

ಛಾಂದೋಗ್ಯೋಪನಿಷದ್ಭಾಷ್ಯಮ್

ಬೃಹದಾರಣ್ಯಕೋಪನಿಷದ್ಭಾಷಮ್

ಈಶಾವಾಸ್ಯೋಪನಿಷದ್ಭಾಷ್ಯಮ್

ತಲವಕಾರೋಪನಿಷದ್ಭಾಷ್ಯಮ್

ಷಟ್ಪ್ರಶ್ನೋಪನಿಷದ್ಭಾಷ್ಯಮ್

ಕಾಠಕೋಪನಿಷದ್ಭಾಷ್ಯಮ್

ಆಥರ್ವಣೋಪನಿಷದ್ಭಾಷ್ಯಮ್

ಮಾಂಡೂಕ್ಯೋಪನಿಷದ್ಭಾಷ್ಯಮ್

ತೈತ್ತಿರೀಯೋಪನಿಷದ್ಭಾಷ್ಯಮ್

*ಶ್ರುತಿಪ್ರಸ್ಥಾನಗ್ರಂಥ :*

ಋಗ್ಭಾಷ್ಯಮ್

*ಇತಿಹಾಸಪ್ರಸ್ಥಾನಗ್ರಂಥಗಳು :*

ಮಹಾಭಾರತತಾತ್ಪರ್ಯನಿರ್ಣಯಃ

ಯಮಕಭಾರತಮ್

*ಪುರಾಣಪ್ರಸ್ಥಾನಗ್ರಂಥ :*

ಭಾಗವತತಾತ್ಪರ್ಯನಿರ್ಣಯಃ

*ಪ್ರಕರಣಗ್ರಂಥಗಳು :*

ತತ್ತ್ವಸಂಖ್ಯಾನಮ್

ತತ್ತ್ವವಿವೇಕಃ

ತತ್ತ್ವೋದ್ಯೋತಃ

ವಿಷ್ಣುತತ್ತ್ವನಿರ್ಣಯಃ

ಪ್ರಮಾಣಲಕ್ಷಣಮ್

ಕಥಾಲಕ್ಷಣಮ್

ಉಪಾಧಿಖಂಡನಮ್

ಮಾಯಾವಾದಖಂಡನಮ್

ಪ್ರಪಂಚಮಿಥ್ಯಾತ್ವಾನುಮಾನಖಂಡನಮ್

ಕರ್ಮನಿರ್ಣಯಃ

*ಆಚಾರಗ್ರಂಥಗಳು :*

ತಂತ್ರಸಾರಸಂಗ್ರಹಃ

ಸದಾಚಾರಸ್ಮೃತಿಃ

ಜಯಂತೀನಿರ್ಣಯಃ

ಕೃಷ್ಣಾಮೃತಮಹಾರ್ಣವಃ

ಯತಿಪ್ರಣವಕಲ್ಪಃ

*ಸ್ತೋತ್ರಗ್ರಂಥಗಳು :*

ನಖಸ್ತುತಿಃ

ದ್ವಾದಶಸ್ತೋತ್ರಮ್

ಕಂದುಕಸ್ತುತಿಃ (ಪೂರ್ವಾಶ್ರಮದಲ್ಲಿ ರಚಿತವಾದದ್ದು)

## ಸುಮಧ್ವವಿಜಯದ ಬಗ್ಗೆ ಒಂದು ಮಾತು

ಹದಿನಾರು ಸರ್ಗಾತ್ಮಕವಾದ ಈ ಕೃತಿಯು ಮಹಾಕಾವ್ಯವೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಅಪೂರ್ವ ಛಂದಸ್ಸುಗಳಿಂದ ಅಲಂಕೃತವಾದ ಈ ಕಾವ್ಯವು ಶಾಸ್ತ್ರಗ್ರಂಥವೆಂದರೂ ತಪ್ಪಾಗಲಾರದು. ಶ್ರೀಮದಾಚಾರ್ಯರ ನೈಜ ಚರಿತ್ರೆಯನ್ನು ತಿಳಿಸಲು ಹೊರಟ ಈ ಕಾವ್ಯದಲ್ಲಿ ಎಲ್ಲಿಯೂ ಇಲ್ಲದ ಉತ್ಪ್ರೇಕ್ಷೆಗಳನ್ನು ವರ್ಣಿಸಿ ಕಾವ್ಯದ ಸೊಬಗನ್ನು ಹೆಚ್ಚಿಸಿಲ್ಲ ಎಂಬ ಮಾತನ್ನು ಸ್ವಯಂ ನಾರಾಯಣಪಂಡಿತಾಚಾರ್ಯರೇ ತಮ್ಮ ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಈ ಗ್ರಂಥವು ಇವತ್ತು ಸಂಸ್ಕೃತವಾಙ್ಮಯದಲ್ಲಿ ಕಂಡುಬರುವ ಎಲ್ಲ ವಿಜಯಕಾವ್ಯಗಳಿಗೆ ಮೂಲವೆಂದರೆ ತಪ್ಪಾಗಲಾರದು. ಜೀವೋತ್ತಮರಾದ ಇವರ ವಿಶಿಷ್ಟಲೀಲೆಗಳನ್ನು ಇದರಲ್ಲಿ ವರ್ಣಿಸಿರುವುದರಿಂದ ನಿತ್ಯ ಪಾರಾಯಣಕ್ಕೆ ಅತ್ಯಂತ ಸೂಕ್ತವಾದ ಗ್ರಂಥವಾಗಿದೆ.

ಸುಮಧ್ವವಿಜಯದ ಮೇಲೆ ಅನೇಕ ವ್ಯಾಖ್ಯಾನಗಳು ಹೊರಟಿವೆ. ಅವು ಈ ಕೆಳಗಿನಂತೆ ತಿಳಿಯಬಹುದು.

1) ಶ್ರೀ ನಾರಾಯಣ ಪಂಡಿತಾಚಾರ್ಯರ ಭಾವಪ್ರಕಾಶಿಕಾ
2) ಶ್ರೀ ವೇದಾಂಗತೀರ್ಥರ ಪದಾರ್ಥದೀಪಿಕಾ
3) ಶ್ರೀ ಸುಮತೀಂದ್ರತೀರ್ಥರ ವ್ಯಾಖ್ಯಾನ
4) ಶ್ರೀ ವಿಶ್ವಪತಿತೀರ್ಥರ ಪದಾರ್ಥದೀಪಿಕೋದ್ಬೋಧಿಕಾ
5) ಶ್ರೀ ಲಿಂಗೇರಿ ಶ್ರೀನಿವಾಸಾಚಾರ್ಯರ ವ್ಯಾಖ್ಯಾನ
6) ಆನಂದತೀರ್ಥಾಚಾರ್ಯರ ಪದಾರ್ಥಪ್ರಕಾಶಿಕಾ
7) ಛಲಾರಿ ಶೇಷಾಚಾರ್ಯರ ಮಂದೋಪಕಾರಿಣೀ
8) ಗರುಡವಾಹನ ಲಕ್ಷ್ಮೀನಾರಾಯಣಾಚಾರ್ಯರು
(ಇವರು ರಾಯರ ಪೂರ್ವಾಶ್ರಮದ ಸಂತತಿ)

ಇದಲ್ಲದೇ ನಮ್ಮ ಶ್ರೀಮಠದ ಪೂರ್ವಿಕ ಗುರುಗಳಾದ ಶ್ರೀಸುಜನೇಂದ್ರತೀರ್ಥರು ಒಂದು ವ್ಯಾಖ್ಯಾನವನ್ನು ಬರೆದಿದ್ದಾರೆಂದು ತಿಳಿದು ಬರುತ್ತದೆ.

ಇತ್ತೀಚಿನ ದಿನಗಳಲ್ಲಿ ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರು ತತ್ವಚಂದ್ರಿಕಾ ಎಂಬ ವ್ಯಾಖ್ಯಾನವನ್ನು ರಚಿಸಿ ಪ್ರಕಾಶನಗೊಳಿಸಿದ್ದಾರೆ.

## ಗ್ರಂಥಕರ್ತೃಗಳ ಪರಿಚಯ

ಶ್ರೀಸುಮಧ್ವವಿಜಯವನ್ನು ಬರೆದ ನಾರಾಯಣಪಂಡಿತಾಚಾರ್ಯರು ಶ್ರೀಸುಬ್ರಹ್ಮಣ್ಯಪಂಡಿತರ ಮೊಮ್ಮಕ್ಕಳು, ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು ಎಂದು ತಿಳಿದು ಬರುತ್ತದೆ. ಆಶುಕವಿಗಳಾದ ಇವರು ಲಿಕುಚವಂಶದವ-ರೆಂದು ಆಂಗೀರಸ ಗೋತ್ರದಲ್ಲಿ ಜನಿಸಿದವರೆಂದು ತಿಳಿದುಬರುತ್ತದೆ. ಎಂಥ ಜಟಿಲವಾದ ಶಾಸ್ತ್ರಪ್ರಮೇಯಗಳನ್ನು ಸುಲಭವಾದ ಕಾವ್ಯಶೈಲಿಯಲ್ಲಿ ಬರೆಯುವುದರಲ್ಲಿ ಅಪ್ರತಿಮರು ಇವರು. ಶ್ರೀಮದಾಚಾರ್ಯರ ವೈಭವವನ್ನು ಕಣ್ಣಾರೆ ಕಂಡು ಪುಟಕ್ಕಿಳಿಸಿದ ಪೂತಾತ್ಮರು.

## ಇವರು ರಚಿಸಿದ ಗ್ರಂಥಗಳು

1) ಸುಮಧ್ವವಿಜಯಃ
2) ಭಾವದೀಪಃ (ಸುಮಧ್ವವಿಜಯಭಾವಪ್ರಕಾಶಿಕಾ)
3) ಅಣುಮಧ್ವವಿಜಯಃ (ಪ್ರಮೇಯನವಮಾಲಿಕಾ)
4) ಮಣಿಮಂಜರೀ
5) ನಯಚಂದ್ರಿಕಾ (ಅನುವ್ಯಾಖ್ಯಾನಟೀಕಾ)
6) ತತ್ತ್ವಮಂಜರೀ (ವಿಷ್ಣುತತ್ತ್ವನಿರ್ಣಯಟೀಕಾ)
7) ಯಮಕಭಾರತಟೀಕಾ
8) ಅಣುಭಾಷ್ಯಟೀಕಾ
9) ಕೃಷ್ಣಾಮೃತಮಹಾರ್ಣವಟೀಕಾ
10) ಮಿಥ್ಯಾತ್ವಾನುಮಾನಖಂಡನಟೀಕಾ (ಶ್ಲೋಕರೂಪ)

11) ಸಂಗ್ರಹರಾಮಾಯಣಮ್ (ನಿರ್ಣಯಾನುಸಾರಿಯಾಗಿ ರಾಮಾಯಣಕಥಾಸಂಗ್ರಹ)

12) ಶುಭೋದಯಮ್ (ಒಂದು ಆಧ್ಯಾತ್ಮಿಕ ಕಾವ್ಯ)

13) ಪಾರಿಜಾತಹರಣಮ್ (ಯಮಕಕಾವ್ಯ)

14) ಯೋಗದೀಪಿಕಾ (ಸದಾಚಾರವಿವರಣರೂಪ ಗ್ರಂಥ)

15) ಮಧ್ವಾಮೃತಮಹಾರ್ಣವಃ (ಶ್ರೀಮಧ್ವಮಾಹಾತ್ಮ್ಯಪ್ರತಿಪಾದಕ ಕೃತಿ)

16) ಅಂಶಾವತಾರ (ಅಕಾರಾದಿಯಾಗಿ ದೇವದೈತ್ಯರ ಅಂಶಾವೇಶಾವತಾರಗಳನ್ನು ನಿರೂಪಿಸುವ ಶ್ಲೋಕರೂಪ ಕೃತಿ)

17) ನರಸಿಂಹಸ್ತುತಿಃ

18) ರಾಮಗೀತ್ಯಷ್ಟಕಮ್

19) ದಾಶರಥ್ಯಷ್ಟಕಮ್

20) ಕೃಷ್ಣಮಾಲಾಸ್ತೋತ್ರಮ್ (ಮಹಾಭಾರತತಾತ್ಪರ್ಯನಿರ್ಣಯೋಕ್ತ-ಕೃಷ್ಣಕಥಾಸಂಗ್ರಹ)

21) ಮಹಾಲಕ್ಷ್ಮೀಸ್ತುತಿಃ

22) ಮಧ್ವಕವಚಮ್

23) ಅಣುವಾಯುಸ್ತುತಿಃ

24) ಶಿವಸ್ತುತಿಃ

25) ತಾರತಮ್ಯಸ್ತೋತ್ರಮ್

- ಇವುಗಳಲ್ಲಿನ ಕೆಲವು ಯಮಕಶ್ಲೋಕಗಳೂ, ಇನ್ನೂ ಕೆಲವು ಸ್ತೋತ್ರಗಳೂ ಸಹ ನಾರಾಯಣಪಂಡಿತರ ಹೆಸರಿನಲ್ಲಿ ಪ್ರಸಿದ್ಧವಾಗಿವೆ.

ಇಂತಹ ಮೇರುಕೃತಿಯನಿಸಿದ ಸುಮಧ್ವವಿಜಯದ ಅಧ್ಯಯನಶೀಲರಾದ ವಿದ್ಯಾರ್ಥಿಗಳಿಗೂ, ಜಿಜ್ಞಾಸುಗಳಿಗೂ ಅತ್ಯಂತ ಉಪಕಾರಕವಾದ ರೀತಿಯಲ್ಲಿ ಪದಚ್ಛೇದ ಅನ್ವಯಾನುಸಾರೇಣ ಅರ್ಥ, ತಾತ್ಪರ್ಯ, ವಿಗ್ರಹ, ವ್ಯಾಕರಣ, ಅಲಂಕಾರ, ಛಂದೋವಿಶೇಷಗಳನ್ನೊಳಗೊಂಡ ರೀತಿಯಲ್ಲಿ ಅನುವಾದಿಸಿ ಈ ಹಿಂದೆ ನಮ್ಮ ಶ್ರೀಮಠದ ಅಧಿಕೃತ ಮಾಸಪತ್ರಿಕೆಯಾದ ಗುರುಸಾರ್ವಭೌಮದಲ್ಲಿ ಧಾರಾವಾಹಿರೂಪದಿಂದ ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ ಶ್ರೀ 1008 ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು ಪ್ರಕಾಶನಗೊಳಿಸಿದ್ದರು. ಇದರ ಅನುವಾದವನ್ನು ಪ್ರಸಿದ್ಧ ವಿದ್ವಾಂಸರಾದ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು, ಮಾಗಡಿ ರಂಗನಾಥಾಚಾರ್ಯರು, ಹಾಗೂ ಎಸ್. ವಿ. ಭೀಮಭಟ್ಟರು, ಮಾಡಿದ್ದರು. ಪ್ರಕೃತ ಈ ಪ್ರಕಾಶನಕಾರ್ಯದಲ್ಲಿ ಮಾರ್ಗದರ್ಶನವನ್ನು ನೀಡಿದ, ಆಗಿನ ಶ್ರೀಗುರು-ಸಾರ್ವಭೌಮ ಪತ್ರಿಕೆಯ ಪ್ರಧಾನ ಸಂಪಾದಕರಾದ ಹಾಗು ನಮ್ಮ ವಿದ್ಯಾಗುರುಗಳಾದ ರಾಜಾ. ಎಸ್. ಗಿರಿಯಾ-ಚಾರ್ಯರ ನೇತೃತ್ವದಲ್ಲಿ ಈ ಅನುವಾದವು ಪ್ರಕಾಶನಗೊಂಡು ಎಲ್ಲರ ಕೈಸೇರಿತು. ಪ್ರಕೃತ ಪ್ರಸ್ತುತ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀ ಶ್ರೀ 1008 ಸುಯತೀಂದ್ರತೀರ್ಥ ಶ್ರೀಪಾದಂಗಳವರು ಮಾಸಪತ್ರಿಕೆಯಲ್ಲಿ ಪ್ರಕಟಗೊಂಡ ಶ್ರೀ ಸುಮಧ್ವವಿಜಯದ ಹದಿನಾರು ಸರ್ಗಾತ್ಮಕವಾದ ಈ ಕೃತಿಯನ್ನು ಸಂಪಾದಿಸಿ, ಪ್ರಕಾಶಿಸಲು ನಮಗೆ ಆದೇಶವನ್ನಿತ್ತಿದ್ದರು. ನಾವು ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದ ಅನೇಕ ವಿದ್ವಾಂಸರ ಸಹಕಾರದೊಂದಿಗೆ ಸಂಪಾದಿಸಿ, ಜಿಜ್ಞಾಸುಗಳ ಕೈಸೇರುವ ಪ್ರಯತ್ನವನ್ನು ಮಾಡಿದ್ದೇವೆ. ಈ ನಿಟ್ಟಿನಲ್ಲಿ ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳಾದ

ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರ ಹಾಗೂ ಹೆಚ್ಚುವರಿ ಆಪ್ತಕಾರ್ಯದರ್ಶಿಗಳಾದ ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರ ಸಹಕಾರವು ಅಭಿನಂದನೀಯವಾಗಿದೆ. ಇಂತಹ ಉತ್ತಮ ಕಾರ್ಯದಲ್ಲಿ ನಮ್ಮನ್ನು ತೊಡಗುವಂತೆ ಮಾಡಿದ ಪರಮಪೂಜ್ಯ ಶ್ರೀಪಾದಂಗಳವರಿಗೆ ನಮ್ಮ ಅನಂತ ಶಿ॥ಸಾ॥ ನಮನಗಳು.

ಹಾಗೆಯೇ ನಮಗೆ ಉತ್ತಮ ಮಾರ್ಗದರ್ಶನವನ್ನು ನೀಡಿದ ನಮ್ಮ ಗುರುಗಳಾದ ಪಂಡಿತಕೇಸರೀ ರಾಜಾ ಎಸ್. ಗಿರಿಯಾಚಾರ್ಯರಿಗೆ ಅನಂತ ನಮನಗಳು. ಹಾಗೆಯೇ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರನ್ನು ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಅಭಿನಂದಿಸುತ್ತೇವೆ ಕರಡು ತಿದ್ದುವ ಕಾರ್ಯದಲ್ಲಿ ಸಹಕರಿಸಿದ ನಮ್ಮ ಶ್ರೀ ಗುರುಸಾರ್ವಭೌಮಸಂಸ್ಕೃತವಿದ್ಯಾಪೀಠದ ವಿದ್ವಾಂಸರಿಗೆ ಹೃತ್ಪೂರ್ವಕ ಧನ್ಯ-ವಾದಗಳು. ಸರಿಯಾದ ಸಮಯಕ್ಕೆ ಅಂದವಾಗಿ ಮುದ್ರಿಸಿದ ಶ್ರೀ ಸುಧಾ ಮುದ್ರಣದ ಮಾಲೀಕರಾದ ಶ್ರೀ ಧನಂಜಯ ವರಖೇಡಕರ್ ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

*ವಿದ್ವಾನ್ ರಾಜಾ ಎಸ್. ಪವಮಾನಾಚಾರ್ಯ*
*ವಿದ್ವಾನ್ ಕಡಪ ರಾಘವೇಂದ್ರಾಚಾರ್ಯ*
*ವಿದ್ವಾನ್ ಡಾ॥ ಎನ್. ವಾದಿರಾಜಾಚಾರ್ಯ*
*ವಿದ್ವಾನ್ ಪುರಾಣಿಕ ಸುಬ್ರಹ್ಮಣ್ಯಾಚಾರ್ಯ*
ಸಂಪಾದಕರು.

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಚತುರ್ದಶಃ ಸರ್ಗಃ

### ಹದಿನಾಲ್ಕನೆಯ ಸರ್ಗದ ಕಥಾಸಾರ

ಶ್ರೀಮಧ್ವಾಚಾರ್ಯರು ಅತಿತೇಜಸ್ವಿಗಳಾಗಿ ವಿರಾಜಿಸುತ್ತಾ ಶ್ರೀ ವಿಷ್ಣುಮಂಗಲ ದೇವಾಲಯದಲ್ಲಿ ವಾಸ ಮಾಡುತ್ತಿದ್ದರು. ಜಯಸಿಂಹರಾಜನು ಶ್ರೀಮಧ್ವಾಚಾರ್ಯರನ್ನು ಬಹಳ ಭಕ್ತಿಯಿಂದ ಸೇವಿಸುತ್ತಾ ಅವರ ವಶದಲ್ಲಿರುವುದನ್ನು ನೋಡಿ ಆ ಗ್ರಾಮದ ಮುಖ್ಯಸ್ಥರು ಏನು ಮಾಡಲೂ ತೋರದೆ ಆಚಾರ್ಯರಲ್ಲಿದ್ದ ದ್ವೇಷವನ್ನು ತ್ಯಜಿಸಿದರು. ಅವರು ಪದ್ಮತೀರ್ಥನು ಕದ್ದ ಪುಸ್ತಕಗಳನ್ನು ಜಯಸಿಂಹರಾಜನ ಸಮ್ಮುಖದಲ್ಲಿ ಶಂಕರಪಂಡಿತರಿಗೆ ಅರ್ಪಿಸಿದರು. ಶಂಕರಪಂಡಿತರು ರಾಜನ ಮತ್ತು ಗ್ರಾಮದ ಮುಖ್ಯಸ್ಥರ ಪ್ರಾರ್ಥನೆಯಂತೆಯೂ, ಆಚಾರ್ಯರ ಆಜ್ಞೆಯಿಂದಲೂ ಆ ಪುಸ್ತಕಗಳನ್ನು ಸ್ವೀಕರಿಸಿದರು. ಆಗ ಶಂಕರಪಂಡಿತರ ಅಣ್ಣನಾದ ತ್ರಿವಿಕ್ರಮ ಪಂಡಿತಾಚಾರ್ಯರು ಜಯಸಿಂಹರಾಜನಿಗೆ ಸಂತೋಷದಿಂದ ಆಶೀರ್ವಾದ ಮಾಡಿದರು. ಆಚಾರ್ಯರು ಕೆಲವು ದಿವಸಗಳವರೆಗೆ ಆ ದೇವಾಲಯದಲ್ಲಿ ವಾಸಮಾಡುತ್ತಾ ತಮ್ಮ ಸಂಪರ್ಕಕ್ಕೆ ಬಂದ ಜನರಿಗೆ ಅವರವರ ಯೋಗ್ಯತೆಯನ್ನು ಅನುಸರಿಸಿ ಅನುಗ್ರಹ ಮಾಡುತ್ತಿದ್ದರು. ಅವರೊಡನೆ ಇದ್ದ ಇತರ ಯತಿಗಳೂ ತಮ್ಮ ಗುರುಗಳ ಆಚಾರವನ್ನು ತಾವೂ ಅನುಸರಿಸುತ್ತಿದ್ದರು. ಆಚಾರ್ಯರ ಜತೆಯಲ್ಲಿದ್ದ ಯತಿಶಿಷ್ಯರೂ, ಇತರ ಶಿಷ್ಯರೂ ತಮ್ಮ ತಮ್ಮ ಗುರುಗಳ ಸೇವೆಯನ್ನು, ಆಚಾರ್ಯರ ಸೇವೆಯನ್ನು ಅತಿಶಯವಾದ ಭಕ್ತಿಯಿಂದ ಮಾಡುತ್ತಿದ್ದರು. ಒಂದು ಸಂದರ್ಭವು ಹೀಗೆ ನಡೆಯಿತು. ಒಬ್ಬ ಶಿಷ್ಯನು ಹಿಂದಿನ ರಾತ್ರಿ ಬಹಳ ಹೊತ್ತಿನವರೆಗೆ ಗ್ರಂಥ ವ್ಯಾಸಂಗ ಮಾಡುತ್ತಾ ಇದ್ದು ಬಹಳ ಹೊತ್ತಾದ ಮೇಲೆ ಮಲಗಿದ್ದನು. ಆದ್ದರಿಂದ ಮರುದಿನ ಬೆಳಿಗ್ಗೆ ಅವನಿಗೆ ಬೇಗನೆ ಎಚ್ಚರವಾಗಲಿಲ್ಲ. ಅವನು ಗುರುಗಳಿಗೆ ಸ್ನಾನದ ಪಂಚೆ ಮಡಿಬಟ್ಟೆ ಮುಂತಾದವುಗಳನ್ನು ಒದಗಿಸಬೇಕಾಗಿತ್ತು. ಆ ಶಿಷ್ಯನು ಬೇಗನೆ ಏಳದಿದ್ದುದರಿಂದ ಆಚಾರ್ಯರು ಸ್ನಾನ ಕಾಲವು ಮೀರುವುದೆಂದು ತಿಳಿದು ತಾವೇ ಬಟ್ಟೆ ಇತ್ಯಾದಿಗಳನ್ನು ತೆಗೆದುಕೊಂಡು ಹೋದರು. ಕೂಡಲೇ ಆ ಶಿಷ್ಯನಿಗೆ ಎಚ್ಚರವಾಗಿ ಅವನು ತುಂಬಾ ವ್ಯಥೆಗೊಂಡನು. 'ಶಿಷ್ಯರೇ! ನೀವು ನಿದ್ದೆಯಿಂದ ಎದ್ದು ಮೊದಲೇ ನಿಮಗೆ ನೇಮಿಸಿದ ಕೆಲಸಗಳನ್ನು ಏಕೆ ಮಾಡಲಿಲ್ಲ?' ಎಂದು ಗುರುಗಳು ಆಕ್ಷೇಪಿಸಿಯಾರು ಎಂದು ಆ ಶಿಷ್ಯರು ಭಯದಿಂದ ವಿನೀತರಾಗಿ ಕೊಳದ ಬಳಿ ದಾರಿ ಬಿಟ್ಟು ಸುಮ್ಮನೆ ನಿಂತಿದ್ದರು. ಶ್ರೀ ಪೂರ್ಣಪ್ರಜ್ಞರು ಸ್ನಾನಮಾಡಿ ಆಹ್ನಿಕ ಮಾಡಿಕೊಳ್ಳುತ್ತಿದ್ದಾಗ ಅವರ ಹತ್ತಿರ ದೀಪವನ್ನು ಹಚ್ಚಿ ಇಟ್ಟಿದ್ದರು. ಆಗ ಮತ್ತೊಬ್ಬ ಯತಿಗಳು ಶಂಖದಲ್ಲಿ ನೀರು ತುಂಬಿ ಪರಮಾತ್ಮನಿಗೆ ಅರ್ಘ್ಯಪಾದ್ಯಾದಿ ಉಪಚಾರಗಳನ್ನು ಸಮರ್ಪಿಸಿ ಹಿಂದಿನ ದಿನದ ನಿರ್ಮಾಲ್ಯವನ್ನು ತೆಗೆದರು. ನಿರ್ಮಾಲ್ಯದ ಹೂವು ತುಳಸಿಗಳನ್ನು ತೆಗೆಯುವಾಗ ಅವುಗಳಿಂದ ಅಮೃತವು ಸುರಿಯುತ್ತಿತ್ತು. ಶಿಷ್ಯರು ಅದು ತುಪ್ಪವಿರಬಹುದು ಎಂದು ಹೇಳಿದಾಗ ಅಲ್ಲಿದ್ದ ಹಿರಿಯರು ಇದು ತುಪ್ಪವಲ್ಲ ಅಮೃತ! ಎಂದು ಹೇಳಿದರು. ಶಿಷ್ಯರು ಅದು ಅಮೃತವೆಂದು ನಂಬಿದರು. ಅಷ್ಟು ಹೊತ್ತಿಗಾಗಲೇ ಸೂರ್ಯನು ಉದಯಿಸಿದನು. ಕತ್ತಲೆಯೆಲ್ಲಾ ಕರಗಿಹೋಯಿತು. ಪ್ರಪಂಚವೆಲ್ಲವೂ ಸ್ವಚ್ಛವಾಯಿತು, ಮಂಗಳವಾಯಿತು. ಗವಾಕ್ಷಗಳ ಸಂಧಿಗಳಿಂದ

ಸೂರ್ಯಕಿರಣಗಳು ಒಳಹೊಕ್ಕು ಶಿಷ್ಯರನ್ನು ಅಧ್ಯಯನಕ್ಕೆ ಹೋಗಿರಿ ಎಂದು ಸ್ನೇಹಿತರಂತೆ ಎಚ್ಚರಿಸಿದವು. ಪ್ರವಚನ ಮಂಟಪದಲ್ಲಿ ಆಚಾರ್ಯರಿಗಾಗಿ ಎತ್ತರವಾದ ಆಸನವನ್ನು ಇಟ್ಟಿದ್ದರು. ಆಗ ಆಹ್ನಿಕವನ್ನು ಮುಗಿಸಿದ ಅನೇಕ ಯತಿಗಳೂ ಇತರರೂ ಬೇಗನೆ ಬಂದು ಕುಳಿತರು. ಅವರು ವೇದಾಂತ ಶಾಸ್ತ್ರದ ಓಲೆಗರಿಯ ಪುಸ್ತಕಗಳನ್ನು ಎದುರಿಗೆ ಇಟ್ಟುಕೊಂಡು ಕುಳಿತರು. ಅವರು ತಾಲಪತ್ರ ಪುಸ್ತಕಗಳ ನಾಭಿಯಲ್ಲಿ ತೂರಿಸಿದ ದಾರದ ಕಟ್ಟನ್ನು ಬಿಚ್ಚಿ ಪತ್ರವನ್ನು ಬಿಡಿಸಿದರು. ಅವರು ಆ ದಿನ ಓದಬೇಕಾದ ಭಾಗವನ್ನು ಗಮನಿಸಿ ಗುರುತಿಟ್ಟುಕೊಂಡು ಆಚಾರ್ಯರು ಬರುವುದನ್ನೇ ಕಾಯುತ್ತಾ ಮೌನವಾಗಿ ಕುಳಿತಿದ್ದಾಗ ಶ್ರೀಪೂರ್ಣಪ್ರಜ್ಞರು ಜಪ ಮಾಡುವಾಗ ಸುತ್ತಲೂ ಕಟ್ಟಿಕೊಂಡಿದ್ದ ಕೆಂಪುಬಣ್ಣದ ಪರದೆಯನ್ನು ಸರಿಸಿ ಸೂರ್ಯನಂತೆ ಪ್ರವಚನಮಂಟಪದಲ್ಲಿ ತಮಗಾಗಿ ಇಟ್ಟಿರುವ ಆಸನದಲ್ಲಿ ರಾಜಿಸಿದರು. ಅವರು 'ಓಂ' ಎಂದು ಪ್ರಣವವನ್ನು ಮೊದಲು ಉಚ್ಚರಿಸಿದರು. ಅವರ ಸೂಚನೆಯಂತೆ ಶಿಷ್ಯರು ಉಪನಿಷದ್ ಭಾಷ್ಯದ ಮೂಲವನ್ನು ಮೆಲ್ಲಗೆ ಸ್ಪಷ್ಟವಾಗಿ ಪಠಿಸಿದರು. ಆಚಾರ್ಯರು ಕೇಳುವವರ ಕಿವಿಗೆ ಇಂಪಾಗುವಂತೆ ಅದರ ವ್ಯಾಖ್ಯಾನವನ್ನು ಮಾಡಿದರು. ಅವರು ಆಲಸ್ಯ ಅಥವಾ ಬೇಸರಗಳಿಲ್ಲದೆ ಪ್ರಶ್ನೆ ಕೇಳುವವರಿಗೆ ಧೀರಕಂಠದಿಂದ ಉತ್ತರ ಕೊಡುತ್ತಿದ್ದರು. ಹೀಗೆ ಶ್ರೀಮಧ್ವಾಚಾರ್ಯರು ಪ್ರವಚನ ಮಾಡುತ್ತಿರುವಾಗ ಮಧ್ಯಾಹ್ನ ಕಳೆಯಿತು. ಆಗ ಆಚಾರ್ಯರು ಪಾಠ ಮುಗಿಸಿ ಮಧ್ಯಾಹ್ನದ ಸ್ನಾನಕ್ಕಾಗಿ ಸರೋವರಕ್ಕೆ ಹೋದರು. ಆಚಾರ್ಯರು ಕೆರೆಯ ನೀರಿನಲ್ಲಿ ಮುಳುಗಿ ಸ್ನಾನಮಾಡಿ ಮೇಲಕ್ಕೆ ಬಂದರು. ಸರೋವರದ ದಡದಲ್ಲಿಯೇ ಕುಳಿತು ಶಂಖದಲ್ಲಿ ತುಂಬಿದ ನೀರಿನಿಂದ ಸಾಲಿಗ್ರಾಮ ಶಿಲೆಗಳಿಗೆ ಅಭಿಷೇಕ ಮಾಡಿದರು. ಆ ಸಾಲಿಗ್ರಾಮ ತೀರ್ಥವನ್ನು ತಾವು ಪ್ರಾಶನ ಮಾಡಿ, ಶಿಷ್ಯರಿಗೂ ಕೊಟ್ಟರು. ಅನಂತರ ಗೋಪೀಚಂದನದಿಂದ ಹನ್ನೆರಡು ನಾಮಗಳನ್ನು ಧರಿಸಿ ಶಂಖಚಕ್ರಾದಿ ಚಿಹ್ನೆಗಳನ್ನೂ ಧಾರಣಮಾಡಿದರು. ಅವರು ಸ್ನಾನ ಮಾಡಿ ಪೂಜೆ ಮಾಡಬೇಕಾಗಿರುವ ಸ್ಥಳಕ್ಕೆ ಬರುತ್ತಿರುವಾಗ 'ಎಲೈ ಜನರೇ! ಆಚಾರ್ಯರು ಬರುತ್ತಿದ್ದಾರೆ, ದಾರಿ ಬಿಟ್ಟು ಪಕ್ಕದಲ್ಲಿ ನಿಲ್ಲಿರಿ' ಎಂದು ಹೇಳುವುದಕ್ಕೆ ಮೊದಲೇ ಜನರು ಕೈಮುಗಿದುಕೊಂಡು ಪಕ್ಕದಲ್ಲಿ ನಿಲ್ಲುತ್ತಿದ್ದರು. ಆಚಾರ್ಯರು ಸ್ನಾನ ಮಾಡಿಕೊಂಡು ದೇವಸ್ಥಾನಕ್ಕೆ ಬಂದಾಗ ಮಡಿಯಲ್ಲಿರುವ ಭಕ್ತರು ಅವರ ಪಾದಗಳಿಗೆ ನೀರನ್ನು ಹಾಕಿ ತೊಳೆದರು. ಆಚಾರ್ಯರು ಮುಂದೆ ಹೋಟ ಕೂಡಲೇ ಭಕ್ತರು ಅವರ ಪಾದೋದಕವನ್ನು ಒಂದು ತೊಟ್ಟು ಬಿಡದಂತೆ ಸೇವಿಸುತ್ತಿದ್ದರು. ಆಚಾರ್ಯರು ಪೂಜಾಸ್ಥಾನಕ್ಕೆ ಬರುವಷ್ಟರಲ್ಲಿ ಒಬ್ಬ ಸಂನ್ಯಾಸಿಗಳು ಬಹಳ ನಿಯಮದಿಂದ ಅರ್ಘ್ಯೋದಕವನ್ನು ತಂದಿದ್ದರು. ಆಚಾರ್ಯರು ಪೂಜಾ ಮಂಟಪಕ್ಕೆ ಬಂದು ಶುದ್ಧವಾದ ಜಲವನ್ನು ಶಂಖದಲ್ಲಿ ತುಂಬಿ ಶಂಖಪೂಜೆಯನ್ನು ಮಾಡಿ, ಅನಂತರ ಕಲಶಪೂಜಾದಿಗಳನ್ನು ಮಾಡಿ ಗಂಧ ತುಳಸೀ ಪುಷ್ಪಗಳಿಂದ ದೇವರನ್ನು ಪೂಜಿಸಿದರು. ಆಚಾರ್ಯರು ಅರ್ಘ್ಯಪಾದ್ಯಾದಿಗಳಿಂದ ಪ್ರತಿಮೆಯಲ್ಲಿ ಶ್ರೀಮನ್ನಾರಾಯಣನನ್ನು ಪೂಜಿಸಿ, ತಮ್ಮ ಹೃದಯದಲ್ಲಿಯೂ ಬಿಂಬರೂಪಿಯಾದ ಪರಮಾತ್ಮನನ್ನು ನಿರಂತರವಾಗಿ ಪೂಜಿಸುತ್ತಿದ್ದರು. ಆಚಾರ್ಯರು ಶ್ರೀಹರಿಯ ಬಾಹ್ಯಪೂಜೆಯನ್ನು ಮುಗಿಸಿ ದೇವರಿಗೆ ಸಮರ್ಪಿಸಿದ ಗಂಧವನ್ನು ಹಚ್ಚಿಕೊಂಡರು. ದೇವರ ಪ್ರಸಾದರೂಪವಾದ ಅಕ್ಷತಾದಿಗಳನ್ನು ಧರಿಸಿದರು. ಮೃದುವಾದ ರೇಷ್ಮೆಯ ಪಟ್ಟೆ ಮಡಿಯನ್ನುಟ್ಟಿರುವ ಅವರು ಎಲ್ಲಾ ಭಕ್ತಜನರ ಕಣ್ಣನಗಳಿಗೆ ಉತ್ಸವವನ್ನು ಉಂಟುಮಾಡುತ್ತಿದ್ದರು. ಅನಂತರ ಅವರು ಸಂನ್ಯಾಸಿಗಳ ಭೋಜನಕ್ಕೆ ಅರ್ಹವಾದ ಶ್ರೇಷ್ಠವಾದ ಅನ್ನವನ್ನು, 'ಶ್ರೀಹರಿಯು ಸುಪ್ರೀತನಾಗಲಿ' ಎಂದು ಅನುಸಂಧಾನ ಮಾಡುತ್ತಾ ಸ್ವೀಕರಿಸುತ್ತಿದ್ದರು. ಶಿಷ್ಯರು ಮುಖ ಮಂಟಪದಲ್ಲಿ ರತ್ನಗಂಬಳಿಯನ್ನು ಹಾಸಿ ಅದರ ಮೇಲೆ ತೆಳುವಾದ ಬಟ್ಟೆಯನ್ನು ಹೊದ್ದಿಸಿ ಆಸನವನ್ನು ತಯಾರು ಮಾಡುತ್ತಿದ್ದರು. ಆಚಾರ್ಯರು ಆ ಮಂಟಪದಲ್ಲಿ ಕುಳಿತು ಮನೋಹರವಾದ ಶಾಸ್ತ್ರಾರ್ಥ ವಿಚಾರ ಮಾಡುತ್ತಾ ಪಂಡಿತರ ಸಮೂಹವನ್ನು ಸ್ವಲ್ಪ ಹೊತ್ತು ಸಂತೋಷಪಡಿಸುತ್ತಿದ್ದರು. ಒಂದು ದಿನ ಈ ರೀತಿಯಾಗಿ ಸ್ವಲ್ಪ ಸಮಯ ಕಳೆದ ಮೇಲೆ ಆಚಾರ್ಯರ ಪ್ರಿಯಶಿಷ್ಯರಲ್ಲೊಬ್ಬನು ಬಂದು ತನ್ನ ಬಾಯಿಯ ಗಾಳಿಯು ಆಚಾರ್ಯರಿಗೆ ತಗಲದಂತೆ, ಮುಖಕ್ಕೆ ಕೈ ಇಟ್ಟುಕೊಂಡು ಅವರ ಕಿವಿಯಲ್ಲಿ ಒಂದು ಕಾರ್ಯವನ್ನು ವಿಜ್ಞಾಪಿಸಿದನು. 'ಆಚಾರ್ಯರ ಹತ್ತಿರಕ್ಕೆ ಬಂದು ನಮಸ್ಕರಿಸಿ ಹೋಗಬೇಕೆಂದು ಅನೇಕ ಸ್ತ್ರೀಪುರುಷರು ಹೊರಗೆ ಕಾಯುತ್ತಿದ್ದಾರೆ. ಅವರು ಬಂದು ತಮ್ಮ ದರ್ಶನ ಮಾಡಿಕೊಂಡು ಹೋಗಲು ಅನುಮತಿಯನ್ನು ಕೊಡಬೇಕು' ಎಂದನು.

ಭಕ್ತರ ವಿಜ್ಞಾಪನೆಯನ್ನು ಕೇಳಿದ ಕೂಡಲೇ ಆಚಾರ್ಯರು ಮಂದಹಾಸ ಮಾಡುತ್ತಾ ಅವರು ಬರಬಹುದೆಂದು ಸೂಚಿಸಿದರು. ಕೂಡಲೇ ಸಭಾಮಂಟಪದಲ್ಲಿ ಸೇರಿದ ಗೃಹಸ್ಥರು ನಾನು ಮುಂದೆ ತಾನು ಮುಂದೆ ಎಂದು ಬೇಗನೆ ಸಮೀಪಕ್ಕೆ ಬಂದು ನಮಸ್ಕಾರ ಮಾಡಿದರು. ಅನೇಕ ದೇಶದ ಬೇರೆ ಬೇರೆ ಜನರು ಆಚಾರ್ಯರನ್ನು ನೋಡುವುದಕ್ಕೆ ಮೊದಲು ತಾವು ಕೇಳಿ ತಿಳಿದ ಗುಣಗಳಿಗಿಂತ ನೂರುಪಾಲು ಹೆಚ್ಚು ಗುಣವುಳ್ಳ ಆಚಾರ್ಯವನ್ನು ಪ್ರತ್ಯಕ್ಷವಾಗಿ ನೋಡುತ್ತಾ ಆಶ್ಚರ್ಯಪಟ್ಟು ಕೈಮುಗಿದು ನಿಂತುಕೊಂಡುಬಿಟ್ಟರು. ಶ್ರೀಮದಾಚಾರ್ಯರು ಅವರನ್ನು ಕುರಿತು 'ಕುಳಿತುಕೊಳ್ಳಿರಿ' ಎಂದು ಕೈಯಿಂದ ಸನ್ನೆ ಮಾಡುತ್ತಾ ಹೇಳಿದರು.

ಅನಂತರ ಆಚಾರ್ಯರ ಪ್ರವಚನ ಪ್ರಾರಂಭವಾಯಿತು. ಆಗ ಕೆಲವು ಶಿಷ್ಯರು ಇತರರಿಗೆ ಪಾಠವನ್ನು ಅನುವಾದ ಮಾಡಿ ಹೇಳುತ್ತಿದ್ದರು. ಇನ್ನು ಕೆಲವರು ಚಿಂತನ ಮಾಡುತ್ತಿದ್ದರು. ಆಚಾರ್ಯರು ಪಾಠ ಹೇಳಲು ಉದ್ಯುಕ್ತರಾದ ಕೂಡಲೇ ಅವರ ಶಿಷ್ಯರನ್ನು ಮತ್ತೊಬ್ಬನು ಕರೆದು 'ಈಗ ಅನುವಾದ ಮುಂತಾದ್ದು ಯಾವುದೂ ಬೇಡ. ಗುರುಗಳು ಪಾಠ ಹೇಳಲು ಪ್ರಾರಂಭಿಸುತ್ತಿದ್ದಾರೆ ಬಾ' ಎಂದು ಕರೆದನು. ಶ್ರೀವೇದವ್ಯಾಸದೇವರಂತೆ ಶೋಭಿಸುತ್ತಾ ಆಚಾರ್ಯರು ಸೂರ್ಯಾಸ್ತಮಯ ವಾಗುವವರೆಗೂ ಪಾಠ ಹೇಳಿದರು. ಜನರು ಎವೆಯಿಕ್ಕದೆ ಆಚಾರ್ಯರನ್ನು ನೋಡುತ್ತಾ ಹೊತ್ತು ಕಳೆದುದನ್ನೇ ತಿಳಿಯದೆ ಅಲ್ಲೇ ಕುಳಿತಿರುತ್ತಿದ್ದರು.

ಉದಯಿಸುವಾಗಲೂ ಕೆಂಪಾಗಿದ್ದು ಅಸ್ತಮಯ ಹೊಂದುವಾಗಲೂ ಕೆಂಪಾಗಿ ಕಾಣಿಸುತ್ತಿದ್ದ ಸೂರ್ಯನು, 'ಮಹಾತ್ಮರು ಸಂಪತ್ತಿನಲ್ಲಿಯೂ ಆಪತ್ತಿನಲ್ಲಿಯೂ ಆನಂದ-ವಿಕಾರಗಳನ್ನು ಹೊಂದುವುದಿಲ್ಲ' ಎಂಬುದನ್ನು ಸೂಚಿಸು-ತ್ತಿದ್ದನು. ಸೂರ್ಯನು ಸಮುದ್ರದಲ್ಲಿ ಮುಳುಗುತ್ತಾ ಅರ್ಧಭಾಗ ಮರೆಯಾದಾಗ ಕಪ್ಪುಸೀರೆಯನ್ನುಟ್ಟಿರುವ ಭೂದೇವಿಯ ಕಪ್ಪಾದ ಬಟ್ಟೆಯಲ್ಲಿ ಅರ್ಧ ಅಡಗಿದ್ದ ಕೆಂಪಾದ ರತ್ನದಂತೆ ಕಾಣಿಸುತ್ತಿದ್ದನು.

ಆಚಾರ್ಯರು ಸಾಯಂಕಾಲ ಸ್ನಾನಮಾಡಿ, ಪೃಥಿವ್ಯಾದಿತತ್ತ್ವಗಳಲ್ಲಿ ವ್ಯಾಪ್ತನಾದ, ಸಮಸ್ತಚೇತನಾಚೇತನ ಪ್ರಪಂಚಕ್ಕಿಂತ ಭಿನ್ನನಾದ ಶ್ರೀಹರಿಯನ್ನು ಧ್ಯಾನಿಸಿದರು.

ಗೃಹಸ್ಥರಾದ ಬ್ರಾಹ್ಮಣರು ಸರೋವರದ ಬಳಿಗೆ ಹೋಗಿ ಸೂರ್ಯನು ಕಾಣುತ್ತಿರುವಾಗಲೇ ಸಂಧ್ಯಾವಂದನೆಯನ್ನು ಪ್ರಾರಂಭಿಸಿ, ನಕ್ಷತ್ರಗಳು ಕಾಣುವವರೆಗೂ ಲೋಪವಿಲ್ಲದಂತೆ ಜಪ ಮಾಡಿದರು. ಅಗ್ನಿಹೋತ್ರಿಗಳು ಅಗ್ನಿಯಲ್ಲಿ ಹೋಮ ಮಾಡಿದರು.

ಅಷ್ಟು ಹೊತ್ತಿಗೆ ಚಂದ್ರೋದಯವಾಯಿತು. ಹಗಲು ಸಂತಪಿಸುತ್ತಿದ್ದ ಚಕೋರ ಪಕ್ಷಿಗಳೂ, ಕುಮುದ ಪುಷ್ಪಗಳೂ ಆಗ ಸಂತೋಷಪಟ್ಟವು. ಶ್ರೀಮಧ್ವಾಚಾರ್ಯರು ವಿಷ್ಣುಪದವನ್ನು (ವಿಷ್ಣುಸ್ವರೂಪವನ್ನು) ಪ್ರಕಾಶಗೊಳಿಸಿದರು. ಚಂದ್ರನೂ ವಿಷ್ಣುಪದವನ್ನು (ಆಕಾಶವನ್ನು) ಪ್ರಕಾಶಗೊಳಿಸಿದನು. ಈ ವಿಷಯಗಳನ್ನು ಹದಿನಾಲ್ಕನೆಯ ಸರ್ಗದಲ್ಲಿ ಶ್ರೀಮನ್ನಾರಾಯಣ ಪಂಡಿತಾಚಾರ್ಯರು ಗುಣಾಲಂಕಾರಭರಿತವಾದ ಉತ್ತಮ ಶೈಲಿಯಿಂದ ವರ್ಣಿಸಿದ್ದಾರೆ.

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಚತುರ್ದಶಃ ಸರ್ಗಃ

**ಅವತಾರಿಕಾ—** ಶ್ರೀಮಧ್ವಾಚಾರ್ಯರು ವಿಷ್ಣುಮಂಗಲದಲ್ಲಿ ವಾಸಮಾಡುತ್ತಾ ಜಯಸಿಂಹರಾಜನನ್ನು, ಹಾಗೂ ಉಳಿದ ಮಹಾಜನರನ್ನೂ ತಮ್ಮಲ್ಲಿ ಭಕ್ತರನ್ನಾಗಿ ಮಾಡಿಕೊಂಡರೆಂದು ಹೇಳುತ್ತಾರೆ.

**ಪರಿವೃಢಘನಸಂಘೇ ರಾಜಸಿಂಹೋರ್ಜಶಕ್ತ್ಯಾ**
**ತ್ಯಜತಿ ಮಲಿನಭಾವಂ ನೀರಸತ್ವಾನ್ನಿಕಾಮಮ್ ।**
**ಸ್ಫುಟಮುದಯತಿ ತೇಜಸ್ಸ್ವ್ಯುಜ್ಜ್ವಲೇ ಮಧ್ವಭಾನೌ**
**ಸುಜನಜಲಜಕಾಂತ್ಯೈ ವಿಶ್ವಮಾಸೀನ್ಮನೋಜ್ಞಮ್ ॥ 1 ॥**

**ಪದಚ್ಛೇದ—** ಪರಿವೃಢಘನಸಂಘೇ, ರಾಜಸಿಂಹೋರ್ಜಶಕ್ತ್ಯಾ, ತ್ಯಜತಿ, ಮಲಿನಭಾವಂ, ನೀರಸತ್ವಾತ್, ನಿಕಾಮಂ, ಸ್ಫುಟಂ, ಉದಯತಿ, ತೇಜಸ್ಸ್ವ್ಯುಜ್ಜ್ವಲೇ ಮಧ್ವಭಾನೌ ಸುಜನಜಲಜಕಾಂತ್ಯೈ, ವಿಶ್ವಂ, ಆಸೀತ್, ಮನೋಜ್ಞಮ್ ।

**ಅನ್ವಯ—** ಪರಿವೃಢಘನಸಂಘೇ, ರಾಜಸಿಂಹೋರ್ಜಶಕ್ತ್ಯಾ, ನೀರಸತ್ವಾತ್, ಮಲಿನಭಾವಂ, ನಿಕಾಮಂ, ತ್ಯಜತಿ, (ಸತಿ) ತೇಜಸ್ಸ್ವ್ಯುಜ್ಜ್ವಲೇ, ಮಧ್ವಭಾನೌ, ಸುಜನಜಲಜಕಾಂತ್ಯೈ, ಉದಯತಿ (ಸತಿ), ವಿಶ್ವಂ, ಮನೋಜ್ಞಂ, ಆಸೀತ್ ।

**ಅನ್ವಯಾರ್ಥ—**

**ಪರಿವೃಢ, ಘನ, ಸಂಘೇ** = ಪಾಡಿ ಕುಡಿಲು ಎಂಬ ಎರಡು ಗ್ರಾಮಗಳ (ಕಬೆನಾಡಿನ) ಮುಖ್ಯಸ್ಥರೆಂಬ, ಮೋಡಗಳ, ಸಮೂಹವು,

**ರಾಜಸಿಂಹೋರ್ಜಶಕ್ತ್ಯಾ** = ರಾಜಶ್ರೇಷ್ಠನಾದ ಜಯಸಿಂಹನೆಂಬ ಕಾರ್ತಿಕಮಾಸದ (ವೃಶ್ಚಿಕ ಮಾಸದ) ಸಾಮರ್ಥ್ಯದಿಂದ,

**ನೀರಸತ್ವಾತ್** = ಬಲವಿಲ್ಲದಿರುವುದರಿಂದ, ನೀರಿಲ್ಲದಿರುವುದರಿಂದ,

**ಮಲಿನಭಾವಂ** = ಪದ್ಮತೀರ್ಥಾದಿಗಳಲ್ಲಿ ಪಕ್ಷಪಾತವನ್ನು, ಆಚಾರ್ಯರಲ್ಲಿ ದ್ವೇಷವನ್ನು, ಕಪ್ಪಾಗಿರುವಿಕೆಯನ್ನು

**ನಿಕಾಮಂ** = ಅತ್ಯಂತವಾಗಿ

**ತ್ಯಜತಿ (ಸತಿ)** = ಬಿಡುತ್ತಿರಲು,

**ತೇಜಸ್ಸ್ವ್ಯುಜ್ಜ್ವಲೇ** = ಕಾಂತಿಯುಳ್ಳವರಲ್ಲಿ, ಪ್ರಕಾಶಮಾನರಾದ,

**ಮಧ್ವಭಾನೌ** = ಶ್ರೀಮಧ್ವಾಚಾರ್ಯರೆಂಬ ಸೂರ್ಯನು,

**ಸುಜನಜಲಜಕಾಂತ್ಯೈ** = ಸಜ್ಜನರೆಂಬ ತಾವರೆ ಹೂವುಗಳ ಶೋಭೆಗೋಸ್ಕರ,
**ಸ್ಫುಟಂ** = ಸ್ಪಷ್ಟವಾಗಿ,
**ಉದಯತಿ (ಸತಿ)** = ಅಭ್ಯುದಯವನ್ನು ಹೊಂದುತ್ತಿರಲು,
**ವಿಶ್ವಂ** = ಎಲ್ಲವೂ, ಪ್ರಪಂಚವು,
**ಮನೋಜ್ಞಂ** = ಮನೋಹರವಾಗಿ,
**ಆಸೀತ್** = ಆಯಿತು.

**ತಾತ್ಪರ್ಯ—** ಶರತ್ಕಾಲದ ಉತ್ತರಭಾಗದಲ್ಲಿ ಸೌರವೃಶ್ಚಿಕ ಮಾಸ,ಚಾಂದ್ರ ಆಶ್ವಯುಜಕಾರ್ತಿಕ ಮಾಸಗಳು ಬರುತ್ತವೆ. ಆ ಕಾಲದ ಸಾಮರ್ಥ್ಯದಿಂದ ಆಗ ನೀರಿಲ್ಲದಿರುವುದರಿಂದ ಮೋಡಗಳು ಕಪ್ಪುಬಣ್ಣವನ್ನು ಬಿಡುತ್ತವೆ, ಬೆಳ್ಳಗಾಗುತ್ತವೆ. ಸೂರ್ಯನು ಉಜ್ವಲವಾಗಿ ಬೆಳಗುತ್ತಾ ಕಮಲಗಳನ್ನು ಅರಳಿಸುವನು. ಆಗ ಪ್ರಪಂಚವೆಲ್ಲವೂ ರಮ್ಯವಾಗುತ್ತದೆ. ಹಾಗೆಯೇ ಕಬೆನಾಡಿನ ಮುಖಂಡರು, 'ಪಾಡಿ, ಕುಡಿಲು' ಎಂಬ ಎರಡು ಗ್ರಾಮಗಳ ಮುಖಂಡರು, ರಾಜನೂ ಶ್ರೀಮಧ್ವರ ಅಧೀನ ವಾಗಿರುವುದನ್ನು ಕಂಡರು. ಅವರ ಬಲವು ಕಡಿಮೆಯಾಯಿತು. ರಾಜನ ಹೆದರಿಕೆಯಿಂದ ಅವರು ಶ್ರೀಮಧ್ವರಲ್ಲಿ ದ್ವೇಷವನ್ನು ಬಿಟ್ಟರು. ಪದ್ಮತೀರ್ಥಾದಿಗಳಲ್ಲಿ ಪಕ್ಷಪಾತವನ್ನು ಬಿಟ್ಟರು. ಪದ್ಮತೀರ್ಥನು ಶಂಕರಾರ್ಯರಿಂದ ಅಪಹರಿಸಿದ ಪುಸ್ತಕಗಳನ್ನು ತಿರುಗಿ ಅವರಿಗೇ ಸತ್ಕಾರಪೂರ್ವಕವಾಗಿ ಅರ್ಪಿಸಿದನು. ಅವರಲ್ಲಿ ಗ್ರಾಮದ ಮುಖಂಡರು ಕ್ಷಮಾಪಣೆ ಕೇಳಿದರು. ಇದರಿಂದ ತೇಜಸ್ವಿಗಳಲ್ಲಿ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರಿಗೆ ದೊಡ್ಡ ವಿಜಯ ಉಂಟಾದಂತೆ ಆಯಿತು. ಹೀಗೆ ಎಲ್ಲಾ ಕಾರ್ಯವೂ ಮಂಗಳದಲ್ಲಿ ಪರ್ಯವಸಾನ ಹೊಂದಿತು. ಶ್ರೀಮಧ್ವಾಚಾರ್ಯರೇ ಸಾಕ್ಷಾತ್ತಾಗಿ ಅಲ್ಲಿಗೆ ಬಂದುದರಿಂದ ಪದ್ಮತೀರ್ಥಾದಿಗಳ ಪೀಡೆಯೆಲ್ಲ ಪರಿಹಾರವಾಗಿ ಎಲ್ಲವೂ ಅನುಕೂಲವಾಯಿತು.

'ಕಬೆನಾಡು' ಎಂಬ ಜಯಸಿಂಹನ ರಾಜ್ಯದ ಗ್ರಾಮದ ಮುಖಂಡರೆಂಬ ಮೇಘ ಸಮೂಹವು ರಾಜಶ್ರೇಷ್ಠನಾದ ಜಯಸಿಂಹನೆಂಬ ಕಾರ್ತಿಕ ಮಾಸದ ಬಲದಿಂದ ಮೋಡಗಳಲ್ಲಿ ನೀರು ಕಡಿಮೆಯಾದಂತೆ ಶಕ್ತಿ ಕಡಿಮೆಯಾದುದರಿಂದ, ಪದ್ಮತೀರ್ಥಾದಿಗಳಲ್ಲಿ ಪ್ರೀತಿ ಶ್ರೀಮಧ್ವಾಚಾರ್ಯರಲ್ಲಿ ದ್ವೇಷ ಎಂಬ ಮನಸ್ಸಿನ ಕಲ್ಮಷವನ್ನು ಚೆನ್ನಾಗಿ ಬಿಡುತ್ತಿರಲು, ತೇಜಸ್ಸುಳ್ಳವರಲ್ಲಿ ಅಧಿಕವಾಗಿ ಪ್ರಕಾಶಿಸುವ ಶ್ರೀಮಧ್ವಾಚಾರ್ಯರೆಂಬ ಸೂರ್ಯನು ಸಜ್ಜನರೆಂಬ ಕಮಲಗಳನ್ನು ಅರಳಿಸುವುದಕ್ಕಾಗಿ ಸ್ಪಷ್ಟವಾಗಿ ಉದಯಿಸಲು ಸಮಸ್ತ ಕಾರ್ಯವೂ ಮನೋಹರವಾಯಿತು ಎಂದು ಭಾವ. (ಅಲಂಕಾರಿಕ ತಾತ್ಪರ್ಯ)

ರಾಜಾನಂ ಶ್ರೀಮಧ್ವವಶವರ್ತಿನಂ ದೃಷ್ಟ್ವಾ ತದ್ಭಯೇನ ಗ್ರಾಮೀಣಜನೇ ಶ್ರೀಮಧ್ವಪ್ರಾತಿಕೂಲ್ಯಂ ಪರಿತ್ಯಜ್ಯ ಅನುಕೂಲ್ಯಂ ಭಜತಿ ಸತಿ, ಪ್ರಾಕ್ ಶಂಕರಾರ್ಯಕರಾತ್ ಪದ್ಮತೀರ್ಥಕೃತ ಪುಸ್ತಕಾಪಹಾರಸ್ಯ ಶಂಕರಾರ್ಯಸಂಮಾನನಾತ್ಮಕ ಪ್ರತಿಕ್ರಿಯಾಪೂರ್ವಕಂ ರಾಜ್ಞಿ ಶ್ರೀಮಧ್ವಕ್ಷಮಾಪನೋನ್ಮುಖೇ ಸತಿ ಸರ್ವಂ ಕಾರ್ಯಂ ಮನೋಹರಂ ಆಸೀತ್ ಇತ್ಯಭಿಪ್ರಾಯಃ.

**ಶ್ಲೇಷಾರ್ಥೇಷು—** ಘನಸಂಘೇ ಊರ್ಜಶಕ್ತ್ಯಾ ಶರತ್ಕಾಲೋತ್ತರಸ್ಯ ವೃಶ್ಚಿಕಮಾಸಸ್ಯ ಸಾಮರ್ಥ್ಯೇನ ನಿರ್ಜಲತ್ವಾತ್ ಮಾಲಿನ್ಯಂ ತ್ಯಜತಿ ಸತಿ ಶುಭ್ರತ್ವಂ ಚ ಭಜತಿ ಸತಿ ಸೂರ್ಯೇ ಚ ಶರದಿ ಮೇಘಾವರಣರಹಿತತ್ವೇನ ಸ್ಫುಟಂ ಉದಯತಿ ಸತಿ ವಿಶ್ವಂ ಜಗತ್ ಸರ್ವತೋದಿತಂ ಯಥಾ ಮನೋಹರಂ ಭವೇತ್ ತದ್ವತ್ ಇತಿ ಭಾವಃ (ಇದು ವಿಶ್ವಪತಿತೀರ್ಥೀಯದಲ್ಲಿ ಹೇಳಿರುವ ತಾತ್ಪರ್ಯ. ಇದರ ಭಾಷಾಂತರ ತಾತ್ಪರ್ಯವನ್ನು ಈ ಹಿಂದೆಯೇ ಕೊಡಲಾಗಿದೆ. ಇಲ್ಲಿ ಶ್ಲೇಷ ಸಂಕೀರ್ಣವಾದ ರೂಪಾಲಂಕಾರ)

**ಭಾವಪ್ರಕಾಶಿಕಾ—** ಊರ್ಜಃ ಶರದಃ ಉತ್ತರಭಾಗಃ, ಊರ್ಜ ಎಂದರೆ ಶರತ್ಕಾಲದ ಉತ್ತರ ಭಾಗ, ಆಶ್ವಯುಜ ಕಾರ್ತಿಕ ಮಾಸಗಳು ಶರದೃತು, ಇಲ್ಲಿ ಶರತ್ಕಾಲದ ಉತ್ತರಭಾಗ ಕಾರ್ತಿಕಮಾಸ, ಸೌರಮಾನ ರೀತಿಯಿಂದ ವೃಶ್ಚಿಕಮಾಸ.

ಮಲಿನಭಾವಂ ಮಾನಸಭಾವಂ ನೀಲತ್ವಂ ಚ = ಮಲಿನಭಾವ ಎಂದರೆ ಮನಸ್ಸಿನ ಹಗೆ ಪಕ್ಷಪಾತ ಮತ್ತು ಕಪ್ಪುಬಣ್ಣ, ವಿಶ್ವಂ ಕಾರ್ಯಂ ಅಶೇಷಂಜಗಚ್ಚ = ವಿಶ್ವಂ ಎಂದರೆ ಎಲ್ಲಾ ಕೆಲಸ, ಮತ್ತು ಸಮಸ್ತ ಪ್ರಪಂಚ ಎಂದು ಅರ್ಥ.

ವಿಗ್ರಹ—

**ಪರಿವೃಢಘನಸಂಘೇ—** ಪರಿವೃಢಾಃ ಏವ ಘನಾಃ ಪರಿವೃಢಘನಾಃ ಪರಿವೃಢಘನಾನಾಂ ಸಂಘಃ ಪರಿವೃಢಘನ ಸಂಘಃ ತಸ್ಮಿನ್ ।

**ನೀರಸತ್ವಂ—** ನಿರ್ಗತಃ ರಸಃ ಯೇಭ್ಯಃ ತೇ ನೀರಸಾಃ, ತೇಷಾಂ ಭಾವಃ ನೀರಸತ್ವಂ ತಸ್ಮಾತ್ ।

**ರಾಜಸಿಂಹೋರ್ಜಶಕ್ತ್ಯಾ—** ರಾಜಾ ಸಿಂಹ ಇವ ರಾಜಸಿಂಹಃ, ರಾಜಸಿಂಹ ಏವ ಊರ್ಜಃ ರಾಜ-ಸಿಂಹೋರ್ಜಃ, ತಸ್ಯ ಶಕ್ತಿಃ, ತಯಾ ।

**ಮಲಿನಭಾವಃ—** ಮಲಿನಸ್ಯ ಭಾವಃ ಮಲಿನಭಾವಃ ತಂ ।

**ತೇಜಸ್ಸ್ವುಜ್ವಲೇ—** ತೇಜಸ್ಸ್ವೇಷು ಉಜ್ವಲಃ ತೇಜಸ್ಸುಜ್ವಲಃ ತಸ್ಮಿನ್ ।

**ಮಧ್ವಭಾನೌ—** ಮಧ್ವಃ ಏವ ಭಾನುಃ ಮಧ್ವಭಾನುಃ ತಸ್ಮಿನ್ ।

**ಸುಜನಜಲಜಕಾಂತ್ಯೈಃ—** ಸುಜನಾ ಏವ ಜಲಜಾನಿ ಸುಜನಜಲಜಾನಿ, ಸುಜನಜಲಜಾನಾಂ ಕಾಂತಿಃ ಸುಜನಜಲಜಕಾಂತಿಃ ತಸ್ಯೈ ।

**ಕ್ರಿಯಾಪದ—** ಆಸೀತ್ - ಆಸೀತ್ ಆಸ್ತಾಂ ಆಸನ್, ಆಸೀಃ ಆಸ್ತಂ ಆಸ್ತ, ಆಸಂ ಆಸ್ವ ಆಸ್ಮ । ಅಸ ಭುವಿ ಅಕರ್ಮಕ ಪರಸ್ಮೈಪದಿ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನಂ ।

**ಕೋಶ—** ಪರಿವೃಢ = ಪ್ರಭು, 'ನಾಥಃ ಪರಿವೃಢಃ ಪ್ರಭುಃ ಪರಿವೃಢೋಽಧಿಪಃ' ಅಮರ, ಘನ = ಮೋಡ, 'ಘನಜೀಮೂತಮುದಿರಜಲಮುಗ್ ಧೂಮಯೋನಯಃ' ಅಮರ, ಊರ್ಜ = ಕಾರ್ತಿಕ ಮಾಸ, 'ಸ್ಯಾತ್ತು ಕಾರ್ತಿಕೇ, ಬಾಹುಲೋರ್ಜೌ ಕಾರ್ತಿಕಿಕಃ' ಅಮರ, ನೀರಸತ್ವಾತ್ ಎಂಬಲ್ಲಿ ರಸ = ಸಾಮರ್ಥ್ಯ, ಜಲ, 'ಶೃಂಗಾರಾದೌ ವಿಷೇ ವೀರ್ಯೇ ಗುಣೇ ರಾಗೇ ದ್ರವೇ ರಸಃ' ಅಮರ ।

**ಪ್ರಯೋಗ—** ವಿಶ್ವೇನ ಮನೋಜ್ಞೇನ ಭೂಯತ (ಭಾವೇ) ।

**ವೃತ್ತ—** ಈ ಸರ್ಗದಲ್ಲಿ ಪ್ರಾಯಶಃ ಮಾಲಿನೀವೃತ್ತ, 'ನನಮಯಯಯಯುತೇಯಂ ಮಾಲಿನೀ ಭೋಗಿಲೋಕೈಃ' ಎಂದು ಅದರ ಲಕ್ಷಣ.

★ ★ ★

**ಅವತಾರಿಕಾ—** ಕಾರ್ಯಾನುಕೂಲ್ಯವನ್ನೇ ವಿಶೇಷ ರೀತಿಯಿಂದ ವಿವರಿಸುತ್ತಾರೆ.

**ಕೃತಮಪಕೃತಮಾರ್ಯೈಃ ಕ್ಷಮ್ಯತಾಂ ಕ್ಷಾಂತಿಭೂಷೈ-**
**ರಿತಿ ಮೃದು ವದತಾಂ ಸಂಪ್ರಾರ್ಥನಾಭಿಃ ಪ್ರಭೂಣಾಮ್ ।**
**ಅಪಹೃತಮಪರೇಷಾಂ ಮಂತ್ರತೋ ಗ್ರಂಥಜಾತಂ**
**ದಶಹೃದಯನಿಯೋಗಾದಗ್ರಹೀಚ್ಛಂಕರಾರ್ಯಃ ॥ 2 ॥**

**ಪದಚ್ಛೇದ—** ಕೃತಂ, ಅಪಕೃತಂ, ಆರ್ಯೈಃ, ಕ್ಷಮ್ಯತಾಂ, ಕ್ಷಾಂತಿಭೂಷೈಃ, ಇತಿ, ಮೃದು, ವದತಾಂ, ಸಂಪ್ರಾರ್ಥನಾಭಿಃ, ಪ್ರಭೂಣಾಂ, ಅಪಹೃತಂ, ಅಪರೇಷಾಂ, ಮಂತ್ರತಃ, ಗ್ರಂಥಜಾತಂ, ದಶಹೃದಯನಿಯೋಗಾತ್, ಅಗ್ರಹೀತ್, ಶಂಕರಾರ್ಯಃ ।

**ಅನ್ವಯ—** ಶಂಕರಾರ್ಯಾಃ, ಅಪರೇಷಾಂ, ಮಂತ್ರತಃ, ಅಪಹೃತಂ, ಗ್ರಂಥಜಾತಂ, ಕ್ಷಾಂತಿಭೂಷೈಃ, ಆರ್ಯೈಃ, ಕೃತಂ, ಅಪಕೃತಂ, ಕ್ಷಮ್ಯತಾಂ, ಇತಿ, ಮೃದು, ವದತಾಂ, ಪ್ರಭೂಣಾಂ, ಸಂಪ್ರಾರ್ತನಾಭಿಃ, ದಶಹೃದಯನಿಯೋಗಾತ್, ಅಗ್ರಹೀತ್ ।

**ಅನ್ವಯಾರ್ಥ—**

**ಶಂಕರಾರ್ಯಾಃ** = ಶಂಕರಪಂಡಿತರು,
**ಅಪರೇಷಾಂ** = ಮಾಯಾವಾದಿಗಳ,
**ಮಂತ್ರತಃ** = ಮಂತ್ರಾಲೋಚನೆಯಿಂದ,
**ಅಪಹೃತಂ** = ಪದ್ಮತೀರ್ಥನಿಂದ ಅಪಹರಿಸಲ್ಪಟ್ಟ,
**ಗ್ರಂಥಜಾತಂ** = ಗ್ರಂಥಗಳ ಸಮೂಹವನ್ನು,
**ಕ್ಷಾಂತಿಭೂಷೈಃ** = ಕ್ಷಮೆಯೇ ಅಲಂಕಾರವಾಗಿ ಉಳ್ಳ,
**ಆರ್ಯೈಃ** = ಸಜ್ಜನರಾದ ನಿಮ್ಮಿಂದ,
**ಕೃತಂ** = ಪದ್ಮತೀರ್ಥನಿಂದ ಮಾಡಲ್ಪಟ್ಟ,
**ಅಪಕೃತಂ** = ಅಪರಾಧವು (ತಪ್ಪು),
**ಕ್ಷಮ್ಯತಾಂ** = ಕ್ಷಮಿಸಲ್ಪಡಲಿ,
**ಇತಿ** = ಈ ರೀತಿಯಾಗಿ,
**ಮೃದು** = ಸಮಾಧಾನ ಪೂರ್ವಕವಾಗಿ,
**ವದತಾಂ** = ಮಾತನಾಡುತ್ತಿರುವ,
**ಪ್ರಭೂಣಾಂ** = ಗ್ರಾಮಾಧಿಪತಿಗಳು ಮತ್ತು ಜಯಸಿಂಹರಾಜನ,
**ಸಂಪ್ರಾರ್ಥನಾಭಿಃ** = ಸರಿಯಾದ ಬೇಡುವಿಕೆಗಳಿಂದ,
**ದಶಹೃದಯನಿಯೋಗಾತ್** = ಶ್ರೀಪೂರ್ಣಪ್ರಜ್ಞರ ಅಪ್ಪಣೆಯಿಂದ,
**ಅಗ್ರಹೀತ್** = ಸ್ವೀಕರಿಸಿದರು.

**ತಾತ್ಪರ್ಯ—** ಚೋಳದೇಶದ ಪದ್ಮತೀರ್ಥನೆಂಬ ವಿದ್ವಾಂಸನು, ತ್ರಿವಿಕ್ರಮಪಂಡಿತರ ತಮ್ಮನಾದ ಶಂಕರಪಂಡಿತ-ರೆಂಬವರಲ್ಲಿದ್ದ ಶ್ರೀಮಧ್ವಾಚಾರ್ಯರ ಪುಸ್ತಕಗಳನ್ನು ಅಪಹರಿಸಿದ್ದನು. ಅನಂತರ ಶ್ರೀಮಧ್ವಾಚಾರ್ಯರ ಭಯದಿಂದ ಕದ್ದ ಪುಸ್ತಕಗಳನ್ನು ತಾನು ಚಾತುರ್ಮಾಸ್ಯಕ್ಕೆ ತಂಗಿದ್ದ ಸ್ಥಳದಲ್ಲಿಯೇ ಬಿಟ್ಟು ಹುಣ್ಣಿಮೆ ರಾತ್ರಿಯೇ ಹೊರಟುಹೋದನು. ಗ್ರಾಮದ ಜನರು ಆ ಪುಸ್ತಕಗಳನ್ನು ಮಧ್ವಾಚಾರ್ಯರಿಗೆ ಒಪ್ಪಿಸಲು ಬಂದರು. ಅವರು ಆ ಪುಸ್ತಕಗಳನ್ನು ತಾವು ಸ್ವೀಕರಿಸದೆ ಒಬ್ಬ ಮಧ್ಯಸ್ಥನಲ್ಲಿಟ್ಟು, ಪದ್ಮತೀರ್ಥನು ಮಾಡಿರುವ ಅನ್ಯಾಯವನ್ನು ಜಯಸಿಂಹರಾಜನಿಗೆ ತಿಳಿಸಿ ತಾವು ಸಹ್ಯಪರ್ವತಕ್ಕೆ ಹೋಗಿದ್ದರು. ರಾಜನು ಹೇಳಿ ಕಳುಹಿಸಿದಾಗ ಹಿಂದಿರುಗಿ ಬಂದರು. ಆಗ ಗ್ರಾಮಾಧಿಪತಿಗಳೂ ರಾಜನೂ 'ಎಲೈ ಶಂಕರಾರ್ಯರೇ! ಇತರ ಜನರ ಪ್ರೇರಣೆಯಿಂದ ಪದ್ಮತೀರ್ಥರು ಈ ಪುಸ್ತಕಗಳನ್ನು ಅಪಹರಿಸಿದ್ದರು. ಸಂಭಾವಿತರೂ ವಿವೇಕಿಗಳೂ ಆದ ನೀವು ಅವಿವೇಕಿಗಳಾದ ಮೂರ್ಖರು ಮಾಡಿದ ಈ ಅಪರಾಧವನ್ನು ಕ್ಷಮಿಸಿರಿ. ಶ್ರೀಮಧ್ವಾಚಾರ್ಯರ ಈ ಪುಸ್ತಕಗಳನ್ನು ಸ್ವೀಕರಿಸಿರಿ' ಎಂದು ಪ್ರಾರ್ಥಿಸಿದರು. ಶಂಕರಪಂಡಿತರು ಅವರ ಪ್ರಾರ್ಥನೆಯಿಂದಲೂ ಶ್ರೀಮಧ್ವಾ ಚಾರ್ಯರ ಅಪ್ಪಣೆಯಿಂದಲೂ ಆ ಗ್ರಂಥಗಳನ್ನು ಸ್ವೀಕರಿಸಿದರು ಎಂದು ಭಾವ.

**ಅಯಂ ಅಭಿಪ್ರಾಯಃ—** ಚೋಲಜಂ ಪದ್ಮತೀರ್ಥಂ ಪೌರ್ಣಮಾಸ್ಯಾಂ ಉತ್ಥಾಯ ನಿಶೀಥೇ ಏವ ವಿದ್ರುತಂ ಶ್ರುತ್ವಾ ತದ್ ಗ್ರಾಮಜನ್ಯೈಃ ತೇನ ಅಪಹೃತಂ ಗ್ರಂಥಜಾತಂ ಶ್ರೀಮಧ್ವಾಯ ಸಮರ್ಪಿತಂ । ಸ ತು ತತ್ ಮಧ್ಯಸ್ಥಕರೇ ಸ್ಥಾಪಯಿತ್ವಾ

ನಿಜಶಿಷ್ಯಮುದೇ ಸಹ್ಯಗಿರಿಂ ಆಪ್ತಃ । ತತ್ ಶ್ರುತ್ವಾ ರಾಜಮುಖೇನ ಪ್ರಾರ್ಥಿತೇ ಶ್ರೀಮಧ್ವೇ ವಿಷ್ಣುಮಂಗಲಂ ಗತೇ ಸತಿ ತತ್ ಸನ್ನಿಧೌ, ರಾಜ್ಞಾ ಉಭಯಗ್ರಾಮಪರಿವೃಢಜನೈಶ್ಚ ಕ್ಷಮಾಪಿತಃ ಶಂಕರಾರ್ಯಃ ಕ್ಷಿತಿಪತಿನಾ ತತ್ರ ಆನಾಯಿತಂ ಗ್ರಂಥಜಾತಂ ಆಚಾರ್ಯಾಣಾಂ ಆಜ್ಞಯಾ ಅಗ್ರಹೀತ್ ಇತಿ. (ವಿಶ್ವಪತಿತೀರ್ಥೀಯ ವ್ಯಾಖ್ಯೆಯ ಈ ವಾಕ್ಯಗಳ ಅಭಿಪ್ರಾಯವನ್ನು ಹಿಂದೆ ಕೊಡಲಾಗಿದೆ.)

ವಿಗ್ರಹ—

ಕ್ಷಾಂತಿಭೂಷಾಃ— ಕ್ಷಾಂತಿಃ ಭೂಷಾ ಯೇಷಾಂ ತೇ ಕ್ಷಾಂತಿಭೂಷಾಃ ।

ಗ್ರಂಥಜಾತಂ— ಗ್ರಂಥಾನಾಂ ಜಾತಂ ಗ್ರಂಥಜಾತಂ ತತ್ ।

ದಶಹೃದಯನಿಯೋಗಾತ್— ದಶ (ಪೂರ್ಣಂ) ಹೃದಯಂ ಯಸ್ಯ ಸಃ (ದಶ ಪೂರ್ಣಾನಿ) ಹೃದಯಾನಿ ಯಸ್ಯ ಸಃ ದಶಹೃದಯಃ, ದಶಹೃದಯಸ್ಯ ನಿಯೋಗಃ ದಶಹೃದಯನಿಯೋಗಃ ತಸ್ಮಾತ್ ।

ಕ್ರಿಯಾಪದ— ಕ್ಷಮ್ಯತಾಂ- ಕ್ಷಮ್ಯತಾಂ ಕ್ಷಮ್ಯೇತಾಂ ಕ್ಷಮ್ಯಂತಾಂ । ಕ್ಷಮೂಷ್ ಸಹನೇ ಕರ್ಮಣಿ ಲೋಟ್ । ಅಗ್ರಹೀತ್- ಅಗ್ರಹೀತ್ ಅಗ್ರಹೀಷ್ಟಾಂ ಅಗ್ರಹೀಷುಃ ಅಗ್ರಹೀಃ ಅಗ್ರಹೀಷ್ಟಂ ಅಗ್ರಹೀಷ್ಟ ಅಗ್ರಹೀಷಂ ಅಗ್ರಹೀಷ್ವ ಅಗ್ರಹೀಷ್ಮ । ಗ್ರಹ ಉಪಾದಾನೇ ಪರಸ್ಮೈಪದಿ ಕರ್ತರಿ ಲುಙ್ ।

ಕೋಶ— ಭೂಷಾ = ಅಲಂಕಾರ, 'ಭೂಷಾ ತು ಸ್ಯಾದಲಂಕ್ರಿಯಾ' (ಭೂಷಣಂ ಸ್ಯಾದಲಂಕ್ರಿಯಾ) ಅಮರ. ದಶ = ಪೂರ್ಣ, 'ದಶೇತಿ ಪೂರ್ಣಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ' ಅಭಿಧಾನ ।

ಪ್ರಯೋಗ— 'ಕ್ಷಾಂತಿಭೂಷಾಃ ಹೇ ಆರ್ಯಾಃ! ಕೃತಂ ಅಪಕೃತಂ (ಭವಂತಃ) ಕ್ಷಮ್ಯಂತಾಂ' ಇತಿ ಮೃದು ವದತಾಂ ಪ್ರಭೂಣಾಂ ಸಂಪ್ರಾರ್ಥನಾಭಿಃ, ದಶಹೃದಯನಿಯೋಗಾತ್, ಶಂಕರಾರ್ಯೇಣ ಅಪರೇಷಾಂ ಮಂತ್ರತಃ ಅಪಹೃತಂ ಗ್ರಂಥಜಾತಂ ಅಗ್ರಾಹಿ ।

★ ★ ★

ಅವತಾರಿಕಾ— ಆಗ ಅಲ್ಲೇ ಇದ್ದ ತ್ರಿವಿಕ್ರಮ ಪಂಡಿತರು ತಮ್ಮ ತಮ್ಮನಿಗೆ ಆದ ವಿಜಯದಿಂದ ಸಂತೋಷಪಟ್ಟು, ಇದಕ್ಕೆ ಕಾರಣನಾದ ಜಯಸಿಂಹರಾಜನನ್ನು ಆಶೀರ್ವದಿಸಿದರು ಎಂದು ಹೇಳುತ್ತಾರೆ.

**ಪರಿವೃತಮವನಮ್ಯೈರ್ಗ್ರಾಮಣೀಗ್ರಾಮ್ಯಪೂರ್ವೈ-**
**ರವನತಮುರುಚೇತಃಪಾದಪಾರ್ಶ್ವೇ ನೃಸಿಂಹಮ್ ।**
**ಸಹಜವಿಜಯತೋಽಯುಗ್ವಿಕ್ರಮಾರ್ಯಃ ಪ್ರಸನ್ನಃ**
**ಕವಿಕುಲತಿಲಕೋಽಸಾವಾಶಿಷಾಽತೋಷಯತ್ತಮ್ ॥ 3 ॥**

ಪದಚ್ಛೇದ— ಪರಿವೃತಂ, ಅವನಮ್ಯೈಃ, ಗ್ರಾಮಣೀಗ್ರಾಮ್ಯಪೂರ್ವೈಃ, ಅವನತಂ, ಉರುಚೇತಃಪಾದಪಾರ್ಶ್ವೇ, ನೃಸಿಂಹಂ, ಸಹಜವಿಜಯತಃ, ಅಯುಗ್, ವಿಕ್ರಮಾರ್ಯಃ, ಪ್ರಸನ್ನಃ, ಕವಿಕುಲತಿಲಕಃ, ಅಸೌ, ಆಶಿಷಾ, ಅತೋಷಯತ್, ತಂ ।

ಅನ್ವಯ— ಕವಿಕುಲತಿಲಕಃ, ಸಹಜವಿಜಯತಃ, ಪ್ರಸನ್ನಃ, ಅಸೌ, ಅಯುಗ್, ವಿಕ್ರಮಾರ್ಯಃ, ಅವನಮ್ಯೈಃ, ಗ್ರಾಮಣೀಗ್ರಾಮ್ಯಪೂರ್ವೈಃ, ಪರಿವೃತಂ, ಉರುಚೇತಃ, ಪಾದಪಾರ್ಶ್ವೇ, ಅವನತಂ, ತಂ, ನೃಸಿಂಹಂ, ಆಶಿಷಾ, ಅತೋಷಯತ್ ।

ಅನ್ವಯಾರ್ಥ—

**ಕವಿಕುಲತಿಲಕಃ** = ಕವಿಗಳ ಸಮೂಹಕ್ಕೆ ತಿಲಕದಂತೆ (ಹಣೆಯ ಬೊಟ್ಟಿನಂತೆ) ಅಲಂಕಾರ ಪ್ರಾಯರಾಗಿರುವ,

**ಸಹಜವಿಜಯತಃ** = ಸಹೋದರರಾದ ಶಂಕರಾರ್ಯರ ಗೆಲುವಿನಿಂದ,

**ಪ್ರಸನ್ನಃ** = ಸಂತೋಷಪಟ್ಟ

**ಅಸೌ** = ಈ,

**ಅಯುಗ್‌ವಿಕ್ರಮಾರ್ಯಃ** = ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು,

**ಅವನಮ್ರೈಃ** = ಬಾಗಿದ (ವಿಧೇಯರಾದ),

**ಗ್ರಾಮಣೀಗ್ರಾಮ್ಯಪೂರ್ವೈಃ** = ಗ್ರಾಮಾಧಿಪತಿಗಳು, ಗ್ರಾಮದ ಬ್ರಾಹ್ಮಣರು ಇವರೇ ಮೊದಲಾಗಿ ಉಳ್ಳವರಿಂದ

**ಪರಿವೃತಂ** = ಸುತ್ತುವರಿಯಲ್ಪಟ್ಟ

**ಉರುಚೇತಃ ಪಾದಪಾರ್ಶ್ವೇ** = ಶ್ರೀಪೂರ್ಣಪ್ರಜ್ಞರ, ಪಾದದ ಬಳಿಯಲ್ಲಿ

**ಅವನತಂ** = ವಿಧೇಯನಾಗಿರುವ (ಬಾಗಿದ),

**ತಂ ನೃಸಿಂಹಂ** = ಆ ಪುರುಷಶ್ರೇಷ್ಠನಾದ ಜಯಸಿಂಹರಾಜನನ್ನು,

**ಆಶಿಷಾ** = ಆಶೀರ್ವಾದದಿಂದ,

**ಅತೋಷಯತ್** = ಸಂತೋಷಗೊಳಿಸಿದರು.

ತಾತ್ಪರ್ಯ— ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು ಕವಿಕುಲಕ್ಕೆ ಭೂಷಣರು. ಅವರು ತಮ್ಮ ತಮ್ಮನಾದ ಶಂಕರಾರ್ಯನಿಗೆ ಆದ ವಿಜಯದಿಂದ ಸಂತೋಷಪಟ್ಟರು. ತಮ್ಮನಲ್ಲಿದ್ದ ಶ್ರೀಮಧ್ವಾಚಾರ್ಯರ ಗ್ರಂಥಗಳು ಇತರರಿಂದ ಅಪಹೃತವಾಗಿದ್ದವು. ಅವು ಪುನಃ ದೊರಕಿದವು ಇದು ತ್ರಿವಿಕ್ರಮರಿಗೆ ತುಂಬಾ ಸಂತೋಷವನ್ನುಂಟುಮಾಡಿತು. ಈ ವಿಜಯಕ್ಕೆ ಕಾರಣನು ಕಬನಾಡಿನ ಅಧಿಪತಿಯಾದ ಜಯಸಿಂಹನು. ಅವನು ವಿನಯದಿಂದ ಶ್ರೀಮಧ್ವಾಚಾರ್ಯರ ಪಾದಗಳ ಬಳಿ ಬಗ್ಗಿ ಕೈಮುಗಿದು ನಿಂತಿದ್ದನು. ಅನೇಕ ಗ್ರಾಮಾಧಿಪತಿಗಳೂ, ಗ್ರಾಮದಲ್ಲಿರುವ ಬ್ರಾಹ್ಮಣಪಂಡಿತರೂ ರಾಜನ ಸುತ್ತಲೂ ನಿಂತು ವಿನಯದಿಂದ ಬಾಗಿ ಆಚಾರ್ಯರಿಗೆ ಕೈಮುಗಿದು ಗೌರವವನ್ನು ಸೂಚಿಸುತ್ತಿದ್ದರು. ಈ ಸಂದರ್ಭದಲ್ಲಿ ತ್ರಿವಿಕ್ರಮರು ಮಹಾರಾಜ ಜಯಸಿಂಹನಿಗೆ ಆಶೀರ್ವಾದ ಮಾಡಿ ಅವನನ್ನು ಸಂತೋಷಪಡಿಸಿದರು.

ವಿಶೇಷಾಂಶ ಭಾವಪ್ರಕಾಶಿಕಾ— ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು ಮಾಡಿರುವ ಮೂಲ' ಆಶೀರ್ವಾದ ಪದ್ಯವನ್ನು ನಾರಾಯಣ ಪಂಡಿತಾಚಾರ್ಯರು ತಮ್ಮ ಭಾವ ಪ್ರಕಾಶಿಕಾ ವ್ಯಾಖ್ಯಾನದಲ್ಲಿ ಈ ರೀತಿ ಕೊಟ್ಟಿರುತ್ತಾರೆ.

**'ಸ್ವಃಸುಂದರೀಭುಜಲತಾಪರಿರಂಭಣೇ ಧೂಃ ಪೌರಂದರೀ ಭವತಿ ಯಂ ಭಜತಾಂ ಭುಜಿಷ್ಯಾ ।**

**ಆನಂದತೀರ್ಥಭಗವತ್‌ಪದಪದ್ಮರೇಣುಃ ಸ್ವಾನಂದದೋ ಭವತು ತೇ ಜಯಸಿಂಹ ಭೂಪ' ॥ ಇತ್ಯಾಶಿಷಾ ।**

ಸ್ವರ್ಗದ ಸುಂದರಿಯರ ಬಾಹುಲತೆಗಳ ಆಲಿಂಗನದಿಂದ ಕೂಡಿದ ಇಂದ್ರನಿಗೆ ಸಂಬಂಧಪಟ್ಟ ಅಧಿಕಾರ ಸ್ಥಾನವು ಯಾವ ಆನಂದತೀರ್ಥರ ಪಾದಪದ್ಮಗಳ ಧೂಳಿಯನ್ನು ಭಜಿಸುವವರಿಗೆ ಸೇವಕಿಯಾಗುತ್ತದೆಯೋ, ಅಂತಹ ಆಚಾರ್ಯರ ಪಾದಧೂಳಿಯು, 'ಎಲೈ ಜಯಸಿಂಹರಾಜನೇ ನಿನಗೆ ಶ್ರೇಷ್ಠವಾದ ಆನಂದವನ್ನು ಕೊಡಲಿ' ಎಂದು ಈ ಶ್ಲೋಕದ ತಾತ್ಪರ್ಯ. ಈ ಶ್ಲೋಕದ ಅಭಿಪ್ರಾಯವನ್ನೇ ಮಾಲಿನೀ ವೃತ್ತದಲ್ಲಿ ಶ್ರೀನಾರಾಯಣ ಪಂಡಿತಾಚಾರ್ಯರು ಅನುವಾದ ಮಾಡಿರುತ್ತಾರೆ. ನಾಲ್ಕನೇ ಶ್ಲೋಕವು ಉಪಚರತಿ ನಿತಾಂತಂ ಎಂಬುದು ಶ್ಲೋಕಾರ್ಥದ ಅನುವಾದವು.

ವಿಗ್ರಹ—

**ಗ್ರಾಮಣೀಗ್ರಾಮ್ಯಪೂರ್ವೈಃ**— ಗ್ರಾಮಂ ನಯಂತೀತಿ ಗ್ರಾಮಣ್ಯಃ, ಗ್ರಾಮೇ ಭವಾಃ ಗ್ರಾಮ್ಯಾಃ, ಗ್ರಾಮಣ್ಯಶ್ಚ ಗ್ರಾಮ್ಯಾಶ್ಚ ಗ್ರಾಮಣೀಗ್ರಾಮ್ಯಾಃ, ತೇ ಪೂರ್ವೇ ಯೇಷಾಂ ತೇ ಗ್ರಾಮಿಣೀ- ಗ್ರಾಮ್ಯಪೂರ್ವಾಃ ತೈಃ 'ಗ್ರಾಮಿಣೀರ್ನಾಪಿತೇ ಪುಂಸಿ ಶ್ರೇಷ್ಠೇ' ।

**ಉರುಚೇತಃಪಾದಪಾರ್ಶ್ವಂ—** ಉರು ಚೇತಃ ಯಸ್ಯ ಸಃ ಉರುಚೇತಃ, ಉರುಚೇತಸಃ ಪಾದೌ ಉರುಚೇತಃಪಾದೌ, ಉರುಚೇತಃ ಪಾದಯೋಃ ಪಾರ್ಶ್ವಂ ಉರುಚೇತಃಪಾದಪಾರ್ಶ್ವಂ ತಸ್ಮಿನ್ ।

**ನೃಸಿಂಹಃ—** ನಾ ಸಿಂಹ ಇವ ನೃಸಿಂಹಃ ತಂ ।

**ಸಹಜವಿಜಯತಃ—** ಸಹ ಜಾಯತೇ ಇತಿ ಸಹಜಃ, ಸಹಜಸ್ಯ ವಿಜಯಃ ಸಹವಿಜಯಃ, ಸಹಜವಿಜಯಾತ್ ಇತಿ ಸಹಜವಿಜಯತಃ । (ಪಂಚಮೀ ವಿಭಕ್ತಿಯ ಅರ್ಥದಲ್ಲಿ ತಸಿ ಪ್ರತ್ಯಯ)

**ಅಯುಗ್‌ವಿಕ್ರಮಾರ್ಯಃ—** ನ ಯುಕ್ ಅಯುಕ್, (ಸಮ ಎರಡು, ಸಮವಲ್ಲದ್ದು ಅಯುಕ್ ಮೂರು,) ಅಯುಕ್ ವಿಕ್ರಮಃ ಯಸ್ಯಸಃ ಅಯುಗ್‌ವಿಕ್ರಮಃ (ತ್ರಿವಿಕ್ರಮಃ), ಅಯುಗ್ ವಿಕ್ರಮಃ ಇತಿ ಆರ್ಯಃ ಅಯುಗ್‌ವಿಕ್ರಮಾರ್ಯಃ । (ರೂಢನಾಮಗಳನ್ನು ಹೀಗೆ ಯೌಗಿಕವಾಗಿ ಪ್ರಯೋಗಿಸುವುದು ನೇಯಾರ್ಥ ಎಂಬ ದೋಷವಾಗುತ್ತದೆ. ಇಂತಹ ಪದಗಳನ್ನು ಅಪ್ರಸಿದ್ಧವಾದ ಲಕ್ಷಣಾವೃತ್ತಿಯಿಂದ ಕೂಡಿಸಬೇಕಾಗುತ್ತದೆ. ಆದರೂ ಇದು ಒಂದು ವಿಧವಾದ ಶಾಸ್ತ್ರಕಾವ್ಯವಾದ್ದರಿಂದ ಇಲ್ಲಿ ದೋಷವಿಲ್ಲ ವೆಂದು ತಿಳಿಯಬೇಕು.)

**ಕವಿಕುಲತಿಲಕಃ—** ಕವೀನಾಂ ಕುಲಂ ಕವಿಕುಲಂ ಕವಿಕುಲಸ್ಯ ತಿಲಕಃ ಕವಿಕುಲತಿಲಕಃ ।

**ಕ್ರಿಯಾಪದ—** **ಅತೋಷಯತ್**- ಅತೋಷಯತ್ ಅತೋಷಯತಾಂ ಅತೋಷಯನ್, ಅತೋಷಯಃ ಅತೋಷಯತಂ ಅತೋಷಯತ, ಅತೋಷಯಂ ಅತೋಷಯಾವ ಅತೋಷಯಾಮ । ತುಷತುಷ್ಟೌ ಅಕರ್ಮಕ, ಣಿಜಂತವಾದಾಗ ಸಕರ್ಮಕ, ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನಂ ।

**ಕೋಶ—** ಗ್ರಾಮಣೀಃ = 'ಗ್ರಾಮಣೀರ್ನಾಪಿತೇ ಪುಂಸಿ ಶ್ರೇಷ್ಠೇ ಗ್ರಾಮಾಧಿಪೇ ತ್ರಿಷು' ಅಮರ, ಸಹಜ = ಸಹೋದರ (ತಮ್ಮ ಅಥವಾ ಅಣ್ಣ) 'ಸಮಾನೋದರ್ಯಸೋದರ್ಯಸಗರ್ಭ್ಯ ಸಹಜಾಃ ಸಮಾಃ' ಅಮರ ಆಶೀರ್ವಾದ, 'ಆಶೀರುರಗದಂಷ್ಟ್ರಾಯಾಂ ಶುಭವಾಕ್ಯಾಭಿಲಾಷಯೋಃ' ವೈಜಯಂತೀ ।

**ಪ್ರಯೋಗ—** ಕವಿಕುಲತಿಲಕೇನ, ಸಹಜವಿಜಯತಃ ಪ್ರಸನ್ನೇನ ಅಮುನಾ ಅಯುಗ್‌ವಿಕ್ರಮಾರ್ಯೇಣ ಅವನಮ್ರೈಃ ಗ್ರಾಮಣೀಗ್ರಾಮ್ಯಪೂರ್ವೈಃ ಪರಿವೃತಃ ಉರುಚೇತಃ ಪಾದಪಾರ್ಶ್ವೇ ಅವನತ । ನೃಸಿಂಹಃ (ಜಯಸಿಂಹಃ) ಆಶಿಷಾ ಅತೋಷ್ಯತ । (ಕರ್ಮಣಿ) ತ್ರಿವಿಕ್ರಮಪಂಡಿತರಿಂದ ಜಯಸಿಂಹರಾಜನು ಸಂತೋಷಗೊಳಿಸಲ್ಪಟ್ಟನು.

★ ★ ★

**ಅವತಾರಿಕಾ—** ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯರು ಮಾಡಿದ ಆಶೀರ್ವಾದ ಪದ್ಯದ ಅರ್ಥವನ್ನು ಶ್ರೀಮತ್ ನಾರಾಯಣ ಪಂಡಿತಾಚಾರ್ಯರು ಅನುವಾದ ಮಾಡುತ್ತಿದ್ದಾರೆ.

**ಉಪಚರತಿ ನಿತಾಂತಂ ಹಂತ ಪೌರಂದರೀಧೂ-**
**ರ್ದ್ಯುಸದಸಿ ಭಜತೋ ಯಂ ದುರ್ಲಭಾ ದಭ್ರಭಾಗ್ಯೈಃ ।**
**ದಿಶತು ಸ ಪರಮಾನಂದಾಗ್ರ್ಯತೀರ್ಥಾಂಘ್ರಿರೇಣು-**
**ರ್ಧರಣಿಧರ ಸುಖಂ ತೇ ಸಂತತಂ ಸ್ವಾಂತರೇತಿ ॥ 4 ॥**

**ಪದಚ್ಛೇದ—** ಉಪಚರತಿ, ನಿತಾಂತಂ, ಹಂತ, ಪೌರಂದರೀ, ಧೂಃ, ದ್ಯುಸದಸಿ, ಭಜತಃ ಯಂ, ದುರ್ಲಭಾ, ದಭ್ರಭಾಗ್ಯೈಃ, ದಿಶತು, ಸಃ, ಪರಮಾನಂದಾಗ್ರ್ಯತೀರ್ಥಾಂಘ್ರಿರೇಣುಃ, ಧರಣೀಧರ, ಸುಖಂ, ತೇ, ಸಂತತಂ, ಸ್ವಾಂತರ, ಇತಿ ।

**ಅನ್ವಯ—** ಹೇ, ಸ್ವಾಂತರ, ಧರಣಿಧರ! ಯಂ, ಭಜತಃ, ದಭ್ರಭಾಗ್ಯೈಃ, ದುರ್ಲಭಾ, ಪೌರಂದರೀ, ಧೂಃ ದ್ಯುಸದಸಿ, ನಿತಾಂತಂ, ಉಪಚರತಿ, ಹಂತ! ಸಃ, ಪರಮಾನಂದಾಗ್ಯತೀರ್ಥಾಂಘ್ರಿರೇಣುಃ, ತೇ, ಸಂತತಂ, ಸುಖಂ, ದಿಶತು, ಹಂತ! (ಇತಿ ಆಶಿಷಾ ಅತೋಷಯತ್) ।

**ಅನ್ವಯಾರ್ಥ—**

**ಹೇ ಸ್ವಾಂತರ** = ಎಲೈ! ಉತ್ತಮವಾದ ಮನಸ್ಸುಳ್ಳ,

**ಧರಣಿಧರ** = ರಾಜನೇ!

**ಯಂ** = ಶ್ರೀಮತ್ ಆನಂದತೀರ್ಥರ ಯಾವ ಪಾದಧೂಳಿಯನ್ನು,

**ಭಜತಃ** = ಸೇವಿಸುವ (ಸಜ್ಜನರನ್ನು),

**ದಭ್ರಭಾಗ್ಯೈಃ** = ಅಲ್ಪವಾದ, ಅದೃಷ್ಟ (ಯೋಗ್ಯತಾ) ಸಂಪತ್ತುಳ್ಳವರಿಂದ,

**ದುರ್ಲಭಾ** = ಪಡೆಯಲು ಸಾಧ್ಯವಿಲ್ಲದ,

**ಪೌರಂದರೀ** = ಇಂದ್ರನಿಗೆ ಸಂಬಂಧಿಸಿರುವ,

**ಧೂಃ** = ವ್ಯಾಪಾರವು (ಇಂದ್ರನು ಮಾಡುವ ಸೇವಾ ವ್ಯಾಪಾರವು),

**ದ್ಯುಸದಸಿ** = ದೇವಸಭೆಯಲ್ಲಿ,

**ನಿತಾಂತಂ** = ಬಹಳವಾಗಿ,

**ಉಪಚರತಿ** = ಗೌರವಿಸುತ್ತದೆಯೋ (ಸನ್ಮಾನಿಸುತ್ತದೆಯೋ),

**ಹಂತ** = ಸಂತೋಷವು,

**ಸಃ** = ಅಂತಹ,

**ಪರಮ** = ಶ್ರೇಷ್ಠವಾದ,

**ಆನಂದಾಗ್ರ್ಯತೀರ್ಥಾಂಘ್ರಿರೇಣುಃ** = ಆನಂದವನ್ನು ಕೊಡುವ ಶ್ರೇಷ್ಠವಾದ ಶಾಸ್ತ್ರವುಳ್ಳ ಶ್ರೀಮಧ್ವಾಚಾರ್ಯರ, ಪಾದಧೂಳಿಯು,

**ತೇ** = ನಿನಗೆ,

**ಸಂತತಂ** = ಯಾವಾಗಲೂ,

**ಸುಖಂ** = ಆನಂದವನ್ನು,

**ದಿಶತು** = ಕೊಡಲಿ,

(**ಇತಿ** = ಈ ರೀತಿಯಾಗಿ,

**ಆಶಿಷಾ** = ಆಶೀರ್ವಾದದಿಂದ,

**ಅತೋಷಯತ್** = ಸಂತೋಷಗೊಳಿಸಿದರು)

**ತಾತ್ಪರ್ಯ—** ನಿರ್ಮಲವಾದ ಮನಸ್ಸುಳ್ಳ ಜಯಸಿಂಹರಾಜನೇ! ಶ್ರೀಮಧ್ವಾಚಾರ್ಯರನ್ನು ನಮಸ್ಕರಿಸಿ ಸೇವಿಸುವ ಜನರನ್ನು ಅವರ ಪಾದಧೂಳಿಯು ಇಂದ್ರಪದವಿಗೇರಿಸುವುದು. ಇಂದ್ರಪದವಿಯಾಗಲಿ, ಅದಕ್ಕೆ ಸಮಾನ ಪದವಿಯಾಗಲಿ, ಅಲ್ಪಭಾಗ್ಯರಿಗೆ ಸಿಗಲಾರದಷ್ಟೆ! ಶ್ರೀಮಧ್ವಾಚಾರ್ಯರ ಪಾದಧೂಳಿಯನ್ನು ಸೇವಿಸುವವರನ್ನು ಇಂದ್ರನೇ ತನ್ನ

ಸಭೆಯಲ್ಲಿ ತನಗೆ ಸಮಾನರೆಂದು ಗೌರವಿಸುವನು, ಸನ್ಮಾನಿಸುವನು. ಇಂತಹ ಉತ್ತಮ ಪದವಿಗೆ ಕಾರಣವಾದ ಶ್ರೀಮದ್ ಆನಂದತೀರ್ಥಭಗವತ್ಪಾದರ ಪಾದಧೂಳಿಯು ನಿನಗೆ ಯಾವಾಗಲೂ ಆನಂದವನ್ನೀಯಲಿ, ಎಂದು ತ್ರಿವಿಕ್ರಮರು ಆಶೀರ್ವಾದ ಮಾಡಿದರು.

ವಿಗ್ರಹ—

**ಪೌರಂದರೀ—** ಪುರಂದರಸ್ಯ ಇಯಂ ಪೌರಂದರೀ ।

**ದ್ಯುಸದಃ—** ದಿವಃ ಸದಃ ದ್ಯುಸದಃ (ಅಥವಾ ದ್ಯೋಃ ಸದಃ ದ್ಯುಸದಃ ತಸ್ಮಿನ್) ತಸ್ಮಿನ್ ದ್ಯುಸದಸಿ ।

**ದಭ್ರಭಾಗ್ಯಾಃ—** ದಭ್ರಂ ಭಾಗ್ಯಂ ಯೇಷಾಂ ತೇ ದಭ್ರಭಾಗ್ಯಾಃ ತೈಃ ।

**ಪರಮಾನಂದಂ—** ಪರಮಃ ಆನಂದಃ ಯಸ್ಮಾತ್ ತತ್ ಪರಮಾನಂದಂ ।

**ಪರಮಾನಂದಾಗ್ರ್ಯತೀರ್ಥಾಂಘ್ರಿರೇಣುಃ—** ಅಗ್ರ್ಯಂ ಚ ತತ್ ತೀರ್ಥಂ ಚ ಅಗ್ರ್ಯತೀರ್ಥಂ, ಪರಮಾನಂದಂ ಅಗ್ರ್ಯತೀರ್ಥಂ ಯಸ್ಮಾತ್ ಸಃ ಪರಮಾನಂದಾಗ್ರ್ಯ ತೀರ್ಥಃ (ಆನಂದಃ ಅಗ್ರ್ಯಂ ತೀರ್ಥಂ ಯಸ್ಯ ಸಃ ಆನಂದಾಗ್ರ್ಯತೀರ್ಥಃ ಪರಮಶ್ಚಾಸೌ ಆನಂದಾಗ್ರ್ಯತೀರ್ಥಶ್ಚ ಪರಮಾನಂದಾಗ್ರ್ಯತೀರ್ಥಃ-ಛಲಾರಿಯ) ತಸ್ಯ ಅಂಘ್ರೀ ಪರಮಾನಂದಾಗ್ರ್ಯತೀರ್ಥಾಂಘ್ರೀ, ತಯೋಃ ರೇಣುಃ ಪರಮಾನಂದಾಗ್ರ್ಯತೀರ್ಥಾಂ-ಘ್ರಿರೇಣುಃ ।

**ಧರಣಿಧರಃ—** ಧರತೀತಿ ಧರಃ ಧರಣ್ಯಾಃ ಧರಃ ಧರಣಿಧರಃ, ತಸ್ಯ ಸಂಬುದ್ಧಿಃ ಹೇ ಧರಣಿಧರ!

**ಸ್ವಾಂತರಃ—** ಶೋಭನಂ ಅಂತರಂ ಯಸ್ಯ ಸಃ ಸ್ವಾಂತರಃ ತಸ್ಯ ಸಂಬುದ್ಧಿಃ ಹೇ ಸ್ವಾಂತರ!

**ಕ್ರಿಯಾಪದ— ಉಪಚರತಿ** - ಉಪ+ಚರತಿ ಚರತಃ ಚರಂತಿ, ಚರಸಿ ಚರಥಃ ಚರಥ, ಚರಾಮಿ ಚರಾವಃ ಚರಾಮಃ। ಉಪ ಉಪಸರ್ಗ ಚರಗತಿಭಕ್ಷಣಯೋಃ ಸಕರ್ಮಕ, ಪರಸ್ಮೈಪದಿ, ಲಟ್ ಪ್ರಥಮಪುರುಷೇ ಏಕವಚನಂ ।

**ದಿಶತು** - ದಿಶತು-ದಿಶತಾತ್ ದಿಶತಾಂ ದಿಶಂತು, ದಿಶ ದಿಶತಾತ್ ದಿಶತಂ, ದಿಶತ, ದಿಶಾನಿ ದಿಶಾವ ದಿಶಾಮ । ದಿಶ ಅತಿಸರ್ಜನೇ ಸಕರ್ಮಕ ಲೋಟ್ ಪರಸ್ಮೈಪದಿ ಪ್ರಥಮಪುರುಷೇ ಏಕವಚನಂ ।

**ಕೋಶ—** ದಭ್ರಭಾಗ್ಯೈಃ ಎಂಬಲ್ಲಿ ದಭ್ರ = ಸ್ವಲ್ಪ 'ಸ್ತೋಕಾಲ್ಪಕ್ಷುಲ್ಲಕಾಃ ಶ್ಲಕ್ಷ್ಣಂ ಸೂಕ್ಷ್ಮಂ ದಭ್ರಂ ಕೃಶಂ ತನು' ಅಮರ, ದ್ಯುಸದಸಿ ಎಂಬಲ್ಲಿ ದ್ಯು (ದ್ಯೋ) (ದಿವ್) = ಸ್ವರ್ಗ, 'ದ್ಯೋರ್ದಿವೌ ದ್ವೇ ಸ್ತ್ರಿಯಾಂ' ಅಮರ, ಇಲ್ಲಿ ದಿವಃ ಸದಃ ಎಂದು ವಿಗ್ರಹ ಮಾಡಿದಾಗ 'ದಿವಉತ್' ಎಂಬ ಸೂತ್ರದಿಂದ ವಕಾರಕ್ಕೆ ಉಕಾರದೇಶ, ದ್ಯೋ ಶಬ್ದದ ಜತೆಗೆ ವಿಗ್ರಹ ಮಾಡಿದಾಗ ಓಕಾರಕ್ಕೆ ಹ್ರಸ್ವ ಉಕಾರ ಬಂದು ದ್ಯುಸದಸಿ ಎಂದು ರೂಪವಾಯಿತೆಂದು ತಿಳಿಯಬೇಕು.

**ಛಲಾರಿಯ ವಿಶೇಷಾಂಶ—** ಶ್ರೀಮದಾನಂದತೀರ್ಥರ ಪಾದರೇಣುವನ್ನು ಸೇವಿಸುವ ಇಂದ್ರಪದ ಯೋಗ್ಯರಾದ ಜೀವರನ್ನು ಅಮರಾವತಿಯು ಸೇವಿಸುತ್ತದೆ ಎಂದು ಅರ್ಥ. ಇಂದ್ರಪದಯೋಗ್ಯರಾದ ಜೀವರು ಶ್ರೀಮಧ್ವಾಚಾರ್ಯರ ಪಾದಧೂಳಿಗಳ ಸೇವೆಯಿಂದಲೇ ಸ್ವರ್ಗಾಧಿಪತ್ಯವನ್ನು ಪಡೆಯುತ್ತಾರೆ ಎಂದು ಹೇಳಿದಂತಾಯಿತು.

**ಪ್ರಯೋಗ—** ಸ್ವಾಂತರ ಧರಣಿಧರ!, ಯಂ, ಭಜಂತಃ ದಭ್ರಭಾಗ್ಯೈಃ, ದುರ್ಲಭಯಾ, ಪೌರಂದರ್ಯಾಧುರಾ, ದ್ಯುಸದಸಿ, ನಿತಾಂತಂ, ಉಪಚರ್ಯಂತೇ, ಹಂತ! ತೇನ ಪರಮಾನಂದಾಗ್ರ್ಯತೀರ್ಥಾಂಘ್ರಿರೇಣುನಾ, ತೇ ಸಂತತಂ, ಸುಖಂ, ದಿಶ್ಯತಾಂ, ಇತಿ, (ಆಶಿಷಾ ಸಃ ಜಯಸಿಂಹಭೂಪಃ ಅಮುನಾ ಕವಿಕುಲತಿಲಕೇನ ಅತೋಷ್ಯತ) ।

★ ★ ★

**ಅವತಾರಿಕಾ—** ಶ್ರೀಮಧ್ವಾಚಾರ್ಯರ ವಿಶೇಷ ಪರಿಚಯವಿಲ್ಲದಿರುವ ಶ್ರೀತ್ರಿವಿಕ್ರಮರು ಅವರ ಮಹಿಮೆಯನ್ನು ಈ ರೀತಿ ಹೇಗೆ ಹೊಗಳಿದರು? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ.

**ಅನತಿಪರಿಚಿತಸ್ಯಾಪ್ಯಸ್ಯ ಸೋಽಯಂ ಕವೀಂದ್ರೋ**
**ಗುಣರಸಮತಿಗೂಢಂ ಜ್ಞಾತವಾನಿತ್ಯಚಿತ್ರಮ್ ।**
**ಮಧು ಮಧುಕರರಾಜೋ ನಿಷ್ಪತನ್ ಪೌಷ್ಪಮಾಪ್ತುಂ**
**ನನು ಪರಿಚಯಹೀನಃ ಕಾನನೇಽಪಿ ಪ್ರಭುಃ ಸ್ಯಾತ್ ॥ 5 ॥**

**ಪದಚ್ಛೇದ—** ಅನತಿಪರಿಚಿತಸ್ಯ, ಅಪಿ, ಅಸ್ಯ, ಸಃ, ಅಯಂ, ಕವೀಂದ್ರಃ, ಗುಣರಸಂ, ಅತಿಗೂಢಂ, ಜ್ಞಾತವಾನ್, ಇತಿ, ಅಚಿತ್ರಂ, ಮಧು, ಮಧುಕರರಾಜಃ, ನಿಷ್ಪತನ್, ಪೌಷ್ಪಂ, ಆಪ್ತುಂ, ನನು, ಪರಿಚಯಹೀನಃ, ಕಾನನೇ, ಅಪಿ, ಪ್ರಭುಃ, ಸ್ಯಾತ್ ।

**ಅನ್ವಯ—** ಕವೀಂದ್ರಃ, ಸಃ, ಅಯಂ, ಅನತಿಪರಿಚಿತಸ್ಯ, ಅಪಿ, ಅಸ್ಯ, ಅತಿಗೂಢಂ, ಗುಣರಸಂ, ಜ್ಞಾತವಾನ್, ಇತಿ, ಅಚಿತ್ರಂ, ಕಾನನೇ, ನಿಷ್ಪತನ್, ಮಧುಕರರಾಜಃ, ಪರಿಚಯಹೀನಃ, ಅಪಿ, ಪೌಷ್ಪಂ, ಮಧು, ಆಪ್ತುಂ, ಪ್ರಭುಃ, ಸ್ಯಾತ್, ನನು ।

**ಅನ್ವಯಾರ್ಥ—**

**ಕವೀಂದ್ರಃ** = ಜ್ಞಾನಿಶ್ರೇಷ್ಠರೂ, ಕವಿಶ್ರೇಷ್ಠರೂ, ಆದ,
**ಸಃ ಅಯಂ** = ಪ್ರಸಿದ್ಧರಾದ ಈ ತ್ರಿವಿಕ್ರಮಪಂಡಿತಾಚಾರ್ಯರು,
**ಅನತಿಪರಿಚಿತಸ್ಯ ಅಪಿ** = ಹೆಚ್ಚು ಪರಿಚಯವಿಲ್ಲದವರಾಗಿದ್ದರೂ,
**ಅಸ್ಯ** = ಈ ಆನಂದತೀರ್ಥರ,
**ಅತಿಗೂಢಂ** = ಅತ್ಯಂತ ರಹಸ್ಯವಾದ,
**ಗುಣರಸಂ** = ಗುಣಗಳ ಮುಖ್ಯಾಂಶವನ್ನು, (ಗುಣಗಳ ಸಾರಭಾಗವನ್ನು)
**ಜ್ಞಾತವಾನ್** = ತಿಳಿದಿದ್ದರು.
**ಇತಿ** = ಹೀಗೆಂಬ ವಿಷಯವು,
**ಅಚಿತ್ರಂ** = ಆಶ್ಚರ್ಯಕರವಲ್ಲ,
**ಕಾನನೇ** = ಕಾಡಿನಲ್ಲಿ,
**ನಿಷ್ಪತನ್** = ಹಾರಾಡುತ್ತಾ ಸಂಚರಿಸುತ್ತಿರುವ,
**ಮಧುಕರರಾಜಃ** = ಶ್ರೇಷ್ಠವಾದ ದುಂಬಿಯು,
**ಪರಿಚಯಹೀನಃ ಅಪಿ** = ಪರಿಚಯವಿಲ್ಲದಿದ್ದರೂ,
**ಪೌಷ್ಪಂ** = ಹೂವಿನ,
**ಮಧು** = ಮಕರಂದವನ್ನು,
**ಆಪ್ತುಂ** = ಹೊಂದಲು,
**ಪ್ರಭುಃ** = ಸಮರ್ಥವಾಗಿ,
**ಸ್ಯಾತ್ ನನು** = ಆಗಿಯೇ ತೀರುತ್ತದೆಯಷ್ಟೆ!

**ತಾತ್ಪರ್ಯ**— ಕವಿಶ್ರೇಷ್ಠರಾದ ತ್ರಿವಿಕ್ರಮ ಪಂಡಿತಾಚಾರ್ಯರಿಗೆ ಶ್ರೀಮಧ್ವಾಚಾರ್ಯರ ಪರಿಚಯ ಹೆಚ್ಚಾಗಿರಲಿಲ್ಲ. ಆದರೂ ಅವರು ಶ್ರೀಮಧ್ವಾಚಾರ್ಯರು, ಅವರ ಪಾದಧೂಳಿಯೂ, ಇಂದ್ರಪದವಿಯನ್ನೇ ಕೊಡಬಲ್ಲದು ಎಂಬ ವಿಷಯ ವನ್ನು ತಿಳಿದರು. ಇದು ಪಾಮರರಿಗೆ ತಿಳಿಯಲು ಸಾಧ್ಯವಿಲ್ಲದ ವಿಷಯ. ಆದರೂ ತ್ರಿವಿಕ್ರಮರು ಈ ವಿಷಯವನ್ನು ತಿಳಿದು ಕೊಂಡು, ಅದರಂತೆ ಜಯಸಿಂಹರಾಜನಿಗೆ ಆಶೀರ್ವಾದ ಮಾಡಿದರು ಎಂಬುದು ಆಶ್ಚರ್ಯಕರವಾದ ವಿಷಯವಲ್ಲ.

ಹೂವುಗಳನ್ನು ಅರಸುತ್ತಾ, ಮಕರಂದರಸವನ್ನು ಕುಡಿಯುವ ಅಪೇಕ್ಷೆಯಿಂದ ಓಡಾಡುತ್ತಿರುವ ಬುದ್ಧಿವಂತವಾದ ಜೇನು ನೊಣವು (ದುಂಬಿಯು) ತನಗೆ ಪರಿಚಯವಿಲ್ಲದ ಕಾಡಿನಲ್ಲಿಯೂ ಕೂಡ ಹಿಂದೆ ತಾನು ಎಂದೂ ನೋಡಿಲ್ಲದ ಹೂವನ್ನೂ ಅದರ ವಾಸನೆಯಿಂದ ಕಂಡುಹಿಡಿದು ನೋಡುವುದರಿಂದಲೇ ಆ ಹೂವಿನ ವಿಶೇಷತೆಯನ್ನು ಅದರ ರಸದ ಗುಣ ವಿಶೇಷಗಳನ್ನು ತಿಳಿದು, ಆ ರಸವನ್ನು ಸ್ವೀಕರಿಸುತ್ತದೆ. ಅದರಂತೆಯೇ ತ್ರಿವಿಕ್ರಮರೂ ಆಚಾರ್ಯರ ಮಹಿಮೆಗಳನ್ನು ತಿಳಿದಿದ್ದಾರೆ. ಇದು ಆಶ್ಚರ್ಯಕರವಲ್ಲ, ಇದೇ ಬುದ್ಧಿವಂತರ ಲಕ್ಷಣವಷ್ಟೆ!

**ವಿಗ್ರಹ**—

**ಅನತಿಪರಿಚಿತಸ್ಯ**— ಅತಿ (ಅತ್ಯಂತಂ) ಪರಿಚಿತಃ ಅತಿಪರಿಚಿತಃ, ನ ಅತಿಪರಿಚಿತಃ ಅನತಿಪರಿಚಿತಃ ತಸ್ಯ ಅನತಿಪರಿಚಿತಸ್ಯ ।

**ಕವೀಂದ್ರಃ**— ಕವಿಷು ಇಂದ್ರಃ ಕವೀಂದ್ರಃ ।

**ಗುಣರಸಃ**— ಗುಣಾನಾಂ ರಸಃ ಗುಣರಸಃ ತಂ ।

**ಅತಿಗೂಢಃ**— ಅತ್ಯಂತಂ ಗೂಢಃ ಅತಿಗೂಢಃ ತಂ ।

**ಅಚಿತ್ರಂ**— ಚಿತ್ರಸ್ಯ ಅಭಾವಃ ಅಚಿತ್ರಂ ।

**ಮಧುಕರರಾಜಃ**— ಕರೋತೀತಿ ಕರಃ, ಮಧು ಕುರ್ವಂತೀತಿ ಮಧುಕರಾಃ, ಮಧುಕರಾಣಾಂ ರಾಜಾ ಮಧುಕರರಾಜಃ ।

**ಪೌಷ್ಪಂ ತತ್**— ಪುಷ್ಪಸ್ಯ ಇದಂ ಪೌಷ್ಪಂ ತತ್ ।

**ಪರಿಚಯಹೀನಃ**— ಪರಿಚಯೇನ ಹೀನಃ ಪರಿಚಯಹೀನಃ ।

**ಕ್ರಿಯಾಪದ**— **ಸ್ಯಾತ್** - ಸ್ಯಾತ್ ಸ್ಯಾತಾಂ ಸ್ಯುಃ ಇತ್ಯಾದಿ, ಅಸ್ ಧಾತು ವಿಧಿ ಲಿಙ್ ।

**ಕೋಶ**— ಕಾನನ = ಕಾಡು, 'ಗಹನಂ ಕಾನನಂ ವನಂ', ಮಧುಕರ = ದುಂಬಿ, 'ಮಧುವ್ರತೋ ಮಧುಕರೋ ಮಧುಲಿಣ್ ಮಧುಪಾಲಿನಃ' ಅಮರ ।

**ವಿಶೇಷಾಂಶ**— ಯಥಾ, ಪುಷ್ಪರಸಂ, ಅನ್ವಿಷ್ಯನ್, ಭ್ರಮರಃ, ಕಾನನೇಽಪಿ, ನಿಷ್ಪತನ್, ಪ್ರಾಕ್, ಅದೃಷ್ಟಸ್ಯಾಪಿ, ಪುಷ್ಪಸ್ಯ ಮಧು ಪ್ರಾಪ್ನೋತ್ಯೇವ ಪುಷ್ಪಸಂದರ್ಶನಮಾತ್ರೇಣ, ಮಧುವೈಶೇಷ್ಯಂ, ಜ್ಞಾತ್ವಾ ಸ್ವೀಕರೋತಿ, ತದ್ವತ್ ಅಯಂ ತ್ರಿವಿಕ್ರಮಾಚಾರ್ಯೋಽಪಿ ಪ್ರಾಕ್ ಅತಿಪರಿಚಯಹೀನಸ್ಯಾಪಿ ಮಧ್ವಾಚಾರ್ಯಸ್ಯ ಗುಣವಿಶೇಷಂ ಜ್ಞಾತವಾನ್ । ತಾದೃಶ ಸೂಕ್ಷ್ಮವೇದನಶಕ್ತಿಮತ್ತ್ವಾತ್ ಅತಃ ನೇದಮಾಶ್ಚರ್ಯಂ ಇತಿ ಭಾವಃ ।

ಹೇಗೆ ಹೂವಿನರಸವನ್ನು ಹುಡುಕುತ್ತಿರುವ ಶ್ರೇಷ್ಠವಾದ ದುಂಬಿಯು ಕಾಡಿನಲ್ಲಿ ಹಾರಾಡುತ್ತಿದ್ದರೂ ಕೂಡ ಹಿಂದೆ ನೋಡದೆ ಇದ್ದ ಹೂವಿನ ಮಕರಂದ ರಸವನ್ನು ಸವಿಯುತ್ತದೆ, ಆ ಮಕರಂದ ರಸವನ್ನು ಕಳೆದುಕೊಳ್ಳುವುದಿಲ್ಲ. ಹೂವನ್ನು ನೋಡಿದ ಕೂಡಲೇ ಅದರ ಮಕರಂದದ ವೈಶಿಷ್ಟ್ಯವನ್ನು ತಿಳಿದು, ರಸವನ್ನು ಸ್ವೀಕರಿಸುತ್ತದೆ. ಅದರಂತೆ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರೂ ಹಿಂದೆ ಆಚಾರ್ಯರ ವಿಶೇಷ ಪರಿಚಯವಿಲ್ಲದಿದ್ದರೂ ಬಹಳ ಸೂಕ್ಷ್ಮಬುದ್ಧಿಯುಳ್ಳವರಾದ್ದರಿಂದ ಆಚಾರ್ಯರ ಗುಣವಿಶೇಷವನ್ನು ತಿಳಿದರು (ಪ್ರತಿ ವಸ್ತೂಪಮಾಲಂಕಾರ).

**ಪ್ರಯೋಗ**— ಕವೀಂದ್ರೇಣ ತೇನ ಅನೇನ, ಅನತಿಪರಿಚಿತಸ್ಯಾಪಿ ಅಸ್ಯ ಅತಿಗೂಢಃ ಗುಣರಸಃ ಜ್ಞಾತಃ ಇತಿ ಅಚಿತ್ರಂ, ಕಾನನೇ ನಿಷ್ಪತತಾ ಮಧುಕರರಾಜೇನ ಪರಿಚಯಹೀನೇನ ಅಪಿ ಪೌಷ್ಪಂ ಮಧು ಆಪ್ತುಂ ಪ್ರಭುಣಾ ಭೂಯೇತ ನನು ।

★ ★ ★

**ಅವತಾರಿಕಾ**— ಶ್ರೀಪೂರ್ಣಪ್ರಜ್ಞರು ವಿಷ್ಣುಮಂಗಲ ದೇವಾಲಯದಲ್ಲಿ ಅವರವರ ಯೋಗ್ಯತೆಗೆ ತಕ್ಕಂತೆ ತಮ್ಮ ಮಹಿಮೆಯನ್ನು ಬೀರುತ್ತಾ ಕೆಲವು ದಿವಸಗಳವರೆಗೆ ವಾಸಿಸಿದರು ಎಂದು ಹೇಳುತ್ತಾರೆ.

**ಅಖಿಲಖಲಕುಲಾನಾಂ ವರ್ಧಯನ್ ದ್ವೇಷದೋಷಂ**
**ವಿದಧದಪಿ ನರಾಣಾಂ ಕೌತುಕಂ ಮಧ್ಯಮಾನಾಮ್ ।**
**ಸ್ವಗತಿಸಮುಚಿತಾನಾಂ ಭೂತಿದಾಯೀ ಶುಭಾನಾಂ**
**ಬಹುಲಹೃದಿಹ ನಿನ್ಯೇ ಶರ್ವರೀ ಕಾಶ್ಚಿದೇವಮ್ ॥ 6 ॥**

**ಪದಚ್ಛೇದ**— ಅಖಿಲಖಲಕುಲಾನಾಂ, ವರ್ಧಯನ್, ದ್ವೇಷದೋಷಂ, ವಿದಧತ್, ಅಪಿ, ನರಾಣಾಂ, ಕೌತುಕಂ, ಮಧ್ಯಮಾನಾಂ, ಸ್ವಗತಿಸಮುಚಿತಾನಾಂ, ಭೂತಿದಾಯೀ, ಶುಭಾನಾಂ, ಬಹುಲಹೃತ್, ಇಹ, ನಿನ್ಯೇ, ಶರ್ವರೀಃ, ಕಾಶ್ಚಿತ್, ಏವಂ ।

**ಅನ್ವಯ**— ಬಹುಲಹೃತ್, ಅಖಿಲಖಲಕುಲಾನಾಂ, ದ್ವೇಷದೋಷಂ, ವರ್ಧಯನ್, ಮಧ್ಯಮಾನಾಂ, ನರಾಣಾಂ, ಕೌತುಕಂ, ವಿದಧತ್, ಸ್ವಗತಿಸಮುಚಿತಾನಾಂ, ಶುಭಾನಾಂ, ಭೂತಿದಾಯೀ, ಅಪಿ (ಸನ್), ಇಹ, ಏವಂ, ಕಾಶ್ಚಿತ್, ಶರ್ವರೀಃ, ನಿನ್ಯೇ ।

**ಅನ್ವಯಾರ್ಥ**—

**ಬಹುಲಹೃತ್** = ಶ್ರೀಪೂರ್ಣಪ್ರಜ್ಞಾಚಾರ್ಯರು,
**ಅಖಿಲಖಲಕುಲಾನಾಂ** = ಎಲ್ಲಾ ತಮೋಯೋಗ್ಯರಾದ ದುರ್ಜನರ ಸಮೂಹಗಳಿಗೆ,
**ದ್ವೇಷದೋಷಂ** = ತನ್ನ ವಿಷಯದಲ್ಲಿ ಹಗೆತನವೆಂಬ ಕುಂದನ್ನು,
**ವರ್ಧಯನ್** = ಹೆಚ್ಚಿಸುತ್ತಾ,
**ಮಧ್ಯಮಾನಾಂ** = ಮಧ್ಯಮಾಧಿಕಾರಿಗಳಾದ ನಿತ್ಯಸಂಸಾರಿಗಳಾದ ಜೀವರಿಗೆ,
**ಕೌತುಕಂ** = ಆಶ್ಚರ್ಯವನ್ನು,
**ವಿದಧತ್ (ಸನ್)** = ಉಂಟುಮಾಡುತ್ತಾ,
**ಸ್ವಗತಿಸಮುಚಿತಾನಾಂ** = ಪರಮಾತ್ಮನ ಸ್ಥಾನಕ್ಕೆ(ಮೋಕ್ಷಕ್ಕೆ) ಯೋಗ್ಯರಾದ,
**ಶುಭಾನಾಂ** = ಸಾತ್ವಿಕರಾದ ಮೋಕ್ಷಯೋಗ್ಯ ಜನರಿಗೆ,
**ಭೂತಿದಾಯೀ (ಸನ್) ಅಪಿ** = ಜ್ಞಾನಭಕ್ತಿವೈರಾಗ್ಯಾದಿ ಸಂಪತ್ತನ್ನು ಕೊಡತಕ್ಕವರಾಗಿಯೂ,
**ಇಹ** = ಈ ವಿಷ್ಣುಮಂಗಲದೇವಾಲಯದಲ್ಲಿ,
**ಏವಂ** = ಮುಂದ ಹೇಳುವ ರೀತಿಯಿಂದ,
**ಕಾಶ್ಚಿತ್** = ಕೆಲವು,
**ಶರ್ವರೀಃ** = ರಾತ್ರಿಗಳನ್ನು,
**ನಿನ್ಯೇ** = ಕಳೆದರು.

**ತಾತ್ಪರ್ಯ**— ಶ್ರೀಪೂರ್ಣಪ್ರಜ್ಞಾಚಾರ್ಯರ ಸದಾಚಾರ ಸದ್ವಿಚಾರಗಳಿಂದ ಕೆಲವು ಮಂದಿ ದುರ್ಜನರಿಗೆ ಅವರಲ್ಲಿ ದ್ವೇಷವು ಉಂಟಾಗುತ್ತಿತ್ತು. ಭಕ್ತಿಯಾಗಲಿ,ದ್ವೇಷವಾಗಲಿ ಇಲ್ಲದ ಸಾಧಾರಣ ಜನರಿಗೆ ಅವರ ಅತಿಮಾನುಷ ವ್ಯಾಪಾರಗಳನ್ನು ನೋಡಿದಾಗ ಆಶ್ಚರ್ಯವುಂಟಾಗುತ್ತಿತ್ತು. ಸಾತ್ವಿಕರಾದ ಮುಕ್ತಿಯೋಗ್ಯರಾದ ಜನರಿಗೆ ಆಚಾರ್ಯರ ನಿತ್ಯಾಹ್ನಿಕ, ಪ್ರವಚನ,

ದೇವ ಪೂಜಾದಿಗಳನ್ನು ನೋಡಿದಾಗ ಅವರಲ್ಲಿ ಭಕ್ತಿಯುಂಟಾಗುತ್ತಿತ್ತು ಮತ್ತು ಪರಮಾತ್ಮನಲ್ಲಿ ಜ್ಞಾನ, ಭಕ್ತಿಗಳೂ, ವಿಷಯ ವೈರಾಗ್ಯಾದಿಗಳೂ ಉಂಟಾಗುತ್ತಿದ್ದವು.

ಅಮಾನುಷ ಮಧ್ವಾಚಾರ್ಯಸ್ಯ ದರ್ಶನೇನ ತದಸಹಮಾನಾನಾಂ ಮಧ್ಯಮಾನಾಂ ಮಧ್ವೇ ದ್ವೇಷೋ ಭವತಿ ಮಧ್ಯಮಾನಾಂ ಆಶ್ಚರ್ಯಂ ಭವತಿ, ಉತ್ತಮಾನಾಂ ಮಧ್ವಾಚಾರ್ಯೇ ಭಕ್ತ್ಯುದ್ರೇಕೋ ಭವತಿ ಇತಿ ಭಾವಃ । (ಭಲಾರಿಯ) ಜೀವರು ತಮೋಯೋಗ್ಯರು (ಅಧಮರು) ನಿತ್ಯಸಂಸಾರಿಗಳು (ಮಧ್ಯಮರು) ಮುಕ್ತಿಯೋಗ್ಯರು (ಉತ್ತಮರು) ಎಂದು ಮೂರು ವಿಧವಾಗಿರುತ್ತಾರೆ. ಇವರನ್ನೇ ತಾಮಸರಾಜಸಸಾತ್ವಿಕರೆಂದೂ ಹೇಳುತ್ತಾರೆ. ಶ್ರೀಮಧ್ವಾಚಾರ್ಯರು ಅಧಮರಿಗೆ ತಮ್ಮ ಆಚಾರಾದಿಗಳಿಂದ ದ್ವೇಷವನ್ನುಂಟು ಮಾಡುತ್ತಾ, ಮಧ್ಯಮರಿಗೆ ಆಶ್ಚರ್ಯವನ್ನುಂಟುಮಾಡುತ್ತಾ, ಉತ್ತಮರಿಗೆ ತಮ್ಮಲ್ಲಿ ಭಕ್ತಿಯ ಉದ್ರೇಕವನ್ನೂ, ವಿಷಯವೈರಾಗ್ಯ ಹರಿಭಕ್ತಿ ಜ್ಞಾನಾದಿ ಸಂಪತ್ತನ್ನು ಹೆಚ್ಚಿಸುತ್ತಾ, ಶ್ರೀವಿಷ್ಣುಮಂಗಲ ದೇವಾಲಯದಲ್ಲಿ ಹಲವು ದಿವಸಗಳವರೆಗೆ ವಾಸ ಮಾಡಿದರು ಎಂದು ಭಾವ.

ವಿಗ್ರಹ—

**ಅಖಿಲಖಲಕುಲಾನಾಂ**— ಅಖಿಲಾಶ್ಚತೇ ಖಲಾಶ್ಚ ಅಖಿಲಖಲಾಃ, ಅಖಿಲಖಲಾನಾಂ ಕುಲಾನಿ ಅಖಿಲಖಲ-ಕುಲಾನಿ ।

**ದ್ವೇಷದೋಷಂ**— ದ್ವೇಷ ಇತಿ ದೋಷಃ ದ್ವೇಷದೋಷಃ ತಂ ।

**ಸ್ವಗತಿ ಸಮುಚಿತಾನಾಂ**— ಸ್ವಸ್ಯ(ಸ್ವತಂತ್ರಸ್ಯ)ಗತಿಃ ಸ್ವಗತಿಃ, ಸ್ವಗತೇಃ ಸಮುಚಿತಾಃ ಸ್ವಗತಿಸಮುಚಿತಾಃ ತೇಷಾಂ ।

**ಭೂತಿದಾಯೀ**—ಭೂತಿಂ ದದಾತಿ ಇತಿ ಭೂತಿದಾಯೀ,

**ಬಹುಲಹೃತ್**—ಬಹುಲಂ (ಸರ್ವ ವಿಷಯಕಂ) ಹೃತ್ (ಜ್ಞಾನಂ) ಯಸ್ಯ ಸಃ ಬಹುಲಹೃತ್ ।

**ಕ್ರಿಯಾಪದ**— ನಿನ್ಯೇ- ನಿನ್ಯೇ ನಿನ್ಯಾತೇ ನಿನ್ಯಿರೇ, ನಿನ್ಯಿಷೇ ನಿನ್ಯಾಥೇ ನಿನ್ಯಿಢ್ವೇ-ನಿನ್ಯಿಧ್ವೇ, ನಿನ್ಯೇ ನಿನ್ಯಿವಹೇ ನಿನ್ಯಿಮಹೇ । ಣೀಞ್ ಪ್ರಾಪಣೇ ಆತ್ಮನೇಪದಿ ಲಿಟ್ ಪ್ರಥಮಪುರುಷೇ ಏಕವಚನಂ ।

**ಕೋಶ**— ಖಲ = ಅಧಮ, 'ಕ್ರೂರೇನೀಚೇಽಧಮೇ ಖಲಃ' ಅಮರ.

**ಪ್ರಯೋಗ**—ಬಹುಲಹೃದಾ ಅಖಿಲಖಲಕುಲಾನಾಂ ದ್ವೇಷದೋಷಂ ವರ್ಧಯತಾ(ಸತಾ), ಸ್ವಗತಿಸಮುಚಿತಾನಾಂ ಶುಭಾನಾಂ ಭೂತಿದಾಯಿನಾ ಅಪಿ (ಸತಾ) ಇಹ ಏವಂ ಕಾಶ್ಚಿತ್, ಶರ್ವರ್ಯಃ ನಿನ್ಯಿರೇ ।

★ ★ ★

**ಅವತಾರಿಕಾ**— ಇನ್ನು ಮುಂದೆ ಈ 14ನೆಯ ಸರ್ಗದ ಏಳನೆಯ ಶ್ಲೋಕದಿಂದ 44ನೆಯ ಶ್ಲೋಕ ಪೂರ್ತಿಯಾಗಿ ಆಚಾರ್ಯರ ಪ್ರತಿದಿನದ ಆಹ್ನಿಕ ಕೃತ್ಯಗಳನ್ನು ವರ್ಣಿಸುತ್ತಾರೆ. ಮೊದಲು ಆಚಾರ್ಯರು ಬ್ರಾಹ್ಮೀ ಮುಹೂರ್ತದಲ್ಲಿ ಮಾಡುತ್ತಿದ್ದ ಕರ್ತವ್ಯಗಳನ್ನು ಹೇಳುತ್ತಾರೆ.

**ಉದಯತಿ ವಿನತಾಯಾ ನಂದನೇ ಶ್ಲಾಘ್ಯಕಾಲೇ**
**ಸ ಕೃತಸಕಲಕೃತ್ಯಃ ಕೃತ್ಯವೇದಿಪ್ರವೇಕಃ ।**
**ಅರುಣಯವನಿಕಾಂತರ್ಬ್ರಹ್ಮ ನಾರಾಯಣಾಖ್ಯಂ**
**ಗುರುಗುಣಮಭಿದಧ್ಯೌ ಯೋಗ್ಯಯೋಗಾಸನಸ್ಥಃ ॥ 7 ॥**

**ಪದಚ್ಛೇದ**— ಉದಯತಿ, ವಿನತಾಯಾಃ, ನಂದನೇ, ಶ್ಲಾಘ್ಯಕಾಲೇ, ಸಃ, ಕೃತಸಕಲಕೃತ್ಯಃ, ಕೃತ್ಯವೇದಿಪ್ರವೇಕಃ, ಅರುಣಯವನಿಕಾಂತಃ, ಬ್ರಹ್ಮ, ನಾರಾಯಣಾಖ್ಯಂ, ಗುರುಗುಣಂ, ಅಭಿದಧ್ಯೌ, ಯೋಗ್ಯಯೋಗಾಸನಸ್ಥಃ ।

**ಅನ್ವಯ**— ಕೃತ್ಯವೇದಿಪ್ರವೇಕಃ, ಸಃ, ವಿನತಾಯಾಃ, ನಂದನೇ, ಉದಯತಿ (ಸತಿ), ಕೃತಸಕಲಕೃತ್ಯಃ (ಸನ್), ಅರುಣಯವನಿಕಾಂತಃ, ಯೋಗ್ಯಯೋಗಾಸನಸ್ಥಃ (ಸನ್), ಗುರುಗುಣಂ, ನಾರಾಯಣಾಖ್ಯಂ, ಬ್ರಹ್ಮ, ಅಭಿದಧ್ಯೌ ।

**ಅನ್ವಯಾರ್ಥ**—

**ಕೃತ್ಯ, ವೇದಿ, ಪ್ರವೇಕಃ** = ಆಯಾ ಕಾಲದಲ್ಲಿ ಮಾಡಬೇಕಾಗಿರುವ ಕರ್ತವ್ಯಗಳನ್ನು ತಿಳಿದವರಲ್ಲಿ ಉತ್ತಮರಾದ,

**ಸಃ** = ಆ ಶ್ರೀಮಧ್ವಾಚಾರ್ಯರು,

**ವಿನತಾಯಾಃ** = ವಿನತಾ ಎಂಬ ಕಶ್ಯಪರ ಪತ್ನಿಯರ,

**ನಂದನೇ** = ಮಗನಾದ ಅರುಣನು,

**ಉದಯತಿ (ಸತಿ)** = ಉದಯಿಸುತ್ತಿರಲಾಗಿ,

**ಶ್ಲಾಘ್ಯಕಾಲೇ** = ಪ್ರಾತಃಕಾಲದ ಸ್ನಾನ ಸಂಧ್ಯಾವಂದನಾದಿ ಕೃತ್ಯಗಳಿಗೆ ಪ್ರಶಸ್ತವಾದ ಕಾಲದಲ್ಲಿ

**ಕೃತಸಕಲಕೃತ್ಯಃ(ಸನ್)** = ಮಾಡಲ್ಪಟ್ಟ ಎಲ್ಲಾ ಸ್ನಾನ ಮುಂತಾದ ಕಾರ್ಯಗಳುಳ್ಳವರಾಗಿ,

**ಅರುಣಯುವನಿಕಾಂತಃ** = ಕೆಂಪಾದ (ಕಾವಿ ಬಣ್ಣದ) ಪರದೆಯ ಒಳಗೆ,

**ಯೋಗ್ಯಯೋಗಾಸನಸ್ಥಃ** = ಧ್ಯಾನಕ್ಕೆ ಉಚಿತವಾದ, ಧ್ಯಾನದ ಆಸನದಲ್ಲಿ ಕುಳಿತವರಾಗಿ,

**ಗುರುಗುಣಂ** = ಶ್ರೇಷ್ಠವಾದ ಜ್ಞಾನ ಆನಂದಾದಿ ಅನಂತ ಗುಣಗಳುಳ್ಳ,

**ನಾರಾಯಣಾಖ್ಯಂ** = ನಾರಾಯಣನೆಂಬ ಹೆಸರುಳ್ಳ

**ಬ್ರಹ್ಮ** = ಪರಬ್ರಹ್ಮವನ್ನು (ಸರ್ವೋತ್ತಮವಾದ ವಸ್ತುವನ್ನು)

**ಅಭಿದಧ್ಯೌ** = ಧ್ಯಾನಿಸಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ಯಾವ ಯಾವ ಕಾಲದಲ್ಲಿ ಯಾವ ಯಾವ ಕರ್ತವ್ಯಗಳನ್ನು ಮಾಡಬೇಕೆಂದು ಚೆನ್ನಾಗಿ ತಿಳಿದವರು, ಅಂತಹವರಲ್ಲಿ ಅತ್ಯಂತ ಶ್ರೇಷ್ಠರೂ ಆಗಿದ್ದರು. ಅವರು ಅರುಣೋದಯ ಕಾಲದಲ್ಲಿ ಎದ್ದು ಸ್ನಾನ ಮುಂತಾದ ಎಲ್ಲಾ ಕರ್ತವ್ಯಗಳನ್ನು ಮಾಡುತ್ತಿದ್ದರು. ಅನಂತರ ಧ್ಯಾನಕ್ಕೆ ಉಚಿತವಾದ ಆಸನದಲ್ಲಿ ಕಾವಿ ಶಾಟಿಯ ಪರದೆಯ ಒಳಗೆ ಇತರರಿಗೆ ಕಾಣಿಸದಂತೆ ಕುಳಿತುಕೊಳ್ಳುತ್ತಿದ್ದರು. ಅಲ್ಲಿ ಅವರು ಧ್ಯಾನಕ್ಕೆ ಉಚಿತವಾದ ಯೋಗಾಸನದಲ್ಲಿದ್ದು ಶ್ರೇಷ್ಠವಾದ ಅಪ್ರಾಕೃತವಾದ ಅನಂತಗುಣಗಳಿಂದ ಪರಿಪೂರ್ಣನಾದ ಶ್ರೀಮನ್ನಾರಾಯಣನೆಂಬ ಪರಬ್ರಹ್ಮನನ್ನು ಧ್ಯಾನಿಸುತ್ತಿದ್ದರು.

ತಮ್ಮ ಧ್ಯಾನವು ಶುದ್ಧವಾಗಿ ಇರುವುದಕ್ಕಾಗಿ, ಬೇಡವಾದ ಜನರು ಓಡಾಡದಂತೆ ಮಾಡುವುದಕ್ಕಾಗಿ ತಮಗೂ ಜನರಿಗೂ ಮಧ್ಯಭಾಗದಲ್ಲಿ ಎರಡು ಗೋಡೆಗಳಿಗೆ ಸೇರಿಸಿ ಪರದೆಯನ್ನು ಹಾಕಿಸಿ ಅದರ ಒಳಗಡೆ ಆಚಾರ್ಯರು ಕುಳಿತು ಕೊಳ್ಳುತ್ತಿದ್ದರು. 'ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಂ' (ಭಗವದ್ಗೀತಾ) ಬಹಳ ಎತ್ತರವೂ ಇಲ್ಲದೆ, ಬಹಳ ತಗ್ಗಾಗಿಯೂ ಇಲ್ಲದಿರುವ ಬಟ್ಟೆ, ಕೃಷ್ಣಾಜಿನ, ದರ್ಭಾಸನ ಇವುಗಳಲ್ಲಿ ಯಾವುದಾದರೂ ಒಂದರಲ್ಲಿ ಅಥವಾ ಶುದ್ಧವಾದ ವಸ್ತ್ರ ವಸ್ತ್ರದ ಮೇಲೆ ಕೃಷ್ಣಾಜಿನವನ್ನು ಹಾಸಿ ಅದರ ಮೇಲೆ ದರ್ಭಾಸನವನ್ನಿಟ್ಟು ಅದರ ಮೇಲೆ ಕುಳಿತುಕೊಳ್ಳುತ್ತಿದ್ದರು. ಆಗ ಪದ್ಮಾಸನ, ಸ್ವಸ್ತಿಕಾಸನ ಅಥವಾ ವೀರಾಸನ ಈ ಆಸನಗಳಲ್ಲಿ ಯಾವುದಾದರೊಂದು ಆಸನದಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದರು ಎಂದು ತಾತ್ಪರ್ಯ.

ವಿಗ್ರಹ—

**ಶ್ಲಾಘ್ಯಕಾಲಃ**— ಶ್ಲಾಘಿತುಂ ಯೋಗ್ಯಃ ಶ್ಲಾಘ್ಯಃ, ಶ್ಲಾಘ್ಯಶ್ಚಾಸೌ ಕಾಲಶ್ಚ ಶ್ಲಾಘ್ಯಕಾಲಃ ತಸ್ಮಿನ್ ।

**ಕೃತಸಕಲಕೃತ್ಯಃ**— ಸಕಲಾನಿ ಚ ತಾನಿ ಕೃತ್ಯಾನಿ ಚ ಸಕಲಕೃತ್ಯಾನಿ, ಕೃತಾನಿ ಸಕಲಕೃತ್ಯಾನಿ ಯೇನ ಸಃ ಕೃತಸಕಲಕೃತ್ಯಃ।

**ಕೃತ್ಯವೇದಿನಃ**— ಕೃತ್ಯಾನಿ ವಿದಂತಿ ಇತಿ ಕೃತ್ಯವೇದಿನಃ ।

**ಕೃತ್ಯವೇದಿಪ್ರವೇಕಃ**— ಕೃತ್ಯವೇದಿನಾಂ ಪ್ರವೇಕಃ ಕೃತ್ಯವೇದಿಪ್ರವೇಕಃ ।

**ಅರುಣಯವನಿಕಾಂತಃ**— ಅರುಣಾ ಚ ಸಾ ಯವನಿಕಾ ಚ ಅರುಣಯವನಿಕಾ, ಅರುಣಯವನಿಕಾಯಾಃ ಅಂತಃ ಅರುಣಯವನಿಕಾಂತಃ (ಈ ಸಮಸ್ತ ಪದವು ಅವ್ಯಯ) ।

**ಯೋಗ್ಯಯೋಗಾಸನಸ್ಥಃ**— ಯೋಗಸ್ಯ ಆಸನಂ ಯೋಗಾಸನಂ, ಯೋಗ್ಯಂ ಚ ತತ್ ಯೋಗಾಸನಂ ಚ ಯೋಗ್ಯಯೋಗಾಸನಂ, ಯೋಗ್ಯಯೋಗಾಸನೇ ತಿಷ್ಠತೀತಿ ಯೋಗ್ಯಯೋಗಾಸನಸ್ಥಃ ।

**ಕ್ರಿಯಾಪದ**— ಅಭಿದಧ್ಯೌ - ಅಭಿ+ದಧ್ಯೌ, ದಧ್ಯೌ ದಧ್ಯತುಃ ದಧ್ಯುಃ, ದಧ್ಯಿಥ-ದಧ್ಯಾಥ ದಧ್ಯಥುಃ ದಧ್ಯ, ದಧ್ಯೌ ದಧ್ಯಿವ ದಧ್ಯಿಮ । ಧ್ಯೈ ಚಿಂತಾಯಾಂ ಸಕ ಅನಿಟ್ ಪರ. to think of, to meditate, to recollect ಲಿಟ್. ಪ್ರಥಮ ಪುರುಷೇ ಏಕವಚನಂ ಅಭಿ ಉಪಸರ್ಗ ।

**ಕೋಶ**— ಪ್ರವೇಕ = ಉತ್ತಮ, 'ಕ್ಲೀಬೇ ಪ್ರಧಾನಂ ಪ್ರಮುಖಂ ಪ್ರವೇಕಾನುತ್ತಮೋತ್ತಮಾಃ' ಅಮರ, 'ಅಗ್ರ್ಯಂ ಪ್ರಾಗ್ರಹರಂ (ಣಂ) ಪ್ರವೇಕಮಪರಂ ವರ್ಯಂ ವರೇಣ್ಯಂ ವರಂ' ಹಲಕೋಶ, ಯವನಿಕಾ = ಪರದೆ, 'ಪ್ರತಿಸೀರಾ ಯ(ಜ)ವನಿಕಾ ಸ್ಯಾತ್ ತಿರಸ್ಕರಿಣೀ ಚ ಸಾ' ಅಮರ, ಅಂತಃ(ಅಂತರ್) = ಮಧ್ಯ, 'ಅಂತರ್ಮಧ್ಯೇ ತಥಾ ಪ್ರಾಂತೇ' ವಿಶ್ವ ಯೋಗ = ಧ್ಯಾನ, 'ಯೋಗಃ ಸನ್ನಹನೋಪಾಯಧ್ಯಾನಸಂಗತಿಯುಕ್ತಿಷು' ಅಮರನಾಥವರ್ಗ ।

**ಪ್ರಯೋಗ**— ಕೃತ್ಯವೇದಿಪ್ರವೇಕೇಣ ತೇನ ವಿನತಾಯಾಃ ನಂದನೇ ಉದಯತಿ ಸತಿ ಶ್ಲಾಘ್ಯಕಾಲೇ ಕೃತಸಕಲಕೃತ್ಯೇನ, ಅರುಣಯವನಿಕಾಂತಃ ಯೋಗ್ಯಯೋಗಾಸನಸ್ಥೇನ ಗುರುಗುಣಂ ನಾರಾಯಣಾಖ್ಯಂ ಬ್ರಹ್ಮ ಅಭಿದಧ್ಯೇ (ಶ್ರೀಮಧ್ವಾಚಾರ್ಯರಿಂದ ಧ್ಯಾನ ಮಾಡಲ್ಪಟ್ಟಿತು) ಕರ್ಮಣಿ ।

★ ★ ★

**ಅವತಾರಿಕಾ**— ಆ ಸಮಯದಲ್ಲಿ ಆಚಾರ್ಯರ ಶಿಷ್ಯರ ಆಚರಣೆಯನ್ನು ತಿಳಿಸುತ್ತಾರೆ.

**ಅತಿಧವಲಿತದಂತಾ ದಂತಕಾಷ್ಠೈಃ ಪ್ರಶಸ್ತೈ-**
**ರಪಿ ಯುಗಪದನೇಕೇ ಸಸ್ನುರತ್ರ ವ್ರತೀಂದ್ರಾಃ ।**
**ಗುರುಭಿರಭಿಹಿತೇಷ್ವಾಚಾರಭೇದೇಷು ನಿಷ್ಠಾಂ**
**ಸ್ಫುಟಮವಗಮಯಂತಃ ಸೌಷ್ಠವಾತ್ ಕರ್ಮಣಾಂ ಚ ॥ 8 ॥**

**ಪದಚ್ಛೇದ**— ಅತಿಧವಲಿತದಂತಾಃ, ದಂತಕಾಷ್ಠೈಃ, ಪ್ರಶಸ್ತೈಃ, ಅಪಿ, ಯುಗಪತ್, ಅನೇಕೇ, ಸಸ್ನುಃ, ಅತ್ರ, ವ್ರತೀಂದ್ರಾಃ, ಗುರುಭಿಃ, ಅಭಿಹಿತೇಷು, ಆಚಾರಭೇದೇಷು, ನಿಷ್ಠಾಂ, ಸ್ಫುಟಂ, ಅವಗಮಯಂತಃ, ಸೌಷ್ಠವಾತ್, ಕರ್ಮಣಾಂ, ಚ ।

**ಅನ್ವಯ**— ಪ್ರಶಸ್ತೈಃ ದಂತಕಾಷ್ಠೈಃ ಅತಿಧವಲಿತದಂತಾಃ, ಕರ್ಮಣಾಂ, ಸೌಷ್ಠವಾತ್, ಗುರುಭಿಃ, ಅಭಿಹಿತೇಷು, ಆಚಾರಭೇದೇಷು, ನಿಷ್ಠಾಂ, ಅವಗಮಯಂತಃ, ಅನೇಕೇ, ವ್ರತೀಂದ್ರಾಃ, ಅಪಿ, ಅತ್ರ, ಯುಗಪತ್, ಸಸ್ನುಃ ।

**ಅನ್ವಯಾರ್ಥ**—

**ಪ್ರಶಸ್ತೈಃ** = ಶ್ರೇಷ್ಠವಾದ,

**ದಂತಕಾಷ್ಠೈಃ** = ಹಲ್ಲುಜ್ಜಿಕೊಳ್ಳುವ ಕಡ್ಡಿಗಳಿಂದ,

**ಅತಿಧವಲಿತದಂತಾಃ** = ಬಹಳ ಬೆಳ್ಳಗೆ ಉಜ್ಜಲ್ಪಟ್ಟ ಹಲ್ಲುಗಳುಳ್ಳ

**ಕರ್ಮಣಾಂ** = ಮೃತ್ತಿಕಾಶೌಚ, ಆಚಮನ, ಪ್ರಾಣಾಯಾಮ, ಸ್ನಾನಸಂಕಲ್ಪಾದಿ ಕಾರ್ಯಗಳ,

**ಸೌಷ್ಠವಾತ್** = ಸರಿಯಾದ ಆಚರಣೆಯಿಂದಲೂ,

**ಗುರುಭಿಃ** = ತಮ್ಮ ತಮ್ಮ ಗುರುಗಳಿಂದ,

**ಅಭಿಹಿತೇಷು** = ಹೇಳಲ್ಪಟ್ಟ

**ಆಚಾರಭೇದೇಷು** = ಬೇರೆ ಬೇರೆ ಆಚಾರಗಳಲ್ಲಿ

**ನಿಷ್ಠಾಂ** = ಆದರವನ್ನು

**ಸ್ಫುಟಂ** = ಸ್ಪಷ್ಟವಾಗಿ,

**ಅವಗಮಯಂತಃ** = (ಜನರಿಗೆ) ಸೂಚಿಸುತ್ತಿರುವ (ಜ್ಞಾಪಿಸಿಕೊಡುತ್ತಿರುವ),

**ಅನೇಕೇ** = ಬಹಳ ಮಂದಿ,

**ವ್ರತೀಂದ್ರಾಃ ಅಪಿ** = ಯತಿಶ್ರೇಷ್ಠರೂ ಕೂಡ,

**ಅತ್ರ** = (ಆಚಾರ್ಯರು ಸ್ನಾನಮಾಡಿದ) ಈ ತಟಾಕದಲ್ಲಿ

**ಯುಗಪತ್** = ಒಂದೇ ಕಾಲದಲ್ಲಿ (ಒಟ್ಟಿಗೆ),

**ಸಸ್ನುಃ** = ಸ್ನಾನ ಮಾಡಿದರು.

**ತಾತ್ಪರ್ಯ**— ಶ್ರೀ ಪೂರ್ಣಪ್ರಜ್ಞರು ನಿತ್ಯಾಹ್ನಿಕಕ್ಕಾಗಿ ಎದ್ದಾಗಲೇ ಅವರ ಅನೇಕ ಮಂದಿ ಯತಿಶಿಷ್ಯರೂ ಎದ್ದರು. ಅವರು ಶಾಸ್ತ್ರದಲ್ಲಿ ಉತ್ತಮವೆಂದು ಉಕ್ತವಾದ ಹಲ್ಲುಜ್ಜುವ ಕಡ್ಡಿಗಳಿಂದ ಬೆಳ್ಳಗಾಗುವಂತೆ ಹಲ್ಲುಗಳನ್ನು ಚೆನ್ನಾಗಿ ಉಜ್ಜಿದರು. ಅವರವರ ಗುರುಗಳು ಅವರವರಿಗೆ ಉಪದೇಶಿಸಿದಂತೆ ಮೃತ್ತಿಕಾಶೌಚ, ಸ್ನಾನಸಂಕಲ್ಪ, ಪ್ರಾಣಾಯಾಮ, ಆಚಮನ, ಸೂಕ್ತ ಜಪ ಮುಂತಾದವುಗಳನ್ನು ಬಹಳ ಚೆನ್ನಾಗಿ ನಡೆಸಿದರು. ಅವರವರು ಮಾಡುತ್ತಿರುವ ಆಚಾರ ವಿಶೇಷಗಳಲ್ಲಿ ಬಹಳ ಹೆಚ್ಚಾದ ಶ್ರದ್ಧೆ, ಆಸಕ್ತಿ, ಗೌರವಗಳು ಅವರವರಿಗೆ ಇದ್ದುವೆಂಬುದು ಇದರಿಂದ ಜನರಿಗೆ ಚೆನ್ನಾಗಿ ತಿಳಿದು ಬರುತ್ತಿತ್ತು. ಇಂತಹ ಅನೇಕ ಯತಿಶ್ರೇಷ್ಠರು ಎಲ್ಲರೂ ಒಟ್ಟಿಗೆ ಏಕಕಾಲದಲ್ಲಿ ಆಚಾರ್ಯರು ಸ್ನಾನಮಾಡಿದ ತಟಾಕದಲ್ಲಿಯೇ ಸ್ನಾನ ಮಾಡಿದರು.

**ವಿಶೇಷಾಂಶ**— ದಂತಕಾಷ್ಠಲಕ್ಷಣಂ.

**ಕನಿಷ್ಠಿಕಾಸಮಂ ಸ್ಥೌಲ್ಯೇ ದ್ವಾದಶಾಂಗುಲಮಾಯತಂ ।**
**ಸತ್ವಚಂ ದಂತಕಾಷ್ಠಂ ಸ್ಯಾತ್ ತಸ್ಯಾಗ್ರೇಣ ತು ಧಾವಯೇತ್ ॥**

ಅವರವರ ಕಿರುಬೆರಳಿನಷ್ಟು ದಪ್ಪವಾಗಿದ್ದು, ಅವರವರ ಬೆರಳುಗಳಲ್ಲಿ ಹನ್ನೆರಡು ಅಂಗುಲ ಉದ್ದವಾಗಿರುವ ಹಾಗೂ ತೊಗಟೆಯಿಂದ ಸಹಿತವಾದ ಬೇವು ಇತ್ಯಾದಿ ವನಸ್ಪತಿಗಳ ಕಡ್ಡಿಯೇ ದಂತಕಾಷ್ಠವು, ಇದರ ತುದಿಯಿಂದ ಹಲ್ಲುಜ್ಜಿ ಕೊಳ್ಳಬೇಕು.

**ಛಲಾರಿಯ- ಅಯಂಭಾವಃ**— ವಿಹಿತಕಾಷ್ಠೇನ ದಂತಾನ್ ಶೋಧಯಿತ್ವಾ ಶೌಚಾಚಮನಾದಿ ಕರ್ಮಣಾಂ ನ್ಯೂನತ್ವಂ ಯಥಾ ನ ಸ್ಯಾತ್ ತಥಾ ಯತೀನಾಂ ಕರ್ಮಾನುಷ್ಠಾನದರ್ಶನೇನ ಸ್ವಗುರೂಪದಿಷ್ಟಾಚಾರೇಷು ತೇಷಾಂ ಅತ್ಯಾದರೋ ವರ್ತತೇ ಇತಿ ಲೋಕಾಃ ಅಜಾನನ್ ಇತಿ ।

ವಿಹಿತವಾದ ದಂತಕಾಷ್ಠದಿಂದ ಹಲ್ಲುಗಳನ್ನು ಶೋಧಿಸಿ, ಶೌಚ ಆಚಮನ ಮುಂತಾದ ಕರ್ಮಗಳಲ್ಲಿ ನ್ಯೂನತೆ ಇಲ್ಲದಂತೆ ಯತಿಗಳು ಕರ್ಮಾನುಷ್ಠಾನ ಮಾಡಿದರು. ಇದನ್ನು ನೋಡಿದ ಜನರು ಈ ಯತಿಗಳಿಗೆ ತಮ್ಮ ತಮ್ಮ ಗುರುಗಳು ಉಪದೇಶಿಸಿದ ಆಚಾರಗಳಲ್ಲಿ ತುಂಬಾ ಆದರವಿದೆಯೆಂದು ತಿಳಿದರು ಎಂದು ಅಭಿಪ್ರಾಯ.

ವಿಗ್ರಹ—

**ಅತಿಧವಲಿತದಂತಾಃ—** ಅತಿಧವಲಿತಾಃ ದಂತಾಃ ಯ್ಯೆಃ ತೇ ಅತಿಧವಲಿತದಂತಾಃ ।

**ವ್ರತೀಂದ್ರಾಃ—** ವ್ರತಾನಿ (ನಿಯಮಾಃ) ಏಷಾಂ ಸಂತೀತಿ ವ್ರತಿನಃ, ವ್ರತೀನಾಂ ಇಂದ್ರಾಃ ವ್ರತೀಂದ್ರಾಃ ।

**ಆಚಾರಭೇದೇಷು—** ಆಚಾರಾಣಾಂ ಭೇದಾಃ ಆಚಾರಭೇದಾಃ ತೇಷು ।

**ಸೌಷ್ಠವಂ—** ಸುಷ್ಠು (ಅವ್ಯಯ) ಭಾವಃ ಸೌಷ್ಠವಂ ತಸ್ಮಾತ್ ।

**ಕ್ರಿಯಾಪದ—** ಸಸ್ನುಃ- ಸಸ್ನೌ ಸಸ್ನತುಃ ಸಸ್ನುಃ, ಸಸ್ನಿರ್ಥ ಸಸ್ನಾಥ ಸಸ್ನಥುಃ ಸಸ್ನ, ಸಸ್ನೌ ಸಸ್ನಿವ ಸಸ್ನಿಮ । ಷ್ಣಾ (ಸ್ನಾ) ಶೌಚೇ ಅಕರ್ಮಕ ಅನಿಟ್ ಪರಸ್ಮೈ. to bathe, to perform an ablution ಲಿಟ್ ಪ್ರಥಮಪುರುಷೇ ಏಕವಚನಂ ।

**ಕೋಶ—** ಯುಗಪತ್ (ಅವ್ಯಯ) = ಒಟ್ಟಿಗೆ, ಏಕಕಾಲದಲ್ಲಿ 'ತದಾ ತದಾನೀಂ ಯುಗಪದೇಕದಾ ಸರ್ವದಾ ಸದಾ' ಅಮರ ।

**ಪ್ರಯೋಗ—** ಪ್ರಶಸ್ತೈಃ ದಂತಕಾಷ್ಠೈಃ ಅತಿಧವಲಿತದಂತೈಃ, ಕರ್ಮಣಾಂ ಸೌಷ್ಠವಾತ್ ಗುರುಭಿಃ ಅಭಿಹಿತೇಷು ಆಚಾರಭೇದೇಷು ನಿಷ್ಠಾಂ ಸ್ಫುಟಂ ಅವಗಮಯದ್ಭಿಃ ಚ, ಅನೇಕೈಃ ವ್ರತೀಂದ್ರೈಃ ಅಪಿ ಅತ್ರ ಯುಗಪತ್ ಸಸ್ನೇ, ಭಾವೇ ಪ್ರಯೋಗ ।

★ ★ ★

ಅವತಾರಿಕಾ— ಆಚಾರ್ಯರ ಶಿಷ್ಯರು ನಿದ್ರೆ ಶ್ರಮಗಳನ್ನು ಲೆಕ್ಕಿಸದೆ ಮಾಡಿದ ಗುರುಸೇವೆಯನ್ನು ವಿವರಿಸುತ್ತಾರೆ.

**ಚರಮಸಮಯಸುಪ್ತಾಃ ಪೂರ್ವಮುತ್ಥಾಯ ಶಿಷ್ಯಾಃ**
**ಗುರುಜನಪರಿಚರ್ಯಾಂ ಚಕ್ರಿರೇ ದುಷ್ಕರಾಂ ಚ ।**
**ಸಬಹುಮತಿ ತದಾದ್ಯಪ್ಯಾರ್ಧರಾತ್ರಾತ್ ಪ್ರಸನ್ನಾಃ**
**ಸುಗತಿರಪರಥೈಷಾಂ ಸ್ಯಾತ್ ಕಥಂಕಾರಮಿಷ್ಟಾ ॥ 9 ॥**

ಪದಚ್ಛೇದ— ಚರಮಸಮಯಸುಪ್ತಾಃ, ಪೂರ್ವಂ, ಉತ್ಥಾಯ, ಶಿಷ್ಯಾಃ, ಗುರುಜನಪರಿಚರ್ಯಾಂ, ಚಕ್ರಿರೇ, ದುಷ್ಕರಾಂ, ಚ, ಸಬಹುಮತಿ, ತದಾದಿ, ಅಪಿ, ಆ ಅರ್ಧರಾತ್ರಾತ್, ಪ್ರಸನ್ನಾಃ, ಸುಗತಿಃ, ಅಪರಥಾ, ಏಷಾಂ, ಸ್ಯಾತ್, ಕಥಂಕಾರಂ, ಇಷ್ಟಾ ।

ಅನ್ವಯ— ಚರಮಸಮಯಸುಪ್ತಾಃ, ಶಿಷ್ಯಾಃ, ಪೂರ್ವಂ, ಉತ್ಥಾಯ, ತದಾದಿ, ಆ ಅರ್ಧರಾತ್ರಾತ್, ಅಪಿ, ಪ್ರಸನ್ನಾಃ, ದುಷ್ಕರಾಂ, ಗುರುಜನಪರಿಚರ್ಯಾಂ, ಚ, ಸಬಹುಮತಿ, ಚಕ್ರಿರೇ, ಅಪರಥಾ, ಏಷಾಂ, ಇಷ್ಟಾ, ಸುಗತಿಃ, ಕಥಂಕಾರಂ, ಸ್ಯಾತ್ ।

ಅನ್ವಯಾರ್ಥ—

**ಚರಮಸಮಯ ಸುಪ್ತಾಃ** = ಗುರುಗಳು ನಿದ್ರಿಸಿದ ಅನಂತರದ ಸಮಯದಲ್ಲಿ ನಿದ್ರಿಸಿದ,

**ಶಿಷ್ಯಾಃ** = ಶಿಷ್ಯರು,

**ಪೂರ್ವಂ** = ಗುರುಗಳು ಏಳುವುದಕ್ಕಿಂತ ಮೊದಲು,

**ಉತ್ಥಾಯ** = ಎದ್ದು

**ತದಾದಿ** = ಎಚ್ಚರವಾಗಿ ಎದ್ದ ಸಮಯ ಮೊದಲುಗೊಂಡು,

**ಆ ಅರ್ಧರಾತ್ರಾತ್ ಅಪಿ** = ಮುಂದೆ ಬರುವ ನಡುರಾತ್ರಿಯವರೆಗೂ,

**ಪ್ರಸನ್ನಾಃ (ಸಂತಃ)** = ಬೇಸರವಿಲ್ಲದೆ ಸಂತೋಷಗೊಂಡವರಾಗಿ,
**ದುಷ್ಕರಾಂ** = (ಅಲ್ಪಭಾಗ್ಯರಿಂದ) ಮಾಡಲು ಅಸಾಧ್ಯವಾದ,
**ಗುರುಜನಪರಿಚರ್ಯಾಂ ಚ** = ಗುರುಜನರ ಸೇವೆಯನ್ನೂ,
**ಸಬಹುಮತಿ** = ಆದರಪೂರ್ವಕವಾಗಿ,
**ಚಕ್ರಿರೇ** = ಮಾಡಿದರು.
**ಅಪರಥಾ** = ಹೀಗೆ ಗುರುಜನರ ಸೇವೆಯನ್ನು ಮಾಡದಿದ್ದರೆ,
**ಏಷಾಂ** = ಈ ಶಿಷ್ಯರಿಗೆ,
**ಇಷ್ಟಾ** = ಬೇಕಾಗಿರುವ,
**ಸುಗತಿಃ** = ಮೋಕ್ಷವೆಂಬ ಸದ್ಗತಿಯು,
**ಕಥಂಕಾರಂ** = ಹೇಗೆ ತಾನೇ,
**ಸ್ಯಾತ್** = ಆದೀತು?

**ತಾತ್ಪರ್ಯ—** ಕೆಲವು ಮಂದಿ ಶಿಷ್ಯರು ಗುರುಗಳು ಮಲಗಿದ ಮೇಲೆ ರಾತ್ರಿ ಮಲಗಿದ್ದರು. ಅದುವರೆಗೂ ಅಧ್ಯಯನ ಗುರು ಸೇವಾದಿಗಳನ್ನು ಮಾಡುತ್ತಿದ್ದರು. ಅವರು ಬೆಳಗಿನ ಜಾವದಲ್ಲಿ ಗುರುಗಳು ಏಳುವುದಕ್ಕೆ ಮೊದಲೇ ಎದ್ದರು. ಎದ್ದಾಗಿನಿಂದ ಆರಂಭಿಸಿ ಮುಂದೆ ಬರುವ ಮಧ್ಯರಾತ್ರಿಯವರೆಗೂ ಅಲ್ಪ ಭಾಗ್ಯರಿಗೆ ಮಾಡಲು ಸಾಧ್ಯವಿಲ್ಲದ ಗುರುಸೇವೆಯನ್ನು ಪ್ರಸನ್ನರಾಗಿದ್ದು ಬಹಳ ಗೌರವಪೂರ್ವಕವಾಗಿ ಮಾಡಿದರು. ಹೀಗೆ ಶ್ರಮಪಟ್ಟಾದರೂ ಗುರುಸೇವೆ ಮಾಡುವುದು ಅತ್ಯಾವಶ್ಯಕವು. ಗುರುಶುಶ್ರೂಷೆಯನ್ನು ಗೌರವ ಆದರಗಳಿಂದ ಮಾಡದಿದ್ದರೆ ಆ ಶಿಷ್ಯರು ಯಾವ ಸದ್ಗತಿ ಯನ್ನು ಅಪೇಕ್ಷಿಸಿ ಗುರುಗಳ ಬಳಿಗೆ ಬಂದಿದ್ದಾರೋ ಅದು ಅವರಿಗೆ ಹೇಗೆ ಸಿಗಲು ಸಾಧ್ಯ? ಗುರುಗಳ ಅನುಗ್ರಹದಿಂದಲೇ ಸದ್ಗತಿಯು ಸಿಗಲು ಸಾಧ್ಯ. ಗುರುಗಳ ಪ್ರಸಾದವು ಅತ್ಯಾವಶ್ಯಕ ಎಂದು ಭಾವ.

**ವಿಗ್ರಹ—**

**ಚರಮಸಮಯಸುಪ್ತಾಃ—** ಚರಮಶ್ಚಾಸೌ ಸಮಯಶ್ಚ ಚರಮಸಮಯಃ, ಚರಮಸಮಯೇ ಸುಪ್ತಾಃ ಚರಮಸಮಯಸುಪ್ತಾಃ । (ಚರಮ = ಕೊನೆಯದು, 'ಚರಮೋಽನ್ತ್ಯೇ ಚ ಪಶ್ಚಿಮೇ' ವಿಶ್ವ)

**ಗುರುಜನಪರಿಚರ್ಯಾ—** ಗುರವಃ ಇತಿ ಜನಾಃ ಗುರುಜನಾಃ, ಗುರುಜನಾನಾಂ ಪರಿಚರ್ಯಾ ಗುರುಜನ ಪರಿಚರ್ಯಾ ತಾಂ ।

**ದುಷ್ಕರಾಂ—** ದುಃಖೇನ ಕರ್ತುಂ ಶಕ್ಯಾ ದುಷ್ಕರಾ ತಾಂ ।

**ಸಬಹುಮತಿ—** ಬಹುಮತ್ಯಾ ಸಹಿತಂ ಯಥಾ ಭವತಿ ತಥಾ ಸಬಹುಮತಿ । (ಕ್ರಿಯಾ ವಿಶೇಷಣ ಅವ್ಯಯ)

**ತದಾದಿ—** ಸಃ (ಪ್ರಬೋಧಕಾಲಃ) ಆದಿಃ ಯಥಾ ಭವತಿ ತಥಾ ತದಾದಿ (ಕ್ರಿಯಾ. ವಿಶೇ. ಅ.) ಆ ಅರ್ಧರಾತ್ರಾತ್ ಎಂಬಲ್ಲಿ ''ಆಙ್ ಮರ್ಯಾದಾವಚನೇ'' (ಅ-1.4.89) ಎಂಬ ಸೂತ್ರದಿಂದ ಕರ್ಮಪ್ರವಚನೀಯಸಂಜ್ಞೆ, ''ಪಂಚಮ್ಯ ಪಾಙ್ ಪರಿಭಿಃ'' (ಅ-2.3.10) ಎಂಬ ಸೂತ್ರದಿಂದ ಪಂಚಮೀ ।

**ಸಂಗತಿಃ—** ಶೋಭನಾ ಚ ಸಾ ಗತಿಶ್ಚ ಸಂಗತಿಃ । (ಪರಿಚರ್ಯಾ = ಸೇವೆ, ''ವರಿವಸ್ಯಾ ತು ಶುಶ್ರೂಷಾ ಪರಿಚರ್ಯಾಪ್ಯುಪಾಸನಾ''(ನಂ) ಅಮರ, ಕಥಂಕಾರಂ, ''ಅನ್ಯಥೈವಂ ಕಥಮಿತ್ಥಂ ಸುಸಿದ್ಧಾ ಪ್ರಯೋಗಶ್ಚೇತ್'' (ಅ-3.4.27) ಎಂಬ ಸೂತ್ರದಿಂದ ಕಥಂ ಎಂಬುದು ಉಪಪದವಾಗಿರುವಾಗ ಕೃಧಾತುವಿಗೆ ಣಮುಲ್ ಪ್ರತ್ಯಯ ।

**ಕ್ರಿಯಾಪದ—** ಚಕ್ರಿರೇ - ಕೃಧಾತು ಸಕರ್ಮಕ ಲಿಟ್ ಆತ್ಮನೇಪದಿ ಪ್ರಥಮಪುರುಷೇ ಬಹುವಚನಂ । ಸ್ಯಾತ್ - ಅಸ್ ಧಾತು ಅಕರ್ಮಕ ಪರಸ್ಮೈಪದಿ ವಿಧಿಲಿಙ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಚರಮಸಮಯಸುಪ್ತೈಃ ಶಿಷ್ಯೈಃ ಪೂರ್ವಂ ಉತ್ಥಾಯ ತದಾದಿ ಆ ಅರ್ಧರಾತ್ರಾತ್ ಅಪಿ ಪ್ರಸನ್ನೈಃ ದುಷ್ಕರಾ ಗುರುಜನಪರಿಚರ್ಯಾ ಚ ಸಬಹುಮತಿ ಚಕ್ರೇ (ಕರ್ಮಣಿ) । ಅಪರಥಾ ಏಷಾಂ ಇಷ್ಟಯಾ ಸುಗತ್ಯಾ ಕಥಂ ಭೂಯೇತ? (ಭಾವೇ) ।

★ ★ ★

**ಅವತಾರಿಕಾ—** ಅಲ್ಲಿ ಸೇರಿರುವ ಅನೇಕ ಶಿಷ್ಯರಲ್ಲಿ ಒಬ್ಬ ಶಿಷ್ಯನ ವಿಷಯದಲ್ಲಿ ನಡೆದ ಒಂದು ಘಟನೆಯನ್ನು ವರ್ಣಿಸುತ್ತಾರೆ.

**ಶ್ರವಣಮನನಹೇತೋಃ ಪ್ರಾಕ್ ಚಿರಾಯಾಸ್ತನಿದ್ರಃ**
**ಸಪದಿ ವಿವಶಯಂತ್ಯಾ ನಿದ್ರಯಾ ಗ್ರಸ್ತಚೇತಾಃ ।**
**ಸ್ವಯಮಪಿ ನಯತಿ ದ್ರಾಗಂಗವಸ್ತ್ರಾದಿ ಪೂಜ್ಯೇ**
**ಝಟಿತಿ ವಿಗತನಿದ್ರಃ ಕೋಽಪಿ ಶಿಷ್ಯೋಽನ್ವಶೇತ ॥ 10 ॥**

**ಪದಚ್ಛೇದ—** ಶ್ರವಣಮನನಹೇತೋಃ, ಪ್ರಾಕ್, ಚಿರಾಯ, ಅಸ್ತನಿದ್ರಃ, ಸಪದಿ, ವಿವಶಯಂತ್ಯಾ, ನಿದ್ರಯಾ, ಗ್ರಸ್ತಚೇತಾಃ, ಸ್ವಯಂ, ಅಪಿ, ನಯತಿ, ದ್ರಾಕ್, ಅಂಗವಸ್ತ್ರಾದಿ, ಪೂಜ್ಯೇ, ಝಟಿತಿ, ವಿಗತನಿದ್ರಃ, ಕಃ, ಅಪಿ, ಶಿಷ್ಯಃ, ಅನ್ವಶೇತ ।

**ಅನ್ವಯ—** ಶ್ರವಣಮನನಹೇತೋಃ, ಪ್ರಾಕ್, ಚಿರಾಯ, ಅಸ್ತನಿದ್ರಃ, ಸಪದಿ, ವಿವಶಯಂತ್ಯಾ, ನಿದ್ರಯಾ, ಗ್ರಸ್ತಚೇತಾಃ, ಝಟಿತಿ, ವಿಗತನಿದ್ರಃ, ಕೋಽಪಿ, ಶಿಷ್ಯಃ, ಪೂಜ್ಯೇ, ಸ್ವಯಮಪಿ, ಅಂಗವಸ್ತ್ರಾದಿ, ನಯತಿ, ಸತಿ, ಅನ್ವಶೇತ ।

**ಅನ್ವಯಾರ್ಥ—**

**ಶ್ರವಣಮನನಹೇತೋಃ** = ಪಾಠ ಕೇಳುವುದು, ಕೇಳಿದ್ದನ್ನು ಚಿಂತನ ಮಾಡುವುದು, ಇವುಗಳ ಕಾರಣಕ್ಕಾಗಿ (ಶ್ರವಣಾದಿಗಳಿಗೋಸ್ಕರ) (ಅಥವಾ ಕೇಳಿದ ಗ್ರಂಥಗಳ ಚಿಂತನೆಗೋಸ್ಕರ),
**ಪ್ರಾಕ್** = ಹಿಂದಿನ ರಾತ್ರಿಯಲ್ಲಿ
**ಚಿರಾಯ** = ಬಹಳ ಹೊತ್ತು,
**ಅಸ್ತನಿದ್ರಃ** = ನಿದ್ರೆಯನ್ನು ಬಿಟ್ಟಿದ್ದ
**ಸಪದಿ** = ಕೂಡಲೇ, (ಅರುಣೋದಯ ಕಾಲದಲ್ಲಿ)
**ವಿವಶಯಂತ್ಯಾ** = ಪರಾಧೀನನ್ನಾಗಿ ಮಾಡುವ,
**ನಿದ್ರಯಾ** = ನಿದ್ದೆಯಿಂದ,
**ಗ್ರಸ್ತಚೇತಾಃ** = ಆಕ್ರಮಿಸಲ್ಪಟ್ಟ ಮನಸ್ಸುಳ್ಳ,
**ಝಟಿತಿ** = ಕೂಡಲೇ,
**ವಿಗತನಿದ್ರಃ** = ನಿದ್ದೆಯಿಂದ ಎದ್ದ
**ಕಃ ಅಪಿ ಶಿಷ್ಯಃ** = ಯಾವನೋ ಒಬ್ಬ ಶಿಷ್ಯನು,

**ಪೂಜ್ಯೇ** = ಗುರುಗಳು,

**ಅಂಗವಸ್ತ್ರಾದಿ** = ಸ್ನಾನದ ಬಟ್ಟೆ ಮೊದಲಾದವುಗಳನ್ನು,

**ಸ್ವಯಂ ಅಪಿ** = ತಾನೇ,

**ದ್ರಾಕ್** = ಬೇಗನೇ,

**ನಯತಿ ಸತಿ** = ಒಯ್ಯುತ್ತಿರಲಾಗಿ,

**ಅನ್ವಶೇತ** = ಪಶ್ಚಾತ್ತಾಪಪಟ್ಟನು.

**ತಾತ್ಪರ್ಯ—** ಶಿಷ್ಯರು ಗುರುಗಳಿಗೆ ಅಂಗವಸ್ತ್ರ (ಮೈ ಒರಸುವ ಬಟ್ಟೆ), ದೇವರ ಪೆಟ್ಟಿಗೆ ಮುಂತಾದ್ದನ್ನು ಸ್ನಾನ ಮಾಡುವಲ್ಲಿಗೆ ಒಯ್ದು ಕೊಡಬೇಕಾದುದು ಅವರ ಕರ್ತವ್ಯವಾಗಿತ್ತು. ಒಂದು ದಿನ ಒಬ್ಬ ಶಿಷ್ಯನು ಹಿಂದಿನ ದಿವಸ ಭಾಗವತ ಪಾಠವನ್ನು ರಾತ್ರಿಯೂ ಕೇಳುತ್ತಿದ್ದನು. ಅನಂತರ ಅದರ ಮನನವನ್ನು ಬಹಳ ಹೊತ್ತು ಮಾಡುತ್ತಿದ್ದನು. ಅವನು ಹಗಲು ಕೇಳಿದ ಪಾಠವನ್ನು ಪುನಃ ಚಿಂತನೆ ಮಾಡಿ ದೃಢಪಡಿಸಿಕೊಳ್ಳಬೇಕಾಗಿತ್ತು. ಈ ಕಾರ್ಯಗಳಲ್ಲಿ ರಾತ್ರಿ ಬಹಳ ಕಳೆದು ಹೋಯಿತು. ರಾತ್ರಿ ಬಹಳ ಹೊತ್ತಾದ ಮೇಲೆ ಮಲಗಿದ್ದರಿಂದ ಅರುಣೋದಯ ಕಾಲದಲ್ಲಿ ಅವನನ್ನು ನಿದ್ದೆಯು ಬಲವಾಗಿ ಆವರಿಸಿತ್ತು. ಆದರೆ ಅವನ ಗುರುಗಳು ಅರುಣೋದಯ ಕಾಲದಲ್ಲಿ ಎದ್ದು ತಮ್ಮ ದಂಡ ಅಂಗವಸ್ತ್ರ ದೇವರ ಪೆಟ್ಟಿಗೆ ಮುಂತಾದ್ದನ್ನು ತೆಗೆದುಕೊಂಡು ಸ್ನಾನಕ್ಕಾಗಿ ಹೊರಟರು. ಆ ಕೂಡಲೇ ಶಿಷ್ಯನಿಗೆ ಎಚ್ಚರವಾಯಿತು. 'ಅಯ್ಯೋ ಈ ದಿವಸ ಸರಿಯಾದ ಸಮಯದಲ್ಲಿ ಎಚ್ಚರಗೊಂಡು ನಾನು ಗುರುಸೇವೆ ಮಾಡದೆ ಬಹಳ ಅಪರಾಧ ಮಾಡಿದೆ' ಎಂದು ಅವನು ಪಶ್ಚಾತ್ತಾಪಪಟ್ಟನು. (ಶಿಷ್ಯನು ಎದ್ದು ತಾನು ದೊಡ್ಡ ತಪ್ಪು ಮಾಡಿದೆನು ಎಂದೂ, ಪಶ್ಚಾತ್ತಾಪಪಟ್ಟನು ಎಂದೂ, ಹೇಳಿದುದರಿಂದ ಗುರುಗಳಿಗೆ ಶಿಷ್ಯರಲ್ಲಿ ವಾತ್ಸಲ್ಯವೂ, ಶಿಷ್ಯರಿಗೆ ಗುರುಭಕ್ತಿಯೂ ಇದೆಯೆಂದು ವರ್ಣಿಸಿದಂತಾಯಿತು)

ಕಶ್ಚಿತ್ ಶಿಷ್ಯಃ ಪೂರ್ವರಾತ್ರೌ ಶ್ರುತಗ್ರಂಥಚಿಂತನೇನ ನಿಮಿತ್ತೇನ ಬಹುಕಾಲಜಾಗರೂಕಸನ್ ಅರುಣೋದಯಕಾಲೇ ನಿದ್ರಾವಶಂ ಗತಃ ತದಾ ಗುರೋಃ ಪೂರ್ವಂ ಉತ್ಥಾಯ ಆತ್ಮನಾ ನೇತವ್ಯಸ್ವಗುರುಸ್ನಾನಾಂಗವಸ್ತ್ರಾದಿಕಂ ಸ್ವಗುರೌ ಸ್ವಯಮೇವ ಗೃಹೀತ್ವಾ ಸ್ನಾನಾಯ ಗಚ್ಛತಿ ಸತಿ ಸಹಸಾ ಪ್ರಬುದ್ಧಸ್ಸನ್ ಮಹಾನ್ ಅಪರಾಧಃ ಮಮ ಪ್ರಾಪ್ತಃ ಇತಿ ಪಶ್ಚಾತ್ತಾಪಂ ಪ್ರಾಪ್ತವಾನ್ ಇತಿ ಭಾವಃ । (ಛಲಾರಿಯ)

ಒಬ್ಬ ಶಿಷ್ಯನು ಹಿಂದಿನ ರಾತ್ರಿಯಲ್ಲಿ ಕೇಳಿರುವ ಪಾಠನ ಚಿಂತನ ಮಾಡುತ್ತಾ ಬಹಳ ಹೊತ್ತು ಎಚ್ಚೆತ್ತಿದ್ದು ಅರುಣೋದಯ ಕಾಲದಲ್ಲಿ ನಿದ್ರಾಪರವಶನಾದನು. ಆಗ ಗುರುಗಳಿಗಿಂತ ಮೊದಲು ಎದ್ದು ತಾನೇ ತೆಗೆದುಕೊಂಡು ಹೋಗಬೇಕಾಗಿದ್ದ ತನ್ನ ಗುರುಗಳ ಸ್ನಾನದ ಅಂಗವಸ್ತ್ರ ಮುಂತಾದ್ದನ್ನು, ತನ್ನ ಗುರುಗಳು ತಾವೇ ತೆಗೆದುಕೊಂಡು ಸ್ನಾನಕ್ಕೋಸ್ಕರ ಹೋಗುತ್ತಿರುವಾಗ ಕೂಡಲೇ ಎಚ್ಚೆತ್ತ ಶಿಷ್ಯನು 'ನನ್ನಿಂದ ದೊಡ್ಡ ಅಪರಾಧವಾಯಿತು' ಎಂದು ಪಶ್ಚಾತ್ತಾಪ ಪಟ್ಟನು ಎಂದು ಛಲಾರಿಯದ ತಾತ್ಪರ್ಯ.

ವಿಗ್ರಹ—

**ಶ್ರವಣಮನನಹೇತೋಃ—** ಶ್ರವಣಂ ಚ ಮನನಂ ಚ ಶ್ರವಣಮನನೇ, ಶ್ರವಣಮನನೇ ಏವ ಹೇತುಃ ಶ್ರವಣ ಮನನಹೇತುಃ ತಸ್ಮಾತ್, ಅಥವಾ ಶ್ರವಣಸ್ಯ(ಕೇಳಿದುದರ) ಮನನಂ ಶ್ರವಣಮನನಂ, ಶ್ರವಣಮನನಸ್ಯ ಹೇತುಃ ಶ್ರವಣಮನನಹೇತುಃ ತಸ್ಮಾತ್ ।

**ಅಸ್ತನಿದ್ರಃ—** ಅಸ್ತಾ ನಿದ್ರಾ ಯೇನ ಸಃ ಅಸ್ತನಿದ್ರಃ ।

**ಅಂಗವಸ್ತ್ರಾದಿ—** ಅಂಗಸ್ಯ ವಸ್ತ್ರಂ ಅಂಗವಸ್ತ್ರಂ, (ಸ್ನಾನ ಮಾಡಿದ ಮೇಲೆ ಒರೆಸಿಕೊಳ್ಳುವ ಬಟ್ಟೆ), ಅಂಗವಸ್ತ್ರಂ ಆದಿ ಯಸ್ಯ ತತ್ ಅಂಗವಸ್ತ್ರಾದಿ, ತತ್, ಅಥವಾ ವಸ್ತ್ರಂ ಆದಿ ಯಸ್ಯ ತತ್ ವಸ್ತ್ರಾದಿ, ಅಂಗಂ (ಸ್ನಾನಾಂಗಂ) ಚ ತತ್ ವಸ್ತ್ರಾದಿ ಚ ಅಂಗವಸ್ತ್ರಾದಿ ತತ್ ।

**ಪೂಜ್ಯಃ**— ಪೂಜಯಿತುಂ ಯೋಗ್ಯಃ ಪೂಜ್ಯಃ ತಸ್ಮಿನ್,

**ವಿಗತನಿದ್ರಃ**— ವಿಗತಾ ನಿದ್ರಾ ಯಸ್ಮಾತ್ ಸಃ ವಿಗತನಿದ್ರಃ ।

**ಕ್ರಿಯಾಪದ**— ಅನ್ವಶೇತ-ಅನು+ಅಶೇತ ಅಶೇಯಾತಾಂ ಅಶೇರತ, ಅಶೇಥಾಃ ಅಶೇಯಾಥಾಂ ಅಶೇಧ್ವಂ, ಅಶಯಿ ಅಶೇವಹಿ ಅಶೇಮಹಿ । ಅನು ಉಪಸರ್ಗ ಶೀಙ್(ಶೀ) ಸ್ವಪ್ನೇ ಧಾತು ಅಕರ್ಮಕ ಆತ್ಮನೇಪದಿ ಲಙ್ ಪ್ರಥಮಪುರುಷೇ ಏಕವಚನಂ ।

**ಕೋಶ**— ನಿದ್ರಾ = ನಿದ್ದೆ, 'ಸ್ಯಾನ್ನಿದ್ರಾಶಯನಂ ಸ್ವಾಪಃ' ಅಮರ, ಸಪದಿ = ಕೂಡಲೇ, 'ಸದ್ಯಃ ಸಪದಿ ತತ್ ಕ್ಷಣೇ' ಅಮರ, ಅಂಗ = ಶರೀರ, ಉಪಕರಣ, 'ಅಂಗಂ ಗಾತ್ರಾಂತಿಕೋಪಾಯಪ್ರತೀಕೇಷ್ವಪ್ರಧಾನಕೇ' ವಿಶ್ವ ।

**ಪ್ರಯೋಗ**— ಶ್ರವಣಮನನಹೇತೋಃ ಪ್ರಾಕ್ ಚಿರಾಯ ಅಸ್ತನಿದ್ರೇಣ ಸಪದಿ ವಿವಶಯಂತ್ಯಾ ನಿದ್ರಯಾ ಗ್ರಸ್ತಚೇತಸಾ ಝುಟತಿ ವಿಗತನಿದ್ರೇಣ ಕೇನಾಪಿ ಶಿಷ್ಯೇಣ ಪೂಜ್ಯೇ ಅಂಗವಸ್ತ್ರಾದಿ ಸ್ವಯಂ ಅಪಿ ನಯತಿ (ಸತಿ) ಅನ್ವಶಯ್ಯತ (ಭಾವೇ) ।

★ ★ ★

**ಅವತಾರಿಕಾ**— ಸಮಯಕ್ಕೆ ಸರಿಯಾಗಿ ಗುರುಸೇವೆ ಮಾಡಲಾಗದ ಶಿಷ್ಯರು ಪಶ್ಚಾತ್ತಾಪಪಟ್ಟು ಅನಂತರ ಏನು ಮಾಡಿದರು ಎಂದು ಹೇಳುತ್ತಾರೆ.

**ವಿಹಿತಮವಿಹಿತಂ ಪ್ರಾಗೇವ ಕಸ್ಮಾದ್ವಿನಿದ್ರೈ-**
**ರಿತಿ ಗುರುಪರಿವಾದಾಶಂಕಯಾ ನಮ್ರಗಾತ್ರಾಃ ।**
**ಚಿರಮನವತರಂತಃ ಶ್ರಾವಕಾ ಮುಕ್ತಮಾರ್ಗಾಃ**
**ಗುರುಷು ಜಲಸಕಾಶಸ್ಥೇಷು ತೂಷ್ಣೀಮತಿಷ್ಠನ್ ॥ 11 ॥**

**ಪದಚ್ಛೇದ**— ವಿಹಿತಂ, ಅವಿಹಿತಂ, ಪ್ರಾಕ್, ಏವ, ಕಸ್ಮಾತ್, ವಿನಿದ್ರೈಃ, ಇತಿ, ಗುರುಪರಿವಾದಾಶಂಕಯಾ, ನಮ್ರಗಾತ್ರಾಃ, ಚಿರಂ, ಅನವತರಂತಃ, ಶ್ರಾವಕಾಃ, ಮುಕ್ತಮಾರ್ಗಾಃ, ಗುರುಷು, ಜಲಸಕಾಶಸ್ಥೇಷು, ತೂಷ್ಣೀಂ, ಅತಿಷ್ಠನ್ ।

**ಅನ್ವಯ**— ಶ್ರಾವಕಾಃ, 'ಪ್ರಾಗೇವ ವಿನಿದ್ರೈಃ(ಭವದ್ಭಿಃ) ವಿಹಿತಂ ಕಸ್ಮಾತ್ ಅವಿಹಿತಂ', ಇತಿ, ಗುರುಪರಿವಾದಾ ಶಂಕಯಾ, ನಮ್ರಗಾತ್ರಾಃ(ಸಂತಃ), ಗುರುಷು, ಜಲಸಕಾಶಸ್ಥೇಷು(ಸತ್ಸು), ಚಿರಂ, ಅನವತರಂತಃ(ಸಂತಃ), ಮುಕ್ತ ಮಾರ್ಗಾಃ (ಸಂತಃ), ತೂಷ್ಣೀಂ, ಅತಿಷ್ಠನ್ ।

**ಅನ್ವಯಾರ್ಥ**—

**ಶ್ರಾವಕಾಃ** = ಶಿಷ್ಯರು,(ಅಥವಾ ಹೇ ಶ್ರಾವಕಾಃ = ಎಲೈ ಶಿಷ್ಯರೇ!)
**ಪ್ರಾಕ್ ಏವ** = ನಾವು ಏಳುವುದಕ್ಕಿಂತ ಮೊದಲೇ,
**ವಿನಿದ್ರೈಃ** = ನಿದ್ರೆಯನ್ನು ಬಿಟ್ಟಿದ್ದ (ಭವದ್ಭಿಃ = ನಿಮ್ಮಿಂದ)
**ವಿಹಿತಂ** = ನಾವು ನೇಮಿಸಿದ ಕಾರ್ಯವು,
**ಕಸ್ಮಾತ್** = ಏತಕ್ಕೆ,
**ಅವಿಹಿತಂ** = ಮಾಡಲ್ಪಡಲಿಲ್ಲ?
**ಇತಿ** = ಎಂಬುದಾಗಿ,
**ಗುರುಪರಿವಾದಾಶಂಕಯಾ** = ಗುರುಗಳ ಗದರಿಸುವಿಕೆಯ ಹೆದರಿಕೆಯಿಂದ,

**ನಮ್ರಗಾತ್ರಾಃ** = (ಸಂತಃ) ಬಾಗಿದ ಶರೀರವುಳ್ಳವರಾಗಿ,

**ಗುರುಷು** = ಗುರುಗಳು,

**ಜಲಸಕಾಶಸ್ಥೇಷು** = ನೀರಿನ ಹತ್ತಿರ ಇರುವಾಗ,

**ಚಿರಂ** = ಬಹಳ ಹೊತ್ತು,

**ಅನವತರಂತಃ** = ಇಳಿಯದೆ ಇದ್ದವರಾಗಿ,

**ಮುಕ್ತಮಾರ್ಗಾಃ (ಸಂತಃ)** = ಬಿಡಲ್ಪಟ್ಟ ದಾರಿಯುಳ್ಳವರಾಗಿ,

**ತೂಷ್ಣೀಂ** = ಸುಮ್ಮನೆ,

**ಅತಿಷ್ಠನ್** = ನಿಂತರು.

**ತಾತ್ಪರ್ಯ**— ಎಲೈ ಶಿಷ್ಯರೇ! ನೀವು ನಮಗಿಂತ ಮೊದಲೇ ಎದ್ದು, ನಾವು ನಿಮಗೆ ನೇಮಿಸಿದ ಕರ್ತವ್ಯವನ್ನೂ, ವೇದಸ್ಮೃತಿಗಳಲ್ಲಿ ಹೇಳಿರುವ ಕಾರ್ಯಗಳನ್ನೂ ಏಕೆ ಮಾಡಲಿಲ್ಲ? ಎಂದು ಗುರುಗಳು ಆಕ್ಷೇಪಿಸಿ ಗದರಿಸಿಯಾರು ಎಂಬ ಸಂದೇಹದಿಂದ, ಆ ಶಿಷ್ಯರು ಭಯಪಟ್ಟು ವಿನೀತರಾಗಿ ಸ್ವಲ್ಪ ಬಾಗಿ ನಿಂತಿದ್ದರು. ಗುರುಗಳು ನೀರಿನ ಹತ್ತಿರ ಸ್ನಾನಾದಿ ಕಾರ್ಯಗಳಿಗಾಗಿ ನಿಂತಿರುವಷ್ಟು ಹೊತ್ತು, ಬಹಳ ಹೊತ್ತಾದರೂ ನೀರಿಗೆ ಇಳಿಯದೆ ಗುರುಗಳು ಸ್ನಾನಮಾಡಿ ಬರುವ ದಾರಿಯನ್ನು ಬಿಟ್ಟು ತಾವು ಸ್ನಾನ ಮಾಡದೆ ಸುಮ್ಮನೆ ನಿಂತಿದ್ದರು. ಶಿಷ್ಯರಿಗೆ ಗುರುಗಳಲ್ಲಿ ಅಷ್ಟು ಭಕ್ತಿ ಇದ್ದಿತು ಎಂದು ತಾತ್ಪರ್ಯ.

**ವಿಗ್ರಹ**—

**ಅವಿಹಿತಂ**— ನ ವಿಹಿತಂ ಅವಿಹಿತಂ ।

**ವಿನಿದ್ರಾಃ**— ವಿಗತಾ ನಿದ್ರಾ ಯೇಭ್ಯಃ ತೇ ವಿನಿದ್ರಾಃ ತೈಃ ।

**ಗುರುಪರಿವಾದಶಂಕಾ**— ಗುರೂಣಾಂ ಪರಿವಾದಃ ಗುರುಪರಿವಾದಃ, ಗುರುಪರಿವಾದಸ್ಯ ಆಶಂಕಾ ಗುರು-ಪರಿವಾದಾಶಂಕಾ ತಯಾ ।

**ನಮ್ರಗಾತ್ರಾಃ**— ನಮ್ರಂ ಗಾತ್ರಂ ಯೇಷಾಂ ತೇ ನಮ್ರಗಾತ್ರಾಃ ।

**ಅನವತರಂತಃ**— ನ ಅವತರಂತಃ ಅನವತರಂತಃ ।

**ಮುಕ್ತಮಾರ್ಗಾಃ**— ಮುಕ್ತಃ ಮಾರ್ಗಃ ಯೈಃ ತೇ ಮುಕ್ತಮಾರ್ಗಾಃ ।

**ಜಲಸಕಾಶಸ್ಥಾಃ**— ಜಲಸ್ಯ ಸಕಾಶಃ ಜಲಸಕಾಶಃ, ಜಲಸಕಾಶೇ ತಿಷ್ಠಂತೀತಿ ಜಲಸಕಾಶಸ್ಥಾಃ ತೇಷು ।

(**ಸಕಾಶಃ** = ಸಮೀಪ, nearness)

**ಕ್ರಿಯಾಪದ**— **ಅತಿಷ್ಠತ್**- ಅತಿಷ್ಠತ್ ಅತಿಷ್ಠತಾಂ ಅತಿಷ್ಠನ್, ಅತಿಷ್ಠಃ ಅತಿಷ್ಠತಂ ಅತಿಷ್ಠತ, ಅತಿಷ್ಠಂ ಅತಿಷ್ಠಾವ ಅತಿಷ್ಠಾಮ । ಷ್ಠಾ(ಸ್ಥಾ) ಗತಿನಿವೃತ್ತೌ ಅಕರ್ಮಕ ಅನಿಟ್ ಪರಸ್ಮೈ. to stand ಅನದ್ಯತನಭೂತೇ ಲಙ್ ಪ್ರಥಮಪುರುಷೇ ಬಹುವಚನಂ ।

**ಕೋಶ**— ಪರಿವಾದ = ಗದರಿಸುವುದು, ಆಕ್ಷೇಪ, 'ಅವರ್ಣಾಕ್ಷೇಪನಿರ್ವಾದಪರೀವಾದಾಪವಾದವತ್' ಅಮರ ।

**ಪ್ರಯೋಗ**— 'ಹೇ ಶ್ರಾವಕಾಃ, ಭವಂತಃ ಪ್ರಾಗೇವ ವಿನಿದ್ರಾಃ ವಯಂ ಯತ್ ವಿಹಿತವಂತಃ ತತ್ ಕಸ್ಮಾತ್ ನ ವಿಹಿತವಂತಃ ಇತಿ ಗುರುಪರಿವಾದಾಶಂಕಯಾ ನಮ್ರಗಾತ್ರೈಃ ಗುರುಷು ಜಲಸಕಾಶಸ್ಥೇಷು ಚಿರಂ ಅನವತರದ್ಭಿಃ, ಮುಕ್ತಮಾರ್ಗೈಃ (ಶ್ರಾವಕೈಃ) ಚಿರಂ ಅಸ್ಥೀಯತ (ಭಾವೇ)' ।

★ ★ ★

**ಅವತಾರಿಕಾ—** ಶ್ರೀಮದಾನಂದತೀರ್ಥರು ಪೂಜೆ ಮಾಡುವುದಕ್ಕೆ ಮೊದಲು ಅವರ ಶಿಷ್ಯರಾದ ಯತಿಗಳೊಬ್ಬರು ಮಾಡಿದ ನಿರ್ಮಾಲ್ಯ ವಿಸರ್ಜನ ಪೂಜೆಯನ್ನು ವರ್ಣಿಸುತ್ತಾರೆ.

**ವಿಪುಲಹೃದಯಪಾರ್ಶ್ವೇ ದೀಪದೀಪ್ತಿಪ್ರದೀಪ್ತೇ**
**ದರವರಪರಿಪೂರ್ಣೈರ್ವಾರ್ಭಿರರ್ಘ್ಯಾದಿ ದತ್ವಾ।**
**ಯತಿರತಿಯತಚೇತಾಶ್ಚ ಕ್ರಿಣೋಽರ್ಚಾನಿಕಾಯಾತ್**
**ಕುಸುಮಸಮಿತಿಮಗ್ರ್ಯಾಮಾದರಾದುಜ್ಜಹಾರ ॥ 12 ॥**

**ಪದಚ್ಛೇದ—** ವಿಪುಲಹೃದಯಪಾರ್ಶ್ವೇ, ದೀಪದೀಪ್ತಿಪ್ರದೀಪ್ತೇ, ದರವರಪರಿಪೂರ್ಣೈಃ, ವಾರ್ಭಿಃ, ಅರ್ಘ್ಯಾದಿ, ದತ್ವಾ ಯತಿಃ, ಅತಿಯತಚೇತಾಃ, ಚಕ್ರಿಣಃ, ಅರ್ಚಾನಿಕಾಯಾತ್, ಕುಸುಮಸಮಿತಿಂ, ಅಗ್ರ್ಯಾಂ, ಆದರಾತ್, ಉಜ್ಜಹಾರ।

**ಅನ್ವಯ—** ಅತಿಯತಚೇತಾಃ, ಯತಿಃ, ದೀಪದೀಪ್ತಿಪ್ರದೀಪ್ತೇ, ವಿಪುಲಹೃದಯಪಾರ್ಶ್ವೇ, ದರವರಪರಿಪೂರ್ಣೈಃ, ವಾರ್ಭಿಃ, ಅರ್ಘ್ಯಾದಿ, ದತ್ವಾ, ಚಕ್ರಿಣಃ, ಅರ್ಚಾನಿಕಾಯಾತ್, ಅಗ್ರ್ಯಾಂ, ಕುಸುಮಸಮಿತಿಂ, ಆದರಾತ್, ಉಜ್ಜಹಾರ।

**ಅನ್ವಯಾರ್ಥ—**

**ಅತಿಯತಚೇತಾಃ** = ಅತಿಶಯವಾಗಿ ನಿಗ್ರಹಿಸಿದ ಮನಸ್ಸುಳ್ಳ,
**ಯತಿಃ** = ಆಚಾರ್ಯರ ಶಿಷ್ಯರಾದ ಸಂನ್ಯಾಸಿಗಳೊಬ್ಬರು,
**ದೀಪದೀಪ್ತಿಪ್ರದೀಪ್ತೇ** = ದೀಪಗಳ ಪ್ರಕಾಶದಿಂದ ಉಜ್ವಲವಾದ,
**ವಿಪುಲಹೃದಯಪಾರ್ಶ್ವೇ** = ಶ್ರೀಪೂರ್ಣಪ್ರಜ್ಞರ ಸನ್ನಿಧಿಯಲ್ಲಿ
**ದರವರಪರಿಪೂರ್ಣೈಃ** = ಶ್ರೇಷ್ಠವಾದ ಶಂಖದಲ್ಲಿ ತುಂಬಿದ,
**ವಾರ್ಭಿಃ** = ನೀರುಗಳಿಂದ,
**ಅರ್ಘ್ಯಾದಿ** = ಅರ್ಘ್ಯ, ಪಾದ್ಯ ಮೊದಲಾದುದನ್ನು,
**ದತ್ವಾ** = ಕೊಟ್ಟು,
**ಚಕ್ರಿಣಃ** = ಸುದರ್ಶನ ಚಕ್ರಧಾರಿಯಾದ ಶ್ರೀಹರಿಯ,
**ಅರ್ಚಾನಿಕಾಯಾತ್** = ಸಾಲಗ್ರಾಮ ಪ್ರತಿಮೆ ಮೊದಲಾದ ಪ್ರತೀಕಗಳ ಸಮೂಹದ ದೆಸೆಯಿಂದ,
**ಅಗ್ರ್ಯಾಂ** = ಶ್ರೇಷ್ಠವಾದ,
**ಕುಸುಮಸಮಿತಿಂ** = ಹೂವುಗಳ ಸಮೂಹವನ್ನು,
**ಆದರಾತ್** = ಭಕ್ತಿಯಿಂದ,
**ಉಜ್ಜಹಾರ** = ತೆಗೆದರು.

**ತಾತ್ಪರ್ಯ—** ಶ್ರೀ ಪೂರ್ಣಪ್ರಜ್ಞಾಚಾರ್ಯರು ಆಹ್ನಿಕವನ್ನು ಮಾಡುತ್ತಾ ಕುಳಿತಿದ್ದರು. ಅಲ್ಲಿ ಹಚ್ಚಿಟ್ಟಿದ್ದ ದೀಪಗಳಿಂದ ಆ ಪ್ರದೇಶವೆಲ್ಲವೂ ಪ್ರಕಾಶಮಯವಾಗಿತ್ತು. ಆಗ ಮನಸ್ಸನ್ನೂ ಇಂದ್ರಿಯಗಳನ್ನೂ ನಿಗ್ರಹಿಸಿದ ಆಚಾರ್ಯರ ಶಿಷ್ಯರಾದ ಯತಿಗಳೊಬ್ಬರು ಶ್ರೀಮನ್ನಾರಾಯಣನ ಸಾಲಿಗ್ರಾಮ, ಪ್ರತಿಮೆ, ಮೊದಲಾದುವುಗಳಿಗೆ ಶ್ರೇಷ್ಠವಾದ ಶಂಖದಲ್ಲಿ ನೀರು ತುಂಬಿ ಅರ್ಘ್ಯ, ಪಾದ್ಯ, ಆಚಮನ ಇತ್ಯಾದಿಗಳನ್ನು ಕೊಟ್ಟರು. ಹಿಂದಿನ ದಿನ ದೇವರ ಪೂಜೆ ಮಾಡುವಾಗ ಅಲಂಕರಿಸಿದ್ದ ಉತ್ತಮವಾದ ತುಳಸಿ, ಮಲ್ಲಿಗೆ ಮುಂತಾದ ಕುಸುಮ ಸಮೂಹವನ್ನು ತೆಗೆದರು, ಭಕ್ತಿಯಿಂದ ನಿರ್ಮಾಲ್ಯ ವಿಸರ್ಜನೆಯನ್ನು ಮಾಡಿ ಪರಮಾತ್ಮನನ್ನು ಈ ರೀತಿ ಪೂಜಿಸಿದರು.

**ವಿಗ್ರಹ—**

**ವಿಪುಲಹೃದಯಪಾರ್ಶ್ವಂ—** ವಿಪುಲಂ ಹೃದಯಂ ಯಸ್ಯ ಸಃ ವಿಪುಲಹೃದಯಃ, ವಿಪುಲಹೃದಯಸ್ಯ ಪಾರ್ಶ್ವಂ ವಿಪುಲಹೃದಯಪಾರ್ಶ್ವಂ ತಸ್ಮಿನ್ ।

**ದೀಪದೀಪ್ತಿಪ್ರದೀಪ್ತೇ—** ದೀಪಾನಾಂ ದೀಪ್ತಿಃ ದೀಪದೀಪ್ತಿಃ, ದೀಪದೀಪ್ತ್ಯಾ ಪ್ರದೀಪ್ತಂ, ತಸ್ಮಿನ್ ।

**ದರವರಪರಿಪೂರ್ಣೈಃ—** ದರೇಷು ವರಃ ದರವರಃ, ದರವರೇ ಪರಿಪೂರ್ಣಾನಿ ದರವರಪರಿಪೂರ್ಣಾನಿ ತೈಃ।

**ಅರ್ಘ್ಯಂ—** ಅರ್ಘ್ಯಂ ಆದಿ ಯಸ್ಯ ತತ್ ಅರ್ಘ್ಯಾದಿ ತತ್ ।

**ಅತಿಯತಚೇತಾಃ—** ಅತ್ಯಂತಂ ಯತಂ ಅತಿಯತಂ, ಅತಿಯತಂ ಚೇತಃ ಯಸ್ಯ ಸಃ ಅತಿಯತಚೇತಾಃ ।

**ಚಕ್ರೀ—** ಚಕ್ರಂ ಅಸ್ಯ ಅಸ್ತೀತಿ ಚಕ್ರೀ ತಸ್ಯ ।

**ಅರ್ಚಾನಿಕಾಯಾತ್—** ಅರ್ಚಾನಾಂ ನಿಕಾಯಃ ಅರ್ಚಾನಿಕಾಯಃ ತಸ್ಮಾತ್ ।

**ಕುಸುಮಸಮಿತಿಂ—** ಕುಸುಮಾನಾಂ ಸಮಿತಿಃ ಕುಸುಮಸಮಿತಿಃ ತಾಂ ।

**ಕ್ರಿಯಾಪದ—** ಉಜ್ಜಹಾರ - ಉದ್+ಜಹಾರ ಜಹ್ರತುಃ ಜಹ್ರುಃ, ಜಹರ್ಥ ಜಹ್ರಥುಃ ಜಹ್ರ, ಜಹಾರ-ಜಹರ ಜಹ್ರಿವ ಜಹ್ರಿಮ । ಹೃಞ್ ಹರಣೇ ಸಕರ್ಮಕ ಅನಿಟ್ ಉಭಯಪದೀ ಪ್ರಕೃತೇ ಪರಸ್ಮೈಪದಿ to take, to lead, to draw to a distance, to deprive of to win, to obtain ಉದ್ ಹೃ = ತೆಗೆ, ಭೂತಅನದ್ಯತನ ಪರೋಕ್ಷೇ ಲಿಟ್ ಉದ್ ಉಪಸರ್ಗ ಪ್ರಥಮಪುರುಷೇ ಏಕವಚನಂ ।

**ಕೋಶ—** **ವಾರ್ಭಿಃ** = ವಾಃ ವಾರೀ ವಾರಿ, ವಾರಾ ವಾರ್ಭ್ಯಾಂ ವಾರ್ಭಿಃ । ರೇಫಾಂತ ನಪುಂಸಕಲಿಂಗ ವಾರ್ ಶಬ್ದ ತೃತೀಯಾ ಬಹುವಚನ, 'ಆಪಃ ಸ್ತ್ರೀ ಭೂಮ್ನಿ ವಾರ್ ವಾರಿ' ಅಮರ, ವಿಪುಲಹೃದಯ = ಜ್ಞಾನಪೂರ್ಣವಾದ ಹೃದಯವುಳ್ಳ ಆಚಾರ್ಯರು, 'ವಿಪುಲಃ ಪೃಥುಲೇಽಗಾಧೇ' ವಿಶ್ವ ಚಕ್ರಂ = ಚಕ್ರಾಯುಧ, 'ಚಕ್ರಂ ಸೈನ್ಯರಥಾಂಗಯೋಃ' ವಿಶ್ವ ಅರ್ಚಾ = ಭಗವಂತನ ಪ್ರತೀಕಗಳು ಸಾಲಿಗ್ರಾಮಾದಿಗಳು, 'ಅರ್ಚಾ ಪೂಜಾಪ್ರತಿಮಯೋಃ' ವಿಶ್ವ ಸಮಿತಿ = ಸಮೂಹ, 'ಸಂಘೇ ಸಭಾಯಾಂ ಸಮಿತಿಃ' ಅಮರ ।

**ನಿರ್ಮಾಲ್ಯವಿಸರ್ಜನಪ್ರಕಾರ—** 'ಅಂಗುಷ್ಠತರ್ಜನ್ಯಗ್ರಾಭ್ಯಾಂ ನಿರ್ಮಾಲ್ಯಮಪನೋದಯೇತ್' ಎಂಬ ಪ್ರಮಾಣ ದಂತೆ ಹೆಬ್ಬೆರಳು ಮತ್ತು ತೋರುಬೆರಳುಗಳಿಂದ ನಿರ್ಮಾಲ್ಯವನ್ನು ತೆಗೆಯಬೇಕು.

**ಪ್ರಯೋಗ—** ಅತಿಯತಚೇತಸಾ ಯತಿನಾ ದೀಪದೀಪ್ತಿಪ್ರದೀಪ್ತೇ ವಿಪುಲಹೃದಯಪಾರ್ಶ್ವೇ ದರವರಪರಿಪೂರ್ಣೈಃ ವಾರ್ಭಿಃ ಅರ್ಘ್ಯಾದಿ ದತ್ತ್ವಾ ಚಕ್ರಿಣಃ ಅರ್ಚಾನಿಕಾಯಾತ್ ಅಗ್ರ್ಯಾ ಕುಸುಮಸಮಿತಿಃ ಆದರಾತ್ ಉಜ್ಜಹ್ರೇ (ಕರ್ಮಣಿ)।

★ ★ ★

**ಅವತಾರಿಕಾ—** ನಿರ್ಮಾಲ್ಯ ವಿಸರ್ಜನ ಸಮಯದಲ್ಲಿ ನಡೆದ ಒಂದು ಅದ್ಭುತವನ್ನು ಹೇಳುತ್ತಾರೆ.

**ಅಮೃತಮಪಿ ನಿರೀಕ್ಷ್ಯ ಸ್ರಾವಿ ನಿರ್ಮಾಲ್ಯಸೂನೇ**
**ಘೃತಮಿದಮಿತಿ ಸದ್ಯೋ ಭ್ರಾಂತಿಮಂತೋಽಪಿ ಶಿಷ್ಯಾಃ ।**
**ಶ್ರದಧುರಧಿಕವಾಕ್ಯೈರ್ವಿಭ್ರಮಾಸ್ತಚ್ಚ ಪಶ್ಚಾತ್**
**ಅನುದಿನಮಮೃತಾನ್ನೈಸ್ತಸ್ಯ ಸೇವ್ಯಸ್ಯ ಶಕ್ತ್ಯಾ ॥ 13 ॥**

**ಪದಚ್ಛೇದ—** ಅಮೃತಂ, ಅಪಿ, ನಿರೀಕ್ಷ್ಯ, ಅಸ್ರಾವಿ, ನಿರ್ಮಾಲ್ಯಸೂನೇ, ಘೃತಂ ಇದಂ, ಇತಿ, ಸದ್ಯಃ, ಭ್ರಾಂತಿ-ಮಂತಃ, ಅಪಿ, ಶಿಷ್ಯಾಃ, ಶ್ರದಧುಃ, ಅಧಿಕವಾಕ್ಯೈಃ, ವಿಭ್ರಮಾಃ, ತತ್, ಚ, ಪಶ್ಚಾತ್, ಅನುದಿನಂ, ಅಮೃತಾನ್ನೈಃ, ತಸ್ಯ ಸೇವ್ಯಸ್ಯ, ಶಕ್ತ್ಯಾ ।

ಅನ್ವಯ— ಅನುದಿನಂ, ಅಮೃತಾನ್ನೈಃ, ಸೇವ್ಯಸ್ಯ, ತಸ್ಯ, ಶಕ್ತ್ಯಾ, ನಿರ್ಮಾಲ್ಯಸೂನೇ, ಅಸ್ರಾವಿ (ಸ್ರಾವಿ), ಅಮೃತಂ, ನಿರೀಕ್ಷ್ಯ, ಅಪಿ, ಇದಂ, ಘೃತಂ, ಇತಿ, ಸದ್ಯಃ, ಭ್ರಾಂತಿಮಂತಃ, ಅಪಿ, ಶಿಷ್ಯಾಃ, ಪಶ್ಚಾತ್, ಅಧಿಕವಾಕ್ಯೈಃ, ವಿಭ್ರಮಾಃ, ತತ್, ಚ, ಶ್ರದಧುಃ ।

ಅನ್ವಯಾರ್ಥ—

**ಅನುದಿನಂ** = ಪ್ರತಿದಿನವೂ,
**ಅಮೃತಾನ್ನೈಃ** = ಸುಧೆಯನ್ನು ಸ್ವೀಕರಿಸುವ ದೇವತೆಗಳಿಂದ,
**ಸೇವ್ಯಸ್ಯ** = ಸೇವಿಸಲು ಯೋಗ್ಯರಾದ (ಸೇವಿಸಲ್ಪಡುವ),
**ತಸ್ಯ** = ಆ ಆಚಾರ್ಯರ,
**ಶಕ್ತ್ಯಾ** = ಮಹಿಮೆಯಿಂದ,
**ನಿರ್ಮಾಲ್ಯಸೂನೇ** = ನಿರ್ಮಾಲ್ಯವಾದ ಹೂವು ತುಳಸಿಗಳಲ್ಲಿ,
**ಸ್ರಾವಿ (ಅಸ್ರಾವಿ)** = ಸುರಿಯುತ್ತಿರುವ (ತೊಟ್ಟಿಕ್ಕುತ್ತಿರುವ)
**ಅಮೃತಂ** = ಅಮೃತವನ್ನು,
**ನಿರೀಕ್ಷ್ಯಾಪಿ** = ನೋಡಿಯೂ ಕೂಡ,
**ಇದಂ** = ಇದು,
**ಘೃತಂ ಇತಿ** = ತುಪ್ಪವೆಂದು,
**ಸದ್ಯಃ** = ಆ ಕ್ಷಣದಲ್ಲಿ,
**ಭ್ರಾಂತಿಮಂತಃ ಅಪಿ** = ಭ್ರಾಂತಿ ಉಳ್ಳವರಾದಾಗ್ಯೂ,
**ಶಿಷ್ಯಾಃ** = ಶಿಷ್ಯರು,
**ಪಶ್ಚಾತ್** = ಅನಂತರ,
**ಅಧಿಕವಾಕ್ಯೈಃ** = ಹಿರಿಯರ ಮಾತುಗಳಿಂದ,
**ವಿಭ್ರಮಾಃ** = ಭ್ರಾಂತಿರಹಿತರಾಗಿ,
**ತತ್ ಚ** = ಅದು ಅಮೃತವೆಂಬುದನ್ನೂ,
**ಶ್ರದಧುಃ** = ನಂಬಿದರು.

**ತಾತ್ಪರ್ಯ**— ಆಚಾರ್ಯರು ಹಿಂದಿನ ದಿನ ಪೂಜೆ ಮಾಡಿದ ಸಾಲಿಗ್ರಾಮಾದಿ ಪ್ರತೀಕಗಳಿಂದ ನಿರ್ಮಾಲ್ಯವನ್ನು ತೆಗೆಯುವಾಗ, ಹೂವು, ತುಳಸಿ ಮುಂತಾದುವುಗಳಿಂದ ಅಮೃತವು ತೊಟ್ಟಿಕ್ಕುತ್ತಿತ್ತು. ಅಮೃತವನ್ನು ಭೋಜನ ಮಾಡುವ ದೇವತೆಗಳಿಂದ ಸೇವಿಸಲ್ಪಡುವ ಆಚಾರ್ಯರು ತಾವು ಅಮೃತ ಬಿಂದುಗಳಿಂದಲೇ ದೇವರನ್ನು ಪೂಜಿಸಿದ್ದರು. ನಿರ್ಮಾಲ್ಯ ಪುಷ್ಪಾದಿಗಳನ್ನು ತೆಗೆಯುತ್ತಿದ್ದಾಗ ತೊಟ್ಟಿಕ್ಕುತ್ತಿದ್ದ ಆ ಅಮೃತವನ್ನು ನೋಡಿ ಶಿಷ್ಯರು ಇದು ತುಪ್ಪವೆಂದು ಭ್ರಮೆಗೊಂಡರು. ಆಗ ಅಲ್ಲಿದ್ದ ಆಚಾರ್ಯರ ಮಹಿಮೆಯನ್ನು ಬಲ್ಲ ಹಿರಿಯರು ಇದು ತುಪ್ಪವಲ್ಲ ಅಮೃತವೆಂದು ಬೋಧಿಸಿದಾಗ ಅವರ ಮಾತುಗಳಿಂದ, ತೊಟ್ಟಿಕ್ಕುತ್ತಿದ್ದ ದ್ರವಪದಾರ್ಥವು ಅಮೃತವೆಂದೇ ನಂಬಿದರು.

ವಿಗ್ರಹ—

**ಅನುದಿನಂ**— ದಿನೇ ದಿನೇ ಅನುದಿನಂ ।
**ಅಮೃತಾನ್ನೈಃ**— ಅಮೃತಂ ಅನ್ನಂ ಯೇಷಾಂ ತೇ ಅಮೃತಾನ್ನಾಃ ತೈಃ ।
**ನಿರ್ಮಾಲ್ಯಸೂನೇ**— ನಿರ್ಮಾಲ್ಯಂ ಚ ತತ್ ಸೂನಂ ಚ ನಿರ್ಮಾಲ್ಯಸೂನಂ, ತಸ್ಮಿನ್ ।

**ಭ್ರಾಂತಿಮಂತಃ—** ಭ್ರಾಂತಿಃ ಏಷಾಂ ಅಸ್ತೀತಿ ಭ್ರಾಂತಿಮಂತಃ ।
**ಅಧಿಕವಾಕ್ಯಾನಿ—** ಅಧಿಕಾನಾಂ ವಾಕ್ಯಾನಿ ಅಧಿಕವಾಕ್ಯಾನಿ ತೈಃ ।
**ವಿಭ್ರಮಾಃ—** ವಿಗತಃ ಭ್ರಮಃ ಯೇಭ್ಯಃ ತೇ ವಿಭ್ರಮಾಃ ।

**ಕ್ರಿಯಾಪದ— ಶದಧುಃ** - ಶ್ರತ್+ಅಧುಃ ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ । ಶ್ರತ್ ಎಂಬ ಅವ್ಯಯಪೂರ್ವಕವಾದ ಡುಧಾಞ್ ಧಾರಣಪೋಷಣಯೋಃ (ಧಾ) ಎಂಬ ಧಾತುವಿನ ಭೂತಾರ್ಥಕ ಲುಙ್ ಲಕಾರ. 'ಶ್ರದಂತರೋರುಪಸರ್ಗವದ್ವೃತ್ತಿರ್ವಾಚ್ಯಾ' ಎಂಬ ವಚನದಿಂದ ಶ್ರತ್ ಎಂಬುದು ಉಪಸರ್ಗದಂತೆ ಧಾತುವಿನ ಜತೆಗೆ ಸೇರಿಕೊಳ್ಳುತ್ತದೆ.

**ಕೋಶ—** ಅಮೃತಾನ್ನೈಃ ಎಂಬಲ್ಲಿ 'ಆದಿತ್ಯಾ ಋಭವೋಽಸ್ವಪ್ನಾ ಅಮರ್ತ್ಯಾ ಅಮೃತಾಂಧಸಃ' ಅಮರ, ನಿರ್ಮಾಲ್ಯ ಸೂನಂ ಎಂಬಲ್ಲಿ ಸೂನಂ = ಹೂವು, 'ಸೂನಂ ಪ್ರಸವಪುಷ್ಪಯೋಃ' ಅಮರ, ಘೃತಂ = ತುಪ್ಪ 'ಘೃತಮಾಜ್ಯಂ ಹವಿಸ್ಸರ್ಪಿಃ' ಅಮರ, ಭ್ರಾಂತಿಮಂತಃ ಎಂಬಲ್ಲಿ ಭ್ರಮ = 'ಭ್ರಾಂತಿರ್ಮಿಥ್ಯಾಮತಿರ್ಭ್ರಮಃ' ಅಮರ ।

**ಪ್ರಯೋಗ—** ಅನುದಿನಂ ಅಮೃತಾನ್ನೈಃ ಸೇವ್ಯಸ್ಯ ತಸ್ಯ ಶಕ್ತ್ಯಾ ನಿರ್ಮಾಲ್ಯಸೂನೇ ಸ್ರಾವಿ ಅಮೃತಂ ನಿರೀಕ್ಷ್ಯ ಅಪಿ ಸದ್ಯಃ ಇದಂ ಘೃತಂ ಇತಿ ಭ್ರಾಂತಿಮದ್ಭಿಃ ಅಪಿ ಶಿಷ್ಯೈಃ ಪಶ್ಚಾತ್ ಅಧಿಕವಾಕ್ಯೈಃ ವಿಭ್ರಮ್ಯೈಃ ತತ್ ಚ ಶ್ರದಧಾಯಿ (ಕರ್ಮಣಿ)।

**ವಿಶೇಷವಿಚಾರ—** ನಿರ್ಮಾಲ್ಯವಿಸರ್ಜನಸಮಯೇ ದೇವೋಪರಿ ಸಮರ್ಪಿತಪುಷ್ಪೇಷು ಶ್ರೀಮಧ್ವಾಚಾರ್ಯ ಮಹಿಮ್ನಾ ಪರಿಸ್ರುತಂ ಅಮೃತಂ ಘೃತಂ ಇದಂ ಇತಿ ಭ್ರಾಂತ್ಯಾ ಮನ್ಯಮಾನಾಃ ಜನಾಃ ಪಶ್ಚಾತ್ ಮಧ್ವಾಚಾರ್ಯ ಮಾಹಾತ್ಮ್ಯವಿದುಷಾಂ ಜನಾನಾಂ 'ನೇದಂ ಘೃತಂ ಕಿಂತು ಅಮೃತಮೇವ' ಇತಿ ವಾಕ್ಯಂ ಶ್ರುತ್ವಾ ಭ್ರಾಂತಿರಹಿತಾಸ್ಸಂತಃ ನಿರ್ಮಾಲ್ಯಪುಷ್ಪೇ ಘೃತವತ್ ಸ್ನಿಗ್ಧತಯಾ ಅಸ್ಮಾಭಿಃ ಯದೇತತ್ ದೃಷ್ಟಂ ತತ್ ಅಮೃತಮೇವೇತಿ ವಿಶ್ವಾಸಮಗಮನ್ ಇತಿ ಭಾವಃ । (ಛಲಾರಿಯ)

★ ★ ★

**ಅವತಾರಿಕಾ—** ಸೂರ್ಯೋದಯವನ್ನು ಒಬ್ಬ ರಾಜನ ಅಭ್ಯುದಯಕ್ಕೆ ಸಮಾನವಾಗಿ ವರ್ಣಿಸುತ್ತಾರೆ.

**ಅಗಮದುಚಿತಮಂತ್ರೈಸ್ತೂದಯಾನಾಂ ತ್ರಯಾಣಾಂ**
**ಕೃತಿಭಿರನುಮತಾತ್ಮಾ ತತ್ರ ಪಂಚಾಂಗವಿದ್ಭಿಃ ।**
**ಉದಯಮಹಿಮರೋಚಿಶ್ಚಕ್ರವರ್ತೀ ತ್ರಿಶಕ್ತಿ-**
**ರ್ದಧದತಿಬೃಹದಂತಃ ಷಡ್ಗುಣಂ ಸ್ವಾತ್ತತೇಜಃ ॥ 14 ॥**

**ಪದಚ್ಛೇದ—** ಅಗಮತ್, ಉಚಿತಮಂತ್ರೈಃ, ತು ಉದಯಾನಾಂ ತ್ರಯಾಣಾಂ, ಕೃತಿಭಿಃ, ಅನುಮತಾತ್ಮಾ, ತತ್ರ, ಪಂಚಾಂಗವಿದ್ಭಿಃ, ಉದಯಂ, ಅಹಿಮರೋಚಿಶ್ಚಕ್ರವರ್ತೀ, ತ್ರಿಶಕ್ತಿಃ, ದಧತ್, ಅತಿಬೃಹತ್, ಅಂತಃ, ಷಡ್ಗುಣಂ, ಸ್ವಾತ್ತತೇಜಃ।

**ಅನ್ವಯ—** ತತ್ರ, ಉಚಿತಮಂತ್ರೈಃ, ಪಂಚಾಂಗವಿದ್ಭಿಃ, ಕೃತಿಭಿಃ, ತ್ರಯಾಣಾಂ, ಉದಯಾನಾಂ, ಅನುಮತಾತ್ಮಾ, ತ್ರಿಶಕ್ತಿಃ, ಅಂತಃ, ಅತಿಬೃಹತ್, ಷಡ್ಗುಣಂ, ಸ್ವಾತ್ತತೇಜಃ, ದಧತ್, ಅಹಿಮರೋಚಿಶ್ಚಕ್ರವರ್ತೀ, ತು ಉದಯಂ, ಅಗಮತ್ ।

**ಅನ್ವಯಾರ್ಥ—**

ತತ್ರ = ಆ ಸಮಯದಲ್ಲಿ

**ಉಚತಮಂತ್ರೈಃ** = ಜಪಕ್ಕೆ ಉಚಿತವಾದ ಗಾಯತ್ರ್ಯಾದಿ ಮಂತ್ರಗಳುಳ್ಳ, ಮಿತ್ರರ ಏಳಿಗೆಗೆ ಯೋಗ್ಯವಾದ ಗುಟ್ಟಾದ ವ್ಯವಹಾರವನ್ನರಿತ (ಯುಕ್ತವಾದ ಮಂತ್ರಾಲೋಚನೆಯುಳ್ಳ)

**ಪಂಚಾಂಗವಿದ್ಭಿಃ** = ಹೃದಯ, ಶಿರಸ್ಸು, ಶಿಖಾ, ಕವಚ, ಅಸ್ತ್ರ ಎಂಬ ಐದು ಅಂಗಗಳನ್ನು ತಿಳಿದ, ಕಾರ್ಯಾರಂಭಕ್ಕೆ ಉಚಿತವಾದ ಉಪಾಯ ಸಹಾಯಕ ಪುರುಷರ ಮತ್ತು ದ್ರವ್ಯದ ಸಮೃದ್ಧಿ, ತನ್ನ ತೊಂದರೆಗಳಿಗೆ ತಕ್ಕ ಪ್ರತೀಕಾರ, ದೇಶಕಾಲಗಳ ಸರಿಯಾದ ತಿಳುವಳಿಕೆ, ಕಾರ್ಯಸಿದ್ಧಿ ಎಂಬ ಐದು ಅಂಗಗಳನ್ನು ತಿಳಿದ,

**ಕೃತಿಭಿಃ** = ಕುಶಲರಾದ ಜ್ಞಾನಿಗಳಿಂದ, ಮಂತ್ರಿಗಳಿಂದ,

**ತ್ರಯಾಣಾಂ** = ಮೂರು ಸಂಖ್ಯೆಯ,

**ಉದಯಾನಾಂ** = ಅರುಣೋದಯ, ಉಷೋದಯ, ಸೂರ್ಯೋದಯ ಇವುಗಳ ವಿಷಯದಲ್ಲಿ ಮತ್ತು ಮಿತ್ರೋದಯ, ಭೂಮ್ಯುದಯ, ಕೋಶೋದಯ ಇವುಗಳಿಗೆ,

**ಅನುಮತಾತ್ಮಾ** = ಸಂಮತವಾಧ ಸ್ವರೂಪವುಳ್ಳ,

**ತ್ರಿಶಕ್ತಿಃ** = ಪ್ರಕಾಶನ, ತಾಪನ (ಸೆಕೆಯನ್ನುಂಟುಮಾಡುವುದು), ಆಹ್ಲಾದನ (ಸಂತೋಷಪಡಿಸುವುದು) ಎಂಬ ಮೂರು ಶಕ್ತಿಗಳುಳ್ಳ, ಉತ್ಸಾಹಶಕ್ತಿ, ಪ್ರಭುಶಕ್ತಿ ಮಂತ್ರಶಕ್ತಿ ಎಂಬ ಮೂರು ಶಕ್ತಿಗಳುಳ್ಳ,

**ಅಂತಃ** = ತನ್ನ (ಸೂರ್ಯನ) ಮಂಡಲದೊಳಗೆ, ದೇಶದೊಳಗೆ,

**ಅತಿಬೃಹತ್** = ಅತ್ಯಂತ ದೊಡ್ಡದಾದ (ಪೂರ್ಣವಾದ),

**ಷಡ್ಗುಣಂ** = ಪೂರ್ಣ, ಐಶ್ವರ್ಯ, ಸಾಮರ್ಥ್ಯ, ಕೀರ್ತಿ, ಸಂಪತ್ತು, ಜ್ಞಾನ, ವೈರಾಗ್ಯ ಎಂಬ ಆರು ಗುಣಗಳುಳ್ಳ, ಸಂಧಿ, ವಿಗ್ರಹ (ಯುದ್ಧ), ಯಾನ (ಯುದ್ಧ ಪ್ರಯಾಣ), ಆಸನ (ಸುಮ್ಮನೆ ಕುಳಿತು ಕೊಳ್ಳುವುದು), ದ್ವೈಧೀಭಾವ (ಭೇದೋಪಾಯ ಮಾಡುವುದು), ಆಶ್ರಯ (ಶತ್ರುವು ತನಗಿಂತ ಬಲಿಷ್ಠನಾಗಿದ್ದಾಗ ಇನ್ನೊಬ್ಬನನ್ನು ಆಶ್ರಯಿಸುವುದು) ಎಂಬ ಆರು ಗುಣಗಳುಳ್ಳ,

**ಸ್ವಾತ್ಮತೇಜಃ** = ತನ್ನ ಸ್ವಾಮಿಯಾದ ವಿಷ್ಣುವಿಗೆ ಅಧೀನವಾದ ಮತ್ತು ತನ್ನ ತೇಜಸ್ಸನ್ನು (ಮತ್ತು ಸ್ವರೂಪ ಸಾಮರ್ಥ್ಯವನ್ನು)

**ದಧತ್** = ಧರಿಸಿದ,

**ಅಹಿಮರೋಚಿಃ** = ಉಷ್ಣಕಿರಣಗಳುಳ್ಳ ಸೂರ್ಯನೆಂಬ,

**ಚಕ್ರವರ್ತೀ ತು** = ಸಾರ್ವಭೌಮನಾದರೋ,

**ಉದಯಂ** = ಅಭ್ಯುದಯವನ್ನು,

**ಅಗಮತ್** = ಹೊಂದಿದನು. (ರೂಪಕ ಸಂಕೀರ್ಣ ಶ್ಲೇಷಾಲಂಕಾರ) (ಈ ಶ್ಲೋಕದಲ್ಲಿ ಸೂರ್ಯ ಮತ್ತು ರಾಜನ ಪರವಾಗಿ ಪದಗಳಿಗೆ ಬೇರೆ ಬೇರೆ ಅರ್ಥವಿರುವುದನ್ನು ಗಮನಿಸಬೇಕು).

**ತಾತ್ಪರ್ಯ**— ಚಕ್ರವರ್ತಿಯು ಒಳ್ಳೆಯ ಮಂತ್ರಿಗಳನ್ನು ಹೊಂದಿರಬೇಕು. ಸ್ನೇಹಿತರ ಮತ್ತು ತನ್ನ ರಾಜ್ಯದ ಏಳಿಗೆಗೆ ಬೇಕಾದ ರೀತಿಯ ಸರಿಯಾದ ಮಂತ್ರಾಲೋಚನೆಯನ್ನು ತಿಳಿದ ಆ ಮಂತ್ರಿಗಳು ಕಾರ್ಯವನ್ನು ಆರಂಭಿಸಬೇಕಾದ ಯುಕ್ತಿಯನ್ನು ಹೇಳಿಕೊಡುವರು (2) ಸಹಾಯಕರಾದ ಸೇವಕರನ್ನು, ಸೇನೆಯವರನ್ನು, ಇತರ ರಾಜರನ್ನೂ ಸೇರಿಸುವರು. ಕಾರ್ಯಸಿದ್ಧಿಗೆ ಬೇಕಾದ ಹಣದ ಸಂಗ್ರಹವನ್ನು ಮಾಡಿಸುವರು (3) ರಾಜನಿಗೆ ಬರುವ ಅಥವಾ ಬರಲಿರುವ ಅವನತಿಗೆ ಪ್ರತೀಕಾರವನ್ನು ತಿಳಿಸುವರು. (4) ಕಾರ್ಯಕ್ಕೆ ಯೋಗ್ಯವಾದ ದೇಶಕಾಲಗಳನ್ನು ತಿಳಿಸುವರು (5) ಕಾರ್ಯವನ್ನು ಸಾಧಿಸಿ ಕೊಡುವರು. ಬುದ್ಧಿವಂತರಾದ ಅವರ ಮಂತ್ರಾಲೋಚನೆ ಮತ್ತು ಪ್ರಯತ್ನದಿಂದ ರಾಜನ ಮಿತ್ರರ ಏಳಿಗೆ, ಹಾಗೆಯೇ ಯಥೋಚಿತವಾದ ಅವನ ರಾಜ್ಯದ ವಿಸ್ತಾರ ಮತ್ತು ಖಜಾನೆಯ ಅಭಿವೃದ್ಧಿ ಎಂಬ ಮೂರು ವಿಧವಾದ ಅಭಿವೃದ್ಧಿಗಳು ಉಂಟಾಗುವುವು. ಚಕ್ರವರ್ತಿಯು ತನ್ನ ಯೋಗ್ಯರಾದ ಮಂತ್ರಿಗಳು ಮಾಡುವ ಈ ಕಾರ್ಯಸಾಧನೆಗಳಿಗೆ ಅನುಗುಣವಾಗಿ

ನಡೆದುಕೊಂಡು ಈ ಕಾರ್ಯಗಳಿಗೆಲ್ಲಾ ಪ್ರೇರಕಶಕ್ತಿಯಾಗಿರುವನು. ಇಂತಹ ಅಭ್ಯುದಯಗಳನ್ನು ಹೊಂದಲು ಅವನು ಯೋಗ್ಯನಾಗಿರುವನು. ಆ ಚಕ್ರವರ್ತಿಯಲ್ಲಿ ಪ್ರಭುಶಕ್ತಿ, ಉತ್ಸಾಹಶಕ್ತಿ ಮತ್ತು ಮಂತ್ರಶಕ್ತಿಗಳೆಂಬ ಮೂರು ಶಕ್ತಿಗಳು ಪರಿಪೂರ್ಣವಾಗಿರುವುವು. (ಬೊಕ್ಕಸ ಮತ್ತು ಸೈನ್ಯಗಳ ಶಕ್ತಿಯೇ 'ಪ್ರಭುಶಕ್ತಿ', ಸಂಧಿ, ಯುದ್ಧ ಮುಂತಾದವುಗಳನ್ನು ಸರಿಯಾಗಿ ವ್ಯವಸ್ಥೆಗೊಳಿಸಿ ತನ್ನ ಪ್ರಯತ್ನದಿಂದ ಕಾರ್ಯವನ್ನು ಮುಂದುವರಿಸುವುದು 'ಉತ್ಸಾಹಶಕ್ತಿ', ಸಮರ್ಥರಾದ ಸಚಿವರ ಸಲಹೆಗಳಿಂದ ಕಾರ್ಯವನ್ನು ಸಾಧಿಸುವ ರೀತಿ ನೀತಿಗಳನ್ನು ತಿಳಿದು ಕೆಲಸ ನಡೆಸುವುದು 'ಮಂತ್ರಶಕ್ತಿ'ಯು) ಚಕ್ರವರ್ತಿ ತನಗೆ ಅಧೀನವಾದ ದೇಶದೊಳಗೆ ತನ್ನ ಆಜ್ಞಾ ಶಕ್ತಿಯಿಂದ ಸಂಪೂರ್ಣವಾಗಿ ವ್ಯಾಪಿಸಿರುವನು. ತನ್ನಲ್ಲಿ ಪರಿಪೂರ್ಣವಾದ ಸಾಮರ್ಥ್ಯವನ್ನು ಹೊಂದಿರುವನು. ಅಂತಹ ರಾಜನು ಕಾಲ ದೇಶ ಸಾಮರ್ಥ್ಯಗಳನ್ನು ತಿಳಿದು ಸಂಧಿಯನ್ನು ಮಾಡಿಕೊಳ್ಳುವನು. ತನ್ನ ಶಕ್ತಿಯು ಪರಿಪೂರ್ಣವಾಗಿದ್ದಾಗ ಯುದ್ಧವನ್ನು ಮಾಡುವನು, ಕೆಲವು ಬಾರಿ ಯುದ್ಧ ಸಿದ್ಧತೆ ಮಾಡುತ್ತಾ ಇದ್ದು ಯುದ್ಧ ಪ್ರಯಾಣ ಮಾಡಿಸುತ್ತಾ ಸೇನೆಯ ಕವಾಯತ್ತು ಚಲನವಲನಗಳನ್ನು ಮಾಡಿಸುತ್ತಾ ಇರುವನು. ಶತ್ರುವು ತನಗಿಂತ ಬಲವಂತನಾಗಿದ್ದಾಗ ಕೆಲವು ಬಾರಿ ಉದಾಸೀನನಾಗಿ ಸುಮ್ಮನಿರುವನು, ಕೆಲವು ಬಾರಿ ಭೇದೋಪಾಯವನ್ನು ಮಾಡುವನು, ಇನ್ನು ಕೆಲವು ಬಾರಿ ತನಗಿಂತ ಬಲಿಷ್ಠನಾದ ಮತ್ತೊಬ್ಬ ರಾಜನನ್ನು ಆಶ್ರಯಿಸುವನು. ಹೀಗೆ ಆರು ಗುಣಗಳಿಂದ ಒಬ್ಬ ಸಾರ್ವಭೌಮರಾಜನು ಏಳಿಗೆಯನ್ನು ಹೊಂದುತ್ತಿರುವನು.

ಜ್ಞಾನಿಗಳು ಜಪಕ್ಕೆ ಯೋಗ್ಯವಾದ ಗಾಯತ್ರ್ಯಾದಿ ಮಂತ್ರಗಳನ್ನು ತಿಳಿದು, ಹೃದಯ, ಶಿರಸ್ಸು, ಶಿಖಾ, ಕವಚ, ಅಸ್ತ್ರ ಎಂಬ ಪಂಚಾಂಗಗಳನ್ನು ಅರಿತಿರುತ್ತಾರೆ. ಅರುಣೋದಯ, ಉಷೋದಯ (ಪ್ರಾತಃಕಾಲದ ಆರಂಭ) ಸೂರ್ಯೋದಯ ಎಂಬ ಮೂರು ಉದಯಗಳಿಗೆ ಅನುಗುಣವಾದ ಸ್ವರೂಪವುಳ್ಳ ಸೂರ್ಯನನ್ನು ಅವರು ಹೃದಯ ಮುಂತಾದ ಪಂಚಾಂಗ ನ್ಯಾಸ ಪೂರ್ವಕವಾಗಿ ಗಾಯತ್ರೀ ಮಂತ್ರದಿಂದ ಧ್ಯಾನಿಸುತ್ತಾ ಆರಾಧಿಸುತ್ತಾರೆ. ಹೀಗೆ ಜ್ಞಾನಿಗಳಿಗೆ ಇಷ್ಟವಾದ ಸ್ವರೂಪವುಳ್ಳ ಸೂರ್ಯನು ಪ್ರಕಾಶಗೊಳಿಸುವ ಶಕ್ತಿ ತಾಪವನ್ನುಂಟು ಮಾಡುವ ಶಕ್ತಿ, ಮಳೆ ಮುಂತಾದವುಗಳ ಮೂಲಕ ಸಂತೋಷ ಗೊಳಿಸುವ ಶಕ್ತಿ ಎಂಬ ಮೂರುಶಕ್ತಿಗಳಿಂದ ಕೂಡಿರುತ್ತಾನೆ. ತನ್ನ ಬಿಂಬದಲ್ಲಿರುವ ಪೂರ್ಣೈಶ್ವರ್ಯ, ವೀರ್ಯ, ಕೀರ್ತಿ, ಸಂಪತ್ತು, ಜ್ಞಾನ ವೈರಾಗ್ಯಗಳೆಂಬ ಆರು ಗುಣಗಳಿಂದ ಕೂಡಿದ ಶ್ರೀಮನ್ನಾರಾಯಣನ ತೇಜಸ್ಸಿಗೆ ಅಧೀನವಾದ ತೇಜಸ್ಸು ಉಳ್ಳವನಾಗಿರುತ್ತಾನೆ. ತಾನೂ ಕೂಡ ತನ್ನ ಯೋಗ್ಯತೆಗನುಸಾರವಾಗಿ ಪೂರ್ಣೈಶ್ವರ್ಯಾದಿ ಆರು ಗುಣಗಳಿಂದ ಕೂಡಿರುತ್ತಾನೆ. ಬಿಸಿಯಾದ ಪ್ರಕಾಶವುಳ್ಳ ತೇಜಸ್ಸುಗಳಲ್ಲಿ ಶ್ರೇಷ್ಠನಾದ ಇಂತಹ ಉಷ್ಣಪ್ರಕಾಶವುಳ್ಳವರಿಗೆ ಚಕ್ರವರ್ತಿಯಾದ ಸೂರ್ಯನು ಆಗ ಉದಯಿಸಿದನು. ಒಬ್ಬ ಚಕ್ರವರ್ತಿಯು ಅಭ್ಯುದಯವನ್ನು ಹೊಂದುವಂತೆ ಸೂರ್ಯನೂ ಉದಯಿಸಿದನು.

ಚಕ್ರವರ್ತಿಯು ಉಚಿತವಾದ ಮಂತ್ರವುಳ್ಳ ಪಂಚಾಗವನ್ನು ಬಲ್ಲ ಸಮರ್ಥರಾದ ಮಂತ್ರಿಗಳಿಂದ ಮಿತ್ರೋದಯಾದಿ ಮೂರು ಉದಯಗಳನ್ನು ಹೊಂದಲೂ ಸಮರ್ಥನಾಗುತ್ತಾನೆ. ಪ್ರಭುಶಕ್ತಿ ಮೊದಲಾದ ಮೂರು ಶಕ್ತಿಗಳಿಂದ ಕೂಡಿದ್ದು ತನ್ನ ರಾಜ್ಯದಲ್ಲಿ ಪ್ರಭಾವಶಾಲಿಯಾಗಿದ್ದು ಸಂಧಿವಿಗ್ರಹಾದಿ ಷಡ್ಗುಣ ಪರಿಪೂರ್ಣವಾದ ತನ್ನ ಸ್ವರೂಪಸಾಮರ್ಥ್ಯದಿಂದ ವೃದ್ಧಿ ಹೊಂದುತ್ತಾನೆ. ಉಷ್ಣಪ್ರಕಾಶವುಳ್ಳ ತೇಜಸ್ಸುಗಳಿಗೆ ಚಕ್ರವರ್ತಿಯಾದ ಸೂರ್ಯನೂ ಹೃದಯಾದಿ ಪಂಚಾಂಗನ್ಯಾಸವನ್ನು ಬಲ್ಲ ಮಂತ್ರಜಪವನ್ನು ಮಾಡುವ ಗಾಯತ್ರ್ಯಾದಿ ಜಪಗಳಿಗೆ ಬೇಕಾದ ಮಂತ್ರಗಳನ್ನು ಅರಿತ ಬ್ರಾಹ್ಮಣರಿಂದ ಅರುಣೋದಯಾದಿ ಮೂರು ಉದಯಗಳಲ್ಲಿ ಧ್ಯಾನಿಸಲು ಯೋಗ್ಯನು ಎಂಬುದಾಗಿ ಸಂಮತನಾಗಿರುವನು. ಪ್ರಕಾಶನೀ ಮೊದಲಾದ ಮೂರು ಶಕ್ತಿಗಳಿಂದ ಕೂಡಿ ತನ್ನೊಳಗೆ ಅತ್ಯಂತ ಪೂರ್ಣವಾದ ಪೂರ್ಣೈಶ್ವರ್ಯಾದಿ ಷಡ್ಗುಣವುಳ್ಳ ಶ್ರೀಮನ್ನಾರಾಯಣನ ತೇಜಸ್ಸನ್ನು ಧರಿಸಿ ಅವನಿಗೆ ಅಧೀನನಾಗಿ ತಾನೂ ಸದ್ಗುಣಭರಿತನಾಗಿ ತೇಜಸ್ಸನ್ನು ಹೊರಹೊಮ್ಮುತ್ತಾ ಆಗ ಉದಯಿಸುತ್ತಾನೆ.

ಇಲ್ಲಿ ಭಾವಪ್ರಕಾಶಿಕಾ ವ್ಯಾಖ್ಯಾನ— ಅರುಣೋಷಸ್ಸವಿತೄಣಾಮುದಯಾಸ್ತ್ರಯಃ ಮಿತ್ರಭೂಕೋಶಾನಾಮುದ-ಯಾಶ್ಚ = ಮೂರು ಉದಯಗಳೆಂದರೆ ಸೂರ್ಯನ ಪಕ್ಷದಲ್ಲಿ ಅರುಣೋದಯ ಉಷಸ್ ಉದಯ,

ಸೂರ್ಯೋದಯಗಳು. ಚಕ್ರವರ್ತಿಯ ಪಕ್ಷದಲ್ಲಿ ಮಿತ್ರೋದಯ, ಭೂಮ್ಯುದಯ, ಕೋಶೋದಯ ಎಂಬ ಮೂರು ಉದಯಗಳು. 'ಮಂತ್ರಾಃ ಗಾಯತ್ರ್ಯಾದ್ಯಾಃ ಗೋಪ್ಯಾಃ ವ್ಯವಹರಣವಿಶೇಷಾಶ್ಚ' = ಮಂತ್ರ ಎಂದರೆ (ಸೂರ್ಯನ ಪಕ್ಷದಲ್ಲಿ) ಗಾಯತ್ರೀ ಮುಂತಾದ ರಹಸ್ಯವಾದ ಉಪಾಸನೆಯ ವಿದ್ಯೆಗಳು, ರಾಜನ ಪಕ್ಷದಲ್ಲಿ ರಹಸ್ಯವಾಗಿಡಬೇಕಾದ ವ್ಯವಹಾರ ವಿಶೇಷಗಳು. ಹೃದಯಶಿರಃ ಶಿಖಾಕವಚಾಸ್ತ್ರಾಣಿ ಪಂಚಂಗಾನಿ, ಕರ್ಮಣಾಂ ಆರಂಭೋಪಾಯಃ ಪುರುಷದ್ರವ್ಯಸಂಪತ್ ವಿನಿಪಾತಪ್ರತೀಕಾರಃ ದೇಶ ಕಾಲಾವೇಕ್ಷಣಂ ಕಾರ್ಯ ಸಿದ್ಧಿರಿತಿ ಚ = ಪಂಚಾಂಗಗಳೆಂದರೆ ಸೂರ್ಯನ ಪಕ್ಷದಲ್ಲಿ ಹೃದಯ, ಶಿರಸ್ಸು, ಶಿಖಾ, ಕವಚ, ಅಸ್ತ್ರಗಳು, (ಮಂತ್ರದ ಒಂದೊಂದು ಭಾಗವನ್ನು ತತ್ಸವಿತುಃ ಹೃದಯಾಯ ನಮಃ ಇತ್ಯಾದಿಯಾಗಿ ಹೇಳುತ್ತಾ ಹೃದಯಾದಿ ಗಳನ್ನು ಮುಟ್ಟುವುದು) ರಾಜನ ಪಕ್ಷದಲ್ಲಿ ಕಾರ್ಯಗಳ ಆರಂಭೋಪಾಯ, ಪುರುಷದ್ರವ್ಯ ಸಮೃದ್ಧಿ, ಆಪತ್ತುಗಳಿಗೆ ಪ್ರತೀಕಾರ, ದೇಶಕಾಲಗಳ ನಿರೀಕ್ಷಣ, ಕಾರ್ಯಸಿದ್ಧಿ ಎಂಬುದಾಗಿ ಐದು ಅಂಗಗಳು. ಪ್ರಕಾಶನ ತಪನಾಹ್ಲಾದನ ಶಕ್ತಯಸ್ತ್ರಿಸ್ರಃ ಆಹ್ಲಾದನಂ ವೃಷ್ಟ್ಯಾ, ಉತ್ಸಾಹ ಮಂತ್ರ ಪ್ರಭುತ್ವ ಶಕ್ತಯಶ್ಚ = ತ್ರಿಶಕ್ತಿ ಎಂಬಲ್ಲಿ, ಸೂರ್ಯನ ಪಕ್ಷದಲ್ಲಿ ಪ್ರಕಾಶನ, ತಪನ, ಆಹ್ಲಾದನ ಶಕ್ತಿಗಳು ಮೂರು, ಆಹ್ಲಾದನ ಎಂದರೆ ಮಳೆಯನ್ನು ಸುರಿಸಿ ಸಂತೋಷಪಡಿಸುವುದು ಎಂದು ಅರ್ಥ. ರಾಜನ ಪಕ್ಷದಲ್ಲಿ ಉತ್ಸಾಹಶಕ್ತಿ ಮಂತ್ರಶಕ್ತಿ ಪ್ರಭುತ್ವಶಕ್ತಿಗಳೆಂಬ ಮೂರು ಶಕ್ತಿಗಳು. ಸ್ವಾತ್ಮತೇಜಃ ಸ್ವಸ್ವಾಮಿನೋ ವಿಷ್ಣೋರ್ಜ್ಯೋತಿಃ ಸುಷ್ಠ್ವಾತ್ಮನಃ ಪರಾಕ್ರಮಶ್ಚ = ಸ್ವಾತ್ಮತೇಜಃ ಎಂದರೆ ತನ್ನ ಸ್ವಾಮಿಯಾದ ಶ್ರೀಮನ್ನಾರಾಯಣನ ಜ್ಯೋತಿಸ್ಸು ಎಂದು ಸೂರ್ಯ ಪಕ್ಷದಲ್ಲಿ ಅರ್ಥ, ಸರಿಯಾಗಿರುವ ತನ್ನ ಪರಾಕ್ರಮ ಎಂದು ರಾಜನ ಪಕ್ಷದಲ್ಲಿ ಅರ್ಥ.

**ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।**
**ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥**

ಇತಿ ಷಡ್ಗುಣಾಃ = ಸಂಪೂರ್ಣವಾದ ಐಶ್ವರ್ಯ ಅಂದರೆ ಸ್ವಾಮಿತ್ವ ಪ್ರಾರಂಭಮಾಡಿದ್ದನ್ನು ಕೊನೆ ಹೊಂದಿಸುವ ಸಂಪೂರ್ಣ ಶಕ್ತಿಯೇ ವೀರ್ಯ, ಸಂಪೂರ್ಣವಾದ ಕೀರ್ತಿ, ಸಂಪೂರ್ಣವಾದ ಸಂಪತ್ತು, ಸಂಪೂರ್ಣವಾದ ಜ್ಞಾನ ಮತ್ತು ವಿಜ್ಞಾನಗಳು ಈ ಆರರ ಸಮುದಾಯಕ್ಕೆ ಭಗ ಎಂದು ಹೆಸರು. ಈ ಆರು ಗುಣಗಳು ಸಮುದಾಯರೂಪನೇ ಶ್ರೀಮನ್ನಾ-ರಾಯಣನು. ಇಂತಹ ಶ್ರೀಮನ್ನಾರಾಯಣನೆಂಬ ತೇಜಸ್ಸನ್ನು ತನ್ನೊಳಗೆ ಧರಿಸಿರುವವನು ಎಂದು ಸೂರ್ಯ ಪಕ್ಷದಲ್ಲಿ ಅರ್ಥ.

**ಸಂಧಿಂ ಚ ವಿಗ್ರಹಂ ಚೈವ ಯಾನಮಾಸನಮೇವ ಚ ।**
**ದ್ವೈಧೀಭಾವಂ ಸಂಶ್ರಯಂ ಚ ಷಡ್ಗುಣಾನ್ ಕವಯೋ ವಿದುಃ ॥**

ಇತಿ ಚ = ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಂಶ್ರಯ ಎಂಬುದಾಗಿ ರಾಜ್ಯಶಾಸ್ತ್ರ ಪಂಡಿತರು ರಾಜನಿಗೆ ಆರು ಗುಣಗಳಿರಬೇಕೆಂದು ತಿಳಿಯುತ್ತಾರೆ ಎಂಬ ಪ್ರಮಾಣಾನುಸಾರವಾಗಿ ರಾಜನ ಪಕ್ಷದಲ್ಲಿ ಸಂಧಿ ಮುಂತಾದ ಆರು ಗುಣಗಳಿಂದ ಕೂಡಿದ ತನ್ನ ಪರಾಕ್ರಮವನ್ನು ಹೊಂದಿದವನು ಎಂದು ಅರ್ಥ. ಈ ರೀತಿ ಈ ಶ್ಲೋಕದ ಅನೇಕ ಅಂಶಗಳನ್ನು ಕವಿಗಳಾದ ಶ್ರೀಮನ್ನಾರಾಯಣಪಂಡಿತಾಚಾರ್ಯರೇ ಸ್ವತಃ ವ್ಯಾಖ್ಯಾನ ಮಾಡಿರುತ್ತಾರೆ.

**ವಿಗ್ರಹ ಮತ್ತು ಕೋಶ—**

**ಅಹಿಮರೋಚಿಶ್ಚಕ್ರವರ್ತೀ—** ಹಿಮಂ ನ ಭವತೀತಿ ಅಹಿಮಂ । ಅಹಿಮಂ ರೋಚಿಃ ಯಸ್ಯ ಸಃ ಅಹಿಮರೋಚಿಃ, (ಸೂರ್ಯ, ಹಿಮ = ಶೀತ) 'ತುಷಾರಃ ಶೀತಲಃ ಶೀತಃ ಹಿಮಃ ಸಪ್ತಾನ್ಯಲಿಂಗಕಾಃ' ಅಮರ, ರೋಚಿಃ = ಪ್ರಕಾಶ, 'ರೋಚಿಃ ಶೋಚಿರುಭೇ ಕ್ಲೀಬೇ ಪ್ರಕಾಶೋ ದ್ಯೋತ ಆತಪಃ' ಅಮರ, ಅಹಿಮರೋಚಿರೇವ ಚಕ್ರವರ್ತೀ ಅಹಿಮರೋಚಿಶ್ಚಕ್ರವರ್ತೀ । ಚಕ್ರವರ್ತೀ = ಸರ್ವ ಭೂಮಿಯ ಅಧಿಪತಿ, ರಾಜರಿಗೆ ರಾಜ, 'ಮಹಾರಾಜ ಚಕ್ರವರ್ತೀ ಸಾರ್ವಭೌಮಃ' ಅಮರ ।

**ಉಚಿತಮಂತ್ರಾಃ—** ಉಚಿತಃ ಮಂತ್ರಃ ಯೇಷಾಂ ತೇ ಉಚಿತಮಂತ್ರಾಃ ।

**ಪಂಚಾಂಗವಿದ್ಭಿಃ—** ಪಂಚ ಚ ತಾನಿ ಅಂಗಾನಿ ಚ ಪಂಚಾಂಗಾನಿ, ತಾನಿ ವಿದಂತೀತಿ ಪಂಚಾಗವಿದಃ ತೈಃ । 'ಕೃತಿಭಿಃ' ಎಂಬಲ್ಲಿ ಕೃತೀ ಎಂದರೆ ಬುದ್ಧಿವಂತ, 'ಕೃತೀ ಕುಶಲ ಇತ್ಯಪಿ' ಅಮರ ।

**ಅನುಮತಾತ್ಮಾ—** ಅನುಮತಃ ಆತ್ಮಾ ಯಸ್ಯಸಃ ಅನುಮತಾತ್ಮಾ । ತ್ರಯಾಣಾಂ ಉದಯಾನಾಂ ಅನುಮತಾತ್ಮಾ ಎಂದರೆ ಅರುಣೋದಯಾನಂತರ ಉಷಸ್ಸಿನ ಉದಯ ಅನಂತರ ಸೂರ್ಯೋದಯ ಎಂದು ತನ್ನ ಸಂಚಾರ ಕಾಲದ ನಿಯಮವುಳ್ಳವನು ಎಂದು ಅಭಿಪ್ರಾಯ.

**ತ್ರಿಶಕ್ತಿಃ—** ತಿಸ್ರಃ ಶಕ್ತಯಃ ಯಸ್ಯ ಸಃ ತ್ರಿಶಕ್ತಿಃ ಪದಾರ್ಥ ಪ್ರಕಾಶನ, ತಾಪನ ಮತ್ತು ಆಹ್ಲಾದನ ಎಂಬ ಮೂರು ಶಕ್ತಿಗಳುಳ್ಳವನು ಎಂದು ಸೂರ್ಯಪಕ್ಷದಲ್ಲಿ ಅರ್ಥ.

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥**

ಎಂದು ಮನುಸ್ಮೃತಿಯಲ್ಲಿ ಹೇಳಿದಂತೆ ಅಗ್ನಿಯಲ್ಲಿ ಹೋಮಿಸಿದ ಆಹುತಿಯು ಸೂರ್ಯನಿಗೆ ಸೇರಿ, ಸೂರ್ಯನಿಂದ ಮಳೆಯಾಗಿ, ಮಳೆಯಿಂದ ಬೆಳೆ-ಅನ್ನವು ಉಂಟಾಗಿ, ಅದರಿಂದ ಪ್ರಜೆಗಳು ಬೆಳೆಯುವುದರಿಂದ ಸೂರ್ಯನಲ್ಲಿ ಆಹ್ಲಾದನ ಶಕ್ತಿಯೂ ಇದೆಯೆಂದು ತಿಳಿದುಬರುತ್ತದೆ.

**ಅತಿಬೃಹತ್-** ಅತ್ಯಂತಂ ಬೃಹತ್ ಅತಿಬೃಹತ್ ।
**ಷಡ್ಗುಣಂ-** ಷಟ್ ಗುಣಾಃ ಯಸ್ಯ ತತ್ ಷಡ್ಗುಣಂ,
**ಸ್ವಾತ್ಮತೇಜ-** ಸ್ವಸ್ಯ ಆತ್ಮಾ ಸ್ವಾತ್ಮಾ ಸ್ವಾತ್ಮನಃ ತೇಜಃ ಸ್ವಾತ್ಮತೇಜಃ ।

ರಾಜನ ಪಕ್ಷದಲ್ಲಿ ಮಂತ್ರ ಎಂದರೆ ರಹಸ್ಯವಾದ ಸಮಾಲೋಚನೆ, 'ವೇದಭೇದೇ ಗುಪ್ತವಾದೇ ಮಂತ್ರಃ' ಎಂದು ವಿಶ್ವಕೋಶವಿದೆ. ಮಂತ್ರಿಗಳು ತಿಳಿದಿರಬೇಕಾದ ಪಂಚಾಂಗಗಳನ್ನು ಛಲಾರಿಯ ಮತ್ತು ವಿಶ್ವಪತಿತೀರ್ಥೀಯದಲ್ಲಿ ಶ್ಲೋಕಪ್ರಮಾಣದಿಂದ ತಿಳಿಸಿದ್ದಾರೆ.

**ಕರ್ಮಾರಂಭೋಚಿತೋಪಾಯಃ ಪುರುಷದ್ರವ್ಯಸಂಪದಃ ।**
**ವಿನಿಪಾತಪ್ರತೀಕಾರೋ ದೇಶಕಾಲಾವಲೋಕನಂ ।**
**ಕಾರ್ಯಸಿದ್ಧಿರಿತಿ ಪ್ರೋಕ್ತಮಂಗಾನಾಂ ಪಂಚಕಂ ಬುಧೈಃ ॥**

ಈ ಐದು ಅಂಗಗಳ ಅರ್ಥವನ್ನು ಹಿಂದೆಯೇ ಹೇಳಲಾಗಿದೆ. ಗಾಯತ್ರ್ಯಾದಿ ಮಂತ್ರಗಳನ್ನು ಜಪಿಸುವವರು ಮಾಡಬೇಕಾಗಿರುವ ಹೃದಯಾದಿ ಪಂಚಾಂಗನ್ಯಾಸವನ್ನು ಹಿಂದೆಯೇ ಹೇಳಲಾಗಿದೆ. ಓಂ ತತ್ಸವಿತುಃ ಹೃದಯಾಯ ನಮಃ, ವರೇಣ್ಯಂ ಶಿರಸೇ ಸ್ವಾಹಾ, ಭರ್ಗೋದೇವಸ್ಯ ಶಿಖಾಯೈ ವಷಟ್, ಧೀಮಹಿ ಕವಚಾಯ ಹುಮ್, ಧಿಯೋ ಯೋನಃ ನೇತ್ರಾಭ್ಯಾಂ ವೌಷಟ್, ಪ್ರಚೋದಯಾತ್ ಅಸ್ತ್ರಾಯ ಫಟ್ ಇವೇ ಗಾಯತ್ರೀ ಮಂತ್ರದ ಪಂಚಾಂಗಗಳು.

**ಕ್ರಿಯಾಪದ— ಅಗಮತ್ -** ಅಗಮತ್ ಅಗಮತಾಂ ಅಗಮನ್, ಅಗಮಃ ಅಗಮತಂ ಅಗಮತ, ಅಗಮಂ ಅಗಮಾವ ಅಗಮಾಮ । ಗಮ್ ಲೃ ಗತೌ ಸಕರ್ಮಕ ಅನಿಟ್ ಪರಸ್ಮೈ ಲುಙ್ ಪ್ರಥಮಪುರುಷೇ ಏಕವಚನಂ. 'ಪುಷಾದಿದ್ಯುತಾದಿಲೃದಿತಃ ಪರಸ್ಮೈಪದೇಷು' (ಸೂತ್ರ 3.1.55) ಎಂಬ ಸೂತ್ರದಿಂದ ಅಙ್.

ಪ್ರಯೋಗ— ತತ್ರ ಉಚಿತಮಂತ್ರೈಃ ಪಂಚಾಂಗವಿದ್ಭಿಃ ಕೃತಿಭಿಃ ತ್ರಯಾಣಾಂ ಉದಯಾನಾಂ ಅನುಮತಾತ್ಮನಾ, ಅಂತಃ ಅತಿಬೃಹತ್ ಷಡ್‌ಗುಣಂ ಸ್ವಾತ್ಮತೇಜಃ ದಧತಾ ಅಹಿಮರೋಚಿಶ್ಚಕ್ರವರ್ತಿನಾ ತು ಉದಯಃ ಅಗಾಮಿ (ಕರ್ಮಣಿ) ।

★ ★ ★

**ಅವತಾರಿಕಾ—** ಸಿಂಹವು ಆನೆಗಳನ್ನು ಸಂಹರಿಸುವಂತೆ ಸೂರ್ಯನು ಕತ್ತಲೆಯ ರಾಶಿಯನ್ನು ನಾಶಗೊಳಿಸಿ ಉದಯಿಸಿದನು ಎಂದು ವರ್ಣಿಸುತ್ತಾರೆ.

**ತಿಮಿರನಿಕರಕುಂಭಿವ್ರಾತಮತ್ಯಂತತೀವ್ರಂ**
**ಸ್ಥಿರತರಮಖಿಲಾನಾಂ ಪ್ರಾಣಿನಾಂ ರುದ್ಧಮಾರ್ಗಮ್ ।**
**ಭುವನಭವನಪೂರ್ಣಂ ಭಾನುಮಾನಂಜನಾಭಂ**
**ಹರಿರಿವ ನಖರೈಃ ಪ್ರಾಗ್ರಶ್ಮಿಜಾಲೈರ್ನಿರಾಸ ॥ 15 ॥**

**ಪದಚ್ಛೇದ—** ತಿಮಿರನಿಕರಕುಂಭಿವ್ರಾತಂ, ಅತ್ಯಂತತೀವ್ರಂ, ಸ್ಥಿರತರಂ, ಅಖಿಲಾನಾಂ, ಪ್ರಾಣಿನಾಂ, ರುದ್ಧಮಾರ್ಗಂ, ಭುವನಭವನಪೂರ್ಣಂ, ಭಾನುಮಾನ್, ಅಂಜನಾಭಂ, ಹರಿಃ, ಇವ, ನಖರೈಃ, ಪ್ರಾಕ್, ರಶ್ಮಿಜಾಲೈಃ, ನಿರಾಸ ।

**ಅನ್ವಯ—** ಭಾನುಮಾನ್, ಅತ್ಯಂತತೀವ್ರಂ, ಸ್ಥಿರತರಂ, ಅಖಿಲಾನಾಂ, ಪ್ರಾಣಿನಾಂ, ರುದ್ಧಮಾರ್ಗಂ, ಭುವನ-ಭವನಪೂರ್ಣಂ, ಅಂಜನಾಭಂ, ತಿಮಿರನಿಕರಕುಂಭಿವ್ರಾತಂ, ಪ್ರಾಕ್, ರಶ್ಮಿಜಾಲೈಃ, ಹರಿಃ, ಇವ, ನಿರಾಸ ।

**ಅನ್ವಯಾರ್ಥ—**

**ಭಾನುಮಾನ್** = ಒಳ್ಳೆಯ ಕಿರಣಗಳಿಂದ ಕೂಡಿದ ಸೂರ್ಯನು,
**ಅತ್ಯಂತತೀವ್ರಂ** = ಬಹಳ ದುಸ್ಸಹವಾದ,
**ಸ್ಥಿರತರಂ** = ಬಹಳ ದೃಢವಾದ (ಆಳವಾಗಿ ಬೇರೂರಿರುವ),
**ಅಖಿಲಾನಾಂ** = ಎಲ್ಲಾ
**ಪ್ರಾಣಿನಾಂ** = ಜೀವಸಮೂಹಗಳ,
**ರುದ್ಧಮಾರ್ಗಂ** = ಮಾರ್ಗವನ್ನು ತಡೆದಿರುವ (ತಡೆಯಲ್ಪಟ್ಟ ಮಾರ್ಗವುಳ್ಳ),
**ಭುವನಭವನಪೂರ್ಣಂ** = ಲೋಕವೆಂಬ ಮನೆಯಲ್ಲಿ ತುಂಬಿರುವ,
**ಅಂಜನಾಭಂ** = ಕಾಡಿಗೆಯಂತಹ ಕಾಂತಿಯುಳ್ಳ
**ತಿಮಿರನಿಕರಕುಂಭಿವ್ರಾತಂ** = ಕತ್ತಲೆಯ ಸಮೂಹವೆಂಬ ಆನೆಗಳ ಸಮೂಹವನ್ನು
**ಪ್ರಾಕ್** = ಮೊದಲು,
**ರಶ್ಮಿಜಾಲೈಃ** = ಕಿರಣಗಳ ಸಮೂಹಗಳಿಂದ,
**ನಖರೈಃ** = ಉಗುರುಗಳಿಂದ,
**ಹರಿಃ ಇವ** = ಸಿಂಹದಂತೆ,
**ನಿರಾಸ** = ನಿರಾಕರಿಸಿದನು. (ನಿವಾರಿಸಿದನು)

**ತಾತ್ಪರ್ಯ—** ಆನೆಗಳು ಅತ್ಯಂತ ಕ್ರೂರವಾಗಿಯೂ, ಭಯಂಕರವಾಗಿಯೂ ಇರುವವು. ಕಾಡು ನೆಲದ ಮೇಲೆ ದೃಢವಾಗಿ ನಿಂತು ಎಲ್ಲಾ ಪ್ರಾಣಿಗಳ ದಾರಿಗೆ ಅಡ್ಡವಾಗಿರುತ್ತವೆ. ತಾವು ನಿಂತಿರುವ ಪ್ರದೇಶವನ್ನೆಲ್ಲಾ ಆವರಿಸಿಕೊಂಡು ಕಾಡಿಗೆಯ ಕಪ್ಪಿನ ರಾಶಿಯಂತೆ ಕಾಡಿಗೆಯ ಬೆಟ್ಟದಂತೆ ಹೊಳೆಯುತ್ತಿರುತ್ತವೆ. ಅಂತಹ ಆನೆಗಳ ಹಿಂಡನ್ನು ಸಿಂಹವು ತನ್ನ ಮುಂಗಾಲುಗಳ ಉಗುರುಗಳನ್ನು ಮೊದಲು ಮುಂದೆ ಚಾಚಿ ಕುಂಭಸ್ಥಳದ ಮೇಲೆ ಹಾರಿ, ಗಂಡಸ್ಥಳವನ್ನು ಸೀಳಿ ಬಗೆದು ಕೊಲ್ಲುತ್ತದೆ. ಅದರಂತೆ ಕತ್ತಲೆಯೂ ಅತ್ಯಂತ ಕಠಿನವಾಗಿರುತ್ತದೆ. ಸಹಿಸಲು ಅಸಾಧ್ಯವಾಗಿರುತ್ತದೆ. ಬಹಳ ಆಳವಾಗಿ ಬೇರೂರಿದಂತೆ ಕಾಣಿಸುತ್ತಾ ಎಲ್ಲಾ ಪ್ರಾಣಿಗಳಿಗೂ ಒಂದು ಹೆಜ್ಜೆ ದಾರಿ ನಡೆಯಲೂ ಸಾಧ್ಯವಿಲ್ಲದಂತೆ ಲೋಕವೆಂಬ

ಮನೆಯನ್ನು ಪೂರ್ತಿಯಾಗಿ ತುಂಬಿಕೊಂಡಿರುತ್ತದೆ. ಕಾಡಿಗೆಯ ದೊಡ್ಡ ರಾಶಿಯಂತೆ ಕಾಡಿಗೆಯ ಬೆಟ್ಟದಂತೆ ಕಪ್ಪಾದ ಕತ್ತಲೆಯು ಎಲ್ಲರಿಗೂ ಹೆದರಿಕೆಯನ್ನು ಹುಟ್ಟಿಸುತ್ತದೆ. ಆದರೆ ಸೂರ್ಯನು ಉದಯಿಸುತ್ತಾ ತನ್ನ ಮಂಡಲವು ಮೇಲಕ್ಕೆ ಬರುವುದಕ್ಕೆ ಮೊದಲೇ ತನ್ನ ಕಿರಣಗಳನ್ನು ಮುಂದಕ್ಕೆ ಕಳುಹಿಸಿ ಆ ಕತ್ತಲೆಯ ರಾಶಿಯನ್ನು ನಿರಾಕರಿಸುತ್ತಾನೆ. ಶ್ರೀಮಧ್ವಾಚಾರ್ಯರ ವಾಸಸ್ಥಳದಲ್ಲಿ ಸೂರ್ಯಕಿರಣಗಳಿಂದ ಕತ್ತಲೆಯು ಕರಗಿ ಅರುಣೋದಯವಾಯಿತು. ಸೂರ್ಯೋದಯವು ಸಮೀಪಿಸಿತು ಎಂದು ತಾತ್ಪರ್ಯ. ಇಲ್ಲಿ ರೂಪಕೋಜ್ಜೀವಿತವಾದ ಉಪಮಾಲಂಕಾರವಿದೆ.

**ವಿಗ್ರಹ—**

**ತಿಮಿರನಿಕರಕುಂಭಿವ್ರಾತಂ—** ತಿಮಿರಾಣಾಂ ನಿಕರಃ ತಿಮಿರನಿಕರಃ, ಕುಂಭಃ ಏಷಾಂ ಅಸ್ತೀತಿ ಕುಂಭಿನಃ, ಕುಂಭಿನಾಂ ವ್ರಾತಃ ಕುಂಭಿವ್ರಾತಃ, ತಿಮಿರನಿಕರಃ ಏವ ಕುಂಭಿವ್ರಾತಃ ತಿಮಿರನಿಕರಕುಂಭಿವ್ರಾತಃ ತಂ ।

**ಅತ್ಯಂತತೀವ್ರಂ—** ಅತಿಕ್ರಾಂತಃ ಅಂತಂ ಅತ್ಯಂತಂ, ಅತ್ಯಂತಂ ತೀವ್ರಃ ಅತ್ಯಂತತೀವ್ರಃ ತಂ ।

**ಸ್ಥಿರತರಃ—** ಅತಿಶಯೇನ ಸ್ಥಿರಃ ಸ್ಥಿರತರಃ ತಂ । (ಸೂರ್ಯಪ್ರಕಾಶದ ಹೊರತು ಬೇರೆ ಯಾವ ಪ್ರಕಾಶದಿಂದಲೂ ನಿವಾರಿಸಲು ಅಸಾಧ್ಯವಾದ, ಉಪಮಾನ ಪಕ್ಷದಲ್ಲಿ ಸಿಂಹದ ಹೊರತು ಮತ್ತಾವುದರಿಂದಲೂ ಕೊಲ್ಲಲು ಅಸಾಧ್ಯ)

**ರುದ್ಧಮಾರ್ಗಃ—** ರುದ್ಧಃ ಮಾರ್ಗಃ ಯೇನ ಸಃ ರುದ್ಧಮಾರ್ಗಃ ತಂ । (ಓಡಾಡುವುದೇ ಮುಂತಾದ ಕಾರ್ಯಕ್ಕೆ ಪ್ರತಿಬಂಧಕವಾದ)

**ಭುವನಭವನಪೂರ್ಣಂ—** ಭುವನಂ ಏವ ಭವನಂ ಭುವನಭವನಂ, ಭುವನಭವನೇ ಪೂರ್ಣಃ ಭುವನಭವನಪೂರ್ಣಃ ತಂ ।

**ರಶ್ಮಿಜಾಲಾನಿ—** ರಶ್ಮೀನಾಂ ಜಾಲಾನಿ ರಶ್ಮಿಜಾಲಾನಿ ತೈಃ ।

**ಕ್ರಿಯಾಪದ— ನಿರಾಸ** - ನಿರ್+ಆಸ ಆಸತುಃ ಆಸುಃ, ಆಸಿಥ ಆಸಥುಃ ಆಸ, ಆಸ ಆಸಿವ ಆಸಿಮ । ಅಸು (ಅಸ್) ಕ್ಷೇಪಣೇ, ಸಕ, ಸೇಟ್, ಪರ to throw (ಲಟ್ ಅಸ್ಯತಿ ದಿವಾದಿ) ।

**ಕೋಶ—** ತಿಮಿರನಿಕರಕುಂಭಿವ್ರಾತಃ ಎಂಬಲ್ಲಿ ತಿಮಿರ = ಕತ್ತಲೆ, 'ಅಂಧಕಾರೋಽಸ್ತ್ರಿಯಾಂ ಧ್ವಾಂತಂ ತಮಿಸ್ರಂ ತಿಮಿರಂ ತಮಃ' ಅಮರ, ನಿಕರ = ಸಮೂಹ, 'ಸ್ತೋಮೌಘನಿಕರವ್ರಾತವಾರಸಂಘಾತಸಂಚಯಾಃ' ಅಮರ, ಗಂಡಸ್ಥಲ ಗಳಿಂದ ಕೂಡಿದವುಗಳು (ಆನೆಗಳು) ಕುಂಭ = ಆನೆಗಳ ಗಂಡಸ್ಥಳದ ಮೇಲಿರುವ ಗುಪ್ಪುಗಳು, 'ಕುಂಭೌ ಘಟೇಭ ಮೂರ್ಧಾಂಶೌ' ಅಮರ, ವ್ರಾತಃ = ಸಮೂಹ, 'ಸ್ತೋಮೌಘನಿಕರವ್ರಾತ' ಅಮರ, ಪ್ರಾಣಿನಾಂ ಎಂಬಲ್ಲಿ ಪ್ರಾಣಿನ್, ಪ್ರಾಣಿನಃ = ಚೇತನರು, 'ಪ್ರಾಣೀ ತು ಚೇತನೋ ಜನ್ಮೀ ಜಂತು ಜನ್ಯು ಶರೀರಿಣಃ' ಅಮರ, ಭಾನವಃ (ಕಿರಣಗಳು) ಅಸ್ಯ ಸಂತೀತಿ ಭಾನುಮಾನ್ = ಸೂರ್ಯನು, 'ಭಾನುಃ ಕಿರಣಸೂರ್ಯಯೋಃ' ವಿಶ್ವ 'ಭಾನುಃ ಕರೋ ಮರೀಚಿಃ ಸ್ತ್ರೀಪುಂಸಯೋಃ' ಅಮರ, 'ಅಂಜನವತ್ (ಅಂಜನ ಪರ್ವತವತ್) ಆಭಾ ಯಸ್ಯ ಸಃ ಅಂಜನಾಭಃ ತಂ' ಹರಿಃ ಸಿಂಹ, ಯಮಾನಿಲೇಂದ್ರಚಂದ್ರಾರ್ಕವಿಷ್ಣುಸಿಂಹಾಂಶುವಾಜಿಷು । ಶುಕಾಹಿಕಪಿ ಭೇಕೇಷು ಹರಿಃ ನಾ, ಕಪಿಲೇ ತ್ರಿಷು' ಅಮರ, ಇವ = ಅಂತೆ, ಉಪಮಾವಾಚಕ ಶಬ್ದ ''ಇವ, ವದ್, ವಾ, ಯಥಾ ಶಬ್ದಾಃ ಉಪಮಾನಾರ್ಥವಾಚಕಾಃ'' ದಂಡೀ. ರಶ್ಮಿ = ''ಕಿರಣಪ್ರಗ್ರಹೌ ರಶ್ಮೀ' ಅಮರ, ಜಾಲಂ = ಸಮೂಹ, 'ಅನಾಯಗವಾಕ್ಷಕ್ಷಾರಕೇಷ್ವಪಿ' ಅಮರ ।

**ಪ್ರಯೋಗ—** ಭಾನುಮತಾ ಅತ್ಯಂತತೀವ್ರಃ ಸ್ಥಿರತರಃ ಅಖಿಲಾನಾಂ ಪ್ರಾಣಿನಾಂ ರುದ್ಧಮಾರ್ಗಃ ಭುವನಭವನ ಪೂರ್ಣಃ ಅಂಜನಾಭಃ ತಿಮಿರನಿಕರಕುಂಭಿವ್ರಾತಃ ಪ್ರಾಕ್ ಹರಿಣಾ ಇವ ರಶ್ಮಿಜಾಲೈಃ ನಿರಾಸೇ (ಕರ್ಮಣಿ) ।

★ ★ ★

**ಅವತಾರಿಕಾ—** ಸೂರ್ಯನು ಉದಯಿಸಿ ತನ್ನ ಕಿರಣಗಳ ಮೂಲಕ ದಿಕ್ಕುಗಳಲ್ಲಿ ಹರಡುತ್ತಿರುವುದನ್ನು ನಾಯಕನು ಅನೇಕ ಮಂದಿ ನಾಯಿಕೆಯರನ್ನು ಕೈಗಳಿಂದ ಏಕಕಾಲದಲ್ಲಿ ಅಪ್ಪಿಕೊಳ್ಳುವ ವ್ಯವಹಾರಕ್ಕೆ ಸಮಾನವಾಗಿ ವರ್ಣಿಸುತ್ತಾರೆ.

**ಮಧುರಪತಗರಾವಾಃ ಶಾಂತನೈಶಾಂಬುಬಾಷ್ಪಾಃ**
**ಸಪದಿ ವಿಪುಲರಾಗಾಃ ಸ್ವಾಭಿಸಾರಾತ್ ಪ್ರಸನ್ನಾಃ ।**
**ಅರುಣತರಣಿರತ್ಯಚ್ಛಾಂಬರಾ ದಿಕ್ಪುರಂಧ್ರೀಃ**
**ಸ್ಮಿತಸರಸಿಜವಕ್ತ್ರಾಃ ಸ್ವೈಃ ಕರೈರಾಲಿಲಿಂಗೇ ॥ 16 ॥**

**ಪದಚ್ಛೇದ—** ಮಧುರಪತಗರಾವಾಃ, ಶಾಂತನೈಶಾಂಬುಬಾಷ್ಪಾಃ, ಸಪದಿ, ವಿಪುಲರಾಗಾಃ, ಸ್ವಾಭಿಸಾರಾತ್, ಪ್ರಸನ್ನಾಃ, ಅರುಣತರಣಿಃ, ಅತ್ಯಚ್ಛಾಂಬರಾಃ, ದಿಕ್ಪುರಂಧ್ರೀಃ, ಸ್ಮಿತಸರಸಿಜವಕ್ತ್ರಾಃ, ಸ್ವೈಃ, ಕರೈಃ, ಆಲಿಲಿಂಗೇ ।

**ಅನ್ವಯ—** ಅರುಣತರಣಿಃ, ಸ್ವೈಃ, ಕರೈಃ, ಮಧುರಪತಗರಾವಾಃ, ಶಾಂತನೈಶಾಂಬುಬಾಷ್ಪಾಃ, ಸಪದಿ, ವಿಪುಲ-ರಾಗಾಃ, ಸ್ವಾಭಿಸಾರಾತ್, ಪ್ರಸನ್ನಾಃ, ಅತ್ಯಚ್ಛಾಂಬರಾಃ, ಸ್ಮಿತಸರಸಿಜವಕ್ತ್ರಾಃ, ದಿಕ್ಪುರಂಧ್ರೀಃ, ಆಲಿಲಿಂಗೇ ।

**ಅನ್ವಯಾರ್ಥ—**

**ಅರುಣತರಣಿಃ** = ಆಗ ತಾನೇ ಉದಯಿಸಿರುವುದರಿಂದ ಕೆಂಪಗಿರುವ ಸೂರ್ಯನು,

**ಸ್ವೈಃ** = ತನ್ನ

**ಕರೈಃ** = ಕಿರಣಗಳಿಂದ, ಕೈಗಳಿಂದ,

**ಮಧುರಪತಗರಾವಾಃ** = ಇಂಪಾದ, ಹಕ್ಕಿಗಳ ಇಂಚರವುಳ್ಳ, ಮನೋಹರವಾದ ಕೋಗಿಲೆ, ಗಿಣಿ ಮುಂತಾದ ಪಕ್ಷಿಗಳ ದನಿಯಂತೆ ದನಿಯುಳ್ಳ,

**ಶಾಂತನೈಶಾಂಬುಬಾಷ್ಪಾಃ** = ಅಡಗಿಹೋದ (ಕಡಿಮೆಯಾದ), ರಾತ್ರಿಯ ಮಂಜಿನ ನೀರೆಂಬ ಕಣ್ಣೀರುಳ್ಳ, ಶಾಂತವಾದ ರಾತ್ರಿಯಲ್ಲಿ ಪ್ರಿಯವಿರಹ ವೇದನೆಯಿಂದ ಉಂಟಾದ ಕಣ್ಣೀರುಳ್ಳ,

**ಸಪದಿ** = ಕೂಡಲೇ,

**ವಿಪುಲರಾಗಾಃ** = ಹೆಚ್ಚಾದ ಕೆಂಪು ಬಣ್ಣವುಳ್ಳ, ಕೂಡಲೇ ಹೆಚ್ಚಾದ ಪ್ರೇಮವುಳ್ಳ,

**ಸ್ವಾಭಿಸಾರಾತ್** = ತನ್ನ ವ್ಯಾಪನೆಯಿಂದ (ಕಿರಣಪ್ರಕಾಶಗಳ ಮೂಲಕ ಹರಡುವುದರಿಂದ) ತನ್ನ ಆಗಮನದಿಂದ,

**ಪ್ರಸನ್ನಾಃ** = ನಿರ್ಮಲವಾದ, ಮಂದಹಾಸ ಮಾಡುತ್ತಾ ಸಂತೋಷಗೊಂಡಿರುವ,

**ಅತ್ಯಚ್ಛಾಂಬರಾಃ** = ಅತ್ಯಂತ ನಿರ್ಮಲವಾದ ಆಕಾಶವುಳ್ಳ, ನಿರ್ಮಲವಾದ ಬಟ್ಟೆಯುಳ್ಳ,

**ಸ್ಮಿತಸರಸಿಜವಕ್ತ್ರಾಃ** = ಅರಳಿದ ಕಮಲದಂತಹ ಮುಖಗಳುಳ್ಳ,

**ದಿಕ್ಪುರಂಧ್ರೀಃ** = ದಿಕ್ಕುಗಳೆಂಬ ಸೌಭಾಗ್ಯವತಿ ಸ್ತ್ರೀಯರನ್ನು

**ಆಲಿಲಿಂಗೇ** = ಅಪ್ಪಿಕೊಂಡನು.

**ತಾತ್ಪರ್ಯ—** ಒಬ್ಬ ಅತಿ ಪ್ರಿಯತಮನಾದ ಪತಿಯು ತನ್ನ ಕಾಂತೆಯರನ್ನು ಬಿಟ್ಟು ರಾತ್ರಿಯಲ್ಲಿ ಬೇರೆಡೆಗೆ ಹೋಗಿದ್ದನು. ಬೆಳಗಾಗುತ್ತಿರುವಾಗಲೇ ಮನೆಗೆ ಬಂದನು. ಅವನು ತಮ್ಮನ್ನು ಬಿಟ್ಟು ಹೋದುದರಿಂದ ಈ ಸುಂದರಿಯರು ತುಂಬಾ ಸಿಟ್ಟುಗೊಂಡಿದ್ದರು. ಆದರೆ ಪ್ರಿಯತಮನು ಬಂದು ಪ್ರೀತಿಯಿಂದ ಅವರ ಮೈದಡವಿದಾಗ ಅವರ ಕೋಪವೆಲ್ಲವೂ ಶಾಂತವಾಯಿತು. ರಾತ್ರಿ ಪ್ರಿಯವಿರಹದಿಂದ ಉಕ್ಕಿದ ಕಣ್ಣೀರು ಅಡಗಿತು, ಮಾಯವಾಯಿತು. ಪ್ರಿಯತಮನನ್ನು ನೋಡಿದ

ಕೂಡಲೇ ಪ್ರೇಮವು ಹೆಚ್ಚಾಯಿತು. ಅರಳಿದ ತಾವರೆ ಹೂವುಗಳಂತೆ ಅವರ ಮುಖಗಳು ಸಂತೋಷದ ಮಂದಹಾಸವನ್ನು ಸೂಸಲಾರಂಭಿಸಿದವು. ಸ್ವಚ್ಛವಾದ ಬಿಳಿಯ ಮತ್ತು ಬೇರೆ ಬಣ್ಣದ ಸೀರೆಗಳನ್ನುಟ್ಟಿರುವ ಅವರು ಕೋಗಿಲೆ, ಗಿಣಿಗಳಂತೆ ಇಂಪಾದ ಮಾತುಗಳನ್ನಾಡುತ್ತಾ ಪ್ರಿಯನನ್ನು ಎದುರುಗೊಂಡಾಗ ಪ್ರೇಮಪೂರ್ಣನಾದ ಕೆಂಪಗೆ ಇರುವ ಅವನು ಎರಡೇ ಆಗಿದ್ದರೂ ಬಹಳವಾಗಿರುವಂತಿರುವ ಕೈಗಳಿಂದ ಅವರನ್ನು ಅಪ್ಪಿಕೊಂಡು ಮುದ್ದಿಸುತ್ತಾನೆ, ಸಮಾಧಾನ ಮಾಡುತ್ತಾನೆ. ಅದರಂತೆಯೇ ಪ್ರಕೃತದಲ್ಲಿ ಪ್ರಾತಃಕಾಲವಾಯಿತು. ಸೂರ್ಯೋದಯವಾಯಿತು. ಆಗ ತಾನೇ ಉದಯಿಸಿದ್ದರಿಂದ ಕೆಂಪಾದ ಸೂರ್ಯನು ಕಾಣಿಸಿಕೊಂಡನು. ಇಂಪಾದ ಪಕ್ಷಿಗಳ ಇಂಚರದಿಂದ ದಿಕ್ಕುಗಳು ಅವನಿಗೆ ಸ್ವಾಗತ ಬಯಸಿದವು. ರಾತ್ರಿ ಬಿದ್ದಿದ್ದ ಇಬ್ಬನಿಯ ನೀರು ಸೂರ್ಯನ ಕಿರಣಗಳ ಸಂಪರ್ಕದಿಂದ ಕಡಿಮೆಯಾಗಿ ಅಡಗಿ ಹೋಯಿತು. ದಿಕ್ಕುಗಳಲ್ಲೆಲ್ಲಾ ಕೆಂಪುಬಣ್ಣವು ಬಹಳವಾಗಿ ಹರಡಿಕೊಂಡಿತು, ಸೂರ್ಯನು ತನ್ನ ಕಿರಣಗಳನ್ನು ಎಲ್ಲಾ ಕಡೆ ಹರಡಿದ್ದರಿಂದ ದಿಕ್ಕುಗಳು ತುಂಬಾ ಪ್ರಸನ್ನವಾದುವು, ನಿರ್ಮಲವಾದುವು. ಎಲ್ಲಾ ದಿಕ್ಕುಗಳ ಪ್ರದೇಶದ ಅಂಬರವೂ(ಆಕಾಶವೂ) ಸ್ವಚ್ಛವಾಗಿತ್ತು. ತಾವರೆ ಹೂವುಗಳು ಅರಳಿ ದಿಕ್ಕುಗಳೆಂಬ ಸುಮಂಗಲಿ ಸ್ತ್ರೀಯರ ಅರಳಿದ ಮುಖದಂತೆ ಶೋಭಿಸುತ್ತಿದ್ದುವು. ಇಂತಹ ದಿಕ್ಕುಗಳೆಂಬ ಸಚ್ಚರಿತ್ರರಾದ ಕಾಂತೆಯರನ್ನು ಸೂರ್ಯನು ತನ್ನ ಕಿರಣಗಳೆಂಬ ಕೈಗಳಿಂದ ಅಪ್ಪಿಕೊಂಡನು. ಉದಯಿಸಿದ ಸೂರ್ಯನ ಕಿರಣಗಳು ಎಲ್ಲಾ ದಿಕ್ಕುಗಳಲ್ಲಿಯೂ ಹರಡಿದವು ಎಂದು ಭಾವ. ಇಲ್ಲಿ ಸೂರ್ಯನ ಉದಯಕಾಲದ ವ್ಯವಹಾರದಿಂದ ಅನೇಕ ಪ್ರಿಯತಮೆಯರಲ್ಲಿ ಸಮಾನವಾದ ಅನುರಾಗವನ್ನಿಟ್ಟಿರುವ ಪ್ರಿಯತಮನಾದ ನಾಯಕನ ವ್ಯವಹಾರವು ತೋರುವುದರಿಂದ ಸಮಾಸೋಕ್ತಿ ಅಲಂಕಾರ.

ವಿಗ್ರಹ—

**ಮಧುರಪತಗರಾವಾಃ—** ಪತಗಾನಾಂ ರಾವಾಃ ಪತಗರಾವಾಃ, ಮಧುರಾಃ ಪತಗರಾವಾಃ ಯಾಸಾಂ ತಾಃ ಮಧುರಪತಗರಾವಾಃ ತಾಃ । (ಅಂತಹ ದಿಕ್ಕುಗಳನ್ನು) ಪತಗವತ್ ರಾವಃ ಪತಗರಾವಃ ಮಧುರಃ ಪತಗರಾವಃ ಯಾಸಾಂ ತಾಃ ಮಧುರಪತಗರಾವಾಃ ತಾಃ ।(ಅಂತಹ ಸುಮಂಗಲಿಸ್ತ್ರೀಯರನ್ನು)

**ಶಾಂತನೈಶಾಂಬುಬಾಷ್ಪಾಃ—** ನಿಶಃ ಸಂಬಂಧೀನಿ ನೈಶಾನಿ, ನೈಶಾನಿ ಚ ತಾನಿ ಅಂಬೂನಿ ಚ ನೈಶಾಂಬೂನಿ, ನೈಶಾಂಬೂನ್ಯೇವ ಶಾಂತಾ ಬಾಷ್ಪಾಃ ಯಾಸಾಂ ತಾಃ ಶಾಂತನೈಶಾಂಬುಬಾಷ್ಪಾಃ ।

**ಶಾಂತನೈಶಾಂಬುಬಾಷ್ಪಾಃ—** ನಿಶಾಯಾಂ ಭವಂ ನೈಶಂ, ನೈಶಂ ಚ ತತ್ ಅಂಬು ಚ ನೈಶಾಂಬು, ಶಾಂತಂ ನೈಶಾಂಬುಸದೃಶಂ ಬಾಷ್ಪಂ ಯಾಸಾಂ ತಾಃ । (ಎಂದು ವಿಗ್ರಹ)

**ವಿಪುಲರಾಗಾಃ—** ವಿಪುಲಃ ರಾಗಃ ಯಾಸಾಂ ತಾಃ ವಿಪುಲರಾಗಾಃ ತಾಃ (ದಿಕ್ಕುಗಳು ಮತ್ತು ಸ್ತ್ರೀಯರು ಎರಡರ ಪಕ್ಷದಲ್ಲಿಯೂ ಸಮಾನ ವಿಗ್ರಹ)

**ಸ್ವಾಭಿಸಾರಾತ್—** ಸ್ವೇಷಾಂ (ತನ್ನದಾದ ಕಿರಣಗಳ) ಅಭಿಸಾರಃ ಸ್ವಾಭಿಸಾರಃ ತಸ್ಮಾತ್ ಸ್ವಾಭಿಸಾರಾತ್ । (ಸ್ವಸ್ಯ (ಸ್ವಕೀಯನಾಯಕಸ್ಯ) ಅಭಿಸಾರಃ ಸ್ವಾಭಿಸಾರಃ ತಸ್ಮಾತ್)

**ಸ್ಮಿತಸರಸಿಜವಕ್ತ್ರಾಃ—** ಸರಸಿ ಜಾಯಂತೇ ಇತಿ ಸರಸಿಜಾನಿ, ಸ್ಮಿತಾನಿ ಚ ತಾನಿ ಸರಸಿಜಾನಿ ಚ ಸ್ಮಿತಸರಸಿಜಾನಿ, ಸ್ಮಿತಸರಸಿಜಾನ್ಯೇವ ವಕ್ತ್ರಾಣಿ ಯಾಸಾಂ ತಾಃ ಸ್ಮಿತಸರಸಿಜವಕ್ತ್ರಾಃ ತಾಃ । (ಸ್ತ್ರೀಯರ ಪಕ್ಷದಲ್ಲಿ ಸ್ಮಿತ-ಸರಸಿಜವತ್ ವಕ್ತ್ರಾಣಿ ಯಾಸಾಂ ತಾಃ)

**ಅರುಣತರಣಿಃ ಅತ್ಯಚ್ಛಾಂಬರಾಃ—** ಅರುಣಶ್ಚ ಅಸೌ ತರಣಿಶ್ಚ ಅರುಣತರಣಿಃ, ಅತಿಶಯೇನ ಅಚ್ಛಂ ಅತ್ಯಚ್ಛಂ, ಅತ್ಯಚ್ಛಂ ಅಂಬರಂ (ಆಕಾಶ ಮತ್ತು ವಸ್ತ್ರ) ಯಾಸಾಂ ತಾಃ ಅತ್ಯಚ್ಛಾಂಬರಾಃ ತಾಃ ।

**ದಿಕ್ ಪುರಂಧ್ರೀಃ—** ದಿಶಃ ಏವ ಪುರಂಧ್ರ್ಯಃ ದಿಕ್‌ಪುರಂಧ್ರ್ಯಃ ತಾಃ ।

**ಕ್ರಿಯಾಪದ—** **ಆಲಿಲಿಂಗೇ-** ಆ+ಲಿಲಿಂಗೇ, ಲಿಲಿಂಗಾತೇ ಲಿಲಿಂಗಿರೇ ಇತ್ಯಾದಿ ಆಜ್ ಉಪಸರ್ಗಪೂರ್ವಕ ಲಿಗಿಗತೌ ಲಿಟ್ ಪ್ರಥಮಪುರುಷೇ ಏಕವಚನಂ. ಈ ಧಾತುವು ಪರಸ್ಮೈಪದಿ ಆದರೂ 'ಚಾಂದ್ರಾದಯಸ್ತು ಮನ್ಯಂತೇ ಸರ್ವಸ್ಮಾದುಭಯಂ ಪದಂ' ಎಂಬ ವಚನದಿಂದ ಆತ್ಮನೇ ಪದದಲ್ಲಿ ಬಂದಿದೆ ಎಂದು ತಿಳಿಯಬೇಕು.

**ಕೋಶ ಮತ್ತು ವಿಶೇಷ ವಿಚಾರಗಳು—** ಅರುಣ = ನಸುಗೆಂಪು, 'ಅವ್ಯಕ್ತರಾಗಸ್ತ್ವರುಣಃ', ತರಣಿ = ಸೂರ್ಯ, 'ದ್ಯುಮಣಿಃ ತರಣಿರ್ಮಿತ್ರಃ' ಅಮರ, ಪುರಂಧ್ರೀ = ಒಳ್ಳೆಯ ನಡತೆಯವಳು, ಗೃಹಿಣಿ, 'ಪುರಂಧ್ರೀ ಸುಚರಿತ್ರಾ ಚ' ಅಮರ, ಸ್ವ = ತನ್ನದು, 'ಸ್ವೋ ಜ್ಞಾತಾವಾತ್ಮನಿ ಸ್ವಂ ತ್ರಿಷ್ವಾತ್ಮೀಯೇ' ಅಮರ, ಕರ = ಕೈ, 'ಕಿರಣ ಬಲಿಹಸ್ತಾಂಶವಃ ಕರಾಃ', ಪತಗ = ಪಕ್ಷಿ, 'ಪತತ್ರಿಪತ್ರಿಪತಗಪತತ್ ಪತ್ರರಥಾಂಡಜಾಃ' ಅಮರ, ಬಾಷ್ಪ = ಕಣ್ಣೀರು, ಹಬೆ, 'ಬಾಷ್ಪೋ ನೇತ್ರ ಜಲೋಷ್ಮಣೋಃ ಬಾಷ್ಪಂ ಊಷ್ಮಾಶ್ರು' ಅಮರ, ರಾಗ = ಕೆಂಪುಬಣ್ಣ, ಅನುರಾಗ, 'ರಾಗೋಽನುರಾಗೇ ಮಾತ್ಸರ್ಯೇ ಲಾಕ್ಷಾದೌ ರಕ್ತಿಮತ್ವಿಷೋಃ' ನಾನಾರ್ಥರತ್ನಮಾಲಾ, ಅಂಬರ = ಆಕಾಶ, ಬಟ್ಟೆ, 'ಅಂಬರಂ ವ್ಯೋಮ್ನಿ ವಾಸಸಿ' ಕೋಶ. ಅಭಿಸಾರ = ಹರಡುವಿಕೆ, ಮುಟ್ಟುವುದು, ಮೃದಡವುದು.

★ ★ ★

**ಅವತಾರಿಕಾ—** ಸೂರ್ಯೋದಯ ಸಮಯದಲ್ಲಿ ಕಿಟಕಿಯ ಮೂಲಕ ತೂರಿ ಬರುತ್ತಿರುವ ಕಿರಣಗಳು ಆಗಿನ ವಿದ್ಯಾರ್ಥಿಗಳಿಗೆ ಸ್ನೇಹಿತರಂತೆ ಉಪಕಾರ ಮಾಡುತ್ತಿದ್ದವು ಎಂದು ವರ್ಣಿಸುತ್ತಾರೆ.

**ಪ್ರಣತಿರಭಸಧೂಲೀಬದ್ಧಶೋಭಾವಿಶೇಷಾಃ**
**ದಧುರುಪಕೃತಿಮತ್ತಾಂ ಸಾಧುಜಾಲಾಂತರಾಪ್ತಾಃ ।**
**ಸಮಯಮುಪನತಂ ಸಂವೇದಯಂತೋ ವಯಸ್ಯಾ**
**ಇವ ದಶಶತಕೇತೋಃ ಕೇಶವಃ ಶ್ರಾವಕಾಣಾಮ್ ॥ 17 ॥**

**ಪದಚ್ಛೇದ—** ಪ್ರಣತಿರಭಸಧೂಲೀಬದ್ಧಶೋಭಾವಿಶೇಷಾಃ, ದಧುಃ, ಉಪಕೃತಿಮತ್ತಾಂ, ಸಾಧುಜಾಲಾಂತರಾಪ್ತಾಃ, ಸಮಯಂ, ಉಪನತಂ, ಸಂವೇದಯಂತಃ ವಯಸ್ಯಾಃ, ಇವ, ದಶಶತಕೇತೋಃ, ಕೇಶವಃ ಶ್ರಾವಕಾಣಾಂ ।

**ಅನ್ವಯ—** ಪ್ರಣತಿರಭಸಧೂಲೀಬದ್ಧಶೋಭಾವಿಶೇಷಾಃ, ಸಾಧುಜಾಲಾಂತರಾಪ್ತಾಃ, ಸಮಯಂ, ಉಪನತಂ (ಸಂತಂ), ಸಂವೇದಯಂತಃ, ದಶಶತಕೇತೋಃ, ಕೇತವಃ, ವಯಸ್ಯಾ, ಇವ, ಶ್ರಾವಕಾಣಾಂ, ಉಪಕೃತಿಮತ್ತಾಂ, ದಧುಃ ।

**ಅನ್ವಯಾರ್ಥ—**

**ಪ್ರಣತಿ, ರಭಸ, ಧೂಲೀ, ಬದ್ಧ, ಶೋಭಾವಿಶೇಷಾಃ** = ಪ್ರಾತಃಸಂಧ್ಯೆಯ ಸೂರ್ಯನ ನಮಸ್ಕಾರದ, ವೇಗದಿಂದ, (ಉತ್ಪನ್ನವಾದ) ಧೂಳಿಗಳಿಂದ, ಕಟ್ಟಿದ, (ಉತ್ಪನ್ನವಾದ) ಕಾಂತಿವಿಶೇಷವುಳ್ಳ, ಸೂರ್ಯ ನಮಸ್ಕಾರ ಮಾಡುವ ಸಂಭ್ರಮದಿಂದ ಮೈಗೆ ಅಂಟಿಕೊಂಡ ಧೂಳಿಗಳಿಂದ ಕಾಂತಿವಿಶೇಷವನ್ನು ಹೊಂದಿರುವ,

**ಸಾಧು, ಜಾಲಾಂತರಾಪ್ತಾಃ** = ಚೆನ್ನಾಗಿರುವ, ಕಿಟಕಿಯ ಮಧ್ಯದಿಂದ ತೂರಿ ಬರುತ್ತಿರುವ, ಸಜ್ಜನರ ಸಮೂಹದ ಮಧ್ಯದಿಂದ ಬಂದಿರುವ,

**ಸಮಯಂ** = ಸೂರ್ಯೋದಯ ಸಮಯವನ್ನು ಶಾಸ್ತ್ರಪಾಠದ ಆರಂಭ ಸಮಯವನ್ನು,

**ಉಪನತಂ (ಸಂತಂ)** = ಸಮೀಪಿಸಿದ್ದನ್ನಾಗಿ,

**ಸಂವೇದಯಂತಃ** = ತಿಳಿಸಿಕೊಡುತ್ತಿರುವ,

**ದಶಶತಕೇತೋಃ** = ಸಹಸ್ರಕಿರಣನಾದ ಸೂರ್ಯನ, (ಅಸಂಖ್ಯ ಕಿರಣಪೂರ್ಣನಾದ ಸೂರ್ಯನ)
**ಕೇತವಃ** = ರಶ್ಮಿಗಳು,
**ವಯಸ್ಯಾಃ ಇವ** = ಸಹಪಾಠಿಗಳಾದ ಸ್ನೇಹಿತರಂತೆ,
**ಶ್ರಾವಕಾಣಾಂ** = ಪಾಠಕೇಳುವ ಶಿಷ್ಯರಿಗೆ,
**ಉಪಕೃತಿಮತ್ತಾಂ** = ಉಪಕಾರವನ್ನು,
**ದಧುಃ** = ಉಂಟುಮಾಡಿದವು.

**ತಾತ್ಪರ್ಯ**— ಬ್ರಹ್ಮಚಾರಿ ಶಿಷ್ಯರು ಬೆಳಿಗ್ಗೆ ಎದ್ದು ಸ್ನಾನ ಮಾಡಿ ಸಂಧ್ಯಾವಂದನೆ ಮಾಡಿ ಸೂರ್ಯ ನಮಸ್ಕಾರ ಮಾಡುತ್ತಾರೆ. ನಮಸ್ಕಾರ ಮಾಡುವಾಗ ಮೈಗೆ ನೆಲದ ಧೂಳು ಹತ್ತಿಕೊಂಡಿದ್ದು ಬ್ರಹ್ಮಚಾರಿ ಬಾಲಕರಿಗೆ ವಿಶೇಷವಾದ ಶೋಭೆಯುಂಟಾಗುತ್ತದೆ. ಒಳ್ಳೆಯ (ಸಜ್ಜನರ) ವಂಶದಲ್ಲಿ ಹುಟ್ಟಿದ ಅವರ ಪಾಠದ ಸಮಯವು ಬಂದೊದಗಿತು ಎಂದು ತಮ್ಮ ಸಹಪಾಠಿಗಳಿಗೆ ಸೂಚಿಸಲು ಕಿಟಕಿಗಳ ಸಂಧಿ ಮೂಲಕ ಇಣುಕುತ್ತಾ ಇರುತ್ತಾರೆ. ಪಾಠಕ್ಕೆ ಹೊತ್ತಾಯಿತು, ಏಳಿರಿ ಎಂದು ಹೇಳುತ್ತಾರೆ. ಹೀಗೆ ತಮ್ಮ ಸ್ನೇಹಿತರಿಗೆ ಉಪಕಾರ ಮಾಡುತ್ತಾರೆ. ಪ್ರಾತಃ ಕಾಲದಲ್ಲಿ ಕಿಟಕಿಗಳ ಮೂಲಕ ತೂರಿಬರುವ ಸೂರ್ಯನ ಮೊದಲ ಕಿರಣಗಳು ಬ್ರಹ್ಮಚಾರಿಗಳು ಸೂರ್ಯನ ನಮಸ್ಕಾರ ಮಾಡುವ ವೇಗದಿಂದ ಮೇಲಕ್ಕೆದ್ದ ಧೂಳಿಗಳಿಂದ ಮತ್ತಷ್ಟು ಶೋಭಿಸುತ್ತಾ ಇರುತ್ತವೆ. ವಿಶಾಲವಾದ ಸುಂದರವಾದ ಕಿಟಕಿಗಳ ಮೂಲಕ ಒಳಕ್ಕೆ ಬರುತ್ತಾ ಇರುತ್ತವೆ. ಸಹಸ್ರಕಿರಣನಾದ ಸೂರ್ಯನ ಇಂತಹ ಕಿರಣಗಳು ಪಾಠದ ಸಮಯವನ್ನು ತಿಳಿಸಿ ಎಚ್ಚರಿಸುವ ಸ್ನೇಹಿತರಂತೆ ಉಪಕಾರ ಮಾಡುತ್ತಾ ಶೋಭಿಸಿದವು. (ಸೂರ್ಯನು ಉದಯಿಸಿ ಅವನ ಕಿರಣಗಳು ಮನೆಯೊಳಗೆ ಇಣುಕು-ವಷ್ಟರಲ್ಲಿಯೇ ಪಾಠವು ಪ್ರಾರಂಭವಾಗುತ್ತಿತ್ತು).

**ಛಲಾರಿಯ**— ಗವಾಕ್ಷಮಧ್ಯಾತ್ ಆಗತಾನ್ ಸೂರ್ಯಕಿರಣಾನ್ ದೃಷ್ಟ್ವಾ ಶ್ರಾವಕಾಃ ಶ್ರವಣಾಯೋದ್ಯತಾಃ ಆಸನ್ ಇತ್ಯರ್ಥಃ । ವಯಸ್ಯಾಶ್ಚ ಅನ್ಯೋನ್ಯಂ ಶ್ರವಣಕಾಲಂ ಜ್ಞಾಪಯಂತಿ ಹಿ । ಗವಾಕ್ಷಾತ್ ಅಂತಃ ಪ್ರವಿಷ್ಟಾಃ ಸೂರ್ಯ-ಕಿರಣಾಃ ಶ್ರಾವಕನಮಸ್ಕಾರೋತ್ಪನ್ನಧೂಲಿಸಂಬಂಧೇನ ಶೋಭಾವಿಶೇಷಪ್ರಾಪ್ತಿಲಕ್ಷಣೋಪಕಾರವಂತಃ ಸಂತಃ ಸ್ವಯಮಪಿ ಶ್ರಾವಕಾಣಾಂ ಸಮಯಜ್ಞಾಪನಲಕ್ಷಣಂ ಉಪಕಾರಂ ಕೃತ್ವಾ ಪ್ರತ್ಯುಪಕಾರಿಣೋ ಬಭೂವುಃ ।

**ತಾತ್ಪರ್ಯ**— ಗವಾಕ್ಷಗಳ ಮಧ್ಯದಿಂದ ಒಳಬಂದ ಸೂರ್ಯನ ಕಿರಣಗಳನ್ನು ನೋಡಿ ಶಿಷ್ಯರು ಪಾಠ ಕೇಳುವುದಕ್ಕೆ ಸಿದ್ಧರಾದರು ಎಂದು ಅರ್ಥ. ಲೋಕದಲ್ಲಿ ಸ್ನೇಹಿತರೂ ಪರಸ್ಪರವಾಗಿ ಪಾಠಕೇಳುವ ಸಮಯ ಬಂತು ಸಿದ್ಧರಾಗಿರಿ ಎಂದು ನೆನಪು ಮಾಡಿಕೊಡುತ್ತಾರೆ. ಗವಾಕ್ಷಗಳ ಮೂಲಕ ಒಳಗೆ ಬಂದ ಸೂರ್ಯನ ಕಿರಣಗಳು ಶಿಷ್ಯರು ಮಾಡಿದ ನಮಸ್ಕಾರದಿಂದ ಧೂಳು ಮೇಲಕ್ಕೆದ್ದಾಗ ಆ ಧೂಳುಗಳಿಂದ ಶೋಭೆಯನ್ನು ಹೊಂದಿದುವು. ಇದು ಆ ಕಿರಣಗಳಿಗೆ ಶಿಷ್ಯರು ಮಾಡಿದ ಉಪಕಾರವು. ಆ ಕಿರಣಗಳು ಪಾಠ ಕೇಳುವ ಶಿಷ್ಯರಿಗೆ ಪಾಠವನ್ನು ಕೇಳಲು ಸಮಯವು ಬಂದೊದಗಿದೆ ಎಂದು ನೆನಪು ಮಾಡಿಕೊಟ್ಟು ಉಪಕಾರ ಮಾಡಿ ಅವರು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡಿದವು ಎಂದು ತಾತ್ಪರ್ಯ. ಇಲ್ಲಿ ಈ ರೀತಿ ಪರಸ್ಪರ ಉಪಕಾರವು ಸೂಚಿತವಾಗುವುದರಿಂದ 'ಅನ್ಯೋನ್ಯ' ಎಂಬ ಅಲಂಕಾರವು ಸೂಚಿತವಾಗುತ್ತದೆ. 'ಅನ್ಯೋನ್ಯಂ ನಾಮ ಯತ್ರ ಸ್ಯಾತ್ ಉಪಕಾರಃ ಪರಸ್ಪರಂ', 'ತ್ರಿಯಾಮಾ ಶಶಿನಾಭಾತಿ ಶಶೀ ಭಾತಿ ತ್ರಿಯಾಮಯಾ' ಎಂದು ಅನ್ಯೋನ್ಯಾಲಂಕಾರದ ಲಕ್ಷಣ ಮತ್ತು ಉದಾಹರಣೆಗಳು. ಎಲ್ಲಿ ಪರಸ್ಪರ ಉಪಕಾರವು ಕಂಡು ಬರುತ್ತದೆಯೋ ಅಲ್ಲಿ ಅನ್ಯೋನ್ಯಾಲಂಕಾರವು. ರಾತ್ರಿಯು ಚಂದ್ರನಿಂದ ಶೋಭಿಸುತ್ತದೆ, ಚಂದ್ರನು ರಾತ್ರಿಯಿಂದ ಶೋಭಿಸುತ್ತಾನೆ ಎಂದು ಉದಾಹರಣೆಯು. ಉಪಮಾಲಂಕಾರವು ಸ್ಪಷ್ಟವಾಗಿದೆ.

**ಭಾವಪ್ರಕಾಶಿಕಾ**— ಭದ್ರಜಾಲರಂಧ್ರಗತಾಃ ಸಜ್ಜನಸಮೂಹಮಧ್ಯಾತ್ ಆಗತಾಶ್ಚ । ಭದ್ರಜಾಲಾಂತರಾಪ್ತಾಃ ಎಂಬಲ್ಲಿ ಮಂಗಳಕರವಾದ ಕಿಟಕಿಗಳ ಸಂಧಿಗಳಿಂದ ಬಂದಿರುವ (ಕಿರಣಗಳು) ಎಂದೂ ಸಜ್ಜನರ ಸಮೂಹದ ಮಧ್ಯದಿಂದ ಬಂದಿರುವ ಶಿಷ್ಯರು ಎಂದೂ ಅರ್ಥ.

ವಿಗ್ರಹ—

**ಪ್ರಣತಿರಭಸಧೂಲೀಬದ್ಧಶೋಭಾವಿಶೇಷಾಃ—** ಪ್ರಣತೇಃ ರಭಸಃ ಪ್ರಣತಿರಭಸಃ, ರಭಸ ಎಂದರೆ ಸಂಭ್ರಮ ಅಂದರೆ ಸಂತೋಷ. ವೇಗವೆಂದೂ ಎರಡು ಅರ್ಥಗಳು, 'ರಭಸೋ ವೇಗಹರ್ಷಯೋಃ' ವಿಶ್ವ । ಪ್ರಣತಿರಭಸೇನ(ಉತ್ಪನ್ನಾಃ) ಧೂಲ್ಯಃ ಪ್ರಣತಿರಭಸಧೂಲ್ಯಃ, ಪ್ರಣತಿರಭಸಧೂಲೀಭಿಃ ಬದ್ಧಃ (ಸಂಬದ್ಧಃ ಉತ್ಪನ್ನಃ) ಶೋಭಾವಿಶೇಷಃ ಯೇಷಾಂ ತೇ ಪ್ರಣತಿರಭಸಧೂಲೀಬದ್ಧಶೋಭಾವಿಶೇಷಾಃ । (ಕೇಶವಃ ಎಂಬುದು ವಿಶೇಷ್ಯ)

**ಉಪಕೃತಿಮಂತಃ—** ಉಪಕೃತಿಃ ಏಷಾಂ ಅಸ್ತೀತಿ ಉಪಕೃತಿಮಂತಃ, ಉಪಕೃತಿಮತಾಂ ಭಾವಃ ಉಪಕೃತಿ ಮತ್ತಾ ತಾಂ ।

**ಸಾಧುಜಾಲಾಂತರಾಪ್ತಾಃ—** ಸಾಧೂನಿ ಚ ತಾನಿ ಜಾಲಾನಿ ಚ ಸಾಧುಜಾಲಾನಿ, ಸಾಧುಜಾಲಾನಾಂ ಅಂತರಂ ಸಾಧುಜಾಲಾಂತರಂ, ಸಾಧುಜಾಲಾಂತರೇಣ ಆಪ್ತಾಃ ಸಾಧುಜಾಲಾಂತರಾಪ್ತಾಃ । (ಕಿರಣಗಳ ಪಕ್ಷದಲ್ಲಿ ಈ ವಿಗ್ರಹ)

**ಸಾಧುಜಾಲಾಂತರಾಪ್ತಾಃ—** ಸಾಧೂನಾಂ ಜಾಲಂ ಸಾಧುಜಾಲಂ, ಸಾಧುಜಾಲಸ್ಯ ಅಂತರಂ ಸಾಧು ಜಾಲಾಂತರಂ, ಸಾಧುಜಾಲಾಂತರಾತ್ ಆಪ್ತಾಃ ಸಾಧುಜಾಲಾಂತರಾಪ್ತಾಃ । (ಶಿಷ್ಯರ ಪಕ್ಷದಲ್ಲಿ ವಿಗ್ರಹ)

**ದಶಶತಕೇತುಃ—** ದಶ ಚ ತಾನಿ ಶತಾನಿ ಚ ದಶಶತಾನಿ । (ದಶಗುಣಿತಾನಿ ಶತಾನಿ ದಶಶತಾನಿ) (ದಶಗುಣಿತಂ ಶತಂ ದಶಶತಂ) ದಶಶತಾನಿ (ದಶಶತಂ) ಕೇತವಃ ಯಸ್ಯಸಃ ದಶಶತಕೇತುಃ (ಸೂರ್ಯಃ) ತಸ್ಯ ।

**ಕ್ರಿಯಾಪದ—** **ದಧುಃ**- ದಧೌ ದಧತುಃ ದಧುಃ, ದಧಿಥ-ದಧಾಥ ದಧಥುಃ ದಧ, ದಧೌ ದಧಿವ ದಧಿಮ। ಡುಧಾಞ್ ಧಾರಣಪೋಷಣಯೋಃ (ಧಾಧಾತು) ಪರಸ್ಮೈಪದಿ ಲಿಟ್ ಪ್ರಥಮಪುರುಷೇ ಬಹುವಚನಂ ।

**ಪ್ರಯೋಗ—** ಪ್ರಣತಿರಭಸಧೂಲೀಬದ್ಧಶೋಭಾವಿಶೇಷೈಃ ಸಾಧುಜಾಲಾಂತರಾಪ್ತೈಃ ಸಮಯಂ ಉಪನತಂ ಸಂವೇದಯದ್ಭಿಃ ದಶಶತಕೇತೋಃ ಕೇತುಭಿಃ ವಯಸ್ಯೈಃ ಇವ ಶ್ರಾವಕಾಣಾಂ ಉಪಕೃತಿಮತ್ತಾ ದಧೇ (ಕರ್ಮಣಿ) ।

★ ★ ★

**ಅವತಾರಿಕಾ—** ಆಗ ಕೂಡಲೇ ಶಿಷ್ಯರೆಲ್ಲರೂ ಪಾಠ ಕೇಳುವುದಕ್ಕೆ ಸಿದ್ಧರಾದರು ಎಂದು ಹೇಳುತ್ತಾರೆ.

**ನಿಹಿತಮುಚಿತಮುಚ್ಚಂ ಯೋಗಪೀಠಂ ಪ್ರವಕ್ತುಃ**
**ಪರಿಷದಿ ಪರಿತೋಽಮೀ ಸತ್ವರಾಃ ಸತ್ತ್ವಭಾಜಃ ।**
**ದ್ರುತಮವಸಿತಕೃತ್ಯೈರ್ಧನ್ಯಸಂನ್ಯಾಸಿವರ್ಗೈಃ (ಸಂಘೈಃ)**
**ಶ್ರವಣಪರಮಕೃತ್ಯಾಯೋಪತಸ್ಥುಃ ಸಮೇತಾಃ ॥ 18 ॥**

**ಪದಚ್ಛೇದ—** ನಿಹಿತಂ, ಉಚಿತಂ, ಉಚ್ಚಂ, ಯೋಗಪೀಠಂ, ಪ್ರವಕ್ತುಃ, ಪರಿಷದಿ, ಪರಿತಃ, ಅಮೀ, ಸತ್ವರಾಃ, ಸತ್ತ್ವಭಾಜಃ, ದ್ರುತಂ, ಅವಸಿತಕೃತ್ಯೈಃ, ಧನ್ಯಸಂನ್ಯಾಸಿವರ್ಗೈಃ(ಸಂಘೈಃ), ಶ್ರವಣಪರಮಕೃತ್ಯಾಯ ಉಪತಸ್ಥುಃ, ಸಮೇತಾಃ ।

**ಅನ್ವಯ—** ಸತ್ವರಾಃ, ಸತ್ತ್ವಭಾಜಃ, ಅಮೀ, ದ್ರುತಂ, ಅವಸಿತಕೃತ್ಯೈಃ, ಧನ್ಯಸಂನ್ಯಾಸಿವರ್ಗೈಃ(ಸಂಘೈಃ), ಸಮೇತಾಃ, ಪರಿಷದಿ, ನಿಹಿತಂ, ಉಚಿತಂ, ಉಚ್ಚಂ, ಪ್ರವಕ್ತುಃ, ಯೋಗಪೀಠಂ, ಪರಿತಃ, ಶ್ರವಣಪರಮಕೃತ್ಯಾಯ, ಉಪತಸ್ಥುಃ ।

**ಅನ್ವಯಾರ್ಥ—**

**ಸತ್ವರಾಃ** = ಅವಸರಿಸುತ್ತಿರುವ (ವೇಗದಿಂದ ಕೂಡಿದ),
**ಸತ್ತ್ವಭಾಜಃ** = ಸಾತ್ತ್ವಿಕ ಗುಣವುಳ್ಳ,
**ಅಮೀ** = ಈ ಶಿಷ್ಯರು (ಶ್ರಾವಕರು=ಪಾಠ ಕೇಳುವವರು),
**ದ್ರುತಂ** = ಬೇಗನೆ,
**ಅವಸಿತಕೃತ್ಯೈಃ** = ಮುಗಿಸಿದ ಜಪಧ್ಯಾನಾದಿ ಕಾರ್ಯಗಳುಳ್ಳ,
**ಧನ್ಯಸಂನ್ಯಾಸಿವರ್ಗೈಃ(ಸಂಘೈಃ)** = ಪುಣ್ಯವಂತರಾದ ಯತಿಗಳ ಸಮೂಹಗಳಿಂದ,
**ಸಮೇತಾಃ** = ಸಹಿತರಾಗಿ,
**ಪರಿಷದಿ** = ಪ್ರವಚನದ ಸಭೆಯಲ್ಲಿ,
**ನಿಹಿತಂ** = ಇಡಲ್ಪಟ್ಟ,
**ಉಚಿತಂ** = ತಕ್ಕುದಾದ, (ಯೋಗ್ಯವಾದ)
**ಉಚ್ಚಂ** = ಎತ್ತರವಾದ,
**ಪ್ರವಕ್ತುಃ** = ಪ್ರವಚನ ಮಾಡಲಿರುವ ಶ್ರೀಮಧ್ವಾಚಾರ್ಯರ,
**ಯೋಗಪೀಠಂ ಪರಿತಃ** = ಯೋಗಾಸನದ ಸುತ್ತಲೂ,
**ಶ್ರವಣಪರಮಕೃತ್ಯಾಯ** = ಪಾಠವನ್ನು ಕೇಳುವುದು ಎಂಬ ಶ್ರೇಷ್ಠವಾದ ಕಾರ್ಯಕ್ಕೋಸ್ಕರ,
**ಉಪತಸ್ಥುಃ** = ಸಮೀಪದಲ್ಲಿ ಬಂದು ಕುಳಿತರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಶಿಷ್ಯರೆಲ್ಲರೂ ಪರಮಸಾತ್ತ್ವಿಕರು. ಶ್ರವಣದಲ್ಲಿ ಬಹಳ ಹೆಚ್ಚಾದ ಆಸಕ್ತಿಯುಳ್ಳವರು. ಅವರು ಪಾಠದ ಸಮಯವು ಸಮೀಪಿಸಿತೆಂದು ತಿಳಿದು ಬೇಗನೆ ಸ್ನಾನ ಜಪತರ್ಪಣ ಧ್ಯಾನಗಳೇ ಮೊದಲಾದ ಪ್ರಾತಃಕಾಲದ ಕಾರ್ಯಗಳನ್ನು ಮುಗಿಸಿದರು. ಅಷ್ಟರಲ್ಲಿ ಅನೇಕ ಸಂನ್ಯಾಸಿ ಶಿಷ್ಯರೂ ತಮ್ಮ ಪ್ರಾತರಾಹ್ನಿಕಗಳನ್ನು ಮುಗಿಸಿ ಶ್ರವಣಕ್ಕೆ ಸಿದ್ಧರಾಗಿದ್ದರು. ಪಾಠ ಹೇಳುವ ಸಭಾಮಂಟಪದಲ್ಲಿ ಯೋಗ್ಯವಾದ ಸ್ವಲ್ಪ ಎತ್ತರವಾದ ಯೋಗಾಸನವನ್ನು ತತ್ತ್ವೋಪದೇಶಕರಾದ ಶ್ರೀಮಧ್ವಾಚಾರ್ಯರಿಗಾಗಿ ಸಿದ್ಧಪಡಿಸಲಾಗಿತ್ತು. ಶಿಷ್ಯರೆಲ್ಲರೂ ಶ್ರೇಷ್ಠರಾದ ಸಂನ್ಯಾಸಿಗಳ ಸಮೂಹಗಳಿಂದ ಸಹಿತರಾಗಿ ಆಚಾರ್ಯರ ಯೋಗಾಸನದ ಸುತ್ತಲೂ ಶ್ರವಣವೆಂಬ ಶ್ರೇಷ್ಠ ಕಾರ್ಯಕ್ಕಾಗಿ ಸಮೀಪದಲ್ಲಿ ಕುಳಿತರು.

ವಿಗ್ರಹ—

**ಯೋಗಪೀಠಂ—** ಯೋಗಸ್ಯ ಪೀಠಂ ಯೋಗಪೀಠಂ ।
**ಸತ್ವರಾಃ—** ತ್ವರಯಾ ಸಹ ವರ್ತಂತೇ ಇತಿ ಸತ್ವರಾಃ ।
**ಸತ್ತ್ವಭಾಜಃ—** ಸತ್ತ್ವಂ ಭಜಂತೀತಿ ಸತ್ತ್ವಭಾಜಃ ।
**ಅವಸಿತಕೃತ್ಯಾಃ—** ಅವಸಿತಂ ಕೃತ್ಯಂ ಯೈಃ ತೇ ಅವಸಿತಕೃತ್ಯಾಃ ।
**ಧನ್ಯಸಂನ್ಯಾಸಿವರ್ಗೈಃ—** ಧನ್ಯಾಶ್ಚ ತೇ ಸಂನ್ಯಾಸಿನಶ್ಚ ಧನ್ಯಸಂನ್ಯಾಸಿನಃ, ಧನ್ಯಸಂನ್ಯಾಸಿನಾಂ ವರ್ಗಾಃ (ಸಂಘಾಃ) ಧನ್ಯಸಂನ್ಯಾಸಿವರ್ಗಾಃ ತೈಃ ।
**ಶ್ರವಣಪರಮಕೃತ್ಯಂ—** ಪರಮಂ ಚ ತತ್ ಕೃತ್ಯಂ ಚ ಪರಮಕೃತ್ಯಂ, ಶ್ರವಣಮೇವ ಪರಮಕೃತ್ಯಂ ಶ್ರವಣಪರಮಕೃತ್ಯಂ ತಸ್ಮೈ ।

**ಕ್ರಿಯಾಪದ— ಉಪತಸ್ಥುಃ** -ಉಪ+ತಸ್ಥುಃ, ತಸ್ಥೌ ತಸ್ಥತುಃ ತಸ್ಥುಃ, ತಸ್ಥಿಥ-ತಸ್ಥಾಥ ತಸ್ಥಥುಃ ತಸ್ಥ, ತಸ್ಥೌ ತಸ್ಥಿವ ತಸ್ಥಿಮ। ಉಪ ಉಪಸರ್ಗ ಷ್ಠಾ (ಸ್ಥಾ) ಗತಿನಿವೃತ್ತೌ ಲಿಟ್ ಅಕರ್ಮಕ ಪರಸ್ಮೈಪದ.

**ಕೋಶ ಮತ್ತು ವ್ಯಾಕರಣವಿಶೇಷ—** ಪೀಠಂ = ಮಣೆ, ಆಸನ, 'ವಿಷ್ಟರಃ ಪೀಠಮಾಸನಂ' ಅಮರ. 'ಯೋಗಪೀಠಂ ಪರಿತಃ' ಎಂಬಲ್ಲಿ ಯೋಗಪೀಠಂ ಎಂಬುದು ದ್ವಿತೀಯಾ ವಿಭಕ್ತಿಯಲ್ಲಿದೆ 'ಅಭಿತಃ ಪರಿತಃ ಸಮಯಾ ನಿಕಷಾ ಹಾ ಪ್ರತಿಯೋಗೇऽಪಿ' ಎಂಬ ವಾರ್ತಿಕದಿಂದ ದ್ವಿತೀಯಾ.

**ಪ್ರಯೋಗ—** ಸತ್ತ್ವರೈಃ ಸತ್ತ್ವಭಾಗ್ಭಿಃ ಅಮೀಭಿಃ (ಶ್ರಾವಕೈಃ) ದ್ರುತಂ ಅವಸಿತಕೃತ್ಯೈಃ ಧನ್ಯಸಂನ್ಯಾಸಿವರ್ಗೈಃ ಸಮೇತೈಃ ಪರಿಷದಿ ನಿಹಿತಂ ಉಚಿತಂ ಉಚ್ಚಂ ಪ್ರವಕ್ತುಃ ಯೋಗಪೀಠಂ ಪರಿತಃ ಶ್ರವಣಪರಮಕೃತ್ಯಾಯ ಉಪತಸ್ಥೇ (ಭಾವೇ) ।

★ ★ ★

**ಅವತಾರಿಕಾ—** ಪಾಠಕ್ಕೆ ಕುಳಿತುಕೊಂಡಿದ್ದ ಶಿಷ್ಯರು ತಮ್ಮೆದುರಿಗೆ ಬಿಡಿಸಿ ಇಟ್ಟುಕೊಂಡಿದ್ದ ತಾಳೇಗರಿಯ ಪುಸ್ತಕಗಳನ್ನು ವರ್ಣಿಸುತ್ತಾರೆ.

**ಬಭುರಮಲಗುಣಾನಾಂ ಶೋಭನಾಚ್ಛಾದನಾನಾಂ**
**ಮುರರಿಪುನಿಲಯಾನಾಂ ಹಂತ ವೈದಾಂತಿಕೀನಾಮ್ ।**
**(ವೇದಾಂತಿಕಾನಾಮ್)**
**ಸಪದಿ ಸುವಿವೃತಾನಾಮಂತರರ್ಥಾ ಧಿಯಾಂ ವಾ**
**ವಿವಿಧಕವಲಿಕಾನಾಂ ಸಂಚಯಾಃ ಪತ್ರಿಕಾಣಾಮ್ ॥ 19 ॥**

**ಪದಚ್ಛೇದ—** ಬಭುಃ, ಅಮಲಗುಣಾನಾಂ, ಶೋಭನಾಚ್ಛಾದನಾನಾಂ, ಮುರರಿಪುನಿಲಯಾನಾಂ, ಹಂತ, ವೈದಾಂತಿಕೀನಾಂ, ಸಪದಿ, ಸುವಿವೃತಾನಾಂ, ಅಂತಃ, ಅರ್ಥಾಃ, ಧಿಯಾಂ, ವಾ, ವಿವಿಧಕವಲಿಕಾನಾಂ, ಸಂಚಯಾಃ, ಪತ್ರಿಕಾಣಾಂ ।

**ಅನ್ವಯ—** ಅಮಲಗುಣಾನಾಂ, ಶೋಭನಾಚ್ಛಾದನಾನಾಂ, ಮುರರಿಪುನಿಲಯಾನಾಂ, ವೈದಾಂತಿಕೀನಾಂ (ವೇದಾಂತಿಕಾನಾಂ), ಸಪದಿ, ಸುವಿವೃತಾನಾಂ, ವಿವಿಧಕವಲಿಕಾನಾಂ, ಪತ್ರಿಕಾಣಾಂ, ಸಂಚಯಾಃ, ಅಮಲಗುಣಾನಾಂ, ಶೋಭನಾಚ್ಛಾದನಾನಾಂ, ಮುರರಿಪುನಿಲಯಾನಾಂ, ವೈದಾಂತಿಕೀನಾಂ (ವೇದಾಂತಿಕಾನಾಂ) ಸಪದಿ, ಸುವಿವೃತಾನಾಂ, ಅಂತಃ, ಧಿಯಾಂ, ಅರ್ಥಾಃ, ವಾ, ಬಭುಃ, ಹಂತ ।

**ಅನ್ವಯಾರ್ಥ—**

**ಅಮಲಗುಣಾನಾಂ** = ಸ್ವಚ್ಛವಾದ ಕಟ್ಟುವ ಹಗ್ಗ(ದಾರ)ಗಳುಳ್ಳ,
**ಶೋಭನಾಚ್ಛಾದನಾನಾಂ** = ಸುಂದರವಾದ (ಚೆನ್ನಾಗಿರುವ) ಸುತ್ತುವ ಬಟ್ಟೆಯುಳ್ಳ,
**ಮುರರಿಪುನಿಲಯಾನಾಂ** = ಶ್ರೀಕೃಷ್ಣನ ನಿವಾಸಸ್ಥಾನವಾಗಿರುವ(ಕೃಷ್ಣಸನ್ನಿಧಾನಪಾತ್ರವಾದ)
**ವೈದಾಂತಿಕೀನಾಂ** = ವೇದಾಂತಶಾಸ್ತ್ರಕ್ಕೆ ಸಂಬಂಧಪಟ್ಟ,
**ಸಪದಿ** = ಆಗ ತಾನೇ,
**ಸುವಿವೃತಾನಾಂ** = ರೇಷ್ಮೆ ವಸ್ತ್ರ ಮುಂತಾದ ಆವರಣವನ್ನು ತೆಗೆದು ತೆರೆಯಲ್ಪಟ್ಟ,
**ವಿವಿಧಕವಲಿಕಾನಾಂ** = ನಾನಾವಿಧವಾದ ಒಳಗಿನ ಪತ್ರಗಳುಳ್ಳ (ನಾನಾ ವಿಧವಾದ ಪುಸ್ತಕಗಳನ್ನು ಇಡುವುದಕ್ಕೆ ಬೇಕಾದ ದರ್ಭಾಸನವೇ (ದರ್ಭೆಯ ಚಾಪೆ ವ್ಯಾಸಪೀಠ) ಮೊದಲಾದ ಆಧಾರವುಳ್ಳ - ಛಲಾರಿಯ)
**ಪತ್ರಿಕಾಣಾಂ** = ತಾಳೆಗರಿಗಳ,
**ಸಂಚಯಾಃ** = ಸಮೂಹಗಳು,

**ಅಮಲಗುಣಾನಾಂ** = ನಿರ್ಮಲವಾದ ಜ್ಞಾನಭಕ್ತಿ ಮುಂತಾದ ಗುಣಗಳಿಂದ ಕೂಡಿದ,

**ಶೋಭನಾಚ್ಛಾದನಾನಾಂ** = ಅಯೋಗ್ಯರಿಗೆ ಭಗವಂತನ ಸ್ವರೂಪವನ್ನು ಉಪದೇಶಿಸದಿರುವುದು ಎಂಬ ಮನೋಹರವಾದ ಮರೆಮಾಚುವಿಕೆಯುಳ್ಳ,

**ಮುರರಿಪುನಿಲಯಾನಾಂ** = ಶ್ರೀಹರಿಯ ಆವಾಸವಾಗಿರುವ (ಶ್ರೀಕೃಷ್ಣ ವಿಷಯಕವಾದ ಅಂತಃಕರಣದಿಂದ ಹುಟ್ಟಿರುವ)

**ವೈದಾಂತಿಕೀನಾಂ** = ವೇದಾಂತಶಾಸ್ತ್ರಕ್ಕೆ ಸಂಬಂಧಪಟ್ಟ

(**ವೇದಾಂತಿಕಾನಾಂ** = ವೇದಾಂತಶಾಸ್ತ್ರವಿಚಾರ ಮಾಡುವವರಿಗೆ)

**ಸಪದಿ** = ಕೂಡಲೇ,

**ಸುವಿವೃತಾನಾಂ** = ದೂರ ಮಾಡಲ್ಪಟ್ಟ ಅಜ್ಞಾನಾವರಣವುಳ್ಳ,

**ಅಂತಃ** = ಅಂತಃಕರಣದಲ್ಲಿ ಪರಿಣಮಿಸಿದ,

**ಧಿಯಾಂ** = ಬುದ್ಧಿಗಳ,

**ಅರ್ಥಾಃ ವಾ** = ಅರ್ಥಗಳಂತೆ,

**ಬಭುಃ** = ಪ್ರಕಾಶಿಸಿದವು,

**ಹಂತ!** = ಆಹಾ ಎಂತಹ ಆನಂದವು!

ತಾತ್ಪರ್ಯ— ಸಜ್ಜನರ ಬುದ್ಧಿಗಳು ಜ್ಞಾನಭಕ್ತಿ ವೈರಾಗ್ಯಾದಿ ನಿರ್ಮಲಗುಣಗಳಿಂದ ಕೂಡಿರುತ್ತವೆ. ಅವರ ಬುದ್ಧಿಗಳು ಅಯೋಗ್ಯರಿಗೆ ಪರಮಾತ್ಮನನ್ನು ತಿಳಿಸದೆ ಗೋಪ್ಯವಾಗಿಡುತ್ತವೆ. ಅವರ ಬುದ್ಧಿಗಳು ಪರಮಾತ್ಮನಿಗೆ ಯಾವಾಗಲೂ ನೆಲೆಯಾಗಿರುತ್ತವೆ. ಪರಮಾತ್ಮನ ಧ್ಯಾನವನ್ನು ಮಾಡುತ್ತಾ ಇರುತ್ತವೆ. ಆ ಬುದ್ಧಿಗಳು ವೇದಾಂತ ವಿಷಯಗಳನ್ನೇ ಒಳಗೊಂಡಿರುತ್ತವೆ. ಆ ಬುದ್ಧಿಗಳಿಗೆ ಎಂದಿಗೂ ಅಜ್ಞಾನಾವರಣವಿರುವುದಿಲ್ಲ. ಇಂತಹ ಬುದ್ಧಿಗಳಲ್ಲಿ ಭಗವಂತನ ಸ್ವರೂಪದ ವಿಷಯಗಳು ಪ್ರಕಾಶಿಸುವಂತೆ ಪ್ರವಚನ ಸಮಯದಲ್ಲಿ ಶಿಷ್ಯರು ತಮ್ಮ ಎದುರು ತೆರೆದು ಇಟ್ಟುಕೊಂಡಿರುವ ತಾಳೆ ಓಲೆಗಳ ಪುಸ್ತಕಗಳು ಶೋಭಿಸಿದವು. ಆ ತಾಳೆ ಓಲೆಯ ಪುಸ್ತಕಗಳಲ್ಲಿ ಬುದ್ಧಿಗಳಲ್ಲಿರುವಂತೆ ಅಮಲಗುಣಗಳು ಅಂದರೆ ನಿರ್ಮಲವಾದ ಕಟ್ಟುವ ದಾರಗಳಿದ್ದವು. ಹಾಗೆಯೇ ಬುದ್ಧಿಗಳು ಅಯೋಗ್ಯರಿಂದ ರಹಸ್ಯವನ್ನು ಆಚ್ಛಾದಿಸಿ ಇಡುವಂತೆ ಈ ಪುಸ್ತಕಗಳಿಗೂ ಉತ್ತಮವಾದ ಆಚ್ಛಾದನಗಳು ಅಂದರೆ ಸುತ್ತುವ ವಸ್ತ್ರಗಳಿದ್ದವು. ಬುದ್ಧಿಗಳು ಶ್ರೀಹರಿಯ ವಿಷಯಕವಾಗಿ ಇರುವಂತೆ, ಈ ಪುಸ್ತಕಗಳೂ ವಿಷ್ಣುವಿಷಯದ ತತ್ತ್ವಾರ್ಥದ ಬರವಣಿಗೆಗಳನ್ನು ಒಳಗೊಂಡಿದ್ದವು. ಬುದ್ಧಿಗಳು ವೇದಾಂತ ವಿಚಾರಗಳನ್ನು ಒಳಗೊಂಡಿರುವಂತೆ ಪುಸ್ತಕಗಳೂ ವೇದಾಂತಶಾಸ್ತ್ರಕ್ಕೆ ಸಂಬಂಧಪಟ್ಟಿದ್ದವು. ಬುದ್ಧಿಗಳು ಅಜ್ಞಾನಾವರಣವನ್ನು ಸರಿಸುವಂತೆ ಈ ಪುಸ್ತಕಗಳ ಆವರಣಗಳೂ ಸರಿದಿದ್ದವು, ಅವು ತೆರೆದಿದ್ದವು. ಒಳಗೆ ಬಗೆಬಗೆಯ ಪತ್ರಗಳು ಅಲ್ಲಿ ರಾಜಿಸುತ್ತಿದ್ದವು. ಈ ಪುಸ್ತಕಗಳನ್ನು ವ್ಯಾಸಪೀಠ ದರ್ಭೆಯ ಚಾಪೆ ಮುಂತಾದ ಬೇರೆ ಬೇರೆ ರೀತಿಯ ಆಸನಗಳ ಮೇಲೆ ಇಡಲಾಗಿತ್ತು. ಇಂತಹ ಪುಸ್ತಕಗಳು ಅಂತಃಕರಣದ ಪರಿಣಾಮವಾದ ಬುದ್ಧಿಗಳಲ್ಲಿ ತೋರುವ ವಿಷಯಗಳು ಮೂರ್ತಿಮತ್ತಾಗಿ ರಾಜಿಸುವಂತೆ ರಾಜಿಸಿದವು. ಈ ದೃಶ್ಯವು ಬಹಳ ಆನಂದಕರವಾಗಿತ್ತು ಎಂದು ಶಿಷ್ಯರು ಪುಸ್ತಕಗಳನ್ನು ಬಿಡಿಸಿ ಇಟ್ಟು ಪಾಠ ಕೇಳುವುದಕ್ಕೆ ಕುಳಿತಾಗ ಕಾಣುವ ದೃಶ್ಯವನ್ನು ಇಲ್ಲಿ ವರ್ಣಿಸಿದ್ದಾರೆ. ಅಂತಃಕರಣದಲ್ಲಿರುವ ಬುದ್ಧಿಗಳಿಗೆ ವಿಷಯಗಳಾದ ಭಗವಂತನ ಸ್ವರೂಪಗಳಂತೆ ಪುಸ್ತಕಗಳ ಪತ್ರಗಳಿದ್ದವು ಎಂದು ಅಭಿಪ್ರಾಯ. ಗುರೂಪದೇಶದಿಂದ ಯೋಗ್ಯರು ತಮ್ಮ ಬುದ್ಧಿಶಕ್ತಿಯಿಂದ ಪರಮಾತ್ಮನ ಸ್ವರೂಪವನ್ನು ತಿಳಿದುಕೊಳ್ಳುತ್ತಾರೆ. ವಿದ್ಯೆಗಳೂ ಸಹ ಯೋಗ್ಯರಿಗಲ್ಲದೆ ಅಯೋಗ್ಯರಿಗೆ ಪರಮಾತ್ಮನ ಸ್ವರೂಪವನ್ನು ಪ್ರಕಟಗೊಳಿಸುವುದಿಲ್ಲವೆಂದು ಸೂಚಿತವಾಯಿತು.

ವಿಗ್ರಹ—

**ಅಮಲಗುಣಾನಾಂ**—(ಗ್ರಂಥಪಕ್ಷದಲ್ಲಿ)ಅಮಲಃ ಗುಣಃ ಯಾಸಾಂ ತಾಃ ಅಮಲಗುಣಾಃ (ಪತ್ರಿಕಾಃ) ತಾಸಾಂ ।

**ಅಮಲಗುಣಾನಾಂ**—(ಬುದ್ಧಿಪಕ್ಷದಲ್ಲಿ)ಅಮಲಾಃ ಗುಣಾಃ ಯಾಸಾಂ ತಾಃ ಅಮಲಗುಣಾಃ (ಧಿಯಃ) ತಾಸಾಂ ।

**ಶೋಭನಾಚ್ಛಾದನಾಂ**— ಶೋಭನಾನಿ ಆಚ್ಛಾದನಾನಿ ಯಾಸಾಂ ತಾಃ ಶೋಭನಾಚ್ಛಾದನಾಃ ತಾಸಾಂ। (ಬುದ್ಧಿಪಕ್ಷದಲ್ಲಿ)

**ಶೋಭನಾಚ್ಛಾದನಾಂ**— ಶೋಭನಸ್ಯ (ಶೋಭನಂ ಇತಿ ವಾ) ಆಚ್ಛಾದನಂ ಯಾಭಿಃ ತಾಃ ಶೋಭನಾ-ಚ್ಛಾದನಾಃ (ಧಿಯಃ) ತಾಸಾಂ ।

**ಮುರರಿಪುನಿಲಯಾನಾಂ**— ಮುರಸ್ಯ ರಿಪುಃ ಮುರರಿಪುಃ, ಮುರರಿಪೋಃ ನಿಲಯಾಃ ಮುರರಿಪುನಿಲಯಾಃ ತಾಸಾಂ । (ಈ ವಿಗ್ರಹವು ಎರಡು ಅರ್ಥಕ್ಕೂ ಸಮಾನ) ನಿಲಯ ಶಬ್ದವು ನಿತ್ಯ ಪುಲ್ಲಿಂಗವು.

**ವೈದಾಂತಿಕೀನಾಂ**— ವವೇದಾಂತಃ ಪ್ರಯೋಜನಂ ಯಾಸಾಂ ತಾಃ ವೈದಾಂತಿಕ್ಯಃ ತಾಸಾಂ । ''ಪ್ರಯೋಜನಂ'' ಎಂಬ ಸೂತ್ರದಿಂದ ಠಕ್, 'ಠ'ಕ್ಕೆ ಇಕ ಆದೇಶ. ಸ್ತ್ರೀ ಲಿಂಗದಲ್ಲಿ ಜೀಷ್, ವೈದಾಂತಿಕಾನಾಂ ಎಂಬ ಪಾಠವೂ ಇಲ್ಲಿದೆ. ಆ ಪಕ್ಷದಲ್ಲಿ ವಿಗ್ರಹವು ಹೀಗೆಯೇ. ವೇದಾಂತ ವಿಚಾರಪರರಾದ ಪುರುಷರಿಗೆ ಎಂದು ಅರ್ಥ. ಛಲಾರಿಯದಲ್ಲಿ ವೇದಾಂತಕೀನಾಂ ಎಂದು ಪಾಠವಿದೆ. 'ವೇದಾಂತಾನಾಂ ಸಂಬಂಧಿನ್ಯಃ ವೇದಾಂತಕ್ಯಃ ತಾಸಾಂ' ಲಿಖಿತವೇದಾಂತ ಶಾಸ್ತ್ರಾಣಾಂ ಇತಿ ಯಾವತ್ ಬರೆದಿರುವ ವೇದಾಂತ ಶಾಸ್ತ್ರಗಳ ಎಂದು ತಾತ್ಪರ್ಯ ಎಂದು ಕೊಟ್ಟಿದ್ದಾರೆ. ಈ ವಿಗ್ರಹವೂ, ಇಲ್ಲಿಯ ಪ್ರತ್ಯಯವೂ ಯಾವುದೆಂದು ಸ್ಪಷ್ಟವಾಗುತ್ತಿಲ್ಲ

**ಸುವಿವೃತಾನಾಂ**— ಸುಷ್ಠು ವಿವೃತಾಃ ಸುವಿವೃತಾಃ ತಾಸಾಂ, (ಬುದ್ಧಿಪಕ್ಷದಲ್ಲಿ) ಸು ಸುಷ್ಠು ನಿರಸ್ತಂ ವೃತಂ ಆಚ್ಛಾದನಂ ಯಾಸಾಂ ತಾಸಾಂ.

**ವಿವಿಧಕವಲಿಕಾನಾಂ**— ವಿವಿಧಾಃ ಕವಲಿಕಾಃ ಯಾಸಾಂ ತಾಃ ವಿವಿಧಕವಲಿಕಾಃ ತಾಸಾಂ, ಸಂಚಯಾಃ = ಸಂಪುಟಾನಿ, ಸಂಚಯವೆಂದರೆ ಸಂಪುಟಗಳು ಎಂದು ಛಲಾರಿಯದಲ್ಲಿ ಅರ್ಥ ಬರೆದಿರುತ್ತಾರೆ.

**ಕ್ರಿಯಾಪದ— ಬಭುಃ** - ಬಭೌ ಬಭತುಃ ಬಭುಃ, ಬಭಿಥ-ಬಭಾಥ ಬಭಥುಃ ಬಭ, ಬಭೌ ಬಭಿವ ಬಭಿಮ । ಭಾದೀಪ್ತೌ ಅಕರ್ಮಕ ಪರಸ್ಮೈಪದ ಲಿಟ್ ।

**ಕೋಶ**— ಆಚ್ಛಾದನಂ = ಬಟ್ಟೆ 'ವಸ್ತ್ರಮಾಚ್ಛಾದನಂ ವಾಸಃ' ಅಮರ, ವಾ = ಅಂತೆ, 'ಉಪಮಾಯಾಂ ವಿಕಲ್ಪೇ ವಾ' ಅಮರ ।

**ಪ್ರಯೋಗ**— ಅಮಲಗುಣಾನಾಂ ಪತ್ರಿಕಾಣಾಂ ಸಂಚಯೈಃ ಅಂತಃ ಧಿಯಾಂ ಅರ್ಥೈಃ ವಾ ಬಭೇ, ಹಂತ (ಭಾವೇ)

★ ★ ★

**ಅವತಾರಿಕಾ**— ಆ ಓಲೆ ಪುಸ್ತಕಗಳ ಅಕ್ಷರಗಳನ್ನು ವರ್ಣಿಸುತ್ತಾರೆ.

**ಅನತಿವಿರಲಭಾವಾ ಅಪ್ಯನನ್ಯೋನ್ಯಸಂಗಾ**
**ಋಜುತರತತನಾನಾಪಂಕ್ತಿಸಾಮ್ಯಾಪ್ತಶೋಭಾಃ ।**
**ದ್ವಿರದತುರಗದೇಶ್ಯಾ ದೂರತೋ ವರ್ಜಿತಾಂತಾಃ**
**ಕುಶಲಲಿಖಿತರೂಪಾ ರೇಜಿರೇ ತೇಷು(ತತ್ರ) ವರ್ಣಾಃ ॥ 20 ॥**

**ಪದಚ್ಛೇದ**— ಅನತಿವಿರಲಭಾವಾಃ, ಅಪಿ, ಅನನ್ಯೋನ್ಯಸಂಗಾಃ, ಋಜುತರತತನಾನಾಪಂಕ್ತಿಸಾಮ್ಯಾಪ್ತಶೋಭಾಃ, ದ್ವಿರದತುರಗದೇಶ್ಯಾಃ, ದೂರತಃ, ವರ್ಜಿತಾಂತಾಃ, ಕುಶಲಲಿಖಿತರೂಪಾಃ, ರೇಜಿರೇ, ತೇಷು, ವರ್ಣಾಃ ।

**ಅನ್ವಯ—** ತೇಷು (ತತ್ರ), ಅನತಿವಿರಲಭಾವಾಃ, ಅಪಿ, ಅನನ್ಯೋನ್ಯಸಂಗಾಃ, ಋಜುತರತತನಾನಾಪಂಕ್ತಿಸಾಮ್ಯಾಪ್ತ ಶೋಭಾಃ, ದೂರತಃ, ವರ್ಜಿತಾಂತಾಃ, ಕುಶಲಲಿಖಿತರೂಪಾಃ, ವರ್ಣಾಃ, ದ್ವಿರದತುರಗದೇಶ್ಯಾಃ, ರೇಜಿರೇ ।

**ಅನ್ವಯಾರ್ಥ—**

**ತೇಷು** = ಆ ಪತ್ರದಲ್ಲಿ

**ಅನತಿವಿರಲಭಾವಾಃ ಅಪಿ** = ಹೆಚ್ಚು ವಿರಲತೆ ಇಲ್ಲದಿದ್ದಾಗ್ಯೂ (ಅತಿದೂರವಿಲ್ಲದಿದ್ದಾಗ್ಯೂ, ಹೆಚ್ಚು ಎಡೆಬಿಡದೆ ಬರೆದಿರುವವುಗಳಾದರೂ),

**ಅನನ್ಯೋನ್ಯಸಂಗಾಃ** = ಒಂದಕ್ಕೊಂದು ಸೇರದೇ ಇರುವ (ತಗಲದಿರುವ),

**ಋಜುತರ, ತತ, ನಾನಾಪಂಕ್ತಿ, ಸಾಮ್ಯಾಪ್ತಶೋಭಾಃ** = ಬಹಳ ನೇರವಾಗಿರುವ, ಮುಂದಕ್ಕೆ ಹರಡಿರುವ, ಅನೇಕ ಸಾಲುಗಳ, ಹೋಲಿಕೆಯಿಂದ ಹೊಂದಲ್ಪಟ್ಟ ಕಾಂತಿಗಳುಳ್ಳ,

**ದೂರತಃ** = ದೂರದಿಂದ

**ವರ್ಜಿತಾಂತಾಃ** = ಅಂಚುಗಳನ್ನು ಬಿಟ್ಟಿರುವ,

**ಕುಶಲಲಿಖಿತರೂಪಾಃ** = ಬುದ್ಧಿವಂತರಿಂದ ಬರೆಯಲ್ಪಟ್ಟ ಸ್ವರೂಪಗಳುಳ್ಳ,

**ವರ್ಣಾಃ** = ಅಕ್ಷರಗಳು

**ದ್ವಿರದತುರಗದೇಶ್ಯಾಃ** = ಆನೆ ಕುದುರೆಗಳ ಆಕೃತಿಗಳಿಗೆ ಸಮಾನವಾದ ಆಕೃತಿಗಳುಳ್ಳವುಗಳಾಗಿ,

**ರೇಜಿರೇ** = ಪ್ರಕಾಶಿಸಿದುವು.

**ತಾತ್ಪರ್ಯ—** ಆ ತಾಳೆಪತ್ರಗಳಲ್ಲಿರುವ ಅಕ್ಷರಗಳನ್ನು ಬಹಳ ದೂರ ದೂರ ಸ್ಥಳ ಬಿಟ್ಟು ವಿರಳವಾಗಿ ಬರೆದಿರಲಿಲ್ಲ. ಅಲ್ಲಿರುವ ಅಕ್ಷರಗಳು ಎಡೆಬಿಡದಂತೆ ಕಂಡು ಬರುತ್ತಿದ್ದರೂ, ಒಂದಕ್ಕೊಂದು ತಗಲಿಕೊಂಡಿರಲಿಲ್ಲ. ಪಂಕ್ತಿಗಳೆಲ್ಲವೂ ನೆಟ್ಟಗಿದ್ದವು. ಮುಂದೆ ಮುಂದೆ ವ್ಯಾಪಿಸುತ್ತಾ ಹೋಗಿದ್ದವು. ಹೀಗೆ ಇದ್ದ ಅನೇಕ ಪಂಕ್ತಿಗಳು ಪರಸ್ಪರ ಹೊಂದಾಣಿಕೆಯಿಂದ ಶೋಭಿಸುತ್ತಿದ್ದವು. ಆ ಪತ್ರಗಳ ಎಡಬಲದ ಅಂಚುಗಳು ಮತ್ತು ಮೇಲೆ ಕೆಳಗೆ ಸ್ಥಳವನ್ನು ಬಿಟ್ಟಿದ್ದರು. ಇಂತಹ ಅಕ್ಷರಗಳನ್ನು ಒಳ್ಳೆಯ ಬುದ್ಧಿವಂತರು ಬರೆದಿದ್ದರು. ಕೆಲವು ಪತ್ರಗಳಲ್ಲಿ ಅಲ್ಲಲ್ಲಿ ಅಕ್ಷರಗಳು ಸ್ವಲ್ಪ ದೊಡ್ಡದಾಗಿ ಆನೆಗಳ ಆಕೃತಿಯುಳ್ಳವು ಗಳಾಗಿದ್ದವು. ಅವುಗಳು ಗಜಲಿಪಿಗಳು, ಕೆಲವು ಅಕ್ಷರಗಳು ಕುದುರೆಗಳ ಆಕೃತಿ ಉಳ್ಳವುಗಳಾಗಿದ್ದುವು. ಇಂತಹ ಚಿಕ್ಕ ಅಕ್ಷರಗಳು ಅಲ್ಲಿದ್ದವು. ಮೂಲ, ಪ್ರತೀಕಗಳ ಅಕ್ಷರಗಳು ಗಜಲಿಪಿಯಲ್ಲಿಯೂ, ವ್ಯಾಖ್ಯಾನದ ಅಕ್ಷರಗಳು ತುರಗ ಲಿಪಿಯಲ್ಲಿಯೂ ಇದ್ದವು. ಹೀಗೆ ಆ ಪುಸ್ತಕಗಳ ಅಕ್ಷರಗಳು ಶೋಭಿಸಿದವು ಎಂದು ಭಾವವು. ಪುಸ್ತಕಗಳ ಹಾಳೆಗಳಲ್ಲಿನ ಅಕ್ಷರಗಳನ್ನು ವರ್ಣಿಸಿರುವ ಈ ಪದ್ಯವು ಬಹಳ ಚಮತ್ಕಾರವಾಗಿದೆ.

**ವಿಗ್ರಹ—**

**ಅನತಿವಿರಲಭಾವಾಃ—** ಅತ್ಯಂತಂ ವಿರಲಭಾವಃ ಅತಿವಿರಲಭಾವಃ, ನ ವಿದ್ಯತೇ ಅತಿವಿರಲಭಾವಃ ಯೇಷಾಂ ತೇ ಅನತಿವಿರಲಭಾವಾಃ ।

**ಅನನ್ಯೋನ್ಯಸಂಗಾಃ—** ಅನ್ಯೋನ್ಯಂ ಸಂಗಃ ಅನ್ಯೋನ್ಯಸಂಗಃ, ನ ವಿದ್ಯತೇ ಅನ್ಯೋನ್ಯಸಂಗಃ ಯೇಷಾಂ ತೇ ಅನನ್ಯೋನ್ಯಸಂಗಾಃ ।

**ಋಜುತರತತನಾನಾಪಂಕ್ತಿಸಾಮ್ಯಾಪ್ತಶೋಭಾಃ—** ಅತಿಶಯೇನ ಋಜವಃ ಋಜುತರಾಃ, ಋಜುತರಾಶ್ಚ ತಾಃ ತತಾಶ್ಚ ಋಜುತರತತಾಃ, ಋಜುತರತತಾಶ್ಚ ತಾಃ ನಾನಾಪಂಕ್ತಯಶ್ಚ ಋಜುತರತತನಾನಾಪಂಕ್ತಯಃ, ಸಮಾನಾಂ ಭಾವಃ ಸಾಮ್ಯಂ ಋಜುತರತತನಾನಾಪಂಕ್ತೀನಾಂ ಸಾಮ್ಯಂ, ಋಜುತರತತನಾನಾಪಂಕ್ತಿ ಸಾಮ್ಯಂ, ಋಜುತರತತನಾನಾಪಂಕ್ತಿಸಾಮ್ಯೇನ ಆಪ್ತಾಶೋಭಾ ಯೇಷಾಂ ತೇ ಋಜುತರತತನಾನಾ ಪಂಕ್ತಿಸಾಮ್ಯಾಪ್ತಶೋಭಾಃ ।

**ದ್ವಿರದತುರಗಾಃ—** ದ್ವಿರದಾಶ್ಚ ತುರಗಾಶ್ಚ ದ್ವಿರದತುರಗಾಃ, ದ್ವಿರಗತುರಗದೇಶ್ಯಾಃ = ಆನೆ ಕುದುರೆಗಳ ಆಕೃತಿಯಂತೆ ಆಕೃತಿಯುಳ್ಳವುಗಳು (ತುರಗದೇಶ್ಯಾಃ ತುರಗಕಲ್ಪಾಃ, ''ಈಷದಸಮಾಪ್ತೌ ಕಲ್ಪಪ್‌ದೇಶ್ಯ ದೇಶೀಯರಃ'' ಇತಿ (ಭಾವಪ್ರಕಾಶಿಕಾ), ಇಲ್ಲಿ ದೇಶ್ಯಪ್ರತ್ಯಯ. 'ವರ್ಜಿತಃ ಅಂತಃ ಯ್ಯೈಃ ತೇ ವರ್ಜಿತಾಂತಾಃ' ।

**ಕುಶಲಲಿಖಿತರೂಪಾಃ—** ಕುಶಲೈಃ ಲಿಖಿತಾನಿ ರೂಪಾಣಿ ಯೇಷಾಂ ತೇ ಕುಶಲಲಿಖಿತರೂಪಾಃ ।

**ಕ್ರಿಯಾಪದ—** ರೇಜಿರೇ - ರೇಜೇ ರೇಜಾತೇ ರೇಜಿರೇ, ರೇಜಿಷೇ ರೇಜಾಥೇ - ಇತ್ಯಾದಿ, ರಾಜೃದೀಪ್ತೌ ಆತ್ಮನೇಪದಿ ಲಿಟ್.

**ಕೋಶ—** ವರ್ಣ = ಅಕ್ಷರ, 'ವರ್ಣೋ ದ್ವಿಜಾದೌ ಶುಕ್ಲಾದೌ ಯಶೋಗುಣಕಥಾಸು ಚಃ' 'ಅಕ್ಷರೇ ಗುಣಭೇದೇ ಚ ಸ್ವರ್ಣೇ ಯಜ್ಞೇ ವಿಲೇಪನೇ' ವಿಶ್ವ ಅಂತ = ಅಂಚು, ಕೊನೆ.

**ಪ್ರಯೋಗ—** ತೇಷು ಅನತಿವಿರಲಭಾವೈಃ ಅಪಿ ಅನನ್ಯೋನ್ಯಸಂಗೈಃ ಋಜುತರತತನಾನಾಪಂಕ್ತಿಸಾಮ್ಯಾಪ್ತಶೋಭೈಃ ದೂರತಃ ವರ್ಜಿತಾಂತ್ಯೈಃ ಕುಶಲಲಿಖಿತರೂಪೈಃ ವರ್ಣೈಃ ದ್ವಿರದತುರಗದೇಶ್ಯೈಃ ರೇಜೇ (ಭಾವೇ) ।

★ ★ ★

**ಅವತಾರಿಕಾ—** ಶಿಷ್ಯರು ಪಾಠ ಕೇಳಲು ಪ್ರಾರಂಭ ಮಾಡಿದ ರೀತಿಯನ್ನು ವರ್ಣಿಸುತ್ತಾರೆ.

**ಸಪದಿ (ಝುಟಿತಿ)ದದೃಶುರೇಕೇ ವಾಚನೀಯಾದಿಭಾಗಂ**
**ಪರಿಚಯಪಟುತಾಭ್ಯಾಂ ತಾವದೇಕೇ ಚಿರೇಣ ।**
**ಹರಿಗುರುನಮನಂ ದ್ರಾಗ್ ಯತ್ನತೋಽಮೀ ವಿಧಾಯ**
**ಪ್ರಯಯುರಪರಸಾಮ್ಯಂ ಸಿದ್ಧಯೇ ಸ್ಯಾದ್ಧಿ ಯತ್ನಃ ॥ 21 ॥**

**ಪದಚ್ಛೇದ—** ಸಪದಿ (ಝುಟತಿ), ದದೃಶುಃ, ಏಕೇ, ವಾಚನೀಯಾದಿಭಾಗಂ, ಪರಿಚಯಪಟುತಾಭ್ಯಾಂ, ತಾವತ್, ಏಕೇ, ಚಿರೇಣ, ಹರಿಗುರುನಮನಂ, ದ್ರಾಕ್, ಯತ್ನತಃ, ಅಮೀ, ವಿಧಾಯ, ಪ್ರಯಯುಃ, ಅಪರಸಾಮ್ಯಂ, ಸಿದ್ಧಯೇ, ಸ್ಯಾತ್, ಹಿ, ಯತ್ನಃ ।

**ಅನ್ವಯ—** ಏಕೇ, ವಾಚನೀಯಾದಿಭಾಗಂ, ಪರಿಚಯಪಟುತಾಭ್ಯಾಂ, ಸಪದಿ, ದದೃಶುಃ, ತಾವತ್, ಏಕೇ, ಚಿರೇಣ, ದದೃಶುಃ, ಅಮೀ, ಯತ್ನತಃ, ಹರಿಗುರುನಮನಂ, ದ್ರಾಗ್, ವಿಧಾಯ, ಅಪರಸಾಮ್ಯಂ, ಪ್ರಯಯುಃ, ಸಿದ್ಧಯೇ, ಯತ್ನಃ, ಸ್ಯಾತ್, ಹಿ ।

**ಅನ್ವಯಾರ್ಥ—**

**ಏಕೇ** = ಕೆಲವು ಮಂದಿ ಶಿಷ್ಯರು,
**ವಾಚನೀಯಾದಿಭಾಗಂ** = ಆ ದಿನ ಓದಬೇಕಾಗಿರುವ ಪಾಠದ ಪ್ರಾರಂಭದ ಅಂಶವನ್ನು,
**ಪರಿಚಯಪಟುತಾಭ್ಯಾಂ** = ಅಭ್ಯಾಸದಿಂದ ಉಂಟಾದ ತಿಳುವಳಿಕೆ ಮತ್ತು ಚುರುಕುತನದಿಂದ,
**ಸಪದಿ** = ಕೂಡಲೇ,
**ದದೃಶುಃ** = ನೋಡಿದರು.
**ತಾವತ್** = ಆಗ,
**ಏಕೇ** = ಮತ್ತೆ ಕೆಲವರು,

**ಚಿರೇಣ** = ಬಹಳ ಹೊತ್ತಿನ ಮೇಲೆ (ವಾಚನೀಯಾದಿಭಾಗಂ = ಆ ದಿನ ಓದಬೇಕಾದ ಪಾಠದ ಆದಿ ಭಾಗವನ್ನು)

**ದದೃಶುಃ** = ನೋಡಿದರು.

**ಅಮೀ** = (ಓದಬೇಕಾದ ಪಾಠದ ಭಾಗವನ್ನು ತಡವಾಗಿ ಕಂಡವರು) ಇವರು,

**ಯತ್ನತಃ** = ಪ್ರಯತ್ನದಿಂದ,

**ಹರಿಗುರುನಮನಂ** = ದೇವತೆಯಾದ ಶ್ರೀಹರಿಯ ಮತ್ತು ಗುರುಗಳ (ಶ್ರೀಮಧ್ವಾಚಾರ್ಯರ) ನಮಸ್ಕಾರವನ್ನು,

**ದ್ರಾಕ್** = ಬೇಗನೇ,

**ವಿಧಾಯ** = ಮಾಡಿ,

**ಅಪರಸಾಮ್ಯಂ** = ಬೇಗನೆ ಪಾಠವನ್ನು ನೋಡಿದ ಇತರರ ಸಮಕಕ್ಷತೆಯನ್ನು,

**ಪ್ರಯಯುಃ** = ಹೊಂದಿದರು,

**ಯತ್ನಃ** = ಪ್ರಯತ್ನವು,

**ಸಿದ್ಧಯೇ** = ಕಾರ್ಯದಲ್ಲಿ ವಿಜಯಕ್ಕೋಸ್ಕರ,

**ಸ್ಯಾತ್ ಹಿ** = ಆಗಿಯೇ ಆಗುತ್ತದೆಯಷ್ಟೆ.

**ತಾತ್ಪರ್ಯ**— ಕೆಲವು ಮಂದಿ ಶಿಷ್ಯರು ಆ ದಿನ ಓದಬೇಕಾಗಿರುವ ಗ್ರಂಥದ ಪ್ರಾರಂಭ ಭಾಗವನ್ನು, ಅಭ್ಯಾಸಬಲ ಮತ್ತು ಬುದ್ಧಿ ಚಾತುರ್ಯಗಳಿಂದ ಕೂಡಲೇ ಕಂಡುಕೊಂಡರು. ಮತ್ತೆ ಕೆಲವರು ನಿಧಾನವಾಗಿ ಆ ದಿನ ಓದಬೇಕಾಗಿರುವ ಹಿಂದಿನ ದಿನ ಓದಿ ನಿಲ್ಲಿಸಿದ ಭಾಗದ ಮುಂದಿನ ಭಾಗವನ್ನು ಕಂಡುಹಿಡಿದರು. ಹೀಗೆ ಕೆಲವರು ಓದಬೇಕಾದ ಭಾಗವನ್ನು ಬೇಗನೆ ಕಂಡುಹಿಡಿದರು. ಕೆಲವರು ತಡವಾಗಿ ಕಂಡುಹಿಡಿದರು. ಹೀಗಿದ್ದರೂ ವಿಳಂಬದಿಂದ ಕಂಡುಹಿಡಿದ ಶಿಷ್ಯರು ಹರಿ ನಮಸ್ಕಾರ, ಗುರುನಮಸ್ಕಾರಗಳನ್ನು ಬೇಗನೇ ಮಾಡಿ, ಬೇಗನೇ ಪಾಠ ಭಾಗವನ್ನು ಕಂಡವರ ಸಮತೆಯನ್ನು ಹೊಂದಿದರು. ಹೀಗೆ ಒಂದರಲ್ಲಿ ಹಿಂದೆ ಬಿದ್ದವರು ಮತ್ತೊಂದರಲ್ಲಿ ಮುಂದಾಗಿ, ಹಿಂದೆ ಮುಂದಿದ್ದವರ ಸಾಲಿನಲ್ಲಿ ಸರಿಸಮನಾಗಿ ಬಂದರು. ಇದು ಯುಕ್ತವೇ ಸರಿ. ಏಕೆಂದರೆ ದೇಶಕಾಲೋಚಿತವಾಗಿ ಮಾಡಿದ ಪ್ರಯತ್ನವು ಸರಿಯಾದ ಫಲವನ್ನು ಕೊಟ್ಟೇ ತೀರುತ್ತದೆಯಷ್ಟೆ. ಸರಿಯಾದ ಪ್ರಯತ್ನ ಮಾಡಿದರೆ ಫಲಪ್ರಾಪ್ತಿಯು ಆಗಿಯೇ ಆಗುತ್ತದೆ. ಆದರೆ ಪ್ರಯತ್ನ ಮಾಡದೆ ಫಲವಾಗಲಾರದು. ಸರಿಯಾದ ಪ್ರಯತ್ನ ಮಾಡಿದರೆ ಫಲವಾಗದೆಯೂ ಇರುವುದಿಲ್ಲ (ಅರ್ಥಾಂತರ ನ್ಯಾಸಾಲಂಕಾರ).

ವಿಗ್ರಹ—

**ವಾಚನೀಯಾದಿಭಾಗಃ**— ವಾಚಯಿತುಂ ಯೋಗ್ಯಃ ವಾಚನೀಯಃ, ಆದಿಶ್ಚಾಸೌ ಭಾಗಶ್ಚ ಆದಿಭಾಗಃ, ವಾಚನೀಯಸ್ಯ ಆದಿಭಾಗಃ ವಾಚನೀಯಾದಿಭಾಗಃ ತಂ ।

**ಪರಿಚಯಪಟುತಾಭ್ಯಾಂ**— ಪಟೋಃ ಭಾವಃ ಪಟುತಾ, ಪರಿಚಯಶ್ಚ ಪಟುತಾ ಚ ಪರಿಚಯಪಟುತೇ ತಾಭ್ಯಾಂ । (ಪರಿಚಯಃ = ಗ್ರಂಥವಿಷಯಶ್ರವಣಮನನಾದಿರೂಪಾಭ್ಯಾಸಃ, ಹಿಂದಿನ ಗ್ರಂಥವನ್ನು ಚೆನ್ನಾಗಿ ಕೇಳಿ ಓದಿ, ಚಿಂತನೆ ಮಾಡಿರುವುದು ಮುಂತಾದ ಅಭ್ಯಾಸ, ಏಕೇ = ಕೆಲವರು, 'ಏಕೇ ಮುಖ್ಯಾನ್ಯಕೇವಲಾಃ' ಅಮರ) ।

**ಹರಿಗುರುನಮನಂ**— ಹರಿಶ್ಚ ಗುರುಶ್ಚ ಹರಿಗುರೂ, ಹರಿಗುರ್ವೋಃ ನಮನಂ ಹರಿಗುರುನಮನಂ ತತ್ ।

**ಸಾಮ್ಯಂ**— ಸಮಾನಾಂ ಭಾವಃ ಸಾಮ್ಯಂ ।

ಅಪರಸಾಮ್ಯಂ— ಅಪರೇಷಾಂ ಸಾಮ್ಯಂ ಅಪರಸಾಮ್ಯಂ ತತ್ । (ಝುಟತಿ = ಬೇಗನೇ, ಸಪದಿ = ಕೂಡಲೇ, 'ಸ್ಯಾತ್ ಝುಟಿತ್ಯಂಜಸಾಹ್ನಾಯ ದ್ರಾಕ್ ಮಂಕ್ಷು ಸಪದಿ ದ್ರುತೇ' ಅಮರ)

**ವ್ಯಾಕರಣವಿಶೇಷ—** ವಾಚನೀಯಾದಿಭಾಗದರ್ಶನೇ ಸಾಮ್ಯಸಂಪಾದನಾಸಮರ್ಥತ್ವಾತ್ ನಮಸ್ಕಾರಂ ಕೃತ್ವಾ ತತ್ರ ಸಾಮ್ಯಂ ಪ್ರಾಪುಃ ಇತಿ ಭಾವಃ. ಯದ್ವಾ ವಿಲಂಬೇನ ದ್ರಷ್ಟಾರಃ ಶೀಘ್ರದ್ರಷ್ಟಪೇಕ್ಷಯಾ ಪೂರ್ವಮೇವ ಮಹೋದ್ಯೋಗೇನ ನಮನಂ ಕೃತ್ವಾ ವಾಚನೀಯಾದಿಭಾಗಜ್ಞಾನಂ ಸಂಪಾದ್ಯ ವಾಚನವಿಷಯೇ ಸಾಮ್ಯಂ ಪ್ರಾಪುಃ ಇತ್ಯರ್ಥಃ । (ಛಲಾರಿಯ)

ಆ ದಿನ ಪಾಠವಾಗಬೇಕಾಗಿದ್ದ ಗ್ರಂಥದ ಭಾಗವನ್ನು ನೋಡುವ ವಿಷಯದಲ್ಲಿ ಇತರರ ಸಮತೆಯನ್ನು ಹೊಂದ-ಲಾರದವರು ಹರಿಗುರು ನಮಸ್ಕಾರವನ್ನು ಬೇಗನೆ ಮಾಡಿ ಆ ವಿಷಯದಲ್ಲಿ ಇತರರ ಸಾಮ್ಯವನ್ನು ಹೊಂದಿದರು ಎಂದು ಅಭಿಪ್ರಾಯ. ಅಥವಾ ತಡವಾಗಿ ಓದಬೇಕಾದ ಭಾಗವನ್ನು ಕಂಡುಹಿಡಿದವರು ಬೇಗನೇ ನೋಡಿದವರಿಗಿಂತ ಮೊದಲೇ ಹೆಚ್ಚಾದ ಪ್ರಯತ್ನದಿಂದ ಹರಿಗುರು ನಮಸ್ಕಾರಗಳನ್ನು ಮಾಡಿ ಅನಂತರ ಆ ದಿನ ಓದಬೇಕಾದ ಗ್ರಂಥದ ಆದಿಭಾಗದ ಜ್ಞಾನವನ್ನು ಪಡೆದು, ಓದುವ ವಿಷಯದಲ್ಲಿ ಇತರರ ಸಾಮ್ಯವನ್ನು ಪಡೆದರು ಎಂದು ಅಭಿಪ್ರಾಯ. ಯತ್ನಃ ಸಿದ್ಧಯೇ ಸ್ಯಾತ್ ಹಿ = ದೇಶಕಾಲೋಚಿತವಾದ ಪ್ರಯತ್ನವು ಅಭೀಷ್ಟ ಸಿದ್ಧಿಗೆ ಕಾರಣವಾಗಿಯೇ ಆಗುತ್ತದೆಯಷ್ಟೇ, ಅಭೀಷ್ಟ ಸಿದ್ಧಿಯಾಗಬೇಕಾದರೆ ಪ್ರಯತ್ನವು ಬೇಕೇ ಬೇಕಷ್ಟೆ. ಈ ರೀತಿ ಇಲ್ಲಿ ಎರಡೂ ವಿಧವಾಗಿ ಯೋಜನೆಯನ್ನು ಮಾಡಿಕೊಳ್ಳ ಬಹುದು.

**ಕ್ರಿಯಾಪದ—** ದದೃಶುಃ- ದದರ್ಶ ದದೃಶತುಃ ದದೃಶುಃ, ದದರ್ಶಿಥ-ದದ್ರಷ್ಠ ದದೃಶಥುಃ ದದೃಶ, ದದರ್ಶ ದದೃಶಿವ ದದೃಶಿಮ । ದೃಶಿರ್ ಪ್ರೇಕ್ಷಣೇ ಪರಸ್ಮೈ ಲಿಟ್. ಸ್ಯಾತ್ - ಸ್ಯಾತ್ ಸ್ಯಾತಾಂ ಸ್ಯುಃ ಇತ್ಯಾದಿ, ಅಸಭುವಿ ಪರಸ್ಮೈ ಅಕರ್ಮಕ ವಿಧಿಲಿಙ್ ।

**ಪ್ರಯೋಗ—** ಏಕೈಃ ವಾಚನೀಯಾದಿಭಾಗಃ ಪರಿಚಯಪಟುತಾಭ್ಯಾಂ ಸಪದಿ (ಝುಟತಿ) ದದೃಶೇ, ತಾವತ್ ಏಕೈಃ ಚಿರೇಣ (ವಾಚನೀಯಾದಿ ಭಾಗಃ) ದದೃಶೇ, ಅಮೀಭಿಃ ಹರಿಗುರುನಮನಂ ದ್ರಾಕ್ ವಿಧಾಯ ಅಪರಸಾಮ್ಯಂ ಪ್ರಯಯೇ, ಯತ್ನೇನ ಸಿದ್ಧಯೇ ಭೂಯೇತ ಹಿ, ಸಿದ್ಧಯೇ ಯತ್ನೇನ ಭೂಯೇತ ಹಿ ।

★ ★ ★

**ಅವತಾರಿಕಾ—** ಹೀಗೆ ಎಲ್ಲಾ ಶಿಷ್ಯರೂ ಪಾಠಕ್ಕೆ ಸಿದ್ಧರಾಗಿ ಕುಳಿತಿದ್ದಾಗ, ಆಚಾರ್ಯರು ಆ ಸಭಾಮಂಟಪಕ್ಕೆ ದಯಮಾಡಿಸಿ, ಅದನ್ನು ಅಲಂಕರಿಸಿದರು ಎಂದು ಹೇಳುತ್ತಾರೆ.

**ಯತವಚಸಿ ಜನೇಽಸ್ಮಿನ್ನಾನತೇ ಸನ್ನಿರಸ್ಯನ್**
**ಸಿಚಯಯವನಿಕಾಂ (ಅಸಿಚಯವನಿಕಾಂ) ತಾಂ**
**ಸಾಂಧ್ಯಜೀಮೂತರಕ್ತಾಮ್ ।**
**ರವಿರಿವ ರವಿಪೂಜ್ಯಾಂಘ್ರಿಃ ಸಮಾಜಾಂತರಿಕ್ಷೇ**
**ವ್ಯಲಸದತಿಶಯಾಲುಃ ಸನ್ ಸಹಸ್ರಪ್ರಕಾಶಃ ॥ 22 ॥**

**ಪದಚ್ಛೇದ—** ಯತವಚಸಿ, ಜನೇ, ಅಸ್ಮಿನ್, ಆನತೇ, ಸನ್ನಿರಸ್ಯನ್ ಸಿಚಯಯವನಿಕಾಂ, (ಅಸಿಚಯವನಿಕಾಂ) ತಾಂ, ಸಾಂಧ್ಯಜೀಮೂತರಕ್ತಾಂ, ರವಿಃ, ಇವ, ರವಿಪೂಜ್ಯಾಂಘ್ರಿಃ, ಸಮಾಜಾಂತರಿಕ್ಷೇ, ವ್ಯಲಸತ್, ಅತಿಶಯಾಲುಃ, ಸನ್, ಸಹಸ್ರಪ್ರಕಾಶಃ ।

**ಅನ್ವಯ—** ಆನತೇ, ಅಸ್ಮಿನ್, ಜನೇ, ಯತವಚಸಿ, ಸತಿ, ಸಾಂಧ್ಯಜೀಮೂತರಕ್ತಾಂ, ತಾಂ, ಸಿಚಯಯವನಿಕಾಂ, (ಅಸಿಚಯವನಿಕಾಂ) ಸನ್ನಿರಸ್ಯನ್, ರವಿಪೂಜ್ಯಾಂಘ್ರಿಃ, ಅತಿಶಯಾಲುಃ, ಸನ್, ಸಹಸ್ರಪ್ರಕಾಶಃ, ಸಮಾಜಾಂತರಿಕ್ಷೇ, ರವಿಃ, ಇವ, ವ್ಯಲಸತ್ ।

ಅನ್ವಯಾರ್ಥ—

**ಆನತೇ** = ನಮಸ್ಕಾರ ಮಾಡಿದ,

**ಅಸ್ಮಿನ್ ಜನೇ** = ಈ ಕೇಳುವ ಜನರು,

**ಯತವಚಸಿ (ಸತಿ)** = ನಿಯಮಿಸಿದ ಮಾತುಳ್ಳವರಾಗಿರಲು (ಮೌನವಾಗಿರಲು),

**ಸಾಂಧ್ಯಜೀಮೂತರಕ್ತಾಂ** = ಸಂಧ್ಯೆಯ ಮೋಡದಂತೆ ಕೆಂಪಾದ,

**ತಾಂ** = ಅಂತಹ,

**ಸಿಚಯಯವನಿಕಾಂ** = ಕಾವಿ ಬಟ್ಟೆಯ ಪರದೆಯನ್ನು (ಅಸಿಚ = ಸಾಧಾರಣ ಬಟ್ಟೆಯದಲ್ಲದ, ಯವನಿಕಾಂ = ಪರದೆಯನ್ನು),

**ಸನ್ನಿರಸ್ಯನ್** = ಸರಿಸುತ್ತಿರುವವರಾಗಿ,

**ರವಿಪೂಜ್ಯಾಂಘ್ರಿಃ** = ಸೂರ್ಯನಿಂದ ಪೂಜಿಸಲು ಯೋಗ್ಯವಾದ ಪಾದಗಳುಳ್ಳ,

**ಅತಿಶಯಾಲುಃ** = ಅತಿಶಯಗೊಳ್ಳುವವರಾದ,

**ಸಹಸ್ರಪ್ರಕಾಶಃ** = ಅನಂತಪ್ರಕಾಶವುಳ್ಳ (ಶ್ರೀಪೂರ್ಣಪ್ರಜ್ಞಾಚಾರ್ಯರು)

**ಸಮಾಜಾಂತರಿಕ್ಷೇ** = ಪ್ರವಚನಮಂಟಪವೆಂಬ ಆಕಾಶದಲ್ಲಿ,

**ರವಿಃ ಇವ** = ಸೂರ್ಯನಂತೆ,

**ವ್ಯಲಸತ್** = ಪ್ರಕಾಶಿಸಿದರು.

ತಾತ್ಪರ್ಯ— ಹೀಗೆ ಶ್ರೋತೃಗಳಾದ ಗೃಹಸ್ಥ ಶಿಷ್ಯರು ಮತ್ತು ಸಂನ್ಯಾಸಿ ಶಿಷ್ಯರು ಹರಿಗುರು ನಮಸ್ಕಾರ ಮಾಡಿ ಸ್ವಲ್ಪ ಹೊತ್ತು ಮೌನವಾಗಿ ಆಚಾರ್ಯರು ಬರುವ ದಾರಿಯನ್ನು ನೋಡುತ್ತಾ ಕುಳಿತಿದ್ದರು. ಆಚಾರ್ಯರು ಏಕಾಂತದಲ್ಲಿ ಆಹ್ನಿಕಕ್ಕಾಗಿ ಕುಳಿತುಕೊಳ್ಳುವಾಗ ತಮ್ಮ ಸುತ್ತಲೂ ಕಾವಿಯ ಕೆಂಪುಬಣ್ಣದ ಒಂದು ಪರದೆಯನ್ನು ಕಟ್ಟಿಸಿಕೊಂಡಿದ್ದರು. ಸೂರ್ಯದೇವರಿಂದಲೂ ಪೂಜ್ಯರಾದ ಎಲ್ಲರನ್ನು ಮೀರಿಸಿದ ಅತಿಶಯವುಳ್ಳ ಅಂತಹ ಶ್ರೀಪೂರ್ಣಪ್ರಜ್ಞಾಚಾರ್ಯರು ಆ ಕೆಂಪುಬಣ್ಣದ ಪರದೆಯನ್ನು ದೂರಸರಿಸಿ ಬಂದು ಪ್ರವಚನ ಮಂಟಪದಲ್ಲಿ ತಮಗೆ ನಿಯತವಾದ ಸ್ಥಾನದಲ್ಲಿ ವಿರಾಜಿಸಿದರು. ಪ್ರಾತಃಕಾಲ ಜನರು ಸಂಧ್ಯಾವಂದನೆ ಮಾಡುತ್ತಾ ಗಾಯತ್ರೀ ಮಂತ್ರವನ್ನು ಜಪಿಸುತ್ತಾ, ಸೂರ್ಯದೇವನ ಕಡೆಗೆ ಬಾಗಿ ನಿಂತಿರುವಾಗ, ಮೌನದಿಂದ ನಮಸ್ಕಾರ ಮಾಡುತ್ತಾ ಇರುವಾಗ ಸಹಸ್ರರಶ್ಮಿಯಾದ ಸೂರ್ಯನು ಸಂಜೆಯ ಕೆಂಪಿನಿಂದ ಹೊಳೆಯುತ್ತಿರುವ ಮೋಡಗಳೆಂಬ ಪರದೆಯನ್ನು ಸರಿಸಿ, ತಳ್ಳಿ ನಮ್ಮ ಜನಸಮಾಜದ ಈ ಆಕಾಶದಲ್ಲಿ ಉದಯಿಸಿ ಮೇಲೆ ಬಂದು ಹೇಗೆ ಶೋಭಿಸುತ್ತಾನೋ ಹಾಗೆ ಆಚಾರ್ಯರು ಶೋಭಿಸಿದರು ಎಂದು ಅಭಿಪ್ರಾಯ.

ವಿಗ್ರಹ ಮತ್ತು ಕೋಶ—

**ಯತವಚಾಃ**— ಯತಂ ವಚಃ ಯಸ್ಯ ಸಃ ಯತವಚಾಃ ತಸ್ಮಿನ್ ।

**ಸಿಚಯಯವನಿಕಾಂ**— ಸಿಚಯಃ ಏವ ಯವನಿಕಾ ಸಿಚಯಯವನಿಕಾಂ ತಾಂ । (ಸಿಚಯ = ಬಟ್ಟೆ, 'ವಸ್ತ್ರಂ ಸಿಚಯಃ ಪಟಃ' ಹಲ. ಅಸಿಚಯವನಿಕಾಂ ಎಂಬ ಪಾಠದಲ್ಲಿ )

**ಅಸಿಚಯವನಿಕಾಂ**— ನ ವಿದ್ಯತೇ ಸಿಚಃ ಯಸ್ಯಾಂ ಸಾ ಅಸಿಚಾ, ಅಸಿಚಾ ಚ ಸಾ ಯವನಿಕಾ ಚ ಅಸಿಚಯವನಿಕಾ ತಾಂ, ಇಲ್ಲಿ ಸಿಚ ಶಬ್ದಕ್ಕೆ ಬಟ್ಟೆ ಎಂಬ ಅರ್ಥದಲ್ಲಿ ಕೋಶವನ್ನು ಹುಡುಕಬೇಕು. ಇಲ್ಲಿ ಛಲಾರಿಯ ಪಾಠದ ಅರ್ಥಕ್ಕೂ ವಿಶ್ವಪತಿತೀರ್ಥೀಯ ಪಾಠದ ಅರ್ಥಕ್ಕೂ ವಿರೋಧ ಕಂಡುಬರುತ್ತದೆ. ಆದರೆ ಆ ಪರದೆಯು ಸಾಧಾರಣ ಬಟ್ಟೆಯದು ಅಲ್ಲ, ವಿಶೇಷವಾದ ರೇಷ್ಮೆಯ ಬಟ್ಟೆಯದು ಎಂಬ ಅರ್ಥವನ್ನಿಟ್ಟುಕೊಂಡಾಗ ವಿರೋಧ ಪರಿಹಾರವಾಗುತ್ತದೆ. ಯವನಿಕಾ = ಪರದೆ, 'ಪ್ರತಿಸೀರಾ ಯವನಿಕಾ ಸ್ಯಾತ್ ತಿರಸ್ಕರಿಣೀ ಚ ಸಾ' ಅಮರ ।

**ಸಾಂಧ್ಯ:**— ಸಂಧ್ಯಾಯಾಂ ಭವಃ ಸಾಂಧ್ಯಃ ।

**ಸಾಂಧ್ಯಜೀಮೂತರಕ್ತಾಂ**— ಸಾಂಧ್ಯಶ್ಚಾಸೌ ಜೀಮೂತಶ್ಚ ಸಾಂಧ್ಯಜೀಮೂತಃ, ಸಾಂಧ್ಯಜೀಮೂತಃ ಇವ ರಕ್ತಾ ಸಾಂಧ್ಯಜೀಮೂತರಕ್ತಾ ತಾಂ । (ಜೀಮೂತ = ಮೋಡ, 'ಘನಜೀಮೂತಮುದಿರಜಲಮುಗ್ ಧೂಮಯೋನಯಃ' ಅಮರ ।)

**ರವಿಪೂಜ್ಯಾಂಘ್ರಿ:**— ರವಿಣಾ ಪೂಜ್ಯೌ ರವಿಪೂಜ್ಯೌ, ರವಿಪೂಜ್ಯೌ ಅಂಘ್ರೀ ಯಸ್ಯ ಸಃ ರವಿಪೂಜ್ಯಾಂಘ್ರಿಃ ।

**ಸಮಾಜಾಂತರಿಕ್ಷಂ**— ಸಮಾಜಃ ಏವ ಅಂತರಿಕ್ಷಂ ಸಮಾಜಾಂತರಿಕ್ಷಂ ತಸ್ಮಿನ್ ।

**ಸಹಸ್ರಪ್ರಕಾಶಃ**— ಸಹಸ್ರಂ ಪ್ರಕಾಶಾಃ ಯಸ್ಯ ಸಃ ಸಹಸ್ರಪ್ರಕಾಶಃ ।

**ಕ್ರಿಯಾಪದ**— ವ್ಯಲಸತ್ - ವಿ+ಅಲಸತ್ ಅಲಸತಾಂ ಅಲಸನ್, ಇತ್ಯಾದಿ ವಿ ಉಪಸರ್ಗ ಲಸ ಪ್ರಕಾಶೇ ಪರಸ್ಮೈ ಲಙ್ ।

**ಪ್ರಯೋಗ**— ಆನತೇ ಅಸ್ಮಿನ್‌ಜನೇ ಯತವಚಸಿ ಸತಿ ಸಾಂಧ್ಯಜೀಮೂತರಕ್ತಾಂ ತಾಂ ಸಿಚಯಯವನಿಕಾಂ ಸನ್ನಿರಸ್ಯತಾ ರವಿಪೂಜ್ಯಾಂಘ್ರಿಣಾ ಅತಿಶಯಾಲುನಾ ಸಹಸ್ರಪ್ರಕಾಶೇನ ಸಮಾಜಾಂತರಿಕ್ಷೇ ರವಿಣಾ ಇವ ವ್ಯಲಸ್ಯತ (ಭಾವೇ)।

★ ★ ★

**ಅವತಾರಿಕಾ**— ಆಚಾರ್ಯರು ಪಾಠಾರಂಭಕ್ಕಿಂತ ಮೊದಲು ಮಂಗಳಾರ್ಥವಾಗಿ 'ಓಂ' ಎಂದು ಪ್ರಣವವನ್ನು ಉಚ್ಚರಿಸಿದ ಕ್ರಮವನ್ನು ತಿಳಿಸುತ್ತಿದ್ದಾರೆ.

**ತ್ರಿಭುವನವರತೇಜೋವ್ಯಕ್ತವೇದಾರ್ಥಶುಕ್ಲ-**
**ತ್ರಿತಯರಸತಯಾ ಯೇ ವರ್ಣಿತಾ ವರ್ಣವರ್ಯಾ ।**
**ಪೃಥುಮತಿರಥ ತೇಷಾಮೈಕ್ಯಮಾಪಾದ್ಯ ಸಮ್ಯಕ್**
**ಪ್ರವಚನಪರಿಶುದ್ಧ್ಯೈ ಸ್ಮ ಪ್ರಣೌತಿ ಪ್ರವೀಣಃ ॥ 23 ॥**

**ಪದಚ್ಛೇದ**— ತ್ರಿಭುವನವರತೇಜೋವ್ಯಕ್ತವೇದಾರ್ಥಶುಕ್ಲತ್ರಿತಯರಸತಯಾ, ಯೇ, ವರ್ಣಿತಾಃ, ವರ್ಣವರ್ಯಾಃ, ಪೃಥುಮತಿಃ, ಅಥ, ತೇಷಾಂ, ಐಕ್ಯಂ, ಆಪಾದ್ಯ, ಸಮ್ಯಕ್, ಪ್ರವಚನಪರಿಶುದ್ಧ್ಯೈ, ಸ್ಮ, ಪ್ರಣೌತಿ, ಪ್ರವೀಣಃ ।

**ಅನ್ವಯ**— ಅಥ, ಪ್ರವೀಣಃ, ಪೃಥುಮತಿಃ, ಯೇ, ವರ್ಣವರ್ಯಾಃ, ತ್ರಿಭುವನವರತೇಜೋವ್ಯಕ್ತವೇದಾರ್ಥಶುಕ್ಲತ್ರಿತಯರಸತಯಾ, ವರ್ಣಿತಾಃ, ತೇಷಾಂ, ಐಕ್ಯಂ, ಸಮ್ಯಕ್, ಆಪಾದ್ಯ, ಪ್ರವಚನಪರಿಶುದ್ಧ್ಯೈ, ಪ್ರಣೌತಿ, ಸ್ಮ ।

**ಅನ್ವಯಾರ್ಥ**—

**ಅಥ** = ಸಭಾಮಂಟಪದಲ್ಲಿ ಆಸನದಲ್ಲಿ ಕುಳಿತ ಮೇಲೆ,

**ಪ್ರವೀಣಃ** = ಕುಶಲರಾದ,

**ಪೃಥುಮತಿಃ** = ಶ್ರೀಪೂರ್ಣಪ್ರಜ್ಞರು,

**ಯೇ** = ಯಾವ,

**ವರ್ಣವರ್ಯಾಃ** = ಅಕಾರ, ಉಕಾರ, ಮಕಾರವೆಂಬ ಉತ್ತಮ ವರ್ಣಗಳು,

**ತ್ರಿಭುವನವರತೇಜೋ, ವ್ಯಕ್ತ, ವೇದಾರ್ಥ, ಶುಕ್ಲತ್ರಿತಯರಸತಯಾ** = ಮೂರು ಲೋಕಗಳ ಉತ್ತಮ ತೇಜಸ್ಸಾದ ಅಗ್ನಿ ವಾಯು ಸೂರ್ಯರಿಂದ, ಸಾರರೂಪವಾಗಿ, ಆವಿರ್ಭವಿಸಿದ ಋಕ್ ಯಜುಸ್ಸು ಸಾಮ ಎಂಬ ಮೂರು ವೇದಗಳ ಪ್ರತಿಪಾದ್ಯವಿಷಯಗಳಾದ ಭೂಃ (ಸ್ಫೂರ್ತಿರೂಪನು) ಅತಿಶಯ

ಪ್ರಭಾವವುಳ್ಳವನು, ಅತಿಶಯ ಬಲರೂಪನು, ಎಂಬ ಅರ್ಥದ ಮೂರು ವ್ಯಾಹೃತಿಗಳ, ಸಾರ-ರೂಪದಿಂದ,

**ವರ್ಣಿತಾಃ** = ಪ್ರತಿಪಾದಿಸಲ್ಪಟ್ಟಿವೆಯೋ,

**ತೇಷಾಂ** = ಆ ಮೂರು ವರ್ಣಗಳ,

**ಐಕ್ಯಂ** = ಮೇಲನವನ್ನು, (ಸೇರಿಸುವಿಕೆಯನ್ನು)

**ಸಮ್ಯಕ್** = ಚೆನ್ನಾಗಿ,

**ಆಪಾದ್ಯ** = ಉಂಟುಮಾಡಿ,

**ಪ್ರವಚನಪರಿಶುದ್ಧ್ಯೈ** = ವ್ಯಾಖ್ಯಾನದ ಪವಿತ್ರತೆಗಾಗಿ,

**ಪ್ರಣೌತಿ ಸ್ಮ** = ಉಚ್ಚರಿಸಿದರು (ಓಂ ಎಂದು ಪ್ರಣವವನ್ನು ಪಠಿಸಿದರು).

ತಾತ್ಪರ್ಯ— ಈ ಪ್ರಪಂಚದಲ್ಲಿ ಭೂಲೋಕ, ಭುವರ್ಲೋಕ (ಅಂತರಿಕ್ಷ) ಸುವರ್ಲೋಕ (ಸ್ವರ್ಗ) ಎಂಬುದಾಗಿ ಮೂರು ಲೋಕಗಳಿವೆ. ಇವುಗಳಲ್ಲಿ ಕ್ರಮವಾಗಿ ಅಗ್ನಿ, ವಾಯು ಮತ್ತು ಸೂರ್ಯ ಎಂಬ ದೇವತಾತ್ಮಕವಾದ ಮೂರು ತೇಜಸ್ಸುಗಳಿರುವುವು. ಈ ಮೂರು ತೇಜೋ ದೇವತೆಗಳಿಂದ ಕ್ರಮವಾಗಿ ಋಕ್, ಯಜುಸ್ಸು, ಸಾಮ ಎಂಬ ಮೂರು ವೇದಗಳು ಪ್ರಕಟವಾಗಿವೆ. ಈ ಮೂರು ವೇದಗಳ ಸಾರಭೂತವಾದ ಅರ್ಥವೇ ಕ್ರಮವಾಗಿ ಭೂಃ, ಭುವಃ, ಸುವಃ ಎಂಬ ವ್ಯಾಹೃತಿಗಳು. ಈ ಮೂರು ವ್ಯಾಹೃತಿಗಳ ಸಾರವೇ ಅಕಾರ, ಉಕಾರ ಮತ್ತು ಮಕಾರಗಳು. ಪ್ರವಚನ ದಕ್ಷರಾದ ಶ್ರೀ ಪೂರ್ಣಪ್ರಜ್ಞರು ತಮ್ಮ ಪ್ರವಚನದ ಪವಿತ್ರತೆಗಾಗಿ ಅ, ಉ, ಮ, ಎಂಬ ಮೂರು ಅಕ್ಷರಗಳ ಮೇಲನದಿಂದ ಉಂಟಾದ ಪ್ರಣವ ಎಂದೂ ಹೆಸರುಳ್ಳ 'ಓಂ'ಕಾರವನ್ನು ಮೊದಲು ಉಚ್ಚರಿಸಿದರು.

'ಸ ಇಮಾನ್ ಲೋಕನಸೃಜತ ಪೃಥಿವೀಮಂತರಿಕ್ಷಂ ದಿವಂ, ತಾನ್ ಲೋಕಾನ್ ಅಭ್ಯತಪತ್ । ತೇಭ್ಯೋಽಭಿತಪ್ತೇಭ್ಯ-ಸ್ತ್ರೀಣಿ ಜ್ಯೋತೀಂಷ್ಯಜಾಯಂತ, ಅಗ್ನಿರೇವ ಪೃಥಿವ್ಯಾ ಅಜಾಯತ, ವಾಯುರಂತರಿಕ್ಷಾತ್ ಆದಿತ್ಯೋ ದಿವಃ, ತಾನಿ ಜ್ಯೋತೀಂಷ್ಯಭ್ಯತಪತ್, ತೇಭ್ಯೋಽಭಿತಪ್ತೇಭ್ಯಸ್ತ್ರೀಣಿ (ಶುಕ್ರಾಣಿ) ಶುಕ್ಲಾನ್ಯಜಾಯಂತ, ಭೂರಿತ್ಯೇವ ಋಗ್ವೇದಾದಜಾಯತ, ಭುವರೀತಿ ಯಜುರ್ವೇದಾತ್, ಸುವರಿತಿ ಸಾಮವೇದಾತ್, ತಾನಿ (ಶುಕ್ರಾಣಿ) ಶುಕ್ಲಾನ್ಯಭ್ಯತಪತ್, ತೇಭ್ಯೋಽಭಿತಪ್ತೇಭ್ಯ-ಸ್ತ್ರಯೋ ವರ್ಣಾ ಅಜಾಯಂತ, ಅಕಾರಉಕಾರೋ ಮಕಾರ ಇತಿ' ತಾನೇಕಧಾ ಸಮಭರತ್ ತದೇತದೋಮಿತಿ ಇತ್ಯಾದಿ ಶ್ರುತ್ಯಾ ವರ್ಣಿತಾಃ, ಐತರೇಯ ಬ್ರಾಹ್ಮಣ ಪಂಚಮಖಂಡಿಕಾ ಪ್ರತಿಪಾದಿತಪ್ರಣವಪ್ರಕಾರಃ ದ್ರಷ್ಟವ್ಯಃ (ಭಾವ ಪ್ರಕಾಶಿಕಾ)

ಪರಮಾತ್ಮನು ಈ ಪ್ರಪಂಚವನ್ನು ಸೃಜಿಸಿದನು. ಪೃಥಿವೀ, ಅಂತರಿಕ್ಷ, ದ್ಯು ಎಂಬ ಆ ಮೂರು ಲೋಕಗಳ ಸಾರವನ್ನು ಉದ್ಧರಿಸುವುದಕ್ಕಾಗಿ ಅವುಗಳನ್ನು ಕಾಯಿಸಿದನು. ಸೃಷ್ಟಿ ಮಾಡಲು ಜ್ಞಾನರೂಪವಾದ ತಪಸ್ಸನ್ನು ಮಾಡಿದನು. ಅಭಿತಪ್ತವಾದ ಆ ಮೂರು ಲೋಕಗಳಿಂದ ಕ್ರಮವಾಗಿ ಮೂರು ಜ್ಯೋತಿಸ್ಸುಗಳು ಹುಟ್ಟಿದವು. ಪೃಥಿವಿಯಿಂದ ಅಗ್ನಿಯು ಹುಟ್ಟಿತು, ಅಂತರಿಕ್ಷದಿಂದ ವಾಯುವು, ದ್ಯುಲೋಕದಿಂದ ಸೂರ್ಯನು ಹುಟ್ಟಿದನು. ಆ ಜ್ಯೋತಿಸ್ಸುಗಳನ್ನೂ ಪರಮಾತ್ಮನು ಅಭಿತಾಪಗೊಳಿಸಿದನು. (ಸೃಷ್ಟಿಗಾಗಿ ಆಲೋಚಿಸಿದನು) ಅಭಿತಪ್ತವಾದ ಆ ಮೂರು ಜ್ಯೋತಿಸ್ಸುಗಳಿಂದ ಮೂರು ಶುಕ್ಲಗಳು (ಶುಕ್ರಗಳು) ಹುಟ್ಟಿದವು. 'ಭೂಃ' ಎಂಬ ವ್ಯಾಹೃತಿಯೇ ಋಗ್ವೇದದಿಂದ ಹುಟ್ಟಿತು. (ಅಭಿವ್ಯಕ್ತವಾಯಿತು) 'ಭುವಃ' ಎಂಬ ವ್ಯಾಹೃತಿಯು ಯಜುರ್ವೇದದಿಂದ ಹುಟ್ಟಿತು (ಅಭಿವ್ಯಕ್ತವಾಯಿತು). 'ಸುವಃ' ಎಂಬ ವ್ಯಾಹೃತಿಯು ಸಾಮವೇದದಿಂದ ಹುಟ್ಟಿತು (ಅಭಿವ್ಯಕ್ತವಾಯಿತು). ಆ ಶುಕ್ಲ (ಶುಕ್ರ)ಗಳನ್ನು ಪರಮಾತ್ಮನು ಅಭಿತಾಪಗೊಳಿಸಿದನು. ಅಭಿತಪ್ತವಾದ ಆ ಮೂರು ಶುಕ್ರ (ಶುಕ್ಲ)ಗಳಿಂದ ಮೂರು ವರ್ಣಗಳು ಹುಟ್ಟಿದವು. ಅಕಾರ, ಉಕಾರ, ಮಕಾರ ಎಂದು ಈ ಮೂರು ವರ್ಣಗಳನ್ನು ಒಂದೇ ಪ್ರಕಾರವಾಗಿ ಒಟ್ಟುಗೂಡಿಸಿದನು. ಅದೇ 'ಓಂ' ಎಂದಾಯಿತು. ಇತ್ಯಾದಿ ಶ್ರುತಿಯಿಂದ ವರ್ಣಿತವಾದವುಗಳು ಅ ಉ ಮ ಎಂಬ ಮೂರು ವರ್ಣಗಳು, ಹೀಗೆ ಪ್ರಣವ (ಓಂಕಾರ)ದ ಪ್ರಕಾರವು ಐತರೇಯ ಬ್ರಾಹ್ಮಣ ಐದನೆಯ ಖಂಡಿಕೆಯಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ವಿಗ್ರಹ—

**ತ್ರಿಭುವನವರಾಣಿ—** ತ್ರೀಣಿ ಚ ತಾನಿ ಭುವನಾನಿ ಚ ತ್ರಿಭುವನಾನಿ, (ತ್ರಯಾಣಾಂ ಭುವನಾನಾಂ ಸಮಾಹಾರಃ ತ್ರಿಭುವನಂ) ತ್ರಿಭುವನೇಭ್ಯಃ ವರಾಣಿ ತ್ರಿಭುವನವರಾಣಿ, (ತ್ರಿಭುವನೇ ವರಾಣಿ ತ್ರಿಭುವನ ವರಾಣಿ),

**ತ್ರಿಭುವನವರತೇಜೋವ್ಯಕ್ತವೇದಾಃ—** ತ್ರಿಭುವನವರಾಣಿ ಚ ತಾನಿ ತೇಜಾಂಸಿ ಚ ತ್ರಿಭುವನವರತೇಜಾಂಸಿ, ತ್ರಿಭುವನವರತೇಜೋಭ್ಯಃ ವ್ಯಕ್ತಾಃ ತ್ರಿಭುವನವರತೇಜೋವ್ಯಕ್ತಾಃ, ತ್ರಿಭುವನವ್ಯಕ್ತಾಶ್ಚ ತೇ ವೇದಾಶ್ಚ ತ್ರಿಭುವನವರತೇಜೋವ್ಯಕ್ತವೇದಾಃ ।

**ತ್ರಿ-ವೇದಾರ್ಥಃ—** ತ್ರಿ-ವೇದೇಭ್ಯಃ (ವ್ಯಕ್ತಾಃ) ಅರ್ಥಾಃ, ತ್ರಿ-ವೇದಾರ್ಥಾಃ (ತ್ರಿ-ವೇದಾನಾಂ ಅರ್ಥಃ ತ್ರಿವೇದಾರ್ಥಃ) ತ್ರಿ-ವೇದಾರ್ಥಾಶ್ಚ ತಾನಿ ಶುಕ್ಲಾನಿ ಚ ತ್ರಿಶುಕ್ಲಾನಿ,

**ಶುಕ್ಲತ್ರಿತಯಂ—** ತ್ರಯೋಽವಯವಾಃ ಅಸ್ಯೇತಿ ತ್ರಿತಯಂ, ಶುಕ್ಲಾನಾಂ ತ್ರಿತಯಂ ಶುಕ್ಲತ್ರಿತಯಂ ,

**ಶುಕ್ಲತ್ರಿತಯಂ—** ವೇದಾರ್ಥಶ್ಚ ತತ್ ಶುಕ್ಲತ್ರಿತಯಂ ಚ ವೇದಾರ್ಥಶುಕ್ಲ ತ್ರಿತಯಂ,

**ರಸತಾ—** ರಸಸ್ಯ ಭಾವಃ ರಸತಾ,

**ತ್ರಿ-ರಸತಯಾ—** ತ್ರಿತಯಾತ್ ರಸತಾ ತ್ರಿತಯರಸತಾ, ತಯಾ ತ್ರಿರಸತಯಾ (ತ್ರಿತಯಸ್ಯರಸತಾ ತಯಾ)

**ಪೃಥುಮತಿಃ—** ಪೃಥುಃ ಮತಿಃ ಯಸ್ಯ ಸಃ ಪೃಥುಮತಿಃ ।

**ಐಕ್ಯಂ—** ಏಕಸ್ಯ ಭಾವಃ ಐಕ್ಯಂ,

**ಪ್ರವಚನಪರಿಶುದ್ಧಿಃ—** ಪ್ರವಚನಸ್ಯ ಪರಿಶುದ್ಧಿಃ ಪ್ರವಚನಃ ಪರಿಶುದ್ಧಿಃ ತಸ್ಯೈ ।

**ಪ್ರಯೋಗ—** ಅಥ ಪ್ರವೀಣೇನ ಪೃಥುಮತಿನಾ, ಯೈಃ ವರ್ಣವರ್ಯೈಃ ತ್ರಿಭುವನವರತೇಜೋವ್ಯಕ್ತವೇದಾರ್ಥ ಶುಕ್ಲ ತ್ರಿತಯರಸತಯಾ ವರ್ಣ್ಯತೇ ಭೂಯತೇ, ತೇಷಾಂ ಐಕ್ಯಂ ಸಮ್ಯಕ್ ಆಪಾದ್ಯ ಪ್ರವಚನಪರಿಶುದ್ಧ್ಯೈ ಪ್ರಣೂಯತೇ ಸ್ಮ ।

**ಕೋಶ ವಿಶೇಷಾಂಶ—** ಪ್ರವೀಣ = ನಿಪುಣ, 'ಪ್ರವೀಣೇ ನಿಪುಣಾಭಿಜ್ಞವಿಜ್ಞನಿಷ್ಣಾತಶಿಕ್ಷಿತಾಃ' ಅಮರ. ತ್ರಿಭುವನ ವರತೇಜೋರಸತಯಾ ಎಂಬಲ್ಲಿ ತ್ರಿಶಬ್ದವನ್ನು ಭುವನ, ತೇಜಸ್ಸು, ವೇದ ಈ ಮೂರಕ್ಕೂ ಅನ್ವಯಿಸಬೇಕು. ತ್ರಿಭುವನ, ತ್ರಿತೇಜಸ್ಸು, ತ್ರಿವೇದ, ಎಂದು ತ್ರೀಣಿ ಚ ತ್ರೀಣಿ ಚ ತ್ರಯಶ್ಚ ತ್ರೀಣಿ ಎಂದು ಏಕಶೇಷವೃತ್ತಿ. 'ಸರೂಪಾಣಾಂ ಏಕಶೇಷ ಏಕವಿಭಕ್ತೌ' ಎಂಬ ಸೂತ್ರದಿಂದ ಈ ರೂಪ ಸಿದ್ಧಿಸುತ್ತದೆ. (ಛಲಾರಿಯ)

**ಕ್ರಿಯಾಪದ— ಪ್ರಣೌತಿ** - ಪ್ರ+ನೌತಿ = ಪ್ರಣೌತಿ, ನೌತಿ ನುತಃ ನುವಂತಿ, ನೌಷಿ ನುಥಃ ನುಥ, ನೌಮಿ ನುವಃ ನುಮಃ, ಣು(ನು) ಸ್ತುತೌ to praise ಅದಾದಿ ಎರಡನೇ ಗಣ. ಸಕ, ಸೇಟ್ ಪರಸ್ಮೈಪದಿ ಪ್ರಥಮಪುರುಷೇ ಏಕವಚನಂ 'ಸ್ಮ' ಯೋಗದಿಂದ ಭೂತಕಾಲದ ಅರ್ಥ ।

★ ★ ★

**ಅವತಾರಿಕಾ—** ಆಚಾರ್ಯರು ಉಪನಿಷದ್ಭಾಷ್ಯ ಅಥವಾ ಸೂತ್ರಭಾಷ್ಯ ಗ್ರಂಥದ ಪ್ರವಚನವನ್ನು ಮಾಡಿದರು ಎಂದು ಹೇಳುತ್ತಾ ಆಚಾರ್ಯರ ಪಾಠದ ಕ್ರಮವನ್ನು ವಿವರಿಸುತ್ತಾರೆ.

**ಸ್ವರಮಚರಮಕಾಲೇ ಮಂದ್ರಮೇವಾತ್ಯಜದ್ಭಿಃ**
**ಸ್ಫುಟಮುಪನಿಷದಂತೇ ವಾಚಕೈರ್ವಾಚ್ಯಮಾನೇ ।**
**ಪ್ರವಚನಮತಿಚಿತ್ರಂ ಪ್ರಾಣಭಾಜಾಂ ಶ್ರುತೀನಾ-**
**ಮಮೃತಮಮೃತಭಾವಸ್ಯೈಷ ಹೇತುಂ ಚಕಾರ ॥ 24 ॥**

**ಪದಚ್ಛೇದ—** ಸ್ವರಂ, ಅಚರಮಕಾಲೇ, ಮಂದ್ರಂ, ಏವ, ಅತ್ಯಜದ್ಭಿಃ, ಸ್ಫುಟಂ, ಉಪನಿಷದಂತೇ, ವಾಚಕೈಃ, ವಾಚ್ಯಮಾನೇ, ಪ್ರವಚನಂ, ಅತಿಚಿತ್ರಂ, ಪ್ರಾಣಭಾಜಾಂ, ಶ್ರುತೀನಾಂ, ಅಮೃತಂ, ಅಮೃತಭಾವಸ್ಯ, ಏಷಃ, ಹೇತುಃ, ಚಕಾರ ।

**ಅನ್ವಯ—** ಅಚರಮಕಾಲೇ, ಮಂದ್ರಂ, ಸ್ವರಂ, ಅತ್ಯಜದ್ಭಿಃ, ಏವ, ವಾಚಕೈಃ, ಉಪನಿಷದಂತೇ, ಸ್ಫುಟಂ, ವಾಚ್ಯ-ಮಾನೇ(ಸತಿ), ಏಷಃ, ಪ್ರಾಣಭಾಜಾಂ, ಶ್ರುತೀನಾಂ, ಅಮೃತಂ, ಅಮೃತಭಾವಸ್ಯ, ಹೇತುಂ, ಅತಿಚಿತ್ರಂ, ಪ್ರವಚನಂ, ಚಕಾರ ।

**ಅನ್ವಯಾರ್ಥ—**

**ಅಚರಮಕಾಲೇ** = ಪಾಠಾರಂಭದ ಸಮಯದಲ್ಲಿ,
**ಮಂದ್ರಂ** = ಉಚ್ಚವಲ್ಲದ (ಮೆಲ್ಲಗಿರುವ),
**ಸ್ವರಂ** = ಧ್ವನಿಯನ್ನು,
**ಅತ್ಯಜದ್ಭಿಃ ಏವ** = ಬಿಡದೇ ಇರುವ, (ಸ್ವೀಕರಿಸಿದವರೇ ಆಗಿರುವ)
**ವಾಚಕೈಃ** = ಓದುವ ಶಿಷ್ಯರಿಂದ,
**ಉಪನಿಷದಂತೇ** = ಉಪನಿಷದ್ಭಾಷ್ಯವು (ವೇದಾಂತ ಶಾಸ್ತ್ರವಿಷಯಕವಾದ ಗ್ರಂಥವು)
**ಸ್ಫುಟಂ** = ಸ್ಪಷ್ಟವಾಗಿ,
**ವಾಚ್ಯಮಾನೇ (ಸತಿ)** = ಓದಲ್ಪಡಲು,
**ಏಷಃ** = ಈ ಶ್ರೀಮಧ್ವಾಚಾರ್ಯರು,
**ಪ್ರಾಣಭಾಜಾಂ** = ಸುಜೀವರ,
**ಶ್ರುತೀನಾಂ** = ಕಿವಿಗಳಿಗೆ,
**ಅಮೃತಂ** = ಅಮೃತದಂತಿರುವ,
**ಅಮೃತಭಾವಸ್ಯ** = ಮುಕ್ತಿಗೆ,
**ಹೇತುಂ** = ಕಾರಣವಾದ,
**ಅತಿಚಿತ್ರಂ** = ಅತ್ಯಾಶ್ಚರ್ಯಕರವಾದ,
**ಪ್ರವಚನಂ** = ಶಾಸ್ತ್ರವ್ಯಾಖ್ಯಾನವನ್ನು,
**ಚಕಾರ** = ಮಾಡಿದರು.

**ತಾತ್ಪರ್ಯ—** ಆಚಾರ್ಯರ ಬಳಿಯಲ್ಲಿ ಓದುವ ಶಿಷ್ಯರು ಪಾಠಾರಂಭದ ಸಮಯದಲ್ಲಿ ಮೆತ್ತಗಾದ ಸ್ವರದಿಂದ ಉಪನಿಷದ್ಭಾಷ್ಯವನ್ನು ಸ್ಪಷ್ಟವಾಗಿ ಓದುತ್ತಿದ್ದರು. ಆಗ ಶ್ರೀಮಧ್ವಾಚಾರ್ಯರು ಕೇಳತಕ್ಕ ಸಜ್ಜೀವರ ಕಿವಿಗಳಿಗೆ ಅಮೃತ-ಪ್ರಾಯವಾದ, ಮೋಕ್ಷಕ್ಕೆ ಕಾರಣವಾದ ಮತ್ತು ಅತ್ಯಾಶ್ಚರ್ಯಕರವಾದ ಶಾಸ್ತ್ರಪ್ರವಚನವನ್ನು ಮಾಡಿ ಶಿಷ್ಯರನ್ನು ಉಪದೇಶಿಸಿದರು. ಪಾಠಾರಂಭ ಸಮಯದಲ್ಲಿ ಗುರುಗಳ ಸನ್ನಿಧಿಯಲ್ಲಿ ಉಚ್ಚಧ್ವನಿಯು ನಿಷಿದ್ಧವಾದುದರಿಂದ ಶಿಷ್ಯರು ಮೆಲ್ಲಗೆ ಗ್ರಂಥವನ್ನೋದಿದರು. ಆಚಾರ್ಯರು ಗ್ರಂಥಾರ್ಥವನ್ನು ವಿವರವಾಗಿ ಬೋಧಿಸಿದರು. ಆಚಾರ್ಯರ ಅದ್ಭುತವಾದ ಇಂತಹ ಪ್ರವಚನವನ್ನು ಕೇಳಿದವರು ಮೋಕ್ಷವನ್ನೇ ಪಡೆಯುವರು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ಅಚರಮಕಾಲಃ—** ಚರಮಃ ನ ಭವತೀತಿ ಅಚರಮಃ, ಅಚರಮಶ್ಚಾಸೌ ಕಾಲಶ್ಚ ಅಚರಮಕಾಲಃ ತಸ್ಮಿನ್ । (ಉಪಕ್ರಮಕಾಲೇ = ಆರಂಭಕಾಲದಲ್ಲಿ ಎಂದು ಅರ್ಥ) ಮಂದ್ರಸ್ವರಃ = 'ಉಪಾಂಶುಧ್ವನಿಃ' ಮೆತ್ತಗಿನ ಧ್ವನಿ.

**ಉಪನಿಷದಂತಂ**— ಉಪನಿಷದಾಂ ಅಂತಃ (ನಿರ್ಣಯಃ) ಯಸ್ಮಾತ್ ತತ್ ಉಪನಿಷದಂತಂ ತಸ್ಮಿನ್ ।
ಅಂತಃ = ನಿರ್ಣಯಃ, 'ಅಂತೋಽಸ್ತ್ರೀ ನಿರ್ಣಯೇ ನಾಶೇ ಸ್ವರೂಪಾಗ್ರ್ಯೇತರೇತರಃ' ಭಾಸ್ಕರಕೋಶ (ಶಿಷ್ಯರು ಮೆಲ್ಲಗೆ ಓದುತ್ತಿದ್ದರೂ ಇತರರಿಗೆ ಸ್ಪಷ್ಟವಾಗಿ ಕೇಳಿಸುವಂತೆ ಓದುತ್ತಿದ್ದರು ಎಂದು ಅರ್ಥ).

**ಪ್ರಾಣಭಾಜಾಂ**— ಪ್ರಾಣಾನ್ ಇಂದ್ರಿಯಾಣಿ ಭಜಂತೀತಿ ಪ್ರಾಣಭಾಜಃ ತೇಷಾಂ । (ಇಂದ್ರಿಯಪಾಟವವುಳ್ಳ ಸುಜೀವರು)

**ಅಮೃತಭಾವಸ್ಯ**— ಅಮೃತಸ್ಯ ಭಾವಃ ಅಮೃತಭಾವ ತಸ್ಯ ।

**ಕ್ರಿಯಾಪದ**— ಚಕಾರ - ಚಕಾರ ಚಕ್ರತುಃ ಚಕ್ರುಃ, ಚಕರ್ಥ ಚಕ್ರಥುಃ ಚಕ್ರ, ಚಕಾರ-ಚಕರ ಚಕೃವ ಚಕೃಮ । ಡುಕೃಞ್ ಕರಣೇ ಕೃಧಾತು ಸಕ. ಅನಿಟ್ ಉಭಯಪದಿ to do, to make ಎಂಟನೇ ಗಣ.

**ಪ್ರಯೋಗ**— ಅಚರಮಕಾಲೇ ಮಂದ್ರಂ ಸ್ವರಂ ಅತ್ಯಜಂತಃ ಏವ ವಾಚಕಾಃ ಉಪನಿಷದಂತಂ ಸ್ಫುಟಂ ಅವಾಚಯನ್, ಏವಂ ಸತಿ ಏತೇನ ಪ್ರಾಣಭಾಜಾಂ ಶ್ರುತೀನಾಂ ಅಮೃತಂ ಅಮೃತಭಾವಸ್ಯ ಹೇತುಃ ಅತಿಚಿತ್ರಂ ಪ್ರವಚನಂ ಚಕ್ರೇ ।

★ ★ ★

**ಅವತಾರಿಕಾ**— ಪಾಠ ಸಮಯದಲ್ಲಿ ಪ್ರಶ್ನೆ ಕೇಳಿದವರಿಗೆ ಆಚಾರ್ಯರು ಸರಿಯಾದ ಉತ್ತರವನ್ನು ಕೊಡುತ್ತಿದ್ದ ರೀತಿಯನ್ನು ವರ್ಣಿಸುತ್ತಾರೆ.

**ಧನಮಿವ ಸಧನಾಯೇಭ್ಯೋಽರ್ಕಸೂನುಃ ಪ್ರಸನ್ನಃ**
**ಶರಶತಮಿವ ಪಾರ್ಥಃ ಸಂಯುಗಾರ್ಥಿಭ್ಯ ಉಗ್ರಃ ।**
**ಅರತಿವಿರಹಿತಃ ಸೋಽನಾರತಂ ನಾದಿ(ನೋಽದಿ)ಶನ್ನೋ**
**ಪ್ರತಿವಚನಮದೀನಂ ಚೋದಕೇಭ್ಯೋಽಖಿಲೇಭ್ಯಃ ॥ 25 ॥**

**ಪದಚ್ಛೇದ**— ಧನಂ, ಇವ, ಸಧನಾಯೇಭ್ಯಃ, ಅರ್ಕಸೂನುಃ, ಪ್ರಸನ್ನಃ, ಶರಶತಂ, ಇವ, ಪಾರ್ಥಃ, ಸಂಯುಗಾರ್ಥಿಭ್ಯಃ, ಉಗ್ರಃ, ಅರತಿವಿರಹಿತಃ, ಸಃ, ಅನಾರತಂ, ನ, (ನೋ)ಅದಿಶತ್, ನೋ, ಪ್ರತಿವಚನಂ, ಅದೀನಂ, ಚೋದಕೇಭ್ಯಃ, ಅಖಿಲೇಭ್ಯಃ ।

**ಅನ್ವಯ**— ಪ್ರಸನ್ನಃ, ಅರ್ಕಸೂನುಃ, ಸಧನಾಯೇಭ್ಯಃ, ಧನಂ, ಇವ, ಉಗ್ರಃ, ಪಾರ್ಥಃ, ಸಂಯುಗಾರ್ಥಿಭ್ಯಃ, ಶರಶತಂ, ಇವ, ಅರತಿವಿರಹಿತಃ, ಸಃ, ಅಖಿಲೇಭ್ಯಃ, ಚೋದಕೇಭ್ಯಃ, ಅದೀನಂ, ಪ್ರತಿವಚನಂ, ನ (ನೋ), ಅದಿಶತ್ (ಇತಿ), ನೋ ।

**ಅನ್ವಯಾರ್ಥ**—

**ಪ್ರಸನ್ನಃ** = ಸಂತುಷ್ಟನಾದ,
**ಅರ್ಕಸೂನುಃ** = ಸೂರ್ಯಪುತ್ರನಾದ ಕರ್ಣನು,
**ಸಧನಾಯೇಭ್ಯಃ** = ಧನದ ಅಪೇಕ್ಷೆ ಉಳ್ಳವರಿಗೆ,
**ಧನಂ ಇವ** = ಹಣವನ್ನೆಂಬಂತೆ,
**ಉಗ್ರಃ** = ಕಠಿಣನಾದ, (ಶತ್ರುಗಳ ಮೇಲೆ ಸಿಟ್ಟಾದ)
**ಪಾರ್ಥಃ** = ಅರ್ಜುನನು,

**ಸಂಯುಗಾರ್ಥಿಭ್ಯಃ** = ಯುದ್ಧವನ್ನು ಬಯಸುವ ಪ್ರತಿವೀರರಿಗೆ,

**ಶರಶತಂ ಇವ** = ನೂರಾರು ಬಾಣಗಳನ್ನೆಂಬಂತೆ,

**ಅರತಿವಿರಹಿತಃ** = ಉದಾಸೀನತೆ ಇಲ್ಲದಿರುವ,

**ಸಃ** = ಆ ಶ್ರೀಮಧ್ವಾಚಾರ್ಯರು,

**ಅಖಿಲೇಭ್ಯಃ** = ಸಮಸ್ತರಾದ,

**ಚೋದಕೇಭ್ಯಃ** = ಪ್ರಶ್ನೆ ಕೇಳುವವರಿಗೆ,

**ಅದೀನಂ** = ಪ್ರೌಢವಾದ,

**ಪ್ರತಿವಚನಂ** = ಉತ್ತರವನ್ನು,

**ಅನಾರತಂ** = ಯಾವಾಗಲೂ,

ನ (**ನೋ**) **ಅದಿಶತ್** (ಇತಿ)

**ನೋ** = ಕೊಡಲಿಲ್ಲವೆಂದಿಲ್ಲ. ಪ್ರತ್ಯುತ್ತರವನ್ನು ಕೊಟ್ಟೇ ಕೊಡುತ್ತಿದ್ದರು ಎಂದು ಭಾವ.

**ತಾತ್ಪರ್ಯ**— ಸೂರ್ಯಪುತ್ರನಾದ ಕರ್ಣನು ಹಣದ ಆಶೆಯಿಂದ ಬಂದ ಅತಿಥಿಗಳಿಗೆ ಮತ್ತು ಯಾಚಕರಿಗೆ ಪ್ರಸನ್ನನಾಗಿ ಬೇಡಿದಷ್ಟು ದ್ರವ್ಯವನ್ನು ಕೊಟ್ಟು ಸಂತೋಷಪಡಿಸಿ ಕಳುಹಿಸುತ್ತಿದ್ದನು. ಶ್ರೀಮಧ್ವಾಚಾರ್ಯರೂ ಕೂಡ ಸ್ವಲ್ಪವೂ ಸೋಮಾರಿತನ ಆಲಸ್ಯಗಳಿಲ್ಲದೆ ಪಾಠ ಹೇಳುತ್ತಾ ಪ್ರಶ್ನೆ ಕೇಳುವವರಿಗೆ ಸ್ವಲ್ಪವೂ ಕೋಪಿಸದೆ ಪ್ರಸನ್ನರಾಗಿ ಗಂಭೀರಭಾವದಿಂದ ಪ್ರತ್ಯುತ್ತರಗಳನ್ನು ಕೊಡುತ್ತಿದ್ದರು. ಅರ್ಜುನನು ಯುದ್ಧವನ್ನು ಬಯಸುವ ಪ್ರತಿವೀರರಿಗೆ ನೂರಾರು ಬಾಣಗಳನ್ನು ಪ್ರಯೋಗಿಸಿ ಅವರ ಯುದ್ಧದ ಅಪೇಕ್ಷೆಯನ್ನು ತೀರಿಸುತ್ತಿದ್ದನು. ಅದರಂತೆ ಆಚಾರ್ಯರೂ ತೀವ್ರವಾಗಿ ಪ್ರಶ್ನಿಸುವವರಿಗೆ ಮತ್ತೂ ನಿಖರವಾದ ಉತ್ತರಗಳನ್ನು ಕೊಡುತ್ತಿದ್ದರು. ಅವರ ಅಸದಭಿಪ್ರಾಯಗಳನ್ನು ನಿರಾಕರಿಸುತ್ತಿದ್ದರು. ಅವರು ಯಾರಿಗೂ ಉತ್ತರಗಳನ್ನು ಕೊಡದೇ ಇರುತ್ತಿರಲಿಲ್ಲ. ಪ್ರಶ್ನೆ ಮಾಡಿದಾಗಲೆಲ್ಲ ಉತ್ತರ ಕೊಡುತ್ತಲೇ ಇದ್ದರು. ಸರ್ವಜ್ಞರಾದ ಆಚಾರ್ಯರಿಗೆ ಯಾವ ಪ್ರಶ್ನೆಗೂ ಉತ್ತರ ಕೊಡಲು ಅಸಾಧ್ಯ ಎಂಬುದೇ ಇರಲಿಲ್ಲ. ಅವರು ಕೋಪವಿಲ್ಲದೆ ಬಹು ಸಂತೋಷದಿಂದಲೇ ಪಾಠಪ್ರವಚನವನ್ನು ಮಾಡುತ್ತಿದ್ದರು ಎಂದು ಭಾವ.

ಯೇ ಮತ್ಸರವರ್ಜಿತಾಃ ತತ್ತ್ವಬುಭುತ್ಸಯಾ ಪೃಚ್ಛಂತಿ ತಾನ್ ಪ್ರತಿ ತತ್ ಸಂತುಷ್ಟಿಕರಂ ಪ್ರತ್ಯುತ್ತರಂ ಪ್ರಸನ್ನೋ ಭೂತ್ವಾದಿದೇಶ ಇತಿ ಭಾವಃ = ಯಾರು ಮಾತ್ಸರ್ಯವಿಲ್ಲದೆ ತತ್ತ್ವವನ್ನು ತಿಳಿಯುವ ಇಚ್ಛೆಯಿಂದ ಕೇಳುತ್ತಾರೋ ಅವರನ್ನು ಕುರಿತು ಅವರಿಗೆ ಸಂತೋಷವನ್ನುಂಟು ಮಾಡುವ ಪ್ರತ್ಯುತ್ತರವನ್ನು ಪ್ರಸನ್ನರಾಗಿ ಕೊಡುತ್ತಿದ್ದರು ಎಂದು ಭಾವವು.

ಯೇ ತು ಮತ್ಸರಾತ್ ಜಿಗೀಷಯಾ ಚೋದಯಂತಿ ತೇಭ್ಯಃ ತನ್ನಿರಾಕರಣೇ ಸಮರ್ಥಮುತ್ತರಂ ದದೌ = ಯಾರು ಮಾತ್ಸರ್ಯದಿಂದ ಜಯಿಸಲು ಅಪೇಕ್ಷಿಸಿ ಪ್ರಶ್ನಿಸುತ್ತಿದ್ದರೋ ಅವರಿಗೆ ಅವರನ್ನು ನಿರಾಕರಿಸಲು ಸಮರ್ಥವಾದ ಉತ್ತರವನ್ನು ಕೊಟ್ಟರು. ಉಭಯತ್ರ ದೃಷ್ಟಾಂತಃ, ಅರ್ಕಸೂನುಃ, ಸಧನಾಯೇಭ್ಯಃ ಧನಮಿವ, ಪಾರ್ಥಃ ಸಂಯುಗಾರ್ಥಿಭ್ಯಃ ಶರಶತಂ ಇವ ಇತಿ = ಎರಡೂ ವಿಷಯದಲ್ಲಿ ದೃಷ್ಟಾಂತವು, ಸೂರ್ಯಪುತ್ರನಾದ ಕರ್ಣನು ಹಣವನ್ನು ಅಪೇಕ್ಷಿಸುವವರಿಗೆ ಹಣವನ್ನೆಂಬಂತೆಯೂ, ಅರ್ಜುನನು ಯುದ್ಧಾಪೇಕ್ಷಿಗಳಿಗೆ ನೂರಾರು ಬಾಣಗಳನ್ನೆಂಬಂತೆಯೂ ಎಂದು ಭಾವ.

**ವಿಗ್ರಹ ಮತ್ತು ಕೋಶ**—

**ಸಧನಾಯೇಭ್ಯಃ**— ಧನಾಯಯಾ ಸಹಿತಾಃ ಸಧನಾಯಾಃ, ಧನಾಯಾ = ಹಣದ ಆಶೆ "ಅಶನಾಯೋದನ್ಯಾಧನಾಯಾ ಬುಭುಕ್ಷಾಪಿಪಾಸಾ ಗರ್ಧೇಷು" (ಪಾ.ಸೂ. 7-4-34) ಎಂಬ ಸೂತ್ರದಿಂದ ನಿಪಾತ.

**ಅರ್ಕಸೂನುಃ**— ಅರ್ಕಸ್ಯ ಸೂನುಃ ಅರ್ಕಸೂನುಃ ।

**ಶರಶತಂ—** ಶರಾಣಾಂ ಶತಂ ಶರಶತಂ ತತ್ ।

**ಪಾರ್ಥಃ—** ಪೃಥಾಯಾಃ ಅಪತ್ಯಂ ಪುಮಾನ್ ಪಾರ್ಥಃ ।

**ಸಂಯುಗಾರ್ಥಿನಃ—** ಸಂಯುಗಂ ಅರ್ಥಯಂತೇ ಇತಿಸಂಯುಗಾರ್ಥಿನಃ, 'ಸಂಪ್ರಹಾರಾಭಿಸಂಪಾತಕಲಿ ಸಂಸ್ಫೋಟಸಂಯುಗಾಃ' ಅಮರ, ಅರ್ಕಸೂನು ಎಂಬಲ್ಲಿ ಅರ್ಕ = ಸೂರ್ಯ, 'ವಿಕರ್ತನಾರ್ಕ ಮಾರ್ತಂಡಮಿಹಿರಾರುಣಪೂಷಣಃ' ಅಮರ ।

**ಅರತಿವಿರಹಿತಃ—** ರತೇಃ ಅಭಾವಃ ಅರತಿಃ, ಅರತ್ಯಾ ವಿರಹಿತಃ ಅರತಿವಿರಹಿತಃ, ಪ್ರತಿವಚನಂ = ಉತ್ತರಂ, 'ಪ್ರತಿವಾಕ್ಯೋತ್ತರೇ ಸಮೇ' ಅಮರ ।

**ಕ್ರಿಯಾಪದ—** ಅದಿಶತ್- ನೋ(ನ) ಅದಿಶತ್ ಇತಿ ನೋ ಎಂಬಲ್ಲಿ 'ದ್ವೌ ನಞೌ ಪ್ರಕೃತಮರ್ಥಂ ದ್ರಢಯತಃ' ಎಂಬ ನ್ಯಾಯದಿಂದ ಕೊಟ್ಟೇ ಕೊಡುತ್ತಿದ್ದರು ಎಂದು ಅರ್ಥ. ಅದಿಶತ್ ಅದಿಶತಾಂ ಅದಿಶನ್, ಅದಿಶಃ ಅದಿಶತಂ ಅದಿಶತ, ಅದಿಶಂ ಅದಿಶಾವ ಅದಿಶಾಮ । ದಿಶ ಅತಿಸರ್ಜನೇ ಆರನೆಯ ಗಣ ಸಕ. ಪರ. ಅನಿಟ್, ಲಙ್ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಪ್ರಸನ್ನೇನ ಅರ್ಕಸೂನುನಾ ಸಧನಾಯೇಭ್ಯಃ ಧನಂ ಇವ ಉಗ್ರೇಣ ಪಾರ್ಥೇನ ಸಂಯುಗಾರ್ಥಿಭ್ಯಃ ಶರಶತಂ ಇವ ಅರತಿವರಹಿತೇನ ತೇನ ಅಖಿಲೇಭ್ಯಃ ಚೋದಕೇಭ್ಯಃ ಅದೀನಂ ಪ್ರತಿವಚನಂ ನೋ(ನ) ಅದಿಶ್ಯತ ಇತಿ ನೋ (ಕರ್ಮಣಿ) ।

★ ★ ★

**ಅವತಾರಿಕಾ—** ಹೀಗೆ ಪಾಠ ಹೇಳಿದ ಮೇಲೆ ಆಚಾರ್ಯರು ಮಾಧ್ಯಾಹ್ನಿಕ ಸ್ನಾನಕ್ಕೆ ಬಂದರೆಂದು ಮುಂದಿನ ಶ್ಲೋಕದಿಂದ ಹೇಳುತ್ತಾರೆ.

**ಅಥ ದಶಶತಶೋಚಿಷ್ಯಾಪ್ರಯಾತಿ ಪ್ರತೀಚ್ಯಾಂ(ಚ್ಯಾಃ)**
**ಪ್ರವಚನಮವಸಾಯ್ಯ(ಯ) ಸ್ನಾತುಮಾಯಾತ್ ತಟಾಕಮ್ ।**
**ಪೃಥುಮತಿರಿಹ ತಾವತ್ ಶ್ರೇಷ್ಠಸಂಸರ್ಗಲೋಲೈಃ**
**ಸಮಗಮಿ ಸಪದಿ ಸ್ವರ್ನಿಮ್ನಗಾದ್ಯೈಶ್ಚ(ಸು)ತೀರ್ಥೈಃ ॥ 26 ॥**

**ಪದಚ್ಛೇದ—** ಅಥ, ದಶಶತಶೋಚಿಷಿ, ಆಪ್ರಯಾತಿ, ಪ್ರತೀಚ್ಯಾಂ(ಚ್ಯಾಃ), ಪ್ರವಚನಂ, ಅವಸಾಯ್ಯ(ಯ), ಸ್ನಾತುಂ, ಆಯಾತ್, ತಟಾಕಂ, ಪೃಥುಮತಿಃ, ಇಹ, ತಾವತ್, ಶ್ರೇಷ್ಠಸಂಸರ್ಗಲೋಲೈಃ, ಸಮಗಮಿ, ಸಪದಿ, ಸ್ವರ್ನಿಮ್ನ-ಗಾದ್ಯೈಃ, ಚ(ಸು) ತೀರ್ಥೈಃ ।

**ಅನ್ವಯ—** ಅಥ, ದಶಶತಶೋಚಿಷಿ, ಪ್ರತೀಚ್ಯಾಂ, (ಚ್ಯಾಃ) ಆ, ಪ್ರಯಾತಿ (ಸತಿ), ಪೃಥುಮತಿಃ, ಪ್ರವಚನಂ, ಅವಸಾಯ,(ಯ್ಯ) ಸ್ನಾತುಂ (ಯಾವತ್) ತಟಾಕಂ, ಆಯಾತ್, ತಾವತ್, ಶ್ರೇಷ್ಠಸಂಸರ್ಗಲೋಲೈಃ, ಸ್ವರ್ನಿಮ್ನಗಾದ್ಯೈಃ ಸುತೀರ್ಥೈಃ, ಚ, ಇಹ ಸಪದಿ, ಸಮಗಮಿ ।

**ಅನ್ವಯಾರ್ಥ—**

**ಅಥ** = ಅನಂತರ,

**ದಶಶತಶೋಚಿಷಿ** = ಅಸಂಖ್ಯಕಿರಣಗಳುಳ್ಳ ಸೂರ್ಯನು,

**ಪ್ರತೀಚ್ಯಾಂ** = ಪಶ್ಚಿಮ ದಿಕ್ಕಿನಲ್ಲಿ, (ಪ್ರತೀಚ್ಯಾಃ = ಪಶ್ಚಿಮ ದಿಕ್ಕಿಗೆ, ಅಭಿಮುಖಿಂ = ಎದುರಾಗಿ),

ಆ = ಸ್ವಲ್ಪವಾಗಿ,

**ಪ್ರಯಾತಿ (ಸತಿ)** = ಹೋಗುತ್ತಿರಲಾಗಿ,

**ಪೃಥುಮತಿಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,

**ಪ್ರವಚನಂ** = ಶಾಸ್ತ್ರವ್ಯಾಖ್ಯಾನವನ್ನು,

**ಅವಸಾಯ(ಯ್ಯ)** = ಮುಗಿಸಿ,

**ಸ್ನಾತುಂ** = ಮಾಧ್ಯಾಹ್ನಿಕ ಸ್ನಾನಕ್ಕೋಸ್ಕರ, (ಯಾವತ್ = ಎಷ್ಟರಲ್ಲಿ)

**ತಟಾಕಂ** = ಸರೋವರವನ್ನು ಕುರಿತು,

**ಆಯಾತ್** = ಬಂದರೋ,

**ತಾವತ್** = ಅಷ್ಟರಲ್ಲಿ

**ಶ್ರೇಷ್ಠಸಂಸರ್ಗಲೋಲೈಃ** = ಅತ್ಯಂತ ಉತ್ತಮರಾದ ಶ್ರೀಮಧ್ವಾಚಾರ್ಯರ ಸಂಬಂಧದ ವಿಷಯದಲ್ಲಿ ಆಸಕ್ತಿಯುಳ್ಳ

**ಸ್ವರ್ನಿಮ್ನಗಾದ್ಯೈಃ** = ದೇವಗಂಗಾನದಿಯೇ ಮೊದಲಾಗಿ ಉಳ್ಳ

**(ಸು)ತೀರ್ಥೈಃ ಚ** = ಉತ್ತಮ ತೀರ್ಥಗಳಿಂದಲೂ,

**ಇಹ** = ಆಚಾರ್ಯರು ಮಾಧ್ಯಾಹ್ನಿಕ ಸ್ನಾನ ಮಾಡಲಿರುವ ಸರೋವರದಲ್ಲಿ,

**ಸಪದಿ** = ಕೂಡಲೇ,

**ಸಮಗಮಿ** = ಸೇರಲ್ಪಟ್ಟಿತು.

**ತಾತ್ಪರ್ಯ**— ಹೀಗೆ ಶ್ರೀಮಧ್ವಾಚಾರ್ಯರು ಪ್ರವಚನ ಮಾಡುತ್ತಿರಲಾಗಿ ಮಧ್ಯಾಹ್ನದ ಸಮಯವೂ ಮೀರಿತು. ಕೂಡಲೇ ಅವರು ವ್ಯಾಖ್ಯಾನವನ್ನು ಮುಗಿಸಿ ಮಾಧ್ಯಾಹ್ನಿಕ ಸ್ನಾನಕ್ಕಾಗಿ ಸರೋವರಕ್ಕೆ ಬಂದರು. ಅವರು ಬರುವಷ್ಟರಲ್ಲಿ ಗಂಗಾನದಿತೀರ್ಥಾಭಿಮಾನಿದೇವತೆಗಳೂ ಶ್ರೀಮಧ್ವರ ಸಂಪರ್ಕದಿಂದ ತಾವು ಪವಿತ್ರರಾಗಬೇಕೆಂಬ ಆಸೆಯಿಂದ ಆಚಾರ್ಯರು ಬರುವುದಕ್ಕೆ ಮೊದಲೇ ಆ ಸರೋವರದಲ್ಲಿ ಬೇಗನೆ ಬಂದು ಸೇರಿಕೊಂಡರು. ಗಂಗಾದಿತೀರ್ಥಾಭಿಮಾನಿ ದೇವತೆಗಳೂ ಆಚಾರ್ಯರ ಸಮಾಗಮದಿಂದ ಪವಿತ್ರರಾಗಲು ಬಯಸುತ್ತಿದ್ದರು ಎಂದು ಹೇಳಿದ್ದರಿಂದ ಆಚಾರ್ಯರ ಸಂಪರ್ಕವು ಎಲ್ಲಾ ತೀರ್ಥಾಭಿಮಾನಿದೇವತೆಗಳ ಸಂಗಕ್ಕಿಂತಲೂ ಪವಿತ್ರವು ಎಂದು ತಿಳಿಸಿದಂತಾಯಿತು.

**ವಿಗ್ರಹ ಮತ್ತು ಕೋಶ**—

**ದಶಶತಶೋಚಿಷಿ**— ದಶಗುಣಿತಂ ಶತಂ ದಶಶತಂ, ದಶಶತಂ ಶೋಚೀಂಷಿ ಯಸ್ಯ ಸಃ ದಶಶತಶೋಚಿ ತಸ್ಮಿನ್ (ದಶ ಶೋಚಿಸ್ ಸಕಾರಾಂತ ಪುಲ್ಲಿಂಗ) ಆ = ಈಷತ್ = ಸ್ವಲ್ಪ, ಆಙ ಈಶದರ್ಥೇಽಭಿವ್ಯಾಪ್ತೌ ಸೀಮಾರ್ಥೇ ಧಾತುಯೋಗಜೇ' ಅಮರ ।

**ಪೃಥುಮತಿಃ**— ಪೃಥುಃ ಮತಿಃ ಯಸ್ಯ ಸಃ ಪೃಥುಮತಿಃ ।

**ಶ್ರೇಷ್ಠಸಂಸರ್ಗಲೋಲೈಃ**— ಪ್ರಶಸ್ಯಃ ಶ್ರೇಯಾನ್ ಶ್ರೇಷ್ಠಃ, ಶ್ರೇಷ್ಠಸ್ಯ ಸಂಸರ್ಗಃ ಶ್ರೇಷ್ಠಸಂಸರ್ಗಃ, ಶ್ರೇಷ್ಠ ಸಂಸರ್ಗೇ ಲೋಲಾನಿ ಶ್ರೇಷ್ಠಸಂಸರ್ಗಲೋಲಾನಿ ತೈಃ । ಲೋಲ = ಆಸೆಯಿಂದ ಕೂಡಿದ, 'ಲೋಲಃ ಸತೃಷ್ಣಚಲಯೋಃ' ಭಾಸ್ಕರ ।

**ಸ್ವರ್ನಿಮ್ನಗಾದ್ಯೈಃ**— ಸ್ವಃ ನಿಮ್ನಗಾ ಸ್ವರ್ನಿಮ್ನಗಾ, ಸ್ವರ್ನಿಮ್ನಗಾ ಆದ್ಯಾ ಯೇಷಾಂ ತಾನಿ ಸ್ವರ್ನಿಮ್ನಗಾದ್ಯಾನಿ, ತೈಃ। (ಶೋಭನಾನಿ ಚ ತಾನಿ ತೀರ್ಥಾನಿ ಚ ಸುತೀರ್ಥಾನಿ ತೈಃ)

**ಕ್ರಿಯಾಪದ—** **ಆಯಾತ್**- ಆ+ಅಯಾತ್ ಅಯಾತಾಂ ಅಯುಃ-ಅಯಾನ್, ಅಯಾಃ ಅಯಾತಂ ಅಯಾತ, ಅಯಾಂ ಅಯಾವ ಅಯಾಮ । ಯಾ ಪ್ರಾಪಣೇ ಸಕ. ಪರಸ್ಮೈಪದಿ ಎರಡನೇ ಗಣ ಅದಾದಿ, ಅನಿಟ್ ಅನದ್ಯತನ ಭೂತೇ ಲಙ್, ಯಾ = to go ಆಯಾ = to come. ಸಮ್ ಅಗಮಿ ಗಮ್‍ಲೃ ಗತೌ ಸಕ. ಅನಿ ಪರ to go ಲುಙ್ ।

**ಪ್ರಯೋಗ—** ಅಥ ದಶಶತಶೋಚಿಷಿ ಪ್ರತೀಚ್ಯಾಃ ಆ ಪ್ರಯಾತಿ (ಸತಿ) ಪೃಥುಮತಿನಾ ಪ್ರವಚನಂ ಅವಸಾಯ್ಯ ಸ್ನಾತುಂ ತಟಾಕಃ ಅಯಾಯತ (ಕರ್ಮಣಿ) ತಾವತ್ ಇಹ ಶ್ರೇಷ್ಠಸಂಸರ್ಗಲೋಲಾನಿ ಸ್ವರ್ನಿಮ್ನಗಾದ್ಯಾನಿ (ಸು) ತೀರ್ಥಾನಿ ಸಪದಿ ಸಮಗಂಸತ (ಅಕರ್ಮಕ ಕರ್ತರಿ ಲುಙ್) 'ಸಮೋಗಮ್ಯೃಚ್ಛಿಭ್ಯಾಂ' ಎಂಬ ಸೂತ್ರದಿಂದ ಸಮ್ ಉಪಸರ್ಗ ಬಂದಾಗ ಗಮ್ ಧಾತುವಿಗೆ ಆತ್ಮನೇಪದ ಬರುತ್ತದೆ ಮತ್ತು ಅದು ಅಕರ್ಮಕವಾಗತ್ತದೆ.

★ ★ ★

**ಅವತಾರಿಕಾ—** ಆಚಾರ್ಯರು ಸ್ನಾನಕ್ಕಾಗಿ ಸರೋವರಕ್ಕೆ ಇಳಿದಾಗ ಅವರ ಸಂಪೂರ್ಣ ಆಕೃತಿಯನ್ನು ಹೊಂದಿದ ನೀರಿನ ರಾಶಿಯನ್ನು ವರ್ಣಿಸುತ್ತಾರೆ.

**ಘನರಸನಿಕರೋಽಸಾವಂತರತ್ಯಂತಶುದ್ಧೋ**
**ಮುನಿಗಣ ಇವ ಭೂಯಃ ಸ್ನೇಹವಾನ್ ಪ್ರಾಗ್‍ದಧಾನಃ ।**
**ಪ್ರತಿಕೃತಿಮಖಿಲಜ್ಞಸ್ಯಾಪರೋಕ್ಷ್ಯೇಣ ತಾವತ್**
**ಸ್ಫುಟಮಲಭತ ರೂಪಂ ಮಜ್ಜನೇ ಸಜ್ಜನೇಷ್ಟಮ್ ॥ 27 ॥**

**ಪದಚ್ಛೇದ—** ಘನರಸನಿಕರಃ, ಅಸೌ, ಅಂತಃ, ಅತ್ಯಂತಶುದ್ಧಃ, ಮುನಿಗಣಃ, ಇವ, ಭೂಯಃಸ್ನೇಹವಾನ್, ಪ್ರಾಕ್, ದಧಾನಃ, ಪ್ರತಿಕೃತಿಂ, ಅಖಿಲಜ್ಞಸ್ಯ, ಅಪರೋಕ್ಷ್ಯೇಣ, ತಾವತ್, ಸ್ಫುಟಂ, ಅಲಭತ, ರೂಪಂ, ಮಜ್ಜನೇ, ಸಜ್ಜನೇಷ್ಟಮ್ ।

**ಅನ್ವಯ—** ಅಂತಃ, ಅತ್ಯಂತಶುದ್ಧಃ, ಭೂಯಃಸ್ನೇಹವಾನ್, ಅಸೌ, ಘನರಸನಿಕರಃ, ಪ್ರಾಕ್, ಅಖಿಲಜ್ಞಸ್ಯ, ಪ್ರತಿ-ಕೃತಿಂ, ದಧಾನಃ (ಸನ್), ತಾವತ್, ಮಜ್ಜನೇ, ಸಜ್ಜನೇಷ್ಟಂ, ರೂಪಂ, ಸ್ಫುಟಂ, ಆಪರೋಕ್ಷ್ಯೇಣ, ಮುನಿಗಣಃ, ಇವ, ಅಲಭತ ।

**ಅನ್ವಯಾರ್ಥ—**

**ಅಂತಃ** = ನೀರಿನ ಒಳಗಡೆ,
**ಅತ್ಯಂತಶುದ್ಧಃ** = ಕೆಸರು ಇತ್ಯಾದಿಗಳಿಂದ ರಹಿತವಾಗಿದ್ದು ಬಹಳ ಪವಿತ್ರವಾದ,
**ಭೂಯಃಸ್ನೇಹವಾನ್** = ಬಹಳವಾದ, ದ್ರವತ್ವ (ಜಿಡ್ಡು) ಎಂಬ ಧರ್ಮವುಳ್ಳ,
**ಅಸೌ ಘನರಸನಿಕರಃ** = ಈ ನೀರಿನ ಸಮೂಹವು,
**ಪ್ರಾಕ್** = ಆಚಾರ್ಯರು ಸ್ನಾನಕ್ಕೆ ಇಳಿಯುವುದಕ್ಕಿಂತ ಮೊದಲು,
**ಅಖಿಲಜ್ಞಸ್ಯ** = ಸರ್ವಜ್ಞರಾದ ಶ್ರೀಮಧ್ವಾಚಾರ್ಯರ,
**ಪ್ರತಿಕೃತಿಂ** = ಪ್ರತಿಬಿಂಬವನ್ನು,
**ದಧಾನಃ ಸನ್** = ಧರಿಸಿದ್ದಾಗಿ,
**ತಾವತ್ ಮಜ್ಜನೇ** = ಅವಗಾಹನ ಸ್ನಾನಕ್ಕೆ ಇಳಿದ ಸಮಯದಲ್ಲಿ,
**ಸಜ್ಜನೇಷ್ಟಂ** = ಸಜ್ಜನರಿಗೆ ಪ್ರಿಯವಾದ,
**ರೂಪಂ** = ಆಚಾರ್ಯರ ಆಕೃತಿಯನ್ನು,

**ಸ್ಫುಟಂ** = ಸ್ಪಷ್ಟವಾಗಿ,
**ಅಪರೋಕ್ಷ್ಯೇಣ** = ಪ್ರತ್ಯಕ್ಷತೆಯಿಂದ,
(**ಅಂತಃ** = ಅಂತಃಕರಣದಲ್ಲಿ
**ಅತ್ಯಂತಶುದ್ಧಃ** = ಅಜ್ಞಾನಾದಿ ದೋಷರಹಿತವಾದ,
**ಪ್ರಾಕ್** = ಧ್ಯಾನ ಯೋಗವು ಪರಿಪಕ್ವವಾಗುವುದಕ್ಕಿಂತ ಮೊದಲು,
**ಅಖಿಲಜ್ಞಸ್ಯ** = ಸರ್ವಜ್ಞನಾದ ಭಗವಂತನ,
**ಸಜ್ಜನೇಷ್ಟಂ** = ಭಗವಂತನ ಭಕ್ತರಾದ ಜನರಿಗೆ, ಪ್ರೀತಿಪಾತ್ರರಾದ ಜನರಿಗೆ ಪ್ರೀತಿಪಾತ್ರವಾದ,
**ರೂಪಂ** = ಭಗವಂತನ ರೂಪವನ್ನು,
**ದಧಾನಃ** = ಧರಿಸಿರುವ,
**ಭೂಯಸ್ನೇಹವಾನ್** = ಬಹಳ ಭಕ್ತಿಯುಳ್ಳ)
**ಮುನಿಗಣಃ ಇವ** = ಮುನಿಗಳ ಸಮೂಹದಂತೆ,
**ಅಲಭತ** = ಹೊಂದಿತು.

ತಾತ್ಪರ್ಯ— ಮುನಿಗಳ ಮನಸ್ಸು ಅಜ್ಞಾನ ಕಾಮ್ಯಕರ್ಮ ಮೊದಲಾದ ದೋಷಗಳಿಂದ ದೂರವಾಗಿ ಪರಮ ಪವಿತ್ರವಾಗಿರುತ್ತದೆ. ಅವರಿಗೆ ಭಗವಂತನಲ್ಲಿ ಅತಿಶಯವಾದ ಭಕ್ತಿಯೂ ಇರುತ್ತದೆ. ಅವರು, ಧ್ಯಾನ ಯೋಗವು ಪಕ್ವ ವಾಗುವುದಕ್ಕಿಂತ ಮೊದಲು ಶುದ್ಧವಾದ ತಮ್ಮ ಅಂತಃಕರಣದಲ್ಲಿ ಪರಮಾತ್ಮನ ವಾಸನಾಮಯವಾದ ಪ್ರತಿಬಿಂಬವನ್ನು ನೋಡುವರು. ಧ್ಯಾನ ಯೋಗವು ಪರಿಪಕ್ವವಾದ ಅನಂತರ ಮತ್ತೂ ಹೆಚ್ಚಾದ ಭಕ್ತಿಯಿಂದ ಕೂಡಿದವರಾಗಿ ಬಿಂಬರೂಪ ನಾದ ಪರಮಾತ್ಮನನ್ನು ಪ್ರತ್ಯಕ್ಷವಾಗಿಯೇ ನೋಡುವರು.

ಪ್ರಕೃತದಲ್ಲಿ ಆಚಾರ್ಯರು ಸ್ನಾನಕ್ಕಾಗಿ ಬಂದಿರುವ ಸರೋವರವೂ ಕೆಸರು ಇತ್ಯಾದಿಗಳಿಲ್ಲದೆ ಒಳಗಡೆಯೂ ಅತ್ಯಂತ ನಿರ್ಮಲವಾಗಿತ್ತು. ದ್ರವತ್ವ ಮತ್ತು ಸ್ನೇಹವೆಂಬ ಜಲದ ಗುಣಗಳಿಂದ ಬಹಳವಾಗಿ ಕೂಡಿಕೊಂಡಿತ್ತು. ಆಚಾರ್ಯರು ಸ್ನಾನ ಮಾಡುವುದಕ್ಕಿಂತ ಮೊದಲು ದಡದಲ್ಲಿ ಸ್ವಲ್ಪ ಹೊತ್ತು ನಿಂತಿರುವಾಗ ಅವರ ಪ್ರತಿಬಿಂಬವು ನೀರಿನಲ್ಲಿ ಕಾಣಿಸಿದ್ದರಿಂದ, ಅದು ಅದನ್ನು ಧರಿಸಿತು. ಅನಂತರ ಆಚಾರ್ಯರು ಸ್ನಾನಕ್ಕೆ ಇಳಿದಾಗ ಯೋಗಿಗಳ ಅಂತಃಕರಣದಲ್ಲಿ ಮೊದಲು ಪರಮಾತ್ಮನ ವಾಸನಾಮಯ ಪ್ರತಿಬಿಂಬವು ಗೋಚರಿಸಿ, ಅನಂತರ ಬಿಂಬರೂಪಿಯಾದ ಪರಮಾತ್ಮನೇ ಸಾಕ್ಷಾತ್ ಗೋಚರಿಸುವಂತೆ ಆಚಾರ್ಯರ ಬಿಂಬರೂಪದಂತಿರುವ ಸಾಕ್ಷಾತ್ ಆಕಾರವನ್ನೇ ಧರಿಸಿತು. ಹೀಗೆ ಕೆರೆಯ ನೀರಿನಲ್ಲಿ ಆಚಾರ್ಯರು ಸ್ನಾನಕ್ಕಾಗಿ ಇಳಿದರು.

**ವಿಗ್ರಹ ಮತ್ತು ಕೋಶ—**

**ಘನರಸನಿಕರಃ**— ಘನರಸಾನಾಂ ನಿಕರಃ ಘನರಸನಿಕರಃ, ಘನರಸಃ(ಘನರಸಂ) = ನೀರು, 'ನೀರಕ್ಷೀರಾಂಬು ಶಂಬರಂ' 'ಮೇಘಪುಷ್ಪಂ ಘನರಸಂ(ಘನರಸಂ)'. ಅಮರ ।
**ಅತ್ಯಂತಶುದ್ಧಃ**— ಅತ್ಯಂತಂ ಶುದ್ಧಃ ಅತ್ಯಂತಶುದ್ಧಃ ।
**ಮುನಿಗಣಃ**— ಮುನೀನಾಂ ಗಣಃ ಮುನಿಗಣಃ ।
**ಭೂಯಸ್ನೇಹವಾನ್**— ಭೂಯಾಂಶ್ಚ ಅಸೌ ಸ್ನೇಹಶ್ಚ ಭೂಯಃಸ್ನೇಹಃ, ಭೂಯಃಸ್ನೇಹಃ ಅಸ್ಯ ಅಸ್ತೀತಿ ಭೂಯಃಸ್ನೇಹವಾನ್ ।
**ಆಪರೋಕ್ಷ್ಯಂ**— ಅಪರೋಕ್ಷಸ್ಯ ಭಾವಃ ಆಪರೋಕ್ಷ್ಯಂ ತೇನ ।
**ಸಜ್ಜನಾಃ**— ಸಂತಶ್ಚ ತೇ ಜನಾಶ್ಚ ಸಜ್ಜನಾಃ ।

ಸಜ್ಜನೇಷ್ಟಂ— ಸಜ್ಜನಾನಾಂ ಇಷ್ಟಂ ಸಜ್ಜನೇಷ್ಟಂ । ಸ್ನೇಹವೆಂಬುದು ಜಲದ ಗುಣ. ಇಲ್ಲಿ ದ್ರವತ್ವವನ್ನು ಸ್ನೇಹ ಶಬ್ದದಿಂದ ಇಟ್ಟುಕೊಳ್ಳಬೇಕು.

**ಕ್ರಿಯಾಪದ—** ಅಲಭತ - ಅಲಭತ ಅಲಭೇತಾಂ ಅಲಭಂತ, ಅಲಭಥಾಃ ಅಲಭೇಥಾಂ ಅಲಭಧ್ವಂ, ಅಲಭೇ ಅಲಭಾವಹಿ ಅಲಭಾಮಹಿ । ಡುಲಭಷ್ (ಲಭ್) ಪ್ರಾಪ್ತೌ, ಸಕ. ಅನಿಟ್, ಆತ್ಮನೇಪದಿ to get to obtain ಹೊಂದು, ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಅಂತಃ ಅತ್ಯಂತಶುದ್ಧೇನ, ಭೂಯಃಸ್ನೇಹವತಾ ಅಮುನಾ ಘನರಸನಿಕರೇಣ, ಪ್ರಾಕ್ ಅಖಿಲಜ್ಞಸ್ಯ ಪ್ರತಿಕೃತಿಂ ದಧಾನೇನ (ಸತಾ) ತಾವತ್ ಮಜ್ಜನೇ, ಸಜ್ಜನೇಷ್ಟಂ ರೂಪಂ ಸ್ಫುಟಂ ಆಪರೋಕ್ಷ್ಯೇಣ ಮುನಿಗಣೇನ ಇವ ಅಲಭ್ಯತ ।

★ ★ ★

**ಅವತಾರಿಕಾ—** ಆಚಾರ್ಯರು ಸರೋವರದ ದಡದಲ್ಲಿ ಕುಳಿತು ನಿರ್ಮಾಲ್ಯ ತೀರ್ಥಕ್ಕಾಗಿ ಶಾಲಗ್ರಾಮ ಶಿಲೆಗಳಿಗೆ ಮಾಡಿದ ಅಭಿಷೇಕವನ್ನು ವರ್ಣಿಸುತ್ತಾರೆ.

**ಅಪರಿಮಿತಮನೀಷಸ್ಯೋಲ್ಲಸಚ್ಛಂಖಬಾಹೋ**
**ರಥಚರಣಶಿಲಾನಾಂ ತನ್ವತೋಽತ್ರಾಭಿಷೇಕಮ್ ।**
**ಪ್ರತಿತನವ ಉದಾರಾಸ್ತಾಸ್ವಲಂ ಸನ್ನಿಧಾತು-**
**ಸ್ತನವ ಇವ ವಿರೇಜುಃ ಪಾಂಚಜನ್ಯಪ್ರಿಯಸ್ಯ ॥ 28 ॥**

**ಪದಚ್ಛೇದ—** ಅಪರಿಮಿತಮನೀಷಸ್ಯ, ಉಲ್ಲಸಚ್ಛಂಖಬಾಹೋಃ, ರಥಚರಣಶಿಲಾನಾಂ, ತನ್ವತಃ, ಅತ್ರ, ಅಭಿಷೇಕಂ, ಪ್ರತಿತನವಃ, ಉದಾರಾಃ, ತಾಸು, ಅಲಂ, ಸನ್ನಿಧಾತುಃ, ತನವಃ, ಇವ, ವಿರೇಜುಃ, ಪಾಂಚಜನ್ಯಪ್ರಿಯಸ್ಯ ।

**ಅನ್ವಯ—** ಅತ್ರ, ರಥಚರಣಶಿಲಾನಾಂ, ಅಭಿಷೇಕಂ, ತನ್ವತಃ, ಉಲ್ಲಸಚ್ಛಂಖಬಾಹೋಃ, ಅಪರಿಮಿತಮನೀಷಸ್ಯ, ಉದಾರಾಃ, ಪ್ರತಿತನವಃ, ತಾವತ್, ಅಲಂ, ಸನ್ನಿಧಾತುಃ, ಪಾಂಚಜನ್ಯಪ್ರಿಯಸ್ಯ, ತನವಃ, ಇವ, ವಿರೇಜುಃ ।

**ಅನ್ವಯಾರ್ಥ—**

**ಅತ್ರ** = ಈ ಸರೋವರದ (ತೀರದ)ಲ್ಲಿ
**ರಥಚರಣಶಿಲಾನಾಂ** = ಶಾಲಗ್ರಾಮ ಶಿಲೆಗಳಿಗೆ,
**ಅಭಿಷೇಕಂ** = ಅಭಿಷೇಕವನ್ನು (ಸ್ನಾನವನ್ನು),
**ತನ್ವತಃ** = ಮಾಡುತ್ತಿರುವ,
**ಉಲ್ಲಸಚ್ಛಂಖಬಾಹೋಃ** = ಪ್ರಕಾಶಮಾನವಾದ ಶಂಖವನ್ನು ಬಲಗೈಯಲ್ಲಿ ಉಳ್ಳ,
**ಅಪರಿಮಿತಮನೀಷಸ್ಯ** = ಶ್ರೀಪೂರ್ಣಪ್ರಜ್ಞರ,
**ಉದಾರಾಃ** = ಚೆನ್ನಾಗಿರುವ,
**ಪ್ರತಿತನವಃ** = ಪ್ರತಿಬಿಂಬಗಳು,
**ತಾಸು** = ಆ ಶಿಲೆಗಳಲ್ಲಿ
**ಅಲಂ** = ಚೆನ್ನಾಗಿ,
**ಸನ್ನಿಧಾತುಃ** = ಸನ್ನಿಧಾನವನ್ನು ಇಟ್ಟಿರುವ,

**(ಉಲ್ಲಸಚ್ಛಂಖಬಾಹೋಃ** = ಪ್ರಕಾಶಮಾನವಾದ ಶಂಖವನ್ನು ಕೈಯಲ್ಲಿ ಹಿಡಿದಿರುವ,
**ಅಪರಿಮಿತಮನೀಷಸ್ಯ** = ಸರ್ವಜ್ಞನಾದ)
**ಪಾಂಚಜನ್ಯಪ್ರಿಯಸ್ಯ** = ಪಾಂಚಜನ್ಯವೆಂಬ ಶಂಖವು ಪ್ರಿಯವಾಗಿ ಉಳ್ಳ ಶ್ರೀಹರಿಯ,
**ತನವಃ ಇವ** = ಬಿಂಬ ಶರೀರಗಳಂತೆ,
**ವಿರೇಜುಃ** = ಹೊಳೆದವು.

**ತಾತ್ಪರ್ಯ—** ಆಚಾರ್ಯರು ಸರೋವರದಲ್ಲಿ ಸ್ನಾನಮಾಡಿ ಅಲ್ಲಿಯೇ ದಡದಲ್ಲಿ ಕುಳಿತು ನಿರ್ಮಾಲ್ಯ ತೀರ್ಥಕ್ಕಾಗಿ ಬಲಗೈಯಲ್ಲಿ ಶಂಖವನ್ನು ಹಿಡಿದುಕೊಂಡು ಅದರಿಂದ ಅಭಿಷೇಕ ಮಾಡಿದರು. ಆಗ ಅವರ ಅನೇಕ ಪ್ರತಿಬಿಂಬಗಳೂ ಶಾಲಗ್ರಾಮಗಳಲ್ಲಿ ಕಾಣಿಸಿಕೊಂಡವು. ಆ ಪ್ರತಿಬಿಂಬಗಳು ಆ ಶಾಲಗ್ರಾಮ ಶಿಲೆಗಳಲ್ಲಿ ಯಾವಾಗಲೂ ಸನ್ನಿಹಿತನಾಗಿರುವ, ಪಾಂಚಜನ್ಯಶಂಖಧಾರಿಯಾದ ಶ್ರೀ ಹರಿಯ ಶರೀರಗಳೋ ಎಂಬಂತೆ ಹೊಳೆದವು.

ಸ್ನಾತ್ವಾ ತೀರೇ ಉಪವಿಶ್ಯ, ಶಂಖಂ ದಕ್ಷಿಣಪಾಣಿನಾ ಗೃಹೀತ್ವಾ ತೀರ್ಥಾರ್ಥಂ ಶಾಲಿಗ್ರಾಮಶಿಲಾಭಿಷೇಕಕರಣ-ವೇಲಾಯಾಂ ಸ್ವಚ್ಛತ್ವೇನ ಶಾಲಿಗ್ರಾಮಶಿಲಾಸು ಪ್ರತಿಫಲಿತಾಃ ಹಸ್ತಧೃತಶಂಖಸ್ಯ ಮಧ್ವಾಚಾರ್ಯಸ್ಯ ಆಕಾರಾಃ ಶಾಲಿಗ್ರಾಮ-ಶಿಲಾಸನ್ನಿಹಿತಸ್ಯ ಶಂಖಪಾಣೇಃ ಹರೇಃ ರೂಪಾಣೀವ ರೇಜಿರೇ ಇತಿ ಭಾವಃ (ಛಲಾರಿಯ)

ಸ್ನಾನಮಾಡಿ ತೀರದಲ್ಲಿ ಕುಳಿತು ಶಂಖವನ್ನು ಬಲಗೈಯಿಂದ ಹಿಡಿದು ತೀರ್ಥಕ್ಕೋಸ್ಕರ ಶಾಲಿಗ್ರಾಮ ಶಿಲೆಗಳಿಗೆ ಅಭಿಷೇಕ ಮಾಡುವ ಸಮಯದಲ್ಲಿ ಸ್ವಚ್ಛತೆಯಿಂದಾಗಿ ಶಾಲಿಗ್ರಾಮ ಶಿಲೆಗಳಲ್ಲಿ ಪ್ರತಿಬಿಂಬಿತವಾದ, ಕೈಯಲ್ಲಿ ಶಂಖವನ್ನು ಹಿಡಿದಿರುವ ಶ್ರೀಮಧ್ವಾಚಾರ್ಯರ ಆಕಾರಗಳು, ಶಾಲಿಗ್ರಾಮ ಶಿಲೆಗಳಲ್ಲಿ ಸನ್ನಿಹಿತನಾದ ಪಾಂಚಜನ್ಯ ಶಂಖವನ್ನು ಕೈಯಲ್ಲಿ ಹಿಡಿದಿರುವ ಶ್ರೀಹರಿಯ ರೂಪಗಳಂತೆ ಶೋಭಿಸಿದವು ಎಂದು ಛಲಾರಿಯ ವ್ಯಾಖ್ಯಾನದ ಭಾವ. ಶ್ರೀಹರಿಯ ಭಕ್ತರಿಗೆ ಮುಕ್ತಿಯಲ್ಲಿ ತಮ್ಮ ಸ್ವಾಮಿಯ ಸಾರೂಪ್ಯವು ಪ್ರಮಾಣಸಿದ್ಧವಾದುದರಿಂದ ಈ ವರ್ಣನೆಯು ಯುಕ್ತವಾಗಿದೆ ಎಂದು ತಿಳಿಯಬೇಕು.

**ವಿಗ್ರಹ ಮತ್ತು ಕೋಶ—**

**ಅಪರಿಮಿತಮನೀಷಸ್ಯ—** ಅಪರಿಮಿತಾ ಮನೀಷಾ ಯಸ್ಯ ಸಃ ಅಪರಿಮಿತಮನೀಷಃ ತಸ್ಯ ।

**ಉಲ್ಲಸಚ್ಛಂಖಬಾಹೋಃ—** ಉಲ್ಲಸಂಶ್ಚಾಸೌ ಶಂಖಶ್ಚ ಉಲ್ಲಸಚ್ಛಂಖಃ, ಉಲ್ಲಸಚ್ಛಂಖಃ ಬಾಹೌ ಯಸ್ಯ ಸಃ ಉಲ್ಲಸಚ್ಛಂಖಬಾಹುಃ ತಸ್ಯ । 'ಉಲ್ಲಸಚ್ಛಂಖಬಾಹೋರಥಚರಣಶಿಲಾನಾಂ' ಎಂಬಲ್ಲಿ ಬಾಹೋಃ ಎಂಬ ವಿಸರ್ಗವು 'ಸ ' 'ರ' ಆಗಿ ರೇಫಕ್ಕೆ ಲೋಪ ಬಂದು ಬಾಹೋರಥ ಎಂದಾಗಿದೆ ।

**ರಥಚರಣಶಿಲಾನಾಂ—** ರಥಸ್ಯ ಚರಣಃ ರಥಚರಣಃ, (ರಥಚರಣಃ = ರಥದ ಕಾಲು = ಚಕ್ರ) ಸಃ ಅಸ್ಯ ಅಸ್ತೀತಿ ರಥಚರಣೀ, (ಚಕ್ರವುಳ್ಳ ಶ್ರೀಹರಿ), ರಥಚರಣಿನಃ ಶಿಲಾಃ ರಥಚರಣಶಿಲಾಃ ತಾಸಾಂ, ಅಥವಾ ರಥಚರಣಃ(ಚಕ್ರಂ) ಆಸು ಅಸ್ತೀತಿ ರಥಚರಣನ್ಯಃ, ರಥಚರಣನ್ಯಶ್ಚ ತಾಃ ಶಿಲಾಶ್ಚ ರಥಚರಣಶಿಲಾಃ ತಾಸಾಂ । (ಚಕ್ರ ಚಿಹ್ನೆಯಿಂದ ಕೂಡಿದ ಶಾಲಿಗ್ರಾಮ ಶಿಲೆಗಳು ಎಂದು ಅರ್ಥ) ।

**ಪಾಂಚಜನ್ಯಪ್ರಿಯಃ—** ಪಾಂಚಜನ್ಯಃ ಪ್ರಿಯಃ ಯಸ್ಯ ಸಃ ಪಾಂಚಜನ್ಯಪ್ರಿಯಃ ತಸ್ಯ ।

**ಕ್ರಿಯಾಪದ— ವಿರೇಜುಃ** - ವಿ+ರೇಜುಃ, ರರಾಜ ರರಾಜತುಃ-ರೇಜತುಃ ರರಾಜುಃ-ರೇಜುಃ, ರರಾಜಿಥ-ರೇಜಿಥ ರರಾಜಥುಃ-ರೇಜಥುಃ ರರಾಜ-ರೇಜ, ರರಾಜ ರರಾಜಿವ-ರೇಜಿವ ರರಾಜಿಮ-ರೇಜಿಮ । ರಾಜೃ ದೀಪ್ತೌ ಅಕ. ಸೇಟ್ ಉಭ. to shine ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಬಹುವಚನಂ ।

**ಪ್ರಯೋಗ—** ಅತ್ರ ರಥಚರಣಶಿಲಾನಾಂ ಅಭಿಷೇಕಂ ತನ್ವತಃ ಉಲ್ಲಸಚ್ಛಂಖಬಾಹೋಃ ಅಪರಿಮಿತಮನೀಷಸ್ಯ ಉದಾರಾಭಿಃ ಪ್ರತಿತನುಭಿಃ ತಾಸು ಅಲಂ ಸನ್ನಿಧಾತುಃ ಪಾಂಚಜನ್ಯಪ್ರಿಯಸ್ಯ ತನುಭಿಃ ಇವ ವಿರೇಜೇ (ಭಾವೇ) ।

★ ★ ★

**ಅವತಾರಿಕಾ**— ನಿರ್ಮಾಲ್ಯತೀರ್ಥ ಪ್ರಾಶನದ (ಶ್ರೀವಿಷ್ಣುಪಾದೋದಕ ಸೇವನದ) ಫಲವನ್ನು ವರ್ಣಿಸುತ್ತಾ ಆಚಾರ್ಯರು ನಿರ್ಮಾಲ್ಯ ತೀರ್ಥವನ್ನು ಸ್ವೀಕರಿಸಿದರು ಎಂದು ಹೇಳುತ್ತಾರೆ.

**ಅಭಿದಧತಿ ಮುನೀಂದ್ರಾ ದ್ವಾದಶಾಬ್ದೋಪವಾಸ-**
**ಪ್ರತಿಮಫಲಮಲಂ ಯತ್ ಸೇವನಂ ಭಕ್ತಿಯುಕ್ತಮ್ ।**
**ಅಧಿಕಮಮರನದ್ಯಾದ್ಯಾಪ್ಲವಾದ್ಧನ್ಯಮಾನ್ಯಾ-**
**ದಪಿಬದಲವಬೋಧೋ ವಿಷ್ಣುಪಾದೋದಕಂ ತತ್ ॥ 29 ॥**

**ಪದಚ್ಛೇದ**— ಅಭಿದಧತಿ, ಮುನೀಂದ್ರಾಃ, ದ್ವಾದಶಾಬ್ದೋಪವಾಸಪ್ರತಿಮಫಲಂ, ಅಲಂ, ಯತ್ಸೇವನಂ, ಭಕ್ತಿ-ಯುಕ್ತಂ, ಅಧಿಕಂ, ಅಮರನದ್ಯಾದ್ಯಾಪ್ಲವಾತ್, ಧನ್ಯಮಾನ್ಯಾತ್, ಅಪಿಬತ್, ಅಲವಬೋಧಃ, ವಿಷ್ಣುಪಾದೋದಕಂ, ತತ್।

**ಅನ್ವಯ**— ಮುನೀಂದ್ರಾಃ, ಭಕ್ತಿಯುಕ್ತಂ, ಯತ್ಸೇವನಂ, ಅಲಂ, ದ್ವಾದಶಾಬ್ದೋಪವಾಸಪ್ರತಿಮಫಲಂ, ಧನ್ಯ-ಮಾನ್ಯಾತ್, ಅಮರನದ್ಯಾದ್ಯಾಪ್ಲವಾತ್, ಅಧಿಕಂ, ಅಭಿದಧತಿ, ಅಲವಬೋಧಃ, ತತ್, ವಿಷ್ಣುಪಾದೋದಕಂ, ಅಪಿಬತ್ ।

**ಅನ್ವಯಾರ್ಥ**—

**ಮುನೀಂದ್ರಾಃ** = ಮುನಿಶ್ರೇಷ್ಠರು,
**ಭಕ್ತಿಯುಕ್ತಂ** = ಭಕ್ತಿಸಹಿತವಾದ,
**ಯತ್** = ಯಾವ ಶ್ರೀವಿಷ್ಣುಪಾದೋದಕದ,
**ಸೇವನಂ** = ಸೇವಿಸುವಿಕೆಯನ್ನು,
**ಅಲಂ** = ಚೆನ್ನಾಗಿ,
**ದ್ವಾದಶಾಬ್ದೋಪವಾಸಪ್ರತಿಮಫಲಂ** = ಹನ್ನೆರಡು ವರ್ಷಗಳ ಅನಶನಕ್ಕೆ (ಊಟವಿಲ್ಲದಿರುವಿಕೆಗೆ) ಸಮಾನ-ವಾದ ಫಲ ಉಳ್ಳದ್ದನ್ನಾಗಿಯೂ,
**ಧನ್ಯಮಾನ್ಯಾತ್** = ಪುಣ್ಯವಂತರಾದ ಹಿರಿಯರಿಂದ, ಪೂಜ್ಯವಾದ,
**ಅಮರನದ್ಯಾಪ್ಲಾವಾತ್** = ಗಂಗಾನದಿಯೇ, ಮೊದಲಾಗಿ ಉಳ್ಳ ನದಿಗಳಲ್ಲಿ ಸ್ನಾನ ಮಾಡುವುದಕ್ಕಿಂತಲೂ,
**ಅಧಿಕಂ** = ಉತ್ತಮವನ್ನಾಗಿ,
**ಅಭಿದಧತಿ** = ಹೇಳುತ್ತಾರೋ,
**ಅಲವಬೋಧಃ** = ಶ್ರೀಪೂರ್ಣಪ್ರಜ್ಞರು,
**ತತ್ ವಿಷ್ಣುಪಾದೋದಕಂ** = ಆ ನಿರ್ಮಾಲ್ಯತೀರ್ಥರೂಪವಾದ ಜಲವನ್ನು,
**ಅಪಿಬತ್** = ಕುಡಿದರು.

**ತಾತ್ಪರ್ಯ**— ಸಮುದ್ರವನ್ನು ಸೇರದ ಮತ್ತೊಂದು ಮಹಾ ನದಿಗೆ ಸೇರುವ ನದಿಯಲ್ಲಿ ಸ್ನಾನ ಮಾಡಿದರೆ ಮೂರು ರಾತ್ರಿಗಳಲ್ಲಿ (ಮೂರು ಹಗಲು ರಾತ್ರಿ ಪೂರ್ತಿಯಾಗಿ) ಉಪವಾಸ ಮಾಡಿದ ಪುಣ್ಯ ಫಲವು ಬರುತ್ತದೆ. ಸಮುದ್ರವನ್ನು ಸೇರುವ ನದಿಗಳು ಸ್ನಾನ ಮಾಡುವವರಿಗೆ ಒಂದು ಪಕ್ಷೋಪವಾಸದ ಫಲವನ್ನು ಕೊಡುತ್ತವೆ. ಸಮುದ್ರ ಸ್ನಾನವು ಒಂದು ತಿಂಗಳು ಉಪವಾಸದ ಫಲವನ್ನು ಕೊಡುತ್ತದೆ. ಗೋದಾವರೀ ನದಿಯ ನೀರು ಸ್ನಾನ ಮಾಡುವವರಿಗೆ ಆರು ತಿಂಗಳು ಉಪವಾಸ ಮಾಡಿದಾಗ ಬರುವ ಫಲವನ್ನು ಕೊಡುತ್ತದೆ. ಗಂಗೆಯು ಒಂದು ವರ್ಷದ ಫಲವನ್ನು ಕೊಡುತ್ತದೆ. ವಿಷ್ಣುಪಾದೋದಕವು ಹನ್ನೆರಡು ವರ್ಷಗಳ ಕಾಲ ಮಾಡಿದ ಉಪವಾಸದ ಫಲವನ್ನು ಕೊಡುತ್ತದೆ ಎಂದು ಪ್ರಮಾಣವಿದೆ. ಹೀಗೆ ವಿಷ್ಣುಪಾದೋದಕ ಪಾನ ಮಾಡಿದರೆ ಹನ್ನೆರಡು ವರ್ಷಗಳ ಕಾಲ ಉಪವಾಸ ಮಾಡಿದ ಪುಣ್ಯಫಲವು ದೊರಕುತ್ತದೆ.

ಹೀಗೆ ಹಿರಿಯರು ಬಹಳ ಪೂಜ್ಯ ಬುದ್ಧಿಯಿಂದ ಗೌರವಿಸಿರುವ ಗಂಗಾನದಿಗಳ ಸ್ನಾನಕ್ಕಿಂತಲೂ ಹೆಚ್ಚು ಫಲವನ್ನು ಕೊಡುವ ವಿಷ್ಣುಪಾದೋದಕವನ್ನು ಶ್ರೀಮಧ್ವಾಚಾರ್ಯರು ಪ್ರಾಶನ ಮಾಡಿದರು (ಕುಡಿದರು).

ಇಲ್ಲಿ ಭಾವಪ್ರಕಾಶಿಕೆಯಲ್ಲಿ ಉದಾಹೃತವಾದ ಪ್ರಮಾಣಗಳು -

**ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ ।**
**ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥**
**ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ ।**
**ದ್ವಾದಶಾಬ್ದೋಪವಾಸಸ್ಯ ವಿಷ್ಣುಪಾದೋದಸೇವನಂ ॥**
**ಯಾನಿ ಕಾನಿ ಚ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ಚ ।**
**ವಿಷ್ಣುಪಾದೋದಕಸ್ಯೈತೇ ಕಲಾಂ ನಾರ್ಹಂತಿ ಷೋಡಶೀಂ ॥ ಇತಿ ಅಭಿದಧತಿ ॥**

(ಈ ಪ್ರಮಾಣಗಳ ಅಭಿಪ್ರಾಯವನ್ನು ತಾತ್ಪರ್ಯದಲ್ಲಿಯೇ ಕೊಡಲಾಗಿದೆ.)

**ವಿಗ್ರಹ ಮತ್ತು ಕೋಶ—**

**ಮುನೀಂದ್ರಾಃ—** ಮುನೀನಾಂ ಇಂದ್ರಾಃ ಮುನೀಂದ್ರಾಃ ।

**ದ್ವಾದಶಾಬ್ದೋಪವಾಸಪ್ರತಿಮಫಲಂ—** ದ್ವಾದಶ ಅಬ್ದಾಃ ಯಸ್ಯ ಸಃ ದ್ವಾದಶಾಬ್ದಃ, ದ್ವಾದಶಾಬ್ದಶ್ಚಾಸೌ ಉಪವಾಸಶ್ಚ ದ್ವಾದಶಾಬ್ದೋಪವಾಸಃ, ದ್ವಾದಶಾಬ್ದೋಪವಾಸೇನ ಪ್ರತಿಮಾ ಯಸ್ಯ ತತ್ ದ್ವಾದಶಾಬ್ದೋಪವಾಸಪ್ರತಿಮಂ, ದ್ವಾದಶಾಬ್ದೋಪವಾಸಪ್ರತಿಮಂ ಫಲಂ ಯಸ್ಯ ತತ್ ದ್ವಾದಶಾಬ್ದೋಪವಾಸಪ್ರತಿಮ ಫಲಂ ।

**ಯತ್ಸೇವನಂ—** ಯಸ್ಯ ಸೇವನಂ ಯತ್ಸೇವನಂ ।

**ಭಕ್ತಿಯುಕ್ತಂ—** ಭಕ್ತ್ಯಾ ಯುಕ್ತಂ ಭಕ್ತಿಯುಕ್ತಂ ।

**ಅಮರನದ್ಯಾದ್ಯಾಪ್ಲವಾತ್—** ಅಮರಾಣಾಂ ನದೀ ಅಮರನದೀ, ಅಮರನದೀ ಆದಿಃ ಯಾಸಾಂ ತಾಃ ಅಮರನದ್ಯಾದಯಃ, ಅಮರನದ್ಯಾದಿಷು ಆಪ್ಲವಃ ಅಮರನದ್ಯಾದ್ಯಾಪ್ಲವಃ, ತಸ್ಮಾತ್ ।

**ಧನ್ಯಮಾನ್ಯಾತ್—** ಧನ್ಯೈಃ ಮಾನ್ಯಃ ಧನ್ಯಮಾನ್ಯಃ ತಸ್ಮಾತ್ ।

**ಅಲವಬೋಧಃ—** ನ ಲವಃ ಅಲವಃ, ಅಲವಃ ಬೋಧಃ ಯಸ್ಯ ಸಃ ಅಲವಬೋಧಃ ।

**ವಿಷ್ಣುಪಾದೋದಕಂ—** ಪಾದಯೋಃ ಉದಕಂ ಪಾದೋದಕಂ । ವಿಷ್ಣೋಃ ಪಾದೋದಕಂ ವಿಷ್ಣು-ಪಾದೋದಕಂ ತತ್ । ಆಪ್ಲಾವ = ಸ್ನಾನ, 'ಆಪ್ಲವಃ ಸ್ನಾನಂ' ಅಮರ ।

**ಕ್ರಿಯಾಪದ— ಅಪಿಬತ್**- ಅಪಿಬತ್ ಅಪಿಬತಾಂ ಅಪಿಬನ್, ಅಪಿಬಃ ಅಪಿಬತಂ ಅಪಿಬತ, ಅಪಿಬಂ ಅಪಿಭಾವ ಅಪಿಬಾಮ । ಪಾ ಪಾನೇ ಸಕ. ಅನಿ. ಪರ. to drink ಅನದ್ಯತನಭೂತೇ ಲಙ್ । **ಅಭಿದಧತಿ**- ಅಭಿ+ದಧಾತಿ ಧತ್ತಃ ದಧತಿ, ದಧಾಸಿ ಧತ್ಥಃ ಧತ್ಥ, ದಧಾಮಿ ದಧ್ವಃ ದಧ್ಮಃ । ಡುಧಾಞ್ (ಧಾ) ಧಾರಣಪೋಷಣಯೋಃ ಸಕ. ಅನಿಟ್ ಉಭ to put to grant, to produce to bear ಲಟ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಮುನೀಂದ್ರೈಃ ಭಕ್ತಿಯುಕ್ತಂ ಯತ್ಸೇವನಂ ಅಲಂ ದ್ವಾದಶಾಬ್ದೋಪವಾಸಪ್ರತಿಮಫಲಂ, ಧನ್ಯ-ಮಾನ್ಯಾತ್, ಅಮರನದ್ಯಾದ್ಯಾಪ್ಲವಾತ್ ಅಧಿಕಂ(ಚ) ಅಭಿಧೀಯತೇ, ಅಲವಬೋಧೇನ ತತ್ ವಿಷ್ಣುಪಾದೋದಕಂ ಅಪೀಯತ (ಕರ್ಮಣಿ) ।

★ ★ ★

**ಅವತಾರಿಕಾ—** ಆಚಾರ್ಯರು ಗೋಪೀಚಂದನದಿಂದ ಊರ್ಧ್ವಪುಂಡ್ರ-ಚಕ್ರ-ಶಂಖಗಳನ್ನು ಧರಿಸಿದಾಗ ಹೇಗೆ ಶೋಭಿಸಿದರು ಎಂಬ ವಿಷಯವನ್ನು ವರ್ಣಿಸುತ್ತಾರೆ.

**ತರಣಿಭಿರಿವ ಗೌರೈರೂರ್ಧ್ವಪುಂಡ್ರೈರ್ದ್ವಿಷಡ್ಭಿಃ**
**ಸದರಪರಮಚಕ್ರೋದೀರ್ಣತೇಜಾ ಹರೀಷ್ಟಃ ।**
**ಮುರರಿಪುವಿಮುಖಾನಾಂ ದುಸ್ಸಹೋ ದೇಹಭಾಜಾಂ**
**ಲಯಸಮಯ ಇವಾನ್ಯೋ ಮಾನ್ಯಧೀರಾಬಭಾಸೇ ॥ 30 ॥**

**ಪದಚ್ಛೇದ—** ತರಣಿಭಿಃ, ಇವ, ಗೌರೈಃ, ಊರ್ಧ್ವಪುಂಡ್ರೈಃ, ದ್ವಿಷಡ್ಭಿಃ, ಸದರಪರಮಚಕ್ರೋದೀರ್ಣತೇಜಾಃ, ಹರೀಷ್ಟಃ, ಮುರರಿಪುವಿಮುಖಾನಾಂ, ದುಸ್ಸಹಃ, ದೇಹಭಾಜಾಂ, ಲಯಸಮಯಃ, ಇವ, ಅನ್ಯಃ, ಮಾನ್ಯಧೀಃ, ಆಬಭಾಸೇ ।

**ಅನ್ವಯ—** ಸದರಪರಮಚಕ್ರೋದೀರ್ಣತೇಜಾಃ, ಹರೀಷ್ಟಃ, ಮುರರಿಪುವಿಮುಖಾನಾಂ, ದೇಹಭಾಜಾಂ, ದುಸ್ಸಹಃ, ಮಾನ್ಯಧೀಃ, ತರಣಿಭಿಃ, ಇವ, ಗೌರೈಃ, ದ್ವಿಷಡ್ಭಿಃ, ಊರ್ಧ್ವಪುಂಡ್ರೈಃ, ಅನ್ಯಃ, ಲಯಸಮಯಃ, ಇವ, ಆಬಭಾಸೇ।

**ಅನ್ವಯಾರ್ಥ—**

**ಸದರ, ಪರಮಚಕ್ರೋದೀರ್ಣತೇಜಾಃ** = ಶಂಖದಿಂದ ಸಹಿತವಾದ ಅರೆಕಾಲುಗಳಿಂದ, (ಕಡ್ಡಿಗಳಿಂದ ಕೂಡಿದ) ಉತ್ತಮವಾದ ಚಕ್ರದ ಚಿಹ್ನೆಯಿಂದ ಅಭಿವೃದ್ಧಿಗೊಂಡ ಪ್ರಕಾಶವುಳ್ಳ,
**ಹರೀಷ್ಟಃ** = ಶ್ರೀಮನ್ನಾರಾಯಣನಿಗೆ ಪ್ರಿಯರಾದ,
**ಮುರರಿಪುವಿಮುಖಾನಾಂ** = ಶ್ರೀಹರಿಗೆ ವಿರುದ್ಧರಾದ(ಭಕ್ತರಲ್ಲದ),
**ದೇಹಭಾಜಾಂ** = ಪ್ರಾಣಿಗಳಿಗೆ,
**ದುಸ್ಸಹಃ** = ಸಹಿಸಲಾಗದ,
**ಮಾನ್ಯಧೀಃ** = ಪೂಜ್ಯವಾದ ಬುದ್ಧಿಯುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು,
**ತರಣಿಭಿಃ ಇವ** = ಹನ್ನೆರಡು ಮಂದಿ ಸೂರ್ಯರುಗಳಿಂದೆಂಬಂತೆ,
**ಗೌರೈಃ** = ಬೆಳ್ಳಗಿರುವ,
**ದ್ವಿಷಡ್ಭಿಃ** = ಹನ್ನೆರಡು ಸಂಖ್ಯೆಯ,
**ಊರ್ಧ್ವಪುಂಡ್ರೈಃ** = ಮೇಲ್ಮುಖವಾದ ಗೋಪೀಚಂದನ ಚಿಹ್ನೆಗಳಿಂದ,
**ಅನ್ಯಃ** = ವಿಲಕ್ಷಣವಾದ ಬೇರೊಂದು,
**ಲಯಸಮಯಃ ಇವ** = ಪ್ರಲಯ ಕಾಲದಂತೆ,
**ಆಬಭಾಸೇ** = ಪ್ರಕಾಶಿಸಿದರು.

**ತಾತ್ಪರ್ಯ—** ಪ್ರಲಯ ಕಾಲದಲ್ಲಿ ಹನ್ನೆರಡು ಮಂದಿ ಸೂರ್ಯರು ಉದಯಿಸುವರು. ಆಗ ಶ್ರೇಷ್ಠವಾದ ಅರೆಕಾಲುಗಳಿಂದ ಕೂಡಿದ ಶ್ರೀಹರಿಯ ಸುದರ್ಶನ ಚಕ್ರವು ಸಂಹಾರಕಾರ್ಯಕ್ಕೆ ನೆರವಾಗಿ ಬರುತ್ತದೆ. ಅದರ ಕಾಂತಿಯಿಂದ ಪ್ರಲಯ ಕಾಲದ ತೇಜಸ್ಸು ಮತ್ತೂ ಹೆಚ್ಚುತ್ತದೆ. ಶ್ರೀಮನ್ನಾರಾಯಣನು ಮಾಡುವ ಸಂಹಾರ ಕಾರ್ಯಕ್ಕೆ ಅಂಗವಾದ ಪ್ರಲಯಕಾಲವು ಶ್ರೀಹರಿಯ ಸಂಕಲ್ಪಕ್ಕೆ ಅನುಗುಣವಾಗಿ ಅವನಿಗೆ ಇಷ್ಟವಾಗಿದೆ. ಹರಿವಿಮುಖರಾದ ದುಷ್ಟರಿಗೆ ಆ ಕಾಲವು ಅತ್ಯಂತ ದುಸ್ಸಹವಾಗಿದೆ. ಆ ಪ್ರಲಯಕಾಲದಲ್ಲಿ ದುಷ್ಟರು ಆತ್ಯಂತಿಕವಾಗಿ ನಾಶ ಹೊಂದುವರು. ಹರಿದ್ವೇಷದ ಪರಿಪಾಕವುಳ್ಳವರು ಪ್ರಲಯ ಕಾಲದಲ್ಲಿ ತಮಸ್ಸನ್ನು ಹೊಂದುವರು. ಪ್ರಕೃತ ಶ್ರೀಮಧ್ವಾಚಾರ್ಯರೂ ಆ ಪ್ರಲಯ

ಕಾಲದಂತೆಯೇ ಶೋಭಿಸಿದರು. ಅವರೂ ಸ್ನಾನಾನಂತರದಲ್ಲಿ ಪ್ರಲಯಕಾಲದ ದ್ವಾದಶಾದಿತ್ಯರಂತೆ ಹೊಳೆಯುವ ಹನ್ನೆರಡು ಊರ್ಧ್ವಪುಂಡ್ರವೆಂಬ ಮೇಲ್ಮುಖವಾದ ಬೆಳ್ಳಗಿರುವ ನಾಮುಗಳನ್ನು ಹಚ್ಚಿಕೊಂಡರು. ನಾಮುಗಳ ಮೇಲೆ ಪಾರ್ಶ್ವಗಳಲ್ಲಿಯೂ ಶಂಖಚಕ್ರಗಳ ಚಿಹ್ನೆಗಳನ್ನು ಹಚ್ಚಿಕೊಂಡು ಮತ್ತೂ ಹೆಚ್ಚು ಕಾಂತಿಯುಳ್ಳವರಾದರು. ಅವರೂ ಪ್ರಲಯಕಾಲದಂತೆ ಶ್ರೀಹರಿಯ ಸಂಕಲ್ಪಾನುಗುಣವಾಗಿ ಕಾರ್ಯಗಳನ್ನು ಮಾಡುವರಾದುದರಿಂದ ಶ್ರೀಹರಿಗೆ ಅತ್ಯಂತ ಪ್ರೀತಿಪಾತ್ರರು. ಪ್ರಲಯಕಾಲದಂತೆಯೇ ಹರಿಭಕ್ತಿ ಇಲ್ಲದ, ತಾಮಸ ಜನರಿಗೆ ಆಚಾರ್ಯರು ನೋಡಲು ಅಶಕ್ಯರು, ಸಹಿಸಲು ಅಸಾಧ್ಯರು. ಆಚಾರ್ಯರು ಪ್ರತಿಪಾದಿಸುವ ಹರಿಸರ್ವೋತ್ತಮತ್ವ ಸಿದ್ಧಾಂತವನ್ನು ಕೇಳಲಾರದ ಇತರ ವಾದಿಗಳಿಗೆ ಆಚಾರ್ಯರ ಸ್ವರೂಪವು ದುಸ್ಸಹವಾಗಿತ್ತು. ನೋಡಲು ಅಸಾಧ್ಯವಾಗಿತ್ತು. ಎಲ್ಲರಿಗೂ ಗೌರವಾರ್ಹವಾದ ಬುದ್ಧಿಯುಳ್ಳ ಇಂತಹ ಶ್ರೀಮಧ್ವಾಚಾರ್ಯರು ಪ್ರಳಯಕಾಲದಂತೆ ಪ್ರಕಾಶಿಸಿದರು ಎಂದು ಭಾವ.

ವಿಗ್ರಹ—

**ಊರ್ಧ್ವಪುಂಡ್ರಾಃ**— ಊರ್ಧ್ವಾಶ್ಚತೇ ಪುಂಡ್ರಾಶ್ಚ ಊರ್ಧ್ವಪುಂಡ್ರಾಃ ತೈಃ ।

**ದ್ವಿಷಡ್ಭಿಃ**— ದ್ವೌ ಚ ತೇ ಷಟ್ ಚ ದ್ವಿಷಟ್ ತೈಃ ದ್ವಿಷಡ್ಭಿಃ ।

**ಸದರಪರಮಚಕ್ರೋದೀರ್ಣತೇಜಾಃ**— ದರೇಣ ಸಹಿತಂ ಸದರಂ, ಸದರಂ ಚ ತತ್ ಪರಮಂ ಚ, ಸದರಪರಮಂ ಚ ತತ್ ಚಕ್ರಂ ಚ ಸದರಪರಮಚಕ್ರಂ, ಸದರಪರಮಚಕ್ರೇಣ ಉದೀರ್ಣಂ ತೇಜಃ ಯಸ್ಯ ಸಃ ಸದರ ಪರಮಚಕ್ರೋದೀರ್ಣತೇಜಾಃ । ಇಲ್ಲಿ ಸದರಂ - ಸಂತಿ ಅರಾಣಿ ಯಸ್ಯ ತತ್ ಸದರಂ ಎಂದೂ ವಿಗ್ರಹ ಮಾಡಬಹುದು. ಪ್ರಲಯ ಕಾಲದ ಪಕ್ಷದಲ್ಲಿ ಈ ವಿಗ್ರಹ.

**ಹರೀಷ್ಟಃ**— ಹರೇಃ ಇಷ್ಟಃ ಹರೀಷ್ಟಃ ।

**ಮುರರಿಪುವಿಮುಖಾಃ**— ಮುರಸ್ಯ ರಿಪುಃ ಮುರರಿಪುಃ, ಮುರರಿಪೋಃ ವಿಮುಖಾಃ ಮುರರಿಪುವಿಮುಖಾಃ ತೇಷಾಂ ।

**ದುಸ್ಸಹಃ**— ದುಃಖೇನ ಸೋಢುಂ ಶಕ್ಯಃ ದುಸ್ಸಹಃ ।

**ದೇಹಭಾಜಃ**— ದೇಹಂ ಭಜಂತೀತಿ ದೇಹಭಾಜಃ ತೇಷಾಂ ।

**ಲಯಸಮಯಃ**— ಲಯಸ್ಯ ಸಮಯಃ ಲಯಸಮಯಃ ।

**ಮಾನ್ಯಧೀಃ**— ಮಾನಯಿತುಂ ಯೋಗ್ಯಾ ಮಾನ್ಯಾ, ಮಾನ್ಯಾ ಧೀಃ ಯಸ್ಯ ಸಃ ಮಾನ್ಯಧೀಃ ।

**ಕೋಶ**— ತರಣಿ = ಸೂರ್ಯ, 'ದ್ಯುಮಣಿಸ್ತರಣಿರ್ಮಿತ್ರಃ' ಅಮರ. ಗೌರ = ಬಿಳಿಯದು, 'ಅವದಾತಃ ಸಿತೋ ಗೌರಃ' ಅಮರ, ಪುಂಡ್ರಃ (ಪುಂಡ್ರಂ) = ನಾಮ, 'ಚಿತ್ರಕಮುಕ್ತಂ ವಿಶೇಷಕಂ ಪುಂಡ್ರಂ' ಹಲ. ಪುಂಡ್ರ ಶಬ್ದವು ಪುಲ್ಲಿಂಗ ನಪುಂಸಕ ಲಿಂಗಗಳೆರಡರಲ್ಲಿಯೂ ಇದೆ. ನಪುಂಸಕಲಿಂಗವಾದರೆ ದ್ವೇ ಚ ತೇ ಷಟ್ ಚ ದ್ವಿಷಟ್ ಎಂದು ವಿಗ್ರಹ ಮಾಡಬೇಕು. ಅರ = ಅರೆಕಾಲು, ಚಕ್ರದ ಸುತ್ತಲಿನ ಗೂಟಗಳು, ಅರಂ ಶೀಘ್ರೇ ಚ ಚಕ್ರಾಂಗೇ ಶೀಘ್ರಗಾಮಿನಿ ಕಿಲ್ಬಿಷೇ - ವಿಶ್ವ ಅರಾ ಇವ ರಥನಾಭೌ ಎಂಬ ಪ್ರಯೋಗಾನುಸಾರವಾಗಿ ಅರಶಬ್ದವು ಪುಲ್ಲಿಂಗವೂ ಇದೆ. ಆದ್ದರಿಂದ ಸಂತಃ ಅರಾಃ ಸಂತಿ (ಅರಾಣಿ) ಯಸ್ಯ ತತ್ ಎಂದೂ ವಿಗ್ರಹ ಮಾಡಬಹುದು.

**ಕ್ರಿಯಾಪದ**— ಆಬಭಾಸೇ- ಆ+ಬಭಾಸೇ ಬಭಾಸಾತೇ ಬಭಾಸಿರೇ, ಬಭಾಸಿಷೇ ಬಭಾಸಾಥೇ ಬಭಾಸಿಧ್ವೇ, ಬಭಾಸೇ ಬಭಾಸಿವಹೇ ಬಭಾಸಿಮಹೇ । ಆಙ್ ಉಪಸರ್ಗ, ಭಾ(ಭಾಸ್) ದೀಪ್ತೌ ಅಕ. ಸೇಟ್. ಆತ್ಮನೇ to shine ಲಿಟ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ**— ಸದರಪರಮಚಕ್ರೋದೀರ್ಣತೇಜಸಾ ಹರೀಷ್ಟೇನ ಮುರರಿಪುವಿಮುಖಾನಾಂ ದೇಹಭಾಜಾಂ ದುಸ್ಸಹೇನ ಮಾನ್ಯಧಿಯಾ ತರಣಿಭಿಃ ಇವ ಗೌರೈಃ ದ್ವಿಷಡ್ಭಿಃ ಊರ್ಧ್ವಪುಂಡ್ರೈಃ, ಅನ್ಯೇನ ಪ್ರಲಯಸಮಯೇನೇವ ಆಬಭಾಸೇ (ಭಾವೇ) ।

★ ★ ★

**ಅವತಾರಿಕಾ—** ಸ್ನಾನ ಮಾಡಿ ಮಠದೊಳಗೆ ಬರುವಾಗ ಆಚಾರ್ಯರಿಗೆ ಜನರು ತಾವಾಗಿಯೇ ದೂರದಲ್ಲಿಯೇ ದಾರಿಯನ್ನು ಬಿಟ್ಟರು ಎಂದು ಹೇಳುತ್ತಾರೆ.

**ಸಮುಧಿಕಧಿಷಣಸ್ಯ ಪ್ರೇಕ್ಷಮಾಣೋ ಜನೌಘಃ**
**ಪ್ರಕೃತಿಮಧುರಮಾಸ್ಯವ್ಯಾಜಪೂರ್ಣೇಂದುಬಿಂಬಮ್ ।**
**ಅಮುಚದಪಸರೇತಿ ಶ್ರಾವಕೋಕ್ತೇಃ ಪುರಾಽಸ್ಮಿನ್**
**ಪ್ರಚಲತಿ ಪದವೀಂ ತಾಂ ಪ್ರಾಂಜಲಿಸ್ತೂರ್ಣಮಾರಾತ್ ॥ 31 ॥**

**ಪದಚ್ಛೇದ—** ಸಮುಧಿಕಧಿಷಣಸ್ಯ, ಪ್ರೇಕ್ಷಮಾಣಃ ಜನೌಘಃ ಪ್ರಕೃತಿಮಧುರಂ, ಆಸ್ಯವ್ಯಾಜಪೂರ್ಣೇಂದುಬಿಂಬಂ, ಅಮುಚತ್, ಅಪಸರ, ಇತಿ ಶ್ರಾವಕೋಕ್ತೇಃ, ಪುರಾ, ಅಸ್ಮಿನ್, ಪ್ರಚಲತಿ, ಪದವೀಂ, ತಾಂ, ಪ್ರಾಂಜಲಿಃ, ತೂರ್ಣಂ, ಆರಾತ್ ।

**ಅನ್ವಯ—** ಸಮುಧಿಕಧಿಷಣಸ್ಯ, ಪ್ರಕೃತಿಮಧುರಂ, ಆಸ್ಯವ್ಯಾಜಪೂರ್ಣೇಂದುಬಿಂಬಂ, ಪ್ರೇಕ್ಷಮಾಣಃ, ಜನೌಘಃ, ಅಪಸರ, ಇತಿ, ಶ್ರಾವಕೋಕ್ತೇಃ, ಪುರಾ, ಅಸ್ಮಿನ್, ಪ್ರಚಲತಿ, ಸತಿ, ಪ್ರಾಂಜಲಿಃ, ತೂರ್ಣಂ, ಆರಾತ್, ತಾಂ, ಪದವೀಂ, ಅಮುಚತ್ ।

**ಅನ್ವಯಾರ್ಥ—**

**ಸಮುಧಿಕಧಿಷಣಸ್ಯ** = ಶ್ರೀಪೂರ್ಣಪ್ರಜ್ಞರ,
**ಪ್ರಕೃತಿಮಧುರಂ** = ಸ್ವಭಾವದಿಂದಲೇ ಸುಂದರವಾದ,
**ಆಸ್ಯವ್ಯಾಜಪೂರ್ಣೇಂದುಬಿಂಬಂ** = ಮುಖವೆಂಬ ನೆಪವುಳ್ಳ ಪೂರ್ಣಚಂದ್ರನ ಮಂಡಲವನ್ನು,
**ಪ್ರೇಕ್ಷಮಾಣಃ** = ನೋಡುತ್ತಿರುವ,
**ಜನೌಘಃ** = ಜನರ ಗುಂಪು,
**ಅಪಸರ** = ದೂರಕ್ಕೆ ಸರಿ,
**ಇತಿ** = ಎಂದು,
**ಶ್ರಾವಕೋಕ್ತೇಃ** = ಶಿಷ್ಯರ ಮಾತಿನಿಂದ,
**ಪುರಾ** = ಮೊದಲೇ,
**ಅಸ್ಮಿನ್** = ಶ್ರೀ ಮಧ್ವಾಚಾರ್ಯರು,
**ಪ್ರಚಲತಿ (ಸತಿ)** = ಹೊರಡುತ್ತಿರಲು,
**ಪ್ರಾಂಜಲಿಃ** = ಕೈಮುಗಿದವನಾಗಿ,
**ತೂರ್ಣಂ** = ಬೇಗನೆ,
**ಆರಾತ್** = ದೂರದಲ್ಲಿ
**ತಾಂ** = ಆ ಮಧ್ವರು ಹೋಗುತ್ತಿರುವ,
**ಪದವೀಂ** = ದಾರಿಯನ್ನು,
**ಅಮುಚತ್** = ಬಿಟ್ಟಿತು.

**ತಾತ್ಪರ್ಯ—** ಆಚಾರ್ಯರು ಸ್ನಾನ ಮಾಡಿ ಸಮೀಪದಿಂದ ಬಾವಿ [illegible] ಪೂರ್ಣಪ್ರಜ್ಞರ ಮುಖವನ್ನು ನೋಡುತ್ತಿರುವಾಗ ಶಿಷ್ಯರು 'ದಾರಿ ಬಿಟ್ಟು ಪಕ್ಕಕ್ಕೆ ಸರಿಯಿರಿ, ಆಚಾರ್ಯರು ಬರುತ್ತಿದ್ದಾರೆ' ಎಂದು ಹೇಳುವ

ಪದ್ಧತಿ. ಆದರೆ ಆಚಾರ್ಯರ ಸ್ವಭಾವ ಸುಂದರವಾದ ಮುಖಚಂದ್ರನನ್ನು ನೋಡುತ್ತಾ ನಿಂತಿದ್ದ ಜನರು, ಶಿಷ್ಯರು 'ಸರಿಯಿರಿ ದಾರಿ ಬಿಡಿರಿ' ಎಂದು ಹೇಳುವುದಕ್ಕಿಂತ ಮೊದಲೇ, ಕೈಮುಗಿದು ಹಿಂದಕ್ಕೆ ದೂರಕ್ಕೆ ಸರಿದು ನಿಂತು ಆಚಾರ್ಯರಿಗೆ ದಾರಿ ಮಾಡಿಕೊಟ್ಟರು. ಆಚಾರ್ಯರನ್ನು ನೋಡುತ್ತಿದ್ದ ಜನರಿಗೆ ಅವರಿಗೆ ದಾರಿ ಬಿಟ್ಟು ಕೊಡಬೇಕೆಂಬ ಗೌರವ ಬುದ್ಧಿಯು ಶಿಷ್ಯರು ಹೇಳುವುದಕ್ಕೆ ಮೊದಲೇ ಉತ್ಪನ್ನವಾಗುತ್ತಿತ್ತು ಎಂದು ಭಾವ.

**ವಿಗ್ರಹ—**

**ಸಮಧಿಕಧಿಷಣಃ—** ಸಮಧಿಕಾ ಧಿಷಣಾ ಯಸ್ಯ ಸಃ ಸಮಧಿಕಧಿಷಣಃ ।

**ಜನೌಘಃ—** ಜನಾನಾಂ ಓಘಃ ಜನೌಘಃ ।

**ಪ್ರಕೃತಿಮಧುರಂ—** ಪ್ರಕೃತ್ಯಾ ಮಧುರಂ ಪ್ರಕೃತಿಮಧುರಂ ।

**ಅಸ್ಯವ್ಯಾಜಪೂರ್ಣೇಂದುಬಿಂಬಂ—** ಅಸ್ಯಂ ಇತಿ ವ್ಯಾಜಃ ಯಸ್ಯ ತತ್ ಅಸ್ಯವ್ಯಾಜಂ, ಇಂದೋಃ ಬಿಂಬಂ ಇಂದುಬಿಂಬಂ, ಪೂರ್ಣಂ ಚ ತತ್ ಇಂದುಬಿಂಬಂ ಚ ಪೂರ್ಣೇಂದುಬಿಂಬಂ, ಅಸ್ಯವ್ಯಾಜಂ ಚ ತತ್ ಪೂರ್ಣೇಂದುಬಿಂಬಂ ಚ ಅಸ್ಯವ್ಯಾಜಪೂರ್ಣೇಂದುಬಿಂಬಂ ತತ್ ।

**ಶ್ರಾವಕೋಕ್ತಿಃ—** ಶ್ರಾವಕಾಣಾಂ ಉಕ್ತಿಃ ಶ್ರಾವಕೋಕ್ತಿಃ ತಸ್ಯಾಃ ।

**ಪ್ರಾಂಜಲಿಃ—** ಪ್ರಕೃಷ್ಟಃ ಅಂಜಲಿಃ ಯಸ್ಯ ಸಃ ಪ್ರಾಂಜಲಿಃ (ಬದ್ಧಾಂಜಲಿಃ ಇತ್ಯರ್ಥಃ)

**ಕ್ರಿಯಾಪದ— ಅಮುಚತ್** - ಅಮುಚತ್ ಅಮುಚತಾಂ ಅಮುಚನ್, ಅಮುಚಃ ಅಮುಚತಂ ಅಮುಚತ, ಅಮುಚಂ ಅಮುಚಾವ ಅಮುಚಾಮ । ಮುಚ್ ಲೃ ಮೋಕ್ಷಣೇ ಸಕ, ಅನಿಟ್, ಉಭ. to loose to leave, to abandon ಭೂತೇ ಲುಙ್.

**ಕೋಶ—** ಪ್ರಕೃತಿಃ = ಸ್ವಭಾವ, 'ಪ್ರಕೃತಿಃ ಪಂಚಭೂತೇಷು ಸ್ವಭಾವೇ ಮೂಲಕಾರಣೇ' ವೈಜಯಂತೀ, ಆರಾತ್ = ದೂರ 'ಆರಾದ್ದೂರಸಮೀಪಯೋಃ' ಅಮರ, ಆ ಪದವಿ = ದಾರಿ, 'ಅಯನಂ ವರ್ತ್ಮಮಾರ್ಗಾಧ್ವಪಂಥಾನಃ ಪದವೀ ಸೃತಿಃ' ಅಮರ ।

**ಪ್ರಯೋಗ—** ಸಮಧಿಕಧಿಷಣಸ್ಯ ಪ್ರಕೃತಿಮಧುರಂ ಅಸ್ಯವ್ಯಾಜಪೂರ್ಣೇಂದುಬಿಂಬಂ ಪ್ರೇಕ್ಷಮಾಣೇನ ಜನೌಘೇನ, 'ಅಪಸ್ರಿಯತಾಂ' ಇತಿ ಶ್ರಾವಕೋಕ್ತೇಃ ಪುರಾ ಅಸ್ಮಿನ್ ಪ್ರಚಲತಿ ಸತಿ ಪ್ರಾಂಜಲಿನಾ ತೂರ್ಣಂ ಆರಾತ್ ಸಾ ಪದವೀ ಅಮೋಚಿ ।

★ ★ ★

**ಅವತಾರಿಕಾ—** ಆಚಾರ್ಯರ ಪಾದಪ್ರಕ್ಷಾಲನದ ಜಲವನ್ನು ಭಕ್ತರೆಲ್ಲರೂ ಶಿರಸ್ಸಿಗೆ ಪ್ರೋಕ್ಷಿಸಿಕೊಂಡರು ಎಂಬ ವಿಷಯವನ್ನು ವರ್ಣಿಸುತ್ತಾರೆ.

**ಗುರುಚರಣಸರೋಜದ್ವಂದ್ವನಿರ್ಣೇಜನಾಂಭೋ**
**ದಧತಿ ಜನನಿಕಾಯೇ ಸರ್ವಮುರ್ವೀಗತಂ ಚ ।**
**ಅವನಿರನಭಿನಂದಿನ್ಯಪ್ಯದಶ್ಚಕ್ಷಮೇಽಸೌ**
**ಕಥಮಪಿ ಕಥಮೇವ ಸ್ಯಾತ್ ಕ್ಷಮಾಖ್ಯಾಽನ್ಯಥಾಽಸ್ಯಾಃ ॥ 32 ॥**

**ಪದಚ್ಛೇದ—** ಗುರುಚರಣಸರೋಜದ್ವಂದ್ವನಿರ್ಣೇಜನಾಂಭಃ, ದಧತಿ, ಜನನಿಕಾಯೇ, ಸರ್ವಂ, ಉರ್ವೀಗತಂ, ಚ, ಅವನಿಃ, ಅನಭಿನಂದಿನೀ, ಅಪಿ, ಅದಃ, ಚಕ್ಷಮೇ, ಅಸೌ, ಕಥಂ, ಅಪಿ, ಕಥಂ, ಏವ, ಸ್ಯಾತ್, ಕ್ಷಮಾಖ್ಯಾ, ಅನ್ಯಥಾ, ಅಸ್ಯಾಃ ।

**ಅನ್ವಯ—** ಜನನಿಕಾಯೇ, ಉರ್ವೀಗತಂ, ಗುರುಚರಣಸರೋಜದ್ವಂದ್ವನಿರ್ಣೇಜನಾಂಭಃ, ಸರ್ವಂ, ಚ, ದಧತಿ, ಅಸೌ, ಅವನಿಃ, ಅನಭಿನಂದಿನೀ, ಅಪಿ, ಅದಃ, ಕಥಂ, ಅಪಿ, ಚಕ್ಷಮೇ, ಅನ್ಯಥಾ, ಅಸ್ಯಾಃ, ಕ್ಷಮಾಖ್ಯಾ, ಕಥಂ, ಏವ, ಸ್ಯಾತ್।

**ಅನ್ವಯಾರ್ಥ—**

**ಜನನಿಕಾಯೇ** = ಜನರ ಗುಂಪು,
**ಉರ್ವೀಗತಂ** = ನೆಲದ ಮೇಲೆ ಇರುವ,
**ಗುರುಚರಣಸರೋಜದ್ವಂದ್ವನಿರ್ಣೇಜನಾಂಭಃ** = ಶ್ರೀಮಧ್ವಗುರುಗಳ ಕಮಲದಂತಿರುವ ಎರಡು ಪಾದಗಳ ಪ್ರಕ್ಷಾಲನದ (ತೊಳೆದ) ನೀರನ್ನು,
**ಸರ್ವಂ ಚ** = ಎಲ್ಲವನ್ನೂ,
**ದಧತಿ ಸತಿ** = ತಲೆಯ ಮೇಲೆ ಧರಿಸಲು,
**ಅಸೌ** = ಈ,
**ಅವನಿಃ** = ಭೂಮಿಯು,
**ಅನಭಿನಂದಿನೀ ಅಪಿ** = ಅಭಿನಂದಿಸುವವಳು ಆಗದಿದ್ದರೂ (ಜನರು ಎಲ್ಲಾ ನೀರನ್ನು ತೊಟ್ಟು ಬಿಡದೆ ಪ್ರೋಕ್ಷಿಸಿಕೊಂಡದ್ದನ್ನು) (ಸಂತೋಷದಿಂದ ಒಪ್ಪಿಕೊಳ್ಳದೆ ಇದ್ದವಳಾದಾಗ್ಯೂ),
**ಅದಃ** = ಈ ನೀರಿನ ಧಾರಣೆಯನ್ನು,
**ಕಥಂ ಅಪಿ** = ಹೇಗಾದರೂ ಕಷ್ಟದಿಂದ,
**ಚಕ್ಷಮೇ** = ಸಹಿಸಿಕೊಂಡಳು.
**ಅನ್ಯಥಾ** = ಹಾಗಿಲ್ಲದಿದ್ದರೆ (ಹೀಗೆ ಸಹಿಸಿಕೊಳ್ಳದಿದ್ದರೆ)
**ಅಸ್ಯಾಃ** = ಈ ಭೂಮಿಗೆ,
**ಕ್ಷಮಾಖ್ಯಾ** = ಕ್ಷಮಾ ಎಂಬ ಹೆಸರು,
**ಕಥಂ ಏವ ಸ್ಯಾತ್** = ಹೇಗೆ ತಾನೆ ಆದೀತು.

**ತಾತ್ಪರ್ಯ—** ಆಚಾರ್ಯರು ಸ್ನಾನ ಮಾಡಿ ಬರುವಾಗ ಪಾದವನ್ನು ತೊಳೆದುಕೊಂಡ ನೀರನ್ನೆಲ್ಲಾ ಅಲ್ಲಿ ಸೇರಿದ್ದ ಜನರು ಪ್ರೋಕ್ಷಿಸಿಕೊಂಡರು. ಅಲ್ಲಿ ಭೂಮಿಯ ಮೇಲೆ ನೀರಿನ ಹನಿಯೂ ಉಳಿಯಲಿಲ್ಲ. ಆಗ ಭೂದೇವಿಯು ಜನರೆಲ್ಲರೂ ಈ ರೀತಿ ತನಗೆ ನೀರಿನ ಹನಿಯನ್ನು ಉಳಿಸದೆ ಆಚಾರ್ಯರ ಪಾದಪ್ರಕ್ಷಾಲನೋದಕವನ್ನು ಪ್ರೋಕ್ಷಿಸಿಕೊಂಡದ್ದನ್ನು ಅಭಿನಂದಿಸಲಿಲ್ಲ. ಆದರೂ ಅವಳು ಆ ಭಕ್ತ ಜನರ ಮೇಲೆ ಸಿಟ್ಟು ಮಾಡದೆ ಸಹಿಸಿಕೊಂಡಳು, ಕ್ಷಮಿಸಿದಳು. ಇದು ಯುಕ್ತವೇ ಸರಿ. ಏಕೆಂದರೆ ಅವಳು ಹಾಗೆ ಕ್ಷಮಿಸದಿದ್ದರೆ ಅವಳಿಗೆ ಕ್ಷಮಾ ಎಂಬ ಹೆಸರು ಹೇಗೆ ತಾನೇ ಯುಕ್ತವಾದೀತು! (ಭೂದೇವಿಗೆ 'ಗೌರಿಲಾ ಕುಂಭಿನೀ ಕ್ಷಮಾ' ಎಂಬ ಕೋಶಾನುಸಾರವಾಗಿ 'ಕ್ಷಮಾ' ಎಂಬ ಹೆಸರು. ಕ್ಷಮಾ ಎಂದರೆ ಕ್ಷಮಿಸುವವಳು ಎಂದು ಅರ್ಥ. ಪ್ರಕೃತದಲ್ಲಿ ಭಕ್ತರು ಆಚಾರ್ಯ ಪಾದೋದಕವನ್ನೆಲ್ಲಾ ತಾವೇ ಧರಿಸಿಕೊಂಡು ಭೂದೇವಿಗೆ ಸ್ವಲ್ಪವೂ ಉಳಿಸದೇ ಇದ್ದರೂ ಅವಳು ಅವಶ್ಯವಾಗಿ ಕ್ಷಮಿಸಲೇ ಬೇಕಾಯಿತು. ಇಲ್ಲವಾದರೆ ಅವಳಿಗೆ ಕ್ಷಮಾ ಎಂಬ ಹೆಸರು ಕೂಡಲಾರದಷ್ಟೇ ಎಂದು ಭಾವ. ಕಾವ್ಯಲಿಂಗಾಲಂಕಾರ)

**ವಿಗ್ರಹ—**

**ಚರಣಸರೋಜೇ—** ಚರಣೌ ಸರೋಜೇ ಇವ ಚರಣಸರೋಜೇ । (ಚರಣಾವೇವ ಸರೋಜೇ ಇತಿ ವಾ)
**ಗುರುಚರಣಸರೋಜದ್ವಂದ್ವನಿರ್ಣೇಜನಾಂಭಃ—** ಗುರುಚರಣಸರೋಜಯೋಃ ದ್ವಂದ್ವಂ ಗುರುಚರಣಸರೋಜದ್ವಂದ್ವಂ, ಗುರುಚರಣಸರೋಜದ್ವಂದ್ವಸ್ಯ ನಿರ್ಣೇಜನಂ ಗುರುಚರಣಸರೋಜದ್ವಂದ್ವ-

ನಿರ್ಣೇಜನಂ, ಗುರುಚರಣಸರೋಜದ್ವಂದ್ವನಿರ್ಣೇಜನಸ್ಯ ಅಂಭಃ ಗುರುಚರಣಸರೋಜದ್ವಂದ್ವ-ನಿರ್ಣೇಜನಾಂಭಃ, ತತ್ ।

**ಜನನಿಕಾಯಃ**— ಜನಾನಾಂ ನಿಕಾಯಃ ಜನನಿಕಾಯಃ ತಸ್ಮಿನ್ ।

**ಉರ್ವೀಗತಂ**— ಉರ್ವ್ಯಾಂ ಗತಂ ಉರ್ವೀಗತಂ ।

**ಅನಭಿನಂದಿನೀ**— ಅಭಿನಂದಿತುಂ ಶೀಲಂ ಅಸ್ಯಾಃ ಇತಿ ಅಭಿನಂದಿನೀ, ನ ಅಭಿನಂದಿನೀ ಅನಭಿನಂದಿನೀ ।

**ಕ್ಷಮಾಖ್ಯಾ**— ಕ್ಷಮಾ ಇತಿ ಆಖ್ಯಾ ಕ್ಷಮಾಖ್ಯಾ ।

**ಪ್ರಯೋಗ**— ಜನನಿಕಾಯೇ ಉರ್ವೀಗತಂ ಗುರುಚರಣಸರೋಜದ್ವಂದ್ವನಿರ್ಣೇಜನಾಂಭಃ ಸರ್ವಂ ಚ ದಧತಿ ಸತಿ ಅಮುಯಾ ಅವನ್ಯಾ ಅನಭಿನಂದಿನ್ಯಾ ಅಪಿ ಅದಃ ಕಥಂ ಅಪಿ ಚಕ್ಷಮೇ, ಅನ್ಯಥಾ ಅಸ್ಯಾಃ ಕ್ಷಮಾಖ್ಯಯಾ ಕಥಂ ಏವ ಭೂಯೇತ ।

**ಕೋಶ**— ದ್ವಂದ್ವ = ಜೋಡಿ, 'ದ್ವಂದ್ವಂ ಕಲಹಯುಗ್ಮಯೋಃ' ಅಮರ, ಕ್ಷಮಾ = ಭೂಮಿ, 'ಗೌರಿಲಾ ಕುಂಭಿನೀ ಕ್ಷಮಾ', 'ಕ್ಷ್ಮಾವನಿರ್ಮೇದಿನೀ ಮಹೀ' ಅಮರ ।

**ವಿಶೇಷ ವಿಚಾರ**— ಸರ್ವತ್ರ ಅತಿಕ್ಷಮಾಯುಕ್ತತ್ವಾದೇವ ಕ್ಷಮೇತ್ಯುಚ್ಯತೇ, ಕುತ್ರಚಿತ್ ಕ್ಷಮಾಭಾವೇ ಕ್ಷಮೇತಿ ನಾಮ ನ ಸ್ಯಾತ್ ಇತಿ ಭಾವಃ । (ಥಲಾರಿಯ)

ಭೂದೇವಿಯು ಎಲ್ಲಾ ವಿಷಯದಲ್ಲಿಯೂ ಅತ್ಯಂತ ಕ್ಷಮಾವಂತಳಾದ್ದರಿಂದ ಕ್ಷಮಾ ಎಂದೂ ಹೇಳಲ್ಪಡುತ್ತಾಳೆ. ಯಾವುದೊಂದು ವಿಷಯದಲ್ಲಿಯಾದರೂ ಕ್ಷಮೆ ಇಲ್ಲದಿದ್ದರೆ ಅವಳಿಗೆ (ಭೂದೇವಿಗೆ) ಕ್ಷಮೆ ಎಂಬ ಹೆಸರು ಹೇಗೆ ಕೂಡೀತು? ಎಂದು ಅಭಿಪ್ರಾಯ.

**ಧಾತುರೂಪ**— ಚಕ್ಷಮೇ - ಚಕ್ಷಮೇ ಚಕ್ಷಮಾತೇ ಚಕ್ಷಮಿರೇ, ಚಕ್ಷಮಿಷೇ-ಚಕ್ಷಂಸೇ ಚಕ್ಷಮಾಥೇ ಚಕ್ಷಮಿಧ್ವೇ-ಚಕ್ಷಂಧ್ವೇ, ಚಕ್ಷಮೇ ಚಕ್ಷಮಿವಹೇ-ಚಕ್ಷಣ್ವಹೇ, ಚಕ್ಷಮಿಮಹೇ-ಚಕ್ಷಣ್ಮಹೇ । ಕ್ಷಮೂಷ್ ಸಹನೇ, (ಕ್ಷಮ್) ಸಕ = ವೇಟ್ ಆತ್ಮ to endure ಲಿಟ್ ಪ್ರಥಮಪುರುಷೇ ಏಕವಚನಂ ।

★ ★ ★

**ಅವತಾರಿಕಾ**— ಆಚಾರ್ಯರ ಪೂಜೆಗೆ ಒಬ್ಬರು ಯತಿಗಳು ಅಗ್ರ್ಯೋದಕ ತಂದುದನ್ನು ವರ್ಣಿಸುತ್ತಾರೆ.

**ಅವಿದಿತರಸಭೇದಂ ಶೀತಲಂ ಲಘ್ವಗಂಧಂ**
**ವಿಮಲಮಮಲಪಾಣಿಃ ಪಾಣಿಜೈರಪ್ರವಿಷ್ಟಮ್ ।**
**ವದನಪವನಭೀತ್ಯಾ ಪಾರ್ಶ್ವತೋ ಬಿಭ್ರದಗ್ರ್ಯಂ**
**ಕಮಥ ಕರಕಪೂರ್ಣಂ ಸಂಯಮೀಹಾನಿನಾಯ ॥ 33 ॥**

**ಪದಚ್ಛೇದ**— ಅವಿದಿತರಸಭೇದಂ, ಶೀತಲಂ, ಲಘು, ಅಗಂಧಂ, ವಿಮಲಂ, ಅಮಲಪಾಣಿಃ, ಪಾಣಿಜೈಃ, ಅಪ್ರವಿಷ್ಟಂ, ವದನಪವನಭೀತ್ಯಾ, ಪಾರ್ಶ್ವತಃ, ಭಿಭ್ರತ್, ಅಗ್ರ್ಯಂ, ಕಂ, ಅಥ, ಕರಕಪೂರ್ಣಂ, ಸಂಯಮೀ, ಇಹ, ಆನಿನಾಯ ।

**ಅನ್ವಯ**— ಅಥ, ಅಮಲಪಾಣಿಃ, ಸಂಯಮೀ, ವದನಪವನಭೀತ್ಯಾ, ಪಾರ್ಶ್ವತಃ, ಬಿಭ್ರತ್(ಸನ್), ಅವಿದಿತ-ರಸಭೇದಂ, ಶೀತಲಂ, ಲಘು, ಅಗಂಧಂ, ವಿಮಲಂ, ಪಾಣಿಜೈಃ, ಅಪ್ರವಿಷ್ಟಂ, ಕರಕಪೂರ್ಣಂ, ಅಗ್ರ್ಯಂ, ಕಂ, ಇಹ, ಆನಿನಾಯ ।

**ಅನ್ವಯಾರ್ಥ—**

**ಅಥ** = ಅನಂತರ,
**ಅಮಲಪಾಣಿಃ** = ಪವಿತ್ರವಾದ ಕೈಗಳುಳ್ಳ
**ಸಂಯಮೀ** = ಒಬ್ಬ ಸಂನ್ಯಾಸಿ,
**ವದನಪವನಭೀತ್ಯಾ** = ಬಾಯಿಯ ಗಾಳಿಯ ಹೆದರಿಕೆಯಿಂದ,
**ಪಾರ್ಶ್ವತಃ** = ಒಂದು ಪಕ್ಕದಲ್ಲಿ
**ಬಿಭ್ರತ್ (ಸನ್)** = (ಕಲಶವನ್ನು) ಹಿಡಿದುಕೊಂಡವರಾಗಿ,
**ಅವಿದಿತರಸಭೇದಂ** = ತಿಳಿಯಲ್ಪಡದ ರುಚಿಯೇ ವ್ಯತ್ಯಾಸವುಳ್ಳ
**ಶೀತಲಂ** = ತಂಪಾಗಿರುವ,
**ಲಘು** = ಹಗುರವಾದ,
**ಅಗಂಧಂ** = ದುರ್ವಾಸನೆಯಿಲ್ಲದ,
**ವಿಮಲಂ** = ನಿರ್ಮಲವಾದ,
**ಪಾಣಿಜೈಃ** = ಉಗುರುಗಳಿಂದ,
**ಅಪ್ರವಿಷ್ಟಂ** = ಮುಟ್ಟಲ್ಪಡದಿರುವ,
**ಕರಕಪೂರ್ಣಂ** = ಕಮಂಡಲುವಿನಲ್ಲಿ ತುಂಬಿರುವ,
**ಅಗ್ರ್ಯಂ** = ಶ್ರೇಷ್ಠವಾದ,
**ಕಂ** = ನೀರನ್ನು,
**ಇಹ** = ಇಲ್ಲಿಗೆ,
**ಆನಿನಾಯ** = ತಂದರು.

**ತಾತ್ಪರ್ಯ—** ಆಚಾರ್ಯರು ಸ್ನಾನಾದಿಗಳನ್ನು ಮಾಡಿ ಮಠವನ್ನು ಪ್ರವೇಶಿಸಿದರು. ಅನಂತರ ಜಿತೇಂದ್ರಿಯರಾದ ಮತ್ತು ಪರಿಶುದ್ಧರಾದ ಸಂನ್ಯಾಸಿಗಳೊಬ್ಬರು ತಮ್ಮ ಕೈಗಳನ್ನು ಪುನಃ ತೊಳೆದುಕೊಂಡರು. ಪರಿಶುದ್ಧವಾದ ಕಮಂಡಲುವಿನಲ್ಲಿ ಪೂಜೆಗಾಗಿ ನೀರನ್ನು ತಂದರು. ಆಗ ಆ ನೀರಿಗೆ ಬಾಯಿಯ ಗಾಳಿಯು ತಗಲಬಾರದೆಂದು, ಆ ಕಮಂಡಲವನ್ನು ಬಹಳ ಭಯಭಕ್ತಿಗಳಿಂದ ಒಂದು ಪಕ್ಕದಲ್ಲಿ ಎತ್ತಿ ಹಿಡಿದುಕೊಂಡಿದ್ದರು. ಆ ನೀರು ತಂಪಾಗಿತ್ತು. ಹಗುರವಾಗಿತ್ತು. ದುರ್ವಾಸನೆಯಿಲ್ಲದೆ ನಿರ್ಮಲವಾಗಿತ್ತು. ಆ ನೀರನ್ನು ಉಗುರುಗಳ ಸ್ಪರ್ಶವಿಲ್ಲದೆ ವಸ್ತ್ರದಿಂದ ಮುಚ್ಚಿ ತಂದಿದ್ದರು. (ದೇವರ ಪೂಜೆಗಾಗಿ ಇಷ್ಟೊಂದು ನಿಯಮಗಳಿಂದ ನೀರನ್ನು ಕಲಶದಲ್ಲಿ (ಕಮಂಡಲುವಿನಲ್ಲಿ) ತುಂಬಿ ತಂದರು)

**ವಿಗ್ರಹ—**

**ಅವಿದಿತರಸಭೇದಂ—** ರಸಸ್ಯ ಭೇದಃ ರಸಭೇದಂ, ನ ವಿದಿತಃ ಅವಿದಿತಃ, ಅವಿದಿತ ರಸಭೇದಃ ಯಸ್ಯ ತತ್ ಅವಿದಿತರಸಭೇದಂ, ತತ್ ।

**ಅಗಂಧಂ—** (ದ್ವಿಪಕ) ನ ವಿದ್ಯತೇ ಗಂಧಃ ಯಸ್ಯ ತತ್ ಅಗಂಧಂ, ತತ್ ।

**ಅಮಲಪಾಣಿಃ—** ಅಮಲೌ ಪಾಣೀ ಯಸ್ಯ ಸಃ ಅಮಲಪಾಣಿಃ ।

**ಪಾಣಿಜಾಃ—** ಪಾಣೇಃ ಜಾಯಂತೇ ಇತಿ ಪಾಣಿಜಾಃ (ನಖಾಃ = ಉಗುರುಗಳು) ತೈಃ ।

**ಅಪ್ರವಿಷ್ಟಂ—** ನ ಪ್ರವಿಷ್ಟಂ ಅಪ್ರವಿಷ್ಟಂ ತತ್ ।

**ವದನಪವನಭೀತ್ಯಾ—** ವದನಸ್ಯ ಪವನಃ ವದನಪವನಃ, ವದನಪವನಾತ್ ಭೀತಿಃ ವದನಪವನಭೀತಿಃ ತಯಾ ।

**ಪಾರ್ಶ್ವತಃ—** ಪಾರ್ಶ್ವೇ ಇತಿ ಪಾರ್ಶ್ವತಃ । (ಎಲ್ಲಾ ವಿಭಕ್ತಿಗಳಿಗೆ ಬರುವ ತಸಿಪ್ರತ್ಯಯ ಇಲ್ಲಿ ಸಪ್ತಮೀ ವಿಭಕ್ತಿಯ ಅರ್ಥದಲ್ಲಿ ಬಂದಿದೆ (ಸಾರ್ವವಿಭಕ್ತಿಕಃ ತಸಿಃ)

**ಕರಕಪೂರ್ಣಂ—** ಕರಕೇ ಪೂರ್ಣಂ ಕರಕಪೂರ್ಣಂ ।

**ಸಂಯಮೀ—** ಸಂಯಮಃ ಅಸ್ಯ ಅಸ್ತೀತಿ ಸಂಯಮೀ ।

**ಕ್ರಿಯಾಪದ—** **ಆನಿನಾಯ** - ಆ+ನಿನಾಯ, ನಿನ್ಯತುಃ ನಿನ್ಯುಃ, ನಿನಯಿಥ-ನಿನೇಥ ನಿನ್ಯಥುಃ ನಿನ್ಯ, ನಿನಾಯ-ನಿನಯ ನಿನ್ಯಿವ ನಿನ್ಯಿಮ. ಣೀಞ್ ಪ್ರಾಪಣೇ (ನೀ) ದ್ವಿಕ ಅನಿ. ಉಭ to lead to carry to bring to Pass ಲಿಟ್ ಪ್ರಥಮಪುರುಷೇ ಏಕವಚನಂ ಆಙ್ ಉಪಸರ್ಗ ।

**ಕೋಶ—** ಕಂ = ನೀರು, 'ಮಾರುತೇ ವೇಧಸಿ ಬ್ರಧ್ನೇ ಪುಂಸಿ', 'ಕಃ ಕಂ ಶಿರೋಽಮ್ಬುನೋಃ' ಅಮರ, 'ಕೋ ಬ್ರಹ್ಮಾತ್ಮಾನಿಲಾರ್ಕೇಷು ಶಮನೇ ಸರ್ವನಾಮನಿ' 'ಪಾವಕೇ ಮಯೂರೇ ಚ ಮುಖಶೀರ್ಷಜಲೇಷು ಕಂ' ವಿಶ್ವ, ಕರಕಃ = (ಯತಿಗಳ) ಕಮಂಡಲು, 'ಕಮಂಡಲೌ ಚ ಕರಕಃ' ಅಮರ ।

**ವಿಶೇಷವಿಚಾರ—** ಅಗಂಧಮವ್ಯಕ್ತರಸಂ ಶೀತಲಂ ಚ ತೃಷಾಪಹಂ । ಅಚ್ಛಂ ಲಘು ಚ ಪಥ್ಯಂ ಚ ತೋಯಂ ಗುಣವದುಚ್ಯತೇ ಇತಿ ಚ ॥ ನೀರಿನಲ್ಲಿ ದುರ್ವಾಸನೆ ಇರಬಾರದು, ಅದರ ರುಚಿಯು ಉಲ್ಬಣವಾಗಿರಬಾರದು, ಭಾರಿ ಸಿಹಿ, ಭಾರಿ ಸಪ್ಪೆ ಉಪ್ಪು ಚೌಳು ಇತ್ಯಾದಿಯಾಗಿರಬಾರದು. ಅದನ್ನು ಯಾರಾದರೂ ಕುಡಿದು ಎಂಜಲು ಮಾಡಿರಬಾರದು, ತಂಪಾಗಿರಬೇಕು. ಕುಡಿದರೆ ಬಾಯಾರಿಕೆಯನ್ನು ಹೋಗಲಾಡಿಸುವಂತಿರಬೇಕು. ನಿರ್ಮಲವಾಗಿಯೂ ಹಗುರವಾಗಿಯೂ ಇರುವ ನೀರು ಉತ್ತಮವೆಂದು ಶಾಸ್ತ್ರದಲ್ಲಿ ಹೇಳಲಾಗಿದೆ ಎಂದು ಪ್ರಮಾಣ ಶ್ಲೋಕದ ಅಭಿಪ್ರಾಯ. ದೇವರ ಪೂಜೆಗೆ ಇಂತಹ ನೀರನ್ನೇ ತರಬೇಕು.

**ಪ್ರಯೋಗ—** ಅಥ ಅಮಲಪಾಣಿನಾ ಸಂಯಮಿನಾ ವದನಪವನಭೀತ್ಯಾ ಪಾರ್ಶ್ವತಃ ಬಿಭ್ರತಾ (ಸತಾ) ಅವಿದಿತರಸಭೇದಂ ಶೀತಲಂ ಲಘು ಅಗಂಧಂ ವಿಮಲಂ ಪಾಣಿಜೈಃ ಅಪ್ರವಿಷ್ಟಂ ಕರಕಪೂರ್ಣಂ ಅರ್ಘ್ಯಂ ಕಂ ಇಹ ಆನಿನ್ಯೇ (ಕರ್ಮಣಿ)।

★ ★ ★

**ಅವತಾರಿಕಾ—** ಆಚಾರ್ಯರು ಅರ್ಘ್ಯೋದಕವನ್ನು ಶಂಖದಲ್ಲಿ ತುಂಬಿಸಿದರು ಎಂಬ ವಿಷಯವನ್ನು ವರ್ಣಿಸುತ್ತಾರೆ.

**ವಿಹಸಿತಬಿಸಭಂಗಶ್ರೀಪ್ರಕರ್ಷಂ ಸಿ(ಶಿ)ತಿಮ್ನಾ**
**ಜಲಜಮಮೃತಪೂರ್ಥೈಃ ಪೂರಯಾಮಾಸ ರಮ್ಯಮ್ ।**
**ಸಮಯಗುಣವಿಶೇಷಾಲೋಚಕೈರ್ಲಾಲನೀಯಃ**
**ಸಸುರಭಿಸುಮನೋಭಿಃ ಸ ಸ್ಫುಟಂ ಗೌರಪಕ್ಷಃ ॥ 34 ॥**

**ಪದಚ್ಛೇದ—** ವಿಹಸಿತಬಿಸಭಂಗಶ್ರೀಪ್ರಕರ್ಷಂ, ಸಿತಿಮ್ನಾ (ಶಿತಿಮ್ನಾ), ಜಲಜಂ, ಅಮೃತಪೂರ್ಥೈಃ, ಪೂರಯಾಮಾಸ, ರಮ್ಯಂ, ಸಮಯಗುಣವಿಶೇಷಾಲೋಚಕೈಃ, ಲಾಲನೀಯಃ, ಸಸುರಭಿಸುಮನೋಭಿಃ, ಸಃ, ಸ್ಫುಟಂ, ಗೌರಪಕ್ಷಃ ।

**ಅನ್ವಯ—** ಗೌರಪಕ್ಷಃ, ಸಮಯಗುಣವಿಶೇಷಾಲೋಚಕೈಃ, ಸುಮನೋಭಿಃ, ಸ್ಫುಟಂ, ಲಾಲನೀಯಃ, ಸಃ, ಸಿತಿಮ್ನಾ, ವಿಹಸಿತಬಿಸಭಂಗಶ್ರೀಪ್ರಕರ್ಷಂ, ರಮ್ಯಂ, ಜಲಜಂ, ಸಸುರಭಿಸುಮನೋಭಿಃ, ಅಮೃತಪೂರ್ಥೈಃ, ಪೂರಯಾಮಾಸ ।

**ಅನ್ವಯಾರ್ಥ—**

**ಗೌರಪಕ್ಷಃ** = ಪ್ರಾಮಾಣಿಕನಾದುದರಿಂದ ಶುದ್ಧವಾದ ಸಿದ್ಧಾಂತವುಳ್ಳ

**ಸಮಯಗುಣವಿಶೇಷಾಲೋಚಕೈಃ** = ತನ್ನ ಶಾಸ್ತ್ರದ ಶ್ರುತಿಸ್ಮೃತ್ಯಾದಿಗಳಿಗೆ ಅನುಗುಣವಾಗಿರುವಿಕೆ ಮುಂತಾದ ವಿಶೇಷ ಗುಣಗಳನ್ನು ವಿಮರ್ಶಿಸುವ,

**ಸುಮನೋಭಿಃ** = ದೇವತೆಗಳಿಂದ,

**ಸ್ಫುಟಂ** = ಚೆನ್ನಾಗಿ,

**ಲಾಲನೀಯಃ** = ಗೌರವಿಸಲು ಯೋಗ್ಯರಾದ,

**ಸಃ** = ಆ ಮಧ್ವಾಚಾರ್ಯರು,

**ಸಿತಿಮ್ನಾ** = ಬೆಳ್ಳಗಿರುವುದರಿಂದ,

**ವಿಹಸಿತ, ಬಿಸಭಂಗ, ಶ್ರೀಪ್ರಕರ್ಷಂ** = ಅಪಹಾಸ ಮಾಡಲ್ಪಟ್ಟ, (ನಿರಾಕರಿಸಲ್ಪಟ್ಟ) ತಾವರೇದಂಟಿನ ತುಂಡಿನ, ಕಾಂತ್ಯಾತಿಶಯವುಳ್ಳ,

**ರಮ್ಯಂ** = ಸುಂದರವಾದ,

**ಜಲಜಂ** = ಶಂಖವನ್ನು,

**ಸುಸುರಭಿಸುಮನೋಭಿಃ** = ಸುವಾಸನೆಯುಳ್ಳ ಹೂವುಗಳಿಂದ ಸಹಿತವಾದ,

**ಅಮೃತಪೂರೈಃ** = ಜಲಸಮೂಹಗಳಿಂದ,

**ಪೂರಯಾಮಾಸ** = ತುಂಬಿಸಿದರು.

**(ಮತ್ತೊಂದು ಅರ್ಥ)**

**ಸಮಯಗುಣವಿಶೇಷಾಲೋಚಕೈಃ** = ಕೃಷ್ಣಪಕ್ಷ ಶುಕ್ಲಪಕ್ಷ ಮುಂತಾದ ಕಾಲಗಳ ಗುಣವಿಶೇಷಗಳನ್ನು ಆಲೋಚಿಸುವ ಜ್ಯೋತಿಷ್ಕರಿಂದ,

**ಲಾಲನೀಯಃ** = ಗೌರವಿಸಲು ಯೋಗ್ಯವಾದ,

**ಗೌರಪಕ್ಷಃ** = ಶುಕ್ಲಪಕ್ಷವು,

**ಶಿತಿಮ್ನಾ** = ಬಿಳುಪಿನಿಂದ,

**ವಿಹಸಿತಬಿಸಭಂಗಶ್ರೀಪ್ರಕರ್ಷಂ** = ತಾವರೆದಂಟಿನ ತುಂಡಿನ ಕಾಂತಿಯನ್ನು ಅಪಹಾಸ ಮಾಡುತ್ತಿರುವ, (ತಾವರೆದಂಟಿನ ತುಂಡಿಗಿಂತಲೂ ಹೆಚ್ಚು ಕಾಂತಿಯುಳ್ಳ)

**ರಮ್ಯಂ** = ಮನೋಹರವಾದ

**ಜಲಜಂ** = ಚಂದ್ರನನ್ನು,

**ಸುಸುರಭಿಸುಮನೋಭಿಃ** = ಕಾಮಧೇನುವಿನಿಂದ ಸಹಿತರಾದ ದೇವತೆಗಳಿಂದ,

**ಅಮೃತಪೂರೈಃ** = ಅಮೃತಮಯವಾದ ಕಲೆಗಳಿಂದ (ಅಮೃತಪ್ರವಾಹಗಳಿಂದ),

**ಪೂರಯಾಮಾಸ** = ತುಂಬಿಸಿತು.

**ತಾತ್ಪರ್ಯ—** ಶುಕ್ಲಪಕ್ಷ ಕೃಷ್ಣಪಕ್ಷ ಮುಂತಾದ ಕಾಲಗಳ ಗುಣವಿಶೇಷಗಳನ್ನು ಅರಿತ ಒಳ್ಳೆಯ ಮುಹೂರ್ತವನ್ನು ಬಲ್ಲ ಜೋಯಿಸರು ಮಂಗಳ ಕಾರ್ಯಗಳಿಗೆ ಪ್ರಶಸ್ತವಾದ ಶುಕ್ಲ ಪಕ್ಷವನ್ನು ಗೌರವಿಸುವರು. ಅಂತಹ ಶುಕ್ಲಪಕ್ಷದಲ್ಲಿ ದೇವತೆಗಳು ಕಾಮಧೇನುವಿನಿಂದ ಸಹಿತರಾಗಿ ಕೃಷ್ಣಪಕ್ಷದಲ್ಲಿ ತಾವು ಕುಡಿದ ಚಂದ್ರನ ಅಮೃತಕಲೆಗಳನ್ನು ತಾವರೆದಂಟಿನ ತುಂಡಿಗಿಂತಲೂ ಹೆಚ್ಚು ಬಿಳುಪಾಗಿರುವ ಚಂದ್ರನಲ್ಲಿ ಪುನಃ ತುಂಬಿಸುವರು. ಶುಕ್ಲ ಪಕ್ಷದ ಪಾಡ್ಯದಿಂದ ಆರಂಭಿಸಿ ಒಬ್ಬೊಬ್ಬರೂ ಒಂದೊಂದು

ಅಮೃತಕಲೆಯನ್ನು ತುಂಬಿಸಿ ಹುಣ್ಣಿಮೆಯ ದಿನ ಚಂದ್ರನನ್ನು ಪೂರ್ಣನನ್ನಾಗಿ ಮಾಡುತ್ತಾರೆ ಇದು (ಧ್ವನಿತಾರ್ಥ) ಅದರಂತೆಯೇ ಶ್ರೀಮಧ್ವಾಚಾರ್ಯರು (ಪಾಂಚಜನ್ಯ) ಶಂಖವನ್ನು ಅಮೃತಪ್ರವಾಹಗಳಿಂದ (ಜಲಪ್ರವಾಹಗಳಿಂದ) ತುಂಬಿಸಿದರು. ಶೃತಿಸ್ಮೃತಿಗಳಿಗೆ ಅನುಗುಣವಾಗಿರುವುದರಿಂದ ಪ್ರಾಮಾಣಿಕವಾದ ವೈಷ್ಣವ ಸಿದ್ಧಾಂತವನ್ನು ರಚಿಸಿರುವುದ ರಿಂದ ಅವರೂ 'ಗೌರಪಕ್ಷ' ಅಂದರೆ ಶುಕ್ಲಪಕ್ಷ ಎಂದು ಹೇಳಿಸಿಕೊಳ್ಳುತ್ತಾರೆ. ಸಿದ್ಧಾಂತದ ಗುಣವಿಶೇಷಗಳನ್ನು ಪರ್ಯಾ ಲೋಚಿಸುವ ದೇವತೆಗಳಿಂದಲೂ, ಪಂಡಿತರಿಂದಲೂ ಶುಕ್ಲಪಕ್ಷದಂತೆಯೇ ಗೌರವಿಸಲು ಯೋಗ್ಯರಾಗಿದ್ದಾರೆ. ಅಂತಹ ಶ್ರೀಮಧ್ವಾಚಾರ್ಯರು ತಾವರೆ ತುಂಡಿಗಿಂತಲೂ ಬಿಳುಪಾದ ಸಮುದ್ರ ಜಲದಲ್ಲಿ ಹುಟ್ಟಿದ್ದುದರಿಂದ ಜಲಜ ಎಂಬ ಹೆಸರುಳ್ಳ ಶಂಖದಲ್ಲಿ ಒಳ್ಳೆಯ ಸುವಾಸನೆಯುಳ್ಳ ಹೂವುಗಳಿಂದ ಸಹಿತವಾಗಿ ಅರ್ಘ್ಯೋದಕವನ್ನು ಧಾರೆಯಾಗಿ ತುಂಬಿದರು. ಶಂಖವನ್ನು ಪೂಜಿಸಿ ಅದರ ನೀರಿನಿಂದ ದೇವರನ್ನು ಅಭಿಷೇಕಿಸಿದರು. ಆಚಾರ್ಯರು ಶಂಖಕ್ಕೆ ನೀರು ತುಂಬುವುದನ್ನು ನೋಡಿದರೆ ದೇವತೆಗಳು ಚಂದ್ರನಿಗೆ ಶುಕ್ಲಪಕ್ಷದಲ್ಲಿ ಅಮೃತಕಲೆಗಳನ್ನು ತುಂಬುವಂತೆ ಕಾಣಸುತ್ತಿತ್ತು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ಗೌರಪಕ್ಷ—** ಗೌರಃ (ಪ್ರಾಮಾಣಿಕತ್ವೇನ ನಿರ್ಮಲಃ) ಪಕ್ಷಃ (ವೈಷ್ಣವ ಸಿದ್ಧಾಂತಃ) ಯಸ್ಯ ಸಃ ಗೌರಪಕ್ಷಃ ಶುದ್ಧ ಸಿದ್ಧಾಂತವುಳ್ಳ ಆಚಾರ್ಯರು ಎಂದು ಪ್ರಕೃತಾರ್ಥದಲ್ಲಿ ವಿಗ್ರಹ. ಗೌರಶ್ಚಾಸೌ ಪಕ್ಷಶ್ಚ ಗೌರಪಕ್ಷಃ, ಶುಕ್ಲಪಕ್ಷ ಎಂದು ಅರ್ಥ.

**ಸಮಯಗುಣವಿಶೇಷಾಲೋಚಕಾಃ—** ಸಮಯಸ್ಯ ಗುಣಾಃ ಸಮಯಗುಣಾಃ, ಸಮಯಗುಣಾನಾಂ ವಿಶೇಷಾಃ ಸಮಯಗುಣವಿಶೇಷಾಃ, ಆಲೋಚಯಂತೀತಿ ಆಲೋಚಕಾಃ, ಸಮಯಗುಣ ವಿಶೇಷಾಣಾಂ ಆಲೋಚಕಾಃ ಸಮಯಗುಣವಿಶೇಷಾಲೋಚಕಾಃ ತೈಃ । ಎರಡು ಅರ್ಥಗಳ ಪಕ್ಷ ದಲ್ಲಿಯೂ ವಿಗ್ರಹವು ಸಮಾನ. ಸಮಯ = ಸಿದ್ಧಾಂತ ಮತ್ತು ಕಾಲ, 'ಸಮಯಾಃ ಶಪಥಾಚಾರಕಾಲ ಸಿದ್ಧಾಂತಸಂವಿದಃ' ಅಮರ.

**ಸಸುರಭಿಸುಮನೋಭಿಃ—** ಸುರಭ್ಯಾ ಸಹಿತಾ ಸಸುರಭಯಃ (ಇಲ್ಲಿ ಸುರಭಿಶಬ್ದಕ್ಕೆ ಸುವಾಸನೆಯುಳ್ಳದ್ದು ಎಂದು ಅರ್ಥವಿದ್ದರೂ ಭಾವಪ್ರಧಾನ ನಿರ್ದೇಶವನ್ನಿಟ್ಟುಕೊಂಡು ಸೌರಭ ಸುವಾಸನೆ ಎಂದು ಅರ್ಥವನ್ನಿಟ್ಟು ಕೊಳ್ಳಬೇಕು) ಸಸುರಭಯಶ್ಚ ತಾಃ ಸುಮನಸಶ್ಚ ಸಸುರಭಿಸುಮನಸಃ ತಾಭಿಃ, (ಸುಸರಭಿ ಸುಮನೋಭಿಃ ಎಂಬ ಪಾಠದಲ್ಲಿ ಸುಶೋಭನಾಶ್ಚ ತಾಃ ಸುಭಯಶ್ಚ ತಾಃ ಸುಮನಸಃ ಸುಸುರಭಿ ಸುಮನಸಃ ತಾಭಿಃ ಎಂದು ವಿಗ್ರಹ ಮಾಡಬೇಕು. ತುಂಬಾ ಸುವಾಸನೆಯಾದ ಹೂವುಗಳಿಂದ ಎಂದು ಅರ್ಥ) ಇನ್ನೊಂದು ಅರ್ಥ ಪಕ್ಷದಲ್ಲಿ ಸುರಭ್ಯಾ ಕಾಮಧೇನ್ವಾ ಸಹಿತಾಃ ಸಸುರಭಯಃ, ಸಸುರಭಯಶ್ಚ ತೇ ಸುಮನಸಶ್ಚ ಸಸುರಭಿಸುಮನಸಃ = ಕಾಮಧೇನುವಿನಿಂದ ಸಹಿತರಾದ ದೇವತೆಗಳೆಂಬ ಅಮೃತ ಕಲೆಗಳನ್ನು ತುಂಬಿಸುವ ಕರ್ತೃಗಳಿಂದ ಎಂದು ಅರ್ಥ ಹಿಂದೆ ಹೇಳಿದ ಪಾಠಾಂತರ ಪಕ್ಷದಲ್ಲಿ 'ಸುಶೋಭನಾ ಸುರಭಿಃ ಯೇಷಾಂ ತೇ ಸಸುರಭಯಃ ಸಸುರಭಯಶ್ಚ ತೇ ಸುಮನಸಶ್ಚಸುಸುರಭಿ ಸುಮನಸಃ' ಎಂದು ವಿಗ್ರಹ.

**ವಿಹಸಿತಬಿಸಭಂಗಶ್ರೀಪ್ರಕರ್ಷಃ—** 'ಸುಪರ್ವಾಣಸ್ಸುಮನಸಃ', 'ಸ್ತ್ರಿಯಃ ಸುಮನಸಃ ಪುಷ್ಪಂ' ಅಮರ. ಶೋಭನಂ ಮನಃ ಯೇಷಾಂ ತೇ ಸುಮನಸಃ, ಪಂಡಿತರು ಎಂದೂ ಅರ್ಥ. ಬಿಸಸ್ಯ ಭಂಗಃ ಬಿಸಭಂಗಃ ಬಿಸಭಂಗಸ್ಯ ಶ್ರೀ, ಬಿಸಭಂಗಶ್ರೀಃ ಬಿಸಭಂಗಶ್ರಿಯಃ ಪ್ರಕರ್ಷಃ ಬಿಸಭಂಗಶ್ರೀಪ್ರಕರ್ಷಃ, ವಿಹಸಿತಃ ಬಿಸಭಂಗಶ್ರೀಪ್ರಕರ್ಷಃ ಯೇನ ಸಃ ವಿಹಸಿತಬಿಸಭಂಗಶ್ರೀಪ್ರಕರ್ಷಃ ತಂ । ಎರಡು ಅರ್ಥಗಳಲ್ಲಿಯೂ ಇಲ್ಲಿ ವಿಗ್ರಹವು ಸಮಾನ. ಬಿಸ = ತಾವರೆಯ ದಂಟು. ತಾವರೇದಂಟಿನ ಕೊಳವೆ. 'ಅಥಾಸ್ತ್ರಿಯಾಂ

ಮೃಣಾಲಂ ಬಿಸಂ' ಅಮರ. ಸಿತಸ್ಯ ಭಾವಃ = ಸಿತಿಮಾ, ತೇನ ಶಿತಿಮ್ನಾ ಎಂಬ ಪಾಠಪಕ್ಷದಲ್ಲಿ 'ಶಿತಸ್ಯ ಭಾವಃ ಶಿತಿಮಾ' ಎಂದು ವಿಗ್ರಹ ಮಾಡಿಕೊಳ್ಳಬೇಕು. ಶಸಯೋರಭೇದಃ ಎಂದು ಇಟ್ಟುಕೊಂಡು ಶಿತಸಿತ ಶಬ್ದಗಳು ಒಂದೇ ಎಂದು ಇಟ್ಟುಕೊಂಡು ರೂಪವನ್ನು ಸಾಧಿಸಬೇಕು. ವರ್ಣದೃಢಾದಿಭ್ಯಃ ಷ್ಯಞ್ ಚ (5-1-123) ಎಂಬ ಸೂತ್ರದಿಂದ ಇಮನಿಚ್ ಪ್ರತ್ಯಯ, 'ಶಿತೀಧವಲಮೇಚಕೌ' ಎಂಬ ಕೋಶಾನುಸಾರವಾಗಿ ಶಿತಿ ಎಂದರೆ ಬಿಳಿ ಎಂಬ ಅರ್ಥ ಮಾಡಲು ಸಾಧ್ಯವಿದೆ. ಆಗ 'ಶಿತೇಃ ಭಾವಃ ಶಿತಿಮಾ' ಎಂದು ರೂಪಸಿದ್ಧಿಯನ್ನು ಮಾಡಿಕೊಳ್ಳಬೇಕು. ಹಿಂದಿನ ಹಾಗೆಯೇ ಇಮನಿಚ್ ಪ್ರತ್ಯಯವನ್ನು ಹೇಳಬೇಕು. ಇಲ್ಲಿ ಎಲ್ಲಾ ಕಡೆಯಲ್ಲಿಯೂ ಟೇಃ (6-4-155) ಎಂಬ ಸೂತ್ರದಿಂದ ಟ ಲೋಪವು. ಜಲಜ ಎಂದರೆ ಸಮುದ್ರಜಲದಿಂದ ಹುಟ್ಟಿದ ಶಂಖ ಮತ್ತು ಸಮುದ್ರದಿಂದ ಹುಟ್ಟಿದ ಚಂದ್ರ, ಎಂದು ಎರಡು ಅರ್ಥ. 'ಅಬ್ಜೌ ಶಂಖಶಶಾಂಕೌ ದ್ವೌ' ಅಮರ.

**ಅಮೃತಪೂರಾಃ—** ಅಮೃತಾನಾಂ ಪೂರಾಃ ಅಮೃತಪೂರಾಃ ತೈಃ, 'ಪಯಃ ಕೀಲಾಲಮಮೃತಂ', 'ಪೀಯೂಷಮಮೃತಂ ಸುಧಾ', 'ತ್ರಿಷ್ವಪ್ಸು ಚ ಘೃತಾಮೃತೇ, ಲಾಲಯಿತುಂ ಯೋಗ್ಯಃ ಲಾಲನೀಯಃ' ಅನೀಯರ್ ಪ್ರತ್ಯಯ ।

**ಕ್ರಿಯಾಪದ—** ಪೂರಯಾಮಾಸ ಪೂರಯಾಮಾಸತುಃ ಪೂರಯಾಮಾಸುಃ, ಪೂರಯಾಮಾಸಿಥ ಪೂರಯಾಮಾಸಥುಃ ಪೂರಯಾಮಾಸ, ಪೂರಯಾಮಾಸ ಪೂರಯಾಮಾಸಿವ ಪೂರಯಾಮಾಸಿಮ । ಪೂರೀ ಆಪ್ಯಾಯನೇ ಸಕ ಸೇಟ್ ಉಭಯ ಲಿಟ್ ।

**ಪ್ರಯೋಗ—** ಗೌರಪಕ್ಷೇಣ ಸಮಯಗುಣವಿಶೇಷಾಲೋಚಕೈಃ ಸುಮನೋಭಿಃ ಸ್ಫುಟಂ ಲಾಲನೀಯೇನ ತೇನ ಸಿತಿಮಾ ವಿಹಸಿತಬಿಸಭಂಗಶ್ರೀಪ್ರಕರ್ಷಃ ರಮ್ಯಃ ಜಲಜಃ ಸು(ಸ)ಸುರಭಿಸುಮನೋಭಿಃ ಅಮೃತಪೂರೈಃ ಪೂರಯಾಮಾಸೇ (ಕರ್ಮಣಿ) ।

**ವ್ಯಾಕರಣವಿಶೇಷ—** ಸುರಭ್ಯಾದಯೋ ದೇವಾಃ ಕೃಷ್ಣಪ್ರತಿಪದಂ ಆರಭ್ಯ ಚಂದ್ರಸ್ಯ ಪ್ರತಿದಿನಂ ಏಕೈಕಾಂ ಕಲಾಂ ದರ್ಶಾವಧಿ ಸ್ವೀಕೃತ್ಯ ಪುನಃ ಶುಕ್ಲ ಪ್ರತಿಪತ್ತಿಥಿಮಾರಭ್ಯ ಯಥಾಕ್ರಮಂ ಪ್ರತ್ಯಹಂ ಏಕೈಕಕಲಾಪ್ರತ್ಯರ್ಪಣೇನ ಚಂದ್ರಂ ಅಮೃತಕಲಾಭಿಃ ಪೂರ್ಣಿಮಾವಧಿ ಪೂರಯಂತೀತಿ ಹಿ ಪ್ರಸಿದ್ಧಂ. ಪೂರಯಂತಿ ದಿಶಃ ಸೋಮಂ ದೇವಾಗಾವಃ ಸರಸ್ವತೀ ಇತಿ. ಸುರಭಿ ಮುಂತಾದ ದೇವತೆಗಳು ಕೃಷ್ಣಪಕ್ಷದ ಪಾಡ್ಯವನ್ನು ಆರಂಭಿಸಿ ಪ್ರತಿದಿನವೂ ಚಂದ್ರನ ಒಂದೊಂದು ಕಲೆಯನ್ನು ಅಮಾವಾಸ್ಯೆವರೆಗೆ ಸ್ವೀಕರಿಸಿ ತಿರುಗಿ ಶುಕ್ಲಪಕ್ಷದ ಪಾಡ್ಯವನ್ನು ಆರಂಭಿಸಿ ಪ್ರತಿದಿನವೂ ಚಂದ್ರನ ಒಂದೊಂದು ಕಲೆಯನ್ನು ಹಿಂದಿರುಗಿ ಚಂದ್ರನಿಗೆ ಅರ್ಪಿಸುತ್ತಾ ಚಂದ್ರನನ್ನು ಅಮೃತಕಲೆಗಳಿಂದ ಹುಣ್ಣಿಮೆಯವರೆಗೂ ಅಪ್ಯಾಯನಗೊಳಿಸುತ್ತಾರೆ ಎಂದು 'ಪೂರಯಂತಿ ದಿಶಃ ಸೋಮಂ ದೇವಾ ಗಾವಃ ಸರಸ್ವತೀ' ಎಂಬ ಪ್ರಮಾಣದಿಂದ ಪ್ರಸಿದ್ಧವಾದ ವಿಷಯವು ಎಂದು ಫಲಾರಿಯದಲ್ಲಿ ತಾತ್ಪರ್ಯವನ್ನು ವರ್ಣಿಸುತ್ತಾರೆ.

**ವಿಶೇಷ ವಿಚಾರ—** ಸಸುರಭಿಸುಮನೋಭಿಃ ಸುಷ್ಠು ಸುಗಂಧಿಪುಷ್ಪೈಃ, ಸಸುರಭಿಸುಮನೋಭಿಃ ಎಂದರೆ ಬಹಳ ಒಳ್ಳೆಯ ಸುವಾಸನೆಯುಳ್ಳ ಹೂವುಗಳಿಂದ ಸಹಿತರಾದ ದೇವತೆಗಳಿಂದ ಎಂದು ಮತ್ತೊಂದು ಅರ್ಥ. 'ಪೂರಯಂತಿ ದಿಶಃ ಸೋಮಂ ದೇವಾ ಗಾವಃ ಸರಸ್ವತೀ ಇತಿ ಚ' ದಿಗಭಿಮಾನಿದೇವತೆಗಳು, ದೇವತೆಗಳು, ಕಾಮಧೇನುಗಳು, ಸರಸ್ವತೀ ಇವರೆಲ್ಲರೂ ಚಂದ್ರನಲ್ಲಿ ಅಮೃತವನ್ನು ತುಂಬುವರು.

★ ★ ★

ಅವತಾರಿಕಾ— ಆಚಾರ್ಯರು ಗಂಧಪುಷ್ಪಾದಿಗಳಿಂದ ದೇವರನ್ನು ಪೂಜಿಸಿದುದನ್ನು ವಿವರಿಸುತ್ತಾರೆ.

**ವಿಮಲಮಲಯಜಾಂಭೋಬಿಂದುಭಿಶ್ಚರ್ಚಿತಾರ್ಚೋ**
**ನವಲಲಿತತುಲಸ್ಯಾ ಪುಷ್ಪರಾಜ್ಯಾಽರ್ಚಿಚ(ರ್ಚಯ)ತ್ ಸಃ ।**
**ಸ್ಥಲಜಜಲಜವಲ್ಲೀ ವೃಕ್ಷವೀರುತ್ಸಮಸ್ತ-**
**ಪ್ರಸವವಿಜಯಲಕ್ಷ್ಮ್ಯಾ ಮೂರ್ತಯೇವೇಂದಿರೇಶಮ್ ॥ 35 ॥**

ಪದಚ್ಛೇದ— ವಿಮಲಮಲಯಜಾಂಭೋಬಿಂದುಭಿಃ, ಚರ್ಚಿತಾರ್ಚಃ, ನವಲಲಿತತುಲಸ್ಯಾ, ಪುಷ್ಪರಾಜ್ಯಾ, ಆರ್ಚಿಚತ್ (ಅರ್ಚಯತ್), ಸಃ, ಸ್ಥಲಜಜಲಜವಲ್ಲೀ, ವೃಕ್ಷವೀರುತ್ಸಮಸ್ತಪ್ರಸವವಿಜಯಲಕ್ಷ್ಮ್ಯಾ, ಮೂರ್ತಯಾ, ಇವ, ಇಂದಿರೇಶಂ ।

ಅನ್ವಯ— ವಿಮಲಮಲಯಜಾಂಭೋಬಿಂದುಭಿಃ, ಚರ್ಚಿತಾರ್ಚಃ, ಮೂರ್ತಯಾ, ನವಲಲಿತತುಲಸ್ಯಾ, ಸ್ಥಲಜ-ಜಲಜವಲ್ಲೀ, ವೃಕ್ಷವೀರುತ್ಸಮಸ್ತಪ್ರಸವವಿಜಯಲಕ್ಷ್ಮ್ಯಾ, ಇವ, ಪುಷ್ಪರಾಜ್ಯಾ, ಇಂದಿರೇಶಂ, ಆರ್ಚಿಚತ್ (ಅರ್ಚಯತ್) ।

ಅನ್ವಯಾರ್ಥ—

ವಿಮಲಮಲಯಜಾಂಭೋಃಬಿಂದುಭಿಃ = ನಿರ್ಮಲವಾದ ಗಂಧದ ನೀರಿನ ಹನಿಗಳಿಂದ,
ಚರ್ಚಿತಾರ್ಚಃ = ಲೇಪನಮಾಡಲ್ಪಟ್ಟ ಪ್ರತಿಮೆಯುಳ್ಳ,
ಸಃ = ಆ ಮಧ್ವಾಚಾರ್ಯರು,
ಮೂರ್ತಯಾ = ಶರೀರವನ್ನು ಧರಿಸಿರುವ,
ನವಲಲಿತತುಲಸ್ಯಾ = ಹೊಸದಾದ, ಮೃದುವಾದ ಮತ್ತು ಮನೋಹರವಾದ ದಳರೂಪ ತುಳಸಿಯಿಂದ,
ಸ್ಥಲಜಜಲಜವಲ್ಲಿ = (ಭೂಮಿಯಲ್ಲಿ) ನೆಲದಲ್ಲಿ ಬೆಳೆಯುವ ಜಾಜಿ ಮಲ್ಲಿಗೆ ಮೊದಲಾದವುಗಳ, ನೀರಿನಲ್ಲಿ ಬೆಳೆಯುವ ಕಮಲ ನೈದಿಲೆ ಮೊದಲಾದವುಗಳ, ಚಪ್ಪರಕ್ಕೆ ಹಬ್ಬಿಸಿದ ಬಳ್ಳಿಗಳ,
ವೃಕ್ಷವೀರುತ್ಸಮಸ್ತಪ್ರಸವವಿಜಯಲಕ್ಷ್ಮ್ಯಾ = ಸಂಪಿಗೆ ಮುಂತಾದ ಮರಗಳ, ನೆಲದ ಮೇಲೆ ಹಬ್ಬಿರುವ ಬಳ್ಳಿಗಳ, ಎಲ್ಲಾ ಹೂವುಗಳ,
ಇವ = ಉತ್ಕರ್ಷ ವಿಶೇಷ (ಅತಿಶಯ)ಕ್ಕೆ ಅಭಿಮಾನಿಯಾಗಿರುವ ಲಕ್ಷ್ಮಿಯೋ ಎಂಬಂತಿರುವ,
ಪುಷ್ಪರಾಜ್ಯಾ = ಹೂವುಗಳ ಸಮೂಹದಿಂದ,
ಇಂದಿರೇಶಂ = ಶ್ರೀಮನ್ನಾರಾಯಣನನ್ನು
ಆರ್ಚಿಚತ್ (ಆರ್ಚಯತ್) = ಪೂಜಿಸಿದರು.

ತಾತ್ಪರ್ಯ— ಆಚಾರ್ಯರು ದೇವರಿಗೆ ಅಭಿಷೇಕ ಮಾಡಿದರು. ಅನಂತರ ನಿರ್ಮಲವಾದ ಗಂಧದ ನೀರಿನ ಹನಿಗಳಿಂದ ದೇವರ ಸಾಲಿಗ್ರಾಮ ಪ್ರತಿಮಾದಿಗಳನ್ನು ಲೇಪಿಸಿದರು. (ಹಸಿಯಾದ ಗಂಧವನ್ನು ದೇವರಿಗೆ ಹಚ್ಚಿದರು) ಅನಂತರ ಕೋಮಲವಾಗಿಯೂ, ಸುಂದರವಾಗಿಯೂ ಆದ ತಾನೇ ತಂದಿರುವ, ಹೊಸದಾದ ದೇಹವನ್ನು ಧರಿಸಿ ಬಂದಿರುವ ತುಳಸಿಯ ಅಭಿಮಾನಿದೇವತೆಯೋ ಎಂಬಂತಿರುವ ತುಳಿಸಿದಲ ಸಮುದಾಯದಿಂದ ದೇವರನ್ನು ಅಲಂಕರಿಸಿದರು. ಹಾಗೆಯೇ ಹೂವುಗಳ ಅಭಿಮಾನಿ ದೇವತೆಯಾದ ಲಕ್ಷ್ಮಿಯೋ ಎಂಬಂತಿರುವ ಮಲ್ಲಿಗೆ, ಜಾಜಿ, ತಾವರೆ, ಸಂಪಿಗೆ ಇರುವಂತಿಗೆ, ಸೇವಂತಿಗೆ ಚಪ್ಪರದ ಮೇಲೆ ಹಬ್ಬಿಸಿದ ಬಳ್ಳಿಯ ಹೂವುಗಳು ನೆಲದ ಮೇಲೆಲ್ಲ ಹಬ್ಬಿಸಿದ ಬಳ್ಳಿಗಳ, ಹೂವುಗಳ ರಾಶಿಯಿಂದಲೂ ಶ್ರೀಹರಿಯನ್ನು ಚೆನ್ನಾಗಿ ಪೂಜಿಸಿದರು. ಗಂಧ ತುಳಸೀ ಪುಷ್ಪಗಳಿಂದ ಪ್ರತಿಮೆಯಲ್ಲಿ ದೇವರನ್ನು ಪೂಜಿಸಿದರು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ವಿಮಲಮಲಯಜಾಂಭೋಬಿಂದಭಿಃ—** ವಿಮಲಶ್ಚಾಸೌ ಮಲಯಜಶ್ಚ ವಿಮಲಮಲಯಜಃ, ಅಂಭಸಾಂ ಬಿಂದವಃ ಅಂಭೋಬಿಂದವಃ, ವಿಮಲಮಲಯಜಸ್ಯ ಅಂಭೋಬಿಂದವಃ ವಿಮಲಮಲಯಜಾಂಭೋ-ಬಿಂದವಃ ತೈಃ । ಮಲಯಜ = ಗಂಧ, 'ಗಂಧ ಸಾರೋ ಮಲಯಜೋ ಭದ್ರಶ್ರೀಶ್ಚಂದನೋಽ ಸ್ತ್ರಿಯಾಂ' ಅಮರ. ಅಂಭಃ = ನೀರು, 'ಅಂಭೋರ್ಣಸ್ತೋಯೇಪಾನೀಯ' ಅಮರ.

**ಚರ್ಚಿತಾರ್ಚಃ—** ಚರ್ಚಿತಾಃ ಅರ್ಚಾಃ ಯೇನ ಸಃ ಚರ್ಚಿತಾರ್ಚಃ, 'ಅರ್ಚಾ ಪೂಜಾಪ್ರತಿಮಯೋಃ' ವಿಶ್ವ 'ಅರ್ಚಾತು ಪ್ರತಿಮಾ ಪ್ರೋಕ್ತಾ ಹರಿಣೀ ಸಾ ಹಿರಣ್ಮಯೀ' ಹಲ । (ಇಲ್ಲಿ ನಿರ್ಮಲವಾದ ಗಂಧದ ನೀರಿನ ಹನಿಗಳಿಂದ ಪ್ರತಿಮೆಯನ್ನು ಲೇಪಿಸಿದರು ಎಂಬ ಅರ್ಥವನ್ನು ಇಟ್ಟುಕೊಂಡು ಕೆಲವರು ನೀರಾದ ಗಂಧವನ್ನು ದೇವರಿಗೆ ಹಚ್ಚುವರು. ಮತ್ತೆ ಕೆಲವರು ಬಿಂದು ಪದದ ಸ್ವಾರಸ್ಯವನ್ನು ಇಟ್ಟುಕೊಂಡು ತುಳಸೀದಳಗಳಿಂದ ಶಾಲಿಗ್ರಾಮ ಪ್ರತಿಮಾದಿಗಳ ಮೇಲೆ ಹನಿಹನಿಯಾಗಿ ಗಂಧವನ್ನು ಹಚ್ಚಬೇಕೆನ್ನುತ್ತಾರೆ ಮತ್ತೆ ಕೆಲವರು ಗಂಧವನ್ನು ತೇದು ಉಂಡೆಯಾಗಿ ಮಾಡಿ ಹಸಿಯಾಗಿರುವ ಗಂಧದ ಉಂಡೆಯನ್ನು ದೇವರ ಮೇಲೆ ಇಡಬೇಕೆನ್ನುವರು (ಛಲಾರಿಯ) ।

**ನವಲಲಿತತುಲಸ್ಯಾ—** ಲಲಿತಾ ಚ ಸಾ ತುಲಸೀ ಚ ಲಲಿತತುಲಸೀ, ನವಾ ಚ ಸಾ, ಲಲಿತತುಲಸೀ ಚ ನವಲಲಿತತುಲಸೀ ತಯಾಃ ।

**ಪುಷ್ಪರಾಜ್ಯಾಃ—** ಪುಷ್ಪಾಣಾಂ ರಾಜಿಃ ಪುಷ್ಪರಾಜಿಃ ತಯಾ ।

**ಸ್ಥಲಜಜಲಜವಲ್ಲೀವೃಕ್ಷವೀರುತ್‌ಸಮಸ್ತಪ್ರಸವವಿಜಯಲಕ್ಷ್ಮ್ಯಾ—** ಸ್ಥಲೇ ಜಾಯಂತ ಇತಿ ಸ್ಥಲಜಾಃ, ವಲ್ಲ್ಯಶ್ಚ ವೃಕ್ಷಾಶ್ಚ ವೀರುಧಶ್ಚ ವಲ್ಲೀವೃಕ್ಷವೀರುಧಃ, ಸ್ಥಲಜಾಶ್ಚ ಜಲಜಾಶ್ಚ ಸ್ಥಲಜಜಲಜಾಃ, ಸ್ಥಲಜಜಲಜಾಶ್ಚ ವಲ್ಲೀ ಚ ವೃಕ್ಷವೀರುಧಶ್ಚ ಸ್ಥಲಜಜಲಜವಲ್ಲೀವೃಕ್ಷವೀರುಧಃ, ಸಮಸ್ತಾಶ್ಚ ತೇ ಪ್ರಸವಾಶ್ಚ ಸಮಸ್ತಪ್ರಸವಾಃ, ಸ್ಥಲಜಜಲಜವಲ್ಲೀ ವೃಕ್ಷವೀರುಧಾಂ ಸಮಸ್ತಪ್ರಸವಾಃ, ಸ್ಥಲಜಜಲಜವಲ್ಲೀವೃಕ್ಷವೀರುತ್ ಸಮಸ್ತ-ಪ್ರಸವಾಃ, ತೇಷಾಂ ವಿಜಯಃ(ಉತ್ಕರ್ಷಃ), ತಸ್ಯ ಲಕ್ಷ್ಮೀಃ ತಯಾ । ಪ್ರಸವ = ಹೂವು, 'ಸ್ಯಾದುತ್ಪಾದೇ ಫಲೇ ಪುಷ್ಪೇ ಪ್ರಸವೋ ಗರ್ಭಮೋಚನೇ' ಅಮರ. ವಲ್ಲೀ = ಚಪ್ಪರದ ಮೇಲೆ ಹಬ್ಬಿರುವ ಬಳ್ಳಿ, ವೀರುತ್ = ನೆಲದ ಮೇಲೆ ಹರಡುವ ಲತೆಗೆ 'ವೀರುತ್' ಎಂದು ಹೆಸರು ಎಂದು ಅಮರಕೋಶದ ಅರ್ಥ.

**ಇಂದಿರೇಶಂ—** ಇಂದಿರಾಯಾಃ ಈಶಃ ಇಂದಿರೇಶಃ ತಂ । ಸ್ಥಲಜಾಃ ಜಾಜೀಮಲ್ಲಿಕಾದಯಃ, ಜಲಜಾಃ ಕಲ್ಹಾರ ಪದ್ಮಾದಯಃ, ವೃಕ್ಷಾಃ ಚಂಪಕಾದಯಃ, ಇತಿ ಜ್ಞೇಯಂ, ಶ್ರೀಗಂಧತುಲಸೀನಾನಾವಿಧಪುಷ್ಪೈಶ್ಚ ದೇವಂ ಸಮ್ಯಕ್ ಆರಾಧಯಾಮಾಸ ಇತಿ ಭಾವಃ, ನೆಲದಲ್ಲಿ ಬೆಳೆದ ಜಾಜಿ ಮಲ್ಲಿಗೆ ಮುಂತಾದವುಗಳು ನೀರಿನಲ್ಲಿ ಬೆಳೆದ ಕಲ್ಹಾರ (ಕೆಂಪುಹೂವು) ತಾವರೆ ಮುಂತಾದವುಗಳು, ಚಂಪಕಾದಿವೃಕ್ಷಗಳ ಹೂವುಗಳು ಎಂದು ತಿಳಿಯಬೇಕು. ಶ್ರೀಗಂಧ ತುಳಸೀ ನಾನಾವಿಧ ಪುಷ್ಪಗಳಿಂದ ದೇವರನ್ನು ಪೂಜಿಸಿದರು ಎಂದು ತಾತ್ಪರ್ಯ.

**ಕ್ರಿಯಾಪದ— ಆರ್ಚಿಚತ್**- ಆರ್ಚಿಚತ್ ಆರ್ಚಿಚತಾಂ ಇತ್ಯಾದಿ ಅರ್ಚಪೂಜಾಯಂ ಸಕ. ಸೇಟ್ ಉಭಯ ಲುಙ್ ಆರ್ಚಯತ್ ಎಂಬ ಪಾಠವಿದ್ದಾಗ ಅರ್ಚಯತ್ ಆರ್ಚಯತಾಂ ಆರ್ಚಯನ್ ಇತ್ಯಾದಿ ಆರ್ಚ ಪೂಜಾಯಾಂ ಲಙ್ ।

**ಪ್ರಯೋಗ—**ವಿಮಲಮಲಯಜಾಂಭೋಬಿಂದುಭಿಃ ಚರ್ಚಿತಾರ್ಚೇನ, ಇಂದಿರೇಶಃ ಅರ್ಚ(ಅರ್ಚ್ಯತ) ಕರ್ಮಣಿ।

★ ★ ★

**ಅವತಾರಿಕಾ**— ಆಚಾರ್ಯರು ಎಲ್ಲಾ ರಾಜೋಪಚಾರಗಳನ್ನು ಅರ್ಪಿಸಿ ಅಪರಾಧವಿಲ್ಲದಂತೆ ಪೂಜಿಸಿದರು ಎಂದು ವರ್ಣಿಸುತ್ತಾರೆ.

**ಸ ದದದಧಿಕಬೋಧಃ ಷೋಡಶಾತ್ರೋಪಚಾರಾನ್**
**ವ್ಯರಹಯದಗುಣಾನ್ ದ್ವಾತ್ರಿಂಶದಾಗಃ ಪುರೋಗಾನ್ ।**
**ಅಗಣಿತಗುಣಮುಚ್ಚೈಸ್ತೋಷಯನ್ ಶಾರ್ಙ್ಗಪಾಣಿಂ**
**ಷಡಪಿ ಪರಮಭಕ್ತ್ಯಾಽನೂಪಚಾರಾನ್ ದಿದೇಶ ॥ 36 ॥**

**ಪದಚ್ಛೇದ**— ಸಃ, ದದತ್, ಅಧಿಕಬೋಧಃ, ಷೋಡಶ, ಅತ್ರ, ಉಪಚಾರಾನ್, ವ್ಯರಹಯತ್, ಅಗುಣಾನ್, ದ್ವಾತ್ರಿಂಶದಾಗಃ, ಪುರೋಗಾನ್, ಅಗಣಿತಗುಣಂ, ಉಚ್ಚೈಃ, ತೋಷಯನ್, ಶಾರ್ಙ್ಗಪಾಣಿಂ, ಷಟ್, ಅಪಿ ಪರಮಭಕ್ತ್ಯಾ, ಅನೂಪಚಾರಾನ್, ದಿದೇಶ ।

**ಅನ್ವಯ**— ಅತ್ರ, ಷೋಡಶ, ಉಪಚಾರಾನ್, ದದತ್, ಅಗಣಿತಗುಣಂ, ಶಾರ್ಙ್ಗಪಾಣಿಂ, ಉಚ್ಚೈಃ, ತೋಷಯನ್, ಸಃ, ಅಧಿಕಬೋಧಃ, ದ್ವಾತ್ರಿಂಶದಾಗಃ, ಪುರೋಗಾನ್, ಅಗುಣಾನ್, ವ್ಯರಹಯತ್, ಪರಮಭಕ್ತ್ಯಾ, ಷಟ್, ಅನೂಪಚಾರಾನ್, ದಿದೇಶ ।

**ಅನ್ವಯಾರ್ಥ**—

**ಅತ್ರ** = ಈ ಪೂಜೆಯಲ್ಲಿ,
**ಷೋಡಶ** = ಹದಿನಾರು ಸಂಖ್ಯೆಯ,
**ಉಪಚಾರಾನ್** = ಸತ್ಕಾರಗಳನ್ನು,
**ದದತ್** = ಕೊಡುತ್ತಿರುವ (ಸಮರ್ಪಿಸುತ್ತಿರುವ),
**ಅಗಣಿತಗುಣಂ** = ಎಣೆಯಿಲ್ಲದ ಗುಣಗಳುಳ್ಳ,
**ಶಾರ್ಙ್ಗಪಾಣಿಂ** = ಶಾರ್ಙ್ಗಧನುಧಾರಿಯಾದ ಶ್ರೀಮನ್ನಾರಾಯಣನನ್ನು,
**ಉಚ್ಚೈಃ** = ಬಹಳ ಚೆನ್ನಾಗಿ,
**ತೋಷಯನ್** = ಸಂತೋಷಗೊಳಿಸುತ್ತಿರುವ,
**ಸಃ ಅಧಿಕಬೋಧಃ** = ಅಂತಹ ಶ್ರೀಮಧ್ವಾಚಾರ್ಯರು,
**ದ್ವಾತ್ರಿಂಶದಾಗಃ** = ಮೂವತ್ತ ಎರಡು ಸಂಖ್ಯೆಯ, ಅಪರಾಧಗಳೇ
**ಪುರೋಗಾನ್** = ಮೊದಲಾಗಿ ಉಳ್ಳ,
**ಅಗುಣಾನ್** = ದೋಷಗಳನ್ನು,
**ವ್ಯರಹಯತ್** = ವರ್ಜಿಸಿದರು.
**ಪರಮಭಕ್ತ್ಯಾ** = ಶ್ರೇಷ್ಠವಾದ ಭಕ್ತಿಯಿಂದ,
**ಷಟ್** = ಆರು ಸಂಖ್ಯೆಯ,
**ಅನೂಪಚಾರಾನ್** = ಉಪಸತ್ಕಾರಗಳನ್ನು,
**ದಿದೇಶ** = ಕೊಟ್ಟರು.

**ತಾತ್ಪರ್ಯ**— 'ಅರ್ಘ್ಯ, ಪಾದ್ಯ, ಆಚಮನೀಯ, ಮಧುಪರ್ಕ, ಪುನರಾಚಮನೀಯ, ಸ್ನಾನ, ವಸ್ತ್ರ ಭೂಷಣ, ಯಜ್ಞೋಪವೀತ, ಆಸನ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ನಮಸ್ಕಾರ' ಇವೇ ಹದಿನಾರು ಉಪಚಾರಗಳು.

(ಅನೂಪಚಾರಗಳು ಮುಖ್ಯವಾದ ಷೋಡಶೋಪಚಾರಗಳ ಮಧ್ಯದಲ್ಲಿ ಮಾಡುವ ಅಮುಖ್ಯ ಸತ್ಕಾರಗಳು) 'ಮುಖ ವಾಸ, ತಾಂಬೂಲ, ಕನ್ನಡಿ, ಛತ್ರಿ, ಚಾಮರ, ಪಾದುಕಾ', ಇವುಗಳ ಪೂಜೆಯಲ್ಲಿ ಅವಶ್ಯ ವರ್ಜಿಸಬೇಕಾದ ಮೂವತ್ತೆರಡು ಅಪರಾಧಗಳು- 1. ಊಟ ಮಾಡಿದ ಮೇಲೆ ಪೂಜೆ ಮಾಡುವುದು, 2. ನೀರು ಕುಡಿದು ಪೂಜೆ ಮಾಡುವುದು, 3. ಹಲ್ಲು ಗಳನ್ನು ಸ್ವಚ್ಛಮಾಡಿಕೊಳ್ಳದೆ ದೇವರ ಹತ್ತಿರ ಹೋಗುವುದು, 4. ಮೈಥುನಾನಂತರ ಪೂಜೆ, 5. ಹೆಣವನ್ನು ಮುಟ್ಟಿದ ನಂತರ ದೇವರ ಪೂಜೆಗೆ ಹೋಗುವುದು, 6. ಪೂಜೆಯ ನಡುವೆ ಮಲವಿಸರ್ಜನೆ, 7. ಪೂಜೆಯ ನಡುವೆ ಮೂತ್ರ ವಿಸರ್ಜನೆಗಾಗಿ ಹೋಗುವುದು, 8. ಕಣ್ಣೀರು ಸುರಿಸುತ್ತಾ ಮಾತನಾಡುವುದು, 9. ಕಪ್ಪುಬಟ್ಟೆಯನ್ನು ಹೊದ್ದುಕೊಂಡು ದೇವರ ಹತ್ತಿರ ಹೋಗುವುದು, 10. ರಾಜಾನ್ನ ಭೋಜನ, 11. ದೂರ ನಿಂತು ಪೂಜೆ, 12. ಆಚಮನ ಮಾಡದೆ ಪೂಜೆ, 13. ಕೋಪ ಮಾಡುವುದು, 14. ನಿಷಿದ್ಧ ಪುಷ್ಪಗಳಿಂದ ಪೂಜೆ, 15. ಕೆಂಪು ಕೌಪೀನವನ್ನಿಡುವುದು, 16. ಕರಿಬಟ್ಟೆಯನ್ನುಟ್ಟು ಪೂಜೆ ಮಾಡುವುದು, 17. ಕತ್ತಲೆಯಲ್ಲಿ ದೇವರ ಸ್ಪರ್ಶ, 18. ಕಾಮುಕತೆ, 19. ಕರಿವಸ್ತ್ರವನ್ನು ದೇವರ ಹತ್ತಿರ ಉಪಯೋಗಿಸು ವುದು, ಅದರಿಂದ ಗಾಳಿ ಹಾಕುವುದು, ಜಾಡಿಸುವುದು, 20. ನಾಯಿ ಮುಟ್ಟುವುದು, 21. (ಕಾಡು) ಹಂದಿಯ ಮಾಂಸ ಭೋಜನ, 22. ಕುಕ್ಕುಟಾಸನ (ತುದಿ ಕಾಲಿನ ಆಸನ), 23. ಕೆಸರಿನಿಂದ ತಾನು ಮಲಿನವಾಗಿರುವಾಗ ದೇವರ ಪೂಜೆಗಾಗಿ ತಾನು ದೇವರ ಹತ್ತಿರ ಹೋಗುವುದು, 24. ಚಿತೆಯನ್ನು ಮುಟ್ಟಿ ದೇವರ ಹತ್ತಿರ ಹೋಗುವುದು, 25. ಹಿಂಡಿ ತಿನ್ನುವುದು, 26. ಹಂದಿಮಾಂಸವನ್ನು ದೇವರಿಗೆ ಅರ್ಪಿಸುವುದು, 27. ಮದ್ಯಪಾನ, 28. ಕುಸಬೆಹೂವಿನ ದಳವನ್ನು ತಿನ್ನುವುದು, 29. ಪುಷ್ಪವನ್ನು ಅರ್ಪಿಸದೆ ಧೂಪದಾನ, 30. ವಿಷ್ಣುಪ್ರತಿಮೆಯನ್ನು ಹೊತ್ತವನು ಪಾದರಕ್ಷೆಯನ್ನು ಧರಿಸುವುದು, 31. ನಗಾರಿ ಹೊಡೆಯುವವನಲ್ಲದೆ ಇತರ ಶೂದ್ರನು ದೇವರ ಹತ್ತಿರ ಬರುವುದು, 32. ಊಟ ಮಾಡಿದ ಅನ್ನವು ಜೀರ್ಣಸದಿರುವಾಗ ದೇವರ ಪೂಜೆ ಮಾಡುವುದು ಇವೇ ಮೂವತ್ತೆರಡು ಅಪರಾಧಗಳು.

ಶ್ರೀಮಧ್ವಾಚಾರ್ಯರು ಶ್ರೀಕೃಷ್ಣನ ಪೂಜೆಯನ್ನು ಭಕ್ತಿಯಿಂದ ಮಾಡುತ್ತಾ ಹದಿನಾರು ಉಪಚಾರಗಳನ್ನು ಬಹಳ ಭಕ್ತಿಯಿಂದ ಅರ್ಪಿಸಿ ಅವನನ್ನು ಅತಿಶಯವಾಗಿ ಸಂತೋಷಪಡಿಸಿದರು. ಹೆಚ್ಚಾದ ಭಕ್ತಿಯಿಂದ ಆರು ಅಮುಖ್ಯ ಉಪಚಾರ ಗಳನ್ನೂ ಅರ್ಪಿಸಿದರು. ಮೂವತ್ತೆರಡು ಉಪಚಾರಗಳಲ್ಲಿ ಯಾವುದೊಂದನ್ನೂ ಮಾಡಲಿಲ್ಲ. ದೇವರನ್ನು ಭಕ್ತಿಯಿಂದ ಕ್ಷಮಿಸ ಬೇಕೆಂದು ಕೇಳಿಕೊಂಡರು. ಈ ರೀತಿ ಶ್ರೀಮಧ್ವಾಚಾರ್ಯರು ದೇವರನ್ನು ಪೂಜಿಸಿದರು.

ವಿಗ್ರಹ—

**ಅಧಿಕಬೋಧಃ—** ಅಧಿಕಃ ಬೋಧಃ ಯಸ್ಯ ಸಃ ಅಧಿಕಬೋಧಃ ।

**ಅಗುಣಾಃ—** ನ ಗುಣಾಃ ಅಗುಣಾಃ, ತಾನ್ ।

**ತತ್ ಪ್ರಾಶಸ್ತ್ಯಂ ವಿರೋಧಶ್ಚ ತದನ್ಯತ್ವಂ ತದಲ್ಪತಾ ।**
**ಅಪ್ರಾಶಸ್ತ್ಯಂ ವಿರೋಧಶ್ಚ ನಞರ್ಥಾಃ ಷಟ್ ಪ್ರಕೀರ್ತಿತಾಃ ॥**

ಎಂಬಂತೆ ಇಲ್ಲಿ ವಿರೋಧವು ನಞರ್ಥ.

**ದ್ವಾತ್ರಿಂಶದಾಗಃಪುರೋಗಾನ್—** ದ್ವ್ಯಧಿಕಾ ತ್ರಿಂಶತ್ ದ್ವಾತ್ರಿಂಶತ್, ದ್ವಾತ್ರಿಂಶಚ್ಚ ತಾನಿ ಆಗಾಂಸಿ ಚ ದ್ವಾತ್ರಿಂಶದಾಗಾಂಸಿ, ದ್ವಾತ್ರಿಂಶದಾಗಾಂಸಿ ಪುರೋಗಾಣಿ ಯೇಷಾಂ ತೇ ದ್ವಾತ್ರಿಂಶದಾಗಃಪುರೋಗಾಃ ತಾನ್ ।

**ಅಗಣಿತಗುಣಂ—** ನ ಗಣಿತಾಃ ಅಗಣಿತಾಃ, ಅಗಣಿತಾಃ ಗುಣಾಃ ಯಸ್ಯ ಸಃ ಅಗಣಿತಗುಣಃ ತಂ ।

**ಶಾರ್ಙ್ಗಪಾಣಿಃ—** ಶಾರ್ಙ್ಗಂ ಪಾಣೌ ಯಸ್ಯ ಸಃ ಶಾರ್ಙ್ಗಪಾಣಿಃ ತಂ । ಪರಮಾ ಚ ಸಾ ಭಕ್ತಿಶ್ಚ ಪರಮಭಕ್ತಿಃ ತಯಾ ।

**ಕ್ರಿಯಾಪದ—** **ವ್ಯರಹಯತ್** - ವಿ ಅರಹಯತ್+ಅರಹಯತಾಂ ಅರಹಯನ್ ಇತ್ಯಾದಿ, ವಿ ಉಪಸರ್ಗ ರಹತ್ಯಾಗೇ ಚುರಾದಿ ಪರಸ್ಮೈ ಲಙ್. **ದಿದೇಶ** - ದಿದೇಶ ದಿದಿಶತುಃ ದಿದಿಶುಃ ಇತ್ಯಾದಿ. ದಿಶ ಅತಿಸರ್ಜನೇ ಪರಸ್ಮೈ. ಲಿಟ್.

**ಪ್ರಯೋಗ—** ಅತ್ರ ಷೋಡಶೋಪಚಾರಾನ್ ದದತಾ ಅಗಣಿತಗುಣಂ ಶಾರ್ಙ್ಗಪಾಣಿಂ ಉಚ್ಚೈಃ ತೋಷಯತಾ ತೇನ ಅಧಿಕಬೋಧೇನ ದ್ವಾತ್ರಿಂಶದಾಗಃಪುರೋಗಾಃ ಅಗುಣಾಃ ವ್ಯರಹ್ಯಂತ. ಪರಮಭಕ್ತ್ಯಾ ಷಟ್ ಅನೂಪಚಾರಾ ಅಪಿ ದಿದಿಶಿರೇ।

**ಭಾವಪ್ರಕಾಶಿಕಾವಚನ—** ಅರ್ಘ್ಯ-ಪಾದ್ಯ-ಆಚಮನ-ಮಧುಪರ್ಕ-ಪುನರಾಚಮನ-ಸ್ನಾನ-ವಸ್ತ್ರಭೂಷಣ-ಯಜ್ಞೋಪವೀತ-ಆಸನ-ಗಂಧ-ಪುಷ್ಪ-ಧೂಪ-ದೀಪ-ನೈವೇದ್ಯ-ನಮಸ್ಕಾರಾಃ, ಷೋಡಶೋಪಚಾರಾಃ, ಅರ್ಘ್ಯ ಮುಂತಾದವುಗಳು ಹದಿನಾರು ಉಪಚಾರಗಳು. ಅಗುಣಾಃ ಅನ್ಯಚಿತ್ತತ್ವಾದಯಃ = ಅಗುಣ ಎಂದರೆ ಬೇರೆ ಕಡ ಮನಸ್ಸಿಟ್ಟಿರುವುದೇ ಮೊದಲಾದ ದೋಷಗಳು. ಭುಕ್ತ್ವಾ ಪ್ರೀತ್ವಾರ್ಚನಂ ದಂತಕಾಷ್ಠಾಭಕ್ಷ್ಯುಪಸರ್ಪಣಂ । ಮೈಥುನಾನಂತರಂ ಚಾರ್ಚಾ ಶವಂ ಸ್ಪೃಷ್ಟ್ವೋಪಸರ್ಜನಂ । ಅರ್ಚಾಂತರೇ ಮೂರ್ತವಿಷ್ಠಾವಿಸರ್ಗೌ ಸಾಸ್ರಭಾಷಣಂ । ನೀಲವಸ್ತ್ರಾವೃತಃ-ಸ್ಯಾಪ್ತೀ ರಾಜಾನ್ನಾತ್ತಿರುಪಾಗ (ಹ)ತಿಃ । ಉಪಸ್ಪೃಶ್ಯಾವಿಧಾನೈಸ್ತು ಶುಶ್ರೂಷೋರಪಿ ರುಷ್ಟತಾ । ಅಕರ್ಮಣ್ಯಪ್ರಸೂನಾರ್ಚಾ ರಕ್ತಕೌಪೀನವಸ್ತ್ರತಾ । ಕೃಷ್ಣವಸ್ತ್ರೈರ್ಹರೇಃ ಕರ್ಮವಿಧಿಃ ಸ್ಪೃಷ್ಟಿಸ್ತಮಸ್ಯಪಿ । ಕಾಮಾನುಸಾರಿತಾ ಕೃಷ್ಣವಸ್ತ್ರಸ್ಯ ಪರಿಧೂನನಂ । ಶ್ವಸ್ಪೃಷ್ಟಿಃ ಕೋಲಮಾಂಸಾತ್ತಿರ್ಜಾಲಪಾದಾಸನಂ ತಥಾ । ಉಪಸರ್ಪಃ ಪಂಕಿಲೇ ಚ ಚಿತಿಂ ಸ್ಪೃಷ್ಟ್ವೋಪಸರ್ಪಣಂ । ಪಿಣ್ಯಾಕಾತ್ತಿಶ್ಚೋಪಸರ್ತುಃ ಪೋತ್ರಿಮಾಂಸೋಪಪಾದನಂ । ಉಪಯಾತುರ್ಮದ್ಯಮಾನಂ ಕುಸುಂಬದಲ ಭಕ್ಷಣಂ। (ಪರಪ್ರಾವರಣಗ್ರಾಹಃ ಸ್ವಂಜನಾದೇರಕಲ್ಪನಂ) ಪುಷ್ಪಾದಾನೇ ಧೂಪದಾನಂ ಹರಿವೋಢುರುಪಾನಹೌ । ಅಭೇರೀ ಹಂತುರಭ್ಯಾಪ್ತಿರಜೀರ್ಣಾನ್ನಸ್ಯ ಪೂಜನಂ ॥ ದ್ವಾತ್ರಿಂಶದಪರಾಧಾಸ್ತು ಕಥಿತಾ ಗುರುದೋಷದಾಃ । ವಸುಂಧರಾಯೈ ಕೋಲೇನ ವಿಷ್ಣುನಾ ಪ್ರಭುವಿಷ್ಣುನಾ । ಇತಿ ॥ ಇವುಗಳು 32 ಅಪರಾಧಗಳು. ಈ ಶ್ಲೋಕಗಳ ಅರ್ಥವನ್ನು ಹಿಂದೆಯೇ ಹೇಳಿದೆ.

'ಮುಖವಾಸಶ್ಚ ತಾಂಬೂಲಂ ದರ್ಪಣಂ ಛತ್ರಚಾಮರೇ । ಪಾದುಕೇ ಚೇತಿ ವಿಜ್ಞೇಯಾ ಉಪಚಾರಾಃ ಪರೇ ಬುಧೈಃ । ಇತಿ ಷಡನೂಪಚಾರಾಃ । ಮುಖವಸ್ತ್ರಾದಿ ಆರು ಅನೂಪಚಾರಗಳು. ಇದರ ಅಭಿಪ್ರಾಯವನ್ನು ಹಿಂದೆ ಹೇಳಲಾಗಿದೆ.

**ವಿಶೇಷಾಂಶ ಛಲಾರಿಯ—** ಶ್ರೀಮಧ್ವಾಚಾರ್ಯಃ ಅರ್ಘ್ಯಾದಿಷೋಡಶೋಪಚಾರೈಃ ಮುಖವಾಸ ಆದಿಭಿಃ ಷಡ್‌ಭಿಃ ಅನೂಪಚಾರೈಶ್ಚ ಹರಿಂ ಪೂಜಯಿತ್ವಾ.

> ಅಪರಾಧ ಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ ।
> ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ ।
> ಇತ್ಯುಕ್ತಪ್ರಕಾರೇಣ ಕ್ಷಮಾಪಯಾಮಾಸ ಇತಿ ಭಾವಃ ॥

ಶ್ರೀ ಮಧ್ವಾಚಾರ್ಯರು ಅರ್ಘ್ಯ ಮುಂತಾದ ಹದಿನಾರು ಉಪಚಾರಗಳಿಂದಲೂ ಮುಖ ವಸ್ತ್ರ ಮುಂತಾದ ಆರು ಅನೂಪಚಾರಗಳಿಂದಲೂ ಹರಿಯನ್ನು ಪೂಜಿಸಿ ಅಪರಾಧ ಸಹಸ್ರಗಳನ್ನು ನಾನು ಹಗಲೂ ರಾತ್ರಿ ಮಾಡುತ್ತೇನೆ. ಪುರುಷೋತ್ತಮನಾದ ಹರಿಯೇ! ಅವೆಲ್ಲವನ್ನು ಕ್ಷಮಿಸು ಎಂದು ಹೇಳಿದ ರೀತಿಯಿಂದ ದೇವರಲ್ಲಿ ಕ್ಷಮಾಪ್ರಾರ್ಥನಾ ಮಾಡಿದರು ಎಂದು ಭಾವ.

(ಮೂವತ್ತೆರೆಡು ಅಪರಾಧಗಳೇ ಅಲ್ಲ, ಶತಾಪರಾಧಗಳೂ ಇವೆ. ಅವೆಲ್ಲವನ್ನೂ ಸಾಮಾನ್ಯಮಾನವರು ಮಾಡುವುದು ಸ್ವಭಾವ. ನಮಗೆ ತಿಳಿದು ಅಥವಾ ತಿಳಿಯದೆ ಮಾಡಿದ ಆ ಅಪರಾಧಗಳನ್ನೂ ಕ್ಷಮಿಸಬೇಕೆಂದು ಹರಿಯನ್ನು ಸಾಮಾನ್ಯರು ಬೇಡಿಕೊಳ್ಳಬೇಕೆಂದು ತಿಳಿಸಲು ಆಚಾರ್ಯರು ಈ ರೀತಿ ಮಾಡಿದರೆಂದು ತಿಳಿಯಬೇಕು)

**ವಿಶೇಷ ವಿಚಾರ**— ದೇವರಲ್ಲಿ ಬಹಳ ಭಕ್ತಿಯಿಂದ ಏಕಾಗ್ರತೆಯಿಂದ ಪೂಜೆಮಾಡಬೇಕೆಂಬ ವಿಷಯವನ್ನು ತಿಳಿಸುವುದಕ್ಕಾಗಿ ಈ ಮೂವತ್ತೆರೆಡು ಅಪರಾಧಗಳನ್ನು ಮಾಡಬಾರದು ಎಂದು ತಿಳಿಸಿದ್ದಾರೆ. ಶ್ರೀಮಧ್ವಾಚಾರ್ಯರಲ್ಲಿ ಸ್ವಾಭಾವಿಕವಾಗಿಯೇ ಈ ಮೂವತ್ತೆರೆಡು ಅಪರಾಧಗಳಿರುವುದಿಲ್ಲ. ಇತರರು ಈ ಅಪರಾಧಗಳು ಘಟಿಸದಂತೆ ಎಚ್ಚರವಾಗಿರಬೇಕೆಂದು ತಿಳಿಸುವುದಕ್ಕಾಗಿ ಇಲ್ಲಿ ಆಚಾರ್ಯರು 32 ಅಪರಾಧಗಳನ್ನು ಮಾಡಲಿಲ್ಲ ಎಂದು ತಿಳಿಸಿದ್ದಾರೆ. ಅರ್ಘ್ಯಪಾದ್ಯಾದಿ 16 ಉಪಚಾರಗಳನ್ನು ಮುಖವಸ್ತ್ರಾದಿ 6 ಅನೂಪಚಾರಗಳನ್ನು ಬಹಳ ಶ್ರದ್ಧಾಭಕ್ತಿಯಿಂದ ದೇವರಿಗೆ ಅರ್ಪಿಸಬೇಕು. ಏಕೆಂದರೆ ಈ ಉಪಚಾರಗಳನ್ನು ಸರಿಯಾಗಿ ಒಪ್ಪಿಸುವುದೇ ದೇವರ ಪೂಜೆಯು.

★ ★ ★

**ಅವತಾರಿಕಾ**— ಆಚಾರ್ಯರು ದಿವ್ಯಯೋಗಿ ಶ್ರೇಷ್ಠರಾದುದರಿಂದ ತಮ್ಮ ಹೃದಯಕಮಲಮಂದಿರದಲ್ಲಿಯೂ ಶ್ರೀಹರಿಯನ್ನು ನಿತ್ಯವೂ ನಿರಂತರವಾಗಿ ಪೂಜಿಸುತ್ತಿದ್ದಾರೆಂದು ವರ್ಣಿಸುತ್ತಾರೆ.

**ತಮರುಣಮಣಿವರ್ಣಂ ದಿವ್ಯದೇಹಾಖ್ಯಗೇಹೇ**
**ಸ್ನಪಿತಮತಿಪೃಥುಶ್ರದ್ಧಾನದೀಚಿತ್ತವಾರ್ಭಿಃ ।**
**ನನು ಸ ಯಜತಿ ನಿತ್ಯಂ ಹೃತ್ಸರೋಜಾಸನಸ್ಥಂ**
**ನ ತು ಸಕೃದಿತಿ ಪುಷ್ಪೈರಷ್ಟಭಿರ್ಭಾವಪುಷ್ಪೈಃ ॥ 37 ॥**

**ಪದಚ್ಛೇದ**— ತಂ, ಅರುಣಮಣಿವರ್ಣಂ, ದಿವ್ಯದೇಹಾಖ್ಯಗೇಹೇ, ಸ್ನಪಿತಂ, ಅತಿಪೃಥುಶ್ರದ್ಧಾನದೀಚಿತ್ತವಾರ್ಭಿಃ, ನನು, ಸಃ, ಯಜತಿ, ನಿತ್ಯಂ, ಹೃತ್ಸರೋಜಾಸನಸ್ಥಂ, ನ, ತು, ಸಕೃತ್, ಇತಿ, ಪುಷ್ಪೈಃ, ಅಷ್ಟಭಿಃ, ಭಾವಪುಷ್ಪೈಃ ।

**ಅನ್ವಯ**— ಸಃ, ಇತಿ, ಅರುಣಮಣಿವರ್ಣಂ, ದಿವ್ಯದೇಹಾಖ್ಯಗೇಹೇ, ಅತಿಪೃಥುಶ್ರದ್ಧಾನದೀಚಿತ್ತವಾರ್ಭಿಃ, ಸ್ನಪಿತಂ, ಹೃತ್ಸರೋಜಾಸನಸ್ಥಂ, ತಂ, ಪುಷ್ಪೈಃ, ಅಷ್ಟಭಿಃ, ಭಾವಪುಷ್ಪೈಃ, ನಿತ್ಯಂ, ಯಜತಿ, ನನು, ಸಕೃತ್, ಇತಿ, ನ, ತು ।

**ಅನ್ವಯಾರ್ಥ**—

**ಸಃ** = ಆ ಶ್ರೀಮಧ್ವಾಚಾರ್ಯರು,
**ಇತಿ** = ಈ ರೀತಿ,
**ಅರುಣಮಣಿವರ್ಣಂ** = ಕೆಂಪಾದ ಪದ್ಮರಾಗಮಣಿಯ ಬಣ್ಣವುಳ್ಳ,
**ದಿವ್ಯ** = ದೇವಲೋಕ ಸಂಬಂಧಿಯಾದ (ಅಲೌಕಿಕವಾದ),
**ದೇಹಾಖ್ಯಗೇಹೇ** = ದೇಹವೆಂದು ಹೆಸರುಳ್ಳ ಮನೆಯಲ್ಲಿ,
**ಅತಿಪೃಥುಶ್ರದ್ಧಾನದೀಚಿತ್ತವಾರ್ಭಿಃ** = ಬಹಳ ದೊಡ್ಡದಾದ (ಅತ್ಯಂತ ಹೆಚ್ಚಾದ) ಶ್ರದ್ಧೆಯೆಂಬ ನದಿಯ ಮನಸ್ಸೆಂಬ ನೀರಿನಿಂದ,
**ಸ್ನಪಿತಂ** = ಸ್ನಾನ ಮಾಡಿಸಲ್ಪಟ್ಟ
**ಹೃತ್ಸರೋಜಾಸನಸ್ಥಂ** = ಹೃದಯವೆಂಬ ಕಮಲದಲ್ಲಿ ಸನ್ನಿಹಿತನಾಗಿರುವ,
**ತಂ** = ಆ ಪರಮಾತ್ಮನನ್ನು,
**ಪುಷ್ಪೈಃ** = ಪರಿಪೂರ್ಣವಾದ,
**ಅಷ್ಟಭಿಃ** = ಎಂಟು ಸಂಖ್ಯೆಯ,
**ಭಾವಪುಷ್ಪೈಃ** = ಅಂತಃಕರಣದ ಪರಿಣಾಮ ವಿಶೇಷವಾದ ಭಾವಗಳೆಂಬ ಹೂವುಗಳಿಂದ,

ನಿತ್ಯಂ = ಯಾವಾಗಲೂ,

ಯಜತಿ ನನು = ಪೂಜಿಸುತ್ತಾರಷ್ಟೆ

ಸಕೃತ್ = ಒಂದು ಬಾರಿ ಮಾತ್ರ (ಯಜತಿ),

ಇತಿ = ಪೂಜೆ ಮಾಡುತ್ತಾರೆಂದು,

ನ ತು = ಅಲ್ಲ.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ಹಿಂದೆ ಹೇಳಿದಂತೆ ಈ ರೀತಿ ಅನೇಕ ಪುಷ್ಪಗಳಿಂದ ನಿತ್ಯದಲ್ಲಿಯೂ ದೇವರನ್ನು ಒಂದು ಬಾರಿ ಮಾತ್ರ ಪೂಜಿಸುತ್ತಾರೆಂದು ತಿಳಿಯಬಾರದು. ಅವರು ನಿತ್ಯವಾಗಿ, ನಿರಂತರವಾಗಿ ಲೌಕಿಕವಾದ ಒಂದು ದಿವ್ಯಪೂಜೆಯನ್ನು ಮಾಡುತ್ತಾರೆ. ಆ ಪೂಜಾಕ್ರಮದ ವಿವರ ಹೀಗಿದೆ. ಅವರ ದಿವ್ಯವಾದ ಅದ್ಭುತವಾದ ದೇಹವೇ ಒಂದು ಮನೆ. ಹೃದಯ ಕಮಲವೇ ಆಸನ. ಅವರ ಹೃದಯದಲ್ಲಿರುವ ಆಸ್ತಿಕ್ಯ ಬುದ್ಧಿ ಎಂಬ ಹೆಸರಿನ ಶ್ರದ್ಧೆಯೇ ಅಲ್ಲಿ ಹರಿಯುವ ನದಿ. ಆ ನದಿಯಲ್ಲಿ ಹರಿಯುತ್ತಿರುವ ಮನಸ್ಸಿನ ಪರಿಣಾಮ ವಿಶೇಷವೇ ನದಿಯ ಜಲವು. ಆಚಾರ್ಯರು ಇಂತಹ ಚಿತ್ತವೆಂಬ ಜಲದಿಂದ ತನ್ನ ಇಷ್ಟದೇವತೆಯನ್ನು ನಿತ್ಯವೂ ಸ್ನಾನ ಮಾಡಿಸುತ್ತಾರೆ. ದಿವ್ಯವಾದ ಕೆಂಪುಬಣ್ಣದ ಪದ್ಮರಾಗದಂತಿರುವ ಹೃದಯಕಮಲವೆಂಬ ಪೀಠದಲ್ಲಿ ಸ್ನಾನ ಮಾಡಿಸಿರುವ ಪರಮಾತ್ಮನನ್ನು ಕುಳ್ಳಿರಿಸಿ ಅಹಿಂಸಾ ಮುಂತಾದ ಎಂಟು ಸಂಖ್ಯೆಯ ಪರಿಪೂರ್ಣವಾದ ಭಾವಪುಷ್ಪಗಳಿಂದ ಯಾವಾಗಲೂ ನಿಶ್ಚಯವಾಗಿ ಪೂಜಿಸುತ್ತಾರೆ.

**ಆರಾಧಯಾಮಿ ಮಣಿಸನ್ನಿಭಮಾತ್ಮಬಿಂಬಂ**
**ಮಾಯಾಪುರೇ ಹೃದಯಪಂಕಜಸನ್ನಿವಿಷ್ಟಂ ।**
**ಶ್ರದ್ಧಾನದೀವಿಮಲಚಿತ್ತಜಲಾಭಿಷೇಕಂ**
**ಭಾವಾಷ್ಟಪುಷ್ಪವಿಧಿನಾ ಹರಿಮರ್ಚಯಾಮಿ ॥**

ಪರಮಾತ್ಮನು ತನ್ನ ಇಚ್ಛೆಯಿಂದ ದೇಹವೆಂಬ ಪಟ್ಟಣವನ್ನು ನಿರ್ಮಿಸಿದ್ದಾನೆ. ಅಲ್ಲಿ ರತ್ನದಂತಿರುವ ಹೃದಯ ಕಮಲದಲ್ಲಿ ಪ್ರತಿಬಿಂಬನಾದ ಜೀವನಿಗೆ (ನನಗೆ) ಬಿಂಬನಾಗಿರುವ ಶ್ರೀಹರಿಯು ನಿರಂತರದಲ್ಲಿಯೂ ಸನ್ನಿಹಿತನಾಗಿದ್ದಾನೆ. ಹೃದಯದಲ್ಲಿ ಶ್ರದ್ಧೆಯೆಂಬ ಜಲದಿಂದ ಶ್ರೀಮಹಾವಿಷ್ಣುವನ್ನು ನಾನು ಅಭಿಷೇಕಿಸುತ್ತೇನೆ. ಅನಂತರ ಅಹಿಂಸಾ ಮುಂತಾದ ಎಂಟು ಭಾವಪುಷ್ಪಗಳಿಂದ ಆ ಶ್ರೀಹರಿಯನ್ನು ವಿಧಿಪ್ರಕಾರವಾಗಿ ಪೂಜಿಸುವೆನು ಎಂದು ಶ್ರೀಭೀಮಸೇನ ದೇವರು ಹೇಳಿರುತ್ತಾರೆ. ಶ್ರೀಮಧ್ವಾಚಾರ್ಯರು ಭೀಮಸೇನನ ಅವತಾರರು, ಯೋಗಿಶ್ರೇಷ್ಠರು ಅಪರೋಕ್ಷಿಗಳಲ್ಲಿ ಉತ್ತಮರು ಅವರು ತಮ್ಮ ಹೃದಯದಲ್ಲಿ ಒಂದು ಕ್ಷಣವೂ ಬಿಡದೆ ಹರಿಪೂಜೆಯನ್ನು ಮಾಡುತ್ತಿರುತ್ತಾರೆ. ಆದರೂ ಅಪ್ರಬುದ್ಧರಾದ ಭಕ್ತರಿಗೆ ಬಾಹ್ಯ ಪೂಜಾಕ್ರಮವನ್ನು ತೋರಿಸಿ, ಭಗವಂತನ ಅನುಗ್ರಹಕ್ಕಾಗಿ ಶಾಲಗ್ರಾಮಾದಿಗಳಲ್ಲಿ ಶ್ರೀಹರಿಯನ್ನು ಬಾಹ್ಯ ಪುಷ್ಪಗಳಿಂದ ಪೂಜಿಸಿದರು. ಭಕ್ತರಿಗೆ ಪೂಜಾಕ್ರಮವನ್ನು ತಿಳಿಸಿ ತನ್ನಲ್ಲಿ ಭಗವಂತನ ವಿಶೇಷಾನುಗ್ರಹವನ್ನು ಸಂಪಾದಿಸಿ ಕೊಂಡರು. ಎಂಟು ಭಾವಪುಷ್ಪಗಳು ಯಾವುವೆಂದರೆ -

**ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ ।**
**ಸರ್ವಭೂತದಯಾಪುಷ್ಪಂ ಕ್ಷಮಾಪುಷ್ಪಂ ವಿಶಿಷ್ಯತೇ ॥**
**ಜ್ಞಾನಪುಷ್ಪಂ ತಪಃ ಪುಷ್ಪಂ ಧ್ಯಾನಪುಷ್ಪಂ ತು ಸಪ್ತಮಂ ।**
**ಸತ್ಯಂ ಚೈವಾಷ್ಟಮಂ ಪುಷ್ಪಮೇಭಿಸ್ತುಷ್ಯತಿ ಕೇಶವಃ ॥**

1. ಅಹಿಂಸಾ, 2. ಇಂದ್ರಿಯ ನಿಗ್ರಹ, 3. ಸರ್ವಪ್ರಾಣಿಗಳಲ್ಲಿ ದಯೆ, 4. ಕ್ಷಮೆ, 5. ಜ್ಞಾನ, 6. ತಪಸ್ಸು, 7. ಧ್ಯಾನ, 8. ಸತ್ಯ ಇವೇ ಎಂಟು ಭಾವಪುಷ್ಪಗಳು. ಅಹಿಂಸಾದಿಗಳನ್ನು ಆಚರಿಸಿದರೆ ಅದು ಭಾವಪುಷ್ಪಗಳಿಂದ ಮಾಡಿದ ಹರಿ ಪೂಜೆಯಾಗುವುದು. ಇದೇ ಶ್ರೇಷ್ಠ ಪೂಜೆ. ಇದರಿಂದ ಶ್ರೀಹರಿಯು ಸಂತುಷ್ಟನಾಗುವನು ಭಾವ ಎಂದರೆ ಅಂತಃಕರಣದ

ಪರಿಣಾಮ ವಿಶೇಷ. ಅಹಿಂಸಾ ಎಂದರೆ ಮನಸ್ಸಿನಲ್ಲಿ ನಿರಂತರವಾಗಿ ಯಾವ ಹರಿಭಕ್ತರಾದ ಸಜ್ಜನರಿಗೂ ನನ್ನಿಂದ ಹಿಂಸೆಯಾಗದಿರಲಿ ಎಂಬ ಅನುಸಂಧಾನ. ಹೀಗೆಯೇ ಇಂದ್ರಿಯ ನಿಗ್ರಹಾದಿಗಳೂ ಅನುಸಂಧಾನ ವಿಶೇಷಗಳು ಅವುಗಳಿಂದ ಬಾಹ್ಯವಾದ ಅಹಿಂಸಾದಿಗಳು ಭಕ್ತರಲ್ಲಿ ನೆಲೆಗೊಳ್ಳುತ್ತವೆ ಎಂದು ತಿಳಿಯಬೇಕು.

**ಭಾವಪ್ರಕಾಶಿಕಾ ವಚನಗಳು**

**ಆರಾಧಯಾಮಿ ಮಣಿಸನ್ನಿಭಮಾತ್ಮಬಿಂಬಂ**
**ಮಾಯಾಪುರೇ ಹೃದಯಪಂಕಜಸನ್ನಿವಿಷ್ಟಂ ।**
**ಶ್ರದ್ಧಾನದೀವಿಮಲಚಿತ್ತಜಲಾಭಿಷೇಕಂ**
**ಭಾವಾಷ್ಟಪುಷ್ಪವಿಧಿನಾ ಹರಿಮರ್ಚಯಾಮಿ ॥**

**ಇತಿ ಭೀಮವಚನಮನೂದಿತಂ ತಮಿತ್ಯಾದಿನಾ**
**'ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ ।**
**ಶೌಚಂ ತುಷ್ಟಿಃ ಸರ್ವಸಮರ್ಪಣಂ ಇತ್ಯಷ್ಟಭಾವ ಪುಷ್ಪಾಣಿ ॥**

**ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ**
**ಸರ್ವಭೂತದಯಾ ಪುಷ್ಪಂ ಕ್ಷಮಾಪುಷ್ಪಂ ವಿಶಿಷ್ಯತೇ ।**
**ಜ್ಞಾನಪುಷ್ಪಂ ತಪಃ ಪುಷ್ಪಂ ಧ್ಯಾನಪುಷ್ಪಂ ತು ಸಪ್ತಮಂ**
**ಸತ್ಯಂ ಚೈವಾಷ್ಟಮಂ ಪುಷ್ಪಮೇಭಿಸ್ತುಷ್ಯತಿ ಕೇಶವಃ ॥ ಇತಿ ಚ ॥**

ಆರಾಧಯಾಮಿ ಇತ್ಯಾದಿಯಾದ ಭೀಮಸೇನ ದೇವರ ವಚನವನ್ನೇ ತಮರುಣಮಣಿವರ್ಣಂ ಎಂಬ ಪದ್ಯದಲ್ಲಿ ಅನುವಾದ ಮಾಡಿದ್ದಾರೆ. ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹ, ಶೌಚ, ತುಷ್ಟಿ ಸರ್ವ ಸಮರ್ಪಣಗಳೇ ಭಾವಪುಷ್ಪಗಳು. ಅಹಿಂಸಾ ಪ್ರಥಮಂ ಪುಷ್ಪಂ ಇತ್ಯಾದಿ ಶ್ಲೋಕದಲ್ಲಿ ಹೇಳಿದ ರೀತಿಯಿಂದಲೂ ಎಂಟು ಭಾವಪುಷ್ಪಗಳನ್ನು ತಿಳಿಯಬಹುದು ಎಂದು ಭಾವಪ್ರಕಾಶಿಕಾ ವಚನಗಳ ಅಭಿಪ್ರಾಯ ಉಳಿದ ವಿವರಣೆಗಳು ತಾತ್ಪರ್ಯದಲ್ಲಿ ಬಂದಿವೆ.

**ವಿಗ್ರಹ ಮತ್ತು ಕೋಶ—**

**ಅರುಣಮಣಿವರ್ಣಂ—** ಅರುಣಶ್ಚಾಸೌ ಮಣಿಶ್ಚ ಅರುಣಮಣಿಃ, ಅರುಣಮಣೇಃ ವರ್ಣಃ ತಂ ।

**ದಿವ್ಯದೇಹಾಖ್ಯಗೇಹೇ—** ದಿವಿ ಭವಃ ದಿವ್ಯಃ, ದಿವ್ಯಶ್ಚಾಸೌ ದೇಹಶ್ಚ ದಿವ್ಯದೇಹಃ, ದಿವ್ಯದೇಹ ಇತಿ ಆಖ್ಯಾ ಯಸ್ಯ ತತ್ ದಿವ್ಯದೇಹಾಖ್ಯಂ, ದಿವ್ಯದೇಹಾಖ್ಯಂ ಚ ತತ್ ಗೇಹಂ ಚ ದಿವ್ಯದೇಹಾಖ್ಯಗೇಹಂ ತಸ್ಮಿನ್ ।

**ಅತಿಪೃಥುಶ್ರದ್ಧಾನದೀಚಿತ್ತವಾರ್ಭಿಃ—** ಶ್ರದ್ಧೈವ ನದೀ ಶ್ರದ್ಧಾನದೀ, ಅತಿಪೃಥುಶ್ಚ ಸಾ ಶ್ರದ್ಧಾನದೀ ಚ ಅತಿ ಪೃಥುಶ್ರದ್ಧಾನದೀ, ಚಿತ್ತಾನ್ಯೇವ ವಾರಿ ಚಿತ್ತವಾರಿ, ಅತಿಪೃಥುಶ್ರದ್ಧಾನದ್ಯಾಃ ಚಿತ್ತವಾರಿ ಅತಿ-ಪೃಥುಶ್ರದ್ಧಾನದೀಚಿತ್ತವಾರಿ ತೈಃ । (ರೇಫಾಂತ ನಪುಂ. ವಾರ್ ಶಬ್ದಃ ವಾಃ ವಾರೀ ವಾರಿ. ವಾರಾ ವಾಭ್ಯಾಂ ವಾರ್ಭಿಃ ಇತ್ಯಾದಿ) 'ಆಪಃ ಸ್ತ್ರೀ ಭೂಮ್ನಿ ವಾರ್ ವಾರಿ' ಅಮರ ।

**ಹೃತ್ಸರೋಜಾಸನಸ್ಥಂ—** ಸರಸಿ ಜಾಯತೇ ಇತಿ ಸರೋಜಂ, ಹೃದೇವ ಸರೋಜಂ ಹೃತ್ಸರೋಜಂ, ಹೃತ್ಸರೋಜಮೇವ ಆಸನಂ ಹೃತ್ಸರೋಜಾಸನಂ, ಹೃತ್ಸರೋಜಾಸನೇ ತಿಷ್ಠತೀತಿ ಹೃತ್-ಸರೋಜಾಸನಸ್ಥಃ ತಂ ।

**ಭಾವಪುಷ್ಪಾಣಿ—** ಭಾವಾ ಇತಿ ಪುಷ್ಪಾಣಿ ಭಾವಪುಷ್ಪಾಣಿ ತೈಃ ।

**ಕ್ರಿಯಾಪದ—** **ಯಜತಿ-** ಯಜತಿ ಯಜತಃ ಯಜಂತಿ, ಯಜಸಿ ಯಜಥಃ ಯಜಥ, ಯಜಾಮಿ ಯಜಾವಃ ಯಜಾಮಃ । ಯಜದೇವ ಪೂಜಾಸಂಗತಿಕರಣದಾನೇಷು ಯಜ to worship ಸಕ ಪರಸ್ಮೈ ಲಟ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ತೇನ ಇತಿ ಪುಷ್ಪೈಃ ನಿತ್ಯಂ ಸಕೃತ್ ಸಃ ಇಜ್ಯತೇ ಇತಿ ನ ತು (ಕಿಂತು) ದಿವ್ಯದೇವಾಖ್ಯಗೇಹೇ ಅತಿ ಪೃಥುಶ್ರದ್ಧಾನದೀಚಿತ್ತವಾರ್ಭಿಃ ಸ್ನಪಿತಃ ಅರುಣಮಣಿವರ್ಣಃ ಹೃತ್ ಸರೋಜಾಸನಸ್ಥಃ ಸಃ ಅಷ್ಟಭಿಃ ಭಾವಪುಷ್ಪೈಃ ನಿತ್ಯಂ ಇಜ್ಯತೇ ನನು ।

★ ★ ★

**ಅವತಾರಿಕಾ—** ಪೂಜೆ ಮಾಡಿದ ಮೇಲೆ ಆಚಾರ್ಯರು ಏನು ಮಾಡಿದರೆಂದು ಹೇಳುತ್ತಾರೆ.

**ಕೃತಪರಮಸಪರ್ಯಃ ಸಾಂದ್ರಸಚ್ಚಂದನಾಂಭಃ**
**ಪರಿಮಲಿತಭುಜೋರೋಮಂಡಲಾಂಸೋ ಮನೀಷೀ ।**
**ಸ್ಮಿತರುಚಿರಮುಖೇಂದುಃ ಸ್ನಿಗ್ಧಕೌಶೇಯವಾಸಾಃ**
**ಸಮುನಿಸುರ(ಸುರಮುನಿ)ನರಾಣಾಂ ಚಕ್ಷುಷಾಮುತ್ಸವೋಽಭೂತ್ ॥ 38 ॥**

**ಪದಚ್ಛೇದ—** ಕೃತಪರಮಸಪರ್ಯಃ, ಸಾಂದ್ರಸಚ್ಚಂದನಾಂಭಃ ಪರಿಮಲಿತಭುಜೋರೋಮಂಡಲಾಂಸಃ, ಮನೀಷೀ, ಸ್ಮಿತರುಚಿರಮುಖೇಂದುಃ, ಸ್ನಿಗ್ಧಕೌಶೇಯವಾಸಾಃ, ಸಮುನಿಸುರನರಾಣಾಂ (ಸಸುರಮುನಿನರಾಣಾಂ), ಚಕ್ಷುಷಾಂ, ಉತ್ಸವಃ, ಅಭೂತ್ ।

**ಅನ್ವಯ—** ಕೃತಪಮಸಪರ್ಯಃ, ಸಾಂದ್ರಸಚ್ಚಂದನಾಂಭಃಪರಿಮಲಿತಭುಜೋರೋಮಂಡಲಾಂಸಃ, ಸ್ಮಿತರುಚಿ-ರಮುಖೇಂದುಃ, ಸ್ನಿಗ್ಧಕೌಶೇಯವಾಸಾಃ, ಮನೀಷೀ, ಸಃ, ಮುನಿಸುರನರಾಣಾಂ (ಸಮುನಿಸುರನರಾಣಾಂ), ಚಕ್ಷುಷಾಂ, ಉತ್ಸವಃ, ಅಭೂತ್ ।

**ಅನ್ವಯಾರ್ಥ—**

**ಕೃತ, ಪರಮಸಪರ್ಯಃ** = ಮಾಡಲ್ಪಟ್ಟ, ಸರ್ವೋತ್ತಮನಾದ ಶ್ರೀಮನ್ನಾರಾಯಣನ ಪೂಜೆಯನ್ನು ಮಾಡಲ್ಪಟ್ಟ
**ಸಾಂದ್ರಸತ್** = ಗಟ್ಟಿಯಾದ,
**ಚಂದನಾಂಭಃ** = ಒಳ್ಳೆಯ ಗಂಧದ ನೀರಿನಿಂದ ,
**ಪರಿಮಲಿತ** = ಸುವಾಸನೆಗೊಳಿಸಲ್ಪಟ್ಟ ,
**ಭುಜ** = ತೋಳು,
**ಉರೋಮಂಡಲ** = ಎದೆಯ ಪ್ರದೇಶ,
**ಅಂಸಃ** = ಹೆಗಲು ಇವುಗಳುಳ್ಳ,
**ಸ್ಮಿತ, ರುಚಿರ, ಮುಖೇಂದುಃ, ಸ್ನಿಗ್ಧ, ಕೌಶೇಯವಾಸಾಃ** = ಮುಗುಳ್ನಗೆಯಿಂದ, ಮನೋಹರವಾದ ಚಂದ್ರ-ನಂತಹ ಮುಖವುಳ್ಳ ನುಣುಪಾದ, ರೇಷ್ಮೆಯ ವಸ್ತ್ರವುಳ್ಳ
**ಮನೀಷೀ** = ಜ್ಞಾನಿಗಳಾದ,
**ಸಃ** = ಆ ಶ್ರೀಮಧ್ವಾಚಾರ್ಯರು,
**ಮುನಿಸುರನರಾಣಾಂ** = ಮುನಿಗಳು, ದೇವತೆಗಳು, ಮನುಷ್ಯರು ಇವರ,

**ಚಕ್ಷುಷಾಂ** = ಕಣ್ಣುಗಳಿಗೆ,

**ಉತ್ಸವಃ** = ಸಂತೋಷವನ್ನುಂಟು ಮಾಡುವವರು,

**ಅಭೂತ್** = ಆದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ದೇವಪೂಜಾ ವಿಧಾನವನ್ನು ಬಲ್ಲ ಪರಮಜ್ಞಾನಿಗಳು. ಅವರು ಹಿಂದೆ ಹೇಳಿದ ರೀತಿಯಿಂದ ಸರ್ವೋತ್ತಮನಾದ ಶ್ರೀಮನ್ನಾರಾಯಣನ ಪೂಜೆಯನ್ನು ಮಾಡಿದರು. ಅನಂತರ ಗಟ್ಟಿಯಾದ ಹರಿಪ್ರಸಾದ ರೂಪವಾದ ಗಂಧವನ್ನು ನೀರಾಗಿ ಮಾಡಿಕೊಂಡು ತೋಳುಗಳು, ಎದೆ, ಹೆಗಲು ಇವುಗಳಿಗೆ ಹಚ್ಚಿಕೊಂಡು ಪರಿಮಳಭರಿತ ರಾದರು. ಮೃದುವಾದ ರೇಶ್ಮೆಬಟ್ಟೆಯನ್ನುಟ್ಟು ಕಿರುನಗೆಯಿಂದ ಆಚಾರ್ಯರು ಶೋಭಿಸುತ್ತಿದ್ದರು. ಆಗ ದೇವತೆಗಳು, ಮುನಿಗಳು ಮತ್ತು ಮನುಷ್ಯರ ಕಣ್ಣುಗಳಿಗೆ ಆಚಾರ್ಯರ ಸುಂದರರೂಪ ನೋಟವು ಅತ್ಯಂತ ಆನಂದಕರವಾದ ಉತ್ಸವದಂತಾಯಿತು. ಎಲ್ಲರಿಗೂ ಆಚಾರ್ಯರ ರೂಪವು ಸಂತೋಷವನ್ನುಂಟುಮಾಡಿತು. ಪೂಜೆ ಮಾಡಿದ ಅನಂತರ ಹರಿಪ್ರಸಾದ ಗಂಧಾದಿಗಳಿಂದ ತಮ್ಮ ದಿವ್ಯ ದೇಹವನ್ನು ಅಲಂಕರಿಸಿಕೊಂಡ ಆಚಾರ್ಯರ ರೂಪದರ್ಶನವು ಎಲ್ಲರಿಗೂ ಆನಂದವನ್ನುಂಟುಮಾಡಿತು ಎಂದು ಹೇಳಿದುದರಿಂದ ಹರಿಭಕ್ತರು ಹರಿಪ್ರಸಾದರೂಪವಾದ ಗಂಧಾದಿಗಳಿಂದ ದೇಹವನ್ನು ಅಲಂಕರಿಸಬೇಕೆಂದು ಸೂಚಿತವಾಯಿತು.

'ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ । ಉಚ್ಛಿಷ್ಟಭೋಜಿನೋ ದಾಸಾಃ ತವ ಮಾಯಾಂ ಜಯೇ-ಮಹಿ' ಎಂಬ ಭಾಗವತದಲ್ಲಿಯೂ ಈ ವಿಷಯವನ್ನು ಹೇಳಿದ್ದಾರೆ.

**ವಿಗ್ರಹ ಮತ್ತು ಕೋಶ—**

**ಕೃತಪರಮಸಪರ್ಯಃ—** ಪರಮಸ್ಯ ಸಪರ್ಯಾ ಪರಮಸಪರ್ಯಾ, ಕೃತಾ ಪರಮಸಪರ್ಯಾ ಯೇನ ಸಃ ಕೃತಪರಮಸಪರ್ಯಃ । ಸಪರ್ಯ = ಪೂಜೆ, 'ಪೂಜಾ ನಮಸ್ಯಾಪಚಿತಿಃ ಸಪರ್ಯಾರ್ಚಾರ್ಹಣಾಃ ಸಮಾಃ' ಅಮರ ।

**ಸಾಂದ್ರಸಚ್ಚಂದನಾಂಭಃಪರಿಮಲಿತಭುಜೋರೋಮಂಡಲಾಂಸಃ—** ಉರಸಃ ಮಂಡಲಂ ಉರೋ-ಮಂಡಲಂ, ಭುಜೌ ಚ ಉರೋಮಂಡಲಂ ಚ, ಅಂಸೌ ಚ ಭುಜೋರೋಮಂಡಲಾಂಸಾಃ, ಚಂದನಸ್ಯ ಅಂಭಃ ಚಂದನಾಂಭಃ, ಸಚ್ಚ ತತ್ ಚಂದನಾಂಭಶ್ಚ ಸಚ್ಚಂದನಾಂಭಃ, ಸಾಂದ್ರಂ ಚ ತತ್ ಸಚ್ಚಂದನಾಂಭಶ್ಚ ಸಾಂದ್ರಸಚ್ಚಂದನಾಂಭಃ, ಪರಿಮಲಃ ಏಷಾಂ ಸಂಜಾತಃ ಇತಿ ಪರಿಮಲಿತಾಃ, ಸಾಂದ್ರಸಚ್ಚಂದನಾಂಭಸಾ ಪರಿಮಲಿತಾಃ ಭುಜೋ ರೋಮಂಡಲಾಂಸಾಃ ಯಸ್ಯ ಸಃ ಸಾಂದ್ರ-ಸಚ್ಚಂದನಾಂಭಃ ಪರಿಮಲಿತಭುಜೋರೋಮಂಡಲಾಂಸಃ ।

**ಮನೀಷೀ—** ಮನಸಃ ಈಷಾ ಮನೀಷಾ, ಮನೀಷಾ ಅಸ್ಯ ಅಸ್ತೀತಿ ಮನೀಷೀ ।

**ಮುಖೇಂದುಃ—** ಮುಖಂ ಇಂದುರಿವ ಮುಖೇಂದುಃ (ಮುಖಮೇವ ಇಂದುಃ ಮುಖೇಂದುಃ ಇತಿ ವಾ) ।

**ಸ್ಮಿತರುಚಿರಮುಖೇಂದುಃ—** ಸ್ಮಿತೇನ ರುಚಿರಃ ಮುಖೇಂದುಃ ಯಸ್ಯ ಸಃ ಸ್ಮಿತರುಚಿರಮುಖೇಂದುಃ । (ಸ್ಮಿತೇನ ರುಚಿರಂ ಸ್ಮಿತರುಚಿರಂ, ಸ್ಮಿತರುಚಿರಂ ಚ ತತ್ ಮುಖಂ ಚ ಸ್ಮಿತರುಚಿರಮುಖಂ, ಸ್ಮಿತರುಚಿರಮುಖಂ ಇಂದುರಿವ ಸ್ಮಿತರುಚಿರಮುಖೇಂದುಃ ಇತಿ ವಾ) । 'ಸುಂದರಂ ರುಚಿರಂ ಚಾರು ಸುಷಮಂ ಸಾಧು ಶೋಭನಂ' ಅಮರ ।

**ಸ್ನಿಗ್ಧಕೌಶೇಯವಾಸಾಃ—** ಸ್ನಿಗ್ಧಂ ಕೌಶೇಯಂ ವಾಸಃ ಯಸ್ಯ ಸಃ ಸ್ನಿಗ್ಧಕೌಶೇಯವಾಸಾಃ । 'ಚಿಕ್ಕಣಂ ಮಸೃಣಂ ಸ್ನಿಗ್ಧಂ' ಅಮರ.

**ಸುರಮುನಿನರಾಃ—** ಸುರಾಶ್ಚ ಮುನಯಶ್ಚ ನರಾಶ್ಚ ಸುರಮುನಿನರಾಃ ತೇಷಾಂ । (ಮುನಿಭಿಃ ಸಹಿತಾಃ ಸಮುನಯಃ ಸುರಾಶ್ಚ ನರಾಶ್ಚ ಸುರನರಾಃ, ಸಮುನಯಶ್ಚ ತೇ ಸುರನರಾಶ್ಚ ಸಮುನಿಸುರನರಾಃ,

ತೇಷಾಂ ಸಮುನಿಸುರನರಾಣಾಂ । ಹರಿಪೂಜಾನಂತರಂ ನಿರ್ಮಾಲ್ಯಗಂಧೇನ ಸ್ವಾಂಗಂ ಅಲಂಕೃತ್ಯ ಕೌಶೇಯವಸ್ತ್ರೇಣ ಪ್ರಾವರಣಂ ಕೃತ್ವಾ ಉಪವಿಷ್ಟಂ ಮಂದಂ ಹಸಂತಂ ಶ್ರೀಮಧ್ವಾಚಾರ್ಯಂ ಪಶ್ಯತಾಂ ಸುರನರಾದೀನಾಂ ಚಕ್ಷುಷಾಂ ಉತ್ಸವಃ ಅಭೂತ್ ಇತ್ಯರ್ಥಃ (ಛಲಾರಿಯ) ।

ಹರಿಪೂಜೆಯ ಅನಂತರ ಹರಿನಿರ್ಮಾಲ್ಯವಾದ ಗಂಧದಿಂದ ತಮ್ಮ ಅಂಗವನ್ನು ಅಲಂಕರಿಸಿ ರೇಷ್ಮೆಯ ವಸ್ತ್ರವನ್ನು ಹೊದ್ದು ಕುಳಿತುಕೊಂಡು ಮುಗುಳ್ನಗುತ್ತಾ ಇರುವ ಶ್ರೀಮಧ್ವಾಚಾರ್ಯರನ್ನು ನೋಡುತ್ತಿರುವ ದೇವತೆಗಳು, ಮನುಷ್ಯರು ಮುಂತಾದವರ ಕಣ್ಣುಗಳಿಗೆ ತುಂಬಾ ಆನಂದ ಉಂಟಾಯಿತು ಎಂದು ಅಭಿಪ್ರಾಯ.

**ಕ್ರಿಯಾಪದ—** **ಅಭೂತ್**- ಭೂ ಸತ್ತಾಯಾಂ ಲುಙ್ ।

**ಪ್ರಯೋಗ—** ಕೃತಪರಮಸಪರ್ಯೇಣ ಸಾಂದ್ರಸಚ್ಚಂದನಾಂಭಃಪರಿಮಲಿತಭುಜೋರೋಮಂಡಲಾಂಸೇನ ಸ್ಮಿತ-ರುಚಿರಮುಖೇಂದುನಾ ಸ್ನಿಗ್ಧಕೌಶೇಯವಾಸಸಾ (ತೇನ) ಸಮುನಿಸುರನರಾಣಾಂ ಚಕ್ಷುಷಾಂ ಉತ್ಸವೇನ ಅಭಾವಿ ।

★ ★ ★

**ಅವತಾರಿಕಾ—** ಆಮೇಲೆ ಆಚಾರ್ಯರು ಭಿಕ್ಷೆ ಸ್ವೀಕರಿಸಿದ್ದನ್ನು ವರ್ಣಿಸುತ್ತಾರೆ.

**ಪರಮಥ ಪರಮಾನ್ನಂ ಪ್ರಾಪ್ತಮೇವಾಪ್ರಯಾಸಂ**
**ಪ್ರಭುರಿಹ ಬುಭುಜೇಽಸೌ ವೇದವಾದಪ್ರವೀಣಃ ।**
**ಅಜಿತಪರಮಭಕ್ತಃ ಸಂತತಂ ಮನ್ಯಮಾನಃ**
**ಸಕಲಜಗದಧೀಶಃ ಪ್ರೀಯತಾಂ ಶೌರಿರಿತ್ಥಮ್ ॥ 39 ॥**

**ಪದಚ್ಛೇದ—** ಪರಂ, ಅಥ, ಪರಮಾನ್ನಂ, ಪ್ರಾಪ್ತಂ, ಏವ, ಅಪ್ರಯಾಸಂ, ಪ್ರಭುಃ, ಇಹ, ಬುಭುಜೇ, ಅಸೌ, ವೇದವಾದಪ್ರವೀಣಃ, ಅಜಿತಪರಮಭಕ್ತಃ, ಸಂತತಂ, ಮನ್ಯಮಾನಃ, ಸಕಲಜಗದಧೀಶಃ, ಪ್ರೀಯತಾಂ, ಶೌರಿಃ, ಇತ್ಥಂ ।

**ಅನ್ವಯ—** ಅಥ, ಪ್ರಭುಃ, ಸಕಲಜಗದಧೀಶಃ, ಶೌರಿಃ, ಪ್ರೀಯತಾಂ, ಇತ್ಥಂ, ಸಂತತಂ, ಮನ್ಯಮಾನಃ, ವೇದವಾದಪ್ರವೀಣಃ, ಅಜಿತಪರಮಭಕ್ತಃ, ಅಸೌ, ಅಪ್ರಯಾಸಂ, ಪ್ರಾಪ್ತಂ, ಪರಂ, ಪರಮಾನ್ನಂ, ಇಹ, ಬುಭುಜೇ ।

**ಅನ್ವಯಾರ್ಥ—**

**ಅಥ** = ಶ್ರೀಹರಿಯ ಪೂಜೆಯು ಮುಗಿದ ಬಳಿಕ,
**ಪ್ರಭುಃ** = ಸ್ವಾಮಿಯಾದ,
**ಸಕಲಜಗದಧೀಶಃ** = ಎಲ್ಲಾ ಪ್ರಪಂಚಕ್ಕೆ ಒಡೆಯನಾದ,
**ಶೌರಿಃ** = ಶ್ರೀಕೃಷ್ಣನು,
**ಪ್ರೀಯತಾಂ** = ಸಂತುಷ್ಟನಾಗಲಿ,
**ಇತ್ಥಂ** = ಈ ರೀತಿಯಾಗಿ,
**ಸಂತತಂ** = ಯಾವಾಗಲೂ,
**ಮನ್ಯಮಾನಃ** = ಅನುಸಂಧಾನ ಮಾಡುತ್ತಿರುವ,
**ವೇದವಾದ** = ವೇದವನ್ನು ವಿಚಾರಮಾಡುವುದರಲ್ಲಿ
**ಪ್ರವೀಣಃ** = ಕುಶಲರಾದ,

**ಅಜಿತಪರಮಭಕ್ತಃ** = ಶ್ರೀಮನ್ನಾರಾಯಣನ ಮುಖ್ಯಭಕ್ತರಾದ,
**ಅಸೌ** = ಶ್ರೀಮಧ್ವಾಚಾರ್ಯರು,
**ಅಪ್ರಯಾಸಂ** = ಅನಾಯಾಸವಾಗಿ,
**ಪ್ರಾಪ್ತಂ** = ಒದಗಿದ,
**ಪರಂ** = ಉತ್ತಮವಾದ,
**ಪರಮಾನ್ನಂ** = ಪಾಯಸವನ್ನು,
**ಬುಭುಜೇ** = ಭುಜಿಸಿದರು.

**ತಾತ್ಪರ್ಯ**— ಹೀಗೆ ವಿಷ್ಣುಮಂಗಲದೇವಾಲಯದಲ್ಲಿ ಅನೇಕ ದಿವಸ ವಾಸಿಸುತ್ತಿದ್ದ ಶ್ರೀಮಧ್ವಾಚಾರ್ಯರ ದಿನ ಚರ್ಯಾ ಮತ್ತು ದೇವರ ಪೂಜೆಗಳಲ್ಲಿ ಒಂದು ದಿನದ ಕ್ರಮವನ್ನು ವಿವರಿಸಿದ್ದಾಯಿತು. ಪ್ರತಿದಿನವೂ ಆಚಾರ್ಯರು ಹೀಗೆಯೇ ನಿತ್ಯಕ್ರಮಗಳನ್ನು ನಡೆಸಿಕೊಂಡು ಹೋಗುತ್ತಿದ್ದರು. ಯಾವಾಗಲೂ ಪರಮಾತ್ಮನು ಸುಪ್ರೀತನಾಗಲಿ ಎಂದು ಅನುಸಂಧಾನ ಮಾಡುತ್ತಾ ಇರುತ್ತಿದ್ದರು. ಪರಮಾತ್ಮನ ಪೂಜೆಯಾದ ಮೇಲೆ ಸಕಲ ಜಗತ್ತಿನ ಸ್ವಾಮಿಯೂ ವಿಶೇಷತಃ ನನ್ನ ಸ್ವಾಮಿಯೂ ಆದ ಶ್ರೀಹರಿಯು ಸಂತುಷ್ಟನಾಗಲಿ ಎಂದು ಚಿಂತಿಸುತ್ತಾ ತಾವು ಪೂಜೆ ಮಾಡಿದ ದೇವಾಲಯದಲ್ಲಿಯೇ ಪ್ರಯತ್ನವಿಲ್ಲದೆ ದೊರಕಿದ ಪರಮಾತ್ಮನ ಪ್ರಸಾದರೂಪವಾದ ಶ್ರೇಷ್ಠವಾದ ಅನ್ನವನ್ನು ಸ್ವೀಕರಿಸಿದರು. ಸಂನ್ಯಾಸಿಗಳ ಭೋಜನಕ್ಕೆ ಅರ್ಹವಾದ ಉತ್ತಮವಾದ ಪಾಯಸವನ್ನು ಸ್ವೀಕರಿಸಿದರು. ಆಚಾರ್ಯರು ಸಕಲ ಕಾರ್ಯಗಳನ್ನು ಭಗವಂತನಿಗೆ ಪ್ರೀತಿಯಾಗಲಿ ಎಂದೇ ಆಚರಿಸತಕ್ಕವರಾದುದರಿಂದ ಈ ರೀತಿಯಾದ ಭಿಕ್ಷಾಸ್ವೀಕಾರವೂ ಶ್ರೀಹರಿ ಪ್ರೀತಿಕರವಾಗಲಿ ಎಂದು ಪ್ರಾರ್ಥಿಸಿದರು.

**ವಿಗ್ರಹ**—

**ಪರಮಾನ್ನಂ**— ಪರಮಂ ಚ ತತ್ ಅನ್ನಂ ಚ ಪರಮಾನ್ನಂ ತತ್ ।

**ಅಪ್ರಯಾಸಂ**— ನ ವಿದ್ಯತೇ ಪ್ರಯಾಸಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಅಪ್ರಯಾಸಂ। (ಕ್ರಿ.ವಿ. ಅವ್ಯ)

**ವೇದವಾದಪ್ರವೀಣಃ**— ವೇದಾನಾಂ ವಾದಃ ವೇದವಾದಃ, ವೇದವಾದೇ ಪ್ರವೀಣಃ ವೇದವಾದಪ್ರವೀಣಃ ।

**ಅಜಿತಪರಮಭಕ್ತಃ**— ಪರಮಶ್ಚಾಸೌ ಭಕ್ತಶ್ಚ ಪರಮಭಕ್ತಃ, ಅಜಿತಸ್ಯ ಪರಮಭಕ್ತಃ ಅಜಿತಪರಮಭಕ್ತಃ ।

**ಸಕಲಜಗದಧೀಶಃ**— ಸಕಲಾನಿ ಚ ತಾನಿ ಜಗಂತಿ ಚ ಸಕಲಜಗಂತಿ, ಸಕಲಜಗತಾಂ ಅಧೀಶಃ ಸಕಲಜಗದ ಧೀಶಃ ।

**ಶೌರಿಃ**— ಶೂರಸ್ಯ ಅಪತ್ಯಂ ಪುಮಾನ್ ಶೌರಿಃ ।

**ಕ್ರಿಯಾಪದ**— **ಪ್ರೀಯತಾಂ** - ಪ್ರೀಯತಾಂ ಪ್ರೀಯೇತಾಂ ಪ್ರೀಯಂತಾಂ, ಪ್ರೀಯಸ್ವ ಪ್ರೀಯೇಥಾಂ ಪ್ರೀಯಧ್ವಂ, ಪ್ರೀಯೈ ಪ್ರೀಯಾವಹೈ ಪ್ರೀಯಾಮಹೈ । ಪ್ರೀಙ್ ಪ್ರೀಣನೇ ದೈವಾದಿಕಧಾತು, ಅಕ. ಆತ್ಮನೇ ಲೋಟ್ ಪ್ರಥಮಪುರುಷೇ ಏಕವಚನಂ.

**ಬುಭುಜೇ**- ಬುಭುಜೇ ಬಭುಜಾತೇ ಬಭುಜಿರೇ, ಬುಭುಜಿಷೇ ಬಭುಜಾಥೇ ಬುಭುಜಿಧ್ವೇ, ಬುಭುಜೇ ಬುಭುಜಿವಹೇ ಬುಭುಜಿಮಹೇ । ಭುಜಪಾಲನಾವಭ್ಯವಹಾರಯೋಃ ಆತ್ಮನೇ ಪದಿ, ಲಿಟ್ ಪ್ರಥಮಪುರುಷೇ ಏಕವಚನಂ ಭುಜೋಽನವನೇ ಎಂಬ ಸೂತ್ರದಿಂದ ಅವನ (ರಕ್ಷಣ) ಭಿನ್ನವಾದ ಭೋಜನ ಎಂಬ ಅರ್ಥದಲ್ಲಿ ಆತ್ಮನೇ ಪದ ಬಂದಿವೆ.

**ಪ್ರಯೋಗ**— ಅಥ ಪ್ರಭುಣಾ ಸಕಲಜಗದಧೀಶೇನ, ಶೌರಿಣಾ ಪ್ರೀಯತಾಂ ಇತ್ಥಂ ಸಂತತಂ ಮನ್ಯಮಾನೇನ ವೇದವಾದಪ್ರವೀಣೇನ ಅಜಿತಪರಮಭಕ್ತೇನ ಅಮುನಾ ಅಪ್ರಯಾಸಂ ಏವ ಪ್ರಾಪ್ತಂ ಪರಂ ಪರಮಾನ್ನಂ ಇಹ ಬುಭುಜೇ ।

**ವ್ಯಾಕರಣ ವಿಶೇಷ**— ಇಲ್ಲಿ ಭಾವಪ್ರಕಾಶಿಕಾ ವಚನ.

''**ಪ್ರಾಯಃ ಸೋऽಯಮನಾಯಾಸಂ ಪೂಜ್ಯತೇ ಪರಮೇಶ್ವರಃ ।**
**ಪ್ರೀಯತಾಮಿತಿ ತದ್ಭಕ್ತ್ಯಾ ಸತತಂ ವೇದಶಾಲಿಭಿಃ ॥**

ಇತಿ ಭಗವತಾ ಸ್ವಯಮೇವಾಭಿಹಿತಂ ಅನೂದಿತಂ ಪರಮಿತ್ಯಾದಿನಾ''. ವೇದ ವೇದಾರ್ಥವನ್ನು ಬಲ್ಲ ಜ್ಞಾನಿಗಳು ದೇವರಲ್ಲಿ ನಿರಂತರ ಭಕ್ತಿಯಿಂದ ಭಗವಂತನು ಪ್ರಸನ್ನನಾಗಲಿ ಎಂದು ಪ್ರಾರ್ಥಿಸುತ್ತಲೇ ಎಲ್ಲಾ ಕಾರ್ಯಗಳನ್ನು ಮಾಡುತ್ತಾರೆ. ಆದುದರಿಂದಲೇ ಸುಲಭವಾಗಿ ತಮ್ಮ ನಿತ್ಯ ಕಾರ್ಯಕ್ರಮಗಳಿಂದಲೇ ಹರಿ ಪೂಜೆಯನ್ನು ಸಾಧಿಸುತ್ತಾರೆ. ಎಂಬುದಾಗಿ ಪರಮಾತ್ಮನೇ ಸ್ವತಃ ತಿಳಿಸಿರುತ್ತಾನೆ. ಆ ವಿಷಯವನ್ನೇ ಇಲ್ಲಿ ಪರಮಥ ಇತ್ಯಾದಿ ಶ್ಲೋಕದಿಂದ ಅನುವಾದ ಮಾಡಿದ್ದಾಗಿದೆ.

★ ★ ★

**ಅವತಾರಿಕಾ**— ಆಚಾರ್ಯರು ಭಿಕ್ಷಾಸ್ವೀಕಾರ ಮಾಡಿದ ಮೇಲೆ ಮಾಡಿದ ಶಾಸ್ತ್ರಾರ್ಥವಿಚಾರವನ್ನು ವರ್ಣಿಸುತ್ತಾರೆ.

**ಸಹಚರಪರಿಕ್ಲೃಪ್ತೇ ಸೂಕ್ಷ್ಮವಸಾಸ್ತೃ(ವೃ)ತೇऽಸಾ-**
**ವವಿತನುರುಹರೂಪೌಶೀರವರ್ಯೇ ನಿಷಣ್ಣಃ ।**
**ಅರಮಯದಿಹ ನಾನಾಹೃದ್ಯವಿದ್ಯಾವಿಲಾಸೈಃ**
**ಕವಿಜನಪರಿವಾರಂ ಮಂಡಯನ್ ಮಂಟಪಾಗ್ರ್ಯಮ್ ॥ 40 ॥**

**ಪದಚ್ಛೇದ**— ಸಹಚರಪರಿಕ್ಲೃಪ್ತೇ, ಸೂಕ್ಷ್ಮವಸಾ(ವೃ)ಸ್ತೃತೇ ಅಸೌ, ಅವಿತನುರುಹರೂಪೌಶೀರವರ್ಯೇ, ನಿಷಣ್ಣಃ, ಅರಮಯತ್, ಇಹ, ನಾನಾಹೃದ್ಯವಿದ್ಯಾವಿಲಾಸೈಃ, ಕವಿಜನಪರಿವಾರಂ, ಮಂಡಯನ್, ಮಂಟಪಾಗ್ರ್ಯಂ ।

**ಅನ್ವಯ**— ಸಹಚರಪರಿಕ್ಲೃಪ್ತೇ, ಸೂಕ್ಷ್ಮವಸಾಸ್ತೃತೇ(ವೃತೇ), ಅವಿತನುರುಹರೂಪೌಶೀರವರ್ಯೇ, ನಿಷಣ್ಣಃ, ಮಂಟಪಾಗ್ರ್ಯಂ, ಮಂಡಯನ್, ಅಸೌ, ಇಹ, ಕವಿಜನಪರಿವಾರಂ, ನಾನಾಹೃದ್ಯವಿದ್ಯಾವಿಲಾಸೈಃ, ಅರಮಯತ್ ।

**ಅನ್ವಯಾರ್ಥ**—

**ಸಹಚರ** = ಶಿಷ್ಯರಿಂದ,
**ಪರಿಕ್ಲಪ್ತೇ** = ಸಜ್ಜುಗೊಳಿಸಲ್ಪಟ್ಟ
**ಸೂಕ್ಷ್ಮವಸಾಸ್ತೃತೇ** = ತೆಳ್ಳಗಿರುವ ಬಟ್ಟೆಯಿಂದ ಮುಚ್ಚಲ್ಪಟ್ಟ
**ಅವಿತನುರೂಪೌಶೀರವರ್ಯೇ** = ಉಣ್ಣೆಯಿಂದ ಮಾಡಿದ, ಶ್ರೇಷ್ಠವಾದ ರತ್ನಗಂಬಳಿಯ ಮೇಲೆ,
**ನಿಷಣ್ಣಃ** = ಕುಳಿತಿರುವ,
**ಮಂಟಪಾಗ್ರ್ಯಂ** = ಶ್ರೇಷ್ಠವಾದ ಸಭಾಮಂಟಪವನ್ನು,
**ಮಂಡಯನ್** = ಅಲಂಕರಿಸುತ್ತಿರುವ,
**ಅಸೌ** = ಈ ಶ್ರೀಮಧ್ವಾಚಾರ್ಯರು,
**ಇಹ** = ಈ ಸಭಾಮಂಟಪದಲ್ಲಿ
**ಕವಿಜನಪರಿವಾರಂ** = ಸುತ್ತಲೂ ಕುಳಿತಿರುವ ವಿದ್ವಾಂಸರ ಸಮೂಹವನ್ನು,
**ನಾನಾ** = ಅನೇಕ ಬಗೆಯ,

**ಹೃದ್ಯವಿದ್ಯಾವಿಲಾಸೈಃ** = ಮನೋಹರವಾದ ವಿದ್ಯಾವಿನೋದಗಳಿಂದ,

**ಅರಮಯತ್** = ಸಂತೋಷಗೊಳಿಸಿದರು.

**ತಾತ್ಪರ್ಯ—** ಆಚಾರ್ಯರು ಭಿಕ್ಷಾ ಸ್ವೀಕಾರ ಮಾಡಿ ಹೊರಗೆ ಬರುವುದರೊಳಗಾಗಿ ಹೊರಗೆ ಸಭಾಮಂಟಪದಲ್ಲಿ ಜನರು ತುಂಬಿದ್ದರು. ಶಿಷ್ಯರು ಆಚಾರ್ಯರಿಗಾಗಿ ರತ್ನಗಂಬಳಿಯ ಮೇಲೆ ನವಿರಾದ ಬಟ್ಟೆಯನ್ನು ಹಾಸಿ ಆಸನವನ್ನು ಸಿದ್ಧ ಪಡಿಸಿದ್ದರು. ಆಚಾರ್ಯರು ಹೊರಗೆ ಬಂದು ತಮಗಾಗಿ ಸಿದ್ಧಪಡಿಸಿದ ಆಸನದ ಮೇಲೆ ಕುಳಿತು ಸಭಾಮಂಟಪವನ್ನು ಅಲಂಕರಿಸಿದರು. ಅಲ್ಲಿ ಅನೇಕ ಪಂಡಿತರು ಆಚಾರ್ಯರ ಸುತ್ತಲೂ ಕುಳಿತಿದ್ದರು. ಆಚಾರ್ಯರು ಅವರನ್ನು ಅನೇಕ ಪ್ರಕಾರವಾದ ಶಾಸ್ತ್ರಾರ್ಥ ವಿನೋದಗಳಿಂದ ಸಂತೋಷಪಡಿಸಿದರು.

**ವಿಗ್ರಹ ಮತ್ತು ಕೋಶ—**

**ಸಹಚರಪರಿಕ್ಲೃಪ್ತೇ—** ಸಹಚರೇಣ ಪರಿಕ್ಲೃಪ್ತಂ ಸಹಚರಪರಿಕ್ಲೃಪ್ತಂ ತಸ್ಮಿನ್ ।

**ಸೂಕ್ಷ್ಮವಸ್ತ್ರಾಸ್ತೃತೇ—** ಸೂಕ್ಷ್ಮಂ ಚ ತತ್ ವಸ್ತ್ರಂ ಚ ಸೂಕ್ಷ್ಮವಸ್ತ್ರಂ, ಸೂಕ್ಷ್ಮವಸ್ತ್ರೇಣ ಆಸ್ತೃತಂ (ಆವೃತಂ) ಸೂಕ್ಷ್ಮವಸ್ತ್ರಾಸ್ತೃತಂ (ವಸ್ತ್ರಾವೃತಂ) ತಸ್ಮಿನ್ ।

**ಅವಿತನುರುಹರೂಪೌಶೀರವರ್ಯೇ—** ಅವೇಃ ತನುರುಹಾಣಿ ಅವಿತನುರುಹಾಣಿ, ಅವಿತನುರುಹೈಃ ರೂಪ್ಯತೇ ಇತಿ ಅವಿತನುರುಹರೂಪಂ, ಔಶೀರಂ ಇತಿ ವರ್ಯಂ ಔಶೀರವರ್ಯಂ, ಅವಿತನುರುಹ ರೂಪಂ ಚ ತತ್ ಔಶೀರವರ್ಯಂ ಚ ಅವಿತನುರುಹರೂಪೌಶೀರವರ್ಯಂ ತಸ್ಮಿನ್ । ಅವಿ = ಕುರಿ, 'ಅವಯಃ ಶೈಲಮೇಷಾರ್ಕಾಃ', 'ಮೇಷಾಜಾವಯ ಏಡಕಃ' ಅಮರ, ತನುರುಹ = ರೋಮ, ತುಪ್ಪಟ, ಉಣ್ಣೆ 'ತನೂರುಹಂ ರೋಮಲೋಮ' ಅಮರ, ಇಲ್ಲಿ ಶ್ಲೋಕದಲ್ಲಿ 'ತನುರುಹ' ಎಂದು ಹ್ರಸ್ವ 'ನು' ಎಂಬ ಅಕ್ಷರವೇ ಇದೆ. ಅದೇ ಇರಬೇಕು. ಅಮರ ಕೋಶದಲ್ಲಿ ತನೂರುಹಂ ಎಂದು ದೀರ್ಘ ತನೂಶಬ್ದದಿಂದ ಕೂಡಿದ ಪರ್ಯಾಯ ಪದವಿದೆ. ಆದರೆ 'ಸ್ತ್ರಿಯಾಂ ಮೂರ್ತಿಃ ತನುಃ ತನೂಃ' ಎಂದು ಉಕಾರಾಂತ ತನುಶಬ್ದದಿಂದ ನಿಷ್ಪನ್ನವಾದ ತನುರುಹ ಪದವನ್ನು ಇಲ್ಲಿ ಇಟ್ಟುಕೊಳ್ಳ ಬೇಕು. ಔಶೀರಂ = ರತ್ನಗಂಬಳಿಯ ಆಸನ, ಹಾಸಿಗೆ, 'ಔಶೀರಂ ಶಯನಾಸನೇ' ಅಮರ ।

**ನಾನಾಹೃದ್ಯವಿದ್ಯಾವಿಲಾಸೈಃ—** ನಾನಾ ಚ ತಾಃ ಹೃದ್ಯಾ ಚ ತಾಃ ವಿದ್ಯಾಃ ಚ ನಾನಾಹೃದ್ಯವಿದ್ಯಾಃ, ನಾನಾಹೃದ್ಯವಿದ್ಯಾನಾಂ ವಿಲಾಸಾಃ ನಾನಾಹೃದ್ಯವಿದ್ಯಾವಿಲಾಸಾಃ ತೈಃ । ವಿಲಾಸ = ವಿನೋದಲೀಲೆ, 'ವಿಲಾಸೋ ಭಾವಲೀಲಯೋಃ' ವಿಶ್ವ ।

**ಕವಿಜನಾಪರಿವಾರಂ—** ಕವಯಃ ಇತಿ ಜನಃ ಕವಿಜನಃ, ಕವಿಜನಶ್ಚಾಸೌ ಪರಿವಾರಶ್ಚ ಕವಿಜನಪರಿವಾರಃ, ತಂ ಅಥವಾ ಕವಯಃ ಇತಿ ಜನಾಃ ಕವಿಜನಾಃ, ಪರಿತಃ ವಾರಃ ಪರಿವಾರಃ, ಕವಿಜನಾನಾಂ ಪರಿವಾರಃ ಕವಿಜನಪರಿವಾರಃ ತಂ । ವಾರ = ಸಮುದಾಯ, 'ವಾರಸಂಘಾತ ಸಂಚಯಾಃ' ಅಮರ. ಸುತ್ತಲೂ ಕುಳಿತಿರುವ ಪಂಡಿತರ ಸಮುದಾಯ ಎಂದು ಅರ್ಥ.

**ಮಂಟಪಾಗ್ರ್ಯಂ—** ಮಂಟಪೇಷು ಅಗ್ರ್ಯಃ ಮಂಟಪಾಗ್ರ್ಯಃ ತಂ । 'ಮಂಟಪೋಽಸ್ತ್ರೀ ಜನಾಶ್ರಯಃ' ಅಮರ.

**ಕ್ರಿಯಾಪದ—** **ಅರಮಯತ್**- ಅರಮಯತ್ ಅರಮಯತಾಂ ಅರಮಯನ್ ಇತ್ಯಾದಿ, ರಮು ಕ್ರೀಡಾಯಾಂ ಣಿಜಂತ ಕರ್ತರಿ ಲಙ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಸಹಚರಪರಿಕ್ಲೃಪ್ತೇ ಸೂಕ್ಷ್ಮವಸ್ತ್ರಾವೃತೇ ಅವಿತನುರುಹರೂಪೌಶಿರವರ್ಯೇ ನಿಷಣ್ಣೇನ ಮಂಟಪಾಗ್ರ್ಯಂ ಮಂಡಯತಾ ಅಮುನಾ ಇಹ ಕವಿಜನಪರಿವಾರಃ ನಾನಾಹೃದ್ಯವಿದ್ಯಾವಿಲಾಸೈಃ ಅರಮ್ಯತ ।

★ ★ ★

ಅವತಾರಿಕಾ— ಆಚಾರ್ಯರಲ್ಲಿ ಕಾರ್ಯವನ್ನು ವಿಜ್ಞಾಪಿಸುವ ಶಿಷ್ಯನ ರೀತಿಯನ್ನು ವರ್ಣಿಸುತ್ತಾರೆ.

**ಅವಸರಮಧಿಗಮ್ಯ ಭ್ರೂವಿಜೃಂಭಾದಭೀಷ್ಟೋ**
**ಮುಖಸತತಗಲಕ್ಷ್ಮೀ(ಕ್ಷ್ಮೀ)ಭೂತಪಾಣಿಪ್ರವಾಲಃ ।**
**ಸ್ಮಿತನಯನವಿಕಾಸೈಸ್ತಸ್ಯ ವಿಜ್ಞಾತಭಾವಃ**
**ಶ್ರವಸಿ ಕಿಮಪಿ ಕಾರ್ಯಂ ಮಂತ್ರಯಾಮಾಸ ಮಂಕ್ಷು ॥ 41 ॥**

ಪದಚ್ಛೇದ— ಅವಸರಂ, ಅಧಿಗಮ್ಯ, ಭ್ರೂವಿಜೃಂಭಾತ್, ಅಭೀಷ್ಟಃ, ಮುಖಸತತಗಲಕ್ಷ್ಮೀ(ಕ್ಷ್ಮೀ) ಭೂತಪಾಣಿಪ್ರವಾಲಃ, ಸ್ಮಿತನಯನವಿಕಾಸೈಃ, ತಸ್ಯ, ವಿಜ್ಞಾತಭಾವಃ ಶ್ರವಸಿ, ಕಿಂ, ಅಪಿ, ಕಾರ್ಯಂ, ಮಂತ್ರಯಾಮಾಸ, ಮಂಕ್ಷು ।

ಅನ್ವಯ— ಅಭೀಷ್ಟಃ, ಭ್ರೂವಿಜೃಂಭಾತ್, ಅವಸರಂ, ಅಧಿಗಮ್ಯ, ಸ್ಮಿತನಯನವಿಕಾಸೈಃ, ವಿಜ್ಞಾತಭಾವಃ, ತಸ್ಯ, ಶ್ರವಸಿ, ಕಿಂ, ಅಪಿ, ಕಾರ್ಯಂ, ಮುಖಸತತಗಲಕ್ಷ್ಮೀ(ಕ್ಷ್ಮೀ) ಭೂತಪಾಣಿಪ್ರವಾಲಃ, ಸನ್, ಮಂಕ್ಷು, ಮಂತ್ರಯಾಮಾಸ ।

ಅನ್ವಯಾರ್ಥ—

**ಅಭೀಷ್ಟಃ** = ಶ್ರೀಮಧ್ವಾಚಾರ್ಯರಿಗೆ ಪ್ರಿಯನಾದ ಶಿಷ್ಯನೊಬ್ಬನು,
**ಭ್ರೂವಿಜೃಂಭಾತ್** = ಹುಬ್ಬಿನ ವಿಲಾಸದಿಂದ (ಸಂಕೇತದಿಂದ),
**ಅವಸರಂ** = ಸಮಯವನ್ನು,
**ಅಧಿಗಮ್ಯ** = ಹೊಂದಿ,
**ಸ್ಮಿತನಯನವಿಕಾಸೈಃ** = ಮಂದಹಾಸವು, ಕಣ್ಣುಗಳ ಅರಳುವಿಕೆ ಇವುಗಳಿಂದ,
**ವಿಜ್ಞಾತಭಾವಃ** = ತಿಳಿಯಲ್ಪಟ್ಟ ಅಭಿಪ್ರಾಯವುಳ್ಳವನಾಗಿ,
**ತಸ್ಯ** = ಆ ಶ್ರೀಮಧ್ವಾಚಾರ್ಯರ,
**ಶ್ರವಸಿ** = ಕಿವಿಯಲ್ಲಿ,
**ಕಿಂ ಅಪಿ** = ಯಾವುದೋ ಒಂದು,
**ಕಾರ್ಯಂ** = ಕೆಲಸವನ್ನು,
**ಮುಖ, ಸತತಗ, ಲಕ್ಷ್ಮೀ(ಕ್ಷ್ಮೀ)ಭೂತ, ಪಾಣಿಪ್ರವಾಲಃ** = ಬಾಯಿಯ, ಶ್ವಾಸವಾಯುವಿಗೆ ಅಲಂಕಾರದಂತಿರುವ, (ಗುರಿಯಾಗಿ, ನೇರವಾಗಿ, ಅಡ್ಡವಾದ) ಕೈಯೆಂಬ ಚಿಗುರುಳ್ಳ, ಚಿಗುರೆಯಂತಹ ಕೈಯುಳ್ಳವನಾಗಿ,
**ಮಂಕ್ಷು** = ಬೇಗನೆ,
**ಮಂತ್ರಯಾಮಾಸ** = ರಹಸ್ಯವಾಗಿ ಹೇಳಿದನು.

ತಾತ್ಪರ್ಯ— ಹೀಗೆ ಆಚಾರ್ಯರು ಶಾಸ್ತ್ರಾರ್ಥ ವಿನೋದಗಳಿಂದ ಸ್ವಲ್ಪಸಮಯವನ್ನು ಕಳೆದರು. ಅಲ್ಲಿ ಅನೇಕ ಜನರು ಆಚಾರ್ಯರ ಹತ್ತಿರ ಬಂದು ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆಯಬೇಕೆಂದು ಕಾಯುತ್ತಿದ್ದರು. ಆಚಾರ್ಯರ ಪ್ರೀತಿಪಾತ್ರನಾದ ಶಿಷ್ಯನೊಬ್ಬನು ಈ ವಿಷಯವನ್ನು ಆಚಾರ್ಯರಿಗೆ ತಿಳಿಸಿ ಅವರಿಂದ ಅಪ್ಪಣೆ ಪಡೆಯಬೇಕೆಂದು ಸಮಯ ಕಾಯುತ್ತಿದ್ದನು. ಆಚಾರ್ಯರ ಹುಬ್ಬಿನ ಒಂದು ಬಗೆಯ ವಿಲಾಸದ ಚಲನದಿಂದ ಆ ಶಿಷ್ಯನು ಆಚಾರ್ಯರನ್ನು ವಿಜ್ಞಾಪಿಸಲು ಇದೇ ಸಮಯ ಎಂದು ತಿಳಿದನು. ಆಚಾರ್ಯರು ತಿರುಗಿ ಮುಗುಳ್ನಗೆಯಿಂದಲೂ, ಅರಳಿದ ಕಣ್ಣುಗಳಿಂದಲೂ ಈಗ ತಮ್ಮಲ್ಲಿ ಕಾರ್ಯವನ್ನು ವಿಜ್ಞಾಪಿಸಬಹುದೆಂದು ಸೂಚಿಸಿದರು. ಆಗ ಆ ಶಿಷ್ಯನು ಹಿಂದೆ ಹೇಳಿದಂತೆ ಆ ಯಾವುದೋ ಒಂದು ಕಾರ್ಯವನ್ನು ಆಚಾರ್ಯರ ಕಿವಿಯಲ್ಲಿ ಗುಟ್ಟಾಗಿ ಬೇಗನೆ ಬಿನ್ನಯಿಸಿದನು. ಅವನು ತಾನು ಆಚಾರ್ಯರ ಕಿವಿಯ ಹತ್ತಿರ ತನ್ನ ಬಾಯಿಯಿಂದ ಮಾತನಾಡುವಾಗ ಬಾಯಿಯ ಉಸಿರು ಆಚಾರ್ಯರ ಮೈಗೆ

ತಗುಲಬಾರದೆಂದು ಶ್ವಾಸವಾಯುವಿಗೆ ಚಿಗುರೆಲೆಯಂತಿರುವ ಕೈಯನ್ನು ಅಡ್ಡಲಾಗಿ ಹಿಡಿದಿದ್ದನು. ಅವನು ತನ್ನ ಬಾಯಿಗೆ ಅಡ್ಡಲಾಗಿ ಕೈಹಿಡಿದಿರುವುದು ಶ್ವಾಸ ವಾಯುವಿಗೆ ಒಂದು ವಿಧವಾದ ಅಲಂಕಾರ ಸಂಪತ್ತಿನಂತೆ ಕಾಣಿಸುತ್ತಿತ್ತು.

**ವಿಗ್ರಹ ಮತ್ತು ಕೋಶ—**

**ಭ್ರೂವಿಜೃಂಭಾತ್—** ಭ್ರುವಃ ವಿಜೃಂಭಃ ಭ್ರೂವಿಜೃಂಭಃ ತಸ್ಮಾತ್ ।

**ಮುಖಸತತಗಲಕ್ಷ್ಮೀಭೂತಪಾಣಿಪ್ರವಾಲಃ—**ಸತತಂ ಗಚ್ಛತೀತಿ, ಸತಗಃ, ಮುಖಸ್ಯ ಸತತಗಃ ಮುಖಸತತಗಃ, ಸತತಗಃ = ಸದಾಗತಿಃ = ವಾಯುವು, 'ಮಾತರಿಶ್ವಾ ಸದಾಗತಿಃ' ಅಮರ, ಪಾಣಿರೇವ ಪ್ರವಾಲಃ ಪಾಣಿ ಪ್ರವಾಲಃ, ಅಲಕ್ಷ್ಮೀ ಲಕ್ಷ್ಮೀ ಸಂಪದ್ಯಮಾನಃ ಲಕ್ಷ್ಮೀಭೂತಃ (ಅಲಕ್ಷಃ ಲಕ್ಷಃ ಸಂಪದ್ಯಮಾನಃ ಲಕ್ಷ್ಮೀ-ಭೂತಃ) ಮುಖಸತತಗಲಸ್ಯ ಲಕ್ಷೀಭೂತಃ ಮುಖಸತತಗಲಕ್ಷ್ಮೀಭೂತಃ, ಮುಖಸತತಗಲಕ್ಷ್ಮೀಭೂತಃ ಪಾಣಿ ಪ್ರವಾಲಃ ಯಸ್ಯ ಸಃ । ಪ್ರವಾಲ = ಹವಳ, ಚಿಗುರೆಲೆ, 'ಪ್ರವಾಲಮಂಕುರೇಪ್ಯಸ್ತ್ರೀ' ಅಮರ, ಅಂಕುರ = ಎಳೆಯ ಎಲೆ, 'ಪ್ರವಾಲೋ ವಲ್ಲಕೀದಂಡೇ ವಿದ್ರುಮೇ ನವಪಲ್ಲವೇ' ವಿಶ್ವ 'ಅಥ ವಿದ್ರುಮಃ ಪುಂಸಿ ಪ್ರವಾಲಂ ಪುಂನಪುಂಸಕಂ' ಎಂಬ ಅಮರಕೋಶಾನುಸಾರವಾಗಿ ಪ್ರವಾಲ ಶಬ್ದವು ಪುಲ್ಲಿಂಗ ನಪುಂಸಕ ಲಿಂಗಗಳೆರಡರಲ್ಲಿಯೂ ಇದೆ.

**ಸ್ಮಿತನಯನವಿಕಾಸೈಃ—** ನಯನಯೋಃ ವಿಕಾಸಾಃ ನಯನವಿಕಾಸಾಃ, ಸ್ಮಿತಂ ಚ ನಯನವಿಕಾಸಾಶ್ಚ ಸ್ಮಿತನಯನ ವಿಕಾಸಾಃ ತೈಃ ।

**ವಿಜ್ಞಾತಭಾವಃ—** ವಿಜ್ಞಾತಃ ಭಾವಃ ಯೇನ ಸಃ ವಿಜ್ಞಾತಭಾವಃ । ಭಾವಃ = ಅಭಿಪ್ರಾಯ, 'ಭಾವೋಽಭಿಪ್ರಾಯ ಆಶಯಃ' ಕೋಶ, 'ಭಾವಃ ಸತ್ತಾ ಸ್ವಭಾವಾಭಿಪ್ರಾಯಚೇಷ್ಟಾತ್ಮಜನ್ಮಸು' ಅಮರ. ಶ್ರವಃ = ಕಿವಿ, 'ಶ್ರವಸ್ ಸಕಾರಾಂತ ನಪುಂ. ''ಕರ್ಣಶಬ್ದಗ್ರಹೌ ಶ್ರೋತ್ರಂ ಶ್ರುತಿಃ ಸ್ತ್ರೀ ಶ್ರವಣಂ ಶ್ರವಃ' ಅಮರ, ಮಂಕ್ಷು (ಅವ್ಯಯ) = ಬೇಗನೆ, 'ದ್ರಾಕ್ ಮಂಕ್ಷು ಸಪದಿದ್ರುತೇ' ಅಮರ ।

**ಕ್ರಿಯಾಪದ—** ಮಂತ್ರಯಾಮಾಸ- ಮಂತ್ರಯಾಮಾಸ ಮಂತ್ರಯಾಮಾಸತುಃ ಮಂತ್ರಯಾಮಾಸುಃ, ಮಂತ್ರಯಾಮಾಸಿಥ ಇತ್ಯಾದಿ. ಮಂತ್ರಿಗುಪ್ತಭಾಷಣೇ (ಮಂತ್ರ) ಸಕ. ಸೇಟ್, ಆತ್ಮನೇಪದಿ ಲಿಟ್. ಈ ಧಾತುವಿಗೆ ಲಿಟ್ ಲಕಾರದ ''ಕೃಞ್ ಚಾನುಪ್ರಯುಜ್ಯತೇ ಲಿಟಿ'' ಎಂಬ ಸೂತ್ರದಿಂದ ಕೃ.ಭೂ. ಅಸ್‌ಧಾತುಗಳ ಅನುಪ್ರಯೋಗವು ಬರುತ್ತದೆ. ಅಸ್‌ಧಾತುವು ಪರಸ್ಮೈಪದಿಯಾದುದರಿಂದ ಈ ಧಾತುವಿನ ಲಿಟ್ ರೂಪವು ಪರಸ್ಮೈಪದಿಯಾಗುತ್ತದೆ. ಮಂತ್ರಯಾಮ್ ಎಂಬುದು ಅವ್ಯಯ. ಅದಕ್ಕೆ ಅಸ್ ಧಾತುವಿನ ಅನುಪ್ರಯೋಗ.

**ಪ್ರಯೋಗ—** ಅಭೀಷ್ಟೇನ ಭ್ರೂವಿಜೃಂಭಾತ್ ಅವಸರಂ ಅಧಿಗಮ್ಯ ಸ್ಮಿತನಯನವಿಕಾಸೈಃ ವಿಜ್ಞಾತಭಾವೇನ ತಸ್ಯ ಶ್ರವಸಿ ಕಿಂ ಅಪಿ ಕಾರ್ಯಂ ಮುಖಸತತಗಲಕ್ಷ್ಮೀಭೂತಪಾಣಿಪ್ರವಾಲೇನ ಮಂಕ್ಷು ಮಂತ್ರಯಾಮಾಸೇ ।

★ ★ ★

**ಅವತಾರಿಕಾ—** ಆ ಶಿಷ್ಯನ ವಿಜ್ಞಾಪನೆಯಂತೆ ತಮ್ಮ ದರ್ಶನಕ್ಕಾಗಿ ಬಂದವರು ಬರಬಹುದು ಎಂದು ಆಚಾರ್ಯರು ಸೂಚಿಸಿದಾಗ ಭಕ್ತರೆಲ್ಲರೂ ಮುಂದೆ ಬಂದು ವಂದಿಸಿದರು ಎಂದು ಹೇಳುತ್ತಾರೆ.

**ಪ್ರಣತಿಪರಮಕೃತ್ಯಾಃ ಸನ್ಮತೇರ್ಯೇ ಜನೌಘಾಃ**
**ವಿಬಭುರನತಿದೂರೇ ಸಂಹತಾಸ್ತಾನತೀತ್ಯ ।**
**ಅಹಮಹಮಿಕಯಾಽಽಶು ಪ್ರಾಪ್ಯ ಪಾರ್ಶ್ವಂ ಪ್ರಣೇಮು-**
**ರ್ಮಹವ ಇಹ ಗೃಹಸ್ಥಾಃ ಪೂರ್ವಸೇವಾಂ ವಿಧಾತುಮ್ ॥ 42 ॥**

**ಪದಚ್ಛೇದ—** ಪ್ರಣತಿಪರಮಕೃತ್ಯಾಃ, ಸನ್ಮತೇಃ, ಯೇ, ಜನೌಘಾಃ, ವಿಬಭುಃ, ಅನತಿದೂರೇ, ಸಂಹತಾಃ, ತಾನ್, ಅತೀತ್ಯ, ಅಹಮಹಮಿಕಯಾ, ಆಶು, ಪ್ರಾಪ್ಯ, ಪಾರ್ಶ್ವಂ, ಪ್ರಣೇಮುಃ, ಬಹವಃ, ಇಹ, ಗೃಹಸ್ಥಾಃ, ಪೂರ್ವಸೇವಾಂ, ವಿಧಾತುಂ ।

**ಅನ್ವಯ—** ಇಹ, ಬಹವಃ, ಗೃಹಸ್ಥಾಃ, ಪೂರ್ವಸೇವಾಂ, ವಿಧಾತುಂ, ಅಹಮಹಮಿಕಯಾ, ಆಶು, ಪಾರ್ಶ್ವಂ, ಪ್ರಾಪ್ಯ, ಪ್ರಣತಿಪರಮಕೃತ್ಯಾಃ, ಯೇ, ಜನೌಘಾಃ, ಸನ್ಮತೇಃ, ಅನತಿದೂರೇ, ಸಂಗತಾಃ, ವಿಬಭುಃ, ತಾನ್, ಅತೀತ್ಯ, ಪ್ರಣೇಮುಃ ।

**ಅನ್ವಯಾರ್ಥ—**

**ಇಹ** = ಈ ಸಭೆಯಲ್ಲಿ,

**ಬಹವಃ** = ಅನೇಕ ಮಂದಿ,

**ಗೃಹಸ್ಥಾಃ** = ಗೃಹಸ್ಥರು,

**ಪೂರ್ವಸೇವಾಂ** = ಎಲ್ಲರಿಗಿಂತ ಮೊದಲಿನ ನಮಸ್ಕಾರಾದಿ ಸೇವೆಯನ್ನು,

**ವಿಧಾತುಂ** = ಮಾಡುವುದಕ್ಕೆ,

**ಅಹಮಹಮಿಕಯಾ** = ನಾನು ಮೊದಲು ಸೇವೆ ಮಾಡವೆನು, ನಾನು ಮೊದಲು ಸೇವೆ ಮಾಡವೆನು ಎಂಬ ಭಾವನೆಯಿಂದ,

**ಆಶು** = ಬೇಗನೆ,

**ಪಾರ್ಶ್ವಂ** = ಆಚಾರ್ಯರ ಸಮೀಪವನ್ನು,

**ಪ್ರಾಪ್ಯ** = ಹೊಂದಿ,

**ಪ್ರಣತಿಪರಮಕೃತ್ಯಾಃ** = ನಮಸ್ಕಾರವೇ ಮುಖ್ಯಕಾರ್ಯವಾಗಿ ಉಳ್ಳ,

**ಯೇ ಜನೌಘಾಃ** = ಯಾವ ಜನರ ಸಮೂಹಗಳು,

**ಸನ್ಮತೇಃ** = ಶ್ರೀಪೂರ್ಣಪ್ರಜ್ಞರ,

**ಅನತಿದೂರೇ** = ಹತ್ತಿರದಲ್ಲಿ,

**ಸಂಗತಾಃ** = ಸೇರಿದವುಗಳಾಗಿ,

**ವಿಬಭುಃ** = ವಿರಾಜಿಸಿದವೋ,

**ತಾನ್** = ಆ ಗುಂಪುಗಳನ್ನು,

**ಅತೀತ್ಯ** = ದಾಟಿ (ಮುಂದೆ ಬಂದು),

**ಪ್ರಣೇಮುಃ** = ನಮಸ್ಕಾರ ಮಾಡಿದರು.

**ತಾತ್ಪರ್ಯ—** ಆ ಸಭಾಮಂಟಪದಲ್ಲಿ ಅನೇಕ ಸದ್ಗೃಹಸ್ಥರು ನೆರೆದಿದ್ದರು. ಅವರಲ್ಲಿ ಕೆಲವರು ಆಚಾರ್ಯರನ್ನು ಕಂಡು ನಮಸ್ಕಾರ ಮಾಡಿ ಹೋಗಬೇಕೆಂಬ ಉದ್ದೇಶವನ್ನು ಮಾತ್ರ ಇಟ್ಟುಕೊಂಡು ಬಂದಿದ್ದರು. ಆಚಾರ್ಯರ ದರ್ಶನ ಮಾಡುವವರು ಬರಬಹುದು ಎಂದು ಹೇಳಿದ ಕೂಡಲೇ ಕೇವಲ ನಮಸ್ಕಾರ ಮಾಡುವ ಉದ್ದೇಶದಿಂದ ಬಂದಿರುವ ಗೃಹಸ್ಥರು ಆಚಾರ್ಯರ ಸಮೀಪದಲ್ಲಿ ಕೆಲವು ಗುಂಪುಗಳಾಗಿ ನಿಂತುಕೊಂಡರು. ಅವರು ಒಬ್ಬೊಬ್ಬರಾಗಿ ಮುಂದೆ ಬಂದು ನಮಸ್ಕರಿಸ ಬೇಕೆಂದು ನಿರ್ಧರಿಸಿ ಸಮಯ ಕಾಯುತ್ತಿದ್ದಾಗ ಅವರಿಗಿಂತಲೂ ಹಿಂದೆ ಇದ್ದ ಮತ್ತೆ ಕೆಲವು ಮಂದಿ ಗೃಹಸ್ಥರ ಗುಂಪುಗಳು ಮುಂದೆ ಬಂದವು. ಅವರೆಲ್ಲರೂ ನಾನು ಮೊದಲು ಆಚಾರ್ಯರ ದರ್ಶನ, ಪಾದಸ್ಪರ್ಶ, ನಮಸ್ಕಾರ ಇತ್ಯಾದಿಗಳನ್ನು ಮಾಡಬೇಕು. ನಾನು ಮೊದಲು ಮಾಡಬೇಕು ಎಂಬ ಉತ್ಸಾಹದಿಂದ ಕೇವಲ ನಮಸ್ಕಾರಕ್ಕಾಗಿ ಕಾದಿದ್ದ

ಗುಂಪುಗಳನ್ನು ದಾಟಿ ಮುಂದೆ ಬಂದು ನಮಸ್ಕರಿಸಿದರು. ಹೀಗೆ ಆಚಾರ್ಯರ ಸೇವೆಯಲ್ಲಿ ಎಲ್ಲರಿಗೂ ತುಂಬಾ ಉತ್ಸಾಹ ಸಂತೋಷಗಳು ತುಂಬಿ ತುಳುಕುತ್ತಿದ್ದವು.

**ವಿಗ್ರಹ ಮತ್ತು ಕೋಶ—**

**ಪ್ರಣತಿಪರಮಕೃತ್ಯಾಃ—** ಪ್ರಣತಿಃ ಪರಮಂ ಕೃತ್ಯಂ ಯೇಷಾಂ ತೇ ಪ್ರಣತಿಪರಮಕೃತ್ಯಾಃ ।

**ಸನ್ಮತಿಃ—** ಸತೀ ಮತಿಃ ಯಸ್ಯ ಸಃ ಸನ್ಮತಿಃ ತಸ್ಯ । ಸನ್ಮತಿಃ = ನಿರ್ದೋಷವಾದ ಬುದ್ಧಿಯುಳ್ಳ (ಶ್ರೀಮಧ್ವಾಚಾರ್ಯರು)

**ಜನೌಘಃ—** ಜನಾನಾಂ ಓಘಃ ಜನೌಘಃ ।

**ಅನತಿದೂರಂ—** ಅತ್ಯಂತಂ ದೂರಂ ಅತಿದೂರಂ, ನ ಅತಿದೂರಂ ಅನತಿದೂರಂ ತಸ್ಮಿನ್ ।

**ಪೂರ್ವಸೇವಾಂ—** ಪೂರ್ವಾ ಚ ಸಾ ಸೇವಾ ಚ ಪೂರ್ವಸೇವಾ ತಂ । ಅಹಮಹಮಿಕಾ = ನಾನು ಹೆಚ್ಚು ನಾನು ಹೆಚ್ಚು ಎಂಬ ಭಾವ, 'ಅಹಮಹಮಿಕಾ ತು ಸಾ ಸ್ಯಾತ್ ಪರಸ್ಪರಂ ಯೋ ಭವತ್ಯಹಂಕಾರಃ' ಅಮರ ।

**ಕ್ರಿಯಾಪದ—** **ವಿಬಭುಃ** - ವಿ+ಬಭುಃ, ಬಭೌ ಬಭತುಃ ಬಭುಃ, ಬಭಿಥ ಬಭಾಥ ಬಭಥುಃ ಇತ್ಯಾದಿ ವಿ ಉಪಸರ್ಗ ಭಾ ದೀಪ್ತೌ ಅಕ. ಅನಿ. ಪರ ಲಿಟ್ । **ಪ್ರಣೇಮುಃ** - ಪ್ರ+ನೇಮುಃ - ಪ್ರಣೇಮುಃ, ನನಾಮ ನೇಮತುಃ ನೇಮುಃ, ನೇಮಿಥ ನನಂಥ ನೇಮಥುಃ ನೇಮ, ನನಾಮ-ನನಮ ನೇಮಿವ ನೇಮಿಮ । ಣಮು (ನಮ್) ಪ್ರಹ್ವತ್ವೇ ಶಬ್ದೇ ಚ, ಸಕ ಅನಿ ಪರ. ಪ್ರಥಮಪುರುಷೇ ಬಹುವಚನಂ ।

**ಪ್ರಯೋಗ—** ಇಹ ಬಹುಭಿಃ ಗೃಹಸ್ಥೈಃ ಪೂರ್ವಸೇವಾಂ ವಿಧಾತುಂ ಅಹಮಹಮಿಕಯಾ ಆಶು ಪಾರ್ಶ್ವಂ ಪ್ರಾಪ್ಯ ಪ್ರಣತಿಪರಮಕೃತ್ಯೈಃ ಯೈಃ ಜನೌಘೈಃ ಸನ್ಮತೇಃ ಅನತಿದೂರೇ ಸಂಗತೈಃ ವಿಬಭೇ ತಾನ್ ಅತೀತ್ಯ ಪ್ರಣೇಮೇ ।

★ ★ ★

**ಅವತಾರಿಕಾ—** ವಂದಿಸಿದ ಜನರನ್ನು ಆಚಾರ್ಯರು ಅಭಿನಂದಿಸಿದರೆಂದು ಹೇಳುತ್ತಾರೆ.

**ವಿವಿಧಜನಪದಸ್ಥಾಃ ಪ್ರಾಕ್ ಶ್ರುತೇಭ್ಯೋ ಗುಣೇಭ್ಯಃ**
**ಶತಗುಣಗುಣಮೇನಂ ವಿಸ್ಮಿತಾ ವೀಕ್ಷಮಾಣಾಃ ।**
**ಮುಕುಲಿತಕರಪದ್ಮಾ ಆಸ್ಯತಾಮಿತ್ಯವಾಪ್ತಾಃ**
**ಪ್ರಚುರತರಹೃದಾ ಸಂಭಾವಯಾಂಚಕ್ರಿರೇಽನ್ಯೇ ॥ 43 ॥**

**ಪದಚ್ಛೇದ—** ವಿವಿಧಜನಪದಸ್ಥಾಃ, ಪ್ರಾಕ್, ಶ್ರುತೇಭ್ಯಃ, ಗುಣೇಭ್ಯಃ, ಶತಗುಣಗುಣಂ, ಏನಂ, ವಿಸ್ಮಿತಾಃ, ವೀಕ್ಷಮಾಣಾಃ, ಮುಕುಲಿತಕರಪದ್ಮಾಃ, ಆಸ್ಯತಾಂ, ಇತಿ ಅವಾಪ್ತಾಃ, ಪ್ರಚುರತರಹೃದಾ, ಸಂಭಾವಯಾಂಚಕ್ರಿರೇ, ಅನ್ಯೇ ।

**ಅನ್ವಯ—** ಅವಾಪ್ತಾಃ, ವಿವಿಧಜನಪದಸ್ಥಾಃ, ಅನ್ಯೇ, ಪ್ರಾಕ್, ಶ್ರುತೇಭ್ಯಃ, ಗುಣೇಭ್ಯಃ, ಶತಗುಣಗುಣಂ, ಏನಂ, ವೀಕ್ಷಮಾಣಾಃ, ವಿಸ್ಮಿತಾಃ, ಮುಕುಲಿತಕರಪದ್ಮಾಃ, ಪ್ರಚುರತರಹೃದಾ, ಆಸ್ಯತಾಂ, ಇತಿ, ಸಂಭಾವಯಾಂಚಕ್ರಿರೇ ।

**ಅನ್ವಯಾರ್ಥ—**

**ಅವಾಪ್ತಾಃ** = ಆಚಾರ್ಯರನ್ನು ನೋಡಲು ಹತ್ತಿರ ಬಂದ,

**ವಿವಿಧಜನಪದಸ್ಥಾಃ** = ಅನೇಕ ವಿಧವಾದ ಗ್ರಾಮಗಳಲ್ಲಿರುವ,

**ಅನ್ಯೇ** = ಇತರ ಜನರೂ,

ಪ್ರಾಕ್ = ಹಿಂದೆ,

ಶ್ರುತೇಭ್ಯಃ = ಕೇಳಿರುವ,

ಗುಣೇಭ್ಯಃ = ಗುಣಗಳಿಗಿಂತ,

ಶತಗುಣಗುಣಂ = ನೂರು ಪಾಲು ಹೆಚ್ಚು ಗುಣಗಳುಳ್ಳ,

ಏನಂ = ಈ ಶ್ರೀಮಧ್ವಾಚಾರ್ಯರನ್ನು,

ವೀಕ್ಷಮಾಣಾಃ (ಸಂತಃ) = ನೋಡುತ್ತಿರುವವರಾಗಿ,

ವಿಸ್ಮಿತಾಃ = ಆಶ್ಚರ್ಯಗೊಂಡವರಾಗಿ,

ಮುಕುಲಿತಕರಪದ್ಮಾಃ = ಜೋಡಿಸಿದ, (ಸಂತಃ) ಕಮಲದಂತಿರುವ ಕೈ ಉಳ್ಳವರಾಗಿ,

ಪ್ರಚುರತರಹೃದಾ = ಶ್ರೀಪೂರ್ಣಪ್ರಜ್ಞಾಚಾರ್ಯರಿಂದ,

ಆಸ್ಯತಾಂ = ಕುಳಿತುಕೊಳ್ಳೋಣವಾಗಲಿ,

ಇತಿ = ಎಂಬುದಾಗಿ,

ಸಂಭಾವಯಾಂಚಕ್ರಿರೇ = ಸನ್ಮಾನಿಸಲ್ಪಟ್ಟರು.

**ತಾತ್ಪರ್ಯ—** ಅಲ್ಲಿಗೆ ಅನೇಕ ಗ್ರಾಮಗಳಿಂದ ಮತ್ತು ದೇಶಗಳಿಂದ ಜನರು ಬಂದಿದ್ದರು. ಅವರು ಆಚಾರ್ಯರ ಗುಣಗಳನ್ನು ಹಿಂದೆ ಕೇಳಿ ತಿಳಿದಿದ್ದರು. ಆದರೆ ಹಿಂದೆ ಕೇಳಿ ತಿಳಿದ ಗುಣಗಳಿಗಿಂತ ನೂರು ಪಾಲು ಹೆಚ್ಚು ಗುಣಗಳು ಆಚಾರ್ಯರಲ್ಲಿ ಅವರಿಗೆ ಕಂಡುಬಂದವು. ಅವರು ಆಶ್ಚರ್ಯಪಟ್ಟು ಆಚಾರ್ಯರನ್ನು ನೋಡುತ್ತಾ ನಿಂತರು. ಕರಕಮಲ ಗಳನ್ನು ಮೊಗ್ಗಿನಂತೆ ಮಾಡಿಕೊಂಡು ಕೈಮುಗಿದರು. ಆಗ ಆಚಾರ್ಯರು ಆ ಜನರನ್ನು ಕುರಿತು, ಕುಳಿತುಕೊಳ್ಳಿರಿ ಎಂದು ಹೇಳಿ ಸನ್ಮಾನಿಸಿದರು.

**ವಿಗ್ರಹ ಮತ್ತು ಕೋಶ—**

**ವಿವಿಧಜನಪದಸ್ಥಾಃ—** ವಿವಿಧಾಶ್ಚ ತೇ ಜನಪದಾಶ್ಚ ವಿವಿಧಜನಪದಾಃ, ವಿವಿಧಜನಪದೇಷು ತಿಷ್ಠಂತೀತಿ ವಿವಿಧಜನಪದಸ್ಥಾಃ । ಜನಪದಃ = ದೇಶ, 'ನೀವೃಜ್ಜನಪದೋ ದೇಶವಿಷಯೌ ತೂಪವರ್ತನಂ' ಅಮರ ।

**ಶತಗುಣಗುಣಂ—** ಶತಂ ಗುಣಾಃ ಯೇಷಾಂ ತೇ ಶತಗುಣಾಃ, ಶತಗುಣಾಃ ಗುಣಾಃ ಯಸ್ಯ ಸಃ ಶತಗುಣ-ಗುಣಃ ತಂ ।

**ಮುಕುಲಿತಕರಪದ್ಮಾಃ—** ಕರಾ ಏವ ಪದ್ಮಾನಿ ಕರಪದ್ಮಾನಿ, ಮುಕುಲಿತಾನಿ ಕರಪದ್ಮಾನಿ ಯೇಷಾಂ ತೇ ಮುಕುಲಿತಕರಪದ್ಮಾಃ ।

**ಪ್ರಚುರತರಹೃದಾ—** ಅತಿಶಯೇನ ಪ್ರಚುರಂ ಪ್ರಚುರತರಂ, ಪ್ರಚುರತರಂ ಹೃತ್ ಯಸ್ಯ ಸಃ ಪ್ರಚುರತರ ಹೃತ್ ತೇನ ।

**ಪ್ರಯೋಗ—** ಅವಾಪ್ತಾನ್ ವಿವಿಧಜನಪದಸ್ಥಾನ್ ಅನ್ಯಾನ್ ಪ್ರಾಕ್ ಶ್ರುತೇಭ್ಯಃ ಗುಣೇಭ್ಯಃ ಶತಗುಣಗುಣಂ ಏನಂ ವೀಕ್ಷಮಾಣಾನ್ ವಿಸ್ಮಿತಾನ್ ಮುಕುಲಿತಕರಪದ್ಮಾನ್ ಪ್ರಚುರತರಹೃತ್ ಯೂಯಂ ಆಧ್ವಂ ಇತಿ ಸಂಭಾವಯಾಂಚಕ್ರೇ (ಕರ್ತರಿ) ।

★ ★ ★

**ಅವತಾರಿಕಾ—** ಆಗ ಪಾಠಕ್ಕಾಗಿ ಶಿಷ್ಯರನ್ನು ಕರೆಯುವ ಸಂಭ್ರಮವನ್ನು ವರ್ಣಿಸುತ್ತಾರೆ.

**ಅಲಮಲಮನುವಾದೇನಾನುವಾಚ್ಯೇತ ಪಶ್ಚಾತ್**
**ನನು ಗುರವ ಇದಾನೀಮುದ್ಯತಾ ಹಿ ಪ್ರವಕ್ತುಮ್ ।**
**ನ ಮನನಮಧುನಾ ದ್ರಾಗಾವ್ರಜೇತ್ಯಾಹ್ವಯತ್ತಾಂ-**
**ಚ್ಛ್ರುತಪರಿಚಯಸಕ್ತಾಂಚ್ಛ್ರಾವಕಾಂಚ್ಛ್ರಾವಕಾಗ್ರ್ಯಃ ॥ 44 ॥**

**ಪದಚ್ಛೇದ—** ಅಲಂ, ಅಲಂ, ಅನುವಾದೇನ, ಅನುವಾಚ್ಯೇತ, ಪಶ್ಚಾತ್, ನನು, ಗುರವಃ, ಇದಾನೀಂ, ಉದ್ಯತಾಃ, ಹಿ, ಪ್ರವಕ್ತುಂ, ನ, ಮನನಂ, ಅಧುನಾ, ದ್ರಾಕ್, ಆವ್ರಜ, ಇತಿ, ಆಹ್ವಯತ್, ತಾನ್, ಶ್ರುತಪರಿಚಯಸಕ್ತಾನ್, ಶ್ರಾವಕಾನ್, ಶ್ರಾವಕಾಗ್ರ್ಯಃ ।

**ಅನ್ವಯ—** ಅನುವಾದೇನ, ಅಲಂ, ಅಲಂ, ಪಶ್ಚಾತ್, ಅನುವಾಚ್ಯೇತ, ಮನನಂ, ಅಧುನಾ, ನ, ಗುರವಃ, ಇದಾನೀಂ, ಪ್ರವಕ್ತುಂ, ಉದ್ಯತಾಃ, ನನು, ಹಿ, ದ್ರಾಕ್, ಆವ್ರಜ, ಇತಿ, ಶ್ರಾವಕಾಗ್ರ್ಯಃ, ಶ್ರುತಪರಿಚಯಸಕ್ತಾನ್, ತಾನ್, ಶ್ರಾವಕಾನ್, ಆಹ್ವಯತ್ ।

**ಅನ್ವಯಾರ್ಥ—**

**ಅನುವಾದೇನ** = ಅನುವಾದದಿಂದ (ಅನುವಾದ ಕೇಳಿದ ಗ್ರಂಥವನ್ನು ಮತ್ತು ಓದಿ ಚಿಂತನಮಾಡಿ, ತಿರುಗಿ ಉಚ್ಚರಿಸುವುದು),

**ಅಲಂ ಅಲಂ** = ಸಾಕು ಸಾಕು,

**ಪಶ್ಚಾತ್** = ಅನಂತರ,

**ಅನುವಾಚ್ಯೇತ** = ಅನುವಾದ ಮಾಡಲ್ಪಡಬಹುದು,

**ಮನನಂ** = ಚಿಂತನೆಯೂ,

**ಅಧುನಾ** = ಈಗ,

**ನ** = ಇಲ್ಲ (ಬೇಡ),

**ಗುರವಃ** = ಗುರುಗಳು,

**ಇದಾನೀಂ** = ಈಗ,

**ಪ್ರವಕ್ತುಂ** = ವ್ಯಾಖ್ಯಾನ ಮಾಡುವುದಕ್ಕೆ,

**ಉದ್ಯತಾಃ ನನು** = ಉದ್ಯುಕ್ತರಾಗಿದ್ದಾರಷ್ಟೇ,

**ಹಿ** = ಆದುದರಿಂದ,

**ದ್ರಾಕ್** = ಬೇಗನೆ,

**ಆವ್ರಜ** = ಬಾ,

**ಇತಿ** = ಹೀಗೆಂದು,

**ಶ್ರಾವಕಾಗ್ರ್ಯಃ** = ಮುಖ್ಯ ಶಿಷ್ಯನು,

**ಶ್ರುತ ಪರಿಚಯ ಸಕ್ತಾನ್** = ಕೇಳಲ್ಪಟ್ಟ ಗ್ರಂಥದ, ಅಭ್ಯಾಸದಲ್ಲಿ, ಆಸಕ್ತರಾದ,

**ತಾನ್ ಶ್ರಾವಕಾನ್** = ಆ ಶ್ರೋತೃಗಳನ್ನು,

**ಆಹ್ವಯತ್** = ಕರೆದನು.

**ತಾತ್ಪರ್ಯ—** ಅನಂತರ ಶ್ರೀಮಧ್ವಾಚಾರ್ಯರು ಪ್ರವಚನ ಮಾಡಲು ಉದ್ಯುಕ್ತರಾದರು. ಆ ಸಮಯದಲ್ಲಿ ಆಚಾರ್ಯರ ಶಿಷ್ಯರಲ್ಲಿ ಕೆಲವರು ಹಿಂದೆ ಓದಿದ ಗ್ರಂಥವನ್ನು ಅನುವಾದ ಮಾಡಿ ಸಹಪಾಠಿಗಳಿಗೆ ಹೇಳುತ್ತಿದ್ದರು. ಕೆಲವರು ಚಿಂತನೆ ಮಾಡುತ್ತಿದ್ದರು. ಆಚಾರ್ಯರ ಶಿಷ್ಯರಲ್ಲಿ ಹಿರಿಯನೊಬ್ಬನು ಅವರ ಬಳಿಗೆ ಹೋಗಿ ಹೀಗೆ ಹೇಳಲಾರಂಭಿಸಿದನು. ಎಲೈ ಗೆಳೆಯನೇ ಈಗ ಗ್ರಂಥಗಳ ಅನುವಾದ ಸಾಕು, ಪಾಠ ಆದ ಮೇಲೆ ಅನುವಾದ ಮಾಡಿಕೊಳ್ಳಬಹುದು. ಈಗ ಮನನವೂ ಬೇಡ, ಈಗ ಗುರುಗಳು ಪ್ರವಚನ ಮಾಡಲು ಪ್ರಾರಂಭಿಸುತ್ತಿದ್ದಾರೆ. ಬೇಗನೇ ಬಾ, ನೀನೂ ಬೇಗನೇ ಬಾ ಪಾಠ ಕೇಳೋಣ ಎಂದು ಆ ಹಿರಿಯ ಶಿಷ್ಯನು ಅಭ್ಯಾಸ ನಿರತರಾದ ಇತರ ಶಿಷ್ಯರನ್ನು ಕರೆದನು.

**ವಿಗ್ರಹ ಮತ್ತು ಕೋಶ—**

**ಅಲಂ ಅಲಂ—** ಅನುವಾದೇನ ಅಲಂ ಅಲಂ ಎಂಬಲ್ಲಿ ಸಂಭ್ರಮದಲ್ಲಿ ದ್ವಿರುಕ್ತಿ. ಅಲಂ = ಸಾಕು, 'ಅಲಂ ಭೂಷಣಪರ್ಯಾಪ್ತಿ ಶಕ್ತಿವಾರಣವಾಚಕಂ' ಅಮರ. ಇಲ್ಲಿ ''ಗಮ್ಯಮಾನಾಪಿ ಕ್ರಿಯಾಕಾರಕ ವಿಭಕ್ತೌ ಪ್ರಯೋಜಿಕಾ'' ಎಂಬ ವಚನದಿಂದ ಅನುವಾದೇನ ಸಾಧ್ಯಂ ನಾಸ್ತಿ ಅನುವಾದದಿಂದ ಆಗ ಸಾಧಿಸ-ಬೇಕಾದ್ದಿಲ್ಲ ಎಂದು ಅಧ್ಯಾಹೃತವಾದ ಸಾಧನ ಕ್ರಿಯೆಯನ್ನು ಕುರಿತು ಅನುವಾದವು ಕರಣ-ವಾದುದರಿಂದ ತೃತೀಯಾ ವಿಭಕ್ತಿಯು ಬಂದಿದೆ.

**ಶ್ರುತಪರಿಚಯಸಕ್ತಾನ್—** ಶ್ರುತಸ್ಯ ಪರಿಚಯಃ ಶ್ರುತ ಪರಿಚಯಃ, ಶ್ರುತಪರಿಚಯೇ ಸಕ್ತಾಃ ಶ್ರುತಪರಿಚಯ ಸಕ್ತಾಃ, ತಾನ್ ।

**ಶ್ರಾವಕಾಗ್ರ್ಯಃ—** ಶ್ರಾವಕೇಷು ಅಗ್ರ್ಯಃ ಶ್ರಾವಕಾಗ್ರ್ಯಃ ।

**ಪ್ರಯೋಗ—** ಅನುವಾದೇನ ಅಲಂ ಅಲಂ, ತ್ವಂ ಪಶ್ಚಾತ್ ಅನುವಾಚಯೇಃ, ಅಧುನಾ ಮನನೇನ ನ ಭೂಯತೇ, ದ್ರಾಕ್ ಆವ್ರಜ್ಯತಾಂ, ಇತಿ ಶ್ರುತಪರಿಚಯಸಕ್ತಾಃ ಶ್ರಾವಕಾಃ ಶ್ರಾವಕಾಗ್ರ್ಯೇಣ ಆಹೂಯಂತ !

**ವ್ಯಾಕರಣ ವಿಶೇಷ—** ಈ ಶ್ಲೋಕದ ಛಲಾರಿ ಟೀಕೆಯಲ್ಲಿ ಸಹಸ್ರಶ್ರೋತಃ! ಸಹಸ್ರಶ್ರೋತೃ ಎಂಬ ಗೆಳೆಯನೇ! ಎಂದು ಸಂಬೋಧನೆ ಮಾಡಿ ಆಚಾರ್ಯರ ಶಿಷ್ಯ ಶ್ರೇಷ್ಠನು ತನ್ನ ಸಹಪಾಠಿಯನ್ನು ಕರೆದನು ಎಂದು ಹೇಳಿದ್ದಾರೆ. ಆದರೆ ಸಹಸ್ರಶ್ರೋತಃ ಎಂಬ ಪದವು ಮೂಲದಲ್ಲಿಲ್ಲ.

**ಕ್ರಿಯಾಪದ— ಅನುವಾಚ್ಯೇತ** - ಅನು+ವಾಚ್ಯೇತ ವಾಚ್ಯೇಯಾತಾಂ ವಾಚ್ಯೇರನ್, ವಾಚ್ಯೇಥಾಃ ವಾಚ್ಯೇಯಾಥಾಂ ವಾಚ್ಯೇಧ್ವಂ, ವಾಚ್ಯೇಯ ವಾಚ್ಯೇವಹಿ ವಾಚ್ಯೇಮಹಿಃ । ಅನು ಉಪಸರ್ಗಪೂರ್ವಕ ವಚ ಪರಿಭಾಷಣೇ ಅಥವಾ (ಬ್ರೂಞ್ ವ್ಯಕ್ತಾಯಾಂ ವಾಚಿ) ವಿಧಿಲಿಙ್ ಣಿಜಂತ ಆತ್ಮನೇ ಪದ.

**ಆವ್ರಜ** - ಆ+ವ್ರಜ, ವ್ರಜತು-ವ್ರಜತಾತ್ ವ್ರಜತಾಂ ವ್ರಜಂತು ಇತ್ಯಾದಿ. ಆಙ್ ಉಪಸರ್ಗ ವ್ರಜಗತೌ ಪರಸ್ಮೈಪದೀ, ಲೋಟ್ ಮಧ್ಯಮಪುರುಷ ಏಕವಚನ,

**ಆಹ್ವಯತ್** - ಅಹ್ವಯತ್ ಆಹ್ವಯತಾಂ ಅಹ್ವಯನ್, ಅಹ್ವಯಃ ಅಹ್ವಯತಂ ಅಹ್ವಯತ ಇತ್ಯಾದಿ ಹ್ವೇಞ್ ಸ್ಪರ್ಧಾಯಾಂ ಶಬ್ದೇಚ, ಉಭಯಪದೀ, ಪ್ರಕೃತೇ ಪರಸ್ಮೈಪದೀ ಅನದ್ಯತನಭೂತೇ ಲಙ್ ।

★ ★ ★

ಅವತಾರಿಕಾ— ಆಚಾರ್ಯರ ಪ್ರವಚನವನ್ನು ಕೇಳಿದಾಗ ಜನರಿಗೆ ಆದ ಆನಂದವನ್ನು ವಿವರಿಸುತ್ತಾರೆ.

**ಅಧಿಕಧಿಷಣಮೇನಂ ವ್ಯಾಖ್ಯಯಾ ಶೋಭಮಾನಂ**
**ಹರಿಮಿವ ಕವಿವರ್ಯಂ ಸತ್ಯವತ್ಯಾಸ್ತನೂಜಮ್ ।**
**ಸತತಮನಿಮಿಷಂ ಸಂದೃಶ್ಯ ಸಾನಂದಚಿತ್ತಾಃ**
**ಸಮಯಮಪಿ ಗತಂ ಸಂವಿದ್ರತೇ ನ ಸ್ಮ ಲೋಕಾಃ ॥ 45 ॥**

**ಪದಚ್ಛೇದ**— ಅಧಿಕಧಿಷಣಂ, ಏನಂ, ವ್ಯಾಖ್ಯಯಾ, ಶೋಭಮಾನಂ, ಹರಿಂ, ಇವ, ಕವಿವರ್ಯಂ, ಸತ್ಯವತ್ಯಾಃ, ತನೂಜಂ, ಸತತಂ, ಅನಿಮಿಷಂ, ಸಂದೃಶ್ಯ, ಸಾನಂದಚಿತ್ತಾಃ, ಸಮಯಂ, ಅಪಿ, ಗತಂ, ಸಂವಿದ್ರತೇ, ನ, ಸ್ಮ, ಲೋಕಾಃ ।

**ಅನ್ವಯ**— ಲೋಕಾಃ, ವ್ಯಾಖ್ಯಯಾ, ಶೋಭಮಾನಂ, ಕವಿವರ್ಯಂ, ಸತ್ಯವತ್ಯಾಃ, ತನೂಜಂ, ಹರಿಂ, ಇವ, ಏನಂ, ಅಧಿಕಧಿಷಣಂ, ಸತತಂ, ಅನಿಮಿಷಂ, ಸಂದೃಶ್ಯ, ಸಾನಂದಚಿತ್ತಾಃ, ಸಂತಃ, ಗತಂ, ಸಮಯಮಪಿ, ನ, ಸಂವಿದ್ರತೇ, ಸ್ಮ ।

**ಅನ್ವಯಾರ್ಥ**—

**ಲೋಕಾಃ** = ಜನರು,
**ವ್ಯಾಖ್ಯಯಾ** = ಪ್ರವಚನದಿಂದ,
**ಶೋಭಮಾನಂ** = ಪ್ರಕಾಶಿಸುತ್ತಿರುವ,
**ಕವಿವರ್ಯಂ** = ಜ್ಞಾನಿಗಳಲ್ಲಿ ಶ್ರೇಷ್ಠರಾದ,
**ಸತ್ಯವತ್ಯಾಃ** = ಸತ್ಯವತೀದೇವಿಯ,
**ತನೂಜಂ** = ಮಗನಾದ,
**ಹರಿಂ ಇವ** = ಶ್ರೀವೇದವ್ಯಾಸರಂತಿರುವ,
**ಏನಂ** = ಇಂತಹ,
**ಅಧಿಕಧಿಷಣಂ** = ಶ್ರೀಪೂರ್ಣಪ್ರಜ್ಞಾಚಾರ್ಯರನ್ನು,
**ಸತತಂ** = ನಿರಂತರವಾಗಿ,
**ಅನಿಮಿಷಂ** = ರೆಪ್ಪೆಮುಚ್ಚದೆ,
**ಸಂದೃಶ್ಯ** = ನೋಡಿ,
**ಸಾನಂದಚಿತ್ತಾಃ** = ಸಂತುಷ್ಟವಾದ ಮನಸ್ಸುಳ್ಳವರಾಗಿ,
**ಗತಂ** = ಕಳೆದುಹೋದ,
**ಸಮಯಂ ಅಪಿ** = ಕಾಲವನ್ನೂ ಕೂಡ,
**ನ ಸಂವಿದ್ರತೇ** = ತಿಳಿಯಲಿಲ್ಲ.

**ತಾತ್ಪರ್ಯ**— ಸತ್ಯವತೀ ದೇವಿಯ ಮಗನಾಗಿ ಅವತರಿಸಿದ ಜ್ಞಾನಿಶ್ರೇಷ್ಠರಾದ ಶ್ರೀವೇದವ್ಯಾಸರು ಪ್ರವಚನ ಮಾಡುವಾಗ ಹೇಗೆ ಶೋಭಿಸುತ್ತಿದ್ದರೋ ಅದರಂತೆ ಪ್ರವಚನ ಮಾಡುತ್ತಿರುವ ಜ್ಞಾನಿಶ್ರೇಷ್ಠರಾದ ಆಚಾರ್ಯರು ಶೋಭಿಸುತ್ತಿದ್ದರು. ಅಲ್ಲಿ ಸೇರಿದ ಜನರು ರೆಪ್ಪೆ ಮುಚ್ಚದೆ ಎಡೆಬಿಡದೆ ಆಚಾರ್ಯರನ್ನು ನೋಡಿ ಮನಸ್ಸಿನಲ್ಲಿ ತುಂಬಾ ಸಂತೋಷಪಟ್ಟರು. ಅವರಿಗೆ ಅಲ್ಲಿ ಸಮಯ ಕಳೆದುದು ಗೊತ್ತಾಗಲೇ ಇಲ್ಲ. ಆಚಾರ್ಯರ ಪ್ರವಚನ ಮಾಧುರ್ಯ ಆಚಾರ್ಯರ ದೇಹಸೌಂದರ್ಯ ಇವೆರಡೂ ಕೇಳುವವರ ಮತ್ತು ನೋಡುವವರ ಕಿವಿ ಕಣ್ಣುಗಳನ್ನು ಮನಸ್ಸನ್ನು ಸೆಳೆದು ಬಿಟ್ಟಿತು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ಅಧಿಕಧಿಷಣಃ—** ಅಧಿಕಾ ಧಿಷಣಾ ಯಸ್ಯ ಸಃ ಅಧಿಕಧಿಷಣಃ ತಂ । ಅಧಿಕಧಿಷಣಃ = ಪೂರ್ಣವಾದ ಬುದ್ಧಿಯುಳ್ಳ (ಪೂರ್ಣಪ್ರಜ್ಞರು) ಧಿಷಣಾ = ಪ್ರಜ್ಞೆ, ಸರಿಯಾದ ತಿಳುವಳಿಕೆ, 'ಬುದ್ಧಿರ್ಮನೀಷಾ ಧಿಷಣಾ ಧೀಃ ಪ್ರಜ್ಞಾಶೇಮುಷೀ ಮತಿಃ' ಅಮರ.

**ಕವಿವರ್ಯಃ—** ಕವಿಷು ವರ್ಯಃ ಕವಿವರ್ಯಃ ತಂ ।

**ತನೂಜಃ—** ತನ್ವಾಃ ಜಾಯತೇ ಇತಿ ತನೂಜಃ ತಂ ।

**ಅನಿಮಿಷಂ—** ನ ವಿದ್ಯತೇ ನಿಮೇಷಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಅನಿಮಿಷಂ । ಕ್ರಿಯಾ ವಿಶೇಷಣ ಬಹುವ್ರೀಹಿ.

**ಸಾನಂದಚಿತ್ತಾಃ—** ಆನಂದೇನ ಸಹ ವರ್ತತೇ ಇತಿ ಸಾನಂದಂ, ಸಾನಂದಂ ಚಿತ್ತಂ ಯೇಷಾಂ ತೇ ಸಾನಂದಚಿತ್ತಾಃ ।

**ಕ್ರಿಯಾಪದ— ಸಂವಿದ್ರತೇ** - ಸಂ+ವಿದ್ರತೇ, (ವಿದತೇ), ಸಂವಿತ್ತೇ ಸಂವಿದಾತೇ ಸಂವಿದ್ರತೇ (ಸಂವಿದತೇ), ಸಂವಿತ್ಸೇ ಸಂವಿದಾಥೇ ಸಂವಿದ್‌ಧ್ವೇ, ಸಂವಿದೇ ಸಂವಿದ್ವಹೇ ಸಂವಿದ್ಮಹೇ । ವಿದ ಜ್ಞಾನೇ, ಸಕರ್ಮಕ ಸೇಟ್ ಪರಸ್ಮೈಪದೀ, ಸಂ ಉಪಸರ್ಗ ಬಂದಾಗ ಸಮೋ ಗಮ್ಯೃಚ್ಛಿ... (1-3-29) ಎಂಬ ಸೂತ್ರದಲ್ಲಿರುವ ವಿದಿಪ್ರಚ್ಛಿಸ್ವರತೀನಾಂ ಉಪಸಂಖ್ಯಾನಂ (ವಾ 918) ಎಂಬ ವಾರ್ತಿಕದಿಂದ ಆತ್ಮನೇಪದ. ಇಲ್ಲಿ ವಿದಿ ಎಂದರೆ ಅದಾದಿಗಣದ ಲುಗ್‌ವಿಕರಣದ, ವಿದಜ್ಞಾನೇ ಎಂಬ ಧಾತುವನ್ನೇ ಇಟ್ಟುಕೊಳ್ಳಬೇಕು. 'ಸಂ' ಉಪಸರ್ಗಪೂರ್ವಕವಾದ ಈ ಧಾತುವಿನ ಲಟ್ ಪ್ರಥಮಪುರುಷೇ ಬಹುವಚನ ದಲ್ಲಿ, ವೇತ್ತೇರ್ವಿಭಾಷಾ (7-1-7) ಎಂಬ ಸೂತ್ರದಿಂದ ಸಂವಿದ್+ಅತೇ ಎಂದಿರುವಾಗ ಅಕಾರಕ್ಕೆ ರುಟ್ ಆಗಮವು ವಿಕಲ್ಪದಿಂದ ಬಂದು ಸಂವಿದ್ರತೇ ಎಂಬ ರೂಪವಾಗುತ್ತದೆ. ರುಟ್ ಬಾರದೇ ಇದ್ದಾಗ ಸಂವಿದತೇ ಎಂದು ರೂಪವಾಗುತ್ತದೆ. ಭಾವಪ್ರಕಾಶಿಕಾದಲ್ಲಿ ಹೀಗೆಯೇ ಹೇಳಿದ್ದಾರೆ. ಸಂವಿಂದತೇ ಎಂಬ ಪಾಠದಲ್ಲಿ ವಿದ ವಿಚಾರಣೇ ಎಂಬ ರುಧಾದಿ ಧಾತು ವನ್ನು (1450) ಇಟ್ಟುಕೊಳ್ಳಬೇಕು. ಆದರೆ ಆಗ ಭಾವಪ್ರಕಾಶಿಕಾ ವ್ಯಾಖ್ಯಾನಕ್ಕೆ ವಿರೋಧ ಬರುತ್ತದೆ ಮತ್ತು ಸಮಯವನ್ನು ವಿಚಾರ ಮಾಡಲಿಲ್ಲ ಎಂಬ ಬೇರೆ ಅರ್ಥವೂ ಆಗುತ್ತದೆ. ಆದುದರಿಂದ ಸಂವಿದತೇ ಎಂಬ ಪಾಠವು ಸರಿಯಲ್ಲವೆಂದು ತೋರುತ್ತದೆ. ಇಲ್ಲಿ 'ಲಟ್‌ಸ್ಮೇ' ಎಂಬ ಸೂತ್ರದಿಂದ ವರ್ತಮಾನ ಕಾಲಕ್ಕೆ ಭೂತಕಾಲದ ಅರ್ಥ ಬಂದಿದೆ.

**ಪ್ರಯೋಗ—** ಲೋಕೈಃ (ಜನರಿಂದ) ವ್ಯಾಖ್ಯಯಾ ಶೋಭಮಾನಂ ಕವಿವರ್ಯಂ ಸತ್ಯವತ್ಯಾಃ ತನೂಜಂ ಹರಿಂ ಇವ ಏನಂ ಅಧಿಕಧಿಷಣಂ ಸತತಂ ಅನಿಮಿಷಂ ಸಂದೃಶ್ಯ ಸಾನಂದಚಿತ್ತೈಃ ಗತಃ ಸಮಯಃ ಅಪಿ ನ ವಿದ್ಯತೇಸ್ಮ (ತಿಳಿಯಲ್ಪಡುತ್ತಿರಲಿಲ್ಲ) ।

★ ★ ★

**ಅವತಾರಿಕಾ—** ಮಹಾಕಾವ್ಯದಲ್ಲಿ ವರ್ಣಿಸಬೇಕಾದ ಸೂರ್ಯಾಸ್ತಮಯವನ್ನು ಈಗ ವರ್ಣಿಸುತ್ತಾರೆ.

**ಉದಯಮಿತ ಇವಾಸ್ತಂ ಯಂಶ್ಚ ಭಾನುರ್ಬಭಾಸೇ**
**ಸ್ಫುಟಮಕಲುಷರೂಪೋ ದರ್ಶನೀಯೋಽನುರಾಗೀ ।**
**ಶುಚಿ ಹರಿಪದಮಾಪತ್ಸಂಪದೋರಾಶ್ರಿತಾನಾಂ**
**ನ ಹಿ ಭವತಿ ವಿಶೇಷಃ ಸ್ವಪ್ರಕಾಶೋನ್ನತಾನಾಮ್ ॥ 46 ॥**

**ಪದಚ್ಛೇದ—** ಉದಯಂ, ಇತಃ, ಇವ, ಅಸ್ತಂ, ಯನ್, ಚ, ಭಾನುಃ, ಬಭಾಸೇ, ಸ್ಫುಟಂ, ಅಕಲುಷರೂಪಃ, ದರ್ಶನೀಯಃ, ಅನುರಾಗೀ, ಶುಚಿ, ಹರಿಪದಂ, ಆಪತ್ಸಂಪದೋಃ, ಆಶ್ರಿತಾನಾಂ, ನ, ಹಿ, ಭವತಿ, ವಿಶೇಷಃ, ಸ್ವಪ್ರಕಾಶೋನ್ನತಾನಾಂ।

**ಅನ್ವಯ—** ಅಕಲುಷರೂಪಃ, ದರ್ಶನೀಯಃ, ಅನುರಾಗೀ, ಭಾನುಃ, ಅಸ್ತಂ, ಯನ್, ಚ, ಉದಯಂ, ಇತಃ, ಇವ, ಸ್ಫುಟಂ, ಬಭಾಸೇ, ಶುಚಿ, ಹರಿಪದಂ, ಆಶ್ರಿತಾನಾಂ, ಸ್ವಪ್ರಕಾಶೋನ್ನತಾನಾಂ, ಆಪತ್ಸಂಪದೋಃ, ವಿಶೇಷಃ, ನ, ಭವತಿ, ಹಿ ।

**ಅನ್ವಯಾರ್ಥ—**

**ಅಕಲುಷರೂಪಃ** = ನಿರ್ಮಲವಾದ ಆಕೃತಿಯುಳ್ಳ,
**ದರ್ಶನೀಯಃ** = ನೋಡಲು ಯೋಗ್ಯನಾದ,
**ಅನುರಾಗೀ** = (ಸಾಯಂಕಾಲದ)ಕೆಂಪುಬಣ್ಣವುಳ್ಳ, (ಪ್ರೀತಿಯುಳ್ಳ),
**ಭಾನುಃ** = ಸೂರ್ಯನು,
**ಅಸ್ತಂ ಯನ್ ಚ** = ಅಸ್ತವನ್ನು ಹೊಂದುತ್ತಿರುವಾಗಲೂ,
**ಉದಯಂ ಇತಃ ಇವ** = ಉದಯವನ್ನು ಹೊಂದಿದವನಂತೆ,
**ಸ್ಫುಟಂ** = ಚೆನ್ನಾಗಿ,
**ಬಭಾಸೇ** = ಪ್ರಕಾಶಿಸಿದನು.
**ಶುಚಿ** = ನಿರ್ಮಲವಾದ (ಪವಿತ್ರವಾದ),
**ಹರಿಪದಂ** = ವಿಷ್ಣುವಿನ ಪಾದವನ್ನು (ಆಕಾಶವನ್ನು),
**ಆಶ್ರಿತಾನಾಂ** = ಆಶ್ರಯಿಸಿರುವ,
**ಸ್ವಪ್ರಕಾಶೋನ್ನತಾನಾಂ** = ಸ್ವರೂಪವಾದ ತಮ್ಮ ಪ್ರಕಾಶದಿಂದ ಉತ್ಕೃಷ್ಟರಾದವರಿಗೆ,
**ಆಪತ್ಸಂಪದೋಃ** = ವಿಪತ್ತಿನಲ್ಲಿಯೂ, ಸಂಪತ್ತಿನಲ್ಲಿಯೂ,
**ವಿಶೇಷಃ** = ವ್ಯತ್ಯಾಸವು,
**ನ ಭವತಿ ಹಿ** = ಉಂಟಾಗುವುದಿಲ್ಲವಷ್ಟೇ.

**ತಾತ್ಪರ್ಯ—** ಯಥಾ ಅಕಲುಷರೂಪಃ = ಪ್ರಸನ್ನಸ್ವರೂಪಃ, ಅನುರಾಗೀ = ಸ್ವಕೀಯೇಷು ಸ್ನೇಹವಾನ್ ಕಶ್ಚಿತ್ ಪುರುಷಃ, ಅಸ್ತಂ = ಅದರ್ಶನಂ ವಿಪದಂ, ಯಂಶ್ಚ = ಪ್ರಾಪ್ನುವನ್ನಪಿ ಸಂಪದಂ ಇತಃ ಇವ = ಪ್ರಾಪ್ತಃ ಇವ ಶೋಭತೇ, ನ ತು ತತ್ರ ಸಂಕೋಚವಿಕಾಸೌ ದರ್ಶಯತಿ, ತದ್ವತ್ ಸೂರ್ಯಃ ಉದಯಾಸ್ತಮಯಯೋಃ ಏಕಪ್ರಕಾರ ಏವ ಸನ್ ಶುಶುಭೇ. ಯಥಾ ಶ್ರೀಹರಿಚರಣಂ ಆಶ್ರಿತಾನಾಂ ಸತಾಂ ಆಪತ್ಸಂಪದೋಃ ವಿಶೇಷಾಭಾವಃ ತಥಾ ವಿಷ್ಣುಪದಂ ಆಕಾಶಂ ಆಶ್ರಿತಸ್ಯ ಪ್ರಕಾಶೋನ್ನತಸ್ಯ ಭಾನೋರಪಿ ಉದಯಾಸ್ತಮಯಯೋಃ ವಿಶೇಷಾಭಾವಃ ಇತಿ ಭಾವಃ ।

ನಿರ್ಮಲ ಸ್ವರೂಪನಾದ ಸೂರ್ಯನು ಪ್ರಾತಃಕಾಲ ಸಾಯಂಕಾಲಗಳಲ್ಲಿ ನೋಡುವುದಕ್ಕೆ ಯೋಗ್ಯನಾಗಿರುತ್ತಾನೆ. ಆಗ ಸಂಜೆಯ ಕೆಂಪು ಬಣ್ಣದಿಂದ ಅವನು ಮನೋಹರನೂ ಆಗಿರುತ್ತಾನೆ. ಸೂರ್ಯನು ಸಾಯಂಕಾಲ ಕಣ್ಮರೆ-ಯಾಗುತ್ತಿದ್ದರೂ ಉದಯಿಸುವ ಕಾಲದಲ್ಲಿ ಹೇಗೋ ಹಾಗೆ ಸ್ಪಷ್ಟವಾಗಿ ಪ್ರಕಾಶಿಸುತ್ತಾ ನೋಡಲು ಮನೋಹರ-ನಾಗಿರುತ್ತಾನೆ. ಅವನಲ್ಲಿ ವ್ಯತ್ಯಾಸವು ಬರುವುದಿಲ್ಲ. ನಿರ್ಮಲ ಸ್ವಭಾವವುಳ್ಳವನೂ, ತನ್ನವರಲ್ಲಿ ಸ್ನೇಹವುಳ್ಳವನೂ ಆದ ಮಹಾ ಪುರುಷನೊಬ್ಬನು ವಿಪತ್ತನ್ನು ಹೊಂದಿದಾಗಲೂ ಕೂಡ ಸಂಪತ್ತಿನ ಕಾಲದಲ್ಲಿ ಹೇಗೋ ಹಾಗೆಯೇ ಶೋಭಿಸುತ್ತಾನೆ. ಅವನಲ್ಲಿ ಸಂಕೋಚ ವಿಕಾಸಗಳು ಕಂಡು ಬರುವುದಿಲ್ಲ. ದುಃಖ ಆನಂದಗಳೆಂಬ ವಿಕಾರಗಳು ಕಂಡುಬರುವುದಿಲ್ಲ. ಇದು ಯುಕ್ತವೇ ಆಗಿದೆ. ಏಕೆಂದರೆ ನಿರ್ಮಲವಾದ ಹರಿಪದವನ್ನು (ಪರಮಾತ್ಮನ ಪಾದವನ್ನು) ಆಶ್ರಯಿಸಿ ತಮ್ಮ ಸ್ವಂತವಾದ ಪ್ರಕಾಶದಿಂದ ಶ್ರೇಷ್ಠರಾದ ಸಜ್ಜನರಿಗೆ ಆಪತ್ತಿನಲ್ಲಿಯೂ, ಸಂಪತ್ತಿನಲ್ಲಿಯೂ ದುಃಖ, ಆನಂದಗಳೆಂಬ ವಿಕಾರಗಳು ಉಂಟಾಗುವುದಿಲ್ಲ. ದೇವರನ್ನು ನಂಬಿದವರು ಆಪತ್ತಿನಲ್ಲಿಯೂ, ಸಂಪತ್ತಿನಲ್ಲಿಯೂ ದುಃಖಸುಖಗಳಿಗೆ ಒಳಗಾಗದೆ ಒಂದೇ ರೀತಿಯಿಂದ

ಇರುತ್ತಾರೆ. ಹಾಗೆಯೇ ಹರಿಪದ-ವಿಷ್ಣುಪದ ಅಂದರೆ ಆಕಾಶವನ್ನು ಆಶ್ರಯಿಸಿರುವ ತನ್ನ ಸ್ವಂತ ಪ್ರಕಾಶದಿಂದ ಶ್ರೇಷ್ಠವಾಗಿ ಬೆಳಗುತ್ತಿರುವ ಸೂರ್ಯನು ಸಾಯಂಕಾಲದಲ್ಲಿಯೂ ಉದಯಕಾಲದಲ್ಲಿ ಹೇಗೋ ಹಾಗೆ ಕಂಗೊಳಿಸಿದನು.

**ಉದಯೇ ಸವಿತಾ ರಕ್ತಃ ರಕ್ತಶ್ಚಾಸ್ತಮಯೇ ತಥಾ ।**
**ಸಂಪತ್ತೌ ಚ ವಿಪತ್ತೌ ಚ ಮಹತಾಮೇಕರೂಪತಾ ॥**

ಎಂಬ ಪ್ರಸಿದ್ಧವಾದ ಸುಭಾಷಿತವು ಇದರಿಂದ ನೆನಪಿಗೆ ಬರುತ್ತದೆ. (ಇಲ್ಲಿ ಅರ್ಥಾಂತರನ್ಯಾಸಾಲಂಕಾರ)

**ವಿಗ್ರಹ ಮತ್ತು ಕೋಶ—**

**ಅಕಲುಷರೂಪಃ—** ನ ಕಲುಷಂ ಅಕಲುಷಂ, ಅಕಲುಷಂ ರೂಪಂ ಯಸ್ಯ ಸಃ ಅಕಲುಷರೂಪಃ । ಕಲುಷ = ಮಲಿನವಾದ, 'ಕಲುಷೋಽನಚ್ಛ ಆವಿಲಃ' ಅಮರ ।

**ದರ್ಶನೀಯಃ—** ದ್ರಷ್ಟುಂ ಯೋಗ್ಯ ದರ್ಶನೀಯಃ ।

**ಅನುರಾಗೀ —** ಅನುಗತಃ ರಾಗಃ ಅನುರಾಗಃ, ಅನುರಾಗಃ ಅಸ್ಯ ಅಸ್ತೀತಿ ಅನುರಾಗೀ ।

**ಹರಿಪದಂ—** ಹರೇಃ ಪದಂ ಹರಿಪದಂ ।

**ಆಪತ್‌ಸಂಪದೌ—** ಆಪಚ್ಚ ಸಂಪಚ್ಚ ಆಪತ್‌ಸಂಪದೌ, ತಯೋಃ ಆಪತ್‌ಸಂಪದೋಃ ।

**ಸ್ವಪ್ರಕಾಶೋನ್ನತಾನಾಂ—** ಸ್ವಶ್ಚಾಸೌ ಪ್ರಕಾಶಶ್ಚ ಸ್ವಪ್ರಕಾಶಃ, ಸ್ವಪ್ರಕಾಶೇನ ಉನ್ನತಾಃ ಸ್ವಪ್ರಕಾಶೋನ್ನತಾಃ ತೇಷಾಂ ।

**ಕ್ರಿಯಾಪದ—** ಬಭಾಸೇ - ಬಭಾಸೇ ಬಭಾಸಾತೇ ಬಭಾಸಿರೇ, ಬಭಾಸಿಷೇ ಬಭಾಸಾಥೇ ಬಭಾಸಿಧ್ವೇ, ಬಭಾಸೇ ಬಭಾಸಿವಹೇ ಬಭಾಸಿಮಹೇ । ಭಾಸೃದೀಪ್ತೌ ಅಕರ್ಮಕ ಸೇಟ್ ಆತ್ಮನೇಪದೀ ಲಟ್ ಪ್ರಥಮಪುರುಷೇ ಏಕವಚನ.

ಭವತಿ- ಭೂ ಸತ್ತಾಯಾಂ ಲಟ್ ।

**ಪ್ರಯೋಗ—** ಅಕಲುಷರೂಪೇಣ ದರ್ಶನೀಯೇನ ಅನುರಾಗಿಣಾ ಭಾನುನಾ ಅಸ್ತಂ ಯಥಾ ಚ ಉದಯಂ ಇತೇನ ಇವ ಸ್ಫುಟಂ ಬಭಾಸೇ (ಭಾವೇ) ಶುಚಿ ಹರಿಪದಂ ಆಶ್ರಿತಾನಾಂ ಸ್ವಪ್ರಕಾಶೋನ್ನತಾನಾಂ ಆಪತ್ ಸಂಪದೋಃ ವಿಶೇಷೇಣ ನ ಭೂಯತೇ ಹಿ ।

★ ★ ★

**ಅವತಾರಿಕಾ—** ಅರ್ಧ ಮುಳುಗುತ್ತಿರುವ ಸಾಯಂಕಾಲದ ಸೂರ್ಯನನ್ನು ವರ್ಣಿಸುತ್ತಾರೆ.

**ಮರಕತ(ತಕ)ಮಣಿವರ್ಣೇ ಭೂತಧಾತ್ರೀಪುರಂಧ್ರ್ಯಾಃ**
**ಲಸತಿ ಜಲಧಿವಾಸಸ್ಯರ್ಧಲೀನಃ ಕ್ಷಣಾರ್ಧಮ್ ।**
**ಅರುಣತರಣಿಬಿಂಬಚ್ಛದ್ಮನಾ ಪದ್ಮರಾಗಃ**
**ಕಪಿಶಕರಕಲಾಪೋಲ್ಲಾಸ್ಯಭೂತ್ ಪ್ರೇಕ್ಷಣೀಯಃ ॥ 47 ॥**

**ಪದಚ್ಛೇದ—** ಮರಕತಮಣಿವರ್ಣೇ, ಭೂತಧಾತ್ರೀಪುರಂಧ್ರ್ಯಾಃ, ಲಸತಿ, ಜಲಧಿವಾಸಸಿ, ಅರ್ಧಲೀನಃ, ಕ್ಷಣಾರ್ಧಮ್, ಅರುಣತರಣಿಬಿಂಬಚ್ಛದ್ಮನಾ, ಪದ್ಮರಾಗಃ, ಕಪಿಶಕರಕಲಾಪೋಲ್ಲಾಸೀ, ಅಭೂತ್, ಪ್ರೇಕ್ಷಣೀಯಃ ।

**ಅನ್ವಯ—** ಭೂತಧಾತ್ರೀಪುರಂಧ್ರ್ಯಾಃ, ಮರಕತಮಣಿವರ್ಣೇ, ಲಸತಿ, ಜಲಧಿವಾಸಸಿ, ಕ್ಷಣಾರ್ಧಂ, ಅರ್ಧಲೀನಃ, ಅರುಣತರಣಿಬಿಂಬಚ್ಛದ್ಮನಾ, ಕಪಿಶಕರಕಲಾಪೋಲ್ಲಾಸೀ, ಪದ್ಮರಾಗಃ, ಪ್ರೇಕ್ಷಣೀಯಃ, ಅಭೂತ್ ।

**ಅನ್ವಯಾರ್ಥ—**

**ಭೂತಧಾತ್ರೀಪುರಂಧ್ರ್ಯಾಃ** = ಎಲ್ಲಾ ಪ್ರಾಣಿಗಳಿಗೂ ತಾಯಿಯಾದ ಭೂದೇವಿಯೆಂಬ ಹೆಂಗಸಿನ,

**ಮರಕತಮಣಿವರ್ಣೇ** = ಪಚ್ಚೆಮಣಿಯ ಬಣ್ಣವುಳ್ಳ, (ಕಪ್ಪಾದ)

**ಲಸತಿ** = ಪ್ರಕಾಶಿಸುತ್ತಿರುವ,

**ಜಲಧಿವಾಸಸಿ** = ಸಮುದ್ರವೆಂಬ ಬಟ್ಟೆಯಲ್ಲಿ (ಸೀರೆಯಲ್ಲಿ),

**ಕ್ಷಣಾರ್ಧಂ** = ಅರೆಕ್ಷಣ (ಸ್ವಲ್ಪ ಹೊತ್ತು),

**ಅರ್ಧಲೀನಃ** = ಅರ್ಧ ಭಾಗ ಅಡಗಿದ (ಮರೆಯಾದ),

**ಅರುಣತರಣಿಬಿಂಬಚ್ಛದ್ಮನಾ** = ನಸುಗೆಂಪಾಗಿರುವ ಸೂರ್ಯನ ಮಂಡಲದ ನೆಪದಿಂದ,

**ಕಪಿಶಕರಕಲಾಪೋಲ್ಲಾಸೀ** = ಕೆಂಚುಬಣ್ಣದ (ಕಪ್ಪು ಮಿಶ್ರ ಕೆಂಪು ಬಣ್ಣದ) ಕಿರಣಗಳ ಸಮೂಹದಿಂದ ಪ್ರಕಾಶಿಸುವ,

(ಕರ = ಕಿರಣಗಳೆಂಬ, ಕಲಾಪ = ಆಭರಣದಿಂದ),

**ಪದ್ಮರಾಗಃ** = ಕೆಂಪುರತ್ನವು,

**ಪ್ರೇಕ್ಷಣೀಯಃ** = ನೋಡಲು ಯೋಗ್ಯವಾಗಿ,

**ಅಭೂತ್** = ಆಯಿತು.

**ತಾತ್ಪರ್ಯ—** ಕಸ್ಯಾಶ್ಚಿತ್ ಯೋಷಿತಃ ನಿತಂಬಲಗ್ನನೀಲವಸ್ತ್ರೇ ಅರ್ಧನಿಮಗ್ನಃ ಪದ್ಮರಾಗಃ ಯಥಾ ದರ್ಶನೀಯಃ ಭವತಿ ಏವಂ ಪೃಥಿವ್ಯಾಖ್ಯಯೋಷಿತಃ ಸಮುದ್ರಾಖ್ಯನೀಲವಸನೇ ನಿಮಗ್ನಃ ಲೋಹಿತಸೂರ್ಯಮಂಡಲಾಖ್ಯಪದ್ಮರಾಗಃ ಪ್ರೇಕ್ಷಣೀಯೋಽಭೂತ್ ಇತಿ ಭಾವಃ ॥

ಯಾವಳೋ ಒಬ್ಬ ಹೆಂಗಸು ಕಪ್ಪಾದ ಸೀರೆಯನ್ನುಟ್ಟು, ಸೊಂಟದಲ್ಲಿ ಪದ್ಮರಾಗಮಣಿಯ ಆಭರಣವನ್ನು ಧರಿಸಿದ್ದಳು. ಆ ಮಣಿಯು ಕಪ್ಪು ಸೀರೆಯಲ್ಲಿ ಅರ್ಧ ಮುಚ್ಚಿ ಹೋಗಿದ್ದಾಗ ತನ್ನ ಅರ್ಧಭಾಗದ ಕಿರಣಗಳನ್ನು ಮೇಲ್ಮುಖವಾಗಿ ಹೊರ ಹೊಮ್ಮಿಸುತ್ತಾ ಸುಂದರವಾಗಿ ಕಾಣಿಸುತ್ತಿತ್ತು. ಪ್ರಕೃತ ಸಾಯಂಕಾಲ ಸೂರ್ಯಾಸ್ತಮಯವಾಗುತ್ತಿದೆ. ಸೂರ್ಯನು ಕೆಂಪಾಗಿ ಕಾಣಿಸುತ್ತಿದ್ದಾನೆ. ತನ್ನ ಕಪ್ಪುಕೆಂಪುಮಿಶ್ರವಾದ ಕಿರಣಗಳನ್ನು ಮೇಲ್ಮುಖವಾಗಿ ಹೊಮ್ಮಿಸುತ್ತಿದ್ದಾನೆ. ಅವನು ಆಗ ಹೆಂಗಸಿನ ಕರಿ ಸೀರೆಯಲ್ಲಿ ಅರ್ಧಮುಚ್ಚಿದ್ದ ಪದ್ಮರಾಗ ಮಣಿಯಂತೆ ಸುಂದರನಾಗಿ ಕಂಡನು ಎಂದರೆ ಸೂರ್ಯನು ಮುಳುಗುತ್ತಾ ಇದ್ದನು ಎಂದು ತಾತ್ಪರ್ಯ. ಇಲ್ಲಿ 'ಜಲಧಿರೇವ ವಾಸಃ' ಎಂಬಲ್ಲಿ ರೂಪಕವೂ, 'ಅರುಣತರಣಿಬಿಂಬಚ್ಛದ್ಮನಾ' ಎಂಬಲ್ಲಿ ಕೈತವಾಪಹ್ನುತಿಯೂ. 'ಪದ್ಮರಾಗಃ ಪ್ರೇಕ್ಷಣೀಯಃ ಅಭೂತ್' ಎಂಬಲ್ಲಿ ರೂಪಕಾಪಹ್ನುತಿಗಳಿಂದ ಉಜ್ಜೀವಿತವಾದ ಅತಿ-ಶಯೋಕ್ತಿ ಅಲಂಕಾರವೂ ಇದೆ.

**ವಿಗ್ರಹ ಮತ್ತು ಕೋಶ—**

**ಮರಕತಮಣಿವರ್ಣೇ—** ಮರಕತಂ ಇತಿ ಮಣಿಃ ಮರಕತಮಣಿಃ, ಮರಕತಮಣೇಃ ವರ್ಣಃ ಇವ ವರ್ಣಃ ಯಸ್ಯ ತತ್ ಮರಕತಮಣಿವರ್ಣಂ ತಸ್ಮಿನ್ । ಮರಕತಂ = (ಗರುಡ) ಪಚ್ಚೆಮಣಿ, 'ಗಾರುತ್ಮತಂ ಮರಕತಂ ಅಶ್ಮಗರ್ಭೋಃ ಹರಿನ್ಮಣಿಃ' ಅಮರ, ಮರಕತ ಎಂಬ ಶಬ್ದವೂ ಇದೆ ।

**ಭೂತಧಾತ್ರೀಪುರಂಧ್ರ್ಯಾ—** ಭೂತಧಾತ್ರೀ ಏವ ಪುರಂಧ್ರೀ ಭೂತಧಾತ್ರೀಪುರಂಧ್ರೀ ತಸ್ಯಾಃ । ಭೂಮಿ, 'ಭೂತಧಾತ್ರೀ ರತ್ನಗರ್ಭಾ ವಿಪುಲಾ ಸಾಗರಾಂಬರಾ' ಅಮರ, ಪುರಂಧ್ರೀ = ಗಂಡ ಮತ್ತು ಮಕ್ಕಳುಳ್ಳ ಹೆಂಗಸು, 'ಸ್ಯಾತ್ತು ಕುಟುಂಬಿನೀ ಪುರಂಧ್ರೀ' ಅಮರ, 'ರಮಾ ವಾಮಾ ವಾಮನೇತ್ರಾ ಪುರಂಧ್ರೀ' ಹಲ ।

**ಜಲಧಿವಾಸಸಿ—** ಜಲಧಿರೇವ ವಾಸಃ ಜಲಧಿವಾಸಃ ತಸ್ಮಿನ್ ।

**ಅರ್ಧಲೀನಃ—** ಅರ್ಧಂ ಯಥಾ ಭವತಿ ತಥಾ ಲೀನಃ ಅರ್ಧಲೀನಃ ।

**ಕ್ಷಣಾರ್ಧಂ**— ಕ್ಷಣಸ್ಯ ಅರ್ಧಂ ಕ್ಷಣಾರ್ಧಂ ।

**ಅರುಣತರಣಿಬಿಂಬಚ್ಛದ್ಮನಾ**— ಅರುಣಶ್ಚಾಸೌ ತರಣಿಶ್ಚ ಅರುಣತರಣಿಃ, ಅರುಣತರಣೇಃ ಬಿಂಬಂ ಅರುಣತರಣಬಿಂಬಂ, ಅರುಣತರಣಿಬಿಂಬಂ ಏವ ಛದ್ಮ ಅರುಣತರಣಬಿಂಬಚ್ಛದ್ಮ ತೇನ ।

**ಕಪಿಶಕರಕಲಾಪೋಲ್ಲಾಸೀ**— ಕಪಿಶಾಶ್ಚ ತೇ ಕರಾಶ್ಚ ಕಪಿಶಕರಾಃ, ಕಪಿಶಕರಾಣಾಂ ಕಲಾಪಃ ಕಪಿಶಕರಕಲಾಪಃ, (ಕಪಿಶಕರಾ ಏವ ಕಲಾಪಃ ಕಪಿಶಕರಕಲಾಪಃ), ಕಪಿಶಕರಕಲಾಪೇನ ಉಲ್ಲಸತೀತಿ ಕಪಿಶಕರ-ಕಲಾಪೋಲ್ಲಾಸೀ ।

**ಪ್ರೇಕ್ಷಣೀಯಃ**— ಪ್ರೇಕ್ಷಿತುಂ ಯೋಗ್ಯಃ ಪ್ರೇಕ್ಷಣೀಯಃ । ಕಲಾಪ = ಸಮೂಹ, ಅಲಂಕಾರ, 'ಕಲಾಪೋ ಭೂಷಣೇ ಬರ್ಹೇ ತೂಣೀರೇ ಸಂಹತಾವ ಲಪಿ' ಅಮರ ।

**ಕ್ರಿಯಾಪದ**— **ಅಭೂತ್**- ಭೂಸತ್ತಾಯಾಂ ಲುಙ್ ।

**ಪ್ರಯೋಗ**— ಭೂತಧಾತ್ರೀಪುರಂಧ್ರ್ಯಾಃ ಮರಕತಮಣಿವರ್ಣೇ ಲಸತಿ ಜಲಧಿವಾಸಸಿ ಕ್ಷಣಾರ್ಧಂ ಅರ್ಧಲೀನೇನ, ಅರುಣತರಣಿಬಿಂಬಚ್ಛದ್ಮನಾ ಕಪಿಶಕರಕಲಾಪೋಲ್ಲಾಸಿನಾ ಪದ್ಮರಾಗೇಣ ಪ್ರೇಕ್ಷಣೀಯೇನ ಅಭಾವಿ (ಭಾವೇ) ।

★ ★ ★

**ಅವತಾರಿಕಾ**— ಆಚಾರ್ಯರ ಸಾಯಂಕಾಲದ ಜಪಧ್ಯಾನಗಳನ್ನು ವಿವರಿಸುತ್ತಾರೆ.

**ಅವನಿವನವನಧ್ರುಗ್ವಾಯುಖಾಹಮ್ಮಹತ್ಸು**
**ಪ್ರಕೃತಿಗುಣಸಮೇತಾವ್ಯಾಕೃತಾಕಾಶ ಏಕಮ್ ।**
**ತತಮತನುಮನಾಃ ಸೋಽಚಿಂತಯತ್ ಸತ್ಸಮಾಧಾ-**
**ವಸುರಸುರನರೇಭ್ಯಃ ಸದ್ಗುಣಂ ನಾಥಮನ್ಯಮ್ ॥ 48 ॥**

**ಪದಚ್ಛೇದ**— ಅವನಿವನವನಧ್ರುಗ್ವಾಯುಖಾಹಮ್ಮಹತ್ಸು, ಪ್ರಕೃತಿಗುಣಸಮೇತಾವ್ಯಾಕೃತಾಕಾಶೇ, ಏಕಂ, ತತಂ, ಅತನುಮನಾಃ, ಸಃ, ಅಚಿಂತಯತ್, ಸತ್ಸಮಾಧೌ, ಅಸುರಸುರನರೇಭ್ಯಃ, ಸದ್ಗುಣಂ, ನಾಥಂ, ಅನ್ಯಮ್ ।

**ಅನ್ವಯ**— ಸಃ, ಅತನುಮನಾಃ, ಸತ್ಸಮಾಧೌ, ಅವನಿವನವನಧ್ರುಗ್ವಾಯುಖಾಹಮ್ಮಹತ್ಸು, ಪ್ರಕೃತಿಗುಣ-ಸಮೇತಾವ್ಯಾಕೃತಾಕಾಶೇ, ತತಂ, ಏಕಂ, ಅಸುರಸುರನರೇಭ್ಯಃ, ಅನ್ಯಂ, ಸದ್ಗುಣಂ, ನಾಥಂ, ಅಚಿಂತಯತ್ ।

**ಅನ್ವಯಾರ್ಥ**—

**ಸಃ** = ಅಂತಹ,

**ಅತನುಮನಾಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,

**ಸತ್ಸಮಾಧೌ** = ಒಳ್ಳೆಯ ಧ್ಯಾನಯೋಗ ಕಾಲದಲ್ಲಿ,

**ಅವನಿ, ವನ, ವನಧ್ರುಕ್, ವಾಯು, ಖಾ, ಹಮ್ಮಹತ್ಸು** = ಭೂಮಿ, ನೀರು, ಅಗ್ನಿ, ಗಾಳಿ, ಆಕಾಶವು, ಅಹಂಕಾರ ತತ್ತ್ವವು, ಮಹತ್ತತ್ತ್ವವು ಇವುಗಳಲ್ಲಿ,

**ಪ್ರಕೃತಿಗುಣಸಮೇತಅವ್ಯಾಕೃತಾಕಾಶೇ** = ಜಡಪ್ರಕೃತಿಯ, ಗುಣಗಳಾದ ಸತ್ತ್ವರಜಸ್ಸು ತಮಸ್ಸುಗಳಿಂದ, ಕೂಡಿದ, ಅವ್ಯಾಕೃತಾಕಾಶದಲ್ಲಿ

**ತತಂ** = ವ್ಯಾಪಿಸಿರುವ,

**ಏಕಂ** = ಮುಖ್ಯವಾದ,

**ಅಸುರಸುರನರೇಭ್ಯಃ** = ದೈತ್ಯರು, ದೇವತೆಗಳು, ಮನುಷ್ಯರು ಇವರುಗಳ ದೆಸೆಯಿಂದ,

**ಅನ್ಯಂ** = ಬೇರೆಯಾಗಿರುವ (ಭಿನ್ನವಾದ),

**ಸದ್ಗುಣಂ** = ನಿರ್ದೋಷನಾದ, ಜ್ಞಾನನಂದಾದಿಗಳುಳ್ಳ,

**ನಾಥಂ** = ಸ್ವಾಮಿಯಾದ ನಾರಾಯಣನನ್ನು,

**ಅಚಿಂತಯತ್** = ಧ್ಯಾನಿಸಿದರು.

**ತಾತ್ಪರ್ಯ**— ಸಾಯಂಕಾಲ ಸ್ನಾನವನ್ನು ಮಾಡಿ ಪೂರ್ಣಜ್ಞಾನವುಳ್ಳ ಆ ಶ್ರೀಮಧ್ವಾಚಾರ್ಯರು ಮನಸ್ಸನ್ನು ಪರಮಾತ್ಮನಲ್ಲಿ ಕೇಂದ್ರೀಕರಿಸಿ ಉತ್ತಮವಾದ ಧ್ಯಾನಯೋಗರೂಪವಾದ ಸಮಾಧಿಯಲ್ಲಿ ನಿರತರಾದರು.

ಭೂಮಿ, ಜಲ, ತೇಜಸ್ಸು, ಆಕಾಶ, ಅಹಂಕಾರತತ್ವ, ಮಹತ್ತತ್ವ ಈ ಏಳು ಪದಾರ್ಥಗಳಲ್ಲಿಯೂ, ಸತ್ತ್ವ, ರಜಸ್ಸು ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿದ ಅವ್ಯಾಕೃತಾಕಾಶ ಎಂಬ ಹೆಸರುಳ್ಳ ಜಡಪ್ರಕೃತಿಯಲ್ಲಿಯೂ ಪರಬ್ರಹ್ಮನಾದ ನಾರಾಯಣನು ವ್ಯಾಪಿಸಿರುತ್ತಾನೆ. ಅವನು ಯಾವ ಸ್ಥಾನದಲ್ಲಿದ್ದರೂ ಅವನಿಗೆ ಸ್ಥಾನ ನಿಮಿತ್ತದಿಂದ ಭೇದವಿಲ್ಲ. ಅವನು ದೈತ್ಯರು ದೇವತೆಗಳು ಮಾನವರು ಇವರೇ ಮೊದಲಾದ ಎಲ್ಲಾ ಚೇತನ ವರ್ಗಕ್ಕಿಂತಲೂ ಅಚೇತನ ವರ್ಗಕ್ಕಿಂತಲೂ ಅತ್ಯಂತ ಭಿನ್ನನು. ಜ್ಞಾನ ಆನಂದ ಮೊದಲಾದ ಎಲ್ಲಾ ಕಲ್ಯಾಣಗುಣಗಳಿಂದ ಪರಿಪೂರ್ಣನು, ಸರ್ವಸ್ವಾಮಿಯು, ಇಂತಹ ಪರಮಾತ್ಮನನ್ನು ಆಚಾರ್ಯರು ಸಮಾಧಿ ಕಾಲದಲ್ಲಿ ಧ್ಯಾನ ಮಾಡಿದರು. ಇದರಿಂದ ಆಚಾರ್ಯರು ಸಾಯಂಕಾಲ ಸ್ನಾನ ಮಾಡಿ ಜಪತರ್ಪಣಾದಿಗಳನ್ನು ಮಾಡಿದರೆಂದೂ, ಮನಸ್ಸನ್ನು ಪರಮಾತ್ಮನಲ್ಲಿ ವಿಶೇಷವಾಗಿ ನೆಲೆಗೊಳಿಸಿ ಸಮಸ್ತ ತತ್ವಗಳಲ್ಲಿಯೂ ಇರುವ ಪರಮಾತ್ಮನನ್ನು ಧ್ಯಾನಿಸಿದರೆಂದೂ ತಿಳಿಯಬೇಕು. ಆಚಾರ್ಯರು ಯೋಗಮಾರ್ಗವನ್ನರಿತ ಮಹಾಯೋಗಿಗಳೆಂದೂ ಇದರಿಂದ ಸೂಚಿತವಾಯಿತು. 'ವನಾಯ ದ್ರುಹ್ಯತಿ ಇತಿ ವನಧ್ರುಕ್' = ಅಗ್ನಿ, ತೇಜಸ್ಸು ಎಂದು ತಾತ್ಪರ್ಯ.

**ವಿಗ್ರಹ**—

**ಅವನಿವನವನಧ್ರುಗ್‌ವಾಯುಖಾಹಂಮಹತ್ಸು**— ಅವನಿಶ್ಚ ವನಂ ಚ ವನಧ್ರುಕ್ ಚ ವಾಯುಶ್ಚ ಖಂ ಚ ಮಹಚ್ಚ ಅವನಿವನವನಧ್ರುಕ್‌ವಾಯುಖಾಹಂಮಹಾಂತಿ ತೇಷು ।

**ಪ್ರಕೃತಿಗುಣಸಮೇತಾವ್ಯಾಕೃತಾಕಾಶೇ**— ಪ್ರಕೃತೇಃ ಗುಣಾಃ ಪ್ರಕೃತಿಗುಣಾಃ, ಪ್ರಕೃತಿಗುಣೈಃ ಸಮೇತಃ ಪ್ರಕೃತಿಗುಣಸಮೇತಃ, ಪ್ರಕೃತಿಗುಣಸಮೇತಶ್ಚಾಸೌ ಅವ್ಯಾಕೃತಾಕಾಶಶ್ಚ ಪ್ರಕೃತಿಗುಣಸಮೇತಾವ್ಯಾಕೃತಾಕಾಶಃ, ತಸ್ಮಿನ್ ।

**ಅತನುಮನಾಃ**— ನ ತನು ಅತನು, ಅತನು ಮನಃ ಯಸ್ಯ ಸಃ ಅತನುಮನಾಃ ।

**ಸತ್ ಸಮಾಧೌ**— ಸಂಶ್ಚಾಸೌ ಸಮಾಧಿಶ್ಚ ಸತ್‌ಸಮಾಧಿಃ ತಸ್ಮಿನ್ ।

**ಅಸುರಸುರನರೇಭ್ಯಃ**— ಅಸುರಾಶ್ಚ ಸುರಾಶ್ಚ ನರಾಶ್ಚ ಅಸುರಸುರನರಾಃ ತೇಭ್ಯಃ ।

**ಸದ್ಗುಣಃ**— ಸಂತಃ ಗುಣಾ ಯಸ್ಯ ಸಃ ಸದ್ಗುಣಃ ತಂ ।

**ಕ್ರಿಯಾಪದ— ಅಚಿಂತಯತ್**- ಅಚಿಂತಯತ್ ಅಚಿಂತಯತಾಂ ಅಚಿಂತಯನ್, ಅಚಿಂತಯಃ ಅಚಿಂತಯತಂ ಅಚಿಂತಯತ, ಅಚಿಂತಯಂ ಅಚಿಂತಯಾವ ಅಚಿಂತಯಾಮ । ಚಿತಿ (ಚಿಂತ್) ಸ್ಮೃತ್ಯಾಂ ಸಕ. ಸೇಟ್. ಉಭ. to think to consider ಆಲೋಚಿಸು ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನಂ ।

**ಕೋಶ**— ಅವನಿವನವನಧ್ರುಗ್‌ವಾಯುಖಾಹಂಮಹತ್ಸು, ವನ = ನೀರು, 'ಜೀವನಂ ಭುವನಂ ವನಂ' ಅಮರ, 'ವನಂ ಕಾನನನೀರಯೋಃ' ವಿಶ್ವ, ಖ = ಆಕಾಶ, 'ನಭೋಽಂತರಿಕ್ಷಂ ಗಗನಂ ಅನಂತಂ ಸುರವರ್ತ್ಮಖಂ' ಅಮರ,

ಖಂ = ಆಕಾಶ, 'ಪ್ರಕೀರ್ತಿತಂ ಏಕಾಕ್ಷರ' ರತ್ನಮಾಲಾ, ಇಲ್ಲಿ ವಾಯುಪದದಿಂದ ಭೂತವಾಯುವನ್ನು ಇಟ್ಟುಕೊಳ್ಳಬೇಕು. ಪ್ರಕೃತಿ = ಜಡಪ್ರಕೃತಿ, ಪ್ರಪಂಚಕ್ಕೆ ಕಾರಣವಾದ ವ್ಯಾಪ್ತವಾದ ಸೂಕ್ಷ್ಮತತ್ತ್ವ 'ಪ್ರಕೃತಿಃ ಪಂಚಭೂತೇಷು ಸ್ವಭಾವೇ ಮೂಲಕಾರಣೇ' ವಿಶ್ವ।

**ಪ್ರಯೋಗ—** ತೇನ ಅತನುಮನಸಾ ಸತ್ ಸಮಾಧೌ ಅವನಿವನವನಧ್ರುಗ್ವಾಯುಖಾಹಂಮಹತ್ಸು ಪ್ರಕೃತಿಗುಣ ಸಮೇತಾವ್ಯಾಕೃತಾಕಾಶೇ ತತಃ ಏಕಃ ಅಸುರಸುರನರೇಭ್ಯಃ ಅನ್ಯಃ ಸದ್ಗುಣಃ ನಾಥಃ ಅಚಿಂತ್ಯತ (ಅಧ್ಯಾಯತ) ಧ್ಯಾನಿಸಲ್ಪಟ್ಟನು ಕರ್ಮಣಿ ।

★ ★ ★

**ಅವತಾರಿಕಾ—** ಬ್ರಾಹ್ಮಣರು ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡಿದರು ಎಂದು ಹೇಳುತ್ತಾರೆ.

**ವ್ಯದಧತ ಪರಿದೃಷ್ಟಜ್ಯೋತಿಷಃ ಸಾಧು ಸಾಂಧ್ಯಂ**
**ನಿಯಮಮವನಿದೇವಾಃ ಜ್ಯೋತಿಷೋಽಪ್ಯಾವಲೋಕಾತ್ ।**
**ವಿಹಿತಮನುಸರಂತೋ ಧರ್ಮಶಾಸ್ತ್ರಪ್ರವೀಣಾಃ**
**ಸವಿತರಿ ಸವಿತಾರಂ ಚಿಂತಯಂತಸ್ತ್ರಿಲೋಕ್ಯಾಃ ॥ 49 ॥**

**ಪದಚ್ಛೇದ—** ವ್ಯದಧತ, ಪರಿದೃಷ್ಟಜ್ಯೋತಿಷಃ, ಸಾಧು, ಸಾಂಧ್ಯಂ, ನಿಯಮಂ, ಅವನಿದೇವಾಃ, ಜ್ಯೋತಿಷಃ, ಅಪಿ, ಆ, ಅವಲೋಕಾತ್, ವಿಹಿತಂ, ಅನುಸರಂತಃ, ಧರ್ಮಶಾಸ್ತ್ರಪ್ರವೀಣಾಃ, ಸವಿತರಿ, ಸವಿತಾರಂ, ಚಿಂತಯಂತಃ, ತ್ರಿಲೋಕ್ಯಾಃ।

**ಪದಚ್ಛೇದ—** ವಿಹಿತಂ, ಅನುಸರಂತಃ, ಧರ್ಮಶಾಸ್ತ್ರಪ್ರವೀಣಾಃ, ಸವಿತರಿ, ತ್ರಿಲೋಕ್ಯಾಃ, ಸವಿತಾರಂ, ಚಿಂತಯತಃ, ಪರಿದೃಷ್ಟಜ್ಯೋತಿಷಃ, ಆ, ಅವಲೋಕಾತ್, ಸಾಂಧ್ಯಂ, ನಿಯಮಂ, ಅಪಿ, ವ್ಯದಧತ ।

**ಅನ್ವಯಾರ್ಥ—**

**ವಿಹಿತಂ** = ಸ್ಮೃತ್ಯಾದಿಗಳಲ್ಲಿ ಹೇಳಿರುವ ಆಚಾರವನ್ನು,
**ಅನುಸರಂತಃ** = ಅನುಸರಿಸುತ್ತಿರುವ,
**ಧರ್ಮಶಾಸ್ತ್ರಪ್ರವೀಣಾಃ** = ಧರ್ಮವನ್ನು ಬೋಧಿಸುವ ಶಾಸ್ತ್ರಗಳಲ್ಲಿ ಪರಿಣತರಾದ,
**ಸವಿತರಿ** = ಸೂರ್ಯನಲ್ಲಿ,
**ತ್ರಿಲೋಕ್ಯಾಃ** = ಮೂರುಲೋಕಗಳ,
**ಸವಿತಾರಂ** = ಸೃಷ್ಟಿಕರ್ತನಾದ ಶ್ರೀಮನ್ನಾರಾಯಣನನ್ನು,
**ಚಿಂತಯಂತಃ** = ಧ್ಯಾನಿಸುತ್ತಿರುವ,
**ಪರಿದೃಷ್ಟಜ್ಯೋತಿಷಃ** = ಚೆನ್ನಾಗಿ ನೋಡಲ್ಪಟ್ಟ ಸೂರ್ಯಕಿರಣಗಳುಳ್ಳ,
**ಅವನಿದೇವಾಃ** = ಬ್ರಾಹ್ಮಣರು,
**ಜ್ಯೋತಿಷಃ** = ನಕ್ಷತ್ರದ(ಗಳ),
**ಆ ಅವಲೋಕಾತ್** = ದರ್ಶನವಾಗುವವರೆಗೂ,
**ಸಾಂಧ್ಯಂ** = ಸಂಧ್ಯಾಕಾಲದಲ್ಲಿ ಮಾಡಬೇಕಾದ,
**ನಿಯಮಂ ಅಪಿ** = ಅನುಷ್ಠಾನವನ್ನೂ,

**ಸಾಧು** = ಚೆನ್ನಾಗಿ,

**ವ್ಯದಧತ** = ಮಾಡಿದರು.

**ತಾತ್ಪರ್ಯ—** ಆಚಾರ್ಯರ ಶಿಷ್ಯರಾದ ಅನೇಕ ಗೃಹಸ್ಥ ಬ್ರಾಹ್ಮಣರು ಸೂರ್ಯಾಸ್ತಮಯ ಕಾಲವು ಸಮೀಪಿಸಿದೊಡನೆ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ನಿಯಮಗಳನ್ನು ಅನುಸರಿಸಿ ಸಂಧ್ಯಾವಂದನೆಯನ್ನು ಮಾಡಲಾರಂಭಿಸಿದರು. ಅವರೆಲ್ಲರೂ ಸೂರ್ಯಮಂಡಲಾಭಿಮಾನಿಯಾದ ಸವಿತೃನಾಮ ಸೂರ್ಯನಲ್ಲಿ ಸನ್ನಿಹಿತನಾಗಿರುವ ಎಲ್ಲಾ ಲೋಕಗಳನ್ನೂ ಸೃಷ್ಟಿಮಾಡಿರುವ ಸವಿತೃನಾಮಕನಾದ ನಾರಾಯಣನನ್ನು ಧ್ಯಾನಿಸುತ್ತಾ ನಕ್ಷತ್ರಗಳು ಕಾಣಿಸುವವರೆಗೆ ಸಂಧ್ಯಾಕಾಲದ ನಿಯಮವನ್ನು ಅನುಸರಿಸಿ ಗಾಯತ್ರೀ ಜಪವನ್ನು ಭಕ್ತಿಪೂರ್ವಕವಾಗಿ ಲೋಪವಿಲ್ಲದೆ ಮಾಡಿದರು.

**ವಿಗ್ರಹ—**

**ಪರಿದೃಷ್ಟಜ್ಯೋತಿಷಃ—** ಪರಿದೃಷ್ಟಾನಿ ಜ್ಯೋತೀಂಷಿ ಯೈಃ ತೇ ಪರಿದೃಷ್ಟಜ್ಯೋತಿಷಃ ।

**ಸಾಂಧ್ಯಂ—** ಸಂಧ್ಯಾಯಾಂ ಭವಃ ಸಾಂಧ್ಯಃ ತಂ ।

**ಅವನಿದೇವಾಃ—** ಅವನ್ಯಾಃ ದೇವಾಃ ಅವನಿದೇವಾಃ ।

**ಧರ್ಮಶಾಸ್ತ್ರಪ್ರವೀಣಾಃ—** ಧರ್ಮಶಾಸ್ತ್ರೇ ಪ್ರವೀಣಾಃ ಧರ್ಮಶಾಸ್ತ್ರಪ್ರವೀಣಾಃ ।

**ತ್ರಿಲೋಕ್ಯಾಃ—** ತ್ರಯಾಣಾಂ ಲೋಕಾನಾಂ ಸಮಾಹಾರಃ ತ್ರಿಲೋಕೀ ತಸ್ಯಾಃ ।

**ಕ್ರಿಯಾಪದ—** ವ್ಯದಧತ - ವಿ+ಅದಧತ, ಅಧತ್ತ ಅದಧಾತಾಂ ಅದಧತ, ಅಧತ್ಥಾಃ ಅದಧಾಥಾಂ ಅಧದ್‌ಧ್ವಂ, ಅದಧಿ ಅದಧ್ವಹಿ ಅದಧ್ಮಹಿ । ಡುಧಾಞ್ ಧಾರಣಪೋಷಣಯೋಃ ಸಕ. ಅನಿ. ಉಭ. ಅನದ್ಯತನಭೂತೇ ಲಙ್ ಪ್ರಥಮ ಪುರುಷೇ ಬಹುವಚನಂ ।

**ಪ್ರಯೋಗ—** ವಿಹಿತಂ ಅನುಸರದ್ಭಿಃ ಧರ್ಮಶಾಸ್ತ್ರಪ್ರವೀಣೈಃ ಸವಿತರಿ ತ್ರಿಲೋಕ್ಯಾಃ ಸವಿತಾರಂ ಚಿಂತಯದ್ಭಿಃ ಪರಿದೃಷ್ಟ ಜ್ಯೋತಿರ್ಭಿಃ ಅವನಿದೇವೈಃ ಜ್ಯೋತಿಷಃ ಆ ಅವಲೋಕಾತ್ ಸಾಂಧ್ಯಃ ನಿಯಮಃ ಅಪಿ ಸಾಧು ವ್ಯಧೀಯತ (ಕರ್ಮಣಿ) ।

**ವ್ಯಾಕರಣವಿಶೇಷ—** ಜ್ಯೋತಿಷೋಽಪ್ಯಾವಲೋಕಾತ್ ಎಂಬ ಪದಗಳಿಗೆ ಸ್ವತಃ ಶ್ರೀಮನ್ನಾರಾಯಣಪಂಡಿತಾಚಾರ್ಯರೇ ಆ ಜ್ಯೋತಿಷಃ ದರ್ಶನಾತ್ ಬೆಳಕು(ನಕ್ಷತ್ರಗಳು) ಕಾಣಿಸುವವರೆಗೆ ಎಂದು ಅರ್ಥವನ್ನು ಬರೆದಿದ್ದಾರೆ. ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇತ್ ಸಾವಿತ್ರೀಮರ್ಕದರ್ಶನಾತ್ । ಉತ್ತರಾಂ ತು ಸಮಾಸೀನಃ ಸಮ್ಯಗೃಕ್ಷವಿಭಾವನಾತ್ । ಇತಿ ।

'ವಿಹಿತಂ ಅನುಸರಂತಃ' ಎಂಬಲ್ಲಿ ವಿಹಿತವೆಂದರೆ ವಿಧಾನ ಮಾಡಲ್ಪಟ್ಟದ್ದು ಎಂದು ಅರ್ಥ. ಪ್ರಾತಸ್ಸಂಧ್ಯೆಯನ್ನು ಅರುಣೋದಯದಲ್ಲಿಯೇ ಪ್ರಾರಂಭಿಸಬೇಕು. ಸೂರ್ಯ ದರ್ಶನವಾಗುವವರೆಗೆ ಗಾಯತ್ರೀ ಜಪವನ್ನು ಮಾಡುತ್ತಾ ನಿಂತಿರಬೇಕು. ಸಾಯಂಕಾಲದ ಸಂಧ್ಯಾವಂದನೆಯನ್ನು ಕುಳಿತುಕೊಂಡು ಮಾಡಬೇಕು. ನಕ್ಷತ್ರಗಳು ಕಾಣಿಸುವವರೆಗೆ ಸಾಯಂಕಾಲ ಜಪ ಮಾಡುತ್ತಾ ಇರಬೇಕು ಎಂದು ಸ್ಮೃತಿಯಲ್ಲಿ ಹೇಳಿದ ನಿಯಮವನ್ನು ಅನುಸರಿಸಿ ಆ ಬ್ರಾಹ್ಮಣರು ಸಂಧ್ಯಾ ವಂದನೆಯನ್ನು ಮಾಡಿದರು ಎಂದು ಅಭಿಪ್ರಾಯ.

★ ★ ★

**ಅವತಾರಿಕಾ—** ಸಾಯಂಕಾಲ ಅಗ್ನಿಹೋತ್ರಿಗಳು ಮಾಡಿದ ಅಗ್ನಿಹೋತ್ರವನ್ನು ವರ್ಣಿಸುತ್ತಾರೆ.

**ವಿವಿದುರತಿತರಾಂ ಯೇ ದೇವತಾಃ ಷೋಡಶೋಕ್ತಾಃ**
**ಹರಹರಿಹಯಪೂರ್ವಾಂತ್ಯಾಃ ಕಲಾಭೇದತೋಽಸ್ಯ ।**
**ಸುಹುತಮತಿಸೃಜಂತೋಽಗ್ನ್ಯಾಹಿತಾಸ್ತೇಽಗ್ನಿಹೋತ್ರಂ**
**ವ್ಯಧುರುಚಿತಮಪೂರ್ವಂ ಯೇನ ಗಾಯತ್ರಲೋಕಾಃ ॥ 50 ॥**

**ಪದಚ್ಛೇದ—** ವಿವಿದುಃ, ಅತಿತರಾಂ, ಯೇ, ದೇವತಾಃ ಷೋಡಶ, ಉಕ್ತಾಃ, ಹರಹರಿಹಯಪೂರ್ವಾಂತ್ಯಾಃ, ಕಲಾಭೇದತಃ, ಅಸ್ಯ, ಸುಹುತಂ, ಅತಿಸೃಜಂತಃ, ಅಗ್ನ್ಯಾಹಿತಾಃ, ತೇ, ಅಗ್ನಿಹೋತ್ರಂ, ವ್ಯಧುಃ ಉಚಿತಂ, ಅಪೂರ್ವಂ, ಯೇನ, ಗಾಯತ್ರಲೋಕಃ ।

**ಅನ್ವಯ—** ಯೇ, ಅಗ್ನ್ಯಾಹಿತಾಃ, ಅಸ್ಯ, ಕಲಾಭೇದತಃ, ಉಕ್ತಾಃ, ಹರಹರಿಹಯಪೂರ್ವಾಂತ್ಯಾಃ, ಷೋಡಶ, ದೇವತಾಃ, ಅತಿತರಾಂ, ವಿವಿದುಃ, ತೇ, ಸುಹುತಂ, ಅತಿಸೃಜಂತಃ, ಯೇನ, ಗಾಯತ್ರಲೋಕಃ, ಭವತಿ (ತಾದೃಕ್), ಉಚಿತಂ, ಅಪೂರ್ವಂ, ಅಗ್ನಿಹೋತ್ರಂ, ವ್ಯಧುಃ ।

**ಅನ್ವಯಾರ್ಥ—**

**ಯೇ** = ಯಾವ

**ಅಗ್ನ್ಯಾಹಿತಾಃ** = ಅಗ್ನಿಹೋತ್ರಿಗಳು, ಅಗ್ನ್ಯಾಧಾನ ಮಾಡಿ ನಿತ್ಯದಲ್ಲಿಯೂ (ಅಗ್ನಿಯಲ್ಲಿ ಹೋಮ ಮಾಡುವವರು)

**ಅಸ್ಯ** = ಈ ಅಗ್ನಿಹೋತ್ರದ,

**ಕಲಾಭೇದತ** = ಅವಾಂತರ ವಿಭಾಗಗಳ ಭೇದದಿಂದ,

**ಉಕ್ತಾಃ** = ಹೇಳಲ್ಪಟ್ಟ

**ಹರ, ಹರಿಹಯ, ಪೂರ್ವಾಂತ್ಯಾಃ** = ರುದ್ರದೇವರು, ಹಸುರಾದ ಕುದುರೆಗಳುಳ್ಳ ಇಂದ್ರರು, ಮೊದಲು ಕೊನೆಯಲ್ಲಿ ಉಳ್ಳ

**ಷೋಡಷ** = ಹದಿನಾರು ಮಂದಿ,

**ದೇವತಾಃ** = ದೇವತೆಗಳನ್ನು,

**ಅತಿತರಾಂ** = ಬಹಳವಾಗಿ, ಚೆನ್ನಾಗಿ,

**ವಿವಿದುಃ** = ತಿಳಿದಿದ್ದರೋ,

**ತೇ** = ಅಂತಹ ಅಗ್ನಿಹೋತ್ರಿಗಳು,

**ಸುಹುತಂ** = ಹವಿಸ್ಸನ್ನು (ಹಾಲನ್ನು),

**ಅತಿಸೃಜಂತಃ** = 'ನ ಮಮ' ಎಂದು ಅಗ್ನಿಯಲ್ಲಿ ಹಾಕುತ್ತಾ,

**ಯೇನ** = ಯಾವುದರಿಂದ,

**ಗಾಯತ್ರಲೋಕಃ(ಭವತಿ)** = ಗಾನಮಾಡುವವರನ್ನು ಕಾಪಾಡುವುದರಿಂದ ಗಾಯತ್ರ ನಾಮಕನಾದ ವಿಷ್ಣುವಿನ ಲೋಕವು ಪ್ರಾಪ್ತವಾಗುವುದೋ

**ತಾದೃಕ್** = ಅಂತಹ

**ಉಚಿತಂ** = ತಮಗೆ ಯೋಗ್ಯವಾದ,

**ಅಪೂರ್ವಂ** = ಎಲ್ಲರಿಗೂ ಸಾಧ್ಯವಲ್ಲದ (ಅಸಾಧಾರಣವಾದ),

**ಅಗ್ನಿಹೋತ್ರಂ** = ಅಗ್ನಿಹೋತ್ರ ಹೋಮವನ್ನು,

**ವ್ಯಧುಃ** = ಮಾಡಿದರು.

**ತಾತ್ಪರ್ಯ—** ಅಲ್ಲಿ ಅಗ್ನ್ಯಾಧಾನ ಮಾಡಿದ ಅನೇಕ ಅಗ್ನಿಹೋತ್ರಿಗಳಿದ್ದರು. ಅವರು ಸಾಯಂಕಾಲ ಸಂಧ್ಯಾವಂದನಾದಿಗಳನ್ನು ಮುಗಿಸಿ ಅನಂತರ ಅಗ್ನಿಹೋತ್ರ ಹೋಮವನ್ನು ಮಾಡಿದರು. ಈ ಅಗ್ನಿಹೋತ್ರ ಹೋಮದ

ಆದಿಯಲ್ಲಿ ರುದ್ರ, ಅಂತ್ಯದಲ್ಲಿ ಇಂದ್ರ ಎಂಬ ದೇವತೆಗಳು ಒಟ್ಟು ಹದಿನಾರು ದೇವತೆಗಳು ಪೂಜಿಸಲ್ಪಡುತ್ತಾರೆ. ಆ ಅಗ್ನಿಹೋತ್ರಿಗಳು ಈ ದೇವತೆಗಳನ್ನೆಲ್ಲಾ ಚೆನ್ನಾಗಿ ತಿಳಿದಿದ್ದರು. ಸಮಿತ್ತು, ಹಾಲು, ತುಪ್ಪ ಮುಂತಾದ ಹವಿಸ್ಸುಗಳನ್ನು ಪರಮಾತ್ಮನಲ್ಲಿ ಅರ್ಪಣ ಬುದ್ಧಿಯಿಂದ 'ಸ್ವಾಹಾ, ನ ಮಮ' ಇದು ಇಂತಹ ದೇವತೆಗೆ ಅರ್ಪಿತವಾಗಿದೆ. ಇದು ನನಗಲ್ಲ ರುದ್ರಾದಿ ದೇವತೆಗಳಿಗೆ ಎಂದು ಹೇಳಿ ಅರ್ಪಿಸುತ್ತಾರೆ. ಗಾನ ಮಾಡುವವರನ್ನು ಕಾಪಾಡುವುದರಿಂದ ಗಾಯತ್ರ ಎಂಬ ಹೆಸರುಳ್ಳ ಶ್ರೀಹರಿಯ ಲೋಕವನ್ನು ಈ ಅಗ್ನಿಹೋತ್ರ ಹೋಮವನ್ನು ಮಾಡುವ ನಿಷ್ಕಾಮ ಕರ್ಮಿಗಳು ಹೊಂದುತ್ತಾರೆ. ಮಮತೆಯನ್ನು ಬಿಟ್ಟು ಫಲಾಪೇಕ್ಷೆಯಿಲ್ಲದೆ ಪರಮಾತ್ಮನಲ್ಲಿ ಸಮರ್ಪಿಸುವ ಈ ಅಗ್ನಿಹೋತ್ರವು ಜ್ಞಾನದ್ವಾರಾ ಮೋಕ್ಷವನ್ನೇ ಕೊಡುತ್ತದೆ. ಇಂತಹ ಅಗ್ನಿಹೋತ್ರವನ್ನು ಅಲ್ಲಿರುವ ಅಗ್ನಿಹೋತ್ರಿಗಳು ಮಾಡಿದರು ಎಂದು ಭಾವ.

ವಿಗ್ರಹ ಮತ್ತು ಕೋಶ—

**ಷೋಡಶ—** ಷಡಧಿಕಾಃ ದಶ ಷೋಡಶ (16) ।

**ಹರಹರಿಹಯಪೂರ್ವಾಂತ್ಯಾಃ—** ಹರಶ್ಚ ಹರಿಹಯಶ್ಚ ಹರಹರಿಹಯೌ, ಪೂರ್ವಶ್ಚ ಅಂತ್ಯಶ್ಚ ಪೂರ್ವಾಂತ್ಯೌ, ಹರಹರಿಹಯೌ ಪೂರ್ವಾಂತ್ಯೌ ಯಾಸಾಂ ತಾಃ ಹರಹರಿಹಯಪೂರ್ವಾಂತ್ಯಾಃ । ಹರಯ = ಕಪಿಲ ವರ್ಣದ, 'ಹಯಾಃ (ಕುದುರೆಗಳು) ಯಸ್ಯ ಸಃ ಹರಿಹಯಃ (ಇಂದ್ರನು) ಜಂಭಭೇದೀ ಹರಿಹಯಃ ಸ್ವಾರಾಟ್ ನಮುಚಿಸೂದನಃ' ಅಮರ, ಹರಃ = ಈಶ್ವರ, 'ಹರಃ ಸ್ಮರಹರೋಗರ್ಭಃ' ಅಮರ ।

**ಕಲಾಭೇದತಃ—** ಕಲಾನಾಂ ಭೇದಃ ಕಲಾಭೇದಃ, ಕಲಾಭೇದೇನ ಇತಿ ಕಲಾಭೇದತಃ ।

**ಸುಹುತಂ—** ಶೋಭನಂ ಚ ತತ್ ಹುತಂ ಚ ಸುಹುತಂ ತತ್ ।

**ಅಪೂರ್ವಂ—** ನ ಪೂರ್ವ ಅಪೂರ್ವಂ ।

**ಗಾಯತ್ರಲೋಕಃ—** ಗಾಯತಿ ತ್ರಾಯತೇ ಚೇತಿ ಗಾಯತ್ರಃ, ಗಾಯತ್ರಸ್ಯ ಲೋಕಃ ಗಾಯತ್ರಲೋಕಃ ।

**ಕ್ರಿಯಾಪದ—** **ವಿವಿದುಃ** - ವಿವೇದ ವಿವಿದತುಃ ವಿವಿದುಃ, ವಿವೇದಿಥ ವಿವಿದಥುಃ ವಿವಿದ, ವಿವೇದ ವಿವಿದಿವ ವಿವಿದಿಮ । ವಿದಜ್ಞಾನೇ (ತಿಳಿ, ಗೌರವಿಸು) ಸಕ, ಸೇಟ್, ಪರ, ಲಿಟ್, ಪ್ರಥಮಪುರುಷೇ ಬಹುವಚನಂ । **ವ್ಯಧುಃ**- ವಿ ಅಧುಃ, ಅಧಾತ್-ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ. ಡುಧಾಞ್ ಧಾರಣ ಪೋಷಣಯೋಃ ಸಕ. ಅನಿ. ಉಭ. ಲುಙ್, ಪರಸ್ಮೈಪದ ಪ್ರಥಮಪುರುಷೇ ಬಹುವಚನಂ ।

**ಪ್ರಯೋಗ—** ಯೈಃ ಅಗ್ನ್ಯಾಹಿತೈಃ ಅಸ್ಯ (ಅಗ್ನಿಹೋತ್ರಸ್ಯ) ಕಲಾಭೇದತಃ ಉಕ್ತಾಃ ಹರಹರಿಹಯಪೂರ್ವಾಂತ್ಯಾಃ ಷೋಡಶ ದೇವತಾಃ ಅತಿತರಾಂ ವಿವಿದಿರೇ, ತೈಃ ಅಗ್ನ್ಯಾಹಿತೈಃ ಸುಹುತಂ ಅತಿಸೃಜದ್ಭಿಃ ಯೇನ (ಅಗ್ನಿಹೋತ್ರೇಣ) ಗಾಯತ್ರಲೋಕೇನ (ಭೂಯತೇ) (ತಾದೃಶಂ) ಉಚಿತಂ ಅಪೂರ್ವಂ ಅಗ್ನಿಹೋತ್ರಂ ವ್ಯಧಾಯಿ ।

**ವಿಶೇಷವಿಚಾರ—** ಅಗ್ನಿಹೋತ್ರದ ಹದಿನಾರು ದೇವತೆಗಳನ್ನು ಭಾವಪ್ರಕಾಶಿಕಾದಲ್ಲಿ ಹೇಳಿದ್ದಾರೆ.

'ರೌದ್ರಂ ಗವಿ ಸದ್'ವಾಯವ್ಯಂ ಉಪಾವಸೃಷ್ಟಮಾಶ್ವಿನಂ ದುಹ್ಯಮಾನಂ ಸೌಮ್ಯಂ ದುಗ್ಧಂ ವಾರುಣಮಧಿಶ್ರಿತಂ ಪೌಷ್ಣಂ ಸಮುದಯಂತಂ ಮಾರುತಂ ವಿಷ್ಯಂದಮಾನಂ ವೈಶ್ವದೇವಂ ಬಿಂದುಮನ್ಮೈತ್ರಂ ಶರೋಗೃಹೀತಂ ದ್ಯಾವಾ-ಪೃಥಿವೀಯಮುದ್ವಾಸಿತಂ ಸಾವಿತ್ರಂ ಪ್ರಕ್ರಾಂತಂ ವೈಷ್ಣವಂ ಹ್ರಿಯಮಾಣಂ ಬಾರ್ಹಸ್ಪತ್ಯಮ್ ಉಪಸನ್ನಂ ಅಗ್ನೇಃ ಪೂರ್ವಾಹುತಿಃ ಪ್ರಜಾಪತೇರುತ್ತರೈಂದ್ರಾಹುತಂ' ಇತಿ ಶ್ರುತ್ಯುಕ್ತಾಃ ಷೋಡಶ ದೇವತಾಃ ।

ಅಗ್ನಿಹೋತ್ರ ಹೋಮದಲ್ಲಿ ಹೋಮ ಮಾಡಬೇಕಾದ ಹಾಲು ಕರೆಯುವ ಮೊದಲು ಗೋವಿನಲ್ಲಿರುತ್ತದೆ. ಅದಕ್ಕೆ ಗವಿಸತ್ ಎಂದು ಹೆಸರು ಆ ಹಾಲಿಗೆ 'ರೌದ್ರ' ಎಂದು ಹೆಸರು ಅಂದರೆ, ರುದ್ರನೇ ದೇವತೆಯಾಗಿ ಉಳ್ಳದ್ದು ಆ ಹಾಲು ಎಂದು ಅರ್ಥ. ಹೀಗೆ (1) ರುದ್ರನು ಅಗ್ನಿಹೋತ್ರ ಹೋಮಕ್ಕೆ ಮೊದಲನೇ ದೇವತೆ, (2) ಹಸುವಿನ ಕೆಚ್ಚಲಲ್ಲಿರುವ ಹಾಲು ಹಸುವಿನ ಮೊಲೆಗೆ ಬಂದಾಗ ಅದಕ್ಕೆ 'ಉಪಾವಸೃಷ್ಟ' ಎಂದು ಹೆಸರು. ಆಗ ಅದು ವಾಯುವ್ಯವಾಗುತ್ತದೆ. ಸ್ತನದಲ್ಲಿರುವ

ಆ ಕ್ಷೀರಕ್ಕೆ ವಾಯುವೇ ದೇವತೆ ಎಂದು ಅರ್ಥ, (3) ದುಹ್ಯಮಾನಂ ಸತ್ ಆಶ್ವಿನಂ = ಹಾಲು ಕರೆಯುತ್ತಿರುವಾಗ ಆ ಹಾಲು ಆಶ್ವಿನ ಎಂದು ಹೇಳಲ್ಪಡುತ್ತದೆ. ಅಶ್ವಿನೀದೇವತೆಗಳೇ ಆ ಹಾಲಿಗೆ ದೇವತೆಗಳು ಎಂದು ಅರ್ಥ, (4) ಸೌಮ್ಯಂ ದುಗ್ಧಂ = ಹಾಲು ಕರೆದು ಆದ ಮೇಲೆ ಆ ಹಾಲಿಗೆ ಸೋಮನೇ ದೇವತೆಯು, (5) ವಾರುಣಮಧಿಶ್ರಿತಂ ಕಾಯಿಸಲಿಕ್ಕಾಗಿ ಒಲೆಯಲ್ಲಿಟ್ಟಿರುವ ಆ ಹಾಲು 'ವಾರುಣ'ವಾಗುತ್ತದೆ. ವರುಣನೇ ಆ ಹಾಲಿಗೆ ದೇವತೆಯು, (6) ಪೌಷ್ಣಂ ಸಮುದ-ಯಂತಂ = ಬಿಸಿಯಾಗಿ ಮೇಲಕ್ಕೆ ಬರುತ್ತಿರುವ ಆ ಹಾಲು 'ಪೌಷ್ಣ' ಅಂದರೆ ಪೂಷನೇ ದೇವತೆಯಾಗಿ ಉಳ್ಳದ್ದಾಗಿರುತ್ತದೆ, (7) ಮಾರುತಂ ವಿಷ್ಯಂದಮಾನಂ = ಕುದಿಯುತ್ತಾ ಪಾತ್ರೆಯಿಂದ ಹೊರಗೆ ಸುರಿಯುತ್ತಿರುವ ಆ ಹಾಲು 'ಮಾರುತ' ಎನಿಸಿಕೊಳ್ಳುತ್ತದೆ, (8) ವೈಶ್ವದೇವಂ ಬಿಂದುಮತ್ = ಹಾಲು ಉಕ್ಕಿ ಹೊರಗೆ ಸುರಿಯುವಾಗ ಗುಳ್ಳೆ ಗುಳ್ಳೆಯಾಗಿಯೂ ಹನಿ ಹನಿಯಾಗಿಯೂ ಸುರಿಯುತ್ತದೆ. ಅದು ವೈಶ್ವದೇವ ಎನ್ನಿಸಿಕೊಳ್ಳುತ್ತದೆ. ವಿಶ್ವೇದೇವತೆಗಳೇ ಆ ಹಾಲಿಗೆ ದೇವತೆಗಳು ಎಂದು ಅರ್ಥ, (9) ಮೈತ್ರಂ ಶರೋ ಗೃಹೀತಂ = ಹಾಲಿಗೆ ಸೇರಿದಂತೆ ಅದರ ಮೇಲಿರುವ ಕೆನೆಯು ಮೈತ್ರ ಎನಿಸಿಕೊಳ್ಳುತ್ತದೆ. ಅದಕ್ಕೆ 'ಮಿತ್ರ' ಎಂಬುವನೇ ದೇವತೆಯು, (10) ದ್ಯಾವಾಪೃಥಿವೀಯಮುದ್ವಾಸಿತಂ = ಕೆಳಗೆ ಇಟ್ಟಿರುವ ಆ ಹಾಲಿಗೆ 'ದ್ಯಾವಾಪೃಥಿವೀಯ' ಎಂದು ಹೆಸರು. ದ್ಯೋ ಮತ್ತು ಪೃಥಿವಿಗಳು ಆ ಹಾಲಿಗೆ ದೇವತೆಗಳು, (11) ಸಾವಿತ್ರಂ ಪ್ರಕ್ರಾಂತಂ = ಹೋಮ ಮಾಡಲು ಪ್ರಾರಂಭಿಸಿದಾಗ ಆ ಹಾಲಿಗೆ ಸಾವಿತ್ರ ಎಂದು ಹೆಸರು 'ಸವಿತೃ'ವೇ ಆ ಹಾಲಿಗೆ ದೇವತೆ, (12) ವೈಷ್ಣವಂ (ಹ್ರೀ) ಹ್ರಿಯಮಾಣಂ = ಹೋಮ ಮಾಡಲು ಅಗ್ನಿಯ ಸಮೀಪಕ್ಕೆ ಒಯ್ಯಲ್ಪಡುತ್ತಿರುವ, ಆ ಹಾಲು ವೈಷ್ಣವ ವಿಷ್ಣುವೇ ದೇವತೆಯಾಗಿ ಉಳ್ಳದ್ದಾಗಿರುತ್ತದೆ, (13) ಬಾರ್ಹಸ್ಪತ್ಯಂ ಉಪಸನ್ನಂ = ಅಗ್ನಿಯ ಸಮೀಪಕ್ಕೆ ಬಂದಿರುವ ಆ ಹಾಲು ಬಾರ್ಹಸ್ಪತ್ಯ ಅಂದರೆ ಬೃಹಸ್ಪತಿಯೇ ದೇವತೆಯಾಗಿ ಉಳ್ಳದ್ದಾಗಿರುತ್ತದೆ, (14) ಅಗ್ನೇಃ ಪೂರ್ವಾಹುತಿಃ = ಅನಂತರ ಮೊದಲನೇ ಆಹುತಿಯು ಅಗ್ನಿದೇವತಾಕವಾದುದು, ಅಗ್ನಿಗೆ ಮೊದಲನೇ ಆಹುತಿಯನ್ನು ಅರ್ಪಿಸಬೇಕು, (15) ಪ್ರಜಾಪತೇರುತ್ತರಾ = ಉತ್ತರಾಹುತಿಯು ಪ್ರಜಾಪತಿದೇವತಾಕವಾಗಿದೆ, (16) ಹುತಂ ಐಂದ್ರಂ = ಹೋಮ-ಕ್ರಿಯೆಗೆ ಇಂದ್ರನೇ ದೇವತೆಯು ಎಂದು ಆ ಶ್ರುತಿಯ ಅರ್ಥ. ಹೀಗೆ ರುದ್ರನಿಂದ ಆರಂಭಿಸಿ ಇಂದ್ರನವರೆಗೆ ಅಗ್ನಿಹೋತ್ರ ಹೋಮದಲ್ಲಿ ಹೋಮಿಸಬೇಕಾದ ಹಾಲಿಗೆ ಹದಿನಾರು ದೇವತೆಗಳಿದ್ದಾರೆ. ಆ ಅಗ್ನಿಹೋತ್ರಿಗಳು ಈ ಅವಾಂತರ ದೇವತಾ ವಿಭಾಗವನ್ನು ಚೆನ್ನಾಗಿ ತಿಳಿದಿದ್ದರು ಎಂದು ಅರ್ಥ. 'ಅತಿಸೃಜಂತಃ ಅಗ್ನಯ ಇದಂ ನ ಮಮ ಇತ್ಯಾದಿರೂಪೇಣ' ಭಾವ ಪ್ರಕಾಶಿಕಾ. ಆಹಿತಃ ಅಗ್ನಿಃ ಯೈಃ ತೇ ಅಗ್ನ್ಯಾಹಿತಾಃ 'ವಾ, ಹಿತಾಗ್ನ್ಯಾದಿಷು' ಎಂಬ ಸೂತ್ರದಿಂದ ನಿಷ್ಠಾ(ಕ್ತ) ಪ್ರತ್ಯಯಂತವಾದ ಆಹಿತಃ ಶಬ್ದಕ್ಕೆ ಪರನಿಪಾತ, ಯೇನ ಗಾಯತ್ರಲೋಕಃ ಎಂದರೆ ಇಂತಹ ಅಗ್ನಿಹೋತ್ರದಿಂದ ಗಾಯತ್ರೀ ಶಬ್ದವಾಚ್ಯನಾದ ವಿಷ್ಣುವಿನ ಲೋಕಪ್ರಾಪ್ತಿಯಾಗುತ್ತದೆ ಎಂದು ಅರ್ಥ, ''ಗಾಯತ್ರೀಲೋಕಮಾಪ್ನೋತಿ ಇತಿ ಶ್ರುತೌ ಗಾಯತ್ರೀಶಬ್ದೋದಿತಸ್ಯ ವಿಷ್ಣೋಃ ಲೋಕೋ ಜ್ಞಾನದ್ವಾರಾ ಭವತೀತಿ'' ಭಾವಪ್ರಕಾಶಿಕಾ. ಗಾಯತ್ರೀಲೋಕಮಾಪ್ನೋತಿ-ಗಾಯತ್ರೀಲೋಕವನ್ನು ಹೊಂದುತ್ತಾನೆ ಎಂಬ ಶ್ರುತಿಯಲ್ಲಿ ಗಾಯತ್ರೀ ಶಬ್ದದಿಂದ ಹೇಳಲ್ಪಟ್ಟಿರುವ ವಿಷ್ಣುವಿನ ಲೋಕವು ಜ್ಞಾನದ ಮೂಲಕವಾಗಿ ಅಗ್ನಿಹೋತ್ರದಿಂದ ಪ್ರಾಪ್ತವಾಗುತ್ತದೆ ಎಂದು ಅಭಿಪ್ರಾಯ.

★ ★ ★

ಅವತಾರಿಕಾ— ಈ ಶ್ಲೋಕದಿಂದ ಚಂದ್ರೋದಯವನ್ನು ವರ್ಣಿಸುತ್ತಾರೆ.

**ವಿಧುರಯಮಕಲಂಕಃ ಸ್ಯಾದ್ಯದಿ ಸ್ಯಾದವಶ್ಯಂ**
**ನನು ನಿಜಸಹಜಾಯಾಃ ಸುಂದರಾಸ್ಯೇಂದುಕಲ್ಪಃ ।**
**ಇತಿ ಸುರಲಲನಾಭಿರ್ಲಾಲಿತಃ ಖೇಚರೀಭಿಃ**
**ಸಮಧಿಕಮಧುರಿಮ್ನಾ ಪೂರ್ಣಚಂದ್ರಸ್ತದೋದ್ಯೈತ್ ॥ 51 ॥**

ಪದಚ್ಛೇದ – ವಿ ಃ, ಅಯಂ, ಅಕಲಂಕಃ, ಸ್ಯಾತ್, ಯದಿ, ಸ್ಯಾತ್, ಅವಶ್ಯಂ, ನನು, ನಿಜಸಹಜಾಯಾಃ, ಸುಂದರಾಸ್ಯೇಂದ ಕಲ್ಪ, ಇ ತಿ, ಸುರಲಲನಾಭಿಃ, ಲಾಲಿತಃ, ಖೇಚರೀಭಿಃ, ಸಮಧಿಕಮಧುರಿಮ್ಣಾ ಪೂರ್ಣಚಂದ್ರಃ, ತದಾ, ಉದೈತ್ ।

ಅನ್ವಯ— ತದಾ, ಖೇಚರೀಭಿಃ, ಸುರಲಲನಾಭಿಃ, ಅಯಂ, ವಿಧುಃ, ಅಕಲಂಕಃ, ಯದಿ, ಸ್ಯಾತ್ (ತರ್ಹಿ), ಸಮಧಿಕಮಧುರಿಮ್ಣಾ ನಿಜಸಹಜಾಯಾಃ, ಸುಂದರಾಸ್ಯೇಂದುಕಲ್ಪಃ, ಅವಶ್ಯಂ, ಸ್ಯಾತ್, ನನು, ಇತಿ, ಲಾಲಿತಃ, ಪೂರ್ಣಚಂದ್ರಃ, ಉದೈತ್ ।

ಅನ್ವಯಾರ್ಥ—

ತದಾ = ಆ ಚಂದ್ರೋದಯದಲ್ಲಿ,
ಖೇಚರೀಭಿಃ = ಆಕಾಶದಲ್ಲಿ ಸಂಚರಿಸುವ,
ಸುರಲಲನಾಭಿಃ = ದೇವಸ್ತ್ರೀಯರಿಂದ,
ಅಯಂ = ಈ
ವಿಧುಃ = ಚಂದ್ರನು,
ಅಕಲಂಕಃ = ಕಳಂಕವಿಲ್ಲದವನು,
ಯದಿ = ಒಂದು ವೇಳೆ,
ಸ್ಯಾತ್ = ಆಗಿದ್ದರೆ,
(ತರ್ಹಿ = ಆ ಪಕ್ಷದಲ್ಲಿ),
ಸಮಧಿಕಮಧುರಿಮ್ಣಾ = ಬಹಳ ಹೆಚ್ಚಾದ ಸೌಂದರ್ಯದಿಂದ,
ನಿಜಸಹಜಾಯಾಃ = ತನ್ನ ಸಹೋದರಿಯಾದ ಲಕ್ಷ್ಮಿಯ,
ಸುಂದರಾಸ್ಯೇಂದುಕಲ್ಪಃ = ಮನೋಹರವಾಗಿರುವ ಮುಖವೆಂಬ ಚಂದ್ರನಿಗೆ ಸಮಾನನು,
ಅವಶ್ಯಂ = ನಿಶ್ಚಯವಾಗಿಯೂ,
ಸ್ಯಾತ್ನನು = ಆದಾನಷ್ಟೆ
ಇತಿ = ಹೀಗೆಂದು,
ಲಾಲಿತಃ = ಹೊಗಳಲ್ಪಟ್ಟ
ಪೂರ್ಣಚಂದ್ರಃ = ಹದಿನಾರು ಕಲೆಗಳಿಂದ ತುಂಬಿದ ಚಂದ್ರನು,
ಉದೈತ್ = ಉದಯಿಸಿದನು.

ತಾತ್ಪರ್ಯ— ಹೀಗೆ ಸಂಧ್ಯಾಕಾಲವು ಕಳೆಯುತ್ತಾ ಬಂತು. ಆ ದಿನ ಹುಣ್ಣಿಮೆಯಾಗಿತ್ತು. ಆದುದರಿಂದ ಸೂರ್ಯಾಸ್ತಮಯವಾಗುತ್ತಿದ್ದಂತೆಯೇ ಹದಿನಾರು ಕಲೆಗಳಿಂದ ಕೂಡಿದ ಪೂರ್ಣಚಂದ್ರನು ಉದಯಿಸಿದನು. ಅವನನ್ನು ನೋಡಿ ಆಕಾಶದಲ್ಲಿ ಸಂಚರಿಸುವ ದೇವಾಂಗನೆಯರು ''ಈ ಚಂದ್ರನಲ್ಲಿ ಎಲ್ಲಾ ಗುಣಗಳೂ ಇವೆ. ಕಳಂಕವೆಂಬ ಒಂದೇ ಒಂದು ದೋಷವಿದೆ. ಅದೊಂದು ಇಲ್ಲದಿದ್ದರೆ ಈ ಚಂದ್ರನು ಅತಿಶಯವಾದ ಸೌಂದರ್ಯದಿಂದ ತನ್ನ ಸಹೋದರಿಯಾದ ಲಕ್ಷ್ಮೀದೇವಿಗೆ ಸಮಾನನಾಗುತ್ತಿದ್ದನು. ಹೀಗೆ ಲಕ್ಷ್ಮೀದೇವಿಯ ಮುಖಸಾಮ್ಯವನ್ನು ಹೊಂದದಿದ್ದರೂ ಇವನು ಸುಂದರನಾಗಿಯೇ ಇದ್ದಾನೆ'' ಎಂದರು. ಆಕಾಶದಲ್ಲಿ ಸಂಚರಿಸುತ್ತಿದ್ದ ಆ ದೇವಾಂಗನೆಯರು ಚಂದ್ರನನ್ನು ಹೀಗೆ ಹೊಗಳಿದರು. ಹೀಗೆ ಹೊಗಳಿಸಿಕೊಳ್ಳುತ್ತಿದ್ದ ಪೂರ್ಣಚಂದ್ರನು ಆಗ ಉದಯಿಸಿದನು. (ಸಂಭಾವನಾಲಂಕಾರ)

''ಸಕಲಂಕತ್ವಾತ್ ಅಕಲಂಕ ರಮಾ ವದನ ಸಾಮ್ಯಾಭಾವೇಽಪಿ ಏತಾದೃಶಮಾಧುರ್ಯಸ್ಯ ಅನ್ಯತ್ರಾಭಾವಾತ್ ನಾನ್ಯಸಮಾನಃ, ಅನ್ಯಾಪೇಕ್ಷಯಾ ಅಧಿಕಸುಂದರ ಏವ ಇತಿ ಲಾಲಿತಃ ಇತಿ ಭಾವಃ''. ಚಂದ್ರನು ಕಲಂಕದಿಂದ ಕೂಡಿರುತ್ತಾನೆ. ಚಂದ್ರನ ಸಹೋದರಿಯಾದ ಲಕ್ಷ್ಮಿಯ ಮುಖದಲ್ಲಿ ಯಾವ ಕಳಂಕವೂ ಇಲ್ಲ. ಆದುದರಿಂದ ಚಂದ್ರನಿಗೆ ಅಕಳಂಕವಾದ ಲಕ್ಷ್ಮಿಯ ಮುಖದ ಸಾಮ್ಯವು ಕೂಡಲಾರದು, ಆದರೂ ಚಂದ್ರನ ಸೌಂದರ್ಯದ ಹಿರಿಮೆ ಇನ್ನೆಲ್ಲಿಯೂ ಕಂಡು ಬರುವುದಿಲ್ಲ. ಹೀಗೆ ಚಂದ್ರನ ಸಮಾನರು ಮತ್ತಾರೂ ಇಲ್ಲ. ಲಕ್ಷ್ಮಿಯ ಮುಖವನ್ನು ಬಿಟ್ಟು ಮತ್ತೆಲ್ಲರಿಗಿಂತಲೂ ಚಂದ್ರನು ಅಧಿಕ ಸುಂದರನು ಎಂದು ದೇವತಾಸ್ತ್ರೀಯರು ಪೂರ್ಣಚಂದ್ರನನ್ನು ಕೊಂಡಾಡಿದರು ಎಂದು ಭಾವ. (ಛಲಾರಿಯ)

**ವಿಗ್ರಹ ಮತ್ತು ಕೋಶ—**

**ಅಕಲಂಕಃ—** ನ ವಿದ್ಯತೇ ಕಲಂಕಃ ಯಸ್ಯ ಸಃ ಅಕಲಂಕಃ । ಕಲಂಕ = ಕಪ್ಪು ಗುರುತು. 'ಕಲಂಕೋಽಂಕಾಪವಾದಯೋಃ' ಅಮರ ।

**ನಿಜಸಹಜಾ—** ಸಹ ಜಾಯತೇ ಇತಿ ಸಹಜಾ, ನಿಜಾ ಚ ಸಾ ಸಹಜಾ ಚ ನಿಜಸಹಜಾ ತಸ್ಯಾಃ ।

**ಸುಂದರಾಸ್ಯೇಂದುಕಲ್ಪಃ—** ಸುಂದರಂ ಚ ತತ್ ಆಸ್ಯಂ ಚ ಸುಂದರಾಸ್ಯಂ, ಸುಂದರಾಸ್ಯಮೇವ ಇಂದುಃ ಸುಂದರಾಸ್ಯೇಂದುಃ, ಸುಂದರಾಸ್ಯೇಂದುನಾ ಸದೃಶಃ ಸುಂದರಾಸ್ಯೇಂದುಕಲ್ಪಃ ।

**ಸುರಲಲನಾಭಿಃ—** ಸುರಾಣಾಂ ಲಲನಾಃ ಸುರಲಲನಾಃ ತಾಭಿಃ । ಲಲನಾ = ಸ್ತ್ರೀ. 'ಪ್ರಮದಾ ಮಾನಿನೀ ಕಾಂತಾ ಲಲನಾ ಚ ನಿತಂಬಿನೀ' ಅಮರ ।

**ಖೇಚರ್ಯಃ—** ಖೇ ಚರಂತೀತಿ ಖೇಚರ್ಯಃ ತಾಭಿಃ ।

**ಸಮಧಿಕಮಧುರಿಮ್ಣಾ—** ಸಮ್ಯಕ್ ಅಧಿಕಃ ಸಮಧಿಕಃ, ಮಧುರಸ್ಯ ಭಾವಃ ಮಧುರಿಮಾಃ, ಸಮಧಿಕಶ್ಚಾಸೌ ಮಧುರಿಮಾ ಚ ಸಮಧಿಕಮಧುರಿಮಾ ತೇನ ।

**ಪೂರ್ಣಚಂದ್ರಃ—** ಪೂರ್ಣಶ್ಚಾಸೌ ಚಂದ್ರಶ್ಚ ಪೂರ್ಣಚಂದ್ರಃ ।

**ಪ್ರಯೋಗ—** ತದಾ ಖೇಚರೀಭಿಃ ಸುರಲಲನಾಭಿಃ, ಅನೇನ ವಿಧುನಾ ಅಕಲಂಕೇನ ಯದಿ ಭೂಯೇತ ರ್ತಹಿ ಸಮಧಿಕಮಧುರಿಮ್ಣಾ ನಿಜಸಹಜಾಯಾಃ ಸುಂದರಾಸ್ಯೇಂದುಕಲ್ಪೇನ ಅವಶ್ಯಂ ಭೂಯೇತ ಇತಿ ಲಾಲಿತೇನ ಪೂರ್ಣಚಂದ್ರೇಣ ಉದೈಯತ (ಭಾವೇ) ಉದಯಿಸಲ್ಪಟ್ಟಿತು.

**ವಿಶೇಷವಿಚಾರ—** ಈ ಶ್ಲೋಕದ ತಾತ್ಪರ್ಯವನ್ನು ಮನನ ಮಾಡಲು ಅನುಕೂಲಿಸುವುದಕ್ಕಾಗಿ ವಿಶ್ವಪತಿತೀರ್ಥೀಯದಲ್ಲಿ ಬರೆದ ಸಂಸ್ಕೃತ ತಾತ್ಪರ್ಯವನ್ನೂ ಕೊಡಲಾಗಿದೆ.

**ಅಯಂಭಾವಃ—** ಚಂದ್ರಃ ನಿಜಸಹಜಾಯಾಃ ರಮಾಯಾಃ ಸುಂದರವದನಮಾಧುರ್ಯಸಮಾನಮಾಧುರ್ಯವಾನ್ ಭವತಿ । ತಥಾಪಿ ನ ರಮಾವದನಸಮಾನಃ ಸಮಮಧುರಮಾಧುರ್ಯವತ್ತ್ವೇಽಪಿ ಸಕಲಂಕತ್ವಾತ್ । ತಸ್ಮಾತ್ ಯದ್ಯಯಮಕಲಂಕಃ ಸ್ಯಾತ್ ರ್ತಹಿ ನಿಷ್ಕಲಂಕರಮಾವದನಸಮಾನೋ ಭವೇತ್, ನ ಚಾಯಂ ನಿಷ್ಕಲಂಕಃ ಏವಂ ಚ ಸತಿ ಸಕಲಂಕತ್ವಾತ್ ನ ರಮಾವದನಸಮಾನಃ ಏತಾದೃಶಮಾಧುರ್ಯಸ್ಯ ಅನ್ಯತ್ರ ಅಭಾವಾತ್, ನಾಸ್ಯ ಸಮಾನಃ, ತಸ್ಮಾದಸಮಾನಃ ಏವ ।

ಚಂದ್ರನು ತನ್ನ ಸಹೋದರಿಯಾದ ರಮಾದೇವಿಯ ಸುಂದರ ವದನದ ಸೌಂದರ್ಯಕ್ಕೆ ಸಮಾನವಾದ ಸೌಂದರ್ಯವುಳ್ಳವನೇ ಆಗಿದ್ದಾನೆ. ಆದರೂ ರಮೆಯ ವದನಕ್ಕೆ ಅವನು ಸಮಾನನಲ್ಲ. ಸಮವಾದ ಮಧುರ ಸೌಂದರ್ಯವಿದ್ದರೂ ಇವನು ಸಕಲಂಕನಾಗಿರುವುದೇ ಇದಕ್ಕೆ ಕಾರಣ. ಆದುದರಿಂದ ಇವನು ಒಂದು ವೇಳೆ ಅಕಲಂಕನಾದರೆ ನಿಷ್ಕಳಂಕವಾದ ರಮೆಯವದನಕ್ಕೆ ಸಮಾನನಾದಾನು. ಇವನು ನಿಷ್ಕಳಂಕನಲ್ಲ. ಹೀಗಿರಲಾಗಿ ಸಕಲಂಕನಾದುದರಿಂದ

ರಮೆಯ ವದನ ಸಮಾನನಲ್ಲ, ಆದರೆ ಇಂತಹ ಮಾಧುರ್ಯ ಬೇರೆಲ್ಲಿಯೂ ಇಲ್ಲದುದರಿಂದ ಇವನಿಗೆ ಸಮಾನರಿಲ್ಲ ಹೀಗೆ ಇವನು ತನ್ನ ಅಕ್ಕನನ್ನು ಬಿಟ್ಟರೆ ಅಸಮಾನನೇ ಸರಿ.

**ಕ್ರಿಯಾಪದ—** ಸ್ಯಾತ್ - ಸ್ಯಾತ್ ಸ್ಯಾತಾಂ ಸ್ಯುಃ, ಸ್ಯಾಃ ಸ್ಯಾತಂ ಸ್ಯಾತ, ಸ್ಯಾಂ ಸ್ಯಾವ ಸ್ಯಾಮ । ಸ್ಯಾತ್ ಎರಡು ಬಾರಿ ಬಂದಿದೆ. ಅಸಭುವಿ ಅಕ ಸೇಟ್ ಪರ to be ವಿಧಿಲಿಙ್. ಪ್ರಥಮಪುರುಷೇ ಏಕವಚನಂ । **ಉದೈತ್** - ಉದ್+ಐತ್ ಐತಾಂ ಆಯನ್, ಐಃ ಐತಂ ಐತ, ಆಯಂ ಐವ ಐಮ । ಇಣ್ (ಇ) ಗತೌ, ಸಕ. ಅನಿ ಪರ. to go ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನಂ ।

★ ★ ★

**ಅವತಾರಿಕಾ—** ಚಂದ್ರೋದಯ ಸಮಯದಲ್ಲಿ ಕೆಲವರಿಗೆ ಸಂತಾಪ, ಮತ್ತೆ ಕೆಲವರಿಗೆ ತಂಪು (ಆನಂದ) ಉಂಟಾಯಿತೆಂಬ ವಿಷಯವನ್ನು ವರ್ಣಿಸುತ್ತಾರೆ.

**ಇನವಿರಹಮಸಹ್ಯಂ ಪ್ರಾಪ್ಯ ಪದ್ಮೈಃ ಸಚಕ್ರೈ-**
**ಶ್ಚಿರಮಿಹ (ಮಪಿ) ಪರಿತಪ್ತಂ ಪೂರ್ವತಪ್ತೈಃ ಸುತುಷ್ಟಮ್ ।**
**ಮೃದುಕುಮುದಚಕೋರೈಃ ಪಾದಸಂಗೇನ ರಾಜ್ಞಃ**
**ಕಮಪಿ ಸಕಲಹೃದ್ಯಂ ಕಲ್ಪಯೇನ್ನೈವ ದೈವಮ್ ॥ 52 ॥**

**ಪದಚ್ಛೇದ—** ಇನವಿರಹಂ, ಅಸಹ್ಯಂ, ಪ್ರಾಪ್ಯ, ಪದ್ಮೈಃ, ಸಚಕ್ರೈಃ, ಚಿರಂ, ಇಹ, (ಅಪಿ) ಪರಿತಪ್ತಂ, ಪೂರ್ವತಪ್ತೈಃ ಸುತುಷ್ಟಮ್, ಮೃದುಕುಮುದಚಕೋರೈಃ, ಪಾದಸಂಗೇನ, ರಾಜ್ಞಃ, ಕಂ, ಅಪಿ, ಸಕಲಹೃದ್ಯಂ, ಕಲ್ಪಯೇತ್, ನ, ಏವ, ದೈವಮ್ ।

**ಅನ್ವಯ—** ಇಹ, ಸಚಕ್ರೈಃ, ಪದ್ಮೈಃ, ಅಸಹ್ಯಂ, ಇನವಿರಹಂ, ಪ್ರಾಪ್ಯ, ಚಿರಂ, ಪರಿತಪ್ತಂ, ಪೂರ್ವತಪ್ತೈಃ, ಮೃದುಕುಮುದಚಕೋರೈಃ (ಅಪಿ), ರಾಜ್ಞಃ, ಪಾದಸಂಗೇನ, ಸುತುಷ್ಟಂ, ದೈವಂ, ಕಂ, ಅಪಿ, ಸಕಲಹೃದ್ಯಂ, ನ, ಏವ, ಕಲ್ಪಯೇತ್ ।

**ಅನ್ವಯಾರ್ಥ—**

**ಇಹ** = ಈ ರಾತ್ರಿಯಲ್ಲಿ
**ಸಚಕ್ರೈಃ** = ಚಕ್ರವಾಕ ಪಕ್ಷಿಗಳಿಂದ ಸಹಿತವಾದ,
**ಪದ್ಮೈಃ** = ತಾವರೆ ಹೂವುಗಳಿಂದ,
**ಅಸಹ್ಯಂ** = ಸಹಿಸಲು ಅಸಾಧ್ಯವಾದ,
**ಇನ ವಿರಹಂ** = ಸೂರ್ಯನ, ಅಗಲುವಿಕೆಯನ್ನು
**ಪ್ರಾಪ್ಯ** = ಹೊಂದಿ,
**ಚಿರಂ** = ಬಹಳ ಕಾಲ (ಬೆಳಗಾಗುವವರೆಗೆ, ಬಹಳ ಹೊತ್ತು),
**ಪರಿತಪ್ತಂ** = ವ್ಯಥೆ ಹೊಂದಲ್ಪಟ್ಟಿತು.
**ಪೂರ್ವತಪ್ತೈಃ** = ಮೊದಲು ಹಗಲಿನಲ್ಲಿ ಸೂರ್ಯನ ಕಿರಣಗಳಿಂದ ಸಂತಾಪಗೊಂಡ,
**ಮೃದುಕುಮುದ ಚಕೋರೈಃ** = ಕೋಮಲವಾದ, ನೈದಿಲೆ, ಚಕೋರಪಕ್ಷಿ ಇವುಗಳಿಂದ,
**ರಾಜ್ಞಃ** = ಚಂದ್ರನ,

**ಪಾದಸಂಗೇನ** = ಕಿರಣಗಳ ಸಂಬಂಧದಿಂದ,

**ಸುತುಷ್ಟಂ** = ಸಂತೋಷ ಹೊಂದಲ್ಪಟ್ಟಿತು.

**ದೈವಂ** = ಭಾಗ್ಯದೇವತೆಯು,

**ಕಂ ಅಪಿ** = ಯಾವ ಪದಾರ್ಥವನ್ನು,

**ಸಕಲಹೃದ್ಯಂ** = ಎಲ್ಲರಿಗೂ ಅನುಕೂಲವಾಗಿ,

**ನೈವ ಕಲ್ಪಯೇತ್** = ಉಂಟು ಮಾಡಲಾರದು.

ತಾತ್ಪರ್ಯ— ಸೂರ್ಯನು ಇರುವಾಗ ಚಕ್ರವಾಕ ಪಕ್ಷಿಗಳೂ, ತಾವರೆ ಹೂವುಗಳೂ ಸೂರ್ಯನ ಕಿರಣ ಸ್ಪರ್ಶವನ್ನು ಹೊಂದಿ ಇರುತ್ತವೆ. ಸೂರ್ಯನು ಅಸ್ತಮಯ ಹೊಂದಿದ ಕೂಡಲೇ ಅವುಗಳಿಗೆ ಸೂರ್ಯನ ವಿರಹವು ಸಹಿಸಲು ಅಸಾಧ್ಯವಾಯಿತು. ಅವುಗಳು ರಾತ್ರಿಯ ಪೂರ್ತಿ ಚಂದ್ರನ ಕಿರಣ ಸಂಪರ್ಕದಿಂದ ಬೆಳಗಾಗುವವರೆಗೂ ದುಃಖಪಟ್ಟವು. ಶತ್ರುವು (ಪರಪುರುಷನು) ಕಾಲಿನಿಂದ ಒದ್ದರೆ ಹೇಗೆ ದುಃಖವಾಗುತ್ತದೆಯೋ ಅದರಂತೆ ಅವುಗಳಿಗೆ ದುಃಖವುಂಟಾಯಿತು. ಅನಂತರ ಚಂದ್ರೋದಯವಾಯಿತು. ಈಗ ಹಿಂದೆ ಸೂರ್ಯನ ಪಾದಗಳ ಸ್ಪರ್ಶದಿಂದ (ಒದೆತದಿಂದ) ಸಂತಾಪಗೊಂಡಿದ್ದ ಕೋಮಲವಾದ ಕುಮುದ ಪುಷ್ಪಗಳೂ, ಚಕೋರ ಪಕ್ಷಿಗಳೂ ಕೂಡ ಚಂದ್ರನ ಪಾದಸ್ಪರ್ಶದಿಂದ (ಕಿರಣಗಳ ಸಂಪರ್ಕದಿಂದ) ಸಂತೋಷಪಟ್ಟವು. ಹೀಗೆ ಒಬ್ಬರಿಗೆ ಒಂದು ವಸ್ತುವಿನಿಂದ ಸುಖವುಂಟಾದರೆ ಬೇರೆ ಕೆಲವರಿಗೆ ಅದೇ ವಸ್ತುವಿನಿಂದ ದುಃಖವುಂಟಾಗುತ್ತದೆ. ಕೆಲವರಿಗೆ ಸುಖಕ್ಕೆ ಕಾರಣವಾದ ವಸ್ತುವು ಇತರರಿಗೆ ದುಃಖಕ್ಕೆ ಕಾರಣವಾಗುತ್ತದೆ. ದೈವವು ಯಾವ ವಸ್ತುವನ್ನೂ ಎಲ್ಲರಿಗೂ ಅನುಕೂಲವನ್ನಾಗಿ ಮಾಡುವುದಿಲ್ಲ. ಲೋಕದಲ್ಲಿ ನಿರ್ದೋಷವಾದ ವಸ್ತುವು ಯಾವುದೂ ಇಲ್ಲ. ನಿರ್ಗುಣವಾದ ವಸ್ತುವೂ ಯಾವುದೂ ಇಲ್ಲ. ಒಂದು ವಸ್ತುವು ಒಂದಕ್ಕೆ ಅನುಕೂಲವಾಗಿದ್ದರೆ ಮತ್ತೊಂದಕ್ಕೆ ಪ್ರತಿಕೂಲ ವಾಗುತ್ತದೆ. ಹೀಗೆ ನಿರ್ದೋಷ ಪದಾರ್ಥವೂ ಕೆಲವರಿಗೆ ಅಪ್ರಿಯವಾಗುತ್ತದೆ ಎಂದು ಭಾವ. ಇಲ್ಲಿ ಅರ್ಥಾಂತರನ್ಯಾಸಾಲಂಕಾರವಿದೆ.

ವಿಗ್ರಹ ಮತ್ತು ಕೋಶ—

**ಇನವಿರಹಂ**— ಇನಸ್ಯ ವಿರಹಃ ಇನವಿರಹಃ ತಂ । ಇನ = ಸೂರ್ಯ, 'ಇನಃ ಸೂರ್ಯೇ ನೃಪೇ ಪತ್ಯೌ' ವಿಶ್ವ

**ಅಸಹ್ಯಂ**— ಸೋಢುಂ ಅಶಕ್ಯಃ ಅಸಹ್ಯಃ ತಂ ।

**ಸಚಕ್ರೈಃ**— ಚಕ್ರೈಃ ಸಹಿತಾನಿ ಸಚಕ್ರಾಣಿ ತೈಃ । ಚಕ್ರ = ಚಕ್ರವಾಕ ಎಂಬ ಪಕ್ಷಿ ಚಕ್ಕವಕ್ಕಿ 'ಕೋಕಶ್ಚಕ್ರಶ್ಚಕ್ರವಾಕಃ ರಥಾಂಗಾಹ್ವಯನಾಮಕಃ' ಅಮರ ।

**ಪೂರ್ವತಪ್ತಾಃ**— ಪೂರ್ವಂ ತಪ್ತಾಃ ಪೂರ್ವತಪ್ತಾಃ ತೈಃ ।

**ಸುತುಷ್ಟಂ**— ಸಮ್ಯಕ್ ತುಷ್ಟಂ ಸುತುಷ್ಟಂ (ಭಾವೇ) ।

**ಪರಿತಪ್ತಂ**— ಪರಿತಃ ತಪ್ತಂ ಪರಿತಪ್ತಂ । ಇದೂ ಭಾವ ಪ್ರತ್ಯಯಾಂತ ಶಬ್ದ.

**ಮೃದುಕುಮುದಚಕೋರೈಃ**— ಮೃದೂನಿ ಚ ತಾನಿ ಕುಮುದಾನಿ ಚ ಮೃದುಕುಮುದಾನಿ, ಮೃದು ಕುಮುದಾನಿ ಚ ಚಕೋರಾಶ್ಚ ಮೃದುಕುಮುದಚಕೋರಾಃ ತೈಃ ।

**ಪಾದಸಂಗಾಃ**— ಪಾದಾನಾಂ ಸಂಗಾಃ ಪಾದಸಂಗಾಃ । ಪಾದ = ಕಾಲು, ಕಿರಣ, ನಾಲ್ಕನೆಯ ಒಂದು ಭಾಗ, 'ಪಾದಾರಶ್ಮ್ಯಂಘ್ರಿತುರ್ಯಾಂಶಾಃ' ಅಮರ, ರಾಜ್ಞಃ = ಚಂದ್ರನ, ರಾಜಾ = ಚಂದ್ರನು, ರಾಜನ್ ಶಬ್ದ. 'ರಾಜಾ ಪ್ರಭೌ ನೃಪೇ ಚಂದ್ರೇ' ವಿಶ್ವ ।

**ಸಕಲಹೃದ್ಯಃ**— ಸಕಲಾನಾಂ ಹೃದ್ಯಃ ಸಕಲಹೃದ್ಯಃ ತಂ । ದೈವ = ವಿಧಿ, ಅದೃಷ್ಟ 'ದೈವಂ ದಿಷ್ಟಂ ಭಾಗಧೇಯಂ' ಅಮರ.

**ಕ್ರಿಯಾಪದ**— ಕಲ್ಪಯೇತ್ - ಕಲ್ಪಯೇತ್ ಕಲ್ಪಯೇತಾಂ ಕಲ್ಪಯೇಯುಃ, ಕಲ್ಪಯೇಃ ಕಲ್ಪಯೇತಂ, ಕಲ್ಪಯೇಯಂ ಕಲ್ಪಯೇವ ಕಲ್ಪಯೇಮ । ಕೃಪೂ (ಕಲ್ಪ) ಸಾಮರ್ಥ್ಯೇ ಅಕ ವೇಟ್ ಆತ್ಮನೇ to be fit for to be able ಈ ಧಾತುವಿನ ಣಿಜಂತ ವಿಧಿಲಿಙ್ ಪರಸ್ಮೈ.

**ಪ್ರಯೋಗ**— ಇಹ ಸಚಕ್ರಾಣಿ ಪದ್ಮಾನಿ ಅಸಹ್ಯಂ ಇನವಿರಹಂ ಪ್ರಾಪ್ಯ ಚಿರಂ ಪರ್ಯತಪನ್, ರಾಜ್ಞಃ ಪಾದಸಂಗೇನ ಪೂರ್ವತಪ್ತಾಃ ಮೃದುಕುಮುದಚಕೋರಾಃ (ಅಪಿ) ಸಮತುಷ್ಯನ್, ದೈವೇನ ಕೋಽಪಿ ಸಕಲಹೃದ್ಯಃ ನೈವ ಕಲ್ಪ್ಯೇತ ।

**ವಿಶೇಷವಿಚಾರ**— ಇಲ್ಲಿ ಒಬ್ಬನು ಪಾದಗಳಿಂದ ತುಳಿಯುತ್ತಿದ್ದರೂ ಅವನಲ್ಲಿ ಕೆಲವರು ಪ್ರೀತಿಯನ್ನೇ ಮಾಡುತ್ತಾರೆ. ಸೂರ್ಯನು ತನ್ನ ಪಾದಗಳಿಂದ (ಕಾಲುಗಳಿಂದ ಮತ್ತು ಕಿರಣಗಳಿಂದ ಎಂದೂ ಅರ್ಥ) ತಾಪವನ್ನುಂಟು ಮಾಡುತ್ತಿದ್ದರೂ ಚಕ್ರವಾಕ ಪಕ್ಷಿಗಳು ಮತ್ತು ತಾವರೆ ಹೂವುಗಳು ಸಂತೋಷಪಡುತ್ತಿದ್ದವು. ಮತ್ತೊಬ್ಬನು ಪಾದಸ್ಪರ್ಶ ಮಾಡಿದರೆ ಕೆಲವರಿಗೆ ನೋವಾಗುತ್ತದೆ. ಚಂದ್ರನ ಪಾದಸ್ಪರ್ಶದಿಂದ (ಕಾಲು ಮತ್ತು ಕಿರಣಗಳ ಸ್ಪರ್ಶದಿಂದ) ತಾವರೆಗಳು ಮತ್ತು ಚಕ್ರವಾಕ ಪಕ್ಷಿಗಳಿಗೆ ದುಃಖವುಂಟಾಗುತ್ತಿತ್ತು. ಆದರೆ ಚಂದ್ರನ ಮೃದುವಾದ ಪಾದಸ್ಪರ್ಶದಿಂದ ಕುಮುದಗಳು ಮತ್ತು ಚಕೋರಗಳು (ಜೊನ್ನವಕ್ಕಿ) ಸಂತೋಷಪಡುತ್ತಿದ್ದವು. ಹೀಗೆ ನಿರ್ದೋಷವಾದರೂ, ಗುಣಭರಿತವಾದರೂ ಎಲ್ಲರಿಗೂ ಪ್ರಿಯವಾದ ಒಂದು ಪದಾರ್ಥವಿರುವುದಿಲ್ಲ, ದೇವರು ನಿರ್ದೋಷನಾದರೂ ಗುಣಪೂರ್ಣನಾದರೂ ಎಲ್ಲರೂ ದೇವರನ್ನು ಪ್ರೀತಿಸುವುದಿಲ್ಲ. ಇದರಿಂದ ಪ್ರೀತಿಗೆ ಅಂತರಂಗದ ಒಂದು ರೀತಿಯ ಸ್ವಭಾವವು ಕಾರಣವೇ ಹೊರತು ಬಾಹ್ಯವಾದ ಉಪಾಧಿಗಳು ಕಾರಣವಲ್ಲ ಎಂಬ ಭವಭೂತಿಯ ಮಾತು ಸ್ಮರಣೆಗೆ ಬರುತ್ತದೆ.

**''ವ್ಯತಿಷಜತಿ ಪದಾರ್ಥಾನಾಂತರಃ ಕೋಽಪಿ ಹೇತುಃ ನ ಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೇ ।**
**ವಿಕಸತಿ ಹಿ ಪತಂಗಸ್ಯೋದಯೇ ಪುಂಡರೀಕಂ ದ್ರವತಿ ಚ ಹಿಮರಶ್ಮಾವುದ್ಗತೇ ಚಂದ್ರಕಾಂತಃ ॥''**

ಒಳಗಿನ ಯಾವುದೋ ಒಂದು ಕಾರಣವು ಪದಾರ್ಥಗಳನ್ನು ಪರಸ್ಪರ ಹತ್ತಿರಕ್ಕೆ ತರುತ್ತದೆ. ಅಥವಾ ಅವುಗಳಿಗೆ ಸ್ನೇಹವನ್ನುಂಟು ಮಾಡುತ್ತದೆ. ಸೌಂದರ್ಯ, ಕಾಂತಿ, ಮುಂತಾದ ಬಾಹ್ಯ ಉಪಾಧಿಗಳನ್ನು ಪ್ರೀತಿಯು ಆಧರಿಸಿರುವುದಿಲ್ಲ. ಸೂರ್ಯನು ಉದಯಿಸಿದಾಗ ತಾವರೆಯು ಅರಳುತ್ತದೆ, ನಗುತ್ತದೆ. ಸೂರ್ಯನ ತಾಪ ತಗುಲಿದರೂ ವಿಕಸಿತವಾಗುತ್ತದೆ. ತಂಪಾದ ಕಿರಣಗಳುಳ್ಳ ಚಂದ್ರನ ಕಿರಣಗಳು ಸೋಕಿದಾಗ ಅಮೃತಶಿಲೆಯು ಘನೀಭೂತವಾಗುವುದಿಲ್ಲ, ದ್ರವಿಸಿ ನೀರು ಸುರಿಸುತ್ತದೆ. ಇಲ್ಲಿ (ಭವಭೂತಿ) ಕವಿಯು ಅಚೇತನಗಳ ದೃಷ್ಟಾಂತವನ್ನೇ ಕೊಟ್ಟಿದ್ದಾನೆ. ಆದರೆ ಈ ಕಾವ್ಯಕರ್ತೃಗಳು ಚೇತನ ಅಚೇತನಗಳ ಒಂದೊಂದು ಜೋಡಿಯನ್ನೇ ದೃಷ್ಟಾಂತವಾಗಿ ಕೊಟ್ಟು ಮೇಲಿನ ವಿಷಯವನ್ನು ಬಹಳ ಹೃದಯಂಗಮವಾಗಿ ಸೂಚ್ಯವಾಗಿ ತಿಳಿಸಿದ್ದಾರೆ.

★ ★ ★

**ಅವತಾರಿಕಾ**— ಉದಯಿಸಿದ ಚಂದ್ರನು ಪದಾರ್ಥಗಳನ್ನು ಪ್ರಕಾಶಗೊಳಿಸಿ ಜನರಿಗೆ ತಿಳಿಸಿದನು ಎಂಬುದನ್ನು ಶ್ರೀಮಧ್ವಾಚಾರ್ಯರ ಉಪದೇಶಕ್ಕೆ ಹೋಲಿಸಿ ವರ್ಣಿಸುತ್ತಿದ್ದಾರೆ.

**ದಲಿತೇಂದ್ರನೀಲಮಣಿನೀಲವಿಭ್ರಮಂ**
**ನವಕುಂದಕುಡ್ಮಲಸಿತದ್ವಿಜಾವಲಿ ।**
**ಸ್ಮಿತಯಾ ನಗೋತ್ತಮಶಿರಸ್ಸುಜಾತಯಾ**
**ವನಮಾಲಯಾ ಸುರಭಿತಾಶಯಾಽನ್ವಿತಮ್ ॥ 53 ॥**

**(53, 54, 55 ಈ ಮೂರು ಶ್ಲೋಕಗಳಿಗೆ ಏಕಾನ್ವಯವಿರುವುದರಿಂದ ಇದು ವಿಶೇಷಕವು. ಪ್ರಕಟೀಚಕಾರ ಎಂಬ ಕ್ರಿಯಾಪದದ ಜೊತೆಗೆ ಅನ್ವಯವನ್ನು ಹೇಳಬೇಕು)**

**ಪದಚ್ಛೇದ—** ದಲಿತೇಂದ್ರನೀಲಮಣಿನೀಲವಿಭ್ರಮಂ, ನವಕುಂದಕುಡ್ಮಲಸಿತದ್ವಿಜಾವಲಿ, ಸ್ಮಿತಯಾ, ನಗೋತ್ತಮ ಶಿರಸ್ಸುಜಾತಯಾ, (ನಗೋತ್ತಮ ಶಿರಸ್ಸು+ಜಾತಯಾ ಎಂದು ಎರಡು ಪದಗಳನ್ನೂ ಇಟ್ಟುಕೊಳ್ಳಬೇಕು) ವನಮಾಲಯಾ, ಸುರಭಿತಾಶಯಾ, ಅನ್ವಿತಂ ।

**ಅನ್ವಯ—**(ಭಗವಾನ್ ಸಃ) ದಲಿತೇಂದ್ರನೀಲಮಣಿನೀಲವಿಭ್ರಮಂ, ನವಕುಂದಕುಡ್ಮಲಸಿತದ್ವಿಜಾವಲಿ, ಸ್ಮಿತಯಾ, ನಗೋತ್ತಮಶಿರಸ್ಸುಜಾತಯಾ, ಸುರಭಿತಾಶಯಾ, ವನಮಾಲಯಾ, ಅನ್ವಿತಂ (ಅರ್ಥಾಂತರಂ ಗೋಭಿಃ ಪ್ರಕಟೀಚಕಾರ. ಚಂದ್ರಸ್ತು ಶಬ್ದಗುಣಕಂ ಅರ್ಥಾಂತರಂ ಪ್ರಕಟೀಚಕಾರ) ।

**ಅನ್ವಯಾರ್ಥ—**

**ಭಗವಾನ್**= ಪೂಜ್ಯರಾದ,
**ಸಃ** = ಆ ಶ್ರೀಮಧ್ವಾಚಾರ್ಯರು,
**ದಲಿತ** = ಕೆತ್ತಿರುವ (ಸೀಳಿರುವ),
**ಇಂದ್ರನೀಲಮಣಿನೀಲವಿಭ್ರಮಂ** = ಇಂದ್ರನೀಲರತ್ನದಂತೆ ಶ್ಯಾಮಲವಾದ ಕಾಂತಿಯುಳ್ಳ,
**ನವಕುಂದಕುಡ್ಮಲಸಿತದ್ವಿಜಾವಲಿ** = ಹೊಸದಾದ ಮಾಗಿಮಲ್ಲಿಗೆ ಹೂವಿನ ಮೊಗ್ಗಿನಂತೆ ಬೆಳ್ಳಗಿರುವ, ಹಲ್ಲುಗಳ ಸಾಲುಳ್ಳ (ನಕ್ಷತ್ರಗಳ ಸಮೂಹವುಳ್ಳ),
**ಸ್ಮಿತಯಾ** = ಅರಳಿದ,
**ನಗೋತ್ತಮಶಿರಸುಜಾತಯಾ** = ಶ್ರೇಷ್ಠವಾದ ಮರದ ತುದಿಯಲ್ಲಿ ಹುಟ್ಟಿರುವ,
(**ನಗೋತ್ತಮ** = ಶ್ರೇಷ್ಠವಾದ ಪರ್ವತದ,
**ಶಿರಸ್ಸು** = ತುದಿಗಳಲ್ಲಿ ಜಾತಯಾ) ಹುಟ್ಟಿದ,
**ಸುರಭಿತಾಶಯಾ** = ಸುವಾಸನೆಗೊಳಿಸಲ್ಪಟ್ಟ ದಿಕ್ಕುಗಳುಳ್ಳ,
**ವನಮಾಲಯಾ** = ವೈಜಯಂತಿ ಎಂಬ ಹೂ ಮಾಲೆಯಿಂದ,
(**ವನ** = ಕಾಡುಗಳ,
**ಮಾಲಯಾ** = ಸಾಲಿನಿಂದ)
**ಅನ್ವಿತಂ** = ಕೂಡಿರುವ,
**ಅರ್ಥಾಂತರಂ** = ಜಗತ್ತೆಂಬ ವಸ್ತುವಿಗಿಂತ ವಿಲಕ್ಷಣವಾದ ಶ್ರೀಕೃಷ್ಣನೆಂಬ ವಸ್ತುವನ್ನು,
**ಗೋಭಿಃ** = ಮಾತುಗಳಿಂದ,
**ಪ್ರಕಟೀಚಕಾರ** = ವ್ಯಕ್ತಗೊಳಿಸಿದರು.
**ಚಂದ್ರಃ ತು** = ಚಂದ್ರನಾದರೋ,
**ಶಬ್ದಗುಣಂ** = ಶಬ್ದವೇ ಗುಣವಾಗಿ ಉಳ್ಳ,
**ಅರ್ಥಾಂತರಂ** = ಆಕಾಶವೆಂಬ ಮತ್ತೊಂದು ವಸ್ತುವನ್ನು,
**ಗೋಭಿಃ** = ಕಿರಣಗಳಿಂದ,
**ಪ್ರಕಟೀಚಕಾರ** = ಪ್ರಕಾಶಗೊಳಿಸಿದನು.

**ತಾತ್ಪರ್ಯ—** ಆಕಾಶವು ಸೀಳಿ ಕೆತ್ತಿ ಸಾಣೆ ಹಿಡಿದ ಇಂದ್ರನೀಲ ಮಣಿಯಂತೆ ನೀಲವರ್ಣದಿಂದ ಕೂಡಿ ಕೊಂಡಿದೆ. ಹಾಗೂ ಬಹಳ ಸುಂದರವಾಗಿದೆ. ಹೊಸದಾದ ಮಲ್ಲಿಗೆ ಮೊಗ್ಗಿನಂತಿರುವ ನಕ್ಷತ್ರಗಳ ಸಾಲುಗಳಿಂದ ಕಂಗೊಳಿಸುತ್ತಿದೆ. ಆಕಾಶದ ಕೆಳಗೆ ಭೂಮಿಯಲ್ಲಿರುವ ಎತ್ತರವಾದ ಬೆಟ್ಟಗಳ ತುದಿಯಲ್ಲಿ ಹುಟ್ಟಿ ಬೆಳೆದಿರುವ ಎತ್ತರವಾದ ಮರಗಳ

ತುದಿಯಲ್ಲಿ ಅರಳಿದ ಹೂವುಗಳಿಂದ ಆಕಾಶವು ಅಲಂಕೃತವಾಗಿದೆ. ತಲೆಯ ಮೇಲೆ ಅರಳಿದ ಹೂವುಗಳನ್ನು ಹೊತ್ತಿರುವ ಮರಗಳ ಸಾಲುಗಳು, ವನಮಾಲೆಯಂತೆ ಆಕಾಶಕ್ಕೆ ಅಲಂಕಾರವಾಗಿವೆ. ಚಂದ್ರನು ಉದಯಿಸಿದಾಗ ಇಂತಹ ಶಬ್ದವೆಂಬ ಒಂದು ಗುಣವುಳ್ಳ ಆಕಾಶವನ್ನು ತನ್ನ ಕಿರಣಗಳಿಂದ ಬೆಳದಿಂಗಳಿನಿಂದ ಪ್ರಕಾಶಗೊಳಿಸಿದನು. (ಅಸಾಧಾರಣವಾದ ಸೌಂದರ್ಯದಿಂದ ಕೂಡಿದ ವಸ್ತುವನ್ನು ದೀಪದ ಬೆಳಕಿನಲ್ಲಿ ಪ್ರಕಟಗೊಳಿಸಿ, ಆ ವಸ್ತುವು ಎಲ್ಲರ ಕಣ್ಣಿಗೂ ಬೀಳುವಂತೆ ಒಬ್ಬ ಮಹಾಪುರುಷನು ಲೋಕದಲ್ಲಿ ಹೇಗೆ ಮಾಡುತ್ತಾನೋ ಅದರಂತೆ ಎಂದು ಧ್ವನಿ).

ಶ್ರೀಕೃಷ್ಣನೂ ಸೀಳಿ ಕೆತ್ತಿ ಸಾಣೆ ಹಿಡಿದು ಪ್ರಕಾಶಗೊಳಿಸಿದ ಇಂದ್ರನೀಲ ಮಣಿಯಂತೆ ಸುಂದರವಾಗಿ ಕಂಗೊಳಿಸುತ್ತಾನೆ. ಅವನ ಸುಂದರವದನದಲ್ಲಿ ಮಲ್ಲಿಗೆ ಮೊಗ್ಗಿನಂತೆ ಶುಭ್ರವಾದ ಹಲ್ಲುಗಳು ಮಂದಹಾಸ ಮಾಡುವಾಗ ಪ್ರಕಾಶಿಸುತ್ತಿದ್ದವು. ಅವನ ಕೊರಳಲ್ಲಿ ಶ್ರೇಷ್ಠವಾದ ಮರಗಳ ಮೇಲೆ ಅರಳಿದ ಹೂವುಗಳಿಂದ ರಚಿತವಾದ ಎಲ್ಲಾ ದಿಕ್ಕುಗಳನ್ನು ಸುವಾಸನೆಗೊಳಿಸುವ ವೈಜಯಂತೀ ಎಂಬ ಅಪ್ರಾಕೃತವಾದ ಹೂಮಾಲೆಯು ಕಂಗೊಳಿಸುತ್ತಿತ್ತು. ಇಂತಹ ಅಪ್ರಾಕೃತದಿವ್ಯಮಹಾಪುರುಷನಾದ ಶ್ರೀಕೃಷ್ಣನ ಸ್ವರೂಪವನ್ನು ಅವನ ಸರ್ವೋತ್ತಮತ್ವಾದಿ ಗುಣಗಳನ್ನು ಶ್ರೀಮಧ್ವಾಚಾರ್ಯರು ತಮ್ಮ ಮಾತುಗಳಿಂದ ಮತ್ತು ಗ್ರಂಥದಲ್ಲಿ ಬರೆದಿರುವ ವಾಕ್ಯಗಳಿಂದ ಸಜ್ಜನರಿಗೆ ತಿಳಿಯುವಂತೆ ಪ್ರಕಟಗೊಳಿಸಿದರು. ಚಂದ್ರನು ಶಬ್ದವೆಂಬ ಒಂದೇ ಗುಣವುಳ್ಳ ವಸ್ತುವನ್ನು ಪ್ರಕಟಗೊಳಿಸಿದನು. ಆಚಾರ್ಯರು ಅನಂತಗುಣಪೂರ್ಣವಾದ ಶ್ರೀಕೃಷ್ಣನೆಂಬ ವಿಲಕ್ಷಣ ವಸ್ತುವನ್ನು ಪ್ರಕಾಶಗೊಳಿಸಿದರು ಎಂದು ವ್ಯತ್ಯಾಸವಿದೆ ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ದಲಿತೇಂದ್ರನೀಲಮಣಿನೀಲವಿಭ್ರಮಂ—** ದಲಿತಶ್ಚಾಸೌ ಇಂದ್ರನೀಲಮಣಿಶ್ಚ ದಲಿತೇಂದ್ರನೀಲಮಣಿಃ, ತದ್ವತ್ ನೀಲಃ ವಿಭ್ರಮಃ ಯಸ್ಯ ತತ್ ದಲಿತೇಂದ್ರನೀಲಮಣಿನೀಲವಿಭ್ರಮಂ, ತತ್ । ('ಆಕಾಶೇ ನೀಲಿಮೋದೇತಿ' ಎಂಬ ಶ್ರುತಿಯಿಂದ ಭೂತಾಕಾಶದಲ್ಲಿ ನೀಲರೂಪವಿದೆ ಎಂದು ಪ್ರಸಿದ್ಧಿಯಿದೆ. ಶ್ರೀಕೃಷ್ಣನೂ ನೀಲವರ್ಣದವನಾಗಿದ್ದಾನೆ) ।

**ನವಕುಂದಕುಡ್ಮಲಸಿತದ್ವಿಜಾವಲಿ—** ಕುಂದಾನಾಂ ಕುಡ್ಮಲಾಃ ಕುಂದಕುಡ್ಮಲಾಃ, ನವಾಶ್ಚ ತೇ ಕುಂದಕುಡ್ಮಲಾಶ್ಚ ನವಕುಂದ ಕುಡ್ಮಲಾಃ, ದ್ವಿಜಾನಾಂ ಆವಲಿಃ ದ್ವಿಜಾವಲಿಃ, ನವಕುಂದಕುಡ್ಮಲವತ್ ಸಿತಾ ದ್ವಿಜಾವಲಿಃ ಯಸ್ಯ ತತ್ ನವಕುಂದಕುಡ್ಮಲ ಸಿತದ್ವಿಜಾವಲಿ ತತ್ । ಕುಡ್ಮಲ = ಮೊಗ್ಗು 'ಕುಡ್ಮಲೋ ಮುಕುಲೋಽಸ್ತ್ರಿಯಾಂ' ಅಮರ. ದ್ವಿಜ = ಹಲ್ಲು, ನಕ್ಷತ್ರ, 'ದಂತವಿಪ್ರಾಂಡಜಾ ದ್ವಿಜಾಃ' ಅಮರ. ಆವಲಿ = ಸಾಲು, 'ವೀಥ್ಯಾಲಿರಾವಲಿಃ ಪಂಕ್ತಿಃ' ಅಮರ ।

**ನಗೋತ್ತಮಶಿರಸ್ಸುಜಾತಯಾ—** ನಗಾನಾಂ ಉತ್ತಮಾಃ ನಗೋತ್ತಮಾಃ, ನಗೋತ್ತಮಾನಾಂ ಶಿರಾಂಸಿ ನಗೋತ್ತಮಶಿರಾಂಸಿ, ಸು ಸಮ್ಯಕ್ ಜಾತಾ ಸುಜಾತಾ, ನಗೋತ್ತಮಶಿರಸ್ಸು ಸುಜಾತಾ ನಗೋತ್ತಮಶಿರಸ್ಸುಜಾತಾ ತಯಾ । ನಗ = ಮರ, ಪರ್ವತ, 'ಶೈಲವೃಕ್ಷೌ ನಗಾವಗೌ' ಅಮರ. 'ಅಗೋ, ನಗಸ್ತು ಭುಜಗೇ ಭಾನೌ ಭೂಧರಭೂರುಹೋಃ' ಭಾಸ್ಕರ ।

**ಸುರಭಿತಾಶಯಾ—** ಸುರಭಿತಾಃ ಆಶಾಃ ಯಯಾ ಸಾ ಸುರಭಿತಾಶಾಃ ತಯಾ. ಆಶಾ = ದಿಕ್ಕು, ಆಸೆ, 'ಆಶಾ ತೃಷ್ಣಾ ದಿಶೋಃ ಪ್ರೋಕ್ತಾ' ವಿಶ್ವ, 'ಆಶಾ ದಿಗತಿತೃಷ್ಣಯೋಃ' ಅಮರ. ವನಮಾಲಾ = ಕಾಡುಗಳ ಸಾಲು. ವೈಜಯಂತೀ ಎಂಬ ಶ್ರೀಕೃಷ್ಣನ ಮಾಲೆ, 'ಆಪಾದಲಂಬಿನೀ ಮಾಲಾ ವನಮಾಲಾಭಿಧೀಯತೇ' ಎಂಬ ವಚನದಂತೆ ಕತ್ತಿನಿಂದ ಕಾಲುಗಳವರೆಗೆ ಲಂಬಿಸುತ್ತಿರುವ ಶ್ರೀಕೃಷ್ಣನ ಕೊರಳಲ್ಲಿರುವ ಮಾಲೆಯು ವನಮಾಲೆ ಎಂದೂ ವೈಜಯಂತೀ ಎಂದೂ ಪ್ರಸಿದ್ಧವಾಗಿದೆ. ಮಾಲಾ = ಹೂಮಾಲೆ ಸಾಲು 'ಮಾಲಾಚೋನ್ನತ ಭೂರ್ಮಾಲಾ', 'ಮಾಲಾ ಪಂಕ್ತೌ ಪುಷ್ಪಾದಿದಾಮನಿ' ಭಾಸ್ಕರ.

ಇಲ್ಲಿ ಮಂಜುಭಾಷಿಣೀ ವೃತ್ತ. 'ಸಜಸಾ ಜಗೌ ಚ ಯದಿ ಮಂಜುಭಾಷಿಣೀ' ಎಂದು ಅದರ ಲಕ್ಷಣ. ಇಲ್ಲಿ ಉಪಮಾ ವ್ಯತಿರೇಕ ಮತ್ತು ಶ್ಲೇಷಾಲಂಕಾರಗಳಿವೆ. ಕ್ರಿಯಾಪದದ ರೂಪವನ್ನು ಕೊನೆಯ ಶ್ಲೋಕದಲ್ಲಿ ವ್ಯಾಖ್ಯಾನದಲ್ಲಿ ಕೊಡಲಾಗಿದೆ.

**ಪ್ರಯೋಗ—** ಭಗವತಾ ತೇನ ದಲಿತೇಂದ್ರಮಣಿನೀಲವಿಭ್ರಮಂ, ನವಕುಂದಕುಡ್ಮಲಸಿತದ್ವಿಜಾವಲಿ, ಸ್ಮಿತಯಾ ನಗೋತ್ತಮಶಿರಸ್ಸುಜಾತಯಾ ಸುರಭಿತಾಶಯಾ ವನಮಾಲಯಾ ಅನ್ವಿತಂ ಅರ್ಥಾಂತರಂ ಗೋಃ ಪ್ರಕಟೀಚಕ್ರೇ, ಚಂದ್ರೇಣ ತು ಶಬ್ದಗುಣಕಂ ಅರ್ಥಾಂತರಂ ಪ್ರಕಟೀಚಕ್ರೇ (ಕರ್ಮಣಿ) ।

★ ★ ★

**ಅವತಾರಿಕಾ—** ಈ ಚಮತ್ಕಾರವಾದ ಅರ್ಥಾಂತರ ವರ್ಣನೆಯನ್ನೇ ಮುಂದುವರಿಸುತ್ತಾರೆ ಮತ್ತು ಸರ್ಗ ಸಮಾಪ್ತಿಯನ್ನು ಮಾಡುತ್ತಾರೆ.

**ಮೃದುಗಾಮಿವಿಮಾನಸಂಪದೋ**
**ರಮಯತ್ ಸುಸ್ಮಿತಗೋಪಸುಂದರೀಃ ।**
**ಪರಿತಾಪವಿಹೀನಮುಜ್ವಲಂ**
**ಸುತತಂ ಸೂಕ್ಷ್ಮತರಾಂಬರಂ ವರಮ್ ॥ 54 ॥**

**ಗೋಭಿಸ್ತಮಾಂಸ್ಯಪನಯನ್ ಗತಿದಂ ಪ್ರಜಾನಾ-**
**ಮರ್ಥಾಂತರಂ ಸ ಭಗವಾನ್ ಪ್ರಕಟೀಚಕಾರ ।**
**ಸಾನಂದಚಿದ್ಗುಣಗಣಂ ಪರಿಪೂರ್ಣಸಂವಿತ್**
**ಚಂದ್ರಸ್ತು ಶಬ್ದಗುಣಮಿತ್ಯಯಮೇವ ಭೇದಃ ॥ 55 ॥**

**ಪದಚ್ಛೇದ—** ಮೃದುಗಾಮಿವಿಮಾನಸಂಪದಃ, ರಮಯತ್, ಸುಸ್ಮಿತಗೋಪಸುಂದರೀಃ, ಪರಿತಾಪವಿಹೀನಂ ಉಜ್ವಲಂ, ಸುತತಂ, ಸೂಕ್ಷ್ಮತರಾಂಬರಂ, ವರಂಗೋಭಿಃ, ತಮಾಂಸಿ, ಅಪನಯನ್, ಗತಿದಂ, ಪ್ರಜಾನಾಂ, ಅರ್ಥಾಂತರಂ, ಸಃ, ಭಗವಾನ್, ಪ್ರಕಟೀಚಕಾರ, ಸಾನಂದಚಿದ್ಗುಣಗಣಂ, ಪರಿಪೂರ್ಣಸಂವಿತ್, ಚಂದ್ರಃ, ತು, ಶಬ್ದಗುಣಂ, ಇತಿ, ಅಯಂ, ಏವ, ಭೇದಃ ।

**ಅನ್ವಯ—** ಭಗವಾನ್, ಸಃ, ಪರಿಪೂರ್ಣಸಂವಿತ್, ಗೋಭಿಃ, ತಮಾಂಸಿ, ಅಪನಯನ್, ಪ್ರಜಾನಾಂ, ಗತಿದಂ, ಮೃದುಗಾಮಿವಿಮಾನಸಂಪದಃ, ಸುಸ್ಮಿತಗೋಪಸುಂದರೀಃ, ರಮಯತ್, ಪರಿತಾಪವಿಹೀನಂ, ಉಜ್ವಲಂ, ಸುತತಂ, ಸೂಕ್ಷ್ಮತರಾಂಬರಂ, ವರಂ, ಸಾನಂದಚಿದ್ಗುಣಗಣಂ, ಅರ್ಥಾಂತರಂ, ಪ್ರಕಟೀಚಕಾರ, ಚಂದ್ರಃ, ತು, ಶಬ್ದಗುಣಂ, ಅರ್ಥಾಂತರಂ, ಪ್ರಕಟೀಚಕಾರ, ಇತಿ, ಅಯಂ, ಏವ, ಭೇದಃ ।

**ಅನ್ವಯಾರ್ಥ—**

**ಭಗವಾನ್** = ಷಡ್ಗುಣೈಶ್ವರ್ಯಸಂಪನ್ನರಾದ,
**ಸಃ** = ಅಂತಹ,
**ಪರಿಪೂರ್ಣಸಂವಿತ್** = ಶ್ರೀ ಪೂರ್ಣಪ್ರಜ್ಞಾಚಾರ್ಯರು,
**ಗೋಭಿಃ** = ಪ್ರವಚನದ ಮಾತುಗಳಿಂದ, (ಚಂದ್ರಪಕ್ಷದಲ್ಲಿ ಕಿರಣಗಳಿಂದ)
**ತಮಾಂಸಿ** = ಅಜ್ಞಾನವೆಂಬ ಕತ್ತಲೆಗಳನ್ನು, (ಕತ್ತಲೆಯನ್ನು)

**ಅಪನಯನ್** = ಹೋಗಲಾಡಿಸುತ್ತಾ,
**ಪ್ರಜಾನಾಂ** = ಮೋಕ್ಷಯೋಗ್ಯರಾದ ಭಕ್ತರಾದ ಸಜ್ಜನರಿಗೆ, (ಎಲ್ಲಾ ಜನರಿಗೆ)
**ಗತಿದಂ** = ಮೋಕ್ಷವನ್ನು ಕೊಡುವ, (ಇತ್ತ ಅತ್ತ ಮಾರ್ಗ ಸಂಚಾರಕ್ಕೆ ಅನುಕೂಲತೆಯನ್ನು ಉಂಟುಮಾಡುವ),
**ಮೃದುಗಾಮಿವಿಮಾನಸಂಪದಃ** = ಮೆಲ್ಲಗೆ ಸಂಚರಿಸುವ ಪ್ರಣಯಕೋಪವಿಲ್ಲದಿರುವಿಕೆ ಎಂಬ ಸಂಪತ್ತುಳ್ಳ,
(**ಮೃದುಗಾಮಿ** = ಮೆಲ್ಲಗೆ ಸಂಚರಿಸುವ,
**ವಿಮಾನಸಂಪದ** = ವಿಮಾನಗಳ ಸಮೃದ್ಧಿಯುಳ್ಳ),
**ಸುಸ್ಮಿತ ಗೋಪಸುಂದರೀಃ** = ಒಳ್ಳೆಯ ಮಂದಹಾಸವುಳ್ಳ, ಗೋಪಿಕಾಸ್ತ್ರೀಯರನ್ನು,
(**ಸುಸ್ಮಿತ** = ಒಳ್ಳೆಯ ಮಂದಹಾಸವುಳ್ಳ,
**ಗೋಪಸುಂದರೀಃ** = ದೇವತಾ ಸ್ತ್ರೀಯರನ್ನು),
**ರಮಯತ್** = ಸಂತೋಷಪಡಿಸುವ,
**ಪರಿತಾಪವಿಹೀನಂ** = ಸಂತಾಪ (ದುಃಖ)ರಹಿತನಾದ (ಆಕಾಶವು ಜಡವಾದುದರಿಂದ ಸಂತಾಪರಹಿತವಾದ),
**ಉಜ್ವಲಂ** = ಪ್ರಕಾಶಿಸುತ್ತಿರುವ (ಮೋಡಗಳಿಲ್ಲದ್ದರಿಂದ ನಿರ್ಮಲವಾಗಿ ಪ್ರಕಾಶಿಸುತ್ತಿರುವ),
**ಸುತತಂ** = ಒಳ್ಳೆಯ ವೀಣಾದಿ ವಾದ್ಯಗಳಿಂದ ಸಹಿತವಾದ (ಚೆನ್ನಾಗಿ ವ್ಯಾಪಿಸಿರುವ),
**ಸೂಕ್ಷ್ಮತರಾಂಬರಂ** = ಬಹಳ ತೆಳುವಾದ, ಪೀತಾಂಬರ ಎಂಬ ಬಟ್ಟೆಯನ್ನು, (ಕಣ್ಣಿಗೆ ಕಾಣದಿರುವುದರಿಂದ ಬಹಳ ಸೂಕ್ಷ್ಮವಾದ ಮತ್ತು ಅಂಬರ ಎಂಬ ಶಬ್ದದಿಂದ ಹೇಳಲ್ಪಡುವ)
**ವರಂ** = ಸರ್ವೋತ್ತಮವಾದ, (ಪಂಚಭೂತಗಳಲ್ಲಿ ಉತ್ತಮವಾದ)
**ಸಾನಂದಚಿದ್ಗುಣಗಣಂ** = ಆನಂದಜ್ಞಾನಗಳೆಂಬ ಎರಡುಗುಣಗಳಿಂದ ಸಹಿತವಾದ ಐಶ್ವರ್ಯಾದಿ ಅನಂತ ಗುಣಗಳ ಸಮೂಹವುಳ್ಳ (ಈ ವಿಶೇಷಣವು ಚಂದ್ರನಿಗೆ ಅನ್ವಯಿಸುವುದಿಲ್ಲ).
**ಅರ್ಥಾಂತರಂ** = ಶ್ರೀಕೃಷ್ಣವೆಂಬ ಜಡಾಜಡಪ್ರಪಂಚವಿಲಕ್ಷಣವಾದ ವಸ್ತುವನ್ನು,
**ಪ್ರಕಟೀಚಕಾರ** = ಪ್ರಕಟಗೊಳಿಸಿದರು.
**ಚಂದ್ರಸ್ತು** = ಚಂದ್ರನಾದರೋ,
**ಶಬ್ದಗುಣಂ** = ಶಬ್ದವೆಂಬ ಒಂದೇ ಗುಣವುಳ್ಳ,
**ಅರ್ಥಾಂತರಂ** = ಪೃಥಿವ್ಯಾದಿಗಳಿಗಿಂತ ವಿಲಕ್ಷಣವಾದ ಆಕಾಶವೆಂಬ ಒಂದೇ ವಸ್ತುವನ್ನು,
**ಪ್ರಕಟೀಚಕಾರ** = ಪ್ರಕಟಗೊಳಿಸಿದನು,
**ಇತಿ** = ಎಂಬುದಾಗಿ
**ಅಯಂ ಏವ** = ಇದೇ,
**ಭೇದಃ** = (ಚಂದ್ರನಿಗೂ ಶ್ರೀಮಧ್ವಾಚಾರ್ಯರಿಗೂ ಇರುವ) ವ್ಯತ್ಯಾಸವು.

**ತಾತ್ಪರ್ಯ**— ಷಡ್ಗುಣೈಶ್ವರ್ಯ ಸಂಪನ್ನರಾದ ಪರಮಪೂಜ್ಯರಾದ ಆ ಶ್ರೀಮಧ್ವಾಚಾರ್ಯರು ತಮ್ಮ ಪ್ರವಚನದ ಮಾತುಗಳಿಂದ ಅಜ್ಞಾನವೆಂಬ ತಮಸ್ಸನ್ನು ಕಳೆಯುತ್ತಾರೆ. ಚಂದ್ರನು ತನ್ನ ಕಿರಣಸಮೂಹಗಳಿಂದ ಕತ್ತಲೆಯ ರಾಶಿಯನ್ನು ನಾಶಮಾಡುತ್ತಾನೆ. ಶ್ರೀಕೃಷ್ಣನು ಮೋಕ್ಷಯೋಗ್ಯರಾದ ಸಾತ್ವಿಕ ಭಕ್ತ ಜನರಿಗೆ ಮೋಕ್ಷವನ್ನು ಕೊಡುವನು. ಚಂದ್ರನಿಂದ ಪ್ರಕಾಶಿತವಾದ ಆಕಾಶವು ರಾತ್ರಿಯಲ್ಲಿ ಓಡಾಡುವ ಜನರಿಗೆ ದಾರಿಯಲ್ಲಿ ಸುಲಭವಾಗಿ ಸಂಚಾರ ಮಾಡಲು ಅನುಕೂಲ ಪಡಿಸಿಕೊಡುವುದು. ಶ್ರೀಕೃಷ್ಣನು ಮಂದಗಮನೆಯರೂ ಶ್ರೀಕೃಷ್ಣನ ಸೌಂದರ್ಯಾದಿಗುಣಗಳಿಗೆ ಮಾರುಹೋಗಿ

ಮುನಿಸನ್ನು ಬಿಟ್ಟಿರುವ ಒಳ್ಳೆಯ ಕಿರುನಗೆಯನ್ನು ಬೀರುತ್ತಿರುವ ಗೋಪಿಕಾ ಸ್ತ್ರೀಯರನ್ನು ಗಾನನರ್ತನಾದಿಗಳಿಂದ ಸಂತೋಷಪಡಿಸಿದನು. ಚಂದ್ರೋದಯವಾದಾಗ ಆಕಾಶವು ಮೆಲ್ಲಗೆ ಸಂಚರಿಸುವ ವಿಮಾನಗಳ ಸಮೃದ್ಧಿಯುಳ್ಳ ಒಳ್ಳೆಯ ಮಂದಹಾಸದಿಂದ ಕೂಡಿದ ಸುಂದರಿಯರಾದ ದೇವತಾಸ್ತ್ರೀಯರಿಗೆ ವಿಹಾರ ಮಾಡಲು ಅನುಕೂಲ ಮಾಡಿಕೊಟ್ಟಿತು. ಆಚಾರ್ಯರಿಂದ ಪ್ರಕಾಶಿತನಾದ ಶ್ರೀಕೃಷ್ಣನು ಚಿಂತಾಸಂತಾಪಾದಿಲೇಪರಹಿತನು. ಚಂದ್ರನಿಂದ ಪ್ರಕಾಶಿತವಾದ ಆಕಾಶವೂ ಜಡವಾದುದರಿಂದ ಸಂತಾಪಾದಿಗಳಿಲ್ಲದ್ದು. ಶ್ರೀಕೃಷ್ಣನೂ ನಿರ್ದೋಷನು, ಪ್ರಕಾಶಮಾನನು, ಆಕಾಶವೂ ಸ್ವಚ್ಛವೂ ಪ್ರಕಾಶಮಾನವೂ ಆಗಿದೆ. ಶ್ರೀಕೃಷ್ಣನು ಉತ್ತಮವಾದ ವೀಣಾದಿ ವಾದ್ಯಗಳಿಂದ ತನ್ನಲ್ಲಿ ಅನುರಕ್ತರಾದ ಭಕ್ತೆಯರಾದ ಗೋಪಿಕಾಸ್ತ್ರೀಯರನ್ನು ಸಂತೋಷಪಡಿಸಿದನು. (ಅವನೂ ಸುತತನು) ಆಕಾಶವೂ ತುಂಬಾ ವ್ಯಾಪ್ತವಾದುದರಿಂದ ಸುತತವು ಆಚಾರ್ಯರಿಂದ ಪ್ರಕಟಿತನಾದ ಶ್ರೀಕೃಷ್ಣನೂ ಬಹಳ ಸೂಕ್ಷ್ಮವಾದ ತೆಳುವಾದ ಪೀತಾಂಬರವನ್ನು ಧರಿಸಿದ್ದಾನೆ. ಚಂದ್ರನಿಂದ ಪ್ರಕಾಶಗೊಂಡ ಆಕಾಶವೂ ಸಾಧಾರಣವಾಗಿ ಕಣ್ಣಿಗೆ ಕಾಣದ್ದು ಆದ್ದರಿಂದ ಸೂಕ್ಷ್ಮವಾದುದು, ಹಾಗೂ ಅಂಬರ ಎಂಬ ಶಬ್ದದಿಂದ ವಾಚ್ಯವಾದುದು, ಹೀಗೆ ಸೂಕ್ಷ್ಮತರಾಂಬರ ಎಂದು ಹೇಳಲ್ಪಡುತ್ತದೆ. ಆಚಾರ್ಯರು ಉಪದೇಶಿಸಿದ ಶ್ರೀಕೃಷ್ಣನು ಸರ್ವೋತ್ತಮನು ಚಂದ್ರನು ತೋರಿಸಿದ ಆಕಾಶವು ಪಂಚಭೂತಗಳಲ್ಲಿ ಸರ್ವೋತ್ತಮವು. ಪಂಚಭೂತಗಳಲ್ಲಿ ಕೊನೆಯ ದಾದ ಪೃಥಿವಿಯು ಭೂತಾವಮಾ = ಭೂತಗಳಲ್ಲಿ ಅವರ, ಆದುದರಿಂದ ಆಕಾಶವು ಭೂತೋತ್ತಮ ಎಂದು ತಿಳಿಯಬೇಕು. ಆದರೆ ಆರ್ಚಾಯರು ಉಪದೇಶಿಸಿದ ಶ್ರೀಕೃಷ್ಣನು ಆನಂದ, ಜ್ಞಾನ, ಪ್ರಕಾಶ, ಬಲ, ಔದಾರ್ಯ, ವೀರ್ಯ, ಸೌಂದರ್ಯ ಮುಂತಾದ ಅನಂತಾನಂತ ಗುಣಗಣಪರಿಪೂರ್ಣನು. ಚಂದ್ರನಿಂದ ಪ್ರಕಟಿತವಾದ ಆಕಾಶದಲ್ಲಿ ಶಬ್ದವೆಂಬ ಒಂದೇ ಧರ್ಮವು (ಗುಣವು) ಇದೆ. ಹೀಗೆ ಅನಂತಾನಂತಗುಣಭರಿತವಾದ ಸಮಸ್ತ ಪ್ರಪಂಚ ವಿಲಕ್ಷಣನಾದ ಶ್ರೀಕೃಷ್ಣನೆಂಬ ಸರ್ವೋತ್ತಮ ವಸ್ತುವನ್ನು ಆಚಾರ್ಯರು ಸಚ್ಛಾಸ್ತ್ರ ಪ್ರವಚನ ಮಾಡುತ್ತಾ ಶಿಷ್ಯರ ಹೃದಯಾಕಾಶದಲ್ಲಿ ಪ್ರಕಟಗೊಳಿಸಿದರು. ಚಂದ್ರನು ಉದಯಿಸಿ ಅನೇಕ ರೀತಿಗಳಿಂದ ಶ್ರೀಕೃಷ್ಣನ ಹಾಗೆಯೇ ಇರುವ ಆಕಾಶವನ್ನು ಪ್ರಕಟಗೊಳಿಸಿದನು. ಆದರೆ ಶ್ರೀಮಧ್ವಾಚಾರ್ಯರಿಗೂ ಚಂದ್ರನಿಗೂ ಇರುವ ಮುಖ್ಯವಾದ ಭೇದವು ಒಂದೇ. ಚಂದ್ರನು ಪ್ರಕಟಗೊಳಿಸಿದ ಆಕಾಶದಲ್ಲಿ ಶಬ್ದವೆಂಬ ಒಂದೇ ಗುಣವಿದೆ. ಆಚಾರ್ಯರು ಉಪದೇಶಿಸಿ ಶಿಷ್ಯರ ಹೃದಯಾಕಾಶದಲ್ಲಿ ಪ್ರಕಟಗೊಳಿಸಿದ ಶ್ರೀಕೃಷ್ಣನಲ್ಲಿ ಅನಂತ ಕಲ್ಯಾಣ ಗುಣಗಣಗಳು ಮಣಿರಾಶಿಗಳಂತೆ ಬೆಳಗುತ್ತಿವೆ. ಇಷ್ಟೇ ವ್ಯತ್ಯಾಸವು. ರಾತ್ರಿಯಲ್ಲಿ ಭಾಗವತ ಪ್ರವಚನ ಮಾಡುತ್ತಾ ಆಚಾರ್ಯರು ಶ್ರೀಹರಿಯ ಕೃಷ್ಣಾದಿರೂಪಗಳನ್ನು ಭಕ್ತರ ಹೃದಯಮಂದಿರದ ಆಕಾಶದಲ್ಲಿ ಪ್ರಕಟಗೊಳಿಸಿದರು ಎಂದು ಭಾವ. ನಿಶಾಯಾಂ ಭಾಗವತಂ ವ್ಯಾಚಕ್ಷಾಣಃ ಶ್ರೀಮನ್ಮಧ್ವಃ ಕೃಷ್ಣಾದಿರೂಪಂ ಪ್ರಕಾಶಿತವಾನ್ ಇತಿ ಭಾವಃ । (ಭಾವಪ್ರಕಾಶಿಕಾ) ಇಲ್ಲಿ ಮಧ್ವಚಂದ್ರರಿಗೆ ವಿಶೇಷವನ್ನು ಹೇಳಿದ್ದರಿಂದ ವ್ಯತಿರೇಕಾಲಂಕಾರ 'ವ್ಯತಿರೇಕೋ ವಿಶೇಷಶ್ಚೇ-ದುಪಮಾನೋ ಪಮೇಯಯೋಃ' ಚಂದ್ರಾಲೋಕ ಶ್ಲೇಷಾಲಂಕಾರದಿಂದ ಈ ವ್ಯತಿರೇಕಾಲಂಕಾರವು ಸೇರಿಕೊಂಡಿರು-ವುದರಿಂದ ಅಲಂಕಾರ ಸಂಸೃಷ್ಟಿಯು ಇದೆ.

ವಿಗ್ರಹ ಮತ್ತು ಕೋಶ—

ಮೃದುಗಾಮಿವಿಮಾನಸಂಪದಃ— ಮಾನಃ (ಪ್ರಣಯ ಕೋಪ) ಏವ ಸಂಪತ್ ಮಾನಸಂತ್, ವಿಗತಾ ಮಾನಸಂಪತ್ ಯಾಭ್ಯಃ ತಾಃ ವಿಮಾನಸಂಪದಃ ಅಥವಾ ವಿಗತಃ ಮಾನಃ ವಿಮಾನಃ, ವಿಮಾನಃ ಏವ ಸಂಪತ್ ಯಾಸಾಂ ತಾಃ । ವಿಮಾನ ಸಂಪದಃ = ಪ್ರಣಯ (ಕೋಪವನ್ನು ಬಿಟ್ಟಿರುವುದೆಂಬ ಸಂಪತ್ತುಳ್ಳ) 'ಮಾನಶ್ಚಿತ್ತ ಸಮುನ್ನತಿಃ' ಅಮರ. ಮಾನಃ = ಪ್ರಣಯ ಕಲಹದಿಂದ ಉಂಟಾದ ಕೋಪ । ಮೃದು ಗಚ್ಛಂತಿ ತಾಚ್ಛೀಲ್ಯೇನೇತಿ ಮೃದುಗಾಮಿನ್ಯಃ, ಮೃದುಗಾಮಿನ್ಯಶ್ಚ ತಾಃ ವಿಮಾನಸಂಪದಶ್ಚ ಮೃದುಗಾಮಿವಿಮಾನ ಸಂಪದಃ ತಾಃ (ದ್ವಿ.ಬ) (ಇದು ಗೋಪಿಕಾ ಸ್ತ್ರೀಯರ ಪಕ್ಷದಲ್ಲಿ ವಿಗ್ರಹ. ದೇವತಾಸ್ತ್ರೀಯರ ಪಕ್ಷದಲ್ಲಿ ವಿಗ್ರಹವು ಹೀಗೆ)

**ಮೃದುಗಾಮಿವಿಮಾನಸಂಪದಃ**— ವಿಮಾನಾನಾಂ ಸಂಪದಃ ವಿಮಾನಸಂಪದಃ, ಮೃದುಗಾಮಿನಃ ವಿಮಾನ-ಸಂಪದಃ ಯಾಸಾಂ ತಾಃ, ಮೃದುಗಾಮಿ ವಿಮಾನಸಂಪದಃ = ಮೆತ್ತಗೆ ಹೋಗುವ ವಿಮಾನಗಳ ಸಮೃದ್ಧಿಯುಳ್ಳ 'ಮೃದುಗಾಮಿನ್ಯಃ ವಿಮಾನ ಸಂಪದಃ ಆಸಾಂ, ಮೃದುಗಾಮಿನ್ಯಶ್ಚ ಏತಾಃ ವಿಮಾನ-ಸಂಪದಶ್ಚೇತಿ ಚ' ಭಾವಪ್ರಕಾಶಿಕಾ, ಇಲ್ಲಿ ವಿಮಾನಾನಾಂ ಸಂಪತ್ ಯಾಸಾಂ ತಾಃ ವಿಮಾನಸಂಪದಃ = ವಿಮಾನಗಳ ಸಂಪತ್ತುಳ್ಳವರು, ಮೃದು ಗಾಮಿನ್ಯಃ = ಮೆತ್ತಗೆ ನಡೆಯುವವರು.

**ಮೃದುಗಾಮಿವಿಮಾನಸಂಪದಃ**— ಮೃದುಗಾಮಿನ್ಯಶ್ಚ ತಾಃ ವಿಮಾನಸಂಪದಶ್ಚ ಮೃದುಗಾಮಿವಿಮಾನ ಸಂಪದಃ ಎಂದು ವಿಗ್ರಹಮಾಡಿದರೆ, ಮೆತ್ತಗೆ ನಡೆಯುವವರು ಮತ್ತು ವಿಮಾನಗಳ ಸಮೃದ್ಧಿ ಯುಳ್ಳವರು ಎಂಬ ಅರ್ಥವೂ ಬರುತ್ತದೆ. ಭಾವಪ್ರಕಾಶಿಕಾ ವ್ಯಾಖ್ಯಾನವು ಎರಡು ಅರ್ಥಗಳಿಗೂ ಅನುಕೂಲವಾಗಿದೆ.

**ರಮಯತ್** - ರಮಯತ್ ರಮಯತೀ ರಮಯಂತಿ, ರಮ್ ಧಾತು ಣಿಜಂತದ ಮೇಲೆ ಶತೃ ಸಂತೋಷ-ಪಡಿಸತಕ್ಕದ್ದು ಎಂದು ಅರ್ಥ.

**ಸುಸ್ಮಿತಗೋಪಸುಂದರೀಃ**— ಸು ಶೋಭನಂ ಸ್ಮಿತಂ ಯಾಸಾಂತಾಃ ಸುಸ್ಮಿತಾಃ, ಗಾಃ ಪಾಂತೀತಿ ಗೋಪಾಃ ಗೋಪಾನಾಂ ಸುಂದರ್ಯಃ ಗೋಪಸುಂದರ್ಯಃ, ಸುಸ್ಮಿತಾಶ್ಚ ತಾಃ ಗೋಪಸುಂದರ್ಯಶ್ಚ ಸುಸ್ಮಿತ ಗೋಪಸುಂದರ್ಯಃ ತಾಃ । ಮಂದಹಾಸ ಪೂರ್ಣರಾದ ಗೋಪಾಲಸುಂದರಿಯರು, ಮಂದಹಾಸ ಮಾಡುತ್ತಿರುವ ದೇವತಾ ಸುಂದರಿಯರು ಎಂದೂ ಅರ್ಥ. 'ಗೋಪಾಃ ಸ್ವರ್ಗಪಾಃ ಪಶುಪಾಶ್ಚ' ಭಾವ ಪ್ರಕಾಶಿಕಾ, ಗೋಪ ಎಂದರೆ ಸ್ವರ್ಗವನ್ನು ಕಾಪಾಡುವ ದೇವತೆಗಳು ಮತ್ತು ಪಶುಪಾಲನೆ ಮಾಡುವ ಗೊಲ್ಲರು ಎಂದೂ ಅರ್ಥ. ಗೋ (ಗೌಃ) ಪುಃ = ಸ್ವರ್ಗ, ಗೌಃ ಸ್ತ್ರೀಹಸುಗೌಃ (ಪುಂ) = ಎತ್ತು, 'ಸ್ವರ್ಗೇಷು ಪಶುವಾಗ್ವಜ್ರದೃಙ್ ನೇತ್ರ ಘೃಣಿ ಭೂಜಲೇ' । 'ಲಕ್ಷ್ಯದೃಷ್ಟ್ಯಾ ಸ್ತ್ರಿಯಾಂ ಪುಂಸಿ ಗೌಃ' ಅಮರ, 'ಗೌರ್ನಾಕೇ ವೃಷಭೇ ಚಂದ್ರೇ', ರತ್ನಮಾಲಾ ।

**ಪರಿತಾಪವಿಹೀನಂ**— ಪರಿತಾಪೇನ ವಿಹೀನಂ ಪರಿತಾಪವಿಹೀನಂ ತತ್ ।

**ಸುತತಂ**— ಸುಶೋಭನಂ ತತಂ ಯಸ್ಯ ತತ್ ಸುತತಂ ತತ್ । ವೀಣಾದಿಕಂ ವಾದ್ಯಂ = ವೀಣಾದಿವಾದ್ಯ 'ತತಂ ವೀಣಾದಿಕಂ ವಾದ್ಯಂ' ಅಮರ. ಸು ಸಮ್ಯಕ್ ತತಂ ವ್ಯಾಪ್ತಂ ಸುತತಂ, ತತ್, 'ತತಂ ವ್ಯಾಪ್ತಂ, ವೀಣಾದಿವಾದ್ಯಂ ಚ' ಭಾವಪ್ರಕಾಶಿಕಾ ।

**ಸೂಕ್ಷ್ಮತರಾಂಬರಂ**— ಅತಿಶಯೇನ ಸೂಕ್ಷ್ಮಂ ಸೂಕ್ಷ್ಮತರಂ, ಸೂಕ್ಷ್ಮತರಂ ಅಂಬರಂ ಯಸ್ಯ ತತ್ ಸೂಕ್ಷ್ಮತರಾಂಬರಂ ತತ್ ।

**ಗತಿದಂ**— ಗತಿಂ ಮೋಕ್ಷಂ ಮಾರ್ಗಂ ಚ ದದಾತೀತಿ ಗತಿದಂ । 'ಗತಿದಂ ಮೋಕ್ಷದಂ ಮಾರ್ಗದಂ ಚ', ಭಾವಪ್ರಕಾಶಿಕಾ, **ಅರ್ಥಾಂತರಂ** ಅನ್ಯಃ ಅರ್ಥಃ ಅರ್ಥಾಂತರಂ, ಮತ್ತೊಂದು ವಸ್ತು ।

**ಭಗವಾನ್**— ಭಗಃ ಅಸ್ಯ ಅಸ್ತೀತಿ ಭಗವಾನ್ ।

**ಸಾನಂದಚಿದ್ಗುಣಗಣಂ**— ಆನಂದಶ್ಚ ಚಿಚ್ಚ ಆನಂದಚಿತೌ, ಆನಂದಚಿದ್ಭ್ಯಾಂ ಸಹ ವರ್ತಂತೇ ಇತಿ ಸಾನಂದಚಿತಃ, ಸಾನಂದಚಿತಶ್ಚ ತೇ ಗುಣಾಶ್ಚ ಸಾನಂದಚಿದ್‌ಗುಣಾಃ, ಸಾನಂದಚಿದ್ಗುಣಾನಾಂ ಗಣಃ ಯಸ್ಯ ತತ್ ಸಾನಂದಚಿದ್ಗುಣಗಣಂ ತತ್ ।

**ಪರಿಪೂರ್ಣಸಂವಿತ್**— ಪರಿಪೂರ್ಣಾ ಸಂವಿತ್ ಯಸ್ಯ ಸಃ ಪರಿಪೂರ್ಣಸಂವಿತ್ ।

**ಶಬ್ದಗುಣಂ**— ಶಬ್ದಃ ಗುಣಃ ಯಸ್ಯ ತತ್ ಶಬ್ದಗುಣಂ ತತ್ ।

**ಕ್ರಿಯಾಪದ—** ಪ್ರಕಟೀಚಕಾರ - ಅಪ್ರಕಟಂ ಪ್ರಕಟಂ ಸಂಪದ್ಯಮಾನಂ ಚಕಾರ ಪ್ರಕಟೀಚಕಾರ । ಚಕಾರ ಚಕ್ರತುಃ ಚಕ್ರುಃ, ಚಕರ್ಥ ಚಕ್ರಥುಃ ಚಕ್ರ, ಚಕಾರ-ಚಕರ ಚಕೃವ ಚಕೃಮ । ಡುಕೃಞ್ (ಕೃ) ಕರಣೇ ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನಂ ।

**ಪ್ರಯೋಗ—** ಭಗವತಾ ತೇನ ಪರಿಪೂರ್ಣಸಂವಿದಾ, ಗೋಭಿಃ ತಮಾಂಸಿ ಅಪನಯತಾ, ಪ್ರಜಾನಾಂ ಗತಿದಂ, ಮೃದುಗಾಮಿವಿಮಾನಸಂಪದಃ ಸುಸ್ಮಿತಗೋಪಸುಂದರೀಃ ರಮಯತ್, ಪರಿತಾಪವಿಹೀನಂ ಉಜ್ವಲಂ ಸುತತಂ ಸೂಕ್ಷ್ಮ-ತರಾಂಬರಂ ವರಂ ಸಾನಂದಚಿದ್ಗುಣಗಣಂ ಅರ್ಥಾಂತರಂ ಪ್ರಕಟೀಚಕ್ರೇ, ಚಂದ್ರೇಣ ತು ಶಬ್ದಗುಣಂ ಅರ್ಥಾಂತರಂ ಪ್ರಕಟೀಚಕ್ರೇ, ಇತಿ ಅಯಮೇವ ಭೇದಃ (ಭವತಿ) ಅನೇನೈವ ಭೇದೇನ ಭೂಯತೇ) ।

**ವೃತ್ತ—** ಮೃದುಗಾಮಿ ಎಂಬ 54ನೆಯ ಶ್ಲೋಕದಲ್ಲಿ ಸುಂದರೀವೃತ್ತ ಲಕ್ಷಣ 'ಅಯುಜೋರ್ಯದಿ ಸೌ ಜಗೌ ಸಮಯೋಃ ಸ್ಭೌರಲಗಾಶ್ಚ ಸುಂದರೀ', 55ನೆಯ ಗೋಭಿಃ ಎಂಬ ಶ್ಲೋಕದಲ್ಲಿ ವಸಂತತಿಲಕ ವೃತ್ತ.

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ಚತುರ್ದಶಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಪಂಚದಶಃ ಸರ್ಗಃ

### ಹದಿನೈದನೆಯ ಸರ್ಗದ ಕಥಾಸಾರ

ತರುವಾಯ ಶ್ರೀಮಧ್ವಾಚಾರ್ಯರು 'ಪಾಡಿಕುಡಿಲು' ಎಂಬ ಹಳ್ಳಿಯಲ್ಲಿರುವ ದೇವಾಲಯದಲ್ಲಿ ವಾಸಮಾಡುತ್ತ ತಾವು ರಚಿಸಿದ ಬ್ರಹ್ಮಸೂತ್ರಭಾಷ್ಯವನ್ನು ಅಲ್ಲಿ ಸೇರಿದ ಜನರಿಗೆ ವಿವರಿಸಿದರು. ಆಗ ತ್ರಿವಿಕ್ರಮಪಂಡಿತಾಚಾರ್ಯರು ಆಚಾರ್ಯರು ಹೇಳಿರುವ ಹರಿಸರ್ವೋತ್ತಮತ್ವ, ಜೀವೇಶ್ವರಭೇದ ಇತ್ಯಾದಿ ದ್ವೈತಸಿದ್ಧಾಂತಗಳನ್ನು ತರ್ಕಗಳಿಂದ, ಯುಕ್ತಿಗಳಿಂದ ಖಂಡಿಸಿ ಅದ್ವೈತ ಸಿದ್ಧಾಂತವನ್ನು ಸಮರ್ಥಿಸಲು ಎದುರಾದರು. ಶ್ರೀಮಧ್ವಾಚಾರ್ಯರು ಶ್ರೀಹರಿಯೇ ಸೃಷ್ಟ್ಯಾದಿ ಕಾರಣನು ಇತ್ಯಾದಿ ತತ್ತ್ವಗಳನ್ನು ಸಮರ್ಥಿಸಲು ತಡೆಯಿಲ್ಲದ ವಾಕ್ಪ್ರವಾಹದಿಂದ ಕೂಡಿದ ಉಪನ್ಯಾಸವನ್ನು ಮಾಡಲು ತೊಡಗಿದರು. ಅವರ ಮಾತಿಗೆ ವೇದ-ಉಪನಿಷತ್ತುಗಳು, ಸ್ಮೃತಿಪುರಾಣಗಳ ಬೆಂಬಲವಿತ್ತು. ಅವರ ಮಾತು ರುದ್ರಾದಿಗಳಿಗೂ ಮಾನ್ಯವಾಗಿತ್ತು.

ಅವರು ಈ ರೀತಿ ಉಪನ್ಯಾಸ ಮಾಡಿದರು. ''ಶ್ರೀಮನ್ನಾರಾಯಣನು ಅನಂತಗುಣಗಳುಳ್ಳವನು. ಮುಖ್ಯವಾಗಿ ವೇದಪ್ರತಿಪಾದ್ಯನು, ಬ್ರಹ್ಮಶಬ್ದವಾಚ್ಯನು. ಸೃಷ್ಟ್ಯಾದಿ ಅಷ್ಟಕರ್ತನು'' ಈ ವಿಷಯಗಳನ್ನು ಆಚಾರ್ಯರು ಅನೇಕ ಪ್ರಮಾಣ ಗಳಿಂದ ಸಾಧಿಸಿದರು. ಮೊದಲು ಅವರು ನಿರೀಶ್ವರ, ಸೇಶ್ವರ ಸಾಂಖ್ಯಮತಗಳನ್ನೂ, ಚಾರ್ವಾಕ, ಭಾಟ್ಟ, ಪ್ರಾಭಾಕರ ಮತಗಳನ್ನೂ ಖಂಡಿಸಿದರು. ಅನಂತರ ವೇದೋಪನಿಷತ್ತುಗಳನ್ನು ಪ್ರಮಾಣವಾಗಿ ಒಪ್ಪಿಕೊಳ್ಳಲೇಬೇಕಾಗುವುದರಿಂದ ನಾರಾಯಣನೇ ಜಗಜ್ಜನ್ಮಾದಿಕರ್ತನು ಎಂದು ಸಾಧಿಸಿದರು. ಪಾಶುಪತ, ಗಾಣಪತ್ಯ, ಸೌರ, ಸ್ಕಾಂದ ಮೊದಲಾದ ಮತಗಳೂ ಸರಿಯಲ್ಲವೆಂದು ಪ್ರತಿಪಾದಿಸಿದರು. ಅನುಮಾನ ಆಗಮಗಳಿಂದ ನಾರಾಯಣನು ಅನಂತಗುಣವುಳ್ಳವನೆಂದು ಸಾಧಿಸಿದರು. ಈ ತತ್ತ್ವಕ್ಕೆ ವಿರುದ್ಧವಾದ ವೈಶೇಷಿಕ ಮತವನ್ನು ಖಂಡಿಸಿದರು. ಮಾಯಾವಾದಿಗಳು ಶೂನ್ಯವಾದಿಗಳಾದ ಬೌದ್ಧರ ಮತವನ್ನೇ ರೂಪಾಂತರದಿಂದ ಪ್ರತಿಪಾದಿಸುವುದರಿಂದ ಪ್ರಚ್ಛನ್ನಬೌದ್ಧರೆಂದು ಹೇಳಿಸಿಕೊಳ್ಳಲು ಅರ್ಹರು. ಅವರಿಗೆ ಶೂನ್ಯವಾದಿಗಳಾದ ಬೌದ್ಧರಿಂದ ವಾಸ್ತವಿಕವಾಗಿ ಭೇದವಿಲ್ಲ ಎಂದು ಆಚಾರ್ಯರು ಯುಕ್ತಿಗಳಿಂದ ವಿವರಿಸಿ ಆ ಎರಡು ಮತಗಳನ್ನೂ ಸರಿಯಾದ ಕಾರಣಗಳನ್ನು ಕೊಟ್ಟು ಖಂಡಿಸಿದರು. ಶ್ರೀಮನ್ನಾರಾಯಣನ ಅನುಗ್ರಹದಿಂದಲೇ ಸಾತ್ತ್ವಿಕರಾದ ಚೇತನರು ಸ್ವರೂಪಾನಂದಾವಿರ್ಭಾವರೂಪವಾದ ಮುಕ್ತಿಯನ್ನು ಪಡೆಯುವರು ಎಂದು ಪ್ರತಿಪಾದಿಸಿದರು. ಇನ್ನೂ ಅನೇಕವಾದ ತತ್ತ್ವವಾದ ಪ್ರಮೇಯಗಳನ್ನು ಬಗೆಬಗೆಯಿಂದ ವಿವರಿಸಿ ತಿಳಿಸಿದರು.

ಆಚಾರ್ಯರ ವಾಗ್ವೈಖರಿಯನ್ನು ತ್ರಿವಿಕ್ರಮಪಂಡಿತರೂ ಕೇಳಿದರು. ಅವರು ಮಾಯಾವಾದವನ್ನು ಸಮರ್ಥಿಸಲು ಪ್ರಬಲವಾದ ಅನೇಕ ಅನುಮಾನಗಳನ್ನು ಉದಾಹರಣೆಯ ಸಹಿತವಾಗಿ ಮುಂದಿಟ್ಟರು. ಶ್ರೀಮಧ್ವಾಚಾರ್ಯರು ತ್ರಿವಿಕ್ರಮ ಪಂಡಿತರ ಯುಕ್ತಿಗಳಿಗಿಂತಲೂ ಪ್ರಬಲವಾದ ಅನೇಕ ಯುಕ್ತಿಗಳನ್ನು ಪ್ರಯೋಗಿಸಿ, ಅವರ ಯುಕ್ತಿಗಳನ್ನು ಖಂಡಿಸಿದರು.

ಕೊನೆಗೆ ತ್ರಿವಿಕ್ರಮಪಂಡಿತರಿಗೆ ಉತ್ತರ ಹೇಳಲು ತೋಚಲಿಲ್ಲ. ಅವರಿಗೆ ಆಚಾರ್ಯರಲ್ಲಿ ಕೇಳಬೇಕಾದ ಪ್ರಶ್ನೆಯೂ ಉಳಿಯಲಿಲ್ಲ. ಅವರು ಸೋತರು, ಕ್ಷಮೆ ಬೇಡಿದರು. ಆಚಾರ್ಯರ ಪಾದಕಮಲಗಳ ಧೂಳಿಯ ದಾಸ್ಯವನ್ನು ಬೇಡಿದರು. ಶ್ರೀಮಧ್ವಾಚಾರ್ಯರು ಅವರನ್ನು ತಮ್ಮ ಶಿಷ್ಯನನ್ನಾಗಿ ಪರಿಗ್ರಹಿಸಿದರು. ದ್ವೈತಸಿದ್ಧಾಂತದ ರಹಸ್ಯ ಪ್ರಮೇಯ ಗಳನ್ನೆಲ್ಲಾ ಬೋಧಿಸಿದರು. ಆಚಾರ್ಯರು ತಾವು ರಚಿಸಿದ ಬ್ರಹ್ಮಸೂತ್ರಭಾಷ್ಯಕ್ಕೆ ವ್ಯಾಖ್ಯಾನ ಬರೆಯಲು, ಶ್ರೀತ್ರಿವಿಕ್ರಮ ಪಂಡಿತರನ್ನು ಆಜ್ಞಾಪಿಸಿದರು. ಅದರಂತೆ ತ್ರಿವಿಕ್ರಮಪಂಡಿತಾಚಾರ್ಯರು ಆಚಾರ್ಯರ ಅದ್ಭುತವಾದ ಬ್ರಹ್ಮಸೂತ್ರಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದರು. ಆ ವ್ಯಾಖ್ಯಾನವು 'ತತ್ತ್ವದೀಪಿಕಾ' ಅಥವಾ 'ತತ್ತ್ವಪ್ರದೀಪ' ಎಂಬ ಹೆಸರಿನಿಂದ ಪ್ರಸಿದ್ಧ-ವಾಯಿತು. ತ್ರಿವಿಕ್ರಮಪಂಡಿತರ ಪ್ರಾರ್ಥನೆಯಂತೆ ಆಚಾರ್ಯರು ನಾಲ್ಕು ಮಂದಿ ಶಿಷ್ಯರಿಂದ ಏಕಕಾಲದಲ್ಲಿ ನಿರಂತರವಾಗಿ ಅನುವ್ಯಾಖ್ಯಾನವೆಂಬ ಗ್ರಂಥವನ್ನು ಬರೆಯಿಸಿದರು. ಅನುವ್ಯಾಖ್ಯಾನದಲ್ಲಿ ಹೇಳಿರುವ ಯುಕ್ತಿಗಳನ್ನು ವಿವರಿಸುವ ಸಲುವಾಗಿ ನ್ಯಾಯವಿವರಣವೆಂಬ ಗ್ರಂಥವನ್ನೂ ರಚಿಸಿ ಬರೆಸಿದರು.

ಶ್ರೀಮಧ್ವಾಚಾರ್ಯರ ತಂದೆ-ತಾಯಿಗಳು ಪಾಜಕ ಕ್ಷೇತ್ರದಲ್ಲಿರುವ ತಮ್ಮ ಮನೆಯಲ್ಲಿ ವಾಸವಾಗಿದ್ದರು. ಆಚಾರ್ಯರನ್ನು ನೋಡಿ ಅವರ ಪ್ರವಚನವನ್ನು ಕೇಳಿ ಅವರ ಅಜ್ಞಾನ-ದುಃಖಗಳು ದೂರವಾಗಿದ್ದವು. ಕಾಲಕ್ರಮದಲ್ಲಿ ಅವರು ವೈಕುಂಠವನ್ನು ಸೇರಿದರು. ಆಗ ಅವರ ಕಿರಿಯ ಮಗನು ಅಲ್ಲಿ ವಾಸಿಸುತ್ತಿದ್ದನು.

ಆದರೆ ತಂದೆ-ತಾಯಿಗಳ ಮರಣಾನಂತರ ವಿಧಿವಿಲಾಸದಿಂದ ಮಧ್ವಾಚಾರ್ಯರ ಆ ತಮ್ಮನ ಹಣ, ದನಕರುಗಳು ಧವಸಧಾನ್ಯ ಎಲ್ಲವೂ ಹಾಳಾದವು. ಆ ತಮ್ಮನು ವಿರಕ್ತನಾಗಿ ಅಣ್ಣನ ಹತ್ತಿರ ಬಂದು ಸಂನ್ಯಾಸವನ್ನು ಕೊಡಬೇಕೆಂದು ಪ್ರಾರ್ಥಿಸಿದನು. ಪುನಃ ಪುನಃ ನಮಸ್ಕಾರ ಮಾಡಿದನು. ಆದರೆ ಆಚಾರ್ಯರು ಇದು ಚಾತುರ್ಮಾಸ್ಯ ಕಾಲ, ಸಂನ್ಯಾಸ ಸ್ವೀಕಾರಕ್ಕೆ ತಕ್ಕ ಕಾಲವಲ್ಲ. ಚಾತುರ್ಮಾಸ್ಯ ಕಳೆದ ಮೇಲೆ ಸಂನ್ಯಾಸ ಕೊಡುವೆನೆಂದು ಸಮಾಧಾನಪಡಿಸಿ ತಮ್ಮನನ್ನು ಮನೆಗೆ ಕಳುಹಿಸಿದರು. ಆಚಾರ್ಯರ ತಮ್ಮನು ಹಿಂದಿರುಗಿ ಮನೆಗೆ ಹೋದರೂ ಅಣ್ಣನನ್ನೇ ಚಿಂತಿಸುತ್ತಾ ಸಂನ್ಯಾಸ ಸ್ವೀಕಾರದ ಸಮಯವನ್ನು ಎದುರು ನೋಡುತ್ತಾ ಅದುವರೆಗೆ ಊಟ ಮಾಡಲಿಲ್ಲ, ನಗಲಿಲ್ಲ. ಆಚಾರ್ಯರು ಚಾತುರ್ಮಾಸ್ಯ ವ್ರತವನ್ನು ಮುಗಿಸಿ, ತಮ್ಮ ಅವತಾರ ಕ್ಷೇತ್ರವಾದ ಪಾಜಕ ಕ್ಷೇತ್ರಕ್ಕೆ ತೆರಳಿದರು. ಅಲ್ಲಿ ಸಂನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕೆ ಮೊದಲು ಮಾಡಬೇಕಾದ ಆತ್ಮಶ್ರಾದ್ಧಾದಿಗಳನ್ನು ಮಾಡಿಕೊಂಡಿರುವ ತಮ್ಮನಿಗೆ ಸಂನ್ಯಾಸವನ್ನು ಕೊಟ್ಟು ಪ್ರಣವ ಮಂತ್ರೋಪದೇಶವನ್ನು ಕೊಟ್ಟರು. ತಮ್ಮನಿಗೆ 'ವಿಷ್ಣುತೀರ್ಥ' ಎಂಬ ಆಶ್ರಮದ ಹೆಸರನ್ನಿಟ್ಟರು. ಅನಂತರ ವಿಷ್ಣು-ತೀರ್ಥರು ಒಂದು ಕ್ಷಣವನ್ನೂ ವ್ಯರ್ಥಮಾಡದೆ ಶ್ರವಣ-ಮನನಗಳನ್ನು ಮಾಡುತ್ತಿದ್ದರು. ಮಂತ್ರಜಪವನ್ನು ಮಾಡುತ್ತಿದ್ದರು. ಪರಬ್ರಹ್ಮ ಚಿಂತನೆಯನ್ನು ಮಾಡುತ್ತಾ ಇದ್ದರು. ವಿಷ್ಣುತೀರ್ಥರ ಇಂದ್ರಿಯ ನಿಗ್ರಹ, ಭಕ್ತಿ-ಸೇವೆ ಮುಂತಾದುವುಗಳಿಂದ ಪ್ರಸನ್ನರಾದ ಶ್ರೀಮಧ್ವಾಚಾರ್ಯರು ಅವರಿಗೆ ಈ ಜನ್ಮದಲ್ಲಿಯೇ ಬ್ರಹ್ಮಸಾಕ್ಷಾತ್ಕಾರವಾಗುವಂತೆ ಅನುಗ್ರಹ ಮಾಡಿದ್ದರು.

ವಿಷ್ಣುತೀರ್ಥರು ಮಹಾಮಹಿಮರು. ಅವರು, ನಾನು ಮಧ್ವಾಚಾರ್ಯರ ಶಿಷ್ಯರಲ್ಲಿ ಎರಡನೆಯವನು ಮೂರನೆಯವನು ಎಂದು ಗಣನೆಗೆ ಬರಬಾರದು, ಶಿಷ್ಯರಲ್ಲಿ ಶ್ರೇಷ್ಠನು, ಮೊದಲನೆಯವನು ಎಂಬ ಕೀರ್ತಿಯನ್ನು ಗಳಿಸ ಬೇಕೆಂದು ಸಂಕಲ್ಪಿಸಿದರು. ಅವರು ಉತ್ತರದೇಶದ ತೀರ್ಥಯಾತ್ರೆಯನ್ನೆಲ್ಲಾ ಮಾಡಿದರು. ಕೊನೆಗೆ ಸಹ್ಯಾದ್ರಿಯ ಒಂದು ಭಾಗವಾದ ಕುಮಾರಧಾರಾ ನದಿಯು ಹುಟ್ಟುವ ಸ್ಥಳದಲ್ಲಿರುವ ಹರಿಶ್ಚಂದ್ರಪರ್ವತವನ್ನು ಅದೃಶ್ಯರಾಗಿ ಸೇರಿದರು. ಅವರು ಉಪವಾಸವಾಗಿದ್ದು ಅಲ್ಲಿ ತಪಸ್ಸು ಮಾಡಲು ಪ್ರಾರಂಭಿಸಿದರು. ಭಕ್ತರು ಅವರಿದ್ದ ಬೆಟ್ಟಕ್ಕೆ ಬಂದು ಪಂಚಗವ್ಯವನ್ನು ತಂದಿಟ್ಟು, ಅದನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದಾಗ ಐದು ದಿವಸಕ್ಕೊಮ್ಮೆ ಆ ಪಂಚಗವ್ಯವನ್ನು ಮಾತ್ರ ಸ್ವಲ್ಪವೇ ತೆಗೆದುಕೊಳ್ಳುತ್ತಿದ್ದರು. ಕೊನೆಗೆ ಅದನ್ನೂ ಬಿಟ್ಟು ನೆಲದ ಮೇಲೆ ಬಿದ್ದ ಬಿಲ್ವಪತ್ರೆಗಳನ್ನು ತಿಂದು ನೀರು ಕುಡಿದು ಮುನಿಗಳು ಮಾಡುವ ತಪಸ್ಸಿಗಿಂತಲೂ ಕಠಿಣವಾದ ತಪಸ್ಸನ್ನು ಮಾಡಿದರು. ನಿತ್ಯಾಹ್ನಿಕಗಳನ್ನು ಸರಿಯಾಗಿ ಮಾಡುತ್ತಾ ಶಿಲೆಯ ಮೇಲೆ ಕೂತುಕೊಂಡು ಧ್ಯಾನ ಮಾಡಿದರು. ಪ್ರಾಣಾಯಾಮವನ್ನು ಮಾಡಿ, ಇಂದ್ರಿಯಗಳನ್ನೆಲ್ಲಾ ಅಂತರ್ಮುಖವಾಗಿ ಮಾಡಿ-ಕೊಂಡು ಧ್ಯಾನ ಮಾಡುತ್ತಾ ಸಮಾಧಿಯಲ್ಲಿ ಲೀನರಾದರು. ಅತ್ಯಂತ ಅದ್ಭುತವಾದ ಮುಕುಂದನ ಸುಂದರ ರೂಪವನ್ನು

ನೋಡುತ್ತಾ ಬಾಹ್ಯಪ್ರಜ್ಞಾಶೂನ್ಯರಾಗಿ ಪರಮಾತ್ಮನ ರೂಪದರ್ಶನದಲ್ಲಿಯೇ ಮಗ್ನರಾದರು. ಹೀಗೆ ಬಹುಕಾಲ ಅಸಂಪ್ರಜ್ಞಾತ ಸಮಾಧಿಸ್ಥರಾದ ಅವರ ಈ ಪ್ರಯತ್ನಕ್ಕೆ ಭಗವಂತನ ಸಾಕ್ಷಾತ್ಕಾರ, ಮೋಕ್ಷಗಳೇ ಫಲವಾಗಿ ದೊರೆತವು. ಶ್ರೀಮಧ್ವವಲ್ಲಭನಾದ ಶ್ರೀಹರಿಯು ಮಧ್ವಾನುಜನರಿಗೆ ಮಾಡಿದ ಅನುಗ್ರಹದ ರಹಸ್ಯವನ್ನು ವಿಶೇಷ ರೀತಿಯಿಂದ ವರ್ಣಿಸಲು ನನಗೂ ಸಾಧ್ಯವಿಲ್ಲ. ಅದು ಗೋಪ್ಯವಾದುದರಿಂದಲೂ ನಾನು ಹೆಚ್ಚಾಗಿ ವರ್ಣಿಸುವುದಿಲ್ಲ ಎಂದು ಕವಿ ವರ್ಯರಾದ ನಾರಾಯಣಪಂಡಿತಾಚಾರ್ಯರೇ ಹೇಳುತ್ತಾರೆ. ಶ್ರೀಮಧ್ವರ ಸೇವೆಯ ಮಹಿಮೆಯು ಹೀಗೆ ಅದ್ಭುತ ವಾಗಿದೆ. ಕಲಿಯುಗದಲ್ಲಿಯೂ ಶ್ರೀವಿಷ್ಣುತೀರ್ಥರು ಮಧ್ವರ ಇಂತಹ ಅನುಗ್ರಹವನ್ನು ಪಡೆದರು ಎಂದು ದೇವತೆಗಳೂ ವಿಷ್ಣುತೀರ್ಥರನ್ನು ಗೌರವಿಸಿದರು. ಶ್ರೀವಿಷ್ಣುತೀರ್ಥರಿಗೆ 'ಅನಿರುದ್ಧತೀರ್ಥ'ರೆಂಬ ಶಿಷ್ಯರಿದ್ದರು. ಸಕಲ ಶಾಸ್ತ್ರ ಪ್ರವೀಣರೂ ತರ್ಕಶಾಸ್ತ್ರದಲ್ಲಿ ವಿಶೇಷವಾಗಿ ವಿದ್ವಾಂಸರೂ ಆಗಿದ್ದ ಆ ಅನಿರುದ್ಧತೀರ್ಥರ ಪ್ರಾರ್ಥನೆಯಂತೆ ಒಮ್ಮೆ ವಿಷ್ಣುತೀರ್ಥರು ಉಡುಪಿಗೆ ಬಂದಿದ್ದರು. ಆಗ ಅಲ್ಲಿಯ ಜನರು ನಮ್ಮನ್ನು ಅನುಗ್ರಹಿಸಲು ಶ್ರೀಮಧ್ವರೇ ಪುನಃ ಬಂದರೆಂದು ತಿಳಿದರು. ಅಣ್ಣ-ತಮ್ಮಂದಿರಲ್ಲಿ ಅಂತಹ ಹೋಲಿಕೆಯಿತ್ತು. ಶ್ರೀವಿಷ್ಣುತೀರ್ಥರಿಗೆ ವ್ಯಾಸತೀರ್ಥರೆಂಬ ತಾಪಸಶ್ರೇಷ್ಠರೂ ಶಿಷ್ಯರಾಗಿದ್ದರು. ಶ್ರೀವಿಷ್ಣುತೀರ್ಥರು ಅವರಿಗೂ ವಿಶೇಷಾನುಗ್ರಹವನ್ನು ಮಾಡಿದರು. ಹೀಗೆ ತಮ್ಮ ಭಕ್ತಿಯಿಂದ ಶ್ರೀಹರಿಯ ವಿಶೇಷಾನುಗ್ರಹ ವನ್ನು ಪಡೆದ ಶ್ರೀವಿಷ್ಣುತೀರ್ಥರು ಇತರರಿಗೆ ಹತ್ತಲು ಅಸಾಧ್ಯವಾದ ಕುಮಾರಪರ್ವತವೆಂಬ ಸಹ್ಯಪರ್ವತದ ಶಿಖರವನ್ನು ಹತ್ತಿ ಅಲ್ಲಿ ಅದೃಶ್ಯರಾಗಿ ತಪಸ್ಸನ್ನು ಮಾಡುತ್ತಾ ಇದ್ದುಬಿಟ್ಟರು.

ಗೋದಾವರೀ ತೀರವಾಸಿಗಳಾದ ಶೋಭನಭಟ್ಟರೆಂಬ ಪಂಡಿತೋತ್ತಮರೊಬ್ಬರು ಆಚಾರ್ಯರ ಕೀರ್ತಿಯನ್ನು ಕೇಳಿ ಅವರ ಹತ್ತಿರ ಬಂದರು. ಆಚಾರ್ಯರು ಅವರಿಗೆ ಸಂನ್ಯಾಸವನ್ನು ಕೊಟ್ಟರು. ಅವರು ಶ್ರೀಪದ್ಮನಾಭತೀರ್ಥರೆಂಬ ಹೆಸರಿನಿಂದ ಆಚಾರ್ಯರ ಶಿಷ್ಯರಾದರು. ಶ್ರೀಪದ್ಮನಾಭತೀರ್ಥರ ಭಕ್ತಿವೈರಾಗ್ಯ ನಿರಂತರ ಸೇವೆಗಳಿಂದ ಪ್ರಸನ್ನರಾದ ಆಚಾರ್ಯರು ಅವರಿಗೆ ಪರಮಮಂಗಳಕರವಾದ ರಹಸ್ಯವಾದ ವೇದಾಂತ ವಿದ್ಯೆಯನ್ನು ಉಪದೇಶಿಸಿದರು. ಶ್ರೀಪದ್ಮನಾಭ ತೀರ್ಥರಾದರೋ ಅದು ಮೊದಲ್ಗೊಂಡು ವೇದಾಂತಶಾಸ್ತ್ರವನ್ನು ಬಿಟ್ಟು ಬೇರೆ ಕಡೆಗೆ ಮನಸ್ಸನ್ನೇ ಕೊಡಲಿಲ್ಲ. ಶ್ರೀಪದ್ಮನಾಭ ತೀರ್ಥರು ವೈಶೇಷಿಕಾದಿಶಾಸ್ತ್ರಗಳನ್ನು ಪರಿಶೀಲಿಸಿ ಅವರ ನ್ಯಾಯಗಳನ್ನು ವೇದಾಂತನ್ಯಾಯಗಳಿಂದ ಖಂಡಿಸಿ ಮಾಯಾವಾದಿ ಗಳನ್ನೂ ತಮ್ಮ ಶಾಸ್ತ್ರವ್ಯಾಖ್ಯಾನದ ಗರ್ಜನೆಯಿಂದ ಹೆದರಿಸಿ, ಖಂಡಿಸಿ ಸೋಲಿಸುತ್ತಿದ್ದರು. ಶ್ರೀಪದ್ಮನಾಭತೀರ್ಥರು ಜ್ಞಾನ ಸಮುದ್ರರು. ಅವರು ಆಚಾರ್ಯರ ಅನುವ್ಯಾಖ್ಯಾನವೆಂಬ ಗ್ರಂಥಕ್ಕೆ 'ಸನ್ನ್ಯಾಯರತ್ನಾವಲಿ' ಎಂಬ ಟೀಕೆಯನ್ನು ವಿರಚಿಸಿದರು. ಅದು ಸಮುದ್ರದಲ್ಲಿ ದೊರಕುವ ರತ್ನದಂತೆಯೇ ಅಮೂಲ್ಯವಾಗಿತ್ತು. ಶ್ರೀಪದ್ಮನಾಭತೀರ್ಥರು ವೇದ ಪ್ರವಚನವನ್ನು ಮಾಡಿ ಇವರು ವೇದಪ್ರವಚನಾಚಾರ್ಯರಾದ ಶ್ರೀಮಧ್ವಾಚಾರ್ಯರ ಶಿಷ್ಯರೆಂದು ಸಭೆಗಳಲ್ಲಿ ವಿಶೇಷವಾದ ಮನ್ನಣೆಯನ್ನು ಪಡೆದಿದ್ದರು. ಈ ಭಾರತದೇಶದಲ್ಲಿ ಶ್ರೀಪೂರ್ಣಪ್ರಜ್ಞಾಚಾರ್ಯರಿಗೆ ಶ್ರೀವಿಷ್ಣುತೀರ್ಥರು ಮತ್ತು ಶ್ರೀಪದ್ಮನಾಭತೀರ್ಥರಿಗಿಂತ ಮೊದಲೂ, ಅನಂತರವೂ ಅನೇಕರು ಶಿಷ್ಯರಾಗಿದ್ದರು. ಅವರಲ್ಲಿ ಜಿತೇಂದ್ರಿಯರಾದ ಹೃಷೀಕೇಶತೀರ್ಥರು, ಜನನ-ಮರಣಗಳನ್ನು ನಿವಾರಿಸಿಕೊಂಡ ಜನಾರ್ದನತೀರ್ಥರು, ನರಸಿಂಹೋಪಾಸಕರಾದ ನರಸಿಂಹತೀರ್ಥರು, ಇಂದ್ರಾದಿಗಳೆಲ್ಲರಿಗಿಂತಲೂ ಉತ್ತಮನಾದ ಉಪೇಂದ್ರನನ್ನು ಸರ್ವದಾ ಸ್ಮರಿಸುವ ಉಪೇಂದ್ರ-ತೀರ್ಥರು, ವಾಮನನಲ್ಲಿಯೇ ನೆಟ್ಟಮನವುಳ್ಳ ವಾಮನತೀರ್ಥರು, ಶ್ರೀರಾಮಧ್ಯಾನಾಸಕ್ತರಾದ ರಾಮತೀರ್ಥರು, ಅತೀಂದ್ರಿಯ ಜ್ಞಾನಸಂಪನ್ನರಾದ ಅಧೋಕ್ಷಜತೀರ್ಥರು ಇವರು ಮುಖ್ಯರು. ಹೀಗೆ ಇನ್ನೂ ಅನೇಕ ಶಿಷ್ಯರು ಇದ್ದರು. ಇವರೆಲ್ಲರೂ ಭಕ್ತಿವೈರಾಗ್ಯಸಮುದ್ರರು. ತಮ್ಮ ಸಂಚಾರಗಳಿಂದ ಭೂಮಿಯನ್ನೇ ಪಾವನಗೊಳಿಸುತ್ತಿದ್ದರು. ಹರಿಯ ಸರ್ವೋತ್ತಮತ್ವವನ್ನು ಜನರಿಗೆ ಉಪದೇಶಿಸಿ ದುರ್ಮತಗಳನ್ನು ಖಂಡಿಸಿ ಆಚಾರ್ಯರು ಅನುಗ್ರಹಿಸಿರುವ ದಿವ್ಯ ಪ್ರತಿಮೆಗಳಲ್ಲಿ ಜ್ಞಾನಾನಂದಮೂರ್ತಿಯಾದ ಶ್ರೀಹರಿಯನ್ನು ಪೂಜಿಸುತ್ತಿದ್ದರು. ಹೀಗೆಯೇ ಆಚಾರ್ಯರ ಶಿಷ್ಯರಿಗೂ ಅನೇಕ ಶಿಷ್ಯರಿದ್ದರು. ಅವರೆಲ್ಲರೂ ಸದ್ಗುಣಗಳಿಂದಲೂ ಶಾಸ್ತ್ರಗಳಿಂದಲೂ ಅಲಂಕೃತರಾಗಿದ್ದರು. ಆಚಾರ್ಯರಿಂದ ರಚಿತವಾದ ಸಚ್ಛಾಸ್ತ್ರಗಳ ಶ್ರವಣ-ಮನನಗಳನ್ನು ಮಾಡುತ್ತಾ, ಶ್ರೀಹರಿಯ ಧ್ಯಾನ ಮಾಡುತ್ತಾ ದುರ್ವಾದಿಗಳ ಅಭಿಪ್ರಾಯ

ವನ್ನು ನಿರಾಕರಿಸುತ್ತಾ ಅವರು ಭೂಮಂಡಲಕ್ಕೆ ಅಲಂಕಾರಪ್ರಾಯರಾಗಿದ್ದರು. ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ಕೆಲವರು ಸ್ವಲ್ಪವೇ ಶಾಸ್ತ್ರಶ್ರವಣ ಮಾಡಿದ್ದರೂ ಬಹಳ ಭಕ್ತಿಸಂಪನ್ನರಾಗಿದ್ದರು. ಮತ್ತೆ ಕೆಲವರು ಸ್ವಲ್ಪವೇ ತಿಳಿದಿದ್ದರೂ ಬಹಳವಾಗಿ ಶಾಸ್ತ್ರವನ್ನು ಕೇಳಿದವರು, ಹೀಗೆ ಅವರ ಶಿಷ್ಯರೆಲ್ಲರೂ ಒಂದಲ್ಲ ಒಂದು ರೀತಿಯಿಂದ ಅತಿಶಯವನ್ನು ಹೊಂದಿದ್ದರು. ಶ್ರೀಮಧ್ವಾಚಾರ್ಯರಿಂದ ಅನೇಕ ಗೃಹಸ್ಥ ಶಿಷ್ಯರೂ ಸಂಪೂರ್ಣವಾಗಿ ಅನುಗ್ರಹ ಪಡೆದಿದ್ದರು. ಅವರಲ್ಲಿ ಲಿಕುಚ ವಂಶದ ತ್ರಿವಿಕ್ರಮಪಂಡಿತಾಚಾರ್ಯರು, ಅವರ ತಮ್ಮ ಶಂಕರಾಚಾರ್ಯರು, ಅವರ ವಂಶದ ಮತ್ತೊಬ್ಬ ಶಂಕರಾಚಾರ್ಯರು ಈ ಮೂವರು ಮುಖ್ಯರಾಗಿದ್ದರು. ಲಿಕುಚ ವಂಶದ ಈ ಮೂವರೂ ಪಂಡಿತೋತ್ತಮರು. ಶ್ರೀಮಧ್ವಾಚಾರ್ಯರ ಅಪ್ಪಣೆಯನ್ನು ಪಾಲಿಸುತ್ತಾ ಶಿಷ್ಯರಿಗೆ ಸದ್ವಿದ್ಯೆಯನ್ನು ಉಪದೇಶಮಾಡುತ್ತಾ ಇವರು ಮಧ್ವಸಿದ್ಧಾಂತವನ್ನು ಬೆಳೆಸಿದರು. ಗ್ರಾಮಗಳ ಒಡೆಯರಾದ ಮತ್ತೆ ಕೆಲವರು ಬ್ರಾಹ್ಮಣಾದಿ ವರ್ಣದವರೂ ಆಚಾರ್ಯರ ಶಿಷ್ಯರಾಗಿದ್ದರು. ಅವರು ಶಾಸ್ತ್ರಾಭ್ಯಾಸಾದಿಗಳನ್ನು ಮಾಡದಿದ್ದರೂ ಸಜ್ಜನರನ್ನು ಕಾಪಾಡುವುದು, ದುರ್ಜನರನ್ನು ಶಿಕ್ಷಿಸುವುದು ಮುಂತಾದ ಸೇವಾಕಾರ್ಯದಿಂದ ಆಚಾರ್ಯರ ಅನುಗ್ರಹವನ್ನೂ ಆ ಮೂಲಕ ಶ್ರೀಹರಿಯ ಅನುಗ್ರಹವನ್ನೂ ಪಡೆದರು. ಹೀಗೆ ಶ್ರೀಮಧ್ವಾಚಾರ್ಯರ ಶಿಷ್ಯರೂ, ಅವರ ಶಿಷ್ಯರೂ, ಹೀಗೆ ಶಿಷ್ಯಪರಂಪರೆಯವರು ಆಚಾರ್ಯರ ದಯೆಯಿಂದ ತಮ್ಮ ಉದ್ಧಾರವನ್ನು ಮಾಡಿಕೊಂಡಿರುವುದಲ್ಲದೆ ಲೋಕವನ್ನು ಉದ್ಧರಿಸುವರು. ಇಂತಹ ಆಚಾರ್ಯರ ಪಾದಪದ್ಮವನ್ನು ವಿವೇಕಿಗಳಾದ ಎಲ್ಲರೂ ಸೇವಿಸಲು ಅಪೇಕ್ಷಿಸುವರಷ್ಟೆ!

ಹೀಗೆ ಸಜ್ಜನರಿಂದ ಭಕ್ತಿಯಿಂದ ಸೇವಿತರಾದ ಆಚಾರ್ಯರು ಕಣ್ವತೀರ್ಥದ ಹತ್ತಿರದಲ್ಲಿರುವ 'ಏಕವಾಟ'ವೆಂಬ (ತಾಂತ್ಯ) ಗ್ರಾಮದ ಜನರ ಪ್ರಾರ್ಥನೆಯಂತೆ ಅಲ್ಲಿಯೇ ಮಠದಲ್ಲಿ ಚಾತುರ್ಮಾಸ್ಯ ವ್ರತವನ್ನು ಆಚರಿಸುತ್ತಾ ವಾಸ ಮಾಡಿದರು. ಈ ಲೋಕದಲ್ಲಿ ಹುಟ್ಟಿದ ಎಲ್ಲರೂ ಸಂಸಾರತಾಪಶಾಂತಿಗಾಗಿ ಆನಂದತೀರ್ಥರ ಸುಂದರ ಮುಖ ಚಂದಿರನನ್ನು ಕಾಣಬೇಕು. ಅದರಿಂದ ಸಕಲೇಷ್ಟಾರ್ಥಗಳೂ ಲಭಿಸುವುವು. ಹಾಗೆ ಆಚಾರ್ಯರನ್ನು ನೋಡಿ ತಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಂಡಿರುವ ಆಚಾರ್ಯರ ದಾಸರ ದಾಸರ ದಾಸರ ದಾಸ್ಯವನ್ನಾದರೂ ಮಾಡಿದರೆ ಆಚಾರ್ಯರು ನಮ್ಮನ್ನು ಉದ್ಧರಿಸುವರು. ಆದ್ದರಿಂದ ಪ್ರತಿಯೊಬ್ಬ ಸಾತ್ತ್ವಿಕ ಜೀವನೂ ಆಚಾರ್ಯರಲ್ಲಿ ಅವರ ಶಿಷ್ಯ ಪರಂಪರೆಯಲ್ಲಿ ಭಕ್ತಿಯನ್ನು ಮಾಡಿ ಉದ್ಧಾರ ಹೊಂದಬೇಕೆಂದು ಆಶಿಸಿ ಅದರಂತೆ ಪ್ರಯತ್ನ ನಡೆಸಬೇಕು.



|| ಶ್ರೀಃ ||

|| ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ||

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಪಂಚದಶಃ ಸರ್ಗಃ

**ಅವತಾರಿಕಾ—** ಆಚಾರ್ಯರು ಹಳ್ಳಿಯ ಜನರಿಗೆ ತಮ್ಮ ಬ್ರಹ್ಮಸೂತ್ರಭಾಷ್ಯವನ್ನು ಪ್ರವಚನ ಮಾಡಿ ವಿವರಿಸಿದ-ರೆಂದು ಹೇಳುತ್ತಾರೆ.

**ಭೂಯೋಬೋಧಸ್ತತೋ ಭೂಯೋ ವ್ಯಾಚಖ್ಯೌ ಭಾಷ್ಯಮದ್ಭುತಮ್ ।**
**ಗ್ರಾಮೇ ಗ್ರಾಮೀಣಸಾಮಾನ್ಯೇ ವಸಂಸ್ತತ್ರಾಮರಾಲಯೇ ॥ 1 ॥**

**ಪದಚ್ಛೇದ—** ಭೂಯೋಬೋಧಃ, ತತಃ, ಭೂಯಃ, ವ್ಯಾಚಖ್ಯೌ, ಭಾಷ್ಯಂ, ಅದ್ಭುತಂ, ಗ್ರಾಮೇ, ಗ್ರಾಮೀಣ ಸಾಮಾನ್ಯೇ, ವಸನ್, ತತ್ರ, ಅಮರಾಲಯೇ ।

**ಅನ್ವಯ—** ತತಃ, ಭೂಯೋಬೋಧಃ, ತತ್ರ, ಗ್ರಾಮೇ, ಗ್ರಾಮೀಣಸಾಮಾನ್ಯೇ, ಅಮರಾಲಯೇ, ವಸನ್, ಭೂಯಃ, ಅದ್ಭುತಂ, ಭಾಷ್ಯಂ, ವ್ಯಾಚಖ್ಯೌ ।

**ಅನ್ವಯಾರ್ಥ—**

**ತತಃ** = ಅನಂತರ,
**ಭೂಯೋಬೋಧಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,
**ತತ್ರ ಗ್ರಾಮೇ** = ಆ 'ಪಾಡಿಕುಡಿಲು' ಎಂಬ ಹಳ್ಳಿಯಲ್ಲಿ,
**ಗ್ರಾಮೀಣಸಾಮಾನ್ಯೇ** = ಗ್ರಾಮದ ಜನರಿಗೆ ಸಾಧಾರಣವಾದ,
**ಅಮರಾಲಯೇ** = ದೇವಾಲಯದಲ್ಲಿ,
**ವಸನ್** = ವಾಸಿಸುತ್ತಾ,
**ಭೂಯಃ** = ಮತ್ತೂ,
**ಅದ್ಭುತಂ** = ಆಶ್ಚರ್ಯಕರವಾದ,
**ಭಾಷ್ಯಂ** = ಶ್ರೀಮದ್ಬ್ರಹ್ಮಸೂತ್ರಭಾಷ್ಯವನ್ನು,
**ವ್ಯಾಚಖ್ಯೌ** = ಪ್ರವಚನದ ಮೂಲಕ ತಿಳಿಸಿದರು.

**ತಾತ್ಪರ್ಯ—** ಶ್ರೀವಿಷ್ಣುಮಂಗಲ ದೇವಾಲಯದಲ್ಲಿ ಕೆಲವು ದಿನ ವಾಸಮಾಡಿದ ಅನಂತರ ಆಚಾರ್ಯರು 'ಪಾಡಿಕುಡಿಲು' ಎಂಬ ಆ ಗ್ರಾಮದಲ್ಲಿರುವ 'ಕುಡಿಲು' ಎಂಬ ಒಂದು ದೇವಾಲಯದಲ್ಲಿ ವಾಸಮಾಡಿದರು. ಆ ದೇವಾಲಯವು ಗ್ರಾಮಸ್ಥರಿಗೆಲ್ಲಾ ಸಾಧಾರಣವಾಗಿತ್ತು. ಹಳ್ಳಿಯವರೆಲ್ಲರೂ ಅಲ್ಲಿ ಸೇರುತ್ತಿದ್ದರು. ಅಲ್ಲಿ ಆಚಾರ್ಯರು ತಾವು ಬ್ರಹ್ಮಸೂತ್ರಗಳಿಗೆ ಬರೆದ ಅದ್ಭುತವಾದ ಭಾಷ್ಯವನ್ನು ಸಭೆಯ ಜನರಿಗೆ ಪ್ರವಚನದ ಮೂಲಕ ವಿವರಿಸಿ ಹೇಳಿದರು.

ವಿಶೇಷಾಂಶ—ಭಾವಪ್ರಕಾಶಿಕಾ— ಅಮರಾಲಯಸ್ಯ ಕುಡಿಲ್ ಇತ್ಯಪಭ್ರಷ್ಟಭಾಷಾ, ಗ್ರಾಮಸ್ಯಾಪಿ । ಆಚಾರ್ಯರು ಭಾಷ್ಯ ಪ್ರವಚನ ಮಾಡಿದ ದೇವಾಲಯಕ್ಕೆ ಕುಡಿಲ್ ಎಂದು ಹೆಸರು. ಗ್ರಾಮಕ್ಕೂ ಕುಡಿಲ್ ಎಂದು ಹೆಸರು. (ಇದನ್ನೇ ಪಾಡಿಕುಡಿಲ್ ಎಂದೂ ಹೇಳುತ್ತಾರೆ. ಕಾಡಿನ ಹತ್ತಿರದಲ್ಲಿರುವ, ಜನರು ಕೂಡುವ ಸ್ಥಳ ಎಂದು ಅದರ ಅರ್ಥ. ಈ ದೇವಾಲಯವು ವಿಷ್ಣುಮಂಗಲ ದೇವಾಲಯವಲ್ಲ, ಬೇರೊಂದು ಎಂದು ತಿಳಿದುಬರುತ್ತದೆ).

ವಿಗ್ರಹ—

ಭೂಯೋಬೋಧಃ— ಭೂಯಾನ್ ಬೋಧಃ ಯಸ್ಯ ಸಃ ಭೂಯೋಬೋಧಃ ।

ಗ್ರಾಮೀಣಸಾಮಾನ್ಯೇ— ಗ್ರಾಮೇ ಭವಾಃ ಗ್ರಾಮೀಣಾಃ ಗ್ರಾಮಾದ್ಯಖಞೌ ಎಂಬ ಸೂತ್ರದಿಂದ ಖಞ್ ಪ್ರತ್ಯಯ । ಗ್ರಾಮೀಣಾನಾಂ ಸಾಮಾನ್ಯಃ ಗ್ರಾಮೀಣಸಾಮಾನ್ಯಃ ತಸ್ಮಿನ್ ।

ಅಮರಾಲಯೇ— ಅಮರಾಣಾಂ ಆಲಯಃ ಅಮರಾಲಯಃ ತಸ್ಮಿನ್ ।

ಕ್ರಿಯಾಪದ— ವ್ಯಾಚಖ್ಯೇ - ವಿ+ಆ+ಚಖ್ಯೇ ಚಖ್ಯಾತೇ ಚಖ್ಯಿರೇ, ಚಖ್ಯಿಷೇ ಚಖ್ಯಾಥೇ, ಚಖ್ಯಿಧ್ವೇ ಚಖ್ಯೇ, ಚಖ್ಯಿವಹೇ ಚಖ್ಯಿವಹೇ ಚಖ್ಯಿಮಹೇ । ವಿ ಆಙ್ ಉಪಸರ್ಗದ್ವಯಪೂರ್ವಕ ಖ್ಯಾ ಪ್ರಕಥನೇ = ಹೇಳುವುದು. ಅದಾದಿ, ಸಕ, ಅನಿ, ಪರ. to relate to tell ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನ ।

ಪ್ರಯೋಗ— ತತಃ ಭೂಯೋಬೋಧೇನ ತತ್ರ ಗ್ರಾಮೇ ಗ್ರಾಮೀಣಸಾಮಾನ್ಯೇ ಅಮರಾಲಯೇ ವಸತಾ ಸತಾ ಭೂಯಃ ಅದ್ಭುತಂ ಭಾಷ್ಯಂ ವ್ಯಾಚಖ್ಯೇ (ಕರ್ಮಣಿ) ।

ವೃತ್ತ— ಈ ಸರ್ಗದಲ್ಲಿ ಪ್ರಾಯಃ ಪಥ್ಯಾ ವಕ್ತ್ರವೃತ್ತ. 'ವಕ್ತ್ರಂ ನಾದ್ಯಾನ್ನಸೌ ಸ್ಯಾತಾಮಬ್ಧೇರ್ಯೋಽನುಷ್ಟುಭಿಃ ಖ್ಯಾತಂ । ಯುಜೋರ್ಜೇನ ಸರಿದ್ಭರ್ತುಃ ಪಥ್ಯಾವಕ್ತ್ರಂ ಪ್ರಕೀರ್ತಿತಂ' ಎಂದು ಅದರ ಲಕ್ಷಣ. ಈ ವೃತ್ತವು ಅನುಷ್ಟುಪ್ ವೃತ್ತದ ಪ್ರಭೇದ।

★ ★ ★

ಅವತಾರಿಕಾ— ಆಗ ತನ್ನೊಡನೆ ವಾದಕ್ಕೆ ಬಂದಿರುವ ತ್ರಿವಿಕ್ರಮಪಂಡಿತಾಚಾರ್ಯರನ್ನು, ಆಚಾರ್ಯರು ತಮಗೆ ಎದುರಾಳಿಯಾಗಿ ಬಂದಿರುವ ಶತ್ರುಸೈನ್ಯದ ಸೇನಾಪತಿಯಂತೆ ತಿಳಿದರು ಎಂದು ಹೇಳುತ್ತಾರೆ.

**ಪರ(ಪ್ರತಿ)ಪಕ್ಷರಥಾರೂಢಂ ಖರತರ್ಕಮಹಾಯುಧಮ್ ।**
**ತ್ರಿವಿಕ್ರಮಾರ್ಯಂ ಸೋಽಪಶ್ಯತ್ ಪ್ರತಿವೀರಮಿವಾಗ್ರತಃ ॥ 2 ॥**

ಪದಚ್ಛೇದ— ಪರಪಕ್ಷರಥಾರೂಢಂ, ಖರತರ್ಕಮಹಾಯುಧಂ, ತ್ರಿವಿಕ್ರಮಾರ್ಯಂ, ಸಃ, ಅಪಶ್ಯತ್, ಪ್ರತಿವೀರಂ, ಇವ, ಅಗ್ರತಃ ।

ಅನ್ವಯ— ಸಃ, ಪರ(ಪ್ರತಿ)ಪಕ್ಷರಥಾರೂಢಂ, ಖರತರ್ಕಮಹಾಯುಧಂ, ತ್ರಿವಿಕ್ರಮಾರ್ಯಂ, ಪ್ರತಿವೀರಂ, ಇವ, ಅಗ್ರತಃ, ಅಪಶ್ಯತ್ ।

ಅನ್ವಯಾರ್ಥ—

ಸಃ = ಆ ಶ್ರೀಮಧ್ವಾಚಾರ್ಯರು,

ಪರಪಕ್ಷ(ಪ್ರತಿಪಕ್ಷ) = ಪ್ರತಿಸಿದ್ಧಾಂತವೆಂಬ,

ರಥ = ರಥದಲ್ಲಿ

ಆರೂಢಂ = ಆರೋಹಣ ಮಾಡಿರುವ,

ಖರ = ತೀಕ್ಷ್ಣವಾದ,
ತರ್ಕ = ಅನುಮಾನವೆಂಬ,
ಮಹಾಯುಧಂ = ದೊಡ್ಡ ಅಸ್ತ್ರವುಳ್ಳ
ತ್ರಿವಿಕ್ರಮಾರ್ಯಂ = ತ್ರಿವಿಕ್ರಮಪಂಡಿತಾಚಾರ್ಯರನ್ನು,
ಪ್ರತಿವೀರಂ ಇವ = ತನಗೆ ಎದುರಾಳಿಯಾದ ಭಟನನ್ನೆಂಬಂತೆ,
ಅಗ್ರತಃ = ಮುಂಭಾಗದಲ್ಲಿ,
ಅಪಶ್ಯತ್ = ನೋಡಿದರು.

**ತಾತ್ಪರ್ಯ—** ಶತ್ರುಸೇನಾಪತಿಯು ರಥವನ್ನೇರಿ ಅಸ್ತ್ರಶಸ್ತ್ರ ಸನ್ನದ್ಧನಾಗಿ ಎದುರಿಗೆ ಬಂದು ನಿಂತರೆ, ಈ ಕಡೆಯ ಸೇನಾಪತಿಯು ಇವನು ತನ್ನನ್ನು ಎದುರಿಸಲು ಬಂದ ಪ್ರತಿ ವೀರನು ಎಂದು ತಿಳಿಯುತ್ತಾನೆ ಮತ್ತು ಯುದ್ಧಮಾಡಲು ಸನ್ನದ್ಧನಾಗುತ್ತಾನೆ. ಅದರಂತೆ ವಾದಯುದ್ಧಕ್ಕೆ ನಿಂತ ಮಹಾಸೇನಾಪತಿಗಳಾದ ಶ್ರೀಮಧ್ವಾಚಾರ್ಯರು ಶತ್ರುಸೈನ್ಯದ ಸೇನಾಪತಿಯಂತಿರುವ ತ್ರಿವಿಕ್ರಮಪಂಡಿತಾಚಾರ್ಯರು ಅದ್ವೈತ ಸಿದ್ಧಾಂತವೆಂಬ ರಥವನ್ನೇರಿ, ಕಠಿಣವಾದ ತರ್ಕಗಳೆಂಬ ಆಯುಧಗಳಿಂದ ಸಜ್ಜಾಗಿ ಬಂದಾಗ ಅದ್ವೈತಸಿದ್ಧಾಂತವನ್ನು ವಹಿಸಿ ಯುಕ್ತಿಶೂರರಾಗಿರುವ ಈ ತ್ರಿವಿಕ್ರಮ-ಪಂಡಿತಾಚಾರ್ಯರು ತನಗೆ ಸರಿಯಾದ ಪ್ರತಿವಾದಿಯಾಗಿ ಬಂದಿರುವರೆಂದು ತಿಳಿದರು.

**ವಿಶೇಷಾಂಶ—** ಸ್ವಸಿದ್ಧಾಂತಂ ಸಮರ್ಥ್ಯ ಪರಸಿದ್ಧಾಂತಂ ನಿರಾಕುರ್ವನ್ ಶ್ರೀಮಧ್ವಾಚಾರ್ಯಃ ಸ್ವಪಕ್ಷವಿರುದ್ಧ ಪರಪಕ್ಷಮವಲಂಬ್ಯ ಆಗತಂ ಅತಿತರ್ಕಕರ್ಕಶಂ ತ್ರಿವಿಕ್ರಮಾರ್ಯಂ ಅಭಿಮುಖತಃ ಸ್ಥಿತಂ ಅಪಶ್ಯತ್ ಯಥಾ ಕಶ್ಚಿತ್ ಯೋದ್ಧಾ ರಥಾರೂಢಂ ನಾನಾನಿಶಿತಾಯುಧಧರಂ ಪ್ರತಿವೀರಂ ಅಗ್ರತಃ ಪಶ್ಯೇತ್ ತದ್ವತ್ ಇತಿ ಭಾವಃ (ಛಲಾರೀಯ). ತಮ್ಮ ಸಿದ್ಧಾಂತವನ್ನು ಸಮರ್ಥಿಸಿ ಪರಸಿದ್ಧಾಂತವನ್ನು ನಿರಾಕರಿಸುವ ಶ್ರೀಮಧ್ವಾಚಾರ್ಯರು ತಮ್ಮ ಪಕ್ಷಕ್ಕೆ ವಿರುದ್ಧವಾದ ಪರಸಿದ್ಧಾಂತವನ್ನು ಅವಲಂಬಿಸಿ ಬಂದಿರುವ ತರ್ಕಗಳಿಂದ ಅತಿಕರ್ಕಶರಾದ ತ್ರಿವಿಕ್ರಮಪಂಡಿತಾಚಾರ್ಯರನ್ನು ತನ್ನೆದುರು ಕುಳಿತಾಗ ಯೋಧನೊಬ್ಬನು ರಥವನ್ನೇರಿ ನಾನಾ ಬಗೆಯ ಹರಿತವಾದ ಆಯುಧಗಳನ್ನು ಧರಿಸಿ ಬಂದರೆ ಹೇಗೋ ಹಾಗೆ ನೋಡಿದರು ಎಂದು ಅಭಿಪ್ರಾಯ.

**ವಿಗ್ರಹ ಮತ್ತು ಕೋಶ—**

**ಪರಪಕ್ಷರಥಾರೂಢಂ—** ಪರಶ್ಚಾಸೌ ಪಕ್ಷಶ್ಚ ಪರಪಕ್ಷಃ, ಪರಪಕ್ಷಃ ಏವ ರಥಃ ಪರಪಕ್ಷರಥಃ, ಪರಪಕ್ಷರಥಂ ಆರೂಢಃ ಪರಪಕ್ಷರಥಾರೂಢಃ ತಂ (ಪ್ರತಿಪಕ್ಷ ಏವ ರಥಃ ತಂ ಆರೂಢಃ ತಂ) ।

**ಖರತರ್ಕಮಹಾಯುಧಂ—** ಖರಾಶ್ಚ ತೇ ತರ್ಕಾಶ್ಚ ಖರತರ್ಕಾಃ, ಮಹಾಂತಿ ಚ ತಾನಿ ಆಯುಧಾನಿ ಚ ಮಹಾಯುಧಾನಿ, ಖರತರ್ಕಾ ಏವ ಮಹಾಯುಧಾನಿ ಯಸ್ಯ ಸಃ ಖರತರ್ಕಮಹಾಯುಧಃ ತಂ ।
ಖರ = ತೀಕ್ಷ್ಣ, 'ತಿಗ್ಮಂ ತೀಕ್ಷ್ಣಂ ಖರಂ ತದ್ವತ್' ಅಮರ ।

**ತ್ರಿವಿಕ್ರಮಾರ್ಯಃ—** ತ್ರಿವಿಕ್ರಮಃ ಇತಿ ಆರ್ಯಃ ತ್ರಿವಿಕ್ರಮಾರ್ಯಃ ತಂ ।

**ಕ್ರಿಯಾಪದ— ಅಪಶ್ಯತ್ -** ಅಪಶ್ಯತ್ ಅಪಶ್ಯತಾಂ ಅಪಶ್ಯನ್, ಅಪಶ್ಯಃ ಅಪಶ್ಯತಂ ಅಪಶ್ಯತ, ಅಪಶ್ಯಂ ಅಪಶ್ಯಾವ ಅಪಶ್ಯಾಮ । ದೃಶಿರ್ ಪ್ರೇಕ್ಷಣೇ (ದೃಶ್ ಪಶ್ಯ್) ಸಕ. ಅನಿ. ಪರ. lo sce. ಅನದ್ಯತನಭೂತೇ ಲಙ್. ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ತೇನ ಪರಪಕ್ಷರಥಾರೂಢಃ ಖರತರ್ಕಮಹಾಯುಧಃ ತ್ರಿವಿಕ್ರಮಾರ್ಯಃ ಪ್ರತಿವೀರಃ ಇವ ಅಗ್ರತಃ ಅದೃಶ್ಯತ (ಕರ್ಮಣಿ) ।

★ ★ ★

**ಅವತಾರಿಕಾ**— ಆಗ ಆಚಾರ್ಯರ ಉಪನ್ಯಾಸಭಾರತಿಯು ಸೇನೆಯಂತೆ ಇತ್ತು ಎಂದು ವರ್ಣಿಸುತ್ತಾರೆ.

**ತದಾ ತದಾನನಾಂಭೋಜಾದ್ ವೃತ್ತೋಪನ್ಯಾಸಭಾರತೀ ।**
**ಸೇನಾ ಸೇನಾಗ್ರಹಾ ದಿವ್ಯಾ ಶಿಬಿರಾದಿವ ನಿರ್ಯಯೌ ॥ 3 ॥**

**ಪದಚ್ಛೇದ**— ತದಾ, ತದಾನನಾಂಭೋಜಾತ್, ವೃತ್ತಾ, ಉಪನ್ಯಾಸಭಾರತೀ, ಸೇನಾ, ಸೇನಾಗ್ರಹಾ, ದಿವ್ಯಾ, ಶಿಬಿರಾತ್, ಇವ, ನಿರ್ಯಯೌ ।

**ಅನ್ವಯ**— ತದಾ, ವೃತ್ತಾ, ದಿವ್ಯಾ, ಸೇನಾಗ್ರಹಾ, ಉಪನ್ಯಾಸಭಾರತೀ, ತದಾನನಾಂಭೋಜಾತ್, ಸೇನಾ, ಶಿಬಿರಾತ್, ಇವ, ನಿರ್ಯಯೌ ।

**ಅನ್ವಯಾರ್ಥ**—

**ತದಾ** = ತ್ರಿವಿಕ್ರಮಪಂಡಿತಾಚಾರ್ಯರು ಕೇಳುತ್ತಿರುವಾಗ,

**ವೃತ್ತಾ** = ಪ್ರಾರಂಭವಾದ,

**ದಿವ್ಯಾ** = ಆಶ್ಚರ್ಯಕರವಾದ,

**ಸೇನಾಗ್ರಹಾ** = ಸಮಸ್ತ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾದ ಶ್ರೀಮನ್ಮಹಾವಿಷ್ಣುವಿಗೆ ಜಗತ್ತಿನ ಸಂಪೂರ್ಣ ಸ್ವಾಮ್ಯವನ್ನು ಸಮರ್ಥಿಸುವುದರಲ್ಲಿ ಆದರಾತಿಶಯವುಳ್ಳ, (ಸೇನಾಪತಿಗೆ ಜಯವನ್ನುಂಟುಮಾಡು- ವುದರಲ್ಲಿ ಹಠದಿಂದ ಕೂಡಿರುವ)

**ಉಪನ್ಯಾಸಭಾರತೀ** = ಉಪನ್ಯಾಸರೂಪವಾದ ಮಾತು,

**ತದಾನನಾಂಭೋಜಾತ್** = ಆ ಶ್ರೀಮಧ್ವಾಚಾರ್ಯರ ಮುಖಕಮಲದ ದೆಸೆಯಿಂದ,

**ಸೇನಾ** = ಸೈನ್ಯವು,

**ಶಿಬಿರಾತ್ ಇವ** = ತನ್ನ ವಾಸಸ್ಥಾನವಾದ ಬಿಡಾರದಿಂದಲೆಂಬಂತೆ,

**ನಿರ್ಯಯೌ** = ಹೊರಟಿತು.

**ತಾತ್ಪರ್ಯ**— ಆಗ ಒಂದು ಆಶ್ಚರ್ಯಕರವಾದ ಘಟನೆ ನಡೆಯಿತು. ತ್ರಿವಿಕ್ರಮಪಂಡಿತಾಚಾರ್ಯರು ಕುಳಿತು ಕೊಂಡು ನೋಡುತ್ತಿದ್ದರು ಮತ್ತು ಕೇಳುತ್ತಿದ್ದರು. ಶ್ರೀಮಧ್ವಾಚಾರ್ಯರ ಮುಖಕಮಲದಿಂದ ದಿವ್ಯವಾದ ಉಪನ್ಯಾಸ ಭಾರತಿಯು ಹೊರಟಿತು. ಶ್ರೀಮಧ್ವಾಚಾರ್ಯರು ತಮ್ಮ ಸಿದ್ಧಾಂತವನ್ನು ಸಾಧಿಸುವ ದಿವ್ಯವಾದ ಉಪನ್ಯಾಸವನ್ನು ಕೊಟ್ಟರು. ಯುದ್ಧಕ್ಕೆ ಸಿದ್ಧವಾದ ಸೇನೆಯು ತನ್ನ ಒಡೆಯನಿಗೆ ಜಯಗಳಿಸಿಕೊಡುವುದರಲ್ಲಿ ತುಂಬ ಆಗ್ರಹದಿಂದ ಕೂಡಿಕೊಂಡು ಉತ್ಸಾಹದಿಂದ ತಾನು ವಾಸಿಸುವ ಶಿಬಿರದಿಂದ ಹೊರಡುವಂತೆ ಶ್ರೀಮನ್ನಾರಾಯಣನೇ ಸರ್ವೋತ್ತಮನೆಂದು ಸಾಧಿಸುವು ದರಲ್ಲಿ ಹಠ ತೊಟ್ಟಿರುವ, ಹರಿಸರ್ವೋತ್ತಮತ್ವ ಸಾಧನೆಯಲ್ಲಿಯೇ ಪರಮತಾತ್ಪರ್ಯವುಳ್ಳ ದಿವ್ಯವಾದ ಉಪನ್ಯಾಸ ರೂಪವಾದ ವಚನವು ಆಚಾರ್ಯರ ಕಮಲದಂತಿರುವ ಮುಖದಿಂದ ಹೊರಹೊರಟಿತು. ಶತ್ರುವನ್ನು ಕಂಡೊಡನೆ ಉತ್ಸಾಹದಿಂದ ಸೈನ್ಯವು ಎದುರಾಗಿ ಹೊರಟಂತೆ ತ್ರಿವಿಕ್ರಮಪಂಡಿತರನ್ನು ಕಂಡಾಗ ಆಚಾರ್ಯರ ಮುಖದಿಂದ ಉಪನ್ಯಾಸವು ತಡೆಯಿಲ್ಲದೆ ಹೊರಟಿತು ಎಂದು ಭಾವವು.

**ವಿಗ್ರಹ ಮತ್ತು ಕೋಶ**—

**ತದಾನನಾಂಭೋಜಾತ್**— ತಸ್ಯ ಆನನಂ ತದಾನನಂ, ತದಾನನಂ ಏವ ಅಂಭೋಜಂ ತದಾನನಾಂಭೋಜಂ ತಸ್ಮಾತ್ । ವೃತ್ತಾ = ಪ್ರಾರಂಭವಾದ, ನಡೆಯುತ್ತಿರುವ, ಆದಿಕರ್ಮಣಿ ಕ್ತಃ ಕರ್ತರಿ ಚ (3.4.17) ಎಂಬ ಸೂತ್ರದಿಂದ ಕರ್ತರಿ ಕ್ತಪ್ರತ್ಯಯ ।

**ಉಪನ್ಯಾಸಭಾರತೀ—** ಉಪನ್ಯಾಸರೂಪಾ ಚ ಸಾ ಭಾರತೀ ಚ ಉಪನ್ಯಾಸಭಾರತೀ । ಉಪನ್ಯಾಸ = ಭಾಷಣ, 'ಉಪನ್ಯಾಸಸ್ತು ವಾಙ್ಮುಖಂ' ಅಮರ, ಭಾರತೀ = ಮಾತು, 'ಬ್ರಾಹ್ಮೀ ತು ಭಾರತೀ ಭಾಷಾ ಗೀರ್ವಾಗ್‌ವಾಣೀ ಸರಸ್ವತೀ' ಅಮರ ।

**ಸೇನಾಗ್ರಹಾ—** ಇನೇ ಆಗ್ರಹಃ ಇನಾಗ್ರಹಃ, ಇನಾಗ್ರಹೇಣ ಸಹ ವರ್ತತೇ ಇತಿ ಸೇನಾಗ್ರಹಾ । ಸೇನಾ = ಸಿಪಾಯಿಗಳ ದಂಡು, 'ಧ್ವಜಿನೀ ವಾಹಿನೀ ಸೇನಾ ಪೃತನಾನೀಕಿನೀ ಚಮೂಃ' ಅಮರ. ಈ ಸೇನೆಗೆ ನಾಲ್ಕು ಅಂಗಗಳು, ಆನೆ, ಕುದುರೆ, ಕಾಲಾಳುಗಳು, 'ಹಸ್ತ್ಯಶ್ವರಥ ಪಾದಾತಂ ಸೇನಾಂಗಂ ಸ್ಯಾ-ಚ್ಚತುಷ್ಟಯಂ' ಅಮರ. ಇನ = ಸ್ವಾಮಿ (ವಿಷ್ಣು ಮತ್ತು ರಾಜನು) 'ಇನಃ ಸೂರ್ಯೇ ಪ್ರಭೌ' ಅಮರ, 'ಇನಃ ಸ್ವಾಮಿನಿ ಸೂರ್ಯೇ ಚ' ಅಭಿಧಾನಕೋಶ ।

**ಶಿಬಿರಾತ್—** ಶಿಬಿರಂ = ಸೇನೆಯ ವಾಸಸ್ಥಳ, 'ನಿವೇಶಃ ಶಿಬಿರಂ ಷಂಡೇ' ಅಮರ. ಇದು ಆದಿಕುಲಕ, 'ನಿರ್ಯಯೌ' ಎಂಬ ಕ್ರಿಯಾಪದವುಳ್ಳ ಈ ಶ್ಲೋಕವನ್ನು ಆರಂಭಿಸಿ 'ಪದ್ಮೇಶಪದಪದ್ಮಶ್ರಿತ್ ಕೃತ್ಯಾಂಗಂ ಪದ್ಮಜನ್ಮನಃ । ಲಾಲಿತಾ ಶಿರಸೇಶೇನ ಗಂಗೇವಾಶೇಷಪಾವನೀ ॥' ಎಂಬ 7ನೆಯ ಶ್ಲೋಕದವರೆಗೆ ಐದು ಶ್ಲೋಕಗಳಿಗೆ ಏಕಾನ್ವಯವಿದೆ. ಐದು ಅಥವಾ ಅದಕ್ಕಿಂತ ಹೆಚ್ಚು ಶ್ಲೋಕಗಳಿಗೆ ಏಕಾನ್ವಯವಿದ್ದರೆ ಕುಲಕ. ತದಾ-ಇತ್ಯಾದಿ ಕುಲಕದ ಮೊದಲನೆಯ ಶ್ಲೋಕದಲ್ಲಿರುವ 'ನಿರ್ಯಯೌ' ಕ್ರಿಯಾಪದದ ಜತೆಗೆ ಎಲ್ಲಾ ಶ್ಲೋಕಗಳಿಗೆ ಅನ್ವಯವಿರುವುದರಿಂದ ಇದು ಆದಿಕುಲಕವು. (ಉಪಮಾಲಂಕಾರವು).

**ಕ್ರಿಯಾಪದ—** **ನಿರ್ಯಯೌ** - ನಿರ್+ಯಯೌ, ಯಯತುಃ ಯಯುಃ, ಯಯಿಥ ಯಯಾಥ ಯಯಥುಃ ಯಯ, ಯಯೌ ಯಯಿವ ಯಯಿಮ । ಯಾ = ಪ್ರಾಪಣೇ ಅದಾದಿ ಸಕ. ಅನಿ. ಪರ ೧೦ ೪೦ ಅನದ್ಯತನ ಪರೋಕ್ಷೆ ಭೂತೇ ಲಿಟ್. ಪ್ರಥಮಪುರುಷೇ ಏಕವಚನ, ನಿರ್ ಉಪಸರ್ಗ.

**ಪ್ರಯೋಗ—** ತದಾ ವೃತ್ತಯಾ ಸೇನಾಗ್ರಹಯಾ, ಉಪನ್ಯಾಸಭಾರತ್ಯಾ ತದಾನನಾಂಭೋಜಾತ್ ಸೇನಯಾ ಶಿಬಿರಾತ್ ಇವ ನಿರ್ಯಯೇ (ಭಾವೇ) ।

★ ★ ★

**ಅವತಾರಿಕಾ—** ಆಚಾರ್ಯರ ಉಪನ್ಯಾಸಭಾರತಿಯನ್ನು ಸೇನೆಗೆ ಹೋಲಿಸಿ ಎರಡಕ್ಕೂ ಅನ್ವಯಿಸುವ ವಿಶೇಷಣಗಳಿಂದ ವರ್ಣಿಸುತ್ತಾರೆ.

**ನಾತ್ಯತ್ವರಾ ನಾತಿರಯಾ ನಸ್ಖಲಂತೀ ನಿರಂತರಾ ।**
**ಅನಾನಾವಯವೇತ್ಯೇವ ದವೀಯೋಭಿಃ ಪ್ರತರ್ಕಿತಾ ॥ 4 ॥**

**ಪದಚ್ಛೇದ—** ನಾತ್ಯತ್ವರಾ, ನಾತಿರಯಾ, ನಸ್ಖಲಂತೀ, ನಿರಂತರಾ, ಅನಾನಾವಯವಾ, ಇತಿ, ಏವ, ದವೀಯೋಭಿಃ, ಪ್ರತರ್ಕಿತಾ ।

**ಅನ್ವಯ—** ನಾತ್ಯತ್ವರಾ, ನಾತಿರಯಾ, ನಸ್ಖಲಂತೀ, ನಿರಂತರಾ, ದವೀಯೋಭಿಃ, ಅನಾನಾವಯವಾ, ಇತಿ, ಏವ, ಪ್ರತರ್ಕಿತಾ । (ಸಾ ಉಪನ್ಯಾಸ ಭಾರತೀ ತದಾನನಾಂಭೋಜಾತ್ ಶಿಬಿರಾತ್ ಸೇನಾ ಇವ ನಿರ್ಯಯೌ ಎಂದು ಹಿಂದಿನ ಶ್ಲೋಕದೊಡನೆ ಏಕಾನ್ವಯ)

**ಅನ್ವಯಾರ್ಥ—**

**ನಾತ್ಯತ್ವರಾ** = ಅತ್ಯಂತ ಮೆಲ್ಲನೆಯಲ್ಲದ,

**ನಾತಿರಯಾ** = ಅತ್ಯಂತ ವೇಗವಿಲ್ಲದ,

**ನಸ್ಖಲಂತೀ** = ಶಬ್ದಾರ್ಥಗಳ ಸ್ಖಲನವಿಲ್ಲದ (ಸೇನೆಯ ಪಕ್ಷದಲ್ಲಿ ಎಲ್ಲಿಯೂ ಎಡವದೆ ತಡವರಿಸದೆ ಇರುವ),

**ನಿರಂತರಾ** = ತಡೆಯಿಲ್ಲದೇ ಮುಂದೆ ಸಾಗತಕ್ಕ (ಎಡೆಬಿಡದಿರುವ),

**ದವೀಯೋಭಿಃ** = ದೂರದಲ್ಲಿರುವುದರಿಂದ,

**ಅನಾನಾವಯವಾ ಇತ್ಯೇವ** = ಸ್ವರವರ್ಣಪದವಾಕ್ಯ ಮಹಾವಾಕ್ಯರೂಪವಾದ ನಾನಾಭಾಗಗಳು ಇಲ್ಲದುದು ಎಂದೇ (ಸೇನೆಯ ಪಕ್ಷದಲ್ಲಿ ಆನೆ, ಕುದುರೆ, ರಥ, ಕಾಲಾಳು ಎಂಬ ನಾನಾಭಾಗಗಳು ಇಲ್ಲದುದೆಂದೇ),

**ಪ್ರತರ್ಕಿತಾ** = ಊಹಿಸಲ್ಪಟ್ಟ (ಆ ಉಪನ್ಯಾಸ ಭಾರತಿಯು ಆಚಾರ್ಯರ ಮುಖಕಮಲದಿಂದ, ಶಿಬಿರದಿಂದ ಸೇನೆಯು ಹೊರಟಂತೆ ಹೊರಟಿತು)

**ತಾತ್ಪರ್ಯ**— ಸೇನೆಯು ಮೆಲ್ಲಗೂ ಅಲ್ಲದೆ, ಬೇಗನೆಯೂ ಅಲ್ಲದೆ, ಎಲ್ಲಿಯೂ ಎಡೆಬಿಡದೆ ತಡೆಯಿಲ್ಲದೆ ನಡೆಯುತ್ತಾ, ದೂರದಲ್ಲಿರುವುದರಿಂದ ಇಲ್ಲಿ ಆನೆ, ಕುದುರೆ, ರಥ, ಕಾಲಾಳುಗಳು ಇಲ್ಲವೆಂದೇ ಊಹಿಸಲ್ಪಡುತ್ತಾ ಸಾಗುತ್ತದೆ. ಆಚಾರ್ಯರ ಉಪನ್ಯಾಸವೂ ಅತಿ ಮೆಲ್ಲಗೂ ಅಲ್ಲದೆ, ಅತಿ ಬೇಗನೆಯೂ ಅಲ್ಲದೆ, ಎಲ್ಲಿಯೂ ಶಬ್ದಾರ್ಥಗಳ ಸ್ಖಲನವಿಲ್ಲದೆ, ಮಧ್ಯದಲ್ಲಿ ಎಡೆಬಿಡದೆ ಸಾಗುತ್ತಿತ್ತು. ಆದುದರಿಂದಲೇ ದೂರದಲ್ಲಿರುವವರಿಗೆ ಈ ಉಪನ್ಯಾಸದಲ್ಲಿ ಸ್ವರ, ಅಕ್ಷರ, ಪದವಾಕ್ಯಾದಿ ಅಂಗಗಳು ಇವೆಯೆಂದೇ ತೋರುತ್ತಿರಲಿಲ್ಲ. ಆಚಾರ್ಯರ ಮೃದುಗಂಭೀರವಾದ ಉಪನ್ಯಾಸವು ಒಂದು ಅಖಂಡವಾದ ಸಂಗೀತ ಸ್ವರಧಾರೆಯಂತೆ ದೂರದಲ್ಲಿರುವವರಿಗೆ ಮತ್ತು ಈ ಉಪನ್ಯಾಸ ವಿಷಯದ ಪರಿಚಯವಿಲ್ಲದವರಿಗೆ ಕೇಳಿ ಬಂತೆಂದು ಅಭಿಪ್ರಾಯ.

**ವಿಗ್ರಹ**—

**ನಾತ್ಯತ್ವರಾ**— ನ ವಿದ್ಯತೇ ಅತಿತ್ವರಾ ಯಸ್ಯಾಃ ಸಾ ನಾತ್ಯತ್ವರಾ । ಇಲ್ಲಿ 'ನಞ್' ಶಬ್ದದ ಅರ್ಥವುಳ್ಳ ನ ಎಂಬ ಶಬ್ದದ ಜತೆಗೆ ಸಮಾಸ ಬಂದಿರುವುದರಿಂದ 'ನ' ಶಬ್ದದ ನಕಾರ ಲೋಪವಾಗಿ ನುಡಾಗಮವು ಬರಲಿಲ್ಲ. ನಞ್ ಆಗಿದ್ದರೆ ಅನತಿತ್ವರಾ ಎಂದು ರೂಪವಾಗುತ್ತಿತ್ತು. ಇದು ನ ಶಬ್ದವಾದುದರಿಂದ ನಾತ್ಯತ್ವರಾ ಎಂಬ ರೂಪವು ಸಾಧುವೆಂದು ತಿಳಿಯಬೇಕು.

**ನಾತಿರಯಾ**— ನ ವಿದ್ಯತೇ ಅತಿರಯಃ ಯಸ್ಯಾಃ ಸಾ ನಾತಿರಯಾ । ಇಲ್ಲಿಯೂ ನಞ್ ಅಲ್ಲ, ನ ಎಂಬ ಅವ್ಯಯವೆಂದು ತಿಳಿಯಬೇಕು. ಹೀಗೆಯೇ ನ+ಸ್ಖಲಂತೀ ನಸ್ಖಲಂತೀ ಎಂಬುದೂ ನಞಾರ್ಥಕವಾದ ನಶಬ್ದದಿಂದ ಆದ ಸಮಾಸವು.

**ನಿರಂತರಾ**— ನಿರ್ಗತಂ ಅಂತರಂ ಯಸ್ಯಾಃ ಸಾ ನಿರಂತರಾ,

**ಅನಾನಾವಯವಾ**— ನ ವಿದ್ಯಂತೇ ನಾನಾ ಅವಯವಾಃ ಯಸ್ಯಾಃ ಸಾ ಅನಾನಾವಯವಾ, ದೂರಃ ದವೀಯಾನ್ ದವಿಷ್ಠಃ, ನತರ ತಮ ಬೋಧಕ ಶಬ್ದಗಳು. ದವೀಯಸ್ ಎಂಬುದು ದೂರಶಬ್ದಕ್ಕೆ ಈಯಸುನ್ ಪ್ರತ್ಯಯ ಬಂದು ಆಗಿರುವ ಶಬ್ದವು. ದವೀಯಾನ್ ದವೀಯಾಂಸೌ ದವೀಯಾಂಸಃ, ದವೀಯಸಾ ದವೀಯೋಭ್ಯಾಂ ದವೀಯೋಭಿಃ ತೃತೀಯಾ ವಿಭಕ್ತಿ ಬಹುವಚನ.

**ಪ್ರಯೋಗ**— ನಾತ್ಯತ್ವರಯಾ ನಾತಿರಯಯಾ ನಸ್ಖಲಂತ್ಯಾ ನಿರಂತರಯಾ, ದವೀಯೋಭಿಃ ಅನಾನಾವ ಯವಯಾ ಇತ್ಯೇವ ಪ್ರತರ್ಕಿತಯಾ (ಭಾರತ್ಯಾ ಸೇನಯಾ ಶಿಬಿರಾತ್ ಇವ ನಿರ್ಯಯೇ) ।

★ ★ ★

ಅವತಾರಿಕಾ— ಮತ್ತೂ ಆಚಾರ್ಯರ ಉಪನ್ಯಾಸಭಾರತಿಯನ್ನು ಸೇನೆಯ ದೃಷ್ಟಾಂತದಿಂದ ವರ್ಣಿಸುತ್ತಾರೆ.

**ಸೂತ್ರಸ್ಯಂದನವೃಂದಾಢ್ಯಾ ದುರ್ವಾರಶ್ರುತಿವಾರಣಾ ।**
**ಸೂಪಪತ್ತಿಮಹಾಪತ್ತಿರ್ವಿಚಿತ್ರಸ್ಮೃತಿಸಪ್ತಿಕಾ ॥ 5 ॥**

**ಪದಚ್ಛೇದ—** ಸೂತ್ರಸ್ಯಂದನವೃಂದಾಢ್ಯಾ, ದುರ್ವಾರಶ್ರುತಿವಾರಣಾ, ಸೂಪಪತ್ತಿಮಹಾಪತ್ತಿಃ, ವಿಚಿತ್ರಸ್ಮೃತಿಸಪ್ತಿಕಾ ।

**ಅನ್ವಯ—** ಸೂತ್ರಸ್ಯಂದನವೃಂದಾಢ್ಯಾ, ದುರ್ವಾರಶ್ರುತಿವಾರಣಾ, ಸೂಪಪತ್ತಿಮಹಾಪತ್ತಿಃ, ವಿಚಿತ್ರಸ್ಮೃತಿಪತ್ತಿಕಾ । (ಉಪನ್ಯಾಸಭಾರತೀ ತದಾನನಾಂಭೋಜಾತ್ ಸೇನಾ ಶಿಬಿರಾತ್ ಇವ ನಿರ್ಯಯೌ)

**ಅನ್ವಯಾರ್ಥ—**

**ಸೂತ್ರಸ್ಯಂದನವೃಂದಆಢ್ಯಾ** = ಬ್ರಹ್ಮಸೂತ್ರಗಳೆಂಬ ರಥಗಳ ಸಮೂಹದಿಂದ ಸಂಪನ್ನವಾದ (ಕೂಡಿರುವ),

**ದುರ್ವಾರಶ್ರುತಿವಾರಣಾ** = ಖಂಡಿಸಲು ಅಸಾಧ್ಯವಾದ (ತಡೆಯಲು ಸಾಧ್ಯವಿಲ್ಲದ) ವೇದಗಳೆಂಬ ಆನೆಗಳುಳ್ಳ,

**ಸೂಪಪತ್ತಿಮಹಾಪತ್ತಿಃ** = ಒಳ್ಳೆಯ ಯುಕ್ತಿಗಳೆಂಬ ದೊಡ್ಡ ದೊಡ್ಡ ಕಾಲಾಳುಗಳುಳ್ಳ,

**ವಿಚಿತ್ರಸ್ಮೃತಿಸಪ್ತಿಕಾ** = ಆಶ್ಚರ್ಯಕರವಾದ ಸ್ಮೃತಿಗಳೆಂಬ ಕುದುರೆಗಳುಳ್ಳ (ಉಪನ್ಯಾಸಭಾರತಿಯು ಆಚಾರ್ಯರ ಮುಖಕಮಲದಿಂದ ಸೇನೆಯು ಶಿಬಿರದಿಂದ ಹೇಗೋ ಹಾಗೆ ಹೊರಟಿತು).

**ತಾತ್ಪರ್ಯ—** ಆಚಾರ್ಯರ ಉಪನ್ಯಾಸಭಾರತಿಯು ಮತ್ತೂ ಹೇಗಿತ್ತೆಂದು ವರ್ಣಿಸುತ್ತಾರೆ. ಒಂದು ಸೇನೆಯಲ್ಲಿ ರಥ ಸಮೂಹಗಳು, ತಡೆಯಲು ಸಾಧ್ಯವಿಲ್ಲದ ಆನೆಗಳು, ಸಮರ್ಥರಾದ ಕಾಲಾಳುಗಳೂ, ನಾನಾ ಬಣ್ಣದ ಕುದುರೆಗಳೂ ಇರುತ್ತವೆ. ಹೀಗೆ ಆನೆ, ಕುದುರೆ, ರಥ, ಕಾಲಾಳುಗಳೆಂಬ ಚತುರಂಗವುಳ್ಳ ಸೇನೆಯಂತೆ ಆಚಾರ್ಯರ ಉಪನ್ಯಾಸ ಭಾರತಿಯು ರಥಗಳ ಸಮೂಹಗಳಂತಿರುವ ಬ್ರಹ್ಮಸೂತ್ರಗಳಿಂದ ಸಂಪನ್ನವಾಗಿತ್ತು. ಆ ಉಪನ್ಯಾಸಭಾರತಿಯು ಆನೆಗಳಂತಿರುವ ವೇದಗಳಿಂದ ತಡೆಯಲು ಅಸಾಧ್ಯವಾಗಿತ್ತು. ಒಳ್ಳೆಯ ಕಾಲಾಳುಗಳಂತಹ ಶ್ರೇಷ್ಠಯುಕ್ತಿಗಳಿಂದ ಕೂಡಿತ್ತು. ಕುದುರೆಗಳಂತಹ ತನ್ನ ಪಕ್ಷವನ್ನು ಸಾಧಿಸಲು ಸಮರ್ಥವಾದ ಸ್ಮೃತಿಗ್ರಂಥಗಳೆಂಬ ಪ್ರಮಾಣಗಳಿಂದಲೂ ಕೂಡಿತ್ತು. ಇಂತಹ ಉಪನ್ಯಾಸಭಾರತಿಯು ಚತುರಂಗಸೈನ್ಯವು ಶಿಬಿರದಿಂದ ಹೊರಡುವಂತೆ ಆಚಾರ್ಯರ ಮುಖಕಮಲದಿಂದ ಹೊರಟಿತು.

**ವಿಗ್ರಹ ಮತ್ತು ಕೋಶ—**

**ಸೂತ್ರಸ್ಯಂದನವೃಂದಾಢ್ಯಾ—** ಸೂತ್ರಾಣ್ಯೇವ ಸ್ಯಂದನಾಃ ಸೂತ್ರಸ್ಯಂದನಾಃ, ಸೂತ್ರಸ್ಯಂದನಾನಾಂ ವೃಂದಂ ಸೂತ್ರಸ್ಯಂದನವೃಂದಂ, ಸೂತ್ರಸ್ಯಂದನವೃಂದೇನ ಆಢ್ಯಾ ಸೂತ್ರಸ್ಯಂದನವೃಂದಾಢ್ಯಾ। ಸ್ಯಂದನ = ರಥ, 'ಶತಾಂಗಃ ಸ್ಯಂದನೋ ರಥಃ' ಅಮರ ।

**ದುರ್ವಾರಶ್ರುತಿವಾರಣಾ—** ದುಃಖೇನ ವಾರಯಿತುಂ ಶಕ್ಯಾಃ ದುರ್ವಾರಾಃ, ದುರ್ವಾರಾಶ್ಚ ತಾಃ ಶ್ರುತಯಶ್ಚ ದುರ್ವಾರಶ್ರುತಯಃ, ದುರ್ವಾರಶ್ರುತಯ ಏವ ವಾರಣಾಃ ಯಸ್ಯಾಂ ಸಾ ದುರ್ವಾರಶ್ರುತಿವಾರಣಾ । ವಾರಣ = ಆನೆ, 'ಕುಂಜರೋ ವಾರಣಃ ಕರೀ' ಅಮರ ।

**ಸೂಪಪತ್ತಿಮಹಾಪತ್ತಿಃ—** ಶೋಭನಾಶ್ಚ ತಾಃ ಉಪಪತ್ತಯಶ್ಚ ಸೂಪಪತ್ತಯಃ, ಮಹಾಂತಶ್ಚ ತೇ ಪತ್ತಯಶ್ಚ ಮಹಾಪತ್ತಯಃ, ಸೂಪಪತ್ತಯಃ ಏವ ಮಹಾಪತ್ತಯಃ ಯಸ್ಯಾಂ ಸಾ ಸೂಪಪತ್ತಿಮಹಾಪತ್ತಿಃ। ಪತ್ತಿ = ಕಾಲಾಳು, 'ಪದಾತಿಪತ್ತಿಪದಗಪದಾತಿಕಪದಾಜಯಃ' ಅಮರ. ಪದ್ಯತೇ (ದಿವಾದಿ) ಇತಿ ಪತ್ತಿಃ ಬಾಹುಲಕಾತ್ ಕರ್ತರಿ ತಿಃ ತಿಪ್ರತ್ಯಯ ಅಥವಾ ಕ್ತಿಚ್ ಪ್ರತ್ಯಯ ಪುಲ್ಲಿಂಗ ಶಬ್ದ.

**ವಿಚಿತ್ರಸ್ಮೃತಿಸಪ್ತಿಕಾ—** ವಿಚಿತ್ರಾಶ್ಚ ತಾಃ ಸ್ಮೃತಯಶ್ಚ ವಿಚಿತ್ರಸ್ಮೃತಯಃ, ವಿಚಿತ್ರಸ್ಮೃತಯಃ ಏವ ಸಪ್ತಯಃ ಯಸ್ಯಾಂ ಸಾ ವಿಚಿತ್ರಸ್ಮೃತಿಸಪ್ತಿಕಾ । ಬಹುವ್ರೀಹಿಯಲ್ಲಿ ಕಪ್ರತ್ಯಯ, ಸಪ್ತಿ = ಕುದುರೆ, 'ವಾಜಿವಾಹಾರ್ವಗಂಧರ್ವಹಯಸೈಂಧವಸಪ್ತಯಃ' ಅಮರ ।

**ಪ್ರಯೋಗ—** ಸೂತ್ರಸ್ಯಂದನ ವೃಂದಾಢ್ಯಯಾ ದುರ್ವಾರಶ್ರುತಿವಾರಣಯಾ, ಸೂಪಪತ್ತಿಮಹಾಪತ್ತ್ಯಾ, ವಿಚಿತ್ರಸ್ಮೃತಿ ಸಪ್ತಿಕಯಾ (ಉಪನ್ಯಾಸಭಾರತ್ಯಾ ತದಾನನಾಂಭೋಜಾತ್ ಸೇನಯಾ ಶಿಬಿರಾತ್ ಇವ ನಿರ್ಯಯೇ) ।

★ ★ ★

**ಅವತಾರಿಕಾ—** ಲಕ್ಷ್ಮೀದೇವಿಯ ದೃಷ್ಟಾಂತದಿಂದ ಆಚಾರ್ಯರ ಉಪನ್ಯಾಸಭಾರತಿಯನ್ನು ವರ್ಣಿಸುತ್ತಾರೆ.

**ವರ್ಧಿತೋರ್ಮಿಹರಿಪ್ರೇಷ್ಠಾ ಸುಪಯೋಧರಸುಸ್ವನಾ ।**
**ಸವಿತಾನಪ್ರಕಾಶಾರ್ಥಾ ಸಾಗರೀ ಶ್ರೀರಿವಾಪರಾ ॥ 6 ॥**

**ಪದಚ್ಛೇದ—** ವರ್ಧಿತೋರ್ಮಿಹರಿಪ್ರೇಷ್ಠಾ, ಸುಪಯೋಧರಸುಸ್ವನಾ, ಸವಿತಾನಪ್ರಕಾಶಾರ್ಥಾ, ಸಾಗರೀ, ಶ್ರೀಃ, ಇವ, ಅಪರಾ ।

**ಅನ್ವಯ—** ವರ್ಧಿತೋರ್ಮಿಹರಿಪ್ರೇಷ್ಠಾ, ಸುಪಯೋಧರಸುಸ್ವನಾ, ಸವಿತಾನಪ್ರಕಾಶಾರ್ಥಾ, ಅಪರಾ, ಸಾಗರೀ, ಶ್ರೀಃ, ಇವ (ಉಪನ್ಯಾಸಭಾರತೀ ತದಾನನಾಂಭೋಜಾತ್ ಸೇನಾಶಿಬಿರಾತ್ ಇವ ನಿರ್ಯಯೌ) ।

**ಅನ್ವಯಾರ್ಥ—**

**ವರ್ಧಿತಊರ್ಮಿಹರಿಪ್ರೇಷ್ಠಾ** = ನಾಶಗೊಳಿಸಲ್ಪಟ್ಟ ವೃದ್ಧಿಹ್ರಾಸಾದಿ ವಿಕಾರಗಳುಳ್ಳ (ಹಸಿವು, ಬಾಯಾರಿಕೆ ಮುಂತಾದ ಷಡೂರ್ಮಿಗಳುಳ್ಳ) ಶ್ರೀಮನ್ನಾರಾಯಣನಿಗೆ ಅತ್ಯಂತ ಪ್ರಿಯಳಾದ,

**ಸುಪಯೋಧರಸುಸ್ವನಾ** = ಒಳ್ಳೆಯ ಮೋಡದ ಧ್ವನಿಯಂತಹ ಧ್ವನಿಯುಳ್ಳ,

**ಸವಿತಾನಪ್ರಕಾಶಾರ್ಥಾ** = ವಿಸ್ತಾರದಿಂದ ಸಹಿತವಾಗಿ, ಸ್ಪಷ್ಟವಾದ ಅಭಿಪ್ರಾಯವುಳ್ಳ (ಉಪನ್ಯಾಸಭಾರತೀ ತದಾನನಾಂಭೋಜಾತ್ = ಉಪನ್ಯಾಸಭಾರತಿಯು ಆಚಾರ್ಯರ ಮುಖಕಮಲದಿಂದ)

**ಅಪರಾ** = ಬೇರೊಬ್ಬಳಾದ,

**ಸಾಗರೀ** = ಸಮುದ್ರರಾಜನಾದ ವರುಣನ ಮಗಳಾದ,

**ಶ್ರೀಃ ಇವ** = ಲಕ್ಷ್ಮಿಯಂತೆ,

**(ನಿರ್ಯಯೌ** = ಆ ಲಕ್ಷ್ಮಿಯು ಹೇಗಿದ್ದಾಳೆಂದರೆ,)

**ವರ್ಧಿತೋರ್ಮಿಹರಿಪ್ರೇಷ್ಠಾ** = ನಾಶಗೊಳಿಸಲ್ಪಟ್ಟ (ಖಂಡಿಸಲ್ಪಟ್ಟ) ಭಕ್ತರ ಷಡೂರ್ಮಿಗಳುಳ್ಳ ಶ್ರೀಹರಿಗೆ, ಅತಿಶಯವಾಗಿ ಪ್ರಿಯಳಾದ,

**ಸುಪಯೋಧರಸುಸ್ವನಾ** = ಸುಂದರವಾದ ಸ್ತನಗಳಿಂದ ಕೂಡಿರುವ, ಒಳ್ಳೆಯ ಕಂಠಧ್ವನಿಯುಳ್ಳ,

**ಸವಿತಾನಪ್ರಕಾಶಾರ್ಥಾ** = ವಿಸ್ತಾರದಿಂದ ಕೂಡಿದ, ಅಪ್ರಾಕೃತ ತೇಜೋಮಯ ದ್ರವ್ಯಸ್ವರೂಪಳಾದ,

**(ಸಾಗರೀ ಶ್ರೀರಿವ ಉಪನ್ಯಾಸಭಾರತೀ ನಿರ್ಯಯೌ** = ಸಮುದ್ರರಾಜನಾದ ವರುಣನ ಮಗಳಾದ ಲಕ್ಷ್ಮಿಯಂತೆ ಆಚಾರ್ಯರ ಉಪನ್ಯಾಸಭಾರತಿಯು ಅವರ ಮುಖಕಮಲದಿಂದ ಹೊರಹೊರಟಳು). ಸಾಗರನ ಮಗಳಾದ ಆ ಲಕ್ಷ್ಮಿಯು ಹೇಗಿದ್ದಳೆಂದರೆ,

**ಅಪರಾಸಾಗರೀಶ್ರೀರಿವ** = ಮತ್ತೊಂದಾಗಿರುವ ಸಗರನೆಂಬ ರಾಜನಿಗೆ ಸಂಬಂಧಪಟ್ಟ ಸೇನೆಯ ಕಾಂತಿಯಂತೆ ಇದ್ದಳು. ಸಗರರಾಜನ ಸೇನೆಯ ಕಾಂತಿಯು ಹೇಗಿತ್ತೆಂದರೆ,

**ವರ್ಧಿತೋರ್ಮಿಹರಿಪ್ರೇಷ್ಠಾ** = ವರ್ಧಿತೋರ್ಮಿ ಎಂಬ (ಅಶ್ವಗಳ) ನಡಿಗೆಯುಳ್ಳ ಕುದುರೆಗಳಿಗೆ, ಹೆಚ್ಚು ಪ್ರೀತಿ ಪಾತ್ರವಾದ,

**ಸುಪಯೋಧರಸುಸ್ವನಾ** = ಚೆನ್ನಾಗಿ ಜಲಭರಿತವಾದ ಮೋಡಗಳಂತೆ, ಗಂಭೀರವಾದ ಕೆನೆಯುವ ಧ್ವನಿಯುಳ್ಳ,

**ಸವಿತಾನಪ್ರಕಾಶಾರ್ಥಾ** = ವಿಸ್ತಾರವಾಗಿ (ಬಹಳ ಚೆನ್ನಾಗಿ) ಪ್ರಕಟವಾಗುವ, ಶತ್ರುಗಳಿಗೆ ಹೆದರಿಕೆಯನ್ನುಂಟು ಮಾಡುವಿಕೆ ಎಂಬ ಪ್ರಯೋಜನವುಳ್ಳ,

**ಅಪರಾಸಾಗರೀಶ್ರೀರಿವ** = ಬೇರೆಯಾಗಿರುವ ಸಗರರಾಜನ ಅರವತ್ತು ಸಾವಿರ ಮಕ್ಕಳಿಗೆ ಸಂಬಂಧಪಟ್ಟ ಕಾಂತಿಯಂತೆ ಸಗರರಾಜನ ಸೇನೆಯ ಕಾಂತಿಯು ಇತ್ತು.

*ಸಗರರಾಜನ ಅರವತ್ತು ಸಾವಿರ ಮಕ್ಕಳಿಗೆ ಸಂಬಂಧಪಟ್ಟ ಕಾಂತಿಯು ಹೇಗಿತ್ತೆಂದರೆ,*

**ವರ್ಧಿತೋರ್ಮಿಹರಿಪ್ರೇಷ್ಠಾ** = ವರ್ಧಿತೋರ್ಮಿ ಎಂಬ ಅಶ್ವಗಳಿಗೆ ಸಂಬಂಧಪಟ್ಟ ಗತಿವಿಶೇಷದಂತೆ, ಅಶ್ವಮೇಧದ ಅಶ್ವಕ್ಕೆ ಅತ್ಯಂತ ಪ್ರಿಯವಾದ,

**ಸುಪಯೋಧರಸುಸ್ವನಾ** = ಒಳ್ಳೆಯ ಮೋಡದ ಧ್ವನಿಯಂತೆ ಧ್ವನಿಯುಳ್ಳ.

**ಸವಿತಾನಪ್ರಕಾಶಾರ್ಥಾ** = ಯಜ್ಞವನ್ನು ಪ್ರಕಾಶಗೊಳಿಸುವುದು ಎಂಬ ಪ್ರಯೋಜನವುಳ್ಳ,

**ಅಪರಾಸಾಗರೀಶ್ರೀರಿವ** = ಹಿಂದಿನದಕ್ಕಿಂತ ಬೇರೆಯಾದ ಸಮುದ್ರಕ್ಕೆ ಸಂಬಂಧಪಟ್ಟ ಕಾಂತಿಯಂತಿರುವ, ಸಮುದ್ರದ ಕಾಂತಿಯು ಹೇಗಿತ್ತೆಂದರೆ,

**ವರ್ಧಿತೋರ್ಮಿಹರಿಪ್ರೇಷ್ಠಾ** = ಹೆಚ್ಚಿಸಲ್ಪಟ್ಟ ಅಲೆಗಳುಳ್ಳ ಚಂದ್ರನಿಗೆ ಅತಿಶಯವಾಗಿ ಪ್ರಿಯವಾದ,

**ಸುಪಯೋಧರಸುಸ್ವನಾ** = ಒಳ್ಳೆಯ ಮೇಘಧ್ವನಿಯಂತೆ ಗಂಭೀರಧ್ವನಿಯುಳ್ಳ,

**ಸವಿತಾನಪ್ರಕಾಶಾರ್ಥಾ** = ವಿಸ್ತಾರವಾದ ತೇಜಸ್ಸುಳ್ಳ ರತ್ನಗಳೆಂಬ ಪದಾರ್ಥಗಳುಳ್ಳ,

**ಸಾಗರೀಶ್ರೀರಿವ** = ಸಮುದ್ರಕ್ಕೆ ಸಂಬಂಧಿಸಿರುವ ಕಾಂತಿಯಂತೆ ಇರುವಂತಹುದು.

1. ಹೀಗೆ ಸಾಗರದ ಜಲದ ಕಾಂತಿಯಂತೆ ಇರುವ, 2. ಸಗರರಾಜನ 60 ಸಾವಿರ ಮಂದಿ ಮಕ್ಕಳ ಕಾಂತಿಯು ಅದರಂತೆ ಇರುವ, 3. ಸಗರರಾಜನ ಮಕ್ಕಳ ಸೇನೆಯ ಕಾಂತಿಯು, 4. ಅದರಂತೆ ಇರುವ ಸಾಗರ ಪುತ್ರಿಯಾದ ಲಕ್ಷ್ಮೀ ದೇವಿಯಂತೆ ಇರುವ, 5. ಆಚಾರ್ಯರ ಉಪನ್ಯಾಸಭಾರತಿಯು, ಸೇನೆಯು ಶಿಬಿರದಿಂದ ಹೊರಡುವಂತೆ ಆಚಾರ್ಯರ ಮುಖಕಮಲದಿಂದ ಹೊರಹೊರಟಿತು.

ತಾತ್ಪರ್ಯ— 1. ಆಚಾರ್ಯರ ಉಪನ್ಯಾಸಭಾರತಿಯು ಯಾವಾಗಲೂ ವೃದ್ಧಿಹ್ರಾಸಾದಿಗಳಿಲ್ಲದ ಮತ್ತು ಭಕ್ತರ ಹಸಿವು, ಬಾಯಾರಿಕೆ ಇತ್ಯಾದಿ ಊರ್ಮಿಗಳನ್ನು ನಿವಾರಿಸುವ ಹರಿಗೆ ಅತ್ಯಂತ ಪ್ರಿಯವಾದುದು, ಗುಡುಗಿನಂತೆ ಗಂಭೀರ ವಾದುದು, ವಿಸ್ತಾರವಾಗಿ ಅರ್ಥಗಳನ್ನು ಪ್ರಕಾಶಪಡಿಸತಕ್ಕಂತಹುದೂ ಆಗಿತ್ತು. ಇಂತಹ ಉಪನ್ಯಾಸಭಾರತಿಯು ಪ್ರಸಿದ್ಧಳಾದ ಲಕ್ಷ್ಮೀಯಲ್ಲದೆ ಬೇರೊಂದು ಲಕ್ಷ್ಮೀದೇವಿಯಂತೆ ಇತ್ತು. 2. ಆ ಲಕ್ಷ್ಮೀದೇವಿಯಾದರೋ ಭಕ್ತರ ಷಡೂರ್ಮಿ ಗಳನ್ನು ಭೇದಿಸುವ ಶ್ರೀಹರಿಗೆ ಅತ್ಯಂತ ಪ್ರಿಯಳಾದವಳು. ಶ್ರೇಷ್ಠವಾದ ಸ್ತನವುಳ್ಳವಳು, ಉತ್ತಮ ಸ್ವರವುಳ್ಳವಳು, ವಿಸ್ತಾರವಾದ ಧನಸಂಪತ್ತಿಗೆ ಅಭಿಮಾನಿಯಾಗಿದ್ದು ಅಖಂಡೈಶ್ವರ್ಯವುಳ್ಳವಳು, ವಿಸ್ತಾರವಾದ ತೇಜೋಮಯ ದಿವ್ಯ ಸ್ವರೂಪವುಳ್ಳವಳು, ವಿಸ್ತಾರವಾಗಿ ಎಲ್ಲಾ ವಸ್ತುಗಳ ಪ್ರಕಾಶವುಳ್ಳವಳು. ಇಂತಹ ಶ್ರೀಯು (ಲಕ್ಷ್ಮೀಯು) ಸಗರರಾಜನ ಸೇನಾ ಶ್ರೀಯಂತೆ (ಸೇನಾಲಕ್ಷ್ಮೀಯಂತೆ ಅಂದರೆ ಸೇನೆಯ ಕಾಂತಿಯಂತೆ) ಇದ್ದಳು. 3. ಸೇನಾಶ್ರೀಯಾದರೋ ಊರ್ಮಿ ಎಂಬ ವೃದ್ಧಿಯಾಗುತ್ತಿರುವ ಅಶ್ವಗಳಿಗೆ ಪ್ರಿಯವಾದ ಒಂದು ರೀತಿಯ ಅಶ್ವಗಳ ನಡಿಗೆಯುಳ್ಳದ್ದು. ಮೋಡದ ಗುಡುಗಿನಂತೆ ಗಂಭೀರವಾದ ಧ್ವನಿಯಿಂದ ಕೂಡಿದೆ. ವಿಸ್ತಾರವಾಗಿ ಹೊರಡುವುದರಿಂದ ಶತ್ರುಗಳನ್ನು ಬೆದರಿಸುವುದು ಎಂಬ ಪ್ರಯೋಜನವನ್ನು ಸಾಧಿಸಿದೆ. ಇಂತಹ ಸಗರನ ಸೇನಾಶ್ರೀಯು ಸಗರಪುತ್ರರ ಕಾಂತಿಯಂತಿತ್ತು. 4. ಸಗರಪುತ್ರರ ಶ್ರೀಯು

(ಕಾಂತಿ) ಹೇಗಿತ್ತೆಂದರೆ, ಊರ್ಮಿ ಎಂಬ ಗತಿಯನ್ನು ಹೆಚ್ಚಿಸುತ್ತಾ ಹೋಗುವ ಅಶ್ವಮೇಧದ ಕುದುರೆಗೆ ಅತ್ಯಂತ ಪ್ರಿಯವಾಗಿತ್ತು. ಸಗರನು ಅಶ್ವಮೇಧ ಯಜ್ಞವನ್ನು ನಡೆಸುತ್ತಾನೆ ಎಂದು ಎಲ್ಲರಿಗೂ ತಿಳಿಸುವುದಕ್ಕೋಸ್ಕರ ಬಿಟ್ಟಿರುವ ಆ ಯಜ್ಞಾಶ್ವವು ಎಲ್ಲಾ ಕಡೆಗಳಲ್ಲಿಯೂ ಓಡಾಡುತ್ತಾ ಆ ಪ್ರಯೋಜನವನ್ನು ಬಹಳ ಚೆನ್ನಾಗಿ ಸಾಧಿಸುತ್ತಿತ್ತು. ಸಗರಪುತ್ರರ ಸೈನ್ಯಶ್ರೀಯೂ ಕೂಡ ಸಾಗರಶ್ರೀಯಂತೆ ಅಂದರೆ ಸಮುದ್ರದ ಜಲಲಕ್ಷ್ಮಿಯಂತೆ ಇತ್ತು. 5. ಸಮುದ್ರದ ಜಲಶ್ರೀಯು ಹೇಗಿತ್ತೆಂದರೆ ಸಾಗರಪುತ್ರನು ಎಂದು ಪ್ರಸಿದ್ಧವಾದ ಯಾವನು ತನ್ನ ಉದಯದಿಂದ ಸಾಗರನ ಅಲೆಗಳನ್ನು ಹೆಚ್ಚಿಸುತ್ತಾನೋ ಅಂತಹ ಚಂದ್ರನಿಗೆ ಅತ್ಯಂತ ಪ್ರಿಯವಾಗಿತ್ತು, ಸಮುದ್ರವು ತನ್ನ ಜಲದ ಅಲೆಗಳ ಮೂಲಕ ನೀರು ತುಂಬಿದ ಮೋಡದಂತೆ ಗಂಭೀರವಾಗಿ ಭೋರ್ಗರೆಯುತ್ತಿತ್ತು ಮತ್ತು ಬಹಳ ವಿಸ್ತಾರವಾಗಿ ಪ್ರಕಾಶಿಸುವ ರತ್ನಾದಿವಸ್ತುಗಳು ಅಲ್ಲಿದ್ದವು (ಇಲ್ಲಿ ಉಪಮಾಲಂಕಾರವಿದೆ). ಹೀಗೆ ಉಪಮೇಯವಾದ ಒಂದು ಅರ್ಥ. ಉಪಮಾನಗಳ ಪರವಾದ ನಾಲ್ಕು ಅರ್ಥವುಳ್ಳ ಈ ಶ್ಲೋಕವು ಅತ್ಯದ್ಭುತವಾಗಿದೆ. ಇಲ್ಲಿ ಶ್ಲಿಷ್ಟ ಶಬ್ದಗಳಿಂದ ಸಾಧಾರಣ ಧರ್ಮವನ್ನು ಇಟ್ಟುಕೊಳ್ಳಬೇಕು.

ಇಲ್ಲಿ ಉಪನ್ಯಾಸಭಾರತಿಯು ಬೇರೊಬ್ಬಳಾದ ಶ್ರೀಯಂತೆಯೂ, ಸಗರರಾಜನ ಸೇನೆಯ ಶ್ರೀಯಂತೆಯೂ ಸಗರಪುತ್ರರ ಶ್ರೀಯಂತೆಯೂ, ಸಾಗರದ ಶ್ರೀಯಂತೆಯೂ ಇತ್ತು ಎಂದು ಉಪನ್ಯಾಸಭಾರತಿಗೆ ನಾಲ್ಕು ಉಪಮಾನಗಳನ್ನು ಕೊಟ್ಟಿದ್ದಾರೆ. ಅಥವಾ ಹಿಂದೆ ಹೇಳಿದಂತೆ ಸಾಗರದ ಜಲಶ್ರೀಯಂತಿರುವ ಸಗರಪುತ್ರರಶ್ರೀ ಅದರಂತೆ ಇರುವ ಸಗರನ ಸೈನ್ಯಶ್ರೀ, ಅದರಂತೆ ಇರುವ ಮತ್ತೊಬ್ಬಳಾದ ಸಾಗರದ ಶ್ರೀಯಂತೆ (ಲಕ್ಷ್ಮಿಯಂತೆ) ಇರುವ ಉಪನ್ಯಾಸಭಾರತಿಯು ಆಚಾರ್ಯರ ಮುಖಕಮಲದಿಂದ ಹೊರಹೊರಟಿತು ಎಂದು ಪರಂಪರಿತೋಪಮಾ ರೀತಿಯಿಂದಲೂ ಅರ್ಥ ಇಟ್ಟು-ಕೊಳ್ಳಬಹುದು.

ಶ್ರೀಶಬ್ದಕ್ಕೆ ಭಾರತೀ ಎಂಬ ಅರ್ಥವೂ ಇದೆ. ಈ ಉಪನ್ಯಾಸಭಾರತಿಯು, ಭಕ್ತರ ಷಡೂರ್ಮಿಗಳನ್ನು ಖಂಡಿಸಿದ ಹರಿ ಎಂದರೆ ವಾಯುದೇವರಿಗೆ ಅತ್ಯಂತ ಪ್ರಿಯಳಾದ, ಸುಂದರವಾದ ಸ್ತನವುಳ್ಳ ಮತ್ತು ಗಂಭೀರಧ್ವನಿಯುಳ್ಳ, ಸಕಲ ವಾಙ್ಮಯಗಳ ಅರ್ಥವನ್ನು ವಿಸ್ತಾರವಾಗಿ ಪ್ರಕಾಶಪಡಿಸುವ ಭಾರತೀದೇವಿಯಂತೆ ಇತ್ತು ಎಂಬ ಅರ್ಥವನ್ನೂ ಈ ಶ್ಲೋಕಕ್ಕೆ ಇಟ್ಟುಕೊಳ್ಳಬಹುದು. ಹರಿ ಎಂಬ ಶಬ್ದಕ್ಕೆ ವಾಯು ಎಂಬ ಅರ್ಥವೂ, ಶ್ರೀಶಬ್ದಕ್ಕೆ ಭಾರತೀ ಎಂಬ ಅರ್ಥವೂ ಪ್ರಮಾಣಸಿದ್ಧವಾಗಿದೆ. ಆ ಪ್ರಮಾಣವನ್ನು ಮುಂದೆ ಕೊಡುತ್ತೇವೆ.

**ವಿಶೇಷಾಂಶ-ಭಾವಪ್ರಕಾಶಿಕಾ—** ಸ್ವಭಕ್ತವಿಷಯೇ ಖಂಡಿತಷಡೂರ್ಮಿಕಸ್ಯ ಹರೇಃ ಪ್ರೇಷ್ಠಾ ಉಪನ್ಯಾಸಭಾರತೀ ಸಾಗರಜಾ ಲಕ್ಷ್ಮೀಶ್ಚ = ವರ್ಧಿತೋರ್ಮಿಹರಿಪ್ರೇಷ್ಠಾ ಎಂದರೆ ತನ್ನ ಭಕ್ತರ ವಿಷಯದಲ್ಲಿ ಷಡೂರ್ಮಿಗಳನ್ನು ನಾಶಮಾಡಿರುವ ಹರಿಗೆ ಅತಿಶಯವಾಗಿ ಪ್ರೀತಿಪಾತ್ರಳು ಈ ಉಪನ್ಯಾಸಭಾರತಿಯು. ಹಾಗೆಯೇ ಸಾಗರನ ಮಗಳಾದ ಲಕ್ಷ್ಮಿಯೂ ಭಕ್ತರ ಷಡೂರ್ಮಿಗಳನ್ನು ನಾಶಮಾಡಿರುವ ಶ್ರೀಹರಿಗೆ ಅತ್ಯಂತ ಪ್ರೀತಿಪಾತ್ರಳು.

ಸಾದಿಭಿಃ ವರ್ಧಿತೋರ್ಮ್ಯಾಖ್ಯ, ಗತಿವಿಶೇಷವದಶ್ವಪ್ರೇಷ್ಠಾ ಸೇನಾ ಸಾಗರಾಪತ್ಯಶ್ರೀಶ್ಚ = ಕುದುರೆ ಸವಾರರಿಂದ ವೃದ್ಧಿಗೊಳಿಸಲ್ಪಟ್ಟ ಊರ್ಮಿ ಎಂಬ ಗತಿವಿಶೇಷವುಳ್ಳ ಕುದುರೆಗಳಿಗೆ ಹೆಚ್ಚು ಪ್ರಿಯವಾದುದು ಸೇನೆ. ಸ್ವೋದಯೇನ ವರ್ಧಿತ ಕಲ್ಲೋಲಚಂದ್ರಪ್ರೇಷ್ಠಾ ಸಾಗರಸಂಬಂಧಿನೀ ಕಾಂತಿಶ್ಚ = ತನ್ನ ಉದಯದಿಂದ ಸಮುದ್ರದ ದೊಡ್ಡ ಅಲೆಗಳನ್ನು ಹೆಚ್ಚಿಸಿರುವ ಚಂದ್ರನಿಗೆ ಅತಿಶಯವಾಗಿ ಪ್ರಿಯವಾದುದು ಸಾಗರಕ್ಕೆ ಸಂಬಧಿಸಿದ (ಸಾಗರಜಲದ) ಕಾಂತಿಯು.

ಸುಕುಚಾ ಸುಸ್ವರಾ ರಮಾ = ಸುಪಯೋಧರಸುಸ್ವನಾ ಎಂಬಲ್ಲಿ ಲಕ್ಷ್ಮೀದೇವಿಯ ಪಕ್ಷದಲ್ಲಿ ಸುಂದರವಾದ ಸ್ತನವುಳ್ಳವಳು ಮತ್ತು ಮಧುರಧ್ವನಿವುಳ್ಳವಳು ರಮಾದೇವಿ. ಸುಜಲಧರವದ್ ಗಂಭೀರಸುಸ್ವರಾ ಅನ್ಯಾ = ಒಳ್ಳೆಯ ಮೋಡದಂತೆ ಗಂಭೀರವಾದ ಹಾಗೂ ಮನೋಹರವಾದ ಧ್ವನಿವುಳ್ಳದ್ದು ಆಚಾರ್ಯರ ಉಪನ್ಯಾಸಭಾರತಿಯು. ಸವಿಸ್ತರಂ ಪ್ರಕಾಶಾಭಿಪ್ರಾಯಾ ಗೀಃ = ಸವಿತಾನಪ್ರಕಾಶಾರ್ಥಾ ಎಂಬಲ್ಲಿ ವಿಸ್ತರದಿಂದ ಸಹಿತವಾಗಿ ಸ್ಪಷ್ಟವಾದ ಅಭಿಪ್ರಾಯವುಳ್ಳದ್ದು ಆಚಾರ್ಯರ ಉಪನ್ಯಾಸಭಾರತಿಯು, ಸವಿಸ್ತಾರ ಸ್ವರೂಪತೇಜೋದ್ರವ್ಯಾತ್ಮಿಕಾ ರಮಾ = ವಿಸ್ತಾರದಿಂದ ಸಹಿತವಾದ ಸ್ವರೂಪತೇಜಸ್ಸು ಎಂಬ ದ್ರವ್ಯಾತ್ಮಕಳಾದ ರಮಾ ದೇವಿಯು ಎಂದೂ ಆ ಪದಕ್ಕೆ ಅರ್ಥ.

ಸವಿಸ್ತಾರಪ್ರಾದುರ್ಭಾವೇನ (ಅರ್ಥಃ) ಪ್ರಯೋಜನಂ ಶತ್ರುಭೀಷಣಂ ಸೇನಾಯಾಃ = ಸವಿತಾನಪ್ರಕಾಶಾರ್ಥಾ ಎಂಬ ವಿಶೇಷಣಕ್ಕೆ ಸಗರರಾಜನ ಸೇನೆಯ ಪಕ್ಷದಲ್ಲಿ ವಿಸ್ತಾರದಿಂದ ಸಹಿತವಾಗಿ ಸೇನೆಯು ಪ್ರಕಟವಾಗುವುದರಿಂದ ಅಂದರೆ ಮುನ್ನುಗ್ಗುವುದರಿಂದ ಶತ್ರುಗಳನ್ನು ಹೆದರಿಸುವುದು ಎಂಬ ಪ್ರಯೋಜನವು ಸೇನೆಗೆ ಸಿದ್ಧಿಸುತ್ತದೆ ಎಂದು ಅರ್ಥ. ಶತ್ರುಗಳನ್ನು ಹೆದರಿಸುವುದು ಎಂಬ ಪ್ರಯೋಜನವುಳ್ಳದ್ದು ಎಂದು ಅರ್ಥ. ಸಯಜ್ಞಪ್ರಕಾಶನ ಪ್ರಯೋಜನಾಸಾಗರಾ ಪತ್ನಶ್ರೀ-ಸವಿತಾನಪ್ರಕಾಶಾರ್ಥಾ ಎಂಬ ವಿಶೇಷಣಕ್ಕೆ ಸಗರನ ಮಕ್ಕಳ ಕಾಂತಿ ಎಂಬ ಅರ್ಥವನ್ನು ಇಟ್ಟುಕೊಳ್ಳುವಾಗ, ಅಶ್ವಮೇಧ ಯಜ್ಞದ ಪ್ರಕಾಶನವೆಂಬ ಪ್ರಯೋಜನವುಳ್ಳದ್ದು ಎಂದು ಅರ್ಥ.

ಸವಿಸ್ತಾರತೇಜೋಯುಕ್ತರತ್ನಾಖ್ಯಾರ್ಥವತೀ ಅಸ್ಯಾ = ಸಾಗರೀ ಶ್ರೀಃ ಎಂಬ ಪದಕ್ಕೆ ಸಾಗರದ ಸಂಬಂಧಿಯಾದ (ಜಲದ) ಕಾಂತಿ ಎಂಬ ಅರ್ಥ ಪಕ್ಷದಲ್ಲಿ ಬಹಳ ವಿಸ್ತಾರವಾದ ತೇಜಸ್ಸಿನಿಂದ ಕೂಡಿದ ರತ್ನಗಳೆಂಬ ಅರ್ಥವುಳ್ಳದ್ದು ಎಂದು ಅರ್ಥ.

ಹೀಗೆ ಭಾವಪ್ರಕಾಶಿಕೆಯಲ್ಲಿ ವರ್ಧಿತೋರ್ಮಿಹರಿಪ್ರೇಕ್ಷ್ಯಾ, ಸುಪಯೋಧರಸುಸ್ವನಾ, ಸವಿತಾನಪ್ರಕಾಶಾರ್ಥಾ ಎಂಬ ಮೂರು ವಿಶೇಷಣಗಳಿಗೂ ಉಪನ್ಯಾಸಭಾರತೀ, ಲಕ್ಷ್ಮೀ, ಸಗರಸೇನೆಯ ಕಾಂತಿ, ಸಗರನ ಮಕ್ಕಳ ಕಾಂತಿ, ಸಮುದ್ರದ ಕಾಂತಿ ಎಂದು ಐದು ಅರ್ಥಗಳಿಗೆ ಅನುಗುಣವಾಗಿ ಅರ್ಥವನ್ನು ಹೇಳಲಾಗಿದೆ.

**ವಿಗ್ರಹ ಮತ್ತು ಕೋಶ—**

**ವರ್ಧಿತೋರ್ಮಿಹರಿಪ್ರೇಕ್ಷ್ಯಾ—** ವರ್ಧಿತಾಃ ಊರ್ಮಯಃ ಯೇನ ಸಃ ವರ್ಧಿತೋರ್ಮಿಃ, ವರ್ಧಿತೋರ್ಮಿಶ್ಚಾಸೌ ಹರಿಶ್ಚ ವರ್ಧಿತೋರ್ಮಿಹರಿಃ, ವರ್ಧಿತೋರ್ಮಿಹರೇಃ ಪ್ರೇಕ್ಷ್ಯಾ ವರ್ಧಿತೋರ್ಮಿಹರಿ ಪ್ರೇಕ್ಷ್ಯಾ । ವರ್ಧಿತ = ನಾಶಮಾಡಲ್ಪಟ್ಟ, ವರ್ಧನ = ನಾಶ, 'ವರ್ಧನಂ ಛೇದನೇ ದ್ವಯೋಃ' ಹಲಾಯುಧಕೋಶ, 'ಕಲ್ಪನಂ ಕರ್ತನಂ ಪ್ರೋಕ್ತಂ ವರ್ಧನಂ ಛೇದನಂ ತಥಾ' ಹಲಕೋಶ ।

**ಸುಪಯೋಧರಸುಸ್ವನಾ—** ಶೋಭನಶ್ಚಾಸೌ ಪಯೋಧರಶ್ಚ ಸುಪಯೋಧರಃ ಶೋಭನಶ್ಚಾಸೌ ಸ್ವನಶ್ಚ ಸುಸ್ವನಃ, ಸುಪಯೋಧರಸ್ಯ ಸುಸ್ವನ ಇವ ಸುಸ್ವನಃ ಯಸ್ಯಾಃ ಸಾ ಸುಪಯೋಧರಸುಸ್ವನಾ । ಸ್ವನ = ಧ್ವನಿ, 'ಶಬ್ದೇ ನಿನಾದ ನಿನದ ಧ್ವನಿಧ್ವಾನರವಸ್ವನಾಃ' ಅಮರ ।

**ಸವಿತಾನಪ್ರಕಾಶಾರ್ಥಾ—** ವಿತಾನೇನ ಸಹಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸವಿತಾನಂ, ಸವಿತಾನಂ ಪ್ರಕಾಶಃ ಸವಿತಾನಪ್ರಕಾಶಃ, ಸವಿತಾನಪ್ರಕಾಶೇ ಅರ್ಥಃ (ಅಭಿಪ್ರಾಯಃ) ಯಸ್ಯಾಃ ಸಾ ಸವಿತಾನಪ್ರಕಾಶಾರ್ಥಾ । ಲಕ್ಷ್ಮೀಪರವಾದ ಎರಡನೆಯ ಅರ್ಥದಲ್ಲಿಯೂ ವರ್ಧಿತೋರ್ಮಿಹರಿ ಪ್ರೇಕ್ಷ್ಯಾ ಎಂಬ ಪದಕ್ಕೆ ಹಿಂದಿನಂತೆಯೇ ವಿಗ್ರಹವು ಸುಪಯೋಧರಸುಸ್ವನಾ ಎಂಬಲ್ಲಿ ಶೋಭನೌ ಪಯೋಧರೌ ಯಸ್ಯಾಃ ಸಾ ಸುಪಯೋಧರಾ, ಶೋಭನಃ ಸ್ವನಃ ಯಸ್ಯಾಃ ಸಾ ಸುಸ್ವನಾ, ಸುಪಯೋಧರಾ ಚ ಸಾ ಸುಸ್ವನಾ ಚ ಸುಪಯೋಧರಸುಸ್ವನಾ । ವಿಶೇಷಣ ಉಭಯಪದ ಕರ್ಮಧಾರಯ ಸಮಾಸ ।

ಸವಿತಾನಪ್ರಕಾಶಾರ್ಥಾ ಎಂಬಲ್ಲಿ ವಿತಾನೇನ ಸಹ ವರ್ತತೇ ಇತಿ ಸವಿತಾನಃ (ವಿತಾನ = ವಿಸ್ತಾರ, 'ಕ್ರತು ವಿಸ್ತಾರ ಯೋರಸ್ತ್ರೀ ವಿತಾನಂ ತ್ರಿಷು ತುಚ್ಛಕೇ' ಅಮರ) ಸವಿತಾನಃ ಪ್ರಕಾಶಃ ಅರ್ಥಃ ಯಸ್ಯಾಃ ಸಾ ಎಂದು ವಿಗ್ರಹ, ಇಲ್ಲಿ ಅರ್ಥವೆಂದರೆ ಎಲ್ಲಾ ಪದಾರ್ಥಗಳು, ಹಣ ದ್ರವ್ಯ ಎಂಬ ಅರ್ಥಗಳು, 'ಅರ್ಥೋಽಭಿಧೇಯರೈವಸ್ತುಪ್ರಯೋಜನ-ನಿವೃತ್ತಿಷು' ಅಮರ. ಶ್ರೀಃ = ಇಲ್ಲಿ ಲಕ್ಷ್ಮಿ, 'ಲಕ್ಷ್ಮೀಃ ಪದ್ಮಾಲಯಾ ಪದ್ಮಾ ಕಮಲಾ ಶ್ರೀರ್ಹರಿಪ್ರಿಯಾ' ಅಮರ.

ಸಗರನ ಸೈನ್ಯ ಪಕ್ಷದಲ್ಲಿ ವರ್ಧಿತೋರ್ಮಿಹರಿಪ್ರೇಕ್ಷ್ಯಾ ಎಂಬಲ್ಲಿ ಹೀಗೆ ವಿಗ್ರಹ. ವರ್ಧಿತಾ ಊರ್ಮಿಃ ಯೇಷಾಂ ತೇ ವರ್ಧಿತೋರ್ಮಯಃ ವರ್ಧಿತೋರ್ಮಯಶ್ಚ ತೇ ಹರಯಶ್ಚ ವರ್ಧಿತೋರ್ಮಿಹರಯಃ ವರ್ಧಿತೋರ್ಮಿಹರೀಣಾಂ ಪ್ರೇಕ್ಷ್ಯಾ ವರ್ಧಿತೋರ್ಮಿಹರಿಪ್ರೇಕ್ಷ್ಯಾ ಇಲ್ಲಿ ಊರ್ಮಿ = ಅಶ್ವಗಳ ಗತಿ ವಿಶೇಷ.

ಸುಪಯೋಧರಸುಸ್ತನಾ ಎಂಬಲ್ಲಿ ಮೊದಲನೆಯ ಅರ್ಥ ಪಕ್ಷದಲ್ಲಿ ಇದ್ದಂತೆಯೇ ವಿಗ್ರಹ. ಸವಿತಾನಪ್ರಕಾಶಾರ್ಥಾ ಎಂಬಲ್ಲಿ ಸವಿತಾನಂ ಪ್ರಕಾಶೇನ ಅರ್ಥಃ (ಪ್ರಯೋಜನಂ ಶತ್ರುಭೀಷಣಾಖ್ಯಂ) ಯಸ್ಯಾಃ ಸಾ ಸವಿತಾನಪ್ರಕಾಶಾರ್ಥಾ, ಸಗರಪುತ್ರರ ಕಾಂತಿಯಂತೆ ಎಂಬ ಅರ್ಥದಲ್ಲಿ ವರ್ಧಿತೋರ್ಮೇಃ ಹರೇಃ (ಅಶ್ವಮೇಧಾಶ್ವಸ್ಯ) ಪ್ರೇಷ್ಯಾ ಎಂದು ವರ್ಧಿತೋರ್ಮಿ ಹರಿಪ್ರೇಷ್ಯಾ ಎಂಬಲ್ಲಿ ವಿಗ್ರಹ ಸುಪಯೋಧರಸುಸ್ತನಾ ಎಂಬಲ್ಲಿ ಮೊದಲನೆಯ ಪಕ್ಷದಂತೆಯೇ ವಿಗ್ರಹ.

ಸವಿತಾನ ಪ್ರಕಾಶಾರ್ಥಾ ಎಂಬಲ್ಲಿ ವಿತಾನಸ್ಯ (ಯಜ್ಞದ) ಪ್ರಕಾಶಃ ವಿತಾನಪ್ರಕಾಶಃ ವಿತಾನಪ್ರಕಾಶ ಏವ ಅರ್ಥಃ ವಿತಾನಪ್ರಕಾಶಾರ್ಥಃ, ವಿತಾನಪ್ರಕಾಶಾರ್ಥೇನ ಸಹಿತಾ ಸವಿತಾನಪ್ರಕಾಶಾರ್ಥಾ, 'ವಿತಾನಂ ಸಂಸ್ತರೋ ಬರ್ಹಿಃ ಸವಃ ಸತ್ರಂ ಚ ಕಥ್ಯತೇ' ಎಂಬ ಹಲಕೋಶಾನುಸಾರವಾಗಿ ವಿತಾನ = ಯಜ್ಞ ಎಂದು ಅರ್ಥ. ಶ್ರೀಃ = ಶೋಭೆ, 'ಶೋಭಾಸಂಪತ್ತಿ ಪದ್ಮಾಸು ಲಕ್ಷ್ಮೀಃ ಶ್ರೀರಿವ ಕಥ್ಯತೇ' ಕೋಶ. ಸಮುದ್ರಸಂಬಂಧಿಯಾದ ಕಾಂತಿ ಎಂಬ ಅರ್ಥದಲ್ಲಿ ವರ್ಧಿತಾಃ ಊರ್ಮಯಃ ಯೇನ ಸಃ ವರ್ಧಿತೋರ್ಮಿಃ, ವರ್ಧಿತೋರ್ಮಿಶ್ಚಾಸೌ ಹರಿಶ್ಚ ವರ್ಧಿತೋರ್ಮಿಹರಿಃ, ವರ್ಧಿತೋರ್ಮಿಹರೇಃ ಪ್ರೇಷ್ಯಾ ವರ್ಧಿತೋರ್ಮಿಹರಿಪ್ರೇಷ್ಯಾ । ಇಲ್ಲಿ ಹರಿ = ಚಂದ್ರ, 'ಯಮಾನಿಲೇಂದ್ರ ಚಂದ್ರಾರ್ಕವಿಷ್ಣುಸಿಂಹಾಂಶು ವಾಜಿಷು । ಶುಕಾ ಹಿಕಪಿಭೇಕೇಷು ಹರಿರ್ನಾ ಕಪಿಲೇ ತ್ರಿಷು' ಅಮರ. 'ಅರ್ಕಮರ್ಕಟಮಂಡೂಕವಿಷ್ಣುವಾಸವವಾಯವಃ । ತುರಂಗಸಿಂಹ ಶೀತಾಂಶುಯಮಾಶ್ಚ ಹರಯೋ ದಶ' ಹಲ. ಊರ್ಮಿ = ಅಲೆ, 'ಭಂಗಸ್ತರಂಗ ಊರ್ಮಿರ್ವಾ' ಅಮರ.

ವಿತಾನೇನ ಸಹ ವರ್ತತ ಇತಿ ಸವಿತಾನಃ, ಸವಿತಾನಃ ಪ್ರಕಾಶಃ ಯೇಷಾಂ ತೇ ಸವಿತಾನಪ್ರಕಾಶಾಃ, ಸವಿತಾನಪ್ರಕಾಶಾಃ ಅರ್ಥಾಃ ಯಸ್ಯಾಃ ಸಾ ಸವಿತಾನ ಪ್ರಕಾಶಾರ್ಥಾ ಇಲ್ಲಿ ಅರ್ಥ ಎಂದರೆ ರತ್ನಾದಿ ಶ್ರೇಷ್ಠವಸ್ತುಗಳು, ಕೋಶವನ್ನು ಹಿಂದೆಯೇ ಹೇಳಿದೆ.

ಶ್ರೀಃ = ಭಾರತಿ (ವಾಯುಪತ್ನಿ) ದ್ವಿತೀಯಾಂಗಂ ಸರಸ್ವತೀ ॥ 119 ॥

'ಶಂ ರೂಪೇ ತು ರತೇರ್ವಾಯೌ ಶ್ರೀರಿತ್ಯೇವ ಚ ಕೀರ್ತ್ಯತೇ ॥

ಸೈವ ಚ ದ್ರೌಪದೀ ನಾಮ ಕಾಳೀ ಚಂದ್ರೇತಿ ಚೋಚ್ಯತೇ' ॥ 120 ॥ (ಮ.ತಾ.ನಿ. ಅ. 2)

ಸರ್ವವಿದ್ಯಾ ದ್ರೌಪದೀ ತು ಯಸ್ಮಾತ್ ಸೈವ ಸರಸ್ವತೀ (ಮ.ತಾ.ನಿ. ಅ. 2) ॥ 135 ॥

ಈ ಪ್ರಮಾಣಗಳಿಂದ ಶ್ರೀ ಎಂದರೆ ಸರಸ್ವತೀ ಮತ್ತು ಭಾರತಿಯರಿಬ್ಬರು. ಸಾಗರಸ್ಯ ಇಯಂ ಸಾಗರೀ ಸಗರಸ್ಯೇಯಂ ಸಾಗರೀ. ಸಾಗರಾಣಾಂ ಇಯಂ ಸಾಗರೀ, ಸಾಗರಸ್ಯ ಇಯಂ ಸಾಗರೀ. (ನಾಲ್ಕು ಅರ್ಥಗಳಿಗೆ 4 ವಿಗ್ರಹ).

**ಪ್ರಯೋಗ—** ವರ್ಧಿತೋರ್ಮಿಹರಿಪ್ರೇಷ್ಯಯಾ ಸುಪಯೋಧರಸುಸ್ತನಯಾ, ಸವಿತಾನಪ್ರಕಾಶಾರ್ಥಯಾ ಅಪರಯಾ ಸಾಗರ್ಯಾ ಶ್ರಿಯಾ ಇವ (ಉಪನ್ಯಾಸಭಾರತ್ಯಾ ತದಾನನಾಂಭೋಜಾತ್ ಸೇನಯಾ ಶಿಬಿರಾತ್ ಇವ ನಿರ್ಯಯೇ) ।

★ ★ ★

**ಅವತಾರಿಕಾ—** ಗಂಗೆಯ ಉಪಮೆಯಿಂದ ಆಚಾರ್ಯರ ಉಪನ್ಯಾಸಭಾರತಿಯನ್ನು ವರ್ಣಿಸುತ್ತಾರೆ.

**ಪದ್ಮೇಶಪದಪದ್ಮಶ್ರಿತ್ ಕೃತ್ಯಾಂಗಂ ಪದ್ಮಜನ್ಮನಃ ।**
**ಲಾಲಿತಾ ಶಿರಸೇಶೇನ ಗಂಗೇವಾಶೇಷಪಾವನೀ ॥ 7 ॥**

**ಪದಚ್ಛೇದ—** ಪದ್ಮೇಶಪದಪದ್ಮಶ್ರಿತ್, ಕೃತ್ಯಾಂಗಂ, ಪದ್ಮಜನ್ಮನಃ, ಲಾಲಿತಾ, ಶಿರಸಾ, ಈಶೇನ, ಗಂಗಾ, ಇವ, ಅಶೇಷ ಪಾವನೀ ।

**ಅನ್ವಯ—** ಪದ್ಮೇಶಪದಪದ್ಮಶ್ರಿತ್, ಪದ್ಮಜನ್ಮನಃ, ಕೃತ್ಯಾಂಗಂ, ಈಶೇನ, ಶಿರಸಾ, ಲಾಲಿತಾ, ಗಂಗಾ, ಇವ, ಅಶೇಷ ಪಾವನೀ (ಉಪನ್ಯಾಸಭಾರತೀ ತದಾನನಾಂಭೋಜಾತ್ ನಿರ್ಯಯೌ) ।

**ಅನ್ವಯಾರ್ಥ—**

**ಪದ್ಮೇಶಪದಪದ್ಮಶ್ರಿತ್** = ಲಕ್ಷ್ಮೀದೇವಿಯ ಸ್ವಾಮಿಯಾದ ಶ್ರೀಮನ್ನಾರಾಯಣನ ಕಾಲುಗಳೆಂಬ ತಾವರೆಗಳನ್ನು (ತಾವರೆಯಂತಿರುವ ಕಾಲುಗಳನ್ನು) ಆಶ್ರಯಿಸಿರುವ,

**ಪದ್ಮಜನ್ಮನಃ** = ಕಮಲದಿಂದ ಉದ್ಭವಿಸಿರುವ ಬ್ರಹ್ಮದೇವರ,

**ಕೃತ್ಯಾಂಗಂ** = ಆಹ್ನಿಕ ಪೂಜಾದಿಗಳಿಗೆ ಸಾಧನವಾದ,

**ಈಶೇನ** = ಶ್ರೀಮಹಾರುದ್ರ ದೇವರಿಂದಲೂ,

**ಶಿರಸಾ** = ತಲೆಯಿಂದ,

**ಲಾಲಿತಾ** = ಆದರಿಸಲ್ಪಟ್ಟ (ಹೂರಲ್ಪಟ್ಟ),

**ಗಂಗಾ ಇವ** = ಗಂಗಾದೇವಿಯಂತೆ,

**ಅಶೇಷಪಾವನೀ** = ಸಮಸ್ತ ಪ್ರಪಂಚವನ್ನು ಪವಿತ್ರಗೊಳಿಸುವ.

(ಉಪನ್ಯಾಸಭಾರತಿಯು ಆಚಾರ್ಯರ ಮುಖಕಮಲದಿಂದ ಹೊರಹೊರಟಿತು).

**ತಾತ್ಪರ್ಯ—** ಗಂಗೆಯು ಶ್ರೀಮನ್ನಾರಾಯಣನ ಪಾದಕಮಲಗಳಿಂದ ಹುಟ್ಟಿ ಅದನ್ನೇ ಆಶ್ರಯಿಸಿದ್ದಾಳೆ. ಗಂಗಾದೇವಿಯ ಪರಮಪವಿತ್ರವಾದ ಜಲಗಳಿಂದಲೇ ಬ್ರಹ್ಮದೇವರು ಶ್ರೀಹರಿಯ ಪಾದ ತೊಳೆದು ಪೂಜಿಸಿರುವರು. ಅವರ ಆಹ್ನಿಕಾದಿ ಸಮಸ್ತ ಕಾರ್ಯಗಳಿಗೂ ಪರಮಾತ್ಮನ ಪಾದಪ್ರಕ್ಷಾಲನೆಗೂ ಆ ಗಂಗಾಜಲವೇ ಸಾಧನವಾಗಿದೆ. ಈಶ್ವರನು ಪರಮಾದರದಿಂದ ಆ ಗಂಗಾಜಲವನ್ನು ತನ್ನ ತಲೆಯಲ್ಲಿ ಧರಿಸಿರುವನು. ಗಂಗೆಯು ಸ್ಮರಣ, ದರ್ಶನ, ಸ್ಪರ್ಶನ, ಸ್ನಾನ, ಪಾನಾದಿಗಳಿಂದ ಸಮಸ್ತ ಪ್ರಪಂಚವನ್ನು ಪವಿತ್ರವನ್ನಾಗಿ ಮಾಡುತ್ತಾಳೆ. ಹಾಗೆ ಶ್ರೀಮಧ್ವಾಚಾರ್ಯರ ಮಾತು ವಿಷ್ಣುವಿನ ಸರ್ವೋತ್ತಮತ್ವವನ್ನು ಪ್ರತಿಪಾದಿಸುವುದರಲ್ಲಿಯೇ ಪರಮ ತಾತ್ಪರ್ಯವುಳ್ಳದ್ದು, ಆದುದರಿಂದ ಶ್ರೀಹರಿಯ ಪಾದ-ಕಮಲವನ್ನೇ ಆಶ್ರಯಿಸಿದೆ. ಈ ಉಪನ್ಯಾಸಭಾರತಿಯು ಚತುರ್ಮುಖನ ಪದವಿಗೆ ಯೋಗ್ಯರಾದ ಋಜುಗಳಿಗೆ ಬ್ರಹ್ಮನ ಪದವಿಯನ್ನಿತ್ತು ಆ ಬ್ರಹ್ಮನ ಪದವಿಯಲ್ಲಿದ್ದು ಕಾರ್ಯಗಳನ್ನು ಮಾಡಲೂ ಸಾಧನವಾಗಿದೆ. ಶ್ರೀಶಂಕರನೂ ಈ ಉಪನ್ಯಾಸಭಾರತಿಯನ್ನು ತಲೆಬಾಗಿ ಗೌರವಿಸಿ ಸ್ವೀಕರಿಸುವನು. ಈ ಉಪನ್ಯಾಸಭಾರತಿಯು ಕೇಳುವ ಜನರನ್ನೆಲ್ಲಾ ಪವಿತ್ರಗೊಳಿಸುವುದು. ಇಂತಹ ಉಪನ್ಯಾಸಭಾರತಿಯು ಆಚಾರ್ಯರ ಮುಖಕಮಲದಿಂದ ಹೊರಹೊರಟಿತು.

ಉಪಮೇಯ ಪರವಾಗಿ ಹೇಳುವಾಗ ಪದ್ಮೇಶಪದಪದ್ಮಶ್ರಿತ್ = ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಪಾದಪದ್ಮ ವಿಷಯವಾದುದರಿಂದ ಆ ಹರಿಯನ್ನೇ ಆಶ್ರಯಿಸಿರುವುದೂ, ಪದ್ಮಜನ್ಮನಃ ಕೃತ್ಯಾಂಗಂ = ಬ್ರಹ್ಮದೇವರ ಪದವಿಗೆ ಬಂದ ಮೇಲೆ ಅವರ ಅನುಷ್ಠಾನಕ್ಕೆ (ಪರಮಾತ್ಮನ ಧ್ಯಾನಾದಿಗಳಿಗೆ) ಅಂಗವಾದುದು, ಈಶೇನ ಶಿರಸಾ ಲಾಲಿತಾ = ಶ್ರೀರುದ್ರದೇವರಿಂದಲೂ ಶಿರಸಾ ಮಾನ್ಯವಾಗಿರುವುದು, ಅಶೇಷಪಾವನೀ = ಕೇಳುವ ಎಲ್ಲರನ್ನೂ ಪವಿತ್ರಗೊಳಿಸತಕ್ಕಂತಹುದು ಎಂದು ವಿಶೇಷಣಗಳನ್ನು ಅನ್ವಯಿಸಿಕೊಳ್ಳಬೇಕು. (ತಾತ್ಪರ್ಯವನ್ನು ಹಿಂದೆಯೇ ಹೇಳಿದೆ).

**ವಿಗ್ರಹ ಮತ್ತು ಕೋಶ—**

**ಪದ್ಮೇಶಪದಪದ್ಮಶ್ರಿತ್—** ಪದ್ಮಾಯಾಃ ಈಶಃ ಪದ್ಮೇಶಃ, ಪದಮೇವ ಪದ್ಮಂ ಪದಪದ್ಮಂ, ಪದ್ಮೇಶಸ್ಯ ಪದಪದ್ಮಂ ಪದ್ಮೇಶ ಪದಪದ್ಮಂ, ಪದ್ಮೇಶಪದಪದ್ಮಂ ಶ್ರಯತೇ ಇತಿ ಪದ್ಮೇಶಪದಪದ್ಮಶ್ರಿತ್ । ಪದ್ಮಾ = ಲಕ್ಷ್ಮೀದೇವಿ, 'ಲಕ್ಷ್ಮೀಃ ಪದ್ಮಾಲಯಾ ಪದ್ಮಾ' ಅಮರ, ಈಶಃ = ರುದ್ರದೇವರು, 'ಶಂಭುರೀಶಃ ಪಶುಪತಿಃ' ಅಮರ, ಪದ = ಕಾಲು, 'ಪದಂ ವ್ಯವಸಿತತ್ರಾಣಸ್ಥಾನ ಲಕ್ಷ್ಮಾಂಘ್ರಿವಸ್ತುಷು' ಅಮರ ।

**ಕೃತ್ಯಾಂಗಂ—** ಕೃತ್ಯಸ್ಯ ಅಂಗಂ ಕೃತ್ಯಾಂಗಂ ।

**ಪದ್ಮಜನ್ಮನಃ**— ಪದ್ಮಾತ್ ಜನ್ಮ ಯಸ್ಯ ಸಃ ಪದ್ಮಜನ್ಮಾ ತಸ್ಯ ।

**ಅಶೇಷಪಾವನೀ**— ಅಶೇಷಾನ್ ಪಾವಯತೀತಿ ಅಶೇಷಪಾವನೀ । ಅಶೇಷ = ಎಲ್ಲರೂ, ಸುರನರನಾಗಾದಿಗಳು.ದೇವಲೋಕದಲ್ಲಿ ಸುರರನ್ನು ಮನುಷ್ಯಲೋಕದಲ್ಲಿ ನರರನ್ನೂ, ಪಾತಾಳಲೋಕದಲ್ಲಿ ನಾಗರನ್ನೂ ತ್ರಿಪಥಗೆಯಾದ ಗಂಗೆಯು ಪಾವನಗೊಳಿಸುತ್ತಾಳೆ. ತ್ರೈಲೋಕ್ಯಾಚಾರ್ಯರಾದ ಆಚಾರ್ಯರ ಉಪನ್ಯಾಸಭಾರತಿಯು ತ್ರಿಲೋಕಗಳಲ್ಲಿರುವ ಸಜ್ಜನರೆಲ್ಲರನ್ನೂ ಪಾವನಗೊಳಿಸುವುದು.

**ಪ್ರಯೋಗ**— ಪದ್ಮೇಶಪದಪದ್ಮಶ್ರಿತಾ ಪದ್ಮಜನ್ಮನಃ ಕೃತ್ಯಾಂಗೇನ ಈಶೇನ ಶಿರಸಾ ಲಾಲಿತಯಾ ಗಂಗಯಾ ಇವ ಅಶೇಷಪಾವನ್ಯಾ (ಉಪನ್ಯಾಸಭಾರತ್ಯಾ ತದಾನನಾಂಭೋಜಾತ್ ನಿರ್ಯಯೇ) ।

★ ★ ★

**ಅವತಾರಿಕಾ**— ಆಚಾರ್ಯರ ಉಪನ್ಯಾಸಭಾರತಿಯು ಏನು ಹೇಳುತ್ತಲಿದ್ದಾಳೆ ? ಆಚಾರ್ಯರ ಉಪನ್ಯಾಸ ವಚನಗಳಿಂದ ಪ್ರತಿಪಾದ್ಯಾಂಶವು ಯಾವುದು ಎಂಬುದನ್ನು ತಿಳಿಸುತ್ತಾರೆ.

**ನಾರಾಯಣೋಽನಂತಗುಣೋ ಬ್ರಹ್ಮಾಖ್ಯೋ ವೇದವೇದಿತಃ ।**
**ವಿಶ್ವಕರ್ತೇತಿ ವಿಶ್ವಜ್ಞಃ ಶ್ರುತ್ಯಾ ಯುಕ್ತ್ಯಾಪ್ಯಸೀಷಧತ್ ॥ 8 ॥**

**ಪದಚ್ಛೇದ**— ನಾರಾಯಣಃ, ಅನಂತಗುಣಃ, ಬ್ರಹ್ಮಾಖ್ಯಃ, ವೇದವೇದಿತಃ, ವಿಶ್ವಕರ್ತಾ, ಇತಿ, ವಿಶ್ವಜ್ಞಃ, ಶ್ರುತ್ಯಾ, ಯುಕ್ತ್ಯಾ, ಅಪಿ, ಅಸೀಷಧತ್ ।

**ಅನ್ವಯ**— ವಿಶ್ವಜ್ಞಃ, ನಾರಾಯಣಃ, ಅನಂತಗುಣಃ, ಬ್ರಹ್ಮಾಖ್ಯಃ, ವೇದವೇದಿತಃ, ವಿಶ್ವಕರ್ತಾ, ಇತಿ, ಶ್ರುತ್ಯಾ, ಯುಕ್ತ್ಯಾ, ಅಪಿ, ಅಸೀಷಧತ್ ।

**ಅನ್ವಯಾರ್ಥ**—

**ವಿಶ್ವಜ್ಞಃ** = ಎಲ್ಲವನ್ನೂ ಬಲ್ಲ ಶ್ರೀಪೂರ್ಣಪ್ರಜ್ಞಾಚಾರ್ಯರು,
**ನಾರಾಯಣಃ** = ಗುಣಪೂರ್ಣನೂ, ದೋಷದೂರನೂ, ಜ್ಞೇಯನೂ, ಗಮ್ಯನೂ ಆದ ಶ್ರೀಹರಿಯು,
**ಅನಂತಗುಣಃ** = ದೇಶ, ಕಾಲ, ಸಂಖ್ಯೆಗಳ ಮಿತಿಗೆ ಒಳಪಡದ (ನಿರ್ಣಯಿಸಲು ಸಾಧ್ಯವಿಲ್ಲದ) ಜ್ಞಾನ, ಶಕ್ತಿ, ಬಲ, ಐಶ್ವರ್ಯ ಮೊದಲಾದ ಮಂಗಳಸ್ವರೂಪವಾದ ಧರ್ಮಗುಣಗಳುಳ್ಳವನು,
**ಬ್ರಹ್ಮಾಖ್ಯಃ** = ಸಮಸ್ತ ಶುಭಗುಣ ಪರಿಪೂರ್ಣನಾದುದರಿಂದ ಬ್ರಹ್ಮ ಎಂಬ ಶಬ್ದದಿಂದ ಮುಖ್ಯವಾಚ್ಯನು,
**ವೇದವೇದಿತಃ** = ವೇದಗಳಿಂದಲೇ ಮುಖ್ಯಪ್ರತಿಪಾದ್ಯನು (ಅನುಮಾನಾದಿಗಳಿಂದ ಪ್ರತಿಪಾದ್ಯನಲ್ಲ),
**ವಿಶ್ವಕರ್ತಾ** = ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವನು,
**ಇತಿ** = ಹೀಗೆಂದು,
**ಶ್ರುತ್ಯಾ** = ವೇದದಿಂದ,
**ಯುಕ್ತ್ಯಾ ಅಪಿ** = ಯುಕ್ತಿಯಿಂದಲೂ,
**ಅಸೀಷಧತ್** = ಸಾಧಿಸಿದರು.

**ತಾತ್ಪರ್ಯ**— ಪರಮಮಂಗಳಕರವಾದ ಶ್ರೀಮದಾನಂದತೀರ್ಥರ ಉಪನ್ಯಾಸಭಾರತಿಯು ಶ್ರೀಮುಖ್ಯಪ್ರಾಣದೇವರ ಪ್ರೇಮಾಸ್ಪದಳಾದ ಭಾರತಿಯಂತೆ ಯಾವ ಮಹೋಪದೇಶವನ್ನು ಪ್ರತಿಪಾದಿಸುತ್ತಿತ್ತು ಎಂಬುದನ್ನು ಶ್ರೀನಾರಾಯಣ ಪಂಡಿತಾಚಾರ್ಯರು ವಿವರಿಸುತ್ತಾರೆ. ಶ್ರೀಮನ್ಮಧ್ವಾಚಾರ್ಯರು ಅಧಿಕಾರಿಗಳಾದ ಸಾತ್ವಿಕ ಜೀವರಿಗೆ ಹೇಳುತ್ತಿದ್ದಾರೆ.

ಶ್ರೀಮನ್ನಾರಾಯಣನಲ್ಲಿ ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು, ಕಾಂತಿ, ಆನಂದ, ಔದಾರ್ಯ, ಮುಂತಾದ ಅನಂತಾನಂತ ಕಲ್ಯಾಣಗುಣಗಳಿವೆ. ಅವನ ಈ ಗುಣಗಳು ಇಷ್ಟು ದೇಶಗಳಲ್ಲಿ ಮಾತ್ರ ಇವೆಯೆಂದೂ, ಇಂತಹ ಕಾಲಗಳಲ್ಲಿ ಮಾತ್ರ ಇವೆಯೆಂದೂ ಹೇಳಲು ಸಾಧ್ಯವಿಲ್ಲ. ಗುಣಗಳಿಗೆ ಮಿತಿ ಅಂದರೆ ಅವಧಿಯಿಲ್ಲ. ಅವನ ಗುಣಗಳು ಅವನ ಸ್ವರೂಪವೇ ಆಗಿದ್ದು ಸರ್ವತ್ರ ವ್ಯಾಪ್ತಗಳಾಗಿ ನಿತ್ಯವಾಗಿವೆ. ನಮ್ಮ ಗುಣಗಳಂತೆ ಆ ಗುಣಗಳಲ್ಲ. ಆ ಗುಣಗಳು ಇಷ್ಟೇ ಇವೆಯೆಂಬ ಸಂಖ್ಯಾ ನಿಯಮವೂ ಇಲ್ಲ. ಸಕಲ ವೇದಗಳಿಂದಲೂ ವೇದಾನುಸಾರಿಗಳಾದ ಇತರ ಸಚ್ಛಾಸ್ತ್ರಗಳಿಂದಲೂ ಈ ವಿಷಯಗಳು ತಿಳಿದು ಬರುತ್ತವೆ. ನಾರಾಯಣನು ಸಕಲಗುಣಗಳ ಸಮುದಾಯರೂಪನು ಎಂಬ ಅರ್ಥವನ್ನು ಹೇಳುವ 'ಬ್ರಹ್ಮ' ಎಂಬ ಶಬ್ದವು ಮುಖ್ಯವಾಗಿ ಅವನೊಬ್ಬನಿಗೇ ಅನ್ವಯಿಸತಕ್ಕದ್ದು. ಅನುಮಾನಾದಿಗಳಿಂದ ಅವನನ್ನು ಸರಿಯಾಗಿ ತಿಳಿಯಲು ಸಾಧ್ಯವಿಲ್ಲ. ಈ ಸಮಸ್ತ ಪ್ರಪಂಚಕ್ಕೂ ಉತ್ಪತ್ತಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಎಂಬ ಎಂಟು ಕಾರ್ಯಗಳನ್ನು ಆಯಾ ವಸ್ತುವಿನ ಯೋಗ್ಯತೆಯನ್ನು ಅನುಸರಿಸಿ ಅವನೊಬ್ಬನೇ ಮಾಡುತ್ತಾನೆ. ಈ ಎಲ್ಲ ವಿಷಯವು ಅನಂತಾನಂತ ವೇದಗಳಿಂದಲೂ, ಆ ವೇದಗಳಿಗೆ ಸಮ್ಮತವಾದ ಯುಕ್ತಿಗಳಿಂದಲೂ ತಿಳಿದು ಬರುತ್ತವೆ ಎಂದು ಆಚಾರ್ಯರು ಶ್ರುತಿಯಿಂದಲೂ ಯುಕ್ತಿಯಿಂದಲೂ ಸಾಧಿಸಿದರು.

**ವಿಶೇಷಾಂಶ—** ಆಚಾರ್ಯರು ಉದಾಹರಿಸಿದ ಶ್ರುತಿಗಳಲ್ಲಿ ಕೆಲವು 1) ಪರೋ ಮಾತ್ರಯಾ ತನ್ವಾವೃಧಾನ, 2) ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ, 3) ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ಶ್ರುತಿಗಳಿಂದ ಶ್ರೀಹರಿಯು ಅನಂತಗುಣಪೂರ್ಣನೆಂದು ಸಿದ್ಧಿಸುತ್ತದೆ, 4) ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ, 5) ಏಷ ಪಂಥಾ ಏತತ್ ಕರ್ಮ ಏತದ್ ಬ್ರಹ್ಮ, 6) ಏಷ ಉ ಏವ ಬ್ರಹ್ಮ ಏಷ ಉ ಏವ ಆತ್ಮಾ ಇತ್ಯಾದಿ ಶ್ರುತಿಗಳಿಂದ ಅವನೇ ಮುಖ್ಯವಾಗಿ ಬ್ರಹ್ಮಶಬ್ದವಾಚ್ಯನೆಂದು ತಿಳಿದುಬರುತ್ತದೆ, 7) ತಾ ವಾ ಏತಾಃ ಸರ್ವಾಃ ಋಚಃ ಸರ್ವೇ ವೇದಾ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಋಚ ಇತ್ಯೇವ ವಿದ್ಯಾತ್, 8) ಸ ಏವ ಸರ್ವವೇದೇದ್ಯಃ ಇತ್ಯಾದಿ ಶ್ರುತಿಗಳಿಂದ ನಾರಾಯಣನು ಸ್ವತಂತ್ರ ಅನುಮಾನಾದಿಗಳಿಂದ ಪ್ರತಿಪಾದ್ಯನಲ್ಲ, ಸಮಸ್ತ ವೇದಗಳಿಂದಲೇ ಪ್ರತಿಪಾದ್ಯನು ಎಂಬ ವಿಷಯವು ತಿಳಿದುಬರುತ್ತದೆ, 9) ಯೋನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ 10) ನ ತಂ ವಿಧಾಥ ಯ ಇಮಾ ಜಜಾನ, 11) ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ ಕಿಂಚನ ಮಿಷತ್, ಸ ಐಕ್ಷತ ಲೋಕಾನ್ನು ಸೃಜಾ ಇತಿ ಸ ಇಮಾನ್ ಲೋಕಾನಸೃಜತ್ ಇತ್ಯಾದಿ ಶ್ರುತಿಗಳಿಂದ ಪರಮಾತ್ಮನೇ ವಿಶ್ವಕರ್ತಾ ಎಂದು ತಿಳಿದುಬರುತ್ತದೆ. ಯುಕ್ತಿಗಳನ್ನು ಮುಂದೆ ಹೇಳುತ್ತಾರೆ.

**ವಿಗ್ರಹ—**

**ಅನಂತಗುಣಃ—** ನ ವಿದ್ಯತೇ ಅಂತಃ ಯೇಷಾಂ ತೇ ಅನಂತಾಃ, ಅನಂತಾಃ ಗುಣಾಃ ಯಸ್ಯ ಸಃ ಅನಂತಗುಣಃ ।

**ಬ್ರಹ್ಮಾಖ್ಯಃ—** ಬ್ರಹ್ಮ ಇತಿ ಆಖ್ಯಾ ಯಸ್ಯಸಃ ಬ್ರಹ್ಮಾಖ್ಯಃ ।

**ವೇದವೇದಿತಃ—** ವೇದೈಃ ವೇದಿತಃ ವೇದವೇದಿತಃ ।

**ವಿಶ್ವಕರ್ತಾ—** ವಿಶ್ವಸ್ಯ ಕರ್ತಾ ವಿಶ್ವಕರ್ತಾ ।

**ವಿಶ್ವಜ್ಞಃ—** ವಿಶ್ವಂ ಜಾನಾತೀತಿ ವಿಶ್ವಜ್ಞಃ ।

**ಕ್ರಿಯಾಪದ— ಅಸೀಷಧತ್** - ಅಸೀಷಧತ್ ಅಸೀಷಧತಾಂ ಅಸೀಷಧನ್, ಅಸೀಷಧಃ, ಅಸೀಷಧತಂ ಅಸೀಷಧತ, ಅಸೀಷಧಂ ಅಸೀಷಧಾವ ಅಸೀಷಧಾಮ । ಸಾಧ ಸಂಸಿದ್ಧೌ ಸಕ. ಅನಿಟ್, ಪರಸ್ಮೈ, ಣಿಜಂತ ಲುಙ್ ।

**ಪ್ರಯೋಗ—** ವಿಶ್ವಜ್ಞೇನ ''ನಾರಾಯಣೇನ ಅನಂತಗುಣೇನ ಬ್ರಹ್ಮಾಖ್ಯೇನ ವೇದವೇದಿತೇನ ವಿಶ್ವಕರ್ತ್ರಾ ಭೂಯತೇ'' ಇತಿ ಶ್ರುತ್ಯಾ ಯುಕ್ತ್ಯಾ ಅಪಿ ಅಸಾಧಿ.

★ ★ ★

## ನಿರೀಶ್ವರಸಾಂಖ್ಯಮತಖಂಡನ

**ಅವತಾರಿಕಾ—** ಮೂಲಪ್ರಕೃತಿಯೆಂಬ ಸೂಕ್ಷ್ಮವಾದ ವಸ್ತುವೇ ವಿಶ್ವಕರ್ತ್ರೀ (ಸ್ವತಂತ್ರವಾಗಿ ಪ್ರಪಂಚ ಸೃಷ್ಟ್ಯಾದಿ ಕಾರಣವು) ನಾರಾಯಣನಲ್ಲ, ಪ್ರಪಂಚಕ್ಕೆ ಸೃಷ್ಟ್ಯಾದಿಗಳನ್ನು ಮಾಡತಕ್ಕ ಈಶ್ವರನೇ ಇಲ್ಲ ಎಂದು ಹೇಳುವ ನಿರೀಶ್ವರ ಸಾಂಖ್ಯರ ಮತವನ್ನು ಖಂಡಿಸುತ್ತಾರೆ.

**ಪ್ರಧಾನಮಪರಾಧೀನಂ ಕಾರಣಂ ಪರಿಣಾಮಿ ಯತ್ ।**
**ಪಯೋವದಿತಿ ಚೇತ್ ಸಾಧ್ಯವೈಕಲ್ಯಂ ಸ್ಯಾನ್ನಿದರ್ಶನೇ ॥ 9 ॥**

**ಪದಚ್ಛೇದ—** ಪ್ರಧಾನಂ, ಅಪರಾಧೀನಂಕಾರಣಂ, ಪರಿಣಾಮಿ, ಯತ್, ಪಯೋವತ್, ಇತಿ, ಚೇತ್, ಸಾಧ್ಯ ವೈಕಲ್ಯಂ, ಸ್ಯಾತ್, ನಿದರ್ಶನೇ ।

**ಅನ್ವಯ—** ಯತ್, ಪ್ರಧಾನಂ, ಪರಿಣಾಮಿ(ತತ್), ಅಪರಾಧೀನಂ, ಕಾರಣಂ, ಪಯೋವತ್, ಇತಿ, ಚೇತ್, ನಿದರ್ಶನೇ, ಸಾಧ್ಯವೈಕಲ್ಯಂ, ಸ್ಯಾತ್ ।

**ಅನ್ವಯಾರ್ಥ—**

**ಯತ್** = ಯಾವ ಕಾರಣದಿಂದ,
**ಪ್ರಧಾನಂ** = ಜಡಪ್ರಕೃತಿಯೆಂಬ ಹೆಸರುಳ್ಳ ಪ್ರಧಾನವೆಂಬ ಮೂಲತತ್ತ್ವವು,
**ಪರಿಣಾಮಿ** = ವಿಕಾರವುಳ್ಳದ್ದಾಗಿದೆ.
**ತತ್** = ಆದುದರಿಂದ,
**ತತ್** = ಆ ಜಡಪ್ರಕೃತಿಯು,
**ಅಪರಾಧೀನಂ ಕಾರಣಂ** = ಸ್ವತಂತ್ರವಾದ ಕಾರಣವು,
**ಪಯೋವತ್** = ಹಾಲಿನಂತೆ (ಹಾಲು ಮೊಸರಿಗೆ ಹೇಗೆ ಕಾರಣವೋ ಹಾಗೆ ವಿಕಾರರೂಪವಾದ ಪ್ರಪಂಚಕ್ಕೆ ಪ್ರಧಾನವೇ ಪರಿಣಾಮಿ ಕಾರಣವು),
**ಇತಿ ಚೇತ್** = ಹೀಗೆಂದ ಪಕ್ಷದಲ್ಲಿ,
**ನಿದರ್ಶನೇ** = ದೃಷ್ಟಾಂತವಾಗಿ (ಉದಾಹರಣೆಗಾಗಿ) ಕೊಟ್ಟಿರುವ ಹಾಲಿನಲ್ಲಿ,
**ಸಾಧ್ಯವೈಕಲ್ಯಂ** = ಸಾಧಿಸಲ್ಪಡಬೇಕಾದ ಅಪರಾಧೀನಕಾರಣತ್ವ (ಸ್ವತಂತ್ರಕಾರಣತ್ವ) ಎಂಬ ಅಂಶದ ಇಲ್ಲದಿರುವಿಕೆ ಎಂಬ ದೋಷವು (ಸಾಧ್ಯವೈಕಲ್ಯವು),
**ಸ್ಯಾತ್** = ಬಂದೀತು.

**ತಾತ್ಪರ್ಯ—** ಈ ಒಂಭತ್ತನೆಯ ಶ್ಲೋಕದಿಂದ ಅರವತ್ತಮೂರನೆಯ ಶ್ಲೋಕಪೂರ್ತಿ (9-63) 'ವಿಷ್ಣುರ್ಮೋಕ್ಷಸ್ಯ ದಾತೇತಿ ವಿಶ್ವಂ ಭವತಿ ಶೋಭನಂ' ಎಂಬಲ್ಲಿವರೆಗೆ 'ನಾರಾಯಣನು ಅನಂತಗುಣಪರಿಪೂರ್ಣನು' ಎಂಬ ಎಂಟನೆಯ ಶ್ಲೋಕದಲ್ಲಿ ಹೇಳಿರುವ ಪ್ರತಿಜ್ಞೆಯನ್ನು ಸಮರ್ಥನೆ ಮಾಡುತ್ತಾರೆ. ಅದಕ್ಕಾಗಿ ನಾರಾಯಣನ ಅನಂತಗುಣಪೂರ್ಣತ್ವ ಮತ್ತು ಸರ್ವೋತ್ತಮತ್ವಕ್ಕೆ ವಿರುದ್ಧವಾದ ಇತರ ಮತಗಳನ್ನು ಖಂಡಿಸಬೇಕು. ಈಗ ಮೊದಲು ಸಾಂಖ್ಯಮತವನ್ನು ಖಂಡಿಸುತ್ತಾರೆ. ಆ ಸಾಂಖ್ಯಮತವು 'ಸೇಶ್ವರಸಾಂಖ್ಯಮತ, ನಿರೀಶ್ವರಸಾಂಖ್ಯಮತ' ಎಂದು ಎರಡು ವಿಧ. ಅಂದರೆ ಈಶ್ವರನನ್ನು ಒಪ್ಪಿಕೊಳ್ಳುವ ಸಾಂಖ್ಯರು ಕೆಲವರು, ಈಶ್ವರನನ್ನು ಒಪ್ಪಿಕೊಳ್ಳದಿರುವ ಸಾಂಖ್ಯರು ಕೆಲವರು. ಈಗ ಮೊದಲು ನಿರೀಶ್ವರಸಾಂಖ್ಯಮತವನ್ನು ಖಂಡಿಸುತ್ತಾರೆ. ನಿರೀಶ್ವರಸಾಂಖ್ಯರು ಪ್ರಧಾನವೆಂಬ ಹೆಸರಿನ ಜಡಪ್ರಕೃತಿಯೇ ಎಲ್ಲಾ ಕಾರ್ಯಗಳಿಗೂ ಸ್ವತಂತ್ರಕರ್ತ್ರೀ. ಅದು ಯಾರೊಬ್ಬರ ಪ್ರೇರಣೆಯೂ ಇಲ್ಲದೆ ತಾನಾಗಿಯೇ ವಿಕಾರಗೊಂಡು (ಪರಿಣಮಿಸಿ) ಈ ವೃಕ್ಷಪರ್ವತಸಾಗರಾದಿ

ಜಗತ್ತಿನ ರೂಪವನ್ನು ಹೊಂದುವುದು. ಇದು ಪೂರ್ತಿಯಾಗಿ ಸ್ವತಂತ್ರವಾದ ಕಾರಣ. ಪುರುಷ ಅಂದರೆ ಜೀವರು ಚೇತನ ಸ್ವರೂಪರಾದರೂ ಕರ್ತೃತ್ವಭೋಕ್ತೃತ್ವಾದಿ ಯಾವ ಲೇಪವೂ ಇಲ್ಲದೆ ನೀರಿನಲ್ಲಿರುವ ತಾವರೆ ಎಲೆಯಂತೆ ಅಸಂಗ-ರಾಗಿರುತ್ತಾರೆ. ಪ್ರಕೃತಿ ಮತ್ತು ಪುರುಷರು ಬೇರೆಯಾಗಿದ್ದರೂ ಅವರಿಬ್ಬರಲ್ಲಿ ಭೇದವಿದೆ ಎಂಬ ಜ್ಞಾನವಿಲ್ಲದ್ದರಿಂದ ಪ್ರಕೃತಿ-ಯಲ್ಲಿ ಆಗುವ ಪರಿಣಾಮಗಳೆಲ್ಲಾ ತನಗೇ ಆಗುತ್ತವೆ ಎಂಬ ಭ್ರಾಂತಿಯು ಪುರುಷನಿಗೆ ಉಂಟಾಗಿ ಭೋಕ್ತೃತ್ವವಿದ್ದಂತೆ ಕಂಡು ಬರುತ್ತದೆ. ಯಾವಾಗ ಪ್ರಕೃತಿಯು ಪುರುಷನಿಗಿಂತ ಬೇರೆ ಎಂಬ ವಿವೇಕ ಜ್ಞಾನವುಂಟಾಗುತ್ತದೆಯೋ ಕೂಡಲೇ ಪುರುಷನು ತನ್ನ ಸ್ವರೂಪದಿಂದ (ಚೇತನಸ್ವರೂಪನಾಗಿ) ಕೈವಲ್ಯದಿಂದ ಇರುತ್ತಾರೆ. ಇದೇ ಮೋಕ್ಷವು ಎಂದು ಹೇಳುತ್ತಾರೆ.

ನಾರಾಯಣನು ವಿಶ್ವಕರ್ತನಲ್ಲ, ಪ್ರಧಾನವೇ ಸ್ವತಂತ್ರಕಾರಣವೆಂದು ಹೇಳುವ ಈ ಮತವು ನಾರಾಯಣನು ಗುಣ-ಪೂರ್ಣನೆಂದು ಹೇಳುವ ಆಚಾರ್ಯರ ಸಿದ್ಧಾಂತಕ್ಕೆ ಪೂರ್ಣವಾಗಿ ವಿರುದ್ಧವಾಗಿದೆ. ಆದ್ದರಿಂದ ಅದನ್ನು ವಿಮರ್ಶಿಸಿ ನಿರಾಕರಿಸುವುದು ಅತ್ಯಾವಶ್ಯಕವಾಗಿದೆ. ಸಾಂಖ್ಯರು ಪ್ರಕೃತಿಗೆ ಸ್ವತಂತ್ರ ಕಾರಣತ್ವವನ್ನು ಸಮರ್ಥಿಸಲು ಹೇಳುವ ಅನುಮಾನವು ಹೀಗಿದೆ. ''ಪ್ರಧಾನವು ಜಗತ್‌ಸೃಷ್ಟ್ಯಾದಿ ವಿಷಯದಲ್ಲಿ ಸ್ವತಂತ್ರಕಾರಣವು, ವಿಕಾರ ಹೊಂದುವ ಕಾರಣ ವಾದುದರಿಂದ ಹಾಲಿನಂತೆ''. ಹಾಲು ವಿಕಾರ ಹೊಂದಿ ಮೊಸರು, ಬೆಣ್ಣೆ, ಮೊದಲಾದ ವಸ್ತುಗಳ ರೂಪವನ್ನು ಹೊಂದುತ್ತದೆ. ಮೊಸರು, ಇತ್ಯಾದಿಗಳ ರೂಪವನ್ನು ಹೊಂದಲು ಹಾಲಿಗೆ ಯಾರ ಸಹಾಯವೂ ಬೇಕಾಗಿಲ್ಲ. ಅದರಂತೆ ಪ್ರಕೃತಿಯೂ ಇನ್ನೊಬ್ಬರ ಅಪೇಕ್ಷೆ ಇಲ್ಲದೆ ಸ್ವತಂತ್ರವಾಗಿ ವಿಕಾರಗೊಂಡು ಈ ಪ್ರಪಂಚದ ರೂಪವನ್ನು ಹೊಂದುತ್ತದೆ ಎಂದು ಅಭಿಪ್ರಾಯವು.

ನಿರೀಶ್ವರಸಾಂಖ್ಯರ ಈ ಅನುಮಾನವು ದೋಷಯುಕ್ತವಾಗಿದೆ. ನ್ಯಾಯಮತದವರು ಅನುಮಾನವನ್ನು ಸ್ವಾರ್ಥಾ-ನುಮಾನ ಮತ್ತು ಪರಾರ್ಥಾನುಮಾನ ಎಂದು ಎರಡು ವಿಧವಾಗಿದೆ ಎಂದು ಹೇಳುತ್ತಾರೆ. ತನ್ನ ಅನುಮಿತಿಗೆ (ಊಹೆಗೆ) ಕಾರಣವಾದ ಅನುಮಾನವು ಸ್ವಾರ್ಥಾನುಮಾನವು, ಇನ್ನೊಬ್ಬರ ಅನುಮತಿಗೆ (ಊಹೆಗೆ) ಕಾರಣವಾದ ಅನುಮಾನವು ಪರಾರ್ಥಾನುಮಾನವು. ಈ ಪರಾರ್ಥಾನುಮಾನಕ್ಕೆ ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನ ಎಂಬ ಐದು ಅಂಗಗಳಿವೆ. ಹೊಗೆಯ ಜ್ಞಾನದಿಂದ ಬೆಂಕಿಯನ್ನು ತಿಳಿಯುವಾಗ (ಧೂಮಜ್ಞಾನದಿಂದ ವಹ್ನಿಜ್ಞಾನವುಂಟಾಗುವಾಗ) ಧೂಮಾನುಮಾನಕ್ಕೆ ಈ ಅಂಗಗಳು ಹೀಗೆ ಇರುತ್ತವೆ. 1) 'ಪರ್ವತೋ ವಹ್ನಿಮಾನ್' ಪರ್ವತವು ಬೆಂಕಿಯುಳ್ಳದ್ದು ಎಂಬುದು ಪ್ರತಿಜ್ಞೆ. 2) 'ಧೂಮಾತ್' ಹೊಗೆ ಇರುವುದರಿಂದ ಎಂಬುದು ಹೇತು. 3) 'ಯೋ ಯೋ ಧೂಮವಾನ್ ಸಃ ಅಗ್ನಿಮಾನ್ ಯಥಾ ಮಹಾನಸಂ' (ಯಾವ ಯಾವುದು ಹೊಗೆ ಉಳ್ಳದ್ದೋ ಅದೆಲ್ಲವೂ ಬೆಂಕಿಯುಳ್ಳದ್ದು, ಅಡಿಗೆಮನೆ ಯಂತೆ) ಎಂಬುದು ಉದಾಹರಣೆ. 4) 'ತಥಾಚ ಅಯಂ, ಅಯಂ ಚ ತಥಾ ಅಯಂ ಪರ್ವತೋಽಪಿ ವಹ್ನಿವ್ಯಾಪ್ಯ ಧೂಮವಾನ್' (ಈ ಪರ್ವತವೂ ಹಾಗೆಯೇ, ಅಂದರೆ ಮಹಾನಸದಂತೆ ಪರ್ವತವೂ ವಹ್ನಿವ್ಯಾಪ್ಯವಾದ ಧೂಮವುಳ್ಳದ್ದು). 5) 'ತಸ್ಮಾತ್ತಥಾ' ಎಂಬುದು ನಿಗಮನವು (ತಸ್ಮಾತ್ = ವಹ್ನಿವ್ಯಾಪ್ಯಧೂಮ ಉಳ್ಳದ್ದರಿಂದ) ಮಹಾನಸವು ಹೇಗೆ ವಹ್ನಿ ಉಳ್ಳದ್ದೋ ಹಾಗೆಯೇ ವಹ್ನಿವ್ಯಾಪ್ಯಧೂಮ ಉಳ್ಳದ್ದರಿಂದ ಪರ್ವತವೂ ವಹ್ನಿ ಉಳ್ಳದ್ದು.

ಪ್ರಕೃತದಲ್ಲಿ ''ಪ್ರಧಾನಂ ಸ್ವತಂತ್ರಕಾರಣಂ ಪರಿಣಾಮಿತ್ವಾತ್, ಪಯೋವತ್'' ಎಂಬ ಅನುಮಾನದಲ್ಲಿ 1) ಪ್ರಧಾನಂ ಸ್ವತಂತ್ರಕಾರಣಂ ಎಂಬುದು ಪ್ರತಿಜ್ಞೆ. ಇಲ್ಲಿ ಪ್ರಧಾನವು ಪಕ್ಷ, ಸ್ವತಂತ್ರಕಾರಣತ್ವ ಸಾಧ್ಯ, 2) ಪರಿಣಾಮಿತ್ವಾತ್ ಎಂಬುದು ಹೇತುವು, 3) ಯತ್ ಪರಿಣಾಮಿ ತತ್ ಸ್ವತಂತ್ರಕಾರಣಂ ಯಥಾ ಪಯಃ ಇದೆ ಉದಾಹರಣೆ (ನಿದರ್ಶನ) ಕೆಲವರು ಅನುಮಾನಕ್ಕೆ ಮೂರೇ ಅವಯವಗಳನ್ನು ಒಪ್ಪುತ್ತಾರೆ. ಹೀಗೆ ಸಾಂಖ್ಯರು ಅನುಮಾನ ಪ್ರಯೋಗ ಮಾಡುತ್ತಾರೆ.

ಆದರೆ ಉದಾಹರಣೆಯಾಗಿ ಕೊಟ್ಟಿರುವ ಹಾಲಿನಲ್ಲಿ ಸ್ವತಂತ್ರಕಾರಣತ್ವವಿಲ್ಲವೆಂದು ಶ್ರುತಿಯು ಹೇಳುತ್ತದೆ. ಪರಿಣಾಮಿತ್ವವೆಂಬ ಹೇತುವಿನಿಂದ ಸ್ವತಂತ್ರಕಾರಣತ್ವವನ್ನು ಪ್ರಧಾನದಲ್ಲಿ ಸಾಧಿಸಬೇಕಾದರೆ ದೃಷ್ಟಾಂತದಲ್ಲಿ ಪರಿಣಾ-ಮಿತ್ವವೆಂಬ ಹೇತುವೂ ಸ್ವತಂತ್ರ ಕಾರಣತ್ವವೆಂಬ ಸಾಧ್ಯವೂ ಇರಬೇಕು. ಆದರೆ 'ಏತೇನ ಹ ವಾವ ಪಯೋ ಮಂಡಂ ಭವತಿ', (ಈ ಭಗವಂತನಿಂದಲೇ ಹಾಲು, ಮೊಸರು ಆಗುತ್ತದೆ, ಮೊಸರಿನ ರೂಪವನ್ನು ಹೊಂದುತ್ತದೆ) ಎಂದು ಒಂದು

ವೇದವು ಸಾರುತ್ತಿದೆ. ''ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ । ನ ಋತೇ ತ್ವತ್ ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ'' (ಋ. 10-113-9) ಗಣಪತೇ = ಎಲ್ಲ ಇಂದ್ರಿಯ ಗಣಗಳಿಗೆ ಸ್ವಾಮಿಯಾದ ಭಗವಂತನೇ! ಮಘವನ್ = ಧನವಂತನೇ, ಕೀರ್ತಿವಂತನೇ, ಯಜ್ಞಸ್ವಾಮಿಯೇ! ಗಣೇಷುನಿಷುಸೀದ = ನೀನು ನಿನ್ನನ್ನು ಪೂಜಿಸುವವರ ಇಂದ್ರಿಯ ಸಮೂಹಗಳಲ್ಲಿ, ಚೆನ್ನಾಗಿ ಸ್ಥಿರವಾಗಿ ನಿಂತಿರು, ಕುಳಿತಿರು. ಅಲ್ಲಿದ್ದು, ಮಹಾಂ = ಪೂಜ್ಯನಾದ, ಅರ್ಕಂ = ಪರಮಾನಂದಭರಿತನಾದ, ಚಿತ್ರಂ = ಅತ್ಯಾಶ್ಚರ್ಯತಮನಾದ, ತ್ವಾಂ = ನಿನ್ನನ್ನು, (ನೀನೇ) ಅರ್ಚ = ಪೂಜಿಸಿಕೋ, ನಾನೇ (ಭಗವಂತನೆ) ಏಕೆ ಪೂಜ್ಯನೆಂದು ದೇವರು ಕೇಳಿದರೆ ಭಕ್ತನು ಉತ್ತರ ಹೇಳುತ್ತಾನೆ, ತ್ವಾಂ = ನಿನ್ನನ್ನೇ, ಕವೀನಾಂ = ಜ್ಞಾನಿಗಳ ಮಧ್ಯದಲ್ಲಿ, ವಿಪ್ರತಮಂ = ಅತ್ಯಂತ ಉತ್ಕೃಷ್ಟನನ್ನಾಗಿ, ಜ್ಞಾನಿಗಳು, ಆಹುಃ = ಹೇಳುತ್ತಾರೆ, ನಿನಗೊಬ್ಬನಿಗೇ ಪೂಜ್ಯತ್ವವೆಂದಿಷ್ಟೇ ಅಲ್ಲ. ಪೂಜಕನೂ ಮುಖ್ಯವಾಗಿ ನೀನೇ ಆಗಿದ್ದೀ, ಪೂಜ್ಯನೂ ನೀನೇ ಹೇಗೋ ಹಾಗೆ ಮುಖ್ಯಪೂಜಕನೂ ನೀನೇ. ಏಕೆಂದರೆ ತ್ವತ್ ಋತೇ = ನಿನ್ನ ಹೊರತು (ನೀನಿಲ್ಲದೆ) ಆರೇ = ದೂರದಲ್ಲಿ, ಅಥವಾ ಸಮೀಪದಲ್ಲಿ, ಕಿಂಚನ = ಅತ್ಯಲ್ಪವಾದ ಚಲನೆಯೂ ಕೂಡ, ನ ಕ್ರಿಯತೇ = ಮಾಡಲ್ಪಡುವುದಿಲ್ಲ. ಈ ವೇದವು ಪರಮಾತ್ಮನೇ ಸರ್ವಕರ್ತಾ ಅವನಿಲ್ಲದೆ ಯಾವ ಕಾರ್ಯವೂ ನಡೆಯುವುದಿಲ್ಲವೆಂದು ಹೇಳುತ್ತದೆ.

'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾಃ ನದ್ಯಃ ಸ್ಯಂದಂತೇ ಯಾಶ್ಚ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚೋಽನ್ಯಾಃ ಯಾಂ ಯಾಂ ಚ ದಿಶಮನು' (ಬೃ.5.8.9) (ಕೆಲವು ವಿಲಕ್ಷಣವಾದ ನದಿಗಳು ಪೂರ್ವದಿಕ್ಕಿನಲ್ಲಿ ಹರಿಯುತ್ತವೆ. ಮತ್ತೆ ಕೆಲವು ವಿಲಕ್ಷಣವಾದ ನದಿಗಳು ಪಶ್ಚಿಮದಿಕ್ಕಿನಲ್ಲಿ ಹರಿಯುತ್ತವೆ. ಕೆಲವು ಬೆಳ್ಳಗಿರುವ ಹಿಮಾಲಯಾದಿ ಪರ್ವತಗಳಿಂದ, ಮತ್ತೆ ಕೆಲವು ನದಿಗಳು ನೀಲಪರ್ವತಗಳಿಂದ ಹರಿಯುತ್ತವೆ. ಹೀಗೆ ಎಲ್ಲಾ ದಿಕ್ಕಿಗೆ ಹರಿಯುವ ನದಿಗಳೂ ಅಕ್ಷರ ನಾಮಕನಾದ ಭಗವಂತನ ಆಜ್ಞಾಮಾತ್ರದಿಂದಲೇ ಆಯಾಯಾ ದಿಕ್ಕಿಗೆ ಹರಿಯುತ್ತವೆ ಎಂದು ಯಾಜ್ಞವಲ್ಕ್ಯರು ಗಾರ್ಗಿಗೆ ಹೇಳುತ್ತಾರೆ). ''ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ''॥ (ಭಾಗವತ.2-10-12) (ಪ್ರಕೃತ್ಯಾದಿತತ್ವವೂ, ಧರ್ಮಾಧರ್ಮಗಳೂ, ಪ್ರವಾಹರೂಪವಾದ ಕಾಲವೂ, ಸ್ವಭಾವ = ಪ್ರಕೃತ್ಯಾದಿಗಳ ಪರಿಣಾಮಾದಿಗಳೂ ಈ ಮೇಲಿನ ತತ್ತ್ವಗಳ ಅಭಿಮಾನಿಚೇತನರೂ, ಈಶ್ವರನ ಅನುಗ್ರಹದಿಂದ, ಸ್ವರೂಪಪ್ರಮಿತಿ ಪ್ರವೃತ್ತಿಗಳೆಂಬ ತ್ರಿವಿಧಸತ್ತಾ ವಿಶಿಷ್ಟರಾಗಿರುತ್ತಾರೆ. ಈಶ್ವರಾನುಗ್ರಹವಿಲ್ಲದಿದ್ದರೆ ಈ ಮೇಲಿನ ತತ್ತ್ವಗಳಿಗೆ ತ್ರಿವಿಧಸತ್ತೆಯೂ ಇರಲಾರದು).

ವಿಗ್ರಹ—

**ಪರಾಧೀನಂಕಾರಣಂ**— ಪರಸ್ಮಿನ್ ಅಧೀನಂ ಪರಾಧೀನಂ, ನ ಪರಾಧೀನಂ ಅಪರಾಧೀನಂ, ಅಪರಾಧೀನಂ ಚ ತತ್ ಕಾರಣಂ ಚ ಅಪರಾಧೀನಕಾರಣಂ ।

**ಪರಿಣಾಮಿ**— ಪರಿಣಾಮಃ ಅಸ್ಯ ಅಸ್ತೀತಿ ಪರಿಣಾಮಿ (ಮಿನ್.ನಪುಂ) ।

**ಪಯೋವತ್**— ಪಯಸಾ ತುಲ್ಯಂ ಪಯೋವತ್ ।

**ಸಾಧ್ಯವೈಕಲ್ಯಂ**— ವಿಕಲಸ್ಯ ಭಾವಃ ವೈಕಲ್ಯಂ ಸಾಧ್ಯಸ್ಯ ವೈಕಲ್ಯಂ ಸಾಧ್ಯವೈಕಲ್ಯಂ ।

**ಕೋಶ**— ಪಯಃ = ಹಾಲು, ನೀರು, 'ಪಯಃ ಪಾನೀಯದುಗ್ಧಯೋಃ' ಭಾಸ್ಕರ, ಪರಿಣಾಮ = ರೂಪಾಂತರ ಪ್ರಾಪ್ತಿ, transformation, ಪರಿಣಾಮೋ ವಿಕಾರಃ ಸ್ಯಾತ್ ಸಮೇ ವಿಕೃತಿವಿಕ್ರಿಯೇ' ಅಮರ ।

ಸಾಧ್ಯವೈಕಲ್ಯಂ = ಪಯಸೋಽಪಿ ವಿಷ್ಣ್ವಧೀನತ್ವಾತ್ 'ನ ಋತೇ ತ್ವತ್' ಇತ್ಯಾದೇಃ = ನ ಋತೇ ತ್ವತ್ ಕ್ರಿಯತೇ ಕಿಂಚನಾರೇ । ಭಗವಂತನೇ! ನಿನ್ನ ಹೊರತು ದೂರದಲ್ಲಿಯಾಗಲೀ ಹತ್ತಿರದಲ್ಲಿಯಾಗಲೀ ಏನೂ ಯಾರಿಂದಲೂ ಮಾಡಲ್ಪಡುವುದಿಲ್ಲ ಇತ್ಯಾದಿ ಶ್ರುತ್ಯನುಸಾರವಾಗಿ ಹಾಲೂ ಕೂಡ ಮೊಸರಿನ ರೂಪದಿಂದ ಪರಿಣಾಮ ಹೊಂದುವುದಕ್ಕೆ ವಿಷ್ಣ್ವಧೀನವಾದುದರಿಂದ, ದೃಷ್ಟಾಂತದಲ್ಲಿ ಸಾಧ್ಯಹೀನತೆಯು ಬಂತು ಎಂದು ತಿಳಿಯಬೇಕು. ಭಾವಪ್ರಕಾಶಿಕಾ.

'ಪ್ರಧಾನಂ ಸ್ವತಂತ್ರಂ ಕಾರಣಂ ಭವಿತುಮರ್ಹತಿ ಪರಿಣಾಮಿತ್ವಾತ್' ಈ ಅನುಮಾನದಲ್ಲಿ ಕಾರಣತ್ವಮಾತ್ರ ಸಾಧಿಸಿದರೆ ಕುಲಾಲನಲ್ಲಿ (ಕುಂಬಾರನಲ್ಲಿ) ಕಾರಣತ್ವವು ಸಿದ್ಧವಾದುದರಿಂದ ಸಿದ್ಧಸಾಧನತಾ (ಸಿದ್ಧವಾದ ವಿಷಯವನ್ನೇ ಸಾಧಿಸಿದಂತೆ, ತಿಳಿದ ವಿಷಯವನ್ನೇ ತಿಳಿಸಿದಂತೆ) ಬರುತ್ತದೆ. ಆದುದರಿಂದ ಸ್ವತಂತ್ರ ಎಂದು ಸಾಂಖ್ಯರು, ವಿಶೇಷಣವನ್ನು ಕೊಟ್ಟಿರುತ್ತಾರೆ ಎಂದು ತಿಳಿಯಬೇಕು.

**ಕ್ರಿಯಾಪದ—** ಸ್ಯಾತ್ - ಸ್ಯಾತ್ ಸ್ಯಾತಾಂ ಸ್ಯುಃ ಅಸ ಭುವಿ ವಿಧಿಲಿಙ್ ।

**ಪ್ರಯೋಗ—** ಪ್ರಧಾನೇನ ಯತ್ ಪರಿಣಾಮಿನಾ ಭೂಯತೇ ತತ್ ಪಯೋವತ್ ಅಪರಾಧೀನಕಾರಣೇನ ಭೂಯತೇ ಇತಿ ಚೇತ್ ನಿದರ್ಶನೇ ಸಾಧ್ಯವೈಕಲ್ಯೇನ ಭೂಯೇತ (ಭಾವೇ) ।

★ ★ ★

**ಅವತಾರಿಕಾ—** ಈ ರೀತಿ ಪರಿಣಾಮಿತ್ವ ಹೇತುವಿನಿಂದ ಪ್ರಧಾನಕ್ಕೆ ಸ್ವತಂತ್ರ ಕಾರಣತ್ವವನ್ನು ಸಾಧಿಸುವ ಅನುಮಾನ-ವನ್ನು ದೂಷಿಸಿದ್ದಾಯಿತು. ಆದರೂ ಸಿದ್ಧಾಂತ ಪಕ್ಷದಲ್ಲಿ ಸಾಧಕವಾದ ಪ್ರಮಾಣವನ್ನು ಹೇಳದಿದ್ದರೆ ನಮ್ಮ ಸಿದ್ಧಾಂತವು ಪ್ರತಿಷ್ಠಿತವಾಗುವುದಿಲ್ಲ. ಆದುದರಿಂದ ಈಗ ಸ್ವಪಕ್ಷಸಾಧಕವಾದ ಪ್ರಮಾಣವನ್ನು ಹೇಳಬೇಕು. ಇಲ್ಲಿ ನಮ್ಮ ಪಕ್ಷಕ್ಕೆ ಸಾಧಕವಾದ ಆಗಮ ಪ್ರಮಾಣಗಳು ಬೇಕಾದಷ್ಟಿವೆ. ಆದರೂ ಪ್ರತಿವಾದಿಯು ಅನುಮಾನ ಪ್ರಮಾಣವನ್ನು ಅವಲಂಬಿಸಿ ಪೂರ್ವಪಕ್ಷವನ್ನು ಮಾಡಿದ್ದರಿಂದ ನಾವೂ ಕೂಡಾ ಅನುಮಾನ ಪ್ರಮಾಣವನ್ನೇ ಹೇಳುವುದು ಉಚಿತವೆಂದು ಆಚಾರ್ಯರು ಅನುಮಾನವನ್ನೇ ಉಪನ್ಯಾಸ ಮಾಡುತ್ತಾರೆ.

**ವಿವಾದಾಧ್ಯಾಸಿತಾ ಸೃಷ್ಟಿಶ್ಚೇತನೇಚ್ಛಾನುಸಾರಿಣೀ ।**
**ಸೃಷ್ಟಿತ್ವಾತ್ ಪಟಸೃಷ್ಟಿರ್ವೇತ್ಯನುಮಾ ಪಕ್ಷಸಾಧಿಕಾ ॥ 10 ॥**

**ಪದಚ್ಛೇದ—** ವಿವಾದಾಧ್ಯಾಸಿತಾ, ಸೃಷ್ಟಿಃ, ಚೇತನೇಚ್ಛಾನುಸಾರಿಣೀ, ಸೃಷ್ಟಿತ್ವಾತ್, ಪಟಸೃಷ್ಟಿಃ, ವಾ, ಇತಿ, ಅನುಮಾ, ಪಕ್ಷಸಾಧಿಕಾ ।

**ಅನ್ವಯ—** ವಿವಾದಾಧ್ಯಾಸಿತಾ, ಸೃಷ್ಟಿಃ, ಚೇತನೇಚ್ಛಾನುಸಾರಿಣೀ, ಸೃಷ್ಟಿತ್ವಾತ್, ಪಟಸೃಷ್ಟಿಃ, ವಾ, ಇತಿ, ಅನುಮಾ (ಅಸ್ಮಾಕಂ), ಪಕ್ಷಸಾಧಿಕಾ (ಭವತಿ) ।

**ಅನ್ವಯಾರ್ಥ—**

**ವಿವಾದಾಧ್ಯಾಸಿತಾ** = ಚರ್ಚೆಗೆ ವಿಷಯವಾಗಿರುವ, ಸ್ವತಂತ್ರಜಡಾಧೀನವೋ, ಚೇತನಾಧೀನವೋ ಎಂದು ವಾದಿ ಪ್ರತಿವಾದಿಗಳ ವಿಪ್ರತಿಪತ್ತಿಗೆ ವಿಷಯವಾಗಿರುವ,
**ಸೃಷ್ಟಿಃ** = ಜಗತ್ತಿನ ಸೃಷ್ಟಿಯು, ಇದು ಪಕ್ಷವು.
**ಚೇತನೇಚ್ಛಾನುಸಾರಿಣೀ** = ಒಬ್ಬ ಸ್ವತಂತ್ರನಾದ ಚೇತನನ (ಜ್ಞಾನವುಳ್ಳ ವಸ್ತುವಿನ) ಇಚ್ಛೆಗೆ ಒಳಪಟ್ಟದ್ದು
**ಸೃಷ್ಟಿತ್ವಾತ್** = ಸೃಷ್ಟಿತ್ವವಿರುವುದರಿಂದ, ಅದೂ ಒಂದು ಕಾರ್ಯವಾಗಿರುವುದರಿಂದ,
**ಪಟಸೃಷ್ಟಿರ್ವಾ** = ಬಟ್ಟೆಯ ಉತ್ಪತ್ತಿಯಂತೆ,
**ಇತಿ** = ಎಂಬುದಾಗಿ,
**ಅನುಮಾ** = ವ್ಯಾಪ್ತಿ ಮುಂತಾದ ಅಂಗಗಳುಳ್ಳ ಅನುಮಾನವು,
**ಅಸ್ಮಾಕಂ** = ನಮ್ಮ,
**ಪಕ್ಷಸಾಧಿಕಾ** = ಸಿದ್ಧಾಂತವನ್ನು ಸಾಧಿಸುವಂತಹದ್ದಾಗಿ,
**ಭವತಿ** = ಆಗುತ್ತದೆ.

ತಾತ್ಪರ್ಯ— ಈ ಪ್ರಪಂಚ ಸೃಷ್ಟಿಯು ಜ್ಞಾನವುಳ್ಳ ಸ್ವತಂತ್ರವಸ್ತುವಿನ ಅಧೀನವೋ ಅಥವಾ ಜಡವಾದ ಪ್ರಕೃತಿಯ ಅಧೀನವೋ ಎಂದು ಸಿದ್ಧಾಂತಿಗಳೂ ನಿರೀಶ್ವರ ಸಾಂಖ್ಯರೂ ಈಗ ಚರ್ಚೆ ಮಾಡುತ್ತಿದ್ದಾರೆ. ವಿರುದ್ಧಾರ್ಥ ಪ್ರತಿಪಾದಕವಾದ ಎರಡು ವಾಕ್ಯಗಳಿಂದ ಉಂಟಾದ ಜ್ಞಾನಕ್ಕೆ ವಿಷಯವಾದ ಈ ಸೃಷ್ಟಿಯು ಜ್ಞಾನವುಳ್ಳ ಒಬ್ಬನ ಇಚ್ಛೆಯನ್ನು ಅನುಸರಿಸಿ ನಡೆದಿದೆ ಎಂದು ನಾವು ಸಾಧಿಸುತ್ತಿದ್ದೇವೆ. ವಸ್ತ್ರವನ್ನು ಸೃಷ್ಟಿಸುವಂತೆ, ಈ ಜಗತ್ತನ್ನು ಯಾರಾದರೂ ಸೃಷ್ಟಿಸಿರುವುದರಿಂದ. ಆ ಸೃಷ್ಟಿಕರ್ತನು ಒಬ್ಬ ಚೇತನನೇ ಆಗಿರಬೇಕು ಎಂಬ ಅನುಮಾನವು ನಮ್ಮ ಪಕ್ಷವನ್ನು ಸಾಧಿಸಿಕೊಡುತ್ತದೆ. ಒಬ್ಬ ಮನುಷ್ಯನು ತಾನು ವಸ್ತ್ರವನ್ನು ಮಾಡಬೇಕೆಂದು ಇಚ್ಛಿಸಿದರೆ ತನ್ನ ಇಚ್ಛೆಯಂತೆ ಆ ವಸ್ತ್ರವನ್ನು ನಿರ್ಮಿಸುವನು. ಹಾಗಾದರೆ ಮಾತ್ರವೇ ವಸ್ತ್ರದ ನಿರ್ಮಾಣವಾಗುವುದು. ಪುರುಷಪ್ರಯತ್ನವಿಲ್ಲದೆ ತಾನಾಗಿ ವಸ್ತ್ರನಿರ್ಮಾಣವಾಗುವುದಿಲ್ಲ. ಅದರಂತೆ ಪ್ರಕೃತಿಯು ಪ್ರಪಂಚರೂಪದಿಂದ ಪರಿಣಮಿಸುವುದು ಎಂಬ ಸೃಷ್ಟಿಯು ಒಬ್ಬ ಪುರುಷನ ಇಚ್ಛೆಯನ್ನು ಅನುಸರಿಸಿ ನಡೆಯತಕ್ಕದ್ದೇ ಅಲ್ಲದೆ ತಾನಾಗಿ ನಡೆಯಲಾರದು. ಯಾರಿಂದ ಈ ಪ್ರಪಂಚದ ಸೃಷ್ಟಿಯು ನಡೆಯುತ್ತದೋ ಆ ಪುರುಷನೇ ಭಗವಂತನು ಎಂದು ತಾತ್ಪರ್ಯ.

ವಿಗ್ರಹ ಮತ್ತು ಕೋಶ—

ವಿವಾದಾಧ್ಯಾಸಿತಾ— ವಿವಾದಂ ಅಧ್ಯಾಸಿತಾ ವಿವಾದಾಧ್ಯಾಸಿತಾ ।

ಚೇತನೇಚ್ಛಾನುಸಾರಿಣೀ— ಚೇತನಸ್ಯ ಇಚ್ಛಾ ಚೇತನೇಚ್ಛಾ, ಚೇತನೇಚ್ಛಾಂ ಅನುಸರತೀತಿ ಚೇತನೇ-ಚ್ಛಾನುಸಾರಿಣೀ ।

ಪಟಸೃಷ್ಟಿಃವಾ— ಪಟಸ್ಯ ಸೃಷ್ಟಿಃ, ಪಟಸೃಷ್ಟಿಃ । ವಾ = ಅಂತೆ, 'ವಾ ವಿಕಲ್ಪೋಪಮಾನಯೋಃ' ಕೋಶ, ಇವ ವದ್ ವಾ ಯಥಾಶಬ್ದಾಃ ಉಪಮಾನಾರ್ಥವಾಚಕಾಃ ದಂಡೀ ।

ಅನುಮಾ— ಅನುಮೀಯತೇ ಅನಯಾ ಇತಿ ಅನುಮಾ ।

ಪಕ್ಷಸಾಧಿಕಾ— ಪಕ್ಷಸ್ಯ ಸಾಧಿಕಾ ಪಕ್ಷಸಾಧಿಕಾ ।

ಪ್ರಯೋಗ— ವಿವಾದಾಧ್ಯಾಸಿತಯಾ ಸೃಷ್ಟ್ಯಾ ಚೇತನೇಚ್ಛಾನುಸಾರಿಣ್ಯಾ ಭೂಯತೇ, ಸೃಷ್ಟಿತ್ವಾತ್ ಪಟಸೃಷ್ಟಿವತ್, ಇತ್ಯನುಮಯಾ (ಅಸ್ಮಾಕಂ) ಪಕ್ಷಸಾಧಿಕಯಾ (ಭೂಯತೇ) ।

★ ★ ★

ಅವತಾರಿಕಾ— ಸಾಂಖ್ಯರು ನಿರೀಶ್ವರಸಾಂಖ್ಯರು ಮತ್ತು ಸೇಶ್ವರಸಾಂಖ್ಯರೆಂದು ಎರಡು ರೀತಿಯಾಗಿದ್ದಾರೆ. ಆ ನಿರೀಶ್ವರ ಸಾಂಖ್ಯರಲ್ಲಿಯೂ ಕೆಲವರು ಕೇವಲ ಜಡಪ್ರಕೃತಿಯಿಂದಲೇ ಸೃಷ್ಟಿಯಾಗುತ್ತದೆ ಎಂದು ಹೇಳುತ್ತಾರೆ. ಕೆಲವರು ಚೇತನ ಅಂದರೆ ಜೀವರೂ, ಅಚೇತನವಾದ ಪ್ರಕೃತಿಯೂ ಸೇರಿ ಪ್ರಪಂಚವನ್ನು ನಿರ್ಮಿಸುತ್ತವೆ. ಇವುಗಳಲ್ಲಿ ಚೇತನವು ಅಮುಖ್ಯ, ಅಚೇತನವಾದ ಜಡವು (ಜಡಪ್ರಕೃತಿಯು) ಮುಖ್ಯ. ಹೀಗೆ ಮುಖ್ಯವಾದ ಜಡಪ್ರಕೃತಿಯು ಸಹಕಾರಿಯಾದ ಜೀವರನ್ನು ಕೂಡಿಕೊಂಡು ಈ ಪ್ರಪಂಚದ ಸೃಷ್ಟಿಗೆ ಕಾರಣವಾಗಿದೆ. ಜಡಪ್ರಕೃತಿಯೇ ಈ ಪ್ರಪಂಚಾಕಾರದಿಂದ ಪರಿಣಾಮ ಹೊಂದುತ್ತದೆ ಎಂದು ಹೇಳುತ್ತಾರೆ. ಆ ಮತವನ್ನು ಇಲ್ಲಿ ನಿರಾಕರಿಸುತ್ತಾರೆ - ಈ ಮತವನ್ನು 'ಜೀವೋಪಸರ್ಜನಕ ಪ್ರಕೃತಿ ಕರ್ತೃತ್ವವಾದ' ಎನ್ನುತ್ತಾರೆ. ಅದರ ನಿರಾಕರಣೆಯನ್ನು ಮಾಡುತ್ತಾರೆ.

**ಯಚ್ಚೇತನಾಚೇತನಯೋರಂಗಾಂಗಿತ್ವಾದಿ ಮನ್ವತೇ ।**
**ಸೃಷ್ಟಾವೀಶಾನಪೇಕ್ಷಾಯಾಂ ತನ್ನ ಶೋಭನತಾಂ ವ್ರಜೇತ್ ॥ 11 ॥**

ಪದಚ್ಛೇದ— ಯತ್, ಚೇತನಾಚೇತನಯೋಃ, ಅಂಗಾಂಗಿತ್ವಾದಿ, ಮನ್ವತೇ, ಸೃಷ್ಟೌ, ಈಶಾನಪೇಕ್ಷಾಯಾಂ, ತತ್, ನ, ಶೋಭನತಾಂ, ವ್ರಜೇತ್ ।

**ಅನ್ವಯ—** ಸೃಷ್ಟೌ, ಚೇತನಾಚೇತನಯೋಃ, ಅಂಗಾಂಗಿತ್ವಾದಿ, ಯತ್, ಮನ್ವತೇ, ಸೃಷ್ಟೌ ಈಶಾನಪೇಕ್ಷಾಯಾಂ, ತತ್, ಶೋಭನತಾಂ, ನ, ವ್ರಜೇತ್ ।

**ಅನ್ವಯಾರ್ಥ—**

**ಸೃಷ್ಟೌ** = ಜಗತ್ತಿನ ಸೃಷ್ಟಿ ವಿಷಯದಲ್ಲಿ,

**ಚೇತನಾಚೇತನಯೋಃ** = ಜೀವ ಮತ್ತು ಜೀವವಿಲ್ಲದ ಜಡಪ್ರಕೃತಿ ಎಂಬ ವಸ್ತುಗಳಲ್ಲಿ,

**ಅಂಗಾಂಗಿತ್ವಾದಿ** = ಒಂದು ಅಂಗ (ಅಮುಖ್ಯ) ಮತ್ತೊಂದು ಅಂಗಿ (ಮುಖ್ಯ) ಎಂಬ ಅಪ್ರಧಾನತ್ವ ಪ್ರಧಾನತ್ವ ಇವುಗಳೇ (ಆದಿ =) ಮೊದಲಾದ,

**ಯತ್** = ಯಾವ ಪ್ರಮೇಯವನ್ನು,

**(ಕೇಚಿತ್ = ಕೆಲವು ಸಾಂಖ್ಯರು) ಮನ್ವತೇ** = ತಿಳಿಯುತ್ತಾರೋ,

**ತತ್** = ಹಾಗೆ ಅಂಗೀಕಾರ ಮಾಡುವುದು,

**ಈಶಾನಪೇಕ್ಷಯಾಂ** = ಸ್ವತಂತ್ರನಾದ ಈಶ್ವರನ ಅಪೇಕ್ಷೆ ಇಲ್ಲದಿದ್ದಲ್ಲಿ (ಸ್ವತಂತ್ರನಾದ ಒಬ್ಬ ಕರ್ತೃವು ಬೇಡವೆಂಬ ಪಕ್ಷದಲ್ಲಿ),

**ಶೋಭನತಾಂ** = ವಿವೇಕಿಗಳಿಂದ ಅಂಗೀಕಾರ ಮಾಡುವುದಕ್ಕೆ ಯೋಗ್ಯತೆಯನ್ನು,

**ನ ವ್ರಜೇತ್** = ಹೊಂದಲಾರದು.

**ತಾತ್ಪರ್ಯ—** ಈ ಜಗತ್ತು ಒಂದು ಕಾರ್ಯ. ಅದಕ್ಕೆ ಜೀವಚೇತನರೂ ಕಾರಣ, ಅಚೇತನವಾದ ಜಡಪ್ರಕೃತಿ ಎಂಬ ಹೆಸರುಳ್ಳ ಪ್ರಧಾನವೂ ಕಾರಣ. ಆದರೆ ಚೇತನವು ಉಪಸರ್ಜನ ಅಂದರೆ ಅಮುಖ್ಯಕಾರಣ ಅಚೇತನವಾದ ಜಡ ಪ್ರಕೃತಿಯು ಮುಖ್ಯ ಕಾರಣ. ಹೀಗೆ ಚೇತನ ಮತ್ತು ಅಚೇತನಗಳೆರಡೂ ಅಮುಖ್ಯ, ಮುಖ್ಯ ಭಾವದಿಂದ ಸೇರಿ ಪ್ರಪಂಚಕ್ಕೆ ಕಾರಣವಾಗುತ್ತವೆ. ಇದು ಚೇತನೋಪಸರ್ಜನಕವಾದ ಸ್ವತಂತ್ರಪ್ರಧಾನಕರ್ತೃತ್ವವಾದ. ಕಾಯಿಸಿ ಬಿಸಿಯಾರಿದ ಹಾಲಿಗೆ ಹುಳಿ ಮಜ್ಜಿಗೆಯಿಂದ ಹೆಪ್ಪು ಹಾಕಿದರೆ (ಆತಂಚನ ಮಾಡಿದರೆ) (ಆತಂಚನ = ಹೆಪ್ಪು ಹಾಕುವುದು) ಆ ಹಾಲೇ ಹುಳಿಯ ಸಂಬಂಧದಿಂದ ಪರಿಣಾಮ ಹೊಂದಿ ಮೊಸರು ಎಂಬ ಕಾರ್ಯರೂಪವಾಗಿ ಪರಿಣಮಿಸುತ್ತದೆ. ಹೀಗೆ ಹಾಲು ತಾನೇ ಮೊಸರು ಎಂಬ ಕಾರ್ಯವನ್ನು ಉಂಟುಮಾಡುತ್ತದೆಯಾದರೂ, ಹೆಪ್ಪು ಹಾಕುವ ಒಬ್ಬ ಪುರುಷನ ಸಹಾಯವನ್ನು ಅಪೇಕ್ಷಿಸುತ್ತದೆ. ಹೆಪ್ಪು ಹಾಕುವವರು ಇಲ್ಲದಿದ್ದಲ್ಲಿ, ಹಾಲು ಮೊಸರಿನ ರೂಪದಿಂದ ಪರಿಣಮಿಸುವುದಿಲ್ಲ. ಅದರಂತೆ ಪ್ರಧಾನವು ಈ ಪ್ರಪಂಚದ ಆಕಾರದಿಂದ ತಾನೇ ಪರಿಣಮಿಸುತ್ತದೆ. ತಾನೇ ಪ್ರಪಂಚಕ್ಕೆ ಕಾರಣವಾಗುತ್ತದೆ. ಆದರೂ ಜೀವರ ಸಹಾಯವನ್ನು ಅಪೇಕ್ಷಿಸುತ್ತದೆ. ಜೀವರು ತಮ್ಮ ಅದೃಷ್ಟಾದಿ ದ್ವಾರಾ ಪ್ರಪಂಚದ ಸೃಷ್ಟಿಗೆ ಕಾರಣರಾಗುತ್ತಾರೆ ಎಂದು ಈ ಸಾಂಖ್ಯರ ಅಭಿಪ್ರಾಯ.

ಆದರೆ ಈ ಮತವೂ ವಿವೇಕಿಗಳಿಗೆ ಅಂಗೀಕಾರಾರ್ಹವಲ್ಲ. ಸ್ವತಂತ್ರನಾದ ಈಶ್ವರನನ್ನು ಒಪ್ಪಿದರೆ ಮಾತ್ರವೇ ಈ ಪ್ರಪಂಚದ ಉತ್ಪತ್ತಿ ಮುಂತಾದ ಕಾರ್ಯಗಳು ಸಮಂಜಸವಾಗಿ ಕೂಡುತ್ತವೆ. ಹಾಲು-ಹೆಪ್ಪುಗಳಿಗೆ ಸಂಯೋಗವಾಗುವಂತೆ ಜೀವಚೇತನರು ಮತ್ತು ಪ್ರಧಾನಗಳಿಗೆ ಪ್ರಥಮಸಂಬಧವನ್ನುಂಟುಮಾಡಲು ಬೇರೊಬ್ಬ ಕರ್ತನು ಬೇಕು. ಈ ಚೇತನಾ-ಚೇತನ ಸಂಸರ್ಗವೆಂಬ ಆದಿಯ ಕಾರ್ಯವನ್ನು ಜಡವಾದ ಪ್ರಧಾನವು ಮಾಡಲಾರದು. ಕೇವಲ ಅಚೇತನವು ಯಾವ ಕಾರ್ಯವನ್ನೂ ಮಾಡುವುದಿಲ್ಲ, ಮಾಡಲಾರದು ಎಂದು ಸಾಂಖ್ಯರೇ ಒಪ್ಪಿರುತ್ತಾರೆ. ಹಾಗೆ ಕೇವಲ ಜಡವೇ ಈ ಕಾರ್ಯವನ್ನು ಮಾಡುವುದಾದರೆ ಎಲ್ಲ ಕಾರ್ಯವನ್ನೂ ಮಾಡಬೇಕಾದೀತು.

ಈ ಸಿದ್ಧಾಂತ ರೀತಿಯಿಂದ ಅಚೇತನದ ಅನುಗ್ರಹವಿಲ್ಲದೆ ಚೇತನರೂ ಕೂಡ ಸ್ವತಂತ್ರರಾಗಿ ಮೊದಲನೆಯ ಪ್ರಕೃತಿ ಪುರುಷ ಸಂಸರ್ಗವನ್ನುಂಟುಮಾಡಲಾರದು. ಚೇತನಕ್ಕೆ ಕಾರ್ಯವನ್ನು ಮಾಡಲು ಅಚೇತನದ ಅನುಗ್ರಹ, ಅಚೇತನಕ್ಕೆ

ಕಾರ್ಯವನ್ನು ಮಾಡಲು ಚೇತನದ ಅನುಗ್ರಹ ಬೇಕು ಎಂದು ಒಪ್ಪಿದರೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಹುಚ್ಚು ಬಿಡದೆ ಮದುವೆಯಾಗದು, ಮದುವೆಯಾಗದೆ ಹುಚ್ಚು ಬಿಡದು ಎಂಬುದು ಅನ್ಯೋನ್ಯಾಶ್ರಯಕ್ಕೆ ಪ್ರಸಿದ್ಧ ಉದಾಹರಣೆ. ಚೇತನಾಚೇತನ ನಿಯಾಮಕನಾದ ಈಶ್ವರನನ್ನು ಒಪ್ಪದಿದ್ದರೆ ಈ ಜೀವಚೇತನರು ಮತ್ತು ಜಡವಾದ ಅಚೇತನಗಳ ಸಂಪರ್ಕವೇ ಆಗಲಾರದು. ಆದುದರಿಂದ ಸ್ವತಂತ್ರನಾದ ಈಶ್ವರನನ್ನು ಒಪ್ಪದಿರುವ ಈ ನಿರೀಶ್ವರಸಾಂಖ್ಯರ ಮತ ಸರಿಯಲ್ಲ, ವಿವೇಕಿಗಳಿಗೆ ಅಂಗೀಕಾರಾರ್ಹವಲ್ಲ. ಅಲ್ಲದೆ ಇದೇ ಯುಕ್ತಿಯಿಂದ ಸೇಶ್ವರಸಾಂಖ್ಯಮತವೂ ಸರಿಯಲ್ಲವೆಂದು ತಿಳಿದು ಬರುತ್ತದೆ. ಏಕೆಂದರೆ ಸೇಶ್ವರಸಾಂಖ್ಯರು ಈಶ್ವರನನ್ನು ಒಪ್ಪಿದರೂ ಅವನಿಂದ ಸೃಷ್ಟ್ಯಾದಿಗಳನ್ನು ನಡೆಸಲು ಯಾವ ಸಹಕಾರವೂ ದೊರಕುವುದಿಲ್ಲ ಎಂದು ಒಪ್ಪಿರುತ್ತಾರೆ. ಅವನು ಸ್ವತಂತ್ರಕಾರಣನೂ ಅಲ್ಲ. ಅವನಲ್ಲಿ ಸರ್ವಜ್ಞತ್ವ, ಸರ್ವಶಕ್ತಿ ಮುಂತಾದ ಧರ್ಮಗಳಿಲ್ಲ. ಹೀಗಾದರೆ ಈಶ್ವರನನ್ನು ಒಪ್ಪಿದರೂ ಕೂಡ ಸೃಷ್ಟ್ಯಾದಿ ಕಾರ್ಯಗಳಿಗೆ ಜೀವ ಮತ್ತು ಜಡರ ಸಂಯೋಗವಾಗಲು, ಉಪಾಯವಿಲ್ಲದಿದ್ದ ಪ್ರಯುಕ್ತ ಅನ್ಯೋನ್ಯಾಶ್ರಯದೋಷವು ತಪ್ಪುವುದಿಲ್ಲ.

ಈ ಶ್ಲೋಕದಲ್ಲಿ ಆದಿಶಬ್ದವನ್ನು ಕೊಟ್ಟಿದ್ದಾರೆ. ಅದರಿಂದ ಪೃಥವೀ, ಜಲ, ತೇಜಸ್ಸು, ವಾಯು ಎಂಬ ನಾಲ್ಕು ಭೂತಗಳು ಮಾತ್ರವೇ ಪ್ರಪಂಚ. ಇವುಗಳ ಸಂಬಂಧದಿಂದ ದೇಹವು ಏರ್ಪಡುತ್ತದೆ. ಈ ಭೂತಗಳ ಸಂಪರ್ಕವಾದಾಗ, ಕೆಲವು ವಸ್ತುಗಳ ಮಿಶ್ರಣದಿಂದ ಮಧ್ಯದಲ್ಲಿ ಮದಶಕ್ತಿ ಹುಟ್ಟುವಂತೆ ದೇಹದಲ್ಲಿ ಚೈತನ್ಯವು ಹುಟ್ಟುತ್ತದೆ ಇದೇ ಆತ್ಮ. ದೇಹಕ್ಕಿಂತ ಬೇರೆಯಾದ ಆತ್ಮನಿಲ್ಲ ಎಂದು ಹೇಳುವ ಚಾರ್ವಾಕರ ಮತವೂ ಇದರಿಂದ ಖಂಡಿಸಲ್ಪಟ್ಟಂತಾಯಿತು. ಸೃಷ್ಟಿಗೆ ಈಶ್ವರನ ಅಪೇಕ್ಷೆಯಿಲ್ಲದಿದ್ದರೆ ಈ ಸೃಷ್ಟಿಯೇ ಆಗಲಾರದು ಎಂದು ಈ ಹಿಂದೆ ಸಮರ್ಥಿಸಲಾಗಿದೆಯಷ್ಟೆ! ಭಾಟ್ಟರು ಮತ್ತು ಪ್ರಾಭಾಕರರೆಂಬುವರೂ ಈಶ್ವರನನ್ನು ಒಪ್ಪುವುದಿಲ್ಲ. ಅವರಲ್ಲಿ ಸ್ವಲ್ಪ ಒಳಭೇದವಿದ್ದರೂ ಅವರೆಲ್ಲರೂ ನಿರೀಶ್ವರವಾದಿಗಳೇ ಆಗಿದ್ದಾರೆ. ಅವರನ್ನೂ ಇದರಿಂದ ಖಂಡಿಸಿದಂತಾಯಿತು.

**ವಿಗ್ರಹ—**

**ಚೇತನಾಚೇತನಯೋಃ—** ಚೇತನಂ ಚ ಅಚೇತನಂ ಚ ಚೇತನಾಚೇತನೇ ತಯೋಃ ।

**ಅಂಗಾಂಗಿತ್ವಾದಿ—** ಅಂಗಂ ಅಸ್ಯ ಅಸ್ತೀತಿ ಅಂಗಿ, ಅಂಗಂ ಚ ಅಂಗಿ ಚ ಅಂಗಾಂಗಿನೀ, ಅಂಗಾಂಗಿನೋಃ ಭಾವಃ, ಅಂಗಾಂಗಿತ್ವಂ ಅಂಗಾಂಗಿತ್ವಂ ಆದಿ ಯಸ್ಯ ತತ್ ಅಂಗಾಂಗಿತ್ವಾದಿ ತತ್ ।

**ಅನಪೇಕ್ಷಾಯಾಂ—**ಅಪೇಕ್ಷಾಯಾಃ ಅಭಾವಃ ಅನಪೇಕ್ಷಾ, ಈಶಸ್ಯ ಅನಪೇಕ್ಷಾ ಈಶಾನಪೇಕ್ಷಾ ತಸ್ಯಾಂ ಈಶಾನಪೇಕ್ಷಯಾಂ ।

**ಶೋಭನತಾಂ—** ಶೋಭನಸ್ಯ ಭಾವಃ ಶೋಭನತಾ ತಾಂ ।

**ಕ್ರಿಯಾಪದ— ಮನುತೇ** - ಮನುತೇ ಮನ್ವಾತೇ ಮನ್ವತೇ, ಮನುಷೇ ಮನ್ವಾಥೇ ಮನುಧ್ವೇ, ಮನ್ವಹೇ ಮನುಮಹೇ ಮನ್ವೇ ಮನುವಹೇ ಮನ್ಮಹೇ । ಮನು ಅವಬೋಧನೇ ಸಕ ಸೇಟ್, ಆತ್ಮ to consider to esteem ಲಟ್. ಪ್ರಥಮಪುರುಷೇ ಬಹುವಚನ. **ವ್ರಜೇತ್**- ವ್ರಜೇತ್ ವ್ರಜೇತಾಂ ವ್ರಜೇಯುಃ ವ್ರಜೇಃ ವ್ರಜೇತಂ ವ್ರಜೇತ, ವ್ರಜೇಯಂ, ವ್ರಜೇವ, ವ್ರಜೇಮ । ವ್ರಜಗತೌ ಸಕ. ಸೇಟ್. ಪರ to go ವಿಧಿಲಿಜ್ ।

**ಪ್ರಯೋಗ—** (ಕೈಶ್ಚಿತ್)ಸೃಷ್ಟೌ ಚೇತನಾಚೇತನಯೋಃ ಯತ್ ಅಂಗಾಂಗಿತ್ವಾದಿ ಮನ್ಯತೇ, ತೇನ ಈಶಾನಪೇಕ್ಷಯಾಂ ಶೋಭನತಾ ನ ವ್ರಜ್ಯೇತ ।

★ ★ ★

**ಪ್ರಶ್ನೆ**- ದೇವರು ಇದ್ದಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲದ್ದರಿಂದ ದೇವರನ್ನು ಒಪ್ಪಲು ಸಾಧ್ಯವಿಲ್ಲ

**ಉತ್ತರ**- ದೇವರು ಇದ್ದಾನೆ ಎಂಬ ವಿಷಯದಲ್ಲಿ ವೇದವೇ ಪ್ರಮಾಣ, ಆದ್ದರಿಂದ ದೇವರನ್ನು ಒಪ್ಪಲು ಏಕೆ ಸಾಧ್ಯವಿಲ್ಲ?

ಪ್ರಶ್ನೆ- ವೇದವನ್ನು ಪ್ರಮಾಣವೆಂದು ಒಪ್ಪದಿರುವವನನ್ನು ಕುರಿತು ವೇದಪ್ರಮಾಣದಿಂದ ಈಶ್ವರನನ್ನು ಹೇಗೆ ಸಾಧಿಸುತ್ತೀರಿ?

ಉತ್ತರ- ದೇವರನ್ನು ಪ್ರತ್ಯಕ್ಷವಾಗಿ ಕಂಡವರಿದ್ದಾರೆ. ಅವರ ಪ್ರತ್ಯಕ್ಷ ಪ್ರಮಾಣದಿಂದ ದೇವರನ್ನು ಸಾಧಿಸುತ್ತೇವೆ.

ಪ್ರಶ್ನೆ- ದೇವರನ್ನು ನಮ್ಮ ಇಂದ್ರಿಯಗಳಿಂದ ಕಾಣಲು ಸಾಧ್ಯವಿಲ್ಲವೆಂದು ನೀವೇ ಒಪ್ಪಿದ್ದೀರಿ. ಅವನಲ್ಲಿ ಪ್ರಕೃತಿ ಸಂಬಂಧವೇ ಇಲ್ಲದಿರುವುದರಿಂದ ಪ್ರಾಕೃತವಾದ ಯಾವ ಇಂದ್ರಿಯಗಳಿಗೂ ಅವನು ಗೋಚರನಾಗುವುದಿಲ್ಲ. ಇನ್ನೊಬ್ಬರಿಗೆ ದೇವರು ಪ್ರತ್ಯಕ್ಷನಾಗಿದ್ದಾನೆ ಎಂಬ ಮಾತನ್ನು ನಾವು ನಂಬಲು ಸಾಧ್ಯವಿಲ್ಲ. ಏಕೆಂದರೆ, ಇನ್ನೊಬ್ಬನನ್ನು ಆಪ್ತನೆಂದು ತಿಳಿಯಲು ನಮಗೆ ಯಾವ ಪ್ರಮಾಣವೂ ಸರಿಯಾಗಿ ಸಿಗುವುದಿಲ್ಲ.

ಉತ್ತರ- ಅನುಮಾನದಿಂದ ಈಶ್ವರನನ್ನು ಸಾಧಿಸುತ್ತೇವೆ.

ಪ್ರಶ್ನೆ- ನಿಮ್ಮ ಅನುಮಾನದಿಂದ ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನನ್ನು ಸಾಧಿಸುವಾಗ ಅಂತಹ ಮತ್ತೊಬ್ಬ ಈಶ್ವರನನ್ನೇ ದೃಷ್ಟಾಂತವಾಗಿ ಕೊಡಬೇಕಾಗುತ್ತದೆ. ಆದರೆ ಅಂತಹ ಮತ್ತೊಬ್ಬ ಈಶ್ವರನಿಲ್ಲ, ನೀವು ಇಬ್ಬರು ಸರ್ವಜ್ಞರೂ ಸರ್ವಶಕ್ತರೂ ಆದ ದೇವರನ್ನು ಒಪ್ಪಿಲ್ಲ, ಒಪ್ಪಲು ಸಾಧ್ಯವೂ ಇಲ್ಲ. ಹೊಗೆ ಇದ್ದಲ್ಲಿ ಬೆಂಕಿ ಇದೆ ಎಂಬ ಅನುಮಾನಕ್ಕೆ ಅಡಿಗೆಮನೆಯು ದೃಷ್ಟಾಂತವಾಗಿರುತ್ತದೆ. ಬೆಟ್ಟದಲ್ಲಿ ಆ ದೃಷ್ಟಾಂತದಿಂದ ನಾವು ಹೊಗೆಯನ್ನು ಕಂಡು ಬೆಂಕಿಯನ್ನು ತಿಳಿಯುತ್ತೇವೆ. ಇಲ್ಲಿ ಹಾಗಿಲ್ಲ, ಆದ್ದರಿಂದ ಈಶ್ವರನನ್ನು ಅನುಮಾನದಿಂದ ಸಾಧಿಸಲು ಸಾಧ್ಯವಿಲ್ಲ. ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನನ್ನು ಸಾಧಿಸುವಾಗ ಆ ರೀತಿಯ ಸರ್ವಜ್ಞತೆ, ಸರ್ವಶಕ್ತಿಗಳು ಬೇರೆಲ್ಲಿಯೂ ಕಾಣದಿರುವುದರಿಂದ ಈ ವಿಶೇಷಣವೇ ಅಪ್ರಸಿದ್ಧವಾಗುತ್ತದೆ. ಯಾರಿಗೂ ತಿಳಿಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈಶ್ವರನನ್ನು ಸಾಧಿಸಲು ಯಾವ ಪ್ರಮಾಣವೂ ಇಲ್ಲದಿರುವಾಗ ಈಶ್ವರನನ್ನು ಒಪ್ಪದಿರುವವರ ಮತವು ಪ್ರಾಮಾಣಿಕರಿಗೆ ಅಂಗೀಕಾರಾರ್ಹವಲ್ಲವೆಂದು ಹೇಗೆ ಹೇಳುತ್ತೀರಿ?

ಉತ್ತರ- ನಾವು ಅನುಮಾನದಿಂದಲೇ ಈಶ್ವರನನ್ನು ಸಾಧಿಸುತ್ತೇವೆ. ಆದರೆ ಆ ಅನುಮಾನಕ್ಕೆ ನೀವು ಹಿಂದೆ ಹೇಳಿದಂತೆ ಸರ್ವಜ್ಞ ಮತ್ತು ಸರ್ವಶಕ್ತನಾದ ಮತ್ತೊಬ್ಬ ಈಶ್ವರನು ದೃಷ್ಟಾಂತವಾಗಿ ಬೇಕಿಲ್ಲ. ಆ ಅನುಮಾನದ ಪ್ರಯೋಗವನ್ನೀಗ ಕೇಳಿರಿ.

**ಸರ್ವವಿನ್ನಿರ್ಮಿತಂ ಸರ್ವಂ ಕಾದಾಚಿತ್ಕತ್ವಹೇತುತಃ ।**
**ನ ಯದೇವಂ ನೋ ತದೇವಂ ಯಥಾತ್ಮೇತೀಶ್ವರಾನುಮಾ ॥ 12 ॥**

ಪದಚ್ಛೇದ— ಸರ್ವವಿನ್ನಿರ್ಮಿತಂ, ಸರ್ವಂ, ಕಾದಾಚಿತ್ಕತ್ವಹೇತುತಃ, ನ, ಯತ್, ಏವಂ, ನೋ, ತತ್, ಏವಂ, ಯಥಾ, ಆತ್ಮಾ, ಇತಿ, ಈಶ್ವರಾನುಮಾ ।

ಅನ್ವಯ— ಸರ್ವಂ, ಸರ್ವವಿನ್ನಿರ್ಮಿತಂ, ಕಾದಾಚಿತ್ಕತ್ವಹೇತುತಃ, ಯತ್, ಏವಂ, ನ, ತತ್, ಏವಂ, ನೋ, ಆತ್ಮಾ, ಯಥಾ, ಇತಿ, ಈಶ್ವರಾನುಮಾ ।

ಅನ್ವಯಾರ್ಥ—

**ಸರ್ವಂ** = ಈ ಧರೆ, ಸಾಗರ, ಗಿರಿ ಮುಂತಾದ ಎಲ್ಲಾ ಕಾರ್ಯ ಸಮೂಹವೂ,

**ಸರ್ವವಿನ್ನಿರ್ಮಿತಂ** = ಸರ್ವಜ್ಞನಾದ ಒಬ್ಬನಿಂದ ರಚಿಸಲ್ಪಟ್ಟದ್ದು,

**ಕಾದಾಚಿತ್ಕತ್ವಹೇತುತಃ** = ಹಿಂದೆ ಇಲ್ಲದೆ ಇದ್ದು ಉಂಟಾಗುವ ಕಾರಣದಿಂದ,

**ಯತ್ ಏವಂ ನ** = ಯಾವುದು ಸರ್ವಜ್ಞನಿಂದ ಹೀಗೆ ನಿರ್ಮಿತವಲ್ಲವೋ,

**ತತ್ ಏವಂ ನೋ** = ಅದು ಅಂತಹದು (ಕೆಲವು ಕಾಲ ಮಾತ್ರ ಇರುವುದು) ಅಲ್ಲ.

**ಆತ್ಮಾ ಯಥಾ** = ಜೀವಾತ್ಮನಂತೆ,

**ಇತಿ** = ಹೀಗೆ

**ಈಶ್ವರಾನುಮಾ** = ಸ್ವತಂತ್ರನಾದ ಕರ್ತನು ಇದ್ದಾನೆಂಬುದಕ್ಕೆ ಯುಕ್ತಿ. ಯಾವುದು ಹಿಂದೆ ಇಲ್ಲದೆ ಆಮೇಲೂ ಇಲ್ಲದೆ ಮಧ್ಯಕಾಲದಲ್ಲಿ ಹುಟ್ಟುತ್ತದೆಯೋ ಅದೆಲ್ಲಾ ಅನಿತ್ಯ. ಅನಿತ್ಯವೆಲ್ಲವೂ (ಅನಿತ್ಯವಾದ ಈ ಜಗತ್ತೆಲ್ಲವೂ) ಸರ್ವಜ್ಞನಾದ ಕರ್ತನಿಂದ ಹುಟ್ಟಿದ್ದು, ಯಾವುದು ಜೀವಾತ್ಮನಂತೆ. ಸ್ವರೂಪದಿಂದ ನಿತ್ಯವೋ ಅದು ಯಾರಿಂದಲೂ ಸೃಷ್ಟಿ ಹೊಂದಿಲ್ಲ ಎಂಬ ಈ ಅನುಮಾನವು ಸ್ವತಂತ್ರಕರ್ತನೊಬ್ಬನು ಇದ್ದಾನೆಂಬುದಕ್ಕೆ ಯುಕ್ತಿ.

**ತಾತ್ಪರ್ಯ**— ಈಶ್ವರನು ಇಲ್ಲವೆಂದು ಹೇಳಿದುದು ಸರಿಯಲ್ಲ. ವ್ಯತಿರೇಕ್ಯನುಮಾನದಿಂದ ಈಶ್ವರನನ್ನು ಸಾಧಿಸಲು ಸಾಧ್ಯವಿದೆ. ದೃಷ್ಟಾಂತವನ್ನೂ ಕೊಡಲು ಸಾಧ್ಯವಿದೆ. ಅನಿತ್ಯವಾಗಿರುವುದರಿಂದ ಸಮಸ್ತ ಕಾರ್ಯಸಮೂಹವೂ ಸರ್ವಜ್ಞನಾದ ಪರಮಾತ್ಮನಿಂದ ನಿರ್ಮಿಸಲ್ಪಟ್ಟಿದೆ. ಯಾವ ವಸ್ತುವು ಸರ್ವಜ್ಞನಾದ ಪರಮಾತ್ಮನಿಂದ ನಿರ್ಮಿಸಲ್ಪಟ್ಟದ್ದಲ್ಲವೋ ಅದು ಅನಿತ್ಯವಲ್ಲ, ಜೀವನು ಇದಕ್ಕೆ ದೃಷ್ಟಾಂತ. ಜೀವನು ಸರ್ವಜ್ಞನಾದ ಸರ್ವಶಕ್ತನಾದ ಈಶ್ವರನಿಂದಲೂ ನಿರ್ಮಿಸ-ಲ್ಪಟ್ಟವನಲ್ಲ, ಅನಿತ್ಯವೂ ಅಲ್ಲ, ಅದಕ್ಕೆ ವಿರುದ್ಧವಾಗಿ ಸರ್ವಪ್ರಪಂಚವೂ ಅನಿತ್ಯವಾದುದರಿಂದ ಸರ್ವಜ್ಞನೂ ಸರ್ವಕರ್ತನೂ ಆದ ಪರಮಾತ್ಮನನ್ನು ಒಪ್ಪಲೇಬೇಕಾಗಿದೆ. ಈ ಪ್ರಪಂಚವನ್ನು ಸೃಷ್ಟಿಮಾಡುವುದು ಅವನ ಮುಖ್ಯ ಕಾರ್ಯ. ಇದು ವ್ಯತಿರೇಕ್ಯನುಮಾನ. 'ಸಾಧಿಸಲ್ಪಡಬೇಕಾಗಿರುವ ವಸ್ತುವು ಇಲ್ಲದೆ ಇದ್ದ ಸ್ಥಳದಲ್ಲಿ ಸಾಧಿಸಲು ಬೇಕಾಗಿರುವ ಹೇತುವೂ ಇಲ್ಲವೆಂದು ತೋರಿಸುವುದು ವ್ಯತಿರೇಕ್ಯನುಮಾನವು'. ಉದಾ-ಧೂಮದಿಂದ ಸಾಧಿಸಬೇಕಾದ ಅಗ್ನಿಯು ನೀರು ತುಂಬಿದ ಮಡುವಿನಲ್ಲಿಲ್ಲ. ಆದ್ದರಿಂದ ಸಾಧಕವಾದ ಧೂಮವೂ ಇಲ್ಲ, ಬೆಟ್ಟದಲ್ಲಿ ಧೂಮದ ಅಭಾವವಿಲ್ಲವಾದುದರಿಂದ ಬೆಂಕಿಯ ಅಭಾವವೂ ಇಲ್ಲ. ಬೆಂಕಿಯೇ ಇದೆಯೆಂದು ತಿಳಿಯಬಹುದು. ಅದರಂತೆ ಇಲ್ಲಿಯೂ ಕೂಡ ಸರ್ವಜ್ಞನಿಂದಲೂ ನಿರ್ಮಿತವಲ್ಲದ ಜೀವನಲ್ಲಿ 'ಕಾದಾಚಿತ್ಕತ್ವ'. ಹಿಂದೆ ಇಲ್ಲದೆ ಇದ್ದು ಆಗುವಿಕೆ (ಅಭೂತ್ವಾಭಾವಿತ್ವ) ಎಂಬುದೂ ಇಲ್ಲ, ಅವನು ಅನಿತ್ಯನಲ್ಲ, ಗಿರಿಸಾಗರಾದಿ ಈ ಪ್ರಪಂಚವಾದರೋ 'ಕಾದಾಚಿತ್ಕ' ಎಂದೋ ಒಂದು ಸಮಯದಲ್ಲಿ ಮಾತ್ರ ಇರುವುದು (ಅನಿತ್ಯ) ಆದುದರಿಂದ ಸರ್ವಜ್ಞನಿಂದ ನಿರ್ಮಿತವಲ್ಲವೆಂದು ಅಲ್ಲ ಎಂಬ ವ್ಯತಿರೇಕ ದೃಷ್ಟಾಂತದಿಂದ ಸರ್ವಜ್ಞ, ಸರ್ವಕರ್ತನಾದ ಈಶ್ವರನು ಇದ್ದಾನೆಂದು ನಿರೀಶ್ವರವಾದಿಯೂ ಒಪ್ಪಿಕೊಳ್ಳಬೇಕಾಗುತ್ತದೆ. (ವಾಸ್ತವವಾಗಿ ಇದು ಕೇವಲ ವ್ಯತಿರೇಕಿ ಅನುಮಾನವು. ಇದರ ವಿವರಣೆಯನ್ನು ಮುಂದೆ ಕೊಡಲಾಗುತ್ತದೆ).

**ವಿಗ್ರಹ ಮತ್ತು ಕೋಶ**—

**ಸರ್ವವಿನ್ನಿರ್ಮಿತಂ**— ಸರ್ವಂ ವೇತ್ತೀತಿ ಸರ್ವವಿತ್, ಸರ್ವವಿದಾ ನಿರ್ಮಿತಂ ಸರ್ವವಿನ್ನಿರ್ಮಿತಂ।

**ಕಾದಾಚಿತ್‌ಕತ್ವಹೇತುತಃ**— ಕದಾಚಿತ್ ಭವಂ ಕಾದಾಚಿತ್ಕಂ ತಸ್ಯ ಭಾವಃ ಕಾದಾಚಿತ್ಕತ್ವಂ, ಕಾದಾಚಿತ್ಕತ್ವಂ ಇತಿ ಹೇತುಃ, ಕಾದಾಚಿತ್ಕತ್ವಹೇತುಃ, ಕಾದಾಚಿತ್ಕತ್ವಹೇತೋಃ ಇತಿ ಕಾದಾಚಿತ್ಕತ್ವಹೇತುತಃ।

**ಈಶ್ವರಾನುಮಾ**— ಈಶ್ವರಸ್ಯ ಅನುಮಾ ಈಶ್ವರಾನುಮಾ. 'ನೋ' ಎಂಬುದು ಇಲ್ಲ ಅಲ್ಲ ಎಂಬ ಅರ್ಥದ ಅವ್ಯಯ. 'ಅಭಾವೇನಹ್ಯನೋನಾಪಿ' ಅಮರ।

**ಪ್ರಯೋಗ**— ಕಾದಾಚಿತ್ಕತ್ವಹೇತುತಃ ಸರ್ವೇಣ ಸರ್ವವಿನ್ನಿರ್ಮಿತೇನ ಭೂಯತೇ, ಯೇನ ಏವಂ ನ ಭೂಯತೇ, ತೇನ ಏವಂ ನೋ ಭೂಯತೇ, ಆತ್ಮನಾ ಯಥಾ ಭೂಯತೇ, ತಥಾ ಈಶ್ವರಾನುಮಯಾ ಭೂಯತೇ (ಭಾವೇ)।

**ವಿಶೇಷಾಂಶ**— ಪೃಥಿವಿಯು ಜಲಾದಿಗಳಿಗಿಂತ ಬೇರೆ, ಗಂಧವಿರುವುದರಿಂದ ಎಂಬಲ್ಲಿ, ಎಲ್ಲಾ ಪೃಥಿವಿಯು ಜಲಾದಿಗಳಿಗಿಂತ ಬೇರೆ ಹೌದೇ ಅಲ್ಲವೇ ಎಂಬ ಸಂದೇಹಕ್ಕೆ ವಿಷಯವಾಗಿ ಪಕ್ಷವಾಗಿರುವುದರಿಂದ, ಗಂಧವುಳ್ಳದ್ದು ಜಲಾದಿ ಭಿನ್ನ ಎಂದು ಹೇಳಿದಾಗ ದೃಷ್ಟಾಂತವು ಸಿಗುವುದಿಲ್ಲ. ಆಗ ಎಲ್ಲಿ ಜಲಾದಿಭೇದವಿಲ್ಲವೋ (ಜಲಾದಿಗಳಲ್ಲಿ) ಅಲ್ಲಿ ಗಂಧವಿಲ್ಲವೆಂದು ವ್ಯಾಪ್ತಿಯನ್ನು ಹೇಳಿ ಅದಕ್ಕೆ ದೃಷ್ಟಾಂತವಾಗಿ ಜಲಾದಿಗಳನ್ನೇ ಕೊಡಬೇಕಾಗುತ್ತದೆ. ಅದರಂತೆ ಇಲ್ಲಿಯೂ ಹೇಳಬೇಕು. ವ್ಯಾಪ್ತಿಯನ್ನು ಹಿಂದೆಯೇ ತಿಳಿಸಲಾಗಿದೆ.

★ ★ ★

**ಅವತಾರಿಕಾ**— ವೇದವನ್ನು ನಾವು ಪ್ರಮಾಣವೆಂದು ಒಪ್ಪುವುದಿಲ್ಲ. ಆದ್ದರಿಂದ ವೇದದಿಂದ ಈಶ್ವರನನ್ನು ಸಾಧಿಸಲು ಬರುವುದಿಲ್ಲ ಎಂದು ಹಿಂದೆ ಪ್ರತಿವಾದಿಗಳು ಆಕ್ಷೇಪ ಮಾಡಿದ್ದರು. ಆಗ ಅದನ್ನು ಒಪ್ಪಿಕೊಂಡು ಕೇವಲ ವ್ಯತಿರೇಕಿ ಅನುಮಾನದಿಂದ ಈಶ್ವರನನ್ನು ಸಾಧಿಸಿದ್ದಾಯಿತು. ಈಗ ವೇದಪ್ರಾಮಾಣ್ಯವನ್ನು ಒಪ್ಪದೆ ಕೇವಲ ಅನುಮಾನದಿಂದ ಈಶ್ವರನನ್ನು ಸಾಧಿಸಲು ಹೊರಟರೆ, ಈಶ್ವರನನ್ನೇ ಏಕೆ ಯಾವ ಪ್ರಮೇಯವನ್ನೇ ಆಗಲೀ ಕೇವಲ ಅನುಮಾನದಿಂದ ಸಾಧಿಸಲು ಹೊರಟರೆ ಅನೇಕ ಅತಿಪ್ರಸಂಗಗಳು (ತೊಂದರೆಗಳು) ಬರುತ್ತವೆ ಎಂದು ಹೇಳುತ್ತಾರೆ.

**ಬಲಾಯ ಸರ್ವಾನುಮಾನಾಂ ವೇದಾಃ ಸ್ಯುರ್ಯೈರಪಾಲಿತಾಃ ।**
**ಕಾಮಾದೇತಾಃ ಪ್ರವರ್ತಂತೇ ಕಾಮಿನ್ಯ ಇವ ಭರ್ತೃಭಿಃ ॥ 13 ॥**

**ಪದಚ್ಛೇದ**— ಬಲಾಯ, ಸರ್ವಾನುಮಾನಾಂ, ವೇದಾಃ, ಸ್ಯುಃ, ಯೈಃ, ಅಪಾಲಿತಾಃ, ಕಾಮಾತ್, ಏತಾಃ, ಪ್ರವರ್ತಂತೇ, ಕಾಮಿನ್ಯಃ, ಇವ, ಭರ್ತೃಭಿಃ ।

**ಅನ್ವಯ**— ವೇದಾಃ, ಸರ್ವಾನುಮಾನಾಂ, ಬಲಾಯ, ಸ್ಯುಃ, ಯೈಃ, ಅಪಾಲಿತಾಃ, ಏತಾಃ, ಭರ್ತೃಭಿಃ, ಅಪಾಲಿತಾಃ, ಕಾಮಿನ್ಯಃ, ಇವ, ಕಾಮಾತ್, ಪ್ರವರ್ತಂತೇ ।

**ಅನ್ವಯಾರ್ಥ**—

**ವೇದಾಃ** = ವೇದಗಳು,
**ಸರ್ವಾನುಮಾನಾಂ** = ಎಲ್ಲಾ ಅನುಮಾನಗಳಿಗೆ,
**ಬಲಾಯ** = ಪ್ರಾಬಲ್ಯಕ್ಕೋಸ್ಕರ,
**ಸ್ಯುಃ** = ಇದ್ದೇ ಇರಬೇಕು.
**ಯೈಃ** = ಯಾವ ವೇದಗಳಿಂದ,
**ಅಪಾಲಿತಾಃ** = ಸಹಾಯ ಹೊಂದದಿರುವ, (ಅನುಗ್ರಹಿಸಲ್ಪಡದಿರುವ, ರಕ್ಷಿಸಲ್ಪಡದಿರುವ)
ಏತಾಃ = ಈ ಅನುಮಾನಗಳು,
**ಭರ್ತೃಭಿಃ** = ಗಂಡಂದಿರಿಂದ,
**ಅಪಾಲಿತಾಃ** = ರಕ್ಷಿಸಲ್ಪಡದಿರುವ,
**ಕಾಮಿನ್ಯಃ ಇವ** = ಹೆಂಗಸರಂತೆ (ವ್ಯಭಿಚಾರಿಣಿ ಸ್ತ್ರೀಯರಂತೆ),
**ಕಾಮಾತ್** = ಆಯಾ ವಾದಿಗಳ ಇಚ್ಛಾನುಸಾರ,
**ಪ್ರವರ್ತಂತೇ** = ಪ್ರವರ್ತಿಸುತ್ತವೆ.

**ತಾತ್ಪರ್ಯ**—ಕೇವಲ ಯುಕ್ತಿಗಳಿಂದ ಈಶ್ವರನನ್ನು ಸಾಧಿಸಲು ಹೊರಡಬಾರದು. ಯುಕ್ತಿಗಳಿಗೆ ವೇದಗಳ ಬೆಂಬಲವು ಬೇಕು. ಅನುಮಾನದಿಂದ ಸಾಧಿಸಲ್ಪಡಬೇಕಾದ ಅತೀಂದ್ರಿಯ ಪ್ರಮೇಯಗಳೆಲ್ಲವೂ ವೇದಗಳಿಗ ವಿರುದ್ಧವಾಗಿಲ್ಲದಿದ್ದರೆ ಮಾತ್ರ ಮತ್ತು ವೇದಗಳಿಗೆ ಸಮ್ಮತವಾಗಿದ್ದರೆ ಮಾತ್ರ ಅವು ನಿರ್ದೋಷವಾಗಿರುತ್ತವೆ ಎಂದು ಅರಿಯಬೇಕು. ಅತೀಂದ್ರಿಯವಾದ ಧರ್ಮಾಧರ್ಮಗಳೇ ಮೊದಲಾದ ಪ್ರಮೇಯಗಳ ವಿಷಯದಲ್ಲಿ ಅಪೌರುಷೇಯ-ವಾದ ವೇದಗಳೇ ಪ್ರಮಾಣ ಗಳೆಂದು ಅಂಗೀಕರಿಸಬೇಕು. ಹಾಗಿಲ್ಲದಿದ್ದರೆ ವೇದಾನುಕೂಲ್ಯವಿಲ್ಲದ ಅನುಮಾನಗಳು ಆಯಾ ವಾದಿ-ಪ್ರತಿವಾದಿಗಳ ಇಚ್ಛಾನುಸಾರವಾಗಿ ನಿರೂಪಿತವಾಗುವ ಸಂದರ್ಭವಿರುತ್ತದೆ. ಗಂಡಂದಿರ ಅಂಕೆಗೆ ಒಳ-ಪಡದೆ ತಮ್ಮ ಇಚ್ಛೆಯಂತೆ ನಡೆಯುವ ಸ್ವೈರಿಣಿಯರಂತೆ ಇಂತಹ ಯುಕ್ತಿಗಳು ಪ್ರಮೇಯವನ್ನು ನಿರ್ಧರಿಸಲು ಸಹಾಯಕವಾಗುವುದಿಲ್ಲ.

**ಶ್ರುತಿಸಾಹಾಯ್ಯರಹಿತಮನುಮಾನಂ ನ ಕುತ್ರಚಿತ್ ।**

**ನಿಶ್ಚಯಾತ್ ಸಾಧಯೇದರ್ಥಂ ಪ್ರಮಾಣಾಂತರಮೇವ ಚ ॥**

ಎಂಬ ಪ್ರಮಾಣಾನುಸಾರವಾಗಿ ವೇದಪ್ರಮಾಣಬಲದಿಂದಲೇ ಅನುಮಾನಗಳು ಪ್ರಮಾಣಗಳೆನಿಸುತ್ತವೆ ಎಂದು ತಿಳಿದು ಬರುತ್ತದೆ.

**ವಿಗ್ರಹ—**

**ಸರ್ವಾನುಮಾನಾಂ—** ಸರ್ವಾಶ್ಚ ತಾಃ ಅನುಮಾಶ್ಚ ಸರ್ವಾನುಮಾಃ, ತಾಸಾಂ ।

**ಅಪಾಲಿತಾಃ—** ನ ಪಾಲಿತಾಃ, ಅಪಾಲಿತಾಃ ।

**ಕ್ರಿಯಾಪದ— ಸ್ಯುಃ** - ಸ್ಯಾತ್ ಸ್ಯಾತಾಂ ಸ್ಯುಃ ಇತ್ಯಾದಿ. ಅಸ ಭುವಿ ವಿಧಿಲಿಙ್ । **ಪ್ರವರ್ತಂತೇ** - ಪ್ರ+ವರ್ತಂತೇ, ವರ್ತತೇ ವರ್ತೇತೇ ವರ್ತಂತೇ, ಇತ್ಯಾದಿ, ವೃತು ವರ್ತನೇ ಲಟ್ ।

**ಪ್ರಯೋಗ—** ವೇದೈಃ ಸರ್ವಾನುಮಾನಾಂ ಬಲಾಯ ಭೂಯೇತ, ಯೈಃ ಅಪಾಲಿತಾಭಿಃ ಏತಾಭಿಃ ಭರ್ತೃಭಿರ ಪಾಲಿತಾಭಿಃ ಕಾಮಿನೀಭಿರಿವ ಕಾಮಾತ್ ಪ್ರವರ್ತ್ಯತೇ ।

★ ★ ★

## ಭಾಸ್ಕರನ ಪರಿಣಾಮವಾದದ ಖಂಡನೆ

**ಅವತಾರಿಕಾ—** ಭಾಸ್ಕರ ಮೊದಲಾದ ಕೆಲವು ವಾದಿಗಳು ಪರಬ್ರಹ್ಮವೇ ಜಗತ್ತಿನ ಆಕಾರದಿಂದ ಪರಿಣಾಮ ಹೊಂದುತ್ತದೆ ಎಂದು ಹೇಳುತ್ತಾರೆ. ಇಲ್ಲಿ ಅವರ ಮತವನ್ನು ನಿರಾಕರಿಸುತ್ತಾರೆ.

**ಕಾರಣಂ ಪರಿಣಾಮಿ ಸ್ಯಾದ್ ಬ್ರಹ್ಮ ನೋ ಚೇತನತ್ವತಃ ।**

**ನ ಯದಿತ್ಥಂ ನೋ ತದಿತ್ಥಂ ಯಥಾ ಕ್ಷೀರಪುರಸ್ಸರಮ್ ॥ 14 ॥**

**ಪದಚ್ಛೇದ—** ಕಾರಣಂ, ಪರಿಣಾಮಿ, ಸ್ಯಾತ್, ಬ್ರಹ್ಮ, ನೋ, ಚೇತನತ್ವತಃ, ನ, ಯತ್, ಇತ್ಥಂ ನೋ, ತತ್, ಇತ್ಥಂ, ಯಥಾ, ಕ್ಷೀರಪುರಸ್ಸರಂ ।

**ಅನ್ವಯ—** ಬ್ರಹ್ಮ, ಪರಿಣಾಮಿ, ಕಾರಣಂ, ನೋ, ಸ್ಯಾತ್, ಚೇತನತ್ವತಃ, ಯತ್, ಇತ್ಥಂ, ನ, ತತ್, ಇತ್ಥಂ, ನೋ, ಯಥಾ, ಕ್ಷೀರಪುರಸ್ಸರಂ ।

**ಅನ್ವಯಾರ್ಥ—**

ಬ್ರಹ್ಮ = ಪರಬ್ರಹ್ಮವು,

**ಪರಿಣಾಮಿಕಾರಣಂ** = ವಿಕಾರ ಹೊಂದುವ ಕಾರಣವು,

**ನೋ ಸ್ಯಾತ್** = ಆಗಲಾರದು,

**ಚೇತನತ್ವತಃ** = ಚೇತನತ್ವವಿರುವುದರಿಂದ (ಚೇತನವಾಗಿರುವುದರಿಂದ),

**ಯತ್** = ಯಾವ ವಸ್ತುವು,

ಇತ್ಥಂ = ಪರಿಣಾಮಿ ಕಾರಣವು ಆಗುವುದಿಲ್ಲವೆಂದು,

ನ = ಅಲ್ಲವೋ,

**ತತ್** = ಆ ವಸ್ತುವು,

ಇತ್ಥಂ = ಚೇತನತ್ವವುಳ್ಳದ್ದೆಂದು,

**ನೋ** = ಆಗುವುದಿಲ್ಲ,

**ಯಥಾ** = ಹೇಗೆ,

**ಕ್ಷೀರಪುರಸ್ಸರಂ** = ಹಾಲು ಮುಂತಾದವುಗಳೋ (ಹಾಗೆ).

**ತಾತ್ಪರ್ಯ**— ಜಗತ್ತಿನ ಸೃಷ್ಟ್ಯಾದಿಗಳಿಗೆ ಸ್ವತಂತ್ರನಾದ ಈಶ್ವರನೇ ಕಾರಣನೆಂದು ಭಾಸ್ಕರನೇ ಮೊದಲಾದ ಕೆಲವು ಪರಿಣಾಮಾದ್ವೈತವಾದಿಗಳು ಒಪ್ಪುತ್ತಾರೆ. ಆದರೆ ಬ್ರಹ್ಮವಸ್ತುವೊಂದೇ ಸತ್ಯವೆಂದೂ, ಬ್ರಹ್ಮನಿಗಿಂತ ಬೇರೆಯಾದ ವಸ್ತುವೇ ಇಲ್ಲವೆಂದೂ, ಬ್ರಹ್ಮನೇ ವಿಕಾರ ಹೊಂದಿ ಜಗತ್ತಿನ ಆಕಾರದಿಂದ ಪರಿಣಾಮ ಹೊಂದಿ ಸೃಷ್ಟಿಯಾಯಿತು ಎಂಬ ವ್ಯವಹಾರಕ್ಕೆ ಕಾರಣವಾಗುತ್ತದೆ ಎಂದೂ ಅವರ ಮತ. ಈ ಸಿದ್ಧಾಂತವು ಸರಿಯಲ್ಲ. ಏಕೆಂದರೆ ''ಬ್ರಹ್ಮ ವಸ್ತುವು ವಿಕಾರ ಹೊಂದಿ ಕಾರಣವಾಗುವುದಿಲ್ಲ. ಏಕೆಂದರೆ ಅದು ಚೇತನವಾಗಿದೆ'' ಎಂಬ ಅನುಮಾನಕ್ಕೆ ವಿರೋಧ ಬರುವುದರಿಂದ ಬ್ರಹ್ಮವಸ್ತುವು ಜಗತ್ತಿಗೆ ಉಪಾದಾನ ಕಾರಣವಲ್ಲ. ಯಾವ ವಸ್ತುವು ವಿಕಾರ ಹೊಂದುವುದರ ಮೂಲಕ ಕಾರಣವಾಗುತ್ತದೆಯೋ ಅದು ಅಚೇತನ ವಸ್ತುವೇ ಆಗಿರಬೇಕು. ಹಾಲು ವಿಕಾರ ಹೊಂದಿ ಮೊಸರಾಗುತ್ತದೆ. ಆ ಹಾಲು ಅಚೇತನವೂ ಆಗಿದೆ. ಬ್ರಹ್ಮನು ಹಾಲಿನಂತೆ ಅಚೇತನವಲ್ಲದ್ದರಿಂದ ಪರಿಣಾಮಿ ಕಾರಣವೂ ಅಲ್ಲ. ಬ್ರಹ್ಮವು ಪರಿಣಾಮಿಕಾರಣವೆಂದೇ ಒಪ್ಪುವುದಾದರೆ ಬ್ರಹ್ಮವನ್ನು ಅಚೇತನವೆಂದೇ ಒಪ್ಪಿಕೊಳ್ಳಬೇಕಾದೀತು. ಎಲ್ಲಾ ಕಾರ್ಯಗಳಿಗೂ ಬ್ರಹ್ಮವೇ ಕಾರಣವೆಂದು ನಾವೂ ಒಪ್ಪುತ್ತೇವೆ. ಆದರೆ ಪರಿಣಾಮಿಕಾರಣವೆಂದು ಒಪ್ಪುವುದಿಲ್ಲ. ಚೇತನವಸ್ತುವು ನಿತ್ಯವೆಂದೂ ನಿರ್ವಿಕಾರವೆಂದೂ ವೇದಾದಿಗಳು ಸಾರುತ್ತವೆ. ಬ್ರಹ್ಮವೂ ಚೇತನವೇ ಆದುದರಿಂದ ಅದೇ ಜಗತ್ತಿಗೆ ಪರಿಣಾಮಿ ಕಾರಣವಾದರೆ ಜಗತ್ತು ಸತ್ಯವೆಂದೇ ಹೇಳ ಬೇಕಾಗುತ್ತದೆ. ಜಗತ್ತು ಸುಳ್ಳೆಂದು ಹೇಳುವುದಾದರೆ ಬ್ರಹ್ಮವೂ ಸುಳ್ಳೆಂದೇ ಹೇಳಬೇಕಾಗುತ್ತದೆ. ದೋಸೆಯು ಸುಳ್ಳಾದರೆ ಅದಕ್ಕೆ ವಿಕಾರಿ ಕಾರಣವಾದ ಅಕ್ಕಿಹಿಟ್ಟು ಸುಳ್ಳಲ್ಲವೇ! (ಈ ಮತವನ್ನು ಇತರ ಅದ್ವೈತ ಮತಾವಲಂಬಿಗಳೂ ಹೆಚ್ಚಾಗಿ ಅನುಮೋದಿಸುವುದಿಲ್ಲ). ಇಲ್ಲಿ 1) ''ಬ್ರಹ್ಮ ಪರಿಣಾಮಿ ಕಾರಣಂ ನ ಭವತಿ'' ಎಂದು ಪ್ರತಿಜ್ಞೆ, 2) ''ಚೇತನತ್ವಾತ್'' ಎಂದು ಹೇತುವು, 3) ಯತ್ ಪರಿಣಾಮಿಕಾರಣಂ ನೇತಿ ನ, ಅರ್ಥಾತ್ ಪರಿಣಾಮಿಕಾರಣಂ, ತತ್ ಚೇತನಂ ನ, ''ಯಥಾ ಕ್ಷೀರಾದಿಕಂ'' ಎಂದು ಉದಾಹರಣೆಯು. 4) ''ತಥಾ ಚ ನೇದಮಚೇತನಂ'' ಎಂದು ಉಪನಯ, 5) ''ತಸ್ಮಾತ್ ನ ಪರಿಣಾಮಿ ಕಾರಣಂ'' ಎಂದು ನಿಗಮನವು. ಇವೇ ಇಲ್ಲಿ ಪಂಚಾವಯವಗಳು. 1) ಬ್ರಹ್ಮವು ಪರಿಣಾಮಿ ಕಾರಣವಾಗುವುದಿಲ್ಲ. 2) ಚೇತನವಾಗಿರುವುದರಿಂದ, 3) ಯಾವುದು ಪರಿಣಾಮಿಕಾರಣವಲ್ಲವೆಂದಲ್ಲವೂ (ಪರಿಣಾಮಿ-ಕಾರಣವೋ) ಅದು ಚೇತನವಲ್ಲ. ಉದಾಹರಣೆಗೆ ಹಾಲು ಮುಂತಾದ್ದು. 4) ಬ್ರಹ್ಮವು ಚೇತನವಲ್ಲವೆಂದಲ್ಲ (ಅಂದರೆ ಚೇತನವೇ ಆಗಿದೆ). 5) ಆದ್ದರಿಂದ ಬ್ರಹ್ಮವು ಪರಿಣಾಮಿಕಾರಣವಲ್ಲ ಎಂದು ಈ ಐದು ಅವಯವವಾಕ್ಯಗಳ ಅರ್ಥವು. ಇಲ್ಲಿ ಪ್ರತಿಜ್ಞೆಯಲ್ಲಿ ಬ್ರಹ್ಮವು ಕಾರಣವಲ್ಲ ಎಂದು ಹೇಳಿದರೆ ಬ್ರಹ್ಮವನ್ನು ಸರ್ವಕಾರಣವೆಂದು ಹೇಳುವ ಸಿದ್ಧಾಂತಕ್ಕೆ ವಿರೋಧ ಬರುತ್ತದೆ. ಆದ್ದರಿಂದ ಬ್ರಹ್ಮವು ಪರಿಣಾಮಿಕಾರಣವಲ್ಲ ಎಂದು ಪ್ರತಿಜ್ಞೆ ಮಾಡಿರುತ್ತಾರೆ. ಇದು ವೇದದಿಂದ ಅನುಗ್ರಹೀತವಾದ ಅನುಮಾನವು. ಆದುದರಿಂದ ಇದು ನಿರ್ದೋಷವೆಂದು ತಿಳಿಯಬೇಕು.

ವಿಗ್ರಹ—

**ಪರಿಣಾಮಿ**— ಪರಿಣಾಮಃ ಅಸ್ಯ ಅಸ್ತೀತಿ ಪರಿಣಾಮಿ ।

**ಚೇತನತ್ವತಃ**— ಚೇತನಸ್ಯ ಭಾವಃ ಚೇತನತ್ವಂ, ಚೇತನತ್ವಾತ್ ಇತಿ ಚೇತನತ್ವತಃ ।

**ಕ್ಷೀರಪುರಸ್ಸರಂ**— ಕ್ಷೀರಂ ಪುರಸ್ಸರಂ ಯಸ್ಯ ತತ್ ಕ್ಷೀರಪುರಸ್ಸರಂ ।

**ಕ್ರಿಯಾಪದ**— **ಸ್ಯಾತ್** ಇದರ ರೂಪಗಳು ಹಿಂದೆಯೇ ಬಂದಿವೆ.

**ಪ್ರಯೋಗ**— ಬ್ರಹ್ಮಣಾ ಪರಿಣಾಮಿಕಾರಣೇನ ನೋ ಭೂಯತೇ ಚೇತನತ್ವತಃ, ಯೇನ ಇತ್ಥಂ (ಪರಿಣಾಮಿಕಾರಣ ಭಿನ್ನೇನ) ನ ಭೂಯತೇ ತೇನ ಇತ್ಥಂ (ಚೇತನೇನ) ನೋ ಭೂಯತೇ ಯಥಾ ಕ್ಷೀರಪುರಸ್ಸರೇಣ ।

★ ★ ★

## ನಾರಾಯಣನೇ ಸರ್ವೋತ್ತಮ

**ಅವತಾರಿಕಾ**— ನಾರಾಯಣನೆಂಬ ಹೆಸರುಳ್ಳ ಪರಬ್ರಹ್ಮನೇ ವಿಶ್ವಕರ್ತನೆಂದು ಈ ಹಿಂದೆ ಹೇಳಲಾಗಿದೆ. ಆದರ ಪಶುಪತಿ, ಗಣಪತಿ, ಸುಬ್ರಹ್ಮಣ್ಯ, ಸೂರ್ಯ ಮುಂತಾದವರು ವಿಶ್ವಕರ್ತರೆಂದು ಆಯಾ ಸಿದ್ಧಾಂತದ ಆಗಮಗಳಿಂದ ತಿಳಿದು ಬರುವುದರಿಂದ ನಾರಾಯಣನೇ ವಿಶ್ವಕರ್ತನೆಂಬುದು ಸರಿಯಲ್ಲ ಎಂಬ ಶಂಕೆಯನ್ನು ಇಲ್ಲಿ ಪರಿಹರಿಸುತ್ತಾರೆ.

**ನ ವಿಶ್ವಕೃತ್ ಪಶುಪತಿಃ ಶ್ರೂಯಮಾಣಾಗುಣತ್ವತಃ ।**
**ಚೈತ್ರವತ್ ಕಿಂ ಪುನರ್ವಿಘ್ನಬ್ರಧ್ನಾದ್ಯಾ ಬಾಲಶಂಕಿತಾಃ ॥ 15 ॥**

**ಪದಚ್ಛೇದ**— ನ, ವಿಶ್ವಕೃತ್, ಪಶುಪತಿಃ, ಶ್ರೂಯಮಾಣಾಗುಣತ್ವತಃ, ಚೈತ್ರವತ್, ಕಿಂ, ಪುನಃ, ವಿಘ್ನಬ್ರಧ್ನಾದ್ಯಾಃ, ಬಾಲಶಂಕಿತಾಃ ।

**ಅನ್ವಯ**— ಪಶುಪತಿಃ, ಶ್ರೂಯಮಾಣಾಗುಣತ್ವತಃ, ಚೈತ್ರವತ್, ವಿಶ್ವಕೃತ್, ನ, ಬಾಲಶಂಕಿತಾಃ, ವಿಘ್ನಬ್ರಧ್ನಾದ್ಯಾಃ, ಕಿಂ, ಪುನಃ ।

**ಅನ್ವಯಾರ್ಥ**—

**ಪಶುಪತಿಃ** = ಪಶುನಾಮಕರಾದ ಪ್ರಜೆಗಳಿಗೆ ಸ್ವಾಮಿಯಾದ ಶಂಕರನು,
**ಶ್ರೂಯಮಾಣ** = ವೇದವಾಕ್ಯದಿಂದ ಪ್ರತಿಪಾದಿಸಲ್ಪಡುವ,
**ಅಗುಣತ್ವತಃ** = ದೋಷತ್ವ ಇರುವುದರಿಂದ,
**ಚೈತ್ರವತ್** = ಚೈತ್ರನೆಂಬ ಒಬ್ಬ ಮನುಷ್ಯನಂತೆ,
**ವಿಶ್ವಕೃತ್** = ಎಲ್ಲವನ್ನೂ ಸೃಷ್ಟಿಮಾಡುವವನು,
**ನ** = ಅಲ್ಲ, (ಎಂದಾದಾಗ)
**ಬಾಲಶಂಕಿತಾಃ** = ಅವಿವೇಕಿಗಳಿಂದ ಊಹಿಸಲ್ಪಟ್ಟ,
**ವಿಘ್ನ** = ಗಣೇಶನೂ,
**ಬ್ರಧ್ನ** = ಸೂರ್ಯನೂ,
**ಆದ್ಯಾಃ** = ಇವರೇ, ಮೊದಲಾಗಿ ಉಳ್ಳವರು,
**(ವಿಶ್ವಕೃತಃ ನ ಭವಂತೀತಿ) ಕಿಂ ಪುನಃ ವಕ್ತವ್ಯಂ** = ಸಮಸ್ತಪ್ರಪಂಚದ ಸೃಷ್ಟಿಕರ್ತರಾಗುವುದಿಲ್ಲವೆಂದು ಏನು ಹೇಳತಕ್ಕದ್ದು?

**ತಾತ್ಪರ್ಯ**— ಪಾಶುಪತ, ಗಾಣಾಪತ್ಯ, ಸೌರ, ಸ್ಕಾಂದ ಮೊದಲಾದ ಮತದವರು ತಮ್ಮ ಆಗಮಗಳ ಬಲದಿಂದ, ಶಿವ, ಗಣಪತಿ, ಸೂರ್ಯ, ಸುಬ್ರಹ್ಮಣ್ಯ ಮುಂತಾದವರೇ ಸೃಷ್ಟ್ಯಾದ್ಯಷ್ಟಕರ್ತರೆಂದು ಹೇಳುತ್ತಾರೆ. ಅವರಲ್ಲಿ ಪಾಶುಪತರೇ ಪ್ರಧಾನರು. ಅವರು "ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ" ಇವೇ ಮೊದಲಾದ ಆಗಮಗಳಿಂದ ಆಪಾತವಾಗಿ ತೋರುವ ಅರ್ಥವನ್ನಿಟ್ಟುಕೊಂಡು ಪಶುಪತಿಯಾದ ರುದ್ರನೇ ಸರ್ವೋತ್ತಮನೆಂದು ಹೇಳುತ್ತಾರೆ. ಆದರೆ ಶ್ರುತಿಗಳನ್ನು ವಿಮರ್ಶೆ ಮಾಡಿದಾಗ ಈ ಅರ್ಥವು ಸರಿಯಲ್ಲವೆಂದು ತಿಳಿದುಬರುತ್ತದೆ. ವಿವೇಕವಿಲ್ಲದೆ ಸ್ವೇಚ್ಛೆಯಿಂದ ಅರ್ಥಮಾಡಿದರೆ ಅದು ವೇದಪ್ರಮಾಣದ ದೋಷವಲ್ಲ. ಪುರುಷನ ದೋಷವು. ಆದುದರಿಂದ ಈಶ್ವರನು ಸೃಷ್ಟ್ಯಾದಿಕರ್ತನಲ್ಲ. ಏಕೆಂದರ ಅವನಲ್ಲಿ ಅನೇಕ ದೋಷಗಳಿವೆಯೆಂದು ವೇದವೇ ಹೇಳುತ್ತದೆ. "ಯಂ ಕಾಮಯೇ ತಂ ತಮುಗ್ರಂ ಕೃಣೋಮಿ" ಎಂಬ ಅಂಭೃಣೀ ಸೂಕ್ತದಲ್ಲಿ ರುದ್ರನು ಅಂಭೃಣೀನಾಮಕಳಾದ ಲಕ್ಷ್ಮಿಯ ಆಧೀನನೆಂದು ತಿಳಿದು ಬರುವುದರಿಂದ ಅವನು ಪರಾಧೀನನೆಂದಾಯಿತು. ಆ ಲಕ್ಷ್ಮಿಯು "ಮಮ ಯೋನಿರಪ್ಸ್ವಂತಃ ಸಮುದ್ರೇ" ಎಂಬ ಪ್ರಮಾಣದಂತೆ ಪರಮಾತ್ಮನ

ಅಧೀನಳಾದ್ದರಿಂದ ಈಶ್ವರನು ನಾರಾಯಣನಿಗಿಂತ ತುಂಬಾ ಕೆಳಗಿನವನಾಗಿದ್ದಾನೆ. ''ಸೋऽರೋದೀತ್ ಯದರೋದೀತ್ ತದ್ ರುದ್ರಸ್ಯ ರುದ್ರತ್ವಂ'' ಎಂಬ ವೇದವಾಕ್ಯದಿಂದ ಈಶ್ವರನು ರೋದನ ಮಾಡಿದ್ದರಿಂದ 'ರುದ್ರ' ಎಂಬ ಹೆಸರನ್ನು ಹೊಂದಿದ್ದಾನೆ ಎಂದು ತಿಳಿದು ಬರುತ್ತದೆ. ಹೀಗೆ ಪರಾಧೀನತ್ವ, ರೋದನ ಮುಂತಾದ ದೋಷಗಳು ಈಶ್ವರನಲ್ಲಿ ಕಂಡುಬರುವುದರಿಂದ ಈಶ್ವರನು ಪ್ರಪಂಚದ ಸೃಷ್ಟ್ಯಾದಿ ಕರ್ತನು ಆಗಲು ಸಾಧ್ಯವಿಲ್ಲ. ಹೀಗಿರಲು ಅವಿವೇಕಿಗಳು ತಮ್ಮ ಮೂಢತನದಿಂದ ಗಣಪತಿ, ಸೂರ್ಯ ಮೊದಲಾದ ದೇವತೆಗಳನ್ನು ಜಗತ್ಕರ್ತರೆಂದು ಕಲ್ಪಿಸಿದುದು ಸರ್ವಥಾ ಅಯುಕ್ತವೆಂದು ಹೇಳಬೇಕಾಗಿಯೇ ಇಲ್ಲವಷ್ಟೆ!

ನಿರ್ದೋಷನೂ, ಸ್ವತಂತ್ರನೂ, ಸರ್ವಜ್ಞನೂ ಆದವನೇ ಸೃಷ್ಟ್ಯಾದಿ ಕರ್ತನಾಗಲು ಸಾಧ್ಯ. ಸರಿಯಾಗಿ ವಿಮರ್ಶಿಸಿದಾಗ ವೇದಗಳಿಂದ ನಿರ್ದೋಷನೂ, ಗುಣಪೂರ್ಣನೂ ಆಗಿ ತಿಳಿದು ಬರುವವನು ಶ್ರೀಮನ್ನಾರಾಯಣನೊಬ್ಬನೇ. ಆದುದರಿಂದ ನಾರಾಯಣನ ಸರ್ವ ಕರ್ತೃತ್ವವು ಪಾಶುಪತಾದಿ ಆಗಮ ವಿರುದ್ಧವೆಂಬ ಆಕ್ಷೇಪವು ಸರಿಯಲ್ಲ, ವೇದದಲ್ಲಿಯೇ ಪ್ರಸಿದ್ಧವಾದ ಪಾರತಂತ್ರ್ಯ, ಅಜ್ಞಾನ, ದುಃಖ ಮುಂತಾದ ದೋಷವುಳ್ಳವನೆಂದು ಪ್ರಸಿದ್ಧನಾದ ಈಶ್ವರನಾಗಲೀ, ಗಣೇಶನಾಗಲೀ ಅಥವಾ ಮತ್ಯಾರೇ ಆಗಲೀ ವಿಶ್ವಕರ್ತೃಗಳೆಂದು ಹೇಳಲು ಸಾಧ್ಯವಿಲ್ಲ. ಪಾಶುಪತಾದಿ ಆಗಮಗಳು ಪೌರುಷೇಯಗಳು. ಅವುಗಳಲ್ಲಿ ದೋಷಗಳಿರುವುದರಿಂದ ಅವು ಅಪ್ರಮಾಣಗಳು. ಯಾವ ದೋಷಗಳ ಶಂಕೆಗೂ ಅವಕಾಶವಿಲ್ಲದಿರುವ ವೇದಗಳಿಗೆ ವಿರುದ್ಧವಾದ ಆ ಅಪ್ರಾಮಾಣಿಕ ಗ್ರಂಥಗಳಿಂದ ಇತರರನ್ನು ಸರ್ವೋತ್ತಮರೆಂದೂ, ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣರೆಂದೂ ಕಲ್ಪಿಸುವವರು, ಅವಿವೇಕಿಗಳು, ಬಾಲರು. ವೇದದಲ್ಲಿ ರುದ್ರ ಮುಂತಾದವರು ಜಗತ್ಕರ್ತರೆಂದು ಹೇಳುವ ವಾಕ್ಯಗಳಿವೆ. ಆದರೆ ಇಲ್ಲಿ ''ಯೋ ದೇವಾನಾಂ ನಾಮಧಾ ಏಕ ಏವ'' ಇತ್ಯಾದಿ ಶ್ರುತಿಗನುಸಾರವಾಗಿ ಆ ಎಲ್ಲಾ ಹೆಸರುಗಳೂ ಪರಮಾತ್ಮನನ್ನೇ ಹೇಳುತ್ತವೆಯೆಂದು ತಿಳಿಯಬೇಕು. ''ರುಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾತ್ ಜನಾರ್ದನಃ'' ಎಂಬ ನಿರ್ವಚನದಂತೆ ಭಕ್ತರ ಅಜ್ಞಾನಾದಿ ರೋಗವನ್ನು ಕಳೆಯುವ ಶ್ರೀಹರಿಯೇ ಪರಮಮುಖ್ಯನಾಗಿ ರುದ್ರನಾಗಿರುತ್ತಾನೆ. ರೋದನಾದಿ ದುಃಖವುಳ್ಳ ಈಶ್ವರನು ಮುಖ್ಯವಾಗಿ ರುದ್ರಶಬ್ದ ವಾಚ್ಯನೂ ಅಲ್ಲ, ಜಗತ್ಕರ್ತನೂ ಅಲ್ಲ, ಸರ್ವೋತ್ತಮನೂ ಅಲ್ಲ, ಗಣಪತಿ, ಸೂರ್ಯ ಮುಂತಾದವರೂ ನಾರಾಯಣನ ಅಧೀನಳಾದ ಲಕ್ಷ್ಮಿಯೂ ಈಶ್ವರನ ಅಧೀನರೆಂದೂ, ಅನೇಕ ದೋಷವುಳ್ಳವರೆಂದೂ ಪ್ರಮಾಣಗಳಿಂದ ಕಂಡುಬರುವುದರಿಂದ ಅವರು ಸೃಷ್ಟ್ಯಾದಿ ಕರ್ತರಲ್ಲವೆಂದೂ, ಸರ್ವೋತ್ತಮರಲ್ಲವೆಂದೂ ಪುನಃ ಹೇಳಬೇಕಾಗಿದೆಯೇ? ಹೀಗೆಯೇ ನಾರಾಯಣನ ಸರ್ವೋತ್ತಮತ್ವ ವಿಷಯದಲ್ಲಿ ಸಂಶಯವನ್ನು ಪರಿಹರಿಸಿ ಮುಂದೆ ನಾರಾಯಣನು ಪೂರ್ಣಾನಂದ, ಸರ್ವವಿಷಯಕವಾದ ಜ್ಞಾನ, ಅಪ್ರಾಕೃತಪ್ರಕಾಶ, ಬಹಳವಾದ ಔದಾರ್ಯ ಮುಂತಾದ ಅನಂತಗುಣಪೂರ್ಣನೆಂದು ಪ್ರಸ್ತಾವಿಸುತ್ತೇವೆ. ಆದ್ದರಿಂದ ನಾರಾಯಣನೇ ಜಗತ್ತಿನ ಸೃಷ್ಟ್ಯಾದಿ ಅಷ್ಟಕರ್ತನೆಂದು ನಿಸ್ಸಂಶಯವಾಗಿ ತಿಳಿಯಬೇಕು.

ಇಲ್ಲಿ 1) ''ಪಶುಪತಿಃ ವಿಶ್ವಕೃತ್ ನ'' = ಈಶ್ವರನು ಪ್ರಪಂಚದ ಸೃಷ್ಟಿಕರ್ತನಲ್ಲವೆಂದು ಪ್ರತಿಜ್ಞೆ, 2) ''ಶ್ರೂಯಮಾಣಾಗುಣತ್ವಾತ್'' = ವೇದಗಳಿಂದ ತಿಳಿದುಬರುವ ದುಃಖ, ಅಜ್ಞಾನ, ಪಾರತಂತ್ರ್ಯ ಮುಂತಾದ ದೋಷಗಳಿರುವುದರಿಂದ ಎಂದು ಹೇತುವು, 3) ''ಯಃ ಶ್ರೂಯಮಾಣಾಗುಣಃ ಸಃ ನ ವಿಶ್ವಕೃತ್ ಯಥಾ ಚೈತ್ರಃ'' = ಯಾವನು ದೋಷವುಳ್ಳವನೆಂದು ತಿಳಿದು ಬರುತ್ತದೆಯೋ ಅವನು ವಿಶ್ವಕರ್ತನಲ್ಲ. ಚೈತ್ರನೆಂಬ ಲೋಕಪ್ರಸಿದ್ಧ ಜೀವನಂತೆ ಎಂಬುದು ಉದಾಹರಣೆಯು, ಚೈತ್ರನೆಂಬ ಒಬ್ಬ ಜೀವನು ದುಃಖಿ ಮತ್ತು ಪರಾಧೀನನು. ಆದುದರಿಂದ ಅವನು ಜಗತ್ತಿಗೆ ಕರ್ತನಾಗಲಾರನು, 4) ನ ಚಾಯಂ ಶ್ರೂಯಮಾಣಾಗುಣಃ =ಈ ಶ್ರೀಹರಿಯು ಎಲ್ಲಿಯೂ ದೋಷವುಳ್ಳವನೆಂದು ಪ್ರತಿಪಾದಿತನಾಗಿಲ್ಲ. ಇದು ಉಪನಯವು, 5) ತಸ್ಮಾತ್ ವಿಶ್ವಕೃತ್ ನೇತಿ ನ = ಆದ್ದರಿಂದ ಶ್ರೀಹರಿಯು ಸೃಷ್ಟಿಕರ್ತನಲ್ಲವೆಂದಲ್ಲ, ಅವನೇ ಸೃಷ್ಟಿಕರ್ತನೇ ಆಗಿದ್ದಾನೆ ಎಂಬುದು ನಿಗಮನ (ಉಪಸಂಹಾರ) ಎಂದು ತಿಳಿಯಬೇಕು. ಈ ರೀತಿ ಐದು ಅವಯವವುಳ್ಳ ನ್ಯಾಯಪ್ರಯೋಗವನ್ನೇ ಮಾಡಬೇಕೆಂದು ನಿರ್ಬಂಧವಿಲ್ಲ. ಆದರೂ ನ್ಯಾಯಶಾಸ್ತ್ರದಂತೆ ಈ

ಐದು ವಾಕ್ಯಗಳನ್ನು ತೋರಿಸಿದೆ. (ಇನ್ನು ಮುಂದಿನ ಅನೇಕ ಶ್ಲೋಕಗಳಲ್ಲಿಯೂ ಈ ಐದು ಅವಯವಗಳುಳ್ಳ ನ್ಯಾಯಪ್ರಯೋಗವನ್ನು ಊಹಿಸಿಕೊಳ್ಳಬಹುದು)

**ವಿಗ್ರಹ ಮತ್ತು ಕೋಶ—**

**ವಿಶ್ವಕೃತ್—** ವಿಶ್ವಂ ಕರೋತೀತಿ ವಿಶ್ವಕೃತ್ ।

**ಪಶುಪತಿಃ—** ಪಶೂನಾಂ ಪತಿಃ, ಪಶುಪತಿಃ । ಪಶುಪತಿಃ = ಶಂಭುವು, 'ಶಂಭುರೀಶಃ ಪಶುಪತಿಃ' ಅಮರ ।

**ಶ್ರೂಯಮಾಣಾಗುಣತ್ವತಃ—** ಶ್ರೂಯಂತೇ ಇತಿ ಶ್ರೂಯಮಾಣಾಃ, ನ ಗುಣಾಃ ಅಗುಣಾಃ, ಗುಣವಿರುದ್ಧಾಃ ದೋಷಾಃ, ಶ್ರೂಯಮಾಣಾಃ ಅಗುಣಾಃ ಯಸ್ಯ ಸಃ ಶ್ರೂಯಮಾಣಾಗುಣಃ, ಶ್ರೂಯಮಾಣಾಗುಣಸ್ಯ ಭಾವಃ ಶ್ರೂಯಮಾಣಾಗುಣತ್ವಂ, ತಸ್ಮಾತ್ ಶ್ರೂಯಮಾಣಾಗುಣತ್ವತಃ । ಪಂಚಮೀ ವಿಭಕ್ತಿಗೆ ತಸಿ ಪ್ರತ್ಯಯ ।

**ಚೈತ್ರವತ್—** ಚೈತ್ರೇಣ ತುಲ್ಯಂ ಚೈತ್ರವತ್ ।

**ವಿಘ್ನಬ್ರಧ್ನಾದ್ಯಾಃ—** ಆದೌ ಭವೌ ಆದ್ಯೌ, ವಿಘ್ನಶ್ಚ ಬ್ರಧ್ನಶ್ಚ ವಿಘ್ನಬ್ರಧ್ನೌ, ವಿಘ್ನಬ್ರಧ್ನೌ ಆದ್ಯೌ ಯೇಷಾಂ ತೇ ವಿಘ್ನಬ್ರಧ್ನಾದ್ಯಾಃ । ಇಲ್ಲಿ ವಿಘ್ನ ಎಂಬ ಏಕದೇಶದಿಂದ ವಿಘ್ನರಾಜ (ವಿಘ್ನೇಶ)ನನ್ನು ಇಟ್ಟುಕೊಳ್ಳಬೇಕು. ನಾಮಗ್ರಹಣೇ 'ನಾಮೈಕದೇಶ ಗ್ರಹಣಂ' ಎಂಬ ನ್ಯಾಯದಿಂದ ಇಲ್ಲಿ ಹೆಸರಿನ ಒಂದು ಭಾಗವನ್ನು ಮಾತ್ರವೇ ತೆಗೆದುಕೊಂಡಿದ್ದಾರೆ. ಪರಮಾತ್ಮನ ಅನುಗ್ರಹದಿಂದಲೇ ಗಣಪತಿಯು ವಿಘ್ನರಾಜನಾಗಿದ್ದು, ದುಷ್ಟರಿಗೆ ವಿಘ್ನಗಳನ್ನು ಕೊಡುವವನೂ, ಸಜ್ಜನರ ವಿಘ್ನವನ್ನು ಪರಿಹರಿಸುವವನೂ ಆಗಿರುತ್ತಾನೆ. ಸ್ವತಃ ಅವನು ವಿಘ್ನವೆಂಬ ದೋಷವೇ ಆಗಿದ್ದಾನೆ ಎಂದು ತಿಳಿಸಲು ಹೀಗೆ ಹೆಸರಿನ ಒಂದಂಶವನ್ನು ಮಾತ್ರವೇ ತೆಗೆದುಕೊಂಡಿರುತ್ತಾರೆಂದು ತಿಳಿಯಬೇಕು. ಬ್ರಧ್ನ = ಸೂರ್ಯ, 'ಭಾಸ್ಕರಾಹಸ್ಕರಬ್ರಧ್ನಪ್ರಭಾಕರ ವಿಭಾಕರಾಃ' ಅಮರ ।

**ಬಾಲಶಂಕಿತಾಃ—** ಬಾಲೈಃ ಶಂಕಿತಾಃ ಬಾಲಶಂಕಿತಾಃ । ಬಾಲ = ಮೂರ್ಖ, 'ಮೂರ್ಖೇಽರ್ಭಕೇಽಪಿ ಬಾಲಃ ಸ್ಯಾತ್' ಅಮರ ।

**ಪ್ರಯೋಗ—** ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ. ಭವತಿ, ಭವಂತಿ ಎಂಬ ಕ್ರಿಯಾಧ್ಯಾಹಾರವನ್ನು ಮಾಡಿಕೊಳ್ಳಬೇಕು. ಪಶುಪತಿನಾ ಶ್ರೂಯಮಾಣಾಗುಣತ್ವತಃ, ವಿಶ್ವಕೃತಾ ನ ಭೂಯತೇ, ಚೈತ್ರವತ್, ಬಾಲಶಂಕಿತೈಃ, ವಿಘ್ನಬ್ರಧ್ನಾದ್ಯೈಃ ವಿಶ್ವಕೃದ್ಭಿಃ ನ ಭೂಯತೇ ಇತಿ ಕಿಂ ಪುನಃ (ವಕ್ತವ್ಯಂ) ।

★ ★ ★

## ವೈಶೇಷಿಕಮತ ನಿರಾಸ ಮತ್ತು ಈಶ್ವರನ ಅನಂತಕಲ್ಯಾಣಗುಣ ಸಮರ್ಥನ

**ಅವತಾರಿಕಾ—** 'ನಾರಾಯಣೋಽನಂತಗುಣಃ' ಎಂಬ 8ನೆಯ ಶ್ಲೋಕದಲ್ಲಿ ಶ್ರೀಮನ್ನಾರಾಯಣನು ಜ್ಞಾನಾನಂದಾದಿ ಅನಂತಕಲ್ಯಾಣಗುಣಪೂರ್ಣನೆಂದು ಹೇಳಿದ್ದಾರೆ. ಅದನ್ನು ವೈಶೇಷಿಕರೆಂಬ ತಾರ್ಕಿಕರು ಸಹಿಸುವುದಿಲ್ಲ. ಅವರ ಮತವನ್ನು ಖಂಡಿಸುವ ಸಲುವಾಗಿ ಮೊದಲು ಅವರ ಮತವನ್ನು ಅನುವಾದ ಮಾಡುತ್ತಾರೆ.

**ನನು ಸೌಖ್ಯಾದಿಮಾನ್ ನೇಶೋ ದುಃಖಾದಿರಹಿತತ್ವತಃ ।**
**ಯೋ ನೈವಂ ಸ್ಯಾತ್ ಸ ನೈವಂ ಸ್ಯಾದ್ ಯಥಾ ಸಂಸೃತಿಮಾನಿತಿ ॥ 16 ॥**

**ಪದಚ್ಛೇದ—** ನನು, ಸೌಖ್ಯಾದಿಮಾನ್, ನ, ಈಶಃ, ದುಃಖಾದಿರಹಿತತ್ವತಃ, ಯಃ, ನ, ಏವಂ, ಸ್ಯಾತ್, ಸಃ, ನ, ಏವಂ, ಸ್ಯಾತ್, ಯಥಾ, ಸಂಸೃತಿಮಾನ್, ಇತಿ ।

**ಅನ್ವಯ—** ನನು, ಈಶಃ, ಸೌಖ್ಯಾದಿಮಾನ್, ನ, ದುಃಖಾದಿರಹಿತತ್ವತಃ, ಯಃ, ಏವಂ, ನ, ಸ್ಯಾತ್, ಸಃ, ಏವಂ, ನ, ಸ್ಯಾತ್, ಸಂಸೃತಿಮಾನ್, ಯಥಾ, ಇತಿ । (ವೈಶೇಷಿಕಃ ಶಂಕತೇ)

**ಅನ್ವಯಾರ್ಥ—**

**ನನು** = ಇಲ್ಲಿ ಹೀಗೆ ಆಕ್ಷೇಪವು,

**ಈಶಃ** = ಆನಂದಾದಿಗುಣಪೂರ್ಣನೆಂದು ನೀವು ನಂಬಿರುವ ನಾರಾಯಣನು,

**ಸೌಖ್ಯಾದಿಮಾನ್ ನ** = ಆನಂದ ಮುಂತಾದ ಗುಣಗಳಿಂದ ಪೂರ್ಣನಲ್ಲ,

**ದುಃಖಾದಿರಹಿತತ್ವತಃ** = ದುಃಖ, ಅಜ್ಞಾನ, ಭ್ರಮ, ಸಂಶಯಾದಿಗಳು ಇಲ್ಲದಿರುವುದರಿಂದ,

**ಯಃ** = ಯಾವನು,

**ಏವಂ** = ಸೌಖ್ಯಾದಿಗುಣರಹಿತನು,

**ನ ಸ್ಯಾತ್** = ಆಗಿರುವುದಿಲ್ಲವೋ,

**ಸಃ** = ಅವನು,

**ಏವಂ ನ ಸ್ಯಾತ್** = ದುಃಖಾದಿರಹಿತನಾಗಿರುವುದಿಲ್ಲ,

**ಸಂಸೃತಿಮಾನ್** = ಸಂಸಾರಿಯು,

**ಯಥಾ** = ಹೇಗೋ(ಹಾಗೆ),

**ಇತಿ** = ಎಂದು (ವೈಶೇಷಿಕ ತಾರ್ಕಿಕನು ಆಕ್ಷೇಪಿಸುತ್ತಾನೆ),

**ಇತಿ** =(ನನು = ಹೀಗೆ ತಾರ್ಕಿಕರ ಆಕ್ಷೇಪವಷ್ಟೆ ಎಂದೂ ಅನ್ವಯಾರ್ಥ ಇಟ್ಟುಕೊಳ್ಳಬಹುದು).

**ತಾತ್ಪರ್ಯ—** ಲೋಕದಲ್ಲಿ ಎಲ್ಲಿ ಗುಣವಿದೆಯೋ ಅಲ್ಲಿ ದೋಷವೂ ಇದೆ. 'ನ ನಿರ್ದೋಷಂ ನ ನಿರ್ಗುಣಂ' = ಲೋಕದಲ್ಲಿ ನಿರ್ದೋಷವಾದ ಪದಾರ್ಥವೂ ಇಲ್ಲ. ನಿರ್ಗುಣವಾದ ವಸ್ತುವೂ ಇಲ್ಲ. ಈ ನಿಯಮವನ್ನು ಒಪ್ಪಿಕೊಳ್ಳುವ ವೈಶೇಷಿಕರು ಜಗತ್ಕರ್ತನಾದ ಪರಮೇಶ್ವರನನ್ನು ಒಪ್ಪಿಕೊಂಡರೂ ಸುಖದುಃಖಗಳು ಒಂದನ್ನು ಬಿಟ್ಟು ಒಂದು ಇಲ್ಲವಾದ್ದರಿಂದ ಈಶ್ವರನಲ್ಲಿ ಆನಂದಜ್ಞಾನಾದಿಗಳನ್ನು ಒಪ್ಪಿದರೆ ದುಃಖಾಜ್ಞಾನಾದಿಗಳನ್ನೂ ಒಪ್ಪಬೇಕಾಗುತ್ತದೆ ಎಂಬ ಭಯದಿಂದ ಈಶ್ವರನಲ್ಲಿ ಯಾವ ಆನಂದಜ್ಞಾನಾದಿಗಳನ್ನೂ ಒಪ್ಪುವುದಿಲ್ಲ. ಅವರ ಮತಪ್ರಕಾರ ಅಶೇಷ ದುಃಖನಿವೃತ್ತಿಯೇ ಮೋಕ್ಷ. ಸುಖಪದದಿಂದ ಸಾಂಸಾರಿಕವಾದ ಆನಂದಾದಿ ಗುಣಗಳನ್ನು ಇಟ್ಟುಕೊಳ್ಳಬೇಕು. ಆದ್ದರಿಂದ ಮೋಕ್ಷದಲ್ಲಿಯೂ ಯಾರಲ್ಲಿಯೂ ಜ್ಞಾನಾನಂದಾದಿಗಳು ಇರುವುದಿಲ್ಲ.

ಆನಂದಜ್ಞಾನ ಮುಂತಾದ ಅನಂತಗುಣಗಳುಳ್ಳವನೆಂದು ನೀವು ಒಪ್ಪಿರುವ ಈಶ್ವರನು ಆನಂದಜ್ಞಾನಾದಿಗಳುಳ್ಳವನು ಅಲ್ಲ ಎಂದು ವೈಶೇಷಿಕರ ಪ್ರತಿಜ್ಞೆಯು. ದುಃಖಾದಿಗಳು ಇಲ್ಲದಿರುವುದರಿಂದ ಎಂದು ಹೇತುವು. ಯಾವ ಪುರುಷನು ಸೌಖ್ಯಾದಿರಹಿತನಲ್ಲವೋ (ಸೌಖ್ಯಾದಿಗಳುಳ್ಳವನೋ) ಅವನು ದುಃಖಾದಿರಹಿತನಾಗಿರುವುದಿಲ್ಲ. ದುಃಖಾದಿಗಳಿಂದ ಸಹಿತನೇ ಆಗಿರುತ್ತಾನೆ. ಇದಕ್ಕೆ ದೃಷ್ಟಾಂತ ಸಂಸಾರಿ ಪುರುಷ. ಇದು ಉದಾಹರಣೆ. ಪರಮಾತ್ಮನು ದುಃಖಾದಿಗಳುಳ್ಳವನಲ್ಲ, ಉಪನಯ. ಆದ್ದರಿಂದ ಸುಖಾದಿರಹಿತನೂ ಆಗಿದ್ದಾನೆ. ನಿಗಮನ. ನೀವು ಹೇಳುವಂತೆ ಪರಮಾತ್ಮನು ಸುಖಾದಿರಹಿತನಲ್ಲದಿದ್ದರೆ ದುಃಖಾದಿರಹಿತನೂ ಅಲ್ಲ. ಪರಮಾತ್ಮನು ದುಃಖಾದಿ ಸಹಿತನೇ ಆಗಬೇಕಾಗಿ ಬರುತ್ತದೆ.

ಅಥವಾ ಪರಮೇಶ್ವರನು ಆನಂದಾದಿಪೂರ್ಣನಾಗಿದ್ದರೆ ದುಃಖಾದಿಗಳೂ ಅವನಲ್ಲಿ ಇರಬೇಕಾಗುತ್ತದೆ. ಸಂಸಾರಿಯೇ ಇದಕ್ಕೆ ದೃಷ್ಟಾಂತ. ನೀವು ಪರಮಾತ್ಮನನ್ನು ದುಃಖಾದಿಗಳು ಉಳ್ಳವನೆಂದು ಒಪ್ಪುವುದಿಲ್ಲ. ಆದುದರಿಂದ ಅವನು ಸುಖಾದಿಗಳೂ ಇಲ್ಲದವನೆಂದು ಆಪಾದನ ರೂಪವಾಗಿಯಾದರೂ ಅರ್ಥಮಾಡಿಕೊಳ್ಳಬಹುದು. ಹೀಗೆ ಪರಮಾತ್ಮನಲ್ಲಿ

ದುಃಖ ಲೇಶವೂ ಇಲ್ಲದ್ದರಿಂದ ಸುಖವೂ ಇರುವುದಿಲ್ಲ ಎಂಬ ಅನುಮಾನ ವಿರುದ್ಧವಾದುದರಿಂದ ಈಶ್ವರನಿಗೆ ಆನಂದಾದಿ ಅನಂತಗುಣಪೂರ್ಣತ್ವವು ಯುಕ್ತವಲ್ಲ ಎಂದು ಆಕ್ಷೇಪ.

ವಿಗ್ರಹ—

**ಸೌಖ್ಯಾದಿಮಾನ್**— ಸುಖಮೇವ ಸೌಖ್ಯಂ, ಸೌಖ್ಯಂ ಆದಿಃ ಯೇಷಾಂ ತೇ ಸೌಖ್ಯಾದಯಃ ಸೌಖ್ಯಾದಯಃ ಅಸ್ಯ ಸಂತೀತಿ ಸೌಖ್ಯಾದಿಮಾನ್ ।

**ದುಃಖಾದಿರಹಿತತ್ವತಃ**— ದುಃಖಂ ಆದಿಃ ಯೇಷಾಂ ತೇ ದುಃಖಾದಯಃ, ದುಃಖಾದಿಭಿಃ ರಹಿತಃ ದುಃಖಾದಿ ರಹಿತಃ, ದುಃಖಾದಿರಹಿತಸ್ಯಭಾವಃ ದುಃಖಾದಿರಹಿತತ್ವಂ, ತಸ್ಮಾತ್ ಇತಿ ದುಃಖಾದಿರಹಿತತ್ವತಃ ।

**ಸಂಸೃತಿಮಾನ್**— ಸಂಸೃತಿಃ ಅಸ್ಯ ಅಸ್ತೀತಿ ಸಂಸೃತಿಮಾನ್ ।

ಇಲ್ಲಿ ಸ್ಯಾತ್ ಎಂಬುದು ಕ್ರಿಯಾಪದ. ಅದು ಹಿಂದೆಯೇ ಬಂದಿದೆ.

**ಪ್ರಯೋಗ**— ಈಶೇನ ಸೌಖ್ಯಾದಿಮತಾ ನ ಭೂಯತೇ, ದುಃಖಾದಿರಹಿತತ್ವತಃ ಯೇನ ಏವಂ ನ ಭೂಯೇತ, ತೇನ ಏವಂ ನ ಭೂಯೇತ, ಸಂಸೃತಿಮತಾ ಯಥಾ ಇತಿ ನನು ।

★ ★ ★

**ಅವತಾರಿಕಾ**— ಹೀಗೆ ಪ್ರತಿವಾದಿಯು ಹೇಳಿದ ಅನುಮಾನವನ್ನು ಪ್ರತ್ಯನುಮಾನದಿಂದ ಇಲ್ಲಿ ದೂಷಿಸುತ್ತಾರೆ. (ಆನಂದಾದಿ ಪರೋಕ್ಷ ವಿಷಯಕವಾದ ಅನುಮಾನವನ್ನು ಜ್ಞಾನವೆಂಬ ಪ್ರತ್ಯಕ್ಷವಿಷಯಕ ಅನುಮಾನದಿಂದ ಖಂಡಿಸುತ್ತಾರೆ).

**ಏವಂ ಚೇದ್ ವಿಮತೋ ಜ್ಞಾನೀ ನ ಭ್ರಾಂತಿರಹಿತತ್ವತಃ ।**
**ಯ ಏವಂ ನೋ ಸ ಏವಂ ನೋ ಭವೀವೇತ್ಯನುಮೀಯತೇ ॥ 17 ॥**

**ಪದಚ್ಛೇದ**— ಏವಂ, ಚೇತ್, ವಿಮತಃ, ಜ್ಞಾನೀ, ನ, ಭ್ರಾಂತಿರಹಿತತ್ವತಃ, ಯಃ, ಏವಂ, ನೋ, ಸಃ, ಏವಂ ನೋ, ಭವೀ, ವಾ, ಇತಿ, ಅನುಮೀಯತೇ ।

**ಅನ್ವಯ**— ಏವಂ, ಚೇತ್, ವಿಮತಃ, ಜ್ಞಾನೀ, ನ, ಭವತಿ, ಭ್ರಾಂತಿರಹಿತತ್ವತಃ, ಯಃ, ಏವಂ, ನೋ, ಸ್ಯಾತ್, ಸ, ಏವಂ, ನೋ, ಸ್ಯಾತ್, ಭವೀ, ಇವ, ಇತ್ಯನುಮೀಯತೇ ।

ಅನ್ವಯಾರ್ಥ—

**ಏವಂ ಚೇತ್** = ದುಃಖಾದಿಗಳ ಇಲ್ಲದಿರುವಿಕೆ ಎಂಬ ಹೇತುವು ಈಶ್ವರನಲ್ಲಿ ಇರುವುದರಿಂದ (ಹೇತುವು ಪಕ್ಷದಲ್ಲಿ ಇರುವುದೇ ಪಕ್ಷಧರ್ಮತಾ) ಕೇವಲ ಪಕ್ಷಧರ್ಮತೆಯಿಂದ ಶ್ರುತ್ಯಾದಿಗಳಿಂದ ಸಿದ್ಧವಾಗಿರುವ ಆನಂದಾದಿಗಳನ್ನು ಈಶ್ವರನಲ್ಲಿ ಇಲ್ಲವೆಂದು ನೀವು ಸಾಧಿಸುವುದಾದರೆ ನಾವೂ ಕೂಡ ಪಕ್ಷದಲ್ಲಿ ಇರುವ ಮಾತ್ರದಿಂದ (ಪಕ್ಷಧರ್ಮತಾವುಳ್ಳ) ಹೇತುವೆಂದು ಕರೆಯಲ್ಪಡುವ ಧರ್ಮದಿಂದ ಆಯಾ ವಾದಿಗಳು ಸರ್ವಜ್ಞನೆಂದು ಒಪ್ಪಿರುವ ಪರಮೇಶ್ವರನು ಜ್ಞಾನವುಳ್ಳವನೆಂದು ಸಾಧಿಸಲೂ ಬರುವುದಿಲ್ಲ. ಅವನಲ್ಲಿ ಜ್ಞಾನವೂ ದುರ್ಘಟವೆಂದು ಸಾಧಿಸುತ್ತೇವೆ. ದುಃಖಾದಿಗಳಿಲ್ಲದಿರುವುದರಿಂದ ಈಶ್ವರನು ಸುಖಾದಿ-ಗಳಿಲ್ಲದವನೆಂದು ಸಾಧಿಸುವುದಾದರೆ,

**ವಿಮತಃ** = ಸರ್ವಜ್ಞನು ಹೌದೇ ಅಲ್ಲವೇ ಎಂದು ವಿವಾದಕ್ಕೆ ವಿಷಯನಾದ, ಈಶ್ವರನು,

**ಜ್ಞಾನೀ ನ ಭವತಿ** = ಜ್ಞಾನವುಳ್ಳವನೂ ಆಗುವುದಿಲ್ಲ,

**ಭ್ರಾಂತಿರಹಿತತ್ವತಃ** = ಭ್ರಾಂತಿಯಿಲ್ಲದಿರುವುದರಿಂದ,

**ಯಃ** = ಯಾವನು,

**ಏವಂ** = ಜ್ಞಾನವಿಲ್ಲದವನು,

**ನೋ** = ಅಲ್ಲವೋ,

**ಸಃ** = ಅವನು,

**ಏವಂ** = ಭ್ರಾಂತಿ ಇಲ್ಲದವನು,

**ನೋ** = ಆಗಿರುವುದಿಲ್ಲ,

**ಭವೀ ಇವ** = ಸಂಸಾರಿಯಂತೆ,

**ಇತಿ ವಾ** = ಎಂಬುದಾಗಿ ಕೂಡ,

**ಅನುಮೀಯತೇ** = ಅನುಮಾನ ಮಾಡಲ್ಪಡುತ್ತದೆ. (ಹೀಗೆ ಈಶ್ವರನಿಗೆ ಜ್ಞಾನವೇ ಇಲ್ಲವೆಂದು ಸಾಧಿಸಲು ಅಥವಾ ಅಜ್ಞಾನವಿದೆಯೆಂದು ಸಾಧಿಸಲು ದುಷ್ಟಯುಕ್ತಿಯನ್ನು ಹೇಳಬಹುದು).

**ತಾತ್ಪರ್ಯ**— ದುಃಖವಿಲ್ಲದ್ದರಿಂದ ಪರಬ್ರಹ್ಮನಲ್ಲಿ (ಈಶ್ವರನಲ್ಲಿ) ಸುಖವನ್ನು ಒಪ್ಪದಿರುವುದಾದರೆ, ಸರ್ವಜ್ಞನು ಹೌದೋ ಅಲ್ಲವೋ ಎಂಬ ವಾಗ್ವಾದಕ್ಕೆ ವಿಷಯನಾದ ಪರಮಾತ್ಮನು ಜ್ಞಾನವಿಲ್ಲದವನೂ ಆಗಲಿ. ಏಕೆಂದರೆ ಅವನಿಗೆ ಭ್ರಾಂತಿ ಇರುವುದಿಲ್ಲ. ಲೋಕದಲ್ಲಿ ಯಾವನು ಜ್ಞಾನವಿಲ್ಲದವನಾಗುವುದಿಲ್ಲವೋ (ಜ್ಞಾನವುಳ್ಳವನೋ) ಅವನು ಭ್ರಮೆ ಇಲ್ಲದವ-ನಾಗುವುದಿಲ್ಲ (ಭ್ರಾಂತಿಯುಳ್ಳವನಾಗಿಯೇ ಇರುತ್ತಾನೆ), ಜ್ಞಾನಕ್ಕೂ ಭ್ರಾಂತಿಗೂ ವ್ಯಾಪ್ತಿಯು ಸಂಸಾರಿ ಜೀವನಲ್ಲಿಯೇ ಕಂಡು ಬರುತ್ತದೆ. ಸಂಸಾರಿಯು ಜ್ಞಾನವಂತನಾದುದರಿಂದ ಭ್ರಮ(ವಿಪರೀತ ಜ್ಞಾನ)ವುಳ್ಳವನೂ ಆಗಿದ್ದಾನೆ. ನೀವು ಜೀವರ ವ್ಯತಿರೇಕದೃಷ್ಟಾಂತದಿಂದ ಸುಖವಿರುವವನು ದುಃಖವುಳ್ಳವನಾಗಿಯೇ ಕಂಡಿರುತ್ತಾನೆ. ಜೀವರಂತೆ, ಈಶ್ವರನಲ್ಲಿ ದುಃಖವಿಲ್ಲ ವಾದುದರಿಂದ ಸುಖವೂ ಇಲ್ಲವೆಂದು ಸಾಧಿಸುವುದಾದರೆ ಅದೇ ಜೀವರ ವ್ಯತಿರೇಕ ದೃಷ್ಟಾಂತದಿಂದ ಭ್ರಾಂತಿಜ್ಞಾನ-ವಿದ್ದಲ್ಲಿಯೇ ಜ್ಞಾನವು ಕಂಡಿದ್ದರಿಂದ ಭ್ರಾಂತಿ ಇಲ್ಲದ ಈಶ್ವರನು ಜ್ಞಾನಿಯೂ ಅಲ್ಲ (ಅಜ್ಞಾನಿಯು), ಸರ್ವಜ್ಞನೂ ಅಲ್ಲವೆಂದು ಸಾಧಿಸಲು ಹೊರಟರೆ ನೀವು ಏನನ್ನು ಹೇಳುತ್ತೀರಿ? ಆದುದರಿಂದ ಶ್ರುತಿಸಿದ್ಧವಾದ ಈಶ್ವರನ ಜ್ಞಾನಾನಂದಾದಿ ಗುಣಪೂರ್ಣತ್ವವನ್ನು ನೀವು ಕೇವಲ ಅನುಮಾನದಿಂದ ನಿರಾಕರಿಸಲು ಹೊರಟರೆ ನಾವು ಈಶ್ವರನಿಗೆ ಜ್ಞಾನಸಾಮಾನ್ಯವೂ ಇಲ್ಲವೆಂದು ಸಾಧಿಸಲು ಹೊರಡುತ್ತೇವೆ ಹಾಗೂ ನಿಮ್ಮ ಅನುಮಾನವು ಉಪಯೋಗವಿಲ್ಲದ್ದು ಎಂದಾಯಿತು.

**ವಿಗ್ರಹ ಮತ್ತು ಕೋಶ**—

**ಜ್ಞಾನೀ**— ಜ್ಞಾನಂ ಅಸ್ಯ ಅಸ್ತೀತಿ ಜ್ಞಾನೀ ।

**ಭ್ರಾಂತಿರಹಿತತ್ವತಃ**— ಭ್ರಾಂತ್ಯಾರಹಿತಃ ಭ್ರಾಂತಿರಹಿತಃ, ಭ್ರಾಂತಿರಹಿತಸ್ಯ ಭಾವಃ ಭ್ರಾಂತಿರಹಿತತ್ವಂ, ತಸ್ಮಾತ್ ಇತಿ ಭ್ರಾಂತಿರಹಿತತ್ವತಃ । 'ಭ್ರಾಂತಿರ್ಮಿಥ್ಯಾಮತಿರ್ಭ್ರಮಃ' ಅಮರ ।

**ಭವೀ**— ಭವಃ ಅಸ್ಯ ಅಸ್ತೀತಿ ಭವೀ ।

**ಕ್ರಿಯಾಪದ— ಅನುಮೀಯತೇ** - ಅನುಮೀಯತೇ ಮೀಯೇತೇ ಮೀಯಂತೇ, ಮೀಯಸೇ ಮೀಯೇಥೇ ಮೀಯಧ್ವೇ ಮೀಯೇ ಮಿಯಾವಹೇ ಮೀಯಾಮಹೇ । ಲಟ್ ಅನು ಉಪಸರ್ಗ (ಮಮಾನೇ, ಮಾಙ್‌ಮಾನೇ ಎಂಬ ಧಾತುಗಳೂ ಆಗಬಹುದು) ।

**ಪ್ರಯೋಗ**— ಏವಂ ಚೇತ್ ವಿಮತೇನ ಜ್ಞಾನಿನಾ ನ ಭೂಯತೇ ಭ್ರಾಂತಿರಹಿತತ್ವತಃ, ಯೇನ ಏವಂ ನ ಭೂಯೇತ ತೇನ ಏವಂ ನ ಭೂಯೇತ, ಭವಿನಾ ಇವ, ಇತಿ ವಯಂ ಅನುಮಿನುಮಃ । (ಅನುಮಿಮೀಮಹೇ)

★ ★ ★

**ಅವತಾರಿಕಾ—** ''ವೇದಾಂತಿಗಳೇ! ನೀವು ಕೇವಲ ಅನುಮಾನದಿಂದ ಈಶ್ವರನು ಅಜ್ಞನೆಂದು ಆಪಾದಿಸಲು ಸಾಧಿಸಲು ಹೊರಟಿರಿ. ಅದು ಸರಿಯಲ್ಲ. ''ಯಸ್ಸರ್ವಜ್ಞಸ್ಸರ್ವವಿತ್, ಯಸ್ಯ ಜ್ಞಾನಮಯಂ ತಪಃ'' ಇವೇ ಮೊದಲಾದ ವೇದಗಳಲ್ಲಿ ಈಶ್ವರನಿಗೆ ಸರ್ವಜ್ಞತ್ವವನ್ನು ಹೇಳಿರುವುದರಿಂದ ಅದಕ್ಕೆ ವಿರೋಧ ಬರುತ್ತದೆ. ವೇದವು ಪ್ರಮಾಣತಮ, ಅತ್ಯಂತ ಉತ್ಕೃಷ್ಟ ಪ್ರಮಾಣವೆಂದು ನೀವೂ ಒಪ್ಪಿದ್ದೀರಿ. ಹಾಗೂ ನೀವು ಪ್ರಯೋಗಿಸಿದ ಹೇತುವು ಬಾಧಿತವಾಯಿತು'',

**ವೇದಾಂತಿ—** ''ವೈಶೇಷಿಕರೇ ಹಾಗಾದರೆ ದುಃಖಾದಿಗಳಿಲ್ಲದ್ದರಿಂದ ಈಶ್ವರನು ಆನಂದಾದಿಗುಣಗಳಿಲ್ಲ-ದವನು ಎಂದು ನೀವು ಹೇಳಿದ ಅನುಮಾನವೂ ಬಾಧಿತವಾಗುತ್ತದೆ''. ಈ ರೀತಿ ಸಮಾನವಾದ ವಿರೋಧಿ ಉತ್ತರದಿಂದ (ಪ್ರತಿಬಂಧಿಯಿಂದ) ಪರನ ಅನುಮಾನವನ್ನು ಖಂಡಿಸುತ್ತಾರೆ.

**ಸರ್ವಜ್ಞಸ್ಯಾಜ್ಞತಾಂ ವೇದಃ ಶ್ರದ್ಧೇಯೋ ವಿರುಣದ್ಧಿ ಚೇತ್ ।**
**ತಸ್ಯೈವಾಮಂದಮಾನಂದಂ ವದನ್ನಾಶ್ರಾವ್ಯಸೌ ಕಥಮ್ ॥ 18 ॥**

**ಪದಚ್ಛೇದ—** ಸರ್ವಜ್ಞಸ್ಯ, ಅಜ್ಞತಾಂ, ವೇದಃ, ಶ್ರದ್ಧೇಯಃ, ವಿರುಣದ್ಧಿ, ಚೇತ್, ತಸ್ಯೈವ, ಅಮಂದಂ, ಆನಂದಂ, ವದನ್, ನ, ಅಶ್ರಾವಿ, ಅಸೌ, ಕಥಂ ।

**ಅನ್ವಯ—** ಶ್ರದ್ಧೇಯಃ, ವೇದಃ, ಸರ್ವಜ್ಞಸ್ಯ, ಅಜ್ಞತಾಂ, ನಿ (ವಿ)ರುಣದ್ಧಿ ಚೇತ್, ತಸ್ಯೈವ, ಅಮಂದಂ, ಆನಂದಂ, ವದನ್, ಅಸೌ, ಕಥಂ, ನ, ಅಶ್ರಾವಿ?

**ಅನ್ವಯಾರ್ಥ—**

**ಶ್ರದ್ಧೇಯಃ** = ಪ್ರಮಾಣತಮವೆಂದು ನಂಬಬೇಕಾಗಿರುವ,
**ವೇದಃ** = ವೇದವು,
**ಸರ್ವಜ್ಞಸ್ಯ** = ಭೂತ ಭವಿಷ್ಯದ್ ವರ್ತಮಾನ ಕಾಲಗಳ ಸಮಸ್ತ ವಸ್ತುಗಳ ಕೂಲಂಕಷಜ್ಞಾನವುಳ್ಳ ಈಶ್ವರನಿಗೆ,
**ಅಜ್ಞತಾಂ** = ಅಜ್ಞಾನಿತ್ವವನ್ನು,
**ವಿರುಣದ್ಧಿ ಚೇತ್** = ನಿಷೇಧಿಸುತ್ತದೆ (ವಿರೋಧಿಸುತ್ತದೆ) ಎಂದಾದರೆ,
**ತಸ್ಯ ಏವ** = ಅಂತಹ ಸರ್ವಜ್ಞನಾದ ಈಶ್ವರನಿಗೆಯೇ,
**ಅಮಂದಂ** = ಪೂರ್ಣವಾದ,
**ಆನಂದಂ** = ಸುಖವನ್ನು,
**ವದನ್** = ಹೇಳುವ,
**ಅಸೌ** = ಈ ವೇದವು,
**ಕಥಂ** = ಹೇಗೆ
**ನ ಅಶ್ರಾವಿ** = ಕೇಳಲ್ಪಡಲಿಲ್ಲ? (ವೇದವು ಈಶ್ವರನನ್ನು ಸರ್ವಜ್ಞನೆಂದು ಹೇಳುತ್ತದೆ. ಆದ ಕಾರಣ ಅವನಿಗೆ ಅಜ್ಞಾನವನ್ನು ಸಾಧಿಸಲು ಸಾಧ್ಯವಿಲ್ಲವೆಂದರೆ ಅದೇ ವೇದವು ಅವನೇ ಈಶ್ವರನು ಪೂರ್ಣಾನಂದನೆಂದು ಹೇಳುತ್ತದೆ, ಅದು ನಿನ್ನ ಕಿವಿಗೆ ಬೀಳಲಿಲ್ಲೇನು?)

**ತಾತ್ಪರ್ಯ—** ನೀವು, ನಾವು, ಎಲ್ಲರೂ ಪ್ರಮಾಣವೆಂದೂ, ಅತ್ಯಂತ ಪ್ರಮಾಣತಮವೆಂದೂ ನಂಬಿರುವ 'ಯಸ್ಸರ್ವಜ್ಞ ಸ್ಸರ್ವವಿತ್', ಇತ್ಯಾದಿ ವೇದವು ಈಶ್ವರನನ್ನು ಸರ್ವಜ್ಞನೆಂದು ನಿರ್ಧಾರವಾಗಿ ಹೇಳುವುದರಿಂದ, ಅದಕ್ಕೆ ವಿರುದ್ಧವಾಗಿ ವೇದಾಂತಿಗಳಾದ ನೀವು ಈಶ್ವರನು ಅಜ್ಞಾನಿಯೆಂದು ಆಪಾದಿಸಲು ಹೊರಟರೆ ವೇದವಿರುದ್ಧವಾದ ಅನುಮಾನವು, 'ಮನುಷ್ಯರ ತಲೆಬುರುಡೆ ಶುಚಿಯಾದುದು, ಪ್ರಾಣಿಯ ಅಂಗವಾದುದರಿಂದ ಶಂಖದಂತೆ' ಎಂಬ ಅನುಮಾನದಂತೆ ಬಾಧಿತವಾಗುತ್ತದೆ ಎಂದು ತಾರ್ಕಿಕನು ಆಕ್ಷೇಪಿಸುತ್ತಾನೆ.

ಹಾಗಾದರೆ ವೇದದಲ್ಲಿ ಸರ್ವಜ್ಞನೆಂದು ಹೇಳಿರುವ ಈಶ್ವರನಿಗೆಯೇ ಪರಿಪೂರ್ಣಾನಂದವನ್ನು ಹೇಳುವ ಅನೇಕ ಶ್ರುತಿಗಳಿವೆ. ''ಆನಂದಂ ಬ್ರಹ್ಮಣೋ ವಿದ್ವಾನ್, ನ ಬಿಭೇತಿ ಕದಾಚನೇತಿ, ಆನಂದೋ ಬ್ರಹ್ಮೇತಿ ವ್ಯಜಾನಾತ್, ಕೋಹ್ಯೇವಾನ್ಯಾತ್ ಕಃ ಪ್ರಾಣ್ಯಾತ್, ಯದೇಷ ಆಕಾಶ ಆನಂದೋ ನ ಸ್ಯಾತ್, ವಿಜ್ಞಾನಮಾನಂದಂ ಬ್ರಹ್ಮ, ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ'' ಇತ್ಯಾದಿ ವೇದವಾಕ್ಯಗಳು ನಿನ್ನ ಕಿವಿಗೆ ಬೀಳಲಿಲ್ಲವೇನು? ನೀನು 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಬಲದಿಂದ ಈಶ್ವರನಿಗೆ ಅಜ್ಞಾನವನ್ನು ಹೇಳಲು ಸಾಧ್ಯವಿಲ್ಲವೆಂದರೆ, ನಾವೂ ಕೂಡ 'ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದಿ ಶ್ರುತಿಬಲದಿಂದ ಈಶ್ವರನಲ್ಲಿ ಸಂಪೂರ್ಣಾನಂದಾದಿ ಗುಣಗಳಿವೆಯೆಂದು ಸಾಧಿಸುತ್ತೇವೆ. ಆಗ ನಿನಗೆ ನಮ್ಮ ಅನುಮಾನವನ್ನು ನಿರಾಕರಿಸಲು ಸಾಧ್ಯವಾಗುವುದಿಲ್ಲ. ನೀನು ಬರೇ ಯುಕ್ತಿಯಿಂದ ಈಶ್ವರನಲ್ಲಿ ಸುಖವಿಲ್ಲವೆಂದು ಸಾಧಿಸಿದರೆ ನಮಗೂ ಬರೇ ಯುಕ್ತಿಯಿಂದ ಈಶ್ವರನಲ್ಲಿ ಜ್ಞಾನವಿಲ್ಲವೆಂದು ಸಾಧಿಸಲು ಬರುತ್ತದೆ ಎಂದು ಆಕ್ಷೇಪಿಸಲಿಕ್ಕಾಗಿ ಸಾಧಿಸಿದೆವು. ನೀನು ವೇದದಿಂದ ಜ್ಞಾನವಿದೆಯೆಂದು ಸಾಧಿಸುವುದಾದರೆ ನಾವೂ ವೇದದಿಂದ ಈಶ್ವರನು ದುಃಖಾದಿ ದೋಷರಹಿತನೆಂದೂ, ಸುಖಜ್ಞಾನಾದಿಸಕಲಸದ್ಗುಣಪೂರ್ಣನೆಂದೂ ಸಾಧಿಸುತ್ತೇವೆ ಎಂದು ವೇದಾಂತಿಗಳು ಉತ್ತರ ಕೊಡುತ್ತಾರೆ ಎಂದು ತಾತ್ಪರ್ಯ.

**ವಿಗ್ರಹ—**

**ಸರ್ವಜ್ಞಸ್ಯ—** ಸರ್ವಂ ಜಾನಾತಿ ಇತಿ ಸರ್ವಜ್ಞಃ ತಸ್ಯ ।

**ಅಜ್ಞತಾಂ—** ನ ಜಾನಾತೀತಿ ಅಜ್ಞಃ, ಅಜ್ಞಸ್ಯ ಭಾವಃ ಅಜ್ಞತಾ ತಾಂ ಅಜ್ಞತಾಂ ।

**ಶ್ರದ್ಧೇಯಃ—** ಶ್ರದ್ಧಾತುಂ ಯೋಗ್ಯಃ ಶ್ರದ್ಧೇಯಃ ।

**ಅಮಂದಃ—** ನ ಮಂದಃ ಅಮಂದಃ ತಂ ।

**ಕ್ರಿಯಾಪದ— ವಿರುಣದ್ಧಿ** - ವಿ+(ನಿ)+ರುಣದ್ಧಿ, ರುಂಧಃ ರುಂಧತಿ, ರುಣತ್ಸಿ ರುಂಧಃ ರುಂಧ, ರುಣಧ್ಮಿ ರುಂಧ್ವಃ ರುಂಧ್ಮಃ । ರುಧಿರ್ ಆವರಣೇ, ನಿ + (ಅಥವಾ ವಿ) ಉಪಸರ್ಗ, ದ್ವಿಕ. ಅನಿಟ್, ಉಭಯ. to obstruct, to prevent, to besiege, ಲಟ್ (ಪರಸ್ಮೈ) ಪ್ರಥಮಪುರುಷೇ ಏಕವಚನ ।

**ಅಶ್ರಾವಿ** - ಅಶ್ರಾವಿ ಅಶ್ರಾವಿಷಾತಾಂ ಆಶ್ರಾವಿಷತ, ಅಶ್ರಾವಿಷ್ಠಾಃ ಅಶ್ರಾವಿಷಾಥಾಂ ಅಶ್ರಾವಿಢ್ವಂ, ಅಶ್ರಾವಿಧ್ವಂ, ಅಶ್ರಾವಿಷಿ ಅಶ್ರಾವಿಷ್ವಹಿ ಅಶ್ರಾವಿಷ್ಮಹಿ । ಶ್ರು ಶ್ರವಣೇ ಸಕ ಅನಿ ಪರ to hear ಕರ್ಮಣಿ ಲುಙ್ ಆತ್ಮನೇಪದಂ ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ಶ್ರದ್ಧೇಯೇನ ವೇದೇನ ಸರ್ವಜ್ಞಸ್ಯ ಅಜ್ಞತಾ ನಿರುಧ್ಯತೇ ಚೇತ್, ತಸ್ಯೈವ ಅಮಂದಂ ಆನಂದಂ ವದಂತಂ ಅಮುಂ (ವೇದಂ) ತ್ವಂ ಕಥಂ ನಾಶ್ರೌಷೀಃ?

★ ★ ★

**ಅವತಾರಿಕಾ—** ''ಈಶ್ವರನಲ್ಲಿ ಸುಖವಿದೆಯೆಂದು ನಾವು ಒಪ್ಪುವುದಿಲ್ಲ. ಅವನು ಸುಖಿಯಾದರೆ ದುಃಖಿಯಾಗಲೇ-ಬೇಕು. 'ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದಿ ಶ್ರುತಿಯಿಂದ ಈಶ್ವರನಲ್ಲಿ ದುಃಖವಿಲ್ಲವೆಂದು ಸಿದ್ಧಿಸುತ್ತದೆಯೇ ಹೊರತು ಸುಖವಿದೆಯೆಂದು ಸಿದ್ಧಿಸುವುದಿಲ್ಲ. ಶ್ರುತಿಯಲ್ಲಿರುವ 'ಆನಂದ' ಎಂಬ ಪದಕ್ಕೆ 'ದುಃಖಾಭಾವ' ಎಂದೇ ಅರ್ಥ. ಸುಖವೆಂದು ಅರ್ಥವಲ್ಲ. ಸುಖ ಬೇರೆ, ದುಃಖಾಭಾವ ಬೇರೆ ಎಂಬ ತಾರ್ಕಿಕದ ಆಕ್ಷೇಪವನ್ನು ನಿರಾಕರಿಸುತ್ತಾರೆ''.

**ದುಃಖಂ ಪರಿಜಿಹೀರ್ಷನ್ ಯಃ ಸುಖಂ ನೋರೀಚಿಕೀರ್ಷತಿ ।**

**(ನಾಂಗೀಚಿಕೀರ್ಷತಿ)**

**ಸ ಹಂತಾಪತಿತಂ ದುಃಖಮೀಶಸ್ಯ ವ್ಯಸ್ಮರಜ್ಜಡಃ ॥ 19 ॥**

**ಪದಚ್ಛೇದ—** ದುಃಖಂ, ಪರಿಜಿಹೀರ್ಷನ್, ಯಃ ಸುಖಂ ನ, ಊರೀಚಿಕೀರ್ಷತಿ, (ನ ಅಂಗಿಚಿಕೀರ್ಷತಿ), ಸಃ, ಹಂತ, ಆಪತಿತಂ, ದುಃಖಂ, ಈಶಸ್ಯ, ವ್ಯಸ್ಮರತ್, ಜಡಃ ।

**ಅನ್ವಯ—** ಯಃ, ಈಶಸ್ಯ, ದುಃಖಂ, ಪರಿಜಿಹೀರ್ಷನ್, ಸುಖಂ, ನ ಊರೀಚಿಕೀರ್ಷತಿ (ಅಂಗೀಚಿಕೀರ್ಷತಿ), ಸಃ, ಜಡಃ, ಈಶಸ್ಯ, ಆಪತಿತಂ, ದುಃಖಂ, ವ್ಯಸ್ಮರತ್, ಹಂತ ।

**ಅನ್ವಯಾರ್ಥ—**

**ಯಃ** = ಯಾವನು,

**ಈಶಸ್ಯ** = ಸರ್ವನಿಯಾಮಕನಾದ ಪರಮಾತ್ಮನಿಗೆ,

**ದುಃಖಂ** = ದುಃಖವನ್ನು,

**ಪರಿಜಿಹೀರ್ಷನ್** = ಪರಿಹರಿಸಲು ಇಚ್ಛಿಸುವವನಾಗಿ,

**ಸುಖಂ** = ಸುಖವನ್ನು,

**ನ ಊರೀಚಿಕೀರ್ಷತಿ** = ಅಂಗೀಕರಿಸಲು ಇಚ್ಛಿಸುವುದಿಲ್ಲವೋ,

**ಸಃ ಜಡಃ** = ಆ ಮಂದಬುದ್ಧಿಯುಳ್ಳವನು (ಈಶಸ್ಯ = ಪರಮಾತ್ಮನಿಗೆ)

**ಆಪತಿತಂ** = ಬಲಾತ್ಕಾರದಿಂದ ಬಂದಿರುವ,

**ದುಃಖಂ** = ದುಃಖವನ್ನು,

**ವ್ಯಸ್ಮರತ್** = ಮರೆತನು.

**ಹಂತ** = ಆಹಾ! ಮೂರ್ಖತನವು!

**ತಾತ್ಪರ್ಯ—** ಈಶ್ವರನೂ ಒಬ್ಬ ಚೇತನನೆಂದೂ ಎಲ್ಲರೂ, ತಾರ್ಕಿಕನೂ ಸಹ ಒಪ್ಪಿಕೊಳ್ಳಲೇಬೇಕಷ್ಟೆ! ಎಲ್ಲರೂ ಒಪ್ಪಿಕೊಂಡೇ ಇರುತ್ತಾರೆ. ಲೋಕದಲ್ಲಿ ಪ್ರತಿಯೊಬ್ಬ ಚೇತನನಿಗೂ ಸುಖ ಅಥವಾ ದುಃಖ ಇವೆರಡರಲ್ಲಿ ಒಂದು ಇರಲೇಬೇಕು. ಹಾಗೆ ಇರುವುದೇ ಎಲ್ಲಾ ಕಡೆ ಕಂಡಿದೆ. ಲೋಕದಲ್ಲಿ ದೇವದತ್ತಾದಿಗಳು ಸುಖ ಹಾಗೂ ದುಃಖ ಇವೆರಡರಲ್ಲಿ ಒಂದನ್ನು ಹೊಂದಿಯೇ ಇರುತ್ತಾರೆ. ಸುಖ ಅಥವಾ ದುಃಖ ಇವೆರಡರಲ್ಲಿ ಒಂದನ್ನು ಹೊಂದಿರುವುದಿಲ್ಲವೋ ಅದು ಚೇತನವೇ ಅಲ್ಲ. ಮಡಿಕೆ, ಬಟ್ಟೆ, ಕಲ್ಲು ಮುಂತಾದುವುಗಳು ದೃಷ್ಟಾಂತ. ''ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ'' ''ಸುಖದ ಅನಂತರ ದುಃಖ, ದುಃಖದ ಅನಂತರ ಸುಖ'' ಎಂಬ ಆಗಮದಿಂದಲೂ, ಎಲ್ಲಾ ಜೀವರ ಅನುಭವ ಬಲದಿಂದಲೂ ಚೇತನನಾಗಿರುವ ಪ್ರತಿಯೊಬ್ಬನಿಗೂ ಸುಖವಿಲ್ಲದಿದ್ದರೆ ದುಃಖ, ದುಃಖವಿಲ್ಲದಿದ್ದರೆ ಸುಖವು ಇದ್ದೇ ತೀರಬೇಕು. ಈಶ್ವರನಿಗೆ ಸುಖವಿಲ್ಲ ಎನ್ನುವುದಾದರೆ ಇಷ್ಟವಿಲ್ಲದಿದ್ದರೂ ಬಲಾತ್ಕಾರದಿಂದ ಅವನಿಗೆ ದುಃಖವಿದೆಯೆಂದು ಸಿದ್ಧಿಸುತ್ತದೆ. ಹಾಗೆ ದುಃಖವಿದೆಯೆಂದು ಒಪ್ಪುವುದಕ್ಕಿಂತ ಈಶ್ವರನು ದುಃಖರಹಿತನು. ಆನಂದಪೂರ್ಣನು ಎಂದು ಒಪ್ಪುವುದು ಉಚಿತವು. ಆದುದರಿಂದ ಈಶ್ವರನಿಗೆ ಸುಖವಿದೆ ಎಂದು ಒಪ್ಪಿದರೆ ದುಃಖವೂ ಇರಬೇಕಾಗುತ್ತದೆ. ಆದುದರಿಂದ ''ಈಶ್ವರನಿಗೆ ಸುಖವಿಲ್ಲ. ಈಶ್ವರನು ಪರಮಾನಂದಸ್ವರೂಪನು'' ಎಂದು ಹೇಳುವ ಶ್ರುತಿಯು ದುಃಖಾಭಾವ ವಿದೆಯೆಂದು ಹೇಳುತ್ತದೆಯೇ ಹೊರತು ಸುಖವಿದೆಯೆಂದು ಹೇಳುವುದಿಲ್ಲ. ಆದ್ದರಿಂದ ''ಈಶ್ವರನು ದುಃಖರಹಿತ-ನಾದ್ದರಿಂದ ಸುಖವುಳ್ಳವನಲ್ಲ ಎಂಬ ಅನುಮಾನಕ್ಕೆ ನೀವು (ವೇದಾಂತಿಗಳು) ಬಾಧ ದೋಷ ಹೇಳಿದುದು ಸರಿಯಲ್ಲ'' ಎಂಬ ತಾರ್ಕಿಕರ ಆಕ್ಷೇಪವು ಇದರಿಂದ ಪರಿಹೃತವಾಯಿತು.

**ವಿಗ್ರಹ ಮತ್ತು ಕೋಶ—**

**ಪರಿಜಿಹೀರ್ಷನ್—** ಪರಿಹರ್ತುಂ ಇಚ್ಛನ್ ಪರಿಜಿಹೀರ್ಷನ್ ।

**ಊರಿಚಿಕೀರ್ಷತಿ**— ಕರ್ತುಂ ಇಚ್ಛತಿ ಚಿಕೀರ್ಷತಿ, ಅನೂರೀ ಊರೀ ಸಂಪದ್ಯಮಾನಂ ಚಿಕೀರ್ಷತಿ ಊರೀಚಿಕೀರ್ಷತಿ । ಊರೀ = ವಿಸ್ತಾರ, ಅಂಗೀಕಾರ, Extensively, granted, agreed. 'ಊರಯ್ಯೂರೀ ಚೋರರೀ ಚ ವಿಸ್ತಾರೇಽಂಗೀಕೃತೌ ತ್ರಯಂ' ಅಮರ

**ಅಂಗೀಚಿಕೀರ್ಷಿತಿ**—(ಅನಂಗಂ ಅಂಗಂ ಸಂಪದ್ಯಮಾನಂ ಚಿಕೀರ್ಷತಿ ಅಂಗೀಚಿಕೀರ್ಷತಿ, ಕೃಭ್ವಸ್ತಿಯೋಗೇ ಸಂಪದ್ಯಕರ್ತರಿ ಚ್ವಿಃ (5-4-50) ಎಂಬ ಸೂತ್ರದಿಂದ ಅಭೂತತದ್ಭಾವ ಇತಿ ವ್ಯಕ್ತವ್ಯಂ (ವಾ. 3340) ಎಂಬ ವಾರ್ತಿಕದಲ್ಲಿ ಹೇಳಿದ ಅರ್ಥದಲ್ಲಿ ಚ್ವಿಪ್ರತ್ಯಯ)

**ಕ್ರಿಯಾಪದ**— **ಚಿಕೀರ್ಷಿತಿ** - ಚಿಕೀರ್ಷತಿ ಚಿಕೀರ್ಷತಃ ಚಿಕೀರ್ಷಂತಿ ಇತ್ಯಾದಿ ಡುಕೃಞ್‌ಕರಣೇ ಸನ್ನಂತ ಲಟ್ ಧಾತೋಃ ಕರ್ಮಣಃ ಸಮಾನಕರ್ತೃಕಾದಿಚ್ಛಾಯಾಂ ವಾ ಎಂಬ ಸೂತ್ರದಿಂದ ಸನ್.

**ವ್ಯಸ್ಮರತ್** - ವಿ + ಅಸ್ಮರತ್ ಅಸ್ಮರತಾಂ ಅಸ್ಮರನ್, ಅಸ್ಮರಃ ಅಸ್ಮರತಂ ಅಸ್ಮರತ, ಅಸ್ಮರಂ ಅಸ್ಮರಾವ ಅಸ್ಮರಾಮ । ಸ್ಮೃ ಚಿಂತಾಯಾಂ, ಸಕ ಅನಿ ಪರ to remember ವಿ ಉಪಸರ್ಗ, ಅನದ್ಯತನಭೂತೇ ಲಙ್ ।

**ಪ್ರಯೋಗ**— ದುಃಖಂ ಪರಿಜಿಹೀರ್ಷತಾ ಯೇನ ಸುಖಂ ನ ಊರೀಚಿಕೀರ್ಷ್ಯತೇ, ಜಡೇನ ತೇನ ಆಪತಿತಂ ಈಶಸ್ಯ ದುಃಖಂ ವ್ಯಸ್ಮರ್ಯತ ಹಂತ ।

★ ★ ★

**ಅವತಾರಿಕಾ**— ಹೀಗೆ ಈಶ್ವರನು ಸುಖಾದಿರಹಿತನು ದುಃಖರಹಿತನಾದುದರಿಂದ ಎಂಬ ಅನುಮಾನಕ್ಕೆ ಬಾಧವೆಂಬ ದೋಷವನ್ನು ಹೇಳಿದರು. (ಪಕ್ಷದಲ್ಲಿ ಸಾಧ್ಯವಾದುದು ಇಲ್ಲದಿರುವುದೇ ಬಾಧವು. ಇಲ್ಲಿ ಸುಖಾದಿರಾಹಿತ್ಯ (ಅಂದರೆ) ಸುಖಾದಿಗಳ ಅಭಾವವು ಈಶ್ವರನಲ್ಲಿ ಇಲ್ಲವಾದುದರಿಂದ ಬಾಧವು) ಪರಕೀಯರ ಆ ಅನುಮಾನಕ್ಕೆ ಪರರ ರೀತಿಯಿಂದಲೇ ಅಸಿದ್ಧಿಯನ್ನು ಹೇಳುತ್ತಾರೆ. ಪಕ್ಷದಲ್ಲಿ ಹೇತುವು ಇಲ್ಲದಿರುವುದೇ ಅಸಿದ್ಧಿಯು. ಇಲ್ಲಿ ದುಃಖರಹಿತತ್ವ-ದುಃಖವಿಲ್ಲದಿರುವಿಕೆ ಎಂಬುದು ಈಶ್ವರನಲ್ಲಿ ಪರರೀತಿಯಲ್ಲಿ ಕೂಡುವುದಿಲ್ಲವಾದುದರಿಂದ ಪಕ್ಷದಲ್ಲಿ ಹೇತುವಿನ ಅಭಾವವು ಬಂದು ಅಸಿದ್ಧಿಯುಂಟಾಗುತ್ತದೆ ಎಂದು ಹೇಳುತ್ತಾರೆ.

**ಯೋ ದುಃಖಸಮವಾಯೋಽಯಂ ಚೈತ್ರೇ ತೇನ ಹ್ಯಭೇದವಾನ್ ।**
**ಸಮವಾಯಃ ಕಶ್ಚಿದೀಶೇ ತದನೇಕತ್ವಮನ್ಯಥಾ ॥ 20 ॥**

**ಪದಚ್ಛೇದ**— ಯಃ, ದುಃಖಸಮವಾಯಃ, ಅಯಂ, ಚೈತ್ರೇ, ತೇನ, ಹಿ, ಅಭೇದವಾನ್, ಸಮವಾಯಃ, ಕಶ್ಚಿತ್, ಈಶೇ, ತದನೇಕತ್ವಂ, ಅನ್ಯಥಾ ।

**ಅನ್ವಯ**— ಚೈತ್ರೇ, ಯಃ, ಅಯಂ, ದುಃಖಸಮವಾಯಃ, ತೇನ, ಅಭೇದವಾನ್, ಕಶ್ಚಿತ್, ಸಮವಾಯಃ, ಈಶೇ, ಹಿ, ಅನ್ಯಥಾ, ತದನೇಕತ್ವಂ, ಸ್ಯಾತ್ ।

**ಅನ್ವಯಾರ್ಥ**—

**ಚೈತ್ರೇ** = ಚೈತ್ರನೆಂಬ ಸಂಸಾರಿಯಲ್ಲಿ,
**ಯಃ** = ಯಾವ,
**ಅಯಂ** = ಈ ಪ್ರಸಿದ್ಧವಾದ,
**ದುಃಖಸಮವಾಯಃ** = ದುಃಖದ ಸಮವಾಯವೆಂಬ ಸಂಬಂಧವಿದೆಯೋ,
**ತೇನ** = ಆ ಸಮವಾಯದಿಂದ,

**ಅಭೇದವಾನ್** = ಅಭೇದವುಳ್ಳ (ಅದೇ ಆಗಿರುವ, ಭೇದವಿಲ್ಲದ)

**ಕಶ್ಚಿತ್** = ಯಾವುದೋ ಒಂದು,

**ಸಮವಾಯಃ** = ಜ್ಞಾನಾದಿ ಸಮವಾಯ ಸಂಬಂಧವು,

**ಈಶೇ** = ಈಶ್ವರನಲ್ಲಿ,

**ಹಿ** = (ಇದೆಯೆಂದು ಪ್ರಸಿದ್ಧವಾಗಿದೆಯಷ್ಟೆ!) ಯಾವ ಕಾರಣದಿಂದ ಇದೆಯೋ ಅದರಿಂದ ಈಶ್ವರನೂ, ದುಃಖಸಮವಾಯ ಸಂಬಂಧವುಳ್ಳವನಾಗಿ ದುಃಖಿಯೇ ಆದನು.

**ಅನ್ಯಥಾ** = ಸಂಸಾರಿಯಲ್ಲಿರುವ ದುಃಖಸಮವಾಯಕ್ಕೂ, ಈಶ್ವರನಲ್ಲಿರುವ ಜ್ಞಾನ ಇಚ್ಛಾಕೃತಿಗಳ ಸಮ-ವಾಯಕ್ಕೂ ಭೇದವಿದೆಯೆಂದು ಒಪ್ಪುವುದಾದರೆ,

**ತದನೇಕತ್ವಂ** = ಆ ಸಮವಾಯವೆಂಬ ಸಂಬಂಧಕ್ಕೆ ಅನೇಕತ್ವವು (ಸ್ಯಾತ್ = ಬಂದೀತು) ಸಮವಾಯ-ಸಂಬಂಧವು ಒಂದೇ ಆಗಲಾರದು ಅನೇಕವಾದೀತು.

**ತಾತ್ಪರ್ಯ**— ತಾರ್ಕಿಕರು ಸಮವಾಯವೆಂಬ ಒಂದು ಪದಾರ್ಥವನ್ನು ಒಪ್ಪುತ್ತಾರೆ. ಸಮವಾಯ ಎಂದರೆ ಒಂದು ಸಂಬಂಧ. ಇದು ಒಂದನ್ನು ಮತ್ತೊಂದು ಬಿಟ್ಟು ಅಗಲದೆ ಇರುವ ಎರಡು ಪದಾರ್ಥಗಳಿಗೆ ಇರುವ ಸಂಬಂಧ. ಘಟಪಟ ಮುಂತಾದ ಅವಯವಿಗಳಿಗೂ ಕಪಾಲ ತಂತು ಮುಂತಾದ ಅವಯವಗಳಿಗೂ, ಪೃಥಿವೀ ಮುಂತಾದ ದ್ರವ್ಯಗಳಿಗೂ ಅವುಗಳಲ್ಲಿರುವ ರೂಪಾದಿ ಗುಣಗಳು ಮತ್ತು ಚಲನಾದಿ ಕರ್ಮಗಳಿಗೂ ಹಾಗೂ ದ್ರವ್ಯ, ಗುಣ, ಕರ್ಮಗಳಿಗೂ ಅವುಗಳಿರುವ ದ್ರವ್ಯತ್ವ, ಪೃಥಿವೀತ್ವ, ರೂಪತ್ವ, ರಸತ್ವ, ಕರ್ಮತ್ವ, ಚಲನತ್ವ ಮುಂತಾದ ಜಾತಿಗಳಿಗೂ, ಪರಮಾಣುವೆಂಬ ಸೂಕ್ಷ್ಮವಾದ ನಿತ್ಯದ್ರವ್ಯಗಳು ಮತ್ತು ಅವುಗಳಲ್ಲಿರುವ ವಿಶೇಷ ಪದಾರ್ಥಗಳಿಗೂ ಸಮವಾಯ ಎಂಬ ಸಂಬಂಧವಿದೆ ಎಂದು ತಾರ್ಕಿಕರು ಹೇಳುತ್ತಾರೆ. ಮೇಲೆ ಹೇಳಿದ ಪದಾರ್ಥಗಳನ್ನು ಅಯುತಸಿದ್ಧಗಳೆಂದು ಹೇಳುತ್ತಾರೆ. ಅಯುತಸಿದ್ಧ ಪದಾರ್ಥಗಳಿಗೆ ಸಮವಾಯವೇ ಸಂಬಂಧವು. ಸಮವಾಯವು ನಿತ್ಯವು. ಸಂಬಂಧಿಯಾದ ವಸ್ತುವು ನಾಶವಾದರೂ ನಾಶವಾಗುವುದಿಲ್ಲ ಮತ್ತು ಈ ಸಮವಾಯವು ಒಂದೇ ಆಗಿದೆ. ಘಟ ಮತ್ತು ಅದರ ರೂಪಕ್ಕೆ ಇರುವ ಸಮವಾಯ ಸಂಬಂಧವೂ, ಪಟ ಮತ್ತು ಅದರ ರೂಪಕ್ಕೆ ಇರುವ ಸಮಯವಾಯ ಸಂಬಂಧವೂ ಬೇರೆಯಲ್ಲ ಎಂದು ವೈಶೇಷಿಕರ ಮತ.

ತಾರ್ಕಿಕರ ಈ ಸಿದ್ಧಾಂತದಂತೆ ವಿಚಾರ ಮಾಡಿದಾಗ ಈಶ್ವರನು ದುಃಖರಹಿತನಾದ್ದರಿಂದ ಅವನು ಸುಖವುಳ್ಳವನಲ್ಲ ಎಂಬ ಅವರ ಅನುಮಾನದಲ್ಲಿ ಸ್ವರೂಪಾಸಿದ್ಧಿ ಎಂಬ ದೋಷವು ಬರುತ್ತದೆ. ಈಶ್ವರನು ದುಃಖವಿಲ್ಲದವನು ಎಂಬ ಹೇತುವು ಈಶ್ವರನಲ್ಲಿ ಬರುವುದಿಲ್ಲ. ಈಶ್ವರನು ದುಃಖವುಳ್ಳವನೇ ಆಗಬೇಕಾಗುತ್ತದೆ.

ಚೈತ್ರನೆಂಬ ಒಬ್ಬ ಜೀವನಲ್ಲಿ ದುಃಖವೆಂಬ ಗುಣದ ಸಮವಾಯ ಎಂಬ ಸಂಬಂಧವಿದೆ. ಈಶ್ವರನಲ್ಲಿ ಜ್ಞಾನ ಇಚ್ಛಾ ಪ್ರಯತ್ನವೆಂಬ ಗುಣಗಳ ಸಮವಾಯ ಸಂಬಂಧವಿದೆ. ತಾರ್ಕಿಕರ ಮತದಂತೆ ಈ ಎರಡು ಸಮವಾಯಗಳೂ ಒಂದೇ ಆಗಿವೆ. ಆಗ ಚೈತ್ರನಲ್ಲಿರುವ ದುಃಖಸಮವಾಯ ಮತ್ತು ಈಶ್ವರನಲ್ಲಿರುವ ಜ್ಞಾನಾದಿ ಸಮವಾಯಗಳು ಒಂದೇ ಆಗುತ್ತವೆ. ಹೀಗೆ ಪರಮಾತ್ಮನಲ್ಲಿಯೂ ದುಃಖಸಮವಾಯವು ಬರುತ್ತದೆ. ದುಃಖಸಮವಾಯವು ಬಂದರೆ ಪರಮಾತ್ಮನೂ ದುಃಖವುಳ್ಳವನೇ ಎಂದಾಯಿತು. ಆಗ ಈಶ್ವರನು ದುಃಖರಹಿತನಾದುದರಿಂದ ಸುಖವುಳ್ಳವನಲ್ಲ ಎಂಬ ತಾರ್ಕಿಕರ ಅನುಮಾನದಲ್ಲಿ ದುಃಖರಹಿತನು ಎಂಬ ಹೇತುವು ಪಕ್ಷನಾಗಿರುವ ಈಶ್ವರನಲ್ಲಿ ಬರುವುದಿಲ್ಲ, ಪಕ್ಷದಲ್ಲಿ ಹೇತುವೇ ಇಲ್ಲದಿರುವುದು ಎಂಬ ಸ್ವರೂಪಾಸಿದ್ಧಿದೋಷವು ತಾರ್ಕಿಕನ ಅನುಮಾನಕ್ಕೆ ಬರುತ್ತದೆ.

ಸಮವಾಯವೆಂಬ ಸಂಬಂಧವು ಒಂದೇ ಅಲ್ಲ, ಅದು ವ್ಯಕ್ತಿಭೇದದಿಂದ ಬೇರೆ ಬೇರೆ ಎಂದು ಒಪ್ಪಿದರೆ ಈ ದೋಷವು ಬರುವುದಿಲ್ಲ. ಆದರೆ ಹೀಗೆ ಒಪ್ಪಿದರೆ ಸಮವಾಯವು ಅನೇಕ ವಸ್ತುಗಳಲ್ಲಿ ಒಂದೇ ಇರುತ್ತದೆ ಎಂಬ ತಾರ್ಕಿಕರ ಸಿದ್ಧಾಂತಕ್ಕೆ ವಿರುದ್ಧವಾದ ಅಂಶವನ್ನು ಒಪ್ಪಿಕೊಳ್ಳುವುದು ಅಪಸಿದ್ಧಾಂತ ಎನಿಸಿಕೊಳ್ಳುತ್ತದೆ. ಹೀಗೆ ತಾರ್ಕಿಕರ ಯುಕ್ತಿಯಲ್ಲಿ

ನೋಷವನ್ನು ತೋರಿಸುವ ಸಲುವಾಗಿ ಈಶ್ವರನು ದುಃಖವುಳ್ಳವನಾಗುತ್ತಾನೆ ಎಂದು ಆಪಾದನೆ ಮಾಡಿದ್ದೇವೆ. ನಿರ್ದೋಷನಾದ ಈಶ್ವರನಲ್ಲಿ ದುಃಖವನ್ನು ಸಾಧಿಸಲು ವೇದಾಂತಿಗಳಾದ ನಾವು ಹೊರಟಿಲ್ಲ ಎಂದು ತಿಳಿಯಬೇಕು.

**ವಿಶೇಷಾಂಶ—** ''ಸಮವಾಯಸ್ತು ಸಂಬಂಧೋ ನಿತ್ಯಃ ಸ್ಯಾದೇಕ ಏವ ಸಃ'' ''ಸಮವಾಯಸ್ತ್ವೇಕ ಏವ'' ಎಂದು ತಾರ್ಕಿಕರು ಸಮವಾಯವನ್ನು ನಿತ್ಯವೆಂದೂ, ಅದು ಒಂದೇ ಎಂದೂ ಒಪ್ಪಿರುತ್ತಾರೆ. ''ತದನೇಕತ್ವಂ = ಸಮವಾಯಸ್ಯ ಅನೇಕತ್ವಂ'' (ಭಾವಪ್ರಕಾಶಿಕಾ) ಚೈತ್ರನಲ್ಲಿರುವ ದುಃಖಸಮವಾಯವೂ, ಈಶ್ವನರಲ್ಲಿರುವ ಜ್ಞಾನಾದಿ ಸಮವಾಯವೂ ಬೇರೆ ಬೇರೆ ಎಂದು ಒಪ್ಪಿದರೆ ಸಮವಾಯವು ಅನೇಕವಾಗುತ್ತದೆ. ಆಗ ಅಪಸಿದ್ಧಾಂತ ದೋಷವು ಬರುತ್ತದೆ ಎಂದು ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ ಶ್ರೀಮನ್ನಾರಾಯಣಪಂಡಿತಾಚಾರ್ಯರೇ ಸೂಚಿಸಿರುತ್ತಾರೆ.

**ವಿಗ್ರಹ—**

**ದುಃಖಸಮವಾಯಃ—** ದುಃಖಸ್ಯ ಸಮವಾಯಃ ದುಃಖಸಮವಾಯಃ ।

**ಅಭೇದವಾನ್—** ಅಭೇದಃ ಅಸ್ಯ ಅಸ್ತಿತಿ ಅಭೇದವಾನ್ ।

**ತದನೇಕತ್ವಂ—** ತಸ್ಯ ಅನೇಕತ್ವಂ ತದನೇಕತ್ವಂ ।

**ಪ್ರಯೋಗ—** ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ. ಆದರೆ ಭವತಿ, ಅಸ್ತಿ ಕ್ರಿಯೆಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಚೈತ್ರೇ ಯೇನ ಅನೇನ ದುಃಖಸಮವಾಯೇನ ಭೂಯತೇ ತೇನ ಅಭೇದವತಾ ಕೇನಚಿತ್ ಸಮವಾಯೇನ ಈಶೇ ಭೂಯತೇ ಹಿ, ಅನ್ಯಥಾ ತದನೇಕತ್ವೇನ ಭೂಯತೇ ।

★ ★ ★

**ಅವತಾರಿಕಾ—** ಸಮವಾಯವು ಒಂದೇ, ಆದರೂ ಚೈತ್ರ ಮೈತ್ರ ಮುಂತಾದ ಉಪಾಧಿ ಭೇದದಿಂದದು ಬೇರೆ-ಯಾಗಿ ಕಾಣಿಸುತ್ತದೆ. ಇದು ಔಪಾಧಿಕ ಭೇದ. ವಾಸ್ತವವಾದ ಭೇದವಲ್ಲ. ಹೀಗೆ ಜೀವನಲ್ಲಿ ದುಃಖಸಮವಾಯವಿದ್ದರೂ ಈಶ್ವರನಲ್ಲಿರುವ ಜ್ಞಾನಸಮವಾಯಕ್ಕೂ ಜೀವಾತ್ಮನಲ್ಲಿರುವ ದುಃಖಸಮವಾಯಕ್ಕೂ ಭೇದವಿರುವುದರಿಂದ ಈಶ್ವರನಲ್ಲಿ ದುಃಖವಿಲ್ಲವಾದುದರಿಂದ ಈಶ್ವರನು ದುಃಖರಹಿತನು ಎಂಬ ನನ್ನ ಯುಕ್ತಿಯಲ್ಲಿ ಅಸಿದ್ಧಿದೋಷವು ಬರುವುದಿಲ್ಲ ಎಂದು ತಾರ್ಕಿಕನು ಆಕ್ಷೇಪಿಸಿದರೆ ಅದಕ್ಕೆ ಉತ್ತರವನ್ನು ಹೇಳುತ್ತಾರೆ.

**ಔಪಾಧಿಕೋಽಸ್ಯ ಭೇದಶ್ಚೇತ್ ಸತ್ಯೋಽಸತ್ಯಃ ಸ್ವಿದುಚ್ಯತಾಮ್ ।**
**ತದ್ದ್ವಯಂ ಚೋಕ್ತದೋಷಂ ಹಿ ಮಾಯಿವನ್ಮಾ ವದೇತ್ ಪರಮ್ ॥ 21 ॥**

**ಪದಚ್ಛೇದ—** ಔಪಾಧಿಕಃ, ಅಸ್ಯ, ಭೇದಃ, ಚೇತ್, ಸತ್ಯಃ, ಅಸತ್ಯಃ, ಸ್ವಿತ್, ಉಚ್ಯತಾಂ, ತತ್ ದ್ವಯಂ, ಚ ಉಕ್ತದೋಷಂ, ಹಿ, ಮಾಯಿವತ್, ಮಾ, ವದೇತ್, ಪರಮ್ ।

**ಅನ್ವಯ—** ಅಸ್ಯ, ಔಪಾಧಿಕಃ, ಭೇದಃ, ಚೇತ್, ಸಃ, ಸತ್ಯಃ (ಸ್ವಿತ್), ಅಸತ್ಯಃ, ಸ್ವಿತ್, ಉಚ್ಯತಾಂ, ತತ್‌ದ್ವಯಂ, ಚ ಉಕ್ತದೋಷಂ, ಹಿ, ಮಾಯಿವತ್, ಪರಂ, ಮಾ, ವದೇತ್ ।

**ಅನ್ವಯಾರ್ಥ—**

**ಅಸ್ಯ** = ಈ ಸಮವಾಯಕ್ಕೆ,

**ಔಪಾಧಿಕಃ** = ಉಪಾಧಿಯಿಂದ ಉಂಟಾದ,

**ಭೇದಃ ಚೇತ್** = ಭೇದವು ಅಂಗೀಕರಿಸಲ್ಪಡುವುದಾದರೆ,

**(ಸಃ = ಆ ಭೇದವು) ಸತ್ಯಃ ಸ್ವಿತ್** = ಸತ್ಯವೋ (ಪಾರಮಾರ್ಥಿಕವೋ),

ಅಸತ್ಯಃ ಸ್ವಿತ್ = ಅಸತ್ಯವೋ (ಅಪಾರಮಾರ್ಥಿಕವೋ ಮಿಥ್ಯಾಭೂತವಾದುದೋ),

ಉಚ್ಯತಾಂ = ಹೇಳಲ್ಪಡಲಿ.

ತದ್‌ದ್ವಯಂ ಚ = ಆ ಎರಡು ಪಕ್ಷಗಳೂ,

ಉಕ್ತದೋಷಂ ಹಿ = (ಅಸ್ಮಾಭಿಃ = ನಮ್ಮಿಂದ) ಹಿಂದೆ ಹೇಳಲ್ಪಟ್ಟ ದೋಷವುಳ್ಳವುಗಳೇ ಆಗಿವೆ.

ಮಾಯಿವತ್ = ಮಾಯಾವಾದಿಯಂತೆ (ಅದ್ವೈತಿಯಂತೆ)

ಪರಂ = ಈ ಭೇದವು ಸತ್ಯವೂ ಅಲ್ಲ ಅಸತ್ಯವೂ ಅಲ್ಲ. 'ಸದಸದ್ವಿಲಕ್ಷಣ' ಎಂಬ ಪಕ್ಷವನ್ನು,

ಮಾ ವದೇತ್ = ಹೇಳಕೂಡದು.

ತಾತ್ಪರ್ಯ— ಆಕಾಶವು ಒಂದೇ ಆಗಿದೆ. ಆದರೂ ಘಟ ಮಠ ಮುಂತಾದ ಉಪಾಧಿಗಳು ಬೇರೆ ಬೇರೆಯಾಗಿರುವುದರಿಂದ ಘಟಾಕಾಶ, ಮಠಾಕಾಶ ಎಂದು ಭೇದವನ್ನು ಹೇಳುತ್ತಾರೆ. ಅದರಂತೆ ಅನೇಕ ವಸ್ತುಗಳಲ್ಲಿರುವ ಸಮವಾಯವು ಒಂದೇ ಆದರೂ ಚೈತ್ರ ಮೈತ್ರ ಈಶ್ವರ ಮುಂತಾದ ಉಪಾಧಿ (ಆಶ್ರಯಗಳ) ಭೇದದಿಂದ ಆ ಸಮವಾಯವು ಬೇರೆ ಬೇರೆಯಾಗುತ್ತದೆ. ಆದ್ದರಿಂದ ಚೈತ್ರನಲ್ಲಿರುವ ದುಃಖಸಮವಾಯವು ನೀವು ಹೇಳುವಂತೆ ಈಶ್ವರನಲ್ಲಿಲ್ಲ. ಈಶ್ವರನಲ್ಲಿರುವ ಜ್ಞಾನಸಮವಾಯವು ಚೈತ್ರನಲ್ಲಿಯೂ ಇಲ್ಲ. ಹೀಗೆ ಉಪಾಧಿಗಳ ಭೇದದಿಂದ ಸಮವಾಯವು ಬೇರೆ ಬೇರೆಯಾದುದರಿಂದ ಚೈತ್ರನ ದುಃಖದ ಸಮವಾಯವು ಈಶ್ವರನಲ್ಲಿ ಬರುವುದಿಲ್ಲ. ಈಶ್ವರನು ದುಃಖರಹಿತನಾದುದರಿಂದ ಸುಖರಹಿತನೂ ಆಗಿದ್ದಾನೆ ಎಂಬ ನಮ್ಮ ಅನುಮಾನಕ್ಕೆ ಅಸಿದ್ಧಿಯು ಹೇಗೆ ಬರುತ್ತದೆ ಎಂದು ಶಂಕಿಸಿದರೆ ಅದಕ್ಕೆ ಉತ್ತರ ಹೇಳುತ್ತಾರೆ. ನೀವು ಸಮವಾಯಕ್ಕೆ ಉಪಾಧಿಯಿಂದ ಭೇದವನ್ನು ಹೇಳುತ್ತೀರಷ್ಟೆ! ಆ ಭೇದವು ಪಾರಮಾರ್ಥಿಕವೋ ಅಥವಾ ಅಪಾರ ಮಾರ್ಥಿಕವೋ, ಭೇದವು ಸತ್ಯವೋ ಸುಳ್ಳೋ ಹೇಳಿರಿ. ಹೀಗೆ ನಾವು ಪ್ರಶ್ನಿಸಿದಾಗ ನೀವು ನಿಮಗೆ ಒಪ್ಪಿಗೆಯಾದ ಪಕ್ಷವನ್ನು ಹೇಳಬೇಕು. ನಾವು ಯಾವ ಪಕ್ಷವನ್ನಾದರೂ ಒಪ್ಪಿಕೊಳ್ಳುತ್ತೇವೆ. ಆದರಿಂದ ಏನು ದೋಷವು ಬರುತ್ತದೆ ಎಂದರೆ ಅದಕ್ಕೆ ನಾವು ಉತ್ತರ ಹೇಳುತ್ತೇವೆ. ಔಪಾಧಿಕವಾದ ಸಮವಾಯದ ಭೇದವು ಸತ್ಯವಾದರೆ ಸಮವಾಯವು ಅನೇಕವಾಗುತ್ತದೆ. ಆಗ ''ಸಮವಾಯಸ್ತು ಏಕಃ ಏವ'' ''ಸಮವಾಯವು ಒಂದೇ ಒಂದು, ಅದರಲ್ಲಿ ಭೇದವಿಲ್ಲ'' ಎಂಬ ನಿಮ್ಮ ಸಿದ್ಧಾಂತಕ್ಕೆ ಭಂಗ ಬರುತ್ತದೆ. ಪೂರ್ವಾಚಾರ್ಯರು ಅಂಗೀಕರಿಸಿದ ಸಿದ್ಧಾಂತಕ್ಕೆ ವಿರುದ್ಧವಾಗಿ ಅಂಗೀಕಾರ ಮಾಡುವುದು, ಅಪಸಿದ್ಧಾಂತ ಎಂಬ ದೋಷವು, ಆ ದೋಷವು ನಿಮಗೆ ಬರುತ್ತದೆ. ಇನ್ನು ಸಮವಾಯದಲ್ಲಿರುವ ಉಪಾಧಿಯಿಂದ ಉಂಟಾದ ಭೇದವು ಅಸತ್ಯವಾದರೆ ಸಮವಾಯದಲ್ಲಿ ಭೇದವಿಲ್ಲವೆಂದಾಯಿತು. ಹಾಗಾದರೆ ಚೈತ್ರನಲ್ಲಿರುವ ದುಃಖಸಮವಾಯವೇ ಈಶ್ವರ ನಲ್ಲಿಯೂ ಇದೆಯೆಂದಾಯಿತು. ಆಗ ಈಶ್ವರನು ಹೇಗೆ ದುಃಖರಹಿತನಾಗಲು ಸಾಧ್ಯ? ಈಶ್ವರನಲ್ಲಿ ದುಃಖಸಮವಾಯ ವಿದ್ದರೂ ದುಃಖವಿಲ್ಲವೆನ್ನುವುದಾದರೆ ದುಃಖಸಮವಾಯವಿರುವ ಚೈತ್ರನಿಗೂ ದುಃಖವಿಲ್ಲವೆಂದಾಗಲಿ, ಈ ರೀತಿ ಉಪಾಧಿಯಿಂದ ಉಂಟಾದ ಸಮವಾಯಭೇದವು ಸತ್ಯವೆಂದು ಹೇಳಿದರೂ, ಅಸತ್ಯವೆಂದೂ ಹೇಳಿದರೂ ದೋಷವನ್ನು ಹೇಳಿದ್ದಾಯಿತು.

ಸಮವಾಯವು ಒಂದೇ ಆದರೂ ಅದರಲ್ಲಿ ಔಪಾಧಿಕವಾದ ಭೇದವಿದೆ. ಅದು ಸತ್ಯವೂ ಅಲ್ಲ, ಅಸತ್ಯವೂ ಅಲ್ಲ. 'ಸತ್ಯಾಸತ್ಯವಿಲಕ್ಷಣ' 'ಸದಸದ್ವಿಲಕ್ಷಣ' ಸತ್ಯವೆಂದೂ ಅಸತ್ಯವೆಂದೂ ಹೇಳಲು ಬಾರದುದು ಎಂದು ಹೇಳುತ್ತೇನೆ–ಎಂದರೆ ಆ ಮಾತು ಸರಿಯಲ್ಲ. 'ಸದಸದ್ವಿಲಕ್ಷಣ' ಎಂಬ ಮಾತನ್ನು ಮಾಯಾವಾದಿಗಳು ಹೇಳುತ್ತಾರೆ. ಒಂದು ವಸ್ತುವು 'ಸತ್' ಅಲ್ಲ, 'ಅಸತ್' ಅಲ್ಲ ಎರಡಕ್ಕಿಂತಲೂ ವಿಲಕ್ಷಣವಾದುದು ಎಂಬ ಮಾತು ಸ್ವವ್ಯಾಹತವಾದುದು. 'ಸತ್' ಅಲ್ಲವಾದರೆ ಅಸತ್ ಆಗಬೇಕು. ಅಸತ್ ಅಲ್ಲವಾದರೆ ಸತ್ ಆಗಬೇಕು. ಸದಸದ್ವಿಲಕ್ಷಣವಾದ ವಸ್ತುವು ಎಲ್ಲಿಯೂ ಇಲ್ಲ, ಯಾರೂ ಒಪ್ಪಿಲ್ಲ. ಈ ಸದಸದ್ವಿಲಕ್ಷಣ ವಸ್ತುವಿನ ಅಂಗೀಕಾರವು ಮಾಯಾವಾದಿಗಳಿಗೆ ಮಾತ್ರ ಭೂಷಣವಾಗಿದೆ. ಸ್ವವ್ಯಾಹತವಾದ ಭಾಷಣವು ಮಾಯಿಗಳಿಗೆ ಮಾತ್ರವೇ ಭೂಷಣ, ಉಳಿದವರು ಯಾರೂ ಸ್ವವ್ಯಾಹತವಾದ ಮಾತನ್ನು ಭೂಷಣವೆಂದು ಒಪ್ಪುವುದಿಲ್ಲ.

ವೈಶೇಷಿಕ ತಾರ್ಕಿಕನೆಂಬ ನೀನು ಅವರಂತೆ ಒಪ್ಪಲು ಸಾಧ್ಯವಿಲ್ಲ. ಹೀಗೆ ಸಮವಾಯಭೇದವು ಸತ್ಯ, ಅಸತ್ಯ ಎಂಬ ಎರಡು ಪಕ್ಷಗಳಿಗೆ ದೋಷವನ್ನು ಹೇಳಿದ್ದರಿಂದ, ಮೂರನೆಯ ಪಕ್ಷವು ಕೂಡದೇ ಇರುವುದರಿಂದ ಸಮವಾಯಕ್ಕೆ ಔಪಾಧಿಕವಾದ ಭೇದವು ಇಲ್ಲವೆಂದಾಯಿತು. ಹಾಗಾದರೆ ಈಶ್ವರನಲ್ಲಿಯೂ ದುಃಖಸಮವಾಯವು ಬರುವುದರಿಂದ ದುಃಖಾದಿ ರಹಿತತೆಯು ಬರುವುದಿಲ್ಲ. ಆದುದರಿಂದ ಆ ಹೇತುವೇ ಪಕ್ಷದಲ್ಲಿ ಇರುವುದಿಲ್ಲವಾದುದರಿಂದ ಪಕ್ಷದಲ್ಲಿ ಇಲ್ಲದೇ ಇರುವ ಹೇತುವಿನಿಂದ ಈಶ್ವರನಲ್ಲಿ ಸುಖರಾಹಿತ್ಯವನ್ನು ಆನಂದವಿಲ್ಲ ಎಂಬ ವಿಷಯವನ್ನು ಹೇಗೆ ಸಾಧಿಸುತ್ತೀ? ಹೀಗೆ ಸರ್ವೇಶ್ವರ ನಾದ ಭಗವಂತನಿಗೆ ಆನಂದಜ್ಞಾನ ಮುಂತಾದ ಅನಂತಗುಣಗಳಿವೆಯೆಂದು ನಾವು ಹೇಳಿದುದು ಅತ್ಯಂತ ಸಂಗತವೇ ಆಗಿದೆ. ''ನಾರಾಯಣಃ ಅನಂತಗುಣಃ'' ಎಂಬ ನಮ್ಮ ಜಯಘೋಷವು ಪ್ರತಿವಾದಿಗಳ ಕಿವಿಯಲ್ಲಿ ಮೊಳಗುತ್ತದೆ.

**ವಿಗ್ರಹ—**

**ಉಕ್ತದೋಷಂ—** ಉಕ್ತೌ ದೋಷೌ ಯಸ್ಯ ತತ್ ಉಕ್ತದೋಷಂ ।

**ದ್ವಯಂ—** ದ್ವಯೋಃ ಸಮುದಾಯಃ ದ್ವಯಂ ।

**ಮಾಯಿವತ್—** ಮಾಯಿನಾ ತುಲ್ಯಂ ಮಾಯಿವತ್ ।

**ಕ್ರಿಯಾಪದ— ಉಚ್ಯತಾಂ -** ಉಚ್ಯತಾಂ ಉಚ್ಯೇತಾಂ ಉಚ್ಯಂತಾಂ, ಉಚ್ಯಸ್ವ, ಉಚ್ಯೇಥಾಂ ಉಚ್ಯಧ್ವಂ, ಉಚ್ಯೈ ಉಚ್ಯಾವಹೈ ಉಚ್ಯಾಮಹೈ । ಬ್ರೂಞ್ ವ್ಯಕ್ತಾಯಾಂ ವಾಚಿ ಅಥವಾ ವಚ ಪರಿಭಾಷಣೇ ಕರ್ಮಣಿ ಲೋಟ್,

**ವದೇತ್ -** ವದೇತ್ ವದೇತಾಂ ವದೇಯುಃ, ವದೇಃ ವದೇತಂ ವದೇತ, ವದೇಯಂ ವದೇವ ವದೇಮ । ವದ ವ್ಯಕ್ತಾ ಯಾಂ ವಾಚಿ ಸಕ. ಪರ. ವಿಧಿಲಿಙ್ ।

**ಪ್ರಯೋಗ—** ಅಸ್ಯ (ಸಮವಾಯಸ್ಯ) ಔಪಾಧಿಕಃ ಭೇದಃ (ಅಂಗೀಕ್ರಿಯತೇ) ಚೇತ್ ತೇನ ಭೇದೇನ ಸತ್ಯೇನ ಸ್ವಿತ್ ಭೂಯತೇ, ಅಸತ್ಯೇನ ಸ್ವಿತ್ ಭೂಯತೇ, ತದ್ದ್ವಯೇನ ಉಕ್ತದೋಷೇಣ, ಭೂಯತೇ (ಭವತಾ) ಮಾಯಿವತ್ ಪರಂ (ಸದಸದ್ವಿಲಕ್ಷಣಂ) ಮಾ ಉದ್ಯೇತ ।

★ ★ ★

**ಅವತಾರಿಕಾ—** ಹೀಗೆ ಸಮವಾಯ ಎಂಬ ತಾರ್ಕಿಕರು ಅಂಗೀಕರಿಸಿರುವ ಸಂಬಂಧರೂಪವಾದ ಪದಾರ್ಥಕ್ಕೆ ಔಪಾಧಿಕವಾದ ಭೇದವನ್ನು ನಿರಾಕರಿಸಿ ಅವರು ಒಪ್ಪಿರುವ ಬೇರೆ ಪ್ರಮೇಯವೂ ನಿರಸ್ತವಾಯಿತು ಎಂದು ಹೇಳುತ್ತಾರೆ.

**ಬ್ರೂಯುರೌಪಾಧಿಕಂ ಭೇದಂ ಜ್ಞಾನಾದೀನಾಂ ಯದಾತ್ಮನಃ ।**

**ನೀತ್ಯಾಽನಯಾ ತನ್ನಿರಾಸಾತ್ ಸ್ಯಾತ್ತಸ್ಯಾನಂತಧರ್ಮತಾ (ಧರ್ಮಿತಾ) ॥ 22 ॥**

**ಪದಚ್ಛೇದ—** ಬ್ರೂಯುಃ, ಔಪಾಧಿಕಂ, ಭೇದಂ, ಜ್ಞಾನಾದೀನಾಂ, ಯತ್, ಆತ್ಮನಃ, ನೀತ್ಯಾ, ಅನಯಾ, ತನ್ನಿರಾಸಾತ್, ಸ್ಯಾತ್, ತಸ್ಯ, ಅನಂತಧರ್ಮತಾ ।

**ಅನ್ವಯ—** ಆತ್ಮನಃ, ಜ್ಞಾನಾದೀನಾಂ, ಔಪಾಧಿಕಂ, ಭೇದಂ, ಬ್ರೂಯುಃ (ಇತಿ), ಯತ್, ಅನಯಾ, ನೀತ್ಯಾ, ತನ್ನಿರಾಸಾತ್, ತಸ್ಯ, ಅನಂತಧರ್ಮತಾ, ಸ್ಯಾತ್ ।

**ಅನ್ವಯಾರ್ಥ—**

**ಆತ್ಮನಃ** = ಪರಮಾತ್ಮನ,

**ಜ್ಞಾನಾದೀನಾಂ** = ಜ್ಞಾನ ಆನಂದ ಮೊದಲಾದವುಗಳಿಗೆ,

**ಔಪಾಧಿಕಂ** = ಉಪಾಧಿಯಿಂದ ಉಂಟಾದ,

**ಭೇದಂ** = ಭೇದವನ್ನು,

**ಬ್ರೂಯುಃ (ಇತಿ) ಯತ್** = ಹೇಳಬೇಕೆಂಬ ಅಭಿಪ್ರಾಯವು ಯಾವುದೋ,

**ಅನಯಾ ನೀತ್ಯಾ** = ಸಮವಾಯಕ್ಕೆ ಉಪಾಧಿನಿಮಿತ್ತವಾದ ಭೇದವನ್ನು ನಿರಾಕರಿಸುವ ಈ ಯುಕ್ತಿಯಿಂದ,

**ತನ್ನಿರಾಸಾತ್** = ಔಪಾಧಿಕ ಭೇದದ ತಿರಸ್ಕಾರವಾದುದರಿಂದ,

**ತಸ್ಯ** = ಆ ಪರಮಾತ್ಮನಿಗೆ,

**ಅನಂತಧರ್ಮತಾ** = ಅಪರಿಮಿತವಾದ ಶುದ್ಧಾನಂದ, ಸರ್ವವಿಷಯವಾದ ಜ್ಞಾನ ಮುಂತಾದ ಅಪರಿಮಿತ ಗುಣವುಳ್ಳತನವು,

**ಸ್ಯಾತ್** = ಬಂದೇ ತೀರುತ್ತದೆ.

**ತಾತ್ಪರ್ಯ—** ವೈಶೇಷಿಕರು ಪರಮಾತ್ಮನಿಗೂ ಅವನ ಜ್ಞಾನ, ಇಚ್ಛೆ, ಪ್ರಯತ್ನಗಳೆಂಬ ಗುಣಗಳಿಗೂ ಉಪಾಧಿ ನಿಮಿತ್ತವಾದ ಭೇದವನ್ನು ಹೇಳುತ್ತಾರೆ. ಜೀವನಲ್ಲಿ ಇಲ್ಲದಿರುವ ಔಪಾಧಿಕವಾದ ಈ ಗುಣಗಳಿಂದ ಸೃಷ್ಟಿ ಮುಂತಾದ ಕಾರ್ಯಗಳು ನಡೆಯುತ್ತವೆಯೆಂದು ಹೇಳುತ್ತಾರೆ. ಆದರೆ ಒಂದೇ ಆದ ಸಮವಾಯಕ್ಕೆ ಉಪಾಧಿಭೇದದಿಂದ ಭೇದವನ್ನು ಹೇಳಲು ಬರುವುದಿಲ್ಲವೆಂದು ಹಿಂದೆ ಯುಕ್ತಿಯಿಂದ ಸಮರ್ಥಿಸಲಾಗಿದೆ. ಅದೇ ವಿಧವಾದ ನಿರಾಕರಣಯುಕ್ತಿಯಿಂದ ಪರಮಾತ್ಮನಿಗೂ ಅವನ ಗುಣಗಳಿಗೂ ಔಪಾಧಿಕ ಭೇದವಿಲ್ಲವೆಂದು ಹೇಳಲು ಬರುವುದಿಲ್ಲವಾದುದರಿಂದ, ಭೇದವು ಸ್ವಾಭಾವಿಕವೆಂದೇ ಸಿದ್ಧವಾಗುತ್ತದೆ. ಆಗ ಪರಮಾತ್ಮನಿಗೆ ನಾವು ಹಿಂದೆ ಹೇಳಿದಂತೆ ಅನಂತಗುಣಗಳಿವೆಯೆಂದೂ ಸಿದ್ಧವಾಗುತ್ತದೆ.

**ವಿಗ್ರಹ—**

**ಔಪಾಧಿಕಃ—** ಉಪಾಧಿಃ ಪ್ರಯೋಜನಂ(ಪ್ರಯೋಜಕಂ) ಅಸ್ಯೇತಿ ಔಪಾಧಿಕಃ । (ಪ್ರಯೋಜನಂ ಎಂಬ ಸೂತ್ರದಿಂದ ಠಕ್)

**ಜ್ಞಾನಾದಯಃ—** ಜ್ಞಾನಂ ಆದಿ ಯೇಷಾಂ ತೇ ಜ್ಞಾನಾದಯಃ ತೇಷಾಂ ।

**ತನ್ನಿರಾಸಾತ್—** ತಸ್ಯ ನಿರಾಸಃ ತನ್ನಿರಾಸಃ ತಸ್ಮಾತ್ ।

**ಅನಂತಧರ್ಮತಾ—** ಅನಂತಾಃ ಧರ್ಮಾಃ ಯಸ್ಯಸಃ ಅನಂತಧರ್ಮಾ । (ಅನಂತಧರ್ಮನ್ ಶಬ್ದ, ಧರ್ಮಾದನಿಚ್ ಕೇವಲಾತ್ ಎಂಬ ಸೂತ್ರದಿಂದ ಅನಿಚ್ ಪ್ರತ್ಯಯ) ಅನಂತಧರ್ಮಣಃ ಭಾವಃ ಅನಂತ ಧರ್ಮತಾ (ಛಲಾರಿಯದಲ್ಲಿ ಅನಂತಧರ್ಮಿತಾ ಎಂಬ ಪಾಠವಿದೆ. ಆಗ ಅನಂತಾಶ್ಚ ತೇ ಧರ್ಮಾಶ್ಚ ಅನಂತಧರ್ಮಾಃ, ಅನಂತಧರ್ಮಾಃ ಅಸ್ಯ ಸಂತೀತಿ ಅನಂತಧರ್ಮೀ, ಅನಂತಧರ್ಮಿಣಃ ಭಾವಃ ಅನಂತಧರ್ಮಿತಾ ಎಂದು ವಿಗ್ರಹ, ಅರ್ಥವು ಹಿಂದಿನಂತೆಯೇ) ।

**ಕ್ರಿಯಾಪದ— ಬ್ರೂಯುಃ** - ಬ್ರೂಯಾತ್ ಬ್ರೂಯಾತಾಂ ಬ್ರೂಯುಃ, ಬ್ರೂಯಾಃ ಬ್ರೂಯಾತಂ ಬ್ರೂಯಾತ, ಬ್ರೂಯಾಂ ಬ್ರೂಯಾವ ಬ್ರೂಯಾಮ । ಬ್ರೂಞ್(ಬ್ರೂ) ವ್ಯಕ್ತಾಯಾಂ ವಾಚಿ ಉಭಯಪದೀ. ಇಲ್ಲಿ ಪರಸ್ಮೈಪದಿ ವಿಧಿಲಿಙ್. **ಸ್ಯಾತ್**, ಅಸ್ ಧಾತು ವಿಧಿಲಿಙ್ ।

**ಪ್ರಯೋಗ—** ಪರಮಾತ್ಮನಃ ಜ್ಞಾನಾದೀನಾಂ ಔಪಾಧಿಕಭೇದಃ (ವೈಶೇಷಿಕೈಃ) ಉಚ್ಯೇತ ಇತಿ ಯತ್ ಅನಯಾ ನೀತ್ಯಾ ತನ್ನಿರಾಸಾತ್ ತಸ್ಯ ಅನಂತಧರ್ಮತಯಾ ಭೂಯೇತ ।

★ ★ ★

**ಅವತಾರಿಕಾ—** ಅವಯವ ಮತ್ತು ಅವಯವಿಗಳಿಗೆ, ಗುಣಗುಣಿಗಳಿಗೆ, ಕ್ರಿಯಾ ಮತ್ತು ಕ್ರಿಯಾವುಳ್ಳ ವಸ್ತುವಿಗೆ, ಜಾತಿ ವ್ಯಕ್ತಿಗಳಿಗೆ, ವಿಶೇಷ ಮತ್ತು ನಿತ್ಯ ದ್ರವ್ಯಗಳಿಗೆ ಸಮವಾಯವೆಂಬ ಸಂಬಂಧವಿದೆಯೆಂದು ತಾರ್ಕಿಕರ ಮತವು. ಅದೂ ಕೂಡುವುದಿಲ್ಲವೆಂದು ಹೇಳುತ್ತಾರೆ.

**ಗುಣಾದಿಭೇದೇ ಸಂಬಂಧಮಪೇಕ್ಷ್ಯಾಪ್ಯನವಸ್ಥಿತೇಃ ।**
**ವಿಶೇಷಮಾತ್ರೇಣಾನಂತ್ಯಂ ಗುಣಾನಾಂ ಶೋಭತೇ ವಿಭೋಃ ॥ 23 ॥**

**ಪದಚ್ಛೇದ—** ಗುಣಾದಿಭೇದೇ, ಸಂಬಂಧಂ, ಅಪೇಕ್ಷ್ಯ, ಅಪಿ, ಅನವಸ್ಥಿತೇಃ, ವಿಶೇಷಮಾತ್ರೇಣ, ಆನಂತ್ಯಂ. ಗುಣಾನಾಂ, ಶೋಭತೇ, ವಿಭೋಃ ।

**ಅನ್ವಯ—** ಗುಣಾದಿಭೇದೇ, ಸಂಬಂಧಂ, ಅಪೇಕ್ಷ್ಯ, ಅಪಿ, ಅನವಸ್ಥಿತೇಃ, ವಿಶೇಷಮಾತ್ರೇಣ, ವಿಭೋಃ, ಗುಣಾನಾಂ, ಆನಂತ್ಯಂ, ಶೋಭತೇ ।

**ಅನ್ವಯಾರ್ಥ—**

**ಗುಣಾದಿಭೇದೇ(ಸತಿ)** = ಗುಣ ಮೊದಲಾದವುಗಳಿಗೆ ಭೇದವಿದ್ದರೆ, (ರೂಪರಸಾದಿಗುಣಗಳೂ, ಜ್ಞಾನ ಆನಂದ ಮುಂತಾದ ಗುಣಗಳೂ ಇವುಗಳಿಗೂ ಈ ಗುಣಗಳುಳ್ಳ ಗುಣಿವಸ್ತುಗಳಿಗೂ ಭೇದವನ್ನು ಅಂಗೀಕರಿಸಿದರೆ)

**ಸಂಬಂಧಂ** = ಗುಣ-ಗುಣಿ, ಅವಯವ-ಅವಯವಿ ಮುಂತಾದವುಗಳಿಗೂ ಭೇದವುಳ್ಳವುಗಳಿಗೂ ಭೇದಕ್ಕೂ ಇರುವ ಸಂಬಂಧವನ್ನು,

**ಅಪೇಕ್ಷ್ಯ ಅಪಿ** = ಅಪೇಕ್ಷಿಸಿಯೂ,

**ಅನವಸ್ಥಿತೇಃ** = ಅನವಸ್ಥಾದೋಷದ ದೆಸೆಯಿಂದ,

**ವಿಶೇಷಮಾತ್ರೇಣ** = ಭೇದವಿಲ್ಲದ ವಸ್ತುವಿನಲ್ಲಿ ಭೇದನಿಮಿತ್ತಕವಾದ ಅನೇಕ ವ್ಯವಹಾರಕ್ಕೆ ಕಾರಣವಾದ ವಿಶೇಷವನ್ನು ಒಪ್ಪಿಕೊಳ್ಳುವ ಮಾತ್ರದಿಂದಲೇ,

**ವಿಭೋಃ** = ವ್ಯಾಪ್ತನಾದ ನಾರಾಯಣನ,

**ಗುಣಾನಾಂ** = ಜ್ಞಾನ ಆನಂದಾದಿ ಗುಣಗಳ,

**ಆನಂತ್ಯಂ** = ಅಪರಿಮಿತವಾಗಿರುವಿಕೆಯು,

**ಶೋಭತೇ** = ಚೆನ್ನಾಗಿ ಪ್ರಕಾಶಿಸುತ್ತದೆ, ಯುಕ್ತವಾಗಿ ತೋರುತ್ತದೆ.

**ತಾತ್ಪರ್ಯ—** ಗುಣ ಮತ್ತು ಗುಣಿ, (ಗಂಧಪೃಥಿವಿಗಳಿಗೆ) ಅವಯವ ಮತ್ತು ಅವಯವಿ, ಇವುಗಳಿಗೆ, (ಕಪಾಲ ಮತ್ತು ಘಟಗಳಿಗೆ) ಇನ್ನೂ ಇತರ ಒಂದನ್ನು ಬಿಟ್ಟು ಮತ್ತೊಂದು ಅಗಲದ ಅಯುತ ಸಿದ್ಧವಸ್ತುಗಳಿಗೆ ಭೇದವಿದೆ ಯೆಂದು ಒಪ್ಪಿ ಅವುಗಳಿಗೆ ಸಮವಾಯವೆಂಬ ಸಂಬಂಧವಿದೆಯೆಂದು ಒಪ್ಪಿದರೆ, ಗುಣ ಮತ್ತು ಗುಣಗಳು ಭಿನ್ನವಾಗಿವೆ ಎಂಬಲ್ಲಿ ವಿಶೇಷ್ಯವಾಗಿರುವ ಗುಣಗುಣಿಗಳಿಗೂ ವಿಶೇಷಣವಾದ ಭೇದಕ್ಕೂ ಪರಸ್ಪರ ಭೇದವನ್ನು ಒಪ್ಪಬೇಕು. ಹಾಗೆ ಭೇದವನ್ನು ಒಪ್ಪದಿದ್ದರೆ ವಿಶೇಷಣ ವಿಶೇಷ್ಯಭಾವವೇ ಕೂಡಲಾರದು. ಏಕೆಂದರೆ ಇದು ವಿಶೇಷಣ, ಇದು ವಿಶೇಷ್ಯ, ಎಂಬ ವ್ಯವಹಾರವು ಭೇದಸಾಪೇಕ್ಷವಾದುದು. ಭೇದವಿಲ್ಲದಿದ್ದಲ್ಲಿ ವಿಶೇಷಣ ವಿಶೇಷ್ಯ ಭಾವವು ಕೂಡುವುದಿಲ್ಲ. ಈ ಭೇದಕ್ಕೂ ಗುಣ ಮುಂತಾದ ಭೇದವುಳ್ಳವುಗಳಿಗೂ (ಭೇದಿಗಳಿಗೂ) ಪರಸ್ಪರ ಭೇದವನ್ನು ಒಪ್ಪಲೇಬೇಕು, ಇಲ್ಲವಾದರೆ ಈಶ್ವರನು ಗುಣವುಳ್ಳವನು ಎಂಬ ವ್ಯವಹಾರವು ಕೂಡಲಾರದು. ಹೀಗೆ ಗುಣಗಳಿಗೂ ಪರಸ್ಪರ ಭೇದವನ್ನು ಹೇಳಬೇಕು. ಇಲ್ಲವಾದರೆ ಆ ಗುಣಗಳಿಗೆ ಅನಂತತೆಯೂ ಕೂಡುವುದಿಲ್ಲ. ಹೀಗೆ ಜ್ಞಾನಕ್ಕೂ ಈಶ್ವರನಿಗೂ, ಆನಂದಕ್ಕೂ ಈಶ್ವರನಿಗೂ, ಈ ರೀತಿ ಅವನ

ಅನಂತಗುಣಗಳಿಗೂ ಆತನಿಗೂ ಇರತಕ್ಕ ಭೇದಗಳು ಒಂದು ಗುಣಕ್ಕೂ ಮತ್ತೊಂದು ಗುಣಕ್ಕೂ ಇರುವ ಪರಸ್ಪರ ಭೇದಗಳು ಮತ್ತು ಈ ಭೇದಗಳಲ್ಲಿ ತೋರುವ ಪರಸ್ಪರ ಭೇದಗಳು, ಆ ಪರಸ್ಪರ ಭೇದಗಳಲ್ಲಿ ತೋರುವ ಪರಸ್ಪರ ಭೇದಗಳು, ಇವನ್ನೆಲ್ಲಾ ಅಂಗೀಕಾರ ಮಾಡಿದಾಗ ಅನವಸ್ಥಾ ಎಂಬ ದೋಷವು ಬರುತ್ತದೆ.

ಹಾಗಾದರೆ ವೇದಾಂತಿಗಳಾದ ನಿಮ್ಮ ಪಕ್ಷದಲ್ಲಿ ಗುಣಗುಣಿಗಳಿಗೂ, ಗುಣಗಳಿಗೂ ಪರಸ್ಪರ ಭೇದವೇ ಇದೆಯಲ್ಲವೇ! ಭೇದವು ಇಲ್ಲವೆಂದರೆ ಈಶ್ವರನು ಗುಣವುಳ್ಳವನು ಎಂದು ವ್ಯವಹರಿಸಲು ಸಾಧ್ಯವಾಗಲಾರದು. ಗುಣಗಳಿಗೆ ಪರಸ್ಪರ ಭೇದವಿಲ್ಲದಿದ್ದರೆ ಅವುಗಳಿಗೆ ಅಪರಿಮಿತತ್ವವು ಕೂಡಲಾರದು. ಹೀಗೆ ಗುಣಗುಣಿ ಮುಂತಾದುವುಗಳಿಗೂ, ಪರಸ್ಪರ ಗುಣಗಳಿಗೂ ಭೇದಾಂಗೀಕಾರ ಮಾಡಿದರೆ ಅನವಸ್ಥಾದೋಷವು ನಿಮಗೂ ಬರುತ್ತದೆಯಷ್ಟೇ? ಎಂದರೆ ಹೇಳುತ್ತೇವೆ. ನಾವು ಈಶ್ವರನಿಗೂ ಅವನ ಗುಣಗಳಿಗೂ ಭೇದವನ್ನು ಒಪ್ಪಿದ್ದರೆ ಈ ಅನವಸ್ಥಾದೋಷವು ಬರುತ್ತಿತ್ತು. ಆದರೆ ನಾವು ಈಶ್ವರನ ಗುಣಗಳಿಗೂ ಈಶ್ವರನಿಗೂ ಮತ್ತು ಈಶ್ವರನ ಗುಣಗಳಿಗೂ ಪರಸ್ಪರವಾಗಿಯೂ ಭೇದವನ್ನು ಒಪ್ಪುವುದಿಲ್ಲ. ಅಭೇದವನ್ನೇ ಒಪ್ಪುತ್ತೇವೆ. ಹಾಗಾದರೆ ಈಶ್ವರನ ಜ್ಞಾನ, ಈಶ್ವರನ ಆನಂದ ಎಂಬ ಭೇದವ್ಯವಹಾರವು ಹೇಗೆ ಕೂಡುತ್ತದೆ? ಈಶ್ವರನ ಜ್ಞಾನವು, ಈಶ್ವರನ ಆನಂದವು ಬೇರೆ ಬೇರೆ, ಈಶ್ವರನ ಜ್ಞಾನದಲ್ಲಿ ಎಲ್ಲಾ ವಸ್ತುಗಳೂ ವಿಷಯವಾಗಿದೆ.. ಈಶ್ವರನ ಆನಂದದಲ್ಲಿ ವಸ್ತುಗಳು ವಿಷಯವಾಗಿಲ್ಲ ಇತ್ಯಾದಿ ವ್ಯವಹಾರಗಳು ಹೇಗೆ ಕೂಡುತ್ತವೆ ಎಂದು ಕೇಳಿದರೆ ನಾವು ವಿಶೇಷವೆಂಬ ಒಂದು ಪದಾರ್ಥವನ್ನು ಒಪ್ಪಿರುತ್ತೇವೆ. ಅದರಿಂದ ಈ ವ್ಯವಹಾರಗಳೆಲ್ಲಾ ಕೂಡುತ್ತವೆ. ವಿಶೇಷವೆಂದರೆ ಭೇದವಿಲ್ಲದ ವಸ್ತುವಿನಲ್ಲಿ ಭೇದದಿಂದ ಬರುವ ಅನೇಕ ವ್ಯವಹಾರಗಳಿಗೆ ಹೇತುವಾದ ಭೇದಕ್ಕೆ ಪ್ರತಿನಿಧಿಯಾದ ಪದಾರ್ಥವು.

> **'ಭೇದಹೀನೇ ತ್ವಪರ್ಯಾಯಶಬ್ದಾಂತರನಿಯಾಮಕಃ ।**
> **ವಿಶೇಷೋ ನಾಮ ಕಥಿತಃ ಸೋऽಸ್ತಿ ವಸ್ತುಷ್ವಶೇಷತಃ ॥'**

ಎಂದು ವಿಶೇಷ ಲಕ್ಷಣವನ್ನೂ ಹೇಳಿರುತ್ತಾರೆ. ಆದುದರಿಂದ ಗುಣಗುಣ್ಯಾದಿಗಳಿಗೆ ಭೇದವನ್ನು ಒಪ್ಪದಿದ್ದರೂ ವಿಶೇಷವನ್ನು ಮಾತ್ರ ಅಂಗೀಕಾರ ಮಾಡಿದ್ದರಿಂದ ಆ ವಿಶೇಷದಿಂದಲೇ ವ್ಯಾಪ್ತನಾದ ನಾರಾಯಣನ ಗುಣಗಳಿಗೆ ಅನಂತತೆಯು ಕೂಡುತ್ತದೆ. ಭೇದವನ್ನು ಒಪ್ಪಬೇಕಾಗಿಲ್ಲ. ವಿಶೇಷ ಬಲದಿಂದಲೇ ಆನಂದಾದಿಗಳು ಗುಣಗಳೆಂದೂ, ಪರಮಾತ್ಮನು ಗುಣಿ ಎಂದೂ, ಆನಂದಾದಿಗಳು ಭೋಗ್ಯವೆಂದೂ, ಪರಮಾತ್ಮನು ಭೋಕ್ತಾ ಎಂದು, ಇನ್ನಿತರ ಭೇದ-ವ್ಯವಹಾರಗಳೂ, ಆನಂದಾದಿ ಗುಣಗಳಿಗೆ ಪರಸ್ಪರ ಭೇದವಿಲ್ಲದಿದ್ದರೂ ವಿಶೇಷ ಬಲದಿಂದಲೇ ಪರಸ್ಪರ ಭೇದ-ವ್ಯವಹಾರವೂ, ಆನಂತ್ಯವೂ ಕೂಡುತ್ತದೆ.

ವಿಗ್ರಹ—

**ಗುಣಾದಿಭೇದೇ—** ಗುಣಃ ಆದಿಃ ಯೇಷಾಂ ತೇ ಗುಣಾದಯಃ, ಗುಣಾದೀನಾಂ ಭೇದಃ ಗುಣಾದಿಭೇದಃ ತಸ್ಮಿನ್ ।

**ಅನವಸ್ಥಿತೇಃ—** ಅವಸ್ಥಿತೇರಭಾವಃ ಅನವಸ್ಥಿತಿಃ, ತಸ್ಯಾಃ (ಪಂ) ।

**ವಿಶೇಷಮಾತ್ರೇಣ—** ವಿಶೇಷಾಃ ಏವ ವಿಶೇಷಮಾತ್ರಂ ತೇನ ।

**ಆನಂತ್ಯಂ—** ಅನಂತಾನಾಂ ಭಾವಃ ಆನಂತ್ಯಂ ।

**ಕ್ರಿಯಾಪದ— ಶೋಭತೇ** -ಶೋಭತೇ ಶೋಭೇತೇ ಶೋಭಂತೇ ಇತ್ಯಾದಿ ಶುಭ ದೀಪ್ತೌ ಅಕ. ಸೇಟ್ ಆತ್ಮ. ಲಟ್ ।

**ಪ್ರಯೋಗ—** ಗುಣಾದಿಭೇದೇ ಸಂಬಂಧಂ ಅಪೇಕ್ಷ್ಯ ಅಪಿ ಅನವಸ್ಥಿತೇಃ ವಿಶೇಷಮಾತ್ರೇಣ ವಿಭೋಃ ಗುಣಾನಾಂ ಆನಂತ್ಯೇನ ಶುಭ್ಯತೇ (ಭಾವೇ) ।

★ ★ ★

ಅವತಾರಿಕಾ— ಈಗ ಪರಮೇಶ್ವರನು ಅನಂತಗುಣಪರಿಪೂರ್ಣನೆಂಬುದು ಶೂನ್ಯವಾದಿಗಳಾದ ಬೌದ್ಧರಿಗೆ ಸಮ್ಮತವಲ್ಲವಾದುದರಿಂದ ಶೂನ್ಯವಾದವೇ ಮಾಯಾವಾದವು, ಮಾಯಾವಾದಕ್ಕೂ ಶೂನ್ಯವಾದಕ್ಕೂ ಭೇದವಿಲ್ಲವೆಂದೂ ಶೂನ್ಯವಾದವನ್ನು ಖಂಡಿಸಿದಾಗ ಮಾಯಾವಾದವನ್ನೂ ಖಂಡಿಸಿದಂತೆಯೇ ಆಗುವುದೆಂದೂ ತಿಳಿಸಲು ಶೂನ್ಯವಾದಿ-ಗಳಲ್ಲಿರುವ ಪ್ರಭೇದವನ್ನು ಹೇಳುತ್ತಾರೆ.

**ಮನ್ಯಂತೇ ಶೂನ್ಯಮೇವಾನ್ಯೇ ತತ್ತ್ವಮಾಗಮವೈರಿಣಃ ।**
**ಮತಾ ಮಾಧ್ಯಮಿಕಾಸ್ತೇಽಪಿ ವ್ಯಕ್ತಾಶ್ಛನ್ನಾ ಇತಿ ದ್ವಯೇ ॥ 24 ॥**

ಪದಚ್ಛೇದ— ಮನ್ಯಂತೇ, ಶೂನ್ಯಂ, ಏವ, ಅನ್ಯೇ, ತತ್ತ್ವಂ, ಆಗಮವೈರಿಣಃ, ಮತಾಃ, ಮಾಧ್ಯಮಿಕಾಃ, ತೇ, ಅಪಿ, ವ್ಯಕ್ತಾಃ, ಛನ್ನಾಃ, ಇತಿ, ದ್ವಯೇ ।

ಅನ್ವಯ— ಅನ್ಯೇ, ಆಗಮವೈರಿಣಃ, ಮಾಧ್ಯಮಿಕಾಃ, ಶೂನ್ಯಂ, ಏವ, ತತ್ತ್ವಂ, ಮನ್ಯಂತೇ, ತೇ, ಅಪಿ, ವ್ಯಕ್ತಾಃ, ಛನ್ನಾಃ, ಇತಿ, ದ್ವಯೇ, ಮತಾಃ ।

ಅನ್ವಯಾರ್ಥ—

**ಅನ್ಯೇ** = ಈ ವೈಶೇಷಿಕರಿಗಿಂತ ಬೇರೆಯವರಾದ,
**ಆಗಮವೈರಿಣಃ** = ವೇದವನ್ನು ಪ್ರಮಾಣವೆಂದು ಒಪ್ಪಿಕೊಳ್ಳದಿರುವುದರಿಂದ ವೇದದ್ವೇಷಿಗಳಾದ,
**ಮಾಧ್ಯಮಿಕಾಃ** = ಮಾಧ್ಯಮಿಕ, ಯೋಗಾಚಾರ, ಸೌತ್ರಾಂತಿಕ, ವೈಭಾಷಿಕ ಎಂಬ ನಾಲ್ಕು ಪ್ರಭೇದಗಳುಳ್ಳ ಬೌದ್ಧರಲ್ಲಿ ಒಬ್ಬರಾದ ಸರ್ವಶೂನ್ಯವಾದಿಗಳಾದ ಮಾಧ್ಯಮಿಕರೆಂಬುವರು,
**ಶೂನ್ಯಂ ಏವ** = ಶೂನ್ಯವನ್ನೇ, (ಏನೂ ಇಲ್ಲ ಎಂಬುದನ್ನೇ)
**ತತ್ತ್ವಂ** = ಪರತತ್ತ್ವವನ್ನಾಗಿ,
**ಮನ್ಯಂತೇ** = ತಿಳಿಯುತ್ತಾರೆ.
**ತೇ ಅಪಿ** = ಅವರೂ,
**ವ್ಯಕ್ತಾಃ** = ಪ್ರಕಟ ಶೂನ್ಯವಾದಿಗಳು,
**ಛನ್ನಾಃ** = ಪ್ರಚ್ಛನ್ನ (ಗುಪ್ತರಾದ) ಶೂನ್ಯವಾದಿಗಳು,
**ಇತಿ** = ಎಂಬುದಾಗಿ,
**ದ್ವಯೇ** = ಎರಡು ವಿಧವಾಗಿ,
**ಮತಾಃ** = ತಿಳಿಯಲ್ಪಟ್ಟಿದ್ದಾರೆ.

ತಾತ್ಪರ್ಯ— ಈಗ ಭಗವಂತನ ಗುಣಗಳು ಅನಂತವೆಂಬುದನ್ನು ಸಹಿಸದಿರುವ ಬೌದ್ಧರಿಗೂ, ಮಾಯಾವಾದಿ-ಗಳೆಂದು ಪ್ರಸಿದ್ಧರಾದ ಅದ್ವೈತಿಗಳಿಗೂ ಪರಾಪರತತ್ತ್ವ ವಿಷಯದಲ್ಲಿ ವ್ಯತ್ಯಾಸವಿಲ್ಲದಿರುವುದರಿಂದ ಮಾಯಾವಾದಿಗಳೇ ಶೂನ್ಯವಾದಿಗಳು, ಶೂನ್ಯವಾದಿಗಳಾದ ಮಾಧ್ಯಮಿಕ ಬೌದ್ಧರಿಗೂ ಮಾಯಾವಾದಿ ಅದ್ವೈತಿಗಳಿಗೂ ಭೇದವಿಲ್ಲ ಎಂದು ಸಮರ್ಥಿಸುವುದಕ್ಕಾಗಿ ಶೂನ್ಯವಾದಿಗಳಲ್ಲಿರುವ ಪ್ರಭೇದಗಳನ್ನು ತಿಳಿಸುತ್ತಾರೆ.

ವೈಶೇಷಿಕರಿಗಿಂತ ಇತರರಾದ ಮಾಧ್ಯಮಿಕರೆಂಬ ಬೌದ್ಧರು ವೇದದ್ವೇಷಿಗಳು; ಅವರು ವೇದವನ್ನು ಪ್ರಮಾಣವೆಂದೇ ಒಪ್ಪುವುದಿಲ್ಲ. ಅವರು ಶೂನ್ಯವೇ ಪರತತ್ತ್ವವೆಂದು ತಿಳಿಯುತ್ತಾರೆ. ಜಗತ್ತು ಮಿಥ್ಯಾ ಎಂದು ಹೇಳುತ್ತಾರೆ. ಈ ತೆರನಾದ ಬೌದ್ಧರು ಪ್ರಕಟಬೌದ್ಧರು, ಪ್ರಚ್ಛನ್ನಬೌದ್ಧರೆಂದು ಎರಡು ಬಗೆಯಾಗಿದ್ದಾರೆ. ಆ ಪ್ರಚ್ಛನ್ನಬೌದ್ಧರೇ ಮಾಯಾವಾದಿ ಅದ್ವೈತಿಗಳು. ಮಾಧ್ಯಮಿಕರು ಸ್ಪಷ್ಟವಾಗಿ ಶೂನ್ಯವಾದಿಗಳು, ಅವರು ಶೂನ್ಯವೇ ಪರತತ್ತ್ವವೆಂದು ಪ್ರಕಟವಾಗಿ ಹೇಳುತ್ತಾರೆ. ಅದ್ವೈತಿಗಳು ಅದೇ ವಿಷಯವನ್ನು ಗುಟ್ಟಾಗಿ ಹೇಳುತ್ತಾರೆ. ಆ ಶೂನ್ಯವಾದವನ್ನೇ ಪ್ರತಿಪಾದಿಸುತ್ತಾರೆ.

**ವಿಗ್ರಹ ಮತ್ತು ಕೋಶ—**

**ಆಗಮವೈರಿಣಃ—** ವೈರಂ ಏಷಾಂ ಅಸ್ತೀತಿ ವೈರಿಣಃ, ಆಗಮಸ್ಯ ವೈರಿಣಃ ಆಗಮವೈರಿಣಃ । 'ವೈರಂ ವಿರೋಧೋ ವಿದ್ವೇಷಃ', 'ರಿಪೌ ವೈರಿಸಪತ್ನಾರಿ ದ್ವಿಷದ್‌ದ್ವೇಷಣದುರ್ಹೃದಃ' ಅಮರ, ಆಗಮ = ಶಾಸ್ತ್ರ, 'ಆಗಮಸ್ತ್ವಾಗತೌ ಶಾಸ್ತ್ರೇ' ಭಾಸ್ಕರ ।

**ಕ್ರಿಯಾಪದ—** **ಮನ್ಯಂತೇ** - ಮನ್ಯತೇ ಮನ್ಯೇತೇ ಮನ್ಯಂತೇ, ಇತ್ಯಾದಿ ಮನ ಜ್ಞಾನೇ ಸಕರ್ಮಕ ಅನಿ ಆತ್ಮ. to know, to think ಲಟ್ ।

**ಪ್ರಯೋಗ—** ಅನ್ಯೈಃ ಆಗಮವೈರಿಭಿಃ ಮಾಧ್ಯಮಿಕೈಃ ಶೂನ್ಯಂ ಏವ ತತ್ತ್ವಂ ಮನ್ಯತೇ, ತೈಃ ಅಪಿ ವ್ಯಕ್ತೈಃ ಧನ್ಯೈಃ ಇತಿ ಮತ್ತೈಃ ದ್ವಯ್ಯೈಃ ಭೂಯತೇ ।

★ ★ ★

**ಅವತಾರಿಕಾ—** ಪರಬ್ರಹ್ಮವಾದಿಗಳು ಶೂನ್ಯವಾದಿಗಳಾಗುವುದು ಹೇಗೆ ? ವೇದಾಂತಿಗಳಾದ ಮಾಯಾವಾದಿಗಳು ಶಾಸ್ತ್ರವೈರಿಗಳು ಹೇಗೆ? ಎಂದರೆ ಹೇಳುತ್ತಾರೆ.

**ಶೂನ್ಯಂ ಬ್ರಹ್ಮಾಹ್ವಯೇನಾಹುಃ ಸ್ವಾಂಶ್ಚ ವೇದಾಂತಿನೋಽಭ್ಯಧುಃ ।**
**ಅತತ್ತ್ವಾವೇದಕಂ ವೇದಂ ವದಂತಶ್ಚರಮೇ ಖಲಾಃ ॥ 25 ॥**

**ಪದಚ್ಛೇದ—** ಶೂನ್ಯಂ, ಬ್ರಹ್ಮಾಹ್ವಯೇನ, ಆಹುಃ, ಸ್ವಾನ್, ಚ, ವೇದಾಂತಿನಃ, ಅಭ್ಯಧುಃ, ಅತತ್ತ್ವಾವೇದಕಂ, ವೇದಂ, ವದಂತಃ, ಚರಮೇ, ಖಲಾಃ ।

**ಅನ್ವಯ—** ವೇದಂ, ಅತತ್ತ್ವಾವೇದಕಂ, ವದಂತಃ, ಚರಮೇ, ಖಲಾಃ, ಶೂನ್ಯಂ, ಬ್ರಹ್ಮಾಹ್ವಯೇನ, ಆಹುಃ, ಸ್ವಾನ್, ಚ, ವೇದಾಂತಿನಃ, ಅಭ್ಯಧುಃ ।

**ಅನ್ವಯಾರ್ಥ—**

**ವೇದಂ** = ಮಂತ್ರ ಬ್ರಾಹ್ಮಣರೂಪವಾದ ವೇದವನ್ನು,
**ಅತತ್ತ್ವಾವೇದಕಂ** = ಸತ್ಯವಾದ ಬ್ರಹ್ಮತತ್ತ್ವವನ್ನು ತಿಳಿಸತಕ್ಕದ್ದಲ್ಲವೆಂದು,
**ವದಂತಃ** = ಹೇಳುತ್ತಿರುವ,
**ಚರಮೇ** = ಕೊನೆಯವರಾದ,
**ಖಲಾಃ** = ದುಷ್ಟರಾದ ಮಾಯವಾದಿಗಳು,
**ಶೂನ್ಯಂ** = ಬೌದ್ಧರು ಹೇಳುವ ಶೂನ್ಯವನ್ನು,
**ಬ್ರಹ್ಮಾಹ್ವಯೇನ** = ಬ್ರಹ್ಮವೆಂಬ ಹೆಸರಿನಿಂದ,
**ಆಹುಃ** = ಹೇಳುತ್ತಾರೆ,
**ಸ್ವಾನ್ ಚ** = ತಮ್ಮನ್ನು,
**ವೇದಾಂತಿನಃ** = ವೇದಾಂತಿಗಳನ್ನಾಗಿ,
**ಅಭ್ಯಧುಃ** = ಹೇಳಿಕೊಂಡರು.

**ತಾತ್ಪರ್ಯ—** ಮಂತ್ರ, ಬ್ರಾಹ್ಮಣ, ಉಪನಿಷತ್ತು ಎಂದು ವೇದವು ಮೂರು ವಿಧವಾಗಿದೆ. (ಆರಣ್ಯಕವೆಂಬ ಭಾಗವು ಉಪನಿಷತ್ತುಗಳಲ್ಲಿಯೇ ಸೇರುತ್ತದೆ). ಇವುಗಳಲ್ಲಿ ಮಂತ್ರಬ್ರಾಹ್ಮಣಾತ್ಮಕವಾದ ವೇದಭಾಗವು ಬ್ರಹ್ಮವ್ಯತಿರಿಕ್ತವಾದ ಇಂದ್ರಾದಿ

ದೇವತೆ ಮತ್ತು ಕರ್ಮವನ್ನು ಪ್ರತಿಪಾದಿಸುವುದರಿಂದ ಅತತ್ತ್ವಾವೇದಕ ಪ್ರಮಾಣವೆನ್ನಿಸಿಕೊಳ್ಳುತ್ತದೆ. ಉಪನಿಷದ್ ಭಾಗವು ಬ್ರಹ್ಮನನ್ನು ಪ್ರತಿಪಾದನೆ ಮಾಡುವುದರಿಂದ ತತ್ತ್ವಾವೇದಕ ಪ್ರಮಾಣವು ಎಂದು ಮಾಯಾವಾದಿಗಳು ಹೇಳುತ್ತಾರೆ. ಹೀಗೆ ಮಂತ್ರಬ್ರಾಹ್ಮಣಾತ್ಮಕವಾದ ವೇದಭಾಗವು ಪ್ರಮಾಣವಾದರೂ ಪಾರಮಾರ್ಥಿಕ ಬ್ರಹ್ಮಸ್ವರೂಪವನ್ನು ತಿಳಿಸದಿರುವುದರಿಂದ ಅತತ್ತ್ವಾವೇದಕ ಪ್ರಮಾಣವೆಂದು ಮಾಯಾವಾದಿಗಳ ಅಭಿಪ್ರಾಯ. ಮುಖ್ಯವಾಗಿ ಸಕಲ ವೇದಗಳಿಂದಲೂ ವೇದ್ಯನಾದ ಪರಬ್ರಹ್ಮಸ್ವರೂಪನಾದ ಭಗವಂತನಾದ ವಾಸುದೇವನನ್ನು ವೇದದ ಒಂದು ಭಾಗವೂ ಪ್ರತಿಪಾದಿಸುವುದಿಲ್ಲವೆಂದೂ, ವೇದದ ಒಂದು ಚಿಕ್ಕ ಭಾಗವು ಮಾತ್ರ ಪರಬ್ರಹ್ಮನನ್ನು ಪ್ರತಿಪಾದಿಸುವುದೆಂದೂ ಹೇಳುವ ಈ ದುರ್ಜನರು, 'ಪ್ರಕಟಬೌದ್ಧರು ಪ್ರಚ್ಛನ್ನಬೌದ್ಧರು' ಎಂದು ಹಿಂದೆ ಹೇಳಿರುವ ಎರಡು ಶೂನ್ಯವಾದಿಗಳಲ್ಲಿ ಎರಡನೆಯವರಾಗುತ್ತಾರೆ. ಶೂನ್ಯವಾದಿಬೌದ್ಧರು ನಿರಾಕಾರ ನಿರ್ವಿಶೇಷವಾದ ಶೂನ್ಯವನ್ನು ಪರತತ್ತ್ವವೆಂದು ಹೇಳಿರುತ್ತಾರೆ. ಮಾಯಾವಾದಿಗಳು ಆ ಶೂನ್ಯಕ್ಕಿಂತ ಏನೂ ವಿಶೇಷವಿಲ್ಲದಿರುವ ಪರತತ್ತ್ವವನ್ನೇ ಹೇಳಿರುತ್ತಾರೆ. ಮಾಯಾವಾದಿಗಳು ಆ ಶೂನ್ಯಕ್ಕಿಂತ ಏನೂ ವಿಶೇಷವಿಲ್ಲದಿರುವ ಪರತತ್ತ್ವವನ್ನೇ ಬ್ರಹ್ಮವೆಂದು ಹೇಳುತ್ತಾರೆ. ಕೇವಲ ಶೂನ್ಯ ಬ್ರಹ್ಮ ಎಂಬ ಹೆಸರುಗಳು ಬೇರೆಯಾಗಿವೆಯೇ ಹೊರತು ವಸ್ತುಭೇದವಿಲ್ಲ. ಇಂತಹ ನಿರ್ವಿಶೇಷ (ಶೂನ್ಯರೂಪ) ಚೈತನ್ಯವಾದಿಗಳು ತಮ್ಮನ್ನು ವೇದಾಂತಿಗಳೆಂದು ಹೇಳಿಕೊಳ್ಳುತ್ತಾರೆ. ಶೂನ್ಯ ವಾದಿಗಳ ಶೂನ್ಯಕ್ಕೂ ಮಾಯಾವಾದಿಗಳ ಬ್ರಹ್ಮಕ್ಕೂ ಯಾವ ಭೇದವೂ ಇಲ್ಲದಿರುವಾಗ, ಬೌದ್ಧರೂ ಮಾಯಾವಾದಿಗಳೂ ಇಬ್ಬರೂ ಶೂನ್ಯವಾದಿಗಳೇ ಆದರು.

**ವಿಗ್ರಹ ಮತ್ತು ಕೋಶ—**

**ಬ್ರಹ್ಮಾಹ್ವಯೇನ—** ಬ್ರಹ್ಮ ಇತಿ ಆಹ್ವಯಃ ಯಸ್ಯ ತತ್ ಬ್ರಹ್ಮಾಹ್ವಯಂ ತೇನ । ಆಹ್ವಯಃ = ಹೆಸರು. 'ಅಥಾಹ್ವಯಃ ಆಖ್ಯಾಹ್ವೇ ಅಭಿಧಾನಂ ಚ ನಾಮಧೇಯಂ ಚ ನಾಮ ಚ' ಅಮರ ।

**ಅತತ್ತ್ವಾವೇದಕಂ—** ತತ್ತ್ವಂ ಆವೇದಯತೀತಿ ತತ್ತ್ವಾವೇದಕಂ, ನ ತತ್ತ್ವಾವೇದಕಂ ಅತತ್ತ್ವಾವೇದಕಂ ತಂ । ಚರಮೇ = ಕೊನೆಯವರು, ಚರಮಶಬ್ದವನ್ನು ಸರ್ವನಾಮಗಳಲ್ಲಿ ಹೇಳಿಲ್ಲ. ಆದರೆ 'ಪ್ರಥಮಚರಮ ತಯಾಲ್ಪಾರ್ಧಕತಿಪಯನೇಮಾಶ್ಚ'(1-1-33) ಎಂಬ ಸೂತ್ರದಿಂದ ಜಸ್ (ಪ್ರಥಮಾ ಬಹುವಚನ)ನಲ್ಲಿ ವಿಕಲ್ಪದಿಂದ ಸರ್ವನಾಮಸಂಜ್ಞೆಯನ್ನು ಹೇಳಿರುವುದರಿಂದ ಚರಮೇ ಚರಮಾಃ ಎಂದು ಎರಡು ರೂಪಗಳು.

**ಕ್ರಿಯಾಪದ— ಆಹುಃ** - ಆಹ ಆಹತು ಆಹುಃ, ಆಹಿತ ಆಹಥುಃ ಬ್ರೂಥ, ಬ್ರವೀಮಿ ಬ್ರೂವಃ ಬ್ರೂಮಃ, ಬ್ರೂಞ್ ವ್ಯಕ್ತಾಯಾಂ ವಾಚಿ, ಸಕ. ಸೇಟ್, ವಚಿ ಆದೇಶ ಬಂದಾಗ ಅನಿಟ್, ಉಭ. to speak clearly 'ಲಟ್, 'ಬ್ರುವಃ ಪಂಚಾನಾಂ ಆದಿತ ಆಹೋ ಬ್ರುವಃ' (3-4-84) ಎಂಬ ಸೂತ್ರದಿಂದ ಮೊದಲಿನ ಐದು ರೂಪಗಳಲ್ಲಿ ಆಹ್ ಆದೇಶ, ಲಿಟ್ ಲಕಾರದ ಪ್ರತ್ಯಯಗಳು. 'ಬ್ರವೀತಿ ಬ್ರೂತಃ ಬ್ರುವಂತಿ, ಬ್ರವೀಷಿ ಬ್ರೂಥಃ' ಎಂಬ ರೂಪಗಳೂ ಇವೆ ।

**ಅಭ್ಯಧುಃ** - ಅಭಿ+ಅಧುಃ, ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ । ಅಭಿ ಉಪಸರ್ಗ, ಡುಧಾಞ್ ಧಾರಣ ಪೋಷಣಯೋಃ, ಧಾರಣಪೋಷಣಾರ್ಥಕ ಧಾಧಾತು ಸಕ ಅನಿ. ಉಭ to put to grant, to produce, to bear ಲುಙ್ ಪ್ರಥಮಪುರುಷೇ ಬಹುವಚನ ।

**ಪ್ರಯೋಗ—** ವೇದಂ ಅತತ್ತ್ವಾವೇದಕಂ ವದದ್ಭಿಃ ಚರಮೈಃ ಖಲೈಃ ಶೂನ್ಯಂ ಬ್ರಹ್ಮಾಹ್ವಯೇನ ಉಚ್ಯತೇ, ಸ್ವೇ ಚ ವೇದಾಂತಿನಃ ಅಭ್ಯಧಾಯಿಷತ ।

★ ★ ★

**ಅವತಾರಿಕಾ—** ಹೀಗೆ ಶೂನ್ಯವಾದಿಗಳಿಗೂ ಮಾಯಾವಾದಿಗಳಿಗೂ ಪರತತ್ತ್ವ ವಿಷಯದಲ್ಲಿ ವಿವಾದವಿರಲು ಸಾಧ್ಯವಿಲ್ಲವೆಂದು ಪ್ರತಿಪಾದಿಸಿ ಅಪರತತ್ತ್ವ(ಜಗತ್ತು) ವಿಷಯದಲ್ಲಿಯೂ ವಿವಾದವಿಲ್ಲವೆಂದು ಹೇಳುತ್ತಾರೆ.

**ಪರತತ್ತ್ವವಿವರ್ತತ್ವಾದಪರಸ್ಯಾಖಿಲಸ್ಯ ಚ ।**
**ಅವಿಶೇಷತ್ವತಶ್ಚಾಸ್ಯ ನಾಂತರಂತರಮೇತಯೋಃ ॥ 26 ॥**

**ಪದಚ್ಛೇದ—** ಪರತತ್ತ್ವವಿವರ್ತತ್ವಾತ್, ಅಪರಸ್ಯಅಖಿಲಸ್ಯ, ಚ, ಅವಿಶೇಷತ್ವತಃ, ಚ, ಅಸ್ಯ, ನಃ ಅಂತಃ, ಅಂತರಂ ಏತಯೋಃ ।

**ಅನ್ವಯ—** ಅಖಿಲಸ್ಯ ಅಪರಸ್ಯ, ಚ, ಪರತತ್ತ್ವವಿವರ್ತತ್ವಾತ್, ಅಸ್ಯ, ಚ, ಅವಿಶೇಷತ್ವತಃ, ಏತಯೋಃ, ಅಂತಃ, ಅಂತರಂ, ನ (ಅಸ್ತಿ) ।

**ಅನ್ವಯಾರ್ಥ—**

**ಅಖಿಲಸ್ಯ** = ಸಮಸ್ತವಾದ,
**ಅಪರಸ್ಯ ಚ** = ಅಪರತತ್ತ್ವವಾದ ಜಗತ್ತಿಗೆ,
**ಪರತತ್ತ್ವವಿವರ್ತತ್ವಾತ್** = ಪರತತ್ತ್ವವಾದ ಬ್ರಹ್ಮ ಮತ್ತು ಶೂನ್ಯಗಳೇ, ಭ್ರಾಂತಿಯಿಂದ ವಿವರ್ತೋಪಾದಾನ ವಾಗುವುದರಿಂದ,
**ಅಸ್ಯ ಚ** = ಈ ಬ್ರಹ್ಮನಿಗೆ,
**ಅವಿಶೇಷತ್ವತಃ** = ವಿಶೇಷವಿಲ್ಲದ್ದರಿಂದ (ಈ ಪ್ರಚ್ಛನ್ನಬೌದ್ಧನಿಗೂ ಶೂನ್ಯವಾದಿಗಿಂತ ವಿಶೇಷವಿಲ್ಲದ್ದರಿಂದ),
**ಏತಯೋಃ** = ಶೂನ್ಯವಾದ ಮತ್ತು ಮಾಯಾವಾದ ಮತಗಳಲ್ಲಿ (ಶೂನ್ಯ ಮತ್ತು ಬ್ರಹ್ಮಗಳಲ್ಲಿ),
**ಅಂತಃ** = ಒಳಗೆ,
**ಅಂತರಂ** = ವ್ಯತ್ಯಾಸವು,
**ನ (ಅಸ್ತಿ)** = ಇಲ್ಲ.

**ತಾತ್ಪರ್ಯ—** ಭೂಮಿ, ಪರ್ವತ ಮುಂತಾದ ನಾನಾ ಪ್ರಪಂಚವೇ ಅಪರತತ್ತ್ವವು ವೇದಾಂತಿಗಳಿಗೆ ಬ್ರಹ್ಮ ಮತ್ತು ಬೌದ್ಧರಿಗೆ ಶೂನ್ಯವೇ ಪರತತ್ತ್ವವು. ಈ ಅಪರತತ್ತ್ವವಾದ ಜಗತ್ತೆಲ್ಲವೂ ಪರತತ್ತ್ವವಾದ ಬ್ರಹ್ಮದ ವಿವರ್ತಕಾರ್ಯವು. ವಿವರ್ತವೆಂದರೆ ಒಂದು ವಸ್ತುವು ಭ್ರಾಂತಿಯಿಂದ ಮತ್ತೊಂದಾಗಿ ತೋರುವುದು. ಕಪ್ಪೆಚಿಪ್ಪು (ಶುಕ್ತಿಯು) ದೋಷದಿಂದ ಬೆಳ್ಳಿಯಂತೆ ತೋರುತ್ತದೆ. ಅದರಂತೆ ಶೂನ್ಯವಾದಿಗಳು ಶೂನ್ಯದಲ್ಲಿ ಜಗತ್ತು ಕಾಣುತ್ತದೆ. ಜಗತ್ತಿಗೆ ಶೂನ್ಯವೇ ವಿವರ್ತ ಉಪಾದಾನಕಾರಣವೆಂದು ಹೇಳುತ್ತಾರೆ. ಮಾಯಾವಾದಿಗಳು ಬ್ರಹ್ಮವೇ ಜಗತ್ತಿನ ಆಕಾರದಿಂದ ಕಾಣಿಸುತ್ತದೆ. ಜಗತ್ತಿಗೆ ಬ್ರಹ್ಮವೇ ವಿವರ್ತಉಪಾದಾನಕಾರಣವೆಂದು ಅಂಗೀಕರಿಸಿರುತ್ತಾರೆ. ಆದುದರಿಂದ ಅಪರತತ್ತ್ವ ವಿಷಯದಲ್ಲಿ ವಿವಾದವಿರಲು ಕಾರಣವಿಲ್ಲ.

ಬೌದ್ಧರು ಶೂನ್ಯವು ಜಗತ್ಕಾರಣವೆಂದು ಹೇಳುತ್ತಾರೆ, ಮಾಯಾವಾದಿಗಳು ಬ್ರಹ್ಮವು ಜಗತ್ಕಾರಣವೆಂದು ಹೇಳುತ್ತಾರೆ. ಹೀಗೆ ಜಗತ್ಕಾರಣಗಳು ಇಬ್ಬರಿಗೂ ಬೇರೆ ಬೇರೆಯಾಗಿರುವುದು ಒಂದು ವಿಶೇಷ ಮತ್ತು ಶೂನ್ಯ ಬ್ರಹ್ಮಗಳಿಗೂ ವಿಶೇಷವಿದೆ. ಹೀಗೆ ಅಪರತತ್ತ್ವ ವಿಷಯದಲ್ಲಿಯೂ ಇಬ್ಬರಿಗೂ ವಿವಾದವಿದೆ, ಪರತತ್ತ್ವ ವಿಷಯದಲ್ಲಿಯೂ ವಿವಾದವಿದೆ ಎಂದು ತಿಳಿದು ಬರುತ್ತದೆ ಎಂದು ಪ್ರಶ್ನೆಯು ಉದ್ಭವಿಸಬಹುದು. ಆದರೆ ಇದು ಸರಿಯಲ್ಲ. ಶೂನ್ಯವಾದಿಗಳಾದ ಬೌದ್ಧರು ಶೂನ್ಯವನ್ನು ನಿರ್ವಿಶೇಷವೆಂದು ಒಪ್ಪಿರುತ್ತಾರೆ. ಮಾಯಾವಾದಿಗಳು ಬ್ರಹ್ಮವನ್ನು ನಿರ್ವಿಶೇಷವೆಂದು ಒಪ್ಪಿರುತ್ತಾರೆ. ಆದುದರಿಂದ ಶೂನ್ಯಕ್ಕಿಂತ ಬ್ರಹ್ಮದಲ್ಲಿ ಯಾವ ವಿಶೇಷವನ್ನೂ ಹೇಳಲು ಬರುವುದಿಲ್ಲ. ಹೀಗೆ ಈ ಎರಡು ಮತಗಳ ಮಧ್ಯದಲ್ಲಿ ವಿಚಾರ ಮಾಡಿದಾಗ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ.

ವಿಗ್ರಹ ಮತ್ತು ಕೋಶ—

**ಪರತತ್ತ್ವವಿವರ್ತತ್ವಾತ್**— ಪರಂ ಚ ತತ್ ತತ್ತ್ವಂ ಚ ಪರತತ್ತ್ವಂ, ಪರತತ್ತ್ವಸ್ಯ ವಿವರ್ತಃ ಪರತತ್ತ್ವವಿವರ್ತಃ, ಪರತತ್ತ್ವವಿವರ್ತಸ್ಯ ಭಾವಃ ಪರತತ್ತ್ವವಿವರ್ತತ್ವಂ ತಸ್ಮಾತ್ ।

**ಅವಿಶೇಷತ್ವತಃ**— ನ ವಿದ್ಯತೇ ವಿಶೇಷಃ ಯಸ್ಯ ತತ್ ಅವಿಶೇಷಂ, ತಸ್ಯ ಭಾವಃ ಅವಿಶೇಷತ್ವಂ, ಅವಿಶೇಷತ್ವಾತ್ ಇತಿ ಅವಿಶೇಷತ್ವತಃ । ಅಂತಃ(ಅವ್ಯಯ)= ಮಧ್ಯದಲ್ಲಿ, 'ಅಂತರ್ಮಧ್ಯೇ ತಥಾ ಪ್ರಾಂತೇ ಧನಂಜಯ', ಅಂತರಂ = ಭೇದ, 'ಅಂತರಮವಕಾಶಾವಧಿಪರಿಧಾನಾಂತರ್ಧಿಭೇದತಾದರ್ಥ್ಯೇ' ಅಮರ, 'ಅಂತರಂ ತು ಪರೀಧಾನೇ ಭೇದೇ ರಂಧ್ರಾವಕಾಶಯೋಃ' ವಿಶ್ವ ।

**ವಿಶೇಷಾಂಶ**— **ವಿವರ್ತ**—In (Vedanthaphil) An apparent or illusory form, an unreal appearance caused by ಅವಿದ್ಯಾ or humon error, This is a favourite doctrine of Vedantins according to whom the whole visible world is a mere illusion an unreal and illusory appearance, while Brahman or Supreme spirit is the only real entity, as a serpent (ಸರ್ಪ) is a vivarta of a rope (ರಜ್ಜು, ಹಗ್ಗ) so is the world a vivarta of the real entity Brahman and the illusion is removed by vidya or true knowledge (Apte) ವಿವರ್ತವೆಂದರೆ ಕಣ್ಣಿಗೆ ಕಂಡರೂ ನಿಜವಲ್ಲದ ಆಕಾರ, ಅಸತ್ಯವಾದ ತೋರಿಕೆ. ಇದು ಅವಿದ್ಯೆಯಿಂದ ಮತ್ತು ಪುರುಷರ ದೋಷದಿಂದ ಉಂಟಾಗುತ್ತದೆ. ಇದು ಜೀವ ಬ್ರಹ್ಮೈಕ್ಯವಾದಿಗಳಾದ ಅದ್ವೈತ ವೇದಾಂತಿಗಳಿಗೆ ಅಚ್ಚುಮೆಚ್ಚಿನ ಒಂದು ವಾದ. (ಸಿದ್ಧಾಂತ) ಮಾಯಾವಾದಿಗಳಾದ ವೇದಾಂತಿಗಳು ಈ ಕಾಣಿಸುವ, ಪ್ರಪಂಚವೆಲ್ಲವೂ ಕೇವಲ ಭ್ರಮೆ, ಕಣ್ಣುಕಟ್ಟು, ಅಸತ್ಯ, ಪರಬ್ರಹ್ಮಚೇತನವೊಂದೇ ನಿಜವಾದ ಅಸ್ತಿತ್ವ ಉಳ್ಳದ್ದು. ಮನುಷ್ಯನ ಕಣ್ಣಿನ ದೋಷದಿಂದ ಅಥವಾ ವಸ್ತುವಿನ ದೋಷದಿಂದ ಹಗ್ಗವು ಹಾವು ಎಂದು ಕಾಣಿಸುವಂತೆ, ಕಪ್ಪೆಚಿಪ್ಪು ಬೆಳ್ಳಿಯೆಂದು ಕಾಣುವಂತೆ ಪಾರಮಾರ್ಥಿಕ ಅಸ್ತಿತ್ವವುಳ್ಳ ಬ್ರಹ್ಮನು ತನ್ನ ಮಾಯೆಯಿಂದಲೂ ಜೀವನಲ್ಲಿರುವ ಅವಿದ್ಯೆಯಿಂದಲೂ ಜಗತ್ತು ಎಂದು ಕಾಣಿಸುತ್ತಾನೆ. ವಿದ್ಯೆ ಅಥವಾ ಯಥಾರ್ಥಜ್ಞಾನದಿಂದ ಈ ಪ್ರಪಂಚ ಭ್ರಾಂತಿಯು ಹೊರಟುಹೋಗುತ್ತದೆ, ನಾಶವಾಗುತ್ತದೆ. ಬೌದ್ಧರೂ ಹೀಗೆಯೇ ಹೇಳುತ್ತಾರೆ. ಆದರೆ ಬ್ರಹ್ಮ ಎಂಬುದಕ್ಕೆ ಬದಲಾಗಿ ಶೂನ್ಯವೆಂದೂ, ಅವಿದ್ಯೆ ಅಥವಾ ಮಾಯಾ ಎಂಬುದಕ್ಕೆ ಬದಲಾಗಿ ಸಂವೃತಿ ಎಂಬ ಪದವನ್ನು ಉಪಯೋಗಿಸು ತ್ತಾರೆ. ತತ್ತ್ವಪ್ರಕ್ರಿಯೆ ಎಲ್ಲವೂ ಒಂದೇ ರೀತಿ ಇದೆ. ಆದುದರಿಂದ ಶೂನ್ಯವಾದ ಮಾಯಾವಾದಗಳಿಗೆ ಯಾವ ವಿಶೇಷವೂ ಇಲ್ಲ ಎಂದು ಹೇಳಿರುತ್ತಾರೆ.

**ಪ್ರಯೋಗ**— ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ. ಅಸ್ತಿ ಎಂಬ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಏತಯೋಃ ಅಂತಃ ಅಂತರೇಣ ನ ಭೂಯತೇ ಭಾವೇ ಪ್ರಯೋಗ ।

★ ★ ★

**ಅವತಾರಿಕಾ**— ಹೀಗೆ ಎರಡು ಮತಗಳಿಗೂ ಸಾಮ್ಯವನ್ನು ಹೇಳಿ ಅವೆರಡು ಮತಗಳನ್ನು ಆಚಾರ್ಯರು ಒಟ್ಟಿಗೇ ನಿರಾಕರಿಸಿದರು ಎಂದು ಹೇಳುತ್ತಾರೆ.

**ಅಖಂಡಖಂಡನನ್ಯಾಯಾನಖಂಡಮಪಿ ಖಂಡಯನ್ ।**

**ಅಖಂಡಯದಖಂಡಜ್ಞೋ ದ್ವಯಾಂಶ್ಚಾಖಂಡಲದ್ವಿಷಃ ॥ 27 ॥**

**ಪದಚ್ಛೇದ**— ಅಖಂಡಖಂಡನನ್ಯಾಯಾನ್, ಅಖಂಡಂ, ಅಪಿ, ಖಂಡಯನ್, ಅಖಂಡಯತ್, ಅಖಂಡಜ್ಞಃ, ದ್ವಯಾನ್, ಚ, ಆಖಂಡಲದ್ವಿಷಃ ।

**ಅನ್ವಯ**— ಅಖಂಡಜ್ಞಃ, ಅಖಂಡಖಂಡನನ್ಯಾಯಾನ್, ಅಖಂಡಂ, ಅಪಿ, ಖಂಡಯನ್, ದ್ವಯಾನ್, ಚ, ಆಖಂಡಲದ್ವಿಷಃ, ಅಖಂಡಯತ್ ।

ಅನ್ವಯಾರ್ಥ—

**ಅಖಂಡಜ್ಞಃ** = ಸರ್ವಜ್ಞರಾದ ಶ್ರೀಮಧ್ವಾಚಾರ್ಯರು,

**ಅಖಂಡಖಂಡನನ್ಯಾಯಾನ್** = ಸಮಸ್ತವಾದ ತಮ್ಮ ಜೀವೇಶ್ವರಭೇದ ಸಿದ್ಧಾಂತದ ನಿರಾಕರಣರೂಪವಾದ, ಕುತರ್ಕರೂಪವಾದ ನ್ಯಾಯಾಭಾಸಗಳನ್ನು,

**ಅಖಂಡಂ ಅಪಿ** = ನಿರ್ವಿಶೇಷವೆಂದು ಒಪ್ಪಿರುವ ಅವರ ಪರತತ್ತ್ವವನ್ನೂ,

**ಖಂಡಯನ್** = (ಸನ್) ನಿರಾಕರಿಸುತ್ತಾ,

**ದ್ವಯಾನ್** = ಮಾಯಾವಾದಿ ಮತ್ತು ಶೂನ್ಯವಾದಿಗಳೆಂದು ಎರಡು ಬಗೆಯವರಾದ,

**ಆಖಂಡಲದ್ವಿಷಃ** = ಇಂದ್ರ ಶತ್ರುಗಳಾದ ದಾನವರನ್ನು,

**ಅಖಂಡಯತ್** = ನಿರಾಕರಿಸಿದರು.

**ತಾತ್ಪರ್ಯ—** ಶೂನ್ಯವಾದಿಗಳು ಮತ್ತು ಮಾಯಾವಾದಿಗಳು ಜೀವೇಶ್ವರಭೇದ, ಪ್ರಪಂಚಸತ್ಯತ್ವ ಮುಂತಾದ ಆಚಾರ್ಯರ ಸಿದ್ಧಾಂತಗಳನ್ನು ನಿರಾಕರಿಸಲು ಅನೇಕ ಕುತರ್ಕರೂಪವಾದ ಯುಕ್ತ್ಯಾಭ್ಯಾಸಗಳನ್ನು ಪ್ರಯೋಗಿಸುತ್ತಾರೆ. ನಿರ್ವಿಶೇಷವಾದ ಶೂನ್ಯ ಅಥವಾ ಬ್ರಹ್ಮವೆಂಬ ನಿರ್ವಿಶೇಷತತ್ತ್ವವನ್ನು ಸಾಧಿಸುತ್ತಾರೆ, ಅದು ಒಂದೇ ತತ್ತ್ವವೆಂದು ಹೇಳುತ್ತಾರೆ. ಸರ್ವಜ್ಞರಾದ ಆಚಾರ್ಯರು ಇಂದ್ರ ದ್ವೇಷಿಗಳಾದ ದಾನವರೂಪರಾದ ಈ ಇಬ್ಬರು ವಾದಿಗಳನ್ನು ನಿರಾಕರಿಸಿದರು.

ವಿಗ್ರಹ ಮತ್ತು ಕೋಶ—

**ಅಖಂಡಖಂಡನನ್ಯಾಯಾನ್—** ಖಂಡಯಂತೀತಿ ಖಂಡನಾಃ, ಖಂಡನಾಶ್ಚ ತೇ ನ್ಯಾಯಾಶ್ಚ ಖಂಡನ ನ್ಯಾಯಾಃ, ಅಖಂಡಾಶ್ಚತೇ ಖಂಡನನ್ಯಾಯಾಶ್ಚ ಅಖಂಡಖಂಡನನ್ಯಾಯಾಃ ತಾನ್, ಅಥವಾ ಖಂಡನಸ್ಯ ನ್ಯಾಯಾಃ ಖಂಡನನ್ಯಾಯಾಃ ಅಖಂಡಾಶ್ಚತೇ ಖಂಡನನ್ಯಾಯಾಶ್ಚ ತಾನ್ ।

**ಅಖಂಡಜ್ಞಃ—** ಅಖಂಡಂ ಜಾನಾತೀತಿ ಅಖಂಡಜ್ಞಃ ।

**ಆಖಂಡಲದ್ವಿಷಃ—**ಆಖಂಡಲಸ್ಯ ದ್ವಿಷಃ ಆಖಂಡಲದ್ವಿಷಃ ತಾನ್ । ಆಖಂಡಲ = ಇಂದ್ರ, 'ಆಖಂಡಲಃ ಸಹಸ್ರಾಕ್ಷಃ', ಆಖಂಡಲದ್ವಿಟ್ = ದಾನವ, 'ಇಂದ್ರಾದಿ ದನುಜೇಂದ್ರಾದಿದಾನವಾಃ' ಅಮರ ।

**ಕ್ರಿಯಾಪದ—** **ಅಖಂಡಯತ್**-ಅಖಂಡಯತ್ ಅಖಂಡಯತಾಂ ಅಖಂಡಯನ್, ಅಖಂಡಯಃ ಅಖಂಡ ಯತಂ, ಅಖಂಡಯತ, ಅಖಂಡಯಂ ಅಖಂಡಯಾವ ಅಖಂಡಯಾಮ । ಖಡಿ ಭೇದನೇ ಣಿಜಂತ ಲಙ್ ಪರಸ್ಮೈಪದ।

**ಪ್ರಯೋಗ—** ಅಖಂಡಜ್ಞೇನ ಅಖಂಡಖಂಡನನ್ಯಾಯಾನ್ ಅಖಂಡಮಪಿ ಖಂಡಯತಾ ದ್ವಯೇ ಆಖಂಡಲದ್ವಿಷಸ್ತ್ವ ಅಖಂಡ್ಯಂತ ।

★ ★ ★

**ಅವತಾರಿಕಾ—** ಶೂನ್ಯವಾದಿಗಳು ಶೂನ್ಯ ಒಂದೇ ಪಾರಮಾರ್ಥಿಕವಾದ ತತ್ತ್ವವೆಂದು ಏನು ಹೇಳುತ್ತಾರೋ ಅದನ್ನು ಖಂಡಿಸುತ್ತಾರೆ.

**ವಿಮತಂ ಕಾರಣಂ ನ ಸ್ಯಾದಸತ್ತ್ವಾನ್ನ ಯದೀದೃಶಮ್ ।**
**ನೇದೃಶಂ ತದ್ಯಥಾ ಕುಂಭಕರ್ತೇತ್ಯತ್ರಾನುಮೀಯತೇ ॥ 28 ॥**

**ಪದಚ್ಛೇದ—** ವಿಮತಂ, ಕಾರಣಂ, ನ, ಸ್ಯಾತ್, ಅಸತ್ತ್ವಾತ್, ನ, ಯತ್, ಈದೃಶಂ, ನ, ಈದೃಶಂ, ತತ್, ಯಥಾ, ಕುಂಭಕರ್ತಾ, ಇತಿ ಅತ್ರ, ಅನುಮೀಯತೇ ।

**ಅನ್ವಯ—** (ಅಂಘೋ! ತಾಪಸ) ವಿಮತಂ, ಕಾರಣಂ, ನ, ಸ್ಯಾತ್, ಅಸತ್ತ್ವಾತ್, ಯತ್, ಈದೃಶಂ, ನ, ತತ್, ಈದೃಶಂ, ನ, ಯಥಾ, ಕುಂಭಕರ್ತಾ, ಇತಿ ಅತ್ರ, (ಅಸ್ಮಾಭಿಃ) ಅನುಮೀಯತೇ ।

**ಅನ್ವಯಾರ್ಥ—**

**(ಅಂಘೋ! ತಾಪಸ)** = ಎಲೈ ಶೂನ್ಯವಾದಿಯಾದ ಬೌದ್ಧಮುನಿಯೇ!

**ವಿಮತಂ** = ಜಗತ್ತಿಗೆ ಕಾರಣವು ಹೌದೋ ಅಲ್ಲವೋ ಎಂದು ಸಂದೇಹಕ್ಕೆ ವಿಷಯವಾದ ಶೂನ್ಯವು,

**ಕಾರಣಂ** = ಜಗತ್ತಿಗೆ ಕಾರಣವಾಗಿ,

**ನ ಸ್ಯಾತ್** = ಆಗಲಾರದು,

**ಅಸತ್ತ್ವಾತ್** = ಅಸತ್ ಆದುದರಿಂದ (ಸ್ವರೂಪರಹಿತವಾದುದರಿಂದ),

**ಯತ್ ಈದೃಶಂ ನ** = ಯಾವುದು ಕಾರಣವಲ್ಲವೆಂದು ಅಲ್ಲವೋ,

**ತತ್** = ಆ ವಸ್ತುವು,

**ಈದೃಶಂ ನ** = ಅಸತ್ ಅಲ್ಲ (ಸ್ವರೂಪರಹಿತವಾದುದು ಅಲ್ಲ, ಸತ್ ಆದುದು)

**ಯಥಾ** = ಹೇಗೆ,

**ಕುಂಭಕರ್ತಾ** = ಕುಂಬಾರನು,

**ಇತಿ** = ಹೀಗೆಂದು,

**(ಅಸ್ಮಾಭಿಃ = ನಮ್ಮಿಂದ) ಅತ್ರ** = ಈ ಶೂನ್ಯಕಾರಣತ್ವ ವಿಷಯದಲ್ಲಿ,

**ಅನುಮೀಯತೇ** = ಪ್ರತಿಯಾಗಿ ಅನುಮಾನ ಮಾಡಲ್ಪಡುತ್ತದೆ.

**ತಾತ್ಪರ್ಯ—** ಎಲೈ ಬೌದ್ಧ ತಾಪಸನೇ! ಶೂನ್ಯವೇ ಜಗತ್ಕಾರಣವೆಂದು ನೀನು ಹೇಳುತ್ತಿದೀಯೆ! ಶೂನ್ಯವು ಜಗತ್ಕಾರಣವಲ್ಲವೆಂದು ನಾವು ಹೇಳುತ್ತಿದ್ದೇವೆ. ಹೀಗೆ ''ಕಾರಣವು ಹೌದೋ ಅಲ್ಲವೋ'' ಎಂದು ವಿವಾದಗ್ರಸ್ತವಾದ ಶೂನ್ಯವು ಕಾರಣವಲ್ಲ ಎಂದು ನಾವು ಸಾಧಿಸುತ್ತೇವೆ. ಶೂನ್ಯವು ಅಸತ್, ನಿಸ್ಸ್ವರೂಪ, ಯಾವ ಸಂಬಂಧವೂ ಇಲ್ಲದುದು. ಆದುದರಿಂದ ಎಂಬುದೇ ಹೇತುವು. ಯಾವುದು ಕಾರಣವಲ್ಲವೆಂದು ಅಲ್ಲವೋ ಅದು ಅಸತ್ ಅಲ್ಲ, ಅಂದರೆ ಕಾರಣವಾಗಿರುವ ವಸ್ತುವು ಸತ್ ಆಗಿರುತ್ತದೆ. ಉದಾಹರಣೆಗೆ ಕುಂಬಾರನು. ಕುಂಬಾರನು ಕಾರಣನಾಗಿರುತ್ತಾನೆ. ಸತ್ ಆಗಿರುತ್ತಾನೆ. ಸತ್ ಅಲ್ಲದುದು ಕಾರಣವಾಗಿರುವುದು ಎಲ್ಲೂ ಕಂಡಿಲ್ಲ. ವಿಮತಂ ಶೂನ್ಯಂ, ಕಾರಣಂ ನ ಭವತಿ ಅಸತ್ತ್ವಾತ್ ಯತ್ಕಾರಣಂ ನ ಭವತೀತಿ ನ, ಅರ್ಥಾತ್ ಕಾರಣಂ, ತತ್ ಅಸತ್ ನ, ಸದೇವ, ಯಥಾ ಕುಲಾಲಃ ಎಂಬ ವ್ಯತಿರೇಕಿ ಅನುಮಾನದಿಂದ ನೀನು ಒಪ್ಪಿರುವ ಶೂನ್ಯವು ಜಗತ್ಕಾರಣವಾಗಲಾರದು ಎಂದು ನಾವು ಸಾಧಿಸುತ್ತೇವೆ. (ಮುಂದಿನ ಶ್ಲೋಕದಿಂದ ಅಂಘೋ ತಾಪಸ ಎಂಬುದನ್ನು ಇಲ್ಲಿಗೆ ಸೇರಿಸಿಕೊಳ್ಳಬೇಕು).

**ವಿಗ್ರಹ ಮತ್ತು ಕೋಶ—**

**ಅಸತ್ತ್ವಾತ್—** ನ ಸತ್ ಅಸತ್ ಅಸತಃ ಭಾವಃ ಅಸತ್ತ್ವಂ ತಸ್ಮಾತ್ ।

**ಕುಂಭಕರ್ತಾ—** ಕುಂಭಸ್ಯ ಕರ್ತಾ ಕುಂಭಕರ್ತಾ । ಕುಂಭಕರ್ತಾ = ಕುಂಬಾರ, 'ಕುಂಭಕಾರಃ ಕುಲಾಲಃ ಸ್ಯಾತ್' ಅಮರ ।

**ಕ್ರಿಯಾಪದ— ಸ್ಯಾತ್** - ಸ್ಯಾತ್ ಅಸ ಭುವಿ ವಿಧಿಲಿಙ್, ಅನು+ಮೀಯತೇ ಮೀಯೇತೇ, ಇತ್ಯಾದಿ ಅನು ಉಪಸರ್ಗ ಮಾಙ್(ಮಾ) ಮಾನೇ ಶಬ್ದೇ ಚ ಸಕ, ಅನಿ, ಆತ್ಮ to measure ಕರ್ಮಣಿ ಲಟ್ ।

**ಪ್ರಯೋಗ—** ವಿಮತೇನ ಕಾರಣೇನ ನ ಭೂಯೇತ, ಅಸತ್ತ್ವಾತ್ ಯೇನ ಈದೃಶೇನ ನ ಭೂಯತೇ ತೇನ ಅಸತಾ ನ ಭೂಯತೇ ಸತಾ ಏವ ಭೂಯತೇ ಯಥಾ ಇತಿ ಅತ್ರ ಶೂನ್ಯತತ್ತ್ವವಿಷಯೇ ವಯಂ ಅನುಮಿಮೀಮಹೇ ।

★ ★ ★

**ಅವತಾರಿಕಾ—** ಈಗ ಶೂನ್ಯವಾದಿಯ ಪೂರ್ವಪಕ್ಷವನ್ನು ಉಕ್ತಿ ಪ್ರತ್ಯುಕ್ತಿಯಿಂದ ಅನುವಾದ ಮಾಡುತ್ತಾರೆ. ಮೊದಲು ಸಿದ್ಧಾಂತಿಯು ಹೇಳುತ್ತಾನೆ.

**ಅಂಘೋ (ಅಹೋ) ತಾಪಸ ! ನೋ ಶೂನ್ಯಂ ಕಾರಣಂ ಕುಂಭಕರ್ತೃವತ್ ।**
**ಯತ್ ಸಂವೃತ್ಯುತ್ಥಿತಂ ವಿಶ್ವಂ ತತ್ಕಾರಣಮಿತೀರ್ಯತೇ ॥ 29 ॥**

**ಪದಚ್ಛೇದ—** ಅಂಘೋ, ತಾಪಸ, ನೋ, ಶೂನ್ಯಂ, ಕಾರಣಂ ಕುಂಭಕರ್ತೃವತ್, ಯತ್‌ಸಂವೃತ್ಯುತ್ಥಿತಂ, ವಿಶ್ವಂ, ತತ್, ಕಾರಣಂ, ಇತಿ, ಈರ್ಯತೇ ।

**ಅನ್ವಯ—** ಅಂಘೋ ತಾಪಸ!, ಶೂನ್ಯಂ, ಕುಂಭಕರ್ತೃವತ್, ಕಾರಣಂ, ನೋ(ಭವತಿ), (ಕಿಂತು) ವಿಶ್ವಂ, ಯತ್‌ಸಂವೃತ್ಯುತ್ಥಿತಂ, ತತ್, ಕಾರಣಂ, ಇತಿ, ಈರ್ಯತೇ ।

**ಅನ್ವಯಾರ್ಥ—**

**ಅಂಘೋ (ಅಹೋ) ತಾಪಸ** = ಎಲೈ ಶಾಕ್ಯಮುನಿಯೇ!
**ಶೂನ್ಯಂ** = ನೀನು ಹೇಳುವ ಶೂನ್ಯತತ್ತ್ವವು,
**ಕುಂಭಕರ್ತೃವತ್** = ಕುಂಬಾರನಂತೆ,
**ಕಾರಣಂ ನೋ(ಭವತಿ)** = ಕಾರಣವಾಗಲಾರದು, (ಎಂದು ನಾವು ಹೇಳಿದರೆ ಇದಕ್ಕೆ ಬೌದ್ಧೋವದತಿ ಉತ್ತರವನ್ನು ಬೌದ್ಧನು ಹೇಳುತ್ತಾನೆ) (ಕಿಂತು = ಆದರೆ),
**ವಿಶ್ವಂ** = ಜಗತ್ತು,
**ಯತ್‌ಸಂವೃತ್ಯುತ್ಥಿತಂ** = ಯಾವ ಶೂನ್ಯದ ಅಜ್ಞಾನದಿಂದ ಉಂಟಾಯಿತೋ,
**ತತ್** = ಅದು,
**ಕಾರಣಂ ಇತಿ** = ಕಾರಣವೆಂದು, (ಅಸ್ಮಾಭಿಃ = ನಮ್ಮಿಂದ)
**ಈರ್ಯತೇ** = ಹೇಳಲ್ಪಡುತ್ತದೆ.

**ತಾತ್ಪರ್ಯ—** ಎಲೈ ಶಾಕ್ಯಮುನಿಯೇ! ನೀನು ಹೇಳುತ್ತಿರುವ ಶೂನ್ಯವು ಕುಂಬಾರನು ಗಡಿಗೆಗೆ ಹೇಗೆ ಕಾರಣನೋ ಆ ರೀತಿ ಕಾರಣವಾಗಲಾರದು. ಅಂದರೆ ಮಡಿಕೆ ಹುಟ್ಟಲು ಮಣ್ಣು ಎಂಬ ಉಪಾದಾನ ಕಾರಣದ (ಪರಿಣಾಮಿಕಾರಣದ) ಅಪೇಕ್ಷೆಯಿದೆ. ಮಣ್ಣಿನಿಂದ ಕುಂಬಾರನು ಮಡಿಕೆಯನ್ನು ಮಾಡುತ್ತಾನೆ. ಆಗ ಮಣ್ಣು ಮಡಿಕೆಗೆ ಉಪಾದಾನ ಕಾರಣವು ಕುಂಬಾರನು ನಿಮಿತ್ತ ಕಾರಣನು. ಆದರೆ ಪ್ರಪಂಚವು ಶೂನ್ಯದ ಅಜ್ಞಾನದಿಂದ ಇದ್ದಂತೆ ತೋರುತ್ತದೆ. ಶೂನ್ಯವು ಪ್ರಪಂಚಕ್ಕೆ ಕಾರಣವೆಂದರೆ ಇಷ್ಟೇ ಅರ್ಥ. ಶೂನ್ಯವು ಪ್ರಪಂಚವನ್ನು ರಚಿಸುವುದೆಂದರೆ ಶೂನ್ಯವೇ ಪ್ರಪಂಚದ ಆಕಾರದಿಂದ ತೋರುವುದು ಎಂದು ಅರ್ಥ. ನಾವು ಶೂನ್ಯವನ್ನೇ ನೋಡುತ್ತಿದ್ದರೂ ಇದು ಶೂನ್ಯವೆಂದು ಜ್ಞಾನಿಲ್ಲದಿರುವುದರಿಂದ ಶೂನ್ಯವನ್ನೇ ನಾವು ಇದು ಪ್ರಪಂಚ ಎಂದು ತಿಳಿಯುತ್ತೇವೆ. ಇಷ್ಟರಿಂದಲೇ ಶೂನ್ಯವು ಪ್ರಪಂಚಕ್ಕೆ ಕಾರಣವೆಂದು ನೀವು ಹೇಳುತ್ತೀರಷ್ಟೆ!

ಕಪ್ಪೆಚಿಪ್ಪನ್ನು ಸರಿಯಾಗಿ ತಿಳಿಯದೆ ಭ್ರಾಂತನು ಅದನ್ನು ರಜತವೆಂದು ತಿಳಿಯುತ್ತಾನೆ, "ಇದೋ ನನ್ನೆದುರು ರಜತವಿದೆ" ಎಂದು ವ್ಯವಹರಿಸುತ್ತಾನೆ, ಹೀಗೆಯೇ ಶೂನ್ಯತತ್ತ್ವವನ್ನು ಸರಿಯಾಗಿ ಅಪರೋಕ್ಷದಿಂದ ತಿಳಿಯದಿರುವ ಒಬ್ಬ ಅಜ್ಞಾನಿಗೆ ಶೂನ್ಯದಲ್ಲಿ ಇದು ಭೂಮಿ, ಇದು ಬೆಟ್ಟ, ಇದು ನದಿ, ಇದು ಸಮುದ್ರ ಎಂಬ ಪ್ರತೀತಿಯು ಉಂಟಾಗುತ್ತದೆ, ಹೀಗೆ ಕಪ್ಪೆಚಿಪ್ಪಿನ ಯಥಾರ್ಥ ಸ್ವರೂಪವನ್ನು ತಿಳಿಯದಿರುವುದರಿಂದ ತೋರುವ ಬೆಳ್ಳಿಗೆ ಕಪ್ಪೆಚಿಪ್ಪು ಕಾರಣವೆಂದು ಹೇಗೆ ಹೇಳುತ್ತಾರೋ ಅದರಂತೆ ಶೂನ್ಯದ ತತ್ತ್ವಜ್ಞಾನವಿಲ್ಲದಿರುವುದರಿಂದ ತೋರುವ ಪ್ರಪಂಚಕ್ಕೆ ಶೂನ್ಯವು ಕಾರಣ ಎಂದು

ಬೌದ್ಧರು ಹೇಳುತ್ತಾರೆ. ಶೂನ್ಯವು ಕುಂಬಾರನು ಗಡಿಗೆಗೆ ಕಾರಣನಾಗುವಂತೆ ಕಾರಣವಲ್ಲ ಎಂದು ಶೂನ್ಯವಾದಿಗಳ ಅಭಿಪ್ರಾಯವನ್ನು ಅನುವಾದ ಮಾಡಿರುತ್ತಾರೆ.

**ವಿಗ್ರಹ ಮತ್ತು ಕೋಶ—**

**ಅಂಘೋ(ಅಹೋ)ತಾಪಸ—** ಅಂಘೋ, ಎಂಬುದು ಎಲೈ ಎಂಬ ಅರ್ಥವುಳ್ಳ ಸಂಬೋಧಪದ, ಛಲಾರಿಯ ವ್ಯಾಖ್ಯಾನದಲ್ಲಿ ಅಹೋ ಎಂಬ ಪದವಿದೆ. ತಾಪಸ! = ಬೌದ್ಧಮುನಿಯೇ?, ತಾಪಸಃ = ಇಲ್ಲಿ ಶಾಕ್ಯಮುನಿ, (ಬುದ್ಧನ ಅನುಯಾಯಿ) ಎಂದು ಅರ್ಥ. 'ಮುನೀಂದ್ರಃ ಶ್ರೀಘನಃ ಶಾಸ್ತಾ ಮುನಿಃ' ಎಂಬ ಅಮರಕೋಶದಲ್ಲಿ ತಾಪಸಪರ್ಯಾಯವಾದ ಮುನಿ ಶಬ್ದವನ್ನು ಪ್ರಯೋಗ ಮಾಡಿರುತ್ತಾರೆ.

**ಕುಂಭಕರ್ತೃವತ್—** ಕುಂಭಸ್ಯ ಕರ್ತಾ ಕುಂಭಕರ್ತಾ, ಕುಂಭಕರ್ತ್ರಾ ತುಲ್ಯಂ ಕುಂಭಕರ್ತೃವತ್ ।

**ಯತ್ಸಂವೃತ್ಯುತ್ಥಿತಂ—** ಯಸ್ಯ ಸಂವೃತಿಃ ಯತ್ಸಂವೃತಿಃ, ಯತ್ಸಂವೃತ್ಯಾ ಉತ್ಥಿತಂ ಯತ್ಸಂವೃತ್ಯುತ್ಥಿತಂ।

**ಕ್ರಿಯಾಪದ—** ಈರ್ಯತೇ ಈರ್ಯೇತೇ ಈರ್ಯಂತೇ ಇತ್ಯಾದಿ ಈರ ಗತೌ ಕಂಪನೇ ಚ ಕರ್ಮಣಿ ಲಟ್ ಆತ್ಮನೇ ಪದಂ ।

**ಪ್ರಯೋಗ—** ಅಂಘೋ ತಾಪಸ! ಶೂನ್ಯೇನ ಕುಂಭಕರ್ತೃವತ್ ಕಾರಣೇನ ನೋ(ಭೂಯತೇ) ವಿಶ್ವೇನ ಯತ್ಸಂವೃತ್ಯುತ್ಥಿತೇನ ಭೂಯತೇ ತತ್ ಕಾರಣಂ ಇತಿ ಈರಯಾಮಃ ।

★ ★ ★

**ಅವತಾರಿಕಾ—** ಇದುವರೆಗೆ ಅನುವಾದ ಮಾಡಿದ ಮಾಧ್ಯಮಿಕ ಬೌದ್ಧನ ಮತವನ್ನು ಖಂಡಿಸುತ್ತಿದ್ದಾರೆ.

**ಏವಂ ಚೇತ್ ಕಾರಣಂ ಮಾ ಸ್ಮ ಬ್ರವೀಃ ಶೂನ್ಯಂ ಕಥಂಚನ ।**
**ಆಯುಷ್ಮಂಸ್ತದಧಿಷ್ಠಾನಂ ವ್ಯುತ್ಪಿತ್ಸಸ್ವ ಗುರೋರ್ಗೃಹೇ ॥ 30 ॥**

**ಪದಚ್ಛೇದ—** ಏವಂ, ಚೇತ್, ಕಾರಣಂ, ಮಾ, ಸ್ಮ, ಬ್ರವೀಃ, ಶೂನ್ಯಂ, ಕಥಂಚನ, ಆಯುಷ್ಮನ್, ತತ್, ಅಧಿಷ್ಠಾನಂ, ವ್ಯುತ್ಪಿತ್ಸಸ್ವ, ಗುರೋಃ, ಗೃಹೇ ।

**ಅನ್ವಯ—** ಏವಂ, ಚೇತ್, ಶೂನ್ಯಂ, ಕಥಂಚನ, ಕಾರಣಂ, ಮಾ, ಸ್ಮ, ಬ್ರವೀಃ, ಆಯುಷ್ಮನ್!, ತತ್, ಅಧಿಷ್ಠಾನಂ, (ಭವತಿ) ಗುರೋಃ, ಗೃಹೇ, ವ್ಯುತ್ಪಿತ್ಸಸ್ವ ।

**ಅನ್ವಯಾರ್ಥ—**

**ಏವಂ ಚೇತ್** = ಹೀಗೆ ಶೂನ್ಯತತ್ತ್ವಜ್ಞಾನದಿಂದ ತೋರುವ ಪ್ರಪಂಚಕ್ಕೆ ಶೂನ್ಯವು ಕಾರಣವೆಂದು ಒಪ್ಪುವುದಾದರೆ,

**ಶೂನ್ಯಂ** = ಶೂನ್ಯವನ್ನು,

**ಕಥಂಚನ** = ಯಾವ ಪ್ರಕಾರದಿಂದಲೂ,

**ಕಾರಣಂ** = ಕಾರಣವನ್ನಾಗಿ,

**ಮಾ ಸ್ಮ ಬ್ರವೀಃ** = ಹೇಳಬೇಡ,

**ಆಯುಷ್ಮನ್** = ಚಿರಂಜೀವಿಯೇ,

**ತತ್** = ನೀನು ಅಂಗೀಕರಿಸಿರುವ ಆ ಶೂನ್ಯವು,

**ಅಧಿಷ್ಠಾನಂ** = ಆಧಾರವು, (ಆಶ್ರಯಸ್ಥಾನವು) (ಭವತಿ = ಆಗಿರುತ್ತದೆ. ಕಾರಣವಾಗಲಾರದು)

**ಗುರೋಃ** = ಉಪಾಧ್ಯಾಯರ,

**ಗೃಹೇ** = ಮನೆಯಲ್ಲಿ

**ವ್ಯುತ್ಪಿತ್ಸಸ್ವ** = (ಅಧಿಷ್ಠಾನ ಮತ್ತು ಕಾರಣಗಳ ಸ್ವರೂಪವನ್ನು) ತಿಳಿಯಲು ಇಚ್ಛಿಸು (ತಿಳಿಯಲು ಪ್ರಯತ್ನ ಮಾಡು).

**ತಾತ್ಪರ್ಯ**— ಎಲೈ ಬೌದ್ಧ ತಾಪಸನೇ! ನಿನ್ನ ಮಾತಿನ ಅಭಿಪ್ರಾಯವನ್ನು ವಿವೇಚಿಸಿದಾಗ, ಶೂನ್ಯವು ಅಧಿಷ್ಠಾನವಾಗಿದ್ದು ಕಾರಣವೆಂದು ತಿಳಿದು ಬರುತ್ತದೆ. ಹೀಗಾದರೆ ಶೂನ್ಯವು ಪ್ರಪಂಚಕ್ಕೆ ಸ್ವತಂತ್ರಕಾರಣವೆಂದು ಯಾವ ರೀತಿಯಿಂದಲೂ ಹೇಳಬೇಡ. ನೀನು ಹೇಳುವ ಶೂನ್ಯವು ನಿನ್ನ ಮತದ ಪ್ರಕಾರ ಅಧಿಷ್ಠಾನವಾಯಿತು. ಪ್ರಪಂಚವೆಂಬ ವಸ್ತುವು ವಾಸಿಸಲು ಬೇಕಾದ ಸ್ಥಳದಂತೆ ಆಯಿತು. ಅದು ಕಾರಣವಾಗುವುದಿಲ್ಲ. ಮನುಷ್ಯನು ಮನೆಯಲ್ಲಿದ್ದರೆ ಮನೆಯು ಅವನಿಗೆ ಅಧಿಷ್ಠಾನವೇ ಹೊರತು ಕಾರಣವಲ್ಲ. ನೀನು ಕಾರಣ ಮತ್ತು ಅಧಿಷ್ಠಾನಗಳ ಸ್ವರೂಪವನ್ನು ಸರಿಯಾಗಿ ತಿಳಿದಿಲ್ಲ. ಎಲೈ ಚಿರಂಜೀವಿಯೇ! ನೀನು ಗುರುಗಳ ಮನೆಗೆ ಹೋಗಿ ಕೆಲವು ದಿವಸಗಳವರೆಗೆ ವಾಸಮಾಡಿ ಕಾರಣವೆಂದರೇನು! ಅಧಿಷ್ಠಾನವೆಂದರೇನು? ಎಂದು ಗುರುಗಳಿಂದ ಚೆನ್ನಾಗಿ ತಿಳಿದು ಅನಂತರ ಕಾರಣದ ಲಕ್ಷಣದಿಂದ ಕೂಡಿದ್ದನ್ನು ಕಾರಣವೆಂದೂ, ಅಧಿಷ್ಠಾನ ಲಕ್ಷಣದಿಂದ ಕೂಡಿದ್ದನ್ನು ಅಧಿಷ್ಠಾನವೆಂದೂ ವ್ಯವಹರಿಸು. ಹೀಗೆ ಕಾರಣ ಮತ್ತು ಅಧಿಷ್ಠಾನಗಳ ಸ್ವರೂಪ ಜ್ಞಾನದಿಂದ ವ್ಯವಹಾರವು ದೃಢವಾದ ಮೇಲೆ ನಮ್ಮೊಡನೆ ವ್ಯವಹರಿಸು. (ಕಾರಣ ಮತ್ತು ಅಧಿಷ್ಠಾನಗಳ ಸ್ವರೂಪವನ್ನು ತಿಳಿಯದೆ ವ್ಯವಹರಿಸುವ ನಿನ್ನ ದೀರ್ಘ ಜೀವನವು ವ್ಯರ್ಥ. ಎಂಬ ಅಭಿಪ್ರಾಯದಿಂದ ಹೇ ಆಯುಷ್ಮನ್ = ಎಲೈ ದೀರ್ಘ ಜೀವಿಯೇ! ಎಂದು ಪರಿಹಾಸಸೂಚಕವಾದ ಸಂಬೋಧನೆಯನ್ನು ಮಾಡಿದ್ದಾರೆ. ಹೇಗೇ ಇರಲಿ, ಅಧಿಷ್ಠಾನವಾದ ಶೂನ್ಯದ ತತ್ತ್ವಜ್ಞಾನ ವಿಲ್ಲದಿರುವುದರಿಂದ ತೋರುವ ಪ್ರಪಂಚಕ್ಕೆ ಈ ಶೂನ್ಯಭ್ರಾಂತಿಗೆ ಶೂನ್ಯವು ಅಧಿಷ್ಠಾನವೂ ಆಗಲಾರದು. ಕಾರಣವೂ ಆಗಲಾರದು. ಅಧಿಷ್ಠಾನ ಮತ್ತು ಕಾರಣಶಬ್ದಗಳ ಅರ್ಥ ಮತ್ತು ಲಕ್ಷಣಗಳನ್ನು ಗುರುಗಳಲ್ಲಿ ಚೆನ್ನಾಗಿ ಓದಿಕೊಳ್ಳಪ್ಪ ಎಂದು ಹಾಸ್ಯ ಮಾಡುತ್ತಾ ಹೇಳುತ್ತಿದ್ದಾರೆ).

ವಿಗ್ರಹ—

**ಆಯುಷ್ಮನ್**— ಆಯುಃ ಅಸ್ಯ ಅಸ್ತೀತಿ ಆಯುಷ್ಮಾನ್, ತಸ್ಯ ಸಂಬುದ್ಧಿಃ ಹೇ ಆಯುಷ್ಮನ್! ತದ್ಧಿತ ವೃತ್ತಿ, ಮತುಪ್ ಪ್ರತ್ಯಯ ।

**ಕ್ರಿಯಾಪದ**— **ಬ್ರವೀಃ** - ಮಾ ಸ್ಮ ಬ್ರವೀಃ, ಅಬ್ರವೀತ್ ಅಬ್ರೂತಾಮ್ ಅಬ್ರುವನ್, ಅಬ್ರವೀಃ ಅಬ್ರೂತಮ್ ಅಬ್ರೂತ, ಅಬ್ರವಂ ಅಬ್ರೂವ ಅಬ್ರೂಮ । ಬ್ರೂಞ್ ವ್ಯಕ್ತಾಯಾಂ ವಾಚಿ ಸಕ. ಸೇಟ್ ವಚಿ ಆದೇಶ ಬಂದಾಗ ಅನಿಟ್ ಉಭ. ಅನದ್ಯತನಭೂತೇ ಲಙ್. ಸ್ಮೋತ್ತರೇ ಲಙ್ ಚ (3-3-176) ಮಾಙ್(ಮಾ) ಎಂಬುದರ ಮುಂದೆ ಸ್ಮ ಬಂದಾಗ ಲಙ್ ಲಕಾರವೂ ಲುಙ್ ಲಕಾರವೂ ಬರುತ್ತದೆ. ಬರೇ ಮಾ(ಮಾಙ್) ಬಂದಾಗ 'ಮಾಙ್' ಲುಙ್ (3-3-175) ಎಂಬ ಸೂತ್ರದಿಂದ ಲುಙ್ ಮಾತ್ರ ಬರುತ್ತದೆ. ನ ಮಾಙ್ಯೋಗೇ (6-4-74) ಎಂಬ ಸೂತ್ರದಿಂದ ಮಾಙ್ ಯೋಗವಿದ್ದಾಗ ಅಟ್ ಎಂಬ ಆಗಮ ಬರುವುದಿಲ್ಲ. ಆದ್ದರಿಂದ ಇಲ್ಲಿ ಮಾ ಸ್ಮ ಸೇರಿಸಿ ಕ್ರಿಯಾರೂಪಗಳನ್ನು ಹೀಗೆ ಹೇಳಬೇಕು. ಮಾಸ್ಮ ಬ್ರವೀತ್ ಬ್ರೂತಾಂ ಬ್ರುವನ್, ಬ್ರವೀಃ ಬ್ರೂತಂ ಬ್ರೂತ, ಬ್ರವಂ ಬ್ರೂವ ಮಾ ಸ್ಮ ಬ್ರೂಮ । ವ್ಯುತ್ಪಿತ್ಸಸ್ವ ವ್ಯುತ್ಪತ್ತುಂ ಇಚ್ಛ ವ್ಯುತ್ಪಿತ್ಸಸ್ವ ವಿ ಉತ್ ಉಪಸರ್ಗದ್ವಯಪೂರ್ವಕ ಪದಗತೌ ಎಂಬ ಧಾತುವಿನ ಸನ್ನಂತಲೋಟ್ ಮಧ್ಯಮ ಪುರುಷ ಏಕವಚನದ ರೂಪ. ಪಿತ್ಸತಾಂ ಪಿತ್ಸೇತಾಂ ಪಿತ್ಸಂತಾಮ್, ಪಿತ್ಸಸ್ವ ಪಿತ್ಸೇಥಾಂ ಪಿತ್ಸಧ್ವಂ, ಪಿತ್ಸೈ ಪಿತ್ಸಾವಹೈ ಪಿತ್ಸಾಮಹೈ ।

**ಪ್ರಯೋಗ**— ಏವಂ ಚೇತ್ (ತ್ವಯಾ) ಶೂನ್ಯಂ ಕಾರಣಂ ಮಾ ಸ್ಮ ಉಚ್ಯತ ತೇನ ಅಧಿಷ್ಠಾನೇನ ಭೂಯತೇ ಆಯುಷ್ಮನ್! ಗುರೋಃ ಗೃಹೇ (ತ್ವಯಾ) ವ್ಯುತ್ಪಿತ್ಸ್ಯತಾಮ್ ।

★ ★ ★

**ಅವತಾರಿಕಾ—** ಶೂನ್ಯವು ಜಗತ್ತಿನ ಆರೋಪಕ್ಕೆ ಕಾರಣವಲ್ಲದಿದ್ದರೂ ಅಧಿಷ್ಠಾನವಾದರೂ ಆಗಲಿ ಎಂದರೆ ಅದೂ ಕೂಡುವುದಿಲ್ಲವೆಂದು ಹೇಳುತ್ತಾರೆ.

**ವಿವಾದಸ್ಯ ಪದಂ ನ ಸ್ಯಾದಧಿಷ್ಠಾನಮಸತ್ತ್ವತಃ ।**
**ವೈಧರ್ಮ್ಯೇಣೈಷ ದೃಷ್ಟಾಂತಃ ಶುಕ್ತ್ಯಾದಿವದಿತೀರ್ಯತೇ ॥ 31 ॥**

**ಪದಚ್ಛೇದ—** ವಿವಾದಸ್ಯ, ಪದಂ, ನ, ಸ್ಯಾತ್, ಅಧಿಷ್ಠಾನಂ, ಅಸತ್ತ್ವತಃ, ವೈಧರ್ಮ್ಯೇಣ, ಏಷಃ, ದೃಷ್ಟಾಂತಃ, ಶುಕ್ತ್ಯಾದಿವತ್, ಇತಿ, ಈರ್ಯತೇ ।

**ಅನ್ವಯ—** ವಿವಾದಸ್ಯ, ಪದಂ, ಅಧಿಷ್ಠಾನಂ, ನ, ಸ್ಯಾತ್, ಅಸತ್ತ್ವತಃ, ವೈಧರ್ಮ್ಯೇಣ, ಶುಕ್ತ್ಯಾದಿವತ್, ಇತಿ, ಏಷಃ, ದೃಷ್ಟಾಂತಃ, ಈರ್ಯತೇ ।

**ಅನ್ವಯಾರ್ಥ—**

**ವಿವಾದಸ್ಯ ಪದಂ** = ವಿಪ್ರತಿಪತ್ತಿಗೆ ವಿಷಯವಾದ ಶೂನ್ಯವು,
**ಅಧಿಷ್ಠಾನಂ** = ಭ್ರಾಂತಿಗೆ ಆಧಾರಭೂತವಾದ ವಾಸಸ್ಥಾನವು,
**ನ ಸ್ಯಾತ್** = ಆಗಲಾರದು,
**ಅಸತ್ತ್ವತಃ** = ಅಸತ್ ಆದುದರಿಂದ, (ಇಲ್ಲದ್ದು ಆದುದರಿಂದ)
**ವೈಧರ್ಮ್ಯೇಣ** = ವ್ಯತಿರೇಕ ಮುಖದಿಂದ, (ಸಾಧ್ಯಾಭಾವ ಹೇತ್ವಭಾವಗಳಿಗೆ ವ್ಯಾಪ್ತಿ ಹೇಳುವ ಮೂಲಕ)
**ಶುಕ್ತ್ಯಾದಿವತ್** = ಕಪ್ಪೆಚಿಪ್ಪು ಮೊದಲಾದ ವಸ್ತುವಿನಂತೆ,
**ಇತಿ** = ಎಂದು,
**ಏಷಃ ದೃಷ್ಟಾಂತಃ** = ಈ ವ್ಯತಿರೇಕ ದೃಷ್ಟಾಂತವು,
**ಈರ್ಯತೇ** = ಹೇಳಲ್ಪಡುತ್ತದೆ.

**ತಾತ್ಪರ್ಯ—**

**ಬೌದ್ಧ:-** ಹಾಗಾದರೆ ಶೂನ್ಯವು ಕಾರಣವಲ್ಲವೆಂದು ಒಪ್ಪುತ್ತೇನೆ. ಆದರೂ ಅದು ಜಗತ್ತಿನ ಆರೋಪಕ್ಕೆ ಅಧಿಷ್ಠಾನವಾಗಲಿ. ಕಪ್ಪೆಚಿಪ್ಪನ್ನು ನೋಡಿ 'ಇದು ಬೆಳ್ಳಿ' ಎಂದು ಭ್ರಾಂತಿಯುಂಟಾದಾಗ ತೋರುವ ಕಪ್ಪೆಚಿಪ್ಪಿಗಿಂತ ಬೇರೆಯಾದ ಬೆಳ್ಳಿಯು ಹೇಗೆ ಪಾರಮಾರ್ಥಿಕವಲ್ಲವೋ, ಅದರಂತೆ ಜಗತ್ತಿನ ಆರೋಪಕ್ಕೆ ಅಧಿಷ್ಠಾನವಾದ ಶೂನ್ಯಕ್ಕಿಂತ ಬೇರೆಯಾಗಿ ಕಾಣುವ ಜಗತ್ತು ತಾತ್ತ್ವಿಕವಲ್ಲ (ಪಾರಮಾರ್ಥಿಕವಲ್ಲ) ಎಂದು ಹೇಳುತ್ತೇನೆ. ಇಷ್ಟರಿಂದಲೇ ನನ್ನ ಇಷ್ಟಸಿದ್ಧಿಯಾಗುತ್ತದೆ.

**ಸಿದ್ಧಾಂತಿ:-** ಎಲೈ ಬೌದ್ಧನೇ ನೀನು ಹೇಳುವ ಶೂನ್ಯಕ್ಕೆ ಅನುಮಾನವಿರೋಧದಿಂದಾಗಿ ಅಧಿಷ್ಠಾನತ್ವವೂ ಕೂಡುವುದಿಲ್ಲ. ಅದು ಹೇಗೆಂದರೆ, ವಿವಾದಕ್ಕೆ ವಿಷಯವಾದ ಶೂನ್ಯವು ಅಧಿಷ್ಠಾನವಾಗುವುದಿಲ್ಲ. ಅಸತ್ ಆದುದರಿಂದ, ಶೂನ್ಯವು ಇಲ್ಲದಿರುವ ವಸ್ತುವಾದುದರಿಂದ ಎಂಬ ಅನುಮಾನ ವಿರೋಧ ಬರುವುದರಿಂದ ನೀನು ಹೇಳುವ ಶೂನ್ಯವು ಅಧಿಷ್ಠಾನವೂ ಆಗುವುದಿಲ್ಲ.

**ಬೌದ್ಧ:-** ನಿಮ್ಮ ಅನುಮಾನಕ್ಕೆ ದೃಷ್ಟಾಂತವು ಯಾವುದು? ಯಾವುದು ಅಸತ್ ಆಗಿದೆಯೋ ಅದು ಅಧಿಷ್ಠಾನವಲ್ಲ ಎಂಬ ವ್ಯಾಪ್ತಿಯನ್ನು ಹೇಳಿದರೆ ಈ ಹೇತುಸಾಧ್ಯಗಳುಳ್ಳ ಒಂದು ವಸ್ತುವು ಇಲ್ಲವಾದುದರಿಂದ ದೃಷ್ಟಾಂತವು ಸಿಗುವುದಿಲ್ಲ. ಅನುಮಾನಕ್ಕೆ ಬೇಕಾದ ಅನ್ವಯ (ದೃಷ್ಟಾಂತ) ಸಪಕ್ಷವಿಲ್ಲದಿರುವುದರಿಂದ ನಿಮ್ಮ ಅನುಮಾನವು ಸರಿಯಲ್ಲ.

**ಸಿದ್ಧಾಂತಿ:-** ಎಲ್ಲಿ ಸಾಧ್ಯವು ಇಲ್ಲವೋ ಅಲ್ಲಿ ಹೇತುವೂ ಇಲ್ಲ. ಎಲ್ಲಿ ಸಾಧ್ಯಾಭಾವ ಇದೆಯೋ ಅಲ್ಲಿ ಹೇತ್ವಭಾವವಿದೆ ಎಂದು ವ್ಯಾಪ್ತಿಯನ್ನು ತೋರಿಸುವುದೇ ವೈಧರ್ಮ್ಯದಿಂದ ವ್ಯಾಪ್ತಿ, ವ್ಯತಿರೇಕವ್ಯಾಪ್ತಿ. ವೈಧರ್ಮ್ಯವ್ಯಾಪ್ತಿಯನ್ನು ಹೇಳುವಾಗ

ವೈಧರ್ಮ್ಯ ದೃಷ್ಟಾಂತವನ್ನೇ ಹೇಳಬೇಕು. ಎಲ್ಲಿ ಬೆಂಕಿ ಇಲ್ಲವೋ ಅಲ್ಲಿ ಹೊಗೆ ಇಲ್ಲ ಎಂಬ ವ್ಯತಿರೇಕ ವ್ಯಾಪ್ತಿಗೆ ಮಹಾಹ್ರದವು (ಮಡು) ದೃಷ್ಟಾಂತ. ಅದರಂತೆ ಇಲ್ಲಿ ಯಾವುದು ಅಧಿಷ್ಠಾನವಲ್ಲವೆಂದು ಅಲ್ಲವೋ ಅಂದರೆ ಅಧಿಷ್ಠಾನವಾಗಿದೆಯೋ ಅದು ಅಸತ್ ಅಲ್ಲ. ಸತ್ ಅಂದರೆ ಇರುವ ಪದಾರ್ಥವೇ ಆಗಿದೆ. ದೃಷ್ಟಾಂತವು ಬೆಳ್ಳಿಯ ಆರೋಪಕ್ಕೆ ಅಧಿಷ್ಠಾನವಾದ ಕಪ್ಪೆಚಿಪ್ಪು - ಎಂದು ನಾವು ವ್ಯತಿರೇಕವ್ಯಾಪ್ತಿಯನ್ನು ಹೇಳಿ ವೈಧರ್ಮ್ಯ ದೃಷ್ಟಾಂತದಿಂದ ನಿನ್ನ ಶೂನ್ಯವು ಜಗತ್ತಿನ ಆರೋಪಕ್ಕೆ ಅಧಿಷ್ಠಾನವಾಗುವುದಿಲ್ಲ ಎಂದು ಖಂಡಿಸುತ್ತೇವೆ.

''ವಿಮತಂ ಶೂನ್ಯಂ ಜಗದಾರೋಪಾಧಿಷ್ಠಾನಂ ನ ಭವತಿ, ಅಸತ್ವಾತ್, ಯತ್ ಆರೋಪಾಧಿಷ್ಠಾನಂ ತತ್ ಸತ್, ಯಥಾ ರಜತಾದ್ಯಾರೋಪಾದಿಷ್ಠಾನಶುಕ್ತ್ಯಾದಿ'' ಎಂದು ಇಲ್ಲಿ ಬೌದ್ಧನನ್ನು ಕುರಿತು ಪ್ರಯೋಗ ಮಾಡಬೇಕಾದ ನ್ಯಾಯವು.

ವಿಗ್ರಹ—

**ಅಸತ್ತ್ವತಃ—** ನ ಸತ್ ಅಸತ್, ಅಸತಃ ಭಾವಃ ಅಸತ್ತ್ವಂ, ಅಸತ್ತ್ವಾತ್ ಇತಿ ಅಸತ್ತ್ವತಃ ।

**ವೈಧರ್ಮ್ಯೇಣ—** ವಿರುದ್ಧಃ ಧರ್ಮಃ ಯಸ್ಯ ಸಃ ವಿಧರ್ಮಾ, ವಿಧರ್ಮಣಃ ಭಾವಃ ವೈಧರ್ಮ್ಯಂ ತೇನ ।

**ಶುಕ್ತ್ಯಾದಿವತ್—** ಶುಕ್ತಿಃ ಆದಿಃ ಯಸ್ಯ ಸಃ ಶುಕ್ತ್ಯಾದಿಃ, ಶುಕ್ತ್ಯಾದಿನಾ ತುಲ್ಯಂ ಶುಕ್ತ್ಯಾದಿವತ್ ।

**ಕ್ರಿಯಾಪದ—** ಈರ್ಯತೇ - ಈರ್ಯತೇ ಈರ್ಯೇತೇ ಈರ್ಯಂತೇ, ಇತ್ಯಾದಿ, ಈರ ಗತೌ ಕಂಪನೇ ಚ ಕರ್ಮಣಿ ಲಟ್ ಆತ್ಮನೇಪದಂ ।

**ಪ್ರಯೋಗ—** ವಿವಾದಸ್ಯ ಪದೇನ ಅಧಿಷ್ಠಾನೇನ ನ ಭೂಯೇತ, ಅಸತ್ತ್ವತಃ, ವೈಧರ್ಮ್ಯೇಣ ಶುಕ್ತ್ಯಾದಿವತ್ ಇತಿ ಏತಂ ದೃಷ್ಟಾಂತಂ ಈರಯಾಮಃ ।

★ ★ ★

**ಅವತಾರಿಕಾ—** ಶೂನ್ಯವಾದ ಮಾಯಾವಾದಗಳೆರಡೂ ಒಂದೇ ಆಗಿವೆ ಎಂದು ನೀವು ಹಿಂದೆ ಹೇಳಿದುದು ಅಯುಕ್ತ. ಶೂನ್ಯವಾದದಲ್ಲಿ ವೇದವು ಅಪ್ರಮಾಣ, ಮಾಯಾವಾದದಲ್ಲಿ ವೇದವು ಪ್ರಮಾಣ, ಹೀಗೆ ಶೂನ್ಯವಾದ ಮಾಯಾವಾದಗಳಿಗೆ ವ್ಯತ್ಯಾಸವಿರುವಾಗ ಎರಡು ಮತಗಳೂ ಒಂದೇ ಎಂದು ನೀವು ಹೇಳಿದುದು ಅಯುಕ್ತ ಎಂದು ಮಾಯಾವಾದಿಗಳು ಆಕ್ಷೇಪಿಸಿದರೆ ಉತ್ತರ ಹೇಳುತ್ತಾರೆ.

**ಅತತ್ತ್ವಾವೇದಕಂ ಮಾನಮಿತಿ ಸ್ವವ್ಯಾಹತಂ ಯತಃ ।**
**ತದ್ವಾದೀ ತೇನ ವೇದಸ್ಯ ಸೋಽಭಿಪ್ರೈತ್ಯ ಪ್ರಮಾಣತಾಮ್ ॥ 32 ॥**

**ಪದಚ್ಛೇದ—** ಅತತ್ತ್ವಾವೇದಕಂ, ಮಾನಂ, ಇತಿ, ಸ್ವವ್ಯಾಹತಂ, ಯತಃ, ತದ್ವಾದೀ, ತೇನ, ವೇದಸ್ಯ, ಸಃ, ಅಭಿಪ್ರೈತಿ, ಅಪ್ರಮಾಣತಾಮ್ ।

**ಅನ್ವಯ—** ಯತಃ, ಅತತ್ತ್ವಾವೇದಕಂ, ಮಾನಂ, ಇತಿ, ಸ್ವವ್ಯಾಹತಂ, ತೇನ, ತದ್ವಾದೀ, ಸಃ, ವೇದಸ್ಯ, ಅಪ್ರಮಾಣತಾಂ, ಅಭಿಪ್ರೈತಿ ।

**ಅನ್ವಯಾರ್ಥ—**

**ಯತಃ** = ಯಾವ ಕಾರಣದಿಂದ,

**ಅತತ್ತ್ವಾವೇದಕಂ** = ತತ್ತ್ವವನ್ನು ತಿಳಿಸದೇ ಇರತಕ್ಕಂತಹುದು. (ಅಯಥಾರ್ಥವಾದ ವಿಷಯವನ್ನು ತಿಳಿಸ-ತಕ್ಕಂತಹುದು)

**ಮಾನಂ** = ಪ್ರಮಾಣವು,

**ಇತಿ** = ಹೀಗೆಂಬ ಮಾತು,

**ಸ್ವವ್ಯಾಹತಂ** = ಪರಸ್ಪರ ವಿರುದ್ಧವಾದುದು,

**ತೇನ** = ಆ ಕಾರಣದಿಂದ,

**ತದ್ವಾದೀ** = ವೇದವು ಅತತ್ತ್ವಾವೇದಕವೆಂದು ಹೇಳುವ,

**ಸಃ** = ಆ ಮಾಯಾವಾದಿಯು,

**ವೇದಸ್ಯ** = ವೇದಕ್ಕೆ,

**ಅಪ್ರಮಾಣತಾಂ** = ಅಪ್ರಾಮಾಣ್ಯವನ್ನು,

**ಅಭಿಪ್ರೈತಿ** = ಒಪ್ಪುತ್ತಾನೆ.

**ತಾತ್ಪರ್ಯ**— ಮಾಯಾವಾದೀ, ''ಪರತತ್ತ್ವವಿವರ್ತತ್ವಾದಪರಸ್ಯಾಖಿಲಸ್ಯ ಚ । ಅವಿಶೇಷಸ್ತ್ವತ್ರಶಾಸ್ತ್ರಸ್ಯ ನಾಂತರಂತ ರಮೇತಯೋಃ ॥ (ಸ.15 ಶ್ಲೋ.26)'' ಎಂದು ನೀವು ಮಾಯಾವಾದಿಶೂನ್ಯವಾದಿ ಮತಗಳಿಗೆ ವಿಶೇಷವಿಲ್ಲವೆಂದು ಹೇಳಿದ್ದೀರಿ. ಅದು ಸರಿಯಲ್ಲ. ಶೂನ್ಯವಾದಿಗಳು ವೇದವು ಪ್ರಮಾಣವೆಂದು ಒಪ್ಪುವುದಿಲ್ಲ. ಮಾಯಾವಾದಿಗಳ ಅಭಿಪ್ರಾಯವು ಹೀಗಿದೆ.

''ವೇದದಲ್ಲಿ ಮಂತ್ರಬ್ರಾಹ್ಮಣ ಎಂದು ಒಂದು ಭಾಗ, ಉಪನಿಷತ್ತುಗಳು ಎಂದು ಮತ್ತೊಂದು ಭಾಗ. ಇವೆರಡರಲ್ಲಿ ಮೊದಲನೆಯ ಭಾಗವು ಸುಳ್ಳಾದ ಭೇದ, ಮಣ್ಣು, ಮಡಿಕೆ, ಸಮುದ್ರ, ಆಕಾಶ ಮುಂತಾದ ಪ್ರಪಂಚವನ್ನು ಹೇಳುತ್ತದೆ. ಆದುದರಿಂದ ವೇದದ ಈ ಭಾಗವು ಅತತ್ತ್ವಾವೇದಕಪ್ರಮಾಣ ಅಂದರೆ ಅಪಾರಮಾರ್ಥಿಕವಾದ ವಿಷಯವನ್ನು ಹೇಳುವ ಪ್ರಮಾಣ. ಉಪನಿಷತ್ತುಗಳು ಎಂಬ ವೇದದ ಎರಡನೆಯ ಭಾಗವು ಪಾರಮಾರ್ಥಿಕವಾದ ಬ್ರಹ್ಮವನ್ನು ಹೇಳುವುದರಿಂದ ತತ್ತ್ವಾವೇದಕ ಪ್ರಮಾಣವು. ಹೀಗೆ ಅತತ್ತ್ವಾವೇದಕ ವೇದಪ್ರಮಾಣ, ತತ್ತ್ವಾವೇದಕ ವೇದಪ್ರಮಾಣ ಎಂದು ಎರಡು ವಿಧವಾಗಿ ವೇದವನ್ನು ಪ್ರಮಾಣವೆಂದು ಅಂಗೀಕರಿಸುವ ಮಾಯಾವಾದಿಗಳಾದ ನಮ್ಮ ಮತವು ಅವೈದಿಕವಾದ ಶೂನ್ಯವಾದಿ ಬೌದ್ಧರ ಮತಕ್ಕೆ ಸಮಾನವು, ಅದಕ್ಕೂ ಇದಕ್ಕೂ ಯಾವ ವಿಶೇಷವೂ ಇಲ್ಲ, ಇವೆರಡು ಮತಗಳು ಒಂದೇ ಎಂದು ಹೇಗೆ ಹೇಳುತ್ತೀರಿ?''

**ಸಿದ್ಧಾಂತಿ**:- ಮಾಯಾವಾದಿಗಳೇ! ನಿಮ್ಮ ಮತಕ್ಕೂ ಶೂನ್ಯವಾದಿ ಮತಕ್ಕೂ ವ್ಯತ್ಯಾಸವಿದೆ (ವಿಶೇಷವಿದೆ) ಎಂದು ಹೇಳಿದಿರಲ್ಲವೇ! ಆದರೆ ನೀವು ಹೇಳಿದ ರೀತಿಯಿಂದ ವೇದಕ್ಕೆ ಪ್ರಾಮಾಣ್ಯವು ಸಂಭವಿಸಿದರೆ ಮಾತ್ರ ನಿಮ್ಮ ಮತ್ತು ಶೂನ್ಯವಾದಿಗಳ ಮತಕ್ಕೆ ವೈಲಕ್ಷಣವು ಕೂಡಬಹುದು. ಆದರೆ ನಿಮ್ಮ ಮತದಂತೆ ವೇದಕ್ಕೆ ಪ್ರಾಮಾಣ್ಯವೇ ಕೂಡುವುದಿಲ್ಲ. ವೇದವು ಅತತ್ತ್ವಾವೇದಕವು ಎಂದು ಹೇಳಿ ಪ್ರಮಾಣವೆಂದು ಹೇಳುವುದು ಪರಸ್ಪರ ವಿರುದ್ಧವಾಗುತ್ತದೆ.

ವೇದವು ತತ್ತ್ವವನ್ನು ತಿಳಿಸುವುದಿಲ್ಲವೆಂದು ಹೇಳಿ ಅದು ಪ್ರಮಾಣವೆಂದು ಹೇಳುವುದು 'ನನ್ನ ತಾಯಿ ಬಂಜೆ' ಎಂದು ಹೇಳುವುದಕ್ಕೆ ಸಮಾನವಾಗುತ್ತದೆ. ಇದು ಪರಸ್ಪರ ವಿರುದ್ಧವಾದ (ಸ್ವವ್ಯಾಹತವಾದ) ಮಾತು. ಆದ್ದರಿಂದ ವೇದವು ಅತತ್ತ್ವಾವೇದಕ ಪ್ರಮಾಣವೆಂದು ಹೇಳುವ ಮಾಯಾವಾದಿಯು ವೇದವು ಅಪ್ರಮಾಣವೆಂದೇ ಹೇಳಿದಂತಾಗುತ್ತದೆ. ವೇದವು ಅತತ್ತ್ವಾವೇದಕವೆಂದರೇನು? ಅತತ್ತ್ವ ಅಂದರೆ ಅಯಥಾರ್ಥವಾದ ಆಕಾರವನ್ನು ಆವೇದಕ ತಿಳಿಸಿಕೊಡು-ವಂತಹದ್ದು ಎಂದು ಅರ್ಥ. ಅಯಥಾರ್ಥವಾದ ಆಕಾರವನ್ನು ತಿಳಿಸುವಂತಹದೇ ಅಪ್ರಮಾಣವು. ಆದುದರಿಂದ ಅತತ್ತ್ವಾವೇದಕವೆಂದು ಹೇಳಿ ಪುನಃ ಅದೇ ಪ್ರಮಾಣವೆಂದು ಹೇಳುವುದು 'ಯಾವಜ್ಜೀವಮಹಂ ಮೌನೀ' ಹುಟ್ಟಿ-ದಂದಿನಿಂದ ಬದುಕಿರುವವರೆಗೆ (ಅಂದರೆ ಸಾಯುವವರೆಗೆ) ನಾನು ಮಾತಾಡುವುದಿಲ್ಲ. ಮೂಕನಾಗಿದ್ದೇನೆ ಎಂಬಂತೆ ವಿರುದ್ಧವಾಗಿದೆ. ಆದುದರಿಂದ ಈ ರೀತಿ ಸ್ವವ್ಯಾಹತವಾದ ಮಾತನ್ನಾಡುವ ಮಾಯಾವಾದಿಯು ವೇದವು ಪ್ರಮಾಣವೆಂದು ಹೇಳುವುದು ವೈದಿಕರನ್ನು ಮತ್ತು ಜನಸಾಮಾನ್ಯರನ್ನು ಮೋಸಗೊಳಿಸುವುದಕ್ಕೆ ಮಾತ್ರ ಎಂದೇ ತಿಳಿಯುತ್ತೇನೆ. ಹೀಗೆ ಮಾಯಾವಾದಿ ಮತ್ತು ಶೂನ್ಯವಾದಿಗಳಿಬ್ಬರೂ ವೇದವನ್ನು ಅಪ್ರಮಾಣವೆಂದೇ ಬೇರೆ ಬೇರೆ ಭಂಗಿಯಿಂದ ಹೇಳುವವರೇ

ಆಗಿರುತ್ತಾರೆ. ಆದುದರಿಂದ ಸಮಾನರೇ ಆಗಿರುತ್ತಾರೆ. ಮಾಯವಾದಿಯು ಸ್ವವ್ಯಾಹತವಾದ ಮಾತನ್ನು ಆಡುತ್ತಾನ ಎಂಬುದು ಮತ್ತೊಂದು ಹೆಚ್ಚಿನ ಅಂಶ. ಅಂತೂ ಶೂನ್ಯವಾದಿ ಮತಕ್ಕಿಂತ ಮಾಯಾವಾದಿ ಮತಕ್ಕೆ ಯಾವ ವೈಲಕ್ಷಣ್ಯವೂ ಇಲ್ಲ.

**ವಿಗ್ರಹ—**

**ಅತತ್ತ್ವಾವೇದಕಂ—** ಆವೇದಯತೀತಿ ಆವೇದಕಂ, ತತ್ತ್ವಸ್ಯ ಆವೇದಕಂ ತತ್ತ್ವಾವೇದಕಂ, ತತ್ತ್ವಾವೇದಕಂ ನ ಭವತೀತಿ ಅತತ್ತ್ವಾವೇದಕಂ ।

**ಸ್ವವ್ಯಾಹತಂ—** ಸ್ವೇನ ವ್ಯಾಹತಂ ಸ್ವವ್ಯಾಹತಂ ।

**ತದ್ವಾದೀ—** ವದತಿ ಶಾಚ್ಛೀಲ್ಯೇನೇತಿ ವಾದೀ (ವೇದಸ್ಯ ಅತತ್ತ್ವಾವೇದಕತ್ವಸ್ಯ ವಾದೀ) ತಸ್ಯ ವಾದೀ ತದ್ವಾದೀ ।

**ಅಪ್ರಮಾಣತಾಂ—** ಪ್ರಮೀಯತೇ ಅನೇನ ಇತಿ ಪ್ರಮಾಣಂ, ನ ಪ್ರಮಾಣಂ, ಅಪ್ರಮಾಣಂ, ಅಪ್ರಮಾಣಸ್ಯ ಭಾವಃ ಅಪ್ರಮಾಣತಾ ತಾಂ ।

**ಕ್ರಿಯಾಪದ— ಅಭಿಪ್ರೈತಿ** - ಅಭಿ+ಪ್ರ+ಏತಿ, ಇತಃ ಯಂತಿ, ಏಷಿ ಇಥಃ ಇಥ, ಏಮಿ ಇವಃ ಇಮಃ । ಇಣ್ ಗತೌ 10 90 ಸಕ. ಪರ. ಅನಿ. ಲಟ್ ।

**ಪ್ರಯೋಗ—** ಅತತ್ತ್ವಾವೇದಕಂ ಮಾನಂ ಇತಿ (ವಚನೇನ) ಯತಃ ಸ್ವವ್ಯಾಹತೇನ (ಭೂಯತೇ) ತೇನ (ಕಾರಣೇನ) ತದ್ವಾದಿನಾ ತೇನ ವೇದಸ್ಯ ಅಪ್ರಮಾಣತಾ ಅಭಿಪ್ರೇಯತೇ ।

★ ★ ★

**ಅವತಾರಿಕಾ—** ಉಪನಿಷತ್ ಎಂಬ ವೇದಭಾಗವು ಪರಮಾರ್ಥರೂಪವಾದ ಬ್ರಹ್ಮವೆಂಬ ವಿಷಯವನ್ನು ಹೇಳುವುದರಿಂದ ತತ್ತ್ವಾವೇದಕ ಪ್ರಮಾಣವೆಂದು ಮಾಯಾವಾದಿಗಳು ಹೇಳುವ ವಿಷಯವೂ ಸರಿಯಾಗಿಲ್ಲ ಎಂದು ಹೇಳುತ್ತಾರೆ.

**ಯಂ ತತ್ತ್ವಾವೇದಕಂ ವೇದ ವೇದಾಂಶಂ ವೇದದೂಷಕಃ ।**
**ತತ್ತ್ವಸ್ಯಾವರ್ಣನೀಯತ್ವಾತ್ ಸ ತತ್ತ್ವಾವೇದಕಃ ಕಥಮ್ ॥ 33 ॥**

**ಪದಚ್ಛೇದ—** ಯಂ, ತತ್ತ್ವಾವೇದಕಂ, ವೇದ, ವೇದಾಂಶಂ, ವೇದದೂಷಕಃ, ತತ್ತ್ವಸ್ಯ, ಅವರ್ಣನೀಯತ್ವಾತ್, ಸಃ ತತ್ತ್ವಾವೇದಕಃ, ಕಥಮ್ ।

**ಅನ್ವಯ—** ವೇದದೂಷಕಃ, ಯಂ, ವೇದಾಂಶಂ, ತತ್ತ್ವಾವೇದಕಂ, ವೇದ, ತತ್ತ್ವಸ್ಯ, ಅವರ್ಣನೀಯತ್ವಾತ್, ಸಃ, ಕಥಂ, ತತ್ತ್ವಾವೇದಕಃ ।

**ಅನ್ವಯಾರ್ಥ—**

**ವೇದದೂಷಕಃ** = ವೇದವನ್ನು (ಅತತ್ತ್ವಾವೇದಕ ಪ್ರಮಾಣವೆಂದು) ನಿಂದಿಸುವ ಮಾಯಾವಾದಿಯು,
**ಯಂ** = ಯಾವ,
**ವೇದಾಂಶಂ** = ವೇದಭಾಗವಾದ ಉಪನಿಷತ್ತನ್ನು,
**ತತ್ತ್ವಾವೇದಕಂ** = ಬ್ರಹ್ಮತತ್ತ್ವವನ್ನು ತಿಳಿಸತಕ್ಕದ್ದನ್ನಾಗಿ,
**ವೇದ** = ತಿಳಿಯುತ್ತಾನೋ,
**ತತ್ತ್ವಸ್ಯ** = ಪಾರಮಾರ್ಥಭೂತವಾದ ಬ್ರಹ್ಮನಿಗೆ,

**ಅವರ್ಣನೀಯತ್ವಾತ್** = ಹೇಳಲ್ಪಡಲು ಬಾರದಿರುವಿಕೆಯಿರುವುದರಿಂದ (ಬ್ರಹ್ಮವು ಅನಿರ್ವಚನೀಯ-ವಾದುದರಿಂದ)

**ಸಃ** = ಆ ಉಪನಿಷದ್ಭಾಗವೆಂಬ ವೇದವು,

**ಕಥಂ** = ಹೇಗೆ,

**ತತ್ತ್ವಾವೇದಕಃ** = ಪರಮಾರ್ಥವಾದ ಬ್ರಹ್ಮವನ್ನು ತಿಳಿಸತಕ್ಕದ್ದು (ಆದೀತು?)

**ತಾತ್ಪರ್ಯ**— ವೇದದ ಹೆಚ್ಚಿನ ಭಾಗಕ್ಕೆ ಅಪ್ರಮಾಣ್ಯವನ್ನು ಹೇಳುವ ಮಾಯಾವಾದಿಯು ನಿಜವಾಗಿಯೂ ವೇದನಿಂದಕನು, ವೇದವನ್ನು ದೂಷಿಸುವವನೇ ಆಗಿದ್ದಾನೆ. ಉಳಿದ ಎಲ್ಲಾ ವೇದಭಾಗವು ತತ್ತ್ವವನ್ನು ಹೇಳದಿದ್ದರೂ ಉಪನಿಷತ್ತುಗಳೆಂಬ ವೇದದ ಒಂದು ಭಾಗವು ತತ್ತ್ವವನ್ನು ಅಂದರೆ ಸತ್ಯವಾದ ಪರಬ್ರಹ್ಮವನ್ನು ತಿಳಿಸುತ್ತದೆಯೆಂದು ಮಾಯಾವಾದಿಯು ಹೇಳುತ್ತಾನೆ. ಆದರೆ ಅವನು ತತ್ತ್ವ ಅಂದರೆ ಪಾರಮಾರ್ಥಿಕಸತ್ಯ ಎಂದು ಕರೆಯುವ ಪರಬ್ರಹ್ಮವು ಅವನು ಹೇಳುವಂತೆಯೇ ಅವರ್ಣನೀಯವಾದುದರಿಂದ ಆ ಮಾಯಾವಾದಿಯು ವೇದಾಂತವು ಪರಬ್ರಹ್ಮವನ್ನು ಹೇಗೆ ಪ್ರತಿಪಾದಿಸುತ್ತದೆ? ಪರಬ್ರಹ್ಮವನ್ನು ಅವಾಚ್ಯ ಎಂದು ಒಪ್ಪಿ, ಪುನಃ ಅದೇ ಪರಬ್ರಹ್ಮವನ್ನು ಉಪನಿಷತ್ತುಗಳು ಪ್ರತಿ-ಪಾದಿಸುತ್ತವೆಯೆಂದು ಹೇಳುವುದು ಪರಸ್ಪರ ವಿರುದ್ಧವಾಗಿದೆ ಹಾಗೂ ಉಪನಿಷತ್ತು ತತ್ತ್ವಾವೇದಕ (ಸತ್ಯವಾದ ಬ್ರಹ್ಮವನ್ನು ಪ್ರತಿಪಾದಿಸುತ್ತವೆ) ಎಂಬುದು ವಿರುದ್ಧವಾಯಿತು. ಆದುದರಿಂದ ಹೀಗೆ ಸ್ವವ್ಯಾಹತ ಭಾಷಿಯಾದ ಮಾಯಾವಾದಿಯು ವೇದವನ್ನು ಪ್ರಮಾಣವೆಂದು ಹೇಳುವುದು ವೈದಿಕರನ್ನು (ಆಸ್ತಿಕರನ್ನು) ಮೋಸಗೊಳಿಸುವುದಕ್ಕೆ ಮಾತ್ರವೆಂದು ತಿಳಿದು-ಬರುತ್ತದೆ. ಹೀಗೆ ಮಾಯಾವಾದಿ ಮತ್ತು ಶೂನ್ಯವಾದಿಗಳಿಬ್ಬರೂ ವೇದಕ್ಕೆ ಅಪ್ರಮಾಣ್ಯವಾದಿಗಳೇ ಆಗಿದ್ದಾರೆ. ಮಾಯಾ-ವಾದಿಯು ಸ್ವವ್ಯಾಹತಭಾಷಿಯೂ ಆಗಿದ್ದಾನೆಂಬುದು ಅಧಿಕವಾದ ದೋಷ. ಆದ್ದರಿಂದ ಶೂನ್ಯವಾದಿಮತಕ್ಕಿಂತ ಮಾಯಾ-ವಾದಿಮತಕ್ಕೆ ವೈಲಕ್ಷಣ್ಯವಿಲ್ಲವೆಂದು ತಿಳಿಯಬೇಕು.

**ವಿಗ್ರಹ**—

**ಅತತ್ತ್ವಾವೇದಕಂ**— ಆವೇದಯತೀತಿ ಆವೇದಕಂ, ತತ್ತ್ವಸ್ಯ ಆವೇದಕಂ ತತ್ತ್ವಾವೇದಕಂ, ನ ತತ್ತ್ವಾವೇದಕಂ ಅತತ್ತ್ವಾವೇದಕಂ ।

**ವೇದಾಶಂ**— ವೇದಸ್ಯ ಅಂಶಃ ತಂ,

**ವೇದದೂಷಕಃ**— ವೇದಂ ದೂಷಯತೀತಿ ವೇದದೂಷಕಃ ।

**ಕ್ರಿಯಾಪದ**— ವೇದ ವಿದತುಃ ವಿದುಃ, ವೇತ್ಥ ವಿದಥುಃ ವಿದ, ವೇದ ವಿದ್ವ ವಿದ್ಮ । ವಿದಜ್ಞಾನೇ ಲಟ್. ವಿದೋ ಲಟೋ ವಾ (3483) ಈ ಸೂತ್ರದಿಂದ ಲಟ್‌ಗೆ ಲಿಟ್‌ನ ಆದೇಶಗಳು ।

★ ★ ★

**ಅವತಾರಿಕಾ**— ಮಾಯಾವಾದಿಯು ಆಕ್ಷೇಪಿಸುತ್ತಾನೆ "ತತ್ತ್ವಾವೇದಕವಾದ ಉಪನಿಷತ್ತು ಎಂಬ ವೇದಪ್ರಮಾಣವು ಬ್ರಹ್ಮನಲ್ಲಿ ವಚನ ವೃತ್ತಿಯಿಂದ (ಶಕ್ತಿವೃತ್ತಿಯಿಂದ) ಪ್ರವರ್ತಿಸಲಾರದಾದುದರಿಂದ ವೇದಕ್ಕೆ ವಿಷಯವಿಲ್ಲದ್ದರಿಂದ ಬ್ರಹ್ಮಪ್ರತಿಪಾದಕತ್ವವು ಬರುವುದಿಲ್ಲ. ಹೀಗೆ ಉಪನಿಷತ್ತೂ ನಿರ್ವಿಷಯವಾಗುವುದರಿಂದ ಪ್ರಮಾಣವಾಗುವುದಿಲ್ಲ" ಎಂದು ತತ್ತ್ವವಾದಿಗಳು ನಮ್ಮ ಮೇಲೆ ಆಕ್ಷೇಪ ಮಾಡಿದುದು ಸರಿಯಲ್ಲ.

"ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಇತ್ಯಾದಿ ವಾಕ್ಯಗಳಿಂದ ಬ್ರಹ್ಮನು ವೇದಗಳಿಂದ ವಾಚ್ಯ ನಲ್ಲವೆಂದು ತಿಳಿದುಬರುತ್ತದೆ. ಆದ್ದರಿಂದ ಅಭಿಧಾ (ಶಕ್ತಿ) ಎಂಬ ಮುಖ್ಯವಾದ ವೃತ್ತಿಯಿಂದ ವೇದವು ಬ್ರಹ್ಮವನ್ನು ಪ್ರತಿ ಪಾದಿಸುವುದಿಲ್ಲ, ಪ್ರತಿಪಾದಿಸಲು ಸಮರ್ಥವಾಗುವುದಿಲ್ಲ ಎಂದು ನಾವೂ ಒಪ್ಪುತ್ತೇವೆ. ಆದರೆ ಅದರಿಂದ ಉಪನಿಷತ್ತು

ಎಂಬ ವೇದಭಾಗಕ್ಕೆ ಅಪ್ರಾಮಾಣ್ಯವು ಬರುವುದಿಲ್ಲ. ಏಕೆಂದರೆ ಉಪನಿಷತ್ತು 'ಲಕ್ಷಣಾವೃತ್ತಿ' ಎಂಬ ಶಬ್ದಾರ್ಥ ಸಂಬಂಧದಿಂದ ಪರಮಾತ್ಮನನ್ನು ಬೋಧಿಸುತ್ತದೆ. ಲಕ್ಷಣಾ ಎಂಬ ವೃತ್ತಿಯು (ವೃತ್ತಿ = ಶಾಬ್ದಬೋಧಕ್ಕೆ ಬೇಕಾದ ಪದಪದಾರ್ಥಗಳ ಸಂಬಂಧ) ಮೂರು ವಿಧವಾಗಿದೆ. 1) ಜಹಲ್ಲಕ್ಷಣಾ, 2) ಅಜಹಲ್ಲಕ್ಷಣಾ, 3) ಜಹದಜಹಲ್ಲಕ್ಷಣಾ,

1) **ಜಹಲ್ಲಕ್ಷಣಾ** - ಗಂಗಾಯಾಂ ಘೋಷಃ = ಗಂಗೆಯಲ್ಲಿ ಗೊಲ್ಲರ ಹಳ್ಳಿಯಿದೆ ಎಂಬ ವಾಕ್ಯವನ್ನು ಕೇಳಿದ ಕೂಡಲೇ ನೀರಿನ ಪ್ರವಾಹದಲ್ಲಿ ಗೊಲ್ಲರಹಳ್ಳಿಯಿದೆ ಎಂದು ತಿಳಿಯಲು ಸಾಧ್ಯವಿಲ್ಲ. ಈ ವಿಷಯವು ಸರಿ ಹೊಂದುವುದಿಲ್ಲ-ವಾದುದರಿಂದ ನೀರಿಗೂ ದಡಕ್ಕೂ ಸಾಮೀಪ್ಯ(ಬಹಳ ಹತ್ತಿರದ ಸಂಯೋಗ)ವಿರುವುದರಿಂದ ಪ್ರವಾಹದ ಸಂಯೋಗವುಳ್ಳ ತೀರವನ್ನು ಇಲ್ಲಿ ತೆಗೆದುಕೊಳ್ಳಬೇಕು. ಆಗ ''ಗಂಗಾಯಾಂ ಘೋಷಃ'' ಎಂಬ ಮಾತಿಗೆ ''ತೀರೇ ಘೋಷಃ'' ತೀರದಲ್ಲಿ ಗೊಲ್ಲರಹಳ್ಳಿಯಿದೆ ಎಂದು ಅರ್ಥ ಮಾಡುತ್ತೇವೆ. ಇದೇ ಜಹಲ್ಲಕ್ಷಣಾ.

2) **ಅಜಹಲ್ಲಕ್ಷಣಾ** - ''ಕಾಕೇಭ್ಯೋ ದಧಿ ರಕ್ಷ್ಯತಾಂ'' ''ಕಾಗೆಗಳಿಂದ ಮೊಸರು ಕಾಪಾಡಲ್ಪಡಲಿ''. ಒಬ್ಬನು ಒಂದು ಕಡೆ ಮೊಸರಿನ ಗಡಿಗೆಯನ್ನು ಇಟ್ಟು ಎಲ್ಲೋ ಹೋಗುತ್ತಿದ್ದಾನೆ. ಅವನು ಅಲ್ಲಿರುವ ಮತ್ತೊಬ್ಬನಿಗೆ ''ಈ ಮೊಸರನ್ನು ಕಾಗೆಗಳಿಂದ ರಕ್ಷಿಸು'' ಎಂದು ಹೇಳುತ್ತಾನೆ. ಅಲ್ಲಿಗೆ ನಾಯಿ, ಬೆಕ್ಕು, ಮುಂತಾದುವುಗಳು ಬಂದು ಮೊಸರನ್ನು ಕುಡಿಯಲು ಪ್ರಯತ್ನಿಸಿದರೆ ಈ ಮನುಷ್ಯನು ತಡೆಯಬೇಕೇ ಬೇಡವೇ? ಮೊಸರನ್ನು ಕುಡಿದು ಹಾಳು ಮಾಡುವ ಎಲ್ಲಾ ಪ್ರಾಣಿಗಳಿಂದಲೂ ಮೊಸರನ್ನು ಕಾಪಾಡಬೇಕು. ಮೊಸರನ್ನು ಕಾಗೆಗಳಿಂದ ಕಾಪಾಡು ಎಂದು ಹೇಳಿದವನ ತಾತ್ಪರ್ಯವು ಇದೇ ಆಗಿದೆ. ಆದ್ದರಿಂದ ಇಲ್ಲಿ 'ಕಾಕ' ಎಂಬ ಪದಕ್ಕೆ ಮೊಸರು ಕುಡಿದು ಹಾಳು ಮಾಡುವವುಗಳು (ದಧ್ಯುಪಘಾತಕಗಳು) ಎಂದು ಅರ್ಥವನ್ನು ಮಾಡಬೇಕು. ಇಲ್ಲಿ 'ಕಾಕ' ಪದದ ಕಾಗೆ ಎಂಬ ಅರ್ಥವನ್ನೂ ಅದರ ಜೊತೆಗೆ ''ದಧಿ ಉಪಘಾತಕತ್ವ'' ಮೊಸರನ್ನು ಹಾಳು ಮಾಡುವಿಕೆ ಎಂಬ ಸಂಬಂಧದಿಂದ ನರಿ, ನಾಯಿ, ಬೆಕ್ಕು ಮುಂತಾದುವುಗಳನ್ನು ಇಟ್ಟುಕೊಳ್ಳಬೇಕು. ಇದು ಅಜಹಲ್ಲಕ್ಷಣಾ.

3) **ಜಹದಜಹಲ್ಲಕ್ಷಣಾ** - 'ತತ್ತ್ವಮಸಿ' ಎಂಬಲ್ಲಿ ತ್ವಂ = ಅಲ್ಪಜ್ಞತ್ವ, ಅಲ್ಪಶಕ್ತಿಗಳಿಂದ ಕೂಡಿದ ನೀನು, ತತ್ = ಸರ್ವಜ್ಞತ್ವ ಸರ್ವಶಕ್ತಿಗಳಿಂದ ಕೂಡಿದ ಪರಬ್ರಹ್ಮನು ಅಸಿ = ಆಗಿದ್ದೀ, ಅಲ್ಪಜ್ಞಾನ, ಅಲ್ಪಶಕ್ತಿಗಳಿಂದ ಕೂಡಿದ ಎಲೈ ಜೀವನೇ! ನೀನು ಸರ್ವಜ್ಞಾನ, ಸರ್ವಶಕ್ತಿಯಿಂದ ಕೂಡಿದ ಬ್ರಹ್ಮನೇ ಆಗಿದ್ದೀ ಎಂದು ಈ ಶ್ರುತಿಯ ಅರ್ಥ. ಆದರೆ ಇದು ಕೂಡುವುದಿಲ್ಲ. ತಂಪಾದ ಸ್ಪರ್ಶವುಳ್ಳ ಜಲವನ್ನು, ಈ ಜಲವು ಉಷ್ಣಸ್ಪರ್ಶವುಳ್ಳ ತೇಜಸ್ಸೇ ಆಗಿದೆ ಎಂದು ವಿರುದ್ಧವಾದ ಧರ್ಮಗಳುಳ್ಳ ಜಲವಹ್ನಿಗಳಿಗೆ ಅಭೇದವನ್ನು ಹೇಳಿದರೆ ಹೇಗೆ ಅದು ಸರ್ವಥಾ ಅಯುಕ್ತವೋ ಅದರಂತೆ ವಿರುದ್ಧ ಧರ್ಮವುಳ್ಳ ಜೀವ-ಬ್ರಹ್ಮರಿಗೆ ಅಭೇದವು ಸರ್ವಥಾ ಅಯುಕ್ತವು. ಆದ್ದರಿಂದ ಇಲ್ಲಿ ಅಲ್ಪಜ್ಞತ್ವ, ಅಲ್ಪಶಕ್ತಿ ಎಂಬ ಧರ್ಮಗಳನ್ನು ಬಿಟ್ಟು ಜೀವತ್ವಂ ಎಂಬ ಶಬ್ದಕ್ಕೆ ಚೇತನ (ಚಿತ್) ಎಂಬ ಅರ್ಥವನ್ನು ಮಾತ್ರ ಇಟ್ಟುಕೊಳ್ಳಬೇಕು. ಹೀಗೆ ತತ್ ಪದದ ಅರ್ಥದಲ್ಲಿ ಸರ್ವಜ್ಞಾನ, ಸರ್ವಶಕ್ತಿ ಎಂಬ ವಿಶೇಷಣಗಳನ್ನು ಬಿಟ್ಟು ಚೇತನ ಎಂಬ ಅರ್ಥವನ್ನು ಮಾತ್ರ ಇಟ್ಟುಕೊಳ್ಳಬೇಕು. ಹೀಗೆ ತತ್ ತ್ವಂ ಅಸಿ ಎಂಬ ಈ ವಾಕ್ಯಕ್ಕೆ ಚಿತ್ ಆದ ನೀನು ಚಿತ್ ಆಗಿದ್ದಿ. ಚಿತ್ ಚಿತ್ ಅಸಿ ಎಂದು ಅರ್ಥವಾಗುತ್ತದೆ. ಹೀಗೆ ಜೀವ ಚೇತನನು ಬ್ರಹ್ಮಚೇತನನಿಗಿಂತ ಅಭಿನ್ನನು ಎಂಬ ಅರ್ಥವನ್ನು ಜಹದಜಹಲ್ಲಕ್ಷಣಾ ಎಂಬ ವೃತ್ತಿಯಿಂದ ವೇದವು ಬೋಧಿಸುತ್ತದೆ. 1) ಯತೋ ವಾ ಇಮಾನಿ ಭೂತಾನಿ ಜಾಯಂತೇ ಎಂಬ ವೇದವೂ ಜಹಲ್ಲಕ್ಷಣಾ-ವೃತ್ತಿಯಿಂದ ಬ್ರಹ್ಮವನ್ನು ಬೋಧಿಸುತ್ತದೆ. 2) ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ವಾಕ್ಯಗಳು ಅಜಹಲ್ಲಕ್ಷಣಾವೃತ್ತಿಯಿಂದ ಬ್ರಹ್ಮವನ್ನು ಬೋಧಿಸುತ್ತದೆ.

ತತ್ತ್ವಮಸಿ ಇತ್ಯಾದಿ ವಾಕ್ಯಗಳು ಜಹದಜಹಲ್ಲಕ್ಷಣಾ ವೃತ್ತಿಯಿಂದ ಬ್ರಹ್ಮವನ್ನು ಬೋಧಿಸುತ್ತವೆ. ಲೌಕಿಕವಾಗಿ ''ಸೋಽಯಂ ದೇವದತ್ತಃ'' ಎಂಬುದು ಜಹದಜಹಲ್ಲಕ್ಷಣೆಗೆ ಉದಾಹರಣೆ. ಕಾಶೀದೇಶ, ಬಹು ಹಿಂದಿನ ಕಾಲ ಇವುಗಳ ಸಂಬಂಧವುಳ್ಳ ದೇವದತ್ತನು, ನಮ್ಮ ಕಣ್ಣೆದುರಿನ ದೇಶ ಮತ್ತು ವರ್ತಮಾನಕಾಲ ಸಂಬಂಧವುಳ್ಳವನಿಗಿಂತ ಅಭಿನ್ನನಾಗಿದ್ದಾನೆ ಎಂದು ಈ ವಾಕ್ಯಕ್ಕೆ ಅರ್ಥ. ಒಬ್ಬನಲ್ಲಿಯೇ ತದ್ದೇಶಕಾಲಸಂಬಂಧವೂ ಏತದ್ದೇಶಕಾಲಸಂಬಂಧವೂ ವಿರುದ್ಧವಾದುದರಿಂದ

'ತತ್ತಾ' ಆ ದೇಶ, ಕಾಲ ಸಂಬಂಧವು ಈಗ ಕೂಡದಿರುವುದರಿಂದ ಆ ಅಂಶವನ್ನು ಬಿಟ್ಟು 'ಇದಂತಾ' ಈ ದೇಶ, ಕಾಲ ಸಂಬಂಧ ಮಾತ್ರ ಇಟ್ಟುಕೊಂಡು ಯಾವುದೋ ಒಂದು ಸಂಬಂಧವಿಶಿಷ್ಟನಾದ ದೇವದತ್ತನು ಈ ದೇಶ ಕಾಲಸಂಬಂಧ ವಿಶಿಷ್ಟನಿಗಿಂತ ಅಭಿನ್ನನಾಗಿದ್ದಾನೆ ಎಂದು ಅರ್ಥ ಮಾಡಬೇಕು. ಹೀಗೆ ಮೂರು ವಿಧವಾದ ಲಕ್ಷಣಾವೃತ್ತಿಗಳಿಂದ ವೇದವು ಬ್ರಹ್ಮವನ್ನು ಪ್ರತಿಪಾದಿಸುತ್ತದೆ. ಹೀಗಿರುವಾಗ ಬ್ರಹ್ಮವೆಂಬ ತತ್ತ್ವವನ್ನು ಪ್ರತಿಪಾದಿಸುವ ವೇದವು ನಿರ್ವಿಷಯವು ಹೇಗಾದೀತು? ಬ್ರಹ್ಮವನ್ನು ಪ್ರತಿಪಾದಿಸುವುದರಿಂದ ಉಪನಿಷತ್ತು ಎಂಬ ವೇದಭಾಗವು ಉತ್ತಮವಾದ ತತ್ತ್ವಾವೇದಕ ಪ್ರಮಾಣವಾಗಿದೆಯಲ್ಲವೇ ! ಎಂದು ಮಾಯಾವಾದಿಯು ಆಕ್ಷೇಪಿಸಿದರೆ ಉತ್ತರವನ್ನು ಹೇಳುತ್ತಾರೆ.

**ಲಕ್ಷಣಾಭಿಃ ಪ್ರವರ್ತಂತೇ ವಾಕ್ಯಾನಿ ತಿಸೃಭಿರ್ಯದಿ ।**
**ವಿಷಯತ್ವಂ ಲಕ್ಷಣಾನಾಂ ತಸ್ಯೈವಾನಿಷ್ಟಮಾಗತಮ್ ॥ 34 ॥**

**ಪದಚ್ಛೇದ—** ಲಕ್ಷಣಾಭಿಃ, ಪ್ರವರ್ತಂತೇ, ವಾಕ್ಯಾನಿ, ತಿಸೃಭಿಃ, ಯದಿ, ವಿಷಯತ್ವಂ, ಲಕ್ಷಣಾನಾಂ, ತಸ್ಯ, ಏವ, ಅನಿಷ್ಟಂ, ಆಗತಮ್ ।

**ಅನ್ವಯ—** ವಾಕ್ಯಾನಿ, ಯದಿ, ತಿಸೃಭಿಃ, ಲಕ್ಷಣಾಭಿಃ (ಬ್ರಹ್ಮಣಿ), ಪ್ರವರ್ತಂತೇ (ತರ್ಹಿ), ತಸ್ಯ, ಏವ (ಬ್ರಹ್ಮಣಃ), ಅನಿಷ್ಟಂ, ಲಕ್ಷಣಾನಾಂ, ವಿಷಯತ್ವಂ, ಆಗತಮ್ ।

**ಅನ್ವಯಾರ್ಥ—**

**ವಾಕ್ಯಾನಿ** = ತತ್ತ್ವಾವೇದಕವೆಂದು ಅಂಗೀಕೃತವಾದ ವೇದಗಳು,
**ಯದಿ** = ಒಂದು ವೇಳೆ,
**ತಿಸೃಭಿಃ** = ಮೂರು ಪ್ರಕಾರವಾದ,
**ಲಕ್ಷಣಾಭಿಃ** = ಲಕ್ಷಣಾವೃತ್ತಿಗಳಿಂದ (ಬ್ರಹ್ಮಣಿ = ಬ್ರಹ್ಮನಲ್ಲಿ),
**ಪ್ರವರ್ತಂತೇ** = ಪ್ರವರ್ತಿಸುತ್ತವೆ (ಬ್ರಹ್ಮವನ್ನು ಪ್ರತಿಪಾದಿಸುತ್ತವೆ ಎಂದು ಹೇಳುವುದಾದರೆ) (ತರ್ಹಿ = ಆ ಪಕ್ಷದಲ್ಲಿ),
**ತಸ್ಯ ಏವ (ಬ್ರಹ್ಮಣಃ)** = ವಾಚ್ಯತ್ವಪ್ರಮೇಯತ್ವ ಮುಂತಾದ ಎಲ್ಲಾ ವಿಶೇಷಗಳಿಂದ ರಹಿತನೆಂದು ಅಂಗೀಕರಿಸಲ್ಪಟ್ಟ ನಿನ್ನ ಪರಬ್ರಹ್ಮನಿಗೆಯೇ,
**ಅನಿಷ್ಟಂ** = (ಅಪಸಿದ್ಧಾಂತ ಬರುವುದರಿಂದ) ನಿನಗೆ ಇಷ್ಟವಿಲ್ಲದಿರುವ,
**ಲಕ್ಷಣಾನಾಂ** = ಲಕ್ಷಣಾವೃತ್ತಿಗಳಿಗೆ (ಗಳಿಂದ)
**ವಿಷಯತ್ವಂ** = ಪ್ರತಿಪಾದನ ಸಂಬಂಧವೆಂಬ ವಿಶೇಷಣವು,
**ಆಗತಮ್** = ಒದಗಿತು.

**ತಾತ್ಪರ್ಯ—** ಮಾಯಾವಾದಿಯು ತತ್ತ್ವಾವೇದಕವೆಂದು ಒಪ್ಪಿರುವ ವೇದವಾಕ್ಯಗಳು ಅಭಿಧಾ ಎಂಬ ಮೊದಲನೆಯ ವೃತ್ತಿಯಿಂದ ಬ್ರಹ್ಮವನ್ನು ಪ್ರತಿಪಾದಿಸದಿದ್ದರೂ ಜಹಲ್ಲಕ್ಷಣಾ, ಅಜಹಲ್ಲಕ್ಷಣಾ, ಜಹದಜಹಲ್ಲಕ್ಷಣಾ ಎಂಬ ಮೂರು ವಿಧ ವೃತ್ತಿಗಳಿಂದ ಬ್ರಹ್ಮವನ್ನು ಪ್ರತಿಪಾದಿಸುತ್ತವೆ. ಆದುದರಿಂದ ವೇದವಾಕ್ಯಗಳು ನಿರ್ವಿಷಯವಾಗುವುದಿಲ್ಲ. ಅವು ತತ್ತ್ವಾವೇದಕಪ್ರಮಾಣಗಳೇ ಆಗುತ್ತವೆ ಎಂದು ಮಾಯಾವಾದಿಯು ಹೇಳಿದರೆ ಅದನ್ನು ಖಂಡಿಸುತ್ತಾರೆ. ವೇದ ವಾಕ್ಯಗಳು ಮೂರು ವಿಧವಾದ ಲಕ್ಷಣಾವೃತ್ತಿಗಳಿಂದ ಬ್ರಹ್ಮವನ್ನು ಪ್ರತಿಪಾದಿಸುತ್ತವೆ ಎಂದು ಹೇಳಿದರೆ ಬ್ರಹ್ಮನಿಗೆ ಲಕ್ಷಣಾ ವಿಷಯಕತ್ವವು ಬಂದಿತು. ಬ್ರಹ್ಮನು ವಿಷಯತ್ವವೆಂಬ ವಿಶೇಷಣಸಹಿತನಾದನು. ಮಾಯಾವಾದಿಗಳು ವಾಚ್ಯತ್ವಪ್ರಮೇಯತ್ವ ಮುಂತಾದ ಯಾವ ವಿಶೇಷಣಸಂಬಂಧವೂ ಬ್ರಹ್ಮನಲ್ಲಿ ಇಲ್ಲವೆಂದು ಒಪ್ಪಿದ್ದಾರೆ. ಈಗ ಲಕ್ಷಣಾವೃತ್ತಿ ವಿಷಯತ್ವವನ್ನು

ಬ್ರಹ್ಮನಿಗೆ ಒಪ್ಪಿದರೆ ಅಪಸಿದ್ಧಾಂತವು ಬರುತ್ತದೆ. ಹೀಗೆ ಬ್ರಹ್ಮನಿಗೆ ಲಕ್ಷಣಾವಿಷಯತ್ವವೂ ಬರುವುದಿಲ್ಲವಾದುದರಿಂದ ನಿರ್ವಿಷಯತ್ವವೇ ಬಂದಿತು. ಆಗ ವೇದಕ್ಕೆ ಪ್ರತಿಪಾದ್ಯ ವಿಷಯವಿಲ್ಲವೆಂದಾಯಿತು. ಹೀಗಾಗಿ ನೀನು ತತ್ತ್ವಾವೇದಕವೆಂದು ಒಪ್ಪಿರುವ ವೇದಭಾಗವೂ ಅಪ್ರಮಾಣವೆಂದೇ ಆಯಿತು ಎಂದು ತಾತ್ಪರ್ಯ.

**ವಿಗ್ರಹ—**

**ವಿಷಯತ್ವಂ—** ವಿಷಯಸ್ಯ ಭಾವಃ ವಿಷಯತ್ವಂ ।

**ಅನಿಷ್ಟಂ—** ನ ಇಷ್ಟಂ ಅನಿಷ್ಟಂ ।

**ಕ್ರಿಯಾಪದ—** ಪ್ರವರ್ತಂತೇ - ಪ್ರ+ವರ್ತಂತೇ ವರ್ತತೇ ವರ್ತೇತೇ, ವರ್ತಂತೇ, ವರ್ತಸೇ ವರ್ತೇಥೇ ವರ್ತಧ್ವೇ, ವರ್ತೇ ವರ್ತಾವಹೇ ವರ್ತಾಮಹೇ । ಪ್ರ ಉಪಸರ್ಗ, ವೃತು (ವೃತ್) ವರ್ತನೇ, ಅಕ, ಸೇಟ್, ಆತ್ಮ, ಲಟ್, ಪ್ರಥಮಪುರುಷ ಬಹುವಚನ ।

**ಪ್ರಯೋಗ—** ವಾಕ್ಯೈಃ ತಿಸೃಭಿಃ ಲಕ್ಷಣಾಭಿಃ ಯದಿ ಪ್ರವರ್ತ್ಯತೇ (ತರ್ಹಿ) ತಸ್ಯ ಏವ ಅನಿಷ್ಟೇನ ಲಕ್ಷಣಾನಾಂ ವಿಷಯತ್ವೇನ ಅಗತೇನ (ಭೂಯತೇ) ।

★ ★ ★

**ಅವತಾರಿಕಾ—** ಪರಬ್ರಹ್ಮನಿಗೆ ನಿರ್ವಿಶೇಷತ್ವವನ್ನು ಅಂಗೀಕರಿಸಿದರೆ ಇಷ್ಟೇ ದೋಷವಲ್ಲ, ಇನ್ನೂ ಹೆಚ್ಚಾದ ದೋಷವಿದೆ ಎಂದು ಪ್ರತಿಜ್ಞೆ ಮಾಡುತ್ತಾರೆ

**ಕಿಂಚಾಖಂಡೇऽತ್ರ ವಾಕ್ಯಾನಿ ಕಿಂಚಿದ್ವಿದಧತೇ ನ ಹಿ ।**
**ತಾನ್ಯಭ್ಯಧುರಭಾವಂ ಚೇಜ್ಜಾಡ್ಯಾದೇಸ್ತನ್ನ ಶೋಭತೇ ॥ 35 ॥**

**ಪದಚ್ಛೇದ—** ಕಿಂ, ಚ, ಅಖಂಡೇ, ಅತ್ರ, ವಾಕ್ಯಾನಿ, ಕಿಂಚಿತ್, ವಿದಧತೇ, ನ, ಹಿ, ತಾನಿ, ಅಭ್ಯಧುಃ, ಅಭಾವಂ, ಚೇತ್, ಜಾಡ್ಯಾದೇಃ, ತತ್, ನ, ಶೋಭತೇ ।

**ಅನ್ವಯ—** ಕಿಂ, ಚ, ಅಖಂಡೇ, ಅತ್ರ, ವಾಕ್ಯಾನಿ, ಕಿಂಚಿತ್, ನ, ಹಿ, ವಿದಧತೇ, ತಾನಿ, ಜಾಡ್ಯಾದೇಃ, ಅಭಾವಂ, ಅಭ್ಯಧುಃ, ಚೇತ್, ತತ್, ನ, ಶೋಭತೇ ।

**ಅನ್ವಯಾರ್ಥ—**

**ಕಿಂಚ** = ಮತ್ತೊಂದು ದೂಷಣವೇನೆಂದರೆ,

**ಅಖಂಡೇ** = ಭೇದವಿಲ್ಲದ (ನಿರ್ವಿಶೇಷನಾದ),

**ಅತ್ರ** = ಬ್ರಹ್ಮನಲ್ಲಿ

**ವಾಕ್ಯಾನಿ** = ಸತ್ಯಂ ಜ್ಞಾನಂ ಅನಂತಂ ಬ್ರಹ್ಮ ಇತ್ಯಾದಿ ವಾಕ್ಯಗಳು,

**ಕಿಂಚಿತ್** = ಸತ್ಯತ್ವಾದಿರೂಪವಾದ ಯಾವ ವಿಶೇಷಣವನ್ನೂ,

**ನ ಹಿ ವಿದಧತೇ** = ಅರ್ಪಿಸುವುದಿಲ್ಲ (ಪ್ರತಿಪಾದಿಸುವುದಿಲ್ಲ, ಆದುದರಿಂದ ಲಕ್ಷಣಾವೃತ್ತಿಯನ್ನು ಅಂಗೀಕಾರ ಮಾಡಿದುದೂ ವ್ಯರ್ಥ)

**ತಾನಿ** = ಆ ವಾಕ್ಯಗಳು,

**ಜಾಡ್ಯಾದೇಃ** = ಜಡತ್ವ (ಜ್ಞಾನಶೂನ್ಯತ್ವ) ಮೊದಲಾದುದರ,

**ಅಭಾವಂ** = ಇಲ್ಲದಿರುವಿಕೆಯನ್ನು,

**ಅಭ್ಯಧುಃ ಚೇತ್** = ಪ್ರತಿಪಾದಿಸಿದವು (ಹೇಳಿದುವು ಪ್ರತಿಪಾದಿಸುತ್ತವೆ) ಎಂದು ಹೇಳುವುದಾದರೆ,
**ತತ್** = ಆ ಪ್ರಕಾರ ಹೇಳುವುದು,
**ನ ಶೋಭತೇ** = ಶೋಭಿಸುವುದಿಲ್ಲ (ಯುಕ್ತವಾಗಲಾರದು).

**ತಾತ್ಪರ್ಯ—** ಪರಬ್ರಹ್ಮವು ಅಖಂಡ ಅಂದರೆ ಯಾವ ಭೇದವೂ ಇಲ್ಲದುದು, ನಿರ್ವಿಶೇಷವಾದುದು ಎಂದು ನೀವು ಒಪ್ಪಿರುತ್ತೀರಿ. ಇಂತಹ ಪರಬ್ರಹ್ಮನಲ್ಲಿ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಇತ್ಯಾದಿ ವೇದವಾಕ್ಯಗಳು ಸತ್ಯತ್ವ, ಜ್ಞಾನತ್ವ, ಅನಂತತ್ವ, ಮೊದಲಾದ ಯಾವ ಧರ್ಮ ವಿಶೇಷಗಳನ್ನೂ ಹೇಳಲಾರವಷ್ಟೆ! ಬ್ರಹ್ಮನಲ್ಲಿ ಸತ್ಯತ್ವವೆಂಬ ಧರ್ಮವಿದೆ ಎಂದು ಒಪ್ಪಿದರೆ ಬ್ರಹ್ಮನಲ್ಲಿ ಭೇದವಿಲ್ಲ, ವಿಶೇಷವಿಲ್ಲ ಎಂಬ ಮಾತು ಹಾಳಾಗುತ್ತದೆ. ಹೀಗೆ ಈ ವಾಕ್ಯಗಳು ಪರಬ್ರಹ್ಮನಲ್ಲಿ ಯಾವ ಒಂದು ವಿಶೇಷಧರ್ಮವನ್ನೂ ಹೇಳದ ಕಾರಣ ಲಕ್ಷಣಾವೃತ್ತಿಯನ್ನು ಅಂಗೀಕರಿಸಿರುವುದು ನಿರರ್ಥಕವಾಗುತ್ತದೆ. ಹಾಗಲ್ಲ, ಸತ್ಯಂ, ಜ್ಞಾನಂ, ಅನಂತಂ, ಬ್ರಹ್ಮ ಇತ್ಯಾದಿ ವಾಕ್ಯಗಳು ಬ್ರಹ್ಮನಲ್ಲಿ ಸತ್ಯತ್ವ ಮೊದಲಾದ ಭಾವರೂಪವಾದ (ಇದೆ ಎಂದು ಪ್ರಥಮ ಪ್ರತೀತಿಯಲ್ಲಿಯೇ ತೋರುವ) ಧರ್ಮಗಳನ್ನು ಹೇಳದಿದ್ದರೂ ಸತ್ಯಪದವು ಅಸತ್ಯತ್ವಾಭಾವವನ್ನು ಹೇಳುತ್ತದೆ. ಬ್ರಹ್ಮವು ಸತ್ಯತ್ವ ಉಳ್ಳದ್ದು ಅಲ್ಲದಿದ್ದರೂ, ಅಸತ್ಯತ್ವದ- ಅಭಾವವುಳ್ಳದ್ದು, ಸತ್ಯವಲ್ಲವೆಂದು ಅಲ್ಲ, ಎಂದು ತಿಳಿಸುತ್ತದೆ. ಹೀಗೆಯೇ ಜ್ಞಾನಪದವು ಜಡವಲ್ಲವೆಂದು ಅಲ್ಲ, ಬ್ರಹ್ಮನಲ್ಲಿ ಜ್ಞಾನಾಭಾವವೆಂಬ ಜಾಡ್ಯದ ಅಭಾವವಿದೆ ಎಂದು ಹೇಳುತ್ತದೆ. ಬ್ರಹ್ಮನಲ್ಲಿ ಜ್ಞಾನತ್ವವಿಲ್ಲದಿದ್ದರೂ ಅಜ್ಞಾನವ್ಯಾವೃತ್ತತ್ವವಿದೆ ಎಂದು ಹೇಳುತ್ತದೆ. ಅನಂತಪದವು ಅನಂತತ್ವವೆಂಬ ಧರ್ಮವನ್ನು ಹೇಳದಿದ್ದರೂ, ದೇಶಕಾಲವಸ್ತು ಪರಿಚ್ಛೇದವೆಂಬ ಮೂರು ವಿಧವಾದ ಅಂತವುಳ್ಳದ್ದು ಅಲ್ಲದೇ ಇರುವಂತಹುದು ಬ್ರಹ್ಮ, ಅಂತವ್ಯಾವೃತ್ತ ಎಂದು ಹೇಳುತ್ತದೆ. ಹೀಗೆ ಈ ಪದಗಳು ಅಭಾವರೂಪವಾದ ಧರ್ಮವನ್ನು ಬೋಧಿಸುತ್ತವೆ ಎಂದು ಹೇಳುವುದಾದರೆ ಅದೂ ಚೆನ್ನಾಗಿಲ್ಲ, ಯುಕ್ತವಾಗಿಲ್ಲ. (ಇದಕ್ಕೆ ಕಾರಣವನ್ನು ಮುಂದಿನ 37ನೇ ಶ್ಲೋಕದಲ್ಲಿ ಹೇಳುತ್ತಾರೆ).

**ವಿಗ್ರಹ—**

**ಅಖಂಡೇ—** ಖಂಡ್ಯತೇ ಇತಿ ಖಂಡಃ, ನ ವಿದ್ಯತೇ ಖಂಡಃ (ಭೇದಃ) ಯಸ್ಯ ತತ್ ಅಖಂಡಂ ತಸ್ಮಿನ್ ।
ಭೇದಃ ಭಾವೇ ಘಞ್, ಖಡಿ ಭೇದನೇ ಎಂಬ ಧಾತುವು.

**ಅಭಾವಂ—** ನ ಭಾವಃ ಅಭಾವಃ ತಂ ।

**ಜಾಡ್ಯಾದೇಃ—** ಜಡಸ್ಯ ಭಾವಃ ಜಾಡ್ಯಂ, ಜಾಡ್ಯಂ ಆದಿಃ ಯಸ್ಯ ಸಃ ಜಾಡ್ಯಾದಿಃ ತಸ್ಯ ।

**ಕ್ರಿಯಾಪದ— ವಿದಧತೇ** - ವಿ+ದಧತೇ, ಧತ್ತೇ ದಧಾತೇ ದಧತೇ, ಧತ್ಸೇ ದಧಾಥೇ, ಧದ್ವೇ, ದಧೇ, ದಧ್ವಹೇ, ದಧ್ಮಹೇ । ಡುಧಾಞ್(ಧಾ)ಧಾರಣಪೋಷಣಯೋಃ, ಸಕ ಅನಿ. ಉಭ. ಇಲ್ಲಿ ಆತ್ಮನೇಪದಿ ಲಟ್, ಪ್ರಥಮಪುರುಷೇ ಬಹುವಚನ ವಿ. ಉಪಸರ್ಗ ।

**ಅಭ್ಯಧುಃ-** ಅಭಿ + ಅಧುಃ ಅಧಾತ್ ಅಧಾತಾಂ ಅಧುಃ ಇತ್ಯಾದಿ ಮೇಲಿನದೇ ಧಾತು. ಭೂತೇ ಲುಙ್ ಅಭಿ ಉಪಸರ್ಗ ಪ್ರಥಮಪುರುಷೇ ಬಹುವಚನ ।

**ಶೋಭತೇ-** ಶೋಭತೇ ಶೋಭೇತೇ ಶೋಭಂತೇ ಇತ್ಯಾದಿ ಶುಭ ದೀಪ್ತೌ (ಶುಭ್ to shine) ಅಕ. ಸೇಟ್ ಆತ್ಮನೇಪದ ಲಟ್. ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ಕಿಂಚ ಅಖಂಡೇ ಅತ್ರ ವಾಕ್ಯೈಃ ಕಿಂಚಿತ್ ನ ಹಿ ವಿಧೀಯತೇ, ತೈಃ ಜಾಡ್ಯಾದೇಃ ಅಭಾವಃ ಅಭ್ಯಧಾಯಿ ಚೇತ್, ತೇನ ನ ಶುಭ್ಯತೇ ।

★ ★ ★

**ಅವತಾರಿಕಾ**— ಸತ್ಯಜ್ಞಾನಾದಿ ವಾಕ್ಯಗಳು ಅಸತ್ಯತ್ವದ ಅಭಾವವನ್ನು ಅಜ್ಞಾನದ (ಜಾಡ್ಯದ) ಅಭಾವವನ್ನು, ಅಂತದ ಅಭಾವವನ್ನು ಇತ್ಯಾದಿಗಳನ್ನು ಹೇಳುತ್ತವೆ ಎಂದು ಹೇಳಿದಿರಲ್ಲವೇ! ಈ ಅಸತ್ಯತ್ವಾಭಾವ ಮುಂತಾದ ಧರ್ಮಗಳು ಬ್ರಹ್ಮಸ್ವರೂಪವೆಂದು ಒಪ್ಪುತ್ತೀರೋ ಅಥವಾ ಬ್ರಹ್ಮದ ವಿಶೇಷಗಳು ಎಂದು ಒಪ್ಪುತ್ತೀರೋ, ಈ ಅಸತ್ಯತ್ವಾಭಾವ ಮುಂತಾದ ಧರ್ಮಗಳು ಬ್ರಹ್ಮಸ್ವರೂಪವೆಂದು ಒಪ್ಪಿದರೆ ಬ್ರಹ್ಮವೂ ಅಭಾವರೂಪವೆಂದು ಆಗುತ್ತದೆ. ಬ್ರಹ್ಮವು ಅಭಾವರೂಪವೆಂದು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಹೇಳುತ್ತಾರೆ.

**ಅಭಾವಭಾವಸ್ಯಾಭಾವಾದ್ಭಾವರೂಪಸ್ಯ ತಸ್ಯ ತು ।**
**ಭಾವಾಭಾವವಿಶೇಷಾಣಾಮಭಾವಾದವಿಶೇಷಿಣಃ ॥ 36 ॥**

**ಪದಚ್ಛೇದ**— ಅಭಾವಭಾವಸ್ಯ, ಅಭಾವಾತ್, ಭಾವರೂಪಸ್ಯ, ತಸ್ಯ, ತು, ಭಾವಾಭಾವವಿಶೇಷಾಣಾಮ್, ಅಭಾವಾತ್, ಅವಿಶೇಷಿಣಃ ।

**ಅನ್ವಯ**— ಭಾವರೂಪಸ್ಯ ತಸ್ಯ ತು ಅಭಾವಭಾವಸ್ಯ ಅಭಾವಾತ್, ಅವಿಶೇಷಿಣಃ ಭಾವಾಭಾವವಿಶೇಷಾಣಾಂ ಅಭಾವಾತ್ (ಲಕ್ಷಣಾ ಅಂಗೀಕೃತಾಪಿ ವ್ಯರ್ಥಾ ಭವತಿ, ಸತ್ಯಜ್ಞಾನಾದಿ ವಾಕ್ಯಾನಾಂ ಬ್ರಹ್ಮವಿಷಯತ್ವಾಭಾವಾತ್ ನ ತತ್ತ್ವಾವೇದಕತ್ವಂ ಸಂಭವತಿ)

**ಅನ್ವಯಾರ್ಥ**—

**ಭಾವರೂಪಸ್ಯ** = ಸದ್ರೂಪನಾದ (ವಿಧಿಪ್ರತ್ಯಯ ವಿಷಯನಾದ),

**ತಸ್ಯ ತು** = ಆ ಬ್ರಹ್ಮನಿಗಾದರೋ,

**ಅಭಾವಭಾವಸ್ಯ** = ಅಭಾವಸ್ವರೂಪತ್ವದ,

**ಅಭಾವಾತ್** = ಅಭಾವವಿರುವುದರಿಂದ (ಸತ್ಯಜ್ಞಾನಾದಿ ವಾಕ್ಯಗಳು ಬ್ರಹ್ಮಾತ್ಮಕವಾದ ಅಸತ್ಯತ್ವಾಭಾವವನ್ನು ಹೇಳುತ್ತವೆ ಎಂಬ ಪಕ್ಷವು ಯುಕ್ತವಲ್ಲ).

**ಅವಿಶೇಷಿಣಃ** = ನಿರ್ವಿಶೇಷನಾದ ನಿನ್ನ ಪರಬ್ರಹ್ಮನಿಗೆ,

**ಭಾವಾಭಾವವಿಶೇಷಾಣಾಂ** = ಭಾವರೂಪವಾದ ಅಥವಾ ಅಭಾವರೂಪವಾದ ವಿಶೇಷಗಳ,

**ಅಭಾವಾತ್** = ಇಲ್ಲದಿರುವಿಕೆಯಿಂದಾಗಿ (ಅಸತ್ಯತ್ವಾಭಾವ ಮುಂತಾದುವುಗಳು ಬ್ರಹ್ಮನ ವಿಶೇಷವೆಂದು ಹೇಳಲು ಬರುವುದಿಲ್ಲ. ಆದುದರಿಂದ ಲಕ್ಷಣಾವೃತ್ತಿಯನ್ನು ಅಂಗೀಕಾರ ಮಾಡಿದುದೂ ವ್ಯರ್ಥ. ಸತ್ಯಜ್ಞಾನಾದಿ ವಾಕ್ಯಗಳಿಗೆ ಬ್ರಹ್ಮವಿಷಯತ್ವವನ್ನು ಹೇಳಲು ಬರುವುದಿಲ್ಲವಾದುದರಿಂದ ಉಪನಿಷದಾತ್ಮಕವಾದ ವೇದಭಾಗಕ್ಕೆ ತತ್ತ್ವಾವೇದಕತ್ವವೂ ಬರುವುದಿಲ್ಲ).

**ತಾತ್ಪರ್ಯ**— ಮಾಯಾವಾದಿಮತದ ರೀತಿಯಿಂದ ಪರಬ್ರಹ್ಮವು ಭಾವರೂಪ ಅಂದರೆ ಸದ್ರೂಪವು ಇದೆ ಎಂಬ ಪ್ರತೀತಿಗೆ ವಿಷಯವಾದುದು. ಅಂತಹ ಪರಬ್ರಹ್ಮನಲ್ಲಿ ಅಸತ್ಯತ್ವವು ಇಲ್ಲ ಎಂದು ಅಸತ್ಯತ್ವಾಭಾವಾದಿ ಧರ್ಮಗಳನ್ನು ಹೇಳಲು ಬರುವುದಿಲ್ಲ. ಅಭಾವರೂಪಧರ್ಮಗಳು ಅಧಿಕರಣರೂಪವಾದುದರಿಂದ ಬ್ರಹ್ಮವೂ ಅಭಾವಾತ್ಮಕವಾಗ ಬೇಕಾಗುತ್ತದೆ. ಬ್ರಹ್ಮವು ಭಾವಾತ್ಮಕಸದ್ರೂಪವೆಂದು ಮಾಯಾವಾದಿಗಳು ಒಪ್ಪಿರುತ್ತಾರೆ. ಅಭಾವರೂಪವೆಂದು ಹೇಳಿದರೆ ಅವರ ಸಿದ್ಧಾಂತಕ್ಕೆ ವಿರೋಧ ಬರುತ್ತದೆ. ಇನ್ನು ಅಸತ್ಯತ್ವಾಭಾವಾದಿಗಳು ಬ್ರಹ್ಮನಲ್ಲಿರುವ ಒಂದು ವಿಧವಾದ ವಿಶೇಷ ಧರ್ಮಗಳು, ವಿಶೇಷಣಗಳು ಎಂದು ಎರಡನೆಯ ಪಕ್ಷವನ್ನು ಒಪ್ಪಿದರೆ, ಅದೂ ಸರಿಯಾಗುವುದಿಲ್ಲ. ಬ್ರಹ್ಮನಲ್ಲಿ ಭಾವರೂಪವಾದ ಯಾವ ವಿಶೇಷಣಗಳೂ ಇಲ್ಲ. ಅಭಾವರೂಪವಾದ ಯಾವ ವಿಶೇಷಗಳೂ ಇಲ್ಲವೆಂದು ಮಾಯಾವಾದಿಗಳು ಒಪ್ಪಿರುತ್ತಾರೆ. ಈಗ ಅಸತ್ಯತ್ವಾಭಾವ ಮುಂತಾದ ವಿಶೇಷಗಳನ್ನು ಬ್ರಹ್ಮಾತಿರಿಕ್ತವಾಗಿ ಒಪ್ಪಿದರೆ ಅಪಸಿದ್ಧಾಂತವು ಬರುತ್ತದೆ.

ಹೀಗಾಗಿ ಪರಬ್ರಹ್ಮನಲ್ಲಿ ಅವನ ಸ್ವರೂಪವೇ ಆದ ಅಸತ್ಯತ್ವಾಭಾವಾದಿರೂಪವಾದ ಸತ್ಯತ್ವಾದಿಗಳು ಇವೆಯೆಂಬ ಪಕ್ಷವೂ ಕೂಡುವುದಿಲ್ಲ. ಅಸತ್ಯತ್ವಾಭಾವಾದಿಗಳು ಬ್ರಹ್ಮನ ವಿಶೇಷವೆಂಬ ಪಕ್ಷವೂ ಯುಕ್ತವಾಗುವುದಿಲ್ಲ. ಹೀಗೆ ಎರಡು ಪಕ್ಷಗಳೂ ಸರಿಯಲ್ಲ. ಸತ್ಯಜ್ಞಾನಾದಿವಾಕ್ಯಗಳಲ್ಲಿ ಮೂರು ವಿಧವಾದ ಲಕ್ಷಣಾವೃತ್ತಿಯನ್ನು ಒಪ್ಪಿದುದೂ ವ್ಯರ್ಥ. ಸತ್ಯಜ್ಞಾನಾದಿ ವಾಕ್ಯಗಳಿಗೆ ಬ್ರಹ್ಮವಿಷಯತ್ವವು ಕೂಡುವುದಿಲ್ಲವಾದುದರಿಂದ, ಉಪನಿಷದಾತ್ಮಕ ವೇದಭಾಗಕ್ಕೂ ತತ್ತ್ವಾವೇದಕ ಪ್ರಮಾಣತ್ವವು ಕೂಡುವುದಿಲ್ಲ ಎಂದು ತಾತ್ಪರ್ಯ.

**ವಿಗ್ರಹ—**

**ಅಭಾವಭಾವಸ್ಯ—** ಅಭಾವಸ್ಯ ಭಾವಃ ಅಭಾವಭಾವಃ ತಸ್ಯ ।

**ಭಾವರೂಪಸ್ಯ—** ಭಾವಃ ರೂಪಂ ಯಸ್ಯ ತತ್ ಭಾವರೂಪಂ ತಸ್ಯ ।

**ಭಾವಾಭಾವವಿಶೇಷಾಣಾಂ—** ಭಾವಾಶ್ಚ ಅಭಾವಾಶ್ಚ ಭಾವಾಭಾವಾಃ, ಭಾವಾಭಾವಾಶ್ಚ ತೇ ವಿಶೇಷಾಶ್ಚ ಭಾವಾಭಾವವಿಶೇಷಾಃ ತೇಷಾಂ ।

**ಅವಿಶೇಷಿಣಃ—** ವಿಶೇಷಃ ಅಸ್ಯ ಅಸ್ತೀತಿ ವಿಶೇಷಿ, ನ ವಿಶೇಷಿ ಅವಿಶೇಷಿ ತಸ್ಯ ।

**ಪ್ರಯೋಗ—** ಭಾವರೂಪಸ್ಯ ತಸ್ಯ ತು ಅಭಾವಭಾವಸ್ಯ ಅಭಾವಾತ್ (ಪ್ರಥಮಪಕ್ಷೇಣ ಯುಕ್ತೇನ ನ ಭೂಯತೇ) ಅವಿಶೇಷಿಣಃ ಭಾವಾಭಾವವಿಶೇಷಾಣಾಂ ಅಭಾವಾತ್ (ದ್ವಿತೀಯೇನ ಪಕ್ಷೇಣ ಯುಕ್ತೇನ ನ ಭೂಯತೇ) ।

★ ★ ★

**ಅವತಾರಿಕಾ—** "ಮನ್ಯಂತೇ ಶೂನ್ಯಮೇವಾನ್ಯೇ ತತ್ತ್ವಂ" (ಸ.16 ಶ್ಲೋ.24) ಎಂಬಲ್ಲಿ ಮಾಯಾವಾದಿಗಳು ಪ್ರಚ್ಛನ್ನಬೌದ್ಧರೆಂದು ಹೇಳಿ, ಪರತತ್ತ್ವವಿವರ್ತತ್ವಾದಪರಸ್ಯಾಖಿಲಸ್ಯ ಚ (ಸ.16 ಶ್ಲೋ.26) ಎಂಬ ಶ್ಲೋಕದಿಂದ ಅದನ್ನು ಸಮರ್ಥಿಸಿದ್ದಾರೆ. ಈಗ ಆ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುತ್ತಾರೆ.

**ಯೋ ವೇದವೇದಿತಾರ್ಥಾನಾಂ ನಿತ್ಯ(ನಿತ್ಯಂ)ಸಂತ್ಯಾಗಸಂಶ್ರವೀ ।**
**ವೇದಬಾಹ್ಯೋ ವಿಪಶ್ಚಿದ್ಭಿರೇಷ ನಿಶ್ಚೀಯತಾಂ ತತಃ ॥ 37 ॥**

**ಪದಚ್ಛೇದ—** ಯಃ, ವೇದವೇದಿತಾರ್ಥಾನಾಂ, ನಿತ್ಯಸಂತ್ಯಾಗಸಂಶ್ರವೀ, ವೇದಬಾಹ್ಯಃ, ವಿಪಶ್ಚಿದ್ಭಿಃ, ಏಷಃ, ನಿಶ್ಚೀಯತಾಂ, ತತಃ ।

(ಈ ಪದ್ಯದ ಯೋ ವೇದವೇದಿತಾರ್ಥಾನಾಂ ಎಂಬ ಪೂರ್ವಾರ್ಧವನ್ನು ಉತ್ತರಾರ್ಧವನ್ನಾಗಿಯೂ ಉತ್ತರಾರ್ಧವನ್ನು ಪೂರ್ವಾರ್ಧವನ್ನಾಗಿಯೂ ಛಲಾರಿಯದಲ್ಲಿ ಕೊಟ್ಟಿದ್ದಾರೆ. ಇದೊಂದು ಪಾಠಾಂತರ).

**ಅನ್ವಯ—** ಯಃ, ವೇದವೇದಿತಾರ್ಥಾನಾಂ, ನಿತ್ಯಸಂತ್ಯಾಗಸಂಶ್ರವೀ, ತತಃ, ಏಷಃ, ವಿಪಶ್ಚಿದ್ಭಿಃ, ವೇದಬಾಹ್ಯಃ, ನಿಶ್ಚೀಯತಾಮ್ ।

**ಅನ್ವಯಾರ್ಥ—**

**ಯಃ** = ಯಾವ ಮಾಯಾವಾದಿಯು,

**ವೇದವೇದಿತಅರ್ಥಾನಾಂ** = ವೇದಗಳಿಂದ ತಿಳಿಸಲ್ಪಟ್ಟ ಪ್ರಪಂಚ ಸತ್ಯತ್ವಾದಿ ಅರ್ಥಗಳನ್ನು,

**ನಿತ್ಯಸಂತ್ಯಾಗಸಂಶ್ರವೀ** = ಯಾವಾಗಲೂ ಬಿಡುವ ವಿಷಯದಲ್ಲಿ ಪ್ರತಿಜ್ಞೆಯುಳ್ಳವನೋ,

**ತತಃ** = ಆದುದರಿಂದ,

**ಏಷಃ** = ಈ ಮಾಯಾವಾದಿಯು,

**ವಿಪಶ್ಚಿದ್ಭಿಃ** = ವಿದ್ವಾಂಸರಿಂದ,
**ವೇದಬಾಹ್ಯಃ** = ವೇದವನ್ನು ಒಪ್ಪದವನೆಂದು,
**ನಿಶ್ಚೀಯತಾಂ** = ನಿಶ್ಚಯಿಸಲ್ಪಡಲಿ.

**ತಾತ್ಪರ್ಯ—** ವೇದಗಳು ಪ್ರಪಂಚವು ಸತ್ಯವೆಂದೂ, ಶ್ರೀಹರಿಯು ಅನಂತಗುಣಪೂರ್ಣನೆಂದೂ ನಿರ್ದೋಷ-ನೆಂದೂ ಇನ್ನೂ ಅನೇಕ ವಿಷಯಗಳನ್ನು ತಾತ್ಪರ್ಯ ಪುರಸ್ಸರವಾಗಿ ಸಾರುತ್ತವೆ. ಆದರೆ ಮಾಯಾವಾದಿಯು ನಿರ್ಗುಣ ಬ್ರಹ್ಮವೊಂದೇ ಸತ್ಯ. ಉಳಿದುದೆಲ್ಲವೂ ಮಿಥ್ಯಾ ಎಂಬ ಪ್ರತಿಜ್ಞೆಯನ್ನು ಮಾಡಿ ಅದನ್ನು ನಿರ್ವಹಿಸುವುದಕ್ಕಾಗಿ ವೇದಗಳಲ್ಲಿ ಹೇಳಿರುವ ಮೇಲಿನ ವಿಷಯಗಳನ್ನು ಒಪ್ಪುವುದೇ ಇಲ್ಲವೆಂದು ಪ್ರತಿಜ್ಞೆ ಮಾಡಿರುತ್ತಾನೆ. ಬೌದ್ಧನು ವೇದವನ್ನೇ ಒಪ್ಪುವುದಿಲ್ಲ. ಆದುದರಿಂದ ವೇದಬಾಹ್ಯನು. ಮಾಯಾವಾದಿಯು ವೇದವನ್ನು ಪ್ರಮಾಣವೆಂದು ಒಪ್ಪಿಕೊಂಡರೂ ಅದು ತಿಳಿಸಿರುವ ಅರ್ಥವು ಸುಳ್ಳೆನ್ನುತ್ತಾನೆ. ಒಬ್ಬನು ವೇದವೆಂದ ಶಬ್ದರಾಶಿಯೇ ಅಪ್ರಮಾಣವೆಂದರೆ ಮತ್ತೊಬ್ಬನು ವೇದವು ಪ್ರಮಾಣ. ಆದರೆ ಅದರಲ್ಲಿ ಹೇಳಿದ ಅರ್ಥವು ಪ್ರಮಾಣವಲ್ಲವೆನ್ನುತ್ತಾನೆ. ಅದರಿಂದಾಗಿ ಬೌದ್ಧನಂತೆಯೇ ಮಾಯಾವಾದಿಯೂ ವೇದಬಾಹ್ಯನೆಂದಾಗುವುದಿಲ್ಲವೇ? ಪಂಡಿತರೇ ಇದನ್ನು ನಿರ್ಣಯಿಸಲಿ.

**ವಿಗ್ರಹ ಮತ್ತು ಕೋಶ—**

**ವೇದವೇದಿತಾರ್ಥಾನಾಂ—** ವೇದೇನ ವೇದಿತಾಃ ವೇದವೇದಿತಾಃ ವೇದವೇದಿತಾಶ್ಚ ತೇ ಅರ್ಥಾಶ್ಚ ವೇದವೇದಿತಾರ್ಥಾಃ ತೇಷಾಂ ।

**ನಿತ್ಯಸಂತ್ಯಾಗಸಂಶ್ರವೀ—** ಸಂಶ್ರವಃ ಅಸ್ಯ ಅಸ್ತೀತಿ ಸಂಶ್ರವೀ, ಸಂತ್ಯಾಗೇ ಸಂಶ್ರವೀ ಸಂತ್ಯಾಗಸಂಶ್ರವೀ, ನಿತ್ಯಂ ಸಂತ್ಯಾಗಸಂಶ್ರವೀ ನಿತ್ಯಂಸಂತ್ಯಾಗಸಂಶ್ರವೀ । (ಭಲಾರಿಯದಲ್ಲಿ 'ನಿತ್ಯಂ ಸಂತ್ಯಾಗಸಂಶ್ರವೀ' ಎಂದು ನಿತ್ಯಪದವು ಪ್ರತ್ಯೇಕವಾಗಿ ಸಮಾಸವಾಗದೇ ಇದೆ). ಸಂಶ್ರವಃ = ಪ್ರತಿಶ್ರವಃ, ಪ್ರತಿಜ್ಞೆ, 'ಅಂಗೀಕಾರಾಭ್ಯುಪಗಮಪ್ರತಿಶ್ರವಸಮಾಧಯಃ' ಅಮರ ।

**ವೇದಬಾಹ್ಯಃ—** ವೇದೇಭ್ಯಃ ಬಾಹ್ಯಃ ವೇದಬಾಹ್ಯಃ ।

**ಕ್ರಿಯಾಪದ— ನಿಶ್ಚೀಯತಾಂ** - ನಿಸ್+ಚೀಯತಾಂ ಚೀಯೇತಾಂ ಚೀಯಂತಾಂ, ಚೀಯಸ್ವ ಚೀಯೇಥಾಂ ಚೀಯಧ್ವಂ ಚೀಯೈ ಚೀಯಾವಹೈ ಚೀಯಾಮಹೈ । ನಿಸ್ ಉಪಸರ್ಗ ಚಿಞ್ (ಚಿ) ಚಯನೇ to heap up, to collect ದ್ವಿಕ. ಅನಿ ಉಭ. ಕರ್ಮಣಿ ಲೋಟ್ ।

**ಪ್ರಯೋಗ—** ಯೇನ ವೇದವೇದಿತಾರ್ಥಾನಾಂ ನಿತ್ಯಸಂತ್ಯಾಗಸಂಶ್ರವಿಣಾ (ಭೂಯತೇ) ಏತಂ ವಿಪಶ್ಚಿತ್ಃ ವೇದಬಾಹ್ಯಂ ನಿಶ್ಚಿನ್ವಂತು ।

★ ★ ★

**ಅವತಾರಿಕಾ—** ಹೀಗೆ ಮಾಯಾವಾದಿ ಶೂನ್ಯವಾದಿಗಳಿಬ್ಬರೂ ವೇದಬಾಹ್ಯರಾದರು. ಇಬ್ಬರಿಗೂ ಸಾಮ್ಯವಿದೆ-ಯೆಂದಾಯಿತು. ಪರತತ್ತ್ವ ಅಪರತತ್ತ್ವ ವಿಷಯದಲ್ಲಿ ಇಬ್ಬರಿಗೂ ವಿಶೇಷವಿಲ್ಲವೆಂದು ಹಿಂದೆಯೇ ಸಾಧಿಸಿದ್ದಾಗಿದೆ. ಆದುದರಿಂದ ಶೂನ್ಯವಾದಿ ಮತದಲ್ಲಿ ಯಾವುದು ದೋಷವೋ ಅದೇ ದೋಷವು ಮಾಯಾವಾದಿ ಮತಕ್ಕೂ ಬರುತ್ತದೆ ಎಂದು ಹೇಳುತ್ತಾರೆ.

**ಜ್ಯಾಯಸೋ ದೂಷಣೇನೈವ ಧೂರ್ತಂಮನ್ಯೋಽಪಿ ದೂಷಿತಃ ।**
**ಪಕ್ಷಯೋರವಿಶೇಷತ್ವಾದೇತಯೋಃ ಸದ್ವಿಪಕ್ಷಯೋಃ ॥ 38 ॥**

**ಪದಚ್ಛೇದ—** ಜ್ಯಾಯಸಃ, ದೂಷಣೇನ, ಏವ, ಧೂರ್ತಂಮನ್ಯಃ, ಅಪಿ, ದೂಷಿತಃ, ಪಕ್ಷಯೋಃ, ಅವಿಶೇಷತ್ವಾತ್, ಏತಯೋಃ, ಸದ್ವಿಪಕ್ಷಯೋಃ ।

**ಅನ್ವಯ—** ಜ್ಯಾಯಸಃ, ದೂಷಣೇನ, ಏವ, ಸದ್ವಿಪಕ್ಷಯೋಃ, ಏತಯೋಃ, ಪಕ್ಷಯೋಃ, ಅವಿಶೇಷತ್ವಾತ್, ಧೂರ್ತಮ್ಮನ್ಯಃ, ಅಪಿ, ದೂಷಿತಃ ।

**ಅನ್ವಯಾರ್ಥ—**

**ಜ್ಯಾಯಸಃ** = ಹಿರಿಯವನಾದ ಮತ್ತು ಮಾಯಾವಾದಿಗಿಂತ ಶ್ರೇಷ್ಠನಾದ, ಶೂನ್ಯವಾದಿಯ,

**ದೂಷಣೇನೈವ** = ಖಂಡನದಿಂದಲೇ,

**ಸದ್ವಿಪಕ್ಷಯೋಃ** = ಸಜ್ಜನರಿಗೆ ವಿರುದ್ಧಗಳಾದ,

**ಏತಯೋಃ** = ಈ ಎರಡು ಸಿದ್ಧಾಂತಗಳಿಗೆ,

**ಅವಿಶೇಷತ್ವಾತ್** = ವ್ಯತ್ಯಾಸವಿಲ್ಲದಿರುವುದರಿಂದ,

**ಧೂರ್ತಂಮನ್ಯಃ ಅಪಿ** = ತಾನು ಮೋಸಗಾರನೆಂದು ತಿಳಿದಿರುವ ಮಾಯಾವಾದಿಯೂ ಕೂಡ,

**ದೂಷಿತಃ** = ಖಂಡಿಸಲ್ಪಟ್ಟನು.

**ತಾತ್ಪರ್ಯ—** ''ಮತಾ ಮಧ್ಯಮಿಕಾಸ್ತೇಪಿ ವ್ಯಕ್ತಾಶ್ಛನ್ನಾ ಇತಿ ದ್ವಯೇ'' ಎಂಬಲ್ಲಿ (ಶ್ಲೋ.24) ಮೊದಲು ಹೇಳಲ್ಪಟ್ಟವರು ಬೌದ್ಧರು. ಆದ್ದರಿಂದ ಜ್ಯೇಷ್ಠರೂ (ಹಿರಿಯರೂ) ಮತ್ತು ಸ್ಪಷ್ಟವಾಗಿ ಶೂನ್ಯವಾದವನ್ನು ಹೇಳುವವ-ರಾದುದರಿಂದ ಶ್ರೇಷ್ಠರೂ ಆದ ಶೂನ್ಯವಾದಿಗಳನ್ನು ದೂಷಿಸಿದ್ದರಿಂದಲೇ ಪ್ರಚ್ಛನ್ನಬೌದ್ಧರೂ ಮಹಾವಂಚಕರೂ ಆದ ಮಾಯಾವಾದಿಗಳನ್ನೂ ಖಂಡಿಸಿದಂತಾಯಿತು. ಈ ಪ್ರಕಟಬೌದ್ಧರು ಮತ್ತು ಪ್ರಚ್ಛನ್ನಬೌದ್ಧರು ಇವರಿಬ್ಬರ ಸಿದ್ಧಾಂತ-ಗಳಲ್ಲಿಯೂ ಪರಸ್ಪರವಾಗಿ ವಿಶೇಷವಿಲ್ಲ. ಆದುದರಿಂದ ಜ್ಯೇಷ್ಠನೂ ಶ್ರೇಷ್ಠನೂ ಆದ ಪ್ರಕಟಬೌದ್ಧನನ್ನು ನಿರಾಕರಿಸಿದ್ದರಿಂದ ಪ್ರಚ್ಛನ್ನಬೌದ್ಧನಾದ ತಾನು ಎಲ್ಲರನ್ನೂ ಚೆನ್ನಾಗಿ ಮೋಸಗೊಳಿಸಿದ್ದೇನೆ ಎಂದು ತಿಳಿಸಿರುವ ಮಾಯಾವಾದಿಯನ್ನೂ ನಿರಾಕರಿಸಿದಂತಾಯಿತು.

**ವಿಗ್ರಹ ಮತ್ತು ಕೋಶ—**

**ಸದ್ವಿಪಕ್ಷಯೋಃ—** ಸತಾಂ ವಿಪಕ್ಷೌ ಸದ್ವಿಪಕ್ಷೌ ತಯೋಃ ।

**ಅವಿಶೇಷತ್ವಾತ್—** ನ ವಿದ್ಯತೇ ವಿಶೇಷಃ ಯಯೋಸ್ತೌ ಅವಿಶೇಷೌ, ಅವಿಶೇಷಯೋಃ ಭಾವಃ ಅವಿಶೇಷತ್ವಂ ತಸ್ಮಾತ್ ।

ಜ್ಯಾಯಾನ್ = ಶ್ರೇಷ್ಠ, ಹೆಚ್ಚಾದ, ಹಿರಿಯವನಾದ, ದ್ವಯೋಃ = ಅಯಂ ಅತಿಶಯೇನ ಪ್ರಶಸ್ಯಃ (priaseworthy) ವಿಪುಲ much, ವೃದ್ಧಃ = old ಈ ಅರ್ಥದಲ್ಲಿ ದ್ವಿವಚನ. ವಿಭಜ್ಯೋಪಪದ್ರೆ ತರಬೀಯಸುನೌ (5.3.62) ಎಂಬ ಸೂತ್ರದಿಂದ ಜ್ಯ ಆದೇಶ 'ಜ್ಯಾದಾದೀಯ ಸಃ' (6.4.160) ಎಂಬ ಸೂತ್ರದಿಂದ ಈಯಸುನ್ ಪ್ರತ್ಯಯದ ಈಕಾರಕ್ಕೆ 'ಅ' ಆದೇಶ. ಜ್ಯಾಯಸ್ ಸಕಾರಾಂತ ಪುಲ್ಲಿಂಗ, ಜ್ಯಾಯಾನ್ ಜ್ಯಾಯಾಂಸೌ, ಜ್ಯಾಯಾಂಸಃ, ಹೇ ಜ್ಯಾಯನ್, ಜ್ಯಾಯಾಂಸಂ ಜ್ಯಾಯಾಂಸೌ ಜ್ಯಾಯಸಃ, ಜ್ಯಾಯಾಸಾ ಜ್ಯಾಯೋಭ್ಯಾಂ ಜ್ಯಾಯೋಭಿಃ, ಇತ್ಯಾದಿ ಆತ್ಮಾನಂ ಧೂರ್ತಂ ಮನ್ಯತೇ ಇತಿ ಧೂರ್ತಮ್ಮನ್ಯಃ, ಆತ್ಮಮಾನೇ ಖಶ್ ಚ (3.2.83) ಎಂಬ ಸೂತ್ರದಿಂದ ಖಶ್‌ಪ್ರತ್ಯಯ, ಖಶ್ ಪ್ರತ್ಯಯವು ಶಿತ್ ಆದುದರಿಂದ ಸಾರ್ವಧಾತುಕ ಸಂಜ್ಞೆಯು ಬಂದು, 'ಶ್ಯನ್' ಪ್ರತ್ಯಯ ಬರುತ್ತದೆ. ಅರುರ್ದ್ವಿಷದಜಂತಸ್ಯ ಮುಮ್ (6.3.67) ಎಂಬ ಸೂತ್ರದಿಂದ ಮುಮ್ ಆಗಮ, ಧೂರ್ತ = ಮೋಸಗಾರ, 'ಪಾಪೋ ಧೂರ್ತಸ್ತು ವಂಚಕಃ' ಅಮರ.

**ಪ್ರಯೋಗ—** ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ. ಭವತಿ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಜ್ಯಾಯಸಃ ದೂಷಣೇನೈವ ಸದ್ವಿಪಕ್ಷಯೋಃ ಏತಯೋಃ ಪಕ್ಷಯೋಃ ಅವಿಶೇಷತ್ವಾತ್ ಧೂರ್ತಮ್ಮನ್ಯೇನಾಪಿ ದೂಷಿತೇನ (ಭೂಯತೇ) ।

★ ★ ★

**ಅವತಾರಿಕಾ—** ವಿಮತಂ ಕಾರಣಂ ನ ಸ್ಯಾತ್ (ಶ್ಲೋ.28) ಎಂಬಲ್ಲಿ ವಿಮತಂ ಶೂನ್ಯಂ ಕಾರಣಂ ನ ಭವತಿ ಅಸತ್ತ್ವಾತ್ ಎಂದೂ, ವಿವಾದಸ್ಯ ಪದಂ ನ ಸ್ಯಾತ್ ಅಧಿಷ್ಠಾನಮಸತ್ತ್ವತಃ (ಶ್ಲೋ.31) ಎಂಬಲ್ಲಿ ವಿಪ್ರತಿಪತ್ತಿವಿಷಯೀಭೂತಂ ಶೂನ್ಯಂ ಅಧಿಷ್ಠಾನಂ ನ ಭವತಿ ಅಸತ್ವಾತ್ ಎಂದೂ ಶೂನ್ಯವಾದಿಯ ಶೂನ್ಯವು ಜಗತ್ಕಾರಣವಾಗುವುದಿಲ್ಲವೆಂದೂ, ಆರೋಪಕ್ಕೆ ಅಧಿಷ್ಠಾನವಾಗುವುದಿಲ್ಲವೆಂದೂ ಶೂನ್ಯವಾದಿಗಳನ್ನು ಖಂಡಿಸಿದ್ದೀರಿ. ಆ ಖಂಡನದಿಂದಲೇ ಮಾಯಾವಾದಿಯ ಖಂಡನವೂ ಆಗಿದೆ ಎಂದಿದ್ದೀರಿ. ಶೂನ್ಯವು ಕಾರಣವಲ್ಲ ಮತ್ತು ಅಧಿಷ್ಠಾನವಲ್ಲ. ಅಸತ್ ಆದುದರಿಂದ ಎಂದು ಶೂನ್ಯವಾದಿಗಳನ್ನು ಖಂಡಿಸಿದ್ದರಿಂದ ಬ್ರಹ್ಮಕಾರಣತ್ವವಾದಿಗಳಾದ, ಬ್ರಹ್ಮವು ಜಗದಾರೋಪಕ್ಕೆ ಅಧಿಷ್ಠಾನವೆಂದು ಹೇಳುವ ನಮ್ಮನ್ನು (ಮಾಯಾವಾದಿಗಳನ್ನು) ಹೇಗೆ ಖಂಡಿಸಿದಂತಾಯಿತು. ನಾವು ಬ್ರಹ್ಮವನ್ನು ಅಸತ್ ಎಂದು ಒಪ್ಪುವುದಿಲ್ಲ. ಸದೇವ ಸೋಮ್ಯೇದಮಗ್ರ ಆಸೀತ್ ಇತ್ಯಾದಿ ಶ್ರುತಿಗನುಸಾರವಾಗಿ ಬ್ರಹ್ಮವು ಸತ್ ಎಂದೇ ಹೇಳುವ ನಮಗೆ ಶೂನ್ಯವಾದಿಯ ಖಂಡನೆಗಾಗಿ ಹೇಳಿರುವ 'ಅಸತ್ತ್ವಾತ್' ಅಸತ್. ಆದುದರಿಂದ ಇಲ್ಲವೆಂದು ತೋರುವುದರಿಂದ ಎಂಬ ಹೇತುವು ಇಲ್ಲವೆಂದಾಗುತ್ತದೆ. ಆದ್ದರಿಂದ ಶೂನ್ಯವಾದ ದೂಷಣದಿಂದ ಮಾಯಾವಾದಿಗಳಿಂದ ನಮ್ಮನ್ನು ದೂಷಿಸಿದಂತೆ ಆಗುವುದಿಲ್ಲ ಎಂದು ಶಂಕಿಸಿದರೆ ಹೇಳುತ್ತಾರೆ.

**ಅಸತ್ತ್ವಾದಿತ್ಯಸೌ ಹೇತುರಸಿದ್ಧೋ ಬ್ರಹ್ಮವಾದಿನಃ ।**
**ಮೇತಿ ಭಾಣ್ಯವಿಶೇಷತ್ವಾದೇತಯೋರ್ಬ್ರಹ್ಮಶೂನ್ಯಯೋಃ ॥ 39 ॥**

**ಪಾಠಾಂತರ—** ಮೇತಿ ಭಾಣ್ಯವಿಶೇಷತ್ವಾತ್ತತ್ವಯೋರ್ಬ್ರಹ್ಮಶೂನ್ಯಯೋಃ.

**ಪದಚ್ಛೇದ—** ಅಸತ್ವಾತ್, ಇತಿ, ಅಸೌ, ಹೇತುಃ, ಅಸಿದ್ಧಃ, ಬ್ರಹ್ಮವಾದಿನಃ, ಮಾ, ಇತಿ, ಭಾಣಿ, ಅವಿಶೇಷತ್ವಾತ್, ಏತಯೋಃ, ಬ್ರಹ್ಮಶೂನ್ಯಯೋಃ ।

**ಅನ್ವಯ—** ಏತಯೋಃ, ಬ್ರಹ್ಮಶೂನ್ಯಯೋಃ (ತತ್ತ್ವಯೋಃ ಬ್ರಹ್ಮಶೂನ್ಯಯೋಃ), ಅವಿಶೇಷತ್ವಾತ್, ಬ್ರಹ್ಮವಾದಿನಃ, ಅಸತ್ವಾತ್, ಇತಿ, ಅಸೌ, ಹೇತುಃ, ಅಸಿದ್ಧಃ, ಇತಿ, ಮಾ, ಭಾಣಿ ।

**ಅನ್ವಯಾರ್ಥ—**

**ಏತಯೋಃ ಬ್ರಹ್ಮಶೂನ್ಯಯೋಃ** = ಈ ಬ್ರಹ್ಮ ಮತ್ತು ಶೂನ್ಯಗಳಿಗೆ, (ತತ್ತ್ವಯೋಃ ಬ್ರಹ್ಮಶೂನ್ಯಯೋಃ) (ತತ್ತ್ವಗಳಾಗಿರುವ ಬ್ರಹ್ಮಶೂನ್ಯಗಳಿಗೆ),

**ಅವಿಶೇಷತ್ವಾತ್** = ವ್ಯತ್ಯಾಸವಿಲ್ಲದಿರುವುದರಿಂದ,

**ಬ್ರಹ್ಮವಾದಿನಃ** = ಬ್ರಹ್ಮವನ್ನು ಅಂಗೀಕರಿಸಿರುವ ಮಾಯಾವಾದಿಯಾದ ನನಗೆ,

**ಅಸತ್ತ್ವಾತ್ ಇತಿ** = ಶೂನ್ಯಕ್ಕೆ ಕಾರಣತ್ವವನ್ನು ಅಧಿಷ್ಠಾನತ್ವವನ್ನೂ ನಿಷೇಧಿಸಲು ಪ್ರಯೋಗಿಸಿರುವ ಅಸತ್ವಾತ್ ಎಂಬ,

**ಅಸೌ ಹೇತುಃ** = ಈ ಸಾಧ್ಯಜ್ಞಾಪಕವಾದ ಲಿಂಗವು,

**ಅಸಿದ್ಧಃ** = ಸ್ವರೂಪಾಸಿದ್ಧಿ ಎಂಬ ದೋಷಗ್ರಸ್ತವಾಯಿತು,

**ಇತಿ** = ಹೀಗೆಂದು,

**ಮಾ ಭಾಣಿ** = ಹೇಳಲ್ಪಡಕೂಡದು.

**ತಾತ್ಪರ್ಯ—** "ನಾನು ಮಾಯಾವಾದಿಯು, ಬ್ರಹ್ಮವನ್ನು ಒಪ್ಪುವವನು. 'ಅಸತ್ತ್ವಾತ್' ಇಲ್ಲದುದು ಆದುದರಿಂದ ಎಂದು ಬೌದ್ಧನ 'ಶೂನ್ಯಕ್ಕೆ' ಕಾರಣತ್ವ ಮತ್ತು ಅಧಿಷ್ಠಾನತ್ವವನ್ನು ಖಂಡಿಸಲು ಹೇಳಿರುವ ಹೇತುವು ನನಗೆ ಅಸಿದ್ಧವಾಗಿದೆ. ನಾನು ಅದನ್ನು ಒಪ್ಪಿಲ್ಲ. ಬ್ರಹ್ಮವು ನನ್ನ ಮತದಂತೆ 'ಸತ್' ಎಂದು ಮಾಯಾವಾದಿಯು ಹೇಳಕೂಡದು. ಈ ಮಾತು

ಯುಕ್ತವಾಗುವುದಿಲ್ಲ. ಏಕೆಂದರೆ ಮಾಯಾವಾದಿಯಾದ ನೀನೂ ಶೂನ್ಯವಾದಿಯಾದ ಬೌದ್ಧನೂ ನೀವಿಬ್ಬರೂ ಒಪ್ಪಿಕೊಂಡಿರುವ ಬ್ರಹ್ಮ ಮತ್ತು ಶೂನ್ಯವೆಂಬ ತತ್ತ್ವಗಳಿಗೆ ಏನೂ ಭೇದವಿಲ್ಲ. ಆದುದರಿಂದ ಅಸತ್ತ್ವ (ಇಲ್ಲದಿರುವಿಕೆ) ಎಂದು ಶೂನ್ಯಕ್ಕೆ ಹೇಳಿದ ಹೇತುವು ನಿನ್ನ ನಿರ್ಧರ್ಮಕ, ನಿರಾಕಾರ, ನಿರ್ಗುಣ ಬ್ರಹ್ಮನಲ್ಲಿಯೂ ಅರ್ಥಾತ್ ಸಿದ್ಧಿಸುವುದರಿಂದ ಹೇತುವನ್ನು ಅಸಿದ್ಧ ಎನ್ನಲು ಸಾಧ್ಯವಿಲ್ಲ''.

ವಿಗ್ರಹ—

ಅಸತ್ತ್ವಾತ್— ಅಸತಃ ಭಾವಃ ಅಸತ್ತ್ವಂ ತಸ್ಮಾತ್ ಅಸತ್ತ್ವಾತ್ ।

ಅಸಿದ್ಧಃ— ನ ಸಿದ್ಧಃ ಅಸಿದ್ಧಃ ।

ಬ್ರಹ್ಮವಾದಿನಃ— ಬ್ರಹ್ಮ ವದತಿ ಇತಿ ಬ್ರಹ್ಮವಾದೀ ತಸ್ಯ ಬ್ರಹ್ಮವಾದಿನಃ ।

ಅವಿಶೇಷತ್ವಾತ್— ನ ವಿದ್ಯತೇ ವಿಶೇಷಃ ಯಯೋಃ ತೇ ಅವಿಶೇಷೇ (ಬ್ರಹ್ಮಶೂನ್ಯೇ) ಅವಿಶೇಷಯೋಃ ಭಾವಃ ಅವಿಶೇಷತ್ವಂ ತಸ್ಮಾತ್ ಅವಿಶೇಷತ್ವಾತ್ ।

ಬ್ರಹ್ಮಶೂನ್ಯಯೋಃ— ಬ್ರಹ್ಮ ಚ ಶೂನ್ಯಂ ಚ ಬ್ರಹ್ಮಶೂನ್ಯೇ ತಯೋಃ ಬ್ರಹ್ಮಶೂನ್ಯಯೋಃ ।

ಕ್ರಿಯಾಪದ— ಮಾ ಭಾಣಿ - ಭಣ ಶಬ್ದೇ, ಸಕ. ಸೇಟ್ ಪರ ಕರ್ಮಣಿ ಲುಙ್ ಮಾಙಿ ಲುಙ್ (3.3.175) ಎಂಬ ಸೂತ್ರದಿಂದ ಮಾಙ್ (ಮಾ) ಎಂಬುದರ ಯೋಗವಿದ್ದಾಗ ಲುಙ್ ನಮಾಙ್ ಯೋಗೇ (6.4.74) ಎಂಬ ಸೂತ್ರದಿಂದ ಅಟ್ ಆಗಮಕ್ಕೆ ನಿಷೇಧ (ಅ) ಭಾಣಿ (ಅ) ಭಾಣಿಷಾತಾಂ (ಅ) ಭಾಣಿಷತ (ಅ) ಭಾಣಿಷ್ಠಾಃ (ಅ) ಭಾಣಿಷಾಥಾಂ (ಅ) ಭಾಣಿಢ್ವಮ್ (ಅ) ಭಾಣಿಷಿ (ಅ) ಭಾಣಿಷ್ವಹಿ, ಮಾಙ್ ಉಪಯೋಗಿಸಿದಾಗ 'ಅ' ಬಿಟ್ಟು ಹೇಳಬೇಕು. ಇಲ್ಲಿ ಛಲಾರಿಯದಲ್ಲಿ 'ಮೇತಿಭಾಷಿ' ಎಂಬ ಪಾಠವಿದೆ. ಅದರಂತೆ ಭಾಷ ವ್ಯಕ್ತಾಯಾಂ ವಾಚಿ ಎಂಬ ಧಾತುವಿನ ಕರ್ಮಣಿ ಲುಙ್ ಲಕಾರವನ್ನು ಇಟ್ಟುಕೊಳ್ಳಬೇಕು. ರೂಪಗಳು ವ್ಯಾಕರಣವಿಶೇಷವೆಲ್ಲವೂ ಹಿಂದಿನಂತೆಯೇ.

ಪ್ರಯೋಗ— ಏತಯೋಃ ಬ್ರಹ್ಮಶೂನ್ಯಯೋಃ ಅವಿಶೇಷತ್ವಾತ್ ಬ್ರಹ್ಮವಾದಿನಃ ಅಸತ್ತ್ವಾತ್ ಇತಿ ಅಮುನಾ ಹೇತುನಾ ಅಸಿದ್ಧೇನ (ಭೂಯತೇ) ಇತಿ (ಭವಾನ್) ಮಾ ಭಾಣೀತ್ (ಮಾಭಾಷಿಷ್ಟ) ।

★ ★ ★

ಅವತಾರಿಕಾ— ವಿಮತಂ ಕಾರಣಂ ನ ಸ್ಯಾತ್ (ಸರ್ಗ 15 ಶ್ಲೋ. 28) ಎಂಬಲ್ಲಿಯೂ, ವಿವಾದಸ್ಯ ಪದಂ ನ ಸ್ಯಾತ್ (ಸ.15 ಶ್ಲೋ.31) ಎಂಬಲ್ಲಿಯೂ ಬೌದ್ಧರು ಅಂಗೀಕರಿಸಿರುವ ಶೂನ್ಯಕ್ಕೆ ಕಾರಣತ್ವವನ್ನೂ, ಅಧಿಷ್ಠಾನತ್ವವನ್ನೂ ನಿರಾಕರಿಸಲು ನೀವು 'ಅಸತ್ತ್ವಾತ್' ಶೂನ್ಯವು 'ಅಸತ್' ಆದುದರಿಂದ ಎಂಬ ಹೇತುವನ್ನು ಪ್ರಯೋಗಿಸಿದ್ದೀರಿ. ಬ್ರಹ್ಮವೂ ಶೂನ್ಯವೂ ಸಮಾನವಾದುದರಿಂದ ನಿಮ್ಮ ಬ್ರಹ್ಮವೂ ಅಸತ್ತಾದುದರಿಂದ ಕಾರಣವೂ ಅಧಿಷ್ಠಾನವೂ ಆಗುವುದಿಲ್ಲ ಎಂದು ಹೇಳಿದ್ದೀರಿ. ಆದರೆ ನೀವು ಹೇಳಿದ 'ಅಸತ್ತ್ವ' ಎಂಬ ಹೇತುವು ಬ್ರಹ್ಮವಾದಿಯಾದ ನನಗೆ ಸಿದ್ಧವಲ್ಲ. ನಾನು ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂಬ ಶ್ರುತಿಗನುಸಾರವಾಗಿ ಬ್ರಹ್ಮನು ಸತ್ಯ, ಅವನಲ್ಲಿ ಸತ್ಯತ್ವ ಎಂಬ ಧರ್ಮವಿದೆ ಎಂದು ಒಪ್ಪುತ್ತೇನೆ. ಸತ್ಯತ್ವ ಎಂದರೂ ಸತ್ತ್ವ ಎಂದರೂ ಒಂದೇ ಆಗಿದೆ. ಆದುದರಿಂದ 'ಅಸತ್ತ್ವ' ಎಂಬ ಹೇತುವು ನನ್ನ ಮತದಂತೆ ಬ್ರಹ್ಮನಲ್ಲಿ ಬರುವುದಿಲ್ಲ ಎಂದು ಹೇಳಿದರೆ ದೋಷವನ್ನು ಹೇಳುತ್ತಾರೆ.

**ಸೋಽಂಗೀಕರೋತಿ ಚೇತ್ ಸತ್ತ್ವಂ ಬ್ರಹ್ಮಣಃ ಸ್ಯಾದ್ವಿಶೇಷಿತಾ ।**
**ನ ಚೇತ್ ಪ್ರಾಪ್ತಂ ಪಾರಿಶೇಷ್ಯಾದಸತ್ತ್ವಂ ನ ನಿರಸ್ಯತು ॥ 40 ॥**

ಪದಚ್ಛೇದ— ಸಃ, ಅಂಗೀಕರೋತಿ, ಚೇತ್, ಸತ್ತ್ವಂ, ಬ್ರಹ್ಮಣಃ, ಸ್ಯಾತ್, ವಿಶೇಷಿತಾ, ನ, ಚೇತ್, ಪ್ರಾಪ್ತಂ, ಪಾರಿಶೇಷ್ಯಾತ್, ಅಸತ್ತ್ವಂ, ನಿರಸ್ಯತು ।

**ಅನ್ವಯ**— ಸಃ, ಬ್ರಹ್ಮಣಃ, ಸತ್ತ್ವಂ, ಅಂಗೀಕರೋತಿ, ಚೇತ್, ಬ್ರಹ್ಮಣಃ, ವಿಶೇಷಿತಾ, ಸ್ಯಾತ್, ನ, ಚೇತ್, ಪಾರಿಶೇಷ್ಯಾತ್, ಪ್ರಾಪ್ತಂ, ಅಸತ್ತ್ವಂ, ನ, ನಿರಸ್ಯತು ।

**ಅನ್ವಯಾರ್ಥ**—

**ಸಃ** = ಆ ಮಾಯಾವಾದಿಯು,
**ಬ್ರಹ್ಮಣಃ** = (ಅವನು ಅಂಗೀಕರಿಸಿರುವ) ಪರಬ್ರಹ್ಮನಿಗೆ,
**ಸತ್ತ್ವಂ** = 'ಸತ್ಯತ್ವ' ಇರುವಿಕೆ ಎಂಬ ಧರ್ಮವನ್ನು,
**ಅಂಗೀಕರೋತಿ ಚೇತ್** = ಒಪ್ಪುವುದಾದರೆ,
**ಬ್ರಹ್ಮಣಃ** = (ಮಾಯಾವಾದಿಯು ಅಂಗೀಕರಿಸಿರುವ) ಪರಬ್ರಹ್ಮನಿಗೆ,
**ವಿಶೇಷಿತಾ** = ಸವಿಶೇಷತೆಯು (ವಿಶೇಷದಿಂದ ಕೂಡಿರುವಿಕೆಯು),
**ಸ್ಯಾತ್** = ಆದೀತು.
**ನ ಚೇತ್** = ಮಾಯಾವಾದಿಯು ಅಂಗೀಕರಿಸಿರುವ ಪರಬ್ರಹ್ಮನಿಗೆ ಸತ್ಯತ್ವ (ಸತ್ತ್ವ) ಎಂಬ ಧರ್ಮವನ್ನು ಒಪ್ಪಿಕೊಳ್ಳದಿದ್ದರೆ,
**ಪಾರಿಶೇಷ್ಯಾತ್** = ಪರಸ್ಪರ ವಿರುದ್ಧವಾದ ಎರಡು ಧರ್ಮಗಳಲ್ಲಿ ಒಂದನ್ನು ಒಪ್ಪಿಕೊಳ್ಳದಿದ್ದರೆ ಮತ್ತೊಂದನ್ನು ಒಪ್ಪಿಕೊಳ್ಳಬೇಕಾಗುತ್ತದೆ ಎಂಬ ಪರಿಶೇಷಪ್ರಮಾಣದಿಂದ,
**ಪ್ರಾಪ್ತಂ** = ಒದಗಿದ (ಒಪ್ಪಿಕೊಳ್ಳಬೇಕಾಗಿ ಬಂದಿರುವ),
**ಅಸತ್ತ್ವಂ** = ಅಸತ್ಯತ್ವ (ಇಲ್ಲದಿರುವಿಕೆ) ಎಂಬ ಧರ್ಮವನ್ನು (ಮಾಯಾವಾದಿಯು),
**ನ ನಿರಸ್ಯತು** = ನಿರಾಕರಿಸದಿರಲಿ (ನಿರಾಕರಿಸಲು ಸಾಧ್ಯವಿಲ್ಲ).

**ತಾತ್ಪರ್ಯ**— ಪರಸ್ಪರ ವಿರುದ್ಧವಾದ ಎರಡು ಧರ್ಮಗಳಲ್ಲಿ ಯಾವುದಾದರೊಂದನ್ನು ನಿಷೇಧಿಸಿದರೆ, ಇಲ್ಲವೆಂದು ಒಪ್ಪಿದರೆ ಮತ್ತೊಂದು ಧರ್ಮವನ್ನು ಅಲ್ಲಿ ಇದೆಯೆಂದು ಒಪ್ಪಿಕೊಳ್ಳುವುದು ಅನಿವಾರ್ಯವಾಗುತ್ತದೆ. ಒಂದು ಧರ್ಮದ ನಿಷೇಧವು ಮತ್ತೊಂದು ಧರ್ಮದ ವಿಧಿ(ಇದೆಯೆಂದು ಒಪ್ಪುವಿಕೆ)ಯಿಂದ ವ್ಯಾಪ್ತವಾಗುತ್ತದೆ. ಪ್ರಕೃತದಲ್ಲಿ ಸತ್ತ್ವ ಅಸತ್ವಗಳು ಪರಸ್ಪರ ವಿರುದ್ಧವಾಗಿರುತ್ತದೆ. ಈ ಎರಡು ಧರ್ಮಗಳಲ್ಲಿ ಬ್ರಹ್ಮನಲ್ಲಿ ಸತ್ತ್ವ ಎಂಬ ಧರ್ಮವು ಇಲ್ಲವೆಂದು ಒಪ್ಪಿದರೆ ಅಸತ್ತ್ವವು ಬಂದೇ ಬರುತ್ತದೆ.

ಪ್ರಕೃತದಲ್ಲಿ ಮಾಯಾವಾದಿಯು ತಾನು ಒಪ್ಪಿರುವ ಪರಬ್ರಹ್ಮನಿಗೆ ಶೂನ್ಯಕ್ಕಿಂತ ವೈಲಕ್ಷಣ್ಯವನ್ನು ಸಾಧಿಸುವುದಕ್ಕಾಗಿ ಸತ್ತ್ವವನ್ನು ಅಂಗೀಕರಿಸಿದರೆ ಸತ್ತ್ವ ಎಂಬುದು ಒಂದು ವಿಶೇಷವಾದುದರಿಂದ ಬ್ರಹ್ಮನಿಗೆ ಸವಿಶೇಷತ್ವವು ಪ್ರಾಪ್ತವಾಯಿತು. ಆಗ ನನ್ನ ಪರಬ್ರಹ್ಮವು ನಿರ್ವಿಶೇಷವಾದುದು ಎಂಬ ಮಾಯಾವಾದಿಯ ಪ್ರತಿಜ್ಞೆಯು ಭಗ್ನವಾಗುತ್ತದೆ. ಈ ನಿರ್ವಿಶೇಷತ್ವ ಭಂಗವಾಗದಿರುವುದಕ್ಕೋಸ್ಕರ ಬ್ರಹ್ಮನಲ್ಲಿ ಸತ್ತ್ವವೆಂಬ ವಿಶೇಷವನ್ನು ಒಪ್ಪುವುದಿಲ್ಲವೆಂದರೆ ಹಿಂದೆ ಹೇಳಿದ ಪರಿಶೇಷ ಪ್ರಮಾಣದಿಂದ ಅಸತ್ತ್ವವು ಬಲಾತ್ಕಾರದಿಂದ ಬಂದೊದಗುತ್ತದೆ. ಆ ಅಸತ್ತ್ವವನ್ನು ನಿರಾಕರಿಸುವುದು ಸರಿಯಲ್ಲ. ಹೀಗೆ ಅಸತ್ತ್ವವನ್ನು ಅಂಗೀಕಾರ ಮಾಡಿದರೆ ಅಸತ್ತ್ವಹೇತುವು ಮಾಯಾವಾದಿಯಾದ ನನಗೆ ಪರಬ್ರಹ್ಮನಲ್ಲಿ ಅಸಿದ್ಧವು ಎಂದು ಹಿಂದೆ ಹೇಳಿದುದು ಅಯುಕ್ತವು. ಹೀಗೆ ಮಾಯಾವಾದಿಯು ತನ್ನ ಬ್ರಹ್ಮನಿಗೆ ಸತ್ತ್ವವನ್ನು ಒಪ್ಪದಿದ್ದರೆ ಅಸತ್ತ್ವವು ಬಂದು, ಅಸತ್ವ ಹೇತುವಿನಿಂದ ಶೂನ್ಯದಂತೆಯೇ ಪರಬ್ರಹ್ಮನಿಗೂ ಕಾರಣತ್ವವೂ ಅಧಿಷ್ಠಾನತ್ವವೂ ಕೂಡುವುದಿಲ್ಲ ಎಂದು ಸಾಧಿಸಲು ನಮಗೆ ಅನುಕೂಲವಾಗುತ್ತದೆ. ಹೀಗೆ ಬ್ರಹ್ಮನಿಗೆ ಸತ್ವ ಅಸತ್ತ್ವ ಎಂಬ ಧರ್ಮಗಳಲ್ಲಿ ಯಾವುದೊಂದು ಧರ್ಮವಿದೆಯೆಂಬ ಪಕ್ಷವನ್ನು ಒಪ್ಪಿದರೂ ತೊಂದರೆ ಇರುವುದರಿಂದ ಇದು ಮಾಯಾವಾದಿಗೆ 'ಉಭಯತಃ ಪಾಶಾ ರಜ್ಜುಃ' ಎಂದಾಗುತ್ತದೆ. (**ಉಭಯತಃ ಪಾಶಾ** ರಜ್ಜು ನ್ಯಾಯ ಎರಡು ತುದಿಗಳಲ್ಲಿಯೂ ಬಿಗಿಯುವ ಕುಣಿಕೆಯುಳ್ಳ ಹಗ್ಗದ ನ್ಯಾಯ. ಹಗ್ಗಕ್ಕೆ ನಾನಾ ಬಗೆಯ ಗಂಟು (Knot)ಗಳನ್ನು ಹಾಕುತ್ತಾರೆ. ಚಲಿಸಿದ ಕೂಡಲೇ ಬಿಗಿದು ಹಾಕಬಲ್ಲ ಒಂದು ರೀತಿಯ ಕುಣಿಕೆ ಇದೆ.

ಅದು ಹಗ್ಗದ ಎರಡು ತುದಿಗಳಲ್ಲಿಯೂ ಇದ್ದರೆ ಯಾವ ಕಡೆ ಕೈ ಹಾಕಿದರೂ ಕೈ ಕಟ್ಟಿಗೆ ಸಿಕ್ಕಿಹಾಕಿಕೊಳ್ಳುತ್ತದೆ. ಯಾವುದಾದರೊಂದು ಕಡೆ ಕೈ ಹಾಕಲೇಬೇಕಾಗಿದೆ. ಇಂತಹ ಪರಿಸ್ಥಿತಿಗೆ ಉಭಯತಃ ಪಾಶಾ ರಜ್ಜುಃ ಎಂದು ಹೇಳುತ್ತಾರೆ. ಒಬ್ಬನ ಕತ್ತಿಗೆ ಹಗ್ಗ ಬಿದ್ದಿದೆ. ಯಾವ ಕಡೆ ಚಲಿಸಿದರೂ ಹಗ್ಗದ ಕುಣಿಕೆ ಬಿಗಿಯುತ್ತದೆ. ಹೀಗಾಗಿ ಚಲಿಸದೆ ಸುಮ್ಮನೆ ಇರಬೇಕಾಗಿದೆ ಎಂದೂ ಈ ನ್ಯಾಯದ ಅರ್ಥವನ್ನು ಹೇಳುತ್ತಾರೆ. ಶಾಸ್ತ್ರಗ್ರಂಥಗಳಲ್ಲಿ ವಾದ-ವಿವಾದಗಳು ಬೆಳೆದಾಗ ಈ ನ್ಯಾಯವನ್ನು ಪ್ರಯೋಗಿಸುತ್ತಾರೆ. ''ಇತೋ ವ್ಯಾಘ್ರಸ್ತತಸ್ತಟೀ'' ಇತ್ತ ದರಿ ಅತ್ತ ಹುಲಿ ಎಂಬ ನ್ಯಾಯವೂ ಈ ರೀತಿಯದೇ. ಇತ್ತ ಹುಲಿ ಅಟ್ಟಿಸಿಕೊಂಡು ಬರುತ್ತಿದೆ. ಅತ್ತ ಕಡಿದಾದ ಬೆಟ್ಟದ ಕಿಬ್ಬಿಯಿದೆ. ಇಕ್ಕಳದಲ್ಲಿ ಸಿಕ್ಕಿಕೊಂಡಂತೆ ಈ ಮನುಷ್ಯನ ಗತಿಯಾಗಿದೆ. (ಎರಡು ಅಪಾಯಗಳ ಮಧ್ಯದಲ್ಲಿ ಸಿಕ್ಕಿಕೊಂಡು ಪೇಚಾಡುವ ಮನುಷ್ಯನ ಪಾಡನ್ನು ಇದು ವರ್ಣಿಸುತ್ತದೆ). ಸತ್ತ್ವವನ್ನು ಒಪ್ಪಿದರೂ ತೊಂದರೆ ನಿರ್ವಿಶೇಷತ್ವಹಾನಿ, ಸತ್ತ್ವವನ್ನು ಒಪ್ಪದಿದ್ದರೂ ತೊಂದರೆ, ಅಸತ್ತ್ವವನ್ನು ಒಪ್ಪಿದಂತಾಗಿ ಶೂನ್ಯದಂತೆಯೇ ಮಾಯಾವಾದಿಯು ಪರಬ್ರಹ್ಮನಿಗೆ ಕಾರಣತ್ವ ಅಧಿಷ್ಠಾನತ್ವಗಳು ಬರುವುದಿಲ್ಲ ಎಂದಾಗುತ್ತದೆ ಎಂದು ಭಾವ.

ವಿಗ್ರಹ—

**ಸತ್ತ್ವಂ—** ಸತಃ ಭಾವಃ ಸತ್ತ್ವಂ ತತ್ ।

**ವಿಶೇಷಿತಾ—** ವಿಶೇಷಃ ಅಸ್ಯ ಅಸ್ತೀತಿ ವಿಶೇಷಿ, ವಿಶೇಷಿಣಃ ಭಾವಃ ವಿಶೇಷಿತಾ ।

**ಪರಿಶೇಷ್ಯಾತ್—** ಪರಿಶಿಷ್ಯತೇ ಇತಿ ಪರಿಶೇಷಃ ಪರಿಶೇಷಸ್ಯ ಭಾವಃ ಪಾರಿಶೇಷ್ಯಂ ತಸ್ಮಾತ್ ।

**ಅಸತ್ತ್ವಂ—** ಅಸತಃ ಭಾವಃ ಅಸತ್ತ್ವಂ ತತ್ ।

**ಕ್ರಿಯಾಪದ—** **ಸ್ಯಾತ್** - ಸ್ಯಾತ್ ಸ್ಯಾತಾಂ ಸ್ಯುಃ ಅಸ ಭುವಿ ವಿಧಿಲಿಙ್ ಅನಂಗಂ ಅಂಗಂ ಸಂಪದ್ಯಮಾನಂ ಕರೋತಿ ಅಂಗೀಕರೋತಿ, ಕೃಭ್ವಸ್ತಿಯೋಗೇ ಸಂಪದ್ಯಕರ್ತರಿ ಚ್ವಿಃ (5.4.50) ಎಂಬ ಸೂತ್ರದಿಂದ ಅಭೂತ ತದ್ಭಾವ ಇತಿ ವಕ್ತವ್ಯಂ ಎಂಬ ವಾರ್ತಿಕ ಸಹಕಾರದಿಂದ (3.3.40) ಅಭೂತತದ್ಭಾವಾರ್ಥದಲ್ಲಿ ಚ್ವಿ ಪ್ರತ್ಯಯ. ನಿರಸ್ಯತು - ನಿರ್+ಅಸ್ಯತು ಅಸ್ಯತಾತ್ ಅಸ್ಯತಾಂ ಅಸ್ಯಂತು, ಅಸ್ಯ ಅಸ್ಯತಾತ್ ಅಸ್ಯತಂ ಅಸ್ಯತ, ಅಸ್ಯಾನಿ ಅಸ್ಯಾವ ಅಸ್ಯಾಮ । ಅಸು (ಅಸ್) ಕ್ಷೇಪಣೇ, ಸಕ. ಸೇಟ್. ಪರ. to throw ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ತೇನ ಬ್ರಹ್ಮಣಃ ಸತ್ತ್ವಂ ಅಂಗೀಕ್ರಿಯತೇ ಚೇತ್ ಬ್ರಹ್ಮಣಃ ವಿಶೇಷಿತಯಾ ಭೂಯೇತ, ನ ಚೇತ್ ಪಾರಿಶೇಷ್ಯಾತ್ ಪ್ರಾಪ್ತಂ ಅಸತ್ತ್ವಂ ನ ನಿರಸ್ಯತಾಮ್ ।

★ ★ ★

**ಅವತಾರಿಕಾ—** ಹಾಗಾದರೆ ಶೂನ್ಯದಿಂದ ವೈಲಕ್ಷಣ್ಯವಿಲ್ಲದ್ದರಿಂದ ನಾನು ಒಪ್ಪಿರುವ ಪರಬ್ರಹ್ಮನಿಗೆ 'ಅಸತ್ತ್ವವು' ಪ್ರಾಪ್ತವಾಗಲಿ, ನನಗೆ ಅದರಿಂದ ಏನು ಅನಿಷ್ಟವುಂಟಾಗುತ್ತದೆ? ಎಂದು ಮಾಯಾವಾದಿಯು ಹೇಳಿದರೆ ಬ್ರಹ್ಮನಿಗೆ ಅಸತ್ತ್ವವನ್ನು ಒಪ್ಪಿದರೆ ಪ್ರಾಪ್ತವಾಗುವ ಅನಿಷ್ಟವನ್ನು ಫಲಿತಾರ್ಥವನ್ನು ಸೂಚಿಸುತ್ತಾ ಹೇಳುತ್ತಾರೆ.

**ವಿಗೀತಂ ನ ವಿಚಾರ್ಯಂ ಸ್ಯಾನ್ನ ಭಾವ್ಯಂ ನ ಫಲಪ್ರದಮ್ ।**
**ಶೂನ್ಯಂ ಬ್ರಹ್ಮಾದ್ಯಮದ್ವೈತಂ ವಿಧಿಧೀಗೋಚರೋ ನ ಯತ್ ॥ 41 ॥**

**ಪದಚ್ಛೇದ—** ವಿಗೀತಂ, ನ, ವಿಚಾರ್ಯಂ, ಸ್ಯಾತ್, ನ, ಭಾವ್ಯಂ, ನ, ಫಲಪ್ರದಂ, ಶೂನ್ಯಂ, ಬ್ರಹ್ಮಾದ್ಯಂ, ಅದ್ವೈತಂ, ವಿಧಿಧೀಗೋಚರಃ, ನ, ಯತ್ ।

**ಅನ್ವಯ—** ಯತ್, ವಿಧಿಧೀಗೋಚರಃ, ನ, ತತ್, ವಿಗೀತಂ, ಅದ್ವೈತಂ, ಶೂನ್ಯಂ, ಬ್ರಹ್ಮಾದ್ಯಂ, ವಿಚಾರ್ಯಂ, ನ, ಭಾವ್ಯಂ, ನ, ಫಲಪ್ರದಂ, ನ ।

ಅನ್ವಯಾರ್ಥ—

**ಯತ್** = ಯಾವ ಕಾರಣದಿಂದ ಮಾಯಾವಾದಿಯು ಒಪ್ಪಿರುವ ಯಾವ ಪರತತ್ತ್ವವಿದೆಯೋ ಅದು,

**ವಿಧಿಧೀಗೋಚರಃ** = ಇದೆ ಎಂಬ ಜ್ಞಾನಕ್ಕೆ ವಿಷಯವು,

**ನ** = ಅಲ್ಲವೋ,

**ತತ್** = ಆ ಕಾರಣದಿಂದ, ಆ ಪರತತ್ತ್ವವಾದ,

**ವಿಗೀತಂ** = ವಿವಾದಕ್ಕೆ ವಿಷಯವಾದ,

**ಅದ್ವೈತಂ** = ಭೇದವಿಲ್ಲದ,

**ಶೂನ್ಯಂ** = ಶೂನ್ಯರೂಪವಾದ,

**ಬ್ರಹ್ಮಾದ್ಯಂ** = ಅದ್ವೈತಿಗಳ ಪರಬ್ರಹ್ಮತತ್ತ್ವವು, ಶೂನ್ಯವಾದಿಗಳ ಶೂನ್ಯತತ್ತ್ವವು, ವಿಜ್ಞಾನವಾದಿಗಳಾದ ಯೋಗಾಚಾರಬೌದ್ಧರ ವಿಜ್ಞಾನವು, ಸ್ಫೋಟವಾದಿಗಳಾದ ವೈಯಾಕರಣ ಸ್ಫೋಟವು, ಇವೇ ಮೊದಲಾದುದು,

**ವಿಚಾರ್ಯಂ** = ಶ್ರವಣಾದಿವಿಚಾರಯೋಗ್ಯವಾದುದು,

**ನ ಸ್ಯಾತ್** = ಆಗಲಾರದು,

**ಭಾವ್ಯಂ ನ (ಸ್ಯಾತ್)** = ಧ್ಯಾನ ಮಾಡಲು ಯೋಗ್ಯವೂ ಆಗಲಾರದು,

**ಫಲಪ್ರದಂ ನ (ಸ್ಯಾತ್)** = ಧರ್ಮ ಅರ್ಥ ಕಾಮ ಮೋಕ್ಷ ಎಂಬ ಪ್ರಯೋಜನಗಳನ್ನು ಉಂಟು ಮಾಡುವಂತಹದೂ ಆಗಲಾರದು.

**ತಾತ್ಪರ್ಯ**— ಮಾಯಾವಾದಿಗಳು ಒಪ್ಪುವ ಪರಬ್ರಹ್ಮವು 'ಇದೆ' 'ಸತ್ತ್ವವುಳ್ಳದ್ದು'. ''ಸತ್ಯತ್ವವೆಂಬ ಧರ್ಮವುಳ್ಳದ್ದು'' ಎಂಬ ವಿಧಿಬುದ್ಧಿಗೆ(Affirmative sense) ವಿಷಯವಾಗುವುದಿಲ್ಲ ಎಂದು ಅವರೇ ಒಪ್ಪಿಕೊಂಡಂತಾಯಿತು. ಬ್ರಹ್ಮನಲ್ಲಿ ಸತ್ತ್ವ ಎಂಬ ಧರ್ಮವಿಲ್ಲ ಎಂದು ಒಪ್ಪಿಕೊಂಡರೆ ಬ್ರಹ್ಮವು ಇದೆಯೆಂಬ ವಿಧಿಬುದ್ಧಿಗೆ ವಿಷಯವಲ್ಲ ಎಂದು ಹೇಳಿದಂತಾಯಿತಷ್ಟೆ. ಆ ಬ್ರಹ್ಮನಲ್ಲಿ ಯಾವ ವಿಧವಾದ ಭೇದಪ್ರಪಂಚವೂ ಇಲ್ಲವೆಂದು ಅಂಗೀಕರಿಸಿದ್ದೀರಿ. ಹೀಗಾಗಿ ಮಾಯಾವಾದಿಗಳ ಬ್ರಹ್ಮವು ಶೂನ್ಯರೂಪವೆಂದೇ ಆಗುತ್ತದೆ. ಸತ್ ಆಗಿದೆಯೋ ಅಸತ್ ಆಗಿದೆಯೋ ಎಂದು ವಿವಾದಕ್ಕೆ ವಿಷಯವಾದ ಆ ಮಾಯಾವಾದಿಗಳ ಬ್ರಹ್ಮವು ಅಸತ್ ಆದರೆ ಮೋಕ್ಷಾಪೇಕ್ಷಿಗಳಿಗೆ ಶ್ರವಣಮನನರೂಪವಾದ ವಿಚಾರಕ್ಕೆ ಯೋಗ್ಯವಾಗಲಾರದು. ಧ್ಯಾನಮಾಡಲೂ ಯೋಗ್ಯವಾಗಲಾರದು. ಧರ್ಮ ಮೊದಲಾದ ಮೋಕ್ಷಾಂತವಾದ ಯಾವ ಅಭೀಷ್ಟ ಫಲಪ್ರದವೂ ಆಗಲಾರದು. ಬೆಕ್ಕಿನ ಕೋಡು ಮುಂತಾದ ಇಲ್ಲದ ವಸ್ತುವಿನಂತೆ ಬ್ರಹ್ಮನೂ ಅಸತ್ ಎಂದಾದರೆ ಆ ಬ್ರಹ್ಮವು ಶ್ರವಣ ಮನನಾದಿ ವಿಚಾರಕ್ಕೆ ಹೇಗೆ ಅರ್ಹವಾಗುತ್ತದೆ? ಧ್ಯಾನಿಸಲು ಹೇಗೆ ಯೋಗ್ಯವಾಗುತ್ತದೆ? ಅದನ್ನು ಹೇಗೆ ಸೇವಿಸಲು ಸಾಧ್ಯ? ಅದು ಯಾವ ಫಲವನ್ನು ಕೊಟ್ಟೀತು? ಹೀಗಾಗಿ ಮೋಕ್ಷಾಪೇಕ್ಷಿಗಳು ಪರಬ್ರಹ್ಮವನ್ನು ಭಜಿಸಲಾರರು. ಹೀಗೆಯೇ ಶೂನ್ಯವಾದಿಗಳಾದ ಮಾಧ್ಯಮಿಕಬೌದ್ಧರ ಶೂನ್ಯವು ವಿಜ್ಞಾನವಾದಿಗಳಾದ ಯೋಗಾಚಾರ ಬೌದ್ಧರ ವಿಜ್ಞಾನವು, ಸ್ಫೋಟವಾದಿಗಳಾದ ವೈಯಾಕರಣರ ಸ್ಫೋಟವು (ಕೆಲವರ ಮತದಂತೆ ಅಖಂಡಕಾಲವೂ) ಪರತತ್ತ್ವವಾಗಲಾರದು. ಅವುಗಳಿಗೆ ಶ್ರವಣಾದಿ ವಿಷಯತ್ವವು ಅದ್ವೈತಿಗಳ ಪರಬ್ರಹ್ಮದಂತೆಯೇ ಕೂಡುವುದಿಲ್ಲ ಎಂದು ಅಭಿಪ್ರಾಯವು.

**ವಿಗ್ರಹ**—

**ವಿಚಾರ್ಯಂ**— ವಿಚಾರಯಿತುಂ ಯೋಗ್ಯಂ ವಿಚಾರ್ಯಂ ।

**ಭಾವ್ಯಂ**— ಭಾವಯಿತುಂ ಯೋಗ್ಯಂ ಭಾವ್ಯಂ ।

**ಫಲಪ್ರದಂ**— ಪ್ರದದಾತಿ ಇತಿ ಪ್ರದಂ, ಫಲಸ್ಯ ಪ್ರದಂ ಫಲಪ್ರದಂ ।

**ಬ್ರಹ್ಮಾದ್ಯಂ**— ಆದೌ ಭವಂ ಆದ್ಯಂ ಬ್ರಹ್ಮ ಆದ್ಯಂ ಯಸ್ಯ ತತ್ ಬ್ರಹ್ಮಾದ್ಯಂ ।

**ಅದ್ವೈತಂ—** ದ್ವಿಧಾ ಇತಂ ದ್ವೀತಂ ದ್ವೀತಮೇವ ದ್ವೈತಂ ನ ವಿದ್ಯತೇ ದ್ವೈತಂ ಯಸ್ಯ ತತ್ ಅದ್ವೈತಂ ।

**ವಿಧಿಧೀಗೋಚರಃ—** ಗವಾಂ ಚರಃ ಗೋಚರಃ, ವಿಧೇಃ ಧೀಃ ವಿಧಿಧೀಃ ವಿಧಿಧಿಯಃ ಗೋಚರಃ ವಿಧಿಧೀ ಗೋಚರಃ । ಸ್ಯಾತ್ ಕ್ರಿಯಾಪದ ಹಿಂದೆ ಬಂದಿದೆ.

**ಪ್ರಯೋಗ—** ವಿಗೀತೇನ ಅದ್ವೈತೇನ ಶೂನ್ಯೇನ ಬ್ರಹ್ಮಾದ್ಯೇನ ವಿಚಾರ್ಯೇಣ ನ ಭೂಯೇತ, ಭಾವ್ಯೇನ ನ ಭೂಯೇತ, ಫಲಪ್ರದೇನ ನ ಭೂಯೇತ, ಯತ್ (ತೇನ) ವಿಧಿಧೀಗೋಚರೇಣ ನ ಭೂಯತೇ ।

★ ★ ★

**ಅವತಾರಿಕಾ—** ಮೇಲೆ ಹೇಳಿದ ಅನುಮಾನಕ್ಕೆ ದೃಷ್ಟಾಂತವೇನು ?

**ಖಪುಷ್ಪವದಖಂಡತ್ವಾದ್ ವ್ಯತಿರಿಕ್ತಂ ನಿದರ್ಶನಮ್ ।**
**ಪ್ರಮಾಣಾದಿವದಿತ್ಯೇವಮೂಹನೀಯಂ ಯಥೇಪ್ಸಿತಮ್ ॥ 42 ॥**

**ಪದಚ್ಛೇದ—** ಖಪುಷ್ಪವತ್, ಅಖಂಡತ್ವಾತ್, ವ್ಯತಿರಿಕ್ತಂ, ನಿದರ್ಶನಂ, ಪ್ರಮಾಣಾದಿವತ್, ಇತಿ, ಏವಂ ಊಹನೀಯಂ, ಯಥೇಪ್ಸಿತಮ್ ।

**ಅನ್ವಯ—** ಅಖಂಡತ್ವಾತ್, ಖಪುಷ್ಪವತ್, ಏವಂ, ವ್ಯತಿರಿಕ್ತಂ, ನಿದರ್ಶನಂ, ಯಥೇಪ್ಸಿತಂ, ಪ್ರಮಾಣಾದಿವತ್, ಇತಿ, ಊಹನೀಯಮ್ ।

**ಅನ್ವಯಾರ್ಥ—**

**ಅಖಂಡತ್ವಾತ್** = ವಿಶೇಷವಿಲ್ಲದ್ದರಿಂದ,
**ಖಪುಷ್ಪವತ್** = ಆಕಾಶದ ಹೂವಿನಂತೆ,
**ಏವಂ** = ಹೀಗೆ,
**ವ್ಯತಿರಿಕ್ತಂ** = ವ್ಯತಿರೇಕಿಯಾದ (ಇಲ್ಲಿ ಹೇಳಿದ ಸಾಧ್ಯಸಾಧನಗಳಿಲ್ಲದ),
**ನಿದರ್ಶನಂ** = ದೃಷ್ಟಾಂತವು,
**ಯಥೇಪ್ಸಿತಂ** = ಇಷ್ಟ ಬಂದಂತೆ,
**ಪ್ರಮಾಣಾದಿವತ್ ಇತಿ** = ಪ್ರಮಾಣಪ್ರಮೇಯಾದಿಗಳಂತೆ ಎಂದು,
**ಊಹನೀಯಂ** = ಊಹಿಸತಕ್ಕದ್ದು.

**ತಾತ್ಪರ್ಯ—** ಖಪುಷ್ಪ = ಆಕಾಶದ ಹೂವು ಎಂಬ ಶಬ್ದದಿಂದ ಒಂದು ವಸ್ತುವು ತೋರಿದರೂ ಅದು ವಿಧಿಪ್ರತ್ಯಯಕ್ಕೆ ವಿಷಯವಾಗುವುದಿಲ್ಲ. ಹಾಗೆಯೇ ಮಾಯಾವಾದಿಗಳ ಬ್ರಹ್ಮವು, ಶೂನ್ಯವಾದಿಗಳ ಶೂನ್ಯವು, ವಿಜ್ಞಾನ-ವಾದಿಗಳ ವಿಜ್ಞಾನವು, ವೈಯಾಕರಣರ ಸ್ಫೋಟವು, ಕಾಲವಾದಿಗಳ ಕಾಲವು ಇವೆಲ್ಲವೂ ನಿರ್ವಿಶೇಷವಾದುದರಿಂದ ವಿಧಿ ಜ್ಞಾನಕ್ಕೆ ವಿಷಯವಾಗುವುದಿಲ್ಲ. ಇದಕ್ಕೆ ಹೇತುವು ಅಖಂಡತ್ವ, ಅಖಂಡತ್ವವೆಂದರೆ ಸತ್ವ-ಸತ್ಯತ್ವ ಮೊದಲಾದ ಯಾವ ಧರ್ಮವೂ ಇಲ್ಲದಿರುವಿಕೆ. ಆಕಾಶಪುಷ್ಪವೂ ಯಾವ ಧರ್ಮವೂ ಇಲ್ಲದ್ದು, ತಾನೂ ಸ್ವತಃ ಇಲ್ಲದ್ದು, ಅದರಂತೆ ಹಿಂದೆ ಹೇಳಿದ ಬ್ರಹ್ಮಾದಿ ಗಳೂ ಆಗಿರುತ್ತಾರೆ. ಇದಕ್ಕೆ ವ್ಯತಿರೇಕದೃಷ್ಟಾಂತವೇನೆಂದರೆ ಪ್ರಮಾಣದಂತೆ, ಪ್ರಮೇಯದಂತೆ ಎಂದು. ಹೀಗೆ ವ್ಯತಿರೇಕ ದೃಷ್ಟಾಂತವನ್ನು ತಮ್ಮ ತಮ್ಮ ಇಷ್ಟಾನುಸಾರವಾಗಿ ಊಹಿಸಿಕೊಳ್ಳಬಹುದು. ಪ್ರತ್ಯಕ್ಷ ಅನುಮಾನ ಮೊದಲಾದ ಪ್ರಮಾಣವು ಪ್ರತ್ಯಕ್ಷತ್ವ ಮೊದಲಾದ ಧರ್ಮವುಳ್ಳದ್ದಾಗಿ ವಿಚಾರಾರ್ಹವಾಗಿದೆ. ಆದ್ದರಿಂದ ಸತ್ (ಇದ್ದದ್ದು) ಆಗಿದೆ. ಇದಕ್ಕೆ ವಿರುದ್ಧವಾಗಿ ಆಕಾಶಪುಷ್ಪವು (ಸುಳ್ಳಾದ ವಸ್ತುವು) ನಿರ್ಧರ್ಮಕವೂ ಅಸತ್ತೂ ಅವಿಚಾರಣೀಯವೂ ಆಗಿದೆ. ಈ ಅನ್ವಯ ವ್ಯತಿರೇಕದ ದೃಷ್ಟಾಂತಗಳಿಂದ ನಿಧರ್ಮಕ ಅಸತ್ ಆದ ಮಾಯಾವಾದಿಗಳ ಪರಬ್ರಹ್ಮವು ತಿರಸ್ಕಾರಾರ್ಹವಾಗಿದೆ.

ಇಲ್ಲಿ ಈ ರೀತಿ ಅನುಮಾನಪ್ರಮೇಯವನ್ನು ಇಟ್ಟುಕೊಳ್ಳಬಹುದು. ವಿವಾದವಿಷಯವಾದ ಬ್ರಹ್ಮವು (ವಿಮತಂ ಬ್ರಹ್ಮ) ವಿವೇಕಿಯಿಂದ ಶ್ರುತಿಮೀಮಾಂಸಾದಿಗಳಿಂದ ವಿಚಾರಮಾಡಲು ಯೋಗ್ಯವಾದುದು ಅಲ್ಲ. (ವಿವೇಕಿನಾ ಶ್ರುತಿ ಮೀಮಾಂಸಾದಿಭಿಃ ವಿಚಾರ್ಯಂ ನ ಭವತಿ) ಶಬ್ದ ಮುಂತಾದ ಪ್ರಮಾಣಗಳಿಗೆ ವಿಷಯವಲ್ಲದುದರಿಂದ ಆಕಾಶಪುಷ್ಪದಂತೆ (ಶ್ರುತ್ಯಾದ್ಯ ವಿಷಯತ್ವಾತ್, ಆಕಾಶಪುಷ್ಪವತ್) ಹೀಗೆಯೇ ವಿವಾದ ವಿಷಯವಾದ ಬ್ರಹ್ಮವು ಧ್ಯೇಯವೂ ಆಗುವುದಿಲ್ಲ. ನಿರಾಕಾರವಾದುದರಿಂದ ಆಕಾಶಪುಷ್ಪದಂತೆ (ವಿಮತಂ ಧ್ಯೇಯಂ ನ ಭವತಿ ನಿರಾಕಾರತ್ವಾತ್ ಖಪುಷ್ಪವತ್) ವಿವಾದ ವಿಷಯವಾದ ಬ್ರಹ್ಮಾದಿವಿಷಯಕವಾದ ಭಾವನೆಯು ಮೋಚಕವೂ ಆಗುವುದಿಲ್ಲ. ಅಸತ್ ಪದಾರ್ಥ ವಿಷಯಕ ವಾದುದರಿಂದ ಶಶವಿಷಾಣ (ಮೊಲದ ಕೋಡಿನ) ವಿಷಯವಾದ ಭಾವನೆಯಂತೆ (ವಿವಾದವಿಷಯಾ ಬ್ರಹ್ಮಾದಿವಿಷಯಾ ಭಾವನಾ ಮೋಚಿಕಾ ನ ಭವತಿ ಅಸದ್ವಿಷಯತ್ವಾತ್ ಶಶವಿಷಾಣಾದಿಭಾವನಾವತ್) ವಿವಾದ ವಿಷಯವಾದ ಬ್ರಹ್ಮ ಮೊದಲಾದುದು ಪುರುಷಾರ್ಥಪ್ರದವಾಗುವುದಿಲ್ಲ. ಅಸತ್ ಆದುದರಿಂದ ಅಶ್ವಶೃಂಗದಂತೆ, (ವಿಮತಂ ಬ್ರಹ್ಮಾದ್ಯಂ ಫಲಪ್ರದಂ ನ ಭವತಿ ಅಸತ್ತ್ವಾತ್ ಅಶ್ವಶೃಂಗವತ್, ಯಾವ ಯಾವುದು ವಿಚಾರಯೋಗ್ಯವೋ, ಭಾವನಾ (ಧ್ಯಾನ) ಯೋಗ್ಯವೋ ಫಲಪ್ರದವೋ ಅದೆಲ್ಲವೂ ಸತ್ (ಇದ್ದದ್ದು) ಆಗಿಯೇ ಕಂಡಿದೆ. ಪ್ರಮಾಣಾದಿಗಳಂತೆ (ಯದ್ಯದ್ ವಿಚಾರ್ಯಂ ಭಾವ್ಯಂ ಫಲಪ್ರದಂ ವಾ ತತ್ತತ್ ಸದೇವ ದೃಷ್ಟಂ ಪ್ರಮಾಣಾದಿವತ್) ಪ್ರಮಾಣ ಅಥವಾ ಪ್ರಮೇಯವು ಸಾಧುವೇ ಅಸಾಧುವೇ ಎಂಬ ವಿಚಾರಕ್ಕೆ ವಿಷಯವಾಗುತ್ತದೆ. ಈ ಬ್ರಹ್ಮವು ಪ್ರಮಾಣ ವಿಷಯವಾದ್ದರಿಂದ ವಿಚಾರ ವಿಷಯವಲ್ಲ. ಹೀಗೆಯೇ ಪ್ರಮೇಯವನ್ನು ವ್ಯತಿರೇಕ ದೃಷ್ಟಾಂತವಾಗಿ ಇಟ್ಟುಕೊಳ್ಳಬಹುದು).

ಸತ್ತ್ವಾದಿವಿಶೇಷಣವಿಶಿಷ್ಟವಾದ ವಸ್ತುವೇ ವಿಚಾರಾರ್ಹವಾಗುತ್ತದೆ, ಧ್ಯಾನ ಯೋಗ್ಯವಾಗುತ್ತದೆ, ಫಲಪ್ರದವೂ ಆಗುತ್ತದೆ. ಇಂತಹ ವಿಶೇಷಣರಹಿತವಾದ ವಸ್ತುಗಳು, ಬ್ರಹ್ಮ, ಶೂನ್ಯ, ವಿಜ್ಞಾನ, ಸ್ಫೋಟ ಮುಂತಾದುವುಗಳು ವಿಚಾರಾ-ರ್ಹವಲ್ಲ. ಧ್ಯಾನಾರ್ಹಗಳಲ್ಲ, ಅಭೀಷ್ಟಫಲಪ್ರದಗಳೂ ಅಲ್ಲ. ಬ್ರಹ್ಮಾದಿವಸ್ತುಗಳೆಲ್ಲವೂ ನಿರಾಕಾರವೆಂದು ಒಪ್ಪಿರುವುದರಿಂದ ಧ್ಯಾನಕ್ಕೆ ವಿಷಯವಾಗುವುದಿಲ್ಲ. ಸದ್ವಸ್ತುವೇ ವಿಚಾರಾದಿಗಳಿಗೆ ವಿಷಯವು ಪ್ರಮಾಣದಂತೆ, ಪ್ರಮೇಯದಂತೆ ಎಂಬ ಅನುಮಾನವು ಈ ವಿಷಯವನ್ನು ಸಾಧಿಸಿಕೊಡುತ್ತದೆ. ತಿಳಿಯತಕ್ಕ ಪ್ರಮೇಯವಿದ್ದರೆ ಅದು ಪ್ರಮಾಣಕ್ಕೆ ವಿಷಯ-ವಾಗುತ್ತದೆ. ಪ್ರಮೇಯವೇ ಇಲ್ಲದಿದ್ದರೆ ಪ್ರಮಾಣದ ಆವಶ್ಯಕತೆಯೂ ಇಲ್ಲ. ಸದ್ವಸ್ತುವೇ ಇಲ್ಲದಿದ್ದರೆ ವಿಚಾರಾದಿಗಳು ಅನಾವಶ್ಯಕವೆಂದು ಹೇಳಬೇಕಾಗಿಯೇ ಇಲ್ಲ.

ವಿಗ್ರಹ—

**ಖಪುಷ್ಪವತ್**— ಖಸ್ಯ ಪುಷ್ಪಂ ಖಪುಷ್ಪಂ, ಖಪುಷ್ಪೇಣ ತುಲ್ಯಂ ಖಪುಷ್ಪವತ್ ।

**ಅಖಂಡತ್ವಾತ್**— ನ ವಿದ್ಯತೇ ಖಂಡಃ ಯಸ್ಯ ತತ್ ಅಖಂಡಂ (ಬ್ರಹ್ಮ) ಅಖಂಡಸ್ಯ ಭಾವಃ ಅಖಂಡತ್ವಂ ತಸ್ಮಾತ್ ।

**ಪ್ರಮಾಣಾದಿವತ್**— ಪ್ರಮಾಣಂ ಆದಿ ಯಸ್ಯ ತತ್ ಪ್ರಮಾಣಾದಿ, ಪ್ರಮಾಣಾದಿನಾ ತುಲ್ಯಂ ಪ್ರಮಾಣಾದಿವತ್ ।

**ಯಥೇಪ್ಸಿತಂ**— ಆಪ್ತುಂ ಇಷ್ಟಂ ಈಪ್ಸಿತಂ, ಈಪ್ಸಿತಂ ಅನತಿಕ್ರಮ್ಯ ಯಥೇಪ್ಸಿತಂ ।

**ಪ್ರಯೋಗ**— ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ (ಭವತಿ) ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ವಿಮತಂ ಬ್ರಹ್ಮಾದ್ಯಂ ವಿಚಾರ್ಯಂ ನ ಭವತಿ ಅಖಂಡತ್ವಾತ್ ಖಪುಷ್ಪವತ್ ಇತ್ಯನುಮಾನೇನ ಭೂಯತೇ ಏವಂ ವ್ಯತಿರಿಕ್ತೇನ ನಿದರ್ಶನೇನ ಯಥೇಪ್ಸಿತಂ ಪ್ರಮಾಣಾದಿವತ್ ಇತಿ ಊಹನೀಯೇನ ಭೂಯತೇ ।

★ ★ ★

**ಅವತಾರಿಕಾ**— ನಾರಾಯಣೋಽನಂತಗುಣಃ ಬ್ರಹ್ಮಾಖ್ಯೋ ವೇದವೇದಿತಃ (8) ಎಂಬಲ್ಲಿ ಬ್ರಹ್ಮವು ವೇದ-ವೇದ್ಯವೆಂದು ಹೇಳಿದುದು ವೇದವು ಅಪ್ರಮಾಣವಾದುದರಿಂದ ಯುಕ್ತವಲ್ಲ ಎಂಬ ಆಕ್ಷೇಪಕ್ಕೆ ಉತ್ತರ.

**ಆಮ್ನಾಯಾನಾಮಮಾನತ್ವೇ ಧರ್ಮಾದೇರಪ್ರಮಾಣತಾ ।**
**ಧರ್ಮಾದ್ಯಭಾವೇ ನೋ ಮಾನಂ ಪ್ರತ್ಯಕ್ಷೈಕಪ್ರಮಾಣಿನಃ ॥ 43 ॥**

**ಪದಚ್ಛೇದ**— ಆಮ್ನಾಯಾನಾಂ ಅಮಾನತ್ವೇ, ಧರ್ಮಾದೇಃ ಅಪ್ರಮಾಣತಾ, ಧರ್ಮಾದ್ಯಭಾವೇ, ನೋ, ಮಾನಂ, ಪ್ರತ್ಯಕ್ಷೈಪ್ರಮಾಣಿನಃ ।

**ಅನ್ವಯ**— ಆಮ್ನಾಯಾನಾಮಮಾನತ್ವೇ, ಧರ್ಮಾದೇರಪ್ರಮಾಣತಾ, ಧರ್ಮಾದ್ಯಭಾವೇ, ನೋ, ಮಾನಂ, ಪ್ರತ್ಯಕ್ಷೈಪ್ರಮಾಣಿನಃ ।

**ಅನ್ವಯಾರ್ಥ**—

**ಆಮ್ನಾಯಾನಾಂ ಅಮಾನತ್ವೇ** = ಚಾರ್ವಾಕ ಬುದ್ಧನೇ ಮುಂತಾದವರು ರಚಿಸಿರುವ,

**ಧರ್ಮಾದೇಃ ಅಪ್ರಮಾಣತಾ** = ಧರ್ಮಾದಿಗಳಿಗೆ ಪ್ರಮಾಣಶೂನ್ಯತ್ವವು (ಬಂದೀತು),

**ಪ್ರತ್ಯಕ್ಷೈಪ್ರಮಾಣಿನಃ** = ಪ್ರತ್ಯಕ್ಷವು ಒಂದೇ ಪ್ರಮಾಣವೆನ್ನುವ ಚಾರ್ವಾಕನಿಗೂ,

**ಧರ್ಮಾದ್ಯಭಾವೇ** = ಧರ್ಮ ಪರಲೋಕ ಮೊದಲಾದವುಗಳ ಅಭಾವ ವಿಷಯದಲ್ಲಿ,

**ನೋ ಮಾನಂ** = ಪ್ರಮಾಣವಿಲ್ಲ.

**ತಾತ್ಪರ್ಯ**— ಹಿಂದೆ ನಾರಾಯಣನು ಅನಂತಗುಣಗಳುಳ್ಳವನು ಎಂಬ ವಿಷಯದಲ್ಲಿ ಯಾರೂ ರಚಿಸದಿರುವ ನಿತ್ಯಗಳಾದ ವೇದಗಳೇ ಪ್ರಮಾಣಗಳೆಂದು ಹೇಳಿರುತ್ತೇವೆ. ಆ ವೇದಗಳನ್ನು ಪ್ರಮಾಣಗಳೆಂದು ಒಪ್ಪಿಕೊಳ್ಳದಿದ್ದರೆ; ಪ್ರತ್ಯಕ್ಷ ಪ್ರಮಾಣಕ್ಕೆ ಗೋಚರವಾಗದ, ಧರ್ಮ, ಈಶ್ವರ, ಪರಲೋಕ ಮುಂತಾದವುಗಳ ವಿಷಯದಲ್ಲಿ ಪ್ರಮಾಣವೇ ಇಲ್ಲವೆಂದಾಗುವುದು. ಅನುಮಾನವು ಕಾಮಚಾರಿಯಾದುದರಿಂದ (ಇಷ್ಟ ಬಂದಂತೆ ಪ್ರಯೋಗಿಸಲು ಬರುವುದರಿಂದ) ಅನುಮಾನದಿಂದ ಧರ್ಮಾದಿಗಳ ಅಭಾವವನ್ನೂ ಸಾಧಿಸಬಹುದು. ಆದುದರಿಂದ ಧರ್ಮಾದಿಗಳನ್ನು ತಿಳಿಯಲು ವೇದ ಒಂದೇ ಸಾಧನ. ಪ್ರತ್ಯಕ್ಷ ಒಂದೇ ಪ್ರಮಾಣವಾದರೆ ಧರ್ಮಾದಿಗಳಿಲ್ಲ ಎನ್ನುವ ಚಾರ್ವಾಕನೂ ಪ್ರತ್ಯಕ್ಷ ಅನುಮಾನಗಳಿಗೆ ಗೋಚರವಾಗದ ಧರ್ಮಾದಿಗಳ ಅಭಾವವನ್ನೂ ಆಗಮವನ್ನು ಒಪ್ಪದೇ ಸಾಧಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ಆಗಮವನ್ನು ಪ್ರಮಾಣವೆಂದು ಒಪ್ಪಿಕೊಳ್ಳಲೇಬೇಕು.

**ವಿಗ್ರಹ**—

**ಅಮಾನತ್ವೇ**— ನ ಮಾನಾನಿ ಅಮಾನಾನಿ ತೇಷಾಂ ಭಾವಃ ತಸ್ಮಿನ್ ।

**ಧರ್ಮಸ್ಯ**— ಧರ್ಮಃ ಆದಿಃ ಯಸ್ಯ ಸಃ ತಸ್ಯ ।

**ಅಪ್ರಮಾಣತಾ**— ನ ವಿದ್ಯತೇ ಪ್ರಮಾಣಂ ಯಸ್ಯ ಸಃ ತಸ್ಯ ಭಾವಃ ।

**ಧರ್ಮಾದ್ಯಭಾವೇ**— ಧರ್ಮಃ ಆದಿಃ ಯಸ್ಯ ಸಃ । ಧರ್ಮಾದೇಃ ಅಭಾವಃ ತಸ್ಮಿನ್ ।

**ಪ್ರತ್ಯಕ್ಷೈಕಪ್ರಮಾಣಿನಃ**— ಪ್ರತ್ಯಕ್ಷಂ ಏಕಂ ಪ್ರಮಾಣಂ ಅಸ್ಯ ಅಸ್ತೀತಿ ಪ್ರತ್ಯಕ್ಷೈಕಪ್ರಮಾಣೀ (ಣಿನ್) ತಸ್ಯ ।

★ ★ ★

**ಅವತಾರಿಕಾ—** ಧರ್ಮಾದಿಗಳ ಅಭಾವ ಸಿದ್ಧಿಗೆ ಅಥವಾ ಧರ್ಮಸಿದ್ಧಿಗೂ ವೇದವು ಬೇಡ, ಪೌರುಷೇಯ ವಾಕ್ಯದಿಂದಲೇ ಧರ್ಮದ ಅಭಾವವು ಸಿದ್ಧಿಸುತ್ತದೆ ಎಂದು ಬೌದ್ಧನೂ, ಚಾರ್ವಾಕರೂ ಹೇಳಿದರೆ ಹೇಳುತ್ತಾರೆ.

**ನ ಪೌರುಷೇಯಂ ವಚನಂ ಪ್ರಾಮಾಣ್ಯೇನ ವಿನಿಶ್ಚಿತಮ್ ।**
**ಪೌರುಷೇಯತ್ವತೋ ಯದ್ವದ್ವಾಕ್ಯಮುನ್ಮತ್ತಭಾಷಿತಮ್ ॥ 44 ॥**

**ಪದಚ್ಛೇದ—** ನ, ಪೌರುಷೇಯಂ, ವಚನಂ, ಪ್ರಾಮಾಣ್ಯೇನ, ವಿನಿಶ್ಚಿತಂ, ಪೌರುಷೇಯತ್ವತಃ, ಯದ್ವತ್, ವಾಕ್ಯಂ, ಉನ್ಮತ್ತಭಾಷಿತಮ್ ।

**ಅನ್ವಯ—** ಪೌರುಷೇಯಂ, ವಚನಂ, ಪ್ರಾಮಾಣ್ಯೇನ, ವಿನಿಶ್ಚಿತಂ, ನ(ಭವತಿ), ಪೌರುಷೇಯತ್ವತಃ, ಉನ್ಮತ್ತ ಭಾಷಿತಂ, ವಾಕ್ಯಂ, ಯದ್ವತ್ ।

**ಅನ್ವಯಾರ್ಥ—**

**ಪೌರುಷೇಯಂ** = ಚಾರ್ವಾಕ ಬುದ್ಧನೇ ಮುಂತಾದವರು ರಚಿಸಿರುವ,

**ವಚನಂ** = ವಾಕ್ಯವು (ಗ್ರಂಥವು),

**ಪ್ರಾಮಾಣ್ಯೇನ** = ಧರ್ಮಾದಿಗಳು ಇಲ್ಲ ಅಥವಾ ವೇದದಲ್ಲಿ ಹೇಳಿದುದು ಧರ್ಮವಲ್ಲ, ನಾವು ಹೇಳಿದುದೇ ಧರ್ಮ ಎಂಬ ವಿಷಯದಲ್ಲಿ ಪ್ರಮಾಣರೂಪದಿಂದ (ಆಧಾರಗ್ರಂಥರೂಪದಿಂದ),

**ವಿನಿಶ್ಚಿತಂ** = ನಿಶ್ಚಯಿಸಲ್ಪಟ್ಟದ್ದಾಗಿ,

**ನ (ಭವತಿ)** = ಆಗುವುದಿಲ್ಲ

**ಪೌರುಷೇಯತ್ವತಃ** = ಪುರುಷರಿಂದ ರಚಿತವಾಗಿರುವುದರಿಂದ,

**ಉನ್ಮತ್ತಭಾಷಿತಂ ವಾಕ್ಯಂ** = ಹುಚ್ಚನಿಂದ ಹೇಳಲ್ಪಟ್ಟ ವಾಕ್ಯವು,

**ಯದ್ವತ್** = ಹೇಗೋ (ಹಾಗೆ).

**ತಾತ್ಪರ್ಯ—** ಚಾರ್ವಾಕ ಮತಪ್ರವರ್ತಕನಾದ ಬೃಹಸ್ಪತಿ (ಒಬ್ಬ ಅಸುರನೂ) ಬುದ್ಧ ಮೊದಲಾದ ಪುರುಷರೂ ನಿರ್ಮಿಸಿರುವ ವಾಕ್ಯಸಮುದಾಯರೂಪವಾದ ಗ್ರಂಥವು, ಧರ್ಮವು ಇಲ್ಲ ಎಂಬ ವಿಷಯದಲ್ಲಿಯಾಗಲೀ ನಾವು ಹೇಳಿದುದೇ ಧರ್ಮ, ನೀವು ಹೇಳಿದುದು, ವೇದದಲ್ಲಿ ಹೇಳಿರುವುದು ಧರ್ಮವಲ್ಲ ಎಂಬ ವಿಷಯದಲ್ಲಿಯಾಗಲೀ ಪ್ರಮಾಣವಾಗುವುದಿಲ್ಲ. ಪುರುಷರು ರಚಿಸಿರುವ ಗ್ರಂಥಗಳನ್ನು ಧರ್ಮಾಭಾವ ಮುಂತಾದ ವಿಷಯದಲ್ಲಿ ಆಧಾರ ಗ್ರಂಥವಾಗಿ ಸ್ವೀಕರಿಸಲು ಬರುವುದಿಲ್ಲ. ಒಬ್ಬ ಹುಚ್ಚನು ಹೇಳಿದ ಮಾತು, ಅದು ಹುಚ್ಚನು ಹೇಳಿರುವ ಮಾತು, ಆದುದರಿಂದಲೇ ಸತ್ಯವೆಂದೂ ಪ್ರಮಾಣವೆಂದೂ ನಂಬಲು ಹೇಗೆ ಸಾಧ್ಯವಾಗುವುದಿಲ್ಲವೋ ಅದರಂತೆ ಪುರುಷರು ರಚಿಸಿರುವ ವಚನಸಮುದಾಯರೂಪವಾದ ಗ್ರಂಥವನ್ನು ಪ್ರಮಾಣವೆಂದು ನಂಬಲು ಸಾಧ್ಯವಾಗುವುದಿಲ್ಲ. ಚಾರ್ವಾಕರೇ ಆಗಲೀ, ಬೌದ್ಧರೇ ಆಗಲೀ, ಇತರ ಯಾರೇ ವಾದಿಗಳಾಗಲೀ ''ಸರ್ವಜ್ಞನಾದ ಪುರುಷನು ರಚನೆ ಮಾಡಿದ ವಾಕ್ಯ ಸಮುದಾಯರೂಪವಾದ ಗ್ರಂಥದಿಂದ ತಮ್ಮ ಶಾಸ್ತ್ರದ ಪ್ರಮೇಯವನ್ನು ಸಾಧಿಸಿಕೊಳ್ಳುತ್ತೇವೆ, ಆಯಾ ಶಾಸ್ತ್ರಗಳು ನಮಗೆ ಸಮ್ಮತರಾದ ಆಪ್ತರಿಂದ ರಚಿತವಾದುದರಿಂದ ಪ್ರಮಾಣಗಳಾಗಿವೆ'' ಎಂದು ಹೇಳಲು ಸಾಧ್ಯವಿಲ್ಲ. ಈ ಆಗಮಗ್ರಂಥಗಳೂ ವಾಕ್ಯಸಮುದಾಯರೂಪವಾದುದರಿಂದ ಹುಚ್ಚನ ವಾಕ್ಯದಂತೆ ಪ್ರಮಾಣವಲ್ಲ ಎಂದು ವಿರುದ್ಧವಾಗಿ ಹೇಳಲೂ ಬರುತ್ತದೆಯಲ್ಲವೇ? 'ವಿಮತಂ ಬುದ್ಧಾದಿಪ್ರಣೀತಂ ವಾಕ್ಯಂ ಧರ್ಮಾಭಾವೇ, ಧರ್ಮಾದೌ ವಾ ನ ಪ್ರಮಾಣಂ ಪೌರುಷೇಯತ್ವಾತ್, ಯತ್ ಪೌರುಷೇಯಂ ವಾಕ್ಯಂ ತತ್ ಧರ್ಮಾದೌ ನ ಪ್ರಮಾಣಂ ಯಥಾ ಉನ್ಮತ್ತವಾಕ್ಯಂ'.

ಧರ್ಮಾದಿಗಳ ಅಭಾವಾದಿ ವಿಷಯದಲ್ಲಿ ಪ್ರಮಾಣವು ಆಗಿದೆಯೇ ಇಲ್ಲವೇ ಎಂಬ ಸಂದೇಹಕ್ಕೆ ವಿಷಯವಾದ ಬುದ್ಧ ಮುಂತಾದವರು ರಚಿಸಿರುವ ವಾಕ್ಯವು (ಆಗಮಗ್ರಂಥವು) ಧರ್ಮಾಭಾವ ಅಥವಾ ಧರ್ಮಾದಿವಿಷಯದಲ್ಲಿ ಪ್ರಮಾಣವು ಆಗುವುದಿಲ್ಲ. ಪುರುಷರು ರಚಿಸಿರುವ ಗ್ರಂಥಗಳಾಗಿರುವುದರಿಂದ, ಯಾವ ಯಾವುದು ಪುರುಷರಿಂದ ರಚಿತವಾದ ವಾಕ್ಯರೂಪವಾಗಿದೆಯೋ ಅದು ಧರ್ಮಾದ್ಯಭಾವವಿಷಯದಲ್ಲಿ ಪ್ರಮಾಣವಲ್ಲ, ಹುಚ್ಚನ ವಾಕ್ಯದಂತೆ ಎಂದು ಇಲ್ಲಿ ಅನುಮಾನವನ್ನು ಪ್ರಯೋಗಿಸಬೇಕು.

**ವಿಶೇಷಾಂಶ—** ಚಾರ್ವಾಕನು ಪ್ರತ್ಯಕ್ಷವು ಒಂದೇ ಪ್ರಮಾಣವೆನ್ನುತ್ತಾನೆ. ಬೌದ್ಧನು ಪ್ರತ್ಯಕ್ಷ ಮತ್ತು ಅನುಮಾನ ಎರಡೇ ಪ್ರಮಾಣವೆನ್ನುತ್ತಾನೆ. ಇವರಿಬ್ಬರೂ ಆಗಮವನ್ನು ಪ್ರಮಾಣವೆಂದು ಒಪ್ಪುವುದಿಲ್ಲ. ಇನ್ನೂ ಸೂಕ್ಷ್ಮವಾದ ಅನೇಕ ವ್ಯತ್ಯಾಸಗಳಿವೆ. ಹಾಗಿರುವಾಗ ಪೌರುಷೇಯ ವಾಕ್ಯದಿಂದ ಧರ್ಮಾದಿ ಸಿದ್ಧಿಯು ಅಥವಾ ಧರ್ಮಾದಿಗಳ ಅಭಾವ ಸಿದ್ಧಿಯು ಆಗುತ್ತದೆ ಎಂದು ಶಂಕಿಸಿದುದು ಹೇಗೆ ಎಂದರೆ, ಬೌದ್ಧರು, ಆಗಮಕ್ಕೆ ಪ್ರಾಮಾಣ್ಯವನ್ನು ಒಪ್ಪದಿದ್ದರೂ ಅದನ್ನು ಅನುಮಾನದಲ್ಲಿ ಅಂತರ್ಭಾವ ಮಾಡುತ್ತಾರೆ. ಚಾರ್ವಾಕನು ಆಗಮವು ಯಥಾರ್ಥಜ್ಞಾನವನ್ನು ಉಂಟುಮಾಡದಿದ್ದರೂ ವಸ್ತುವಿನ ವಿಷಯದಲ್ಲಿ, ಸಂಶಯವನ್ನೂ, ಒಂದು ರೀತಿಯ ವಿಶೇಷಸಂಶಯರೂಪವಾದ ಸಂಭಾವನಾಜ್ಞಾನವನ್ನು (ಇದು ಹೀಗಿರಬಹುದು ಎಂಬ ಜ್ಞಾನವನ್ನು) ಉಂಟುಮಾಡುತ್ತದೆ. ಮುಂದೆ ಪ್ರತ್ಯಕ್ಷದಿಂದಲೇ ಧರ್ಮಾದ್ಯಭಾವ ಜ್ಞಾನವು ಉಂಟಾಗುತ್ತದೆ, ಇತ್ಯಾದಿ ರೀತಿಯಿಂದ ಹೇಳುತ್ತಾರೆ. ಆ ಅಭಿಪ್ರಾಯದಿಂದ ಇಲ್ಲಿ ಶಂಕೆಯನ್ನು ಮಾಡಿ ಉತ್ತರವನ್ನು ಕೊಟ್ಟಿದ್ದಾರೆ ಎಂದು ತಿಳಿಯಬೇಕು.

ವಿಗ್ರಹ—

**ಪೌರುಷೇಯಂ—** ಪುರುಷೇಣ ಕೃತಂ ಪೌರುಷೇಯಂ । ಸರ್ವಪುರುಷಾಭ್ಯಾಂ ಣಢಞೌ (5-1-10) ಎಂಬ ಸೂತ್ರದಿಂದ ಪುರುಷಾದ್ ವಧವಿಕಾರಸಮೂಹತೇನ ಕೃತೇಷು (ವಾ 3000) ಎಂಬ ವಾರ್ತಿಕದಿಂದ ಕೃತ ಎಂಬ ಅರ್ಥದಲ್ಲಿ ಢಞ್ ಪ್ರತ್ಯಯ. ಪುರುಷ + ಢಞ್ (ಢ) ಢಕ್ಕೆ ಏಯ ಆದೇಶ. ಆದಿವೃದ್ಧಿ, ಪೌರುಷೇಯ ಎಂದು ರೂಪ. ಪ್ರಮಾಣಸ್ಯ ಭಾವಃ ಪ್ರಾಮಾಣ್ಯಂ ತೇನ. ಪೌರುಷೇಯಸ್ಯ ಭಾವಃ ಪೌರುಷೇಯತ್ವಂ ತಸ್ಮಾತ್ ಪೌರುಷೇಯತ್ವತಃ, ಉನ್ಮತ್ತೇನ ಭಾಷಿತಂ ಉನ್ಮತ್ತಭಾಷಿತಂ ।

**ಪ್ರಯೋಗ—** ಈ ಶ್ಲೋಕದಲ್ಲಿಯೂ ಕ್ರಿಯಾಪದವಿಲ್ಲ. ಭವತಿ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಪೌರುಷೇಯಣ ವಚನೇನ ಪ್ರಾಮಾಣ್ಯೇನ ವಿನಿಶ್ಚಿತೇನ ನ ಭೂಯತೇ ।

★ ★ ★

**ಅವತಾರಿಕಾ—** ಬುದ್ಧಾದಿಗಳು ಸರ್ವಜ್ಞರು, ಆದುದರಿಂದ ಹುಚ್ಚರ ಮಾತಿನಲ್ಲಿ ಅಪನಂಬಿಕೆ ಬರುವಂತೆ ಅವರ ಮಾತಿನಲ್ಲಿ ಅಪನಂಬಿಕೆಗೆ, (ಪ್ರಾಮಾಣ್ಯ ಸಂಶಯಕ್ಕೆ) ಅವಕಾಶವಿಲ್ಲ ಎಂದರೆ ಹೇಳುತ್ತಾರೆ.

**ವಿಮತಃ ಪುರುಷೋಽಜ್ಞಃ ಸ್ಯಾತ್ ಸ್ಯಾಚ್ಚಾ(ದ)ಸೌ ವಿಪ್ರಲಂಭಕಃ ।**
**ಪುಂಸ್ತ್ವಾಚ್ಚೈತ್ರವದಿತ್ಯಸ್ತ್ರಾ(ಃ) ಸ(ಸಾ)ರ್ವಜ್ಞೇ ಕೇವಲಾನುಮಾಃ ॥ 45 ॥**

**ಪದಚ್ಛೇದ—** ವಿಮತಃ, ಪುರುಷಃ, ಅಜ್ಞಃ, ಸ್ಯಾತ್, ಸ್ಯಾತ್ ಚ, ಅಸೌ, ವಿಪ್ರಲಂಭಕಃ, ಪುಂಸ್ತ್ವಾತ್, ಚೈತ್ರವತ್, ಇತಿ, ಅಸ್ತ್ರಾ(ಅಸ್ತ್ರಾಃ), ಸರ್ವಜ್ಞೇ(ಸಾರ್ವಜ್ಞೇ), ಕೇವಲಾನುಮಾ(ಃ) ।

**ಅನ್ವಯ—** ವಿಮತಃ, ಪುರುಷಃ, ಅಜ್ಞಃ, ಸ್ಯಾತ್, ಪುಂಸ್ತ್ವಾತ್, ಚೈತ್ರವತ್(ಚ), ಅಸೌ, ವಿಪ್ರಲಂಭಕಃ, ಸ್ಯಾತ್, ಇತಿ, ಸರ್ವಜ್ಞೇ(ಸಾರ್ವಜ್ಞೇ), ಕೇವಲಾನುಮಾ(ಃ), ಅಸ್ತ್ರಾ (ಃ) ।

**ಅನ್ವಯಾರ್ಥ—**

ವಿಮತಃ = ಸರ್ವಜ್ಞನು ಹೌದೋ ಅಲ್ಲವೋ ಎಂದು ವಿವಾದವಿಷಯನಾದ,

ಪುರುಷಃ = ಬುದ್ಧ ಮುಂತಾದವನು,

ಅಜ್ಞಃ = ಅಜ್ಞಾನಿಯು,

ಸ್ಯಾತ್ = ಆಗಿರಬಹುದು,

ಪುಂಸ್ತ್ವಾತ್ = ಮನುಷ್ಯನಾದುದರಿಂದ,

ಚೈತ್ರವತ್ = ಚೈತ್ರನೆಂಬ ಮನುಷ್ಯನಂತೆ,

ಚ = ಮತ್ತು,

ಅಸೌ = ಇವನು,

ವಿಪ್ರಲಂಭಕಃ = ಮೋಸಗಾರನೂ,

ಸ್ಯಾತ್ = ಆಗಿರಬಹುದು,

ಇತಿ = ಹೀಗೆಂದು,

ಸರ್ವಜ್ಞೇ = ಸರ್ವಜ್ಞನಾದ ಪುರುಷನನ್ನು ಸಾಧಿಸುವ ವಿಷಯದಲ್ಲಿ (ಸಾರ್ವಜ್ಞೇ =ಸರ್ವಜ್ಞತ್ವ ವಿಷಯದಲ್ಲಿ),

ಕೇವಲಾನುಮಾ = ಶ್ರುತ್ಯಾದಿ ಸಹಾಯವಿಲ್ಲದ ಅನುಮಾನವು (ಅನುಮಾನಗಳು),

ಅಸ್ತಾ = ನಿರಾಕರಿಸಲ್ಪಟ್ಟಿತು (ನಿರಾಕರಿಸಲ್ಪಟ್ಟವು).

**ತಾತ್ಪರ್ಯ—** ಘಟಾದಿ ವಸ್ತುಗಳಂತೆ ಧರ್ಮ, ಅಧರ್ಮ ಮುಂತಾದ ವಸ್ತುಗಳು ಯಾವನಾದರೊಬ್ಬನ ಪ್ರತ್ಯಕ್ಷಕ್ಕೆ ವಿಷಯವಾಗುತ್ತವೆ. ಯಾವನಾದರೊಬ್ಬನು ಧರ್ಮಾದಿಗಳನ್ನು ನೋಡುತ್ತಾನೆ, ಅನಂತರ ಅದನ್ನೆಲ್ಲಾ ಗ್ರಂಥರೂಪದಲ್ಲಿ ಬರೆಯುತ್ತಾನೆ ಅಥವಾ ಬರೆಸುತ್ತಾನೆ ಎಂದು ಒಂದು ರೀತಿಯ ಅನುಮಾನ ಪ್ರಮಾಣದ ಪ್ರಣಾಳಿಕೆಯಿಂದ ಧರ್ಮಾ-ಧರ್ಮಾದಿಗಳನ್ನು ಸಾಧಿಸಬಹುದು. ಈ ರೀತಿ ಸರ್ವಜ್ಞನಾದ ಆಪ್ತನಾದ ಪುರುಷನು ಮಾಡಿರುವ ಆಗಮಗಳಿಂದಲೇ ಧರ್ಮಾದಿಗಳನ್ನು ಸಾಧಿಸಲು ಬರುತ್ತಿರುವಾಗ ಅಪೌರುಷೇಯವಾದ ವೇದವನ್ನು ಒಪ್ಪಿ ಅದರಿಂದಲೇ ಧರ್ಮಾ-ಧರ್ಮಾದಿಗಳನ್ನು ಏಕೆ ಸಾಧಿಸಬೇಕು? ಎಂಬ ಆಕ್ಷೇಪವು ಬರುತ್ತದೆ.

ನೀವು ಸರ್ವಜ್ಞನೆಂದು ಒಪ್ಪಿರುವವನನ್ನು ನಾವು ಸರ್ವಜ್ಞನೆಂದು ಒಪ್ಪುವುದಿಲ್ಲ. ಹೀಗೆ ಸರ್ವಜ್ಞನು ಹೌದೋ ಅಲ್ಲವೋ ಎಂದು ವಿವಾದವಿಷಯವಾದ ಬುದ್ಧಾದಿ ಪುರುಷನು ಅಜ್ಞಾನಿಯಾಗಿರಲು ಸಾಧ್ಯವಿರದೆ, ಬೌದ್ಧಾದಿಗಳು ಸರ್ವಜ್ಞನೆಂದು ಒಪ್ಪಿರುವ ಬುದ್ಧ ಮುಂತಾದ ಪುರುಷನು ವಿವಕ್ಷಿತವಾದ ಅರ್ಥದ ತತ್ತ್ವಜ್ಞಾನವುಳ್ಳವನಲ್ಲ. ಅವನೂ ಒಬ್ಬ ಪುರುಷನಾದುದರಿಂದ ಹುಚ್ಚನಾದ ಚೈತ್ರನೆಂಬ ಪುರುಷನಂತೆ, ಎಂಬ ಅನುಮಾನದಿಂದ ಬುದ್ಧಾದಿಗಳಿಗೂ ಸರಿಯಾದ ತತ್ತ್ವಜ್ಞಾನ ವಿಲ್ಲವೆಂದು ನಿಶ್ಚಯ ಮಾಡಲು ಸಾಧ್ಯವಿದೆ. ಹಾಗೆಯೇ ಮೋಸಗಾರನು ಹೌದೋ ಅಲ್ಲವೋ ಎಂದು ನಮಗೂ ನಿಮಗೂ ವಿವಾದವಿಷಯನಾದ ಪುರುಷನು ಮೋಸಗಾರನಾಗಿರಲೂ ಸಾಧ್ಯವಿದೆ. ಲೋಕದಲ್ಲಿ ಮೋಸಗಾರನೆಂದು ಎಲ್ಲರೂ ಒಪ್ಪಿರುವ ಒಬ್ಬ ಪುರುಷನಂತೆ ಇವನೂ ಮೋಸಗಾರನಾಗಿರಬಹುದೆಂದು ಊಹಿಸಲು ಅವಕಾಶವಿದೆ. ಆದುದ-ರಿಂದ ಸರ್ವಜ್ಞನಾದ ಪುರುಷರು ಒಬ್ಬನು ಇದ್ದಾನೆ ಎಂದು ಸಾಧಿಸಲು ವಾದಿಗಳು ಪ್ರಯೋಗ ಮಾಡುವ ಅನುಮಾನಗಳಿಗೆ ವೇದ ಮತ್ತು ಸ್ಮೃತಿಗಳ ಸಹಕಾರವಿಲ್ಲದಿದ್ದರೆ, ಅವುಗಳಿಂದ ಸರ್ವಜ್ಞನಾದ ಪುರುಷನನ್ನು ಸಾಧಿಸಲು ಬರುವುದಿಲ್ಲ. ಆ ಪುರುಷನು ಸರ್ವಜ್ಞನಲ್ಲವೆಂದು ನಾವು ಪ್ರಯೋಗಿಸುವ ಅನುಮಾನಗಳಿಂದ, ವಾದಿಗಳ ಅನುಮಾನಗಳು ತಿರಸ್ಕೃತ-ವಾಗುತ್ತವೆ.

**ವಿಗ್ರಹ—**

**ವಿಪ್ರಲಂಭಕಃ—** ವಿಪ್ರಲಭತೇ ಇತಿ ವಿಪ್ರಲಂಭಕಃ ।

**ಪುಂಸ್ತ್ವಾತ್**— ಪುಂಸಃ ಭಾವಃ ಪುಂಸ್ತ್ವಂ ತಸ್ಮಾತ್ ।

**ಸಾರ್ವಜ್ಞೇ**— ಸರ್ವಜ್ಞಸ್ಯ ಭಾವಃ ಸಾರ್ವಜ್ಞಂ ತಸ್ಮಿನ್ । 'ಹಾಯನಾಂತಯುವಾದಿಭ್ಯೋಽಣ್' (5.1.130) ಎಂಬ ಸೂತ್ರದಿಂದ ಅಣ್ ।

**ಪ್ರಯೋಗ**— ಸ್ಯಾತ್ ಎಂಬ ಕ್ರಿಯಾಪದವು ಹಿಂದೆ ಬಂದಿದೆ. ವಿಮತೇನ ಪುರುಷೇಣ ಅಜ್ಞೇನ ಭೂಯೇತ, ಪುಂಸ್ತ್ವಾತ್ ಚೈತ್ರವತ್, ಅಮುನಾ ವಿಪ್ರಲಂಭಕೇನ ಚ ಭೂಯೇತ, ಇತಿ ಸಾರ್ವಜ್ಞೇ ಕೇವಲಾನುಮಯಾ ಅಸ್ತಯಾ ಭೂಯತೇ ।

★ ★ ★

**ಅವತಾರಿಕಾ**— ಬೌದ್ಧಾದಿ ಶಾಸ್ತ್ರಗಳಲ್ಲಿ ಪ್ರೀತಿಯಿಟ್ಟವರಿಗಾಗುವ ದುಷ್ಫಲವನ್ನು ವಿವರಿಸುತ್ತಾರೆ.

**ದುಃಖಾ(ಖೀ)ಕರೋತಿ ಯದ್ದೈವಂ ದುಶ್ಶಾಸ್ತ್ರೇಷೂಗ್ರ ಆಗ್ರಹಃ ।**
**ದುಃಖಾಕರೋಽತಿಘೋರಸ್ಸ್ಯಾಲ್ಲೋಕೋಽತಸ್ತದ್ವತಾಂ ಧ್ರುವಃ ॥ 46 ॥**

**ಪದಚ್ಛೇದ**— ದುಃಖಾಕರೋತಿ(ದುಃಖೀಕರೋತಿ), ಯತ್, ದೈವಂ, ದುಶ್ಶಾಸ್ತ್ರೇಷು, ಉಗ್ರಃ, ಆಗ್ರಹಃ, ದುಃಖಾಕರಃ, ಅತಿಘೋರಃ, ಸ್ಯಾತ್, ಲೋಕಃ, ಅತಃ, ತದ್ವತಾಂ, ಧ್ರುವಃ ।

**ಅನ್ವಯ**— ಯತ್, ದುಶ್ಶಾಸ್ತ್ರೇಷು, ಉಗ್ರಃ, ಆಗ್ರಹಃ, ದೈವಂ, ದುಃಖಾಕರೋತಿ (ದುಃಖೀಕರೋತಿ), ಅತಃ, ತದ್ವತಾಂ, ಅತಿಘೋರಃ, ದುಃಖಾಕರಃ, ಧ್ರುವಃ, ಲೋಕಃ, ಸ್ಯಾತ್ ।

**ಅನ್ವಯಾರ್ಥ**—

**ಯತ್** = ಯಾವ ಕಾರಣದಿಂದ,

**ದುಶ್ಶಾಸ್ತ್ರೇಷು** = ವೇದವಿರುದ್ಧವಾದ ಶಾಸ್ತ್ರಗಳಲ್ಲಿ,

**ಉಗ್ರಃ** = ಕಠಿಣವಾದ (ದೃಢವಾದ),

**ಆಗ್ರಹಃ** = ಅಭಿಮಾನವು ಹಠವು,

**ದೈವಂ** = ಭಗವಂತನನ್ನು,

**ದುಃಖಾಕರೋತಿ** = ವೇದಗಳಲ್ಲಿ ಹೇಳಿರುವುದಕ್ಕಿಂತ ವಿಪರೀತವಾಗಿ ದುಃಖಿ ಎಂದು ತೋರಿಸುತ್ತದೆ (ವೇದದಲ್ಲಿ ಹೇಳಿರುವುದಕ್ಕಿಂತ ವಿಪರೀತವಾಗಿ ಉಪಾಸನೆ ಮಾಡಿಸುತ್ತದೆ).

**ಅತಃ** = ಆದುದರಿಂದ,

**ತದ್ವತಾಂ** = ಅಂತಹ ಆಗ್ರಹವುಳ್ಳವರಿಗೆ,

**ಅತಿಘೋರಃ** = ಅತ್ಯಂತ ಭಯಂಕರವಾದ,

**ದುಃಖಾಕರಃ** = ಕಷ್ಟಗಳಿಗೆ ಗಣಿಯಂತಿರುವ,

**ಧ್ರುವಃ** = ಶಾಶ್ವತವಾದ,

**ಲೋಕಃ** = ಲೋಕವು,

**ಸ್ಯಾತ್** = ಆಗಿಯೇ ತೀರುತ್ತದೆ.

**ತಾತ್ಪರ್ಯ**— ಅವೈದಿಕ ಶಾಸ್ತ್ರಗಳೆಲ್ಲವೂ ದುಶ್ಶಾಸ್ತ್ರಗಳು, ಅವುಗಳಲ್ಲಿ ಆಗ್ರಹವುಳ್ಳವರಿಗೆ ಬಹಳ ಕೆಟ್ಟ ಫಲವಾಗುತ್ತದೆ. ಏಕೆಂದರೆ ಬೌದ್ಧಾದಿ ದುಶ್ಶಾಸ್ತ್ರಗಳಲ್ಲಿ ನಿವಾರಿಸಲು ಸಾಧ್ಯವಿಲ್ಲದ ದೃಢವಾದ ದುರಭಿಮಾನವೆಂಬ ಹಠವು ಉಂಟಾಗಿ,

ಅವುಗಳು ಪರಮಪ್ರಮಾಣವೆಂದು ನಂಬಿದವರು ವೇದಾದಿ ಸಚ್ಛಾಸ್ತ್ರಗಳಲ್ಲಿ ಹೇಳಿದ ರೀತಿಗಿಂತ ವಿಪರೀತವಾದ ರೀತಿಯಲ್ಲಿ ಪರಮಾತ್ಮನನ್ನು ತಿಳಿಯುತ್ತಾರೆ, ಇಲ್ಲವೆಂದೇ ತಿಳಿಯುತ್ತಾರೆ ಮತ್ತು ಹಾಗೆಯೇ ಉಪಾಸನೆ ಮಾಡುತ್ತಾರೆ. ಹೀಗೆ ಪರಮಾತ್ಮನ ಸರಿಯಾದ ರೂಪಕ್ಕಿಂತ ವಿಪರೀತರೂಪದ ಉಪಾಸನೆ ಮಾಡುವ ಆ ದುಶ್ಶಾಸ್ತ್ರಾಗ್ರಹಿಗಳಿಗೆ ಸಕಲ ದುಃಖಿಗಳಿಗೂ ಆಶ್ರಯವಾಗಿದ್ದು ಸಹಿಸಲಸಾಧ್ಯವಾದ ಶಾಶ್ವತವಾದ ಅಂಧಂತಮಸ್ಸೆಂಬ ದುಃಖವುಂಟಾಗುತ್ತದೆ. ದುಃಶ್ಶಾಸ್ತ್ರಗಳಲ್ಲಿ ಆಗ್ರಹದಿಂದ ಪರಮಪುರುಷನಾದ ಭಗವಂತನನ್ನು ವಿಪರೀತ ರೀತಿಯಿಂದ ಉಪಾಸನೆ ಮಾಡಿ ಪರಮದುಃಖಕರವಾದ ಲೋಕಗಳನ್ನು ದುರ್ವಾದಿಗಳು ಪಡೆಯುತ್ತಾರೆ ಎಂದು ಭಾವ.

**ವಿಗ್ರಹ ಮತ್ತು ಕೋಶ—**

ಪ್ರಾತಿಲೋಮ್ಯೇನ ದುಃಖಂ ಕರೋತಿ ದುಃಖಾಕರೋತಿ, ಆರಾಧ್ಯಪ್ರತಿಕೂಲಾಚರಣಂ, ಪ್ರಾತಿಲೋಮ್ಯಂ = ಆರಾಧಿಸುವ ದೇವತೆಗೆ ಪ್ರತಿಕೂಲವಾಗಿ ನಡೆದುಕೊಳ್ಳುವುದು ಪ್ರಾತಿಲೋಮ್ಯ, ಇಂತಹ ಪ್ರಾತಿ-ಲೋಮ್ಯದಿಂದ ದುಃಖವನ್ನು ಉಂಟುಮಾಡುತ್ತಾನೆ ಎಂಬ ಅರ್ಥದಲ್ಲಿ 'ದುಃಖಾತ್ ಪ್ರಾತಿಲೋಮ್ಯೇ ಡಾಚ್' (5.4.64) ಎಂಬ ಸೂತ್ರದಿಂದ ಡಾಚ್ (ಆ) ಪ್ರತ್ಯಯ.

**ದುಃಖಾಕರೋತಿ—** ದುಃಖ+ಆ+ ಕರೋತಿ ದುಃಖಾಕರೋತಿ, ದುಃಖೀಕರೋತಿ ಎಂಬ ಪಾಠದಲ್ಲಿ, ದುಃಖಂ ಅಸ್ಯ ಅಸ್ತೀತಿ ದುಃಖೀ, ಅದುಃಖಿನಂ, ದುಃಖಿನಂ ಸಂಪದ್ಯಮಾನಂ ಕರೋತಿ ದುಃಖೀಕರೋತಿ ಎಂದು ವಿಗ್ರಹ । ಕೃಭ್ವಸ್ತಿಯೋಗೇ ಸಂಪದ್ಯಕರ್ತರಿ ಚ್ವಿಃ (5.4.50) ಎಂಬ ಸೂತ್ರದಿಂದ ಅಭೂತತದ್ಭಾವ ಇತಿ ವಕ್ತವ್ಯಂ (ವಾ.3340) ಎಂಬ ವಾರ್ತಿಕದಿಂದ ಚ್ವಿಪ್ರತ್ಯಯ.

**ದುಃಶಾಸ್ತ್ರೇಷು—** ದುಷ್ಟಾನಿ ಚ ತಾನಿ ಶಾಸ್ತ್ರಾಣಿ ಚ ದುಶ್ಶಾಸ್ತ್ರಾಣಿ ತೇಷು, ದುಃಖಾನಾಂ ಆಕರಃ ದುಃಖಾಕರಃ । ಆಕರಃ = ಗಣಿ, 'ಖನಿಃ ಸ್ತ್ರಿಯಾಂ ಆಕರಃ ಸ್ಯಾತ್' ಅಮರ ।

**ಅತಿಘೋರಃ—** ಅತ್ಯಂತಂ ಘೋರಃ ಅತಿಘೋರಃ, (ಉಗ್ರ ಆಗ್ರಹಃ) ।

**ತದ್ವತಾಂ—** ಸಃ ಏಷಾಂ ಅಸ್ತೀತಿ ತದ್ವಂತಃ ತೇಷಾಂ ।

**ಕ್ರಿಯಾಪದ—** ಕರೋತಿ ಕುರುತಃ ಇತ್ಯಾದಿ ಕೃಧಾತು ಲಟ್ ।

**ಪ್ರಯೋಗ—** ಯತ್ ದುಶ್ಶಾಸ್ತ್ರೇಷು ಉಗ್ರೇಣ ಆಗ್ರಹೇಣ ದೈವಂ ದುಃಖಾಕ್ರಿಯತೇ (ದುಃಖೀಕ್ರಿಯತೇ) ಅತಃ ತದ್ವತಾಂ ಅತಿಘೋರೇಣ ದುಃಖಾಕರೇಣ ಧ್ರುವೇಣ ಲೋಕೇನ ಭೂಯೇತ ।

★ ★ ★

**ಅವತಾರಿಕಾ—** ಸಚ್ಛಾಸ್ತ್ರವನ್ನು ಅಭ್ಯಾಸ ಮಾಡಿದವರಿಗೆ ಆಗುವ ಫಲವನ್ನು ವಿವರಿಸುತ್ತಾರೆ.

**ಅಸ್ಮಾಕೇಽಪೇಕ್ಷಿತೇ ಪಕ್ಷೇ ಮೋಕ್ಷಂ ದದ್ಯಾದಧೋಕ್ಷಜಃ ।**
**ಯತ್ರ ಸ್ವಾನಂದಿನಃ ಸಂತಃ ಸೇವಂತೇ ವಿಷಯಾನ್ ಬಹೂನ್ ॥ 47 ॥**

**ಪದಚ್ಛೇದ—** ಅಸ್ಮಾಕೇ, ಅಪೇಕ್ಷಿತೇ, ಪಕ್ಷೇ, ಮೋಕ್ಷಂ, ದದ್ಯಾತ್, ಅಧೋಕ್ಷಜಃ, ಯತ್ರ, ಸ್ವಾನಂದಿನಃ, ಸಂತಃ, ಸೇವಂತೇ, ವಿಷಯಾನ್, ಬಹೂನ್ ।

**ಅನ್ವಯ—** ಅಸ್ಮಾಕೇ, ಪಕ್ಷೇ, ಅಪೇಕ್ಷಿತೇ, ಅಧೋಕ್ಷಜಃ, ಯತ್ರ, ಸಂತಃ, ಸ್ವಾನಂದಿನಃ, ಬಹೂನ್, ವಿಷಯಾನ್, ಸೇವಂತೇ, ತಂ, ಮೋಕ್ಷಂ, ದದ್ಯಾತ್ ।

**ಅನ್ವಯಾರ್ಥ—**

**ಅಸ್ಮಾಕೇ** = ನಮ್ಮದಾದ,

**ಪಕ್ಷೇ** = ಸಿದ್ಧಾಂತವು,

**ಅಪೇಕ್ಷಿತೇ (ಸತಿ)** = ಪ್ರಮಾಣವಾಗಿ ಒಪ್ಪಲ್ಪಡಲು, ಸ್ವೀಕರಿಸಲ್ಪಟ್ಟಾಗ,

**ಅಧೋಕ್ಷಜಃ** = ಶ್ರೀಮನ್ನಾರಾಯಣನು,

**ಯತ್ರ** = ಯಾವ ಸಿದ್ಧಾಂತಪ್ರಕಾರವಾದ ಮೋಕ್ಷದಲ್ಲಿ,

**ಸಂತಃ** = ಸಾತ್ತ್ವಿಕಜೀವರು,

**ಸ್ವಾನಂದಿನಃ** = ಸ್ವರೂಪಾನಂದಾದಿವಿರ್ಭಾವವುಳ್ಳವರಾಗಿ,

**ಬಹೂನ್ ವಿಷಯಾನ್** = ಬಹಳವಾದ ಅಪ್ರಾಕೃತ ಭೋಗ್ಯವಸ್ತುಗಳನ್ನು,

**ಸೇವಂತೇ** = ಅನುಭವಿಸುತ್ತಾರೋ,

**ತಂ** = ಅಂತಹ,

**ಮೋಕ್ಷಂ** = ಮೋಕ್ಷವನ್ನು,

**ದದ್ಯಾತ್** = ಕೊಟ್ಟೇ ಕೊಡುತ್ತಾನೆ.

**ತಾತ್ಪರ್ಯ—** ನಮ್ಮ ದ್ವೈತಸಿದ್ಧಾಂತವನ್ನು ಪ್ರಮಾಣವೆಂದು ಅಂಗೀಕರಿಸಿ ಪ್ರತ್ಯಕ್ಷ, ಪ್ರಮಾಣಕ್ಕೆ ಗೋಚರನಾಗದೇ ಸಾಧನದೆಶೆಯಲ್ಲಿ ಕೇವಲ ವೇದವೆಂಬ ಸದಾಗಮಕ್ಕೆ ಗೋಚರನಾದ ನಾರಾಯಣನನ್ನು ಭಕ್ತಿಯಿಂದ ಕೂಡಿದ ಉಪಾಸನೆಯಿಂದ ಸಾಕ್ಷಾತ್ಕರಿಸಿದರೆ ಅವನು ಪ್ರಸನ್ನನಾಗಿ ಮೋಕ್ಷವನ್ನು ಕೊಡುವನು. ನಾವು ಹೇಳುವ ಮೋಕ್ಷದಲ್ಲಿ ಸಾತ್ತ್ವಿಕ ಜೀವರು ಸ್ವರೂಪಾನಂದವನ್ನು ನಿರಂತರವಾಗಿ ಅನುಭವಿಸುತ್ತಿರುವರು. ಅಪ್ರಾಕೃತವಾದ ಶಬ್ದ ಸ್ಪರ್ಶಾದಿಗಳನ್ನು ಸ್ತ್ರೀ ಮುಂತಾದ ಅಪ್ರಾಕೃತಭೋಗಗಳನ್ನು ಅನುಭವಿಸುತ್ತಾರೆ. ಇಲ್ಲಿಯ ಭೋಗವೆಲ್ಲವೂ ಜಡಪ್ರಕೃತಿಸಂಬಂಧವಾದ ಸತ್ತ್ವ ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಗೆ ಸಂಬಂಧಿಸಿದುದು. ನಶ್ವರ, ದುಃಖಮಿಶ್ರ, ದುಃಖಾಧಿಕವೂ ಆಗಿದೆ. ಮೋಕ್ಷದ ಭೋಗವು ಪ್ರಕೃತಿಸಂಬಂಧವಿಲ್ಲದುದು ಕೇವಲ ಸುಖಾತ್ಮಕವಾಗಿದೆ ಎಂದು ಭಾವ.

ವಿಗ್ರಹ—

**ಅಸ್ಮಾಕೇ—** ಅಸ್ಮಾಕಂ ಅಯಂ ಆಸ್ಮಾಕಃ ತಸ್ಮಿನ್ । ತಸ್ಮಿನ್ನಣಿ ಚ ಯುಷ್ಮಾಕಾಸ್ಮಾಕೌ (4-3-2) ಎಂಬ ಸೂತ್ರದಿಂದ ಯುಷ್ಮಾಕ ಎಂಬ ಆದೇಶ ಮತ್ತು ಅಣ್ ಪ್ರತ್ಯಯ ।

**ಅಧೋಕ್ಷಜಃ—** ಅಧಃಕೃತಂ ಅಕ್ಷಜಂ ಯೇನ ಸಃ ಅಧೋಕ್ಷಜಃ ।

**ಸ್ವಾನಂದಿನಃ—** ಸ್ವಶ್ಚಾಸೌ ಆನಂದಶ್ಚ ಸ್ವಾನಂದಃ, ಸ್ವಾನಂದಃ ಏಷಾಂ ಅಸ್ತೀತಿ ಸ್ವಾನಂದಿನಃ ।

**ಕ್ರಿಯಾಪದ—** **ದದ್ಯಾತ್** - ದದ್ಯಾತ್ ದದ್ಯಾತಾಂ ದದ್ಯುಃ, ದದ್ಯಾಃ ದದ್ಯಾತಂ ದದ್ಯಾತ, ದದ್ಯಾಂ ದದ್ಯಾವ ದದ್ಯಾಮ । ಡುದಾಞ್ (ದಾ) ದಾನೇ ಧಾತು ಪರ. ವಿಧಿಲಿಙ್. ಸೇವತೇ - ಸೇವತೇ ಸೇವೇತೇ ಸೇವಂತೇ, ಸೇವಸೇ ಸೇವೇಥೇ ಸೇವಧ್ವೇ, ಸೇವೇ ಸೇವಾವಹೇ ಸೇವಾಮಹೇ । ಷೇವೃ (ಸೇವ್) ಸೇವನೇ ಸಕ ಸೇಟ್ ಆತ್ಮ ಲಟ್ to serve to enjoy.

**ಪ್ರಯೋಗ—** ಆಸ್ಮಾಕೇ ಪಕ್ಷೇ ಅಪೇಕ್ಷಿತೇ ಅಧೋಕ್ಷಜೇನ, ಯತ್ರ ಸದ್ಭಿಃ ಸ್ವಾನಂದಿಭಿಃ ಬಹವಃ ವಿಷಯಾಃ ಸೇವ್ಯಂತೇ (ಸಃ) ಮೋಕ್ಷಃ ದೀಯೇತ ।

★ ★ ★

**ಅವತಾರಿಕಾ—** ಜೀವಾತ್ಮನು ನಿರ್ವಿಶೇಷ ಬ್ರಹ್ಮಸ್ವರೂಪನಾಗುವುದೇ ಮೋಕ್ಷವು. ಹಾಗಿರುವಾಗ ಆನಂದಾನುಭವ-ವೆಂಬ ವಿಶೇಷವು ಎಲ್ಲಿಂದ ಬರುತ್ತದೆ? ಆನಂದಾನುಭವವೆಂಬ ವಿಶೇಷವನ್ನು ಒಪ್ಪಿದರೆ ಬ್ರಹ್ಮನು ನಿರ್ವಿಶೇಷನು ಎಂಬ ಸಿದ್ಧಾಂತಕ್ಕೆ ಭಂಗ ಬಂದೀತಷ್ಟೆ ಎಂದರೆ ಹೇಳುತ್ತಾರೆ.

**ಸ್ವವ್ಯಾಹತ್ಯಾದಿನೋಪೇಕ್ಷ್ಯಾ ಮುಕ್ತಿರ್ಯಾ ನಿರ್ವಿಶೇಷಿ(ಷ)ತಾ ।**
**ಕದೇತ್ಯಾದ್ಯನುಯೋಗೇಽಸ್ಯಾ ವಿಶೇಷಃ ಸ್ಯಾನ್ನನೂತ್ತರೇ ॥ 48 ॥**

**ಪದಚ್ಛೇದ—** ಸ್ವವ್ಯಾಹತ್ಯಾದಿನಾ, ಉಪೇಕ್ಷ್ಯಾ, ಮುಕ್ತಿಃ, ಯಾ, ನಿರ್ವಿಶೇಷಿತಾ, ಇತಿ, ಆದಿ, ಅನುಯೋಗೇ, ಅಸ್ಯಾಃ, ವಿಶೇಷಃ, ಸ್ಯಾತ್, ನನು, ಉತ್ತರೇ ।

**ಅನ್ವಯ—** ಯಾ, ಮುಕ್ತಿಃ, ನಿರ್ವಿಶೇಷಿತಾ (ಸಾ), ಸ್ವವ್ಯಾಹತ್ಯಾದಿನಾ, ಉಪೇಕ್ಷ್ಯಾ, ಕದಾ, ಇತ್ಯಾದ್ಯನುಯೋಗೇ, ಉತ್ತರೇ, ಅಸ್ಯಾಃ, ವಿಶೇಷಃ, ಸ್ಯಾನ್ನನು ।

**ಅನ್ವಯಾರ್ಥ—**

**ಯಾ** = ಯಾವ,
**ಮುಕ್ತಿಃ** = ಮೋಕ್ಷವು,
**ನಿರ್ವಿಶೇಷಿ(ಷ)ತಾ** = ಯಾವ ವಿಶೇಷವೂ ಇಲ್ಲದ ಬ್ರಹ್ಮಸ್ವರೂಪವಾದುದೋ, (ಸಾ = ಅದು)
**ಸ್ವವಾಹತ್ಯಾದಿನಾ** = ತನ್ನ ಮಾತಿಗೇ ತಾನು ವಿರೋಧವಾಗಿ ಆಡುವುದು ಎಂಬ ಸ್ವವ್ಯಾಹತಿ, ಇನ್ನೂ ಇತರ ದೋಷದಿಂದ,
**ಉಪೇಕ್ಷ್ಯಾ** = ಉದಾಸೀನ ಮಾಡಲ್ಪಡತಕ್ಕದ್ದು,
**ಕದಾಇತ್ಯಾದಿಅನುಯೋಗೇ (ಸತಿ)** = ಯಾವಾಗ? ಇದೇ ಮೊದಲಾದ ಪ್ರಶ್ನೆ ಮಾಡಿದಾಗ,
**ಉತ್ತರೇ** = ಉತ್ತರದಲ್ಲಿ,
**ಅಸ್ಯಾಃ** = ಈ ಮುಕ್ತಿಗೆ,
**ವಿಶೇಷಃ** = ವಿಶೇಷವು,
**ಸ್ಯಾತ್ ನನು** = ಬಂದೇ ಬರುತ್ತದೆಯಷ್ಟೆ.

**ತಾತ್ಪರ್ಯ—** ಅದ್ವೈತವಾದಿಗಳು ಜೀವಾತ್ಮನಿಗೆ ಯಾವ ವಿಶೇಷವೂ ಇಲ್ಲದ ಬ್ರಹ್ಮಸ್ವರೂಪ ಪ್ರಾಪ್ತಿಯೇ ಮೋಕ್ಷ-ವೆಂದು ಹೇಳುತ್ತಾರೆ. ಆದರೆ ಈ ಪಕ್ಷದಲ್ಲಿ ಸ್ವವ್ಯಾಹತಿ ಮುಂತಾದ ದೋಷಗಳು ಬರುವುದರಿಂದ ಈ ಪಕ್ಷವನ್ನು ಮೋಕ್ಷಾಪೇಕ್ಷಿಗಳು ಉಪೇಕ್ಷಿಸಬೇಕಾಗಿದೆ. ಸ್ವವ್ಯಾಹತಿ ಮುಂತಾದ ದೋಷಗಳು ಹೇಗೆ ಬರುತ್ತವೆಂದರೆ ಭೇದವಾದಿಯು ಐಕ್ಯವಾದಿಯನ್ನು ಕುರಿತು ನಿನ್ನ ಸಿದ್ಧಾಂತದಂತೆ ಮುಕ್ತಿಯು ಯಾವಾಗ ಆಗುತ್ತದೆ ಎಂದು ಪ್ರಶ್ನೆ ಮಾಡುತ್ತಾನೆ. ಆಗ ಐಕ್ಯವಾದಿಯು ಉತ್ತರ-ವನ್ನು ಕೊಟ್ಟರೆ ಅವನು ಹೇಳುವ ಮುಕ್ತಿಯಲ್ಲಿ ವಿಶೇಷವು ಬಂದೇ ಬಂತು. ಭೇದವಾದಿಗಳು ಐಕ್ಯವಾದಿಗಳನ್ನು ಕುರಿತು ನಿಮ್ಮ ಸಿದ್ಧಾಂತದಂತೆ ಜೀವನಿಗೆ ಬ್ರಹ್ಮಸ್ವರೂಪಪ್ರಾಪ್ತಿ ಎಂಬ ಮೋಕ್ಷವು ಯಾವಾಗ ಹೇಗೆ ಆಗುತ್ತದೆ ಎಂದು ಕೇಳಿದಾಗ ಉತ್ತರ ಹೇಳುವವನು ಐಕ್ಯಜ್ಞಾನ ಪರಿಪಾಕವು ಪೂರ್ಣವಾದ ಮೇಲೆ ಮುಕ್ತಿ ಎಂದು ಉತ್ತರ ಕೊಡುತ್ತಾನೆ. ಆಗ ಮುಕ್ತಿಗೆ ಐಕ್ಯ ಜ್ಞಾನೋತ್ತರ ಕಾಲಸಂಬಂಧ ಎಂಬ ವಿಶೇಷವೂ ಪರಿಪಾಕವೆಂಬ ವಿಶೇಷವೂ, ಪೂರ್ಣತೆ ಎಂಬ ವಿಶೇಷವೂ ಬಂದಂತೆ ಆಯಿತು. ಈ ವಿಶೇಷಗಳನ್ನೆಲ್ಲಾ ಒಪ್ಪಿ ಪುನಃ ಬ್ರಹ್ಮನು ನಿರ್ವಿಶೇಷವೆಂದು ಒಪ್ಪಿದರೆ ತಾನು ಒಪ್ಪಿದ್ದಕ್ಕೇ ತಾನೇ ವಿರುದ್ಧವಾಗಿ ಒಪ್ಪಿದಂತಾಯಿತು. ಇದೇ ಸ್ವವ್ಯಾಹತಿಯು ಬ್ರಹ್ಮನಿಗೆ ನಿರ್ವಿಶೇಷತ್ವವನ್ನು ಸಂರಕ್ಷಿಸುವುದಕ್ಕೋಸ್ಕರ ಉತ್ತರವನ್ನೇ ಕೊಡದೇ ಸುಮ್ಮನಿದ್ದರೆ 'ಅನುಕ್ತಿ' ಎಂಬ ನಿಗ್ರಹಸ್ಥಾನವು ಬರುತ್ತದೆ. (ಪರಾಜಯದ ಕಾರಣವನ್ನು ನಿಗ್ರಹಸ್ಥಾನವೆಂದು ಹೇಳುತ್ತಾರೆ). ಆದುದರಿಂದ ನಿರ್ವಿಶೇಷಬ್ರಹ್ಮಸ್ವರೂಪ ಪ್ರಾಪ್ತಿಯು ಮೋಕ್ಷವೆಂದು ಒಪ್ಪಕೂಡದು.

ವಿಗ್ರಹ—

**ಸ್ವವ್ಯಾಹತ್ಯಾದಿನಾ**— ಸ್ವವ್ಯಾಹತಿಃ ಆದಿಃ ಯಸ್ಯಸಃ ಸ್ವವ್ಯಾಹತ್ಯಾದಿಃ ತೇನ । (ದೋಷೇಣ)

**ಉಪೇಕ್ಷ್ಯ**— ಉಪೇಕ್ಷಿತುಂ ಯೋಗ್ಯಾ ಉಪೇಕ್ಷ್ಯಾ ।

**ನಿರ್ವಿಶೇಷಿತಾ**— ನಿರ್ಗತಃ ವಿಶೇಷಃ ಯಸ್ಮಾತ್ ತತ್ ನಿರ್ವಿಶೇಷಂ (ಬ್ರಹ್ಮ) ನಿರ್ವಿಶೇಷಸ್ಯ ಭಾವಃ ನಿರ್ವಿಶೇಷತಾ । ನಿರ್ವಿಶೇಷಿತಾ ಎಂಬ ಪಾಠದಲ್ಲಿ ವಿಶೇಷಃ ಅಸ್ಯ ಅಸ್ತೀತಿ ವಿಶೇಷಿ, ವಿಶೇಷಿಣಃ ಭಾವಃ ವಿಶೇಷಿತಾ, ನಿರ್ಗತಾ ಚ ಸಾ ವಿಶೇಷಿತಾ ಚ ನಿರ್ವಿಶೇಷಿತಾ ।

**ಕದೇತ್ಯಾನುಯೋಗೇ**— ಕದಾ ಇತಿ ಆದಿಃ ಯಸ್ಯ ಸಃ ಕದೇತ್ಯಾದಿಃ, ಕದೇತ್ಯಾದಿಶ್ಚಾಸೌ ಅನುಯೋಗಶ್ಚ ಕದೇತ್ಯಾದ್ಯನುಯೋಗಃ ತಸ್ಮಿನ್ ।

**ಪ್ರಯೋಗ**— ಯಯಾ ಮುಕ್ತ್ಯಾ ನಿರ್ವಿಶೇಷಿತಯಾ ಭೂಯತೇ (ತಯಾ) ಸ್ವವ್ಯಾಹತ್ಯಾದಿನಾ ಉಪೇಕ್ಷ್ಯಯಾ ಭೂಯತೇ, ಕದೇತ್ಯಾದ್ಯನುಯೋಗೇ (ಸತಿ) ಉತ್ತರೇ ಅಸ್ಯಾಃ ವಿಶೇಷಣ ಭೂಯೇತ ನನು ।

★ ★ ★

**ಅವತಾರಿಕಾ**— ಈ ವಿಷಯದಲ್ಲಿ ಮತ್ತೊಂದು ದೋಷವನ್ನು ಹೇಳುತ್ತಾರೆ.

**ಅಪಿ ಬುದ್ಧ್ಯಾದಿರಹಿತಃ ಪುರುಷಾರ್ಥೀ ನ ಸರ್ವಥಾ ।**
**ನಿಖಿಲಾನುಭವಾಭಾವಾತ್ ಪುತ್ತಲೀಕಾಪುರೋಗವತ್ ॥ 49 ॥**

**ಪದಚ್ಛೇದ**— ಅಪಿ, ಬುದ್ಧ್ಯಾದಿರಹಿತಃ, ಪುರುಷಾರ್ಥೀ, ನ, ಸರ್ವಥಾ, ನಿಖಿಲಾನುಭವಾಭಾವಾತ್, ಪುತ್ತಲೀಕಾ ಪುರೋಗವತ್ ।

**ಅನ್ವಯ**— ಅಪಿ, ಬುದ್ಧ್ಯಾದಿರಹಿತಃ, ನಿಖಿಲಾನುಭವಾಭಾವಾತ್, ಪುತ್ತಲೀಕಾಪುರೋಗವತ್, ಸರ್ವಥಾ, ಪುರುಷಾರ್ಥೀ, ನ ।

**ಅನ್ವಯಾರ್ಥ**—

**ಅಪಿ** = ಮತ್ತು,

**ಬುದ್ಧ್ಯಾದಿರಹಿತಃ** = ಬುದ್ಧಿ (ಅಂತಃಕರಣ) ಚಕ್ಷುರಾದಿ ಇಂದ್ರಿಯಗಳು ಇವುಗಳು ಇಲ್ಲದಿರುವವನು,

**ನಿಖಿಲ ಅನುಭವ ಅಭಾವಾತ್** = ಎಲ್ಲಾ ಬಾಹ್ಯ ಮತ್ತು ಅಂತರವಾದ ಸಂವೇದನೆಗಳ ಇಲ್ಲದಿರುವಿಕೆ-ಯಿಂದ,

**ಪುತ್ತಲೀಕಾ** = ಮರದ ಗೊಂಬೆ,

**ಪುರೋಗವತ್** = ಮೊದಲಾದುದರಂತೆ,

**ಸರ್ವಥಾ** = ಎಲ್ಲಾ ರೀತಿಯಿಂದಲೂ,

**ಪುರುಷಾರ್ಥೀ ನ** = ಜೀವರು ಅಪೇಕ್ಷಿಸುವ ಯಾವ ಪ್ರಯೋಜನವೂ ಉಳ್ಳವನಲ್ಲ.

**ತಾತ್ಪರ್ಯ**— ಮುಕ್ತನಿಗೆ ಬುದ್ಧಿ, ಅಂತಃಕರಣ, ಕಣ್ಣು ಕಿವಿ ಮೊದಲಾದ ಇಂದ್ರಿಯಗಳು ಯಾವುವೂ ಇಲ್ಲ ಎಂದು ಹೇಳುವವರೂ ಇದ್ದಾರೆ. ವೈಶೇಷಿಕರೆಂಬ ತಾರ್ಕಿಕರು ಜೀವನು ಬಾಹ್ಯ ಆಂತರಜ್ಞಾನವಿಲ್ಲದೆ ಬರೀ ಪಾತ್ರೆಯಂತೆ ಜೀವ ಸ್ವರೂಪ ಮಾತ್ರ ಇರುವುದೇ ಮೋಕ್ಷವೆನ್ನುತ್ತಾರೆ. ಹೀಗೆ ಒಪ್ಪಿದರೆ ಆ ಮುಕ್ತನಿಗೆ ಯಾವ ರೀತಿಯಲ್ಲಿಯೂ ಯಾವ ಪುರುಷಾರ್ಥವೂ ಇಲ್ಲವೆಂದಾದೀತು. ಹೊರಗಿನ ವಸ್ತುಗಳ ಜ್ಞಾನಕ್ಕೆ ಬೇಕಾದ ಬಾಹ್ಯ ಇಂದ್ರಿಯಗಳು ಇಲ್ಲದಿರುವುದರಿಂದ ಅವನಿಗೆ ಬಾಹ್ಯವಸ್ತುವಿನ ಜ್ಞಾನವಿಲ್ಲವೆಂದಾಯಿತು. ಅಂತಃಕರಣವಿಲ್ಲದಿರುವುದರಿಂದ ಒಳಗಿನ ಸುಖಾದಿಗಳ ಅನುಭವವೂ

ಇಲ್ಲವೆಂದಾಯಿತು. ಆಗ ಅವನು ಮರದ ಗೊಂಬೆ, ಶಿಲಾಪ್ರತಿಮೆ ಮುಂತಾದವುಗಳಂತೆ ಜಡನೆಂದೇ ಆಯಿತು. ಮರದ ಗೊಂಬೆ ಮುಂತಾದ ವಸ್ತುಗಳಿಗೂ ಕಣ್ಣು ಮೊದಲಾದ ಇಂದ್ರಿಯಗಳೂ ಬುದ್ಧಿ ಮೊದಲಾದವುಗಳೂ ಇಲ್ಲ. ಅದಕ್ಕೆ ಯಾವ ಪುರುಷಾರ್ಥವೂ ಇಲ್ಲ. ಅದರಂತೆಯೇ ಮುಕ್ತನೂ ಇರಬೇಕಾಗುತ್ತದೆ.

**ವಿಗ್ರಹ—**

**ಬುದ್ಧ್ಯಾದಿರಹಿತಃ—** ಬುದ್ಧಿಃ ಆದಿಃ ಯಸ್ಯಸಃ ಬುದ್ಧ್ಯಾದಿಃ, ಬುದ್ಧ್ಯಾದಿನಾ ರಹಿತಃ, ಬುದ್ಧ್ಯಾದಿರಹಿತಃ ।

**ಪುರುಷಾರ್ಥೀ—** ಪುರುಷೈಃ ಅರ್ಥ್ಯಂತೇ ಇತಿ ಪುರುಷಾರ್ಥಾಃ ಪುರುಷಾರ್ಥಾಃ ಅಸ್ಯ ಸಂತೀತಿ ಪುರುಷಾರ್ಥೀ ।

**ನಿಖಿಲಾನುಭವಾಭಾವಾತ್—**ನಿಖಿಲಾಶ್ಚತೇ ಅನುಭವಾಶ್ಚ ನಿಖಿಲಾನುಭವಾಃ ನಿಖಿಲಾನುಭವಾನಾಂ ಅಭಾವಃ ನಿಖಿಲಾನುಭವಾಭಾವಃ ತಸ್ಮಾತ್ ।

**ಪುತ್ತಲೀಕಾಪುರೋಗವತ್—** ಪುತ್ತಲೀಕಾ ಪುರೋಗಾ ಯಸ್ಯ ಸಃ ಪುತ್ತಲೀಕಾಪುರೋಗಃ, ಪುತ್ತಲೀಕಾ ಪುರೋಗೇಣತುಲ್ಯಂ ಪುತ್ತಲೀಕಾಪುರೋಗವತ್ ।

**ಪ್ರಯೋಗ—** ಅಪಿ ಬುದ್ಧ್ಯಾದಿರಹಿತೇನ ಪುತ್ತಲೀಕಾಪುರೋಗವತ್ ನಿಖಿಲಾನುಭವಾಭಾವಾತ್ ಸರ್ವಥಾ ಪುರುಷಾರ್ಥಿನಾ ನ ಭೂಯತೇ ।

★ ★ ★

**ಅವತಾರಿಕಾ—** ಈಶ್ವರನ ಸಾರೂಪ್ಯ ಹೊಂದಿದ ಮುಕ್ತನಿಗೆ ಬುದ್ಧ್ಯಾದಿಗಳು ಇಲ್ಲವೆನ್ನುವುದು ಸರ್ವಥಾ ಅಯುಕ್ತವೆನ್ನುತ್ತಾರೆ.

**ಜ್ಞಾನಪ್ರಯತ್ನವಾಂಛಾವಾನೀಶೋ ನ ಹ್ಯಶುಭಂ (ಭ) ವ್ರಜೇತ್ ।**
**ಸ್ವಸಾಮರ್ಥ್ಯೇನ ತೇನೈವ ತಂ ಚ ಕುರ್ಯಾತ್ ಸ ತಾದೃಶಮ್ ॥ 50 ॥**

**ಪದಚ್ಛೇದ—** ಜ್ಞಾನಪ್ರಯತ್ನವಾಂಛಾವಾನ್, ಈಶಃ, ನ, ಹಿ, ಅಶುಭಂ, ಭಜೇತ್ (ವ್ರಜೇತ್), ಸ್ವಸಾಮರ್ಥ್ಯೇನ, ತೇನ, ಏವ, ತಂ, ಚ, ಕುರ್ಯಾತ್, ಸಃ, ತಾದೃಶಂ ।

**ಅನ್ವಯ—** ಜ್ಞಾನಪ್ರಯತ್ನವಾಂಛಾವಾನ್, ಈಶಃ, ಸ್ವಸಾಮರ್ಥ್ಯೇನ, ಅಶುಭಂ, ನ, ಭಜೇತ್ (ವ್ರಜೇತ್), ಹಿ. ತೇನ, ಏವ, ಸಃ, ತಂ, ಚ, ತಾದೃಶಂ, ಕುರ್ಯಾತ್ ।

**ಅನ್ವಯಾರ್ಥ—**

**ಜ್ಞಾನ** = ಎಲ್ಲಾ ವಸ್ತುಗಳ ಸರಿಯಾದ, ತಿಳುವಳಿಕೆ
**ಪ್ರಯತ್ನ** = ಕಾರ್ಯಸಾಧನೆಗೆ ಬೇಕಾಗುವ ಪ್ರಕೃಷ್ಟವಾದ ಕೃತಿ,
**ವಾಂಛಾವಾನ್** = ಕಾರ್ಯವನ್ನು ಸಾಧಿಸುವ ಇಚ್ಛೆ ಇವುಗಳುಳ್ಳ,
**ಈಶಃ** = ಸಮರ್ಥನಾದ ಪರಮಾತ್ಮನು,
**ಸ್ವಸಾಮರ್ಥ್ಯೇನ** = ತನ್ನ ಸ್ವರೂಪಶಕ್ತಿಯಿಂದ,
**ಅಶುಭಂ** = ಅನಿಷ್ಟವನ್ನು
**ನ ಭಜೇತ್ (ವ್ರಜೇತ್) ಹಿ** = ಹೊಂದಲಾರನಷ್ಟೆ!
**ತೇನ ಏವ** = ಅಂತಹ ಸಾಮರ್ಥ್ಯದಿಂದಲೇ,

**ಸಃ** = ಆ ಭಗವಂತನು,

**ತಂ ಚ** = ಆ ಜೀವನನ್ನಾದರೂ,

**ತಾದೃಶಂ** = ಜ್ಞಾನಾನಂದಾದಿ ಶುಭಗುಣವುಳ್ಳವನನ್ನಾಗಿ, ದುಃಖಾದಿ ಅಶುಭಗುಣರಹಿತನನ್ನಾಗಿ,

**ಕುರ್ಯಾತ್** = ಮಾಡುವನು.

**ತಾತ್ಪರ್ಯ—** ಸರ್ವಸ್ವಾಮಿಯಾದ ನಾರಾಯಣನಿಗೆ ಯಾವಾಗಲೂ ಸರಿಯಾದ ತಿಳುವಳಿಕೆಯಿದೆ. ಯಾವಾಗಲೂ ಸರಿಯಾದ ಪ್ರಯತ್ನವಿದೆ. ಹಾಗೆಯೇ ಸರಿಯಾದ ಇಚ್ಛೆ ಇದೆ. ಇದೆಲ್ಲವೂ ಅವನ ಸ್ವರೂಪಾತ್ಮಕವೇ ಆಗಿದೆ. ಅವನು ತನ್ನ ಸ್ವರೂಪಶಕ್ತಿಯಿಂದಲೇ ದುಃಖ, ಅಜ್ಞಾನ ಇತ್ಯಾದಿ ಅಮಂಗಳ ವಸ್ತುಗಳ ಸಂಬಂಧವನ್ನು ಎಂದೂ ಹೊಂದುವುದಿಲ್ಲ. ಏಕೆಂದರೆ ಪರಮಾತ್ಮನಿಗೆ ಈಶ ಎಂಬ ಹೆಸರಿದೆ. ಈಶ ಎಂದರೆ ಸಮರ್ಥನು. ಅವನು ತನ್ನ ಸ್ವರೂಪಸಾಮರ್ಥ್ಯದಿಂದಲೇ ದುಃಖಾದಿ ಅನಿಷ್ಟಧರ್ಮಗಳನ್ನು ಬಿಡುವನು. ದೋಷಗಳು ಸಮರ್ಥನ ಬಳಿಗೇ ಸುಳಿಯಲಾರವು. ಸುಖ ಮುಂತಾದ ಶುಭಧರ್ಮಗಳು ಅವನ ಸ್ವರೂಪವಾಗಿರುವುವು. ಅವುಗಳನ್ನು ಅವನು ಸರ್ವಕಾಲದೇಶಗಳಲ್ಲಿಯೂ ಅನುಭವಿಸುವನು. ಗುಣಪೂರ್ಣ, ಗುಣಾತ್ಮಕ, ದೋಷದೂರ ಆಗಿರುವ ವಸ್ತುವೇ ಈಶ್ವರನೆಂದು ಎಲ್ಲರೂ ಒಪ್ಪಲೇಬೇಕು. ಅಂತಹ ನಮ್ಮ ಈಶ್ವರನು ತನ್ನ ಸಾಮರ್ಥ್ಯದಿಂದಲೇ ತನ್ನನ್ನು ಸೇವಿಸುವ ಭಕ್ತನನ್ನೂ ಕೂಡ ಜ್ಞಾನ, ಆನಂದ ಮುಂತಾದ ಶುಭಗುಣ-ವುಳ್ಳವನನ್ನಾಗಿಯೂ, ದುಃಖ ಮೊದಲಾದ ಯಾವ ಅಶುಭಧರ್ಮಗಳೂ ಇಲ್ಲದವನನ್ನಾಗಿಯೂ ಮಾಡುತ್ತಾನೆ. ಈಶ್ವರನ ಸಾರೂಪ್ಯವು ಮುಕ್ತಿ ಎಂದು ಹೇಳುತ್ತಾರಷ್ಟೆ. ಪರಮಾತ್ಮನ ಸ್ವರೂಪದಂತಹ ಸ್ವರೂಪವನ್ನು ಹೊಂದುವುದು ಮುಕ್ತಿ ಎಂದಾದ ಮೇಲೆ ಪರಮಾತ್ಮನಂತೆಯೇ ನಿರ್ದುಃಖಸುಖಸ್ವರೂಪವು, ನಿರ್ದೋಷಗುಣಸ್ವರೂಪವು ಜೀವನಿಗೂ ಬರ-ಬೇಕಷ್ಟೆ. ತನ್ನ ಸ್ವರೂಪಸಾಮ್ಯವನ್ನು ಕೊಡುವ ಸಮರ್ಥನಾದ ಪರಮಾತ್ಮನು ದುಃಖವನ್ನು ಪರಿಹಾರ ಮಾಡಿ ನಿತ್ಯ ಸುಖಾನುಭವವು ಜೀವನಿಗೆ ಬರುವಂತೆ ಮಾಡುತ್ತಾನೆ ಎಂದೇ ಅಂಗೀಕರಿಸಬೇಕು. ಆದುದರಿಂದ ಮುಕ್ತನಿಗೆ ಬುದ್ಧಿ, ಇಂದ್ರಿಯಾದಿಗಳು ಇಲ್ಲವೆನ್ನುವುದು ಸರಿಯಲ್ಲ. ಮುಕ್ತನಿಗೂ ಸ್ವರೂಪಾತ್ಮಕವಾದ ಬುದ್ಧಿ ಮುಂತಾದುವುಗಳು ಇವೆ ಎಂದೂ ಅಂಗೀಕರಿಸಬೇಕು ಎಂದು ಭಾವ.

**ವಿಗ್ರಹ—**

**ಜ್ಞಾನಪ್ರಯತ್ನವಾಂಛಾವಾನ್—** ಜ್ಞಾನಂ ಚ ಪ್ರಯತ್ನಶ್ಚ ವಾಂಛಾ ಚ ಜ್ಞಾನಪ್ರಯತ್ನವಾಂಛಾಃ ತಾಃ ಅಸ್ಯ ಸಂತೀತಿ ಜ್ಞಾನಪ್ರಯತ್ನವಾಂಛಾವಾನ್ ।

**ಅಶುಭಂ—** ನ ಶುಭಂ ಅಶುಭಂ ತತ್ ।

**ಸ್ವಸಾಮರ್ಥ್ಯೇನ—** ಸಮರ್ಥಸ್ಯ ಭಾವಃ ಸಾಮರ್ಥ್ಯಂ ಸ್ವಸ್ಯ ಸಾಮರ್ಥ್ಯಂ ಸ್ವಸಾಮರ್ಥ್ಯಂ ತೇನ ।

**ಕ್ರಿಯಾಪದ— ವ್ರಜೇತ್** - ವ್ರಜೇತ್ ವ್ರಜೇತಾಂ ವ್ರಜೇಯುಃ, ವ್ರಜೇಃ ವ್ರಜೇತಂ ವ್ರಜೇತ, ವ್ರಜೇಯಂ ವ್ರಜೇವ ವ್ರಜೇಮ । ವ್ರಜ ಗತೌ ಸಕ. ಸೇಟ್ ಪರ to go ವಿಧಿಲಿಙ್ । ಕುರ್ಯಾತ್ ಕುರ್ಯಾತಾಂ ಕುರ್ಯುಃ, ಕುರ್ಯಾಃ ಕುರ್ಯಾತಂ ಕುರ್ಯಾತ, ಕುರ್ಯಾಂ ಕುರ್ಯಾವ ಕುರ್ಯಾಮ । ಡುಕೃಞ್ ಕರಣೇ (ಕೃ.) ಸಕ. ಅನಿಟ್ ಉಭ. to do, to make ವಿಧಿಲಿಙ್ (ಭಜೇತ್ ಎಂಬ ಪಾಠದಲ್ಲಿ ಭಜ ಸೇವಾಯಾಂ ವಿಧಿಲಿಙ್).

**ಪ್ರಯೋಗ—** ಜ್ಞಾನಪ್ರಯತ್ನ ವಾಂಛಾವತಾ ಈಶೇನ ಸ್ವಸಾಮರ್ಥ್ಯೇನ ಅಶುಭಂ ನ ವ್ರಜ್ಯೇತ (ನ ಭಜ್ಯೇತ) ಓ. ತೇನ ಏವ (ಸಾಮರ್ಥ್ಯೇನ) ತೇನ ಸ ಚ ತಾದೃಶಃ ಕ್ರಿಯೇತ ।

★ ★ ★

**ಅವತಾರಿಕಾ—** ಮುಕ್ತರಿಗೆ ಸುಖವಿರುವುದಾದರೆ ದುಃಖವೂ ಬರಬೇಕಾದೀತು ಎಂದು ಆಕ್ಷೇಪಿಸಿದರೆ ಸಮಾಧಾನ ಹೇಳುತ್ತಾರೆ.

**ದುಃಖವ್ಯಾಪ್ತಂ ಸುಖಂ ಬದ್ಧೇ ದೃಷ್ಟ್ವಾ ಮುಕ್ತೇರ್ನಿ(ಕ್ತೇನಿ)ರಸ್ಯತಾ ।**
**ಸ್ವರೂಪಂ ಚ ನಿರಸ್ಯೇತ ಶೂನ್ಯವಾದೀ ತದಾ ಭವೇತ್ ॥ 51 ॥**

**ಪದಚ್ಛೇದ—** ದುಃಖವ್ಯಾಪ್ತಂ, ಸುಖಂ, ಬದ್ಧೇ, ದೃಷ್ಟ್ವಾ ,ಮುಕ್ತೇಃ (ಮುಕ್ತೇಃ), ನಿರಸ್ಯತಾ, ಸ್ವರೂಪಂ, ಚ, ನಿರಸ್ಯೇತ, ಶೂನ್ಯವಾದೀ, ತದಾ, ಭವೇತ್ ।

**ಅನ್ವಯ—** ಬದ್ಧೇ, ದುಃಖವ್ಯಾಪ್ತಂ, ಸುಖಂ, ದೃಷ್ಟ್ವಾ ಮುಕ್ತೇ (ಸುಖಂ), ನಿರಸ್ಯತಾ (ಮುಕ್ತೇಃ ಸುಖಂ ನಿರಸ್ಯತಾ), ಸ್ವರೂಪಂ, ಚ, ನಿರಸ್ಯೇತ, ತದಾ, ಶೂನ್ಯವಾದೀ, ಭವೇತ್ ।

**ಅನ್ವಯಾರ್ಥ—**

**ಬದ್ಧೇ** = ಸಂಸಾರಬಂಧ ಉಳ್ಳ ಜೀವನಲ್ಲಿ,
**ದುಃಖವ್ಯಾಪ್ತಂ** = ದುಃಖದ ವ್ಯಾಪ್ತಿಯುಳ್ಳ (ದುಃಖದಿಂದ ವ್ಯಾಪಿಸಿಕೊಂಡಿರುವ, ದುಃಖವನ್ನು ಬಿಟ್ಟಿರದ)
**ಸುಖಂ** = ಸೌಖ್ಯವನ್ನು,
**ದೃಷ್ಟ್ವಾ** = ನೋಡಿ,
**ಮುಕ್ತೇ** = ಸಂಸಾರದಿಂದ ಬಿಡುಗಡೆ ಹೊಂದಿದ ಜೀವನಲ್ಲ,
**(ಸುಖಂ) ನಿರಸ್ಯತಾ** = ಸುಖವನ್ನು ನಿರಾಕರಿಸುವ ವಾದಿಯಿಂದ (ಮುಕ್ತೇಃ = ಸಂಸಾರದ ದೆಸೆಯಿಂದ ಬಿಡುಗಡೆ ಎಂಬ ಮುಕ್ತಿಯದೆಸೆಯಿಂದ, ಸುಖಂ = ಸೌಖ್ಯವನ್ನು, ನಿರಸ್ಯತಾ = ನಿರಾಕರಿಸುವ ವಾದಿಯಿಂದ)
**ಸ್ವರೂಪಂ ಚ** = ಮುಕ್ತಜೀವನಲ್ಲಿ ಸ್ವರೂಪವೂ,
**ನಿರಸ್ಯೇತ** = ನಿರಾಕರಿಸಲ್ಪಟ್ಟೀತು,
**ತದಾ** = ಆಗ,
**ಶೂನ್ಯವಾದೀ** = ಶೂನ್ಯವಾದಿಯು,
**ಭವೇತ್** = ಆದಾನು.

**ತಾತ್ಪರ್ಯ—** ಸಂಸಾರಿಯು ದುಃಖಿಯೂ ಸುಖಿಯೂ ಆಗಿರುವನು. ಅದನ್ನು ನೋಡಿ ದುಃಖವಿದ್ದಲ್ಲಿ ಸುಖ, ಸುಖವಿದ್ದಲ್ಲಿ ದುಃಖ ಎಂದು ಸುಖ-ದುಃಖಗಳಿಗೆ ವ್ಯಾಪ್ತಿ ಇರುವುದರಿಂದ ದುಃಖವಿಲ್ಲದ ಮುಕ್ತನಲ್ಲಿ ಸುಖವೂ ಇಲ್ಲ ಎಂದು ಸುಖವನ್ನು ನಿರಾಕರಿಸುವುದಾದರೆ ಮುಕ್ತನಲ್ಲಿ ಜೀವಸ್ವರೂಪವೂ ಇಲ್ಲವೆಂದು ಒಪ್ಪಿಕೊಳ್ಳಬೇಕಾದೀತು. ಆಗ ಮುಕ್ತನಲ್ಲಿ ಸುಖವನ್ನು ಒಪ್ಪದಿರುವ ವಾದಿಯು ಶೂನ್ಯವಾದಿಯೇ ಆಗಬೇಕಾದೀತು.

ಹಿಂದೆ ''ಯತ್ರ ಸ್ವಾನಂದಿನಃ ಸಂತಃ'' ಎಂಬಲ್ಲಿ (ಸ.15 ಶ್ಲೋ.47) ಮುಕ್ತನಿಗೆ ಆನಂದಾನುಭವವನ್ನು ಹೇಳಿದ್ದಾರೆ. ಆದರೆ ಅದು ಯುಕ್ತವಲ್ಲ. ಮುಕ್ತನು ಸುಖವುಳ್ಳವನಾದರೆ ಅವನಲ್ಲಿ ದುಃಖವನ್ನು ಒಪ್ಪಬೇಕಾಗುತ್ತದೆ. ಸುಖ-ದುಃಖಗಳೆರಡೂ ಪರಸ್ಪರ ವ್ಯಾಪ್ತವಾಗಿವೆ. ಎಲ್ಲಿ ಸುಖವಿದೆಯೋ ಅಲ್ಲಿ ದುಃಖವಿದೆ, ಎಲ್ಲಿ ದುಃಖವಿದೆಯೋ ಅಲ್ಲಿ ಸುಖವೂ ಇದೆ ಎಂದು ವ್ಯಾಪ್ತಿ ಇದೆ. ಸುಖವಿದೆಯೋ ಇಲ್ಲವೋ ಎಂದು ವಿವಾದ ವಿಷಯನಾದ ಮುಕ್ತನು, ಸುಖವುಳ್ಳವನಲ್ಲ, ದುಃಖವಿಲ್ಲದಿರುವುದರಿಂದ, ಯಾವನು ಸುಖವುಳ್ಳವನೋ ಅವನು ದುಃಖರಹಿತನಾಗಿರುವುದಿಲ್ಲ, ಸಂಸಾರಿಯಂತೆ, ಈ ಮುಕ್ತನು ದುಃಖರಹಿತನಲ್ಲವೆಂದು ಅಲ್ಲ, ದುಃಖರಹಿತನೇ ಆಗಿದ್ದಾನೆ. ಆದುದರಿಂದ ಸುಖವುಳ್ಳವನೂ ಅಲ್ಲ, ದುಃಖವುಳ್ಳವನಿಗೇ ಸುಖವಿದೆ ಎಂದು ಲೋಕದಲ್ಲಿ ವ್ಯಾಪ್ತಿಯು ಕಂಡಿದೆ ಎಂದು ಆಕ್ಷೇಪಿಸಿದಾಗ ಅದಕ್ಕೆ ಉತ್ತರವನ್ನು ಹೇಳುತ್ತಾರೆ. (ವಿಮತಃ

ಮುಕ್ತಃ ಸುಖೀ ನ ಭವತಿ ದುಃಖರಹಿತತ್ವಾತ್, ಯಃ ಸುಖೀ ಸಃ ದುಃಖರಹಿತೋ ನ ಭವತಿ ತಸ್ಮಾನ್ನ ಸುಖೀ) ಎಂದು ಆಕ್ಷೇಪ.

**ಉತ್ತರ—** ಸಂಸಾರಿಜೀವನಲ್ಲಿ ಈಗ ನಾವು ಕಾಣುತ್ತಿರುವ ಸುಖವೆಲ್ಲವೂ ದುಃಖದಿಂದ ಅವಿನಾಭೂತವಾಗಿದೆ. ದುಃಖವನ್ನು ಬಿಟ್ಟಿರುವುದೇ ಇಲ್ಲ. ಇದನ್ನು ನೋಡಿ ಸಂಸಾರದಿಂದ ಬಿಡುಗಡೆಯಾಗಿರುವ ಅವಸ್ಥೆಯಲ್ಲಿ ಸುಖವನ್ನು ಒಪ್ಪಿದರೆ ದುಃಖವೂ ಬರಬೇಕಾಗುತ್ತದೆ ಎಂಬ ಭಯದಿಂದ ಮುಕ್ತಿಯಲ್ಲಿ ಸುಖವೇ ಇಲ್ಲ ಎಂದು ಒಪ್ಪುವ ವಾದಿಯು ಮುಕ್ತಿಯಲ್ಲಿ ಸ್ವರೂಪವನ್ನು ನಿರಾಕರಿಸಬೇಕಾದೀತು. ಸಂಸಾರಿಯಲ್ಲಿ ಸುಖ-ದುಃಖಗಳು ಸಹಚರಿತವಾಗಿರುತ್ತವೆ (ಒಟ್ಟಿಗೇ ಇರುತ್ತವೆ). ಅದನ್ನು ನೋಡಿ ಮುಕ್ತಿಯಲ್ಲಿಯೂ ಸುಖ-ದುಃಖಗಳಿಗೆ ನಿಯಮದಿಂದ ಸಾಹಚರ್ಯ ಇರಬೇಕಾಗುತ್ತದೆ ಎಂದು ಭ್ರಮಿಸಿ ಮುಕ್ತಿಯಲ್ಲಿ ಸುಖವಿಲ್ಲ ಎಂದು ಹೇಳುವ ವಾದಿಯು, ಮುಕ್ತಿಯಲ್ಲಿ ಸುಖವೂ ಇಲ್ಲ ದುಃಖವೂ ಇಲ್ಲ ಎಂದು ಹೇಳುವಂತೆ ಜೀವಸ್ವರೂಪವೂ ಇಲ್ಲ ಎಂದು ಒಪ್ಪಿಕೊಳ್ಳಬೇಕಾದೀತು. ಹಾಗೆಯೇ ಆಗಲಿ, ಮುಕ್ತಿಯಲ್ಲಿ ಜೀವ ಸ್ವರೂಪವೇ ಬೇಡವೆಂದರೆ ಈ ವಾದಿಯು ಶೂನ್ಯವಾದಿಯಾಗಬೇಕಾದೀತು. ಪ್ರಕೃತವಾದಿಯಾದ ತಾರ್ಕಿಕನು ಶೂನ್ಯ-ವಾದಿಯಲ್ಲವಷ್ಟೆ! ಸ್ವರೂಪಶೂನ್ಯನು ಹೌದೋ ಅಲ್ಲವೋ ಎಂದು ಆಪಾದನೆ ಮಾಡುವ ನಮಗೂ ಸ್ವರೂಪವುಳ್ಳವನೆಂದು ಒಪ್ಪುವ ತಾರ್ಕಿಕನಿಗೂ ವಿವಾದವಿಷಯನಾದ ಮುಕ್ತಜೀವನು ಸ್ವರೂಪಶೂನ್ಯನೇ ಆಗಿದ್ದಾನೆ. ಚೇತನನಾಗಿದ್ದು ದುಃಖ-ವಿಲ್ಲದುದರಿಂದ, ಯಾವನು ಸ್ವರೂಪಶೂನ್ಯನಲ್ಲವೋ ಅವನು ಚೇತನನಾಗಿದ್ದು ದುಃಖರಹಿತನೂ ಆಗಿರುವುದಿಲ್ಲ. ಸಂಸಾರಿಯು ಸ್ವರೂಪಶೂನ್ಯನಲ್ಲ. ಅವನು ಚೇತನನಾಗಿದ್ದು ದುಃಖರಹಿತನೂ ಅಲ್ಲ. ದುಃಖಿಯೇ ಆಗಿರುತ್ತಾನೆ. ಮುಕ್ತನು ನಿಮ್ಮಂತೆ ಚೇತನನಾಗಿದ್ದು ದುಃಖರಹಿತನಲ್ಲವೆಂದು ಅಲ್ಲ, ದುಃಖರಹಿತ ಚೇತನನೇ ಆಗಿರುತ್ತಾನೆಂದು ನೀವು ಒಪ್ಪಿದ್ದೀರಿ. ಆದ್ದರಿಂದ ಸ್ವರೂಪಶೂನ್ಯನೇ ಆಗಬೇಕಾಗುತ್ತದೆ ಎಂದು ನಾವು ಆಪಾದಿಸುತ್ತೇವೆ. ಆದ್ದರಿಂದ ಮುಕ್ತನಿಗೆ ಬುದ್ಧಿ, ಇಂದ್ರಿಯ ಮುಂತಾದುವುಗಳು ಇಲ್ಲವೆಂದು ಸಾಧಿಸುವ ಪೂರ್ವಪಕ್ಷಿಯ ಯುಕ್ತಿಯು ಆಭಾಸರೂಪವಾಗಿದೆ. ಮುಕ್ತನಿಗೆ ಬುದ್ಧಿ ಇಂದ್ರಿಯಾದಿಗಳೂ ಇವೆ. ಅವನಿಗೆ ಚೇತನಸ್ವರೂಪವಾದ ಆನಂದವೂ ಇದೆ ಎಂದು ಒಪ್ಪಿಕೊಳ್ಳಬೇಕು ಎಂದು ತಾತ್ಪರ್ಯ.

ವಿಗ್ರಹ—

**ದುಃಖವ್ಯಾಪ್ತಂ—** ದುಃಖೇನ ವ್ಯಾಪ್ತಂ ದುಃಖವ್ಯಾಪ್ತಂ ತತ್ ।

**ಶೂನ್ಯವಾದೀ—** ಶೂನ್ಯಂ ವದತೀತಿ ಶೂನ್ಯವಾದೀ ।

**ಕ್ರಿಯಾಪದ— ನಿರಸ್ಯೇತ** - ನಿರ್ + ಅಸ್ಯೇತ ಅಸ್ಯೇಯಾತಾಂ ಅಸ್ಯೇರನ್, ಅಸ್ಯೇಥಾಃ ಅಸ್ಯೇಯಾಥಾಂ ಅಸ್ಯೇಧ್ವಂ, ಅಸ್ಯೇಯ ಅಸ್ಯೇವಹಿ ಅಸ್ಯೇಮಹಿ । ನಿರ್ ಉಪಸರ್ಗ, ಅಸು ಕ್ಷೇಪಣೇ ಸಕ. ಸೇಟ್ ಪರ. ಕರ್ಮಣಿ ಆತ್ಮನೇಪದಿ ವಿಧಿ ಲಿಙ್. ಭವೇತ್ ಭೂಸತ್ತಾಯಾಂ ವಿಧಿಲಿಙ್ ।

**ಪ್ರಯೋಗ—** ಬದ್ಧೇ ದುಃಖವ್ಯಾಪ್ತಂ ಸುಖಂ ದೃಷ್ಟ್ವಾ ಮುಕ್ತೇ ನಿರಸ್ಯನ್ ಸ್ವರೂಪಂ ಚ ನಿರಸ್ಯೇತ್ ತದಾ ಶೂನ್ಯವಾದಿನಾ ಭೂಯೇತ ।

★ ★ ★

**ಅವತಾರಿಕಾ—** ಮುಕ್ತರಿಗೆ ಬುದ್ಧ್ಯಾದಿಗಳನ್ನು ಒಪ್ಪಿದರೆ ವೈಶೇಷಿಕ ತಾರ್ಕಿಕರ ಆಕ್ಷೇಪವನ್ನು ವಿವರಿಸುತ್ತಾರೆ.

**ನನು ವಿಪ್ರತಿಪನ್ನಃ ಸ್ಯಾದೂರ್ಮಿಮಾನ್ ದೇಹವತ್ತ್ವತಃ ।**
**ಚೈತ್ರೋ ಯಥೇತ್ಯುಪಾಧಿಃ ಸ್ಯಾತ್ತತ್ರ ಚಾಶುದ್ಧದೇಹಿತಾ ॥ 52 ॥**

**ಪದಚ್ಛೇದ—** ನನು, ವಿಪ್ರತಿಪನ್ನಃ, ಸ್ಯಾತ್, ಊರ್ಮಿಮಾನ್, ದೇಹವತ್ತ್ವತಃ, ಚೈತ್ರಃ, ಯಥಾ, ಇತಿ, ಉಪಾಧಿಃ, ಸ್ಯಾತ್, ತತ್ರ, ಚ, ಅಶುದ್ಧದೇಹಿತಾ ।

**ಅನ್ವಯ—** ನನು, ವಿಪ್ರತಿಪನ್ನಃ, ಊರ್ಮಿಮಾನ್, ಸ್ಯಾತ್, ದೇಹವತ್ತ್ವತಃ, ಚೈತ್ರೋ, ಯಥಾ, ಇತಿ, ತತ್ರ, ಚ, ಅಶುದ್ಧದೇಹಿತಾ, ಉಪಾಧಿಃ, ಸ್ಯಾತ್ ।

**ಅನ್ವಯಾರ್ಥ—**

**ನನು** = ಹಾಗಾದರೆ,

**ವಿಪ್ರತಿಪನ್ನಃ** = ಷಡೂರ್ಮಿಗಳು ಉಳ್ಳವನು ಹೌದೋ ಅಲ್ಲವೋ ಎಂದು ವಿವಾದ ವಿಷಯನಾದ ಮುಕ್ತಜೀವನು,

**ಊರ್ಮಿಮಾನ್** = ಆರು ವಿಕಾರವುಳ್ಳವನು,

**ಸ್ಯಾತ್** = ಆಗಬೇಕಾಗುತ್ತದೆ,

**ದೇಹವತ್ತ್ವತಃ** = ದೇಹ ಇರೋಣದರಿಂದ,

**ಚೈತ್ರೋ ಯಥಾ** = ಚೈತ್ರನಂತೆ,

**ಇತಿ** = ಹೀಗೆ ಆಶಂಕಿಸಿದರೆ,

**ತತ್ರ ಚ** = ಆ ಊರ್ಮಿವುಳ್ಳತನದಲ್ಲಿಯೂ,

**ಅಶುದ್ಧದೇಹಿತಾ** = ಅಶುದ್ಧ ದೇಹವಿರುವುದು,

**ಉಪಾಧಿಃ ಸ್ಯಾತ್** = ಪ್ರಯೋಜಕವು ಆಗಿಯೇ ತೀರುತ್ತದೆ.

**ತಾತ್ಪರ್ಯ—** ಮುಕ್ತನಿಗೆ ದೇಹಬುದ್ಧಿ ಇಂದ್ರಿಯಗಳಿವೆ ಎಂದು ಒಪ್ಪಿದರೆ ವೈಶೇಷಿಕನು ಶಂಕಿಸುತ್ತಾನೆ. ಮುಕ್ತನಿಗೆ ಬುದ್ಧಿ ಇಂದ್ರಿಯಗಳಿವೆ ಎಂದು ಒಪ್ಪಿದರೆ ಆ ಬುದ್ಧ್ಯಾದಿಗಳಿಗೆ ಆಶ್ರಯವಾದ ದೇಹವೂ ಇದೆ ಎಂದು ಒಪ್ಪಿಕೊಳ್ಳ-ಬೇಕಾದೀತು. ಹಾಗೆ ಒಪ್ಪಿಕೊಂಡರೆ ಮುಕ್ತನಿಗೆ ಹಸಿವು, ಬಾಯಾರಿಕೆ ಮುಂತಾದ ಷಡೂರ್ಮಿಗಳನ್ನು ಒಪ್ಪಿಕೊಳ್ಳ-ಬೇಕಾದೀತು. ಮುಕ್ತನೆಂದು ಒಪ್ಪಿಕೊಂಡು ಹಸಿವು, ಬಾಯಾರಿಕೆ ಮುಂತಾದುವುಗಳನ್ನು ಒಪ್ಪಿಕೊಳ್ಳುವುದು ಅತ್ಯಂತ ವಿರುದ್ಧವಾಗುತ್ತದೆ. ಮುಕ್ತಿಗೂ ಷಡೂರ್ಮಿಗಳಿಗೂ ಪರಸ್ಪರ ವಿರೋಧವಿದೆ. ಆದುದರಿಂದ ಮುಕ್ತನಿಗೆ ದೇಹವಿಲ್ಲವೆಂದೇ ಹೇಳಬೇಕು. ಹಾಗೆ ದೇಹವಿಲ್ಲದಿದ್ದರೆ ಜ್ಞಾನ ಇಚ್ಛಾಪ್ರಯತ್ನಗಳೂ ಇರುವುದಿಲ್ಲ. ಮುಕ್ತನಿಗೆ ಸುಖವೂ ಇರುವುದಿಲ್ಲ ಎಂದು ವೈಶೇಷಿಕನು ಶಂಕಿಸಿದರೆ ಅದಕ್ಕೆ ಹೀಗೆ ಉತ್ತರ ಕೊಡುತ್ತಾರೆ.

'ವಿಪ್ರತಿಪನ್ನಃ ಊರ್ಮಿಮಾನ್ ಸ್ಯಾತ್ ದೇಹವತ್ತ್ವಾತ್ ಚೈತ್ರವತ್', ದೇಹಬುದ್ಧ್ಯಾದಿಗಳು ಉಳ್ಳವನು ಹೌದೋ ಅಲ್ಲವೋ ಎಂದು ವಿವಾದ ವಿಷಯನಾದ ಮುಕ್ತನು ದೇಹವುಳ್ಳವನಾದರೆ ಹಸಿವು, ಬಾಯಾರಿಕೆ ಮುಂತಾದ ಷಡೂರ್ಮಿಗಳು ಉಳ್ಳವನಾಗಬೇಕಾದೀತು. ದೇಹವುಳ್ಳವನಾದುದರಿಂದ ಚೈತ್ರನಂತೆ ಎಂದು ವೈಶೇಷಿಕರು ಅನುಮಾನವನ್ನು ಹೇಳಬೇಕು. ಆದರೆ ಈ ಅನುಮಾನಕ್ಕೆ ಅಶುದ್ಧದೇಹವುಳ್ಳತನ ಎಂಬುದು ಉಪಾಧಿಯಾಗುತ್ತದೆ.

ಉಪಾಧಿಯೆಂದರೆ ಸಾಧ್ಯಕ್ಕೆ ವ್ಯಾಪಕವಾಗಿದ್ದು ಸಾಧನಕ್ಕೆ ಅವ್ಯಾಪಕವಾದ ಧರ್ಮವು. ಸಾಧ್ಯಕ್ಕೆ ಪ್ರಯೋಜನವಾಗಿದ್ದು ಸಾಧನಕ್ಕೆ ಅಪ್ರಯೋಜಕವಾದ ಧರ್ಮವೇ ಉಪಾಧಿಯು. ಪರ್ವತಃ ಧೂಮವಾನ್ ವಹ್ನೇಃ ಪರ್ವತವು ಬೆಂಕಿ ಇರುವುದರಿಂದ ಹೊಗೆ ಉಳ್ಳದ್ದು ಎಂಬ ಅನುಮಾನದಲ್ಲಿ ಆರ್ದ್ರೇಂಧನಸಂಯೋಗವು ಉಪಾಧಿಯು. ಆರ್ದ್ರೇಂಧನ ಸಂಯೋಗವೆಂದರೆ ಹಸಿಕಟ್ಟಿಗೆ ಮತ್ತು ಬೆಂಕಿಗಳ ಸಂಯೋಗವು, ಇದು ಹೊಗೆ ಇದ್ದಲ್ಲೆಲ್ಲಾ ಇರುತ್ತದೆ. ಆದುದರಿಂದ ಇದು ಸಾಧ್ಯವಾದ ಧೂಮಕ್ಕೆ ವ್ಯಾಪಕವಾಗಿದೆ ಮತ್ತು ಧೂಮಕ್ಕೆ ಪ್ರಯೋಜಕವೂ ಆಗಿದೆ. ಹೊಗೆ ಉಂಟಾಗುವುದಕ್ಕೆ ಹಸಿ ಕಟ್ಟಿಗೆಯೇ ಕಾರಣವಷ್ಟೆ. ಎಲ್ಲೆಲ್ಲಿ ಬೆಂಕಿ ಇದೆಯೋ ಅಲ್ಲೆಲ್ಲಾ ಆರ್ದ್ರೇಂಧನ ಸಂಯೋಗವಿರುವುದಿಲ್ಲ. ಕಾದ ಕಬ್ಬಿಣದ ಗುಂಡಿನಲ್ಲಿ ಬೆಂಕಿ ಇದ್ದರೂ ಅಲ್ಲಿ ಆರ್ದ್ರೇಂಧನಸಂಯೋಗವಿರುವುದಿಲ್ಲ. ಬೆಂಕಿಗೆ ಆರ್ದ್ರೇಂಧನಸಂಯೋಗವು ಪ್ರಯೋಜಕ-ವಲ್ಲ. ಬೆಂಕಿ ಹುಟ್ಟಬೇಕಾದರೆ ಆರ್ದ್ರೇಂಧನ ಸಂಯೋಗವೇ ಬೇಕೆಂಬ ನಿಯಮವಿಲ್ಲ. ಆದ್ದರಿಂದ ಸಾಧನವಾದ

(ಹೇತುವಾದ) ವಹ್ನಿಗೆ ಆರ್ದ್ರೇಂಧನ ಸಂಯೋಗವು ಅವ್ಯಾಪಕವಾಯಿತು. ಈ ಉಪಾಧಿಯು ತಪ್ತವಾದ ಅಯೋಗೋಳಕದಿಂದ ನಿವೃತ್ತವಾಗುವಾಗ ತನಗೆ ವ್ಯಾಪ್ಯವಾದ ತನ್ನಿಂದ ಪ್ರಯೋಜ್ಯವಾದ (ತನ್ನಿಂದಲೇ ಹುಟ್ಟುವ) ಧೂಮವನ್ನು ನಿವೃತ್ತಿಗೊಳಿಸುತ್ತದೆ. ಅಯೋಗೋಳಕದಲ್ಲಿ ಹೊಗೆ ಇಲ್ಲ. ಹೊಗೆಗೆ ವ್ಯಾಪಕವಾದ ಆರ್ದ್ರೇಂಧನ ಸಂಯೋಗವಿಲ್ಲದಿರುವುದರಿಂದ ಎಂದು ಅನುಮಾನಮಾಡಲು ಈ ಉಪಾಧಿಯು ಸಹಕಾರಿಯಾಗುತ್ತದೆ. ಪ್ರಕೃತದಲ್ಲಿ ಹೀಗೆಯೇ ವೈಶೇಷಿಕರು ಹೇಳಿದ ಅನುಮಾನಕ್ಕೆ ಅಶುದ್ಧದೇಹಿತ್ವವು (ಅಶುದ್ಧವಾದ ಪ್ರಾಕೃತದೇಹವಿದೆಯಾದುದರಿಂದ ಉಪಾಧಿಯು ಸಾಧ್ಯ ವ್ಯಾಪಕವಾಯಿತು. ಷಡೂರ್ಮಿಗಳು ಇರುವುದಕ್ಕೆ ಅಶುದ್ಧದೇಹವೇ ಪ್ರಯೋಜಕ, ಬರೇ ದೇಹವಲ್ಲ ಎಂದಾಯಿತು. ಇನ್ನು ದೇಹ ಇದ್ದಲ್ಲೆಲ್ಲಾ ಅಂದರೆ ಪಕ್ಷನಾಗಿರುವ ಮುಕ್ತನಲ್ಲಿ ಅಶುದ್ಧದೇಹವಿಲ್ಲ. ಮುಕ್ತನಿಗೆ ಪ್ರಾಕೃತವಾದ ಅಶುದ್ಧ ದೇಹವನ್ನು ನಾವು ಒಪ್ಪುವುದಿಲ್ಲ. ಇನ್ನು ಈಶ್ವರನಿಗೂ (ಜ್ಞಾನಾನಂದಾತ್ಮಕವಾದ) ದೇಹವಿದೆ, ಅವನಿಗೂ ಅಶುದ್ಧ ದೇಹವಿಲ್ಲ, ಆದುದರಿಂದ ಉಪಾಧಿಯು ಸಾಧನಾವ್ಯಾಪಕವಾಯಿತು. ಅಂದರೆ ದೇಹ ಎಂಬ ವಸ್ತುವು ಇರಬೇಕಾದರೆ ಪ್ರಕೃತಿಯೇ ಪ್ರಯೋಜಕವೆಂದು ಹೇಳಲು ಬರುವುದಿಲ್ಲ ಎಂದಾಯಿತು. ಹೀಗೆ ಅಶುದ್ಧದೇಹಿತ್ವವು ಪಕ್ಷವಾಗಿರುವ ಮುಕ್ತ ನಿಂದ ತಾನು ವ್ಯಾವೃತ್ತವಾಗುವಾಗ, ತನಗೆ ವ್ಯಾಪ್ಯವಾದ ಷಡೂರ್ಮಿಗಳನ್ನೂ ವ್ಯಾವೃತ್ತಿಗೊಳಿಸುತ್ತದೆ. ಹೀಗೆ ವ್ಯಾಪಕವಾದ ಉಪಾಧಿಯ ಅಭಾವವೆಂಬ ಹೇತುವಿನಿಂದ ವ್ಯಾಪ್ಯವಾದ ಊರ್ಮಿಮತ್ತ್ವದ ಅಭಾವವನ್ನು ನಾವು ಸಾಧಿಸುತ್ತೇವೆ. 'ವಿಮತಃ ಮುಕ್ತಃ, ಊರ್ಮಿಮಾನ್ ನ ಭವತಿ, ಅಶುದ್ಧದೇಹಾಭಾವಾತ್, ಈಶ್ವರವತ್', ವಿವಾದ ವಿಷಯನಾದ ಮುಕ್ತನು ಷಡೂರ್ಮಿಗಳುಳ್ಳವನು ಅಲ್ಲ, ಅಶುದ್ಧ ದೇಹವಿಲ್ಲದಿರುವುದರಿಂದ ಈಶ್ವರನಂತೆ ಎಂದು ವೈಶೇಷಿಕನ ಅನುಮಾನಕ್ಕೆ ನಾವು ಪ್ರತ್ಯನುಮಾನವನ್ನು ಪ್ರಯೋಗಿಸುತ್ತೇವೆ. ಈ ಪ್ರತ್ಯನುಮಾನಪ್ರಯೋಗಕ್ಕೆ ಉಪಾಧಿಯೇ ಸಹಕಾರಿಯಾಗಿದೆ. ಎಲ್ಲಿ ಅಶುದ್ಧ ದೇಹವಿಲ್ಲವೋ ಅಲ್ಲಿ ಷಡೂರ್ಮಿಗಳೂ ಇರುವುದಿಲ್ಲ. ಈಶ್ವರನಂತೆ ಎಂದು ವ್ಯಾಪ್ತಿಯನ್ನು ಹೇಳಲು ಬರುವುದರಿಂದ ನಮ್ಮ ಅನುಮಾನವು ಅಪ್ರಯೋಜಕವಲ್ಲ. ಹೀಗೆ ಮುಕ್ತರಿಗೆ ದೇಹವನ್ನು ಒಪ್ಪಿದರೆ ಷಡೂರ್ಮಿಗಳು ಇವೆಯೆಂದು ಒಪ್ಪಬೇಕಾಗುತ್ತದೆ ಎಂಬುದಾಗಿ ವೈಶೇಷಿಕನು ಮಾಡಿದ ಅನುಮಾನವು ಅಶುದ್ಧದೇಹಿತ್ವ ಉಪಾಧಿಯಿಂದ ದುಷ್ಟವಾದ್ದರಿಂದ ಆ ಅನುಮಾನದಿಂದ ಅವನ ಇಷ್ಟಸಿದ್ಧಿಯಾಗುವುದಿಲ್ಲ.

ಸಂಸಾರಿಗಳಾದ ಜೀವರಿಗೆ ದೇಹವಿರುತ್ತದೆ. ಅವರಿಗೆ ಆರು ಊರ್ಮಿಗಳೂ ಇವೆ. ಆ ಆರು ಊರ್ಮಿಗಳು ಯಾವುವು ಎಂದರೆ (ಅಸ್ತಿ = ಪದಾರ್ಥವು ಇದೆ), ಜಾಯತೇ = ಹುಟ್ಟುತ್ತದೆ, ವರ್ಧತೇ ಬೆಳೆಯುತ್ತದೆ, ವಿಪರಿಣಮತೇ = ವ್ಯತ್ಯಾಸವಾಗುತ್ತದೆ, ವಿಪರಿಣಾಮಗೊಳ್ಳುತ್ತದೆ, ಕ್ಷೀಯತೇ = ಕ್ಷೀಣಿಸುತ್ತದೆ, ಹ್ರಸತಿ = ಕಡಿಮೆಯಾಗುತ್ತದೆ, ನಶ್ಯತಿ = ನಾಶವಾಗುತ್ತದೆ, ಇವುಗಳಲ್ಲಿ ಹುಟ್ಟು, ಬೆಳವಣಿಗೆ, ವಿಪರಿಣಾಮ, ಕ್ಷೀಣತೆ, ಹ್ರಾಸ, ನಾಶಗಳು ಷಡೂರ್ಮಿಗಳು. ಇವು ಸಂಸಾರಿಜೀವರಿಗೆ ಮಾತ್ರ ಇರುತ್ತವೆ. ಮುಕ್ತರಿಗೆ ಇರುವುದಿಲ್ಲ. ಅಶನಾಯಾ = ಹಸಿವು, ಪಿಪಾಸಾ = ಬಾಯಾರಿಕೆ, ಶೋಕ, ಮೋಹ, ಜರಾ = ಮುಪ್ಪು, ಮೃತ್ಯು = ಮರಣ ಇವು ಆರು ಷಡೂರ್ಮಿಗಳು ಎಂದೂ ಹೇಳುತ್ತಾರೆ. ಇವುಗಳೂ ಸಂಸಾರಿಗಳಿಗೆ ಮಾತ್ರ ಇವೆ. ಮುಕ್ತರಿಗೆ ಇರುವುದಿಲ್ಲ. ಮುಕ್ತರಿಗೆ ದೇಹ, ಇಂದ್ರಿಯ, ಬುದ್ಧಿಗಳನ್ನು ಒಪ್ಪಿದರೆ ಈ ಊರ್ಮಿಗಳೂ ಇವೆಯೆಂದು ಒಪ್ಪಬೇಕಾಗುತ್ತದೆ. ಆಗ ಮುಕ್ತಿಯು ಸಂಸಾರದಂತೆಯೇ ಆಗುತ್ತದೆ ಎಂದು ಶಂಕೆ. ಆದರೆ ಪ್ರಾಕೃತವಾದ ಅಶುದ್ಧದೇಹವಿದ್ದರೆ ಮಾತ್ರ ಈ ಷಡೂರ್ಮಿಗಳು ಇರುತ್ತವೆ. ಮುಕ್ತನಿಗೆ ಅಪ್ರಾಕೃತವಾದ ಚಿದಾನಂದ-ಮಯವಾದ (ಜ್ಞಾನಸ್ವರೂಪವಾದ) ದೇಹವನ್ನು ನಾವು ಒಪ್ಪಿರುವುದರಿಂದ ಷಡೂರ್ಮಿಗಳು ಆಕ್ರಮಿಸಲು ಅವಕಾಶವಿಲ್ಲ. ಈ ಊರ್ಮಿಗಳು ಪ್ರಕೃತಿಗೆ ಸಂಬಂಧಿಸಿರುವುದರಿಂದ ಅಪ್ರಾಕೃತದಿವ್ಯದೇಹಿಗಳಾದ ಮುಕ್ತರಿಗೆ ಇವು ಹೇಗೆ ಬರುತ್ತವೆ? ಸರ್ವಥಾ ಇವುಗಳ ಸಂಪರ್ಕವು ಮುಕ್ತರಿಗೆ ಇಲ್ಲ ಎಂದು ಪರಮತಾತ್ಪರ್ಯ.

ವಿಗ್ರಹ—

ಊರ್ಮಿಮಾನ್— ಊರ್ಮಯಃ ಅಸ್ಯ ಸಂತೀತಿ ಊರ್ಮಿಮಾನ್ ।

ದೇಹವತ್ತ್ವತಃ— ದೇಹಃ ಅಸ್ಯ ಅಸ್ತೀತಿ ದೇಹವಾನ್, ದೇಹವತಃ ಭಾವಃ ದೇಹವತ್ತ್ವಂ, ದೇಹವತ್ತ್ವಾತ್ ಇತಿ ದೇಹವತ್ತ್ವತಃ ।

**ಅಶುದ್ಧದೇಹಿತಾ—** ನ ಶುದ್ಧಃ ಅಶುದ್ಧಃ ಅಶುದ್ಧಶ್ಚಾಸೌ ದೇಹಶ್ಚ ಅಶುದ್ಧದೇಹಃ, ಅಶುದ್ಧದೇಹಃ ಅಸ್ಯ ಅಸ್ತೀತಿ ಅಶುದ್ಧದೇಹೀ ಅಶುದ್ಧದೇಹಿನಃ ಭಾವಃ ಅಶುದ್ಧದೇಹಿತಾ ।

**ಪ್ರಯೋಗ—** ಇಲ್ಲಿ ಸ್ಯಾತ್ ಕ್ರಿಯಾಪದ. ಅದು ಹಿಂದೆ ಬಂದಿದೆ. ನನು ವಿಪ್ರತಿಪನ್ನೇನ ದೇಹವತ್ತ್ವತಃ ಚೈತ್ರೇಣ ಯಥಾ ಊರ್ಮಿಮತಾ ಭೂಯೇತ ಇತಿ, ಚ ತತ್ರ ಅಶುದ್ಧದೇಹಿತಯಾ ಉಪಾಧಿನಾ ಭೂಯೇತ ।

★ ★ ★

**ಅವತಾರಿಕಾ—** ಮುಕ್ತನಿಗೆ ಷಡೂರ್ಮಿಗಳನ್ನು ಸಾಧಿಸುವ ದೇಹವತ್ತ್ವ ಎಂಬ ಅನುಮಾನಕ್ಕೆ ಉಪಾಧಿಯನ್ನು ಹೇಳಿ ಈಗ ಸಾಧಾರಣ ವ್ಯಭಿಚಾರ ಎಂಬ ದೋಷವನ್ನೂ ಹೇಳುತ್ತಾರೆ.

**ಅನೈಕಾಂತಿಕತಾ ಹೇತೋರ್ದೇಹವತ್ತ್ವಾದಧೀಶಿತುಃ ।**
**ಸೋಽದೇಹಶ್ಚೇದನಿಚ್ಛಾದಿರ್ಭವೇಚ್ಛಶವಿಷಾಣವತ್ ॥ 53 ॥**

**ಪದಚ್ಛೇದ—** ಅನೈಕಾಂತಿಕತಾ, ಹೇತೋಃ, ದೇಹವತ್ತ್ವಾತ್, ಅಧೀಶಿತುಃ, ಸಃ, ಅದೇಹಃ, ಚೇತ್, ಅನಿಚ್ಛಾದಿಃ, ಭವೇತ್, ಶಶವಿಷಾಣವತ್ ।

**ಅನ್ವಯ—** ಅಧೀಶಿತುಃ, ದೇಹವತ್ತ್ವಾತ್, ಹೇತೋಃ, ಅನೈಕಾಂತಿಕತಾ (ಭವತಿ), ಸಃ, ಅದೇಹಃ, ಚೇತ್, ಶಶ ವಿಷಾಣವತ್, ಅನಿಚ್ಛಾದಿಃ, ಭವೇತ್ ।

**ಅನ್ವಯಾರ್ಥ—**

**ಅಧೀಶಿತುಃ** = ಎಲ್ಲರಿಗೂ ನಿಯಾಮಕನಾದ ಪರಮಾತ್ಮನಿಗೆ,
**ದೇಹವತ್ತ್ವಾತ್** = ದೇಹವುಳ್ಳತನವಿರುವುದರಿಂದ,
**ಹೇತೋಃ** = ದೇಹವತ್ತ್ವ ಎಂಬ ಹೇತುವಿಗೆ,
**ಅನೈಕಾಂತಿಕತಾ** = ಸಾಧಾರಣ ವ್ಯಭಿಚಾರ ದೋಷವು (ಭವತಿ = ಉಂಟಾಗುತ್ತದೆ),
**ಸಃ** = ಆ ಈಶ್ವರನು,
**ಅದೇಹಃ ಚೇತ್** = ದೇಹವಿಲ್ಲದವನಾದರೆ,
**ಶಶವಿಷಾಣವತ್** = ಮೊಲದ ಕೊಂಬಿನಂತೆ,
**ಅನಿಚ್ಛಾದಿಃ** = ಇಚ್ಛಾ ಮುಂತಾದವುಗಳು ಇಲ್ಲದಿರುವವನು,
**ಭವೇತ್** = ಆದಾನು?

**ತಾತ್ಪರ್ಯ—** 'ವಿಪ್ರತಿಪನ್ನಃ ಊರ್ಮಿಮಾನ್ ಸ್ಯಾತ್ ದೇಹವತ್ತ್ವಾತ್, ಚೈತ್ರಃ ಯಥಾ' ಮುಕ್ತನಿಗೆ ದೇಹವನ್ನು ಒಪ್ಪಿದರೆ ಷಡೂರ್ಮಿಗಳನ್ನು ಸಂಸಾರಿ ಚೈತ್ರನಿಗಿರುವಂತೆ ಒಪ್ಪಬೇಕಾಗುತ್ತದೆ ಎಂಬ ಅನುಮಾನಕ್ಕೆ ಹಿಂದೆ ಉಪಾಧಿಯನ್ನು ಹೇಳಿ ಈಗ ವ್ಯಭಿಚಾರವನ್ನು ಹೇಳುತ್ತಾರೆ. ಈ ಅನುಮಾನದಲ್ಲಿ ಜೀವನು ಪಕ್ಷ, ಷಡೂರ್ಮಿಗಳು ಸಾಧ್ಯ, ದೇಹವು ಹೇತು, ಚೈತ್ರನು ದೃಷ್ಟಾಂತ, ಸದನುಮಾನದಲ್ಲಿ ಹೇತುವು ಸಾಧ್ಯವು ಇರುವಲ್ಲಿ ಮಾತ್ರ ಇರಬೇಕು. ಸಾಧ್ಯಾಭಾವವಿರುವಲ್ಲಿಯೂ ಹೇತುವಿದ್ದರೆ ಆ ಹೇತುವನ್ನು ವ್ಯಭಿಚರಿತ ಎಂದು ಹೇಳುತ್ತಾರೆ. ಅನೈಕಾಂತಿಕವೆಂದೂ ಹೇಳುತ್ತಾರೆ. ಇಲ್ಲಿ ದೇಹವೆಂಬ ಹೇತುವು ಷಡೂರ್ಮಿಗಳೆಂಬ ಸಾಧ್ಯವಿಲ್ಲದ (ಸಾಧ್ಯಾಭಾವವುಳ್ಳ) ಈಶ್ವರನಲ್ಲಿ ಇರುವುದರಿಂದ ವ್ಯಭಿಚರಿತವಾಯಿತು. ಈ ವ್ಯಭಿಚರಿತ ಹೇತುವಿನಿಂದ ಸಾಧ್ಯವನ್ನು ಸಾಧಿಸಲು ಬರುವುದಿಲ್ಲ. ಇನ್ನು ಸಾಧ್ಯವಾದ ಊರ್ಮಿಗಳ ಅಭಾವ ಇರುವ ಈಶ್ವರನಲ್ಲಿ ದೇಹವತ್ತ್ವ ಎಂಬ ಹೇತುವಿಲ್ಲ, ಈಶ್ವರನಿಗೆ ದೇಹವಿಲ್ಲ ಎಂದರೆ ಮೊಲಕ್ಕೆ ಕೊಂಬು ಇಲ್ಲದಿರುವಂತೆ ಈಶ್ವರನಿಗೂ ಜ್ಞಾನ, ಇಚ್ಛಾ ಪ್ರಯತ್ನಗಳು ಇಲ್ಲವೆಂದಾದೀತು. ಈಶ್ವರನಿಗೆ ದೇಹವನ್ನೊಪ್ಪಿದರೆ ಅವನಲ್ಲಿ ಷಡೂರ್ಮಿಗಳಿಲ್ಲವಾದುದರಿಂದ

ಅನುಮಾನಕ್ಕೆ ವ್ಯಭಿಚಾರ ದೋಷ, ದೇಹವಿಲ್ಲವೆಂದರೆ ಮೊಲದ ಕೊಂಬಿನಂತೆ ಈಶ್ವರನು ನಿಸ್ಸ್ವರೂಪನೂ ಆಗ ಬೇಕಾಗುತ್ತದೆ. ಆಗ ಅವನಲ್ಲಿ ಜ್ಞಾನ, ಇಚ್ಛಾ ಪ್ರಯತ್ನಗಳೆಂಬ ಗುಣಗಳು ಇಲ್ಲವೆಂದು ನಿನಗೆ ಅಸಂಮತವಾದ ವಿಷಯ ವನ್ನು ನೀನು ಒಪ್ಪಿಕೊಳ್ಳಬೇಕಾಗುತ್ತದೆ.

'ವಿಮತಃ ಈಶ್ವರಃ' ಇಚ್ಛಾದಿರಹಿತಃ' ದೇಹರಹಿತತ್ವಾತ್' ಶಶವಿಷಾಣವತ್' ವಿಪ್ರತಿಪನ್ನನಾದ ಈಶ್ವರನು ಇಚ್ಛಾದಿ ರಹಿತನಾಗಬೇಕಾಗುತ್ತದೆ. ದೇಹ ಇಲ್ಲದ್ದರಿಂದ ಶಶವಿಷಾಣದಂತೆ ಎಂದು ಇಲ್ಲಿ ಪ್ರತ್ಯನುಮಾನವನ್ನು ಇಟ್ಟುಕೊಳ್ಳಬೇಕು ಅಥವಾ 'ಯದಿ ಅದೇಹಃ ಸ್ಯಾತ್ ತರ್ಹಿ ಇಚ್ಛಾದಿರಹಿತೋಽಪಿ ಸ್ಯಾತ್ ಶಶವಿಷಾಷಣವತ್' ಪರಮಾತ್ಮನಿಗೆ ದೇಹವನ್ನು ಒಪ್ಪದಿದ್ದರೆ ಅವನಲ್ಲಿ ಇಚ್ಛಾದಿಗಳೂ ಇಲ್ಲವೆಂದು ಒಪ್ಪಬೇಕಾಗುತ್ತದೆ. ಶಶವಿಷಾಣದಂತೆ, ಎಂದು ಆಪಾದನೆಯನ್ನು ಮಾಡಲು ಬರುತ್ತದೆ ಎಂದಾದರೂ ಇಟ್ಟುಕೊಳ್ಳಬೇಕು.

ವಿಗ್ರಹ—

**ದೇಹವತ್ತ್ವಾತ್—** ದೇಹಃ ಅಸ್ಯ ಅಸ್ತೀತಿ ದೇಹವಾನ್, ದೇಹವತಃ ಭಾವಃ ದೇಹವತ್ತ್ವಂ ತಸ್ಮಾತ್ ।

**ಅದೇಹಃ—** ನ ವಿದ್ಯತೇ ದೇಹಃ ಯಸ್ಯ ಸಃ ಅದೇಹಃ ।

**ಅನಿಚ್ಛಾದಿಃ—** ಇಚ್ಛಾ ಆದಿಃ ಯಸ್ಯ ಸಃ ಇಚ್ಛಾದಿಃ, ನ ವಿದ್ಯತೇ ಇಚ್ಛಾದಿಃ ಯಸ್ಯ ಸಃ ಅನಿಚ್ಛಾದಿಃ ।

**ಶಶವಿಷಾಣವತ್—** ಶಶವಿಷಾಣೇನ ತುಲ್ಯಂ ಶಶವಿಷಾಣವತ್ ।

**ಪ್ರಯೋಗ— ಭವೇತ್** ಕ್ರಿಯಾಪದ, ಭವೇತ್ ಭವೇತಾಂ ಭವೇಯುಃ ಇತ್ಯಾದಿ. ಭೂಸತ್ತಾಯಾಂ, ವಿಧಿಲಿಙ್ ಪರಸ್ಮೈಪದಿ. ಅಧೀಶಿತುಃ ದೇಹವತ್ತ್ವಾತ್ ಹೇತೋಃ ಅನೈಕಾಂತಿಕತಯಾ ಭೂಯತೇ, ತೇನ ಅದೇಹೇನ ಭೂಯತೇ ಚೇತ್ ಶಶವಿಷಾಣವತ್ ಅನಿಚ್ಛಾದಿನಾ ಭೂಯೇತ ।

★ ★ ★

**ಅವತಾರಿಕಾ—** ಈಶ್ವರನು ತಿಳಿಯುತ್ತಾನೆ, ಆದುದರಿಂದ 'ಜ್ಞಾತಾ' ಎನಿಸಿಕೊಳ್ಳುತ್ತಾನೆ. 'ಜ್ಞಾತೃ' ಎಂಬುದು ಈಶ್ವರನ ಸ್ವರೂಪವಾಗಿದೆ. ಆದುದರಿಂದ ದೇಪವಿಲ್ಲದಿದ್ದರೆ ಈಶ್ವರನು ಮೊಲದ ಕೊಂಬಿನಂತೆ ಎಂದು ನೀವು ಹೇಳಿದುದು ಅಯುಕ್ತ ಎಂದು ಹೇಳುತ್ತಾರೆ.

**ಜ್ಞಾತ್ರಾದಿರೂಪಮಸ್ಯ ಸ್ಯಾದ್ ವೈಲಕ್ಷಣ್ಯಾಯ ಚೇತ್ತತಃ ।**
**ತದೇವ ದೇಹಶಬ್ದೋಕ್ತಂ ನ ಹ್ಯಸೌ ಪ್ರಾಕೃತಾಕೃತಿಃ ॥ 54 ॥**

**ಪದಚ್ಛೇದ—** ಜ್ಞಾತ್ರಾದಿರೂಪಂ, ಅಸ್ಯ, ಸ್ಯಾತ್, ವೈಲಕ್ಷಣ್ಯಾಯ, ಚೇತ್, ತತಃ, ತತ್, ಏವ, ದೇಹಶಬ್ದೋಕ್ತಂ, ನ, ಹಿ, ಅಸೌ, ಪ್ರಾಕೃತಾಕೃತಿಃ ।

**ಅನ್ವಯ—** ಅಸ್ಯ, ತತಃ, ವೈಲಕ್ಷಣ್ಯಾಯ, ಜ್ಞಾತ್ರಾದಿರೂಪಂ, ಸ್ಯಾತ್, ಚೇತ್, ತತ್, ಏವ, ದೇಹಶಬ್ದೋಕ್ತಂ, ಅಸೌ, ಪ್ರಾಕೃತಾಕೃತಿಃ, ನ, ಹಿ ।

**ಅನ್ವಯಾರ್ಥ—**

**ಅಸ್ಯ** = ಈ ಈಶ್ವರನಿಗೆ,

**ತತಃ** = ಅಸತ್ ಆದ ಶಶವಿಷಾಣಾದಿಗಳಿಗಿಂತ,

**ವೈಲಕ್ಷಣ್ಯಾಯ** = ವ್ಯತ್ಯಾಸವು ಸಿದ್ಧಿಸುವುದಕ್ಕಾಗಿ,

**ಜ್ಞಾತ್ರಾದಿರೂಪಂ ಸ್ಯಾತ್ ಚೇತ್** = 'ಜ್ಞಾತಾ' ತಿಳಿಯುವವನು, ಜ್ಞಾನವುಳ್ಳವನು ಎಂಬ ಸ್ವರೂಪವುಳ್ಳವನು ಎಂದು ಒಪ್ಪಿಕೊಳ್ಳುವುದಾದರೆ,

**ತತ್ ಏವ** = ಅದೇ,
**ದೇಹಶಬ್ದೋಕ್ತಂ** = ದೇಹ ಎಂಬ ಶಬ್ದದಿಂದ ಹೇಳಲ್ಪಟ್ಟದ್ದು,
**ಅಸೌ** = ಈ ಈಶ್ವರನು,
**ಪ್ರಾಕೃತಾಕೃತಿಃ** = ಪ್ರಾಕೃತ ದೇಹವುಳ್ಳವನು,
**ನಹಿ** = ಅಲ್ಲವಷ್ಟೆ.

**ತಾತ್ಪರ್ಯ—** ಈಶ್ವರನು ಮೊಲದ ಕೊಂಬಿನಂತೆ ಅಲ್ಲವೆಂದು ಸಾಧಿಸಲಿಕ್ಕಾಗಿ ತಾರ್ಕಿಕನು ಈಶ್ವರನಿಗೆ ಜ್ಞಾತೃ ತಿಳಿಯತಕ್ಕವನು, ಇಚ್ಛೆತೃ ಜಗತ್ತಿನ ಸೃಷ್ಟಿ ಇತ್ಯಾದಿಗಳನ್ನು ಬಯಸುವವನು, ಯತಿತೃ = ಪ್ರಯತ್ನಮಾಡುವವನು, ಎಂಬ ಸ್ವರೂಪವು ಈಶ್ವರನಿಗೆ ಇದೆಯೆಂದು ಹೇಳುವುದಾದರೆ "ಜ್ಞಾತೃ ಇಚ್ಛೆತೃ ಯತಿತೃ" ಎಂಬುವುಗಳೇ ಈಶ್ವರನ ದೇಹಗಳೆನಿಸುತ್ತವೆ. ತಾರ್ಕಿಕನು ಹೇಳುವ ರೂಪವನ್ನೇ ನಾವು ಈಶ್ವರನ ದೇಹವೆನ್ನುತ್ತೇವೆ. ಆ ಪರಮಾತ್ಮನು ಸಂಸಾರಿಗಳಂತೆ ಪ್ರಾಕೃತವಾದ ಅಶುದ್ಧವಾದ ಶರೀರವುಳ್ಳವನೆಂದು ನಾವೂ ಹೇಳಿಲ್ಲ. ಅಪ್ರಾಕೃತವಾದ ದೇಹವನ್ನು ಪರವಾದಿಯೇ ಒಪ್ಪಿದ್ದರಿಂದ ಹಿಂದೆ ವಾದಿಯು ಹೇಳಿದ್ದ "ವಿಪ್ರತಿಪನ್ನಃ ಊರ್ಮಿಮಾನ್ ಸ್ಯಾತ್, ದೇಹವತ್ತ್ವಾತ್, ಚೈತ್ರವತ್" ಎಂಬ ಅನುಮಾನಕ್ಕೆ ಊರ್ಮಿಗಳು ಇಲ್ಲದಿರುವ ಈಶ್ವರನಲ್ಲಿ ದೇಹವಿರುವುದರಿಂದ ಸಾಧ್ಯಾಭಾವ ಇರುವಲ್ಲಿ ಹೇತುವು ಇರುವುದರಿಂದ ವ್ಯಭಿಚಾರವು ಸ್ಥಿರವಾಯಿತು. ಈಶ್ವರನ ದೇಹವು ಅಪ್ರಾಕೃತಜ್ಞಾನಾನಂದಾತ್ಮಕ, ಸಂಸಾರದಲ್ಲಿ ಜೀವನ ದೇಹವು ಪ್ರಾಕೃತ, ಜ್ಞಾನ, ಆನಂದಸ್ವರೂಪವಲ್ಲ ಎಂಬ ವೈಲಕ್ಷಣ್ಯವಿದ್ದರೂ ಈಶ್ವರನಿಗೂ ದೇಹವೆಂಬ ವಸ್ತುವಿದೆ ಎಂದು ಒಪ್ಪಿಕೊಂಡದ್ದ ರಿಂದ ಆ ದೇಹವು ಬೇರೆ ಬೇರೆ ರೀತಿಯದು ಎಂಬ ವಿವಾದವು ಅಪ್ರಯೋಜಕ. ಪ್ರಾಕೃತ ದೇಹವಿದ್ದರೆ ಮಾತ್ರವೇ ಊರ್ಮಿಗಳು ಇರುತ್ತವೆ. ಅಪ್ರಾಕೃತದೇಹವಿದ್ದಲ್ಲಿ ಊರ್ಮಿಗಳು ಇರುವುದಿಲ್ಲ ಎಂಬ ವಿಷಯವು ಆಗಮ-ದಿಂದ ಸಿದ್ಧ ವಾಗುತ್ತದೆ ಎಂದೂ ತಿಳಿಯಬೇಕು.

**ವಿಗ್ರಹ—**

**ಜ್ಞಾತ್ರಾದಿರೂಪಂ—** ಜ್ಞಾತಾ ಆದಿಃ ಯಸ್ಯ ತತ್ ಜ್ಞಾತ್ರಾದಿ, ಜ್ಞಾತ್ರಾದಿ ಚ ತತ್ ರೂಪಂ ಚ ಜ್ಞಾತ್ರಾದಿರೂಪಂ ।
**ವೈಲಕ್ಷಣ್ಯಾಯ—** ವಿಲಕ್ಷಣಸ್ಯ ಭಾವಃ ವೈಲಕ್ಷಣ್ಯಂ ತಸ್ಮೈ ।
**ದೇಹಶಬ್ದೋಕ್ತಂ—** ದೇಹ ಇತಿ ಶಬ್ದಃ ದೇಹಶಬ್ದಃ, ದೇಹಶಬ್ದೇನ ಉಕ್ತಂ ದೇಹಶಬ್ದೋಕ್ತಂ ।
**ಪ್ರಾಕೃತಾಕೃತಿಃ—** ಪ್ರಾಕೃತಾ ಆಕೃತಿಃ ಯಸ್ಯ ಸಃ ಪ್ರಾಕೃತಾಕೃತಿಃ ।

**ಪ್ರಯೋಗ—** ಅಸ್ಯ ತತಃ ವೈಲಕ್ಷಣ್ಯಾಯ ಜ್ಞಾತ್ರಾದಿರೂಪೇಣ ಭೂಯೇತ ಚೇತ್ ತೇನೈವ ದೇಹ ಶಬ್ದೋಕ್ತೇನ ಭೂಯತೇ, ಅಮುನಾ ಪ್ರಾಕೃತಾಕೃತಿನಾ ನ ಭೂಯತೇ ಹಿ ।

★ ★ ★

**ಅವತಾರಿಕಾ—** ಹಾಗಾದರೆ ಈಶ್ವರನಿಗೆ ಜ್ಞಾನಾನಂದಾತ್ಮಕವಾದ ಸ್ವರೂಪಭೂತವಾದ ದೇಹವಿದೆಯೆಂದು ಒಪ್ಪಿ-ಕೊಳ್ಳೋಣ. ಆದರೂ ಪ್ರಕೃತ ಮುಕ್ತನಿಗೆ ದೇಹವಿದೆಯೆಂಬ ವಿಷಯದಲ್ಲಿ ಯಾವ ಪ್ರಮಾಣವನ್ನು ಹೇಳಿದಂತಾಯಿತು? ಎಂದು ಕೇಳಿದರೆ ಪರವಾದಿಯ ಅನುಮಾನದೂಷಣದ ಫಲವನ್ನು ವಿವರಿಸುತ್ತಾ ಮುಕ್ತನಿಗೆ ಜ್ಞಾನಾನಂದಾತ್ಮಕವಾದ ಸ್ವರೂಪದೇಹವಿದೆಯೆಂದು ಹೇಳುತ್ತಾರೆ.

**ಏವಂ ಸ್ವರೂಪದೇಹತ್ವಂ ಮುಕ್ತಸ್ಯಾಪ್ಯುರರೀಕೃತಮ್ ।**
**ನಾನಿಷ್ಟಭೋಗಸ್ತೇನ ಸ್ಯಾತ್ ಪ್ರಾಕೃತಕ್ಷೇತ್ರಸಂಭವಃ ॥ 55 ॥**

**ಪದಚ್ಛೇದ—** ಏವಂ, ಸ್ವರೂಪದೇಹತ್ವಂ, ಮುಕ್ತಸ್ಯ, ಅಪಿ, ಉರರೀಕೃತಂ, ನ, ಅನಿಷ್ಟಭೋಗಃ, ತೇನ, ಸ್ಯಾತ್, ಪ್ರಾಕೃತಕ್ಷೇತ್ರಸಂಭವಃ ।

**ಅನ್ವಯ**— ಮುಕ್ತಸ್ಯ, ಅಪಿ, ಏವಂ, ಸ್ವರೂಪದೇಹತ್ವಂ, ಉರರೀಕೃತಂ, ತೇನ, ಪ್ರಾಕೃತಕ್ಷೇತ್ರಸಂಭವಃ, ಅನಿಷ್ಟ-ಭೋಗಃ, ನ, ಸ್ಯಾತ್ ।

**ಅನ್ವಯಾರ್ಥ**—

**ಮುಕ್ತಸ್ಯ ಅಪಿ** = ಸಂಸಾರದಿಂದ ಬಿಡುಗಡೆ ಹೊಂದಿದ ಜೀವನಿಗೂ,

**ಏವಂ** = ಹೀಗೆ,

**ಸ್ವರೂಪದೇಹತ್ವಂ** = ಜ್ಞಾನಾನಂದಸ್ವರೂಪವಾದ ದೇಹವುಳ್ಳತನವು,

**ಉರರೀಕೃತಂ** = ಅಂಗೀಕರಿಸಲ್ಪಟ್ಟಿದೆ.

**ತೇನ** = ಅದರಿಂದ,

**ಪ್ರಾಕೃತಕ್ಷೇತ್ರಸಂಭವಃ** = ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿಯಿಂದ ಉತ್ಪನ್ನವಾದ ದೇಹದಿಂದ ಉತ್ಪತ್ತಿಯುಳ್ಳ,

**ಅನಿಷ್ಟಭೋಗಃ** = ದುಃಖಾನುಭವವು,

**ನ ಸ್ಯಾತ್** = ಆಗಲಾರದು.

**ತಾತ್ಪರ್ಯ**— ಈಶ್ವರನಿಗೆ ಇರುವಂತೆಯೇ ಮುಕ್ತಜೀವನಿಗೂ ಜ್ಞಾನ ಆನಂದಸ್ವರೂಪವಾದ ದೇಹವಿದೆಯೆಂದು ನಾವು ಒಪ್ಪಿಕೊಳ್ಳುತ್ತೇವೆ. ಮುಕ್ತಜೀವನಿಗೆ ಆ ಚಿದಾನಂದಮಯ ದೇಹದಿಂದ ಎಂದೂ ದುಃಖಾನುಭವವು ಉಂಟಾಗುವುದಿಲ್ಲ. ಸತ್ತ್ವಾದಿಗುಣತ್ರಯ ವಿಕಾರವಾದ ಪಾಂಚಭೌತಿಕ ದೇಹದಲ್ಲಿ ರಕ್ತಮಾಂಸಾದಿಗಳು ಇರುತ್ತವೆ. ಇಂತಹ ದೇಹವುಳ್ಳ ಸಂಸಾರಿಜೀವರಿಗೆ ಮಾತ್ರವೇ ಅನಿಷ್ಟಭೋಗವು ಒದಗುವುದು. ಮುಕ್ತಜೀವರಿಗೆ ಸ್ವರೂಪದೇಹದಿಂದ ಪರಮಾನಂದ ಭೋಗವೇ ಆಗುತ್ತದೆ.

ಈಶ್ವರನು ಜ್ಞಾನಾನಂದಸ್ವರೂಪನೆಂದು ಹೇಗೆ ಪ್ರಮಾಣದಿಂದ ಸಿದ್ಧಿಸುತ್ತದೆಯೋ ಅದೇ ರೀತಿ ಮುಕ್ತಜೀವರೂ ಜ್ಞಾನಾನಂದಸ್ವರೂಪರೆಂದು ಪ್ರಮಾಣದಿಂದ ಸಿದ್ಧಿಸುತ್ತದೆ. ಈಶ್ವರನಿಗೆ ಷಡೂರ್ಮಿಗಳು ಇಲ್ಲದಿರುವಂತೆ ಮುಕ್ತಜೀವನಿಗೂ ಷಡೂರ್ಮಿಗಳು ಇರುವುದಿಲ್ಲ. ಈಶ್ವರನಿಗೆ ಸ್ವರೂಪಭೂತವಾದ ಬುದ್ಧಿ, ಇಂದ್ರಿಯಗಳಿರುವಂತೆ ಮುಕ್ತಜೀವನಿಗೂ ಸ್ವರೂಪಭೂತವಾದ ಬುದ್ಧೀಂದ್ರಿಯಗಳಿರುತ್ತವೆ. ಈಶ್ವರನಿಗೂ ಅನಿಷ್ಟಭೋಗವಿಲ್ಲ, ಹಿಂದೆ ಪರವಾದಿಯು ಮುಕ್ತನಿಗೆ ಸುಖವಿದೆ ಎಂದು ಒಪ್ಪಿದರೆ ದುಃಖವೂ ಇದೆಯೆಂದೂ ಆಪಾದಿಸಿದ್ದನು. ಆ ಆಪಾದನೆಗೆ ಇಲ್ಲಿ ಉತ್ತರವನ್ನು ಹೇಳಿದ್ದಾರೆ. ಪ್ರಾಕೃತ ಶರೀರನಿಮಿತ್ತಕವಾಗಿ ದುಃಖವು ಬರುತ್ತದೆ. ಮುಕ್ತನಿಗೆ ಪ್ರಾಕೃತಶರೀರವಿಲ್ಲದಿರುವುದರಿಂದ ದುಃಖಭೋಗ-ವಿಲ್ಲ. ಪರಂತು ಅಪ್ರಾಕೃತದಿವ್ಯದೇಹದಿಂದ ಕೇವಲ ಸುಖಭೋಗವೇ ಆಗುತ್ತಿರುತ್ತದೆ ಎಂದು ಪರಮತಾತ್ಪರ್ಯ.

**ವಿಗ್ರಹ ಮತ್ತು ಕೋಶ**—

**ಸ್ವರೂಪದೇಹತ್ತ್ವಂ**— ಸ್ವಂ ಚ ತತ್ ರೂಪಂ ಸ್ವರೂಪಂ, ಸ್ವರೂಪಂ ದೇಹಃ ಯಸ್ಯ ಸಃ ಸ್ವರೂಪದೇಹಃ ಸ್ವರೂಪದೇಹಸ್ಯ ಭಾವಃ ಸ್ವರೂಪದೇಹತ್ವಂ ।

**ಅನಿಷ್ಟಭೋಗಃ**— ನ ಇಷ್ಟಂ ಅನಿಷ್ಟಂ ಅನಿಷ್ಟಸ್ಯ ಭೋಗಃ ಅನಿಷ್ಟಭೋಗಃ ।

**ಪ್ರಾಕೃತಕ್ಷೇತ್ರಸಂಭವಃ**— ಪ್ರಕೃತೇಃ ಆಗತಂ ಪ್ರಾಕೃತಂ ಪ್ರಾಕೃತಂ ಚ ತತ್ ಕ್ಷೇತ್ರಂ ಚ ಪ್ರಾಕೃತಕ್ಷೇತ್ರಂ, ಪ್ರಾಕೃತಕ್ಷೇತ್ರಾತ್ ಸಂಭವಃ ಯಸ್ಯ ಸಃ ಪ್ರಾಕೃತಕ್ಷೇತ್ರಸಂಭವಃ । ಕ್ಷೇತ್ರಂ = ಶರೀರ, 'ಕ್ಷೇತ್ರಂ ಪತ್ನೀ ಶರೀರಯೋಃ' ಅಮರ ।

**ಪ್ರಯೋಗ**— ಮುಕ್ತಸ್ಯಾಪಿ ಏವಂ ಸ್ವರೂಪದೇಹೇನ ಉರರೀಕೃತೇನ (ಭೂಯತೇ) ತೇನ ಪ್ರಾಕೃತಕ್ಷೇತ್ರಸಂಭವೇನ ಅನಿಷ್ಟಭೋಗೇನ ನ ಭೂಯೇತ ।

★ ★ ★

ಅವತಾರಿಕಾ— ಮುಕ್ತನಿಗೆ ಜ್ಞಾನಾನಂದಮಯವಾದ ಸ್ವರೂಪದೇಹವಿದೆಯೆಂದೂ ದೇಹಕ್ಕೂ ಮುಕ್ತಾತ್ಮನಿಗೂ ಭೇದವಿಲ್ಲ. ಐಕ್ಯವೇ ಇದೆಯೆಂದೂ ಹೇಳಿದ್ದಾಯಿತು. ಆದರೆ ದೇಹವು ಅವಯವಸಮುದಾಯದಿಂದ ಉತ್ಪನ್ನ-ವಾದುದರಿಂದ ಮುಕ್ತನೂ ಸಾವಯವನಾದನು. ಅವಯವಗಳಿಗೆ ನಾಶವು ಕಂಡದ್ದರಿಂದ ಮುಕ್ತನಿಗೂ ನಾಶವು ಬರಲಿ ಎಂಬ ಆಕ್ಷೇಪವನ್ನು ಅನುವಾದಿಸುತ್ತಾರೆ ಮತ್ತು ವಿಕಲ್ಪಿಸುತ್ತಾರೆ.

**ವಿಮತೋ ನಾವಯವವಾನ್ ವಿನಾಶಿತ್ವಪ್ರಸಂಗತಃ ।**
**ಪಟವಚ್ಚೇದವಯವಾ ನಿರಸ್ಯಂತೇಽತ್ರ ಕೀದೃಶಾಃ ॥ 56 ॥**

ಪದಚ್ಛೇದ— ವಿಮತಃ, ನ, ಅವಯವವಾನ್, ವಿನಾಶಿತ್ವಪ್ರಸಂಗತಃ, ಪಟವತ್, ಚೇತ್, ಅವಯವಾಃ, ನಿರಸ್ಯಂತೇ, ಅತ್ರ, ಕೀದೃಶಾಃ ।

ಅನ್ವಯ— ವಿಮತಃ, ಅವಯವವಾನ್, ನ (ಭವತಿ), ವಿನಾಶಿತ್ವಪ್ರಸಂಗತಃ, ಪಟವತ್, ಚೇತ್, ಅತ್ರ, ಕೀದೃಶಾಃ, ಅವಯವಾಃ, ನಿರಸ್ಯಂತೇ?

ಅನ್ವಯಾರ್ಥ—

**ವಿಮತಃ** = ಸಾವಯವನೋ ನಿರವಯವನೋ ಎಂದು ಸಂದೇಹವಿಷಯನಾದ ಮುಕ್ತಜೀವನು,
**ಅವಯವವಾನ್ ನ (ಭವತಿ)** = ಅವಯವವುಳ್ಳವನು ಆಗುವುದಿಲ್ಲ.
**ವಿನಾಶಿತ್ವಪ್ರಸಂಗತಃ** = ವಿನಾಶವು ಉಂಟಾಗಬೇಕಾಗಿ ಬರುವುದರಿಂದ,
**ಪಟವತ್** = ಬಟ್ಟೆಯಂತೆ,
**ಚೇತ್** = ಹೀಗೆ ಹೇಳುವುದಾದರೆ,
**ಅತ್ರ** = ಈ ಮುಕ್ತಜೀವನಲ್ಲಿ,
**ಕೀದೃಶಾಃ** = ಎಂತಹ,
**ಅವಯವಾಃ** = ಅವಯವಗಳು,
**ನಿರಸ್ಯಂತೇ** = ನಿರಾಕರಿಸಲ್ಪಡುತ್ತವೆ?

ತಾತ್ಪರ್ಯ— ಮುಕ್ತನಿಗೆ ಜ್ಞಾನಾನಂದಸ್ವರೂಪವಾದ ದೇಹವಿದೆಯೆಂದು ಹಿಂದೆ (ಶ್ಲೋ.55) ಹೇಳಿದುದು ಸರಿಯಲ್ಲ. ದೇಹವು ಯಾವಾಗಲೂ ಅವಯವಗಳಿಂದ ಸಹಿತವಾಗಿಯೇ ಇರುತ್ತದೆ. ಸ್ವರೂಪದೇಹಾತ್ಮಕನಾದ ಮುಕ್ತಜೀವನು ಸಾವಯವನಾದರೆ ಅವನಿಗೆ ನಾಶವೂ ಬರಬೇಕಾದೀತು ಎಂಬ ಪ್ರಶ್ನೆಗೆ (ಸಂದೇಹಕ್ಕೆ) ಇಲ್ಲಿ ಉತ್ತರ ಹೇಳುತ್ತಿದ್ದಾರೆ.

ಮೊದಲು ಪೂರ್ವಪಕ್ಷವನ್ನು ವಿವರಿಸುತ್ತಾರೆ. ಸಾವಯವನೋ ನಿರವಯವನೋ ಎಂದು ಸಂದೇಹಕ್ಕೆ ವಿಷಯನಾದ ಮುಕ್ತಜೀವನು, ಅವಯವ ಉಳ್ಳವನಲ್ಲ. ಏಕೆಂದರೆ ಅವಯವಗಳಿದ್ದರೆ ಅವನಿಗೆ ನಾಶವು ಬರಬೇಕಾಗುತ್ತದೆ ಎಂದು ಪೂರ್ವಪಕ್ಷ. ಇಲ್ಲಿಯ ಅಭಿಪ್ರಾಯ ಹೀಗಿದೆ. ಮುಕ್ತಜೀವನಿಗೆ ನಾಶವಿಲ್ಲದಿರುವುದರಿಂದ ಪರಮಾಣುವಿನಂತೆ ಅವನು ನಿರವಯವನು. ಮುಕ್ತಜೀವನಿಗೆ ಅವಯವಗಳಿದ್ದರೆ ಘಟಾದಿಗಳಂತೆ ನಾಶವು ಬರಬೇಕಾಗುತ್ತದೆ. ಹೀಗೆ ಮುಕ್ತಜೀವನು ನಿರವಯವನಾದುದರಿಂದ ಅವಯವಗಳಿಂದ ಕೂಡಿದ ಜ್ಞಾನಾನಂದಮಯವಾದ ದೇಹಸ್ವರೂಪನು ಮುಕ್ತನೆಂದು ಹಿಂದೆ ಹೇಳಿದುದು ಯುಕ್ತವಲ್ಲ.

ಈ ಪೂರ್ವಪಕ್ಷವನ್ನು ಸಾಮಾನ್ಯವಾಗಿ ಅನುವಾದಮಾಡುತ್ತಾರೆ. ಮುಂದಿನ ಶ್ಲೋಕದಲ್ಲಿ ನಿರಾಕರಿಸುತ್ತಾರೆ. ಮುಕ್ತ ಜೀವನಿಗೆ ಅವಯವಗಳಿಲ್ಲವೆಂದು ನೀವು ನಿರಾಕರಿಸುತ್ತೀರಿ. ಆದರೆ ಯಾವ ಪ್ರಕಾರದ ಅವಯವಗಳನ್ನು ನಿರಾಕರಿಸು-ತ್ತೀರಿ? ಅವಯವಗಳು ಎರಡು ವಿಧವಾಗಿದೆ. ಭಿನ್ನಾವಯವಗಳು ಮತ್ತು ಅಭಿನ್ನಾವಯವಗಳು. ಮುಕ್ತಜೀವನ

ಸ್ವರೂಪಾತ್ಮಕ ದೇಹಕ್ಕಿಂತ ಭಿನ್ನವಾದ ಅವಯವಗಳನ್ನು ನಿರಾಕರಿಸುತ್ತೀರೋ? ಅಥವಾ ಮುಕ್ತಜೀವನ ಸ್ವರೂಪದೇಹಕ್ಕಿಂತ ಅಭಿನ್ನವಾದ ಅವಯವಗಳನ್ನು ನಿರಾಕರಿಸುತ್ತೀರೋ ಎಂದು ಕೇಳುತ್ತೇವೆ. ವಿಕಲ್ಪನಿರಾಕರಣ ಮತ್ತು ಸಿದ್ಧಾಂತ ಮುಂದಿನ ಶ್ಲೋಕದಲ್ಲಿ ಬರುತ್ತದೆ.

**ವಿಗ್ರಹ—**

**ಅವಯವವಾನ್—** ಅವಯವಾಃ ಅಸ್ಯ ಸಂತೀತಿ ಅವಯವವಾನ್ ।

**ವಿನಾಶಿತ್ವಪ್ರಸಂಗತಃ—** ವಿನಾಶಃ ಅಸ್ಯ ಅಸ್ತೀತಿ ವಿನಾಶೀ, ವಿನಾಶಿನಃ ಭಾವಃ ವಿನಾಶಿತ್ವಂ, ವಿನಾಶಿತ್ವಸ್ಯ ಪ್ರಸಂಗಃ ವಿನಾಶಿತ್ವಪ್ರಸಂಗಃ, ವಿನಾಶಿತ್ವಪ್ರಸಂಗಾತ್ ಇತಿ ವಿನಾಶಿತ್ವಪ್ರಸಂಗತಃ ।

**ಪಟವತ್—** ಪಟೇನ ತುಲ್ಯಂ ಪಟವತ್ ।

**ಕ್ರಿಯಾಪದ—** ನಿರಸ್ಯಂತೇ - ನಿರ್ + ಅಸ್ಯಂತೇ, ಅಸ್ಯತೇ ಅಸ್ಯೇತೇ ಅಸ್ಯಂತೇ, ಅಸ್ಯಸೇ ಅಸ್ಯೇಥೇ ಅಸ್ಯಧ್ವೇ, ಅಸ್ಯೇ ಅಸ್ಯಾವಹೇ ಅಸ್ಯಾಮಹೇ । ಅಸು(ಅಸ್)ಕ್ಷೇಪಣೇ ಸಕ. ಸೇಟ್ ಪರ. to throw ಕರ್ಮಣಿ ಲಿಟ್ ಪ್ರಥಮಪುರುಷ ಬಹುವಚನ ।

**ಪ್ರಯೋಗ—** ವಿಮತೇನ ಅವಯವವತಾ ನ ಭೂಯತೇ ವಿನಾಶಿತ್ವಪ್ರಸಂಗತಃ ಪಟವತ್ ಚೇತ್ ಅತ್ರ (ತ್ವಂ) ಕೀದೃಶಾನ್ ಅವಯವಾನ್ ನಿರಸ್ಯಸಿ?

★ ★ ★

**ಅವತಾರಿಕಾ—** ಮುಕ್ತನಿಗೆ ಭಿನ್ನವಾದ ಜಡದೇಹಗಳು ಇಲ್ಲವೆಂಬ ಮೊದಲನೆಯ ಪಕ್ಷವನ್ನು ನಿರಾಕರಿಸುತ್ತಾರೆ.

**ಸಿದ್ಧಸಾಧನತಾ ಹೇತೋಸ್ತೇ ಭಿನ್ನಾಶ್ಚೇದಚಿನ್ಮಯಾಃ ।**
**ಆತ್ಮನೋ ಭೇದರಹಿತಾ ಏಷ್ಟವ್ಯಾ ಏವ ವಾದಿಭಿಃ ॥ 57 ॥**

**ಪದಚ್ಛೇದ—** ಸಿದ್ಧಸಾಧನತಾ, ಹೇತೋಃ, ತೇ, ಭಿನ್ನಾಃ, ಚೇತ್, ಅಚಿನ್ಮಯಾಃ, ಆತ್ಮನಃ, ಭೇದರಹಿತಾಃ, ಏಷ್ಟವ್ಯಾಃ, ಏವ, ವಾದಿಭಿಃ ।

**ಅನ್ವಯ—** ತೇ, ಭಿನ್ನಾಃ, ಅಚಿನ್ಮಯಾಃ (ನಿರಸ್ಯಂತೇ), ಚೇತ್, ಹೇತೋಃ, ಸಿದ್ಧಸಾಧನತಾ, ಆತ್ಮನಃ, ಭೇದರಹಿತಾಃ, ವಾದಿಭಿಃ, ಏಷ್ಟವ್ಯಾಃ, ಏವ ।

**ಅನ್ವಯಾರ್ಥ—**

**ಭಿನ್ನಾಃ** = ಮುಕ್ತಾತ್ಮನಿಗಿಂತ ಬೇರೆಯಾದ,

**ಅಚಿನ್ಮಯಾಃ** = ಜ್ಞಾನರೂಪವಲ್ಲದ,

**ತೇ** = ಆ ಅವಯವಗಳು,

**(ನಿರಸ್ಯಂತೇ) ಚೇತ್** = ನಿರಾಕರಿಸಲ್ಪಡುವುದಾದರೆ,

**ಹೇತೋಃ** = ವಿನಾಶಿತ್ವ (ನಾಶವಾಗುವಿಕೆ) ಎಂಬ ಹೇತುವಿಗೆ,

**ಸಿದ್ಧಸಾಧನತಾ** = ಸಿದ್ಧವಾದುದನ್ನೇ (ವಾದಿಯು ಒಪ್ಪಿಕೊಂಡಿರುವುದನ್ನೇ) ಸಾಧಿಸುವುದು ಎಂಬ ದೋಷವು ಬರುವುದು.

**ಆತ್ಮನಃ** = ಮುಕ್ತಾತ್ಮನಿಗಿಂತ,

**ಭೇದರಹಿತಾಃ** = ಭೇದವಿಲ್ಲದ ಅವಯವಗಳು, (ವೈಶೇಷಿಕರಿಂದ)

**ಏಷ್ಟವ್ಯಾಃ ಏವ** = ಒಪ್ಪಿಕೊಳ್ಳಲ್ಪಡಲೇಬೇಕು.

**ತಾತ್ಪರ್ಯ—** ಮುಕ್ತಾತ್ಮನು ದೇಹವುಳ್ಳವನು ಎಂದು ಒಪ್ಪಿಕೊಂಡರೆ ದೇಹವು ಅವಯವಸಮುದಾಯ ರೂಪವಾದುದರಿಂದ ಅವಯವವುಳ್ಳ ಪದಾರ್ಥವು ಬಟ್ಟೆ, ಗಡಿಗೆ ಮುಂತಾದವುಗಳಂತೆ ವಿನಾಶವುಳ್ಳದ್ದು. ಆದುದರಿಂದ ಮುಕ್ತನಿಗೂ ವಿನಾಶವು ಬರಬೇಕಾಗುತ್ತದೆ. ಆವಾಗ ಮುಕ್ತನಿಗೆ ಅವಯವವಿಲ್ಲವೆಂದು ಸಾಧಿಸುವ ವೈಶೇಷಿಕರನ್ನು ಕುರಿತು ನಾವು ಕೇಳುತ್ತೇವೆ. ನೀವು ಮುಕ್ತಾತ್ಮನಿಗಿಂತ ಭಿನ್ನವಾದ ಜ್ಞಾನಾನಂದಮಯವಲ್ಲದ ಜಡವಾದ ಅವಯವಗಳನ್ನು ನಿರಾಕರಿಸುತ್ತೀರೋ ಅಥವಾ ಮುಕ್ತಾತ್ಮನಿಗೆ ಸ್ವರೂಪವಾಗಿರುವ ಜ್ಞಾನಾನಂದಮಯವಾದ ಅವಯವಗಳನ್ನು ನಿರಾಕರಿಸುತ್ತೀರೋ? ಮುಕ್ತಾತ್ಮನ ಸ್ವರೂಪಕ್ಕಿಂತ ಭಿನ್ನವಾದ, ಜಡವಾದ(ಜ್ಞಾನಾನಂದಸ್ವರೂಪವಲ್ಲದ) ಅವಯವಗಳನ್ನು ನಿರಾಕರಿಸುವ ಪಕ್ಷದಲ್ಲಿ ಹೇತುವಿಗೆ ಸಿದ್ಧಸಾಧನತಾ ಎಂಬ ದೋಷವು ಬರುತ್ತದೆ. ವಿನಾಶಿತ್ವವೆಂಬ ಹೇತುವಿನಿಂದ ಮುಕ್ತನಿಗೆ ಸ್ವರೂಪ-ದೇಹಕ್ಕಿಂತ ಭಿನ್ನವಾದ ಅವಯವಗಳಿಲ್ಲ ಎಂದು ಸಾಧಿಸಿದರೆ ಆ ವಿಷಯವು ನಮಗೆ ಸಿದ್ಧವೇ ಆಗಿದೆ. ನಾವೂ ಮುಕ್ತಾತ್ಮನ ಸ್ವರೂಪಕ್ಕಿಂತ ಭಿನ್ನವಾದ ಅವಯವಗಳನ್ನು ಒಪ್ಪುವುದಿಲ್ಲ. ಇನ್ನು ಮುಕ್ತಜೀವನಿಗಿಂತ ಭೇದವಿಲ್ಲದ ಅವಯವಗಳನ್ನು ಒಪ್ಪುವುದಾದರೆ ಅದು ನಮಗೂ ಇಷ್ಟವೇ. ಹೀಗೆ ವೈಶೇಷಿಕಾದಿವಾದಿಗಳೂ ಕೂಡ ಮುಕ್ತಜೀವನಿಗೆ ಜ್ಞಾನ ಆನಂದಾದಿ ಸ್ವರೂಪಾತ್ಮಕವಾದ ದೇಹವನ್ನು ಒಪ್ಪಿಕೊಳ್ಳಬೇಕಾಗುತ್ತದೆ ಎಂದ ಮೇಲೆ ಅದನ್ನು ನಿರಾಕರಿಸುವುದು ಯುಕ್ತವಲ್ಲ.

**ವಿಗ್ರಹ—**

**ಸಿದ್ಧಸಾಧನತಾ—** ಸಾಧ್ಯತೇ ಅನೇನೇತಿ ಸಾಧನಂ ಸಿದ್ಧಸ್ಯ ಸಾಧನಂ ಸಿದ್ಧಸಾಧನಂ, ಸಿದ್ಧಸಾಧನಸ್ಯ ಭಾವಃ ಸಿದ್ಧಸಾಧನತಾ ।

**ಅಚಿನ್ಮಯಾಃ—** ಚಿತ್‌ಪ್ರಚುರಾಃ ಚಿನ್ಮಯಾಃ ನ ಚಿನ್ಮಯಾಃ ಅಚಿನ್ಮಯಾಃ ।

**ಭೇದರಹಿತಾಃ—** ಭೇದೇನ ರಹಿತಾಃ ಭೇದರಹಿತಾಃ ।

**ಪ್ರಯೋಗ—** ಪಾನ್ ಭಿನ್ನಾನ್ ಅಚಿನ್ಮಯಾನ್ ನಿರಸ್ಯಸಿ ಚೇತ್ ಹೇತೋಃ ಸಿದ್ಧಸಾಧನತಯಾ ಭೂಯತೇ (ಅತಃ), ಆತ್ಮನಃ ಭೇದರಹಿತೈಃ ತೈಃ ದೇಹೈಃ ವಾದಿಭಿಃ ಏಷ್ಟವ್ಯಃ ಭೂಯತೇ ।

★ ★ ★

**ಅವತಾರಿಕಾ—** ವೈಶೇಷಿಕರು ಮುಕ್ತನಾದ ಆತ್ಮನಿಗೆ ಆತ್ಮಾಭಿನ್ನವಾದ ಅವಯವಗಳನ್ನು ಏಕೆ ಒಪ್ಪಿಕೊಳ್ಳಬೇಕೆಂದು ಕೇಳಿದರೆ ಹೇಳುತ್ತಾರೆ.

**ಪರಮಾಣ್ವಾದಿದೇಶೇಷು ವ್ಯಾಪ್ತ್ಯೈ ವ್ಯಾಮಾದಿಕೇಷ್ವಪಿ ।**
**ಯಥಾಽಽತ್ಮನಃ ಪ್ರದೇಶಾಃ ಸ್ಯುಸ್ತೇಷಾಂ ನೋಽವಯವಾಸ್ತಥಾ ॥ 58 ॥**

**ಪದಚ್ಛೇದ—** ಪರಮಾಣ್ವಾದಿದೇಶೇಷು, ವ್ಯಾಪ್ತ್ಯೈ, ವ್ಯಾಮಾದಿಕೇಷು, ಅಪಿ, ಯಥಾ, ಆತ್ಮನಃ, ಪ್ರದೇಶಾಃ, ಸ್ಯುಃ, ತೇಷಾಂ, ನಃ, ಅವಯವಾಃ, ತಥಾ ।

**ಅನ್ವಯ—** ತೇಷಾಂ, ಆತ್ಮನಃ, ವ್ಯಾಪ್ತ್ಯೈ, ಪರಮಾಣ್ವಾದಿದೇಶೇಷು, ವ್ಯಾಮಾದಿಕೇಷು, ಪ್ರದೇಶಾಃ, ಯಥಾ, ಸ್ಯುಃ, ತಥಾ, ನಃ, ಅವಯವಾಃ (ಸ್ಯುಃ) ।

**ಅನ್ವಯಾರ್ಥ—**

**ತೇಷಾಂ** = ಆ ವೈಶೇಷಿಕರಿಗೆ (ರ) (ಮತದಲ್ಲಿ),
**ಆತ್ಮನಃ** = ಪರಮಾತ್ಮನ ಅಥವಾ ಜೀವಾತ್ಮರ,
**ವ್ಯಾಪ್ತ್ಯೈ** = ವ್ಯಾಪ್ತಿಯು ಸಿದ್ಧಿಸುವುದಕ್ಕೋಸ್ಕರ,
**ಪರಮಾಣ್ವಾದಿದೇಶೇಷು** = ಪರಮಾಣು, ದ್ವ್ಯಣುಕ, ತ್ರ್ಯಣುಕಾದಿಗಳ ಪ್ರದೇಶಗಳಲ್ಲಿಯೂ,

**ವ್ಯಾಮಾದಿಕೇಷು ಅಪಿ** = ಮಾರು ಮೊದಲಾದ ಅನೇಕ ಸ್ಥಳಗಳಲ್ಲಿಯೂ,
**ಪ್ರದೇಶಾಃ** = ಸ್ಥಳಗಳು,
**ಯಥಾ** = ಹೇಗೆ,
**ಸ್ಯುಃ** = ಇದ್ದೇ ಇರಬೇಕಾಗಿವೆಯೋ,
**ತಥಾ** = ಹಾಗೆ,
**ನಃ** = ನಮಗೆ (ದ್ವೈತಿಗಳಾದ ನಮ್ಮ ಮತದಲ್ಲಿ),
**ಅವಯವಾಃ** = ದೇಹಕ್ಕಿಂತ ಭಿನ್ನವಲ್ಲದ ಅವಯವಗಳು,
**ಸ್ಯುಃ** = ಇದ್ದೇ ಇರುವುವು.

**ತಾತ್ಪರ್ಯ—** ವೈಶೇಷಿಕರೂ ಆತ್ಮಾಭಿನ್ನವಾದ ಅವಯವಗಳನ್ನು ಒಪ್ಪಿಕೊಳ್ಳಲೇಬೇಕು. ಏಕೆಂದರೆ ವೈಶೇಷಿಕರು ಪರಮಾತ್ಮನನ್ನೂ ಜೀವಾತ್ಮರನ್ನೂ ಎಲ್ಲಾ ಪ್ರದೇಶಗಳಲ್ಲಿಯೂ ವ್ಯಾಪಿಸಿ ಇರುವವರು ವಿಭುಗಳು ಎಂದು ಹೇಳುತ್ತಾರೆ. ಪರಮಾಣು, ದ್ವ್ಯಣುಕ, ತ್ರ್ಯಣುಕ ಮುಂತಾದುವುಗಳು ವಿಭುಗಳಾದ ಜೀವಾತ್ಮ ಮತ್ತು ಪರಮಾತ್ಮರ ವ್ಯಾಪ್ತಿಗೆ ಯೋಗ್ಯವಾದ ಸ್ಥಾನಗಳು, ವ್ಯಾಮ (a measure of length equal to the space between the tips of the finger of either hand when the arms are extended) ಎರಡು ಕೈಗಳನ್ನು ನೀಡಿದಾಗ ಆಗುವ ಉದ್ದ, ಆ ಉದ್ದದ ಪ್ರದೇಶ, a measure of distance equal to 400 hastas or cubits ನಾಲ್ಕು ನೂರು ಗೇಣು ಸುಮಾರು ಒಂದು ಫರ್ಲಾಂಗ ಉದ್ದ ಮುಂತಾದುವುಗಳು ಜೀವ ಪರಮಾತ್ಮರ ವ್ಯಾಪ್ತಿಗೆ ಯೋಗ್ಯವಾದ ಸ್ಥಾನಗಳು. ಇವೆಲ್ಲವೂ ಆತ್ಮನ ಪ್ರದೇಶಗಳು (ಅಂದರೆ ಅವಯವಗಳು) ಆಗಿವೆ. ನಮ್ಮ ಪಕ್ಷದಲ್ಲಿಯ ಮುಕ್ತಾತ್ಮನಿಗೆ ಅಭಿನ್ನವಾದ ಅವಯವಗಳು ಹಾಗೆಯೇ ಇರುತ್ತವೆ.

ವೈಶೇಷಿಕರು ಎಲ್ಲಾ ಆತ್ಮರೂ ವ್ಯಾಪ್ತರು ಎಂದು ಒಪ್ಪುತ್ತಾರೆ. ಪರಮಾಣು ಮುಂತಾದ ಅಲ್ಪಸ್ಥಳಗಳಲ್ಲಿಯೂ, ಮಾರು (ವ್ಯಾಮ ಮುಂತಾದ ಹೆಚ್ಚಾದ ದೊಡ್ಡ, ದೀರ್ಘವಾದ) ಸ್ಥಳಗಳಲ್ಲಿಯೂ, ಆತ್ಮನಿಗೆ ಪ್ರದೇಶಗಳನ್ನು ಒಪ್ಪಬೇಕು. ಈ ಚಿಕ್ಕ, ದೊಡ್ಡ ಸ್ಥಳಗಳಲ್ಲಿ ಆತ್ಮರು ವ್ಯಾಪಿಸಿಲ್ಲವಾದರೆ ಆತ್ಮರು ಎಲ್ಲಾ ಪ್ರದೇಶಗಳಲ್ಲಿಯೂ ವ್ಯಾಪಿಸಿ ಇದ್ದಾರೆ ಎಂದು ಹೇಳುವುದು ಹೇಗೆ ತಿಳಿಯುವುದು? ಹೀಗೆ ವೈಶೇಷಿಕರ ಪಕ್ಷದಲ್ಲಿ ಆತ್ಮಾಭಿನ್ನವಾದ ಆತ್ಮ ಪ್ರದೇಶಗಳು ಹೇಗೆ ಇವೆಯೋ, ಹಾಗೆಯೇ ನಮ್ಮ ಪಕ್ಷದಲ್ಲಿಯೂ ಮುಕ್ತಜೀವರಿಗೆ ಇರುವ ಆಯಾ ಅವಯವಗಳು, ಮುಕ್ತಜೀವರಿಗಿಂತ ಅಭಿನ್ನವಾಗಿವೆ. ಆನಂದಜ್ಞಾನ ಮುಂತಾದ ಗುಣಗಳೇ ಕೈ, ಕಾಲು, ಹೊಟ್ಟೆ, ಶಿರಸ್ಸು ಇವುಗಳ ರೂಪದಲ್ಲಿವೆ ಎಂದು ಒಪ್ಪಿದರೆ ವೈಶೇಷಿಕರು ಯಾವ ಪ್ರತಿವಾದವನ್ನು ಮಾಡಲು ಸಾಧ್ಯವಿಲ್ಲ. ಮುಕ್ತಜೀವರಿಗೆ ಅವರಿಂದ ಭೇದವಿಲ್ಲದ ಅಂದರೆ ಮುಕ್ತಜೀವರ ಸ್ವರೂಪವೇ ಆದ ಅವಯವಗಳು ಇವೆಯೆಂದು ವೈಶೇಷಿಕರೂ, ಅದ್ವೈತಿಗಳೂ ಒಪ್ಪಿಕೊಳ್ಳಲೇಬೇಕಾಗುವುದು. ಏಕೆಂದರೆ, ಮುಕ್ತನಿಗೆ ಸ್ವರೂಪ ದೇಹವಿಲ್ಲವೆಂದರೆ ಮುಕ್ತಜೀವನ ಸ್ವರೂಪವೇ ಇಲ್ಲವೆಂದಾದೀತು, ಕೊನೆಗೆ ಜೀವಾಭಿನ್ನನಾದ ಈಶ್ವರನೂ ಇಲ್ಲವೆಂದಾದೀತು. ಆದುದರಿಂದ ಮುಕ್ತನಿಗೆ ಸ್ವರೂಪದೇಹವನ್ನು ಅದ್ವೈತಿಯೂ ನಿಷೇಧಿಸಲು ಸಾಧ್ಯವಿಲ್ಲ. ಅವನೂ ಸ್ವರೂಪದೇಹವನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ.

**ವಿಗ್ರಹ ಮತ್ತು ಕೋಶ—**

**ಪರಮಾಣ್ವಾದಿದೇಶೇಷುಃ—** ಪರಮಾಣುಃ ಆದಿಃ ಯೇಷಾಂ ತೇ ಪರಮಾಣ್ವಾದಯಃ, ಪರಮಾಣ್ವಾದೀನಾಂ ದೇಶಾಃ ಪರಮಾಣ್ವಾದಿದೇಶಾಃ ತೇಷು,

**ವ್ಯಾಮಾದಿಕೇಷುಃ—** ವ್ಯಾಮಃ ಆದಿಃ ಯೇಷಾಂ ತೇ ವ್ಯಾಮಾದಿಕಾಃ ತೇಷು । ವ್ಯಾಮ = ಎರಡು ಕೈಗಳನ್ನೂ ಉದ್ದವಾಗಿ ಚಾಚಿದಾಗ ಆಗುವ ಉದ್ದ, ಮಾರು, 'ವ್ಯಾಮೋ ಬಾಹ್ವೋಃ ಸಕರಯೋಸ್ತತಯೋಸ್ತಿರ್ಯಗಂತರಂ' ಅಮರ ।

**ಕ್ರಿಯಾಪದ—** ಸ್ಯುಃ - ಸ್ಯಾತ್ ಸ್ಯಾತಾಂ ಸ್ಯುಃ ಇತ್ಯಾದಿ ಅಸ ಭುವಿ ಅಕ. ಸೇಟ್ ಪರ. ಠಿಟ ಚಿಥಿ ವಿಧಿಲಿಙ್ ಪ್ರಥಮಪುರುಷೇ ಬಹುವಚನ ।

**ಪ್ರಯೋಗ—** ತೇಷಾಂ ಆತ್ಮನಃ ವ್ಯಾಪ್ತ್ಯೈ ಪರಮಾಣ್ವಾದಿದೇಶೇಷು ವ್ಯಾಮಾದಿಕೇಷು ಪ್ರದೇಶೈಃ ಯಥಾ ಭೂಯತೇ ತಥಾ ನಃ ಅವಯವೈಃ ಭೂಯತೇ ।

★ ★ ★

**ಅವತಾರಿಕಾ—** ಹೀಗೆ ಮುಕ್ತರಿಗೆ ದೇಹವಿದೆಯೆಂದು ಸಾಧಿಸಿದ್ದಾಯಿತು. ಈಗ ಇಂದ್ರಿಯಾದಿಗಳನ್ನೂ ಸಾಧಿಸುತ್ತಾರೆ.

**ಮುಕ್ತೋ ರೂಪಾದಿವಿತ್ ಸತ್ತ್ವಾಜ್ಜಡಾನ್ಯತ್ವೇ ಸತೀಶವತ್ ।**
**ದೃಷ್ಟಾಂತೋಽಸಾಧ್ಯವಿಕಲಸ್ತಸ್ಯ ಸರ್ವಜ್ಞತಾಗ್ರಹಾತ್ ॥ 59 ॥**

**ಪದಚ್ಛೇದ—** ಮುಕ್ತಃ, ರೂಪಾದಿವಿತ್, ಸತ್ತ್ವಾತ್, ಜಡಾನ್ಯತ್ವೇ ಸತಿ, ಈಶವತ್, ದೃಷ್ಟಾಂತಃ, ಅಸಾಧ್ಯವಿಕಲಃ, ತಸ್ಯ, ಸರ್ವಜ್ಞತಾಗ್ರಹಾತ್ ।

**ಅನ್ವಯ—** ಮುಕ್ತಃ, ರೂಪಾದಿವಿತ್, ಜಡಾನ್ಯತ್ವೇ, ಸತಿ, ಸತ್ತ್ವಾತ್, ಈಶವತ್, ದೃಷ್ಟಾಂತಃ, ಅಸಾಧ್ಯವಿಕಲಃ, ತಸ್ಯ, ಸರ್ವಜ್ಞತಾಗ್ರಹಾತ್ ।

**ಅನ್ವಯಾರ್ಥ—**

**ಮುಕ್ತಃ** = ಮುಕ್ತನಾದ ಜೀವನು,
**ರೂಪಾದಿವಿತ್** = ರೂಪರಸಗಂಧ ಮೊದಲಾದ ವಿಷಯಗಳ ಜ್ಞಾನವುಳ್ಳವನು,
**ಜಡಾನ್ಯತ್ವೇ ಸತಿ** = ಜ್ಞಾನವಿಲ್ಲದ ಘಟಾದಿವಸ್ತುಗಳಿಗಿಂತ ಭಿನ್ನವಾಗಿರಲಾಗಿ,
**ಸತ್ತ್ವಾತ್** = ಇರುವ ವಸ್ತುವಾಗಿರುವುದರಿಂದ,
**ಈಶವತ್** = ಈಶ್ವರನಂತೆ (ಪರಮಾತ್ಮನಂತೆ),
**ದೃಷ್ಟಾಂತಃ** = ಈಶ್ವರನಂತೆ ಎಂಬ ಉದಾಹರಣೆಯು,
**ಅಸಾಧ್ಯವಿಕಲಃ** = ರೂಪಾದಿವಿಷಯಕಜ್ಞಾನವೆಂಬ ಸಾಧ್ಯಧರ್ಮರಹಿತವಾದುದು ಎಂದು ಅಲ್ಲ. (ರೂಪಾದಿ ವಿಷಯಜ್ಞಾನವೆಂಬ ಸಾಧ್ಯಧರ್ಮ ಉಳ್ಳದ್ದೇ ಆಗಿದೆ) ಏಕೆಂದರೆ,
**ತಸ್ಯ** = ಈಶ್ವರವಾದಿಗಳು ಅಂಗೀಕರಿಸಿರುವ ಈಶ್ವರನಿಗೆ,
**ಸರ್ವಜ್ಞತಾಗ್ರಹಾತ್** = ಸರ್ವಜ್ಞತೆಯನ್ನು ಒಪ್ಪಿರುವುದರಿಂದ (ಈಶ್ವರನು ರೂಪಾದಿವಿಷಯಕ ಜ್ಞಾನವುಳ್ಳವನೆಂದೇ ಒಪ್ಪಿಕೊಳ್ಳಬೇಕಾಗಿದೆ).

**ತಾತ್ಪರ್ಯ—** ಮುಕ್ತಜೀವನು ಜಡವಸ್ತುವಿಗಿಂತ ಭಿನ್ನನು ಮತ್ತು ಸತ್ ಆದ (ಇರತಕ್ಕ) ವಸ್ತುವು, ಶಶವಿಷಾಣಾದಿಗಳಂತೆ ಅಸತ್ ಅಲ್ಲ. ಆದುದರಿಂದ ರೂಪರಸಶಬ್ದಾದಿವಿಷಯಗಳ ಜ್ಞಾನವು ಮುಕ್ತನಿಗೆ ಇದ್ದೇ ಇದೆ. ರೂಪಾದಿಜ್ಞಾನವಿರಬೇಕಾದರೆ ಕಣ್ಣು, ನಾಲಿಗೆ, ಕಿವಿ ಮುಂತಾದ ಇಂದ್ರಿಯಗಳು ಇರಲೇಬೇಕಷ್ಟೆ. 'ಮುಕ್ತಃ ರೂಪಾದಿವಿತ್, ಜಡಾನ್ಯತ್ವೇ ಸತಿ ಸತ್ತ್ವಾತ್' = ಮುಕ್ತನು ರೂಪಾದಿ ವಿಷಯಕಜ್ಞಾನವುಳ್ಳವನು, ಜಡಕ್ಕಿಂತ ಭಿನ್ನವಾಗಿದ್ದು ಸತ್ ಆದ ವಸ್ತುವಾದುದರಿಂದೆಂಬ ಅನುಮಾನಕ್ಕೆ ಈಶ್ವರನೇ ದೃಷ್ಟಾಂತ. ಈಶ್ವರನೂ ಜಡಭಿನ್ನನು, ಚೇತನನು ಸತ್ ಆದ ವಸ್ತುವು, ಅವನಲ್ಲಿ ರೂಪಾದಿ ವಿಷಯಕಜ್ಞಾನವಿದೆ. ಅದರಂತೆ ಮುಕ್ತಜೀವನಲ್ಲಿಯೂ ಹೇತುವು ಇರುವುದರಿಂದ ಸಾಧ್ಯವೂ ಇದೆಯೆಂದು ಒಪ್ಪಿಕೊಳ್ಳ

ಬೇಕು. ಹಾಗಲ್ಲ, ಈಶ್ವರನಲ್ಲಿ ರೂಪಾದಿಜ್ಞಾನವಿಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವು ಇಲ್ಲದ ಪ್ರಯುಕ್ತ ಸಾಧ್ಯವೈಕಲ್ಯ (ಸಾಧಿಸಲ್ಪಡಬೇಕಾದ ಧರ್ಮವು ಇಲ್ಲದಿರುವುದು) ಎಂಬ ದೋಷವು ಬರುವುದಷ್ಟೆ? ಎಂದರೆ ತಾರ್ಕಿಕರು, ಅದ್ವೈತಿಗಳು ಮುಂತಾದ ಈಶ್ವರವಾದಿಗಳು ಒಪ್ಪಿರುವ ಈಶ್ವರನು ಸರ್ವಜ್ಞನಷ್ಟೆ? ಅವರೆಲ್ಲರೂ ತಾವು ಒಪ್ಪಿರುವ ಈಶ್ವರನನ್ನು ಸರ್ವಜ್ಞ-ನೆಂದೂ ಒಪ್ಪಿರುತ್ತಾರೆ. ಸರ್ವಜ್ಞನೆಂದರೆ ಎಲ್ಲಾ ವಿಷಯಗಳ ಜ್ಞಾನವುಳ್ಳವನೆಂದು ಅರ್ಥವಷ್ಟೆ. ರೂಪರಸಗಂಧಾದಿ ವಿಷಯಗಳು ಸರ್ವದಲ್ಲಿಯೇ ಸೇರಬೇಕಷ್ಟೆ! ಹಾಗಾಗಿ ಈಶ್ವರನು ಸರ್ವವಿಷಯಕ ಜ್ಞಾನವುಳ್ಳವನೆಂದು ಅವರೆಲ್ಲರೂ ಒಪ್ಪಿಕೊಳ್ಳಬೇಕಾದುದರಿಂದ ನಮ್ಮ ಅನುಮಾನಕ್ಕೆ ಸಾಧ್ಯವೈಕಲ್ಯವೆಂಬ ದೋಷವನ್ನು ಹೇಳಲು ಬರುವುದಿಲ್ಲ. ಹೀಗೆ ಮುಕ್ತಜೀವನಿಗೆ ಜ್ಞಾನಾನಂದಸ್ವರೂಪದೇಹವಿದ್ದಂತೆಯೇ ರೂಪರಸಗಂಧಸ್ಪರ್ಶಶಬ್ದಾದಿ ವಿಷಯಕ ಜ್ಞಾನವಿರುವುದರಿಂದ ಇವುಗಳನ್ನು ಗ್ರಹಿಸಲು ಬೇಕಾಗಿರುವ ಕಣ್ಣು, ನಾಲಿಗೆ, ಮೂಗು, ತ್ವಚೆ, ಕಿವಿ, ಮನಸ್ಸು ಮುಂತಾದ ಇಂದ್ರಿಯಗಳೂ ಇವೆ. ಆದರೆ ಇವೆಲ್ಲವೂ ಜ್ಞಾನಾನಂದಸ್ವರೂಪದೇಹಾತ್ಮಕವಾಗಿವೆ ಎಂಬ ವೈಲಕ್ಷಣ್ಯವಿರುವುದರಿಂದ ಮುಕ್ತನು ಸಂಸಾರಿಯಂತೆಯೇ ಆಗುತ್ತಾನೆ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

ವಿಗ್ರಹ—

**ರೂಪಾದಿವತ್**— ರೂಪಂ ಆದಿಃ ಯಸ್ಯ ಸಃ ರೂಪಾದಿಃ, ರೂಪಾದಿಂ ವೇತ್ತೀತಿ ರೂಪಾದಿವಿತ್ ।

**ಸತ್ತ್ವಾತ್**— ಸತಃ ಭಾವಃ ಸತ್ತ್ವಂ ತಸ್ಮಾತ್ ।

**ಜಡಾನ್ಯತ್ವೇ**— ಜಡಾತ್ ಅನ್ಯಃ ಜಡಾನ್ಯಃ ಜಡಾನ್ಯಸ್ಯ ಭಾವಃ ಜಡಾನ್ಯತ್ವಂ ತಸ್ಮಿನ್ ।

**ಈಶವತ್‌ದೃಷ್ಟಾಂತಃ**— ಈಶೇನ ತುಲ್ಯಂ ಈಶವತ್ ದೃಷ್ಟಃ ಅಂತಃ ಯಸ್ಮಿನ್ ಸಃ ದೃಷ್ಟಾಂತಃ ।

**ಅಸಾಧ್ಯವಿಕಲಃ**— ಸಾಧ್ಯೇನ ವಿಕಲಃ ಸಾಧ್ಯವಿಕಲಃ, ಸಾಧ್ಯವಿಕಲಃ ನ ಭವತೀತಿ ಅಸಾಧ್ಯವಿಕಲಃ ।

**ಸರ್ವಜ್ಞತಾಗ್ರಹಾತ್**— ಸರ್ವಂ ಜಾನಾತೀತಿ ಸರ್ವಜ್ಞಃ ಸರ್ವಜ್ಞಸ್ಯ ಭಾವಃ ಸರ್ವಜ್ಞತಾ ಸರ್ವಜ್ಞತಾಯಾಃ ಗ್ರಹಃ ಸರ್ವಜ್ಞತಾಗ್ರಹಃ ತಸ್ಮಾತ್ ಸರ್ವಜ್ಞತಾಗ್ರಹಾತ್ ।

**ಪ್ರಯೋಗ**— ಮುಕ್ತೇನ ರೂಪಾದಿವಿದಾ ಭೂಯತೇ, ಜಡಾನ್ಯತ್ವೇ ಸತಿ ಈಶವತ್, ದೃಷ್ಟಾಂತೇನ ಅಸಾಧ್ಯ ವಿಕಲೇನ ಭೂಯತೇ ತಸ್ಯ ಸರ್ವಜ್ಞತಾಗ್ರಹಾತ್ ।

★ ★ ★

**ಅವತಾರಿಕಾ**— ಇಲ್ಲಿ ಆಕ್ಷೇಪವು - ಈಶ್ವರನು ಸರ್ವಜ್ಞನು ಎಂದು ಒಪ್ಪಿಕೊಳ್ಳುತ್ತೇವೆ. ಅವನಿಗೆ ರೂಪಾದಿಗಳ ಅನುಭವದಿಂದ ಹುಟ್ಟಿದ ಸುಖವಿಲ್ಲ. ಏಕೆಂದರೆ ಸುಖವನ್ನು ಒಪ್ಪಿಕೊಂಡರೆ ದುಃಖವನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. 'ಮುಕ್ತಃ, ರೂಪಾದಿವಿತ್ ಜಡಾನ್ಯತ್ವೇ ಸತಿ ಸತ್ತ್ವಾತ್ ಈಶವತ್' ಎಂಬಲ್ಲಿ ರೂಪಾದಿವಿಷಯಾನುಭವಜನ್ಯವಾದ ಸುಖಾನುಭವವನ್ನು ನೀವು ಸಾಧಿಸಲು ಹೊರಟಿದ್ದೀರಿ. ಈ ಸಾಧ್ಯವನ್ನು ಈಶ್ವರನಲ್ಲಿ ಅದ್ವೈತಿಗಳು ಒಪ್ಪದಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೆಂಬ ದೋಷವು ಬಂದೇ ಬರುತ್ತದೆಯಲ್ಲವೇ ಎಂಬ ಆಕ್ಷೇಪವನ್ನು ಅನುವಾದಿಸಿ ಖಂಡಿಸುತ್ತಾರೆ.

**ಈಶ್ವರೋ ನ ಸುಖೀ ತೇನ ರೂಪಾದ್ಯನುಭವನ್ನಪಿ ।**
**ದುಃಖಪ್ರಸಂಗಾದಿತಿ ಮಾ ವಾದಿ ತದ್ವ್ಯಾಪ್ತಿದೂಷಣಾತ್ ॥ 60 ॥**

**ಪದಚ್ಛೇದ**— ಈಶ್ವರಃ, ನ, ಸುಖೀ, ತೇನ, ರೂಪಾದಿ, ಅನುಭವನ್, ಅಪಿ, ದುಃಖಪ್ರಸಂಗಾತ್, ಇತಿ, ಮಾ, ವಾದಿ, ತದ್ವ್ಯಾಪ್ತಿದೂಷಣಾತ್ ।

**ಅನ್ವಯ**— ಈಶ್ವರಃ, ರೂಪಾದಿ, ಅನುಭವನ್, ಅಪಿ, ತೇನ, ಸುಖೀ, ನ, ದುಃಖಪ್ರಸಂಗಾತ್, ತದ್ವ್ಯಾಪ್ತಿ ದೂಷಣಾತ್, ಇತಿ, ಮಾ, ವಾದಿ ।

**ಅನ್ವಯಾರ್ಥ**—

**ಈಶ್ವರಃ** = ಪರಮಾತ್ಮನು,

**ರೂಪಾದಿ** = ರೂಪರಸಾದಿವಿಷಯಗಳನ್ನು,

**ಅನುಭವನ್ ಅಪಿ** = ಪ್ರತ್ಯಕ್ಷದಿಂದ ವಿಷಯೀಕರಿಸುವವನಾದರೂ,

**ತೇನ** = ಆ ರೂಪರಸಾದಿವಿಷಯಕಪ್ರತ್ಯಕ್ಷಾನುಭವದಿಂದ,

**ಸುಖೀ ನ** = ಸುಖ ಉಳ್ಳವನು ಅಲ್ಲ,

**ದುಃಖಪ್ರಸಂಗಾತ್** = ದುಃಖವು ಇದೆಯೆಂದು ಹೇಳಬೇಕಾದೀತು ಎಂಬ ಆಪಾದನೆ ಬರುವುದರಿಂದ,

**ಇತಿ** = ಎಂದು,

**ತದ್ವ್ಯಾಪ್ತಿದೂಷಣಾತ್** = ಯಾವನು ಸುಖವುಳ್ಳವನೋ ಅವನು ದುಃಖವುಳ್ಳವನು (ಎಲ್ಲಿ ಸುಖವಿದೆಯೋ ಅಲ್ಲಿ ದುಃಖವಿದೆ) ಎಂಬ ವ್ಯಾಪ್ತಿಯನ್ನು ನಿರಾಕರಿಸಿರುವುದರಿಂದ,

**ಮಾವಾದಿ** = ಹೇಳಲ್ಪಡಕೂಡದು.

**ತಾತ್ಪರ್ಯ**— ಈಶ್ವರನಿಗೆ ರೂಪಾದಿವಿಷಯಕಜ್ಞಾನವಿದೆ ಎಂದು ನಾವು ಒಪ್ಪಿದರೂ, ರೂಪಾದಿವಿಷಯಕ ಜ್ಞಾನದಿಂದ ಈಶ್ವರನಿಗೆ ಸುಖದ ಅನುಭವವು ಉಂಟಾಗುವುದಿಲ್ಲ ಎಂದು ಹೇಳುತ್ತೇವೆ. ನೀವು ರೂಪಾದಿವಿಷಯಕ ಜ್ಞಾನದಿಂದ ಸುಖಾನುಭವ ಈಶ್ವರನಿಗೆ ಇರುವುದರಿಂದ ಮುಕ್ತಜೀವನಿಗೂ ಅಂತಹ ಸುಖಾನುಭವವಿದೆಯೆಂದು ಸಾಧಿಸುತ್ತಿದ್ದೀರಿ. ದೃಷ್ಟಾಂತವಾದ ಈಶ್ವರನಲ್ಲಿ ಈ ಸುಖಾನುಭವವು ಇಲ್ಲದಿರುವುದರಿಂದ ದೃಷ್ಟಾಂತವು ಸಾಧ್ಯವಿಕಲವಲ್ಲ ಎಂದು ಹೇಳಿದುದು ಸರಿಯಲ್ಲ ಎಂದರೆ ನಾವು ಉತ್ತರ ಹೇಳುತ್ತೇವೆ. ಈಶ್ವರನಿಗೆ ರೂಪಾದಿವಿಷಯಕ ಅನುಭವದಿಂದ ಬರಬೇಕಾದ ಸುಖವನ್ನು ನೀವು ಒಪ್ಪಿಕೊಳ್ಳದಿರಲು ಕಾರಣವೇನು? ಯಾವನು ಸುಖವುಳ್ಳವನೋ ಅವನು ದುಃಖವುಳ್ಳವನು, ಎಲ್ಲಿ ಸುಖವಿದೆಯೋ ಅಲ್ಲಿ ದುಃಖವಿದೆ ಎಂಬ ವ್ಯಾಪ್ತಿಯನ್ನು ಒಪ್ಪಿಕೊಂಡಿರುವುದರಿಂದ ನಾವು ಹಾಗೆ ಹೇಳುತ್ತೇವೆ ಎಂದರೆ ನಾವು ಆ ವ್ಯಾಪ್ತಿಯನ್ನು ಹಿಂದೆಯೇ ಖಂಡಿಸಿರುತ್ತೇವೆ. ''ನನು ಸೌಖ್ಯಾದಿಮಾನ್ ನೇಶಃ ದುಃಖಾದಿರಹಿತತ್ವತಃ'' (ಸ.15 ಶ್ಲೋ.16). ಈಶ್ವರನು ಸುಖಾದಿಗಳು ಉಳ್ಳವನಲ್ಲ, ದುಃಖಾದಿರಹಿತನಾದುದರಿಂದ, ಎಂದು ಪೂರ್ವಪಕ್ಷಿಯು ಶಂಕಿಸಿದಾಗ ''ಏವಂ ಚೇದ್ ವಿಮತೋ ಜ್ಞಾನೀ ನ ಭ್ರಾಂತಿರಹಿತತ್ವತಃ'' (ಸ.15 ಶ್ಲೋ.17) ದುಃಖವಿರುವುದರಿಂದ ಈಶ್ವರನಲ್ಲಿ ಸುಖವೂ ಇಲ್ಲ ಎನ್ನುವುದಾದರೆ, ಈಶ್ವರನು ನಮ್ಮಂತೆ ಭ್ರಾಂತಿಯುಳ್ಳವನು ಅಲ್ಲವಾದುದರಿಂದ, ಜ್ಞಾನವುಳ್ಳವನೂ ಅಲ್ಲ ಎಂದು ಸತ್ ಪ್ರತಿ ಪಕ್ಷಾನುಮಾನವನ್ನು (ಎದುರಾಳಿಯಾದ ಸಮಬಲಾನುಮಾನವನ್ನು) ಹೇಳುತ್ತೇವೆ ಮತ್ತು ''ತಸ್ಯೈವಾಮಂದಮಾನಂದಂ ವದನ್ನಾಶ್ರಾವ್ಯಸೌ ಕಥಂ'' (ಸ.15 ಶ್ಲೋ.18) ಎಂಬಲ್ಲಿ ಹೇಳಿದಂತೆ ''ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನೇತಿ, ಆನಂದೋಬ್ರಹ್ಮೇತಿ ವ್ಯಜಾನಾತ್, ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್, ಯದೇಷ ಆಕಾಶ ಆನಂದೋ ನ ಸ್ಯಾತ್'' ಎಂಬ ವೇದವು ಈಶ್ವರನಿಗೆ ಪರಿಪೂರ್ಣಾನಂದವಿದೆಯೆಂದು ಯುಕ್ತಿಯುಕ್ತವಾಗಿಯೂ ಹೇಳುತ್ತಿರುವುದರಿಂದ ಎಲ್ಲಿ ಸುಖವಿದೆಯೋ ಅಲ್ಲಿ ದುಃಖವಿದೆ. ಸುಖವಿರುವುದರಿಂದ ಈಶ್ವರನು ದುಃಖವುಳ್ಳವನಾಗುತ್ತಾನೆ ಎಂಬ ಅನುಮಾನಕ್ಕೆ ಬಾಧ, ಅಂದರೆ ಈಶ್ವರನಲ್ಲಿ ಸುಖವಿದ್ದರೂ ದುಃಖವಿಲ್ಲ. ದುಃಖಾಭಾವವೇ ಇದೆ ಎಂದು ಬಾಧವನ್ನು ಹಿಂದೆಯೇ ಹೇಳಿ ಸುಖವಿದ್ದಲ್ಲಿ ದುಃಖವಿದೆ ಎಂಬ ವ್ಯಾಪ್ತಿಯನ್ನು ದೂಷಿಸಿದ್ದೇವೆ. ಆದುದರಿಂದ ಈಶ್ವರನಿಗೆ ರೂಪಾದಿ ವಿಷಯಕಜ್ಞಾನವೂ, ಸುಖಾನುಭವವೂ ಇದೆ. ಹೀಗೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೆಂಬ ದೋಷವಿಲ್ಲ. ಪಕ್ಷನಾದ ಮುಕ್ತಜೀವನಲ್ಲಿ ಜಡಭಿನ್ನ ನಾಗಿದ್ದು ಸತ್ಪದಾರ್ಥವಾಗಿರುವುದರಿಂದ ರೂಪಾದ್ಯನುಭವದಿಂದ ಅಭಿವ್ಯಕ್ತವಾದ ಸುಖಾನುಭವವೂ ಇದೆಯೆಂದು ಸ್ಥಿರವಾಯಿತು.

**ಕ್ರಿಯಾಪದ—** **ಮಾ, ವಾದಿ** - ಅವಾದಿ ಅವಾದಿಷಾತಾಂ ಅವಾದಿಷತ, ಅವಾದಿಷ್ಠಾಃ ಅವಾದಿಷಾಥಾಂ ಅವಾದಿಧ್ವಂ, ಢ್ವಂ, ಅವಾದಿಷಿ ಅವಾದಿಷ್ವಹಿ ಅವಾದಿಷ್ಮಹಿ । ವದ ವ್ಯಕ್ತಾಯಾಂ ವಾಚಿ ಸಕ. ಸೇಟ್ । ಪರ. to speak ಕರ್ಮಣಿ ಲುಙ್. ಮಾಙ್ (ಮಾ) ಯೋಗವಿದ್ದಾಗ ಅಟ್ (ಅ) ಆಗಮ ಬಂದಿಲ್ಲ.

**ಪ್ರಯೋಗ—** ಈಶ್ವರೇಣ ರೂಪಾದಿ ಅನುಭವತಾ ಅಪಿ ದುಃಖಪ್ರಸಂಗಾತ್ ತೇನ ಸುಖಿನಾ ನ ಭೂಯತೇ ಇತಿ (ಭವಾನ್) ತದ್ವ್ಯಾಪ್ತಿದೂಷಣಾತ್ ಮಾ ವಾದೀತ್ ।

★ ★ ★

**ಅವತಾರಿಕಾ—** ಹಿಂದಿನ ಶ್ಲೋಕದಲ್ಲಿ ಹೇಳಿದ ಅನುಮಾನದಲ್ಲಿ ಈಶ್ವರನ ದೃಷ್ಟಾಂತ ಹೇಳಿದುದು ಸರಿಯಲ್ಲ. ಈಶ್ವರನೇ ಇಲ್ಲ ಎಂಬ ಭಾಟ್ಟಮೀಮಾಂಸಕಾದಿವಾದಿಗಳು ಈ ದೃಷ್ಟಾಂತವನ್ನು ಒಪ್ಪುವುದಿಲ್ಲ ಎಂದರೆ ಬೇರೆ ದೃಷ್ಟಾಂತವನ್ನು ಹೇಳುತ್ತಾರೆ.

**ದೃಷ್ಟಾಂತೋ ಯಸ್ಯ ನೇಷ್ಟೋಽಯಂ ತಸ್ಯ ಸ್ಯಾದ್ ವ್ಯತಿರೇಕವಾನ್ ।**
**ಶಿಲಾವದಿತ್ಯತಃ ಶುದ್ಧಚಿದ್ದೇಹೇಂದ್ರಿಯಭೋಗ್ಯಸೌ ॥ 61 ॥**

**ಪದಚ್ಛೇದ—** ದೃಷ್ಟಾಂತಃ, ಯಸ್ಯ, ನ, ಇಷ್ಟಃ, ಅಯಂ, ತಸ್ಯ ಸ್ಯಾತ್, ವ್ಯತಿರೇಕವಾನ್, ಶಿಲಾವತ್, ಇತಿ, ಅತಃ, ಶುದ್ಧಚಿದ್ದೇಹೇಂದ್ರಿಯಭೋಗೀ, ಅಸೌ ।

**ಅನ್ವಯ—** ಯಸ್ಯ, ಅಯಂ, ದೃಷ್ಟಾಂತಃ, ನೇಷ್ಟಃ, ತಸ್ಯ, ಶಿಲಾವತ್, ಇತಿ, ವ್ಯತಿರೇಕವಾನ್, ಸ್ಯಾತ್, ಅತಃ, ಅಸೌ, ಶುದ್ಧಚಿದ್ದೇಹೇಂದ್ರಿಯಭೋಗೀ ।

**ಅನ್ವಯಾರ್ಥ—**

**ಯಸ್ಯ** = ಈಶ್ವರನನ್ನು ಒಪ್ಪಿಕೊಳ್ಳದಿರುವ ಯಾವ ಭಾಟ್ಟಮೀಮಾಂಸಕಾದಿ ಮತದವನಿಗೆ,

**ಅಯಂ ದೃಷ್ಟಾಂತಃ** = ಈ ಸರ್ವಜ್ಞನಾದ ಈಶ್ವರನ ದೃಷ್ಟಾಂತವು,

**ನ ಇಷ್ಟಃ** = ಒಪ್ಪಿಗೆಯಾಗಿಲ್ಲವೋ,

**ತಸ್ಯ** = ಅವನಿಗೆ,

**ಶಿಲಾವತ್ ಇತಿ** = ಕಲ್ಲಿನಂತೆ ಎಂಬ,

**ವ್ಯತಿರೇಕವಾನ್** = ಸಾಧ್ಯಸಾಧನಗಳಿಲ್ಲದ (ಸಾಧ್ಯವಿಲ್ಲದಿದ್ದಲ್ಲಿ ಸಾಧನವೂ ಇಲ್ಲವೆಂಬ) ವ್ಯತಿರೇಕದೃಷ್ಟಾಂತವು,

**ಸ್ಯಾತ್** = ಆದೀತು,

**ಅತಃ** = ಆದುದರಿಂದ,

**ಅಸೌ** = ಈ ಮುಕ್ತಜೀವನು,

**ಶುದ್ಧಚಿತ್‌ದೇಹಇಂದ್ರಿಯಭೋಗೀ** = ಅಪ್ರಾಕೃತವಾದ, ಜ್ಞಾನರೂಪವಾದ ಶರೀರವೂ, ಚಕ್ಷುಸ್ಸು ಮುಂತಾದ ಇಂದ್ರಿಯಗಳೂ, ಇವುಗಳಿಂದ ಉಂಟಾಗುವ ಸುಖಾನುಭವವುಳ್ಳವನು.

**ತಾತ್ಪರ್ಯ—** ಮುಕ್ತನು ಜಡಭಿನ್ನನಾದ ಚೇತನನಾಗಿದ್ದು ಸತ್ ಇರುವ ಪದಾರ್ಥವಾದುದರಿಂದ ಈಶ್ವರನಂತೆ ರೂಪಾದಿವಿಷಯಕವಾದ ಅನುಭವದಿಂದ ಅಭಿವ್ಯಕ್ತವಾದ ಸುಖವುಳ್ಳವನು ಎಂದು ಸರ್ವಜ್ಞನನಾದ ಈಶ್ವರನ ದೃಷ್ಟಾಂತದಿಂದ ಮುಕ್ತನಿಗೆ ರೂಪಾದಿವಿಷಯಕ ಅನುಭವವನ್ನೂ ಸುಖಾನುಭವವನ್ನೂ ಸಮರ್ಥಿಸಿದ್ದೀರಿ. ಇದು ಸರ್ವಜ್ಞನಾದ ಈಶ್ವರನನ್ನು ಒಪ್ಪುವವರಿಗೆ ಸರಿಹೋಗಬಹುದು. ಆದರೆ ನಿರೀಶ್ವರರಾದ ಭಾಟ್ಟಮೀಮಾಂಸಕರೇ ಮೊದಲಾದವರಿಗೆ ಈ

ದೃಷ್ಟಾಂತವು ಸಮ್ಮತವಾಗುವುದಿಲ್ಲ. ಆದುದರಿಂದ ಅವರನ್ನು ಕುರಿತು ಮುಕ್ತನು ರೂಪಾದಿವಿಷಯಕ ಅನುಭವವುಳ್ಳವನೆಂದು ಸಮರ್ಥಿಸಲು ಬರುವುದಿಲ್ಲ ಎಂದರೆ ಅದಕ್ಕೆ ಉತ್ತರ ಹೇಳುತ್ತಾರೆ.

''ಮುಕ್ತಃ ರೂಪಾದಿಜ್ಞಾನವಾನ್ ಜಡಾನ್ಯತ್ವೇ ಸತಿ ಸತ್ತ್ವಾತ್ ಮುಕ್ತಜೀವನು ರೂಪಾದಿವಿಷಯಕ ಅನುಭವವುಳ್ಳವನಾಗಿದ್ದಾನೆ. ಜಡಭಿನ್ನನಾಗಿದ್ದು ಸತ್‌ಪದಾರ್ಥವಾಗಿರುವುದರಿಂದ ಎಂಬ ಅನುಮಾನಕ್ಕೆ ವ್ಯತಿರೇಕ ವ್ಯಾಪ್ತಿಯನ್ನು ಹೇಳಿ ವೈಧರ್ಮ್ಯ ದೃಷ್ಟಾಂತ ಅಥವಾ ವ್ಯತಿರೇಕಿದೃಷ್ಟಾಂತವನ್ನು ಹೇಳಬೇಕು. ಯಃ ರೂಪಾದಿ ಜ್ಞಾನವಾನ್ ನ ಭವತಿ ಸಃ ಜಡಾನ್ಯತ್ವೇ ಸತಿ ಸನ್ ನ ಭವತಿ ಯಥಾ ಶಿಲಾದಿಃ'' ಯಾವನು ರೂಪಾದಿವಿಷಯಕ ಜ್ಞಾನವುಳ್ಳವನಲ್ಲವೋ ಅವನು ಜಡಭಿನ್ನನಾಗಿದ್ದು ಸತ್ತಾ (ಇರುವಿಕೆ) ಎಂಬ ಹೇತುವುಳ್ಳವನಲ್ಲ. ಬಂಡೆಕಲ್ಲು ಮುಂತಾದ ವಸ್ತುವಿನಂತೆ ಎಂದು ವ್ಯತಿರೇಕವ್ಯಾಪ್ತಿಪೂರ್ವಕವಾದ ವ್ಯತಿರೇಕದೃಷ್ಟಾಂತವನ್ನು ಹೇಳಬೇಕು. ಪ್ರಕೃತನಾದ ಮುಕ್ತಜೀವನಲ್ಲಿ ಜಡಭಿನ್ನನಾಗಿದ್ದು ಸತ್ತಾ ಎಂಬ ಧರ್ಮವೇ ಇರುವುದರಿಂದ ರೂಪಾದಿವಿಷಯಕ ಅನುಭವವಿದೆಯೆಂದು ಪಕ್ಷದಲ್ಲಿ ಸಾಧ್ಯವನ್ನು ಸಮರ್ಥಿಸಲು ಬರುತ್ತದೆ.

ನಿರೀಶ್ವರವಾದಿಗಳಾಗಿದ್ದರೂ ಭಾಟ್ಟಾದಿಪೂರ್ವಮೀಮಾಂಸಕರು ವೇದಪ್ರಾಮಾಣ್ಯವನ್ನು ಒಪ್ಪುತ್ತಾರೆ, ಅವರಿಗೆ

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಃ ತತ್ರ ಮಾಮ್ಮತಂ ಕೃಧಿ ॥**

ಎಂಬ ಮಂತ್ರದಿಂದಲೂ ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ಇತ್ಯಾದಿ ಅನೇಕ ವೇದಮಂತ್ರಗಳಿಂದಲೂ ಮುಕ್ತನಿಗೆ ರೂಪರಸಗಂಧಾದಿಗಳ ಜ್ಞಾನವಿದೆ. ಆನಂದವಿದೆ ಎಂದು ತಿಳಿಸಲು ಬರುತ್ತದೆ. ಹೀಗೆ ಮುಕ್ತಜೀವರಿಗೆ ಎಲ್ಲರಿಗೂ ಶುದ್ಧಜ್ಞಾನಾದಿಸ್ವರೂಪಾತ್ಮಕ ದೇಹ, ಇಂದ್ರಿಯ, ಮನಸ್ಸು ಎಲ್ಲವೂ ಇವೆ ಎಂಬ ವಿಷಯದಲ್ಲಿ ಸಾಧಕಪ್ರಮಾಣಗಳು ಯಥೇಚ್ಛವಾಗಿವೆ. ಬಾಧಕಪ್ರಮಾಣಗಳಿಲ್ಲ. ಆದುದರಿಂದ ಈ ಮುಕ್ತಜೀವನು ಶುದ್ಧ ಜ್ಞಾನಾನಂದಾತ್ಮಕವಾದ ದೇಹ ಇಂದ್ರಿಯಗಳುಳ್ಳವನು, ಶುದ್ಧವಾದ ಜ್ಞಾನಾನಂದಾತ್ಮಕವಾದ ಸುಖಾನುಭವವುಳ್ಳವನು ಎಂದು ನಿರಾಬಾಧವಾಗಿ ಸಿದ್ಧಿಸುತ್ತದೆ.

ವಿಗ್ರಹ—

**ವ್ಯತಿರೇಕವಾನ್**— ವ್ಯತಿರೇಕಃ ಅಸ್ಯ ಅಸ್ತೀತಿ ವ್ಯತಿರೇಕವಾನ್ ।

**ಶಿಲಾವತ್**— ಶಿಲಯಾ ತುಲ್ಯಂ ಶಿಲಾವತ್ ।

**ಶುದ್ಧದೇಹೇಂದ್ರಿಯಭೋಗ್ಯಸೌ**— ದೇಹಶ್ಚ ಇಂದ್ರಿಯಾಣಿ ಚ ಭೋಗಾಶ್ಚ ದೇಹೇಂದ್ರಿಯಭೋಗಾಃ, ಶುದ್ಧಾ ಚ ಸಾ ಚಿಚ್ಚ ಶುದ್ಧಚಿತ್ ಶುದ್ಧಚಿಚ್ಚ ತೇ ದೇಹೇಂದ್ರಿಯಭೋಗಾಶ್ಚ ಶುದ್ಧಚಿದ್ದೇಹೇಂದ್ರಿಯಭೋಗಾಃ, ಶುದ್ಧಚಿದ್ದೇಹೇಂದ್ರಿಯಭೋಗಾಃ ಅಸ್ಯ ಸಂತೀತಿ ಶುದ್ಧಚಿದ್ದೇಹೇಂದ್ರಿಯ ಭೋಗೀ ।

**ಪ್ರಯೋಗ**— ಯಸ್ಯ ಅನೇನ ದೃಷ್ಟಾಂತೇನ ಇಷ್ಟೇನ ನ ಭೂಯತೇ ತಸ್ಯ ಶಿಲಾವತ್ ಇತಿ ವ್ಯತಿರೇಕವತಾ (ದೃಷ್ಟಾಂತೇನ) ಭೂಯೇತ, ಅತಃ ಅಮುನಾ ಶುದ್ಧಚಿದ್ದೇಹೇಂದ್ರಿಯಭೋಗಿನಾ ಭೂಯತೇ ।

★ ★ ★

**ಅವತಾರಿಕಾ**— ಹೀಗೆ ನಾವು ಹೇಳಿದ ರೀತಿಯಿಂದ ಮುಕ್ತಜೀವರಿಗೆ ಅಪ್ರಾಕೃತವಾದ ದೇಹ ಇಂದ್ರಿಯ-ರೂಪಾದಿಜ್ಞಾನ ಆನಂದಾನುಭವ ಎಲ್ಲವೂ ಇದೆಯೆಂದು ಪ್ರಮಾಣಗಳಿಂದ ಸಿದ್ಧವಾದರೂ ವಾದಿಗಳು ಈ ಪ್ರಕಾರದ ಮೋಕ್ಷವನ್ನು ಒಪ್ಪುವುದಿಲ್ಲ. ನಮ್ಮ ಮೋಕ್ಷಸ್ವರೂಪಕ್ಕೆ ವಿರುದ್ಧವಾದ ಅವರು ಹೇಳುವ ಮೋಕ್ಷಸ್ವರೂಪದ ವಿಷಯದಲ್ಲಿ

ಪ್ರಬಲವಾದ ಪ್ರಮಾಣವಿರುವುದರಿಂದ ನಾವು ಹೇಳುವ ಮೋಕ್ಷಸ್ವರೂಪವನ್ನು ಅವರು ಒಪ್ಪುವುದಿಲ್ಲ ಎಂದಲ್ಲ, ಒಂದು ವಿಧವಾದ ಅವರ ಜೀವರ ಸ್ವರೂಪಕ್ಕೆ ಅಂಟಿಕೊಂಡಿರುವ ದ್ವೇಷದ ಮೂಲಕವಾಗಿಯೇ ಅವರು ನಾವು ಹೇಳುವ ಮೋಕ್ಷಸ್ವರೂಪವನ್ನು ಒಪ್ಪುವುದಿಲ್ಲ. ದುರಾಗ್ರಹದಿಂದ ನಾವು ಹೇಳುವ ಮೋಕ್ಷಸ್ವರೂಪಕ್ಕೆ ವಿರುದ್ಧವಾದ ಮೋಕ್ಷ-ಸ್ವರೂಪವನ್ನು ಒಪ್ಪುತ್ತಾರೆಂದು ಹೇಳುತ್ತಾರೆ.

**ಸ್ವಾನಂದವಿಷಯೇ ಮೋಕ್ಷೇ ವೇದೋಕ್ತೇ ಯುಕ್ತಿಸಾಧಿತೇ ।**
**ದ್ವೇಷೋಽಯಂ ವಾದಿನಾಂ ಕಸ್ಮಾತ್ತದ್ವಿರುದ್ಧೇಽಥ ವಾಽಽಗ್ರಹಃ ॥ 62 ॥**

**ಪದಚ್ಛೇದ—** ಸ್ವಾನಂದವಿಷಯೇ, ಮೋಕ್ಷೇ, ವೇದೋಕ್ತೇ, ಯುಕ್ತಿಸಾಧಿತೇ, ದ್ವೇಷಃ, ಅಯಂ, ವಾದಿನಾಂ, ಕಸ್ಮಾತ್, ತದ್ವಿರುದ್ಧೇ, ಅಥವಾ, ಆಗ್ರಹಃ ।

**ಅನ್ವಯ—** ಸ್ವಾನಂದವಿಷಯೇ, ವೇದೋಕ್ತೇ, ಯುಕ್ತಿಸಾಧಿತೇ, ಮೋಕ್ಷೇ, ವಾದಿನಾಂ, ಅಯಂ, ದ್ವೇಷಃ, ಕಸ್ಮಾತ್? ಅಥ, ತದ್ವಿರುದ್ಧೇ, ಆಗ್ರಹೋ, ವಾ, ಕಸ್ಮಾತ್?

**ಅನ್ವಯಾರ್ಥ—**

**ಸ್ವಾನಂದವಿಷಯೇ** = ಸ್ವರೂಪಾನಂದವೇ ಭೋಗ್ಯವಾಗಿ ಉಳ್ಳ,

**ವೇದೋಕ್ತೇ** = ಯತ್ರಾನಂದಾಶ್ಚ ಇತ್ಯಾದಿ ವೇದಗಳಿಂದ ಪ್ರತಿಪಾದಿತವಾದ,

**ಯುಕ್ತಿಸಾಧಿತೇ** = ಹಿಂದೆ ಹೇಳಿರುವ ಯುಕ್ತಿಗಳಿಂದ ಸಾಧಿಸಲ್ಪಟ್ಟ,

**ಮೋಕ್ಷೇ** = ಮೋಕ್ಷಸ್ವರೂಪ ವಿಷಯದಲ್ಲಿ,

**ವಾದಿನಾಂ** = ವೈಶೇಷಿಕ, ಮಾಯಾವಾದಿ ಮುಂತಾದ ಪೂರ್ವಪಕ್ಷಿಗಳಿಗೆ,

**ಅಯಂ** = ಲೋಕದಲ್ಲಿ ಪ್ರತ್ಯಕ್ಷವಾಗಿ ಕಾಣುತ್ತಿರುವ,

**ದ್ವೇಷಃ** = ವೈರವು,

**ಕಸ್ಮಾತ್** = ಯಾವ ಕಾರಣದಿಂದ?

**ಅಥ** = ಮತ್ತು (ದ್ವೇಷದ ಅನಂತರ),

**ತದ್ವಿರುದ್ಧೇ** = ನಾವು ಹೇಳಿರುವ ಮೋಕ್ಷಸ್ವರೂಪಕ್ಕೆ ವಿರುದ್ಧವಾದ ''ಜೀವನಿಗೆ ನಿರ್ವಿಶೇಷಬ್ರಹ್ಮಸ್ವರೂಪಪ್ರಾಪ್ತಿ'' ಎಂಬ ಮೋಕ್ಷದ ವಿಷಯದಲ್ಲಿ,

**ಆಗ್ರಹೋ ವಾ** = ಹಠವಾಗಲೀ,

**ಕಸ್ಮಾತ್** = ಯಾವ ಕಾರಣದಿಂದ?

**ತಾತ್ಪರ್ಯ—** ಇಷ್ಟರವರೆಗೆ ನಾವು ಹೇಳದಂತೆ ನಮ್ಮ ಸಿದ್ಧಾಂತದಲ್ಲಿ ಪ್ರತಿಯೊಬ್ಬ ಮುಕ್ತಿಯೋಗ್ಯ ಜೀವನೂ, ಸ್ವರೂಪ ಭೂತವಾದ ತನ್ನ ಆನಂದವನ್ನು ಅವನವನು ಅನುಭವಿಸುವುದೇ ಮೋಕ್ಷವು. ಈ ಮೋಕ್ಷವು ವೇದಪ್ರತಿಪಾದಿತವಾಗಿದೆ. ''ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ'' ಎಂಬ ಶ್ರುತಿಯಿಂದ ಮೋಕ್ಷದಲ್ಲಿ ಆನಂದವಿದೆಯೆಂದು ತಿಳಿದುಬರುತ್ತದೆ. ''ಕಾಮಸ್ಯ ಯತ್ರಾಪ್ತಾಃ ಕಾಮಾಃ ತತ್ರ ಮಾಮ್ಮತಂ ಕೃಧಿ, ಇಂದ್ರಾಯೇಂದೋ ಪರಿಸ್ರವ'' ಎಂಬ ಶ್ರುತಿ-ಯಿಂದ ಮುಕ್ತಿಯಲ್ಲಿ ಯಥೇಚ್ಛವಾದ ಆನಂದಾನುಭವವಿದೆಯೆಂದು ತಿಳಿದುಬರುತ್ತದೆ. ''ಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ'' ಎಂಬ ಶ್ರುತಿಯಿಂದ ಮುಕ್ತರಿಗೆ ನೇತ್ರ (ಕಣ್ಣು) ಕಿವಿ ಮುಂತಾದ

ಇಂದ್ರಿಯಗಳಿವೆಯೆಂದು ತಿಳಿದುಬರುತ್ತದೆ. ''ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ'' ಎಂಬ ಶ್ರುತಿಯಿಂದ ಮೋಕ್ಷದಲ್ಲಿ ಯಥೇಷ್ಟ ಸಂಚಾರ, ಭಕ್ಷಣ, ಕ್ರೀಡಾದಿಗಳು ಇವೆಯೆಂದು ತಿಳಿಯುತ್ತದೆ. ''ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ'' ಎಂಬ ಶ್ರುತಿಯಿಂದ ಅಪರೋಕ್ಷಜ್ಞಾನಿಯು ಮುಕ್ತನಾದ ಚತುರ್ಮುಖ ಬ್ರಹ್ಮನ ಜೊತೆಗೆ ಎಲ್ಲಾ ಕಾಮಗಳನ್ನೂ ಅನುಭವಿಸುತ್ತಾನೆ ಎಂದು ತಿಳಿದುಬರುತ್ತದೆ. ಇನ್ನೂ ಇಂತಹ ನೂರಾರು ಸಹಸ್ರಾಧಿಕ, ವೇದವಾಕ್ಯಗಳಿಂದ ಮೋಕ್ಷವೆಂದರೆ ಆಯಾ ಜೀವರ ನಿರ್ದುಃಖಾನಂದಸ್ವರೂಪದ ಅಭಿವ್ಯಕ್ತಿಯೆಂದು ತಿಳಿದುಬರುತ್ತಿದ ಮತ್ತು ಹಿಂದೆ ಹೇಳಿದ ಅನೇಕ ಯುಕ್ತಿಗಳಿಂದ ಈ ರೀತಿಯಾಗಿಯೇ ಮೋಕ್ಷವು ಸಿದ್ಧಿಸುತ್ತದೆ. ''ಜ್ಞಾನಪ್ರಯತ್ನ-ವಾಂಛಾವಾನೀಶೋ ನ ಹ್ಯಶುಭಂ ಭಜೇತ್ । ಸ್ವಸಾಮರ್ಥ್ಯೇನ ತೇನೈವ ತಂ ಚ ಕುರ್ಯಾತ್ ಸ ತಾದೃಶಮ್ ॥'' (ಸ.15 ಶ್ಲೋ.50) ಜ್ಞಾನ ಇಚ್ಛಾ ಪ್ರಯತ್ನಗಳುಳ್ಳವನೆಂದು ವೈಶೇಷಿಕರು ತಮ್ಮ ಈಶ್ವರನ ಸ್ವರೂಪವನ್ನು ಹೇಳುವರು. ಅಂತಹ ಈಶ್ವರನು ತನ್ನ ಉಪಾಸಕನನ್ನು ಜ್ಞಾನ ಇಚ್ಛಾ ಪ್ರಯತ್ನಗಳುಳ್ಳವನನ್ನಾಗಿಯೇ ಮಾಡದಿರುವನೇ? ಮಾಡಿಯೇ ಮಾಡುತ್ತಾನೆ ಎಂದು ಜೀವನ ಮುಕ್ತಿಯಲ್ಲಿ ಸಂಭಾವಿತವಾದ ಸ್ವರೂಪವನ್ನು ಹಿಂದೆ ಸಾಧಿಸುತ್ತಾರೆ. ಸೋಽದೇಹಶ್ಚೇದ-ನಿಚ್ಛಾದಿರ್ಭವೇಚ್ಚಶ ವಿಷಾಣವತ್ (ಸ.15) ಈಶ್ವರನಿಗೆ ಶರೀರವಿಲ್ಲವೆಂದು ಹೇಳಿದರೆ ಮೊಲದ ಕೊಂಬಿನಂತೆ ಈಶ್ವರ-ನಿಗೂ ಇಚ್ಛಾಜ್ಞಾನ ಪ್ರಯತ್ನಗಳು ಇಲ್ಲವೆಂದಾದೀತು ಎಂದು ಜ್ಞಾನ ಇಚ್ಛಾ ಪ್ರಯತ್ನಾತ್ಮಕ ದೇಹವನ್ನು ಈಶ್ವರನಿಗೆ ಹಿಂದೆ ಸಾಧಿಸಿದ್ದಾಗಿದೆ. ''ಮುಕ್ತೋ ರೂಪಾದಿವಿತ್ ಸತ್ತ್ವಾತ್ ಜಡಾನ್ಯತ್ವೇ ಸತೀಶವತ್'' (ಸ.15 ಶ್ಲೋ.59) ಎಂಬಲ್ಲಿ (ಜಡಭಿನ್ನ) ಚೇತನನಾಗಿದ್ದು ಸತ್ಪದಾರ್ಥವಾಗಿರುವುದರಿಂದ ಈಶ್ವರನಂತೆ ಮುಕ್ತಜೀವನು ರೂಪಾದಿವಿಷಯಗಳ ಜ್ಞಾನವುಳ್ಳವನು, ಎಂದೂ ಸಾಧಿಸಿದ್ದಾಗಿದೆ. ಇನ್ನೂ ಇಂತಹ ಅನೇಕವಾದ ಶ್ರುತ್ಯನುಸಾರಿಯುಕ್ತಿಗಳಿಂದ ನಮ್ಮ ಸಿದ್ಧಾಂತದಂತೆ ಮೋಕ್ಷ ಸ್ವರೂಪವನ್ನು ಸಾಧಿಸಿ ತೋರಿಸಿದ್ದೇವೆ. ಹೀಗಿದ್ದರೂ ನಮ್ಮ ಸಿದ್ಧಾಂತದ ಮೇಲೆ ಪೂರ್ವಪಕ್ಷ ಮಾಡುವ ವಾದಿಗಳು ನಾವು ಹೇಳುವ ಮೋಕ್ಷ ಸ್ವರೂಪವನ್ನು ದ್ವೇಷಿಸುತ್ತಾರೆ. ನಾವು ಹೇಳುವ ಮೋಕ್ಷಕ್ಕೆ ವಿರುದ್ಧವಾದ ''ಜೀವಾತ್ಮರೆಲ್ಲರೂ ನಿರ್ವಿಶೇಷ-ಬ್ರಹ್ಮಸ್ವರೂಪವನ್ನು ಹೊಂದುವುದೇ ಮೋಕ್ಷವೆಂದು ಹಠ ಹಿಡಿಯುತ್ತಾರೆ. ಇದಕ್ಕೇನು ಕಾರಣ? ತಮ್ಮ ಸಿದ್ಧಾಂತದಲ್ಲಿ ಇರುವ ಪಕ್ಷಪಾತವೇ ಕಾರಣ. ಪ್ರಮಾಣವಿಲ್ಲದಿದ್ದರೂ ಅಂಧವಿಶ್ವಾಸದಿಂದ, ಗೂಢವಾದ ದ್ವೇಷದಿಂದ ನಾವು ಹೇಳುವ ಮೋಕ್ಷ ಸ್ವರೂಪವನ್ನು ದ್ವೇಷಿಸುತ್ತಾರೆ.''

ವಿಗ್ರಹ—

**ಸ್ವಾನಂದವಿಷಯೇ—** ಸ್ವಶ್ಚಾಸೌ ಆನಂದಶ್ಚ ಸ್ವಾನಂದಃ, ಸ್ವಾನಂದ ಏವ ವಿಷಯಃ ಯಸ್ಮಿನ್ ಸಃ ಸ್ವಾನಂದವಿಷಯಃ (ಮೋಕ್ಷಃ) ತಸ್ಮಿನ್ ।

**ವೇದೋಕ್ತೇ—** ವೇದೈಃ ಉಕ್ತಃ ವೇದೋಕ್ತಃ ತಸ್ಮಿನ್ ।

**ಯುಕ್ತಿಸಾಧಿತೇ—** ಯುಕ್ತಿಭಿಃ ಸಾಧಿತಃ ಯುಕ್ತಿಸಾಧಿತಃ ತಸ್ಮಿನ್ ।

**ವಾದಿನಾಂ—** ವಾದಾಃ ಏಷಾಂ ಸಂತೀತಿ ವಾದಿನಃ ತೇಷಾಂ ।

**ತದ್ವಿರುದ್ಧೇ—** ತಸ್ಯ ವಿರುದ್ಧಃ ತದ್ವಿರುದ್ಧಃ ತಸ್ಮಿನ್ ।

**ಪ್ರಯೋಗ—** ಸ್ವಾನಂದವಿಷಯೇ ವೇದೋಕ್ತೇ ಯುಕ್ತಿಸಾಧಿತೇ ಮೋಕ್ಷೇ ವಾದಿನಾಂ ಅನೇನ ದ್ವೇಷೇಣ ಕಸ್ಮಾದ್ ಭೂಯತೇ? ಅಥ ತದ್ವಿರುದ್ಧೇ ಆಗ್ರಹೇಣ ವಾ ಕಸ್ಮಾದ್ ಭೂಯತೇ ।

★ ★ ★

**ಅವತಾರಿಕಾ—** ಅಸ್ಮಾಕೇಽವೇಕ್ಷಿತೇ ಪಕ್ಷೇ ಮೋಕ್ಷಂ ದದ್ಯಾದಧೋಕ್ಷಜಃ (ಸರ್ಗ 15 ಶ್ಲೋಕ 42) ನಮ್ಮ ದ್ವೈತ ಸಿದ್ಧಾಂತವನ್ನು ಪ್ರಮಾಣವೆಂದು ಅಂಗೀಕರಿಸಿದರೆ ಶ್ರೀಮನ್ನಾರಾಯಣನು ಸ್ವಸ್ವರೂಪಾನಂದಾವಿರ್ಭಾವರೂಪವಾದ

ಮೋಕ್ಷವನ್ನು ಕೊಡುವನು ಎಂಬಲ್ಲಿ ಹೇಳಿರುವ ಮುಂದಿನ ಗ್ರಂಥದಲ್ಲಿ ಸಾಧಿಸಿರುವ ಪ್ರಮೇಯವನ್ನು ಉಪಸಂಹರಿಸುತ್ತಾರೆ.

**ತತಃ ಸ್ವತಃ ಪ್ರಮಾಣೇನ ದೇವೋ ವೇದೇನ ವೇದಿತಃ ।**
**ವಿಷ್ಣುರ್ಮೋಕ್ಷಸ್ಯ ದಾತೇತಿ ವಿಶ್ವಂ ಭವತಿ ಶೋಭನಮ್ ॥ 63 ॥**

**ಪದಚ್ಛೇದ—** ತತಃ, ಸ್ವತಃ, ಪ್ರಮಾಣೇನ, ದೇವಃ, ವೇದೇನ, ವೇದಿತಃ, ವಿಷ್ಣುಃ, ಮೋಕ್ಷಸ್ಯ, ದಾತಾ, ಇತಿ, ವಿಶ್ವಂ, ಭವತಿ, ಶೋಭನಮ್ ।

**ಅನ್ವಯ—** ತತಃ, ಸ್ವತಃ, ಪ್ರಮಾಣೇನ, ವೇದೇನ, ವೇದಿತಃ, ದೇವಃ, ವಿಷ್ಣುಃ, ಮೋಕ್ಷಸ್ಯ, ದಾತಾ, ಇತಿ, ವಿಶ್ವಂ, ಶೋಭನಂ, ಭವತಿ ।

**ಅನ್ವಯಾರ್ಥ—**

**ತತಃ** = ಆದುದರಿಂದ,
**ಸ್ವತಃ ಪ್ರಮಾಣೇನ** = ಇನ್ನೊಂದನ್ನು ಅಪೇಕ್ಷಿಸದೆ ಪ್ರಮಾಣವಾಗಿರುವ,
**ವೇದೇನ** = ವೇದದಿಂದ,
**ವೇದಿತಃ** = ಬೋಧಿಸಲ್ಪಟ್ಟ
**ದೇವಃ** = ಕ್ರೀಡಾದಿಗುಣವಿಶಿಷ್ಟನಾದ,
**ವಿಷ್ಣುಃ** = ಶ್ರೀಮನ್ನಾರಾಯಣನು,
**ಮೋಕ್ಷಸ್ಯ** = ಮೋಕ್ಷದ,
**ದಾತಾ** = ದಾತೃವು (ಮೋಕ್ಷವನ್ನು ಕೊಡುವವನು),
**ಇತಿ** = ಹೀಗೆಂದು,
**ವಿಶ್ವಂ** = ಎಲ್ಲಾ ಮೋಕ್ಷಾದಿ ಪ್ರಮೇಯವೂ,
**ಶೋಭನಂ** = ಮಂಗಳಕರವಾಗಿ,
**ಭವತಿ** = ಆಗುತ್ತದೆ.

**ತಾತ್ಪರ್ಯ—** ಹೀಗೆ ನಮ್ಮ ಮತಕ್ಕೆ ವಿರುದ್ಧವಾದ ಮತಗಳಿಗೆ ಸಾಧಕ ಪ್ರಮಾಣಗಳಿಲ್ಲ ಮತ್ತು ಅವು ಪ್ರಮಾಣ ವಿರುದ್ಧವೂ ಆಗಿದೆ. ಆದ್ದರಿಂದ ಆ ಮತಸಿದ್ಧಾಂತಗಳನ್ನು ಆದರಿಸಬಾರದು. ವೇದವು ಬೇರೊಂದು ಪ್ರಮಾಣವನ್ನು ಅಪೇಕ್ಷಿಸದೆ ಪ್ರಮಾಣವಾಗಿದೆ. ವೇದದ ಪ್ರಾಮಾಣ್ಯವನ್ನು ತಿಳಿಯಲು ವೇದವೇ ಸಾಕು. ಅದಕ್ಕಿಂತ ಬೇರೆಯಾದ ಪ್ರಮಾಣದ ಅಪೇಕ್ಷೆ ಇಲ್ಲ. ಇಂತಹ ವೇದದಲ್ಲಿ ಶ್ರೀಹರಿಯು ಸ್ವಾತಂತ್ರ್ಯಾದಿ ಅನಂತಗುಣಗಳಿಂದ ಪೂರ್ಣನೆಂದೂ ಸಮಸ್ತ ದೋಷರಹಿತನೆಂದೂ ಪ್ರತಿಪಾದಿತವಾಗಿದೆ. ಅವನು ಯಾವಾಗಲೂ ಕ್ರೀಡಾ (ಆಟ, ಆನಂದ) ವಿಜಿಗೀಷಾ (ನಿರಂತರ ಉತ್ಸಾಹ) ಮುಂತಾದ ಗುಣಗಳಿಂದ ಕೂಡಿದ ದೇವನು. ಅವನೇ ಶ್ರೀಮನ್ನಾರಾಯಣನು, ಅವನೇ ಮೋಕ್ಷವನ್ನು ಕೊಡುವವನು. ಈ ರೀತಿ ಒಪ್ಪಿದರೆ ಮೋಕ್ಷಾದಿಸಮಸ್ತಪ್ರಮೇಯಗಳೂ ಸರಿಹೊಂದುತ್ತವೆ. ಎಲ್ಲವೂ ಮಂಗಳಕರ-ವಾಗುತ್ತವೆ. ಯಾವ ವಿರೋಧವೂ ಯಾವ ಅನಿಷ್ಟವೂ ಬರಲಾರದು ಎಂದು ಅಭಿಪ್ರಾಯ.

**ಪ್ರಯೋಗ—** (ಈ ಶ್ಲೋಕದಲ್ಲಿ ಸಮಾಸಪದಗಳಿಲ್ಲ. ಆದುದರಿಂದ ವಿಗ್ರಹವನ್ನು ತೋರಿಸಿಲ್ಲ.) ತತಃ ಸ್ವತಃ ಪ್ರಮಾಣೇನ ವೇದೇನ ವೇದಿತೇನ ದೇವೇನ ವಿಷ್ಣುನಾ ಮೋಕ್ಷಸ್ಯ ದಾತ್ರಾ ಭೂಯತೇ ಇತಿ ವಿಶ್ವೇನ ಶೋಭನೇನ ಭೂಯತೇ ।

★ ★ ★

**ಅವತಾರಿಕಾ—** "ತದಾ ತದಾನನಾಂಭೋಜಾತ್" ಎಂಬ ಶ್ಲೋಕವನ್ನು ಆರಂಭಿಸಿ ಈ 63ನೆಯ ಶ್ಲೋಕದವರೆಗೆ ಸಾಧಿಸಿದ ವಿಷಯವನ್ನು ಮುಗಿಸಿ, ಪ್ರಕೃತ ವಿಷಯವನ್ನು ಅನುಸರಿಸುತ್ತಾರೆ.

**ಇತ್ಯಾದೀನ್ ದರ್ಶಯಂತ್ಯರ್ಥಾನ್ ವ್ಯಾಖ್ಯೋಪನ್ಯಾಸಸಂಯುತಾ ।**
**ತ್ರಿವಿಕ್ರಮಾರ್ಯೇಣ ತದಾ ವಿಶ್ವಾಭಿಜ್ಞಸ್ಯ ಶುಶ್ರುವೇ ॥ 64 ॥**

**ಪದಚ್ಛೇದ—** ಇತ್ಯಾದೀನ್, ದರ್ಶಯಂತೀ, ಅರ್ಥಾನ್, ವ್ಯಾಖ್ಯಾ, ಉಪನ್ಯಾಸಸಂಯುತಾ, ತ್ರಿವಿಕ್ರಮಾರ್ಯೇಣ, ತದಾ, ವಿಶ್ವಾಭಿಜ್ಞಸ್ಯ, ಶುಶ್ರುವೇ ।

**ಅನ್ವಯ—** ಇತ್ಯಾದೀನ್, ಅರ್ಥಾನ್, ದರ್ಶಯಂತೀ, ವಿಶ್ವಾಭಿಜ್ಞಸ್ಯ, ಉಪನ್ಯಾಸಸಂಯುತಾ, ವ್ಯಾಖ್ಯಾ, ತ್ರಿವಿಕ್ರಮಾರ್ಯೇಣ, ತದಾ, ಶುಶ್ರುವೇ ।

**ಅನ್ವಯಾರ್ಥ—**

**ಇತ್ಯಾದೀನ್** = ಪ್ರಧಾನಮಪರಾಧೀನಂ (ಸ.16 ಶ್ಲೋ.9) ಇವೇ ಮೊದಲಾದ,
**ಅರ್ಥಾನ್** = ಸ್ವಪಕ್ಷಸಾಧಕ ಮತ್ತು ಪರಪಕ್ಷನಿರಾಕರಣರೂಪವಾದ ಪ್ರಮೇಯಗಳನ್ನು,
**ದರ್ಶಯಂತೀ** = ತೋರಿಸುತ್ತಿರುವ (ಪ್ರತಿಪಾದಿಸುತ್ತಿರುವ),
**ವಿಶ್ವಾಭಿಜ್ಞಸ್ಯ** = ಸರ್ವಜ್ಞರಾದ ಶ್ರೀಮಧ್ವಾಚಾರ್ಯರ,
**ಉಪನ್ಯಾಸಸಂಯುತಾ** = ಉಪನ್ಯಾಸದಿಂದ ಕೂಡಿದ,
**ವ್ಯಾಖ್ಯಾ** = ಪ್ರವಚನವು,
**ತ್ರಿವಿಕ್ರಮಾರ್ಯೇಣ** = ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರಿಂದ,
**ತದಾ** = ಆಗ,
**ಶುಶ್ರುವೇ** = ಕೇಳಲ್ಪಟ್ಟಿತು.

**ತಾತ್ಪರ್ಯ—** "ಪ್ರಧಾನವು ಸ್ವತಂತ್ರವಾದ ಕಾರಣವು" 'ಪ್ರಧಾನಮಪರಾಧೀನಂ ಕಾರಣಂ' ಇತ್ಯಾದಿ ಪರಪಕ್ಷದ ನಿರಾಕರಣ, ಮುಕ್ತನಿಗೆ ಸ್ವರೂಪದೇಹವಿದೆ ಇತ್ಯಾದಿ ಸ್ವಪಕ್ಷಸಾಧನರೂಪವಾದ ಪ್ರಮೇಯಗಳನ್ನು ಶ್ರೀಪೂರ್ಣಪ್ರಜ್ಞರು ಉಪನ್ಯಾಸರೂಪದಿಂದ ಬೋಧಿಸಿ, ಶಾಸ್ತ್ರವಾಕ್ಯಗಳ ವ್ಯಾಖ್ಯಾನವನ್ನೂ ಮಾಡಿದರು. ಅವರ ಈ ಉಪನ್ಯಾಸ ಮತ್ತು ಪ್ರವಚನವನ್ನು ಆಗ ಅಲ್ಲಿಯೇ ಕುಳಿತಿದ್ದ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರೂ ಕೇಳಿದರು.

ವಿಗ್ರಹ—

**ಇತ್ಯಾದೀನ್—** ಇತಿ ಆದಿಃ ಯೇಷಾಂ ತೇ ಇತ್ಯಾದಯಃ ತಾನ್ ।
**ಉಪನ್ಯಾಸಸಂಯುತಾ—** ಉಪನ್ಯಾಸೇನ ಸಂಯುತಾ ಉಪನ್ಯಾಸಸಂಯುತಾ ।
**ವಿಶ್ವಾಭಿಜ್ಞಃ—** ಅಭಿಜಾನಾತೀತಿ ಅಭಿಜ್ಞಃ ವಿಶ್ವಸ್ಯ ಅಭಿಜ್ಞಃ ವಿಶ್ವಾಭಿಜ್ಞಃ ತಸ್ಯ ।
**ತ್ರಿವಿಕ್ರಮಾರ್ಯೇಣ—** ತ್ರಿವಿಕ್ರಮ ಇತಿ ಆರ್ಯಃ ತ್ರಿವಿಕ್ರಮಾರ್ಯಃ ತೇನ ।

**ಕ್ರಿಯಾಪದ— ಶುಶ್ರುವೇ** - ಶುಶ್ರುವೇ ಶುಶ್ರುವಾತೇ ಶುಶ್ರುವಿರೇ, ಶುಶ್ರುಷೇ ಶುಶ್ರುವಾಥೇ ಶುಶ್ರುಢ್ವೇ, ಶುಶ್ರುವೇ ಶುಶ್ರುವಹೇ ಶುಶ್ರುಮಹೇ । ಶ್ರುಶ್ರವಣೇ. ಅಕ. ಅನಿ. ಪರ to hear ಭೂತಾನದ್ಯತನ ಪರೋಕ್ಷೇ ಕರ್ಮಣಿ ಲಿಟ್. ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ಇತ್ಯಾದೀನ್ ಅರ್ಥಾನ್ ದರ್ಶಯಂತೀಂ ವಿಶ್ವಾಭಿಜ್ಞಸ್ಯ ಉಪನ್ಯಾಸಸಂಯುತಾಂ ವ್ಯಾಖ್ಯಾಂ ತ್ರಿವಿಕ್ರಮಾರ್ಯಃ ತದಾ ಶುಶ್ರಾವ ।

* * *

**ಅವತಾರಿಕಾ**— ಈ ರೀತಿಯ ಆಚಾರ್ಯರ ಪ್ರವಚನವನ್ನು ಕೇಳಿದ ಮೇಲೆ ತ್ರಿವಿಕ್ರಮಪಂಡಿತಾಚಾರ್ಯರು ಏನು ಮಾಡಿದರು ?

**ಅಥ ಪ್ರಾಯುಂಕ್ತ ವಿವಿಧಾನ್ ಬೋಧಚಾಪಗುಣೇರಿತಾನ್ ।**
**ವಿಪಕ್ಷಯುಕ್ತಾನ್ ವೀರ್ಯೇಣ ತೀಕ್ಷ್ಣಾಂಸ್ತರ್ಕಶರಾನಸೌ ॥ 65 ॥**

**ಪದಚ್ಛೇದ**— ಅಥ, ಪ್ರಾಯುಂಕ್ತ, ವಿವಿಧಾನ್, ಬೋಧಚಾಪಗುಣೇರಿತಾನ್, ವಿಪಕ್ಷಯುಕ್ತಾನ್, ವೀರ್ಯೇಣ, ತೀಕ್ಷ್ಣಾನ್, ತರ್ಕಶರಾನ್, ಅಸೌ ।

**ಅನ್ವಯ**— ಅಥ, ಅಸೌ, ವಿವಿಧಾನ್, ಬೋಧಚಾಪಗುಣೇರಿತಾನ್, ವಿಪಕ್ಷಯುಕ್ತಾನ್, ತೀಕ್ಷ್ಣಾನ್, ತರ್ಕಶರಾನ್, ವೀರ್ಯೇಣ, ಪ್ರಾಯುಂಕ್ತ ।

**ಅನ್ವಯಾರ್ಥ**—

**ಅಥ** = ಶ್ರೀಮಧ್ವಾಚಾರ್ಯರ ಉಪನ್ಯಾಸದ ಸಮಾಪ್ತಿಯ ಅನಂತರ,

**ಅಸೌ** = ಈ ತ್ರಿವಿಕ್ರಮಪಂಡಿತಾಚಾರ್ಯರು,

**ವಿವಿಧಾನ್** = ನಾನಾ ಪ್ರಕಾರವಾದ (ಪಕ್ಷಿಯ ಗಮನಪ್ರಕಾರವುಳ್ಳ),

**ಬೋಧಚಾಪಗುಣಈರಿತಾನ್** = ತನ್ನ ಸಿದ್ಧಾಂತಜ್ಞಾನವೆಂಬ ಬಿಲ್ಲಿನ ಚಾತುರ್ಯ, ಧೈರ್ಯಾದಿ ಗುಣಗಳೆಂಬ ಬಿಲ್ಲಿನ ಹಗ್ಗದಿಂದ (ನಾರಿನಿಂದ), ಪ್ರೇರಿಸಲ್ಪಟ್ಟ,

**ವಿಪಕ್ಷಯುಕ್ತಾನ್** = ಮಧ್ವಸಿದ್ಧಾಂತದ ವಿರುದ್ಧ ಸಿದ್ಧಾಂತಗಳಿಂದ ಕೂಡಿದ (ಪಕ್ಷಿಯ ರೆಕ್ಕೆಗಳಿಂದ ಕೂಡಿದ),

**ತೀಕ್ಷ್ಣಾನ್** = ಪ್ರತಿಪಕ್ಷನಿರಾಕರಣ ಸಮರ್ಥವಾದ (ಹರಿತವಾದ),

**ತರ್ಕಶರಾನ್** = ಅನುಮಾನಗಳೆಂಬ ಬಾಣಗಳನ್ನು, ವೀರ್ಯೇಣ ಸಾಮರ್ಥ್ಯದಿಂದ,

**ಪ್ರಾಯುಂಕ್ತ** = ಪ್ರಯೋಗಿಸಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರ ಉಪನ್ಯಾಸರೂಪವಾದ ವಾದವು ಮುಗಿಯಿತು. ಅನಂತರ ತ್ರಿವಿಕ್ರಮ ಪಂಡಿತಾಚಾರ್ಯರ ಪ್ರತಿವಾದವು ಪ್ರಾರಂಭವಾಯಿತು. ಪರಾಕ್ರಮಿಯಾದ ಯೋಧನೊಬ್ಬನು ಬಿಲ್ಲಿನ ಹೆದೆಯನ್ನು ಏರಿಸಿ ಹದ್ದಿನ ರೆಕ್ಕೆಯನ್ನು ಜೋಡಿಸಿರುವ ಹರಿತವಾದ ಬಾಣಗಳನ್ನು ಬಿಲ್ಲಿಗೆ ಜೋಡಿಸಿ ಸಾಮರ್ಥ್ಯವನ್ನೆಲ್ಲಾ ಉಪಯೋಗಿಸಿ, ಜಾಣ್ಮೆಯಿಂದ ಆ ಬಾಣಗಳನ್ನು ಪ್ರತಿಭಟನ ಮೇಲೆ ಪ್ರಯೋಗಿಸುತ್ತಾನೆ. ಅದರಂತೆ ತ್ರಿವಿಕ್ರಮಪಂಡಿತರು ತನ್ನ ತತ್ತ್ವಜ್ಞಾನವೆಂಬ ಬಿಲ್ಲಿನ ಹಗ್ಗವನ್ನು ಬಿಗಿಯಾಗಿ ಕಟ್ಟಿ ದ್ವೈತಸಿದ್ಧಾಂತಕ್ಕೆ ವಿರೋಧಪಕ್ಷದಿಂದ ಕೂಡಿದ ವ್ಯಾಪ್ತ್ಯಾದಿಗಳಿಂದ ಕೂಡಿ ದೃಢವಾಗಿದ್ದು, ನಿರಾಕರಿಸಲು ಅಸಾಧ್ಯವಾದ ಯುಕ್ತಿಗಳಿಂದ ಬಾಣಗಳನ್ನು ತನ್ನ ಬುದ್ಧಿಬಲದಿಂದ ಪ್ರಯೋಗಿಸಿದರು. ತ್ರಿವಿಕ್ರಮಪಂಡಿತರು ಅದ್ವೈತ ಮೊದಲಾದ ಮತಗಳ ಯುಕ್ತಿಗಳಿಂದ ಆಚಾರ್ಯರಿಗೆ ವಿರುದ್ಧವಾಗಿ ವಾದಿಸಿದರು. ತ್ರಿವಿಕ್ರಮಪಂಡಿತರ ಪಾಂಡಿತ್ಯವೇ ಬಿಲ್ಲು, ತರ್ಕಗಳೇ ಬಾಣಗಳು. ತರ್ಕಗಳನ್ನು ವಾದಿಯ ಎದುರಲ್ಲಿ ಮಂಡಿಸುವುದೇ ಬಿಲ್ಲಿನಲ್ಲಿ ಹೆದೆಯೇರಿಸಿ ಬಾಣವನ್ನು ಜೋಡಿಸಿ ಪ್ರಯೋಗಿಸುವುದು ಎಂದು ಅಭಿಪ್ರಾಯ. ಇಲ್ಲಿ ರೂಪಾಲಂಕಾರವಿದೆ.

**ವಿಗ್ರಹ**—

**ಬೋಧಚಾಪಗುಣೇರಿತಾನ್**— ಬೋಧ ಏವ ಚಾಪಃ ಬೋಧಚಾಪಃ, ಗುಣಾ ಏವ ಗುಣಃ, ಬೋಧ-ಚಾಪಸ್ಯ ಗುಣಃ, ಬೋಧಚಾಪಗುಣಃ, ಬೋಧಚಾಪಗುಣೇನ ಈರಿತಾಃ ಬೋಧಚಾಪಗುಣೇರಿತಾಃ ತಾನ್ ।

**ವಿಪಕ್ಷಯುಕ್ತೈಃ**— ವೇಃ ಪಕ್ಷಾಃ ವಿಪಕ್ಷಾಃ ವಿಪಕ್ಷೈಃ ಯುಕ್ತಾಃ ವಿಪಕ್ಷಯುಕ್ತಾಃ ತೈಃ (ಇದು ಬಾಣ ಎಂಬ ಅರ್ಥದ ಪಕ್ಷದಲ್ಲಿ ವಿಗ್ರಹ) ವಿರುದ್ಧಾಃ ಪಕ್ಷಾಃ ವಿಪಕ್ಷಾ, ವಿಪಕ್ಷೈಃ ಯುಕ್ತಾಃ ವಿಪಕ್ಷಯುಕ್ತಾಃ ತೈಃ । (ಇದು ತರ್ಕಪಕ್ಷದಲ್ಲಿ ವಿಗ್ರಹ)

**ತರ್ಕಶರಾನ್**— ತರ್ಕಾ ಏವ ಶರಾಃ ತಾನ್ ।

**ಕೋಶ**— ವಿಪಕ್ಷ ಎಂಬಲ್ಲಿ, ವಿ = ಪಕ್ಷಿ, ಪರಮಾತ್ಮ, 'ವಿಃಪಕ್ಷಿಪರಮಾತ್ಮನೋಃ' ಅಮರ, ಗುಣ = ಬಿಲ್ಲಿನ ಹೆದೆ, ಚಾತುರ್ಯ ಧೈರ್ಯಾದಿಗುಣಗಳು, 'ಮೌರ್ವ್ಯಾಂ ದ್ರವ್ಯಾಶ್ರಿತೇ ಸತ್ತ್ವಶೌರ್ಯ ಸಂಧ್ಯಾದಿಕೇ ಗುಣಃ' ಅಮರ । Bow string, quality of an object such as generosity, bravery, the three fundamental qualities Sattva, Rajas and Tamas, colour, the six Political expedients.

**ಕ್ರಿಯಾಪದ**— **ಪ್ರಾಯುಂಕ್ತ** - ಪ್ರ+ಅಯುಂಕ್ತ, ಅಯುಂಜಾತಾಂ, ಅಯುಂಜತ, ಅಯುಂಕ್ಥಾಃ ಅಯುಂಜಾಥಾಂ ಅಯುಂಗ್ಧ್ವಂ, ಅಯುಂಜಿ ಅಯುಂಜ್ವಹಿ ಅಯುಂಜ್ಮಹಿ । ಪ್ರ. ಉಪಸರ್ಗ, ಯುಜಿರ್(ಯುಜ್) ಯೋಗೇ, ಸಕ. ಅನಿ. ಉಭ. to unite, to put, to prepare ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನ ।

**ಪ್ರಯೋಗ**— ಅಥ ಅಮುನಾ ವಿವಿಧಾಃ ಬೋಧಚಾಪಗುಣೇರಿತಾಃ ವಿಪಕ್ಷಯುಕ್ತಾಃ ತೀಕ್ಷ್ಣಾಃ ತರ್ಕಶರಾಃ ವೀರ್ಯೇಣ ಪ್ರಾಯುಜ್ಯಂತ ।

★ ★ ★

**ಅವತಾರಿಕಾ**— ಆಗ ಶ್ರೀಮಧ್ವಾಚಾರ್ಯರು ಏನು ಮಾಡಿದರು ?

**ಚಿಚ್ಛೇದಾತುಚ್ಛಧಿಷಣಸ್ತಾಂಸ್ತದಾ ತರ್ಕಸಾಯಕೈಃ ।**
**ಪ್ರಯುಕ್ತಮಾತ್ರಾನ್ ಪ್ರಹಸಂಲ್ಲೀಲಯಾತಿಶಯಾಲುಭಿಃ ॥ 66 ॥**

**ಪದಚ್ಛೇದ**— ಚಿಚ್ಛೇದ, ಅತುಚ್ಛಧಿಷಣಃ, ತಾನ್, ತದಾ, ತರ್ಕಸಾಯಕೈಃ, ಪ್ರಯುಕ್ತಮಾತ್ರಾನ್, ಪ್ರಹಸನ್, ಲೀಲಯಾ, ಅತಿಶಯಾಲುಭಿಃ ।

**ಅನ್ವಯ**— ಪ್ರಹಸನ್, ಅತುಚ್ಛಧಿಷಣಃ, ಪ್ರಯುಕ್ತಮಾತ್ರಾನ್, ತಾನ್, ತದಾ, ಅತಿಶಯಾಲುಭಿಃ, ತರ್ಕಸಾಯಕೈಃ, ಲೀಲಯಾ, ಚಿಚ್ಛೇದ ।

**ಅನ್ವಯಾರ್ಥ**—

**ಪ್ರಹಸನ್** = ನಗುತ್ತಿರುವ,
**ಅತುಚ್ಛಧಿಷಣಃ** = ಪೂರ್ಣಪ್ರಜ್ಞಾಚಾರ್ಯರು,
**ಪ್ರಯುಕ್ತಮಾತ್ರಾನ್** = ಕೇವಲ ಪ್ರಯೋಗಿಸಲ್ಪಟ್ಟ,
**ತಾನ್** = ಆ ತ್ರಿವಿಕ್ರಮರ ಯುಕ್ತಿ ಬಾಣಗಳನ್ನು,
**ತದಾ** = ಆಗ,
**ಅತಿಶಯಾಲುಭಿಃ** = ಅವುಗಳನ್ನು ಮೀರಿಸುವ,
**ತರ್ಕಸಾಯಕೈಃ** = ಅನುಮಾನಗಳೆಂಬ ಬಾಣಗಳಿಂದ,
**ಲೀಲಯಾ** = ಅನಾಯಾಸದಿಂದ,
**ಚಿಚ್ಛೇದ** = ಕತ್ತರಿಸಿದರು (ಖಂಡಿಸಿದರು).

ತಾತ್ಪರ್ಯ— ಯೋಧನೊಬ್ಬನು ತನ್ನ ಪ್ರತಿಯೋಧನ ಬಾಣಗಳನ್ನು ಮೀರಿಸುವ ಹಾಗೂ ಹೆಚ್ಚು ಶಕ್ತಿಯುಳ್ಳ ಬಾಣಗಳನ್ನು ಕೂಡಲೇ ಪ್ರಯೋಗಿಸಿ ಎದುರಾಳಿಯ ಬಾಣಗಳನ್ನು ಕತ್ತರಿಸಿ ಹಾಕುವಂತೆ ತ್ರಿವಿಕ್ರಮಪಂಡಿತರು ತರ್ಕಶರಗಳನ್ನು ಪ್ರಯೋಗಿಸಿದ ಕೂಡಲೇ ಶ್ರೀಮಧ್ವಾಚಾರ್ಯರು ನಗುತ್ತಾ ಅವರ ಯುಕ್ತಿಬಾಣಗಳನ್ನು ಮೀರಿಸುವ ಮತ್ತು ಹೆಚ್ಚು ಬಲವುಳ್ಳ ತರ್ಕಬಾಣಗಳನ್ನು ಪ್ರತಿಯಾಗಿ ಪ್ರಯೋಗಿಸಿ ತ್ರಿವಿಕ್ರಮಪಂಡಿತರ ತರ್ಕಬಾಣಗಳನ್ನು ಖಂಡಿಸಿದರು. ಅವರು ಅನಾಯಾಸವಾಗಿ ವಿನೋದದಿಂದ ಆಟವಾಡಿದಂತೆ ವಾದಮಾಡಿ ತ್ರಿವಿಕ್ರಮರ ವಾದಗಳನ್ನು ಪುಡಿ ಮಾಡು-ತ್ತಿದ್ದರು. ಆಚಾರ್ಯರು ಅತಿಶಯಪ್ರತಿಭಾಸಂಪನ್ನರಾದುದರಿಂದ ಪ್ರತಿವಾದಿಯು ಹೇಳಿದಕೂಡಲೇ ಪ್ರತ್ಯುತ್ತರವನ್ನು ಕೊಡುತ್ತಿದ್ದರು. ಪ್ರತಿವಾದಿಯ ಇದಿರಿನಲ್ಲಿ ಅವರಿಗೆ ಭಯ, ಕೋಪ, ನಡುಕ ಯಾವುದೂ ಇರಲಿಲ್ಲ. ಅವರು ನಗುತ್ತಾ ಮಾತಾಡುತ್ತಿದ್ದರು.

ವಿಗ್ರಹ—

**ಅತುಚ್ಛಧಿಷಣಃ**— ನ ತುಚ್ಛಾ ಅತುಚ್ಛಾ, ಅತುಚ್ಛಾ ಧಿಷಣಾ ಯಸ್ಯಸಃ ಅತುಚ್ಛಧಿಷಣಃ ।

**ತರ್ಕಸಾಯಕೈಃ**— ತರ್ಕಾ ಏವ ಸಾಯಕಾಃ ತರ್ಕಸಾಯಕಾಃ ತೈಃ ।

**ಪ್ರಯುಕ್ತಮಾತ್ರಾನ್**— ಕೇವಲಂ ಪ್ರಯುಕ್ತಾಃ ಪ್ರಯುಕ್ತಮಾತ್ರಾಃ ತಾನ್ ।

**ಅತಿಶಯಾಲುಭಿಃ**— ಅತಿಶಯಿತುಂ ಶೀಲಂ ಏಷಾಂ ಇತಿ ಅತಿಶಯಾಲವಃ, ತಾನ್ ।

**ಕ್ರಿಯಾಪದ— ಚಿಚ್ಛೇದ** - ಚಿಚ್ಛೇದ ಚಿಚ್ಛಿದತುಃ ಚಿಚ್ಛಿದುಃ, ಚಿಚ್ಛೇದಿಥ ಚಿಚ್ಛಿದಥುಃ ಚಿಚ್ಛಿದ, ಚಿಚ್ಛೇದ ಚಿಚ್ಛಿದಿವ ಚಿಚ್ಛಿದಿಮ । ಛಿದಿರ್ (ಛಿದ್) ದ್ವೈಧೀಕರಣೇ ರುಧಾದಿಃ ಸಕ. ಅನಿ. ಉಭ. to cut, to mow ಭೂತಾನದ್ಯತನ ಪರೋಕ್ಷೇ ಲಿಟ್, ಪ್ರಥಮಪುರುಷೇ ಏಕವಚನ ।

ಪ್ರಯೋಗ— ಪ್ರಹಸತಾ ಅತುಚ್ಛಧಿಷಣೇನ, ತೇ ತದಾ ಅತಿಶಯಾಲುಭಿಃ ತರ್ಕಸಾಯಕೈಃ ಚಿಚ್ಛಿದಿರೇ ।

★ ★ ★

ಅವತಾರಿಕಾ— ಹೀಗೆ ಸೋಲಿನ ಅಂಚನ್ನು ತಲುಪಿದರೂ ತ್ರಿವಿಕ್ರಮಪಂಡಿತಾಚಾರ್ಯರು ಸಾಹಸವನ್ನು ತೋರಿದರು.

**ಅಧಾರ್ಯಾಣೀತರಜನ್ಯೈರನಿವರ್ತ್ಯಾನಿ (ವಾರ್ಯಾಣಿ) ಪೂರುಷೈಃ ।**
**ವಿಜಿಗೀಷುರ್ದ್ವಿಜಶ್ರೇಷ್ಠೋ ವೇದಾಸ್ತ್ರಾಣಿ ಪ್ರಯುಕ್ತವಾನ್ ॥ 67 ॥**

ಪದಚ್ಛೇದ— ಅಧಾರ್ಯಾಣಿ, ಇತರಜನ್ಯೈಃ, ಅನಿವರ್ತ್ಯಾನಿ (ಅನಿವಾರ್ಯಾ), ಪೂರುಷೈಃ, ವಿಜಿಗೀಷುಃ, ದ್ವಿಜಶ್ರೇಷ್ಠಃ, ವೇದಾಸ್ತ್ರಾಣಿ, ಪ್ರಯುಕ್ತವಾನ್ ।

ಅನ್ವಯ— ವಿಜಿಗೀಷುಃ, ದ್ವಿಜಶ್ರೇಷ್ಠಃ, ಇತರಜನ್ಯೈರಧಾರ್ಯಾಣಿ, ಪೂರುಷೈಃ, ಅನಿವರ್ತ್ಯಾನಿ (ಅನಿವಾರ್ಯಾಣಿ), ವೇದಾಸ್ತ್ರಾಣಿ, ಪ್ರಯುಕ್ತವಾನ್ ।

ಅನ್ವಯಾರ್ಥ—

**ವಿಜಿಗೀಷುಃ** = ಜಯಿಸುವ ಇಚ್ಛೆಯುಳ್ಳ,

**ದ್ವಿಜಶ್ರೇಷ್ಠಃ** = ಬ್ರಾಹ್ಮಣಶ್ರೇಷ್ಠರಾದ ತ್ರಿವಿಕ್ರಮಪಂಡಿತಾಚಾರ್ಯರು,

**ಇತರಜನ್ಯೈಃ** = ಶೂದ್ರರೇ ಮೊದಲಾದ ತ್ರಿವರ್ಣೇತರರಿಂದ, ಅಲ್ಪಮತಿಗಳಾದ ಜನರಿಂದ,

**ಅಧಾರ್ಯಾಣಿ** = ಶ್ರವಣಾದಿಗಳಿಂದ ಧರಿಸಲು ಅನರ್ಹವಾದ, ತಿಳಿಯಲು ಅಶಕ್ಯವಾದ,

**ಪೂರುಷೈಃ** = ಸಾಮಾನ್ಯ ಜನರಿಂದ,

**ಅನಿವರ್ತ್ಯಾನಿ (ಅನಿವಾರ್ಯಾಣಿ)** = ನಿವಾರಿಸಲು, ಅಶಕ್ಯವಾದ,

**ವೇದಾಸ್ತ್ರಾಣಿ** = ವೇದಗಳೆಂಬ (ವೈದಿಕವಾಕ್ಯಗಳೆಂಬ) ಆಯುಧಗಳನ್ನು,

**ಪ್ರಯುಕ್ತವಾನ್** = ಪ್ರಯೋಗಿಸಿದರು.

**ತಾತ್ಪರ್ಯ**— ಜಯಿಸುವ ಅಪೇಕ್ಷೆಯುಳ್ಳ ಯೋಧನೊಬ್ಬನು ಶಸ್ತ್ರಯುದ್ಧದಲ್ಲಿ ಪರಾಜಿತನಾಗಿ ಅಸ್ತ್ರಯುದ್ಧವನ್ನು ಮಾಡುತ್ತಾನೆ. ಅದರಂತೆ ಮತ್ತೂ ಜಯೋತ್ಸಾಹಭರಿತರಾದ ತ್ರಿವಿಕ್ರಮಪಂಡಿತರು ವೇದಗಳೆಂಬ ಅಸ್ತ್ರಗಳನ್ನು ಪ್ರಯೋಗಿಸಿದರು. ಸಾಧಾರಣ ಜನರಿಗೆ ಅಸ್ತ್ರಗಳ ವೇಗವನ್ನೂ ಏಟನ್ನೂ ಸಹಿಸಲು ಸಾಧ್ಯವಿರುವುದಿಲ್ಲ. ಅದರಂತೆ ತ್ರಿವರ್ಣೇತರರಿಂದ ಶ್ರವಣಾದಿಗಳ ಮೂಲಕ ಧರಿಸಲು ಅಶಕ್ಯವಾದ ವೈದಿಕ ವಾಕ್ಯಗಳೆಂಬ ಅಸ್ತ್ರಗಳನ್ನು ತ್ರಿವಿಕ್ರಮಪಂಡಿತರು ಪ್ರಯೋಗಿಸಿದರು. ಸಾಧಾರಣ ಜನರಿಗೆ ಅಸ್ತ್ರಗಳಿಗೆ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ಅವುಗಳನ್ನು ಹಿಂತಿರುಗಿಸಲು ಸಾಧ್ಯವಿಲ್ಲದಿರುವಂತೆ, ತ್ರಿವಿಕ್ರಮಪಂಡಿತರು ಪ್ರಯೋಗಿಸಿದ ವೇದವಾಕ್ಯಗಳ ಆಪಾತಾರ್ಥವನ್ನು ನಿರಾಕರಿಸಲು ಸಾಧಾರಣ ಜನರಿಗೆ ಸಾಧ್ಯವಿರಲಿಲ್ಲ. ಇಂತಹ ವೇದವಾಕ್ಯಗಳೆಂಬ ಅಸ್ತ್ರಗಳನ್ನು ತ್ರಿವಿಕ್ರಮಪಂಡಿತರು ಪ್ರಯೋಗಿಸಿದರು. ಮಹಾರಥಿಕನು ಬೇರೆಯವರಿಂದ ಪಡೆಯಲು ಅಸಾಧ್ಯವಾದ ಧರಿಸಲೂ ಅಸಾಧ್ಯವಾದ ಹಾಗೂ ಪ್ರಯೋಗಿಸಿದಾಗ ಸಹಿಸಿಕೊಂಡು ಪ್ರತ್ಯಸ್ತ್ರದಿಂದ ಹಿಂತಿರುಗಿಸಲೂ ಅಸಾಧ್ಯವಾದ ಬ್ರಹ್ಮಾಸ್ತ್ರವೇ ಮೊದಲಾದ ಮಹಾಮಂತ್ರಾಸ್ತ್ರಗಳನ್ನು ಪ್ರಯೋಗಿಸುವಂತೆ ತ್ರಿವಿಕ್ರಮಪಂಡಿತರು ತನ್ನ ಪಕ್ಷಕ್ಕೆ ಸಾಧಕವಾದ ಪ್ರಬಲವಾದ ವೇದವಾಕ್ಯಗಳನ್ನು ಉದಾಹರಿಸಿದರು ಎಂದು ಭಾವ.

**ವಿಗ್ರಹ**—

**ಅಧಾರ್ಯಾಣಿ**— ಧಾರಯಿತುಂ ಯೋಗ್ಯಾನಿ ಧಾರ್ಯಾಣಿ, ನ ಧಾರ್ಯಾಣಿ ಅಧಾರ್ಯಾಣಿ, ತಾನಿ ।

**ಇತರಜನ್ಯೈಃ**— ಇತರೇ ಚ ತೇ ಜನಾಶ್ಚ ಇತರಜನಾಃ ತೈಃ ।

**ಅನಿವರ್ತ್ಯಾನಿ**— ನಿವರ್ತಯಿತುಂ ಯೋಗ್ಯಾನಿ ನಿವರ್ತ್ಯಾನಿ, ನ ನಿವರ್ತ್ಯಾನಿ ಅನಿವರ್ತ್ಯಾನಿ ತಾನಿ ।

**ವಿಜಿಗೀಷುಃ**— ವಿಜೇತುಂ ಇಚ್ಛುಃ ವಿಜಿಗೀಷುಃ ।

**ವೇದಾಸ್ತ್ರಾಣಿ**— ವೇದಾ ಏವ ಅಸ್ತ್ರಾಣಿ ವೇದಾಸ್ತ್ರಾಣಿ ತಾನಿ ।

**ಕ್ರಿಯಾಪದ**— ಪ್ರಯುಕ್ತವಾನ್ ಎಂಬುದು ಇಲ್ಲಿ ಕೃದಂತಪದವು, ಕ್ರಿಯಾಪದದ ಅರ್ಥವನ್ನು ಕೊಡುತ್ತದೆ. ಅಭೂತ್ ಎಂಬ ಮತ್ತೊಂದು ಕ್ರಿಯಾಪದವನ್ನು ಅಧ್ಯಾಹಾರ ಮಾಡಿ ವಾಕ್ಯವನ್ನು ಪೂರ್ತಿಗೊಳಿಸಬಹುದು.

**ಪ್ರಯೋಗ**— ವಿಜಿಗೀಷುಣಾ ದ್ವಿಜಶ್ರೇಷ್ಠೇನ ಇತರಜನ್ಯೈಃ ಅಧಾರ್ಯಾಣಿ ಪೂರುಷೈಃ ಅನಿವರ್ತ್ಯಾನಿ ವೇದಾಸ್ತ್ರಾಣಿ ಪ್ರಯುಕ್ತಾನಿ ಅಭೂವನ್ ।

★ ★ ★

**ಅವತಾರಿಕಾ**— ಶ್ರೀಮಧ್ವಾಚಾರ್ಯರು ತ್ರಿವಿಕ್ರಮರ ವೇದವಾಕ್ಯಾಸ್ತ್ರಗಳನ್ನು ಖಂಡಿಸಿದರು.

**ವಾಕ್ಯೈರತಿಬಲೀಯೋಭಿಃ ಪ್ರತ್ಯಸ್ತ್ರೈರಿವ ವೈದಿಕೈಃ ।**

**ಅರ್ಥಾಂತರಂ ಪ್ರಕಟಯಂಸ್ತಾನ್ಯಸೌ ಸಂನ್ಯವರ್ತಯತ್ ॥ 68 ॥**

**ಪದಚ್ಛೇದ**— ವಾಕ್ಯೈಃ, ಅತಿಬಲೀಯೋಭಿಃ, ಪ್ರತ್ಯಸ್ತ್ರೈಃ, ಇವ, ವೈದಿಕೈಃ, ಅರ್ಥಾಂತರಂ, ಪ್ರಕಟಯನ್, ತಾನಿ, ಅಸೌ, ಸನ್ನ್ಯವರ್ತಯತ್ ।

**ಅನ್ವಯ**— ಅಸೌ, ಅತಿಬಲೀಯೋಭಿಃ, ಪ್ರತ್ಯಸ್ತ್ರೈರಿವ, ವೈದಿಕೈಃ, ವಾಕ್ಯೈಃ, ಅರ್ಥಾಂತರಂ, ಪ್ರಕಟಯನ್, ತಾನಿ, ಸನ್ನ್ಯವರ್ತಯತ್ ।

**ಅನ್ವಯಾರ್ಥ—**

**ಅಸೌ** = ಈ ಶ್ರೀಮಧ್ವಾಚಾರ್ಯರು,

**ಅತಿಬಲೀಯೋಭಿಃ** = ನಿರವಕಾಶವಾಗಿಯೂ, ಉಪಜೀವ್ಯವಾಗಿಯೂ ಇರುವುದರಿಂದ ಹೆಚ್ಚು ಪ್ರಬಲವಾದ,

**ವೈದಿಕೈಃ ವಾಕ್ಯೈಃ** = ವೇದದ ವಾಕ್ಯಗಳಿಂದ,

**ತಾನಿ** = ತ್ರಿವಿಕ್ರಮಪಂಡಿತರು ಪ್ರಯೋಗಿಸಿದ ವೇದವಾಕ್ಯಗಳನ್ನು,

**ಪ್ರತ್ಯಸ್ತ್ರೈರಿವ** = ಪ್ರತಿಕೂಲವಾದ ಅಸ್ತ್ರಗಳಿಂದಲೋ ಎಂಬಂತೆ,

**ಅರ್ಥಾಂತರಂ ಪ್ರಕಟಯನ್** = ಬೇರೆ ಅರ್ಥವನ್ನು ತಿಳಿಸುತ್ತಾ,

**ಸನ್ನ್ಯವರ್ತಯತ್** = ಹಿಂತಿರುಗಿಸಿದರು. (ಸಾವಕಾಶವಾಗಿಯೂ ದುರ್ಬಲವಾಗಿಯೂ ಮಾಡಿದರು)

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಬೇರೆ ಅರ್ಥದಲ್ಲಿ ಅವಕಾಶವಿಲ್ಲದಿರುವ ಅನೇಕವಾದ ಬಲಿಷ್ಠವಾದ ವೇದ ವಾಕ್ಯಗಳನ್ನು ಉದಾಹರಿಸಿ ಪ್ರತಿವಾದಿಯು ಹೇಳಿದ ವಾಕ್ಯಗಳಿಗೆ ಬೇರೆ ಅರ್ಥವನ್ನು ಹೇಳಿದರು. ತಾವು ಹೇಳಿದ ವಾಕ್ಯಗಳು ಪ್ರತಿವಾದಿಯು ಹೇಳಿದ ವಾಕ್ಯಗಳಿಗೆ ಆಧಾರವಾಗಿರುವುದರಿಂದಲೂ ಬಲವತ್ತಾದವುಗಳು ಎಂದು ತೋರಿಸಿದರು. ಹೀಗೆ ಪ್ರತಿವಾದಿಯು ಹೇಳಿದ ವಾಕ್ಯಗಳಿಗೆ ಬೇರೆ ಅರ್ಥವನ್ನು ಹೇಳಿದರು. ಪ್ರತಿಕೂಲವಾದ ಅಸ್ತ್ರಗಳಂತಿರುವ ವಾಕ್ಯಗಳಿಂದ, ಪ್ರತಿವಾದಿಯು ಹೇಳಿದ ವೇದವಾಕ್ಯಗಳು ಅವನಿಗೆ ಅನುಕೂಲವಾದ ಅರ್ಥವನ್ನು ಹೇಳುವುದಿಲ್ಲವೆಂದು ಪ್ರತಿಪಾದಿಸಿ ಪ್ರತಿವಾದಿಯನ್ನು ನಿರಾಕರಿಸಿದರು. ಮಹಾರಥಿಕರು ಅಸ್ತ್ರಗಳಿಗೆ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ಖಂಡಿಸುವಂತೆ ತಾವು ಹೇಳಿದ ಖಂಡಿಸಲು ಅಸಾಧ್ಯವಾದ ಅರ್ಥವುಳ್ಳ ವಾಕ್ಯಗಳಿಂದ ತ್ರಿವಿಕ್ರಮಾರ್ಯರು ಹೇಳಿದ ವಾಕ್ಯಗಳಿಂದವರಿಗೆ ಅಭಿಮತವಾದ ಅರ್ಥವು ಸಿದ್ಧಿಸುವುದಿಲ್ಲವೆಂದು ತೋರಿಸಿದರು. ತನ್ನ ಸಿದ್ಧಾಂತವನ್ನು ಸಾಧಿಸಿದರು ಎಂದು ಭಾವ.

**ವಿಗ್ರಹ—**

**ಅತಿಬಲೀಯೋಭಿಃ—** ಅತಿಶಯೇನ ಬಲವಂತಿ ಅತಿಬಲೀಯಾಂಸಿ ತೈಃ ।

**ಅರ್ಥಾಂತರಂ—** ಅನ್ಯಃ ಅರ್ಥಃ ಅರ್ಥಾಂತರಂ ತತ್ ।

**ವಿಶೇಷಾಂಶ—** ಅರ್ಥಾಂತರಂ ಅನ್ಯಸ್ಯ ವಿಪರೀತಂ ಜಯಾದಿಕಂ ಚ ಭಾ. ಪ್ರ. ಅರ್ಥಾಂತರಂ ಪ್ರಕಟಯನ್ ಎಂದರೆ ಪ್ರತಿವಾದಿಯ ಅರ್ಥಕ್ಕೆ ವಿರುದ್ಧವಾದ ಮತ್ತು ಜಯ ಮುಂತಾದ ಅರ್ಥವನ್ನೂ ಪ್ರಕಟಗೊಳಿಸುತ್ತಾ ಎಂದು ಅರ್ಥ.

**ಕ್ರಿಯಾಪದ— ಸಂನ್ಯವರ್ತಯತ್** - ಸಮ್+ನಿ+ಅವರ್ತಯತ್, ಅವರ್ತಯತಾಂ ಅವರ್ತಯನ್, ಅವರ್ತಯಃ ಅವರ್ತಯತಂ ಅವರ್ತಯತ, ಅವರ್ತಯಂ ಅವರ್ತಯಾವ ಅವರ್ತಯಾಮ । ಸಮ್ ನಿ ಎರಡು ಉಪಸರ್ಗಗಳು, ವೃತು (ವೃತ್ ವರ್ತ್) ವರ್ತನೇ, ಅಕ ಸೇಟ್ ಆತ್ಮ to exist, to happen, to live on ಣಿಜಂತ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನ ಸನ್ನ್ಯವರ್ತಯತ್ ಎಂದು ರೂಪ ।

**ಪ್ರಯೋಗ—** ಅಮುನಾ ಅತಿಬಲೀಯೋಭಿಃ ಪ್ರತ್ಯಸ್ತ್ರೈರಿವ ವೈದಿಕೈಃ ವಾಕ್ಯೈಃ ಅರ್ಥಾಂತರಂ ಪ್ರಕಟಯತಾ ತಾನಿ ಸನ್ನ್ಯವರ್ತ್ಯಂತ ।

★ ★ ★

**ಅವತಾರಿಕಾ—** ಕೊನೆಗೆ ಶ್ರೀಮಧ್ವಾಚಾರ್ಯರು ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರನ್ನು ಗೆದ್ದರು.

**ಸಪ್ತಾಷ್ಟಾನಿ ದಿನಾನ್ಯೇವಂ ವಾದಂ ಕೃತ್ವಾ ಸಹಾಮುನಾ ।**
**ನಿರುತ್ತರಂ ತಂ ನಿಶ್ಶೋದ್ಯಂ ಚಕ್ರೇ ಚಕ್ರಾಯುಧಪ್ರಿಯಃ ॥ 69 ॥**

**ಪದಚ್ಛೇದ—** ಸಪ್ತಾಷ್ಟಾನಿ, ದಿನಾನಿ, ಏವಂ, ವಾದಂ, ಕೃತ್ವಾ, ಸಹ, ಅಮುನಾ, ನಿರುತ್ತರಂ, ತಂ, ನಿಶ್ಶೋದ್ಯಂ, ಚಕ್ರೇ, ಚಕ್ರಾಯುಧಪ್ರಿಯಃ ।

**ಅನ್ವಯ—** ಚಕ್ರಾಯುಧಪ್ರಿಯಃ, ಅಮುನಾ, ಸಹ, ಏವಂ, ಸಪ್ತಾಷ್ಟಾನಿ, ದಿನಾನಿ, ವಾದಂ, ಕೃತ್ವಾ, ತಂ, ನಿರುತ್ತರಂ, ನಿಶ್ಚೋದ್ಯಂ, ಚಕ್ರೇ ।

**ಅನ್ವಯಾರ್ಥ—**

**ಚಕ್ರಾಯುಧಪ್ರಿಯಃ** = ಸುದರ್ಶನಚಕ್ರಧಾರಿಯಾದ ಶ್ರೀಹರಿಗೆ ಪ್ರೀತಿಪಾತ್ರರಾದ ಶ್ರೀಮಧ್ವಾಚಾರ್ಯರು,

**ಅಮುನಾ ಸಹ** = ಈ ತ್ರಿವಿಕ್ರಪಂಡಿತಾಚಾರ್ಯರೊಡನೆ,

**ಏವಂ** = ಈ ರೀತಿಯಾಗಿ,

**ಸಪ್ತಾಷ್ಟಾನಿ** = ಹದಿನೈದು ದಿನಗಳವರೆಗೆ,

**ವಾದಂ ಕೃತ್ವಾ** = ವಾದಕಥೆಯನ್ನು ಮಾಡಿ (ಚರ್ಚಿಸಿ),

**ತಂ** = ಆ ತ್ರಿವಿಕ್ರಮಪಂಡಿತಾಚಾರ್ಯರನ್ನು,

**ನಿರುತ್ತರಂ** = ಪ್ರತ್ಯುತ್ತರವಿಲ್ಲದವರನ್ನಾಗಿಯೂ,

**ನಿಶ್ಚೋದ್ಯಂ** = ಪ್ರಶ್ನೆ ಇಲ್ಲದವರನ್ನಾಗಿಯೂ,

**ಚಕ್ರೇ** = ಮಾಡಿದರು.

**ತಾತ್ಪರ್ಯ—** ಸುದರ್ಶನಧರನಾದ ಶ್ರೀಹರಿಗೆ ಅತ್ಯಂತ ಪ್ರೀತಿಪಾತ್ರರಾದ ಶ್ರೀಮಧ್ವಾಚಾರ್ಯರು ಶ್ರೀಮತ್ ತ್ರಿವಿಕ್ರಮಪಂಡಿತರೊಡನೆ ಈ ರೀತಿ ಹದಿನೈದು ದಿನಗಳವರೆಗೆ ವಾದವನ್ನು ಮಾಡಿದರು. ಕೊನೆಗೆ ಪಂಡಿತಾಚಾರ್ಯರನ್ನು ಪ್ರತ್ಯುತ್ತರ ಇಲ್ಲದವರನ್ನಾಗಿಯೂ, ಪ್ರಶ್ನೆ ಇಲ್ಲದವರನ್ನಾಗಿಯೂ ಮಾಡಿದರು. ಆಚಾರ್ಯರು ಹೇಳಿದ ಸಿದ್ಧಾಂತದ ಮೇಲೆ ಪುನಃ ಪ್ರಶ್ನೆ ಕೇಳಲು ಅಥವಾ ಆಕ್ಷೇಪ ಮಾಡಲು ಪಂಡಿತಾಚಾರ್ಯರಿಗೆ ಏನೂ ಉಳಿಯಲಿಲ್ಲ. ಆಚಾರ್ಯರು ಕೇಳಿದ ಪ್ರಶ್ನೆಗೆ ಪ್ರತ್ಯುತ್ತರ ಹೇಳಲೂ ಪಂಡಿತಾಚಾರ್ಯರಿಗೆ ಸಾಧ್ಯವಾಗಲಿಲ್ಲ. ತ್ರಿವಿಕ್ರಮಪಂಡಿತರು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಆಚಾರ್ಯರು ಉತ್ತರ ಹೇಳಿದರು. ಹೀಗೆ ಆಚಾರ್ಯರು ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರನ್ನು ಸೋಲಿಸಿದರು.

**ವಿಗ್ರಹ ಮತ್ತು ಕೋಶ—**

**ಸಪ್ತಾಷ್ಟಾನಿ—** ಸಪ್ತ ಚ ಅಷ್ಟೌ ಚ ಸಪ್ತಾಷ್ಟಾನಿ, ಸಪ್ತಾಷ್ಟಾನಾಂ ಪೂರಣಾನಿ ಸಪ್ತಾಷ್ಟಾನಿ । 'ತಸ್ಯ ಪೂರಣೇ ಡಟ್' (5.2.49) ಎಂಬ ಸೂತ್ರದಿಂದ ಡಟ್‌ಪ್ರತ್ಯಯ. ದಿನಾನಿ ಎಂಬುದಕ್ಕೆ ವಿಶೇಷಣ.

**ನಿರುತ್ತರಂ—** ನಿರ್ಗತಂ ಉತ್ತರಂ ಯಸ್ಮಾತ್ ಸಃ ನಿರುತ್ತರಃ ತಂ ।

**ನಿಶ್ಚೋದ್ಯಂ—** ನಿರ್ಗತಂ ಚೋದ್ಯಂ (ಆಕ್ಷೇಪಃ) ಯಸ್ಮಾತ್ ಸಃ ನಿಶ್ಚೋದ್ಯಃ ತಂ । 'ಚೋದ್ಯಂ ಆಕ್ಷೇಪಾಭಿಯೋಗೌ' ಅಮರ, ಸಪ್ತಾಷ್ಟಾನಿ ದಿನಾನಿ ವಾದಂ ಕೃತ್ವಾ ಎಂಬಲ್ಲಿ 'ಕಾಲಾಧ್ವನೋರತ್ಯಂತ ಸಂಯೋಗೇ'(2.3.5) ಎಂಬ ಸೂತ್ರದಿಂದ ಗುಣಕ್ರಿಯಾದ್ರವ್ಯಗಳೊಡನೆ ನಿರಂತರ ಸಂಯೋಗ (ಸಂಬಂಧ) ಎಂಬ ಅರ್ಥದಲ್ಲಿ ದ್ವಿತೀಯಾ ವಿಭಕ್ತಿ ಬಂದಿದೆ. ಹದಿನೈದು ದಿನಗಳಲ್ಲಿಯೂ ಎಡೆಬಿಡದೆ ವಾದವನ್ನು ಮಾಡಿದರು ಎಂದು ಅರ್ಥ.

**ಚಕ್ರಾಯುಧಪ್ರಿಯಃ—** ಚಕ್ರಂ ಆಯುಧಂ ಯಸ್ಯ ಸಃ ಚಕ್ರಾಯುಧಃ, ಚಕ್ರಾಯುಧಸ್ಯ ಪ್ರಿಯಃ ಚಕ್ರಾಯುಧಪ್ರಿಯಃ ।

**ಕ್ರಿಯಾಪದ—** ಚಕ್ರೇ ಚಕ್ರಾತೇ ಚಕ್ರಿರೇ ಇತ್ಯಾದಿ. ಡುಕೃಞ್ (ಕೃ) ಕರಣೇ to do, to make ಆತ್ಮನೇ ಲಿಟ್ ।

**ಪ್ರಯೋಗ—** ಚಕ್ರಾಯುಧಪ್ರಿಯೇಣ, ಅಮುನಾ ಸಹ ಸಪ್ತಾಷ್ಟಾನಿ ದಿನಾನಿ ವಾದಂ ಕೃತ್ವಾ ಸಃ ನಿರುತ್ತರಃ ನಿಶ್ಚೋದ್ಯಃ ಚಕ್ರೇ (ಕರ್ಮಣಿ) ।

★ ★ ★

**ಅವತಾರಿಕಾ**— ಹೀಗೆ ಶ್ರೀಮನ್ಮಧ್ವಾಚಾರ್ಯರಿಗೆ ಜಯವಾಯಿತು. ತ್ರಿವಿಕ್ರಮಪಂಡಿತಾಚಾರ್ಯರು ಸೋತರು. ಮುಂದೇನಾಯಿತು?

**ಪ್ರಣಮ್ಯಾಚಷ್ಟ ಶಿಷ್ಟೋಽಸೌ ಕ್ಷಮ್ಯತಾಂ ನಾಥ ಚಾಪಲಮ್ ।**
**ಪದಪದ್ಮರಜೋದಾಸ್ಯಂ ಧ್ರುವಂ ಮೇ ದೀಯತಾಮಿತಿ ॥ 70 ॥**

**ಪದಚ್ಛೇದ**— ಪ್ರಣಮ್ಯ, ಆಚಷ್ಟ, ಶಿಷ್ಟಃ, ಅಸೌ, ಕ್ಷಮ್ಯತಾಂ, ನಾಥ! ಚಾಪಲಂ, ಪದಪದ್ಮರಜೋದಾಸ್ಯಂ, ಧ್ರುವಂ, ಮೇ, ದೀಯತಾಂ, ಇತಿ ।

**ಅನ್ವಯ**— ಶಿಷ್ಟಃ, ಅಸೌ, ಪ್ರಣಮ್ಯ, ಹೇ ನಾಥ! (ಭವತಾ), ಚಾಪಲಂ, ಕ್ಷಮ್ಯತಾಂ, ಧ್ರುವಂ (ತವ), ಪದಪದ್ಮರಜೋದಾಸ್ಯಂ, ಮೇ, ದೀಯತಾಂ, ಇತಿ, ಅಚಷ್ಟ ।

**ಅನ್ವಯಾರ್ಥ**—

**ಶಿಷ್ಟಃ** = ಸ್ವರೂಪದಿಂದ ಉತ್ತಮ ಜೀವರಾದ,
**ಅಸೌ** = ಈ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು,
**ಪ್ರಣಮ್ಯ** = ನಮಸ್ಕರಿಸಿ,
**ಹೇ ನಾಥ** = ಎಲೈ ಸ್ವಾಮಿಯಾದ ಶ್ರೀಪೂರ್ಣಪ್ರಜ್ಞಾಚಾರ್ಯರೇ! (ಭವತಾ = ನಿಮ್ಮಿಂದ) (ಮೇ = ನನ್ನ)
**ಚಾಪಲಂ** = ಹುಡುಗತನವು,
**ಕ್ಷಮ್ಯತಾಂ** = ಕ್ಷಮಿಸಲ್ಪಡಲಿ.
**ಧ್ರುವಂ** = ಶಾಶ್ವತವಾದ,
**ಭವತಾಂ** = ನಿಮ್ಮ,
**ಪದಪದ್ಮರಜೋದಾಸ್ಯಂ** = ಪಾದಕಮಲಗಳ ಧೂಳುಗಳ ಸೇವಕತನವು,
**ಮೇ** = ನನಗೆ,
**ದೀಯತಾಂ** = ಕೊಡಲ್ಪಡಲಿ,
**ಇತಿ** = ಎಂದು,
**ಆಚಷ್ಟ** = ಹೇಳಿದರು.

**ತಾತ್ಪರ್ಯ**— ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು ಶ್ರೀಪೂರ್ಣಪ್ರಜ್ಞಾಚಾರ್ಯರೊಡನೆ ಇಷ್ಟು ದಿವಸ-ಗಳವರೆಗೆ ವಾದಮಾಡಿದರೂ, ಸ್ವರೂಪತಃ ಉತ್ತಮಜೀವರಾದ ಸಾತ್ವಿಕರಾದ ಅವರು ಆಚಾರ್ಯರನ್ನು ಸಾಷ್ಟಾಂಗ ನಮಸ್ಕರಿಸಿ ಪ್ರಭುಗಳಾದ ಆಚಾರ್ಯರೇ! ಮಹಾತ್ಮರಾದ ತಮ್ಮೊಡನೆ ವಾದಿಸಿ ನಾನು ಬಾಲಚೇಷ್ಟೆಯನ್ನು ತೋರಿಸಿದೆನು. ತಮ್ಮಂತಹ ಪೂರ್ಣಜ್ಞಾನರೊಡನೆ ನನ್ನ ಈ ವಾದ-ವಿವಾದವು ಹುಡುಗಾಟಿಕೆಯೇ ಹೊರತು ಮತ್ತೇನೂ ಅಲ್ಲ. ತಾವು ನನ್ನನ್ನು ಕ್ಷಮಿಸಬೇಕು. ತಮ್ಮ ಪಾದಪದ್ಮಗಳ ಧೂಳಿಯ ದಾಸವೃತ್ತಿಯನ್ನು, ತಮ್ಮ ನಿರಂತರಸೇವೆಯನ್ನು ನನಗೆ ಅನುಗ್ರಹಿಸಬೇಕು ಎಂದು ಹೇಳಿದರು. ನನ್ನ ತಪ್ಪನ್ನು ಕ್ಷಮಿಸಿ ತಮ್ಮ ದಾಸನನ್ನಾಗಿ ಅಂಗೀಕರಿಸಿ ಉದ್ಧರಿಸಬೇಕೆಂದು ಶ್ರೀಮತ್ ತ್ರಿವಿಕ್ರಮಪಂಡಿತರು ಪ್ರಾರ್ಥಿಸಿದರು ಎಂದು ಭಾವ.

**ವಿಗ್ರಹ**—

**ಚಾಪಲಂ**— ಚಪಲಸ್ಯ ಭಾವಃ ಚಾಪಲಂ ತತ್ ।
**ಪದಪದ್ಮರಜೋದಾಸ್ಯಂ**— ಪದೇ ಪದ್ಮೇ ಇವ ಪದಪದ್ಮೇ, ಪದಪದ್ಮಯೋಃ ರಜಾಂಸಿ ಪದಪದ್ಮ ರಜಾಂಸಿ, ದಾಸಸ್ಯ ಭಾವಃ ದಾಸ್ಯಂ ಪದಪದ್ಮರಜಸಾಂ ದಾಸ್ಯಂ ಪದಪದ್ಮರಜೋದಾಸ್ಯಂ ತತ್ ।

**ಕ್ರಿಯಾಪದ—** **ಆಚಷ್ಟ** - ಆ+ಆಚಷ್ಟ ಆಚಕ್ಷಾತಾಂ ಆಚಕ್ಷತ, ಆಚಷ್ಠಾಃ ಆಚಕ್ಷಾಥಾಂ ಆಚಡ್‌ಢ್ವಂ, ಆಚಕ್ಷಿ ಆಚಕ್ಷ್ವಹಿ ಆಚಕ್ಷ್ಮಹಿ । ಅಙ್(ಆ) ಉಪಸರ್ಗ, ಚಕ್ಷಿಙ್ ವ್ಯಕ್ತಾಯಾಂ ವಾಚಿ to speak clearly ಸಕ. ಸೇಟ್ ಆತ್ಮ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನ ।

**ಕ್ಷಮ್ಯತಾಂ** - ಕ್ಷಮ್ಯತಾಂ ಕ್ಷಮ್ಯೇತಾಂ ಕ್ಷಮ್ಯಂತಾಂ, ಕ್ಷಮ್ಯಸ್ವ ಕ್ಷಮ್ಯೇಥಾಂ ಕ್ಷಮ್ಯಧ್ವಂ, ಕ್ಷಮ್ಯೈ ಕ್ಷಮ್ಯಾವಹೈ ಕ್ಷಮ್ಯಾಮಹೈ । ಕ್ಷಮೂಷ್ (ಕ್ಷಮ್) ಸಹನೇ ಸಕ. ವೇಟ್ ಆತ್ಮ. ಪ್ರಾರ್ಥನಾಯಾಂ ಕರ್ಮಣಿ ಲೋಟ್ ಪ್ರಥಮಪುರುಷ ಏಕವಚನದಲ್ಲಿ ಕ್ಷಮ್ಯತಾಂ ಎಂದು ರೂಪ.

**ದೀಯತಾಂ** - ದೀಯತಾಂ ದೀಯೇತಾಂ ದೀಯಂತಾಂ, ದೀಯಸ್ವ ದೀಯೇಥಾಂ ದೀಯಧ್ವಂ, ದೀಯೈ ದೀಯಾವಹೈ ದೀಯಾಮಹೈ । ಡುದಾಞ್ (ದಾ) ದಾನೇ to give ಸಕ. ಅನಿ ಉಭ. ಪ್ರಾರ್ಥನಾಯಾಂ ಕರ್ಮಣಿ ಲೋಟ್ ಪ್ರಥಮಪುರುಷೇ ಏಕವಚನದಲ್ಲಿ ದೀಯತಾಂ ಎಂದು ರೂಪ.

**ಪ್ರಯೋಗ—** ಶಿಷ್ಯೇನ ಅಮುನಾ ಪ್ರಣಮ್ಯ ಹೇ ನಾಥ ಭವಾನ್ ಚಾಪಲಂ ಕ್ಷಮತಾಂ (ಭವಾನ್) ಧ್ರುವಂ (ಭವತಃ) ಪದಪದ್ಮರಜೋದಾಸ್ಯಂ ದದಾತು ಇತಿ ಆಖ್ಯಾಯತ (ಕರ್ಮಣಿ) ।

★ ★ ★

**ಅವತಾರಿಕಾ—** ಮುಂದೆ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು ಮಾಡಿದ ಮಹತ್ಕಾರ್ಯವೇನೆಂದು ಹೇಳುತ್ತಾರೆ.

**ವ್ಯಾಖ್ಯಾಂ ಭಾಷ್ಯಸ್ಯ ಭೂಯೋಧೀಃ ಶ್ರವಣಂ ಸೂರಿನಂದನಃ ।**
**ಸಂತಃ ಪ್ರೀತಿಮಸಂತೋಽನ್ಯಾಂ ಸಮಮಾರೇಭಿರೇ ತತಃ ॥ 71 ॥**

**ಪದಚ್ಛೇದ—** ವ್ಯಾಖ್ಯಾಂ, ಭಾಷ್ಯಸ್ಯ, ಭೂಯೋಧೀಃ, ಶ್ರವಣಂ, ಸೂರಿನಂದನಃ, ಸಂತಃ, ಪ್ರೀತಿಂ, ಅಸಂತಃ, ಅನ್ಯಾಂ, ಸಮಂ, ಆರೇಭಿರೇ, ತತಃ ।

**ಅನ್ವಯ—** ತತಃ, ಭೂಯೋಧೀಃ, ಭಾಷ್ಯಸ್ಯ, ವ್ಯಾಖ್ಯಾಂ, ಸೂರಿನಂದನಃ, ಶ್ರವಣಂ, ಸಂತಃ, ಪ್ರೀತಿಂ, ಅಸಂತಃ, ಅನ್ಯಾಂ, ಸಮಂ, ಆರೇಭಿರೇ ।

**ಅನ್ವಯಾರ್ಥ—**

**ತತಃ** = ಅನಂತರ,
**ಭೂಯೋಧೀಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,
**ಭಾಷ್ಯಸ್ಯ** = ಶ್ರೀಮದ್ ಬ್ರಹ್ಮಸೂತ್ರಭಾಷ್ಯದ,
**ವ್ಯಾಖ್ಯಾಂ** = ಉಪನ್ಯಾಸವನ್ನು (ಪ್ರವಚನವನ್ನು),
**ಆರೇಭೇ** = ಆರಂಭಿಸಿದರು.
**ಸೂರಿನಂದನಃ** = ಸುಬ್ರಹ್ಮಣ್ಯಪಂಡಿತರ ಪುತ್ರರಾದ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು,
**ಶ್ರವಣಂ** = ಶ್ರೀಮದ್ ಬ್ರಹ್ಮಸೂತ್ರಭಾಷ್ಯದ ಶ್ರವಣವನ್ನು ಕಿವಿಯಿಂದ ಕೇಳಿ, ಬಾಯಿಯಿಂದ ಉಚ್ಚರಿಸಿ ಅರ್ಥವನ್ನು ತಿಳಿಯುವುದನ್ನು,
**ಆರೇಭೇ** = (ಆರಂಭಿಸಿದರು)
**ಸಂತಃ** = ಸಜ್ಜನರು,
**ಪ್ರೀತಿಂ** = ಸಂತೋಷವನ್ನು, (ಆರೇಭಿರೇ = ಆರಂಭಿಸಿದರು).
**ಅಸಂತಃ** = ದುರ್ಜನರು,

**ಅನ್ಯಾಂ** = ಪ್ರೀತಿಗಿಂತ ಬೇರೆಯಾದುದನ್ನು (ಅಪ್ರೀತಿಯನ್ನು), ದ್ವೇಷವನ್ನು

**ಸಮಂ** = ಏಕಕಾಲದಲ್ಲಿ,

**ಆರೇಭಿರೇ** = ಆರಂಭಿಸಿದರು.

**ತಾತ್ಪರ್ಯ**— ಅನಂತರ ಶ್ರೀಪೂರ್ಣಪ್ರಜ್ಞಾಚಾರ್ಯರು ಪಂಡಿತಾಚಾರ್ಯರಿಗೆ ತಮ್ಮ ಭಾಷ್ಯದ ಉಪದೇಶವನ್ನು ಮಾಡಲು ಪ್ರಾರಂಭಿಸಿದರು. ಶ್ರೀಮತ್ ಸುಬ್ರಹ್ಮಣ್ಯಪಂಡಿತರ ಪುತ್ರರಾದ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು ಆ ಭಾಷ್ಯದ ಶ್ರವಣವನ್ನು ಪ್ರಾರಂಭಿಸಿದರು. ಹೀಗೆ ತ್ರಿವಿಕ್ರಮಾರ್ಯರಿಗೆ ಆಚಾರ್ಯರು ಬ್ರಹ್ಮಸೂತ್ರವನ್ನು ಉಪದೇಶಿಸಲು ಪ್ರಾರಂಭಿಸಿದ್ದನ್ನೂ, ಅವರು ಕೇಳಲು ಪ್ರಾರಂಭಿಸಿದ್ದನ್ನೂ ಕಂಡು ಸಜ್ಜನರು ಸಂತೋಷಪಡಲಾರಂಭಿಸಿದರು. ದುರ್ಜನರು ಅಸಂತೋಷವನ್ನು ವ್ಯಕ್ತಪಡಿಸಲಾರಂಭಿಸಿದರು. ಆಚಾರ್ಯರ ಭಾಷ್ಯಪ್ರವಚನ, ಪಂಡಿತಪುತ್ರರಾದ ತ್ರಿವಿಕ್ರಮರು ಮಾಡುವ ಶ್ರವಣ, ಇದನ್ನು ಕಂಡು-ಕೇಳಿ ಸಜ್ಜನರು ಅದ್ವೈತ ದಿಗ್ಗಜ ಪಂಡಿತರಾದ ಈ ತ್ರಿವಿಕ್ರಮಪಂಡಿತರು ದ್ವೈತಭಾಷ್ಯವನ್ನು ಓದುವುದು ಅವರ ಸಾತ್ತ್ವಿಕತೆಯ ಕುರುಹು, ಶ್ರೀಮಧ್ವಾಚಾರ್ಯರ ಮಹಾಮಹಿಮೆಗೆ ದ್ಯೋತಕ ಎಂದು ಸಂತೋಷ-ಪಟ್ಟರು. ದುರ್ಜನರು ಆಹಾ! ಎಂತಹ ವಿಪರ್ಯಾಸ! ಅದ್ವೈತಿ ದಿಗ್ಗಜ ಪಂಡಿತರಾಗಿದ್ದ ತ್ರಿವಿಕ್ರಮರು ಅದ್ವೈತವನ್ನು ರಕ್ಷಿಸುವುದನ್ನು ಬಿಟ್ಟು ದ್ವೈತಮತವನ್ನು ಅವಲಂಬಿಸಿ ಮಧ್ವಾಚಾರ್ಯರ ಶಿಷ್ಯರಾಗಿ ದ್ವೈತಭಾಷ್ಯವನ್ನು ಕೇಳಲು ಪ್ರಾರಂಭಿಸಿದರಲ್ಲಾ! ಎಂದು ಅಸಂತೋಷವನ್ನು, ವಿಷಾದವನ್ನು ವ್ಯಕ್ತಪಡಿಸಲಾರಂಭಿಸಿದರು. ಇಲ್ಲಿ ಪ್ರಕೃತಾಪ್ರಕೃತಗಳಿಗೆ ಆರಂಭ ಎಂಬ ಒಂದೇ ಕ್ರಿಯೆಯ ಜತೆಗೆ ಅನ್ವಯ ಹೇಳಿದ್ದರಿಂದ ದೀಪಕಾಲಂಕಾರ. "ವದಂತಿ ವರ್ಣ್ಯಾವರ್ಣ್ಯಾನಾಂ ಧರ್ಮೈಕ್ಯಂ ದೀಪಕಂ ಬುಧಾಃ । ಮದೇನ ಭಾತಿ ಕಲಭಃ ಪ್ರತಾಪೇನ ಮಹೀಪತಿಃ" ॥ ಎಂದು ಆ ಅಲಂಕಾರದ ಲಕ್ಷಣ ಮತ್ತು ಉದಾಹರಣೆಗಳು.

ವಿಗ್ರಹ—

**ಭೂಯೋಧೀಃ**— ಭೂಯಸೀ ಧೀಃ ಯಸ್ಯ ಸಃ ಭೂಯೋಧೀಃ ।

**ಸೂರಿನಂದನಃ**— ಸೂರೇಃ ನಂದನಃ ಸೂರಿನಂದನಃ ।

**ಅಸಂತಃ**— ನ ಸಂತಃ ಅಸಂತಃ ।

**ಕ್ರಿಯಾಪದ— ಆರೇಭಿರೇ** - ಆ+ರೇಭಿರೇ, ರೇಭೇ ರೇಭಾತೇ ರೇಭಿರೇ, ರೇಭಿಷೇ ರೇಭಾಥೇ ರೇಭಿಧ್ವೇ, ರೇಭೇ ರೇಭಿವಹೇ ರೇಭಿಮಹೇ । ರಭ (ರಭ್) ರಾಭಸ್ಯೇ ಸಕ. ಅನಿ ಆತ್ಮ to begin, to desire, to act rashly ಆಙ್ (ಆ) ಉಪಸರ್ಗ ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಬಹುವಚನೇ ಆರೇಭಿರೇ ಇತಿರೂಪಂ ।

**ಪ್ರಯೋಗ**— ಭೂಯೋಧಿಯಾ ಭಾಷ್ಯಸ್ಯ ವ್ಯಾಖ್ಯಾ ಸೂರಿನಂದನೇನ ಶ್ರವಣಂ ಸದ್ಭಿಃ ಪ್ರೀತಿಃ ಅಸದ್ಭಿಃ ಅನ್ಯಾ (ಅಪ್ರೀತಿಃ) ಆರೇಭಿರೇ ಆರಂಭಿಸಲ್ಪಟ್ಟವು (ಕರ್ಮಣಿ) ।

★ ★ ★

**ಅವತಾರಿಕಾ**— ತ್ರಿವಿಕ್ರಮಪಂಡಿತಾಚಾರ್ಯರು ದ್ವೈತಭಾಷ್ಯಕ್ಕೆ ಟೀಕೆಯನ್ನು ಮಾಡುತ್ತಾ ಆಚಾರ್ಯರ ಗ್ರಂಥಗಳನ್ನು ಪ್ರಶಂಸೆ ಮಾಡಲಾರಂಭಿಸಿದರು.

**ಗುರ್ವಾಜ್ಞಾಗೌರವಾಟ್ಟೀಕಾಂ ಕುರ್ವನ್ ಭಾಷ್ಯಸ್ಯ ದುಷ್ಕರಾಮ್ ।**
**ಷಡರ್ಧವಿಕ್ರಮಾರ್ಯೋऽಸೌ ಮಹಾಚಾರ್ಯಮವೋಚತ ॥ 72 ॥**

**ಪದಚ್ಛೇದ**— ಗುರ್ವಾಜ್ಞಾಗೌರವಾತ್, ಟೀಕಾಂ, ಕುರ್ವನ್, ಭಾಷ್ಯಸ್ಯ, ದುಷ್ಕರಾಂ, ಷಡರ್ಧವಿಕ್ರಮಾರ್ಯಃ, ಅಸೌ, ಮಹಾಚಾರ್ಯಂ, ಅವೋಚತ ।

**ಅನ್ವಯ—** ಗುರ್ವಾಜ್ಞಾಗೌರವಾತ್, ದುಷ್ಕರಾಂ, ಭಾಷ್ಯಸ್ಯ, ಟೀಕಾಂ, ಕುರ್ವನ್, ಅಸೌ, ಷಡರ್ಧವಿಕ್ರಮಾರ್ಯಃ, ಮಹಾಚಾರ್ಯಂ, ಅವೋಚತ ।

**ಅನ್ವಯಾರ್ಥ—**

**ಗುರುಆಜ್ಞಾಗೌರವಾತ್** = ಗುರುಗಳಾದ ಶ್ರೀಮಧ್ವಾಚಾರ್ಯರ ಅಪ್ಪಣೆಯ ಮೇಲಿನ ಭಕ್ತಿಯ ಅತಿಶಯದಿಂದ,

**ದುಷ್ಕರಾಂ** = (ಅವರ ಆಜ್ಞಾಬಲವಿಲ್ಲದೆ) ಇತರರಿಂದ ಮಾಡಲು ಅಸಾಧ್ಯವಾದ,

**ಭಾಷ್ಯಸ್ಯ** = ಶ್ರೀಮದ್ ಬ್ರಹ್ಮಸೂತ್ರಭಾಷ್ಯದ,

**ಟೀಕಾಂ** = ವ್ಯಾಖ್ಯಾನವನ್ನು

**ತತ್ತ್ವದೀಪಿಕಾ (ಪ್ರದೀಪ)** = ಎಂಬ ಟೀಕೆಯನ್ನು

**ಕುರ್ವನ್** = ಮಾಡುತ್ತಿರುವ,

**ಅಸೌ** = ಈ,

**ಷಡರ್ಧವಿಕ್ರಮಾರ್ಯಃ** = (ಆರರ ಅರ್ಧ = ಮೂರು ತ್ರಿ) ತ್ರಿವಿಕ್ರಮಪಂಡಿತಾಚಾರ್ಯರು,

**ಮಹಾಚಾರ್ಯಂ** = ಶ್ರೀಮಧ್ವಾಚಾರ್ಯರನ್ನು ಕುರಿತು,

**ಅವೋಚತ** = ಹೇಳಿದರು.

**ತಾತ್ಪರ್ಯ—** ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ತಮ್ಮ ಶಿಷ್ಯರಾದ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರಿಗೆ ''ನೀವು ನಮ್ಮ ಶ್ರೀಮದ್ ಬ್ರಹ್ಮಸೂತ್ರಭಾಷ್ಯಕ್ಕೆ ವ್ಯಾಖ್ಯಾನ ಬರೆಯಬೇಕು'' ಎಂದು ಅಪ್ಪಣೆ ಮಾಡಿದರು. ಆಚಾರ್ಯರ ಆಜ್ಞಾಬಲ, ಅನುಗ್ರಹಬಲವಿಲ್ಲದೆ ಇತರ ಯಾರಿಗೂ ಮಾಡಲು ಅಸಾಧ್ಯವಾದ ಬ್ರಹ್ಮಸೂತ್ರಭಾಷ್ಯದ ಟೀಕಾರಚನಾಕಾರ್ಯವನ್ನು ಕೈಗೊಂಡ ಶ್ರೀಮತ್ ತ್ರಿವಿಕ್ರಮಪಂಡಿತರು ಆಚಾರ್ಯರ ಭಾಷ್ಯಕ್ಕೆ ತತ್ತ್ವದೀಪಿಕಾ (ತತ್ತ್ವಪ್ರದೀಪ) ಎಂಬ ಟೀಕೆಯನ್ನು ಬರೆಯಲಾರಂಭಿಸಿದರು. ಹಾಗೆ ಬರೆಯುತ್ತಿರುವಾಗ ಅವರು ಸರ್ವೋತ್ತಮ ಆಚಾರ್ಯರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರನ್ನು ಕುರಿತು ಹೇಳಲಾರಂಭಿಸಿದರು.

**ವಿಗ್ರಹ—**

**ಗುರ್ವಾಜ್ಞಾಗೌರವಾಟ್ಟೀಕಾಂ—** ಗುರೋಃ ಆಜ್ಞಾ ಗುರ್ವಾಜ್ಞಾ, ಗುರೋಃ ಭಾವಃ ಗೌರವಂ ಗುರ್ವಾಜ್ಞಾಯಾಃ ಗೌರವಂ ಗುರ್ವಾಜ್ಞಾಗೌರವಂ ತಸ್ಮಾತ್ ।

**ದುಷ್ಕರಾಂ—** ದುಃಖೇನ ಕರ್ತುಂ ಶಕ್ಯಾ ದುಷ್ಕರಾ ತಾಂ ।

**ಷಡರ್ಧವಿಕ್ರಮಾರ್ಯಃ—** ಷಡರ್ಧವಿಕ್ರಮಶ್ಚಾಸೌ ಆರ್ಯಶ್ಚ ಷಡರ್ಧವಿಕ್ರಮಾರ್ಯಃ ।

**ಮಹಾಚಾರ್ಯಂ—** ಮಹಾಂಶ್ಚ ಅಸೌ ಆಚಾರ್ಯಶ್ಚ ಮಹಾಚಾರ್ಯಃ ತಂ ।

**ಕ್ರಿಯಾಪದ— ಅವೋಚತ** - ಅವೋಚತ ಅವೋಚೇತಾಂ ಅವೋಚಂತ, ಅವೋಚಥಾಃ ಅವೋಚೇಥಾಂ, ಅವೋಚಧ್ವಂ ಅವೋಚೇ ಅವೋಚಾವಹಿ ಅವೋಚಾಮಹಿ । ಬ್ರೂಞ್ (ಬ್ರೂ) ವ್ಯಕ್ತಾಯಾಂ ವಾಚಿ ಸಕ. ಸೇಟ್ ವಚ್ ಆದೇಶ ಬಂದಾಗ ಅನಿಟ್ । ಉಭಂ to speak clearly ಅರ್ಧಧಾತುಕದಲ್ಲಿ 'ಬ್ರುವೋ ವಚಿಃ' ಎಂಬ ಸೂತ್ರದಿಂದ ವಚ್ ಆದೇಶ. ಭೂತೇ ಲುಙ್ ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ಗುರ್ವಾಜ್ಞಾ ಗೌರವಾತ್ ದುಷ್ಕರಾಂ ಭಾಷ್ಯಸ್ಯ ಟೀಕಾಂ ಕುರ್ವತಾ ಅಮುನಾ ಷಡರ್ಧ ವಿಕ್ರಮಾರ್ಯೇಣ ಮಹಾಚಾರ್ಯಃ ಅವಾಚಿ (ಕರ್ಮಣಿ) ।

★ ★ ★

**ಅವತಾರಿಕಾ**— ಮೊದಲು ಶ್ರೀಮದ್ ಬ್ರಹ್ಮಸೂತ್ರಭಾಷ್ಯವನ್ನು ಹೊಗಳುತ್ತಾರೆ.

**ಕವೀಂದ್ರೈರ್ನ ಸಮಾಪ್ಯಂತೇ ಸಂಗೃಹ್ಯಾಪಿ ಯತೋಽನಿಶಮ್ ।**
**ನ್ಯಾಯರತ್ನಾನಿ ಭಾಷ್ಯಾಬ್ಧೇರಸ್ಯ ಗಾಂಭೀರ್ಯಮದ್ಭುತಮ್ ॥ 73 ॥**

**ಪದಚ್ಛೇದ**— ಕವೀಂದ್ರೈಃ, ನ, ಸಮಾಪ್ಯಂತೇ, ಸಂಗೃಹ್ಯ, ಅಪಿ, ಯತಃ, ಅನಿಶಂ, ನ್ಯಾಯರತ್ನಾನಿ, ಭಾಷ್ಯಾಬ್ಧೇಃ, ಅಸ್ಯ, ಗಾಂಭೀರ್ಯಂ, ಅದ್ಭುತಂ ।

**ಅನ್ವಯ**— ಕವೀಂದ್ರೈಃ, ಯತಃ, ನ್ಯಾಯರತ್ನಾನಿ, ಅನಿಶಂ, ಸಂಗೃಹ್ಯಾಪಿ, ನ, ಸಮಾಪ್ಯಂತೇ, ಅಸ್ಯ, ಭಾಷ್ಯಾಬ್ಧೇಃ, ಗಾಂಭೀರ್ಯಂ, ಅದ್ಭುತಂ (ಭವತಿ) ।

**ಅನ್ವಯಾರ್ಥ**—

**ಕವೀಂದ್ರೈಃ** = ಕವಿಶ್ರೇಷ್ಠರಿಂದ,
**ಯತಃ** = ಯಾವುದರ ದೆಸೆಯಿಂದ,
**ನ್ಯಾಯರತ್ನಾನಿ** = ಶಾಸ್ತ್ರನ್ಯಾಯಗಳೆಂಬ ರತ್ನಗಳು,
**ಅನಿಶಂ** = ನಿರಂತರವಾಗಿ,
**ಸಂಗೃಹ್ಯಾಪಿ** = ಸಂಗ್ರಹಿಸಿಯೂ ಕೂಡ,
**ನ ಸಮಾಪ್ಯಂತೇ** = ಮುಗಿಯುವುದಿಲ್ಲವೋ (ಕೊನೆ ಹೊಂದುವುದಿಲ್ಲವೋ),
**ಅಸ್ಯ** = ಈ,
**ಭಾಷ್ಯಾಬ್ಧೇಃ** = ಬ್ರಹ್ಮಸೂತ್ರಭಾಷ್ಯವೆಂಬ ಸಮುದ್ರದ,
**ಗಾಂಭೀರ್ಯಂ** = ಆಳವು (ಬಹಳವಾದ ಅರ್ಥಗಳಿಂದ ಕೂಡಿರುವಿಕೆಯು),
**ಅದ್ಭುತಂ** = ಆಶ್ಚರ್ಯಕರವು.

**ತಾತ್ಪರ್ಯ**— ವೇದಾರ್ಥವನ್ನು ವಿಚಾರಮಾಡಿ ನಿರ್ಧರಿಸಲು ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ (ಉಪಪತ್ತಿಯುಕ್ತಿ), ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ, ನಿರವಕಾಶತ್ವ ಸಾವಕಾಶತ್ವಗಳು, ಉಪಜೀವ್ಯತ್ವ ಉಪಜೀವಕತ್ವ, ಬಹುತ್ವಾಲ್ಪತ್ವಗಳು, ಇವುಗಳ ಮೂಲಕ ನಿರ್ಧರಿಸಿದ ಪ್ರಾಬಲ್ಯ, ದೌರ್ಬಲ್ಯಗಳು ಅತ್ಯಾವಶ್ಯಕವಾಗಿವೆ. ಇವುಗಳೇ ವೇದಾರ್ಥ ವಿಚಾರಕ್ಕೆ ಸಹಕಾರಿಯಾದ ನ್ಯಾಯಗಳು. ತಾವು ಮಾಡಿರುವ ಬ್ರಹ್ಮಸೂತ್ರಭಾಷ್ಯವೆಂಬ ಸಮುದ್ರದಿಂದ ವೇದಾರ್ಥವಿಚಾರಾಂಗಭೂತವಾದ ನ್ಯಾಯರತ್ನಗಳನ್ನು ಜ್ಞಾನಿಶ್ರೇಷ್ಠರು ನಿರಂತರವಾಗಿ ಸಂಗ್ರಹಿಸಿದರೂ ಅವು ಮುಗಿಯುವುದಿಲ್ಲ. ವಿಚಾರ ಮಾಡಿದಾಗ ವೇದಾರ್ಥ ನಿರ್ಣಯಕ್ಕೆ ಸಹಕಾರಿಯಾದ ನ್ಯಾಯರತ್ನಗಳು ಮತ್ತೂ ದೊರಕುತ್ತವೆ. ಸಮುದ್ರದಿಂದ ರತ್ನಗಳನ್ನು ನೀರಿನಲ್ಲಿ ಮುಳುಗುವವರು ಹೇಗೆ ಎತ್ತುತ್ತಾರೋ, ರತ್ನಾಕರವಾದ ಗಂಭೀರವಾದ ಸಮುದ್ರದಲ್ಲಿ ತೆಗೆದಷ್ಟು ಮತ್ತೂ ರತ್ನಗಳು ಹೇಗೆ ಸಿಗುತ್ತಿರುತ್ತವೆಯೋ ಹಾಗೆಯೇ ತಾವು ರಚಿಸಿದ ಭಾಷ್ಯಸಮುದ್ರದಲ್ಲಿ ತೆಗೆದಷ್ಟು ನ್ಯಾಯರತ್ನಗಳು ಸಿಗುತ್ತಲೇ ಇರುತ್ತವೆ. ಅವುಗಳು ಮುಗಿಯುವುದೇ ಇಲ್ಲ. ಇಂತಹ ಭಾಷ್ಯರತ್ನಾಕರದ ಗಾಂಭೀರ್ಯವು ಅತ್ಯಾಶ್ಚರ್ಯಕರವಾಗಿದೆ ಎಂದು ತ್ರಿವಿಕ್ರಮಪಂಡಿತರು ಆಚಾರ್ಯರ ಬ್ರಹ್ಮಸೂತ್ರ ಭಾಷ್ಯವು ಇತರ ಮತಾಚಾರ್ಯರ ಭಾಷ್ಯಕ್ಕಿಂತ ಗಾತ್ರದಲ್ಲಿ ಚಿಕ್ಕದು. ಆದರೆ ಅರ್ಥದೃಷ್ಟಿಯಿಂದ ಅದು ಸಮುದ್ರದಂತೆ ದೊಡ್ಡದು. ವೇದಾರ್ಥವನ್ನು ವಿಚಾರಿಸಿ ನಿರ್ಣಯಿಸಲು ಅಲ್ಲಿ ಆಚಾರ್ಯರು ಅನೇಕ ನ್ಯಾಯಗಳನ್ನು ಹೇಳಿದ್ದಾರೆ. ಅವು ವಿಪುಲವಾಗಿವೆ. ಅವು ಇಷ್ಟೇ ಇವೆಯೆಂದು ನಿರ್ಧರಿಸಲು ಜ್ಞಾನಿಶ್ರೇಷ್ಠರಿಗೂ ಸಾಧ್ಯವಿಲ್ಲ ಎಂದು ಭಾವ, ರೂಪಾಲಂಕಾರ.

ವಿಗ್ರಹ—

**ಕವೀಂದ್ರೈಃ**— ಕವೀನಾಂ ಇಂದ್ರಾಃ ಕವೀಂದ್ರಾಃ ತೈಃ ।

**ನ್ಯಾಯರತ್ನಾನಿ**— ನ್ಯಾಯಾ ಏವ ರತ್ನಾನಿ ನ್ಯಾಯರತ್ನಾನಿ ।

**ಭಾಷ್ಯಾಬ್ಧೇಃ**— ಭಾಷ್ಯಂ ಏವ ಅಬ್ಧಿಃ ಭಾಷ್ಯಾಬ್ಧಿಃ ತಸ್ಮಾತ್ ।

**ಗಾಂಭೀರ್ಯಂ**— ಗಂಭೀರಸ್ಯ ಭಾವಃ ಗಾಂಭೀರ್ಯಂ ।

**ಕ್ರಿಯಾಪದ**— ಸಮಾಪ್ಯಂತೇ - ಸಮ್ ಆಪ್ಯಂತೇ, ಆಪ್ಯತೇ ಆಪ್ಯೇತೇ ಆಪ್ಯಂತೇ ಆಪ್ಯಸೇ ಆಪ್ಯೇಥೇ ಆಪ್ಯಧ್ವೇ, ಆಪ್ಯೇ ಆಪ್ಯಾವಹೇ ಆಪ್ಯಾಮಹೇ । ಸಮ್ ಉಪಸರ್ಗ, ಅಪ್ಲ್ಲೃ ವ್ಯಾಪ್ತೌ (ಆಪ್) ಸಕ. ಅನಿ. ಪರ to obtain, to pervade ಕರ್ಮಣಿ ಲಟ್ ಪ್ರಥಮಪುರುಷ ಬಹುವಚನ ।

**ಪ್ರಯೋಗ**— ಕವೀಂದ್ರಾಃ ಯತಃ ನ್ಯಾಯರತ್ನಾನಿ ಅನಿಶಂ ಸಂಗೃಹ್ಯಾಪಿ ನ ಸಮಾಪ್ನುವಂತಿ ಅಸ್ಯ ಭಾಷ್ಯಾಬ್ಧೇಃ ಗಾಂಭೀರ್ಯೇಣ ಅದ್ಭುತೇನ (ಭೂಯತೇ) ।

★ ★ ★

**ಅವತಾರಿಕಾ**— ಆಚಾರ್ಯರು ರಚಿಸಿರುವ ಈಶಾವಾಸ್ಯಾದಿ ಹತ್ತು ಉಪನಿಷತ್ತುಗಳ ಭಾಷ್ಯಗಳನ್ನು ವರ್ಣಿಸುತ್ತಾರೆ.

**ದಶೋಪನಿಷದೋ ದೇವೀರ್ದೇವಾ ಇವ ಸಮೀಪ್ಸಿತಾಃ ।**

**ಯುಕ್ತಾಃ ಪ್ರಸಾದಯಂತ್ಯರ್ಥಾ ಏಷು ಭಾಷ್ಯಾಲಯೇಷ್ವಲಮ್ ॥ 74 ॥**

**ಪದಚ್ಛೇದ**— ದಶೋಪನಿಷದಃ(ದಶ ಉಪನಿಷದಃ), ದೇವೀಃ, ದೇವಾಃ, ಇವ, ಸಮೀಪ್ಸಿತಾಃ, ಯುಕ್ತಾಃ, ಪ್ರಸಾದಯಂತಿ, ಅರ್ಥಾಃ, ಏಷು, ಭಾಷ್ಯಾಲಯೇಷು, ಅಲಮ್ ।

**ಅನ್ವಯ**— ಏಷು, ಭಾಷ್ಯಾಲಯೇಷು, ಯುಕ್ತಾಃ, ಸಮೀಪ್ಸಿತಾಃ, ಅರ್ಥಾಃ, ದೇವೀಃ, ದಶೋಪನಿಷದಃ, ಸಮೀಪ್ಸಿತಾಃ, ದೇವಾಃ, (ಆಲಯೇಷು) ಯುಕ್ತಾಃ, ದೇವೀರಿವ, ಅಲಂ, ಪ್ರಸಾದಯಂತಿ ।

**ಅನ್ವಯಾರ್ಥ**—

**ಏಷು** = ಈ,

**ಭಾಷ್ಯಾಲಯೇಷು** = ದಶೋಪನಿಷದ್ಭಾಷ್ಯಗಳೆಂಬ ಮನೆಗಳಲ್ಲಿ,

**ಯುಕ್ತಾಃ** = ಯುಕ್ತಿಸಹಿತವಾದ,

**ಸಮೀಪ್ಸಿತಾಃ** = ಅಪೇಕ್ಷಿತವಾದ,

**ಅರ್ಥಾಃ** = (ತಮ್ಮಿಂದ ಭಾಷ್ಯರೂಪದಲ್ಲಿ ಹೇಳಲ್ಪಟ್ಟ) ಉಪನಿಷತ್ತುಗಳ ಅರ್ಥಗಳು,

**ದೇವೀಃ** = ಪ್ರಕಾಶಮಾನವಾದ,

**ದಶ ಉಪನಿಷದಃ** = ಹತ್ತು ಉಪನಿಷತ್ತುಗಳನ್ನು,

**ಸಮೀಪ್ಸಿತಾಃ** = ದೇವಿಯರಿಗೆ ಪ್ರೀತಿಪಾತ್ರರಾದ,

**ದೇವಾಃ** = ದೇವರುಗಳು,

**ಆಲಯೇಷು** = (ದೇವಾಲಯಗಳಲ್ಲಿ),

**ಯುಕ್ತಾಃ** = ಒಟ್ಟು ಸೇರಿರುವ,

**ದೇವೀರಿವ** = ತಮ್ಮ ಪತ್ನಿಯರಾದ ದೇವತಾ ಸ್ತ್ರೀಯರನ್ನು ಎಂಬಂತೆ,

**ಅಲಂ** = ಚೆನ್ನಾಗಿ,

**ಪ್ರಸಾದಯಂತಿ** = ವಿವರಿಸುತ್ತವೆ. (ಸಂತೋಷಗೊಳಿಸುತ್ತಾರೆ)

**ತಾತ್ಪರ್ಯ**— ದೇವತೆಗಳು ತಮ್ಮ ಮನೆಗಳಲ್ಲಿ ಒಟ್ಟು ಸೇರಿದ ಪ್ರಕಾಶಮಾನರಾದ ತಮ್ಮ ಪ್ರೀತಿಪಾತ್ರರಾದ ಪತ್ನಿಯರನ್ನು ಪ್ರಿಯವಚನೋಪಚಾರಗಳಿಂದ ಆನಂದಗೊಳಿಸುತ್ತಾರೆ. ಅದರಂತೆ ತಾವು ರಚಿಸಿರುವ ಉಪನಿಷದ್ಭಾಷ್ಯ-ಗಳೆಂಬ ಮನೆಗಳಲ್ಲಿ ಒಟ್ಟು ಸೇರಿರುವ, ಉಪನಿಷತ್ತುಗಳಿಗೆ ಇಷ್ಟವಾದ ಅರ್ಥಗಳು ಹತ್ತು ಉಪನಿಷತ್ತುಗಳನ್ನು ಪ್ರಸನ್ನವನ್ನಾಗಿ ಮಾಡುತ್ತವೆ. ಭಾಷ್ಯಾರ್ಥಗಳು ಉಪನಿಷತ್ತುಗಳನ್ನು ಪ್ರಸಾದಗುಣಯುಕ್ತವನ್ನಾಗಿ ಮಾಡುತ್ತವೆ. ಶಬ್ದಕ್ಕೆ ಹೊಂದುವ ಮನಸ್ಸಿಗೆ ಸುಖವಾಗಿ ತಿಳಿಯುವ ಅರ್ಥವಿರುವುದೇ ಪ್ರಸಾದಗುಣ. ಉಪನಿಷತ್ತುಗಳಿಗೆ ಆಚಾರ್ಯರು ಭಾಷ್ಯಗಳಲ್ಲಿ ಹೇಳಿರುವ ಅರ್ಥಗಳು ಬಹಳ ಹೊಂದುವಂತೆ ಇದ್ದು, ಉಪನಿಷತ್ತುಗಳಿಗೆ (ಅಭಿಮಾನಿದೇವತೆಗಳಿಗೆ) ಇಷ್ಟವಾಗುವಂತೆ ಇದ್ದು, ಉಪನಿಷತ್ತುಗಳನ್ನು ಬಹಳ ಚೆನ್ನಾಗಿ ಪ್ರಸನ್ನವನ್ನಾಗಿ ಮಾಡುತ್ತಿವೆ ಎಂದು ಅಭಿಪ್ರಾಯ. ಇಲ್ಲಿ ಉಪಮಾಲಂಕಾರವಿದೆ.

**ವಿಗ್ರಹ**—

**ಭಾಷ್ಯಾಲಯೇಷು**— ಭಾಷ್ಯಾಣಿ ಏವ ಆಲಯಾಃ ಭಾಷ್ಯಾಲಯಾಃ ತೇಷು ।

**ಕ್ರಿಯಾಪದ**— **ಪ್ರಸಾದಯಂತಿ** - ಪ್ರ+ಸಾದಯಂತಿ, ಸಾದಯತಿ ಸಾದಯತಃ ಸಾದಯಂತಿ, ಸಾದಯಸಿ ಸಾದಯಥಃ ಸಾದಯಥ ಸಾದಯಾಮಿ ಸಾದಯಾವಃ ಸಾದಯಾಮಃ । ಷದ್ಲೃ (ಸದ್) ಸೀದ್ ವಿಶರಣಗತ್ಯವಸಾದನೇಷು, ಗತೌ ಸಕ. ಅನಿ. ಪರ. to devide, to break, to go, to despond, to be weary ಣಿಜಂತ ಪ್ರ ಉಪಸರ್ಗ ಪ್ರಥಮಪುರುಷ ಬಹುವಚನ ।

**ಪ್ರಯೋಗ**— ಏಷು ಭಾಷ್ಯಾಲಯೇಷು ಯುಕ್ತೈಃ ಸಮೀಪ್ಸಿತೈಃ ಅರ್ಥೈಃ ದಶೋಪನಿಷದಃ (ಹತ್ತು ಉಪನಿಷತ್ತುಗಳು ಪ್ರಥಮಾ ಬಹುವಚನಾಂತ) ದೇವ್ಯಃ ದೇವ್ಯಃ ಇವ ಅಲಂ ಪ್ರಸಾದ್ಯಂತೇ ।

★ ★ ★

**ಅವತಾರಿಕಾ**— ಗೀತಾತಾತ್ಪರ್ಯ ಮತ್ತು ಗೀತಾಭಾಷ್ಯ ಎಂಬ ಆಚಾರ್ಯರ ಎರಡು ಗ್ರಂಥಗಳನ್ನು ವರ್ಣಿಸುತ್ತಾರೆ.

**ಗೀತಾತಾತ್ಪರ್ಯಭಾಷ್ಯಾಭ್ಯಾಮಾಭ್ಯಾಂ ವಿಶ್ವಂ ಪ್ರಕಾಶ್ಯತೇ ।**
**ಗೋಗಣೈರಪ್ರತೀಕಾರ್ಯೈರರ್ಕೇಂದುಭ್ಯಾಮಿವಾಧಿಕಮ್ ॥ 75 ॥**

**ಪದಚ್ಛೇದ**— ಗೀತಾತಾತ್ಪರ್ಯಭಾಷ್ಯಾಭ್ಯಾಂ, ಆಭ್ಯಾಂ, ವಿಶ್ವಂ, ಪ್ರಕಾಶ್ಯತೇ, ಗೋಗಣೈಃ, ಅಪ್ರತೀಕಾರ್ಯೈಃ, ಅರ್ಕೇಂದುಭ್ಯಾಂ, ಇವ, ಅಧಿಕಮ್ ।

**ಅನ್ವಯ**— ಆಭ್ಯಾಂ, ಗೀತಾತಾತ್ಪರ್ಯಭಾಷ್ಯಾಭ್ಯಾಂ, ಅಪ್ರತೀಕಾರ್ಯೈಃ, ಗೋಗಣೈಃ, ವಿಶ್ವಂ, ಅರ್ಕೇಂದುಭ್ಯಾಂ, ವಿಶ್ವಮಿವ, ಅಧಿಕಂ, ಪ್ರಕಾಶ್ಯತೇ ।

**ಅನ್ವಯಾರ್ಥ**—

**ಆಭ್ಯಾಂ** = ಈ,

ಗೀತಾತಾತ್ಪರ್ಯಭಾಷ್ಯಾಭ್ಯಾಂ = ಭಗವದ್ಗೀತಾ ತಾತ್ಪರ್ಯ ಮತ್ತು ಭಗವದ್ಗೀತಾ ಭಾಷ್ಯಗಳಿಂದ,

**ಅಪ್ರತೀಕಾರ್ಯೈಃ** = ತಡೆಯಿಲ್ಲದ (ಇತರರಿಂದ ನಿರಾಕರಿಸಲು ಸಾಧ್ಯವಿಲ್ಲದ),

**ಗೋಗಣೈಃ** = ಮಾತುಗಳ ಸಮೂಹಗಳಿಂದ,

ವಿಶ್ವಂ = ಶ್ರೀಕೃಷ್ಣನು ಹೇಳಲು ಇಚ್ಛಿಸಿರುವ ಎಲ್ಲಾ ಪ್ರಮೇಯಸಮೂಹವೂ,

**ಅರ್ಕೇಂದುಭ್ಯಾಂ** = ಸೂರ್ಯಚಂದ್ರರಿಂದ,
**ಅಪ್ರತೀಕಾರ್ಯೈಃ** = ತಡೆಯಲು ಸಾಧ್ಯವಿಲ್ಲದ,
**ಗೋಗಣೈಃ** = ಕಿರಣಸಮೂಹಗಳಿಂದ,
**ವಿಶ್ವಮಿವ** = ಜಗತ್ತಿನಂತೆ,
**ಅಧಿಕಂ** (ಯಥಾ ಭವತಿ ತಥಾ ಕ್ರಿ.ವಿ.) = ಹೆಚ್ಚಾಗಿ,
**ಪ್ರಕಾಶ್ಯತೇ** = ಪ್ರಕಾಶಿಸಲ್ಪಡುತ್ತದೆ.

**ತಾತ್ಪರ್ಯ—** ಸೂರ್ಯ-ಚಂದ್ರರು ಯಾರಿಂದಲೂ ತಡೆಯಲ್ಪಡದೆ ಇರುವ ಮತ್ತು ನೇರವಾಗಿ ಜಗತ್ತನ್ನೂ, ಜಗತ್ತಿನ ಎಲ್ಲಾ ಪದಾರ್ಥಗಳನ್ನೂ ಮುಟ್ಟುವ ತಮ್ಮ ಕಿರಣಗಳಿಂದ ಎಲ್ಲವನ್ನೂ ಪ್ರಕಾಶಗೊಳಿಸುತ್ತಾರೆ. ಆಚಾರ್ಯರೇ! ಅದರಂತೆಯೇ ತಾವು ರಚಿಸಿರುವ ಭಗವದ್ಗೀತಾ ತಾತ್ಪರ್ಯ ಮತ್ತು ಭಗವದ್ಗೀತಾಭಾಷ್ಯ ಎಂಬ ಎರಡು ಗ್ರಂಥಗಳು ಯಾರಿಂದಲೂ ನಿರಾಕರಿಸಲು ಸಾಧ್ಯವಿಲ್ಲದ ನಿಮ್ಮ ಮಾತುಗಳಿಂದ ಶ್ರೀಕೃಷ್ಣನು ಹೇಳಲು ಬಯಸಿರುವ ಎಲ್ಲಾ ಪ್ರಮೇಯ-ಗಳನ್ನೂ ಜೀವೇಶ್ವರಭೇದ ಮತ್ತು ಹರಿಸರ್ವೋತ್ತಮತ್ವವನ್ನು ಜಗತ್ತಿನ ಸತ್ಯತ್ವವನ್ನು ಚೆನ್ನಾಗಿ ಪ್ರಕಾಶಗೊಳಿಸುತ್ತವೆ. ಗೀತಾ-ತಾತ್ಪರ್ಯ ಮತ್ತು ಗೀತಾಭಾಷ್ಯಗ್ರಂಥಗಳಲ್ಲಿ ಎಲ್ಲಾ ಪ್ರಮೇಯಗಳೂ ಸಂಗ್ರಹಿಸಲ್ಪಟ್ಟಿವೆ ಎಂದು ತಾತ್ಪರ್ಯ. ಶ್ಲಿಷ್ಟೋಪಮಾ.

**ವಿಗ್ರಹ ಮತ್ತು ಕೋಶ—**

**ಗೀತಾತಾತ್ಪರ್ಯಭಾಷ್ಯಾಭ್ಯಾಂ—** ತಾತ್ಪರ್ಯಂ ಚ ಭಾಷ್ಯಂ ಚ ತಾತ್ಪರ್ಯಭಾಷ್ಯೇ ಗೀತಾಯಾಃ ತಾತ್ಪರ್ಯ-ಭಾಷ್ಯೇ ಗೀತಾತಾತ್ಪರ್ಯ ಭಾಷ್ಯೇ ತಾಭ್ಯಾಂ ।`(ಇಲ್ಲಿ ಅಲ್ಪಾಚ್‌ತರಂ 2.2.34) ಎಂಬ ನಿಯಮದಿಂದ ಭಾಷ್ಯ ಶಬ್ದವನ್ನು ದ್ವಂದ್ವ ಸಮಾಸದಲ್ಲಿ ಮೊದಲು ಹೇಳಬೇಕಾಗಿದ್ದರೂ ಅಭ್ಯರ್ಹಿತಂ ಚ (ವಾ 1.4.12) ಎಂಬ ನಿಯಮಪ್ರಕಾರ ಭಾಷ್ಯಕ್ಕಿಂತಲೂ ಜಿಜ್ಞಾಸುಗಳಿಗೆ ವಿಶದವಾಗಿ ಹೆಚ್ಚು ಅರ್ಥ ಪ್ರಕಾಶಕ-ವಾದುದರಿಂದ ತಾತ್ಪರ್ಯ ಶಬ್ದಕ್ಕೆ ಪೂರ್ವನಿಪಾತ ಬಂದಿದೆ ಎಂದು ತಿಳಿಯಬಹುದು. ಗವಾಂ ಗಣಾಃ ಗೋಗಣಾಃ ತೈಃ, ಗೋ = ಕಿರಣ, ಮಾತು, 'ಸ್ವರ್ಗೇಷು ಪಶುವಾಗ್ವಜ್ರ ದಿಙ್‌ನೇತ್ರ ಘೃಣಿಭೂಜಲೇ । ಲಕ್ಷ್ಯದೃಷ್ಟ್ಯಾ ಸ್ತ್ರಿಯಾಂ ಪುಂಸಿ ಗೌಃ' ಅಮರ ।

**ಅಪ್ರತೀಕಾರ್ಯೈಃ—** ನ ವಿದ್ಯತೇ ಪ್ರತೀಕಾರಃ ಯೇಷಾಂ ತೇ ಅಪ್ರತೀಕಾರಾಃ ತೈಃ । ಪ್ರತೀಕಾರಃ = ಸೇಡು ತೀರಿಸಿಕೊಳ್ಳುವುದು, ವಿರೋಧ ಮಾಡುವುದು, 'ವೈರಶುದ್ಧಿಃ ಪ್ರತೀಕಾರೋ ವೈರನಿರ್ಯಾತನಂ ಚ ಸಾ' ಅಮರ. ಪ್ರತೀಕಾರ ಎಂಬಲ್ಲಿ ಉಪಸರ್ಗಸ್ಯ ಘಞ್ ಅಮನುಷ್ಯೇ ಬಹುಲಂ (6.2.122) ಎಂಬ ಸೂತ್ರದಿಂದ ಉಪಸರ್ಗಕ್ಕೆ ವಿಕಲ್ಪದಿಂದ ದೀರ್ಘ ।

**ಅರ್ಕೇಂದುಭ್ಯಾಂ—** ಅರ್ಕಶ್ಚ ಇಂದುಶ್ಚ ಅರ್ಕೇಂದೂ, ಇಲ್ಲಿ ಇಂದುಶ್ಚ ಅರ್ಕಶ್ಚ ಅರ್ಕೇಂದುಃ, ತಾಭ್ಯಾಂ ಎಂದು ವಿಗ್ರಹ ಮಾಡಿದರೂ ಅಜಾದ್ಯದಂತಂ (2-2-33) ಎಂಬ ಸೂತ್ರದಂತೆ ದ್ವಂದ್ವಸಮಾಸದಲ್ಲಿ ಅರ್ಕಶಬ್ದವೇ ಮೊದಲು ಬರುತ್ತದೆ ।

**ಕ್ರಿಯಾಪದ— ಪ್ರಕಾಶ್ಯತೇ** - ಪ್ರ+ಕಾಶ್ಯತೇ ಕಾಶ್ಯೇತೇ ಕಾಶ್ಯಂತೇ, ಕಾಶ್ಯಸೇ ಕಾಶ್ಯೇಥೇ ಕಾಶ್ಯಧ್ವೇ, ಕಾಶ್ಯೇ ಕಾಶ್ಯಾವಹೇ ಕಾಶ್ಯಾಮಹೇ । ಪ್ರ ಉಪಸರ್ಗ ಚ ಕಾಶೃ (ಕಾಶ್) ದೀಪ್ತೌ ಅಕ. ಸೇಟ್. ಆತ್ಮ. to shine ಣಿಜಂತ ಕರ್ಮಣಿ ಲಟ್ ಪ್ರಥಮಪುರುಷೇ ಏಕವಚನ ಪ್ರಕಾಶ್ಯತೇ ಎಂದು ರೂಪ ।

**ಪ್ರಯೋಗ—** ಏತೇ ಗೀತಾತಾತ್ಪರ್ಯಭಾಷ್ಯೇ ಅಪ್ರತೀಕಾರ್ಯೈಃ ಗೋಗಣೈಃ ಅರ್ಕೇಂದೂ ವಿಶ್ವಮಿವ ವಿಶ್ವಂ ಅಧಿಕಂ ಪ್ರಕಾಶಯತಃ (ಕರ್ತರಿ) ।

★ ★ ★

**ಅವತಾರಿಕಾ—** ಮಹಾಭಾರತ ತಾತ್ಪರ್ಯನಿರ್ಣಯವನ್ನು ವರ್ಣಿಸುತ್ತಾರೆ.

**ಇತಿಹಾಸಪುರಾಣಾಬ್ಧೇರ್ಭವಚ್ಚಿತ್ತಾದ್ರಿಲೋಡಿತಾತ್ ।**
**ಜಾತಾಂ ಭಾರತತಾತ್ಪರ್ಯಸುಧಾಂ ಕಃ ಸನ್ನ ಸೇವತೇ ॥ 76 ॥**

**ಪದಚ್ಛೇದ—** ಇತಿಹಾಸಪುರಾಣಾಬ್ಧೇಃ, ಭವಚ್ಚಿತ್ತಾದ್ರಿಲೋಡಿತಾತ್, ಜಾತಾಂ, ಭಾರತತಾತ್ಪರ್ಯಸುಧಾಂ, ಕಃ, ಸನ್, ನ, ಸೇವತೇ?

**ಅನ್ವಯ—** ಭವಚ್ಚಿತ್ತಾದ್ರಿಲೋಡಿತಾತ್, ಇತಿಹಾಸಪುರಾಣಾಬ್ಧೇಃ, ಜಾತಾಂ, ಭಾರತತಾತ್ಪರ್ಯಸುಧಾಂ, ಕಃ, ಸನ್, ನ, ಸೇವತೇ?

**ಅನ್ವಯಾರ್ಥ—**

**ಭವಚ್ಚಿತ್ತ-ಅದ್ರಿಲೋಡಿತಾತ್** = ತಮ್ಮ ಮನಸ್ಸೆಂಬ ಮಂದರಪರ್ವತದಿಂದ ಕಡೆಯಲ್ಪಟ್ಟ,

**ಇತಿಹಾಸಪುರಾಣಅಬ್ಧೇಃ** = ಭಾರತ, ರಾಮಾಯಣ ಮೊದಲಾದ ಚರಿತ್ರಗ್ರಂಥಗಳು, ಭಾಗವತ ಮೊದಲಾದ ಸೃಷ್ಟ್ಯಾದಿ ಪ್ರತಿಪಾದಕ ಗ್ರಂಥಗಳು ಇವುಗಳೆಂಬ ಕ್ಷೀರಸಮುದ್ರದಿಂದ,

**ಜಾತಾಂ** = ಹುಟ್ಟಿದ,

**ಭಾರತತಾತ್ಪರ್ಯಸುಧಾಂ** = ಭಾರತತಾತ್ಪರ್ಯನಿರ್ಣಯವೆಂಬ ಅಮೃತವನ್ನು,

**ಕಃ** = ಯಾವ,

**ಸನ್** = ಸಜ್ಜನನು,

**ನ ಸೇವತೇ** = ಸೇವಿಸುವುದಿಲ್ಲ? (ಕೇಳುವುದಿಲ್ಲ)

**ತಾತ್ಪರ್ಯ—** ಹಿಂದೆ ಕ್ಷೀರಸಮುದ್ರವನ್ನು ಮಂದರಪರ್ವತದಿಂದ ಕಡೆದಾಗ ಅಮೃತವು ಹುಟ್ಟಿತು. ಅದನ್ನು ಸಜ್ಜನರಾದ ದೇವತೆಗಳು ಸೇವಿಸಿದರು. ಅದರಂತೆ, ಶ್ರೀಮದಾಚಾರ್ಯರೇ! ತಾವು ತಮ್ಮ ಮನಸ್ಸೆಂಬ ಮಂದರದಿಂದ ಶ್ರೀಮನ್ಮಹಾಭಾರತ, ರಾಮಾಯಣ ಸಮಸ್ತ ಪುರಾಣಗಳೆಂಬ ಕ್ಷೀರಸಮುದ್ರವನ್ನು ಚೆನ್ನಾಗಿ ಆಲೋಡನೆ ಮಾಡಿದಿರಿ. ಆಲೋಡನೆ ಮಾಡಿದಾಗ ಹುಟ್ಟಿದ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯವೆಂಬ ಗ್ರಂಥಾಮೃತವನ್ನು ಯಾವ ಸಜ್ಜನನು ತಾನೇ ಸೇವಿಸಲಾರನು? ಭಾರತಾದಿ ಸಮಸ್ತ ಸದಾಗಮಗಳ ಸಾರರೂಪವಾಗಿರುವ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯವು ಮಂದರಪರ್ವತದಿಂದ ಕ್ಷೀರಸಮುದ್ರವನ್ನು ಕಡೆದಾಗ ಹುಟ್ಟಿದ ಅಮೃತದಂತೆ ಅತ್ಯಂತ ಶ್ರೇಷ್ಠವಾದ ವಸ್ತುವಾದುದರಿಂದ ಮೋಕ್ಷಾಪೇಕ್ಷಿಗಳಾದ ಎಲ್ಲಾ ಸಜ್ಜನರೂ ಅದನ್ನು ಕೇಳಿ ಪರ್ಯಾಲೋಚಿಸಿ ಪರಮಾತ್ಮನನ್ನು ಧ್ಯಾನಿಸಿ ಮೋಕ್ಷವನ್ನು ಪಡೆಯಬೇಕು. ಸಜ್ಜನನಾದ ಯಾವನೂ ಇಂತಹ ಅತ್ಯುತ್ತಮ ಗ್ರಂಥದ ಶ್ರವಣಾದಿಗಳನ್ನು ಮಾಡದಿರಲಾರನು ಎಂದು ಭಾವ.

**ವಿಗ್ರಹ—**

**ಇತಿಹಾಸಪುರಾಣಾಬ್ಧೇಃ—** ಇತಿಹಾಸಶ್ಚ ಪುರಾಣಾನಿ ಚ ಇತಿಹಾಸಪುರಾಣಾನಿ, ಇತಿಹಾಸಪುರಾಣಾನ್ಯೇವ ಅಬ್ಧಿಃ ಇತಿಹಾಸಪುರಾಣಾಬ್ಧಿಃ, ತಸ್ಮಾತ್ ।

**ಭವಚ್ಚಿತ್ತಾದ್ರಿಲೋಡಿತಾತ್—** ಭವತಃ ಚಿತ್ತಂ ಭವಚ್ಚಿತ್ತಂ, ಭವಚ್ಚಿತ್ತಮೇವ ಅದ್ರಿಃ ಭವಚ್ಚಿತ್ತಾದ್ರಿಃ, ಭವಚ್ಚಿತ್ತಾದ್ರಿಣಾ ಲೋಡಿತಃ ಭವಚ್ಚಿತ್ತಾದ್ರಿಲೋಡಿತಃ, ತಸ್ಮಾತ್ ।

**ಭಾರತತಾತ್ಪರ್ಯಸುಧಾಂ—** ಭಾರತಸ್ಯ ತಾತ್ಪರ್ಯಂ ಭಾರತತಾತ್ಪರ್ಯಂ, ಭಾರತತಾತ್ಪರ್ಯಮೇವ ಸುಧಾ ಭಾರತತಾತ್ಪರ್ಯಸುಧಾ, ತಾಂ ।

**ಕ್ರಿಯಾಪದ—** ಸೇವತೇ - ಸೇವತೇ ಸೇವೇತೇ ಸೇವಂತೇ, ಸೇವಸೇ ಸೇವೇಥೇ ಸೇವಧ್ವೇ, ಸೇವೇ ಸೇವಾವಹೇ ಸೇವಾಮಹೇ । ಷೇವೃ ಸೇವನೇ (ಸೇವ್) ಸಕ. ಸೇಟ್. ಆತ್ಮ to serve, to enjoy, ವರ್ತಮಾನೇ ಲಟ್ ಪ್ರಥಮ-ಪುರುಷ ಏಕವಚನದಲ್ಲಿ ಸೇವತೇ ಎಂದು ರೂಪ ।

**ಪ್ರಯೋಗ—** ಭವಚ್ಚಿತ್ತಾದ್ರಿಲೋಡಿತಾತ್ ಇತಿಹಾಸಪುರಾಣಾಬ್ಧೇಃ ಜಾತಾ ಭಾರತತಾತ್ಪರ್ಯಸುಧಾ ಕೇನ ಸತಾ ನ ಸೇವ್ಯತೇ?

★ ★ ★

**ಅವತಾರಿಕಾ—** ಆಚಾರ್ಯರು ರಚಿಸಿರುವ ಭಾಗವತತಾತ್ಪರ್ಯನಿರ್ಣಯವನ್ನು ವರ್ಣಿಸುತ್ತಾರೆ.

**ಪುರಾಣಸ್ಥಾನಪಾಂಥಾನಾಮಭಾಷಾತ್ರಯವೇದಿನಾಮ್ ।**
**ಭವತಾ ಸುಸಖಾ ಚಕ್ರೇ ಶ್ರೀಭಾಗವತನಿರ್ಣಯಃ ॥ 77 ॥**

**ಪದಚ್ಛೇದ—** ಪುರಾಣಸ್ಥಾನಪಾಂಥಾನಾಂ, ಅಭಾಷಾತ್ರಯವೇದಿನಾಂ, ಭವತಾ, ಸುಸಖಾ, ಚಕ್ರೇ, ಶ್ರೀಭಾಗವತ ನಿರ್ಣಯಃ ।

**ಅನ್ವಯ—** ಅಭಾಷಾತ್ರಯವೇದಿನಾಂ, ಪುರಾಣಸ್ಥಾನಪಾಂಥಾನಾಂ, ಸುಸಖಾ, ಶ್ರೀಭಾಗವತನಿರ್ಣಯಃ, ಭವತಾ, ಚಕ್ರೇ ।

**ಅನ್ವಯಾರ್ಥ—**

**ಅಭಾಷಾತ್ರಯವೇದಿನಾಂ** = ಗುಹ್ಯಭಾಷಾ, ದರ್ಶನಭಾಷಾ, ಸಮಾಧಿಭಾಷಾ ಎಂಬ ಮೂರು ಭಾಷೆಗಳನ್ನು ತಿಳಿಯದಿರುವ,

**ಪುರಾಣಸ್ಥಾನಪಾಂಥಾನಾಂ** = ಪುರಾಣವೇ ಆಶ್ರಯವಾಗಿ ಉಳ್ಳ ಜನರೆಂಬ ಮಾರ್ಗಸ್ಥರಿಗೆ (ಪ್ರಯಾಣಿಕರಿಗೆ) ಅಥವಾ ಪುರಾಣವಾಕ್ಯಗಳ ಸಮೂಹವೆಂಬ ಪ್ರಕರಣಗಳನ್ನು ಆಲೋಡನೆ ಮಾಡುವ ಜನರಿಗೆ,

**ಸುಸಖಾ** = ಒಳ್ಳೆಯ ಮಿತ್ರನಾದ,

**ಶ್ರೀಭಾಗವತನಿರ್ಣಯಃ** = ಶ್ರೀಭಾಗವತತಾತ್ಪರ್ಯ ನಿರ್ಣಯವೆಂಬ ಗ್ರಂಥವು,

**ಭವತಾ** = ನಿಮ್ಮಿಂದ,

**ಚಕ್ರೇ** = ಮಾಡಲ್ಪಟ್ಟಿತು.

**ತಾತ್ಪರ್ಯ—** ಲೋಕದಲ್ಲಿ ಆಯಾ ದೇಶದ ಭಾಷೆಯನ್ನು ಅರಿಯದ ಪಯಣಿಗನಿಗೆ ಆಯಾ ದೇಶದ ಭಾಷೆಯನ್ನು ಅರಿತ ಸಭ್ಯನಾದವನು ಒಳ್ಳೆಯ ಸ್ನೇಹಿತನಾಗಿ ಬೇರೊಂದು ಭಾಷೆಯ ಅರ್ಥವನ್ನು ಅವನಿಗೆ ತಿಳಿಸಿ ಸರಿಯಾದ ದಾರಿಯನ್ನು ತೋರಿಸುವನು. ಪರಭಾಷೆಯ ದೇಶದಲ್ಲಿ ಅವನ ವ್ಯವಹಾರವು ಸುಗಮವಾಗಿ ಸಾಗಲು ಸಹಾಯ ಮಾಡುವನು. ಹಾಗೆಯೇ ಪುರಾಣೇತಿಹಾಸಗಳಲ್ಲಿರುವ ಗುಹ್ಯಭಾಷಾ, ದರ್ಶನಭಾಷಾ, ಸಮಾಧಿಭಾಷಾ ಎಂಬ ಮೂರು ಭಾಷೆಗಳನ್ನು ತಿಳಿಯದಿರುವವರು ಪುರಾಣಗಳ ಅರ್ಥವನ್ನು ಹೇಳಲು ಸಾಧ್ಯವಾಗುವುದಿಲ್ಲ. ಅಂತಹವರು ಪುರಾಣಗಳಿಂದ ತತ್ತ್ವಜ್ಞಾನ-ವನ್ನು ಸಂಪಾದಿಸಲು ಅನುಕೂಲವಾಗುವಂತೆ ನೀವು ಭಾಗವತತಾತ್ಪರ್ಯನಿರ್ಣಯವನ್ನು ರಚಿಸಿ ದಾರಿ ತೋರಿಸಿದಿರಿ. ಪುರಾಣಗಳ ಅರ್ಥವನ್ನು ತಿಳಿದು ಇತರರಿಗೆ ತಿಳಿಸಿ ಸಂಸಾರಮಾರ್ಗವನ್ನು ಕ್ರಮಿಸುತ್ತಾ ಮೋಕ್ಷಮಾರ್ಗದ ಕಡೆಗೆ ಹೋಗ-ಬೇಕೆನ್ನುವ ಸಜ್ಜನರಿಗೆ ನಿಮ್ಮ ಭಾಗವತತಾತ್ಪರ್ಯನಿರ್ಣಯವು ಒಳ್ಳೆಯ ದಾರಿಯ ಸ್ನೇಹಿತನಂತಿದೆ. ಪುರಾಣಗಳಲ್ಲಿ ಒಂದೇ ವಿಷಯವನ್ನು ತಿಳಿಸುವ ಕೆಲವು ವಾಕ್ಯಗಳ ಸಮೂಹಕ್ಕೆ ಪ್ರಕರಣವೆಂದು ಹೆಸರು. ಪ್ರಕರಣಗಳ ಸಮೂಹವನ್ನು ಪ್ರಸ್ಥಾನ-ವೆಂದು ಹೇಳುತ್ತಾರೆ. ಇಂತಹ ಅನೇಕ ಪ್ರಕರಣ ಸಮೂಹಗಳನ್ನು ವಿಮರ್ಶೆ ಮಾಡುವ ತತ್ತ್ವವನ್ನು ತಿಳಿಯಲು ಬಯಸುವ

ಸಜ್ಜನರಿಗೆ ಶ್ರೀಭಾಗವತನಿರ್ಣಯವು ನಡುದಾರಿಯಲ್ಲಿ ಸಿಕ್ಕಿದ ಗೆಳೆಯನಂತೆ ಅತ್ಯಂತ ಉಪಕಾರಿಯಾಗಿದೆ. ಭಾಗವತ ತಾತ್ಪರ್ಯದಲ್ಲಿ ಆಚಾರ್ಯರು ತೋರಿಸಿರುವ ರೀತಿಯಿಂದ ಪುರಾಣಗಳ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳಲು ಸಾಧ್ಯ ಎಂದು ಭಾವವು.

ಸ್ಪಷ್ಟವಾಗಿ ಅರ್ಥವಾಗುವ ಭಾಷೆಯು ಸಮಾಧಿಭಾಷೆಯು ವಿಷ್ಣುಮಹಿಮೆಯನ್ನು ಶ್ರೀವೇದವ್ಯಾಸರು ಚಿತ್ತದ ಏಕಾಗ್ರತೆಯಿಂದ ಹೇಳಿದ್ದಾರೆ. ಇದೇ ಸಮಾಧಿಭಾಷೆ. ಸಮಾಧಾನವುಳ್ಳ ಮನಸ್ಸಿನ ಭಾಷೆಯೇ ಸಮಾಧಿ ಭಾಷೆಯು । "ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।" ಎಂಬುದು ಸಮಾಧಿಭಾಷೆಯು । ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ । ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ॥ ಎಂಬುದೂ ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ । ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಂ ಎಂಬುದೂ ಸಮಾಧಿ ಭಾಷೆಯು. ಭಾಗವತದ ಭಾಷೆಯು ಪ್ರಾಯಃ ಪೂರ್ತಿಯಾಗಿ ಸಮಾಧಿಭಾಷೆಯು. ಮೊದಲು ಹೇಳಿದ ಕೃಷ್ಣಮಹಿಮೆ ಎಂಬ ಪ್ರಮೇಯಕ್ಕೂ ಕೊನೆಯಲ್ಲಿ ಹೇಳುವ ಕೃಷ್ಣಮಹಿಮೆ ಎಂಬ ಪ್ರಮೇಯಕ್ಕೂ ವಿರುದ್ಧವಾಗಿ ಮಧ್ಯದಲ್ಲಿ ವೈಷ್ಣವಮತಕ್ಕೆ ವಿರುದ್ಧವಾದ ಪಾಶುಪತಾದಿಮತಸಿದ್ಧವಾದ ರುದ್ರೋತ್ಕರ್ಷ ಹೇಳುವುದೂ ಕೃಷ್ಣನು ರುದ್ರಾರ್ಚನ ಮಾಡಿದನೆಂದು ಹೇಳುವುದೂ, ಅಜ್ಞಜನರ ಮೋಹಕ್ಕಾಗಿ ಎಂದು ತಿಳಿಯಬೇಕು. ಇದು ದರ್ಶನ ಭಾಷೆಯಿಂದ ಹೇಳಲ್ಪಟ್ಟ ಪ್ರಮೇಯವು. ಇದು ಗ್ರಾಹ್ಯವಲ್ಲ. ಸಮಾಧಿಭಾಷೆಯಿಂದ ಹೇಳಲ್ಪಟ್ಟ ಪ್ರಮೇಯಕ್ಕೆ ಅವಿರುದ್ಧವಾದ ದರ್ಶನಭಾಷೆಯಿಂದ ಹೇಳಲ್ಪಟ್ಟ ಪ್ರಮೇಯವೂ ಗ್ರಾಹ್ಯವಾಗುತ್ತದೆ. ದರ್ಶನಭಾಷೆ ಮತ್ತು ಸ್ಪಷ್ಟಾರ್ಥಕವಾದ ಸಮಾಧಿಭಾಷೆಗಿಂತಲೂ ಬೇರೆ ರೀತಿಯಿಂದ ಪ್ರತಿಪಾದನ ಮಾಡುವ ಭಾಷೆಯು ಗುಹ್ಯಭಾಷೆಯು । ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ । ಪ್ರಮದಾಃ ಕೇಶ ಶೂಲಿನ್ಯೋ ಭವಿಷ್ಯಂತಿ ಕಲೌ ಯುಗೇ ॥ ಇತ್ಯಾದಿಗಳಲ್ಲಿ ಗುಹ್ಯಭಾಷೆಯಿಂದ ಪ್ರಮೇಯವನ್ನು ಹೇಳಿರುತ್ತಾರೆ. "ದೇಶ ದೇಶಗಳಲ್ಲಿ ಊರೂರುಗಳಲ್ಲಿ ಅನ್ನ ಮತ್ತು ಪಾನೀಯಗಳ ವಿಕ್ರಯ ನಡೆಯುತ್ತದೆ. ಚೌಕಗಳು ಸೇರುವಲ್ಲಿಯೂ ವೇದವನ್ನು ಗಟ್ಟಿಯಾಗಿ ಕೂಗಿ ಹೇಳುತ್ತಿರುತ್ತಾರೆ, ಸ್ತ್ರೀಯರು ತಮ್ಮ ಗುಹ್ಯಾಂಗವನ್ನು ಮಾರಾಟಮಾಡಿ ವ್ಯಭಿಚಾರದಿಂದ ಜೀವಿಸುತ್ತಾರೆ. ಕಲಿಯುಗದಲ್ಲಿ ಈ ರೀತಿಯ ವ್ಯವಹಾರವಿರುತ್ತದೆ" ಎಂದು ರಹಸ್ಯಾರ್ಥ. ಈ ರೀತಿಯ ಮೂರು ಭಾಷೆಗಳು ನೂರು ವಿಧದ ರೀತಿಗಳು ಇತ್ಯಾದಿಗಳನ್ನು ತಿಳಿದವನೇ ಪುರಾಣಗಳನ್ನು ಹೇಳಲು ಅರ್ಹನು. ಇವನ್ನೆಲ್ಲಾ ತಿಳಿದ ಆಚಾರ್ಯರು ಭಾಗವತತಾತ್ಪರ್ಯದಲ್ಲಿ ಪುರಾಣಾರ್ಥವನ್ನು ಪ್ರಮಾಣಸಹಿತವಾಗಿ ತಿಳಿಸಿದ್ದಾರೆ.

ವಿಗ್ರಹ—

**ಪುರಾಣಸ್ಥಾನಪಾಂಥಾನಾಂ—** ಪುರಾಣಾನಾಂ ಸ್ಥಾನಾನಿ ಪುರಾಣಸ್ಥಾನಾನಿ, ಪುರಾಣಸ್ಥಾನೇಷು ಪಾಂಥಾಃ ಪುರಾಣಸ್ಥಾನಪಾಂಥಾಃ ತೇಷಾಂ । ಪುರಾಣಾನ್ಯೇವ ಸ್ಥಾನಾನಿ ಯೇಷಾಂ ತೇ ಪುರಾಣಸ್ಥಾನಾಃ, ಪುರಾಣಸ್ಥಾನಾಶ್ಚ ತೇ ಪಾಂಥಾಶ್ಚ ಪುರಾಣಸ್ಥಾನಪಾಂಥಾಃ ತೇಷಾಂ ।

**ಅಭಾಷಾತ್ರಯವೇದಿನಃ—** ತ್ರಯಾಣಾಂ ಸಮುದಾಯಃ ತ್ರಯಂ ಭಾಷಾಣಾಂ ತ್ರಯಂ ಭಾಷಾತ್ರಯಂ, ಭಾಷಾತ್ರಯಂ ವಿದಂತೀತಿ ಭಾಷಾತ್ರಯವೇದಿನಃ, ಭಾಷಾತ್ರಯವೇದಿನಃ ನ ಭವಂತೀತಿ ಅಭಾಷಾ-ತ್ರಯವೇದಿನಃ ತೇಷಾಂ ।

**ಸುಸಖಾ—** ಶೋಭನಶ್ಚಾಸೌ ಸಖಾ ಚ ಸುಸಖಾ । ಇಲ್ಲಿ 'ರಾಜಾಹಃಸಖಿಭ್ಯಷ್ಟಚ್' ಎಂಬ ಸೂತ್ರದಿಂದ 'ಸಖಿ' ಶಬ್ದಕ್ಕೆ ಟಚ್ ಪ್ರತ್ಯಯ ಬರಬೇಕಾಗಿತ್ತು. ಆದರೆ 'ನಪೂಜನಾತ್' (5.4.69) ಎಂಬ ಸೂತ್ರದಿಂದ ಅದಕ್ಕೆ ನಿಷೇಧ ಇರುವುದರಿಂದ ಟಚ್ ಪ್ರತ್ಯಯವು ಬಂದಿಲ್ಲ.

**ಶ್ರೀಭಾಗವತನಿರ್ಣಯಃ—** ಶ್ರೀಯುಕ್ತಂ ಚ ತತ್ ಭಾಗವತಂ ಚ ಶ್ರೀಭಾಗವತಂ, ಶ್ರೀಭಾಗವತಸ್ಯ ನಿರ್ಣಯಃ ಶ್ರೀಭಾಗವತನಿರ್ಣಯಃ ।

**ಕ್ರಿಯಾಪದ—** ಚಕ್ರೇ ಚಕ್ರಾತೇ ಚಕ್ರಿರೇ, ಇತ್ಯಾದಿ ಕರ್ತರಿಯಂತೆಯೇ ರೂಪ. ಡುಕೃಞ್ ಕರಣೇ ಧಾತು ಕರ್ಮಣಿ ಲಿಟ್ ಸರ್ಗ 16 ಶ್ಲೋಕ 45 ರಲ್ಲಿ ಇದರ ರೂಪಗಳು ಬಂದಿದೆ.

**ಪ್ರಯೋಗ—** ಅಭಾಷಾತ್ರಯವೇದಿನಾಂ ಪುರಾಣಸ್ಥಾನಪಾಂಥಾನಾಂ ಸುಸಖಾಯಂ ಶ್ರೀಭಾಗವತನಿರ್ಣಯಂ ಭವಾನ್ ಚಕ್ರೇ ।

★ ★ ★

**ಅವತಾರಿಕಾ—** ಆಚಾರ್ಯರು ರಚಿಸಿರುವ ತಂತ್ರಸಾರವೆಂಬ ಗ್ರಂಥವನ್ನು ವರ್ಣಿಸುತ್ತಾರೆ.

**ಕಸ್ತಂತ್ರಸಾರಂ ಸಂಪ್ರಾಪ್ಯ ನ ಸ್ಯಾತ್ ಪರ್ಯಾಪ್ತವಾಂಛಿತಃ ।**
**ಅಮರ್ತ್ಯೈರಾಶ್ರಿತಚ್ಛಾಯಂ ಕಲ್ಪದ್ರುಮಮಿವೋತ್ತಮಮ್ ॥ 78 ॥**

**ಪದಚ್ಛೇದ—** ಕಃ, ತಂತ್ರಸಾರಂ, ಸಂಪ್ರಾಪ್ಯ, ನ, ಸ್ಯಾತ್, ಪರ್ಯಾಪ್ತವಾಂಛಿತಃ, ಅಮರ್ತ್ಯೈಃ, ಆಶ್ರಿತಚ್ಛಾಯಂ, ಕಲ್ಪದ್ರುಮಂ, ಇವ, ಉತ್ತಮಂ ।

**ಅನ್ವಯ—** ಉತ್ತಮಂ, ಅಮರ್ತ್ಯೈಃ, ಆಶ್ರಿತಚ್ಛಾಯಂ, ತಂತ್ರಸಾರಂ, ಉತ್ತಮಂ, ಅಮರ್ತ್ಯೈಃ, ಆಶ್ರಿತಚ್ಛಾಯಂ, ಕಲ್ಪದ್ರುಮಮಿವ, ಸಂಪ್ರಾಪ್ಯ, ಕಃ, ಪರ್ಯಾಪ್ತವಾಂಛಿತಃ, ನ, ಸ್ಯಾತ್?

**ಅನ್ವಯಾರ್ಥ—**

**ಉತ್ತಮಂ** = ಶ್ರೇಷ್ಠಗ್ರಂಥವಾದ,
**ಅಮರ್ತ್ಯೈಃ** = ಭಗವಂತನ ಮೂರ್ತಿಗಳಿಂದ (ಅಥವಾ ವರ್ಣಾಭಿಮಾನಿಗಳಾದ ಬ್ರಹ್ಮಾದಿದೇವತೆಗಳಿಂದ),
**ಆಶ್ರಿತಚ್ಛಾಯಂ** = ಆಶ್ರಯಿಸಲ್ಪಟ್ಟ ವರ್ಣಗಳ ಸಾಲುಳ್ಳ (ಅಥವಾ = ಆಶ್ರಿಯಸಲ್ಪಟ್ಟ ಸಿದ್ಧಾಂತವುಳ್ಳ),
**ತಂತ್ರಸಾರಂ** = ತಂತ್ರಗ್ರಂಥಗಳಲ್ಲಿ ಶ್ರೇಷ್ಠವಾದ ತಂತ್ರಸಾರ ಎಂಬ ಗ್ರಂಥವನ್ನು,
**ಉತ್ತಮಂ** = ವೃಕ್ಷಗಳಲ್ಲಿ ಶ್ರೇಷ್ಠವಾದ,
**ಅಮರ್ತ್ಯೈಃ** = ದೇವತೆಗಳಿಂದ,
**ಆಶ್ರಿತಚ್ಛಾಯಂ** = ಆಶ್ರಯಿಸಲ್ಪಟ್ಟ ನೆರಳುಳ್ಳ,
**ಕಲ್ಪದ್ರುಮಂ ಇವ** = ಕಲ್ಪವೃಕ್ಷವನ್ನೋಪಾದಿಯಲ್ಲಿ,
**ಸಂಪ್ರಾಪ್ಯ** = ಹೊಂದಿ,
**ಕಃ** = ಯಾವನು,
**ಪರ್ಯಾಪ್ತವಾಂಛಿತಃ** = ಪೂರ್ಣವಾದ ಅಪೇಕ್ಷೆಯುಳ್ಳವನು,
**ನ ಸ್ಯಾತ್** = ಆಗಲಾರನು?

**ತಾತ್ಪರ್ಯ—** ಕಲ್ಪವೃಕ್ಷವು ಕ್ಷೀರಸಮುದ್ರವನ್ನು ಕಡೆಯುವಾಗ ಹುಟ್ಟಿದ ಶ್ರೇಷ್ಠವಾದ ವೃಕ್ಷವು. ದೇವತೆಗಳು ನಂದನ ವನದಲ್ಲಿ ಆ ವೃಕ್ಷದ ನೆರಳಿನಲ್ಲಿ ಕುಳಿತುಕೊಳ್ಳುತ್ತಾರೆ. ಅದು ದೇವತೆಗಳು ಬೇಡಿದ್ದನ್ನೆಲ್ಲಾ ಕೊಡುತ್ತದೆ ಮತ್ತು ಅವರ ಅಭಿಲಾಷೆ ಗಳನ್ನು ಪೂರ್ಣಗೊಳಿಸುತ್ತದೆ. ಅದರಂತೆಯೇ ಗ್ರಂಥಗಳಲ್ಲಿ ಶ್ರೇಷ್ಠವಾದುದು ತಂತ್ರಸಾರಗ್ರಂಥವು. ಆ ತಂತ್ರಸಾರಗ್ರಂಥದ ವರ್ಣಗಳ ಸಾಲುಗಳಲ್ಲಿ ಭಗವಂತನ ಮೂರ್ತಿಗಳೇ ವಿರಾಜಮಾನವಾಗಿವೆ. ಬ್ರಹ್ಮಾದಿದೇವತೆಗಳೂ ಆ ವರ್ಣಪಂಕ್ತಿಗಳಲ್ಲಿ ವಿರಾಜಿಸುತ್ತಿದ್ದಾರೆ. ತಂತ್ರಗ್ರಂಥಗಳಲ್ಲಿ ಉತ್ತಮವಾದ ಈ ಗ್ರಂಥವನ್ನು ಆಶ್ರಯಿಸಿದಾಗ ಯಾವನು ತಾನೇ ಪರಿಪೂರ್ಣ ಮನೋರಥನಾಗಲಾರನು? ಎಲ್ಲರ ಎಲ್ಲಾ ಅಭಿಲಾಷೆಗಳೂ ನೆರವೇರುತ್ತವೆ. ಕಲ್ಪವೃಕ್ಷದ ನೆರಳನ್ನು ಆಶ್ರಯಿಸಿದಂತೆ ತಂತ್ರಸಾರಸಿದ್ಧಾಂತವನ್ನು ದೇವತೆಗಳು ಆಶ್ರಯಿಸಿದ್ದಾರೆ. ಇಂತಹ ತಂತ್ರಸಾರಸಿದ್ಧಾಂತವನ್ನು ಆಶ್ರಯಿಸಿದರೆ ಮಾನವನ ಮನೋರಥವೆಲ್ಲವೂ ಕೈಗೂಡುವುದರಲ್ಲಿ ಸಂದೇಹವೇ ಇಲ್ಲ ಎಂದು ಅಭಿಪ್ರಾಯ.

**ವಿಗ್ರಹ ಮತ್ತು ಕೋಶ—**

**ತಂತ್ರಸಾರಂ—** ತಂತ್ರೇಷು ಸಾರಃ ತಂತ್ರಸಾರಃ ತಂ ।

**ಪರ್ಯಾಪ್ತವಾಂಛಿತಃ—** ಪರ್ಯಾಪ್ತಂ ವಾಂಛಿತಂ ಯಸ್ಯ ಸಃ ಪರ್ಯಾಪ್ತವಾಂಛಿತಃ ।

**ಆಶ್ರಿತಚ್ಛಾಯಂ—** ಆಶ್ರಿತಾ ಛಾಯಾ ಯಸ್ಯ ಸಃ ಆಶ್ರಿತಚ್ಛಾಯಃ ತಂ । ಛಾಯಾ = ನೆರಳು, ಪಂಕ್ತಿ, ಸಿದ್ಧಾಂತ, 'ಛಾಯಾಪಂಕ್ತೌ ಪ್ರತಿಮಾಯಾಮರ್ಕಯೋಷಿತ್ಯನಾತಪೇ । ಉಕ್ತಾ ವೈ ಪಾವನೇ ಕಾಂತೌ ಶೋಭಾಯಾಂ ಚ ತಮಸ್ಯಪಿ' ಹೇಮಚಂದ್ರ ।

**ಕ್ರಿಯಾಪದ—** **ಸ್ಯಾತ್** - ಸ್ಯಾತ್ ಸ್ಯಾತಾಂ ಸ್ಯುಃ ಇತ್ಯಾದಿ ಅಸ ಭುವಿ (ಅಸ್ ಆರ್ಧಧಾತುಕದಲ್ಲಿ ಭೂ ಆದೇಶ) ಅ. ಸೇಟ್. ಪರ. to be ವಿಧಿಲಿಙ್ ಪ್ರಥಮಪುರುಷ ಏಕವಚನ ।

**ಪ್ರಯೋಗ—** ಉತ್ತಮಂ ಸಂಪ್ರಾಪ್ಯ ಕೇನ ಪರ್ಯಾಪ್ತವಾಂಛಿತೇನ ನ ಭೂಯೇತ?

★ ★ ★

**ಅವತಾರಿಕಾ—** ಆಚಾರ್ಯರು ರಚಿಸಿರುವ ಕಥಾಲಕ್ಷಣ ಮತ್ತು ಪ್ರಮಾಣಲಕ್ಷಣಗಳೆಂಬ ಎರಡು ಪ್ರಕರಣ ಗ್ರಂಥಗಳನ್ನು ವರ್ಣಿಸುತ್ತಾರೆ.

**ಲೋಕಾನಾಮವಲೋಕಾಯ ಮಾರ್ಗಸ್ಯಾಸ್ಯ ವ್ಯಧಾದ್ ಭವಾನ್ ।**
**ಕರುಣಾಕರ ನೇತ್ರಾಭೇ ವಾದಸನ್ಮಾನಲಕ್ಷಣೇ ॥ 79 ॥**

**ಪದಚ್ಛೇದ—** ಲೋಕಾನಾಂ, ಅವಲೋಕಾಯ, ಮಾರ್ಗಸ್ಯ, ಅಸ್ಯ, ವ್ಯಧಾತ್, ಭವಾನ್, ಕರುಣಾಕರ! ನೇತ್ರಾಭೇ, ವಾದಸನ್ಮಾನಲಕ್ಷಣೇ ।

**ಅನ್ವಯ—** ಹೇ ಕರುಣಾಕರ ! ಭವಾನ್, ಲೋಕಾನಾಂ, ಅಸ್ಯ, ಮಾರ್ಗಸ್ಯ, ಅವಲೋಕಾಯ, ನೇತ್ರಾಭೇ, ವಾದಸನ್ಮಾನಲಕ್ಷಣೇ, ವ್ಯಧಾತ್ ।

**ಅನ್ವಯಾರ್ಥ—**

**ಹೇ ಕರುಣಾಕರ** = ಎಲೈ ದಯಾಸಮುದ್ರರಾದ ಆಚಾರ್ಯರೇ!

**ಭವಾನ್** = ತಾವು,

**ಲೋಕಾನಾಂ** = ಜಿಜ್ಞಾಸು ಜನರಿಗೆ,

**ಅಸ್ಯ ಮಾರ್ಗಸ್ಯ** = ಈ ವಾದ, ಜಲ್ಪ, ವಿತಂಡಾ ಎಂಬ ಮೂರು ಕಥಾ (ಚರ್ಚೆಯ) ಮಾರ್ಗಗಳ, ಪ್ರತ್ಯಕ್ಷ ಅನುಮಾನ, ಆಗಮವೆಂಬ ಮೂರು ಪ್ರಮಾಣ ಮಾರ್ಗಗಳ,

**ಅವಲೋಕಾಯ** = ನೋಟಕ್ಕಾಗಿ (ಸರಿಯಾದ ತಿಳುವಳಿಕೆಗಾಗಿ),

**ನೇತ್ರಾಭೇ** = ಎರಡು ಕಣ್ಣುಗಳಂತಿರುವ,

**ವಾದಸನ್ಮಾನಲಕ್ಷಣೇ** = ವಾದ ಮತ್ತು ಸತ್ ಪ್ರಮಾಣಗಳ ಲಕ್ಷಣಗಳುಳ್ಳ ಕಥಾಲಕ್ಷಣ ಮತ್ತು ಪ್ರಮಾಣಲಕ್ಷಣ ಗಳೆಂಬ ಎರಡು ಗ್ರಂಥಗಳನ್ನು,

**ವ್ಯಧಾತ್** = ಮಾಡಿದ್ದೀರಿ.

**ತಾತ್ಪರ್ಯ—** ದಯಾಸಮುದ್ರರಾದ ಶ್ರೀಮಧ್ವಾಚಾರ್ಯರೇ! ಲೋಕದಲ್ಲಿ ಜನರಿಗೆ ತಾವು ಹೋಗಬೇಕಾದ ಮಾರ್ಗವನ್ನು ಸರಿಯಾಗಿ ತಿಳಿಯಲು ಎರಡು ಕಣ್ಣುಗಳು ಅತ್ಯಾವಶ್ಯಕ. ಹಾಗೆಯೇ ಶಾಸ್ತ್ರಮಾರ್ಗದಲ್ಲಿ ಪ್ರಮೇಯಗಳನ್ನು ಸರಿಯಾಗಿ ತಿಳಿಯುವುದಕ್ಕೂ, ಇತರರು ವಿಪರೀತವಾಗಿ ತಿಳಿಸಿರುವ ಪ್ರಮಾಣ ಪ್ರಮೇಯಗಳನ್ನು ಖಂಡಿಸಿ ಸರಿಯಾದ

ಪ್ರಮಾಣಪ್ರಮೇಯಗಳನ್ನು ಪ್ರತಿಷ್ಠಾಪಿಸುವುದಕ್ಕೂ ಅತ್ಯಾವಶ್ಯಕವಾಗಿರುವ ಎರಡು ಗ್ರಂಥಗಳನ್ನು ಎರಡು ಕಣ್ಣುಗಳಂತೆ ತಾವು ರಚಿಸಿ ಮಹೋಪಕಾರ ಮಾಡಿದ್ದೀರಿ. ಈ ಗ್ರಂಥಗಳಲ್ಲಿ ಕಥಾಲಕ್ಷಣವು ಜನರಿಗೆ ವಾದ, ಜಲ್ಪ, ವಿತಂಡಾ ಎಂಬ ಮೂರು ವಿಧವಾದ ಕಥಾಮಾರ್ಗವನ್ನು ತಿಳಿಸಿಕೊಡುತ್ತದೆ. ತತ್ತ್ವನಿರ್ಣಯ ಮಾಡುವುದಕ್ಕಾಗಿ ಬೆಳೆಸುವ ಮೂರು ವಿಧ ಈ ಚರ್ಚೆಯ ಪ್ರಕಾರಗಳಿಂದ ಶಿಷ್ಯರಿಗೆ ಮತ್ತು ಸಜ್ಜನರಿಗೆ ತತ್ತ್ವನಿಶ್ಚಯ ಉಂಟಾಗುತ್ತದೆ. ಅಹಂಕಾರಿಗಳಾಗಿ ಅಡ್ಡದಾರಿಯಲ್ಲಿ ಹೋಗುತ್ತಿದ್ದು ಜನರನ್ನು ಸರಿಯಾದ ಶಾಸ್ತ್ರಮಾರ್ಗದಿಂದ ಅಡ್ಡದಾರಿಗೆ ಎಳೆದುಕೊಂಡು ಹೋಗಿ ದುಃಖಪಡಿಸುವ ದುರ್ವಾದಿಗಳ ಖಂಡನೆ ಮಾಡಲು ಈ ಗ್ರಂಥದಿಂದ ಅನುಕೂಲವಾಗುತ್ತದೆ. ಹಾಗೆಯೇ ಪ್ರತ್ಯಕ್ಷ ಅನುಮಾನ, ಆಗಮ ಗಳೆಂಬ ಮೂರು ಪ್ರಮಾಣಗಳ ಸರಿಯಾದ ಜ್ಞಾನವನ್ನು ಉಂಟುಮಾಡುವ ಪ್ರಮಾಣಲಕ್ಷಣ ಎಂಬ ಗ್ರಂಥದಿಂದ ಶಾಸ್ತ್ರದಲ್ಲಿ ತತ್ತ್ವಗಳನ್ನು ನಿಶ್ಚಯಿಸಲು ಅನುಸರಿಸುವ ಮಾರ್ಗದ ಸರಿಯಾದ ಜ್ಞಾನವು ಉಂಟಾಗುತ್ತದೆ. ಹೀಗೆ ಜನರಿಗೆ ಎರಡು ಕಣ್ಣುಗಳಂತಿರುವ ಎರಡು ಗ್ರಂಥಗಳನ್ನು ರಚಿಸಿ ತಾವು ಮಹೋಪಕಾರವನ್ನು ಮಾಡಿರುತ್ತೀರಿ.

**ವಿಗ್ರಹ—**

**ಕರುಣಾಕರ—** ಕರುಣಾಯಾಃ ಆಕರಃ ಕರುಣಾಕರಃ ತಸ್ಯ ಸಂಬುದ್ಧಿಃ ಹೇ ಕರುಣಾಕರ ।

**ನೇತ್ರಾಭೇ—** ನೇತ್ರಸ್ಯ ಆಭೇವ ಆಭಾ ಯಯೋಸ್ತೇ ನೇತ್ರಾಭೇ ।

**ವಾದಸನ್ಮಾನಲಕ್ಷಣೇ—** ಸಚ್ಚ ತತ್ ಮಾನಂ ಚ ಸನ್ಮಾನಂ, ವಾದಶ್ಚ ಸನ್ಮಾನಂ ಚ ವಾದಸನ್ಮಾನೇ, ವಾದ-ಸನ್ಮಾನಯೋಃ ಲಕ್ಷಣೇ ಯಯೋಸ್ತೇ ವಾದಸನ್ಮಾನಲಕ್ಷಣೇ ।

**ಕ್ರಿಯಾಪದ—** ವ್ಯಧಾತ್ - ವಿ+ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ । ಡುಧಾಞ್ (ಧಾ) ಧಾರಣಪೋಷಣಯೋಃ ಸಕ. ಅನಿ ಉಭಯಪದೀ । to put, to grant, to produce, to bear ಭೂತೇಲುಙ್, ವಿ ಉಪಸರ್ಗ ಪ್ರಥಮಪುರುಷೇ ಏಕವಚನದಲ್ಲಿ ವ್ಯಧಾತ್ ಎಂದು ರೂಪ.

**ಪ್ರಯೋಗ—** ಹೇ ಕರುಣಾಕರ! ಭವತಾ ಲೋಕಾನಾಂ ಅಸ್ಯ ಮಾರ್ಗಸ್ಯ ಅವಲೋಕಾಯ ನೇತ್ರಾಭೇ ವಾದಸನ್ಮಾನ ಲಕ್ಷಣೇ ವ್ಯಧಾಯಿಷಾತಾಮ್ ।

★ ★ ★

**ಅವತಾರಿಕಾ—** ಆಚಾರ್ಯರ ಪ್ರಕರಣಗ್ರಂಥಗಳಲ್ಲಿ ಒಂದಾದ ಶ್ರೀಮದ್ವಿಷ್ಣುತತ್ತ್ವವಿನಿರ್ಣಯವನ್ನು ಅರ್ಜುನ-ನೆಂದು ವರ್ಣಿಸುತ್ತಾರೆ.

**ಏಕಾಕೀ ಕಿಲ ಯಶ್ಚಕ್ರೇ ಪದಂ ಮೌಲಿಷು ವಿದ್ವಿಷಾಮ್ ।**
**ತತ್ತ್ವನಿರ್ಣಯಪಾರ್ಥೋಽಯಂ ಕೇನ ನಾಮ ನ ಪೂಜ್ಯತೇ ॥ 80 ॥**

**ಪದಚ್ಛೇದ—** ಏಕಾಕೀ, ಕಿಲ, ಯಃ, ಚಕ್ರೇ, ಪದಂ, ಮೌಲಿಷು, ವಿದ್ವಿಷಾಂ, ತತ್ತ್ವನಿರ್ಣಯಪಾರ್ಥಃ, ಅಯಂ, ಕೇನ, ನಾಮ, ನ, ಪೂಜ್ಯತೇ?

**ಅನ್ವಯ—** ಯಃ, ಏಕಾಕೀ, ವಿದ್ವಿಷಾಂ, ಮೌಲಿಷು, ಪದಂ, ಚಕ್ರೇ, ಕಿಲ, ಅಯಂ, ತತ್ತ್ವನಿರ್ಣಯಪಾರ್ಥಃ, ಕೇನ, ನಾಮ, ನ, ಪೂಜ್ಯತೇ?

**ಅನ್ವಯಾರ್ಥ—**

**ಯಃ** = ಯಾವನು,

**ಏಕಾಕೀ** = ಒಬ್ಬಂಟಿಗನಾಗಿ,

**ವಿದ್ವಿಷಾಂ** = ಶತ್ರುಗಳ,

**ಮೌಲಿಷು** = ತಲೆಗಳ ಮೇಲೆ,

**ಪದಂ** = ಕಾಲನ್ನು (ಸ್ಥಾನವನ್ನು),

**ಚಕ್ರೇ ಕಿಲ** = ಇಟ್ಟನಷ್ಟೆ!

**ಅಯಂತತ್ತ್ವನಿರ್ಣಯಪಾರ್ಥಃ** = ಈ ತತ್ತ್ವನಿರ್ಣಯವೆಂಬ ಅರ್ಜುನನು,

**ಕೇನ ನಾಮ** = ಯಾರಿಂದ ತಾನೇ,

**ನಪೂಜ್ಯತೇ** = ಗೌರವಿಸಲ್ಪಡುವುದಿಲ್ಲ.

**ತಾತ್ಪರ್ಯ**— ಕುಂತೀಪುತ್ರನಾದ ಅರ್ಜುನನು ನಿವಾತಕವಚರೆಂಬ ದಾನವರನ್ನು ಒಬ್ಬನೇ ಸೋಲಿಸಿ ಸಂಹರಿಸಿದನು. ಅಜ್ಞಾತವಾಸ ಕಾಲದಲ್ಲಿ ವಿರಾಟರಾಜನ ಪಟ್ಟಣದಲ್ಲಿ ವಾಸಮಾಡುತ್ತಿದ್ದು ಉತ್ತರಗೋಗ್ರಹಣ ಕಾಲದಲ್ಲಿ ಎಲ್ಲಾ ಕೌರವಸೈನ್ಯವನ್ನೂ, ವೀರಾಗ್ರೇಸರರಾದ ಮಹಾರಥಿಕರನ್ನೂ ಒಬ್ಬನೇ ಸೋಲಿಸಿದ್ದನು. ಹಾಗೆಯೇ ತಾವು ರಚಿಸಿರುವ ವಿಷ್ಣುತತ್ತ್ವನಿರ್ಣಯವೆಂಬ ಪ್ರಕರಣಗ್ರಂಥವೆಂಬ ಮಹಾವೀರನು ತಾನೊಬ್ಬನೇ ಇತರರ ಸಹಾಯಾಪೇಕ್ಷೆ ಇಲ್ಲದೆ ದುರ್ವಾದಿಗಳ ವಾದಗಳನ್ನು ಖಂಡಿಸಿ ಪರಾಪರತತ್ತ್ವಗಳನ್ನು ತಿಳಿಸಿ ಸಜ್ಜನರಿಗೆ ಆನಂದವನ್ನುಂಟುಮಾಡುತ್ತಿದ್ದಾನೆ. ಅಂತಹ ತತ್ತ್ವನಿರ್ಣಯ ಪಾರ್ಥವನ್ನು ಯಾರು ತಾನೇ ಸಂಮಾನಿಸುವುದಿಲ್ಲ? ಎಲ್ಲರೂ ಗೌರವಿಸುವರು. ಉತ್ತರನೊಡನೆ ಉತ್ತರಗೋಗ್ರಹಣಾದಿಗಳಲ್ಲಿ ಅರ್ಜುನನೊಬ್ಬನೇ ಶತ್ರುಗಳನ್ನು ಗೆದ್ದಂತೆ ಮತ್ತು ಎಲ್ಲರಿಂದ ಸಮ್ಮಾನಿತನಾದಂತೆ ಇತರ ವಾದಿಗಳನ್ನು ತತ್ತ್ವನಿರ್ಣಯ ಗ್ರಂಥವೊಂದೇ ಸೋಲಿಸುತ್ತದೆ. ಆದುದರಿಂದ ಅದು ಅತ್ಯಂತ ಸಮ್ಮಾನಾರ್ಹವಾದುದು ಎಂದು ಭಾವ.

**ವಿಗ್ರಹ**—

**ಏಕಾಕೀ**— ಏಕ ಏವ ಅಸಹಾಯಃ ಏಕಾಕೀ । ಏಕಾದಾಕಿನಿಚ್ಚಾಸಹಾಯೇ (5.3.52) ಎಂಬ ಸೂತ್ರದಿಂದ ಆಕಿನಿಚ್ ಪ್ರತ್ಯಯ ।

**ತತ್ತ್ವನಿರ್ಣಯಪಾರ್ಥಃ**— ತತ್ತ್ವನಿರ್ಣಯ ಏವ ಪಾರ್ಥಃ ತತ್ತ್ವನಿರ್ಣಯಪಾರ್ಥಃ ।

**ಕ್ರಿಯಾಪದ**— **ಪೂಜ್ಯತೇ** - ಪೂಜ್ಯತೇ ಪೂಜ್ಯೇತೇ ಪೂಜ್ಯಂತೇ, ಪೂಜ್ಯಸೇ ಪೂಜ್ಯೇಥೇ ಪೂಜ್ಯಧ್ವೇ, ಪೂಜ್ಯೇ ಪೂಜ್ಯಾವಹೇ ಪೂಜ್ಯಾಮಹೇ । ಪೂಜ ಪೂಜಾಯಾಂ ಸಕ. ಸೇಟ್. ಉಭ. to worship, to adore ಕರ್ಮಣಿ ಲಟ್ ಪ್ರಥಮಪುರುಷೇ ಏಕವಚನೇ ಪೂಜ್ಯತೇ ಇತಿರೂಪಂ । ಚಕ್ರೇ - ಚಕ್ರೇ ಚಕ್ರಾತೇ ಚಕ್ರಿರೇ ಈ ಕ್ರಿಯಾಪದವು ಸರ್ಗ 16 ರ ಶ್ಲೋಕ 69 ರಲ್ಲಿ ಬಂದಿದೆ.

**ಪ್ರಯೋಗ**— ಯೇನ ಏಕಾಕಿನಾ ವಿದ್ವಿಷಾಂ ಮೌಲಿಷು ಪದಂ ಚಕ್ರೇ ಕಿಲ, ಇಮಂ ತತ್ತ್ವನಿರ್ಣಯಪಾರ್ಥಂ ಕೋ ನಾಮ ನ ಪೂಜಯತಿ?

★ ★ ★

**ಅವತಾರಿಕಾ**— ಆಚಾರ್ಯರು ಮಾಡಿರುವ ತತ್ತ್ವೋದ್ಯೋತಾದಿ ಉಳಿದ ಒಂಭತ್ತು ಪ್ರಕರಣಗ್ರಂಥಗಳನ್ನೂ ಸ್ತೋತ್ರ ಮಾಡುತ್ತಾರೆ.

**ವಾದಾದಯಃ ಪ್ರಕರಣಸ್ಫುಲಿಂಗಾಸ್ತನವೋಽಪ್ಯಲಮ್ ।**
**ವಿಪಕ್ಷಕಕ್ಷಂ ಕ್ಷಿಣ್ವಂತಿ ಮಾರುತೇನ ತ್ವಯೇರಿತಾಃ ॥ 81 ॥**

**ಪದಚ್ಛೇದ**— ವಾದಾದಯಃ, ಪ್ರಕರಣಸ್ಫುಲಿಂಗಾಃ, ತನವಃ, ಅಪಿ, ಅಲಂ, ವಿಪಕ್ಷಕಕ್ಷಂ, ಕ್ಷಿಣ್ವಂತಿ, ಮಾರುತೇನ, ತ್ವಯಾ, ಈರಿತಾಃ ।

**ಅನ್ವಯ**— ಮಾರುತೇನ, ತ್ವಯಾ, ಈರಿತಾಃ, ವಾದಾದಯಃ, ಪ್ರಕರಣಸ್ಫುಲಿಂಗಾಃ, ಅಲಂ, ತನವಃ, ಅಪಿ, ವಿಪಕ್ಷಕಕ್ಷಂ, ಕ್ಷಿಣ್ವಂತಿ ।

**ಅನ್ವಯಾರ್ಥ**—

**ಮಾರುತೇನ** = ಮುಖ್ಯಪ್ರಾಣರಾದ,
**ತ್ವಯಾ** = ನಿಮ್ಮಿಂದ,
**ಈರಿತಾಃ** = ಹೇಳಲ್ಪಟ್ಟ, ಪ್ರೇರಿಸಲ್ಪಟ್ಟ,
**ವಾದಾದಯಃ** = ತತ್ತ್ವೋದ್ಯೋತ ಮೊದಲಾಗಿ ಉಳ್ಳ,
**ಪ್ರಕರಣಸ್ಫುಲ್ಲಿಂಗಾಃ** = ಪ್ರಕರಣಗಳೆಂಬ ಬೆಂಕಿ ಕಿಡಿಗಳು,
**ಅಲಂ** = ಬಹಳ,
**ತನವಃ ಅಪಿ** = ಸಣ್ಣವಾದರೂ,
**ವಿಪಕ್ಷಕಕ್ಷಂ** = ಶತ್ರುಗಳೆಂಬ ಒಣಗಿದ ಕಾಡನ್ನು,
**ಕ್ಷಿಣ್ವಂತಿ** = ನಾಶಗೊಳಿಸುವುವು.

**ತಾತ್ಪರ್ಯ**— ಯಥಾ ವಾಯುನಾ ಉದ್ಬೋಧಿತಾಃ ಅಗ್ನಿಕಣಾಃ ವನಂ ನಾಶಯಂತಿ ತಥಾ ವಾಯುನಾ ತ್ವಯಾ ಪ್ರೋಕ್ತಾನಿ ಶ್ರೀಮತ್ತತ್ತ್ವೋದ್ಯೋತಾದಿಪ್ರಕರಣಾನಿ ಪ್ರತೀಪವಾದಂ ನಿರಾಕುರ್ವಂತಿ = ಗಾಳಿಯಿಂದ ಪ್ರೇರಿತವಾದ ಚಿಕ್ಕ ಚಿಕ್ಕ ಅಗ್ನಿಕಣಗಳು ದೊಡ್ಡದಾಗಿ ಪ್ರಜ್ವಲಿಸಿ ದೊಡ್ಡಕಾಡನ್ನು ಸುಡುತ್ತವೆ. ಅದರಂತೆ ವಾಯುದೇವರೇ ಆದರೆ ಶ್ರೀಮನ್ಮಧ್ವಾಚಾರ್ಯರಾದ ನೀವು ಮಾಡಿರುವ ತತ್ತ್ವೋದ್ಯೋತಾದಿ ಪ್ರಕರಣಗಳು ಚಿಕ್ಕವುಗಳಾದ್ದರಿಂದ ಚಿಕ್ಕ ಬೆಂಕಿಕಡ್ಡಿಗಳಂತಿದ್ದು ವಾಯುದೇವರಾದ ನಿಮ್ಮಿಂದ ರಚಿಸಲ್ಪಟ್ಟವುಗಳಾದ್ದರಿಂದ ದೊಡ್ಡವುಗಳಾಗಿ ವಿರುದ್ಧ ಸಿದ್ಧಾಂತವೆಂಬ ಒಣಗಿದ ಕಾಡನ್ನು ಸುಡುತ್ತವೆ. ಗಾಳಿಗೆ ಓಡಿಬಂದ ಬೆಂಕಿಕಿಡಿಗಳು ಚಿಕ್ಕವುಗಳಾದರೂ ಒಣಗಿದ ದೊಡ್ಡ ಕಾಡನ್ನು ಸುಡುವಂತೆ ತತ್ತ್ವೋದ್ಯೋತಾದಿ ಪ್ರಕರಣಗಳು ಚಿಕ್ಕವುಗಳಾಗಿದ್ದರೂ ನಿಮ್ಮಿಂದ ದೊಡ್ಡವುಗಳಾಗಿ ಪರಮತವನ್ನು ನಿರಾಕರಿಸುತ್ತವೆ ಎಂದು ಭಾವ.

**ವಿಗ್ರಹ ಮತ್ತು ಕೋಶ**—

**ವಾದಾದಯಃ**— ವಾದಃ ಆದಿಃ ಯೇಷಾಂ ತೇ ವಾದಾದಯಃ ।

**ಪ್ರಕರಣಸ್ಫುಲಿಂಗಾಃ**— ಪ್ರಕರಣಾನಿ ಏವ ಸ್ಫುಲಿಂಗಾಃ ಪ್ರಕರಣಸ್ಫುಲಿಂಗಾಃ । ಪ್ರಕರಣ ಎಂದರೆ ಶಾಸ್ತ್ರದ ಏಕದೇಶಕ್ಕೆ ಸಂಬಂಧಿಸಿ, ಶಾಸ್ತ್ರದ ಕಾರ್ಯವಾದ ತತ್ತ್ವಸ್ಥಿರೀಕರಣ, ಇತರ ವಾದಿಗಳ ನಿರಾಕರಣ ಇವುಗಳನ್ನು ಮಾಡುವ ಗ್ರಂಥವಿಶೇಷವು. ಅಥವಾ ಶಾಸ್ತ್ರವೆಂದರೆ ಬ್ರಹ್ಮಸೂತ್ರಗಳು. ಅದರ ಏಕದೇಶವೆಂದರೆ ಒಂದು ಸೂತ್ರ ಅಥವಾ ಅಧಿಕರಣ. ಇವುಗಳಿಗೆ ಹೇಳಿದ ಫಲ ಈ ಪ್ರಕರಣ ಗ್ರಂಥಕ್ಕೂ ಇರುತ್ತದೆ. ಇದು ಯಾವುದೋ ಒಂದು ಸೂತ್ರ ಅಥವಾ ಅಧಿಕರಣಕ್ಕೆ ಸಂಬಂಧಿಸಿದ ವಿಷಯವನ್ನೇ ಪ್ರತಿಪಾದಿಸುತ್ತದೆ.

**ಶಾಸ್ತ್ರೈಕದೇಶಸಂಬದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಮ್ ।**
**ಆಹುಃ ಪ್ರಕರಣಂ ನಾಮಗ್ರಂಥಭೇದಂ ವಿಪಶ್ಚಿತಃ ॥**

ಎಂದು ಪ್ರಕರಣಲಕ್ಷಣವನ್ನು ಹೇಳುತ್ತಾರೆ. ಸ್ಫುಲಿಂಗ=ಬೆಂಕಿಕಿಡಿ, 'ತ್ರಿಷು ಸ್ಫುಲಿಂಗೋಗ್ನಿಕಣಃ' ಅಮರ.

**ವಿಪಕ್ಷಕಕ್ಷಃ**— ವಿಪಕ್ಷ ಏವ ಕಕ್ಷಃ ವಿಪಕ್ಷಕಕ್ಷಃ ತಂ । ಕಕ್ಷ = ಒಣಕಾಡು, 'ಸೌರಭೇ ಚ ತೃಣೇ ಕಕ್ಷಂ ಶುಷ್ಕಕಾನನವೀರುಧೋಃ' ವಿಶ್ವಃ।

**ಕ್ರಿಯಾಪದ—** ಕ್ಷಿಣೋತಿ- ಕ್ಷಿಣುತಃ, ಕ್ಷಿಣ್ವಂತಿ ಕ್ಷಿಣೋಷಿ ಕ್ಷಿಣುಥಃ, ಕ್ಷಿಣುಥ ಕ್ಷಿಣೋಮಿ ಕ್ಷೀಣೋಮಿ, ಕ್ಷಿಣುವಃ- ಕ್ಷಿಣ್ವಃ ಕ್ಷಿಣುಮಃ ಕ್ಷಿಣ್ಮಃ । ಕ್ಷಿಣು (ಕ್ಷಿಣ್) = ಹಿಂಸಾಯಾಂ, ಸಕ. ಸೇಟ್. ಉಭ. to kill ವರ್ತಮಾನೇ ಲಟ್ ಪ್ರಥಮ- ಪುರುಷ ಬಹುವಚನಂ ಕ್ಷಿಣ್ವಂತಿ ಇತಿ ರೂಪಂ ।

**ಪ್ರಯೋಗ—** ಮಾರುತೇನ ತ್ವಯಾ ಈರಿತೈಃ ವಾದಾದಿಭಿಃ ಪ್ರಕರಣಸ್ಫುಲಿಂಗೈಃ ಅಲಂ ತನುಭಿಃ ಅಪಿ ವಿಪಕ್ಷಕಕ್ಷಃ ಕ್ಷಿಣ್ಯತೇ ।

★ ★ ★

**ಅವತಾರಿಕಾ—** ಅಣುಭಾಷ್ಯವನ್ನು ವರ್ಣಿಸುತ್ತಾರೆ.

**ಅನಂತೋಽರ್ಥಃ ಪ್ರಕಟಿತಸ್ತ್ವಯಾಣೌ ಭಾಷ್ಯಸಂಗ್ರಹೇ ।**
**ಅಹೋ ಆತ್ಮಪರಿಜ್ಞಪ್ತ್ಯೈ ಕೃಷ್ಣೇನೇವಾನನಾಂತರೇ ॥ 82 ॥**

**ಪದಚ್ಛೇದ—** ಅನಂತಃ, ಅರ್ಥಃ, ಪ್ರಕಟಿತಃ, ತ್ವಯಾ, ಅಣೌ, ಭಾಷ್ಯಸಂಗ್ರಹೇ, ಅಹೋ, ಆತ್ಮಪರಿಜ್ಞಪ್ತ್ಯೈ, ಕೃಷ್ಣೇನ, ಇವ, ಆನನಾಂತರೇ ।

**ಅನ್ವಯ—** ತ್ವಯಾ, ಆತ್ಮಪರಿಜ್ಞಪ್ತ್ಯೈ, ಅಣೌ, ಭಾಷ್ಯಸಂಗ್ರಹೇ, ಅನಂತಃ, ಅರ್ಥಃ, ಕೃಷ್ಣೇನ, ಆನನಾಂತರೇ, ಇವ, ಪ್ರಕಟಿತಃ, ಅಹೋ ।

**ಅನ್ವಯಾರ್ಥ—**

**ತ್ವಯಾ** = ತಮ್ಮಿಂದ,
**ಆತ್ಮಪರಿಜ್ಞಪ್ತ್ಯೈ** = ತಮ್ಮ ಸಾಮರ್ಥ್ಯದ ತಿಳುವಳಿಕೆಯನ್ನುಂಟುಮಾಡುವುದಕ್ಕಾಗಿ,
**ಅಣೌ** = ಸಂಕ್ಷಿಪ್ತವಾದ,
**ಭಾಷ್ಯಸಂಗ್ರಹೇ** = ಬ್ರಹ್ಮಸೂತ್ರಭಾಷ್ಯಾರ್ಥ ಸಂಗ್ರಹವುಳ್ಳ ಅಣುವೇದಾಂತಭಾಷ್ಯದಲ್ಲಿ,
**ಅನಂತಃ** = ಮಿತಿ ಇಲ್ಲದ,
**ಅರ್ಥಃ** = ವಿಷಯವು,
**ಕೃಷ್ಣೇನ** = ಶ್ರೀಕೃಷ್ಣನಿಂದ,
**ಆನನಾಂತರೇ ಇವ** = ತನ್ನ ಬಾಯಿಯ ಒಳಭಾಗದಲ್ಲಿ ಎಂಬಂತೆ,
**ಪ್ರಕಟಿತಃ** = ಸ್ಪಷ್ಟಗೊಳಿಸಲ್ಪಟ್ಟಿದೆ,
**ಅಹೋ** = ಆಶ್ಚರ್ಯ.

**ತಾತ್ಪರ್ಯ—** ಹಿಂದೆ ಒಂದು ಬಾರಿ ಬಾಲಕೃಷ್ಣನು ಮಣ್ಣನ್ನು ತಿಂದನೆಂದು ಯಶೋದೆಗೆ ತಿಳಿದುಬಂದಾಗ ಅವಳು ಶ್ರೀಕೃಷ್ಣನನ್ನು ಗದರಿಸಿ, ''ಏಕೆ ಮಣ್ಣನ್ನು ತಿಂದೆ? ಬಾಯಿ ತೆರೆ'' ಎಂದಳು. ಆಗ ಶ್ರೀಕೃಷ್ಣನು ತಾನು ಭಗವಂತನ ಅವತಾರ ವೆಂದು ತಿಳಿಸಲು ತನ್ನ ಅದ್ಭುತವಾದ ಮಹಿಮೆಯನ್ನು ತಿಳಿಸಲು ಪುಟ್ಟಬಾಯಿಯನ್ನು ತೆರೆದು ಅದರೊಳಗೆ ಸಮಸ್ತ ಬ್ರಹ್ಮಾಂಡವನ್ನು ತೋರಿದನು. ಆಗ ಯಶೋದೆಯು ಆಶ್ಚರ್ಯಪಟ್ಟಳು. ಹಾಗೆಯೇ, ಆಚಾರ್ಯರೇ! ತಾವು ತಮ್ಮ ಅಸಾಧಾರಣ ಮಹಿಮೆಯನ್ನು ತೋರಿಸುವುದಕ್ಕೋಸ್ಕರ ಬಹಳ ಚಿಕ್ಕದಾದ 'ಅಣುಭಾಷ್ಯ' ಎಂಬ ಗ್ರಂಥವನ್ನು ರಚಿಸಿ, ತಮ್ಮ ಭಾಷ್ಯದಲ್ಲಿ ತಿಳಿಸಿರುವ ಸಮಸ್ತ ವೇದಾಂತಸಾರವನ್ನು ಆ ಚಿಕ್ಕ ಗ್ರಂಥದಲ್ಲಿ ತೋರಿಸಿದಿರಿ. ದ್ವೈತಸಿದ್ಧಾಂತಕ್ಕನುಸಾರವಾಗಿ ಎಲ್ಲಾ ವೇದಾಂತ ಪ್ರಮೇಯರೂಪವಾದ 222 ಅಧಿಕರಣಗಳ ಸಾರದ ಸಂಗ್ರಹವನ್ನು ಚಿಕ್ಕ ಗ್ರಂಥದಲ್ಲಿ ಮಾಡಿದಿರಿ. ಈ ಮೂಲಕ ಆತ್ಮಪರಿಜ್ಞಪ್ತಿಯನ್ನು ಸಾತ್ತ್ವಿಕರಿಗೆ ಉಂಟುಮಾಡಿದಿರಿ. ಆತ್ಮಶಬ್ದಕ್ಕೆ ಮುಖ್ಯವಾಚ್ಯನು ಪರಮಾತ್ಮನು. ಅವನ

ಸ್ವರೂಪವು ಹೀಗಿದೆ. ಅವನನ್ನು ತಿಳಿದು ಸೇವಿಸಿದವರಿಗೆ ಇಂತಹ ಫಲವು ಸಿಗುತ್ತದೆ ಎಂಬ ವಿಷಯವನ್ನೆಲ್ಲಾ ಚಿಕ್ಕ ಗ್ರಂಥದಲ್ಲಿ ಸಾರರೂಪದಿಂದ ಅಡಕವಾಗಿ ಇಟ್ಟಿದ್ದೀರಿ. ಇದರಿಂದ ನಿಮ್ಮ ಆತ್ಮಪರಿಜ್ಞಪ್ತಿಯನ್ನೂ ಭಕ್ತಜನರಿಗೆ ಮಾಡಿಕೊಟ್ಟಿದ್ದೀರಿ. ಆಚಾರ್ಯರು ತಾವು ಮಹಾನುಭಾವರು. ಕೃಷ್ಣನು ಪುಟ್ಟ ಬಾಯಿಯಲ್ಲಿ ವಿಶ್ವವನ್ನು ತೋರಿದಂತೆ ಪುಟ್ಟ ಗ್ರಂಥದಲ್ಲಿ ಸಮಸ್ತ ಪ್ರಮೇಯವನ್ನು ತೋರಿಸಿದ್ದರಿಂದ ತಾವು ಕೃಷ್ಣಭಕ್ತಾಗ್ರೇಸರರಾದ ವಾಯುದೇವರ ಅವತಾರರೆಂದೂ ತಮ್ಮ ಬುದ್ಧಿಶಕ್ತಿಯು ಅಪಾರವೆಂದೂ ತಿಳಿಯಪಡಿಸಿದಿರಿ. ಇದು ಭಕ್ತರಿಗೆ ಆಶ್ಚರ್ಯಕರವಾಗಿದೆ ಎಂದು ಭಾವ. (ಈ ಗ್ರಂಥವನ್ನು ಅಣು-ವೇದಾಂತ, ಅಣುಭಾಷ್ಯ, ಸರ್ವಶಾಸ್ತ್ರಾರ್ಥ ಸಂಗ್ರಹ, ಅಣುಭಾಷ್ಯ ಸಂಗ್ರಹ ಎಂದೂ ಹೇಳುತ್ತಾರೆ). ಇಲ್ಲಿ ಉಪಮಾಲಂಕಾರವಿದೆ.

**ವಿಗ್ರಹ ಮತ್ತು ಕೋಶ—**

ಭಾಷ್ಯಸಂಗ್ರಹೇ— ಭಾಷ್ಯಸ್ಯ ಸಂಗ್ರಹಃ ಭಾಷ್ಯಸಂಗ್ರಹಃ ತಸ್ಮಿನ್ ।

ಆತ್ಮಪರಿಜ್ಞಪ್ತ್ಯೈ— ಆತ್ಮನಃ ಪರಿಜ್ಞಪ್ತಿಃ ಆತ್ಮಪರಿಜಪ್ತಿಃ ತಸ್ಯೈ ।

ಆನನಾಂತರೇ— ಆನನಸ್ಯ ಅಂತರಂ ಆನನಾಂತರಂ ತಸ್ಮಿನ್ ।

ಆತ್ಮಾ = ತಾನು, ಪರಮಾತ್ಮ, ಬುದ್ಧಿ, 'ಆತ್ಮಾ ಯತ್ನೋ ಧೃತಿ ಬುದ್ಧಿಃ ಸ್ವಭಾವೋ ಬ್ರಹ್ಮ ವರ್ಷ್ಮ ಚ' ಅಮರ. ಅಹೋ + ಆತ್ಮ ಪರಿಜ್ಞಪ್ತ್ಯೈ ಎಂಬಲ್ಲಿ ಓತ್ (1.1.15) ಎಂಬ ಸೂತ್ರದಂತೆ ಪ್ರಗೃಹ್ಯ ಸಂಜ್ಞೆ ಬಂದು ಪ್ರಕೃತಿಭಾವ ಬರುತ್ತದೆ. ಸಂಧಿಯಾಗುವುದಿಲ್ಲ.

**ಪ್ರಯೋಗ—** ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ. ಪ್ರಕಟಿತಃ ಎಂಬ ಕೃದಂತಪದದಿಂದ ಪ್ರಕಟಗೊಳಿಸಲ್ಪಟ್ಟಿತು ಎಂದು ಕರ್ಮಣಿ ಪ್ರಯೋಗವು ತೋರಿಸಲ್ಪಟ್ಟಿದೆ. ಅದನ್ನು ಕರ್ತರಿ ಪ್ರಯೋಗಕ್ಕೆ ಬದಲಾಯಿಸಿದಾಗ ಆ ವಾಕ್ಯವು ಹೀಗೆ ಆಗುತ್ತದೆ. ''ತ್ವಂ ಆತ್ಮಪರಿಜ್ಞಪ್ತ್ಯೈ ಅಸೌ ಭಾಷ್ಯಸಂಗ್ರಹೇ ಅನಂತಂ ಅರ್ಥಂ ಕೃಷ್ಣಃ ಆನನಾಂತರ ಇವ ಪ್ರಾಕಟಯಃ, ಅಹೋ!''

★ ★ ★

**ಅವತಾರಿಕಾ—** ಯಮಕಭಾರತವೆಂಬ ಆಚಾರ್ಯರ ಕವಿತಾಗ್ರಂಥವನ್ನು ವರ್ಣಿಸುತ್ತಾರೆ.

**ಭಗವಂಶ್ಚಿತ್ರಕವಿತಾಂ ಲೌಕಿಕೀಂ ದರ್ಶಯನ್ ಕಿಲ ।**
**ಗೋಪ್ಯಂ ಭಾರತಸಂಕ್ಷೇಪಮಕೃಥಾ ವಿಶ್ವವಿಸ್ಮಯಮ್ ॥ 83 ॥**

**ಪದಚ್ಛೇದ—** ಭಗವನ್, ಚಿತ್ರಕವಿತಾಂ, ಲೌಕಿಕೀಂ, ದರ್ಶಯನ್, ಕಿಲ, ಗೋಪ್ಯಂ, ಭಾರತಸಂಕ್ಷೇಪಂ, ಅಕೃಥಾಃ, ವಿಶ್ವವಿಸ್ಮಯಂ ।

**ಅನ್ವಯ—** ಭಗವನ್, ಲೌಕಿಕೀಂ, ಚಿತ್ರಕವಿತಾಂ, ದರ್ಶಯನ್, ಗೋಪ್ಯಂ, ವಿಶ್ವವಿಸ್ಮಯಂ, ಭಾರತಸಂಕ್ಷೇಪಂ, ಅಕೃಥಾಃ, ಕಿಲ ।

**ಅನ್ವಯಾರ್ಥ—**

**ಭಗವನ್** = ಷಡ್ಗುಣೈಶ್ವರ್ಯಸಂಪನ್ನರಾದ ಪೂಜ್ಯ ಆಚಾರ್ಯರೇ! (ತ್ವಂ = ನೀವು),

**ಲೌಕಿಕೀಂ** = ಲೋಕದಲ್ಲಿ ಪ್ರಸಿದ್ಧವಾದ,

**ಚಿತ್ರಕವಿತಾಂ** = ಆಶ್ಚರ್ಯಕರವಾದ ಕವಿತೆಯನ್ನು,

**ದರ್ಶಯನ್** = ತೋರಿಸುತ್ತಾ,

**ಗೋಪ್ಯಂ** = ರಹಸ್ಯವಾದ, ರಹಸ್ಯವಾಗಿಡಲು ಯೋಗ್ಯವಾದ,

ವಿಶ್ವವಿಸ್ಮಯಂ = ಎಲ್ಲರಿಗೂ ಆಶ್ಚರ್ಯಕರವಾದ,

ಭಾರತಸಂಕ್ಷೇಪಂ = ಸಂಕ್ಷೇಪದಿಂದ ಭಾರತದ ಕಥೆಯನ್ನು ತಿಳಿಸುವ ಯಮಕಭಾರತವೆಂಬ ಗ್ರಂಥವನ್ನು,

ಅಕೃಥಾಃ ಕಿಲ = ಮಾಡಿದಿರಷ್ಟೆ!

**ತಾತ್ಪರ್ಯ—** ಷಡ್ಗುಣೈಶ್ವರ್ಯಸಂಪನ್ನರಾದ ಪರಮಪೂಜ್ಯರಾದ ಆಚಾರ್ಯರೇ! ಲೋಕದಲ್ಲಿ ಯಮಕವೆಂದು ಪ್ರಸಿದ್ಧವಾಗಿರುವ ಶಬ್ದಾಲಂಕಾರರೂಪವಾದ ಕವಿತೆಯು ತಮಗೆ ವಶವಾಗಿದೆ ಎಂದು ಸಾಮಾನ್ಯ ಜನರಿಗೆ ತಿಳಿಸಿಕೊಡು-ವುದಕ್ಕಾಗಿ ತಾವು ರಹಸ್ಯವಾದ ಭಾರತದ ಪ್ರಮೇಯವನ್ನು ತಿಳಿಸಿಕೊಡುವ ಯಮಕಕವಿತಾರೂಪವಾದ, ಪ್ರಪಂಚಕ್ಕೆಲ್ಲಾ ಆಶ್ಚರ್ಯಕರವಾದ ಯಮಕಭಾರತವೆಂಬ ಮಹಾಭಾರತಾರ್ಥಸಂಗ್ರಹರೂಪವಾದ ಶ್ರೇಷ್ಠಗ್ರಂಥವನ್ನು ಮಾಡಿದಿರಿ. ತಮ್ಮ ಸಾಮರ್ಥ್ಯವು ಅಸಾಧಾರಣವಾಗಿದೆ ಎಂದು ತ್ರಿವಿಕ್ರಮಪಂಡಿತರು ಆಚಾರ್ಯರ ಗ್ರಂಥನಿರ್ಮಾಣಶಕ್ತಿಯನ್ನು ಹೊಗಳುತ್ತಾ ಆಚಾರ್ಯರ ಮಹಿಮೆಯನ್ನು ಪ್ರಕಟಗೊಳಿಸಿದರು ಎಂದು ಭಾವವು.

**ವಿಗ್ರಹ—**

ಭಗವನ್— ಭಗಃ ಅಸ್ಯ ಅಸ್ತೀತಿ ಭಗವಾನ್, ತಸ್ಯ ಸಂಬುದ್ಧಿಃ ಹೇ ಭಗವನ್!

**ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।**
**ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥**

ಎಂಬ ಪ್ರಮಾಣದಂತೆ ಸಂಪೂರ್ಣವಾದ ಐಶ್ವರ್ಯ, ವೀರ್ಯ, ಕೀರ್ತಿ, ಸಂಪತ್ತು, ಜ್ಞಾನ, ವಿಜ್ಞಾನ, ಇವುಗಳ ಸಮುದಾಯಕ್ಕೆ ಭಗ ಎಂದು ಹೆಸರು. ಈ ಷಡ್ಗುಣಸ್ವರೂಪವಾದ ಐಶ್ವರ್ಯವುಳ್ಳವರು ಭಗವಂತರು.

**ಚಿತ್ರಕವಿತಾಂ—** ಚಿತ್ರಾ ಚ ಸಾ ಕವಿತಾ ಚ ಚಿತ್ರಕವಿತಾ ತಾಂ ।

**ಲೋಕವಿದಿತಃ—** ಲೋಕೇಷು ವಿದಿತಃ ಲೌಕಿಕಃ, ಲೋಕಸರ್ವಲೋಕಾಟ್ಠಞ್ (5.1.44) ಎಂಬ ಸೂತ್ರದಿಂದ, 'ತತ್ರ ವಿದಿತಃ (ಲೋಕದಲ್ಲಿ ಪ್ರಸಿದ್ಧವಾದುದು ಎಂಬ ಅರ್ಥದಲ್ಲಿ ಠಞ್ ಪ್ರತ್ಯಯ ಲೋಕ+ಠ, ಠಕ್ಕೆ ಇಕ ಆದೇಶ, ಆದಿವೃದ್ಧಿ, ಕಕಾರದ ಮುಂದಿರುವ ಆಕಾರಕ್ಕೆ ಲೋಪ, ಲೌಕಿಕ ಎಂದು ರೂಪ). ಮುಂದೆ ಸ್ತ್ರೀಲಿಂಗದಲ್ಲಿ ಙೀಪ್ ಪ್ರತ್ಯಯ, ಲೌಕಿಕ + ಈ, ಇಲ್ಲಿಯೂ ಕಕಾರದ ಮುಂದಿರುವ ಅಕಾರಕ್ಕೆ ಲೋಪ ಬಂದು ಲೌಕಿಕೀ ಎಂದು ರೂಪವಾಗಿದೆ ।

**ಗೋಪ್ಯಂ—** ಗೋಪಾಯಿತುಂ ಯೋಗ್ಯಂ ಗೋಪ್ಯಂ ।

**ಭಾರತಸಂಕ್ಷೇಪಂ—** ಸಂಕ್ಷಿಪ್ಯತೇ ಅತ್ರ ಇತಿ ಸಂಕ್ಷೇಪಃ, ಭಾರತಸ್ಯ ಸಂಕ್ಷೇಪಃ ಭಾರತಸಂಕ್ಷೇಪಃ ತಂ । ಅಥವಾ ಭಾರತಸ್ಯ ಸಂಕ್ಷೇಪಃ ಯಸ್ಮಿನ್ ಸಃ ಭಾರತಸಂಕ್ಷೇಪಃ ತಂ ।

**ವಿಶ್ವವಿಸ್ಮಯಂ—** ವಿಶ್ವಸ್ಯ ವಿಸ್ಮಯಃ ಯಸ್ಮಾತ್ ಸಃ ವಿಶ್ವವಿಸ್ಮಯಃ ತಂ ।

**ಕ್ರಿಯಾಪದ— ಅಕೃಥಾಃ** - ಅಕೃತ ಅಕೃಷಾತಾಂ ಅಕೃಷತ, ಅಕೃಥಾಃ ಅಕೃಷಾಥಾಂ ಅಕೃಢ್ವಂ, ಅಕೃಷಿ ಅಕೃಷ್ವಹಿ ಅಕೃಷ್ಮಹಿ । ಡುಕೃಞ್ ಕರಣೇ ಸಕ. ಉಭ. ಅನಿ. ಆತ್ಮನೇ ಪದ. ಭೂತೇ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಅಕೃಥಾಃ ಎಂದು ರೂಪ ।

**ಪ್ರಯೋಗ—** ಭಗವನ್ (ತ್ವಯಾ) ಲೌಕಿಕೀಂ ಚಿತ್ರಕವಿತಾಂ ದರ್ಶಯತಾ (ಸತಾ), ಗೋಪ್ಯಃ ವಿಶ್ವವಿಸ್ಮಯಃ ಭಾರತ ಸಂಕ್ಷೇಪಃ ಅಕಾರಿ ಕಿಲ ।

★ ★ ★

**ಅವತಾರಿಕಾ**— ಸದಾಚಾರಸ್ಮೃತಿ, ಜಯಂತೀಕಲ್ಪ ಯತಿಪ್ರಣವಕಲ್ಪ ಮೊದಲಾದ ಇನ್ನೂ ಅನೇಕ ಗ್ರಂಥಗಳನ್ನು ಒಂದೇ ಶ್ಲೋಕದಿಂದ ವರ್ಣಿಸುತ್ತಾರೆ.

**ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ ।**
**ತ್ವಯಿ ರತ್ನಾಕರೇ ರತ್ನಶ್ರೇಣೀರ್ವಾ ಗಣಯಂತಿ ಕೇ ॥ 84 ॥**

**ಪದಚ್ಛೇದ**— ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ, ತ್ವಯಿ, ರತ್ನಾಕರೇ, ರತ್ನಶ್ರೇಣೀಃ, ವಾ, ಗಣಯಂತಿ, ಕೇ?

**ಅನ್ವಯ**—ತ್ವಯಿ, ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ, ರತ್ನಾಕರೇ, ರತ್ನಶ್ರೇಣೀಃ, ವಾ, ಕೇ, ಗಣಯಂತಿ!

**ಅನ್ವಯಾರ್ಥ**—

**ತ್ವಯಿ** = ನಿಮ್ಮಲ್ಲಿ (ನಿಮ್ಮಲ್ಲಿರುವ, ನೀವು ಮಾಡಿರುವ),

**ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ** = ಅನೇಕ ಪ್ರಕಾರವಾದ, ನೀತಿಬೋಧಕ ಶ್ಲೋಕಗಳ, (ಹಿತೋಕ್ತಿಗಳ) ಸ್ತುತಿಗ್ರಂಥಗಳ, ಹಾಡಲು ಯೋಗ್ಯವಾದ ಪದ್ಯಗಳ, ಇವುಗಳೇ ಮೊದಲಾಗಿ ಉಳ್ಳವುಗಳ ರಚನಾರೂಪವಾದ ಉತ್ತಮವಾದ ಗ್ರಂಥಗಳನ್ನು,

**ರತ್ನಾಕರೇ** = ರತ್ನಗಳಿಗೆ ಆಶ್ರಯವಾದ ಸಮುದ್ರದಲ್ಲಿ,

**ರತ್ನಶ್ರೇಣೀಃ ವಾ** = ರತ್ನಗಳ ಸಾಲುಗಳನ್ನೆಂಬಂತೆ,

**ಕೇ** = ಯಾರು,

**ಗಣಯಂತಿ** = ಲೆಕ್ಕ ಮಾಡುತ್ತಾರೆ?

**ತಾತ್ಪರ್ಯ**— ಸಮುದ್ರಕ್ಕೆ ರತ್ನಾಕರ ಎಂಬ ಹೆಸರಿದೆ. ಅಲ್ಲಿ ಲೆಕ್ಕಮಾಡಲು ಸಾಧ್ಯವಿಲ್ಲದಷ್ಟು ರತ್ನಗಳು, ಶ್ರೇಷ್ಠವಸ್ತು-ಗಳಿವೆ. ಆ ರತ್ನಸಮೂಹಗಳನ್ನು ಯಾರು ಲೆಕ್ಕ ಮಾಡಿಯಾರು ಅದರಂತೆಯೇ ತಾವು ರಚಿಸಿದ ಅನೇಕ ಸುಭಾಷಿತಗಳು, ಸ್ತೋತ್ರಗಳು, ಗಾಥೆಗಳು, ಇವನ್ನೆಲ್ಲಾ ಯಾರು ಲೆಕ್ಕ ಮಾಡಿಯಾರು? ಸದಾಚಾರಸ್ಮೃತಿ, ಜಯಂತೀಕಲ್ಪ, ನಖಸ್ತುತಿ, ದ್ವಾದಶಸ್ತೋತ್ರ, ಯತಿಪ್ರಣವಕಲ್ಪ ಮುಂತಾದ ಅನೇಕ ಗ್ರಂಥರತ್ನಗಳನ್ನು ತಾವು ರಚಿಸಿರುವಿರಿ. ಸಮುದ್ರದಲ್ಲಿ ಅಪರಿ-ಮಿತವಾದ ರತ್ನಗಳು ಇರುತ್ತವೆ ಮತ್ತು ಹೊಸದಾಗಿ ಹುಟ್ಟುತ್ತವೆ, ಸೇರಿಕೊಳ್ಳುತ್ತವೆ. ಅದರಂತೆ ತಾವು ಮಾಡಿರುವ ಅದ್ಭುತ ಗ್ರಂಥರತ್ನಗಳನ್ನು ಲೆಕ್ಕಮಾಡಲು ಸಾಧಾರಣ ಮಾನವರಿಗೆ ಸಾಧ್ಯವಿಲ್ಲ ಎಂದು ಭಾವ.

**ವಿಗ್ರಹ ಮತ್ತು ಕೋಶ**—

**ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ**— ಸ್ತೋತ್ರಾಣಿ ಚ ಗಾಥಾಶ್ಚ ಸೋತ್ರಗಾಥಾಃ, ಸ್ತೋತ್ರಗಾಥಾಃ ಆದಯಃ ಯೇಷಾಂ ತೇ ಸ್ತೋತ್ರಗಾಥಾದಯಃ, ನಾನಾವಿಧಾನಿ ಸುಭಾಷಿತಾನಿ ಯೇಷು ತೇ ನಾನಾ ಸುಭಾಷಿತಾಃ, ನಾನಾಸುಭಾಷಿತಾಶ್ಚ ತೇ ಸ್ತೋತ್ರಗಾಥಾದಯಶ್ಚ ನಾನಾಸುಭಾಷಿತಸ್ತೋತ್ರಗಾಥಾ ದಯಃ, ನಾನಾಸುಭಾಷಿತಸ್ತೋತ್ರಗಾಥಾದೀನಾಂ ಕೃತಿಃ ನಾನಾಸುಭಾಷಿತಸ್ತೋತ್ರಗಾಥಾದಿಕೃತಿಃ, ಸತ್ಯಶ್ಚ ತಾಃ ಕೃತಯಶ್ಚ ಸತ್ಕೃತಯಃ, ನಾನಾಸುಭಾಷಿತಸ್ತೋತ್ರಗಾಥಾದಿಕೃತ್ಯಾತ್ಮಿಕಾಶ್ಚ ತಾಃ ಸತ್ಕೃತಯಶ್ಚ ನಾನಾ ಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತಯಃ ತಾಃ ।

**ರತ್ನಾಕರೇ**— ರತ್ನಾನಾಂ ಆಕರಃ ರತ್ನಾಕರಃ । ರತ್ನಾಕರ = ಸಮುದ್ರ, 'ರತ್ನಾಕರೋ ಜಲನಿಧಿರ್ಯಾದಃಪತಿರ ಪಾಂಪತಿಃ' ಅಮರ ।

**ರತ್ನಶ್ರೇಣೀಃ**— ರತ್ನಾನಾಂ ಶ್ರೇಣ್ಯಃ ರತ್ನಶ್ರೇಣ್ಯಃ ತಾಃ । ಶ್ರೇಣೀ = ಸಾಲು, ಸಮೂಹ, 'ವೀಥ್ಯಾಲಿರಾವಲಿಃ ಪಂಕ್ತಿಃ ಶ್ರೇಣೀ ಲೇಖಾಸ್ತು ರಾಜಯಃ' ಅಮರ, ಶ್ರೇಣಿ, ಶ್ರೇಣೀ ಸ್ತ್ರೀ ಮತ್ತು ಪುಂ, ವಾ = 'ವಿಕಲ್ಪೋಪಮಾನಯೋಃ' ಅಮರ ।

**ಕ್ರಿಯಾಪದ— ಗಣಯಂತಿ** - ಗಣಯತಿ ಗಣಯತಃ ಗಣಯಂತಿ, ಗಣಯಸಿ ಗಣಯಥಃ ಗಣಯಥ, ಗಣಯಾಮಿ, ಗಣಯಾವಃ ಗಣಯಾಮಃ । ಗಣಸಂಖ್ಯಾನೇ 10ನೇ ಗಣ ಚುರಾದಿ ಸಕ. ಸೇಟ್. ಉಭ. ವರ್ತಮಾನೇ ಲಟ್ ಪ್ರಥಮಪುರುಷ ಬಹುವಚನ ।

**ಪ್ರಯೋಗ**— ತ್ವಯಿ ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸಸ್ಕೃತಯಃ ರತ್ನಾಕರೇ ರತ್ನಶ್ರೇಣ್ಯಃ ವಾಕ್ಯೈಃ ಗಣ್ಯಂತೇ? (ಕರ್ಮಣಿ)

★ ★ ★

**ಅವತಾರಿಕಾ**— ಇದುವರೆಗೆ ವರ್ಣಿಸಿದ ಗ್ರಂಥಗಳ ಮಹಿಮೆಯನ್ನು ಸಂಗ್ರಹಿಸಿ ವರ್ಣಿಸುತ್ತಾರೆ.

**ಏಷು ದಭ್ರಮತೀನ್ ದಭ್ರಾನ್ ಹಸತ್ಯುಚ್ಚೈಃ ಸತಾಂ ಸಭಾ ।**
**ಚಿಂತಾಮಣೀಂಶ್ಚಿಂತಯಂತೀ ಮಿತಾನಪ್ಯಮಿತಾರ್ಥದಾನ್ ॥ 85 ॥**

**ಪದಚ್ಛೇದ**— ಏಷು, ದಭ್ರಮತೀನ್, ದಭ್ರಾನ್, ಹಸತಿ, ಉಚ್ಚೈಃ, ಸತಾಂ, ಸಭಾ, ಚಿಂತಾಮಣೀನ್‌ಚಿಂತಯಂತೀ, ಮಿತಾನ್, ಅಪಿ, ಅಮಿತಾರ್ಥದಾನ್ ।

**ಅನ್ವಯ**— ಮಿತಾನ್, ಅಪಿ, ಅಮಿತಾರ್ಥದಾನ್, ಚಿಂತಾಮಣೀನ್‌ಚಿಂತಯಂತೀ, ಸತಾಂ, ಸಭಾ, ಏಷು, ದಭ್ರಮತೀನ್, ದಭ್ರಾನ್, ಉಚ್ಚೈಃ, ಹಸತಿ ।

**ಅನ್ವಯಾರ್ಥ**—

**ಮಿತಾನ್ ಅಪಿ** = ಅಲ್ಪಪರಿಣಾಮವುಳ್ಳದ್ದಾಗಿದ್ದರೂ, ಸ್ವಲ್ಪವೇ ಶಬ್ದಗಳಿಂದ ಕೂಡಿ ಚಿಕ್ಕದಾಗಿದ್ದರೂ,
**ಅಮಿತಾರ್ಥದಾನ್** = ಮಿತಿಯಿಲ್ಲದ ಸಂಪತ್ತುಗಳನ್ನು ಕೊಡುವ, ಮಿತಿಯಿಲ್ಲದ ವಿಷಯಗಳನ್ನು ಕೊಡುವ, ಮಿತಿಯಿಲ್ಲದ ವಿಷಯಗಳನ್ನು ನಿರೂಪಿಸುವ (ಗ್ರಂಥಗಳನ್ನು),
**ಚಿಂತಾಮಣೀನ್** = ಚಿಂತಾಮಣಿ ಎಂಬ ರತ್ನಸಮಾನಗಳನ್ನಾಗಿ,
**ಚಿಂತಯಂತೀ** = ತಿಳಿಯುವ,
**ಸತಾಂ** = ಸಜ್ಜನರ,
**ಸಭಾ** = ಸಮಿತಿಯು (ಸಮೂಹವು),
**ಏಷು** = ತಾವು ರಚಿಸಿರುವ ಗ್ರಂಥಗಳಲ್ಲಿ,
**ದಭ್ರಮತೀನ್** = ಸಣ್ಣ ಗ್ರಂಥಗಳೆಂಬ ಭಾವನೆ ಉಳ್ಳ,
**ದಭ್ರಾನ್** = ಅಲ್ಪಜನರನ್ನು (ಕೆಲವೇ ಜನರನ್ನು),
**ಉಚ್ಚೈಃ** = ಗಟ್ಟಿಯಾಗಿ (ಚೆನ್ನಾಗಿ),
**ಹಸತಿ** = ಉಪಹಾಸ ಮಾಡುತ್ತದೆ.

**ತಾತ್ಪರ್ಯ**— ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೇ! ತಮ್ಮ ಗ್ರಂಥಗಳು ಶಬ್ದ ಪರಿಮಾಣದಿಂದ ಚಿಕ್ಕವುಗಳಾಗಿ ಇವೆ. ಆದರೆ ಅವುಗಳು ಅಪರಿಮಿತವಾದ ಅರ್ಥವನ್ನು ಕೊಡುತ್ತವೆ. ವಿಚಾರ ಮಾಡುವ ಸಾತ್ತ್ವಿಕಚೇತನರಿಗೆ ತಮ್ಮ

ಗ್ರಂಥಗಳು ಎಲ್ಲಾ ವಿಧವಾದ ಸಂದೇಹಗಳನ್ನು ಪರಿಹರಿಸುವ ಉತ್ತರಗಳನ್ನು ಬೋಧಿಸುತ್ತವೆ. ಚಿಂತಾಮಣಿಯು ಚಿಕ್ಕದಾಗಿದ್ದರೂ, ಚಿಂತಿಸಿದ ಪ್ರಯೋಜನಗಳನ್ನು, ಸಂಪತ್ತುಗಳನ್ನು ಕೊಡುತ್ತದೆ. ಚಿಂತಾಮಣಿಯಂತಿರುವ ಈ ತಮ್ಮ ಗ್ರಂಥಗಳು ಅತಿ ಶ್ರೇಷ್ಠವಾಗಿವೆ ಎಂದು ಆಲೋಚಿಸುವ ಸಜ್ಜನರಾದ ವಿದ್ವಾಂಸರ ಸಭೆಯು ಈ ಗ್ರಂಥಗಳು ಅಲ್ಪವಾಗಿವೆ ಎಂದು ತಿಳಿಯುವ ಮೂಢಮತಿಗಳನ್ನು ಅಪಹಾಸ ಮಾಡುತ್ತವೆ. ಚಿಂತಾಮಣಿಯು ಚಿಕ್ಕದಾಗಿದ್ದರೂ ಚಿಂತಿಸಿದ ಅನೇಕ ಇಷ್ಟಾರ್ಥಗಳನ್ನು ಕೊಡುವಂತೆ, ತಮ್ಮ ಗ್ರಂಥಗಳು ಚಿಕ್ಕವಾಗಿದ್ದರೂ ಚಿಂತಿಸಿದ ಅರ್ಥಗಳನ್ನು ಅಮೂಲ್ಯವಾದ ಅನೇಕ ವಿಷಯಗಳನ್ನೂ ತಿಳಿಸಿಕೊಡುತ್ತವೆ. ಇವುಗಳು ಅಲ್ಪಗ್ರಂಥಗಳೆಂದು ತಿಳಿಯುವವರು ಸಜ್ಜನರಾದ ವಿದ್ವಾಂಸರ ಸಭೆಯಲ್ಲಿ ಅಪಮಾನ ಹೊಂದುವರು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ದಭ್ರಮತೀನ್—** ದಭ್ರಾ ಇತಿ ಮತಿಃ ಯೇಷಾಂ ತೇ ದಭ್ರಮತಯಃ ತಾನ್ । ದಭ್ರ = ಅಲ್ಪ, little, small 'ಸ್ತೋಕಾಲ್ಪಕ್ಷುಲ್ಲಕಾಃ ಸೂಕ್ಷ್ಮಂ ಶ್ಲಕ್ಷ್ಣಂ ದಭ್ರಂ ಕೃಶಂ ತನು' ಅಮರ ।

**ಅಮಿತಾರ್ಥದಾನ್—** ನ ಮಿತಾಃ ಅಮಿತಾಃ, ಅಮಿತಾಶ್ಚ ತೇ ಅರ್ಥಾಶ್ಚ ಅಮಿತಾರ್ಥಾಃ ತಾನ್ ।

**ಕ್ರಿಯಾಪದ— ಹಸತಿ** - ಹಸತಿ ಹಸತಃ ಹಸಂತಿ, ಹಸಸಿ ಹಸಥಃ ಹಸಥ, ಹಸಾಮಿ ಹಸಾವಃ ಹಸಾಮಃ । ಹಸೇ ಹಸನೇ, (ಹಸ್ ಅಕ. ಸೇಟ್. ಪರ.) to laugh, to joke, ವರ್ತಮಾನೇ ಲಟ್, ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ಮಿತಾನ್ ಅಪಿ ಅಮಿತಾರ್ಥದಾನ್ ಚಿಂತಾಮಣೀನ್ ಚಿಂತಯಂತ್ಯಾ ಸತಾಂ ಸಭಯಾ ಏಷು ದಭ್ರಮತಯಃ ದಭ್ರಾಃ ಉಚ್ಚೈಃ ಹಸ್ಯಂತೇ (ಕರ್ಮಣಿ) ।

★ ★ ★

**ಅವತಾರಿಕಾ—** ಆಚಾರ್ಯರ ಗ್ರಂಥಗಳನ್ನು ಈ ರೀತಿ ಸ್ತೋತ್ರಮಾಡಲು ಕಾರಣವೇನೆಂದು ತಿಳಿಸುತ್ತಾರೆ.

**ಅಪರೋಽಪೀಷ್ಯತೇಽಸ್ಮಾಭಿರ್ಗ್ರಂಥೇಷ್ವೇತೇಷು ಸತ್ಸ್ವಪಿ ।**
**ಸತ್ಸ್ವಪೀಂದ್ರಾದಿಷು ಪುರಾ ತಾರಕಾರಿರಿವಾಮರ್ತ್ಯೈಃ ॥ 86 ॥**

**ಪದಚ್ಛೇದ—** ಅಪರಃ, ಅಪಿ, ಇಷ್ಯತೇ, ಅಸ್ಮಾಭಿಃ, ಗ್ರಂಥೇಷು, ಏತೇಷು, ಸತ್ಸು, ಅಪಿ, ಸತ್ಸು, ಅಪಿ, ಇಂದ್ರಾದಿಷು, ಪುರಾ, ತಾರಕಾರಿಃ, ಇವ, ಅಮರ್ತ್ಯೈಃ ।

**ಅನ್ವಯ—** ಏತೇಷು, ಗ್ರಂಥೇಷು, ಸತ್ಸು ಅಪಿ, ಅಸ್ಮಾಭಿಃ, ಅಪರಃ, ಅಪಿ (ಗ್ರಂಥಃ), ಪುರಾ, ಇಂದ್ರಾದಿಷು, ಸತ್ಸು ಅಪಿ, ಅಮರ್ತ್ಯೈಃ, ತಾರಕಾರಿಃ, ಇವ, ಇಷ್ಯತೇ ।

**ಅನ್ವಯಾರ್ಥ—**

**ಏತೇಷುಗ್ರಂಥೇಷು** = ಇಂತಹ ಗ್ರಂಥಗಳು,
**ಸತ್ಸು = ಅಪಿ** = ಇದ್ದರೂ,
**ಅಸ್ಮಾಭಿಃ** = ನಮ್ಮಿಂದ,
**ಅಪರಃ ಅಪಿ (ಗ್ರಂಥಃ)** = ಬೇರೊಂದು ಗ್ರಂಥವೂ,
**ಪುರಾ** = ಹಿಂದೆ,
**ಇಂದ್ರಾದಿಷು ಸತ್ಸು ಅಪಿ** = ಇಂದ್ರ ಮೊದಲಾದವರು ಇದ್ದರೂ,
**ಅಮರ್ತ್ಯೈಃ** = ದೇವತೆಗಳಿಂದ,

**ತಾರಕಾರಿಃ ಇವ** = ತಾರಕಾಸುರನ ಶತ್ರುವಾದ ಸುಬ್ರಹ್ಮಣ್ಯನೋಪಾದಿಯಲ್ಲಿ,
**ಇಷ್ಯತೇ** = ಅಪೇಕ್ಷಿಸಲ್ಪಡುತ್ತದೆ.

**ತಾತ್ಪರ್ಯ**— ಪೂರ್ವದಲ್ಲಿ ಸಮರ್ಥರಾದ ಇಂದ್ರಾದಿದೇವತೆಗಳು ಇದ್ದರೂ, ದೇವತೆಗಳೆಲ್ಲಾ ಸೇರಿ ತಾರಕಾಸುರನ ಸಂಹಾರ ಮಾಡಲು ಷಣ್ಮುಖನಾದ ಸುಬ್ರಹ್ಮಣ್ಯನು ಬೇಕೆಂದು ಅಪೇಕ್ಷಿಸಿದರು. ಅವನಿಂದ ತಾರಕಾಸುರನ ನಿಗ್ರಹವಾದಾಗ ಆನಂದಿಸಿದರು. ಅದರಂತೆ ನಾವೂ ಇತರ ದರ್ಶಗಳನ್ನೂ ಮಾಯಾವಾದವನ್ನೂ ತಿರಸ್ಕರಿಸಿ ನಮ್ಮ ಸಿದ್ಧಾಂತವನ್ನು ಪ್ರತಿಷ್ಠಾಪಿಸುವ ಮತ್ತೊಂದು ಗ್ರಂಥವು ತಮ್ಮಿಂದ ರಚಿತವಾಗಬೇಕೆಂದು ತಮ್ಮಲ್ಲಿ ಪ್ರಾರ್ಥಿಸುತ್ತಿದ್ದೇವೆ ಎಂದು ಭಾವ.

**ವಿಗ್ರಹ**—

**ಇಂದ್ರಾದಿಷು**— ಇಂದ್ರಃ ಆದಿಃ ಯೇಷಾಂ ತೇ ಇಂದ್ರಾದಯಃ ತೇಷು ।
**ತಾರಕಾರಿಃ**— ತಾರಕಸ್ಯ ಅರಿಃ ತಾರಕಾರಿಃ ।

**ಕ್ರಿಯಾಪದ**— **ಇಷ್ಯತೇ** - ಇಷ್ಯತೇ ಇಷ್ಯೇತೇ ಇಷ್ಯಂತೇ, ಇಷ್ಯಸೇ ಇಷ್ಯೇಥೇ ಇಷ್ಯಧ್ವೇ, ಇಷ್ಯೇ ಇಷ್ಯಾವಹೇ ಇಷ್ಯಾಮಹೇ । ಇಷ್ (ಇಚ್ಛ್) ಇಚ್ಛಾಯಾಂ ಸಕ. ಸೇಟ್. ಪರ. to wish.

**ಪ್ರಯೋಗ**— ಏತೇಷು ಗ್ರಂಥೇಷು ಸತ್ಸು ಅಪಿ ವಯಂ ಅಪರಂ ಅಪಿ (ಗ್ರಂಥಂ) ಪುರಾ ಇಂದ್ರಾದಿಷು ಸತ್ಸು ಅಪಿ ಅಮರಾಃ ತಾರಕಾರಿಂ ಇವ ಇಚ್ಛಾಮಃ (ಕರ್ತರಿ) ।

★ ★ ★

**ಅವತಾರಿಕಾ**— ಹಿಂದೆ ರಚಿಸಿರುವ ಗ್ರಂಥಗಳಲ್ಲಿಯೇ ಬೇಕಾದ ಯುಕ್ತಿಗಳಿರುವಾಗ ನೂತನ ಗ್ರಂಥವು ಏಕೆ ಬೇಕು?

**ಗ್ರಂಥೇಭ್ಯ ಏಭ್ಯೋಽಗಾಧೇಭ್ಯೋ ಯುಕ್ತಯೋ ನೋ ದುರುದ್ಧರಾಃ ।**
**ಮನೋಮಾಂದ್ಯಾತ್ತತೋ ಗ್ರಂಥಂ ವ್ಯಕ್ತತರ್ಕತತಿಂ ಕುರು ॥ 87 ॥**

**ಪದಚ್ಛೇದ**— ಗ್ರಂಥೇಭ್ಯಃ, ಏಭ್ಯಃ, ಅಗಾಧೇಭ್ಯಃ, ಯುಕ್ತಯಃ, ನಃ, ದುರುದ್ಧರಾಃ, ಮನೋಮಾಂದ್ಯಾತ್, ತತಃ, ಗ್ರಂಥಂ, ವ್ಯಕ್ತತರ್ಕತತಿಂ, ಕುರು ।

**ಅನ್ವಯ**— ಏಭ್ಯಃ, ಅಗಾಧೇಭ್ಯಃ, ಗ್ರಂಥೇಭ್ಯಃ, ಯುಕ್ತಯಃ, ಮನೋಮಾಂದ್ಯಾತ್, ದುರುದ್ಧರಾಃ, ತತಃ, ನಃ, ವ್ಯಕ್ತತರ್ಕತತಿಂ, ಗ್ರಂಥಂ, ಕುರು ।

**ಅನ್ವಯಾರ್ಥ**—

**ಏಭ್ಯಃ ಅಗಾಧೇಭ್ಯಃ** = ಇಂತಹ ಗಂಭೀರವಾದ,
**ಗ್ರಂಥೇಭ್ಯಃ** = (ತಮ್ಮ) ಗ್ರಂಥಗಳಿಂದ,
**ಯುಕ್ತಯಃ** = ಯುಕ್ತಿಗಳು,
**ಮನೋಮಾಂದ್ಯಾತ್** = ಬುದ್ಧಿಯ ಅಲ್ಪತೆಯಿಂದ, (ಬುದ್ಧಿಯ ಮೌಢ್ಯದಿಂದ),
**ದುರುದ್ಧರಾಃ** = ಹೊರತೆಗೆಯಲು ಅಶಕ್ಯಗಳು,
**ತತಃ** = ಆದುದರಿಂದ,
**ನಃ** = ನಮಗೆ,
**ವ್ಯಕ್ತತರ್ಕತತಿಂ** = ಸ್ಪಷ್ಟವಾದ ಯುಕ್ತಿಗಳ ಸಮೂಹವುಳ್ಳ,
**ಗ್ರಂಥಂ** = ಗ್ರಂಥವನ್ನು,
**ಕುರು** = ಮಾಡಿರಿ.

**ತಾತ್ಪರ್ಯ—** ತಮ್ಮ ಇದುವರೆಗಿನ ಗ್ರಂಥಗಳೂ ಗೂಢವಾದ ಅನೇಕ ಯುಕ್ತಿಗಳನ್ನೂ, ಅಭಿಪ್ರಾಯಗಳನ್ನೂ ಒಳಗೊಂಡಿವೆ. ಆದುದರಿಂದಲೇ ಇವು ಅತ್ಯಂತ ಗಂಭೀರವಾಗಿವೆ. ಈ ಗ್ರಂಥಗಳಿಂದ ತಮಗೆ ಸಮ್ಮತಗಳಾದ, ಅನು-ಕೂಲಗಳಾದ ಯುಕ್ತಿಗಳನ್ನು ಎತ್ತಿ ತೆಗೆಯಲು ಅಲ್ಪಬುದ್ಧಿಗಳಾದ ನಮಗೆ ಸಾಮರ್ಥ್ಯವಿಲ್ಲ. ಆದುದರಿಂದ ನಮಗಾಗಿ ಸ್ಪಷ್ಟವಾದ ಯುಕ್ತಿಗಳ ಸಮೂಹವುಳ್ಳ ಮತ್ತೊಂದು ಗ್ರಂಥವನ್ನು ರಚಿಸಬೇಕೆಂದು ನಾವು ಪ್ರಾರ್ಥಿಸುತ್ತೇವೆ. (ಎಂದು ತ್ರಿವಿಕ್ರಮಪಂಡಿತಾ ಚಾರ್ಯರು ಆಚಾರ್ಯರಲ್ಲಿ ನಿವೇದನೆ ಮಾಡಿಕೊಂಡರು ಎಂದು ಭಾವ).

**ವಿಗ್ರಹ—**

**ಅಗಾಧೇಭ್ಯಃ—** ನ ಗಾಧಾಃ ಅಗಾಧಾಃ ತೇಭ್ಯಃ ।

**ದುರುದ್ಧರಾಃ—** ದುಃಖೇನ ಉದ್ಧರ್ತುಂ ಶಕ್ಯಾಃ ದುರುದ್ಧರಾಃ ।

**ಮನೋಮಾಂದ್ಯಾತ್—** ಮಂದಸ್ಯ ಭಾವಃ ಮಾಂದ್ಯಂ, ಮನಸಃ ಮಾಂದ್ಯಂ ಮನೋಮಾಂದ್ಯಂ ತಸ್ಮಾತ್ ।

**ವ್ಯಕ್ತತರ್ಕತತಿಂ—** ತರ್ಕಾಣಾಂ ತತಯಃ ತರ್ಕತತಯಃ ವ್ಯಕ್ತಾಃ ತರ್ಕತತಯಃ ಯಸ್ಮಿನ್ ಸಃ ವ್ಯಕ್ತತರ್ಕತತಿಃ ತಂ ।

**ಕ್ರಿಯಾಪದ— ಕುರು** - ಕರೋತು-ಕುರುತಾತ್ ಕುರುತಾಂ ಕುರ್ವಂತು, ಕುರು-ಕುರುತಾತ್ ಕುರುತಂ ಕುರುತ, ಕರವಾಣಿ ಕರವಾವ ಕರವಾಮ । ಡು (ಕೃ) ಞ ಕರಣೇ ಸಕ. ಅನಿ. ಉಭ. to do to make, ಪ್ರಾರ್ಥನಾಯಾಂ ಲೋಟ್ ಮಧ್ಯಮಪುರುಷ ಏಕವಚನ ।

**ಪ್ರಯೋಗ—** ಏಭ್ಯಃ ಅಗಾಧೇಭ್ಯ ಗ್ರಂಥೇಭ್ಯಃ ಯುಕ್ತಿಭಿಃ ಮನೋಮಾಂದ್ಯಾತ್ ದುರುದ್ಧರಾಭಿಃ (ಭೂಯತೇ) ತತಃ ನಃ ವ್ಯಕ್ತತರ್ಕತತಿಃ ಗ್ರಂಥಃ (ತ್ವಯಾ) ಕ್ರಿಯತಾಮ್ ।

★ ★ ★

**ಅವತಾರಿಕಾ—** ಹೀಗೆ ತ್ರಿವಿಕ್ರಮರ ಪ್ರಾರ್ಥನೆಯಿಂದ ಆಚಾರ್ಯರು ಅನುವ್ಯಾಖ್ಯಾನವೆಂಬ ಗ್ರಂಥವನ್ನು ಬರೆದರು.

**ಇತ್ಯರ್ಥಿತೋ ವ್ಯಧಾನ್ಮಧ್ವಃ ಸೋಽನುವ್ಯಾಖ್ಯಾಂ ಸತಾಂ ಸುಧಾಮ್ ।**
**ದುರ್ವಾದಿಗರ್ವಾದ್ರಿಪವಿಂ ಮಾಯಿಧ್ವಾಂತರವಿದ್ಯುತಿಮ್ ॥ 88 ॥**

**ಪದಚ್ಛೇದ—** ಇತಿ, ಅರ್ಥಿತಃ, ವ್ಯಧಾತ್, ಮಧ್ವಃ, ಸಃ, ಅನುವ್ಯಾಖ್ಯಾಂ, ಸತಾಂ, ಸುಧಾಂ, ದುರ್ವಾದಿಗರ್ವಾ-ದ್ರಿಪವಿಂ, ಮಾಯಿಧ್ವಾಂತರವಿದ್ಯುತಿಂ ।

**ಅನ್ವಯ—** ಇತಿ, ಅರ್ಥಿತಃ, ಸಃ, ಮಧ್ವಃ, ಸತಾಂ, ಸುಧಾಂ, ದುರ್ವಾದಿಗರ್ವಾದ್ರಿಪವಿಂ, ಮಾಯಿಧ್ವಾಂತ-ರವಿದ್ಯುತಿಂ, ಅನುವ್ಯಾಖ್ಯಾಂ, ವ್ಯಧಾತ್ ।

**ಅನ್ವಯಾರ್ಥ—**

**ಇತಿ** = ಈ ಪ್ರಕಾರವಾಗಿ,

**ಅರ್ಥಿತಃ** = ಪ್ರಾರ್ಥಿಸಲ್ಪಟ್ಟ,

**ಸಃ ಮಧ್ವಃ** = ಆ ಶ್ರೀಮಧ್ವಾಚಾರ್ಯರು,

**ಸತಾಂ** = ಸಜ್ಜನರಿಗೆ,

**ಸುಧಾಂ** = ಅಮೃತದಂತಿರುವ,

**ದುರ್ವಾದಿಗರ್ವಅದ್ರಿಪವಿಂ** = ದುಷ್ಟವಾದಿಗಳ ಅಹಂಕಾರವೆಂಬ ಬೆಟ್ಟಕ್ಕೆ ವಜ್ರಾಯುಧದಂತಿರುವ,
**ಮಾಯಿಧ್ವಾಂತರವಿದ್ಯುತಿಂ** = ಮಾಯಾವಾದಿಗಳೆಂಬ ಕತ್ತಲೆಗೆ ಸೂರ್ಯನ ಕಾಂತಿಯಂತಿರುವ,
**ಅನುವ್ಯಾಖ್ಯಾಂ** = ಅನುವ್ಯಾಖ್ಯಾನವೆಂಬ ಗ್ರಂಥವನ್ನು
**ವ್ಯಧಾತ್** = ಮಾಡಿದರು.

**ತಾತ್ಪರ್ಯ—** ಈ ರೀತಿ ಪ್ರಾರ್ಥಿತರಾದ ಮಹಾನುಭಾವರಾದ ಶ್ರೀಮಧ್ವಾಚಾರ್ಯರು ಸಜ್ಜನರಿಗೆ ಅಮೃತದಂತಿರುವ, ದುರ್ವಾದಿಗಳ ಅಹಂಕಾರವೆಂಬ ಪರ್ವತಕ್ಕೆ ವಜ್ರಾಯುಧದಂತಿರುವ, ಮಾಯಾವಾದಿಗಳೆಂಬ ಕತ್ತಲೆಗೆ ಸೂರ್ಯನಂತಹ ಕಾಂತಿಯುಳ್ಳ, ಅನುವ್ಯಾಖ್ಯಾನವೆಂಬ ಬ್ರಹ್ಮಸೂತ್ರಗಳ ಭಾವಬೋಧಕವಾದ ಗ್ರಂಥವನ್ನು ಮಾಡಿದರು. ಅನುವ್ಯಾಖ್ಯಾನ ಗ್ರಂಥವು ಸಜ್ಜನರಿಗೆ ಅಮೃತದಂತೆ ಆನಂದದಾಯಕವಾಗಿದೆ. ವಜ್ರಾಯುಧವು ಪರ್ವತಗಳನ್ನು ಭೇದಿಸುವಂತೆ ದುಷ್ಟವಾದಿಗಳ ಅಹಂಕಾರವನ್ನು ಖಂಡಿಸುತ್ತದೆ. ಪ್ರಪಂಚವೆಲ್ಲವೂ ಮಾಯಾಕಲ್ಪಿತವೆಂದು ಹೇಳುವ ಮಿಥ್ಯಾವಾದಿಗಳೆಂಬ ಕತ್ತಲೆಯನ್ನು ನಿವಾರಿಸುವ ವಿಷಯದಲ್ಲಿ ಸೂರ್ಯನಂತೆ ಪ್ರಕಾಶವುಳ್ಳದ್ದಾಗಿದೆ. ಇಂತಹ ಗ್ರಂಥವನ್ನು ಆಚಾರ್ಯರು ನಿರ್ಮಿಸಿದರು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ದುರ್ವಾದಿಗರ್ವಾದ್ರಿಪವಿಂ—** ದುರ್ವಾದಃ ಏಷಾಂ ಅಸ್ತೀತಿ ದುರ್ವಾದಿನಃ, ದುರ್ವಾದಿನಾಂ ಗರ್ವಃ ದುರ್ವಾದಿಗರ್ವಃ, ದುರ್ವಾದಿಗರ್ವ ಏವ ಅದ್ರಿಃ ದುರ್ವಾದಿಗರ್ವಾದ್ರಿಃ, ದುರ್ವಾದಿಗರ್ವಾದ್ರೇಃ ಪವಿಃ ತಂ । ಪವಿ = ವಜ್ರ, 'ಹ್ರಾದಿನೀ ವಜ್ರಮಸ್ತ್ರೀ ಸ್ಯಾತ್ ಕುಲಿಶಂ ಭಿದುರಂ ಪವಿಃ' ಅಮರ ।

**ಮಾಯಿಧ್ವಾಂತರವಿದ್ಯುತಿಂ—** ಮಾಯಾ ಏಷಾಂ ಅಸ್ತೀತಿ ಮಾಯಿನಃ, ಮಾಯಿನಃ ಏವ ಧ್ವಾಂತಾನಿ ಮಾಯಿಧ್ವಾಂತಾನಿ, ರವೇಃ ದ್ಯುತಿರಿವ ದ್ಯುತಿಃ ಯಸ್ಯಾಃ ಸಾ ರವಿದ್ಯುತಿಃ, ಮಾಯಿಧ್ವಾಂತಾನಾಂ ರವಿ ದ್ಯುತಿಃ, ಮಾಯಿಧ್ವಾಂತರವಿದ್ಯುತಿಃ, ತಾಂ ।

**ಕ್ರಿಯಾಪದ—** **ವ್ಯಧಾತ್**-ವಿ+ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ। (ಡು)ಧಾಞ್(ಧಾ)ಧಾರಣಪೋಷಣಯೋಃ ಸಕ. ಅನಿ. ಉಭ. ಭೂತೇ ಲುಙ್ ಪ್ರಥಮಪುರುಷೇ ಏಕವಚನ ವಿ ಉಪಸರ್ಗ ।

★ ★ ★

**ಅವತಾರಿಕಾ—** ಅನುವ್ಯಾಖ್ಯಾನವೆಂಬ ಮಹಾಗ್ರಂಥವನ್ನು ನಿರ್ಮಾಣ ಮಾಡಿದ ಕ್ರಮವನ್ನು ವಿವರಿಸುತ್ತಾರೆ.

**ಯುಗಪದ್ರಚಯನ್ನೇನಾಂ ಕದಾಚಿತ್ ಸ ನಿರಂತರಮ್ ।**
**ಚತುರಶ್ಚತುರಃ ಶಿಷ್ಯಾಂಲ್ಲೀಲಯಾಽಲೇಖಯತ್ ಖಲು ॥ 89 ॥**

**ಪದಚ್ಛೇದ—** ಯುಗಪತ್, ರಚಯನ್, ಏನಾಂ, ಕದಾಚಿತ್, ಸಃ, ನಿರಂತರಂ, ಚತುರಃ, ಚತುರಃ, ಶಿಷ್ಯಾನ್, ಲೀಲಯಾ, ಅಲೇಖಯತ್, ಖಲು ।

**ಅನ್ವಯ—** ಕದಾಚಿತ್, ಏನಾಂ, ಯುಗಪತ್, ರಚಯನ್, ಚತುರಃ, ಸಃ, ನಿರಂತರಂ, ಚತುರಃ, ಶಿಷ್ಯಾನ್, ಲೀಲಯಾ, ಅಲೇಖಯತ್, ಖಲು ।

**ಅನ್ವಯಾರ್ಥ—**

**ಕದಾಚಿತ್** = ಒಂದಾನೊಂದು ವೇಳೆ,
**ಏನಾಂ** = ಈ ವ್ಯಾಖ್ಯಾನವನ್ನು

**ಯುಗಪತ್** = ಒಂದೇ ಸಲ,

**ರಚಯನ್** = ನಿರ್ಮಿಸುತ್ತಾ,

**ಚತುರಃ** = ಕುಶಲರಾದ,

**ಸಃ** = ಆ ಶ್ರೀಮಧ್ವಾಚಾರ್ಯರು,

**ನಿರಂತರಂ** = ಎಡೆಬಿಡದೆ,

**ಚತುರಃ** = ನಾಲ್ಕು ಮಂದಿ,

**ಶಿಷ್ಯಾನ್** = ಶಿಷ್ಯರನ್ನು,

**ಲೀಲಯಾ** = ಅನಾಯಾಸದಿಂದ,

**ಅಲೇಖಯತ್ ಖಲು** = ಬರೆಯಿಸಿದರಷ್ಟೆ!

**ತಾತ್ಪರ್ಯ—** ಒಂದಾನೊಂದು ಸಮಯದಲ್ಲಿ ಶ್ರೀಮಧ್ವಾಚಾರ್ಯರು ಈ ಅನುವ್ಯಾಖ್ಯಾನವನ್ನು ರಚಿಸಲಾರಂಭಿಸಿದರು. ಅವರು ನಾಲ್ಕು ಅಧ್ಯಾಯಗಳುಳ್ಳ ಬ್ರಹ್ಮಮೀಮಾಂಸಾಶಾಸ್ತ್ರದ ವ್ಯಾಖ್ಯಾನರೂಪವಾದ ಅನುವ್ಯಾಖ್ಯಾನವನ್ನು ಒಂದೇ ಬಾರಿ ರಚಿಸಿ, ನಾಲ್ಕು ಮಂದಿ ಶಿಷ್ಯರಿಗೆ ಒಂದೊಂದು ಅಧ್ಯಾಯದ ಒಂದೊಂದು ಶ್ಲೋಕವನ್ನು ಹೇಳುತ್ತಾ ಬರೆಸಿದರು. ನಿರಂತರವಾಗಿ ಒಂದೊಂದು ಅಧ್ಯಾಯದ ಒಂದೊಂದು ಶ್ಲೋಕವನ್ನು ಹೇಳುತ್ತಾ ಆಚಾರ್ಯರು ನಾಲ್ಕು ಮಂದಿ ಶಿಷ್ಯರಿಗೆ ಹೇಳಿ ಬರೆಸುವಾಗ ಅವರಿಗೆ ಸ್ವಲ್ಪವೂ ಶ್ರಮ ಅಥವಾ ಚಿಂತೆಯಾಗಲಿಲ್ಲ. ಲೋಕದಲ್ಲಿ ಕುಶಲರಲ್ಲಿ ಅತ್ಯಂತ ಕುಶಲರಾದ ಆಚಾರ್ಯರು ಈ ರೀತಿ ಅದ್ಭುತವಾದ ಕಾರ್ಯವನ್ನು ಮಾಡಿ ತೋರಿಸಿದರು. ''ತೇ ನಮಃ ಕೌಶಲಾಯ'' ಎಂದು ಅವರ ಕೌಶಲಕ್ಕೆ ಕೈಮುಗಿಯಬೇಕಾಗಿದೆ!

**ವಿಗ್ರಹ—**

ನಿರಂತರಂ— ನಿರ್ಗತಂ ಅಂತರಂ ಯಥಾ ಭವತಿ ತಥಾ ನಿರಂತರಂ ।

**ಕ್ರಿಯಾಪದ— ಅಲೇಖಯತ್** - ಅಲೇಖಯತ್ ಅಲೇಖಯತಾಂ ಅಲೇಖಯನ್, ಅಲೇಖಯಃ ಅಲೇಖಯತಂ ಅಲೇಖಯತ, ಅಲೇಖಯಂ ಅಲೇಖಯಾವ ಅಲೇಖಯಾಮ । ಲಿಖ ಲಿಖ್ ಅಕ್ಷರವಿನ್ಯಾಸೇ to write ಸಕರ್ಮಕ. ಸೇಟ್. ಪರ. ಣಿಜಂತ, ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ಕದಾಚಿತ್ ಏನಾಂ ಯುಗಪತ್ ರಚಯತಾ ಚತುರೇಣ ತೇನ ನಿರಂತರಂ ಚತ್ವಾರಃ ಶಿಷ್ಯಾಃ ಲೀಲಯಾ ಅಲೇಖ್ಯಂತ ಖಲು ।

★ ★ ★

ಅವತಾರಿಕಾ— ಆಚಾರ್ಯರು ನ್ಯಾಯವಿವರಣವನ್ನು ರಚಿಸಿದರು.

**ಯುಕ್ತಾಯಾ ಯುಕ್ತಿಮಾಲಾಯಾಃ ಪ್ರೋಕ್ತಾಯಾಸ್ತತ್ರ ಚಾತ್ಮನಾ ।**
**ವ್ಯಕ್ತಂ ಚಕ್ರೇ ವಿವರಣಂ ಕವೀಂದ್ರೈರೇಷ ದುಷ್ಕರಮ್ ॥ 90 ॥**

**ಪದಚ್ಛೇದ—** ಯುಕ್ತಾಯಾಃ, ಯುಕ್ತಿಮಾಲಾಯಾಃ, ಪ್ರೋಕ್ತಾಯಾಃ, ತತ್ರ, ಚ, ಆತ್ಮನಾ, ವ್ಯಕ್ತಂ, ಚಕ್ರೇ, ವಿವರಣಂ, ಕವೀಂದ್ರೈಃ, ಏಷಃ, ದುಷ್ಕರಮ್ ।

**ಅನ್ವಯ—** ಏಷಃ, ತತ್ರ, ಆತ್ಮನಾ, ಪ್ರೋಕ್ತಾಯಾಃ, ಯುಕ್ತಿಮಾಲಾಯಾಃ, ಕವೀಂದ್ರೈಃ, ದುಷ್ಕರಂ, ವಿವರಣಂ, ಚ, ವ್ಯಕ್ತಂ, ಚಕ್ರೇ ।

ಅನ್ವಯಾರ್ಥ—

ಏಷಃ = ಈ ಮಧ್ವಾಚಾರ್ಯರು,
ತತ್ರ = ಆ ಅನುವ್ಯಾಖ್ಯಾನದಲ್ಲಿ,
ಆತ್ಮನಾ = ತನ್ನಿಂದ,
ಪ್ರೋಕ್ತಾಯಾಃ = ಹೇಳಲ್ಪಟ್ಟ,
ಯುಕ್ತಾಯಾಃ = ಯೋಗ್ಯವಾದ,
ಯುಕ್ತಿಮಾಲಾಯಾಃ = ಯುಕ್ತಿಗಳ ಸಮೂಹಕ್ಕೆ,
ಕವೀಂದ್ರೈಃ = ಪಂಡಿತಶ್ರೇಷ್ಠರಿಂದ,
ದುಷ್ಕರಂ = ರಚಿಸಲು ಅಸಾಧ್ಯವಾದ,
ವಿವರಣಂ = ಸ್ಪಷ್ಟೀಕರಣವನ್ನು,
ವ್ಯಕ್ತಂ = ಸ್ಫುಟವಾಗಿ,
ಚಕ್ರೇ = ಮಾಡಿದರು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ಅನುವ್ಯಾಖ್ಯಾನದಲ್ಲಿ ಅತ್ಯಂತ ಸಮರ್ಪಕವಾದ ಅನೇಕ ಯುಕ್ತಿಗಳನ್ನು ಹೇಳಿದ್ದರು. ಆದರೆ ಪಂಡಿತೋತ್ತಮರಿಗೂ ಆ ಯುಕ್ತಿಗಳನ್ನು ಸರಿಯಾಗಿ ವಿವರಿಸಲು ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ಅವರೇ ಸ್ವತಃ ಆ ಯುಕ್ತಿಗಳನ್ನು ಸ್ಪಷ್ಟವಾಗಿ ವಿವರಿಸುವ ನ್ಯಾಯವಿವರಣವೆಂಬ ಮತ್ತೊಂದು ಗ್ರಂಥವನ್ನು ರಚಿಸಿದರು. ಹೀಗೆ ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ ಗ್ರಂಥಗಳು ಈ ರೀತಿ ಇವೆ.

1) ತತ್ತ್ವಸಂಖ್ಯಾನಂ, 2) ತತ್ತ್ವವಿವೇಕಃ, 3) ಉಪಾಧಿಖಂಡನಂ, 4) ಮಾಯಾವಾದಖಂಡನಂ, 5) ಮಿಥ್ಯಾತ್ವಾನುಮಾನಖಂಡನಂ, 6) ತತ್ತ್ವೋದ್ಯೋತಃ, 7) ವಿಷ್ಣುತತ್ತ್ವವಿನಿರ್ಣಯಃ, 8) ಕರ್ಮನಿರ್ಣಯಃ, 9) ಕಥಾಲಕ್ಷಣಂ, 10) ಪ್ರಮಾಣ ಲಕ್ಷಣಂ-ಇವು 10 ದಶಪ್ರಕರಣ ಗ್ರಂಥಗಳೆಂದು ಹೆಸರು ಪಡೆದಿವೆ. 11) ಗೀತಾಭಾಷ್ಯಂ, 12) ಗೀತಾತಾತ್ಪರ್ಯಂ ಇವೆರಡು ಗೀತಾಪ್ರಸ್ಥಾನದ ಗ್ರಂಥಗಳು, 13) ಬ್ರಹ್ಮಸೂತ್ರಭಾಷ್ಯಂ, 14) ಅಣುವೇದಾಂತಃ, 15) ಅನುವ್ಯಾಖ್ಯಾನಂ, 16) ನ್ಯಾಯವಿವರಣಂ-ಈ ನಾಲ್ಕು ಸೂತ್ರಪ್ರಸ್ಥಾನದ ಗ್ರಂಥಗಳು. 17) ತಂತ್ರಸಾರಃ, 18) ಯತಿಪ್ರಣವ ಕಲ್ಪಃ, 19) ಜಯಂತೀಕಲ್ಪಃ-ಇವು ಮೂರು ತಂತ್ರಶಾಸ್ತ್ರಕ್ಕೆ ಸಂಬಧಿಸಿರುವ ಗ್ರಂಥಗಳು. 20) ದ್ವಾದಶಸ್ತೋತ್ರಂ, 21) ನಖ ಸ್ತುತಿಃ-ಇವೆರಡು ಸ್ತೋತ್ರಗ್ರಂಥಗಳು. 22) ಈಶಾವಾಸ್ಯೋಪನಿಷದ್ಭಾಷ್ಯಂ, 23) ಕೇನ (ತಲವಕಾರ) ಉಪನಿಷದ್ಭಾಷ್ಯಂ, 24) ಕಾಠಕ (ಕಠ) ಉಪನಿಷದ್ಭಾಷ್ಯಂ, 25) (ಷಟ್)ಪ್ರಶ್ನೋಪನಿಷದ್ಭಾಷ್ಯಂ, 26) ಮುಂಡಕ ಅಥರ್ವಣೋಪನಿಷದ್ಭಾಷ್ಯಂ, 27) ಮಾಂಡೂಕ್ಯೋಪನಿಷದ್ಭಾಷ್ಯಂ, 28) ತೈತ್ತಿರಿಯೋಪನಿಷದ್ಭಾಷ್ಯಂ, 29) ಐತರೇಯೋಪನಿಷದ್ಭಾಷ್ಯಂ, 30) ಛಾಂದೋಗ್ಯೋಪನಿಷದ್ಭಾಷ್ಯಂ, 31) ಬೃಹದಾರಣ್ಯಕೋಪನಿಷದ್ಭಾಷ್ಯಂ-ಇವು ಹತ್ತು ಉಪನಿಷತ್ ಪ್ರಸ್ಥಾನದ ಗ್ರಂಥಗಳು. 32) ಸದಾಚಾರಸ್ಮೃತಿ, 33) ಕೃಷ್ಣಾಮೃತಮಹಾರ್ಣವಃ- ಇವೆರಡು ಧರ್ಮಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳು. 34) ಋಗ್ಭಾಷ್ಯಂ-ಇದು ಋಕ್ (ವೇದ) ಪ್ರಸ್ಥಾನಕ್ಕೆ ಸಂಬಂಧಪಟ್ಟ ಗ್ರಂಥವು. 35) ಶ್ರೀಮನ್ಮಹಾಭಾರತ-ತಾತ್ಪರ್ಯನಿರ್ಣಯಃ, 36) ಯಮಕಭಾರತಂ, 37) ಭಾಗವತತಾತ್ಪರ್ಯನಿರ್ಣಯ- ಈ ಮೂರು ಪುರಾಣಪ್ರಸ್ಥಾನಕ್ಕೆ ಸೇರಿದ ಗ್ರಂಥಗಳು.

ಹೀಗೆ ಆಚಾರ್ಯರು ಮೂವತ್ತೇಳು (37) ಗ್ರಂಥಗಳನ್ನು ರಚಿಸಿದ್ದಾರೆ. ಇವಲ್ಲದೆ, ತಿಥಿನಿರ್ಣಯ ಮತ್ತು ನ್ಯಾಸ ಪದ್ಧತಿ ಎಂಬ ಎರಡು ಗ್ರಂಥಗಳೂ ಉಪಲಬ್ಧವಾಗಿವೆ. ಆಚಾರ್ಯರು ಬಾಲ್ಯದಲ್ಲಿ ಚೆಂಡಾಡುವಾಗ ರಚಿಸಿದ ಕಂದುಕಸ್ತುತಿ ಎಂಬ ಒಂದು ಚಿಕ್ಕ ಸ್ತೋತ್ರಗ್ರಂಥವೂ ಇದೆ. ನಾನಾ ಸುಭಾಷಿತಗಳು, ಸ್ತೋತ್ರ, ಗಾಥಾ, ಮುಂತಾದ ಅನೇಕ ಗ್ರಂಥಗಳು

ರತ್ನಾಕರದಲ್ಲಿ ರತ್ನಗಳಂತೆ ನಿಮ್ಮಲ್ಲಿ ಅಸಂಖ್ಯವಾಗಿದೆ ಎಂದು ಹೇಳಿದ್ದರಿಂದ ಇನ್ನೂ ಅನೇಕ ಗ್ರಂಥಗಳು ಆಚಾರ್ಯರಿಂದ ರಚಿತವಾಗಿದ್ದಿರಬಹುದೆಂದು ಹೇಳಲು ಅಡ್ಡಿಯಿಲ್ಲ. ಆದರೆ ಆಧ್ಯಾತ್ಮ ವಿದ್ಯೆಗೆ ನಿಕಟಸಂಬಂಧವಿರುವ ಗ್ರಂಥಗಳು 37 ಎಂಬ ಅಭಿಪ್ರಾಯವನ್ನಿಟ್ಟುಕೊಂಡು "ಗ್ರಂಥಾನ್ ಮಧ್ವಶ್ಚಕಾರಾಸೌ ಸಪ್ತತ್ರಿಂಶದಮಂದಧೀಃ" ಪೂರ್ಣಪ್ರಜ್ಞರಾದ ಶ್ರೀಮಧ್ವರು 37 ಗ್ರಂಥಗಳನ್ನು ರಚಿಸಿದ್ದಾರೆ ಎಂದು ಗ್ರಂಥಮಾಲಿಕಾಸ್ತೋತ್ರದಲ್ಲಿ ಶ್ರೀವ್ಯಾಸರಾಜರು ಹೇಳಿರುವುದು ಯುಕ್ತವೇ ಆಗಿದೆಯೆಂದು ತಿಳಿಯಬೇಕು.

ವಿಗ್ರಹ—

**ಯುಕ್ತಿಮಾಲಾಯಾಃ—** ಯುಕ್ತೀನಾಂ ಮಾಲಾ ಯುಕ್ತಿಮಾಲಾ ತಸ್ಯಾಃ ।

**ಕವೀಂದ್ರೈಃ—** ಕವೀನಾಂ ಇಂದ್ರಾಃ ಕವೀಂದ್ರಾಃ ತೈಃ ।

**ದುಷ್ಕರಂ—** ದುಃಖೇನ ಕರ್ತುಂ ಶಕ್ಯಂ ದುಷ್ಕರಂ ತತ್ ।

**ಕ್ರಿಯಾಪದ— ಚಕ್ರೇ** - ಚಕ್ರೇ ಚಕ್ರಾತೇ ಚಕ್ರಿರೇ, ಚಕೃಷೇ ಚಕ್ರಾಥೇ ಚಕೃಢ್ವೇ, ಚಕ್ರೇ ಚಕೃವಹೇ ಚಕೃಮಹೇ । (ಡು) ಕೃ ಞ್ ಕರಣೇ ಉಭ. ಅನಿ. ಸಕ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನ ।

**ಪ್ರಯೋಗ—** ಏತೇನ ತತ್ರ ಆತ್ಮನಾ ಪ್ರೋಕ್ತಾಯಾಃ ಯುಕ್ತಾಯಾಃ ಯುಕ್ತಿಮಾಲಾಯಾಃ ಕವೀಂದ್ರೈಃ ದುಷ್ಕರಂ ವಿವರಣಂ ಚ ವ್ಯಕ್ತಂ ಚಕ್ರೇ (ಕರ್ಮಣಿ) ಮಾಡಲ್ಪಟ್ಟಿತು ।

★ ★ ★

**ಅವತಾರಿಕಾ—** ಆಚಾರ್ಯರ ಪೂರ್ವಾಶ್ರಮದ ತಮ್ಮಂದಿರಾಗಿದ್ದು, ಅವರಿಂದ ಸಂನ್ಯಾಸವನ್ನು ಸ್ವೀಕರಿಸಿ ಶಿಷ್ಯರಾದ ಶ್ರೀವಿಷ್ಣುತೀರ್ಥರ ಮಹಿಮೆಯನ್ನು ವರ್ಣಿಸಲು ಅವರ ಪೂರ್ವಾಶ್ರಮದ ಚರಿತ್ರೆಯನ್ನು ವಿವರಿಸುತ್ತಾರೆ.

**ಮಧ್ವೇಂದೋರ್ನಿತ್ಯಸಂಬಂಧಾನ್ನಿಸ್ತಮಸ್ತಾಪಚೇತಸೋಃ ।**
**ವೈಕುಂಠಂ ಯಾತಯೋಃ ಪಿತ್ರೋರ್ಗೃಹೇಽಸ್ಯಾವರಜೋಽವಸತ್ ॥ 91 ॥**

**ಪದಚ್ಛೇದ—** ಮಧ್ವೇಂದೋಃ, ನಿತ್ಯಸಂಬಂಧಾತ್, ನಿಸ್ತಮಸ್ತಾಪಚೇತಸೋಃ, ವೈಕುಂಠಂ, ಯಾತಯೋಃ, ಪಿತ್ರೋಃ, ಗೃಹೇ, ಅಸ್ಯ, ಅವರಜಃ, ಅವಸತ್ ।

**ಅನ್ವಯ—** ಮಧ್ವೇಂದೋಃ, ನಿತ್ಯಸಂಬಂಧಾತ್, ನಿಸ್ತಮಸ್ತಾಪಚೇತಸೋಃ, ಪಿತ್ರೋಃ, ವೈಕುಂಠಂ, ಯಾತಯೋಃ, ಸತೋಃ, ಅಸ್ಯ, ಅವರಜಃ, ಗೃಹೇ, ಅವಸತ್ ।

**ಅನ್ವಯಾರ್ಥ—**

**ಮಧ್ವೇಂದೋಃ** = ಮಧ್ವಾಚಾರ್ಯರೆಂಬ ಚಂದ್ರನ,

**ನಿತ್ಯಸಂಬಂಧಾತ್** = ಯಾವಾಗಲೂ ನೋಡುವುದು, ಕೇಳುವುದು ಮೊದಲಾದ ಸಂಬಂಧದಿಂದ,

**ನಿಸ್ತಮಸ್ತಾಪಚೇತಸೋಃ** = ಹೋಗಲಾಡಿಸಲ್ಪಟ್ಟ ಕತ್ತಲೆ ಮತ್ತು ಅಜ್ಞಾನ ಇವುಗಳೂ, ಸಂತಾಪವೂ ಇವುಗಳುಳ್ಳ, ಹೃದಯವುಳ್ಳ

**ಪಿತ್ರೋಃ** = ತಂದೆ-ತಾಯಿಗಳು,

**ವೈಕುಂಠಂ** = ವೈಕುಂಠಲೋಕವನ್ನು ಕುರಿತು,

**ಯಾತಯೋಃ (ಸತೋಃ)** = ಪ್ರಯಾಣಿಸಲಾಗಿ,

**ಅಸ್ಯ** = ಈ ಶ್ರೀಮಧ್ವಾಚಾರ್ಯರ,

**ಅವರಜಃ** = ತಮ್ಮನು,

**ಗೃಹೇ** = ಮನೆಯಲ್ಲಿ,

**ಅವಸತ್** = ವಾಸಮಾಡುತ್ತಿದ್ದನು.

**ತಾತ್ಪರ್ಯ**— ಚಂದ್ರನ ದರ್ಶನ, ಚಂದ್ರಕಿರಣಗಳ ಸಂಪರ್ಕದಿಂದ ಜನರು, ಕತ್ತಲೆ, ಬಿಸಿಲಿನ ತಾಪಗಳನ್ನು ಪರಿಹರಿಸಿಕೊಂಡು ಸುಖವಾಗಿರುಂತೆ, ಶ್ರೀಮಧ್ವಾಚಾರ್ಯರೆಂಬ ಚಂದ್ರನ ನಿತ್ಯನಿರಂತರವಾದ ದರ್ಶನ, ಅವರ ಪ್ರವಚನದ ಶ್ರವಣ ಮುಂತಾದ ಸಂಬಂಧದಿಂದ ಮಧ್ಯಗೇಹ ನಾರಾಯಣಭಟ್ಟರು ಮತ್ತು ವೇದವತೀದೇವಿಯು ತಮ್ಮ ಹೃದಯದ ಅಜ್ಞಾನ ಮತ್ತು ಸಂತಾಪಗಳನ್ನು ಕಳೆದುಕೊಂಡು ತಮ್ಮ ಮುಪ್ಪನ್ನು ಪರಮಾತ್ಮನ ಸೇವೆಯಲ್ಲಿ ಕಳೆದರು. ಆಗಾಗ್ಗೆ ಶ್ರೀಮಧ್ವಚಂದ್ರನ ದರ್ಶನ, ಅವರ ಪ್ರವಚನದ ಶ್ರವಣದಿಂದ ಶ್ರೀಮಧ್ವರ ಪೂರ್ವಾಶ್ರಮದ ತಂದೆ-ತಾಯಿಗಳ ಅಜ್ಞಾನ, ಸಂತಾಪಗಳು ನಾಶವಾದವು. ಅವರು ಕೆಲವು ಕಾಲದ ನಂತರ ವೈಕುಂಠವಾಸಿಗಳಾದರು. ಆಗ ಅವರ ತಮ್ಮಂದಿರು (ಪಾಜಕ ಕ್ಷೇತ್ರದ ಮನೆಯಲ್ಲಿ) ವಾಸಮಾಡುತ್ತಿದ್ದರು ಎಂದು ಭಾವ.

ವಿಗ್ರಹ—

**ಮಧ್ವೇಂದೋಃ**— ಮಧ್ವ ಏವ ಇಂದುಃ ಮಧ್ವೇಂದುಃ ತಸ್ಯ ಮಧ್ವೇಂದೋಃ ।

**ನಿತ್ಯಸಂಬಂಧಾತ್**— ನಿತ್ಯಂ ಸಂಬಂಧಃ, ನಿತ್ಯಸಂಬಂಧಃ ತಸ್ಮಾತ್ ನಿತ್ಯಸಂಬಂಧಾತ್, ನಿತ್ಯಶ್ಚಾಸೌ ಸಂಬಂಧಶ್ಚ ನಿತ್ಯಸಂಬಂಧಃ ತಸ್ಮಾತ್ । ಎಂದೂ ವಿಗ್ರಹವಾಗಬಹುದು.

**ನಿಸ್ತಮಸ್ತಾಪಚೇತಸೋಃ**— ತಮಶ್ಚ ತಾಪಶ್ಚ ತಮಸ್ತಾಪೌ, ನಿರ್ಗತೌ ತಮಸ್ತಾಪೌ ಯಸ್ಮಾತ್ ತತ್ ನಿಸ್ತಮಸ್ತಾಪಂ, ನಿಸ್ತಮಸ್ತಾಪಂ ಚೇತಃ ಯಯೋಸ್ತೌ ನಿಸ್ತಮಸ್ತಾಪಚೇತಸೌ ತಯೋಃ ।

**ಪಿತ್ರೋಃ**— ಮಾತಾ ಚ ಪಿತಾ ಚ ಪಿತರೌ ತಯೋಃ ।

**ಕ್ರಿಯಾಪದ**— **ಅವಸತ್** - ಅವಸತ್ ಅವಸತಾಂ ಅವಸನ್, ಅವಸಃ ಅವಸತಂ ಅವಸತ, ಅವಸಂ ಅವಸಾವ ಅವಸಾಮ । ವಸ ನಿವಾಸೇ ಅಕ. ಅನಿ. ಪರ. ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನದಲ್ಲಿ ಅವಸತ್ ಎಂದು ರೂಪ ।

**ಪ್ರಯೋಗ**— ಮಧ್ವೇಂದೋಃ ನಿತ್ಯಸಂಬಂಧಾತ್ ನಿಸ್ತಮಸ್ತಾಪಚೇತಸೋಃ ಪಿತ್ರೋಃ, ವೈಕುಂಠಂ ಯಾತಯೋಃ (ಸತೋಃ) ಅಸ್ಯ ಅವರಜೇನ ಗೃಹೇ ಊಷ್ಯತ (ಭಾವೇ ಲಙ್, ವಾಸಮಾಡಲ್ಪಟ್ಟಿತು) ।

★ ★ ★

**ಅವತಾರಿಕಾ**— ಆಚಾರ್ಯರ ತಮ್ಮಂದಿರಿಗೆ ವೈರಾಗ್ಯ ಪ್ರಾಪ್ತಿ ಮತ್ತು ಅವರು ಆಚಾರ್ಯರ ಬಳಿಗೆ ಬಂದ ವಿಷಯಗಳನ್ನು ಹೇಳುತ್ತಾರೆ.

**ವಿಧಿಭ್ರೂವಿಭ್ರಮಭ್ರಶ್ಯದ್ಧನಗೋಧಾನ್ಯಸಂಪದಾ ।**
**ನಿರ್ವೇದಿನಾ ವೇದವಿದಾ ತೇನಾಪೇ ವೇದವಾದಿರಾಟ್ ॥ 92 ॥**

**ಪದಚ್ಛೇದ**— ವಿಧಿಭ್ರೂವಿಭ್ರಮಭ್ರಶ್ಯದ್‌ಧನಗೋಧಾನ್ಯಸಂಪದಾ, ನಿರ್ವೇದಿನಾ, ವೇದವಿದಾ, ತೇನ, ಆಪೇ, ವೇದವಾದಿರಾಟ್ ।

**ಅನ್ವಯ**— ವಿಧಿಭ್ರೂವಿಭ್ರಮಭ್ರಶ್ಯದ್ಧನಗೋಧಾನ್ಯಸಂಪದಾ, ನಿರ್ವೇದಿನಾ, ವೇದವಿದಾ, ತೇನ, ವೇದವಾದಿ-ರಾಟ್, ಆಪೇ ।

**ಅನ್ವಯಾರ್ಥ—**

**ವಿಧಿಭ್ರೂವಿಭ್ರಮಭ್ರಶ್ಯತ್‌ಧನಗೋಧಾನ್ಯಸಂಪದಾ** = ದೈವದ ಹುಬ್ಬುಗಳ ವಿಲಾಸದಿಂದ ನಾಶವಾದ ಹಣವು, ಹಸುಗಳು, ಭತ್ತ ಮುಂತಾದ ಫಸಲು ಇವುಗಳ ರೂಪದ ಐಶ್ವರ್ಯವುಳ್ಳ,

**ನಿರ್ವೇದಿನಾ** = ವೈರಾಗ್ಯವುಳ್ಳ,

**ವೇದವಿದಾ** = ವೇದವನ್ನು ಅರಿತ,

**ತೇನ** = ಆ ತಮ್ಮನಿಂದ,

**ವೇದವಾದಿರಾಟ್** = ವೇದವನ್ನು ವ್ಯಾಖ್ಯಾನ ಮಾಡುವುದರಲ್ಲಿ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರು,

**ಆಪೇ** = ಹೊಂದಲ್ಪಟ್ಟರು.

**ತಾತ್ಪರ್ಯ—** ಆಚಾರ್ಯರ ತಮ್ಮಂದಿರು ಒಳ್ಳೆಯ ವೇದಜ್ಞರೂ, ಜ್ಞಾನಿಗಳೂ ಆಗಿದ್ದರು. ಆದರೆ ಪ್ರತಿಕೂಲವಾದ ದೈವದ ಹುಬ್ಬಿನ ವಿಲಾಸದಿಂದ ಅವರ ಹಣ, ದನಕರುಗಳು, ಧಾನ್ಯ ಮೊದಲಾದ ಸಂಪತ್ತೆಲ್ಲವೂ ನಾಶವಾಯಿತು. ಅವರಿಗೆ ಸಂಸಾರದಲ್ಲಿ ವೈರಾಗ್ಯವು ಹುಟ್ಟಿತು. ಅವರು ವೇದಾರ್ಥಪ್ರವಚನ ಪ್ರವೀಣರಾದ, ವೇದಾರ್ಥವಾದಿಗಳ ರಾಜರಾದ ಶ್ರೀಮಧ್ವಾಚಾರ್ಯರ ಸನ್ನಿಧಿಗೆ ಬಂದರು. ಪರಮಾತ್ಮನು ಯಾವ ಭಕ್ತನನ್ನು ಉದ್ಧರಿಸಲು ಸಂಕಲ್ಪಿಸುವನೋ ಅವನ ಸಂಪತ್ತನ್ನು ನಷ್ಟಗೊಳಿಸಿ ವಿರಕ್ತನನ್ನಾಗಿ ಮಾಡಿ ಅನುಗ್ರಹಿಸುವನೆಂದು ಭಾಗವತದಲ್ಲಿ ಹೇಳಿದ್ದಾರೆ. ''ಯಸ್ಯಾನುಗ್ರಹ ಮಿಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಂ''. ಆದರಂತೆ ಪರಮಾತ್ಮನು ಆಚಾರ್ಯರ ತಮ್ಮನನ್ನು ಉದ್ಧರಿಸಲು ಅವರಿಗೆ ದಾರಿದ್ರ್ಯವನ್ನು ಇತ್ತನು ಎಂದು ಭಾವ.

**ವಿಗ್ರಹ—**

**ವಿಧಿಭ್ರೂವಿಭ್ರಮಭ್ರಶ್ಯದ್ಧನಗೋಧಾನ್ಯಸಂಪದಾ—** ಭ್ರುವಃ ವಿಭ್ರಮಃ ಭ್ರೂವಿಭ್ರಮಃ, ವಿಧೇಃ ಭ್ರೂವಿಭ್ರಮಃ ವಿಧಿಭ್ರೂವಿಭ್ರಮಃ, ಧನಂ ಚ ಗಾವಶ್ಚ ಧಾನ್ಯಾನಿ ಚ ಧನಗೋಧಾನ್ಯಾನಿ, ಧನಗೋಧಾನ್ಯಾನಿ ಏವ ಸಂಪತ್ ಧನಗೋಧಾನ್ಯಸಂಪತ್, ವಿಧಿಭ್ರೂವಿಭ್ರಮೇಣ ಭ್ರಶ್ಯಂತೀ ಧನಗೋಧಾನ್ಯಸಂಪತ್ ಯಸ್ಯ ಸಃ ವಿಧಿಭ್ರೂವಿಭ್ರಮಭ್ರಶ್ಯದ್‌ಧನಗೋಧಾನ್ಯಸಂಪತ್ ತೇನ ।

**ನಿರ್ವೇದಿನಾಃ—** ನಿರ್ವೇದಃ ಅಸ್ಯ ಅಸ್ತೀತಿ ನಿರ್ವೇದೀ ತೇನ ।

**ವೇದವಿದಾ—** ವೇದಂ ವೇತ್ತಿ ಇತಿ ವೇದವಿತ್ ತೇನ ।

**ವೇದವಾದಿರಾಟ್—** ವೇದಾನ್ ವದಂತೀತಿ ವೇದವಾದಿನಃ, ವೇದವಾದಿನಾಂ ರಾಟ್ ವೇದವಾದಿರಾಟ್ (ರಾಜ್ ಶಬ್ದ ಜಕಾರಾಂತ ಪುಂ) ।

**ಕ್ರಿಯಾಪದ— ಆಪೇ** - ಆಪೇ ಆಪಾತೇ ಆಪಿರೇ, ಆಪಿಷೇ ಆಪಾಥೇ ಆಪಿಧ್ವೇ, ಆಪೇ ಆಪಿವಹೇ ಆಪಿಮಹೇ । ಆಪ್‌ಲೃ (ಆಪ್) ವ್ಯಾಪ್ತೌ, ಸಕ. ಅನಿ. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಕರ್ಮಣಿ ಪ್ರಯೋಗ ಪ್ರಥಮಪುರುಷ ಏಕವಚನ ।

**ಪ್ರಯೋಗ—** ವಿಧಿಭ್ರೂವಿಭ್ರಮಭ್ರಶ್ಯದ್‌ಧನಗೋಧಾನ್ಯಸಂಪತ್ ವೇದವಿತ್ ನಿರ್ವೇದೀ ಸಃ ವೇದವಾದಿರಾಜಂ ಆಪ (ಕರ್ತರಿ) ಹೊಂದಿದನು ।

★ ★ ★

ಅವತಾರಿಕಾ— ತನಗೆ ಸಂನ್ಯಾಸವನ್ನು ಕೊಡಬೇಕೆಂದು ಪ್ರಾರ್ಥಿಸುತ್ತಿರುವ ತಮ್ಮನನ್ನು ಆಚಾರ್ಯರು ಕೆಲವು ಸಮಯದ ನಂತರ ಸಂನ್ಯಾಸ ಕೊಡುವೆನೆಂದು ಹೇಳಿ ಹಿಂದಿರುಗಿ ಕಳುಹಿಸಿದರು.

**ಪಾರಿವ್ರಾಜ್ಯಂ ಪ್ರಾರ್ಥಯಂತಂ ಪಾದಾನಮ್ರಮಿಮಂ ಮುಹುಃ ।**
**ಸಮಯಾಪೇಕ್ಷಯೋರ್ವೀಕ್ಷೋ ಗಮಯಾಮಾಸ ಧಾಮ ತಮ್ ॥ 93 ॥**

**ಪದಚ್ಛೇದ—** ಪಾರಿವ್ರಾಜ್ಯಂ, ಪ್ರಾರ್ಥಯಂತಂ, ಪಾದಾನಮ್ರಂ, ಇಮಂ, ಮುಹುಃ, ಸಮಯಾಪೇಕ್ಷಯಾ, ಉರ್ವೀಕ್ಷಃ, ಗಮಯಾಮಾಸ, ಧಾಮ, ತಮ್ ।

**ಅನ್ವಯ—** ಉರ್ವೀಕ್ಷಃ, ಪಾರಿವ್ರಾಜ್ಯಂ, ಪ್ರಾರ್ಥಯಂತಂ, ಮುಹುಃ, ಪಾದಾನಮ್ರಂ, ತಂ, ಇಮಂ, ಸಮಯಾಪೇಕ್ಷಯಾ, ಧಾಮ, ಗಮಯಾಮಾಸ ।

**ಅನ್ವಯಾರ್ಥ—**

**ಉರ್ವೀಕ್ಷಃ** = ಬಹಳವಾದ ಜ್ಞಾನವುಳ್ಳ ಶ್ರೀಮಧ್ವಾಚಾರ್ಯರು,
**ಪಾರಿವ್ರಾಜ್ಯಂ** = ಸಂನ್ಯಾಸವನ್ನು,
**ಪ್ರಾರ್ಥಯಂತಂ** = ಬೇಡುತ್ತಿರುವ,
**ಮುಹುಃ** = ಬಾರಿ ಬಾರಿಗೂ,
**ಪಾದಾನಮ್ರಂ** = ಕಾಲುಗಳಿಗೆ ಬಾಗಿ ನಮಸ್ಕರಿಸಿದ,
**ತಂ ಇಮಂ** = ಅಂತಹ ಈ ತಮ್ಮನನ್ನು,
**ಸಮಯಾಪೇಕ್ಷಯಾ** = ಸಂನ್ಯಾಸಕಾಲದ ನಿರೀಕ್ಷಣೆಯಿಂದ,
**ಧಾಮ** = ಅವರ ಮನೆಯನ್ನು ಕುರಿತು,
**ಗಮಯಾಮಾಸ** = ಹೋಗುವಂತೆ ಮಾಡಿದರು (ಕಳುಹಿಸಿದರು).

**ತಾತ್ಪರ್ಯ—** ಆಚಾರ್ಯರ ತಮ್ಮಂದಿರು ''ತನಗೆ ತಾವು ಸಂನ್ಯಾಸವನ್ನು ದಯವಿಟ್ಟು ಕೊಡಿರಿ ಎಂದು ಮತ್ತು ಮತ್ತು ಪ್ರಾರ್ಥಿಸಿದರು. ಬಾರಿಬಾರಿಗೂ ಆಚಾರ್ಯರ ಪಾದಗಳ ಬಳಿಯಲ್ಲಿ ಬಾಗಿ ನಮಸ್ಕರಿಸಿದರು. ಆಚಾರ್ಯರು ಅಂತಹ ಆ ತಮ್ಮನಿಗೆ ''ಇದು ಚಾತುರ್ಮಾಸ್ಯ ಕಾಲ, ಸಂನ್ಯಾಸ ಸ್ವೀಕಾರಕ್ಕೆ ಯೋಗ್ಯವಲ್ಲ. ಚಾತುರ್ಮಾಸ್ಯ ಮುಗಿದ ಮೇಲೆ ಸಂನ್ಯಾಸವನ್ನು ಕೊಡುವೆನು'' ಹೀಗೆಂದು ಹೇಳಿ ಸಂನ್ಯಾಸಕೊಡಲು ಯೋಗ್ಯವಾದ ಕಾಲದ ನಿರೀಕ್ಷಣೆಯ ದೃಷ್ಟಿಯಿಂದ ''ತತ್ಕಾಲದಲ್ಲಿ ನೀನು ಮನೆಗೆ ಹೋಗಿ ಅಲ್ಲಿಯೇ ಇರು'' ಎಂದು ಹೇಳಿ ತಮ್ಮನನ್ನು ಮನೆಗೆ ಹಿಂತಿರುಗಿ ಕಳುಹಿಸಿದರು.

**ವಿಗ್ರಹ ಮತ್ತು ಕೋಶ—**

**ಪಾರಿವ್ರಾಜ್ಯಂ—** ಪರಿವ್ರಾಜಃ ಭಾವಃ ಪಾರಿವ್ರಾಜ್ಯಂ । ಪರಿವ್ರಾಟ್ = ಸಂನ್ಯಾಸಿ, ಪಾರಿವ್ರಾಜ್ಯಂ = ಸಂನ್ಯಾಸ, 'ಭಿಕ್ಷುಃ ಪರಿವ್ರಾಟ್ ಕರ್ಮಂದೀ' ಅಮರ ।
**ಪಾದಾನಮ್ರಂ—** ಪಾದಯೋಃ ಅನಮ್ರಃ ಪಾದಾನಮ್ರಃ ತಂ ।
**ಸಮಯಾಪೇಕ್ಷಯಾ—** ಸಮಯಸ್ಯ ಅಪೇಕ್ಷಾ ಸಮಯಾಪೇಕ್ಷಾ ತಯಾ ।
**ಊರ್ವೀಕ್ಷಃ—** ಉರ್ವೀ ಈಕ್ಷಾ ಯಸ್ಯ ಸಃ ಉರ್ವೀಕ್ಷಃ ।

**ಕ್ರಿಯಾಪದ— ಗಮಯಾಮಾಸ** - ಗಮಯಾಮಾಸ ಗಮಯಾಮಾಸತುಃ ಗಮಯಾಮಾಸುಃ, ಗಮಾಯಾಮಾಸಿಥ ಗಮಯಾಮಾಸಥುಃ ಗಮಯಾಮಾಸ, ಗಮಯಾಮಾಸ ಗಮಯಾಮಾಸಿವ ಗಮಯಾಮಾಸಿಮ । ಗಮ್ಲೃ

ಗತೌ, ಸಕ. ಅನಿ. ಪರ. ಣಿಜಂತ, ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ಗಮಯಾಮಾಸ ಎಂದು ರೂಪ. ಇದು ಪ್ರೇರಣಾರ್ಥಕ ಣಿಜಂತರೂಪ ।

**ಪ್ರಯೋಗ—** ಉರ್ವೀಕ್ಷೇಣ ಪಾರಿವ್ರಾಜ್ಯಂ ಪ್ರಾರ್ಥಯನ್ ಮುಹುಃ ಪಾದಾನಮ್ರಃ ಸೋಽಯಂ ಸಮಾಯಾಪೇಕ್ಷಯಾ ಧಾಮ ಗಮಯಾಮಾಸೇ ।

★ ★ ★

**ಅವತಾರಿಕಾ—** ಆಗ ಮನೆಗೆ ಬಂದ ಆಚಾರ್ಯರ ತಮ್ಮಂದಿರು ಏನು ಮಾಡಿದರು ಎಂದು ಹೇಳುತ್ತಾರೆ.

**ನ ಜಘಾಸ ನ ಸುಷ್ವಾಪ ನ ಜಹಾಸ ಸ ಧೀರಧೀಃ ।**
**ಸಮಯಾರ್ಥೀ ಸ್ಮರನ್ ಜ್ಯೇಷ್ಠಂ ರಾಮಂ ರಾಮಾನುಜೋ ಯಥಾ ॥ 94 ॥**

**ಪದಚ್ಛೇದ—** ನ, ಜಘಾಸ, ನ, ಸುಷ್ವಾಪ, ನ, ಜಹಾಸ, ಸಃ, ಧೀರಧೀಃ, ಸಮಯಾರ್ಥೀ, ಸ್ಮರನ್, ಜ್ಯೇಷ್ಠಂ, ರಾಮಂ, ರಾಮಾನುಜಃ, ಯಥಾ ।

**ಅನ್ವಯ—** ರಾಮಾನುಜಃ, ರಾಮಂ, ಯಥಾ, ಜ್ಯೇಷ್ಠಂ, ಸ್ಮರನ್, ಧೀರಧೀಃ, ಸಃ, ಸಮಯಾರ್ಥೀ, ಸನ್, ನ ಜಘಾಸ, ನ, ಸುಷ್ವಾಪ, ನ, ಜಹಾಸ ।

**ಅನ್ವಯಾರ್ಥ—**

**ರಾಮಾನುಜಃ** = ಶ್ರೀರಾಮಚಂದ್ರನ ತಮ್ಮನಾದ ಭರತನು,
**ರಾಮಂ ಯಥಾ** = ಶ್ರೀರಾಮನನ್ನೋಪಾದಿಯಲ್ಲಿ,
**ಜ್ಯೇಷ್ಠಂ** = ಅಣ್ಣಂದಿರಾದ ಶ್ರೀಮಧ್ವಾಚಾರ್ಯರನ್ನು,
**ಸ್ಮರನ್** = ಸ್ಮರಿಸುತ್ತಾ ಇರುವ,
**ಧೀರಧೀಃ** = ಸ್ಥಿರವಾದ ಚಿತ್ತವುಳ್ಳ,
**ಸಃ** = ಆ ಆಚಾರ್ಯರ ತಮ್ಮಂದಿರು,
**ಸಮಯಾರ್ಥೀ(ಸನ್)** = ಸಂನ್ಯಾಸದ ಕಾಲವನ್ನು ಅಪೇಕ್ಷಿಸುವವರಾಗಿ,
**ನ ಜಘಾಸ** = ಊಟ ಮಾಡಲಿಲ್ಲ,
**ನ ಸುಷ್ವಾಪ** = ನಿದ್ರಿಸಲಿಲ್ಲ,
**ನ ಜಹಾಸ** = ನಗಲಿಲ್ಲ.

**ತಾತ್ಪರ್ಯ—** ಶ್ರೀರಾಮನು ವನವಾಸದಲ್ಲಿರುವಾಗ ಹದಿನಾಲ್ಕು ವರ್ಷಗಳು ಕಳೆದ ತರುವಾಯ 'ನಾನು ಅಯೋಧ್ಯೆಗೆ ಬರುವೆನು. ನಿನ್ನ ಅಪೇಕ್ಷೆಯನ್ನು ಪೂರೈಸುವೆನು' ಎಂದು ಭರತನಿಗೆ ಮಾತು ಕೊಟ್ಟಿದ್ದನು. ಆ ಭರತನು ಶ್ರೀರಾಮನು ಬರುವ ಸಮಯವನ್ನು ನಿರೀಕ್ಷಿಸುತ್ತಾ ಊಟ ಮಾಡಲಿಲ್ಲ, ನಿದ್ರಿಸಲಿಲ್ಲ, ನಗಲಿಲ್ಲ. ಹಾಗೆಯೇ ತನ್ನ ಅಣ್ಣಂದಿರಾದ ಶ್ರೀಮಧ್ವರು ಹೇಳಿದ ಚಾತುರ್ಮಾಸ್ಯಸಮಾಪ್ತಿಯ ಕಾಲವು ಯಾವಾಗ ಬಂದೀತು. ನನಗೆ ಸಂನ್ಯಾಸ ಸ್ವೀಕಾರ ಮಾಡುವ ಯೋಗವು ಯಾವಾಗ ಕೈಗೂಡೀತು? ನಾನು ಅಣ್ಣಾ ಮಧ್ವರನ್ನು ಎಂದು ಕಂಡೇನು, ಎಂದು ಸ್ಮರಿಸುತ್ತಾ ಆಚಾರ್ಯರ ತಮ್ಮಂದಿರು, ಮನೆಗೆ ಹೋದಮೇಲೆ ಊಟ ಮಾಡಲಿಲ್ಲ, ನಿದ್ರಿಸಲಿಲ್ಲ, ನಗಲಿಲ್ಲ. ಎಲ್ಲಾ ವಿಷಯಸುಖಗಳನ್ನು ತೊರೆದು, ಆಚಾರ್ಯರು ಯಾವಾಗ ತನಗೆ ಸಂನ್ಯಾಸವನ್ನಿತ್ತು ಅನುಗ್ರಹಿಸಿಯಾರು ಎಂದು ನಿರೀಕ್ಷಿಸುತ್ತಾ ಇದ್ದರು ಎಂದು ಭಾವ.

**ವಿಗ್ರಹ—**

**ಧೀರಧೀಃ—** ಧೀರಾ ಧೀಃ ಯಸ್ಯ ಸಃ ಧೀರಧೀಃ ।

**ಸಮಯಾರ್ಥೀ—** ಸಮಯಂ ಅರ್ಥಯತೇ ಇತಿ ಸಮಯಾರ್ಥೀ ।

**ರಾಮಾನುಜಃ—** ರಾಮಸ್ಯ ಅನುಜಃ ರಾಮಾನುಜಃ ।

**ಕ್ರಿಯಾಪದ— ಜಘಾಸ** - ಜಘಾಸ ಜಕ್ಷತುಃ ಜಕ್ಷುಃ, ಜಘಸಿಥ ಜಕ್ಷಥುಃ ಜಕ್ಷ, ಜಘಾಸ ಜಘಸಮ ಜಕ್ಷಿವ ಜಕ್ಷಿಮ । ಅದಭಕ್ಷಣೇ ಸಕ. ಅನಿ. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ಜಘಾಸ ಎಂದು ರೂಪ ।

ಸುಷ್ವಾಪ - ಸುಷ್ವಾಪ ಸುಷ್ವತುಃ ಸುಷ್ವಪುಃ, ಸುಷ್ವಪಿಥ-ಸುಷ್ವಪ್ಥ ಸುಷ್ವಪಥುಃ ಸುಷ್ವಪ, ಸುಷ್ವಾಪ-ಸುಷ್ವಪ, ಸುಷುಪ್ತಿವ ಸುಷುಪ್ತಿಮ । ಸ್ವಪ್ ಶಯೇ ಅಕ. ಅನಿ. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ಸುಷ್ವಾಪ ಎಂದು ರೂಪ ।

ಜಹಾಸ -ಜಹಾಸ ಜಹಸತುಃ ಜಹಸುಃ, ಜಹಸಿಥ-ಜಹಸಥುಃ ಜಹಸ, ಜಹಾಸ-ಜಹಸ ಜಹಸಿವ ಜಹಸಿಮ । ಹಸೇ (ಹಸ್) ಹಸನೇ ಅಕ ಸೇಟ್. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ಜಹಾಸ ಎಂದು ರೂಪ ।

ಪ್ರಯೋಗ— ರಾಮಾನುಜೇನ ರಾಮಃ ಯಥಾ, ಜ್ಯೇಷ್ಠಂ ಸ್ಮರತಾ ತೇನ ಧೀರಧಿಯಾ ಸಮಯಾರ್ಥಿನಾ ಸತಾ ನ ಜಕ್ಷೇ ನ ಸುಷುಪೇ ನ ಜಹಸೇ (ಊಟ ಮಾಡಲ್ಪಡಲಿಲ್ಲ, ನಿದ್ರಿಸಲ್ಪಡಲಿಲ್ಲ, ನಗಲ್ಪಡಲಿಲ್ಲ) ।

★ ★ ★

ಅವತಾರಿಕಾ— ಚಾತುರ್ಮಾಸ್ಯ ನಿಯಮ ಮುಗಿದ ಮೇಲೆ ಶ್ರೀಮಧ್ವಾಚಾರ್ಯರು ಪಾಜಕಕ್ಷೇತ್ರಕ್ಕೆ ಆಗಮಿಸಿದರು.

**ರಾಜ್ಯೇ ಕಥಂಚಿನ್ನಿಕ್ಷಿಪ್ಯ ರಾಜಾನಂ ವಿರಹಾರ್ದಿತಮ್ ।**
**ಅವತಾರಭುವಂ ಪ್ರಾಯಾದ್ ಭಗವಾಂಛ(ನ್‌ಶ)ರದತ್ಯಯೇ ॥ 95 ॥**

ಪದಚ್ಛೇದ— ರಾಜ್ಯೇ, ಕಥಂಚಿತ್, ನಿಕ್ಷಿಪ್ಯ, ರಾಜಾನಂ, ವಿರಹಾರ್ದಿತಂ, ಅವತಾರಭುವಂ, ಪ್ರಾಯಾತ್, ಭಗವಾನ್, ಶರದತ್ಯಯೇ ।

ಅನ್ವಯ— ಭಗವಾನ್, ಶರದತ್ಯಯೇ, ವಿರಹಾರ್ದಿತಂ, ರಾಜಾನಂ, ಕಥಂಚಿತ್, ರಾಜ್ಯೇ, ನಿಕ್ಷಿಪ್ಯ, ಅವತಾರ ಭುವಂ, ಪ್ರಾಯಾತ್ ।

ಅನ್ವಯಾರ್ಥ—

**ಭಗವಾನ್** = ಷಡ್ಗುಣ್ಯೈಶ್ವರ್ಯಸಂಪನ್ನರಾದ ಶ್ರೀಮಧ್ವಾಚಾರ್ಯರು,

**ಶರದತ್ಯಯೇ** = ಶರದೃತುವು ಮುಗಿದ ಮೇಲೆ, (ಕಾರ್ತಿಕಮಾಸವು ಕಳೆದ ನಂತರ)

**ವಿರಹಾರ್ದಿತಂ** = ವಿಯೋಗದಿಂದ ದುಃಖಿತನಾದ,

**ರಾಜಾನಂ** = ಜಯಸಿಂಹರಾಜನನ್ನು,

**ಕಥಂಚಿತ್** = ಕಷ್ಟದಿಂದ,

**ರಾಜ್ಯೇ** = (ಅವನ) ರಾಜ್ಯದಲ್ಲಿ,

ನಿಕ್ಷಿಪ್ಯ = ಇರಿಸಿ,

**ಅವತಾರಭುವಂ** = ತಾವು ಅವತರಿಸಿದ ಪಾಜಕಕ್ಷೇತ್ರವನ್ನು ಕುರಿತು,

**ಪ್ರಾಯಾತ್** = ಹೋದರು.

**ತಾತ್ಪರ್ಯ—** ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ ಎಂಬ ನಾಲ್ಕು ತಿಂಗಳು ನಡೆಯಬೇಕಾದ ಚಾತುರ್ಮಾಸ್ಯ ಮುಗಿಯಿತು. ವರ್ಷಋತು, ಶರದ್ರುತುಗಳು ಕಳೆದವು. ಆಗ ಆಚಾರ್ಯರು ತಾವು ಅವತರಿಸಿದ ಪಾಜಕ ಕ್ಷೇತ್ರಕ್ಕೆ ತೆರಳಲು ಸಿದ್ಧರಾದರು. ಆಚಾರ್ಯರ ಪರಮಭಕ್ತರಾದ ಜಯಸಿಂಹರಾಜನು ಆಚಾರ್ಯರ ಅಗಲಿಕೆಯನ್ನು ಸಹಿಸದೆ ವ್ಯಥೆಗೊಳಗಾದನು. ಆಚಾರ್ಯರು ಉಪದೇಶದಿಂದ ಅವನನ್ನು ಅನುಗ್ರಹಿಸಿ ಬಹಳ ಕಷ್ಟದಿಂದ ಅವನನ್ನು ಸಮಾಧಾನಪಡಿಸಿ ರಾಜ್ಯದಲ್ಲಿಯೇ ಇರಿಸಿ ತಾವು ಪಾಜಕಕ್ಷೇತ್ರಕ್ಕೆ ತೆರಳಿದರು.

**ವಿಗ್ರಹ—**

**ವಿರಹಾರ್ದಿತಂ—** ವಿರಹೇಣ ಅರ್ದಿತಃ ವಿರಹಾರ್ದಿತಃ ತಂ ।

**ಅವತಾರಭುವಂ—** ಅವತಾರಸ್ಯ ಭೂಃ ಅವತಾರಭೂಃ ತಾಂ ।

**ಶರದತ್ಯಯೇ—** ಶರದಃ ಅತ್ಯಯಃ ಶರದತ್ಯಯಃ ತಸ್ಮಿನ್ ।

**ಕ್ರಿಯಾಪದ— ಪ್ರಾಯಾತ್** - ಪ್ರ+ಅಯಾತ್ ಅಯಾತಾಂ ಅಯುಃ-ಅಯಾನ್, ಅಯಾಃ ಅಯಾತಂ ಅಯಾತ, ಅಯಾಂ ಅಯಾವ ಅಯಾಮ । ಪ್ರ ಉಪಸರ್ಗ, ಯಾ ಪ್ರಾಪಣೇ, ಸಕ. ಅನಿ. ಪರ ಅನದ್ಯತನಭೂತೇ ಲಙ್ ಪ್ರಥಮ-ಪುರುಷ ಏಕವಚನದಲ್ಲಿ ಪ್ರಾಯಾತ್ ಎಂದು ರೂಪ ।

**ಪ್ರಯೋಗ—** ಭಗವತಾ ಶರದತ್ಯಯೇ ವಿರಹಾರ್ದಿತಂ ರಾಜಾನಂ, ಕಥಂಚಿತ್ ರಾಜ್ಯೇ ನಿಕ್ಷಿಪ್ಯ ಅವತಾರಭೂಃ ಪ್ರಾಯಾಯತ ।

★ ★ ★

**ಅವತಾರಿಕಾ—** ಪಾಜಕಕ್ಷೇತ್ರದಲ್ಲಿ ಆಚಾರ್ಯರು ತಮ್ಮನಿಗೆ ಸಂನ್ಯಾಸಾಶ್ರಮವನ್ನು ಕೊಟ್ಟರು.

**ವಿಶುದ್ಧದ್ವಿಕುಲಂ ಶ್ರೌತಂ ಶುಚಿಂ ಕೃತಪಿತೃಕ್ರಿಯಮ್ ।**
**ವಿರಕ್ತಂ ವಿಷಯಾನ್ ಭುಕ್ತ್ವಾ ವ್ಯಧಾನ್ಮಧ್ವೋಽನುಜಂ ಯತಿಮ್ ॥ 96 ॥**

**ಪದಚ್ಛೇದ—** ವಿಶುದ್ಧದ್ವಿಕುಲಂ, ಶ್ರೌತಂ, ಶುಚಿಂ, ಕೃತಪಿತೃಕ್ರಿಯಂ, ವಿರಕ್ತಂ, ವಿಷಯಾನ್, ಭುಕ್ತ್ವಾ, ವ್ಯಧಾತ್, ಮಧ್ವಃ, ಅನುಜಂ, ಯತಿಮ್ ।

**ಅನ್ವಯ—** ವಿಶುದ್ಧದ್ವಿಕುಲಂ, ಶ್ರೌತಂ, ಶುಚಿಂ, ಕೃತಪಿತೃಕ್ರಿಯಂ, ವಿಷಯಾನ್, ಭುಕ್ತ್ವಾ ವಿರಕ್ತಂ, ಅನುಜಂ, ಮಧ್ವಃ, ಯತಿಂ, ವ್ಯಧಾತ್ ।

**ಅನ್ವಯಾರ್ಥ—**

**ವಿಶುದ್ಧದ್ವಿಕುಲಂ** = ಪವಿತ್ರವಾದ ತಾಯಿ ಮತ್ತು ತಂದೆಯ ವಂಶವುಳ್ಳ,

**ಶ್ರೌತಂ** = ವೇದ ಮತ್ತು ಅದರ ಅರ್ಥದ ನಿಶ್ಚಯವುಳ್ಳ,

**ಶುಚಿಂ** = ಮನಸ್ಸು ಮಾತು, ದೇಹಗಳಿಂದ ಪವಿತ್ರವಾದ,

**ಕೃತಪಿತೃ ಕ್ರಿಯಂ** = ಮಾಡಲ್ಪಟ್ಟ ಜೀವಚ್ಛ್ರಾದ್ಧವೆಂಬ ಪಿತೃಕಾರ್ಯವುಳ್ಳ,

**ವಿಷಯಾನ್** = ಹಣ, ಗೋಸಂಪತ್ತು, ಧಾನ್ಯ ಇವನ್ನೆಲ್ಲಾ,

**ಭುಕ್ತ್ವಾ** = (ಸಂಪಾದಿಸಿ) ಅನುಭವಿಸಿ,
**ವಿರಕ್ತಂ** = ವೈರಾಗ್ಯಶಾಲಿಯಾದ,
**ಅನುಜಂ** = ತಮ್ಮನನ್ನು,
**ಮಧ್ವಃ** = ಶ್ರೀಮಧ್ವಾಚಾರ್ಯರು,
**ಯತಿಂ** = ಸಂನ್ಯಾಸಿಯನ್ನಾಗಿ,
**ವ್ಯಧಾತ್** = ಮಾಡಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರ ತಮ್ಮನು ಸಂನ್ಯಾಸವನ್ನು ಸ್ವೀಕಾರ ಮಾಡಲು ಅತ್ಯಂತ ಅರ್ಹನಾಗಿದ್ದನು. ಆಚಾರ್ಯರ ತಮ್ಮನೇ ಆಗಿದ್ದ ಅವನ ತಂದೆ-ತಾಯಿಯರ ವಂಶವು ಶುದ್ಧವಾಗಿತ್ತು. ಅವನು ವೇದ ಮತ್ತು ವೇದಾರ್ಥ-ಗಳನ್ನು ಚೆನ್ನಾಗಿ ತಿಳಿದಿದ್ದನು. ಮನೋವಾಕ್ಕಾಯ ಕರ್ಮಗಳಿಂದ ಶುದ್ಧನಾಗಿದ್ದನು. ಧನಧಾನ್ಯಾದಿಗಳನ್ನು ಅನುಭವಿಸಿ ವಿರಕ್ತನಾಗಿದ್ದನು. ಅವನು ಸಂನ್ಯಾಸಾಶ್ರಮ ಸ್ವೀಕಾರಕ್ಕೆ ಮೊದಲು ಮಾಡಬೇಕಾದ ಜೀವಚ್ಛ್ರಾದ್ಧ ಮುಂತಾದುವುಗಳನ್ನೆಲ್ಲಾ ಮಾಡಿ ಮುಗಿಸಿದ ಮೇಲೆ ಆಚಾರ್ಯರು ಶಾಸ್ತ್ರೋಕ್ತವಾದ ವಿಧಿಯಿಂದ ಅವನನ್ನು ಸಂನ್ಯಾಸಿಯನ್ನಾಗಿ ಮಾಡಿದನು.

**ವಿಗ್ರಹ**—

**ವಿಶುದ್ಧದ್ವಿಕುಲಂ**— ವಿಶುದ್ಧೇ ದ್ವೇ ಕುಲೇ ಯಸ್ಯ ಸಃ ವಿಶುದ್ಧದ್ವಿಕುಲಃ ತಂ ।

**ಶ್ರೌತಂ**— ಶ್ರುತೇಃ ಅಯಂ ಶ್ರೌತಃ ತಂ ।

**ಕೃತಪಿತೃಕ್ರಿಯಂ**— ಪಿತೃಣಾಂ ಕ್ರಿಯಾ ಪಿತೃಕ್ರಿಯಾ, ಕೃತಾ ಪಿತೃಕ್ರಿಯಾ ಯೇನ ಸಃ ಕೃತಪಿತೃಕ್ರಿಯಃ ತಂ ।

**ಕ್ರಿಯಾಪದ**— ವ್ಯಧಾತ್-ವಿ+ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ। ವಿ ಉಪಸರ್ಗ, (ಡು)ಧಾಞ್ ಧಾರಣಪೋಷಣಯೋಃ ಸಕ. ಅನಿ. ಉಭ to put, to grant, to produce, to bear ಭೂತೇ ಲುಙ್ ಪ್ರಥಮಪುರುಷ ಏಕವಚನದಲ್ಲಿ ವ್ಯಧಾತ್ ಎಂದು ರೂಪ ।

**ಪ್ರಯೋಗ**— ವಿಶುದ್ಧದ್ವಿಕುಲಃ ಶ್ರೌತಃ ಶುಚಿಃ ಕೃತಪಿತೃಕ್ರಿಯಃ, ವಿಷಯಾನ್ ಭುಕ್ತ್ವಾ ವಿರಕ್ತಃ ಅನುಜಃ ಮಧ್ವೇನ ಯತಿಃ ವ್ಯಧಾಯಿ ।

★ ★ ★

**ಅವತಾರಿಕಾ**— ಆಚಾರ್ಯರು ತಮ್ಮನಿಗೆ ಪ್ರಣವಮಂತ್ರೋಪದೇಶವನ್ನು ಮಾಡಿದರು.

**ರಹಸ್ಯತಿರಹಸ್ಯಂ ತದ್ಬ್ರಹ್ಮ ಬ್ರಹ್ಮಸಮೋ ದದೌ ।**
**ಅಮುಷ್ಮೈ ಪಂಚತಪಸೋ ನ ವಿದುರ್ಯತ್ತಪಸ್ವಿನಃ ॥ 97 ॥**

**ಪದಚ್ಛೇದ**— ರಹಸಿ, ಅತಿರಹಸ್ಯಂ, ತತ್, ಬ್ರಹ್ಮ, ಬ್ರಹ್ಮಸಮಃ, ದದೌ, ಅಮುಷ್ಮೈ, ಪಂಚತಪಸಃ, ನ, ವಿದುಃ, ಯತ್, ತಪಸ್ವಿನಃ ।

**ಅನ್ವಯ**— ಬ್ರಹ್ಮಸಮಃ, ಪಂಚತಪಸಃ, ತಪಸ್ವಿನಃ, ಯತ್, ಬ್ರಹ್ಮ, ನ, ವಿದುಃ, ಅತಿರಹಸ್ಯಂ, ತತ್, ರಹಸಿ, ಅಮುಷ್ಮೈ, ದದೌ ।

**ಅನ್ವಯಾರ್ಥ**—

**ಬ್ರಹ್ಮಸಮಃ** = ಚತುರ್ಮುಖ ಬ್ರಹ್ಮದೇವರಿಗೆ ಸಮಾನರಾದ ಶ್ರೀಮಧ್ವಾಚಾರ್ಯರು,
**ಪಂಚತಪಸಃ** = ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನು ಮಾಡುತ್ತಿರುವ,

ತಪಸ್ವಿನಃ = ಮುನಿಗಳು,
ಯತ್ = ಯಾವ,
ಬ್ರಹ್ಮ = ಪ್ರಣವವನ್ನು (ಓಂಕಾರ ರೂಪವಾದ ವೇದವನ್ನು),
ನ ವಿದುಃ = ತಿಳಿಯುವುದಿಲ್ಲವೋ,
ಅತಿರಹಸ್ಯಂ = ಬಹಳ ರಹಸ್ಯವಾದ,
ತತ್ = ಆ ಪ್ರಣವಮಂತ್ರವನ್ನು,
ರಹಸಿ = ಏಕಾಂತದಲ್ಲಿ,
ಅಮುಷ್ಮೈ = ಈ ತಮ್ಮನಿಗೆ,
ದದೌ = ಉಪದೇಶ ಮಾಡಿದರು.

ತಾತ್ಪರ್ಯ— ಕೆಲವು ಮುನಿಗಳು ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಯಜ್ಞಕುಂಡಗಳನ್ನು ನಿರ್ಮಿಸಿ ಅಲ್ಲಿ ಅಗ್ನಿ ಪುರುಷ ದೇವರನ್ನು ಪ್ರಜ್ವಲಿಸಿಕೊಂಡು ನೆತ್ತಿಯ ಮೇಲೆ ಬೆಳಗುತ್ತಿರುವ ಸುಡುವ ಸೂರ್ಯನನ್ನು ದಿಟ್ಟಿಸಿ ನೋಡುತ್ತಾ ತಪಸ್ಸು ಮಾಡುತ್ತಾ ಇರುತ್ತಾರೆ. ಅನೇಕ ರಹಸ್ಯ ಮಂತ್ರಗಳನ್ನು ಮಂತ್ರಾರ್ಥಗಳನ್ನು ಅನುಸಂಧಾನ ಮಾಡುತ್ತಾ ಇರುತ್ತಾರೆ. ಅಂತಹ ಮಹಾತಪಸ್ವಿಗಳೂ ಸರಿಯಾಗಿ ತಿಳಿಯದ ರಹಸ್ಯವಾದ ಸಾರ್ಥಪ್ರಣವಮಂತ್ರವನ್ನು ಆಚಾರ್ಯರು ತಮ್ಮನಿಗೆ ರಹಸ್ಯದಲ್ಲಿ ಉಪದೇಶಿಸಿದರು. ಅದರ ಅಂತರಾರ್ಥವನ್ನು ಬೋಧಿಸಿದರು.

ವಿಗ್ರಹ—

ಅತಿರಹಸ್ಯಂ— ಅತ್ಯಂತಂ ರಹಸ್ಯಂ ಅತಿರಹಸ್ಯಂ ।
ಬ್ರಹ್ಮಸಮಂ— ಬ್ರಹ್ಮಣಾ ಸಮಃ ಬ್ರಹ್ಮಸಮಃ ।
ಪಂಚತಪಸಃ— ಪಂಚಸು ತಪಃ ಯೇಷಾಂ ತೇ ಪಂಚತಪಸಃ ।
ತಪಸ್ವಿನಃ— ತಪಃ ಏಷಾಂ ಅಸ್ತೀತಿ ತಪಸ್ವಿನಃ ।

ಕ್ರಿಯಾಪದ— ದದೌ - ದದೌ ದದತುಃ ದದುಃ, ದದಿಥ-ದದಾಥ ದದಥುಃ ದದ, ದದೌ ದದಿವ ದದಿಮ । (ಡು) ದಾ ಞ್ ದಾನೇ ಸಕ.ಅನಿ.ಉಭ to give ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ದದೌ ಎಂದು ರೂಪ ।

ವಿದುಃ - ವೇದ ವಿದತುಃ ವಿದುಃ ವೇತ್ಥ ವಿದಥುಃ ವಿದ, ವೇದ ವಿದ್ವ ವಿದ್ಮ । ವಿದ ಜ್ಞಾನೇ ಸಕ. ಸೇಟ್. ಪರ. to know, to regard, ''ವಿದೋ ಲಟೋ ವಾ'' ಎಂಬ ಸೂತ್ರದಿಂದ ಲಟ್ ಲಕಾರದ ಪ್ರತ್ಯಯಗಳಿಗೆ ಲಿಟ್ ಲಕಾರದ ಪ್ರತ್ಯಯಗಳು ಆದೇಶವಾಗಿ ಬರುತ್ತವೆ. ವರ್ತಮಾನೇ ಲಟ್ ಪ್ರಥಮಪುರುಷ ಬಹುವಚನದಲ್ಲಿ ದದುಃ ಎಂದು ರೂಪ ।

ಪ್ರಯೋಗ— ಬ್ರಹ್ಮಸಮೇನ, ಪಂಚತಪೋಭಿಃ ತಪಸ್ವಿಭಿಃ ಯತ್ ಬ್ರಹ್ಮ ನ ವಿದ್ಯತೇ ಅತಿರಹಸ್ಯಂ ತತ್ ರಹಸಿ ಅಮುಷ್ಮೈ ದದೇ ।

★ ★ ★

ಅವತಾರಿಕಾ— ಆಚಾರ್ಯರು ತಮ್ಮನಿಗೆ ವಿಷ್ಣುತೀರ್ಥ ಎಂಬ ಸಂನ್ಯಾಸನಾಮವನ್ನು ಕೊಟ್ಟರು.

**ಪ್ರೇಮಾಮೃತಪ್ರಸನ್ನಾಸ್ಯಸ್ಮಿತಾಂಗಾಪಾಂಗಪೂರ್ವಕಮ್ ।**
**ಶ್ರೀವಿಷ್ಣುತೀರ್ಥನಾಮಾಸ್ಮೈ ಪ್ರೀತಿತೀರ್ಥಃ ಪ್ರದತ್ತವಾನ್ ॥ 98 ॥**

**ಪದಚ್ಛೇದ**— ಪ್ರೇಮಾಮೃತಪ್ರಸನ್ನಾಸ್ಯಸ್ಮಿತಾಂಗಾಪಾಂಗಪೂರ್ವಕಂ, ಶ್ರೀವಿಷ್ಣುತೀರ್ಥನಾಮ, ಅಸ್ಮೈ, ಪ್ರೀತಿತೀರ್ಥಃ, ಪ್ರದತ್ತವಾನ್ ।

**ಅನ್ವಯ**— ಪ್ರೀತಿತೀರ್ಥಃ, ಪ್ರೇಮಾಮೃತಪ್ರಸನ್ನಾಸ್ಯಸ್ಮಿತಾಂಗಾಪಾಂಗಪೂರ್ವಕಂ, ಅಸ್ಮೈ, ಶ್ರೀವಿಷ್ಣುತೀರ್ಥನಾಮ, ಪ್ರದತ್ತವಾನ್ ।

**ಅನ್ವಯಾರ್ಥ**—

**ಪ್ರೀತಿತೀರ್ಥಃ** = ಆನಂದತೀರ್ಥರು,

**ಪ್ರೇಮಾಮೃತಪ್ರಸನ್ನ ಆಸ್ಯ ಸ್ಮಿತಾಂಗ ಅಪಾಂಗಪೂರ್ವಕಂ** = ಪ್ರೀತಿಯೆಂಬ ಅಮೃತದಿಂದ ಅರಳಿದ ಮುಖವು ಮಂದಹಾಸವೇ ಸಹಾಯಕವಾಗಿ ಉಳ್ಳ (ಮುಗುಳ್ನಗೆಯಿಂದ ಕೂಡಿದ) ಕಡೆಗಣ್ಣು ಮೊದಲಾಗಿ ಉಳ್ಳದ್ದು ಹೇಗೋ ಹಾಗೆ,

**ಅಸ್ಮೈ** = ಈ ತಮ್ಮನಿಗೆ,

**ಶ್ರೀವಿಷ್ಣುತೀರ್ಥನಾಮ** = ಶ್ರೀವಿಷ್ಣುತೀರ್ಥರೆಂಬ ಹೆಸರನ್ನು,

**ದತ್ತವಾನ್** = ಕೊಟ್ಟರು.

**ತಾತ್ಪರ್ಯ**— ಶ್ರೀಮದಾನಂದತೀರ್ಥರು ತಮ್ಮನಲ್ಲಿರುವ ಪ್ರೇಮವೆಂಬ ಅಮೃತದಿಂದ ಪ್ರಸನ್ನವಾದ ಮುಖವುಳ್ಳವರಾಗಿದ್ದರು. ಅವರು ಮಂದಹಾಸದ ಜತೆಗೆ ದಯಾಪೂರ್ಣವಾದ ಕಡೆಗಣ್ಣಿನ ನೋಟದಿಂದ ತಮ್ಮನನ್ನು ನೋಡುತ್ತಾ ತಮ್ಮನಿಗೆ 'ವಿಷ್ಣುತೀರ್ಥ' ಎಂಬ ಆಶ್ರಮನಾಮವನ್ನಿತ್ತರು. ಸ್ನೇಹದಿಂದ ಮಂದಹಾಸಪೂರ್ವಕವಾಗಿ ತಮ್ಮನನ್ನು ನೋಡಿ 'ವಿಷ್ಣುತೀರ್ಥ' ಎಂದು ಹೆಸರಿಟ್ಟರು ಎಂದು ಭಾವ.

**ವಿಗ್ರಹ**—

**ಪ್ರೇಮಾಮೃತಪ್ರಸನ್ನಾಸ್ಯಸ್ಮಿತಾಂಗಾಪಾಂಗಪೂರ್ವಕಂ**— ಪ್ರೇಮ ಏವ ಅಮೃತಂ ಪ್ರೇಮಾಮೃತಂ, ಪ್ರೇಮಾಮೃತೇನ ಪ್ರಸನ್ನಂ ಪ್ರೇಮಾಮೃತಪ್ರಸನ್ನಂ ಪ್ರೇಮಾಮೃತಪ್ರಸನ್ನಂ ಚ ತತ್ ಆಸ್ಯಂ ಚ ಪ್ರೇಮಾಮೃತಪ್ರಸನ್ನಾಸ್ಯಂ, ಸ್ಮಿತಂ ಅಂಗಂ ಯಸ್ಯ ಸಃ ಸ್ಮಿತಾಂಗಃ, ಸ್ಮಿತಾಂಗಶ್ಚಾಸೌ ಅಪಾಂಗಶ್ಚ ಸ್ಮಿತಾಂಗಾಪಾಂಗಃ, ಪ್ರೇಮಾಮೃತಪ್ರಸನ್ನಾಸ್ಯಂ ಚ ಸ್ಮಿತಾಂಗಾಪಾಂಗಶ್ಚ ಪ್ರೇಮಾಮೃತಪ್ರಸನ್ನಾಸ್ಯ-ಸ್ಮಿತಾಂಗಾಪಾಂಗೌ, ತೌ ಪೂರ್ವೌ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಪ್ರೇಮಾಮೃತಪ್ರಸನ್ನಾಸ್ಯ ಸ್ಮಿತಾಂಗಾಪಾಂಗಪೂರ್ವಕಂ ।

**ಶ್ರೀವಿಷ್ಣುತೀರ್ಥನಾಮ**— ಶ್ರೀವಿಷ್ಣುತೀರ್ಥ ಇತಿ ನಾಮ ಶ್ರೀವಿಷ್ಣುತೀರ್ಥನಾಮ ತತ್ ।

**ಪ್ರೀತಿತೀರ್ಥಃ**— ಪ್ರೀತಿಃ (ಪ್ರೀತಿಕರಂ ಆನಂದಕರಂ) ತೀರ್ಥಂ ಯಸ್ಯ ಸಃ ಪ್ರೀತಿತೀರ್ಥಃ ।

**ಕ್ರಿಯಾಪದ ಮತ್ತು ಪ್ರಯೋಗ**— ಈ ಶ್ಲೋಕದಲ್ಲಿ ತಿಙಂತವಾದ ಕ್ರಿಯಾಪದವಿಲ್ಲ. ಪ್ರದತ್ತವಾನ್ ಎಂಬ ಶಬ್ದವೇ ಕ್ರಿಯಾಪದದ ಕೆಲಸವನ್ನು ಮಾಡುತ್ತದೆ. ಅದಕ್ಕೆ ಕೊಟ್ಟಂತಹವನು ಎಂಬ ಅರ್ಥವಿದ್ದರೂ ಕೊಟ್ಟನು ಎಂಬ ಅರ್ಥವನ್ನು ಹೇಳುತ್ತಾರೆ. ಅಭೂತ್ ಎಂಬ ಕ್ರಿಯಾಪದವನ್ನು ಸೇರಿಸಿ ಕೊಟ್ಟಂತಹವರಾದರು ಎಂದು ಅರ್ಥವನ್ನು ಹೇಳುವುದೂ ಸಾಂಪ್ರದಾಯಿಕವಾಗಿದೆ. ಆಗ ಭಾವೇ ಪ್ರಯೋಗಕ್ಕೆ ಈ ವಾಕ್ಯವನ್ನು ಹೀಗೆ ಬದಲಾಯಿಸಬಹುದು. ಪ್ರೀತಿತೀರ್ಥೇನ ಪ್ರೇಮಾಮೃತಪ್ರಸನ್ನಾಸ್ಯಸ್ಮಿತಾಂಗಾಪಾಂಗಪೂರ್ವಕಂ ಅಸ್ಮೈ ಶ್ರೀವಿಷ್ಣುತೀರ್ಥನಾಮ ಪ್ರದತ್ತವತಾ (ಅಭಾವಿ) ।

★ ★ ★

ಅವತಾರಿಕಾ— ಶ್ರೀವಿಷ್ಣುತೀರ್ಥರ ಸಂನ್ಯಾಸಧರ್ಮಾಚರಣೆಯ ಕ್ರಮವನ್ನು ವರ್ಣಿಸುತ್ತಾರೆ.

**ಶ್ರವಣೇನಾನುವಾದೇನ ಮನನೇನಾವೃಥಾಽಕರೋತ್ ।**
**ಕಾಲಂ ವೇದಾಂತಶಾಸ್ತ್ರಸ್ಯ ವೇದಾಂತಗುರುಸೋದರಃ ॥ 99 ॥**

**ಪದಚ್ಛೇದ—** ಶ್ರವಣೇನ, ಅನುವಾದೇನ, ಮನನೇನ, ಅವೃಥಾ, ಅಕರೋತ್, ಕಾಲಂ, ವೇದಾಂತಶಾಸ್ತ್ರಸ್ಯ, ವೇದಾಂತಗುರುಸೋದರಃ ।

**ಅನ್ವಯ—** ವೇದಾಂತಗುರುಸೋದರಃ, ವೇದಾಂತಶಾಸ್ತ್ರಸ್ಯ, ಶ್ರವಣೇನ, ಅನುವಾದೇನ, ಮನನೇನ, ಕಾಲಂ, ಅವೃಥಾಽಕರೋತ್ ।

**ಅನ್ವಯಾರ್ಥ—**

**ವೇದಾಂತಗುರುಸೋದರಃ** = ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳ ಉಪದೇಶಕರಾದ ಶ್ರೀಮಧ್ವರ ತಮ್ಮನಾದ ಶ್ರೀವಿಷ್ಣುತೀರ್ಥರು,
**ವೇದಾಂತಶಾಸ್ತ್ರಸ್ಯ** = ಉಪನಿಷತ್ತು ಬ್ರಹ್ಮಮೀಮಾಂಸಾಶಾಸ್ತ್ರಗಳ,
**ಶ್ರವಣೇನ** = ಕೇಳುವುದರಿಂದ,
**ಅನುವಾದೇನ** = ಕೇಳಿದ್ದನ್ನು ಮರಳಿ ಹೇಳುವುದರಿಂದ,
**ಮನನೇನ** = ಮನಸ್ಸಿನಲ್ಲಿ ಚಿಂತಿಸುವುದರಿಂದ,
**ಕಾಲಂ** = ಸಮಯವನ್ನು,
**ಅವೃಥಾ** = ಸಫಲವಾಗಿ,
**ಅಕರೋತ್** = ಮಾಡಿದರು.

**ತಾತ್ಪರ್ಯ—** ಶ್ರೀಮದಾನಂದತೀರ್ಥರು ಉಪನಿಷತ್ತುಗಳು, ಬ್ರಹ್ಮಮೀಮಾಂಸಾಶಾಸ್ತ್ರ ಮುಂತಾದ ವೇದಾರ್ಥ-ನಿರ್ಣಾಯಕಗಳೂ, ಪ್ರಮೇಯ ಪ್ರತಿಪಾದಕಗಳೂ ಆದ ಗ್ರಂಥಗಳ ಉಪದೇಶಕರಾದ ಮಹಾಗುರುಗಳಾಗಿದ್ದರು. ಅವರ ತಮ್ಮಂದಿರಾದ ಶ್ರೀವಿಷ್ಣುತೀರ್ಥರು ಯಾವಾಗಲೂ ಅಣ್ಣಂದಿರಿಂದ ವೇದಾಂತಶಾಸ್ತ್ರವನ್ನು ಕೇಳುತ್ತಿದ್ದರು. ಕೇಳಿದ್ದನ್ನು ಪುನಃ ಪುನಃ ಹೇಳಿ ದೃಢಪಡಿಸಿಕೊಳ್ಳುತ್ತಿದ್ದರು. ಅದೇ ವಿಷಯವನ್ನು ಮನಸ್ಸಿನಲ್ಲಿ ಯುಕ್ತಿಗಳಿಂದ ಚಿಂತಿಸುತ್ತಿದ್ದರು. ಹೀಗೆ ಶ್ರವಣ, ಅನುವಾದ, ಮನನಗಳಿಂದ ಕಾಲವನ್ನು ಸಾರ್ಥಕರೀತಿಯಿಂದ ಕಳೆಯುತ್ತಿದ್ದರು.

**ವಿಗ್ರಹ—**

**ವೇದಾಂತಶಾಸ್ತ್ರಸ್ಯ—** ವೇದಾನಾಂ ಅಂತಃ (ನಿರ್ಣಯಃ) ಯಸ್ಮಾತ್ ತತ್ ವೇದಾಂತಂ, ವೇದಾಂತಂ ಚ ತತ್ ಶಾಸ್ತ್ರಂ ಚ ವೇದಾಂತಶಾಸ್ತ್ರಂ ತಸ್ಯ ।

**ವೇದಾಂತಗುರುಸೋದರಃ—** ವೇದಾಂತಸ್ಯ ಗುರುಃ ವೇದಾಂತಗುರುಃ, ವೇದಾಂತಗುರೋಃ ಸೋದರಃ ವೇದಾಂತಗುರುಸೋದರಃ ।

**ಕ್ರಿಯಾಪದ— ಅಕರೋತ್** - ಅಕರೋತ್ ಅಕುರುತಾಂ ಅಕುರ್ವನ್, ಅಕರೋಃ ಅಕುರುತಂ ಅಕುರುತ, ಅಕರವಂ ಅಕುರ್ವ ಅಕುರ್ಮ । (ಡು) ಕೃ ಞ್ ಕರಣೇ ಸಕ. ಅನಿ. ಉಭ. to do, to make ಅನದ್ಯತನ ಭೂತಕಾಲದಲ್ಲಿ ಲಙ್ ಲಕಾರ ಪ್ರಥಮಪುರುಷ ಏಕವಚನ ।

**ಪ್ರಯೋಗ—** ವೇದಾಂತಗುರುಸೋದರೇಣ, ವೇದಾಂತಶಾಸ್ತ್ರಸ್ಯ ಶ್ರವಣೇನ, ಅನುವಾದೇನ, ಮನನೇನ, ಕಾಲಃ ಅವೃಥಾ ಅಕ್ರಿಯತ ।

★ ★ ★

**ಅವತಾರಿಕಾ—** ತಮ್ಮ ಗುಣಗಳಿಂದ ಶ್ರೀವಿಷ್ಣುತೀರ್ಥರು ಆಚಾರ್ಯರ ಕೃಪಾಪಾತ್ರರಾದರು.

**ಸ ದಾಂತಿಭಕ್ತಿಮಾಧುರ್ಯಪರಿಚರ್ಯಾದಿಮೇದುರೈಃ ।**
**ಮಹಾವಿಟಪಿನಂ ಚಕ್ರೇ ಗುರೋಃ ಸ್ವಸ್ಥಂ ಕೃಪಾಂಕುರಮ್॥ 100 ॥**

**ಪದಚ್ಛೇದ—** ಸಃ, ದಾಂತಿಭಕ್ತಿಮಾಧುರ್ಯಪರಿಚರ್ಯಾದಿಮೇದುರೈಃ, ಮಹಾವಿಟಪಿನಂ, ಚಕ್ರೇ, ಗುರೋಃ, ಸ್ವಸ್ಥಂ, ಕೃಪಾಂಕುರಮ್ ।

**ಅನ್ವಯ—** ಸಃ, ಸ್ವಸ್ಥಂ, ಗುರೋಃ, ಕೃಪಾಂಕುರಂ, ದಾಂತಿಭಕ್ತಿಮಾಧುರ್ಯಪರಿಚರ್ಯಾದಿಮೇದುರೈಃ, ಮಹಾವಿಟಪಿನಂ, ಚಕ್ರೇ ।

**ಅನ್ವಯಾರ್ಥ—**

**ಸಃ** = ಆ ವಿಷ್ಣುತೀರ್ಥರು,
**ಸ್ವಸ್ಥಂ** = ತನ್ನಲ್ಲಿರುವ,
**ಗುರೋಃ** = ಗುರುಗಳಾದ ಶ್ರೀಮಧ್ವಾಚಾರ್ಯರ,
**ಕೃಪಾಂಕುರಂ** = ದಯೆಯೆಂಬ ಮೊಳಕೆಯನ್ನು,
**ದಾಂತಿಭಕ್ತಿಮಾಧುರ್ಯಪರಿಚರ್ಯಾ ಆದಿ ಮೇದುರೈಃ** = ಇಂದ್ರಿಯನಿಗ್ರಹವು ಹರಿಗುರುಗಳಲ್ಲಿರುವ ಮಾಹಾತ್ಮ್ಯಜ್ಞಾನಪೂರ್ವಕವಾದ ಸುದೃಢ ಸ್ನೇಹವು, ಮಾತು ಮತ್ತು ಮನಸ್ಸುಗಳಲ್ಲಿರುವ ಇಂಪು, ಸೇವೆ, ಇವುಗಳೇ ಮೊದಲಾಗಿ ಉಳ್ಳ ಪುಷ್ಟಿ ಸಾಮಗ್ರಿಗಳಿಂದ,
**ಮಹಾವಿಟಪಿನಂ** = ದೊಡ್ಡ ಮರವನ್ನಾಗಿ,
**ಚಕ್ರೇ** = ಮಾಡಿದರು.

**ತಾತ್ಪರ್ಯ—** ರೈತನು ಹೊಲದಲ್ಲಿ ಬೀಜವನ್ನು ಬಿತ್ತಿ, ಅದು ಮೊಳಕೆಯಾದಾಗ, ಗೊಬ್ಬರ, ನೀರು ಮೊದಲಾದ ಬೆಳೆಯಲು ಬೇಕಾದ ಸಾಮಗ್ರಿಗಳನ್ನು ಹಾಕಿ, ಆ ಮೊಳಕೆಯನ್ನು ದೊಡ್ಡ ಮರವನ್ನಾಗಿ ಮಾಡುವನು. ಅದರಂತೆ ಶ್ರೀವಿಷ್ಣುತೀರ್ಥರು ತಮ್ಮಲ್ಲಿ ಅಣ್ಣನಾದ ಆನಂದತೀರ್ಥರು ಮಾಡಿದ ಕೃಪೆಯ ಮೊಳಕೆಯನ್ನು ತಮ್ಮ ಇಂದ್ರಿಯ ನಿಗ್ರಹ, ಹರಿಗುರುಭಕ್ತಿ, ಸವಿನುಡಿ, ಪ್ರಸನ್ನವಾದ ಮನಸ್ಸು ಗುರುಸೇವೆ ಇವುಗಳಿಂದ ಬೆಳೆಸಿಕೊಂಡು, ಸ್ವಲ್ಪವೇ ಇದ್ದ ಕೃಪಾಂಕುರ-ವನ್ನು ದೊಡ್ಡ ಹೆಮ್ಮರದಂತೆ ಬೆಳೆಸಿಕೊಂಡರು. ಅಂದರೆ ಆಚಾರ್ಯರು ಶ್ರೀವಿಷ್ಣುತೀರ್ಥರ ಇಂದ್ರಿಯನಿಗ್ರಹಾದಿ ಗುಣಗಳನ್ನು ನೋಡಿ ಅವರಲ್ಲಿ ಹೆಚ್ಚು ದಯೆ ಮಾಡಿದರು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ದಾಂತಿಭಕ್ತಿಮಾಧುರ್ಯಪರಿಚರ್ಯಾದಿಮೇದುರೈಃ—** ಮಧುರಸ್ಯ ಭಾವಃ ಮಾಧುರ್ಯಂ ದಾಂತಿಶ್ಚ ಭಕ್ತಿಶ್ಚ, ಮಾಧುರ್ಯಂ ಚ ಪರಿಚರ್ಯಾ ಚ ದಾಂತಿಭಕ್ತಿಮಾಧುರ್ಯಪರಿಚರ್ಯಾಃ, ತಾಃ ಆದಯಃ ಯೇಷಾಂ (ಗುಣಾನಾಂ) ತೇ ದಾಂತಿಭಕ್ತಿಮಾಧುರ್ಯಪರಿಚರ್ಯಾದಯಃ (ಗುಣಾಃ), ತೇ ಏವ ಮೇದುರಾಣಿ, ತೈಃ ।

**ಮಹಾವಿಟಪಿನಂ—** ಮಹಾಂಶ್ಚಾ ಸೌ ವಿಟಪೀ ಚ ಮಹಾವಿಟಪೀ ತಂ । ವಿಟಪೀ = ಮರ, 'ವೃಕ್ಷೋ ಮಹೀರುಹಃ ಶಾಖೀ ವಿಟಪೀ ಪಾದಪಸ್ತರುಃ' ಅಮರ ।

**ಸ್ವಸ್ಥಂ—** ಸ್ವಸ್ಮಿನ್ ತಿಷ್ಠತೀತಿ ಸ್ವಸ್ಥಂ ।

**ಕೃಪಾಂಕುರಂ—** ಕೃಪಾಯಾಃ ಅಂಕುರಃ ಕೃಪಾಂಕುರಃ, ತಂ । ಅಂಕುರ = ಮೊಳಕೆ, 'ಅಂಕುರೋಽಭಿನವೋದ್ಭಿದಿ' ಅಮರ.

**ಕ್ರಿಯಾಪದ—** **ಚಕ್ರೇ** - ಚಕ್ರೇ ಚಕ್ರಾತೇ ಚಕ್ರಿರೇ, ಚಕೃಷೇ ಚಕ್ರಾಥೇ ಚಕೃಢ್ವೇ, ಚಕ್ರೇ ಚಕೃವಹೇ ಚಕೃಮಹೇ । (ಡು) ಕೃಞ್ ಕರಣೇ to do, to make ಅನಿ. ಉಭ. ಸಕ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ।

**ಪ್ರಯೋಗ—** ತೇನ ಸ್ವಸ್ಥಃ ಗುರೋಃ ಕೃಪಾಂಕುರಃ, ದಾಂತಿಭಕ್ತಿಮಾಧುರ್ಯಪರಿಚರ್ಯಾದಿಮೇದುರೈಃ ಮಹಾವಿಟಪೀ ಚಕ್ರೇ ।

★ ★ ★

**ಅವತಾರಿಕಾ—** ಕವಿಗಳು ಇಂತಹ ವಿಷ್ಣುತೀರ್ಥರ ಮಹಿಮೆಯನ್ನು ವರ್ಣಿಸಲು ಪ್ರಾರಂಭಿಸುತ್ತಾರೆ.

**ಅನಂತಮತಿಕಾರುಣ್ಯಕಲ್ಪದ್ರುಮವತೋ ಜನೈಃ ।**
**ಅವರ್ಣ್ಯೋ ಮಹಿಮಾ ತಸ್ಯ ಲೌಲ್ಯಾತ್ ಸಂವರ್ಣ್ಯತೇ ಮನಾಕ್ ॥ 101 ॥**

**ಪದಚ್ಛೇದ—** ಅನಂತಮತಿಕಾರುಣ್ಯಕಲ್ಪದ್ರುಮವತಃ, ಜನೈಃ, ಅವರ್ಣ್ಯಃ, ಮಹಿಮಾ ತಸ್ಯ, ಲೌಲ್ಯಾತ್, ಸಂವರ್ಣ್ಯತೇ, ಮನಾಕ್ ।

**ಅನ್ವಯ—** ಅನಂತಮತಿಕಾರುಣ್ಯಕಲ್ಪದ್ರುಮವತಃ, ತಸ್ಯ, ಮಹಿಮಾ, ಜನೈಃ, ಅವರ್ಣ್ಯಃ, (ತಥಾಪಿ) ಲೌಲ್ಯಾತ್, ಮನಾಕ್, ಸಂವರ್ಣ್ಯತೇ ।

**ಅನ್ವಯಾರ್ಥ—**

**ಅನಂತಮತಿಕಾರುಣ್ಯಕಲ್ಪದ್ರುಮವತಃ** = ಶ್ರೀಪೂರ್ಣಪ್ರಜ್ಞರ ದಯೆಯೆಂಬ ಕಲ್ಪವೃಕ್ಷವುಳ್ಳ,
**ತಸ್ಯ** = ಆ ವಿಷ್ಣುತೀರ್ಥರ,
**ಮಹಿಮಾ** = ಮಾಹಾತ್ಮ್ಯವು,
**ಜನೈಃ** = ಮನುಷ್ಯರಿಂದ,
**ಅವರ್ಣ್ಯಃ** = ವರ್ಣಿಸಲು ಅಶಕ್ಯವಾದುದು, (ತಥಾಪಿ = ಆದರೂ ಕೂಡ)
**ಲೌಲ್ಯಾತ್** = ಚಾಪಲದಿಂದ,
**ಮನಾಕ್** = ಸ್ವಲ್ಪ
**ಸಂವರ್ಣ್ಯತೇ** = ವರ್ಣಿಸಲ್ಪಡುತ್ತದೆ.

**ತಾತ್ಪರ್ಯ—** ಶ್ರೀಪೂರ್ಣಪ್ರಜ್ಞರ ದಯೆಯನ್ನು ಸಂಪಾದಿಸುವುದು ಸ್ವರ್ಗಲೋಕದ ಕಲ್ಪವೃಕ್ಷವನ್ನು ಪಡೆದಂತೆ ದೊಡ್ಡ ಭಾಗ್ಯವಾಗಿದೆ. ಶ್ರೀವಿಷ್ಣುತೀರ್ಥರು ದೊಡ್ಡ ಯೋಗ್ಯತೆಯುಳ್ಳವರಾದುದರಿಂದ ಆಚಾರ್ಯರ ದಯೆಯೆಂಬ ಕಲ್ಪವೃಕ್ಷವನ್ನು ಪಡೆದರು ಆಚಾರ್ಯರ ದಯೆಯನ್ನು ಆಶ್ರಯಿಸಿ ತನ್ನ ಸಾಧನಮಾರ್ಗದಲ್ಲಿ ಮುಂದುವರೆದರು. ಇಂತಹ ವಿಷ್ಣುತೀರ್ಥರ ಮಹಿಮೆಯನ್ನು ವರ್ಣಿಸಲು ಸಾಧಾರಣ ಮನುಷ್ಯರಿಗೆ ಸಾಧ್ಯವಿಲ್ಲ. ಆದರೂ ಅವರ ಮಹಿಮೆಯನ್ನು ವರ್ಣಿಸಬೇಕೆಂಬ, ಲವಲವಿಕೆಯು ನನ್ನಲ್ಲಿ ಉಂಟಾಗಿ, ಚಾಪಲದಿಂದ (ಉತ್ಕಂಠೆಯಿಂದ) ಪ್ರೇರಿತನಾಗಿ ನಾನು ಸ್ವಲ್ಪ ಮಹಿಮೆಯನ್ನಾದರೂ ಯಥಾಶಕ್ತಿಯಾಗಿ ವರ್ಣಿಸುತ್ತೇನೆ (ಎಂದು ಶ್ರೀನಾರಾಯಣಪಂಡಿತಾಚಾರ್ಯರು ಹೇಳುತ್ತಾರೆ).

**ವಿಗ್ರಹ—**

**ಅನಂತಮತಿಕಾರುಣ್ಯಕಲ್ಪದ್ರುಮಮವತಃ—** ಅನಂತಾ ಮತಿಃ ಯಸ್ಯ ಸಃ ಅನಂತಮತಿಃ (ಶ್ರೀಪೂರ್ಣಪ್ರಜ್ಞಾಚಾರ್ಯಃ)ಕರುಣೈವ ಕಾರುಣ್ಯಂ, ಕಾರುಣ್ಯಮೇವ ಕಲ್ಪದ್ರುಮಃ ಕಾರುಣ್ಯಕಲ್ಪದ್ರುಮಃ, ಅನಂತಮತೇಃ ಕಾರುಣ್ಯಕಲ್ಪದ್ರುಮಃ ಅನಂತಮತಿಕಾರುಣ್ಯಕಲ್ಪದ್ರುಮಃ, ಸಃ ಅಸ್ಯ ಅಸ್ತೀತಿ ಅನಂತಮತಿಕಾರುಣ್ಯಕಲ್ಪ

ದ್ರುಮವಾನ್, ತಸ್ಯ ಅನಂತಮತಿಕಾರುಣ್ಯಕಲ್ಪದ್ರುಮವತಃ । ಕಾರುಣ್ಯ = ಕರುಣೆ, ದಯೆ, 'ಕಾರುಣ್ಯಂ ಕರುಣಾ ಘೃಣಾ' ಅಮರ ।

**ಅವರ್ಣ್ಯಃ—** ವರ್ಣಯಿತುಂ ಅಶಕ್ಯಃ ಅವರ್ಣ್ಯಃ ।

**ಲೌಲ್ಯಾತ್—** ಲೋಲಸ್ಯ ಭಾವಃ ಲೌಲ್ಯಂತಸ್ಮಾತ್ । 'ಲೋಲಃ ಸತೃಷ್ಣಚಲಯೋಃ' ಭಾಸ್ಕರ, ಮನಾಕ್ = ಸ್ವಲ್ಪ (ಅವ್ಯಯ), 'ಕಿಂಚಿದೀಷನ್ಮನಾಗಲ್ಪೇ' ಅಮರ ।

**ಕ್ರಿಯಾಪದ—** ಸಂವರ್ಣ್ಯತೇ - ಸಂ+ವರ್ಣ್ಯತೇ ವರ್ಣ್ಯೇತೆ ವರ್ಣ್ಯಂತೇ, ವರ್ಣ್ಯಸೇ ವರ್ಣ್ಯೇಥೇ ವರ್ಣ್ಯಧ್ವೇ, ವರ್ಣ್ಯೇ ವರ್ಣ್ಯಾವಹೇ ವರ್ಣ್ಯಾಮಹೇ । ಸಮ್ ಉಪಸರ್ಗ, ವರ್ಣ ಕ್ರಿಯಾವಿಸ್ತಾರಗುಣವಚನೇಷು ಸಕ. ಸೇಟ್. ಉಭ. to paint, to explain, to extole, ಕರ್ಮಣಿ ಲಟ್ ಪ್ರಥಮಪುರುಷ ಏಕವಚನದಲ್ಲಿ ಸಂವರ್ಣ್ಯತೇ ಎಂದು ರೂಪ ।

**ಪ್ರಯೋಗ—** ಅನಂತಮತಿಕಾರುಣ್ಯಕಲ್ಪದ್ರುಮವತಃ ತಸ್ಯ ಮಹಿಮಾನಂ ಜನ್ಯೈಃ ಅವರ್ಣ್ಯಂ ಅಪಿ ಲೌಲ್ಯಾತ್ ಮನಾಕ್ ಸಂವರ್ಣಯಾಮಿ ।

**ವಿಶೇಷಾಂಶ—** ಇಲ್ಲಿ ಅನಂತಮತಿಕಾರುಣ್ಯಕಲ್ಪದ್ರುಮಂ ಅವತಃ, ಎಂದೂ ಪದಚ್ಛೇದ ಮಾಡಬಹುದು. ಆಗ ಶ್ರೀಪೂರ್ಣಪ್ರಜ್ಞರ ದಯೆಯೆಂಬ ಕಲ್ಪವೃಕ್ಷವನ್ನು ಪಡೆದ ಶ್ರೀವಿಷ್ಣುತೀರ್ಥರು ಅದನ್ನು ಬಹಳ ಜಾಗರೂಕತೆಯಿಂದ ಕಾಪಾಡುತ್ತಿದ್ದರು. ಆ ಕಲ್ಪವೃಕ್ಷವು ತನ್ನನ್ನು ಬಿಟ್ಟು ಹೋಗದಂತೆ ನೋಡಿಕೊಳ್ಳುತ್ತಿದ್ದರು. ಆಚಾರ್ಯರು ಹೇಳಿದ ಸಾಧನ ಮಾರ್ಗವನ್ನು ಸ್ವಲ್ಪವೂ ಬಿಡದೆ ಅನುಸರಿಸುತ್ತಿದ್ದರು ಎಂಬ ಅಭಿಪ್ರಾಯವು ಬರುತ್ತದೆ. ದ್ರುಮ = ವೃಕ್ಷ, 'ಪಲಾಶೀದ್ರು-ದ್ರುಮಾಗಮಾಃ' ಅಮರ.

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರು ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ಮೊದಲನೆಯವರಾಗಿದ್ದರು.

**ಚತುರೋಽಸೌ ಪ್ರವಚನೇ ಮನುಸಂಸಿದ್ಧಿಮಾನ್ಮನಃ ।**
**ಸಂಖ್ಯಾ ಮಾ (ಮಾಂ) ಪೂರಣೀ ಮಾಗಾನ್ಮಧ್ವದಾಸಮಿತಿ ವ್ಯಧಾತ್ ॥ 102 ॥**

**ಪದಚ್ಛೇದ—** ಚತುರಃ, ಅಸೌ, ಪ್ರವಚನೇ, ಮನುಸಂಸಿದ್ಧಿಮಾನ್, ಮನಃ, ಸಂಖ್ಯಾ, ಮಾ (ಮಾಂ), ಪೂರಣೀ, ಮಾಗಾತ್, ಇತಿ, ಮನಃ, ವ್ಯಧಾತ್ ।

**ಅನ್ವಯ—** ಪ್ರವಚನೇ, ಚತುರಃ, ಮನುಸಂಸಿದ್ಧಿಮಾನ್, ಅಸೌ, ಮಧ್ವದಾಸಂ, ಮಾಂ, ಪೂರಣೀ, ಸಂಖ್ಯಾ, ಮಾಗಾತ್, ಇತಿ, ಮನಃ, ವ್ಯಧಾತ್ ।

**ಅನ್ವಯಾರ್ಥ—**

ಪ್ರವಚನೇ = ಶ್ರೀಮಧ್ವಶಾಸ್ತ್ರ ವ್ಯಾಖ್ಯಾನದಲ್ಲಿ,
ಚತುರಃ = ಕುಶಲರಾದ,
ಮನುಸಂಸಿದ್ಧಿಮಾನ್ = ಪ್ರಣವಾದಿ ಮಂತ್ರಗಳ ಜಪದಿಂದ ಇಷ್ಟಸಿದ್ಧಿಯುಳ್ಳ,
ಅಸೌ = ಈ ವಿಷ್ಣುತೀರ್ಥರು,
ಮಧ್ವದಾಸಂ = ಶ್ರೀಮಧ್ವಾಚಾರ್ಯರ ಸೇವಕನಾದ,
ಮಾಂ = ನನ್ನನ್ನು,
ಪೂರಣೀಸಂಖ್ಯಾ = ಪೂರಣಗೊಳಿಸುವ ಸಂಖ್ಯೆಯು (ಎಂದರೆ ದ್ವಿತೀಯ = ಎರಡನೆಯವನು, ತೃತೀಯ = ಮೂರನೆಯವನು ಎಂದು ಪೂರಣಪ್ರತ್ಯಯಾಂತವಾದ ಸಂಖ್ಯೆಯು),

**ಮಾಗಾತ್** = ಹೊಂದಿರಲಿ,

**ಇತಿ** = ಹೀಗೆಂದು,

**ಮನಃ** = ಮನಸ್ಸನ್ನು,

**ವ್ಯಧಾತ್** = ಮಾಡಿದರು.

**ತಾತ್ಪರ್ಯ—** ಶ್ರೀವಿಷ್ಣುತೀರ್ಥರು ಶ್ರೀಮಧ್ವಶಾಸ್ತ್ರವನ್ನು ವ್ಯಾಖ್ಯಾನಿಸಿ ಉಪದೇಶಿಸುವುದರಲ್ಲಿ ಕುಶಲರಾಗಿದ್ದರು. ಪ್ರಣವಾದಿ ಮಂತ್ರಗಳನ್ನು ಜಪಿಸಿ ಸಿದ್ಧಿಯನ್ನು ಪಡೆದಿದ್ದರು. ಇಂತಹ ಮಹಾಮಹಿಮ ಸಂಪನ್ನರಾದ ಶ್ರೀವಿಷ್ಣುತೀರ್ಥಾ-ಚಾರ್ಯರು ಶ್ರೀಮಧ್ವಾಚಾರ್ಯರ ಸೇವಕನಾದ ಶಿಷ್ಯನಾದ ತನ್ನನ್ನು ಇವನು ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ದ್ವಿತೀಯನು (ಎರಡನೆಯವನು) ಅಥವಾ ತೃತೀಯನು (ಮೂರನೆಯವನು) ಎಂದು ಪೂರಣ ಪ್ರತ್ಯಯಾಂತವಾದ ಸಂಖ್ಯೆಯಿಂದ ಯಾರೂ ಹೇಳಬಾರದು. ತಾನೇ 'ಪ್ರಥಮ' ಮೊದಲನೆಯ ಮಧ್ವದಾಸನು ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ಅಗ್ರಗಣ್ಯನು ಎಂದು ಪರಿಗಣಿಸಲ್ಪಡಬೇಕು ಎಂದು ಆಲೋಚಿಸಿದರು.

**ವಿಶೇಷಾಂಶ—** ಸಂಸ್ಕೃತಭಾಷೆಯಲ್ಲಿ ಏಕಃ ಅಂದರೆ ಒಬ್ಬನು ಎಂದು ಅರ್ಥ. ಇದು ಸಂಖ್ಯಾವಾಚಕ. ಪ್ರಥಮಃ ಅಂದರೆ ಮೊದಲನೆಯವನು. ಇದು ಸಂಖ್ಯೇಯ ವಾಚಕ. ಈ ಪ್ರಥಮ ಎಂಬ ಶಬ್ದವು ಏಕಶಬ್ದಕ್ಕೆ ಪ್ರತ್ಯಯ ಸೇರಿಸಿ ಉಂಟಾದ ಶಬ್ದವಲ್ಲ. ಮೊದಲನೆಯವನು (ಒಂದನೆಯವನು) ಎಂಬ ಅರ್ಥವನ್ನು ಹೇಳುವ ರೂಢಶಬ್ದ. ದ್ವೌ ಎಂದರೆ ಇಬ್ಬರು. ಇದು ಸಂಖ್ಯಾವಾಚಕ, ದ್ವಿತೀಯಃ (ಎರಡನೆಯವನು) ಎಂಬುದು ಸಂಖ್ಯೇಯ ವಾಚಕ, ಹೀಗೆಯೇ ತೃತೀಯಃ ಚತುರ್ಥಃ ಪಂಚಮಃ ಷಷ್ಠಃ, ದಶಮಃ, ಏಕಾದಶಃ ವಿಂಶತಿತಮಃ ಇತ್ಯಾದಿ ಶಬ್ದಗಳು ಪೂರಣ ಪ್ರತ್ಯಯ ಎಂಬ ಹೆಸರುಳ್ಳ ಪ್ರತ್ಯಯಗಳನ್ನು ಸೇರಿಸಿ ಸಾಧಿಸಲ್ಪಡುತ್ತವೆ. 'ಪ್ರಥಮ' ಮೊದಲನೆಯವನು ಎಂಬ ಅರ್ಥವನ್ನು ಹೇಳುವ ಶಬ್ದವು ಮಾತ್ರ ಆ ಅರ್ಥದಲ್ಲಿ ರೂಢವಾದ ಶಬ್ದವು. ಪ್ರಥೇರಮಚ್ (ಉಣಾದಿ ಸೂತ್ರ 15-68) ಎಂದು ಅಮಚ್ ಎಂಬ ಪ್ರತ್ಯಯದಿಂದ ನಿಷ್ಪನ್ನವಾದ ಶಬ್ದವು ಇದು ಪೂರಣಪ್ರತ್ಯಯವಲ್ಲ. 'ಅದೌ ಪ್ರಧಾನೇ ಪ್ರಥಮಃ' ಎಂಬ ಅಮರಕೋಶಾನುಸಾರವಾಗಿ ಪ್ರಥಮ ಎಂಬ ಶಬ್ದಕ್ಕೆ ಮೊದಲನೆಯವನು, ಪ್ರಧಾನನು ಎಂದೂ ಅರ್ಥವಾಗುತ್ತದೆ. ದ್ವಿತೀಯಃ ಎಂಬ ಶಬ್ದವು 'ದ್ವೇಸ್ತೀಯಃ' (5.2.54) ಎಂಬ ಪೂರಣಪ್ರತ್ಯಯದಿಂದ ಉಂಟಾದ ಶಬ್ದವು. ಹೀಗೆಯೇ ತೃತೀಯ ಮುಂತಾದ ಎಲ್ಲಾ ಶಬ್ದಗಳೂ 'ತಸ್ಯ ಪೂರಣೇ ಡಟ್' (5.2.48) ಎಂಬ ಪ್ರಸಂಗದಲ್ಲಿ ಬರುವ ಪೂರಣಪ್ರತ್ಯಯಾಂತವಾದ ಶಬ್ದಗಳಾಗಿವೆ. ಪ್ರಥಮ ಎಂಬ ಒಂದು ಶಬ್ದವು ಮಾತ್ರ ಪೂರಣಪ್ರತ್ಯಯಾಂತವಲ್ಲ. ಶ್ರೀಮಧ್ವಾಚಾರ್ಯರ ಶಿಷ್ಯರನ್ನು ಲೆಕ್ಕಿಸುವಾಗ ಇವನು ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ದ್ವಿತೀಯನೆಂದೋ (ಎರಡನೆಯವನೆಂದೋ) ತೃತೀಯನೆಂದೋ (ಮೂರನೆಯವ-ನೆಂದೋ) ಯಾರೂ ಹೇಳಬಾರದು. ಪೂರಣಪ್ರತ್ಯಯಾಂತವಲ್ಲದಿರುವ 'ಪ್ರಥಮಃ' ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ಇವನು ಪ್ರಧಾನನು ಮೊದಲನೆಯವನು ಎಂದು ಹೇಳಬೇಕು, ಅದಕ್ಕಾಗಿ ನಾನು ಪ್ರಯತ್ನಿಸಿ ಎಲ್ಲರನ್ನು ಮೀರಿಸುವನು ಎಂದು ಶ್ರೀವಿಷ್ಣುತೀರ್ಥರು ಸಂಕಲ್ಪಿಸಿದರು ಎಂದು ಭಾವವು.

**ವಿಗ್ರಹ—**

**ಮನುಸಂಸಿದ್ಧಿಮಾನ್—** ಮನೂನಾಂ ಸಂಸಿದ್ಧಿಃ ಮನುಸಂಸಿದ್ಧಿಃ, ಮನುಸಂಸಿದ್ಧಿಃ ಅಸ್ಯ ಅಸ್ತೀತಿ ಮನು-ಸಂಸಿದ್ಧಿಮಾನ್ ।

**ಮಧ್ವದಾಸಂ—** ಮಧ್ವಸ್ಯ ದಾಸಃ ಮಧ್ವದಾಸಃ, ತಂ ।

**ಕ್ರಿಯಾಪದ— ಮಾಗಾತ್** (ಮಾ) ಅಗಾತ್ ಅಗಾತಾಂ ಅಗುಃ, ಅಗಾಃ ಅಗಾತಂ ಅಗಾತ, ಅಗಾಂ ಅಗಾವ ಅಗಾಮ । **ಇಣ್ ಗತೌ** (ಇ) ಸಕ. ಅನಿ. ಪರ. to go ಭೂತೇ ಲುಜ್ ಪ್ರಥಮಪುರುಷ ಏಕವಚನದಲ್ಲಿ ಅಗಾತ್ ಎಂದು ರೂಪ. ಇಲ್ಲಿ ಮಾಜ್ ಎಂಬ ನಿಷೇಧಾರ್ಥಕವಾದ ಅವ್ಯಯವು ಬಂದಿರುವಾಗ 'ಲುಜ್‌ಲಜ್‌ಲೃಂಕ್ಷ್ವಡುದಾತ್ತಃ' (6.4.71)

ಎಂಬ ಸೂತ್ರದಿಂದ ಬರುವ ಅಟ್ ಎಂಬ ಆಗಮವು, ನ ಮಾಙ್ ಯೋಗೇ (6.4.74) ಎಂಬ ಸೂತ್ರದಿಂದ ನಿಷಿದ್ಧವಾಗಿದೆ. ಮಾ ಸೇರಿಸಿ ಹೇಳುವಾಗ ಗಾತ್ ಗಾತಾಂ ಗುಃ, ಇತ್ಯಾದಿ ರೂಪವನ್ನು ಹೇಳಬೇಕು.

**ವ್ಯಧಾತ್** - ವಿ+ಅಧಾತ್, ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ. ಅಧಾಂ ಅಧಾವ ಅಧಾಮ । (ಡು) ಧಾಞ್ ಧಾರಣಪೋಷಣಯೋಃ ಸಕ. ಅನಿ. ಉಭ. to put, to grant, to produce, to bear ಭೂತೇ ಲುಙ್ ವಿ ಉಪಸರ್ಗ ।

**ಪ್ರಯೋಗ—** ಪ್ರವಚನೇ ಚತುರೇಣ ಮನುಸಂಸಿದ್ಧಿಮತಾ ಅಮುಷಾ ಮಧ್ವದಾಸಃ ಅಹಂ ಪೂರಣ್ಯಾ ಸಂಖ್ಯಯಾ ಮಾ ಗಾಯಿ ಇತಿ ಮನಃ ವ್ಯಧಾಯಿ (ಕರ್ಮಣಿ) ।

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರ ತೀರ್ಥಯಾತ್ರೆಯನ್ನು ವರ್ಣಿಸುತ್ತಾರೆ.

**ದಿಶಂ ಪ್ರಯಾ(ಯಾಂ)ತಂ ಶಶಿನಶ್ಚರಂತಂ ಭುವ್ಯಶೋಧಯತ್ ।**
**ತೀರ್ಥಕಂ ವಿಷ್ಣುತೀರ್ಥಂ ಚ ವಿಷ್ಣುತೀರ್ಥಶ್ಚ ತೀರ್ಥಕಮ್ ॥ 103 ॥**

**ಪದಚ್ಛೇದ—** ದಿಶಂ, ಪ್ರಯಾತಂ (ಪ್ರಯಾಂತಂ), ಶಶಿನಃ, ಚರಂತಂ, ಭುವಿ, ಅಶೋಧಯತ್, ತೀರ್ಥಕಂ, ವಿಷ್ಣುತೀರ್ಥಂ, ಚ, ವಿಷ್ಣುತೀರ್ಥಃ, ಚ, ತೀರ್ಥಕಮ್ ।

**ಅನ್ವಯ—** ಶಶಿನಃ, ದಿಶಂ, ಪ್ರಯಾಂತಂ (ಪ್ರಯಾಂತಂ), ಭುವಿ, ಚರಂತಂ, ವಿಷ್ಣುತೀರ್ಥಂ, ತೀರ್ಥಕಂ, ಚ, ಅಶೋಧಯತ್ ।

**ಅನ್ವಯಾರ್ಥ—**

**ಶಶಿನಃ** = ಚಂದ್ರನ,
**ದಿಶಂ** = ದಿಕ್ಕು ಆಗಿರುವ ಉತ್ತರದಿಕ್ಕನ್ನು ಕುರಿತು,
**ಪ್ರಯಾತಂ** = ಹೋಗಿರುವ, (ಪ್ರಯಾಂತಂ = ಹೋಗುತ್ತಿರುವ),
**ಭುವಿ** = ಭೂಮಿಯಲ್ಲಿ,
**ಚರಂತಂ** = ಸಂಚಾರಮಾಡುತ್ತಿರುವ,
**ವಿಷ್ಣುತೀರ್ಥಂ** = ಶ್ರೀವಿಷ್ಣುತೀರ್ಥರನ್ನು,
**ತೀರ್ಥಕಂ ಚ** = ತೀರ್ಥಗಳ ನೀರೂ,
**ಅಶೋಧಯತ್** = ಪವಿತ್ರಗೊಳಿಸಿತು.
**ವಿಷ್ಣುತೀರ್ಥಃ ಚ** = ವಿಷ್ಣುತೀರ್ಥರೂ ಕೂಡ,
**ತೀರ್ಥಕಂ** = ಗಂಗಾದಿ ತೀರ್ಥಗಳ ನೀರನ್ನೂ,
**ಅಶೋಧಯತ್** = ಪವಿತ್ರಗೊಳಿಸಿದರು.

**ತಾತ್ಪರ್ಯ—** ಉತ್ತರ ದಿಕ್ಕಿಗೆ ಚಂದ್ರನು ಅಭಿಮಾನಿದೇವತೆ ಆದುದರಿಂದ ಚಂದ್ರನ ದಿಕ್ಕು ಎಂದು ಅದಕ್ಕೆ ಹೆಸರು. ಶ್ರೀವಿಷ್ಣುತೀರ್ಥರು ಚಂದ್ರನ ದಿಕ್ಕಾದ ಉತ್ತರದಿಕ್ಕಿಗೆ ತೀರ್ಥಯಾತ್ರೆಗಾಗಿ ಹೊರಟರು. ಭಾರತದ ಉತ್ತರ ಭಾಗದಲ್ಲೆಲ್ಲಾ ಸಂಚರಿಸಿದರು. ಆಗ ಶ್ರೀವಿಷ್ಣುತೀರ್ಥಾಚಾರ್ಯರನ್ನು, ಗಂಗಾದಿತೀರ್ಥಗಳ ಜಲವು ಪವಿತ್ರೀಕರಿಸಿತು. ಶ್ರೀವಿಷ್ಣುತೀರ್ಥರೂ ಕೂಡ ಗಂಗಾದಿತೀರ್ಥಜಲಗಳನ್ನು ಪವಿತ್ರಗೊಳಿಸಿದರು. ಗಂಗಾದಿತೀರ್ಥಜಲಗಳಲ್ಲಿ ಸ್ನಾನಮಾಡಿ ಶ್ರೀವಿಷ್ಣುತೀರ್ಥರು

ಪವಿತ್ರರಾದರು. ಗಂಗಾದಿತೀರ್ಥಗಳ ಜಲಗಳೂ ಭಗವಂತನ ಮಹಾಭಕ್ತರಾದ ವಿಷ್ಣುತೀರ್ಥರ ಸಂಗದಿಂದ ಪವಿತ್ರವಾದವು. (ಭವದ್ವಿಧಾ ಭಾಗವತಾಸ್ತೀರ್ಥಭೂತಾಃ ಸ್ವಯಂ ವಿಭೋ । ತೀರ್ಥೀಕುರ್ವಂತಿ ತೀರ್ಥಾನಿ ಸ್ವಾಂತಃಸ್ಥೇನ ಗದಾಭೃತಾ (ಭಾಗವತ) (ಸ್ಕಂ.1 ಶ್ಲೋ.10) ಭಗವಂತನ ಭಕ್ತರು ತಮ್ಮ ಹೃದಯದಲ್ಲಿರುವ ಭಗವಂತನ ಸನ್ನಿಧಾನ ಬಲದಿಂದ ತೀರ್ಥಜಲಗಳನ್ನು ಪವಿತ್ರಗೊಳಿಸುತ್ತಾರೆ).

**ವಿಗ್ರಹ ಮತ್ತು ಕೋಶ—**

**ಶಶಿನಃ—** ಶಶಃ ಅಸ್ಯ ಅಸ್ತೀತಿ ಶಶೀ, ತಸ್ಯ ।

**ತೀರ್ಥಕಂ—** ತೀರ್ಥಾನಾಂ ಕಂ ತೀರ್ಥಕಂ । ಕ = ನೀರು, 'ಮಾರುತೇ ವೇಧಸಿ ಬ್ರಧ್ನೇ ಪುಂಸಿ ಕಃ', 'ಕಂ ಶಿರೋಽಮ್ಬುನೋಃ' ಅಮರ.

**ಕ್ರಿಯಾಪದ—** ಪರ್ಯಶೋಧಯತ್- ಪರಿ+ಅಶೋಧಯತ್ ಅಶೋಧಯತಾಂ ಅಶೋಧಯನ್, ಅಶೋಧಯಃ ಅಶೋಧಯತಂ ಅಶೋಧಯತ, ಅಶೋಧಯಂ ಅಶೋಧಯಾವ ಅಶೋಧಯಾಮ । ಶುಧ ಶೌಚೇ ಅಕ. ಅನಿ. ಪರ. to be pure, to have doubts removed ಶುಧ್ಯತಿ ಇತ್ಯಾದಿ. ಪ್ರಕೃತದಲ್ಲಿ ಣಿಜಂತ ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನ. ಪರಿ ಉಪಸರ್ಗ. (ಶೋಧಯತಿ ಲಟ್ ಅಶೋಧಯತ್ ಲಙ್) ।

**ಪ್ರಯೋಗ—** ಶಶಿನಃ ದಿಶಂ ಪ್ರಯಾನ್ ಭುವಿ ಚರನ್ ವಿಷ್ಣುತೀರ್ಥಃ ತೀರ್ಥಕೇನ ಅಶೋಧ್ಯತ, ವಿಷ್ಣುತೀರ್ಥೇನ ತೀರ್ಥಕಂ ಚ ಅಶೋಧ್ಯತ (ಕರ್ಮಣಿ) ।

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರ ತಪೋನಿಷ್ಠೆಯನ್ನು ವರ್ಣಿಸುತ್ತಾರೆ.

**ಅಕಾಮಾನಾಮನೇಕೇಷಾಂ ಸಿದ್ಧಿಭೂಮಿಂ ತಪಸ್ವಿನಾಮ್ ।**
**ತಿರೋಹಿತಾತ್ಮಾ ಪ್ರಾಪಾಸೌ ಹರಿಶ್ಚಂದ್ರಮಹೀಧರಮ್ ॥ 104 ॥**

**ಪದಚ್ಛೇದ—** ಅಕಾಮಾನಾಂ, ಅನೇಕೇಷಾಂ, ಸಿದ್ಧಿಭೂಮಿಂ, ತಪಸ್ವಿನಾಂ, ತಿರೋಹಿತಾತ್ಮಾ, ಪ್ರಾಪ, ಅಸೌ, ಹರಿಶ್ಚಂದ್ರಮಹೀಧರಂ ।

**ಅನ್ವಯ—** ಅಸೌ, ಅಕಾಮಾನಾಂ, ಅನೇಕೇಷಾಂ, ತಪಸ್ವಿನಾಂ, ಸಿದ್ಧಿಭೂಮಿಂ, ಹರಿಶ್ಚಂದ್ರಮಹೀಧರಂ, ತಿರೋಹಿತಾತ್ಮಾ, ಪ್ರಾಪ ।

**ಅನ್ವಯಾರ್ಥ—**

**ಅಸೌ** = ಈ ವಿಷ್ಣುತೀರ್ಥರು,
**ಅಕಾಮಾನಾಂ** = ಫಲಾಪೇಕ್ಷೆ ಇಲ್ಲದ,
**ಅನೇಕೇಷಾಂ** = ಬಹಳ ಮಂದಿ,
**ತಪಸ್ವಿನಾಂ** = ಮುನಿಗಳ,
**ಸಿದ್ಧಿಭೂಮಿಂ** = ತಪಸ್ಸಿದ್ಧಿಯಾಗಿರುವ ಸ್ಥಳವಾದ,
**ಹರಿಶ್ಚಂದ್ರಮಹೀಧರಂ** = ಹರಿಶ್ಚಂದ್ರಪರ್ವತವನ್ನು,
**ತಿರೋಹಿತಾತ್ಮಾ** = ಇತರರಿಗೆ ಕಾಣಿಸದ ರೂಪವುಳ್ಳವರಾಗಿ,
**ಪ್ರಾಪ** = ಹೊಂದಿದರು.

**ತಾತ್ಪರ್ಯ—** ಸಹ್ಯಾದ್ರಿಯಲ್ಲಿ ಸುಬ್ರಹ್ಮಣ್ಯಕ್ಷೇತ್ರದಲ್ಲಿ ಕುಮಾರಪರ್ವತದ ಹತ್ತಿರ ಹರಿಶ್ಚಂದ್ರಪರ್ವತವೆಂಬ ಒಂದು ಪರ್ವತವಿದೆ. ಅದು ನಿಷ್ಕಾಮಕರ್ಮಿಗಳಾದ ಅನೇಕ ತಪಸ್ವಿಗಳಿಗೆ ತಪಸ್ಸಿದ್ಧಿಯ ಸ್ಥಾನವಾಗಿದೆ. ಶ್ರೀವಿಷ್ಣುತೀರ್ಥರು ಜನರ ಕಣ್ಣುಗಳಿಗೆ ಕಾಣಿಸದಂತೆ ಅದೃಶ್ಯರಾಗಿ ಆ ಪರ್ವತವನ್ನು ಹತ್ತಿದರು. ಅಲ್ಲಿ ತಪಸ್ಸು ಮಾಡಲಾರಂಭಿಸಿದರು.

**ವಿಗ್ರಹ—**

**ಅಕಾಮಾನಾಂ—** ನ ವಿದ್ಯತೇ ಕಾಮಃ (ಫಲೇಚ್ಛಾ) ಯೇಷಾಂ ತೇ ಅಕಾಮಾಃ, ತೇಷಾಂ ।

**ಅನೇಕೇಷಾಂ—** ನ ಏಕೇ ಅನೇಕೇ, ತೇಷಾಂ ।

**ಸಿದ್ಧಿಭೂಮಿಂ—** ಸಿದ್ಧೇಃ ಭೂಮಿಃ ಸಿದ್ಧಿಭೂಮಿಃ, ತಾಂ ।

**ತಪಸ್ವಿನಾಂ—** ತಪಃ ಏಷಾಂ ಅಸ್ತೀತಿ ತಪಸ್ವಿನಃ, ತೇಷಾಂ ।

**ತಿರೋಹಿತಾತ್ಮಾ—** ತಿರೋಹಿತಃ ಆತ್ಮಾ ಯಸ್ಯ ಸಃ ತಿರೋಹಿತಾತ್ಮಾ ।

**ಹರಿಶ್ಚಂದ್ರಮಹೀಧರಃ—** ಹರಿಶ್ಚಂದ್ರ ಇತಿ ಮಹೀಧರಃ ಹರಿಶ್ಚಂದ್ರಮಹೀಧರಃ ತಂ ।

**ಕ್ರಿಯಾಪದ— ಪ್ರಾಪ** - ಪ್ರ+ಆಪ ಆಪತುಃ ಆಪುಃ, ಆಪಿಥ ಆಪಥುಃ ಆಪ, ಆಪ ಆಪಿವ ಆಪಿಮ । ಆಪ್ಲೃ ವ್ಯಾಪ್ತೌ (ಆಪ್) ಸಕ. ಅನಿ. ಪರ. to obtain ot pervade ಭೂತ ಅನದ್ಯತನ ಪರೋಕ್ಷೇ ಲಿಟ್ ।

**ಪ್ರಯೋಗ—** ಅಮುನಾ ಅಕಾಮಾನಾಂ ಅನೇಕೇಷಾಂ ತಪಸ್ವಿನಾಂ ಸಿದ್ಧಿಭೂಮಿಃ ಹರಿಶ್ಚಂದ್ರಮಹೀಧರಃ ತಿರೋಹಿತಾತ್ಮನಾ (ಸತಾ) ಪ್ರಾಪೇ ।

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರು ತಪಸ್ಸನ್ನು ಪ್ರಾರಂಭಿಸಿ ಮೊದಲು ಆಹಾರವನ್ನೇ ಬಿಟ್ಟರೆನ್ನುತ್ತಾರೆ.

**ದ್ವಂದ್ವದುಃಖಾನಲೇ ವೀರೋ ಮಾತ್ಸರ್ಯೇಣ ವಿಮತ್ಸರಃ ।**
**ತತ್ಯಾಜ ಮತ್ವಾ ತಸ್ಯಾಸಾವಶನಾದೀಂಧನಾಯಿತಮ್ ॥ 105 ॥**

**ಪದಚ್ಛೇದ—** ದ್ವಂದ್ವದುಃಖಾನಲೇ, ವೀರಃ, ಮಾತ್ಸರ್ಯೇಣ, ವಿಮತ್ಸರಃ, ತತ್ಯಾಜ, ಮತ್ವಾ ತಸ್ಯ, ಅಸೌ, ಅಶನಾದಿ, ಇಂಧನಾಯಿತಮ್ ।

**ಅನ್ವಯ—** ವೀರಃ, ವಿಮತ್ಸರಃ, ಅಸೌ, ದ್ವಂದ್ವದುಃಖಾನಲೇ, ಮಾತ್ಸರ್ಯೇಣ, ತಸ್ಯ, ಅಶನಾದಿ, ಇಂಧನಾಯಿತಂ, ಮತ್ವಾ ತತ್ಯಾಜ ।

**ಅನ್ವಯಾರ್ಥ—**

**ವೀರಃ** = ಪ್ರಾರಂಭಿಸಿದ ಕಾರ್ಯವನ್ನು ಕೊನೆ ಮುಟ್ಟಿಸುವ, (ಆರಬ್ಧಾಂತಗಾಮಿಯಾದ)

**ವಿಮತ್ಸರಃ** = ಅಸೂಯೆ ಹೊಟ್ಟೆಕಿಚ್ಚು ಎಂಬ ದೋಷವಿಲ್ಲದ,

**ಅಸೌ** = ಈ ಶ್ರೀವಿಷ್ಣುತೀರ್ಥಾಚಾರ್ಯರು,

**ದ್ವಂದ್ವದುಃಖಾನಲೇ** = ಶೀತ, ಉಷ್ಣ ಲಾಭ, ಅಲಾಭ, ಮಾನ ಅಪಮಾನಗಳೆಂಬ ಜೋಡಿಗಳಿಂದ ಉಂಟಾಗುವ ದುಃಖವೆಂಬ ಅಗ್ನಿಯಲ್ಲಿ,

**ಮಾತ್ಸರ್ಯೇಣ** = ಅಸೂಯೆಯಿಂದ, (ದ್ವಂದ್ವದಿಂದ ಉಂಟಾದ ದುಃಖಾಗ್ನಿಯು ತನಗೆ ತೊಂದರೆ ಕೊಡಬಾರದು ಎಂಬ ಅಭಿಪ್ರಾಯದಿಂದ)

**ತಸ್ಯ** = ಆ ಶೀತ-ಉಷ್ಣಾದಿ ಜೋಡಿಗಳಿಗೆ,

**ಅಶನಾದಿ** = ಊಟ, ನೀರು, ಇತ್ಯಾದಿಗಳನ್ನು ಸ್ವೀಕರಿಸುವುದು, ಕುಡಿಯುವುದು ಮೊದಲಾದುದನ್ನು,
**ಇಂಧನಾಯಿತಂ ಮತ್ವಾ** = ಕಟ್ಟಿಗೆಯಂತಿರುವುದನ್ನಾಗಿ ತಿಳಿದು,
**ತತ್ಯಾಜ** = ಬಿಟ್ಟರು.

**ತಾತ್ಪರ್ಯ—** ಶೀತವಾಗುವುದು (ಚಳಿಯಾಗುವುದು), ಸೆಕೆಯಾಗುವುದು, ಲಾಭ, ಅಲಾಭ, ಮಾನ, ಅಪಮಾನ ಇವನ್ನೆಲ್ಲಾ ಪರಸ್ಪರ ವಿರುದ್ಧವಾದ ದ್ವಂದ್ವಗಳು (ಜೋಡಿಗಳು) ಎಂದು ಹೇಳುತ್ತಾರೆ. ಇವುಗಳು ಮಾನವರಿಗೆ ಬಿಡಲು ಸಾಧ್ಯವಿಲ್ಲದವುಗಳು. ಇವುಗಳಿಂದ ಉಂಟಾಗುವ ದುಃಖವು ಬೆಂಕಿಯಂತೆ ಮಾನವರನ್ನು ಸಂತಾಪಗೊಳಿಸುತ್ತದೆ. ಇಂತಹ ಸಾಂಸಾರಿಕ ದುಃಖಾಗ್ನಿಯು ಉಂಟಾಗದಂತೆ ತಡೆದರೆ ಮಾತ್ರವೇ ಪರಮಾತ್ಮನ ಅಖಂಡಧ್ಯಾನದಿಂದ ಯೋಗಸಿದ್ಧಿಯನ್ನು ಪಡೆಯಲು ಸಾಧ್ಯ, ಇಂತಹ ದುಃಖಾಗ್ನಿಯು ಉಂಟಾಗುವುದಕ್ಕೆ ಆಹಾರ, ಪಾನೀಯ ಮುಂತಾದುದು ಕಟ್ಟಿಗೆಯಂತೆ ಇರುತ್ತದೆ. ಬೆಂಕಿಯು ಉರಿಯಲು, ಹೆಚ್ಚಾಗಲು ಕಟ್ಟಿಗೆಯು ಹೇಗೆ ಕಾರಣವೋ ಅದರಂತೆ ದ್ವಂದ್ವ ದುಃಖವು ಉಂಟಾಗಲು ಆಹಾರಾದಿಗಳೇ ಕಾರಣ. ಆದುದರಿಂದ ತಪಸ್ಸಿದ್ಧಿಗೆ ಪ್ರತಿಬಂಧಕವಾದ ಈ ದ್ವಂದ್ವ ದುಃಖಾಗ್ನಿಗೆ ಕಾರಣವಾದ ಆಹಾರಾದಿಗಳನ್ನೇ ಶ್ರೀವಿಷ್ಣುತೀರ್ಥರು ಬಿಟ್ಟರು. ಅನಶನ (ಉಪವಾಸ) ವ್ರತವನ್ನು ಕೈಗೊಂಡು ಚಳಿ, ಸೆಕೆ ಮುಂತಾದ ದ್ವಂದ್ವಗಳಿಂದ ಉಂಟಾಗುವ ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಿ, ಶ್ರೀವಿಷ್ಣುತೀರ್ಥರು ತಪಸ್ಸು ಮಾಡಲಾರಂಭಿಸಿದರು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ದ್ವಂದ್ವದುಃಖಾನಲಃ—** ದ್ವಂದ್ವೇನ ದುಃಖಂ ದ್ವಂದ್ವದುಃಖಂ, ದ್ವಂದ್ವದುಃಖಮೇವ ಅನಲಃ ದ್ವಂದ್ವದುಃಖಾನಲಃ ತಸ್ಮಿನ್ ।

**ಮಾತ್ಸರ್ಯೇಣ—** ಮತ್ಸರ ಏವ ಮಾತ್ಸರ್ಯಂ । 'ಮತ್ಸರೋಽನ್ಯ ಶುಭದ್ವೇಷೇ ತದ್ವತ್‌ಕೃಪಣಯೋಸ್ತ್ರಿಷು' ಅಮರ ।

**ವಿಮತ್ಸರಃ—** ವಿಗತಃ ಮತ್ಸರಃ ಯಸ್ಯ ಸಃ ವಿಮತ್ಸರಃ ।

**ಅಶನಾಂದೀಂಧನಾಯಿತಂ—** ಅಶನಂ ಆದಿ ಯಸ್ಯ ತತ್ ಅಶನಾದಿ, ಇಂಧನವತ್ ಆಚರಿತಂ ಇಂಧನಾಯಿತಂ । ಇಂಧನ = ಕಟ್ಟಿಗೆ, 'ಕಾಷ್ಠಂ ದಾರ್ವಿಂಧನಂ ತ್ವೇಧಃ' ಅಮರ ।

**ಕ್ರಿಯಾಪದ—** ತತ್ಯಾಜ - ತತ್ಯಾಜ ತತ್ಯಜತುಃ ತತ್ಯಜುಃ, ತತ್ಯಜಿಥ ತತ್ಯಕ್ಥ ತತ್ಯಜಥುಃ ತತ್ಯಜ, ತತ್ಯಾಜ ತತ್ಯಜ ತತ್ಯಜಿವ ತತ್ಯಜಿಮ । ತ್ಯಜ ಹಾನೌ ಸಕ. ಅನಿ. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ತತ್ಯಾಜ ಎಂದು ರೂಪ ।

**ಪ್ರಯೋಗ—** ವೀರೇಣ ವಿಮತ್ಸರೇಣ ಅಮುನಾ ದ್ವಂದ್ವದುಃಖಾನಲೇ ಮಾತ್ಸರ್ಯೇಣ ತಸ್ಯ ಅಶನಾದಿ ಇಂಧನಾಯಿತಂ ಮತ್ವಾ ತತ್ಯಜೇ ।

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರು ಭಕ್ತರ ಪ್ರಾರ್ಥನೆಯಂತೆ ಐದು ದಿನಕ್ಕೆ ಒಂದು ಬಾರಿ ಪಂಚಗವ್ಯವನ್ನು ಮಾತ್ರ ಕುಡಿದರು.

**ಭಕ್ತೈರನುಗಿರಂ ನೀತಂ ಪ್ರಾರ್ಥಿತೋ ಯತಿಶೇಖರಃ ।**
**ಪಂಚಗವ್ಯಂ ಪಪೌ ಕಿಂಚಿತ್ ಪಂಚಮೇ ಪಂಚಮೇ ದಿನೇ ॥ 106 ॥**

**ಪದಚ್ಛೇದ—** ಭಕ್ತೈಃ, ಅನುಗಿರಂ, ನೀತಂ, ಪ್ರಾರ್ಥಿತಃ, ಯತಿಶೇಖರಃ, ಪಂಚಗವ್ಯಂ, ಪಪೌ, ಕಿಂಚಿತ್, ಪಂಚಮೇ, ಪಂಚಮೇ, ದಿನೇ ।

**ಅನ್ವಯ**— ಯತಿಶೇಖರಃ, ಭಕ್ತೈಃ, ಅನುಗಿರಂ, ನೀತಂ, ಪಂಚಗವ್ಯಂ, ಪ್ರಾರ್ಥಿತಃ, ಸನ್, ಪಂಚಮೇ, ಪಂಚಮೇ, ದಿನೇ, ಕಿಂಚಿತ್, ಪಪೌ ।

**ಅನ್ವಯಾರ್ಥ**—

**ಯತಿಶೇಖರಃ** = ಸಂನ್ಯಾಸಿ ಶ್ರೇಷ್ಠರಾದ ಆ ಶ್ರೀವಿಷ್ಣುತೀರ್ಥರು,
**ಭಕ್ತೈಃ** = ತನ್ನಲ್ಲಿ ಭಕ್ತಿಯುಳ್ಳ ಜನರಿಂದ,
**ಅನುಗಿರಂ** = ಪರ್ವತದ ಸಮೀಪಕ್ಕೆ,
**ನೀತಂ** = ತರಲ್ಪಟ್ಟ
**ಪಂಚಗವ್ಯಂ** = ಪಂಚಗವ್ಯ ಎಂಬ ಪವಿತ್ರವಾದ ಪದಾರ್ಥವನ್ನು
**ಪ್ರಾರ್ಥಿತಃ (ಸನ್)** = (ಭಕ್ತರಿಂದ) ಬೇಡಿಕೊಳ್ಳಲ್ಪಟ್ಟವರಾಗಿ,
**ಪಂಚಮೇ ಪಂಚಮೇ ದಿನೇ** = ಐದನೆಯ ಐದನೆಯ ದಿನದಲ್ಲಿ
**ಕಿಂಚಿತ್** = ಸ್ವಲ್ಪವೇ,
**ಪಪೌ** = ಕುಡಿದರು.

**ತಾತ್ಪರ್ಯ**— ಗೋಮೂತ್ರ (ಹಸುವಿನ ಗಂಜಳ, ಗೋಮಯ-ಹಸುವಿನ ಸಗಣಿ), ಹಸುವಿನ ಹಾಲು, ದಧಿ (ಹಸುವಿನ ಹಾಲಿನಿಂದಾದ ಮೊಸರು), ಹಸುವಿನ ತುಪ್ಪ ಇವುಗಳನ್ನು ನಿಯತಪ್ರಮಾಣದಿಂದ ಸೇರಿಸಿ ದರ್ಭೆಯ ನೀರನ್ನು ಸೇರಿಸಿ ಗಾಯತ್ರಿಯಿಂದ ಅಭಿಮಂತ್ರಿಸಿದ ಪದಾರ್ಥವನ್ನು ಪಂಚಗವ್ಯವೆನ್ನುತ್ತಾರೆ. ಇದನ್ನು ಒಂದು ಉದ್ಧರಣೆಯಷ್ಟು ಮಾತ್ರ ಶುದ್ಧರಾಗಿ ತೆಗೆದುಕೊಳ್ಳಬೇಕು. ಇದು ಮನುಷ್ಯರ ಪಾಪವನ್ನೆಲ್ಲಾ ಪರಿಹಾರ ಮಾಡುತ್ತದೆ ಎಂದು ಶಾಸ್ತ್ರವಿದೆ. ಶ್ರೀವಿಷ್ಣುತೀರ್ಥರು ಆಹಾರಾದಿಗಳನ್ನೂ ಕೈಬಿಟ್ಟು ತಪಸ್ಸು ಮಾಡುತ್ತಿದ್ದರು. ಆಗ ಅವರ ಭಕ್ತರು ಅವರಿದ್ದ ಬೆಟ್ಟದ ಬಳಿ ಪಂಚಗವ್ಯವನ್ನು ತೆಗೆದುಕೊಂಡು ಬಂದು ಇದನ್ನಾದರೂ ಸ್ವೀಕರಿಸಬೇಕೆಂದು ಪ್ರಾರ್ಥಿಸಿದಾಗ ಯತಿಶ್ರೇಷ್ಠರಾದ ಶ್ರೀವಿಷ್ಣುತೀರ್ಥರು ಐದು ದಿವಸಗಳಲ್ಲಿ ಒಂದು ಬಾರಿ ಮಾತ್ರ ಬೆಟ್ಟದಿಂದ ಇಳಿದು ಬಂದು ಶಾಸ್ತ್ರೋಕ್ತವಾದ ರೀತಿಯಿಂದ ಒಂದೇ ಬಾರಿ ಸ್ವಲ್ಪ ಪಂಚಗವ್ಯವನ್ನು ಮಾತ್ರ ಸ್ವೀಕರಿಸುತ್ತಿದ್ದರು. ಬೇರೆ ಯಾವ ವಿಧವಾದ ಆಹಾರ ಪಾನೀಯಾದಿಗಳನ್ನು ತೆಗೆದುಕೊಳ್ಳುತ್ತಿರಲಿಲ್ಲ.

**ವಿಗ್ರಹ**—

**ಅನುಗಿರಂ**— ಗಿರೇಃ ಸಮೀಪಂ ಅನುಗಿರಂ । 'ಅವ್ಯಯಂ ವಿಭಕ್ತಿಸಮೀಪ' (2.16) ಎಂಬ ಸೂತ್ರದಿಂದ ಸಮೀಪಾರ್ಥದಲ್ಲಿ ಅವ್ಯಯೀಭಾವಸಮಾಸ, 'ಗಿರೇಶ್ಚ ಸೇನಕಸ್ಯ' ಎಂಬ ಸೂತ್ರದಿಂದ (5.4.112) ಅವ್ಯಯೀಭಾವ ಸಮಾಸದಲ್ಲಿ ವಿಕಲ್ಪದಿಂದ ಟಚ್ ಪ್ರತ್ಯಯ ।

**ಯತಿಶೇಖರಃ**— ಯತಿಷು ಶೇಖರಃ ಯತಿಶೇಖರಃ ।

**ಪಂಚಗವ್ಯಂ**— ಗೋಃ ವಿಕಾರಃ ಗವ್ಯಂ, ಪಂಚಾನಾಂ ಗವ್ಯಾನಾಂ ಸಮಾಹಾರಃ ಪಂಚಗವ್ಯಂ, ಪಂಚಾನಾಂ ಪೂರಣಂ ಪಂಚಮಂ ತಸ್ಯ । ಪೂರಣೇ ಡಟ್ (ಡಟ್ ಪ್ರತ್ಯಯ) 'ನಾಂತಾದಸಂಖ್ಯಾದೇರ್ಮಟ್' ಎಂಬ ಸೂತ್ರದಿಂದ ಮಟ್ ಆಗಮ ।

**ಕ್ರಿಯಾಪದ**— **ಪಪೌ** - ಪಪೌ ಪಪತುಃ ಪಪುಃ, ಪಪಿಥ-ಪಪಾಥ ಪಪಥುಃ ಪಪ, ಪಪೌ ಪಪಿವ ಪಪಿಮ । ಪಾ ಪಾನೇ (ಪಿಬ್) ಸಕ. ಅನಿ. ಪರ. to drink ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ಪಪೌ ಎಂದು ರೂಪ ।

**ಪ್ರಯೋಗ**— ಯತಿಶೇಖರೇಣ ಭಕ್ತೈಃ ಅನುಗಿರಂ ನೀತಂ ಪಂಚಗವ್ಯಂ ಪ್ರಾರ್ಥಿತೇನ (ಸತಾ) ಪಂಚಮೇ ಪಂಚಮೇ ದಿನೇ ಕಿಂಚಿತ್ ಪಪೇ ।

★ ★ ★

ಅವತಾರಿಕಾ— ಶ್ರೀವಿಷ್ಣುತೀರ್ಥರು ಪಂಚಗವ್ಯವನ್ನು ತೆಗೆದುಕೊಳ್ಳುವುದನ್ನು ನಿಲ್ಲಿಸಿಬಿಟ್ಟರು ಎಂದು ಹೇಳುತ್ತಾರೆ.

**ಸ ತ್ಯಜನ್ ಸಾಹಸೀ ತಚ್ಚ ತಪಸ್ತೇಪೇऽತಿತಾಪಸಮ್ ।**
**ಬಿಲ್ವಪರ್ಣೈಃ ಕ್ಷಿತೌ ಪನ್ನೈಸ್ತೃಪ್ತಿಮಾನ್ ಸಲಿಲೈರಪಿ ॥ 107 ॥**

ಪದಚ್ಛೇದ— ಸಃ, ತ್ಯಜನ್, ಸಾಹಸೀ, ತತ್, ಚ, ತಪಃ, ತೇಪೇ, ಅತಿತಾಪಸಂ, ಬಿಲ್ವಪರ್ಣೈಃ, ಕ್ಷಿತೌ, ಪನ್ನೈಃ ತೃಪ್ತಿಮಾನ್, ಸಲಿಲೈಃ, ಅಪಿ ।

ಅನ್ವಯ— ಸಾಹಸೀ, ಸಃ, ತತ್, ಚ, ತ್ಯಜನ್, ಕ್ಷಿತೌ, ಪನ್ನೈಃ, ಬಿಲ್ವಪರ್ಣೈಃ, ಸಲಿಲೈಃ, ಅಪಿ, ತೃಪ್ತಿಮಾನ್, ಸನ್, ಅತಿತಾಪಸಂ, ತಪಃ, ತೇಪೇ ।

ಅನ್ವಯಾರ್ಥ—

**ಸಾಹಸೀ** = ಶರೀರ ಇಂದ್ರಿಯಗಳನ್ನು ನಿಗ್ರಹಿಸಿದ,
**ಸಃ** = ಆ ವಿಷ್ಣುತೀರ್ಥರು,
**ತತ್ ಚ** = ಆ ಪಂಚಗವ್ಯವನ್ನೂ,
**ತ್ಯಜನ್ (ಸನ್)** = ಬಿಟ್ಟವರಾಗಿ,
**ಕ್ಷಿತೌ** = ಭೂಮಿಯ ಮೇಲೆ,
**ಪನ್ನೈಃ** = ಉದುರಿದ,
**ಬಿಲ್ವಪರ್ಣೈಃ** = ಬಿಲ್ವವೃಕ್ಷದ ಎಲೆಗಳಿಂದಲೂ,
**ಸಲಿಲೈಃ ಅಪಿ** = ನೀರು ಮಾತ್ರದಿಂದಲೂ,
**ತೃಪ್ತಿಮಾನ್ (ಸನ್)** = ತೃಪ್ತಿಯುಳ್ಳವರಾಗಿ,
**ಅತಿತಾಪಸಂ** = ಮುನಿಗಳನ್ನು ಮೀರಿಸಿದ,
**ತಪಃ** = ತಪಸ್ಸನ್ನು,
**ತೇಪೇ** = ಮಾಡಿದರು.

ತಾತ್ಪರ್ಯ— ಶ್ರೀವಿಷ್ಣುತೀರ್ಥರು ಮಹಾಸಾಹಸಿಗಳು ಮತ್ತು ಸಹನಶೀಲರು. ಅವರು ಶರೀರ ಇಂದ್ರಿಯಗಳನ್ನು ಪೂರ್ತಿಯಾಗಿ ನಿಗ್ರಹಿಸಿದರು. ಕೊನೆಗೆ ಪಂಚಗವ್ಯವನ್ನು ಸೇವಿಸುವುದನ್ನೂ ಬಿಟ್ಟರು. ಭೂಮಿಯ ಮೇಲೆ ತಾನಾಗಿ ಬಿದ್ದ ಬಿಲ್ವದ ಮರದ ಎಲೆಗಳನ್ನು ಮಾತ್ರ ತಿನ್ನುತ್ತಾ, ನೀರನ್ನು ಕುಡಿಯುತ್ತಾ ಸಾಮಾನ್ಯ ಮುನಿಗಳು ಮಾಡುವ ತಪಸ್ಸಿಗಿಂತಲೂ ಅತಿಶಯವಾದ ಕಠಿಣ ತಪಸ್ಸನ್ನು ಮಾಡಲಾರಂಭಿಸಿದರು.

ವಿಗ್ರಹ ಮತ್ತು ಕೋಶ—

**ಸಾಹಸೀ**— ಸಾಹಸಂ ಅಸ್ಯ ಅಸ್ತೀತಿ ಸಾಹಸೀ । ಸಾಹಸ = ನಿಗ್ರಹ, ದಂಡಿಸುವುದು, 'ಸಾಹಸಂ ತು ದಮೋ ದಂಡಃ' ಅಮರ ।

**ಅತಿತಾಪಸಂ**— ತಾಪಸಾನ್ ಅತಿಕ್ರಮ್ಯ ವರ್ತಮಾನಂ ಅತಿತಾಪಸಂ ।

**ಬಿಲ್ವಪರ್ಣೈಃ**— ಬಿಲ್ವಸ್ಯ ಪರ್ಣಾನಿ ಬಿಲ್ವಪರ್ಣಾನಿ, ತೈಃ ।

**ತೃಪ್ತಿಮಾನ್**— ತೃಪ್ತಿಃ ಅಸ್ಯ ಅಸ್ತೀತಿ ತೃಪ್ತಿಮಾನ್ ।

**ಕ್ರಿಯಾಪದ—** **ತೇಪೇ** - ತೇಪೇ ತೇಪಾತೇ ತೇಪಿರೇ, ತೇಪಿಷೇ ತೇಪಾಥೇ ತೇಪಿಧ್ವೇ, ತೇಪೇ ತೇಪಿವಹೇ ತೇಪಿಮಹೇ । ತಪ ಸಂತಾಪೇ (ಐಶ್ವರ್ಯೇ-ವಾ) ಅಕ. ಅನಿ. ಆತ್ಮ. to rule, to be power full, to make penance ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ತೇಪೇ ಎಂದು ರೂಪ ।

**ಪ್ರಯೋಗ—** ಸಾಹಸಿನಾ ತೇನ ತಚ್ಚ ತ್ಯಜತಾ (ಸತಾ) ಕ್ಷಿತೌ ಪನ್ನೈಃ ಬಿಲ್ವಪರ್ಣೈಃ, ಸಲಿಲೈರಪಿ ತೃಪ್ತಿಮತಾ (ಸತಾ) ಅತಿತಾಪಸಂ ತಪಃ ತೇಪೇ ।

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರು ಬೆಟ್ಟದ ಮೇಲೆ ಬರೇ ಬಂಡೆಕಲ್ಲಿನಲ್ಲಿ ಕುಳಿತು ತಪಸ್ಸು ಮಾಡಿದರು ಎಂದು ಹೇಳುತ್ತಾರೆ.

**ಯಥೇಷ್ಟಮಧ್ಯಾಸ್ತ ಶಿಲಾಂ ಯಮೀ ಸುನಿಯಮೀ ಸ ತಾಮ್ ।**
**ನಾಧ್ಯಾಸತೇ ಯಾಮೇಕಾಹಂ ದೈವಭಗ್ನಾಸ್ತಪಸ್ವಿನಃ ॥ 108 ॥**

**ಪದಚ್ಛೇದ—** ಯಥೇಷ್ಟಂ, ಅಧ್ಯಾಸ್ತ, ಶಿಲಾಂ, ಯಮೀ, ಸುನಿಯಮೀ, ಸಃ, ತಾಂ, ನ, ಅಧ್ಯಾಸತೇ, ಯಾಂ, ಏಕಾಹಂ, ದೈವಭಗ್ನಾಃ, ತಪಸ್ವಿನಃ ।

**ಅನ್ವಯ—** ಯಮೀ, ಸುನಿಯಮೀ, ಸಃ, ದೈವಭಗ್ನಾಃ, ತಪಸ್ವಿನಃ, ಯಾಂ, ಏಕಾಹಂ, ನಾಧ್ಯಾಸತೇ, ತಾಂ, ಶಿಲಾಂ, ಯಥೇಷ್ಟಂ, ಅಧ್ಯಾಸ್ತ ।

**ಅನ್ವಯಾರ್ಥ—**

**ಯಮೀ** = ಇಂದ್ರಿಯನಿಗ್ರಹವುಳ್ಳ,
**ಸುನಿಯಮೀ** = ಯತಿಗಳಿಗೆ ಉಚಿತವಾದ ಕರ್ಮಾನುಷ್ಠಾನವುಳ್ಳ,
**ಸಃ** = ಆ ವಿಷ್ಣುತೀರ್ಥರು,
**ದೈವಭಗ್ನಾಃ** = ಈಶ್ವರನಿಂದ ವಿಘ್ನಿತರಾದ, (ಈಶ್ವರಾನುಗ್ರಹವಿಲ್ಲದ)
**ತಪಸ್ವಿನಃ** = ಮುನಿಗಳು,
**ಯಾಂ** = ಯಾವ ಶಿಲೆಯಲ್ಲಿ
**ಏಕಾಹಂ** = ಒಂದು ದಿವಸವೂ,
**ನಾಧ್ಯಾಸತೇ** = ಕುಳಿತುಕೊಳ್ಳಲಾರರೋ,
**ತಾಂ ಶಿಲಾಂ** = ಅಂತಹ ಬಂಡೆಕಲ್ಲಿನಲ್ಲಿ
**ಯಥೇಷ್ಟಂ** = ಬೇಕಾದ ಹಾಗೆ, (ಸ್ವೇಚ್ಛಾನುಸಾರವಾಗಿ)
**ಅಧ್ಯಾಸ್ತ** = ಕುಳಿತುಕೊಂಡಿದ್ದರು.

**ತಾತ್ಪರ್ಯ—** ಶ್ರೀವಿಷ್ಣುತೀರ್ಥರು ಮನಸ್ಸನ್ನು ಸ್ವಾಧೀನಪಡಿಸಿಕೊಂಡು ಮುನಿಗಳು ಮಾಡಬೇಕಾದ ಕರ್ಮಾ-ನುಷ್ಠಾನಗಳನ್ನೆಲ್ಲಾ ಮಾಡುತ್ತಿದ್ದರು. ಹೀಗೆ ಯಮನಿಯಮಸಂಪನ್ನರಾದ ಅವರು, ಈಶ್ವರಾನುಗ್ರಹವಿಲ್ಲದೆ ವಿಘ್ನ ಹೊಂದಿದ ತಪಸ್ವಿಗಳು ಯಾವ ಕಲ್ಲಿನ ಮೇಲೆ ಒಂದು ದಿನವೂ ಕೂಡ ಕುಳಿತುಕೊಳ್ಳಲಾರರೋ ಅಂತಹ (ರಾತ್ರಿಯಲ್ಲಿ) ಶೀತಲವಾದ, ಹಗಲಿನಲ್ಲಿ ಬಹಳ ಬಿಸಿಯಾದ ಬಂಡೆಕಲ್ಲಿನ ಮೇಲೆ ಬಹಳ ಕಾಲ ಕುಳಿತು ಯಥೇಚ್ಛವಾಗಿ ತಪಸ್ಸನ್ನು ಆಚರಿಸಿದರು. ಇದರಿಂದ (ಯೋಗಿಗಳು) ಆಚರಿಸಬೇಕಾದ ಯಮನಿಯಮ ಆಸನಗಳನ್ನು ಹೇಳಿದಂತಾಯಿತು.

ವಿಗ್ರಹ—

**ಯಥೇಷ್ಟಂ**— ಇಷ್ಟಂ ಅನತಿಕ್ರಮ್ಯ ಯಥೇಷ್ಟಂ । 'ಅವ್ಯಯಂ ವಿಭಕ್ತಿ' (2.1.6) ಎಂಬ ಸೂತ್ರದಿಂದ ಅವ್ಯಯೀಭಾವಸಮಾಸ.

**ಸುನಿಯಮೀ**— ಶೋಭನಶ್ಚಾಸೌ ನಿಯಮಶ್ಚ ಸುನಿಯಮಃ, ಸುನಿಯಮಃ ಅಸ್ಯ ಅಸ್ತೀತಿ ಸುನಿಯಮೀ ।

**ಏಕಾಹಂ**— ಏಕಂ ಚ ತತ್ ಅಹಶ್ಚ ಏಕಾಹಂ । 'ಪೂರ್ವಕಾಲೈಕಸರ್ವಜರತ್ ಪುರಾಣನವಕೇವಲಾಃ ಸಮಾನಾಧಿಕರಣೇನ' (2.1.49) ಎಂಬ ಸೂತ್ರದಿಂದ ಕರ್ಮಧಾರಯ ಸಮಾಸ. 'ರಾಜಾಹಃ ಸಖಿಭ್ಯಷ್ಟಚ್' (5.4.91) ಎಂಬ ಸೂತ್ರದಿಂದ ಟಚ್ ಪ್ರತ್ಯಯ. ಏಕಾಹನ್+ಅ ಎಂದಿರುವಾಗ 'ನಸ್ತದ್ಧಿತೇ' (6.4.144) ಎಂಬ ಸೂತ್ರದಿಂದ ಟಲೋಪ. 'ರಾತ್ರಾಹ್ನಾಃ ಪುಂಸಿ' (2.4.29) ಎಂಬ ಸೂತ್ರದಿಂದ ಪುಲ್ಲಿಂಗ. 'ಕಾಲಾಧ್ವನೋರತ್ಯಂತಸಂಯೋಗೇ' (2.3.5) ಎಂಬ ಸೂತ್ರದಿಂದ ಅವಿಚ್ಛಿನ್ನಸಂಯೋಗಾರ್ಥದಲ್ಲಿ ಅಧಿಕರಣಕ್ಕೆ ದ್ವಿತೀಯಾ ವಿಭಕ್ತಿ. 'ತಾಂ ಶಿಲಾಂ' ಎಂಬಲ್ಲಿ 'ಅಧಿ-ಶೀಙ್‌ಸ್ಥಾಸಾಂ ಕರ್ಮ' ಎಂಬ ಸೂತ್ರದಿಂದ ಅಧಿಕರಣಕ್ಕೆ ಕರ್ಮಸಂಜ್ಞೆ।

**ಕ್ರಿಯಾಪದ**— ಅಧ್ಯಾಸ್ತ - ಅಧಿ+ಆಸ್ತ (ಧ್ಯಾಸ್ತ) ಆಸ್ತ ಆಸಾತಾಂ ಆಸತ, ಆಸ್ಥಾಃ ಆಸಾಥಾಂ ಆಧ್ವಂ, ಆಸಿ ಆಸ್ವಹಿ ಆಸ್ಮಹಿ । ಅಧಿ ಉಪಸರ್ಗ, ಆಸ ಉಪವೇಶನೇ, ಅಕ ಸೇಟ್. ಆತ್ಮ to sit. to be ಅನದ್ಯತನಭೂತೇ ಲಙ್ ಪ್ರಥಮ-ಪುರುಷ ಏಕವಚನದಲ್ಲಿ ಆಸ್ತ (ಅಧ್ಯಾಸ್ತ) ಎಂದು ರೂಪ ।

**ಅಧ್ಯಾಸತೇ** - ಅಧಿ ಉಪಸರ್ಗ. ಅಧಿ × ಆಸತೇ (ಅಧ್ಯಾಸತೇ) ಆಸ್ತೇ ಆಸಾತೇ ಆಸತೇ, ಆಸ್ಸೇ ಆಸಾಥೇ ಆಧ್ವೇ, ಆಸೇ ಆಸ್ವಹೇ ಆಸ್ಮಹೇ । ಆಸ ಉಪವೇಶನೇ, ಇತ್ಯಾದಿ ಹಿಂದಿನಂತೆಯೇ, ವರ್ತಮಾನೇ ಲಟ್ ಪ್ರಥಮಪುರುಷ ಬಹು-ವಚನದಲ್ಲಿ ಅಧ್ಯಾಸತೇ ಎಂದು ರೂಪ ।

**ಪ್ರಯೋಗ**— ಯಮಿನಾ ಸುನಿಯಮಿನಾ ತೇನ, ದೈವಭಗ್ನೈಃ ತಪಸ್ವಿಭಿಃ ಯಾ ಏಕಾಹಂ ನಾಧ್ಯಾಸ್ಯತೇ ಸಾ ಶಿಲಾ ಯಥೇಷ್ಟಂ ಅಧ್ಯಾಸ್ಯತ ।

★ ★ ★

**ಅವತಾರಿಕಾ**— ಶ್ರೀವಿಷ್ಣುತೀರ್ಥರ ತಪಸ್ಸಿನ ರೀತಿಯನ್ನು ಮತ್ತೂ ವರ್ಣಿಸುತ್ತಾರೆ.

**ಪವನಾಂಶಾನುಜೋ ಜಿತ್ವಾ ಪವನಂ ರೇಚಕಾದಿಭಿಃ ।**
**ಇಂದ್ರಿಯೇಭ್ಯೋ ಹೃಷೀಕಾಶ್ವಾನ್ ಮನೋಯಂತ್ರಾ ಸಮಾಹರತ್ ॥ 109 ॥**

**ಪದಚ್ಛೇದ**— ಪವನಾಂಶಾನುಜಃ, ಜಿತ್ವಾ, ಪವನಂ, ರೇಚಕಾದಿಭಿಃ, ಇಂದ್ರಿಯೇಭ್ಯಃ, ಹೃಷೀಕಾಶ್ವಾನ್, ಮನೋ-ಯಂತ್ರಾ, ಸಮಾಹರತ್ ।

**ಅನ್ವಯ**— ಪವನಾಂಶಾನುಜಃ, ರೇಚಕಾದಿಭಿಃ, ಪವನಂ, ಜಿತ್ವಾ, ಹೃಷೀಕಾಶ್ವಾನ್, ವಿಷಯೇಭ್ಯಃ, ಮನೋ-ಯಂತ್ರಾ, ಸಮಾಹರತ್ ।

**ಅನ್ವಯಾರ್ಥ**—

**ಪವನಾಂಶಾನುಜಃ** = ಶ್ರೀಮುಖ್ಯಪ್ರಾಣದೇವರ ಅಂಶಾವತಾರರಾದ ಶ್ರೀಮಧ್ವಾಚಾರ್ಯರ ತಮ್ಮಂದಿರಾದ ಶ್ರೀವಿಷ್ಣುತೀರ್ಥರು,

**ರೇಚಕಾದಿಭಿಃ** = ರೇಚಕಪೂರಕ ಮುಂತಾದ ಪ್ರಾಣಾಯಾಮದ ಅಂಗಗಳಿಂದ,

**ಪವನಂ** = ವಾಯುವನ್ನು,

**ಜಿತ್ವಾ** = ಜಯಿಸಿ, (ವಶಪಡಿಸಿಕೊಂಡು)
**ಹೃಷೀಕ ಅಶ್ವಾನ್** = ಇಂದ್ರಿಯಗಳೆಂಬ ಕುದುರೆಗಳನ್ನು,
**ವಿಷಯೇಭ್ಯಃ** = ಶಬ್ದಸ್ಪರ್ಶ ಮುಂತಾದ ಭೋಗ್ಯವಸ್ತುಗಳ ದೆಸೆಯಿಂದ,
**ಮನೋಯಂತ್ರಾ** = ಮನಸ್ಸೆಂಬ ಸಾರಥಿಯಿಂದ,
**ಸಮಾಹರತ್** = ಹಿಂದಿರುಗಿಸಿದರು. (ಅಂತರ್ಮುಖವನ್ನಾಗಿ ಮಾಡಿದರು)

**ತಾತ್ಪರ್ಯ—** ಯೋಗಿಗಳು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಎಂಬ ಎಂಟು ಅಂಗಗಳಿಂದ ಕೂಡಿದ ಯೋಗಾನುಷ್ಠಾನ ಮಾಡಿ ಅಪರೋಕ್ಷಜ್ಞಾನವನ್ನು ಪಡೆದು ಭಗವಂತನ ಪ್ರಸಾದವನ್ನು ಸಂಪಾದಿಸಿ ಮುಕ್ತಿಯನ್ನು ಪಡೆಯಬೇಕಾಗಿದೆ. ಈ ಕಾರ್ಯವು ಸಾಧಾರಣ ಯೋಗಿಗಳಿಗೆ ಕಷ್ಟಸಾಧ್ಯವಾಗಿದೆ. ಆದರೆ ಶ್ರೀಮುಖ್ಯಪ್ರಾಣದೇವರ ಅಂಶಸಂಭೂತರಾದ ಶ್ರೀಮಧ್ವಾಚಾರ್ಯರ ಸಾಕ್ಷಾತ್ ತಮ್ಮಂದಿರಾದ ಶ್ರೀವಿಷ್ಣುತೀರ್ಥರು ಈ ಯೋಗಾಂಗಗಳನ್ನೆಲ್ಲಾ ಬಹಳ ಬೇಗನೆ ಸಂಪಾದಿಸಿದರು. ಅವರು ಯಮ ನಿಯಮ ಆಸನಗಳನ್ನು ಸಾಧಿಸಿ ಅನಂತರ ಪ್ರಾಣಾಯಾಮವನ್ನೂ ಸಾಧಿಸಿದರು. ರೇಚಕ, ಪೂರಕ, ಕುಂಭಕವೆಂಬ ಮೂರು ಅಂಶಗಳುಳ್ಳ, ಮೂರು ವಿಧವಾದ ಪ್ರಾಣಾಯಾಮವನ್ನು ಮಾಡಿ ಅವರು ಶಾರೀರ ವಾಯುವನ್ನು ಸ್ವಾಧೀನಪಡಿಸಿಕೊಂಡರು. ಅನಂತರ ಶಬ್ದಸ್ಪರ್ಶರೂಪ ರಸಗಂಧಗಳೆಂಬ ಬಾಹ್ಯಭೋಗ್ಯಪದಾರ್ಥಗಳಿಂದ ಇಂದ್ರಿಯಗಳನ್ನು ಹಿಂತಿರುಗಿಸಿ ಇಂದ್ರಿಯ ವ್ಯಾಪಾರಗಳನ್ನೆಲ್ಲಾ ಮನಸ್ಸಿನ ಅಧೀನವನ್ನಾಗಿ ಮಾಡಿದರು. ಇಂದ್ರಿಯಗಳನ್ನು ಹೊರಗಿನ ವಿಷಯಗಳಿಂದ ಹಿಂತಿರುಗಿಸಿ ಅಂತರ್ಮುಖವನ್ನಾಗಿ ಮಾಡುವುದೇ ಪ್ರತ್ಯಾಹಾರವು. ಇಂತಹ ಪ್ರತ್ಯಾಹಾರವನ್ನೂ ಶ್ರೀವಿಷ್ಣುತೀರ್ಥರು ಸಾಧಿಸಿದರು.

ಕುದುರೆಗಳು ನಮಗೆ ಬೇಡವಾದ ಅಡ್ಡದಾರಿಗೆ ರಥವನ್ನೆಳೆದುಕೊಂಡು ಹೋಗುವಾಗ ನಿಪುಣನಾದ ರಥಿಕನು ಸಾರಥಿಯ ಮೂಲಕ ಆ ಕುದುರೆಗಳನ್ನು ಕಟ್ಟದಾರಿಯಿಂದ ಹಿಂತಿರುಗಿಸುತ್ತಾನೆ. ಅದರಂತೆ ಈ ವಿಷ್ಣುತೀರ್ಥರು ಶಬ್ದಸ್ಪರ್ಶ ರೂಪರಸಗಂಧಗಳೆಂಬ ವಿಷಯಗಳ ಕಡೆಗೆ ಓಡುತ್ತಿರುವ ಇಂದ್ರಿಯಗಳನ್ನು, ಬುದ್ಧಿಯೆಂಬ ಸಾರಥಿಯಿಂದ ಹಿಂತಿರುಗಿಸಿ ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡರು ಎಂದು ಭಾವವು.

**ವಿಗ್ರಹ—**

**ಪವನಾಂಶಾನುಜಃ—** ಪವನಸ್ಯ ಅಂಶಃ ಪವನಾಂಶಃ, ಅನುಜಾಯತೇ ಇತಿ ಅನುಜಃ, ಪವನಾಂಶಸ್ಯ ಅನುಜಃ ಪವನಾಂಶಾನುಜಃ ।

**ರೇಚಕಾದಿಭಿಃ—** ರೇಚಕಃ ಆದಿಃ ಯೇಷಾಂ ತೇ ರೇಚಕಾದಯಃ, ತೈಃ ।

**ಹೃಷೀಕಾಶ್ವಾನ್—** ಹೃಷೀಕಾಣ್ಯೇವ ಅಶ್ವಾಃ ಹೃಷೀಕಾಶ್ವಾಃ, ತಾನ್ । ಹೃಷೀಕ (ನಪುಂ) = ಇಂದ್ರಿಯ, 'ಹೃಷೀಕಂ ವಿಷಯೀಂದ್ರಿಯಂ' ಅಮರ,

**ಮನೋಯಂತ್ರಾ—** ಮನಃ ಏವ ಯಂತಾ ಮನೋಯಂತಾ ತೇನ ಮನೋಯಂತ್ರಾ । ಯಂತಾ(ಪುಂ) = ಸಾರಥಿ, 'ನಿಯಂತಾ ಪ್ರಾಜಿತಾ ಯಂತಾ ಸೂತಃ ಕ್ಷತ್ತಾ ಚ ಸಾರಥಿಃ' ಅಮರ ।

**ಕ್ರಿಯಾಪದ— ಸಮಾಹರನ್** - ಸಮ್, ಆ+ಅಹರತ್ ಅಹರತಾಂ ಅಹರನ್, ಅಹರಃ ಆಹರತಂ ಅಹರತ, ಅಹರಂ ಅಹರಾವ ಅಹರಾಮ । ಸಮ್, ಆ, ಎರಡು ಉಪಸರ್ಗಗಳು, ಹೃಞ್ (ಹೃ) ಹರಣೇ ಉಭ. (ಇಲ್ಲಿ ಪರಸ್ಮೈಪದಿ) ಅನಿಟ್. ಸಕರ್ಮಕ, ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನ ।

**ಪ್ರಯೋಗ—** ಪವನಾಂಶಾನುಜೇನ, ರೇಚಕಾದಿಭಿಃ ಪವನಂ ಜಿತ್ವಾ ಹೃಷೀಕಾಶ್ವಾಃ ವಿಷಯೇಭ್ಯಃ ಮನೋಯಂತ್ರಾ ಸಮಾಹ್ರಿಯಂತ ।

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರು ಧಾರಣಾಧ್ಯಾನಸಮಾಧಿಗಳೆಂಬ ಯೋಗಾಂಗಗಳನ್ನು ಅಭ್ಯಾಸ ಮಾಡಿದ-ರೆಂದು ಹೇಳುತ್ತಾರೆ.

**ಸ್ಮರನ್ಮುರಾರೇರಾಕಾರಂ ದಧ್ಯಾವಧ್ಯಾತ್ಮಕೋವಿದಃ ।**
**ಸಮಾಧಿಮಾಧಿಶಮನಂ ಯೋಗಿ(ಗ)ಲಭ್ಯಂ ಸ ಲಬ್ಧವಾನ್ ॥ 110 ॥**

**ಪದಚ್ಛೇದ—** ಸ್ಮರನ್, ಮುರಾರೇಃ, ಆಕಾರಂ, ದಧ್ಯೌ, ಅಧ್ಯಾತ್ಮಕೋವಿದಃ, ಸಮಾಧಿಂ, ಆಧಿಶಮನಂ, ಯೋಗಿಲಭ್ಯಂ, ಸಃ, ಲಬ್ಧವಾನ್ ।

**ಅನ್ವಯ—** ಅಧಾತ್ಮಕೋವಿದಃ, ಸಃ, ಮುರಾರೇಃ, ಆಕಾರಂ, ಸ್ಮರನ್, ದಧ್ಯೌ, ಯೋಗಿ(ಗ)ಲಭ್ಯಂ, ಆಧಿಶಮನಂ, ಸಮಾಧಿಂ, ಲಬ್ಧವಾನ್ ।

**ಅನ್ವಯಾರ್ಥ—**

**ಅಧ್ಯಾತ್ಮಕೋವಿದಃ** = ಶ್ರೀಹರಿಯ ವಿಷಯದಲ್ಲಿ (ವೇದಾಂತಶಾಸ್ತ್ರ ವಿಷಯದಲ್ಲಿ) ಬುದ್ಧಿಶಾಲಿಗಳಾದ,
**ಸಃ** = ಆ ವಿಷ್ಣುತೀರ್ಥರು,
**ಮುರಾರೇಃ** = ಶ್ರೀಮನ್ನಾರಾಯಣನ,
**ಆಕಾರಂ** = ಸ್ವರೂಪವನ್ನು,
**ಸ್ಮರನ್** = ಚಿಂತಿಸುತ್ತಾ,
**ದಧ್ಯೌ** = ಧ್ಯಾನಿಸಿದರು,
**ಯೋಗಿಲಭ್ಯಂ** = ಮನೋನಿಗ್ರಹಸಮರ್ಥರಾದ ಮುನಿಗಳಿಂದ (ಯೋಗ = ಪರಮಾತ್ಮನಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದು) ಹೊಂದಲು ಸಾಧ್ಯವಾದ,
**ಆಧಿಶಮನಂ** = ಮನಸ್ಸಿನ ವ್ಯಥೆಯನ್ನು ನಿವಾರಿಸುವ,
**ಸಮಾಧಿಂ** = ನಿರಂತರವಾದ ಪರಮಾತ್ಮ ವಿಷಯವಾದ ಮನೋವೃತ್ತಿಯನ್ನು
**ಲಬ್ಧವಾನ್** = ಪಡೆದರು.

**ತಾತ್ಪರ್ಯ—** ವೇದಾಂತಶಾಸ್ತ್ರವನ್ನು ವಿಚಾರಮಾಡಿ ಹರಿಯನ್ನು ಸರ್ವೋತ್ತಮನೆಂದು ಶ್ರೀವಿಷ್ಣುತೀರ್ಥರು ಚೆನ್ನಾಗಿ ತಿಳಿದಿದ್ದರು. ಅವರು ಪರಮಾತ್ಮನಲ್ಲಿಯೇ ತನ್ನ ಮನಸ್ಸನ್ನು ಕೇಂದ್ರೀಕರಿಸಿದರು. ಧಾರಣಾ ಎಂಬ ಯೋಗಾಂಗಾ-ನುಷ್ಠಾನವನ್ನು ಮಾಡಿದರು. ತಾವು ಶಾಸ್ತ್ರಗಳನ್ನು ಓದಿ ನಿರ್ಧರಿಸಿಕೊಂಡ ಪರಮಾತ್ಮನ ಸ್ವರೂಪವನ್ನು ಸ್ಮರಿಸುತ್ತಾ ಧ್ಯಾನ ಮಾಡಿದರು. ಪರಮಾತ್ಮನಲ್ಲಿ ಮನಸ್ಸನ್ನು ಇಡುವುದು ಎಂಬ ಯೋಗದಿಂದ ಹೊಂದಲು ಸಾಧ್ಯವಾದ ಮತ್ತು ಮನೋ-ವ್ಯಥೆಯನ್ನು ಪರಿಹರಿಸುವ ಸಮಾಧಿಯೆಂಬ ಯೋಗಾಂಗವನ್ನು ಅವರು ಹೊಂದಿದರು. ಅನಾಯಾಸವಾಗಿಯೂ ನಿರಂತರವಾಗಿಯೂ ಭಗವಂತನಲ್ಲಿ ಮನಸ್ಸಿಡುವುದು ಎಂಬ ಸಂಪ್ರಜ್ಞಾತಸಮಾಧಿಯನ್ನು ಶ್ರೀವಿಷ್ಣುತೀರ್ಥರು ಪಡೆದರು ಎಂದು ಅಭಿಪ್ರಾಯ.

**ವಿಗ್ರಹ ಮತ್ತು ಕೋಶ—**

**ಮುರಾರೇಃ—** ಮುರಸ್ಯ ಅರಿಃ ಮುರಾರಿಃ ತಸ್ಯ ।

**ಅಧ್ಯಾತ್ಮಕೋವಿದಃ—** ಅಧಿಕಶ್ಚಾಸೌ ಆತ್ಮಾ ಚ ಆಧ್ಯಾತ್ಮ, ಅಧ್ಯಾತ್ಮನಿ ಕೋವಿದಃ ಅಧ್ಯಾತ್ಮಕೋವಿದಃ । ಆತ್ಮಾನಂ ಅಧಿಕೃತ್ಯ ಪ್ರವರ್ತಮಾನಂ ಶಾಸ್ತ್ರಂ ಅಧ್ಯಾತ್ಮಂ, (ಆತ್ಮನಿ ಇತಿ ಅಧ್ಯಾತ್ಮಂ) 'ಅವ್ಯಯಂ ವಿಭಕ್ತಿ ಸಮೀಪ ಸಮೃದ್ಧಿ ಇತ್ಯಾದಿ ಸೂತ್ರದಿಂದ ವಿಭಕ್ತ್ಯರ್ಥದಲ್ಲಿ ಅವ್ಯಯಾಭಾವ ಅನಶ್ಚ' (5.4.108) ಎಂಬ

ಸೂತ್ರದಿಂದ ಟಚ್ ಪ್ರತ್ಯಯ, ಅಧ್ಯಾತ್ಮನ್ + ಅ ಎಂದಿರುವಾಗ 'ನಸ್ತದ್ಧಿತೇ' (6.4.144) ಎಂಬ ಸೂತ್ರದಿಂದ ಟಿಗೆ (ಅನ್‌ಗೆ) ಲೋಪ, ಅವ್ಯಯ, ಅಧ್ಯಾತ್ಮಂ ಅಧ್ಯಾತ್ಮನಿ ವಾ ಕೋವಿದಃ ।

**ಆಧಿಶಮನಂ**— ಶಮಯತಿ ಇತಿ ಶಮನಃ, ಆಧೇಃ ಶಮನಃ ಅಧಿಶಮನಃ, ತಂ । ಆಧಿ = ಮನೋವ್ಯಥೆ, 'ಪುಂಸ್ಯಾಧಿರ್ಮಾನಸೀ ವ್ಯಥಾ' ಅಮರ ।

**ಯೋಗಲಭ್ಯಂ**— ಯೋಗೇನ ಲಭ್ಯಃ, ತಂ, ಲಬ್ಧುಂ ಯೋಗ್ಯಃ ಲಭ್ಯಃ, ಯೋಗಃ ಏಷಾಂ ಅಸ್ತೀತಿ ಯೋಗಿನಃ ಯೋಗಿಭಿಃ ಲಭ್ಯಃ ಯೋಗಿಲಭ್ಯಃ, ತಂ । ಸಮಾಧಿಃ=ಪರಮಾತ್ಮನಿ ಮನೋಯೋಗಃ, ಸಮಾಧಿ ಎಂದರೆ ಪರಮಾತ್ಮನಲ್ಲಿ ಮನಸ್ಸನ್ನು ನೆಲೆಸುವಂತೆ ಮಾಡುವುದು, 'ಪರೇ ಹಿ ಯೋಗೋ ಮನಸಃ ಸಮಾಧಿಃ' ಸರ್ವೋತ್ತಮನಾದ ಪರಮಾತ್ಮನಲ್ಲಿ ಮನಸ್ಸನ್ನು ನೆಲೆಸುವಂತೆ ಮಾಡುವುದೇ ಸಮಾಧಿಯು.

**ಕ್ರಿಯಾಪದ**— **ದಧ್ಯೌ** - ದಧ್ಯೌ ದಧ್ಯತುಃ ದಧ್ಯುಃ, ದಧ್ಯಿಥ ದಧ್ಯಾಥ, ದಧ್ಯಥುಃ ದಧ್ಯ, ದಧ್ಯೌ ದಧ್ಯಿವ ದಧ್ಯಿಮ । ಧ್ಯೈ ಚಿಂತಾಯಾಂ, ಸಕ. ಅನಿ. ಪರ. to think of, to meditate, to recollect, ಭೂತಾನದ್ಯತನ ಪರೋಕ್ಷೇ ಲಿಟ್. ಪ್ರಥಮಪುರುಷ ಏಕವಚನ ।

**ಪ್ರಯೋಗ**— ಅಧ್ಯಾತ್ಮಕೋವಿದೇನ ತೇನ ಮುರಾರೇಃ ಆಕಾರಂ ಸ್ಮರತಾ (ಮುರಾರೇಃ ಆಕಾರಃ) ದಧ್ಯೇ (ತೇನ) ಯೋಗಿಲಭ್ಯಂ ಆಧಿಶಮನಂ ಸಮಾಧಿಂ ಲಬ್ಧವತಾ ಅಭೂಯತ ।

★ ★ ★

**ಅವತಾರಿಕಾ**— ಶ್ರೀವಿಷ್ಣುತೀರ್ಥರು ಅಸಂಪ್ರಜ್ಞಾತ ಸಮಾಧಿಯನ್ನು ಹೊಂದಿದರು ಎಂದು ಹೇಳುತ್ತಾರೆ.

**ಮೌಕುಂದೇ ಸುಂದರೇ ರೂಪೇ ಸ್ವಾನಂದಾದಿಗುಣಾರ್ಣವೇ ।**
**ಸ್ವಾಶ್ಚರ್ಯರತ್ನೇ ಮಗ್ನಾತ್ಮಾ ನಾನ್ಯತ್ ಕಿಂಚಿದ್ ವಿವೇದ ಸಃ ॥ 111 ॥**

**ಪದಚ್ಛೇದ**— ಮೌಕುಂದೇ, ಸುಂದರೇ, ರೂಪೇ, ಸ್ವಾನಂದಾದಿಗುಣಾರ್ಣವೇ, ಸ್ವಾಶ್ಚರ್ಯರತ್ನೇ, ಮಗ್ನಾತ್ಮಾ, ನ, ಅನ್ಯತ್, ಕಿಂಚಿತ್, ವಿವೇದ, ಸಃ ।

**ಅನ್ವಯ**— ಸ್ವಾನಂದಾದಿಗುಣಾರ್ಣವೇ, ಸ್ವಾಶ್ಚರ್ಯರತ್ನೇ, ಮೌಕುಂದೇ, ಸುಂದರೇ, ರೂಪೇ, ಮಗ್ನಾತ್ಮಾ, ಸಃ, ಅನ್ಯತ್, ಕಿಂಚಿತ್, ನ, ವಿವೇದ ।

**ಅನ್ವಯಾರ್ಥ**—

**ಸ್ವಾನಂದ ಆದಿ ಗುಣ ಅರ್ಣವೇ** = ದೋಷವಿಲ್ಲದ ಶ್ರೇಷ್ಠವಾದ ಆನಂದವೇ ಮೊದಲಾಗಿ ಉಳ್ಳ ಗುಣಗಳಿಗೆ ಸಮುದ್ರವಾದ,

**ಸ್ವಾಶ್ಚರ್ಯರತ್ನೇ** = ಉತ್ತಮವಾದ ಒಳ್ಳೆಯ ಆಶ್ಚರ್ಯಗಳಲ್ಲಿ ಶ್ರೇಷ್ಠವಾದ,

**ಮೌಕುಂದೇ** = ಮೋಕ್ಷಪ್ರದನಾದ ಶ್ರೀಹರಿಗೆ ಸಂಬಂಧಿಸಿದ, ಪರಮಾತ್ಮನ ಸ್ವರೂಪವೇ ಆದ,

**ರೂಪೇ** = ಆಕಾರದಲ್ಲಿ

**ಮಗ್ನಾತ್ಮಾ** = ಮುಳುಗಿದ (ಆಸಕ್ತವಾದ) ಮನಸ್ಸುಳ್ಳ,

**ಸಃ** = ಆ ವಿಷ್ಣುತೀರ್ಥರು,

**ಅನ್ಯತ್** = ಬೇರೆ,

**ಕಿಂಚಿತ್** = ಏನನ್ನೂ,

**ನ ವಿವೇದ** = ತಿಳಿಯಲಿಲ್ಲ.

**ತಾತ್ಪರ್ಯ**— ನಿರ್ದೋಷನಾದ, ಅತಿಶ್ರೇಷ್ಠವಾದ ಸ್ವರೂಪಾನಂದ, ಸ್ವರೂಪಜ್ಞಾನ ಮುಂತಾದ ಗುಣಗಳಿಗೆ ಶ್ರೀಹರಿಯು ಸಮುದ್ರದಂತಿರುವನು. ಅತ್ಯಂತ ಆಶ್ಚರ್ಯಕರ ವಸ್ತುಗಳಲ್ಲಿ ಶ್ರೀಹರಿಯು ಅತ್ಯಂತ ಶ್ರೇಷ್ಠನು. ಮೋಕ್ಷಪ್ರದ-ನಾದುದರಿಂದ ಮುಕುಂದ ಎಂಬ ಹೆಸರುಳ್ಳ ಪರಮಾತ್ಮನಿಗೆ ಈ ಆನಂದಾದಿಗುಣಗಳೇ ಆಕಾರವು, ಸ್ವರೂಪವೂ ಆಗಿವೆ. ಅತ್ಯಂತ ಮನೋಹರವಾದ ಈ ಸ್ವರೂಪದಲ್ಲಿ ಶ್ರೀವಿಷ್ಣುತೀರ್ಥರ ಮನಸ್ಸು ಮಗ್ನವಾಯಿತು, ಮುಳುಗಿಹೋಯಿತು. ಅವರು ಪರಮಾತ್ಮನನ್ನೇ ಸರ್ವದಾ ಧ್ಯಾನಿಸುತ್ತಾ ಬೇರೆ ಯಾವುದನ್ನು ತಿಳಿಯಲಿಲ್ಲ, ಬೇರೆ ಯಾವುದರಲ್ಲಿಯೂ ಮನಸ್ಸನ್ನು ಇಡದೆ ಪರಮಾತ್ಮನಲ್ಲೇ ಮನಸ್ಸನ್ನು ಇಟ್ಟು ಅವರು ಅಸಂಪ್ರಜ್ಞಾತ ಸಮಾಧಿಯನ್ನು ಹೊಂದಿದರು.

**ವಿಗ್ರಹ ಮತ್ತು ಕೋಶ**—

**ಮೌಕುಂದೇ**— ಮುಕುಂದಸ್ಯ ಇದಂ ಮೌಕುಂದಂ, ತಸ್ಮಿನ್ ।

**ಸ್ವಾನಂದಾದಿಗುಣಾರ್ಣವೇ**— ಆನಂದಃ ಆದಿಃ ಯೇಷಾಂ ತೇ ಆನಂದಾದಯಃ, ಆನಂದಾದಯಶ್ಚ ತೇ ಗುಣಾಶ್ಚ ಆನಂದಾದಿಗುಣಾಃ, ಶೋಭನಾಶ್ಚ ತೇ ಆನಂದಾದಿಗುಣಾಶ್ಚ ಸ್ವಾನಂದಾದಿಗುಣಾಃ, ಸ್ವಾನಂದಾದಿಗುಣಾನಾಂ ಅರ್ಣವಃ ಸ್ವಾನಂದಾದಿಗುಣಾರ್ಣವಃ ತಸ್ಮಿನ್ ।

**ಸ್ವಾಶ್ಚರ್ಯರತ್ನೇ**— ಶೋಭನಾನಿ ಚ ತಾನಿ ಆಶ್ಚರ್ಯಾಣಿ ಚ ಸ್ವಾಶ್ಚರ್ಯಾಣಿ, ಸ್ವಾಶ್ಚರ್ಯೇಷು ರತ್ನಂ ಸ್ವಾಶ್ಚರ್ಯರತ್ನಂ ತಸ್ಮಿನ್ । ರತ್ನ = ಶ್ರೇಷ್ಠ, 'ರತ್ನಂ ಶ್ರೇಷ್ಠೇ ಮಣಾವಪಿ' ಅಮರ ।

**ಮಗ್ನಾತ್ಮಾ**— ಮಗ್ನಃ ಆತ್ಮಾ ಯಸ್ಯ ಸಃ ಮಗ್ನಾತ್ಮಾ । ಆತ್ಮಾ = ಮನಸ್ಸು, ಬುದ್ಧಿ 'ಆತ್ಮಾ ಯತ್ನೋ ಧೃತಿರ್ಬುದ್ಧಿಃ ಸ್ವಭಾವೋ ಬ್ರಹ್ಮ ವರ್ಷ್ಮ ಚ' ಅಮರ ।

**ಕ್ರಿಯಾಪದ**— **ವಿವೇದ** - ವಿವೇದ ವಿವಿದತುಃ ವಿವಿದುಃ, ವಿವೇದಿಥ ವಿವಿಧಥುಃ ವಿವಿದ, ವಿವೇದ ವಿವಿದಿವ ವಿವಿದಿಮ । ವಿದ ಜ್ಞಾನೇ ಸಕ. ಸೇಟ್. ಪರ. to know, to regard ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನೇ ವಿವೇದ ಇತಿ ರೂಪಂ ।

**ಪ್ರಯೋಗ**— ಸ್ವಾನಂದಾದಿಗುಣಾರ್ಣವೇ ಸ್ವಾಶ್ಚರ್ಯರತ್ನೇ ಮೌಕುಂದೇ ಸುಂದರೇ ರೂಪೇ ಮಗ್ನಾತ್ಮನಾ ತೇನ ಅನ್ಯತ್ ಕಿಂಚಿತ್ ನ ವಿವಿದೇ ।

★ ★ ★

**ಅವತಾರಿಕಾ**— ಶ್ರೀವಿಷ್ಣುತೀರ್ಥರ ಅಷ್ಟಾಂಗಯೋಗಾನುಷ್ಠಾನವೆಂಬ ತಪಸ್ಸಿಗೆ ಮೋಕ್ಷವೆಂಬ ಮಹಾಫಲವೇ ಬೆಲೆಯಾಯಿತು ಎಂದು ಹೇಳುತ್ತಿದ್ದಾರೆ.

**ಕಾಮತ್ರಾಸವಿಹೀನಸ್ಯ ತಸ್ಯ ಸುಜ್ಞಾನಚಕ್ಷುಷಃ ।**

**ವಿನಾ ಕೈವಲ್ಯಸಾಮ್ರಾಜ್ಯಂ ನಾಘರ್ೋ ಯೋಗಮಣೇರಭೂತ್ ॥ 112 ॥**

**ಪದಚ್ಛೇದ**— ಕಾಮತ್ರಾಸವಿಹೀನಸ್ಯ, ತಸ್ಯ, ಸುಜ್ಞಾನಚಕ್ಷುಷಃ, ವಿನಾ, ಕೈವಲ್ಯಸಾಮ್ರಾಜ್ಯಂ, ನ, ಅರ್ಘಃ, ಯೋಗಮಣೇಃ, ಅಭೂತ್ ।

**ಅನ್ವಯ**— ತಸ್ಯ, ಕಾಮತ್ರಾಸವಿಹೀನಸ್ಯ, ಸುಜ್ಞಾನಚಕ್ಷುಷಃ, ಯೋಗಮಣೇಃ, ಕೈವಲ್ಯಸಾಮ್ರಾಜ್ಯಂ, ವಿನಾ, ಅರ್ಘಃ, ನ, ಅಭೂತ್ ।

**ಅನ್ವಯಾರ್ಥ—**

**ತಸ್ಯ** = ಆ ವಿಷ್ಣುತೀರ್ಥರ,

**ಕಾಮತ್ರಾಸವಿಹೀನಸ್ಯ** = ಫಲಾಪೇಕ್ಷೆಯೆಂಬ ಮಣಿಯ ದೋಷದಿಂದ ರಹಿತವಾದ,

**ಸುಜ್ಞಾನಚಕ್ಷುಷಃ** = ಅಪರೋಕ್ಷಜ್ಞಾನವೆಂಬ ಪ್ರಕಾಶವುಳ್ಳ (ಕಣ್ಣುಳ್ಳ),

**ಯೋಗಮಣೇಃ** = ಅಸಂಪ್ರಜ್ಞಾತ ಸಮಾಧಿರೂಪವಾದ ಧ್ಯಾನವೆಂಬ ರತ್ನಕ್ಕೆ,

**ಕೈವಲ್ಯಸಾಮ್ರಾಜ್ಯಂ ವಿನಾ** = ಮೋಕ್ಷವೆಂಬ ಸಾಮ್ರಾಜ್ಯವನ್ನು ಹೊರತು, (ಬೇರೊಂದು)

**ಅರ್ಘಃ** = ಬೆಲೆಯು,

**ನ ಅಭೂತ್** = ಆಗಲಿಲ್ಲ.

**ತಾತ್ಪರ್ಯ—** ರತ್ನದಲ್ಲಿ ತ್ರಾಸ ಎಂದರೆ ಮತ್ತೊಂದು ರತ್ನಪ್ರಕಾಶದ ಎದುರು ಮಂಕಾಗುವುದು ಎಂಬ ದೋಷ-ವಿರುತ್ತದೆ ಚಕ್ಷುಸ್ಸು (ಕಣ್ಣು) ಎಂಬ ರತ್ನಪ್ರಕಾಶದಿಂದ ಬೆಳಗುವ ರತ್ನವು ಮತ್ತೊಂದು ರತ್ನಪ್ರಕಾಶದಿಂದ ಮಂಕಾಗಿರ-ದಿದ್ದಾಗ ಅಂತಹ ರತ್ನವು ಅತ್ಯಂತ ಶ್ರೇಷ್ಠವೆನಿಸಿಕೊಳ್ಳುತ್ತದೆ. ಇಂತಹ ರತ್ನಕ್ಕೆ ಒಂದು ದೊಡ್ಡ ಸಾಮ್ರಾಜ್ಯವೇ ಬೆಲ-ಯಾಗುವುದು. ಶ್ರೀವಿಷ್ಣುತೀರ್ಥಾಚಾರ್ಯರ ಅಸಂಪ್ರಜ್ಞಾತ ಸಮಾಧಿರೂಪವಾದ ಧ್ಯಾನ ಯೋಗಮಣಿಯಲ್ಲಿ ಫಲಾ-ಪೇಕ್ಷೆಯೆಂಬ ತ್ರಾಸ (ರತ್ನದೋಷ)ವಿರಲಿಲ್ಲ. ಅವರು ಫಲಾಪೇಕ್ಷೆ ಇಲ್ಲದೆ ಯೋಗಾನುಷ್ಠಾನ ಮಾಡಿದ್ದರು. ಉತ್ತಮವಾದ ಅಪರೋಕ್ಷಜ್ಞಾನವೇ ಅವರ ಯೋಗಮಣಿಯ ಕಣ್ಣು (ಪ್ರಕಾಶ) ಆಗಿತ್ತು. ರತ್ನಪ್ರಕಾಶಕ್ಕೆ ಚಕ್ಷುಸ್ಸು (ಕಣ್ಣು) ಎಂದು ಹೆಸರು. ಇಂತಹ ಅಸಂಪ್ರಜ್ಞಾತ ಸಮಾಧಿಯೆಂಬ ರತ್ನಕ್ಕೆ ಮೋಕ್ಷಸಾಮ್ರಾಜ್ಯದ ಹೊರತು ಬೇರೆ ವಸ್ತುವು ಮೂಲ್ಯವಾಗಿರಲು ಸಾಧ್ಯವೇ ಇಲ್ಲ. ಹೇಗೆ ನಿರ್ದೋಷವಾಗಿ ಪ್ರಕಾಶಿಸುವ ರತ್ನಕ್ಕೆ ಸಾಮ್ರಾಜ್ಯವೇ ಬೆಲೆಯಾಗಿರುತ್ತದೆಯೋ ಅದರಂತೆ ಫಲಾಪೇಕ್ಷೆ ಇಲ್ಲದೆ ಅಪರೋಕ್ಷಜ್ಞಾನವನ್ನು ಪಡೆದು ಪರಮಾತ್ಮನಲ್ಲಿ ಮನಸ್ಸನ್ನು ಮುಳುಗಿಸಿ ಧ್ಯಾನಮಾಡಿದ ಶ್ರೀವಿಷ್ಣುತೀರ್ಥರ ಯೋಗಮಣಿಗೆ ಮೋಕ್ಷವೇ ಫಲವು, ಬೇರೆ ಯಾವ ಫಲವೂ ಅಂತಹ ಯೋಗ್ಯರತ್ನಕ್ಕೆ ಯೋಗ್ಯವಲ್ಲ. ಶ್ರೀವಿಷ್ಣುತೀರ್ಥರಿಗೆ ಅವಶ್ಯವಾಗಿ ಮೋಕ್ಷವು ದೊರೆಯುವುದು ಎಂದು ಅಭಿಪ್ರಾಯ.

**ವಿಗ್ರಹ ಮತ್ತು ಕೋಶ—**

**ಕಾಮತ್ರಾಸವಿಹೀನಸ್ಯ—** ಕಾಮ ಏವ ತ್ರಾಸಃ ಕಾಮತ್ರಾಸಃ, ಕಾಮತ್ರಾಸೇನ ವಿಹೀನಃ ಕಾಮತ್ರಾಸವಿಹೀನಃ, ತಸ್ಯ ।

**ಸುಜ್ಞಾನಚಕ್ಷುಷಃ—** ಶೋಭನಂ ಚ ತತ್ ಜ್ಞಾನಂ ಚ ಸುಜ್ಞಾನಂ, ಸುಜ್ಞಾನಂ ಏವ ಚಕ್ಷುಃ ಯಸ್ಯ ಸಃ ಸುಜ್ಞಾನಚಕ್ಷುಃ ತಸ್ಯ ।

**ಕೈವಲ್ಯಸಾಮ್ರಾಜ್ಯಂ—** ಕೇವಲಸ್ಯ ಭಾವಃ ಕೈವಲ್ಯಂ, ಸಮ್ರಾಜಃ ಭಾವಃ ಸಾಮ್ರಾಜ್ಯಂ, ಕೈವಲ್ಯಂ ಏವ ಸಾಮ್ರಾಜ್ಯಂ ಕೈವಲ್ಯಸಾಮ್ರಾಜ್ಯಂ, ತತ್ । ಕೈವಲ್ಯಂ = ಮುಕ್ತಿ, 'ಮುಕ್ತಿಃ ಕೈವಲ್ಯನಿರ್ವಾಣಶ್ರೇಯೋ ನಿಶ್ರೇಯಸಾಮೃತಂ' ಅಮರ ।

**ಯೋಗಮಣೇಃ—** ಯೋಗ ಏವ ಮಣಿಃ ಯೋಗಮಣಿಃ ತಸ್ಯ । ಯೋಗ = ಧ್ಯಾನ, 'ಯೋಗಃ ಸನ್ನಹ-ನೋಪಾಯಧ್ಯಾನಸಂಗತಿ ಯುಕ್ತಿಷು' ಅಮರ । ಅಘ = ಬೆಲೆ, 'ಮೂಲ್ಯೇ ಪೂಜಾವಿಧಾವರ್ಘಃ' ಅಮರ ।

**ಕ್ರಿಯಾಪದ— ಅಭೂತ್** - ಅಭೂತ್ ಅಭೂತಾಂ ಅಭೂವನ್, ಭೂ ಸತ್ತಾಯಾಂ ಭೂತೇ ಲುಙ್ ।

**ಪ್ರಯೋಗ—** ತಸ್ಯ ಕಾಮತ್ರಾಸವಿಹೀನಸ್ಯ ಸುಜ್ಞಾನಚಕ್ಷುಷಃ, ಯೋಗಮಣೇಃ ಕೈವಲ್ಯಸಾಮ್ರಾಜ್ಯಂ ವಿನಾ ಅರ್ಘೇಣ ನ ಅಭಾವಿ ।

★ ★ ★

**ಅವತಾರಿಕಾ**— ಶ್ರೀವಿಷ್ಣುತೀರ್ಥರಿಗೆ ಆಚಾರ್ಯರು ಮಾಡಿದ ಅನುಗ್ರಹವು ಅತ್ಯಂತ ರಹಸ್ಯವಾಗಿದೆಯೆಂದು ಹೇಳುತ್ತಿದ್ದಾರೆ.

**ಮಧ್ವಾನುಜೇ ಮಧ್ವನಾಥೋ ಯಂ ಪ್ರಸಾದಂ ವ್ಯಧಾತ್ತದಾ ।**
**ಸ ಚಿತ್ತಾವಿಷಯತ್ವಾದ್ವಾ ಗೋಪ್ಯತ್ವಾದ್ವಾ ನ ವರ್ಣ್ಯತೇ ॥ 113 ॥**

**ಪದಚ್ಛೇದ**— ಮಧ್ವಾನುಜೇ, ಮಧ್ವನಾಥಃ, ಯಂ, ಪ್ರಸಾದಂ, ವ್ಯಧಾತ್, ತದಾ, ಸಃ, ಚಿತ್ತಾವಿಷಯತ್ವಾತ್, ವಾ, ಗೋಪ್ಯತ್ವಾತ್, ವಾ, ನ, ವರ್ಣ್ಯತೇ ।

**ಅನ್ವಯ**— ಮಧ್ವನಾಥಃ, ತದಾ, ಮಧ್ವಾನುಜೇ, ಯಂ, ಪ್ರಸಾದಂ, ವ್ಯಧಾತ್, ಸಃ, ಚಿತ್ತಾವಿಷಯತ್ವಾತ್, ವಾ, ಗೋಪ್ಯತ್ವಾತ್, ವಾ, ನ, ವರ್ಣ್ಯತೇ ।

**ಅನ್ವಯಾರ್ಥ**—

**ಮಧ್ವನಾಥಃ** = ಶ್ರೀಮಧ್ವಾಚಾರ್ಯರಿಗೆ ಸ್ವಾಮಿಯಾದ ಶ್ರೀಮನ್ನಾರಾಯಣನು,
**ತದಾ** = ಆಗ,
**ಮಧ್ವಾನುಜೇ** = ಶ್ರೀಮಧ್ವಾಚಾರ್ಯರ ತಮ್ಮಂದಿರಾದ ಶ್ರೀವಿಷ್ಣುತೀರ್ಥರಲ್ಲಿ,
**ಯಂ** = ಯಾವ,
**ಪ್ರಸಾದಂ** = ಅನುಗ್ರಹವನ್ನು,
**ವ್ಯಧಾತ್** = ಮಾಡಿದರೋ,
**ಸಃ** = ಆ ಅನುಗ್ರಹವು,
**ಚಿತ್ತಾವಿಷಯತ್ವಾತ್ ವಾ** = (ಇತರರಿಗೆ ತಿಳಿಸಬೇಕೆಂದು) ಮನಸ್ಸಿಗೆ ಗೋಚರಿಸದೆ ಇರುವುದರಿಂದಾಗಲೀ,
**ಗೋಪ್ಯತ್ವಾತ್ ವಾ** = ಇತರರಿಗೆ ಅದನ್ನು ತಿಳಿಯಲು ಅಧಿಕಾರವಿಲ್ಲದಿರುವುದರಿಂದ ಗುಟ್ಟಾಗಿ ಇಡಬೇಕಾದ ವಿಷಯವಾಗಿದ್ದರಿಂದಲಾಗಲೀ,
**ನ ವರ್ಣ್ಯತೇ** = ಹೆಚ್ಚಾಗಿ ಹೇಳಲ್ಪಡುವುದಿಲ್ಲ.

**ತಾತ್ಪರ್ಯ**— ಹೀಗೆ ದಿವ್ಯಧ್ಯಾನಾಸಕ್ತರಾದ, ಪೂರ್ಣಬೋಧರ ಅನುಜರಾದ ಶ್ರೀವಿಷ್ಣುತೀರ್ಥರಲ್ಲಿ ಆನಂದತೀರ್ಥವಲ್ಲಭನಾದ ಶ್ರೀಹರಿಯು ಯಾವ ಅನುಗ್ರಹವನ್ನು ಮಾಡಿದನೆಂದು ನಾನು (ಕಾವ್ಯಕರ್ತೃಗಳಾದ ಶ್ರೀಮನ್ನಾರಾಯಣ ಪಂಡಿತಾಚಾರ್ಯರು) ವಿಸ್ತರಿಸಿ ಹೇಳುವುದಿಲ್ಲ. ಏಕೆಂದರೆ ಆ ವಿಷಯವು ಸಂಪೂರ್ಣವಾಗಿ ನನ್ನ ಮನಸ್ಸಿಗೆ ತಿಳಿದು ಬಂದಿಲ್ಲ. ತಿಳಿದು ಬಂದಿರುವ ವಿಷಯವನ್ನು ಹೇಳಬೇಕೆಂಬ ಪ್ರೇರಣೆಯು ಆಗಿರುವುದಿಲ್ಲ ಮತ್ತು ಅಂತಹ ವಿಷಯವನ್ನು ತಿಳಿಯಲು ಸಾಮಾನ್ಯ ಜನರಿಗೆ ಅಧಿಕಾರವಿಲ್ಲದಿರುವುದರಿಂದ ಅದು ಗುಟ್ಟಾಗಿ ಇಡಬೇಕಾದ ವಿಷಯವಾಗಿದೆ. ಈ ಕಾರಣದಿಂದಲೂ ಆ ವಿಷಯವನ್ನು ನಾನು ವರ್ಣಿಸುವುದಿಲ್ಲ ಎಂದು ಹೇಳುತ್ತಾ ಕವಿಗಳು ಭಗವಂತನು ಶ್ರೀವಿಷ್ಣುತೀರ್ಥರಲ್ಲಿ ಮಾಡಿದ ಅನುಗ್ರಹವು ಬಹಳ ಮಹತ್ತರವಾದುದು ಎಂದು ಸೂಚಿಸಿದ್ದಾರೆ.

**ವಿಗ್ರಹ**—

**ಮಧ್ವಾನುಜೇ**— ಅನುಜಾಯತೇ ಇತಿ ಅನುಜಃ ಮಧ್ವಸ್ಯ ಅನುಜಃ ಮಧ್ವಾನುಜಃ, ತಸ್ಮಿನ್ ।
**ಮಧ್ವನಾಥಃ**— ಮಧ್ವಸ್ಯ ನಾಥಃ ಮಧ್ವನಾಥಃ ।
**ಚಿತ್ತಾವಿಷಯತ್ವಾದ್ವಾ**— ನ ವಿಷಯಃ ಅವಿಷಯಃ, ಚಿತ್ತಸ್ಯ ಅವಿಷಯಃ ಚಿತ್ತಾವಿಷಯಃ, ಚಿತ್ತಾವಿಷಯಸ್ಯ ಭಾವಃ ಚಿತ್ತಾವಿಷಯತ್ವಂ, ತಸ್ಮಾತ್ ।
**ಗೋಪ್ಯತ್ವಾತ್**— ಗೋಪಾಯಿತುಂ ಯೋಗ್ಯಃ ಗೋಪ್ಯಃ, ಗೋಪ್ಯಸ್ಯ ಭಾವಃ ಗೋಪ್ಯತ್ವಂ ತಸ್ಮಾತ್ ।

**ಕ್ರಿಯಾಪದ—** **ವರ್ಣ್ಯತೇ** - ವರ್ಣ್ಯತೇ ವರ್ಣ್ಯೇತೇ ವರ್ಣ್ಯಂತೇ, ವರ್ಣ್ಯಸೇ ವರ್ಣ್ಯೇಥೇ ವರ್ಣ್ಯಧ್ವೇ, ವರ್ಣ್ಯೇ ವರ್ಣ್ಯಾವಹೇ ವರ್ಣ್ಯಾಮಹೇ । ವರ್ಣ ವರ್ಣಕ್ರಿಯಾವಿಸ್ತಾರಗುಣವಚನೇಷು ಸಕ. ಸೇಟ್. ಉಭ. to paint, to explain, to extole, ಕರ್ಮಣಿ ಲಟ್ ಪ್ರಥಮಪುರುಷ ಏಕವಚನದಲ್ಲಿ ವರ್ಣ್ಯತೇ ಎಂದು ರೂಪ ।

★ ★ ★

**ಅವತಾರಿಕಾ—** ದೇವತೆಗಳೂ ಶ್ರೀಮಧ್ವಾಚಾರ್ಯರ ಮಹಿಮೆಯನ್ನು ಹೊಗಳಿದರು ಎಂದು ಹೇಳುತ್ತಾರೆ.

**ಅಹೋ ಮಹಾಬೋಧಸೇವಾಮಹಿಮಾಽಸ್ಮಿನ್ ಯುಗೇ ಯತಃ ।**
**ಧನ್ಯೋಽಸೌ ಸಿದ್ಧಿಮಾಪೇಮಾಂ ಸೋಽಮರ್ತ್ಯೈರಿತ್ಯಲಾಲ್ಯತ ॥ 114 ॥**

**ಪದಚ್ಛೇದ—** ಅಹೋ, ಮಹಾಬೋಧಸೇವಾಮಹಿಮಾ, ಅಸ್ಮಿನ್, ಯುಗೇ, ಯತಃ, ಧನ್ಯಃ, ಅಸೌ, ಸಿದ್ಧಿಂ, ಆಪ, ಇಮಾಂ, ಸಃ, ಅಮರ್ತ್ಯೈಃ, ಇತಿ, ಅಲಾಲ್ಯತ ।

**ಅನ್ವಯ—** ಯತಃ, ಧನ್ಯಃ, ಅಸೌ, ಅಸ್ಮಿನ್, ಯುಗೇ, ಇಮಾಂ, ಸಿದ್ಧಿಂ, ಆಪ (ಅತಃ), ಮಹಾಬೋಧಸೇವಾ-ಮಹಿಮಾ, ಅಹೋ, ಇತಿ, ಸಃ, ಅಮರ್ತ್ಯೈಃ, ಅಲಾಲ್ಯತ ।

**ಅನ್ವಯಾರ್ಥ—**

**ಯತಃ** = ಯಾವ ಕಾರಣದಿಂದ,
**ಧನ್ಯಃ** = ಪುಣ್ಯವಂತರಾದ,
**ಅಸೌ** = ಈ ವಿಷ್ಣುತೀರ್ಥರು,
**ಅಸ್ಮಿನ್ ಯುಗೇ** = ಈ ಕಲಿಯುಗದಲ್ಲಿ,
**ಇಮಾಂ** = ಇಂತಹ,
**ಸಿದ್ಧಿಂ** = ತಪಸ್ಸಿನ ಸಫಲತೆಯನ್ನು,
**ಆಪ** = ಹೊಂದಿದರೋ (ಅತಃ = ಆದುದರಿಂದ),
**ಮಹಾಬೋಧಸೇವಾಮಹಿಮಾ** = ಶ್ರೀಪೂರ್ಣಪ್ರಜ್ಞಾಚಾರ್ಯರ ಸೇವೆಯ ಮಹತ್ತ್ವವು,
**ಅಹೋ** = ಆಶ್ಚರ್ಯಕರವು,
**ಇತಿ** = ಹೀಗೆಂದು,
**ಸಃ** = ಶ್ರೀಪೂರ್ಣಪ್ರಜ್ಞರ ಮಹಿಮೆಯು,
**ಅಮರ್ತ್ಯೈಃ** = ದೇವತೆಗಳಿಂದ,
**ಅಲಾಲ್ಯತ** = ಗೌರವಿಸಲ್ಪಟ್ಟಿತು.

**ತಾತ್ಪರ್ಯ—** ಈ ವಿಷ್ಣುತೀರ್ಥರು ಇಂತಹ ಕಲಿಯುಗದಲ್ಲಿಯೂ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಸೇವೆಯನ್ನು ಮಾಡಿ ಅವರು ಉಪದೇಶ ಮಾಡಿದ ಮಾರ್ಗದಿಂದ ನಡೆದು ಇಂತಹ ಸಿದ್ಧಿಯನ್ನು ಪಡೆದರು. ಆದುದರಿಂದ ಶ್ರೀಮಧ್ವಾಚಾರ್ಯರ ಸೇವೆಯ ಮಹಿಮೆಯು ಆಶ್ಚರ್ಯಕರವಾಗಿದೆ ಎಂದು ಶ್ರೀಮಧ್ವಸೇವೆಯ ಮಹಿಮೆಯನ್ನು ದೇವತೆಗಳೂ ಗೌರವಿಸಿದರು, ಹೊಗಳಿದರು.

**ವಿಗ್ರಹ—**

**ಮಹಾಭೋಧಸೇವಾಮಹಿಮಾ—** ಮಹಾನ್ ಬೋಧಃ ಯಸ್ಯ ಸಃ ಮಹಾಬೋಧಃ, ಮಹಾಬೋಧಸ್ಯ ಸೇವಾ ಮಹಾಬೋಧಸೇವಾ, ಮಹಾಬೋಧಸೇವಾಯಾಃ ಮಹಿಮಾ ಮಹಾಬೋಧಸೇವಾಮಹಿಮಾ ।

**ಕ್ರಿಯಾಪದ**— **ಅಲಾಲ್ಯತ** - ಅಲಾಲ್ಯತ ಅಲಾಲ್ಯೇತಾಂ ಅಲಾಲ್ಯಂತ, ಅಲಾಲ್ಯಥಾಃ ಅಲಾಲ್ಯೇಥಾಂ ಅಲಾಲ್ಯಧ್ವಂ, ಅಲಾಲ್ಯೇ ಅಲಾಲ್ಯಾವಹಿ ಅಲಾಲ್ಯಾಮಹಿ । ಲಲ ಈಪ್ಸಾಯಾಂ (1688) ಆತ್ಮನೇಪದೀ ಚುರಾದಿ, ಕರ್ಮಣಿ ಲಙ್ ಪ್ರಥಮಪುರುಷ ಏಕವಚನದಲ್ಲಿ ಅಲಾಲ್ಯತ ಎಂದು ರೂಪ । **ಆಪ** - ಆಪ ಆಪತುಃ ಆಪುಃ ಇತ್ಯಾದಿ ಆಪ್‌ಲೃ ವ್ಯಾಪ್ತೌ (ಆಪ್) ಸಕ. ಅನಿ. ಪರ to obtain to pervade ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

**ಪ್ರಯೋಗ**— ಯತಃ ಧನ್ಯೇನ ಅಮುನಾ ಅಸ್ಮಿನ್ ಯುಗೇ ಇಯಂ ಸಿದ್ಧಿಃ ಆಪೇ, ಅತಃ ಮಹಾಬೋಧಸೇವಾ-ಮಹಿಮ್ನಾ ಅಹೋ ಭೂಯತೇ ಇತಿ ತಂ (ಮಹಾಬೋಧಸೇವಾಮಹಿಮಾನಂ) ಅಮರಾಃ ಅಲಾಲಯಂತ ।

★ ★ ★

**ಅವತಾರಿಕಾ**— ಇನ್ನು ಆ ವಿಷ್ಣುತೀರ್ಥರ ಶಿಷ್ಯರನ್ನು ವರ್ಣಿಸುತ್ತಾರೆ.

**ತೀವ್ರವ್ರತೋಽತೀಂದ್ರಿಯವಿದ್‌ವಿದ್ಯಾಬ್ಧಿಸ್ತರ್ಕಪಂಡಿತಃ ।**
**ಅನಿರುದ್ಧಪದಾಧಾರಃ ಪ್ರೇಷ್ಠಃ ಶಿಷ್ಯಸ್ತಮಾಯಯೌ ॥ 115 ॥**

**ಪದಚ್ಛೇದ**— ತೀವ್ರವ್ರತಃ, ಅತೀಂದ್ರಿಯವಿತ್, ವಿದ್ಯಾಬ್ಧಿಃ, ತರ್ಕಪಂಡಿತಃ, ಅನಿರುದ್ಧಪದಾಧಾರಃ, ಪ್ರೇಷ್ಠಃ, ಶಿಷ್ಯಃ, ತಂ, ಆಯಯೌ ।

**ಅನ್ವಯ**— ತೀವ್ರವ್ರತಃ, ಅತೀಂದ್ರಿಯವಿತ್, ವಿದ್ಯಾಬ್ಧಿಃ, ತರ್ಕಪಂಡಿತಃ, ಅನಿರುದ್ಧಪದಾಧಾರಃ, ಪ್ರೇಷ್ಠಃ, ಶಿಷ್ಯಃ, ತಂ, ಆಯಯೌ ।

**ಅನ್ವಯಾರ್ಥ**—

**ತೀವ್ರವ್ರತಃ** = ಕಠಿಣವಾದ ನಿಯಮವುಳ್ಳ,

**ಅತೀಂದ್ರಿಯವಿತ್** = ಕಣ್ಣು ಮೊದಲಾದ ಇಂದ್ರಿಯಗಳಿಗೆ ಗೋಚರಿಸದ ಭೂತ ಭವಿಷ್ಯತ್ ವರ್ತಮಾನ-ಕಾಲದ ವಿಷಯಜ್ಞಾನವುಳ್ಳ, (ಅತೀತಾನಾಗತಜ್ಞಾನಿಗಳಾದ)

**ವಿದ್ಯಾಬ್ಧಿಃ** = ವಿದ್ಯಾಸಮುದ್ರರಾದ,

**ತರ್ಕಪಂಡಿತಃ** = ತರ್ಕಶಾಸ್ತ್ರದಲ್ಲಿ ಚತುರರಾದ,

**ಅನಿರುದ್ಧಪದಾಧಾರಃ** = (ಅನಿರುದ್ಧನೆಂಬ ಹೆಸರಿನ ಪರಮಾತ್ಮನ ಪಾದಗಳೇ ಆಶ್ರಯವಾಗಿ ಉಳ್ಳ), ಅನಿರುದ್ಧತೀರ್ಥರು ಎಂಬ ಹೆಸರಿಗೆ ಆಶ್ರಯರಾದ,

**ಪ್ರೇಷ್ಠಃ** = ಅತ್ಯಂತ ಪ್ರೀತಿವಿಷಯರಾದ,

**ಶಿಷ್ಯಃ** = ಶಿಷ್ಯರು,

**ತಂ** = ಆ ವಿಷ್ಣುತೀರ್ಥರನ್ನು ಕುರಿತು,

**ಆಯಯೌ** = ಬಂದರು.

**ತಾತ್ಪರ್ಯ**— ಇತರರಿಂದ ನಿರ್ವಹಿಸಲು ಅಸಾಧ್ಯವಾದ ಕಠಿಣವಾದ ನಿಯಮಗಳನ್ನು ನೆರವೇರಿಸುವವರೂ, ಭೂತಭವಿಷ್ಯಜ್ಞಾನಿಗಳೂ, ವಿದ್ಯಾಸಮುದ್ರರೂ ತರ್ಕಶಾಸ್ತ್ರದಲ್ಲಿ ಚತುರರೂ ಆದ ಶ್ರೀಅನಿರುದ್ಧತೀರ್ಥರೆಂಬುವರು ಶ್ರೀವಿಷ್ಣುತೀರ್ಥರ ಮೊದಲಿನ ಶಿಷ್ಯರಾದರು. ಅವರು ಶ್ರೀವಿಷ್ಣುತೀರ್ಥರು ಹರಿಶ್ಚಂದ್ರಪರ್ವತದಲ್ಲಿ ತಪಸ್ಸು

ಮಾಡುತ್ತಿರುವಾಗ ಅವರ ಬಳಿಗೆ ಬಂದು ಶಿಷ್ಯತ್ವವನ್ನು ವಹಿಸಿ, ತಮ್ಮ ಗುರುಗಳಿಗೆ ಅತ್ಯಂತ ಪ್ರೀತಿವಿಷಯರೂ, ಅನಿರುದ್ಧನೆಂಬ ಪರಮಾತ್ಮನ ಪಾದಾಶ್ರಿತರಾಗಿ, ಅನಿರುದ್ಧತೀರ್ಥರೆಂದೂ ಪ್ರಸಿದ್ಧರಾದರು. ಗುರುಗಳೇ ಅವರಿಗೆ ಅನಿರುದ್ಧ-ತೀರ್ಥರೆಂದು ಹೆಸರಿಟ್ಟಿದ್ದರು. (ಇವರ ವೃಂದಾವನವು ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಹ್ಮಣ್ಯ ಕ್ಷೇತ್ರದಲ್ಲಿದೆ).

**ವಿಗ್ರಹ—**

**ತೀವ್ರವ್ರತಃ—** ತೀವ್ರಂ ವ್ರತಂ ಯಸ್ಯ ಸಃ ತೀವ್ರವ್ರತಃ ।

**ಅತೀಂದ್ರಿಯವಿತ್—** ಇಂದ್ರಿಯಾಣಿ ಅತಿಕ್ರಾಂತಂ ಅತೀಂದ್ರಿಯಂ, ಅತೀಂದ್ರಿಯಂ ವೇತ್ತೀತಿ ಅತೀಂದ್ರಿಯವಿತ್ ।

**ವಿದ್ಯಾಬ್ಧಿಃ—** ವಿದ್ಯಯಾ (ವಿದ್ಯಾಯಾಂ) ಅಬ್ಧಿರಿವ ವಿದ್ಯಾಬ್ಧಿಃ ।

**ತರ್ಕಪಂಡಿತಃ—** ತರ್ಕೇ ಪಂಡಿತಃ ತರ್ಕಪಂಡಿತಃ ।

**ಅನಿರುದ್ಧಪದಾಧಾರಃ—** ಅನಿರುದ್ಧ ಇತಿ ಪದಂ ಅನಿರುದ್ಧಪದಂ, ಅನಿರುದ್ಧಪದಸ್ಯ ಆಧಾರಃ ಅನಿರುದ್ಧ-ಪದಾಧಾರಃ (ಅನಿರುದ್ಧ ಎಂಬ ಹೆಸರಿಗೆ ಆಶ್ರಯರಾದವರು). ಅನಿರುದ್ಧಸ್ಯ ಪದೇ ಅನಿರುದ್ಧಪದೇ ಅನಿರುದ್ಧಪದೇ ಏವ ಆಧಾರಃ ಯಸ್ಯ ಸಃ ಅನಿರುದ್ಧಪದಾಧಾರಃ = ಅನಿರುದ್ಧನೆಂಬ ಹೆಸರಿನ ಪರಮಾತ್ಮನ ಪಾದಗಳೇ ಆಧಾರವಾಗಿ ಉಳ್ಳವರು)

**ಪ್ರೇಷ್ಠಃ—** ಅತಿಶಯೇನ ಪ್ರಿಯಃ ಪ್ರೇಷ್ಠಃ ।

**ಕ್ರಿಯಾಪದ— ಆಯಯೌ** - ಆ+ಯಯೌ, ಯಯತುಃ ಯಯುಃ, ಯಯಿಥ ಯಯಾಥ ಯಯಥುಃ ಯಯ, ಯಯೌ ಯಯಿವ ಯಯಿಮ । ಆಙ ಉಪಸರ್ಗಪೂರ್ವಕ ಯಾ ಪ್ರಾಪಣೇ ಅಕ. ಅನಿ. ಪರ. to go ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

**ಪ್ರಯೋಗ—** ತೀವ್ರವ್ರತೇನ ಅತೀಂದ್ರಿಯವಿದಾ ವಿದ್ಯಾಬ್ಧಿನಾ ತರ್ಕಪಂಡಿತೇನ ಅನಿರುದ್ಧಪದಾಧಾರೇಣ ಪ್ರೇಷ್ಠೇನ ಶಿಷ್ಯೇಣ ಸಃ ಆಯಯೇ ।

★ ★ ★

**ಅವತಾರಿಕಾ—** ಶ್ರೀ ಅನಿರುದ್ಧತೀರ್ಥರ ಪ್ರಾರ್ಥನೆಯಿಂದ ಒಂದು ಬಾರಿ ಶ್ರೀವಿಷ್ಣುತೀರ್ಥರು ಉಡುಪಿಗೆ ಬಂದಾಗ ಜನರು ಶ್ರೀಮಧ್ವಾಚಾರ್ಯರೇ ಪುನಃ ಹಿಂತಿರುಗಿ ಬಂದರೆಂದು ತಿಳಿದರು ಎಂದು ವರ್ಣಿಸುತ್ತಾರೆ.

**ತೇನ ಸಂಪ್ರಾರ್ಥಿತಂ ಪ್ರಾಪ್ತಂ ರೂಪ್ಯಪೀಠಮಿಮಂ ಪುನಃ ।**
**ಕೃತ್ಸ್ನಜ್ಞಂ ಕೃಪಯಾ ಸ್ವೇಷು ಸಂಪ್ರಾಪ್ತಂ ಮೇನಿರೇ ಪ್ರಜಾಃ ॥ 116 ॥**

**ಪದಚ್ಛೇದ—** ತೇನ, ಸಂಪ್ರಾರ್ಥಿತಂ, ಪ್ರಾಪ್ತಂ, ರೂಪ್ಯಪೀಠಂ, ಇಮಂ, ಪುನಃ, ಕೃತ್ಸ್ನಜ್ಞಂ, ಕೃಪಯಾ, ಸ್ವೇಷು, ಸಂಪ್ರಾಪ್ತಂ, ಮೇನಿರೇ, ಪ್ರಜಾಃ ।

**ಅನ್ವಯ—** ತೇನ, ಸಂಪ್ರಾರ್ಥಿತಂ, ರೂಪ್ಯಪೀಠಂ, ಪ್ರಾಪ್ತಂ, ಇಮಂ, ಪ್ರಜಾಃ, ಸ್ವೇಷು, ಕೃಪಯಾ, ಪುನಃ, ಸಂಪ್ರಾಪ್ತಂ, ಕೃತ್ಸ್ನಜ್ಞಂ, ಮೇನಿರೇ ।

**ಅನ್ವಯಾರ್ಥ—**

**ತೇನ** = ಆ ಅನಿರುದ್ಧತೀರ್ಥರಿಂದ,

**ಸಂಪ್ರಾರ್ಥಿತಂ** = ಬಹಳವಾಗಿ ಪ್ರಾರ್ಥಿಸಲ್ಪಟ್ಟ

ರೂಪ್ಯಪೀಠಂ = ಉಡುಪಿಯನ್ನು ಕುರಿತು,
ಪ್ರಾಪ್ತಂ = ಬಂದಿದ್ದ
ಇಮಂ = ಈ ವಿಷ್ಣುತೀರ್ಥರನ್ನು,
ಪ್ರಜಾಃ = ಜನರು,
ಸ್ವೇಷು = ತಮ್ಮಲ್ಲಿ,
ಕೃಪಯಾ = ದಯೆಯಿಂದ,
ಪುನಃ = ಮತ್ತೋಮ್ಮೆ,
ಸಂಪ್ರಾಪ್ತಂ = ಬಂದಿರುವ,
ಕೃತ್ಸ್ನಜ್ಞಂ = ಶ್ರೀಪೂರ್ಣಪ್ರಜ್ಞರನ್ನಾಗಿ,
ಮೇನಿರೇ = ತಿಳಿದರು.

ತಾತ್ಪರ್ಯ— ಆ ಅನಿರುದ್ಧತೀರ್ಥರು ತಮ್ಮ ಗುರುಗಳಾದ ಶ್ರೀವಿಷ್ಣುತೀರ್ಥರನ್ನು ಉಡುಪಿಗೆ ಬರಬೇಕೆಂದು ಬಹಳವಾಗಿ ಪ್ರಾರ್ಥಿಸಿದಾಗ ಶ್ರೀವಿಷ್ಣುತೀರ್ಥರು ಉಡುಪಿಗೆ ಬಂದರು. ಶ್ರೀಮಧ್ವಾಚಾರ್ಯರ ತಮ್ಮಂದಿರಾದ ಶ್ರೀವಿಷ್ಣು-ತೀರ್ಥರಲ್ಲಿ ಆಚಾರ್ಯರ ಹೋಲಿಕೆಯು ಬಹಳವಾಗಿ ಇದ್ದುದರಿಂದ ಶ್ರೀಮಧ್ವಾಚಾರ್ಯರೇ ತಮ್ಮನ್ನು ಅನುಗ್ರಹಿಸಲು ತಿರುಗಿಬಂದರೆಂದು ಜನರು ತಿಳಿದರು. ಶ್ರೀವಿಷ್ಣುತೀರ್ಥರಲ್ಲಿ ಆಕಾರದಿಂದಲೂ ಗುಣಗಳಿಂದಲೂ ಆಚಾರ್ಯರ ಸಾಮ್ಯವಿದ್ದುದರಿಂದ ಅವರನ್ನು ಕಂಡು ಜನರು ಆಚಾರ್ಯರೇ ತಮ್ಮನ್ನು ಅನುಗ್ರಹಿಸುವುದಕ್ಕಾಗಿ ಬಂದರೆಂದು ತಿಳಿದರು. (ಆಚಾರ್ಯರು ಬದರೀ ಪ್ರಯಾಣ ಮಾಡಿದ ಮೇಲೆ, ಒಂದು ಬಾರಿ ಶ್ರೀವಿಷ್ಣುತೀರ್ಥರು ಉಡುಪಿಗೆ ಬಂದಾಗ ಜನರು ಪುನಃ ಆಚಾರ್ಯರೇ ತಮ್ಮನ್ನು ಅನುಗ್ರಹಿಸಲು ಬಂದರೆಂದು ಭಾವಿಸುವಷ್ಟು ಆಚಾರ್ಯರ ಸಾಮ್ಯವು ಶ್ರೀವಿಷ್ಣು-ತೀರ್ಥರಲ್ಲಿ ಇತ್ತು ಎಂದೂ ಸೂಚ್ಯಾರ್ಥವು ಇಲ್ಲಿ ತೋರುತ್ತಿದೆ).

ವಿಗ್ರಹ—

ಕೃತ್ಸ್ನಜ್ಞಂ— ಕೃತ್ಸ್ನಂ ಜಾನಾತೀತಿ ಕೃತ್ಸ್ನಜ್ಞಃ, ತಂ ।

ಕ್ರಿಯಾಪದ— ಮೇನೇ ಮೇನಾತೇ ಮೇನಿರೇ, ಮೇನಿಷೇ ಮೇನಾಥೇ ಮೇನಿಧ್ವೇ, ಮೇನೇ ಮೇನಿವಹೇ ಮೇನಿಮಹೇ । ಮನು (ಮನ್) ಅವಬೋಧನೇ ಸಕ. ಸೇಟ್ । ಆತ್ಮ । to consider, to esteem ಅಥವಾ ಮನ ಜ್ಞಾನೇ ಸಕ. ಅನಿ ಆತ್ಮ । to know, to think ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಬಹುವಚನ ।

ಪ್ರಯೋಗ— ತೇನ ಸಂಪ್ರಾರ್ಥಿತಃ ರೂಪ್ಯಪೀಠಂ ಪ್ರಾಪ್ತಃ ಅಯಂ ಪ್ರಜಾಭಿಃ ಸ್ವೇಷು ಕೃಪಯಾ ಪ್ರಾಪ್ತಃ ಕೃತ್ಸ್ನಜ್ಞಃ ಮೇನೇ ।

★ ★ ★

ಅವತಾರಿಕಾ— ಶ್ರೀವಿಷ್ಣುತೀರ್ಥರ ಮತ್ತೊಬ್ಬ ಶಿಷ್ಯರನ್ನು ವರ್ಣಿಸುತ್ತಾರೆ.

**ಕವೀಂದ್ರತಿಲಕೋ ವಿದ್ವಚ್ಛೇಖರಸ್ತಾಪಸಾಗ್ರಣೀಃ ।**
**ಮಧ್ವಕೇಲೀಶುಕೋಽಸ್ಯಾಭೂಚ್ಛಿಷ್ಯೋ ವ್ಯಾಸಪದಾಶ್ರಯಃ ॥ 117 ॥**

ಪದಚ್ಛೇದ— ಕವೀಂದ್ರತಿಲಕಃ, ವಿದ್ವಚ್ಛೇಖರಃ, ತಾಪಸಾಗ್ರಣೀಃ, ಮಧ್ವಕೇಲೀಶುಕಃ, ಅಸ್ಯ, ಅಭೂತ್, ಶಿಷ್ಯಃ, ವ್ಯಾಸಪದಾಶ್ರಯಃ ।

**ಅನ್ವಯ**— ಅಸ್ಯ, ಕವೀಂದ್ರತಿಲಕಃ, ವಿದ್ವಚ್ಛೇಖರಃ, ತಾಪಸಾಗ್ರಣೀಃ, ಮಧ್ವಕೇಲೀಶುಕಃ, ವ್ಯಾಸಪದಾಶ್ರಯಃ, ಶಿಷ್ಯಃ, ಅಭೂತ್ ।

**ಅನ್ವಯಾರ್ಥ**—

**ಅಸ್ಯ** = ಈ ವಿಷ್ಣುತೀರ್ಥರಿಗೆ,

**ಕವೀಂದ್ರತಿಲಕಃ** = ಕವಿಶ್ರೇಷ್ಠರಿಗೆ ತಿಲಕಪ್ರಾಯರಾದ,

**ವಿದ್ವಚ್ಛೇಖರಃ** = ಪಂಡಿತೋತ್ತಮರಾದ,

**ತಾಪಸಾಗ್ರಣೀಃ** = ಮುನಿಶ್ರೇಷ್ಠರಾದ,

**ಮಧ್ವಕೇಲೀಶುಕಃ** = ಶ್ರೀಮಧ್ವಾಚಾರ್ಯರಿಗೆ ವಿನೋದದ ಗಿಳಿಯಂತಿರುವ,

**ವ್ಯಾಸಪದಾಶ್ರಯಃ** = (ಶ್ರೀವೇದವ್ಯಾಸರ ಪಾದಾವಲಂಬಿಗಳಾದ) ಶ್ರೀವ್ಯಾಸತೀರ್ಥರು ಎಂಬ ಹೆಸರಿಗೆ ಆಶ್ರಯರಾದ,

**ಶಿಷ್ಯಃ** = ಶಿಷ್ಯರು,

**ಅಭೂತ್** = ಇದ್ದರು.

**ತಾತ್ಪರ್ಯ**— ಶ್ರೀವಿಷ್ಣುತೀರ್ಥರಿಗೆ ಶ್ರೀವ್ಯಾಸತೀರ್ಥರು (ಬಾದರಾಯಣತೀರ್ಥರು) ಎಂಬ ಮತ್ತೊಬ್ಬ ಶಿಷ್ಯರೂ ಇದ್ದರು. ಅವರು ಪದ್ಮಬಂಧಾದಿ ಕವಿತೆಗಳನ್ನು ಮಾಡುವ ಕವಿಶ್ರೇಷ್ಠರಿಗೂ ಅಗ್ರೇಸರರಾಗಿದ್ದರು. ಅವರು ತಪಸ್ವಿಗಳಲ್ಲಿ ಅಗ್ರಗಣ್ಯರು. ಶ್ರೀಮಧ್ವಾಚಾರ್ಯರ ವಿನೋದದ ಆಟಕ್ಕೆ ಗಿಳಿಯಂತಿದ್ದರು. ಸಂಸಾರಿಗಳು ತಮ್ಮ ಮೊಮ್ಮಗನೊಡನೆ ವಿನೋದಮಾಡುವಂತೆ ಶ್ರೀಮಧ್ವಾಚಾರ್ಯರು ತಮ್ಮ ಪ್ರಶಿಷ್ಯರಾದ ಶ್ರೀವ್ಯಾಸತೀರ್ಥರ ಗಿಣಿಯ ಮಾತಿನಂತೆ ಮಧುರ-ವಾದ ಮಾತನ್ನು ಕೇಳಿ ವಿನೋದಪಡುತ್ತಿದ್ದರು. ಇದರಿಂದ ಶ್ರೀವ್ಯಾಸತೀರ್ಥರು ತಮ್ಮ ಬುದ್ಧಿ ಚಮತ್ಕಾರ ಸರಸ ಸಂಭಾಷಣಾದಿಗಳಿಂದ ಆಚಾರ್ಯರ ಮನಸ್ಸನ್ನು ಒಲಿಸುತ್ತಿದ್ದರೆಂದು ಸೂಚಿತವಾಗುತ್ತದೆ.

**ವಿಗ್ರಹ**—

**ಕವೀಂದ್ರತಿಲಕಃ**— ಕವೀನಾಂ ಇಂದ್ರಾಃ ಕವೀಂದ್ರಾಃ, ಕವೀಂದ್ರಾಣಾಂ (ತಿಲಕವದಾಚರಿತಃ) ತಿಲಕಃ ಕವೀಂದ್ರತಿಲಕಃ ।

**ವಿದ್ವಚ್ಛೇಖರಃ**— ವಿದುಷಾಂ ಶೇಖರಃ ವಿದ್ವಚ್ಛೇಖರಃ ।

**ತಾಪಸಾಗ್ರಣೀಃ**— ತಾಪಸಾನಾಂ ಅಗ್ರಣೀಃ ತಾಪಸಾಗ್ರಣೀಃ ।

**ಮಧ್ವಕೇಲೀಶುಕಃ**— ಕೇಲ್ಯಾಃ ಶುಕಃ ಕೇಲೀಶುಕಃ, ಮಧ್ವಸ್ಯ ಕೇಲೀಶುಕಃ ಮಧ್ವಕೇಲೀಶುಕಃ ।

**ವ್ಯಾಸಪದಾಶ್ರಯೇ**— ವ್ಯಾಸಸ್ಯ ಪದಂ ವ್ಯಾಸಪದಂ, ವ್ಯಾಸಪದಸ್ಯ ಆಶ್ರಯಃ ವ್ಯಾಸಪದಾಶ್ರಯಃ, ವ್ಯಾಸಪದೇ ಆಶ್ರಯಃ ಯಸ್ಯ ಸಃ, ವ್ಯಾಸ ಇತಿ ಪದಂ ವ್ಯಾಸಪದಂ, ತಸ್ಯ ಆಶ್ರಯಃ ।

**ಕ್ರಿಯಾಪದ**— ಅಭೂತ್ ಭೂಸತ್ತಾಯಾಂ ಲುಙ್ ।

**ಪ್ರಯೋಗ**— ಅಸ್ಯ ಕವೀಂದ್ರತಿಲಕೇನ ವಿದ್ವಚ್ಛೇಖರೇಣ ತಾಪಸಾಗ್ರಣ್ಯಾ ಮಧ್ವಕೇಲೀಶುಕೇನ ವ್ಯಾಸಪದಾಶ್ರಯೇಣ ಶಿಷ್ಯೇಣ ಅಭಾವಿ ।

★ ★ ★

**ಅವತಾರಿಕಾ—** ಈ ವಿಷ್ಣುತೀರ್ಥರ ಅನುಗ್ರಹದಿಂದಲೇ ಈ ಬಾದರಾಯಣತೀರ್ಥರಲ್ಲಿ ಅಂತಹ ಮಹತ್ತ್ವವು ಬಂದಿತು.

**ಅಸೌ ದಾಸ್ಯಂ ಧ್ರುವಂ ಯಾತಂ (ಯಾಂತಂ) ಮಹಾಂತಂ ಮಹತಾಮಪಿ ।**
**ವ್ಯಧಾದನುಗ್ರಹಂ ಕುರ್ವನ್ ಸಾಮರ್ಥ್ಯೈಃ ಕೌತುಕಂ ನೃಣಾಮ್ ॥ 118 ॥**

**ಪದಚ್ಛೇದ—** ಅಸೌ, ದಾಸ್ಯಂ, ಧ್ರುವಂ, ಯಾತಂ (ಯಾಂತಂ), ಮಹಾಂತಂ, ಮಹತಾಂ, ಅಪಿ, ವ್ಯಧಾತ್, ಅನುಗ್ರಹಂ, ಕುರ್ವನ್, ಸಾಮರ್ಥ್ಯೈಃ, ಕೌತುಕಂ, ನೃಣಾಂ ।

**ಅನ್ವಯ—** ಸಾಮರ್ಥ್ಯೈಃ, ನೃಣಾಂ, ಕೌತುಕಂ, ಕುರ್ವನ್, ಅನುಗ್ರಹಂ, ಕುರ್ವನ್, ಅಸೌ, ಧ್ರುವಂ, ದಾಸ್ಯಂ, ಯಾತಂ (ಯಾಂತಂ), (ತಂ) ಮಹತಾಮಪಿ, ಮಹಾಂತಂ, ವ್ಯಧಾತ್ ।

**ಅನ್ವಯಾರ್ಥ—**

**ಸಾಮರ್ಥ್ಯೈಃ** = ತಮ್ಮ ಶಕ್ತಿಗಳಿಂದ,
**ನೃಣಾಂ** = ಮನುಷ್ಯರಿಗೆ,
**ಕೌತುಕಂ** = ಆಶ್ಚರ್ಯವನ್ನು,
**ಕುರ್ವನ್** = ಮಾಡುತ್ತಾ,
**ಅಸೌ** = ಈ ವಿಷ್ಣುತೀರ್ಥರು,
**ಅನುಗ್ರಹಂ ಕುರ್ವನ್** = ಅನುಗ್ರಹವನ್ನು ಮಾಡುವವರಾಗಿ,
**ಧ್ರುವಂ** = ನಿಜವಾಗಿಯೂ,
**ದಾಸ್ಯಂ ಯಾಂತಂ (ಯಾತಂ)** = ದಾಸ್ಯವನ್ನು ಹೊಂದಿರುವ,
(ತಂ = ಆ ಬಾದರಾಯಣತೀರ್ಥರನ್ನು)
**ಮಹತಾಂ ಅಪಿ** = ಮಹಾತ್ಮರುಗಳಲ್ಲಿಯೂ,
**ಮಹಾಂತಂ** = ಅತ್ಯುತ್ತಮರನ್ನಾಗಿ,
**ವ್ಯಧಾತ್** = ಮಾಡಿದರು.

ವಿಗ್ರಹ—

**ದಾಸ್ಯಂ—** ದಾಸಸ್ಯ ಭಾವಃ ದಾಸ್ಯಂ, ತತ್ ।
**ಸಾಮರ್ಥ್ಯೈಃ—** ಸಮರ್ಥಾನಾಂ ಭಾವಾಃ ಸಾಮರ್ಥ್ಯಾನಿ, ತ್ಯೈಃ ।

**ಕ್ರಿಯಾಪದ— ವ್ಯಧಾತ್** - ವಿ + ಅಧಾತ್ ಅಧಾತಾಂ ಅಧುಃ, ಇತ್ಯಾದಿ ವಿ ಉಪಸರ್ಗ, (ಡು) ಧಾ ಞ್ ಧಾರಣ-ಪೋಷಣಯೋಃ, ಅನಿಟ್ ಪರಸ್ಮೈಪದಿ, ಭೂತೇ ಲುಙ್ ಪ್ರಥಮಪುರುಷ ಏಕವಚನ ।

**ಪ್ರಯೋಗ—** ಸಾಮರ್ಥ್ಯೈಃ ನೃಣಾಂ ಕೌತುಕಂ ಕುರ್ವತಾ, ಅಮುನಾ ಅನುಗ್ರಹಂ ಕುರ್ವತಾ (ಸತಾ) ಧ್ರುವಂ ದಾಸ್ಯಂ ಯಾನ್ (ಯಾತಃ) ಸಃ ಮಹತಾಮಪಿ ಮಹಾನ್ ವ್ಯಧಾಯಿ (ಕರ್ಮಣಿ) ।

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರು ಕುಮಾರಪರ್ವತವನ್ನು ಕುರಿತು ಅಂತಿಮವಾಗಿ ಮಹಾಪ್ರಯಾಣವನ್ನು ಮಾಡಿದರು.

**ಆರುರೋಹ ದುರಾರೋಹಂ ಸ ಪರ್ರೈಃ ಪ್ರೀತಿಕೃದ್ಧರೇಃ ।**
**ಮಹಾಂತಂ ಮಹಿಮಾನಂ ಚ ಮಹೀಧ್ರಂ ಚ ಗುಹಪ್ರಿಯಮ್ ॥ 119 ॥**

**ಪದಚ್ಛೇದ—** ಆರುರೋಹ, ದುರಾರೋಹಂ, ಸಃ, ಪರ್ರೈಃ, ಪ್ರೀತಿಕೃತ್, ಹರೇಃ, ಮಹಾಂತಂ, ಮಹಿಮಾನಂ, ಚ, ಮಹೀಧ್ರಂ, ಚ, ಗುಹಪ್ರಿಯಂ ।

**ಅನ್ವಯ—** ಹರೇಃ, ಪ್ರೀತಿಕೃತ್, ಸಃ, ಪರ್ರೈಃ, ದುರಾರೋಹಂ, ಮಹಾಂತಂ, ಮಹಿಮಾನಂ, ಚ, ಗುಹಪ್ರಿಯಂ, ಮಹೀಧ್ರಂ, ಚ, ಆರುರೋಹ ।

**ಅನ್ವಯಾರ್ಥ—**

**ಹರೇಃ** = ಶ್ರೀಮನ್ನಾರಾಯಣನಿಗೆ,
**ಪ್ರೀತಿಕೃತ್** = ಸಂತೋಷವನ್ನುಂಟುಮಾಡುವ,
**ಸಃ** = ಆ ವಿಷ್ಣುತೀರ್ಥರು,
**ಪರ್ರೈಃ** = ಇತರರಿಂದ,
**ದುರಾರೋಹಂ** = ಹೊಂದಲು ಮತ್ತು ಹತ್ತಲು ಅಸಾಧ್ಯವಾದ,
**ಮಹಾಂತಂ** = ಹೆಚ್ಚಾದ, ದೊಡ್ಡದಾದ,
**ಮಹಿಮಾನಂ ಚ** = ಮಹತ್ತ್ವವನ್ನೂ,
**ಗುಹಪ್ರಿಯಂ** = ಸುಬ್ರಹ್ಮಣ್ಯನಿಗೆ ಇಷ್ಟವಾದ,
**ಮಹೀಧ್ರಂ ಚ** = ಕುಮಾರಪರ್ವತವನ್ನು,
**ಆರುರೋಹ** = ಹತ್ತಿದರು.

**ತಾತ್ಪರ್ಯ—** ಶ್ರೀವಿಷ್ಣುತೀರ್ಥರು ಯಾವಾಗಲೂ ಶ್ರೀಮನ್ನಾರಾಯಣನಿಗೆ ಪ್ರೀತಿಕರವಾದ ಕಾರ್ಯಗಳನ್ನು ಮಾಡುತ್ತಿದ್ದರು. ಶ್ರೀಮದಾನಂದತೀರ್ಥರು ತೋರಿಸಿದ ದಾರಿಯಲ್ಲಿಯೇ ನಡೆದ ಅವರು ಇತರರಿಂದ ಹೊಂದಲು ಅಸಾಧ್ಯವಾದ ಬಹಳ ಹೆಚ್ಚಾದ ಮಹಿಮೆಯನ್ನು ಹೊಂದಿದರು. ಬಹಳ ದೊಡ್ಡ ಮಹಾತ್ಮರೆಂದು ಪ್ರಸಿದ್ಧರಾದರು. ಹಾಗೆಯೇ ಮುಂದೆ ಎಲ್ಲಾ ಮನುಷ್ಯರ ಕಣ್ಣಿಗೆ ಕಾಣುವಂತೆ ಸಂಚಾರವನ್ನು ಕೊನೆಗೊಳಿಸುತ್ತಾ ಇತರರಿಂದ ಏರಲು ಅಸಾಧ್ಯವಾದ ಬಹಳ ಎತ್ತರವಾದ ಹಾಗೂ ಸುಬ್ರಹ್ಮಣ್ಯನಿಗೆ ಪ್ರಿಯವಾದ ಕುಮಾರಪರ್ವತವನ್ನು ಹತ್ತಿದರು. ಶ್ರೀವಿಷ್ಣುತೀರ್ಥರು ಹರಿಗುರುಗಳ ಅನುಗ್ರಹದಿಂದ ಮಹಾಮಹಿಮಶಾಲಿಗಳಾಗಿ ತಪಸ್ಸು ಮಾಡುವುದಕ್ಕಾಗಿ ಕುಮಾರ-ಪರ್ವತದ ಶಿಖರವನ್ನೇರಿದರು ಎಂದು ಭಾವ. (ಪುನಃ ಹಿಂದಿರುಗಲಿಲ್ಲ, ಅಲ್ಲಿಯೇ ಚಿರಂಜೀವಿಗಳಾಗಿ ಈಗಲೂ ತಪಸ್ಸುಮಾಡುತ್ತಾ ಇದ್ದಾರೆಂದು ಐತಿಹ್ಯವಿದೆ).

**ವಿಗ್ರಹ—**

**ದುರಾರೋಹಂ—** ದುಃಖೇನ ಆರೋಢುಂ ಶಕ್ಯಃ ದುರಾರೋಹಃ, ತಂ ।
**ಪ್ರೀತಿಕೃತ್—** ಪ್ರೀತಂ ಕರೋತೀತಿ ಪ್ರೀತಿಕೃತ್ ।
**ಮಹೀಧ್ರಂ—** ಮಹೀಂ ಧರತೀತಿ ಮಹೀಧ್ರಃ, ತಂ ।
**ಗುಹಪ್ರಿಯಂ—** ಗುಹಸ್ಯ ಪ್ರಿಯಃ ಗುಹಪ್ರಿಯಃ, ತಂ ಗುಹಪ್ರಿಯಂ ।

**ಕ್ರಿಯಾಪದ—** **ಆರುರೋಹ** - ಆ+ರುರೋಹ, ರುರುಹತುಃ ರುರುಹುಃ, ರುರೋಹಿಥ ರುರುಹಥುಃ ರುರುಹ, ರುರೋಹ ರುರುಹಿವ ರುರುಹಿಮ । ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ ಪರಸ್ಮೈಪದಿ, ಅನಿಟ್. ಆಙ್ ಉಪಸರ್ಗ, ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

**ಪ್ರಯೋಗ—** ಹರೇಃ ಪ್ರೀತಿಕೃತಾ ತೇನ ಪರ್ಯೈಃ ದುರಾರೋಹಃ ಮಹಾನ್ ಮಹಿಮಾ ಚ ಗುಹಪ್ರಿಯಃ ಮಹೀಧ್ರಶ್ಚ ಆರುರುಹೇ ।

★ ★ ★

**ಅವತಾರಿಕಾ—** ಇನ್ನು ಮೇಲೆ ಎಂಟು ಶ್ಲೋಕಗಳಿಂದ ಶ್ರೀಪದ್ಮನಾಭತೀರ್ಥರ ಮಹಿಮೆಯನ್ನು ವರ್ಣಿಸುತ್ತಾ, ಗೋದಾವರೀ ತೀರದಿಂದ ಬಂದ ಶ್ರೀಪದ್ಮನಾಭತೀರ್ಥರೆಂಬುವರು ಆಚಾರ್ಯರ ಮತ್ತೊಬ್ಬ ಅತಿಪ್ರಧಾನ ಶಿಷ್ಯರೆಂದು ಹೇಳುತ್ತಾರೆ.

**ಆಕೃಷ್ಟೋಽಸ್ಯ ಗುಣೈರ್ವ್ಯಾಪ್ತೈರ್ಯೋ ಗೋದಾಯಾ ಉಪಾಯಯೌ ।**
**ಸ ಪದ್ಮನಾಭತೀರ್ಥಾಖ್ಯಃ ಶಿಷ್ಯೋಽನ್ಯೋಽಭೂತ್ ಸುಚೇತಸಃ ॥ 120 ॥**

**ಪದಚ್ಛೇದ—** ಆಕೃಷ್ಟಃ, ಅಸ್ಯ, ಗುಣೈಃ, ವ್ಯಾಪ್ತೈಃ, ಯಃ, ಗೋದಾಯಾಃ, ಉಪಾಯಯೌ, ಸಃ, ಪದ್ಮನಾಭತೀರ್ಥಾಖ್ಯಃ, ಶಿಷ್ಯಃ, ಅನ್ಯಃ, ಅಭೂತ್, ಸುಚೇತಸಃ ।

**ಅನ್ವಯ—** ವ್ಯಾಪ್ತೈಃ, ಅಸ್ಯ, ಗುಣೈಃ, ಆಕೃಷ್ಟಃ, ಯಃ, ಗೋದಾಯಾಃ, ಉಪಾಯಯೌ, ಸುಚೇತಸಃ, ಸಃ, ಪದ್ಮನಾಭತೀರ್ಥಾಖ್ಯಃ, ಅನ್ಯಃ, ಶಿಷ್ಯಃ, ಅಭೂತ್ ।

**ಅನ್ವಯಾರ್ಥ—**

**ವ್ಯಾಪ್ತೈಃ** = ಭೂಮಂಡಲದಲ್ಲಿ ಪ್ರಸಾರಿತವಾದ,
**ಅಸ್ಯ** = ಈ ಶ್ರೀಮಧ್ವಾಚಾರ್ಯರ,
**ಗುಣೈಃ** = ಪಾಂಡಿತ್ಯ, ತತ್ತ್ವಜ್ಞಾನ, ಹರಿಭಕ್ತಿ, ಶಿಷ್ಯವಾತ್ಸಲ್ಯಾದಿ ಗುಣಗಳಿಂದ,
**ಆಕೃಷ್ಟಃ** = ಸೆಳೆಯಲ್ಪಟ್ಟ
**ಯಃ** = ಯಾವ ಪಂಡಿತೋತ್ತಮರು,
**ಗೋದಾಯಾಃ** = ಗೋದಾವರೀತೀರದಿಂದ,
**ಉಪಾಯಯೌ** = ಬಂದರೋ,
**ಸುಚೇತಸಃ** = ಶ್ರೀಪೂರ್ಣಪ್ರಜ್ಞರಿಗೆ,
**ಸಃ** = ಅಂತಹ,
**ಪದ್ಮನಾಭತೀರ್ಥಾಖ್ಯಃ** = ಶ್ರೀಪದ್ಮನಾಭತೀರ್ಥರೆಂಬ,
**ಅನ್ಯಃ** = ಶ್ರೀವಿಷ್ಣುತೀರ್ಥರಿಗಿಂತ ಬೇರೆಯಾದ,
**ಶಿಷ್ಯಃ** = ಶಿಷ್ಯರು,
**ಅಭೂತ್** = ಇದ್ದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ವಿಶ್ವತೋಮುಖವಾದ ಪಾಂಡಿತ್ಯ, ತತ್ತ್ವಜ್ಞಾನ, ಹರಿಭಕ್ತಿ, ಶಿಷ್ಯವಾತ್ಸಲ್ಯ ಮುಂತಾದ ಗುಣಗಳಿಂದ ಸೆಳೆಯಲ್ಪಟ್ಟು ಅವರ ಅಧೀನರಾದ ಪಂಡಿತಶ್ರೇಷ್ಠರಾದ ಶ್ರೀಪದ್ಮನಾಭತೀರ್ಥರೆಂಬ ಮತ್ತೊಬ್ಬ

ಶಿಷ್ಯರು ಶ್ರೀಮಧ್ವಾಚಾರ್ಯರಿಗೆ ಇದ್ದರು. ಗೋದಾವರೀತೀರದ ಅವರು ಆಚಾರ್ಯರು ಇದ್ದಲ್ಲಿಗೆ (ಉಡುಪಿಗೆ) ಬಂದರು. (ಹಿಂದೆ ಆಚಾರ್ಯರು ಬದರಿಕಾಶ್ರಮದಿಂದ ಹಿಂತಿರುಗುವಾಗ ಗೋದಾವರೀತೀರದಲ್ಲಿ ಅವರನ್ನು ಕಂಡು ಚರ್ಚಿಸಿ ಅವರ ಶಿಷ್ಯರಾಗಿದ್ದ ಶೋಭನಭಟ್ಟರೆಂಬುವರೇ ಈ ಪದ್ಮನಾಭತೀರ್ಥರು. ಆಚಾರ್ಯರ ಶಿಷ್ಯರಾಗಿ ಸಂನ್ಯಾಸಿಗಳಾದ ಮೇಲೆ ಶ್ರೀಪದ್ಮನಾಭತೀರ್ಥರೆಂದು ಪ್ರಸಿದ್ಧರಾದರು).

**ವಿಗ್ರಹ—**

**ಪದ್ಮನಾಭತೀರ್ಥಾಖ್ಯಃ—** ಪದ್ಮನಾಭತೀರ್ಥ ಇತಿ ಆಖ್ಯಾ ಯಸ್ಯ ಸಃ ಪದ್ಮನಾಭತೀರ್ಥಾಖ್ಯಃ ।

**ಸುಚೇತಸಃ—** ಶೋಭನಂ ಚೇತಃ ಯಸ್ಯ ಸಃ ಸುಚೇತಾಃ, ತಸ್ಯ ಸುಚೇತಸಃ ।

**ಕ್ರಿಯಾಪದ— ಉಪಾಯಯೌ** - ಉಪ + ಆ + ಯಯೌ ಯಯತುಃ ಯಯುಃ ಇತ್ಯಾದಿ ಉಪ, ಆಙ್ ಎರಡು ಉಪಸರ್ಗಗಳು, ಯಾವ ಪ್ರಾಪಣೇ ಧಾತು ಲಿಟ್ ಪ್ರಥಮಪುರುಷ ಏಕವಚನ । **ಅಭೂತ್**, ಭೂ ಸತ್ತಾಯಾಂ ಲುಙ್ ।

**ಪ್ರಯೋಗ—** ವ್ಯಾಪ್ತೈಃ ಅಸ್ಯ ಗುಣೈಃ ಆಕೃಷ್ಟೇನ ಯೇನ ಗೋದಾಯಾಃ ಉಪಾಯಯೇ, ಸುಚೇತಸಃ ತೇನ ಪದ್ಮನಾಭತೀರ್ಥಾಖ್ಯೇನ ಅನ್ಯೇನ ಶಿಷ್ಯೇಣ ಅಭಾವಿ ।

★ ★ ★

**ಅವತಾರಿಕಾ—** ಆ ಪದ್ಮನಾಭತೀರ್ಥರ ಅತಿಶಯವಾದ ಗುಣಗಳನ್ನು ವರ್ಣಿಸುತ್ತಾರೆ.

**ಶ್ರುತ್ಯಾ ಮತ್ಯಾ ಸದಾ ಭಕ್ತ್ಯಾ ವಿರಕ್ತ್ಯಾ ನಿತ್ಯಸೇವಯಾ ।**
**ತಸ್ಮೈ (ಅಸ್ಮೈ) ಪ್ರಸನ್ನಃ ಪ್ರಾಜ್ಞೇಕ್ಷಃ ಸದ್ಯೋ ವಿದ್ಯಾಂ ದದೌ ಶುಭಾಮ್ ॥ 121 ॥**

**ಪದಚ್ಛೇದ—** ಶ್ರುತ್ಯಾ, ಮತ್ಯಾ, ಸದಾ, ಭಕ್ತ್ಯಾ, ವಿರಕ್ತ್ಯಾ, ನಿತ್ಯಸೇವಯಾ, ತಸ್ಮೈ(ಅಸ್ಮೈ), ಪ್ರಸನ್ನಃ, ಪ್ರಾಜ್ಞೇಕ್ಷಃ, ಸದ್ಯಃ, ವಿದ್ಯಾಂ, ದದೌ, ಶುಭಾಂ ।

**ಅನ್ವಯ—** ಶ್ರುತ್ಯಾ, ಮತ್ಯಾ, ಸದಾ, ಭಕ್ತ್ಯಾ, ವಿರಕ್ತ್ಯಾ, ನಿತ್ಯಸೇವಯಾ, ಪ್ರಸನ್ನಃ, ಪ್ರಾಜ್ಞೇಕ್ಷಃ, ತಸ್ಮೈ(ಅಸ್ಮೈ), ಶುಭಾಂ, ವಿದ್ಯಾಂ, ದದೌ ।

**ಅನ್ವಯಾರ್ಥ—**

**ಶ್ರುತ್ಯಾ** = ವೇದಾಂತಶಾಸ್ತ್ರವನ್ನು ಯಾವಾಗಲೂ ಕೇಳುವುದರಿಂದ,

**ಮತ್ಯಾ** = ಯಾವಾಗಲೂ ವೇದಾಂತಶಾಸ್ತ್ರವನ್ನು ಯುಕ್ತಿಗಳಿಂದ ಸಹಿತವಾಗಿ ಚಿಂತಿಸುತ್ತಿರುವುದರಿಂದಲೂ,

**ಸದಾ** = ಯಾವಾಗಲೂ ಮಾಡುತ್ತಿರುವ,

**ಭಕ್ತ್ಯಾ** = ಗುರು ಮತ್ತು ಹರಿಯಲ್ಲಿರುವ ಭಕ್ತಿಯಿಂದಲೂ,

**ವಿರಕ್ತ್ಯಾ** = ವಿಷಯವೈರಾಗ್ಯದಿಂದಲೂ,

**ನಿತ್ಯಸೇವಯಾ** = ಯಾವಾಗಲೂ ಸೇವೆ ಮಾಡುವುದರಿಂದಲೂ,

**ಪ್ರಸನ್ನಃ** = ಸಂತುಷ್ಟರಾದ,

**ಪ್ರಾಜ್ಞೇಕ್ಷಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,

**ತಸ್ಮೈ**= ಆ ಪದ್ಮನಾಭತೀರ್ಥರಿಗೆ, (**ಅಸ್ಮೈ** = ಈ ಪದ್ಮನಾಭತೀರ್ಥರಿಗೆ)

**ಸದ್ಯಃ** = ಕೂಡಲೇ,

**ಶುಭಾಂ** = ಮಂಗಳಕರವಾದ,

**ವಿದ್ಯಾಂ** = ವೇದಾಂತವಿದ್ಯೆಯನ್ನು

**ದದೌ** = ಉಪದೇಶಮಾಡಿದರು.

**ತಾತ್ಪರ್ಯ—** ಆ ಪದ್ಮನಾಭತೀರ್ಥರು ನಿರಂತರವಾಗಿ ವೇದಾಂತಶಾಸ್ತ್ರವನ್ನು ಯುಕ್ತಿಗಳಿಂದ ಸಹಿತವಾಗಿ ಕೇಳುತ್ತಿದ್ದರು. ಯಾವಾಗಲೂ ಯುಕ್ತಿಸಹಿತವಾಗಿ ವೇದಾಂತಶಾಸ್ತ್ರವನ್ನು ಮನನಮಾಡುತ್ತಿದ್ದರು. ಯಾವಾಗಲೂ ಗುರು-ಗಳಲ್ಲಿಯೂ ಹರಿಯಲ್ಲಿಯೂ ಭಕ್ತಿಯನ್ನು ಮಾಡುತ್ತಿದ್ದರು. ಪ್ರಾಪಂಚಿಕ ವಿಷಯಗಳಲ್ಲಿ ದೃಢವಾದ ವೈರಾಗ್ಯವನ್ನು ತಾಳಿದ್ದರು. ಯಾವಾಗಲೂ ಗುರುಗಳನ್ನು ಸೇವಿಸುತ್ತಿದ್ದರು. ಅವರ ಇಂತಹ ಗುಣಗಳಿಂದ ಸಂತುಷ್ಟರಾದ ಶ್ರೀಪೂರ್ಣ-ಪ್ರಜ್ಞರು ಅವರಿಗೆ ಭಗವಂತನ ಅಪರೋಕ್ಷವನ್ನೇ ಉಂಟುಮಾಡುವ ರಹಸ್ಯದ ಮಂತ್ರಾತ್ಮಕವಾದ ಅಧ್ಯಾತ್ಮ ವಿದ್ಯೆಯನ್ನು ಉಪದೇಶಮಾಡಿದರು. ನಿರಂತರ ಶ್ರವಣ-ಮನನ, ಹರಿಗುರು ಭಕ್ತಿ-ವೈರಾಗ್ಯ, ಗುರುಸೇವಾ ಇವು ಉತ್ತಮಾಧಿಕಾರಿಯ ಲಕ್ಷಣಗಳು. ಇವೆಲ್ಲವೂ ಶ್ರೀಪದ್ಮನಾಭತೀರ್ಥರಲ್ಲಿದ್ದವು. ಆದುದರಿಂದ ಶ್ರೀಪೂರ್ಣಪ್ರಜ್ಞಾಚಾರ್ಯರು ಅವರಿಗೆ ಕೂಡಲೇ ಸರ್ವಶ್ರೇಷ್ಠವಾದ, ರಹಸ್ಯವಾದ ತತ್ತ್ವೋಪದೇಶವನ್ನು ಮಾಡಿದರು ಎಂದು ಭಾವವು.

**ವಿಗ್ರಹ ಮತ್ತು ಕೋಶ—**

**ನಿತ್ಯಸೇವಯಾ—** ನಿತ್ಯಾ ಚ ಸಾ ಸೇವಾ ಚ ನಿತ್ಯಸೇವಾ, ತಯಾ ।

**ಪ್ರಾಜ್ಯೇಕ್ಷಃ—** ಪ್ರಾಜ್ಯಾ ಈಕ್ಷಾ ಯಸ್ಯ ಸಃ ಪ್ರಾಜ್ಯೇಕ್ಷಃ । ಪ್ರಾಜ್ಯ = ಬಹಳ, ಪೂರ್ಣ, ಈಕ್ಷಾ = ಜ್ಞಾನ, 'ಪ್ರಭೂತಂ ಪ್ರಚುರಂ ಪ್ರಾಜ್ಯಂ ಅದಭ್ರಂ ಬಹುಲಂ ಬಹು' ಅಮರ ।

**ಕ್ರಿಯಾಪದ—** ದದೌ - ದದೌ ದದತುಃ ದದುಃ ಇತ್ಯಾದಿ (ಡು)ದಾ ಞ್ ದಾನೇ ಲಿಟ್ ಪರ. ಪ್ರಥಮಪುರುಷ ಏಕವಚನ ।

**ಪ್ರಯೋಗ—** ಶ್ರುತ್ಯಾ ಮತ್ಯಾ ಸದಾ ಭಕ್ತ್ಯಾ ವಿರಕ್ತ್ಯಾ ನಿತ್ಯಸೇವಯಾ ತಸ್ಮೈ ಪ್ರಸನ್ನೇನ ಪ್ರಾಜ್ಯೇಕ್ಷೇಣ ಸದ್ಯೋ ವಿದ್ಯಾ ದದೇ ಶುಭಾ (ವಿದ್ಯೆಯು ಕೊಡಲ್ಪಟ್ಟಿತು ಕರ್ಮಣಿ) ।

★ ★ ★

**ಅವತಾರಿಕಾ—** ಆ ಪದ್ಮನಾಭತೀರ್ಥರ ಅಖಂಡ ಪಾಂಡಿತ್ಯವನ್ನು ವರ್ಣಿಸುತ್ತಾರೆ.

**ವೇದಾಂತಾಬ್ಧಿಂ ನ ಯೋ ಜಾತು ಜಹೌ ವಿದ್ವತ್ತಿಮಿಂಗಿಲಃ ।**
**ಯುಕ್ತಿಪ್ರವಾಹಸಂರಂಭಾತ್ ಪರಶಾಸ್ತ್ರನದೀಚರಃ ॥ 122 ॥**

**ಪದಚ್ಛೇದ—** ವೇದಾಂತಾಬ್ಧಿಂ, ನ, ಯಃ, ಜಾತು, ಜಹೌ, ವಿದ್ವತ್ತಿಮಿಂಗಿಲಃ, ಯುಕ್ತಿಪ್ರವಾಹಸಂರಂಭಾತ್, ಪರಶಾಸ್ತ್ರನದೀಚರಃ ।

**ಅನ್ವಯ—** ಯುಕ್ತಿಪ್ರವಾಹಸಂರಂಭಾತ್, ಪರಶಾಸ್ತ್ರನದೀಚರಃ, ಯಃ, ವಿದ್ವತ್ತಿಮಿಂಗಿಲಃ, ವೇದಾಂತಾಬ್ಧಿಂ, ಜಾತು, ನ, ಜಹೌ ।

**ಅನ್ವಯಾರ್ಥ—**

**ಯುಕ್ತಿಪ್ರವಾಹಸಂರಂಭಾತ್** = ವೈಶೇಷಿಕಾದಿಶಾಸ್ತ್ರಕಾರರ ಯುಕ್ತಿಗಳೆಂಬ ಪ್ರವಾಹದ ಕೋಪದಿಂದ (ಸಂಭ್ರಮದಿಂದ),

**ಪರಶಾಸ್ತ್ರನದೀಚರಃ** = ಇತರರಾದ ವೈಶೇಷಿಕರ ಶಾಸ್ತ್ರವೆಂಬ ನದಿಗಳಲ್ಲಿ ಸಂಚರಿಸುವ,

**ಯಃ** = ಯಾವ ಪದ್ಮನಾಭತೀರ್ಥರೆಂಬ,

**ವಿದ್ವತ್ತಿಮಿಂಗಿಲಃ** = ವಿದ್ವಾಂಸರೆಂಬ ತಿಮಿಂಗಿಲ ಮೀನು,

**ವೇದಾಂತಾಬ್ಧಿಂ** = ವೇದಾಂತಶಾಸ್ತ್ರವೆಂಬ ಸಮುದ್ರವನ್ನು,
**ಜಾತು** = ಎಂದೂ (ಒಂದು ಸಲವೂ),
**ನ ಜಹೌ** = ತ್ಯಜಿಸಲಿಲ್ಲ.

**ತಾತ್ಪರ್ಯ**— ತಿಮಿಂಗಿಲವೆಂಬ ದೊಡ್ಡ ಮೀನು ಯಾವಾಗಲೂ ಸಮುದ್ರದಲ್ಲಿಯೇ ಸಂಚರಿಸುತ್ತದೆ. ಆದರೆ ನದೀಪ್ರವಾಹದ ವೇಗವು ಹೆಚ್ಚಿದಾಗ, ಅದು ನದಿಯಲ್ಲಿಯೂ ತುಂಬಾ ನೀರಿರುವುದರಿಂದ, ಒಂದು ರೀತಿಯ ಉತ್ಸಾಹ ಹುಮ್ಮಸ್ಸುಗಳಿಂದಲೂ ಮತ್ತು ನಾನು ವಾಸಮಾಡುವ ಸಮುದ್ರದಂತೆ ಈ ನದಿಯಲ್ಲಿ ಇದೇಕೆ ಮಹಾಪೂರ? ಇದರ ಸೊಕ್ಕನ್ನು ಅಡಗಿಸಬೇಕು ಎಂಬ ಸಿಟ್ಟಿನಿಂದಲೂ ನದೀಪ್ರವಾಹದಲ್ಲಿ ಸಂಚರಿಸುತ್ತಾ ನದಿಯ ಮೇಲ್ಗಡೆ ಬರುತ್ತದೆ. ಪುನಃ ಸಮುದ್ರವನ್ನೇ ಸೇರುತ್ತದೆ. ಅದರಂತೆ ಶ್ರೀಪದ್ಮನಾಭತೀರ್ಥರು ವೈಶೇಷಿಕಾದಿಶಾಸ್ತ್ರಗಳ ಯುಕ್ತಿಗಳ ರಭಸವನ್ನು ನೋಡಿ ಅವುಗಳ ಮೇಲಿನ ಸಿಟ್ಟಿನಿಂದ ಅವುಗಳನ್ನು ನಿರಾಕರಿಸಲು ಇತರ ಶಾಸ್ತ್ರಗಳಲ್ಲಿ ಬಹಳ ವೇಗದಿಂದಲೂ ಉತ್ಸಾಹದಿಂದಲೂ ನುಗ್ಗಿ ಅವುಗಳನ್ನು ಖಂಡಿಸುತ್ತಾ, ಪುನಃ ವೇದಾಂತಶಾಸ್ತ್ರದ ಕಡೆಗೆ ಮರಳುತ್ತಿದ್ದರು. ಅದನ್ನು ಬಿಡದೆ ಅಲ್ಲಿಯೇ ವಿಹರಿಸು-ತ್ತಿದ್ದರು. ವಿದ್ವತ್ತಿಮಿಂಗಿಲರೂ, ವಿದ್ವಾಂಸರಲ್ಲಿ ಅತಿಶ್ರೇಷ್ಠರೂ, ಸಾಮಾನ್ಯ ವಿದ್ವಾಂಸರನ್ನೂ, ಮಧ್ಯಮ, ಉತ್ತಮ ಮತ್ತು ಅತಿಶ್ರೇಷ್ಠ ದರ್ಜೆಯ ವಿದ್ವಾಂಸರನ್ನೂ ನುಂಗಿಹಾಕುವ ಹಾಗೂ ಸೋಲಿಸುವ ಶ್ರೀಪದ್ಮನಾಭತೀರ್ಥರು, ವೈಶೇಷಿಕಾದಿ ಇತರ ಶಾಸ್ತ್ರಕಾರರ ಯುಕ್ತಿಗಳೆಂಬ ಪ್ರವಾಹದ ಸಂಭ್ರಮದಿಂದಲೂ, ಆ ಯುಕ್ತಿ ಪ್ರವಾಹಗಳ ಮೇಲಿನ ಕೋಪದಿಂದಲೂ ವೈಶೇಷಿಕಾದಿ ಇತರ ಶಾಸ್ತ್ರಗಳೆಂಬ ನದಿಗಳಲ್ಲಿ ಸಂಚರಿಸುತ್ತಾ, ಅವರ ಯುಕ್ತಿಗಳನ್ನು ಅವರ ಯುಕ್ತಿಗಳಿಂದಲೇ ಖಂಡಿಸುತ್ತಾ ಪುನಃ ವೇದಾಂತಶಾಸ್ತ್ರವೆಂಬ ಸಮುದ್ರಕ್ಕೆ ಹಿಂತಿರುಗಿ, ಆ ವೇದಾಂತಮಹಾಸಮುದ್ರವನ್ನು ಎಂದು ಬಿಡುತ್ತಿರಲಿಲ್ಲ. ಖಂಡಿಸುವಾಗ ಇತರ ಶಾಸ್ತ್ರಗಳ ವಿಚಾರವನ್ನು ಮಾಡಿದರೂ ವೇದಾಂತಶಾಸ್ತ್ರದಲ್ಲಿಯೇ ಆಸಕ್ತರಾಗಿರುತ್ತಿದ್ದರು.

**ವಿಶೇಷಾಂಶ**—

**ತಿಮಿರ್ನಾಮ ಮಹಾಮತ್ಸ್ಯಃ ತದ್ಗಿಲಸ್ತು ತಿಮಿಂಗಿಲಃ ।**
**ತಿಮಿಂಗಿಲಗಿಲೋಽಪ್ಯಸ್ತಿ ತದ್ಗಿಲೋಽಪ್ಯಸ್ತಿ ರಾಘವ ॥**

ತಿಮಿ ಎಂದರೆ ದೊಡ್ಡ ಜಾತಿಯ ಮೀನು. ಅದನ್ನು ನುಂಗುವ ಇನ್ನೂ ದೊಡ್ಡ ಮೀನು ತಿಮಿಂಗಿಲವು ಅದನ್ನು ನುಂಗುವ ಇನ್ನೂ ದೊಡ್ಡ ಮೀನಿದೆ. ಅದು ತಿಮಿಂಗಿಲಗಿಲ. ಈ ತಿಮಿಂಗಿಲಗಿಲವನ್ನು ನುಂಗುವ ಅದಕ್ಕಿಂತಲೂ ದೊಡ್ಡ ಜಾತಿಯ ಮೀನು ತಿಮಿಂಗಿಲಗಿಲಗಿಲವೆಂಬುದೂ ಇದೆ. ಇಲ್ಲಿ ಶ್ರೀಪದ್ಮನಾಭತೀರ್ಥರು ತಿಮಿಂಗಿಲಗಿಲಗಿಲರು. ಆದರೆ ಗಿಲಶ್ಚ ಗಿಲಶ್ಚ ಗಿಲಶ್ಚ ಎಂದು ಸರೂಪ ಶಬ್ದವನ್ನು ಪ್ರಯೋಗ ಮಾಡುವಾಗ ಆರ್ಷವಾಗಿ 'ಸರೂಪಾಣಾಂ ಏಕಶೇಷ ಏಕವಿಭಕ್ತೌ' ಎಂಬ ಸೂತ್ರದ ಛಾಯೆಯಿಂದ ಒಂದೇ ಗಿಲ ಶಬ್ದವು ಉಳಿದಿದೆ ಎಂದೂ ಊಹಿಸಲು ಅವಕಾಶವಿದೆ. ಅಂತೂ ಶ್ರೀಪದ್ಮನಾಭತೀರ್ಥರು ಶ್ರೇಷ್ಠ ಪಂಡಿತರನ್ನು ಸೋಲಿಸುವವರನ್ನು ಸೋಲಿಸುವ ಶ್ರೇಷ್ಠ ವಿದ್ವಾಂಸರನ್ನು ಸೋಲಿಸುವ ಅತ್ಯುನ್ನತ ಮಟ್ಟದ ಶ್ರೀಮದಾನಂದತೀರ್ಥರ ಅಚ್ಚುಮೆಚ್ಚಿನ ಶಿಷ್ಯರು. ಅವರು ಆನಂದತೀರ್ಥರಚಿತವಾದ ದ್ವೈತ-ವೇದಾಂತಶಾಸ್ತ್ರವೆಂಬ ತೀರ್ಥರಾಜ ಸಮುದ್ರದಲ್ಲಿ ವಿಹರಿಸುತ್ತಾ ಇತರ ಶಾಸ್ತ್ರಗಳೆಂಬ ನದೀತೀರ್ಥಗಳು ವಿಜೃಂಭಿಸುತ್ತಿದ್ದಾಗ ಸಿಟ್ಟಿನಿಂದ ಅಲ್ಲಿಗೆ ಹೋಗಿ ಆ ನೀರನ್ನೆಲ್ಲಾ ಕಲಕಿ, ಅಲ್ಲಿಯ ಯುಕ್ತಿಜಲವನ್ನೆಲ್ಲಾ ಪೂತ್ಕರಿಸಿ ಉಗಿದು ಪುನಃ ಆನಂದತೀರ್ಥರ ಸುತೀರ್ಥದಲ್ಲಿಯೇ ಮಿಂದು ಮುಳುಗಿ ವಿಹರಿಸುತ್ತಿದ್ದರು ಎಂಬ ವಿಶೇಷವಾದ ಅಭಿಪ್ರಾಯವು ಈ ಶ್ಲೋಕದಿಂದ ಸೂಚಿತವಾಗುತ್ತಿದೆ.

**ವಿಗ್ರಹ**—

**ವೇದಾಂತಾಬ್ಧಿಂ**— ವೇದಾಂತ ಏವ ಅಬ್ಧಿಃ ವೇದಾಂತಾಬ್ಧಿಃ ತಂ ।

**ವಿದ್ವತ್ತಿಮಿಂಗಿಲಃ**— ವಿದ್ವಾನ್ ಏವ ತಿಮಿಂಗಿಲಃ, ವಿದ್ವತ್ತಿಮಿಂಗಿಲಃ । ತಿಮಿಂಗಿಲ = ದೊಡ್ಡ ಜಾತಿಯ ಮೀನು, ಇದು ದೊಡ್ಡ ಹಡಗುಗಳನ್ನು ತನ್ನ ಬೆನ್ನಿನಿಂದ ಮೇಲಕ್ಕೆತ್ತಿ/ಉರುಳಿಸಬಲ್ಲದು. ದೋಣಿಗಳನ್ನು

ನುಂಗಬಲ್ಲದು. 'ಅಥೋ ಝಷಾಃ । ರೋಹಿತೋ ಮದ್ಗುರಃ ಶಾಲೋ ರಾಜೀವಃ ಶಕಲಸ್ತಿಮಿಃ । ತಿಮಿಂಗಿಲಾದಯಶ್ಚ' ಅಮರ ।

**ಯುಕ್ತಿಪ್ರವಾಹಸಂರಭಾತ್**— ಯುಕ್ತಯ ಏವ ಪ್ರವಾಹಾಃ ಯುಕ್ತಿ ಪ್ರವಾಹಾಃ, (ಯುಕ್ತಿಸಮೂಹಗಳು, ನದೀಪ್ರವಾಹದಂತೆ ಒಂದರ ಮೇಲೆ ಮತ್ತೊಂದಾಗಿ ಬರುವ ಯುಕ್ತಿಗಳು ಎಂದು ಅರ್ಥ) ಯುಕ್ತಿ-ಪ್ರವಾಹೇಷು ಸಂರಂಭಃ ಯುಕ್ತಿಪ್ರವಾಹಸಂರಂಭಃ, ತಸ್ಮಾತ್ । ಸಂರಂಭಃ = ಉತ್ಸಾಹ, ವೇಗ, ಕೋಪ, 'ಸಂರಂಭಃ ಸಂಭ್ರಮೇ ಕೋಪೇ' ಕೋಶ ।

**ಪರಶಾಸ್ತ್ರನದೀಚರಾಃ**— ಪರೇಷಾಂ ಶಾಸ್ತ್ರಾಣಿ ಪರಶಾಸ್ತ್ರಾಣಿ, ಪರಶಾಸ್ತ್ರಾಣ್ಯೇವ ನದ್ಯಃ ಪರಶಾಸ್ತ್ರನದ್ಯಃ, ಪರಶಾಸ್ತ್ರನದೀಷು ಚರತೀತಿ ಪರಶಾಸ್ತ್ರನದೀಚರಃ । (ಈ ಶ್ಲೋಕದಲ್ಲಿ ರೂಪಕಾಲಂಕಾರವಿದೆ. 'ವಿಷಯ್ಯಭೇದತಾದ್ರೂಪ್ಯರಂಜನಂ ವಿಷಯಸ್ಯ ಯತ್ ರೂಪಕಂ' ಎಂದು ಅದರ ಲಕ್ಷಣ).

**ಕ್ರಿಯಾಪದ**— **ಜಹೌ** - ಜಹೌ ಜಹತುಃ ಜಹುಃ, ಜಹಿಥ-ಜಹಾಥ ಜಹಥುಃ ಜಹ, ಜಹೌ ಜಹಿವ ಜಹಿಮ । ಓಹಾಕ್ ತ್ಯಾಗೇ ಜುಹೋತ್ಯಾದಿ ಗಣ (ಮೂರನೇ ಗಣ) ಪರಸ್ಮೈಪದಿ ಅನಿಟ್ ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

**ಪ್ರಯೋಗ**— ಯುಕ್ತಿಪ್ರವಾಹಸಂರಂಭಾತ್ ಯೇನ ಪರಶಾಸ್ತ್ರನದೀಚರೇಣ ವಿದ್ವತ್ತಿಮಿಂಗಿಲೇನ ವೇದಾಂತಾಬ್ಧಿಃ ಜಾತು ನ ಜಹೇ (ಕರ್ಮಣಿ) ।

★ ★ ★

**ಅವತಾರಿಕಾ**— ಶ್ರೀಪದ್ಮನಾಭತೀರ್ಥರು ಮಾಯಾವಾದಿಗಳನ್ನು ಜಯಿಸಿದರು.

**ವ್ಯಾಖ್ಯಾಪ್ರಣಾದಮಾತ್ರೇಣ ವೀರಂಮನ್ಯಾನ್ ಸ್ವಮಂಡಲೇ ।**
**ಮಾಯಾವಿಗ್ರಾಮಸಿಂಹಾನ್ ಯೋ ವಾದಿಸಿಂಹೋ ನಿರಾಕರೋತ್ ॥ 123 ॥**

**ಪದಚ್ಛೇದ**— ವ್ಯಾಖ್ಯಾಪ್ರಣಾದಮಾತ್ರೇಣ, ವೀರಂಮನ್ಯಾನ್, ಸ್ವಮಂಡಲೇ, ಮಾಯಾವಿಗ್ರಾಮಸಿಂಹಾನ್, ಯಃ, ವಾದಿಸಿಂಹಃ, ನಿರಾಕರೋತ್ ।

**ಅನ್ವಯ**— ಯಃ, ವಾದಿಸಿಂಹಃ, ಸ್ವಮಂಡಲೇ, ವೀರಂಮನ್ಯಾನ್, ಮಾಯಾವಿಗ್ರಾಮಸಿಂಹಾನ್, ವ್ಯಾಖ್ಯಾ-ಪ್ರಣಾದಮಾತ್ರೇಣ, ನಿರಾಕರೋತ್ ।

**ಅನ್ವಯಾರ್ಥ**—

**ಯಃ** = ಯಾವ,
**ವಾದಿಸಿಂಹಃ** = ವಾದಿಗಳಾದ ಪದ್ಮನಾಭತೀರ್ಥರೆಂಬ ಸಿಂಹವು,
**ಸ್ವಮಂಡಲೇ** = ತಮ್ಮವರ ಗುಂಪಿನಲ್ಲಿ,
**ವೀರಂಮನ್ಯಾನ್** = ನಾವೇ ವೀರರೆಂದು ತಿಳಿದಿರುವ,
**ಮಾಯಾವಿಗ್ರಾಮಸಿಂಹಾನ್** = ಮಾಯಾವಾದಿಗಳೆಂಬ ನಾಯಿಗಳನ್ನು,
**ವ್ಯಾಖ್ಯಾಪ್ರಣಾದಮಾತ್ರೇಣ** = ಶಾಸ್ತ್ರವ್ಯಾಖ್ಯಾನದ ಕೇವಲ ಗರ್ಜನಧ್ವನಿಯಿಂದಲೇ,
**ನಿರಾಕರೋತ್** = ಜಯಿಸಿದರು.

**ತಾತ್ಪರ್ಯ**— ಶ್ರೀಪದ್ಮನಾಭತೀರ್ಥರೆಂಬ ಸಿಂಹವು ನಾವೇ ವೀರರೆಂದು ತಮ್ಮ ಜಾತಿಯ ಗುಂಪಿನಲ್ಲಿ ಹೆಮ್ಮೆಯಿಂದ ಮೆರೆಯುತ್ತಿರುವ ಮಾಯಾವಾದಿಗಳೆಂಬ ನಾಯಿಗಳನ್ನು ಶಾಸ್ತ್ರವ್ಯಾಖ್ಯಾನವೆಂಬ ಸಿಂಹನಾದ ಮಾತ್ರದಿಂದ ನಿರಾಕರಿಸಿತು.

ಸಿಂಹವು ತಾವೇ ಪರಾಕ್ರಮಿಗಳೆಂದು ತಮ್ಮ ಗುಂಪಿನಲ್ಲಿ ಹಿಗ್ಗುವ ನಾಯಿಗಳನ್ನು ಗರ್ಜನ ಮಾತ್ರದಿಂದ ಜಯಿಸುತ್ತದೆ. ಸಿಂಹದ ಗರ್ಜನೆ ಕೇಳಿದ ಕೂಡಲೇ ನಾಯಿಗಳ ಸದ್ದಡಗುತ್ತದೆ. ಅವುಗಳು ಸದ್ದಿಲ್ಲದೆ ಬಾಲವನ್ನು ಮುದುರಿಕೊಂಡು ಮೂಲೆ ಸೇರುತ್ತವೆ. ಹಾಗೆಯೇ ಶ್ರೀಪದ್ಮನಾಭತೀರ್ಥರು ತಾವೇ ಪಂಡಿತರೆಂದು ತಮ್ಮ ಸಮಾಜದಲ್ಲಿ ಹೊಗಳಿಕೊಳ್ಳುವ ಮಾಯಾವಾದಿಗಳನ್ನು ತಮ್ಮ ವ್ಯಾಖ್ಯಾನಮಾತ್ರದಿಂದ ಜಯಿಸಿದರು ಎಂದು ಭಾವ. ಶ್ರೀಪದ್ಮನಾಭತೀರ್ಥರಿಂದ ಎಲ್ಲಾ ಮಾಯಾವಾದಿಗಳೂ ಹೆದರುತ್ತಿದ್ದರು ಎಂದು ತಾತ್ಪರ್ಯ.

ವಿಗ್ರಹ—

**ವ್ಯಾಖ್ಯಾಪ್ರಣಾದಮಾತ್ರೇಣ—** ವ್ಯಾಖ್ಯಾ ಏವ ಪ್ರಣಾದಃ ವ್ಯಾಖ್ಯಾಪ್ರಣಾದಃ, ವ್ಯಾಖ್ಯಾಪ್ರಣಾದ ಏವ ವ್ಯಾಖ್ಯಾಪ್ರಣಾದಮಾತ್ರಂ, ತೇನ ।

**ವೀರಂಮನ್ಯಾನ್—** ಆತ್ಮಾನಂ ವೀರಾನ್ ಮನ್ಯಂತೇ ಇತಿ ವೀರಂಮನ್ಯಾಃ, ತಾನ್ । 'ಆತ್ಮಮಾನೇ ಖಶ್ ಚ' (3.2.83) ಸ್ವಕರ್ಮಕೇ ಮನನೇ ವರ್ತಮಾನಾತ್ ಮನ್ಯತೇಃ ಸುಪಿ, ಖಶ್ ಸ್ಯಾತ್, ತನ್ನನ್ನು ತಿಳಿಯುವಿಕೆ ಎಂಬ ಅರ್ಥದಲ್ಲಿರುವ ಮನ್ಯಧಾತುವಿಗೆ ಖಶ್ ಪ್ರತ್ಯಯ ಬರುತ್ತದೆ ಎಂಬ ಅರ್ಥದ ಸೂತ್ರದಿಂದ ಖಶ್ ಪ್ರತ್ಯಯ. 'ಅರುರ್ದ್ವಿಷದಜಂತಸ್ಯ ಮುಮ್' (6.2.67) ಅರುಷಃ ದ್ವಿಷತಃ ಅಜಂತಸ್ಯ ಚ ಮುಮಾಗಮಃ ಸ್ಯಾತ್ ಖಿದಂತೇ ಉತ್ತರಪದೇ ನ ತು ಅವ್ಯಯಸ್ಯ. ಅರುಸ್ ಶಬ್ದ ದ್ವಿಷತ್ ಶಬ್ದ ಮತ್ತು ಅಜಂತವಾದ ಶಬ್ದಗಳಿಗೆ, ಖಕಾರ ಇತ್ ಆಗಿ ಉಳ್ಳ ಖಶ್ ಪ್ರತ್ಯಯಾಂತ ಶಬ್ದವು ಪರವಾದಾಗ ಮುಮ್ ಎಂಬ ಆಗಮವು ಬರುತ್ತದೆ ಎಂಬ ಅರ್ಥದ ಸೂತ್ರದಿಂದ 'ಮುಮ್' ('ಮ್') ಆಗಮವು ಬರುತ್ತದೆ. ಅರುಂತುದ, ದ್ವಿಷಂತಪ, ಇದರಂತೆ ವೀರಂಮನ್ಯ ಎಂಬ ರೂಪ ।

**ಸ್ವಮಂಡಲೇ—** ಸ್ವೇಷಾಂ ಮಂಡಲಂ ಸ್ವಮಂಡಲಂ, ತಸ್ಮಿನ್ ।

**ಮಾಯಾವಿಗ್ರಾಮಸಿಂಹಾನ್—** ಮಾಯಾ ಏಷಾಂ ಅಸ್ತೀತಿ ಮಾಯಾವಿನಃ । 'ಅಸ್ಮಾಯಾಮೇಧಾಸ್ರಜೋ ವಿನಿಃ' (5.2.121) ಎಂಬ ಸೂತ್ರದಿಂದ ವಿನಿ (ವಿನ್) ಪ್ರತ್ಯಯ, ಗ್ರಾಮೇ (ಗ್ರಾಮಸ್ಯ ವಾ) ಸಿಂಹಾಃ ಗ್ರಾಮಸಿಂಹಾಃ, ಮಾಯಾವಿನಃ ಏವ ಗ್ರಾಮಸಿಂಹಾಃ ಮಾಯಾವಿಗ್ರಾಮಸಿಂಹಾಃ ತಾನ್ ।

**ವಾದಿಸಿಂಹಃ—** ವಾದೀ ಏವ ಸಿಂಹಃ ವಾದಿಸಿಂಹಃ ।

**ಕ್ರಿಯಾಪದ— ನಿರಾಕರೋತ್** - ನಿರ್+ಆ+ಅಕರೋತ್ ಅಕುರುತಾಂ ಅಕುರ್ವನ್, ಅಕರೋಃ ಅಕುರುತಂ ಅಕುರುತ, ಅಕರವಂ ಅಕುರ್ವ ಅಕುರ್ಮ । (ಡು) ಕೃ ಞ್ ಕರಣೇ ಸಕರ್ಮಕ, ಅನಿಟ್ ಉಭಯಪದಿ, ತನಾದಿ 8ನೇ ಗಣ, ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನ । ನಿರ್, ಆ, ಎರಡು ಉಪಸರ್ಗಗಳು ।

**ಪ್ರಯೋಗ—** ಯೇನ ವಾದಿಸಿಂಹೇನ ಸ್ವಮಂಡಲೇ ವೀರಂಮನ್ಯಾಃ ಮಾಯಾವಿಗ್ರಾಮಸಿಂಹಾಃ ವ್ಯಾಖ್ಯಾಪ್ರಣಾದಮಾತ್ರೇಣ ನಿರಾಕ್ರಿಯಂತ ।

★ ★ ★

**ಅವತಾರಿಕಾ—** ಮತ್ತೂ ಶ್ರೀಪದ್ಮನಾಭತೀರ್ಥರ ಮಹಾಮಹಿಮೆಯನ್ನು ವರ್ಣಿಸುತ್ತಾರೆ.

**ಮತ್ತದುರ್ವಾದಿಮಾತಂಗತರ್ಕಮಸ್ತಕದಾರಣೇ ।**
**ಪಂಚಾಸ್ಯೋ ಯೋಽಭವದ್ ವ್ಯಕ್ತಂ ಚತುರಾಸ್ಯೋಽಪಿ ಕೇವಲಮ್ ॥ 124 ॥**

**ಪದಚ್ಛೇದ—** ಮತ್ತದುರ್ವಾದಿಮಾತಂಗತರ್ಕಮಸ್ತಕದಾರಣೇ, ಪಂಚಾಸ್ಯಃ, ಯಃ, ಅಭವತ್, ವ್ಯಕ್ತಂ, ಚತುರಾಸ್ಯಃ, ಅಪಿ, ಕೇವಲಂ ।

**ಅನ್ವಯ—** ಯಃ, ಕೇವಲಂ, ಚತುರಾಸ್ಯಃ, ಅಪಿ, ಮತ್ತದುರ್ವಾದಿಮಾತಂಗತರ್ಕಮಸ್ತಕದಾರಣೇ, ವ್ಯಕ್ತಂ, ಪಂಚಾಸ್ಯಃ, ಅಭವತ್ ।

**ಅನ್ವಯಾರ್ಥ—**

**ಯಃ** = ಯಾವ ಪದ್ಮನಾಭತೀರ್ಥರು,

**ಕೇವಲಂ** = ಮುಖ್ಯವಾಗಿ,

**ಚತುರಾಸ್ಯಃ ಅಪಿ** = ನಾಲ್ಕು ಮುಖವುಳ್ಳವರಾದಾಗ್ಯೂ (ಕುಶಲವಾದ, ಸುಂದರವಾದ ಮುಖವ್ಯಾಪಾರ ಮತ್ತು ಮುಖವುಳ್ಳವರಾದಾಗ್ಯೂ)

**ಮತ್ತದುರ್ವಾದಿಮಾತಂಗತರ್ಕಮಸ್ತಕದಾರಣೇ** = ವಿದ್ಯೆಯಿಂದ ಗರ್ವಿತರಾದ, ಮದವೇರಿದ, ದುಷ್ಟ-ವಾದವುಳ್ಳವರೆಂಬ ಆನೆಗಳ ಯುಕ್ತಿಗಳೆಂಬ ತಲೆಗಳ ಸೀಳುವಿಕೆಯಲ್ಲಿ,

**ವ್ಯಕ್ತಂ** = ಸ್ಪಷ್ಟವಾಗಿ,

**ಪಂಚಾಸ್ಯಃ** = ಐದು ಮುಖವುಳ್ಳವರು, ಸಿಂಹವು (ವಿಸ್ತಾರವಾದ ಯುಕ್ತಿಯುಕ್ತವಾಗಿ ಮಾತಾಡುವ ಮುಖವುಳ್ಳವರು)

**ಅಭವತ್** = ಆದರು.

**ತಾತ್ಪರ್ಯ—** ಈ ಪದ್ಮನಾಭತೀರ್ಥರು ಮುಖ್ಯವಾಗಿ ಚತುರಾಸ್ಯರಾದರೂ (ನಾಲ್ಕು ಮುಖವುಳ್ಳವರಾಗಿದ್ದರೂ) ಅಹಂಕಾರಿಗಳಾದ ಮಾಯಾವಾದಿಗಳೆಂಬ ಆನೆಗಳ ಕುತರ್ಕಗಳೆಂಬ ತಲೆಗಳನ್ನು ಸೀಳುವುದರಲ್ಲಿ ಸ್ಪಷ್ಟವಾಗಿ ಪಂಚಾಸ್ಯ (ಐದು ಮುಖವಳ್ಳವರು) ಆಗಿದ್ದರು. ಇಲ್ಲಿ ನಾಲ್ಕು ಮುಖವುಳ್ಳವರಾಗಿದ್ದರೂ ಐದು ಮುಖವುಳ್ಳವರಾಗಿದ್ದರು ಎಂದು ವಿರೋಧವು ಕಂಡುಬರುತ್ತದೆ. ಆದರೆ ಯಾವ ಪದ್ಮನಾಭತೀರ್ಥರು ಕೇವಲ ಚತುರವದನರು, ಸುಂದರವಾದ ಮತ್ತು ಚೆನ್ನಾಗಿ ಮಾತಾಡುವ ಮುಖವುಳ್ಳವರಾಗಿದ್ದರು. ಅಷ್ಟೇ ಅಲ್ಲ, ಸಿಂಹವು ಮದಿಸಿದ ಆನೆಗಳ ಕುಂಭಸ್ಥಳವನ್ನು ಸೀಳುವಂತೆ ಅಹಂಕಾರಿಗಳಾದ ಮಾಯಾವಾದಿಗಳೆಂಬ ಆನೆಗಳ ಕುತರ್ಕಗಳೆಂಬ ಕುಂಭಸ್ಥಳಗಳನ್ನು ಸೀಳುವ ವಿಷಯದಲ್ಲಿ ಪಂಚಾಸ್ಯರು ಅಂದರೆ ಸಿಂಹವಾಗಿದ್ದರು, ಸಿಂಹದಂತಿದ್ದರು. ಶ್ರೀಪದ್ಮನಾಭತೀರ್ಥರು ಮಾಯಾವಾದಿಗಳ ದುಸ್ತರ್ಕಗಳನ್ನು ಧೈರ್ಯದಿಂದ, ಉಗ್ರವಾಗಿ ಖಂಡಿಸುತ್ತಿದ್ದರು ಎಂದು ಭಾವ. ಇಲ್ಲಿ ಚತುರಾಸ್ಯಃ ಅಪಿ ಪಂಚಾಸ್ಯಃ ನಾಲ್ಕು ಮುಖವುಳ್ಳ-ವರಾದರೂ ಐದು ಮುಖವುಳ್ಳವರು ಎಂಬ ವಿರೋಧವು, ಸುಂದರಮುಖವುಳ್ಳವರು ಮತ್ತು ಸಿಂಹದಂತಿರುವರು ಎಂದು ವಿರೋಧ ಪರಿಹಾರವಿದೆ. ಇಲ್ಲಿ ವಿರೋಧಾಭಾಸಾಲಂಕಾರ. 'ಆಭಾಸತ್ವೇ ವಿರೋಧಸ್ಯ ವಿರೋಧಾಭಾಸ ಇಷ್ಯತೇ' ಎಂದು ವಿರೋಧಾಭಾಸಾಲಂಕಾರದ ಲಕ್ಷಣ.

ವಿಗ್ರಹ—

**ಮತ್ತದುರ್ವಾದಿಮಾತಂಗತರ್ಕಮಸ್ತಕದಾರಣೇ—** ದುರ್ವಾದಃ ಏಷಾಂ ಅಸ್ತೀತಿ ದುರ್ವಾದಿನಃ, ಮತ್ತಾಶ್ಚತೇ ದುರ್ವಾದಿನಶ್ಚ ಮತ್ತದುರ್ವಾದಿನಃ, ಮತ್ತದುರ್ವಾದಿನ ಏವ ಮಾತಂಗಾಃ ಮತ್ತದುರ್ವಾದಿ-ಮಾತಂಗಾಃ, ತರ್ಕಾ ಏವ ಮಸ್ತಕಾಃ ತರ್ಕಮಸ್ತಕಾಃ, ಮತ್ತದುರ್ವಾದಿಮಾತಂಗಾನಾಂ ತರ್ಕಮಸ್ತಕಾಃ ಮತ್ತದುರ್ವಾದಿಮಾತಂಗತರ್ಕಮಸ್ತಕಾಃ, ಮತ್ತದುರ್ವಾದಿಮಾತಂಗತರ್ಕಮಸ್ತಕಾನಾಂ ದಾರಣಂ ಮತ್ತದುರ್ವಾದಿಮಾತಂಗತರ್ಕಮಸ್ತಕದಾರಣಂ, ತಸ್ಮಿನ್ । ಮಾತಂಗ = ಆನೆ (ಚಂಡಾಲ) 'ಗಜೇಽಪಿ ನಾಗಮಾತಂಗೌ' ಅಮರ, ಮಸ್ತಕ = ಶಿರಸ್ಸು 'ಮೂರ್ಧಾ ನಾ ಮಸ್ತಕೋಽಸ್ತ್ರಿಯಾಂ' ಅಮರ. **ಪಂಚಾಸ್ಯಃ** = ಸಿಂಹ, 'ಸಿಂಹೋ ಮೃಗೇಂದ್ರಃ ಪಂಚಾಸ್ಯಃ' ಅಮರ ।

**ಪಂಚಾಸ್ಯಃ—** ಪಂಚಂ ವಿಸ್ತೃತಂ ಆನನಂ ಅಸ್ಯ ಇತಿ ಪಂಚಾಸ್ಯಃ । (ಪಂಚ ಆಸ್ಯಾನಿ ಯಸ್ಯ ಸಃ ವಿರೋಧ ಹೇಳುವಾಗ ವಿಗ್ರಹ)

**ಚತುರಾಸ್ಯಃ—** ಚತುರಂ ಸುಂದರಂ ಆಸ್ಯಂ ಅಸ್ಯ । (ಚತ್ವಾರಿ ಆಸ್ಯಾನಿ ಅಸ್ಯ) 'ಚತುರಾಸ್ಯೋಽಪಿ ಚತುರ್ವದನೋಽಪಿ' ಭಾವಪ್ರಕಾಶಿಕಾ ।

**ಕ್ರಿಯಾಪದ— ಅಭವತ್** - ಅಭವತ್ ಅಭವತಾಂ ಅಭವನ್, ಭೂ ಸತ್ತಾಯಾಂ ಅಕರ್ಮಕ ಸೇಟ್ ಪರ. ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನ ।

**ಪ್ರಯೋಗ—** ಯೇನ ಕೇವಲಂ ಚತುರಾಸ್ಯೇನಾಪಿ ಮತ್ತದುರ್ವಾದಿಮಾತಂಗಮಸ್ತಕದಾರಣೇ ವ್ಯಕ್ತಂ ಪಂಚಾಸ್ಯೇನ ಅಭೂಯತ ।

★ ★ ★

**ಅವತಾರಿಕಾ—** ಶ್ರೀಪದ್ಮನಾಭತೀರ್ಥರು ಸನ್ನ್ಯಾಯರತ್ನಾವಲೀ ಎಂಬ ಗ್ರಂಥವನ್ನು ರಚಿಸಿದರು ಎಂದು ಹೇಳುತ್ತಾರೆ.

**ಸನ್ನ್ಯಾಯರತ್ನಾವಲಿರಪ್ಯುದಪಾದಿ ಯತಃ ಶುಭಾ ।**
**ಟೀಕಾ ಪರಾನುವ್ಯಾಖ್ಯಾಯಾ ಅನರ್ಘಾ ಬೋಧಸಾಗರಾತ್ ॥ 125 ॥**

**ಪದಚ್ಛೇದ—** ಸನ್ನ್ಯಾಯರತ್ನಾವಲಿಃ, ಅಪಿ, ಉದಪಾದಿ, ಯತಃ, ಶುಭಾ, ಟೀಕಾ, ಪರಾನುವ್ಯಾಖ್ಯಾಯಾಃ, ಅನರ್ಘಾ, ಬೋಧಸಾಗರಾತ್ ।

**ಅನ್ವಯ—** ಬೋಧಸಾಗರಾತ್, ಯತಃ, ಪರಾನುವ್ಯಾಖ್ಯಾಯಾಃ, ಶುಭಾ, ಅನರ್ಘಾ, ಟೀಕಾ, ಸನ್ನ್ಯಾಯ-ರತ್ನಾವಲಿಃ, ಅಪಿ, ಉದಪಾದಿ ।

**ಅನ್ವಯಾರ್ಥ—**

**ಬೋಧಸಾಗರಾತ್** = ಜ್ಞಾನಕ್ಕೆ ಸಮುದ್ರದಂತಿರುವ,
**ಯತಃ** = ಯಾವ ಶ್ರೀಪದ್ಮನಾಭತೀರ್ಥರಿಂದ,
**ಪರಾ** = ಉತ್ತಮವಾದ,
**ಅನುವ್ಯಾಖ್ಯಾಯಾಃ** = ಅನುವ್ಯಾಖ್ಯಾನಗ್ರಂಥಕ್ಕೆ,
**ಶುಭಾ** = ಮಂಗಳಕರವಾದ,
**ಅನರ್ಘಾ** = ಅಮೂಲ್ಯವಾದ,
**ಟೀಕಾ** = ವ್ಯಾಖ್ಯಾನವಾದ,
**ಸನ್ನ್ಯಾಯರತ್ನಾವಲಿಃ ಅಪಿ** = ಸನ್ನ್ಯಾಯರತ್ನಾವಲಿ ಎಂಬ ಗ್ರಂಥವೂ,
**ಉದಪಾದಿ** = ಹುಟ್ಟಿತು.

**ತಾತ್ಪರ್ಯ—** ಶ್ರೀಪದ್ಮನಾಭತೀರ್ಥರು ಜ್ಞಾನಕ್ಕೆ ಸಮುದ್ರದಂತಿದ್ದರು. ಸಮುದ್ರದಿಂದ ರತ್ನಾವಲಿಯು (ರತ್ನಗಳ ಸಾಲು) ದೊರಕುವಂತೆ ಜ್ಞಾನಸಮುದ್ರರಾದ ಅವರಿಂದ ಸನ್ನ್ಯಾಯರತ್ನಾವಲಿ ಎಂಬ ಗ್ರಂಥವು ದೊರಕಿತು. ಈ ಗ್ರಂಥವು ಶ್ರೀಮಧ್ವಾಚಾರ್ಯರು ರಚಿಸಿದ ಉತ್ತಮ ಗ್ರಂಥವಾದ ಅನುವ್ಯಾಖ್ಯಾನದ ಟೀಕೆಯಾಗಿದೆ. ರತ್ನಾವಲಿಯು ಅಮೂಲ್ಯ-ವಾಗಿರುವಂತೆ ಸನ್ನ್ಯಾಯರತ್ನಾವಲಿಯೂ ಅಮೂಲ್ಯವಾಗಿದೆ. ಶ್ರೇಷ್ಠವಾದ ಅನುವ್ಯಾಖ್ಯಾನದ ಉತ್ತಮವಾದ ವಿವರಣ-ರೂಪವಾಗಿದೆ. ಸಮುದ್ರದಿಂದ ಅಮೂಲ್ಯವಾದ ಮಂಗಳಕರವಾದ ರತ್ನದ ಸಾಲು ಹುಟ್ಟುವಂತೆ ಜ್ಞಾನಸಮುದ್ರ-ರಾದ ಶ್ರೀಪದ್ಮನಾಭತೀರ್ಥರಿಂದ ಮಂಗಳಕರವಾದ ಅಮೂಲ್ಯವಾದ ಶ್ರೇಷ್ಠವಾದ ಅನುವ್ಯಾಖ್ಯಾನದ ವ್ಯಾಖ್ಯಾನವಾದ ಸನ್ನ್ಯಾಯರತ್ನಾವಲಿ ಎಂಬ ಗ್ರಂಥವು ಹುಟ್ಟಿತು. ಅವರಿಂದ ರಚಿತವಾಯಿತು ಎಂದು ತಾತ್ಪರ್ಯ.

ವಿಗ್ರಹ—

**ಸನ್ನ್ಯಾಯರತ್ನಾವಲಿಃ**— ಸಂತಶ್ಚ ತೇ ನ್ಯಾಯಾಶ್ಚ ಸನ್ನ್ಯಾಯಾಃ, ಸನ್ನ್ಯಾಯಾ ಏವ ರತ್ನಾನಿ ಸನ್ನ್ಯಾಯರತ್ನಾನಿ, ಸನ್ನ್ಯಾಯರತ್ನಾನಾಂ ಆವಲಿಃ ಸನ್ನ್ಯಾಯರತ್ನಾವಲಿಃ ।

**ಪರಾನುವ್ಯಾಖ್ಯಾ**— ಪರಾ ಚ ಸಾ ಅನುವ್ಯಾಖ್ಯಾ ಚ ಪರಾನುವ್ಯಾಖ್ಯಾ, ತಸ್ಯಾಃ ।

**ಅನರ್ಘಾ**— ನ ವಿದ್ಯತೇ ಅರ್ಘಃ ಯಸ್ಯಾಃ ಸಾ ಅನರ್ಘಾ ।

**ಬೋಧಸಾಗರಾತ್**— ಬೋಧಸ್ಯ ಸಾಗರಃ ಬೋಧಸಾಗರಃ, ತಸ್ಮಾತ್ ।

**ಕ್ರಿಯಾಪದ— ಉದಪಾದಿ** - ಉದ್ + ಅಪಾದಿ ಅಪತ್ಸಾತಾಂ ಅಪತ್ಸತ, ಅಪತ್ಥಾಃ ಅಪತ್ಸಾಥಾಂ ಅಪದ್ಧ್ವಮ್, ಅಪತ್ಸಿ ಅಪತ್ಸ್ವಹಿ ಅಪತ್ಸ್ಮಹಿ । ಪದ ಗತೌ ಸಕ. ಅನಿ. ಆತ್ಮ. ಉದ್ ಉಪಸರ್ಗ ಹೋಗು, ತಲುಪು, ಭೂತೇ ಲುಙ್ ಪ್ರಥಮಪುರುಷ ಏಕವಚನ ।

**ಪ್ರಯೋಗ**— ಬೋಧಸಾಗರಾತ್ ಯತಃ ಪರಾನುವ್ಯಾಖ್ಯಾಯಾಃ ಶುಭಯಾ ಅನರ್ಘಯಾ ಟೀಕಯಾ ಸನ್ನ್ಯಾಯರತ್ನಾವಲ್ಯಾ ಅಪಿ ಉದಪಾದಿ ।

★ ★ ★

**ಅವತಾರಿಕಾ**— ಸಭೆಗಳಲ್ಲಿ ಶ್ರೀಪದ್ಮನಾಭತೀರ್ಥರಿಗೆ ಪಂಡಿತಶ್ರೇಷ್ಠರಿಂದ ದೊರಕಿದ ಪೂಜಾಗೌರವಗಳನ್ನು ವರ್ಣಿಸುತ್ತಾರೆ.

**ವೇದಪ್ರವಚನಾಚಾರ್ಯಶಿಷ್ಯೋಽಸಾವಿತಿ ಪೂಜಿತಃ ।**
**ಸಭ್ಯಃ ಸಭಾಯಾಂ ಯೋ ವೇದಂ ವ್ಯಾಚಖ್ಯೌ ವೇದಸಾರವಿತ್ ॥ 126 ॥**

**ಪದಚ್ಛೇದ**— ವೇದಪ್ರವಚನಾಚಾರ್ಯಶಿಷ್ಯಃ, ಅಸೌ, ಇತಿ, ಪೂಜಿತಃ, ಸಭ್ಯಃ, ಸಭಾಯಾಂ, ಯಃ, ವೇದಂ, ವ್ಯಾಚಖ್ಯೌ, ವೇದಸಾರವಿತ್ ।

**ಅನ್ವಯ**— ಅಸೌ, ವೇದಪ್ರವಚನಾಚಾರ್ಯಶಿಷ್ಯಃ, ಇತಿ, ಪೂಜಿತಃ, ಸಭ್ಯಃ, ವೇದಸಾರವಿತ್, ಯಃ, ಸಭಾಯಾಂ, ವೇದಂ, ವ್ಯಾಚಖ್ಯೌ ।

**ಅನ್ವಯಾರ್ಥ**—

**ಅಸೌ** = ಇವರು,

**ವೇದಪ್ರವಚನಆಚಾರ್ಯಶಿಷ್ಯಃ** = ವೇದಗಳ ವ್ಯಾಖ್ಯಾನಿಸಿ ಹೇಳುವುದರಲ್ಲಿ ಗುರುಗಳಾದ ಶ್ರೀಮಧ್ವಾ-ಚಾರ್ಯರ ಶಿಷ್ಯರು,

**ಇತಿ** = ಹೀಗೆಂದು,

**ಪೂಜಿತಃ** = ಸನ್ಮಾನಿಸಲ್ಪಟ್ಟ

**ಸಭ್ಯಃ** = ಸಭೆಗೆ ಯೋಗ್ಯರಾದ,

**ವೇದಸಾರವಿತ್** = ವೇದದ ಮುಖ್ಯವಾದ ಅರ್ಥವನ್ನು ಬಲ್ಲ

**ಯಃ** = ಯಾವ ಪದ್ಮನಾಭತೀರ್ಥರು,

**ಸಭಾಯಾಂ** = ಸಭೆಯಲ್ಲಿ

**ವೇದಂ** = ವೇದವನ್ನು

**ವ್ಯಾಚಖ್ಯೌ** = ಪ್ರವಚನ ಮಾಡಿದರು.

**ತಾತ್ಪರ್ಯ—** ಶ್ರೀಪದ್ಮನಾಭತೀರ್ಥರು ವೇದದ ಮುಖ್ಯವಾದ ಅರ್ಥವನ್ನು ತಿಳಿದಿದ್ದರು. ಅವರು ಸಭೆಯಲ್ಲಿ ಪ್ರವಚನ ಮಾಡುವಾಗ ಚೆನ್ನಾಗಿ ಒಪ್ಪುತ್ತಿದ್ದರು. ಸಭೆಗೆ ಯೋಗ್ಯರಾಗಿ ಅಲಂಕಾರಪ್ರಾಯರಾಗಿದ್ದರು. ಅವರು ವೇದಗಳಿಗೆ ಸರಿಯಾದ ವ್ಯಾಖ್ಯಾನವನ್ನು ಮಾಡಿ ಜನರಿಗೆ ತಿಳಿಸುತ್ತಿದ್ದರು. ಹೀಗೆ ಶ್ರೀಪದ್ಮನಾಭತೀರ್ಥರು ಜನರಿಗೆ ವೇದಾರ್ಥವನ್ನು ತಿಳಿಸುತ್ತಿದ್ದಾಗ ಜನರು ಇವರು ವೇದೋಪದೇಶಮಹಾಚಾರ್ಯರಾದ ಶ್ರೀಮದಾನಂದತೀರ್ಥರ ಶಿಷ್ಯರು ಎಂದು ಅವರನ್ನು ಗೌರವಿಸುತ್ತಿದ್ದರು. ಅಂತಹ ಶ್ರೀಪದ್ಮನಾಭತೀರ್ಥರಿಗೆ ಆಚಾರ್ಯರು ಪ್ರಸನ್ನರಾಗಿ ವಿದ್ಯೆಯನ್ನುಪದೇಶಿಸಿದರು. (ಎಂದು 121 ನೆಯ ಶ್ಲೋಕದ ಜತೆಗೆ ಏಕಾನ್ವಯವನ್ನು ಇಟ್ಟುಕೊಳ್ಳಬೇಕು).

**ವಿಗ್ರಹ—**

**ವೇದಪ್ರವಚನಾರ್ಯಶಿಷ್ಯಃ—** ವೇದಾನಾಂ ಪ್ರವಚನಂ ವೇದಪ್ರವಚನಂ, ವೇದಪ್ರವಚನಸ್ಯ ಆಚಾರ್ಯಃ ವೇದಪ್ರವಚನಾಚಾರ್ಯಃ, ವೇದಪ್ರವಚನಾಚಾರ್ಯಸ್ಯ ಶಿಷ್ಯಃ ವೇದಪ್ರವಚನಾಚಾರ್ಯಶಿಷ್ಯಃ ।

**ಸಭ್ಯಃ—** ಸಭಾಯಾಂ ಸಾಧುಃ ಸಭ್ಯಃ । 'ತತ್ರ ಸಾಧುಃ' (4.4.98) ಎಂಬ ಅಧಿಕಾರದಲ್ಲಿ 'ಸಭಾಯಾಃ ಯಃ' (4.4.105) ಎಂಬ ಸೂತ್ರದಿಂದ ಯ ಪ್ರತ್ಯಯ.

**ವೇದಸಾರವಿತ್—** ವೇದಾನಾಂ ಸಾರಃ ವೇದಸಾರಃ, ವೇದಸಾರಂ ವೇತ್ತೀತಿ ವೇದಸಾರವಿತ್ ।

**ಕ್ರಿಯಾಪದ— ವ್ಯಾಚಖ್ಯೌ** - ವಿ+ಆ+ಚಖ್ಯೌ ಚಖ್ಯತುಃ ಚಖ್ಯುಃ, ಚಖ್ಯಿಥ-ಚಖ್ಯಾಥ ಚಖ್ಯಥುಃ ಚಖ್ಯ, ಚಖ್ಯೌ ಚಖ್ಯಿವ ಚಖ್ಯಿಮ । ಖ್ಯಾ ಪ್ರಕಥನೇ ಅದಾದಿ ಎರಡನೆಯ ಗಣ ಸಕ. ಅನಿ. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ಚಖ್ಯೌ ಎಂದು ರೂಪ । ವಿ, ಆ, ಎರಡು ಉಪಸರ್ಗಗಳು ।

**ಪ್ರಯೋಗ—** ಅಮುನಾ ವೇದಪ್ರವಚನಾಚಾರ್ಯಶಿಷ್ಯ ಇತಿ ಪೂಜಿತೇನ ಸಭ್ಯೇನ ವೇದಸಾರವಿದಾ ಯೇನ ಸಭಾಯಾಂ ವೇದಃ ವ್ಯಾಚಖ್ಯೇ ।

★ ★ ★

**ಅವತಾರಿಕಾ—** ಶ್ರೀವಿಷ್ಣುತೀರ್ಥರು ಮತ್ತು ಶ್ರೀಪದ್ಮನಾಭತೀರ್ಥರಲ್ಲದೆ ಆಚಾರ್ಯರಿಗೆ ಬೇರೆ ಅನೇಕ ಮಂದಿ ಶಿಷ್ಯರಿದ್ದರು.

**ಅನಯೋಃ ಪ್ರಥಮೇ ಶಿಷ್ಯಾಶ್ಚರಮೇ ಚಾಭವನ್ನಿಹ ।**
**ಅನಂತಬೋಧಸ್ಯಾನೇಕೇ ಯತೀಂದ್ರಾ ಬಹುದೇಶಜಾಃ ॥ 127 ॥**

**ಪದಚ್ಛೇದ—** ಅನಯೋಃ, ಪ್ರಥಮೇ, ಶಿಷ್ಯಾಃ, ಚರಮೇ, ಚ, ಅಭವನ್, ಇಹ, ಅನಂತಬೋಧಸ್ಯ, ಅನೇಕೇ, ಯತೀಂದ್ರಾಃ, ಬಹುದೇಶಜಾಃ ।

**ಅನ್ವಯ—** ಇಹ, ಅನಂತಬೋಧಸ್ಯ, ಅನಯೋಃ, ಪ್ರಥಮೇ, ಚ, ಚರಮೇ, ಅನೇಕೇ, ಬಹುದೇಶಜಾಃ, ಯತೀಂದ್ರಾಃ, ಶಿಷ್ಯಾಃ, ಅಭವನ್ ।

**ಅನ್ವಯಾರ್ಥ—**

**ಇಹ** = ಈ ಭಾರತವರ್ಷದಲ್ಲಿ,

**ಅನಂತಬೋಧಸ್ಯ** = ಶ್ರೀಪೂರ್ಣಪ್ರಜ್ಞಾಚಾರ್ಯರಿಗೆ,

**ಅನಯೋಃ** = ಈ ವಿಷ್ಣುತೀರ್ಥರು ಮತ್ತು ಪದ್ಮನಾಭತೀರ್ಥರಿಗಿಂತ,

**ಪ್ರಥಮೇ** = ಮೊದಲಿನ,

ಚ = ಮತ್ತು,

ಚರಮೇ = ಅನಂತರದ,

ಅನೇಕೇ = ಬಹಳ ಮಂದಿ,

ಬಹುದೇಶಜಾಃ = ಅನೇಕ ದೇಶಗಳಲ್ಲಿ ಹುಟ್ಟಿದ,

ಯತೀಂದ್ರಾಃ = ಸಂನ್ಯಾಸಿ ಶ್ರೇಷ್ಠರು,

ಶಿಷ್ಯಾಃ = ಶಿಷ್ಯರಾಗಿ,

ಅಭವನ್ = ಆದರು.

ತಾತ್ಪರ್ಯ— ಈ ಭರತಖಂಡದಲ್ಲಿ ಶ್ರೀಮಧ್ವಾಚಾರ್ಯರಿಗೆ ಶ್ರೀವಿಷ್ಣುತೀರ್ಥರು ಮತ್ತು ಶ್ರೀಪದ್ಮನಾಭ-ತೀರ್ಥರು ಇವರಿಬ್ಬರು ಶಿಷ್ಯರು ಮಾತ್ರವಲ್ಲದೆ ಇವರಿಗಿಂತ ಮೊದಲೇ ಶಿಷ್ಯರಾದವರೂ, ಅನಂತರ ಶಿಷ್ಯರಾದವರೂ ಅನೇಕರಿದ್ದರು. ಅವರು ಬೇರೆ ಬೇರೆ ದೇಶದಲ್ಲಿ ಹುಟ್ಟಿದವರಾಗಿದ್ದರು.

ವಿಗ್ರಹ—

ಪ್ರಥಮಾಃ— ಪ್ರಥಮಃ ಪ್ರಥಮೌ ಪ್ರಥಮೇ ಪ್ರಥಮಾಃ ।

ಚರಮಾಃ— ಚರಮಃ ಚರಮೌ ಚರಮೇ ಚರಮಾಃ । ಮುಂದೆ ರಾಮ ಶಬ್ದದಂತೆ ರೂಪ. ಈ ಎರಡು ಶಬ್ದಗಳು ಸರ್ವನಾಮ ಗಣದಲ್ಲಿ ಪಠಿತವಾಗಿಲ್ಲ. ಆದರೂ 'ಪ್ರಥಮ ಚರಮ ತಯಾಲ್ಪಾರ್ಧಕತಿ-ಪಯನೇಮಾಶ್ಚ' (1.1.33) ಎಂಬ ಸೂತ್ರದಿಂದ ಪ್ರಥಮಾವಿಭಕ್ತಿ ಬಹುವಚನದಲ್ಲಿ ಮಾತ್ರ ವಿಕಲ್ಪದಿಂದ ಸರ್ವನಾಮಸಂಜ್ಞೆ ಬಂದು ಸರ್ವೇ ಎಂಬಂತೆ ಪ್ರಥಮೇ ಚರಮೇ ಎಂದೂ ರೂಪ, ಪ್ರಥಮಾಃ ಚರಮಾಃ ಎಂದೂ ರೂಪ ।

ಅನಂತಬೋಧಸ್ಯ— ಅನಂತಃ ಬೋಧಃ ಯಸ್ಯ ಸಃ ಅನಂತಬೋಧಃ, ತಸ್ಯ ।

ಅನೇಕೇ— ನ ಏಕೇ ಅನೇಕೇ ।

ಯತೀಂದ್ರಾಃ— ಯತೀನಾಂ ಇಂದ್ರಾಃ ಯತೀಂದ್ರಾಃ ।

ಬಹುದೇಶಜಾಃ— ಬಹುಷು ದೇಶೇಷು ಜಾಯಂತೇ ಇತಿ ಬಹುದೇಶಜಾಃ ।

ಕ್ರಿಯಾಪದ— ಅಭವನ್, ಭೂ ಸತ್ತಾಯಾಂ ಅನದ್ಯತನಭೂತಕಾಲದಲ್ಲಿ ಲಙ್‌ಲಕಾರ ।

ಪ್ರಯೋಗ— ಇಹ ಅನಂತಬೋಧಸ್ಯ ಅನಯೋಃ ಪ್ರಥಮೈಃ ಚ ಚರಮೈಃ ಅನೇಕೈಃ ಬಹುದೇಶಜೈಃ ಯತೀಂದ್ರೈಃ ಶಿಷ್ಯೈಃ ಅಭೂಯತ (ಭಾವೇ ಪ್ರಯೋಗ) ।

★ ★ ★

ಅವತಾರಿಕಾ— ಆ ಶಿಷ್ಯರುಗಳ ಹೆಸರುಗಳನ್ನೂ, ಮಹಿಮೆಯನ್ನು ಸೂಚ್ಯವಾಗಿ ಹೇಳುತ್ತಾರೆ.

**ವಶೀಕೃತಹೃಷೀಕಾಶ್ಚ ಜನನಾದ್ಯುಪಮರ್ದಿನಃ ।**
**ನರಸಿಂಹಪದಾಧಾರಾ ಅಭ್ಯಸ್ತೋಪೇಂದ್ರನಾಮಕಾಃ ॥ 128 ॥**

ಪದಚ್ಛೇದ— ವಶೀಕೃತಹೃಷೀಕಾಃ, ಚ, ಜನನಾದ್ಯುಪಮರ್ದಿನಃ, ನರಸಿಂಹಪದಾಧಾರಾಃ, ಅಭ್ಯಸ್ತೋಪೇಂದ್ರ-ನಾಮಕಾಃ ।

ಅನ್ವಯ— ವಶೀಕೃತಹೃಷೀಕಾಃ, ಚ, ಜನನಾದ್ಯುಪಮರ್ದಿನಃ, ನರಸಿಂಹಪದಾಧಾರಾಃ, ಅಭ್ಯಸ್ತೋಪೇಂದ್ರ-ನಾಮಕಾಃ (ಅನೇಕೇ ಶಿಷ್ಯಾಃ ಅಭವನ್) ।

ಅನ್ವಯಾರ್ಥ—

**ವಶೀಕೃತಹೃಷೀಕಾಃ ಚ** = ಸ್ವಾಧೀನ ಮಾಡಿಕೊಡಲ್ಪಟ್ಟ ಇಂದ್ರಿಯಗಳುಳ್ಳವರೂ ಆದುದರಿಂದಲೇ ಹೃಷೀಕೇಶ ತೀರ್ಥರೆಂಬ ಪೂಜ್ಯರೂ,

**ಜನನಾದಿಉಪಮರ್ದಿನಃ** = ಜನ್ಮ ವೃದ್ಧಿ ಮೊದಲಾದವುಗಳನ್ನು ನಿರಾಕರಿಸುವ ಸ್ವಭಾವವುಳ್ಳ ಆದುದರಿಂದಲೇ ಜನಾರ್ದನತೀರ್ಥರೆಂಬ ಪೂಜ್ಯರೂ,

**ನರಸಿಂಹಪದಆಧಾರಾಃ** = ಶ್ರೀನರಸಿಂಹದೇವರ ಪಾದವೇ ಆಶ್ರಯವಾಗಿ ಉಳ್ಳವರೂ, ಆದುದರಿಂದಲೇ ನರಸಿಂಹತೀರ್ಥರೆಂಬ ಪೂಜ್ಯರೂ,

**ಅಭ್ಯಸ್ತ** = ಜನರಿಗೆ ಪರಿಚಿತವಾದ, (ಆವೃತ್ತಿ ಮಾಡಲ್ಪಟ್ಟ)

**ಉಪೇಂದ್ರನಾಮಕಾಃ** = ಉಪೇಂದ್ರ ಎಂಬ ಹೆಸರುಳ್ಳವರೂ, ಆದುದರಿಂದಲೇ ಉಪೇಂದ್ರತೀರ್ಥರೆಂಬ ಪೂಜ್ಯರೂ (ಹೀಗೆ, ಅನಂತಬೋಧಸ್ಯ = ಶ್ರೀಪೂರ್ಣಪ್ರಜ್ಞರಿಗೆ, ಬಹುದೇಶಜಾಃ = ಬೇರೆ ಬೇರೆ ದೇಶಗಳಲ್ಲಿ ಹುಟ್ಟಿದ, ಅನೇಕೇ ಶಿಷ್ಯಾಃ = ಅನೇಕ ಮಂದಿ ಶಿಷ್ಯರು, ಅಭವನ್ = ಇದ್ದರು).

**ತಾತ್ಪರ್ಯ**— ಆ ಶಿಷ್ಯರಲ್ಲಿ ಒಬ್ಬರು ಇಂದ್ರಿಯಗಳನ್ನು ವಶಪಡಿಸಿಕೊಂಡವರಾದುದರಿಂದ ಹೃಷೀಕೇಶ ತೀರ್ಥರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರು. ಮತ್ತೊಬ್ಬರು ತಮ್ಮ ತಪೋಬಲದಿಂದ ಶ್ರೀಹರಿಯ ಅನುಗ್ರಹವನ್ನು ಸಂಪಾದಿಸಿ ಜನನ-ಮರಣರೂಪವಾದ ಸಂಸಾರವನ್ನು ಪರಿಹರಿಸಿಕೊಂಡಿರುವುದರಿಂದ ಜನಾರ್ದನತೀರ್ಥರೆಂದು ಪ್ರಸಿದ್ಧರಾಗಿದ್ದರು. ಮತ್ತೊಬ್ಬರು ಶ್ರೀನರಸಿಂಹದೇವರ ಪಾದಗಳೇ ಆಶ್ರಯವಾಗಿ ಉಳ್ಳವರಾದುದರಿಂದ ನರಸಿಂಹತೀರ್ಥರೆಂದು ಪ್ರಸಿದ್ಧ-ರಾಗಿದ್ದರು. ಮತ್ತೊಬ್ಬರು ಉಪೇಂದ್ರನೆಂಬ ಹೆಸರಿನ ಪರಮಾತ್ಮನ ನಾಮವನ್ನು ಮತ್ತೂ ಮತ್ತೂ ಉಚ್ಚರಿಸುತ್ತಾ, ಉಪೇಂದ್ರ ಮೂರ್ತಿಯ ನಾಮಸ್ಮರಣೆಯನ್ನು ಚೆನ್ನಾಗಿ ಅಭ್ಯಾಸಮಾಡಿರುವವರಾದುದರಿಂದ ಉಪೇಂದ್ರತೀರ್ಥರೆಂದು ಹೆಸರನ್ನು ಹೊಂದಿದ್ದರು. ಜನರು ಇವರನ್ನು ಉಪೇಂದ್ರತೀರ್ಥರೆಂದೇ ಕರೆಯುತ್ತಿದ್ದರು. ಈ ನಾಲ್ಕುಮಂದಿ ಯತಿಗಳಲ್ಲಿ ಹೃಷೀಕೇಶ-ತೀರ್ಥರು ಫಲಿಮಾರುಮಠದ ಮೂಲಯತಿಗಳು, ನರಸಿಂಹತೀರ್ಥರು ಅದಮಾರುಮಠದ ಮೊದಲನೆಯ ಯತಿಗಳು. ಫಲಿಮಾರು ಮತ್ತು ಆದಮಾರುಮಠಗಳು ದ್ವಂದ್ವಮಠಗಳು. ಶ್ರೀಜನಾರ್ದನತೀರ್ಥರು ಕೃಷ್ಣಾಪುರಮಠದ ಮೂಲ-ಯತಿಗಳು. ಶ್ರೀಉಪೇಂದ್ರತೀರ್ಥರು ಪುತ್ತಿಗೆಮಠದ ಮೂಲಯತಿಗಳು. ಕೃಷ್ಣಾಪುರಮಠ ಮತ್ತು ಪುತ್ತಿಗೆಮಠಗಳು ದ್ವಂದ್ವಮಠಗಳಾಗಿವೆ.

(ದ್ವಂದ್ವಮಠ = ಇಬ್ಬಿಬ್ಬರು ಮಠಾಧಿಪತಿಗಳು ಪರಸ್ಪರ ಸಹಕಾರದಿಂದ ಕೃಷ್ಣಪೂಜೆಯನ್ನು ಸರದಿಯಂತೆ ನೆರವೇರಿಸಲು ಮತ್ತು ಒಬ್ಬರು ಇನ್ನೊಬ್ಬರಿಗೆ ಯತ್ಯಾಶ್ರಮ ಕೊಡದೆ ಪರಂಧಾಮವನ್ನು ಹೊಂದಿದರೆ ಆ ಮಠಕ್ಕೆ ದ್ವಂದ್ವ ಮಠಾಧಿಪತಿಗಳು ಯತಿಗಳನ್ನು ನೇಮಿಸಿ ಅವರಿಗೆ ವಿದ್ಯಾಭ್ಯಾಸ, ಯತ್ಯಾಶ್ರಮ, ಪೂಜಾಕ್ರಮಗಳ ತರಬೇತಿಯನ್ನು ಕೊಡಲು ಮಾಡಿದ ಜೋಡಿಮಠಗಳು, ಆಚಾರ್ಯರು ಕಾಸರಗೋಡಿನ ಸಮೀಪದಲ್ಲಿರುವ ಕಣ್ವತೀರ್ಥದ ಬಳಿ ಒಂದು ಕಟ್ಟೆಯಲ್ಲಿ ಇಬ್ಬಿಬ್ಬರು ಸಂನ್ಯಾಸಿಗಳನ್ನು ಪೂರ್ವ ಮೊದಲಾದ ಬಾಗಿಲುಗಳಲ್ಲಿ ಪರ್ಯಾಯಾದಿ ಜವಾಬ್ದಾರಿಗಳನ್ನು ಕೊಟ್ಟು ಕಳುಹಿಸಿದರು. ಆ ಇಬ್ಬರು ಮಠಾಧಿಪತಿಗಳು ಜೊತೆಗಾರರು ದ್ವಂದ್ವ ಮಠಾಧಿಪತಿಗಳೆಂದೂ, ಅವರ ಎರಡು ಮಠಗಳು ದ್ವಂದ್ವಮಠಗಳೆಂದೂ ಪ್ರಸಿದ್ಧವಾದವು ಎಂದು ಸಂಪ್ರದಾಯಜ್ಞರು ಹೇಳುತ್ತಾರೆ.)

**ವಿಶೇಷಾಂಶ**— ಇಲ್ಲಿ ಭಾವಪ್ರಕಾಶಿಕಾ ಎಂಬ ಶ್ರೀಮನ್ನಾರಾಯಣಪಂಡಿತಾಚಾರ್ಯರ ಸುಮಧ್ವವಿಜಯ ವ್ಯಾಖ್ಯಾನದಲ್ಲಿ ನರಸಿಂಹಪದಾಧಾರಾಃ ಎಂಬ ಪದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾ ನರಹರಿತೀರ್ಥಾಃ ಎಂದು ಬರೆದಿರುತ್ತಾರೆ. ಆದರೆ ಉಡುಪಿ ಮಠದ ಪೀಳಿಗೆಯಲ್ಲಿ ಅದಮಾರು ಮಠದ ಮೂಲಯತಿಗಳ ಹೆಸರು ನರಸಿಂಹತೀರ್ಥ ರೆಂದೇ ಇದೆ.

**ವಂದೇ ಹೃಷೀಕೇಶಮಥೋ ನೃಸಿಂಹಂ ಜನಾರ್ದನಂ ಚಿಂತಯಧೀರುಪೇಂದ್ರಮ್ ।**
**ಶ್ರೀವಾಮನಂ ಸಂಸ್ಮರ ವಿಷ್ಣುಮೇಮಿ ಶ್ರೀರಾಮಮಂಚೇಽಹಮಧೋಕ್ಷಜಮ್ ಚ ॥**

ಎಂಬ ಪ್ರಾಚೀನವಾದ ಅಷ್ಟಮಠದ ಯತಿಗಳ ಹೆಸರನ್ನು ಹೇಳುವ ಶ್ಲೋಕದಲ್ಲಿಯೂ ನರಸಿಂಹತೀರ್ಥರೆಂದೇ ಇದೆ. ಇದೇ ನರಸಿಂಹತೀರ್ಥರಿಗೆ ನರಹರಿತೀರ್ಥರೆಂದೇ ಮೂಲತಃ ಹೆಸರು ಇದ್ದಿರಬಹುದು. ನರಹರಿ ಎಂದು ಹೇಳಿದಾಗ ನರಸಿಂಹ ಎಂಬ ಹೆಸರಿನ ಸ್ಮರಣೆಯು ಸಾಮಾನ್ಯರಿಗೆ ಬರದಿರುವುದರಿಂದ ನರಹರಿತೀರ್ಥ ಎಂಬ ಹೆಸರು ನರಸಿಂಹತೀರ್ಥ ಎಂದು ಬದಲಾವಣೆಯಾಗಿರಲೂಬಹುದು. ಆದರೆ ಆ ನರಹರಿತೀರ್ಥರೇ ಘಟ್ಟದ ಮೇಲಿನ ಪದ್ಮನಾಭ, ನರಹರಿ, ಮಾಧವ, ಅಕ್ಷೋಭ್ಯತೀರ್ಥರೆಂದು ಪ್ರಸಿದ್ಧರಾದ ಯತಿಚತುಷ್ಟಯರಲ್ಲಿ ಒಬ್ಬರು ಎಂದು ಭ್ರಮಿಸಬಾರದು. ಹಾಗೆ ಅದಮಾರು ಮಠದ ಮೂಲಯತಿಗಳಾದ ನರಹರಿತೀರ್ಥರೇ ಘಟ್ಟದ ಮೇಲೆ ನರಹರಿತೀರ್ಥರೆಂದು ಪ್ರಸಿದ್ಧರಾದವರು ಎಂದು ಹೇಳಿದರೆ ತುಂಗಭದ್ರಾನದಿಯ ದಂಡೆಯಲ್ಲಿರುವ ಅವರ ವೃಂದಾವನಕ್ಕೆ, ಘಟ್ಟದ ಕೆಳಗಿನವರು ಯಾರೂ ಪೂಜಾದಿಗಳನ್ನು ಮಾಡದಿರಲು ಮತ್ತು ಅವರು ರಾಮದೇವರನ್ನು ತಂದಿರುವುದು, ಕಳಿಂಗರಾಜ್ಯದ ಮಹಾಮಂತ್ರಿ-ಗಳಾಗಿದ್ದು ರಾಜ್ಯಭಾರ ನಿರ್ವಾಹ ಮಾಡಿದುದು ಮುಂತಾದ ಮಹತ್ಕಾರ್ಯಗಳನ್ನು ನೆನೆಸದಿರಲು ಕಾರಣವೇನು? ಇನ್ನೂ ಅನೇಕ ಸಮಸ್ಯೆಗಳು ಉದ್ಭವಿಸುವುದರಿಂದ ಭಾವಪ್ರಕಾಶಿಕೆಯಲ್ಲಿ ಶ್ರೀಮನ್ನಾರಾಯಣಪಂಡಿತಾಚಾರ್ಯರು ನರಹರಿ-ತೀರ್ಥಾಃ ಎಂದು ಬರೆದ ಮಾತ್ರಕ್ಕೆ ಉಡುಪಿ ಅಷ್ಟಮಠಗಳಲ್ಲಿ ಅದಮಾರು ಮಠದ ಮೂಲಯತಿಗಳೆಂದು ಪ್ರಸಿದ್ಧರಾದ ನರಹರಿ (ನರಸಿಂಹ)ತೀರ್ಥರೇ ಘಟ್ಟದ ಮೇಲಿನ ಪ್ರಸಿದ್ಧರಾದ ಯತಿಚತುಷ್ಟಯರಲ್ಲಿ ಒಬ್ಬರು ಎಂದು ಹೇಳುವುದು ಎಂದೂ ಸಮಂಜಸವಾಗುವುದಿಲ್ಲ. ಇಲ್ಲಿ ಭಾವಪ್ರಕಾಶಿಕೆಯ ಈ ಶ್ಲೋಕದ ಪೂರ್ಣವ್ಯಾಖ್ಯಾನವನ್ನು ಈ ಕೆಳಗೆ ಕೊಡಲಾಗುತ್ತದೆ.

ಹೃಷೀಕೇಶತೀರ್ಥಾಃ (ಇದು ವಶೀಕೃತಹೃಷೀಕಾಶ್ಚ ಎಂಬ ವಿಶೇಷಣದ ತಾತ್ಪರ್ಯರೂಪವಾದ ವ್ಯಾಖ್ಯಾನ, ಇದು ಜನನಾದ್ಯುಪಮರ್ದಿನಃ ಎಂಬುದರ ವ್ಯಾಖ್ಯಾನ ಜನನಾದ್ಯುಪಮರ್ದಿನಃ । ನರಹರಿತೀರ್ಥಾಃ ಇದು ನರಸಿಂಹಪದಾಧಾರಾಃ ಎಂಬುದರ ವ್ಯಾಖ್ಯಾನ. ನರಸಿಂಹ ಎಂಬ ಪದಕ್ಕೆ ನರಹರಿ ಎಂದು ವ್ಯಾಖ್ಯಾನಮಾಡಲು ಕಾರಣವನ್ನು ಹಿಂದೆಯೇ ಸೂಚಿಸಲಾಗಿದೆ. ಲೋಕೈರಭ್ಯಸ್ತಂ ಉಪೇಂದ್ರತೀರ್ಥಾ ಇತಿ ನಾಮ ಏಷಾಂ = ಇದು ಅಭ್ಯಸ್ತೋಪೇಂದ್ರನಾಮಕಾಃ ಎಂಬುದರ ವ್ಯಾಖ್ಯಾನ. ಜನರಿಗೆ ಪರಿಚಿತವಾದ ಉಪೇಂದ್ರತೀರ್ಥ ಎಂಬ ಹೆಸರುಳ್ಳವರು ಎಂದು ಅರ್ಥ).

ವಿಗ್ರಹ—

**ವಶೀಕೃತಹೃಷೀಕೇಶಾಃ—** ಅವಶಾನಿ ವಶಾನಿ ಸಂಪದ್ಯಮಾನಾನಿ ಕೃತಾನಿ ವಶೀಕೃತಾನಿ, ವಶೀಕೃತಾನಿ ಹೃಷೀಕಾಣಿ ಯೈಃ ತೇ ವಶೀಕೃತಹೃಷೀಕಾಃ ।

**ಜನನಾದ್ಯುಪರ್ದಿನಃ—** ಜನನಂ ಆದಿಃ ಯಸ್ಯ ತತ್ ಜನನಾದಿ, ಉಪಮರ್ದಿತುಂ ಶೀಲಂ ಏಷಾಮಿತಿ ಉಪಮರ್ದಿನಃ, ಜನನಾದೇಃ ಉಪಮರ್ದಿನಃ ಜನನಾದ್ಯುಪಮರ್ದಿನಃ ।

**ನರಸಿಂಹಪದಾಧಾರಾಃ—** ನರಸಿಂಹಪದಸ್ಯ ಆಧಾರಾಃ ನರಸಿಂಹಪದಾಧಾರಾಃ ನರಸಿಂಹಪದೇ ಆಧಾರೌ ಯೇಷಾಂ ತೇ ನರಸಿಂಹಪದಾಧಾರಾಃ ।

**ಅಭ್ಯಸ್ತೋಪೇಂದ್ರನಾಮಕಾಃ—** ಉಪೇಂದ್ರ ಇತಿ ನಾಮ ಉಪೇಂದ್ರನಾಮ, ಅಭ್ಯಸ್ತಂ ಉಪೇಂದ್ರನಾಮ ಯೇಷಾಂ ತೇ, (ಯೈಃ ತೇ) ಅಭ್ಯಸ್ತೋಪೇಂದ್ರನಾಮಕಾಃ ।

**ಪ್ರಯೋಗ—** (ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ, ಅಭವನ್ ಎಂದು ಅಧ್ಯಾಹಾರ ಮಾಡಬೇಕು) ವಶೀಕೃತ ಹೃಷೀಕೈಃ ಚ ಜನನಾದ್ಯುಪಮರ್ದಿಭಿಃ ನರಸಿಂಹಪದಾಧಾರೈಃ ಅಭ್ಯಸ್ತೋಪೇಂದ್ರನಾಮಕೈಃ ಅನೇಕೈಃ ಶಿಷ್ಯೈಃ ಅಭೂಯತ ।

★ ★ ★

**ಅವತಾರಿಕಾ**— ಅನೇಕ ಮಂದಿ ಶಿಷ್ಯರಲ್ಲಿ ಇನ್ನೂ ಕೆಲವು ಶಿಷ್ಯರ ಹೆಸರುಗಳನ್ನು ಸೂಚ್ಯವಾಗಿ ಹೇಳುತ್ತಾರೆ.

**ಅದೀರ್ಘಾನ್ಯಾಭಿಧಾನಾ ಯೇ ಶ್ರೀಮದ್ರಾಮಪದಾಶ್ರಯಾಃ ।**
**ಅಪ್ರತ್ಯಕ್ಷಗುಣೋದ್ರಿಕ್ತಾ ಭಕ್ತಿವೈರಾಗ್ಯಸಾಗರಾಃ ॥ 129 ॥**

**ಪದಚ್ಛೇದ**— ಅದೀರ್ಘಾನ್ಯಾಭಿಧಾನಾಃ, ಯೇ, ಶ್ರೀಮದ್ರಾಮಪದಾಶ್ರಯಾಃ, ಅಪ್ರತ್ಯಕ್ಷಗುಣೋದ್ರಿಕ್ತಾಃ, ಭಕ್ತಿ-ವೈರಾಗ್ಯಸಾಗರಾಃ ।

**ಅನ್ವಯ**— ಯೇ, ಭಕ್ತಿವೈರಾಗ್ಯಸಾಗರಾಃ, ಅದೀರ್ಘಾನ್ಯಾಭಿಧಾನಾಃ, ಶ್ರೀಮದ್ರಾಮಪದಾಶ್ರಯಾಃ, ಅಪ್ರತ್ಯಕ್ಷ-ಗುಣೋದ್ರಿಕ್ತಾಃ, ಭಕ್ತಿವೈರಾಗ್ಯಸಾಗರಾಃ, ಯೇ (ತೇ ಅನೇಕೇ ಶಿಷ್ಯಾಃ ಅಭವನ್) ।

**ಅನ್ವಯಾರ್ಥ**—

**ಅದೀರ್ಘ ಅನ್ಯ ಅಭಿಧಾನಾಃ** = ವಾಮನ ಎಂದು ಹಿಂದೆ ಹೇಳಿರುವ ಹೆಸರುಗಳಿಗಿಂತ ಬೇರೆಯಾದ ಹೆಸರುಳ್ಳವರೋ,(ಲೌಕಿಕ ವ್ಯವಹಾರವನ್ನು ಕಡಿಮೆ ಮಾಡಿಕೊಂಡಿರುವರೋ) (ವಾಮನತೀರ್ಥ ರೆಂದು ಪ್ರಸಿದ್ಧರಾಗಿದ್ದಾರೋ ಅವರು)

**ಶ್ರೀಮದ್ರಾಮಪದಾಶ್ರಯಾಃ** = ಶೋಭಾಯುಕ್ತವಾದ ರಾಮ ಎಂಬ ಶಬ್ದಕ್ಕೆ ವಾಚ್ಯರಾಗಿದ್ದಾರೋ (ರಾಮ ದೇವರ ಪಾದವೇ ಆಶ್ರಯವಾಗಿ ಉಳ್ಳವರೋ) ರಾಮತೀರ್ಥ ಎಂದು ಪ್ರಸಿದ್ಧರಾದ ಅವರು,

**ಅಪ್ರತ್ಯಕ್ಷಗುಣೋದ್ರಿಕ್ತಾಃ** = ಪ್ರತ್ಯಕ್ಷವಲ್ಲದಿರುವ ಗುಣಗಳಿಂದ ಅಭಿವೃದ್ಧಿಗೊಂಡಿರುವ, ಅಧೋಕ್ಷಜತೀರ್ಥ ಎಂದು ಪ್ರಸಿದ್ಧರಾದ,

**ಭಕ್ತಿವೈರಾಗ್ಯಸಾಗರಾಃ** = ಭಕ್ತಿ ಮತ್ತು ವೈರಾಗ್ಯಗಳಿಗೆ ಸಮುದ್ರದಂತಿರುವ,

**ಯೇ** = ಯಾರು ಇದ್ದಾರೋ (ಅಂತಹ ಅನೇಕ ಶಿಷ್ಯರಿದ್ದರು).

**ತಾತ್ಪರ್ಯ**— ಲೌಕಿಕ ವ್ಯವಹಾರವನ್ನು ಕಡಿಮೆ ಮಾಡಿಕೊಂಡಿರುವ **ವಾಮನತೀರ್ಥರು**, ಶ್ರೀರಾಮನ ಪಾದಾ-ವಲಂಬಿಗಳಾದ **ರಾಮತೀರ್ಥರು**, ಚಕ್ಷುರಾದಿಗಳಿಗೆ ಅಗೋಚರವಾದ ಪರಮಾತ್ಮನ ಗುಣಗಳನ್ನು ಕಂಡಿರುವುದರಿಂದ ಸಂತೋಷದಿಂದ ಉಕ್ಕುತ್ತಿರುವ **ಅಧೋಕ್ಷಜತೀರ್ಥರು**, ಇವರೂ ಆಚಾರ್ಯರ ಶಿಷ್ಯರು. ಇವರೆಲ್ಲರೂ ಭಕ್ತಿವೈರಾಗ್ಯಗಳಿಂದ ಸಮುದ್ರದಂತಿದ್ದಾರೆ. ತತ್ತ್ವಜ್ಞಾನ ಮತ್ತು ಪರಮಾತ್ಮನ ಗುಣಗಳ ಅಪರೋಕ್ಷಜ್ಞಾನದಿಂದ ಪೂರ್ಣರಾದ ಇವರೆಲ್ಲರೂ ಸಮುದ್ರದಂತಿದ್ದಾರೆ. ಇವರು ಏಳು ಮಂದಿ ಆಚಾರ್ಯರ ಶಿಷ್ಯರು. ಇಲ್ಲಿ ಎರಡು ಶ್ಲೋಕಗಳಲ್ಲಿ ಒಂದೊಂದು ಪದದಿಂದ ಆಚಾರ್ಯರ ಒಬ್ಬೊಬ್ಬ ಶಿಷ್ಯರನ್ನೇ ಹೇಳಿದ್ದರೂ ಬಹುವಚನದಿಂದ ನಿರ್ದೇಶಿಸಿದ್ದಾರೆ. ಇವರು ರಜತಪೀಠಪುರದಲ್ಲಿರುವ ಶ್ರೀಕೃಷ್ಣನ ಪೂಜೆಯನ್ನು ಮಾಡುವವರಾದುದರಿಂದ ಉತ್ತಮರು ಎಂದು ತಿಳಿಸಲು ಏಕವಚನದಿಂದ ಹೇಳಬೇಕಾಗಿದ್ದರೂ ಬಹುವಚನ ನಿರ್ದೇಶವೆಂದು ತಿಳಿಯಬೇಕು ಅಥವಾ ವಶೀಕೃತಹೃಷೀಕಾಃ = ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡಿರು-ವವರು ಎಂದು ಆಯಾ ವಿಶೇಷಣಕ್ಕೆ ಅರ್ಥವನ್ನು ಹೇಳುವಾಗ, ಹೀಗೆ ಜಿತೇಂದ್ರಿಯರಾದವರು ಬಹಳವಾಗಿರುವುದರಿಂದ ಬಹುವಚನ ಪ್ರಯೋಗ ಮಾಡಿರುತ್ತಾರೆ ಎಂದು ತಿಳಿಯಬಹುದು ಅಥವಾ 'ಅನಯೋಃ ಪ್ರಥಮೇ ಶಿಷ್ಯಾಃ ಚರಮೇ ಚಾಭವನ್ನಿಹ' (ಸ.15 ಶ್ಲೋ.127) ಈ ವಿಷ್ಣುತೀರ್ಥ, ಪದ್ಮನಾಭತೀರ್ಥರಿಗಿಂತ ಮೊದಲಿನವರೂ, ಅನಂತರದವರೂ ಅನೇಕ ಶಿಷ್ಯರಿದ್ದರು ಎಂದು ಹೇಳಿದ್ದಾರೆ. ಈಗ ಅವರ ಗುಣಗಳನ್ನು ಹೇಳುತ್ತಿದ್ದಾರೆ ಎಂದು ಅರ್ಥಮಾಡಬೇಕು. ಈ ಎಲ್ಲಾ ಶಿಷ್ಯರೂ ವಶೀಕೃತಹೃಷೀಕರು = ಜಿತೇಂದ್ರಿಯರು, ಜನನಾದ್ಯುಪಮರ್ದಿನಃ = ಜನನಮರಣಾದಿರೂಪವಾದ ಸಂಸಾರ-ವನ್ನು ನಾಶಮಾಡುವ ಉತ್ತಮಕರ್ಮಾನುಷ್ಠಾನವನ್ನು ಮಾಡುವವರು. ನರಸಿಂಹಪದಾಧಾರಾಃ = ಕೆಲವರು ನರಸಿಂಹ-ದೇವರ ಉಪಾಸಕರು. ಅಭ್ಯಸ್ತೋಪೇಂದ್ರನಾಮಕಾಃ = ಯಾವಾಗಲೂ ಸರ್ವೋತ್ತಮನಾದ ಶ್ರೀಹರಿಯ ಸ್ಮರಣೆಯನ್ನು ಮಾಡುತ್ತಿರುವವರು, ಅದೀರ್ಘಾನ್ಯಾಭಿಧಾನಾಃ = ಅವಶ್ಯಕಾಗಿ ಬೇಕಾದಷ್ಟೇ ಲೌಕಿಕ ವ್ಯವಹಾರವನ್ನು ಮಾಡಿಕೊಂಡಿರು-

ವವರು, ಲೌಕಿಕವ್ಯವಹಾರವನ್ನು ಬಹಳ ಕಡಿಮೆ ಮಾಡಿಕೊಂಡಿರುವವರು, ಶ್ರೀಮದ್ರಾಮಪದಾಶ್ರಯಾಃ = ಲಕ್ಷ್ಮೀ-ಪತಿಯಾದ ಕಾಂತಿಪೂರ್ಣನಾದ ಶ್ರೀರಾಮನ ಭಕ್ತರು, ಅಪ್ರತ್ಯಕ್ಷಗುಣೋದ್ರಿಕ್ತಾಃ = ಅಪರೋಕ್ಷಜ್ಞಾನವೆಂಬ ಗುಣದಿಂದ ಉತ್ಕೃಷ್ಟರಾದವರು. ಪರಮಾತ್ಮನ ಅಪರೋಕ್ಷಜ್ಞಾನ ಉಳ್ಳವರು ಮತ್ತು ಭೂತ ಭವಿಷ್ಯತ್ ಕಾಲದ ವಸ್ತುಗಳ ಜ್ಞಾನವೆಂಬ ಗುಣದಿಂದಲೂ ಉತ್ಕೃಷ್ಟರಾದವರು. ತ್ರಿಕಾಲಜ್ಞಾನಿಗಳು, ಎಲ್ಲರೂ ಭಕ್ತಿವೈರಾಗ್ಯಸಾಗರರು. ಇವರು ಭಕ್ತಿವೈರಾಗ್ಯಾದಿ-ಸಾಗರರು ಎಂದು ಹೇಳಿರುವುದರಿಂದ ಇವರ ಹೃಷೀಕೇಶ ಮೊದಲಾದ ರೂಢನಾಮದಲ್ಲಿ ತೀರ್ಥ ಎಂಬ ಪದವನ್ನು ಸೇರಿಸಿ ಕೊಂಡು ಹೃಷೀಕೇಶತೀರ್ಥರು ಇತ್ಯಾದಿಯಾಗಿ ಹೆಸರುಗಳನ್ನು ತಿಳಿಯಬೇಕು ಎಂದು ಸೂಚಿಸಿದ್ದಾರೆ. ಸಾಗರವು ಉತ್ತಮವಾದ ಎಲ್ಲಾ ತೀರ್ಥಗಳಿಗೆ ಆಧಾರವಾಗಿರುವಂತೆ ಇವರೆಲ್ಲರ ಆಯಾ ನಾಮಗಳು ಆಯಾ ಗುಣಗಳ ಸಂಬಂಧ-ವಿರುವುದರಿಂದ ಬಂದಿವೆ ಎಂದು ಸೂಚಿಸುವ ಸಲುವಾಗಿಯೇ ವಶೀಕೃತಹೃಷೀಕಾಶ್ಚ ಇತ್ಯಾದಿಯಾಗಿ ಹೇಳಿದ್ದಾರೆ.

ವಿಶೇಷಾಂಶ— ಇಲ್ಲಿ ಭಾವಪ್ರಕಾಶಿಕಾ ವ್ಯಾಖ್ಯಾನದ ವಚನಗಳು ಹೀಗಿವೆ. ಅದೀರ್ಘ ಇತಿ ಅರ್ಥತಃ, ದೀರ್ಘಾತ್ ಅನ್ಯತ್ ವಾಮನತೀರ್ಥಾ ಇತ್ಯಭಿಧಾನಂ ಏಷಾಂ = ಅದೀರ್ಘಾನ್ಯಾಭಿಧಾನಾಃ । ಎಂದರೆ ದೀರ್ಘ ಅಂದರೆ ಎತ್ತರ ಎಂಬ ಅರ್ಥಕ್ಕಿಂತ ಬೇರೆಯಾದ ಹ್ರಸ್ವ = ಕುಳ್ಳು-ತಗ್ಗಾಗಿರುವವರು ಎಂಬ ಅರ್ಥವನ್ನು ಹೇಳುವ ಹೆಸರುಳ್ಳವರು, ವಾಮನ-ತೀರ್ಥರು ಎಂದು ಅಭಿಪ್ರಾಯ. ಅಲ್ಪೀಕೃತ ಲೌಕಿಕ ವ್ಯವಹಾರಾಶ್ಚ = ಲೌಕಿಕ ವ್ಯವಹಾರವನ್ನು ಕಡಿಮೆಮಾಡಿ-ಕೊಂಡಿರುವವರು ಎಂದೂ ಅರ್ಥ. ರಾಮತೀರ್ಥಾ = ಶ್ರೀಮದ್ರಾಮಪದಾಶ್ರಯಾಃ ಎಂದರೆ ಶ್ರೀರಾಮತೀರ್ಥರು ಎಂದು ಅರ್ಥ. ಅಕ್ಷಜಂ ಪ್ರತ್ಯಕ್ಷಂ ಅಧಃ ಯದ್ಗುಣೇಭ್ಯಃ ತೇ ಅಧೋಕ್ಷಜತೀರ್ಥಾ ಇತಿ = ಪ್ರತ್ಯಕ್ಷವು ಯಾರ ಗುಣಗಳಿಂದ ತಿರಸ್ಕೃತವಾಗಿದೆಯೋ ಅವರು ಅಧೋಕ್ಷಜತೀರ್ಥರು, ತಮ್ಮ ಜ್ಞಾನಭಕ್ತಿವೈರಾಗ್ಯಾದಿಗುಣಗಳಿಂದ ಲೌಕಿಕ ಪ್ರತ್ಯಕ್ಷವನ್ನು ತಿರಸ್ಕರಿಸಿ ಪರಮಾತ್ಮನ ಅಪರೋಕ್ಷವನ್ನು ಪಡೆದಿರುವವರು ಮತ್ತು ಭೂತ-ಭವಿಷ್ಯದ್-ವರ್ತಮಾನ ಜ್ಞಾನಿಗಳೂ ಆದ ಅಧೋಕ್ಷಜತೀರ್ಥರು, ಹೃಷೀಕೇಶ ಇತ್ಯಾದಿ ಸೂಚಿತಂ ಭಕ್ತಿ (ಜ್ಞಾನ) ವೈರಾಗ್ಯಸಾಗರಾಃ ಇತಿ = ಹೃಷೀಕೇಶ ಇತ್ಯಾದಿ ಶಬ್ದಗಳಿಂದ ಸೂಚಿತವಾದ ಅರ್ಥವನ್ನೇ ಭಕ್ತಿವೈರಾಗ್ಯಸಾಗರಾಃ ಎಂಬ ಪದದಿಂದ ಹೇಳಿದ್ದಾರೆ. ಸರ್ವತ್ರಾಪಿ ತೀರ್ಥಶಬ್ದಃ ಅಭಿಪ್ರೇತಃ = ಇಲ್ಲಿ ಸಾಗರ ಪದವನ್ನು ಹೇಳಿರುವುದರಿಂದ ಎಲ್ಲಾ ಹೆಸರುಗಳ ಅನಂತರವೂ ತೀರ್ಥಶಬ್ದವನ್ನು ಇಟ್ಟು-ಕೊಳ್ಳಬೇಕು. ಸಾಗರಸ್ಯಾಪಿ ಶುದ್ಧತೀರ್ಥತ್ವಾತ್ = ಇಲ್ಲಿ ಸಾಗರಾಃ ಎಂದು ಹೇಳಿದುದರಿಂದ ಶುದ್ಧತೀರ್ಥರೂಪವಾದ ಸಾಗರದಂತೆ ಇವರೂ ತೀರ್ಥರೂಪರಾಗಿದ್ದಾರೆ ಎಂದು ತಿಳಿದುಬರುತ್ತದೆ. ಏತೇಷಾಮೇತಾನಿ ನಾಮಾನಿ ಗುಣ ಯೋಗೈರ್ವರ್ತಂತೇ ಇತಿ ಪ್ರಕಟಯಿತುಂ ತತ್ತದ್‌ಗುಣವತ್ತ್ವಕಥನೇನ ಸೂಚಿತಾನಿ = ಆಚಾರ್ಯರ ಈ ಶಿಷ್ಯರಿಗೆ ಹೃಷೀಕೇಶತೀರ್ಥ ಇತ್ಯಾದಿ ಹೆಸರುಗಳು ಆಯಾ ಗುಣ ಸಂಬಂಧಗಳಿಂದ ಬಂದಿವೆ ಎಂದು ಸೂಚಿಸಲು, ಆಯಾ ಹೆಸರಿನ ಅರ್ಥವನ್ನು ಬಿಡಿಸಿ ಹೇಳುವ ವಿಶೇಷಣಗಳಿಂದಲೇ ಅವರ ಹೆಸರುಗಳನ್ನು ಸೂಚಿಸಿದ್ದಾರೆ. ಯಥಾಯೋಗ್ಯಂ ಸರ್ವೇಷಾಂ ಸರ್ವಗುಣವತ್ತ್ವಜ್ಞಾಪನಾಯ ಚ = ಮತ್ತು ಇಲ್ಲಿ ಆಯಾ ಹೆಸರುಗಳನ್ನು ಸೂಚಿಸುವ ವಿಶೇಷಣಗಳಿಂದ ಸೂಚಿತವಾದ ಗುಣಗಳು ಅವರವರ ಯೋಗ್ಯತೆಗೆ ತಕ್ಕಂತೆ ಎಲ್ಲರಲ್ಲಿಯೂ ಇವೆ ಎಂದು ಸೂಚಿಸುವುದಕ್ಕಾಗಿಯೂ ಈ ರೀತಿ ಹೇಳಿದ್ದಾರೆ ಎಂದು ತಿಳಿಯಬೇಕು. 129 ನೆಯ ಶ್ಲೋಕದಿಂದ ಸೂಚಿತರಾದ ವಾಮನತೀರ್ಥರು ಶೀರೂರುಮಠದ ಮೂಲಯತಿಗಳು ಸೋದಾಮಠದ ಮೂಲಯತಿಗಳಾದ ಶ್ರೀವಿಷ್ಣುತೀರ್ಥರು ಶೀರೂರು ಮಠಕ್ಕೆ ದ್ವಂದ್ವಮಠದವರು. ವಿಷ್ಣುತೀರ್ಥರ ಮಹಿಮೆಯನ್ನು ಹಿಂದೆಯೇ ಹೇಳಿರುವುದರಿಂದ ಇಲ್ಲಿ ಹೇಳಿಲ್ಲ. ರಾಮತೀರ್ಥರು ಕಾಣಿಯೂರು (ಕಾಣೂರು) ಮಠದವರು, ಅಧೋಕ್ಷಜತೀರ್ಥರು ಪೇಜಾವರ ಮಠದವರು, ಕಾಣಿಯೂರು ಮತ್ತು ಪೇಜಾವರಮಠಗಳು ದ್ವಂದ್ವಮಠಗಳು ಹೀಗೆ ಶ್ರೀಮಧ್ವಾಚಾರ್ಯರ ಎಂಟು ಮಂದಿ ಪ್ರಧಾನಶಿಷ್ಯರನ್ನೂ (ಅಷ್ಟಮಠದವರನ್ನು) ವರ್ಣಿಸಿದಂತಾಯಿತು. ಇವರೆಲ್ಲರಿಗೂ ಇಲ್ಲಿ ಆಯಾ ಹೆಸರುಗಳಿಂದ ಸೂಚಿತವಾದ ಗುಣಗಳಿರುವಂತೆ ಮತ್ತು ಎಲ್ಲರೂ ಭಕ್ತಿವೈರಾಗ್ಯಸಾಗರರಾಗಿರುವಂತೆ ತೀರ್ಥಸ್ವರೂಪರಾಗಿರುವಂತೆ ತೀರ್ಥ ಎಂಬ ಪದವು ಹೆಸರಿನ ಕೊನೆಯಲ್ಲಿ ಇವರೆಲ್ಲರಿಗೂ ಬರುವಂತೆ ಶ್ರೀಪದ್ಮನಾಭತೀರ್ಥರು ಮತ್ತಿತರ ಆಚಾರ್ಯರ ಶಿಷ್ಯರಿಗೂ ಈ ವಿಶೇಷಣಗಳು ಅನ್ವಯಿಸುತ್ತವೆ ಎಂದು

ತಿಳಿಯಬೇಕು. ಮುಂದೆಯೂ ಬಹುವಚನದಿಂದ ಹೇಳುವ ವಿಶೇಷಣಗಳು ಇವರೆಲ್ಲರಿಗೂ ಅನ್ವಯಿಸುತ್ತವೆ ಎಂದೂ ತಿಳಿಯಬೇಕು.

**ವಿಗ್ರಹ—**

**ಅದೀರ್ಘಾನ್ಯಾಭಿಧಾನಾ—** ನ ದೀರ್ಘಃ ಅದೀರ್ಘಃ, ಅದೀರ್ಘಃ ಇತಿ ಅನ್ಯತ್ ಅಭಿಧಾನಂ ಯೇಷಾಂ ತೇ ಅದೀರ್ಘಾನ್ಯಾಭಿಧಾನಾಃ । (ವಾಮನತೀರ್ಥರು ಎಂದು ಅರ್ಥ) ನ ದೀರ್ಘಾಣಿ ಅದೀರ್ಘಾಣಿ, ಅದೀರ್ಘಾಣಿ (ಅಲ್ಪೀಕೃತಾನಿ) ಅನ್ಯಾನಿ (ಲೌಕಿಕಾನಿ) ಅಭಿಧಾನಾನಿ (ವ್ಯವಹಾರಾಃ) ಯೇಷಾಂ ತೇ (ಲೌಕಿಕ ವ್ಯವಹಾರಗಳನ್ನು ಬಹಳ ಕಡಿಮೆ ಮಾಡಿಕೊಂಡಿರುವವರು ಎಂಬ ಸೂಚ್ಯಾರ್ಥಕ್ಕೆ ಅನುಗುಣ ವಾದ ವಿಗ್ರಹ)

**ಶ್ರೀಮದ್ರಾಮಪದಾಶ್ರಯಾಃ—** ರಾಮ ಇತಿ ಪದಂ ರಾಮಪದಂ, ಶ್ರೀಃ ಕಾಂತಿಃ, ಲಕ್ಷ್ಮೀ, ಅಸ್ಯಃ ಅಸ್ತೀತಿ ಶ್ರೀಮತ್, ಶ್ರೀಮಚ್ಚ ತತ್ ರಾಮಪದಂ ಚ ಶ್ರೀಮದ್ರಾಮಪದಂ, ಶ್ರೀಮದ್ರಾಮಪದಸ್ಯ ಆಶ್ರಯಾಃ ಶ್ರೀಮದ್ರಾಮಪದಾಶ್ರಯಾಃ । (ರಾಮತೀರ್ಥರು) ಶ್ರೀಮದ್ರಾಮಪದಂ ಆಶ್ರಯಃ ಯೇಷಾಂ ತೇ ಶ್ರೀಮದ್ರಾಮಪದಾಶ್ರಯಾಃ (ಶ್ರೀರಾಮನ ಪಾದಭಕ್ತರು)

**ಅಪ್ರತ್ಯಕ್ಷಗುಣೋದ್ರಿಕ್ತಾಃ—** ನ ಪ್ರತ್ಯಕ್ಷಾಃ ಅಪ್ರತ್ಯಕ್ಷಾಃ, ಅಪ್ರತ್ಯಕ್ಷಾಶ್ಚ ತೇ ಗುಣಾಶ್ಚ ಅಪ್ರತ್ಯಕ್ಷಗುಣಾಃ ಅಪ್ರತ್ಯಕ್ಷ-ಗುಣೈಃ ಉದ್ರಿಕ್ತಾಃ ಅಪ್ರತ್ಯಕ್ಷಗುಣೋದ್ರಿಕ್ತಾಃ । (ಅಧೋಕ್ಷಜತೀರ್ಥರು ಎಂದು ಅರ್ಥ. ಅಧಃ ಕೃತಂ ಅಕ್ಷಜಂ ಯೇನ ಸಃ ಅಧೋಕ್ಷಜಃ ಎಂಬ ವ್ಯುತ್ಪತ್ತಿಯಿಂದ ಇಂದ್ರಿಯಗಳಿಂದ ಉಂಟಾದ ಜ್ಞಾನವನ್ನು ತಿರಸ್ಕರಿಸಿದವರು ಎಂಬ ಅರ್ಥವು ಬರುತ್ತದೆ. ಕಣ್ಣು ಮುಂತಾದ ಇಂದ್ರಿಯಗಳಿಗೆ ಅಗೋಚರವಾದ ವಸ್ತುಗಳ ಜ್ಞಾನವುಳ್ಳವರು ತ್ರಿಕಾಲದರ್ಶಿಗಳು, ಭಗವಂತನ ಅಪರೋಕ್ಷಜ್ಞಾನವುಳ್ಳವರು ಎಂಬ ಅಭಿಪ್ರಾಯದ ಅಧೋಕ್ಷಜ ಎಂಬ ಹೆಸರಿನ ಅಭಿಪ್ರಾಯವನ್ನೇ ಅಪ್ರತ್ಯಕ್ಷಗುಣೋದ್ರಿಕ್ತಾಃ ಎಂಬ ಪದದಿಂದ ಸೂಚಿಸಿದಂತಾಯಿತು).

**ಭಕ್ತಿವೈರಾಗ್ಯಸಾಗರಾಃ—** ವಿಗತಃ ರಾಗಃ ಯೇಷಾಂ ತೇ ವಿರಾಗಾಃ, ವಿರಾಗಾಣಾಂ ಭಾವಃ ವೈರಾಗ್ಯಂ, ಭಕ್ತಿಶ್ಚ ವೈರಾಗ್ಯಂ ಚ ಭಕ್ತಿವೈರಾಗ್ಯೇ, ಭಕ್ತಿವೈರಾಗ್ಯಾಭ್ಯಾಂ ಸಾಗರಾಃ ಇವ ಭಕ್ತಿವೈರಾಗ್ಯಸಾಗರಾಃ ।

**ಪ್ರಯೋಗ—** (ಈ ಶ್ಲೋಕದಲ್ಲಿಯೂ ಕ್ರಿಯಾಪದವಿಲ್ಲ, ಹಿಂದೆ ಕೊಟ್ಟಿರುವ ಅನ್ವಯದಲ್ಲಿ ಅಭವನ್ ಎಂದು ಅಧ್ಯಾಹಾರ ಮಾಡಿದೆ. ಅದನ್ನೇ ಭಾವ ಪ್ರಯೋಗಕ್ಕೆ ಪರಿವರ್ತಿಸಿಕೊಳ್ಳಬೇಕು). ಯೈಃ ಭಕ್ತಿವೈರಾಗ್ಯಸಾಗರೈಃ ಆದೀರ್ಘಾ-ನ್ಯಾಭಿಧಾನೈಃ ಶ್ರೀಮದ್ರಾಮಪದಾಶ್ರಯೈಃ ಅಪ್ರತ್ಯಕ್ಷಗುಣೋದ್ರಿಕ್ತೈಃ ಅಭೂಯತ, ತೈಃ ಅನೇಕೈಃ ಶಿಷ್ಯೈಃ ಅಭೂಯತ ।

★ ★ ★

**ಅವತಾರಿಕಾ—** 128 ಮತ್ತು 129ನೆಯ ಶ್ಲೋಕಗಳಲ್ಲಿ ಸೂಚಿಸಿರುವ ಏಳುಮಂದಿ ಶಿಷ್ಯರಲ್ಲಿಯೂ ಹಿಂದೆ ವರ್ಣಿಸಿರುವ ವಿಷ್ಣುತೀರ್ಥ, ಪದ್ಮನಾಭತೀರ್ಥರಲ್ಲಿಯೂ ಮುಂದೆ ಸೂಚಿಸಲಿರುವ ಇತರ ಶಿಷ್ಯರಲ್ಲಿಯೂ ಇರುವ ವಿಶೇಷ ಗುಣಗಳನ್ನು ವರ್ಣಿಸುತ್ತಾರೆ.

**ಪಾದ್ಯೈಃ ಪುನಂತಃ ಪೃಥಿವೀಂ ದರ್ಶಯಂತೋ ಹರೇಃ ಪದಮ್ ।**
**ಧೂತದುಸ್ಸಮಯಧ್ವಾಂತಾ ಆದಿತ್ಯಾ ಇವ ಗಾಂ ಗತಾಃ ॥ 130 ॥**

**ಪದಚ್ಛೇದ—** ಪಾದ್ಯೈಃ, ಪುನಂತಃ, ಪೃಥವೀಂ, ದರ್ಶಯಂತಃ, ಹರೇಃ, ಪದಂ, ಧೂತದುಸ್ಸಮಯಧ್ವಾಂತಾಃ, ಆದಿತ್ಯಾಃ, ಇವ, ಗಾಂ, ಗತಾಃ ।

**ಅನ್ವಯ—** ಪಾದ್ಯೈಃ, ಪೃಥಿವೀಂ, ಪುನಂತಃ, ಹರೇಃ, ಪದಂ, ದರ್ಶಯಂತಃ, ಧೂತದುಸ್ಸಮಯಧ್ವಾಂತಾಃ, ಗಾಂ, ಗತಾಃ, ಆದಿತ್ಯಾಃ, ಇವ । (ಅನೇಕೇ ಶಿಷ್ಯಾಃ ಅಭವನ್) (ಪೃಥಿವೀಂ ಅಲಂ ಅಲಂಚಕ್ರುಃ ಎಂದೂ ಅನ್ವಯವನ್ನು ಇಟ್ಟು ಕೊಳ್ಳಬಹುದು)

**ಅನ್ವಯಾರ್ಥ—**

**ಪಾದ್ಯೈಃ** = ಕಾಲುಗಳಿಂದ (ಕಿರಣಗಳಿಂದ)

**ಪೃಥಿವೀಂ** = ಭೂಮಿಯನ್ನು

**ಪುನಂತಃ** = ಪವಿತ್ರಗೊಳಿಸುತ್ತಿರುವ,

**ಹರೇಃ ಪದಂ** = ಶ್ರೀಮನ್ನಾರಾಯಣನ ಸ್ವರೂಪವನ್ನು (ಆಕಾಶವನ್ನು)

**ದರ್ಶಯಂತಃ** = ತೋರಿಸುತ್ತಿರುವ,

**ಧೂತದುಸ್ಸಮಯಧ್ವಾಂತಾಃ** = ನಿವಾರಿಸಲ್ಪಟ್ಟ ದುಷ್ಟಶಾಸ್ತ್ರವೆಂಬ ಕತ್ತಲೆಯುಳ್ಳ,

**ಗಾಂ** = ಭೂಮಿಯನ್ನು

**ಗತಾಃ** = ಪ್ರಾಪ್ತರಾದ,

**ಆದಿತ್ಯಾಃ ಇವ** = ಸೂರ್ಯರಂತಿರುವ (ಅನೇಕ ಶಿಷ್ಯರಿದ್ದರು, ಅನೇಕ ಶಿಷ್ಯರು ಭೂಮಿಯನ್ನು ಚೆನ್ನಾಗಿ ಅಲಂಕರಿಸಿದರು).

**ತಾತ್ಪರ್ಯ—** ಆಚಾರ್ಯರ ಈ ಶಿಷ್ಯರೆಲ್ಲರೂ ತಮ್ಮ ಪಾದನ್ಯಾಸಗಳಿಂದ (ಭೂಮಿಯಲ್ಲಿ ಹೆಜ್ಜೆಯನ್ನು ಇಟ್ಟು ನಡೆದುಕೊಂಡು ಬರುವುದರಿಂದ) ಈ ಭೂಮಿಯನ್ನೇ ಪವಿತ್ರೀಕರಿಸುತ್ತಿದ್ದರು. ಅವರೆಲ್ಲರೂ ಪರಮಾತ್ಮನ ಸ್ವರೂಪವನ್ನು ಪ್ರಕಟಗೊಳಿಸುತ್ತಿದ್ದರು. ದುಷ್ಟಶಾಸ್ತ್ರಗಳ ಅಭ್ಯಾಸದಿಂದ ಉಂಟಾದ ಕತ್ತಲೆಯಂತಿರುವ ಅಜ್ಞಾನವನ್ನು ನಾಶಗೊಳಿಸುತ್ತಿದ್ದರು. ಆದುದರಿಂದ ಇವರು ತಮ್ಮ ಕಿರಣಗಳಿಂದ ಭೂಮಿಯನ್ನು ಪವಿತ್ರಗೊಳಿಸುತ್ತಾ, ವಿಷ್ಣುಪದ (ಹರಿಪದ) ಎಂಬ ಹೆಸರುಳ್ಳ ಆಕಾಶವನ್ನು ಪ್ರಕಾಶಗೊಳಿಸುತ್ತಾ, ರಾತ್ರಿಯ ಕಾಲದಲ್ಲಿ ಬಹಳ ದುಃಖವನ್ನುಂಟು ಮಾಡುತ್ತಿದ್ದ ಕತ್ತಲೆಯನ್ನು ಪರಿಹರಿಸುತ್ತಾ ವಿರಾಜಿಸುತ್ತಿರುವ ಭೂಮಿಗೆ ಇಳಿದಿರುವ ಅನೇಕ ಸೂರ್ಯರಂತೆ ಇದ್ದರು. ಆಚಾರ್ಯರ ಈ ಶಿಷ್ಯರೆಲ್ಲರೂ ಅನೇಕ ದೇಶಗಳಲ್ಲಿ ಸಂಚರಿಸಿ ಆಚಾರ್ಯರ ಸಿದ್ಧಾಂತತತ್ತ್ವವನ್ನು ಭಕ್ತರಿಗೆ ಉಪದೇಶಿಸುತ್ತಾ ದುಶ್ಶಾಸ್ತ್ರಗಳನ್ನು ಖಂಡಿಸುತ್ತಿದ್ದರು ಎಂದು ಅಭಿಪ್ರಾಯ. ಇಲ್ಲಿ ಭೂಮಿಗೆ ಇಳಿದಿರುವ ಅನೇಕ ಸೂರ್ಯರಂತಿದ್ದಾರೆ ಎಂದು ಆಚಾರ್ಯರ ಶಿಷ್ಯರನ್ನು ವರ್ಣಿಸಿದ್ದರಿಂದ ಅಭೂತೋಪಮಾಲಂಕಾರ.

**ವಿಗ್ರಹ ಮತ್ತು ಕೋಶ—**

**ಧೂತದುಸ್ಸಮಯಧ್ವಾಂತಾಃ—** ದುಷ್ಟಾಶ್ಚ ತೇ ಸಮಯಾಶ್ಚ ದುಸ್ಸಮಯಾಃ ದುಸ್ಸಮಯಾಃ ಏವ ಧ್ವಾಂತಾನಿ ದುಸ್ಸಮಯಧ್ವಾಂತಾನಿ, ಧೂತಾನಿ ದುಸ್ಸಮಧ್ವಾಂತಾನಿ ಯೈಃ ತೇ ಧೂತದುಸ್ಸಮಯಧ್ವಾಂತಾಃ । ಸಮಯ = ಸಿದ್ಧಾಂತ, 'ಸಮಯಾಃ ಶಪಥಾಚಾರಕಾಲಸಿದ್ಧಾಂತಸಂವಿದಃ' ಅಮರ. ಧ್ವಾಂತಃ = ಕತ್ತಲೆ, 'ಅಂಧಕಾರೋಽಸ್ತ್ರಿಯಾಂ ಧ್ವಾಂತಂ' ಅಮರ.

**ಹರೇಪದಂ—** ಪಾದ = ಕಾಲು, ಕಿರಣ, 'ಪಾದಾರಶ್ಮ್ಯಂಘ್ರಿತುರ್ಯಾಂಶಾಃ' ಅಮರ, ಹರೇಃ ಪದಂ = ವಿಷ್ಣುಪದ, ಆಕಾಶ, 'ವಿಯದ್ವಿಷ್ಣುಪದಂ ವಾ ತು ಪುಂಸ್ಯಾಕಾಶವಿಹಾಯಸೀ' ಅಮರ ।

**ಪ್ರಯೋಗ—** ಪಾದ್ಯೈಃ ಪೃಥಿವೀಂ ಪುನದ್ಭಿಃ ಹರೇಃ ಪದಂ ದರ್ಶಯದ್ಭಿಃ ಧೂತದುಸ್ಸಮಯಧ್ವಾಂತೈಃ ಗಾಂ ಗತೈಃ ಆದಿತ್ಯೈಃ ಇವ ಅನೇಕೈಃ ಶಿಷ್ಯೈಃ ಅಭೂಯತ ।

★ ★ ★

**ಅವತಾರಿಕಾ—** ಮತ್ತೂ ಆಚಾರ್ಯರ ಎಲ್ಲಾ ಶಿಷ್ಯರ ಗುಣಗಳನ್ನು ವರ್ಣಿಸುತ್ತಾರೆ.

**ಮೋಕ್ಷಶಾಸ್ತ್ರಾಮೃತಾಂಬೋಧಿಸೇವಯಾ ನಿತ್ಯನಿರ್ವೃತಾಃ ।**
**ಚಕ್ರಿಚಾರುತರಾರ್ಚಾಸು ಚಕ್ರಿಣಶ್ಚರಣಾರ್ಚಕಾಃ ॥ 131 ॥**

**ಪದಚ್ಛೇದ ಮತ್ತು ಅನ್ವಯ—** ಮೋಕ್ಷಶಾಸ್ತ್ರಾಮೃತಾಂಬೋಧಿಸೇವಯಾ, ನಿತ್ಯನಿರ್ವೃತಾಃ, ಚಕ್ರಿಚಾರುತರಾರ್ಚಾಸು, ಚಕ್ರಿಣಃ, ಚರಣಾರ್ಚಕಾಃ (ಅನೇಕೇ ಶಿಷ್ಯಾಃ ಅಭವನ್) ।

**ಅನ್ವಯಾರ್ಥ—**

**ಮೋಕ್ಷಶಾಸ್ತ್ರ ಅಮೃತಾಂಬೋಧಿಸೇವಯಾ** = ಮೋಕ್ಷಪ್ರದವಾದ ಶಾಸ್ತ್ರವೆಂಬ ಅಮೃತಸಮುದ್ರದ ಸೇವೆಯಿಂದ (ಅವಗಾಹನಸ್ನಾನದಿಂದ),

**ನಿತ್ಯನಿರ್ವೃತಾಃ** = ಯಾವಾಗಲೂ ಆನಂದ ಉಳ್ಳ,

**ಚಕ್ರಿಚಾರುತರ ಅರ್ಚಾಸು** = ಸುದರ್ಶನ ಚಕ್ರಧಾರಿ ಶ್ರೀಮುಕುಂದನ ಅತಿದಿವ್ಯವಾದ (ಪರಮಸುಂದರ-ವಾದ) ಪ್ರತಿಮೆಗಳಲ್ಲಿ,

**ಚಕ್ರಿಣಃ** = ಚಕ್ರಧರನಾದ ಶ್ರೀಹರಿಯ,

**ಚರಣ** = ಪಾದಗಳನ್ನು,

**ಅರ್ಚಕಾಃ** = ಪೂಜಿಸುವವರಾದರು. (ಅನೇಕ ಶಿಷ್ಯರಿದ್ದರು)

**ತಾತ್ಪರ್ಯ—** ಆ ಶಿಷ್ಯರೆಲ್ಲರೂ ಮತ್ತೂ ಹೇಗಿದ್ದರೆಂದು ಹೇಳುತ್ತಾರೆ. ಅವರೆಲ್ಲರೂ ಮೋಕ್ಷವನ್ನು ಕೊಡುವ ಶ್ರೀಮದಾನಂದತೀರ್ಥರ ಸಿದ್ಧಾಂತವೆಂಬ ಅಮೃತಸಮುದ್ರವನ್ನು, ಅಮೃತಸಮುದ್ರದಲ್ಲಿ ಅವಗಾಹನ ಸ್ನಾನ ಮಾಡು-ವವರಂತೆ ಸೇವಿಸಿ, ಅಮೃತಸಮುದ್ರದಲ್ಲಿ ಅವಗಾಹನ ಸ್ನಾನ ಮಾಡುವವರು ಆನಂದಪಡುವಂತೆ ಆನಂದಪಡುತ್ತಿದ್ದರು. ಶ್ರೀಮನ್ನಾರಾಯಣನ ಅತಿಸುಂದರವಾದ ಪ್ರತಿಮೆಗಳಲ್ಲಿ ಸುದರ್ಶನಚಕ್ರಧಾರಿಯಾದ ಆ ಪರಮಾತ್ಮನ ಪಾದಗಳನ್ನು ನಿತ್ಯದಲ್ಲಿಯೂ ಭಕ್ತಿಯಿಂದ ಪೂಜಿಸುತ್ತಿದ್ದರು. ಸಂನ್ಯಾಸಿಗಳಿಗೆ ಕೇವಲ ವಿಹಿತವಾದವುಗಳು, ವೇದಾಂತ ಶಾಸ್ತ್ರದ ಶ್ರವಣ-ಮನನಾದಿಗಳು ಮಾತ್ರ. ಆಚಾರ್ಯರ ಶಿಷ್ಯರು ಸರ್ವದಾ ವೇದಾಂತಶಾಸ್ತ್ರದ ಶ್ರವಣ ಮಾಡುತ್ತಾ, ಮನನ ಮಾಡುತ್ತಾ, ಧ್ಯಾನ ಮಾಡುತ್ತಾ, ಶಿಷ್ಯರಿಗೆ ಪ್ರವಚನ ಮಾಡುತ್ತಾ ಅಮೃತ ಸಮುದ್ರದಲ್ಲಿ ಮುಳುಗಿದವರು ಆನಂದ-ಪಡುವಂತೆ ಆನಂದದಿಂದ ಇದ್ದರು. ಆಚಾರ್ಯರು ಅವರಿಗೆ ಅನುಗ್ರಹಿಸಿದ್ದ ವಿಷ್ಣುಪ್ರತಿಮೆಗಳಲ್ಲಿ ಸನ್ನಿಹಿತನಾದ ಶ್ರೀಹರಿಯನ್ನು ನಿತ್ಯದಲ್ಲಿಯೂ ನಿರಂತರವಾಗಿ ಪೂಜಿಸುತ್ತಿದ್ದರು. ಸ್ವಯಂ ಗ್ರಂಥಾವಲೋಕನ ಮತ್ತು ಪ್ರವಚನ ಹಾಗೂ ಸಂನ್ಯಾಸಿಗಳಿಗೆ ವಿಹಿತವಾದ ಪ್ರತಿಮಾಪೂಜಾ ಇವುಗಳನ್ನು ಮಾಡುತ್ತಾ ಇರುತ್ತಿದ್ದರು ಎಂದು ಭಾವ.

**ವಿಗ್ರಹ—**

**ಮೋಕ್ಷಶಾಸ್ತ್ರಾಮೃತಾಂಬೋಧಿಸೇವಯಾ—** ಮೋಕ್ಷಸಾಧನಂ ಶಾಸ್ತ್ರಂ ಮೋಕ್ಷಶಾಸ್ತ್ರಂ (ಮಧ್ಯಮಪದ-ಲೋಽಪಿಕರ್ಮಧಾರಯ ಸಮಾಸ) ಅಮೃತಸ್ಯ ಅಂಭೋಧಿಃ ಅಮೃತಾಂಭೋಧಿಃ, ಮೋಕ್ಷಶಾಸ್ತ್ರ-ಮೇವ ಅಮೃತಾಂಭೋಧಿಃ ಮೋಕ್ಷಶಾಸ್ತ್ರಾಮೃತಾಂಭೋಧಿಃ, (ಅವಧಾರಣಪೂರ್ವಪದ ಕರ್ಮ-ಧಾರಯ) (ಅಥವಾ ಮೋಕ್ಷಶಾಸ್ತ್ರಂ ಅಮೃತಾಂಭೋಧಿರಿವ ಮೋಕ್ಷಶಾಸ್ತ್ರಾಮೃತಾಂಭೋಧಿಃ, ಉಪಮಾನೋತ್ತರಪದಕರ್ಮಧಾರಯ) ಮೋಕ್ಷಶಾಸ್ತ್ರಾಮೃತಾಂಭೋಧೇಃಸೇವಾ, ಮೋಕ್ಷಶಾಸ್ತ್ರಾ-ಮೃತಾಂಭೋಧಿಸೇವಾ, ತಯಾ ।

**ನಿತ್ಯನಿರ್ವೃತಾಃ—** ನಿತ್ಯಂ ನಿರ್ವೃತಾಃ ನಿತ್ಯನಿರ್ವೃತಾಃ ।

**ಚಕ್ರಿಚಾರುತರಾರ್ಚಾಸು**— ಚಕ್ರಂ ಅಸ್ಯ ಅಸ್ತೀತಿ ಚಕ್ರೀ, ಅತಿಶಯೇನ ಚಾರವಃ ಚಾರುತರಾಃ, ಚಾರುತರಾಶ್ಚತಾಃ ಅರ್ಚಾಶ್ಚ ಚಾರುತರಾರ್ಚಾಃ, ಚಕ್ರಿಣಃ ಚಾರುತರಾರ್ಚಾಃ ಚಕ್ರಿಚಾರುತರಾರ್ಚಾಃ, ತಾಸು ।

**ಚಕ್ರಿಣಃ**— ಚಕ್ರಂ ಅಸ್ಯ ಅಸ್ತೀತಿ ಚಕ್ರೀ, ತಸ್ಯ ।

**ಚರಣಾರ್ಚಕಾಃ**— ಅರ್ಚಂತೀತಿ ಅರ್ಚಕಾಃ, ಚರಣಯೋಃ ಅರ್ಚಕಾಃ ಚರಣಾರ್ಚಕಾಃ ।

**ಪ್ರಯೋಗ**— ಮೋಕ್ಷಶಾಸ್ತ್ರಾಮೃತಾಂಭೋಧಿಸೇವಯಾ ನಿತ್ಯನಿರ್ವೃತ್ತೈಃ ಚಕ್ರಿಚಾರುತರಾರ್ಚಾಸು ಚಕ್ರಿಣಃ ಚರಣಾರ್ಚಕೈಃ (ಅನೇಕೈಃ ಶಿಷ್ಯೈಃ ಅಭೂಯತ) ।

★ ★ ★

**ಅವತಾರಿಕಾ**— ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಲ್ಲಿ ವರ್ಣಿತರಾದ ಈ ಒಂಭತ್ತು ಮಂದಿ ಯತಿಗಳಿಗೂ, ಇಲ್ಲಿ ವರ್ಣಿತರಾಗದ ಇತರ ಆಚಾರ್ಯ ಶಿಷ್ಯರಾದ ಯತಿಗಳಿಗೂ ಅನೇಕ ಪ್ರಶಿಷ್ಯರಿದ್ದರೆಂದು ಹೇಳುತ್ತಾರೆ.

**ಮಧ್ವಪ್ರಶಿಷ್ಯಾ ಬಹವಃ ಶಿಷ್ಯಾ ಯೇಷಾಂ ಮುಹುಸ್ತಥಾ ।**
**ಅಲಂಚಕ್ರುರಲಂ ಪೃಥ್ವೀಂ ಸರ್ವೇ ಸದ್ಗುಣಭೂಷಣಾಃ ॥ 132 ॥**

**ಪದಚ್ಛೇದ**— ಮಧ್ವಪ್ರಶಿಷ್ಯಾಃ, ಬಹವಃ, ಶಿಷ್ಯಾಃ, ಯೇಷಾಂ, ಮುಹುಃ, ತಥಾ, ಅಲಂಚಕ್ರುಃ, ಅಲಂ, ಪೃಥ್ವೀಂ, ಸರ್ವೇ, ಸದ್ಗುಣಭೂಷಣಾಃ ।

**ಅನ್ವಯ**— ಬಹವಃ, ಮಧ್ವಪ್ರಶಿಷ್ಯಾಃ, ತಥಾ, ಯೇಷಾಂ, ಶಿಷ್ಯಾಃ, ಮುಹುಃ, ಸರ್ವೇ, ಸದ್ಗುಣಭೂಷಣಾಃ, ಪೃಥ್ವೀಂ, ಅಲಂ, ಅಲಂಚಕ್ರುಃ ।

**ಅನ್ವಯಾರ್ಥ**—

**ಬಹವಃ** = ಬಹುಸಂಖ್ಯಾಕರಾದ,
**ಮಧ್ವಪ್ರಶಿಷ್ಯಾಃ** = ಶ್ರೀಮಧ್ವಾಚಾರ್ಯರ ಶಿಷ್ಯರ ಶಿಷ್ಯರು,
**ತಥಾ** = ಹಾಗೆಯೇ,
**ಯೇಷಾಂ ಶಿಷ್ಯಾಃ** = ಯಾರ ಶಿಷ್ಯರು,
**ಮುಹುಃ** = ಮತ್ತು
**(ತೇ) ಸರ್ವೇ** = ಪರಂಪರೆಯಿಂದ ಶಿಷ್ಯರಾದ ಅವರು ಎಲ್ಲರೂ (ಪ್ರಶಿಷ್ಯಶಿಷ್ಯಾದಿಗಳೂ),
**ಸದ್ಗುಣಭೂಷಣಾಃ (ಸಂತಃ)** = ಒಳ್ಳೆಯ ಗುಣಗಳೇ ಅಲಂಕಾರವಾಗಿ ಉಳ್ಳವರಾಗಿ,
**ಪೃಥ್ವೀಂ** = ಭೂಮಿಯನ್ನು,
**ಅಲಂ** = ಹೆಚ್ಚಾಗಿ, (ಅತಿಶಯವಾಗಿ)
**ಅಲಂಚಕ್ರುಃ** = ಅಲಂಕರಿಸಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರಿಗೆ ಅನೇಕ ಮಂದಿ ಪ್ರಶಿಷ್ಯರೂ ಇದ್ದರು. ಅಂದರೆ ಆಚಾರ್ಯರ ಶಿಷ್ಯರಿಗೂ ಶಿಷ್ಯರಿದ್ದರು. ಹಾಗೆಯೇ ಆ ಪ್ರಶಿಷ್ಯರುಗಳ ಶಿಷ್ಯರೂ, ತಿರುಗಿ ಅವರ ಶಿಷ್ಯರೂ ಕೂಡಿ ಈ ಎಲ್ಲಾ ಆಚಾರ್ಯರ ಶಿಷ್ಯ-ಪ್ರಶಿಷ್ಯಾದಿಗಳು ನಿರ್ದೋಷವಾದ ಜ್ಞಾನಭಕ್ತಿವೈರಾಗ್ಯಾದಿಗಳಿಂದ ಅಲಂಕೃತವಾಗಿ ಈ ಭೂಮಂಡಲಕ್ಕೆ ಅಲಂಕಾರಪ್ರಾಯರಾಗಿ ಕಂಗೊಳಿಸುತ್ತಿದ್ದರು.

**ವಿಗ್ರಹ ಮತ್ತು ಕೋಶ**—

**ಮಧ್ವಪ್ರಶಿಷ್ಯಾಃ**— ಮಧ್ವಸ್ಯ ಪ್ರಶಿಷ್ಯಾಃ ಮಧ್ವಪ್ರಶಿಷ್ಯಾಃ ।

**ಸದ್ಗುಣಭೂಷಿಣಾಃ—** ಸಂತಶ್ಚತೇ ಗುಣಾಶ್ಚ ಸದ್ಗುಣಾಃ, (ನಿರ್ದೋಷವಾದ ತಪಸ್ಸು, ಜ್ಞಾನ, ಭಕ್ತಿ, ವೈರಾಗ್ಯ ಮುಂತಾದ ಗುಣಗಳು) ಸದ್ಗುಣಾ ಏವ ಭೂಷಣಾನಿ ಯೇಷಾಂ ತೇ ಸದ್ಗುಣಭೂಷಣಾಃ । ಅಲಂ = ಅತಿಶಯವಾಗಿ, 'ಅಲಂಭೂಷಣಪರ್ಯಾಪ್ತಿಶಕ್ತಿವಾರಣವಾಚಕಂ' ಅಮರ. ಪೃಥ್ವೀ = ಭೂಮಿ, 'ಗೋತ್ರಾ ಕುಃ ಪೃಥಿವೀ ಪೃಥ್ವೀ ಕ್ಷ್ಮಾವನಿರ್ಮೇದಿನೀ ಮಹೀ' ಅಮರ.

**ಕ್ರಿಯಾಪದ— ಅಲಂಚಕ್ರುಃ** - ಅಲಂ + ಚಕ್ರುಃ, ಚಕಾರ ಚಕ್ರತುಃ ಚಕ್ರುಃ, ಇತ್ಯಾದಿ, ಅಲಂ ಎಂಬ ಭೂಷಣಾರ್ಥಕ ಅವ್ಯಯಪೂರ್ವಕವಾದ (ಡು)ಕೃ ಇಞ್ ಕರಣೇ ಧಾತು ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಬಹುವಚನ ।

**ಪ್ರಯೋಗ—** ಬಹುಭಿಃ ಮಧ್ವಪ್ರಶಿಷ್ಯೈಃ ತಥಾ ಯೇಷಾಂ ಶಿಷ್ಯೈಃ ಮುಹುಃ ಸರ್ವೈಃ ಸದ್ಗುಣಭೂಷಣ್ಯೈಃ ಪೃಥ್ವೀ ಅಲಂ ಅಲಂಚಕ್ರೇ ।

★ ★ ★

**ಅವತಾರಿಕಾ—** ಆ ಶಿಷ್ಯರ ಗುಣಗಳನ್ನೇ ವರ್ಣಿಸುತ್ತಾರೆ.

**ಸದಾ ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ ।**
**ಸರ್ವೇ ದುರ್ವಾದಿದುರ್ವಾದಕಾಂಡಖಂಡನಮಂಡನಾಃ ॥ 133 ॥**

**ಪದಚ್ಛೇದ—** ಸದಾ, ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ, ಸರ್ವೇ, ದುರ್ವಾದಿದುರ್ವಾದಕಾಂಡಖಂಡನಮಂಡನಾಃ ।

**ಅನ್ವಯ—** ಸರ್ವೇ (ಅಪಿ), ಸದಾ, ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ, ದುರ್ವಾದಿದುರ್ವಾದಕಾಂಡಖಂಡನಮಂಡನಾಃ, ಅಭವನ್ ।

**ಅನ್ವಯಾರ್ಥ—**

**ಸರ್ವೇ (ಅಪಿ)** = ಸಕಲ ಶಿಷ್ಯರೂ,

**ಸದಾ** = ಯಾವಾಗಲೂ,

**ಸಕಲ** = ಸಮಸ್ತವಾದ,

**ಸಚ್ಛಾಸ್ತ್ರ**= ಸರ್ವಜ್ಞಾಚಾರ್ಯರ ಶ್ರೇಷ್ಠವಾದ ಸಿದ್ಧಾಂತ ಗ್ರಂಥಗಳ,

**ವ್ಯಾಖ್ಯಾಸೌಖ್ಯ ಅಮೃತಾಬ್ಧಿಗಾಃ** = ಪ್ರವಚನದಿಂದ ಉಂಟಾದ ಆನಂದವೆಂಬ ಅಮೃತ ಸಮುದ್ರವನ್ನು ಹೊಂದಿದವರಾಗಿ,

**ದುರ್ವಾದಿದುರ್ವಾದಕಾಂಡಖಂಡನಮಂಡನಾಃ** = ದುಷ್ಟವಾದಿಗಳ ಕೆಟ್ಟವಾದಗಳೆಂಬ ಮರದ ಕಾಂಡವನ್ನು (ಕೆಟ್ಟವಾದಗಳ ಸಮೂಹವನ್ನು) ತುಂಡು ಮಾಡುವುದೇ (ಖಂಡಿಸುವುದೇ) ಅಲಂಕಾರವಾಗಿ ಉಳ್ಳವರಾಗಿ,

**(ಅಭವನ್** = ಆಗಿದ್ದರು).

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಆ ಶಿಷ್ಯ-ಪ್ರಶಿಷ್ಯರೆಲ್ಲರೂ ಯಾವಾಗಲೂ ಮೋಕ್ಷಶಾಸ್ತ್ರದ ಅಭ್ಯಾಸ ಮತ್ತು ಪ್ರವಚನದಲ್ಲಿ ಆಸಕ್ತರಾಗಿದ್ದರು. ವೇದಾಂತಶಾಸ್ತ್ರದ ನಿರಂತರ ಪರಿಶೀಲನದಿಂದ ಉಂಟಾಗುವ ಆನಂದವೆಂಬ ಅಮೃತ-ಸಮುದ್ರದಲ್ಲಿ ಅವರು ತೇಲಾಡುತ್ತಿದ್ದರು. ಅವರು ಯಾವಾಗಲೂ ದುರ್ವಾದಿಗಳ ಕುತರ್ಕ-ಕುವಚನಗಳನ್ನು ನಿರಾಕರಿಸುತ್ತಾ, ದುರ್ವಾದಿನಿರಾಕರಣವೆಂಬ ಉತ್ತಮವಾದ ಅಲಂಕಾರದಿಂದ ಶೋಭಿಸುತ್ತಿದ್ದರು. ದುರ್ವಾದಿಗಳ ದುಷ್ಟ-

ವಾದಗಳನ್ನು ಹುಲ್ಲುಕಡ್ಡಿಗಳನ್ನೆಂಬಂತೆ ಅಥವಾ ತರಕಾರಿಗಿಡ ಮತ್ತು ಹೂಗಿಡಗಳ ದಂಟುಗಳನ್ನೋ ಎಂಬಂತೆ ಅನಾಯಾಸವಾಗಿ ಖಂಡಿಸುತ್ತಿದ್ದರು. ಸರ್ವದಾ ವೇದಾಂತನಿಷ್ಠರಾಗಿದ್ದು ದುರ್ವಾದಿಗಳನ್ನು ಜಯಿಸತಕ್ಕವರಾಗಿದ್ದರು ಎಂದು ಭಾವ.

ವಿಗ್ರಹ—

**ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ**— ಸಚ್ಚ ತತ್ ಶಾಸ್ತ್ರಂ ಚ ಸಚ್ಛಾಸ್ತ್ರಂ ಸಚ್ಛಾಸ್ತ್ರಸ್ಯ ವ್ಯಾಖ್ಯಾ ಸಚ್ಛಾಸ್ತ್ರವ್ಯಾಖ್ಯಾ, ಸುಖಮೇವ ಸೌಖ್ಯಂ, ಸಚ್ಛಾಸ್ತ್ರವ್ಯಾಖ್ಯಯಾ ಸೌಖ್ಯಂ ಸಚ್ಛಾಸ್ತ್ರವ್ಯಾಖ್ಯಾಸೌಖ್ಯಂ, ಅಮೃತಸ್ಯ ಅಬ್ಧಿಃ ಅಮೃತಾಬ್ಧಿಃ, ಸಚ್ಛಾಸ್ತ್ರವ್ಯಾಖ್ಯಾಸೌಖ್ಯಮೇವ ಅಮೃತಾಬ್ಧಿಃ ಸಚ್ಛಾಸ್ತ್ರವ್ಯಾಖ್ಯಾಸೌಖ್ಯಾ-ಮೃತಾಬ್ಧಿಃ, ಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಂ ಗಚ್ಛಂತೀತಿ ಸಚ್ಛಾಸ್ತ್ರವ್ಯಾಖ್ಯಾಖ್ಯಾಮೃತಾಬ್ಧಿಗಾಃ । (ಯಾವಾಗಲೂ ಮಧ್ವಶಾಸ್ತ್ರವ್ಯಾಖ್ಯಾನದಿಂದ ಉಂಟಾದ ಸ್ವರೂಪ ಸುಖದ ಆನಂದವನ್ನು ಅನುಭವಿಸುತ್ತಿರುವವರು ಎಂದು ಅರ್ಥ).

**ದುರ್ವಾದಿದುರ್ವಾದಕಾಂಡಖಂಡನಮಂಡನಾಃ**— ದುಷ್ಟಶ್ಚಾಸೌ ವಾದಶ್ಚ ದುರ್ವಾದಃ, ದುರ್ವಾದಃ ಏಷಾಂ ಅಸ್ತೀತಿ ದುರ್ವಾದಿನಃ, ದುಷ್ಟಾಶ್ಚ ತೇ ವಾದಾಶ್ಚ ದುರ್ವಾದಾಃ, ದುರ್ವಾದಿನಾಂ ದುರ್ವಾದಾಃ ದುರ್ವಾದಿದುರ್ವಾದಾಃ, ದುರ್ವಾದಿದುರ್ವಾದಾನಾಂ ಕಾಂಡಂ ದುರ್ವಾದಿದುರ್ವಾದಕಾಂಡಂ, ದುರ್ವಾದಿದುರ್ವಾದಕಾಂಡಸ್ಯ ಖಂಡನಂ ದುರ್ವಾದಿದುರ್ವಾದಕಾಂಡಖಂಡನಂ, ದುರ್ವಾದಿ-ದುರ್ವಾದಕಾಂಡ ಖಂಡನಂ ಏವ ಮಂಡನಂ·ಯೇಷಾಂ ತೇ ದುರ್ವಾದಿದುರ್ವಾದಕಾಂಡಖಂಡನ-ಮಂಡನಾಃ । ಕಾಂಡ = ಸಮೂಹ, ಕೋಲು, ದೇಟು, 'ಕಾಂಡೋಽಸ್ತ್ರೀ ದಂಡಬಾಣಾರ್ವವರ್ಗಾ-ವಸರವಾರಿಷು' ಅಮರ ।

**ಪ್ರಯೋಗ**— ಸರ್ವೈರಪಿ ಸದಾ ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗೈಃ ದುರ್ವಾದಿದುರ್ವಾದಕಾಂಡ-ಖಂಡನಮಂಡನೈಃ ಅಭೂಯತ ।

★ ★ ★

**ಅವತಾರಿಕಾ**— ಆ ಶಿಷ್ಯರ ಗುಣವಿಶೇಷಗಳನ್ನು ಮತ್ತೂ ವರ್ಣಿಸುತ್ತಾರೆ.

**ಭೂರಿಭಕ್ತಿಭರಾಃ ಕೇಚಿದಪ್ಯಲ್ಪಶ್ರುತ(ತಿ)ಸಂಪದಃ ।**
**ಅಪ್ಯಲ್ಪಬೋಧಾ ಅಪರೇ ಬಹುಶ್ರುತಮಹಾಗುಣಾಃ ॥ 134 ॥**

**ಪದಚ್ಛೇದ**— ಭೂರಿಭಕ್ತಿಭರಾಃ, ಕೇಚಿತ್, ಅಪಿ, ಅಲ್ಪಶ್ರುತ(ತಿ)ಸಂಪದಃ, ಅಪಿ, ಅಲ್ಪಬೋಧಾಃ, ಅಪರೇ, ಬಹುಶ್ರುತಮಹಾಗುಣಾಃ ।

**ಅನ್ವಯ**— ಕೇಚಿತ್, ಅಲ್ಪಶ್ರುತಸಂಪದಃ, ಅಪಿ, ಭೂರಿಭಕ್ತಿಭರಾಃ, ಅಪರೇ, ಅಲ್ಪಬೋಧಾಃ, ಅಪಿ, ಬಹುಶ್ರುತ-ಮಹಾಗುಣಾಃ (ಅಭವನ್) ।

**ಅನ್ವಯಾರ್ಥ**—

**ಕೇಚಿತ್** = ಕೆಲವರು,
**ಅಲ್ಪಶ್ರುತಸಂಪದಃ ಅಪಿ** = ಅಲ್ಪ-ಸ್ವಲ್ಪವಾದ
**ಶ್ರುತಸಂಪದಃ ಅಪಿ** = ಶಾಸ್ತ್ರಶ್ರವಣದ ಸಮೃದ್ಧಿಯುಳ್ಳವರಾದರೂ,
**ಭೂರಿ** = ಹೆಚ್ಚಾದ,

ಭಕ್ತಿಭರಾಃ = ಭಕ್ತಿಯ ಅತಿಶಯವುಳ್ಳವರು,

ಅಪರೇ = ಮತ್ತೆ ಕೆಲವರು,

ಅಲ್ಪಬೋಧಾಃ ಅಪಿ = ಸ್ವಲ್ಪ ತಿಳುವಳಿಕೆಯುಳ್ಳವರಾದರೂ,

ಬಹುಶ್ರುತ(ತಿ)ಮಹಾಗುಣಾಃ = ಬಹಳ ಶ್ರವಣ ಮಾಡಿರುವುದರಿಂದ ಶ್ರೇಷ್ಠವಾದ ಗುಣವುಳ್ಳವರು (ಆಸನ್ = ಆಗಿದ್ದರು)

ತಾತ್ಪರ್ಯ— ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ಕೆಲವರು ಸ್ವಲ್ಪವಾಗಿಯೇ ಶಾಸ್ತ್ರ ಶ್ರವಣ ಮಾಡಿದ್ದರೂ ಅಧಿಕವಾದ ಹರಿಗುರುಭಕ್ತಿ ಉಳ್ಳವರಾಗಿದ್ದರು. ಬೇರೆ ಕೆಲವರು ಬುದ್ಧಿಶಕ್ತಿ ಕಡಿಮೆ ಇದ್ದವರಾಗಿದ್ದರೂ ಹೆಚ್ಚಾಗಿ ಶಾಸ್ತ್ರಶ್ರವಣ ಮಾಡಿದ್ದರಿಂದ ಹೆಚ್ಚು ಗುಣವುಳ್ಳವರಾಗಿದ್ದರು. ಕೆಲವರು ಶಾಸ್ತ್ರಾಭ್ಯಾಸ ಕಡಿಮೆ ಮಾಡಿದ್ದರೂ ಹೆಚ್ಚು ಭಕ್ತಿಯುಳ್ಳವ-ರಾಗಿದ್ದರು. ಕೆಲವರು ಸಾಧಾರಣ ಬುದ್ಧಿಯವರು, ಗ್ರಹಣಧಾರಣಶಕ್ತಿ ಬಹಳ ಕಡಿಮೆಯುಳ್ಳವರು, ಆದರೂ ಅನೇಕ ಬಾರಿ ಶಾಸ್ತ್ರವನ್ನು ಶ್ರವಣಮಾಡಿರುವುದು ಅವರ ಮಹಾಗುಣವಾಗಿತ್ತು ಎಂದು ಭಾವ.

ವಿಗ್ರಹ—

ಭೂರಿಭಕ್ತಿಭರಾಃ— ಭಕ್ತೇಃ ಭರಃ ಭಕ್ತಿಭರಃ ಭೂರಿಃ ಭಕ್ತಿಭರಃ, ಯೇಷಾಂ ತೇ ಭೂರಿಭಕ್ತಿಭರಾಃ ।

ಅಲ್ಪಶ್ರುತಸಂಪದಃ— ಶ್ರುತಸ್ಯ (ಶ್ರುತೇಃ) ಸಂಪತ್ ಶ್ರುತ(ತಿ) ಸಂಪತ್, ಅಲ್ಪಾ ಶ್ರುತಸಂಪತ್ ಯೇಷಾಂ ತೇ ಅಲ್ಪಶ್ರುತಸಂಪದಃ ।

ಅಲ್ಪಬೋಧಾಃ— ಅಲ್ಪಃ ಬೋಧಃ ಯೇಷಾಂ ತೇ ಅಲ್ಪಬೋಧಾಃ ।

ಬಹುಶ್ರುತಮಹಾಗುಣಾಃ— ಬಹು ಚ ತತ್ ಶ್ರುತಂ ಚ ಬಹುಶ್ರುತಂ, ಬಹುಶ್ರುತಂ ಮಹಾನ್ ಗುಣಃ ಯೇಷಾಂ ತೇ ಬಹುಶ್ರುತಮಹಾಗುಣಾಃ ।

ಕ್ರಿಯಾಪದ ಮತ್ತು ಪ್ರಯೋಗ— (ಇಲ್ಲಿ ಕ್ರಿಯಾಪದವಿಲ್ಲ, ಅಭವನ್ ಎಂದು ಅಧ್ಯಾಹಾರ) ಕೈಶ್ಚಿತ್ ಅಲ್ಪಶ್ರುತ-ಸಂಪದ್ಭಿರಪಿ ಭೂರಿಭಕ್ತಿಭರೈಃ (ಅಭೂಯತ) ಅಪರೈಃ ಅಲ್ಪಬೋಧೈಃ ಅಪಿ ಬಹುಶ್ರುತ ಮಹಾಗುಣೈಃ (ಅಭೂಯತ) ।

★ ★ ★

ಅವತಾರಿಕಾ— ಆಚಾರ್ಯರಿಗೆ ಕೆಲವು ಗೃಹಸ್ಥ ಶಿಷ್ಯರೂ ಇದ್ದರು ಎನ್ನುತ್ತಾರೆ.

**ಬಹವೋ ಗೃಹಿಣೋಽಪ್ಯಸ್ಮಾತ್ ಸಮಗ್ರಾನುಗ್ರಹಂ ಯಯುಃ ।**
**ದೀಪ್ತಾ ಯತ್ರಾಗ್ನಯ ಇವ ತ್ರಯೋ ಲಿಕುಚಶೇಖರಾಃ ॥ 135 ॥**

ಪದಚ್ಛೇದ— ಬಹವಃ, ಗೃಹಿಣಃ, ಅಪಿ, ಅಸ್ಮಾತ್, ಸಮಗ್ರಾನುಗ್ರಹಂ, ಯಯುಃ, ದೀಪ್ತಾಃ, ಯತ್ರ, ಅಗ್ನಯಃ, ಇವ, ತ್ರಯಃ, ಲಿಕುಚಶೇಖರಾಃ ।

ಅನ್ವಯ— ಅಸ್ಮಾತ್, ಬಹವಃ, ಗೃಹಿಣಃ, ಅಪಿ, ಸಮಗ್ರಾನುಗ್ರಹಂ, ಯಯುಃ, ಯತ್ರ, ತ್ರಯಃ, ಲಿಕುಚಶೇಖರಾಃ, ಅಗ್ನಯಃ, ಇವ, ದೀಪ್ತಾಃ (ಆಸನ್) ।

ಅನ್ವಯಾರ್ಥ—

ಅಸ್ಮಾತ್ = ಈ ಮಧ್ವಾಚಾರ್ಯರಿಂದ,

ಬಹವಃ = ಬಹಳಮಂದಿ,

ಗೃಹಿಣಃ ಅಪಿ = ಗೃಹಸ್ಥರೂ,

**ಸಮಗ್ರ ಅನುಗ್ರಹಂ** = ಸಂಪೂರ್ಣವಾದ ಅನುಗ್ರಹವನ್ನು,
**ಯಯುಃ** = ಹೊಂದಿದರು.
**ಯತ್ರ** = ಯಾವ ಗೃಹಸ್ಥರಲ್ಲಿ,
**ತ್ರಯಃ** = ಮೂವರು,
**ಲಿಕುಚಶೇಖರಾಃ** = ಲಿಕುಚವಂಶದಲ್ಲಿ ಶ್ರೇಷ್ಠರಾದ ತ್ರಿವಿಕ್ರಮಪಂಡಿತರೇ ಮೊದಲಾದವರು,
**ಅಗ್ನಯಃ ಇವ** = ಅಗ್ನಿಗಳಂತೆ,
**ದೀಪ್ತಾಃ** = ಪ್ರಕಾಶಮಾನರಾದವರು (ಅಭವನ್ = ಆದರು).

**ತಾತ್ಪರ್ಯ—** ಇಂತಹ ಶ್ರೀಮಧ್ವಾಚಾರ್ಯರಿಂದ ಬಹಳ ಮಂದಿ ಗೃಹಸ್ಥರೂ ಸಂಪೂರ್ಣವಾದ ಅನುಗ್ರಹವನ್ನು ಪಡೆದರು. ಅವರಲ್ಲಿ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬ ಮೂರು ಅಗ್ನಿಗಳಂತೆ ಪ್ರಕಾಶಮಾನರಾದ ಲಿಕುಚ-ವಂಶದ ತ್ರಿವಿಕ್ರಮಪಂಡಿತಾಚಾರ್ಯರು ಅವರ ತಮ್ಮ ಶಂಕರಾಚಾರ್ಯರು ಅವರ ವಂಶದ ಮತ್ತೊಬ್ಬ ಶಂಕರಾ-ಚಾರ್ಯರು ಹೀಗೆ ಮೂವರು ಮುಖ್ಯಸ್ಥರು. ಅನೇಕ ಗೃಹಸ್ಥ ಶಿಷ್ಯವರ್ಗದಲ್ಲಿ ಈ ಮೂವರು ಅತಿಶ್ರೇಷ್ಠರಾಗಿದ್ದರು ಎಂದು ಭಾವ.

**ವಿಶೇಷಾಂಶ—** ತ್ರಯಃ = ಮೂರು ಮಂದಿ ಎಂಬಲ್ಲಿ ಭಾವಪ್ರಕಾಶಿಕಾ ವ್ಯಾಖ್ಯಾನ ಹೀಗಿದೆ. ತ್ರಯಃ ತ್ರಿವಿಕ್ರಮಾಚಾರ್ಯಃ, ಶಂಕರಾರ್ಯೌ ದ್ವೌ ಚ = ತ್ರಿವಿಕ್ರಮಪಂಡಿತಾಚಾರ್ಯರು ಅವರ ತಮ್ಮಂದಿರಾದ ಶಂಕರಾ-ಚಾರ್ಯರೊಬ್ಬರು, ಮತ್ತೊಬ್ಬರು ಶಂಕರಾಚಾರ್ಯರು ಇವರೇ ಈ ಮೂರು ಮಂದಿ ಗೃಹಸ್ಥರು ಎಂದು ಭಾವಪ್ರಕಾಶಿಕೆಯ ಅಭಿಪ್ರಾಯ.

**ಕ್ರಿಯಾಪದ—** **ಯಯುಃ**, ಯಯೌ ಯಯತುಃ ಯಯುಃ ಇತ್ಯಾದಿ, ಯಾ ಪ್ರಾಪಣೇ ಸಕರ್ಮಕ ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಬಹುವಚನ ।

**ಪ್ರಯೋಗ—** ಅಸ್ಮಾತ್ ಬಹುಭಿಃ ಗೃಹಿಭಿಃ ಅಪಿ ಸಮಗ್ರಾನುಗ್ರಹಃ ಯಯೇ, ಯತ್ರ ತ್ರಿಭಿಃ ಲಿಕುಚಶೇಖರೈಃ ಅಗ್ನಿಭಿಃ ಇವ ದೀಪ್ತೈಃ (ಅಭೂಯತ) ।

★ ★ ★

**ಅವತಾರಿಕಾ—** ಅಂತಹ ಗೃಹಸ್ಥ ಶಿಷ್ಯಶ್ರೇಷ್ಠರ ಗುಣಗಳನ್ನು ವರ್ಣಿಸುತ್ತಾರೆ.

**ಮಾಧ್ವಂ ನಿಯೋಗಂ ಯೇ ಪ್ರಾಯೋ ನಾತ್ಯಜನ್ ವಿದುಷಾಂ ವರಾಃ ।**
**ಶಿಷ್ಯಕ್ಷೇತ್ರೇಷು ಸದ್ವಿದ್ಯಾಬೀಜಾವಾಪ್ತೈಕದೀಕ್ಷಿತಾಃ ॥ 136 ॥**

**ಪದಚ್ಛೇದ—** ಮಾಧ್ವಂ, ನಿಯೋಗಂ, ಯೇ, ಪ್ರಾಯಃ, ನ, ಅತ್ಯಜನ್, ವಿದುಷಾಂ, ವರಾಃ, ಶಿಷ್ಯಕ್ಷೇತ್ರೇಷು, ಸದ್ವಿದ್ಯಾಬೀಜಾವಾಪ್ತೈಕದೀಕ್ಷಿತಾಃ ।

**ಅನ್ವಯ—** ಶಿಷ್ಯಕ್ಷೇತ್ರೇಷು, ಸದ್ವಿದ್ಯಾಬೀಜಾವಾಪ್ತೈಕದೀಕ್ಷಿತಾಃ, ವಿದುಷಾಂ, ವರಾಃ, ಯೇ, ಪ್ರಾಯಃ, ಮಾಧ್ವಂ, ನಿಯೋಗಂ, ನ, ಅತ್ಯಜನ್ ।

**ಅನ್ವಯಾರ್ಥ—**

**ಶಿಷ್ಯಕ್ಷೇತ್ರೇಷು** = ಶಿಷ್ಯರೆಂಬ ಹೊಲಗದ್ದೆಗಳಲ್ಲಿ, (ಬೀಜವು ಹುಲುಸಾಗಿ ಅಭಿವೃದ್ಧಿ ಹೊಂದಲು ಯೋಗ್ಯವಾದ ಪ್ರದೇಶಗಳಲ್ಲಿ),

ಸದ್ವಿದ್ಯಾಬೀಜಾವಾಪೈಕದೀಕ್ಷಿತಾಃ = ವೇದಾಂತ ವಿದ್ಯಾ ಎಂಬ ಬೀಜವನ್ನು ಬಿತ್ತುವುದರಲ್ಲಿಯೇ, ಮುಖ್ಯದೀಕ್ಷೆ ಉಳ್ಳವರಾಗಿಯೇ,

ವಿದುಷಾಂ = ಪಂಡಿತರ,

ವರಾಃ = ಶ್ರೇಷ್ಠರಾದ,

ಯೇ = ಯಾರು,

ಪ್ರಾಯಃ = ಬಹಳಮಟ್ಟಿಗೆ,

ಮಾಧ್ವಂ = ಶ್ರೀಮಧ್ವಾಚಾರ್ಯರ ಸಂಬಂಧಿಯಾದ (ಶ್ರೀಮದಾಚಾರ್ಯರಿಂದ ಮಾಡಲ್ಪಟ್ಟ),

ನಿಯೋಗಂ = ಆಜ್ಞೆಯನ್ನು

ನ ಅತ್ಯಜನ್ = ಬಿಡಲಿಲ್ಲ.

ತಾತ್ಪರ್ಯ— ಮೇಲೆ ಹೇಳಿದ ಗೃಹಸ್ಥ ಶಿಷ್ಯರಾದ ಶ್ರೇಷ್ಠ ಪಂಡಿತರು ತಮ್ಮ ಶಿಷ್ಯರಲ್ಲಿ ವೇದಾಂತ ವಿದ್ಯೆಯೆಂಬ ಉತ್ತಮವಾದ ಬೀಜವನ್ನು ಬಿತ್ತುವುದರಲ್ಲಿ ಮುಖ್ಯವಾಗಿ ದೀಕ್ಷೆಯನ್ನು ವಹಿಸಿದ್ದರು. ಫಲವತ್ತಾದ ಹೊಲ-ಗದ್ದೆ ಮುಂತಾದ ಭೂಮಿಗಳಲ್ಲಿ ಬೀಜ ಬಿತ್ತಿದರೆ ಅದು ಹುಲುಸಾಗಿ ಬೆಳೆದು ಫಲ ಕೊಡುವಂತೆ ಇವರು ಆರಿಸಿದ ಶಿಷ್ಯರಲ್ಲಿ ಸದ್ವಿದ್ಯಾ ಎಂಬ ಹೆಸರುಳ್ಳ ವೇದಾಂತ ವಿದ್ಯೆಯನ್ನು ಉಪದೇಶ ಮಾಡುವ ಕಾರ್ಯದಲ್ಲಿ ನಿಯಮದಿಂದ ಪ್ರವೃತ್ತರಾಗುತ್ತಿದ್ದರು ಎಂದು ಅರ್ಥ. ಅವರು ಸ್ವಲ್ಪವೂ ಶ್ರೀಮದಾಚಾರ್ಯರ ಆಜ್ಞೆಯನ್ನು ಮೀರಿ ನಡೆಯುತ್ತಿರಲಿಲ್ಲ. ಆಚಾರ್ಯರ ಗೃಹಸ್ಥ ಶಿಷ್ಯರು ಇಂತಹವರಾಗಿದ್ದರು. ಶ್ರೀಮಧ್ವಾಚಾರ್ಯರ ಆಜ್ಞೆಯನ್ನು ಮೀರದೆ ನಡೆಯುತ್ತ ಶಿಷ್ಯರಿಗೆ ವೇದಾಂತೋಪದೇಶವನ್ನೂ ಮಾಡುತ್ತ ಈ ಗೃಹಸ್ಥರಾದ ಪಂಡಿತಶ್ರೇಷ್ಠರೂ ಆಚಾರ್ಯರ ಸಂನ್ಯಾಸಿ ಶಿಷ್ಯರಂತೆ ಉಲ್ಲೇಖನೀಯರಾಗಿ ತಮ್ಮ ಜೀವನವನ್ನು ಸಾರ್ಥಕಗೊಳಿಸುತ್ತಿದ್ದರು ಎಂದು ತಾತ್ಪರ್ಯ.

ವಿಗ್ರಹ—

ಮಾಧ್ವಂ— ಮಧ್ವಸ್ಯ ಅಯಂ ಮಾಧ್ವಃ, ತಂ ।

ಶಿಷ್ಯಕ್ಷೇತ್ರೇಷು— ಶಿಷ್ಯಾ ಏವ ಕ್ಷೇತ್ರಾಣಿ ಶಿಷ್ಯಕ್ಷೇತ್ರಾಣಿ, ತೇಷು ।

ಸದ್ವಿದ್ಯಾಬೀಜಾವಾಪೈಕದೀಕ್ಷಿತಾಃ— ಸತೀ ಚಾಸೌ ವಿದ್ಯಾ ಚ ಸದ್ವಿದ್ಯಾ, (ಸತಃ = ಸನ್ನಾಮಕ ಪರಬ್ರಹ್ಮಣಃ ವಿದ್ಯಾ ಸದ್ವಿದ್ಯಾ) ಸದ್ವಿದ್ಯಾಯಾಃ ಬೀಜಂ ಸದ್ವಿದ್ಯಾಬೀಜಂ, ಸದ್ವಿದ್ಯಾಬೀಜಸ್ಯ ಆವಾಪಃ ಸದ್ವಿದ್ಯಾ-ಬೀಜಾವಾಪಃ, ಏಕೇ ಚ ತೇ ದೀಕ್ಷಿತಾಶ್ಚ ಏಕದೀಕ್ಷಿತಾಃ, ಸದ್ವಿದ್ಯಾಬೀಜಾವಾಪೇ ಏಕದೀಕ್ಷಿತಾಃ ಸದ್ವಿದ್ಯಾ-ಬೀಜಾವಾಪೈಕದೀಕ್ಷಿತಾಃ ।

ಕೋಶ— ಪ್ರಾಯಃ = ಹೆಚ್ಚಾಗಿ, 'ಪ್ರಾಯಶ್ಚಾನಶನೇ ಮೃತ್ಯೌ ತುಲ್ಯಬಾಹುಲ್ಯಯೋಃ' ವಿಶ್ವ ಕ್ಷೇತ್ರ = ಹೊಲಗದ್ದೆ ಶರೀರ, 'ಕ್ಷೇತ್ರಂ ಶರೀರೇ ಕೇದಾರೇ' ವಿಶ್ವ ।

ಕ್ರಿಯಾಪದ— ಅತ್ಯಜನ್ - ಅತ್ಯಜತ್ ಅತ್ಯಜತಾಂ ಅತ್ಯಜನ್ ಇತ್ಯಾದಿ, ತ್ಯಜ ಹಾನೌ (ಬಿಡುವುದು) ಸಕ. ಪರ. ಅನಿಟ್ ಅನದ್ಯತನಭೂತೇ ಲಙ್ ಪ್ರಥಮಪುರುಷ ಬಹುವಚನ ।

ಪ್ರಯೋಗ— ಶಿಷ್ಯಕ್ಷೇತ್ರೇಷು ಸದ್ವಿದ್ಯಾಬೀಜಾವಾಪೈಕದೀಕ್ಷಿತೈಃ ವಿದುಷಾಂ ವರೈಃ ಯೈಃ ಪ್ರಾಯಃ ಮಾಧ್ವಃ ನಿಯೋಗಃ ನ ಅತ್ಯಜತ ।

★ ★ ★

**ಅವತಾರಿಕಾ—** ಆಚಾರ್ಯರಿಗೆ ಕೆಲವು ಗ್ರಾಮಾಧಿಪತಿಗಳಾದ ಶಿಷ್ಯರೂ ಇದ್ದರು ಎಂದು ಹೇಳುತ್ತಾರೆ.

**ಗ್ರಾಮಣ್ಯೋ ಬ್ರಾಹ್ಮಣಾಗ್ರಣ್ಯಃ ಪ್ರಾಪುಃ ಪೂರ್ಣೇಕ್ಷಶಿಷ್ಯತಾಮ್ ।**
**ಯೇಷಾಂ ಸದ್ಗುಪ್ತಿಮಾತ್ರೇಣ ಭವೇತ್ ಕಿಲ ಪರಂ ಪದಮ್ ॥ 137 ॥**

**ಪದಚ್ಛೇದ—** ಗ್ರಾಮಣ್ಯಃ, ಬ್ರಾಹ್ಮಣಾಗ್ರಣ್ಯಃ, ಪ್ರಾಪುಃ, ಪೂರ್ಣೇಕ್ಷಶಿಷ್ಯತಾಂ, ಯೇಷಾಂ, ಸದ್ಗುಪ್ತಿಮಾತ್ರೇಣ, ಭವೇತ್, ಕಿಲ, ಪರಂ, ಪದಂ ।

**ಅನ್ವಯ—** ಗ್ರಾಮಣ್ಯಃ, ಬ್ರಾಹ್ಮಣಾಗ್ರಣ್ಯಃ, ಪೂರ್ಣೇಕ್ಷಶಿಷ್ಯತಾಂ, ಪ್ರಾಪುಃ, ಯೇಷಾಂ, ಸದ್ಗುಪ್ತಿಮಾತ್ರೇಣ, ಪರಂ, ಪದಂ, ಭವೇತ್, ಕಿಲ ।

**ಅನ್ವಯಾರ್ಥ—**

**ಗ್ರಾಮಣ್ಯಃ** = ಗ್ರಾಮಾಧಿಪತಿಗಳಾದ,
**ಬ್ರಾಹ್ಮಣಾಗ್ರಣ್ಯಃ** = ಬ್ರಾಹ್ಮಣಶ್ರೇಷ್ಠರು,
**ಪೂರ್ಣೇಕ್ಷಶಿಷ್ಯತಾಂ** = ಶ್ರೀಪೂರ್ಣಪ್ರಜ್ಞರ ಶಿಷ್ಯತ್ವವನ್ನು
**ಪ್ರಾಪುಃ** = ಹೊಂದಿದರು,
**ಯೇಷಾಂ** = ಯಾರಿಗೆ,
**ಸದ್ಗುಪ್ತಿಮಾತ್ರೇಣ** = ಸಜ್ಜನರನ್ನು ರಕ್ಷಣೆ ಮಾಡುವ ಮಾತ್ರದಿಂದಲೇ,
**ಪರಂಪದಂ** = ಮೋಕ್ಷವು,
**ಭವೇತ್ ಕಿಲ** = ಆಗುವುದು ನಿಶ್ಚಿತವಾಗಿದೆ.

**ತಾತ್ಪರ್ಯ—** ಕೆಲವು ಮಂದಿ ಗ್ರಾಮಾಧಿಪತಿಗಳೂ ಆಚಾರ್ಯರಿಗೆ ಶಿಷ್ಯರಾಗಿದ್ದರು. ಅವರು ಶಾಸ್ತ್ರಾಭ್ಯಾಸ, ಮನನ, ಧ್ಯಾನಾದಿಗಳನ್ನು ಮಾಡಲಿಲ್ಲ. ಆದರೆ ಆಚಾರ್ಯರ ಮಾರ್ಗಾನುಯಾಯಿಗಳಾದ ಸಜ್ಜನರನ್ನು ಕಾಪಾಡಿದರು. ಆ ಪುಣ್ಯಕಾರ್ಯದಿಂದಲೇ ಅವರಿಗೆ ಶ್ರೇಷ್ಠವಾದ ಮೋಕ್ಷವೆಂಬ ಸ್ಥಾನವು ಲಭ್ಯವಾಗುತ್ತಿತ್ತು. ಇಂತಹ ಗ್ರಾಮಾಧಿಪತಿಗಳೂ ಕೂಡ ಕೆಲವರು ಆಚಾರ್ಯರ ಶಿಷ್ಯರಾಗಿದ್ದರು. ಅವರ ಅನುಗ್ರಹಪಾತ್ರರಾಗಿದ್ದರು. ಕ್ಷತ್ರಿಯರು ಅಥವಾ ಕ್ಷತ್ರಿಯ ಸ್ವಭಾವದ ಇತರರೂ, ದುಷ್ಟನಿಗ್ರಹ-ಶಿಷ್ಟಪರಿಪಾಲನ ಮಾಡುತ್ತಿದ್ದರೆ, ಶ್ರೀಹರಿಯು ಅವರ ಸೇವೆಯಿಂದ ಸಂತುಷ್ಟನಾಗಿ, ಆ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ ಅವರಿಗೆ ಯೋಗ್ಯವಾದ ಶ್ರವಣಾದಿ ಸಾಧನಗಳನ್ನು ಅನುಷ್ಠಾನ ಮಾಡಿಸಿ ಮೋಕ್ಷವನ್ನು ಕೊಡುತ್ತಾನೆ. ಆಚಾರ್ಯರ ಶಿಷ್ಯರಲ್ಲಿ ಇಂತಹವರೂ ಇದ್ದರು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ಗ್ರಾಮಣ್ಯಃ—** ಗ್ರಾಮಂ ನಯಂತೀತಿ ಗ್ರಾಮಣ್ಯಃ । ''ಅಗ್ರಗ್ರಾಮಾಭ್ಯಾಂ ನಯತೇರ್ಣೋ ವಾಚ್ಯಃ'' ಎಂಬ ವಾರ್ತಿಕದಿಂದ ನಕಾರಕ್ಕೆ ಣಕಾರ. ಗ್ರಾಮಣೀಃ = ಗ್ರಾಮಾಧಿಪತಿ,'ಗ್ರಾಮಣೀರ್ನಾಪಿತೇ ಪುಂಸಿ ಶ್ರೇಷ್ಠೇ ಗ್ರಾಮಾಧಿಪೇ ತ್ರಿಷು' ಅಮರ ।

**ಬ್ರಾಹ್ಮಣಾಗ್ರಣ್ಯಃ—** ಬ್ರಾಹ್ಮಣಾನಾಂ ಅಗ್ರಣ್ಯಃ ಬ್ರಾಹ್ಮಣಾಗ್ರಣ್ಯಃ । ಅಗ್ರಣ್ಯಃ ಎಂಬಲ್ಲಿಯೂ ಹಿಂದಿನ ವಾರ್ತಿಕದಿಂದ ಣತ್ವ (ಬ್ರಾಹ್ಮಣಾ ಅಗ್ರಣ್ಯಃ ಯೇಷಾಂ ತೇ ಬ್ರಾಹ್ಮಣಾಗ್ರಣ್ಯಃ = ಈ ವಿಗ್ರಹದಿಂದ ಬ್ರಾಹ್ಮಣರೇ ನಿಯಾಮಕರಾಗಿ ಉಳ್ಳ ಕ್ಷತ್ರಿಯ ವೈಶ್ಯ ಶೂದ್ರರೂ ಆಗಿದ್ದ ಗ್ರಾಮಾಧಿಪತಿಗಳು ಎಂದು ಅರ್ಥ) ।

**ಪೂರ್ಣೇಕ್ಷಶಿಷ್ಯತಾಂ—** ಪೂರ್ಣಾ ಈಕ್ಷಾ ಯಸ್ಯ ಸಃ ಪೂರ್ಣೇಕ್ಷಃ, ಶಿಷ್ಯಸ್ಯ ಭಾವಃ ಶಿಷ್ಯತಾ ಪೂರ್ಣೇಕ್ಷಸ್ಯ ಶಿಷ್ಯತಾ ಪೂರ್ಣೇಕ್ಷಶಿಷ್ಯತಾ ತಾಂ ।

**ಸದ್ಗುಪ್ತಿಮಾತ್ರೇಣ**— ಸತಾಂ ಗುಪ್ತಿಃ ಸದ್ಗುಪ್ತಿಃ, ಸದ್ಗುಪ್ತಿರೇವ ಸದ್ಗುಪ್ತಿಮಾತ್ರಂ, ತೇನ, ಸತೀ ಚ ಸಾ ಗುಪ್ತಿಶ್ಚ ಸದ್ಗುಪ್ತಿಃ, ಸದ್ಗುಪ್ತಿರೇವ ಸದ್ಗುಪ್ತಿಮಾತ್ರಂ, ತೇನ ।

**ವಿಶೇಷಾಂಶ**— (ವಿಶ್ವಪತಿತೀರ್ಥೀಯ) ಶ್ರೀಪರಶುರಾಮದೇವರು ಸಮುದ್ರರಾಜನಿಂದ ತಾನು ಪಡೆದ ಭೂಭಾಗ-ದಲ್ಲಿ ತೌಲವ ಕ್ಷೇತ್ರದಲ್ಲಿ ವಾಸಮಾಡುವ ಸಜ್ಜನರ ರಕ್ಷಣೆಗಾಗಿ ಮತ್ತು ದುರ್ಜನರ ನಿಗ್ರಹಕ್ಕಾಗಿ ಅನೇಕ ಮಂದಿ ಕ್ಷತ್ರಿಯಾದಿ-ಗಳನ್ನು ನೇಮಕ ಮಾಡಿದ್ದರು. ಸಜ್ಜನ ರಕ್ಷಣೆಯು ಅವರಿಗೆ ವಿಹಿತವಾದ ಕರ್ಮವಾಗಿತ್ತು. ಆ ವಿಹಿತ ಕರ್ಮದಿಂದಲೇ ಅವರಿಗೆ ಜ್ಞಾನದ ಮೂಲಕ ಮೋಕ್ಷವು ದೊರಕುತ್ತದೆ ಎಂದು ಅಭಿಪ್ರಾಯ.

**ಕ್ರಿಯಾಪದ**— **ಪ್ರಾಪುಃ** - ಪ್ರ + ಆಪುಃ, ಆಪ ಆಪತುಃ ಆಪುಃ, ಇತ್ಯಾದಿ, ಆಪ್ಲೃ (ಆಪ್) ವ್ಯಾಪ್ತೌ, ಸಕ. ಪರ. ಅನಿ. ಭೂತ ಅನದ್ಯತನ ಪರೋಕ್ಷೇ ಲಿಟ್. ಪ್ರ. ಉಪಸರ್ಗ. ಪ್ರಥಮಪುರುಷ ಬಹುವಚನ । **ಭವೇತ್** - ಭವೇತ್ ಭವೇತಾಂ ಭವೇಯುಃ, ಭೂ ಧಾತು ವಿಧಿಲಿಙ್ ।

**ಪ್ರಯೋಗ**— ಗ್ರಾಮಣೀಭಿಃ ಬ್ರಾಹ್ಮಣಾಗ್ರಣೀಭಿಃ ಪೂರ್ಣೇಕ್ಷಶಿಷ್ಯತಾ ಪ್ರಾಪೇ, ಯೇಷಾಂ ಸದ್ಗುಪ್ತಿಮಾತ್ರೇಣ ಪರೇಣ ಪದೇನ ಭೂಯೇತ ಕಿಲ ।

★ ★ ★

**ಅವತಾರಿಕಾ**— ಹೀಗೆ ತನ್ನನ್ನು ನಂಬಿದ ಭಕ್ತರಿಗೆ ಆಚಾರ್ಯರು ಅನುಗ್ರಹಿಸಿದುದನ್ನು ವಿವರಿಸುತ್ತಾರೆ.

**ಶುಶ್ರೂಷಾಪಕ್ಷಪಾತಾದ್ಯೈಃ ಕೇಭ್ಯಶ್ಚಿತ್ ಕೇವಲಂ ದದೌ ।**
**ರಾಮಪ್ರಿಯೋ ರಾಮ ಇವ ಸ್ವಾಂ ಗತಿಂ ಯೋಗಿದುರ್ಲಭಾಮ್ ॥ 138 ॥**

**ಪದಚ್ಛೇದ**— ಶುಶ್ರೂಷಾಪಕ್ಷಪಾತಾದ್ಯೈಃ, ಕೇಭ್ಯಶ್ಚಿತ್, ಕೇವಲಂ, ದದೌ, ರಾಮಪ್ರಿಯಃ, ರಾಮಃ, ಇವ, ಸ್ವಾಂ, ಗತಿಂ, ಯೋಗಿದುರ್ಲಭಾಮ್ ।

**ಅನ್ವಯ**— ರಾಮಪ್ರಿಯಃ, ಕೇಭ್ಯಶ್ಚಿತ್, ಕೇವಲಂ, ಶುಶ್ರೂಷಾಪಕ್ಷಪಾತಾದ್ಯೈಃ, ಯೋಗಿದುರ್ಲಭಾಂ, ಸ್ವಾಂ, ಗತಿಂ, ರಾಮ, ಇವ, ದದೌ ।

**ಅನ್ವಯಾರ್ಥ**—

**ರಾಮಪ್ರಿಯಃ** = ಶ್ರೀರಾಮಚಂದ್ರನಿಗೆ ಪ್ರೀತಿವಿಷಯರಾದ ಶ್ರೀಮಧ್ವಾಚಾರ್ಯರು,
**ಕೇಭ್ಯಶ್ಚಿತ್** = ಕೆಲವು ಮಂದಿ ಮೋಕ್ಷಯೋಗ್ಯರಾದ ಅಧಿಕಾರಿಗಳಿಗೆ (ಸಜ್ಜನರಿಗೆ),
**ಕೇವಲಂ** = ಮುಖ್ಯವಾಗಿ,
**ಶುಶ್ರೂಷಾಪಕ್ಷಪಾತಾದ್ಯೈಃ** = ಹರಿಗುರುಸೇವೆ, ವೈಷ್ಣವ ಸಿದ್ಧಾಂತದಲ್ಲಿ ದೀಕ್ಷೆ ಮೊದಲಾದವುಗಳಿಂದ,
**ಯೋಗಿದುರ್ಲಭಾಂ** = ಭಗವಂತನ ಅನುಗ್ರಹವಿಲ್ಲದೇ ಯೋಗನಿಷ್ಠರಿಂದಲೂ ಹೊಂದಲು ಸಾಧ್ಯವಿಲ್ಲದ,
**ಸ್ವಾಂ ಗತಿಂ** = ಅವರವರು ಪಡೆಯಲು ಯೋಗ್ಯವಾದ ಮೋಕ್ಷವನ್ನು
**ರಾಮಃ ಇವ** = ದಶರಥಪುತ್ರನಾದ ಶ್ರೀರಾಮಚಂದ್ರನಂತೆ,
**ದದೌ** = ಕೊಟ್ಟರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ಶ್ರೀರಾಮಚಂದ್ರಭಗವಂತನಿಗೆ ಅತ್ಯಂತ ಪ್ರೀತಿಪಾತ್ರರು. ಅವರು ತಮ್ಮನ್ನು ಎಡಬಿಡದೆ ಸೇವಿಸುವ ಕೆಲವು ಮಂದಿ ಮೋಕ್ಷಯೋಗ್ಯರಾದ ಸಾತ್ವಿಕಾಧಿಕಾರಿ ಜನರಿಗೆ ಮತ್ತು ಭಕ್ತಿ, ವ್ರತ, ಉಪವಾಸ, ಸಚ್ಛಾಸ್ತ್ರದಲ್ಲಿ ವೈಷ್ಣವಸಿದ್ಧಾಂತದಲ್ಲಿ ಅಚಲವಾದ ನಿಷ್ಠೆ ಮುಂತಾದ ಗುಣಗಳುಳ್ಳ ಮತ್ತೆ ಕೆಲವು ಉತ್ತಮಾಧಿಕಾರಿಗಳಿಗೂ, ಯೋಗಿಗಳಿಗೂ ದುರ್ಲಭವಾದ ತನ್ನ ಅಧೀನವಾದ, ಅವರವರಿಗೆ ಯೋಗ್ಯವಾದ ಮೋಕ್ಷವನ್ನು ಕೊಟ್ಟರು. ಶ್ರೀರಾಮನು

ಪರಂಧಾಮಕ್ಕೆ ತೆರಳುವಾಗ ಕೆಲವು ಅಧಿಕಾರಿಗಳು ನಿರಂತರವಾಗಿ ತನ್ನ ಸ್ಮರಣೆ ಮಾಡಿದುದರಿಂದ ಪ್ರಸನ್ನನಾಗಿ ಅವರಿಗೆ ಸದ್ಗತಿಯನ್ನು ಕೊಟ್ಟಿದ್ದನು. ಅದರಂತೆ ಶ್ರೀಮಧ್ವಾಚಾರ್ಯರೂ ಕೆಲವು ಶಿಷ್ಯರು ಮಾಡಿದ ಅವರವರ ಯೋಗ್ಯತಾನು-ಸಾರವಾದ ಸೇವೆ, ವೈಷ್ಣವ ಸಿದ್ಧಾಂತ ನಿಷ್ಠೆ ಮುಂತಾದ ಗುಣಗಳಿಂದ ಪ್ರಸನ್ನರಾಗಿ ತಾನು ಹೊಂದಲಿರುವ ಪರಬ್ರಹ್ಮನಾದ ನಾರಾಯಣನನ್ನು ಅವರಿಗೂ ತೋರಿಸಿ, ಅಲ್ಲಿಗೆ ಕರೆದೊಯ್ದರು. ಅವರಿಗೆಲ್ಲಾ ಮೋಕ್ಷವನ್ನು ಕೊಟ್ಟರು.

**ವಿಶೇಷಾಂಶ—** 'ಖಗಾ ಮೃಗಾಸ್ತೃಣಾದಯಃ' ಎಂದು ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಹೇಳುವಂತೆ ಶ್ರೀರಾಮಚಂದ್ರನು ಪಕ್ಷಿಮೃಗಾದಿಗಳಿಗೂ ಅವುಗಳ ರಾಮಧ್ಯಾನ ಭಾವನೆಯಿಂದ ಪ್ರಸನ್ನನಾಗಿ ಮೋಕ್ಷಕೊಟ್ಟನು. 'ಸ ಏನಾನ್ ಬ್ರಹ್ಮ ಗಮಯತಿ, ವಿದ್ಯುತ್ ಪತಿರ್ವಾಯುರೇವ ನಯೇದ್ ಬ್ರಹ್ಮ ನ ಚಾಪರಃ', ಇತ್ಯಾದಿ ಪ್ರಮಾಣದಂತೆ ಭಾರತೀಪತಿಗಳಾದ ಶ್ರೀಮುಖ್ಯಪ್ರಾಣದೇವರೇ ಮೋಕ್ಷಯೋಗ್ಯಸಾಧನಸಂಪನ್ನರಾದ ಜೀವರನ್ನು ಮೋಕ್ಷಕ್ಕೆ ಒಯ್ಯುತ್ತಾರೆ, ಮುಕುಂದನಾಮಕ ಪರಬ್ರಹ್ಮನನ್ನು ತಲುಪಿಸುತ್ತಾರೆ ಎಂದು ಪ್ರಮಾಣವಿದೆ. ಅದರಂತೆ ರಾಮಭಕ್ತರೂ ರಾಮಪ್ರಿಯರೂ ಆದ ಶ್ರೀಮಧ್ವಾಚಾರ್ಯರು ಭಕ್ತರಿಗೆ ಪರಬ್ರಹ್ಮನ ದರ್ಶನ ಮಾಡಿಸಿ ಮೋಕ್ಷವನ್ನು ಕರುಣಿಸುವಂತೆ ಮಾಡಿದರು. ''ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ'' ಇತ್ಯಾದಿ ಪ್ರಮಾಣಗಳಿಂದ ವಾಯುದೇವರಿಗೂ ಮೋಕ್ಷ ದಾತೃತ್ವವಿದೆಯೆಂದು ತಿಳಿದುಬರುತ್ತದೆ.

**ವಿಗ್ರಹ—**

**ಶುಶ್ರೂಷಾಪಕ್ಷಪಾತಾದ್ಯೈಃ—** ಶ್ರೋತುಂ ಇಚ್ಛಾ ಶುಶ್ರೂಷಾ । ಕೇಳುವ ಇಚ್ಛೆ ಎಂದು ಯೋಗಾರ್ಥ, ಸೇವೆ ಎಂದು ರೂಢ್ಯರ್ಥ, ಪಕ್ಷೇ (ವೈಷ್ಣವಸಿದ್ಧಾಂತೇ) ಪಾತಃ (ನಿಷ್ಠಾ, ಆಸಕ್ತಿಃ) ಪಕ್ಷಪಾತಃ, ಅದೌ ಭವೌ ಅದ್ಯೌ, ಶುಶ್ರೂಷಾ ಚ ಪಕ್ಷಪಾತಶ್ಚ ಶುಶ್ರೂಷಾಪಕ್ಷಪಾತೌ, ತೌ ಆದ್ಯೌ ಯೇಷಾಂ ತೇ ಶುಶ್ರೂಷಾಪಕ್ಷಪಾತಾದ್ಯಾಃ, ತೈಃ ।

**ರಾಮಪ್ರಿಯಃ—** ರಾಮಸ್ಯ ಪ್ರಿಯಃ ರಾಮಪ್ರಿಯಃ ।

**ಯೋಗಿದುರ್ಲಭಾಂ—** ಯೋಗಃ ಏಷಾಂ ಅಸ್ತೀತಿ ಯೋಗಿನಃ, ದುಃಖೇನ ಲಬ್ಧುಂ ಶಕ್ಯಾ ದುರ್ಲಭಾ, ಯೋಗಿಭಿಃ ದುರ್ಲಭಾ ಯೋಗಿದುರ್ಲಭಾ, ತಾಂ ।

**ಕ್ರಿಯಾಪದ—** ದದೌ - ದದೌ ದದತುಃ ದದುಃ, ದದಿಥ ದದಾಥ, ದದಥುಃ ದದ, ದದೌ ದದಿವ ದದಿಮ । (ಡು) ದಾಞ್ (ದಾ) ದಾನೇ, ಉಭಯಪದಿ, ಇಲ್ಲಿ ಪರಸ್ಮೈಪದಿ, ಸಕ. ಅನಿಟ್. ಭೂತ ಅನದ್ಯತನ ಪರೋಕ್ಷಾರ್ಥದಲ್ಲಿ ಲಿಟ್ ಪ್ರಥಮಪುರುಷ ಬಹುವಚನ ।

**ಪ್ರಯೋಗ—** ರಾಮಪ್ರಿಯೇಣ ಕೇಭ್ಯಶ್ಚಿತ್ ಕೇವಲಂ ಶುಶ್ರೂಷಾಪಕ್ಷಪಾತಾದ್ಯೈಃ ಯೋಗಿದುರ್ಲಭಾ ಸ್ವಾ ಗತಿಃ ರಾಮೇಣ ಇವ ದದೇ ।

★ ★ ★

**ಅವತಾರಿಕಾ—** ಇಂತಹ ಮಹಾಮಹಿಮರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಪಾದಕಮಲ-ಯುಗಳವನ್ನು ಸಜ್ಜನರೆಂದಿಗೂ ಬಿಡಲಾರರು ಎನ್ನುತ್ತಾರೆ.

**ಶಿಷ್ಯಪ್ರಶಿಷ್ಯಾತಿಶಯಾ ಈದೃಶಾ ಯದ್ದಯೋದಯಾತ್ ।**
**ಕೋ ನೇಚ್ಛೇತ್ ಸುಲಭಂ ಭಕ್ತ್ಯಾ ತತ್ಪಾದಸುರಪಾದಪಮ್ ॥ 139 ॥**

**ಪದಚ್ಛೇದ—** ಶಿಷ್ಯಪ್ರಶಿಷ್ಯಾತಿಶಯಾಃ, ಈದೃಶಾಃ, ಯದ್ದಯೋದಯಾತ್, ಕಃ, ನ, ಇಚ್ಛೇತ್, ಸುಲಭಂ, ಭಕ್ತ್ಯಾ, ತತ್ಪಾದಸುರಪಾದಪಂ ।

**ಅನ್ವಯ—** ಯದ್ದಯೋದಯಾತ್, ಶಿಷ್ಯಪ್ರಶಿಷ್ಯಾತಿಶಯಾಃ, ಈದೃಶಾಃ, ಭಕ್ತ್ಯಾ, ಸುಲಭಂ, ತತ್ಪಾದಸುರಪಾದಪಂ, ಕಃ, ನ, ಇಚ್ಛೇತ್ ।

**ಅನ್ವಯಾರ್ಥ—**

**ಯತ್** = ಯಾವ ಶ್ರೀಮಧ್ವಾಚಾರ್ಯರ,

**ದಯಾ** = ಕರುಣೆಯ,

**ಉದಯಾತ್** = ಪ್ರಾದುರ್ಭಾವದಿಂದ,

**ಶಿಷ್ಯಪ್ರಶಿಷ್ಯಅತಿಶಯಾಃ** = ಶ್ರೀಮಧ್ವಾಚಾರ್ಯರ ಶಿಷ್ಯರು, ಶಿಷ್ಯರ ಶಿಷ್ಯರು ಇವರ ಮಹಿಮೆ ಮತ್ತು ಸಾಮರ್ಥ್ಯ ವಿಶೇಷಗಳು,

**ಈದೃಶಾಃ** = ಹೀಗಿರುವುವೋ,

**ಭಕ್ತ್ಯಾ** = ಯಥಾಯೋಗ್ಯವಾದ ಮಾಹಾತ್ಮ್ಯಜ್ಞಾನಪೂರ್ವಕವಾದ ಸುದೃಢ ಸ್ನೇಹದಿಂದ,

**ಸುಲಭಂ** = ಸುಖವಾಗಿ ಪಡೆಯಲು ಸಾಧ್ಯವಾದ,

**ತತ್ಪಾದಸುರಪಾದಪಂ** = ಶ್ರೀಮಧ್ವಾಚಾರ್ಯರ ಪಾದಗಳೆಂಬ ಕಲ್ಪವೃಕ್ಷವನ್ನು,

**ಕಃ** = ಯಾವನು,

**ನ ಇಚ್ಛೇತ್** = ಬಯಸಲಾರನು? (ವಿವೇಕಿಯಾದ ಪ್ರತಿಯೊಬ್ಬನೂ ಅಪೇಕ್ಷಿಸಿಯೇ ಇರುತ್ತಾನೆ)

**ತಾತ್ಪರ್ಯ—** ಶ್ರೀಮಧ್ವಾಚಾರ್ಯರ ಅದ್ಭುತವಾದ ಕರುಣಾಕಟಾಕ್ಷ ಬಿದ್ದುದರಿಂದ ಆಚಾರ್ಯರ ಶಿಷ್ಯರೂ ಆಚಾರ್ಯರ ಶಿಷ್ಯರ ಶಿಷ್ಯರೂ ಆಶ್ಚರ್ಯಕರವಾದ ಮಹಿಮಾತಿಶಯಗಳನ್ನು ತೋರಿಸಿದ್ದಾರೆ. ವಿಶೇಷವಾದ ಸಾಮರ್ಥ್ಯಗಳನ್ನು ಪ್ರಕಟಗೊಳಿಸಿದ್ದಾರೆ. ಯೋಗ್ಯವಾದ ರೀತಿಯಿಂದ ತಮ್ಮ ಮಹಿಮೆಯನ್ನು ತಿಳಿದು ಸ್ನೇಹದಿಂದ ಭಜಿಸುವವರಿಗೆ ಆಚಾರ್ಯರ ಪಾದಕಮಲಗಳ ಅನುಗ್ರಹವು ಸುಲಭವಾಗಿ ಆಗುತ್ತದೆ. ಅವರ ಪಾದಪದ್ಮದ್ವಂದ್ವವು ಕಲ್ಪವೃಕ್ಷದಂತೆ ಸಕಲಾಭೀಷ್ಟಪ್ರದಾನಸಮರ್ಥವಾಗಿದೆ. ಇಂತಹ ಆಚಾರ್ಯರ ಪಾದಗಳೆಂಬ ಕಲ್ಪವೃಕ್ಷವನ್ನು ಯಾವನು ನೋಡಲು ಮತ್ತು ಸೇವಿಸಲು ಬಯಸಲಾರನು ವಿವೇಕಿಗಳಾದ ಸಜ್ಜನರೆಲ್ಲರೂ ಇಚ್ಛಿಸುತ್ತಾರೆ ಎಂದು ಭಾವವು.

**ವಿಗ್ರಹ—**

**ಶಿಷ್ಯಪ್ರಶಿಷ್ಯಾತಿಶಯಾ—** ಶಿಷ್ಯಾಶ್ಚ ಪ್ರಶಿಷ್ಯಾಶ್ಚ ಶಿಷ್ಯಪ್ರಶಿಷ್ಯಾಃ, ಶಿಷ್ಯಪ್ರಶಿಷ್ಯಾಣಾಂ ಅತಿಶಯಾಃ ಶಿಷ್ಯಪ್ರಶಿಷ್ಯಾತಿಶಯಾಃ ।

**ಯದ್ದಯೋದಯಾತ್—** ಯೇಷಾಂ ದಯಾ ಯದ್ದಯಾ, ಯದ್ದಯಾಯಾಃ ಉದಯಃ ಯದ್ದಯೋದಯಃ, ತಸ್ಮಾತ್ ಯದ್ದಯೋದಯಾತ್ ।

**ಸುಲಭಂ—** ಸುಖೇನ ಲಬ್ಧುಂ ಶಕ್ಯಂ ಸುಲಭಂ ।

**ತತ್ಪಾದಸುರಪಾದಪಂ—** ತೇಷಾಂ ಪಾದೌ ತತ್ಪಾದೌ, ತತ್ಪಾದಾವೇವ ಸುರಪಾದಪಃ ತತ್ಪಾದಸುರಪಾದಪಃ । (ಪಾದೈಃ ಪಿಬತೀತಿ ಪಾದಪಃ, ಸುರಾಣಾಂ ಪಾದಪಃ ಸುರಪಾದಪಃ).

**ಕ್ರಿಯಾಪದ— ಇಚ್ಛೇತ್** - ಇಚ್ಛೇತ್ ಇಚ್ಛೇತಾಂ ಇಚ್ಛೇಯುಃ, ಇಚ್ಛೇಃ ಇಚ್ಛೇತಂ ಇಚ್ಛೇತ, ಇಚ್ಛೇಯಂ ಇಚ್ಛೇವ ಇಚ್ಛೇಮ । ಇಷು ಇಚ್ಛಾಯಾಂ ಸಕ. ಪರ. ಸೇಟ್ ವಿಧೌ ಲಿಙ್. ಪ್ರಥಮಪುರುಷ ಏಕವಚನ । 'ಇಷಗಮಿಯಮಾಂ ಛಃ' ಎಂಬ ಸೂತ್ರದಿಂದ ಸಾರ್ವಧಾತುಕದಲ್ಲಿ (ಲಟ್ ಲೋಟ್ ಲಙ್ ವಿಧಿಲಿಙ್) ಷಕ್ಕೆ ಛ ಆದೇಶ.

**ಪ್ರಯೋಗ—** ಯದ್ದಯೋದಯಾತ್ ಶಿಷ್ಯಪ್ರಶಿಷ್ಯಾತಿಶಯೈಃ ಈದೃಶೈಃ (ಭೂಯತೇ) ಭಕ್ತ್ಯಾ ಸುಲಭಃ ತತ್ಪಾದಸುರಪಾದಪಃ ಕೇನ ನ ಇಷ್ಯೇತ ।

★ ★ ★

**ಅವತಾರಿಕಾ—** ಹೀಗೆ ಭಕ್ತರನ್ನು ಅನುಗ್ರಹಿಸುತ್ತಾ ಆಚಾರ್ಯರು ಕಣ್ವತೀರ್ಥದಲ್ಲಿ ಚಾತುರ್ಮಾಸ್ಯ ವ್ರತವನ್ನು ಸಂಕಲ್ಪಿಸಿದರು ಎಂದು ಹೇಳುತ್ತಾರೆ.

**ಇತ್ಥಂ ಸದ್ಭಿಃ ಸದ್ಭಿರರ್ಚ್ಯೋ ಧರಾಯಾಂ**
**ಚಕ್ರೇ ವಾಸಂ ಶೇಷಶಯ್ಯೇ ಶಯಾನೇ ।**
**ಗ್ರಾಮೇ ವಾತೈಃ ಪಾವಿತೇ ಕಾಣ್ವತೀರ್ಥೈಃ**
**ಭಕ್ತಪ್ರೀತ್ಯಾ ಸನ್ಮಠೇಽನೂನಬೋಧಃ ॥ 140 ॥**

**ಪದಚ್ಛೇದ—** ಇತ್ಥಂ, ಸದ್ಭಿಃ, ಸದ್ಭಿಃ, ಅರ್ಚ್ಯಃ, ಧರಾಯಾಂ, ಚಕ್ರೇ, ವಾಸಂ, ಶೇಷಶಯ್ಯೇ, ಶಯಾನೇ, ಗ್ರಾಮೇ, ವಾತೈಃ, ಪಾವಿತೇ, ಕಾಣ್ವತೀರ್ಥೈಃ, ಭಕ್ತಪ್ರೀತ್ಯಾ, ಸನ್ಮಠೇ, ಅನೂನಬೋಧಃ ।

**ಅನ್ವಯ—** ಧರಾಯಾಂ, ಇತ್ಥಂ, ಸದ್ಭಿಃ, ಸದ್ಭಿಃ, ಅರ್ಚ್ಯಃ, ಅನೂನಬೋಧಃ, ಶೇಷಶಯ್ಯೇ, ಶಯಾನೇ, ಕಾಣ್ವತೀರ್ಥೈಃ, ವಾತೈಃ, ಪಾವಿತೇ, ಗ್ರಾಮೇ, ಸನ್ಮಠೇ, ಭಕ್ತಪ್ರೀತ್ಯಾ, ವಾಸಂ, ಚಕ್ರೇ ।

**ಅನ್ವಯಾರ್ಥ—**

**ಧರಾಯಾಂ** = ಭೂಮಿಯಲ್ಲಿ,
**ಇತ್ಥಂ ಸದ್ಭಿಃ** = ಈ ರೀತಿಯಾಗಿರುವ,
**ಸದ್ಭಿಃ** = ಸಜ್ಜನರಿಂದ,
**ಅರ್ಚ್ಯಃ** = ಪೂಜಿಸಲ್ಪಡಲು ಯೋಗ್ಯರಾದ,
**ಅನೂನಬೋಧಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,
**ಶೇಷಶಯ್ಯೇ** = ಶೇಷನೇ ಹಾಸಿಗೆಯಾಗಿ ಉಳ್ಳ ಶ್ರೀಮನ್ನಾರಾಯಣನು,
**ಶಯಾನೇ** = ಮಲಗಿರಲು, (ಚಾತುರ್ಮಾಸ್ಯ ಸಮಯದಲ್ಲಿ ಆಷಾಢ ಶುಕ್ಲ ಪ್ರಥಮೈಕಾದಶೀ ಶಯನೈಕಾದಶೀ ದಿನದಲ್ಲಿ),
**ಕಾಣ್ವತೀರ್ಥೈಃ** = ಕಣ್ವತೀರ್ಥಕ್ಕೆ ಸಂಬಂಧಿಸಿದ, (ಕಣ್ವತೀರ್ಥದ ಜಲವನ್ನು ಸೋಕಿ ಬೀಸುತ್ತಿರುವ),
**ವಾತೈಃ** = ಗಾಳಿಗಳಿಂದ,
**ಪಾವಿತೇ** = ಪವಿತ್ರಗೊಳಿಸಲ್ಪಟ್ಟ
**ಗ್ರಾಮೇ** = ಏಕವಾಟ ಗ್ರಾಮದಲ್ಲಿ (ತಾಂತ್ರ್ಯವೆಂಬ ಗ್ರಾಮದಲ್ಲಿ),
**ಸನ್ಮಠೇ** = ಉತ್ತಮವಾದ ಮಠದಲ್ಲಿ
**ಭಕ್ತಪ್ರೀತ್ಯಾ** = ಭಕ್ತರಲ್ಲಿರುವ ಪ್ರೀತಿಯಿಂದ,
**ವಾಸಂ** = ವಾಸವನ್ನು
**ಚಕ್ರೇ** = ಮಾಡಿದರು.

**ತಾತ್ಪರ್ಯ—** ಭೂಮಿಯಲ್ಲಿರುವ ಭಕ್ತ್ಯಾದಿಗುಣಾತಿಶಯವುಳ್ಳ ಸಜ್ಜನರು ಆಚಾರ್ಯರನ್ನು ಈ ರೀತಿ ಪೂಜಿಸುತ್ತಿದ್ದರು. ಅಷ್ಟರಲ್ಲಿ ಚಾತುರ್ಮಾಸ್ಯ ಕಾಲವು ಬಂದಿತು. ಶ್ರಾವಣ-ಭಾದ್ರಪದ-ಆಶ್ವಯುಜ-ಕಾರ್ತಿಕ ಎಂಬ ನಾಲ್ಕು ತಿಂಗಳು ಚಾತುರ್ಮಾಸ್ಯ. ಈ ಸಮಯದಲ್ಲಿ ಆಷಾಢಶುಕ್ಲದಲ್ಲಿ ಶಯನೈಕಾದಶೀ ಬರುತ್ತದೆ. ಅಂದಿನಿಂದ ಶ್ರೀಹರಿಯು ನಾಲ್ಕು ತಿಂಗಳು ಯೋಗನಿದ್ರೆಯನ್ನು ಮಾಡುತ್ತಾನೆ. ಆಗ ಯತಿಗಳು ಎಲ್ಲಿಗೂ ಸಂಚಾರಕ್ಕೆ ಹೋಗದೆ ಒಂದೇ ಕಡೆ ಇರುತ್ತಾರೆ. ಹೀಗೆ ಚಾತುರ್ಮಾಸ್ಯ ಪ್ರಾರಂಭವಾದಾಗ ಅಲ್ಲಿಯ ಏಕವಾಟ (ತಾಂತ್ರ್ಯ) ಎಂಬ ಗ್ರಾಮದ ಭಕ್ತರು ಇಲ್ಲಿಯೇ

ಚಾತುರ್ಮಾಸ್ಯ ವ್ರತವನ್ನು ಆಚರಿಸಬೇಕೆಂದು ಬೇಡಿಕೊಂಡರು. ಆಚಾರ್ಯರು ತಾಂತ್ರ್ಯ ಗ್ರಾಮದ ಮಂಗಳಕರವಾದ ಶ್ರೇಷ್ಠವಾದ ಮಠದಲ್ಲಿ ಚಾತುರ್ಮಾಸ್ಯ ವ್ರತವನ್ನು ಕೈಗೊಂಡರು. ತಾಂತ್ರ್ಯ ಗ್ರಾಮದಲ್ಲಿಯೇ ಕಣ್ವತೀರ್ಥವೆಂಬ ತೀರ್ಥವಿದೆ. ಆ ತೀರ್ಥಜಲದ ಮೇಲೆ ಬೀಸಿ ಬರುವ ತಂಪಾದ ಪವಿತ್ರವಾದ ಮಂದಮಾರುತದಿಂದ ಪವಿತ್ರವಾದ ತಾಂತ್ರ್ಯಗ್ರಾಮದಲ್ಲಿ ಆಚಾರ್ಯರು ಚಾತುರ್ಮಾಸ್ಯ ವ್ರತವನ್ನು ಕೈಗೊಂಡು ಕುಳಿತರು ಎಂದು ಭಾವ.

**ವಿಶೇಷಾಂಶ ಇಲ್ಲಿ ಭಾವಪ್ರಕಾಶಿಕಾ**— 'ಕಿಂ ಬಹುನಾ ತದಾ ಧರಾಯಾಂ ಜಾತೈಃ ಸದ್ಭಿಃ ಪೂಜ್ಯಃ, ಶಯನೈಕಾದಶ್ಯಾಂ ಅತೀತಾಯಾಂ ಸನ್ಮಠೇ ತಾಂತ್ರ್ಯ ಇತ್ಯಪಭ್ರಷ್ಟನಾಮ್ನಿ ಅಧಿವಾಸೇ' = ಹೆಚ್ಚು ಹೇಳಿದ್ದರಿಂದ ಏನು ಉಪಯೋಗ? ಆಗ ಭೂಮಿಯಲ್ಲಿ ಹುಟ್ಟಿರುವ ಸಜ್ಜನರಿಂದ ಪೂಜ್ಯರಾದ ಆಚಾರ್ಯರು, ಶಯನೈಕಾದಶಿ ಕಳೆದ ಮೇಲೆ, ಆಷಾಢ ಶುದ್ಧ ಹುಣ್ಣಿಮೆಯಂದು ತಾಂತ್ರ್ಯ ಎಂದು ದೇಶಭಾಷೆಯಲ್ಲಿ ಪ್ರಸಿದ್ಧವಾದ ಗ್ರಾಮದಲ್ಲಿ ವಾಸಮಾಡಿದರು ಎಂದು ತಾತ್ಪರ್ಯ.

ಆಚಾರ್ಯರನ್ನು ಆಗ ಭೂಮಿಯಲ್ಲಿ ಹುಟ್ಟಿರುವ ಸಜ್ಜನರೆಲ್ಲರೂ ಸೇವಿಸುತ್ತಿದ್ದರು ಎಂಬ ವಿಶೇಷಾಂಶವನ್ನು ಇಲ್ಲಿ ಗಮನಿಸಬಹುದು.

**ವಿಗ್ರಹ**—

**ಅರ್ಚ್ಯಃ**— ಅರ್ಚಿತುಂ ಯೋಗ್ಯಃ ಅರ್ಚ್ಯಃ ।
**ಶೇಷಶಯ್ಯಂ**— ಶೇಷಃ ಶಯ್ಯಾ ಯಸ್ಯ ಸಃ ಶೇಷಶಯ್ಯಃ ತಸ್ಮಿನ್ ।
**ಕಾಣ್ವತೀರ್ಥ್ಯೈಃ**— ಕಣ್ವಸ್ಯ ತೀರ್ಥಂ ಕಣ್ವತೀರ್ಥಂ, ಕಣ್ವತೀರ್ಥಸ್ಯ ಇಮೇ ಕಾಣ್ವತೀರ್ಥಾಃ ತೈಃ ।
**ಭಕ್ತಪ್ರೀತ್ಯಾ**— ಭಕ್ತೇಷು ಪ್ರೀತಿಃ ಭಕ್ತಪ್ರೀತಿಃ, ತಯಾ ।
**ಸನ್ಮಠೇ**— ಸಂಶ್ಚಾಸೌ ಮಠಶ್ಚ ಸನ್ಮಠಃ, ತಸ್ಮಿನ್ ।
**ಅನೂನಬೋಧಃ**— ನ ಊನಃ ಅನೂನಃ ಅನೂನಃ ಬೋಧಃ ಯಸ್ಯ ಸಃ ಅನೂನಬೋಧಃ ।

**ಕ್ರಿಯಾಪದ**— **ಚಕ್ರೇ** - ಚಕ್ರೇ ಚಕ್ರಾತೇ ಚಕ್ರಿರೇ ಇತ್ಯಾದಿ. (ಡು)ಕೃಞ್ (ಕೃ) ಕರಣೇ ಉಭಯಪದಿ, ಇಲ್ಲಿ ಆತ್ಮನೇ ಪದಿ, ಸಕರ್ಮಕ, ಅನಿಟ್, ಭೂತ ಅನದ್ಯತನ ಪರೋಕ್ಷಾರ್ಥದಲ್ಲಿ ಲಿಟ್ ಪ್ರಥಮಪುರುಷ ಏಕವಚನ ।

**ಪ್ರಯೋಗ**— ಧರಾಯಾಂ ಇತ್ಥಂ ಸದ್ಭಿಃ ಅರ್ಚ್ಯೇನ ಅನೂನ ಬೋಧೇನ ಶೇಷಶಯ್ಯೇ ಶಯಾನೇ ಕಾಣ್ವತೀರ್ಥ್ಯೈಃ ಪಾವಿತೇ ಗ್ರಾಮೇ ಸನ್ಮಠೇ ಭಕ್ತಪ್ರೀತ್ಯಾ ವಾಸಃ ಚಕ್ರೇ ।

★ ★ ★

**ಅವತಾರಿಕಾ**— ಶ್ರೀಪೂರ್ಣಬೋಧರನ್ನು ಕಣ್ಣಾರೆ ಕಂಡವರ ಸೇವೆಯೂ ಇಷ್ಟಾರ್ಥಪ್ರದವೆಂದು ಹೇಳುತ್ತಾ ಈ ಹದಿನೈದನೆಯ ಸರ್ಗವನ್ನು ಸಮಾಪ್ತಿಗೊಳಿಸುತ್ತಿದ್ದಾರೆ.

**ಸ್ವಾನಂದತೀರ್ಥಭಗವದ್ವದನೇಂದುಬಿಂಬಂ**
**ವಿದ್ಯಾಸುಧಾವಿತತಕಾಂತಿಸುಕಾಂತಿಕಾಂತಮ್ ।**
**ಯೈಃ ಪ್ರೈಕ್ಷ್ಯತಾತ್ರ ಭವತಾಪಶಮಾಯ ಭಕ್ತ್ಯೈ-**
**ಸ್ತದ್ದಾಸದಾಸ್ಯಮಪಿ ಕಿಂ ನ ದದಾತಿ ಪುಂಸಃ ॥ 141 ॥**

**ಪದಚ್ಛೇದ**— ಸ್ವಾನಂದತೀರ್ಥಭಗವದ್ವದನೇಂದುಬಿಂಬಂ, ವಿದ್ಯಾಸುಧಾವಿತತಕಾಂತಿಸುಕಾಂತಿಕಾಂತಂ, ಯೈಃ, ಪ್ರೈಕ್ಷ್ಯತ, ಅತ್ರ, ಭವತಾಪಶಮಾಯ, ಭಕ್ತ್ಯೈಃ, ತದ್ದಾಸದಾಸ್ಯಂ, ಅಪಿ, ಕಿಂ, ನ, ದದಾತಿ, ಪುಂಸಃ ।

**ಅನ್ವಯ—** ಅತ್ರ, ಯೈಃ, ಭಕ್ತೈಃ, ಭವತಾಪಶಮಾಯ, ವಿದ್ಯಾಸುಧಾವಿತತಕಾಂತಿಸುಕಾಂತಿಕಾಂತಂ, ಸ್ವಾನಂದತೀರ್ಥ ಭಗವದ್ವದನೇಂದುಬಿಂಬಂ, ಪ್ರೈಕ್ಷ್ಯತ, ತದ್ದಾಸದಾಸ್ಯಂ, ಅಪಿ, ಪುಂಸಃ, ಕಿಂ, ನ, ದದಾತಿ ।

**ಅನ್ವಯಾರ್ಥ—**

**ಅತ್ರ** = ಈ ಭೂಮಿಯಲ್ಲಿ

**ಯೈಃ ಭಕ್ತೈಃ**= ಯಾವ ಭಕ್ತರಿಂದ,

**ಭವತಾಪಶಮಾಯ** = ಸಂಸಾರತಾಪಶಮನ ಮಾಡುವುದಕ್ಕೋಸ್ಕರ (ಸಂಸಾರತಾಪಪರಿಹಾರಸಮರ್ಥವಾದ)

**ವಿದ್ಯಾಸುಧಾವಿತತಕಾಂತಿಸುಕಾಂತಿಕಾಂತಂ** = ವಿದ್ಯೆಯೆಂಬ ಅಮೃತದ ವಿಸ್ತಾರವಾದ ಕಾಂತಿಯುಳ್ಳ, ಮಂಗಳ-ಕರವಾದ ಕಾಂತಿಯಿಂದ ಮನೋಹರವಾದ,

**ಸ್ವಾನಂದತೀರ್ಥಭಗವತ್ ವದನ ಇಂದುಬಿಂಬಂ** = ಮನೋಹರವಾದ ಶ್ರೀಮದಾನಂದತೀರ್ಥರೆಂಬ ಷಡ್ಗುಣ್ಯೈಶ್ವರ್ಯಸಂಪನ್ನರಾದ ದೇವೋತ್ತಮರ ಮುಖವೆಂಬ ಚಂದ್ರಮಂಡಲವು,

**ಪ್ರೈಕ್ಷ್ಯತ** = ನೋಡಲ್ಪಟ್ಟಿತ್ತೋ,

**ತದ್ದಾಸದಾಸ್ಯಂ ಅಪಿ** = ಆ ಭಕ್ತರ ದಾಸರ ದಾಸತ್ವವೂ ಕೂಡ,

**ಪುಂಸಃ** = ಯೋಗ್ಯಪುರುಷನಿಗೆ,

**ಕಿಂ ನ ದದಾತಿ** = ಯಾವ ಅಭೀಷ್ಟವನ್ನು ಕೊಡುವುದಿಲ್ಲ? (ಎಲ್ಲಾ ಅಭೀಷ್ಟಗಳನ್ನು ಕೊಡುವುದು).

**ತಾತ್ಪರ್ಯ—** ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಮುಖವೆಂಬ ಚಂದ್ರಮಂಡಲವು ಸಂಸಾರ-ತಾಪವನ್ನು ಪರಿಹರಿಸಲು ಅತ್ಯಂತ ಸಮರ್ಥವಾದ ವೇದಾಂತವಿದ್ಯೆಗಳೆಂಬ ಅಮೃತಮಯವಾದ ವಿಸ್ತಾರವಾದ ಕಾಂತಿ-ಯಿಂದ ಕೂಡಿವೆ. (ವಿದ್ಯೆಯಿಂದ ಅಮೃತಕಲೆಯಿಂದ ಕೂಡಿದೆ). ಕಾಂತಿಯಿಂದ ಪರಮಮನೋಹರವಾಗಿದೆ. ಇಂತಹ ಮುಖಚಂದ್ರಬಿಂಬವನ್ನು ಪ್ರತ್ಯಕ್ಷದರ್ಶನ ಮಾಡಿದ ಭಕ್ತರ ದಾಸರ ಸೇವಾವೃತ್ತಿಯೂ ಕೂಡ ಮಾನವರಿಗೆ ಯಾವ ಇಷ್ಟಾರ್ಥಗಳನ್ನು ಕೊಡುವುದಿಲ್ಲ? ಆಚಾರ್ಯರನ್ನು ಕಂಡ ದಾಸರ ಸೇವಾವೃತ್ತಿಯೂ ಸಮಸ್ತಾಭೀಷ್ಟಗಳನ್ನು ಕೊಡುತ್ತದೆ ಎಂದು ಭಾವವು. ಶ್ರೀಮಧ್ವಾಚಾರ್ಯರ ದರ್ಶನ ಮಾತ್ರ ಮಾಡಬೇಕಾದರೂ ಬಹಳ ಪುಣ್ಯ ಬೇಕು. ಹಾಗೆ ಅವರ ದರ್ಶನ ಮಾಡಿದವರ ದಾಸಾನುದಾಸನಾಗಿರುವವನೂ ಕೂಡ ಶ್ರೀಮಧ್ವಾಚಾರ್ಯರ ಅನುಗ್ರಹದಿಂದ ಇಷ್ಟಾರ್ಥವನ್ನು ಪಡೆಯು-ವನೆಂದ ಮೇಲೆ ಶ್ರೀಮಧ್ವಾಚಾರ್ಯರ ಸಾಕ್ಷಾತ್ ಭಕ್ತರ, ಅವರನ್ನು ಪ್ರತ್ಯಕ್ಷ ಕಂಡು ಸೇವಿಸಿದವರ ಪುಣ್ಯಕ್ಕೆ ಎಣೆಯೇ ಇಲ್ಲ. ಶ್ರೀಮದಾನಂದತೀರ್ಥಭಗವತ್ಪಾದರ ಶಿಷ್ಯಪ್ರಶಿಷ್ಯತಚ್ಛಿಷ್ಯ ಪರಂಪರೆಯಲ್ಲಿ ಬಂದಿರುವ ಅವರ ಮತಾನುವರ್ತಿಗಳಾದ ಮಹಾನುಭಾವರ ದಾಸ್ಯವಾದರೂ ಜನ್ಮಜನ್ಮಾಂತರದಲ್ಲಿಯೂ ಉಂಟಾಗಲಿ ಎಂದು ಸಾತ್ವಿಕಾಧಿಕಾರಿಗಳು ಯಾವಾಗಲೂ ಭಗವಂತನನ್ನು, ಶ್ರೀಭಾರತೀರಮಣನನ್ನು ಪ್ರಾರ್ಥಿಸಬೇಕು ಎಂದು ತಾತ್ಪರ್ಯ.

**ವಿಗ್ರಹ—**

**ಸ್ವಾನಂದತೀರ್ಥಭಗವದ್ವದನೇಂದುಬಿಂಬಂ—** ಸು ಶೋಭನಾಶ್ಚತೇ ಆನಂದತೀರ್ಥಾಶ್ಚ ಸ್ವಾನಂದತೀರ್ಥಾಃ । (ಇಲ್ಲಿ ಛಲಾರಿಯ ಪಾಠದಲ್ಲಿ ಬರೇ ಆನಂದತೀರ್ಥ ಎಂದೇ ಇದೆ, ಸುಶಬ್ದವಿಲ್ಲ) ಸ್ವಾನಂದತೀರ್ಥಾಶ್ಚ ತೇ ಭಗವಂತಶ್ಚ ಸ್ವಾನಂದತೀರ್ಥಭಗವಂತಃ, ಇಂದೋಃ ಬಿಂಬಂ ಇಂದುಬಿಂಬಂ ವದನಮೇವ ಇಂದುಬಿಂಬಂ ವದನೇಂದುಬಿಂಬಂ, ಸ್ವಾನಂದತೀರ್ಥಭಗವತಾಂ ವದನೇಂದುಬಿಂಬಂ ಸ್ವಾನಂದ ತೀರ್ಥಭಗವದ್‌ವದನೇಂದುಬಿಂಬಂ, ತತ್ । (ಅಥವಾ ಆನಂದತೀರ್ಥಭಗವತಾಂ ವದನೇಂದು ಬಿಂಬಂ ಆನಂದತೀರ್ಥಭಗವದ್‌ವದನೇಂದುಬಿಂಬಂ)

**ವಿದ್ಯಾಸುಧಾವಿತತಕಾಂತಿ—** ಸುಧಯಾ ವಿತತಾ ಸುಧಾವಿತತಾ, ಸುಧಾವಿತತಾ ಚ ಸಾ ಕಾಂತಿಶ್ಚ ಸುಧಾ ವಿತತಕಾಂತಿಃ । (ಅಮೃತಕಲಾ ಇತ್ಯರ್ಥಃ = ಸುಧವಿತತಕಾಂತಿ ಎಂದರೆ ಅಮೃತಕಲೆ ಎಂದು ಅರ್ಥ) ವಿದ್ಯೈವ ಸುಧಾವಿತತಕಾಂತಿಃ ಯಸ್ಯ ತತ್ ವಿದ್ಯಾಸುಧಾವಿತತಕಾಂತಿ । (ವಿದ್ಯೆಯೆಂಬ ಅಮೃತ ಕಲೆಯಿಂದ ತುಂಬಿದ) ಶೋಭನಾ ಚ ಸಾ ಕಾಂತಿಶ್ಚ ಸುಕಾಂತಿಃ, ಸುಕಾಂತ್ಯಾ ಕಾಂತಂ ಸುಕಾಂತಿ ಕಾಂತಂ ತತ್ ।

**ಭವತಾಪಶಮಾಯ—** ಭವ ಏವ ತಾಪಃ ಭವತಾಪಃ (ಭವಸ್ಯ ತಾಪಾಃ ಭವತಾಪಾಃ) ಭವತಾಪಸ್ಯ ಶಮಃ ತಸ್ಮೈ (ಸಮರ್ಥಂ ಎಂದು ಅಧ್ಯಾಹಾರ) ।

**ತದ್ದಾಸದಾಸ್ಯಂ—** ತೇಷಾಂ ದಾಸಾಃ ತದ್ದಾಸಾಃ, ದಾಸಸ್ಯ ಭಾವಃ ದಾಸ್ಯಂ, ತದ್ದಾಸಾನಾಂ ದಾಸ್ಯಂ ತದ್ದಾಸ ದಾಸ್ಯಂ ।

**ಕ್ರಿಯಾಪದ—** **ಪ್ರೈಕ್ಷ್ಯತ** - ಪ್ರ+ಐಕ್ಷ್ಯತ ಐಕ್ಷ್ಯೇತಾಂ ಐಕ್ಷ್ಯಂತ, ಐಕ್ಷ್ಯಥಾಃ ಐಕ್ಷ್ಯೇಥಾಂ ಐಕ್ಷಧ್ವಂ, ಐಕ್ಷ್ಯೇ ಐಕ್ಷ್ಯಾವಹಿ ಐಕ್ಷ್ಯಾಮಹಿ । ಪ್ರ ಉಪಸರ್ಗ. ಈಕ್ಷ ದರ್ಶನೇ, ಸಕ. ಸೇಟ್ ಆತ್ಮ. ಕರ್ಮಣಿ ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನ । ದದಾತಿ - ದದಾತಿ ದತ್ತಃ ದದತಿ, ದದಾಸಿ ದತ್ಥಃ ದತ್ಥ ದದಾಮಿ ದದ್ವಃ ದದ್ಮಃ । ಡು (ದಾ) ಞ್ ದಾನೇ ಸಕ. ಉಭ. ಅನಿ. ವರ್ತಮಾನೇ ಲಟ್ ಪ್ರಥಮಪುರುಷ ಏಕವಚನ ।

**ಪ್ರಯೋಗ—** ಅತ್ರ ಯೇ ಭಕ್ತಾಃ ಭವತಾಪಶಮಾಯ ವಿದ್ಯಾಸುಧಾವಿತತಕಾಂತಿ, ಸುಕಾಂತಿಕಾಂತಂ ಸ್ವಾನಂದ-ತೀರ್ಥಭಗವದ್ವದನೇಂದುಬಿಂಬಂ ಪ್ರೈಕ್ಷ್ಯಂತ, ತದ್ದಾಸದಾಸ್ಯೇನಾಪಿ ಪುಂಸಃ ಕಿಂ ನ ದೀಯತೇ?

*ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ*
*ಪಂಚದಶಃ ಸರ್ಗಃ ಸಮಾಪ್ತಃ ॥*

★ ★ ★

॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಷೋಡಶಃ ಸರ್ಗಃ

### ಹದಿನಾರನೆಯ ಸರ್ಗದ ಕಥಾಸಾರ

ಒಂದಾನೊಂದು ದಿನ ಶ್ರೀಮಧ್ವಾಚಾರ್ಯರ ಅನೇಕ ಶಿಷ್ಯರು, ವೈದಿಕರಾದ ಸಜ್ಜನರು ಒಂದು ಸ್ಥಳದಲ್ಲಿ ಸಭೆ ಸೇರಿದ್ದರು. ಆ ಸಭೆಯಲ್ಲಿ ಶ್ರೀಮಧ್ವಾಚಾರ್ಯರ ಶಿಷ್ಯರೊಬ್ಬರು ಆಚಾರ್ಯರ ಮಹಿಮೆಯನ್ನು ಈ ರೀತಿ ಹೇಳಲಾರಂಭಿಸಿದರು. ಶ್ರೀಮಧ್ವಾಚಾರ್ಯರು ಒಂದಾನೊಂದು ದಿನ ಸಂಚಾರ ಮಾಡುತ್ತಾ ಗೋಮತೀ ನದೀತೀರಕ್ಕೆ ಬಂದರು. ಅಲ್ಲಿ ವೇದನಿಂದಕನಾದ ಒಬ್ಬ ನಾಸ್ತಿಕ ಶೂದ್ರರಾಜನಿದ್ದನು. ವೈದುಷ್ಯ, ಭಕ್ತಿ, ವೈರಾಗ್ಯ, ಮಂತ್ರಸಿದ್ಧಿ ಮುಂತಾದ ಅನೇಕ ಗುಣಗಳಿಂದ ಬಹಳ ಕೀರ್ತಿಶಾಲಿಗಳಾದ ಆಚಾರ್ಯರನ್ನು ಕಂಡು ಅವನು ಈ ರೀತಿ ಹೇಳಿದನು. ''ಯಾವುದಾದರೊಂದು ಸಸ್ಯದ ಬೀಜವನ್ನು ಹಿಡಿದುಕೊಂಡು 'ಯಾ ಓಷಧೀಃ ಪೂರ್ವಜಾತಾಃ' ಇತ್ಯಾದಿ ಮಂತ್ರವನ್ನು ಜಪಿಸಿದರೆ ಆ ಬೀಜಗಳು ಮೊಳಕೆಯೊಡೆದು ಚಿಗುರು, ಎಲೆ, ಹೂವು, ಧಾನ್ಯ(ಫಲ) ಮುಂತಾದ ಎಲ್ಲವೂ ಕೂಡಲೇ ಆಗುತ್ತದೆ ಎಂದು ನಿಮ್ಮ ವೇದದಲ್ಲಿ ಹೇಳಿದೆ. ಆದರೆ ಈಗಿನ ಕಾಲದ ಯಾವ ವೇದಜ್ಞರೂ ಆ ಮಂತ್ರವನ್ನು ಜಪಿಸಿ ಬೀಜಗಳಿಂದ ಮೊಳಕೆ ಬರಿಸಲಾರರು. ಆದುದರಿಂದ ಈ ವೇದವಾಕ್ಯವು ಹುಚ್ಚನ ಮಾತಿನಂತೆ ಅಪ್ರಮಾಣವಾಗಿದೆ. ಈ ದೃಷ್ಟಾಂತದಿಂದ ಎಲ್ಲಾ ವೇದವೂ ಅಪ್ರಮಾಣವೆಂದು ಏಕೆ ಹೇಳಬಾರದು?'' ಎಂದು ಆ ಶೂದ್ರರಾಜನು ಹೇಳಿದಾಗ ಆಚಾರ್ಯರು ''ವೇದದಲ್ಲಿ ಹೇಳಿದ ಫಲವು ಸಿದ್ಧಿಸಬೇಕಾದರೆ ಯೋಗ್ಯನಾದ ಅಧಿಕಾರಿಯಾಗಿರಬೇಕು. ಅಧಿಕಾರಿಯು ಜಪಿಸಿದರೆ ಫಲವು ಆಗಿಯೇ ಆಗುತ್ತದೆ'' ಎಂದರು. ಆಗ ಆ ರಾಜನು ''ಕತ್ತೆಯ ಕೊಂಬು ಹೇಗೆ ನಮಗೆ ಸಿಗುವುದಿಲ್ಲವೋ ಅದರಂತೆ ಯೋಗ್ಯನಾದ ಅಧಿಕಾರಿಯೂ ಇಲ್ಲವೇ ಇಲ್ಲ'' ಎಂದನು. ಆಚಾರ್ಯರು ಈ ಆಕ್ಷೇಪವನ್ನು ಸಹಿಸಲಿಲ್ಲ. ಅವರು ಕೂಡಲೇ ಹೆಸರು ಕಾಳುಗಳನ್ನು ಕೈಯಲ್ಲಿ ಹಿಡಿದುಕೊಂಡು 'ಯಾ ಓಷಧೀಃ..' ಇತ್ಯಾದಿ ಮಂತ್ರವನ್ನು ಜಪಿಸಿ ಆಗಲೇ ಮೊಳಕೆ, ಹೂವು, ಬೀಜಗಳನ್ನು ಸೃಜಿಸಿದರು. ಹೀಗೆ ವೇದೋಕ್ತವಾದ ಫಲವು ಸಿಗಬೇಕಾದರೆ ಭಕ್ತಿ ಜ್ಞಾನ ಮೊದಲಾದ ಯೋಗ್ಯತೆ ಇರಬೇಕೆಂದು ಪ್ರತ್ಯಕ್ಷವಾಗಿ ಸಾಧಿಸಿ ತೋರಿಸಿ ಆಚಾರ್ಯರು ವೇದಪ್ರಾಮಾಣ್ಯವನ್ನು ಸ್ಥಿರೀಕರಿಸಿದರು.

ಒಂದು ದಿನ ರಾತ್ರಿ ಆಚಾರ್ಯರು ತಮ್ಮ ಶಿಷ್ಯರಿಗೆ ದೀಪವನ್ನಿಟ್ಟುಕೊಂಡು ಪಾಠ ಹೇಳುತ್ತಿದ್ದರು. ಆದರೆ ಅಕಸ್ಮಾತ್ತಾಗಿ ದೀಪವು ಆರಿಹೋಯಿತು. ಕೂಡಲೆ ಆಚಾರ್ಯರು ತಮ್ಮ ಕಾಲನ್ನು ಮುಂದಕ್ಕೆ ಚಾಚಿ ಕಾಲಿನ ಹೆಬ್ಬೆರಳಿನ ಉಗುರಿನ ಬೆಳಕಿನಿಂದಲೇ ಶಿಷ್ಯರಿಂದ ಗ್ರಂಥವನ್ನು (ಪಾಠವನ್ನು)ಓದಿಸಿ ತಾವು ಪ್ರವಚನ ಮಾಡಿದರು. ಆಚಾರ್ಯರು ಒಂದು ದಿನ ತುಂಗಾನದಿಯ ಸಹೋದರಿಯಾದ ಭದ್ರಾನದಿಯ ಹತ್ತಿರದ ಪ್ರದೇಶದಲ್ಲಿ ಹೋಗುತ್ತಿರುವಾಗ ಸಾವಿರಾರು ಜನರು ಒಂದು ದೊಡ್ಡ ಬಂಡೆಯನ್ನು ನದಿಯ ಹತ್ತಿರಕ್ಕೆ ಒಯ್ಯಲು ಪ್ರಯತ್ನಿಸುತ್ತಿದ್ದರು. ನದಿಯ ಸ್ನಾನ ಘಟ್ಟದಲ್ಲಿ ಕಡಿದಾದ ಸ್ಥಳದಲ್ಲಿ ನೀರಿನ ಧಾರೆಯನ್ನು ತಡೆಯಲು ಅವರು ದೊಡ್ಡ ಬಂಡೆಯನ್ನು ಒಯ್ದು ಇಡಲು ಪ್ರಯತ್ನಿಸುತ್ತಿದ್ದರು. ಆದರೆ ಅವರು ನದಿಯ

ಕಡಿದಾದ ಪ್ರದೇಶದವರೆಗೆ ಬಂಡೆಯನ್ನು ಒಯ್ಯಲು ಅಸಮರ್ಥರಾಗಿ ತಮ್ಮ ಪ್ರಯತ್ನವನ್ನು ಮಧ್ಯದಲ್ಲಿಯೇ ನಿಲ್ಲಿಸಿದರು. ಸುಮ್ಮನೆ ನಿಂತರು. ಆಚಾರ್ಯರು 'ಎಲೈ ಜನರೇ! ಆ ಬಂಡೆಯನ್ನು ಇಲ್ಲೆ ಏಕೆ ಬಿಟ್ಟಿರಿ?'ಎಂದು ಕೇಳಿದರು. ಅವರು 'ಯತಿವರ್ಯರೇ! ಈ ಬಂಡೆಯನ್ನು ನದಿಯ ಕಡಿದಾದ ಪ್ರದೇಶದಲ್ಲಿ ಸ್ನಾನಕ್ಕೆ ಇಳಿಯುವ ಪ್ರದೇಶದಲ್ಲಿ ಸೌಕರ್ಯಕ್ಕಾಗಿ ಇಡಬೇಕಾಗಿತ್ತು. ನಾವು ಸಾಧ್ಯವಿದ್ದಷ್ಟು ಶ್ರಮಿಸಿದೆವು. ನದಿಯು ಇನ್ನೂ ಬಹಳ ದೂರವಿದೆ. ಈ ಬಂಡೆಯನ್ನು ನದಿಯ ಹತ್ತಿರ ಒಯ್ಯಲು ಮನುಷ್ಯರಿಂದ ಸಾಧ್ಯವಿಲ್ಲ. ಭೀಮಸೇನನಿದ್ದರೆ ಈ ಶಿಲೆಯನ್ನು ಒಯ್ಯಲು ಪ್ರಯತ್ನಿಸುತ್ತಿದ್ದನು. ಅವನೂ ತೆಗೆದುಕೊಂಡು ಹೋಗುತ್ತಿದ್ದನೋ ಇಲ್ಲವೋ?' ಎಂದು ಹೇಳಿದರು. ಕೂಡಲೇ ಆಚಾರ್ಯರು ತಮ್ಮ ಕೋಮಲವಾದ ಕರಕಮಲದಿಂದ ಅನಾಯಾಸವಾಗಿ ಆ ಬಂಡೆಯನ್ನು ನದಿಯ ಹತ್ತಿರ ಪ್ರವಾಹ ತಡೆಯಲು ಬೇಕಾದ ಸ್ಥಳದಲ್ಲಿ ತೆಗೆದು-ಕೊಂಡು ಹೋಗಿ ಇಟ್ಟರು. ಆಚಾರ್ಯರು ಅನಾಯಾಸವಾಗಿ ಲೀಲೆಯಿಂದ ಮಾಡಿದ ಈ ಕೆಲಸವನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾದರು. ತುಂಗೆಯ ತಂಗಿಯಾದ ಭದ್ರೆಯ ಬಳಿ ಚಿಕ್ಕಮಗಳೂರು ಜಿಲ್ಲೆಯ ಕಳಸದ ಹತ್ತಿರ ಇಂದೂ ಅಂದಿನ ಆ ಬಂಡೆಯನ್ನು ಕಾಣಬಹುದು.

ಮತ್ತೊಂದು ದಿನ ಅಮಾವಾಸ್ಯೆ ಸೂರ್ಯಗ್ರಹಣವಿತ್ತು. ಆಚಾರ್ಯರು ಶಿಷ್ಯಸಮೇತರಾಗಿ ಸ್ನಾನ ಮಾಡಲು ಸಮುದ್ರದ ಹತ್ತಿರ ಹೋದರು. ಹಳ್ಳಿಗಳಿಂದ ಹುಡುಗರು, ಮುದುಕರು, ಯುವಕರು ಮುಂತಾದ ನೂರಾರು ಜನರು ಗ್ರಹಣ ಸ್ನಾನಕ್ಕಾಗಿ ಅಲ್ಲಿ ಸೇರಿದ್ದರು. ಅವರೆಲ್ಲರೂ ಮೊದಲು ಸಮುದ್ರದಿಂದ ಸ್ವಲ್ಪ ದೂರದಲ್ಲಿರುವ ಕಣ್ವತೀರ್ಥದಲ್ಲಿ ಸ್ನಾನ ಮಾಡಿ ಶುದ್ಧರಾಗಿಯೇ ಸಮುದ್ರವನ್ನು ಮುಟ್ಟಿ ಸ್ನಾನ ಮಾಡಬೇಕಾಗಿತ್ತು ಈ ಸಂಪ್ರದಾಯವನ್ನು ಜನರು ಅನುಸರಿಸು-ತ್ತಿದ್ದರು. ಆಚಾರ್ಯರು ಪರಿವಾರ ಸಮೇತರಾಗಿ ಸಮುದ್ರಸ್ನಾನಕ್ಕಾಗಿ ಅಲ್ಲಿಗೆ ಬಂದಾಗ ಕೆಲವು ಮಂದಿ ದುರ್ಜನರು ಆಚಾರ್ಯರನ್ನು ನಿಂದಿಸಲು ಆರಂಭಿಸಿದರು. ಆದರೆ ಮತ್ತೆ ಕೆಲವರು ಗಂಭೀರ ಪ್ರಸನ್ನರಾದ ಆಚಾರ್ಯರನ್ನು ನೋಡಿ ಸಂತೋಷಪಟ್ಟು ಅಭಿನಂದಿಸಿದರು. ಸಮುದ್ರವಾದರೋ ಭೋರ್ಗರೆಯುತ್ತಾ ದಡದ ಹತ್ತಿರಕ್ಕೆ ಬಂದು ಬಂದು ಹಿಂದೆ ಹಿಂದಕ್ಕೆ ಹೋಗುತ್ತಿತ್ತು. ಭಯಂಕರ ಮನೋಹರವಾದ ಸಮುದ್ರದಲ್ಲಿ ಸ್ನಾನ ಮಾಡಲು ಜನರು ಭಕ್ತಿ ಭಯದಿಂದ ಸನ್ನದ್ಧರಾಗಿ ಕಾಯುತ್ತಿದ್ದರು. ಆಚಾರ್ಯರು ಸ್ನಾನ ಮುಹೂರ್ತಕ್ಕೆ ಮೊದಲು ಸಮುದ್ರದ ದಡದ ಮರಳಿನಲ್ಲಿ ಕುಳಿತು ಐತರೇಯಶಾಖೆಯ ಸೂಕ್ತಗಳನ್ನು ಇಂಪಾಗಿ ಪಠಿಸುತ್ತಾ ಶಿಷ್ಯರಿಗೆ ಅವುಗಳ ಅರ್ಥವನ್ನು ಹೇಳುತ್ತಿದ್ದರು. ಆಚಾರ್ಯರ ಅದ್ಭುತವಾದ ಪ್ರವಚನವನ್ನು ಕೇಳಲು ಜನರು ಗುಂಪುಗುಂಪಾಗಿ ನೆರೆದರು. ಸಮುದ್ರದ ಘೋಷವನ್ನು ಮೀರಿಸುವ ಧ್ವನಿ ಪ್ರಸನ್ನವಾದ ಮುಖಲಕ್ಷಣವನ್ನು ಅನುಸರಿಸಿ ವೇದದ ಪಠಣ ಪ್ರಮಾಣವನ್ನು ಅನುಸರಿಸಿ ಅದರ ಅರ್ಥ ವಿವರಣ. ಇದನ್ನೆಲ್ಲಾ ಕಂಡು ಕೇಳಿ ಅಲ್ಲಿ ಸೇರಿದ್ದ ಸೇರುತ್ತಿದ್ದ ಜನರು ಹೀಗೆಂದರು 'ಇಂತಹ ಜಗದ್ಗುರುಗಳನ್ನು ಯಾರೋ ನಿಂದಿಸಿದರಂತೆ, ಇವರು ವೇದದ್ವೇಷಿಗಳೆಂದರಂತೆ, ವೇದಗಳ ಸರಿಯಾದ ಭಾವವನ್ನು ಹೇಳುವ ಇವರನ್ನು ತೆಗಳುವ ಆ ಜನರು ನಿಜವಾಗಿಯೂ ಮೂರ್ಖರು. ಅವರಿಗೆ ಧಿಕ್ಕಾರ! ಆಚಾರ್ಯರಿಗೆ ಅನಂತ ನಮಸ್ಕಾರ' ಎಂದು ಹೇಳುತ್ತಾ ಜನತಾಸಾಗರವು ಆಚಾರ್ಯರನ್ನು ನಮಿಸಿತು. ಅನಂತರ ಗ್ರಹಣಮುಹೂರ್ತದಲ್ಲಿ ಆಚಾರ್ಯರು ಸಮುದ್ರಸ್ನಾನ ಮಾಡುವಾಗ ಜನರೂ ಅವರ ಜೊತೆಗೆ ಮಿಂದರು. ಆಚಾರ್ಯರ ಸ್ನಾನದಿಂದ ಮತ್ತಷ್ಟು ಪವಿತ್ರವಾದ ಸಾಗರದ ನೀರಿನಲ್ಲಿ ಸ್ನಾನ ಮಾಡಿ ಆನಂದಿಸಿದರು. ಸ್ನಾನ ಮಾಡುವಾಗ ದೊಡ್ಡ ಅಲೆಗಳ ಬಡಿತದಿಂದ ಬಲಿಷ್ಠರೂ ಕೂಡ ಹಿಂದಕ್ಕೆ ಬೀಳುತ್ತಿದ್ದರು. ಕಾಲಿನ ಹಿಡಿತ ತಪ್ಪಿ ಮುಗ್ಗರಿಸುತ್ತಿದ್ದರು. ಆಚಾರ್ಯರು ಮುಳುಗುವಾಗ ಅಲೆಗಳ ಮಧ್ಯದಲ್ಲಿ ಕಣ್ಮರೆಯಾದರು ಪುನಃ ಎದ್ದು ನಿಂತಾಗ ಅಲೆಯ ಬಡಿತದಿಂದ ಸ್ವಾಭಾವಿಕವಾಗಿ ಎಲ್ಲರಂತೆಯೇ ಬಿದ್ದರು. ಆಗ ಕೆಲವರು ಕುಚೇಷ್ಟೆ ಮಾಡುತ್ತಾ 'ಆಹಾ! ನೋಡಿರಿ ಜಗದ್ಗುರುಗಳಂತೆ ಇವರು. ಈ ಹಗುರವಾದ ಅಲೆಗಳ ಆಟದಿಂದ ಬೀಳುತ್ತಿದ್ದಾರೆ! ಇವರಂತಹ ಜಗದ್ಗುರುಗಳು! ಇವರು ಜಗಲಘುಗಳು!' ಎಂದು ಅಪಹಾಸ್ಯ ಮಾಡಿದರು. ನಾಯಿನರಿಗಳ ಕೂಗನ್ನು ಸಿಂಹವು ಅಲಕ್ಷ್ಯ ಮಾಡುವಂತೆ ಜನರ ಆ ಕುಚೇಷ್ಟೆಯ ಮಾತನ್ನು ಆಚಾರ್ಯರು ಲೆಕ್ಕಿಸಲಿಲ್ಲ. ಆದರೂ ಅವರು ತಮ್ಮ ಹಿರಿಮೆಯನ್ನು ಸ್ವಲ್ಪವಾದರೂ ತೋರಿಸಬೇಕೆಂದು ನಿಶ್ಚಯಿಸಿ ಒಂದು ಬಾರಿ ಸಮುದ್ರವನ್ನು ಗದ್ದಲ ಮಾಡಬೇಡವೆಂದು ಸೂಚಿಸುವಂತೆ

ಓರೆನೋಟದಿಂದ ನೋಡಿದರು. ಕೂಡಲೆ ಸಮುದ್ರದ ಹೆದ್ದೆರೆಗಳು ಶಾಂತವಾದವು. ಅದೊಂದು ಕೆರೆಯಂತೆ ಚಲನೆಯನ್ನು ಬಿಟ್ಟು ಶಾಂತ ಸಾಗರವಾಯಿತು. ಸಜ್ಜನರು ಆಚಾರ್ಯರ ಅದ್ಭುತವಾದ ಈ ಮಹಿಮೆಯನ್ನು ನೋಡಿ ನಮೋ ನಮಃ ಎಂದು ಕೈ ಮುಗಿದರು. ದುರ್ಜನರು ಇದೇನೋ ಇಂದ್ರಜಾಲ, ಮೋಸ ಎಂದು ಹೇಳುತ್ತಾ ಮುಖವನ್ನು ಸೊಟ್ಟಗೆ ಮಾಡಿಕೊಂಡು ಆಚಾರ್ಯರನ್ನು ಪಿಸುಮಾತಿನಲ್ಲಿ ನಿಂದಿಸುತ್ತಲೇ ಇದ್ದರು. ಕಲ್ಲುಸಕ್ಕರೆ, ಹಾಗಲಕಾಯಿಗಳ ಸ್ವಭಾವದಂತೆ ಅವರವರ ಸ್ವಭಾವ ಬದಲಾಯಿಸದೆ ಹಾಗೆ ಹಾಗೆಯೇ ಇರುತ್ತದೆಯೆಂದು ಇದರಿಂದ ತಿಳಿದು ಬರುತ್ತದೆಯಲ್ಲವೇ?

ಗಂಡವಾಟನೆಂಬ ಜಟ್ಟಿಯೊಬ್ಬನು ತನ್ನ ತಮ್ಮನೊಡನೆ ಆಚಾರ್ಯರ ಬಲಪರೀಕ್ಷೆ ಮಾಡಬೇಕೆಂಬ ಜನರ ಕುತೂಹಲದಿಂದ ಅವರ ಬಳಿಗೆ ಬಂದು, ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಾಗ ಆಚಾರ್ಯರು ತಮ್ಮ ಬಲಪರೀಕ್ಷೆಗೆ ಒಪ್ಪಿದರು. ಈ ಗಂಡವಾಟನು ಮೂವತ್ತು ಜನರು ಎತ್ತಬೇಕಾಗಿದ್ದ ಧ್ವಜಸ್ತಂಭವನ್ನು ಒಬ್ಬನೇ ಎತ್ತಿ ಕಾಂತೇಶ್ವರ ಎಂಬ ದೇವಾಲಯಕ್ಕೆ ತಂದಿದ್ದನು. ತೆಂಗಿನಮರದ ಬುಡಕ್ಕೆ ಚಿಕ್ಕಗದೆಯಿಂದ ಹೊಡೆದು ಬಲಿತ ಕಾಯಿಗಳನ್ನು ಕೆಳಗೆ ಉರುಳಿಸುತ್ತಿದ್ದನು. ಇಂತಹವನು ಇವನ ತಮ್ಮನೂ ಇವರಿಬ್ಬರೂ ಒಂದೇ ಬಾರಿ ಬಂದು ಆಚಾರ್ಯರ ಕಂಠವನ್ನು ಬಿಗಿಯಾಗಿ ಹಿಡಿದು ಹಿಸುಕಲು ಪ್ರಯತ್ನ ಪಟ್ಟರು. ಆದರೆ ಕ್ಷಣಕ್ಷಣದಲ್ಲಿ ಆಚಾರ್ಯರ ಕಂಠವು ಗಟ್ಟಿಗಟ್ಟಿಯಾಗುತ್ತಾ ಉಕ್ಕಿಗಿಂತಲೂ ಕಠಿಣವಾಯಿತು. ಅಣ್ಣತಮ್ಮಂದಿರು ಮಹಾಮಲ್ಲರು. ತಮ್ಮ ಪೂರ್ಣಬಲವನ್ನು ಉಪಯೋಗಿಸಿ ಆಚಾರ್ಯರ ಕತ್ತನ್ನು ಹಿಸುಕಿ, ಉಸಿರುಕಟ್ಟಿಸಿ ಸೋಲಿಸಬೇಕೆಂದಿದ್ದರು. ಆದರೆ ಆ ಪ್ರಯತ್ನದಲ್ಲಿ ಈ ಸಹೋದರ ಜಟ್ಟಿಗಳೇ ಸೋತರು, ಜಟ್ಟಿಗಳು ಬೆವರಿದರು, ನಡುಗಿದರು, ಶಕ್ತಿಗುಂದಿ ನೆಲದ ಮೇಲೆ ಬಿದ್ದರು. ಆಚಾರ್ಯರು ಅವರಿಗೆ ಗಾಳಿ ಬೀಸುವಂತೆ ಶಿಷ್ಯರಿಗೆ ಹೇಳಿದರು. ಸ್ವಲ್ಪ ಸಮಯ ಕಳೆಯಿತು. ಜಟ್ಟಿಗಳು ಸ್ವಲ್ಪ ವಿಶ್ರಮಿಸಿಕೊಂಡು ಆಯಾಸ ಪರಿಹಾರ ಮಾಡಿಕೊಂಡ ಮೇಲೆ ಆಚಾರ್ಯರು ನೆಲದ ಮೇಲೆ ತಮ್ಮ ಹೆಬ್ಬೆಟ್ಟನ್ನು ಇಟ್ಟು ಇದನ್ನು ಮೇಲಕ್ಕೆತ್ತಿರಿ, ಅಲ್ಲಾಡಿಸಿರಿ ಎಂದರು. ಆದರೆ ಅವರಿಬ್ಬರು ಎಷ್ಟು ಪ್ರಯತ್ನಪಟ್ಟರೂ ಆಚಾರ್ಯರ ಬೆರಳನ್ನು ಅಲ್ಲಾಡಿಸಲೂ ಸಾಧ್ಯವಾಗಲಿಲ್ಲ.

ಆಚಾರ್ಯರು ಆ ಜನರ ಗುಂಪಿನಲ್ಲಿದ್ದ ಒಬ್ಬ ಚಿಕ್ಕ ಬ್ರಹ್ಮಚಾರಿಯನ್ನು ಕರೆದರು ಅವನು ಹತ್ತಿರ ಬಂದು ಕೂಡಲೇ ಅವರು ಟಣ್ಣನೆ ನೆಗೆದು ಅವನ ಹೆಗಲ ಮೇಲೆ ಕುಳಿತರು. ಜನರು ಈ ಮಾಣಿಯು ಈಗ ಸತ್ತೇ ಹೋಗುತ್ತಾನೆ ಎಂದು ಬೆದರಿದರು. ಆದರೆ ಆಚಾರ್ಯರು ಹುಡುಗನ ಹೆಗಲಿನ ಮೇಲೆ ಕುಳಿತು ಅಲ್ಲಿರುವ ನರಸಿಂಹದೇವರ ಗುಡಿಗೆ ಪ್ರದಕ್ಷಿಣೆ ಬಂದರು. ಜನರ ಆಶ್ಚರ್ಯಕ್ಕೆ ಪಾರವೇ ಇಲ್ಲ. ಆಚಾರ್ಯರಲ್ಲಿ ಅಣಿಮಾದಿ ಅಷ್ಟೈಶ್ವರ್ಯಗಳೂ ಇವೆ. ಅವರ ಮಹಿಮೆ ಅಪಾರ ಎಂದು ಜನತೆಯು ಬೆರಗಾಗಿ ಕೈಮುಗಿಯಿತು.

ಪೂರ್ವವಾಟನೆಂಬ ಮತ್ತೊಬ್ಬ ಜಗಜಟ್ಟಿ ಮಹಾಮಲ್ಲನಿದ್ದನು. ಐವತ್ತು ಮಂದಿ ರಾಜಸೇವಕರಾದ ಭಟರು ಹೊರ ಬೇಕಾದ ಮರದ ಏಣಿಯನ್ನು ಅವನು ತನ್ನ ಮನೆಗೆ ಒಬ್ಬನೇ ಹೊತ್ತು ತಂದಿದ್ದನು. ಅಂತಹ ಪೂರ್ವವಾಟ ಬ್ರಾಹ್ಮಣನು ಆಚಾರ್ಯರು ಪಾಠ ಹೇಳುವಾಗ ಅವರ ಸ್ವರಭಂಗ ಮಾಡುವುದಕ್ಕಾಗಿ ಆಚಾರ್ಯರ ಅಪ್ಪಣೆಯಂತೆಯೇ ಅವರ ಕತ್ತನ್ನು ಬಲವಾಗಿ ಎರಡು ಕಡೆಯಿಂದಲೂ ಹಿಸುಕಿದನು, ಒತ್ತಿಹಿಡಿದನು, ಮೈ ಬೆವರಿ ಸೋತರೂ ಕೂಡ ಪೂರ್ವವಾಟನು ಮತ್ತೂ ಪ್ರಯತ್ನಿಸುತ್ತಿದ್ದನು. ಆದರೆ ಆಚಾರ್ಯರ ಕಂಠಸ್ವರವು ಮೊದಲಿಗಿಂತಲೂ ಹೆಚ್ಚಾಗಿ ವಿರಾಜಿಸಿತು. ಸ್ವಲ್ಪವೂ ಕುಗ್ಗಲಿಲ್ಲ, ಗೊಗ್ಗರ ಧ್ವನಿಯಾಗಲಿಲ್ಲ. ಪೂರ್ವವಾಟನು ಎದುರುಸಿರು ಬಿಡುತ್ತಾ ನಿಂತನು. ಅವನು ವಿಶ್ರಮಿಸಿಕೊಂಡು ಪೂರ್ವಸ್ಥಿತಿಗೆ ಬಂದಾಗ ಆಚಾರ್ಯರು ತಮ್ಮ ಬೆರಳನ್ನು ನೆಲದ ಮೇಲಿಟ್ಟು ಅದನ್ನು ಎತ್ತಲು ಅಲ್ಲಾಡಿಸಲು ಅಪ್ಪಣೆ ಮಾಡಿದರು. ಆ ಹಠವಾದಿ ಮಹಾಬಲಿಷ್ಠನಾದ ಪೂರ್ವವಾಟನಿಗೆ ಬೆಟ್ಟನ್ನು ಮೇಲೆತ್ತಲು ಸಾಧ್ಯವಾಗಲಿಲ್ಲ. ಈ ಮೇಲಿನ ಜಗಜಟ್ಟಿಗಳಿ= ಗಿಂತಲೂ ಬಲಿಷ್ಠರಾದ ಶಿವ, ಅಗ್ನಿ, ವಾಸುದೇವ, ಉಗ್ರ, ಅಮೋಘ ಎಂಬ ಜಟ್ಟಿಗಳೂ ಆಚಾರ್ಯರ ಬಲಪರೀಕ್ಷೆ ಮಾಡಿದರು. ಪರೀಕ್ಷಿಸುವಾಗ ಸ್ವಲ್ಪವೂ ಉದಾಸೀನ ಮಾಡದೆ ಪ್ರಬಲ ಪ್ರಯತ್ನವನ್ನೇ ಮಾಡಿದರು. ಆಚಾರ್ಯರ ಸಾಮರ್ಥ್ಯದಲ್ಲಿ ಅತ್ಯಲ್ಪವಾದ ಕಿರಿಮೆಯನ್ನೂ ನೋಡಲು ಅವರಿಗೆ ಸಾಧ್ಯವಾಗಲಿಲ್ಲ. ಇವರು ನಿಜವಾಗಿಯೂ ಭೀಮಸೇನನೆಂದು ಉತ್ಪ್ರೇಕ್ಷಿಸಿದರು. ಆದರೆ ಅದು ಉತ್ಪ್ರೇಕ್ಷೆಯಲ್ಲ, ನಿಜವಾದ ಮಾತಾಗಿತ್ತು.

ಬಲಶಾಲಿಯಾದ ಜಟ್ಟಿಯೊಬ್ಬನು ಚಿಮಟದಿಂದ ಬಲವಾಗಿ ಹಿಡಿದುಕೊಂಡು ಎಷ್ಟು ಬಾರಿ ಎಳೆದರೂ ಆಚಾರ್ಯರ ತಲೆಯ ಕೂದಲಿನ ಒಂದು ಎಳೆಯನ್ನು ಕೀಳಲೂ ಸಾಧ್ಯವಾಗಲಿಲ್ಲ. ಕೋಮಲವಾಗಿ ಕಾಣಿಸುವ ಬಂಗಾರ ಬಣ್ಣದ ಸುಂದರವಾದ ಮೂಗಿನ ತುದಿಗೆ ಜಟ್ಟಿಯು ಗಟ್ಟಿಯಾಗಿ ಮುಷ್ಟಿಯಿಂದ ಅದೆಷ್ಟು ಬಾರಿ ಗುದ್ದಿದರೂ, ಹೊಡೆದರೂ ಆಚಾರ್ಯರ ಮೂಗು ಕೆಂಪಾಗಲಿಲ್ಲ, ಮುಖದ ಪ್ರಸನ್ನತೆ ಕುಂದಲಿಲ್ಲ. ಸಿಂಹವು ನಾಯಿಗಳೊಡನೆ, ಸಮುದ್ರವು ಸಣ್ಣ ದೊಡ್ಡ ತೊರೆ-ನದಿಗಳೊಡನೆ, ಸೂರ್ಯನು ಮಿಂಚುಹುಳುಗಳ ಜೊತೆಗೆ ಆಟವಾಡುವಂತೆ ಆಚಾರ್ಯರು ತಮ್ಮ ಶತ್ರು, ಮಿತ್ರ, ಉದಾಸೀನರ ಜೊತೆಗೆ ಈ ಆಟಗಳನ್ನು, ನಾನಾ ವಿಲಾಸಗಳನ್ನು ತೋರಿಸುತ್ತಾ ಮನುಷ್ಯನ ಮಧ್ಯದಲ್ಲಿ ಮನುಷ್ಯರಂತೆ ವ್ಯವಹರಿಸಿದರು. ಆಚಾರ್ಯರು ಒಂದು ಬಾರಿ 'ಪಾರಂತೀ' ಎಂಬ ದೇವಾಲಯಕ್ಕೆ ಬಂದರು. ಅಲ್ಲಿ ಬಹುಕಾಲದಿಂದ ಪೂಜೆ, ನೈವೇದ್ಯ, ಉತ್ಸವ ಎಲ್ಲವೂ ನಿಂತುಹೋಗಿತ್ತು. ಆಚಾರ್ಯರು ಅಲ್ಲಿಯ ಗ್ರಾಮಾಧಿಪತಿ, ಅರಸ ಮುಂತಾದವರನ್ನು ಕರೆಸಿ ಅರ್ಧದಿವಸದಲ್ಲಿಯೇ ಪೂಜಾ, ನೈವೇದ್ಯ, ಭೂತಬಲಿ, ಬ್ರಹ್ಮಕಲಶ, ಉತ್ಸವ ಪೂರೈಸಿದರು. ಹಿಂದೆ ಆಚಾರ್ಯರು ಭೀಮಸೇನರಾಗಿದ್ದಾಗ ಅಣ್ಣತಮ್ಮಂದಿರಿಂದ ಕೂಡಿಕೊಂಡು ಅಲ್ಲಿಗೆ ಬಂದು ದ್ರೌಪದಿಯು ಕೈಗೆ ನೀರು ಹಾಕುತ್ತಿದ್ದಾಗ ತಾವು ದೇವರ ಪೂಜೆ ಮಾಡಿದ್ದನ್ನು ಭೂತಬಲಿ ಕೊಟ್ಟಿದ್ದನ್ನು ಆಗ ನೆನಸಿಕೊಂಡರು.

ಆಚಾರ್ಯರು ಒಂದಾನೊಂದು ಬಾರಿ 'ಸರಿದಂತರ' (ಇಡತುದೆ) ಎಂಬ ಗ್ರಾಮಕ್ಕೆ ಬಂದರು. ಆಗ ಬೇಸಿಗೆ ಕಾಲ. ಅಲ್ಲಿ ಕೆರೆ ಒಣಗಿಹೋಗಿತ್ತು. ಆಚಾರ್ಯರು ಕೂಡಲೆ ಮೋಡಗಳನ್ನು ತರಿಸಿ ಆ ಕೆರೆ ತುಂಬುವಷ್ಟು ಮಳೆ ಬರಿಸಿದರು. ಜನರ ಆಶ್ಚರ್ಯಕ್ಕೆ ಪಾರವೇ ಇಲ್ಲ. ಆಚಾರ್ಯರು 'ಸರಿದಂತರ' ಎಂಬ ಗ್ರಾಮದಿಂದ ಶಿಷ್ಯ ಸಮೇತರಾಗಿ ಬೇರೊಂದು ಪ್ರದೇಶಕ್ಕೆ ಹೋಗುತ್ತಿದ್ದಾಗ ದುಷ್ಟರಿಂದ ಪ್ರೇರಿತನಾದ ಗ್ರಾಮಾಧಿಪತಿಯೊಬ್ಬನು. ಅನೇಕ ಭಟರಿಂದ ಕೂಡಿಕೊಂಡು ಆಚಾರ್ಯರನ್ನು ಹೊಡೆಯಲು ಬಂದನು. ಆದರೆ ಉದಯಿಸುವ ಸೂರ್ಯನಂತೆ ಹೊಳೆಯುತ್ತಿರುವ ಆಚಾರ್ಯರನ್ನು ನೋಡಿದ ಕೂಡಲೇ ಆ ಶೂದ್ರ ಗ್ರಾಮಾಧಿಪತಿಯ ಮನಸ್ಸು ಬದಲಾಯಿತು. ಇಂತಹ ತೇಜಸ್ವಿಗಳ ಮೇಲೆ ಕೈ ಮಾಡುವುದು ಸರಿಯಲ್ಲವೆಂದು ಭಾವಿಸಿದ ಆತನು ಆಚಾರ್ಯರಿಗೆ ನಮಸ್ಕಾರ ಮಾಡಿ ತಾನು ಮಾಡಿದ ತಪ್ಪಿಗಾಗಿ ಕ್ಷಮೆ ಕೇಳಿಕೊಂಡನು.

ಕೊಕ್ಕಡ ಎಂಬ ಗ್ರಾಮದಲ್ಲಿ ವೈದ್ಯನಾಥೇಶ್ವರ ಎಂಬ ಹೆಸರಿನ ಈಶ್ವರ ದೇವಾಲಯವಿದೆ. ಅಲ್ಲಿಗೆ ಹೊರಟಿರುವ ಆಚಾರ್ಯರು ತಮ್ಮ ಭಕ್ತನೊಬ್ಬನ ಅನುಕೂಲಕ್ಕಾಗಿ ಪುರಾಣವಚನ ಸಂಗ್ರಹರೂಪವಾದ ಶ್ರೀಕೃಷ್ಣಾಮೃತಮಹಾರ್ಣವೆಂಬ ಗ್ರಂಥವನ್ನು ರಚಿಸಿದರು.

ಆಚಾರ್ಯರು 'ಉಜಿರೆ'(ಉಚ್ಚಭೂತಿ) ಎಂಬ ಗ್ರಾಮಕ್ಕೆ ಬಂದು ಅಲ್ಲಿ ತಾವೇ ಸರ್ವಜ್ಞರೆಂದು ತಿಳಿದಿರುವ ಕೆಲವು ಪಂಡಿತರ ಅಹಂಕಾರ ಖಂಡನೆಗಾಗಿ 'ಕೂಪಮಂಡೂಕಗಳಂತಿರುವ ಈ ಗ್ರಾಮದ ಪಂಡಿತರೆಲ್ಲಿ?' ಎಂದು ಕೇಳಿದರು. ಈ ಮಧ್ವಾಚಾರ್ಯರು ಸಂನ್ಯಾಸಿಗಳು. ಇವರು ಎಲ್ಲವನ್ನು ಬಲ್ಲವರಾದರೂ ಯಜ್ಞಾನುಷ್ಠಾನದ ರೀತಿಯು ಇವರಿಗೆ ತಿಳಿದಿಲ್ಲ. ಆದ್ದರಿಂದ ಕರ್ಮಕಾಂಡದಲ್ಲಿ ಪ್ರಶ್ನೆ ಹಾಕಿ ಇವರನ್ನು ಸೋಲಿಸಬೇಕೆಂದು ಆ ಪಂಡಿತರು ನಿಶ್ಚಯಿಸಿದರು. ಅಲ್ಲಿ ಸಭೆ ಸೇರಿದಾಗ ಸಭಾಮಧ್ಯದಲ್ಲಿ ಪ್ರಕಾಶಿಸುತ್ತಿರುವ ಆಚಾರ್ಯರನ್ನು ಕುರಿತು ಆ ಪಂಡಿತರು ಯಜ್ಞವಿಧಾನವನ್ನು ಹೇಳುವ ಕಠಿಣವಾದ ಒಂದು ಬ್ರಾಹ್ಮಣ ಭಾಗದ ತಾತ್ಪರ್ಯವನ್ನು ಕೇಳಿದರು. ಆಚಾರ್ಯರು ಆ ಮಂತ್ರಖಂಡದ ಅರ್ಥವನ್ನು ಹೇಳಿ 'ನಾರಾಶಂಸೀ' ಎಂಬ ಶ್ರೇಷ್ಠವಾದ ಮಂತ್ರವನ್ನು ಹೇಳಿದರು. ಆಚಾರ್ಯರ ಪಾಂಡಿತ್ಯವನ್ನು ಕಂಡು ಕ್ಷೋಭೆಗೊಂಡು ಪ್ರತಿವಾದಿಗಳು ಆಚಾರ್ಯರು ಹೇಳುವ ಅರ್ಥವು ಸರಿಯಾಗಿದ್ದರೂ ಕೂಡ ತಾವು ಹೇಳಿದ ವೇದಾರ್ಥವು ಸರಿಯಾಗಿಲ್ಲ ಎಂದು ವೇದಖಂಡದ ಅರ್ಥವನ್ನು ಕೇಳಿದರು. ಆಚಾರ್ಯರು ಮಹಾನಾಮ್ನಿ ಋಕ್ಕುಗಳ ಅರ್ಥವನ್ನೆಲ್ಲಾ ಹೇಳಿ ತಾವು ಹೇಳಿದ ಅರ್ಥವು ಮುಂದಿನ ಶಿಷ್ಯಪರಂಪರೆಯಲ್ಲಿ ಸ್ಥಿರವಾಗಿ ಉಳಿಯುವುದಕ್ಕಾಗಿ ಆ ಅರ್ಥವನ್ನೆಲ್ಲಾ ಶಿಷ್ಯರಿಂದ ಬರೆಸಿದರು. ಅದೇ ಕರ್ಮನಿರ್ಣಯ ಎಂಬ ಗ್ರಂಥವಾಯಿತು. ಪ್ರತಿವಾದಿಗಳು ಆಚಾರ್ಯರನ್ನು ನಿಂದಿಸುತ್ತಾ ಓಡಿದರು. ಆದರೆ ಹುಣ್ಣಿಮೆಯ ಪೂರ್ಣಚಂದ್ರನನ್ನು ಕಂಡು ನಾಯಿಗಳು ಕೂಗುತ್ತಾ ದೂರಕ್ಕೆ ಓಡಿದರೆ ಚಂದ್ರಮನಿಗೆ ಹಾನಿಯೇ ತರದು.

ಆಚಾರ್ಯರು ಬಹಳ ದಯಾಳುಗಳು. ಬಡವರ ಮನೆಯಲ್ಲಿ ಭಿಕ್ಷೆಗಾಗಿ ಹೋದಾಗ ಅಲ್ಲಿ ಕೆಲವೇ ಜನರಿಗೆ ಸಾಕಾಗುವಷ್ಟು ಅನ್ನಾದಿ ಪರಿಕರವಿದ್ದು ಊಟ ಮಾಡುವವರ ಸಂಖ್ಯೆ ಹೆಚ್ಚಾಗಿದ್ದರೆ ಅವರು ಕೂಡಲೇ ಅಲ್ಲಿರುವ ಅನ್ನಾದಿ-ಗಳನ್ನು ಒಂದಕ್ಕೆ ನಾಲ್ಕು ಪಾಲು ಹೆಚ್ಚಾಗಿ ಮಾಡಿ ಎಲ್ಲರಿಗೂ ಸಾಕಾಗುವಂತೆ ಮಾಡುತ್ತಿದ್ದರು. ಹಾಗೆಯೇ ಧನಿಕರಾದ ಭಕ್ತರು ಭಿಕ್ಷೆಗಾಗಿ ಕರೆದಾಗ ಅವರ ಸಂತೋಷಕ್ಕಾಗಿ ಮೂವತ್ತು ಮಂದಿಗೆ ಭೋಜನಕ್ಕೆ ಸಾಕಾಗುವ ಅನ್ನಾದಿಗಳನ್ನು ತಾವು ಒಬ್ಬರೇ ಸ್ವೀಕರಿಸಿ ಭಕ್ತರಿಗೆ ಅನುಗ್ರಹ ಮಾಡುತ್ತಿದ್ದರು.

ಆಚಾರ್ಯರು ಮಳೆ ಇಲ್ಲದಿರುವಾಗ ಮಳೆ ಬರಿಸಿ ಕೆರೆ ಬಾವಿಗಳನ್ನು ತುಂಬುವಂತೆ ಮಾಡಿದರು. ಅತಿವೃಷ್ಟಿಯಾಗಿ ತೊಂದರೆಯಾಗುತ್ತಿದ್ದಾಗ ಮಳೆಯನ್ನು ನಿಲ್ಲಿಸಿದರು. ಇಂತಹ ಅತಿಮಾನುಷವಾದ ಅನೇಕ ಪವಾಡಗಳನ್ನು ಮಾಡಿದರು. ಸಕಲಲೋಕನಿಯಾಮಕರಾದ ಶ್ರೀಮುಖ್ಯಪ್ರಾಣನ ಅವತಾರರಾದ ಆಚಾರ್ಯರಿಗೆ ಈ ಮಹಿಮೆಗಳು ಅತ್ಯಲ್ಪ. ಆದರೆ ಅವರ ಭಕ್ತರಾದ ನಾವು ಲೋಕಗುರುಗಳಾದ ಅವರ ಚರಿತ್ರೆಗಳನ್ನು ಅನುವಾದಿಸುವುದು ಗುರುಸ್ತೋತ್ರವಾದುದರಿಂದ ನಮ್ಮ ಶ್ರೇಯಸ್ಸಿಗೆ ಸಾಧನವೆಂದು ತಿಳಿದು ಸ್ವಲ್ಪಭಾಗವನ್ನಷ್ಟೇ ವರ್ಣಿಸಿದ್ದೇವೆ. ಅವರ ಚರಿತ್ರೆ ವರ್ಣನೆಯು ಗುರು-ಸ್ತೋತ್ರವಾಗುತ್ತದೆ ಮತ್ತು ಗುರುಗಳ ಅಂತರ್ಯಾಮಿಯಾದ ಹರಿಯ ಸ್ತೋತ್ರವೂ ಆಗುತ್ತದೆ.

ಹೀಗೆ ಸಭೆಯೊಂದರಲ್ಲಿ ಆಚಾರ್ಯರ ಶಿಷ್ಯನೊಬ್ಬನು ಆಚಾರ್ಯರ ಚರಿತ್ರೆಯನ್ನು ಅನುವಾದ ಮಾಡಿದನು. ಈ ಲೋಕದಲ್ಲಿ ಬ್ರಾಹ್ಮಣನೊಬ್ಬನು ಈ ಚರಿತ್ರೆಯನ್ನು ಹೇಳಿದನೆಂದು ಮಾತ್ರ ತಿಳಿಯತಕ್ಕದಲ್ಲ, ದೇವತೆಗಳ ಸಭೆಯಲ್ಲಿ ಸೇರಿದ್ದ ಗಂಧರ್ವರು ಗುರುಗಳ ಚರಿತ್ರೆಯನ್ನು ಗಾನರೂಪದಿಂದ ಹಾಡಿ ಹೊಗಳಿದ್ದಾರೆ. ಸರಿಗಮಪದನಿಸ ಎಂಬ ಏಳು ಸ್ವರಗಳು, ಮೂರು ಸ್ವರಗ್ರಾಮಗಳು, ಇಪ್ಪತ್ತೊಂದು ಮೂರ್ಛನೆಗಳು, ನಲ್ವತ್ತೊಂಭತ್ತು ತಾನಗಳು, ಇವುಗಳ ಸಮೂಹರೂಪವಾದ ಗಾನದಿಂದ ಗಂಧರ್ವರು ಆಚಾರ್ಯರ ಮಹಿಮೆಯನ್ನು ಹಾಡಿದರು. ದೇವತೆಗಳು ಭಕ್ತಿಯಿಂದ ಕಿರೀಟಗಳ ಮೇಲೆ ಕೈ ಜೋಡಿಸಿ ತಲೆಬಾಗಿಸಿ ಆ ಗುರುಚರಿತ್ರೆಯ ಗಾನವನ್ನು ಕೇಳುತ್ತಿದ್ದರು. ಅನಂತರ ಆ ದೇವತೆಗಳು ಗಂಧರ್ವರು ಹಾಡುತ್ತಿರುವಾಗ ಮಂದಹಾಸ ಪುರಸ್ಸರವಾಗಿ ತಮ್ಮ ಲೋಕದಿಂದ ಹೊರಟು ಬಂದರು. ಶ್ರೀಮದಾ-ನಂದತೀರ್ಥರನ್ನು ನೋಡಿ ಅವರ ವಿಜಯೋತ್ಸವವನ್ನು ಅಭಿನಂದಿಸಲು ಬಂದರು. ಅಂದು ಶ್ರೀಮುಖ್ಯಪ್ರಾಣನು ಮಧ್ವರೂಪದಿಂದ ಭೂಲೋಕದಲ್ಲಿ ಒಂದು ಭಾಗದಲ್ಲಿ ವಾಸಿಸುತ್ತಿದ್ದರು. ಆದರೆ ತಮ್ಮ ಉತ್ತಮ ಗುಣಗಳಿಂದ ಕೀರ್ತಿಯನ್ನು ಎಲ್ಲ ಲೋಕಗಳಿಗೂ ಹರಡಿದ್ದರು. ತ್ರಿಭುವನವಾಸಿಗಳಾದ ಸಾತ್ವಿಕಭಕ್ತರನ್ನು ಉದ್ಧರಿಸಲು ಸಮರ್ಥವಾದ ಅನೇಕ ಶ್ರೇಷ್ಠವಾದ ಗ್ರಂಥಗಳನ್ನು ರಚಿಸಿ ಭಕ್ತಾನುಗ್ರಹ ಮಾಡಿದ್ದರು. ಅಂತಹ ಆಚಾರ್ಯರು ಅನೇಕ ಮಂದಿ ಸಂನ್ಯಾಸಿ ಮತ್ತು ಗೃಹಸ್ಥಶಿಷ್ಯರ ಮಧ್ಯದಲ್ಲಿ ಕುಳಿತು ಐತರೇಯೋಪನಿಷತ್ತಿನ ಅರ್ಥವನ್ನು ಅವರಿಗೆ ವಿವರಿಸಿ ಹೇಳುತ್ತಿದ್ದರು. ಇಂತಹ ಆಚಾರ್ಯರನ್ನು ಕಂಡು ದೇವತೆಗಳು, ಅನುದೇವತೆಗಳು ಆಕಾಶದಿಂದಲೇ ನಮಿಸಿದರು.

ಚಂದ್ರನಂತಹ ನಗುಮೊಗದ ಕಾಂತಿಯ ಕಮಲಗಣ್ಣಿನ ಗಂಭೀರಸ್ವರದ 32 ದಿವ್ಯ ಲಕ್ಷಣ ಸಂಪನ್ನರಾದ ಹರಿಭಕ್ತಿ ಪ್ರೇಮರಸಾಯನದಿಂದ ಯಾವಾಗಲೂ ತೃಪ್ತರಾದ ಆಚಾರ್ಯರನ್ನು ಆ ದೇವತೆಗಳು ಪುಷ್ಪಾಂಜಲಿಯಿಂದ ಪೂಜಿಸಿ ಈ ರೀತಿ ಸ್ತೋತ್ರ ಮಾಡಿದರು.

'ಜಗದ್ಗುರುಗಳಾದ ಶ್ರೀಮಧ್ವಾಚಾರ್ಯರೇ! ನಿಮ್ಮ ವಚನಸಮೂಹಗಳಿಂದ ದುರಾಗಮಾಂಧಕಾರವು ದೂರವಾಯಿತು. ಮೋಕ್ಷಪ್ರದನಾದ ಶ್ರೀಮನ್ನಾರಾಯಣನ ಶುಭಗುಣಗಳನ್ನು ಪ್ರಕಟಗೊಳಿಸಿ ನೀವು ಎಲ್ಲರನ್ನೂ ಅನುಗ್ರಹಿಸಿದಿರಿ. ಹರಿಯೇ ಸರ್ವಗುಣಪರಿಪೂರ್ಣನೆಂದು ಸ್ಥಿರಪಡಿಸಿದಿರಿ. ನೀವು ಹದಿನಾಲ್ಕು ಲೋಕಗಳನ್ನು ಜಯಿಸಿದಿರಿ. ಅವತಾರ ಕಾರ್ಯವನ್ನೆಲ್ಲಾ ಮಾಡಿದಿರಿ. ಹೀಗೆಯೇ ದಯೆಗೈದು ನಮ್ಮನ್ನೆಲ್ಲಾ ರಕ್ಷಿಸಿರಿ' ಎಂದು ದೇವತೆಗಳು ಪ್ರಾರ್ಥಿಸಿದರು.

'ಸಮಸ್ತ ಇಂದ್ರಿಯಗಳಿಗೆ ನಿಯಾಮಕರಾದ ಮುಖ್ಯಪ್ರಾಣದೇವರೇ! ಭಕ್ತರಿಗೆ ತತ್ತ್ವಜ್ಞಾನವನ್ನು ಕರುಣಿಸಲು ನೀವು ಭೂಲೋಕಕ್ಕೆ ಬಂದಿರಿ. ಶ್ರೀರಾಮಚಂದ್ರನಿಗೆ ಅತಿಪ್ರಿಯವಾದ ಹನುಮಂತರೂಪವನ್ನು ತಾಳಿದ ನಿಮಗೆ ನಮನಗಳು.

ಮಹಾಬಲವಂತರಾದ ಶ್ರೀಕೃಷ್ಣನಿಗೆ ಪ್ರಿಯರಾದ ಭೀಮಸೇನದೇವರೇ ನಿಮಗೆ ನಮನಗಳು. ವೇದವ್ಯಾಸರ ಭಕ್ತರಾದ ಮಧ್ವಗುರುಗಳೇ ನಮಗೆ ಒಳ್ಳೆಯ ತತ್ತ್ವಜ್ಞಾನವನ್ನು ಕರುಣಿಸಿರಿ ನಿಮಗೆ ಮತ್ತೂ ಮತ್ತೂ ನಮನಗಳು'.

ಈ ರೀತಿ ಸ್ತೋತ್ರ ಮಾಡುತ್ತಾ ಶ್ರೀಮದಾನಂದತೀರ್ಥಭಗವತ್ಪಾದರ ವಿಜಯ ಮಹೋತ್ಸವವನ್ನು ಬಹುಮಾನಿಸುತ್ತಾ ದೇವತೆಗಳು ಅವರ ಮೇಲೆ ಪರಿಮಳಭರಿತವಾದ ಹೂವುಗಳನ್ನು ಸುರಿಸಿದರು. ಆ ಪುಷ್ಪವೃಷ್ಟಿಯನ್ನು ಅಂದು ಎಲ್ಲರೂ ಕಂಡರು.



॥ ಶ್ರೀಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

## ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತಃ

# ಶ್ರೀಸುಮಧ್ವವಿಜಯಃ

## ಷೋಡಶಃ ಸರ್ಗಃ

**ಸಾಧುಭ್ಯೋ ಮಧುಮಥನಾಂಘ್ರಿಭಕ್ತಿಭಾಗ್ಭ್ಯಃ**
**ಶ್ರೌತೇಭ್ಯೋ ವಿತತಮತೇರ್ಮಹಾನುಭಾವಮ್ ।**
**ವೇದಾಂತಂ ಸ್ವಯಮಿವ ಬಂಧಮೋಕ್ಷಮೂಲಂ**
**ವ್ಯಾಚಷ್ಟ ಸ್ಫುಟಮಥ ಕೋಽಪಿ ಕೋವಿದೋಽತ್ರ ॥ 1 ॥**

**ಪದಚ್ಛೇದ—** ಸಾಧುಭ್ಯೋ, ಮಧುಮಥನಾಂಘ್ರಿಭಕ್ತಿಭಾಗ್ಭ್ಯಃ, ಶ್ರೌತೇಭ್ಯಃ, ವಿತತಮತೇಃ, ಮಹಾನುಭಾವಂ, ವೇದಾಂತಂ, ಸ್ವಯಂ, ಇವ, ಬಂಧಮೋಕ್ಷಮೂಲಂ, ವ್ಯಾಚಷ್ಟ, ಸ್ಫುಟಂ, ಅಥ, ಕಃ, ಅಪಿ, ಕೋವಿದಃ, ಅತ್ರ ।

**ಅನ್ವಯ—** ಅಥ, ಅತ್ರ, ಕಃ, ಅಪಿ, ಕೋವಿದಃ, ಸ್ವಯಂ, ಮಧುಮಥನಾಂಘ್ರಿಭಕ್ತಿಭಾಗ್ಭ್ಯಃ, ಶ್ರೌತೇಭ್ಯಃ, ಸಾಧುಭ್ಯೋಃ, ವಿತತಮತೇಃ, ಬಂಧಮೋಕ್ಷಮೂಲಂ, ಮಹಾನುಭಾವಂ, ಸ್ಫುಟಂ, ವೇದಾಂತಂ, ಇವ, ವ್ಯಾಚಷ್ಟ ।

**ಅನ್ವಯಾರ್ಥ—**

**ಅಥ** = ಅನಂತರ,

**ಅತ್ರ** = ಈ ಮಧ್ವಾಚಾರ್ಯರ ಶಿಷ್ಯರಲ್ಲಿ

**ಕಃ ಅಪಿ** = ಯಾವನೋ ಒಬ್ಬ (ಒಬ್ಬಾನೊಬ್ಬ)

**ಕೋವಿದಃ** = ವಿದ್ವಾಂಸನಾದ ಶಿಷ್ಯನು,

**ಸ್ವಯಂ** = ಸ್ವತಃ,

**ಮಧುಮಥನಾಂಘ್ರಿಭಕ್ತಿಭಾಗ್ಭ್ಯಃ** = ಶ್ರೀಮನ್ನಾರಾಯಣನ ಪಾದಗಳಲ್ಲಿ ಭಕ್ತಿಯನ್ನು ಹೊಂದಿರುವ,

**ಶ್ರೌತೇಭ್ಯಃ** = ವೈದಿಕರಾದ,

**ಸಾಧುಭ್ಯಃ** = ಸಜ್ಜನರಿಗೆ,

**ವಿತತಮತೇಃ** = ಶ್ರೀಪೂರ್ಣಪ್ರಜ್ಞಾಚಾರ್ಯರ,

**ಬಂಧಮೋಕ್ಷಮೂಲಂ** = ಸಂಸಾರಬಂಧನದಿಂದ ಬಿಡುಗಡೆಗೆ ಕಾರಣವಾದ,

**ಮಹಾನುಭಾವಂ** = ಅತಿಶಯವಾದ ಮಹಾತ್ಮ್ಯೆಯನ್ನು,

**ಸ್ಫುಟಂ** = ಸ್ಪಷ್ಟವಾಗಿ,

**ವೇದಾಂತಂ ಇವ** = ವೇದಾಂತ ಶಾಸ್ತ್ರದಂತೆ,

**ವ್ಯಾಚಷ್ಟ** = ಹೇಳಿದನು.

**ತಾತ್ಪರ್ಯ—** ಒಂದು ಸಂದರ್ಭದಲ್ಲಿ ಯಾವುದೋ ಒಂದು ಸ್ಥಳದಲ್ಲಿ ಅನೇಕ ಮಂದಿ ಶ್ರೀಮಧ್ವಾಚಾರ್ಯರ ಶಿಷ್ಯರು ಸೇರಿದ್ದರು. ಅವರಲ್ಲಿ ಪಂಡಿತನಾದ ಒಬ್ಬ ಶಿಷ್ಯನು ಪರಮಾತ್ಮನ ಪಾದಗಳಲ್ಲಿ ಭಕ್ತಿಭರಿತರಾದ ವೇದ-ವೇದಾಂಗಾಧ್ಯಯನ ಸಂಪನ್ನರಾದ ಸಜ್ಜನರಿಗೋಸ್ಕರ ಶ್ರೀಮಧ್ವಾಚಾಯಸ್ತವನ್ನೋ ಎಂಬಂತೆ ಸ್ಪಷ್ಟವಾಗಿ ವಿವರಿಸಿ ಹೇಳಿದನು. ಗುರುಗಳು ಶಿಷ್ಯರಿಗೆ ಸಂಸಾರಬಂಧನಾಶಕವಾದ ವೇದಾಂತವಿದ್ಯೆಯನ್ನು ಉಪದೇಶಿಸುತ್ತಾರೆ, ಅದರಂತೆ ಆಚಾರ್ಯರ ಶಿಷ್ಯನಾದ ಪಂಡಿತನೊಬ್ಬನು ಶ್ರೀಮಧ್ವರ ಮಹಿಮೆಯನ್ನು ಹರಿಭಕ್ತರಾದ ಸಜ್ಜನರಿಗೆ ಉಪದೇಶಿಸಿದನು ಎಂದು ಭಾವ.

**ವಿಗ್ರಹ—**

**ಮಧುಮಥನಾಂಘ್ರಿಭಕ್ತಿಭಾಗ್ಭ್ಯಃ—** ಮಧುಂ ಮಥ್ನಾತೀತಿ ಮಧುಮಥನಃ (ಮಧೋಃ ಮಥನಂ ಯಸ್ಮಾತ್ ಸಃ ಮಧುಮಥನಃ) ಮಧುಮಥನಸ್ಯ ಅಂಘ್ರೀ ಮಧುಮಥನಾಂಘ್ರೀ, ಮಧುಮಥನಾಂಘ್ರ್ಯೋಃ-ಭಕ್ತಿಃ ಮಧುಮಥನಾಂಘ್ರಿಭಕ್ತಿಃ ಮಧುಮಥನಾಂಘ್ರಿಭಕ್ತಿಂ ಭಜಂತೀತಿ ಮಧುಮಥನಾಂಘ್ರೀ-ಭಕ್ತಿಭಾಜಃ ತೇಭ್ಯಃ (ಭಾಜ್ ಜಕಾರಾಂತ ಪುಂ) ।

**ಶ್ರೌತೇಭ್ಯಃ—** ಶ್ರುತೇಃ ಇಮೇ ಶ್ರೌತಾಃ ।

**ವಿತತಮತೇಃ—** ವಿತತಾ ಮತಿಃ ಯಸ್ಯ ಸಃ ತಸ್ಯ ।

**ಮಹಾನುಭಾವಂ—** ಮಹಾನ್ ಚ ಅಸೌ ಅನುಭಾವಶ್ಚ ಮಹಾನುಭಾವಃ ತಂ ।

**ವೇದಾಂತಂ—** ವೇದಾನಾಂ ಅಂತಃ (ನಿರ್ಣಯಃ)ಯಸ್ಮಾತ್ ಸಃ ವೇದಾಂತಃ ತಂ ।

**ಬಂಧಮೋಕ್ಷಮೂಲಂ—** ಬಂಧಾತ್ ಮೋಕ್ಷಃ ಬಂಧಮೋಕ್ಷಃ, ಬಂಧಮೋಕ್ಷಸ್ಯ ಮೂಲಂ ಬಂಧಮೋಕ್ಷ ಮೂಲಂ ।

**ಕೋಶ—** ಕೋವಿದಃ = ಪಂಡಿತ, ವಿದ್ವಾನ್, ವಿಪಶ್ಚಿತ್ ದೋಷಜ್ಞಃ 'ಸನ್ ಸುಧೀಃ ಕೋವಿದೋ ಬುಧಃ' ಅಮರ ।

**ಕ್ರಿಯಾಪದ—** **ವ್ಯಾಚಷ್ಟ** - ವಿ ಆಙ್ ಉಪಸರ್ಗದ್ವಯಪೂರ್ವಕವಾದ ಚಕ್ಷಿಙ್ ವ್ಯಕ್ತಾಯಾಂ ವಾಚಿ ಎಂಬ ಧಾತು ಸಕ ಆತ್ಮ. ಈ ಧಾತುವಿಗೆ ಬರುವ ಖ್ಯಾಞ್ ಆದೇಶವು ಅನಿಟ್ ಪ್ರಕೃತದಲ್ಲಿ ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನದಲ್ಲಿ ವ್ಯಾಚಷ್ಟ ಎಂದು ರೂಪ ।

ವಿ+ಆ+ಅಚಷ್ಟ ಅಚಕ್ಷಾತಾಂ ಅಚಕ್ಷತ, ಅಚಷ್ಠಾಃ ಅಚಕ್ಷಾಥಾಂ ಅಚಡ್‌ಢ್ವಂ, ಅಚಕ್ಷಿ ಅಚಕ್ಷ್ವಹಿ ಅಚಕ್ಷ್ಮಹಿ ।

**ಪ್ರಯೋಗ—** ಅಥ ಅತ್ರ ಕೇನಾಪಿ ಕೋವಿದೇನ ಸ್ವಯಂ ಮಧುಮಥನಾಂಘ್ರಿಭಕ್ತಿಭಾಗ್ಭ್ಯಃ ಶ್ರೌತೇಭ್ಯಃ ಸಾಧುಭ್ಯಃ ವಿತತಮತೇಃ ಬಂಧಮೋಕ್ಷಮೂಲಂ ಮಹಾನುಭಾವಃ ಸ್ಫುಟಂ ವೇದಾಂತಃ ಇವ ವ್ಯಾಖ್ಯಾಯತ ।

**ವೃತ್ತ—** ಈ ಸರ್ಗದಲ್ಲಿ 55ನೆಯ ಶ್ಲೋಕದವರೆಗೆ ಪ್ರಹರ್ಷಿಣಿ ವೃತ್ತ 'ಮ್ನೌ ಜ್ರೌ ಗಸ್ತ್ರಿದಶಯತಿ ಪ್ರಹರ್ಷಿಣೀಯಂ' ಎಂದು ಅದರ ಲಕ್ಷಣ. ಸಾಧುಭ್ಯೋ ಎಂಬ ಮೂರರಲ್ಲಿ ಕೊನೆಗೆ ಹತ್ತರಲ್ಲಿ ಭಾಗ್ಭ್ಯಃ ಎಂಬಲ್ಲಿ ಯತಿಯು ಬಂದಿದೆ.

◡ ◡ ◡   – – – – ◡ –

ಸಾಧುಭ್ಯೋ ಮಧುಮ ಥನಾಂಘ್ರಿ

★★★

**ಅವತಾರಿಕಾ**— ಒಬ್ಬ ಶೂದ್ರರಾಜನು ಆಚಾರ್ಯರನ್ನು ಆಕ್ಷೇಪಿಸಿದ ಕಥೆಯನ್ನು ಪ್ರಾರಂಭಿಸುತ್ತಾರೆ.

**ಗೋಮತ್ಯಾಸ್ತಟನಿಕಟೇಽಚ್ಛಕೀರ್ತಿಚಂದ್ರಂ**
**ವಿಶ್ವಜ್ಞಂ ಕ್ಷಿತಿಪತಿರಂತ್ಯವರ್ಣಜನ್ಮಾ ।**
**ವಿದ್ವೇಷ್ಟಾ ಶ್ರುತಿಗುಣಸಾಧಕಂ ಶ್ರುತೀನಾಂ**
**ವಾಚಾಲೋ ವಚನಮುವಾಚ ವಾಗ್ಮಿವರ್ಯಮ್॥ 2 ॥**

**ಪದಚ್ಛೇದ**— ಗೋಮತ್ಯಾಃ, ತಟನಿಕಟೇ, ಅಚ್ಛಕೀರ್ತಿಚಂದ್ರಂ, ವಿಶ್ವಜ್ಞಂ, ಕ್ಷಿತಿಪತಿಃ, ಅಂತ್ಯವರ್ಣಜನ್ಮಾ, ವಿದ್ವೇಷ್ಟಾ, ಶ್ರುತಿಗುಣಸಾಧಕಂ, ಶ್ರುತೀನಾಂ, ವಾಚಾಲಃ, ವಚನಂ, ಉವಾಚ, ವಾಗ್ಮಿವರ್ಯಂ ।

**ಅನ್ವಯ**— ಗೋಮತ್ಯಾಃ, ತಟನಿಕಟೇ, ಶ್ರುತೀನಾಂ, ವಿದ್ವೇಷ್ಟಾ, ವಾಚಾಲಃ, ಅಂತ್ಯವರ್ಣಜನ್ಮಾ, ಕ್ಷಿತಿಪತಿಃ, ಅಚ್ಛಕೀರ್ತಿಚಂದ್ರಂ, ಶ್ರುತಿಗುಣಸಾಧಕಂ, ವಾಗ್ಮಿವರ್ಯಂ, ವಿಶ್ವಜ್ಞಂ, ವಚನಂ, ಉವಾಚ ।

**ಅನ್ವಯಾರ್ಥ**—

**ಗೋಮತ್ಯಾಃ** = ಗೋಮತೀ ನದಿಯ,
**ತಟನಿಕಟೇ** = ದಡದ ಹತ್ತಿರದಲ್ಲಿರುವ,
**ಶ್ರುತೀನಾಂ** = ವೇದಗಳ,
**ವಿದ್ವೇಷ್ಟಾ** = ವಿಶೇಷ ದ್ವೇಷಿಯಾದ,
**ವಾಚಾಲಃ** = ಬಹುಭಾಷಿಯಾದ,
**ಅಂತ್ಯವರ್ಣಜನ್ಮಾ** = ಶೂದ್ರಜಾತಿಯಲ್ಲಿ ಹುಟ್ಟಿರುವ,
**ಕ್ಷಿತಿಪತಿಃ** = ಒಬ್ಬ ರಾಜನು,
**ಅಚ್ಛಕೀರ್ತಿಚಂದ್ರಂ** = ಪರಿಶುದ್ಧವಾದ ಕೀರ್ತಿಯಿಂದ ಚಂದ್ರನಂತಿರುವ,
**ಶ್ರುತಿಗುಣಸಾಧಕಂ** = ವೇದಗಳ ಅಪೌರುಷೇಯತ್ವ ಪ್ರಾಮಾಣ್ಯ ಮೊದಲಾದ ಗುಣಗಳ ಸಾಧಕರಾದ,
**ವಾಗ್ಮಿವರ್ಯಂ** = ಪ್ರಶಸ್ತ ಮಾತುಗಾರರಾದ,
**ವಿಶ್ವಜ್ಞಂ** = ಶ್ರೀಪೂರ್ಣಪ್ರಜ್ಞರನ್ನು ಕುರಿತು,
**ವಚನಂ** = ಮಾತನ್ನು,
**ಉವಾಚ** = ಹೇಳಿದನು.

**ತಾತ್ಪರ್ಯ**— ಗೋಮತೀ ನದಿಯ ತೀರದಲ್ಲಿ ಒಬ್ಬ ಶೂದ್ರರಾಜನಿದ್ದನು. ಅವನು ದೊಡ್ಡ ವೇದದ್ವೇಷಿಯಾಗಿದ್ದನು. ವೇದವನ್ನು ದೂಷಿಸುವ ಕೆಟ್ಟ ಮಾತುಗಳನ್ನಾಡುತ್ತಿದ್ದನು. ಆಚಾರ್ಯರಾದರೋ ವಾಚಾಳರಲ್ಲಿ ವಾಗ್ಮಿಗಳು, ಪ್ರಶಸ್ತವಾದ ಉತ್ತಮ ಮಾತುಗಳನ್ನು ಆಡುವವರಲ್ಲಿ ಶ್ರೇಷ್ಠರು, ವೇದಾಪೌರುಷೇಯತ್ವ-ವೇದಪ್ರಾಮಾಣ್ಯ ಮುಂತಾದ ವೇದದ ವೈಶಿಷ್ಟ್ಯಗಳನ್ನು ಸಾಧಿಸುವವರು, ಅವರು ತಮ್ಮ ಅಕಳಂಕವಾದ ಕೀರ್ತಿಯಿಂದ ಚಂದ್ರನಂತೆ ಬೆಳಗುತ್ತಿದ್ದರು. ಸರ್ವಜ್ಞರೂ ಮಂತ್ರಸಿದ್ಧಿಯುಳ್ಳ ಮಹಾಮಹಿಮರೂ ಆದ ಆಚಾರ್ಯರನ್ನು ಕುರಿತು ಆ ಶೂದ್ರರಾಜನು ಈ ರೀತಿ ಮಾತನಾಡಿದನು.

**ವಿಗ್ರಹ**—

**ತಟನಿಕಟೇ**— ತಟಸ್ಯ ನಿಕಟಃ ತಟನಿಕಟಃ ತಸ್ಮಿನ್ ।

**ಅಚ್ಛಕೀರ್ತೀಚಂದ್ರಃ**— ಅಚ್ಛಾ ಚ ಸಾ ಕೀರ್ತಿಶ್ಚ ಅಚ್ಛಕೀರ್ತಿಃ ಅಚ್ಛಕೀರ್ತ್ಯಾ ಚಂದ್ರಃ ಇವ ಚಂದ್ರಃ ಅಚ್ಛಕೀರ್ತಿಚಂದ್ರಃ ತಂ ।

**ವಿಶ್ವಜ್ಞಂ**— ವಿಶ್ವಂ ಜಾನಾತೀತಿ ವಿಶ್ವಜ್ಞಃ ತಂ ।

**ಕ್ಷಿತಿಪತಿಃ**— ಕ್ಷಿತೇಃ ಪತಿಃ ಕ್ಷಿತಿಪತಿಃ ।

**ಅಂತ್ಯವರ್ಣಜನ್ಮಾ**— ಅಂತ್ಯಶ್ಚಾಸೌ ವರ್ಣಶ್ಚ ಅಂತ್ಯವರ್ಣಃ, ಅಂತ್ಯವರ್ಣೇ ಜನ್ಮ ಯಸ್ಯ ಸಃ ಅಂತ್ಯವರ್ಣ ಜನ್ಮಾ ।

**ವಿದ್ವೇಷ್ಟಾ**— ವಿಶೇಷೇಣ ದ್ವೇಷ್ಟೀತಿ ವಿದ್ವೇಷ್ಟಾ ।

**ಶ್ರುತಿಗುಣಸಾಧಕಂ**— ಶ್ರುತೇಃ ಗುಣಾಃ ಶ್ರುತಿಗುಣಾಃ, ಶ್ರುತಿಗುಣಾನಾಂ ಸಾಧಕಃ ಶ್ರುತಿಗುಣಸಾಧಕಃ ತಂ ।

**ವಾಗ್ಮಿವರ್ಯಂ**— ವಾಗ್ಮಿಷು ವರ್ಯಃ ವಾಗ್ಮಿವರ್ಯಃ ತಂ ।

**ವಿಶೇಷವಿಚಾರ**— ಕುತ್ಸಿತಂ ಬಹು ಭಾಷತೇ ಇತಿ ವಾಚಾಲಃ ಕೆಟ್ಟದ್ದಾಗಿ ಬಹಳ ಮಾತಾಡುವವನು '**ಆಲಜಾಟಚೌ ಬಹುಭಾಷಿಣಿ**'(5.2.125) ವಾಚ್(ಮಾತು) ಎಂಬ ಶಬ್ದಕ್ಕೆ ಬಹಳ ಮಾತಾಡುವವನು ಎಂಬ ಅರ್ಥದಲ್ಲಿ ಆಲಚ್ ಆಟಚ್ ಎಂಬ ಪ್ರತ್ಯಯಗಳು ಬರುತ್ತವೆ ಎಂಬ ಅರ್ಥದ ಆಲಜಾಟಚೌ ಬಹುಭಾಷಿಣಿ ಎಂಬ ಸೂತ್ರದಿಂದ ಆಲಚ್ ಪ್ರತ್ಯಯ **ಕುತ್ಸಿತೇ ಇತಿ ವಕ್ತವ್ಯಮ್** (ವಾರ್ತಿಕ-3223)ಎಂಬ ವಾರ್ತಿಕದಿಂದ ಕೆಟ್ಟರೀತಿಯಿಂದ ಬಹಳವಾಗಿ ಮಾತಾಡುವವನು ಎಂಬ ಅರ್ಥದಲ್ಲಿ ಈ ಆಲಚ್ ಪ್ರತ್ಯಯವು ಬರುತ್ತದೆ. ಯಸ್ತು ಸಮ್ಯಗ್ ಬಹುಭಾಷತೇ ಸಃ ವಾಗ್ಮೀತ್ಯೇವ=ಯಾವನು ಚೆನ್ನಾಗಿ ಹೆಚ್ಚಾಗಿ ಮಾತಾಡುತ್ತಾನೋ ಅವನು ವಾಗ್ಮಿ (ವಾಗ್ಮಿನ್)ಯು. **ವಾಚೋಗ್ಮಿನಿಃ** (5.2.124)ಎಂಬ ಸೂತ್ರದಿಂದ ಗ್ಮಿನಿ ಪ್ರತ್ಯಯ ಈ ಲ ಆಲಚ್ ಪ್ರತ್ಯಯವು ಗ್ಮಿನಿಪ್ರತ್ಯಯಕ್ಕೆ ಅಪವಾದ ಪ್ರಶಸ್ತಂ ಬಹುಭಾಷತೇ ಇತಿ ವಾಗ್ಮೀ (ವಾಗ್ಮಿನ್) ವಾಚೋ ಗ್ಮನಿಃ ಎಂಬ ಸೂತ್ರದಿಂದ ಗ್ಮಿನಿ ಪ್ರತ್ಯಯ ।

**ಕ್ರಿಯಾಪದ**— **ಉವಾಚ** - ಬ್ರೂಞ ವ್ಯಕ್ತಾಯಾಂ ವಾಚಿ **ಬ್ರುವೋ ವಚಿಃ** ಎಂಬ ಸೂತ್ರದಿಂದ ಆರ್ಧಧಾತುಕದಲ್ಲಿ ವಚ್ ಆದೇಶ, ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ, ಇಲ್ಲಿ 'ವಾಚಾಲಃ ವಾಗ್ಮವರ್ಯಂ ವಚನಂ ಉವಾಚ' ಎಂದು ಎರಡು ಕರ್ಮ ಪದಗಳು ಬಂದಿವೆ. ದುಹ್ ಯಾಚ್ ಪಚ್ ದಂಡ್ ರುಧಿ ಪ್ರಚ್ಛಿ ಚಿ ಬ್ರೂ ಶಾಸು ಜಿ ಮಥ್ ಮುಷಾಮ್ । ಕರ್ಮಯುಕ್ ಸ್ಯಾದಕಥಿತಂ ತಥಾ ಸ್ಯಾನ್ನೀಹೃಕಷ್ಯವಹಾಮ್। ಎಂಬ ಪ್ರಮಾಣದಂತೆ ಬ್ರೂಧಾತುವೂ ದ್ವಿಕರ್ಮಕವಾಗಿದೆ. (ಉವಾಚ ಊಚತುಃ ಊಚುಃ ಇತ್ಯಾದಿ)

**ಪ್ರಯೋಗ**— ಗೋಮತ್ಯಾಃ ತಟನಿಕಟೇ ಶ್ರುತೀನಾಂ ವಿದ್ವೇಷ್ಟಾ ವಾಚಾಲೇನ ಅಂತ್ಯವರ್ಣಜನ್ಮನಾ ಕ್ಷಿತಿಪತಿನಾ ಅಚ್ಛಕೀರ್ತಿಚಂದ್ರಃ ಶ್ರುತಿಗುಣಸಾಧಕಃ ವಾಗ್ಮಿವರ್ಯಃ ವಿಶ್ವಜ್ಞಃ ವಚನಂ ಊಚೇ ।

★★★

**ಅವತಾರಿಕಾ**— ಆ ಶೂದ್ರರಾಜನು ಆಡಿದ ಮಾತು ಏನು ಎಂದು ಹೇಳುತ್ತಾರೆ.

**ಉನ್ಮತ್ತಪ್ರಲಪಿತವನ್ನ ತದ್ಧಿ ಮಾನಂ**
**ಯದ್ವಾಕ್ಯಂ ವ್ಯಭಿಚರತಿ ಕ್ವಚಿತ್ ಫಲೇಽತ್ರ ।**
**ದೃಷ್ಟಾಂತೋ ಭವತಿ ತದಪ್ರಮಾಣತಾಯಾಂ**
**ಸರ್ವೇಷಾಂ ಶ್ರುತಿವಚಸಾಂ ಚ ಸರ್ವಥೇತಿ ॥ 3 ॥**

**ಪದಚ್ಛೇದ**— ಉನ್ಮತ್ತಪ್ರಲಪಿತವತ್, ನ, ತತ್, ಹಿ, ಮಾನಂ, ಯತ್, ವಾಕ್ಯಂ, ವ್ಯಭಿಚರತಿ, ಕ್ವಚಿತ್, ಫಲೇ, ಅತ್ರ, ದೃಷ್ಟಾಂತಃ, ಭವತಿ, ತತ್, ಅಪ್ರಮಾಣತಾಯಾಂ, ಸರ್ವೇಷಾಂ, ಶ್ರುತಿವಚಸಾಂ, ಚ, ಸರ್ವಥಾ, ಇತಿ ।

**ಅನ್ವಯ—** ಅತ್ರ, ಯತ್, ವಾಕ್ಯಂ, ಕ್ವಚಿತ್, ಫಲೇ, ವ್ಯಭಿಚರತಿ, ತತ್, ಉನ್ಮತ್ತಪ್ರಲಪಿತವತ್, ಮಾನಂ, ನ, ಹಿ, ತತ್, ಸರ್ವೇಷಾಂ, ಶ್ರುತಿವಚಸಾಂ, ಚ, ಅಪ್ರಮಾಣತಾಯಾಂ, ದೃಷ್ಟಾಂತಃ, ಸರ್ವಥಾ, ಭವತಿ ।

**ಅನ್ವಯಾರ್ಥ—**

**ಅತ್ರ** = ಈ ವೇದದಲ್ಲಿ,
**ಯತ್** = ಯಾವ,
**ವಾಕ್ಯಂ** = ವಾಕ್ಯವು,
**ಕ್ವಚಿತ್** = ಯವುದಾದರೊಂದು,
**ಫಲೇ** = ವೇದೋಕ್ತವಾದ ಫಲದಲ್ಲಿ,
**ವ್ಯಭಿಚರತಿ** = ಸುಳ್ಳಾಗುತ್ತದೆಯೋ, (ವ್ಯತ್ಯಾಸವಾಗುತ್ತದೆಯೋ)
**ತತ್** = ಆ ವಾಕ್ಯವು,
**ಉನ್ಮತ್ತಪ್ರಲಪಿತವತ್** = ಹುಚ್ಚರ ಬಡಬಡಿಕೆಯಂತೆ, (ಅರ್ಥವಿಲ್ಲದ ಮಾತಿನೋಪಾದಿಯಲ್ಲಿ)
**ಮಾನಂ** = ಪ್ರಮಾಣವು,
**ನಹಿ** = ಇಲ್ಲವಷ್ಟೇ,
(**ಹಿ** = ಈ ವಿಷಯವು ಪ್ರಸಿದ್ಧವಾಗಿದೆ),
**ತತ್** = ಅಂತಹ ವೇದವಾಕ್ಯವು,
**ಸರ್ವೇಷಾಂ** = ಸಮಸ್ತವಾದ,
**ಶ್ರುತಿವಚಸಾಂ ಚ** = ವೇದವಾಕ್ಯಗಳಿಗೂ,
**ಅಪ್ರಮಾಣತಾಯಾಂ** = ಅಪ್ರಾಮಾಣ್ಯ ವಿಷಯದಲ್ಲಿ,
**ದೃಷ್ಟಾಂತಃ** = ಉದಾಹರಣವು,
**ಸರ್ವಥಾ** = ಎಲ್ಲಾ ರೀತಿಯಿಂದಲೂ,
**ಭವತಿ** = ಆಗುತ್ತದೆ.

**ತಾತ್ಪರ್ಯ—** ನಿಮ್ಮ ವೇದಗಳು ಎಷ್ಟೋ ಇವೆ ಅವುಗಳಲ್ಲಿ 'ಯಾ ಔಷಧೀಃ ಪೂರ್ವಜಾತಾ ದೇವೇಭ್ಯಃ ಸ್ತ್ರಿಯುಗಂ ಪುರಾ' । ಇತ್ಯಾದಿಯಾದ ಒಂದು ಮಂತ್ರವಿದೆ. ಆ ವೇದ ಮಂತ್ರವನ್ನು ಜಪಿಸಿ ಯಾವುದಾದರೊಂದು ಬೀಜವನ್ನು ಬಿತ್ತಿದರೆ ಕೂಡಲೇ ಪುಷ್ಪಫಲಾದಿಗಳು ಉಂಟಾಗುವುವು ಎಂದು ವೇದವನ್ನು ಬಲ್ಲ ನಿಮ್ಮವರು ಹೇಳುತ್ತಾರೆ. ಆದರೆ ಆ ಪ್ರಕಾರ ಮಂತ್ರಿಸಿದ ಬೀಜವನ್ನು ಬಿತ್ತಿದ ಕೂಡಲೇ ಪುಷ್ಪಫಲಾದಿಗಳು ಹುಟ್ಟಿರುವುದು ಎಲ್ಲಿಯೂ ಕಂಡು ಬಂದಿಲ್ಲ. ಆದುದರಿಂದ ಆ ವಾಕ್ಯವು ಸುಳ್ಳಾಯಿತು. ಸುಳ್ಳಾದ ಆ ವಾಕ್ಯದ ದೃಷ್ಟಾಂತದಿಂದ ವೇದಗಳೆಲ್ಲವೂ ಸುಳ್ಳೆಂದು ಹೇಳಲು ಸುಲಭವಾಗಿ ಸಾಧ್ಯವಾಗುತ್ತದೆಯಲ್ಲವೆ? ಒಂದು ವೇದವಾಕ್ಯವು ಒಂದು ಫಲ ವಿಷಯದಲ್ಲಿ ಸುಳ್ಳಾದರೆ ಆ ವೇದವಾಕ್ಯವು ಹುಚ್ಚನ ಅಥವಾ ಹೆಂಡ ಕುಡುಕನ ಮಾತಿನಂತೆ ನಂಬಲು ಅರ್ಹವಾಗುವುದಿಲ್ಲ.

**ವಿಶೇಷಾಂಶ ಭಾವಪ್ರಕಾಶಿಕಾ—** ಇದಮಾಕೂತಮ್ ಯಾ ಓಷಧೀರಿತ್ಯಾದಿಸೂಕ್ತೈಃ ಜಪ್ತೈಃ ಓಷಧೀಬೀಜೇಭ್ಯಃ ಸದ್ಯಃ ಪುಷ್ಪಫಲಾದಿನಿಷ್ಪತ್ತಿಃ ಉಚ್ಯತೇ ವೈದಿಕೈಃ, ನ ಚೋಪಲಭ್ಯತೇ ತತಃ ತೇಷಾಂ ವ್ಯಭಿಚಾರಿತ್ವಮ್ ಸ ಇಹ ಚ ।

**ಪ್ರಯೋಗ—** ವಿಮತಂ ವಾಕ್ಯಂ ನ ಮಾನಂ ವ್ಯಭಿಚಾರಿತ್ವಾತ್ ಉನ್ಮತ್ತವಾಕ್ಯವದಿತಿ । ಅಥ ಚ ಸರ್ವೋ ವೇದಃ ಅಪ್ರಮಾಣಂ ವೇದತ್ವಾತ್ ವ್ಯಭಿಚಾರಿವೇದವಾಕ್ಯವದಿತಿ ॥ ಇಲ್ಲಿಯ ಅಭಿಪ್ರಾಯ ಹೀಗಿದೆ 'ಯಾ ಓಷಧೀಃ' ಇತ್ಯಾದಿ ಸೂಕ್ತ ಜಪವನ್ನು ಮಾಡಿ ಯಾವುದಾದರೊಂದು ಸಸ್ಯದ ಬೀಜಗಳನ್ನು ಬಿತ್ತಿದರೆ ಕೂಡಲೇ ಹೂವು ಕಾಯಿ ಹಣ್ಣು ಇತ್ಯಾದಿಗಳು

ಆಗುತ್ತವೆಯೆಂದು ವೈದಿಕರು ಹೇಳುತ್ತಾರೆ. ಆದರೆ ಈ ರೀತಿ ಜಪಿಸಿ ಬಿತ್ತಿದಾಗ ಫಲಪ್ರಾಪ್ತಿಯಾದುದು ಎಲ್ಲೂ ಕಂಡಿಲ್ಲ. ಆದುದರಿಂದ ಅಂತಹ ವೇದವಾಕ್ಯಗಳು ಫಲವ್ಯಭಿಚಾರಿಗಳಾದವು. ಅವುಗಳಿಗೆ ಫಲಸಂಬಂಧವಿಲ್ಲ ಎಂದಾಯಿತು. ಆದುದರಿಂದ ಇಲ್ಲಿ ಈ ರೀತಿ ನಾವು ಅನುಮಾನ ಪ್ರಯೋಗವನ್ನು ಮಾಡುಬಹುದು. ವಿಪ್ರತಿಪನ್ನವಾದ ಯಾ ಓಷಧೀಃ ಇತ್ಯಾದಿ ವೇದವಾಕ್ಯದಂತೆ ಎಂಬ ಅನುಮಾನದಿಂದ ಎಲ್ಲಾ ವೇದವೂ ಅಪ್ರಮಾಣವೆಂದು ನಿರ್ಣಯಿಸಲು ಸಾಧ್ಯವಿದೆ. (ಇದು ಭಾವಪ್ರಕಾಶಿಕೆಯ ಅಭಿಪ್ರಾಯ).

**ವಿಗ್ರಹ ಮತ್ತು ಕೋಶ—**

**ಉನ್ಮತ್ತಪ್ರಲಪಿತವತ್—** ಉನ್ಮತ್ತಸ್ಯ ಪ್ರಲಪಿತಂ ಉನ್ಮತ್ತಪ್ರಲಪಿತಂ ಉನ್ಮತ್ತಪ್ರಲಪಿತೇನ ತುಲ್ಯಂ ಉನ್ಮತ್ತ-ಪ್ರಲಪಿತವತ್ । 'ತೇನ ತುಲ್ಯಂ ಕ್ರಿಯಾ ಚೇದ್ವತಿಃ' (5.1.115) ಈ ಸೂತ್ರದಿಂದ ಸಾದೃಶ್ಯಾರ್ಥದಲ್ಲಿ ವತಿಪ್ರತ್ಯಯ (ಬ್ರಾಹ್ಮಣೇನ ತುಲ್ಯಂ ಬ್ರಾಹ್ಮಣವತ್ ಅಧೀತೇ = ಬ್ರಾಹ್ಮಣನಂತೆ ಅಧ್ಯಯನ ಮಾಡುತ್ತಾನೆ ಎಂದು ಮತ್ತೊಂದು ಉದಾಹರಣ) ಉನ್ಮತ್ತ = ಹುಚ್ಚ 'ಉನ್ಮತ್ತ ಉನ್ಮಾದವತಿ' ಅಮರ. ಪ್ರಲಪಿತಂ = ಮಾತು, 'ವ್ಯಾಹಾರ ಉಕ್ತಿರ್ಲಪಿತಂ ಭಾಷಿತಂ ವಚನಂ ವಚಃ' ಅಮರ.

**ಅಪ್ರಮಾಣತಾಯಾಂ—**ಪ್ರಮಾಣಸ್ಯ ಭಾವಃ ಪ್ರಮಾಣತಾ ನ ಪ್ರಮಾಣತಾ ಅಪ್ರಮಾಣತಾ ತಸ್ಯಾಂ ।

**ಕ್ರಿಯಾಪದ—ವ್ಯಭಿಚರತಿ** - ಚರ ಗತೌ ಭಕ್ಷಣೇ ಚ, ಗತೌ ಅಕ.ಸೇಟ್. ಪರ. ಲಟ್,ಭವತಿ ಭೂ ಸತ್ತಾಯಾಂ ಲಟ್। ವಿ+ಅಭಿ+ಚರತಿ ಚರತಿ ಚರತಃ ಚರಂತಿ ಇತ್ಯಾದಿ ವಿ ಅಭಿ ಎರಡು ಉಪಸರ್ಗಗಳು.

**ಪ್ರಯೋಗ—** ಅತ್ರ ಯೇನ ವಾಕ್ಯೇನ ಕ್ವಚಿತ್ ಫಲೇ ವ್ಯಭಿಚರ್ಯತೇ ತೇನ ಉನ್ಮತ್ತಪ್ರಲಪಿತವತ್ ಮಾನೇನ ನ ಭೂಯತೇ ಹಿ, ತೇನ ಸರ್ವೇಷಾಂ ಶ್ರುತಿವಚಸಾಂ ಚ ಅಪ್ರಮಾಣತಾಯಾಂ ದೃಷ್ಟಾಂತೇನ ಸರ್ವಥಾ ಭೂಯತೇ ।

★★★

**ಅವತಾರಿಕಾ—** ಆಗ ಆಚಾರ್ಯರಿಗೂ ಆ ಶೂದ್ರರಾಜನಿಗೂ ನಡೆದ ವಾಗ್ವಾದವನ್ನು ವಿವರಿಸುತ್ತಾರೆ.

**ವೇದೋಕ್ತಂ ಫಲಮಲಮಾಪ್ಯತೇಽಧಿಕಾರಾ-**
**ದಿತ್ಯುಕ್ತೋಽತನುಮನಸಾಽಭ್ಯಧತ್ತ ಧೂರ್ತಃ ।**
**ಯೋಗ್ಯತ್ವೇ ಸತಿ ನ ಹಿ ದೃಶ್ಯತೇಽಧಿಕಾರೀ**
**ನಾತಃ ಸ್ಯಾತ್ ಸ ಖರವಿಷಾಣವತ್ ಸದೇತಿ ॥ 4 ॥**

**ಪದಚ್ಛೇದ—** ವೇದೋಕ್ತಂ, ಫಲಂ, ಅಲಂ, ಆಪ್ಯತೇ, ಅಧಿಕಾರಾತ್, ಇತಿ, ಉಕ್ತಃ, ಅತನುಮನಸಾ, ಅಭ್ಯಧತ್ತ, ಧೂರ್ತಃ, ಯೋಗ್ಯತ್ವೇ, ಸತಿ, ನ, ಹಿ, ದೃಶ್ಯತೇ, ಅಧಿಕಾರೀ, ನ, ಅತಃ, ಸ್ಯಾತ್, ಸಃ, ಖರವಿಷಾಣವತ್, ಸದಾ, ಇತಿ ।

**ಅನ್ವಯ—** ಅಧಿಕಾರಾತ್, ವೇದೋಕ್ತಂ, ಫಲಂ, ಅಲಂ, ಆಪ್ಯತೇ, ಇತಿ, ಅತನುಮನಸಾ, ಉಕ್ತಃ, ಧೂರ್ತಃ, ಅಧಿಕಾರೀ, ಹಿ, ಯೋಗ್ಯತ್ವೇ, ಸತಿ, ನ, ದೃಶ್ಯತೇ, ಅತಃ, ಸಃ, ಖರವಿಷಾಣವತ್, ಸದಾ, ನ, ಸ್ಯಾತ್, ಇತಿ ।

**ಅನ್ವಯಾರ್ಥ—**

**ಅಧಿಕಾರಾತ್** = ವೇದದಲ್ಲಿ ಹೇಳಿದಂತೆ ಮಾಡುವುದರಲ್ಲಿಯೂ ಅದರಲ್ಲಿ ಹೇಳಿದ ಫಲವನ್ನು ಪಡೆಯುವುದರಲ್ಲಿಯೂ,

**ವೇದೋಕ್ತಂ** = ವೇದದಲ್ಲಿ ಹೇಳಲ್ಪಟ್ಟ

**ಫಲಂ** = ಪ್ರಯೋಜನವು,

**ಅಲಂ** = ಚೆನ್ನಾಗಿ,
**ಆಪ್ಯತೇ** = ಹೊಂದಲ್ಪಡುತ್ತದೆ,
**ಇತಿ** = ಹೀಗೆಂದು,
**ಅತನುಮನಸಾ** = ಶ್ರೀಪೂರ್ಣಪ್ರಜ್ಞರಿಂದ,
**ಉಕ್ತಃ** = ಹೇಳಲ್ಪಟ್ಟ
**ಧೂರ್ತಃ** = ಉದ್ಧತನಾದ,
**ಅಧಿಕಾರೀ ಹಿ** = ವೇದೋಕ್ತವಾದ ಫಲವನ್ನು ಪಡೆಯುವವನು,
**ಯೋಗ್ಯತ್ವೇ ಸತಿ** = ನಮ್ಮ ಕಣ್ಣಿಗೆ ಕಾಣಿಸುವ ಅರ್ಹತೆ ಇರುವಾಗ,
**ನ ದೃಶ್ಯತೇ** = ನೋಡಲ್ಪಡುವುದಿಲ್ಲ,
**ಅತಃ** = ಈ ಕಾರಣದಿಂದ,
**ಸಃ** = ಆ ಅಧಿಕಾರಿಯು,
**ಖರವಿಷಾಣವತ್** = ಕತ್ತೆಯ ಕೊಂಬಿನಂತೆ,
**ಸದಾ** = ಯಾವಾಗಲೂ,
**ನ ಸ್ಯಾತ್ ಇತಿ** = ಇರಲಾರನು ಎಂದು.

**ತಾತ್ಪರ್ಯ**— ಆಗ ಶ್ರೀಪೂರ್ಣಪ್ರಜ್ಞಾಚಾರ್ಯರು ಆ ಶೂದ್ರರಾಜನನ್ನು ಕುರಿತು ವೇದದಲ್ಲಿ ಹೇಳಿದಂತೆ ಮಾಡುವುದರಲ್ಲಿ ಮತ್ತು ಅದರಲ್ಲಿ ಹೇಳಿದ ಫಲವನ್ನು ಹೊಂದುವುದರಲ್ಲಿ ಯೋಗ್ಯತೆ ಇರುವ ಅಧಿಕಾರಿಯು ವೇದೋಕ್ತವಾದ ಕರ್ಮವನ್ನು ಮಾಡಿದರೆ ಫಲವು ಸರಿಯಾಗಿ ಲಭಿಸುತ್ತದೆ ಎಂದು ಹೇಳಿದರು. ಆ ಧೂರ್ತರಾಜನು ನೀವು ಹೇಳಿದಂತಹ ಯೋಗ್ಯತೆ ಉಳ್ಳವನು ಇದ್ದರೆ ಕಣ್ಣಿಗೆ ಕಾಣಸಬೇಕಾಗಿತ್ತು. ಅಂತಹವನು ಕಾಣಿಸದೆ ಇರುವುದರಿಂದ ಕತ್ತೆಯ ಕೋಡಿನಂತೆ ಅಂತಹವನು ಯಾವಾಗಲೂ ಇಲ್ಲವೇ ಇಲ್ಲವೆಂದು ವಾದಿಸಿದನು, ಸಾಧಿಸಿದನು.

ವೇದೋಕ್ತವಾದ ಕರ್ಮವನ್ನು ಮಾಡಲು ಫಲವನ್ನು ಪಡೆಯಲು ಅವನಿಗೆ ಭಕ್ತಿ, ಜ್ಞಾನ ಮುಂತಾದ ಯೋಗ್ಯತೆಯು ಇರಬೇಕು, ಅಂತಹ ಯೋಗ್ಯತೆಯುಳ್ಳವನು ನಮ್ಮ ಕಣ್ಣಿಗೆ ಕಾಣಿಸದೆ ಇದ್ದ ಮಾತ್ರಕ್ಕೆ ವೇದವೇ ಸುಳ್ಳೆಂದು ಹೇಳಬಾರದು ಎಂದು ಆಚಾರ್ಯರು ಹೇಳಿದಾಗ, ಆ ರಾಜನು ಅಂತಹ ಯೋಗ್ಯಯಿದ್ದವನು ಇರುವುದೇ ನಿಜವಾದರೆ ತೋರಿಸಿರಿ. ಅಂತಹವನನ್ನು ತೋರಿಸಲು ಆಗುವುದಿಲ್ಲವಾದರೆ ನಿಮ್ಮ ವೇದೋಕ್ತವಾದ ಫಲವನ್ನು ಪಡೆಯುವ ಅಧಿಕಾರಿಯು ಕತ್ತೆಯ ಕೊಂಬಿನಂತೆ ಇಲ್ಲವೇ ಇಲ್ಲ, ಇಂತಹ ಸುಳ್ಳು ಸುಳ್ಳಾದ ಫಲ ಅಧಿಕಾರಿಗಳನ್ನು ಹೇಳುವ ವೇದವು ಅಪ್ರಮಾಣವೆಂದು ಹೇಳಿದರೆ ತಪ್ಪೇನು? ಎಂದು ರಾಜನು ವಾದಿಸಿದನು.

**ವಿಗ್ರಹ ಮತ್ತು ಕೋಶ**—

**ವೇದೋಕ್ತಂ**— ವೇದೇನ ಉಕ್ತಂ ವೇದೋಕ್ತಂ ।
**ಅತನುಮನಸಾ**— ನ ತನು ಅತನು, ಅತನು ಅತನು ನಮಃ ಮನಃ ಯಸ್ಯ ಸಃ ಅತನುಮನಃ, ತೇನ ।
**ಅಧಿಕಾರೀ**— ಅಧಿಕಾರಃ ಅಸ್ಯ ಅಸ್ತೀತಿ ಅಧಿಕಾರೀ (ಅಧಿಕಾರಿ ನಕಾರಾಂತ) ।
**ಖರವಿಷಾಣವತ್**— ಖರಸ್ಯ ವಿಷಣಂ ಖರವಿಷಾಣಂ ಖರವಿಷಾಣೇನ ತುಲ್ಯಂ ಖರವಿಷಾಣವತ್ । ಖರ = ಕತ್ತೆ, 'ಖರಃ ಸ್ಯಾದ್ಗರ್ದಭೇ ದೇವತಾಲಿ ತೀಕ್ಷ್ಣರಕೇಽಪಿ ಚ' ವಿಶ್ವ ವಿಷಾಣ = ಕೊಂಬು, 'ಶೃಂಗಂ ವಿಷಾಣಮಾಖ್ಯಾತಂ' ವಿಶ್ವ ।

**ಕ್ರಿಯಾಪದ—** ಆಪ್ಯತೇ - ಆಪ್ ಲೃ ವ್ಯಾಪ್ತೌ (ಆಪ್) ಸಕ ಅನಿ ಪರ ಸ್ವಾದಿ ಕರ್ಮಣಿ ವರ್ತಮಾನೇ ಲಟ್ ಪ್ರಥಮಪುರುಷ ಏಕವಚನ । **ಅಭ್ಯದತ್ತ** - ಅಭಿ+ಉಪಸರ್ಗ ಡು ಧಾಞ ಧಾರಣಪೋಷಣಯೋಃ ಸಕ ಅನಿ ಉಭ ಜುಹೋತ್ಯಾದಿ ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನ । **ದೃಶ್ಯತೇ** - ದೃಶಿರ್ (ದೃಶ್)(ಪಶ್ಯ)ಪ್ರೇಕ್ಷಣೇ ಸಕ ಅನಿ ಪರ ಕರ್ಮಣಿ ಲಟ್ ಪ್ರಥಮಪುರುಷ ಏಕವಚನ ।

ಆಪ್ಯತೇ ಆಪ್ಯೇತೇ ಆಪ್ಯಂತೇ, ಆಧತ್ತ ಆದಧಾತಾಂ ಆದಧತ ಇತ್ಯಾದಿ ।

ದೃಶ್ಯತೇ ದೃಶ್ಯೇತೇ ದೃಶ್ಯಂತೇ ಇತ್ಯಾದಿ ।

ಸ್ಯಾತ್ - ಸ್ಯಾತ್ ಸ್ಯಾತಾಂ ಸ್ಯುಃ ಇತ್ಯಾದಿ ಅಸ ಭುವಿ ಅಕ ಸೇಟ್ ಪರ ವಿಧಿ ಲಿಙ ಪ್ರಥಮಪುರುಷ ಏಕವಚನ ।

**ಪ್ರಯೋಗ—** (ಯೋಗ್ಯಃ ಮಾನವಃ) ಅಧಿಕಾರಾತ್ ವೇದೋಕ್ತಂ ಫಲಂ ಅಲಂ ಆಪ್ನೋತಿ ಇತಿ ಅತನುಮನಸಾ ಉಕ್ತೇನ ಧೂರ್ತೇನ (ವಯಂ) ಅಧಿಕಾರಿಣಾಂ ಯೋಗ್ಯತ್ವೇ ಸತಿ ನ ಪಶ್ಯಾಮಃ ಅತಃ ತೇನ ಖರವಿಷಾಣವತ್ ಸದಾ ನ ಭೂಯತ ಇತಿ ।

★★★

**ಅವತಾರಿಕಾ—** ಆಚಾರ್ಯರು ಆಗ ವೇದೋಕ್ತ ಮಂತ್ರ ಜಪದ ಮಹಿಮೆಯನ್ನು ಪ್ರತ್ಯಕ್ಷವಾಗಿ ತೋರಿಸಿದರು.

**ಆಕ್ಷೇಪಂ ತಮಸಹಮಾನ ಉಚ್ಚಮಾನಃ**
**ಸದ್ಯೋಽಸೌ ನಿಜಕರಪಲ್ಲವದ್ವಯೇನ ।**
**ಆದಾಯ ವ್ಯತನುತ ಬೀಜಮೋಷಧೀನಾಂ**
**ಸೂಕ್ತೇನಾಂಕುರದಲಪುಷ್ಪಬೀಜಸೃಷ್ಟಿಮ್ ॥ 5 ॥**

**ಪದಚ್ಛೇದ—** ಆಕ್ಷೇಪಂ, ತಂ, ಅಸಹಮಾನಃ, ಉಚ್ಚಮಾನಃ, ಸದ್ಯಃ, ಅಸೌ, ನಿಜಕರಪಲ್ಲವದ್ವಯೇನ, ಆದಾಯ, ವ್ಯತನುತ, ಬೀಜಂ, ಓಷಧೀನಾಂ, ಸೂಕ್ತೇನ, ಅಂಕುರದಲಪುಷ್ಪಬೀಜಸೃಷ್ಟಿಂ ।

**ಅನ್ವಯ—** ತಂ, ಆಕ್ಷೇಪಂ, ಅಸಹಮಾನಃ, ಉಚ್ಚಮಾನಃ, ಅಸೌ, ಓಷಧೀನಾಂ, ಬೀಜಂ, ನಿಜಕರಪಲ್ಲವದ್ವಯೇನ, ಆದಾಯ, ಸೂಕ್ತೇನ, ಸದ್ಯಃ, ಅಂಕುರದಲಪುಷ್ಪಬೀಜಸೃಷ್ಟಿಂ, ವ್ಯತನುತ ।

**ಅನ್ವಯಾರ್ಥ—**

**ತಂ** = ಅಂತಹ (ಆ ರಾಜನು ಮಾಡಿದಂತಹ),
**ಆಕ್ಷೇಪಂ** = ವೇದಪ್ರಾಮಾಣ್ಯ ನಿರಾಕರಣವನ್ನು,
**ಅಸಹಮಾನಃ** = ಸಹಿಸದ,
**ಉಚ್ಚಮಾನಃ** = ಹೆಚ್ಚಾದ ಅಭಿಮಾನವುಳ್ಳ,
**ಅಸೌ** = ಈ ಮಧ್ವಾಚಾರ್ಯರು,
**ಓಷಧೀನಾಂ ಬೀಜಂ** = ಹೆಸರುಕಾಳನ್ನು,
**ನಿಜಕರಪಲ್ಲವದ್ವಯೇನ** = ತನ್ನ ಚಿಗುರೆಲೆಯಂತಿರುವ ಎರಡು ಕೈಗಳಿಂದ,
**ಆದಾಯ** = ತೆಗೆದುಕೊಂಡು,
**ಸೂಕ್ತೇನ** = ಯಾ ಓಷಧೀಃ ಇತ್ಯಾದಿ ಓಷಧಿ ಸೂಕ್ತದಿಂದ, (ಸೂಕ್ತದ ಜಪದಿಂದ)
**ಸದ್ಯಃ** = ಕೂಡಲೇ,

**ಅಂಕುರದಲಪುಷ್ಪಬೀಜಸೃಷ್ಟಿಂ** = ಮೊಳಕೆ, ಎಲೆ, ಹೂವು, ಕಾಳು ಇವುಗಳ ಉತ್ಪತ್ತಿಯನ್ನು,

**ವ್ಯತನುತ** = ಮಾಡಿದರು.

**ತಾತ್ಪರ್ಯ**— ಆ ಶೂದ್ರರಾಜನು ವೇದಗಳ ಪ್ರಾಮಾಣ್ಯದ ಬಗ್ಗೆ ಮಾಡಿದ ಆಕ್ಷೇಪವನ್ನು ಆಚಾರ್ಯರು ಸಹಿಸಲಿಲ್ಲ. ವೇದಪ್ರಾಮಾಣ್ಯ ವಿಷಯದಲ್ಲಿ ಬಹಳ ಗೌರವವುಳ್ಳವರೂ, ಶ್ರೇಷ್ಠವಾದ ಪ್ರಮಾಣಗಳನ್ನು ಬಲ್ಲವರೂ, ಸರ್ವಜ್ಞರೂ ಆದ ಆಚಾರ್ಯರು ಕೂಡಲೇ ಹೆಸರುಕಾಳುಗಳನ್ನು ತಮ್ಮ ಕೋಮಲವಾದ ಎರಡು ಕೈಗಳಿಂದ ತೆಗೆದುಕೊಂಡು ಬೊಗಸೆ ಯಲ್ಲಿಟ್ಟುಕೊಂಡು 'ಯಾ ಓಷಧೀಃ ಪೂರ್ವಜಾತಾಃ' ಎಂಬ ವೇದಮಂತ್ರವನ್ನು ಜಪಿಸಿದರು, ಕೂಡಲೇ ಬಿತ್ತಿದರು. ಆಗಲೇ ಹೆಸರು ಮೊಳಕೆಯೊಡೆಯಿತು. ಯೋಗ್ಯತೆ ಇದ್ದವರು ಮಂತ್ರವನ್ನು ಜಪಿಸಿ ಬೀಜ ಬಿತ್ತಿದ ಮಾತ್ರದಿಂದಲೇ ಮೊಳಕೆ, ಎಲೆ ಇತ್ಯಾದಿಗಳು ಹುಟ್ಟುತ್ತವೆ ಎಂಬುದನ್ನು ತಾವೇ ಪ್ರತ್ಯಕ್ಷವಾಗಿ ಮಾಡಿ ತೋರಿಸಿದರು.

ಓಷಧೀಸೂಕ್ತ ಋಗ್ವೇದ ಅಷ್ಟಕ 8ನೇ ಅಧ್ಯಾಯ 5ನೇ ವರ್ಗ 8ನೇ ಮಂತ್ರ 'ಯಾ ಓಷಧೀಃ ಪೂರ್ವಜಾತಾ ದೇವೇಭ್ಯ ಸ್ತ್ರಿಯುಗಂ ಪುರಾ ಮನ್ಯೆನು ಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ' ।

**ವಿಗ್ರಹ ಮತ್ತು ಕೋಶ**—

**ಅಸಹಮಾನಃ**— ಸಹತೇ ಇತಿ ಸಹಮಾನಃ ನ ಸಹಮಾನಃ ಅಸಹಮಾನಃ ।

**ಉಚ್ಚಮಾನಃ**— ಉಚ್ಚಃ ಮಾನಃ ಯಸ್ಯ ಸಃ ಉಚ್ಚಮಾನಃ ।

**ಕರಪಲ್ಲವೌ**— ಕರೌ ಪಲ್ಲವೌ ಇವ ಕರಪಲ್ಲವೌ ।

**ನಿಜಕರಪಲ್ಲವದ್ವಯೇನ**— ನಿಜೌ ಚ ತೌ ಕರಪಲ್ಲವೌ ಚ ನಿಜಕರಪಲ್ಲವೌ, ದ್ವೌ ಅವಯವೌ ಅಸ್ಯೇತಿ ದ್ವಯಂ, ನಿಜಕರಪಲ್ಲವಯೋಃ ದ್ವಯಂ ನಿಜಕರಪಲ್ಲವದ್ವಯಂ ತೇನ ।

**ಅಂಕುರದಲಪುಷ್ಪಬೀಜಸೃಷ್ಟಿಂ**— ಸದ್ಯಃ = ಕೂಡಲೇ, 'ಸದ್ಯಃ ಸಪದಿ ತತ್‌ಕ್ಷಣೇ' ಅಮರ. ಅಂಕುರಾಶ್ಚ ದಲಾನಿ ಚ ಪುಷ್ಪಾಣಿ ಚ ಬೀಜಾನಿ ಚ ಅಂಕುರದಲಪುಷ್ಪಬೀಜಾನಿ, ಅಂಕುರದಲಪುಷ್ಪಬೀಜಾನಾಂ ಸೃಷ್ಟಿಃ ಅಂಕುರದಲಪುಷ್ಪಬೀಜಸೃಷ್ಟಿಃ ತಾಂ ।

**ಕ್ರಿಯಾಪದ**— ವ್ಯತನುತ - ವಿ+ಉಪಸರ್ಗ ತನು ವಿಸ್ತಾರೆ ಸಕ. ಸೇಟ್. ಉಭ. (ತನಾದಿ) ಅನದ್ಯತನಭೂತೇ ಲಙ ಪ್ರಥಮಪುರುಷ ಏಕವಚನ ।

ಅತನುತ ಅತನ್ವಾತಾಂ ಅತನ್ವತ, ಅತನುಥಾಃ ಅತನ್ವಾಥಾಂ ಅತನುಧ್ವಂ, ಅತನ್ವಿ ಅತನ್ವಹಿ ಅತನ್ಮಹಿ ।

**ಪ್ರಯೋಗ**— ತಂ ಆಕ್ಷೇಪಂ ಅಸಹಮಾನೇನ ಉಚ್ಚಮಾನೇನ ಅಮುನಾ ಓಷಧೀನಾಂ ಬೀಜಂ ನಿಜಕರಪಲ್ಲವ ದ್ವಯೇನ ಆದಾಯ ಸೂಕ್ತೇನ ಸದ್ಯಃ ಅಂಕುರದಲಪುಷ್ಪಬೀಜಸೃಷ್ಟಿಃ ವ್ಯತನ್ಯತ ।

★ ★ ★

**ಅವತಾರಿಕಾ**— ಶ್ರೀಮಧ್ವಾಚಾರ್ಯರ ಮತ್ತೊಂದು ಮಹಿಮೆ.

**ವ್ಯಾಖ್ಯಾತಾ ನಿಶಿ ಸ ಕದಾಚನ ಪ್ರದೀಪೇ**
**ಸಂಶಾಂತೇ ಪುನರಪಿ ವಾಚಯಾಂಬಭೂವ ।**
**ಶಿಷ್ಯಾನ್ ಸ್ವಾನ್ ಪುರುಕರುಣಾಂಬುಧಿರ್ನಿಜಾಂಘ್ರೇ-**
**ರಂಗುಷ್ಠಸ್ಫುಟನಖರಾಂತರೋಚಿಷೈವ ॥ 6 ॥**

**ಪದಚ್ಛೇದ**— ವ್ಯಾಖ್ಯಾತಾ, ನಿಶಿ, ಸಃ, ಕದಾಚನ, ಪ್ರದೀಪೇ, ಸಂಶಾಂತೇ, ಪುನಃ, ಅಪಿ, ವಾಚಯಾಂಬಭೂವ, ಶಿಷ್ಯಾನ್, ಸ್ವಾನ್, ಪುರುಕರುಣಾಂಬುಧಿಃ, ನಿಜಾಂಘ್ರೇಃ, ಅಂಗುಷ್ಠ ಸ್ಫುಟನಖರಾಂತರೋಚಿಷಾ, ಏವ ।

**ಅನ್ವಯ**— ಕದಾಚನ, ನಿಶಿ, ವ್ಯಾಖ್ಯಾತಾ, ಸಃ, ಪ್ರದೀಪೇ, ಸಂಶಾಂತೇ, ನಿಜಾಂಘ್ರೇಃ, ಅಂಗುಷ್ಠಸ್ಫುಟನಖರಾಂತ್ರ ರೋಚಿಷಾ, ಏವ, ಪುನಃ, ಅಪಿ, ಸ್ವಾನ್, ಶಿಷ್ಯಾನ್, ಪುರುಕರುಣಾಂಬುಧಿಃ, ಸನ್, ವಾಚಯಾಂಬಭೂವ ।

**ಅನ್ವಯಾರ್ಥ**—

**ಕದಾಚನ** = ಒಂದಾನೊಂದು ಸಮಯದಲ್ಲಿ

**ನಿಶಿ** = ರಾತ್ರಿಯಲ್ಲಿ

**ವ್ಯಾಖ್ಯಾತಾ** = ಪ್ರವಚನ ಮಾಡುತ್ತಿರುವ,

**ಸಃ** = ಆ ಮಧ್ವಾಚಾರ್ಯರು,

**ಪ್ರದೀಪೇ** = ದೀಪವು,

**ಸಂಶಾಂತೇ ಸತಿ** = ಆರಿಹೋಗಲು,

**ನಿಜಾಂಘ್ರೇಃ** = ತಮ್ಮ ಪಾದದ

**ಅಂಗುಷ್ಠಸ್ಫುಟನಖರಾಂತರೋಚಿಷಾ ಏವ** = ಹೆಬ್ಬೆರಳಿನ ಸ್ಪಷ್ಟವಾದ ಉಗುರಿನ ಕೊನೆಯ ಕಾಂತಿಯಿಂದಲೇ,

**ಪುನಃ ಅಪಿ** = ಮತ್ತೂ ಕೂಡ,

**ಶಿಷ್ಯನ್** = ತಮ್ಮ ಶಿಷ್ಯರನ್ನು

**ಪುರುಕರುಣಾಂಬುಧಿಃ ಸನ್** = ಹೆಚ್ಚಾದ ಕರುಣಾಸಮುದ್ರರಾಗಿ,

**ವಾಚಯಾಂಬಭೂವ** = ಓದಿಸಿದರು.

**ತಾತ್ಪರ್ಯ**— ಒಂದುದಿನ ರಾತ್ರಿಯಲ್ಲಿ ಆಚಾರ್ಯರು ಪ್ರವಚನ ಮಾಡುತ್ತಿರುವಾಗ ಯಾವುದೋ ಒಂದು ಕಾರಣದಿಂದ ದೀಪವು ಆರಿಹೋಯಿತು. ಆಗ ಆಚಾರ್ಯರು ತಮ್ಮ ಕಾಲನ್ನು ಚಾಚಿದರು. ಆದರೆ ಹೆಬ್ಬೆರಳನ್ನು ಮುಂದೆಚಾಚಿದಾಗ ಆ ಉಗುರಿನ ಕೊನೆಯಿಂದ ದಿವ್ಯವಾದ ಪ್ರಕಾಶವು ಹೊರಹೊಮ್ಮಿತು. ಆ ಬೆಳಕಿನಲ್ಲಿಯೇ ಶಿಷ್ಯರು ಗ್ರಂಥವನ್ನು ಓದಿದಾಗ ಆಚಾರ್ಯರು ಪ್ರವಚನವನ್ನು ಮಾಡಿದರು. ಕರುಣಾಸಮುದ್ರರಾದ ಆಚಾರ್ಯರು ದೀಪವು ಆರಿಹೋದರೂ ಈ ರೀತಿ ತಮ್ಮ ಕಾಯಕಾಂತಿಯಿಂದಲೇ ಓದಿಸಿದರು. ಅನಂತರ ಪಾಠ ಹೇಳಿದರು. (ಇದರಿಂದ ಆಚಾರ್ಯರ ದೇಹವು ತೇಜಃ ಪ್ರಧಾನವಾದ ಅಲೌಕಿಕಮೂರ್ತಿಯೆಂದು ತಿಳಿದು ಬರುತ್ತದೆ)

**ವಿಗ್ರಹ**—

**ಪುರುಕರುಣಾಂಬುಧಿಃ**— ಪುರುಶ್ಚ ಸಾ ಕರುಣಾ ಚ ಪುರುಕರುಣಾ, ಪುರುಕರುಣಾಯಾಃ ಅಂಬುಧಿರಿವ ಅಂಬುಧಿಃ ಪುರುಕರುಣಾಂಬುಧಿಃ ।

**ನಿಜಾಂಘ್ರೇಃ**— ನಿಜಶ್ಚಾಸೌ ಅಂಘ್ರಿಶ್ಚ ನಿಜಾಂಘ್ರಿಃ ತಸ್ಯ ।

**ಸ್ಫುಟನಖರಾಂತರೋಚಿಷಾ**— ನಖರಸ್ಯ ಅಂತಃ ನಖರಾಂತಃ, ನಖರಾಂತಸ್ಯ ರೋಚಿಃ ನಖರಾಂತರೋಚಿಃ, ಸ್ಫುಟಂ ಚ ತತ್ ನಖರಾಂತರೋಚಿಶ್ಚ ಸ್ಫುಟನಖರಾಂತರೋಚಿಃ ತೇನ । ನಖರ = ಉಗುರು, 'ನಖೋಽಸ್ತ್ರೀ ನಖರೋಽಸ್ತ್ರಿಯಾಂ' ಅಮರ, ಅಂತ = ಕೊನೆ (ಪ್ರಾಂತ), 'ಅಂತೋ ಮಧ್ಯೇ ತಥಾ ಪ್ರಾಂತೇ' ವಿಶ್ವ ರೋಚಿಃ = ಪ್ರಕಾಶ, 'ರೋಚಿಃ ಶೋಚಿರುಭೇ ಕ್ಲೀಬೇ ಪ್ರಾಕಾಶೋ ದ್ಯೋತ ಆತಪಃ' ಅಮರ ।

**ಕ್ರಿಯಾಪದ—** **ವಾಚಯಾಂಬಭೂವ** - ಬ್ರೂಞ (ಬ್ರೂ)ವ್ಯಕ್ತಾಯಾಂ ವಾಚಿ ಎಂಬ ಧಾತುವಿನ ಣಿಜಂತದ ಲಿಟ್ ರೂಪ, ಆ ಧಾತುವಿಗೆ ಆರ್ಧಧಾತುಕದಲ್ಲಿ ವಚ್ ಆದೇಶವು ಬರುತ್ತದೆ ।

ವಾಚಯಾಂಭೂವ ವಾಚಯಾಂಬಭೂವತುಃ ವಾಚಯಾಂಬಭೂವುಃ ಇತ್ಯಾದಿ ।

**ಪ್ರಯೋಗ—** ಕದಾಚನ ನಿಶಿ ವ್ಯಾಖ್ಯಾತ್ರಾ ತೇನ ಪ್ರದೀಪೇ ಸಂಶಾಂತೇ ಸತಿ ನಿಜಾಂಘ್ರೇಃ ಸ್ಫುಟನಖರಾಂತ ರೋಚಿಷಾ ಏವ ಪುನಃ ಅಪಿ ಸ್ವೇಶಿಷ್ಯಾಃ ಪುರುಕರುಣಾಬುಧಿನಾ ವಾಚಯಾಂಬಭೂವಿರೇ ।

★ ★ ★

**ಅವತಾರಿಕಾ—** ಆಚಾರ್ಯರ ಮತ್ತೊಂದು ಮಹಿಮೆಯನ್ನು ವರ್ಣಿಸುತ್ತಾರೆ.

**ತೀರ್ಥಾರ್ಥಂ ಪೃಥುತರವಪ್ರಪಾತಿವಾರಾಂ**
**ಧಾರಾಣಾಂ ರಯಸಹನಕ್ಷಮಾಂ ಮಹೇಕ್ಷಃ ।**
**ಆನೀತಾಂ ದಶಶತಪುಂಭಿರತ್ಯಶಕ್ತ್ಯಾ**
**ಪ್ರೇಕ್ಷ್ಯೋಚೇ ವಿಪುಲಶಿಲಾಂ ಕ್ವಚಿತ್ ಸ ಮುಕ್ತಾಮ್ ॥ 7 ॥**

**ಪದಚ್ಛೇದ—** ತೀರ್ಥಾರ್ಥಂ, ಪೃಥುತರವಪ್ರಪಾತಿವಾರಾಂ, ಧಾರಾಣಾಂ, ರಯಸಹನಕ್ಷಮಾಂ, ಮಹೇಕ್ಷಃ, ಆನೀತಾಂ, ದಶಶತಪುಂಭಿಃ, ಅತ್ಯಶಕ್ತ್ಯಾ, ಪ್ರೇಕ್ಷ್ಯ, ಊಚೇ, ವಿಪುಲಶಿಲಾಂ, ಕ್ವಚಿತ್, ಸಃ, ಮುಕ್ತಾಂ ।

**ಅನ್ವಯ—** ಸಃ, ಮಹೇಕ್ಷಃ, ಕ್ವಚಿತ್, ತೀರ್ಥಾರ್ಥಂ, ದಶಶತಪುಂಭಿಃ, ಆನೀತಾಂ, ಅತ್ಯಶಕ್ತ್ಯಾ, ಮುಕ್ತಾಂ, ಪೃಥುತರ ವಪ್ರಪಾತಿವಾರಾಂ, ಧಾರಾಣಾಂ, ರಯಸಹನಕ್ಷಮಾಂ, ವಿಪುಲಶಿಲಾಂ, ಪ್ರೇಕ್ಷ್ಯ, ಊಚೇ ।

**ಅನ್ವಯಾರ್ಥ—**

**ಸಃ** = ಅಂತಹ,

**ಮಹೇಕ್ಷಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,

**ಕ್ವಚಿತ್** = ಒಂದು ಸ್ಥಳದಲ್ಲಿ

**ತೀರ್ಥಾರ್ಥಂ** = ನೀರಿಗೆ ಇಳಿಯುವ ಮೆಟ್ಟಲಿಗಾಗಿ,

**ದಶಶತಪುಂಭಿಃ** = ಸಾವಿರ ಜನರಿಂದ,

**ಆನೀತಾಂ** = ತರಲ್ಪಟ್ಟ

**ಅತ್ಯಶಕ್ತ್ಯಾ** = ಅತ್ಯಂತವಾಗಿ ಸಾಮರ್ಥ್ಯವಿಲ್ಲದಿರುವುದರಿಂದ,

**ಮುಕ್ತಾಂ** = ಮಧ್ಯದಲ್ಲಿ ಬಿಡಲ್ಪಟ್ಟ

**ಪೃಥುತರವಪ್ರಪಾತಿವಾರಾಂ** = ಬಹಳ ದೊಡ್ಡದಾದ, ಎತ್ತರವಾದ ತಟ ಪ್ರದೇಶದಿಂದ ಕೆಳಗೆ ಬೀಳುತ್ತಿರುವ ನೀರುಗಳ,

**ಧಾರಾಣಾಂ** = ಪ್ರವಾಹಗಳ, (ಸಾಲುಗಳ)

**ರಯಸಹನಕ್ಷಮಾಂ** = ವೇಗ ತಡೆಯುವುದರಲ್ಲಿ ಸಮರ್ಥವಾದ,

**ವಿಪುಲಶಿಲಾಂ** = ದೊಡ್ಡ ಬಂಡೆಕಲ್ಲನ್ನು,

ಪ್ರೇಕ್ಷ್ಯ = ನೋಡಿ,

ಊಚೇ = ಹೇಳಿದರು.

ತಾತ್ಪರ್ಯ— ಆಚಾರ್ಯರು ಒಂದಾನೊಂದು ದಿನ ತುಂಗೆಯ ಬಳಿಯಲ್ಲಿಯೇ ಹರಿಯುವ ಭದ್ರಾ ನದಿಯ ಹತ್ತಿರದ ಪ್ರದೇಶದಲ್ಲಿ ಸಂಚರಿಸುತ್ತಾ ಹೋಗುತ್ತಿದ್ದರು. ಆಗ ಅಲ್ಲಿ ಸಾವಿರ ಜನರು ಒಂದು ದೊಡ್ಡ ಬಂಡೆಕಲ್ಲನ್ನು ನದಿಯ ನೀರಿನ ವೇಗವನ್ನು ತಡೆಯುವುದಕ್ಕಾಗಿ ತೆಗೆದುಕೊಂಡು ಹೋಗುತ್ತಾ ಇದ್ದರು. ಆದರೆ ನದಿಯ ನೀರು ಕೆಳಗೆ ಧುಮುಕುವ ಪ್ರಪಾತವು ಮತ್ತಷ್ಟು ದೂರವಿರುವಾಗಲೇ ಮುಂದಕ್ಕೆ ಆ ವಿಶಾಲವಾದ ಬಂಡೆಯನ್ನು ಉರುಳಿಸಿಕೊಂಡು ಹೋಗುವ ಸಾಮರ್ಥ್ಯವಿಲ್ಲದೆ ಮಧ್ಯದಲ್ಲಿಯೇ ಬಿಟ್ಟರು. ಆಚಾರ್ಯರು ಅದನ್ನು ನೋಡಿ ಆ ಜನರನ್ನು ಕುರಿತು ಹೀಗೆಂದರು.

ವಿಗ್ರಹ ಮತ್ತು ಕೋಶ—

ತೀರ್ಥಾರ್ಥಂ— ತೀರ್ಥಾಯ ಇತಿ ತೀರ್ಥಾರ್ಥಂ ।

ಪೃಥುತರವಪ್ರಪಾತಿವಾರಾಂ— ಅತಿಶಯೇನ ಪೃಥು ಪೃಥುತರಃ, ಪೃಥುತರಶ್ಚಾಸೌ ವಪ್ರಶ್ಚ ಪೃಥುತರವಪ್ರಃ, ಪೃಥುತರವಪ್ರಾತ್ ಪತಿತುಂ ಶೀಲಂ ಏಷಾಂ ಇತಿ ಪೃಥುತರವಪ್ರಪಾತೀನೀ, ಪೃಥುತರವಪ್ರಪಾತೀನೀ ಚ ತಾನಿ ವಾರಿ ಚ ಪೃಥುತರವಪ್ರಪಾತಿವಾರಿ, ತೇಷಾಂ । ವಪ್ರ = ದಡ, 'ವಪ್ರಪ್ರಕಾರರೋಧಸೋಃ' ವಿಶ್ವ, (ರೋಧಃ = ತೀರ, 'ಕೂಲಂ ರೋಧಶ್ಚ ತೀರಂ ಚ' ಅಮರ) ವಾರ್ (ವಾಃ) = ನೀರು, 'ಆಪಃ ಸ್ತ್ರೀಭೂಮ್ನಿ ವಾರ್ ವಾರಿ ಸಲಿಲಂ ಕಮಲಂ ಜಲಂ' ಅಮರ. ವಾರ್ ರೇಫಾಂತ ನಪುಂ. ವಾಃ ವಾರೀ ವಾರಿ, ವಾರಾ ವಾರ್ಭ್ಯಾಂ ವಾರ್ಭಿಃ ವಾರಃ ವಾರೋಃ ವಾರಾಂ ಷಷ್ಠಿ ಬಹುವಚನ. ಧಾರಾ = ಸಾಲು, 'ಧಾರಾ ಸೈನ್ಯಾಗ್ರಿಮಸ್ಕಂಧಸಂತತ್ಯೋಃ ಪತನಾಂತರೇ' ವಿಶ್ವ, ಅಥವಾ ಧಾರಾ = ಧುಮುಕುವಿಕೆ, 'ಸಂಪಾತ ಪ್ರವಾಹ ಧಾರಾ ಸಂಪಾತ ಆಸಾರಃ' ಅಮರ ।

ರಯಸಹನಕ್ಷಮಾಂ— ರಯಸ್ಯ ಸಹನಂ ರಯಸಹನಂ, ರಯಸಹನೇ ಕ್ಷಮಾ ರಯಸಹನಕ್ಷಮಾ, ತಾಂ । ರಯ = ವೇಗ, 'ರಂಹಸ್ತರಸೀ ತು ರಯಃ ಸ್ಯದಃ ಜವೋಽಥ' ಅಮರ, ಕ್ಷಮ = ಸಮರ್ಥ, 'ಕ್ಷಮಂ ಶಕ್ತೇ ಹಿತೇ ತ್ರಿಷು' ಅಮರ ।

ಮಹೇಕ್ಷಃ— ಮಹತೀ ಈಕ್ಷಾ ಯಸ್ಯ ಸಃ ಮಹೇಕ್ಷಃ ।

ದಶಶತಪುಂಭಿಃ— ದಶಗುಣಿತಂ ಶತಂ ದಶಶತಂ ಅಥವಾ ದಶಾವೃತ್ತಂ ಶತಂ ದಶಶತಂ, ದಶಶತಂ ಚ ತೇ ಪುಮಾಂಸಶ್ಚ ದಶಶತಪುಮಾಂಸಃ ತೈಃ ।

ಅತ್ಯಶಕ್ತ್ಯಾ— ಅತ್ಯಂತಂ ಅಶಕ್ತಿಃ ಅತ್ಯಶಕ್ತಿಃ, ತಯಾ ।

ವಿಪುಲಶಿಲಾಂ— ವಿಪುಲಾ ಚ ಸಾ ಶಿಲಾ ಚ ವಿಪುಲಶಿಲಾ, ತಾಂ ।

ಕ್ರಿಯಾಪದ— ಊಚೇ - ಬ್ರೂಞ್ ವ್ಯಕ್ತಾಯಾಂ ವಾಚಿ ಉಭಯ ಸಕ ಅನಿಟ್ ಲಿಟ್ ।

ಊಚೇ ಊಚಾತೇ ಊಚಿರೇ ಇತ್ಯಾದಿ ।

ಪ್ರಯೋಗ— ತೇನ ಮಹೇಕ್ಷೇಣ ಕ್ವಚಿತ್ ತೀರ್ಥಾರ್ಥಂ ದಶಶತಪುಂಭಿಃ ಆನಿತಾ ಅತ್ಯಶಕ್ತ್ಯಾ ಮುಕ್ತಾ ಪೃಥುತರವಪ್ರಪಾತಿವಾರಾಂ ಧಾರಾಣಾಂ ರಯಸಹನಕ್ಷಮಾ ವಿಪುಲಶಿಲಾ ಪ್ರೇಕ್ಷ್ಯ (ನೋಡಲ್ಪಟ್ಟು) ಊಚೇ ।

★★★

**ಅವತಾರಿಕಾ—** ಆಗ ಆಚಾರ್ಯರಿಗೂ ಆ ಜನರಿಗೂ ನಡೆದ ಸಂಭಾಷಣೆಯನ್ನು ವಿವರಿಸುತ್ತಾರೆ.

**ಲೋಕಾನಾಮುಪಕೃತಯೇ ಕುತಃ ಶಿಲೇಯಂ**
**ನಿನ್ಯೇ ನೋ ಇತಿ ಜನತಾ ಜಗಾದ ತತ್ರ ।**
**ನೇತಾರೋ ಯತಿವರ ಮಾನವಾ ನ ಹೀಮಾಂ**
**ಭೀಮಶ್ಚೇದಿಹ ಯತತೇ ನಯೇನ್ನ ವೇತಿ ॥ 8 ॥**

**ಪದಚ್ಛೇದ—** ಲೋಕಾನಾಂ, ಉಪಕೃತಯೇ, ಕುತಃ, ಶಿಲಾ, ಇಯಂ, ನಿನ್ಯೇ, ನೋ, ಇತಿ, ಜನತಾ, ಜಗಾದ, ತತ್ರ, ನೇತಾರಃ, ಯತಿವರ, ಮಾನವಾಃ, ನ, ಹಿ, ಇಮಾಂ, ಭೀಮಃ, ಚೇತ್, ಇಹ, ಯತತೇ, ನಯೇತ್, ನ, ವಾ, ಇತಿ ।

**ಅನ್ವಯ—** ಲೋಕಾನಾಂ, ಉಪಕೃತಯೇ, ಇಯಂ, ಶಿಲಾ, ಕುತಃ, ನೋ, ನಿನ್ಯೇ, ಇತಿ, ತತ್ರ, ಜನತಾ, ಹೇ, ಯತಿವರ, ಇಮಾಂ, ನೇತಾರಃ, ಮಾನವಾಃ, ನಹಿ, ಭೀಮಃ, ಚೇತ್, ಇಹ, ಯತತೇ, ನಯೇತ್, ನ, ವಾ, ಇತಿ ।

**ಅನ್ವಯಾರ್ಥ—**

**ಲೋಕಾನಾಂ** = ಜನರ,
**ಉಪಕೃತಯೇ** = ಉಪಕಾರಕ್ಕೋಸ್ಕರ,
**ಇಯಂ ಶಿಲಾ** = ಈ ಬಂಡೆಕಲ್ಲು,
**ಕುತಃ** = ಏತಕ್ಕೆ,
**ನೋ ನಿನ್ಯೇ** = ಒಯ್ಯಲ್ಪಡಲಿಲ್ಲ?
**ಇತಿ** = ಹೀಗೆಂದು, (ಊಚೇ = ಹೇಳಿದರು)
**ತತ್ರ** = ಅಲ್ಲಿರುವ, (ಆ ಸಂದರ್ಭದಲ್ಲಿ)
**ಜನತಾ** = ಜನರ ಸಮೂಹವು,
**ಹೇ ಯತಿವರ** = ಎಲೈ ಶ್ರೇಷ್ಠ ಸಂನ್ಯಾಸಿಗಳೇ,
**ಇಮಾಂ** = ಈ ಶಿಲೆಯನ್ನು,
**ನೇತಾರಃ** = ಒಯ್ಯತಕ್ಕವರು,
**ಮಾನವಾಃ ನ ಹಿ** = ಮನುಷ್ಯರು ಅಲ್ಲ,
**ಭೀಮಃ ಚೇತ್** = ಭೀಮಸೇನನಾದರೋ,
**ಇಹ** = ಈ ಬಂಡೆಕಲ್ಲನ್ನು ಒಯ್ಯುವ ವಿಷಯದಲ್ಲಿ,
**ಯತತೇ** = ಪ್ರಯತ್ನಿಸಿಯಾನು,
**ನಯೇತ ನ ವಾ** = ಒಯ್ದಾನೋ ಇಲ್ಲವೋ?
**ಇತಿ** = ಎಂದು,
**ಜಗಾದ** = ಹೇಳಿತು.
(**ಅಥವಾ ಭೀಮಃ ಇಹ ಯತತೇ ಚೇತ್ ನಯೇತ ನ ವಾ** = ಭೀಮಸೇನನು ಈ ಬಂಡೆಯನ್ನು ತೆಗೆದುಕೊಂಡು

ಹೋಗುವ ವಿಷಯದಲ್ಲಿ ಪ್ರಯತ್ನಿಸಿದರೂ ತೆಗೆದುಕೊಂಡು ಹೋದಾನೋ ಇಲ್ಲವೋ, ಇತಿ ಜಗಾದ = ಎಂದು ಹೇಳಿತು.)

**ತಾತ್ಪರ್ಯ**— 'ಹೇ ಜನರೇ, ನೀವು ಜನರ ಉಪಕಾರಕ್ಕಾಗಿ ನದಿಯ ಪ್ರವಾಹವನ್ನು ತಡೆಯಲು ಇಲ್ಲಿಯವರೆಗೆ ತಂದಿರುವ ಬಂಡೆಕಲ್ಲನ್ನು ಮುಂದಕ್ಕೆ ಏಕೆ ತೆಗೆದುಕೊಂಡು ಹೋಗುವುದಿಲ್ಲ? ಇಲ್ಲಿಯೇ ಏಕೆ ಬಿಟ್ಟು ಬಿಟ್ಟಿರಿ?' ಎಂದು ಆಚಾರ್ಯರು ಆ ಜನರನ್ನು ಕುರಿತು ಕೇಳಿದರು. ಆಗ ಆ ಜನರು 'ಎಲೈ ಯತಿವರ್ಯರೇ, ಈ ದೊಡ್ಡಗಾತ್ರದ ಬಂಡೆಯನ್ನು ಒಯ್ಯುವವರು ಮಾನವರಲ್ಲಿ ಯಾರೂ ಇಲ್ಲವೆಂದು ನಮಗೆ ತೋರುತ್ತಿದೆ. ನಾವು ಸ್ವಲ್ಪ ದೂರ ಹೇಗೋ ತಂದೆವು. ಮುಂದೆ ಇದನ್ನು ಒಯ್ಯಲಾರೆವು. ದ್ವಾಪರಯುಗದ ಭೀಮಸೇನನು ಈಗ ಬಂದರೆ ಈ ಬಂಡೆಕಲ್ಲನ್ನು ಒಯ್ಯಲು ಅವನು ಪ್ರಯತ್ನಿಸಿಯಾನು. ಅವನೂ ಈ ಶಿಲೆಯನ್ನು ತೀರ್ಥದ ಹತ್ತಿರ ತೆಗೆದುಕೊಂಡು ಹೋಗಲು ಸಮರ್ಥನಾದಾನೋ ಇಲ್ಲವೋ ಎಂದು ಸಂದೇಹವೇ ಇದೆ' ಎಂದು ಉತ್ತರಕೊಟ್ಟರು.

**ವಿಗ್ರಹ**—

**ಜನತಾ**— ಜನಾನಾಂ ಸಮೂಹಃ ಜನತಾ । ಇಮಾಂ ನೇತಾರಃ ಎಂಬಲ್ಲಿ ನೇತಾರಃ ಣೀಞ(ನಿ) ಪ್ರಾಪಣೇ ಎಂಬ ಧಾತುವಿಗೆ ತೃನ್ (3.2.135) ಎಂಬ ಸೂತ್ರದಿಂದ ತೃನ್ ಪ್ರತ್ಯಯ, 'ಧಾತೋಃ ತೃನ್ ಪ್ರತ್ಯಯಃ ಸ್ಯಾತ್ ತಚ್ಛೀಲಾದಿಷು ಕರ್ತೃಷು' ಒಯ್ಯುವ ಸ್ವಾಭಾವ ಸಾಮರ್ಥ್ಯವುಳ್ಳ ಎಂಬ ಅರ್ಥದಲ್ಲಿ ತೃನ್ ಪ್ರತ್ಯಯ, 'ನ ಲೋಕಾವ್ಯಯನಿಷ್ಠಾಖಲರ್ಥತೃಣಾಂ' (2.3.69) ಎಂಬ ಸೂತ್ರದಿಂದ ಷಷ್ಠಿ ವಿಭಕ್ತಿಗೆ ನಿಷೇಧ ಬಂದಿದೆ.

**ಯತಿವರಃ**— ಯತಿಷು ವರಃ ಯತಿವರಃ ತಸ್ಯ ಸಂಬುದ್ಧಿಃ । ಹೇ ಯತಿವರ! ಯತಿವರ ಎಂಬ ಶಬ್ದದ ಸಂಬೋಧನೆಯಲ್ಲಿ ಹೇ ಯತಿವರ ಎಂದು ರೂಪ ।

**ಕ್ರಿಯಾಪದ**— ನಿನ್ಯೇ - ಣೀಞ(ನೀ)ಪ್ರಾಪಣೇ ದ್ವಿಕ. ಅನಿ. ಉಭ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮ ಪುರುಷ ಏಕವಚನ । ಜಗಾದ - ಗದವಕ್ತ್ಯಾಯಾಂ ವಾಚಿ ಸಕ ಸೇಟ್ ಪರ ಲಿಟ್ ಪ್ರಥಮಪುರುಷ ಏಕವಚನ ।

**ಯತತೇ** - ಯತೀ ಪ್ರಯತ್ನೇ ಭ್ವಾದಿ. ಅಕ. ಸೇಟ್. ಆತ್ಮ ಪ್ರಥಮಪುರುಷ ಏಕವಚನ । ಣೀಞ (ನೀ) ಧಾತು ವಿಧಿ ಲಿಙ್ ಪರ. ಪ್ರಥಮಪುರುಷ ಏಕವಚನ ।

ನಿನ್ಯೇ ನಿನ್ಯಾತೇ ನಿನ್ಯಿರೇ, ನಿನ್ಯೇಷೇ ನಿನ್ಯಾಥೇ ನಿನ್ಯಿಢ್ವೇ-ನಿನ್ಯಿಧ್ವೇ, ನಿನ್ಯೇ ನಿನ್ಯಿವಹೇ ನಿನ್ಯಿಮಹೇ ।
ಜಗಾದ ಜಗದತುಃ ಜಗದುಃ, ಜಗದಿಥ ಜಗದಥುಃ ಜಗದ, ಜಗಾದ-ಜಗದ ಜಗದಿವ ಜಗದಿಮ ।
ಯತತೇ ಯತೇತೇ ಯತಂತೇ, ಯತಸೇ ಯತೇಥೇ ಯತಧ್ವೇ, ಯತೇ ಯತಾವಹೇ ಯತಾಮಹೇ ।
ನಯೇತ್ ನಯೇತಾಂ ನಯೇಯುಃ, ನಯೇಃ ನಯೇತಂ ನಯೇತ, ನಯೇಯಂ ನಯೇವ ನಯೇಮ ।

**ಪ್ರಯೋಗ**— ಲೋಕಾನಾಂ ಉಪಕೃತಯೇ ಇಮಾಂ ಶಿಲಾಂ ಯೂಯಂ ಕುತಃ ನೋ ನಿನ್ಯೇ? (ನಿನ್ಯಿಢ್ವೇ?)(ಇತಿ ತೇನ ಮಹೇಶ್ವೇಣ ಊಚೇ) ತತ್ರ ಜನತಯಾ ಹೇ ಯತಿವರ ಇಮಾಂ ನೇತೃಭಿಃ ಮಾನವೈಃ ನ ಹಿ ಭೂಯತೇ, ಭೀಮೇನ ಚೇತ್‌ಯತ್ಯತೇ (ತೇನಾಪಿ) ನೀಯೇತ ನ ವಾ ಇತಿ ಜಗದೇ ।

★★★

**ಅವತಾರಿಕಾ—** ಆಗ ಆಚಾರ್ಯರು ಮಾಡಿದ ಮಾನವರಿಗೆ ಸಾಧ್ಯವಿಲ್ಲದ ಅದ್ಭುತವಾದ ಕಾರ್ಯವನ್ನು ವರ್ಣಿಸುತ್ತಾರೆ.

**ನಿನ್ಯೇ ತಾಂ ಗಿರಿಮಿವ ವಾನರೀಕೃತಾತ್ಮಾ**
**ಲೀಲಾವತ್ ಕರಕಮಲೇನ ಸೋಽಮಲೇನ ।**
**ತತ್ರಾಪಿ ನ್ಯಧಿತ ತಯಾಽಸ್ಯ ಸೂಚ್ಯತೇಽಲಂ**
**ತತ್ತುಂಗಾಂ ನನು ನಿಕಷಾಧುನಾಽಪಿ ಕರ್ಮ ॥ 9 ॥**

**ಪದಚ್ಛೇದ—** ನಿನ್ಯೇ, ತಾಂ, ಗಿರಿಂ, ಇವ, ವಾನರೀಕೃತಾತ್ಮಾ, ಲೀಲಾವತ್ಕರಕಮಲೇನ, ಸಃ, ಅಮಲೇನ, ತತ್ರ, ಅಪಿ, ನ್ಯಧಿತ, ತಯಾ, ಅಸ್ಯ, ಸೂಚ್ಯತೇ, ಅಲ,ಂ ತತ್, ತುಂಗಾಂ, ನಿಕಷಾ, ಅಧುನಾ, ಅಪಿ, ಕರ್ಮ ।

**ಅನ್ವಯ—** ಸಃ, ಅಮಲೇನ, ಲೀಲಾವತ್, ಕರಕಮಲೇನ, ತಾಂ, ವಾನರೀಕೃತಾತ್ಮಾ, ಗಿರಿಂ, ಇವ, ನಿನ್ಯೇ, ಅಪಿ, ತತ್ರ, ನ್ಯಧಿತ, ಅಸ್ಯ, ತತ್, ಕರ್ಮ, ತುಂಗಾಂ, ನಿಕಷಾ, ಅಧುನಾ, ಅಪಿ, ಅಲಂ, ಸೂಚ್ಯತೇ, ನನು ।

**ಅನ್ವಯಾರ್ಥ—**

**ಸಃ** = ಆ ಮಧ್ವಾಚಾರ್ಯರು,
**ಅಮಲೇನ** = ನಿರ್ಮಲವಾದ,
**ಲೀಲಾವತ್** = ವಿಲಾಸದಿಂದ ಕೂಡಿದ,
**ಕರಕಮಲೇನ** = ಕಮಲದಂತಹ ಕೈಯಿಂದ,
**ತಾಂ** = ಆ ದೊಡ್ಡ ಬಂಡೆಯನ್ನು,
**ವಾನರೀಕೃತಾತ್ಮಾ** = ಹನುಮಂತನೆಂಬ ಕಪಿಯಾಗಿ ಅವತರಿಸಿದ ಸ್ವರೂಪವುಳ್ಳವನು ತಾವು, (ಹನುಮಂತನ ಸ್ವರೂಪವೇ ಆದ ತಾನು)
**ಗಿರಿಂ ಇವ** = ಗಂಧಮಾದನ ಪರ್ವತವನ್ನೋಪಾದಿಯಲ್ಲಿ,
**ನಿನ್ಯೇ** = ಒಯ್ದರು.
**ಅಪಿ** = ಮತ್ತು,
**ತತ್ರ** = ಆ ಬಂಡೆಯನ್ನು ಇಡಬೇಕಾದ ಸ್ಥಳದಲ್ಲಿ
**ನ್ಯಧಿತ** = ಇಟ್ಟರು.
**ತಯಾ** = ಆ ಮಹಾಶಿಲೆಯಿಂದ,
**ಅಸ್ಯ** = ಈ ಶ್ರೀಮಧ್ವಾಚಾರ್ಯರ,
**ತತ್ ಕರ್ಮ** = ಆ ಕಾರ್ಯವು,
**ತುಂಗಾಂ ನಿಕಷಾ** = ತುಂಗಾನದಿಯ ಹತ್ತಿರ, (ಭದ್ರಾನದಿಯಲ್ಲಿ)
(**ಅಥವಾ ತುಂಗಾಂ ಕಟಿಂ ನಿಕಷಾ** = ಎತ್ತರವಾದ ಭದ್ರಾನದಿಯ ತೀರದ ಬಳಿ)
**ಅಧುನಾಪಿ** = ಈಗಲೂ ಕೂಡ,
**ಅಲಂ** = ಚೆನ್ನಾಗಿ,
**ಸೂಚ್ಯತೇ** = ಸೂಚಿಸಲ್ಪಡುತ್ತದೆ.

**ತಾತ್ಪರ್ಯ—** ಹಿಂದೆ ಇದೇ ಶ್ರೀಮಧ್ವಾಚಾರ್ಯರು ಹನುಮಂತನ ರೂಪವನ್ನು ಸ್ವೀಕರಿಸಿದ್ದರು. ಆಗ ರಾಮ-ರಾವಣರ ಯುದ್ಧದಲ್ಲಿ ಮೃತರಾದ ಕಪಿಗಳನ್ನು ಬದುಕಿಸಲು ಅನಾಯಾಸವಾಗಿ ಒಂದೇ ಕೈಯಿಂದ ಗಂಧಮಾದನ ಪರ್ವತವನ್ನು ಎತ್ತಿ ತಂದಿದ್ದರು. ಆ ಹನುಮಂತ ದೇವರೇ ಆದ ಶ್ರೀಮಧ್ವಾಚಾರ್ಯರು ಇಂದು ತಮ್ಮ ಕೋಮಲ-ವಾದ ಕರಕಮಲದಿಂದ ಅನಾಯಾಸವಾಗಿ ಆ ಮಹಾಶಿಲೆಯನ್ನು ಎತ್ತಿ ತಂದು ಅದನ್ನು ಎಲ್ಲಿ ಇಡಬೇಕಾಗಿತ್ತೋ ಅದೇ ಸ್ಥಳದಲ್ಲಿ ಸರಿಯಾಗಿ ಇಟ್ಟರು. ಆಚಾರ್ಯರು ಮಾಡಿದ ಈ ಅದ್ಭುತ ವ್ಯಾಪಾರವನ್ನು ಇಂದೂ ತುಂಗೆಯ ತಂಗಿಯಾದ ಭದ್ರೆಯ ದಡದಲ್ಲಿ ಆ ಮಹಾಶಿಲೆಯು ಚೆನ್ನಾಗಿ ಸೂಚಿಸುತ್ತಿದೆ. ಇದು ಚರಿತ್ರ ಪ್ರಸಿದ್ಧವಾದ ವಿಚಾರ-ವಾಗಿದೆ.

**ಕ್ರಿಯಾಪದ—** ನ್ಯಧಿ - ಈ ಕ್ರಿಯಾಪದ ಶ್ಲೋಕದ 8 ಸರ್ಗ 16ರಲ್ಲಿ ಕರ್ಮಣಿಯಲ್ಲಿ ಬಂದಿದೆ. ಕರ್ತರಿಯಲ್ಲಿಯೂ ಹಾಗೆಯೇ ರೂಪ.

**ನ್ಯಧಿತ** - ನಿ+ಡುಧಾಞ (ಧಾ) ಧಾರಣಪೋಷಣಯೋಃ ಸಕ ಉಭಯ ಜುಹೋತ್ಯಾದಿ ಅನಿಟ್ ಭೂತೇ ಆತ್ಮ. ಪ. ಲುಙ್ ಪ್ರಥಮಪುರುಷ ಏಕವಚನ ।

ಅಧಿತ ಅಧಿಷಾತಾಂ ಅಧಿಷತ, ಅಧಿಥಾಃ ಅಧಿಷಾಥಾಂ ಅಧಿಢ್ವಂ, ಅಧಿಧ್ವಂ, ಅಧಿಷಿ ಅಧಿಷ್ವಹಿ ಅಧಿಷ್ಮಹಿ ।

**ಸೂಚ್ಯತೇ** - ಸೂಚಪೈಶುನ್ಯೇ ಸಕರ್ಮಕ ಸೇಟ್ ಉಭಯಪದಿ ಕರ್ಮಣಿ ಲಟ್ ।

ಸೂಚ್ಯತೇ ಸೂಚ್ಯೇತೇ ಸೂಚ್ಯಂತೇ ಇತ್ಯಾದಿ .

**ಪ್ರಯೋಗ—** ತೇನ ಅಮಲೇನ ಲೀಲಾವತ್ ಕರಕರ್ಮ ಸಾ ವಾನರೀಕೃತಾತ್ಮನಾ ಗಿರಿವರ ನಿನ್ಯೇ । ಅಪಿ ತತ್ರ ನ್ಯಧಾಯಿ (ಸಾ ಶಿಲಾ) ಅಸ್ಯ ತತ್ ಕರ್ಮ ತುಂಗಾಂ ನಿಕಷಾ ಅಧುನಾಪಿ ಅಲಂ ಸೂಚಯತಿ ನನು.

(ಆ ಶ್ರೀಮಧ್ವಾಚಾರ್ಯರಿಂದ ಹಿಂದೆ ಆಂಜನೇಯನಾಗಿರುವಾಗ ಗಂಧಮಾದನ ಪರ್ವತವನ್ನು ತಂದಂತೆ ಆ ಶಿಲೆಯು ನಿರ್ಮಲವಾದ ಕರಕಮಲದಿಂದ ಒಯ್ಯಲ್ಪಟ್ಟಿತು ಮತ್ತು ಇಡಬೇಕಾದ ಸ್ಥಳದಲ್ಲಿ ಇಡಲ್ಪಟ್ಟಿತು. ಆ ಶಿಲೆಯು ಮಧ್ವಾಚಾರ್ಯರ ಆ ಅದ್ಭುತ ಕಾರ್ಯವನ್ನು ಚಿಕ್ಕಮಗಳೂರು ಜಿಲ್ಲಾ ಹತ್ತಿರ ಇಂದಿಗೂ ಸೂಚಿಸುತ್ತದೆ ಎಂದು ಪ್ರಯೋಗ ಪರಿವರ್ತನೆ ಮಾಡಿದ ಮೇಲೆ ತಾತ್ಪರ್ಯಾರ್ಥ)

★★★

**ಅವತಾರಿಕಾ—** ಆಚಾರ್ಯರ ಮತ್ತೊಂದು ಅದ್ಭುತವಾದ ಕಥೆಯನ್ನು ವರ್ಣಿಸುತ್ತಾರೆ.

**ಸಂಘಾತೈರಧಿಕಘನೈರಲಂಕೃತಾಧ್ವಾ**
**ಶಿಷ್ಯಾಣಾಂ ಯತಮನಸಾಮುತೇತರೇಷಾಮ್ ।**
**ಯತ್ರಾಮಾ ವಸತಿ ತಿಥಾವಿನೇನ ಚಂದ್ರ-**
**ಸ್ತತ್ರಾಸೌ ಸಕಲಮತಿಃ ಸಸಾರ ಸಿಂಧುಮ್ ॥ 10 ॥**

**ಪದಚ್ಛೇದ—** ಸಂಘಾತೈಃ, ಅಧಿಕಘನೈಃ, ಅಲಂಕೃತಾಧ್ವಾ, ಶಿಷ್ಯಾಣಾಂ, ಯತಮನಸಾಂ, ಉತ, ಇತರೇಷಾಂ, ಯತ್ರ, ಅಮಾ, ವಸತಿ, ತಿಥೌ, ಇನೇನ, ಚಂದ್ರಃ, ತತ್ರ, ಅಸೌ, ಸಕಲಮತಿಃ, ಸಸಾರ, ಸಿಂಧುಂ ।

**ಅನ್ವಯ—** ಅಸೌ, ಸಕಲಮತಿಃ, ಯತ್ರ, ತಿಥೌ, ಚಂದ್ರಃ, ಇನೇನ, ಅಮಾ, ವಸತಿ, ತತ್ರ, (ತಿಥೌ) ಯತಮನಸಾಂ, ಉತ, ಇತರೇಷಾಂ, ಶಿಷ್ಯಾಣಾಂ, (ಅಧಿಕಘನೈಃ) ಸಂಘಾತೈಃ, ಅಲಂಕೃತಾಧ್ವಾ ಸನ್, ಸಿಂಧುಂ, ಸಸಾರ ।

ಅನ್ವಯಾರ್ಥ—

ಅಸೌ = ಈ,
ಸಕಲಮತಿಃ = ಶ್ರೀಪೂರ್ಣಪ್ರಜ್ಞಾರ್ಯರು,
ಯತ್ರ = ಯಾವ ತಿಥಿಯಲ್ಲಿ, (ಅಮಾವಾಸ್ಯೆಯಲ್ಲಿ)
ಚಂದ್ರಃ = ಚಂದ್ರನು,
ಇನೇನ = ಸೂರ್ಯನಿಂದ,
ಅಮಾ = ಕೂಡಿಕೊಂಡು,
ವಸತಿ = ವಾಸ ಮಾಡುತ್ತಾನೋ,(ಇರುತ್ತಾನೋ)
ತತ್ರ = ಆ ಅಮಾವಾಸ್ಯಾ ತಿಥಿಯಲ್ಲಿ,
ಉಪರಾಗೇ ಚ ಸತಿ = (ಗ್ರಹಣವು ಇದ್ದಾಗ),
ಯತಮನಸಾಂ = ಯತಿಗಳಾದ,
ಉತ = ಮತ್ತು,
ಇತರೇಷಾಂ = ಬೇರೆ ಗೃಹಸ್ಥರಾದ,
ಶಿಷ್ಯಾಣಾಂ = ಶಿಷ್ಯರ,
(ಅಧಿಕಘನೈಃ = ಬಹಳ ಒತ್ತಾದ ತುಂಬಾ (ಜನಸಮರ್ದವುಳ್ಳ)
ಅಧಿಕಘನೈಃ = ನಡೆದ ಉತ್ತಮ ಕಥೆಗಳನ್ನು ಹೇಳುವ,
ಸಂಘಾತೈಃ = ಸಮೂಹಗಳಿಂದ,
ಅಲಂಕೃತಾಧ್ವಾ = ಅಲಂಕಾರ ಮಾಡಲ್ಪಟ್ಟ ದಾರಿಯುಳ್ಳವರಾಗಿ,
ಸಿಂಧುಂ = ಸಮುದ್ರವನ್ನು ಕುರಿತು,
ಸಸಾರ = ಹೋದರು.

ತಾತ್ಪರ್ಯ— ಮತ್ತೊಂದು ಸಂದರ್ಭದಲ್ಲಿ ನಡೆದ ಕಥೆಯು ಹೀಗಿದೆ. ಒಂದು ದಿನ ಅಮಾವಾಸ್ಯಾ ಸೂರ್ಯ-ಗ್ರಹಣವಿತ್ತು. ಆಗ ಒಳ್ಳೆಯ ವಾಕ್ಯಾರ್ಥ ವಿಚಾರ ಮಾಡುವ, ಇಂದ್ರಿಯ ನಿಗ್ರಹವುಳ್ಳ ಸಂನ್ಯಾಸಿಗಳೂ ಮತ್ತು ಇತರ ಗೃಹಸ್ಥ ಶಿಷ್ಯರೂ ಸೇರಿದ್ದರು. ಅವರು ಆಚಾರ್ಯರ ಮಹಿಮೆಯನ್ನು ಪರಮಾತ್ಮನ ಮಹಿಮೆಯನ್ನು ಪರಸ್ಪರವಾಗಿಯೂ ಇತರರಿಗೂ ತಿಳಿಸುತ್ತಾ ಇದ್ದರೆ, ಇವರ ಜತೆಗೆ ಆಚಾರ್ಯರು ತಾವು ಹೋಗುವ ದಾರಿಯು ಯತಿಗೃಹಸ್ಥಶಿಷ್ಯರಿಂದಲೂ ಇತರ ಜನರಿಂದಲೂ ಅಲಂಕೃತವಾಗಿರುವಾಗ ತಾವೂ ದಾರಿಗೆ ಅಲಂಕಾರಪ್ರಾಯರಾಗಿದ್ದರು. ಜನರ ಗುಂಪಿನಿಂದ ದಾರಿಯು ಇಕ್ಕಟ್ಟಾಗಿರುವಾಗ ಆಚಾರ್ಯರು ಸ್ನಾನಕ್ಕಾಗಿ ಸಮುದ್ರದ ಕಡೆಗೆ ಹೊರಟರು.

ವಿಗ್ರಹ ಮತ್ತು ಕೋಶ—

ಅಧಿಕಘನೈಃ— ಅಧಿಕಂ ಘನಾ ಅಧಿಕಘನಾಃ (ಸಂಘೂತಾಃ) ತೈಃ (ಅಧಿ ಅಧಿಕಾನಿ ಕಥಾನಾನಿ ಯೇಷಾಂತೇ ಅಧಿಕಕಥನಾಃ ತೈಃ ।

ಅಲಂಕೃತಾಧ್ವಾ— ಅಲಂಕೃತಃ ಅಧ್ವಾ ಯಸ್ಯ ಸಃ ಅಲಂಕೃತಾಧ್ವಾ ।

ಯತಮನಸಃ— ಯತಾನಿ ಮನಾಂಸಿ ಯೇಷಾಂ ತೇ ಯತಮನಸಃ ।(ಸಕಾರಾಂತ ಪುಂ ಯತಮನಸ್ ಶಬ್ದ)

ಸಕಲಮತಿಃ— ಸಕಲಾ ಮತಿಃ ಯಸ್ಯ ಸಃ ಸಕಲಮತಿಃ । ಅಮಾ = ಸಮೀಪದಲ್ಲಿ, ಜೊತೆಗೆ, ಇಲ್ಲಿ ಕೂಡಿಕೊಂಡು ಎಂದು ಅರ್ಥ. 'ಅಮಾ ಸಹ ಸಮೀಪೇ ಚ' ಕೋಶ ।

**ಕ್ರಿಯಾಪದ—** ವಸತಿ - ವಸ ನಿವಾಸೇ ಅಕರ್ಮಕ ಅನಿ ಪರ ವರ್ತಮಾನೇ ಲಟ್ ।

ಸಸಾರ - ಸೃ ಗತೌ ಸಕ ಅನಿ ಪರ ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

ವಸತಿ ವಸತಃ ವಸಂತಿ ಇತ್ಯಾದಿ, ಸಸಾರ ಸಸ್ರತುಃ, ಸಸ್ರಥುಃ ಸಸ್ರ, ಸಸಾರ-ಸಸರ ಸಸ್ರವ ಸಸ್ರಮ ।

**ಪ್ರಯೋಗ—** ಅಮುನಾ ಸಕಲಮತಿನಾ ಯತ್ರ ತಿಥೌ ಚಂದ್ರೇಣ ಇನೇನ ಅಮಾ ಉಷ್ಯತೇ ತತ್ರ ಯತಮನಸಾಂ ಉತ ಇತರೇಷಾಂ ಶಿಷ್ಯಾಣಾಂ ಅಧಿಕಘನ್ಯೈಃ ಸಂಘಾತ್ಯೈಃ ಅಲಂಕೃತಾಧ್ವನಾ ಸತಾ ಸಿಂಧುಃ ಸಸ್ರೇ ।

★ ★ ★

**ಅವತಾರಿಕಾ—** ಆಗ ಸುತ್ತ ಮುತ್ತಲಿನ ಹಳ್ಳಿಯ ಜನರೂ ಅಲ್ಲಿಗೆ ಬಂದಿದ್ದರು ಎಂದು ಹೇಳುತ್ತಾರೆ.

**ಆರ್ದ್ರಾಂಗಾಃ ಸಪದಿ ನಿಮಜ್ಜನಾತ್ ಸರಸ್ಯಾಂ**
**ಕಣ್ವಸ್ಯ ದ್ವಿಜಋಷಭಸ್ಯ ವಲ್ಲಭಾಯಾಮ್ ।**
**ತತ್ರಾಯನ್ ಖರಕಿರಣೋಪರಾಗಹೇತೋಃ**
**ಗ್ರಾಮೀಣಾ ಅಪಿ ಸಕಲಾಃ ಸಬಾಲವೃದ್ಧಾಃ ॥ 11 ॥**

**ಪದಚ್ಛೇದ—** ಆರ್ದ್ರಾಂಗಾಃ, ಸಪದಿ, ನಿಮಜ್ಜನಾತ್, ಸರಸ್ಯಾಂ, ಕಣ್ವಸ್ಯ, ದ್ವಿಜಋಷಭಸ್ಯ, ವಲ್ಲಭಾಯಾಂ, ತತ್ರ, ಆಯನ್, ಖರಕಿರಣೋಪರಾಗಹೇತೋಃ, ಗ್ರಾಮಿಣಾ, ಅಪಿ, ಸಕಲಾಃ, ಸಬಾಲವೃದ್ಧಾಃ ।

**ಅನ್ವಯ—** ತತ್ರ, ಸಬಾಲವೃದ್ಧಾಃ, ಸಕಲಾಃ, ಗ್ರಾಮಿಣಾಃ, ಅಪಿ, ಖರಕಿರಣೋಪರಾಗಹೇತೋಃ, ದ್ವಿಜಋಷಭಸ್ಯ, ಕಣ್ವಸ್ಯ, ವಲ್ಲಭಾಯಾಂ, ಸರಸ್ಯಾಂ, ಸಪದಿ, ನಿಮಜ್ಜನಾತ್, ಆರ್ದ್ರಾಂಗಾಃ, (ಸಂತ) ಆಯನ್ ।

**ಅನ್ವಯಾರ್ಥ—**

ತತ್ರ = ಆ ಸಮಯದಲ್ಲಿ

**ಸಬಾಲವೃದ್ಧಾಃ** = ಬಾಲಕರು ಮತ್ತು ಮುದುಕರಿಂದ ಸಹಿತರಾದ,

**ಸಕಲಾಃ** = ಸಮಸ್ತರಾದ,

**ಗ್ರಾಮಿಣಾಃ ಅಪಿ** = ಏಕವಾಟ ಗ್ರಾಮದ ಜನರೂ,

**ಖರಕಿರಣಉಪರಾಗಹೇತೋಃ** = ಸೂರ್ಯನ ಗ್ರಹಣದ ನಿಮಿತ್ತದಿಂದ,

**ದ್ವಿಜಋಷಭಸ್ಯ** = ಬ್ರಾಹ್ಮಣಶ್ರೇಷ್ಠರಾದ,

**ಕಣ್ವಸ್ಯ** = ಕಣ್ವ ಮುನಿಗಳಿಗೆ,

**ವಲ್ಲಭಾಯಾಂ** = ಪ್ರಿಯವಾದ,

**ಸರಸ್ಯಾಂ** = ಸರೋವರದಲ್ಲಿ,

**ಸಪದಿ** = ಕೂಡಲೇ,

**ನಿಮಜ್ಜನಾತ್** = ಮುಳುಗಿ ಸ್ನಾನಮಾಡುವುದರಿಂದ,

**ಆರ್ದ್ರಾಂಗಾಃ (ಸಂತಃ)** = ಒದ್ದೆಯಾದ ಮೈ ಉಳ್ಳವರಾಗಿ,

**ಆಯನ್** = (ಸಮುದ್ರದ ಹತ್ತಿರಕ್ಕೆ) ಬಂದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಬರುವಾಗ ಸುತ್ತಮುತ್ತಲಿನ ಗ್ರಾಮಗಳ ಬಾಲಕರು, ಮುದುಕರು, ಯುವಕರು ಎಲ್ಲರೂ ಸೂರ್ಯಗ್ರಹಣದ ನಿಮಿತ್ತವಾಗಿ ಸಮುದ್ರ ಸ್ನಾನ ಮಾಡಲು ಬರುತ್ತಾ ಇದ್ದರು. ಅವರು ಕಣ್ವ ಋಷಿಗಳಿಗೆ ಪ್ರಿಯವಾದ ಕಣ್ವತೀರ್ಥ ಎಂಬ ಸರೋವರದಲ್ಲಿ ಮುಳುಗಿ ಸ್ನಾನ ಮಾಡಿದರು. ಅನಂತರ ಒದ್ದೆ ಮೈಯಿಂದಲೇ ಸಮುದ್ರ ಸ್ನಾನಕ್ಕಾಗಿ ಬಂದರು (ಸಮುದ್ರದಲ್ಲಿ ಸ್ನಾನ ಮಾಡುವುದಕ್ಕೆ ಮೊದಲು) ಬೇರೆ ನೀರಿನಲ್ಲಿ ಸ್ನಾನ ಮಾಡಿ ಅನಂತರವೇ ಸಮುದ್ರ ಸ್ನಾನ ಮಾಡಬೇಕು. ಆ ಪದ್ಧತಿ ಪ್ರಕಾರ ಜನರು ಕಣ್ವತೀರ್ಥದಲ್ಲಿ ಮಿಂದು ಒದ್ದೆ ಮೈಯಿಂದಲೇ ಸಮುದ್ರದ ಬಳಿಗೆ ಹೋದರು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ಆರ್ದ್ರಾಂಗಾಃ—**ಆರ್ದ್ರಾಣಿ ಅಂಗಾನಿ ಯೇಷಾಂ ತೇ ಆರ್ದ್ರಾಂಗಾಃ । ಸರಸೀ = ಕೆರೆ, (ಈ ಕಾರಾಂತ ಸ್ತ್ರೀಲಿಂಗ) 'ಸರೋವರ ಕಾಸಾರಃ ಸರಸೀ ಸರಃ' ಅಮರ ।

**ದ್ವಿಜಋಷಭಃ—** ದ್ವಿಜೇಷು ಋಷಭಃ ದ್ವಿಜಋಷಭಃ । 'ಋತ್ಯಕಃ' (6.1.128) ಎಂಬ ಸೂತ್ರದಿಂದ ಪಾಕ್ಷಿಕ ಪ್ರಕೃತಿ ಭಾವ ।

**ಖರಕಿರಣೋಪರಾಗಹೇತೋಃ—** ಖರಾಃ ತೀಕ್ಷ್ಣಾಃ ಕಿರಣಾಃ ಯಸ್ಯ ಸಃ । ಖರಕಿರಣಃ = ಸೂರ್ಯನು, 'ಖರ ಕಿರಣಸ್ಯ ಉಪರಾಗಃ ಖರಕಿರಣೋಪರಾಗಃ' (ಉಪರಾಗ = ಗ್ರಹಣ) 'ಉಪರಾಗೋ ಗ್ರಹಃ' ಅಮರ. ಖರಕಿರಣೋಪರಾಗಸ್ಯ ಹೇತುಃ ತಸ್ಮಾತ್ ।

**ಗ್ರಾಮೀಣಾಃ—** ಗ್ರಾಮೇ ಭವಾಃ ಗ್ರಾಮೀಣಾಃ । 'ಗ್ರಾಮಾದ್ ಯ ಖಞ' (4.2.94) ಎಂಬ ಸೂತ್ರದಿಂದ ಖಞ ಪ್ರತ್ಯಯ. ಖ ಕ್ಕೆ ಈನ ಆದೇಶ ಣತ್ವ।

**ಸಬಾಲವೃದ್ಧಾಃ—** ಬಾಲಾಶ್ಚ ವೃದ್ಧಾಶ್ಚ ಬಾಲವೃದ್ಧಾಃ ಬಾಲವೃದ್ಧೈಃ ಸಹ ವರ್ತಂತೇ ಇತಿ ಸಬಾಲವೃದ್ಧಾಃ ।

**ಕ್ರಿಯಾಪದ— ಆಯನ್** - ಇಣ ಗತೌ ಸಕ. ಅನಿ. ಪರ. ಅನದ್ಯತನಭೂತೇ ಲಙ ।

ಐತ ಐತಾಂ ಆಯನ್, ಐಃ ಐತಂ ಐತ, ಆಯಂ ಐವ ಐಮ ।

**ಪ್ರಯೋಗ—** ತತ್ರ ಸಬಾಲವೃದ್ಧಾಃ ಸಕಲೈಃ ಗ್ರಾಮೀಣಾಃ ಅಪಿ ಖರಕಿರಣೋಪರಾಗಹೇತೋಃ ದ್ವಿಜಋಷಭಸ್ಯ ಕಣ್ವಸ್ಯ ವಲ್ಲಭಾಯಾಂ ಸರಸ್ಯಾಂ ಸಪದಿ ನಿಮಜ್ಜನಾತ್ ಆರ್ದ್ರಾಂಗೈಃ ಐಯತ ।

★ ★ ★

**ಅವತಾರಿಕಾ—** ಆಗ ಆಚಾರ್ಯರನ್ನು ಕಂಡು ಸಜ್ಜನರಿಗೆ ಆನಂದವೂ, ದುರ್ಜನರಿಗೆ ಖೇದವೂ ಉಂಟಾಯಿತು ಎನ್ನುತ್ತಾರೆ.

**ಸರ್ವಜ್ಞಂ ಸಪರಿಜನಂ ಸಮೀಕ್ಷಮಾಣಾಃ**
**ಫುಲ್ಲಾಕ್ಷಾಃ ಸ್ಮಿತವದನಾಃ ಶುಭಾ ನನಂದುಃ ।**
**ದೌರ್ಮುಖ್ಯಂ ದಧತ ಉತಾಪರೇ ನಿನಿಂದು-**
**ರ್ನಾಶ್ಚರ್ಯಂ ದ್ವಯಮಪಿ ತತ್ ಸ್ವಭಾವತಂತ್ರಮ್ ॥ 12 ॥**

**ಪದಚ್ಛೇದ—** ಸರ್ವಜ್ಞಂ, ಸಪರಿಜನಂ, ಸಮೀಕ್ಷಮಾಣಾಃ, ಫುಲ್ಲಾಕ್ಷಾಃ, ಸ್ಮಿತವದನಾಃ, ಶುಭಾಃ, ನನಂದುಃ, ದೌರ್ಮುಖ್ಯಂ, ದಧತಃ, ಉತ, ಅಪರೇ, ನಿನಿಂದುಃ, ನ, ಆಶ್ಚರ್ಯಂ, ದ್ವಯಂ, ಅಪಿ, ತತ್, ಸ್ವಭಾವತಂತ್ರಂ ।

**ಅನ್ವಯ—** ಸಪರಿಜನಂ, ಸರ್ವಜ್ಞಂ, ಸಮೀಕ್ಷಮಾಣಾಃ, ಸ್ಮಿತವದನಾಃ, ಫುಲ್ಲಾಕ್ಷಾಃ, ಶುಭಾಃ, ನನಂದುಃ, ಉತ, ಅಪರೇ, ದೌರ್ಮುಖ್ಯಂ, ದಧತಃ, ನಿನಿಂದುಃ, ಸ್ವಭಾವತಂತ್ರಂ, ತತ್, ದ್ವಯಂ, ಅಪಿ, ಆಶ್ಚರ್ಯಂ, ನ ।

**ಅನ್ವಯಾರ್ಥ—**

**ಸಪರಿಜನಂ** = ಪರಿವಾರ ಸಹಿತರಾದ,

**ಸರ್ವಜ್ಞಂ** = ಶ್ರೀಪೂರ್ಣಪ್ರಜ್ಞರನ್ನು,

**ಸಮೀಕ್ಷಮಾಣಾಃ** = ನೋಡುತ್ತಿರುವ,

**ಸ್ಮಿತವದನಾಃ** = ಮಂದಹಾಸಪೂರ್ಣವಾದ ಮುಖವುಳ್ಳ,

**ಫುಲ್ಲಾಕ್ಷಾಃ** = ಅರಳಿದ ಕಣ್ಣುಗಳುಳ್ಳ,

**ಶುಭಾಃ** = ಸಜ್ಜನರು,

**ನನಂದುಃ** = ಆನಂದಿಸಿದರು,

**ಉತ** = ಮತ್ತು,

**ಅಪರೇ** = ಇತರ ತಾಮಸ ಸ್ವಭಾವದ ದುಷ್ಟಜನರು,

**ದೌರ್ಮುಖ್ಯಂ** = ಸೊಟ್ಟಗಾದ ಮುಖವನ್ನು, (ಕೆಟ್ಟಮಾತನ್ನು)

**ದಧತಃ** = ಹೊಂದಿದವರಾಗಿ,

**ನಿನಿಂದುಃ** = ನಿಂದಿಸಿದರು,

**ಸ್ವಭಾವತಂತ್ರಂ** = ಸ್ವಭಾವಾಧೀನವಾದ,

**ತತ್ ದ್ವಯಂ ಅಪಿ** = ಆ ಎರಡೂ (ಆನಂದ ಪ್ರಶಂಸೆ ಮತ್ತು ನಿಂದೆಗಳು),

**ಆಶ್ಚರ್ಯಂ ನ** = ಆಶ್ಚರ್ಯವನ್ನುಂಟು ಮಾಡುವಂತಹುದು ಅಲ್ಲ.

**ತಾತ್ಪರ್ಯ—** ಶ್ರೀಸರ್ವಜ್ಞಾಚಾರ್ಯರು ಪರಿವಾರಸಮೇತರಾಗಿ ಹೀಗೆ ಹೋಗುತ್ತಿದ್ದರು. ಆಗ ಅವರನ್ನು ಅನೇಕರು ದಿಟ್ಟಿಸಿ ನೋಡುತ್ತಿದ್ದರು. ಅವರಲ್ಲಿ ಸಾತ್ವಿಕರಾದ ಜನರು ಆಚಾರ್ಯರ ಅದ್ಭುತ ವ್ಯಕ್ತಿತ್ವವನ್ನು ಕಂಡು ಕಣ್ಣುಗಳನ್ನು ಅರಳಿಸಿ ಮಂದಹಾಸಪೂರ್ಣವಾದ ಮುಖವುಳ್ಳರಾಗಿ ತಾವು ಆನಂದಿಸಿದರು. ದುರ್ಜನರು ಮುಖವನ್ನು ಸೊಟ್ಟಗೆ ಮಾಡಿಕೊಂಡು ಕೆಟ್ಟ ಮಾತನ್ನಾಡುತ್ತಾ ಆಚಾರ್ಯರನ್ನು ತೆಗಳಿದರು. ಈ ಸ್ತುತಿನಿಂದೆಗಳೆರಡೂ ಸಜ್ಜನರ, ದುರ್ಜನರ ಸ್ವಭಾವವಾದುದರಿಂದ ಇದರಲ್ಲಿ ಆಶ್ಚರ್ಯಪಡಬೇಕಾದ ವಿಷಯವಿಲ್ಲ. ಸಾತ್ವಿಕರು ಒಳ್ಳೆಯ ಗುಣಗಳನ್ನು ನೋಡಿ ಗುಣವಂತರನ್ನು ಕಂಡು ಸಂತೋಷಪಡುತ್ತಾರೆ. ತಾಮಸರು ತಾವು ಕರುಬುತ್ತಾರೆ. ಮಹಾಪುರುಷರ ಮೇಲೆ ದೋಷಾರೋಪಣ ಮಾಡಿ ನಿಂದಿಸುತ್ತಾರೆ. ಇದು ಸಜ್ಜನ ದುರ್ಜನರ ಸ್ವಭಾವದ ವ್ಯತ್ಯಾಸವು. ಇದು ಎಂದೂ ಬದಲಾಗುವುದಿಲ್ಲ.

**ವಿಗ್ರಹ ಮತ್ತು ಕೋಶ—**

**ಸರ್ವಜ್ಞಃ—** ಸರ್ವಂ ಜಾನಾತೀತಿ ಸರ್ವಜ್ಞಃ ತಂ ।

**ಸಪರಿಜನಂ—** ಪರಿಜನೈಃ ಸಹ ವರ್ತತೇ ಇತಿ ಸಪರಿಜನಃ ತಂ ।

**ಫುಲ್ಲಾಕ್ಷಾಃ—** ಫುಲ್ಲೇ ಅಕ್ಷಿಣೀ ಯೇಷಾಂ ತೇ ಫುಲ್ಲಾಕ್ಷಾಃ । 'ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಂಗಾತ್ ಷಚ್' (5.4.113) ಎಂಬ ಸೂತ್ರದಿಂದ ಷಚ್ ಪ್ರತ್ಯಯ ಫುಲ್ಲಾಕ್ಷಿ+ಅ ಇಕಾರಲೋಪ ಫುಲ್ಲಾಕ್ಷ ಎಂದು ಅಕಾರಾಂತ ಶಬ್ದವಾಗುತ್ತದೆ.

**ಸ್ಮಿತವದನಾಃ—** ಸ್ಮಿತಂ ವದನಂ ಯೇಷಾಂ ತೇ ಸ್ಮಿತವದನಾಃ ।

**ದೌರ್ಮುಖ್ಯಂ—** ದುಃ ನಿಂದಿತಂ ಮುಖಂ ಅಸ್ಯೇತಿ ದುರ್ಮುಖಃ । 'ದುರ್ಮುಖೇಃ ಮುಖರಾಬದ್ಧಮುಖೌ' ಅಮರ. ದುರ್ಮುಖ = ಕೆಟ್ಟ ಮಾತಾಡುವವನು, ದುರ್ಮುಖಸ್ಯ ಭಾವಃ ದೌರ್ಮುಖ್ಯಂ ತತ್ ।

**ಸ್ವಭಾವತಂತ್ರಂ—** ಸ್ವಭಾವಸ್ಯ ತಂತ್ರಂ ಸ್ವಭಾವತಂತ್ರಂ ।

**ಕ್ರಿಯಾಪದ—** ನನಂದುಃ - ಟು ನದಿ ಸಂಮೃದ್ಧೌ ಅಕ. ಸೇಟ್. ಪರಸ್ಮೈ ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಬಹುವಚನ । ನಿನಿಂದುಃ - ಕುತ್ಸಾಯಾಂ ಅಕ. ಸೇಟ್. ಪರಸ್ಮೈಪದಿ ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಬಹುವಚನ ।

ನನಂದ ನನಂದತುಃ ನನಂದುಃ, ನನಂದಿಥ ನನಂದಥುಃ ನನಂದ, ನನಂದ ನನಂದಿವ ನನಂದಿಮ ।

ನಿನಿಂದ ನಿನಿಂದತುಃ ನಿನಿಂದುಃ, ನಿನಿಂದಿಥ ನಿನಿಂದಥುಃ ನಿನಿಂದ, ನಿನಿಂದ ನಿನಿಂದಿವ ನಿನಿಂದಿಮ ।

**ಪ್ರಯೋಗ—** ಸಪರಿಜನಂ ಸರ್ವಜ್ಞಂ ಸಮೀಕ್ಷಮಾಣೈಃ ಫುಲ್ಲಾಕ್ಷೈಃ ಸ್ಮಿತವದನೈಃ ಶುಭೈಃ ನನಂದೇ ಉತ ಅಪರೈಃ ದೌರ್ಮುಖ್ಯಂ ದಧದ್ಭಿಃ ನಿನಿಂದೇ ಸ್ವಭಾವತಂತ್ರತತ್ದ್ವಯೇನ ಅಪಿ ಆಶ್ಚರ್ಯೇಣ ನ ಭೂಯತೇ ।

★★★

**ಅವತಾರಿಕಾ—** ಪ್ರಕೃತ ಘಟನೆಗೆ ಸಂಬಂಧಪಡುವಂತೆ ಮಹಾಕಾವ್ಯಾಂಗವಾಗಿ ಸಮುದ್ರವರ್ಣನೆಯನ್ನು ಮಾಡುತ್ತಾರೆ.

**ಮಾ ಮೈನಂ ಭುವನಗುರುಂ ವಿನಿಂದತೇತ್ಥಂ**
**ನಿರ್ಭರ್ತ್ಸ್ಯಾಭ್ಯಪತದಿವೋತ್ತರಂಗಹಸ್ತಃ ।**
**ಸಂಕ್ಷೋಭೀ ಘನಘನಘೋಷಘೋರವೇಷಃ**
**ಸಂರಂಭೀ ಖಲದಮನಾಯ ಸಿಂಧುರಾಜಃ ॥ 13 ॥**

**ಪದಚ್ಛೇದ—** ಮಾ, ಮಾ, ಏನಂ, ಭುವನಗುರುಂ, ವಿನಿಂದತ, ಇತ್ಥಂ, ನಿರ್ಭರ್ತ್ಸ್ಯ, ಅಭ್ಯಪತತ್, ಇವ, ಉತ್ತರಂಗಹಸ್ತಃ, ಸಂಕ್ಷೋಭೀ, ಘನಘನಘೋಷಘೋರವೇಷಃ, ಸಂರಂಭೀ, ಖಲದಮನಾಯ, ಸಿಂಧುರಾಜಃ ।

**ಅನ್ವಯ—** ಉತ್ತರಂಗಹಸ್ತಃ, ಸಂಕ್ಷೋಭೀ, ಘನಘನಘೋಷಘೋರವೇಷಃ, ಸಂರಂಭೀ, ಸಿಂಧುರಾಜಃ, ಭುವನ ಗುರುಂ, ಏನಂ, ಮಾ, ವಿನಿಂದತ, ಇತ್ಥಂ, ನಿರ್ಭರ್ತ್ಸ್ಯ, ಖಲದಮನಾಯ, ಅಭ್ಯಪತತ್, ಇವ ।

**ಅನ್ವಯಾರ್ಥ—**

**ಉತ್ತರಂಗ** = ಎತ್ತರವಾದ ಅಲೆಗಳೆಂಬ,
**ಹಸ್ತಃ** = ಕೈಗಳುಳ್ಳ,
**ಸಂಕ್ಷೋಭೀ** = ಅತ್ಯಂತ ಚಲನೆಯುಳ್ಳ (ಅತಿಶಯವಾದ ಕ್ಷೋಭೆಯಿಂದ ಕೂಡಿದ),
**ಘನಘನಘೋಷಘೋರವೇಷಃ** = ಅತಿ ಗಂಭೀರವಾದ (ಗಟ್ಟಿಯಾದ) ಧ್ವನಿಯಿಂದ, ಭಯಂಕರವಾದ ಸ್ವರೂಪವುಳ್ಳ (ಆಕಾರವುಳ್ಳ),
**ಸಂರಂಭೀ** = ವೇಗ ಮತ್ತು ಕೋಪವುಳ್ಳ,
**ಸಿಂಧುರಾಜಃ** = ನದಿಗಳ ರಾಜನಾದ ಸಮುದ್ರನು, (ಸಮುದ್ರನೆಂಬ ರಾಜನು)
**ಭುವನಗುರುಂ** = ಲೋಕಗಳಿಗೆ ಮುಖ್ಯ ಉಪದೇಶಕರಾದ,
**ಏನಂ** = ಈ ಮಧ್ವಾಚಾರ್ಯರನ್ನು,
**ಮಾ ವಿನಿಂದತ** = ನಿಂದಿಸಬೇಡಿರಿ.
**ಇತ್ಥಂ** = ಈ ರೀತಿ,
**ನಿರ್ಭರ್ತ್ಸ್ಯ** = ಗದರಿಸಿ,

**ಖಲದಮನಾಯ** = ನಿಂದಕರಾದ ದುರ್ಜನರ ದಂಡನೆಗಾಗಿ,

**ಅಭ್ಯಪತತ್ ಇವ** = ಮುನ್ನುಗ್ಗಿ ಬಂದನೊ ಎಂಬಂತ್ತಿತ್ತು.

**ತಾತ್ಪರ್ಯ**— ಆಚಾರ್ಯರು ಸಮುದ್ರದ ತೀರಕ್ಕೆ ಬರುವ ಸಮಯದ ಸನ್ನಿವೇಶವು ಆಶ್ಚರ್ಯಕರವಾಗಿತ್ತು. ಆಗ ಸಮುದ್ರದ ತೆರೆಗಳು ಬಹಳ ಎತ್ತರವಾಗಿ ಮೇಲಕ್ಕೆದ್ದು ದಡದ ಕಡೆಗೆ ಮುನ್ನುಗ್ಗುತ್ತಿದ್ದವು. ಸಮುದ್ರದಲ್ಲಿ ತುಂಬಾ ಕ್ಷೋಭೆಯುಂಟಾಗಿ ಸಮುದ್ರವು ಚಲಿಸುತ್ತಿತ್ತು. ಸಮುದ್ರವು ವೇಗದಿಂದ ಬರುತ್ತಿತ್ತು. ಬಹಳ ಗಟ್ಟಿಯಾಗಿ ಗಂಭೀರವಾದ ಧ್ವನಿಯಿಂದ ಸಮುದ್ರದ ಆಕಾರವು ನೋಡುವವರಿಗೆ ಹೆದರಿಕೆಯನ್ನುಂಟುಮಾಡುತ್ತಿತ್ತು. ಆ ಸಮುದ್ರ ರಾಜನು ಭಯಂಕರವಾಗಿ ಭೋರ್ಗರೆಯುತ್ತಾ 'ಎಲೈ ಕಿಡಿಗೇಡಿಗಳೇ ತ್ರೈಲೋಕ್ಯಾಚಾರ್ಯರನ್ನು ಹೀಗೆಲ್ಲಾ ತೆಗಳಬೇಡಿ ಬಾಯಿಗೆ ಬಂದಂತೆ ಬೊಗಳಬೇಡಿ' ಎಂದು ಗದರಿಸಿ, ಹೆದರಿಸಿ, ಶಿಕ್ಷಿಸಲು ಮುಂದುವರಿದು ಬರುವಂತೆ ಕಾಣಿಸುತ್ತಿದ್ದಿತು. ಸಜ್ಜನಶ್ರೇಷ್ಠರಾದ ಮಹಾಪುರುಷನೊಬ್ಬರನ್ನು ತೆಗಳುತ್ತಾ, ಕೂಗುತ್ತಿರುವ ಗುರುನಿಂದಕರಾದ ದುರ್ಜನರನ್ನು ಕಂಡು ಒಬ್ಬ ರಾಜನು, ಮನಸ್ಸಿನಲ್ಲಿ ಕ್ಷೋಭೆಯನ್ನು ಹೊಂದಿ ಕೋಪದಿಂದ ಘರ್ಜಿಸುತ್ತಾ ಸಿಂಹನಾದ ಮಾಡುತ್ತಾ ಭಯಂಕರ ರೂಪವುಳ್ಳವನಾಗಿ ಕೈಗಳನ್ನೆತ್ತಿ ಕೊಂಡು ಕಾಲುಗಳನ್ನು ನೆಲಕ್ಕೆ ಬಡಿಯುತ್ತಾ ದಾಪುಗಾಲು ಹಾಕಿಕೊಂಡು 'ಎಲೈ ದ್ರೋಹಿಗಳೇ ಗುರುಗಳನ್ನು ನಿಂದಿಸಬೇಡಿರಿ ಎಂದು ಮುನ್ನುಗ್ಗಿ ಬಂದನೋ ಎಂಬಂತ್ತಿತ್ತು' ಎಂಬುದಾಗಿ ಕವಿವರ್ಯರು ಉತ್ಪ್ರೇಕ್ಷಿಸಿದ್ದಾರೆ.

**ವಿಗ್ರಹ ಮತ್ತು ಕೋಶ**—

**ಭುವನಗುರುಂ**— ಭುವನಾನಾಂ ಗುರುಃ ಭುವನಗುರುಃ ತಂ ।

**ಉತ್ತರಂಗಹಸ್ತಃ**— ಉದ್ಗತಾಶ್ಚ ತೇ ತರಂಗಾಶ್ಚ ಉತ್ತರಂಗಾಃ, ಉತ್ತರಂಗಾ ಏವ ಹಸ್ತಾಃ ಯಸ್ಯ ಸಃ ಉತ್ತರಂಗಹಸ್ತಃ ।

**ಸಂಕ್ಷೋಭೀ**— ಸಮ್ಯಕ್ ಕ್ಷೋಭಃ ಸಂಕ್ಷೋಭಃ, ಸಂಕ್ಷೋಭಃ ಅಸ್ಯ ಅಸ್ತೀತಿ ಸಂಕ್ಷೋಭೀ ।

**ಘನಘನಘೋಷಘೋರವೇಷಃ**—ಅತಿಶಯೇನ ಘನಃ ಘನಘನಃ, ಘನಘನಶ್ಚಾಸೌ ಘೋಷಶ್ಚ ಘನಘನ ಘೋಷಃ, ಘನಘನಘೋಷೇಣ ಘೋರಃ ವೇಷಃ ಯಸ್ಯ ಸಃ ಘನಘನಘೋಷಘೋರವೇಷಃ ।

**ಸಂರಂಭೀ**— ಸಂರಂಭಃ ಅಸ್ಯ ಅಸ್ತೀತಿ ಸಂರಂಭೀ ।

**ಖಲದಮನಾಯ**— ಖಲಾನಾಂ ದಮನಂ ಖಲದಮನಂ ತಸ್ಮೈ ।

**ಸಿಂಧುರಾಜಃ**— ಸಿಂಧುಶ್ಚಾಸೌ ರಾಜಾ ಚ ಸಿಂಧುರಾಜಃ । (ನದೀನಾಂ = ನದಿಗಳ) ಸಿಂಧು = ನದಿ, ಸಮುದ್ರ 'ಸಿಂಧುಃ ಸಮುದ್ರೇ(ಪುಂ) ನದ್ಯಾಂ ಚ(ಸ್ತ್ರಿ)' ವಿಶ್ವಕೋಶ ।

**ಕ್ರಿಯಾಪದ**— **ವಿನಿಂದತ** - ವಿ+ಣಿದಿ ಕುತ್ಸಾಯಾಂ ವಿ ಉಪಸರ್ಗ ಸಕ. ಸೇಟ್. ಪರ. ಆಜ್ಞಾಯಾಂ ಲೋಟ್ ಮಧ್ಯಮಪುರುಷ ಏಕವಚನ ।

**ಅಭ್ಯಪತತ್** - ಅಭಿ ಪತ್ಲೃ ಗತೌ ಅಕ. ಸೇಟ್. ಪರ. ಅನದ್ಯತನಭೂತೇ ಲಙ ಪ್ರಥಮಪುರುಷ ಏಕವಚನ ।

ನಿಂದತು-ನಿಂದತಾತ್ ನಿಂದತಾಂ ನಿಂದಂತು, ನಿಂದ-ನಿಂದತಾತ್ ನಿಂದತಂ ನಿಂದತ, ನಿಂದಾನಿ ನಿಂದಾವ ನಿಂದಾಮ ।

ಅಪತತ್ ಅಪತತಾಂ ಅಪತನ್, ಅಪತಃ ಅಪತತಂ ಅಪತತ, ಅಪತಂ ಅಪತಾವ ಅಪತಾಮ ।

**ಪ್ರಯೋಗ**— ಉತ್ತರಂಗಹಸ್ತೇನ ಸಂಕ್ಷೋಭಿಣಾ ಘನಘನಘೋಷಘೋರವೇಷೇಣ ಸಂರಂಭಿಣಾ ಸಿಂಧುರಾಜೇನ ಭುವನಗುರುಃ ಏಷಃ ಮಾ ವಿನಿಂದ್ಯತಾಂ ಮಾ ವಿನಿಂದ್ಯತಾಂ ಇತ್ಥಂ ನಿರ್ಭರ್ತ್ಸ್ಯ ಖಲದಮನಾಯ ಅಭ್ಯಪತ್ಯತ ಇವ ।

★ ★ ★

**ಅವತಾರಿಕಾ—** ಮತ್ತು ಮತ್ತೊಂದು ರೀತಿಯಿಂದ ಆ ಸಮುದ್ರವನ್ನು ವರ್ಣಿಸುತ್ತಾರೆ.

**ಸಂಮೋದಾತ್ತರಲತರೋ ದ್ರುತಾಭಿಗಾಮೀ**
**ಗಂಭೀರಸ್ವನನುತಿಮಾನ್ ಸುಫೇನಹಾಸಃ ।**
**ವೀಚ್ಯಂಗೈರಧಿಕತರೈರಿಹಾಧಿವೇಲಂ**
**ಮಧ್ವಾಯ ಪ್ರಣತಿಮಿವ ವ್ಯಧಾತ್ ಸಮುದ್ರಃ ॥ 14 ॥**

**ಪದಚ್ಛೇದ—** ಸಂಮೋದಾತ್, ತರಲತರಃ, ದ್ರುತಾಭಿಗಾಮೀ, ಗಂಭೀರಸ್ವನನುತಿಮಾನ್, ಸುಫೇನಹಾಸಃ, ವೀಚ್ಯಂಗೈಃ, ಅಧಿಕತರೈಃ, ಇಹ, ಅಧಿವೇಲಂ, ಮಧ್ವಾಯ, ಪ್ರಣತಿಂ, ಇವ, ವ್ಯಧಾತ್, ಸಮುದ್ರಃ ।

**ಅನ್ವಯ—** ಇಹ, ಸಂಮೋದಾತ್, ತರಲತರಂ, ದ್ರುತಾಭಿಗಾಮೀ, ಗಂಭೀರಸ್ವನನುತಿಮಾನ್, ಸುಫೇನಹಾಸಃ, ಸಮುದ್ರಃ, ಅಧಿಕತರೈಃ, ವೀಚ್ಯಂಗೈಃ, ಅಧಿವೇಲಂ, ಮಧ್ವಾಯ, ಪ್ರಣತಿಂ, ವ್ಯಧಾತ್, ಇವ ।

**ಅನ್ವಯಾರ್ಥ—**

**ಇಹ** = ಆಚಾರ್ಯರು ಬರುವ ಸಮಯದಲ್ಲಿ

**ಸಂಮೋದಾತ್** = ಸಂತೋಷದಿಂದ,

**ತರಲತರಃ** = ಅತ್ಯಂತ ಚಂಚಲವಾದ,

**ದ್ರುತಾಭಿಗಾಮೀ** = ಬೇಗನೆ ಎದುರಿಗೆ ಬರುತ್ತಿರುವ,

**ಗಂಭೀರಸ್ವನನುತಿಮಾನ್** = ಗಂಭೀರವಾದ ಧ್ವನಿಯಿಂದ ಸ್ತೋತ್ರವುಳ್ಳ,

**ಸುಫೇನ** = ಒಳ್ಳೆಯ ನೊರೆಯೆಂಬ,

**ಹಾಸಃ** = ನಗುವುಳ್ಳ,

**ಸಮುದ್ರಃ** = ಸಮುದ್ರವು,

(**ತ್ಯೈಃ** = ಬಹಳ ಹೆಚ್ಚಾದ, ಒಂದಕ್ಕಿಂತ ಒಂದು ಎತ್ತರವಾದ)

**ಅಧಿಕತರೈಃ** = ಬಹಳವಾಗಿ ವ್ಯಾಪಿಸಿರುವ,

**ವೀಚ್ಯಂಗೈಃ** = ಅಲೆಗಳೆಂಬ ಅವಯವಗಳಿಂದ,

**ಅಧಿವೇಲಂ** = ದಡದಲ್ಲಿ

**ಮಧ್ವಾಯ** = ಶ್ರೀಪೂರ್ಣಪ್ರಜ್ಞಾಚಾರ್ಯರಿಗೆ,

**ಪ್ರಣತಿಂ** = ನಮಸ್ಕಾರವನ್ನು,

**ವ್ಯಧಾತ್ ಇವ** = ಮಾಡಿತೋ ಎಂಬಂತಿತ್ತು.

**ತಾತ್ಪರ್ಯ—** ಸಾತ್ವಿಕನು, ದೇವತಾಭಕ್ತನು, ಗುರುಭಕ್ತನೂ ಆದ ಒಬ್ಬ ಪುರುಷನು ಬಹಳ ಕಾಲ ಕಳೆದ ಮೇಲೆ ತನ್ನ ಮನೆಗೆ ಬಂದು ಗುರುಗಳನ್ನು ಬೇಗನೆ ಎದುರುಗೊಳ್ಳುವನು. ಸಂತೋಷದಿಂದ ಸಾಷ್ಟಾಂಗ ನಮಸ್ಕಾರ ಮಾಡುವನು. ಅವನ ಕೈಕಾಲುಗಳಲ್ಲಿಯೂ, ಮೈಯಲ್ಲಿಯೂ ಸಂತೋಷದಿಂದ ಸ್ಪಂದನವುಂಟಾಗುತ್ತದೆ. ಅವನ ಮುಖದಲ್ಲಿ ತನ್ನ ಧನ್ಯತೆಗೆ ಸಂತೋಷವನ್ನು ಮಂದಹಾಸದಿಂದ ವ್ಯಕ್ತಪಡಿಸುತ್ತಾ ಮೊದಲು ಮೆಲ್ಲನೆ ಸ್ತೋತ್ರವನ್ನು ಪ್ರಾರಂಭ ಮಾಡಿ ಅನಂತರ

ಗಟ್ಟಿಯಾಗಿ ಸ್ತೋತ್ರಮಾಡಲಾರಂಭಿಸುವನು. ಅದರಂತೆಯೇ ಸಮುದ್ರವೂ ಆಚಾರ್ಯರು ಬರುತ್ತಿರುವಾಗ ಅವರನ್ನು ನೋಡಿ ಅತ್ಯಂತ ಚಂಚಲವಾಯಿತು. ಅದರ ಮೈಯಲ್ಲೆಲ್ಲಾ ಚಲನ ಉಂಟಾಯಿತು ಅಲೆಗಳು ಬೇಗನೆ ದಡದ ಕಡೆ ಬರುತ್ತಿರುವಾಗ ಅದು ಆಚಾರ್ಯರನ್ನು ಎದುರುಗೊಳ್ಳಲು ವೇಗವಾಗಿ ಧಾವಿಸಿ ಬರುವಂತೆ ಕಾಣಿಸುತ್ತಿತ್ತು. ಅದರ ಗಂಭೀರವಾದ ಘೋಷವು ಆಚಾರ್ಯರ ಸ್ತೋತ್ರದ ಘೋಷದಂತೆ ಕೇಳಿಸುತ್ತಿತ್ತು. ಅದರ ಬೆಳ್ಳಗಿರುವ ನೊರೆಗಳು ಮಂದಹಾಸದ ಅಲೆಗಳಂತೆ ಕಾಣುತ್ತಿದ್ದವು. ಅದು ಬಹಳ ಎತ್ತರವಾಗಿಯೂ, ಎಲ್ಲಾ ಕಡೆ ವ್ಯಾಪಿಸಿಯೂ ಇರುವ ಅಲೆಗಳಂತೆ ತನ್ನ ಕೈ, ಮೈ, ಕಾಲು ಮುಂತಾದ ಅಂಗಗಳಿಂದ ದಡದಲ್ಲಿ ಬಂದು ಆಚಾರ್ಯರ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡುವಂತೆ ಕಾಣಿಸುತ್ತಿತ್ತು. ಸಮುದ್ರದ ಅಲೆಗಳು ದಡದಲ್ಲಿ ಮೈಚಾಚಿದಂತೆ ಕಾಣಿಸುತ್ತವೆ. ಭಕ್ತನು ಗುರುಗಳನ್ನು ಎದುರುಗೊಂಡು ಕೈಮುಗಿದು ಹೊಗಳಿ ವಂದಿಸುವನು. ಸಮುದ್ರವೂ ಹಾಗೆಯೇ ವಂದಿಸುವಂತೆ ಕಾಣಿಸುತ್ತಿತ್ತು ಎಂದು ಉತ್ಪ್ರೇಕ್ಷಿಸಿದ್ದಾರೆ. (ಹಿಂದಿನ ಶ್ಲೋಕದಲ್ಲಿ ಸಮುದ್ರದ ಸನ್ನಿವೇಶವು ದುರ್ಜನರನ್ನು ಬೆದರಿಸುವಂತೆ ಇತ್ತು ಎಂದು ವರ್ಣಿಸಿ ಈ ಶ್ಲೋಕದಲ್ಲಿ ಅದೇ ಸಮುದ್ರದ ಸನ್ನಿವೇಶವು ಆಚಾರ್ಯರನ್ನು ವಂದಿಸುವಂತೆ ಇತ್ತು ಎಂದು ಕವಿಗಳು ವರ್ಣಿಸಿದ್ದಾರೆ. ಅದಕ್ಕೆ ತಕ್ಕಂತಹ ವಿಶೇಷಣಗಳನ್ನು ಜೋಡಿಸಿ ಸಮುದ್ರರಾಜನಲ್ಲಿ ದುಷ್ಟಶಿಕ್ಷಣ ವ್ಯಾಪಾರವಿದೆ ಮತ್ತು ಸಜ್ಜನರಲ್ಲಿ ಭಕ್ತಿ-ಗೌರವಗಳಿವೆಯೆಂದೂ ಚಮತ್ಕಾರವಾಗಿ ವರ್ಣಿಸಿ ಕವಿವರ್ಯರು ಸಮುದ್ರ ವರ್ಣನೆಯ ಸೊಬಗನ್ನು ಹೆಚ್ಚಿಸಿದ್ದಾರೆ).

**ವಿಗ್ರಹ ಮತ್ತು ಕೋಶ—**

**ತರಲತರಃ—** ಅತಿಶಯೇನ ತರಲಃ ತರಲತರಃ । ತರಲ = ಚಂಚಲ, 'ಚಂಚಲಂ ತರಲಂ ಚೈವ' ಅಮರ ।

**ದ್ರುತಾಭಿಗಾಮೀ—** ದ್ರುತಂ ಅಭಿಗಂತುಂ ಶೀಲಂ ಅಸ್ಯೇತಿ ದ್ರುತಾಭಿಗಾಮೀ । (ಮಿನ್ ನಕಾರಾಂತ ಪುಂ)

**ಗಂಭೀರಸ್ವನನುತಿಮಾನ್—** ಗಂಭೀರಶ್ಚಾಸೌ ಸ್ವನಶ್ಚ ಗಂಭೀರಸ್ವನಃ, ಗಂಭೀರಸ್ವನಃ ಏವ ನುತಿಃ ಗಂಭೀರ-ಸ್ವನನುತಿಃ, ಸಾ ಅಸ್ಯಾಸ್ತೀತಿ ಗಂಭೀರಸ್ವನನುತಿಮಾನ್ ।

**ಸುಫೇನಹಾಸಃ—** ಶೋಭನಶ್ಚಾಸೌ ಫೇನಃ ಸುಫೇನಃ, ಸುಫೇನ ಏವ ಹಾಸಃ ಯಸ್ಯ ಸಃ ಸುಫೇನಹಾಸಃ ।

**ವೀಚ್ಯಂಗೈಃ—** ವೀಚಯಃ ಏವ ಅಂಗಾನಿ ವೀಚ್ಯಂಗಾನಿ ತೈಃ । ವೀಚಿ = ಅಲೆ, 'ಭಂಗಸ್ತರಂಗ ಊರ್ಮಿರ್ವಾ ಸ್ತ್ರೀಯಾಂ ವೀಚಿರಥೋರ್ಮಿಷು' ಅಮರ ।

**ಅಧಿಕತರೈಃ—** ಅತಿಶಯೇನ ಅಧಿಕಾಃ ಅಧಿಕತರಾಃ ತೈಃ । (ಅಧಿಕಂ ತತಾಃ ಅಧಿಕತತಾಃ ತೈಃ)

**ಅಧಿವೇಲಂ—** ವೇಲಾಯಾಂ ಇತಿ ಅಧಿವೇಲಂ । ವಿಭಕ್ತ್ಯರ್ಥೇ ಅವ್ಯಯೀಭಾವಸಮಾಸ. ವೇಲಾ = ಸಮುದ್ರದ ದಡ, 'ವೇಲಾಬ್ಧಿತೀರಾಭಿವೃದ್ಧ್ಯೋಃ ಕಾಲಮರ್ಯಾದಯೋರಪಿ' ಭಾಸ್ಕರ ।

**ಕ್ರಿಯಾಪದ— ವ್ಯಧಾತ್** - ವಿ+ಉಪಸರ್ಗ ಡು ಧಾಞ ಧಾರಣಪೋಷಣಯೋಃ ಇತಿ ಧಾತೋಃ ಸಕ. ಅನಿ. (ಉಭ) ಪರ. ಭೂತೇ ಲುಙ ಪ್ರಥಮ ಪುರುಷ ಏಕವಚನ ।

ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ ।

**ಪ್ರಯೋಗ—** ಇಹ ಸಂಮೋದಾತ್ ತರಲತರೇಣ ದ್ರುತಾಭಿಗಾಮಿನಾ ಗಂಭೀರಸ್ವನನುತಿಮತಾ ಸುಫೇನಹಾಸೇನ ಸಮುದ್ರೇಣ ಅಧಿಕತರೈಃ (ಅಧಿಕತತೈಃ)ವೀಚ್ಯಂಗೈಃ ಅಧಿವೇಲಂ ಮಧ್ವಾಯ ಪ್ರಣತಿಃ ವ್ಯಧಾಯಿ ಇವ ।

★★★

ಅವತಾರಿಕಾ— ಸಮುದ್ರರಾಜನನ್ನು ಆಚಾರ್ಯರಿಗೆ ಹೋಲಿಸಿ ಇಬ್ಬರನ್ನೂ ಒಟ್ಟಿಗೆ ವರ್ಣಿಸುತ್ತಾರೆ.

**ಗೋಲೀಲಾಸ್ವತಿಶಯಿನಾವಗಾಧಭಾವಾ-**
**ನ್ನೋಲ್ಲಂಘ್ಯೌ ವಿವಿಧಗುಣಪ್ರಕಾಶರತ್ನೌ ।**
**ಮಧ್ವಾಬ್ಧೀ ಪರಮಮತೇಃ ಪ್ರಿಯಂ ಜನಾನಾಂ**
**ಲಾವಣ್ಯಂ ನ ತು ಜಲಧೇರಯಂ ವಿಶೇಷಃ ॥ 15 ॥**

ಪದಚ್ಛೇದ—ಗೋಲೀಲಾಸು, ಅತಿಶಯಿನೌ, ಅಗಾಧಭಾವಾತ್, ನೋಲ್ಲಂಘ್ಯೌ, ವಿವಿಧಗುಣಪ್ರಕಾಶರತ್ನೌ, ಮಧ್ವಾಬ್ಧೀ, ಪರಮಮತೇಃ, ಪ್ರಿಯಂ, ಜನಾನಾಂ, ಲಾವಣ್ಯಂ, ನ, ತು, ಜಲಧೇಃ, ಅಯಂ, ವಿಶೇಷಃ ।

ಅನ್ವಯ— ಮಧ್ವಾಬ್ಧೀ, ಗೋಲೀಲಾಸು, ಅತಿಶಯಿನೌ, ಅಗಾಧಭಾವಾತ್, ನ, ಉಲ್ಲಂಘ್ಯೌ, ವಿವಿಧಗುಣಪ್ರಕಾಶ ರತ್ನೌ, ಜನಾನಾಂ, ಪರಮಮತೇಃ, ಲಾವಣ್ಯಂ, ತು, ನ, ಪ್ರಿಯಂ, ಅಯಂ, ವಿಶೇಷಃ, ಜಲಧೇಃ ।

ಅನ್ವಯಾರ್ಥ—

**ಮಧ್ವಾಬ್ಧೀ** = ಶ್ರೀಮಧ್ವಾಚಾರ್ಯರು ಮತ್ತು ಸಮುದ್ರವು ಇವರಿಬ್ಬರೂ,
**ಗೋಲೀಲಾಸು** = (ಕ್ರಮವಾಗಿ)ಮಾತುಗಳ ವಿಲಾಸಗಳಲ್ಲಿ ಮತ್ತು ನೀರಿನ ನಾನಾ ವಿಧವಾದ ಆಟಗಳಲ್ಲಿ,
**ಅತಿಶಯಿನೌ** = ಎಲ್ಲರನ್ನೂ ಮೀರಿಸಿದವರು,
**ಅಗಾಧಭಾವಾತ್** = ಗಂಭೀರವಾದ ಸ್ವಭಾವದಿಂದ ಆಳವಾಗಿರುವುದರಿಂದ,
**ನೋಲ್ಲಂಘ್ಯೌ** = ಅತಿಕ್ರಮಿಸಲು ಅಶಕ್ಯರು,
**ವಿವಿಧಗುಣ** = ಅನೇಕ ಸದ್ಗುಣಗಳೆಂಬ ಅನೇಕ ಗುಣಗಳುಳ್ಳ,
**ಪ್ರಕಾಶರತ್ನೌ** = ಪ್ರಕಾಶವಾದ ರತ್ನವುಳ್ಳವರು,
**ಕಿಂತು** = ಆದರೆ,
**ಜನಾನಾಂ** = ಜನರಿಗೆ,
**ಪರಮಮತೇಃ** = ಶ್ರೀಪೂರ್ಣಪ್ರಜ್ಞರ,
**ಲಾವಣ್ಯಂ** = ಸೌಂದರ್ಯ ವಿಶೇಷವು,
**ಪ್ರಿಯಂ** = ಇಷ್ಟವಾದುದು,
**ಜಲಧೇಃ** = ಸಮುದ್ರದ,
**ಲಾವಣ್ಯಂ** = ಲಾವಣ್ಯವಾದರೋ(ಉಪ್ಪು ನೀರಾಗಿರುವಿಕೆಯು),
**ನ ಪ್ರಿಯಂ** = ಸಂತೋಷಕರವಲ್ಲ
**ಅಯಂ ವಿಶೇಷಃ** = ಇದು(ಇವರಿಬ್ಬರಿಗೂ) ವ್ಯತ್ಯಾಸವು.

ತಾತ್ಪರ್ಯ— ಶ್ರೀಮಧ್ವಾಚಾರ್ಯರು ವಚನ ವಿನೋದಗಳಲ್ಲಿ ಮತ್ತು ಮಾತಿನ ಚತುರತೆಗಳಲ್ಲಿ ಎಲ್ಲರನ್ನೂ ಮೀರಿಸಿದ್ದಾರೆ. ಗಂಭೀರ ಸ್ವಭಾವದಲ್ಲಿಯೂ ಅವರನ್ನು ಮೀರುವವರು ಯಾರೂ ಇಲ್ಲ. ಅವರು ಜ್ಞಾನ, ಭಕ್ತಿ, ವೈರಾಗ್ಯ ಮುಂತಾದ ಅನೇಕ ಸದ್ಗುಣಗಳೆಂಬ ರತ್ನಗಳಿಂದ ವಿರಾಜಮಾನರಾಗಿದ್ದಾರೆ. ಭಕ್ತಿ ಮುಂತಾದ ಅನೇಕ ಗುಣಗಳಿಂದ ವಿರಾಜಿಸುವ ಜ್ಞಾನವೆಂಬ ರತ್ನವುಳ್ಳರು. ಸಮುದ್ರವೂ ಅಪಾರ ಜಲರಾಶಿಯಿಂದ ಕೂಡಿದ್ದು ಎಲ್ಲ ಜಲಗಳನ್ನೂ ನದ್ಯಾದಿಗಳನ್ನೂ ಮೀರಿಸಿದೆ. ನೀರಿನ ವಿಚಿತ್ರವಾದ (ಅಲೆ ಮುಂತಾದವುಗಳ) ಗತಿ ವಿಧಿಗಳಿಂದ ಇತರ ಎಲ್ಲಾ

ಜಲಾಶಯಗಳನ್ನೂ ಮೀರಿಸಿದೆ. ಬಹಳ ಆಳವಾಗಿರುವುದರಿಂದ ಯಾರಿಂದಲೂ ಅತಿಕ್ರಮಿಸಲು ಅಶಕ್ಯವಾಗಿದೆ. ಅಲ್ಲಿ ನಾನಾಬಗೆಯ ಗುಣ ವರ್ಣಗಳುಳ್ಳ ನೀಲಕೆಂಪುವಜ್ರ ಮೊದಲಾದ ಲಾವಣ್ಯವೆಂಬ ಗುಣದ ವಿಷಯದಲ್ಲಿ ಇಬ್ಬರಿಗೂ ವ್ಯತ್ಯಾಸವಿದೆ. ಶ್ರೀಮಧ್ವಾಚಾರ್ಯರ ಲಾವಣ್ಯವು (ಸೌಂದರ್ಯವು)ಜನರಿಗೆ ಪ್ರಿಯವಾಗಿದೆ. ಸಮುದ್ರದಲ್ಲಿಯೂ ಲಾವಣ್ಯವಿದೆ. (ಉಪ್ಪಾಗಿರುವಿಕೆ ಇದೆ) ಅದು ಜನರಿಗೆ ಪ್ರಿಯವಲ್ಲ. ಸಮುದ್ರದ ಲವಣಜಲವನ್ನು ಯಾರೂ ಕುಡಿಯಲು ಇಷ್ಟಪಡುವುದಿಲ್ಲ. ಇದು ಮಾತ್ರ ಅವರಿಬ್ಬರೊಳಗಿನ ವ್ಯತ್ಯಾಸವು ಉಪಮಾನೋಪಮೇಯಗಳಿಗೆ ವಿಶೇಷವನ್ನು ಹೇಳಿದ್ದರಿಂದ ವ್ಯತಿರೇಕಾಲಂಕಾರ 'ವ್ಯತಿರೇಕೋ ವಿಶೇಷಶ್ಚೇದುಪಮಾನೋಪಮೇಯಯೋಃ' ವ್ಯತಿರೇಕಾಲಂಕಾರ ಲಕ್ಷಣ.

**ವಿಗ್ರಹ ಮತ್ತು ಕೋಶ—**

**ಗೋಲೀಲಾಸು—** ಗವಾಂ ಲೀಲಾಃ ಗೋಲೀಲಾಃ ತಾಸು । ಗೋ = ಮಾತು, ನೀರು, ಭೂಮಿ, ಇಲ್ಲಿ ಆಚಾರ್ಯರ ಪಕ್ಷದಲ್ಲಿ ಮಾತು ಎಂದೂ, ಸಮುದ್ರದ ಪಕ್ಷದಲ್ಲಿ ನೀರು ಎಂದೂ ಅರ್ಥ. 'ಭೂವಾಗ್ವಾರಿಷಃ ಗೌರ್ಮತಾ' ವಿಶ್ವ ।

**ಅತಿಶಯಿನೌ—** ಅತಿಶಯಃ ಅನಯೋಃ ಅಸ್ತೀತಿ ಅತಿಶಯಿನೌ ।

**ಅಗಾಧಭಾವಾತ್—** ಅಗಾಧಸ್ಯ ಭಾವಃ ಅಗಾಧಭಾವಃ ತಸ್ಮಾತ್ ।

**ಗಾಂಭೀರ್ಯಾತ್—** ಗಾಂಭೀರ್ಯದ ದೆಸೆಯಿಂದ ।

**ನೋಲ್ಲಂಘ್ಯೌ—** ಉಲ್ಲಂಘಯಿತುಂ ಯೋಗ್ಯೌ ಉಲ್ಲಂಘ್ಯೌ ನ ಉಲ್ಲಂಘ್ಯೌ ನೋಲಂಘ್ಯೌ । ನಞ ಅರ್ಥದ ನ ಶಬ್ದದ ಜೊತೆಗೆ ಸಮಾಸ ।

**ವಿವಿಧಗುಣಪ್ರಕಾಶರತ್ನೌ—** ವಿವಿಧಾಃ ಗುಣಾಃ ಯಸ್ಯ ಸಃ ವಿವಿಧಗುಣಃ, ವಿವಿಧಗುಣಶ್ಚಾಸೌ ಪ್ರಕಾಶಶ್ಚ ವಿವಿಧಗುಣಪ್ರಕಾಶಃ (ಪ್ರಕಾಶ = ಜ್ಞಾನ) ವಿವಿಧಗುಣಪ್ರಕಾಶ ಏವ ರತ್ನಂ ಯಸ್ಯ ಸಃ ವಿವಿಧಗುಣ ಪ್ರಕಾಶರತ್ನಃ (ಸಮುದ್ರ ಪಕ್ಷದಲ್ಲಿ) ವಿವಿಧಾಶ್ಚ ತೇ ಗುಣಾಶ್ಚ ವಿವಿಧಗುಣಾಃ ವಿವಿಧಗುಣೈಃ ಪ್ರಕಾಶಃ ಯೇಷಾಂ ತಾನಿ ವಿವಿಧಗುಣಪ್ರಕಾಶಾನಿ, ವಿವಿಧಗುಣಪ್ರಕಾಶಾನಿ ರತ್ನಾನಿ ಯಸ್ಯ ಸಃ ವಿವಿಧಗುಣ ಪ್ರಕಾಶರತ್ನಃ, ವಿವಿಧಗುಣಪ್ರಕಾಶಶ್ಚ ವಿವಿಧಗುಣಪ್ರಕಾಶರತ್ನಶ್ಚ ವಿವಿಧಗುಪ್ರಕಾಶರತ್ನೌ । 'ಸರೂಪಾಣಾಮೇಕಶೇಷ ಏಕವಿಭಕ್ತೌ' (1.2.64) ಎಂಬ ಸೂತ್ರದಿಂದ ಏಕಶೇಷ ।

**ಮಧ್ವಾಬ್ಧೀ—** ಮಧ್ವಶ್ಚ ಅಬ್ಧಿಶ್ಚ ಮಧ್ವಾಬ್ಧೀ ।

**ಪರಮಮತೇಃ—** ಪರಮಾ ಮತಿಃ ಯಸ್ಯ ಸಃ ಪರಮಮತಿಃ, ತಸ್ಯ ।

**ಲಾವಣ್ಯಂ—** ಲವಣಸ್ಯ ಭಾವಃ ಲಾವಣ್ಯಂ । ಲುನಾತಿ ಜಾಡ್ಯಂ ಇತಿ ಲವಣಂ । ನಂದ್ಯಾದಿಗಣದಲ್ಲಿ ಪ್ರವಿಷ್ಟವಾದುದರಿಂದ 'ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ'(3.1.134) ಎಂಬ ಸೂತ್ರದಿಂದ ಲ್ಯುಪ್ರತ್ಯಯ, 'ಲವಣಾಲ್ಲುಕ್' (4.4.24) ಎಂದು ಪಾಣಿನಿಯು ಸೂತ್ರದಲ್ಲಿ ನಿರ್ದೇಶಿಸಿರುವುದರಿಂದ ಣತ್ವ ಲವಣ = ಉಪ್ಪುರಸ, ದೇಹದ ಕಾಂತಿ (ಲವಣ), 'ಲವಣೋ ರಾಕ್ಷಸೇ ರಸೇ ಅಸ್ತ್ರೀ ಭೇದೇ ಲವಣಾ ತ್ವಿಟ್' ಹೈಮ, ಲವಣಾ = ಕಾಂತಿ, 'ಲವಣಾ ಏವ ಲಾವಣ್ಯಂ' ।

**ಕ್ರಿಯಾಪದ—** ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲ. ಭವತಃ ಭವತಿ ಎಂಬ ಕ್ರಿಯಾಪದವನ್ನು ಅಧ್ಯಾಹಾರ ಮಾಡಬೇಕು.

**ಪ್ರಯೋಗ—** ಮಧ್ವಾಬ್ಧಿಭ್ಯಾಂ ಗೋಲೀಲಾಸು ಅತಿಶಯಿಭ್ಯಾಂ ಅಗಾಧಭಾವಾತ್ ನೋಲ್ಲಂಘ್ಯೌ ವಿವಿಧಗುಣಪ್ರಕಾಶ ರತ್ನಾಭ್ಯಾಂ ಭೂಯತೇ ಪರಮಮತೇಃ ಲಾವಣ್ಯೇನ ಜನಾನಾಂ ಪ್ರಿಯೇಣ ನ ಭೂಯತೇ ಅನೇನ ವಿಶೇಷೇಣ ಭೂಯತೇ ।

★★★

**ಅವತಾರಿಕಾ—** ಗ್ರಹಣಾರಂಭವನ್ನು ನಿರೀಕ್ಷಿಸುತ್ತಿರುವ ಸಮಯದಲ್ಲಿ ಆಚಾರ್ಯರು ಶಿಷ್ಯರಿಗೆ ತತ್ತ್ವೋಪ-ದೇಶವನ್ನು ಮಾಡುತ್ತಿದ್ದರು ಎನ್ನುತ್ತಾರೆ.

**ಅಂಭೋಧೇಸ್ತ್ವರಿತತರೋರ್ಮಿಪಾಣಿಮೃಷ್ಟೇ**
**ಸ್ವಚ್ಛೇಽಸೌ ವಿಕಟತಟಾಸನೇ ನಿಷಣ್ಣಃ ।**
**ವ್ಯಾಚಖ್ಯಾವತಿಚಿರಮೈತರೇಯಶಾಖಾ-**
**ಸೂಕ್ತಾನಿ ಪ್ರಭುರತಿಸುಂದರಪ್ರಕಾರಮ್ ॥ 16 ॥**

**ಪದಚ್ಛೇದ**—ಅಂಭೋಧೇಃ, ತ್ವರಿತತರೋರ್ಮಿಪಾಣಿಮೃಷ್ಟೇ, ಸ್ವಚ್ಛೇ, ಅಸೌ, ವಿಕಟತಟಾಸನೇ, ನಿಷಣ್ಣಃ, ವ್ಯಾಚಖ್ಯೌ, ಅತಿಚಿರಂ, ಐತರೇಯಶಾಖಾಸೂಕ್ತಾನಿ, ಪ್ರಭುಃ, ಅತಿಸುಂದರಪ್ರಕಾರಂ ।

**ಅನ್ವಯ**—ಅಂಭೋಧೇಃ, ತ್ವರಿತತರೋರ್ಮಿಪಾಣಿಮೃಷ್ಟೇ, ಸ್ವಚ್ಛೇ, ವಿಕಟತಟಾಸನೇ, ನಿಷಣ್ಣಃ, ಪ್ರಭುಃ, ಅಸೌ, ಐತರೇಯಶಾಖಾಸೂಕ್ತಾನಿ, ಅತಿಸುಂದರಪ್ರಕಾರಂ, ಅತಿಚಿರಂ, ವ್ಯಾಚಖ್ಯೌ ।

**ಅನ್ವಯಾರ್ಥ**—

**ಅಂಭೋಧೇಃ** = ಸಮುದ್ರದ,

**ತ್ವರಿತತರಊರ್ಮಿಪಾಣಿಮೃಷ್ಟೇ** = ಹೆಚ್ಚು ವೇಗವುಳ್ಳ ಅಲೆಗಳೆಂಬ ಕೈಗಳಿಂದ ಗುಡಿಸಿ ಶುದ್ಧವಾಗಿ ಮಾಡಲ್ಪಟ್ಟ,

**ಸ್ವಚ್ಛೇ** = ನಿರ್ಮಲವಾದ,

**ವಿಕಟತಟಆಸನೇ** = ವಿಶಾಲವಾದ ತೀರವೆಂಬ ಆಸನದ ಮೇಲೆ,

**ನಿಷಣ್ಣಃ** = ಕುಳಿತಿದ್ದ,

**ಪ್ರಭುಃ** = ಪರಮ ಸಮರ್ಥರಾದ,

**ಅಸೌ** = ಈ ಶ್ರೀಮಧ್ವಾಚಾರ್ಯರು,

**ಐತರೇಯಶಾಖಾಸೂಕ್ತಾನಿ** = ಋಗ್ವೇದದ ಐತರೇಯ ಶಾಖಾ ಎಂಬ ಶಾಖೆಯ ಸೂಕ್ತಗಳನ್ನು,

**ಅತಿಸುಂದರಪ್ರಕಾರಂ** = ಅತ್ಯಂತ ಮನೋಹರವಾದ ರೀತಿಯಿಂದ,

**ಅತಿಚಿರಂ** = ಬಹಳ ಹೊತ್ತು,

**ವ್ಯಾಚಖ್ಯೌ** = ವ್ಯಾಖ್ಯಾನ ಮಾಡುತ್ತಿದ್ದರು.

**ತಾತ್ಪರ್ಯ**— ಯಾರಾದರೂ ಮಹಾಪುರುಷರು ಮನೆಗೆ ಬಂದರೆ ಅವರಲ್ಲಿ ತುಂಬಾ ಶ್ರದ್ಧಾ ಭಕ್ತಿ ಗೌರವ-ಗಳಿಂದ ಕೂಡಿದವರು ಕೂಡಲೇ ಓಡಿ ಬಂದು ಆಸನವನ್ನು ಒರೆಸಿ ಅಥವಾ ಮುಂದಿರುವ ನೆಲವನ್ನೇ ತಮ್ಮ ಕೈಗಳಿಂದ ಒರೆಸಿ ಶುದ್ಧಿಪಡಿಸಿ ಆ ಮಹಾತ್ಮರನ್ನು ಕುಳಿತುಕೊಳ್ಳುವಂತೆ ಪ್ರಾರ್ಥಿಸಿ ಅವರನ್ನು ಕುಳ್ಳಿರಿಸುತ್ತಾರೆ. ಅದರಂತೆ ಸಮುದ್ರವು ದೂರದಿಂದ ಚಾಚಿದಂತೆ ಬರುತ್ತಿರುವ ತನ್ನ ಅಲೆಗಳಿಂದ ವಿಶಾಲವಾದ ಮರಳು ದಡವೆಂಬ ಆಸನವನ್ನು ಗುಡಿಸಿ ಸಾರಿಸಿ ಶುದ್ಧಗೊಳಿಸಿತು. ಆಚಾರ್ಯರು ಅಂತಹ ಆಸನದಲ್ಲಿ ಕುಳಿತು ಬಹಳ ಹೊತ್ತು ಋಗ್ವೇದದ ಐತರೇಯ ಶಾಖೆಯ ಸೂಕ್ತಗಳನ್ನು ಬಹಳ ಸುಂದರವಾದ ರೀತಿಯಲ್ಲಿ ಶಿಷ್ಯರಿಗೆ ತಿಳಿಯುವಂತೆ ಪಾಠ ಹೇಳಿದರು. ಪ್ರವಚನ ಮಾಡಿದರು. ಐತರೇಯೋಪನಿಷತ್ತಿನ ಪಾಠವನ್ನು ಹೇಳಿದರು ಎಂದು ಭಾವ.

ವಿಗ್ರಹ—

ತ್ವರಿತತರೋರ್ಮಿಪಾಣಿಮೃಷ್ಟೇ— ಅತ್ಯಂತಂ ತ್ವರಿತಾಃ ತ್ವರಿತತರಾಃ, ತ್ವರಿತತರಾಶ್ಚ ತಾಃ ಊರ್ಮಯಶ್ಚ ತ್ವರಿತತರೋರ್ಮಯಃ, ತ್ವರಿತತರೋರ್ಮಯ ಏವ ಪಾಣಯಃ ತ್ವರಿತತರೋರ್ಮಿಪಾಣಯಃ, ತ್ವರಿತತರೋರ್ಮಿಪಾಣಿಭಿಃ ಮೃಷ್ಟಂ ತ್ವರಿತತರೋರ್ಮಿಪಾಣಿಮೃಷ್ಟಂ ತಸ್ಮಿನ್ ।

ಸ್ವಚ್ಛಂ— ಸು ಅತಿಶಯೇನ ಅಚ್ಛಂ ಸ್ವಚ್ಛಂ ।

ವಿಕಟತಟಾಸನೇ— ವಿಕಟಂ ಚ ತತ್ ತಟಂ ಚ ವಿಕಟತಟಂ, ವಿಕಟತಟಮೇವ ಆಸನಂ ವಿಕಟತಟಾಸನಂ ತಸ್ಮಿನ್ ।

ಐತರೇಯಶಾಖಾಸೂಕ್ತಾನಿ— ಐತರೇಯಸ್ಯ ಶಾಖಾ ಐತರೇಯಶಾಖಾ, ಐತರೇಯಶಾಖಾಯಾಃ ಸೂಕ್ತಾನಿ ಐತರೇಯಶಾಖಾಸೂಕ್ತಾನಿ ತಾನಿ । (ದ್ವಿ.ಬ)

ಅತಿಸುಂದರಪ್ರಕಾರಂ— ಅತ್ಯಂತಂ ಸುಂದರಃ ಅತಿಸುಂದರಃ, ಅತಿಸುಂದರಃ ಪ್ರಕಾರಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಅತಿಸುಂದರಪ್ರಕಾರಂ ।

ಕ್ರಿಯಾಪದ— ವ್ಯಾಚಖ್ಯೌ - ಖ್ಯಾ ಪ್ರಕಥನೇ ವಿ, ಆಙ ಉಪಸರ್ಗಗಳು ಅದಾದಿ ಸಕ. ಅನಿಟ್. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

ಚಖ್ಯೌ ಚಖ್ಯತುಃ ಚಖ್ಯುಃ, ಚಖ್ಯಿಥ ಚಖ್ಯಾಥ ಚಖ್ಯಥುಃ ಚಖ್ಯ, ಚಖ್ಯೌ ಚಖ್ಯಿವ ಚಖ್ಯಿಮ ।

ಪ್ರಯೋಗ— ಅಂಭೋಧೇಃ ತ್ವರಿತತರೋರ್ಮಿಪಾಣಿಮೃಷ್ಟೇ ಸ್ವಚ್ಛೇ ವಿಕಟತಟಾಸನೇ ನಿಷಣ್ಣೇನ ಪ್ರಭುಣಾ ಅಮುನಾ ಅತಿಚಿರಂ ಐತರೇಯಶಾಖಾಸೂಕ್ತಾನಿ ಅತಿಸುಂದರಪ್ರಕಾರಂ ವ್ಯಾಚಖ್ಯೌ ।

★★★

ಅವತಾರಿಕಾ— ಆಗ ಅಲ್ಲಿ ಸೇರಿದ ಜನರು ಏನು ಮಾಡಿದರೆಂದು ಹೇಳುತ್ತಾರೆ.

**ಗಾಂಭೀರ್ಯಾತ್ ಸ್ವನಮಧರೀಕರೋತಿ ಸಿಂಧೋಃ**
**ಶ್ರಾವ್ಯತ್ವಂ ವಹತಿ ತಥಾಽಪ್ಯಹೋ ಸ್ವನೋಽಸ್ಯ ।**
**ಪೂರ್ಣೇಂದುಪ್ರಭವದನಃ ಕ ಏಷ ಧನ್ಯೋ**
**ಮತ್ವೇತ್ಥಂ ಜನಜಲಧಿಸ್ತಮಾಶು ಪರ್ಯೈತ್ ॥ 17 ॥**

ಪದಚ್ಛೇದ— ಗಾಂಭೀರ್ಯಾತ್, ಸ್ವನಂ, ಅಧರೀಕರೋತಿ, ಸಿಂಧೋಃ, ಶ್ರಾವ್ಯತ್ವಂ, ವಹತಿ, ತಥಾ, ಅಪಿ, (ತಥಾಪಿ) ಅಹೋ, ಸ್ವನಃ, ಅಸ್ಯ, ಪೂರ್ಣೇಂದುಪ್ರಭವದನಃ, ಕಃ, ಏಷಃ, ಧನ್ಯಃ, ಮತ್ವಾ ಇತ್ಥಂ, ಜನಜಲಧಿಃ, ತಂ, ಆಶು, ಪರ್ಯೈತ್ ।

ಅನ್ವಯ— ಅಸ್ಯ, ಸ್ವನಃ, ಗಾಂಭೀರ್ಯಾತ್, ಸಿಂಧೋಃ, ಸ್ವನಂ, ಅಧರೀಕರೋತಿ, ತಥಾಪಿ, ಶ್ರಾವ್ಯತ್ವಂ, ವಹತಿ, ಅಹೋ, ಪೂರ್ಣೇಂದುಪ್ರಭವದನಃ, ಧನ್ಯಃ, ಏಷಃ, ಕಃ?, ಇತ್ಥಂ, ಮತ್ವಾ ಜನಜಲಧಿಃ, ತಂ, ಆಶು, ಪರ್ಯೈತ್ ।

ಅನ್ವಯಾರ್ಥ—

**ಅಸ್ಯ** = ಇವರ,
**ಸ್ವನಃ** = ಧ್ವನಿಯು,
**ಗಾಂಭೀರ್ಯಾತ್** = ಗಂಭೀರತೆಯಿಂದ,
**ಸಿಂಧೋಃ** = ಸಮುದ್ರದ,

ಸ್ವನಂ = ಘೋಷವನ್ನು,
ಅಧರೀಕರೋತಿ = ತಗ್ಗಿಸುತ್ತದೆ, (ಕಡಿಮೆ ಮಾಡುತ್ತಿದೆ)
ತಥಾಪಿ = ಆದಾಗ್ಯೂ,
ಶ್ರಾವ್ಯತ್ವಂ = ಕೇಳಲು ಇಂಪಾಗಿರುವಿಕೆಯೆಂಬ ಗುಣವನ್ನು (ಕೇಳಲು ಅರ್ಹತೆಯನ್ನು)
ವಹತಿ = ಹೊಂದಿದೆ,
ಅಹೋ = ಆಶ್ಚರ್ಯವು,
ಪೂರ್ಣೇಂದುಪ್ರಭವದನಃ = ಹುಣ್ಣಿಮೆ ಚಂದ್ರನ ಕಾಂತಿಯಂತಹ ಕಾಂತಿಯುಳ್ಳ,
ಧನ್ಯಃ = ಪುಣ್ಯಧನ ಪೂರ್ಣರಾದ,
ಏಷಃ = ಇವರು,
ಕಃ = ಯಾರು?
ಇತ್ಥಂ = ಈ ರೀತಿ,
ಮತ್ವಾ = ತಿಳಿದು,
ಜನಜಲಧಿಃ = ಜನಸ್ತೋಮವೆಂಬ ಸಮುದ್ರವು,
ತಂ = ಆ ಶ್ರೀಮಧ್ವಾಚಾರ್ಯರನ್ನು,
ಆಶು = ಕೂಡಲೆ,
ಪರ್ಯೈತ್ = ಸುತ್ತುವರಿಯಿತು.

ತಾತ್ಪರ್ಯ—ಅಗೋ,ಅಲ್ಲೊಬ್ಬ ಮಹನೀಯರು ವೇದಪಾರಾಯಣ ಮಾಡುತ್ತಿದ್ದಾರೆ. ಇವರ ಧ್ವನಿಯು ಗಂಭೀರತೆಯಲ್ಲಿ ಸಮುದ್ರದ ಘೋಷಕ್ಕಿಂತಲೂ ಎಷ್ಟೋ ಪಾಲು ಹೆಚ್ಚು, ಕೇಳುವುದಕ್ಕೂ ಇಂಪಾಗಿದೆ. ಗಂಭೀರವಾಗಿದ್ದೂ ಇಂಪಾಗಿರುವಿಕೆಯು ಬಹಳ ಅಪೂರ್ವವಲ್ಲವೇ? ಇಂತಹ ಮಹಾನುಭಾವರು ಇಲ್ಲಿ ವೇದವನ್ನು ಪಠಿಸಿ ವ್ಯಾಖ್ಯಾನಿಸುತ್ತಿರುವುದೂ ಆಶ್ಚರ್ಯಕರ. ಹುಣ್ಣಿಮೆ ಚಂದ್ರನ ಕಾಂತಿಯಂತಹ ಕಾಂತಿಯಿಂದ ಪೂರ್ಣವಾದ ಮುಖವುಳ್ಳ ಪುಣ್ಯಧನಪೂರ್ಣರಾದ ಈ ಮಹನೀಯರು ಯಾರಿರಬಹುದು? ಎಂದು ವಿಚಾರ ಮಾಡುತ್ತಾ ಜನರೆಂಬ ಸಮುದ್ರವು ಆಚಾರ್ಯರನ್ನು ಕೂಡಲೆ ಸುತ್ತುಗಟ್ಟಿತು. ಸಮುದ್ರದಂತೆ ಅಪಾರವಾದ ಜನಸ್ತೋಮವು ಆಚಾರ್ಯರ ಸುತ್ತಲೂ ನೆರೆಯಿತು ಎಂದು ಭಾವ.

ವಿಗ್ರಹ—

ಗಾಂಭೀರ್ಯಂ— ಗಂಭೀರಸ್ಯ ಭಾವಃ ಗಾಂಭೀರ್ಯಂ ತಸ್ಮಾತ್ ।
ಅಧರೀಕರೋತಿ— ಅನಧರಂ ಅಧರಂ ಸಂಪದ್ಯಮಾನಂ ಕರೋತಿ ಅಧರೀಕರೋತಿ ।
ಶ್ರಾವ್ಯತ್ವಂ— ಶ್ರೋತುಂ ಯೋಗ್ಯಃ ಶ್ರಾವ್ಯಃ, ಶ್ರಾವ್ಯಸ್ಯ ಭಾವಃ ಶ್ರಾವ್ಯತ್ವಂ ।
ಪೂರ್ಣೇಂದುಪ್ರಭವದನಃ— ಪೂರ್ಣಶ್ಚಾಸೌ ಇಂದುಶ್ಚ ಪೂರ್ಣೇಂದುಃ, ಪೂರ್ಣೇಂದೋಃ ಪ್ರಭಾ ಇವ ಪ್ರಭಾ ಯಸ್ಯ ಸಃ ಪೂರ್ಣೇಂದುಪ್ರಭವದನಃ ।
ಜನಜಲಧಿಃ— ಜನಾ ಏವ ಜಲಧಿಃ ಜನಜಲಧಿಃ ।

ಕ್ರಿಯಾಪದ— ಅಧರೀಕರೋತಿ - ಡು ಕೃಞ ಕರಣೇ ಚ್ವಿ ಪ್ರತ್ಯಯಾಂತಂ ಅಧರೀ ಶಬ್ದ ಪೂರ್ವಕ ಸಕ. ಅನಿ. ಪರ. ವರ್ತಮಾನೇ ಲಟ್ ।

**ವಹತಿ** - ವಹ ಪ್ರಾಪಣೇ ಸಕ. ಅನಿ. ಪರ. ವರ್ತಮಾನೇ ಲಟ್ ।

ಕರೋತಿ ಕುರುತಃ ಕುರ್ವಂತಿ ಇತ್ಯಾದಿ, ವಹತಿ ವಹತಃ ವಹಂತಿ, ವಹಸಿ ವಹಥಃ ವಹಥ, ವಹಾಮಿ ವಹಾವಃ ವಹಾಮಃ ।

**ಪರ್ಯೈತ್** - ಪರಿ+ಐತ್ ಐಶಾಂ ಆಯನ್ ಐಃ ಐತಂ ಐತ, ಆಯಂ ಐವ ಐಮ ಇಣ್ ಗತೌ ಅನದ್ಯತನಭೂತೇ ಲಙ್ ।

**ಪ್ರಯೋಗ—** ಅಸ್ಯ ಸ್ವನೇನ ಗಾಂಭೀರ್ಯಾತ್ ಸಿಂಧೋಃ ಸ್ವನಃ ಅಧರೀಕ್ರಿಯತೇ ತಥಾಪಿ ಅನೇನ ಸ್ವನೇನ ಶ್ರಾವ್ಯತ್ವಂ ಉಹ್ಯತೇ ಪೂರ್ಣೇಂದುಪ್ರಭವವನೇನ ಧನ್ಯೇನ ಏತೇನ ಕೇನ ಭೂಯತೇ ಇತ್ಥಂ ಮತ್ವಾ ಜನಜಲಧಿನಾ ಸಃ ಆಶು ಪರ್ಯೈತ ।

★ ★ ★

**ಅವತಾರಿಕಾ—** ಆಚಾರ್ಯರ ಆಶ್ಚರ್ಯಕರವಾದ ಪ್ರವಚನವನ್ನು ಕೇಳಿ ಜನರು ಆಚಾರ್ಯರನ್ನು ನಿಂದಿಸಿದವರನ್ನು ಧಿಕ್ಕರಿಸಿದರು ಎಂದು ಹೇಳುತ್ತಾರೆ.

**ವೇದಾನಾಂ ಸಮುಚಿತಭಾವವಾದದಕ್ಷಂ**
**ಯೇ ವೇದದ್ವಿಷಮಿಮಮೂಚಿರೇ ಮಹೇರ್ಷ್ಯಾಃ ।**
**ಧಿಕ್ ಧಿಕ್ ತಾನ್ ಇತಿ ಜನತಾ ಜಗಾದ (ತತ್ರ) ಗಾಢಂ**
**ಸ್ವಾಶ್ಚರ್ಯಾತ್ ಕಿಲ ಕಲಿತಾಂಜಲಿರ್ನಮಂತೀ ॥ 18 ॥**

**ಪದಚ್ಛೇದ—** ವೇದಾನಾಂ, ಸಮುಚಿತಭಾವವಾದದಕ್ಷಂ, ಯೇ, ವೇದದ್ವಿಷಂ, ಇಮಂ, ಊಚಿರೇ, ಮಹೇರ್ಷ್ಯಾಃ, ತಾನ್, ಧಿಕ್, ಧಿಕ್, ಇತಿ, ಜನತಾ (ತತ್ರ), ಗಾಢಂ, ಸ್ವಾಶ್ಚರ್ಯಾತ್, ಜಗಾದ, ಕಿಲ, ಕಲಿತಾಂಜಲಿಃ, ನಮಂತೀ ।

**ಅನ್ವಯ—** ವೇದಾನಾಂ, ಸಮುಚಿತಭಾವವಾದದಕ್ಷಂ, ಇಮಂ, ಮಹೇರ್ಷ್ಯಾಃ, ಯೇ, ವೇದದ್ವಿಷಂ, ಊಚಿರೇ, ತಾನ್, ಧಿಕ್, ಧಿಕ್, ಇತಿ, (ತತ್ರ) ಜನತಾ, ಸ್ವಾಶ್ಚರ್ಯಾತ್, ಕಲಿತಾಂಜಲಿಃ, ನಮಂತೀ, ಗಾಢಂ, ಜಗಾದ, ಕಿಲ ।

**ಅನ್ವಯಾರ್ಥ—**

ವೇದಾನಾಂ = ವೇದಗಳ,

**ಸಮುಚಿತಭಾವವಾದದಕ್ಷಂ** = ಯುಕ್ತವಾದ ಅಭಿಪ್ರಾಯವನ್ನು ಹೇಳುವುದರಲ್ಲಿ ಚತುರರಾದ,

ಇಮಂ = ಈ ಮಹಾನುಭಾವರನ್ನು,

**ಮಹೇರ್ಷ್ಯಾಃ** = ಬಹಳ ಹೆಚ್ಚಾದ ಅಸೂಯೆಯಿಂದ ಕೂಡಿದ,

**ಯೇ** = ಯಾರು,

**ವೇದದ್ವಿಷಂ** = ವೇದಗಳನ್ನು ದ್ವೇಷಿಸುವವರನ್ನಾಗಿ,

**ಊಚಿರೇ** = ಹೇಳಿದರೋ,

**ತಾನ್** = ಅವರನ್ನು,

**ಧಿಕ್ ಧಿಕ್** = ಸುಡು ಸುಡು (ನಿಂದಿಸು ನಿಂದಿಸು),

**ಇತಿ** = ಎಂದು,

(ತತ್ರ = ಆ ಸಮುದ್ರತೀರದಲ್ಲಿ ಸೇರಿದ),

**ಜನತಾ** = ಜನ ಸಮೂಹವು,

**ಸ್ವಾಶ್ಚರ್ಯಾತ್** = ಹೆಚ್ಚಾದ ಆಶ್ಚರ್ಯದಿಂದ,

**ಕಲಿತಾಂಜಲಿಃ** = ಕೈಮುಗಿದವರಾಗಿ,

**ನಮಂತೀ** = ನಮಸ್ಕಾರ ಮಾಡುತ್ತಾ,

**ಗಾಢಂ** = ಸ್ಪಷ್ಟವಾಗಿ (ಅತಿಶಯ ಪೂರ್ವಕವಾಗಿ),

**ಜಗಾದ ಕಿಲ** = ಮಾತನಾಡಿತು ಎಂಬುದು ಪ್ರಸಿದ್ಧವು.

**ತಾತ್ಪರ್ಯ**— ಈ ಮಹಾನುಭಾವರು ವೇದಗಳ ಸರಿಯಾದ ಅಭಿಪ್ರಾಯವನ್ನು ವಿವರಿಸಿ ಹೇಳುವುದರಲ್ಲಿ ಅತ್ಯಂತ ಕುಶಲರಾಗಿದ್ದರು. ಆದರೂ ಕೆಲವು ಮಂದಿ ದುಷ್ಟರು ಇವರು ವೇದದ್ವೇಷಿಗಳು ವೇದಕ್ಕಿಂತಲೂ ಪುರಾಣ ಇತಿಹಾಸ ಸೂತ್ರಾದಿ ಗ್ರಂಥಗಳಿಗೆ ಪ್ರಾಶಸ್ತ್ಯವನ್ನು ಕೊಡುತ್ತಾರೆ, ಎಂದು ಕೆಲವು ನೀಚರು ಅಸೂಯೆಯಿಂದ ಇವರನ್ನು ನಿಂದಿಸಿದ್ದರು. ಆ ನೀಚರಿಗೆ ಧಿಕ್ಕಾರ ಧಿಕ್ಕಾರ ಅವರನ್ನು ಸುಡಬೇಕು. ಅವರನ್ನೇ ನಿಂದಿಸಬೇಕು ನಿಂದಿಸಬೇಕು ಎಂದು ಅಲ್ಲಿ ನೆರೆದಿದ್ದ ಅತ್ಯಂತ ಜನರು ಆಶ್ಚರ್ಯಭರಿತರಾಗಿ ಶ್ರೀಮಧ್ವಾಚಾರ್ಯರಿಗೆ ಕೈ ಮುಗಿದು, ಅನಂತರ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾ ದುರ್ಜನರನ್ನು ಕುರಿತು ಈ ರೀತಿ ಹೇಳಿದರು.

**ವಿಗ್ರಹ**—

**ಸಮುಚಿತಭಾವವಾದದಕ್ಷಂ**— ಸಮುಚಿತಭಾವಸ್ಯ ವಾದಃ ಸಮುಚಿತಭಾವವಾದಃ, ಸಮುಚಿತಭಾವವಾದೇ-ದಕ್ಷಃ ಸಮುಚಿತಭಾವವಾದದಕ್ಷಃ ತಂ । ಸಮುಚಿತಶ್ಚಾಸೌ ಭಾವಶ್ಚ ಸಮುಚಿತ ಭಾವಃ ।

**ವೇದದ್ವಿಷಂ**— ವೇದಾನಾಂ ದ್ವಿಟ್ ವೇದದ್ವಿಟ್ ತಂ । (ದ್ವಿಷ್ ಷಕಾರಾಂತ ಪುಂ) ತಾನ್ ಧಿಕ್ ಎಂಬಲ್ಲಿ ಉಭ ಸರ್ವತಸೋಃ ಕಾರ್ಯಾಽಧಿಗುಪರ್ಯಾದಿಷು ತ್ರಿಷು । ದ್ವಿತೀಯಾಮ್ರೇಡಿತಾಂತೇಷು ತತೋಽನ್ಯತ್ರಾಪಿ ದೃಶ್ಯತೇ ।। ಎಂಬ ಶ್ಲೋಕ ವಾರ್ತಿಕದಿಂದ ದ್ವಿತೀಯಾ ವಿಭಕ್ತಿ.

**ಜನತಾ**— ಜನಾನಾಂ ಸಮೂಹಃ ಜನತಾ ।

**ಸ್ವಾಶ್ಚರ್ಯಾತ್**— ಅತಿಶಯಿತಂ ಆಶ್ಚರ್ಯಂ ಸ್ವಾಶ್ಚರ್ಯಂ ತಸ್ಮಾತ್ ।

**ಕಲಿತಾಂಜಲಿಃ**— ಕಲಿತಃ ಅಂಜಲಿಃ ಯಯಾ ಸಾ ಕಲಿತಾಂಜಲಿಃ ।

**ಕ್ರಿಯಾಪದ**— **ಊಚಿರೇ**- ಬ್ರೂಞ ವ್ಯಕ್ತಾಯಾಂ ವಾಚಿ ಸಕ. ಅನಿ. ಆತ್ಮನೇ ಪದಿ ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಬಹುವಚನ ।

**ಜಗಾದ**- ಗದ ವ್ಯಕ್ತಾಯಾಂ ವಾಚಿ ಸಕ. ಸೇಟ್. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

ಊಚೇ ಊಚಾತೇ ಊಚಿರೇ ಇತ್ಯಾದಿ ।

ಜಗಾದ ಜಗದತುಃ ಜಗದುಃ, ಜಗದಿಥ ಜಗದಥುಃ ಜಗದ, ಜಗಾದ-ಜಗದ ಜಗದಿವ ಜಗದಿಮ ।

**ಪ್ರಯೋಗ**— ವೇದಾನಾಂ ಸಮುಚಿತಭಾವದಕ್ಷಃ ಅಯಂ ಮಹೇರ್ಷ್ಯೈಃ ಯೈಃ ವೇದದ್ವಿಟ್ (ಇತಿ) ಊಚೇ ತಾನ್ ಧಿಕ್ ಧಿಕ್ ಇತಿ ತತ್ರ ಸ್ವಾಶ್ಚರ್ಯಾತ್ ಕಲಿತಾಂಜಲ್ಯಾ ಜನತಯಾ (ಗಾಢಂ) ಜಗದೇ ಕಿಲ ।

★ ★ ★

ಅವತಾರಿಕಾ— ಗ್ರಹಣಸ್ನಾನ ಕಾಲವು ಸಮೀಪಿಸಿದಾಗ ಜನರೆಲ್ಲರೂ ಆಚಾರ್ಯರೊಡನೆ ಸ್ನಾನ ಮಾಡಿದರು ಎಂದು ಹೇಳುತ್ತಾರೆ.

**ಸನ್ಮಾನಂ ವಿಪುಲಹೃದೇ ವಿಧಾಯ ಭಕ್ತ್ಯಾ**
**ಬಿಭ್ರಾಣಾಶ್ಚರಣರಜೋಽಸ್ಯ ದೇವಸೇವ್ಯಮ್ ।**
**ತತ್ಸ್ನಾನಾದಧಿಕಶುಚೌ ನದಾಧಿರಾಜೇ**
**ಸಸ್ನುಸ್ತೇ ದ್ವಿಜನಿಕರಾಃ ಪ್ರಶಸ್ತಕಾಲೇ ॥ 19 ॥**

ಪದಚ್ಛೇದ—ಸನ್ಮಾನಂ, ವಿಪುಲಹೃದೇ, ವಿಧಾಯ, ಭಕ್ತ್ಯಾ, ಬಿಭ್ರಾಣಾಃ, ಚರಣರಜಃ, ಅಸ್ಯ, ದೇವಸೇವ್ಯಂ, (ಚರಣರಜಃ ಸುರೇಂದ್ರಸೇವ್ಯಂ) ತತ್ಸ್ನಾನಾತ್, ಅಧಿಕಶುಚೌ, ನದಾಧಿರಾಜೇ, ಸಸ್ನುಃ, ತೇ, ದ್ವಿಜನಿಕರಾಃ, ಪ್ರಶಸ್ತಕಾಲೇ।

ಅನ್ವಯ— ತೇ, ದ್ವಿಜನಿಕರಾಃ, ವಿಪುಲಹೃದೇ, ಭಕ್ತ್ಯಾ, ಸನ್ಮಾನಂ, ವಿಧಾಯ, ಅಸ್ಯ, ದೇವಸೇವ್ಯಂ, ಚರಣರಜಃ, ಬಿಭ್ರಾಣಾಃ, ತತ್ಸ್ನಾನಾತ್, ಅಧಿಕಶುಚೌ, ನದಾಧಿರಾಜೇ, ಪ್ರಶಸ್ತಕಾಲೇ, ಸಸ್ನುಃ ।

ಅನ್ವಯಾರ್ಥ—

ತೇ = ಆ,
ದ್ವಿಜನಿಕರಾಃ = ಬ್ರಾಹ್ಮಣರ ಸಮೂಹಗಳು,
ವಿಪುಲಹೃದೇ = ಶ್ರೀಪೂರ್ಣಪ್ರಜ್ಞಾಚಾರ್ಯರಿಗೆ,
ಭಕ್ತ್ಯಾ = ಭಕ್ತಿಯಿಂದ,
ಸನ್ಮಾನಂ = ಸರಿಯಾದ ಗೌರವವನ್ನು,
ವಿಧಾಯ = ಮಾಡಿ,
ಅಸ್ಯ = ಈ ಮಧ್ವಾಚಾರ್ಯರ,
ದೇವಸೇವ್ಯಂ = ದೇವತೆಗಳಿಂದ ಸೇವಿಸಲು ಯೋಗ್ಯವಾದ,
ಚರಣರಜಃ = ಕಾಲಿನಧೂಳನ್ನು,
ಬಿಭ್ರಾಣಾಃ = ಧರಿಸಿದವರಾಗಿ,
ತತ್ = ಆ ಶ್ರೀಮಧ್ವಾಚಾರ್ಯರ,
ಸ್ನಾನಾತ್ = ಸ್ನಾನದ ದೆಸೆಯಿಂದ,
ಅಧಿಕಶುಚೌ = ಹೆಚ್ಚು ಪವಿತ್ರವಾದ,
ನದಾಧಿರಾಜೇ = ನದನದೀಗಳಿಗೆ ಮಹಾರಾಜನಾದ ಸಮುದ್ರದಲ್ಲಿ,
ಪ್ರಶಸ್ತಕಾಲೇ = ಶ್ರೇಷ್ಠವಾದ ಗ್ರಹಣ ಸಮಯದಲ್ಲಿ,
ಸಸ್ನುಃ = ಸ್ನಾನ ಮಾಡಿದರು.

ತಾತ್ಪರ್ಯ— ಆ ಬ್ರಾಹ್ಮಣರು ಗುಂಪುಗುಂಪಾಗಿ ಬಂದು ಶ್ರೀಮಧ್ವಾಚಾರ್ಯರಿಗೆ ಗೌರವ ಮತ್ತು ಭಕ್ತಿ ಪುರಸ್ಸರ-ವಾಗಿ ತಲೆಬಾಗಿ ನಮಸ್ಕರಿಸಿದರು. ರುದ್ರಾದಿದೇವೋತ್ತಮರೂ ಶಿರಸಾಧಾರಣ ಮಾಡಿದ ಶ್ರೀಮಧ್ವಾಚಾರ್ಯರ ಪಾದ

ಧೂಳಿಯನ್ನು ತಲೆಯಲ್ಲಿ ಹೊತ್ತರು ಮತ್ತು ಶ್ರೀಮಧ್ವಾಚಾರ್ಯರ ಸ್ನಾನದಿಂದ ಅತ್ಯಂತ ಪವಿತ್ರವಾದ ಸಮುದ್ರದಲ್ಲಿ ಗ್ರಹಣಪುಣ್ಯಕಾಲದಲ್ಲಿ ಸ್ನಾನ ಮಾಡಿದರು. ಆಚಾರ್ಯರ ವೇದವ್ಯಾಖ್ಯಾನ ಮತ್ತು ಪ್ರವಚನಗಳಿಂದ ಅಲ್ಲಿ ಜನರೆಲ್ಲರೂ ಪ್ರಭಾವಿತರಾದರು ಮತ್ತು ಆನಂದಪಟ್ಟರು. ಅವರು ಆಚಾರ್ಯರನ್ನು ಗೌರವದೃಷ್ಟಿಯಿಂದ ನೋಡಿ ಅವರ ಪಾದಧೂಳಿಯನ್ನು ಶಿರಸಾ ವಹಿಸಿದರು. ಆಗ ಸೂರ್ಯಗ್ರಹಣದ ಪುಣ್ಯಕಾಲವು ಒದಗಿದುದರಿಂದ ಆಚಾರ್ಯರು ಸಮುದ್ರದಲ್ಲಿ ಸ್ನಾನ ಮಾಡಿದರು. ಮೊದಲೇ ಪುಣ್ಯತೀರ್ಥವಾದ ಸಮುದ್ರವು ಶ್ರೀಮದಾನಂದತೀರ್ಥಭಗವತ್-ಪಾದಾಚಾರ್ಯರ ಸ್ನಾನದಿಂದ ಮತ್ತಷ್ಟು ಪವಿತ್ರವಾಯಿತು. ಆಗ ಅಂತಹ ಅಲ್ಲಿ ಸೇರಿದ್ದ ಜನರೆಲ್ಲರೂ ಮಿಂದರು ಎಂದು ಅಭಿಪ್ರಾಯವು.

ವಿಗ್ರಹ—

**ಸನ್ಮಾನಂ**— ಸಂಶ್ಚ ತತ್ ಮಾನಂ ಚ ಸನ್ಮಾನಂ, ತತ್ ಸನ್ಮಾನಂ ।

**ಚರಣರಜಃ**— ಚರಣಯೋಃ ರಜಃ ಚರಣರಜಃ ತತ್ ।

**ದೇವಸೇವ್ಯಂ**— ದೇವೈಃ ಸೇವ್ಯಂ ದೇವಸೇವ್ಯಂ ತತ್ ।

**ಸುರೇಂದ್ರಸೇವ್ಯಂ**— ಸುರಾಣಾಂ ಇಂದ್ರಾಃ ಸುರೇಂದ್ರಾಃ (ಸೇವಿತುಂ ಯೋಗ್ಯಂ ಸೇವ್ಯಂ) ಸುರೇಂದ್ರೈಃ ಸೇವ್ಯಂ ಸುರೇಂದ್ರಸೇವ್ಯಂ ತತ್ ।

**ಅಧಿಕಶುಚೌ**— ಅಧಿಕಂ ಶುಚಿ ಅಧಿಕಶುಚಿ, ತಸ್ಮಿನ್ ।

**ನದಾಧಿರಾಜಃ**— ಅಧಿಕಶ್ಚಾಸೌ ರಾಜಾ ಚ ಅಧಿರಾಜಃ, ನದಾನಾಂ ಅಧಿರಾಜಃ ನದಾಧಿರಾಜಃ ತಸ್ಮಿನ್ ।

**ದ್ವಿಜನಿಕರಾಃ**— ದ್ವಿಜಾನಾಂ ನಿಕರಾಃ ದ್ವಿಜನಿಕರಾಃ ।

**ಪ್ರಶಸ್ತಕಾಲೇ**— ಪ್ರಶಸ್ತಶ್ಚಾಸೌ ಕಾಲಶ್ಚ ಪ್ರಶಸ್ತಕಾಲಃ ತಸ್ಮಿನ್ ।

**ಕ್ರಿಯಾಪದ**—ಸಸ್ನುಃ-ಷ್ಣಾ ಶೌಚೇ. ಅಕ. ಅನಿ. ಪರ.ಭೂತಾನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

ಸಸ್ನೌ ಸಸ್ನತುಃ ಸಸ್ನುಃ, ಸಸ್ನಿಥ ಸಸ್ನಾಥ ಸಸ್ನಥುಃ ಸಸ್ನ, ಸಸ್ನೌ ಸಸ್ನಿವ ಸಸ್ನಿಮ ।

**ಪ್ರಯೋಗ**— ತೈಃ ದ್ವಿಜನಿಕರೈಃ ವಿಪುಲಹೃದೇ ಭಕ್ತ್ಯಾ (ಸನ್ನಾಮಂ) ಸನ್ಮಾನಂ ವಿಧಾಯ ಅಸ್ಯದೇವಸೇವ್ಯಂ ಚರಣರಜಃ ಬಿಭ್ರಾಣೈಃ ತತ್ ಸ್ನಾನಾತ್ ಅಧಿಕಶುಚೌ ನದಾಧಿರಾಜೇ ಪ್ರಶಸ್ತಕಾಲೇ ಸಸ್ನೇ ।

★ ★ ★

**ಅವತಾರಿಕಾ**— ಆಗ ಜನರ ಸ್ನಾನದ ಗದ್ದಲವನ್ನು ವರ್ಣಿಸುತ್ತಾರೆ.

**ಕಲ್ಲೋಲೈಃ ಕರಿನಿಕರೈರಿವಾನಿವಾರ್ಯೈ-**
**ರುಲ್ಲೋಲೈರ್ಜನನಿಕರಾನ್ನಿಪಾತಯದ್ಭಿಃ ।**
**ಆಕ್ರಾಂತಾಃ ಪ್ರಬಲತರೈಶ್ಚ ಲೋಠ್ಯಮಾನಾಃ**
**ಹಾಸ್ಯತ್ವಂ ಪ್ರಯಯುರುದನ್ವತೀಹ ನೈಕೇ ॥ 20 ॥**

**ಪದಚ್ಛೇದ**— ಕಲ್ಲೋಲೈಃ, ಕರನಿಕರೈಃ, ಇವ, ಅನಿವಾರ್ಯೈಃ, ಉಲ್ಲೋಲೈಃ, ಜನನಿಕರಾನ್, ನಿಪಾತಯದ್ಭಿಃ, ಆಕ್ರಾಂತಾಃ, ಪ್ರಬಲತರೈಃ, ಚ, ಲೋಠ್ಯಮಾನಾಃ, ಹಾಸ್ಯತ್ವಂ, ಪ್ರಯಯುಃ, ಉದನ್ವತಿ, ಇಹ, ನೈಕೇ ।

**ಅನ್ವಯ**— ಇಹ, ಉದನ್ವತಿ, ನೈಕೇ, ಉಲ್ಲೋಲೈಃ, ಅನಿವಾರ್ಯೈಃ, ಜನನಿಕರಾನ್, ನಿಪಾತಯದ್ಭಿಃ, ಪ್ರಬಲತರೈಃ, ಕರನಿಕರೈಃ, ಇವ ಕಲ್ಲೋಲೈಃ, ಆಕ್ರಾಂತಾಃ, ಚ, ಲೋಠ್ಯಮಾನಾಃ, ಹಾಸ್ಯತ್ವಂ, ಪ್ರಯಯುಃ ।

ಅನ್ವಯಾರ್ಥ—

ಇಹ ಉದನ್ವತಿ = ಈ ಸಮುದ್ರದಲ್ಲಿ,
ನೈಕೇ = ಅನೇಕ ಮಂದಿ,
ಉಲ್ಲೋಲೈಃ = ಅತ್ಯಂತ ಚಂಚಲಗಳಾದ,
ಅನಿವಾರ್ಯೈಃ = ತಡೆಯಲು ಅಸಾಧ್ಯವಾದ,
ಜನನಿಕರಾನ್ = ಜನರ ಸಮೂಹಗಳನ್ನು,
ನಿಪಾತಯದ್ಭಿಃ = ಕೆಡಹುತ್ತಿರುವ,
ಪ್ರಬಲತರೈಃ = ಅತ್ಯಂತ ಪ್ರಬಲವಾದ,
ಕಲ್ಲೋಲೈಃ = ದೊಡ್ಡ ಅಲೆಗಳಿಂದ,
ಆಕ್ರಾಂತಾಃ = ಆಕ್ರಮಿಸಲ್ಪಟ್ಟ(ಮುಳುಗಿಸಲ್ಪಟ್ಟ)ವರಾಗಿಯೂ,
ಲೋಠ್ಯಮಾನಾಃ ಚ = ಉರುಳಾಡಿಸಲ್ಪಟ್ಟವರಾಗಿಯೂ,
ಹಾಸ್ಯತ್ವಂ = ನಗೆಚಾಟಿಕೆಯನ್ನು, (ಉಪಹಾಸ ವಿಷಯತೆಯನ್ನು)
ಪ್ರಯಯುಃ = ಹೊಂದಿದರು.

ತಾತ್ಪರ್ಯ— ಆ ಪಶ್ಚಿಮ ಮಹಾಸಮುದ್ರದಲ್ಲಿ ಆಗ ದೊಡ್ಡ ದೊಡ್ಡ ಅಲೆಗಳು ಬರುತ್ತಿದ್ದವು. ಅವುಗಳು ಮೇಲ್ಮುಖವಾಗಿ, ಬಹಳ ಎತ್ತರವಾಗಿ ಚಲಿಸುತ್ತಾ ದಡದ ಕಡೆಗೆ ಮುನ್ನುಗ್ಗುತ್ತಿದ್ದವು. ಅವುಗಳನ್ನು ನೋಡಿದರೆ ಆನೆಗಳು ಹಿಂಡುಹಿಂಡಾಗಿ ಜನರಿಗೆ ಅವುಗಳನ್ನು ತಡೆದು ಸಮುದ್ರದಲ್ಲಿ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ, ಅಲೆಗಳಿಂದ ಆಕ್ರಮಿಸಲ್ಪಟ್ಟ ಜನರು ಹಿಂದೆ ಬಿದ್ದು ಹೋಗುತ್ತಿದ್ದರು. ಮತ್ತು ಅಲೆಗಳು ಹಿಂದಿರುಗುವಾಗ ಉರುಳಾಡಿಸಲ್ಪಡುತ್ತಾ, ಏಳುತ್ತಾ, ಉರುಳಾಡುತ್ತಾ ಇರುವಾಗ ನೋಡುವ ಇತರ ಜನರಿಗೆ ನಗು ಬರುತ್ತಿತ್ತು. ಹೀಗೆ ಅಲ್ಲಿ ಸಮುದ್ರ ಸ್ನಾನ ಮಾಡುವ ಜನರು ಅಪಹಾಸಕ್ಕೆ ಗುರಿಯಾಗುತ್ತಿದ್ದರು. ಅಹಾ ಇಂತಹ ಬಲಿಷ್ಠರು ಹೇಗೆ ಬಿದ್ದು ಎದ್ದು ಹೊರಳಾಡುತ್ತಿದ್ದಾರೆ ಎಂದು ಬೇರೆ ಕೆಲವರು ಇತರರನ್ನು ಅಪಹಾಸ ಮಾಡುತ್ತಿದ್ದರು. ಮತ್ತೆ ಕೆಲವರು ಅಲೆಗಳಿಂದ ಆಕ್ರಮಿಸಲ್ಪಟ್ಟಾಗ ಆನೆಗಳಿಂದ ಆಕ್ರಮಿಸಲ್ಪಟ್ಟವರಂತೆ ತಮಗಿಂತಲೂ ಬಲಿಷ್ಠರಾದ ಜನರಿಂದ ಉರುಳಾಡಿಸಲ್ಪಟ್ಟರು. ಆಗ ಅವರನ್ನು ನೋಡಿ ಜನರು ನಗಲಾರಂಭಿಸಿದರು. ಅಲೆಗಳಿಂದ ಸಿಕ್ಕಿ ಕಾಲುಗಳು ಆಯತಪ್ಪಿ ಬಿದ್ದು ಎದ್ದು ಹೊರಳಾಡುತ್ತಾ ನೋಡಿ ಜನರು ಸ್ನಾನ ಮಾಡುತ್ತಿರುವುದು ನೋಡುವವರಿಗೆ ತುಂಬಾ ಹಾಸ್ಯವನ್ನುಂಟು ಮಾಡುವ ದೃಶ್ಯವಾಗಿತ್ತು ಎಂದು ಭಾವ.

ವಿಗ್ರಹ ಮತ್ತು ಕೋಶ—

ಕಲ್ಲೋಲಃ— ದೊಡ್ಡ ಅಲೆ, 'ಮಹತ್ಸೂಲ್ಲೋಲಕಲ್ಲೋಲೌ' ಅಮರ ।
ಅನಿವಾರ್ಯೈಃ— ನಿವಾರಯಿತುಂ ಶಕ್ಯಾಃ ನಿವಾರ್ಯಾಃ ನ ನಿವಾರ್ಯಾಃ ಅನಿವಾರ್ಯಾಃ ತೈಃ ।
ಜನನಿಕರೈಃ— ಜನಾನಾಂ ನಿಕರಾಃ ಜನನಿಕರಾಃ ತೈಃ ।
ಪ್ರಬಲತರೈಃ— ಅತ್ಯಂತಂ ಪ್ರಬಲಾಃ ಪ್ರಬಲತರಾಃ ತೈಃ ।
ಹಾಸ್ಯತ್ವಂ— ಹಸಿತುಂ ಯೋಗ್ಯಃ ಹಾಸ್ಯಃ, ಹಾಸ್ಯಸ್ಯ ಭಾವಃ ಹಾಸ್ಯತ್ವಂ ತತ್ ।
ಉದನ್ವಾನ್— ಸಮುದ್ರ, 'ಉದನ್ವಾನ್ ಉದಧಿಃ ಸಿಂಧುಃ' ಅಮರ ।
ನೈಕೇ— ನ ಏಕೇ ನೈಕೇ ನೈಕಧಾ । ಎಂಬಂತೆ ನ ಶಬ್ದದ ಜತೆಗೆ ಸಮಾಸ ಉಲ್ಲೋಲ ಶಬ್ದಕ್ಕೂ ಮಹಾತರಂಗ ಎಂದೂ ಅರ್ಥವನ್ನು ಹೇಳಬಹುದು ಆಗ ಕೆಲವು ಮಹಾತರಂಗಗಳು (ಉಲ್ಲೋಲಾಃ) ಜನರನ್ನೂ ಬೀಳಿಸುತ್ತಿದ್ದವು.

**ಕ್ರಿಯಾಪದ—** **ಪ್ರಯಯುಃ** - ಯಾ ಪ್ರಾಪಣೇ ಸಕ. ಅನಿ. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

ಯಯೌ ಯಯತುಃ ಯಯುಃ, ಯಯಿಥ-ಯಯಾಥ ಯಯಥುಃ ಯಯ, ಯಯೌ ಯಯಿವ ಯಯಿಮ ।

**ಪ್ರಯೋಗ—** ಇಹ ಉದನ್ವತಿ ನೈಕೇ ಉಲ್ಲೋಲೈಃ ಅನಿವಾರ್ಯೈಃ ಜನನಿಕರಾನ್ ನಿಪಾತಯದ್ಭಿಃ ಪ್ರಬಲತರೈಃ ಕರಿನಿಕರೈರಿವ ಕಲ್ಲೋಲೈಃ ಆಕ್ರಾಂತೈಃ ಚ ಲೋಕ್ಯಮಾನೈಃ ಹಾಸ್ಯತ್ವಂ ಪ್ರಯಯೇ ।

★★★

**ಅವತಾರಿಕಾ—** ಆಚಾರ್ಯರು ಸಮುದ್ರದ ನೀರಿನಲ್ಲಿ ಪೂರ್ತಿ ಮುಳುಗಿದಾಗ ಮತ್ತು ಅಲೆಗಳಿಂದ ಉರುಳಿಸಲ್ಪಟ್ಟಾಗ ದುರ್ಜನರು ದುರಾಗ್ರಹದಿಂದ ನಿಂದಿಸಿದರು ಎನ್ನುತ್ತಾರೆ.

**ಮಜ್ಜಂತಂ ಪೃಥುಲಹರೀನಿಗೂಢಮೂರ್ತಿಂ**
**ಸಂಪೂರ್ಣಪ್ರಮತಿಮಸಜ್ಜನೋ ಜಹಾಸ ।**
**ಯೋ ಲೋಕತ್ರಯವಿಜಯೀ ಗುರುಃ ಪ್ರಸಿದ್ಧಃ**
**ಸೋಽಯಂ ಹಾ ಪತತಿ ಲಘೂರ್ಮಿಲೀಲಯೇತಿ ॥ 21 ॥**

**ಪದಚ್ಛೇದ—** ಮಜ್ಜಂತಂ, ಪೃಥುಲಹರೀನಿಗೂಢಮೂರ್ತಿಂ, ಸಂಪೂರ್ಣಪ್ರಮತಿಂ, ಅಸಜ್ಜನಃ, ಜಹಾಸ, ಯಃ, ಲೋಕತ್ರಯವಿಜಯೀ, ಗುರುಃ, ಪ್ರಸಿದ್ಧಃ, ಸಃ, ಅಯಂ, ಹಾ, ಪತತಿ, ಲಘೂರ್ಮಿಲೀಲಯಾ, ಇತಿ ।

**ಅನ್ವಯ—** ಯಃ, ಲೋಕತ್ರಯವಿಜಯೀ, ಗುರುಃ, ಪ್ರಸಿದ್ಧಃ, ಸಃ, ಅಯಂ, ಲಘೂರ್ಮಿಲೀಲಯಾ, ಪತತಿ, ಹಾ, ಇತಿ, ಅಸಜ್ಜನಃ, ಮಜ್ಜಂತಂ, ಪೃಥುಲಹರೀನಿಗೂಢಮೂರ್ತಿಂ, ಸಂಪೂರ್ಣಪ್ರಮತಿಂ, ಜಹಾಸ ।

**ಅನ್ವಯಾರ್ಥ—**

**ಯಃ** = ಯಾರು,

**ಲೋಕತ್ರಯವಿಜಯೀ** = ಮೂರು ಲೋಕಗಳ ವಿಜಯವನ್ನು ಸಂಪಾದಿಸಿದ, (ಮೂರು ಲೋಕಗಳನ್ನು ಜಯಿಸಿದ)

**ಗುರುಃ** = ಗುರುಗಳಾಗಿ,

**ಪ್ರಸಿದ್ಧಃ** = ಪ್ರಖ್ಯಾತರೋ,

**ಸಃ ಅಯಂ** = ಆ ಪ್ರಸಿದ್ಧರಾದ ಎದುರಿಗೆ ಕಾಣಸುವ ಈ ಗುರುಗಳು,

**ಲಘುಊರ್ಮಿಲೀಲಯಾ** = ಸಣ್ಣದಾದ ಅಲೆಗಳ ಆಟದ ವ್ಯಾಪಾರದಿಂದ,

**ಪತತಿ** = ಬೀಳುತ್ತಿದ್ದಾರೆ.

**ಹಾ** = ಅಯ್ಯೋ ಶೋಚನೀಯಾವಸ್ಥೆಯು,

**ಇತಿ** = ಎಂದು,

**ಅಸಜ್ಜನಃ** = ದುಷ್ಟಜನರು,

**ಮಜ್ಜಂತಂ** = ಸ್ನಾನ ಮಾಡುತ್ತಿರುವ,

**ಪೃಥುಲಹರೀನಿಗೂಢಮೂರ್ತಿಂ** = ದೊಡ್ಡ ಅಲೆಗಳಿಂದ (ಅಲೆಗಳಲ್ಲಿ) ಮರೆಯಾದ ದೇಹವುಳ್ಳ,

**ಸಂಪೂರ್ಣಪ್ರಮತಿಂ** = ಶ್ರೀಪೂರ್ಣಬೋಧಾಚಾರ್ಯರನ್ನು,

**ಜಹಾಸ** = ಉಪಹಾಸ ಮಾಡಿದರು.

**ತಾತ್ಪರ್ಯ**— ಆಚಾರ್ಯರು ಗ್ರಹಣ ಸಮಯದಲ್ಲಿ ಸಮುದ್ರದಲ್ಲಿ ಸ್ನಾನ ಮಾಡುತ್ತಿದ್ದರು. ಆಗ ದೊಡ್ಡ ಅಲೆಗಳು ಬಂದಾಗ ಆಚಾರ್ಯರು ಆ ಅಲೆಗಳಲ್ಲಿ ಮರೆಯಾದರು. ಕೆಲವು ಬಾರಿ ಆಚಾರ್ಯರು ಅಲೆಗಳಿಗೆದುರಾಗಿ ನಿಂತಿದ್ದಾಗ ಅಲೆಗಳ ಹೊಡೆತದಿಂದ ಬಿದ್ದು ಹೋಗುತ್ತಿದ್ದರು. ಇಂತಹ ಶ್ರೀಪೂರ್ಣಪ್ರಜ್ಞಾಚಾರ್ಯರನ್ನು ನೋಡಿ ಕೆಲವು ದುರ್ಜನರು ನೋಡಿರಿ ನೋಡಿರಿ ಮೂರು ಲೋಕಗಳನ್ನು ಜಯಿಸಿದರೆಂದೂ, ಜಗದ್ಗುರುಗಳೆಂದೂ ಪ್ರಸಿದ್ಧರಾದ ಈ ಮಧ್ವಾಚಾರ್ಯರು ಲಘುವಾದ (ಅಲ್ಪವಾದ) ಅಲೆಗಳು ಆಟವಾಡುತ್ತಿದ್ದಾಗ ಬಿದ್ದು ಹೋಗುತ್ತಿದ್ದಾರೆ. ಅಯ್ಯೋ ಪಾಪ! ಜಗದ್ಗುರುಗಳು ಲಘು ವಸ್ತುಗಳ ಹೊಡೆತದಿಂದ ಉರುಳಿ ಬೀಳುತ್ತಿದ್ದಾರೆ ಎಂದು ಪರಿಹಾಸ ಮಾಡಿದರು.

**ವಿಗ್ರಹ ಮತ್ತು ಕೋಶ**—

**ಪೃಥುಲಹರೀನಿಗೂಢಮೂರ್ತಿಂ**— ಪೃಥ್ವ್ಯಶ್ಚ ತಾಃ ಲಹರ್ಯಶ್ಚ ಪೃಥುಲಹರ್ಯಃ ಪೃಥುಲಹರೀಭಿಃ (ಪೃಥುಲಹರೀಷು) ನಿಗೂಢಾ ಮೂರ್ತಿಃ ಯಸ್ಯ ಸಃ ಪೃಥುಲಹರೀನಿಗೂಢಮೂರ್ತಿಃ ತಂ ।

**ಸಂಪೂರ್ಣಪ್ರಮತಿಃ**— ಸಂಪೂರ್ಣಾ ಪ್ರಮತಿಃ ಯಸ್ಯ ಸಃ ।

**ಅಸಜ್ಜನಃ**— ಅಸಂಶ್ಚಾಸೌ ಜನಶ್ಚ ಅಸಜ್ಜನಃ ।

**ಲೋಕತ್ರಯವಿಜಯೀ**— ತ್ರಯಃ ಅವಯವಾಃ ಅಸ್ಯೇತಿ ತ್ರಯಂ । ಲೋಕಾನಾಂ ತ್ರಯಂ ಲೋಕತ್ರಯಂ ಲೋಕತ್ರಯಸ್ಯ ವಿಜಯಃ ಲೋಕತ್ರಯವಿಜಯಃ, ಲೋಕತ್ರಯವಿಜಯಃ ಅಸ್ಯ ಅಸ್ತೀತಿ ಲೋಕತ್ರಯ ವಿಜಯೀ । (ವಿಜಯನ್)

**ಲಘೂರ್ಮಿಲೀಲಯಾ**— ಲಘ್ವ್ಯಶ್ಚತಾಃ ಊರ್ಮಯಶ್ಚ ಲಘೂರ್ಮಯಃ ಲಘೂರ್ಮೀಣಾಂ ಲೀಲಾ ಲಘೂರ್ಮೀಲೀಲಾ, ತಯಾ । ಲೀಲಾ = ವಿಲಾಸ, ಆಟ, 'ಲೀಲಾವಿಲಾಸಕ್ರಿಯಯೋಃ' ವಿಶ್ವ ।

**ಕ್ರಿಯಾಪದ**— **ಜಹಾಸ** - ಹಸೇ ಹಸನೇ ಅಕ. ಸೇಟ್. ಪರ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನೇ ಜಹಾಸ ಎಂದು ರೂಪ ।

ಜಹಾಸ ಜಹಸತುಃ ಜಹಸುಃ, ಜಹಸಿಥ ಜಹಸಥುಃ ಜಹಸ, ಜಹಾಸ ಜಹಸ ಜಹಸಿವ ಜಹಸಿಮ ।

**ಪ್ರಯೋಗ**— ಯೇನ ಲೋಕತ್ರಯವಿಜಯಿನಾ ಗುರುಣಾ ಪ್ರಸಿದ್ಧೇನ ಭೂಯತೇ ತೇನ ಅನೇನ ಲಘೂರ್ಮಿ ಲೀಲಯಾ ಪತ್ಯತೇ ಹಾ ಇತಿ ಅಸಜ್ಜನೇನ ಮಜ್ಜನ್ ಪೃಥುಲಹರೀ ನಿಗೂಢಮೂರ್ತಿಃ ಸಂಪೂರ್ಣಪ್ರಮತಿಃ ಜಹಸೇ ।

★★★

**ಅವತಾರಿಕಾ**— ಆಚಾರ್ಯರು ದುರ್ಜನರ ನಿಂದಾವಚನವನ್ನು ಲೆಕ್ಕಿಸಲಿಲ್ಲ ಎಂದು ಹೇಳುತ್ತಾರೆ.

**ನೀಚಾನಾಮವಚವಚಾಂಸ್ಯಜೀಗಣನ್ನೋ**
**ದಭ್ರಾಣಾಂ ಕ್ಷುಭಿತಕರಾಣ್ಯದಭ್ರಸಂಖ್ಯಃ ।**
**ಕ್ರೋಷ್ಟೂನಾಂ ಶ್ವಕಲಕಲಪ್ರದಂ ವಿರಾವಂ**
**ಪಂಚಾಸ್ಯೋ ನ ಹಿ ಗಣಯೇದುದಾರವೀರ್ಯಃ ॥ 22 ॥**

**ಪದಚ್ಛೇದ**— ನೀಚಾನಾಂ, ಅವಚವಚಾಂಸಿ, ಅಜೀಗಣತ್, ನೋ, ದಭ್ರಾಣಾಂ, ಕ್ಷುಭಿತಕರಾಣಿ, ಅದಭ್ರಸಂಖ್ಯಃ, ಕ್ರೋಷ್ಟೂನಾಂ, ಶ್ವಕಲಕಲಪ್ರದಂ, ವಿರಾವಂ, ಪಂಚಾಸ್ಯಃ, ನ, ಹಿ, ಗಣಯೇತ್, ಉದಾರವೀರ್ಯಃ ।

**ಅನ್ವಯ—** ಅದಭ್ರಸಂಖ್ಯಃ, ದಭ್ರಾಣಾಂ, ಕ್ಷುಭಿತಕರಾಣಿ, ನೀಚಾನಾಂ, ಅವಚವಚಾಂಸಿ, ನೋ, ಅಜೀಗಣತ್, ಶ್ವಕಲಕಲಪ್ರದಂ, ಕ್ರೋಷ್ಟೋನಾಂ, ವಿರಾವಂ, ಉದಾರವೀರ್ಯಃ, ಪಂಚಾಸ್ಯಃ, ನ, ಗಣಯೇತ್, ಹಿ ।

**ಅನ್ವಯಾರ್ಥ—**

**ಅದಭ್ರಸಂಖ್ಯಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,

**ದಭ್ರಾಣಾಂ** = ಅಲ್ಪ ಜನರಿಗೆ,

**ಕ್ಷುಭಿತಕರಾಣಿ** = ಮನಃಖೇದವನ್ನು (ಮನಸ್ಸಿನ ತೆಗಳುವಿಕೆಯನ್ನು)ಉಂಟುಮಾಡುವ,

**ನೀಚಾನಾಂ** = ದುಷ್ಟರ,

**ಅವಚವಚಾಂಸಿ** = ಹೇಳಲು ಅಯೋಗ್ಯವಾದ ಮಾತುಗಳನ್ನು,

**ನ ಅಜೀಗಣತ್** = ಲೆಕ್ಕಿಸಲಿಲ್ಲ,

**ಶ್ವಕಲಕಲಪ್ರದಂ** = ನಾಯಿಗಳಿಗೆ ಕೋಲಾಹಲವನ್ನುಂಟುಮಾಡುವ,

**ಕ್ರೋಷ್ಟೂನಾಂ** = ನರಿಗಳ,

**ವಿರಾವಂ** = ಕೂಗನ್ನು,

**ಉದಾರವೀರ್ಯಃ** = ಮಹತ್ತಾದ ಅಂತಸ್ಸತ್ವವುಳ್ಳ,

**ಪಂಚಾಸ್ಯಃ** = ಸಿಂಹವು,

**ನ ಗಣಯೇತ್ ಹಿ** = ಲೆಕ್ಕಿಸಲಾರದಷ್ಟೆ,

ತಾತ್ಪರ್ಯ— ನರಿಗಳು ಗಟ್ಟಿಯಾಗಿ ಹುಕ್ಕೆಹೂ ಎಂದು ಊಳಿಡುವುವು. ಆಗ ನಾಯಿಗಳು ಕ್ಷೋಭೆಗೊಂಡು ಬೊಗಳಲು ಆರಂಭಿಸುವುವು. ಆದರೆ ಮಹತ್ತಾದ ಅಂತಃಸತ್ವವುಳ್ಳ ಧೀರಶೂರ ಮೃಗರಾಜನು ನರಿಗಳ ಕೂಗುಗಳನ್ನು ಲೆಕ್ಕಿಸುವುದಿಲ್ಲ. ತನ್ನಷ್ಟಕ್ಕೆ ಗಂಭೀರವಾಗಿರುತ್ತದೆ. ಅದರಂತೆ ಶ್ರೀಮಧ್ವಾಚಾರ್ಯರು ಸಾಮಾನ್ಯ ಜನರಿಗೆ ಮನಸ್ಸಿನಲ್ಲಿ ಕ್ಷೋಭೆಯನ್ನುಂಟುಮಾಡುವ ನೀಚರ ಅವಾಚ್ಯವಾದ ಮಾತುಗಳನ್ನು ಬಾಯಿಯಿಂದ ಆಡಲು ಅಯೋಗ್ಯವಾದ ದುರ್ವಚನಗಳನ್ನು ಲೆಕ್ಕಿಸಲೇ ಇಲ್ಲ. ಸುಮ್ಮನಿದ್ದರು. (ಇಲ್ಲಿ 'ವಾಕ್ಯಯೋರೇಕ ಸಾಮಾನ್ಯೇ ಪ್ರತಿವಸ್ತೂಪಮಾ ಮತಾ' ಎಂಬ ಲಕ್ಷಣದಿಂದ ಪ್ರತಿವಸ್ತೂಪಮಾಲಂಕಾರ)

ವಿಗ್ರಹ—

**ಅವಚವಚಾಂಸಿ—** ವಚಃ ವಚನಂ, ನ ವಿದ್ಯತೇ ವಚಃ ಯೇಷಾಂ ತಾನಿ ಅವಚಾನಿ, ಅವಚಾನಿ ಚ ತಾನಿ ವಚಾಂಸಿ ಚ ಅವಚವಚಾಂಸಿ ತಾನಿ ।

**ಕ್ಷುಭಿತಕರಾಣಿ—** ಕ್ಷುಭಿತಂ (ಕ್ಷೋಭಃ) ಕುರ್ವಂತೀತಿ ಕ್ಷುಭಿತಕರಾಣಿ, ಕ್ಷುಭಿತಸ್ಯ ಕರಾಣಿ ಕ್ಷುಭಿತಕರಾಣಿ ।

**ಅದಭ್ರಸಂಖ್ಯಃ—** ನ ದಭ್ರಾ ಅದಭ್ರಾ ಅದಭ್ರಾ ಸಂಖ್ಯಾ ಯಸ್ಯ ಸಃ ಅದಭ್ರಸಂಖ್ಯಃ ।

**ಶ್ವಕಲಕಲಪ್ರದಂ—** ಕಲಕಲಂ ಪ್ರದದಾತೀತಿ ಕಲಕಲಪ್ರದಃ, ಶುನಾಂ ಕಲಕಲಪ್ರದಃ ಶ್ವಕಲಕಲಪ್ರದಃ ತಂ ।

**ಉದಾರವೀರ್ಯಃ—** ಉದಾರಂ ವೀರ್ಯಂ ಯಸ್ಯ ಸಃ ಉದಾರವೀರ್ಯಃ ।

**ಕೋಶ—**

**ವಿರಾವ—** ಶಬ್ದ 'ಆರವಾರಾವಸಂರಾವವಿರಾವಾ' ಅಮರ ।

**ಕ್ರೋಷ್ಟು—** ನರಿ, 'ಶೃಗಾಲವಂಚಕಕ್ರೋಷ್ಟು ಫೇರು ಫೇರುವ ಜಂಬುಕಾಃ' ಅಮರ ।

**ಪಂಚಾಸ್ಯಃ—** ಸಿಂಹ, 'ಸಿಂಹೋ ಮೃಗೇಂದ್ರಃ ಪಂಚಾಸ್ಯಃ ಹರ್ಯಕ್ಷಃ ಕೇಸರೀ ಹರಿಃ' ಅಮರ ।

**ಕ್ರಿಯಾಪದ—** **ಅಜೀಗಣತ್** - ಗಣ ಸಂಖ್ಯಾನೇ ಸಕ. ಸೇಟ್. ಉಭ. ಭೂತೇ 'ಲುಙ್ ಈ ಚ ಗಣಃ' (ಪಾ. ಸೂ. 7.4.97) ಅಜೀಗಣತ್ ಇತ್ಯಾದಿ ರೂಪವೂ ಇದೆ ।

**ಗಣಯೇತ್** - ಗಣ ಸಂಖ್ಯಾನೇ ಧಾತು ವಿಧಿ ಲಿಙ್ ಪ್ರಥಮಪುರುಷ ಏಕವಚನ ।

ಅಜೀಗಣತ್ ಅಜೀಗಣತಾಂ ಅಜೀಗಣನ್, ಅಜೀಗಣಃ ಅಜೀಗಣತಂ ಅಜೀಗಣತ, ಅಜೀಗಣಂ ಅಜೀಗಣಾವ ಅಜೀಗಣಾಮ ।

ಗಣಯೇತ್ ಗಣಯೇತಾಂ ಗಣಯೇಯುಃ, ಗಣಯೇಃ ಗಣಯೇತಂ ಗಣಯೇತ್, ಗಣಯೇಯಂ ಗಣಯೇವ ಗಣಯೇಮ ।

**ಪ್ರಯೋಗ—** ಅದಭ್ರಸಂಖ್ಯೇನ ದಭ್ರಾಣಾಂ ಕ್ಷುಭಿತಕರಾಣಿ ನೀಚಾನಾಂ ಅವಚವಚಾಂಸಿ ನ ಅಗಣಿಷತ ಶ್ವಕಲಕಲ ಪ್ರದಃ ಕ್ರೋಷ್ಟೂನಾಂ ವಿರಾವಃ ಪಂಚಾಸ್ಯೇನ ನ ಗಣ್ಯೇತ್ ಹಿ ।

★ ★ ★

**ಅವತಾರಿಕಾ—** ಆಗ ಆಚಾರ್ಯರು ಸಮುದ್ರದ ಕಡೆಗೆ ಕಟಾಕ್ಷ ಬೀರಿದರು. ಸಮುದ್ರವು ಸ್ವಲ್ಪವೂ ಚಲಿಸದೆ ಕೆರೆಯಂತೆ ನಿಶ್ಚಲವಾಯಿತು ಎನ್ನುತ್ತಾರೆ.

**ಜನ್ಮಸ್ಥಿತ್ಯವಸಿತಿದಾಯಿನಂ ಕಟಾಕ್ಷಂ**
**ಲೋಕಾನಾಮಘಟಯದಂಬುಧೌ ಬೃಹದ್ಧೀಃ ।**
**ಆಕ್ರಾಂತೋಽಧಿಕಗುರುಣಾ ಸ ತೇನ ತಾವ-**
**ನ್ಮುಂಚನ್ ಸಂಚಲನಮಭೂತ್ತಟಾಕದೇಶ್ಯಃ ॥ 23 ॥**

**ಪದಚ್ಛೇದ—** ಜನ್ಮಸ್ಥಿತ್ಯವಸಿತಿದಾಯಿನಂ, ಕಟಾಕ್ಷಂ, ಲೋಕಾನಾಂ, ಅಘಟಯತ್, ಅಂಬುಧೌ, ಬೃಹದ್ಧೀಃ, ಆಕ್ರಾಂತಃ, ಅಧಿಕಗುರುಣಾ, ಸಃ, ತೇನ, ತಾವತ್, ಮುಂಚನ್, ಸಂಚಲನಂ, ಅಭೂತ್, ತಟಾಕದೇಶ್ಯಃ ।

**ಅನ್ವಯ—** ಬೃಹದ್ಧೀಃ, ಲೋಕಾನಾಂ, ಜನ್ಮಸ್ಥಿತ್ಯವಸಿತಿದಾಯಿನಂ, ಕಟಾಕ್ಷಂ, ಅಂಬುಧೌ, ಅಘಟಯತ್, ತಾವತ್, ಅಧಿಕಗುರುಣಾ, ತೇನ, ಆಕ್ರಾಂತಃ, ಸಃ, ಸಂಚಲನಂ, ಮುಂಚನ್, ತಟಾಕದೇಶ್ಯಃ, ಅಭೂತ್ ।

**ಅನ್ವಯಾರ್ಥ—**

**ಬೃಹದ್ಧೀಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,
**ಲೋಕಾನಾಂ** = ಸಮಸ್ತ ಲೋಕಗಳಿಗೆ, (ಸಮಸ್ತ ಜನರಿಗೆ)
**ಜನ್ಮಸ್ಥಿತಿಅವಸಿತಿದಾಯಿನಂ** = ಹುಟ್ಟು, ರಕ್ಷಣೆ, ಸಂಹಾರ ಇವುಗಳನ್ನು ಕೊಡುವ,
**ಕಟಾಕ್ಷಂ** = ಕಡೆಗಣ್ಣಿನ ನೋಟವನ್ನು,
**ಅಂಬುಧೌ** = ಸಮುದ್ರದಲ್ಲಿ,
**ಅಘಟಯತ್** = ಸೇರಿಸಿದರು,
**ತಾವತ್** = ಆಗ,
**ಅಧಿಕಗುರುಣಾ** = ಅತ್ಯಂತ ಸಮರ್ಥವಾದ,
**ತೇನ** = ಆಚಾರ್ಯರ ಆ ಕಡೆಗಣ್ಣಿನ ನೋಟದಿಂದ,
**ಆಕ್ರಾಂತಃ** = ಆಕ್ರಮಿಸಲ್ಪಟ್ಟ

ಸಃ = ಆ ಸಮುದ್ರವು,

ಸಂಚಲನಂ = ಅಲ್ಲಾಡುವಿಕೆಯನ್ನು,

ಮುಂಚನ್ = ಬಿಡುತ್ತಾ,

ತಟಾಕದೇಶ್ಯಃ = ಸರೋವರದಂತೆ,

ಅಭೂತ = ಆಯಿತು.

ತಾತ್ಪರ್ಯ— ಮೂಲ ಮುಖ್ಯಪ್ರಾಣಾವತಾರರಾದ ಆಚಾರ್ಯರು ತನ್ನ ಕಡೆಗಣ್ಣಿನ ನೋಟದಿಂದಲೇ ಸಮಸ್ತ ಲೋಕಗಳನ್ನೂ ಸಮಸ್ತ ಚೇತನರನ್ನೂ ಸೃಷ್ಟಿಸಿ ಪಾಲಿಸಿ ಸಂಹರಿಸುತ್ತಾರೆ. ಇಂತಹ ಅತ್ಯಂತ ಸಮರ್ಥವಾದ ತಮ್ಮ ಕಡೆಗಣ್ಣಿನ ನೋಟವನ್ನು ಆಚಾರ್ಯರು ಸಮುದ್ರದ ಕಡೆಗೆ ಹಾಯಿಸಿದರು. ಆಚಾರ್ಯರ ಕಟಾಕ್ಷದಿಂದ ಸಮುದ್ರನು ಬೆದರಿದನು. ಸಮುದ್ರದ ಏರಿಳಿತಗಳು ಅಲೆಗಳ ಹೊಯ್ದಾಟ ಭೋರ್ಗರೆತ ಎಲ್ಲವೂ ನಿಂತು ಹೋದುವು, ಸಮುದ್ರರಾಜನು ಚಿಕ್ಕ ಸರೋವರದಂತೆ ಶಾಂತವಾದನು. ಇದು ಮೊದಲು ಅತ್ತ ಇತ್ತ ಉಕ್ಕಿ, ಉಬ್ಬಿ ಅಲೆಗಳಿಂದ ಬಡಿದು ಬಹಳ ಸದ್ದುಗದ್ದಲ ಮಾಡುತ್ತಿದ್ದ ಸಮುದ್ರನು ಆಚಾರ್ಯರ ಕಡೆಗಣ್ಣಿನ ನೋಟದಿಂದ ಕೆರೆಯಂತಾಗಿ ಅಲ್ಲಾಡದೆ ನಿಂತನು ಎಂದು ಭಾವ.

ವಿಗ್ರಹ ಮತ್ತು ಕೋಶ—

ಜನ್ಮಸ್ಥಿತ್ಯವಸಿತಿದಾಯಿನಂ— ಜನ್ಮ ಚ ಸ್ಥಿತಿಶ್ಚ ಅವಸಿತಿಶ್ಚ ಜನ್ಮಸ್ಥಿತ್ಯವಸಿತಯಃ ತಾಃ (ಜನ್ಮಸ್ಥಿತ್ಯವಸಿತೀಃ) ದಾತುಂ ಶೀಲಂ ಅಸ್ಯ ಅಸ್ತೀತಿ ಜನ್ಮಸ್ಥಿತ್ಯವಸಿತಿದಾಯೀ ತಂ ।

ಕಟಾಕ್ಷಂ— ಕಡೆಗಣ್ಣಿನ ನೋಟ, 'ಕಟಾಕ್ಷೋಽಧಿಪಾಂಗದರ್ಶನೇ' ಅಮರ ।

ಬೃಹದ್ಧೀಃ— ಬೃಹತೀ ಧೀಃ ಯಸ್ಯ ಸಃ ಬೃಹದ್ಧೀಃ ।

ಅಧಿಕಗುರುಣಾ— ಅಧಿಕಂ ಗುರುಃ ಅಧಿಕಗುರುಃ, ತೇನ ಅಧಿಕಗುರುಣಾ ।

ತಟಾಕದೇಶ್ಯಃ— ಈಷದಸಮಾಪ್ತಃ ತಟಾಕಃ ತಟಾಕದೇಶ್ಯಃ ।

ಕ್ರಿಯಾಪದ— ಅಘಟಯತ್ - ಘಟ ಚೇಷ್ಟಾಯಾಂ ಅಕರ್ಮಕ ಸೇಟ್ ಆತ್ಮನೇಪದಿ ಣಿಜಂತದಲ್ಲಿ ಮಿತ್ ಆದುದರಿಂದ 'ಮಿತಾಂಹ್ರಸ್ವಃ' ಎಂದು ಹ್ರಸ್ವ ಅನದ್ಯತನಭೂತೇ ಲಙಾ ಪ್ರಥಮಪುರುಷ ಏಕವಚನ ।

ಅಘಟಯತ್ ಅಘಟಯತಾಂ ಅಘಟಯನ್, ಅಘಟಯಃ ಅಘಟಯತಂ ಅಘಟಯತ, ಅಘಟಯಂ ಅಘಟಯಾವ ಅಘಟಯಾಮ ।

ಪ್ರಯೋಗ— ಬೃಹದ್ಧಿಯಾ ಲೋಕಾನಾಂ ಜನ್ಮಸ್ಥಿತ್ಯವಸಿತಿದಾಯಿಕಟಾಕ್ಷಃ ಅಂಬುಧೌ ಅಘಟ್ಯತ ತಾವತ್ ಅಧಿಕ ಗುರುಣಾ ಆಕ್ರಾಂತೇನ ತೇನ ಸಂಚಲನಂ ಮುಂಚತಾ ತಟಾಕದೇಶ್ಯೇನ ಅಭಾವಿ ।

★ ★ ★

ಅವತಾರಿಕಾ— ಇಂತಹ ಅತ್ಯದ್ಭುತ ಮಹಿಮೆಗಳನ್ನು ಕಂಡರೂ ದುರ್ಜನರು ಆಚಾರ್ಯರನ್ನು ದ್ವೇಷಿಸುವುದನ್ನು ಬಿಡಲಿಲ್ಲ ಎಂದು ಹೇಳುತ್ತಾರೆ.

**ಇತ್ಯಾದ್ಯೈರಪಿ ಚರಿತ್ಯೈರನನ್ಯಸಾಧ್ಯೈ-**

**ರ್ನ ಸ್ಥೇಷ್ಠಾಂ ಬಹುಮತಿಮಾಪ ದುರ್ಜನೋಽಸ್ಮಿನ್ ।**

**ವಿದ್ವೇಷಂ ವ್ಯಧಿತ ಪುನರ್ನಿರಸ್ತಭಾಗ್ಯೇ**

**ತಸ್ಮಿನ್ ದುರ್ಮನಸಿ ತದೇವ ಶೋಭನಂ ಸ್ಯಾತ್ ॥ 24 ॥**

**ಪದಚ್ಛೇದ**— ಇತ್ಯಾದ್ಯೈಃ, ಅಪಿ, ಚರಿತ್ರೈಃ, ಅನನ್ಯಸಾಧ್ಯೈಃ, ನ, ಸ್ಥೇಷ್ಠಾಂ, ಬಹುಮತಿಂ, ಆಪ, ದುರ್ಜನಃ, ಅಸ್ಮಿನ್, ವಿದ್ವೇಷಂ, ವ್ಯಧಿತ, ಪುನಃ, ನಿರಸ್ತಭಾಗ್ಯೇ, ತಸ್ಮಿನ್, ದುರ್ಮನಸಿ, ತತ್, ಏವ, ಶೋಭನಂ, ಸ್ಯಾತ್ ।

**ಅನ್ವಯ**— ದುರ್ಜನಃ, ಇತ್ಯಾದ್ಯೈಃ, ಅನನ್ಯಸಾಧ್ಯೈಃ, ಚರಿತ್ರೈಃ, ಅಪಿ, ಅಸ್ಮಿನ್, ಸ್ಥೇಷ್ಠಾಂ, ಬಹುಮತಿಂ, ನ, ಆಪ, ಪುನಃ, ವಿದ್ವೇಷಂ, ವ್ಯಧಿತ, ನಿರಸ್ತಭಾಗ್ಯೇ, ದುರ್ಮನಸಿ, ತಸ್ಮಿನ್, ತತ್, ಏವ, ಶೋಭನಂ, ಸ್ಯಾತ್ ।

**ಅನ್ವಯಾರ್ಥ**—

**ದುರ್ಜನಃ** = ಕೆಟ್ಟಜನರು,

**ಇತ್ಯಾದ್ಯೈಃ** = ಇದೇ ಮೊದಲಾಗಿ ಉಳ್ಳ,

**ಅನನ್ಯಸಾಧ್ಯೈಃ** = ಇತರರಿಂದ ಮಾಡಲು ಅಶಕ್ಯವಾದ,

**ಚರಿತ್ರೈಃ ಅಪಿ** = ನಡವಳಿಕೆಗಳಿಂದಲೂ,

**ಅಸ್ಮಿನ್** = ಈ ಶ್ರೀಮಧ್ವಾಚಾರ್ಯರಲ್ಲಿ,

**ಸ್ಥೇಷ್ಠಾಂ** = ಅತ್ಯಂತ ಸ್ಥಿರವಾದ,

**ಬಹುಮತಿಂ** = ಗೌರವವನ್ನು,

**ನ ಆಪ** = ಹೊಂದಲಿಲ್ಲ,

**ಪುನಃ** = ಮತ್ತೂ,

**ವಿದ್ವೇಷಂ** = ಹಗೆತನವನ್ನು,

**ವ್ಯಧಿತ** = ಮಾಡಿತು.

**ನಿರಸ್ತಭಾಗ್ಯೇ** = ಒಳ್ಳೆಯ ಅದೃಷ್ಟಹೀನವಾದ,

**ದುರ್ಮನಸಿ** = ಕೆಟ್ಟ ಮನಸುಳ್ಳ,

**ತಸ್ಮಿನ್** = ಆ ದುಷ್ಟಭಾವದಲ್ಲಿ,

**ತತ್ ಏವ** = ಹಗೆತನವನ್ನು ಮತ್ತುಷ್ಟು ಹೆಚ್ಚಿಸಿಕೊಳ್ಳುವುದೇ,

**ಶೋಭನಂ** = ಯೋಗ್ಯವಾದುದು,

**ಸ್ಯಾತ್** = ಆದೀತು.

**ತಾತ್ಪರ್ಯ**— ಆಚಾರ್ಯರು ಈ ರೀತಿ ಸಮುದ್ರಸ್ತಂಭನ ಮತ್ತು ಇದೇ ರೀತಿಯ ಅನೇಕ ಇತರ ಮಹತ್ಕಾರ್ಯಗಳನ್ನು ಮಾಡಿದರು. ಅವನ್ನೆಲ್ಲಾ ಇತರರಿಗೆ ಮಾಡುವುದಕ್ಕೆ ಆಗುವುದಿಲ್ಲ. ಮನಸ್ಸಿನಲ್ಲಿ ಯೋಚಿಸಲೂ ಸಾಧ್ಯವಿಲ್ಲ ಇಂತಹ ಮಹತ್ತರವಾದ, ಅದ್ಭುತವಾದ ಆಚಾರ್ಯರ ಚರಿತಗಳನ್ನು ದುರ್ಜನರು ನೋಡಿದರು, ಆದರೂ ಶಾಶ್ವತ ದುಃಖಕ್ಕೆ ಭಾಗಿಗಳಾಗಬೇಕಾದ ಅವರು ತಮ್ಮ ದುರದೃಷ್ಟಕ್ಕನುಸಾರವಾಗಿ ಆಚಾರ್ಯರಲ್ಲಿ ಅಚಿಂತ್ಯಾದ್ಭುತವಾದ ಪವಾಡಗಳನ್ನು ನೋಡಿದರೂ ಅವರಲ್ಲಿ ಮತ್ತಷ್ಟು ದ್ವೇಷವನ್ನು ಹೆಚ್ಚಿಸಿಕೊಂಡರು. ಜೀವೋತ್ತಮರಲ್ಲಿ ಭಕ್ತಿಯನ್ನು ಮಾಡಿ ಉದ್ಧಾರವಾಗುವ ಸುಯೋಗವಿಲ್ಲದ ಅವರು ಸ್ವಭಾವತಃ ಕೆಟ್ಟಮನಸ್ಸುಳ್ಳವರೇ ಆಗಿದ್ದರು. ಅವರು ಹಾಗೆ ಮಹಾತ್ಮರನ್ನು ದ್ವೇಷಿಸುವುದೇ ಅವರಿಗೆ ಯೋಗ್ಯವಾದ ಕಾರ್ಯವಾಗಿದೆ ಎಂದು ಹೇಳಬೇಕಾಗಿದೆ. ಅಂಧಂತಮಸ್ಸಿಗೆ ಹೋಗುವ ಯೋಗ್ಯತೆಯುಳ್ಳವರು ವಿಷ್ಣುವಿನಲ್ಲಿಯೂ ವಿಷ್ಣುಭಕ್ತರಲ್ಲಿಯೂ ದ್ವೇಷವನ್ನು ತೋರಿಸುವುದು ಅವರ ಸ್ವಭಾವ ಸಿದ್ಧವಾಗಿದೆ, ಇದು ಯಥಾರ್ಥವಾದುದು ಎಂದು ಭಾವ.

ವಿಗ್ರಹ—

ಇತ್ಯಾದ್ಯೈಃ— ಆದೌ ಭವಂ ಆದ್ಯಂ, ಇತಿ ಆದ್ಯಂ ಯೇಷಾಂ ತಾನಿ ಇತ್ಯಾದ್ಯಾನಿ, ತೈಃ ಇತ್ಯಾದ್ಯೈಃ ।

ಅನನ್ಯಸಾಧ್ಯೈಃ— ಸಾಧಯಿತುಂ ಯೋಗ್ಯಾನಿ ಸಾಧ್ಯಾನಿ, ಅನ್ಯೈಃ ಸಾಧ್ಯಾನಿ ಅನ್ಯಸಾಧ್ಯಾನಿ ನ ಅನ್ಯಸಾಧ್ಯಾನಿ ಭವಂತೀತಿ ಅನನ್ಯಸಾಧ್ಯಾನಿ, ತೈಃ ಅನನ್ಯಸಾಧ್ಯೈಃ ।

ಸ್ಥೇಷ್ಠಾ— 'ಸ್ಥಿರಾ ಸ್ಥೇಯಸೀ ಸ್ಥೇಷ್ಠಾ' ಸ್ಥಿರ ಎಂಬ ಶಬ್ದದ ಅತಿಶಯಾರ್ಥಕವಾದ ಇಷ್ಠನ್ ಪ್ರತ್ಯಯಾಂತರೂಪ।

ನಿರಸ್ತಭಾಗ್ಯೇ— ನಿರಸ್ತಂ ಭಾಗ್ಯಂ ಯಸ್ಮಾತ್ ಸಃ ನಿರಸ್ತಭಾಗ್ಯಃ ತಸ್ಮಿನ್ ನಿರಸ್ತಭಾಗ್ಯೇ ।

ದುರ್ಮನಸಿ— ದುಷ್ಟಂ ಮನಃ ಯಸ್ಯ ಸಃ ದುರ್ಮನಾಃ ತಸ್ಮಿನ್ ದುರ್ಮನಸಿ ।

ಕ್ರಿಯಾಪದ— ಆಪ- ಆಪ್‌ಲೃ ವ್ಯಾಪ್ತೌ ಲಿಟ್ ವಿ ಉಪಸರ್ಗ ಡು ಧಾಞ ಧಾರಣಪೋಷಣಯೋ ಸಕ. ಅನಿ. ಆತ್ಮ. ಲುಙ್ । ವ್ಯಧಿತ - ಡು ಧಾಞ್ ದಾನೇ ಲಙ್ । ಸ್ಯಾತ್ - ಅಸ ಭುವಿ ಅಕರ್ಮಕ ಪರ. ವಿಧಿ ಲಿಙ್ ।

ಆಪ ಆಪತುಃ ಆಪುಃ । ಅಧಿತ ಅಧಿಷಾತಾಂ ಅಧಿಷತ । ಸ್ಯಾತ್ ಸ್ಯಾತಾಂ ಸ್ಯುಃ ।

ಪ್ರಯೋಗ— ದುರ್ಜನೇನ ಇತ್ಯಾದ್ಯೈಃ ಅನನ್ಯಸಾಧ್ಯೈಃ ಚರಿತ್ರೈಃ ಅಪಿ ಅಸ್ಮಿನ್ ಸ್ಥೇಷ್ಠಾ ಬಹುಮತಿಃ ನ ಆಪೇ ಪುನಃ (ತೇನ ದುರ್ಜನೇನ) ವಿದ್ವೇಷಃ ವ್ಯಧಾಯಿ ನಿರಸ್ತಭಾಗ್ಯೇ ತಸ್ಮಿನ್ ತೇ ನೈವ ಶೋಭನೇನ ಭೂಯೇತ ।

★★★

ಅವತಾರಿಕಾ— ಆಚಾರ್ಯರ ಮತ್ತೊಂದು ಮಹಿಮೆಯನ್ನು ಹೇಳಲು ಆರಂಭಿಸುತ್ತಾರೆ.

**ಸಂಪ್ರಾಪ್ತಂ ಸಹ ಸಹಜೇನ ಗಂಡವಾಟಂ**
**ಸ್ವೋಜಸ್ಸಂಪ್ರಕಟನ ಆದಿಶದ್ವಿಶಂಕಮ್ ।**
**ಶುಶ್ರೂಷಾಮಯಮುಚಿತೋ ವಿಧಾತುಮೀಷ-**
**ಲ್ಲೋಕಾನಾಮಿತಿ ವಚಸಾ ಪರೀಕ್ಷಕಾಣಾಮ್ ॥ 25 ॥**

ಪದಚ್ಛೇದ— ಸಂಪ್ರಾಪ್ತಂ, ಸಹ, ಸಹಜೇನ, ಗಂಡವಾಟಂ, ಸ್ವೋಜಸ್ಸಂಪ್ರಕಟನೇ, ಆದಿಶತ್, ವಿಶಂಕಂ, ಶುಶ್ರೂಷಾಂ, ಅಯಂ, ಉಚಿತಃ, ವಿಧಾತುಂ, ಈಷತ್, ಲೋಕಾನಾಂ, ಇತಿ, ವಚಸಾ, ಪರೀಕ್ಷಕಾಣಾಂ ।

ಅನ್ವಯ— (ಸಃ)ಸಹಜೇನ, ಸಹ, ಸಂಪ್ರಾಪ್ತಂ, ಗಂಡವಾಟಂ, ಅಯಂ, ಈಷತ್, ಶುಶ್ರೂಷಾಂ, ವಿಧಾತುಂ, ಉಚಿತಃ, ಇತಿ, ಪರೀಕ್ಷಕಾಣಾಂ, ಲೋಕಾನಾಂ, ವಚಸಾ, ವಿಶಂಕಂಸ್ವೋಜಸ್ಸಂಪ್ರಕಟನೇ, ಆದಿಶತ್ ।

ಅನ್ವಯಾರ್ಥ—

(ಸಃ = ಆ ಮಧ್ವಾಚಾರ್ಯರು),

ಸಹಜೇನ ಸಹ = ಸಹೋದರನೊಡನೆ,

ಸಂಪ್ರಾಪ್ತಂ = ಬಂದಿದ್ದ

ಗಂಡವಾಟಂ = ಕೊಡಿಂಜಾಡಿತ್ತಾಯ ಎಂಬ ಹೆಸರಿನ ಬ್ರಾಹ್ಮಣನನ್ನು ಕುರಿತು,

ಅಯಂ = ಇವನು,

ಈಷತ್ = ಸ್ವಲ್ಪ,

ಶುಶ್ರೂಷಾಂ = ಸೇವೆಯನ್ನು (ತಮ್ಮ ಜತೆಗೆ ಸೆಣಸಾಟವನ್ನು),

**ವಿಧಾತುಂ** = ಮಾಡಲು,

**ಉಚಿತಃ ಇತಿ** = ಯೋಗ್ಯನೆಂದು,

**ಪರೀಕ್ಷಕಾಣಾಂ** = ಬಲಪರೀಕ್ಷೆ ಮಾಡುವ,

**ಲೋಕಾನಾಂ** = ಜನರ,

**ವಚಸಾ** = ಮಾತಿನಿಂದ,

**ವಿಶಂಕಂ** = ಸಂದೇಹವಿಲ್ಲದ ಹಾಗೆ,

**ಸ್ವೋಜಪಸಂಪ್ರಕಟನೇ** = ತನ್ನ ಬಲದ ಚೆನ್ನಾಗಿ ತೋರಿಸುವ ವಿಷಯದಲ್ಲಿ

**ಆದಿಶತ್** = ಅಪ್ಪಣೆ ಮಾಡಿದರು.

**ತಾತ್ಪರ್ಯ—** ಕೊಡಿಂಜಾಡಿ ಎಂಬ ಗ್ರಾಮದಲ್ಲಿ ಒಬ್ಬ ಬ್ರಾಹ್ಮಣ ಮಲ್ಲನಿದ್ದನು. ಅವನಿಗೆ ಆ ಗ್ರಾಮದ ಹೆಸರಿನಿಂದ ಕೊಡಿಂಜಾಡಿತ್ತಾಯ ಎಂದೇ ಹೆಸರಾಗಿತ್ತು. ಅವನ ಅಣ್ಣನೂ, ತಮ್ಮನೂ ಕೂಡ ತಮ್ಮನಂತೆಯೇ ಕುಸ್ತಿ ಸಾಮು ಮಾಡಿದ ಒಳ್ಳೆ ಬಲಶಾಲಿಯಾದ ಜಟ್ಟಿಯಾಗಿದ್ದನು. ಆಚಾರ್ಯರು ದೇಹಬಲದಲ್ಲಿ ಎಲ್ಲರನ್ನು ಮೀರಿಸಿದವರು ಎಂಬ ಪ್ರಸಿದ್ಧಿಯಿತ್ತು. ಇದನ್ನು ಸ್ವಲ್ಪಮಟ್ಟಿಗಾದರೂ ಪರೀಕ್ಷಿಸಿ ನೋಡಬೇಕೆಂದು ಕೆಲವು ಕೂತುಹಲಿಗಳಾದ ಜನರು ಬಯಸಿದರು. ಒಂದು ದಿನ ಆ ಅಣ್ಣಾ ತಮ್ಮಂದಿರಾದ ಮಲ್ಲರು ಆಚಾರ್ಯರು ಇದ್ದಲ್ಲಿಗೆ ಬಂದರು. ಆಗ ಮೊದಲೇ ಕಾರ್ಯಕ್ರಮವನ್ನು ಆಲೋಚಿಸಿದ್ದ ಬಲಾಬಲ ಪರೀಕ್ಷೆ ಮಾಡುವ ಮಧ್ಯಸ್ಥರಂತೆ ಇದ್ದ ಕುತೂಹಲಿಗಳಾದ ಜನರು ಆಚಾರ್ಯರನ್ನು ಕುರಿತು ಈ ಜಟ್ಟಿಯು ತಮ್ಮ ಸೇವೆಯನ್ನು ಮಾಡಲು ಅರ್ಹನಾದ ವ್ಯಕ್ತಿಯು ಎಂಬ ಗೂಢಾಭಿಪ್ರಾಯದಿಂದ ಮಾತನಾಡಿದರು. ಸ್ವಲ್ಪವೂ ಭಯವಿಲ್ಲದ ಆಚಾರ್ಯರು ಕೂಡಲೇ ಹಾಗಾದರೆ ಬಹಳ ಸಂತೋಷ ಇವನೊಬ್ಬನೆ ಅಲ್ಲ, ಇವನೂ, ಇವನ ತಮ್ಮನೂ ಇಬ್ಬರೂ ಏಕಕಾಲದಲ್ಲಿ ತಮ್ಮಿಬ್ಬರ ಓಜಸ್ಸನ್ನೂ, ತೇಜಸ್ಸನ್ನು ನಮ್ಮ ಮೇಲೆ ಪೂರ್ಣಬಲ ಪ್ರಯೋಗ ಮಾಡುವುದು ಹೇಗೆ ಎಂದು ಸ್ವಲ್ಪವೂ ವಿಚಾರ ಮಾಡದೆ ಎಲ್ಲ ರೀತಿಯಲ್ಲಿಯೂ ಬಲವನ್ನು ಪರೀಕ್ಷಿಸಲಿ ಎಂದರು.

**ವಿಗ್ರಹ—**

**ಸಹಜೇನ—** ಸಹ ಜಾಯತೇ ಇತಿ ಸಹಜಃ ತೇನ ।

**ಸ್ವೋಜಪಸಂಪ್ರಕಟನೇ—** ಸ್ವಸ್ಯ ಓಜಃ ಸ್ವೋಜಃ, ಸ್ವೋಜಸಃ ಸಂಪ್ರಕಟನಂ ಸ್ವೋಜಸ್ಸಂಪ್ರಕಟನಂ, ತಸ್ಮಿನ್ ।

**ವಿಶಂಕಂ—** ವಿಗತಾ ಶಂಕಾ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ವಿಶಂಕಂ ।

**ಪರೀಕ್ಷಕಣಾಂ—** ಪರೀಕ್ಷಂತೇ ಇತಿ ಪರೀಕ್ಷಕಾಃ ತೇಷಾಂ ।

**ವಿಶೇಷಾಂಶ—** ಗಂಡವಾಟ ಎಂಬ ಪದದ ವಿಷಯದಲ್ಲಿ ಭಾವಪ್ರಕಾಶಿಕಾ ಟಿಪ್ಪಣಿ – 'ಗಂಡವಾಟಸ್ಯ ಕೊಡಿಂಜಾಡಿ ಇತ್ಯಪಭ್ರಷ್ಟಭಾಷಾ' ಗಂಡವಾಟ ಎಂಬ ಪದಕ್ಕೆ ಕೊಡಿಂಜಾಡಿ ಎಂದು ಅಪಭ್ರಷ್ಟವಾದ ತೌಳವ ಭಾಷೆಯಲ್ಲಿ ಹೆಸರು. ಆ ಗ್ರಾಮದ ಆ ಮಲ್ಲನಿಗೆ ಕೊಡಿಂಜಾಡಿತ್ತಾಯ (ಕೊಡಿಂಜಾಡಿ)ಗ್ರಾಮದವನು ಎಂಬುದು ರೂಢನಾಮವಾಗಿತ್ತು ಎಂದು ತಿಳಿಯಬಹುದು.

**ಕ್ರಿಯಾಪದ— ಆದಿಶತ್** - ದಿಶ ಅತಿಸರ್ಜನೇ ಆ ಉಪಸರ್ಗ ಸಕ ಅನಿ, ಪರ. ಅನದ್ಯತನ ಭೂತೇ ಲಙ್ ।

ಆದಿಶತ್ ಆದಿಶತಾಂ ಆದಿಶನ್, ಆದಿಶಃ ಆದಿಶತಂ ಆದಿಶತ ಆದಿಶಂ ಆದಿಶಾವ ಆದಿಶಾಮ ।

**ಪ್ರಯೋಗ—** (ತೇನ) ಸಹಜೇನ ಸಹ ಸಂಪ್ರಾಪ್ತಃ ಗಂಡವಾಟಃ (ಕರ್ಮಪದ) ಅನೇನ ಈಷತ್ ಶುಶ್ರೂಷಾಂ ವಿಧಾತುಂ ಉಚಿತೇನ ಭೂಯತೇ ಇತಿ ಪರೀಕ್ಷಕಾಣಾಂ ಲೋಕಾನಾಂ ವಚಸಾ ವಿಶಂಕಂ ಸ್ವೋಜಸ್ಸಂಪ್ರಕಟೇನ ಆದಿಶ್ಯತ್ ।

★★★

**ಅವತಾರಿಕಾ**— ಆ ಗಂಡವಾಟನೆಂಬ ಜಟ್ಟಿಯ ಬಲವು ಅಸಾಧಾರಣವಾಗಿತ್ತು ಎಂದು ವಿವರಿಸಿ ಹೇಳುತ್ತಾರೆ.

**ಶ್ರೀಕಾಂತೇಶ್ವರಸದನೇಽನಯತ್ ಕಿಲೈಕೋ**
**ಯಸ್ತ್ರಿಂಶನ್ನರವರನೀತಕೇತುಯಷ್ಟಿಮ್ ।**
**ಆಹತ್ಯಾಽಗುರುಗದಯೈವ ನಾರಿಕೇಲಾತ್**
**ಯೋ ಲೇಭೇ ತರಲತರಾತ್ ಫಲಾನಿ ಕಾಮಮ್ ॥ 26 ॥**

**ಪದಚ್ಛೇದ**— ಶ್ರೀಕಾಂತೇಶ್ವರಸದನೇ, ಅನಯತ್, ಕಿಲ, ಏಕಃ, ಯಃ, ತ್ರಿಂಶನ್ನರವರನೀತಕೇತುಯಷ್ಟಿಂ, ಆಹತ್ಯಾ, ಅಗುರುಗದಯಾ, ಏವ, ನಾರಿಕೇಲಾತ್, ಯಃ, ಲೇಭೇ, ತರಲತರಾತ್, ಫಲಾನಿ, ಕಾಮಮ್ ।

**ಅನ್ವಯ**— ಯಃ, ಶ್ರೀಕಾಂತೇಶ್ವರಸದನೇ, ತ್ರಿಂಶನ್ನರವರನೀತಕೇತುಯಷ್ಟಿಂ, ಏಕಃ, ಅನಯತ್, ಕಿಲ, ಯಃ, ಅಗುರುಗದಯಾ, ಏವ, ಆಹತ್ಯಾ, ತರಲತರಾತ್, ನಾರಿಕೇಲಾತ್, ಫಲಾನಿ, ಕಾಮಂ, ಲೇಭೇ ।

**ಅನ್ವಯಾರ್ಥ**—

**ಯಃ** = ಯಾವ ಗಂಟವಾಟನು (ಕೊಡಿಂಜಾಡಿತ್ತಾಯ ಜಟ್ಟಿಯು),

**ಶ್ರೀಕಾಂತೇಶ್ವರಸದನೇ** = ಶ್ರೀಕಾಂತೇಶ್ವರದೇವಾಲಯದಲ್ಲಿ,

**ತ್ರಿಂಶತ್‌ನರವರನೀತಂಕೇತುಯಷ್ಟಿಂ** = ಮೂವತ್ತು ಮಂದಿ ಶ್ರೇಷ್ಠ ಮನುಷ್ಯರಿಂದ (ರಾಜಭಟರಿಂದ) ಒಯ್ಯಲ್ಪಟ್ಟ ಧ್ವಜಸ್ತಂಭವನ್ನು,

**ಏಕಃ** = ಒಬ್ಬನೇ,

**ಅನಯತ್ ಕಿಲ** = ಒಯ್ದಿನೊ,

**ಯಃ** = ಯಾವನು,

**ಅಗುರುಗದಯಾ** = ಭಾರವಾದ ಗದೆಯಿಂದಲೇ,

**ಆಹತ್ಯಾ** = ಹೊಡೆಯುವುದರಿಂದ (ಅಗುರುಗದಯಾ ಏವ ಆಹತ್ಯಾ = ಭಾರವಿಲ್ಲದ ಗದೆಯಿಂದ ಹೊಡೆಯುವುದರಿಂದಲೇ ಅಥವಾ ಅಗರು ಯಥಾ ಭವತಿ ತಥಾ = ಹಗುರವಾಗಿ ಗದಯಾ ಏವ ಆಹತ್ಯಾ = ಗದೆಯಿಂದ ಹೊಡೆಯುವುದರಿಂದಲೇ),

**ತರಲತರಾತ್** = ಅಲ್ಲಾಡುವ,

**ನಾಲಿಕೇರಾತ್** = ತೆಂಗಿನ ಮರದ ದೆಸೆಯಿಂದ,

**ಫಲಾನಿ** = ತೆಂಗಿನಕಾಯಿಗಳನ್ನು,

**ಕಾಮಂ** = ಯಥೇಚ್ಛವಾಗಿ,

**ಲೇಭೇ** = ಪಡೆದನು.

**ತಾತ್ಪರ್ಯ**— ಶ್ರೀಕಾಂತಾವರ ಎಂಬ ಊರಿನಲ್ಲಿ ಕಾಂತೇಶ್ವರ ಎಂಬ ಈಶ್ವರ ದೇವಾಲಯವಿದೆ. ಅಲ್ಲಿಯ ಭಾರವಾದ ಸುವರ್ಣಖಚಿತವಾದ ಧ್ವಜಸ್ತಂಭವನ್ನು ಇತರ ಸಮಯದಲ್ಲಿ ರಾಜನ ಅರಮನೆಯಲ್ಲಿಡುತ್ತಿದ್ದರು. ಉತ್ಸವ ಸಮಯದಲ್ಲಿ ಮೂವತ್ತು ಮಂದಿ ಬಲಿಷ್ಠರಾದ ತರುಣರಾಜಭಟ್ಟರು ಆ ಧ್ವಜಸ್ತಂಭವನ್ನು ಕಾಂತೇಶ್ವರ ದೇವಾಲಯಕ್ಕೆ ತರುತ್ತಿದ್ದರು. ಉತ್ಸವವು ಮುಗಿದ ಮೇಲೆ ಹಿಂದಿರುಗಿ ತೆಗೆದುಕೊಂಡು ಹೋಗುತ್ತಿದ್ದರು. ಇಂತಹ ಭಾರವಾದ ಧ್ವಜಸ್ತಂಭವನ್ನು ಈ ಗಂಡವಾಟ (ಕೊಡಿಂಜಾಡಿತ್ತಾಯ) ಮಲ್ಲನು ಒಬ್ಬನೇ ದೇವಸ್ಥಾನಕ್ಕೆ ಎತ್ತಿಕೊಂಡು ಹೋಗುತ್ತಿದ್ದನು ಮತ್ತು ಹಿಂದಿರುಗಿ ತರುತ್ತಿದ್ದನು. ತೆಂಗಿನಮರದಲ್ಲಿ ಕಾಯಿಗಳು ಬಲಿತಾಗ ಯಾರಾದರೂ ಬಲಿಷ್ಠ ಯುವಕರು ಎತ್ತರವಾದ ಮರವನ್ನು ಹತ್ತಿ ಸಾಹಸದಿಂದ ಆ ಕಾಯಿಗಳನ್ನು ಕೀಳಬೇಕಾಗುತ್ತದೆ. ಆದರೆ ಕೊಡಿಂಜಾಡಿತ್ತಾಯನಿಗೆ ಈ ಶ್ರಮವೇ ಇರಲಿಲ್ಲ. ಅವನ ಹತ್ತಿರ

ಒಂದು ಭಾರವಾದ ಮರದ ಗದೆಯಿತ್ತು. ಆದರಿಂದ ಹಗುರವಾಗಿ ಹದವರಿತು ಹೊಡೆತರೆ ಬಲಿತ ಕಾಯಿಗಳು ಮಾತ್ರವೇ ಉದುರುತ್ತಿದ್ದವು. ಅವನು ಈ ರೀತಿಯಾಗಿ ಮರದ ಗದೆಯ ಹೊಡೆತದಿಂದಲೇ ಬೇಕಾದಷ್ಟು ಕಾಯಿಗಳನ್ನು ಪಡೆಯುತ್ತಿದ್ದನು. ಅವನು ಹಗುರವಾದ ಗದೆಯಿಂದಲೂ ಹೊಡೆದು ಬೇಕಾದಷ್ಟು ಕಾಯಿಗಳನ್ನು ಉರುಳಿಸುತ್ತಿದ್ದನು. ಇಂತಹ ಸಾಮರ್ಥ್ಯಶಾಲಿ ಕೊಡಿಂಜಾಡಿತ್ತಾಯನ ಮೂಲಕವಾಗಿ ಆಚಾರ್ಯರ ಬಲಪರೀಕ್ಷೆಯನ್ನು ಮಾಡಬೇಕೆಂದು ಜಟ್ಟಿಗಳ ಬಲಾಬಲ ಪರೀಕ್ಷೆಯಲ್ಲಿ ಆಸಕ್ತರಾದ ಜನರು ನಿಶ್ಚಯಿಸಿದರು (ಎಂದು ಹಿಂದಿನ ಶ್ಲೋಕದ ಜತೆಗೆ ಏಕಾನ್ವಯವು) ಕಾಂತಾವರ ಎಂಬುದು ದಕ್ಷಿಣ ಕನ್ನಡದ ಕಾರ್ಕಳ ಪಟ್ಟಣದಿಂದ 5, 6 ಮೈಲು ಅಂತರದ ಹಳ್ಳಿ.

ವಿಗ್ರಹ ಮತ್ತು ಕೋಶ—

ಶ್ರೀಕಾಂತೇಶ್ವರಸದನೇ— ಶ್ರೀಕಾಂತಶ್ಚಸೌ ಈಶ್ವರಶ್ಚ ಶ್ರೀಕಾಂತೇಶ್ವರಃ, ಶ್ರೀಕಾಂತೇಶ್ವರಸ್ಯ ಸದನಂ ಶ್ರೀಕಾಂತೇಶ್ವರಸದನಂ, ತಸ್ಮಿನ್ ।

ತ್ರಿಂಶನ್ನರವರನೀತಕೇತುಯಷ್ಟಿಂ— ನರೇಷು ವರಾಃ ನರವರಾಃ, ತ್ರಿಂಶಚ್ಚ ತೇ ನರವರಾಶ್ಚ ತ್ರಿಂಶನ್ನರವರಾಃ, ತ್ರಿಂಶನನರವರೈಃ ನೀತಾ ತ್ರಿಂಶನ್ನರವರನೀತಾ, ಕೇತೋಃ ಯಷ್ಟಿಃ ಕೇತುಯಷ್ಟಿಃ ತ್ರಿಂಶನ್ನರವರನೀತಾ ಚ ಸಾ ಕೇತುಯಷ್ಟಿಶ್ಚ ತ್ರಿಂಶನ್ನರವರನೀತಕೇತುಯಷ್ಟಿಃ ತಾಂ । ಕೇತು = ಧ್ವಜ (ಸ್ತಂಭ), 'ಗ್ರಹಭೇದೇ ಧ್ವಜೇಕೇತುಃ' ಅಮರ ।

ಅಗುರುಗದಯಾ— ಗುರ್ವೀ ಚ ಸಾ ಗದಾ ಚ ಗುರುಗದಾ ತಯಾ ಗುರುಗದಯಾ, ನ ಗುರುಃ ಅಗುರುಃ ಅಗುರುಶ್ಚಸಾ ಗದಾ ಚ ಅಗುರುಗದಾ ತಯಾ ಅಗುರುಗದಯಾ, ಅಥವಾ ನ ಗುರು ಯಥಾ ಭವತಿ ತಥಾ ಅಗುರು (ಕ್ರಿ.ವಿ.) ।

ತರಲತರಾತ್— ಅತಿಶಯೇನ ತರಲಃ ತರಲತರಃ ತಸ್ಮಾತ್ ತರಲತರಾತ್ ।

ಕಾಮಂ— ಯಥೇಚ್ಚವಾಗಿ, 'ಕಾಮಂ ಪ್ರಕಾಮಂ ಪರ್ಯಾಪ್ತಂ' ಅಮರ ।

ಕ್ರಿಯಾಪದ— ಅನಯತ್ - ಣೀಞ ಪ್ರಾಪಣೇ ಸಕ. ಉಭ. ಅನಿ. ಅನದ್ಯತನಭೂತೇ ಲಙ್ ಪ್ರಥಮಪುರುಷ ಏಕವಚನ ।

ಲೇಭೇ - ಡುಲಭಷ್ ಪ್ರಾಪ್ತೌ(ಲಭ್) ಸಕ. ಅನಿ. ಆತ್ಮ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ ।

ಅನಯತ್ ಅನಯತಾಂ ಅನಯನ್ ಇತ್ಯಾದಿ । ಲೇಭೇ ಲೇಭಾತೇ ಲೇಭಿರೇ ಇತ್ಯಾದಿ ।

ಪ್ರಯೋಗ— ಯೇನ ಶ್ರೀಕಾಂತೇಶ್ವರಸದನೇ ತ್ರಿಂಶನ್ನರವರನೀತಕೇತುಯಷ್ಟಿಃ ಏಕೇನ ಅನೀಯತ ಕಿಲ ಯೇನ ಗುರುಗದಯಾ ಏವ ಆಹತ್ಯಾ ತರಲತರಾತ್ ನಾರಿಕೇಲಾತ್ ಫಲಾನಿ ಕಾಮಂ ಲೇಭಿರೇ ।

★★★

ಅವತಾರಿಕಾ— ಆ ಜಟ್ಟಿಗಳಿಬ್ಬರೂ ಪ್ರಕೃತದಲ್ಲಿ ಆಚಾರ್ಯರ ಮೇಲೆ ತೋರಿಸಿದ ತಮ್ಮ ಸಾಮರ್ಥ್ಯವನ್ನು ವಿವರಿಸುತ್ತಾರೆ.

**ಏತಾದೃಗ್‌ಬಲವಿಭವಃ ಸ ತಸ್ಯ ಕಂಠಂ**
**ತಜ್ಜ್ಯೇಷ್ಠೋಽಪ್ಯಭಿತ ಉಭೌ ಸಮಂ ಗೃಹೀತ್ವಾ ।**
**ನಿಷ್ಪೇಷ್ಟುಂ ಪರಮಮವಾಪತುಃ ಪ್ರಯತ್ನಂ**
**ಸಂಘರ್ಷಾತ್ ಕ್ರಮಪರಿವರ್ಧಮಾನತೈಕ್ಷ್ಣ್ಯಮ್ ॥ 27 ॥**

**ಪದಚ್ಛೇದ—** ಏತಾದೃಗ್‌ಬಲವಿಭವಃ, ಸಃ, ತಸ್ಯ, ಕಂಠಂ, ತಜ್ಜ್ಯೇಷ್ಠಃ, ಅಪಿ, ಅಭಿತಃ, ಉಭೌ, ಸಮಂ, ಗೃಹೀತ್ವಾ ನಿಷ್ಪೇಷ್ಟುಂ, ಪರಮಂ, ಅವಾಪತುಃ, ಪ್ರಯತ್ನಂ, ಸಂಘರ್ಷಾತ್, ಕ್ರಮಪರಿವರ್ಧಮಾನತೈಕ್ಷ್ಣ್ಯಮ್ ।

**ಅನ್ವಯ—** ಏತಾದೃಗ್‌ಬಲವಿಭವಃ, ಸಃ, ತಜ್ಜ್ಯೇಷ್ಠಃ, ಅಪಿ, ಉಭೌ, ಸಂಘರ್ಷಾತ್, ಕ್ರಮಪರಿವರ್ಧಮಾನ ತೈಕ್ಷ್ಣ್ಯಮ್, ತಸ್ಯ, ಕಂಠಂ, ಸಮಂ, ಗೃಹೀತ್ವಾ ನಿಷ್ಪೇಷ್ಟುಂ, ಪರಮಂ, ಪ್ರಯತ್ನಂ, ಅವಾಪತುಃ ।

**ಅನ್ವಯಾರ್ಥ—**

**ಏತಾದೃಗ್‌ಬಲವಿಭವಃ** = ಇಂತಹ ಸಾಮರ್ಥ್ಯಾತಿಶಯವುಳ್ಳ,

**ಸಃ** = ಆ ಗಂಡವಾಟನು,

**ತತ್** = ಅವನ,

**ಅಪಿ** = ಸಹೋದರನಾದ ಅಣ್ಣನೂ,

**ಉಭೌ** = ಇವರಿಬ್ಬರೂ,

**ಸಂಘರ್ಷಾತ್** = ಕೈಯಿಂದ ಹಿಸುಕುವುದರಿಂದ,

**ಕ್ರಮಪರಿವರ್ಧಮಾನತೈಕ್ಷ್ಣ್ಯಂ** = ಕ್ರಮಕ್ರಮವಾಗಿ ಹೆಚ್ಚುತ್ತಿರುವ ಕಠಿಣತೆಯುಳ್ಳ,

**ತಸ್ಯ** = ಆ ಶ್ರೀಮಧ್ವಾಚಾರ್ಯರ,

**ಕಂಠಂ** = ಗಂಟಲನ್ನು,

**ಅಭಿತಃ** = ಸುತ್ತಲೂ,

**ಸಮಂ** = ಒಟ್ಟಿಗೆಯೇ,

**ಗೃಹೀತ್ವಾ** = ಹಿಡಿದುಕೊಂಡು,

**ನಿಷ್ಪೇಷ್ಟುಃ** = ಹಿಸುಕಲು,

**ಪರಮಂ ಪ್ರಯತ್ನಂ** = ಹೆಚ್ಚಾದ ಪ್ರಯತ್ನವನ್ನು,

**ಅವಾಪತುಃ** = ಹೊಂದಿದರು.

**ತಾತ್ಪರ್ಯ—** ಇಂತಹ ದೇಹಸಾಮರ್ಥ್ಯವುಳ್ಳ ಗಂಡವಾಟನು ಅವನ ಅಣ್ಣನೂ ಇವರಿಬ್ಬರೂ ಒಂದು ದಿನ ಆಚಾರ್ಯರ ಗಂಟಲನ್ನು ಹಿಸುಕಲು ಎರಡು ಕಡೆಯಿಂದ ಬಂದು ಪ್ರಯತ್ನಪಟ್ಟರು. ಒಬ್ಬನು ಒಂದು ಕಡೆಯಿಂದಲೂ, ಮತ್ತೊಬ್ಬನೂ ಮತ್ತೊಂದು ಕಡೆಯಿಂದಲೂ ಬಂದು ಆಚಾರ್ಯರ ಗಂಟಲು ಮತ್ತು ಕತ್ತುಗಳನ್ನು ಮರ್ದನ ಮಾಡಲಾರಂಭಿಸಿದರು. ಆದರೆ ಈ ಅಣ್ಣ ತಮ್ಮಂದಿರಾದ ಮಹಾಸಾಮರ್ಥ್ಯಶಾಲಿಗಳಾದ ಜಟ್ಟಿಗಳು ಆಚಾರ್ಯರ ಕಂಠ ಕುತ್ತಿಗೆಗಳನ್ನು ಬಿಗಿಯಾಗಿ ಹಿಡಿದು ಹಿಸುಕಿದಂತೆ ಆಚಾರ್ಯರ ಕಂಠಕುತ್ತಿಗೆಗಳು ಬಿಗಿಯಾದವು. ಕಠಿನತೆಯು ಹೆಚ್ಚಾಯಿತು. ಆಗ ಅವರಿಬ್ಬರೂ ಆಚಾರ್ಯರ ಕಂಠವನ್ನು ಮತ್ತಷ್ಟು ಬಿಗಿಯಾಗಿ ಹಿಸುಕಲು ಪ್ರಯತ್ನಪಟ್ಟರು, ಆದರೆ ಇಬ್ಬರೂ ಸೇರಿ ಕುತ್ತಿಗೆಯನ್ನು ಹಿಸುಕಲು ಹೆಚ್ಚು ಹೆಚ್ಚಾಗಿ ಪ್ರಯತ್ನಿಸುತ್ತಿದ್ದಂತೆಯೇ ಆಚಾರ್ಯರ ಕಂಠ ಕುತ್ತಿಗೆಗಳು ಗಟ್ಟಿಗಟ್ಟಿಯಾಗುತ್ತಾ ಬಂದವು. ಅಣ್ಣತಮ್ಮಂದಿರು ಎಷ್ಟು ಹೆಚ್ಚಾಗಿ ತಮ್ಮ ಬಲವನ್ನು ಉಪಯೋಗಿಸುತ್ತಿದ್ದರೋ ಅಷ್ಟೂ ಕೂಡ ಆಚಾರ್ಯರ ಕತ್ತು ಗಂಟಲುಗಳು ಗಟ್ಟಿಯಾಗುತ್ತಿದ್ದವು. ಅವರಿಗೆ ಹಿಸುಕಲು ಕಷ್ಟವಾಗುತ್ತಿತ್ತು.

ವಿಗ್ರಹ—

ಏತಾದೃಗ್‌ಬಲವಿಭವಃ— ಬಲಸ್ಯ ವಿಭವಃ ಬಲವಿಭವಃ, ಏತಾದೃಕ್ ಬಲವಿಭವಃ ಯಸ್ಯ ಸಃ ಏತಾದೃಗ್‌ಬಲವಿಭವಃ, ತಸ್ಯ ಏತಾದೃಗ್‌ಬಲವಿಭವಸ್ಯ ।

ತಜ್ಜ್ಯೇಷ್ಠಃ— ತಸ್ಯ ಜ್ಯೇಷ್ಠಃ ತಜ್ಜ್ಯೇಷ್ಠಃ ।

ಕ್ರಮಪರಿವರ್ಧಮಾನತೈಕ್ಷ್ಣ್ಯಂ— ಕ್ರಮೇಣ ಪರಿವರ್ಧಮಾನಂ ಕ್ರಮಪರಿವರ್ಧಮಾನಂ, ತೀಕ್ಷ್ಣಸ್ಯ ಭಾವಃ ತೈಕ್ಷ್ಣ್ಯಂ, ಕ್ರಮಪರಿವರ್ಧಮಾನಂ ತೈಕ್ಷ್ಣ್ಯಂ, ಯಸ್ಯ ಸಃ ಕ್ರಮಪರಿವರ್ಧಮಾನತೈಕ್ಷ್ಣಿ, ತಂ ಕ್ರಮಪರಿವರ್ಧಮಾನತೈಕ್ಷ್ಣ್ಯಂ ।

ಕ್ರಿಯಾಪದ— ಅವಾಪತುಃ -ಆಪ್ ಲೃ ವ್ಯಾಪ್ತೌ ಅವ ಉಪಸರ್ಗ ಸಕ.ಅನಿ.ಪರ. ಲಿಟ್. ಪ್ರಥಮಪುರುಷ ದ್ವಿವಚನ ।

ಆಪ ಆಪತುಃ ಆಪುಃ ಇತ್ಯಾದಿ

ಪ್ರಯೋಗ— ಏತಾದೃಗ್ ಬಲವಿಭವೇನ ತೇನ ತಜ್ಜ್ಯೇಷ್ಠೇನಾಪಿ ಉಭಾಭ್ಯಾಂ ಸಂಘರ್ಷಾತ್ ಕ್ರಮಪರಿವರ್ಧಮಾನ ತೈಕ್ಷ್ಣ್ಯಂ ತಸ್ಯ ಕಂಠಂ ಅಭಿತಃ ಸಮಂ ಗೃಹಿತ್ವಾ ನಿಷ್ಪೇಷ್ಟುಂ ಪರಮಃ ಪ್ರಯತ್ನಃ ಅವಾಪೇ ।

★ ★ ★

ಅವತಾರಿಕಾ— ಆ ಜಗಜಟ್ಟಿಗಳಿಬ್ಬರೂ ಪರಾಜಿತರಾದರು ಎಂದು ವರ್ಣಿಸುತ್ತಾರೆ.

**ಅಸ್ವಿನ್ನಾವಲಸತರೌ ಗುರೋರ್ನಿಯೋಗಾ-**
**ಚ್ಛತ್ರಾಗ್ರ್ಯಾನಿಲಮಹಿತೌ ಚ ತಾವುಭಾಭ್ಯಾಮ್ ।**
**ಮುಕ್ತ್ವಾಽಯಃ ಕಠಿನತರತ್ವಚಂ ಶಿರೋಧಿಂ**
**ಪರ್ಯಾಯಾತ್ ಸ್ಫುಟವಚನಾಂ ನಿಪೇತತುಃ ಕೌ ॥ 28 ॥**

ಪದಚ್ಛೇದ— ಅಸ್ವಿನ್ನೌ, ಅಲಸತರೌ, ಗುರೋಃ, ನಿಯೋಗಾತ್, ಛತ್ರಾಗ್ರ್ಯಾನಿಲಮಹಿತೌ, ಚ, ತೌ, ಉಭಾಭ್ಯಾಂ, ಮುಕ್ತ್ವಾ ಅಯಃ, ಕಠಿನತರತ್ವಚಂ, ಶಿರೋಧಿಂ, ಪರ್ಯಾಯಾತ್‌ಸ್ಫುಟವಚನಾಂ, ನಿಪೇತತುಃ, ಕೌ ।

ಅನ್ವಯ— ಅಸ್ವಿನ್ನೌ, ನಿಯೋಗಾತ್, ಉಭಾಭ್ಯಾಂ, ಛತ್ರಾಗ್ರ್ಯಾನಿಲಮಹಿತೌ, ಚ, ಅಲಸತರೌ, ತೌ, ಅಯಃ, ಕಠಿನ ತರತ್ವಚಂ, ಪರ್ಯಾಯಾತ್‌ಸ್ಫುಟವಚನಾಂ, ಶಿರೋಧಿಃ, ಮುಕ್ತ್ವಾ ಕೌ, ನಿಪೇತತುಃ ।

ಅನ್ವಯಾರ್ಥ—

ಅಸ್ವಿನ್ನೌ = ಚೆನ್ನಾಗಿ ಬೆವರಿದ,

ಗುರೋಃ = ಗುರುಗಳಾದ ಶ್ರೀಮಧ್ವಾಚಾರ್ಯರ,

ನಿಯೋಗಾತ್ = ಅಪ್ಪಣೆಯಿಂದ,

ಉಭಾಭ್ಯಾಂ = ಇಬ್ಬರು ಶಿಷ್ಯರಿಂದ,

ಛತ್ರಾಗ್ರ್ಯಅನಿಲಮಹಿತೌ = ಶ್ರೇಷ್ಠವಾದ ಕೊಡೆಯ (ಬೀಸಣಿಗೆಯ) ಗಾಳಿಯಿಂದ ಉಪಚರಿಸಲ್ಪಟ್ಟ (ಸಮಾಧಾನಗೊಳಿಸಲ್ಪಟ್ಟ),

ಚ = ಮತ್ತು,

ಅಲಸತರೌ = ಬಹಳ ಆಯಾಸಪಟ್ಟ

**ತೌ** = ಆ ಗಂಡವಾಟ ಸಹೋದರರು,

**ಅಯಃ** = ಕಬ್ಬಿಣದಂತೆ, (ಕಬ್ಬಿಣಕ್ಕಿಂತಲೂ)

**ಕಠಿನತರತ್ವಚಂ** = ಹೆಚ್ಚು ಗಟ್ಟಿಯಾದ ಚರ್ಮವುಳ್ಳ

**ಪರ್ಯಾಯಾತ್** = ಹಿಸುಕುವ ಪ್ರಯತ್ನವು ಹೆಚ್ಚಾದ ಕ್ರಮದಿಂದ

**ಸ್ಫುಟವಚಸಾಂ** = ಸ್ಪಷ್ಟವಾದ ಪ್ರವಚನ ಮಾತುಳ್ಳ,

**ಶಿರೋಧಿಂ** = ಕುತ್ತಿಗೆಯನ್ನು,

**ಮುಕ್ತ್ವಾ** = ಬಿಟ್ಟು

**ಕೌ** = ನೆಲದ ಮೇಲೆ,

**ನಿಪೇತತುಃ** = ಬಿದ್ದರು.

**ತಾತ್ಪರ್ಯ**— ಇಬ್ಬರು ಸಹೋದರ ಮಲ್ಲರೂ ಆಚಾರ್ಯರ ಕುತ್ತಿಗೆಯನ್ನು ಹಿಸುಕುವ ಪ್ರಯತ್ನದಲ್ಲಿ ಸೋತು ತುಂಬಾ ಬೆವರಿದರು. ತುಂಬಾ ಆಯಾಸಪಟ್ಟರು. ಆಗ ಆಚಾರ್ಯರ ಅಪ್ಪಣೆಯಿಂದ ಇಬ್ಬರು ಶಿಷ್ಯರು ಎರಡು ಪಕ್ಕದಲ್ಲಿ ನಿಂತುಕೊಂಡು ಛತ್ರಿಯ ಆಕಾರದ ಎರಡು ಅಗಲವಾದ ಬೀಸಣಿಗೆಗಳಿಂದ ಇಬ್ಬರೂ ಜಟ್ಟಿಗಳಿಗೂ ಗಾಳಿ ಬೀಸಲಾರಂಭಿಸಿದರು. ಹೀಗೆ ಗಾಳಿ ಬೀಸಿ ಉಪಚರಿಸಿ ಸಮಾಧಾನ ಮಾಡಿದರೂ ಅವರಿಬ್ಬರೂ ಆಚಾರ್ಯರ ಕತ್ತನ್ನು ಹಿಸುಕಿ ಅವರ ಉಸಿರು ಕಟ್ಟಿಸುವ ಪ್ರಯತ್ನದಲ್ಲಿ ಸ್ವಲ್ಪ ಮಾತ್ರವೂ ಸಫಲತೆಯನ್ನು ಹೊಂದಲಿಲ್ಲ. ಅಷ್ಟೇ ಅಲ್ಲ ಇವರಿಬ್ಬರು ಪ್ರಯತ್ನವನ್ನು ಹೆಚ್ಚಿಸುತ್ತಿದ್ದಂತೆಯೇ ಆಚಾರ್ಯರ ಕತ್ತು ಕಬ್ಬಿಣದಂತೆ ಕಬ್ಬಿಣಕ್ಕಿಂತಲೂ ಹೆಚ್ಚು ಗಟ್ಟಿಯಾಗುತ್ತಾ ಬರುತ್ತಿತ್ತು. ಹಾಗೆಯೇ ಇವರಿಬ್ಬರು ಆಚಾರ್ಯರ ಕಂಠ ಕುತ್ತಿಗೆಗಳ ಮರ್ದನ ಪ್ರಯತ್ನವನ್ನು ಹೆಚ್ಚಿಸುತ್ತಿದ್ದಂತೆಯೇ ಆಚಾರ್ಯರ ಪ್ರವಚನದ ವಚನಗಳು ಮತ್ತಷ್ಟು ಸ್ಪಷ್ಟವಾಗಿ ಮಧುರವಾಗಿ ಕೇಳಿಬರುತ್ತಿದ್ದವು. ಆಚಾರ್ಯರಿಗೆ ಲವಲೇಶವೂ ಸ್ವರಭಂಗವಾಗಲಿಲ್ಲ, ಆಯಾಸವಾಗಲಿಲ್ಲ, ಬೆವರು ಬರಲಿಲ್ಲ. ಆದರೆ ಕ್ರಮೇಣ ಜಟ್ಟಿಗಳೇ ಸೋತು ಬೆವತು ಬಲಗುಂದಿ ನೆಲದ ಮೇಲೆ ಬಿದ್ದರು.

**ವಿಗ್ರಹ ಮತ್ತು ಕೋಶ**—

**ಅಲಸತರೌ**— ಅತಿಶಯೇನ ಅಲಸೌ ಅಲಸತರೌ ।

**ಛತ್ರಾಗ್ರ್ಯಾನಿಲಮಹಿತೌ**— ಛತ್ರೇಷು ಅಗ್ರ್ಯೇ ಛತ್ರಾಗ್ರ್ಯೇ, ಛತ್ರಾಗ್ರ್ಯಯೋಃ ಅನಿಲಾಃ ಛತ್ರಾಗ್ರ್ಯಾನಿಲಾಃ, ಛತ್ರಾಗ್ರ್ಯಾನಿಲೈಃ ಮಹಿತೌ ಛತ್ರಾಗ್ರ್ಯಾನಿಲಮಹಿತೌ ।

**ಅತಿಕಠನತರತ್ವಚಂ**— ಅತ್ಯಂತ ಕಠಿನಾ ಅತಿಕಠಿನತರಾ, ಅಯೋವತ್ (ಅಯಸಃ = ಕಬ್ಬಿಣಕ್ಕಿಂತಲೂ) ಅತಿ ಕಠಿನತರಾ ತ್ವಕ್ ಯಸ್ಯಾಃ ಸಾ ಕಠಿನತರತ್ವಕ್ ತಾಂ ।

**ಪರ್ಯಾಯಾತ್ಸ್ಫುಟವಚಸಾಂ**— ಪರ್ಯಾಯೇಣ ಸ್ಫುಟಂ ವಚನಂ ಯಸ್ಯಾಂ ಸಾ ಪರ್ಯಾಯತ್ಸ್ಫುಟ ವಚಸಾ ತಾಂ ।(ಪರ್ಯಾಯಾತ್ಸ್ಫುಟವಚಸಾಂ ಎಂಬ ಪಾಠದಲ್ಲಿ ಸ್ಫುಟಂ ವಚಸಾ ಯಸ್ಯಾಂ ಸಾ ಸ್ಫುಟ ವಚಸಾ ತಾಂ ಇಷ್ಟೇ ವಿಗ್ರಹ) ಕು = ಭೂಮಿ, 'ಗೋತ್ರಾ ಕುಃ ಪೃಥಿವೀ ಪೃಥ್ವೀ' ಅಮರ ।

**ಕ್ರಿಯಾಪದ**— **ನಿಪೇತತುಃ** - ಪತ್ಲೃ ಗತೌ ಅಕ ಸೇಟ್ ಪರ ಲಿಟ್ ।

ಪಪಾತ ಪೇತತುಃ ಪೇತುಃ ಪೇತಿಥ ಪೇತಥುಃ ಪೇತ, ಪಪಾತ ಪಪತ ಪೇತಿವ ಪೇತಿಮ ।

**ಪ್ರಯೋಗ**— ಆಸ್ತಿನ್ನಾಭ್ಯಾಂ ಗುರೋಃ ನಿಯೋಗಾತ್ ಉಭಾಭ್ಯಾಂ ಛತ್ರಾಗ್ರ್ಯಾನಿಲ ಮಹಿತಾಭ್ಯಾಂ ಚ ಅಲಸತರಾಭ್ಯಾಂ ತಾಭ್ಯಾಂ ಆಯಃ ಕಠಿನತರತ್ವಚಂ ಪರ್ಯಾಯಾತ್ಸ್ಫುಟವಚಸಾಂ ಶಿರೋಧಿಂ ಮುಕ್ತ್ವಾ ಕೌ ನಿಪೇತೇ ।

★ ★ ★

ಅವತಾರಿಕಾ— ಅವರಿಬ್ಬರೂ ಮರಳಿ ಆಚಾರ್ಯರ ಬಲಪರೀಕ್ಷೆಯನ್ನು ಮಾಡಿ ಸೋತರು ಎಂದು ಹೇಳುತ್ತಾರೆ.

**ಆಶ್ವಸ್ತೌ ಶುಚಿಹೃದಿಮಾವನೂನಮಾನಾ-**
**ವುದ್ಧರ್ತುಂ ಸಮಗದದಂಗುಲೀಂ ಧರಸ್ಥಾಮ್ ।**
**ಸಂಗೃಹ್ಯ ಪ್ರಸಭರಸಾದಪಿ ಪ್ರಯತ್ತೌ**
**ಸಾಮರ್ಥ್ಯಂ ಯಯತುರಿಮೌ ನ ಕಂಪನೇಽಸ್ಯಾಃ ॥ 29 ॥**

ಪದಚ್ಛೇದ—ಆಶ್ವಸ್ತೌ, ಶುಚಿಹೃತ್, ಇಮೌ, ಅನೂನಮಾನೌ, ಉದ್ಧರ್ತುಂ, ಸಮಗದತ್, ಅಂಗುಲೀಂ, ಧರಾಸ್ಥಾಂ, ಸಂಗೃಹ್ಯ, ಪ್ರಸಭರಸಾತ್, ಅಪಿ, ಪ್ರಯತ್ತೌ (ಅತಿಪ್ರಯತ್ನೌ), ಸಾಮರ್ಥ್ಯಂ, ಯಯತುಃ, ಇಮೌ, ನ, ಕಂಪನೇ, ಅಸ್ಯಾಃ ।

ಅನ್ವಯ— ಆಶ್ವಸ್ತೌ, ಶುಚಿಹೃತ್, ಇಮೌ, ಅನೂನಮಾನೌ, ಉದ್ಧರ್ತುಂ, ಸಮಗದತ್, ಅಂಗುಲೀಂ, ಧರಾಸ್ಥಾಂ, ಸಂಗೃಹ್ಯ, ಪ್ರಸಭರಸಾತ್, ಅಪಿ, ಪ್ರಯತ್ತೌ(ಅತಿಪ್ರಯತ್ನೌ), ಸಾಮರ್ಥ್ಯಂ, ಯಯತುಃ, ಇಮೌ, ನ, ಕಂಪನೇ, ಅಸ್ಯಾಃ ।

ಅನ್ವಯಾರ್ಥ—

**ಶುಚಿಹೃತ್** = ಶುದ್ಧವಾದ ಮನಸ್ಸುಳ್ಳ ಶ್ರೀಪೂರ್ಣಪ್ರಜ್ಞಾಚಾರ್ಯರು,
**ಆಶ್ವಸ್ತೌ** = ಆಯಾಸ ಪರಿಹಾರಮಾಡಿಕೊಂಡಿರುವ,
**ಅನೂನಮಾನೌ** = ಮತ್ತು ಕಡಿಮೆಯಾಗದ ತಮ್ಮ ಬಲಾಭಿಮಾನವುಳ್ಳ,
**ಇಮೌ** = ಈ ಗಂಡವಾಟ ಸಹೋದರರನ್ನು ಕುರಿತು,
**ಧರಸ್ಥಾಂ** = ನೆಲದ ಮೇಲೆ ಇಟ್ಟಿರುವ,
**ಅಂಗುಲೀಂ** = ತಮ್ಮ ಬೆರಳನ್ನು,
**ಉದ್ಧರ್ತುಂ** = ಮೇಲಕ್ಕೆತ್ತಲು,
**ಸಮಗದತ್** = ಅಪ್ಪಣೆ ಮಾಡಿದರು,
**ಪ್ರಸಭರಸಾತ್** = ಬಹಳ ಹೆಚ್ಚಾದ ಅತ್ಯುಚ್ಚ ಮಟ್ಟದ ಬಲಾತ್ಕಾರದಿಂದ,
**ಸಂಗೃಹ್ಯ** = ಬೆರಳನ್ನು ಹಿಡಿದುಕೊಂಡು,
**ಪ್ರಯತ್ತೌ ಅಪಿ** = ಪ್ರಯತ್ನ ಮಾಡಿದವರಾದರೂ, (ಅತ್ಯಂತ ಪ್ರಯತ್ನವುಳ್ಳವರಾದರೂ)
**ಇಮೌ** = ಇವರಿಬ್ಬರೂ,
**ಅಸ್ಯಾಃ** = ಈ ಬೆರಳಿನ,
**ಕಂಪನೇ** = ಅಲ್ಲಾಡಿಸುವುದರಲ್ಲಿ,
**ಸಾಮರ್ಥ್ಯಂ** = ಶಕ್ತಿಯನ್ನು,
**ನ ಯಯತುಃ** = ಹೊಂದಲಿಲ್ಲ.

ತಾತ್ಪರ್ಯ— ಅಭಿಮಾನಶಾಲಿಗಳಾದ ಸಹೋದರ ಮಲ್ಲರು ಬೀಸಣಿಗೆ ಗಾಳಿಯಿಂದ ಮತ್ತು ಶೈತ್ಯೋಪಚಾರದಿಂದ ಆಯಾಸ ಪರಿಹಾರ ಮಾಡಿಕೊಂಡು ಎದ್ದು ಕುಳಿತರು. ಆದರೆ ಆಗಲೂ ನಾವು ಆಚಾರ್ಯರಿಗಿಂತ ಬಲದಲ್ಲಿ ಕಡಿಮೆಯಿಲ್ಲ ಎಂಬ ಅಹಂಕಾರವು ಪೂರ್ತಿಯಾಗಿ ತಗ್ಗಲಿಲ್ಲ, ಕುಗ್ಗಲಿಲ್ಲ. ಆಚಾರ್ಯರು ಏನೋ ಇಂದ್ರಜಾಲ ಚಮತ್ಕಾರದಿಂದಲೋ ಕಣ್ಣು ಕಟ್ಟಿನಿಂದಲೋ ನಮ್ಮನ್ನು ಸೋಲಿಸಿರಬಹುದು ವಾಸ್ತವವಾಗಿ ನಾವು ಅವರಿಗಿಂತ ಬಲದಲ್ಲಿ ಕಡಿಮೆಯಿಲ್ಲ ಎಂಬ ಅಹಂಕಾರದಿಂದ ಬೀಗಿ ಕುಳಿತಿರುವ ಅವರ ಮನೋಭಾವವನ್ನು ತಿಳಿದ ಆಚಾರ್ಯರು ತಮ್ಮ ಕೈಯ ಒಂದು ಬೆರಳನ್ನು

ನೆಲದ ಮೇಲೆ ಚಾಚಿ ಇಟ್ಟರು. ಈ ಬೆರಳನ್ನು ಮೇಲಕ್ತಿರಿ ಎಂದು ಅಣ್ಣತಮ್ಮಂದಿರಿಬ್ಬರನ್ನು ಕುರಿತು ಹೇಳಿದರು. ಅವರಿಬ್ಬರೂ ಪ್ರತ್ಯೇಕವಾಗಿ ಪ್ರಯತ್ನಿಸಿದರು, ಒಟ್ಟು ಸೇರಿ ಪ್ರಯತ್ನಿಸಿದರು, ಬೆರಳನ್ನು ಬಲವಾಗಿ ಹಿಡಿದುಕೊಂಡು ತಮಗೆ ಸಾಧ್ಯವಿದ್ದಷ್ಟು ಮಟ್ಟಿನ ಹೆಚ್ಚಿನ ಬಲವನ್ನು ಉಪಯೋಗಿಸಿ ತುಂಬಾ ಪ್ರಯತ್ನದಿಂದ ಆ ಬೆರಳನ್ನು ನೆಲದಿಂದ ಮೇಲಕ್ಕೆತ್ತಲು ಪ್ರಯತ್ನಪಟ್ಟರು ಸಣ್ಣದಾದ ಒಂದು ಬೆರಳನ್ನು ಎತ್ತಲಾರದೆ ಹೋದರೆ ಬಹಳ ಅವಮಾನವಾಗುತ್ತದೆಯೆಂದು ತಿಳಿದು ಬಲದ ಪರಾಕಾಷ್ಠೆ ಯಿಂದ ಪ್ರಯತ್ನಪಟ್ಟರು. ಆದರೆ ಬೆರಳನ್ನು ಎತ್ತುವುದಿರಲಿ ಆ ಬೆರಳನ್ನು ಅಲ್ಲಾಡಿಸಲೂ ಅವರಿಂದಾಗಲಿಲ್ಲ. ಆಚಾರ್ಯರ ಸ್ವರೂಪ ಸಾಮರ್ಥ್ಯವು ಅಷ್ಟು ಹಿರಿದಾಗಿತ್ತು. ಅವರಿಗೆ ಮಂತ್ರ, ಮಾಟ, ಇಂದ್ರಜಾಲ ಯಾವುದೂ ಬೇಕಾಗಿರಲಿಲ್ಲ. ಅವರು ಬಲದೇವತೆಯಾದ ಅವತಾರರೇ ಆಗಿದ್ದರು. ಆದುದರಿಂದಲೇ ಇಂತಹ ಮಹಿಮಾತಿಶಯವು ಅವರಲ್ಲಿತ್ತು ಎಂದು ಭಾವ.

**ವಿಗ್ರಹ ಮತ್ತು ಕೋಶ—**

**ಶುಚಿಹೃತ್—** ಶುಚಿ ಹೃತ್ ಯಸ್ಯ ಸಃ ಶುಚಿಹೃತ್ ।

**ಅನೂನಮಾನೌ—** ನ ಊನಃ ಅನೂನಃ, ಅನೂನಃ ಮಾನಃ ಯಯೋಸ್ತೌ ಅನೂನಮಾನೌ ।

**ಧರಸ್ಥಾಂ—** ಧರಾಯಾಂ ತಿಷ್ಠತೀತಿ ಧರಸ್ಥಾ ತಾಂ ।

**ಪ್ರಸಭರಸಾತ್—** ಪ್ರಸಭಸ್ಯ ರಸಃ ಪ್ರಸಭರಸಃ, ತಸ್ಮಾತ್ । 'ಪ್ರಸಭರಸಾತ್ ಪ್ರಸಂಭಂ ತು ಬಲಾತ್ಕಾರಃ ಹಠಃ' ಅಮರ ।

**ಅತಿಪ್ರಯತ್ನೌ—** ಅತ್ಯಂತಂ ಪ್ರಯತ್ನಃ ಯಯೌಸ್ತೌ ಅತಿಪ್ರಯತ್ನೌ ।

**ಸಾಮರ್ಥ್ಯಂ—** ಸಮರ್ಥಯೋಃ ಭಾವಃ ಸಾಮರ್ಥ್ಯಂ ।

**ಕ್ರಿಯಾಪದ— ಸಮಗದತ್** - ಸಮ್ ಉಪಸರ್ಗ ಗದ ವ್ಯಕ್ತಾಯಾಂ ವಾಚಿ ಸಕ. ಸೇಟ್. ಪರ. ಅನದ್ಯತನ ಭೂತೇ ಲಙ್ । **ಯಯತುಃ** - ಯಾಪ್ರಾಪಣೇ ಸಕ. ಅನಿ. ಪರ. ಲಿಟ್ ಪ್ರಥಮಪುರುಷ ದ್ವಿವಚನ ।

ಅಗದತ್ ಅಗದತಾಂ ಅಗದನ್, ಅಗದಃ ಅಗದತಂ ಅಗದತ, ಅಗದಂ ಅಗದಾವ ಅಗದಾಮ ।

ಯಯೌ ಯಯತುಃ ಯಯುಃ ಇತ್ಯಾದಿ ।

**ಪ್ರಯೋಗ—** ಶುಚಿಹೃದಾ ಆಶ್ವಸ್ತೌ ಅನೂನಮಾನೌ ಇಮೌ ಧರಸ್ಥಾಂ ಅಂಗುಲೀಂ ಉದ್ಧರ್ತುಂ ಸಮಗದ್ಯೇತಾಂ ಪ್ರಸಭರಸಾತ್ ಸಂಗೃಹ್ಯ ಪ್ರಯತ್ನಾಭ್ಯಾಂ (ಅತಿಪ್ರಯತ್ನಾಭ್ಯಾಂ)ಆಭ್ಯಾಂ ಅಸ್ಯಾಃ ಕಂಪನೇ ಸಾಮರ್ಥ್ಯಂ ನ ಯಯೇ ।

★ ★ ★

**ಅವತಾರಿಕಾ—** ಆಚಾರ್ಯರ ಮತ್ತೊಂದು ಮಹಿಮಾತಿಶಯವನ್ನು ಹೇಳುತ್ತಾರೆ.

**ನಿರ್ಯತ್ನಂ ವಟುಮಧಿರುಹ್ಯ ಮಂದಹಾಸೀ**
**ಸ ಪ್ರಾಯಾದಿಹ ಪರಿತೋ ನೃಸಿಂಹಗೇಹಮ್ ।**
**ಐಶ್ವರ್ಯೈರಿತಿ ಲಘಿಮಾದಿಕೈರುಪೇತೋ**
**ಮಧ್ವೋಽಭೂತ್ ತ್ರಿಭುವನಚಿತ್ರರತ್ನರಾಜಃ ॥ 30 ॥**

**ಪದಚ್ಛೇದ—** ನಿರ್ಯತ್ನಂ, ವಟುಂ, ಅಧಿರುಹ್ಯ, ಮಂದಹಾಸೀ, ಸಃ, ಪ್ರಾಯಾತ್, ಇಹ, ಪರಿತಃ, ನೃಸಿಂಹಗೇಹಂ, ಐಶ್ವರ್ಯೈಃ, ಲಘಿಮಾದಿಕೈಃ, ಉಪೇತಃ, ಮಧ್ವಃ ಅಭೂತ್, ತ್ರಿಭುವನಚಿತ್ರರತ್ನರಾಜಃ ।

**ಅನ್ವಯ—** ಸಃ, ಇಹ, ನಿರ್ಯತ್ನಂ, ವಟು, ಅಧಿರುಹ್ಯ, ಮಂದಹಾಸೀ(ಸನ್), ನೃಸಿಂಹಗೇಹಂ, ಪರಿತಃ, ಪ್ರಾಯಾತ್, ಇತಿ, ಲಘಿಮಾದಿಕೈಃ, ಐಶ್ವರ್ಯೈಃ, ಉಪೇತಃ, ಮಧ್ವಃ, ತ್ರಿಭುವನಚಿತ್ರರತ್ನರಾಜಃ, ಅಭೂತ್ ।

ಅನ್ವಯಾರ್ಥ—

ಸಃ = ಆ ಮಧ್ವಾಚಾರ್ಯರು,
ಇಹ = ಈ ತೌಳವ ದೇಶದಲ್ಲಿಯೇ ಒಂದು ಸ್ಥಳದಲ್ಲಿ
ನಿರ್ಯತ್ನಂ = ಪ್ರಯತ್ನವಿಲ್ಲದೆ,
ವಟುಂ = ಬ್ರಹ್ಮಚಾರಿಯನ್ನು,
ಅಧಿರುಹ್ಯ = ಏರಿಕೊಂಡು,
ಮಂದಹಾಸೀ = ಮುಗುಳುನಗುವುಳ್ಳವರಾಗಿ,
ನೃಸಿಂಹಗೇಹಂ ಪರಿತಃ = ಶ್ರೀನರಸಿಂಹದೇವರ ದೇವಾಲಯದ ಸುತ್ತಲೂ,
ಪ್ರಾಯಾತ್ = ಪ್ರದಕ್ಷಿಣೆಯಾಗಿ ಹೋದರು,
ಇತಿ = ಈ ರೀತಿಯಾಗಿ,
ಲಘಿಮಾದಿಕೈಃ = ಹಗುರವಾಗುವಿಕೆ ಮೊದಲಾಗಿವುಳ್ಳ,
ಐಶ್ವರ್ಯೈಃ = ಶಕ್ತಿ ವಿಶೇಷಗಳಿಂದ,
ಉಪೇತಃ = ಕೂಡಿರುವ,
ಮಧ್ವಃ = ಶ್ರೀಮಧ್ವಚಾರ್ಯರು,
ತ್ರಿಭುವನಚಿತ್ರರತ್ನರಾಜಃ = ಮೂರು ಲೋಕಗಳ ಶ್ರೇಷ್ಠವಾದ ಆಶ್ಚರ್ಯ ವಸ್ತುಗಳಲ್ಲಿ ಶ್ರೇಷ್ಠರು,
ಅಭೂತ್ = ಆದರು.

**ತಾತ್ಪರ್ಯ—** ಈ ತೌಳವ ದೇಶದಲ್ಲಿಯೇ ಒಂದು ನರಸಿಂಹದೇವರ ದೇವಾಲಯವಿತ್ತು. ಅಲ್ಲಿ ಅನೇಕ ಜನರು ಸೇರಿರುವ ಒಂದು ಸಂದರ್ಭದಲ್ಲಿ ಆಚಾರ್ಯರು ತಮ್ಮ ಮಹಿಮೆಯನ್ನು ಪ್ರಕಟಪಡಿಸಬೇಕೆಂದು ಸಂಕಲ್ಪಿಸಿದರು. ಅವರು ಅಲ್ಲಿಯೇ ಇದ್ದ ಒಬ್ಬ ಚಿಕ್ಕ ಬ್ರಹ್ಮಚಾರಿಯನ್ನು ಕರೆದರು. ಅವನ ಮೇಲೆ ಯಾವ ಪ್ರಯತ್ನವೂ ಇಲ್ಲದೆ ಹಾರಿ ಏರಿ ಕುಳಿತರು. ಆ ಬ್ರಹ್ಮಚಾರಿಯು ಆಚಾರ್ಯರ ಯಾವ ಅಪ್ಪಣೆಯಿಂದ ಯಾವ ಪ್ರಯತ್ನವೂ ಇಲ್ಲದೆ ಆಚಾರ್ಯರನ್ನು ಹೊತ್ತುಕೊಂಡು ನಡೆಯಲಾರಂಭಿಸಿದನು. ಆಚಾರ್ಯರು ಆ ಬ್ರಹ್ಮಚಾರಿಯ ಹೆಗಲಿನ ಮೇಲೆ ಕುಳಿತು ಆ ಶ್ರೀನರಸಿಂಹದೇವರ ದೇವಾಲಯಕ್ಕೆ ಪ್ರದಕ್ಷಿಣೆ ಬಂದರು. ಇದು ಲಘಿಮಾ = ಎಲ್ಲದಕ್ಕಿಂತ ಹಗುರವಾಗುವುದು ಎಂಬ ಶಕ್ತಿ ವಿಶೇಷವು. ಹಿಂದೆ ಕೊಡಿಂಜಾಡಿತ್ತಾಯ ಜಟ್ಟಿಯನ್ನು ಸೋಲಿಸುವಾಗ ಆಚಾರ್ಯರು ಗರಿಮಾ ಎಲ್ಲರಿಗಿಂತಲೂ ಭಾರವಾಗುವುದು. (ಗಟ್ಟಿಯಾಗುವುದು) ಎಂಬ ಐಶ್ವರ್ಯವನ್ನು ತೋರಿಸಿದ್ದರು. ಈಗ ಲಘಿಮಾ ಎಂಬ ಐಶ್ವರ್ಯವನ್ನು ತೋರಿಸಿದರು. ಹೀಗೆ ಅಣಿಮಾ ಮುಂತಾದ ಅಷ್ಟೈಶ್ವರ್ಯಸಂಪನ್ನರಾದ ಶ್ರೀಮಧ್ವಾಚಾರ್ಯರು ಮೂರು ಲೋಕಗಳಲ್ಲಿರುವ ಅತ್ಯಂತ ಆಶ್ಚರ್ಯಕರವಾದ ಶ್ರೇಷ್ಠವಸ್ತುವಾಗಿ ಶೋಭಿಸಿದರು. (ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಈಶಿತ್ವ, ವಶಿತ್ವ, ಪ್ರಾಕಾಮ್ಯ ಇವೇ ಅಷ್ಟಸಿದ್ಧಿಗಳು.)

1) ಅಣಿಮಾ = ಕಣ್ಣಿಗೆ ಕಾಣುವ ವಸ್ತುಗಳಲ್ಲಿ ಅತ್ಯಂತ ಸೂಕ್ಷ್ಮ ವಸ್ತುವಾಗುವುದು, 2) ಮಹಿಮಾ = ಕಣ್ಣಿಗೆ ಕಾಣುವ ವಸ್ತುಗಳಲ್ಲಿ ಅತ್ಯಂತ ದೊಡ್ಡದಾಗುವುದು, 3) ಗರಿಮಾ = ಎಲ್ಲಾ ವಸ್ತುಗಳಿಗಿಂತಲೂ ಭಾರವಾಗುವುದು, 4) ಲಘಿಮಾ = ಎಲ್ಲಾ ವಸ್ತುಗಳಿಗಿಂತಲೂ ಹಗುರವಾಗುವುದು, 5) ಪ್ರಾಪ್ತಿ = ತಮ್ಮ ಇಂದ್ರಿಯಗಳಿಗೆ ಮತ್ತು ಮನಸ್ಸಿಗೆ ದೂರವಾದ ವಸ್ತುಗಳನ್ನು ಗೋಚರಿಸಿಕೊಳ್ಳುವುದು, ಪರಕಾಯ ಪ್ರವೇಶ = ಇನ್ನೊಬ್ಬರ ದೇಹವನ್ನು ಪ್ರವೇಶಿಸುವುದು. 6) ಪ್ರಾಕಾಮ್ಯ = ಕೇಳಿದ್ದನ್ನು ಕೂಡಲೇ ತಿಳಿದು ಕೊಳ್ಳುವುದು, ಕೇಳದಿರುವುದನ್ನೂ ತಿಳಿಯುವುದು, 7) ಈಶಿತ್ವ = ಎಲ್ಲರನ್ನು ತಾನು ಹೇಳಿದಂತೆ ನಡೆಸುವ ಸಾಮರ್ಥ್ಯ, 8) ವಶಿತ್ವ = ಸತ್ವ ರಜಸ್ ಮತ್ತು ತಮೋಗುಣಗಳ ಕಾರ್ಯಗಳಿಂದ ಮನಸ್ಸು ಚಂಚಲ

ವಾಗದಿರುವುದು, ಈ ಅಷ್ಟಸಿದ್ಧಿಗಳು ವಾಯುದೇವರ ಸ್ವರೂಪದಲ್ಲಿಯೇ ಇರುವುವು. ಇವೇ ಅಷ್ಟೈಶ್ವರ್ಯಗಳು. ಅಣಿಮಾ = ಅತ್ಯಂತ ಚಿಕ್ಕದಾಗುವುದು, ಮಹಿಮಾ = ದೊಡ್ಡದಾಗುವುದು, ಗರಿಮಾ = ಭಾರವಾಗುವುದು, ಲಘಿಮಾ = ಹಗುರು ವಾಗುವುದು, ಪ್ರಾಪ್ತಿ = ಪರಕಾಯಪ್ರವೇಶ, ಪ್ರಾಕಾಮ್ಯ = ಇಷ್ಟಬಂದಂತೆ ಇರುವುದು, ಈಶಿತ್ವ = ಪ್ರಭುತ್ವ ವಶಿತ್ವ = ಸ್ವಾತಂತ್ರ್ಯ ಇವೇ ಅಷ್ಟೈಶ್ವರ್ಯಗಳೆಂದು ಮತ್ತೊಂದು ಅಭಿಪ್ರಾಯವಿದೆ. ಈ ರೀತಿಯಾಗಿ ಆಚಾರ್ಯರು ಮಲ್ಲರ ಹತ್ತಿರ ತಮ್ಮ ಗರಿಮೆಯನ್ನು ತೋರಿಸಿ, ಆ ಘಟನೆಯನ್ನು ತೋರಿಸಿ ತಾವು ಲೋಕಾತೀತನಾದ ದೇವತಾ-ಪುರುಷರೆಂದು ಅಸೂಯಾ ರಹಿತರಾದ ಸಜ್ಜನರಿಗೆ ಮನದಟ್ಟಾಗುವಂತೆ ಮಾಡಿದರು. *ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ । ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಸಿದ್ಧಯಃ ॥*

**ವಿಗ್ರಹ ಮತ್ತು ಕೋಶ—**

**ನಿರ್ಯತ್ನಂ—** ನಿಷ್ಕ್ರಾಂತಃ ಯತ್ನಃ ಯಸ್ಯಸಃ ನಿರ್ಯತ್ನಃ ತಂ । ಬಹುವ್ರೀಹಿ. ವಟುವಿಗೆ ವಿಶೇಷಣ (ವಟುವು ತಾನು ಬೀಳದಿರುವಂತೆ ತನ್ನ ಮೇಲೆ ಭಾರ ಹೆಚ್ಚು ಬೀಳದಂತೆ ಯಾವ ಪ್ರಯತ್ನವನ್ನು ಮಾಡುತ್ತಿರಲಿಲ್ಲ ಎಂದು ಅರ್ಥ)

**ನಿರ್ಗತಃ—** ನಿರ್ಗತಃ ಯತ್ನಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ನಿರ್ಯತ್ನಂ । ಕ್ರಿಯಾವಿಶೇಷಣ, ಬಹುವ್ರೀಹಿ (ಈ ಸಮಾಸದಲ್ಲಿ ಆಚಾರ್ಯರು ಬ್ರಹ್ಮಚಾರಿಗೆ ಆಯಾಸವಾಗದ ಹಾಗೆ ಹೆಗಲ ಮೇಲೇರಿ ಕುಳಿತು ಪ್ರದಕ್ಷಿಣೆ ಬಂದರು ಎಂದು ಅಭಿಪ್ರಾಯ. ಇದು ಅಧಿರುಹ್ಯ = ಮೇಲೆ ಏರಿ ಎಂಬ ಕ್ರಿಯೆಗೆ ವಿಶೇಷಣ)

**ಮಂದಹಾಸೀ—** ಮಂದಶ್ಚಾಸೌ ಹಾಸಶ್ಚ ಮಂದಹಾಸಃ, ಮಂದಹಾಸಃ ಅಸ್ಯ ಅಸ್ತೀತಿ ಮಂದಹಾಸೀ । (ಹಸಿನ್)

**ನೃಸಿಂಹಗೇಹಂ—** ನಾ ಚಾಸೌ ಸಿಂಹಶ್ಚ ನೃಸಿಂಹಃ, ನೃಸಿಂಹಸ್ಯ ಗೇಹಂ ನೃಸಿಂಹಗೇಹಂ ತತ್ ।

**ಐಶ್ವರ್ಯೈಃ—** ಈಶ್ವರಸ್ಯ ಭಾವಃ ಐಶ್ವರ್ಯಂ ತೈಃ ಐಶ್ವರ್ಯೈಃ ।

**ಲಘಿಮಾದಿಕೈಃ—** ಲಘೋರ್ಭಾವಃ ಲಘಿಮಾ, ಲಘಿಮಾ ಆದಿಃ ಯೇಷಾಂ ತೇ ಲಘಿಮಾದಿಕಾಃ, ತೈಃ ಲಘಿಮಾದಿಕೈಃ ।

**ತ್ರಿಭುವನಚಿತ್ರರತ್ನರಾಜಃ—** ತ್ರಯಾಣಾಂ ಭುವನಾನಾಂ ಸಮಾಹಾರಃ ತ್ರಿಭುವನಂ, ತ್ರಿಭುವನೇ ಚಿತ್ರಾಣಿ ತ್ರಿಭುವನಚಿತ್ರಾಣಿ, ತ್ರಿಭುವನಚಿತ್ರಾಣಿ ಚ ತಾನಿ ರತ್ನಾನಿ ಚ ತ್ರಿಭುವನಚಿತ್ರರತ್ನಾನಿ ತ್ರಿಭುವನಚಿತ್ರ ರತ್ನೇಷು ರಾಜಾ ತ್ರಿಭುವನಚಿತ್ರರತ್ನರಾಜಃ, 'ರಾಜಾಹಃ ಸಖಿಭ್ಯಃ ಟಚ್' ಎಂಬ ಸೂತ್ರದಿಂದ ಟಚ್ ಪ್ರತ್ಯಯ, ರತ್ನ = ಶ್ರೇಷ್ಠವಸ್ತು, 'ರತ್ನಂ ಸ್ವಜಾತಿ ಶ್ರೇಷ್ಠೇಽಪಿ' ಅಮರ. ಆಶ್ಚರ್ಯಕರ ವಸ್ತುಗಳೆಂಬ ಶ್ರೇಷ್ಠವಾದ ವಸ್ತುಗಳಲ್ಲಿ ಆಚಾರ್ಯರು ಅತ್ಯಂತ ಶ್ರೇಷ್ಠರು ಎಂದು ಅರ್ಥ.

**ಕ್ರಿಯಾಪದ—** ಪ್ರಾಯಾತ್ - ಯಾ ಪ್ರಾಪಣೇ ಸಕ.ಅನಿ.ಪರ. ಅನದ್ಯತನಭೂತೇ ಲಜ್ ಪ್ರ. ಉಪಸರ್ಗ । ಭೂ ಸತ್ತಾಯಾಂ ಲುಜ್ ।

ಅಯಾತ್ ಅಯಾತಾಂ ಅಯುಃ-ಅಯಾನ್, ಅಯಾಃ ಅಯಾತಂ ಅಯಾತ, ಅಯಾಂ ಅಯಾವ ಅಯಾಮ ।

**ಅಭೂತ್ -** ಅಭೂತ್ ಅಭೂತಾಂ ಅಭೂವನ್, ಇತ್ಯಾದಿ ಭೂ ಸತ್ತಾಯಾಂ ಲುಜ್ ।

**ಪ್ರಯೋಗ—** ತೇನ ಇಹ ನಿರ್ಯತ್ನಂ ವಟುಂ ಅಧಿರುಹ್ಯ ಮಂದಹಾಸಿನಾ ನೃಸಿಂಹಗೇಹಂ ಪರಿತಃ ಪ್ರಾಯಯಾತ್ ಇತಿ ಲಘಿಮಾದಿಕೈರೈಶ್ವರ್ಯೈರುಪೇತೇನ ಮಧ್ವೇನ ತ್ರಿಭುವನಚಿತ್ರರತ್ನರಾಜೇನ ಅಭಾವಿ ।

★ ★ ★

**ಅವತಾರಿಕಾ—** ಇನ್ನೊಬ್ಬ ಜಟ್ಟಿಯು ಆಚಾರ್ಯರನ್ನು ಪರೀಕ್ಷಿಸಿದನು ಎನ್ನುತ್ತಾರೆ.

**ಪಂಚಾಶನ್ನರಪನರೋಪನೀತಮಾತ್ರಾಂ**
**ಯೋ ವಾರ್ಕ್ಷೀಂ ಗೃಹಮಧಿರೋಹಿಣೀಂ ನಿನಾಯ ।**
**ಸ ವ್ಯಾಖ್ಯಾಸ್ವರದಮನಾಯ ಪೂರ್ವವಾಟೋ**
**ನಿರ್ದೇಶಾದ್ ವ್ಯಧಿತ ಗುರೋರ್ಗಲಪ್ರಪೇಷಮ್ ॥ 31 ॥**

**ಪದಚ್ಛೇದ—** ಪಂಚಾಶನ್ನರಪನರೋಪನೀತಮಾತ್ರಾಂ, ಯಃ, ವಾರ್ಕ್ಷೀಂ, ಗೃಹಂ, ಅಧಿರೋಹಿಣೀಂ, ನಿನಾಯ, ಸಃ, ವ್ಯಾಖ್ಯಾಸ್ವರದಮನಾಯ, ಪೂರ್ವವಾಟಃ, ನಿರ್ದೇಶಾತ್, ವ್ಯಧಿತ, ಗುರೋಃ, ಗಲಪ್ರಪೇಷಂ ।

**ಅನ್ವಯ—** ಯಃ, ಪೂರ್ವವಾಟಂ, ಪಂಚಾಶನ್ನರಪನರೋಪನೀತಮಾತ್ರಾಂ, ವಾರ್ಕ್ಷೀಂ, ಅಧಿರೋಹಿಣೀಂ, ಗೃಹಂ, ನಿನಾಯ, ಸಃ, ಗುರೋಃ, ನಿರ್ದೇಶಾತ್, ವ್ಯಾಖ್ಯಾಸ್ವರದಮನಾಯ, ಗಲಪ್ರಪೇಷಂ, ವ್ಯಧಿತ ।

**ಅನ್ವಯಾರ್ಥ—**

**ಯಃ** = ಯಾವ,
**ಪೂರ್ವವಾಟಃ** = ಮೂಡೆಂಬಾಡಿತ್ತಾಯನೆಂಬ ಮಹಾಮಲ್ಲನು,
**ಪಂಚಾಶತ್** = ಐವತ್ತು ಮಂದಿ,
**ನರಪ** = ರಾಜನ,
**ನರ** = ಸೇವಕರಿಂದ,
**ಉಪನೀತಮಾತ್ರಾಂ** = ಒಯ್ಯಲ್ಪಟ್ಟ ಪರಿಮಾಣವುಳ್ಳ (ಭಾರವುಳ್ಳ ಗುರುವುಳ್ಳ),
**ವಾರ್ಕ್ಷೀಂ** = ಮರದಿಂದ ನಿರ್ಮಿತವಾದ,
**ಅಧಿರೋಹಿಣೀಂ** = ಏಣಿಯನ್ನು (ನಿಚ್ಚಣಿಕೆಯನ್ನು),
**ಗೃಹಂ** = (ತನ್ನ) ಮನೆಗೆ,
**ನಿನಾಯ** = ಒಯ್ಯುತ್ತಿದ್ದನೋ,
**ಸಃ** = ಅವನು,
**ಗುರೋಃ** = ಗುರುಗಳಾದ ಶ್ರೀಮಧ್ವಾಚಾರ್ಯರ,
**ನಿರ್ದೇಶಾತ್** = ಅಪ್ಪಣೆಯ ದೆಸೆಯಿಂದ, (ಅಪ್ಪಣೆಯನ್ನು ಪಡೆದು)
**ವ್ಯಾಖ್ಯಾಸ್ವರದಮನಾಯ** = ಪ್ರವಚನದ ಧ್ವನಿಯ ನಿಗ್ರಹಕ್ಕಾಗಿ, (ಕಡಿಮೆ ಮಾಡುವುದಕ್ಕಾಗಿ)
**ಗಲಪ್ರಪೇಷಂ** = ಕಂಠದ ಹಿಸುಕುವಿಕೆಯನ್ನು (ಬಲವಾಗಿ ಒತ್ತಿ ಅದುಮುವುದನ್ನು)
**ವ್ಯಧಿತ** = ಮಾಡಿದನು.

**ತಾತ್ಪರ್ಯ—** ಆಚಾರ್ಯರು ಸಂಚಾರ ಮಾಡುತ್ತಿದ್ದ ಒಂದು ಸ್ಥಳದಲ್ಲಿ ಮೂಡೆಂಬಡಿತ್ತಾಯನೆಂಬ ಬ್ರಾಹ್ಮಣನಿದ್ದನು. ಅವನು ಐವತ್ತು ಮಂದಿ ಬಲಿಷ್ಠರಾದ ರಾಜಸೇವಕರು ಕಷ್ಟದಿಂದ ತೆಗೆದುಕೊಂಡು ಹೋಗುವಷ್ಟು ಭಾರವಾದ ಏಣಿಯನ್ನು ತನ್ನ ಮನೆಗೆ ತಾನೊಬ್ಬನೇ ಅನಾಯಾಸವಾಗಿ ತೆಗೆದುಕೊಂಡು ಹೋಗುತ್ತಿದ್ದನು. ಆದುದರಿಂದ ಅವನಿಗೆ ತಾನು ಮಹಾ ಬಲಶಾಲಿಯೆಂಬ ಅಹಂಕಾರವಿದ್ದಿತು. ಒಂದು ಬಾರಿ ಅವನು ಭೇಟಿಯಾದಾಗ ಆಚಾರ್ಯರು ನೀನು ಪ್ರವಚನದ ಸ್ವರ ಭಂಗವನ್ನು ಮಾಡು? ಎಂದು ಅಪ್ಪಣೆ ಮಾಡಿದರು. ಅದರಂತೆ ಅವನು ಆಚಾರ್ಯರ ಕಂಠವನ್ನು ಬಲವಾಗಿ ಹಿಸುಕಲು

ಆರಂಭಿಸಿದನು. (ವಿಶೇಷಾಂಶ - ಪೂರ್ವವಾಟ ಎಂದರೆ ಮೂಡುದಿಕ್ಕಿನಲ್ಲಿರುವ ಫಲಪುಷ್ಪಭರಿತವಾದ ಜಮೀನಿನ ಒಂದು ಭಾಗ. ವಾಟವನ್ನು 'ಪಾಡಿ' ಎಂದು ಅಪಭ್ರಷ್ಟ ಭಾಷೆಯಲ್ಲಿ ಹೇಳುತ್ತಾರೆ, ಆ ಭಾಗದಲ್ಲಿರುವವನಿಗೆ ಮೂಡಿಂಬಾಡಿತ್ತಾಯ ಎಂದು ತೌಳವ ಭಾಷೆಯಲ್ಲಿ ಹೆಸರು. ಪೂರ್ವವಾಟಸ್ಯ ಮೂಡೆಂಬಡೀತ್ತಪಭ್ರಷ್ಟಭಾಷಾ ಭಾವಪ್ರಕಾಶಿಕಾ. ಎರಡು ಮೂರು ಮಹಡಿಯ ಮನೆಗಳನ್ನು ಮಾಡನ್ನು (ಮೇಲ್ಛಾವಣಿ) ಸರಿಪಡಿಸಲು ಎತ್ತರವಾದ ಏಣಿಯು ಬೇಕು. ಪಾಳೆಯಗಾರ ಅರಸರ ಮನೆಗಳಲ್ಲಿ ಅಂತಹ ಭಾರವಾದ ಏಣಿಗಳಿರುತ್ತವೆ. ಮೂಡೆಂಬಾಡಿತ್ತಾಯ ಜಟ್ಟಿಯು ತನ್ನ (ಮಹಡಿ)ಉಪ್ಪರಿಗೆಯ ಮನೆಯನ್ನು ಸರಿಪಡಿಸಲು ರಾಜನ ಅರಮನೆಯ ಏಣಿಯನ್ನು ತಾನೊಬ್ಬನೇ ಒಯ್ಯುತ್ತಿದ್ದನು ಎಂದು ಅಭಿಪ್ರಾಯ)

**ವಿಗ್ರಹ ಮತ್ತು ಕೋಶ—**

**ಪಂಚಾಶನ್ನರಪನರೋಪನೀತಮಾತ್ರಂ—** ನರಾನ್ ಪಾತೀತಿ ನರಪಃ, ನರಪಸ್ಯ ನರಾಃ ನರಪನರಾಃ, ಪಂಚಾಶಚ್ಚ ತೇ ನರಪನರಾಶ್ಚ ಪಂಚಾಶನ್ನರಪನರಾಃ, ಪಂಚಾಶನ್ನರಪನರೈಃ ಉಪನೀತಾ ಮಾತ್ರಾ ಯಸ್ಯಾಃ ಸಾ ಪಂಚಾಶನ್ನರಪನರೋಪನೀತಮಾತ್ರಾ, ತಾಂ । ಮಾತ್ರಾ = ಪರಿಮಾಣ, 'ಮಾತ್ರಾ ಕರ್ಣ ವಿಭೂಷಾಯಾಂ ವಿತ್ತೇಮಾನೇ ಪರಿಚ್ಛದೇ ಅಕ್ಷರಾವಯವೇ ಸ್ವಲ್ಪೇ ಕ್ಲೀಬಂಕಾತ್ಸ್ನ್ಯೇಽವಧಾರಣೇ' ಮೇದಿನೀ ।

**ವಾರ್ಕ್ಷೀಂ—** ವೃಕ್ಷಸ್ಯ ಇಯಂ ವಾರ್ಕ್ಷೀ, ತಾಂ । ಅಧಿರೋಹಿಣೀ = ಏಣಿ, ನಿಚ್ಚಣಿಕೆ, 'ನಿಃಶ್ರೇಣಿಸ್ತ್ವಧಿರೋಹಿಣೀ' ಅಮರ ।

**ವ್ಯಾಖ್ಯಾಸ್ವರದಮನಾಯ—** ವ್ಯಾಖ್ಯಾಯಾಃ ಸ್ವರಃ ವ್ಯಾಖ್ಯಾಸ್ವರಃ, ವ್ಯಾಖ್ಯಾಸ್ವರಸ್ಯ ದಮನಂ ವ್ಯಾಖ್ಯಾಸ್ವರ ದಮನಂ ತಸ್ಮೈ ।

**ಗಲಪ್ರವೇಷಂ—** ಗಲಸ್ಯ ಪ್ರವೇಷಃ ಗಲಪ್ರವೇಷಃ ತಂ । ಗಲ = ಕಂಠ, 'ಕಂಠೋಗಲಃ' ಅಮರ ।

**ಕ್ರಿಯಾಪದ—** ನಿನಾಯ - ಣೀಞ ಪ್ರಾಪಣೇ ಸಕ. ಅನಿಟ್. ಪರ. ಲಿಟ್, ವಿ+ಡುಧಾ ಧಾರಣಪೋಷಣಯೋಃ ಸಕ. ಆತ್ಮ. ಅನಿಟ್ ಲಿಟ್ ।

ನಿನಾಯ ನಿನ್ಯತುಃ ನಿನ್ಯುಃ, ಇತ್ಯಾದಿ ।

ಅಧಿತ ಅಧಿಷಾತಾಂ ಅಧಿಷತ್ ಅಧಿಥಾಃ ಅಧಿಷಾಥಾಂ ಅಧಿಧ್ವಂ ಅಧಿಢ್ವಂ, ಅಧಿಷಿ ಅಧಿಷ್ವಹಿ ಅಧಿಷ್ಮಹಿ ।

**ಪ್ರಯೋಗ—** ಯೋ ನ ಪೂರ್ವವಾಟೇನ ಪಂಚಾಶನ್ನರಪನರೋಪನೀತಮಾತ್ರಾ ವಾರ್ಕ್ಷೀಂ ಅಧಿರೋಹಿಣೀಗೃಹಂ ನಿನ್ಯೇ, ತೇನ ಗುರೋಃ ನಿರ್ದೇಶಾತ್ ವ್ಯಾಖ್ಯಾಸ್ವರದಮನಾಯ ಗಲಪ್ರವೇಷಃ ವ್ಯಧಾಯಿ ।

★ ★ ★

**ಸ್ವಿನ್ನೇಽಸ್ಮಿನ್ನಪಿ ಯತಮಾನ ಆಗ್ರಹೋಗ್ರೇ**
**ಪ್ರಾಚ್ಯಾತ್ ತತ್ರವಚನನಿಸ್ವನೋಽತಿರೇಜೇ ।**
**ಉದ್ಧರ್ತುಂ ವಿಪುಲಹೃದಂಗುಲಿಂ ಚ ನಾಲಂ**
**ಸೋಽಭೂದಿತ್ಯಜನಿ ಕುತೂಹಲಂ ಜನಾನಾಮ್ ॥ 32 ॥**

**ಪದಚ್ಛೇದ—** ಸ್ವಿನ್ನೇ, ಅಸ್ಮಿನ್, ಅಪಿ, ಯತಮಾನೇ, ಆಗ್ರಹೋಗ್ರೇ, ಪ್ರಾಚ್ಯಾತ್, ತತ್ರವಚನನಿಸ್ವನಃ, ಅತಿರೇಜೇ, ಉದ್ಧರ್ತುಂ, ವಿಪುಲಹೃದಂಗುಲೀಂ, ಚ, ನ, ಅಲಂ, ಸಃ, ಅಭೂತ್, ಇತಿ, ಅಜನಿ, ಕುತೂಹಲಂ, ಜನಾನಾಂ ।

**ಅನ್ವಯ—**ಆಗ್ರಹೋಗ್ರೇ, ಸ್ವಿನ್ನೇ, ಅಪಿ, ಅಸ್ಮಿನ್, ಯತಮಾನೇ(ಸತಿ), ತತ, ವಚನನಿಸ್ವನಃ, ಪ್ರಾಚ್ಯಾತ್, (ಅಪಿ) ಅತಿರೇಜೇ, ಸಃ, ವಿಪುಲಹೃದಂಗುಲಿಂ, ಉದ್ಧರ್ತುಂ, ಚ, ಅಲಂ, ನ, ಅಭೂತ್, ಇತಿ, ಜನಾನಾಂ, ಕುತೂಹಲಂ, ಅಜನಿ ।

ಅನ್ವಯಾರ್ಥ—

**ಆಗ್ರಹೋಗ್ರೇ** = ಹಠದಿಂದ ಕಠಿನನಾದ,

**ಸ್ವಿನ್ನೇ ಅಪಿ** = ಬೆವರಿದವನಾದಾಗ್ಯೂ,

**ಅಸ್ಮಿನ್** = ಈ ಮೂಡಿಂಬಾಡಿತ್ತಾಯನು,

**ಯತಮಾನೇ ಸತಿ** = ಪ್ರಯತ್ನ ಮಾಡುತ್ತಿರಲಾಗಿ,

**ತತ್** = ಆ ಶ್ರೀಮಧ್ವಾಚಾರ್ಯರ ಪ್ರವಚನದ,

**ನಿಸ್ವನಃ** = ವ್ಯಾಖ್ಯಾನದ ಧ್ವನಿಯು,

**ಪ್ರಾಚ್ಯಾತ್ ಅಪಿ** = ಹಿಂದೆ ಇದ್ದ (ಕಂಠವನ್ನು ಒತ್ತುವುದಕ್ಕಿಂತ ಮೊದಲು ಇದ್ದ)(ಪ್ರವಚನದ ಧ್ವನಿ)ಗಿಂತಲೂ,

**ಅತಿರೇಜೇ** = ಹೆಚ್ಚು ವಿರಾಜಿಸಿತು,

**ಸಃ** = ಆ ಜಟ್ಟಿಯು,

**ವಿಪುಲಹೃತ್** = ಸರ್ವಜ್ಞರಾದ ಶ್ರೀಮಧ್ವಾಚಾರ್ಯರ,

**ಅಂಗುಲೀಂ** = ಬೆರಳನ್ನು

**ಉದ್ಧರ್ತುಂ** = ಮೇಲಕ್ಕೆ ಎತ್ತಲು,

**ಸಃ ಅಲಂ** = ಸಮರ್ಥನು,

**ನಾಭೂತ್** = ಆಗಲಿಲ್ಲ

**ಇತಿ** = ಹೀಗೆಂದು,

**ಜನಾನಾಂ** = ಜನರಿಗೆ,

**ಕುತೂಹಲಂ** = ಆಶ್ಚರ್ಯವು,

**ಅಜನಿ** = ಉಂಟಾಯಿತು.

**ತಾತ್ಪರ್ಯ—** ಮಹಾಮಲ್ಲನಾದ ಮೂಡೆಂಬಡಿತ್ತಾಯನು ಶ್ರೀಮಧ್ವಾಚಾರ್ಯರ ಕುತ್ತಿಗೆಯನ್ನು ಸರ್ವ ಪ್ರಯತ್ನದಿಂದ ತನ್ನ ಸಂಪೂರ್ಣ ಬಲವನ್ನು ಉಪಯೋಗಿಸಿ ಹಿಸುಕಲಾರಂಭಿಸಿದನು. ಆಗ ಆಯಾಸದಿಂದ ಅವನ ಶರೀರವು ಬೆವರಿತು. ಆದರೂ ತುಂಬಾ ಹಠಶಾಲಿಯಾದ ಆ ಉಗ್ರನಾದ ಜಟ್ಟಿಯು ಹೇಗಾದರೂ ಮಾಡಿ ಆಚಾರ್ಯರ ಧ್ವನಿಯನ್ನು ನಿಲ್ಲಿಸಬೇಕೆಂದೂ ಅಥವಾ ಸ್ವಲ್ಪವಾದರೂ ಅವರ ಧ್ವನಿಯನ್ನು ಕಡಿಮೆ ಮಾಡಿ ಗೊಗ್ಗರ ಧ್ವನಿಯನ್ನು ಉಂಟುಮಾಡಬೇಕೆಂದೂ ಬಹಳ ಪ್ರಯತ್ನಪಟ್ಟನು. ಆದರೆ ಅವನಿಂದ ಆಚಾರ್ಯರ ಧ್ವನಿಯನ್ನು ಸ್ವಲ್ಪವೂ ಬದಲಾಯಿಸಲು ಆಗಲಿಲ್ಲ. ಅಷ್ಟೆ ಅಲ್ಲ ಈ ಮಹಾಜಟ್ಟಿಯು ಆಚಾರ್ಯರ ಕತ್ತನ್ನು ಹಿಸುಕುವುದಕ್ಕಿಂತ ಮೊದಲು ಇದ್ದ ಮೃದು ಮಧುರ ಗಂಭೀರ ಧ್ವನಿಗಿಂತಲೂ ಇಂಪಾಗಿ, ಗಂಭೀರವಾಗಿ, ಸ್ಪಷ್ಟವಾಗಿ ಅವರ ಪ್ರವಚನದ ಧ್ವನಿಯು ಕೇಳಿಸಲಾರಂಭಿಸಿತು. ಜನರಿಗೆ ಆಗ ಉಂಟಾದ ಕುತೂಹಲ, ಆಶ್ಚರ್ಯ ಅಷ್ಟಿಷ್ಟಲ್ಲ. ಮೂಡೆಂಬಾಡಿತ್ತಾಯನು ತನ್ನ ಪ್ರಯತ್ನವನ್ನು ಬಿಟ್ಟು ಸುಮ್ಮನಾದನು. ಇಂತಹ ಜಟ್ಟಿಗಳು ತಮಗೆ ತೃಣವಾಯರೆಂದು ತೋರಿಸಲು ಆಚಾರ್ಯರು ಮತ್ತೊಂದು ಪ್ರಯೋಗವನ್ನು ಮಾಡಿದರು. ಅವರು ತಮ್ಮ ಕೈಯ ಒಂದು ಬೆರಳನ್ನು ನೆಲದಲ್ಲಿ ಇಟ್ಟು ಇದನ್ನು ಮೇಲಕ್ಕೆತ್ತು ಎಂದರು. ಆ ಜಟ್ಟಿಯು ಗಟ್ಟಿಯಾಗಿ ಹಿಡಿದು ಬೆರಳನ್ನು ಅಲ್ಲಾಡಿಸಲೂ ಸಾಧ್ಯವಾಗಲಿಲ್ಲ. ಆಗ ಅಲ್ಲಿ ಸೇರಿದ್ದ ಜನರ ಆಶ್ಚರ್ಯಕ್ಕೆ ಎಣೆಯೇ ಇಲ್ಲ.

**ವಿಗ್ರಹ—**

**ಆಗ್ರಹೋಗ್ರೇ—** ಆಗ್ರಹೇಣ ಉಗ್ರಃ ಆಗ್ರಹೋಗ್ರಃ ತಸ್ಮಿನ್ ಆಗ್ರಹೋಗ್ರೇ ।

**ಪ್ರಾಚ್ಯಾತ್—** ಪ್ರಾಗ್ ಭವಃ ಪ್ರಾಚ್ಯಃ, ತಸ್ಮಾತ್ ಪ್ರಾಚ್ಯಾತ್ ।

**ತತ್ಪ್ರವಚನಂ**— ತಸ್ಯ ಪ್ರವಚನಂ ತತ್ಪ್ರವಚನಂ, ತತ್ಪ್ರವಚನಸ್ಯ ನಿಸ್ವನಃ ತತ್ಪ್ರವಚನನಿಸ್ವನಃ ।

**ವಿಪುಲಹೃದಂಗುಲೀಂ**— ವಿಪುಲಂ ಹೃತ್ ಯಸ್ಯ ಸಃ ವಿಪುಲಹೃತ್, ವಿಪುಲಹೃದಃ ಅಂಗುಲಿಃ ವಿಪುಲ-ಹೃದಂಗುಲಿಃ, ತಾಂ ।

**ಕುತೂಹಲ**— ಸೋಜಿಗ, 'ಕೌತೂಹಲಂ ಕೌತುಕಂ ಚ ಕುತುಕಂ ಚ ಕುತೂಹಲಂ' ಅಮರ.

**ಕ್ರಿಯಾಪದ**— **ಅತಿರೇಜೇ** - ಅತಿ+ರಾಜೃದೀಪ್ತೌ ಅಕ. ಸೇಟ್. ಉಭ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನ । **ಅಭೂತ್** - ಭೂ ಸತ್ತಾಯಾಂ ಲಿಟ್ । **ಅಜನಿ** - ಜನೀ ಪ್ರಾದುರ್ಭಾವೇ ಅಕ. ಸೇಟ್. ಆತ್ಮ. ಭೂತೇ ಲುಙ್ ಪ್ರಥಮಪುರುಷ ಏಕವಚನ ।

ರೇಜೇ ರೇಜಾತೇ ರೇಜಿರೇ, ರೇಜಿಷೇ ರೇಜಾಥೇ ರೇಜಿಧ್ವೇ, ರೇಜೇ ರೇಜಿವಹೇ ರೇಜಿಮಹೇ, ಪಕ್ಷೇ ರರಾಜೇ ರರಾಜಾತೇ ರರಾಜಿರೇ, ರರಾಜಿಷೇ ರರಾಜಾಥೇ ರರಾಜಿಧ್ವೇ, ರರಾಜೇ ರರಾಜಿವಹೇ ರರಾಜಿಮಹೇ । ಅಜನಿ ಅಜನಿಷಾತಾಂ ಅಜನಿಷತ ಇತ್ಯಾದಿ ।

**ಪ್ರಯೋಗ**— ಆಗ್ರಹೋಗ್ರೇ ಸ್ವಿನ್ನೇ ಅಸ್ಮಿನ್ ಯತಮಾನೇ ತತ್ಪ್ರವಚನನಿಸ್ವನೇನ ಪ್ರಾಚ್ಯಾತ್ ಅಪಿ ಅತಿರೇಜೇ (ಭಾವೇ ಹೆಚ್ಚು ವಿರಾಜಿಸೋಣವಾಯಿತು)ತೇನ ವಿಪುಲಹೃದಂಗುಲಿಂ ಚ ಉದ್ಧರ್ತುಂ ನ ಅಲಂ ಅಭಾವಿ (ಭಾವೇ) ಇತಿ ಜನಾನಾಂ ಕುತೂಹಲೇನ ಅಜನಿ (ಭಾವೇ) ।

★★★

**ಅವತಾರಿಕಾ**— ಇತರ ಅನೇಕ ಜಟ್ಟಿಗಳ ಪರೀಕ್ಷೆಗಳಲ್ಲಿಯೂ ಆಚಾರ್ಯರೇ ಗಟ್ಟಿಯೆಂದೂ ಬಲದಲ್ಲಿ ಅತಿಪ್ರಬಲರೆಂದೂ ನಿರ್ಣಯವಾಯಿತು ಎನ್ನುತ್ತಾರೆ.

**ಪರ್ಯೈಕ್ಷಿ ಪ್ರಭುರಿತರೈಃ ಶಿವಾಗ್ನಿಪೂರ್ವೈ**
**ರ್ನೋಪೈಕ್ಷಿ ಪ್ರಬಲತರೈಸ್ತಥಾಪ್ರಯತ್ನೈಃ ।**
**ನಾವೈಕ್ಷಿ ಕ್ವಚಿದಪಿ ಶಕ್ಯಪೂರ್ತಿರಸ್ಮಿನ್**
**ಉತ್ಪ್ರೈಕ್ಷಿ ಸ್ವಯಮಪಿ ಭೀಮ ಇತ್ಯವಶ್ಯಮ್ ॥ 33 ॥**

**ಪದಚ್ಛೇದ**— ಪರ್ಯೈಕ್ಷಿ, ಪ್ರಭುಃ, ಇತರೈಃ, ಶಿವಾಗ್ನಿಪೂರ್ವೈಃ, ನ, ಉಪೈಕ್ಷಿ, ಪ್ರಬಲತರೈಃ, ತಥಾ, ಪ್ರಯತ್ನೈಃ, ನ, ಅವೈಕ್ಷಿ, ಕ್ವಚಿತ್, ಅಪಿ, ಶಕ್ಯಪೂರ್ತಿಃ, ಅಸ್ಮಿನ್, ಉತ್ಪ್ರೈಕ್ಷಿ, ಸ್ವಯಂ, ಅಪಿ, ಭೀಮಃ, ಇತಿ, ಅವಶ್ಯಮ್ ।

**ಅನ್ವಯ**— ಪ್ರಭುಃ, ಶಿವಾಗ್ನಿಪೂರ್ವೈಃ, ಪ್ರರ್ಯೈಕ್ಷಿ, ತಥಾ, ಪ್ರಯತ್ನೈಃ, ಪ್ರಬಲತರೈಃ, ನ, ಉಪೈಕ್ಷಿ, ಅಸ್ಮಿನ್, ಕ್ವಚಿತ್, ಅಪಿ, ಶಕ್ಯಪೂರ್ತಿಃ, ನ, ಅವೈಕ್ಷಿ, ಸ್ವಯಂ, ಅಪಿ, ಅವಶ್ಯಂ, ಭೀಮಃ, ಇತಿ, ಉತ್ಪ್ರೇಕ್ಷಿ ।

**ಅನ್ವಯಾರ್ಥ**—

**ಪ್ರಭುಃ** = ಸಮರ್ಥರಾದ ಶ್ರೀಮಧ್ವಾಚಾರ್ಯರು,

**ಶಿವಾಗ್ನಿಪೂರ್ವೈಃ** = ಶಿವ, ಅಗ್ನಿ ಎಂಬ ಬ್ರಾಹ್ಮಣರೇ ಮೊದಲಾಗಿ ಉಳ್ಳ,

**ಇತರೈಃ** = ಉಗ್ರ, ಅಮೋಘ, ವಾಸುದೇವ ಮೊದಲಾದ ಬೇರೆ ಬ್ರಾಹ್ಮಣ ಜಟ್ಟಿಗಳಿಂದ,

**ಪರ್ಯೈಕ್ಷಿ** = ಪರೀಕ್ಷಿಸಲ್ಪಟ್ಟರು.

**ತಥಾಪ್ರಯತ್ನೈಃ** = ಹಿಂದಿನ ಜಟ್ಟಿಗಳಂತೆಯೇ ಪ್ರಯತ್ನವುಳ್ಳ,

**ಪ್ರಬಲತರೈಃ** = ಹಿಂದಿನವರಿಗಿಂತಲೂ ಹೆಚ್ಚು ಪ್ರಬಲರಾದ ಜಟ್ಟಿಗಳಿಂದಲೂ,

**ನ ಉಪೈಕ್ಷಿ** = ಉದಾಸೀನ ಮಾಡಲ್ಪಡಲಿಲ್ಲ

**ಅಸ್ಮಿನ್** = ಈ ಶ್ರೀಮಧ್ವಾಚಾರ್ಯರಲ್ಲಿ

**ಕ್ವಚಿದಪಿ** = ಯಾವ ಒಂದು ವಿಷಯದಲ್ಲಿಯಾಗಲೀ, (ಯಾವ ಒಂದು ಅಂಗದಲ್ಲಿಯಾಗಲೀ)

**ಶಕ್ತ್ಯಪೂರ್ತಿಃ** = ಸಾಮರ್ಥ್ಯದ ಅಪೂರ್ಣತೆಯು,

**ನ ಅವೈಕ್ಷಿ** = ನೋಡಲ್ಪಡಲಿಲ್ಲ,

**ಸ್ವಯಂಅಪಿ** = ತಾವೇ, (ಶ್ರೀಮಧ್ವಾಚಾರ್ಯರೇ)

**ಅವಶ್ಯಂ** = ಮುಖ್ಯವಾಗಿ, (ಖಂಡಿತವಾಗಿ)

**ಭೀಮಃ ಇತಿ** = ಶ್ರೀಭೀಮಸೇನ ದೇವರೆಂದು,

**ಉತ್ಪ್ರೇಕ್ಷಿ** = ಊಹಿಸಲ್ಪಟ್ಟರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಬಲದ ವಿಷಯದಲ್ಲಿಯೂ ಹೆಚ್ಚು ಪರಿಪೂರ್ಣರು, ಅತ್ಯಂತ ಸಮರ್ಥರು ಅವರನ್ನು ಮೀರಿಸುವವರು ಯಾರೂ ಇರಲಿಲ್ಲ. ಹಿಂದೆ ಹೇಳಿದ ಜಟ್ಟಿಗಳಿಗಿಂತಲೂ ಪ್ರಬಲರಾದ ಶಿವ, ಅಗ್ನಿ, ವಾಸುದೇವ, ಉಗ್ರ, ಅಮೋಘ ಮೊದಲಾದ ಪ್ರಬಲತಮರಾದ ಅನೇಕ ಬ್ರಾಹ್ಮಣ ಜಟ್ಟಿಗಳು ಆಚಾರ್ಯರ ಬಲವನ್ನು ಪರೀಕ್ಷಿಸಿದರು. ಅವರು ಇತರ ಎಲ್ಲಾ ಜಾತಿಯ ಜಟ್ಟಿಗಳಿಗಿಂತಲೂ ಪ್ರಬಲತಮರಾಗಿದ್ದರು. ಹಿಂದೆ ಆಚಾರ್ಯರನ್ನು ಬಲದ ವಿಷಯದಲ್ಲಿ ತಮ್ಮ ಸಾಮರ್ಥ್ಯವನ್ನು ಪೂರ್ತಿ ಉಪಯೋಗಿಸಿ ಪರೀಕ್ಷಿಸಿದರು. ಅವರು ಪರೀಕ್ಷಿಸುವಾಗ ಪ್ರಬಲ ಪ್ರಯತ್ನಗಳನ್ನು ಮಾಡಿದರು, ಉದಾಸೀನ ಮಾಡಲಿಲ್ಲ. ಇವರಂತೆಯೇ ಇರುವ ಇನ್ನೂ ಪ್ರಬಲರಾದ ಅನೇಕ ಜಟ್ಟಿಗಳು ಅದೇ ತರಹದ ಇನ್ನೂ ಹೆಚ್ಚಿನ ಪ್ರಯತ್ನಗಳನ್ನು ಮಾಡಿ ಪರೀಕ್ಷಿಸಿದರು. ಆದರೆ ಆಚಾರ್ಯರಿಗೆ ಯಾವ ಜಟ್ಟಿ ಕಾಳಗದ ಪಟ್ಟುಗಳನ್ನು ಪ್ರಯೋಗಿಸಿದರೂ ಅಶಕ್ತಿಯು ಕಂಡುಬರಲಿಲ್ಲ. ಅಷ್ಟೇ ಅಲ್ಲ ಯಾವ ಅಂಗದಲ್ಲಿಯೂ ಶಕ್ತಿಹೀನತೆಯು ಕಂಡುಬರಲಿಲ್ಲ. ಕಂಠವನ್ನೊತ್ತಿದರೆ ಅಲ್ಲಿಯೂ ಪರಿಪೂರ್ಣಸಾಮರ್ಥ್ಯ, ಬೆರಳನ್ನು ಎತ್ತಲು ಹೋದರೆ ಅಲ್ಲಿಯೂ ಅವರ ದೇಹದ ಪೂರ್ಣ ಸಾಮರ್ಥ್ಯ, ಹೀಗೆ ಅವರ ಪ್ರತಿಯೊಂದು ಅಂಗವೂ ಪೂರ್ಣದೇಹದ ಸಾಮರ್ಥ್ಯವನ್ನು ಹೊಂದಿತ್ತು. ಅವರಿಗೆ ಯಾವ ವಿಷಯದಲ್ಲಿಯೂ, ಯಾವ ಅಂಗದಲ್ಲಿಯೂ ಶಕ್ತಿಯ ಹೀನತೆಯು ಕಂಡುಬರಲಿಲ್ಲ. ಈ ಜಟ್ಟಿಗಳೆಲ್ಲರೂ ತಾವೇ ಸೋತರು. ಈ ಶ್ರೀಮಧ್ವಾಚಾರ್ಯರು ಸಾಕ್ಷಾತ್ ಭೀಮಸೇನರೇ ಸರಿ ಎಂದು ಜನರೂ, ಜಟ್ಟಿಗಳೂ ಸಹ ಉತ್ಪ್ರೇಕ್ಷಿಸಿದರು. ಈ ಉತ್ಪ್ರೇಕ್ಷೆಯು ಆಚಾರ್ಯರ ವಿಷಯದಲ್ಲಿ ನಿಜವಾಗಿತ್ತು. ಅದು ಸ್ವಭಾವೋಕ್ತಿಯೇ ಆಗಿತ್ತು. ಊಹೆಯಾಗಿರಲಿಲ್ಲ. ಉತ್ = ಉತ್ಕೃಷ್ಟವಾದ, ಪ್ರೇಕ್ಷೆ = ಉಪಲಬ್ಧಿ ಬಲದ ಅನುಭವದ ಮಾತು ಆಗಿತ್ತು.

**ವಿಗ್ರಹ—**

**ಶಿವಾಗ್ನಿಪೂರ್ವಾಃ—** ಶಿವಶ್ಚ ಅಗ್ನಿಶ್ಚ ಶಿವಾಗ್ನೀ, ಶಿವಾಗ್ನೀ ಪೂರ್ವೌ ಯೇಷಾಂ ತೇ ಶಿವಾಗ್ನಿಪೂರ್ವಾಃ । ಶಿವನೆಂಬ ಜಟ್ಟಿ, ಅಗ್ನಿ = ಅಗ್ನಿತ್ರಾಯ(ಅಗ್ನಿಹೋತ್ರಿ) ಎಂಬ ಜಟ್ಟಿ, ಪೂರ್ವ ಶಬ್ದದಿಂದ ವಾಸುದೇವ, ಉಗ್ರ, ಅಮೋಘ ಮೊದಲಾದವರು. 'ಪೂರ್ವ ಶಬ್ದೇನ ವಾಸುದೇವ ಉಗ್ರ ಅಮೋಘಾದಯಃ' ಎಂದು ಭಾವಪ್ರಕಾಶಿಕಾ.

**ಪ್ರಬಲತರೈಃ—** ಅತಿಶಯೇನ ಪ್ರಬಲಾಃ ಪ್ರಬಲತರಾಃ ತೈಃ ।

**ತಥಾಪ್ರಯತ್ನೈಃ—** ತಥಾ ಪ್ರಯತ್ನಃ ಯೇಷಾಂ ತೇ ತಥಾಪ್ರಯತ್ನಾಃ ತೈಃ ।

**ಅಪೂರ್ತಿಃ—** ಪೂರ್ತೇಃ ಅಭಾವಃ ಅಪೂರ್ತಿಃ ।

**ಶಕ್ತ್ಯಪೂರ್ತಿಃ—** ಶಕ್ತೇಃ ಅಪೂರ್ತಿಃ ಶಕ್ತ್ಯಪೂರ್ತಿಃ ।

**ಕ್ರಿಯಾಪದ—** **ಪರ್ಯೈಕ್ಷಿ** - ಪರಿ ಉಪಸರ್ಗ ಈಕ್ಷದರ್ಶನೇ ಸಕ. ಸೇಟ್.ಆತ್ಮನೇ ಕರ್ಮಣಿ ಲುಙ್ ಪ್ರಥಮಪುರುಷ ಏಕವಚನ । **ಉಪೈಕ್ಷಿ** - ಉಪ+ಐಕ್ಷಿ ಹಿಂದಿನಂತೆಯೇ ರೂಪಗಳು, ಉಪ ಉಪಸರ್ಗ ಅವ+ಐಕ್ಷಿ ಹಿಂದಿನಂತೆಯೇ ರೂಪಗಳು । **ಅವೈಕ್ಷಿ** - ಅವ ಉಪಸರ್ಗ ಉತ್ ಪ್ರ+ಐಕ್ಷಿ ಹಿಂದಿನಂತೆಯೇ ರೂಪಗಳು ಉತ್‌ಮತ್ತು ಪ್ರ ಎಂಬ ಎರಡು ಉಪಸರ್ಗಗಳು. ಈ ಶ್ಲೋಕದಲ್ಲಿ ಈಕ್ಷಧಾತು ಒಂದರ ಕರ್ಮಣಿ ಪ್ರಯೋಗದ ರೂಪಗಳು ನಾಲ್ಕು ಬಾರಿ ಬೇರೆ ಬೇರೆ ಉಪಸರ್ಗ ಸಹಿತವಾಗಿ ಉಪಯೋಗಿಸಲ್ಪಟ್ಟಿದೆ ಇದೊಂದು ಕವಿಗಳ ಚಮತ್ಕಾರವಾಗಿದೆ ಕರ್ಮಣಿ ಪ್ರಯೋಗದಲ್ಲಿ ಕರ್ಮಕ್ಕೆ ಪ್ರಾಧಾನ್ಯವಿರುವುದರಿಂದ ಇಲ್ಲಿ ಆಚಾರ್ಯರಿಗೆ ಪ್ರಾಧಾನ್ಯವೂ ಕಂಡುಬರುತ್ತದೆ.

ಐಕ್ಷಿ ಐಕ್ಷಿಷಾತಾಂ ಐಕ್ಷಿಷತ, ಐಕ್ಷಿಷ್ಠಾಃ ಐಕ್ಷಿಷಾಥಾಂ ಐಕ್ಷಿಢ್ವಂ, ಐಕ್ಷಿಷಿ ಐಕ್ಷಿಷ್ವಹಿ ಐಕ್ಷಿಷ್ಮಹಿ ।

**ಪ್ರಯೋಗ—** ಇತರೇ ಶಿವಾಗ್ನಿಪೂರ್ವಾ ಪ್ರಭುಂ ಪರ್ಯೈಕ್ಷಿಷತ ತಥಾ ಪ್ರಯತ್ನಾಃ ಪ್ರಬಲತರಾಃ ನ ಉಪೈಕ್ಷಿಷತ(ತೇ) ಸ್ವಯಂ ಅಪಿ (ಶ್ರೀಮಧ್ವಂ ಅಪಿ)ಭೀಮ ಇತಿ ಉತ್ಪ್ರೈಕ್ಷಿಷತ (ಕರ್ತರಿ) ।

★★★

**ಅವತಾರಿಕಾ—** ಆಚಾರ್ಯರ ಬಲವನ್ನೂ ದೇಹದ ದಾರ್ಢ್ಯವನ್ನು ಬೇರೆ ಬೇರೆ ಉಪಾಯಗಳಿಂದಲೂ ಪರೀಕ್ಷಿಸಿದರು ಎನ್ನುತ್ತಾರೆ.

**ಲೇಖಿನ್ಯಾಂ ಮುಹುರಪಿನಹ್ಯ ಕೃಷ್ಯಮಾಣಂ**
**ನಾಪ್ಯೇಕಂ ತನುರುಹಮಸ್ಯ ತೂದಪಾಟಿ ।**
**ನಾಸಾಗ್ರೇ ಮೃದುನಿ ಕೃತೈಶ್ಚ ಮುಷ್ಟಿಘಾತೈಃ**
**ನಾಸ್ಯೇಂದೋರತಿಬಲಿಭಿಃ ಪ್ರಸನ್ನತಾಸಿ ॥ 34 ॥**

**ಪದಚ್ಛೇದ—** ಲೇಖಿನ್ಯಾಂ, ಮುಹುಃ, ಅಪಿನಹ್ಯ, ಕೃಷ್ಯಮಾಣಂ, ನ, ಅಪಿ, ಏಕಂ, ತನುರುಹಂ, ಅಸ್ಯ, ತು, ಉದಪಾಟಿ, ನಾಸಾಗ್ರೇ, ಮೃದುನಿ, ಕೃತೈಃ, ಚ, ಮುಷ್ಟಿಘಾತೈಃ, ನ, ಆಸ್ಯೇಂದೋಃ, ಅತಿಬಲಿಭಿಃ, ಪ್ರಸನ್ನತಾ, ಅಸಿ ।

**ಅನ್ವಯ—** ಅತಿಬಲಿಭಿಃ, ಲೇಖಿನ್ಯಾಂ, ಮುಹುಃ, ಅಪಿನಹ್ಯ, ಕೃಷ್ಯಮಾಣಂ, ಅಪಿ, ಅಸ್ಯ, ಏಕಂ, ನ, ತು, ಉದಪಾಟಿ, ಮೃದುನಿ, ನಾಸಾಗ್ರೇ, ಕೃತೈಃ, ಮುಷ್ಟಿಘಾತೈಃ, ಚ, ಆಸ್ಯೇಂದೋಃ, ಅತಿ, ಬಲಿಭಿಃ, ಪ್ರಸನ್ನತಾ, ನ, ಅಸಿ ।

**ಅನ್ವಯಾರ್ಥ—**

**ಅತಿಬಲಿಭಿಃ** = ಅತ್ಯಂತ ಬಲಿಷ್ಠರಾದ ಮನುಷ್ಯರಿಂದ,
**ಲೇಖಿನ್ಯಾಂ** = ಕೂದಲನ್ನು ಕೀಳುವ ಚಿಮುಟಿಯಲ್ಲಿ, (ಕೂದಲನ್ನು ಕೀಳುವ ಚಿಮುಟದಿಂದ)
**ಮುಹುಃ** = ಬಾರಿ ಬಾರಿಯೂ, (ಮತ್ತು ಮತ್ತು)
**ಅಪಿನಹ್ಯ** = ಸುತ್ತಿ,
**ಕೃಷ್ಯಮಾಣಂ ಅಪಿ** = ಎಳೆಯಲ್ಪಡುತ್ತಿದ್ದರೂ,
**ಅಸ್ಯ** = ಶ್ರೀಮಧ್ವಾಚಾರ್ಯರ,
**ಏಕಂ ಅಪಿ** = ಒಂದೇ ಒಂದಾದರೋ,
**ತನುರುಹಂ** = ರೋಮವೂ ಕೂಡ, (ಕೂದಲೂ ಕೂಡ)
**ನ ತು ಉದಪಾಟಿ** = ಕೀಳಲ್ಪಡಲಿಲ್ಲ,
**ಮೃದುನಿ** = ಕೋಮಲವಾದ,

**ನಾಸಾಗ್ರೇ** = ಮೂಗಿನ ತುದಿಯಲ್ಲಿ,

**ಅತಿಬಲಿಭಿಃ** = ಅತ್ಯಂತ ಬಲಿಷ್ಠರಾದ ಜಟ್ಟಿಗಳಿಂದ,

**ಕೃತೈಃ** = ಮಾಡಲ್ಪಟ್ಟ

**ಮುಷ್ಟಿಘಾತೈಃ ಚ** = ಮುಷ್ಟಿಯ ಹೊಡೆತಗಳಿಂದಲೂ,

**ಆಸ್ಯೇಂದೋಃ** = ಚಂದ್ರನಂತಿರುವ ಮುಖದ,

**ಪ್ರಸನ್ನತಾ** = ಸಂತೋಷದಿಂದ ಅರಳಿರುವಿಕೆಯು,

**ನ ಅಪಿ** = ಹೋಗಲಾಡಿಸಲ್ಪಡಲಿಲ್ಲ.

**ತಾತ್ಪರ್ಯ—** ಅತ್ಯಂತ ಬಲಶಾಲಿಗಳಾದ ಗಟ್ಟಿಯಾದ ಜಟ್ಟಿ ಜನರು ಮೂಗಿನ ಕೂದಲನ್ನು ಕೀಳುವ ಚಿಮುಟದಿಂದ ಆ ಚಿಮುಟಕ್ಕೆ ಸುತ್ತಿ ಬಹಳ ಆವೃತ್ತಿ ಹಿಡಿದು ಎಳೆದರೂ ಶ್ರೀಮದಾನಂದತೀರ್ಥರ ತಲೆಕೂದಲು ಒಂದನ್ನಾಗಲೀ ಮೈಯ ರೋಮ ಒಂದನ್ನಾಗಲೀ ಕೀಳಲು ಸಾಧ್ಯವಾಗಲಿಲ್ಲ. ಅವರ ಕೂದಲನ್ನು ಕೊಂಕಿಸಲು ಯಾರಿಂದಲೂ ಆಗಲಿಲ್ಲ. ಬಲಿಷ್ಠರಾದ ಜಗಜಟ್ಟಿಗಳು ಬಲವನ್ನು ಪೂರ್ತಿ ಉಪಯೋಗಿಸಿ ಮುಷ್ಟಿಯಿಂದ ಆಚಾರ್ಯರ ಕೋಮಲವಾದ ಮೂಗಿನ ತುದಿಯನ್ನು ಬಲವಾಗಿ ಬಹಳಾವೃತ್ತಿ ಗುದ್ದಿದರು. ಆದರೆ ಆಚಾರ್ಯರ ಮೂಗಿಗೆ ನೋವಾಗುವುದು, ರಕ್ತಬರುವುದು ಒತ್ತಟ್ಟಿಗಿರಲಿ ಆಚಾರ್ಯರ ಮುಖಚಂದ್ರ ಬೆಳದಿಂಗಳಿನಂತಹ ಪ್ರಸನ್ನತೆಯು, ಪ್ರಕಾಶವು ಸ್ವಲ್ಪವೂ ಕಡಿಮೆಯಾಗಲಿಲ್ಲ. ಮುಖವು ಕೆಂಪಾಗಲಿಲ್ಲ. ಮಂದಹಾಸ ಬೆಳದಿಂಗಳು ಪ್ರಸನ್ನವಾಗಿ ಅಲ್ಲಿ ನಲಿಯುತ್ತಿತ್ತು.

**ವಿಗ್ರಹ ಮತ್ತು ಕೋಶ—**

**ತನುರುಹಂ—** ರೋಹತೀತಿ ತನುರುಹ ತನೌ ತಂ, ರೋಮ = ಕೂದಲು, 'ತನೂರುಹಂ ರೋಮಲೋಮ' ಅಮರ ।

**ನಾಸಾಗ್ರಂ—** ನಾಸಾಯಾಃ ಅಗ್ರಂ ನಾಸಾಗ್ರಂ ತಸ್ಮಿನ್ । ನಾಸಾ = ಮೂಗು, 'ಕ್ಲೀಬೇ ಘ್ರಾಣಂ ಗಂಧವಹಾ ಘೋಣಾ ನಾಸಾ ಚ ನಾಸಿಕಾ' ಅಮರ ।

**ಮುಷ್ಟಿಘಾತೈಃ—** ಮುಷ್ಟಿಭಿಃ ಘಾತಾಃ ಮುಷ್ಟಿಘಾತಾಃ ತೈಃ ।

**ಆಸ್ಯಂದೋಃ—** ಆಸ್ಯಂ ಇಂದುರಿವ ಆಸ್ಯೇಂದುಃ ತಸ್ಯ ।

**ಅತಿಬಲಿಭಿಃ—** ಅತ್ಯಂತಂ ಬಲಂ ಅತಿಬಲಂ, ಅತಿಬಲಂ ಏಷಾಂ ಅಸ್ತೀತಿ ಅತಿಬಲಿನಃ ತೈಃ ।

**ಪ್ರಸನ್ನತಾ—** ಪ್ರಸನ್ನಸ್ಯ ಭಾವಃ ಪ್ರಸನ್ನತಾ, ಬೆಳದಿಂಗಳ ಹರಹು, ಪ್ರಕಾಶವಿಸ್ತಾರ 'ಪ್ರಸಾದಸ್ತು ಪ್ರಸನ್ನತಾ' ಅಮರ ।

**ಕ್ರಿಯಾಪದ— ಉದಪಾಟ** - ಪಟಗತೌ ಣಿಜಂತ ಉಭ ಕರ್ಮಣಿ ಲುಙ್ ಉದ್ ಉಪ ಸರ್ಗ ಪ್ರಥಮಪುರುಷ ಏಕವಚನ । **ಅಪಿ** - ಅಸು ಕ್ಷೇಪಣೇ ಕರ್ಮಣಿ ಲುಙ್ ।

ಅಪಾಟಿ ಅಪಾಟಿಷಾತಾಂ ಅಪಾಟಿಷತ, ಅಪಾಟಿಷ್ಠಾಃ ಅಪಾಟಿಷಾಥಾಂ ಅಪಾಟಿಧ್ವಂ, ಅಪಾಟಿಷಿ ಅಪಾಟಿಷ್ವಹಿ ಅಪಾಟಿಷ್ಮಹಿ ।

ಆಸಿ ಆಸಿಷಾತಾಂ ಆಸಿಷತ, ಆಸಿಷ್ಠಾಃ ಆಸಿಷಾಥಾಂ ಆಸಿಧ್ವಂ, ಆಸಿಷಿ ಆಸಿಷ್ವಹಿ ಆಸಿಷ್ಮಹಿ ।

**ಪ್ರಯೋಗ—** ಅತಿಬಲಿನಃ ಲೇಖಿನ್ಯಾಂ ಮುಹುಃ ಅಪಿನಹ್ಯತ ಕೃಷ್ಯಮಾಣಂ ಅಪಿ ಅಸ್ಯ ಏಕಂ ತನುರುಹಂ ನ ಉದಪಾಟಿಷತ. ಮೃದುನಿ ನಾಸಾಗ್ರೇ ಕೃತೈಃ ಮುಷ್ಟಿಘಾತೈಃ ಚ ಆಸ್ಯೇಂದೋಃ ಪ್ರಸನ್ನತಾಂ ನ ಆಸ್ಥನ್ ।

★★★

ಅವತಾರಿಕಾ— ಆಚಾರ್ಯರು ದೇವೋತ್ತಮರು, ಜೀವೋತ್ತಮರು. ಅವರು ಭೂಮಿಯಲ್ಲಿ ತಮಗೆ ಸಮರು ಇಲ್ಲದುದರಿಂದ ದುರ್ಬಲರ ಜೊತೆಗೆ ಆಟವಾಡಿದರು ಎಂದು ಹೇಳುತ್ತಾರೆ.

**ಪಂಚಾಸ್ಯಃ ಶ್ವಭಿರಿವ ಹೀ(ವೈ) ವಿಹೀನಸಾರೈ-**
**ರಂಭೋಧಿರ್ನಗ(ದ)ಸರಿತಾಂ ಜಲೈರಿವಾಲ್ಪೈಃ ।**
**ಖದ್ಯೋತೈರಿವ ತರಣಿರ್ವಿಡಂಬಯನ್ ನೄನ್**
**ಪ್ರತ್ಯರ್ಥಿಸ್ವಸಮನರೈರ್ವ್ಯವಾಹರತ್ ಸಃ ॥ 35 ॥**

**ಪದಚ್ಛೇದ—** ಪಂಚಾಸ್ಯಃ, ಶ್ವಭಿಃ, ಇವ, ಹೀ, (ವೈ)ವಿಹೀನಸಾರೈಃ, ಅಂಭೋಧಿಃ, ನಗಸರಿತಾಂ, ಜಲೈಃ, ಇವ, ಅಲ್ಪೈಃ, ಖದ್ಯೋತೈಃ, ಇವ, ತರಣಿಃ, ವಿಡಂಬಯನ್, ನೄನ್, ಪ್ರತ್ಯರ್ಥಿಸ್ವಸಮನರೈಃ, ವ್ಯವಾಹರತ್, ಸಃ ।

**ಅನ್ವಯ—** ನೄನ್, ವಿಡಂಬಯನ್, ಸಃ, ಪ್ರತ್ಯರ್ಥಿಸ್ವಸಮನರೈಃ, ಪಂಚಾಸ್ಯಃ, ವಿಹೀನಸಾರೈಃ, ಶ್ವಭಿಃ, ಇವ, ಹೀ, ಅಂಭೋಧಿಃ, ಅಲ್ಪೈಃ, ನಗಸರಿತಾಂ ಜಲೈಃ, ಇವ, ತರಣಿಃ, ಖದ್ಯೋತೈಃ, ಇವ, ವ್ಯವಾಹರತ್ ।

**ಅನ್ವಯಾರ್ಥ—**

**ನೄನ್** = ಮಾನವರನ್ನು,
**ವಿಡಂಬಯನ್** = ಅನುಕರಿಸುತ್ತಿರುವ,
**ಸಃ** = ಆ ಶ್ರೀಮಧ್ವಾಚಾರ್ಯರು,
**ಪ್ರತ್ಯರ್ಥಿ** = ವಿರೋಧಿಗಳು,
**ಸ್ವ** = ತಮ್ಮವರು,
**ಸಮ** = ಶತ್ರುಗಳು ಮಿತ್ರರೂ ಅಲ್ಲದ ಉದಾಸೀನರೂ ಆದ,
**ನರೈಃ** = ಮನುಷ್ಯರೊಡನೆ,
**ಪಂಚಾಸ್ಯಃ** = ಸಿಂಹವು,
**ವಿಹೀನಸಾರೈಃ** = ಅತ್ಯಲ್ಪಬಲವುಳ್ಳ,
**ಶ್ವಭಿಃ ಇವ ಹೀ** = ನಾಯಿಗಳಿಂದಲೋಪಾದಿಯಲ್ಲಿ,
**ಅಂಭೋಧಿಃ** = ಸಮುದ್ರವು,
**ಅಲ್ಪೈಃ** = ಚಿಕ್ಕದಾದ,
**ನಗಸರಿತಾಂ** = ಬೆಟ್ಟದ ನದಿಗಳ,
**ಜಲೈಃ ಇವ** = ನೀರಿನಿಂದಲೋಪಾದಿಯಲ್ಲಿ,
**ತರಣಿಃ** = ಸೂರ್ಯನು,
**ಖದ್ಯೋತೈಃ ಇವ** = ಮಿಂಚುಹುಳದಿಂದಲೋಪಾದಿಯಲ್ಲಿ,
**ವ್ಯವಾಹರತ್** = ವ್ಯವಹರಿಸಿದರು.

**ತಾತ್ಪರ್ಯ—** ಸಿಂಹವು ಅಲ್ಪಬಲವುಳ್ಳ ನಾಯಿಗಳೊಡನೆಯೂ ಸಂದರ್ಭಾನುಸಾರವಾಗಿ ವ್ಯವಹರಿಸುತ್ತದೆ. ಅದರಂತೆ ಆಚಾರ್ಯರು ಅಲ್ಪಬಲರಾದ ವಿರೋಧಿಗಳೊಡನೆ ವ್ಯವಹಾರ ನಡೆಸಿ ಗೆದ್ದರು. ಸಮುದ್ರವು ಹತ್ತಿರದ ಬೆಟ್ಟದಲ್ಲಿ ಹುಟ್ಟಿ ತನ್ನನ್ನು ಸೇರುವ ಚಿಕ್ಕ ನದಿಗಳು, ನದಗಳನ್ನು ತನ್ನಲ್ಲಿ ಸೇರಿಸಿಕೊಂಡು ಆಟವಾಡುತ್ತದೆ. ಅದರಂತೆ ಆಚಾರ್ಯರು

ತಮ್ಮವರ ಜೊತೆಗೆ ಸ್ನೇಹದ ವ್ಯವಹಾರ ನಡೆಸುತ್ತಾ ಅವರನ್ನು ಅನುಗ್ರಹಿಸುತ್ತಾ ತಮ್ಮ ಲೀಲೆಯನ್ನು ತೋರಿಸುತ್ತಿದ್ದರು. ಹಗಲು ಪ್ರಖರವಾದ ಸೂರ್ಯಪ್ರಕಾಶದಲ್ಲಿಯೂ ಮಿಂಚುಹುಳಗಳು ಮಿನುಗುತ್ತಾ ತಾವು ತುಂಬಾ ಪ್ರಕಾಶವಂತರೆಂದು ಹೆಮ್ಮೆಯಿಂದ ಬೀಗುತ್ತಾ ಇದ್ದರೂ ಸೂರ್ಯನು ಉದಾಸೀನನಾಗಿರುತ್ತಾನೆ. ಅದರಂತೆ ಆಚಾರ್ಯರು ತಮ್ಮ ಸಿದ್ಧಾಂತ ವಿಷಯದಲ್ಲಿ ಉದಾಸೀನರೊಡನೆಯೂ ವ್ಯವಹರಿಸಿದರು. ಆಚಾರ್ಯರು ಲೋಕೋತ್ತರ ಪುರುಷರಾಗಿದ್ದರೂ, ವಾಯುದೇವರ ಅವತಾರರೇ ಆಗಿದ್ದರೂ, ಮನುಷ್ಯರ ಮಧ್ಯದಲ್ಲಿ ಅವತರಿಸಿದಾಗ ಮನುಷ್ಯರಂತೆಯೇ ವ್ಯವಹರಿಸಿದರು. ಅವರ ಜೊತೆಗೆ ವ್ಯವಹರಿಸಿದ ಅವರ ಸಿದ್ಧಾಂತ ವಿರೋಧಿಗಳೇ ಆಗಲಿ, ಸಿದ್ಧಾಂತವನ್ನು ಅನುಸರಿಸುವ ಭಕ್ತಮಿತ್ರರಾಗಲಿ, ಸಿದ್ಧಾಂತದಲ್ಲಿ ಉದಾಸೀನರಾದವರೇ ಆಗಲಿ, ಅವರು ಯಾರೂ ಆಚಾರ್ಯರಿಗೆ ಯಾವ ವಿಷಯದಲ್ಲಿಯೂ ಸಮರಲ್ಲ ಅತ್ಯಂತ ಕೆಳಮಟ್ಟದವರು. ಆದರೂ ಆಚಾರ್ಯರು ಅಂತಹ ಮೂರು ವಿಧದ ಜನರ ಜತೆಗೆ ಅವರವರ ಯೋಗ್ಯತೆಗೆ ತಕ್ಕಂತೆ ವ್ಯವಹರಿಸಿದರು. ಬಲಶಾಲಿಯಾದ ಸಿಂಹವು ದುರ್ಬಲವಾದ ನಾಯಿಗಳನ್ನು ಓಡಿಸುವಂತೆ ಎದುರಾಳಿಗಳನ್ನು ಖಂಡಿಸಿ ಓಡಿಸುತ್ತಿದ್ದರು. ಸಮುದ್ರವು ಬೆಟ್ಟದ ಚಿಕ್ಕ ನದಿಗಳನ್ನು, ನದಗಳನ್ನೂ ಸ್ವಾಗತಿಸಿ ಅವುಗಳ ನೀರನ್ನು ತನ್ನಲ್ಲಿ ತುಂಬಿಕೊಂಡು ಅವುಗಳಿಗೆ ಆಶ್ರಯಕೊಡುವಂತೆ ಭಕ್ತರನ್ನು ಅನುಗ್ರಹಿಸುತ್ತಿದ್ದರು. ಸೂರ್ಯನು ತನ್ನ ಪ್ರಕಾಶದಿಂದ ಮಿಣುಕು ಹುಳಗಳನ್ನು ಕಾಂತಿಯಿಲ್ಲದ ಹಾಗೆ ಮಾಡುವಂತೆ ಉದಾಸೀನರನ್ನು ಮತಿದುರ್ಬಲರನ್ನಾಗಿ ಹಾಗೆಯೇ ಇಡುತ್ತಿದ್ದರು.

ಇಲ್ಲಿ ಹೀನ, ಉತ್ತಮ, ಮಧ್ಯಮರಿಗೆ ನಾಯಿ, ಬೆಟ್ಟದ ನದಿಗಳು, ಮಿಂಚುಹುಳಗಳು, ಉಪಮಾನಗಳಾಗಿವೆ. ತಾಮಸರು, ಹೀನರು ಆಚಾರ್ಯರ ಸಿದ್ಧಾಂತ ವಿರೋಧಿಗಳು, ಸಾತ್ತ್ವಿಕರು, ಉತ್ತಮರು, ಆಚಾರ್ಯರ ಸಿದ್ಧಾಂತಾ ನುಯಾಯಿಗಳು, ರಾಜಸರು ಮಧ್ಯಮರು, ಆಚಾರ್ಯರ ಸಿದ್ಧಾಂತದಲ್ಲಿ ಉದಾಸೀನರು. ಇಂತಹ ಮೂರು ತರಹೆಯ ಜನರೊಡನೆಯೂ ಆಚಾರ್ಯರು, ಸಿಂಹವು ನಾಯಿಗಳೊಡನೆ, ಸಮುದ್ರವು ನದಿಗಳೊಡನೆ, ಸೂರ್ಯನು ಮಿಣುಕು ಹುಳುಗಳ ಜೊತೆಯಂತೆ ಆಚಾರ್ಯರು ವ್ಯವಹರಿಸುತ್ತಿದ್ದರು ಎಂದು ಆಚಾರ್ಯರ ಪರಮಾತ್ಮನ ಸಂಕಲ್ಪಾನುಸಾರವಾಗಿ ನಡೆಸುತ್ತಿದ್ದ ಅವರ ಅವತಾರದ ಅಲೌಕಿಕವಾದ ನಡತೆಯನ್ನು, ಚರಿತವನ್ನು ವರ್ಣಿಸಿದ್ದಾರೆ (ಮಾಲೋಪಮಾ).

**ವಿಗ್ರಹ ಮತ್ತು ಕೋಶ—**

**ಪಂಚಾಸ್ಯಃ—** ಸಿಂಹ, 'ಸಿಂಹೋ ಮೃಗೇಂದ್ರಃ ಪಂಚಾಸ್ಯಃ' ಅಮರ ।

**ಶ್ವಾ—** ನಾಯಿ, 'ಕೌಲೇಯಕಃ ಸಾರಮೇಯಃ ಕುಕ್ಕುರೋ ಮೃಗದಂಶಕಃ, ಶುನಕೋ ಭಷಕಃ ಶ್ವಾ(ಶ್ವನ್) ಸ್ಯಾದ್ ಗ್ರಾಮಸಿಂಹಶ್ಚ ಕುಕ್ಕುರಃ' ಅಮರ ।

**ವಿಹೀನಸಾರೈಃ—** ವಿಹೀನಃ ಸಾರಃ ಯೇಷಾಂ ತೇ ವಿಹೀನಸಾರಾಃ ತೈಃ ।

**ಅಂಭೋಧಿಃ—** ಅಭಾಂಸಿ ಧೀಯಂತೇ ಇತಿ ಅಂಭೋಧಿಃ । ಅಂಭೋಧಿಃ = ಸಮುದ್ರ.

**ನಗಸರಿತಾಂ—** ನಗಸ್ಯ ಸರಿತಃ ನಗಸರಿತಃ ತಾಸಾಂ । (ನದಾಶ್ಚ ಸರಿತಶ್ಚ ನದಸರಿತಃ ತಾಸಾಂ)

**ಖದ್ಯೋತ—** ಮಿಂಚುಹುಳ, 'ಖದ್ಯೋತೋ ಜ್ಯೋತಿರಂಗಿಣಃ' ಅಮರ ।

**ತರಣಿ—** ಸೂರ್ಯ, 'ದ್ಯುಮಣಿಸ್ತರಣಿರ್ಮಿತ್ರಶ್ಚಿತ್ರಭಾನುರ್ವಿಭಾವಸುಃ' ಅಮರ ।

**ಪ್ರತ್ಯರ್ಥಿಸ್ವಸಮನರೈಃ—** ಪ್ರತ್ಯರ್ಥಿನಶ್ಚ ತೇ ಸಮಾಶ್ಚ ಪ್ರತ್ಯರ್ಥಿಸ್ವಸಮಾಃ, ಪ್ರತ್ಯರ್ಥಿಸ್ವಸಮಾಶ್ಚತೇ ನರಾಶ್ಚ ಪ್ರತ್ಯರ್ಥಿಸ್ವಸಮನರಾಃ ತೈಃ ।

**ಕ್ರಿಯಾಪದ— ವ್ಯವಾಹರತ್** - ಹೃಞ ಹರಣೇ. ಸಕ. ಉಭ. ಅನಿ. ವಿ+ಅವ ಎರಡು ಉಪಸರ್ಗಗಳು ಅನದ್ಯತನ ಭೂತೇ ಲಙ್ ಪ್ರಥಮಪುರುಷ ಏಕವಚನ ।

ಅಹರತ್ ಅಹರತಾಂ ಅಹರನ್, ಅಹರಃ ಅಹರತಂ ಅಹರತ, ಅಹರಂ ಅಹರಾವ ಅಹರಾಮ ।

ಪ್ರಯೋಗ— ನ್ಯನ್ ವಿಡಂಬಯತಾ ತೇನ ಪ್ರತ್ಯರ್ಥಿಸ್ವಸಮನರ್ಥೈಃ ಪಂಚಾಸ್ಯೇನ ವಿಹೀನಸಾರೈಃ ಶ್ವಭಿರಿವ ಹೀ ಅಂಭೋಧಿನಾ ಅಲ್ಪೈಃ ನಗದಸರಿತಾಂ ಜಲೈಃ ಇವ ತರಣಿನಾ ಖದ್ಯೋತೈಃ ಇವ ವ್ಯವಹ್ರಿಯತ ।

★★★

ಅವತಾರಿಕಾ— 'ಪಾರಂತೀ' ಎಂಬಲ್ಲಿ ಆಚಾರ್ಯರು ತೋರಿಸಿದ ಮಹಿಮೆಯನ್ನು ವರ್ಣಿಸುತ್ತಾರೆ.

**ಪಾರಂತೀಸುರಸದನಂ ವಿಶಾಲಸಂವಿತ್**
**ಸಂಪ್ರಾಪ್ತಃ ಖಲು ಸುಚಿರಾನ್ನಿವೇದ್ಯಹೀನಮ್ ।**
**ಗ್ರಾಮ್ಯಾಗ್ರ್ಯಕ್ಷಿತಿಪತಿಭಿರ್ದಿನಾರ್ಧಮಾತ್ರಾತ್**
**ತದ್ಭೂತೀರ್ವ್ಯಥಿತ ಸಭೂತಬಲ್ಯನಲ್ಪಾಃ ॥ 36 ॥**

ಪದಚ್ಛೇದ— ಪಾರಂತೀಸುರಸದನಂ, ವಿಶಾಲಸಂವಿತ್, ಸಂಪ್ರಾಪ್ತಃ, ಖಲು, ಸುಚಿರಾತ್, ನಿವೇದ್ಯಹೀನಂ, ಗ್ರಾಮ್ಯಾಗ್ರ್ಯಕ್ಷಿತಿಪತಿಭಿಃ, ದಿನಾರ್ಧಮಾತ್ರಾತ್, ತದ್ಭೂತೀಃ, ವ್ಯಥಿತ, ಸಭೂತಬಲಿ, ಅನಲ್ಪಾಃ ।

ಅನ್ವಯ— ವಿಶಾಲಸಂವಿತ್, ಸುಚಿರಾತ್, ನಿವೇದ್ಯಹೀನಂ, ಪಾರಂತೀಸುರಸದನಂ, ಸಂಪ್ರಾಪ್ತಃ, ಗ್ರಾಮ್ಯಾಗ್ರ್ಯ ಕ್ಷಿತಿಪತಿಭಿಃ, ದಿನಾರ್ಧಮಾತ್ರಾತ್, ಸಭೂತಬಲಿ, ಅನಲ್ಪಾಃ, ತದ್ಭೂತಿಃ, ವ್ಯಥಿತ, ಖಲು ।

ಅನ್ವಯಾರ್ಥ—

**ವಿಶಾಲಸಂವಿತ್** = ಶ್ರೀಪೂರ್ಣಪ್ರಜ್ಞಾಚಾರ್ಯರು,
**ಸುಚಿರಾತ್** = ಬಹಳ ಕಾಲದಿಂದ,
**ನಿವೇದ್ಯಹೀನಂ** = ಅನ್ನಾದಿ ಪದಾರ್ಥಗಳಿಲ್ಲದಿರುವ,
**ಪಾರಂತೀಸುರಸದನಂ** = ಪಾರಂತೀ ದೇವಾಲಯವನ್ನು (ಕೇವುಡದೇವಾಲಯ ಎಂಬ ದೇವಾಲಯವನ್ನು)
**ಸಂಪ್ರಾಪ್ತಃ ಸನ್** = ಹೊಂದಿದವರಾಗಿ,
**ಗ್ರಾಮ್ಯಾಗ್ರ್ಯಕ್ಷಿತಿಪತಿಭಿಃ** = ಗ್ರಾಮದಮುಖಂಡರು, ರಾಜ ಇವರಿಂದ,
**ದಿನಾರ್ಧಮಾತ್ರಾತ್** = ಅರ್ಧದಿನದಲ್ಲಿಯೇ,
**ಸಭೂತಬಲಿ** = ಭೂತಬಲಿಯಿಂದ ಸಹಿತವಾಗಿ,
**ಅನಲ್ಪಾಃ** = ಬಹಳವಾಗಿರುವ,
**ತದ್ಭೂತೀಃ** = ಆ ದೇವಾಲಯಕ್ಕೆ ಸಲ್ಲತಕ್ಕ ಪೂಜಾ, ಉತ್ಸವಾದಿ ವೈಭವಗಳನ್ನು,
**ವ್ಯಥಿತ ಖಲು** = ನಡೆಸಿದರಷ್ಟೆ

ತಾತ್ಪರ್ಯ— ಆಚಾರ್ಯರು ಸಂಚಾರಕ್ರಮದಿಂದ 'ಪಾರಂತೀ' ಎಂಬ ದೇವಾಲಯಕ್ಕೆ ಬಂದರು. (ಗ್ರಾಮದ ಭಾಷೆಯಲ್ಲಿ ಆ ದೇವಾಲಯಕ್ಕೆ ಕೆಳುಡದೇಲ. (ದೇವಳ ಅಥವಾ ಕೇಟದೇಲ ಎಂದು ಹೆಸರು) ಅಲ್ಲಿಯ ಮುಖಂಡರಿಂದಾಗಿ ಆ ದೇವಾಲಯದಲ್ಲಿ ಬಹುಕಾಲದಿಂದ ಅನ್ನಫಲಾದಿನೈವೇದ್ಯ ಸಮರ್ಪಣೆಯು ನಡೆಯುತ್ತಿರಲಿಲ್ಲ. ಪೂಜೆ ಉತ್ಸವಗಳು ನಿಂತುಹೋಗಿದ್ದವು. ಆಚಾರ್ಯರು ಅಲ್ಲಿಗೆ ಬಂದ ಕೂಡಲೇ ಸುತ್ತಮುತ್ತಲಿನ ಗ್ರಾಮಾಧಿಪತಿಗಳನ್ನೂ ಆ ದೇಶದ ಅರಸನನ್ನು ಕರೆಸಿದರು. ಅವರಿಂದ ಕೂಡಿಕೊಂಡು ಅರ್ಧ ದಿನದಲ್ಲಿಯೇ ಭೂತಬಲಿ ಸಹಿತವಾಗಿ ಆ ದೇವಾಲಯದ ಪೂಜಾದಿ ವೈಭವಗಳನ್ನು ನಡೆಸಿದರು. ಅರ್ಧ ದಿನದಲ್ಲಿಯೇ ಅಲ್ಲಿಯ ಅರಸನೇ ಮೊದಲಾದವರನ್ನು ಪ್ರೋತ್ಸಾಹಿಸಿ ಆ ದೇವಾಲಯದ ಜೀರ್ಣೋದ್ಧಾರ, ಬ್ರಹ್ಮಕಲಶಾಭಿಷೇಕ, ರಥೋತ್ಸವ, ಮಹೋತ್ಸವ ಇತರ ಪೂಜಾದಿಗಳು, ಭೂತಬಲಿ, ಸಂತರ್ಪಣೆಯೇ

ಮುಂತಾದವುಗಳನ್ನು ಮಾಡಿಸಿ ಅಲ್ಲಿನ ವೈಭವವನ್ನು ಹೆಚ್ಚಿಸಿ ಅಲ್ಲಿಯ ಪರಮಾತ್ಮನನ್ನು ಆನಂದಪಡಿಸಿದರು. ಅನುಗ್ರಹವನ್ನು ಗಳಿಸಿದರು. ಆಚಾರ್ಯರು ಶೀಘ್ರವೇ ಮಹಾಕಾರ್ಯಗಳನ್ನು ಮಾಡತಕ್ಕ ಇಂತಹ ಮಹಾಮಹಿಮರು.

ವಿಗ್ರಹ—

**ಪಾರಂತೀಸುರಸದನಂ—** ಸುರಾಣಾಂ ಸದನಂ ಸುರಸದನಂ, ಪಾರಂತ್ಯಾಃ ಸುರಸದನಂ ಪಾರಂತೀಸುರ ಸದನಂ, ತತ್ ।

**ವಿಶಾಲಸಂವಿತ್—** ವಿಶಾಲಾ ಸಂವಿತ್ ಯಸ್ಯ ಸಃ ವಿಶಾಲಸಂವಿತ್ ।

**ನಿವೇದ್ಯಹೀನಂ—** ನಿವೇದಯಿತುಂ ಯೋಗ್ಯಂ ನಿವೇದ್ಯಂ, ನಿವೇದ್ಯೇನ ಹೀನಂ ನಿವೇದ್ಯಹೀನಂ ತತ್ ।

**ಗ್ರಾಮ್ಯಾದಿಕ್ಷಿತಿಪತಿಭಿಃ—** ಗ್ರಾಮೇ ಭವಾಃ ಗ್ರಾಮ್ಯಾಃ, 'ಗ್ರಾಮ್ಯಾದ್ಯಖಞ' ಎಂಬ ಸೂತ್ರದಿಂದ ಯ ಪ್ರತ್ಯಯ, ಗ್ರಮೇಷು ಅಗ್ರ್ಯಾಃ ಗ್ರಾಮ್ಯಾಗ್ರ್ಯಾಃ, ಕ್ಷಿತೇಃ ಪತಿಃ ಕ್ಷಿತಿಪತಿಃ, ಗ್ರಾಮ್ಯಾಗ್ರ್ಯಾಶ್ಚ ಕ್ಷಿತಿಪತಿಶ್ಚ ಗ್ರಾಮ್ಯಾಗ್ರ್ಯ ಕ್ಷಿತಪತಿಯಃ ತೈಃ ।

**ದಿನಾರ್ಧಮಾತ್ರಾತ್—** ದಿನಸ್ಯ ಅರ್ಧಂ ದಿನಾರ್ಧಂ (ಹಗಲಿನ ಅರ್ಧ = ಆರು ಘಂಟೆಗಳು) ದಿನಾರ್ಧ ಮೇವ ದಿನಾರ್ಧಮಾತ್ರಂ ತಸ್ಮಾತ್ ।

**ತದ್ಭೂತೀಃ—** ತಸ್ಯ ಭೂತಯಃ ತದ್ಭೂತಯಃ ತಾಃ ತದ್ಭೂತೀಃ ।

**ಸಭೂತಬಲಿಃ—** ಭೂತೇಭ್ಯೋ ಬಲಿಃ ಭೂತಬಲಿಃ, ಭೂತಬಲಿನಾ ಸಹ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ।

**ಅನಲ್ಪಾಃ—** ನ ಅಲ್ಪಾಃ ಅನಲ್ಪಾಃ, ತಾಃ ।

**ಕ್ರಿಯಾಪದ—** ಡುಧಾಞ ಧಾರಣ ಪೋಷಣಯೋಃ ಉಭ, ಅನಿ, ಸಕ. ಭೂತೇ ಲುಙ್ ವಿ ಉಪಸರ್ಗ ।

ಅಧಿತ ಅಧಿಷಾತಾಂ ಅಧಿಷತ, ಅಧಿಥಾಃ ಅಧಿಷಾಥಾಂ ಅಧಿಢ್ವಂ, ಅಧಿಧ್ವಂ, ಅಧಿಷಿ ಅಧಿಷ್ವಹಿ ಅಧಿಷ್ಮಹಿ ।

**ಪ್ರಯೋಗ—** ವಿಶಾಲಸಂವಿದಾ ಸುಚಿರಾತ ನಿವೇದ್ಯಹೀನಂ ಪಾರಂತೀಸುರಸದನಂ ಸಂಪ್ರಾಪ್ತೇನ ಗ್ರಾಮ್ಯಗ್ರ್ಯ ಕ್ಷಿತಿಪತಿಭಿಃ ದಿನಾರ್ಧಮಾತ್ರಾತ್ ಸಭೂತಬಲಿ ಅನಲ್ಪಾಃ ತದ್ಭೂತಯಃ ವ್ಯಧಾಯಿಷತ ಖಲು ।

★★★

**ಅವತಾರಿಕಾ—** ಆ ದೇವಾಲಯವನ್ನು ಅಷ್ಟು ಬೇಗನೆ ಜೀರ್ಣೋದ್ಧಾರ ಮಾಡಿಸಿ ಉತ್ಸವಾದಿಗಳನ್ನು ಮಾಡಿಸಿದುದರ ಕಾರಣವನ್ನು ವಿವರಿಸುತ್ತಾರೆ.

**ಭೀಮತ್ವೇ ಸಹ ಸಹಜೈಃ ಪ್ರತಿಷ್ಠಿತಃ ಪ್ರಾಕ್**
**ಪಂಚಾತ್ಮಾ ಮುರರಿಪುರಂಚಿತೋ ಯದತ್ರ ।**
**ಪಾಂಚಾಲ್ಯಾ ಬಲಿಸಲಿಲಂ ಸಮಂ ದದತ್ಯಾ**
**ಸೋಽಸ್ಮಾರ್ಷೀತ್ತಮಿಮಮಥ ಪ್ರಪೂಜ್ಯಪೂಜ್ಯಃ ॥ 37 ॥**

**ಪದಚ್ಛೇದ—** ಭೀಮತ್ವೇ, ಸಹ, ಸಹಜೈಃ, ಪ್ರತಿಷ್ಠಿತಃ, ಪ್ರಾಕ್, ಪಂಚಾತ್ಮಾ, ಮುರರಿಪುಃ, ಅಂಚಿತಃ, ಯತ್, ಅತ್ರ, ಪಾಂಚಾಲ್ಯಾ, ಬಲಿಸಲಿಲಂ, ಸಮಂ, ದದತ್ಯಾ, ಸಃ, ಅಸ್ಮಾರ್ಷೀತ್, ತಮ್, ಇಮಂ, ಅಥ, ಪ್ರಪೂಜ್ಯಪೂಜ್ಯಃ ।

**ಅನ್ವಯ—** **ಪ್ರಾಕ್**, ಭೀಮತ್ವೇ, ಸಹಜೈಃ, ಸಹ, ಅತ್ರ, ಪ್ರತಿಷ್ಠಿತಃ, ಪಂಚಾತ್ಮಾ, ಮುರರಿಪುಃ, ಬಲಿಸಲಿಲಂ, ದದತ್ಯಾ, ಪಾಂಚಾಲ್ಯಾ, ಸಮಂ, ಯತ್, ಅಂಚಿತಃ, ಪ್ರಪೂಜ್ಯಪೂಜ್ಯಃ, ಸಃ, ಅಥ, ತಂ, ಇಮಂ, ಅಸ್ಮಾರ್ಷೀತ್ ।

ಅನ್ವಯಾರ್ಥ—

**ಪ್ರಾಕ್** = ಹಿಂದೆ ದ್ವಾಪರಯುಗದಲ್ಲಿ,
**ಭೀಮತ್ವೇ** = ಭೀಮಸೇನ ರೂಪದಲ್ಲಿ
**ಸಹಜೈಃ ಸಹ** = ಸಹೋದರರೊಡನೆ,
**ಅತ್ರ** = ಪಾರಂತೀ ದೇವಾಲಯದಲ್ಲಿ
**ಪ್ರತಿಷ್ಠಿತಃ** = ಪ್ರತಿಷ್ಠಾಪಿಸಲ್ಪಟ್ಟ
**ಪಂಚಾತ್ಮಾ** = ಐದು ರೂಪಗಳುಳ್ಳ
**ಮುರರಿಪುಃ** = ಶ್ರೀಮನ್ನಾರಾಯಣನು,
**ಬಲಿಸಲಿಲಂ** = ಭೂತ ಬಲಿಯ ನೀರನ್ನು,
**ದದತ್ಯಾ** = ಕೊಡುತ್ತಿರುವ,
**ಪಾಂಚಾಲ್ಯಾಸಮಂ** = ದ್ರೌಪದಿಯೊಡನೆ,
**ಯತ್** = ಯಾವ ಕಾರಣದಿಂದ,
**ಅಂಚಿತಃ** = ಪೂಜಿಸಲ್ಪಟ್ಟನೋ, (ತತ್ = ಆಕಾರಣದಿಂದ)
**ಪ್ರಪೂಜ್ಯಪೂಜ್ಯಃ** = ಅತ್ಯಂತ ಪೂಜ್ಯರಾದ ರುದ್ರಾದಿಗಳಿಂದಲೂ ಪೂಜ್ಯರಾದ,
**ಸಃ** = ಶ್ರೀಮಧ್ವಾಚಾರ್ಯರು,
**ಅಥ** = ತರುವಾಯ,
**ತಂ ಇಮಂ** = ಅಂತಹ ಈ ವಿಷ್ಣುವನ್ನು,
**ಅಸ್ಮಾರ್ಷೀತ್** = ನೆನಪು ಮಾಡಿಕೊಂಡರು.

ತಾತ್ಪರ್ಯ— ಪೂರ್ವಾವತಾರದಲ್ಲಿ ತಾವು ಭೀಮಸೇನನಾಗಿರುವಾಗ ಈ ಮಧ್ವಾಚಾರ್ಯರೇ ಇಲ್ಲಿಗೆ ಬಂದಿದ್ದರು. ಆಗ ಆ ಭೀಮಸೇನದೇವರು ತಮ್ಮ ಸಹೋದರರಾದ ಧರ್ಮರಾಜ, ಅರ್ಜುನಾದಿಗಳಿಂದ ಕೂಡಿಕೊಂಡು ಈ ಪಾರಂತೀ ದೇವಾಲಯದಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಎಂಬ ಐದು ರೂಪವುಳ್ಳ ಶ್ರೀಮನ್ಮಹಾ ವಿಷ್ಣುವನ್ನು ಪ್ರತಿಷ್ಠಿಸಿದ್ದರು. ಅನಂತರ ಮುರರಿಪುವಾದ ಆ ಶ್ರೀಕೃಷ್ಣನಿಗೆ ಉತ್ಸವ ಮಾಡಿಸಿ ಭೂತಬಲಿಯನ್ನು ಕೊಡುವಾಗ, ದ್ರೌಪದಿಯು ಬಲಿದಾನಾನಂತರದಲ್ಲಿ ತನ್ನ ಪತಿಯಾದ ಭೀಮಸೇನ ದೇವರಿಗೆ ಕೈಗೆ ನೀರನ್ನು ಕೊಡುತ್ತಿದ್ದಳು. ಆ ನೀರನ್ನು ಭೀಮಸೇನದೇವರು ಬಲಿಯ ಮೇಲೆ ಹಾಕುತ್ತಿದ್ದರು. ದೇವತೆಗಳಿಂದ ಅತಿಶಯವಾಗಿ ಪೂಜಾರ್ಹರಾದ ರುದ್ರಾದಿ-ಗಳಿಂದಲೂ ಪೂಜ್ಯರಾದ ಶ್ರೀಮಧ್ವಾಚಾರ್ಯರು ಪ್ರಕೃತ ಪಾರಂತೀ ಜೀರ್ಣೋದ್ಧಾರಾನಂತರದಲ್ಲಿ ತಾವು ಅಂದು ಪ್ರತಿಷ್ಠೆ ಮಾಡಿದಾಗ ಇದ್ದ ಸನ್ನಿವೇಶವನ್ನು ಈಗ ಸ್ಮರಿಸಿಕೊಂಡರು. ಪಾಂಡವರು ವನವಾಸ ಮಾಡುತ್ತಿದ್ದಾಗ ಸಂಚಾರ ಮಾಡುತ್ತಾ ಪಾರಂತೀಗ್ರಾಮಕ್ಕೆ ಬಂದಿದ್ದರು. ಐದು ಮಂದಿ ಪಾಂಡವರು, ಐದು ಕೃಷ್ಣಪ್ರತಿಮೆಗಳನ್ನು ಅಲ್ಲಿ ಪ್ರತಿಷ್ಠಿಸಿದ್ದರು. ದ್ರೌಪದಿಯು ಭೂತಬಲಿಯ ಜಲಾಂಜಲಿಗೆ ನೀರನ್ನು ಹಾಕುತ್ತಿದ್ದಳು. ಭೀಮಸೇನ ದೇವರಾಗಿದ್ದಾಗ ಘಟನೆಯನ್ನು ಸ್ಮರಿಸಿದ್ದರಿಂದಲೇ ಆಚಾರ್ಯರು ತಾವೇ ಪ್ರತಿಷ್ಠಿಸಿದ ದೇವರಿಗೆ ಪೂಜೆ ನೈವೇದ್ಯಾದಿಗಳು ಇಲ್ಲದಿರುವುದು ಸರಿಯಲ್ಲವೆಂದು ಭಾವಿಸಿ ಕೂಡಲೇ ಜೀರ್ಣೋದ್ಧಾರ, ಉತ್ಸವ, ಪೂಜಾ, ನೈವೇದ್ಯ, ಭೂತಬಲಿ ಎಲ್ಲವನ್ನೂ ಅರ್ಧದಿವಸದಲ್ಲಿಯೇ ಮಾಡಿಸಿದರು ಎಂದು ಭಾವ.

ವಿಗ್ರಹ—

**ಭೀಮತ್ವೇ**— ಭೀಮಸ್ಯ ಭಾವಃ ಭೀಮತ್ವಂ ತಸ್ಮಿನ್ ।
**ಸಹಜೈಃ**— ಸಹ ಜಾಯಂತೇ ಇತಿ ಸಹಜಾಃ ತೈಃ ।

ಪಂಚಾತ್ಮಾ— ಪಂಚ ಆತ್ಮಾನಃ (ಸ್ವರೂಪಾಣಿ) ಯಸ್ಯ ಸಃ ಪಂಚಾತ್ಮಾ ।

ಮುರರಿಪುಃ— ಮುರಸ್ಯ ರಿಪುಃ ಮುರರಿಪುಃ ।

ಪ್ರಪೂಜ್ಯಪೂಜ್ಯಃ— ಪ್ರಕರ್ಷೇಣ ಪೂಜ್ಯಾಃ ಪ್ರಪೂಜ್ಯಾಃ, ಪ್ರಪೂಜ್ಯೈಃ ಪೂಜ್ಯಃ ಪ್ರಪೂಜ್ಯಪೂಜ್ಯಃ ।

ಕ್ರಿಯಾಪದ— ಅಸ್ಮಾರ್ಷೀತ್ - ಸ್ಮೃಚಿಂತಾಯಾಂ ಸಕ. ಅನಿ. ಪರ. ಭೂತೇ ಲುಙ್ ಪ್ರಥಮಪುರುಷ ಏಕವಚನ ।
ಅಸ್ಮಾರ್ಷೀತ್ ಅಸ್ಮಾರ್ಷ್ಟಾಂ ಅಸ್ಮಾರ್ಷುಃ, ಅಸ್ಮಾರ್ಷೀಃ ಅಸ್ಮಾರ್ಷ್ಟಂ ಅಸ್ಮಾರ್ಷ್ಟ, ಅಸ್ಮಾರ್ಷಂ ಅಸ್ಮಾರ್ಷ್ವ ಅಸಾರ್ಷ್ಮ ।

ಪ್ರಯೋಗ— ಪ್ರಾಕ್ ಭೀಮತ್ವೇ ಸಹಜೈಃ ಸಹ ಅತ್ರ ಪ್ರತಿಷ್ಠಿತೇನ ಪಂಚಾತ್ಮನಾ ಮುರರಿಪುಣಾ ಬಲಿಸಲಿಲಂ ದದತ್ಯಾ ಪಾಂಚಾಲ್ಯಾ ಸಮಂ ಯತ್ ಅಂಚಿತೇನ ಅಬೂಯತ ಪ್ರಪೂಜ್ಯಪೂಜ್ಯೇನ ತೇನ ಸೋಧಿಯಂ ಅಸ್ಮಾರಿ ।

★ ★ ★

ಅವತಾರಿಕಾ— ಶ್ರೀಮದಾಚಾರ್ಯರು ಬೇಸಿಗೆ ಕಾಲದಲ್ಲಿಯೂ ಮಳೆ ತರಿಸಿ ಕೆರೆಯನ್ನು ತುಂಬಿಸಿದರು.

**ಆಯಾಸ್ಯನ್ ಕಿಲ ಸರಿದಂತರಾಖ್ಯದೇಶಂ**
**ಗ್ರೀಷ್ಮೇ ನಿರ್ಜಲಮಿಹ ಶುಶ್ರುವಾಂಸ್ತಟಾಕಮ್ ।**
**ತತ್ಕಾಲೇ ಪರಮಭಿವರ್ಷಯನ್ ಘನೌಘಂ**
**ತತ್ಪೂರ್ತ್ಯೈ ವ್ಯಧಿತ ಕುತೂಹಲಂ ಜನಾನಾಮ್ ॥ 38 ॥**

ಪದಚ್ಛೇದ— ಆಯಾಸ್ಯನ್, ಕಿಲ, ಸರಿದಂತರಾಖ್ಯದೇಶಂ, ಗ್ರೀಷ್ಮೇ, ನಿರ್ಜಲಂ, ಇಹ, ಶುಶ್ರುವಾನ್, ತಟಾಕಮ್, ತತ್ಕಾಲೇ, ಪರಂ, ಅಭಿವರ್ಷಯನ್, ಘನೌಘಂ, ತತ್ಪೂರ್ತ್ಯೈ, ವ್ಯಧಿತ, ಕುತೂಹಲಂ, ಜನಾನಾಂ ।

ಅನ್ವಯ— ಗ್ರೀಷ್ಮೇ, ಸರಿದಂತರಾಖ್ಯದೇಶಂ, ಆಯಾಸ್ಯನ್, ಇಹ, ತಟಾಕಂ, ನಿರ್ಜಲಂ, ಶುಶ್ರುವಾನ್, ತತ್ಕಾಲೇ, ಪರಂ, ತತ್ಪೂರ್ತ್ಯೈ, ಘನೌಘಂ, ಅಭಿವರ್ಷಯನ್, ಜನಾನಾಂ, ಕುತೂಹಲಂ, ವ್ಯಧಿತ, ಕಿಲ ।

ಅನ್ವಯಾರ್ಥ—

**ಗ್ರೀಷ್ಮೇ** = ಗ್ರೀಷ್ಮ ಋತುವಿನಲ್ಲಿ,
**ಸರಿದಂತರಾಖ್ಯದೇಶಂ** = ನೇತ್ರಾವತಿ, ಕುಮಾರಧಾರ ನದಿಗಳ ಮಧ್ಯದಲ್ಲಿರುವ ಇಡತುದೆ ಎಂಬ ಪ್ರದೇಶವನ್ನು ಕುರಿತು,
**ಆಯಸ್ಯಾನ್** = ಬರಲಿರುವವರಾಗಿ,
**ಇಹ** = ಈ ಇಡತುದೆ ಗ್ರಾಮದಲ್ಲಿ,
**ತಟಾಕಂ** = ಕೆರೆಯನ್ನು,
**ನಿರ್ಜಲಂ** = ನೀರಿಲ್ಲದನ್ನಾಗಿ,
**ಶುಶ್ರುವಾನ್ ಸನ್** = ಕೇಳಿದವರಾಗಿ,
**ತತ್ಕಾಲೇ** = ಆ ಬೇಸಿಗೆಯಲ್ಲಿ,
**ಪರಂ** = ಕೇವಲ,
**ತತ್ಪೂರ್ತ್ಯೈ** = ಆ ಗ್ರಾಮದ ಕೆರೆ ತುಂಬುವುದಕ್ಕಾಗಿಯೇ,
**ಘನೌಘಂ** = ಮೇಘ ಸಮೂಹವನ್ನು,

**ಅಭಿವರ್ಷಯನ್** = ಮಳೆ ಸುರಿಸುವಂತೆ ಮಾಡುತ್ತಾ,

**ಜನಾನಾಂ** = ಜನರಿಗೆ,

**ಕುತೂಹಲಂ ವ್ಯಧಿತ** = ಆಶ್ಚರ್ಯವನ್ನುಂಟು ಮಾಡಿದರು.

**ತಾತ್ಪರ್ಯ—** ಶ್ರೀಮಧ್ವಾಚಾರ್ಯರು ಬೇಸಿಗೆಯಲ್ಲಿ ಸರಿದಂತರವೆಂಬ (ಇಡೆತುದೆ) ಗ್ರಾಮಕ್ಕೆ ಬರುವವರಿದ್ದರು. ಆಗ ದಾರಿಯಲ್ಲಿ ಸಿಕ್ಕಿದ ಜನರು ಇಡೆತುದೆ ಗ್ರಾಮದ ಕೆರೆಯಲ್ಲಿ ನೀರಿಲ್ಲವೆಂದು ತಿಳಿಸಿದರು. ಆಗ ಆಚಾರ್ಯರು ಆ ಕೂಡಲೇ ಆ ಕೆರೆಯನ್ನು ನೀರಿನಿಂದ ತುಂಬಿಸುವುದಕ್ಕೆ ಮೋಡಗಳ ರಾಶಿಯನ್ನು ಬರಿಸಿ ಮಳೆಗರೆಸಿದರು. ಆ ಮಳೆಯು ಆ ಕೆರೆಯ ಪ್ರದೇಶದಲ್ಲಿ ಮಾತ್ರ ಬಂದು, ಕೆರೆಯು ಮಾತ್ರ ತುಂಬಿತು. ಅಕಾಲದಲ್ಲಿ ಮೋಡಗಳನ್ನು ತರಿಸಿ ಕೆರೆಯ ಪಾತ್ರ ತುಂಬುವಷ್ಟೇ ಅಲ್ಲಿ ಮಾತ್ರ ಮಳೆ ಬರಿಸಿದ ಆ ಅಸಾಧಾರಣ ಮಹಿಮೆಯನ್ನು ಕಂಡು ಜನರು ತುಂಬಾ ಆಶ್ಚರ್ಯಪಟ್ಟರು ಎಂದು ಭಾವ. (ಸರಿದಂತರ=ತುಳು ಭಾಷೆಯಲ್ಲಿ ಇಡೆತುದೆ ನೇತ್ರಾವತಿ-ಕುಮಾರಧಾರಾ ನದಿಗಳ ಪ್ರದೇಶದ ಒಂದು ಗ್ರಾಮ)

**ವಿಗ್ರಹ ಮತ್ತು ಕೋಶ—**

**ಸರಿದಂತರಾಖ್ಯದೇಶಂ—** ಸರಿತೋಃ ಅಂತರಂ ಸರಿದಂತರಂ, ಸರಿದಂತರಂ ಇತಿ ಆಖ್ಯಾ ಯಸ್ಯ ಸಃ ಸರಿದಂತರಾಖ್ಯಃ, ಸರಿದಂತರಾಖ್ಯಶ್ಚಾಸೌ ದೇಶಶ್ಚ ಸರಿದಂತರಾಖ್ಯದೇಶಃ ತಂ ।

**ನಿರ್ಜಲಃ—** ನಿರ್ಗತಂ ಜಲಂ ಯಸ್ಮಾತ್ ಸಃ ನಿರ್ಜಲಃ ।

**ತತ್ಕಾಲೇ—** ಸ ಚಾಸೌ ಕಾಲಶ್ಚ ತತ್ಕಾಲಃ, ತಸ್ಮಿನ್ ।

**ಘನೌಘಃ—** ಘನಾನಾಂ ಓಘಃ ಘನೌಘಃ । ಘನ = ಮೋಡ, 'ಘನಜೀಮೂತಮುದಿರ ಜಲಮುಗ್ಧೂಮ ಯೋನಯಃ' ಅಮರ ।

**ತತ್ಪೂರ್ತ್ಯೈ—** ತಸ್ಯ ಪೂರ್ತಿಃ ತತ್ಪೂರ್ತಿಃ, ತಸ್ಯೈ ।

**ತಟಾಕ** = ಕೆರೆ, 'ಪದ್ಮಾಕರಸ್ತಟಾಕೋಽಸ್ತ್ರೀ ಕಾಸಾರಃ ಸರಸೀಸರಃ' ಅಮರ ।

**ಕ್ರಿಯಾಪದ—** ಶುಶ್ರುವಾನ್ - ಶುಶ್ರುವಾನ್ ಶುಶ್ರುವಾಂಸೌ ಶುಶ್ರುವಾಂಸಃ, ಶುಶ್ರುವಾಂಸಂ ಶುಶ್ರುವಾಂಸೌ ಶುಶ್ರೂಷಃ, ಶುಶ್ರೂಷುಷಾ ಶುಶ್ರೂಷುದ್ಭ್ಯಾಂ ಶುಶ್ರೂಷುದ್ಭಿಃ ಇತ್ಯಾದಿ. ವ್ಯಧಿತ - ಅಧಿತ ಅಧಿಷಾತಾಂ ಅಧಿಷತ, ಇತ್ಯಾದಿ ಡುಧಾಞ ಧಾತು ಕರ್ತರಿ ಭೂತೇ ಲುಙ್ ।

**ಪ್ರಯೋಗ—** ಗ್ರೀಷ್ಮೇ ಸರಿದಂತರಾಖ್ಯಂ ದೇಶಂ ಆಯಾಸ್ಯತಾ ಇಹ ತಟಾಕಂ ನಿರ್ಜಲಂ ಶುಶ್ರೂಷುಷಾ ತತ್ಕಾಲೇ ಪರಂ ತತ್ಪೂರ್ತ್ಯೈ ಘನೌಘಂ ಅಭಿವರ್ಷಯತಾ ಜನಾನಾಂ ಕುತೂಹಲಂ ವ್ಯಧಾಯಿ ಕಿಲ ।

★ ★ ★

**ಅವತಾರಿಕಾ—** ಅದೇ ಪ್ರದೇಶದಲ್ಲಿಯೇ ಆಚಾರ್ಯರನ್ನು ಹೊಡೆಯಲು ಬಂದ ಒಬ್ಬ ಗ್ರಾಮಾಧಿಪತಿಯ ಮನಃ ಪರಿವರ್ತನೆಯಾದ ಘಟನೆಯನ್ನು ವರ್ಣಿಸುತ್ತಾರೆ.

**ದುರ್ಮಂತ್ರೈಃ ಖಲಪಟಲೈಃ ಪ್ರಚೋದ್ಯಮಾನೋ**
**ಗ್ರಾಮೇಶೋ ವೃಷಲಪತಿಃ ಪ್ರಹರ್ತುಮೇನಮ್ ।**
**ಸಂಪ್ರಾಪ್ತಸ್ತತ ಉತ ಯಾಂತಮೀಕ್ಷಮಾಣಃ**
**ಪ್ರೋದ್ಯಂತಂ ರವಿಮಿವ ವಿಸ್ಮಿತೋ ನನಾಮ ॥ 39 ॥**

**ಪದಚ್ಛೇದ—** ದುರ್ಮಂತ್ರೈಃ, ಖಲಪಟಲೈಃ, ಪ್ರಚೋದ್ಯಮಾನಃ, ಗ್ರಾಮೇಶಃ, ವೃಷಲಪತಿಃ, ಪ್ರಹರ್ತುಂ, ಏನಂ, ಸಂಪ್ರಾಪ್ತಃ, ತತಃ, ಉತ, ಯಾಂತಂ, ಈಕ್ಷಮಾಣಃ, ಪ್ರೋದ್ಯಂತಂ, ರವಿಂ, ಇವ, ವಿಸ್ಮಿತಃ, ನನಾಮ ।

ಅನ್ವಯ— ಖಲಪಟಲೈಃ, ದುರ್ಮಂತ್ರೈಃ, ಏನಂ, ಪ್ರಹರ್ತುಂ, ಚೋದ್ಯಮಾನಃ, ಗ್ರಾಮೇಶಃ, ವೃಷಲಪತಿಃ, ಸಂಪ್ರಾಪ್ತಃ, ತತಃ, ಉತ, ಯಾಂತಂ, ಪ್ರೋದ್ಯಂತಂ, ರವಿಂ, ಇವ, ಈಕ್ಷಮಾಣಃ, ವಿಸ್ಮಿತಃ, ನನಾಮ ।

ಅನ್ವಯಾರ್ಥ—

**ಖಲಪಟಲೈಃ** = ದುಷ್ಟರ ಸಮೂಹಗಳಿಂದ,
**ದುರ್ಮಂತ್ರೈಃ** = ಕೆಟ್ಟ ಮಂತ್ರಾಲೋಚನೆಗಳಿಂದ,
**ಏನಂ** = ಈ ಮಧ್ವಾಚಾರ್ಯರನ್ನು
**ಪ್ರಹರ್ತುಂ** = ಹೊಡೆಯಲು, (ಕೊಲ್ಲಲು)
**ಪ್ರಚೋದ್ಯಮಾನಃ** = ಪ್ರೇರಿಸಲ್ಪಟ್ಟ
**ಗ್ರಾಮೇಶಃ** = ಆ ಸರಿದಂತರ(ಇಡೆ ತುದೆ) ಗ್ರಾಮದ ಪಟೇಲನಾದ,
**ವೃಷಲಪತಿಃ** = ಶೂದ್ರರ ಅಧಿಪತಿಯು,
**ಸಂಪ್ರಾಪ್ತಃ** = ಬಂದವನಾಗಿ,
**ತತಃ ಉತ** = ಆ ಸರಿದಂತರ ಗ್ರಾಮದಿಂದಲೂ,
**ಯಾಂತಂ** = ಹೋಗುತ್ತಿರುವ,
**ಪ್ರೋದ್ಯಂತಂ** = ಉದಯಿಸುತ್ತಿರುವ,
**ರವಿಂ ಇವ** = ಸೂರ್ಯನಂತಿರುವ ಆಚಾರ್ಯರನ್ನು,
**ಈಕ್ಷಮಾಣಃ ಸನ್** = ನೋಡುತ್ತಿರುವವನಾಗಿ,
**ವಿಸ್ಮಿತಃ ಸನ್** = ಆಶ್ಚರ್ಯಪಟ್ಟವನಾಗಿ,
**ನನಾಮ** = ನಮಸ್ಕಾರ ಮಾಡಿದನು.

ತಾತ್ಪರ್ಯ— ಶ್ರೀಮಧ್ವಾಚಾರ್ಯರ ಮಹಾಮಹಿಮೆಯನ್ನು ಕೇಳಿ, ನೋಡಿ ಸಹಿಸದ ಕೆಲವರು ಆಚಾರ್ಯರನ್ನು ಕೊಲ್ಲಬೇಕು ಅಥವಾ ಹೊಡೆಯಬೇಕು ಎಂಬ ಉದ್ದೇಶದಿಂದ ಆ ಇಡತುದೆ ಗ್ರಾಮದ ಒಡೆಯನಾದ ಶೂದ್ರರ ಮುಖಂಡನಿಗೆ ದುರ್ಬೋಧನೆ ಮಾಡಿ ಕಳುಹಿಸಿದರು. ಅವನು ಆಚಾರ್ಯರನ್ನು ಹೊಡೆಯಬೇಕೆಂದು ಅನೇಕ ಜನರ ಜತೆಗೆ ದೊಣ್ಣೆ ಕತ್ತಿಗಳನ್ನು ತೆಗೆದುಕೊಂಡು ಬರುತ್ತಿದ್ದನು. ಅಷ್ಟರಲ್ಲಿ ಆಚಾರ್ಯರು ಸರಿದಂತರ ಗ್ರಾಮದಿಂದ ಬೇರೆ ಊರಿಗೆ ಹೋಗುತ್ತಾ ಇದ್ದರು. ಶೂದ್ರಗ್ರಾಮಾಧಿಪತಿಯು ಆಚಾರ್ಯರನ್ನು ದೂರದಿಂದಲೇ ನೋಡಿದನು. ಅವನಿಗೆ ಆಚಾರ್ಯರು ಉದಯಿಸುತ್ತಿರುವ ಸೂರ್ಯನಂತೆ ಕಂಡರು. ಅವನು ಆ ದಿವ್ಯ ತೇಜಸ್ಸನ್ನು ಕಂಡು ಆಶ್ಚರ್ಯಪಟ್ಟನು. ಇಂತಹವರ ಮೇಲೆ ಕೈಯೆತ್ತುವುದು ಸಾಧುವಲ್ಲ, ಸಾಧ್ಯವಲ್ಲ, ಯೋಗ್ಯವಲ್ಲ ಎಂದು ತಿಳಿದು ಅವನು ಆಚಾರ್ಯರ ಪಾದಗಳಿಗೆ ಉದ್ದಂಡ ನಮಸ್ಕಾರ ಹಾಕಿ ಶರಣಾಗತನಾದನು ಮತ್ತು ಕ್ಷಮೆಯನ್ನು ಕೇಳಿಕೊಂಡನು ಎಂದು ಭಾವ.

ವಿಗ್ರಹ ಮತ್ತು ಕೋಶ—

**ದುರ್ಮಂತ್ರೈಃ**— ದುಷ್ಟಾಶ್ಚ ತೇ ಮಂತ್ರಾಶ್ಚ ದುರ್ಮಂತ್ರಾಃ ತೈಃ ।

**ಖಲಪಟಲೈಃ**— ಖಲಾನಾಂ ಪಟಲಾನಿ ಖಲಪಟಲಾನಿ ತೈಃ । ಪಟಲ = ಸಮೂಹ, 'ಪಟಲಂ ತು ಛದಿರ್ವ್ರಜಃ' ವಿಶ್ವ, 'ಪಟಲಂ ಪೇಟಲಂ ಚಕ್ರಂ' ಹಲ, ಖಲ = ದುರ್ಜನ, 'ಪಿಶುನೋ ದುರ್ಜನ ಖಲಃ' ಅಮರ ।

**ಪ್ರಚೋದ್ಯಮಾನಃ**— ಪ್ರಚೋದ್ಯತೇ ಇತಿ ಪ್ರಚೋದ್ಯಮಾನಃ ।

**ಗ್ರಾಮೇಶಃ—** ಗ್ರಾಮಸ್ಯ ಈಶಃ ಗ್ರಾಮೇಶಃ ।

**ವೃಷಲಪತಿಃ—** ವೃಷಲಾನಾಂ ಪತಿಃ ವೃಷಲಪತಿಃ । ವೃಷಲ = ಶೂದ್ರ, 'ಶೂದ್ರಾಶ್ಚಾವರವರ್ಣಾಶ್ಚ ವೃಷಲಾಶ್ಚ ಜಘನ್ಯಜಾಃ' ಅಮರ ।

**ಕ್ರಿಯಾಪದ— ನನಾಮ** - ಣಮು ಪ್ರಹ್ವತ್ವೇ ಶಬ್ದೇ ಚ ಸಕ. ಅನಿ. ಪರ. ಭೂತ. ಅನದ್ಯತನ ಪರೋಕ್ಷೇ ಲಿಟ್ ಪ್ರಥಮಪುರುಷೇ ಏಕವಚನ ।

ನನಾಮ ನೇಮತುಃ ನೇಮುಃ, ನೇಮಿಥ-ನನಂಥ ನೇಮತುಃ ನೇಮ, ನನಾಮ-ನನಮ ನೇಮಿವ ನೇಮಿಮ ।

**ಪ್ರಯೋಗ—** ಖಲಪಟಲ್ಯೈಃ ದುರ್ಮಂತ್ರೈಃ ಏನಂ ಪ್ರಹರ್ತುಂ ಪ್ರಚೋದ್ಯಮಾನೇನ ಗ್ರಾಮೇಶೇನ ವೃಷಲಪತಿನಾ ಸಂಪ್ರಾಪ್ತೇನ ತತ ಉತ ಯಾನ್ ಆಚಾರ್ಯಃ ತಂ ಪ್ರೋದ್ಯಂತಂ ರವಿಂ ಇವ ಈಕ್ಷಮಾಣೇನ ವಿಸ್ಮಿತೇನ ನೇಮೆ ।

★★★

**ಅವತಾರಿಕಾ—** ಆಚಾರ್ಯರು ಶ್ರೀಕೃಷ್ಣಾಮೃತಮಹಾರ್ಣವವೆಂಬ ಗ್ರಂಥವನ್ನು ರಚಿಸಿದರು ಎಂದು ಹೇಳುತ್ತಾರೆ.

**ಕ್ಷೇತ್ರಾಗ್ರ್ಯಂ ತ್ರಿಭುವನವೈದ್ಯನಾಥನಾಥಂ**
**ಪ್ರಸ್ಥಾಯ ಪ್ರಚುರತರಾಂತರಃ ಪ್ರಭಾವೀ ।**
**ಶ್ರೀಕೃಷ್ಣಾಮೃತಪರಮಾರ್ಣವಾಭಿಧಾನಂ**
**ಚಕ್ರೇ ಸದ್ವಚನತತಿಂ ಸ್ವಭಕ್ತಭೂತ್ಯೈ ॥ 40 ॥**

**ಪದಚ್ಛೇದ—**ಕ್ಷೇತ್ರಾಗ್ರ್ಯಂ, ತ್ರಿಭುವನವೈದ್ಯನಾಥನಾಥಂ, ಪ್ರಸ್ಥಾಯ, ಪ್ರಚುರತರಾಂತರಃ, ಪ್ರಭಾವೀ, ಶ್ರೀಕೃಷ್ಣಾಮೃತ ಪರಮಾರ್ಣವಾಭಿಧಾನಂ, ಚಕ್ರೇ, ಸದ್ವಚನತತಿಂ, ಸ್ವಭಕ್ತಭೂತ್ಯೈ ।

**ಅನ್ವಯ—** ಪ್ರಭಾವೀ, ಪ್ರಚುರತರಾಂತರಃ, ತ್ರಿಭುವನವೈದ್ಯನಾಥನಾಥಂ, ಕ್ಷೇತ್ರಾಗ್ರ್ಯಂ, ಪ್ರಸ್ಥಾಯ, ಶ್ರೀಕೃಷ್ಣಾಮೃತ ಪರಮಾರ್ಣವಾಭಿಧಾನಂ, ಸದ್ವಚನತತಿಂ, ಸ್ವಭಕ್ತಭೂತ್ಯೈ, ಚಕ್ರೇ ।

**ಅನ್ವಯಾರ್ಥ—**

**ಪ್ರಭಾವೀ** = ಸಾಮರ್ಥ್ಯವುಳ್ಳ

**ಪ್ರಚುರತರಾಂತರಃ** = ಶ್ರೀಪೂರ್ಣಪ್ರಜ್ಞಾಚಾರ್ಯರು,

**ತ್ರಿಭುವನವೈದ್ಯನಾಥನಾಥಂ** = ಮೂರು ಲೋಕಗಳ ವೈದ್ಯರಿಗೆ ಸ್ವಾಮಿಯಾದ ಧನ್ವಂತರಿಯೇ ಸ್ವಾಮಿಯಾಗಿ ಉಳ್ಳ

**ಕ್ಷೇತ್ರಾಗ್ರ್ಯಂ** = 'ಕೊಕ್ಕಡ' ಎಂಬ ಶ್ರೇಷ್ಠವಾದ ಗ್ರಾಮಕ್ಕೆ,

**ಪ್ರಸ್ಥಾಯ** = ಹೊರಟು,

**ಶ್ರೀಕೃಷ್ಣಾಮೃತಪರಮಾರ್ಣವಾಭಿಧಾನಂ** = ಶ್ರೀಕೃಷ್ಣಾಮೃತಮಹಾರ್ಣವವೆಂಬ ಹೆಸರುಳ್ಳ

**ಸದ್ವಚನತತಿಂ** = ಒಳ್ಳೆಯ ಪುರಾಣ ವಚನಗಳ ಸಮೂಹವನ್ನು

**ಸ್ವಭಕ್ತಭೂತ್ಯೈ** = ತಮ್ಮ ಭಕ್ತನಾದ ಇಡೆಪಾಡಿತ್ತಾಯ ಎಂಬುವನ ಶ್ರೇಯಸ್ಸಿಗಾಗಿ,

**ಚಕ್ರೇ** = ಮಾಡಿದರು.

ತಾತ್ಪರ್ಯ— ಅತ್ಯಂತ ಸಮರ್ಥರಾದ ಶ್ರೀಮಧ್ವಾಚಾರ್ಯರು ಮೂರುಲೋಕಗಳಲ್ಲಿರುವ ವೈದ್ಯರಿಗೆ ಸ್ವಾಮಿಯಾದ ಧನ್ವಂತರಿಯೇ ಸ್ವಾಮಿಯಾಗಿ ಉಳ್ಳ ಶ್ರೇಷ್ಠವಾದ ಕ್ಷೇತ್ರಕ್ಕೆ ಹೊರಟು, ಆ ಕ್ಷೇತ್ರದಲ್ಲಿ ತಮ್ಮ ಭಕ್ತನಾದ 'ಇಡೆಪಾಡಿತ್ತಾಯ' ಎಂಬ ಬ್ರಾಹ್ಮಣನ ಜ್ಞಾನಸಂಪತ್ತಿಗಾಗಿ ಶ್ರೀಕೃಷ್ಣಾಮೃತಮಹಾರ್ಣವವೆಂಬ ಪುರಾಣವಚನಸಂಗ್ರಹರೂಪವಾದ ಅತ್ಯುತ್ತಮ-ವಾದ ಗ್ರಂಥವನ್ನು ಮಾಡಿದರು. (ಈ ವೈದ್ಯನಾಥ ಕ್ಷೇತ್ರವನ್ನು ಅಲ್ಲಿಯ ಭಾಷೆಯಲ್ಲಿ ಕೊಕ್ಕಡ ಎಂದು ಹೇಳುತ್ತಾರೆ. ಇದು ಧರ್ಮಸ್ಥಳದಿಂದ ಸುಬ್ರಹ್ಮಣ್ಯಕ್ಕೆ ಹೋಗುವ ದಾರಿಯಲ್ಲಿದೆ. ಇಲ್ಲಿ ವೈದ್ಯನಾಥ ದೇವಾಲಯವಿದೆ ಸರಿದಂತರ ಕ್ಷೇತ್ರದಿಂದ ಇಲ್ಲಿಗೆ ಹೋಗುತ್ತಾ ಆಚಾರ್ಯರು 'ಶ್ರೀಕೃಷ್ಣಾಮೃತಮಹಾರ್ಣವ' ಎಂಬ ಗ್ರಂಥವನ್ನು ರಚಿಸುತ್ತಾ ಪುರಾಣವಚನಗಳನ್ನು ಬಾಯಿಯಿಂದಲೇ ಹೇಳುತ್ತಾ ಹೋಗುತ್ತಿದ್ದರು. ಶಿಷ್ಯರು ಅದನ್ನೆಲ್ಲಾ ಸಂಗ್ರಹಿಸುತ್ತಾ ಬರೆಯುತ್ತಿದ್ದರು. ಆಚಾರ್ಯರು ವೈದ್ಯನಾಥೇಶ್ವರ ಎಂಬ ಹೆಸರಿನ ರುದ್ರದೇವಾಲಯವಿರುವ ಗ್ರಾಮಕ್ಕೆ ಹೋಗಿ ಅಲ್ಲಿನ ಇಡೆಪಾಡಿತ್ತಾಯ ಬ್ರಾಹ್ಮಣನಿಗೆ ಆ ಗ್ರಂಥವನ್ನು ಉಪದೇಶಿಸಿ ಅವನನ್ನು ಪರಮ ವಿಷ್ಣುಭಕ್ತನನ್ನಾಗಿ ಮಾಡಿದರು)

**ವಿಗ್ರಹ ಮತ್ತು ಕೋಶ—**

**ಕ್ಷೇತ್ರಾಗ್ರ್ಯಂ —** ಕ್ಷೇತ್ರೇಷು ಅಗ್ರ್ಯಂ ಕ್ಷೇತ್ರಾಗ್ರ್ಯಂ ತತ್ ।

**ತ್ರಿಭುವನವೈದ್ಯನಾಥನಾಥಂ—** ತ್ರಯಾಣಾಂ ಭುವನಾನಾಂ ಸಮಾಹಾರಃ ತ್ರಿಭುವನಂ, ತ್ರಿಭುವನೇ ವೈದ್ಯಾಃ ತ್ರಿಭುವನವೈದ್ಯಾಃ, ತ್ರಿಭುವನವೈದ್ಯಾನಾಂ ನಾಥಃ ತ್ರಿಭುವನವೈದ್ಯನಾಥಃ, ತ್ರಿಭುವನವೈದ್ಯನಾಥಃ ನಾಥಃ ಯಸ್ಯ ತತ್ । (ವೈದ್ಯನಾಥೇಶ್ವರ ಎಂಬ ಆ ಕ್ಷೇತ್ರದ ಹೆಸರಿನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ - ವೈದ್ಯರಿಗೆ ಸ್ವಾಮಿಯಾದ ಈಶ್ವರನುಳ್ಳ ಕ್ಷೇತ್ರವೆಂದು ಆ ಶಬ್ದಕ್ಕೆ ಅರ್ಥವಲ್ಲ, ತ್ರಿಭುವನ ವೈದ್ಯರಿಗೂ ಸ್ವಾಮಿಯಾದ ಧನ್ವಂತರಿಯೇ ಸ್ವಾಮಿಯಾಗಿ ಉಳ್ಳ ಈಶ್ವರನು ನೆಲೆಸಿರುವ ಕ್ಷೇತ್ರ ಎಂದು ಆ ಹೆಸರಿನ ಅರ್ಥ ಎಂಬ ಅಭಿಪ್ರಾಯವನ್ನಿಟ್ಟುಕೊಂಡು ಈ ಪದವನ್ನು ಪ್ರಯೋಗಿಸಿದ್ದಾರೆ)

**ಪ್ರಚುರತರಾಂತರಃ—** ಅತಿಶಯೇನ ಪ್ರಚುರಂ ಪ್ರಚುರತರಂ, ಪ್ರಚುರತರಂ ಅಂತರಂ ಯಸ್ಯ ಸಃ ಪ್ರಚುರ ತರಾಂತರಃ । (ಅತಿಶಯವಾಗಿ ಪೂರ್ಣವಾದ ಮನಸ್ಸು ಜ್ಞಾನವುಳ್ಳವರು ಶ್ರೀಮಧ್ವಾಚಾರ್ಯರು)

**ಪ್ರಭಾವೀ—** ಪ್ರಭಾವಃ ಅಸ್ಯ ಅಸ್ತೀತಿ ಪ್ರಭಾವೀ । (ಅತಿಶಯ ಸಾಮರ್ಥ್ಯವುಳ್ಳವರು)

**ಶ್ರೀಕೃಷ್ಣಾಮೃತಪರಮಾರ್ಣವಾಭಿಧಾನಂ—** ಮಹಾಂಶ್ಚಾಸೌ ಅರ್ಣವಶ್ಚ ಮಾಹಾರ್ಣವಃ, ಅಮೃತಸ್ಯ ಮಹಾರ್ಣವಃ ಅಮೃತಮಹಾರ್ಣವಃ, ಶ್ರೀಕೃಷ್ಣ ಏವ ಅಮೃತಮಹಾರ್ಣವಃ ಶ್ರೀಕೃಷ್ಣಾಮೃತ ಮಹಾರ್ಣವಃ, ಶ್ರೀಕೃಷ್ಣಾಮೃತಮಹಾರ್ಣವ ಇತಿ ಅಭಿಧಾನಂ ಯಸ್ಯ ಸಃ ಶ್ರೀಕೃಷ್ಣಾಮೃತಮಹಾರ್ಣ ವಾಭಿಧಾನಃ (ಗ್ರಂಥಃ) ತಂ । (ಶ್ರೀಕೃಷ್ಣಾಮೃತಮಹಾರ್ಣವಾಭಿಧಾನಾಂ ಎಂಬ ಪಾಠ ಪಕ್ಷದಲ್ಲಿ ಶ್ರೀಕೃಷ್ಣಾಮೃತಮಹಾರ್ಣವ ಇತಿ ಅಭಿಧಾನಂ ಯಸ್ಯಾಃ ಸಾ ತಾಂ ಎಂದು ವಿಗ್ರಹ)

**ಸದ್ವಚನತತಿಂ—** ಸಂತಿ ಚ ತಾನಿ ವಚನಾನಿ ಚ ಸದ್ವಚನಾನಿ, ಸದ್ವಚನಾನಾಂ ತತಿಃ ಯಸ್ಮಿನ್ ಸಃ ಸದ್ವಚನತತಿಃ, (ಗ್ರಂಥಃ) ತಂ । (ಅಥವಾ ಸದ್ವಚನಾನಾಂ ತತಿಃ ಸದ್ವಚನತತಿಃ ತಾಂ ಎಂದು ವಿಗ್ರಹ) (ಅಪ್ರಾಮಾಣ್ಯ ಶಂಕಾಕಲಂಕವಿಲ್ಲದ ಪ್ರಮಾಣಭರಿತವಾದ ಪುರಾಣವಚನಗಳ ಸಂಗ್ರಹವನ್ನು ಸಂಗ್ರಹರೂಪವಾದ ಗ್ರಂಥವನ್ನು ಎಂದು ಅರ್ಥ)

**ಸ್ವಭಕ್ತಭೂತ್ಯೈ—** ಸ್ವಸ್ಯ ಭಕ್ತಃ ಸ್ವಭಕ್ತಃ, ಸ್ವಭಕ್ತಸ್ಯ ಭೂತಿಃ ಸ್ವಭಕ್ತಭೂತಿಃ, ತಸ್ಯೈ । ಭೂತಿಃ = ಐಶ್ವರ್ಯ, ಇಲ್ಲಿ ಜ್ಞಾನವೆಂಬ ಐಶ್ವರ್ಯ, 'ವಿಭೂತಿರ್ಭೂತಿರೈಶ್ವರ್ಯಂ ಭೂತಿರ್ಭಸ್ಮನಿ ಸಂಪದಿ' ಅಮರ ।

**ಕ್ರಿಯಾಪದ— ಚಕ್ರೇ - ಡುಕೃಞ್ ಕರಣೇ ಲಿಟ್** । ಚಕ್ರೆ ಚಕ್ರಾತೇ ಚಕ್ರಿರೇ ।

**ಪ್ರಯೋಗ**—ಪ್ರಭಾವಿಣಾ ಪ್ರಚುರತರಾಂತರೇಣ ತ್ರಿಭುವನವೈದ್ಯನಾಥನಾಥಂ ಕ್ಷೇತ್ರಾಗ್ರ್ಯಂ ಪ್ರಸ್ಥಾಯ ಶ್ರೀಕೃಷ್ಣಾಮೃತ ಪರಮಾರ್ಣವಾಭಿಧಾನಃ ಸದ್ವಚನತತಿಃ ಸ್ವಭಕ್ತಭೂತ್ಯೈ ಚಕ್ರೇ ।

★★★

**ಅವತಾರಿಕಾ**— ಆಚಾರ್ಯರು ಉಜಿರೆ ಎಂಬ ಗ್ರಾಮಕ್ಕೆ ಹೋಗಿ ಅಲ್ಲಿಯ ಅಹಂಕಾರಿಗಳಾದ ಬ್ರಾಹ್ಮಣರನ್ನು ವಾದಕ್ಕೆ ಆಹ್ವಾನಿಸಿದರೆಂದು ಹೇಳುತ್ತಾರೆ.

**ಸ ಗ್ರಾಮಂ ಪರಮಭಿಯಾತ ಉಚ್ಚಭೂತಿಂ**
**ವಿದ್ವಾಂಸಃ ಕ್ವ ಕುಹರಕೂಪದರ್ದುರಾಭಾಃ ।**
**ಇತ್ಯೂಚೇ ಮದಮತಿಮಾನಿನೋಽಖಿಲಜ್ಞ-**
**ಮ್ಮನ್ಯಸ್ಯ ಕ್ಷಪಯಿತುಮೇವ ತಜ್ಜನಸ್ಯ ॥ 41 ॥**

**ಪದಚ್ಛೇದ**— ಸಃ, ಗ್ರಾಮಂ, ಪರಂ, ಅಭಿಯಾತಃ, ಉಚ್ಚಭೂತಿಂ, ವಿದ್ವಾಂಸಃ, ಕ್ವ ಕುಹರಕೂಪದರ್ದುರಾಭಾಃ, ಇತಿ, ಊಚೇ, ಮದಂ, ಅತಿಮಾನಿನಃ, ಅಖಿಲಜ್ಞಮ್ಮನ್ಯಸ್ಯ, ಕ್ಷಪಯಿತುಂ, ಏವ, ತಜ್ಜನಸ್ಯ ।

**ಅನ್ವಯ**— ಉಚ್ಚಭೂತಿಂ, ಪರಂ, ಗ್ರಾಮಂ, ಅಭಿಯಾತಃ, ಸಃ, ಅತಿಮಾನಿನಃ, ಅಖಿಲಜ್ಞಮ್ಮನ್ಯಸ್ಯ, ತಜ್ಜನಸ್ಯ, ಮದಂ, ಕ್ಷಪಯಿತುಂ, ಏವ, ಕುಹರಕೂಪದರ್ದುರಾಭಾಃ, ವಿದ್ವಾಂಸಃ, ಕ್ವ ಇತಿ, ಊಚೇ ।

**ಅನ್ವಯಾರ್ಥ**—

**ಉಚ್ಚಭೂತಿಂ** = ಉಚೇರ್ಯ, (ಉಜಿರೆ ಉಚ್ರೆ)
**ಪರಂ** = ಮತ್ತೊಂದು,
**ಗ್ರಾಮಂ** = ಗ್ರಾಮವನ್ನು ಕುರಿತು,
**ಅಭಿಯಾತಃ** = ಪ್ರಯಾಣಮಾಡಿದ,
**ಸಃ** = ಆ ಶ್ರೀಮಧ್ವಾಚಾರ್ಯರು,
**ಅತಿಮಾನಿನಃ** = ನಾವೇ ಅತ್ಯಂತ ಪಂಡಿತರು ಎಂಬ ದುರಭಿಮಾನವುಳ್ಳ,
**ಅಖಿಲಜ್ಞಂಮನ್ಯಸ್ಯ** = ನಾವು ಎಲ್ಲವನ್ನು ತಿಳಿದಿದ್ದೇವೆ ಎಂದು ಭ್ರಮಿಸಿರುವ,
**ತಜ್ಜನಸ್ಯ** = ಗ್ರಾಮದ ಜನರ,
**ಮದಂ** = ಅಂಹಕಾರವನ್ನು,
**ಕ್ಷಪಯಿತುಂ ಏವ** = ನಾಶಪಡಿಸುವುದಕ್ಕಾಗಿಯೇ,
**ಕುಹರ** = ಆಳವಾದ,
**ಕೂಪ** = ಬಾವಿಯ,
**ದರ್ದುರ** = ಕಪ್ಪೆಗಳ,
**ಆಭಾಃ** = ಸಾದೃಶ್ಯವುಳ್ಳ,
**ವಿದ್ವಾಂಸಃ** = ಪಂಡಿತರು,
**ಕ್ವ** = ಎಲ್ಲಿದ್ದಾರೆ?
**ಇತಿ** = ಹೀಗೆಂದು,
**ಊಚೇ** = ಹೇಳಿದರು.

ತಾತ್ಪರ್ಯ— ಇಂತಹ ಶ್ರೀಮಧ್ವಾಚಾರ್ಯರು 'ಉಚ್ಚಭೂತಿ' ಎಂಬ ಮತ್ತೊಂದು ಗ್ರಾಮಕ್ಕೆ ಹೋದರು. ಅಲ್ಲಿ ಕರ್ಮಕಾಂಡದಲ್ಲಿ ಪರಿಶ್ರಮವುಳ್ಳ ಕೆಲವು ಮಂದಿ ವಿದ್ವಾಂಸರಿದ್ದರು. ಆದರೆ ಅವರು ನಾವು ಎಲ್ಲವನ್ನು ಬಲ್ಲವರು, ನಮಗಿಂತ ಶ್ರೇಷ್ಠ ಪಂಡಿತರಿಲ್ಲ ಎಂದು ಅಹಂಕಾರದಿಂದ ಬೀಗುತ್ತಿದ್ದರು. ಆಚಾರ್ಯರು ಅವರ ದುರಭಿಮಾನ-ವನ್ನು ನಿವಾರಿಸುವುದಕ್ಕಾಗಿ ಆ ಗ್ರಾಮಕ್ಕೆ ಹೋಗಿ ಆಳವಾದ ಬಾವಿಯೊಳಗಿನ ಕಪ್ಪೆಗಳಂತಿರುವ ಪಂಡಿತರೆಲ್ಲಿ? ಅವರು ನಮ್ಮನ್ನೇಕೆ ನೋಡಲು ಬರುತ್ತಿಲ್ಲ ಎಂದು ಕೇಳಿದರು. (ಉಚ್ಚಭೂತಿ ಎಂದರೆ ದೇವ ಭಾಷೆಯಲ್ಲಿ ಉಚ್ಚೇರ್ಯ ಉಚ್ಚರೆ ಉಚ್ಚ್ರೆ ಎಂಬ ಹೆಸರಿನ ಗ್ರಾಮ) ಇದು ಧರ್ಮಸ್ಥಳದಿಂದ ಕಾರ್ಕಳಕ್ಕೆ ಹೋಗುವ ದಾರಿಯಲ್ಲಿದೆ. ಅಲ್ಲಿದ್ದ ಪಂಡಿತರು ಆಚಾರ್ಯರನ್ನು ದೂಷಿಸುತ್ತಿದ್ದರು. ಆದುದರಿಂದ ಅಲ್ಲಿಗೆ ಬಂದ ಆಚಾರ್ಯರು ಕೂಪಮಂಡೂಕಗಳಂತೆ (ಬಾವಿ-ಯೊಳಗಿನ ಕಪ್ಪೆಗಳಂತೆ) ತಮ್ಮ ಪರಿಸರವನ್ನು ಬಿಟ್ಟು ಉಳಿದ ಲೋಕದ ಸಮಾಚಾರವನ್ನೇ ತಿಳಿಯದ ದುರಹಂಕಾರಿಗಳಾದ ನಿಂದಕರಾದ ಆ ಜನರೆಲ್ಲಿ? ಎಂದು ಕೇಳಿದರು ಎಂದು ಭಾವ.

ವಿಗ್ರಹ ಮತ್ತು ಕೋಶ—

**ಕುಹರಕೂಪದರ್ದುರಾಭಾಃ**— ಕುಹರಶ್ಚಾಸೌ ಕೂಪಶ್ಚ ಕುಹರಕೂಪಃ । ಕುಹರಕೂಪೇ ದರ್ದುರಾಃ ಕುಹರಕೂಪದರ್ದುರಾಃ, ಕುಹರಕೂಪದರ್ದುರಾಣಾಂ ಆಭಾ ಇವ ಆಭಾ ಯೇಷಾಂ ತೇ ಕುಹರ-ಕೂಪದರ್ದುರಾಭಾಃ । ಕೂಪ = ಬಾವಿ, 'ಪುಂಸ್ಯೇವಾಂಧುಃ ಪ್ರಹಿಃ ಕೂಪಃ ಉದಪಾನಂ ತು ಪುಂಸಿ ವಾ' ಅಮರ, ದರ್ದುರ = ಕಪ್ಪೆ, 'ಭೇಕೇ ಮಂಡೂಕವರ್ಷಾಭೂಶಾಲೂರಪ್ಲವದರ್ದುರಾಃ' ಅಮರ ।

**ಅತಿಮಾನಿನಃ**— ಅತ್ಯಂತಂ ಮಾನಃ ಅತಿಮಾನಃ ಅತಿಮಾನಃ ಅಸ್ಯ ಅಸ್ತೀತಿ ಅತಿಮಾನೀ ತಸ್ಯ ।

**ಅಖಿಲಜ್ಞಮ್ಮನ್ಯಸ್ಯ**— ಅಖಿಲಂ ಜಾನಾತೀತಿ ಅಖಿಲಜ್ಞಃ, ಆತ್ಮಾನಂ ಅಖಿಲಜ್ಞಂ ಮನ್ಯತೇ ಇತಿ ಅಖಿಲಜ್ಞಮ್ಮನ್ಯಃ ತಸ್ಯ ।

**ತಜ್ಜನಸ್ಯ**— ತಸ್ಯ ಜನಃ ತಜ್ಜನಃ ತಸ್ಯ ।

**ಕ್ರಿಯಾಪದ**— ಊಚೇ - ಬ್ರೂಞ್ ವ್ಯಕ್ತಾಯಾಂ ವಾಚಿ ಸಕ. ಆತ್ಮ ಲಿಟ್ । ಊಚೇ ಊಚಾತೇ ಊಚಿರೇ ಇತ್ಯಾದಿ ।

**ಪ್ರಯೋಗ**— ಉಚ್ಚಭೂತಿಂ ಪರಂ ಗ್ರಾಮಂ ಅಭಿಯಾತೇನ ತೇನ ಅತಿಮಾನಿನಃ ಅಖಿಲಜ್ಞಂಮನ್ಯಸ್ಯ ತಜ್ಜನಸ್ಯ ಮದಂ ಕ್ಷಪಯಿತುಂ ಏವ ಕುಹರಕೂಪದರ್ದುರಾಭೈಃ ವಿದ್ವದ್ಭಿಃ ಕ್ವ ಭೂಯತೇ? ಇತಿ ಊಚೇ ।

★★★

**ಅವತಾರಿಕಾ**— ಆಗ ಆ ಜನರ ಮನಸ್ಸಿನ ಭಾವನೆಯನ್ನು ಮತ್ತು ಅವರು ಮಾಡಿದ ಪ್ರಶ್ನೆಯನ್ನು ವಿವರಿಸುತ್ತಾರೆ.

**ಸರ್ವಜ್ಞೋಽಪ್ಯಯಮಧಿಕಂ ನ ಯಜ್ಞಭಂಗೀಂ**
**ಸಂವಿತ್ತೇ ಯತಿರಿತಿ ಬದ್ಧನಿಶ್ಚಯೋಽಸೌ ।**
**ಆಭ್ರಾಂತಂ ಪರಿಷದಿ ಮತ್ಸರಾದಪೃಚ್ಛತ್**
**ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಮ್ ॥ 42 ॥**

**ಪದಚ್ಛೇದ**— ಸರ್ವಜ್ಞಃ, ಅಪಿ, ಅಯಂ, ಅಧಿಕಂ, ನ, ಯಜ್ಞಭಂಗೀಂ, ಸಂವಿತ್ತೇ, ಯತಿಃ, ಇತಿ, ಬದ್ಧನಿಶ್ಚಯಃ, ಅಸೌ, ಆಭ್ರಾಂತಂ, ಪರಿಷದಿ, ಮತ್ಸರಾತ್, ಅಪೃಚ್ಛತ್, ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಂ ।

**ಅನ್ವಯ—** ಸರ್ವಜ್ಞಃ, ಅಪಿ, ಯತಿಃ, ಅಯಂ, ಯಜ್ಞಭಂಗೀಂ, ಅಧಿಕಂ, ನ, ಸಂವಿತ್ತೇ, ಇತಿ, ಬದ್ಧನಿಶ್ಚಯಃ, ಅಸೌ, ಪರಿಷದಿ, ಆಭಾಂತಂ, ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಂ, ಮತ್ಸರಾತ್, ಅಪೃಚ್ಛತ್ ।

**ಅನ್ವಯಾರ್ಥ—**

**ಸರ್ವಜ್ಞಃ ಅಪಿ** = ಎಲ್ಲವನ್ನೂ ತಿಳಿದವರಾದರೂ,

**ಯತಿಃ** = ಸಂನ್ಯಾಸಿಯಾದ,

**ಅಯಂ** = ಈ ಮಧ್ವಾಚಾರ್ಯರು,

**ಯಜ್ಞಭಂಗೀಂ** = ಯಜ್ಞದ ರೀತಿಯನ್ನು,

**ಅಧಿಕಂ** = ಹೆಚ್ಚಾಗಿ,

**ನ ಸಂವಿತ್ತೇ** = ತಿಳಿದಿಲ್ಲ,

**ಇತಿ** = ಹೀಗೆಂದು,

**ಬದ್ಧನಿಶ್ಚಯಃ** = ದೃಢವಾಗಿ ತಿಳಿದಿರುವ, (ಹೀಗೆಂದು ಭ್ರಮಿಸಿರುವ)

**ಅಸೌ** = ಆ ಗ್ರಾಮದ ಪಂಡಿತ ಜನರು,

**ಪರಿಷದಿ** = ಸಭೆಯಲ್ಲಿ,

**ಆಭಾಂತಂ** = ಪ್ರಕಾಶಿಸುತ್ತಿರುವ ಶ್ರೀಮಧ್ವಾಚಾರ್ಯರನ್ನು,

**ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಂ** = ಯಜ್ಞಗಳ ಅರ್ಥವನ್ನು ತಿಳಿಸುವ ವೇದದ ಗೂಢವಾದ, (ತಿಳಿಯಲು ಕಷ್ಟವಾಗಿರುವ) ಅರ್ಥವುಳ್ಳ ಬ್ರಾಹ್ಮಣ ಮಂತ್ರಭಾಗದ ಅಭಿಪ್ರಾಯವನ್ನು,

**ಮತ್ಸರಾತ್** = ಹೊಟ್ಟೆಕಿಚ್ಚಿನಿಂದ,

**ಅಪೃಚ್ಛತ್** = ಕೇಳಿದರು.

**ತಾತ್ಪರ್ಯ—** ಈ ಮಧ್ವಾಚಾರ್ಯರು ಸರ್ವಜ್ಞರೇನೋ ನಿಜ. ಆದರೂ ಸಂನ್ಯಾಸಿಗಳಾದ ಕಾರಣ ಯಜ್ಞಮಾಡುವ ಅಧಿಕಾರವಿಲ್ಲದಿರುವುದರಿಂದ ಯಜ್ಞದ ಕ್ರಮವನ್ನು ಹೆಚ್ಚಾಗಿ ತಿಳಿದಿಲ್ಲ ಎಂದು ಆ ಗ್ರಾಮದ ಪಂಡಿತರು ತಮ್ಮ ತಮ್ಮಲ್ಲಿಯೇ ನಿಶ್ಚಯಿಸಿಕೊಂಡರು. ಆದುದರಿಂದ ಶ್ರೀಮಧ್ವಾಚಾರ್ಯರನ್ನು ಯಜ್ಞಸಂಬಂಧಿಯಾದ ಕರ್ಮಕಾಂಡದ ಅರ್ಥವನ್ನು ಹೇಳುವಂತೆ ಪ್ರಶ್ನಿಸಿ ಹೇಗಾದರೂ ಮಾಡಿ ಅವರನ್ನು ಸೋಲಿಸಬೇಕೆಂದು ನಿರ್ಧರಿಸಿದರು. ಆಚಾರ್ಯರು ಸಭೆಯಲ್ಲಿ ವಿರಾಜಿಸುತ್ತಾ ಇರುವಾಗ ಆ ವಿದ್ವಾಂಸರು ಅಲ್ಲಿಗೆ ಬಂದು 'ಛಂದಸಾಂ ವೈ' ಇತ್ಯಾದಿ ಬ್ರಾಹ್ಮಣ ಭಾಗಕ್ಕೆ ಅರ್ಥವನ್ನು ಹೇಳಿರಿ ಎಂದು ಅಸೂಯೆಯಿಂದ ಪ್ರಶ್ನಿಸಿದರು.

**ವಿಗ್ರಹ—**

**ಸರ್ವಜ್ಞಃ—** ಸರ್ವಂ ಜಾನಾತೀತಿ ಸರ್ವಜ್ಞಃ ।

**ಯಜ್ಞಭಂಗೀಂ—** ಯಜ್ಞಸ್ಯ ಭಂಗೀ ಯಜ್ಞಭಂಗೀ, ತಾಂ ।

**ಬದ್ಧನಿಶ್ಚಯಃ—** ಬದ್ಧಃ ನಿಶ್ಚಯಃ ಯಸ್ಯ ಸಃ ಬದ್ಧನಿಶ್ಚಯಃ ।

**ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಂ—** ಕರ್ಮ ಅರ್ಥಃ ಯಸ್ಯಾಂ ಸಾ ಕರ್ಮಾರ್ಥಾ, ಕರ್ಮಾರ್ಥಾ ಚ ಸಾ ಶ್ರುತಿಶ್ಚ ಕರ್ಮಾರ್ಥಶ್ರುತಿಃ, ಕರ್ಮಾರ್ಥಶ್ರುತೌ ಗಹನಃ ಕರ್ಮಾರ್ಥಶ್ರುತಿಗಹನಃ, ಕರ್ಮಾರ್ಥ ಶ್ರುತಿಗಹನಃ ಅರ್ಥಃ ಯಸ್ಯ ಸಃ ಕರ್ಮಾರ್ಥಶ್ರುತಿಗಹನಾರ್ಥಃ, ಕರ್ಮಾರ್ಥಶ್ರುತಿಗಹನಾರ್ಥಶ್ಚಾಸೌ

ಖಂಡಶ್ಚ ಕರ್ಮಾರ್ಥಶ್ರುತಿಗಹನಾರ್ಥಖಂಡಃ, ಕರ್ಮಾರ್ಥಶ್ರುತಿಗಹನಾರ್ಥಖಂಡಸ್ಯ ಭಾವಃ ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಃ ತಂ । (ಕರ್ಮವೇ ಪ್ರತಿಪಾದ್ಯ ಅರ್ಥವಾಗಿವುಳ್ಳ ಬ್ರಾಹ್ಮಣ ಭಾಗದಲ್ಲಿ ತಿಳಿಯಲು ಕಷ್ಟವಾದ ತಾತ್ಪರ್ಯಾರ್ಥವುಳ್ಳ ಖಂಡದ ಭಾವವನ್ನು ಆ ಪಂಡಿತರು ಕೇಳಿದರು ಎಂದು ಭಾವವು)

**ವಿಶೇಷಾಂಶ—** ಛಂಧಸಾಂ ವೈ ಷಷ್ಠೇನ ಅಹ್ನಾಪ್ತಾನಾಂ ರಸೋತ್ಯನೇದತ್ ಸ ಪ್ರಜಾಪತಿರಬಿಭೇತ್ ಪರಾಯಂ ಛಂದಸಾಂ ರಸೋ ಲೋಕಾನಭ್ಯೇಷ್ಯತೀತಿ ತಂ ಪುರಸ್ತಾಚ್ಛಂದೋಭಿಃ ಪರ್ಯಗೃಹ್ಣಾತ್, ನಾರಾಶಂಸ್ಯಾ ಗಾಯತ್ರ್ಯಾ ರೈಭ್ಯಾ ತ್ರಿಷ್ಟುಭಾ ಇತ್ಯಾದಿ ಶ್ರುತಿಗಳ ಅರ್ಥವನ್ನು ಆ ಪಂಡಿತರು ಕೇಳಿದರು.

**ವಿ.ಸೂ—** ಮಧ್ವಾಚಾರ್ಯಸ್ಯ ಸರ್ವವಿಷಯಕ ಜ್ಞಾನಸತ್ತ್ವೇಽಪಿ ಅಸ್ಯ ಸಂನ್ಯಾಸಿತ್ವೇನ ಯಜ್ಞಕರ್ಮಣಿ ಅಧಿಕಾರಾ ಭಾವಾತ್ ಯಜ್ಞಾದ್ಯನುಷ್ಠಾನವಿಷಯಕಂ ಜ್ಞಾನಂ ಅಸ್ಯ ನಾಸ್ತ್ಯೇವ ಇತಿ ನಿಶ್ಚಿತ್ಯ ತತ್ರತ್ಯಾಃ ಪಂಡಿತಾಃ ಅತ್ರ ವಿಷಯೇ ಏತಸ್ಯ ಪರಾಭವಂ ಕರಿಷ್ಯಾಮಃ ಇತಿ ಆಲೋಚ್ಯ ಮಾತ್ಸರ್ಯೇಣ ಯಜ್ಞಕರ್ಮಾನುಷ್ಠಾನಪ್ರಕಾರಪ್ರತಿಪಾದಕ ದುರ್ಜ್ಞೇ-ಯಾರ್ಥ ಬ್ರಾಹ್ಮಣಖಂಡಸ್ಯ ಅರ್ಥಂ ಅಪೃಚ್ಛನ್ (ಛಲಾರಿಯ ಟೀಕಾ). ಈ ಮಧ್ವಾಚಾರ್ಯರು ಎಲ್ಲವನ್ನೂ ಬಲ್ಲವರು ಆಗಿರಬಹುದು ಆದರೆ ಇವರು ಸಂನ್ಯಾಸಿಗಳಾದುದರಿಂದ ಯಜ್ಞಕರ್ಮದಲ್ಲಿ ಅಧಿಕಾರವಿಲ್ಲ, ಆದ್ದರಿಂದ ಇವರಿಗೆ ಯಜ್ಞವನ್ನು ಹೇಗೆ ನಡೆಸಬೇಕೆಂಬ ಜ್ಞಾನವು ಇಲ್ಲವೇ ಇಲ್ಲ ಎಂದು ಆ ಉಚ್ಚಭೂತಿ ಗ್ರಾಮದ ಪಂಡಿತಂಮನ್ಯ ಬ್ರಾಹ್ಮಣರು ನಿಶ್ಚಯಿಸಿದರು. ಈ ಮಧ್ವಾಚಾರ್ಯರನ್ನು ಕುರಿತು ಕರ್ಮಕಾಂಡದ ಗಹನವಾದ ಅರ್ಥ ವಿಷಯದ ಪ್ರಶ್ನೆಯನ್ನು ಮಾಡಿದರು. ಹೊಟ್ಟೆಕಿಚ್ಚಿನ ಮೊಟ್ಟೆಗಳಾದ ಅವರು ಆಚಾರ್ಯರ ಕೀರ್ತಿಚಂದ್ರನಿಗೆ ಗ್ರಹಣ ಹಿಡಿಸಬೇಕೆಂದು ನಿರ್ಧರಿಸಿ ಸಭೆಯಲ್ಲಿ ಕಲಂಕವಿಲ್ಲದ ಪೂರ್ಣಚಂದ್ರನಂತೆ ವಿರಾಜಿಸುತ್ತಿರುವ ಆಚಾರ್ಯರನ್ನು ಕುರಿತು ಕರ್ಮಾನುಷ್ಠಾನದ ಪ್ರಕಾರವನ್ನು ತಿಳಿಸುವ ದುರ್ಜ್ಞೇಯವಾದ ಅರ್ಥವನ್ನು ತಿಳಿಸುವ ಬ್ರಾಹ್ಮಣ ಖಂಡದ ಅರ್ಥವನ್ನು ಕೇಳಿದರು ಎಂದು ಪರಮ ತಾತ್ಪರ್ಯ.

**ಕ್ರಿಯಾಪದ—** ಸಂವಿತ್ತೇ- ವಿದ ಜ್ಞಾನೇ ಸಕ. ಸೇಟ್. ಪರ. ಉಪಸರ್ಗ ಬಂದಾಗ 'ಸಮೋ ಗಮ್ಯೃಚ್ಛಿಭ್ಯಾಂ' (1.3.29) ಎಂಬ ಸೂತ್ರದಲ್ಲಿರುವ 'ವಿದಿಪ್ರಚ್ಛಿಸ್ವರತೀನಾಮುಪಸಂಖ್ಯಾನಂ' (ವಾ.918) ಎಂಬ ವಾರ್ತಿಕದಿಂದ ಆತ್ಮನೇ ಪದ ಪ್ರತ್ಯಯವು ಬರುತ್ತದೆ. ಪ್ರಥಮಪುರುಷ ಬಹುವಚನದಲ್ಲಿ 'ವೇತ್ತೇರ್ವಿಭಾಷಾ' (7.1.7) ಎಂಬ ಸೂತ್ರದಿಂದ ವಿಕಲ್ಪದಿಂದ ರುಟ್ ಎಂಬ ಆಗಮವೂ ಬರುತ್ತದೆ ।

**ಅಪೃಚ್ಛತ್**- ಪ್ರಚ್ಛಜ್ಞೀಪ್ಸಾಯಾಂ ಸಕ. ಅನಿ. ಪರ. ಅನದ್ಯತನ ಭೂತೇ ಲಙ್ ಪ್ರಥಮಪುರುಷ ಏಕವಚನ 'ದುಹ್ಯಾಚ್' ಪಚ್ ದಂಡ್‌ರುಧಿಪ್ರಚ್ಛಿಚಿಬ್ರೂಶಾಸುಜಿಮಥ್‌ಮುಷಾಂ' ಕರ್ಮಯುಕ್ ಸ್ಯಾದಕಥಿತಂ ತಥಾ ಸ್ಯಾನ್ನೀ-ಹೃಕೃಷ್‌ವಹಾಂ ಎಂಬ ವಚನದಂತೆ ಈ ಧಾತುವು ದ್ವಿಕರ್ಮಕವಾದುದರಿಂದ 'ಆಭಾಂತಂ ಮಧ್ವಂ ಕರ್ಮಾರ್ಥ-ಶ್ರುತಿಗಹನಾರ್ಥಖಂಡ ಭಾವಂ ಅಪೃಚ್ಛತ್' ಎಂದು ಎರಡು ಕರ್ಮಪದವು ಬಂದಿದೆ ।

ವಿತ್ತೇ ವಿದಾತೇ ವಿದತೇ, ವಿತ್ಸೇ ವಿದಾಥೇ ವಿದ್ಧ್ವೇ, ವಿದೇ ವಿದ್ವಹೇ ವಿದ್ಮಹೇ ।

ಅಪೃಚ್ಛತ್ ಅಪೃಚ್ಛತಾಂ ಅಪೃಚ್ಛನ್, ಅಪೃಚ್ಛಃ ಅಪೃಚ್ಛತಂ ಅಪೃಚ್ಛಂ ಅಪೃಚ್ಛತ ಅಪೃಚ್ಛಾವ ಅಪೃಚ್ಛಾಮ ।

**ಪ್ರಯೋಗ—** ಸರ್ವಜ್ಞೇನಾಪಿ ಯತಿನಾ ಅನೇನ ಯಜ್ಞಭಂಗೀ ಅಧಿಕಂ ನ ಸಂವಿದ್ಯತೇ ಇತಿ ಬದ್ಧನಿಶ್ಚಯೇನ ಅಮುನಾ ಪರಿಷದಿ ಆಭಾನ್ (ಶ್ರೀಮಧ್ವಾಚಾರ್ಯಃ ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಂ ಮತ್ಸರಾತ್ ಅಪೃಚ್ಛತ್)।

★ ★ ★

**ಅವತಾರಿಕಾ**— ಆಚಾರ್ಯರು ಆ ಪಂಡಿತರಿಗೆ ಕೊಟ್ಟ ಉತ್ತರವನ್ನು ವಿವರಿಸುತ್ತಾರೆ.

**ಛಂದೋಭ್ಯೋಶ್ಚ್ಯುತರಸಸಂಗ್ರಹಪ್ರವೀಣಾನ್**
**ಷಷ್ಠೇಹ್ನಿ ಪ್ರತಿವಿಹಿತಾನ್ ಪ್ರಜಾಧಿಪೇನ ।**
**ನಾರಾಶಂಸ್ಯಚರಮಚಾರುಮಂತ್ರಭೇದಾ-**
**ನೂಚೇऽಸೌ ತಮಭಿದಧದ್ವಿಸಂಶಯಾಂಶಃ ॥ 43 ॥**

**ಪದಚ್ಛೇದ**— ಛಂದೋಭ್ಯಃ, ಚ್ಯುತರಸಸಂಗ್ರಹಪ್ರವೀಣಾನ್, ಷಷ್ಠೇ, ಅಹ್ನಿ, ಪ್ರತಿವಿಹಿತಾನ್, ಪ್ರಜಾಧಿಪೇನ, ನರಾಶಂಸ್ಯಚರಮಚಾರುಮಂತ್ರಭೇದಾನ್, ಊಚೇ, ಅಸೌ, ತಂ, ಅಭಿದಧತ್, ವಿಸಂಶಯಾಂಶಃ ।

**ಅನ್ವಯ**— ವಿಸಂಶಯಾಂಶಃ, ಅಸೌ, ತಂ, ಅಭಿದಧತ್, ಛಂದೋಭ್ಯಃ, ಚ್ಯುತರಸಸಂಗ್ರಹಪ್ರವೀಣಾನ್, ಪ್ರಜಾಧಿಪೇನ, ಷಷ್ಠೇ, ಅಹ್ನಿ, ನಾರಾಶಂಸ್ಯ-ಚರಮಚಾರುಮಂತ್ರಭೇದಾನ್, ಊಚೇ ।

**ಅನ್ವಯಾರ್ಥ**—

**ವಿಸಂಶಯಾಂಶಃ** = ಸಂಶಯಲೇಶವೂ ಇಲ್ಲದಿರುವ,
**ಅಸೌ** = ಈ ಶ್ರೀಮಧ್ವಾಚಾರ್ಯರು,
**ತಂ** = ಆ ಪಂಡಿತರು ಕೇಳಿದ ವೇದಭಾಗದ ಅರ್ಥವನ್ನು,
**ಅಭಿದಧತ್ ಸನ್** = ಹೇಳುತ್ತಾ,
**ಛಂದೋಭ್ಯಃ** = ವೇದಗಳ ದೆಸೆಯಿಂದ,
**ಚ್ಯುತರಸಸಂಗ್ರಹಪ್ರವೀಣಾನ್** = ನಿರ್ಗತವಾದ ರಸದ(ಸಾರಾಂಶ) ಒಟ್ಟುಗೂಡಿಸುವುದರಲ್ಲಿ ಸಮರ್ಥವಾದ,
**ಪ್ರಜಾಧಿಪೇನ** = ಬ್ರಹ್ಮದೇವರಿಂದ,
**ಷಷ್ಠೇ** = ಆರನೆಯ,
**ಅಹ್ನಿ** = ದಿವಸದಲ್ಲಿ
**ಪ್ರತಿವಿಹಿತಾನ್** = ವಿನಿಯೋಗಿಸಲ್ಪಟ್ಟ
**ನಾರಾಶಂಸ್ಯಚರಮಚಾರುಮಂತ್ರಭೇದಾನ್** = ನಾರಾಶಂಸೀ ಎಂಬ ಮೊದಲಾಗಿ ಉಳ್ಳ ಮನೋಹರವಾದ ಮಂತ್ರ ವಿಶೇಷಗಳನ್ನು,
**ಊಚೇ** = ಹೇಳಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರಿಗೆ ಸಕಲ ಶಾಸ್ತ್ರಗಳಲ್ಲಿಯೂ ಯಾವ ಸಂಶಯವೂ ಇರಲಿಲ್ಲ. ಅವರು ಆ ಪ್ರತಿವಾದಿಗಳು ಕೇಳಿದ ಮಂತ್ರಖಂಡದ ಅರ್ಥವನ್ನು ನಿಶ್ಚಿತವಾಗಿ ಹೇಳಿದರು. ವೇದಭಾಗದ ಸಾರಸಂಗ್ರಹದಲ್ಲಿ ಕುಶಲರಾದ ಬ್ರಹ್ಮದೇವರು ಯಜ್ಞದ ಆರನೆಯ ದಿನ ವಿನಿಯೋಗಿಸದ ಮೊದಲನೆಯದಾದ 'ನಾರಾಶಂಸೀ' ಎಂಬ ಶ್ರೇಷ್ಠವಾದ ಮಂತ್ರ ವಿಶೇಷಗಳನ್ನು ಹೇಳಿದರು, 'ಛಂದಸಾಂ ವೈ ಷಷ್ಠೇನಾಹ್ನಾಪ್ತಾನಾಂ ರಸೋಧಿತ್ಯನೇದತ್ ಸಪ್ರಜಾಪತಿರಬಿಭೇತ್ ಪರಾಯಂ ರಸಃ' ಇದೇ ಆ ವೇದಭಾಗವು.

**ವಿಗ್ರಹ**—

**ಚ್ಯುತರಸಸಂಗ್ರಹಪ್ರವೀಣಾನ್**— ಚ್ಯುತಶ್ಚಾಸೌ ರಸಶ್ಚ ಚ್ಯುತರಸಃ, ಚ್ಯುತರಸಸ್ಯ ಸಂಗ್ರಹಃ ಚ್ಯುತರಸಸಂಗ್ರಹಃ, ಚ್ಯುತರಸಸಂಗ್ರಹೇ ಪ್ರವೀಣಾಃ ಚ್ಯುತರಸಸಂಗ್ರಹಪ್ರವೀಣಾಃ ತಾನ್ ।

**ಷಷ್ಠೇ**— ಷಣ್ಣಾಂ ಪೂರಣಂ ಷಷ್ಠಂ ತಸ್ಮಿನ್ ।

**ಪ್ರಜಾಧಿಪೇನ**— ಪ್ರಜಾನಾಂ ಅಧಿಪಃ ಪ್ರಜಾಧಿಪಃ ತೇನ ।

**ನಾರಾಶಂಸ್ಯಚರಮಚಾರುಮಂತ್ರಭೇದಾನ್**— ಚರಮಃ ನ ಭವತೀತಿ ಅಚರಮಃ, ನಾರಾಶಂಸೀ ಅಚರಮಃ ಯೇಷಾಂ ತೇ ನಾರಾಶಂಸ್ಯಚರಮಾಃ, ನಾರಾಶಂಸ್ಯಚರಮಾಶ್ಚ ತೇ ಚಾರವಶ್ಚ ನಾರಾಶಂಸ್ಯ-ಚರಮಚಾರವಃ, ನಾರಾಶಂಸ್ಯಚರಮಚಾರವಶ್ಚತೇ ಮಂತ್ರಾಶ್ಚ ನಾರಾಶಂಸ್ಯಚರಮಚಾರುಮಂತ್ರಾಃ, ತೇಷಾಂ ಭೇದಾಃ ತಾನ್ ।

**ವಿಸಂಶಯಾಂಶಃ**— ಸಂಶಯಸ್ಯ ಅಂಶಃ ಸಂಶಯಾಂಶಃ ವಿಗತಃ ಸಂಶಯಾಂಶಃ ಯಸ್ಮಾತ್ ಸಃ ವಿಸಂಶಯಾಂಶಃ ।

**ಕ್ರಿಯಾಪದ**— **ಊಚೇ** - ಬ್ರೂಞ ವ್ಯಕ್ತಾಯಾಂ ವಾಚಿ ಉಭ ಸಕ. ಅನಿಟ. ಲಿಟ್ ಪ್ರಥಮಪುರುಷ ಏಕವಚನ । ಊಚೇ ಊಚಾತೇ ಊಚಿರೇ, ಇತ್ಯಾದಿ ।

**ಪ್ರಯೋಗ**— ವಿಸಂಶಯಾಂಶೇನ ಅಮುನಾ ತಂ ಅಭಿದಧತ್ ಛಂದೋಭ್ಯಃ ಚ್ಯುತರಸಸಂಗ್ರಹಪ್ರವೀಣಾಃ ಪ್ರಜಾಧಿಪೇನ ಷಷ್ಠೇ ಅಹ್ನಿ ಪ್ರತಿಹಿತಾಃ ನಾರಾಶಂಸ್ಯಚರಮಚಾರುಮಂತ್ರಭೇದಾಃ ಊಚಿರೇ ।

★ ★ ★

**ಅವತಾರಿಕಾ**— ಮುಂದೆ ಅಲ್ಲಿ ನಡೆದ ವಾದವನ್ನು ವಿವರಿಸುತ್ತಾರೆ.

**ಪಾಂಡಿತ್ಯಂ ಪರಮಮವೇಕ್ಷ್ಯ ತಸ್ಯ ತಾದೃಕ್**
**ಸಂಘರ್ಷಾತ್ ಕ್ಷುಭಿತಮನಾ ವಿಪಕ್ಷಸಂಘಃ ।**
**ನಾರ್ಥಃ ಸ್ಯಾದಯಮಿತಿ ವರ್ಣಯನ್ನಥ ತ್ವಂ**
**ತಂ ಬ್ರೂಹೀತ್ಯುರುಮತಿನೇರಿತೋಽದ್ರವದ್ದ್ರಾಕ್ ॥ 44 ॥**

**ಪದಚ್ಛೇದ**— ಪಾಂಡಿತ್ಯಂ, ಪರಮಂ, ಅವೇಕ್ಷ್ಯ, ತಸ್ಯ, ತಾದೃಕ್, ಸಂಘರ್ಷಾತ್, ಕ್ಷುಭಿತಮನಾಃ, ವಿಪಕ್ಷಸಂಘಃ, ನ, ಅರ್ಥಃ, ಸ್ಯಾತ್, ಅಯಂ, ಇತಿ, ವರ್ಣಯನ್, ಅಥ, ತ್ವಂ, ತಂ, ಬ್ರೂಹಿ, ಇತಿ, ಉರುಮತಿನಾ, ಈರಿತಃ, ಅದ್ರವತ್, ದ್ರಾಕ್ ।

**ಅನ್ವಯ**— ತಸ್ಯ, ತಾದೃಕ್, ಪರಮಂ, ಪಾಂಡಿತ್ಯಂ, ಅವೇಕ್ಷ್ಯ, ಸಂಘರ್ಷಾತ್, ಕ್ಷುಭಿತಮನಾಃ, (ಸಂಘರ್ಷಾತ್ ಕ್ಷುಭಿತಮನಾಃ) ವಿಪಕ್ಷಸಂಘಃ, ಅಯಂ, ಅರ್ಥಃ, ನ, ಸ್ಯಾತ್, ಇತಿ, ವರ್ಣಯನ್, ಅಥ, ತ್ವಂ, ತಂ, ಬ್ರೂಹಿ, ಇತಿ, ಉರುಮತಿನಾ, ಈರಿತಃ, ದ್ರಾಕ್, ಅದ್ರವತ್ ।

**ಅನ್ವಯಾರ್ಥ**—

**ತಸ್ಯ** = ಆ ಶ್ರೀಮಧ್ವಾಚಾರ್ಯರ,
**ತಾದೃಕ್** = ಅಂತಹ,
**ಪರಮಂ** = ಉತ್ಕೃಷ್ಟವಾದ,
**ಪಾಂಡಿತ್ಯಂ** = ವೇದಶಾಸ್ತ್ರಾರ್ಥ ಜ್ಞಾನವನ್ನು,
**ಅವೇಕ್ಷ್ಯ** = ನೋಡಿ, (ತಿಳಿದು)
**ಸಂಘರ್ಷಾತ್** = (ವಾದ ವಿವಾದಗಳ) ತಿಕ್ಕಾಟದಿಂದ,

**ಕ್ಷುಭಿತಮನಾಃ** = ಕೆರಳಿದ ಮನಸ್ಸುಳ್ಳ,
**ವಿಪಕ್ಷಸಂಘಃ** = ಪ್ರತಿವಾದಿಗಳ ಗುಂಪು,
**ಅಯಂ** = ನೀವು ಹೇಳಿರುವ,
**ಅರ್ಥ** = ವೇದಾರ್ಥವು,
**ನ ಸ್ಯಾತ್** = ಆಗುವುದಿಲ್ಲ,
**ಇತಿ** = ಹೀಗೆಂದು,
**ವರ್ಣಯನ್** = ಹೇಳುತ್ತಾ,
**ಅಥ** = ಅನಂತರ,
**ತ್ವಂ**= ಪ್ರತಿವಾದಿಯಾದ ನೀನು,
**ತಂ** = ಆ ಅರ್ಥವನ್ನು,
**ಬ್ರೂಹಿ** = ಹೇಳಿ (ಹೇಳಿರಿ),
**ಇತಿ** = ಹೀಗೆಂದು,
**ಉರುಮತಿನಾ** = ಶ್ರೀಪೂರ್ಣಪ್ರಜ್ಞರಿಂದ,
**ಈರಿತಃ** = ಹೇಳಲ್ಪಟ್ಟದ್ದಾಗಿ,
**ದ್ರಾಕ್** = ಬೇಗನೆ,
**ಅದ್ರವತ್** = ಓಡಿತು.

ತಾತ್ಪರ್ಯ— ಆ ಪ್ರತಿವಾದಿಗಳ ಗುಂಪು ಶ್ರೀಮಧ್ವಾಚಾರ್ಯರ ಅಂತಹ ಶ್ರೇಷ್ಠವಾದ ಅದ್ಭುತ ಪಾಂಡಿತ್ಯವನ್ನು ನೋಡಿತು. ಬಹುಸಂಖ್ಯೆಯಲ್ಲಿ ಗುಂಪುಗೂಡಿ ಬಂದಿದ್ದ ಆ ಪ್ರತಿವಾದಿಗಳು ವಾದವಿವಾದಗಳ ತಿಕ್ಕಾಟದಿಂದ ಮನಸ್ಸಿನಲ್ಲಿ ಕ್ಷೋಭೆಗೊಂಡು ಕೆರಳಿದ್ದರು. ಆದ್ದರಿಂದ ಅವರು ಸಿಟ್ಟುಗೊಂಡು ಯೋಚನೆ ಮಾಡದೆ ಆಚಾರ್ಯರೇ ತಾವು ಈ ವೇದಭಾಗಕ್ಕೆ ಹೇಳಿದ ಅರ್ಥವು ಸರಿಯಿಲ್ಲ ಎಂದರು. ಆದರೆ ಆ ಪ್ರತಿವಾದಿ ವರ್ಗದವರಿಗೆ ಶ್ರೀಮದಾಚಾರ್ಯರು ನೀವೇ ಆ ವೇದಖಂಡಕ್ಕೆ ಸರಿಯಾದ ಅರ್ಥವನ್ನು ಹೇಳಿರಿ ಎಂದರು. ಆದರೆ ಆ ಪ್ರತಿವಾದಿ ವರ್ಗದವರಿಗೆ ಸರಿಯಾಗಿ ಅರ್ಥ ಹೇಳಲಿಕ್ಕೆ ಬಾರದೆ ಇರುವುದರಿಂದ ಹೆದರಿ ಗಾಬರಿಯಾಗಿ ಆ ಸ್ಥಳದಿಂದ ಓಡಿಹೋದರು ಅಲ್ಲಿ ನಿಲ್ಲಲಿಲ್ಲ.

ವಿಗ್ರಹ ಮತ್ತು ಕೋಶ—

**ಪಾಂಡಿತ್ಯಂ**— ಪಂಡಿತಸ್ಯ ಭಾವಃ ಪಾಂಡಿತ್ಯಂ, ತತ್ ।
**ಕ್ಷುಭಿತಮನಾಃ**— ಕ್ಷುಭಿತಂ ಮನಃ ಯಸ್ಯ ಸಃ ಕ್ಷುಭಿತಮನಾಃ ।
**ವಿಪಕ್ಷಸಂಘಃ**— ವಿರುದ್ಧಃ ಪಕ್ಷಃ ಯೇಷಾಂ ತೇ ವಿಪಕ್ಷಾಃ, ವಿಪಕ್ಷಣಾಂ ಸಂಘಃ ವಿಪಕ್ಷಸಂಘಃ । ವಿಪಕ್ಷ = ಶತ್ರು, ವಿರುದ್ಧ ಪಕ್ಷದವನು, 'ಪ್ರತಿವಾದಿ ದ್ವಿಡ್ ವಪಕ್ಷಾಹಿತಾಮಿತ್ರದಸ್ಯುಶಾತ್ರವಶತ್ರವಃ' ಅಮರ ।
**ಉರುಮತಿನಾ**— ಉರುಃ ಮತಿಃ ಯಸ್ಯಸಃ ಉರುಮತಿಃ ತೇನ ।

**ಕ್ರಿಯಾಪದ**— **ಸ್ಯಾತ್** - ಅಸ ಭುವಿ. ಅಕ. ಪರ. ವಿಧಿಲಿಙ್ ।
**ಬ್ರೂಹಿ** - ಬ್ರೂಞ ವ್ಯಕ್ತಾಯಾಂ ವಾಚಿ ಸಕ. ಸೇಟ್. ಉಭ. ಲೋಟ್ ।
**ಅದ್ರವತ್** - ದ್ರುಗತೌ ಅಕ. ಅನಿ. ಪರ. ಅನದ್ಯತನಭೂತೇ ಲಙ್ ।

ಸ್ಯಾತ್ ಸ್ಯಾತಾಂ ಸ್ಯುಃ, ಸ್ಯಾಃ ಸ್ಯಾತಂ ಸ್ಯಾತ, ಸ್ಯಾಮ್ ಸ್ಯಾವ ಸ್ಯಾಮ ।

ಬ್ರವೀತು-ಬ್ರೂತಾತ್ ಬ್ರೂತಾಂ ಬ್ರುವಂತು, ಬ್ರೂಹಿ-ಬ್ರೂತಾತ್ ಬ್ರೂತಂ ಬ್ರೂತ, ಬ್ರವಾಣಿ ಬ್ರವಾವ ಬ್ರವಾಮ ।

ಅಬ್ರವತ್ ಅಬ್ರವತಾಂ ಅಬ್ರವನ್, ಅಬ್ರವಃ ಅಬ್ರವತಂ ಅಬ್ರವತ, ಅಬ್ರವಂ ಅಬ್ರವಾವ ಅಬ್ರವಾಮ ।

**ಪ್ರಯೋಗ—** ತಸ್ಯ ತಾದೃಕ್ ಪರಮಂ ಪಾಂಡಿತ್ಯಂ ಅವೇಕ್ಷ್ಯ ಸಂಘರ್ಷಾತ್ ಕ್ಷುಭಿತಮನಸಾ ವಿಪಕ್ಷಸಂಘೇನ ಅನೇನ ಅರ್ಥೇನ ನ ಭೂಯತೇ ಇತಿ ವರ್ಣಯತಾ ಅಥ ತ್ವಯಾ ಸಃ ಉಚ್ಯತಾಂ ಇತಿ ಉರುಮತಿನಾ ಈರೀತೇನ ದ್ರಾಕ್ ಅದ್ರೂಯತ ।

★ ★ ★

**ಅವತಾರಿಕಾ—** ಪುನಃ ಆ ಜನರು ಬಂದು ಮಾಡಿದ ಪ್ರಶ್ನೆಯನ್ನು ವಿವರಿಸುತ್ತಾರೆ.

**ಸೋಽಪೃಚ್ಛತ್ತಮಥ ಮಹಾಹ್ವಯೋಪಸರ್ಗಾ**
**ಯತ್ರೋಕ್ತಾ ಮನುಚರಣೋಪಸೃಜ್ಯರೂಪಾಃ ।**
**ತಸ್ಯಾರ್ಥಂ ವಚನಚಯಸ್ಯ ತಂ ಬ್ರುವಾಣಃ**
**ಸ್ಥೈರ್ಯಾರ್ಥಂ ಸಪದಿ ಸ ಲೇಖಯಾಂಬಭೂವ ॥ 45 ॥**

**ಪದಚ್ಛೇದ—** ಸಃ, ಅಪೃಚ್ಛತ್, ತಂ, ಅಥ, ಮಹಾಹ್ವಯೋಪಸರ್ಗಾಃ, ಯತ್ರ, ಉಕ್ತಾಃ, ಮನುಚರಣೋ-ಪಸೃಜ್ಯ ರೂಪಾಃ, ತಸ್ಯ, ಅರ್ಥಂ, ವಚನಚಯಸ್ಯ, ತಂ, ಬ್ರುವಾಣಃ, ಸ್ಥೈರ್ಯಾರ್ಥಂ, ಸಪದಿ, ಸಃ, ಲೇಖಯಾಂ ಬಭೂವ ।

**ಅನ್ವಯ—** ಸಃ, ಅಥ, ತಂ, ಅಪೃಚ್ಛತ್, ಯತ್ರ, ಮಹಾಹ್ವಯೋಪಸರ್ಗಾಃ, ಮನುಚರಣೋಪಸೃಜ್ಯರೂಪಾಃ, ಉಕ್ತಾಃ, ಸಃ, ತಸ್ಯ, ವಚನಚಯಸ್ಯ, ತಂ, ಅರ್ಥಂ, ಬ್ರುವಾಣಃ, ಸನ್, ಸ್ಥೈರ್ಯಾರ್ಥಂ, ಸಪದಿ, ಲೇಖಯಾಂಬಭೂವ ।

**ಅನ್ವಯಾರ್ಥ—**

**ಸಃ** = ಆ ಪ್ರತಿವಾದಿಗಳ ಗುಂಪು,
**ಅಥ** = ಅನಂತರ,
**ತಂ** = ಆ ಮಧ್ವಾಚಾರ್ಯರನ್ನು ಕುರಿತು,
**ತಸ್ಯ ಖಂಡಸ್ಯ ಅರ್ಥಂ** = ಆ ಮಂತ್ರ ಖಂಡದ ಅರ್ಥವನ್ನು,
**ಅಪೃಚ್ಛತ್** = ಕೇಳಿತು,
**ಯತ್ರ** = ಯಾವ ಬ್ರಾಹ್ಮಣಮಂತ್ರಭಾಗದಲ್ಲಿ,
**ಮಹಾಹ್ವಯಃ** = ಮಹಾನಾಮ್ನಿ ಎಂಬ ಹೆಸರುಳ್ಳ,
**ಉಪಸರ್ಗಾಃ** = ಐದು ಅವಯವಗಳು,
**ಮನುಚರಣಉಪಸೃಜ್ಯರೂಪಾಃ** = ಮಂತ್ರಗಳ ಪಾದಗಳಿಂದ ಸೇರಿಸತಕ್ಕ ರೂಪವುಳ್ಳವುಗಳಾಗಿ,
**ಉಕ್ತಾಃ** = ಹೇಳಲ್ಪಟ್ಟವೆಯೋ,
**ಸಃ** = ಆ ಮಧ್ವಾಚಾರ್ಯರು,
**ತಸ್ಯ** = ಅಂತಹ,
**ವಚನಚಯಸ್ಯ** = ಆ ಮಹಾನಾಮ್ನೀ ಋಕ್ಕಿನ ವಚನಸಮೂಹದ,

**ಅರ್ಥಂ** = ಅರ್ಥವನ್ನು,

**ಬ್ರುವಾಣಃ** = ಹೇಳುವವರಾಗಿ,

**ಸ್ಥೈರ್ಯಾರ್ಥಂ** = ಪ್ರಪಂಚದಲ್ಲಿ ಆ ಅರ್ಥವು ಸ್ಥಿರವಾಗಿ ನೆಲೆಸುವುದಕ್ಕಾಗಿ,

**ಸಪದಿ** = ಕೂಡಲೇ,

**ಲೇಖಯಾಂಬಭೂವ** = ಬರೆಸಿದರು.

**ತಾತ್ಪರ್ಯ—** ಆ ಪ್ರತಿವಾದಿಗಳು ಹೇಗಾದರೂ ಶ್ರೀಮಧ್ವಾಚಾರ್ಯರನ್ನು ಸೋಲಿಸಬೇಕೆಂದು ಬಯಸಿ ತಿರುಗಿ ಬಂದರು. ಮಹಾನಾಮ್ನಿ ಎಂಬ ವೇದಖಂಡದ ಅರ್ಥವನ್ನು ಕೇಳಿದರು. ಮಹಾನಾಮ್ನಿ ಎಂಬ ಹೆಸರಿನ ಆ ಬ್ರಾಹ್ಮಣ ಮಂತ್ರಭಾಗದಲ್ಲಿ ಹೇಳಿರುವ ಋಕ್ಕ್‌ಗಳಿಗೆ - 1. ಪ್ರಚೇತನ 2. ಪ್ರಚೇತಯ 3. ಆಯಾಹಿ ಪಿಬಮತ್ಸ್ವ 4. ಕ್ರತುಚ್ಛಂದ ಋತಂ ಬೃಹತ್ 5. ಸುಮ್ನ ಆಧೇಹಿ ನೋ ವಸೋ ಎಂದು ಐದು ಮಂತ್ರಪಾದಗಳಿಗೆ ಕೂಡಿಸಬೇಕು. ಈ ಐದು ಪಾದಗಳಿಗೆ ಉಪಸೃಜ್ಯಗಳೆಂದು ಹೆಸರು. ಆ ಐದು ಉಪಸೃಜ್ಯ ಮಂತ್ರಪಾದಗಳು ಹೀಗಿವೆ - 1. ಅಧತ್ವಾನ್ಯಂ ಜಠರೇ ಪ್ರೇಮರಿಚ್ಯತ, 2. ಪ್ರಚೇತನ ಧಾತಾರಾಧಸ್ತುವತೇ ಕಾಮ್ಯಂ ವಸು, 3. ಪ್ರಚೇತಯ ಅಸ್ಮಾಕಂ ಬೋಧಿಚೋದಿತಾ, 4. ಆಯಾಹಿ ಪಿಬಮತ್ಸ್ವ ತಂ ತ್ವಾ ಪರಿಷ್ವಜಾಮಹೇ, 5. ಯಾ ತೇ ರಾತಿರ್ದದಿರ್ವಸು, ಸುಮ್ನ ಆಧೇಹಿನೋ ವಸೋ ಈ ರೀತಿ ಕೂಡಿಸಿ ಆ ವಾಕ್ಯಗಳ ಸಮೂಹದ ಅರ್ಥವನ್ನು ಆಚಾರ್ಯರು ಹೇಳಿದರು. ಆ ಅರ್ಥಗಳು ಲೋಕದಲ್ಲಿ ಸ್ಥಿರವಾಗಿ ಪ್ರಚಾರದಲ್ಲಿ ಉಳಿಯಬೇಕೆಂದು ಶಿಷ್ಯರಿಂದ ಬರೆಸಿದರು. ಮಹಾನಾಮ್ನಿ ಎಂಬ ವೇದಖಂಡದ ಅರ್ಥವನ್ನು ಬೋಧಿಸುವ ಈ ಗ್ರಂಥಕ್ಕೆ ನಿರ್ಣಯ ವೆಂದು ಹೆಸರು. 'ವಿದಾ ಮಘವನ್ ವಿದಾ ಗಾತುಮನುಕೇಶಿಷೋ ದಿಶಃ ಶಿಕ್ಷಾ ಶಚೀನಾಂ ಪತೇ ಪೂರ್ವಿಣಾ ಪುರೂ ವಸೋಃ' ಇತ್ಯಾದಿಯಾಗಿ ಐತರೇಯಶಾಖೆಯ ಮಂತ್ರಗಳಿಗೆ ಮೇಲೆ ಹೇಳಿದ ಐದು ಉಪಸರ್ಗಗಳಿವೆ. ಅವುಗಳನ್ನು ಸೇರಿಸಬೇಕಾದ ಮಂತ್ರಗಳೂ ಅಲ್ಲಿವೆ. 'ಮಹಾನಾಮ್ನಿನಾಮುಪಸರ್ಗಾರ್ಮಿನುಪಸೃಜತಿ' ಎಂಬ ವಚನವೂ ಅಲ್ಲಿದೆ. ಮಹಾನಾಮ್ನಿ ಋಕ್ಕುಗಳಿಗೆ ಉಪಸರ್ಗಗಳನ್ನು ಸೇರಿಸಿ ಅವುಗಳ ಅರ್ಥವನ್ನೂ ಸರಿಯಾಗಿ ತಿಳಿಸಿ. ಅದು ಪ್ರಪಂಚದಲ್ಲಿ ಶಾಶ್ವತವಾಗಿ ನೆಲೆ ನಿಲ್ಲಲು ಶಿಷ್ಯರ ಮೂಲಕವಾಗಿ ತಾವು ಹೇಳಿದ ಅರ್ಥವನ್ನು ಬರೆಸಿ ಕರ್ಮನಿರ್ಣಯವೆಂಬ ಗ್ರಂಥವನ್ನು ರಚಿಸಿದರು ಎಂದು ತಾತ್ಪರ್ಯ.

ವಿಗ್ರಹ—

**ಮಹಾಹ್ವಯಃ—** ಮಹತಃ ಸರ್ವೋತ್ತಮಸ್ಯ ವಿಷ್ಣೋಃ ಆಹ್ವಯಃ ಇಂದ್ರಾದಿನಾಮ ಯಾಸಾಂ ತಾಃ ಮಹಾಹ್ವಯಃ । ಮಹಾನಾಮ್ನ್ಯಃ = ಮಹತಃ ಎಂದರೆ ಸರ್ವೋತ್ತಮನಾದ ವಿಷ್ಣುವಿನ ಇಂದ್ರಾದಿ ನಾಮವು ಎಲ್ಲಿದೆಯೋ ಅವುಗಳೇ ಮಹಾಹ್ವಯ ಅಂದರೆ ಮಹಾನಾಮ್ನಿ ಎಂಬ ಋಕ್ಕುಗಳು 'ಮಹಾಹ್ವಯಾನಾ ಉಪಸರ್ಗಾಃ ಮಹಾಹ್ವಯೋಪಸರ್ಗಾಃ' ।

**ಮನುಚರಣಾಃ—** ಮನೋಃ ಚರಣಾಃ ಮನುಚರಣಾಃ ।

**ಉಪಸೃಜ್ಯಂ—** ಉಪಸ್ರಷ್ಟುಂ ಯೋಗ್ಯಂ ಉಪಸೃಜ್ಯಂ, ಉಪಸೃಜ್ಯಂ ರೂಪಂ ಯೇಷಾಂ ತೇ ಉಪಸೃಜ್ಯ ರೂಪಾಃ ।

**ವಚನಚಯಸ್ಯ—** ವಚನಾನಾಂ ಚಯಃ ವಚನಚಯಃ ತಸ್ಯ ।

**ಸ್ಥೈರ್ಯಾರ್ಥಂ—** ಸ್ಥಿರಾಣಾಂ ಭಾವಃ ಸ್ಥೈರ್ಯಂ, ಸ್ಥೈರ್ಯಾ ಯ ಇತಿ ಸ್ಥೈರ್ಯಾರ್ಥಂ ।

**ಕ್ರಿಯಾಪದ— ಅಪೃಚ್ಛತ್** - ಪ್ರಚ್ಛ ಜ್ಞೀಪ್ಸಾಯಾಂ ಸಕ. ಅನಿ. ಪರ. ಲುಙ್ ।

**ಲೇಖಯಾಂಬಭೂವ** - ಲಿಖ ಅಕ್ಷರ ವಿನ್ಯಾಸೇ ಣಿಜಂತ ಲಿಟ್ ಲೇಖಯಾಂ ಎಂಬುದನ್ನು ಸೇರಿಸಿದ ಬಭೂವ ಇತ್ಯಾದಿ ಭೂ ಧಾತುವಿನ ಲಿಟ್ ರೂಪವನ್ನೇ ಹೇಳಬೇಕು ।

ಅಪ್ರಚ್ಛತ್ ಅಪೃಚ್ಛತಾಂ ಅಪೃಚ್ಛನ್ ಇತ್ಯಾದಿ ।

ಲೇಖಯಾಂಬಭೂವ ಲೇಖಯಾಂಬಭೂವತುಃ ಲೇಖಯಾಂಬಭೂವುಃ ಇತ್ಯಾದಿ ।

**ಪ್ರಯೋಗ—** ತೇನ ಅಥ ಸಃ ಅಪೃಚ್ಛತ್ ಯತ್ರ ಮನುಚರಣೋಪಸೃಜ್ಯರೂಪೈಃ ಮನುಚರಣೈಃ ಉಚ್ಚೈಃ(ಭೂಯತೇ) ತೇನ ತಸ್ಯ ವಚನಚಯಸ್ಯ ತಂ ಅರ್ಥಂ ಬ್ರುವಾಣೇನ ಸತಾ ಸ್ಥೈರ್ಯಾರ್ಥಂ ಸಪದಿ ಲೇಖಯಾಂಬಭೂವೇ ।

★ ★ ★

**ಅವತಾರಿಕಾ—** ಆಗ ಆ ದುರ್ಜನರು ವ್ಯರ್ಥವಾಗಿ ನಿಂದಿಸಿದರು. ಆದರೆ ಅದರಿಂದ ಆಚಾರ್ಯರಿಗೆ ಹಾನಿಯೇನೂ ಆಗಲಿಲ್ಲವೆಂಬುದನ್ನು ದೃಷ್ಟಾಂತ ಸಹಿತವಾಗಿ ವಿವರಿಸುತ್ತಾರೆ.

**ಸಂಪೂರ್ಣಂ ಶಶಿನಮಿವೋದಿತಂ ಕೃಶಃ ಶ್ವಾ**
**ಚುಕ್ಷೋಭಾಶುಭನಿಕರೋ ನಿರೀಕ್ಷ್ಯ ಮಧ್ವಮ್ ।**
**ಪ್ರತ್ಯರ್ಥೀ ಸ್ವಯಮಿತಿ ದೂರವೋ(ತೋ)ಽಭಿಧಾವನ್**
**ಕಿಂ ತೇನ ಕ್ಷತಮಮೃತಾಕರಸ್ಯ ತಸ್ಯ ॥ 46 ॥**

**ಪದಚ್ಛೇದ—** ಸಂಪೂರ್ಣಂ, ಶಶಿನಂ, ಇವ, ಉದಿತಂ, ಕೃಶಃ, ಶ್ವಾ ಚುಕ್ಷೋಭ, ಅಶುಭನಿಕರಃ, ನಿರೀಕ್ಷ್ಯ, ಮಧ್ವಮ್, ಪ್ರತ್ಯರ್ಥೀ, ಸ್ವಯಮ್, ಇತಿ, ದೂರವಃ, ಅಭಿಧಾವನ್, ಕಿಂ, ತೇನ, ಕ್ಷತಮ್, ಅಮೃತಾಕರಸ್ಯ, ತಸ್ಯ ।

**ಅನ್ವಯ—** ಅಶುಭನಿಕರಃ, ಮಧ್ವಂ, ನಿರೀಕ್ಷ್ಯ, ಸಂಪೂರ್ಣಂ, ಉದಿತಂ, ಶಶಿನಂ, ಸ್ವಯಂ, ಪ್ರತ್ಯರ್ಥೀ, ಇತಿ, ದೂರವಃ, ಅಭಿಧಾವನ್, ಕೃಶಃ, ಶ್ವಾ ಇವ, ಚುಕ್ಷೋಭ, ಅಮೃತಾಕರಸ್ಯ, ತಸ್ಯ, ತೇನ, ಕಿಂ, ಕ್ಷತಮ್ ।

**ಅನ್ವಯಾರ್ಥ—**

**ಅಶುಭನಿಕರಃ** = ಅಮಂಗಲಸ್ವರೂಪದ ದುರ್ಜನರ ಸಮೂಹವು,
**ಮಧ್ವಂ** = ಶ್ರೀಮಧ್ವಾಚಾರ್ಯರನ್ನು,
**ನಿರೀಕ್ಷ್ಯ** = ನೋಡಿ,
**ಸಂಪೂರ್ಣಂ** = ಹದಿನಾರು ಕಲೆಗಳಿಂದ ತುಂಬಿದ,
**ಉದಿತಂ** = ಆಗ ತಾನೆ ಉದಯಿಸಿದ,
**ಶಶಿನಂ** = ಚಂದ್ರನನ್ನು, (ನಿರೀಕ್ಷ್ಯ=ನೋಡಿ)
**ಸ್ವಯಂ** = ತಾನು,
**ಪ್ರತ್ಯರ್ಥೀ ಇತಿ** = ಶತ್ರುವೆಂದು,
**ದೂರವಃ** = ಕೆಟ್ಟ ಶಬ್ದವುಳ್ಳದ್ದಾಗಿ, (ದೂರತಃ = ದೂರದಿಂದ)
**ಅಭಿಧಾವನ್** = ಎದುರಾಗಿ ಓಡಿ ಬರುತ್ತಿರುವ,
**ಕೃಶಃ** = ಸಣ್ಣದಾದ,
**ಶ್ವಾ ಇವ** = ನಾಯಿಯಂತೆ,
**ಚುಕ್ಷೋಭ** = ಕ್ಷೋಭೆಗೊಂಡಿತು, (ವ್ಯಥೆಪಟ್ಟಿತು)
**ಅಮೃತಾಕರಸ್ಯ** = ಮೋಕ್ಷವನ್ನು ಕೊಡುವ (ಮುಕ್ತರಿಗೆ ಆಶ್ರಯನಾದ) ಮತ್ತು ಅಮೃತಕ್ಕೆ ಆಶ್ರಯನಾದ,

ತಸ್ಯ = ಆ ಶ್ರೀಮಧ್ವಾಚಾರ್ಯರಿಗೆ ಮತ್ತು ಆ ಚಂದ್ರನಿಗೆ,

ತೇನ = ಆ ದುಷ್ಟರ ಗುಂಪಿನಿಂದ ಅಥವಾ ಗದ್ದಲದಿಂದ,

ಕಿಂ = ಏನು,

ಕ್ಷತಂ = ಹಾನಿಯು?

ತಾತ್ಪರ್ಯ— ಶ್ರೀಮಧ್ವಾಚಾರ್ಯರನ್ನು ನೋಡಿ ಅವರ ಪ್ರವಚನವನ್ನು ಕೇಳಿ ತತ್ತ್ವಜ್ಞಾನಕ್ಕೆ ಅಯೋಗ್ಯರಾದ ಜನರು ತಾವು ಶ್ರೀಮಧ್ವಾಚಾರ್ಯರ ಪ್ರತಿವಾದಿಗಳ ತಮ್ಮ ತತ್ತ್ವಜ್ಞಾನವನ್ನು ಅವರು ಖಂಡಿಸುತ್ತಾರೆಂದೂ ತಿಳಿದು ಅವರು ಎದುರಿಗೆ ಬಂದು ತಮಗೆ ತೋಚಿದ ರೀತಿಯಲ್ಲಿ ಕೂಗುತ್ತ ಅನಂತರ ವಾದ ಮಾಡಲಾರದೆ ಸೋತು ಧೈರ್ಯವಿಲ್ಲದ ಹಿಂತಿರುಗಿದರು. ಹುಣ್ಣಿಮೆಯ ದಿನ ಪೂರ್ವ ದಿಕ್ಕಿನ ಆಕಾಶದಲ್ಲಿ ಚಂದ್ರನು ಹದಿನಾರು ಕಲೆಗಳಿಂದ ತುಂಬಿ ಉದಯಿಸುತ್ತಿದ್ದಾಗ ಇಂತಹ ಚಂದ್ರನನ್ನು ಕಂಡು ದುರ್ಬಲವಾದ ತಿಳಿಗೇಡಿಯಾದ ನಾಯಿಯು ಈ ಪೂರ್ಣಚಂದ್ರನು ತನ್ನನ್ನೇ ಅಣಕಿಸುತ್ತಾನೆಂದೂ ಇವನು ತನ್ನಂತಹ ಗುಣವಿಲ್ಲದ, ತಮ್ಮನ್ನು ಸೌಂದರ್ಯಾದಿ ಗುಣವಿಲ್ಲದವರೆಂದು ನಿಂದಿಸುತ್ತಾನೆಂದೂ ತಿಳಿಯುತ್ತದೆ. ಈ ಪೂರ್ಣಚಂದ್ರನಿಗೆ ತಾನೇ ಪ್ರತಿಭಟನಾದ ಪ್ರತಿವಾದಿಯೆಂದು ಭಾವಿಸಿ ಕೆಟ್ಟ ಧ್ವನಿಯಿಂದ ಚಂದ್ರನ ಕಡೆಗೆ ನೋಡಿ ಬೊಗಳಿ ಬೊಗಳಿ ಕೊನೆಗೆ ಆಯಾಸಪಟ್ಟು ಚಾಂಚಲ್ಯವನ್ನು ಹೊಂದಿ ಸುಮ್ಮನಾಗು- ತ್ತದೆ. ಅಮೃತಕ್ಕೆ ಗಣಿಯಾದ ಚಂದ್ರನಿಗೆ ನಾಯಿಯ ಕೂಗಿನಿಂದ ಏನೂ ಹಾನಿಯಿಲ್ಲ. ಹಾಗೆಯೇ ಅಮೃತವೆಂಬ ಮೋಕ್ಷಕ್ಕೆ ಆಶ್ರಯರಾದ, ಮುಕ್ತರಿಗೆ ಆಶ್ರರಾದ ಮುಕ್ತಿಪ್ರದನೂ ಮುಕ್ತಾಶ್ರಯನೂ ಆದ ಶ್ರೀಹರಿಯ ಪರಮಕೃಪಾಪಾತ್ರರಾದ ಶ್ರೀಮಧ್ವಾಚಾರ್ಯರಿಗೆ ಆ ದುರ್ಜನರ ಕೂಗಿನಿಂದ ಏನೂ ತೊಂದರೆಯಾಗಲಿಲ್ಲ. ಪರಂತು ಆ ದುರ್ಜನರಿಗೆ ಮಹಾತ್ಮರ ತಿರಸ್ಕಾರದಿಂದ ಹಾನಿಯುಂಟಾಯಿತು ಎಂದು ಭಾವವು.

ವಿಗ್ರಹ ಮತ್ತು ಕೋಶ—

**ಅಶುಭನಿಕರಃ**— ನ ಶುಭಾಃ ಅಶುಭಾಃ, ಅಶುಭಾನಾಂ ನಿಕರಃ ಅಶುಭನಿಕರಃ ।

**ಅಮೃತಾಕರಃ**— ಅಮೃತಸ್ಯ ಆಕರಃ ಅಮೃತಾಕರಃ । 'ಆಕರೋ ನಿವಹೋತ್ಪತ್ತಿ ಸ್ಥಾನಶ್ರೇಷ್ಠೇಷು ಕಥ್ಯತೇ' ವಿಶ್ವ

**ಪ್ರತ್ಯರ್ಥಿನ್**— ಶತ್ರು,'ಅಭಿಘಾತಿಪರಾರಾತಿಪ್ರತ್ಯರ್ಥಿ ಪರಿಪಂಥಿನಃ' ಅಮರ ।

**ದೂರವಃ**— ಕೆಟ್ಟಧ್ವನಿಯುಳ್ಳವನು, ದುರ್+ರವ ಎಂದಿರುವಾಗ 'ರೋರಿ'ಎಂಬ ಸೂತ್ರದಿಂದ ಮೊದಲನೆಯ ರೇಫಕ್ಕೆ ಲೋಪ ಬಂದಾಗ ದು+ರವ ಎಂದಿರುತ್ತದೆ. ಆಗ 'ಢ್ರಲೋಪೇ ಪೂರ್ವಸ್ಯ ದೀರ್ಘೋಣಃ' ಎಂಬ ಸೂತ್ರದಿಂದ ದು ಎಂಬಲ್ಲಿರುವ ಉಕಾರಕ್ಕೆ ದೀರ್ಘವು ಬಂದು ದೂರವಃ ಎಂದು ರೂಪವಾಗುತ್ತದೆ. ದೂರತಃ ಎಂಬ ಪಾಠದಲ್ಲಿ 'ದೂರಾತ್ ಇತಿ ದೂರತಃ' ಎಂಬ ಅರ್ಥದಲ್ಲಿ ಪಂಚಮೀ ವಿಭಕ್ತಿಗೆ ತಸಿ ಪ್ರತ್ಯಯವು ಬರುತ್ತದೆ.

ವಿಶೇಷಾಂಶ— ಇಲ್ಲಿ ಅಮೃತಾಕರಸ್ಯ ಎಂಬಲ್ಲಿ ಅಮೃತ ಶಬ್ದಕ್ಕೆ ಚಂದ್ರನ ಪಕ್ಷದಲ್ಲಿ ಅಮೃತ = ಸುಧಾ ಎಂದು ಅರ್ಥ. ಸುಧಾಮಯವಾದ ಕಿರಣಗಳುಳ್ಳವನು ಚಂದ್ರನು. ಆಚಾರ್ಯರ ಪಕ್ಷದಲ್ಲಿ ಅಮೃತವೆಂದರೆ ಮೋಕ್ಷ, ಮುಕ್ತಿ, 'ಕೈವಲ್ಯ ನಿರ್ವಾಣ ಶ್ರೇಯೋನಿಃ ಶ್ರೇಯಸಾಮೃತಂ' ಅಮರ. 'ಅಮೃತಂ ಮೋಕ್ಷಶ್ಚ' ಎಂದು ಭಾವಪ್ರಕಾಶಿಕೆಯಲ್ಲಿ ಎರಡನೆಯ ಅರ್ಥವನ್ನು ಸೂಚಿಸಿದ್ದಾರೆ.

ಕ್ರಿಯಾಪದ— **ಚುಕ್ಷೋಭ** - ಕ್ಷುಭ ಸಂಚಲನೇ ಅಕ. ಸೇಟ್. ಪರ. ದಿವಾದಿ. ಲಿಟ್ ಪ್ರಥಮಪುರುಷ ಏಕವಚನ ।

ಚುಕ್ಷೋಭ ಚುಕ್ಷುಭತುಃ ಚುಕ್ಷುಭುಃ, ಚುಕ್ಷೋಭಿಥ ಚುಕ್ಷುಭಥುಃ ಚುಕ್ಷೋಭ, ಚುಕ್ಷೋಭ ಚುಕ್ಷುಭಿವ ಚುಕ್ಷುಭಿಮ ।

**ಭುಂಕ್ತೇ** - ಡುಧಾಞ್ ಧಾರಣಪೋಷಣಯೋಃ ಸಕ. ಅನಿ. ಉಭ. ಭೂತೇ ಲುಙ್ (ಆತ್ರ) ಭುಂಕ್ತೇ
ಭುಂಜಾತೇ ಭುಂಜತೇ ಭುಂಕ್ಷೇ ಭುಂಜಾಥೇ ಭುಂಗ್ಧ್ವೇ ಭುಂಜೇ ಭುಂಜ್ವಹೇ ಭುಂಜ್ಮಹೇ ।

**ಪ್ರಯೋಗ—** ದಯಾಲುನಾ ತೇನ ಬೃಹತ್ ಪ್ರಬೋಧೇನ ನಿಸ್ಸ್ವಾನಾಂ ಭಕ್ತಾನಾಂ ಕತಿಪಯಭುಕ್ತಿಯುಕ್ತಭಕ್ತಂ ಚತುರ್ಗುಣಂ ವ್ಯಧಾಯಿ ಧನವತಾಂ ಸಂಪ್ರೀತ್ಯೈ (ತನ)ತ್ರಿದಶನರೋಪಭೋಜ್ಯಮನ್ನಂ ಭುಜ್ಯತೇ ಸ್ಮ ।

★ ★ ★

**ಅವತಾರಿಕಾ—** ಹೀಗೆ ಆಚಾರ್ಯರ ಶಿಷ್ಯರು ತಾವು ಹೇಳುತ್ತಿದ್ದ ಕಥೆಯನ್ನು ಮುಗಿಸುತ್ತಾರೆ.

**ವೃಷ್ಟ್ಯಾದೇಃ ಸ ನಿಯಮನಾದಿ ಚಕ್ರ ಏತತ್**
**ಚಿತ್ರಂ ಕಿಂ ಭುವನನಿಯಾಮಕೇ ಸಮೀರೇ ।**
**ಅಪ್ಯೇವಂ ಭುವನಗುರೋಃ ಕೃತಾನುವಾದಃ**
**ಕೃತ್ಯೇಷು ಪ್ರವರ ಇತೀಹ ವರ್ಣಯಾಮಃ ॥ 48 ॥**

**ಪದಚ್ಛೇದ—** ವೃಷ್ಟ್ಯಾದೇಃ, ಸಃ, ನಿಯಾಮನಾದಿ, ಚಕ್ರೇ, ಏತತ್, ಚಿತ್ರಂ, ಕಿಂ, ಭುವನನಿಯಾಮಕೇ, ಸಮೀರೇ, ಅಪಿ, ಏವಂ, ಭುವನಗುರೋಃ, ಕೃತಾನುವಾದಃ, ಕೃತ್ಯೇಷು, ಪ್ರವರಃ, ಇತಿ, ಇಹ, ವರ್ಣಯಾಮಃ ।

**ಅನ್ವಯ—** ಸಃ, ವೃಷ್ಟ್ಯಾದೇಃ, ನಿಯಮನಾದಿ, ಚಕ್ರೇ, ಏತತ್, ಭುವನನಿಯಾಮಕೇ, ಸಮೀರೇ, ಕಿಂ, ಚಿತ್ರಮ್? ಏವಮಪಿ, ಭುವನಗುರೋಃ, ಕೃತಾನುವಾದಃ, ಕೃತ್ಯೇಷು, ಪ್ರವರಃ, ಇತಿ, ಇಹ, ವರ್ಣಯಾಮಃ ।

**ಅನ್ವಯಾರ್ಥ—**

**ಸಃ** = ಆ ಶ್ರೀಮಧ್ವಾಚಾರ್ಯರು,
**ವೃಷ್ಟ್ಯಾದೇಃ** = ಮಳೆ ಮೊದಲಾದುವುಗಳ,
**ನಿಯಮನಾದಿ** = ತಡೆಯುವುದು ಇದೇ ಮೊದಲಾದುದನ್ನು,
**ಚಕ್ರೇ** = ಮಾಡಿದರು,
**ಏತತ್** = ಇದು,
**ಭುವನನಿಯಾಮಕೇ** = ಸಕಲಲೋಕಗಳನ್ನು ಒಳಗೆ ನಿಂತು ಪ್ರೇರಿಸುವ,
**ಸಮೀರೇ** = ಮುಖ್ಯಪ್ರಾಣಸ್ವರೂಪರಾದ ಶ್ರೀಮಧ್ವಾಚಾರ್ಯರಲ್ಲಿ,
**ಕಿಂ ಚಿತ್ರಮ್?** = ಏನು ಆಶ್ಚರ್ಯ,
**ಏವಂ ಅಪಿ** = ಹೀಗಿದ್ದರೂ,
**ಭುವನಗುರೋಃ** = ಸಮಸ್ತ ಲೋಕಗಳ ಗುರುಗಳಾದ ಶ್ರೀಮಧ್ವಾಚಾರ್ಯರ,
**ಕೃತಾನುವಾದಃ** = ಚರಿತ್ರೆಗಳನ್ನು ಸರಿಯಾಗಿ ಹೇಳುವುದು,
**ಕೃತ್ಯೇಷು** = ನಾವು ಮಾಡತಕ್ಕ ಇತರ ಸತ್ಕಾರ್ಯಗಳಿಗೆಲ್ಲ,
**ಪ್ರವರಃ ಇತಿ** = ಸರ್ವೋತ್ಕೃಷ್ಟವೆಂದು,
**ಇಹ** = ಈ ಸಂದರ್ಭದಲ್ಲಿ
**ವಯಂ** = ನಾವು,
**ವರ್ಣಯಾಮಃ** = ವರ್ಣಿಸುತ್ತೇವೆ.

ತಾತ್ಪರ್ಯ— ಇಂತಹ ಶ್ರೀಮಧ್ವಾಚಾರ್ಯರು ಮಳೆಗಾಲವಲ್ಲದ ಕಾಲದಲ್ಲಿಯೂ ಒಂದು ಕೆರೆಯು ಮಾತ್ರ ತುಂಬುವಷ್ಟು ಮಳೆ ಬರಿಸಿದರು. ಮಳೆಯ ಆಪೇಕ್ಷ ಇದ್ದಾಗ ಮಳೆ ಬರಿಸಿದರು. ಮಳೆಗಾಲದಲ್ಲಿಯೂ ಯಾವಾಗ ಮಳೆಯು ಬೇಕಾಗಿಲ್ಲವೋ ಆಗ ಮಳೆಯನ್ನು ನಿಲ್ಲಿಸಿದರು. ಹೊಡೆದು ಕೊಲ್ಲಲು ಬಂದ ಶೂದ್ರರಾಜನ ಬುದ್ಧಿಯನ್ನು ಬದಲಾಯಿಸಿದರು. ಕಡಿಮೆಯಾದ ಅನ್ನವನ್ನು ಹೆಚ್ಚು ಮಾಡಿದರು. ಅನೇಕ ಜನರಿಗೆ ಸಾಕಾಗುವ ಅನ್ನವನ್ನು ತಾವೊಬ್ಬರೇ ಸ್ವೀಕರಿಸಿದರು. ಸಮಸ್ತ ಲೋಕಗಳಿಗೂ ನಿಯಾಮಕರಾದ ಶ್ರೀಮುಖ್ಯಪ್ರಾಣದೇವರ ಅವತಾರರಾದ ಶ್ರೀಮಧ್ವಾ-ಚಾರ್ಯರಲ್ಲಿ ಇದೆಲ್ಲಾ ಏನು ಆಶ್ಚರ್ಯ? ಹೀಗೆ ಆಶ್ಚರ್ಯವಲ್ಲದಿದ್ದರೂ ಲೋಕಗುರುಗಳಾದ ಶ್ರೀಮಧ್ವಾಚಾರ್ಯರ ಚರಿತ್ರೆಗಳನ್ನು ಅನುವಾದಿಸುವುದು ಅವರು ನಡೆಸಿದ ಅದ್ಭುತ ವ್ಯಾಪಾರಗಳನ್ನು ಹೇಳುವುದು ನಾವು ಮಾಡಬೇಕಾವ ಕಾರ್ಯಗಳಲ್ಲಿ ಶ್ರೇಷ್ಠವಾದ ಕಾರ್ಯವು. ಇತರ ಕಾರ್ಯಗಳನ್ನು ಮಾಡುವುದಕ್ಕಿಂತ ಶ್ರೇಷ್ಠವೆಂದು ಹೇಳಬೇಕಾಗಿಯೇ ಇಲ್ಲ. ಇತರರಿಂದಲೂ ಸಾಧ್ಯವಿಲ್ಲದ ಈ ಕಾರ್ಯಗಳನ್ನು ವರ್ಣಿಸಿದಾಗ ಗುರುಸ್ತೋತ್ರವನ್ನು ಮಾಡಿದಂತಾಗುತ್ತದೆ. ಗುರು-ಸ್ತೋತ್ರವು ಶ್ರೇಷ್ಠವಾದ ವ್ಯಾಪಾರವಲ್ಲವೇ? ಆದುದರಿಂದ ನಾವು ಆಚಾರ್ಯರ ಕಾರ್ಯಗಳನ್ನು ಇಲ್ಲಿ ವರ್ಣಿಸುತ್ತೇವೆ. ಭಕ್ತರಿಗೆ ಹರಿಗುರುಸ್ತೋತ್ರಕ್ಕಿಂತ ಮುಖ್ಯವಾದ ಕಾರ್ಯವು ಮತ್ಯಾವುದಿದೆ? ಎಂದು ಭಾವವು.

ವಿಗ್ರಹ—

**ವೃಷ್ಟ್ಯಾದೇಃ**— ವೃಷ್ಟಿಃ ಆದಿಃ ಯಸ್ಯ ಸಃ ವೃಷ್ಟ್ಯಾದಿಃ ತಸ್ಯ ।

**ನಿಯಮನಾದಿ**— ನಿಯಮನಂ ಆದಿ ಯಸ್ಯ ತತ್ ನಿಯಮನಾದಿ ।

**ಭುವನನಿಯಾಮಕೇ**— ಭುವನಾನಾಂ ನಿಯಾಮಕಃ ಭುವನನಿಯಾಮಕಃ ತಸ್ಮಿನ್ ।

**ಭುವನಗುರೋಃ**— ಭುವನಾನಾಂ ಗುರುಃ ಭುವನಗುರುಃ ತಸ್ಯ ।

**ಕೃತಾನುವಾದಃ**— ಕೃತಾನಾಂ ಅನುವಾದಃ ಕೃತಾನುವಾದಃ ।

ಕ್ರಿಯಾಪದ— ಚಕ್ರೇ - ಡುಕೃಞ್‌ಕರಣೇ ಉಭ. ಅನಿಟ್. ಸಕ. ತನಾದಿ 8ನೇ ಗಣ ಲಿಟ್ ।

**ವರ್ಣಯಾಮಃ** - ವರ್ಣ ವರ್ಣಕ್ರಿಯಾವಿಸ್ತಾರಗುಣವಚನೇಷು ಎಂಬ ಧಾತುವಿನ ಲಟ್ ಪರಸ್ಮೈಪದ ಉತ್ತಮ-ಪುರುಷ ಏಕವಚನ ಸಕ. ಸೇಟ್. ಉಭ ಚುರಾದಿ 10ನೇ ಗಣ ।

ಚಕ್ರೇ ಚಕ್ರಾತೇ ಚಕ್ರಿರೇ, ಇತ್ಯಾದಿ । ವರ್ಣಯಾಮಿ ವರ್ಣಯಾವಃ ವರ್ಣಯಾಮಃ ।

ಪ್ರಯೋಗ— ತೇನ ವೃಷ್ಟ್ಯಾದೇಃ ನಿಯಮನಾದಿ ಚಕ್ರೇ ಏತೇನ ಭುವನನಿಯಾಮಕೇ ಸಮೀರೇ ಕೇನ ಚಿತ್ರೇಣ (ಭೂಯತೇ) ಏವಮಪಿ ಭುವನಗುರೋಃ ಕೃತಾನುವಾದೇನ ಕೃತ್ಯೇಷು ಪ್ರವರೇಣ (ಭೂಯತೇ)ಇತಿ ಇಹ (ಅಸ್ಮಾಭಿಃ) ವರ್ಣ್ಯತೇ ।

★ ★ ★

ಅವತಾರಿಕಾ— ಆ ಶಿಷ್ಯರು ಮಾತ್ರವೇ ಗುರುಗಳ ಚರಿತ್ರೆಯನ್ನು ವರ್ಣಿಸಿದರೆಂದು ತಿಳಿಯಬಾರದು. ದೇವತೆಗಳೂ ಇನ್ನೂ ಅದ್ಭುತವಾಗಿ ಆಚಾರ್ಯರ ಚರಿತ್ರೆಯನ್ನು ವರ್ಣಿಸಿದರು ಎಂದು ಗ್ರಂಥಕಾರರು ಹೇಳುತ್ತಾರೆ.

**ಇತ್ಯೂಚೇ ಧರಣಿಸುರೇಣ ಕೇವಲಂ ನೋ**
**ಮಾಧ್ವೀಯಂ ವಿವಿಧಕಥಾ ಕಥಾಸು ಮಾನ್ಯಾ ।**
**ಸಾಕ್ಷಾದಪ್ಯಮರವರ್ಯೈರುದೀರ್ಯಮಾಣಾ**
**ಗಂಧರ್ವೈರ್ದ್ಯುಸದಸಿ ತನ್ಮುದೇ ಜಗೇऽಸೌ ॥ 49 ॥**

**ಪದಚ್ಛೇದ—** ಇತಿ, ಊಚೇ, ಧರಣಿಸುರೇಣ, ಕೇವಲಂ, ನೋ, ಮಾಧ್ವೀ, ಇಯಂ, ವಿವಿಧಕಥಾ, ಕಥಾಸು, ಮಾನ್ಯಾ, ಸಾಕ್ಷಾತ್, ಅಪಿ, ಅಮರವರ್ಯೈಃ, ಉದೀರ್ಯಮಾಣಾ, ಗಂಧರ್ವೈಃ, ದ್ಯುಸದಸಿ, ತನ್ಮುದೇ, ಜಗೇ, ಅಸೌ ।

**ಅನ್ವಯ—** ಕಥಾಸು, ಮಾನ್ಯಾ, ಮಾಧ್ವೀ, ಇಯಂ, ವಿವಿಧಕಥಾ, ಕೇವಲಂ, ಧರಣಿಸುರೇಣ, ಇತಿ, ಊಚೇ, ಇತಿ, ನೋ, ಅಮರವರ್ಯೈಃ, ಅಪಿ, ಸಾಕ್ಷಾತ್, ಉದೀರ್ಯಮಾಣಾ, ಅಸೌ, ದ್ಯುಸದಸಿ, ತನ್ಮುದೇ, ಗಂಧರ್ವೈಃ, ಜಗೇ ।

**ಅನ್ವಯಾರ್ಥ—**

**ಕಥಾಸು** = ಪವಿತ್ರಕೀರ್ತಿಯುಳ್ಳ ಚರಿತ್ರೆಗಳಲ್ಲಿ,

**ಮಾನ್ಯಾ** = ಹೆಚ್ಚು ಪೂಜಾರ್ಹವಾದ,

**ಮಾಧ್ವೀ** = ಶ್ರೀಮಧ್ವಾಚಾರ್ಯರಿಗೆ ಸಂಬಂಧಿಸಿದ,

**ಇಯಂ** = ಈ ವರ್ಣಿತವಾದ,

**ವಿವಿಧಕಥಾ** = ನಾನಾ ವಿಧವಾದ ಕಥೆಯು,

**ಧರಣಿಸುರೇಣ ಕೇವಲಂ** = ಆಚಾರ್ಯರ ಶಿಷ್ಯನಾದ ಬ್ರಾಹ್ಮಣನೊಬ್ಬನಿಂದ ಮಾತ್ರವೇ,

**ಇತಿ** = ಈ ರೀತಿಯಾಗಿ,

**ಊಚೇ ಇತಿ** = ಹೇಳಲ್ಪಟ್ಟಿತ್ತೆಂದು,

**ನೋ** = ಅಲ್ಲ,

**ಅಪಿ** = ದೇವಶ್ರೇಷ್ಠರಿಂದಲೂ,

**ಸಾಕ್ಷಾತ್** = ಪ್ರತ್ಯಕ್ಷವಾಗಿ,

**ಉದೀರ್ಯಮಾಣಾ** = ಹೇಳಲ್ಪಡುತ್ತಿರುವ,

**ಅಸೌ** = ಈ ಕಥೆಯು,

**ದ್ಯುಸದಸಿ** = ದೇವತೆಗಳ ಸಭೆಯಲ್ಲಿ,

**ತನ್ಮುದೇ** = ಆ ದೇವತೆಗಳ ಸಂತೋಷಕ್ಕೋಸ್ಕರ,

**ಗಂಧರ್ವೈಃ** = ಆ ದೇವತೆಗಳ ಸಂಗೀತಗಾರರಿಂದ,

**ಜಗೇ** = ಹಾಡಲ್ಪಟ್ಟಿತು.

**ತಾತ್ಪರ್ಯ—** ಪವಿತ್ರ ಕೀರ್ತಿಯುಳ್ಳ ಮಹಾಪುರುಷರಾದ ದೇವತೆಗಳಿಂದ ಮಾನ್ಯವಾದ ಕಥೆಗಳಲ್ಲಿ ಶ್ರೀಮಧ್ವಾಚಾರ್ಯರ ಈ ಕಥೆಯು ಅತ್ಯಂತ ಮಾನ್ಯವಾದುದು. ಹಿಂದೆ ಹೇಳಿದ ಕಥಗಳನ್ನು ಶ್ರೀಮಧ್ವಾಚಾರ್ಯರ ಶಿಷ್ಯನಾದ ಬ್ರಾಹ್ಮಣನೊಬ್ಬನು ಮಾತ್ರವೇ ಹೇಳಿದನೆಂದು ತಿಳಿಯಬಾರದು, ದೇವಶ್ರೇಷ್ಠರೂ ಕೂಡ ಸಾಕ್ಷಾತ್ತಾಗಿ ತಮ್ಮ ಮುಖದಿಂದಲೇ ಈ ಕಥೆಯನ್ನು ವರ್ಣಿಸುತ್ತಾರೆ. ತಮ್ಮ ಬಾಯಿಯಿಂದಲೇ ಆಚಾರ್ಯರ ಪರಮಪವಿತ್ರವಾದ ಕಥೆಯನ್ನು ಹೇಳುತ್ತಾರೆ. ಅವರು ವರ್ಣಿಸಿದ ಕಥೆಗಳನ್ನು ದೇವತೆಗಳ ಸಭೆಗಳಲ್ಲಿ ಅವರ ಸಂಗೀತ ಗಾಯಕರಾದ ಗಂಧರ್ವರು ದೇವತೆಗಳ ಸಂತೋಷಕ್ಕಾಗಿ ಹಾಡಿನ ಗಾನಮಾಡುತ್ತಾರೆ, ಗಾನ ಮಾಡಿದ್ದಾರೆ. ಇಂತು ಗಂಧರ್ವರೂ ಕೂಡ ಹಾಡಿ ಕೊಂಡಾಡಿದ ಪರಮಪವಿತ್ರ ಚರಿತ್ರೆಯು ಇಲ್ಲಿ ನಿರೂಪಿತವಾಗಿದೆ ಎಂದು ಭಾವ.

**ವಿಗ್ರಹ—**

**ಧರಣಿಸುರೇಣ—** ಧರಣ್ಯಾಃ ಸುರಃ ಧರಣಿಸುರಃ ತೇನ ।

**ಮಾಧ್ವೀ—** ಮಧ್ವಸ್ಯ ಇಯಂ ಮಾಧ್ವೀ ।

**ವಿವಿಧಕಥಾ**— ವಿವಿಧಾ ಚ ಸಾ ಕಥಾ ಚ ವಿವಿಧಕಥಾ ।

**ಮಾನ್ಯಾ**— ಮಾನಯಿತುಂ ಯೋಗ್ಯಾ ಮಾನ್ಯಾ ।

**ಅಮರವರ್ಯೈಃ**— ಅಮರೇಷು ವರಾಃ ಅಮರವರಾಃ ತೈಃ ।

**ದ್ಯುಸದಸಿ**— ದಿವಃ ಸದಃ ದ್ಯುಸದಃ, ತಸ್ಮಿನ್, ದ್ಯುಸದಸಿ ।

**ತನ್ಮುದೇ**— ತೇಷಾಂ ಮುತ್ ತನ್ಮುತ್, ತಸ್ಯೈ ತನ್ಮುದೇ ।

**ಕ್ರಿಯಾಪದ**— **ಊಚೇ** - ಬ್ರೂಞ ವಕ್ತಾಯಾಂ ವಾಚಿ ಉಭ, ಲಿಟ್ ಲಿಟ್ ನಲ್ಲಿ ಆದೇಶ ।

ಊಚೇ ಊಚಾತೇ ಊಚಿರೇ, ಊಚಿಷೇ ಊಚಾಥೇ ಊಚಿಧ್ವೇ, ಊಚೇ ಊಚಿವಹೇ ಊಚಿಮಹೇ ।

**ಜಗೇ** - ಜಗೇ ಜಗಾತೇ ಜಗಿರೇ ಜಗಿಷೇ ಜಗಾಥೇ ಜಗಿಧ್ವೇ, ಜಗೇ ಜಗಿವಹೇ ಜಗಿಮಹೇ । ಗೈ ಶಬ್ದೇ ಕರ್ಮಣಿ ಲಿಟ್ ಪ್ರಥಮಪುರುಷ ಏಕವಚನ ।

**ಪ್ರಯೋಗ**— ಕಥಾಸು ಮಾನ್ಯಾಂ ಮಾಧ್ವೀಂ ಇಮಾಂ ವಿವಿಧಕಥಾಂ ಕೇವಲಂ ಧರಣೀಸುರಃ ಇತಿ ಉವಾಚ ಇತಿ ನೋ ಅಮರವರ್ಯೈಃ ಅಪಿ ಸಾಕ್ಷಾತ್ ಉದೀರ್ಯಮಾಣಾಂ ಅಮೂಂ ದ್ಯುಸದಸಿ ತನ್ಮುದೇ ಗಂಧರ್ವಾಃ ಜಗುಃ ।

★★★

**ಅವತಾರಿಕಾ**— ಆ ಗಂಧರ್ವರು ಹಾಡಿದ ಕ್ರಮವನ್ನೇ ವರ್ಣಿಸುತ್ತಾರೆ.

**ತಾಂ ಪದ್ಯಪ್ರಣಿಗದಿತಾಂ ತು ಮೂರ್ಧಯಿತ್ವಾ**
**ತಾನಾನಾಮುಚಿತತಯಾಽಽತ್ತಪಂಚಮಾದ್ಯಾಃ ।**
**ಗಾಂಧಾರಂ ದ್ಯುವಿಷಯಮುಜ್ವಲಂ ಸೃಜಂತೋ**
**ಗ್ರಾಮಂ ತೇ ಪ್ರಜಗುರಕಾಕಿಕಮ್ರಕಂಠಾಃ ॥ 50 ॥**

**ಪದಚ್ಛೇದ**— ತಾಂ, ಪದ್ಯಪ್ರಣಿಗದಿತಾಂ, ತು, ಮೂರ್ಧಯಿತ್ವಾ, ತಾನಾನಾಂ, ಉಚಿತತಯಾ, ಆತ್ತಪಂಚಮಾದ್ಯಾಃ, ಗಾಂಧಾರಂ, ದ್ಯುವಿಷಯಂ, ಉಜ್ವಲಂ, ಸೃಜಂತಃ, ಗ್ರಾಮಂ, ತೇ, ಪ್ರಜಗುಃ, ಅಕಾಕಿಕಮ್ರಕಂಠಾಃ ।

**ಅನ್ವಯ**— ಅಕಾಕಿಕಮ್ರಕಂಠಾಃ, ತಾನಾನಾಂ, ಉಚಿತತಯಾ, ಆತ್ತಪಂಚಮಾದ್ಯಾಃ, ದ್ಯುವಿಷಯಂ, ಉಜ್ವಲಂ, ಗಾಂಧಾರಂ, ಗ್ರಾಮಂ, ಸೃಜಂತಃ, ತೇ, ಪದ್ಯಪ್ರಣಿಗದಿತಾಂ, ತಾಂ, ತು, ಮೂರ್ಧಯಿತ್ವಾ ಪ್ರಜಗುಃ ।

**ಅನ್ವಯಾರ್ಥ**—

**ಅಕಾಕಿಕಮ್ರಕಂಠಾಃ** = ಕಾಕಿ ಎಂಬ ಕಂಠದೋಷವಿಲ್ಲದ್ದರಿಂದ ಇಂಪಾದ ಧ್ವನಿಯುಳ್ಳ ಗಂಟಲುಳ್ಳ,

**ತಾನಾನಾಂ** = ಒಂದು ಗಾನದಿಂದ ಮತ್ತೊಂದು ಗಾನವನ್ನು ಹೊಂದುವಿಕೆಯ,

**ಉಚಿತತಯಾಽಽತ್ತಪಂಚಮಾದ್ಯಾಃ** = ಮಿಶ್ರಮಾಡದೆ ಯೋಗ್ಯ ರೀತಿಯಿಂದ ಸ್ವೀಕರಿಸಲ್ಪಟ್ಟ ಪ ಎಂಬ ಪಂಚಮ ಸ್ವರವೇ ಮೊದಲಾಗಿ ಉಳ್ಳ,

**ದ್ಯುವಿಷಯಂ** = ದೇವಲೋಕದಲ್ಲಿ ಹಾಡಲು ಯೋಗ್ಯವಾದ,

**ಉಜ್ವಲಂ** = ಪ್ರಕಾಶಮಾನವಾದ,

**ಗಾಂಧಾರಂ ಗ್ರಾಮಂ** = ಎರಡು ಶ್ರುತಿಯುಳ್ಳ ಗಾಂಧಾರ ರಾಗವನ್ನು

**ಸೃಜಂತಃ** = ಉಂಟು ಮಾಡುತ್ತಿರುವ, (ಹಾಡುತ್ತಿರುವ)

ತೇ = ಆ ಗಂಧರ್ವರು,

ಪದ್ಯಪ್ರಣಿಗದಿತಾಂ = ಶ್ಲೋಕರೂಪದಿಂದ ಹೇಳಲ್ಪಟ್ಟ

ತಾಂ ತು = ಹಿಂದೆ ಹೇಳಿರುವ ಆಚಾರ್ಯರ ಚರಿತ್ರೆಯನ್ನು

ಮೂರ್ಛಯಿತ್ವಾ = ಆಯಾ ಸ್ವರದ ವಿಕಾಸದ ಆದಿಯನ್ನು ತಿಳಿಸಿ,

ಪ್ರಜಗುಃ = ಹಾಡಿದರು.

ತಾತ್ಪರ್ಯ— ಆ ಗಂಧರ್ವರು ದೇವತೆಗಳು ರಚಿಸಿರುವ ಆಚಾರ್ಯರ ಚರಿತ್ರೆಯ ಪದ್ಯಗಳನ್ನು ದೇವಸಭೆಯಲ್ಲಿ ರಾಗಾಲಾಪದೊಡನೆ ಹಾಡಿದರು. ಅವರ ಕಂಠದಲ್ಲಿ ಕಾಕಿ ಎಂಬ ಕಂಠದೋಷವಿಲ್ಲದ್ದರಿಂದ ಧ್ವನಿಯು ಬಹಳ ಇಂಪಾಗಿಯೂ ಸುಶ್ರಾವ್ಯವಾಗಿಯೂ ಇದ್ದಿತು. ಅವರು ಒಂದು ಹಾಡನ್ನು ಹಾಡಿ, ಮತ್ತೊಂದು ಹಾಡನ್ನು ಹಾಡುವಾಗ ಪಂಚಮಾದಿ ಸ್ವರಗಳನ್ನು ಒಂದಕ್ಕೊಂದು ಮಿಶ್ರವಾಗದಂತೆ ಯೋಗ್ಯ ರೀತಿಯಿಂದ ಸ್ವರಗಳನ್ನು ಸ್ವೀಕರಿಸುತ್ತಿದ್ದರು. ಅವರು ದೇವಲೋಕದಲ್ಲಿ ಹಾಡಲು ಉಚಿತವಾದ ಎರಡು ಶ್ರುತಿಯುಳ್ಳ ಗಾಂಧಾರರಾಗವನ್ನು ಅತಿ ಸ್ಪಷ್ಟವಾಗಿ ಪ್ರಕಟಿಸುತ್ತಿದ್ದರು.

ವಿಗ್ರಹ—

ಪದ್ಯಪ್ರಣಿಗದಿತಾಂ— ಪದ್ಯೈಃ ಪ್ರಣಿಗದಿತಾ ಪದ್ಯಪ್ರಣಿಗದಿತಾ ತಾಂ ।

ಪಂಚಮಾದ್ಯಾಃ— ಪಂಚಮಃ ಆದ್ಯಃ ಯೇಷಾಂ ತೇ ಪಂಚಮಾದ್ಯಾಃ, ಆತ್ತಾಃ ಪಂಚಮಾದ್ಯಾಃ (ಸಪ್ತಸ್ವರಾಃ) ಯೇಷಾಂ ತೇ ಆತ್ತಪಂಚಮಾದ್ಯಾಃ ।

ಉಚಿತತಯಾ— ಉಚಿತಾನಾಂ ಭಾವಃ ಉಚಿತತಾ, ತಯಾ ।

ದ್ಯುವಿಷಯಃ— ದಿವಃ ವಿಷಯಃ ದ್ಯುವಿಷಯಃ ತಂ ।

ಅಕಾಕಿಕಮ್ರಕಂಠಾಃ— ನ ವಿದ್ಯತೇ ಕಾಕಿಃ ಯಸ್ಯ ಸಃ ಅಕಾಕಿಃ, ಅಕಾಕಿಃ ಕಮ್ರಃ ಕಂಠಃ ಯೇಷಾಂ ತೇ ಅಕಾಕಿಕಮ್ರಕಂಠಾಃ ।

ವಿಶೇಷಾಂಶ— ಮೂರ್ಛಯಿತ್ವಾ ಸ್ವರವಿಕಾಸಾನಾಂ ಆದಿಂ ಕೃತ್ವಾ=ಮೂರ್ಛಯಿತ್ವಾ ಎಂದರೆ ಸ್ವರ ವಿಕಾಸಗಳ ಆರಂಭವನ್ನು ಮಾಡಿ ಎಂದು ಅರ್ಥ. ಆದಿಸ್ವರಾವಸ್ಥಾ ಮೂರ್ಛನೇತ್ಯಭಿಹಿತಾ = ಅಸಂಕರತ್ವೇನ ಗಾನಾದ್ಗಾನಾಂತರಪ್ರಾಪ್ತಿ ಸ್ಥಾನಂ = ತಾನಾನಾಂ ಉಚಿತತಯಾ ಎಂಬಲ್ಲಿ ತಾನ ಎಂದರೆ ಅಸಂಕೀರ್ಣವಾಗಿ ಒಂದು ಗಾನದಿಂದ ಮತ್ತೊಂದು ಗಾನದ ಪ್ರಾಪ್ತಿ ಪಂಚಮಾದ್ಯಾಃ ಸ್ವರಾಃ = ಪಂಚಮಾದಿ ಸ್ವರಗಳು ನಿಷಾದ ಋಷಭ ಗಾಂಧಾರ ಷಡ್ಜ ಮಧ್ಯಮ ಧೈವತ ಎಂದು (ಸ.ರಿ.ಗ.ಮ.ಪ.ಧ.ನಿ) ಏಳು ಸ್ವರಗಳು (ಸರಿಗಮಪಧನೀತಿಕ್ರಮಃ)ಇವುಗಳಲ್ಲಿ ನಿಷಾದ ಗಾಂಧಾರ ಸ್ವರಗಳಿಗೆ ಎರಡೆರಡು ಶ್ರುತಿಗಳು (ದ್ವೇ ದ್ವೇ ನಿಷಾದಗಾಂಧರೌ) ಧೈವತ ಋಷಭಗಳಿಗೆ ಮೂರು ಮೂರು ಶ್ರುತಿಗಳು (ತ್ರಿ ಶ್ರುತೀ ಧೈವತರ್ಷಭೌ) ಷಡ್ಜ ಪಂಚಮ ಮಧ್ಯಮಗಳಿಗೆ ನಾಲ್ಕು ನಾಲ್ಕು ಶ್ರುತಿಗಳು (ಚತುಃ ಶ್ರುತಯ ಉದ್ದಿಷ್ಟಾಃ, ಷಡ್ಜ, ಮಧ್ಯಮ, ಪಂಚಮಾಃ) ಶ್ರುತಿಸಮುದಾಯವೇ ಗ್ರಾಮವು (ಶ್ರುತಿ ಸಮುದಾಯಃ ಗ್ರಾಮಃ) ಇವುಗಳಲ್ಲಿ ಗಾಂಧಾರವು ಸ್ವರ್ಗಲೋಕದಲ್ಲಿ ಮಾತ್ರವೇ ಹಾಡಲ್ಪಡುತ್ತದೆ. (ತತ್ರ ಗಾಂಧಾರಸ್ತು ದ್ಯುಷಯ ಏವ) ಒಟ್ಟಿನಲ್ಲಿ ಗಾನಕ್ಕೆ ಏಳು ಸ್ವರಗಳು (ಸಪ್ತಸ್ವರಾಃ) ಮೂರು ಗ್ರಾಮಗಳು (ತ್ರಯಃ ಗ್ರಾಮಾಃ) ಇಪ್ಪತ್ತೊಂದು ಮೂರ್ಛನೆಗಳು (ಆಲಾಪ ವಿಶೇಷಗಳು) (ಏಕವಿಂಶತಿ ಮೂರ್ಛನಾಃ) ನಲವತ್ತೊಂಭತ್ತು ತಾನಗಳು (ತಾನಾನ್ಯೇಕೋನ ಪಂಚಾಶತ್) ಇದೇ ಸಂಗೀತದ ಲಕ್ಷಣವು ಏತದ್ಗಾನಸ್ಯ ಲಕ್ಷಣಂ ಇತಿ ಚ) ಕಾಕಿ ಮತ್ತು ತುಂಬರು ಎಂದು ಎರಡು ಕಂಠ ದೋಷಗಳು (ಕಾಕಿಶ್ಚ ತುಂಬುರುಶ್ಚೈವ ಕಂಠದೋಷೌ ಪ್ರಕೀರ್ತಿತೌ ಇತಿ ಚ) (ಈ ವಿಷಯವನ್ನು ಭರತಶಾಸ್ತ್ರದಲ್ಲಿ ಹೇಳಿದ್ದಾರೆ).

**ಕ್ರಿಯಾಪದ—** ಪ್ರಜಗುಃ - ಗೈ ಶಬ್ದೇ ಸಕ. ಅನಿ. ಪರ. ಲಿಟ್‌ಪ್ರ ಉಪಸರ್ಗ ।

ಜಗೌ ಜಗತುಃ ಜಗುಃ, ಜಗಿಥ ಜಗಾಥ ಜಗಥುಃಜಗ, ಜಗೌ ಜಗಿವ ಜಗಿಮ ।

**ಪ್ರಯೋಗ—** ಅಕಾಕಿಕಮ್ರಕಂಠೈಃ ತಾನಾನಾಂ ಉಚಿತತಯಾ ಆತ್ತಪಂಚಮಾದ್ಯೈಃ ದ್ಯುವಿಷಯಂ ಉಜ್ಜ್ವಲಂ ಗಾಂಧಾರಂ ಗ್ರಾಮಂ ಸೃಜದ್ಭಿಃ ತೈಃ ಪದ್ಯಪ್ರಣಿಗದಿತಾ ಸಾ (ಕಥಾ)ತು ಮೂರ್ಛಯಿತ್ವಾ ಪ್ರಜಗೇ ।

★★★

**ಅವತಾರಿಕಾ—** ಆ ಗಾನವನ್ನು ದೇವಶ್ರೇಷ್ಠರು ಬಹಳ ಶ್ರದ್ಧೆಯಿಂದ ಕೇಳಿದರೆನ್ನುತ್ತಾರೆ.

**ಆನಮ್ರೈಃ ಸುಮುಕುಟಮೌಲಿಭಿಃ ಕರಾಗ್ರೈ-**
**ರಾತಾಮ್ರೈಃ ಪ್ರತಿಕಲಿತೈಃ ಸ್ಮಿತೈರ್ಮುಖಾಬ್ಜೈಃ ।**
**ಆಶ್ರಾವಿ ಸ್ಥಿರತರಭಕ್ತಿಭಿಃ ಸುರೇಂದ್ರೈ-**
**ಸ್ತದ್ಗೀತಾ ದಶಧಿಷಣಾರ್ಯವರ್ಯಚರ್ಯಾ ॥ 51 ॥**

**ಪದಚ್ಛೇದ—** ಆನಮ್ರೈಃ, ಸುಮುಕುಟಮೌಲಿಭಿಃ, ಕರಾಗ್ರೈಃ, ಆತಾಮ್ರೈಃ, ಪ್ರತಿಕಲಿತೈಃ, ಸ್ಮಿತೈಃ, ಮುಖಾಬ್ಜೈಃ, ಆಶ್ರಾವಿ, ಸ್ಥಿರತರಭಕ್ತಿಭಿಃ, ಸುರೇಂದ್ರೈಃ, ತದ್ಗೀತಾ, ದಶಧಿಷಣಾರ್ಯವರ್ಯಚರ್ಯಾ ।

**ಅನ್ವಯ—** ಸ್ಥಿರತರಭಕ್ತಿಭಿಃ, ಆನಮ್ರೈಃ, ಸುಮುಕುಟಮೌಲಿಭಿಃ, ಪ್ರತಿಕಲಿತೈಃ, ಆತಾಮ್ರೈಃ, ಕರಾಗ್ರೈಃ, ಸ್ಮಿತೈಃ, ಮುಖಾಬ್ಜೈಃ, ಸುರೇಂದ್ರೈಃ, ತದ್ಗೀತಾ, ದಶಧಿಷಣಾರ್ಯವರ್ಯಚರ್ಯಾ, ಆಶ್ರಾವಿ ।

**ಅನ್ವಯಾರ್ಥ—**

**ಸ್ಥಿರತರ** = ಅತಿಶಯವಾಗಿ ದೃಢವಾದ,
**ಭಕ್ತಿಭಿಃ** = ಮಹಾತ್ಮ್ಯಜ್ಞಾನಪೂರ್ವಕವಾದ ಸುದೃಢಸ್ನೇಹವುಳ್ಳ,
**ಆನಮ್ರೈಃ** = ಬಹಳವಾಗಿ ಬಾಗಿದ,
**ಸುಮುಕುಟಮೌಲಿಭಿಃ** = ಒಳ್ಳೆಯ ಕಿರೀಟಗಳಿಂದ ಕೂಡಿದ ಶಿರಸ್ಸುಗಳುಳ್ಳ (ಅಥವಾ ಒಳ್ಳೆಯ ಕಿರೀಟ ಮತ್ತು ತಲೆಗಳುಳ್ಳ),
**ಪ್ರತಿಕಲಿತೈಃ** = ಶಿರಸ್ಸಿನ ಮೇಲೆ ಜೋಡಿಸಲ್ಪಟ್ಟ (ಮುಗಿದಿರುವ),
**ಆತಾಮ್ರೈಃ** = ಅತ್ಯಂತ ಕೆಂಪಾದ,
**ಕರಾಗ್ರೈಃ** = ಕೈಗಳ ಕೊನೆ (ಬೆರಳು)ಗಳಿಂದ ಕೂಡಿದ,
**ಸ್ಮಿತೈಃ** = ಮಂದಹಾಸಭರಿತವಾದ,
**ಮುಖಾಬ್ಜೈಃ** = ಕಮಲದಂತಿರುವ ಮುಖವುಳ್ಳ,
**ಸುರೇಂದ್ರೈಃ** = ದೇವೋತ್ತಮರಿಂದ,
**ತದ್ಗೀತಾ** = ಆ ಗಂಧರ್ವರು ಹಾಡಿದ,
**ದಶಧಿಷಣ** = ಶ್ರೀಪೂರ್ಣಪ್ರಜ್ಞರೆಂಬ,
**ಆರ್ಯವರ್ಯ** = ಆಚಾರ್ಯ ಶ್ರೇಷ್ಠರ,
**ಚರ್ಯಾ** = ಚರಿತ್ರೆಯು,
**ಆಶ್ರಾವಿ** = ಕೇಳಲ್ಪಟ್ಟಿತು.

**ತಾತ್ಪರ್ಯ—** ದೇವತೆಗಳು ಆಚಾರ್ಯರಲ್ಲಿ ಅತ್ಯಂತ ದೃಢವಾದ ಭಕ್ತಿಯುಳ್ಳವರು. ಅವರು ಗಂಧರ್ವರು ಆಚಾರ್ಯರ ಚರಿತ್ರೆಯನ್ನು ಸಂಗೀತ ರೂಪದಲ್ಲಿ ಹಾಡುವಾಗ ಭಕ್ತಿ ವಿನಯಗಳಿಂದ ಅತಿಶಯವಾಗಿ ಬಾಗಿದ್ದರು. ತಮ್ಮ ಕೆಂಪಾದ ಕೈಬೆರಳುಗಳು ಮತ್ತು ಅಂಗೈಗಳಿಂದ ಕೂಡಿದ ಕೈಗಳನ್ನು ಕೆಲವರು ಶಿರಸ್ಸಿನಲ್ಲಿ ಜೋಡಿಸಿದ್ದರು ಮತ್ತು ಕೆಲವರು ಎದೆಯ ಸಮನಾಗಿ ಜೋಡಿಸಿದ್ದರು. ಮತ್ತೆ ಕೆಲವರು ಬಾಗಿ ಸೊಂಟದ ಸಮನಾಗಿ ಜೋಡಿಸಿದ್ದರು. ಅವರು ಸುಂದರವಾದ ಕಿರೀಟಗಳನ್ನು ಧರಿಸಿದ್ದರು ಹಾಗೂ ಸುಂದರವಾದ ತಲೆಗಳಿಂದಲೂ ಕೂಡಿ ಶೋಭಿಸುತ್ತಿದ್ದರು. ಅವರ ಮುಖಗಳಲ್ಲಿ ಪ್ರಸನ್ನತೆಯು ಮಂದಹಾಸವು ಸೂಸುತ್ತಿತ್ತು. ಕೂಡಿದ ಇಂದ್ರಾದಿ ದೇವತೆಗಳು ಜಗದ್ಗುರುಗಳಾದ ಆಚಾರ್ಯೋತ್ತಮರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಚರಿತ್ರೆಯನ್ನು ಸಂಗೀತ ರೂಪದಲ್ಲಿ ಗಂಧರ್ವರು ಹಾಡುತ್ತಿದ್ದಾಗ ಪರಮ ಭಕ್ತಿಯಿಂದ ಕೇಳಿದರು. ದೇವಶ್ರೇಷ್ಠರು ಗುರುಗಳ ಮಹಿಮೆಯನ್ನು ಭಕ್ತಿಯಿಂದ ಕೇಳುತ್ತಿದ್ದಾರೆ ಎಂದ ಮೇಲೆ ಮನುಷ್ಯರು ಭಕ್ತಿಯಿಂದ ಕೇಳಲೇಬೇಕು ಎಂದು ಸೂಚಿತವಾಯಿತು.

**ವಿಗ್ರಹ ಮತ್ತು ಕೋಶ—**

**ಆನಮ್ರೈಃ—** ಆ ಸಮಂತಾತ್ ನಮ್ರಾಃ ಆನಮ್ರಾಃ ತೈಃ ।

**ಸುಮುಕುಟಮೌಲಿಭಿಃ—** ಶೋಭನಂ ಮುಕುಟಂ ಯೇಷಾಂ ತೇ ಸುಮುಕುಟಾಃ, ಸುಮುಕುಟಾಃ ಮೌಲಯಃ ಯೇಷಾಂ ತೇ ಸುಮುಕುಟಮೌಲಯಃ, ತೈಃ । ಮಕುಟ ಮುಕುಟ ಎಂದು ಎರಡು ರೀತಿಯ ಶಬ್ದರೂಪವು ಇದೆ)(ಶೋಭನಾನಿ ಮುಕುಟಾನಿ ಮೌಲಯಶ್ಚ ಯೇಷಾಂ ತೇ ಎಂದೂ ವಿಗ್ರಹ ಮಾಡಬಹುದು)

**ಕರಾಗ್ರೈಃ—** ಕರಾಣಾಂ ಅಗ್ರಾಣಿ ಕರಾಗ್ರಾಣಿ ತೈಃ ।

**ಆತಾಮ್ರೈಃ—** ಆ ಸಮಂತಾತ್ ತಾಮ್ರಾಣಿ ಆತಾಮ್ರಾಣಿ ತೈಃ ।

**ಮುಖಾಬ್ಜೈಃ—** ಮುಖಾನಿ ಅಬ್ಜಾನೀವ ಯೇಷಾಂ ತೇ ಮುಖಾಬ್ಜಾಃ ತೈಃ ।

**ಸ್ಥಿರತರಭಕ್ತಿಭಿಃ—** ಅತಿಶಯೇನ ಸ್ಥಿರಾ ಸ್ಥಿರತರಾ ಸ್ಥಿರತರಾ ಭಕ್ತಿಃ ಯೇಷಾಂ ತೇ ಸ್ಥಿರತರಭಕ್ತಯಃ ತೈಃ ।

**ಸುರೇಂದ್ರೈಃ—** ಸುರಾಣಾಂ ಇಂದ್ರಾಃ ಸುರೇಂದ್ರಾಃ ತೈಃ ।

**ತದ್ಗೀತಾದಶಧಿಷಣಾರ್ಯವರ್ಯಚರ್ಯಾ—** ತೈಃ ಗೀತಾ ತದ್ಗೀತಾ ದಶ (ಪೂರ್ಣಾಃ)ಧಿಷಣಾಃ ಯಸ್ಯಸಃ ದಶಧಿಷಣಃ, ಆರ್ಯೇಷು ವರ್ಯಃ ಆರ್ಯವರ್ಯಃ, ದಶಧಿಷಣಃ ಇತಿ ಆರ್ಯವರ್ಯಃ ದಶಧಿಷಣಾರ್ಯವರ್ಯಃ, ದಶಧಿಷಣಾರ್ಯವರ್ಯಸ್ಯ ಚರ್ಯಾ ದಶಧಿಷಣಾರ್ಯವರ್ಯ-ಚರ್ಯಾ ।

**ಮುಖಾಬ್ಜೈಃ—** ಮುಖಾನಿ ಅಬ್ಜಾನೀವ ಮುಖಾಬ್ಜಾನಿ ತೈಃ ಮುಖಾಬ್ಜೈಃ ।

**ಉಪಲಕ್ಷಿತೈಃ—** ಕಮಲದಂತಹ ಮುಖಗಳಿಂದ ಕೂಡಿದ ಹಿಂದೆ ಹೇಳಿದ ವಿಗ್ರಹವಲ್ಲದೆ ಇದು ಎರಡನೆಯ ವಿಗ್ರಹ. ಈ ಎರಡು ಕಡೆಗಳಲ್ಲಿಯೂ 'ಇತ್ಥಂಭೂತಲಕ್ಷಣೇ' ಎಂಬ ಸೂತ್ರದಿಂದ ತೃತೀಯಾ ವಿಭಕ್ತಿಯು ಬಂದಿದೆ. 'ಜಟಾಭಿಃ ತಾಪಸಃ' ಜಟೆಗಳಿಂದ ತಿಳಿಸಲ್ಪಟ್ಟ ದೇವಶ್ರೇಷ್ಠತ್ವ ಉಳ್ಳ ಇಂದ್ರಾದಿಗಳಿಂದ ಎಂದು ಅರ್ಥ. ಹಾಗೆಯೇ ಕಮಲದಂತಿರುವ ಮುಖಗಳಿಂದ ತಿಳಿಸಲ್ಪಟ್ಟ ದೇವಶ್ರೇಷ್ಠತ್ವ ಉಳ್ಳವರಿಂದ ಎಂದೂ ಅರ್ಥ. ಮುಕುಟ = ಕಿರೀಟ, 'ಅಥ ಮುಕುಟಂ ಕಿರೀಟಂ ಪುಂನಪುಂಸಕಂ' ಅಮರ, ಮೌಲಿ = ತಲೆ, 'ಚೂಡಾ ಕಿರೀಟಂ ಕೇಶಾಶ್ಚ ಸಂಯತಾಃ ಮೌಲಯಸ ಯಃ' ಅಮರ ।

**ಕ್ರಿಯಾಪದ—** ಆಶ್ರಾವಿ - ಶ್ರು ಶ್ರವಣೇ ಸಕರ್ಮಕ, ಅನಿಟ್, ಪರ, ಕರ್ಮಣಿ, ಲುಙ್ ಆತ್ಮ, ಪ್ರಥಮಪುರುಷ ಏಕವಚನ ।

ಆಶ್ರಾವಿ ಆಶ್ರಾವಿಷಾತಾಂ ಆಶ್ರಾವಿಷತ, ಆಶ್ರಾವಿಷ್ಠಾಃ ಆಶ್ರಾವಿಷಾಥಾಂ ಆಶ್ರಾವಿಢ್ವಂ ಧ್ವಂ, ಆಶ್ರೋಢ್ವಂ, ಆಶ್ರಾವಿ ಆಶ್ರವಿಷ್ವಹಿ ಆಶ್ರಾವಿಷ್ಮಹಿ ।

**ಪ್ರಯೋಗ—** ಸ್ಥಿರತರಭಕ್ತಯಃ ಆನಮ್ರಾಃ ಸುಮುಕುಟಮೌಲಯಃ ಪ್ರತಿಕಲಿತೈಃ ಆತಾಮ್ರೈಃ ಕರಾಗ್ರೈಃ (ಉಪಲಕ್ಷಿತಾಃ) ಸ್ಮಿತಾಃ ಮುಖಾಬ್ಜೈಃ (ಉಪಲಿಕ್ಷಿತಾಃ ಅಥವಾ ಸ್ಮಿತೈಃ ಮುಖಾಬ್ಜೈಃ ಉಪಲಕ್ಷಿತಾಃ) ಸುರೇಂದ್ರಾಃ ತದ್ಗೀತಾಂ ದಶಧಿಷಣಾರ್ಯ ವರ್ಯಚರ್ಯಾ ಆಶ್ರೌಷುಃ ।

★★★

**ಅವತಾರಿಕಾ—** ಹೀಗೆ ಆಚಾರ್ಯರ ಅದ್ಭುತ ಚರಿತ್ರೆಯನ್ನು ಕೇಳಿ ಅವರನ್ನು ಸಾಕ್ಷಾತ್ತಾಗಿ ನೋಡಲು ದೇವತೆಗಳೂ, ಮುನಿಗಳೂ ಬಂದರು ಎಂದು ಹೇಳುತ್ತಾರೆ.

**ಗೀರ್ವಾಣೈರ್ವಿಜಯಮಹೋತ್ಸವಸ್ಯ ಪೂಜಾಂ**
**ಕುರ್ವಾಣೈರವಿರಲಸಂವಿದಸ್ತದಾನೀಮ್ ।**
**ವಿಸ್ಮೇರೈರ್ಮುನಿನಿಕರೋಪದೇವಯುಕ್ತೈಃ**
**ಸುಸ್ಮೇರೈರಥ ತಮವೇಕ್ಷಿತುಂ ಪ್ರಜಗ್ಮೇ ॥ 52 ॥**

**ಪದಚ್ಛೇದ—** ಗೀರ್ವಾಣೈಃ, ವಿಜಯಮಹೋತ್ಸವಸ್ಯ, ಪೂಜಾಂ, ಕುರ್ವಾಣೈಃ, ಅವಿರಲಸಂವಿದಃ, ತದಾನೀಂ, ವಿಸ್ಮೇರೈಃ, ಮುನಿನಿಕರೋಪದೇವಯುಕ್ತೈಃ, ಸುಸ್ಮೇರೈಃ, ಅಥ, ತಂ, ಅವೇಕ್ಷಿತುಂ, ಪ್ರಜಗ್ಮೇ ।

**ಅನ್ವಯ—** ಅಥ, ತದಾನೀಂ, ಅವಿರಲಸಂವಿದಃ, ವಿಜಯಮಹೋತ್ಸವಸ್ಯ, ಪೂಜಾಂ, ಕುರ್ವಾಣೈಃ, ಸುಸ್ಮೇರೈಃ, ವಿಸ್ಮೇರೈಃ, ಮುನಿನಿಕರೋಪದೇವಯುಕ್ತೈಃ, ಗೀರ್ವಾಣೈಃ, ತಂ, ಅವೇಕ್ಷಿತುಂ, ಪ್ರಜಗ್ಮೇ ।

**ಅನ್ವಯಾರ್ಥ—**

**ಅಥ** = ಗಂರ್ಧವರ ಗಾನವನ್ನು ಕೇಳಿದ ಅನಂತರ,

**ತದಾನೀಂ** = ಆ ಸಮಯದಲ್ಲಿಯೇ,

**ಅವರಲಸಂವಿದಃ** = ಶ್ರೀಪೂರ್ಣಪ್ರಜ್ಞಾಚಾರ್ಯರ,

**ವಿಜಯಮಹೋತ್ಸವಸ್ಯ** = ನಾನಾವಾದಿಗಳ ಪರಾಜಯ ಪೂರ್ವಕವಾದ ವಿಜಯವೆಂಬ ಶ್ರೇಷ್ಠವಾದ ಉತ್ಸವದ,

**ಪೂಜಾಂ** = ಸನ್ಮಾನವನ್ನು,

**ಕುರ್ವಾಣೈಃ** = ಮಾಡುತ್ತಿರುವ,

**ಸುಸ್ಮೇರೈಃ** = ಮಂದಹಾಸದಿಂದ ಕೂಡಿರುವ,

**ವಿಸ್ಮೇರೈಃ** = ಆಶ್ಚರ್ಯಭರಿತವಾದ,

**ಮುನಿನಿಕರಉಪದೇವಯುಕ್ತೈಃ** = ಋಷಿಗಳ ಸಮೂಹವು, ಗಂಧರ್ವರು ಕೂಡಿದ,

**ಗೀರ್ವಾಣೈಃ** = ದೇವತೆಗಳಿಂದ,

**ತಂ** = ಆ ಮಧ್ವಾಚಾರ್ಯರನ್ನು,

**ಅವೇಕ್ಷಿತುಂ** = ನೋಡುವುದಕ್ಕೆ,

**ಪ್ರಜಗ್ಮೇ** = ಹೋಗೋಣವಾಯಿತು.

**ತಾತ್ಪರ್ಯ—** ದೇವತೆಗಳು ಗಂಧರ್ವರು ದಿವ್ಯಗಾನವನ್ನು ಕೇಳಿದರು. ಆಚಾರ್ಯರ ಮಹಿಮೆಗಳನ್ನು ಕೇಳಿ ದೇವತೆಗಳೂ ಪರಮಾಶ್ಚರ್ಯಭರಿತರಾದರು. ಇಂತಹ ಗುರುಗಳನ್ನು ಪಡೆದ ನಾವು ಧನ್ಯರೆಂದು ಅವರ ಮುಖದಲ್ಲಿ ಸುಂದರವಾದ ಮಂದಹಾಸವು ಮಿನುಗುತ್ತಿತ್ತು. ಆಚಾರ್ಯರು ಅನೇಕ ವಾದಿಗಳನ್ನು ಪರಾಜಯಗೊಳಿಸಿ ವಿಜಯ-ಗಳಿಂದ ಈ ದೊಡ್ಡ ಉತ್ಸವವನ್ನು ನಾವು ಸನ್ಮಾನಿಸಬೇಕು, ಆಚಾರ್ಯರನ್ನು ಗೌರವಿಸಬೇಕು ಎಂದು ಆಲೋಚಿಸಿ ದೇವಮುನಿಗಳು ಮತ್ತು ಗಂಧರ್ವರ ಸಹಿತವಾಗಿ ಆಚಾರ್ಯರನ್ನು ನೋಡಲು ದೇವತೆಗಳು ಹೊರಟರು. ಶ್ರೀಮುಖ್ಯಪ್ರಾಣದೇವರು ಪರಮಾತ್ಮನ ಆಜ್ಞೆಯನ್ನು ಶಿರೋಮಣಿಯಂತೆ ಶಿರಸಾ ವಹಿಸಿ ತಮ್ಮ ಪ್ರಾರ್ಥನೆಯನ್ನು ಹಾರಾವಲಿಯಂತೆ ಹೃದಯದಲ್ಲಿ ಧರಿಸಿ ಶ್ರೀಮಧ್ವಾಚಾರ್ಯರಾಗಿ ಅವತರಿಸಿ ದುರ್ವಾದಿಗಳನ್ನು ಪರಾಜಯಗೊಳಿಸಿ ಸಜ್ಜನರನ್ನು ಉದ್ಧರಿಸಿ ಭೂಮಿಭೂಷಣರಾಗಿ ವಿರಾಜಿಸುತ್ತಿರುವುದನ್ನು ನೋಡಿ ಅವರನ್ನು ಗೌರವಿಸಲು ದೇವತೆಗಳು ಭೂಲೋಕದ ಸಮೀಪಕ್ಕೆ ಬಂದರು ಎಂದು ಭಾವ.

**ವಿಗ್ರಹ—**

**ವಿಜಯಮಹೋತ್ಸವಸ್ಯ—** ಮಹಾಂಶ್ಚ ಅಸೌ ಉತ್ಸವಶ್ಚ ಮಹೋತ್ಸವಃ, ವಿಜಯಃ ಏವ ಮಹೋತ್ಸವಃ ವಿಜಯಮಹೋತ್ಸವಃ ತಸ್ಯ ।

**ಅವಿರಲಸಂವಿದಃ—** ನ ವಿರಲಾ ಅವಿರಲಾ, ಅವಿರಲಾ ಸಂವಿತ್ ಯಸ್ಯ ಸಃ, ಅವಿರಲಸಂವಿತ್ ತಸ್ಯ ।

**ಮುನಿನಿಕರೋಪದೇವಯುಕ್ತೈಃ—** ಮುನೀನಾಂ ನಿಕರಃ ಮುನಿನಿಕರಃ, ಮುನಿನಿಕರಶ್ಚ ಉಪದೇವಾಶ್ಚ ಮುನಿನಿಕರೂಪದೇವಾಃ, ಮುನಿನಿಕರೋಪದೇವೈಃ ಯುಕ್ತಾಃ, ಮುನಿನಿಕರೋಪದೇವಯುಕ್ತಾಃ ತೈಃ ।

**ಸುಸ್ಮೇರೈಃ—** ಸು ಅತಿಶಯೇನ ಸ್ಮೇರಾಃ ಸುಸ್ಮೇರಾಃ ತೈಃ ।

**ಕ್ರಿಯಾಪದ—** ಪ್ರಜಗ್ಮೇ - ಪ್ರ+ಜಗ್ಮೇ ಪ್ರ ಉಪಸರ್ಗ ಗಮ್ಲೃ ಗತೌಭೂತ ಅನದ್ಯತನ ಪರೋಕ್ಷೇ ಲಿಟ್ ಭಾವೇ ಪ್ರಯೋಗವಾದುದರಿಂದ ಕ್ರಿಯಾಪದವನ್ನು ಪ್ರಥಮಪುರುಷ ಏಕವಚನದಲ್ಲಿ ಮಾತ್ರ ಹೇಳಬೇಕು.

**ಪ್ರಯೋಗ—** ಅಥ ತದಾನೀಂ ಅವಿರಲಸಂವಿದಃ ವಿಜಯಮಹೋತ್ಸವಸ್ಯ ಪೂಜಾಂ ಕುರ್ವಾಣಾಃ ಸುಸ್ಮೇರಾಃ ವಿಸ್ಮೇರಾಃ ಮುನಿನಿಕರೋಪದೇವಯುಕ್ತಾಃ ಗೀರ್ವಾಣಾಃ ತಂ ಅವೇಕ್ಷಿತುಂ ಪ್ರಜಗ್ಮುಃ ।

★ ★ ★

**ಅವತಾರಿಕಾ—** ಆ ದೇವಾದಿಗಳು ಆಚಾರ್ಯರನ್ನು ನೋಡಲು ಬಂದ ಕ್ರಮವನ್ನು ವರ್ಣಿಸುತ್ತಾರೆ.

**ಆದರ್ಶಂ ಗುಣಗಣದರ್ಶನೇ ಮುರಾರೇಃ**
**ಸಚ್ಛಾಸ್ತ್ರಂ ರಚಿತಮನೇನ ವರ್ಣಯಂತಃ ।**
**ಪ್ರದ್ಯೋತ್ಯೈರುಡುಪದವೀಂ ಪ್ರಕಾಶಯಂತಃ**
**ಪ್ರೈಕ್ಷಂತ ಪ್ರಚುರಮನೋವಿಲಾಸಮೇತೇ ॥ 53 ॥**

**ಪದಚ್ಛೇದ—** ಆದರ್ಶಂ, ಗುಣಗಣದರ್ಶನೇ, ಮುರಾರೇಃ, ಸಚ್ಛಾಸ್ತ್ರಂ, ರಚಿತಂ, ಅನೇನ, ವರ್ಣಯಂತಃ, ಪ್ರದ್ಯೋತ್ಯೈಃ, ಉಡುಪದವೀಂ, ಪ್ರಕಾಶಯಂತಃ, ಪ್ರೈಕ್ಷಂತ, ಪ್ರಚುರಮನೋವಿಲಾಸಮ್, ಏತೇ ।

**ಅನ್ವಯ**— ಮುರಾರೇಃ, ಗುಣಗಣದರ್ಶನೇ, ಆದರ್ಶಂ, ಅನೇನ, ರಚಿತಂ, ಸಚ್ಛಾಸ್ತ್ರಂ, ವರ್ಣಯಂತಃ, ಪ್ರದ್ಯೋತೈಃ, ಉಡುಪದವೀಂ, ಪ್ರಕಾಶಯಂತಃ, ಏತೇ, ಪ್ರಚುರಮನೋವಿಲಾಸಂ, ಪ್ರೈಕ್ಷಂತ ।

**ಅನ್ವಯಾರ್ಥ**—

**ಮುರಾರೇಃ** = ಮುರಾಸುರನ ಶತ್ರುವಾದ ಶ್ರೀಹರಿಯ,

**ಗುಣಗಣದರ್ಶನೇ** = ಸ್ವಾತಂತ್ರ್ಯಾದಿ ಅನಂತ ಗುಣಗಳ ಸಮೂಹವನ್ನು ನೋಡುವ ವಿಷಯದಲ್ಲಿ,

**ಆದರ್ಶಂ** = ಕನ್ನಡಿಯಾದ,

**ಅನೇನ** = ಈ ಮಧ್ವಾಚಾರ್ಯರಿಂದ,

**ರಚಿತಂ** = ವಿರಚಿಸಲ್ಪಟ್ಟ,

**ಸಚ್ಛಾಸ್ತ್ರಂ** = ಉತ್ತಮವಾದ ಶಾಸ್ತ್ರವನ್ನು,

**ವರ್ಣಯಂತಃ** = ಹೊಗಳುತ್ತಾ,

**ಪ್ರದ್ಯೋತೈಃ** = ತಮ್ಮ ದೇಹದ ಉತ್ತಮ ಪ್ರಕಾಶಗಳಿಂದ,

**ಉಡುಪದವೀಂ** = ನಕ್ಷತ್ರಗಳ ದಾರಿಯಾದ ಆಕಾಶವನ್ನು,

**ಪ್ರಕಾಶಯಂತಃ** = ಬೆಳಗಿಸುತ್ತಾ,

**ಏತೇ** = ಈ ದೇವತೆಗಳು,

**ಪ್ರಚುರಮನೋವಿಲಾಸಂ** = ಸರ್ವ ವಿಷಯಕವಾದ ಮನೋವ್ಯಾಪಾರವುಳ್ಳ (ಸರ್ವಜ್ಞರಾದ) ಶ್ರೀಮಧ್ವಾಚಾರ್ಯರನ್ನು,

**ಪ್ರೈಕ್ಷಂತ** = ನೋಡಿದರು.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ಶ್ರೀಕೃಷ್ಣನ ಸ್ವಾತಂತ್ರ್ಯ ಸರ್ವಜ್ಞತ್ವ ಶುದ್ಧಾನಂದಾದಿ ಸಮಸ್ತ ಕಲ್ಯಾಣ-ಗುಣಗಳನ್ನು ತಿಳಿಯಲು ಕನ್ನಡಿಯಂತಿರುವ ನಿರ್ದೋಷವಾದ ಶಾಸ್ತ್ರಗಳನ್ನು ರಚಿಸಿದ್ದರು. ಆ ಶಾಸ್ತ್ರವನ್ನು ಅಲ್ಲಿ ಪ್ರತಿಪಾದಿತವಾದ ಸಿದ್ಧಾಂತವನ್ನು ದೇವತೆಗಳು ವರ್ಣಿಸುತ್ತಾ ಬರುತ್ತಿದ್ದರು. ಅವರು ಬರುವಾಗ ಅವರ ದೇಹದ ಕಾಂತಿಗಳಿಂದ ನಕ್ಷತ್ರ ಮಾರ್ಗವು ಪ್ರಕಾಶಮಾನವಾಗುತ್ತಿತ್ತು. ಇಂತಹ ಸನ್ನಿವೇಶದಲ್ಲಿ ಆಚಾರ್ಯರ ಚರಿತ್ರೆಯನ್ನು ಕೇಳಿದರು. ಆಚಾರ್ಯರನ್ನು ಕಂಡರು.

**ವಿಗ್ರಹ ಮತ್ತು ಕೋಶ**—

**ಆದರ್ಶ**— ಕನ್ನಡಿ, 'ದರ್ಪಣೇ ಮುಕುರಾದರ್ಶೌ' ಅಮರ ।

**ಗುಣಗಣದರ್ಶನೇ**— ಗುಣಾನಾಂ ಗಣಃ ಗುಣಗುಣಃ, ಗುಣಗಣಸ್ಯ ದರ್ಶನಂ ಗುಣಗಣದರ್ಶನಂ ತಸ್ಮಿನ್ ।

**ಮುರಾರೇಃ**— ಮುರಸ್ಯ ಅರಿಃ ಮುರಾರಿಃ ।

**ಸಚ್ಛಾಸ್ತ್ರಂ**— ಸಚ್ಚ ತತ್ ಶಾಸ್ತ್ರಂ ಸಚ್ಛಾಸ್ತ್ರಂ ತತ್ ।

**ಪ್ರದ್ಯೋತೈಃ**— ಹೆಚ್ಚಾದ ಪ್ರಕಾಶಗಳಿಂದ, 'ಪ್ರಕಾಶೋ ದ್ಯೋತ ಆತಪಃ' ಅಮರ ।

**ಉಡುಪದವೀಂ**— ಉಡೂನಾಂ ಪದವೀ, ಉಡುಪದವೀ ತಾಂ । ಉಡು = ನಕ್ಷತ್ರ, 'ನಕ್ಷತ್ರಮೃಕ್ಷಂ ಭಂ' 'ತಾರಾಪ್ಯುಡು ಸ್ತ್ರೀಯಾಂ' ಅಮರ ।

**ಪ್ರಚುರಮನೋವಿಲಾಸಂ**— ಪ್ರಚುರಃ ಮನಸಃ ವಿಲಾಸಃ ಯಸ್ಯ ಸಃ ಪ್ರಚುರಮನೋವಿಲಾಸಃ, ತಂ । (ಪ್ರಚರಂ ಮನಃ ಯಸ್ಯ ಸಃ ಪ್ರಚುರಮನಾಃ, ಪ್ರಚುರಮನಸಃ ವಿಲಾಸಃ ಪ್ರಚುರಮನೋವಿಲಾಸಃ ತಂ)

**ಕ್ರಿಯಾಪದ—** ಪ್ರೈಕ್ಷ್ಯಂತ - ಪ್ರ+ಈಕ್ಷದರ್ಶನೇ ಲ ಪ್ರ ಉಪಸರ್ಗ ।

ಐಕ್ಷಂತ ಐಕ್ಷೇತಾಂ ಐಕ್ಷಂತ, ಇತ್ಯಾದಿ ।

**ಪ್ರಯೋಗ—** ಮುರಾರೇಃ ಗುಣಗಣದರ್ಶನೇ ಆದರ್ಶಂ ಅನೇನ ರಚಿತಂ ಸಚ್ಛಾಸ್ತ್ರಂ ವರ್ಣಯದ್ಭಿಃ ಪ್ರದ್ಯೋತೈಃ ಉಡಪದವೀಂ ಪ್ರಕಾಶಯದ್ಭಿಃ (ಪ್ರಸಾದಯದ್ಭಿಃ)ಏತೈಃ ಪ್ರಚುರಮನೋವಿಲಾಸಃ ಪ್ರೈಕ್ಷ್ಯಂತ ।

★ ★ ★

**ಅವತಾರಿಕಾ—** ಆ ದೇವಾನುದೇವತೆಗಳು ಬಂದು ಆಚಾರ್ಯರನ್ನು ವಂದಿಸಿದರೆಂದು ಹೇಳುತ್ತಾರೆ.

**ನಾಕೀಂದ್ರಾಸ್ತಮವನಿಭಾಗಮಾವಸಂತಂ**
**ಸುಶ್ಲೋಕೈರಪಿ ಭುವನಾನಿ ಭೂಷಯಂತಮ್ ।**
**ನೇಮುಃ ಖಾದುಪನಿಷದಂ ತದೈತರೇಯೀಂ**
**ವ್ಯಾಖ್ಯಾಂತಂ ವಿವಿಧವಿಶಿಷ್ಟಶಿಷ್ಯಮಧ್ಯೇ ॥ 54 ॥**

**ಪದಚ್ಛೇದ—** ನಾಕೀಂದ್ರಾಃ, ತಂ, ಅವನಿಭಾಗಂ, ಆವಸಂತಂ, ಸುಶ್ಲೋಕೈಃ, ಅಪಿ, ಭುವನಾನಿ, ಭೂಷಯಂತಂ, ನೇಮುಃ, ಖಾತ್, ಉಪನಿಷದಂ, ತದಾ, ಐತರೇಯೀಂ, ವ್ಯಾಖ್ಯಾಂತಂ, ವಿವಿಧವಿಶಿಷ್ಟಶಿಷ್ಯಮಧ್ಯೇ ।

**ಅನ್ವಯ—** ನಾಕೀಂದ್ರಾಃ, ಅವನಿಭಾಗಂ, ಆವಸಂತಂ, ಸುಶ್ಲೋಕೈಃ, ಭುವನಾನಿ, ಭೂಷಯಂತಂ, ಅಪಿ, ವಿವಿಧ ವಿಶಿಷ್ಟಶಿಷ್ಯಮಧ್ಯೇ, ತದಾ, ಐತರೇಯೀಂ, ಉಪನಿಷದಂ, ವ್ಯಾಖ್ಯಾಂತಂ, ತಂ, ಖಾತ್, ನೇಮುಃ ।

**ಅನ್ವಯಾರ್ಥ—**

**ನಾಕೀಂದ್ರಾಃ** = ದೇವಶ್ರೇಷ್ಠರು,
**ಅವನಿಭಾಗಂ** = ಭೂಮಿಯ ಒಂದು ಪ್ರದೇಶದಲ್ಲಿ,
**ಆವಸಂತಂ** = ವಾಸಮಾಡುತ್ತಿರುವ,
**ಸುಶ್ಲೋಕೈಃ** = ಉತ್ತಮವಾದ ಕೀರ್ತಿಗಳಿಂದ,
**ಭುವನಾನಿ** = ಲೋಕಗಳನ್ನು,
**ಭೂಷಯಂತಂ** = ಅಲಂಕರಿಸುತ್ತಿರುವ,
**ಅಪಿ** = ಮತ್ತು,
**ವಿವಿಧವಿಶಿಷ್ಟಶಿಷ್ಯಮಧ್ಯೇ** = ಬ್ರಹ್ಮಚಾರಿಗಳೇ ಮೊದಲಾದ ಜ್ಞಾನ ಭಕ್ತ್ಯಾದಿಗಳಿಂದ ಉತ್ತಮರಾದ ಶಿಷ್ಯರ ಮಧ್ಯದಲ್ಲಿ
**ತದಾ** = ಆಗ
**ಐತರೇಯೀಂ** = ಐತರೇಯ ಎಂಬ,
**ಉಪನಿಷದಂ** = ಉಪನಿಷತ್ತನ್ನು,
**ವ್ಯಾಖ್ಯಾಂತಂ** = ಪ್ರವಚನ ಮಾಡುತ್ತಿರುವ,
**ತಂ** = ಆ ಶ್ರೀಮಧ್ವಾಚಾರ್ಯರನ್ನು,
**ಖಾತ್** = ಆಕಾಶದಲ್ಲಿ
**ನೇಮುಃ** = ನಮಸ್ಕಾರ ಮಾಡಿದರು.

**ತಾತ್ಪರ್ಯ**— ಸಕಲ ಜೀವರ ಶ್ವಾಸ ನಿಯಾಮಕರಾಗಿ ಜೀವನಪ್ರದರಾದ ಶ್ರೀಮುಖ್ಯಪ್ರಾಣದೇವರು ಜ್ಞಾನ ಪ್ರತಿಷ್ಠಾಪನೆಗಾಗಿ ಶ್ರೀಮಧ್ವರೆಂಬ ಹೆಸರಿನಿಂದ ಅವತರಿಸಿ ಈ ಭೂಮಂಡಲದ ಒಂದು ಭಾಗದಲ್ಲಿ ವಾಸಿಸುತ್ತಿದ್ದರು. ಅವರು ತಮ್ಮ ಶ್ರೇಷ್ಠವಾದ ಕೀರ್ತಿಸಮುದಾಯದಿಂದ ಹದಿನಾಲ್ಕು ಲೋಕಗಳಲ್ಲಿಯೂ ಪ್ರಸಿದ್ಧರಾಗಿ, ತ್ರೈಲೋಕ್ಯ ಭೂಷಣರಾಗಿದ್ದರು. ಇಂತಹ ಶ್ರೀಮುಖ್ಯಪ್ರಾಣದೇವರ ಅವತಾರರಾದ ಶ್ರೀಮಧ್ವಾಚಾರ್ಯರನ್ನು ಸಂದರ್ಶಿಸಿ, ಪೂಜಿಸಿ, ಗೌರವಿಸಲು ದೇವತೆಗಳು ಭೂತಳದ ಕಡೆಗೆ ಬಂದಾಗ ಆಚಾರ್ಯರು, ಬ್ರಹ್ಮಚಾರಿ, ಗೃಹಸ್ಥ ಯತಿ ಎಂಬ ನಾನಾ ಬಗೆಯ ಅನೇಕ ಶಿಷ್ಯರ ಮಧ್ಯದಲ್ಲಿ ಕುಳಿತಿದ್ದರು. ವೈರಾಗ್ಯ, ಭಕ್ತಿ, ಜ್ಞಾನಾದಿಗಳಿಂದ ಕೂಡಿದ ಆ ಶಿಷ್ಯರಿಗೆ ಐತೇರೇಯ ಉಪನಿಷತ್ತಿನ ಪ್ರವಚನ ಮಾಡುತ್ತಿದ್ದರು. ಇಂತಹ ಆಚಾರ್ಯರನ್ನು ಕಂಡು ಆ ದೇವಶ್ರೇಷ್ಠರು ಆಕಾಶದಲ್ಲಿಯೇ ನಿಂತು ನಮಸ್ಕರಿಸಿದರು.

**ವಿಗ್ರಹ ಮತ್ತು ಕೋಶ**—

**ನಾಕೇಂದ್ರಾಃ**— ನಾಕಃ ಏಷಾಮಸ್ತೀತಿ ನಾಕಿನಃ, ನಾಕಿನಾಂ ಇಂದ್ರಾಃ ನಾಕೇಂದ್ರಾಃ ।

**ಅವನಿಭಾಗಂ**— ಅವನೇ ಭಾಗಃ ಅವನಿಭಾಗಃ ತಂ ।

**ಸುಶ್ಲೋಕೈಃ**— ಶೋಭನಾಶ್ಚತೇ ಶ್ಲೋಕಾಶ್ಚ ಸುಶ್ಲೋಕಾಃ ತೈಃ । ಶ್ಲೋಕ = ಕೀರ್ತಿ, 'ಪದ್ಯೇ ಯಶಸಿ ಚ ಶ್ಲೋಕಃ' ಅಮರ. 'ಖಾತ್ ನೇಮುಃ' ಎಂಬಲ್ಲಿ 'ಖೇ ಸ್ಥಿತ್ವಾ ನೇಮುಃ' ಆಕಾಶದಲ್ಲಿ ನಿಂತು ನಮಿಸಿದರು ಎಂದು ಸ್ಥಿತ್ವಾ ಎಂಬ ಕ್ತ್ವಾ ಪ್ರತ್ಯಯಾಂತ ಕ್ರಿಯೆಯನ್ನು ಅಧ್ಯಾಹಾರ ಮಾಡಿಕೊಂಡು ಅದರ ಲೋಪವಾದಾಗ ಅಧಿಕರಣಕ್ಕೆ ಪಂಚಮೀ ವಿಭಕ್ತಿಯು ಬಂದಿದೆ ಎಂದು ತಿಳಿಯಬೇಕು. ಇದಕ್ಕೆ ವ್ಯಾಕರಣ ಪ್ರಮಾಣ 'ಲ್ಯಬ್ ಲೋಪೇ ಕರ್ಮಣ್ಯಧಿಕಣೇ ಚ' (ವಾರ್ತಿಕ 1474-1475) ಲ್ಯಂಬತಕ್ಕೆ ಲೋಪಮಾಡಿದಾಗ ಲ್ಯಂಬಂತ ಕ್ರಿಯೆಯು ಕಾಣಸದಿದ್ದಾಗ ಗಮ್ಯಮಾನವಾದ ಆ ಲ್ಯಬಂತಕ್ರಿಯೆಯ ಕರ್ಮ ಮತ್ತು ಅಧಿ ಕರಣಕ್ಕೆ ಪಂಚಮೀಯು ಬರುತ್ತದೆ ಎಂದು ಆ ವಾರ್ತಿಕ ಅರ್ಥ. 'ಪ್ರಾಸಾದಾತ್ ಪ್ರೇಕ್ಷತೇ, ಆಸನಾತ್ ಪ್ರೇಕ್ಷತೇ, ಪ್ರಾಸಾದಂ ಆರುಹ್ಯ ಆಸನೇ ಉಪವಿಶ್ಯ ಪ್ರೇಕ್ಷತೇ, ಮಹಡಿಯನ್ನು ಹತ್ತಿ ನೋಡುತ್ತಾನೆ ಆಸನದಲ್ಲಿ ಕುಳಿತು ನೋಡುತ್ತಾನೆ ಎಂಬ ಅರ್ಥದಲ್ಲಿ ಸಂಸ್ಕೃತಭಾಷೆಯಲ್ಲಿ ಪ್ರಾಸಾದ, ಆಸನ, ಎಂಬ ಪದಗಳಿಗೆ ಪಂಚಮಿ ಬಂದಿದೆ ಇಲ್ಲಿ ಲ್ಯಪ್ ಎಂದು ಹೇಳಿದುದು ಉಪಲಕ್ಷಣವಾದುದರಿಂದ ಕ್ತ್ವಾ ಪ್ರಯತ್ಯಯಾಂತ ಪದವನ್ನು ಲೋಪಮಾಡಿದಾಗ ಇಲ್ಲಿ ಖೇ ಸ್ಥಿತ್ವಾ ನೇಮುಃ ಎಂಬಲ್ಲಿ ಖಾತ್ ನೇಮುಃ ಎಂದು ಪಂಚಮೀ ವಿಭಕ್ತಿಯು ಬಂದಿದೆ. ಖ = ಆಕಾಶ, 'ನಭೋಽಂತರಿಕ್ಷಂ ಗಗನಂ ಅನಂತಂ ಸುರವರ್ತ್ಮ ಖಂ' ಅಮರ.

**ವಿವಿಧವಿಶಿಷ್ಟಶಿಷ್ಯಮಧ್ಯೇ**— ವಿಶಿಷ್ಟಾಶ್ಚ ತೇ ಶಿಷ್ಯಾಶ್ಚ ವಿಶಿಷ್ಟಶಿಷ್ಯಾಃ, ವಿವಿಧಾಶ್ಚ ತೇ ವಿಶಿಷ್ಟಶಿಷ್ಯಾಶ್ಚ ವಿವಿಧಶಿಷ್ಟಶಿಷ್ಯಾಃ, ವಿವಿಧವಿಶಿಷ್ಟಶಿಷ್ಯಾಣಾಂ ಮಧ್ಯಂ ವಿವಿಧವಿಶಿಷ್ಟಶಿಷ್ಯಮಧ್ಯಂ ತಸ್ಮಿನ್ । ಅವನಿಭಾಗಂ ಅವಸಂತಂ ಎಂಬಲ್ಲಿ 'ಉಪಾನ್ವಧ್ಯಾಙವಸಃ'(1.4.48) ಎಂಬ ಸೂತ್ರದಿಂದ ಅಧಿಕಣಕ್ಕೆ ಕರ್ಮಸಂಜ್ಞೆಯು ಬಂದು ದ್ವಿತೀಯಾ ವಿಭಕ್ತಿಯು ಬಂದಿದೆ.

**ಕ್ರಿಯಾಪದ**— ನೇಮುಃ - ಣಮು ಪ್ರಹ್ವತ್ವೇ ಶಬ್ದೇ ಚ ಸಕ. ಅನಿ. ಪರ. ಲಿಟ್ ।

ನನಾಮ ನೇಮತುಃ ನೇಮುಃ ಇತ್ಯಾದಿ ।

**ಪ್ರಯೋಗ**— ನಾಕೇಂದ್ರೈಃ ಅವನಿಭಾಗಂ ಆವಸನ್ ಸುಶ್ಲೋಕೈಃ ಭುವನಾನಿ ಭೂಷಯನ್ ಅಪಿ ವಿವಿಧಶಿಶಿಷ್ಟಶಿಷ್ಯ ಮಧ್ಯೇ ತದಾ ಐತರೇಯೀಂ ಉಪನಿಷದಂ ವ್ಯಾಖ್ಯಾನ್ ಸಃ ಖಾತ್ ನೇಮೇ ।

★ ★ ★

**ಅವತಾರಿಕಾ**— ದಿವ್ಯಲಕ್ಷಣಸಂಪನ್ನರಾದ ಆಚಾರ್ಯರನ್ನು ದೇವತೆಗಳು ಆಕಾಶದಿಂದಲೇ ಪೂಜಿಸಿದರು ಎಂದು ಹೇಳುತ್ತಾರೆ.

**ಶ್ರೀಮಂತಂ ಶಶಿವದನಂ ಕುಶೇಶಯಾಕ್ಷಂ**
**ಗಂಭೀರಸ್ವನಮತಿದಿವ್ಯಲಕ್ಷಣಾಢ್ಯಮ್ ।**
**ಪಶ್ಯಂತಃ ಸ್ವಗುರುಮಥಾರ್ಚಿಚನ್ (ಅರ್ಚಯನ್) ಕೃತಾರ್ಥಾ**
**ವಾಣ್ಯಾ ತಂ ಹರಿರತಿಪೂರ್ಣಕಾಮಮೇತೇ ॥ 55 ॥**

**ಪದಚ್ಛೇದ**— ಶ್ರೀಮಂತಂ, ಶಶಿವದನಂ, ಕುಶೇಶಯಾಕ್ಷಂ, ಗಂಭೀರಸ್ವನಂ, ಅತಿದಿವ್ಯಲಕ್ಷಣಾಢ್ಯಂ, ಪಶ್ಯಂತಃ, ಸ್ವಗುರುಂ, ಅಥ, ಅರ್ಚಿಚನ್ (ಅರ್ಚಯನ್), ಕೃತಾರ್ಥಾಃ, ವಾಣ್ಯಾಂ, ತಂ, ಹರಿರತಿಪೂರ್ಣಕಾಮಂ, ಏತೇ ।

**ಅನ್ವಯ**— ಶ್ರೀಮಂತಂ, ಶಶಿವದನಂ, ಕುಶೇಶಯಾಕ್ಷಂ, ಗಂಭೀರಸ್ವನಂ, ಅತಿದಿವ್ಯಲಕ್ಷಣಾಢ್ಯಂ, ಸ್ವಗುರುಂ, ಪಶ್ಯಂತಃ, ಕೃತಾರ್ಥಾಃ, ಏತೇ, ಅಥ, ಹರಿರತಿಪೂರ್ಣಕಾಮಂ, ತಂ, ವಾಣ್ಯಾ, ಅರ್ಚಿಚನ್ (ಅರ್ಚಯನ್) ।

**ಅನ್ವಯಾರ್ಥ**—

**ಶ್ರೀಮಂತಂ** = ಉತ್ತಮವಾದ ಕಾಂತಿಯುಳ್ಳ,
**ಶಶಿವದನಂ** = ಚಂದ್ರನಂತಹ ಮುಖವುಳ್ಳ,
**ಕುಶೇಶಯಾಕ್ಷಂ** = ಕಮಲದಂತಹ ಕಣ್ಣುಗಳುಳ್ಳ,
**ಗಂಭೀರಸ್ವನಂ** = ಎತ್ತರವಾದ ಧ್ವನಿಯುಳ್ಳ,
**ಅತಿದಿವ್ಯಲಕ್ಷಣಆಢ್ಯಂ** = ದೇವತೆಗಳಿಗೆ ಸಂಬಂಧಿಸಿದ ಲಕ್ಷಣಗಳನ್ನು ಮೀರಿದ ಲಕ್ಷಣಗಳಿಂದ ಸಂಪನ್ನರಾದ,
**ಸ್ವಗುರುಂ** = ತಮ್ಮ ಗುರುಗಳಾದ ಶ್ರೀಮಧ್ವಾಚಾರ್ಯರನ್ನು,
**ಪಶ್ಯಂತಃ** = ನೋಡುತ್ತಿರುವ,
**ಕೃತಾರ್ಥಾಃ** = ಧನ್ಯರಾದ,
**ಏತೇ** = ಈ ದೇವತೆಗಳು,
**ಅಥ** = ಅನಂತರ,
**ಹರಿರತಿಪೂರ್ಣಕಾಮಂ** = ಶ್ರೀಮನ್ನಾರಾಯಣನಲ್ಲಿರುವ ಆಸಕ್ತಿಯಿಂದ (ಜ್ಞಾನ, ಭಕ್ತಿ, ವೈರಾಗ್ಯಾದಿಗಳಿಂದ) (ರತಿ = ಶ್ರೀಹರಿಯನ್ನು ಸರ್ವದಾ ಸಾಕ್ಷಾತ್ಕಾರಿಸುವುದರಿಂದ ಉಂಟಾದ ಆನಂದದಿಂದ) ಪರಿಪೂರ್ಣವಾದ ಅಭಿಲಾಷೆಯುಳ್ಳ,
**ತಂ** = ಆ ಶ್ರೀಮಧ್ವಾಚಾರ್ಯರನ್ನು,
**ವಾಣ್ಯಾ** = ಸ್ತೋತ್ರರೂಪವಾದ ಮಾತಿನಿಂದ,
**ಅರ್ಚಿಚನ್(ಅರ್ಚಯನ್)** = ಪೂಜಿಸಿದರು.

**ತಾತ್ಪರ್ಯ**— ಆಚಾರ್ಯರನ್ನು ಅತಿಶ್ರೇಷ್ಠವಾದ ಕಾಂತಿಯಿಂದ ಕಂಗೊಳಿಸುತ್ತಿದ್ದರು. ಚಂದ್ರನಂತಹ ಸುಂದರವದನ ಅರಳಿದ ತಾವರೆಯಂತಹ ಕಣ್ಣುಗಳು ಎರಿದ ಆಕರ್ಷಕವಾದ ಧ್ವನಿ ಆಚಾರ್ಯರ ಕಡೆಗೆ ಎಂತಹವರನ್ನೂ ಆಕರ್ಷಿಸುತ್ತಿದ್ದವು. ಅವರು ದೇವತೆಗಳಲ್ಲಿಯೂ ದುರ್ಲಭವಾದ ಮೂವತ್ತೆರಡು ಮಹಾಪುರುಷ ಲಕ್ಷಣಗಳಿಂದ ವಿರಾಜಿಸುತ್ತಿದ್ದರು. ನಿರಂತರದಲ್ಲಿಯೂ ಪರಮಾತ್ಮನಲ್ಲಿ ಭಕ್ತಿಯಿಟ್ಟು ಅವನ ನಿತ್ಯಸಾಕ್ಷಾತ್ಕಾರವನ್ನು ಹೊಂದಿ ಅವರು ನಿತ್ಯ

ತೃಪ್ತರಾಗಿದ್ದರು. ಪರಮಾತ್ಮನ ನಿರಂತರವಾದ ಅನುಗ್ರಹವನ್ನು ಹೊರತು ಅವರು ಮತ್ತೇನನ್ನೂ ಪ್ರಾರ್ಥಿಸುತ್ತಿರಲಿಲ್ಲ. ತ್ರೈಲೋಕ್ಯ ಗುರುಗಳೂ ಆದ ಇಂತಹ ಶ್ರೀಮದಾನಂದತೀರ್ಥಭಗವತ್‌ಪಾದಾಚಾರ್ಯರನ್ನು ನೋಡಿ ದೇವತೆಗಳೂ ನಾವು ಧನ್ಯರಾದೆವು ಕೃತಕೃತ್ಯರಾದೆವು ಎಂದು ಹಿರಿಹಿರಿ ಹಿಗ್ಗಿದರು. ಅವರು, ಮನಸ್ಸು ದೇಹಗಳಿಂದ ಅವರನ್ನು ನಮಿಸುತ್ತಾ ಸ್ತೋತ್ರ ರೂಪವಾದ ಮಾತಿನಿಂದ ಪೂಜಿಸಿದರು, ಮನಸ್ಸಿನಿಂದ ಧ್ಯಾನಿಸಿದರು. ಕೈ ಮೊದಲಾದ ಅವಯವಗಳಿಂದ ಪುಷ್ಪಾಂಜಲಿ ಮೊದಲಾದ ಪೂಜೆಯನ್ನು ಮಾಡಿದರು. ಮಾತಿನಿಂದ ಜಯ ಜಯಕಾರ ಮಾಡುತ್ತಾ ಸ್ತುತಿಸಿದರು.

ವಿಗ್ರಹ—

**ಶ್ರೀಮಂತಂ—** ಶ್ರೀಃ ಅಸ್ಯಸ್ತೀತಿ ಶ್ರೀಮಾನ್ ತಂ ।

**ಶಶಿವದನಂ—** ಶಶಿವತ್ ವದನಂ ಯಸ್ಯ ಸಃ ಶಶಿವದನಃ ತಂ ।

**ಕುಶೇಶಯ—** ಕಮಲ, 'ಸಹಸ್ರಪತ್ರಂ ಕಮಲಂ ಶತಪತ್ರಂ ಕುಶೇಶಯಂ' ಅಮರ ।

**ಅತಿದಿವ್ಯಲಕ್ಷಣಾಢ್ಯಂ—** ದೇವಾನಾಂ ಇಮಾನಿ ದಿವ್ಯಾನಿ, ದಿವ್ಯಾನಿ ಅತಿಕ್ರಾಂತಾನಿ ಅತಿದಿವ್ಯಾನಿ, ಅತಿದಿವ್ಯಾನಿ ಚ ತಾನಿ ಲಕ್ಷಣಾನಿ ಚ ಅತಿದಿವ್ಯಲಕ್ಷಣಾನಿ, ಅತಿದಿವ್ಯಲಕ್ಷಣೈಃ ಆಢ್ಯಃ ತಂ । (ಮಹಾಪುರುಷರಲ್ಲಿ 96 ತೊಂಭತ್ತಾರು ಅಂಗುಲ ಎತ್ತರವಾಗಿರುವಿಕೆ) ಷಣ್ಣವತ್ಯಂಗುಲತ್ವ ಮುಂತಾದ 32 ಮೂವತ್ತೆರಡು ಲಕ್ಷಣಗಳಿರುತ್ತವೆ, ದೇವತೆಗಳಲ್ಲಿ 32ರಲ್ಲಿ ಕೆಲವೇ ಲಕ್ಷಣಗಳಿರುತ್ತವೆ. ಅವು ಇತರರಿಗಿಂತ ಹೆಚ್ಚು ಹೆಚ್ಚು ಪರಿಪೂರ್ಣವಾಗಿರುತ್ತವೆ. ಆಚಾರ್ಯರಲ್ಲಿರುವ ಈ ಲಕ್ಷಣಗಳು ದೇವತೆಗಳಲ್ಲಿರುವ ದ್ವಾತ್ರಿಂಶಲ್ಲಕ್ಷಣ ಗಳಿಗಿಂತಲೂ ಅತಿಶಯವಾಗಿದ್ದವು ಎಂದು ಭಾವ.

**ಸ್ವಗುರುಂ—** ಸ್ವೇಷಾಂ ಗುರುಃ ಸ್ವಗುರುಃ ತಂ ।

**ಹರಿರತಿಪೂರ್ಣಕಾಮಂ—**ಹರೌ ರತಿಃ ಹರಿರತಿಃ, ಹರಿರತ್ಯಾ ಪೂರ್ಣಕಾಮಃ ಯಸ್ಯಸಃ ಹರಿರತಿಪೂರ್ಣ ಕಾಮಃ, ತಂ ।

**ಕ್ರಿಯಾಪದ—** ಅರ್ಚಯನ್ - ಅರ್ಚಪೂಜಾಯಾಂ ಎಂಬ ಧಾತುವಿನ ಲುಙ್ ಲಕಾರ ಅಥವಾ ಅರ್ಚಯನ್ ಎಂಬ ಪಾಠವನ್ನು ಇಟ್ಟುಕೊಂಡಾಗ ಅರ್ಚಯತ್ ಅರ್ಚಯತಾಂ ಅರ್ಚಯನ್ ಇತ್ಯಾದಿ ಅರ್ಚಪೂಜಾಯಾಂ (1809) ಚುರಾದಿ ಉಭಯ ಪದಿ ಸಕ. ಸೇಟ್. ಲಙ್ ಹಿಂದೆಯೂ ಅರ್ಚಿಚನ್ ಎಂಬಲ್ಲಿ ಇದೇ ಧಾತುವು.

ಅರ್ಚಿಚತ್ ಅರ್ಚಿಚತಾಂ ಅರ್ಚಿಚನ್, ಇತ್ಯಾದಿ ।

**ಪ್ರಯೋಗ—** ಶ್ರೀಮಂತಂ ಶಶಿವದನಂ ಕುಶೇಶಯಾಕ್ಷಂ ಗಂಭೀರಸ್ವನಂ ಅತಿದಿವ್ಯಲಕ್ಷಣಾಢ್ಯಂಸ್ವಗುರುಂ ಪಶ್ಯದ್ಭಿಃ ಕೃತಾರ್ಥೈಃ ಏತೈಃ ಅಥ ಹರಿರತಿಪೂರ್ಣಕಾಮಃ ಸಃ ವಾಣ್ಯಾ ಅರ್ಚಿ (ಅರ್ಚ್ಯತ) ।

★★★

**ಅವತಾರಿಕಾ—** ದೇವತೆಗಳು ಮಾಡಿದ ಸ್ತೋತ್ರರೂಪವಾದ ವಚನವನ್ನು ಹೇಳುತ್ತಿದ್ದಾರೆ.

**ಅಹರೋ ದುರಾಗಮತಮಃ ಸ್ವಗೋಗಣೈ-**
**ರಕರೋರ್ಮುಕುಂದಗುಣವೃಂದದರ್ಶನಮ್ ।**
**ಅಜಯಶ್ಚತುರ್ದಶ ಜಗಂತಿ ಸದ್ಗುಣೈಃ**
**ಶರಣಂ ಗುರೋ ಕರುಣಯಾಽಪಿ ನೋ ಭವೇಃ ॥ 56 ॥**

**ಪದಚ್ಛೇದ—** ಅಹರಃ, ದುರಾಗಮತಮಃ, ಸ್ವಗೋಗಣೈಃ, ಅಕರೋಃ, ಮುಕುಂದಗುಣವೃಂದದರ್ಶನಂ, ಅಜಯಃ, ಚತುರ್ದಶ, ಜಗಂತಿ, ಸದ್ಗುಣೈಃ, ಶರಣಂ, ಗುರೋ, ಕರುಣಯಾ, ಅಪಿ, ನಃ, ಭವೇಃ ।

**ಅನ್ವಯ—** ಹೇ, ಗುರೋ(ತ್ವಂ), ಸ್ವಗೋಗಣೈಃ, ದುರಾಗಮತಮಃ, ಅಹರಃ (ತ್ವಂ), ಮುಕುಂದಗುಣವೃಂದ ದರ್ಶನಂ, ಅಕರೋಃ(ತ್ವಂ), ಸದ್ಗುಣೈಃ, ಚತುರ್ದಶಜಗಂತಿ, ಅಜಯಃ (ತ್ವಂ), ನಃ, ಅಪಿ, ಕರುಣಯಾ, ಅಪಿ, ಶರಣಂ, ಭವ ।

**ಅನ್ವಯಾರ್ಥ—**

**ಸ್ವಗೋಗಣೈಃ** = ಎಲೈ ಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದರೇ (ತ್ವಂ = ನೀವು) ತಮ್ಮ ಮಾತುಗಳ (ಮಾತುಗಳೆಂಬ ಕಿರಣಗಳ) ಸಮೂಹಗಳಿಂದ,

**ದುರಾಗಮತಮಃ** = ದುಷ್ಟ ಶಾಸ್ತ್ರಗಳಿಂದ ಉಂಟಾದ ಅಜ್ಞಾನವೆಂಬ ಕತ್ತಲೆಯನ್ನು,

**ಅಹರಃ** = ಪರಿಹರಿಸಿದ್ದೀರಿ,

**ಮುಕುಂದಗುಣವೃಂದದರ್ಶನಂ** = ಮುಕ್ತಿಪ್ರದನಾದ ಶ್ರೀಮನ್ನಾರಾಯಣನ, ಶುದ್ಧಾನಂದಾದಿಗುಣಗಳ ಸಮೂಹದ ಜ್ಞಾನವನ್ನು, (ನಃ = ನಮಗೆ)

**ಅಕರೋಃ** = ಮಾಡಿದಿರಿ, (ತ್ವಂ = ನೀವು)

**ಸದ್ಗುಣೈಃ** = ಉತ್ಕೃಷ್ಟವಾದ (ದೋಷವಿಲ್ಲದ) ವೈರಾಗ್ಯ, ಭಕ್ತ್ಯಾದಿ ಗುಣಗಳಿಂದ,

**ಚತುರ್ದಶ** = ಹದಿನಾಲ್ಕು,

**ಜಗಂತಿ** = ಲೋಕಗಳನ್ನು, (ಲೋಕಗಳಲ್ಲಿರುವ ಜೀವರಾಶಿಗಳನ್ನು)

**ಅಜಯಃ** = ಮೀರಿಸಿದಿರಿ,

**ನಃ ಅಪಿ** = ನಮಗೂ ಕೂಡ,

**ಕರುಣಯಾ ಅಪಿ** = ದಯೆಯಿಂದಲೇ,

**ಶರಣಂ** = ರಕ್ಷಕರಾಗಿ,

**ಭವೇಃ** = ಆಗಬೇಕು. (ರಕ್ಷಕರಾಗಿರಿ ಎಂದು ಪ್ರಾರ್ಥಿಸುತ್ತೇವೆ)

**ತಾತ್ಪರ್ಯ—** ನಮ್ಮ ಗುರುಗಳಾದ ಶ್ರೀಮದಾನಂದತೀರ್ಥರೇ ಸೂರ್ಯನು ತನ್ನ ಕಿರಣ ಸಮೂಹಗಳಿಂದ ದುಃಖಕರವಾದ ಕತ್ತಲೆಯನ್ನು ಹೋಗಲಾಡಿಸುತ್ತಾನೆ. ನೀವು ಸೂರ್ಯಕಿರಣ ಸಮೂಹಗಳಂತಿರುವ ನಿಮ್ಮ ಮಾತುಗಳ ಸಮೂಹಗಳಿಂದ ಅಸಚ್ಛಾಸ್ತ್ರಗಳೆಂಬ ಕತ್ತಲೆಯನ್ನು ಹೋಗಲಾಡಿಸಿದಿರಿ. ಗುರುವರ್ಯರೇ ನೀವು ಸೂರ್ಯಕಿರಣ ಸಮುದಾಯದಂತಿರುವ ನಿಮ್ಮ ವಚನಸಮುದಾಯಗಳಿಂದಲೇ ಮುಕ್ತಿಪ್ರದನಾದ ಶ್ರೀಮನ್ನಾರಾಯಣನ ಶುದ್ಧಾನಂದ ಸರ್ವವಿಷಯಕವಾದ ಜ್ಞಾನ ಮುಂತಾದ ಗುಣಗಳ ದರ್ಶನವನ್ನು ನಮಗೆ ಮಾಡಿಸಿದಿರಿ. ಹರಿಯೇ ಸರ್ವೋತ್ತಮನೆಂದು ಪ್ರಕಾಶಗೊಳಿಸಿ ಮಹೋಪಕಾರವನ್ನು ಮಾಡಿದಿರಿ. ನಿಮ್ಮ ಅತ್ಯಂತ ಉತ್ಕೃಷ್ಟವಾದ ವೈರಾಗ್ಯ, ಭಕ್ತ್ಯಾದಿ ಗುಣಗಳಿಂದ ಹದಿನಾಲ್ಕು ಲೋಕಗಳಲ್ಲಿರುವ ಎಲ್ಲಾ ಜೀವರಾಶಿಗಳನ್ನು ಜಯಿಸಿದಿರಿ, ಮೀರಿಸಿದಿರಿ. ನಮಗೂ ಕೂಡ ನೀವು ಕೇವಲ ದಯೆಯಿಂದಲೇ ರಕ್ಷಕರಾಗಿರಬೇಕು ತಾವು ತಮ್ಮ ಅವತಾರ ಕಾರ್ಯವನ್ನೆಲ್ಲಾ ಮಾಡಿದ್ದಾಯಿತು. ಹೀಗೆಯೇ ದಯೆಯಿಟ್ಟು ನಮ್ಮನ್ನು ಸರ್ವದಾ ರಕ್ಷಿಸುತ್ತಿರಬೇಕು ಎಂದು ದೇವತೆಗಳು ಪ್ರಾರ್ಥಿಸಿದರು.

**ವಿಗ್ರಹ—**

**ದುರಾಗಮತಮಃ—**ದುಷ್ಟಾಶ್ಚ ತೇ ಆಗಮಾಶ್ಚ ದುರಾಗಮಾಃ, ದುರಾಗಮಾಃ ತಮಃ ಇವ ದುರಾಗಮತಮಃ।

**ಸ್ವಗೋಗಣೈಃ—** ಸ್ವಸ್ಯ ಗಾವಃ ಸ್ವಗಾವಃ, ಸ್ವಗವಾಂ ಗಣಾಃ ಸ್ವಗೋಗಣಾಃ ತೈಃ ।

**ಮುಕುಂದಗುಣವೃಂದದರ್ಶನಂ—** ಮುಕುಂದಸ್ಯ ಗುಣಾಃ ಮುಕುಂದಗುಣಾಃ, ಮುಕುಂದಗುಣಾನಾಂ ವೃಂದಂ ಮುಕುಂದಗುಣವೃಂದಂ, ಮುಕುಂದಗುಣವೃಂದಸ್ಯ ದರ್ಶನಂ ಮುಕುಂದಗುಣವೃಂದ ದರ್ಶನಂ, ತತ್ ।

**ಚತುರ್ದಶಜಗಂತಿ—** ಚತುರಧಿಕಾನಿ ದಶ ಚತುರ್ದಶ, ತಾನಿ ಚ ಜಗಂತಿ ಚ ಚತುರ್ದಶಜಗಂತಿ ।

**ಸದ್ಗುಣೈಃ—** ಸಂತಶ್ಚ ತೇ ಗುಣಾಶ್ಚ ಸದ್ಗುಣಾಃ ತೈಃ ।

**ಕ್ರಿಯಾಪದ— ಅಹರಃ** - ಹೃಞ ಹರಣೇ ಸಕ. ಅನಿ. ಉಭ. ಅನದ್ಯತನ ಭೂತೇ ಲಙ್ । **ಅಕರೋಃ** - ಡುಕೃಞ ಕರಣೇ ಸಕ. ಅನಿ. ಉಭಯ, ಅನದ್ಯತನಭೂತೇ ಲಙ್ ಮಧ್ಯಮ ಪುರುಷ ಏಕವಚನ । **ಅಜಯಃ** - ಜಿ ಅಭಿಭವೇ ಸಕ. ಅನಿ. ಪರ. ಲಙ್ ಮಧ್ಯಮ ಪುರುಷ ಏಕವಚನ । **ಭವೇಃ** - ಭೂಸತ್ತಾಯಾಂ ಅಕ. ಸೇಟ್ ಪರ. ವಿಧಿಲಿಙ್ ಮಧ್ಯಮ ಪುರುಷ ಏಕವಚನ ।

ಅಹರತ್ ಅಹರತಾಂ ಅಹರನ್, ಅಹರಃ ಅಹರತಂ ಅಹರತ ಇತ್ಯಾದಿ ।

ಅಕೋರತ್ ಅಕುರುತಾಂ ಅಕುರ್ವನ್, ಅಕರೋಃ ಅಕುರುತಂ ಅಕುರುತ ಇತ್ಯಾದಿ ।

ಅಜಯತ್ ಅಜಯತಾಂ ಅಜಯನ್, ಅಜಯಃ ಅಜಯತಂ ಅಜಯತ, ಅಜಯಂ ಅಜಯಾವ ಅಜಯಾಮ ।

ಭವೇತಾಂ ಭವೇಯುಃ, ಭವೇಃ ಭವೇತಂ ಭವೇತ, ಭವೇಯಂ ಭವೇವ ಭವೇಮ ।

**ಪ್ರಯೋಗ—** ಹೇ ಗುರೋ (ತ್ವಯಾ) ಸ್ವಗೋಗಣೈಃ ದುರಾಗಮತಮಃ ಆಹ್ರಿಯತ (ತ್ವಯಾ ನಃ) ಮುಕುಂದಗುಣ ವೃಂದದರ್ಶನಂ ಅಕ್ರಿಯತೇ (ತ್ವಯಾ) ಸದ್ಗುಣೈಃ ಚತುರ್ದಶ ಜಗಂತಿ ಅಜೀಯಂತ (ಹೇ ಗುರೋ) (ತ್ವಯಾ) ನಃ ಅಪಿ ಕರುಣಯಾ ಅಪಿ ಶರಣೇನ ಭೂಯತೇ ವೃತ್ತ = ಸಜಸಾ ಜಗೌ ಭವತಿ ಮಂಜುಭಾಷಿಣೀ ಎಂಬ ಲಕ್ಷಣದಂತೆ ಇಲ್ಲಿ ಮಂಜು ಭಾಷಿಣೀ ವೃತ್ತವು.

★★★

**ಅವತಾರಿಕಾ—** ಗುರುತಮರಾದ ಶ್ರೀಮುಖ್ಯಪ್ರಾಣದೇವರೇ ಇಂತು ನೀವು ಹನುಮಂತ, ಭೀಮ, ಮಧ್ವ ಎಂಬ ಅವತಾರತ್ರಯದಿಂದ ನಮ್ಮ ಇಷ್ಟಾರ್ಥಗಳನ್ನು ಅನುಗ್ರಹಿಸಿದಿರಿ ಎಂದು ಸ್ತುತಿಸುತ್ತಾರೆ.

**ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ**
**ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।**
**ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವನ್**
**ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥ 57 ॥**

**ಪದಚ್ಛೇದ—** ನಮಃ, ತೇ, ಪ್ರಾಣೇಶ, ಪ್ರಣತವಿಭವಾಯ, ಅವನಿಂ, ಅಗಾಃ, ನಮಃ, ಸ್ವಾಮಿನ್, ರಾಮಪ್ರಿಯ ತಮ, ಹನೂಮನ್, ಗುರುಗುಣ, ನಮಃ, ತುಭ್ಯಂ, ಭೀಮ, ಪ್ರಬಲತಮ, ಕೃಷ್ಣೇಷ್ಟ, ಭಗವನ್, ನಮಃ, ಶ್ರೀಮನ್ಮಧ್ವ ಪ್ರದಿಶ, ಸುದೃಶಂ, ನೋ, ಜಯ, ಜಯ ।

**ಅನ್ವಯ—** ಪ್ರಾಣೇಶ (ತ್ವಂ), ಪ್ರಣತವಿಭವಾಯ, ಅವನಿಂ, ಅಗಾಃ, ತೇ, ನಮಃ, ಸ್ವಾಮಿನ್, ರಾಮಪ್ರಿಯತಮ, ಹನೂಮನ್, ಗುರುಗುಣ(ತುಭ್ಯಂ), ನಮಃ, ಪ್ರಬಲತಮ, ಕೃಷ್ಣೇಷ್ಟ, ಭಗವನ್, ತುಭ್ಯಂ, ನಮಃ, ಭಗವನ್, ಶ್ರೀಮನ್ಮಧ್ವ ನಮಃ, ನಃ, ಸುದೃಶಂ, ಪ್ರದಿಶ, ಜಯ, ಜಯ ।

**ಅನ್ವಯಾರ್ಥ—**

**ಹೇ ಪ್ರಾಣೇಶ** = ಎಲ್ಲಾ ಜೀವರ ಇಂದ್ರಿಯಗಳಿಗೆ ಸ್ವಾಮಿಯಾದ ಮೂಲ ಮುಖ್ಯಪ್ರಾಣದೇವರೇ,

**(ತ್ವಂ)** = ನೀವು,

**ಪ್ರಣತವಿಭವಾಯ** = ಹರಿ ಮತ್ತು ಗುರುಗಳಲ್ಲಿ ನಮ್ರರಾದ ಸಾತ್ವಿಕ ಜೀವರ ತತ್ತ್ವಜ್ಞಾನ, ವೈರಾಗ್ಯ, ಭಕ್ತಿ ಮುಂತಾದ ಮೋಕ್ಷ ಪ್ರಯೋಜಕವಾದ ಸಮಸ್ತ ಐಶ್ವರ್ಯಕ್ಕಾಗಿ,

**ಅವನಿಂ** = ಭೂಮಿಯನ್ನು ಕುರಿತು,

**ಅಗಾಃ** = ಹೋಗಿದ್ದೀರಿ,

**ತೇ** = ನಿಮಗೇ,

**ನಮಃ** = ನಮಸ್ಕಾರವು,

**ಸ್ವಾಮಿನ್** = ನಮಗೆ ಒಡೆಯರೇ,

**ರಾಮಪ್ರಿಯತಮ** = ಶ್ರೀರಾಮಚಂದ್ರನಿಗೆ ಅತ್ಯಂತ ಪ್ರಿಯರೇ,

**ಗುರುಗುಣ** = ಬಹಳವಾದ ಜಿತೇಂದ್ರಿಯತ್ವಾದಿ ಗುಣ ಉಳ್ಳವರೇ,

**ಹನೂಮನ್** = ಅಂಜನಾಪುತ್ರರಾದ ಹನುಮಂತರ ದೇವರೇ,

**(ತುಭ್ಯಂ)** = ನಿಮಗೆ,

**ನಮಃ** = ನಮಸ್ಕಾರವು,

**ಪ್ರಬಲತಮ** = ಅತ್ಯಂತ ಬಲಶಾಲಿಗಳೇ,

**ಕೃಷ್ಣೇಷ್ಟ** = ಶ್ರೀಕೃಷ್ಣನಿಗೆ ಪ್ರೀತಿಪಾತ್ರರಾದವರೇ!

**ಭಗವನ್!** = ಸಮಗ್ರ ಐಶ್ವರ್ಯಾದಿ ಷಡ್ಗುಣ ಪರಿಪೂರ್ಣರೇ!,

**ಭೀಮ!** = ಎಲೈ ಭೀಮಸೇನ ದೇವರೇ!,

**ತುಭ್ಯಂ** = ನಿಮಗೆ,

**ನಮಃ** = ನಮಸ್ಕಾರವು.

**ಭಗವನ್!** = ಸರ್ವಜ್ಞತ್ವಾದಿ ಐಶ್ವರ್ಯಪೂರ್ಣರೇ!

**ಶ್ರೀಮನ್ಮಧ್ವ** = ಶ್ರೀ ಮನ್ಮಧ್ವಾಚಾರ್ಯರೇ!(ತುಭ್ಯಂ = ನಿಮಗೆ)

**ನಮಃ** = ನಮಸ್ಕಾರವು. (ತ್ವಂ = ನೀವು)

**ನಃ** = ನಮಗೆ,

**ಸುದೃಶಂ** = ಒಳ್ಳೆಯ ಜ್ಞಾನವೆಂಬ ದೃಷ್ಟಿಯನ್ನು,

**ಪ್ರದಿಶ** = ಕೊಡಿರಿ,

**ಜಯಜಯ** = ನೀವು ಸರ್ವೋತ್ಕೃಷ್ಟರಾಗಿರಿ, ಸರ್ವೋತ್ಕೃಷ್ಟರಾಗಿರಿ. (ದುಷ್ಟರನ್ನು ಜಯಿಸಿರಿ, ದುಷ್ಟರನ್ನು ತಿರಸ್ಕರಿಸಿರಿ)

**ತಾತ್ಪರ್ಯ—** ಸಮಸ್ತ ಜೀವರ ಇಂದ್ರಿಯಾದಿಗಳಿಗೆ ಸ್ವಾಮಿಯಾದ ಭಾರತೀರಮಣಮುಖ್ಯಪ್ರಾಣದೇವರೇ! ನೀವು ಹರಿಗುರುಗಳಲ್ಲಿ ವಿನೀತರಾದ, ಅವರಲ್ಲಿ ಭಕ್ತರಾದ, ಹರಿಗುರುಗಳಿಗೆ ಯಾವಾಗಲೂ ನಮಸ್ಕಾರ ಮಾಡುವ ಸಾತ್ವಿಕ ಜೀವರಿಗೆ ಮೋಕ್ಷಕ್ಕಾಗಿ ಬೇಕಾಗುವ, ನಿರ್ಮಲವಾದ ತತ್ತ್ವಜ್ಞಾನ, ವೈರಾಗ್ಯ, ಭಕ್ತಿ ಮುಂತಾದ ಐಶ್ವರ್ಯವನ್ನು ಕೊಡಲು

ಭೂಮಿಗೆ ಬಂದಿರಿ. ನಿಮಗೆ ನಮಸ್ಕಾರವು. ಸ್ವಾಮಿಯಾದ ಶ್ರೀರಾಮಚಂದ್ರನಿಗೆ ಅತ್ಯಂತ ಇಷ್ಟರಾದ ಶ್ರೇಷ್ಠ ಗುಣಗಣಮಣಿ ಮಂಡಿತರಾದ ಹನುಮಂತದೇವರೇ! ನಿಮಗೆ ನಮಸ್ಕಾರವು. ಶ್ರೀವೇದವ್ಯಾಸದೇವರ ಇಷ್ಟರಾದ, ಶ್ರೀಕೃಷ್ಣನ ಪ್ರೀತಿಪಾತ್ರರಾದ ಶ್ರೀಭೀಮಸೇನದೇವರೇ! ಜ್ಞಾನಾದಿಗುಣಭರಿತರೇ! ನಿಮಗೆ ನಮಸ್ಕಾರವು. ಶ್ರೀವೇದವ್ಯಾಸ ದೇವರಿಗೆ ಇಷ್ಟರಾದ ನಿರವಧಿಕವಾದ ಜ್ಞಾನಾದಿಷಡ್ಗುಣಗಣಭೂಷಿತರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೇ! ಶ್ರೀಮನ್ಮಾಧ್ವಾಚಾರ್ಯರೇ ! ನಿಮಗೆ ನಮಸ್ಕಾರವು. ಹೀಗೆ ಮೂರು ಅವತಾರಗಳನ್ನು ಮಾಡಿ ಸಜ್ಜನರ ಉದ್ಧಾರಕರಾದ ಶ್ರೀ ಮೂಲ ಭಾರತೀರಮಣಮುಖ್ಯಪ್ರಾಣದೇವರೇ! ನಮಗೆ ಮೋಕ್ಷಕ್ಕೆ ಬೇಕಾಗುವ ಎಲ್ಲಾ ಸಾಧನಗಳನ್ನೂ ಅನುಗ್ರಹಿಸಿರಿ, ಒಳ್ಳೆಯ ತತ್ತ್ವಜ್ಞಾನವನ್ನು ಅನುಗ್ರಹಿಸಿರಿ! ಶ್ರೀ ಮನ್ಮಧ್ವಾಚಾರ್ಯರೇ! ಭಾರತೀರಮಣ ಮುಖ್ಯಪ್ರಾಣಾಭಿನ್ನರೇ! ನೀವು ನಮಗೆ ಒಳ್ಳೆಯ ತತ್ತ್ವಜ್ಞಾನವೆಂಬ ದೃಷ್ಟಿಯನ್ನು ದಯಪಾಲಿಸಿರಿ. ನಿಮಗೆ (ಮತ್ತೂ ಮತ್ತೂ) ಅನಂತಾನಂತ ವಂದನೆಗಳು. ನೀವು ಹೀಗೆಯೇ ಜಯಶಾಲಿಗಳಾಗಿರಿ. ನಿಮಗೆ ಜಯವಾಗಲಿ. ಸಜ್ಜನರನ್ನು ರಕ್ಷಿಸಿರಿ, ದುರ್ಜನರನ್ನು ಗೆಲ್ಲಿರಿ! ಹನುಮಂತ ಭೀಮ ಮಧ್ವಾತ್ಮಕರಾದ ಭಾರತೀರಮಣ ಮುಖ್ಯಪ್ರಾಣನಿಗೆ ವಿಜಯವಾಗಲಿ!(ಮುಖ್ಯ ಪ್ರಾಣದೇವರು ಮೂರು ಅವತಾರಗಳನ್ನು ಮಾಡಿ ಭಕ್ತರನ್ನು ಉದ್ಧರಿಸಿದ್ದಾರೆ. ಆದುದರಿಂದ ಸಜ್ಜೀವರಿಗೆ ತತ್ತ್ವಜ್ಞಾನವನ್ನು ಕರುಣಿಸಿ ಉದ್ಧರಿಸಬೇಕೆಂಬ ತಮ್ಮ ಪ್ರಾರ್ಥನೆಯನ್ನು ಮನ್ನಿಸಿ ಭಕ್ತರನ್ನು ಉದ್ಧರಿಸಿ ತಮಗೂ ಉಪಕಾರ ಮಾಡಿದ್ದಕ್ಕಾಗಿ ದೇವತೆಗಳು ಈ ರೀತಿ ಆಚಾರ್ಯರನ್ನು ಗೌರವಿಸಿ, ಪೂಜಿಸಿ, ಅವರ ಉಪಕಾರವನ್ನು ವಿಜ್ಞಾಪಿಸಿ ವಂದಿಸಿ ಜಯಜಯಕಾರವನ್ನು ಮಾಡಿದರು ಎಂದು ಹೇಳಿದಂತಾಯಿತು. ಇದರಿಂದ ಶ್ರೀ ಮಧ್ವಾವತಾರ ಕಾರ್ಯವು ಸಂಪೂರ್ಣವಾಯಿತೆಂದೂ ಸೂಚಿತವಾಯಿತು.)

ವಿಗ್ರಹ—

**ಪ್ರಾಣೇಶ—** ಪ್ರಾಣಾನಾಂ ಈಶಃ ಪ್ರಾಣೇಶಃ, ತಸ್ಯ ಸಂಬುದ್ಧಿಃ ಹೇ ಪ್ರಾಣೇಶ!

**ಪ್ರಣತವಿಭವಾಯ—** ಪ್ರಣತಾನಾಂ ವಿಭವಃ ಪ್ರಣತವಿಭವಃ ತಸ್ಮೈ ಪ್ರಣತವಿಭವಾಯ ।

**ರಾಮಪ್ರಿಯತಮ—** ಅತಿಶೇಯನ ಪ್ರಿಯಃ ಪ್ರಿಯತಮಃ, ರಾಮಸ್ಯ ಪ್ರಿಯತಮಃ ರಾಮಪ್ರಿಯ ತಮಃ ತಸ್ಯ ಸಂಬುದ್ಧಿಃ ರಾಮಪ್ರಿಯತಮ ।

**ಹನೂಮನ್—** ಹನುಃ (ಜ್ಞಾನಂ) ಅಸ್ಯ ಅಸ್ತೀತಿ ಹನೂಮಾನ್, ತಸ್ಯ ಸಂಬುದ್ಧಿಃ ಹನೂಮನ್ !

**ಗುರುಗುಣ—** ಗುರವಃ ಗುಣಾಃ ಯಸ್ಯ ಸಃ ಗುರುಗಣಃ, ತಸ್ಯ ಸಂಬುದ್ಧಿಃ ಹೇ ಗುರುಗುಣ !

**ಪ್ರಬಲತಮ—** ಪ್ರಕೃಷ್ಟಂ ಬಲಂ ಯಸ್ಯ ಸಃ ಪ್ರಬಲಃ, ಅತಿಶೇಯನ ಪ್ರಬಲಃ ಪ್ರಲತಮಃ, ತಸ್ಯ ಸಂಬುದ್ಧಿಃ ಹೇ ಪ್ರಬಲತಮ!

**ಕೃಷ್ಣೇಷ್ಟ—** ಕೃಷ್ಣಸ್ಯ (ಶ್ರೀಕೃಷ್ಣ ಮತ್ತು ವೇದವ್ಯಾಸ ದೇವರಿಗೆ) ಇಷ್ಟಃ ಕೃಷ್ಣೇಷ್ಟಃ ತಸ್ಯ ಸಂಬುದ್ಧಿಃ ಕೃಷ್ಣೇಷ್ಟ !

**ಭಗವನ್—** ಭಗಃ ಅಸ್ಯ ಅಸ್ತೀತಿ ಭಗವಾನ್ ತಸ್ಯ ಸಂಬುದ್ಧಿಃ ಹೇ ಭಗವನ್!

**ಶ್ರೀಮನ್ಮಧ್ವ—** ಶ್ರೀಃ ಅಸ್ಯ ಅಸ್ತೀತಿ ಶ್ರೀಮಾನ್, ಶ್ರೀಮಾಂಶ್ಚ ಅಸೌ ಮಧ್ವಶ್ಚ ಶ್ರೀಮನ್ಮಧ್ವಃ ತಸ್ಯ ಸಂಬುದ್ಧಿಃ ಹೇ ಶ್ರೀಮನ್ಮಧ್ವ !

**ಸುದೃಶಂ—** ಶೋಭನಾ ಚಾಸೌ ದೃಕ್ ಚ ಸುದೃಕ್ ತಾಂ ಸುದೃಶಂ ।

**ಕ್ರಿಯಾಪದ—** ಅಗಾಃ - ಅಗಾತ್ ಅಗಾತಾಂ ಅಗುಃ, ಅಗಾಃ ಅಗಾತಂ ಅಗಾತ, ಅಗಾಂ ಅಗಾವ ಅಗಾಮ । ಇಣ್ ಗತೌ ಸಕ. ಅನಿ. ಪರ. ಲುಙ್ ಇಣೋ ಗಾ ಲುಙ ಎಂಬ ಸೂತ್ರದಿಂದ ಲುಙ್ ಲಕಾರದಲ್ಲಿ ಗಾ ಆದೇಶ. ಮಧ್ಯಮಪುರುಷ ಏಕವಚನ । ಪ್ರದಿಶ - ದಿಶತು ದಿಶತಾತ್ ದಿಶತಾಂ ದಿಶಂತು, ದಿಶ ದಿಶತಾತ್ ದಿಶತಂ ದಿಶತ, ದಿಶಾನಿ ದಿಶಾವ ದಿಶಾಮ । ದಿಶ ಅತಿ ಸರ್ಜನೇ, ಸಕ. ಅನಿ. ಪರ. ಲೋಟ್ ಮಧ್ಯಮಪುರುಷ ಏಕವಚನ । ಪ್ರ.ಉಪಸರ್ಗ ಜಯ - ಜಯ-ಜಯತಾತ್ ಜಯತಂ ಜಯತ, ಜಯಾನಿ ಜಯಾವ ಜಯಾಮ, ಜೀ ಜಯೇ ಅಕ. ಜಿ ಅಭಿಭವೇ ಸಕ. ಅನಿಪರ ಲೋಟ್ ಮಧ್ಯಮಪುರುಷ ಏಕವಚನ ।

**ಪ್ರಯೋಗ—** ಹೇ ಪ್ರಾಣೇಶ! ತ್ವಯಾ ಪ್ರಣತವಿಭವಾಯ ಅವನಿಃ ಅಗಾಯಿ ತೇ ನಮಸಾ ಭೂಯತಾಂ, ಸ್ವಾಮಿನ್ ರಾಮಪ್ರಿಯತಮ ಗುರುಗಣ ಹನೂಮನ್! ತೇ ನಮಸಾ ಭೂಯತಾಂ, ಪ್ರಬಲತಮ ಕೃಷ್ಣೇಷ್ಟ ಭೀಮ ತುಭ್ಯಂ ನಮಸಾ ಭೂಯತಾಂ, ಭಗವನ್ ಶ್ರೀಮನ್ಮಧ್ವ! ನಃ ಸುದೃಕ್ ಪ್ರದಿಶ್ಯತಮ್, ತ್ವಯಾ ಜೀಯತಾಮ್ ।

**ವೃತ್ತ—** 'ರಸೈರುದ್ರೈಶ್ಛಿನ್ನಾ ಯಮನಸಭಲಾಗಃ ಶಿಖರಣೀ' ಎಂಬ ಲಕ್ಷಣದಂತೆ ಈ ಶ್ಲೋಕದಲ್ಲಿ ಶಿಖರಿಣೀ ವೃತ್ತ.

★ ★ ★

**ಅವತಾರಿಕಾ—** ಹೀಗೆ ಸ್ತುತಿಸಿ ದೇವತೆಗಳು ಆಚಾರ್ಯರ ಮೇಲೆ ಹೂಗಳ ಮಳೆಯನ್ನು ಸುರಿಸಿದರೆಂದು ಹೇಳುತ್ತಾ ಶ್ರೀಮನ್ನಾರಾಯಣ ಪಂಡಿತಾಚಾರ್ಯರು ಈ ಸುಮಧ್ವವಿಜಯವೆಂಬ ಮಹಾಕಾವ್ಯವನ್ನು ಪೂರ್ಣಗೊಳಿಸುತ್ತಾರೆ.

**ಇತಿ ನಿಗದಿತವಂತಸ್ತತ್ರ ವೃಂದಾರಕೇಂದ್ರಾ**
**ಗುರುವಿಜಯಮಹಂ ತಂ ಲಾಲಯಂತೋ ಮಹಾಂತಮ್ ।**
**ವವೃಷುರಖಿಲದೃಶ್ಯಂ ಪುಷ್ಪವಾರಂ ಸುಗಂಧಂ**
**ಹರಿದಯಿತವರಿಷ್ಠೇ ಶ್ರೀಮದಾನಂದತೀರ್ಥೇ ॥ 58 ॥**

**ಪದಚ್ಛೇದ—** ಇತಿ, ನಿಗದಿತವಂತಃ, ತತ್ರ, ವೃಂದಾರಕೇಂದ್ರಾಃ, ಗುರುವಿಜಯಮಹಂತಂ, ಲಾಲಯಂತಃ, ಮಹಾಂತಂ, ವವೃಷುಃ, ಅಖಿಲದೃಶ್ಯಂ, ಪುಷ್ಪವಾರಂ, ಸುಗಂಧಂ, ಹರಿದಯಿತವರಿಷ್ಠೇ, ಶ್ರೀಮದಾನಂದತೀರ್ಥೇ ।

**ಅನ್ವಯ—** ತತ್ರ, ವೃಂದಾರಕೇಂದ್ರಾಃ, ಇತಿ, ನಿಗದಿತವಂತಃ, ಮಹಾಂತಂ, ತಂ, ಗುರುವಿಜಯಮಹಂ, ಲಾಲ ಯಂತಃ, ಹರಿದಯಿತವರಿಷ್ಠೆ, ಶ್ರೀಮದಾನಂದತೀರ್ಥೇ, ಸುಗಂಧಂ, ಪುಷ್ಪವಾರಂ, ಅಖಿಲದೃಶ್ಯಂ (ಯಥಾ ಭವತಿ ತಥಾ) ವವೃಷುಃ ।

**ಅನ್ವಯಾರ್ಥ—**

ತತ್ರ = ಆ ಆಕಾಶದಲ್ಲಿ,
**ವೃಂದಾರಕೇಂದ್ರಾಃ** = ದೇವಶ್ರೇಷ್ಠರು,
**ಇತಿ** = ಹೀಗೆಂದು,
**ನಿಗದಿತವಂತಃ (ಸಂತಃ)** = ಹೇಳಿದವರಾಗಿ,
**ಮಹಾಂತಂ** = ಶ್ರೇಷ್ಠವಾದ,
**ತಂ** = ಅಂತಹುದಾದ,
**ಗುರು** = ಶ್ರೀಮಧ್ವಾಚಾರ್ಯರ,
**ವಿಜಯಮಹಂ** = ವಿಜಯೋತ್ಸವವನ್ನು,
**ಲಾಲಯಂತಃ** = ಸಂಮಾನಿಸುತ್ತಾ,
**ಹರಿದಯಿತವರಿಷ್ಠೇ** = ಶ್ರೀಮನ್ನಾರಾಯಣನ ಪ್ರೀತಿಪಾತ್ರರಲ್ಲಿ ಶ್ರೇಷ್ಠರಾದ,
**ಶ್ರೀಮದಾನಂದತೀರ್ಥೇ** = ಶ್ರೀಮಧ್ವಾಚಾರ್ಯರ ಮೇಲೆ,
**ಸುಗಂಧಂ** = ಸುವಾಸನೆಯಿಂದ ಕೂಡಿದ,
**ಪುಷ್ಪವಾರಂ** = ಪುಷ್ಪ ಸಮೂಹವನ್ನು,
**ಅಖಿಲದೃಶ್ಯಂ** = ಎಲ್ಲರೂ ನೋಡಲು ಸಾಧ್ಯವಾದುದಾಗಿ ಹೇಗೆ ಆದೀತೋ ಹಾಗೆ,
**ವವೃಷುಃ** = ಸುರಿಸಿದರು.

ತಾತ್ಪರ್ಯ—ದೇವಶ್ರೇಷ್ಠರು ಆಕಾಶದಲ್ಲಿ ನಿಂತು 'ಅಹರೋ ದುರಾಗಮತಮಃ' ಎಂದು ಹೇಳಿದ ರೀತಿಯಿಂದಲೂ, 'ನಮಸ್ತೇ ಪ್ರಾಣೇಶ!' ಎಂದು ಹೇಳಿದ ರೀತಿಯಿಂದಲೂ, ಆಚಾರ್ಯರನ್ನು ಸ್ತುತಿಸಿ ಬಹಳ ಭಕ್ತಿಯಿಂದ ವಂದಿಸಿ ಪ್ರಾರ್ಥಿಸಿದರು. ಸರ್ವೋತ್ತಮವಾದ ಶ್ರೀಮಧ್ವಾಚಾರ್ಯರ ವಿಜಯವೆಂಬ ಮಹೋತ್ಸವವನ್ನು ಗೌರವದಿಂದ ಪೂಜಿಸಿದರು. ಪರಮಾತ್ಮನ ಭಕ್ತರಲ್ಲಿ ಅತ್ಯಂತ ಶ್ರೇಷ್ಠರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಮೇಲೆ ಉತ್ತಮಪರಿಮಳಪೂರ್ಣವಾದ ದೇವಲೋಕದ ಪುಷ್ಪ ಸಮೂಹವನ್ನು ಎಲ್ಲಾ ಜನರೂ ನೋಡುವಂತೆ ಮಳೆಗರಿಸಿದರು. ಶ್ರೀ ಮಧ್ವಾಚಾರ್ಯರು ಪರಮಾತ್ಮನ ಅಪ್ಪಣೆ ಪ್ರಕಾರ, ದೇವತೆಗಳ ಪ್ರಾರ್ಥನೆಯಂತೆ ಭೂಮಿಯಲ್ಲಿ ಅವತರಿಸಿದರು. ಅನಾದಿ ಪರಂಪರೆಯಿಂದ ಬಂದಿದ್ದ ದ್ವೈತಸಿದ್ಧಾಂತವನ್ನು ಪ್ರತಿಷ್ಠಾಪಿಸಿದರು. ದುರ್ವಾದಿಗಳನ್ನು ವಾದದಲ್ಲಿ ಗೆದ್ದರು. ಸಜ್ಜನರನ್ನು ಉದ್ಧರಿಸಿದರು. ಅದ್ಭುತವಾದ ಅನೇಕ ಮಹಿಮೆಗಳನ್ನು ತೋರಿಸಿದರು. ಶ್ರೀಕೃಷ್ಣನನ್ನು ಪ್ರತಿಷ್ಠಾಪಿಸಿ ಸಜ್ಜನರಿಗೆ ಒಳ್ಳೆಯ ದರ್ಶನವೆಂಬ ಸುದರ್ಶನವನ್ನೂ, ತಪ್ತಸುದರ್ಶನ ಚಕ್ರವೆಂಬ ಸುದರ್ಶನವನ್ನೂ ದಯಪಾಲಿಸಿದರು. ಅನೇಕ ಮಂದಿ ಶಿಷ್ಯರಿಗೆ ಬಿಂಬೋಪಾಸನೆಯನ್ನು ಉಪದೇಶಿಸಿ ಪರಮಾತ್ಮನ ಅಪರೋಕ್ಷವನ್ನು ಮಾಡಿಸಿದರು. ಇನ್ನೂ ಅನೇಕಾನೇಕ ಅದ್ಭುತ ಕಾರ್ಯಗಳನ್ನು ನೆರವೇರಿಸಿದರು.

ಒಂದಾನೊಂದು ದಿನ ಶ್ರೀಮಧ್ವಾಚಾರ್ಯರು ಶ್ರೀರೂಪ್ಯಪೀಠಪುರದಲ್ಲಿ ಅನಂತೇಶ್ವರ ನಾಮಕನಾದ ಶ್ರೀಮದನಂತ ಪದ್ಮನಾಭಸ್ವಾಮಿಯ ಸನ್ನಿಧಾನದಲ್ಲಿ ಅನೇಕ ಮಂದಿ ಶಿಷ್ಯರಿಗೆ ಐತರೇಯೋಪನಿಷತ್ತಿನ ಪ್ರವಚನವನ್ನು ಮಾಡುತ್ತಿದ್ದರು. ಆಗ ಹಿಂದೆ ಹೇಳಿದ ರೀತಿಯಲ್ಲಿ ದೇವತೆಗಳು ಬಂದು ಸ್ತುತಿಸಿ, ವಂದಿಸಿ ಪುಷ್ಪವೃಷ್ಟಿಯನ್ನು ಮಾಡಿ ಪೂಜಿಸಿದರು. ಆಕಾಶದಿಂದ ಪುಷ್ಪವೃಷ್ಟಿಯಾಗುತ್ತಿರುವುದನ್ನು ಜನರು ಪ್ರತ್ಯಕ್ಷವಾಗಿ ನೋಡುತ್ತಿದ್ದರು. ಆಚಾರ್ಯರು ಆ ಪುಷ್ಪರಾಶಿಯ ಮಧ್ಯದಲ್ಲಿ ಕಂಗೊಳಿಸಿದರು. ಅನಂತರ ಅಲ್ಲಿಂದ ಶಿಷ್ಯ ಸಮೇತರಾಗಿ ಬದರಿಗೆ ಹೋಗುತ್ತಾ ಶಿಷ್ಯರನ್ನು ದಾರಿಯಲ್ಲಿ ಅಲ್ಲಲ್ಲಿಯೇ ಬಿಟ್ಟು, ತಾವು ಮಹಾಬದರಿಯಲ್ಲಿರುವ ತಮ್ಮ ಗುರುಗಳಾದ ಶ್ರೀವೇದವ್ಯಾಸರ ಸನ್ನಿಧಿಯನ್ನು ಸೇರಿದರು. ಹೀಗೆ ರಜತಪೀಠ ಪುರದಿಂದ ಹೊರಟುಹೋದರೂ ಅಲ್ಲಿ ಅನಂತೇಶ್ವರನಾಮಕನಾದ ಅನಂತಪದ್ಮನಾಭನ ಸನ್ನಿಧಾನ-ದಲ್ಲಿಯೂ ಶ್ರೀಕೃಷ್ಣ ಮಠದ ಸರ್ವಜ್ಞಪೀಠದಲ್ಲಿಯೂ ಅದೃಶ್ಯರಾಗಿ ತಮ್ಮ ಸನ್ನಿಧಾನವನ್ನಿಟ್ಟಿರುತ್ತಾರೆ. ಮಹಾಬದರಿಯಲ್ಲಿ ಶ್ರೀವೇದವ್ಯಾಸರ ಸನ್ನಿಧಿಯಲ್ಲಿ ದೇವತೆಗಳಿಗೆ ಮತ್ತು ಮಹರ್ಷಿಗಳಿಗೆ ಪ್ರತ್ಯಕ್ಷದೃಶ್ಯರಾಗಿರುತ್ತಾರೆ. ಈಗಲೂ ಶ್ರೀವೇದ-ವ್ಯಾಸರನ್ನು ಸೇವಿಸುತ್ತಾ ಅವರಿಂದ ಬುದ್ಧಿ ಪ್ರಕಾಶವನ್ನು ಪಡೆಯುತ್ತಾ ಇದ್ದಾರೆ. 'ಅದೃಶ್ಯೋಽಸೌ ರೂಪ್ಯಪೀಠೇ ದೃಶ್ಯೋಽಸೌ ಬದರೀತಟೇ' ಎಂಬ ಸಂಪ್ರದಾಯಜ್ಞರ ಮಾತು ಈ ವಿಷಯದಲ್ಲಿ ಪ್ರಮಾಣವಾಗಿದೆ. ಆಚಾರ್ಯರ ಶಿಷ್ಯರಲ್ಲಿ ಕೆಲವರು ಅವರ ಅಪ್ಪಣೆಯಂತೆ ಸಿದ್ಧಾಂತಪ್ರಸಾರ, ಪೂಜಾ, ಧ್ಯಾನಾದಿಗಳನ್ನು ಮಾಡುತ್ತಾ ಭರತಖಂಡದಲ್ಲಿಯೇ ಇದ್ದರು. ಶ್ರೀಪದ್ಮನಾಭತೀರ್ಥರು ಆಚಾರ್ಯರ ಅಪ್ಪಣೆಯಂತೆ ಗಜಗಹ್ವರದ (ಆನೆಗುಂದಿ) ಬಳಿ ಇದ್ದು ಕರ್ನಾಟಕ ಆಂಧ್ರ-ಪ್ರದೇಶದಲ್ಲಿ ಸಂಚಾರ ಮಾಡುತ್ತಾ ಕೊನೆಗೆ ಆನೆಗೊಂದಿಯ ತುಂಗಾಭದ್ರಾನದಿಯ ನಡುವಣ ಗಡ್ಡೆಯಲ್ಲಿ ವೃಂದಾವನಸ್ಥ-ರಾದರು. ಆಚಾರ್ಯರ ಬೇರೆ ಕೆಲವು ಶಿಷ್ಯರು ಅಂತ್ಯಕಾಲದಲ್ಲಿ ಗಂಗಾದಿ ನದಿಗಳನ್ನು ಪ್ರವೇಶಿಸಿದರು. ಈ ಕಾರಣದಿಂದಲೇ ಆಚಾರ್ಯರ ಅನೇಕ ಸಂನ್ಯಾಸಿ ಶಿಷ್ಯರ ವೃಂದಾವನಗಳೂ ಉಪಲಬ್ಧವಾಗಿಲ್ಲ ಎಂದು ಹಿರಿಯರು ಅನೇಕರು ಹೇಳುತ್ತಾರೆ.

ವಿಗ್ರಹ ಮತ್ತು ಕೋಶ—

**ವೃಂದಾರಕೇಂದ್ರಾಃ**— ವೃಂದಾರಕಾಣಾಂ ಇಂದ್ರಾಃ ವೃಂದಾರಕೇಂದ್ರಾಃ । ವೃಂದಾರಕ = ದೇವತೆ, 'ವೃಂದಾರಕಾ ದೈವತಾನಿ ಪುಂಸಿ ವಾ ದೇವತಾ ಸ್ತ್ರಿಯಾಂ' ಅಮರ. 'ಮಹಸ್ತೂತ್ಸವತೇಜಸೋಃ' ಕೋಶ.

**ಅಖಿಲದೃಶ್ಯಂ**— ದ್ರಷ್ಟುಂ ಯೋಗಃ ದೃಶ್ಯಃ, ಅಖಿಲೈಃ ದೃಶ್ಯಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಅಖಿಲದೃಶ್ಯಂ ।

**ಪುಷ್ಪವಾರಂ**— ಪುಷ್ಪಾಣಾಂ ವಾರಃ ತಂ । ವಾರ = ಸಮೂಹ, 'ಸ್ತೋಮೌಘನಿಕರವ್ರಾತ ವಾರ ಸಂಘಾತ ಸಂಚಯಾಃ' ಅಮರ.

**ಸುಗಂಧಂ—** ಶೋಭನಃ ಗಂಧಃ ಯಸ್ಯ ಸಃ ಸುಗಂಧಃ ತಂ ।

**ಹರಿದಯಿತವರಿಷ್ಠೇ—** ಅತಿಶೇಯನ ವರಃ ವರಿಷ್ಠಃ, ಹರೇಃ ದಯಿತಾಃ ಹರಿದಯಿತಾಃ, ಹರಿದಯಿತೇಷು ವರಿಷ್ಠಃ ತಸ್ಮಿನ್ಃ ।

**ಕ್ರಿಯಾಪದ— ವವೃಷುಃ -** ವವರ್ಷ ವವೃಷತುಃ ವವೃಷುಃ, ವವರ್ಷಿಥ ವವೃಷಥುಃ ವವೃಷ, ವವರ್ಷ ವವೃಷಿವ ವವೃಷಿಮ । ವೃಷ ಸೇಚನೇ, ಸಕ. ಸೇಟ್. ಪರಸ್ಮೈ ಪದ ಭೂತ ಅನದ್ಯತನ ಪರೋಕ್ಷೆ ಲಿಟ್. ಪ್ರಥಮಪುರುಷ ಬಹುವಚನೇ ವವೃಷುಃ ಇತಿ ರೂಪಂ ।

**ಪ್ರಯೋಗ—** ತತ್ರ ವೃಂದಾರಕೇಂದ್ರೈಃ, ಇತಿ ನಿಗದಿತವದ್ಭಿಃ, ಮಹಾಂತಂ ತಂ, ಗುರುವಿಜಯಮಹಂ, ಲಾಲಯದ್ಭಿಃ ಹರಿದಯತವರಿಷ್ಠೇ ಶ್ರೀಮದಾನಂದತೀರ್ಥೇ, ಸುಗಂಧಃ ಪುಷ್ಪವಾರಃ, ಅಖಿಲದೃಶ್ಯಂ, ವವೃಷೇ ।

**ವೃತ್ತ—** 'ನನಮಯಯಯುತೇಯಂ ಮಾಲಿನೀಭೋಗಿಲೋಕೈಃ' ಎಂಬ ಲಕ್ಷಣದಂತೆ ಈ ಶ್ಲೋಕದಲ್ಲಿ ಮಾಲಿನೀ ವೃತ್ತವಿದೆ.

***ಇತಿ ಶ್ರೀಮನ್ನಾರಾಯಣಪಂಡಿತಾಚಾರ್ಯವಿರಚಿತೇ ಶ್ರೀಸುಮಧ್ವವಿಜಯೇ ಆನಂದಾಂಕೇ***
***ಷೋಡಶಃ ಸರ್ಗಃ ಸಮಾಪ್ತಃ ॥***

॥ ಶ್ರೀಮಧ್ವೇಶಾರ್ಪಣಮಸ್ತು ॥

★ ★ ★

# ವಿಶೇಷಾಂಶ

ಈ ಸುಮಧ್ವವಿಜಯವನ್ನು ಬರೆದಿರುವ ನಾರಾಯಣಪಂಡಿತಾಚಾರ್ಯರೇ ಈ ಮಹಾಕಾವ್ಯಕ್ಕೆ ಭಾವಪ್ರಕಾಶಿಕಾ ಎಂಬ ಸಂಕ್ಷಿಪ್ತವಾದ ವ್ಯಾಖ್ಯಾನವನ್ನು ತಾವೇ ಬರೆದಿರುತ್ತಾರೆ. ಅದರಲ್ಲಿ ತಾವು ವರ್ಣಿಸಿರುವ ವೃತ್ತಾಂತಗಳಿಗೆ, ಕಥೆಗಳಿಗೆ ಮತ್ತು ಅಮಾನುಷಗಳಾದ ಶ್ರೀಮನ್ಮಧ್ವಾಚಾರ್ಯರ ಮಹಿಮೆಗಳಿಗೆ ಮೂಲಭೂತವಾದ ಶ್ರೀಮದಾಚಾರ್ಯರ ಶಿಷ್ಯರಿಂದಲೇ ರಚಿಸಲ್ಪಟ್ಟಿವೆಯೆಂದು ಪ್ರಸಿದ್ಧವಾಗಿರುವ ಅನೇಕ ಶ್ಲೋಕಗಳನ್ನು ಉದಾಹರಿಸುತ್ತಾರೆ. ಭಾವಪ್ರಕಾಶಿಕಾ ಗ್ರಂಥದ ಮಂಗಳಶ್ಲೋಕ ಮತ್ತು ಅದರ ಕಡೆಯ ಭಾಗದಲ್ಲಿರುವುದನ್ನು ಮಾತ್ರ ಇಲ್ಲಿ ಅನುವಾದ ಸಹಿತವಾಗಿ ಕೊಡಲಾಗುತ್ತದೆ.

**ನಮೋ ಜಯಾತ್ಮನೇ ಯಂತ್ರೇ ದ್ವಿಜರಾಜಸ್ಫುರಚ್ಛ್ರಿಯೇ ।**
**ಹರೇರಜಸ್ಯ ಪ್ರಿಯ ತೇ ಹರಯೇ ದೇವತಾತ್ಮನೇ ॥**

**ಅನ್ವಯಾರ್ಥ—**

**ದ್ವಿಜರಾಜ** = ಚಂದ್ರನಂತೆ,
**ಸ್ಫುರಚ್ಛ್ರಿಯೇ** = ಪ್ರಕಾಶಿಸುತ್ತಿರುವ ಕಾಂತಿಯುಳ್ಳ,
**ಜಯಾತ್ಮನೇ** = ಜಯಸ್ವರೂಪನಾದ (ಜಯಕ್ಕೆ ನಿಯಾಮಕನಾದ)
**ಯಂತ್ರೇ** = ಸಕಲ ಚೇತನಾಚೇತನ ಪ್ರಪಂಚಕ್ಕೆ ನಿಯಾಮಕನಾದ ಶ್ರೀಹರಿಗೆ,
**ನಮಃ** = ನಮಸ್ಕಾರವು,
**ಅಜಸ್ಯ** = ಉತ್ಪತ್ತಿರಹಿತನಾದ,
**ಹರೇಃ** = ಶ್ರೀಮನ್ನಾರಾಯಣನಿಗೆ,
**ಪ್ರಿಯ** = ಪ್ರೀತಿಪಾತ್ರನಾದವಾಯುದೇವನೇ,
**ದೇವತಾತ್ಮನೇ** = ಮೂಲಮುಖ್ಯಪ್ರಾಣದೇವನಾದ,
**ಹರಯೇ** = ಹರಿ ಶಬ್ದವಾಚ್ಯರಾದ ವಾಯುದೇವರಾದ,
**ತೇ ನಮಃ** = ನಿಮಗೆ ನಮಸ್ಕಾರವು.

**ತಾತ್ಪರ್ಯ—** ಗ್ರಂಥಕರ್ತರಾದ ನಾರಾಯಣ ಪಂಡಿತಾಚಾರ್ಯರು ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನ ಬರೆಯಲು ಪ್ರಾರಂಭಿಸಿ ಅದು ನಿರ್ವಿಘ್ನವಾಗಿ ಸಮಾಪ್ತಿ ಹೊಂದಬೇಕೆಂದು ಮಂಗಳವನ್ನು ಮಾಡಿದ್ದಾರೆ.

'ವಿನಯೋಜಯಃ ಸತ್ಯಸಂಧೋ ದಾಶಾರ್ಹಃ ಸಾತ್ವತಾಂ ಪತಿಃ' ಎಂದು ಸಹಸ್ರನಾಮದಲ್ಲಿ ಹೇಳಿದಂತೆ, ಜಯ ನಿಯಾಮಕನಾಗಿ, ಜಯನಾಮಕನಾಗಿರುವ, ಪೂರ್ಣಚಂದ್ರನಂತೆ ಶಾಂತಿಪೂರ್ಣನಾದ ಸಕಲ ಜಗನ್ನಿಯಾಮಕನಾದ ಶ್ರೀಹರಿಗೆ ನಮಸ್ಕಾರವು ಜಗತ್ತಿನ ಜನ್ಮಾದಿಕಾರಣನಾಗಿದ್ದು ಸ್ವತಃ ಜನ್ಮಾದಿಶೂನ್ಯನಾದ ಹರಿಗೆ ಅತಿಪ್ರಿಯತಮ ದೇವತಾರೂಪಿಯಾದ 'ಹರಿ' ಎಂಬ ಹೆಸರಿನಿಂದ ವಾಚ್ಯರಾದ ಶ್ರೀ ಮುಖ್ಯಪ್ರಾಣದೇವರಿಗೂ ನಮಸ್ಕಾರ. ಇದು ವಿಜಯಕಾವ್ಯವಾದುದರಿಂದ ಇದನ್ನು ರಚಿಸಿದವರಿಗೂ, ಓದುವವರಿಗೂ ಜಯವಾಗಲಿ ಎಂದು ಹಾರೈಸುತ್ತಾ ಜಯನಿಯಾಮಕವಾದ ಭಗವಂತನ ರೂಪಕ್ಕೆ ಇಲ್ಲಿ ನಮಸ್ಕಾರ ಮಾಡಿದ್ದಾರೆ. 'ಯಮಾನಿಲೇಂದ್ರಚಂದ್ರಾರ್ಕ ವಿಷ್ಣುಸಿಂಹಾಂಶುವಾಜಿಷು ಶುಕಾಹಿರಪಿ ಭೇಕೇಷು ಹರಿಃ ನಾ ಕಪಿಲೇ

ತ್ರಿಷು' ಎಂಬ ಅಮರಕೋಶದಂತೆ ಹರಿಶಬ್ದವಾಚ್ಯರಾಗಿದ್ದು ಶ್ರೀಹರಿಯ ಅತಿಶಯ ಪ್ರೀತಿಪಾತ್ರರಾದ ಶ್ರೀ ವಾಯುದೇವರಿಗೂ ನಮಸ್ಕಾರ ಮಾಡಿದ್ದಾರೆ. ಹೀಗೆ ಗ್ರಂಥ ಪ್ರತಿಪಾದ್ಯರಾದ ಆಚಾರ್ಯರಿಗೆ ಜಯವನ್ನು ಕೊಡತಕ್ಕ ಜಯ ನಾಮಕನಾದ, ಜಯಕ್ಕೆ ಸ್ವಾಮಿಯಾದ ಪರಮಾತ್ಮನಿಗೂ ನಮಸ್ಕಾರ ಮಾಡಿ ಈ ವ್ಯಾಖ್ಯಾನವನ್ನು ಬರೆಯಲು ಪ್ರಾರಂಭಿಸಿದ್ದಾರೆ.

ಹದಿನಾರನೆಯ ಸರ್ಗದ ಕೊನೆಯ ''ಇತಿ ನಿಗದಿತವಂತಃ'' ಎಂಬ ಶ್ಲೋಕವಾದ ಮೇಲೆ ಭಾವಪ್ರಕಾಶಿಕೆಯಲ್ಲಿ ವಿಶೇಷಾಂಶ ಸೂಚಕಗಳಾದ ಈ ಶ್ಲೋಕಗಳು ಬರುತ್ತಿವೆ.

**ಸುರನಾಥಗುರುಃ ಸುರಭೀಕೃತದಿಙ್ಮುಖಯಾ ನವಚಂದನಮಿಶ್ರಿತಯಾ ।**
**ಅತಿಕೋಮಲಯಾ ತುಲಸೀಪ್ರಸವಚ್ಛಟಯೈಕ್ಷ್ಯತ ಪುಂಭಿರಸೌ ಲಸಿತಃ ॥**

ಅನ್ವಯಾರ್ಥ—

**ಸುರನಾಥಗುರುಃ** = ದೇವಶ್ರೇಷ್ಠರಿಗೂ ಗುರುಗಳಾದ, ದೇವಶ್ರೇಷ್ಠರೂ ಗುರುಗಳೂ ಆದ,
**ಅಸೌ** = ಈ ಶ್ರೀಮಧ್ವಾಚಾರ್ಯರು,
**ಸುರಭೀಕೃತದಿಙ್‌ಮುಖಯಾ** = ದಿಕ್ಕುಗಳ ಮುಂಭಾಗಗಳನ್ನು ಸುವಾಸನೆಗೊಳಿಸಿದ,
**ನವಚಂದನಮಿಶ್ರಿತಯಾ** = ನೂತನವಾದ ಚಂದನಗಂಧದಿಂದ ಸಹಿತವಾದ,
**ಅತಿಕೋಮಲಯಾ** = ಅತಿಶಯವಾಗಿ ಮೃದುವಾದ,
**ತುಲಸೀ** = ತುಲಸಿಯೂ,
**ಪ್ರಸವ** = ಇತರ ಹೂವುಗಳೂ ಇವುಗಳ,
**ಛಟಯಾ** = ರಾಶಿಯಿಂದ,
**ಲಸಿತಃ (ಸನ್)** = ಶೋಭಿತರಾಗಿ,
**ಪುಂಭಿಃ** = ಜನರಿಂದ,
**ಐಕ್ಷ್ಯತ** = ನೋಡಲ್ಪಟ್ಟರು.

ತಾತ್ಪರ್ಯ— ಶ್ರೀಮನ್ಮಧ್ವಾಚಾರ್ಯರು ದೇವಶ್ರೇಷ್ಠರಿಗೂ ಗುರುಗಳು. ಅವರು ಪ್ರವಚನ ಮಾಡುತ್ತಾ ಕುಳಿತಿದ್ದಾಗ ದೇವತೆಗಳು ತುಳಸೀ ಮತ್ತಿತರ ಹೂವುಗಳ ಮಳೆಯನ್ನು ಅವರ ಮೇಲೆ ಸುರಿಸಿದರು. ಆ ಹೂವುಗಳ ವಾಸನೆಯಿಂದ ದಿಕ್ಕುಗಳ ಪ್ರದೇಶವೆಲ್ಲವೂ ಸುವಾಸಿತವಾಗಿತ್ತು. ಅತಿಕೋಮಲವಾದ ಆ ತುಲಸೀ ಮತ್ತು ಹೂವುಗಳನ್ನು ಗಂಧದ ನೀರಿನಲ್ಲಿ ನೆನೆಸಲಾಗಿತ್ತು. ಇಂತಹ ತುಳಸೀ ಮತ್ತು ಇತರ ಮಲ್ಲಿಗೆ, ಸೇವಂತಿಗೆ, ಜಾಜಿ ಮುಂತಾದ ಹೂವುಗಳ ರಾಶಿಯಿಂದ, ಶ್ರೀ ಮನ್ಮಧ್ವಾಚಾರ್ಯರು ಶೋಭಿಸುತ್ತಿರುವುದನ್ನು ಜನರು ನೋಡಿದರು. ಆಚಾರ್ಯರು ಪ್ರವಚನ ಮಾಡುತ್ತಿರುವಾಗ ಅವರ ಮೇಲೆ ಈ ತರಹದ ಪುಷ್ಪವೃಷ್ಟಿಯಾಯಿತು. (ಈ ಶ್ಲೋಕವು ಪರಂಪರೆಯಿಂದ ಬಂದಿರುವ ಆಚಾರ್ಯರ ಶಿಷ್ಯರು ಮಾಡಿರುವ ಶ್ಲೋಕವಾಗಿರಬಹುದು)

**ಪ್ರಾಣಾಧೀಶಃ ಪ್ರಾಣ ಉಕ್ಥೋ ಜ್ಯೇಷ್ಠಃ ಶ್ರೇಷ್ಠೋಽಖಿಲೇಶ್ವರಃ ।**
**ಪಾಪ್ಮನಾಽವಿದ್ಧ ಇತ್ಯಾದಿನಾಽನೋಪನಿಷದೀರಿತಃ ॥**

ಶ್ರೀಮುಖ್ಯಪ್ರಾಣದೇವರು ಪ್ರಾಣವಾಯುವಿಗೆ ನಿಯಾಮಕರು. (ಪಂಚರೂಪವುಳ್ಳ ವಾಯುಗಳಿಗೂ ನಿಯಾಮಕರು)ಇಂದ್ರಿಯಗಳಿಗೆಲ್ಲಾ ಸ್ವಾಮಿಯು. ಜೀವರಿಗೆಲ್ಲಾ ಅಧಿಪತಿಗಳು. ಪ್ರಕೃಷ್ಟವಾದ ವ್ಯಾಪಾರ ಉಳ್ಳವರು ಎಲ್ಲಾ ಇಂದ್ರಿಯಾಭಿಮಾನಿದೇವತೆಗಳು ಹೊರಟು ಹೋದರೂ ಶರೀರವನ್ನು ಧರಿಸಿದವರು ಮತ್ತು ಯಾವ ದೇವತೆಯು ಪ್ರವೇಶ

ಮಾಡಿದರೂ ಏಳದ ಶರೀರವನ್ನು ತಮ್ಮ ಪ್ರವೇಶ ಮಾತ್ರದಿಂದ ಎಬ್ಬಿಸಿದವರು, ಬದುಕುವಂತೆ ಮಾಡಿದವರು. ಹೇಗೆ ಸಮಸ್ತ ಜೀವಜೀವನರು, ಜಗತ್ಪ್ರಾಣರು. ಶ್ರೀ ಲಕ್ಷ್ಮೀನಾರಾಯಣ ಜ್ಯೇಷ್ಠಪುತ್ರರು, ಸಕಲ ಜೀವೋತ್ತಮರು. ಅತ್ಯಂತ ಶ್ರೇಷ್ಠರು, ಎಲ್ಲರಿಗೂ ನಿಯಾಮಕರು ಅವರಿಗೆ ಪಾಪಲೇಪವಿಲ್ಲ. ಅವರು ಅಖಣಾಶ್ಮರು. ಮಣ್ಣಿನ ಹಂಟೆಯು ಶಿಲೆಗೆ ಬಡಿದಾಗ ಅದು ಪುಡಿಪುಡಿಯಾಗುವಂತೆ ದೈತ್ಯರು ವಾಯುದೇವರಿಗೆ ತೊಂದರೆ ಮಾಡಲು ಬಂದು ತಾವೇ ನಾಶವಾಗುತ್ತಾರೆ. ಪವಮಾನ ರಿಗೆ ಏನೂ ಆಗುವುದಿಲ್ಲ. ಇಂತಹ ವಾಯುದೇವರ ಮಹಿಮೆಗಳನ್ನು ನಾನಾ ಉಪನಿಷತ್ತುಗಳಲ್ಲಿ ಹೇಳಲಾಗಿದೆ.

**ಸ ದೇವಶ್ರೇಷ್ಠ ಇತ್ಯಾದಿ ಭಾರತಾದ್ಯೈಶ್ಚ ಕೀರ್ತಿತಃ ।**
**ಪ್ರಾಣ ಇತ್ಯೇವ ಲೋಕೈಶ್ಚ ಸ ಮಹಾಮಹಿಮಾ ಹ್ಯತಃ ॥**
**ಅಶ್ವಮೇಧಃ ಕ್ರತುಶ್ರೇಷ್ಠಃ ಜ್ಯೋತಿಃ ಶ್ರೇಷ್ಠೋ ದಿವಾಕರಃ ।**
**ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠಃ ದೇವಶ್ರೇಷ್ಠಃ ದೇವಶ್ರೇಷ್ಠಸ್ತು ಮಾರುತಃ ॥**

ತಾತ್ಪರ್ಯ— ಇತ್ಯಾದಿ ಮಹಾಭಾರತ ವಚನಗಳಿಂದಲೂ, ಶ್ರೀಮನ್ಮಧ್ವಾಚಾರ್ಯರೂ ಮೂಲರೂಪಿಯಾದ ವಾಯುದೇವರು ದೇವಶ್ರೇಷ್ಠರು ಸಕಲಜೀವೋತ್ತಮರು ಎಂದು ವರ್ಣಿಸಲ್ಪಟ್ಟಿದ್ದಾರೆ. ಲೋಕದಲ್ಲಿಯೂ 'ಪ್ರಾಣ' ಎಲ್ಲರಿಂದಲೂ ಪ್ರಕರ್ಷದಿಂದ ಚೇಷ್ಟೆ ಮಾಡಿಸುವವರು. ಜಗತ್ಪ್ರಾಣರು ಎಂದು ಪ್ರಸಿದ್ಧರಾಗಿದ್ದಾರೆ. ಆದುದರಿಂದ ಶ್ರೀಮುಖ್ಯಪ್ರಾಣದೇವರು ಮಹಾಮಹಿಮರು ಎಂದು ತಿಳಿಯಬೇಕು.

**ಸರ್ವಜ್ಞಾನಬಲಾದೀನಾಮನುಸಂಧಾನಸುಕ್ಷಮಃ ।**
**ಪ್ರಾಣಾವತಾರೇಷ್ವಭಿತಃ ತಸ್ಮಾನ್ನಾತ್ರಾಪ್ಯಪೂರ್ಣತಾ ॥**

ತಾತ್ಪರ್ಯ— ಶ್ರೀವಾಯುದೇವರು ತಮ್ಮ ಮೂಲರೂಪದ ಎಲ್ಲಾ ಜ್ಞಾನ, ಬಲ, ಸುಖಾದಿಗಳನ್ನು ಎಲ್ಲಾ ರೀತಿಯಿಂದಲೂ ಎಲ್ಲಾ ಅವತಾರಗಳಲ್ಲಿಯೂ ಅನುಸಂಧಾನ ಮಾಡಲು ಸಮರ್ಥರು. ಆದುದರಿಂದ ಮುಖ್ಯ-ಪ್ರಾಣದೇವರ ಅವತಾರರಾದ ಆಚಾರ್ಯರಲ್ಲಿ ಜ್ಞಾನಬಲ ಇತ್ಯಾದಿ ಯಾವ ವಿಷಯದಲ್ಲಿಯೂ ನ್ಯೂನ್ಯತೆಯಿಲ್ಲ, ಆದುದರಿಂದಲೇ ನ್ಯೂನತೆಯಿದೆಯೆಂದು ತಿಳಿಯಬಾರದು.

**ಸಾಮರ್ಥ್ಯಾಂಶಾಂಶಮೇವಾತ್ರ ಪ್ರಾದುಶ್ಚಕ್ರೇ ಜಗದ್ಗುರುಃ ।**
**ತತ್ರಾಪ್ಯಮರ್ತ್ಯದೃಶ್ಯಾಂಶಃ ದೇವೈರೇವಾನ್ವಭೂಯತಃ ॥**

ಜಗದ್ಗುರುಗಳಾದ ಶ್ರೀಮಧ್ವಾಚಾರ್ಯರೂ ಪರಮಾತ್ಮನ ಸಂಕಲ್ಪಾನುಸಾರವಾಗಿ ತಮ್ಮ ಸಾಮರ್ಥ್ಯದ ನೂರನೇ ಒಂದು ಅಂಶದ ನೂರನೇ ಒಂದು ಅಂಶವನ್ನು ಮಾತ್ರವೇ ಪ್ರಕಟಸಿದ್ದಾರೆ. ಪ್ರಕಟಗೊಳಿಸಿದ ಈ ಸಾಮರ್ಥ್ಯದ ಅಂಶಾಂಶವನ್ನೂ ಕೂಡ ದೇವತೆಗಳು ಮಾತ್ರವೇ ನೋಡುತ್ತಿದ್ದರು. ಮನುಷ್ಯರಿಗೆ ಗೊತ್ತಾಗುತ್ತಿರಲಿಲ್ಲ. ದೇವತೆಗಳು ಆಚಾರ್ಯರ ಮಹಿಮೈಕದೇಶವನ್ನು ತಿಳಿದು ಅನುಭವಿಸಿ ಆನಂದಿಸಿ ಕೃತಾರ್ಥರಾದರು.

**ಚರ್ಯಾ ದೃಷ್ಟಾ ನರೈಃ ಕಾಶ್ಚಿದ್ ವಿಸ್ಮೃತಾ ದೇವಮಾಯಯಾ ।**
**ಅವಿಸ್ಮೃತಾಶ್ಚ ಪುರುಷೈರ್ನಾಸ್ಮಾಭಿಃ ಸಕಲಾಃ ಶ್ರುತಾಃ ॥**

ಆಚಾರ್ಯರ ಸಮಕಾಲೀನರಾದ, ಆಚಾರ್ಯರ ಶಿಷ್ಯರಾದ ಜನರು ಆಚಾರ್ಯರ ಅದ್ಭುತವಾದ ಕಾರ್ಯ-ಚಿತ್ರಗಳನ್ನು ನಡತೆಗಳನ್ನು ನೋಡಿದ್ದಾರೆ. ಆದರೆ ಅವು ಭೂಮಿಯಲ್ಲಿ ಪ್ರಕಟವಾಗಬಾರದೆಂದು ಹರಿವಾಯುಗಳ ಸಂಕಲ್ಪದಂತೆ ಅವುಗಳಲ್ಲಿ ಕೆಲವು ನೋಡಿದವರ ಮನಃಪಟಲದಿಂದ ಮಾಯಾವಾದವು. ನೋಡಿದ ಜನರು ಮರೆಯ-ದಿರುವ ಅನೇಕ ಘಟನೆಗಳು ಇರಬಹುದು, ಇವೆ.ಆದರೆ ನಾವು ಅವುಗಳನ್ನು ಪೂರ್ಣವಾಗಿ ಕೇಳಿಲ್ಲ.

ಶ್ರುತಾಶ್ಚ ಕಾಶ್ಚಿನ್ನೈವೋಕ್ತಾ ದೇವಗುಹ್ಯತ್ವನಿಶ್ಚಯಾತ್ ।
ಅನ್ಯಾಸ್ತ ಥೈವನ ಪ್ರೋಕ್ತಾ ಗ್ರಂಥಬಾಹುಲ್ಯಭೀತಿತಃ ॥

ನಾವು ಕೇಳಿದ ಕೆಲವು ಘಟನೆಗಳನ್ನೂ ಅವು ದೇವಗುಹ್ಯಗಳು, ಪ್ರಕಟಿಸಲು ಅಯೋಗ್ಯವಾದ ದೇವರಹಸ್ಯಗಳು ಎಂದು ನಿಶ್ಚಯವಾದುದರಿಂದ ಇಲ್ಲಿ ಹೇಳಿಲ್ಲ. ಇನ್ನು ಕೆಲವು ಚಿತ್ರಚರಿತ್ರೆಗಳನ್ನು ಗ್ರಂಥವು ಬಹಳವಾಗುತ್ತದೆ ಎಂಬ ಹೆದರಿಕೆಯಿಂದ ಇಲ್ಲಿ ಹೇಳಿಲ್ಲ.

ಉಕ್ತಾಶ್ಚ ವಿಸ್ಮೃತಾ ನೈವ ತಸ್ಮಾದೇವಾತ್ರ ಕಾರಣಾತ್ ।
ಪ್ರಾಯೇಣ ನೈಕಮಾತ್ರೋಕ್ತಾಃ ಕಥಿತಾ ಇಹ ಸರ್ವತಃ ॥

ನಮಗೆ ಕೇಳಿ ಬಂದ ಕಥೆಗಳಲ್ಲಿ ನಾವು ಮರೆಯದಿರುವ ಕಥೆಗಳನ್ನು ಮಾತ್ರ ಗ್ರಂಥ ವಿಸ್ತಾರವಾಗದಂತೆ ಇಲ್ಲಿ ವರ್ಣಿಸಿದ್ದೇವೆ. ಈ ಕಾವ್ಯದಲ್ಲಿ ತಿಳಿಸಿರುವ ಎಲ್ಲಾ ಘಟನೆಗಳನ್ನು ಅನೇಕರಿಂದ ತಿಳಿದು ಬರೆದಿರುತ್ತೇವೆ.

ಮಯಾ ದೃಷ್ಟಾ ಧ್ರುವಮಿತಿ ಪ್ರೋಕ್ತಾಃ ಪ್ರಾಯೇಣ ಪೂರುಷೈಃ ।
ದ್ವಯೋರ್ವಕ್ತ್ರೋರ್ವಿರೋಧೇ ತು ಸ್ವೀಕೃತಾ ಪ್ರಬಲಸ್ಯ ಗೀಃ ॥

''ನಾನು ಖಂಡಿತವಾಗಿ ನೋಡಿದ್ದೇನೆ'' ಎಂದು ಅನೇಕ ಜನರು ಹೇಳಿದ ಘಟನೆಗಳನ್ನೇ ಪ್ರಾಯಃ ಇಲ್ಲಿ ವರ್ಣಿಸಲಾಗಿದೆ. ಇಬ್ಬರು ಪುರುಷರು ಪರಸ್ಪರ ವಿರುದ್ಧವಾಗಿ ಹೇಳಿದಾಗ ಪ್ರಬಲರು ಯಾರೋ, ಯಾರು ಹೆಚ್ಚು ವಿಶ್ವಾಸಾರ್ಹರೋ ಅವರ ಮಾತನ್ನು ಸ್ವೀಕರಿಸಲಾಗಿದೆ.

ತುಲ್ಯೇ ತತ್ಸೂಕ್ಷ್ಮ ದೃಷ್ಟ್ಯಾದೌ ದೇವೇನೈವ ಪರೀಕ್ಷ್ಯತೇ ।

ಎರಡು ಚರಿತ್ರೆಗಳೂ ಸಮಾನವಾಗಿದ್ದಾಗ ಅದರಲ್ಲಿ ಸೂಕ್ಷ್ಮವಾದ ಗ್ರಾಹ್ಯಾಂಶವು ಯಾವುದರಲ್ಲಿದೆಯೋ ಅದನ್ನೇ ಸ್ವೀಕರಿಸಿದ್ದೇವೆ. ಚರಿತ್ರೆಗಳ ಇನ್ನೂ ಸೂಕ್ಷ್ಮವಾದ ಭೇದಪ್ರಭೇದ ವಿರೋಧ ವಿಷಯಗಳನ್ನು ದೇವರೇ ಪರೀಕ್ಷಿಸಿ ನಿರ್ಧರಿಸಬೇಕು. ನಾವು ನಿರ್ಧರಿಸಲಾರೆವು.

ಕಾವ್ಯಶ್ರೀಯೇ ವಾ ಗುರುಕೀರ್ತಯೇ ವಾ ಪ್ರೋಕ್ತಂ ಸ್ವಯೈವಾಪಿ ಮನೀಷಯೇತಿ ।
ತಸ್ಮಾನ್ನ ಶಂಕ್ಯೇತ ಮಹಾಜನೇಽಸ್ಮಿನ್ ಪುಂಸಾ ಕುಶಾಗ್ರೀಯಧಿಯಾಪ್ಯವಶ್ಯಮ್ ॥

ಈ ಮಹಾಕಾವ್ಯಕರ್ತನಾದ ನಾರಾಯಣಪಂಡಿತನು ಕಾವ್ಯಶೋಭೆಗೋಸ್ಕರ, ಅಥವಾ ಗುರುಗಳ ಕೀರ್ತಿಯನ್ನು ಹೆಚ್ಚು ಹೆಚ್ಚಾಗಿ ಪ್ರಸಿದ್ಧಪಡಿಸಬೇಕೆಂಬ ದುರಾಸೆಯಿಂದಲಾಗಲೀ, ಅಥವಾ ವರ್ಣನ ಮಾಡುವ ಲಂಪಟತನದಿಂದ ತಾನೇ ಕಪೋಲ ಕಲ್ಪನೆಯಿಂದಲಾಗಲೀ ಈ ಮಹಾಕಾವ್ಯದಲ್ಲಿ ಯಾವ ವಿಷಯವನ್ನಾದರೂ ವರ್ಣಿಸಿದ್ದಾನೆಂದು ಯಾವನೂ ಭಾವಿಸಬಾರದು. ಎಂತಹ ಕುಶಾಗ್ರಬುದ್ಧಿಯೂ, ಕುಶಲಮತಿಯೂ, ಊಹಾಪೋಹವುಳ್ಳವನೂ ಈ ಸಂದೇಹವನ್ನು ವ್ಯಕ್ತಪಡಿಸುವುದು ಸರಿಯಲ್ಲ. ಏಕೆಂದರೆ ಹಿಂದೆ ಹೇಳಿದ ರೀತಿಯಿಂದ ಇಲ್ಲಿ ಹೇಳಿರುವ ಪ್ರತಿಯೊಂದು ವಿಷಯವೂ ಪ್ರಾಮಾಣಿಕತೆಮಯವಾದುದು.

ಮಂದಪ್ರಬೋಧಜನತೋಪಕೃತಿಂ ವಿಧಿತ್ಸುಃ
ಮಧ್ವಪ್ರಸಂಗಪರಮೋತ್ಸವಲಂಪಟೋಽಸೌ ।
ಕೃತ್ವಾಪಿ ಮಧ್ವ ವಿಜಯಂ ವ್ಯಧಿತಾಸ್ಯ ಕಿಂಚಿದ್
ಭಾವಪ್ರಕಾಶನಮಿದಂ ಹರಯೇ ನಮೋಽಸ್ತು ॥

ಈ ಮಹಾಕಾವ್ಯ ಕರ್ತೃವಾದ ನಾರಾಯಣಪಂಡಿತನೆಂಬ ನಾನು ಶ್ರೀಮತ್‌ಸುಮಧ್ವವಿಜಯ ಗ್ರಂಥದಲ್ಲಿ ಆಚಾರ್ಯರ ಚರಿತ್ರೆಗಳನ್ನೂ, ಇತರ ವಿಷಯಗಳನ್ನು ಸಾಕಷ್ಟು ವರ್ಣಿಸಿದ್ದೇನೆ. ಆದರೆ ಇಲ್ಲಿ ಹೇಳಿರುವ ವಿಷಯಗಳಲ್ಲಿ ಮಂದುಮತಿಗಳಿಗೆ, ಅಜ್ಞಾನ ಸಂದೇಹಗಳು ಬರಬಾರದೆಂದು ವ್ಯಾಕರಣ ಧರ್ಮಶಾಸ್ತ್ರಾದಿ ವಿಷಯಗಳಲ್ಲಿ ಕೆಲವನ್ನು ಅಲ್ಪವಾಗಿ ವಿವರಿಸಲು ಈ ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನವನ್ನು ಬರೆದಿರುತ್ತೇನೆ. ಶ್ರೀಮಧ್ವರ ವಿಷಯಗಳನ್ನು ಹೇಳುವುದರಿಂದ ಒಂದು ದೊಡ್ಡ ಉತ್ಸವದಂತೆ ಎಂದೂ ಆಚಾರ್ಯರ ಗುಣಕೀರ್ತನ, ಚರಿತ್ರ, ಕಥನಗಳಿಗೆ ಈ ವ್ಯಾಖ್ಯಾನ ಬರೆಯುವುದು ಮತ್ತೊಂದು ಅವಕಾಶವೆಂದೂ ತಿಳಿದು ಈ ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನವನ್ನು ಬರೆದಿರುವೆನು. ಇನ್ನು ಮುಂದೆ ಈ ಕಾವ್ಯದ ವಿಷಯದಲ್ಲಿ ನಾನು ಹೆಚ್ಚಾಗಿ ಏನನ್ನೂ ಹೇಳಲು ಇಷ್ಟಪಡುವುದಿಲ್ಲ. ಹೇಳಬೇಕಾದುವನ್ನೆಲ್ಲಾ ಹೇಳಿಯಾಯಿತು. 'ಶ್ರೀಹರಿಗೆ ನಮಸ್ಕಾರ' ಇಲ್ಲಿಗೆ ಗ್ರಂಥ ಸಮಾಪ್ತಿಯಾಯಿತು. ಹರಯೇ ನಮೋಽಸ್ತು.

**ತ್ರಿವಿಕ್ರಮವಿಪಶ್ಚಿತೋ ಗುಣನಿಧೇಃ ಸುಶಿಷ್ಯಾಃ ಸುತಾಃ**
**ಸತಾಮಭಿಮತಾಸ್ತ್ರಯೋ ಯಸ್ತೃತೀಯೋಽತ್ರ ನಾರಾಯಣಃ ।**
**ಸುಮಧ್ವವಿಜಯಂ ವ್ಯಧಾದ್ಗುರುಗಿರಾ ಸದಾನಂದದಃ**
**ಪ್ರಸೀದತು ತತಃ ಸದಾ ದಶಮತಿಃ ಸ ನಾರಾಯಣಃ ॥**

ತ್ರಿವಿಕ್ರಮಪಂಡಿತಾಚಾರ್ಯರೆಂಬ ಗುಣಗಳ ಗಣಿಯೊಬ್ಬರು ಇದ್ದಾರೆ. ಅವರಿಗೆ ಒಳ್ಳೆಯ ಶಿಷ್ಯರೂ ಆಗಿರುವ ಮೂವರು ಮಕ್ಕಳಿದ್ದಾರೆ. ಆ ಮಕ್ಕಳು ಸಜ್ಜನರ ಪ್ರಶಂಸೆಗೂ ಪಾತ್ರರಾಗಿದ್ದಾರೆ. ಆ ಮೂವರು ಮಕ್ಕಳಲ್ಲಿ ನಾರಾಯಣ-ನೆಂಬುವನು ಮೂರನೆಯವನು. ಅವನು ತನ್ನ ತಂದೆಯೂ ಗುರುವೂ ಆದ ತ್ರಿವಿಕ್ರಮಪಂಡಿತರ ಆದೇಶದಿಂದ ಈ ಸುಮಧ್ವವಿಜಯ ಗ್ರಂಥವನ್ನು ಬರೆದನು. ಈ ಗ್ರಂಥವನ್ನು ಬರೆಯಲು ಗುರುಗಳಾದ ಶ್ರೀಮಧ್ವರ ಅನುಗ್ರಹವಚನವೂ ಸಿಕ್ಕಿತ್ತು. ಭಾರತಿಯ ಅನುಗ್ರಹವೂ ಆಗಿತ್ತು. ಇಲ್ಲಿ ಆಡಿರುವ ಮಾತುಗಳು ಗುರುಗಳ ಅನುಗ್ರಹದಿಂದ ಬಂದಿವೆ. ಆ ಮಾತುಗಳು ಉತ್ತಮವೂ, ಅರ್ಥಗರ್ಭಿತವೂ ಆಗಿವೆ. ಈ ಗ್ರಂಥ ನಿರ್ಮಾಣದಿಂದ ಭಕ್ತರಿಗೆ ಯಾವಾಗಲೂ ಆನಂದವನ್ನು ಕೊಡುವ ಶ್ರೀಹರಿಯು ಪ್ರಸನ್ನನಾಗಲಿ ಅವನ ಪರಮಭಕ್ತರಾದ ದಶಪ್ರತಿಮಿತಿಗಳೆಂದು ವೇದದ ಮಾತುಗಳಲ್ಲಿ ಪ್ರಸಿದ್ಧರಾದ ಆನಂದತೀರ್ಥರೂ ಅವರ ಒಳಗೆ ಹೊರಗೆ ನಿತ್ಯದಲ್ಲಿ ಪ್ರಸನ್ನನಾಗಿ ಪ್ರತ್ಯಕ್ಷನಾಗಿರುವ ನಾರಾಯಣನು ಪ್ರಸನ್ನನಾಗಲಿ. ಅವರು ತಮ್ಮ ವಲ್ಲಭನಾದ ಶ್ರೀವಲ್ಲಭನ ಒಲುಮೆಯು ನಮ್ಮಲ್ಲಿ ಆಗುವಂತೆ ಮಾಡಲಿ ನಮಗೆ ಸದಾನಂದ ರೂಪವಾದ ಮೋಕ್ಷವನ್ನು ಕರುಣಿಸಲಿ.

॥ ಸಮಾಪ್ತೋಽಯಂ ಗ್ರಂಥಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

